ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ

ಸಂಪುಟ–೮ (ಭಾಗ–೧)

# ಜೀವನ ಚರಿತ್ರೆ ಅನುವಾದ ಸಂಪುಟ

ಪ್ರೊ.ಜಿ.ಅಶ್ವತ್ಥನಾರಾಯಣ





ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ

ಸಂಪುಟ ೮ (ಭಾಗ – ೧)

# ಜೀವನಚರಿತ್ರೆ–ಅನುವಾದ ಸಂಪುಟ

ಸಂಪಾದಕರು

**ಪ್ರೊ॥ ಜಿ. ಅಶ್ವತ್ಥನಾರಾಯಣ**



ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

# ಪ್ರಕಾಶಕರ ಮಾತು

ಕನ್ನಡ ಓದುಗರಿಗೆ ಸುಲಭ ಬೆಲೆಯಲ್ಲಿ ಉತ್ತಮ ಕೃತಿಗಳು ಲಭ್ಯವಾಗಬೇಕೆನ್ನುವ ಉದ್ದೇಶದಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಜನಪ್ರಿಯ ಸಾಹಿತ್ಯ ಪ್ರಕಾಶನದಡಿ ಹಲವಾರು ಪ್ರಕಟಣಾ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯರೂಪಕ್ಕೆ ತರಲಾಗುತ್ತಿದೆ. ಈಗಾಗಲೇ ಇಲಾಖೆಯು ಎಂ.ಗೋಪಾಲಕೃಷ್ಣ ಅಡಿಗ, ಹುಯಿಲಗೋಳನಾರಾಯಣರಾಯ, ನಾಡೋಜ ಚೆನ್ನವೀರ ಕಣವಿ, ಕೆ.ಎಸ್.ನರಸಿಂಹಸ್ವಾಮಿ ಹೀಗೆ ಪ್ರಮುಖ ಸಾಹಿತಿಗಳ ಸಮಗ್ರ ಸಾಹಿತ್ಯ ಪ್ರಕಟಣೆಗಳನ್ನು ಹೊರತಂದಿರುತ್ತದೆ. ಪ್ರಸಕ್ತ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರೊ.ಎಂ.ವಿ.ಸೀತಾರಾಮಯ್ಯನವರ ಜನ್ಮಶತಮಾನೋತ್ಸವದ ಅಂಗವಾಗಿ ಹಂತ ಹಂತವಾಗಿ ಅವರ ಸಮಗ್ರ ಸಾಹಿತ್ಯವನ್ನು ಪ್ರಕಟಿಸಲು ಉದ್ದೇಶಿಸಿದೆ. ಅದರಲ್ಲಿ ಈಗಾಗಲೇ ನಾಲ್ಕು ಸಂಪುಟಗಳನ್ನು ಹೊರತರಲಾಗಿದೆ. ಒಬ್ಬ ಲೇಖಕರ ಸಮಗ್ರ ಅಧ್ಯಯನ ಮಾಡಲು ಅನುಕೂಲವಾಗಬೇಕೆಂಬುದು ಈ ಯೋಜನೆಯ ಆಶಯ.

'ರಾಘವ' ಎಂಬ ಕಾವ್ಯನಾಮದಿಂದ ಖ್ಯಾತರಾಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರು ಕವನ, ಕಥೆ, ಕಾದಂಬರಿ, ಮಕ್ಕಳ ಸಾಹಿತ್ಯ, ಗ್ರಂಥ ಸಂಪಾದನೆ, ಕಾವ್ಯಮೀಮಾಂಸೆ, ಸಂಶೋಧನೆ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದವರು. ಐದು ದಶಕಗಳ ಕಾಲ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸುವುದರ ಜೊತೆಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮೂಲಕ ಹಸ್ತಪ್ರತಿಶಾಸ್ತ್ರ ಎಂಬ ನೂತನ ಸಂಶೋಧನಾ ಕ್ಷೇತ್ರವನ್ನು ಆರಂಭಿಸಿ ಅಳಿಸಿ ಹೋಗುತ್ತಿದ್ದ ಪ್ರಾಚೀನ ಸಾಹಿತ್ಯದ ಸಂಗ್ರಹ, ಸಂರಕ್ಷಣೆಯತ್ತ ನಾಡಿನ ಗಮನವನ್ನು ಸೆಳೆದ ಅಚ್ಚುಕಟ್ಟಾದ ಬರವಣಿಗೆಗೆ ಹೆಸರಾದ ಪ್ರೊ.ಎಂ.ವಿ.ಸೀತಾರಾಮಯ್ಯ ಅವರು ಅನನ್ಯ ಸಾಧಕರು.

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಸಾಹಿತ್ಯ ರಚನೆಯನ್ನು ಆರಂಭಿಸಿ, ಹಳಗನ್ನಡ ಪರಂಪರೆ ಮತ್ತು ಆಧುನಿಕ ಕನ್ನಡ ಹಾಗೂ ಇಂಗ್ಲಿಷ್ ಸಾಹಿತ್ಯದ ಹೊಸತನಗಳನ್ನು ಮೈಗೂಡಿಸಿಕೊಂಡು ಸಾಹಿತ್ಯ ಸೃಷ್ಟಿಗೆ ತೊಡಗಿದ ಎರಡೂ ಪರಂಪರೆಗಳ ಭವ್ಯ ಸೇತು ಪ್ರೊ. ಎಂ.ವಿ.ಸೀತಾರಾಮಯ್ಯನವರು. ಸೃಜನಶೀಲ ಸಾಹಿತ್ಯದ ಜೊತೆಜೊತೆಗೆ ಸಂಶೋಧನಾತ್ಮಕ ಸಾಹಿತ್ಯವನ್ನು ಬೆಳೆಸಿದ ಅವರದು ಬಹುಮುಖ ಪ್ರತಿಭೆ. ಅಧ್ಯಯನ–ಅಧ್ಯಾಪನಗಳಲ್ಲಿ ಅಪಾರ ಅನುಭವ ಪಡೆದಿದ್ದ ಪ್ರೊ. ಎಂ.ವಿ.ಸೀತಾರಾಮಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾಗಿ ಕನ್ನಡ ಭಾಷೆಯ ಸರ್ವಾಂಗೀಣ ಬೆಳವಣಿಗೆಗೆ ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಸಾಹಿತ್ಯ ಸೇವೆಯನ್ನು ಗುರುತಿಸಿ, 'ಮುಗಿಯದ ಮಾಯೆ' ಕವನ ಸಂಕಲನಕ್ಕೆ ದೇವರಾಜ್ ಬಹದ್ದೂರ್ ಬಹುಮಾನ,



**Prof. M.V. Seetharamaiah Samagra Sahithya - Vol 8 - Part 1,** (Complete works of Prof. M.V. Seetharamaiah: Biography and Translations Vol. 8 Part 1); Edited by **Prof. G. Ashwathanarayana,** (Retd. Kannada Proffessor) Published by **K.R. Ramakrishna**, Commissioner, Department of Kannada and Culture, Kannada Bhavan, J.C.Road, Bengaluru - 560 002.



ಮುದ್ರಿತ ವರ್ಷ : ೨೦೧೩
ಪ್ರತಿಗಳು : ೧೦೦೦
ಪುಟಗಳು : ೩೦ + ೬೩೪
ಬೆಲೆ : ರೂ. ೧೪೦.೦೦

ರಕ್ಷಾಪುಟ ವಿನ್ಯಾಸ : **ಮಯೂರ ಪ್ರಿಂಟ್ ಆ್ಯಡ್ಸ್**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪



# 'ಯೋಜನೆಯನ್ನು ಕುರಿತು'
# ಎಂ.ವಿ.ಸೀ. ಜನ್ಮಶತಮಾನೋತ್ಸವ–ಹಸ್ತಪ್ರತಿ ಅಧ್ಯಯನವರ್ಷ

ಪ್ರೊ. ಎಂ.ವಿ. ಸೀತಾರಾಮಯ್ಯನವರು ಕನ್ನಡ ಸಾಹಿತ್ಯದಲ್ಲಿ ಮರೆಯಲಾಗದ ಸೇವೆಯನ್ನು ಸಲ್ಲಿಸಿ 'ರಾಘವ' ಕಾವ್ಯನಾಮದ ಕವಿ, ಕಲಾವಿದ, ವಿದ್ವಾಂಸರಾಗಿ ಹೆಸರು ಮಾಡಿದ್ದಾರೆ. ಕಥೆ, ಕಾದಂಬರಿ, ಕವನ, ಲಲಿತಪ್ರಬಂಧ, ನಾಟಕ, ಮಕ್ಕಳ ಸಾಹಿತ್ಯದಂಥ ಸೃಜನಶೀಲ ಸಾಹಿತ್ಯ ಪ್ರಕಾರದಲ್ಲಿ ಪ್ರಮುಖರಾಗಿದ್ದಾರೆ. ಪಾಂಡಿತ್ಯ ಕ್ಷೇತ್ರದಲ್ಲೂ ಅಪಾರವಾದ ವಿದ್ವತ್ತನ್ನು ದಾಖಲಿಸಿರುವ ಶ್ರೇಷ್ಠದರ್ಜೆಯ ವಿದ್ವಾಂಸರಾಗಿದ್ದಾರೆ. ಕನ್ನಡದ ಮೊಟ್ಟಮೊದಲ ಕೃತಿ 'ಕವಿರಾಜಮಾರ್ಗ'ವನ್ನು ಶ್ರೀವಿಜಯಕೃತವೆಂದು ನಿರ್ಣಯಿಸಿದ ಕೀರ್ತಿ ಇವರದು. ತಿಮ್ಮಪ್ಪದಾಸರ ಕೃತಿಗಳ ಮೂಲಕ ಅದ್ವೈತ ಕೀರ್ತನ ಸಾಹಿತ್ಯವನ್ನು ಪರಿಚಯಿಸಿದ್ದಾರೆ. ಪ್ರಾಚೀನ ಕನ್ನಡ ವ್ಯಾಕರಣ, ಕನ್ನಡ ಕಾವ್ಯಮೀಮಾಂಸೆಯಂತಹ 'ಶಾಸ್ತ್ರಸಾಹಿತ್ಯ'ವನ್ನು ತಲಸ್ಪರ್ಶಿಶೋಧಿಸಿದ್ದಾರೆ.

ನಾಡು–ನುಡಿ, ಹೋರಾಟ–ಸಂಘಟನಾ ಕ್ಷೇತ್ರದಲ್ಲೂ ಎಂ.ವಿ.ಸೀ.ಯವರು ಸಾಧಕರಾಗಿದ್ದಾರೆ. ಇಳಿವಯಸ್ಸಿನಲ್ಲೂ ಅನಾರೋಗ್ಯದ ನಡುವೆಯೂ ಕನ್ನಡಪರ ಹೋರಾಟಗಳಲ್ಲಿ ಮುಂಚೂಣಿಯಲ್ಲಿರುತ್ತ ಕಾರ್ಯಕರ್ತರನ್ನು ಪ್ರೋತ್ಸಾಹಿಸುತ್ತಿದ್ದರು. ಆಚಾರ್ಯ ಬಿ.ಎಂ.ಶ್ರೀ ಅವರ ಹೆಸರಿನಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸ್ಥಾಪಿಸಿ ನಾಡಿನ ಹೆಮ್ಮೆಯ ಸಂಶೋಧನ ಸಂಸ್ಥೆಯಾಗಿ ಕಟ್ಟಿದರು.

ಇಂತಹ ಹಲವು ಸಾಧನೆಗಳ ನೇತಾರರಾದ ಎಂ.ವಿ. ಸೀತಾರಾಮಯ್ಯನವರು ಪ್ರತಿಷ್ಠಾನದ ಮೂಲಕ 'ಹಸ್ತಪ್ರತಿಶಾಸ್ತ್ರ' ಎಂಬ ನೂತನ ಸಂಶೋಧನ ಕ್ಷೇತ್ರವನ್ನೇ ತೆರೆದು, ಅಳಿಸಿಹೋಗುತ್ತಿದ್ದ ಪ್ರಾಚೀನ ಓಲೆಗರಿ–ಕಾಗದದ ಹಸ್ತಪ್ರತಿಗಳ ಸಂಗ್ರಹ–ಸಂರಕ್ಷಣೆಯತ್ತ ನಾಡಿನ ಗಮನ ಸೆಳೆದು ಹೊಸಪಡೆ ನಿರ್ಮಾಣವಾಗಲು ಪ್ರೇರಕರಾದರು. ಇದೀಗ ಈ ಕ್ಷೇತ್ರ ಸುಪುಷ್ಟವಾಗಿ ಬೆಳೆದು 'ಹಸ್ತಪ್ರತಿ ಅಧ್ಯಯನ' ಎಂಬ ಇನ್ನೊಂದು ಸಂಶೋಧನ ಕ್ಷೇತ್ರವನ್ನು ರೂಪಿಸುತ್ತಿದೆ. ಇದನ್ನು ಇನ್ನಷ್ಟು ವ್ಯಾಪಕವಾಗಿಸುವ ಉದ್ದೇಶದಿಂದ ಎಂ.ವಿ.ಸೀ. ಅವರ ಶತಮಾನೋತ್ಸವ ವರ್ಷವನ್ನು 'ಹಸ್ತಪ್ರತಿ ಅಧ್ಯಯನ ವರ್ಷ' ಎಂದು ಘೋಷಿಸಿ ನಾಡಿನಾದ್ಯಂತ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಎಂ.ವಿ.ಸೀ. ಸಮಗ್ರ ಸಾಹಿತ್ಯ, ಸಂಸ್ಮರಣ ಸಂಪುಟ ಮತ್ತು ಇನ್ನೂ ಕೆಲವು ಕೃತಿಗಳ ಪ್ರಕಟಣೆ, ರಾಜ್ಯಾದ್ಯಂತ ವಿಚಾರಗೋಷ್ಠಿ, ನಾಡು–ನುಡಿ ಜಾಗೃತಿ ಕಾರ್ಯಕ್ರಮಗಳನ್ನು, ಕಮ್ಮಟಗಳನ್ನು ನಡೆಸುವುದು ಇತ್ಯಾದಿ ಹಲವು ಯೋಜನೆಗಳನ್ನು ಹಮ್ಮಿಕೊಳ್ಳಲಾಗಿತ್ತು.

ಈ ಯೋಜನೆಗಳಲ್ಲಿ ಬಹಳ ಮುಖ್ಯವಾದದ್ದು ಸಮಗ್ರ ಸಾಹಿತ್ಯ ಸಂಪುಟ ಪ್ರಕಟನೆ. ಇದನ್ನು ಕನ್ನಡ ಸಂಸ್ಕೃತಿ ಇಲಾಖೆ ಪೂರ್ತಿಯಾಗಿ ವಹಿಸಿಕೊಂಡು ನಮ್ಮ ಬಹುದೊಡ್ಡಭಾರವನ್ನು ಇಳಿಸಿರುವುದಕ್ಕಾಗಿ ಪ್ರತಿಷ್ಠಾನ ಇಲಾಖೆಯ

'ತೊಟ್ಟಿಲು ತೂಗುವ ಕೈ' ನಾಟಕಕ್ಕೆ, 'ಜೀವನ ನಾಟಕ' ಕಾದಂಬರಿಗೆ ರಾಜ್ಯ ಸರ್ಕಾರದ ಬಹುಮಾನ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 'ಆಸ್ವಾದ' ಅಭಿನಂದನ ಗ್ರಂಥ ಹೀಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳು ಸಂದಿವೆ.

ಪ್ರೊ. ಎಂ.ವಿ.ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯವನ್ನು ಇಲಾಖಾ ವತಿಯಿಂದ ಪ್ರಕಟಿಸಲು ಸಹಕರಿಸಿದ ಬಿ.ಎಂ.ಶ್ರೀ ಪ್ರತಿಷ್ಠಾನದ ಡಾ॥ ನಾ.ಗೀತಾಚಾರ್ಯ ಅವರಿಗೂ ಈ ಸಂಪುಟವನ್ನು ಸಂಪಾದಿಸಿಕೊಟ್ಟ ಹಾಗೂ ಕರಡಚ್ಚು ತಿದ್ದಿದ ಪ್ರೊ. ಜಿ. ಅಶ್ವತ್ಥನಾರಾಯಣ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತದೆ.

ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯ ಪ್ರಕಟಣೆಯನ್ನು ಹೊರತರಲು ಸಹಕರಿಸಿದ ಶ್ರೀಮತಿ ದುರ್ಗಾ ಸಿ. ಆವರ್ತಿ, ಜಂಟಿ ನಿರ್ದೇಶಕರು (ಕಾರ್ಯಕ್ರಮ), ಶ್ರೀಮತಿ ಎನ್. ಶಾಂತಮ್ಮ, ಕಾರ್ಯಕ್ರಮ ಅಧಿಕಾರಿ, ಪ್ರಕಟಣಾ ಶಾಖೆ ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು. ಈ ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರು ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು.

ನಾಡಿನ ಸಂಶೋಧನಾ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿರುವ ಪ್ರೊ.ಎಂ.ವಿ.ಸೀತಾರಾಮಯ್ಯ ಅವರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ಒದಗಿಸುವುದು ನಮ್ಮ ಆಶಯವಾಗಿರುತ್ತದೆ. ವಿದ್ವಾಂಸರಾದ ಪ್ರೊ. ಎಂ.ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಸಾಹಿತ್ಯಾಸಕ್ತರು ಪ್ರೀತಿಯಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

ಬೆಂಗಳೂರು
೨೮.೮.೧೩

**(ಕೆ.ಆರ್. ರಾಮಕೃಷ್ಣ)**
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಸಂಪಾದಕರ ಅರಿಕೆ

ಕನ್ನಡ ಸಾಹಿತ್ಯ ಇಪ್ಪತ್ತನೇ ಶತಮಾನದಲ್ಲಿ ಪ್ರವರ್ಧಮಾನವಾದಷ್ಟು ಹಿಂದಿನ ಯಾವ ಶತಮಾನದಲ್ಲೂ ಕಾಣುವುದಿಲ್ಲ. ಯಾವ ಒಬ್ಬ ಕವಿ ಅಥವಾ ಸಾಹಿತಿ ಇಲ್ಲವೇ ವಿದ್ವಾಂಸನಾಗಲಿ ಅಕ್ಷರಶಃ ನೂರಾರು ಕೃತಿಗಳನ್ನು ಒಬ್ಬನೇ ರಚಿಸಿದ ಉದಾಹರಣೆಗಳು ಇಲ್ಲ. ಇನ್ನು ಕಥೆ, ಕಾದಂಬರಿ, ನಾಟಕ, ಪ್ರಬಂಧ, ಜೀವನಚರಿತ್ರೆ, ಆತ್ಮಕಥೆ, ವಿಮರ್ಶೆ, ಕಾವ್ಯ ಮೊದಲಾದ ಹತ್ತಾರು ಸಾಹಿತ್ಯ ಪ್ರಕಾರಗಳಲ್ಲಿ ವಿಪುಲ ಸಾಹಿತ್ಯ ರಚಿಸಿದ ಮಹಾನ್ ವ್ಯಕ್ತಿಗಳು ಇಪ್ಪತ್ತನೇ ಶತಮಾನದಲ್ಲಿ ಮಾತ್ರ ವಿಶೇಷವಾಗಿ ಕಂಡುಬರುತ್ತಾರೆ. ಪತ್ರಿಕೆಗಳು ಎಂಬ ಪತ್ರಿಕೆಗಳ ಪ್ರಕಾರ ವೈವಿಧ್ಯಮಯವಾಗಿ ಬೆಳೆದಿದ್ದು ಇನ್ನೊಂದು ವಿಶೇಷವಾಗಿದೆ. ಎಷ್ಟೋ ಲೇಖಕರು ಪತ್ರಿಕಾಲೇಖಕರಾಗಿ ಮೆರೆದಿದ್ದಾರೆ, ಗ್ರಂಥಲೇಖಕರಾಗಿಯೇ ಇಲ್ಲ. ಧಾರಾವಾಹಿಯಾಗಿ ಪುಸ್ತಕಗಳು ಪ್ರಕಟವಾದರೂ ಗ್ರಂಥಗಳಾಗಿ ಪ್ರಕಟವಾಗದಿರುವ ನಿದರ್ಶನಗಳು ಉಂಟು. ಇನ್ನು ಅಪ್ರಕಟಿತ ಭಾಷಣಗಳು ಅಸಂಖ್ಯಾತವಾಗಿವೆ. ಹೀಗಾಗಿ ಒಬ್ಬ ಹಿರಿಯ ಲೇಖಕನ ಸಮಗ್ರ ಸಾಹಿತ್ಯ, ಪತ್ರಿಕೆ, ಪುಸ್ತಕ, ಭಾಷಣ, ಪತ್ರಗಳು ಮೊದಲಾದ ರೂಪಗಳಲ್ಲಿ ಚೆದರಿ ಹೋಗಿರುವುದು ಹೆಚ್ಚು.

ಇಂಥ ಸನ್ನಿವೇಶದಲ್ಲಿ ಕನ್ನಡದಲ್ಲಿ ಒಬ್ಬ ಸಾಹಿತಿಯ, ಕವಿಯ ವಿದ್ವಾಂಸನ ಸಮಗ್ರ ಕೃತಿಗಳನ್ನು ಅಧ್ಯಯನ ಮಾಡಿ ಮಹಾಪ್ರಬಂಧ (ಪಿಎಚ್.ಡಿ)ಗಳನ್ನು ರಚಿಸುವ ಪರಂಪರೆ ಪ್ರಾರಂಭವಾಯಿತು.

ಅಂತೆಯೇ ಸಮಗ್ರ ಕೃತಿಗಳ ಪ್ರಕಟನೆ ಪ್ರಾರಂಭವಾಯಿತು. ಕೆಲವರದು ಏಕ ಸಂಪುಟದಲ್ಲಿ ಮತ್ತೆ ಕೆಲವರದು ಹಲವು ಸಂಪುಟಗಳಲ್ಲಿ ಪ್ರಕಟವಾಗಿವೆ. ಈ ದಿಸೆಯಲ್ಲಿ ಪ್ರಕಾಶನ ಸಂಸ್ಥೆ, ವಿಶ್ವವಿದ್ಯಾಲಯ, ಕನ್ನಡ ಸಂಸ್ಕೃತಿ ಇಲಾಖೆಗಳು ಪ್ರಮುಖ ಪಾತ್ರ ವಹಿಸಿವೆ. ಬಿ.ಎಂ.ಶ್ರೀ, ಕೈಲಾಸಂ, ಶ್ರೀರಂಗ, ಜಿ.ಎಸ್. ಶಿವರುದ್ರಪ್ಪ, ಕುವೆಂಪು, ಡಿ.ವಿ.ಜಿ, ಶಂ.ಬಾ.ಜೋಶಿ, ಗಳಗನಾಥ, ಮುದ್ದಣ, ಹುಯಿಲಗೊಳ ನಾರಾಯಣ ರಾಯರು, ಸಮಗ್ರ ದಾಸಸಾಹಿತ್ಯ, ಸಮಗ್ರ ವಚನಸಾಹಿತ್ಯ ಇತ್ಯಾದಿ ಸಮಗ್ರ ಕೃತಿಗಳ ಮಾಲೆ ಪ್ರಕಟವಾಗಿವೆ. ಇದರಿಂದ ಎಲ್ಲೆಲ್ಲೂ ಚೆದುರಿ ಹೋದ, ಹಸ್ತಪ್ರತಿಯಲ್ಲಿದ್ದ ಕೃತಿಗಳೆಲ್ಲ ನಾಡಿನ ಜನತೆಗೆ, ಓದಿಗೆ ಅಧ್ಯಯನಕ್ಕೆ ಸಿಗುವಂತಾಗಿದೆ.

ಕನ್ನಡ ಮತ್ತು ಸಂಸ್ಕೃತ ಇಲಾಖೆಯು ಶತಮಾನೋತ್ಸವದ ಸಾಹಿತಿಗಳ ಸಮಗ್ರ ಸಾಹಿತ್ಯ ಪ್ರಕಟನಾ ಯೋಜನೆಯಡಿಯಲ್ಲಿ ಈಗಾಗಲೇ ಹಲವಾರು ಪ್ರಸಿದ್ಧ ಸಾಹಿತಿ, ಕವಿ, ವಿದ್ವಾಂಸರ ಕೃತಿಗಳನ್ನು ಸಮಗ್ರವಾಗಿ ಪ್ರಕಟಿಸಿ ನಾಡಿಗೆ ಮಹೋಪಕಾರ ಮಾಡಿದೆ. ಈ ದಿಸೆಯಲ್ಲಿ ಇದೀಗ ರಾಘವ ಕಾವ್ಯನಾಮದಿಂದಲೂ ಮೈವೆಂಸೀ ಕಾವ್ಯನಾಮದಿಂದಲೂ ಪ್ರಖ್ಯಾತರಾದ ಎಂ.ವಿ. ಸೀತಾರಾಮಯ್ಯನವರು ನಮ್ಮ

ಕಾರ್ಯದರ್ಶಿಗಳಿಗೂ, ನಿರ್ದೇಶಕರಿಗೂ ಕರ್ನಾಟಕ ಸರ್ಕಾರಕ್ಕೂ ಆಭಾರಿಯಾಗಿದೆ. ಇದರ ಫಲವಾಗಿ ಇದೀಗ ನಿಮ್ಮ ಮುಂದೆ ಈ ಸಂಪುಟಗಳಿವೆ.

ಈ ಸಂಪುಟಗಳ ಸಿದ್ಧತೆಗೆ ಉತ್ಸವ ಸಮಿತಿ ಒಂದೊಂದು ಸಂಪುಟಕ್ಕೆ ಒಬ್ಬೊಬ್ಬ ಸಂಪಾದಕರನ್ನು ನಿಯೋಜಿಸಲು ತೀರ್ಮಾನಿಸಿ ಇಲಾಖೆಗೆ ಸೂಚಿಸಿತು. ಇಲಾಖೆ ನಮ್ಮ ಸೂಚನೆಯನ್ನು ಅಂಗೀಕರಿಸಿ ಅವರುಗಳಿಗೇ ಆಯಾ ಸಂಪುಟಗಳ ಸಂಪಾದನೆಯ ಹೊಣೆಯನ್ನು ವಹಿಸಿದೆ. ಆಯಾ ಸಂಪಾದಕರು ತಮ್ಮ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅವರುಗಳಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಎಂ.ವಿ.ಸೀತಾರಾಮಯ್ಯನವರು ೧೦೦ ಗ್ರಂಥಗಳನ್ನೂ, ನೂರಾರು ಲೇಖನಗಳನ್ನೂ ಬರೆದಿದ್ದು, ಅವುಗಳನ್ನೆಲ್ಲ ೧೨ ಸಂಪುಟಗಳಲ್ಲಿ ಅಡಕಗೊಳಿಸಿ ಯಾವ ಯಾವ ಸಂಪುಟಗಳಲ್ಲಿ ಯಾವ ಯಾವ ಕೃತಿ–ಲೇಖನಗಳಿರಬೇಕೆಂಬ ಸಂಯೋಜನೆಯ ಜವಾಬ್ದಾರಿಯನ್ನು ಕಾರ್ಯದರ್ಶಿಗಳಾದ ಡಾ. ನಾ. ಗೀತಾಚಾರ್ಯ ಅವರು ನಿರ್ವಹಿಸಿದ್ದಾರೆ ಅವರೊಂದಿಗೆ ಇನ್ನೊಬ್ಬ ಕಾರ್ಯದರ್ಶಿಗಳಾದ ಎಸ್.ವಿ. ಶ್ರೀನಿವಾಸರಾವ್ ಸಹಕರಿಸಿದ್ದಾರೆ. ಅವರಿಗೆ ಸಮಿತಿ ಕೃತಜ್ಞವಾಗಿದೆ. ಅದರಂತೆಯೇ ಈ ಸಂಪುಟಗಳು ಸಿದ್ಧವಾಗಿದ್ದು, ಈ ರೀತಿ ವಿಂಗಡಿಸಲಾಗಿದೆ.

೧) ಎಂ.ವಿ.ಸೀ. ಕಾವ್ಯ ಸಂಪುಟ
೨) ಎಂ.ವಿ.ಸೀ. ಸಣ್ಣಕಥೆಗಳ ಸಂಪುಟ
೩) ಎಂ.ವಿ.ಸೀ. ಪ್ರಬಂಧಗಳು, ವ್ಯಕ್ತಿಚಿತ್ರಗಳ ಸಂಪುಟ
೪) ಎಂ.ವಿ.ಸೀ. ಕಾವ್ಯಮೀಮಾಂಸೆ – ಸಾಹಿತ್ಯ ವಿಮರ್ಶೆ ಸಂಪುಟ
೫) ಎಂ.ವಿ.ಸೀ. ಅವರ ಮಕ್ಕಳ ಸಾಹಿತ್ಯ ಮತ್ತು ನಾಟಕ ಸಂಪುಟ
೬) ಎಂ.ವಿ.ಸೀ. ಅವರ ಗ್ರಂಥಸಂಪಾದನೆ – ಹಸ್ತಪ್ರತಿಶಾಸ್ತ್ರ ಸಂಪುಟ
೭) ಎಂ.ವಿ.ಸೀ. ಅವರ ಮುನ್ನುಡಿ – ಲೇಖನ – ಭಾಷಣ ಸಂಪುಟ
೮) ಎಂ.ವಿ.ಸೀ. ಜೀವನ ಚರಿತ್ರೆ – ಅನುವಾದ ಸಂಪುಟ
೯) ಎಂ.ವಿ.ಸೀ. ಅವರ ಇಂಗ್ಲೀಷ್ ಲೇಖನ ಸಂಪುಟ
೧೦) ಎಂ.ವಿ.ಸೀ. ಅವರ ವ್ಯಾಕರಣ, ಛಂದಸ್ಸಂಪುಟ
೧೧) ಎಂ.ವಿ.ಸೀ. ಅವರ ವಿಚಾರ ಸಾಹಿತ್ಯ ಸಂಪುಟ
೧೨) ಎಂ.ವಿ.ಸೀ. ಅವರ ಕಾದಂಬರಿ ಸಂಪುಟ

ತಮ್ಮ ಕೃತಿಗಳ ಹಕ್ಕನ್ನು ಎಂ.ವಿ.ಸೀ. ಅವರೇ ಉಯಿಲಿನ ಮೂಲಕ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಅದನ್ನು ಅವರ ಮಕ್ಕಳಾದ ಎಂ.ಎಸ್. ಭಾಸ್ಕರ್, ಎಂ.ಎಸ್. ರಾಮಪ್ರಸಾದ್, ಎಸ್.ಟಿ. ರಾಧಾಕೃಷ್ಣ, ಎಂ.ಎಸ್. ಶೇಷಾದ್ರಿನಾಥ್ ಮತ್ತು ಶಾರದಾನಾಗರಾಜ್ ಅವರುಗಳು ಸಮ್ಮತಿಸಿ ಸಂತೋಷವಾಗಿ ಪ್ರತಿಷ್ಠಾನದೊಂದಿಗೆ, ಕನ್ನಡ ಸಂಸ್ಕೃತಿ ಇಲಾಖೆಗೆ ಕೈಜೋಡಿಸುವ ಮೂಲಕ ಕನ್ನಡದ ಧೀಮಂತಸಾಹಿತಿ – ವಿದ್ವಾಂಸ – ಸಂಘಟಕ ಪ್ರೊ. ಎಂ.ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಈ ಶತಮಾನೋತ್ಸವ ಸಂದರ್ಭದಲ್ಲಿ ಕನ್ನಡಿಗರಿಗೆ ದೊರಕುವಂತಾಗಿರುವುದಕ್ಕೆ ನಮಗೆ ಸಂತಸವಾಗಿದೆ.

**ಡಾ. ಪಿ.ವಿ. ನಾರಾಯಣ**
ಅಧ್ಯಕ್ಷರು
ಎಂ.ವಿ.ಸೀ. ಶತಮಾನೋತ್ಸವ ಸಮಿತಿ

**ಪ್ರೊ. ಎಂ.ಎಚ್. ಕೃಷ್ಣಯ್ಯ**
ಗೌರವಾಧ್ಯಕ್ಷರು
ಎಂ.ವಿ.ಸೀ. ಶತಮಾನೋತ್ಸವ ಸಮಿತಿ

ನಾಡಿನಾದ್ಯಂತ ಚೆದುರಿ ಹೋಗಿವೆ. ಅಚ್ಚಾದ ಹಲವಾರು ಲೇಖನಗಳು ಗ್ರಂಥಗಳು ಸಮಗ್ರ ಸಾಹಿತ್ಯಕ್ಕೆ ಸೇರಿಸಲು ಲಭ್ಯವಾಗಿಲ್ಲ. ಉದಾಹರಣೆಗೆ ಈ ಜೀವನಚರಿತ್ರೆ ಮತ್ತು ಅನುವಾದ ಸಂಪುಟದಲ್ಲಿ ಸೇರಬೇಕಾದ ಶಿಲಾಮುಖ ಅನುವಾದಿತಕೃತಿ ಮತ್ತು ಇತರ ಹಲವಾರು ಅನುವಾದಿತ ಲೇಖನಗಳು ಹುಡುಕಿದರೂ ಸಿಕ್ಕಿಲ್ಲ. ಹಾಗಾಗಿ ಇಲ್ಲಿ ಸೇರಿಲ್ಲ. ಅನುವಾದಿತ ಕಥೆಗಳನ್ನು ಸಣ್ಣಕಥೆಗಳ ಸಂಪಾದಕರು ತಮ್ಮ ಸಂಪುಟದಲ್ಲಿ ಸೇರಿಸದಿದ್ದ ಪ್ರಯುಕ್ತ ಇಲ್ಲಿ ಸೇರಿಸಿದೆ. ಜೀವನಚರಿತ್ರೆ, ವ್ಯಕ್ತಿಚಿತ್ರಗಳಲ್ಲಿ ಹಲವಾರನ್ನು ಇತರ ಸಂಪುಟಗಳ ಸಂಪಾದಕರು ತಮ್ಮ ಸಂಪುಟಗಳಲ್ಲಿ ಸೇರಿಸಿಕೊಂಡಿದ್ದು ಈಗಾಗಲೇ ಆ ಸಂಪುಟಗಳು ಪ್ರಕಟವಾಗಿರುವುದರಿಂದ ಆ ಬರಹಗಳನ್ನು ಮಾಲೆಯಲ್ಲಿ ಪ್ರನರುಕ್ತವಾಗಬಾರದೆಂಬ ಕಾರಣದಿಂದ ಈ ಸಂಪುಟದಲ್ಲಿ ಸೇರಿಸಿಲ್ಲ. ಇನ್ನು ಅನುವಾದ ವಿಭಾಗದಲ್ಲಿ ಇಂಗ್ಲಿಷಿನಿಂದ ಕನ್ನಡಕ್ಕೆ ಎಂ.ವಿ.ಸೀ. ಅವರು ಅನುವಾದಿಸಿರುವ ಕಥೆ, ಕಾದಂಬರಿ, ಪ್ರಬಂಧ ವಿಜ್ಞಾನ, ಸ್ತೋತ್ರ, ಮೊದಲಾದುವನ್ನು ಮಾತ್ರ ಸಂಗ್ರಹಿಸಲಾಗಿದೆ. ಕನ್ನಡದಿಂದ ಇಂಗ್ಲಿಷಿಗೆ ಎಂವಿಸೀ ಅವರು ಯುಧಿಷ್ಠಿರ, ಮೊದಲಾದ ಕೃತಿಗಳನ್ನು ಹತ್ತಾರು ಲೇಖನಗಳನ್ನು ಅನುವಾದಿಸಿದ್ದಾರೆ. ಅವುಗಳು ಇಂಗ್ಲಿಷ್ ಲೇಖನ ಗ್ರಂಥಗಳ ಸಂಪುಟದಲ್ಲಿ ಪ್ರಕಟವಾಗುವುದರಿಂದ ಇಲ್ಲಿ ಸೇರಿಲ್ಲ. ಹೀಗಾಗಿ ಎಂವಿಸೀ ಅವರ ಸಮಗ್ರ ಜೀವನಚರಿತ್ರೆಗಳ ಬರಹಗಳೂ ಅನುವಾದಗಳು ಹಲವು ಸಂಪುಟಗಳಲ್ಲಿರುವ ಅನುವಾದ ಬರಹಗಳನ್ನು ಸಮೀಕ್ಷಿಸಿದರೆ ಎಂ.ವಿ.ಸೀ. ಅವರ ಸಮಗ್ರ ಅನುವಾದ ಸಾಹಿತ್ಯದ, ಜೀವನಚರಿತ್ರೆ ಸಾಹಿತ್ಯದ ಕೊಡುಗೆ ಏನೆಂಬುದು ತಿಳಿಯುತ್ತದೆ.

ಪ್ರಕೃತ ಜೀವನ ಚರಿತ್ರೆ ಮತ್ತು ಅನುವಾದ ಸಂಪುಟದಲ್ಲಿ ಆತ್ಮಕಥೆ (ಪ್ರಸಿದ್ಧ) ಜೀವನಚರಿತ್ರೆ (ಅಪೂರ್ಣ) ಜೀವನಚರಿತ್ರೆ ವಿಭಾಗದಲ್ಲಿ ಅನುವಾದ ವಿಭಾಗದಲ್ಲಿ ೨ ಕಾದಂಬರಿಗಳು ೨ ಕಥಾಸಂಗ್ರಹಗಳು ೨ ಬಿಡಿ ಕಥೆಗಳು ೧ ವಿಜ್ಞಾನಗ್ರಂಥ ೧ ಸ್ತೋತ್ರಗ್ರಂಥ ಹಾಗೂ ಅನುಬಂಧಗಳೂ ಸೇರಿವೆ.

ನವೋದಯ ಸಾಹಿತಿಗಳಲ್ಲಿ ಅನೇಕರು ಕೇವಲ ಕವಿ ಸಾಹಿತಿಗಳಷ್ಟೇ ಆಗಿರಲಿಲ್ಲ ವಿದ್ವಾಂಸರೂ ಆಗಿದ್ದರು. ಅವರಲ್ಲಿ ಎಂ.ವಿ.ಸೀ. ಅವರೂ ಒಬ್ಬರು. ನವ್ಯ ಸಾಹಿತ್ಯ ಮತ್ತು ನವ್ಯೋತ್ತರ ಸಾಹಿತಿಗಳಲ್ಲಿ ಅನೇಕರು ಕೇವಲ ಕವಿ ಸಾಹಿತಿಗಳು ಆಗಿದ್ದಾರೆ ವಿದ್ವಾಂಸರು, ಸಾಹಿತಿಗಳು ಬಹು ಭಾಷಾ ಪರಿಣತರಾಗಿದ್ದರು. ಆದರೆ ಆಧುನಿಕ ತಲೆಮಾರಿನಲ್ಲಿ ಇವರ ಸಂಖ್ಯೆ ಅತ್ಯಲ್ಪ ಹಾಗಾಗಿ ಅನುವಾದ ಸಾಹಿತ್ಯದಲ್ಲಿ ಶಾಸ್ತ್ರಗ್ರಂಥಗಳ ಅನುವಾದಕರು ಕಡಿಮೆ ಎಂದು ನನ್ನ ಅನಿಸಿಕೆ ಈ ಹಿನ್ನೆಲೆಯಿಂದ ನೋಡಿದಾಗ ಎಂವಿಸೀ ಅವರ ಕೊಡುಗೆ ಕನ್ನಡಕ್ಕೆ ಗಣ್ಯವಾಗಿದೆ. ಈ ಸಂಪುಟದಲ್ಲಿ ಅನುವಾದ ಸಾಹಿತ್ಯಕ್ಕೆ ನೀಡಿದ ಕೊಡುಗೆ ಗಮನಿಸುವಂಥದ್ದಾಗಿದೆ.

ಈ ಸಂಪುಟವನ್ನು ಸಂಪಾದಿಸುವಲ್ಲಿ ಅಚ್ಚಿನಪ್ರತಿಗಳನ್ನು ಹಸ್ತಪ್ರತಿಯನ್ನು (ಸೌಂದರ್ಯಲಹರಿ) ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ, ಎಂ.ವಿ.ಸೀ. ಪುತ್ರರಾದ ಎಂ.ಎಸ್. ಭಾಸ್ಕರ್, ಎಂ.ಎಸ್. ರಾಮಪ್ರಸಾದ್, ಅವರು ಪ್ರತಿಷ್ಠಾನದ ಕಾರ್ಯದರ್ಶಿ ನಾ. ಗೀತಾಚಾರ್ಯರೂ ನೆರವಾಗಿದ್ದಾರೆ. ಈ ಸಂಪುಟವನ್ನು ಸಂಪಾದಿಸಲು

ನಾಡಿನ ಪ್ರಸಿದ್ಧ ವಿದ್ವಾಂಸರಲ್ಲಿ ಒಬ್ಬರು. ಇವರ ಸಮಗ್ರ ಸಾಹಿತ್ಯ ಸಂಪುಟಗಳು ಹೊರಬರುತ್ತಿರುವುದು ಶ್ಲಾಘನೀಯ ಕಾರ್ಯವಾಗಿದೆ.

ಹೊಸಗನ್ನಡದ ಆಚಾರ್ಯಪುರುಷರಾದ, ಬಿ.ಎಂ.ಶ್ರೀ, ತೀ.ನಂ.ಶ್ರೀ, ಕುವೆಂಪು, ಟಿ.ಎಸ್. ವೆಂಕಣ್ಣಯ್ಯ, ಎ.ಆರ್.ಕೃ., ಡಿ.ವಿ.ಜಿ. ಮಾಸ್ತಿ ಮೊದಲಾದವರ ಮಾರ್ಗದರ್ಶನದಲ್ಲಿ ತಮ್ಮ ಜೀವನಪಥ ಹಾಗೂ ಸಾಹಿತ್ಯಪಥಗಳನ್ನು ರೂಪಿಸಿಕೊಂಡ ಎಂ.ವಿ.ಸೀ. ಅವರು ಅರ್ಧಶತಮಾನಕ್ಕೂ ಹೆಚ್ಚಿನ ಕಾಲ ಕನ್ನಡ ಸಾರಸ್ವತ ಲೋಕಕ್ಕೆ ಕಥೆ, ಕವನ, ಕಾದಂಬರಿ ನಾಟಕ, ಅನುವಾದ, ಗ್ರಂಥ ಸಂಪಾದನೆ, ಕಾವ್ಯಮೀಮಾಂಸೆ ಸಂಶೋಧನೆ, ಶಾಸ್ತ್ರಸಾಹಿತ್ಯ, ಮಕ್ಕಳಸಾಹಿತ್ಯ ಮೊದಲಾದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅಧ್ಯಯನ ಮಾಡಿ ನೂರಾರು ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಕನ್ನಡಸಾಹಿತ್ಯ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ. ಹಸ್ತಪ್ರತಿ ಶಾಸ್ತ್ರದ ಕ್ಷೇತ್ರದಲ್ಲಿ ಗಣ್ಯಕಾರ್ಯ ಮಾಡಿದ್ದಾರೆ. ಸಂಶೋಧನೆಗೇ ಪ್ರಾಶಸ್ತ್ಯ ನೀಡಿ ತಮ್ಮ ಗುರುಗಳಿಂದ ಬಿ.ಎಂ.ಶ್ರೀ ಅವರ ಹೆಸರಿನಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವೆಂಬ ಸಂಶೋಧನ ಸಂಸ್ಥೆ ಪ್ರಾರಂಭಿಸಿ, ಲೋಚನ ಎಂಬ ವಿದ್ವತ್ ನಿಯತಕಾಲಿಕೆಯನ್ನು ಅನೇಕ ಸಂಶೋಧನಕೃತಿಗಳನ್ನು ಆ ಸಂಸ್ಥೆಯ ಮೂಲಕ ಹೊರತಂದಿದ್ದಾರೆ. ಕನ್ನಡ ಚಳವಳಿಯಲ್ಲಿ ಪಾತ್ರವಹಿಸಿದ್ದಾರೆ. ಕ್ರಿಯಾಶಾಲಿ ಸಾಹಿತಿಗಳಾಗಿ ಅನೇಕ ಯುವಸಾಹಿತಿಗಳಿಗೆ ಸ್ಫೂರ್ತಿ ಮಾರ್ಗದರ್ಶನ ನೀಡಿದ್ದಾರೆ. ಕನ್ನಡ ಸಾಹಿತ್ಯ ದಿಗಂತಗಳನ್ನು ವಿಸ್ತರಿಸಿದ್ದಾರೆ. ಕನ್ನಡದಲ್ಲಷ್ಟೇ ಅಲ್ಲದೆ ಇಂಗ್ಲಿಷಿನಲ್ಲಿಯೂ ಪರಿಣತರಾಗಿದ್ದ ಎಂವಿಸೀ ಅವರು ಇಂಗ್ಲಿಷಿನಲ್ಲೂ ಹಲವಾರು ಸ್ವತಂತ್ರ ಕೃತಿಗಳನ್ನು ರಚಿಸಿದ್ದಾರೆ. ಇಂಗ್ಲೀಷಿನಿಂದ ಕನ್ನಡಕ್ಕೆ ಕನ್ನಡದಿಂದ ಇಂಗ್ಲಿಷಿಗೆ ಹತ್ತಾರು ಕೃತಿಗಳನ್ನು ಅನುವಾದಿಸಿದ್ದಾರೆ.

ಜೀವನಚರಿತ್ರೆಗಳ ಇತಿಹಾಸವನ್ನು ಕುರಿತು ಅವರು ರಚಿಸಿದ ಸಮಗ್ರಾವಲೋಕನ ಕೃತಿ ಕನ್ನಡ ಜೀವನಚರಿತ್ರೆ, ಶಾಸ್ತ್ರಸಾಹಿತ್ಯ, ಕವಿರಾಜಮಾರ್ಗ, ಹಸ್ತಪ್ರತಿಶಾಸ್ತ್ರದ ಮಣಿಹ ಗ್ರಂಥ ಮೊದಲಾದವು ಕನ್ನಡಕ್ಕೆ ವಿಶಿಷ್ಟ ಕೊಡುಗೆಗಳಾಗಿವೆ.

ಇದೀಗ ಎಂ.ವಿ.ಸೀ. ಅವರ ಸಮಗ್ರ ಕೃತಿಗಳು ೧೨ ಸಂಪುಟಗಳಲ್ಲಿ ಕನ್ನಡ ಸಂಸ್ಕೃತಿ ಇಲಾಖೆಯಿಂದ ಪ್ರಕಟವಾಗುತ್ತಿದೆ. ಈಗಾಗಲೇ ಎಂ.ವಿ.ಸೀ. ಸಣ್ಣಕತೆಗಳ ಸಂಪುಟ ಎಂ.ವಿ.ಸೀ. ಪ್ರಬಂಧಗಳು, ವ್ಯಕ್ತಿಚಿತ್ರಗಳ ಸಂಪುಟ (೩) ಎಂ.ವಿ.ಸೀ. ಕಾವ್ಯಮೀಮಾಂಸೆ–ಸಾಹಿತ್ಯ ವಿಮರ್ಶೆ (೨) ಭಾಗಗಳು (೪) ಎಂ.ವಿ.ಸೀ. ಮಕ್ಕಳ ಸಾಹಿತ್ಯ ಮತ್ತು ಮಕ್ಕಳ ನಾಟಕ ಸಂಪುಟ (೫) ಪ್ರಕಟವಾಗಿವೆ ಜೀವನ ಚರಿತ್ರೆ ಮತ್ತು ಅನುವಾದ ಸಂಪುಟ (೮) ಉಳಿದ ಸಂಪುಟಗಳಾದ ಮುನ್ನುಡಿ ಲೇಖನ, ಭಾಷಣ ಸಂಪುಟ (೭) ವ್ಯಾಕರಣ ಛಂದಸ್ಸು ಸಂಪುಟ (೬) ಗ್ರಂಥ ಸಂಪಾದನೆ ಮತ್ತು ಹಸ್ತ ಪ್ರತಿ ಶಾಸ್ತ್ರ ಸಂಪುಟ (೯) ವಿಚಾರ ಸಾಹಿತ್ಯ ಸಂಪುಟ (೧೦) ಎಂ.ವಿ.ಸೀ. ಅವರ ಇಂಗ್ಲಿಷ್ ಲೇಖನಗಳು ಗ್ರಂಥಗಳು ಸಂಪುಟ (೧೧) ಕಾದಂಬರಿ ಸಂಪುಟ (೧೨) ಇವು ಹಸ್ತಪ್ರತಿ ಹಂತದಲ್ಲಿವೆ. ಹತ್ತು ಸಾವಿರಕ್ಕೂ ಹೆಚ್ಚಿನ ಪುಟಗಳಲ್ಲಿ ೧೦೦ಕ್ಕೂ ಮಿಕ್ಕ ಗ್ರಂಥಗಳನ್ನು ನೀಡಿರುವ ಎಂ.ವಿ.ಸೀ. ಅವರ ಕೃತಿಗಳು, ಲೇಖನಗಳು



# ಪ್ರಸ್ತಾವನೆ

ಎಂ.ವಿ.ಸೀತಾರಾಮಯ್ಯನವರು ನವೋದಯಕಾಲದ ಸಾಹಿತಿಗಳಾದರೂ ನವ್ಯ 'ದಲಿತ' 'ಬಂಡಾಯ' ಸಾಹಿತ್ಯದ ನೆಲೆ ಬೆಲೆಗಳನ್ನು ತಿಳಿದ ಸಾಹಿತಿಗಳಾಗಿದ್ದರು. ಅವರು ಕೇವಲ ಬರಹಗಾರ ಸಾಹಿತಿ ಅಷ್ಟೇ ಆಗಿರಲಿಲ್ಲ, ಕ್ರಿಯಾಶಾಲಿ ಕನ್ನಡ ಚಳವಳಿಯ ಬರಹಗಾರರೂ ಆಗಿದ್ದರು. ಎಂಬತ್ತು ವರ್ಷಗಳು ಬದುಕಿ ಬಾಳಿದ ಅವರು [ಜನನ ೯–೯–೧೯೧೦] ಸುಮಾರು ಶತಮಾನಕ್ಕೂ ಹೆಚ್ಚುಕಾಲ ಕನ್ನಡ ಸಾಹಿತ್ಯ ಸೇವೆ, ಮುಕ್ಕಾಲು ಚಿತ್ರ ಸಂಗೀತಗಳಲ್ಲಿ ಕಲಾಸೇವೆ ಮಾಡಿದರು ವಿದ್ವತ್ಪೂರ್ಣ ಗ್ರಂಥಗಳನ್ನು ರಚಿಸಿದ. [ಕವಿರಾಜ ಮಾರ್ಗ ಇತ್ಯಾದಿ] ವಿದ್ವಾಂಸರೂ ಆಗಿದ್ದರು. ಹೀಗೆ ಸಾಹಿತಿ, ಕವಿ, ನಾಟಕಕಾರ, ಕಲಾವಿದ, ವಿಮರ್ಶಕ, ವಿದ್ವಾಂಸ, ಚಳುವಳಿಕಾರ, ಅಧ್ಯಾಪಕ ಮೊದಲಾದ ಬಹುಮುಖ ಪ್ರತಿಭೆಯ ಕನ್ನಡಿಗರಾದ ಎಂ.ವಿ.ಸೀ ಅವರು ಕನ್ನಡಕ್ಕೆ ಕೊಟ್ಟ ಕೊಡುಗೆಗಳು ಅಪಾರ, ಕನ್ನಡದ ಮೇಜರ್ ಸಾಹಿತಿಗಳಲ್ಲಿ ಅವರೊಬ್ಬರು. ಎಂ.ವಿ.ಸೀ. ಅವರು ಅನುವಾದಕ್ಷೇತ್ರದಲ್ಲಿ ಮತ್ತು ಜೀವನಚರಿತ್ರೆ ಪ್ರಕಾರದಲ್ಲಿ ಕನ್ನಡಕ್ಕೆ ಕೊಟ್ಟ ಕೊಡುಗೆ ಅಪಾರವಾದುದು ವಿಶಿಷ್ಟವಾದುದು ಅವರ ಈ ಎರಡು ಸಾಹಿತ್ಯ ಪ್ರಕಾರಗಳಲ್ಲಿ ಅವರು ನೀಡಿದ ಕೊಡುಗೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದೆ.

ಹಲವು ಭಾಷೆಗಳಲ್ಲಿ ಆಳ ಪರಿಚಯ ಹೊಂದಿದ್ದರೂ ಕನ್ನಡ ಇಂಗ್ಲಿಷ್ ಸಂಸ್ಕೃತ ಭಾಷೆಗಳಲ್ಲಿ ವಿದ್ವಾಂಸರಾದ ಎಂ.ವಿ.ಸೀ ಅವರು ಕನ್ನಡದಲ್ಲೂ ಇಂಗ್ಲಿಷಿನಲ್ಲೂ ಸ್ವತಂತ್ರವಾಗಿ ಬರೆಯಬಲ್ಲವರೂ ಅನುವಾದ ಮಾಡುವವರೂ ಆದ ಸವ್ಯಸಾಚಿ ಆಗಿದ್ದರು. ಸಂಸ್ಕೃತದಿಂದಲೂ ಅನುವಾದ ಮಾಡಬಲ್ಲರಾಗಿದ್ದರು. ಏಳು ಇಪ್ಪಾರಿನ ಮನೆ (ಕಾದಂಬರಿ) ಮುಂತಾದ ಕೃತಿಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ತಂದಿದ್ದಾರೆ. ಇದಲ್ಲದೆ ತಾವೇ ಕನ್ನಡದಲ್ಲಿ ಬರೆದ ರನ್ನ, ಯುಧಿಷ್ಠಿರ, ಎಲ್. ರಾಜಾರಾವ್, ಮೊದಲಾದ ಕೃತಿಗಳನ್ನು ಇಂಗ್ಲಿಷಿಗೆ ತಂದಿದ್ದಾರೆ.

ಇಂಗ್ಲಿಷಿನಲ್ಲಿ ಸ್ವತಂತ್ರವಾಗಿ ಮುದ್ದಣನನ್ನು ಕುರಿತು ಬರೆದಿದ್ದಾರೆ. ಇಂಗ್ಲಿಷಿನಲ್ಲಿ ಭಾರತೀಯ ಸಾಹಿತ್ಯ ವಿಶ್ವಕೋಶಕ್ಕೆ ಕಿರು ಲೇಖನಮಾಲೆಯನ್ನೇ ಬರೆದುಕೊಟ್ಟಿದ್ದಾರೆ. ಆ ಪೈಕಿ ಬ್ರಹ್ಮಶಿವ, ಚಾಮರಸ, ಚಿಕ್ಕದೇವರಾಜ, ದುರ್ಗಸಿಂಹ ಮುಮ್ಮಡಿ ಕೃಷ್ಣರಾಜ ಒಡೆಯರ್, ಬಸವಪ್ಪಶಾಸ್ತ್ರಿ, ಹಳಕಟ್ಟಿ, ಸರ್ವಜ್ಞ ರನ್ನ, ಪುರಂದರದಾಸರ ಜೀವನ ವಿಚಾರ, ಚಾಮರಾಜರಾಯ, ಅತ್ತಿಮಬ್ಬೆ ಮೊದಲಾದ ಕೃತಿಗಳು ಕನ್ನಡಸಾಹಿತ್ಯ ಆಧಾರಿತ ಕೃತಿಗಳಾಗಿ ಇಂಗ್ಲಿಷಿನಲ್ಲಿ ಬರೆದಿದ್ದಾರೆ.

ಜೀವನಚಿತ್ರ, ಕಾದಂಬರಿಗಳ ಜತೆಗೆ ಹತ್ತಾರು ಇಂಗ್ಲಿಷ್ ಕವಿತೆಗಳನ್ನು ಪದ್ಯರೂಪವಾಗಿ ಅನುವಾದಿಸಿದ್ದಾರೆ. ಉದಾಹರಣೆಗೆ ಡೋರ, ಟೆನಿಸನ್

ಆ ಮೂಲಕ ಎಂ.ವಿ.ಸೀ. ಅವರ ಜೀವನ ಚರಿತ್ರೆ ಮತ್ತು ಅನುವಾದ ಕೃತಿಗಳನ್ನು ಅಧ್ಯಯನ ಮಾಡಲು, ಈ ಸಂಪುಟ ಸಂಪಾದಿಸಲು ಅವಕಾಶವಿತ್ತ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೂ ಋಣಿಯಾಗಿದ್ದೇನೆ. ಈ ಸಂಪುಟ ಸುಂದರವಾಗಿ ಹೊರಬರಲು ಮಯೂರ ಪ್ರಿಂಟ್ ಆ್ಯಡ್ಸ್‌ನ ಸತೀಶ್ ಅವರು ಶ್ರಮಿಸಿದ್ದಾರೆ. ಅವರಿಗೆ ವಂದನೆಗಳು. ಜೀವನಚರಿತ್ರೆ ಮತ್ತು ಅನುವಾದ ಕೃತಿಗಳ ಬಗ್ಗೆ ಪ್ರಸ್ತಾವನೆಯನ್ನು ಪ್ರತ್ಯೇಕವಾಗಿ ಬರೆದಿದೆ.

ಎಂ.ವಿ.ಸೀ. ಅವರ ಸಮಗ್ರ ಜೀವನದ ಸಾಹಿತ್ಯ ಪಥ, ಸೂಚಿಗಳನ್ನು ಅವರನ್ನು ಕುರಿತ ಗ್ರಂಥ ಸಂಚಿಕೆ ಸೂಚಿಕೆಗಳನ್ನು ಓದುಗರ ಅನುಕೂಲಕ್ಕಾಗಿ ಅನುಬಂಧದಲ್ಲಿ ಕೊಡಲಾಗಿದೆ. ಕನ್ನಡದಲ್ಲಿ ಜೀವನಚರಿತ್ರೆಗಳನ್ನು ಅನುವಾದಗಳನ್ನು ಓದುವ, ಅಧ್ಯಯನ ಮಾಡುವವರಿಗೆ ಈ ಸಂಪುಟ ಉತ್ತಮ ಕೊಡುಗೆಯೆಂದು ನಂಬಿದ್ದೇನೆ.

ತಾ. ೩೧-೩-೨೦೧೨ **ಪ್ರೊ|| ಜಿ. ಅಶ್ವತ್ಥನಾರಾಯಣ**
ಬೆಂಗಳೂರು (ನಿವೃತ್ತ ಕನ್ನಡ ಪ್ರಾಧ್ಯಾಪಕ)

ಮೂರ್ತಿರಾವ್ ಜಿ.ಎಸ್. ಅಮೂರ್, ಮುಂತಾದವರ ಸಾಲಿಗೆ ಸೇರುವ ಆಧುನಿಕ ವಿದ್ವಾಂಸ ಸಾಹಿತಿಗಳಲ್ಲಿ ಎಂ.ವಿ.ಸೀ. ಅವರು ಒಬ್ಬರು.

**ಇಂಗ್ಲಿಷ್‌ನಲ್ಲಿ ವಿಮರ್ಶಾಬರಹಗಳು**

ಅನುವಾದ ಒಂದು ರೀತಿ ಯಾಂತ್ರಿಕ ಕ್ರಿಯೆ ಆಗಿರುತ್ತದೆ. ಮೂಲಲೇಖಕರ ವಿಚಾರಸರಣಿ, ಭಾಷಾಶೈಲಿಯನ್ನು ಇನ್ನೊಂದು ಭಾಷೆಗೆ ತರುವ ವಾಹಕಶಕ್ತಿ ಅನುವಾದಕ ಆಗಿರುತ್ತಾನೆ. ಅವನ ಸ್ವಂತಿಕೆ ಪ್ರತಿಭೆಯಾಗಿ ಪಾಂಡಿತ್ಯವಾಗಿ ಕವಿಯನ್ನು ಅರ್ಥಮಾಡಿಕೊಳ್ಳುವುದರಲ್ಲಿ ಪ್ರತಿಭೆಯನ್ನು, ಭಾಷೆಯನ್ನು ಅನುವಾದಿಸುವಲ್ಲಿ ಪಾಂಡಿತ್ಯವನ್ನು ತೋರಿಸುತ್ತಾನೆ ಅಷ್ಟೆ.

ಕನ್ನಡದ ಕೃತಿಗಳನ್ನು ಇಂಗ್ಲಿಷಿಗೆ ಅನುವಾದಿಸುವುದಕ್ಕಿಂತ ಭಿನ್ನ ಪ್ರತಿಭೆಯನ್ನು ಕನ್ನಡ ಕೃತಿಗಳ ಇಂಗ್ಲಿಷ್ ವಿಮರ್ಶೆ ಬರಹಗಳಲ್ಲಿ ಕಾಣುತ್ತೇವೆ. ಗ್ರಂಥವಿಮರ್ಶೆ ಮಾಡುವಾಗ ಮೂಲದ ಭಾಗಗಳನ್ನು ಉದ್ಧರಿಸುವಲ್ಲಿ ಅನುವಾದಕನಾಗಿ ಮತ್ತು ವಿಮರ್ಶಿಸುವಲ್ಲಿ ಇಂಗ್ಲಿಷ್ ಲೇಖಕನಾಗಿ, ವಿಮರ್ಶಕ ಕಾಣಿಸಿಕೊಳ್ಳುತ್ತಾನೆ. ಎಷ್ಟೋಜನ ಅನುವಾದಕರು. ಅನುವಾದಕರೆಂದಷ್ಟೆ ಎನಿಸಿಕೊಳ್ಳಬಲ್ಲರು, ಜತೆಗೆ ವಿಮರ್ಶಕರಾಗಿಯೂ ಇಂಗ್ಲಿಷಿನಲ್ಲಿ ಬರೆಯುವುದಿಲ್ಲ ಎಂ.ವಿ.ಸೀ. ಅವರಲ್ಲಿ ಉಭಯಪ್ರತಿಭೆಯು ಇತ್ತು. ಅವರು ಗ್ರಂಥ ಲೇಖನಗಳನ್ನು ಅನುವಾದಿಸುವುದರ ಜತೆಗೆ ಆ ಬಗ್ಗೆ ಸ್ವತಂತ್ರವಾಗಿ ಬರೆಯಬಲ್ಲರಾಗಿದ್ದರು ಡೆಕ್ಕಾನ್‌ಹೆರಾಲ್ಡ್, ಹಿಂದು ಪತ್ರಿಕೆಗಳಲ್ಲಿ ನಿರಂತರವಾಗಿ ಹಲವು ಕಾಲ ವಿಮರ್ಶಾಲೇಖನಗಳನ್ನು ಕನ್ನಡ ಗ್ರಂಥಗಳ ಬಗ್ಗೆ ಬರೆದಿದ್ದಾರೆ. ಆ ಪೈಕಿ ಕೆಲವು ಗ್ರಂಥಗಳ ಬಗ್ಗೆ ಬರಹಗಳು ಗಮನಾರ್ಹವಾಗಿವೆ.

ನಗೆಯನೆಲೆ (ಎಸ್.ಕೆ. ರಾಮಚಂದ್ರರಾವ್, ಪ್ರಬಂಧ)

ಕೇದಿಗೆವನ (ಕಾದಂಬರಿ – ತ.ರಾ.ಸು)

ಕನ್ನಡ ಡಿಂಡಿಮ (ಕವನ ಸಂಕಲನ – ಕುವೆಂಪು)

ದೇವದಾಸಿ (ನಾಟಕ )

ಶಬ್ದಮಣಿ ದರ್ಪಣ ದಿಗ್ದರ್ಶನ (ವ್ಯಾಕರಣ : ದೊಡ್ಡಸ್ವಾಮಿ)

ಡಾ. ಜಕೀರ್ ಹುಸೇನ್ (ಜೀವನ ಚರಿತ್ರೆ – ಮತ್ತೂರು ಕೃಷ್ಣಮೂರ್ತಿ) ಇತ್ಯಾದಿ

ಇಂಗ್ಲಿಷ್ ಅನುವಾದಿತ ಕೃತಿಗಳನ್ನು ರಾಬಿನ್‌ಹುಡ್ ಆಲಿವರ್ ಟ್ವಿಸ್ಟ್ ಚಕ್ರವರ್ತಿಯ ಕೋಗಿಲೆ ಮೊದಲಾದವನ್ನು ಮೂಲಕ್ಕೆ ಹೋಲಿಸಿ ಕನ್ನಡ ಪತ್ರಿಕೆಗಳಲ್ಲಿ ಎಂ.ವಿ.ಸೀ. ಅವರು ವಿಮರ್ಶಿಸಿದ್ದಾರೆ.

ಹೀಗೆ ಕನ್ನಡ ಇಂಗ್ಲಿಷಿನಲ್ಲಿ ಸ್ವತಂತ್ರವಾಗಿ ಬರೆಯುವುದರ ಜತೆಗೆ ಎರಡೂ ಭಾಷೆಗಳಲ್ಲೂ ಅನುವಾದ ಮಾಡಬಲ್ಲ ಉಭಯ ಸಾಮರ್ಥ್ಯ ಪಡೆದ ಎಂ.ವಿ.ಸೀ. ಅವರು ಲೇಖಕರಾಗಿ ಉಪನ್ಯಾಸಕರಾಗಿ ಅನುವಾದಕರಾಗಿ ಸ್ವತಂತ್ರ ಕೃತಿರಚಕರಾಗಿ ಕನ್ನಡದ ಬಹುಮುಖಿ ಅನುವಾದಕರಲ್ಲಿ ಅಗ್ರಗಣ್ಯರಾಗಿದ್ದಾರೆ.

ಕವಿತೆಯೊಂದರ ಕಥನ ಕವನಗಳು. ಇದರಲ್ಲಿ "ದೊಡ್ಡಪ್ಪನ ಅಪೇಕ್ಷೆಯಿಂದ ಪ್ರೇರಿತಳಾಗಿ ವಿಲಿಯಂನನ್ನು ಆಳವಾಗಿ ಪ್ರೀತಿಸುವ ಡೋರ, ಅವಳನ್ನು ಅಪೇಕ್ಷಿಸುವ ವಿಲಿಯಂ ತಂದೆ ಆ್ಯಲನ್ ಮತ್ತು ಮಗ ವಿಲಿಯಂ ಘರ್ಷಣೆ" ಇವಿಷ್ಟು ಈ ಕವನದಲ್ಲಿ ಅಚ್ಚುಕಟ್ಟಾಗಿ ರೂಪತಳೆಯುತ್ತದೆ. ಇವಲ್ಲದೆ ಅನೇಕ ಪ್ರಬಂಧಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಆ ಪೈಕಿ ವಿಲಿಯಂ ಹ್ಯಾಸ್‌ಲಿಟ್ ಬರೆದ 'ದಿ ಇಂಡಿಯನ್ ಜಗ್ಲರ್ಸ್' ಎಂಬುದರಿಂದ ಪ್ರೇರಿತವಾದ ಭಾವಪ್ರಬಂಧ ಒಂದಾಗಿದೆ. ಈ ಭಾವಪ್ರಬಂಧ ಒಂದು ರೀತಿಯ ಮಿಶ್ರಾನುವಾದವಾಗಿದೆ. ಇದರಲ್ಲಿ ಮೂರು ಲೇಖನದ ಕೆಲವು ವಾಕ್ಯಗಳು ನೇರವಾಗಿ ಅನುವಾದಗೊಂಡಿವೆ. ಆದರೂ ಇತರ ಕೆಲವು, ವಿಷಯಗಳು ಹೊಸದಾಗಿ ಸೇರಿಕೊಂಡು 'ಡೊಂಬರು' ಅನುವಾದ ಕೃತಿಯೂ ಸ್ವತಂತ್ರ ಕೃತಿಯೂ ಆದ ಮಿಶ್ರಾನುವಾದವಾಗಿದೆ.

ಶ್ರೀಮತಿ ಕೃಷ್ಣಕುಮಾರಿ ಎಂಬುವರು ತೆಲುಗಿನಲ್ಲಿ ಬರೆದ ವಿವೇಕಾನಂದ ಕೃತಿಯನ್ನು ಇವರು ೧೯೫೧ರಲ್ಲಿ ಕನ್ನಡಕ್ಕೆ ತಂದಿದ್ದಾರೆ.

ಕನ್ನಡದ ಪತ್ರಿಕೆಗಳಿಗೆ ಲೇಖನಗಳನ್ನು ಬರೆದ ಹಾಗೆಯೇ ಇಂಗ್ಲಿಷ್ ಪತ್ರಿಕೆಗಳಿಗೂ ಲೇಖನಗಳನ್ನು ಬರೆದ ನಿದರ್ಶನಗಳಿವೆ. ಇವರು ಇಂಗ್ಲಿಷಿನಲ್ಲೂ ಸೊಗಸಾಗಿ ಉಪನ್ಯಾಸ ನೀಡಬಲ್ಲವರಾಗಿದ್ದರು. ಹೀಗೆ ಕಾದಂಬರಿ, ಜೀವನಚರಿತ್ರೆ, ಪ್ರಬಂಧ, ಕವಿತೆ ಕ್ಷೇತ್ರಗಳಲ್ಲಿ ಇಂಗ್ಲಿಷಿನಿಂದ ಕನ್ನಡಕ್ಕೆ ಕನ್ನಡದಿಂದ ಇಂಗ್ಲಿಷಿಗೆ ಅನುವಾದ ಮಾಡಬಲ್ಲ ಸಾಮರ್ಥ್ಯ ಪ್ರತಿಭೆ ಹೊಂದಿದ್ದ ಎಂ.ವಿ.ಸೀ. ಅವರು ಹೊಸಗನ್ನಡ ವಿದ್ವಾಂಸರಲ್ಲಿ ಉಭಯಭಾಷಾ ಅನುವಾದಕರೂ ಮತ್ತು ಉಭಯಭಾಷಾ ಸ್ವತಂತ್ರ ಲೇಖಕರೂ ಆಗಿ ವಿಶಿಷ್ಟ ಸಾಹಿತಿಗಳ ಸಾಲಿಗೆ ಸೇರುತ್ತಾರೆ.

**ದ್ವಿಭಾಷಾ ಅನುವಾದಕ**

ಎಂ.ವಿ. ಸೀತಾರಾಮಯ್ಯನವರ ಸಾಹಿತ್ಯ ಸೇವೆಯನ್ನು ಅನುವಾದ ಸಾಹಿತ್ಯ ಸೇವೆ, ಸ್ವತಂತ್ರಕೃತಿ ಸೇವೆ ಎಂದು ಎರಡು ಭಾಗಗಳಾಗಿ ಪರಿಗಣಿಸಬಹುದು. ಅನುವಾದಕರು ಅನೇಕರು ನಮ್ಮಲ್ಲಿ ಇದ್ದಾರೆ. ಅವರಲ್ಲಿ ಲೇಖನಗಳನ್ನು ಅನುವಾದಿಸಬಲ್ಲವರು ಕೆಲವರು, ಗ್ರಂಥಗಳನ್ನು ಅನುವಾದಿಸಬಲ್ಲವರು ಕೆಲವರು. ಕೆಲವು ಸಾಹಿತಿಗಳು ಲೇಖನಗಳನ್ನು ಅನುವಾದಿಸುವುದರಜತೆಗೆ ಗ್ರಂಥಗಳನ್ನು ಅನುವಾದಿಸಿದ್ದಾರೆ. ಪತ್ರಿಕಾರಂಗದಲ್ಲಿ ಕೆಲಸ ಮಾಡುವವರಲ್ಲಿ ಅನೇಕರು ಲೇಖನಗಳನ್ನು ಅನುವಾದಿಸಿದರೂ ಗ್ರಂಥಗಳನ್ನು ಅನುವಾದಿಸಿರುವುದಿಲ್ಲ. ಎಷ್ಟೋಜನ ಗ್ರಂಥಲೇಖಕರು ಗ್ರಂಥಗಳನ್ನು ಅನುವಾದಿಸಿದ್ದರೂ ಲೇಖನಗಳನ್ನು ಅನುವಾದಿಸಿರುವುದಿಲ್ಲ ಮತ್ತು ಮತ್ತೆ ಕೆಲವರು. ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಬಲ್ಲವಾಗಿರುತ್ತಾರೆ. ಆದರೆ ಕನ್ನಡದಿಂದ ಇಂಗ್ಲಿಷಿಗೆ ಅನುವಾದಿಸುವವರಾಗಿರುವುದಿಲ್ಲ ಇಂಗ್ಲಿಷಿನಿಂದ ಕನ್ನಡಕ್ಕಾಗಲೀ ಕನ್ನಡದಿಂದ ಇಂಗ್ಲಿಷ್‌ಗಾಗಲಿ ಅನುವಾದಿಸುವ ಉಭಯಭಾಷಾ ಸಾಮರ್ಥ್ಯವುಳ್ಳ ವಿದ್ವಾಂಸ–ಸಾಹಿತಿಗಳು ಕೆಲವರೇ ನಮ್ಮಲ್ಲಿ ಕಾಣಿಸಿಗುತ್ತಾರೆ. ವಿ.ಕೃ.ಗೋಕಾಕ್, ಎ.ಎನ್.

**ಪೀಠಿಕೆ – ೨**

೧. ಭಾಗ್ಯಲಕ್ಷ್ಮಿ ೨. ಮಾದನ ಮಗಳು ೩. ಸೌಭಾಗ್ಯವತಿ ೪. ನಂಜಿನಸವಿ ೫. ಸ್ನೇಹದ ಕಾಣಿಕೆ ೬. ತಾಯಬಯಕೆ ೭. ಕುಂಕುಮಭಾಗ್ಯ ೮. ಜೀವನ ಜೊತೆಗಾತಿ. ಸ್ವತಂತ್ರ ಕಾದಂಬರಿಗಳು ಪ್ರತ್ಯೇಕ ಸಂಪುಟವಾಗಿ ಬರುತ್ತಿರುವುದರಿಂದ ಅವುಗಳ ಬಗ್ಗೆ ಇಲ್ಲಿ ಪ್ರಸ್ತಾಪಿಸಿಲ್ಲ.

ಇನ್ನು ಅನುವಾದಿತ ಕಾದಂಬರಿಗಳಲ್ಲಿ ರಾಬಿನ್‌ಸನ್ ಕ್ರೂಸೋ (೧೯೪೮) ಡ್ಯಾನಿಯಲ್ ಡೀಪೋ ಬರೆದ ಸಾಹಸಮಯ ಕಥಾನಕ. ಎಂ.ವಿ.ಸೀ. ಹೇಳಿದಂತೆ" ಒಂದು ವಿಧದಲ್ಲಿ ರಾಬಿನ್‌ಸನ್ ಕ್ರೂಸೋ ಡೀಪೋವಿನ ಆತ್ಮವೃತ್ತಾಂತವನ್ನೇ ಒಳಗೊಂಡ ಒಂದು ರೂಪಕಕಥೆ ಎನ್ನಬಹುದೇನೋ ಎಂದಿದ್ದಾರೆ. ಸಾಹಸ ಕೃತ್ಯಗಳ ನಿರೂಪಣೆಯ ಜೊತೆಜೊತೆಯಲ್ಲಿಯೇ ನೀತಿಬೋಧೆಯನ್ನು ಮಾಡತಕ್ಕ ಈ ಕಥೆಯನ್ನು ಸುಮಾರು ೧೧೦ ಪುಟಗಳಲ್ಲಿ ಮಕ್ಕಳಿಗೆ ಕಾದಂಬರಿ ರೂಪದಲ್ಲಿ ಅನುವಾದಿಸಿದ್ದಾರೆ. "೧೬೩೨ ರಲ್ಲಿ ಯಾರ್ಕ್ ಪಟ್ಟಣದಲ್ಲಿ ಸದ್ವಂಶದಲ್ಲಿ ರಾಬಿನ್ಸನ್‌ಕ್ರೋಸೋ ತಂದೆತಾಯಿಯರ ಮೂರನೇ ಮಗನಾಗಿ ಹುಟ್ಟುತ್ತಾನೆ. ಕಡಲ ಪಯಣದ ಹುಚ್ಚು ಅವನಿಗೆ ಎಷ್ಟಿತ್ತು ಎಂದರೆ ತಂದೆ ತಾಯಿಗಳ ಬುದ್ಧಿವಾದವನ್ನು ಕೇಳದೆ ಹಡಗನ್ನು ಹತ್ತಿ ಹೊರಟೇ ಬಿಡುತ್ತಾನೆ. ಅಲ್ಲಿಂದ ಮುಂದಿನ ಸಾಹಸ ಕಥೆ ರೋಮಾಂಚನಕಾರಿಯಾದುದು. ಹಡಗು ನಾಶವಾದಾಗ ರಾಬಿನ್ಸನ್ ಪಟ್ಟಪಾಡುಗಳು ಸಾಹಸಪ್ರಸಂಗಗಳು ಇಂದಿಗೂ ಕಿರಿಯರಿಗೆ ರಂಜನೆಯನ್ನು ಉಂಟುಮಾಡುತ್ತವೆ. ಸ್ವಾತಂತ್ರ್ಯಪೂರ್ವದಲ್ಲಿ ಎಷ್ಟು ಜನಪ್ರಿಯವಾಗಿತ್ತು ಎಂದರೆ ಪಠ್ಯಗ್ರಂಥಗಳಲ್ಲಿ ಈ ಕಥೆಯ ಭಾಗಗಳು ಸೇರ್ಪಡೆ ಆಗಿದ್ದವು. ಕನ್ನಡದಲ್ಲಿ ರಾಬಿನ್ ಸನ್ ಕ್ರೂಸೋ ಕಥೆಯನ್ನು ಹಲವರು ಸಂಕ್ಷಿಪ್ತವಾಗಿ ಅನುವಾದಿಸಿದ್ದಾರೆ. ಆದರೆ ಎಂ.ವಿ.ಸೀ ಅವರು ಸಾಕಷ್ಟು ದೀರ್ಘವಾಗಿ ಅನುವಾದಿಸಿದ್ದಾರೆ. ನಮ್ಮಲ್ಲಿ ಪುಟಾಣಿ ಸಾಹಿತ್ಯ ಬಾಲಸಾಹಿತ್ಯ ಕಿಶೋರಸಾಹಿತ್ಯ ಎಂದು ಮೂರು ಬಗೆ ಮಕ್ಕಳ ಸಾಹಿತ್ಯವಿದೆ. ದೇವುಡು, ಜಿ.ಪಿ.ರಾಜರತ್ನಂ ಮೊದಲಾದವರು ಮೂರು ಬಗೆಯ ಮಕ್ಕಳ ಸಾಹಿತ್ಯವನ್ನು ರಚಿಸಿದ್ದಾರೆ. ಪ್ರೈಮರಿ ಶಾಲೆಯ ಮಕ್ಕಳಿಗೆ ವರ್ಣಚಿತ್ರಗಳಿಂದ, ದಪ್ಪಕ್ಷರಗಳಿಂದ ಲಯಬದ್ಧ ಚಮಕ್‌ಗಳಿಂದ, ಪ್ರಾಸಬದ್ಧ ಮಾತುಗಳಿಂದ ಮಕ್ಕಳಿಗೆ ಪುಟಾಣಿ ಸಾಹಿತ್ಯ ಬರೆದವರಲ್ಲಿ ಜಿ.ಪಿ.ರಾಜರತ್ನಂ ಅಗ್ರಗಣ್ಯರು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ಸಾಹಿತ್ಯ ರಚನೆಯಲ್ಲಿ ದೇವುಡು, ಹೊಯಿಸಳರು ಎತ್ತಿದಕೈ. ಹೈಸ್ಕೂಲ್ ಮಟ್ಟದ ಕಿಶೋರರಿಗೆ ಸೂಕ್ತವಾದ ಕಥೆ. ಜೀವನ ಚರಿತ್ರೆ ಪ್ರಬಂಧ ಸಾಹಸ ಕಾದಂಬರಿಗಳನ್ನು ಬರೆದವರು ಹಲವರಿದ್ದಾರೆ. ಅವರಲ್ಲಿ ಜೀವನ ಚರಿತ್ರೆಗಳನ್ನು ಬರೆದವರಲ್ಲಿ ಸುಬೋಧರಾಮರಾಯರು ಅಗ್ರಗಣ್ಯರು. ಎಂ.ವಿ.ಸೀ ಕಿಶೋರರಿಗೆ ಸಾಹಿತ್ಯ ರಚನೆಯಲ್ಲಿ ಸಿದ್ಧರಾಗಿದ್ದಾರೆ. ರಾಬಿನ್‌ಸನ್ ಕ್ರೂಸೋ, ರನ್ನ, ವೈಣಿಕ ವಿದ್ವಾನ್ ಎಲ್. ರಾಜಾರಾವ್. ಯುಧಿಷ್ಠಿರ ಮೊದಲಾದ ಕೃತಿಗಳು, ಕಿಶೊರ ಕೃತಿಗಳಾಗಿವೆ. ಕನ್ನಡದಲ್ಲಿ ಹದಿಹರೆಯದ ಸಾಹಿತ್ಯ (ಟೀನ ಏಜರ್ಸ್ ಲಿಟರೇಚರ್) ಸಾಕಷ್ಟು ಬಂದಿಲ್ಲ ಈ ದೃಷ್ಟಿಯಲ್ಲಿ ಎಂವಿಸೀ ಅನುವಾದ ಕೃತಿ ಗಮನಾರ್ಹಕೃತಿ ಆಗಿದೆ.

ಅವರ ಇಂಗ್ಲಿಷ್ ವಿಮರ್ಶಾಲೇಖನಗಳನ್ನು ಇಂಗ್ಲಿಷ್ ಗ್ರಂಥಗಳನ್ನು ಪ್ರತ್ಯೇಕ ಸಂಪುಟದಲ್ಲಿ ಹೊರಬರುತ್ತಿರುವುದರಿಂದಲೂ, ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದವಾದ ಕವಿತೆಗಳು, ಪ್ರಬಂಧಗಳು, ಕತೆಗಳು, ವಿಮರ್ಶೆಗಳು ಇತರ ಸಂಪುಟಗಳಲ್ಲಿ ಹಲವಾರು ಪ್ರಕಟವಾಗಿರುವುದರಿಂದಲೂ ಜೀವನಚರಿತ್ರೆ ಮತ್ತು ಅನುವಾದ ಸಂಪುಟದಲ್ಲಿ ಕಾದಂಬರಿ, ಕತೆ, ವಿಜ್ಞಾನ, ಸ್ತೋತ್ರ ಪ್ರಬಂಧದ ಅನುವಾದದ ಕೃತಿಗಳನ್ನಷ್ಟೆ ಇಲ್ಲಿಯ ಸಂಪುಟದಲ್ಲಿ ಸಮಾವೇಶಗೊಳಿಸಲಾಗಿದೆ. (ಅನುಬಂದ, ನೋಡಿ)

ಪ್ರಥಮ ಸಂಪುಟದಲ್ಲಿ ಅನುವಾದಿತ ೩ ಕಾದಂಬರಿಗಳಲ್ಲಿ ಏಳು ಇಪ್ಪಾರಿನ ಮನೆ, ಜೂಡಿಲಕ್ಷ್ಮಿ ಕೊಟ್ಟಿದೆ. ರಾಬಿನ್ಸ್‌ಸನ್ ಕ್ರೋಸೋ ಮಕ್ಕಳ ಸಾಹಿತ್ಯ ಸಂಪುಟದಲ್ಲಿ ಪ್ರಕಟವಾಗಿರುವುದರಿಂದ ಇಲ್ಲಿ ಕೊಟ್ಟಿಲ್ಲ. ಉಳಿದ ಪ್ರಕಾರಗಳ ಅನುವಾದಿತ ಕೃತಿಗಳನ್ನು ಜೀವನಚರಿತ್ರೆಗೆ ಸಂಬಂಧಿಸಿದ ಗ್ರಂಥ ಲೇಖನಗಳನ್ನು ೨ನೇ ಭಾಗದ ಸಂಪುಟದಲ್ಲಿ ಕೊಟ್ಟಿದೆ.

**ಪೀಠಿಕೆ – ೧**

**ಮೂರು ಕಾದಂಬರಿಗಳು**

ಪ್ರಕೃತ ಜೀವನ ಚರಿತ್ರೆ ಮತ್ತು ಅನುವಾದ (ಸಂಪುಟ ೮)ಗಳು ಎರಡು ಭಾಗಗಳಲ್ಲಿ ಪ್ರಕಟವಾಗುತ್ತಿದೆ.

ಭಾಗ – ೧ ಅನುವಾದಿತ ಕಾದಂಬರಿಗಳು ಎರಡು ಸೇರಿವೆ. ೧. ಏಳು ಇಪ್ಪಾರಿನ ಮನೆ. ೨. ಜೂಡಿಲಕ್ಷ್ಮಿ ಎರಡು ಕಾದಂಬರಿಗಳು

ಭಾಗ – ೨ ರಲ್ಲಿ ೧. ಆತ್ಮಕಥೆ, ಜೀವನಚರಿತ್ರೆ ೩, ಕತೆಗಳು ೪ ಪ್ರಬಂಧ ೫ ವಿಜ್ಞಾನ ೬ ಸ್ತೋತ್ರಗಳಿಗೆ ಸಂಬಂಧಿಸಿದ ಅನುವಾದಿತ ಕೃತಿಗಳು ಪ್ರಕಟವಾಗಿವೆ. ಪ್ರಾರಂಭದಲ್ಲಿ ಕೃತಿಗಳ ಬಗ್ಗೆ ಕೃತಿ ಪರಿಚಯ, ಹಿರಿಮೆ ಬಗ್ಗೆ ಪ್ರಸ್ತಾವನೆ ಕೊಡಲಾಗಿದೆ. ಕೊನೆಯಲ್ಲಿ ಅಭ್ಯಾಸಿಗಳಿಗೆ ಆಸಕ್ತರಿಗೆ ಉಪಯೋಗವಾಗಲು ಅನುಬಂಧಗಳಾಗಿ ಎಂ.ವಿ.ಸೀ ಅವರ ಸಂಕ್ಷಿಪ್ತ ಜೀವನ ಮಾಹಿತಿ, ಸಮಗ್ರ ಕೃತಿಗಳ ಪಟ್ಟಿ, ಲೇಖನಸೂಚಿ, ಅವರನ್ನು ಕುರಿತ ಗ್ರಂಥ ಲೇಖನಗಳ ಪಟ್ಟಿಯನ್ನು ನೀಡಿದೆ.

ಕಾದಂಬರಿಕಾರರಾಗಿ ಎಂ.ವಿ.ಸೀ ಅವರು ಸ್ವತಂತ್ರವಾಗಿ ಕಾದಂಬರಿಗಳನ್ನು ರಚಿಸಿರುವುದಲ್ಲದೆ. ಅನುವಾದಗಳನ್ನು ಮಾಡಿದ್ದಾರೆ. ನಮ್ಮಲ್ಲಿ ಕೆಲವರು ಕೇವಲ ಅನುವಾದಕ ಕಾದಂಬರಿಕಾರನಾಗಿ ಪ್ರಸಿದ್ಧರಾಗಿದ್ದರೆ ಮತ್ತೆ ಕೆಲವರು ಸ್ವತಂತ್ರ ಕಾದಂಬರಿಕಾರರಾಗಿ ಪ್ರಸಿದ್ಧರಾಗಿದ್ದಾರೆ. ಅನುವಾದ ಸ್ವತಂತ್ರರಚನೆ ಎರಡೂ ಪ್ರಕಾರಗಳಲ್ಲಿ ಕಾದಂಬರಿಗಳನ್ನು ರಚಿಸಿದವರು ಸಾಕಷ್ಟು ಮಂದಿ ಇದ್ದರೂ ಎರಡರಲ್ಲೂ ಯಶಸ್ಸು ಕಂಡವರು ಕೆಲವರೇ. ಅವರಲ್ಲಿ ಎಂ.ವಿ.ಸೀ ಅವರು ಒಬ್ಬರು. ಅವರು ರಚಿಸಿದ ೧೧ ಕಾದಂಬರಿಗಳಲ್ಲಿ ೩ ಕಾದಂಬರಿಗಳು ಅನುವಾದಿತ ಕಾದಂಬರಿಗಳು (ರಾಬಿನ್‌ಸನ್‌ಕ್ರೂಸೋ ೧೯೪೮, ಜೂಡಿಲಕ್ಷ್ಮಿ ೧೯೬೫, ಏಳು ಉಪ್ಪಾರಿನ ಮನೆ ೧೯೬೬) ಉಳಿದ ೮ ಕಾದಂಬರಿಗಳು ಸ್ವತಂತ್ರ ಕಾದಂಬರಿಗಳು

ವಿದ್ಯಾರ್ಥಿಗಳಿಗೆ ಮನಸ್ಸು ಸೆಳೆಯುವ ರೀತಿಯಲ್ಲಿ ಅನುವಾದಿಸಿದ್ದಾರೆ ಎಂಬುದಕ್ಕೆ ಈ ಭಾಗ ಸಾಕ್ಷಿಯಾಗಿದೆ. ಆದರೆ ಅಲ್ಲಲ್ಲಿ ವಿದ್ಯಾರ್ಥಿಗಳ ಮಟ್ಟ ಮೀರಿದ ಪದಗಳನ್ನು ಬಳಸಿದ್ದಾರೆ. ಅದೇ ಶಕ್ತಿಯು (ಪು. ೬೨೩) ದುರ್ಭೇದ್ಯವಾದ ಪ್ರಕಾರದಂತಿತ್ತು (೬೨೨) ಇಂಥವುಗಳನ್ನು ಬದಲಿಸಬೇಕಿತ್ತು ಅಥವಾ ಬಿಡಬೇಕಿತ್ತು.

**ಏಳು ಇಪ್ಪಾರಿನ ಮನೆ**

ಕನ್ನಡದ ಕಾದಂಬರಿ ಇತಿಹಾಸದಲ್ಲಿ ಎರಡು ಬಗೆ ಕಾಣುತ್ತೇವೆ. ಸ್ವತಂತ್ರ ಕಾದಂಬರಿಗಳು ಮತ್ತು ಅನುವಾದಿತ ಕಾದಂಬರಿಗಳು. ಕಾದಂಬರಿ ಸ್ವರೂಪದ ಹಲವಾರು ಕೃತಿಗಳು ನಮ್ಮಲ್ಲಿ ಇದ್ದುವೆಂದು ಹೇಳುವವರನ್ನು ಕಾಣುತ್ತೇವೆ. ಆದರೆ ನಿಜವಾಗಿ ಕಾದಂಬರಿ ಎಂಬ ಸಾಹಿತ್ಯ ಪ್ರಕಾರ ಇಂಗ್ಲಿಷ್ ಭಾಷೆಯ ಪ್ರಭಾವದಿಂದ ಬಂದಿದ್ದು. ನಮ್ಮಲ್ಲಿ ಇಂಗ್ಲೀಷ್ ಶಿಕ್ಷಣ ಪ್ರಾರಂಭವಾದ ಮೇಲೆ ಇಂಗ್ಲಿಷ್ ಸಾಹಿತ್ಯ ಓದಿದವರು ಅದರ ಪ್ರಭಾವಕ್ಕೆ ಒಳಗಾಗಿ ಕನ್ನಡಕ್ಕೆ ವಿಶೇಷವಾಗಿ ನಾಟಕ ಕವಿತೆ, ಪ್ರಬಂಧ ಜೀವನಚರಿತ್ರೆ ವಿಮರ್ಶೆ ಕಾದಂಬರಿ ಮೊದಲಾದ ಸಾಹಿತ್ಯಕೃತಿಗಳನ್ನು ಕನ್ನಡಕ್ಕೆ ತರುವುದರ ಮೂಲಕ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದರು. ಕಾದಂಬರಿಗಳನ್ನು ಎರಡು ರೀತಿಯಲ್ಲಿ ಕನ್ನಡಕ್ಕೆ ತಂದರು. ಒಂದು ರೂಪಾಂತರ ಇನ್ನೊಂದು ಅನುವಾದ. ರೂಪಾಂತರದಲ್ಲಿ ವಸ್ತು ಅದೇ ಆದರೂ ವ್ಯಕ್ತಿ ಸ್ಥಳ ಹೆಸರು ಮೊದಲಾದವನ್ನು ಬದಲಿಸಿ ಕಥೆಯನ್ನು ನಮ್ಮ ಸಂಸ್ಕೃತಿಗೆ ಒಗ್ಗಿಸಿಕೊಂಡು ರೂಪಾಂತರಗೊಳಿಸಿದರು. ಅನುವಾದ ಯಥಾವತ್ತಾಗಿ ಭಾಷಾಂತರವಾಯಿತು. ನಮ್ಮ ವ್ಯಾಕರಣಬಂಧ ಭಾಷೆಯ ಹಿನ್ನೆಲೆಯಲ್ಲಿ ಮೂಲ ಕೃತಿಯ ಹೆಸರು ಸ್ಥಳ ಇತ್ಯಾದಿಗಳ ಅಂಕಿತನಾಮಗಳನ್ನು ಬದಲಿಸಿದೆ ಯಥಾವತ್ತಾದ ಅನುವಾದ ಮಾಡಿದರು. ಕೆಲವರು ಅಲ್ಲಿಯ ಸಂಸ್ಕೃತಿಯ ಸಂಗತಿಗಳು ತಿಳಿಯಲು ವಿವರಣೆ ಟಿಪ್ಪಣಿಗಳನ್ನು ಕೊಟ್ಟರು. ಇಂಗ್ಲಿಷ್ ಪದಗಳ ಮೂಲರೂಪಗಳನ್ನು ತಿಳಿಸಿದರು. ಇಂಗ್ಲಿಷ್ ಭಾಷೆಯ ವಿಧಗಳನ್ನು ಇಂಗ್ಲಿಷ್ ಲಿಪಿಯಲ್ಲೂ ಮುಂದಿಟ್ಟರು. ಅದರ ಮೂಲರೂಪ ತಿಳಿಯಲಿ ಎಂದು.

ಭಾರತೀಯ ಭಾಷೆಗಳಿಂದ ಬಂಗಾಲಿ, ಮರಾಠಿ, ತೆಲುಗು ತಮಿಳು, ಹಿಂದಿ ಮೊದಲಾದ ಭಾಷೆಗಳಿಂದ ಕನ್ನಡಕ್ಕೆ ಕಾದಂಬರಿಗಳು ಅನುವಾದವಾದಾಗ ನಮ್ಮ ಸಂಸ್ಕೃತಿಯ ಕೃತಿಗಳೇ ಅವೂ ಆದುದರಿಂದ, ರೂಪಾಂತರದ ಸಮಸ್ಯೆಗಳು ಅಷ್ಟಾಗಿ ಕಾಡಲಿಲ್ಲ. ನಮ್ಮವೇ ಕೃತಿಗಳು ಎನ್ನಿಸಿದವು.

೧೯ನೇ ಶತಮಾನದಲ್ಲಿ ವಿದೇಶಿಯರು ನಮ್ಮ ಭಾಷೆಕಲಿತು ಮತ್ತೆ ಪ್ರಚಾರದ ಹಿನ್ನೆಲೆಯಲ್ಲಿ ಅನುವಾದಕ್ಕೆ ತೊಡಗಿದರು. ವಿದೇಶೀ ಬರಹದ ಕಡೆ ವಿದ್ವಾಂಸರು, ಸಾಹಿತ್ಯ ಪ್ರೇಮಿಗಳು ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಕನ್ನಡಕ್ಕೆ ತಂದರು. ಇನ್ನೊಂದೆಡೆ ಸ್ವದೇಶಿ ವಿದ್ವಾಂಸರು. ಇಂಗ್ಲಿಷ್ ಕಲಿತವರೂ ಕನ್ನಡಕ್ಕೆ ಕೃತಿಗಳನ್ನು ತಂದರು. ಸ್ವಾತಂತ್ರ್ಯ ಪೂರ್ವದಲ್ಲಿ ಬಂದ ಅನುವಾದಗಳಿಗೂ ಸ್ವಾತಂತ್ರ್ಯಾನಂತರ ಬಂದ ಕೃತಿಗಳಿಗೂ ಒಂದು ವ್ಯತ್ಯಾಸವಿದೆ. ಅದೆಂದರೆ, ಬ್ರಿಟಿಷರ ಆಡಳಿತದ ಪ್ರಭಾವವಾಗಿ

ರಾಬಿನ್ ಸನ್ ಕ್ರೂಸೋದಲ್ಲಿ ಭಾಷೆ ಸರಳವಾಗಿದ್ದು ಕಥೆ ಕುತೂಹಲಕಾರಿಯಾಗಿದೆ. ಇದಕ್ಕೆ ಸಿಂಹದ ಬೇಟೆ ಪ್ರಸಂಗವನ್ನು ಉಲ್ಲೇಖಿಸಬಹುದು (ಇಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಅನುವಾದ ಸಂಪುಟವಾದ ಈ ಸಂಪುಟ ಭಾಗಕ್ಕೆ ಸೇರಬೇಕಾದ ಈ ಕೃತಿಯು ಮಕ್ಕಳ ಸಾಹಿತ್ಯ ಸಂಪುಟದಲ್ಲಿ (ಸಂಪಾದಕರು ಟಿ.ಎಸ್. ನಾಗರಾಜಶೆಟ್ಟಿ) ಪ್ರಕಟವಾಗಿದೆ. ಆದ್ದರಿಂದ ಪಠ್ಯವನ್ನು ಪುನರುಕ್ತಿ ಆಗುತ್ತದೆ ಎಂದು ಇಲ್ಲಿ ಸೇರಿಸಿಲ್ಲ. ಇಲ್ಲಿ ಉಲ್ಲೇಖಿಸಿದ (ಪುಟಸಂಖ್ಯೆ ೫೬೧–೫೬೨ ಆ ಸಂಪುಟದ್ದು)

"…..ಈ ಸ್ಥಳವನ್ನು ಬಿಟ್ಟ ಮೇಲೆ ನಾವು ಅನೇಕ ವೇಳೆ ಸೀನೀರಿಗಾಗಿ ಅಲ್ಲಲ್ಲಿ ತಂಗಬೇಕಾಯಿತು. ಒಮ್ಮೆ ಬೆಳಕು ಹರಿಯುವುದಕ್ಕೆ ಮುಂಚೆ ಒಂದು ಕಡೆ ಲಂಗರು ಬಿಟ್ಟೆವು. ಪಕ್ಕದ ಕರೆಯ ನೆಲ ತಕ್ಕಮಟ್ಟಿಗೆ ಎತ್ತರ ಎದ್ದಿತ್ತು. ಭರತ ಬಂದು ಹರಿಯುವುದರಲ್ಲಿ ಇದ್ದುದರಿಂದ, ಇನ್ನೂ ಮುಂದಕ್ಕೆ ಹೋಗುವುದಕ್ಕಾಗಿ ಇದ್ದೆಡೆಯಲ್ಲೇ ಕಾದಿದ್ದೆವು. ನನಗಿಂತಲೂ ಹೆಚ್ಚಾಗಿ ಗ್ಸ್ಯೂರಿ ಮೈಯೆಲ್ಲಾ ಕಣ್ಣಾಗಿ ಜಾಗರೂಕನಾಗಿದ್ದನು. ಅವನು ನನ್ನ ಬಳಿಗೆ ಬಂದು, "ಅಗೋನೋಡು, ಆಗುಡ್ಡದ ಮೇಲೆ ಒಂದು ಭೂತದಂಥ ಪ್ರಾಣಿ ಮಲಗಿದೆ" ಎಂದು ಮೆಲ್ಲನೆ ಹೇಳಿ ತೋರಿಸಿದ. ಅವನು ಕೈತೋರಿದ ಕಡೆನೋಡಿದೆ. ಅವನು ಹೇಳಿದ್ದು ನಿಜ. ಅಲ್ಲಿ ಕೆರೆಗೆ ಅಭಿಮುಖವಾಗಿ ಒಂದು ಸಿಂಹ ಮಲಗಿತ್ತು. ಹುಡುಗನನ್ನು ದೋಣಿಯಲ್ಲಿ ಸದ್ದು ಮಾಡದೆ ಮಲಗಿರುವಂತೆ ಹೇಳಿ, ನಾನು ನನ್ನ ಬಳಿಯಲ್ಲಿದ್ದ ಮೂರು ಬಂದೂಕುಗಳನ್ನು ಚೆನ್ನಾಗಿ ಬಾರುಮಾಡಿ ತೆಗೆದುಕೊಂಡು ಹೋದೆ. ಗುಂಡಿನ ಸದ್ದು ಕೇಳಿ ಸಿಂಹ ಎದ್ದು ನಿಂತು ಗರ್ಜಿಸಿತು. ಆ ಸಿಂಹ ಬಡಪೆಟ್ಟಿಗೆ ಸಾಯಲಿಲ್ಲ. ಮೂರು ಬಂದೂಕುಗಳಿಂದಲೂ ಮೂರು ಸಲ ಗುಂಡು ಹಾರಿಸಿದ ಮೇಲೆ ಅದು ನೆಲದ ಮೇಲೆ ಒರಗಿಬಿತ್ತು. ಆದರೂ ಅದು ಇನ್ನೂ ಪ್ರಾಣ ಹೋಗದೆ ಒದ್ದಾಡುತ್ತಲೇ ಇತ್ತು. ಗ್ಸ್ಯೂರಿಗೆ ಸ್ವಲ್ಪ ಧೈರ್ಯ ಬಂದಂತಾಗಿ ತಾನು ಕರೆಯ ಕಡೆಗೆ ಹೋಗಲು ಅವಕಾಶ ಕೇಳಿದ ನಾನು ಹೋಗೆಂದೆ ಅವನು ನೀರಿಗೆ ಧುಮುಕಿ, ಒಂದು ಕೈಯಲ್ಲಿ ಈಜಿಕೊಂಡು ಕರೆಗೆ ಹೋದ. ಹೋಗಿ ಒದ್ದಾಡುತ್ತಿದ್ದ ಪ್ರಾಣಿಯ ಕಿವಿಗೆ ಬಂದೂಕು ಹಿಡಿದು ಗುಂಡು ಹಾರಿಸಿ ಅದನ್ನು ಪೂರ್ತಿ ಸಾಯಿಸಿದ್ದು. ಇದೇನೋ ಒಳ್ಳೆಯ ಬೇಟೆಯೇ ಆಯಿತು. ಆದರೆ ಅದರಿಂದ ನಮಗೆ ಆಹಾರ ಮಾತ್ರ ದೊರಕಲಿಲ್ಲ. ಮೂರು ಸಲ ಹೊಡೆಯುವಷ್ಟು ಮದ್ದುಗುಂಡು ನಷ್ಟವಾದುದಕ್ಕೆ ನನಗೆ ವ್ಯಥೆಯಾಯಿತು. ಆದರೆ ಸಿಂಹದಚರ್ಮ ನಮಗೆ ಒಂದಲ್ಲ ಒಂದು ರೀತಿ ಸ್ವಲ್ಪ ಪ್ರಯೋಜನವಾಗುವುದೆಂದು ಭಾವಿಸಿದೆ, ಸಾಧ್ಯವಾದರೆ ಅದರ ಚರ್ಮವನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ ನಾನೂ ಗ್ಸ್ಯೂರಿಯೂ ಅದರ ಚರ್ಮವನ್ನು ಸುಲಿಯ ತೊಡಗಿದ್ದವು. ಆದಿನವೆಲ್ಲ ಅದೇ ಕೆಲಸ ಹಿಡಿಯಿತು. ಕಡೆಗೆ ಸಿಂಹದ ತೊಗಲನ್ನು ತೆಗೆದು, ದೋಣಿಯ ಕೋಣೆಯ ಮೇಲೆ ಅದನ್ನು ಬಿಸಿಲಿನಲ್ಲಿ ಆರಹಾಕಿದೆವು. ಎರಡು ದಿನಗಳಲ್ಲಿ ಅದು ಚೆನ್ನಾಗಿ ಆರಿ ಆ ಮೇಲೆ ನನಗೆ ಮಲಗುವುದಕ್ಕೆ ಒಳ್ಳೆಯ ಹಾಸಾಯಿತು."

ರಷ್ಯಾ, ಅಮೆರಿಕಾದ ಸಾಹಿತ್ಯದ ಕಡೆ ಅವರಿಗೆ ಸಾಕಷ್ಟು ಒಲವಿತ್ತು. ಹಾಗಾಗಿ ಅಮೆರಿಕನ್ ಶ್ರೇಷ್ಠ ಕಥೆಗಾರ ಮತ್ತು ಕಾದಂಬರಿಕಾರನಾದ ನ್ಯಾಥಾನಿಯಲ್ ಹಾಥಾರ್ನ್ ಎಂ.ವಿ.ಸೀ ಅವರ ಮೆಚ್ಚಿನ ಲೇಖಕ. "ಚಿಕ್ಕಂದಿನಿಂದ ಹಾಥಾರ್ನಿನ ಕೃತಿಗಳ ಕಡೆಗೆ ನನ್ನ ಒಲವು ಹರಿದಿದೆ" ಎನ್ನುವ ಅವರು ಅವನ ಕಥೆಗಳನ್ನು ಕಾದಂಬರಿ ಮೊದಲಾದವನ್ನು ಓದಿಕೊಂಡು ಕನ್ನಡಿಗರಿಗೆ ಅವನ ಹಲವಾರು ಕೃತಿಗಳನ್ನು ನೀಡಿದ್ದಾರೆ. ಹಾಥಾರ್ನ್ ಬರೆದ ಕಾದಂಬರಿಗಳು ನಾಲ್ಕು. ಅವೈಕಿ ಸ್ಕಾರ್ಲೆಟ್ ಲೆಟರ್ (೧೮೫೦) ಪ್ರಸಿದ್ಧ ಕಾದಂಬರಿಗಳಲ್ಲಿ ಒಂದು. ಇದನ್ನು ಕನ್ನಡಕ್ಕೆ ಮೂಲದ ಹೆಸರಿನಲ್ಲಿ ದಿ॥ ಕಲಾವತಿ ರಾಮಸ್ವಾಮಿ ಅವರು (೨೦೦೯) ಕನ್ನಡಕ್ಕೆ ಅನುವಾದಿಸಿದ್ದಾರೆ. (ರಕ್ತಾಕ್ಷರ) 'ಕೆಂಪು ಅಕ್ಷರ' ಎಂಬ ಹೆಸರಿನಲ್ಲಿ ಇತರರು ಅನುವಾದಿಸಿದ್ದಾರೆ. ಹಾರ್ಥಾನನ ಇನ್ನೊಂದು ಕಾದಂಬರಿ ದಿ ಹೌಸ್ ಆಫ್ ದಿ ಸೆವನ್ ಗೇಬಲ್ಸ್ ಕೃತಿಯನ್ನು ಎಂ.ವಿ.ಸೀ ಅವರು 'ಏಳು ಇಪ್ಪಾರಿನ ಮನೆ' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಹಾಥಾರ್ನ್ ಬರೆದ ಇನ್ನೆರಡು ಕಾದಂಬರಿಗಳಾದ, ದಿ ಬ್ಲೇತ್ ಡೇಲ್ ರೊಮಾನ್ಸ್ ಮತ್ತು ದಿ ಮಾರ್ಬಲ್ ಫಾನರ ಕಾದಂಬರಿಗಳು ಕನ್ನಡಕ್ಕೆ ಬಂದಂತಿಲ್ಲ.

ಹಾಥಾರ್ನ್ ತನ್ನ ಕಾದಂಬರಿಗಳಲ್ಲಿ ಚಿತ್ರಿಸಿರುವುದು ಮುಖ್ಯವಾಗಿ ಪ್ಯೂರಿಟನ್ ಸಿದ್ಧಾಂತವನ್ನು. ೧೭ನೇ ಶತಮಾನದಲ್ಲಿ ಇಂಗ್ಲೆಂಡಿನಿಂದ ಅಮೆರಿಕಾಕ್ಕೆ ಬಂದು ನೆಲಸಿದ ಬ್ರಿಟಿಷ್ ವಲಸೆಗಾರರು ಅಮೆರಿಕಾದ ಈಶಾನ್ಯ ಭಾಗದ ನ್ಯೂ ಇಂಗ್ಲೆಂಡಿನಲ್ಲಿ ರೂಪಿಸಿಕೊಂಡು, ಆಚರಣೆಗೆ ತಂದು ಕೊಂಡ ನೀತಿ ನಿಯಮ ಸಾಮಾಜಿಕ ಪ್ಯೂರಿಟನ್ ಸಿದ್ಧಾಂತವೆನ್ನಬಹುದು. (ಎಲ್. ಶಾಂತಕುಮಾರಿ ಮುನ್ನುಡಿ 'ದಿ ಸ್ಕಾರ್ಲೆಟ್ ಲೆಟರ್')

ಹಾಥಾರ್ನ್‌ನಲ್ಲಿ ಪೂರ್ವಜರಿಂದ ಬಂದ ಪ್ಯೂರಿಟನ್ ಮತತತ್ತ್ವಗಳ ನೀತಿ ನಿಷ್ಠೆಯೂ ತಾನು ಹುಟ್ಟಿ ಬೆಳೆದ ಪ್ರಜಾಪ್ರಭುತ್ವದ ವಿಶಾಲಭಾವನೆಯ ಮಾನವೀಯತೆಯೂ ಸಮರಸವಾಗಿ ಬೆರೆತು ಕೊಂಡಿದ್ದವು. ಆದರೆ ನೀತಿಯ ಆಚರಣೆಯಲ್ಲಿ ಪ್ಯೂರಿಟನ್ ಮತ ತೋರುತ್ತಿದ್ದ ಕಠೋರತೆ ಪ್ರಜಾಪ್ರಭುತ್ವವು ನೀಡಿದ ವ್ಯಕ್ತಿ ಸ್ವಾತಂತ್ರ್ಯದ ಪರಿಣಾಮವಾಗಿ ವ್ಯಕ್ತಿಯ ನಡೆವಳಿಯಲ್ಲಿ ಕಂಡುಬರುತ್ತಿದ್ದ ಸ್ವಾರ್ಥಪರತೆ ಇವೆರಡೂ ಅತಿರೇಕಗಳನ್ನು ನಿರಾಕರಿಸಿದ್ದನು. ನೀತಿನಿಷ್ಠೆಯ ಅಂತರಂಗ ಶುದ್ಧಿಯ ಹೃದಯದ ಔದಾರ್ಯದ ಬೆಳಕಿನಲ್ಲಿ ಅವನು ಕಂಡುಕೊಂಡ ಜೀವನದ ಮಾನವೀಯ ಮೌಲ್ಯಗಳ ಸಂಬಂಧವಾದ ಭಾವ ಭಾವನೆಗಳನ್ನು ತನ್ನ ಕಥೆ ಕಾದಂಬರಿಗಳಲ್ಲಿ ಬಿತ್ತರಿಸುತ್ತಿದ್ದನು !

ಹೀಗಾಗಿ ಅವನು ತನ್ನ ಕಾದಂಬರಿಗಳಲ್ಲಿ ಕಾದಂಬರಿಯ ಲಕ್ಷಣಗಳನ್ನು ಕಟ್ಟುನಿಟ್ಟಾಗಿ ಪಾಲಿಸಹೊರಟಿಲ್ಲ. ವಾಸ್ತವವಾಗಿ ತನ್ನ ಕಾದಂಬರಿಗಳನ್ನು ನಾವೆಲ್ ಎಂದಲ್ಲ 'ರೊಮಾನ್ಸ್' ಎಂದು ಕರೆದು ಕೊಂಡಿದ್ದಾನೆ. ಅವನ ದೃಷ್ಟಿಯಲ್ಲಿ ನಾವೆಲ್ ವಾಸ್ತವಿಕ, ಅದರ ಹರವಿನಲ್ಲಿ ಬರತಕ್ಕದ್ದು ಗ್ರಂಥಕರ್ತೇನ ಸಮಕಾಲೀನ ಸಮಾಜದ ಯಥಾರ್ಥಚಿತ್ರಣ. ರೊಮಾನ್ಸ್‌ನಲ್ಲಿ (ಅದ್ಭುತರಮ್ಯ ಕಥೆ) ಅದ್ಭುತಕ್ಕೂ

ಇಂಗ್ಲಿಷ್‌ನಲ್ಲಿ ಪ್ರಸಿದ್ಧರಾದ ಲೇಖಕರ ಕೃತಿಗಳು ಕನ್ನಡದಲ್ಲಿ ಹೆಚ್ಚಾಗಿ ಕಾಣಿಸಿಕೊಂಡವು. ಆದರೆ ಸ್ವಾತಂತ್ರ್ಯಾನಂತರ ಯುರೋಪಿಯನ್, ರಷ್ಯನ್, ಜರ್ಮನ್, ಫ್ರೆಂಚ್, ಆಫ್ರಿಕನ್ ಅಮೆರಿಕನ್ ಮೊದಲಾದ ಪಾಶ್ಚಾತ್ಯ ಭಾಷೆಗಳ ಕೃತಿಗಳು ಕನ್ನಡಕ್ಕೆ ಬರತೊಡಗಿದವು. ಇಂಗ್ಲಿಷ್ ಭಾಷೆಯೇ ಶಿಕ್ಷಣದಲ್ಲಿ ಮಾಧ್ಯಮವಾದುದರಿಂದ ಇಂಗ್ಲಿಷ್ ಮೂಲಕ ಈ ಇಂಗ್ಲಿಷೇತರ ಭಾಷೆಗಳ ಕೃತಿಗಳು ಕನ್ನಡಕ್ಕೆ ಬಂದವು. ಅಲ್ಲಲ್ಲಿ ನೇರವಾಗಿ ಆಯಾಭಾಷೆಗಳನ್ನೇ ಕಲಿತು, ಕ.ವೆಂ. ರಾಘವಾಚಾರ್ ಅವರು ಸೋಫೋಕ್ಲಿಸ್ ನಾಟಕಗಳನ್ನು ಕನ್ನಡಕ್ಕೆ ತಂದಹಾಗೆ. ಬಂಗಾಳಿ ಕಲಿತು ನೇರವಾಗಿ ಬಿ. ವೆಂಕಟಾಚಾರ್ಯರು ಮರಾಠಿಯಿಂದ ಗಳಗನಾಥರು ಕನ್ನಡಕ್ಕೆ ಕೃತಿಗಳನ್ನು ತಂದಹಾಗೆ ಹತ್ತಾರು ಪ್ರಯತ್ನಗಳು ನಡೆದವು ಆದರೆ ಇಂಥವರ ಸಂಖ್ಯೆ ಕಡಿಮೆ. ಕನ್ನಡಕ್ಕೆ ಇಂಗ್ಲಿಷೇತರ ಕೃತಿಗಳು ಇಂಗ್ಲಿಷ್ ಭಾಷೆಯಿಂದಲೇ ಬರುತ್ತಿವೆ. ಇವುಗಳ ಸಂಖ್ಯೆಯೇ ಹೆಚ್ಚು. ಇತರ ಭಾರತೀಯ ಭಾಷೆಗಳ ಕೃತಿಗಳಲ್ಲಿ ಎಷ್ಟೋ ಇಂಗ್ಲಿಷ್ ಮೂಲಕವೇ ಕನ್ನಡಕ್ಕೆ ಬರುತ್ತಿದೆ. ಮೂಲದ ಸೊಗಸು ತಿಳಿದಿರುವವರು ಆಯಾಭಾಷೆಯಿಂದ ನೇರವಾಗಿ ಸಮರ್ಥವಾಗಿ ಅನುವಾದಿಸಿದಾಗ ಮೂಲಕೃತಿ ಚೆನ್ನಾಗಿ ಕನ್ನಡದಲ್ಲಿ ಮೂಡಿಬರುತ್ತದೆ.

ಇಂಗ್ಲಿಷಿನಲ್ಲೇ ಬರೆದ ಕೃತಿಗಳು ಕನ್ನಡಕ್ಕೆ ಬಂದಹಾಗೆ ಇಂಗ್ಲಿಷಿನ ಮೂಲಕ ರಷ್ಯನ್, ಜರ್ಮನ್, ಫ್ರೆಂಚ್ ಇತ್ಯಾದಿ ಭಾಷೆಗಳ ಕೃತಿಗಳಲ್ಲಿ ಮೂಲದ ಸೊಗಡು ಅಷ್ಟಾಗಿ ಇರುವುದಿಲ್ಲ. ಟಾಲ್‌ಸ್ಟಾಯ್ ಕೃತಿಗಳು, ಫ್ರೆಂಚ್‌ನ ಮೊಲಿಯರ್ ನಾಟಕಗಳು ಇದಕ್ಕೊಂದು ಉದಾಹರಣೆ. ಇವುಗಳನ್ನು ರಷ್ಯನ್ ಫ್ರೆಂಚ್ ಭಾಷೆಗಳಿಂದ ಅನುವಾದವಾಗಿರುವುದನ್ನು, ಇಂಗ್ಲಿಷ್ ಮೂಲಕ ಅನುವಾದವಾದದ್ದನ್ನು ಹೋಲಿಸಬಹುದು. ಅಷ್ಟೇಕೆ ರವೀಂದ್ರನಾಥ ಠಾಕೂರು ಬಂಗಾಳಿ ಕೃತಿಗಳು ಇಂಗ್ಲಿಷ್ ಮೂಲಕ ಕನ್ನಡಕ್ಕೆ ಬಂದವನ್ನು ಬಂಗಾಳಿಯಿಂದಲೇ ಅನುವಾದವಾದುವನ್ನು ಪರಿಶೀಲಿಸಬಹುದು.

ಎಂ.ವಿ.ಸೀ. ಏಳು ಇಪ್ಪಾರಿನ ಮನೆಯ ಅನುವಾದವನ್ನು ಕುರಿತು ಹೇಳಿರುವ ಮಾತುಗಳಿವು "ಇದು ಸರಳಾನುವಾದವಲ್ಲ ಬಹುಮಟ್ಟಿಗೆ ಯಥಾವತ್ತಾದ ಪದಶಃ ಭಾಷಾಂತರ. ಹಾಥಾರ್ನ್‌ನ ಆಂಗ್ಲಭಾಷಾ ಶೈಲಿ ಕ್ಲಿಷ್ಟವಾದುದು. ಆದರೂ ಭವ್ಯ ಬಂಧುರ ಮೂಲಕೃತಿಯ ಭಾವಭಾವನೆಗಳನ್ನು ಕನ್ನಡಿಸುವುದರ ಜೊತೆಗೆ ಅದರ ಭಾಷಾಶೈಲಿಯ ಸ್ವರೂಪವನ್ನು ಕನ್ನಡಿಸುವುದು ನನ್ನ ಉದ್ದೇಶ"

ಈ ಹಿನ್ನೆಲೆಯಲ್ಲಿ ಎಂ.ವಿ.ಸೀ. ಅವರ ಏಳು ಇಪ್ಪಾರಿನ ಮನೆ ಕಾದಂಬರಿಯನ್ನು ಪರಿಶೀಲಿಸಿದಾಗ ಅದು ಅನುವಾದವಾಗಿ ಎಷ್ಟರ ಮಟ್ಟಿಗೆ ಕನ್ನಡಕ್ಕೆ ಬಂದಿದೆ ಎಂಬುದು ಪ್ರತ್ಯೇಕ ಪ್ರಬಂಧದ ವಿಷಯವಾಗಿದೆ. ಇಲ್ಲಿ ಎಂ.ವಿ.ಸೀ. ಕನ್ನಡ ಕೃತಿಯನ್ನಷ್ಟೇ ಗಮನಿಸಿ ಒಂದೆರಡು ಸಂಗತಿಗಳನ್ನು ಪ್ರಸ್ತಾಪಿಸಲಾಗಿದೆ.

ಎಂ.ವಿ.ಸೀ. ಅವರು ಇಂಗ್ಲೀಷಿನ ಕವಿಗಳೂ, ಪ್ರಬಂಧಕಾರರರು ಕಾದಂಬರಿ ಕಾರರು ಮೊದಲಾದವರನ್ನು ಅಭ್ಯಾಸಮಾಡಿ ಅಲ್ಲಿಯ ಶ್ರೇಷ್ಠಕೃತಿಗಳನ್ನು ಓದಿ ಮೆಚ್ಚಿಕೊಂಡಿದ್ದಾರೆ. ಅದರಲ್ಲೂ ಇಂಗ್ಲಿಷ್ ಕಾದಂಬರಿಗಳನ್ನು ಚೆನ್ನಾಗಿ ಓದಿದ್ದಾರೆ.

೨. ಮಾಸಸ್ ಫ್ರಂ ಆ್ಯನ್ ಓಲ್ಡ್ ಮ್ಯಾನ್ಸ್ (೧೮೪೬)

**ಮಕ್ಕಳ ಕಥಾಸಂಗ್ರಹಗಳು ೨**

೧. ವಂಡರ್ ಬುಕ್ ಫಾರ್ ಗರ್ಲ್ಸ್ ಅಂಡ್ ಬಾಯ್ಸ್ (೧೮೫೨)

೨. ಟ್ಯಾಂಗಲ್‌ವುಡ್ ಟೇಲ್ಸ್ ಫಾರ್ ಗರ್ಲ್ಸ್ ಅಂಡ್ ಬಾಯ್ಸ್ (೧೮೫೩)

**ಜೀವನ ಚರಿತ್ರೆಗಳು ೧**

ಫ್ರಾಂಕ್‌ಲಿನ್ ಪಿಯರ್ಸನ ಜೀವನ (೧೮೫೨) ಇತರ ಕೃತಿಗಳು

ದಿನಚರಿ ರೂಪದ ಎರಡು ಟಿಪ್ಪಣಿ ಗ್ರಂಥಗಳು ೧ (ನೋಟ್‌ಬುಕ್ಸ್)

**ಪ್ರಬಂಧಗಳು ೨**

ಇವನ ಎಲ್ಲಾ ಕೃತಿಗಳಲ್ಲಿ ಕಥೆ ಕಾದಂಬರಿಗಳು ಹೆಚ್ಚು ಜನಪ್ರಿಯವಾಗಿದೆ.

**ಕಥಾವಸ್ತು**

"ಏಳು ಇಪ್ಪಾರಿನ ಮನೆ"ಯ ಕಥಾವಸ್ತುವನ್ನು ಎಂ.ವಿ.ಸೀ. ಅವರ ಮಾತುಗಳಲ್ಲೇ ಹೀಗೆ ಸಂಗ್ರಹಿಸಬಹುದಾಗಿದೆ.

'ಏಳು ಇಪ್ಪಾರಿನ ಮನೆ ಕಾದಂಬರಿಯು "ಗತಕಾಲದ ಪಾಪಕಾರ್ಯಗಳನ್ನೂ ಅದರ ಪರಿಣಾಮವನ್ನು ಚಿತ್ರಿಸುವ ಚರಿತೆ" ಆಗಿದೆ. ಕಥೆ ನಡೆಯುವ ಕಾಲಕ್ಕೆ ಸುಮಾರು ೨೦೦ ವರ್ಷಗಳ ಹಿಂದೆ ಸರದಾರ ಪಿಂಚನ್ನನು ಮಾಟಗಾರಿಕೆಯ ಮೂಢನಂಬಿಕೆಗೆ ಬಲಿಯಾಗಿ ನಿರಪರಾಧಿಯಾದ ಮ್ಯೂತ್ಯೂಮಾಲ್ ಎಂಬುವನನ್ನು ಗಲ್ಲಿಗೇರಿಸುವ ದಂಡನೆಯ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದ್ದನು. ಮಾಲ್ ಪಿಂಚನ್ನನ ಜಮೀನನ್ನು ದಕ್ಕಿಹಾಕಿಕೊಳ್ಳುವ ಉದ್ದೇಶದಿಂದ ಅವನಿಗೆ ಮರಣ ದಂಡನೆಯನ್ನು ವಿಧಿಸಿದ್ದನು. ಮ್ಯಾಥ್ಯುವಾಲ್ ಸತ್ತ ಮೇಲೆ ಅವನ ಜಮೀನನ್ನು ವಶಪಡಿಸಿಕೊಂಡು ಅಲ್ಲಿ ಭವ್ಯಮಹಲನ್ನು ಕಟ್ಟಿಸಿದ್ದನು. ಅದೇ ಏಳು ಇಪ್ಪಾರಿನ ಮನೆ. ಇದು ಶಾಪಗ್ರಸ್ತ ಮನೆಯಾಗಿತ್ತು. ಏಕೆಂದರೆ ಮ್ಯಾಥ್ಯೂಮಲ್ ಸಾಯುವಾಗ 'ದೇವರು ಇವನಿಗೆ ಕುಡಿಯಲು ರಕ್ತವನ್ನು ನೀಡುತ್ತಾನೆ.' ಎಂದು ಶಪಿಸಿದ್ದನು. ಸರದಾರ ಪಿಂಚನ್ ಆ ಮನೆಯಲ್ಲಿ ವಾಸಮಾಡಿದಾಗ ಹಠಾತ್ತಾನೆ ಸಂಶಯಾಸ್ಪದ ರೀತಿಯಲ್ಲಿ ಮಡಿಯಿತ್ತಾನೆ. ಅನಂತರ ಆ ಮನೆ ಶಾಪಗ್ರಸ್ತ ಮನೆ ಎಂಬಂತೆ ಹಾಳು ಬೀಳುತ್ತದೆ. ಹೆಪ್ಜಿಬಾ ಕ್ಲಿಫರ್ಡ್ ಈ ಅನ್ಯಾಯಾರ್ಜಿತವಿತ್ತದ ಸಂಬಂಧ ಕಡಿದುಕೊಂಡು ಪಲಾಯನ ಮಾಡಿದರು. ಅವನ ವಂಶದ ಫೀಬೆ ಎರಡು ಶತಮಾನಗಳ ನಂತರ ಅಲ್ಲಿಗೆ ಬಂದಾಗ ಕತ್ತಲು ಮನೆಗೆ ಬೆಳಕು ಬಂದಂತಾಯಿತು.

ಪಿಶ್ಚನ್ ವಂಶಜಳಾದ ಫೀಬೆ ಮತ್ತು ಮ್ಯಾತ್ಯೂಮಾಲನ ವಂಶಜ ಹಾಲ್‌ಗ್ರೇವ್ ಇವರ ಮದುವೆ. ಶಾಪವಿಮೋಚನೆ ಸಂಕೇತವಾಯಿತು. ಇದು ಈ ಕಾದಂಬರಿಯ ಸ್ಥೂಲ ಹಂದರ.

ಈ ಕತೆಯ ಮೂಲಕ ಹಾಥಾರ್ನ್ "ಒಂದು ತಲೆಮಾರು ಎಸಗಿದ ಅಪರಾಧ ಮುಂದಿನ ತಲೆಮಾರುಗಳಲ್ಲಿಯೂ ಸಾಗಿ ಬರುತ್ತದೆ. ತಾನು ಸಾಧಿಸಿದ ಪ್ರತಿಯೊಂದು ತಾತ್ಕಾಲಿಕ ಪ್ರಯೋಜನವನ್ನು ನೀಗಿಕೊಂಡು ಕಾಡುವ ಕೆಡುಕಿನ

ಅಲೌಕಿಕರಣಕ್ಕೂ ಅವಕಾಶವುಂಟು. ಆದ್ದರಿಂದಲೇ ತನ್ನ ಕಾದಂಬರಿಗಳನ್ನು "ಮಾನವ ಹೃದಯವನ್ನು ಪ್ರತಿಬಿಂಬಿಸುವ ರೂಪಕಕಥೆಗಳು" ಎಂದೇ ಕರೆದಿದ್ದಾನೆ.

ತನ್ನ ಕಾದಂಬರಿಗಳಲ್ಲಿ ತನ್ನ ನಂಬಿಕೆಗಳಿಗೂ ಭಾವನೆಗಳಿಗೂ ರೂಪುಕೊಡಲು ವರ್ತಮಾನ ಕಾಲದ ಸ್ಪಷ್ಟ ವಾಸ್ತವ ಜಗತ್ತಿಗಿಂತಲೂ ಗತಕಾಲದ ಅಸ್ಪಷ್ಟ ಜಗತ್ತನ್ನು ಅವಲಂಬಿಸುವುದು ಅವನಿಗೆ ಅನುಕೂಲವಾಗಿ ಪರಿಣಾಮಕಾರಿಯಾಗಿ ಕಂಡಿತು.

ಹೀಗಾಗಿ ಅವನ ಕೃತಿಗಳಲ್ಲಿ "ನೂರಿನ್ನೂರು ವರ್ಷಗಳಷ್ಟು ಹಿಂದಿನ, ತನ್ನ ಪೂರ್ವಜರ ಕಾಲದ ನ್ಯೂ ಇಂಗ್ಲೆಂಡಿನ ಜನಜೀವನ, ಮಾಟವಿದ್ಯೆ, ವಶೀಕರಣವಿದ್ಯೆ ಮುಂತಾದ ಅದ್ಭುತ ಅಲೌಕಿಕ ಸಂಗತಿಗಳ ಬಗೆಗೆ ಆ ಕಾಲದಲ್ಲಿ ಪ್ರಚಾರವಾಗಿದ್ದ ಮೂಢನಂಬಿಕೆಗಳು, ಆಗಿನ ಜನರ ಮತಶ್ರದ್ಧೆಗಳು ಇವುಗಳ ಚಿತ್ರಣವೇ ಅವನ ಕಥೆ ಕಾದಂಬರಿಗಳ ಹಂದರವಾಗಿತ್ತು. ಇದರ ಮೇಲೆ ಅವರ ಭಾವನೆಗಳ ಬಳ್ಳಿ ಹಬ್ಬುತ್ತಿತ್ತು. ಅದರಲ್ಲಿ ಅವನ ನೀತಿ ಬೋಧೆಯ ಹೂಗಳು ಅರಳುತ್ತಿದ್ದವು. ಹಾಗಾಗಿ ಕಥೆಗಾಗಿ ಕಥೆ ಹೇಳುವುದು ಬಹುಮಟ್ಟಿಗೆ ಅವನ ಗುರಿ ಆಗಿರಲಿಲ್ಲ.

ನ್ಯಾಥಾನಿಯಲ್ ಹಾಥಾರ್ನ್ ಹುಟ್ಟಿದ್ದು ಕ್ರಿ.ಶ. ೧೮೦೪ ಜುಲೈ ೪ ರಂದು. ಅಮೆರಿಕೆಯ ಮಸಾಚುಸೆಟ್ಸ್ ಸಂಸ್ಥಾನದ ಸಲೆಂ ಪಟ್ಟಣದಲ್ಲಿ ೧೮೨೧ರಲ್ಲಿ ಬ್ರನ್ಸ್‌ವಿಕ್ ಎಂಬಲ್ಲಿ ಇದ್ದ ಬೊವ್ ಡಾಯನ್ ಕಾಲೇಜಿನಲ್ಲಿ ಓದಿ ಪದವೀಧರನಾದನು : ಏಕಾಂತವಾಸ ಅವನಿಗೆ ಪ್ರಿಯವಾಗಿತ್ತು. ಇದರ ಫಲವಾಗಿ ಸಾಹಿತ್ಯಾಧ್ಯಯನಕ್ಕೆ ಹೆಚ್ಚು ಅವಕಾಶ ಸಿಕ್ಕಿತ್ತು. ನ್ಯೂ ಇಂಗ್ಲೆಂಡಿನ ಪ್ಯೂರಿಟನ್ ಸಮಾಜವನ್ನು ವಿಶೇಷ ಅಧ್ಯಯನ ಮಾಡಿದನು. ಇದರ ಪ್ರಭಾವ ಅವನ ಕೃತಿಗಳಲ್ಲಿ ಎದ್ದು ಕಾಣುತ್ತದೆ. ಹಲವು ಉದ್ಯೋಗಗಳನ್ನು ಮಾಡಿದರೂ ಯಾವುದರಲ್ಲೂ ಬಹುಕಾಲ ಅವನು ನೆಲೆನಿಲ್ಲಲಿಲ್ಲ. ಕೊನೆಗೆ ಲೇಖನ ವೃತ್ತಿಯಲ್ಲೇ ಜೀವಿಸಬೇಕೆಂದು ನಿರ್ಧರಿಸಿದನು. ಈ ಕಾಲದಲ್ಲೇ ಲೇಖನ ವೃತ್ತಿಯಿಂದ ಜೀವಿಸುವುದು ಕಷ್ಟ. ಇನ್ನು ಆಕಾಲದಲ್ಲಿ ಕೇಳಬೇಕೆ ? ಹಾಗಾಗಿ ನಿಜಕ್ಕೂ ಅದು ಸಾಹಸದ ನಿರ್ಧಾರವಾಗಿತ್ತು. ಯೂರೋಪ್ ಪ್ರವಾಸವನ್ನು ೧೮೬೧ರಲ್ಲಿ ಮುಗಿಸಿಕೊಂಡು ಬಂದಮೇಲೆ ೧೮೬೪ರಲ್ಲಿ ಮತ್ತೆ ನ್ಯೂ ಹ್ಯಾಂಪ್‌ಷೈರ್ ಪ್ರಾಂತಕ್ಕೆ ತನ್ನ ಪ್ರಿಯಮಿತ್ರನೊಡನೆ ಹೋಗಿದ್ದಾಗ ಅಲ್ಲಿಯೇ ನಿಧನನಾದನು.

ಅವನು ಬರೆದ ಕೃತಿಗಳು ಹೀಗಿವೆ :

**ಕಾದಂಬರಿಗಳು : ೪**

೧. ದಿ ಸ್ಕಾರ್‌ಲೇಟ್ ಲೆಟರ್ (೧೮೫೦)

೨. ದಿ ಹೌಸ್ ಆಫ್ ದಿ ಸೆವೆನ್ ಗೇಬಲ್ಸ್ (೧೮೫೧) (ಇದನ್ನೇ ಎಂ.ವಿ.ಸೀ. ಅವರು 'ಏಳು ಇಪ್ಪಾರಿನಮನೆ' ಎಂದು ಅನುವಾದಿಸಿರುವುದು)

೩. ದಿ ಬ್ಲೈತ್ ಡೇಲ್ ರೊಮಾನ್ಸ್ (೧೮೫೨)

೪. ದಿ ಮಾರ್ಬಲ್ ಫಾನ್

**ಸಣ್ಣ ಕಥಾಸಂಕಲನಗಳು ೨**

೧. ಟ್ವೈಸ್ ಟೋಲ್ಡ್ ಟೇಲ್ಸ್ (೧೯೩೭)

ಸಣ್ಣಗಿದ್ದಿತು. ಆದರೂ ಕೂಡ, ಪುರಾತನ ವಂಶದ ಸ್ಥಾಪಕನೆನಿಸಿಕೊಳ್ಳುವ ಮಟ್ಟಿಗೆ ಸಾಕಷ್ಟು ವಯಸ್ಸಾಗಿ, ಬಾಡಿಬತ್ತಿಹೋಗಿ ಸುರುಟಿಮುರುಟಿಕೊಂಡು ತುಂಬ ಅನುಭವಶಾಲಿಯಾಗಿ ಕಾಣುತ್ತಿತ್ತು.

ಕುಟುಂಬ ವರ್ಗದಲ್ಲಿ ಅತ್ಯಂತ ಕಿರಿಯನಾಗಿರುವೆಡೆಗಳಲ್ಲಿ ಕುಲದಲ್ಲಿ ಈಗ ಬದುಕಿರುವ ಮಾದರಿಗಳಲ್ಲದೆ, ಹಿಂದಿನ ತಲೆಗಳ ಎಲ್ಲ ಪೂರ್ವಜರ ವಯಸ್ಸುಗಳನ್ನೂ ತನ್ನಲ್ಲಿಯೇ ಒಟ್ಟು ಗೂಡಿಸಿಕೊಂಡು ಅವರೆಲ್ಲರ ಒಟ್ಟಿನ ಉತ್ಕೃಷ್ಟತೆಗಳನ್ನೂ ವಿಲಕ್ಷಣತೆಗಳನ್ನೂ ತನ್ನ ಕಿರಿಯೊಡಲಿನಲ್ಲಿ ಹಿಡಿದಿಟ್ಟುಕೊಂಡಂತೆ ಕಾಣುತ್ತಿತ್ತು. ಪ್ರಪಂಚದಲ್ಲಿ ಕೋಳಿಮರಿ ಎಂದರೆ ಇದೊಂದೆ ಎಂದು ಅದರ ತಾಯಿ ಭಾವಿಸಿದ್ದಿತು ; ಅಲ್ಲದೆ ಪ್ರಪಂಚ ಮುಂದುವರೆಯುವುದಕ್ಕೂ, ಚರ್ಚುಗಳ ಮತ್ತು ಸರ್ಕಾರದ ವ್ಯವಹಾರಗಳ ಸದ್ಯದ ವ್ಯವಸ್ಥೆ ಏರುಪೇರಾಗದೆ ಸಮಸ್ಥಿತಿಯಲ್ಲಿರುವುದಕ್ಕೂ ತನ್ನ ಮರಿ ಅತ್ಯಗತ್ಯ ಎಂದು ತಿಳಿದಿತ್ತು. ಗರಿಗೆದರಿ ತನ್ನ ಸಣ್ಣಗಾತ್ರವನ್ನು ಅದರ ಸರಿಯಾದ ಆಕೃತಿಯ ಎರಡರಷ್ಟಕ್ಕೆ ಹಿಗ್ಗಿಸುತ್ತಾ ಮುಂದೆ ಏಳಿಗೆಗೆ ಬರಲಿರುವ ತನ್ನ ಸಂತಾನವನ್ನು ನೋಡಿ ಎನ್ನುವಂತೆ ಪ್ರತಿಯೊಬ್ಬರ ಮುಖದ ಬಳಿಯೂ ಹಾರಾಡುತ್ತಾ ತಾಯಿಕೋಳಿ ತನ್ನ ಮರಿಯ ಯೋಗಕ್ಷೇಮವನ್ನು ಒಂದೇ ಸಮನೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿತ್ತು.

ಪಿಂಚನ್ ಮನೆತನದ ಸ್ಥಿತಿಗತಿಯನ್ನು ಈ ಕೋಳಿಮರಿ ವರ್ಣಿಸಿ ತೋರಿಸಿದರೆ, ಬಿರುಗಾಳಿ ನಿಂತ ಮೇಲೆ ಮನೆಯ ಇಪ್ಪಾರು ಮೂಲೆಯಲ್ಲಿ ಆ್ಯಲಿನ್ ಹೂಗಿಡ ಹೂಬಿಟ್ಟಿದ್ದು ಆ ಮನೆಯಲ್ಲಿ ಹೊಸಬದುಕು ಅರಳಿದ ಸೂಚನೆ ಆಗಿದೆ. ಹೀಗೆ ಕಾದಂಬರಿ ಹೊರನೋಟಕ್ಕೆ ಒಂದು ಕಥೆಯಾಗಿ ಕಂಡರೂ ಪ್ರತಿಪಾದಿತ ರೀತಿಯಲ್ಲಿ ಸಾಂಕೇತಿಕ ಚಿತ್ರಣದ ಕಾದಂಬರಿಯಾಗಿ ಗತಕಾಲದ ಮೌಲ್ಯಗಳನ್ನು ಎತ್ತಿ ಹಿಡಿಯುವ ಕಾದಂಬರಿಯಾಗಿದೆ. ಈ ಬೃಹತ್ ಕಾದಂಬರಿಗಳನ್ನು ಎಂ.ವಿ.ಸೀ. ಕನ್ನಡಕ್ಕೆ ನೀಡಿರುವುದು ಅನುವಾದಿತ ಕಾದಂಬರಿ ಸಾಹಿತ್ಯಕ್ಕೆ ಒಂದು ಒಳ್ಳೆಯ ಕೊಡುಗೆ ಆಗಿದೆ. ಒಂದಂಶವೆಂದರೆ ಈ ಕಾದಂಬರಿ ಕಥಾಹರವು ವರ್ಣವಿಸ್ತಾರ ವೈವಿಧ್ಯವಾಗಿರುವುದರಿಂದ ಓದುಗನಿಗೆ ಓದಲು ತಾಳ್ಮೆ ಇರಬೇಕಾಗುತ್ತದೆ.

**ಜೂಡಿಲಕ್ಷ್ಮಿ**

ನಮಿಯೋಮಿ ಮಿಚಿಸನ್ (Naomi Mitchison) ಇಂಗ್ಲೀಷಿನಲ್ಲಿ ಬರೆದಿರುವ, ನ್ಯಾಷನಲ್ ಬುಕ್ ಟ್ರಸ್ಟಿನವರು ೧೯೫೪ರಲ್ಲಿ ಪ್ರಕಟಿಸಿರುವ ೫೨ ಪುಟಗಳ ಕಾದಂಬರಿಯ ಮೂಲಕ ಭಾರತೀಯ ಸಂಸ್ಕೃತಿಯನ್ನು ವಿದೇಶೀ ಲೇಖಕನೊಬ್ಬ ಚಿತ್ರಿಸಿರುವುದಕ್ಕೆ ಸಾಕ್ಷಿಯಾಗಿದೆ. ಲೇಖಕ ಮದರಾಸಿನಲ್ಲಿ ವಾಸವಿದ್ದು ಅಲ್ಲಿಯ ಜನರ ಬದುಕನ್ನು ಹತ್ತಿರದಿಂದ ನೋಡಿದ್ದನ್ನು ಈ ಕೃತಿಯಲ್ಲಿ ಕಾಣಬಹುದು. ಭಾರತೀಯರು ವಿದೇಶದಲ್ಲಿದ್ದು ಅಲ್ಲಿಯ ಬದುಕಿನ ಬಗ್ಗೆ ಬರೆದಕೃತಿಗಳು ಕಡಿಮೆ ಎಂದೇ ಹೇಳಬಹುದು. ವಿದೇಶೀಯರು ಭಾರತಕ್ಕೆ ಬಂದು ಇಲ್ಲಿನ ಬದುಕು ಸಂಸ್ಕೃತಿ ಕಂಡು ಬರೆದ ಕೃತಿಗಳು ಸಾಕಷ್ಟಿವೆ. ಆ ಬಗ್ಗೆ ಪ್ರವಾಸ ಗ್ರಂಥಗಳು,

ಶಕ್ತಿಯಾಗಿ ಪರಿಣಮಿಸುತ್ತದೆ. ಅನೈತಿಕ ರೀತಿಯಲ್ಲಿ ಗಳಿಸಿದ ಆಸ್ತಿಯನ್ನು ತಾನೂ ತನ್ನ ಮುಂದಿನ ಪೀಳಿಗೆಯೂ ಜೀರ್ಣಿಸಿಕೊಳ್ಳುವುದು. ಕಷ್ಟ" ಸಂದೇಶ ಎಂಬ ಸಾರುತ್ತಾನೆ. ನಮ್ಮ ಪಾಪಪುಣ್ಯಗಳನ್ನು ಅಳೆಯುವ ಯಾವುದೋ ಒಂದು ಶಕ್ತಿ ಇದೆ ಎಂದು ಹಾಥಾರ್ನಿನ ನಂಬಿಕೆ. ಇಡೀ ಕಾದಂಬರಿ ಈ ತತ್ವಕ್ಕೆ ದೃಷ್ಟಾಂತವಾಗಿದೆ.

ಈ ಕಾದಂಬರಿಯ ತಾತ್ವಿಕ ಹಿನ್ನೆಲೆಯನ್ನು ಹೀಗೆ ಕ್ರೋಢೀಕರಿಸಬಹುದು.

೧. ಈ ಕೃತಿಯಲ್ಲಿ ಹಾಸುಹೊಕ್ಕಾಗಿ ಬಂದಿರುವ ವೈವಿಧ್ಯಪೂರ್ಣ ವರ್ಣನಾತ್ಮಕ ವಿವರಗಳು ೧೯ನೇ ಶತಮಾನದ ಅಮೆರಿಕಾದ, ನ್ಯೂ ಇಂಗ್ಲೆಂಡಿನ ಜೀವನ ಚಿತ್ರಣವನ್ನು ಸೊಗಸಾಗಿ ನಿರೂಪಿಸಿದೆ.

೨. ವರ್ತಮಾನಕಾಲದ ಜನಜೀವನದ ವಾಸ್ತವಿಕಾಂಶಗಳನ್ನು ಗತಕಾಲದ ಅದ್ಭುತ ಸಂಗತಿಗಳನ್ನು ಕಲಾತ್ಮಕವಾಗಿ ಬೆಸೆಯಲಾಗಿದೆ.

೩. ಪ್ಯೂರಿಟನ್ ಸಮಾಜವನ್ನು ಕುರಿತ ವಿಮರ್ಶಾತ್ಮಕ ವಿಡಂಬನೆ ಎಳೆಎಳೆಯಾಗಿ ನಿರೂಪಿತವಾಗಿದೆ.

೪. ಆಸ್ತಿಗಳಿಕೆಯ ಸಂಗ್ರಹಬುದ್ಧಿ ಮಾನವನ ಹುಟ್ಟುಗುಣ, ಆದರೆ ಅದನ್ನು ಅನೈತಿಕ ರೀತಿಯಲ್ಲಿ ಗಳಿಸಿದರೆ ತಾನೂ ಮುಂದಿನ ಪೀಳಿಗೆಯೂ ಅದನ್ನು ಜೀರ್ಣಿಸಿಕೊಳ್ಳುವುದು ಕಷ್ಟ.

೫. ಹಾಥಾರ್ನ್‌ನ ಪ್ರಕಾರ ಪಾಪಕ್ಕೆ ತಕ್ಕಶಿಕ್ಷೆ ಅನಿವಾರ್ಯ. ಈ ಶಿಕ್ಷೆ ಬಿಡಿಯಾಗಿ ಒಬ್ಬ ವ್ಯಕ್ತಿಗೆ ಮಾತ್ರವಲ್ಲ ಇಡೀ ಜನಸಮೂಹಕ್ಕೆ ಪ್ರಾಪ್ತವಾಗಬಹುದು.

೬. ನಮ್ಮ ಪಾಪಶಕ್ತಿಯನ್ನು ಅಳೆಯುವ ಯಾವುದೋ ಒಂದು ಶಕ್ತಿ ಇದೆ ಅಲ್ಲದೆ ನಮಗಿಂತ ಯಾವುದೇ ಒಂದು ವ್ಯಾಪಕವಾದ ಸಹಾನುಭೂತಿಯ ಶಕ್ತಿಯೂ ನೆಲಸಿದೆ. ಅದರಲ್ಲಿ ಬಲವಾದ ವಿಶ್ವಾಸವನ್ನು ನಾವಿಡಬೇಕು. ಆಗ ಪಾಪಕ್ಕೆ ಹೇಗೆ ದಂಡನೆ ಅನಿವಾರ್ಯವೋ ಹಾಗೆ ನಿರಪರಾಧಿಗಳ ಉದ್ಧಾರವೂ ತಡವಾಗಿ ಆದರೂ ನಿಶ್ಚಿತ ಎಂಬುದು ಹಾರ್ಥಾನೇನ್ ದೃಢನಂಬಿಕೆ.

ಈ ತಾತ್ವಿಕ ಹಿನ್ನೆಲೆಯಲ್ಲಿ ಈ ಕಾದಂಬರಿಯ ಪ್ರಧಾನ ಪಾತ್ರಗಳಾದ ಹೆಸ್ಸಿಬಾ ಮತ್ತು ಕ್ಲಿಫರ್ಡ್, ಹಾಲ್‌ಗ್ರೇವ್ ಮತ್ತು ಫೀಬೆ ಪಾತ್ರಗಳು ಚಿತ್ತಿವಾಗಿದೆ. ಆಲಿಗಳ ಪ್ರಕರಣ ಕಾದಂಬರಿಯ ಕವಲುಕಥೆ ಆಗಿದೆ. ಕುಟುಂಬದ ಕಥೆಯಾಗಿ ಕಾದಂಬರಿ ನಿರೂಪಕನಾಗಿದ್ದರೂ ಮೇಳ ಹೇಳಿದ ತಾತ್ವಿಕ ಅಸ್ತಿಭಾರ ಇಲ್ಲಿನ ಪಾತ್ರಗಳಿಗೆ ಇರುವುದನ್ನು ಕಾಣಬಹುದು.

ಕೃತಿಯಲ್ಲಿ ಪಾತ್ರಗಳನ್ನು ಘಟನೆಗಳನ್ನು ಸಾಂಕೇತಿಕತೆಯ ಪ್ರತೀಕವಾಗಿ ನಿರೂಪಿಸಲಾಗಿದೆ. ವಸ್ತು ಇಲ್ಲಿ ಪ್ರತಿಮೆ ಆಗಿದೆ. ಉದಾಹರಣೆಗೆ ಪಿಂಚನ್ ಉದ್ಯಾನದ ವರ್ಣನೆಯಲ್ಲಿ ಬರುವ ಕೋಳಿ ಕುಟುಂಬದ ವರ್ಣನೆ ಪಿಂಚನ್ ಮನೆತದ ಸ್ಥಿತಿಗತಿಗಳನ್ನು ಸಾಂಕೇತಿಕವಾಗಿ ವರ್ಣಿಸುವ ಕೋಳಿಮರಿಯೊಂದರ ವರ್ಣನೆ ಏಳು ಇಪ್ಪಾರಿನ ಮನೆ ಕಾದಂಬರಿಯಲ್ಲಿ ಬರುವ ಸಾಂಕೇತಿಕ ಚಿತ್ರಣಗಳಿಗೆ ಒಂದು ಒಳ್ಳೆಯ ಮಾದರಿ ಆಗಿದೆ. ೬೬ ಪುಟ (೨೦–೫–೨೦೬) ಇನ್ನೂ ಒಂದು ಮರಿಯ ವಿಷಯ ಹೇಳುವುದಾದರೆ, ಇನ್ನೂ ಮೊಟ್ಟೆಯೊಳಗಡೆಯೇ ಇರಬೇಕಾದಷ್ಟು

ಉಭಯ ಸಂಸ್ಕೃತಿಗಳ ಮಿತಿಗಳ ಸೂಕ್ಷ್ಮ ಚಿತ್ರಣ ಈ ಸರಳ ನುಡಿಗಳಲ್ಲಿ ಕಾಣಬುಹುದು.

ಸ್ವಾತಂತ್ರ್ಯದಿನ ಆಚರಿಸಿದ್ದು, ಕಾಂಚೀಪುರಕ್ಕೆ ಹೋಗಿದ್ದು, ರಾಷ್ಟ್ರೀಯ ವಿಸ್ತರಣ ಯೊಜನಾಕ್ಷೇತ್ರಗಳ ಭೇಟಿ ಕ್ರಿಸ್ಮಸ್, ಪೊಂಗಲ್ ಆಚರಣೆ ಮೊದಲಾದ ಪ್ರಸಂಗಗಳ ನಿರೂಪಣೆ ಲಲಿತ ಅಧ್ಯಾಯಗಳಂತೆ ನಿರೂಪಿತವಾಗಿವೆ.

ಕಾದಂಬರಿಯುದ್ಧಕ್ಕೂ ಹೆಜ್ಜೆ ಹೆಜ್ಜೆಗೆ ಸರಳವರ್ಣನೆಗಳೂ ಮನಸೆಳೆಯುತ್ತದೆ ಸೀರೆ ಅಂಗಡಿಗೆ ಅಮ್ಮಣ್ಣಿ ಜೂಡಿಯನ್ನು ಕರೆದುಕೊಂಡು ಹೋದಾಗ. ಅಲ್ಲಿ ರಸ್ತೆಯಲ್ಲಿ ರಥವೊಂದು ಬರುತ್ತಿತ್ತು ಅದನ್ನು ಜೂಡಿಗೆ ಅಮ್ಮಣ್ಣಿ ವರ್ಣಿಸಿದ್ದು ಹೀಗೆ 'ಅದೇತಾನೆ ಅವರಿಗೆ ತಮಟೆಗಳ ಮತ್ತು ಪಿಳ್ಳಂಗೋವಿಗಳ ನಾದ ಕೇಳಿಬಂತು ; ಅಲ್ಲಿಯೇ ಮೂಲೆಯನ್ನು ತಿರುಗಿಕೊಂಡು ಬಹಳ ಎತ್ತರವಾದ ಮರದ ತೇರು ಬರುತ್ತಿತ್ತು, ಬಣ್ಣಬಳಿದು ಗಿಲೀಟು ಹಾಕಿದ ಅದು ಸಿಂಹಾಸನದ ಹಾಗಿತ್ತು ; ಅದರ ಮೇಲ್ಗಡೆ, ತುಂಬ ಚಿತ್ರಬಿಡಿಸಿ ತೊಡತೊಡಕಾಗಿ ಕೆತ್ತನೆ ಕೆಲಸ ಮಾಡಿದ ಮೇಲು ಕಟ್ಟಿನ ಕೆಳಗೆ ಒಂದು ಸಣ್ಣ ಉಯ್ಯಾಲೆಯಿದ್ದು ಅದರಲ್ಲಿ ಎರಡು ದೇವರ ವಿಗ್ರಹಗಳಿದ್ದವು. ಭಾರಿ ಮರದ ಚಕ್ರಗಳು ಗಡಗಡಸದ್ದು ಮಾಡುತ್ತ ಉರುಳುತ್ತಿದ್ದು. ತೇರನ್ನು ಹಗ್ಗಗಳಿಂದ ಎಳೆಯುತ್ತಿದ್ದರು. ಒಂದೊಂದು ಹಗ್ಗವನ್ನು ನೂರಕ್ಕೂ ಮೇಲ್ಪಟ್ಟು ಜನ ಹಿಡಿಯುತ್ತಿದ್ದರು "ದೇವರನ್ನು ಎಳೆದು ಅವರು ಪುಣ್ಯ ಕಟ್ಟಿಕೊಳ್ಳುತ್ತಾರೆ" (ಪುಟ ೫೫) ಹೀಗೆ ಸಾಕಷ್ಟು ವಿವರಣೆ ವರ್ಣನೆಗಳು ಕಾದಂಬರಿ ಉದ್ದಕ್ಕೂ ಬರುತ್ತವೆ. ಒಂದು ರೀತಿ ಪ್ರಬಂಧವಾಚನದ ಅನಭವವುಂಟಾಗುತ್ತದೆ.

ಕಾದಂಬರಿಯಲ್ಲಿ ಒಂದು ಕಡೆ ಕುಟುಂಬದ ಕಥೆ ಇನ್ನೊಂದು ಕಡೆ ಭಾರತೀಯ ಬದುಕಿನ ಕಥೆ ಮಗದೊಂದು ಕಡೆ ಪಾಶ್ಚಾತ್ಯ ಕುಟುಂಬದ ದೃಷ್ಟಿಯಲ್ಲಿ ಭಾರತೀಯ ಜನಜೀವನ ಕಂಡ ಬಗೆ ಈ ಮೂರೂ ಮುಪ್ಪುರಿಗೊಂಡು ಬಂದಿದೆ.

ಈ ಕಾದಂಬರಿಯನ್ನು ಎಂ.ವಿ.ಸೀ. ಮೆಚ್ಚಿಕೊಂಡರು. ಕೃತಿಯನ್ನು ಪ್ರಕಾಶಕರು ಅನುವಾದಿಸಿಕೊಡಿ ಎಂದು ಕೇಳಿದ್ದಕ್ಕೆ ಅನುವಾದಿಸಿ ಬರೆದುಕೊಟ್ಟ ಕೃತಿ ಆಗಿದೆ. ಈ ಅನುವಾದದಲ್ಲಿ ಇಂಗ್ಲಿಷ್ ಪದಗಳನ್ನು ವಿಶಿಷ್ಟವಾಗಿ ಅನುವಾದಿಸಿದ್ದಾರೆ. ನೇಮ್‌ಪ್ಲೇಟ್ (ಹೆಸರುಹಲಗೆ) ಸೋಷಿಯಲ್ ಸೆಂಟರ್ (ಸಮಾಜಕೇಂದ್ರ) ಯೂನಿಯನ್ ಹೆಲ್ತ್ ಸೆಂಟರ್ (ಒಕ್ಕೂಟ ಆರೋಗ್ಯಕೇಂದ್ರ) ಶೀತಕ ಕಪಾಟು (ರೆಫ್ರಿಜಿರೇಟರ್) ಡಾಕ್ಯುಮೆಂಟರಿ (ಪ್ರತ್ಯಕ್ಷ ನಿದರ್ಶನ) ಆದರೆ ಎಲ್ಲಕಡೆ ಪದಾನುವಾದಗಳನ್ನು ಮಾಡದೆ ಕೆಲವೆಡೆ ಇಂಗ್ಲಿಷ್ ಪದಗಳನ್ನು ಕನ್ನಡ ಲಿಪಿಯಲ್ಲೂ ಇಂಗ್ಲಿಷ್ ಲಿಪಿಯಲ್ಲೂ ಕೊಟ್ಟಿದ್ದಾರೆ. ಉದಾಹರಣೆಗೆ ಪುಟ ೧೩೮ರಲ್ಲಿ ಪಿಂಕ್ (Pink) ಕಾರ್ನ್‌ಫ್ಲವರ್ (Corn Flower) ಡ್ವಾರ್ಫ್ ಫ್ಲಾಕ್ಸ್ (Dwarf Phlox) ಲಾರ್ಕ್‌ಸ್ಪರ್ (Larkpvr) ಹಿಂದಿಪದಗಳನ್ನು ಅನುವಾದಿಸಿಕೊಟ್ಟಿದ್ದಾರೆ. ಬಿಳಿಯ ದೊಗಲೆ ಪಾಯಿಜಾಮ (ಸುರವಾಲ್) ಮಂಡಿಯುದ್ದದ ನೀಳಜುಬ್ಬ (ಕಮೀಜ್) ಒಟ್ಟಿನಲ್ಲಿ ವಿದ್ಯಾರ್ಥಿಗಳು ಓದಬಹುದಾದ ಕಾದಂಬರಿಯೊಂದನ್ನು ಕನ್ನಡಕ್ಕೆ ಕೊಟ್ಟಿದ್ದಾರೆ ಎನ್ನಬಹುದು.

ವಿಮರ್ಶಾ ಲೇಖನಗಳು ಇತಿಹಾಸಗ್ರಂಥಗಳು ಪ್ರಬಂಧಗಳು ಸಾಕಷ್ಟಿವೆ. ಆದರೆ ಕಥೆ ನಾಟಕ ಕಾವ್ಯ ಕಾದಂಬರಿಗಳು ಸ್ವಲ್ಪ ಕಡಿಮೆ ಎಂದರೆ ತಪ್ಪಿಲ್ಲ. ಅನುವಾದಿತ ಕೃತಿಗಳು ಆದರೆ ವಿದೇಶೀಯರಿಂದ ಸ್ವತಂತ್ರವಾಗಿ ಇಲ್ಲಿಯ ಬದುಕಿನ ಬಗ್ಗೆ ರಚಿತ ಕಾದಂಬರಿಗಳು ಅಧಿಕವಾಗಿಲ್ಲ ಎನ್ನಬಹುದು.

ಈ ಕಾದಂಬರಿ ಜೂಡಿ-ಲಕ್ಷ್ಮಿ ಭಾರತೀಯ ಪಾಶ್ಚಾತ್ಯ ಸಂಸ್ಕೃತಿಗಳನ್ನು ಪ್ರತಿನಿಧಿಸುವ ಪಾತ್ರಗಳಾಗಿವೆ. ಇಂಗ್ಲೆಂಡಿನಿಂದ ಬಂದ ಜೂಡಿಯ ತಾಯಿ ತಂದೆಯರಿಗೆ ತಂದೆ ವೈದ್ಯರಾಗಿ, ತಾಯಿ ಸಮಾಜ ಸೇವಕಿಯಾಗಿ ಸೇವೆಸಲ್ಲಿಸುತ್ತಿದ್ದರು ಮೊದಲನೇ ಮಗ ಜಾನ್ ಇಂಗ್ಲೆಂಡ್‌ನಲ್ಲಿ ಓದುತ್ತಿದ್ದ. ಎರಡನೇ ಮಗಳು ಜೂಡಿ ಮದರಾಸಿನಲ್ಲಿ ವಿದ್ಯಾರ್ಥಿಯಾಗಿದ್ದಳು.

ಈ ಕುಟುಂಬದ ಮನೆಪಕ್ಕದಲ್ಲಿದ್ದ ಸಂಪ್ರದಾಯಸ್ಥ ಕುಟುಂಬಕ್ಕೆ ಸೇರಿದ ಲಕ್ಷ್ಮಿ ಜೂಡಿಗೆ ಶಾಲಾ ಗೆಳತಿ ಆಗಿದ್ದಳು. ಅವರಿಬ್ಬರ ಪರಿಚಯ ಬೆಳೆದು ಇಬ್ಬರು ಕುಟುಂಬದ ನಡುವೆ ಮಾತುಕಥೆಗಳಲ್ಲಿ ಕಾದಂಬರಿ ಸಾಗುತ್ತದೆ. ಕಾದಂಬರಿಯಲ್ಲಿ ಮಕ್ಕಳ ಪಾತ್ರಗಳೇ ಪ್ರಮುಖವಾಗಿ ಮಕ್ಕಳ ಕಾದಂಬರಿಯೇನೋ ಇದು ಎನ್ನಿಸುತ್ತದೆ. ಕಥೆಗಿಂತ ಹೆಚ್ಚಾಗಿ ವರ್ಣನೆಗಳು ಸ್ಥಳದ ಪ್ರಸಂಗಗಳ ಭಾವನೆಗಳ ಚಿತ್ರಣವೇ ಹೆಚ್ಚಾಗಿದೆ. ವರ್ಣನೆಗಳೂ ತುಂಬ ಸರಳವಾಗಿವೆ. ಭಾರತೀಯ ಪಾಶ್ಚಾತ್ಯ ಸಂಸ್ಕೃತಿಯ ದೃಷ್ಟಿಕೋನಗಳು ಅಲ್ಲಲ್ಲಿ ಕುತೂಹಲಕಾರಿಯಾಗಿ ಚಿತ್ರಿತವಾಗಿದೆ.

ಉದಾಹರಣೆಗೆ ಜೂಡಿ ಬೇಲಿಪಕ್ಕದ ಪಕ್ಕದ್ಮನೆ ಸಂಪ್ರದಾಯಸ್ಥ ಕುಟುಂಬದವರ ಬಗ್ಗೆ ತಿಳಿಯಲು ಕುತೂಹಲ ತೋರಿಸಿದಾಗ ಜೂಡಿಗೂ ಅವರ ತಂದೆಗೂ ನಡೆದ ಮಾತು ಕಥೆ ಹೀಗಿತ್ತು.

"ಬೆಳಗಿನ ಬೆಡಗಿ" ಹಬ್ಬಿದ್ದ ಬೇಲಿಯ ಆಚೆ ಇದ್ದ ಕುಟುಂಬದ ವಿಚಾರವಾಗಿ ಜೂಡಿ ತನ್ನ ತಂದೆಯನ್ನು ಪ್ರಶ್ನಿಸಿದಾಗ ಅವರು ಆ ಕುಟುಂಬದವರು ಬ್ರಾಹ್ಮಣರೆಂದು ಹೇಳಿದರು. ಯಜಮಾನ ಸಂಸ್ಕೃತ ವಿದ್ವಾಂಸರು, ಆ ಮನೆಯವರಿಗೆ ಹಿಂದೂಗಳಲ್ಲದ ಜನರ ಪರಿಚಯವನ್ನು ಮಾಡಿಕೊಳ್ಳುವ ಇಷ್ಟವಿತ್ತೋ ಇಲ್ಲವೋ ಜೂಡಿಯ ತಂದೆಗೆ ಹೇಳ ಬರುವಂತಿರಲಿಲ್ಲ.

'ಜೂಡಿ' ಅವರು ಒಂದು ವೇಳೆ ಹಳೆಯ ಸಂಪ್ರದಾಯದವರಾದರೆ ನಿನ್ನನ್ನಾಗಲಿ ನನ್ನನ್ನಾಗಲಿ ಮನೆಯೊಳಕ್ಕೆ ಸೇರಿಸದ ಅವರ ಭಾಗಕ್ಕೆ ನಾವು ಹರಿಜನರ ಸಮಾನ. ಅವರ ಮನೆಯನ್ನು ನಾವು ಹೊಲಸು ಮಾಡಿದೆವು ಎಂದು ಅವರು ಭಾವಿಸುವರು" ಎಂದು ಜೂಡಿಯ ತಂದೆ ತಿಳಿಸಿದರು.

"ಏನೋ ತುಂಬ ಅವಿವೇಕವಾಗಿ ಕಾಣುತ್ತೆ "ಎಂದಳು ಜೂಡಿ. ಅವಳ ತಂದೆ ಹೇಳಿದರು" ಆದರೆ ನಿಜವಾಗಿ ಕೆಲವು ವಿಚಾರಗಳಲ್ಲಿ ನಾವು ಕೊಳಕೇ ಸರಿ. ನಾವು ಹೊರಗಡೆ ಹಾಕಿಕೊಳ್ಳುವ ಜೋಡುಗಳನ್ನೇ ಮನೆಯೊಳಗೂ ಹಾಕಿಕೊಳ್ಳುತ್ತೇವೆ. ನೋಡು, ಜೂಡಿ ನಿನ್ನ ಚಪ್ಪಲಿಗಳ ಮೇಲೆ ಅದೆಷ್ಟೊಂದು ದೂಳು ಕೂತಿದೆ. ನೀನಲ್ಲಿ ಕುಳಿತು ಒಮ್ಮೆ ಮೈತೊಳೆದ ನೀರಿನಿಂದಲೇ ಮತ್ತೆ ಸ್ನಾನ ಮಾಡುತ್ತೇವೆ. ನಾವು ಮಾಂಸ ಎಂದು ತಿನ್ನುವುದು ನಿಜವಾಗಿ ಸತ್ತಪ್ರಾಣಿಗಳೂ.."

# ಪರಿವಿಡಿ

# ಪೀಠಿಕೆ

ಈ ಕಾದಂಬರಿಯ ಕರ್ತೃ ನ್ಯಾಥಾನಿಯಲ್ ಹಾಥಾರ್ನ್; ಆತ ಅಮೆರಿಕಾ ದೇಶದ ಒಬ್ಬ ಶ್ರೇಷ್ಠ ಕಥೆಗಾರ ಹಾಗೂ ಕಾದಂಬರಿಕಾರ. ತನ್ನ ವಿಷಯವಾಗಿ ತಾನೇ ಹೇಳಿಕೊಂಡಿರುವಂತೆ, ತನ್ನ ಜೀವಿತಕಾಲದಲ್ಲಿ "ಅವನು ಬಹುವರ್ಷಗಳವರೆಗೆ ಅಮೆರಿಕದ ಸಾಹಿತಿಗಳಲ್ಲಿ ಅತ್ಯಂತ ಅಜ್ಞಾತನಾಗಿದ್ದವನು." (Preface to 'Twice-told Tales,' January 11, 1951) ಅವನಿಗೆ ಕೀರ್ತಿ ಸ್ವಲ್ಪ ತಡವಾಗಿಯೇನೋ ಬಂತು. ಆದರೆ, ಆ ವೇಳೆಗೆ ಅವನ 'ರಕ್ತಾಕ್ಷರ' ಎಂಬ ಕಾದಂಬರಿ ('The Scarlet Letter, 1950) ಪ್ರಕಟವಾಗಿ, ಅದರಿಂದ ಅವನಿಗೆ ಕೀರ್ತಿಯೂ ಧನವೂ ಲಭಿಸಿದುವು. ಅವನು ಬದುಕಿದ್ದ ಕಾಲದಲ್ಲಿಯೆ ಅಮೆರಿಕದ ಅಗ್ರಗಣ್ಯ ಸಾಹಿತಿಗಳಲ್ಲಿ ಅವನಿಗೆ ಸ್ಥಿರವಾದ ಸ್ಥಾನ ಲಭಿಸಿತು ; ಅಮೆರಿಕದ ಸಾಹಿತ್ಯವು ನವೋನವವಾಗುತ್ತಿರುವ ಇಂದಿಗೂ ಆ ಸ್ಥಾನ ಹಾಗೆಯೆ ಉಳಿದುಬಂದಿದೆ ಅವನ ಪಾಲಿಗೆ. ಮಾತ್ರವಲ್ಲ, ಪ್ರಸಿದ್ಧ ಕಾದಂಬರಿಕಾರ ಹೆನ್ರಿ ಜೇಮ್ಸ್ (Henry James) ಹಾಥಾರ್ನನನ್ನು ಕುರಿತು 'ಆಂಗ್ಲ ಸಾಹಿತಿಗಳು' ಎಂಬ ಗ್ರಂಥಮಾಲೆಯಲ್ಲಿ (English Men of Letters Series, 1879) ವಿಮರ್ಶಾತ್ಮಕ ಜೀವನ ಚರಿತ್ರೆಯನ್ನು ಬರೆದಂದಿನಿಂದ ಇಂದಿನವರೆಗೂ ತಜ್ಞ ವಿಮರ್ಶಕರನೇಕರು ಅವನ ಕೃತಿಗಳನ್ನು ಹೊಸ ಹೊಸ ದೃಷ್ಟಿಕೋನಗಳಿಂದ ಪುನಃ ಪರಿಶೀಲನೆ ಮಾಡಿ, ಹೊಸದಾಗಿ ಬೆಲೆಕಟ್ಟಿದ್ದಾರೆ ; ಅವನ ಕೃತಿಗಳಲ್ಲಿ ಅಡಗಿದ್ದ ವಿಶಿಷ್ಟ ಗುಣಧರ್ಮಗಳ ಮೇಲೆ ಹೊಸ ಬೆಳಕನ್ನು ಚೆಲ್ಲಿದ್ದಾರೆ.

ನ್ಯಾಥಾನಿಯಲ್ ಹಾಥಾರ್ನ್ ಹುಟ್ಟಿದ್ದು ಕ್ರಿ.ಶ. 1804ನೆಯ ಇಸವಿ ಜುಲೈ 4ರಂದು, ಈಗಿನ ಮಸ್ಯಾಚುಸೆಟ್ಸ್ ಸಂಸ್ಥಾನದ ಸಲೆಂ (Salem) ಪಟ್ಟಣದಲ್ಲಿ. ಈ ಹುಟ್ಟೂರಿಗೂ ಅವನಿಗೂ ಬೇರ್ಪಡಿಸಲಾಗದಂತಹ ಒಂದು ನಂಟು ಬೆಳೆದು ಬಂದು, ಅದು ಅವನ ಬದುಕಿನ ಮೇಲೂ ಕೃತಿರಚನೆಯ ಮೇಲೂ ಅಚ್ಚಳಿಯದ ಪ್ರಭಾವವನ್ನು ಬೀರಿತು. ಹಾಥಾರ್ನ್ ನಾಲ್ಕು ವರ್ಷ ವಯಸ್ಸಿನ ಹುಡುಗನಾಗಿದ್ದಾಗಲೇ, ನೌಕಾನಾಯಕನಾಗಿದ್ದ ಅವನ ತಂದೆ ಕಡಲ ಪ್ರಯಾಣವೊಂದರಲ್ಲಿ ತೀರಿಹೋದನು. ಪತಿವಿಯೋಗದಿಂದ ದುಃಖಿತಳಾದ ಅವನ ತಾಯಿ ಸುಮಾರು ನಲವತ್ತು ವರ್ಷಕಾಲ ತನ್ನ ಬದುಕನ್ನೆಲ್ಲ ಒಂದು

ಹಣವನ್ನಾಗಲಿ ಗಳಿಸಿಕೊಡದ ಆ ನಿರ್ಭಾಗ್ಯ ಕಾದಂಬರಿಯ ಎಲ್ಲ ಪ್ರತಿಗಳನ್ನೂ ಅವನು ನಾಶಪಡಿಸಿದನು. ಅವನು ತನ್ನ ಸಾಹಿತ್ಯಜೀವನದಲ್ಲಿ ಪರಾನುಕರಣದ ಪಥವನ್ನು ತ್ಯಜಿಸುವಂತೆ ಮಾಡಿ, ಸ್ವತಂತ್ರ ಮಾರ್ಗವೊಂದನ್ನು ಕಲ್ಪಿಸಿಕೊಳ್ಳುವಂತೆ ಮಾಡಿತು ಈ ಸಾಹಸಕಾರ್ಯ. ಅಂದು ಮೊದಲ್ಗೊಂಡು ತನ್ನ ಸ್ವಂತ ಜೀವನದರ್ಶನವನ್ನು ಪ್ರತಿಬಿಂಬಿಸುವ ಹಲವಾರು ಕಥೆಗಳನ್ನೂ ಚಿತ್ರಗಳನ್ನೂ ಬರೆದು ಪ್ರಕಟಿಸಿದನು. ಆದರೂ, 'ರಕ್ತಾಕ್ಷರ' ಪ್ರಕಟವಾಗುವವರೆಗೆ ಕೃತಿರಚನೆಯಿಂದ ಅವನು ಕೃತಾರ್ಥನಾಗಿರಲಿಲ್ಲ. ಸುಖಮಯವಾದ ದಾಂಪತ್ಯಜೀವನ, ಧ್ಯೇಯನಿಷ್ಠೆ – ಈ ಎರಡು ಹುಟ್ಟುಗಳನ್ನು ಹಿಡಿದು ಬಾಳ ನೌಕೆಯಲ್ಲಿ ಬಡತನವನ್ನು ದಾಟಿದ ದಿಟ್ಟತನ ಅವನದು. 1852ರಲ್ಲಿ ಹಾಥಾರ್ನಿನ ಕಾಲೇಜು ಗೆಳೆಯ ಫ್ರಾಂಕ್‌ಲಿನ್ ಪಿಯರ್ಸ್ (Franklin Pierce) ಎಂಬವನ ಹೆಸರು ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ ಪದವಿಗೆ ಸೂಚಿತವಾಯಿತು. ಆಗ ಹಾಥಾರ್ನನು ಆತನ ಜೀವನ ಚರಿತ್ರೆಯನ್ನು ಬರೆದನು. ಪಿಯರ್ಸನೇ ಅಧ್ಯಕ್ಷ ಪದವಿಗೆ ಆಯ್ಕೆಯಾಗಿ, ಆತ ತನ್ನ ಬಾಲ್ಯ ಸ್ನೇಹಿತನಿಗೆ ಒಂದು ದೊಡ್ಡ ಹುದ್ದೆಯನ್ನು ದೊರಕಿಸಿಕೊಟ್ಟನು. ಇದಕ್ಕೆ ಮುಂಚೆಯೆ (1851ರಲ್ಲಿ) ಪ್ರಕಟವಾಗಿತ್ತು 'ಏಳು ಇಪ್ಪಾರಿನ ಮನೆ' (The House of the Seven Gables).

ಕೆಲ ಕಾಲವಾದ ಮೇಲೆ, ಹಾಥಾರ್ನನು ಯೂರೋಪು ದೇಶಗಳನ್ನು ಸಂಚಾರಮಾಡಿಕೊಂಡು ಬರಬೇಕೆಂದು ಬಯಸಿ, ಅದರಂತೆ ಕೆಲವು ವರ್ಷ ಯೂರೋಪು ಪ್ರವಾಸವನ್ನು ಮಾಡಿ, 1861ರಲ್ಲಿ ಸ್ವದೇಶಕ್ಕೆ ಹಿಂದಿರುಗಿದನು. 1964ರಲ್ಲಿ ಮತ್ತೆ ನ್ಯೂ ಹ್ಯಾಂಪ್‌ಷೈರ್ (New Hampshire) ಪ್ರಾಂತಕ್ಕೆ ತನ್ನ ಪರಮಮಿತ್ರ ಪಿಯರ್ಸನೊಡನೆ ಪ್ರಯಾಣ ಬೆಳಸಿದನು. ಸ್ನೇಹಿತರಿಬ್ಬರೂ 'ಪ್ಲಿಮತ್' (Plymouth) ನಗರವನ್ನು ಸೇರಿ, ಅಲ್ಲಿ ತಂಗಿದರು. ಅಲ್ಲಿದ್ದಾಗ, ಒಂದು ದಿನ ರಾತ್ರಿ, ಪಿಯರ್ಸನು ತನ್ನ ಸ್ನೇಹಿತನು ಹೇಗೆ ನಿದ್ರಿಸುತ್ತಿರುವನೆಂದು ತಿಳಿಯಲು ಕುತೂಹಲಗೊಂಡು, ಹಾಥಾರ್ನಿನ ಕೋಣೆಗೆ ಹೋಗಿ ನೋಡಿದನು ; ಹಾಥಾರ್ನನು ದೀರ್ಘನಿದ್ರೆಯಲ್ಲಿದ್ದನು. ಹಾಥಾರ್ನನ ಬರಹಗಳ ಮೊತ್ತ ಅಷ್ಟೇನೂ ಹೆಚ್ಚಿನದಲ್ಲ. ಅವನ ಕೀರ್ತಿ ನಿಂತಿರುವುದು ಮುಖ್ಯವಾಗಿ ನಾಲ್ಕು ಕಾದಂಬರಿಗಳು ಮತ್ತು ಮೂರು ಕಥಾಸಂಕಲನಗಳ ಆಧಾರಗಳ ಮೇಲೆ. ಅವು ಯಾವುವೆಂದರೆ – (1) ಕಾದಂಬರಿಗಳು : ದಿ ಸ್ಕಾರ್‌ಲೆಟ್ ಲೆಟರ್ (The Scarlet Letter 1850), ದಿ ಹೌಸ್ ಆಫ್ ದಿ ಸೆವೆನ್ ಗೇಬಲ್ಸ್ (The House of the Seven Gables, 1851), ದಿ ಬ್ಲೈತ್‌ಡೇಲ್ ರೊಮ್ಯಾನ್ಸ್ (The Blithedale

ಬಗೆಯ ಉಗ್ರ ಏಕಾಂತವಾಸದಲ್ಲಿ ಕಳೆದಳು. ಅವನ ಸೋದರಿಯರಿಬ್ಬರು ಕೂಡ ತಾಯಿಯ ಏಕಾಂತವಾಸದ ಆತ್ಮದಂಡನೆಯಲ್ಲಿ ಪಾಲುಗೊಂಡಿದ್ದರು. ಹೀಗೆ, ಹಾಥಾರ್ನಿನ ಬಾಲ್ಯದಂದು ಮನೆಗೆ ಮನೆಯೇ ಮಬ್ಬು ಕವಿದಂತಿತ್ತು. ಈ ಮನೆಯ ಮಬ್ಬು ಹಾಥಾರ್ನಿನ ಜೀವಿತವನ್ನು ಕವಿಯದೆ ಬಿಡಲಿಲ್ಲ. ಇದರ ಫಲವಾಗಿಯೆ ಇರಬಹುದು, ಅವನದು ಮೊದಲಿನಿಂದಲೂ ಸಂಕೋಚಪ್ರಕೃತಿ; ಅವನೂ ಏಕಾಂತವಾಸಪ್ರಿಯನಾಗಿದ್ದನು. ಈ ಏಕಾಂತತೆ ಅಥವಾ ಒಂಟಿತನ ಅವನ ಅನೇಕ ಕಥೆಕಾದಂಬರಿಗಳಲ್ಲಿ ಕಥಾಸಾಮಗ್ರಿಯ ಮುಖ್ಯ ಧಾತುಗಳಲ್ಲಿ ಒಂದೆನಿಸಿ, ಒಂದು ಅಪರಾಧಕ್ಕೆ ಕಾರಣವಾಗಿಯೊ ಇಲ್ಲವೆ ಅಪರಾಧದ ಪರಿಣಾಮವಾಗಿಯೊ ಮೇಲಿಂದ ಮೇಲೆ ಚಿತ್ರಿತವಾಗಿದೆ. ಪ್ರಸ್ತುತ ಕಾದಂಬರಿಯಲ್ಲಿಯೆ ಇದಕ್ಕೆ ನಿದರ್ಶನವಿದೆ : 'ಏಳು ಇಪ್ಪಾರಿನ ಮನೆ'ಯ ನಿರ್ಮಾಪಕನಾದ ಸರದಾರ ಪಿನ್ಚನ್ನನ ಅಪರಾಧದ ಪರಿಣಾಮವಾಗಿ ಎರಡು ಶತಕಗಳ ತರುವಾಯ ಅವನ ವಂಶದವಳಾದ ಹೆಪ್ಸಿಬಾ ಎಂಬಾಕೆ ಏಕಾಂತವಾಸವನ್ನು ಶಿಕ್ಷೆಯಂತೆ ಅನುಭವಿಸಬೇಕಾಯಿತು.

ಹಾಥಾರ್ನ್ ಬ್ರನ್ಸ್‌ವಿಕ್ ಎಂಬಲ್ಲಿನ ಬೋವ್‌ಡಾಯ್‌ನ್ ಕಾಲೇಜಿನಲ್ಲಿ ಓದಿ 1821ರಲ್ಲಿ ಪದವೀಧರನಾದನು. ತನ್ನ ಕಾಲೇಜು ವಿದ್ಯಾಭ್ಯಾಸ ಮುಗಿದ ಮೇಲೆ (1825) ಅವನು ಸಲೆಂ ಪಟ್ಟಣದಲ್ಲಿ ಕೆಲವು ವರ್ಷ ಒಬ್ಬೊಂಟಿಗನಾಗಿ ವಾಸಮಾಡುತ್ತಿದ್ದನು. ಈ ಕಾಲದಲ್ಲಿಯೆ ಅವನು ನ್ಯೂ ಇಂಗ್ಲೆಂಡಿನ ಪೂರ್ವೇತಿಹಾಸವನ್ನು ವ್ಯಾಸಂಗಮಾಡುತ್ತ, ತನ್ನ ಕಥೆ ಕಾದಂಬರಿಗಳಿಗೆ ಸಾಮಗ್ರಿಯನ್ನು ಸಂಗ್ರಹಿಸುತ್ತ, ತನ್ನ ಲೇಖನವಿಧಾನವನ್ನು ದಿನದಿನಕ್ಕೆ ಉತ್ತಮಪಡಿಸಿಕೊಳ್ಳುತ್ತ ಇದ್ದದ್ದು. ಚಿಕ್ಕಂದಿನ ಅವನ ಏಕಾಂತವಾಸ ಅವನ ಸಾಹಿತ್ಯಜೀವನಕ್ಕೆ ತುಂಬ ನೆರವಾಗಿತ್ತು. ಹೀಗೆ ಕೆಲವು ವರ್ಷ ಕಳೆದ ಮೇಲೆ, ಸೋಫಿಯಾ ಫೀಬಡಿ (Sophia Peabody) ಎಂಬ ತರುಣಿಯನ್ನು ಅವನು ಒಲಿದು, ಅವರ ಮದುವೆ ನಿಶ್ಚಿತವಾಯಿತು (1839). ಇದಕ್ಕೆ ಮುಂಚೆಯೂ ಆ ತರುವಾಯವೂ ಅವನು ಉದ್ಯೋಗಕ್ಕೆ ಸೇರಿಕೊಂಡರೂ, ಹೆಚ್ಚುಕಾಲ ಅವನು ಆ ಉದ್ಯೋಗಗಳಲ್ಲಿರಲಿಲ್ಲ. ವಾಸ್ತವವಾಗಿ, ಉದ್ಯೋಗದಲ್ಲಿರುವುದು ಅವನಿಗೆ ಇಷ್ಟವೂ ಆಗಿರಲಿಲ್ಲ. ಲೇಖನ ವೃತ್ತಿಯಿಂದಲೇ ಜೀವಿಸಬೇಕೆಂಬುದು ಅವನ ಬಹುಮುಂಚಿನ ನಿರ್ಧಾರ. ಆಗಿನ ಕಾಲದಲ್ಲಿ ಅದು ಸಾಹಸದ ಮಾತೇ ಸರಿ. ಆ ನಿರ್ಧಾರದ ಮೊದಲ ಫಲವೇ ಅವನು ಸ್ವಂತ ಖರ್ಚಿನಿಂದ ಪ್ರಕಟಿಸಿದ 'ಫ್ಯಾನ್‌ಷಾ' (Fan shawe : 1828) ಎಂಬ ಕಾದಂಬರಿ. ಹೆಸರನ್ನಾಗಲಿ

ಕಂಡುಬರುತ್ತಿದ್ದ ಸ್ವಾರ್ಥಪರತೆ–ಇವೆರಡೂ ಅತಿರೇಕಗಳನ್ನು ಅವನು ನಿರಾಕರಿಸಿದ್ದನು. (ಈ ಎರಡೂ ಅತಿರೇಕಗಳ ಸಾಕಾರ ಮೂರ್ತಿಗಳಾಗಿದ್ದಾರೆ ಈ ಕಾದಂಬರಿಯ ಸರದಾರ ಪಿನ್ಚನ್ ಮತ್ತು ನ್ಯಾಯಮೂರ್ತಿ ಪಿನ್ಚನ್.) ನೀತಿನಿಷ್ಠೆಯ, ಅಂತರಂಗ ಶುದ್ಧಿಯ, ಹೃದಯದ ಔದಾರ್ಯದ ಬೆಳಕಿನಲ್ಲಿ ಅವನು ಕಂಡುಕೊಂಡ ಜೀವನದ ಮಾನವೀಯ ಮೌಲ್ಯಗಳ ಸಂಬಂಧವಾದ ಭಾವ ಭಾವನೆಗಳನ್ನು ಕಥೆ ಕಾದಂಬರಿಗಳ ರೂಪದಲ್ಲಿ ಬಿತ್ತರಿಸುತ್ತಿದ್ದನು. ವಾಸ್ತವವಾಗಿ, ಅವನು ತನ್ನ ಕಥೆಗಳನ್ನು 'ಮಾನವ ಹೃದಯವನ್ನು ಪ್ರತಿಬಿಂಬಿಸುವ ರೂಪಕ ಕಥೆಗಳೂ' ('Allegories of the heart') ಎಂದೇ ಕರೆದಿದ್ದಾನೆ. ಹೀಗೆ, ತನ್ನ ನಂಬಿಕೆಗಳಿಗೂ ಭಾವನೆಗಳಿಗೂ ರೂಪಕೊಡಲು ವರ್ತಮಾನ ಕಾಲದ ಸ್ಪಷ್ಟ ವಾಸ್ತವ ಜಗತ್ತಿಗಿಂತಲೂ ಗತಕಾಲದ ಅಸ್ಪಷ್ಟ ಜಗತ್ತನ್ನು ಅವಲಂಬಿಸುವುದು ಅನುಕೂಲವಾಗಿ, ಪರಿಣಾಮಕಾರಿಯಾಗಿ ಕಂಡಿತು ಅವನಿಗೆ. ಇಂತು, ನೂರಿನ್ನೂರು ವರ್ಷಗಳಷ್ಟು ಹಿಂದಿನ, ತನ್ನ ಪೂರ್ವಜರ ಕಾಲದ ನ್ಯೂ ಇಂಗ್ಲೆಂಡಿನ ಜನಜೀವನ, ಮಾಟವಿದ್ಯೆ, ವಶೀಕರಣವಿದ್ಯೆ ಮುಂತಾದ ಅದ್ಭುತ ಅಲೌಕಿಕ ಸಂಗತಿಗಳ ಬಗೆಗೆ ಆ ಕಾಲದಲ್ಲಿ ಪ್ರಚುರವಾಗಿದ್ದ ಮೂಢ ನಂಬಿಕೆಗಳು, ಆಗಿನ ಜನರ ಮತಶ್ರದ್ಧೆಗಳು–ಇವುಗಳ ಚಿತ್ರಣವೆ ಅವನ ಕಥೆ ಕಾದಂಬರಿಗಳ ಹಂದರ : ಇದರ ಮೇಲೆ ಹಬ್ಬುತ್ತಿತ್ತು ಅವನ ಭಾವನೆಗಳ ಬಳ್ಳಿ ; ಅದರಲ್ಲಿ ಅರಳುತ್ತಿದ್ದುವು ಅವನ ನೀತಿ ಬೋಧೆಯ ಹೂಗಳು.

'ಏಳು ಇಪ್ಪಾರಿನ ಮನೆ" ಹಾಥಾರ್ನನ ಎರಡನೆಯ ಕಾದಂಬರಿ. ಸಮಕಾಲೀನ ಜನ ಅದನ್ನು ಅವನ ಮೊದಲನೆಯ ಕಾದಂಬರಿ 'ರಕ್ತಾಕ್ಷರ'ಕ್ಕಿಂತ ಮೇಲ್ಮಟ್ಟದ್ದೆಂದು ಭಾವಿಸಿತ್ತು. ಬಹುಶಃ ಇದಕ್ಕೆ ಕಾರಣ, 'ಏಳು ಇಪ್ಪಾರಿನ ಮನೆ' ಅಂದಿನ ಜನದ ಬದುಕಿಗೆ ಹೆಚ್ಚು ಹತ್ತಿರವಾಗಿದ್ದುದು ; 'ರಕ್ತಾಕ್ಷರ'ದಲ್ಲಿ ಕಾಣದಿದ್ದ ಗೆಲವು, ಉಲ್ಲಾಸ, ಇದರಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಚಿಮ್ಮುತಿದ್ದುವು. 'ಗತಕಾಲದ ಮಬ್ಬಿನಿಂದ ನಮ್ಮದೇ ಕಾಲದ ಹಗಲ ಹೊಳವಿಗೆ ಹಾಯ್ದು ಬಂದ ಒಂದು ಹಳೆಯ ಕಥೆ' ಎಂದು ಇದರ ಬಗೆಗೆ ಹಾಥಾರ್ನನೇ ತನ್ನ ಪ್ರಸ್ತಾವನೆಯಲ್ಲಿ ಉಲ್ಲೇಖಿಸಿದ್ದಾನೆ. 'ರಕ್ತಾಕ್ಷರ'ದಲ್ಲಿ ಕಂಡುಬರುವ ಕಥಾಸಂವಿಧಾನದ ಐಕ್ಯವು ಇದರಲ್ಲಿ ಕಂಡುಬರುವುದಿಲ್ಲವೆಂದು ಕೆಲವು ವಿಮರ್ಶಕರ ಮತ ; ಕೇವಲ ಒಂದು ಭಾವನಾಸೂತ್ರದಿಂದ ಕೋದ ದೃಶ್ಯಮಾಲೆ 'ಏಳು ಇಪ್ಪಾರಿನ ಮನೆ' ಎಂದು ಅವರ ವಾದ. ಇದು ಒಪ್ಪತಕ್ಕದ್ದೇ ಆದರೂ ಆ ಭಾವನಾಸೂತ್ರ ಕಾದಂಬರಿಯಲ್ಲಿ ಒಂದು ಪರಿಣಾಮೈಕ್ಯವನ್ನು ಸಾಧಿಸಿದೆ ಎಂಬ ಅಂಶ ಸೂಕ್ಷ್ಮ

Romance, 1852), ದಿ ಮಾರ್ಬಲ್ ಫಾನ್ (The Marble Fawn) ; (2) ಕಥಾಸಂಕಲನಗಳೂ : ಟ್ವೈಸ್ ಟೋಲ್ಡ್ ಟೇಲ್ಸ್ (Twice-Told Tales, 1837), ಮಾಸಸ್ ಫ್ರಮ್ ಆ್ಯನ್ ಓಲ್ಡ್ ಮ್ಯಾನ್ಸ್ (Mosses from an Old manse, 1846), ದಿ ಸ್ನೋ ಇಮೆಜ್ ಆ್ಯಂಡ್ ಅದರ್ ಟ್ವೈಸ್ ಟೋಲ್ಡ್ ಟೇಲ್ಸ್ (The Snow-Image and Other Twice-Told Tales, 1852). ಇವಲ್ಲದೆ, ಅವನು ಮಕ್ಕಳಿಗಾಗಿ ಗ್ರೀಕ್ ಪುರಾಣ ಕಥೆಗಳ ಆಧಾರದ ಮೇಲೆ ಉತ್ಕೃಷ್ಟವಾದ ಮಕ್ಕಳ ಕಥೆಗಳನ್ನೂ (ಎ ವಂಡರ್ ಬುಕ್ ಫಾರ್ ಗರ್ಲ್ಸ್ ಆ್ಯಂಡ್ ಬಾಯ್ಸ್ – A Wonder-Book for Girls and Boys : 1852 ; ಟ್ಯಾಂಗಲ್‌ವುಡ್ ಟೇಲ್ಸ್ ಫಾರ್ ಗರ್ಲ್ಸ್ ಆ್ಯಂಡ್ ಬಾಯ್ಸ್ – Tanglewood Tales for Girls and Boys, 1853), ಜೀವನ ಚರಿತ್ರೆಯನ್ನೂ (ಫ್ರಾಂಕ್‌ಲಿನ್ ಪಿಯರ್ಸ್‌ನ ಜೀವನ – The Life of Franklin Pierce, 1852) ಚರಿತ್ರೆಯನ್ನೂ ಪ್ರಬಂಧಗಳನ್ನೂ ಬರೆದಿದ್ದಾನೆ. ದಿನಚರಿಯ ರೂಪದ ಎರಡು 'ಟಿಪ್ಪಣಿ ಗ್ರಂಥ'ಗಳು (Note Books) ಅವನ ವ್ಯಕ್ತಿತ್ವದ ಹಾಗೂ ಲೇಖನ ಪದ್ಧತಿಯ ಮೇಲೆ ಬೆಳಕು ಬೀರುತ್ತದೆ.

ಹಾಥಾರ್ನ್ ತನ್ನ ಕಥೆ ಕಾದಂಬರಿಗಳಲ್ಲಿ ಸಮಕಾಲೀನ ಸಣ್ಣಕಥೆಯ ಲಕ್ಷಣಗಳನ್ನಾಗಲಿ ಕಾದಂಬರಿಯು ಲಕ್ಷಣಗಳನ್ನಾಗಲಿ ಕಟ್ಟುನಿಟ್ಟಾಗಿ ಪಾಲಿಸಹೊರಟಿಲ್ಲ. ವಾಸ್ತವವಾಗಿ, ಅವನು ತನ್ನ ಕಥೆಗಳನ್ನು Tales (Short Story ಅಲ್ಲ) ಎಂಬುದಾಗಿಯೂ, ಕಾದಂಬರಿಗಳನ್ನು Romances (Novel ಅಲ್ಲ) ಎಂಬುದಾಗಿಯೂ ಕರೆದುಕೊಂಡಿದ್ದಾನೆ. ಅವನ ದೃಷ್ಟಿಯಲ್ಲಿ 'ನಾವೆಲ್' ವಾಸ್ತವಿಕ, ಅದರ ಹರವಿನಲ್ಲಿ ಬರತಕ್ಕದ್ದು ಗ್ರಂಥಕರ್ತನ ಸಮಕಾಲೀನ ಸಮಾಜದ ಯಥಾರ್ಥ ಚಿತ್ರಣ ; 'ರೊಮ್ಯಾನ್ಸ್'ನಲ್ಲಿ (ಅದ್ಭುತರಮ್ಯ ಕಥೆ) ಅದ್ಭುತಕ್ಕೂ ಅಲೌಕಿಕಕ್ಕೂ ಅವಕಾಶವುಂಟು. ('ಏಳು ಇಪ್ಪಾರಿನ ಮನೆ'ಗೆ ಹಾಥಾರ್ನನೆ ಬರೆದಿರುವ 'ಪ್ರಸ್ತಾವನೆ'ಯಲ್ಲಿ ಈ ವಿಷಯವನ್ನು ಕುರಿತು ಚರ್ಚಿಸಿದ್ದಾನೆ.) ಕಥೆಗಾಗಿ ಕಥೆ ಹೇಳುವುದು ಬಹುಮಟ್ಟಿಗೆ ಹಾಥಾರ್ನನ ಗುರಿಯಾಗಿರಲಿಲ್ಲ. ತನ್ನ ಪ್ಯೂರಿಟನ್ ಪೂರ್ವಜರಿಂದ ರಕ್ತಗತವಾಗಿ ಬಂದ ಪ್ಯೂರಿಟನ್ ಮತತತ್ತ್ವಗಳ ನೀತಿ ನಿಷ್ಠೆಯೂ, ತಾನು ಹುಟ್ಟಿ ಬೆಳೆದ ಪ್ರಜಾಪ್ರಭುತ್ವದ ವಿಶಾಲಭಾವನೆಯ ಮಾನವೀಯತೆಯೂ ಅವನಲ್ಲಿ ಸಮರಸವಾಗಿ ಬೆರೆತುಕೊಂಡಿದ್ದುವು. ಆದರೆ, ನೀತಿಯ ಆಚರಣೆಯಲ್ಲಿ ಪ್ಯೂರಿಟನ್ ಮತ ತೋರುತ್ತಿದ್ದ ಕಠೋರತೆ, ಪ್ರಜಾಪ್ರಭುತ್ವವು ನೀಡಿದ ವ್ಯಕ್ತಿಸ್ವಾತಂತ್ರ್ಯದ ಪರಿಣಾಮವಾಗಿ ವ್ಯಕ್ತಿಯ ನಡೆವಕೆಯಲ್ಲಿ

ಸತ್ತಮೇಲೆ, ಸರದಾರನು ಮಾಲನ ಜಮೀನನ್ನು ವಶಪಡಿಸಿಕೊಂಡು, ಅದರ ಮೇಲೆ ಭವ್ಯವಾದ ಮಹಲನ್ನು ಕಟ್ಟಿಸಿದನು. ಅದೇ **ಏಳು ಇಪ್ಪಾರಿನ ಮನೆ.**+ ವಿಧಿವಿಲಾಸವೆಂದರೆ, ಶಾಪಗ್ರಸ್ತವಾದ ಜಮೀನಿನ ಮೇಲೆ ಮನೆಯನ್ನು ಕಟ್ಟಿಕೊಟ್ಟ ಬಡಗಿ ಮಡಿದಾತನ ಮಗ ಥಾಮಸ್ ಮಾಲ್. ಆ ಮನೆಯೂ ಶಾಪಗ್ರಸ್ತವಾದಂತಾಯಿತು ; ಅದರಲ್ಲಿ ಸರದಾರ್ ಪಿನ್ಚನ್ ಹಠಾತ್ತನೆ ಸಂಶಯಾಸ್ಪದ ರೀತಿಯಲ್ಲಿ ಮಡಿದನು. ಅಂದಿನಿಂದ, ಆ ಮನೆಯಲ್ಲಿ ಪಾಪ ಫಲದ ಸಂಕೇತವೆಂಬಂತೆ ಹಾಲು ಸುರಿಯತೊಡಗಿತು, ಮಂಕು ಕವಿಯಿತು. ಎರಡು ಶತಕಗಳ ಕಾಲ ಪಿನ್ಚನ್ ವಂಶದವರಾರೂ ಅಲ್ಲಿ ಏಳಿಗೆ ಹೊಂದಲಿಲ್ಲ. ಪಿನ್ಚನ್ ವಂಶವೃಕ್ಷದ ದೂರದ ಕವಲಿನ ಕುಡಿಯಾದ ಫೀಬೆ ಆ ಮನೆಯೊಳಕ್ಕೆ ಕಾಲಿಟ್ಟಾಗ, ಮನೆಗೆ ಬೆಳಕು ಬಂದಂತಾಯಿತು. ನ್ಯಾಯಮೂರ್ತಿ ಪಿನ್ಚನ್ ಆ ಮನೆಗೆ ಬಂದು ಅಲ್ಲಿ ಸರದಾರ ಪಿನ್ಚನ್ನನಂತೆಯೆ ಸಂಶಯಾಸ್ಪದ ರೀತಿಯಲ್ಲಿ ಮಡಿದಾಗ, ಅವನ ದಾಯಾದಿಗಳೂ ಆ ಮನೆಗೆ ಹಕ್ಕುದಾರರೂ ಎನಿಸಿ ಅಲ್ಲಿ ವಾಸವಾಗಿದ್ದ ಹೆಪ್ಸಿಬಾ ಮತ್ತು ಕ್ಲಿಫರ್ಡ್ ಅನ್ಯಾಯಾರ್ಜಿತ ವಿತ್ತದ ಸಂಬಂಧವನ್ನು ಕಡಿದುಕೊಂಡು ಪಲಾಯನಮಾಡಿದರು. ಆಗಲೀಗ ಶಾಪವಿಮೋಚನೆಯ ಕಾಲ ಸಮನಿಸಿತು. ಪಿನ್ಚನ್ ವಂಶಜಳಾದ ಫೀಬೆ ಮತ್ತು ಮ್ಯಾಥ್ಯೂಮಾಲನ ವಂಶಜನಾದ ಹಾಲ್‌ಗ್ರೇವ್ ಇವರ ಮದುವೆ ಶಾಪವಿಮೋಚನೆಯ ಸಂಕೇತವಾಗಿ ಪರಿಣಮಿಸಿತು. ಇವಿಷ್ಟು, ಈ ಕಾದಂಬರಿಯ ಕಥೆ ಎನ್ನಬಹುದಾದ ಘಟನಾವಳಿ.

ಈ ಮೊದಲೆ ಸೂಚಿಸಿರುವಂತೆ, ಹಿಂದಿನ ಮತ್ತು ಇಂದಿನ ವಿಮರ್ಶಕರು ಹಲವರು ಈ ಕಾದಂಬರಿಯ ಮಹತ್ತ್ವವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಇದರಲ್ಲಿ ಹಾಸುಹೊಕ್ಕಾಗಿ ಬಂದಿರುವ ವೈವಿಧ್ಯ ಪೂರ್ಣ ವರ್ಣನಾತ್ಮಕ ವಿವರಗಳು 19ನೆಯ ಶತಮಾನದ ಅಮೆರಿಕದ–ಅದರಲ್ಲಿ ವಿಶೇಷವಾಗಿ ನ್ಯೂ ಇಂಗ್ಲೆಂಡಿನ–ಜೀವನಕ್ಕೆ ಯಶಸ್ವಿಯಾಗಿ ಕನ್ನಡಿ ಹಿಡಿದಿದೆ. ಅಷ್ಟರ ಮಟ್ಟಿಗೆ, ಈ ಕಾದಂಬರಿ ವಾಸ್ತವಿಕ. ಈ ವರ್ತಮಾನ ಕಾಲದ ಜನಜೀವನದ ವಾಸ್ತವಿಕಾಂಶಗಳನ್ನು ಗತಕಾಲದ 'ಅದ್ಭುತ' (Marvellous) ಸಂಗತಿಗಳೊಂದಿಗೆ ಸಂದುಕಾಣದಂತೆ ಬೆಸೆದಿರುವ ಕಲಾತ್ಮಕತೆಯಲ್ಲಿ ಹಾಥಾರ್ನಿನ ಪ್ರತಿಭೆ ಎದ್ದು ಕಾಣುತ್ತದೆ. ಅಂದಿನ ಅಮೆರಿಕದ ಸಮಾಜ ಚಿತ್ರಣದ ಎಳೆಯೊಂದಿಗೆ ಆ ಸಮಾಜವನ್ನು ಕುರಿತ ವಿಡಂಬನಾತ್ಮಕ ವಿಮರ್ಶೆಯ ಎಳೆಯೂ ಬಣ್ಣಬಣ್ಣವಾಗಿ ಹೆಣೆದುಕೊಂಡಿದೆ,

---

+ಇದರ ಕಲ್ಪನೆಗೆ ಸ್ಫೂರ್ತಿಕೊಟ್ಟ ನಿಜವಾದ ಕಟ್ಟಡವೊಂದಿತ್ತು.

ಪರಿಶೀಲನೆಗೆ ಗೋಚರವಾಗದಿರದು. ಹಾಗೆ ಪರಿಶೀಲಿಸಿದಾಗ, 'ಏಳು ಇಪ್ಪಾರಿನ ಮನೆ' "ಗತ ಕಾಲದ ಪಾಪಕಾರ್ಯವನ್ನೂ ಅದರ ಪರಿಣಾಮವನ್ನೂ ಚಿತ್ರಿಸುವ ಚರಿತೆ" ಎಂಬುದು ಸುವೇದ್ಯವಾಗುತ್ತದೆ. ನೀತಿಪ್ರಧಾನವಾದ ಈ ಭಾವನೆಯನ್ನು ಹಾಥಾರ್ನ್ ಬೇರೆ ಬೇರೆ ಮಾತುಗಳಲ್ಲಿ ಹೀಗೆ ಹೇಳಿದ್ದಾನೆ : "ಒಂದು ತಲೆ ಮಾರಿನವರು ಎಸಗಿದ ಅಪರಾಧ ಮುಂದಿನ ತಲೆಮಾರುಗಳಲ್ಲಿಯೂ ಸಾಗಿಬರುತ್ತದೆ ; ಮತ್ತು, ತಾನು ಸಾಧಿಸಿದ ಪ್ರತಿಯೊಂದು ತಾತ್ಕಾಲಿಕ ಪ್ರಯೋಜನವನ್ನೂ ನೀಗಿಕೊಂಡು, ಕಾಡುವ ಕೆಡುಕಿನ ಶಕ್ತಿಯಾಗಿ ಪರಿಣಮಿಸುತ್ತದೆ"; "ಇಂದಿನ ತಲೆಮಾರಿನವರು ಎಸಗಿದ ಒಂದು ಕಾರ್ಯವು ಬಹುಮುಂದಿನ ಒಂದು ಕಾಲದಲ್ಲಿ ಸತ್ಫಲವನ್ನೊ ದುಷ್ಫಲವನ್ನೊ ಕೊಡಬಹುದಾದ ಮೊಳಕೆಯಾಗಿರುವುದು." ಇಡಿಯ ಕಾದಂಬರಿ ಈ ಹೇಳಿಕೆಗಳ ತಥ್ಯವನ್ನು ದೃಷ್ಟಾಂತಿಸುತ್ತದೆ.

ಬೀಜರೂಪದ ಆ ಪಾಪಕೃತ್ಯದ ಅಥವಾ ಅಪರಾಧದ ಸ್ವರೂಪವರ್ಣನೆ ಕಾದಂಬರಿಯ ಹಿನ್ನೆಲೆಯಾಗಿದೆ : ಕಥೆ ನಡೆಯುವ ಕಾಲಕ್ಕೆ ಸುಮಾರು ಇನ್ನೂರು ವರ್ಷಗಳ ಹಿಂದೆ ಸರದಾರ ಪಿನ್ಚನ್ನನು ಮಾಟಗಾರಿಕೆಯ ಮೂಢನಂಬಿಕೆಗೆ ಬಲಿಯಾಗಿ, ನಿರಪರಾಧಿಯಾದ ಮ್ಯಾತ್ಯೂಮಾಲ್ ಎಂಬವನನ್ನು ಗಲ್ಲಿಗೇರಿಸುವ ದಂಡನೆಯ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದ್ದನು.* ಅವನಿಗೆ ದಂಡನೆ ವಿಧಿಸುವಲ್ಲಿ, ಮಾಲನ ಜಮೀನನ್ನು ದಕ್ಕುಹಾಕಿಕೊಳ್ಳುವ ಸ್ವಾರ್ಥದ ದುರುದ್ದೇಶವೂ ಸೇರಿಕೊಂಡಿತ್ತು. ಮ್ಯಾತ್ಯೂಮಾಲ್ ಸಾಯುವಾಗ–"ದೇವರು ಅವನಿಗೆ ಕುಡಿಯಲು ರಕ್ತವನ್ನು ನೀಡುತ್ತಾನೆ!" ಎಂದು ತನ್ನ ಶತ್ರುವನ್ನು ಶಪಿಸಿ ಪ್ರಾಣಬಿಟ್ಟನು. ಅವನು

---

* ನ್ಯಾಥಾನಿಯಲ್ ಹಾಥಾರ್ನಿನ ಪೂರ್ವಜನೊಬ್ಬನು ಸರದಾರ ಪಿನ್ಚನ್ನನ ಪಾತ್ರಕಲ್ಪನೆಗೆ ಮೂಲ ಮಾದರಿ ಎಂದು ವ್ಯಕ್ತಪಟ್ಟಿದೆ. ಅತ್ಯಂತ ಮೊಮ್ಮೊದಲಿನ ಪೂರ್ವಜನಾದ ವಿಲಿಯಂ ಹಾಥಾರ್ನ್ 1630ರಲ್ಲಿ ಅಮೆರಿಕಕ್ಕೆ ವಲಸೆ ಬಂದನು; ಈತನು ನ್ಯಾಯಮೂರ್ತಿಯಾಗಿ ಕ್ರೂರವಾಗಿ ವರ್ತಿಸಿದ್ದೂ ಉಂಟು. ಈತನ ಮಗ ಜಾನ್ ಹಾಥಾರ್ನ್ ಸಹ ನ್ಯಾಯಮೂರ್ತಿ; ಇವನು 1692ರಲ್ಲಿ ಮಾಟಗಾತಿಯರಿಗೆ ಶಿಕ್ಷೆ ವಿಧಿಸಿದ್ದು ನ್ಯೂ ಇಂಗ್ಲೆಂಡಿನ ಚರಿತ್ರೆಯ ದಾಖಲೆಗಳಲ್ಲಿ ಉಲ್ಲೇಖವಾಗಿದೆ ; ಹಾಗೆ ಶಿಕ್ಷೆ ವಿಧಿಸಿ, ಅವರ ಶಾಪಕ್ಕೆ ಗುರಿಯಾದನೆಂದು ಹೇಳಿಕೆ. ಪರಂಪರಾಗತವಾದ ಈ ಹೇಳಿಕೆಯಲ್ಲಿ ಬರುವ ಶಾಪ ವಾಸ್ತವವಾಗಿ ಜಾನ್ ಹಾಥಾರ್ನಿನ ಜೊತೆಯ ನ್ಯಾಯಮೂರ್ತಿ ನಿಕೊಲಾಸ್ ನಾಯ್ಸ್ ಎಂಬವನಿಗೆ ಸಾರಾಗುಡ್ ಎಂಬವಳು ಕೊಟ್ಟದ್ದು ಎಂದು ಉಲ್ಲೇಖ. ಅದು ಹೀಗಿದೆ ! "I am no more a witch, than you are a wizard ; and if you take away my life, God will give you blood to drink".

ಮಾನವಕೋಟಿಯಲ್ಲಿ ಅಂತರ್ಗತವಾಗಿರುವಂತೆ, ಯಾವೊಬ್ಬನು ಎಸಗಿದ ಕರ್ಮದ ಫಲ ಅವನ ವಂಶಜರಿಗೆ ಅಂಟಿಕೊಂಡು ಸಾಗುವುದೆಂಬ ಕಲ್ಪನೆ–ನಂಬಿಕೆ–ಬೆಳೆದು ಬಂದಿರಬೇಕು. ಇದರ ಜೊತೆಗೆ, ಅವನವನು ಮಾಡಿದ ಕರ್ಮದ ಫಲ. ದುಷ್ಕರ್ಮದ ಫಲವಾಗಲಿ ಸತ್ಕರ್ಮದ ಫಲವಾಗಲಿ, ಆ ಫಲಾನುಭವಕ್ಕಾಗಿ ಪ್ರತಿಯೊಬ್ಬನ ಆತ್ಮವೂ ನ್ಯಾಯತೀರ್ಮಾನದ ಕಡೆಯ ದಿನದ (The Last Day of Judgment) ವರೆಗೆ ಕಾದಿರಬೇಕು. ಸತ್ಕರ್ಮದ ಪ್ರಸಕ್ತಿಗೆ ಇಲ್ಲಿ ಪ್ರಾಧಾನ್ಯವಿಲ್ಲ. ಒಬ್ಬನು ವ್ಯಕ್ತಿಗತವಾಗಿ ಮಾಡುವ ಪಾಪದ–ಅಪರಾಧದ–ಮಾತು ಹಾಗಿರಲಿ. ಪೂರ್ವಜನೊಬ್ಬನು ಎಸಗಿದ ಪಾಪಕೃತ್ಯಕ್ಕಾಗಿ ಅವನ ಪೀಳಿಗೆಯವರು ನಿರಂತರವಾಗಿ ಕಷ್ಟಾನುಭವದ ಮೂಸೆಯಲ್ಲಿ ಕುದಿಯುತ್ತಿರಬೇಕೆ? ಅದಕ್ಕೆ ಪರಿಹಾರ ಮಾರ್ಗವಿಲ್ಲವೆ? ಸರ್ವಸಾಮಾನ್ಯವಾಗಿ ಎಲ್ಲ ಧರ್ಮಗಳೂ ಅಂಗೀಕರಿಸಿರುವಂತೆ, ಈ ಜನ್ಮದಲ್ಲಿ ಪರಿಹಾರವೆಂದರೆ–ಒಂದು ತಪ್ಪೊಪ್ಪಿಗೆ, ಹಾಗೂ ಪಶ್ಚಾತ್ತಾಪ; ಇದು ವ್ಯಕ್ತಿಯ ಕೈಯಲ್ಲೆ ಇದೆ ; ಇನ್ನೊಂದು, ದೈವಾನುಗ್ರಹ ಅಥವಾ ದೈವಕೃಪೆ. ಎರಡಕ್ಕೂ ಕಾಲಾವಕಾಶ ಬೇಕು ; 'ಕಾಲಲಬ್ಧಿ'ಗಾಗಿ ತಾಳ್ಮೆಯಿಂದ ಕಾಯಬೇಕು. ಎರಡೂ ಕೂಡಿದರೆ, ಪರಿಹಾರ ಶೀಘ್ರ. ಪರಿಹಾರದಂತೆ, ಹಾಥಾರ್ನಿನ ನಂಬಿಕೆಯ ಪ್ರಕಾರ ಪಾಪಕ್ಕೆ ತಕ್ಕ ಶಿಕ್ಷೆಯೂ ಅನಿವಾರ್ಯ. ಈ ಶಿಕ್ಷೆ, ಬಿಡಿಯಾಗಿ ಒಬ್ಬ ವ್ಯಕ್ತಿಗೆ ಮಾತ್ರವಲ್ಲದೆ ಇಡಿಯಾಗಿ ಜನ ಸಮೂಹಕ್ಕೇ ಪ್ರಾಪ್ತವಾಗಬಹುದು. ಈ ಅಂಶಗಳಲ್ಲಿ, ಹಾಥಾರ್ನ್ Determinism ಎಂಬ ನಿಯತಿವಾದದ ಪ್ರಭಾವಕ್ಕೆ ಒಳಗಾಗಿದ್ದನು. ನಮ್ಮ ಪಾಪಪುಣ್ಯಗಳ ಫಲವನ್ನು ಅಳೆಯುವ ಯಾವುದೋ ಒಂದು ಶಕ್ತಿ ಇದೆ ಎಂದು ಅವನ ನಂಬಿಕೆ. ಈ ಸಂದರ್ಭದಲ್ಲಿ, ಕಾದಂಬರಿಯಲ್ಲಿ ಬರುವ ಹಾಥಾರ್ನಿನ ಈ ಹೇಳಿಕೆಯನ್ನು ಗಮನಿಸಬಹುದು: "ಮಾನವ ಜಾತಿಯ ಸಾಹಸಪೂರ್ಣ ಕಾರ್ಯಸಾಧನೆಗಳನ್ನು ನಾವು ಪರಿಶೀಲಿಸಿದ್ದೇ ಆದರೆ, ಮಾನವ ಜೀವಿತದ ಸುಖದುಃಖಗಳಲ್ಲಿ ಹುದುಗಿರುವ ಘನತರವಾದ ಗುಣದೊಂದಿಗೆ ಅಲ್ಪವೂ ಕ್ಷುಲ್ಲಕವೂ ಆದ ಯಾವುದೋ ಒಂದು ಗುಣವಿಶೇಷವೂ ತೊಡಕಿಕೊಂಡಿರುವುದನ್ನು ಕಾಣುತ್ತೇವೆ. ಜೀವನವು ಹಾಲುಗಲ್ಲೂ ಮಣ್ಣೂ ಕೂಡಿಯೇ ಆಗಿದೆ. ನಮಗಿಂತ ಮೇಲೆ ಯಾವುದೋ ಒಂದು ವ್ಯಾಪಕವಾದ ಸಹಾನುಭೂತಿಯ ಶಕ್ತಿ ನೆಲಸಿದೆ; ಅದರಲ್ಲಿ ನಾವು ಬಲವಾದ ವಿಶ್ವಾಸವಿಡಬೇಕು. ಇಲ್ಲದೆ ಹೋದರೆ, ವಿಧಿಪುರುಷನ ಕಬ್ಬಿಣದ ಕಠೋರ ಮುಖಮುದ್ರೆಯಲ್ಲಿ ನಮ್ಮ ಬಗೆಗೆ ತಿರಸ್ಕಾರದ ನಗೆ ಹಾಗೂ ಶಮನವಾಗದ ಕಡು ಕ್ರೋಧ–ಇವು ಹೊರತು ಬೇರೇನೂ ಇಲ್ಲವೆಂದು ನಾವು ಶಂಕಿಸಬೇಕಾಗುತ್ತದೆ. ವಿವಿಧ ವಸ್ತುಗಳು ವಿಚಿತ್ರ ರೀತಿಯಲ್ಲಿ ಸಂಮಿಶ್ರಗೊಂಡ

ಹಾಥಾರ್ನ್ ತನ್ನ ತಾತ ಮುತ್ತಾತಂದಿರ ಕಾಲದ ಪ್ಯೂರಿಟನ್ ಮತದ ವೀರನಿಷ್ಠೆಯ ಅಂಧಶ್ರದ್ಧೆ, ಮೂಢನಂಬಿಕೆ ಇವುಗಳ ಘೋರ ಪರಿಣಾಮವನ್ನೂ, 'ಏನಕೇನ ಪ್ರಕಾರೇಣ' ಆಸ್ತಿ ಮಾಡಿಡಬೇಕೆಂಬ ಸಂಗ್ರಹಬುದ್ಧಿ ಬಿತ್ತುವ ವಿಷ ಬೀಜದಿಂದ ಮೊಳೆತು ಬೆಳೆಯುವ ವಿಷವೃಕ್ಷದ ಸ್ವರೂಪವನ್ನೂ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಆಸ್ತಿಯ ಗಳಿಕೆಯಲ್ಲಿ ತಪ್ಪೇನಿಲ್ಲ ; ಸಂಗ್ರಹ ಬುದ್ಧಿ ಮಾನವನ ಹುಟುಗುಣ; ಆದರೆ, ಅನೈತಿಕ ರೀತಿಯಲ್ಲಿ ಗಳಿಸಿದ ಆಸ್ತಿಯನ್ನು ತಾನೂ ತನ್ನ ಮುಂದಿನ ಪೀಳಿಗೆಯೂ ಜೀರ್ಣಿಸಿಕೊಳ್ಳುವುದು ಕಷ್ಟ ಎಂಬುದು ಹಾಥಾರ್ನಿನ ನಂಬಿಕೆ. ಈ ಸಂದರ್ಭದಲ್ಲಿ, ಹಿಂದಿನವರು ಮಾಡಿದ ತಪ್ಪಿಗೆ ಮುಂದಿನವರು ಹೇಗೆ ಹೊಣೆಯಾದಾರು?– ಎಂಬ ಪ್ರಶ್ನೆ ಏಳುವುದು ಸಹಜ. ಅದಕ್ಕೆ ಉತ್ತರ, ಹಾಥಾರ್ನ್ ನಮ್ಮ ಮುಂದಿಟ್ಟಿರುವ ಈ ಪ್ರಶ್ನೆಯಲ್ಲಿ ಅಡಗಿದೆ: "...ಆಸ್ತಿಯ ಪ್ರತಿ ಉತ್ತರಾಧಿಕಾರಿಯೂ–ನಡೆದಿದ್ದ ಅಪರಾಧದ ಅರಿವಿದ್ದೂ ಅದನ್ನು ನೇರ್ಪಡಿಸದೆ ಇದ್ದದ್ದರಿಂದ–ತನ್ನ ಪೂರ್ವಿಕರು ಎಸಗಿದ ಮಹಾಪಾಪ ಕೃತ್ಯವನ್ನು ಮತ್ತೆ ಹೊಸದಾಗಿ ತಾನೂ ಎಸಗಿದಂತಾಗಲಿಲ್ಲವೆ, ಆ ಕೃತ್ಯ ಸಂಬಂಧವಾದ ಮೊದಲಿನ ಎಲ್ಲ ಹೊಣೆಗಾರಿಕೆಯನ್ನೂ ಮರಳಿ ಹೊತ್ತಂತಾಗಲಿಲ್ಲವೆ? ಎಂಬ ಭಯಾನಕ ಪ್ರಶ್ನೆಯನ್ನು ಪರಿಹರಿಸಬೇಕಾದದ್ದು ನಮ್ಮ ಪಾಲಿಗೆ ಉಳಿದಿದೆ. ಸಂದರ್ಭ ಸನ್ನಿವೇಶ ಹೀಗಿದೆಯೆಂದು ಇಟ್ಟುಕೊಂಡರೆ, ಪಿನ್ಚನ್ ವಂಶದವರು ಮಹಾಭಾಗ್ಯದ ಹಕ್ಕುದಾರರಾಗುವ ಬದಲು ಮಹಾದೌರ್ಭಾಗ್ಯದ ಬಳುವಳಿಯನ್ನು ಪಡೆದರು ಎಂದು ಹೇಳುವುದು ಹೆಚ್ಚು ಸತ್ಯವಾದ ಉಕ್ತಿಕ್ರಮವಾಗುವುದಲ್ಲವೆ?" ಆ್ಯಡಂ ಮತ್ತು ಈವ್ (Adam and Eve) ಎಸಗಿದ ಮೂಲ ಪಾಪದ (Original Sin) ಹೊರೆಯನ್ನು ಮಾನವಕೋಟಿ ಹೊತ್ತಿದೆ ಎಂಬುದು ಕ್ರೈಸ್ತ ನಂಬಿಕೆ ; The Sins of the fathers visit upon their sons ಎಂಬ ಹೇಳಿಕೆಯನ್ನೂ ಈ ಸಂದರ್ಭದಲ್ಲಿ ಗಮನಿಸಬಹುದು. ಇವುಗಳ ಬೆಳಕಿನಲ್ಲಿಯೆ ಹಾಥಾರ್ನಿನ ನಂಬಿಕೆ ರೂಪಗೊಂಡಿರುವುದು. ಭಾರತೀಯ ಕರ್ಮಸಿದ್ಧಾಂತದ ಪ್ರಕಾರ ಕರ್ಮಾಚರಣೆ ಹಾಗೂ ಅದರ ಫಲ ವ್ಯಕ್ತಿಗತ ; ಆನುವಂಶಿಕವಲ್ಲ ; ಒಂದೇ ವಂಶದಲ್ಲಿ ಸಜ್ಜನರ ದುರ್ಜನರ ಪರಂಪರೆಯಿರಬಹುದು. ಎಂದೋ ಯಾರೋ ಗೈದ ತಪ್ಪಿತಕ್ಕೆ ಇಂದಿನ ವ್ಯಕ್ತಿ ಹೊಣೆಯಲ್ಲ. ಅವನು ತನ್ನ ಕರ್ಮಫಲವನ್ನು ಮಾತ್ರ ತಾನು ಅನುಭವಿಸುತ್ತಾನೆ ; ಅದು ಅವನ ಜನ್ಮ ಜನ್ಮಾಂತರಗಳ ರೂಪಣ ಶಕ್ತಿಯಾಗಿದ್ದೀತು. ಕ್ರೈಸ್ತ ಧರ್ಮದಲ್ಲಿ ಈ ಜನ್ಮಾಂತರದ ಜಟಿಲತೆಗೆ ಜಾಗವಿಲ್ಲದಿರುವುದರಿಂದ, ಮೂಲ ಪಾಪದ (Original Sin) ಪರಿಣಾಮ

ಸುತ್ತಮುತ್ತಣವರನ್ನು ಹೆಪ್ಸಿಬಾ ಪ್ರೀತಿಸತೊಡಗಿದಾಗ ಅವಳ ಉದ್ಧಾರಕಾರ್ಯ ಪ್ರಾರಂಭವಾಗುತ್ತದೆ. ವಿಶೇಷವಾಗಿ, ಸೋದರ ಕ್ಲಿಫರ್ಡನ ಬಗೆಗೆ ಅವಳು ಮೆರೆದ ಪ್ರೇಮ ತ್ಯಾಗಗಳು ಅವಳ ಉದ್ಧಾರಕ್ಕೆ ಮಾತ್ರವಲ್ಲದೆ ಕ್ಲಿಫರ್ಡನ ಉದ್ಧಾರಕ್ಕೂ ನೆರವಾಗುತ್ತವೆ. ಫೀಬೆ ಅವಳ ಕತ್ತಲಿಡಿದ ಜೀವನಕ್ಕೆ ಬೆಳಕು ಬಂದ ಹಾಗೆ ಬರುತ್ತಾಳೆ (ಅವಳ ಹೆಸರೆ ಬೆಳಕಿನ ದ್ಯೋತಕ); ಅಂಗಡಿಯ ಕೆಲಸದಲ್ಲೂ ತೋಟದ ಕೆಲಸದಲ್ಲೂ ಮನೆಗೆಲಸದಲ್ಲೂ ನೆರವಾಗುತ್ತಾಳೆ. ಅಲ್ಲದೆ, ತನ್ನ ಸ್ವಾರ್ಥರಹಿತ ಸೇವೆಯಿಂದ ಕ್ಲಿಫರ್ಡನ ನಿಸ್ಸಾರವಾದ ಬದುಕಿಗೆ ಸಾರವನ್ನು ತುಂಬುತ್ತಾಳೆ. ಫೀಬೆಯ ಮೇಲೆ ಅಲೌಕಿಕ ಪ್ರಭಾವವನ್ನು ಗಳಿಸಬಹುದಾಗಿದ್ದ ಹಾಲ್ ಗ್ರೇವ್ ಹಾಗೆ ಮಾಡದೆ, ತ್ಯಾಗವನ್ನು ಮೆರೆಯುತ್ತಾನೆ ; ಮಾತ್ರವಲ್ಲ, ಆನುವಂಶಿಕ ವೈರವನ್ನು ಮರೆತು, ಫೀಬೆಯನ್ನು ಮದುವೆಯಾಗಲೊಪ್ಪಿ, ಔದಾರ್ಯವನ್ನೂ ಮೆರೆಯುತ್ತಾನೆ. ಹಾಲ್‌ಗ್ರೇವ್ ಮತ್ತು ಫೀಬೆ–ಇವರ ಮದುವೆ ಮಾಲ್‌ಮನೆತನಕ್ಕೆ ಆಗಿದ್ದ ಅನ್ಯಾಯಕ್ಕೆ ಪ್ರಾಯಶ್ಚಿತ್ತವಾಗಿ ಪರಿಣಮಿಸಿ, ಪಿನ್ಚನ್ ಕುಟುಂಬದ ಉದ್ಧಾರಕ್ಕೆ ನೆರವಾಗುತ್ತದೆ. ಕಾದಂಬರಿಯೇನೋ ಸುಖಾಂತವಾಗಿ ಮುಗಿಯುತ್ತದೆ. ಆದರೆ, ಕ್ಲಿಫರ್ಡ್ ನಿಜವಾಗಿ ಸುಖಿಯೆ ? ಮುಪ್ಪಿನ ಹೊಸಿಲ ಮೇಲೆ ನಿಂತ ಅವನು ಅನಿರೀಕ್ಷಿತವಾಗಿ ದೊರೆತ ಶ್ರೀಮಂತಿಕೆಯನ್ನು ಅನುಭವಿಸಲು ಸಮರ್ಥನೆ ? ಶ್ರೀಮಂತ ಪದವಿಯನ್ನು ವಿಡಂಬನೆಮಾಡಿ, ಕ್ಲಿಫ಼ರ್ಡನನ್ನು ಶ್ರೀಮಂತನನ್ನಾಗಿ ಮಾಡಿರುವುದು ಸಮಂಜಸವೆ ? (ಇದು ಒಂದು ದೋಷವೆಂದು ಕೆಲವು ವಿಮರ್ಶಕರ ಮತ.) ಈ ಪ್ರಶ್ನೆಗಳು ಉಳಿದೇ ಉಳಿಯುತ್ತವೆ. ಈ ಮರ್ತ್ಯ ಪ್ರಪಂಚದಲ್ಲಿ ಒಮ್ಮೆ ಆದ ಅನ್ಯಾಯವನ್ನು ಪೂರ್ತಿಯಾಗಿ ನೇರ್ಪಡಿಸುವುದು ಅಸಾಧ್ಯ ಎಂಬ ತನ್ನ ಸಿದ್ಧಾಂತವನ್ನು ಸಮರ್ಥಿಸುವುದಕ್ಕೆ ಹಾಥಾರ್ನ್ ಕ್ಲಿಫ಼ರ್ಡನ ಪಾತ್ರ ಪೋಷಣೆಯನ್ನು ಈ ರೀತಿ ಮಾಡಿರಬಹುದು.

ಹಾಥಾರ್ನನು ತನ್ನ ನೈತಿಕ ಭಾವನೆಗಳನ್ನು ಕಥಾರೂಪದಲ್ಲಿ ಪ್ರತಿಪಾದಿಸಲು ಅನುಸರಿಸಿರುವ ಕೃತಿರಚನಾ ವಿಧಾನವನ್ನು ವಿಶದವಾಗಿ ಇಲ್ಲಿ ಪರಿಶೀಲಿಸುವುದಕ್ಕೆ ಅವಕಾಶವಿಲ್ಲ. ಆ ವಿಧಾನದ ಪ್ರಮುಖ ಲಕ್ಷಣವಾದ 'ಸಾಂಕೇತಿಕತೆ' (Symbolism)ಯನ್ನು ಸ್ಥೂಲವಾಗಿ ಮಾತ್ರ ಇಲ್ಲಿ ಗಮನಿಸಬಹುದು. ಹಾಥಾರ್ನನನ್ನು 'ಸಾಂಕೇತಿಕತೆಯ ಪ್ರವಾದಿ' (Propheet of Symbolism) ಎಂದು ನಿರ್ದೇಶಿಸಲಾಗಿದೆ. ಈ ಕಾದಂಬರಿಯಲ್ಲಿ, ಏಳು ಇಪ್ಪಾರಿನ ಮನೆ ಸರದಾರ ಪಿನ್ಚನ್ನರ ಘೋರ ಪಾಪಕೃತ್ಯದ ಮೂರ್ತ ಸ್ವರೂಪ ; ಅದರ ತುಂಬ ತುಂಬಿದ ಕತ್ತಲೆ ಆ ಪಾಪಕೃತ್ಯದ ಪ್ರಭಾವ ಸಂಕೇತ ಹೆಪ್ಸಿಬಾ ಹಾಗೂ ಕ್ಲಿಫರ್ಡ್

ಈ ಸೃಷ್ಟಿಯಲ್ಲಿ ಸೌಂದರ್ಯವಿದೆ, ಘನತೆಯಿದೆ ; ಆದರೆ ಅವು ಅತ್ಯಂತ ಹೊಲಸುವೇಷವನ್ನು ಧರಿಸುತ್ತವೆ ; ಈ ಮರ್ಮವನ್ನು ಭೇದಿಸಿ ತಿಳಿಯುವ ಶಕ್ತಿಯೆ ಕಾವ್ಯದೃಷ್ಟಿ". ಹಾಥಾರ್ನಿಗೆ ಈ ಕಾವ್ಯದೃಷ್ಟಿ ಇದೆ ; ಈ ದೃಷ್ಟಿಗೆ ಮಾನವ ಸ್ವಭಾವದ ಒಳಿತು ಕೆಡುಕುಗಳೆರಡೂ ನಿಚ್ಚಳವಾಗಿ ಕಂಡುಬಂದಿವೆ. ಆ ದೃಷ್ಟಿಯ ಕಾಣ್ಕೆಯ ಫಲವಾಗಿ, ಪಾಪಕ್ಕೆ ದಂಡನೆ ಹೇಗೆ ಅನಿವಾರ್ಯವೋ ಹಾಗೆ ನಿರಪರಾಧಿಗಳ ಉದ್ಧಾರವೂ ತಡವಾಗಿಯಾದರೂ ಸುನಿಶ್ಚಿತ ಎಂಬ ನಂಬಿಕೆ ಹಾಥಾರ್ನಿನಲ್ಲಿ ದೃಢವಾಗಿದೆ. ಈ 'ದರ್ಶನಸಿದ್ಧಿ'ಯ, ಈ ನಂಬಿಕೆಯ ಪ್ರತಿಪಾದನೆಯೆ ಈ ಕಾದಂಬರಿಯ ನಿಜವಾದ 'ವಸ್ತು' ಕೆಲವು ವ್ಯಕ್ತಿಗಳ ಆಗು ಹೋಗುಗಳಲ್ಲ.

ಮೇಲ್ಕಂಡ ನಂಬಿಕೆಯ ಬೆಳಕಿನಲ್ಲಿ ಚಿತ್ರಿತರಾಗಿದ್ದಾರೆ, ಈ ಕಾದಂಬರಿಯ ಪ್ರಧಾನ ಪಾತ್ರಗಳಾದ ಹೆಪ್ಸಿಬಾ ಮತ್ತು ಕ್ಲಿಫರ್ಡ್. ಹಾಲ್ ಗ್ರೇವ್ ಮತ್ತು ಫ಼ೀಬೆ ಪೋಷಕ ಪಾತ್ರಗಳಾದರೂ ಕಾದಂಬರಿಯ 'ವಸ್ತು' ವಿನ್ಯಾಸಕ್ಕೆ ನೇರವಾಗಿ ಸಂಬಂಧಪಟ್ಟಿದ್ದಾರೆ. ಈ ಮಾತು ನ್ಯಾಯಮೂರ್ತಿ ಪಿನ್ಚನ್ನನಿಗೂ ಅನ್ವಯಿಸುತ್ತದೆ. ಆ್ಯಲಿಸಳ ಪ್ರಕರಣ ಕಾದಂಬರಿಗೆ ಸಂಬಂಧಪಡದ ಒಂದು 'ಕವಲುಕತೆ' ; 'ವಸ್ತು' ಪ್ರತಿಪಾದನೆಗೆ ಹೆಚ್ಚಿನ ನೆರವು ನೀಡುವ ದೃಷ್ಟಿಯಿಂದ ಮಾತ್ರ ಕಾದಂಬರಿಯಲ್ಲಿ ಅದಕ್ಕೆ ಎಡೆಯುಂಟು. ಒಟ್ಟಿನ ಮೇಲೆ, ಕಾದಂಬರಿಯ ಪಾತ್ರವರ್ಗವೂ ಸನ್ನಿವೇಶಗಳೂ ಕಾದಂಬರಿಯ 'ವಸ್ತು'ವನ್ನು–ಎಂದರೆ, ಒಂದು ಕುಟುಂಬ ವರ್ಗದಮೇಲೆ ಆನುವಂಶಿಕವಾಗಿ ಎರಗಿಬಂದ ಪಾಪದ ಪರಿಣಾಮ ಮತ್ತು ಅದರಿಂದ ಆ ಕುಟುಂಬವರ್ಗ ವಿಮೋಚನೆ ಪಡೆದ ಬಗೆಯನ್ನು– ಪ್ರತಿಪಾದಿಸುವುದಕ್ಕೆ ಸಾಧನಗಳಾಗಿವೆ. ಹಾಥಾರ್ನನು ಈ ಕಾದಂಬರಿಯಲ್ಲಿ ಸೃಷ್ಟಿಸಿರುವ ಪಾತ್ರಗಳು ನಮ್ಮ ಕಣ್ಣಮುಂದೆ ಜೀವಂತವಾಗಿ ಕಾಣಿಸಿಕೊಳ್ಳುತ್ತಾರೆ. ದಿಟ ; ಆದರೆ, ಆ ಪಾತ್ರಗಳಲ್ಲಿ ಗಮನಾರ್ಹವಾದ ಬೆಳವಣಿಗೆ ಕಂಡುಬರುವುದಿಲ್ಲ. ಇದು ಒಂದು ದೋಷ.

'ವಸ್ತು' ಪ್ರತಿಪಾದನೆಗೆ ಪ್ರಧಾನ ಪಾತ್ರವರ್ಗ ಹೇಗೆ ನೆರವಾಗಿದೆ ಎಂಬುದನ್ನು ಸ್ವಲ್ಪಮಟ್ಟಿಗೆ ಗಮನಿಸಬಹುದು : ಆನುವಂಶಿಕ ಪಾಪ ಪರಿಣಾಮವನ್ನು ಅನುಭವಿಸುವುದರಲ್ಲಿ ಹೆಪ್ಸಿಬಾ ಹಾಗೂ ಕ್ಲಿಫರ್ಡ್ ಸಮ ಭಾಗಿಗಳು ; ಆದರೆ, ಅದರಿಂದ ವಿಮೋಚನೆ ಹೊಂದುವ ಉದ್ಧಾರಕಾರ್ಯದಲ್ಲಿ ಹೆಪ್ಸಿಬಾ, ಫ಼ೀಬೆ ಹಾಗೂ ಹಾಲ್‌ಗ್ರೇವ್–ಮೂವರು ಪಾಲುದಾರರು. ತನ್ನ ಉಡಿಗೆ ತೊಡಿಗೆಯಂತೆಯೆ ಜೀರ್ಣಶೀರ್ಣವಾದ ಹಳಗಾಲದ ಹೊಳ್ಳು ಶ್ರೀಮಂತಿಕೆಯ ಸೋಗನ್ನು ಕಳಚಿಹಾಕಿ, ಚಿಲ್ಲರೆ ಅಂಗಡಿಯ 'ಕಾಯಕ'ವನ್ನು ಕೈಕೊಂಡು,

ಕೊಟ್ಟದಕ್ಕಾಗಿ ಮದರಾಸಿನಲ್ಲಿರುವ ಅಮೆರಿಕದ ಸಂಯುಕ್ತ ಸಂಸ್ಥಾನಗಳ ವಾರ್ತಾವಿಭಾಗದ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು
30–12–1964 **ಎಂ.ವಿ. ಸೀತಾರಾಮಯ್ಯ**

ಪಾಪಪರಿಣಾಮದ–ಯಾರೋ ಮಾಡಿದ ತಪ್ಪಿಗೆ ತಾವು ಅನುಭವಿಸಬೇಕಾದ ದುಃಖಕ್ಲೇಶಗಳ–ಪ್ರತೀಕ ಪಾಪಕ್ಕೆ ಪರಿಹಾರವುಂಟು ಎಂಬ ಆಶಾಕಿರಣದ ಸಂಕೇತ ಫ್ಹೀಬೆ ; ಪಿನ್ಚನ್ ಭವನದ ಬೆಳಕಾಗಿ ಬಂದಳು ; ಹೆಪ್ಸಿಬಾ ಮತ್ತು ಕ್ಲಿಫರ್ಡ್ ಇವರ ಮಬ್ಬು ಕವಿದ ಬದುಕಿಗೆ ತುಸು ನಲಿವು ತಂದಳು. ಹಲವು ಕಡೆ, ಮನೆಯ ವಿವಿಧ ಭಾಗಗಳ ವರ್ಣನೆ ಅಥವಾ ಉಲ್ಲೇಖ ಸಾಂಕೇತಿಕವಾಗಿ ಬಂದಿದೆ ; ಇವುಗಳಲ್ಲಿ, ಹಲವು ಸಲ ಬರುವ ಹೊಸಿಲಿನ ಉಲ್ಲೇಖ ಗಮನಾರ್ಹ. ಉದ್ಯಾನದ ವರ್ಣನೆಯಲ್ಲಿ ಅಡಕವಾಗಿರುವ ಕೋಳಿಗಳ ಕುಟುಂಬದ ವರ್ಣನೆ ಪಿನ್ಚನ್ ಮನೆತನದ ಸ್ಥಿತಿಗತಿಯ ದ್ಯೋತಕ. ಬಿರುಗಾಳಿಮಳೆ ನಿಂತಮೇಲೆ, ಮನೆಯ ಇಪ್ಪಾರು ಮೂಲೆಯೊಂದರಲ್ಲಿ ಬೆಳೆದ 'ಆ್ಯಲಿಸ್' ಹೂಗಿಡ ಹೂಬಿಟ್ಟದ್ದು ಆ ಮನೆಯಲ್ಲಿ ಹೊಸಬದುಕು ಅರಳಿದ್ದರ ಸೂಚನೆ. 'ಕತ್ತಲೆ–ಬೆಳಕು'ಗಳ ವಿನ್ಯಾಸವಂತೂ ಪಾತ್ರಕಲ್ಪನೆಯುಲ್ಲೂ ವಾತಾವರಣ ಸೃಷ್ಟಿಯುಲ್ಲೂ ಕಾದಂಬರಿಯುದ್ದಕ್ಕೂ ಪ್ರಮುಖ ಪಾತ್ರವನ್ನು ವಹಿಸಿದೆ. ಏಳು ಇಪ್ಪಾರಿನ ಮನೆಯ ಸಂಗತಿಯನ್ನು ಮೊದಲಿನಲ್ಲಿಯೆ ಪ್ರಸ್ತಾವಿಸಿದೆ ; ಅದರ ಬಗೆಗೆ ಒಂದು ಹೆಚ್ಚಿನ ಮಾತು ಆವಶ್ಯಕ ; ಕೃತಿಯ ಮೊದಲಿನಲ್ಲಿಯೆ ಕೃತಿಯ 'ವಸ್ತು'ವನ್ನು ಪ್ರತಿಮಿಸುವ ಪ್ರತಿಮೆಯನ್ನು ವರ್ಣಿಸಿ, ಅದರ ಮೂಲಕವಾಗಿಯೆ ಕೃತಿಯ ಮೊದಲಿಂದ ಕಡೆಯವರೆಗೆ ವಾಚಕನ ಗಮನವನ್ನು ಸೆರೆಹಿಡಿದು ನಿಲ್ಲಿಸುವುದು ಹಾಥಾರ್ನನ ಕುಶಲಪದ್ಧತಿ. ಏಳು ಇಪ್ಪಾರಿನ ಮನೆಯ ವರ್ಣನೆಯಿಂದ ಮೊದಲಾಗುವ ಈ ಕಾದಂಬರಿಯ ಕಡೆಯ ವಾಕ್ಯ ಅದನ್ನು ನೆನೆದು ನಿಲ್ಲುತ್ತದೆ. ಪರಿಣಾಮವಾಗಿ, ಏಳು ಇಪ್ಪಾರಿನ ಮನೆ ಮಾನವ ನಿರ್ಮಿತಿಯ ಅಶಾಶ್ವತೆಯ ಶಾಶ್ವತಚಿಹ್ನೆವಾಗಿ ವಾಚಕನ ಚಿರಸ್ಮರಣೆಯಲ್ಲಿ ನಿಲ್ಲುತ್ತದೆ.

ಅನುವಾದದ ಬಗೆಗೆ ಎರಡು ಮಾತು : ಇದು ಸರಳಾನುವಾದವಲ್ಲ, ಬಹುಮಟ್ಟಿಗೆ ಯಥಾವತ್ತಾದ ಪದಶಃ ಭಾಷಾಂತರ, ಹಾಥಾರ್ನನ ಆಂಗ್ಲ ಭಾಷಾಶೈಲಿ ಕ್ಲಿಷ್ಟವಾದುದು ; ಆದರೂ ಭವ್ಯ ಬಂಧುರ. ಮೂಲ ಕೃತಿಯ ಭಾವ ಭಾವನೆಗಳನ್ನು ಕನ್ನಡಿಸುವುದರ ಜೊತೆಗೆ, ಅದರ ಭಾಷಾ ಶೈಲಿಯ ಸ್ವರೂಪವನ್ನೂ 'ಕನ್ನಡಿಸು'ವುದು ನನ್ನ ಉದ್ದೇಶ. ಇದರ ಪರಿಣಾಮವಾಗಿ, ಭಾಷಾಂತರದ ಶೈಲಿ ಕ್ಲಿಷ್ಟತರವಾಗಿ ಪರಿಣಮಿಸದಿದ್ದರೆ, ಆ ಉದ್ದೇಶ ನೆರವೇರಿದಂತೆಯೆ.

ಚಿಕ್ಕಂದಿನಿಂದ ಹಾಥಾರ್ನನ ಕೃತಿಗಳ ಕಡೆಗೆ ನನ್ನ ಒಲವು ಹರಿದಿದೆ. ಅವನ ಕೆಲವು ಕಥೆಗಳನ್ನು ರೂಪಾಂತರಮಾಡಿ ಪ್ರಕಟಿಸಿದ್ದೇನೆ. ಅವನ ಮಹತ್ಕೃತಿಯೊಂದನ್ನು ಭಾಷಾಂತರ ಮಾಡುವ ಸುಯೋಗವನ್ನು ಕಲ್ಪಿಸಿ

# ಏಳು ಇಪ್ಪಾರಿನ ಮನೆ

## ೧. ಏಳು ಇಪ್ಪಾರಿನ ಮನೆ

ನಮ್ಮ ಹೊಸ ಇಂಗ್ಲೆಂಡಿನ* ಪಟ್ಟಣಗಳಲ್ಲಿ ಒಂದು ಪಟ್ಟಣದ ಅಡ್ಡ ಬೀದಿಯೊಂದರ ಕೆಳಗಡೆ ಮಾರ್ಗಮಧ್ಯದಲ್ಲಿ ಒಂದು ಜೀರ್ಣವಾದ ಮರದ ಮನೆ ಇದೆ; ಅದಕ್ಕೆ ಚೂಪು ಶಿಖರಗಳುಳ್ಳ ಏಳು ಇಪ್ಪಾರುಗಳಿವೆ; ಅವು ಸುತ್ತಲೂ ಬೇರೆ ಬೇರೆ ದಿಕ್ಕುಗಳಿಗೆ ಮುಖಮಾಡಿಕೊಂಡಿವೆ; ಮನೆಯ ನಡುವೆ ಭಾರಿಯಾದ ಹೊಗೆಕೊಳವೆಗಳ ತಂಡವಿದೆ. ಆ ಬೀದಿಯೆ ಪಿನ್ಚನ್ ಬೀದಿ; ಮನೆಯೆ, ಪುರಾತನ ಪಿನ್ಚನ್ ಭವನ; ವಿಸ್ತಾರವಾದ ಸುತ್ತಳತೆಯ ಒಂದು ಎಲ್ಮ್ ವೃಕ್ಷವು ಬಾಗಿಲ ಮುಂದೆ ಬೇರುಬಿಟ್ಟಿದೆ; 'ಪಿನ್ಚನ್ ಎಲ್ಮ್' ಎಂದು ಹೆಸರುಪಡೆದ ಆ ಮರ ಪಟ್ಟಣದಲ್ಲಿ ಹುಟ್ಟಿದ ಪ್ರತಿಯೊಂದು ಮಗುವಿಗೂ ಪರಿಚಿತ. ಮೇಲೆ ಹೇಳಿದ ಪಟ್ಟಣಕ್ಕೆ ನಾನು ಆಗಾಗ್ಗೆ ಭೇಟಿಕೊಟ್ಟಾಗ, ಆ ಮಹಾ ಎಲ್ಮ್ ವೃಕ್ಷ ಮತ್ತು ಬಿರುಗಾಳಿ ಮಳೆಗಳ ಹೊಡೆತಗಳನ್ನು ತಿಂದಿರುವ ಆ ಕಟ್ಟಡ– ಈ ಎರಡು ಪುರಾತನ ವಸ್ತುಗಳ ನೆರಳಿನಲ್ಲಿ ನಡೆದುಹೋಗಬೇಕೆಂಬ ಉದ್ದೇಶದಿಂದ ಪಿನ್ಚನ್ ಬೀದಿಯಲ್ಲಿ ಹಾದು ಹೋಗಲು ನಾನು ಎಂದೂ ತಪ್ಪಿಲ್ಲ.

ಗೌರವಾರ್ಹವಾದ ಆ ಭವನದ ಸ್ವರೂಪವು ನನ್ನ ಮೇಲೆ ಮನುಷ್ಯ ಮುಖಭಾವದಂತೆಯೆ ಯಾವಾಗಲೂ ಪ್ರಭಾವ ಬೀರಿದೆ; ಅದು ಹೊರಗಣ ಬಿರುಗಾಳಿ ಮಳೆ ಬಿಸಿಲುಗಳು ತನ್ನ ಮೇಲೆ ಉಳಿಸಿರುವ ಕುರುಹುಗಳನ್ನು ಹೊಂದಿರುವುದು ಮಾತ್ರವಲ್ಲದೆ, ಮರ್ತ್ಯಜೀವನದ ದೀರ್ಘಗತಿಯನ್ನೂ ಅದರೊಂದಿಗೆಯೆ ಒಳಗಡೆ ಸಾಗಿರುವ ಭಾಗ್ಯ ಪರಿವರ್ತನೆಗಳನ್ನೂ ಸಹ ವ್ಯಕ್ತಪಡಿಸಿದೆ. ಇವುಗಳನ್ನು ಯಥಾಯೋಗ್ಯವಾಗಿ ನಿರೂಪಿಸಿದ್ದೇ ಆದರೆ, ಇವು ಬಹು ಸ್ವಾರಸ್ಯವಾದ, ಬೋಧಪ್ರದವಾದ ಕಥೆಯಾಗಿ ರೂಪಗೊಳ್ಳುವುವು; ಅದೂ ಅಲ್ಲದೆ, ಬಹುಮಟ್ಟಿಗೆ ಕಲಾತ್ಮಕ ಸಂಯೋಜನೆಯ ಪರಿಣಾಮಫಲವೋ ಎಂಬಂತೆ ಕಾಣಬರುವ ಒಂದು ನಿರ್ದಿಷ್ಟವಾದ, ಆದರೂ, ತನ್ನ ಹಕ್ಕು ಎಂದು ತಾನು ಎಣಿಸಿದ್ದನ್ನು ಸಮರ್ಥನೆಮಾಡಿಕೊಳ್ಳುವುದರಲ್ಲಿ ಪಟ್ಟುಹಿಡಿಯತಕ್ಕವನು; ಪುರಾತನ ಕಾಲದ ಕಾಡನ್ನು ಕಡಿದು, ಒಂದೆರಡು ಎಕರೆ ಭೂಮಿಯನ್ನು ತನ್ನ ತೋಟದ

* ಈಗಿನ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಈಶಾನ್ಯ ಭಾಗದ ಸಂಸ್ಥಾನಗಳು.

ದೋಷವೆಲ್ಲಕ್ಕೂ ಪ್ರಭಾವಶಾಲಿ ಜನವರ್ಗಗಳೂ ಜನನಾಯಕ ಪಟ್ಟವನ್ನು ತಮಗೆ ತಾವೇ ಕಟ್ಟಿಕೊಳ್ಳುವವರೂ ಪಕ್ಕಾಗುವ ಸಂಭವವಿದೆ. ಪಾದ್ರಿಗಳು, ನ್ಯಾಯಾಧೀಶರು, ರಾಜ್ಯನೀತಿವಿಶಾರದರು– ಎಂದರೆ, ತಮ್ಮ ಕಾಲದಲ್ಲಿ ಅತ್ಯಂತ ವಿವೇಕಿಗಳು, ಅತ್ಯಂತ ಪ್ರಶಾಂತರು, ಅತ್ಯಂತ ಪವಿತ್ರರು ಎನ್ನಿಸಿಕೊಂಡವರು– ಗಲ್ಲಿನ ಸುತ್ತಮುತ್ತ ಒಳಸುತ್ತಿನಲ್ಲಿ ನಿಂತಿದ್ದರು; ಆ ರಕ್ತಸಿಕ್ತ ಗೈಮೆಯನ್ನು ಕೊಂಡಾಡಿದವರಲ್ಲಿ ಅವರದ್ದೇ ಅತ್ಯಂತ ಗಟ್ಟಿಯಾದ ದನಿ; ತಾವು ಮೋಸಹೋದುದಾಗಿ ಆಮೇಲೆ ಒಪ್ಪಿಕೊಂಡವರೂ ಅವರೆ. ಅವರ ಕಾರ್ಯಕಲಾಪಗಳಲ್ಲಿ ಯಾವುದಾದರೂ ಒಂದು ಭಾಗ ಇನ್ನೊಂದಕ್ಕಿಂತ ಕಡಮೆಯ ದೋಷಾರೋಪಣೆಗೆ ಪಾತ್ರ ಎಂದು ಹೇಳಬಹುದಾದರೆ, ಹಿಂದೆ ನ್ಯಾಯದ ತೀರ್ಪಿನ ಮೇರೆಗೆ ನಡಸುತ್ತಿದ್ದ ಕಗ್ಗೊಲೆಗಳಲ್ಲಿ ಮಾಡುತ್ತಿದ್ದಂತೆ, ಬಡವರು ಮತ್ತು ಮುದುಕರನ್ನು ಮಾತ್ರವಲ್ಲದೆ ತಮ್ಮ ಸರಿಸಮಾನರು, ಅಣ್ಣತಮ್ಮಂದಿರು, ಮತ್ತು ಹೆಂಡಿರು ಮುಂತಾಗಿ ಎಲ್ಲ ದರ್ಜೆಯ ಜನರನ್ನೂ ಭೇದವೆಣಿಸದೆ ಚಿತ್ರ ಹಿಂಸೆಮಾಡುತ್ತಿದ್ದ ವಿಲಕ್ಷಣ ವಿಧಾನ. ಇಂಥ ವಿವಿಧ ಮಾರಕಕೃತ್ಯದ ಅವ್ಯವಸ್ಥೆಯ ನಡುವೆ ಮಾಲ್‌ನಂಥ ಲೆಕ್ಕಕ್ಕೆ ಬಾರದ ವ್ಯಕ್ತಿಯೊಬ್ಬನು ಸಮಾನದುಃಖಿಗಳ ಗುಂಪಿನಲ್ಲಿ ಬಹುಮಟ್ಟಿಗೆ ಯಾರ ಗಮನಕ್ಕೂ ಬೀಳದೆ, ಬಲಿಯಾದವನು ತುಳಿಯಬೇಕಾದ ದಾರಿಯನ್ನು ತುಳಿಯುತ್ತ, ಗಲ್ಲಿಗೇರಿಸುವ ಗುಡ್ಡಕ್ಕೆ ನಡೆದನೆಂದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಆದರೆ, ಆ ಹೇಯವಾದ ಕಾಲದ ಹುಚ್ಚು ಕೆರಳಿನ ಉರುಬು ತಗ್ಗಿದ ಆಮೇಲಿನ ದಿನಗಳಲ್ಲಿ ನಾಡಿನಿಂದ ಮಾಟ ವಿದ್ಯೆಯನ್ನು ಉಚ್ಚಾಟನೆ ಮಾಡಬೇಕೆಂಬ ಸಾರ್ವತ್ರಿಕವಾದ ಕೂಗಿಗೆ ಸರದಾರ ಪಿನ್ಚನ್ನನೂ ಗಟ್ಟಿಯಾಗಿಯೆ ದನಿಗೂಡಿಸಿದ್ದನೆಂಬ ಸಂಗತಿಯನ್ನು ಎಲ್ಲರೂ ನೆನೆಯುತ್ತಿದ್ದರು; ಅಲ್ಲದೆ, ಮ್ಯಾಥ್ಯೂ ಮಾಲ್‌ನನ್ನು ಮರಣದಂಡನೆಗೆ ಗುರಿಪಡಿಸುವುದರಲ್ಲಿ ಆತ ತೋರಿದ ಉತ್ಸಾಹದಲ್ಲಿ ಅದೊಂದು ಭೇದಬುದ್ಧಿಯ ಉಗ್ರತೆಯಿದ್ದಿತೆಂಬ ಪಿಸುಮಾತಿನ ಆಡಿಕೆ ತಪ್ಪಲಿಲ್ಲ. ಆಪಾದನೆ ಹೊರಿಸಿದ ಅಧಿಕಾರಿಯ ನಡೆವಳಿಕೆಯಲ್ಲಿ ತನ್ನ ಬಗೆಗೆ ವೈಯಕ್ತಿಕ ದ್ವೇಷದ ಕಹಿ ಇದ್ದಿತೆಂಬುದನ್ನು ಮಾಲ್ ಅರಿತುಕೊಂಡಿದ್ದನು, ಹಾಗೂ ತನ್ನ ನಿಮಿತ್ತ ದೊರೆಯುವ ಲಾಭಕ್ಕಾಗಿ ತನ್ನನ್ನು ಬೇಟೆಯಾಡಿಕೊಂದಿದ್ದಾರೆಂದೂ ಅವನು ಸಾರಿಹೇಳಿದ್ದನು– ಇದಿಷ್ಟು ಎಲ್ಲರೂ ಚೆನ್ನಾಗಿ ಬಲ್ಲ ಸಂಗತಿ. ಗಲ್ಲಿಗೇರಿಸುವ ವೇಳೆಯಲ್ಲಿ, ನೇಣಿನ ಕುಣಿಕೆ ಕೊರಳಿನ ಸುತ್ತ ಇಳಿಯ ಬಿದ್ದಾಗ, ಸರದಾರ ಪಿನ್ಚನ್ ಕುದುರೆಯ ಮೇಲೆ ಕುಳಿತು ಆ ದೃಶ್ಯವನ್ನು ನಿರ್ದಯನಾಗಿ ನಿಟ್ಟಿಸಿನೋಡುತ್ತಿದ್ದಾಗ–ಗಲ್ಲುಜಗಲಿಯ ಮೇಲಿನಿಂದ ಮಾಲ್ ಅವನನ್ನು ಸಂಬೋಧಿಸಿ, ಭವಿಷ್ಯ ವಚನವನ್ನು ನುಡಿದಿದ್ದನು;

ಮತ್ತು ಹೊಲಮನೆಯ ಸ್ಥಳವನ್ನಾಗಿ ಮಾಡಿಕೊಂಡಿದ್ದನು; ಅದನ್ನು ಕಾಪಾಡಿಕೊಳ್ಳುವುದರಲ್ಲಿ ಹಲವು ವರ್ಷಗಳಿಂದಲೂ ಅವನು ಗೆದ್ದುಕೊಂಡು ಬಂದಿದ್ದನು. ಈ ವಿವಾದದ ಬಗೆಗೆ ಯಾವುದಾದರೂ ಲಿಖಿತದಾಖಲೆ ಇದೆಯೆ ಎಂಬುದು ತಿಳಿದುಬಂದಿಲ್ಲ. ಈ ಎಲ್ಲದರ ವಿಷಯವಾಗಿ ನಮಗೆ ಪರಿಚಿತವಾದ ಸಂಗತಿಗೆಲ್ಲ ಪರಂಪರಾಗತವಾಗಿ ಬಂದ ಹೇಳಿಕೆಯೇ ಮೂಲಾಧಾರ. ಆದ್ದರಿಂದ, ಈ ವಿವಾದದ ಸರಿತಪ್ಪುಗಳ ಬಗೆಗೆ ನಿರ್ಧಾರಕವಾದ ಅಭಿಪ್ರಾಯ ಕೊಡುವ ಸಾಹಸ ಮಾಡುವುದು ಧಾರ್ಷ್ಟ್ಯವಾದೀತು, ಬಹುಶಃ ಅನ್ಯಾಯವೂ ಆದೀತು. ಆದರೂ, ಮ್ಯಾತ್ಯೂಮಾಲನ ಜಮೀನಿನ ಸಣ್ಣ ಪುಟ್ಟ ಎಲ್ಲೆ ಬಾಂದುಗಳನ್ನು ನುಂಗಿಕೊಳ್ಳಲು ಅನುಕೂಲವಾಗುವಂತೆ ಸರದಾರ ಪಿನ್ಚನ್ನನು ತನ್ನ ಹಕ್ಕಿನ ಜಾಲವನ್ನು ಮಿತಿಮಾರಿ ಹಿಗ್ಗಿಸಿರಲಿಲ್ಲವೇ ಎಂಬುದು ಇನ್ನೇನಲ್ಲದಿದ್ದರೂ ಕನಿಷ್ಠ ಪಕ್ಷ ಸಂದೇಹಾಸ್ಪದವಿಷಯವಾಗಿ ತೋರುತ್ತದೆ. ಹಿಂದಿನ ಕಾಲವನ್ನು ನಾವು ಎಷ್ಟೇ ಕೊಂಡಾಡಬಹುದಾದರೂ ಆ ಕಾಲದಲ್ಲಿ ವ್ಯಕ್ತಿಯ ಸ್ವಭಾವಕ್ಕೆ ಈಗಿಗಿಂತ ಹೆಚ್ಚು ಮಹತ್ವವಿತ್ತು; ಅಂತಹ ಒಂದು ಕಾಲದಲ್ಲಿ ಕೂಡ, ಎಷ್ಟು ಮಾತ್ರಕ್ಕೂ ಸರಿದೊರೆಯಲ್ಲದ ಇಬ್ಬರು ಕಕ್ಷಿಪ್ರತಿಕಕ್ಷಿಗಳ ನಡುವಣ ವಿವಾದವು ಹಲವು ವರ್ಷಗಳವರೆಗೆ ತೀರ್ಮಾನವಾಗದೆ ಉಳಿದಿತ್ತು; ವಿವಾದಕ್ಕೆ ಒಳಗಾಗಿದ್ದ ಜಮೀನಿನಲ್ಲಿ ನೆಲಸಿದ್ದವನು ಮೃತನಾದಾಗ ಮಾತ್ರ ವಿವಾದವು ಕೊನೆಗೊಂಡಿತು; ಈ ಅಂಶ ಮೇಲೆ ಹೇಳಿದ ಸಂದೇಹವನ್ನು ಬಲಪಡಿಸುತ್ತದೆ. ಆತನ ಮರಣದ ರೀತಿ ಕೂಡ ಒಂದೂವರೆ ಶತಮಾನದ ಹಿಂದೆ ಮನಸ್ಸಿನ ಮೇಲೆ ಯಾವ ಬಗೆಯ ಪರಿಣಾಮ ಬೀರುತ್ತಿದ್ದಿತೋ ಅದಕ್ಕಿಂತ ಬೇರೆಯಾದ ಪರಿಣಾಮವನ್ನು ನಮ್ಮ ಕಾಲದಲ್ಲಿ ಬೀರುತ್ತದೆ. ಗುಡಿಸಲ ನಿವಾಸಿಯ ಅಲ್ಪವಾದ ಹೆಸರನ್ನು ಆ ಮರಣವು ವಿಲಕ್ಷಣವಾದ ಘೋರರೀತಿಯಲ್ಲಿ ಧ್ವಂಸಮಾಡಿಬಿಟ್ಟಿತು; ಮತ್ತು ಆತನ ವಸತಿಯಿದ್ದ ಚಿಕ್ಕ ಸ್ಥಳವನ್ನು ನೇಗಿಲಿನಿಂದ ಉತ್ತು, ಮನುಷ್ಯ ವರ್ಗದಲ್ಲಿ ಅವನ ಸ್ಥಾವನ್ನೂ ನೆನೆಪನ್ನೂ ತೊಡೆದು ಹಾಕುವುದು ಬಹುಮಟ್ಟಿಗೆ ಒಂದು ಧರ್ಮಕಾರ್ಯವೆಂಬಂತೆ ಕಾಣುವ ಹಾಗೆ ಮಾಡಿತು.

ಒಂದು ಮಾತಿನಲ್ಲಿ ಹೇಳುವುದಾದರೆ, ಮುದುಕ ಮ್ಯಾತ್ಯೂಮಾಲ್ ಮಾಟಮಂತ್ರ ಮಾಡುತ್ತಿದ್ದನೆಂಬ ಅಪರಾಧಕ್ಕಾಗಿ ಅವನನ್ನು ಗಲ್ಲಿಗೇರಿಸಿಬಿಟ್ಟರು. ಒಂದು ಘೋರ ಭ್ರಮಾಕಲ್ಪನೆಗೆ ಬಲಿಯಾದವರಲ್ಲಿ ಅವನೊಬ್ಬ. ಅದು ನಮಗೆ ಕಲಿಸತಕ್ಕ ನೀತಿಪಾಠಗಳಲ್ಲಿ ಇದೂ ಒಂದು–ಅದೇನೆಂದರೆ, ಅತಿರೊಚ್ಚಿಗೇಳುವ ಜನಜಂಗುಳಿಯಲ್ಲಿ ಯಾವಕಾಲಕ್ಕೂ ಕಂಡುಬರುವ ಉದ್ರೇಕದ ಸ್ವಭಾವ–

ಪಿಶಾಚದ ಭೀತಿಯಿಂದಾಗಲಿ, ಅವು ಎಷ್ಟೇ ಯುಕ್ತವಾಗಿ ಕಂಡರೂ ಯಾವುದೇ ಬಗೆಯ ಕ್ಷುಲ್ಲಕ ಭಾವನೆಗಳಿಂದಾಗಲಿ ಆ ಯೋಜನೆಯಿಂದ ಕದಲತಕ್ಕಂಥವನಾಗಿರಲಿಲ್ಲ ಆತ. ಕೆಟ್ಟಗಾಳಿ ಅಲ್ಲಿದೆಯೆಂದು ಹೇಳಿದ್ದಿದ್ದರೆ, ಅದು ಅವನ ಮೇಲೆ ಸ್ವಲ್ಪಮಟ್ಟಿಗೆ ಪ್ರಭಾವ ಬೀರುತ್ತಿದ್ದಿತೋ ಏನೋ; ದುಷ್ಟ ಪ್ರೇತ ಇರುವೆಡೆಯಲ್ಲಿಯೆ ಅದನ್ನು ಎದುರಿಸಲು ಅವನು ಸಿದ್ಧವಾಗಿದ್ದನು. ಕಬ್ಬಿಣದ ಹಿಡಿಕೆಗಳಿಂದ ಒಟ್ಟಿಗೆ ಬಿಗಿದ, ಕಠಿನವಾದ ಭಾರಿ ಕಗ್ಗಲು ತುಂಡುಗಳಂತೆ ದೃಢನಿಷ್ಠುರ ಸಂಕಲ್ಪ ಬದ್ಧವಾದ ವ್ಯವಹಾರಜ್ಞಾನವನ್ನು ಹೊಂದಿದ್ದ ಅವನು ತನ್ನ ಮೊದಲಿನ ಯೋಜನೆಗೆ ಅನುಸಾರವಾಗಿ ನಡೆದುಕೊಂಡನು; ಅದಕ್ಕೆ ಆಕ್ಷೇಪಣೆ ಬಂದೀತೆಂದು ಅವನು ಬಹುಶಃ ಸ್ವಲ್ಪವೂ ಊಹಿಸಿಲಿಲ್ಲ. ನಯನಾಜೂಕಿನ ವಿಚಾರದಲ್ಲಿಯಾಗಲಿ, ಕೋಮಲ ಮನಸ್ಸಿಗೆ ಬೋಧೆಯಾಗಬಹುದಾದ ಯಾವುದೇ ಧರ್ಮಸೂಕ್ಷ್ಮತೆಯ ವಿಷಯದಲ್ಲಿಯಾಗಲಿ, ತನ್ನ ಜಾತಿಯ ಹಾಗೂ ತನ್ನ ತಲೆಮಾರಿನ ಬಹುಜನದಂತೆ ಗಜಚರ್ಮದವನಾಗಿದ್ದನು. ಆದ್ದರಿಂದ, ಅವನು ತನ್ನ ನೆಲಮಾಳಿಗೆಯನ್ನು ತೋಡಿಸಿ, ನಲವತ್ತು ವರ್ಷಗಳ ಹಿಂದೆ ಮ್ಯಾತ್ಯೂಮಾಲ್ ಮೊತ್ತಮೊದಲು ಎಲ್ಲಿ ಉದುರಿದ್ದ ಎಲೆಗಳನ್ನು ಗುಡಿಸಿ ಹಾಕಿದ್ದನೋ ಆ ಚೌಕಭೂಮಿಯಲ್ಲಿ ತನ್ನ ಸೌಧಕ್ಕೆ ಆಳವಾದ ತಳಹದಿಯನ್ನು ಹಾಕಿದನು. ಕೆಲಸಗಾರರು ತಮ್ಮ ಕೆಲಸಗಳನ್ನು ಪ್ರಾರಂಭಿಸಿದ ಕೂಡಲೆ, ಮೇಲೆ ಹೇಳಿದ ನೀರಿನ ಚಿಲುಮೆ ತನ್ನ ಹಳೆಯ ಶುದ್ಧಗುಣದ ರುಚಿಯನ್ನು ಪೂರ್ತಿ ಕಳೆದುಕೊಂಡಿತು; ಅದೊಂದು ಕೌತುಕದ ಸಂಗತಿ; ಕೆಲವು ಜನ ಎಣಿಸಿದಂತೆ, ಅಪಶಕುನ ಕೂಡ. ಹೊಸ ನೆಲಮಾಳಿಗೆಯ ಆಳದಿಂದ ಅದರ ಮೂಲವು ಕಲಕಿಹೋಯಿತೊ, ಅಥವಾ ಇದೆಲ್ಲದರ ಬುಡದಲ್ಲಿ ಇನ್ನೂ ಸೂಕ್ಷ್ಮವಾದ ಕಾರಣ ಅಡಗಿಕೊಂಡಿದ್ದಿತೋ, ಮಾಲನ ಬಾವಿಯ (ಅದನ್ನು ಇದೇ ಹೆಸರಿನಿಂದ ಇನ್ನೂ ಕರೆಯುತ್ತಿದ್ದರು) ನೀರು ಉಪ್ಪುಪ್ಪಾಗಿ ಅಡಿಗೆಗೂ ಕುಡಿಯುವುದಕ್ಕೂ ಅಯೋಗ್ಯವಾಗಿ ಪರಿಣಮಿಸಿದ್ದು ಖಂಡಿತ. ನಾವು ಪರಿಶೀಲಿಸಿದರೆ, ಈಗಲೂ ಅದು ಹಾಗೆಯೆ ಇದೆ; ಅದನ್ನು ಕುಡಿದು ದಾಹವಡಗಿಸಿಕೊಂಡವರ ಕರುಳಿಗೆ ಅದು ಉಪದ್ರವ ಕೊಡುತ್ತದೆ; ಈ ಬಗೆಗೆ ಅಕ್ಕಪಕ್ಕದ ಯಾವ ಮುದುಕಿಯಾದರೂ ಸಾಕ್ಷಿ ನುಡಿದಾಳು.

ಹೊಸ ಕಟ್ಟಡದ ಮುಖ್ಯ ಬಡಗಿ ಬೇರೆ ಯಾರೂ ಅಲ್ಲ–ಯಾರ ಸಾವು ಸಂಕಟದ ಗರ್ಭದಿಂದ ಜಮೀನನ್ನು ಕಸಿದುಕೊಳ್ಳಲಾಗಿತ್ತೊ ಅದೇ ಪ್ರಾಣಿಯ ಮಗನವನು; ವಾಚಕಮಹಾಶಯನಿಗೆ ಇದು ಆಶ್ಚರ್ಯಕರವಾಗಿ ಕಾಣಬಹುದು.

ಇತಿಹಾಸವೂ ಮನೆಮನೆಯ ಪರಂಪರಾಗತ ಕಥೆಯೂ ಅವೇ ಮಾತುಗಳನ್ನು ಉಳಿಸಿಕೊಂಡು ಬಂದಿವೆ. ಮರಣೋನ್ಮುಖನಾಗಿದ್ದ ಅವನು ತನ್ನ ಹಗೆಯ ನಿರಾತಂಕವಾಗಿದ್ದ ಮುಖದತ್ತ ಬೆರಳುಮಾಡಿ, ವಿಕಟ ದೃಷ್ಟಿಯನ್ನು ಬೀರಿ, "ದೇವರು ಅವನಿಗೆ ಕುಡಿಯಲು ರಕ್ತವನ್ನು ನೀಡುತ್ತಾನೆ!" ಎಂದಿದ್ದನು.

ಆ ಹೆಸರಾಂತ ಮಾಟಗಾರನ ಮರಣದ ತರುವಾಯ, ಅವನ ಬಡ ಕುಟೀರವು ಸುಲಭವಾಗಿ ಸರದಾರ ಪಿನ್ಚನ್ನನ ಕೈಸೂರೆಯಾಯಿತು. ಮರದ ತುಂಡುಗಳಿಂದ ಕಟ್ಟಿದ್ದ, ಮ್ಯಾತ್ಯೂಮಾಲನ ಕುಟೀರವು ಮೊದಲಿದ್ದ ಸ್ಥಳದಲ್ಲಿ– ವಿಶಾಲವಾದ, 'ಓಕ್' ಮರದ ಚೌಕಟ್ಟಿನಿಂದ ತೂಕಿಯಾಗಿ ಕಟ್ಟಿದ, ತನ್ನ ಸಂತತಿಯ ಹಲವು ಪೀಳಿಗೆಗಳಾಗಿಹೋಗುವ ತನಕ ಬಾಳಿಕೆ ಬರುವಂತಹ ಒಂದು ಕುಟುಂಬಯೋಗ್ಯ ಮಹಾಮಂದಿರವನ್ನು ನಿರ್ಮಿಸಬೇಕೆಂದು ಸರದಾರ ಪಿನ್ಚನ್ನನು ಉದ್ದೇಶಿಸಿದ್ದಾನೆಂದು ಗೊತ್ತಾದಾಗ, ಆ ಗ್ರಾಮದ ಹರಟೆ ಮಲ್ಲರ ತಲೆತೂಗಾಟ ಹೆಚ್ಚಾಗಿಯೇ ಇದ್ದಿತು. ಮೇಲೆ ನಿರೂಪಿಸಿರುವ ನಡೆವಳಿಕೆಯ ಉದ್ದಕ್ಕೂ ಆ ನಿಷ್ಠಾವಂತ ಪ್ಯೂರಿಟನ್ನನು ಆತ್ಮಸಾಕ್ಷಿಗನುಗುಣವಾಗಿ ನಡೆಯುವ ಪ್ರಾಮಾಣಿಕ ಮನುಷ್ಯನಂತೆ ವರ್ತಿಸಿದ್ದನೇ ಇಲ್ಲವೆ ಎಂಬ ಬಗೆಗೆ ಅವರು ಸ್ವಲ್ಪವೂ ಸಂದೇಹವನ್ನು ವ್ಯಕ್ತಪಡಿಸಿರಲಿಲ್ಲ; ಆದರೂ, 'ಶಾಂತಿಯಿಲ್ಲದ ಗೋರಿಯ ಮೇಲೆ ತನ್ನ ಮನೆ ಕಟ್ಟಲಿದ್ದಾನೆ' ಎಂದು ಸೂಚಿಸಿದ್ದರು. ಅವನ ಮನೆ ಸತ್ತು ಸಮಾಧಿಯಾದ ಮಾಟಗಾರನ ನಿವಾಸವನ್ನು ಒಳಗೊಳ್ಳುವುದು; ಅಲ್ಲಿನ ಹೊಸ ಕೊಟಡಿಗಳಿಗೂ ಮಲಗುವ ಮನೆಗಳಿಗೂ ಮುಂದೆ ಬರುವ ಮದುವಣಿಗರು ತಮ್ಮ ಮದುವಣಿಗಿತ್ತಿಯನ್ನು ಕರೆದೊಯ್ಯುವರು, ಪಿನ್ಚನ್ ವಂಶದ ರಕ್ತ ಹರಿಯುವ ಮಕ್ಕಳು ಅಲ್ಲಿಯೆ ಹುಟ್ಟುವುವು; ಇಂತು ಆ ಎಡೆಗಳನ್ನು ಕಾಡಲು ಆ ಮಾಟಗಾರನ ಪಿಶಾಚಕ್ಕೆ ಒಂದು ಬಗೆಯ ಹಕ್ಕು ದೊರೆತಂತಾಗುವುದು. ಮಾಲನ ಘೋರಾಪರಾಧದ ಭೀಕರ ವಿಕಾರ ಸ್ವರೂಪವೂ, ಅವನಿಗೆ ವಿಧಿಸಿದ ದಂಡನೆಯ ನೀಚತೆಯೂ ಹೊಸದಾಗಿ ಗಾರೆಹಾಕಿದ ಗೋಡೆಗಳ ಮೇಲೆ ಕರಾಳಚ್ಛಾಯೆಯನ್ನು ಬೀರಿ, ಅವು ಬೇಗನೆ ಮಂಕುಗವಿದ ಹಳಮನೆಯ ನಾತಬಡಿಯುವಂತೆ ಮಾಡುವುವು. ಹೀಗಿರಲು, ಕಡಿಯದ ಕಾಡಿನ ಮರದೆಲೆ ಉದುರಿ ಹರಡಿರುವ ಅಷ್ಟೊಂದು ಚೊಕ್ಕ ನೆಲ ತನ್ನ ಸುತ್ತಮುತ್ತ ಇರುವಲ್ಲಿ, ಆಗಲೇ ಶಾಪಗ್ರಸ್ತವಾಗಿದ್ದ ಸ್ಥಳವನ್ನು ಸರದಾರ ಪಿನ್ಚನ್ನನು ಪುರಸ್ಕರಿಸಿದ್ದು ಏಕೆ?

ಆದರೆ, ಯೋಧನೂ ನ್ಯಾಯಾಧಿಕಾರಿಯೂ ಆಗಿದ್ದ ಈ ಪ್ಯೂರಿಟನ್ ವ್ಯಕ್ತಿ ತನ್ನ ಯೋಜನೆಯನ್ನು ಚೆನ್ನಾಗಿ ಆಲೋಚಿಸಿ ಕೈಗೊಂಡಿದ್ದನು; ಮಾಟಗಾರನ

ಕೆಲವರು ಹೇಳುವಂತೆ–ಇಡಿಯಾಗಿ ಸುಟ್ಟ ಇತ್ತನ್ನೋ, ಅದಿಲ್ಲದಿದ್ದರೆ ಕಡೆಯಪಕ್ಷ, ಸುಲಭವಾಗಿ ಒದಗಿಸಬಹುದಾದ, ಎತ್ತಿನ ತೂಕ ಮತ್ತು ಪ್ರಮಾಣಗಳಷ್ಟೇ ಕೀಲುಮಾಂಸ ಮತ್ತು ಪಕ್ಕೆ ಮಾಂಸಗಳ ಖಂಡಗಳನ್ನೊ ತಿನ್ನಿಸಿ, ಪೂಜ್ಯ ಹಿಗಿನ್ಸ್ ಮಹಾಶಯನ ಪ್ರಾರ್ಥನೆ ಪ್ರವಚನಗಳನ್ನೂ ನೆರೆದ ಜನಸಮುದಾಯದ ಒಕ್ಕೊರಲಿನ ಸ್ತೋತ್ರ ಪಾಠವನ್ನೂ ಅವರಿಗೆ ಹಿಡಿಸುವಂತೆ ಮಾಡಬೇಕಾಗಿತ್ತು. ಇಪ್ಪತ್ತು ಮೈಲಿಗಳ ಫಾಸಲೆಯಲ್ಲಿ ಗುಂಡಿಟ್ಟು ಕೊಂದ ಜಿಂಕೆಯ ಕಳೇಬರವು ಭಾರಿ ಸುತ್ತಳತೆಯ ಹಿಟ್ಟು ಗಡುಬಿಗೆ ಹೂರಣವನ್ನು ಒದಗಿಸಿತ್ತು. ಕೊಲ್ಲಿಯಲ್ಲಿ ಹಿಡಿದ ಅರುವತ್ತು ಪೌಂಡು ತೂಕದ 'ಕಾಡ್' ಮೀನನ್ನು ಮಸಾಲೆ ಸಾರಿಗೆ ಹಾಕಿ ಕುದಿಸಿ ಕರಗಿಸಲಾಗಿತ್ತು. ಸಂಕ್ಷೇಪವಾಗಿ ಹೇಳುವುದಾದರೆ, ಅಡಿಗೆಮನೆಯ ಹೊಗೆಯನ್ನು ಕಾರುತ್ತಿದ್ದ ಹೊಸಮನೆಯ ಹೊಗೆಕೊಳವೆ, ಮಸಾಲೆಸೊಪ್ಪನ್ನೂ ಈರುಳ್ಳಿಯನ್ನೂ ಹೇರಳವಾಗಿ ಬೆರಸಿದ್ದ ಮಾಂಸ, ಕೋಳಿ ಮತ್ತು ಮೀನುಗಳ ವಾಸನೆ–ಇವುಗಳಿಂದ ಸುತ್ತಮುತ್ತಣ ವಾತಾವರಣವನ್ನೆಲ್ಲ ಘಮ ಘಮಾಯಿಸುವಂತೆ ಮಾಡಿತ್ತು. ಪ್ರತಿಯೊಬ್ಬರ ಮೂಗಿನ ಹೊಳ್ಳೆಗಳನ್ನೂ ಪ್ರವೇಶಿಸುತ್ತಿದ್ದ, ಅಂಥ ಹಬ್ಬದ ಕೇವಲ ವಾಸನೆಯೊಂದೇ ಸಾಕು, ಹೊಟ್ಟೆಯನ್ನು ಚುರುಕುಮಾಡಿ ಭೋಜನಕ್ಕೆ ಆಹ್ವಾನನೀಡುತ್ತಿತ್ತು.

ಮಾಲ್‌ನ ಓಣಿಯಲ್ಲಿ (ಅಥವಾ ಅದನ್ನು ಈಗ 'ಪಿನ್ಚನ್ ಬೀದಿ' ಎಂದು ಕರೆಯುವುದು ಹೆಚ್ಚು ಮರ್ಯಾದೆ) ಗೊತ್ತಾದ ಹೊತ್ತಿಗೆ ಸರಿಯಾಗಿ, ಚರ್ಚಿಗೆ ಹೋಗುವ ದಾರಿಯಲ್ಲಿ ಭಕ್ತವೃಂದ ನೆರೆಯುವ ಹಾಗೆ ಜನ ಕಿಕ್ಕಿರಿದು ತುಂಬಿತ್ತು. ಆ ಭವ್ಯಮಂದಿರವನ್ನು ಸಮೀಪಿಸಿದಂತೆ ಎಲ್ಲರೂ ಅದನ್ನು ಕತ್ತೆತ್ತಿ ನೋಡಿದರು; ಇನ್ನ ಮುಂದೆ ಅದು 'ಮಾನವ ಜಾತಿಯ ವಾಸಸ್ಥಾನ' ಎಂಬ ಪದವಿಯನ್ನು ಪಡೆಯುವುದಾಗಿತ್ತು. ಅದು ಬೀದಿಯ ಅಂಚಿನಿಂದ ಸ್ವಲ್ಪ ಹಿಂದಕ್ಕೆ ಸರಿದು ಎಂಬಂತೆ ನೆಟ್ಟಗೆ ನಿಂತಿತ್ತು–ನಮ್ರತೆಯಿಂದಿಲ್ಲ, ಗರ್ವದಿಂದ ಎಂಬಂತೆ. ಆ ಮನೆಯ ಹಲಗೆಸೇರ್ವೆಯ ಗೋಡೆಗಳ ಮೇಲೆ ಸುಣ್ಣ, ಗೋಲಿಕಲ್ಲು, ಗಾಜಿನಚೂರು–ಇವುಗಳಿಂದ ತಯಾರಿಸಿದ ಮಿರುಗುವ ಗಾರೆಯನ್ನು ಬಳಿದಿತ್ತು; ಈ ಗಾರೆಯಮೇಲೆ 'ಗಾತಿಕ್' ಶೈಲಿಯ ವಿಚಿತ್ರ ರೀತಿಯಲ್ಲಿ ಕೊರೆದೋ ಇಲ್ಲವೆ ಅಚ್ಚೊತ್ತಿಯೋ ರೂಪಿಸಿದ ವಿಲಕ್ಷಣ ಆಕೃತಿಗಳಿಂದ ಮನೆಯ ಹೊರಭಾಗವನ್ನೆಲ್ಲ ಅಲಂಕರಿಸಿತ್ತು. ಪ್ರತಿ ಪಾರ್ಶ್ವದಲ್ಲಿಯೂ ಏಳು ಇಪ್ಪಾರುಗಳು ತಮ್ಮ ಚೂಪು ಶಿಖರಗಳಿಂದ ಆಕಾಶವನ್ನು ತಿವಿಯುತ್ತಿದ್ದುವು; ಸಂನ್ಯಾಸಿನಿಗಳ ಒಟ್ಟು ತಂಡವೇ ಕಟ್ಟಡಗಳ ಆಕಾರಧರಿಸಿ ನಿಂತು, ಒಂದು ಭಾರಿ ಹೊಗೆ ಕೊಳವೆಯ ಶ್ವಾಸನಾಳಗಳ

ಅವನು ತನ್ನ ಕಾಲದಲ್ಲಿ ಅತ್ಯುತ್ತಮ ಕೆಲಸಗಾರನಾಗಿದ್ದನೆಂದರೆ, ಅದು ಅಸಂಭವವೇನಲ್ಲ; ಅಥವಾ, ಭೂಗತನಾದ ತನ್ನ ಎದುರಾಳಿಯ ಸಂತತಿಯ ವಿರುದ್ಧವಾದ ಎಲ್ಲ ವೈರಭಾವನೆಯನ್ನೂ ಪ್ರಕಟವಾಗಿ ತೋರೆಯುವುದು ತನಗೆ ಅನುಕೂಲವೆಂದು ಸರದಾರನು ಆಲೋಚಿಸಿರಬೇಕು. ಇಲ್ಲವೆ ಯಾವುದೋ ಸದ್ಭಾವನೆಯಿಂದ ಪ್ರೇರಿತನಾಗಿ ಹಾಗೆ ಮಾಡಿರಬೇಕು. ಅಲ್ಲದೆ, ಪ್ರಾಮಾಣಿಕವಾದ ರೀತಿಯಲ್ಲಿ ದುಡಿದು, ಮಗನು ತನ್ನ ತಂದೆಯ ಬದ್ಧವೈರಿಯ ಥೈಲಿಯಿಂದ ಒಂದು ಪೆನ್ನಿಯನ್ನು,– ಅಲ್ಲ ಅಲ್ಲ,– ಒಂದು ಪೌಂಡಿನಷ್ಟು ಭಾರಿ ಮೊತ್ತವನ್ನು ಗಳಿಸಲು ಇಷ್ಟಪಟ್ಟದ್ದರೆ ಅದು ಆಗಿನ ಕಾಲದಲ್ಲಿ ಸರ್ವಸಾಮಾನ್ಯವಾಗಿದ್ದ ನಯನಾಜೂಕಿಲ್ಲದ ಕಾರ್ಯವಾಸಿ ಸ್ವಭಾವಕ್ಕೆ ವ್ಯತಿರಿಕ್ತವಾಗಿರುತ್ತಿರಲಿಲ್ಲ. ಅದು ಹೇಗಿದ್ದರೂ, ಥಾಮಸ್‌ಮಾಲ್ ಏಳು ಇಪ್ಪಾರಿನ ಮನೆ ಕಟ್ಟಿದ ಶಿಲ್ಪಿಯೆನಿಸಿದನು; ಅವನು ತನ್ನ ಕರ್ತವ್ಯವನ್ನು ಎಷ್ಟು ನಿಷ್ಠೆಯಿಂದ ನೆರಿವೇರಿಸಿದನೆಂದರೆ, ಅವನ ಕೈಗಳು ಜೋಡಿಸಿದ ಮರದ ಚೌಕಟ್ಟು ಇಂದಿಗೂ ಭದ್ರವಾಗಿದೆ.

ಹೀಗೆ ಕಟ್ಟಿದ್ದು ಆ ದೊಡ್ಡ ಮನೆ. ಈ ಲೇಖಕನ ನೆನಪಿನಲ್ಲಿ ಅದು ಇನ್ನೂ ಸುಪರಿಚಿತವಾಗಿ ಉಳಿದಿದೆ– ಏಕೆಂದರೆ, ಬಾಲ್ಯದಿಂದಲೂ ಅದು ಆತನಿಗೆ ಕುತೂಹಲಜನಕವಾಗಿದೆ; ಆ ಮನೆ ಬಹು ಪೂರ್ವಕಾಲದ ಶ್ರೇಷ್ಠವೂ ಭವ್ಯವೂ ಆದ ವಾಸ್ತುಶಿಲ್ಪಶೈಲಿಯ ಮಾದರಿಯಾಗಿ ಮಾತ್ರವಲ್ಲದೆ, ಮಾಂಡಲಿಕನೊರ್ವನ ದುರ್ಗದ ಅರಮನೆಯಲ್ಲಿ ನಡೆಯಬಹುದಾಗಿದ್ದ ಘಟನೆಗಳಿಗಿಂತ ಹೆಚ್ಚು ಮಾನವೀಯ ಘಟನೆಗಳ ಕಾರ್‍ಯರಂಗವಾಗಿದ್ದುದೇ ಆ ಕುತೂಹಲಕ್ಕೆ ಕಾರಣ. ಹೀಗಿರುವುದರಿಂದ, ಸುಪರಿಚಿತವಾಗಿದ್ದರೂ ಜೀರ್ಣಸ್ಥಿತಿಯಲ್ಲಿರುವ ಅದನ್ನು ನೋಡಿದರೆ, ಮೊತ್ತಮೊದಲು ಅದರ ಮೇಲೆ ಸೂರ್ಯರಶ್ಮಿ ಬಿದ್ದಾಗ ಅದರ ಹೊಸ ಹೊಗರು ಹೇಗೆ ಕಂಗೊಳಿಸುತ್ತಿತ್ತು ಎಂಬುದನ್ನು ಕಲ್ಪಿಸಿಕೊಳ್ಳುವುದು ಕಷ್ಟಕರ. ಆ ಪ್ಯೂರಿಟನ್ ಶ್ರೀಮಂತಪ್ರಭು ಊರನ್ನೆಲ್ಲ ಕರೆದು ಆತಿಥ್ಯ ನೀಡಿದ್ದ ಆ ಪ್ರಾತಃಕಾಲದಂದು ಆ ಮನೆ ಹೇಗೆ ಕಾಣುತ್ತಿತ್ತೆಂಬುದರ ಒಂದು ಚಿತ್ರವನ್ನು ಮುಂದಿಡಲು ನಮಗೂ ಸಂತೋಷವೇ; ಆದರೆ, ನೂರರುವತ್ತು ವರ್ಷ ಸಂದಮೇಲೆ ಇಂದು ಅದರ ನಿಜವಾದ ಸ್ಥಿತಿ ಉಂಟುಮಾಡುವ ಪರಿಣಾಮವು ಆ ಚಿತ್ರವನ್ನು ಮಸುಕುಗೊಳಸುವುದು ಅನಿವಾರ್ಯ. ಹಬ್ಬದಂತೆಯೂ ಇದ್ದು ಮತಾಚಾರಕ್ಕೂ ಅನುಗುಣವಾದ ಪವಿತ್ರೀಕರಣ ಸಮಾರಂಭವೊಂದು ಇಂದು ನೆರವೇರಬೇಕಾಗಿತ್ತು. ಜಡಬುದ್ದಿಯ ಜನಕ್ಕೆ 'ಏಲ್' ಮದ್ಯ, ಸೇಬುಮದ್ಯ, ದ್ರಾಕ್ಷಾಮದ್ಯ, ಬ್ರ್ಯಾಂದಿ–ಇವನ್ನು ಧಾರಾಳವಾಗಿ ಕುಡಿಸಿ, ಹಾಗೂ–ಬಲ್ಲವರು

ಕೊಟಡಿಗಳಿಗೆ ಕರೆದೊಯ್ದು ಬಿಡುತ್ತಲೂ ಇಬ್ಬರು ಪರಿಚಾರಕರು ನಿಂತಿದ್ದರು– ಅವರು ಎಲ್ಲರನ್ನೂ ಒಂದೇ ವಿಧವಾಗಿ ಸತ್ಕರಿಸುತ್ತಿದ್ದರೂ, ಯಾರು ಮೇಲು ಯಾರು ಕೀಳು ಎಂದು ಪ್ರತಿಯೊಬ್ಬರನ್ನೂ ಪರೀಕ್ಷಿಸಿನೋಡುತ್ತಿದ್ದರು. ಮಂಕಾಗಿದ್ದರೂ ಶ್ರೀಮಂತವಾದ ಮಕಮಲ್ಲು ಉಡುಪು, ಗಟ್ಟಿಯಾಗಿ ಹೆಣೆದ ತುಪ್ಪುಳ ಕೊರಳಂಚು ಮತ್ತು ಪಟ್ಟಿಗಳು, ಕಸೂತಿಕೆಲಸ ಮಾಡಿದ್ದ ಕೈಗವುಸುಗಳು, ಗಂಭೀರವಾದ ಗಡ್ಡಗಳು, ಅಧಿಕಾರದರ್ಪದ ಭಾವಭಂಗಿಗಳು– ಇವುಗಳಿಂದ ಆ ಕಾಲದಲ್ಲಿ ಪೂಜ್ಯರೆನಿಸಿದ್ದ ಸಭ್ಯಗೃಹಸ್ಥರನ್ನೂ; ಇನ್ನೊಂದು ಕಡೆ, ನಿಧಾನವಾಗಿ ಕಾಲೆಳೆದುಹಾಕುತ್ತ ನಡೆಯುವ ವ್ಯಾಪಾರಗಾರ, ಕಟ್ಟುವ ಕೆಲಸದಲ್ಲಿ ಬಹುಶಃ ತಾನೂ ನೆರವಾಗಿದ್ದ ಮನೆಯೊಳಕ್ಕೆ ಬೆಕ್ಕಸಬೆರಗಾಗಿ ಕದ್ದುಹೋಗುತ್ತಿದ್ದ, ಚರ್ಮದ ಗಿಡ್ಡಂಗಿ ಧರಿಸಿದ್ದ, ಕೂಲಿಕಾರ– ಇವರನ್ನೂ ಬೇರೆಬೇರೆಯಾಗಿ ಗುರುತಿಸಿ ತಿಳಿಯುವುದು ಸುಲಭವಾಗಿತ್ತು.

ಒಂದು ಅಶುಭ ಸಂದರ್ಭವಿತ್ತು ಅಲ್ಲಿ; ಅದರಿಂದಾಗಿ, ಬಂದಿದ್ದ ಅತಿಥಿಗಳ ಪೈಕಿ ಹೆಚ್ಚು ನಯನಾಜೂಕಿನ ಸ್ವಭಾವದ ಕೆಲವರ ಹೃದಯಗಳಲ್ಲಿ ಪ್ರಕಟವಾಗಿವೆಯೆ ಅಸಂತುಷ್ಟಿಯುಂಟಾಯಿತು. ಈ ಭವ್ಯಮಂದಿರದ ನಿರ್ಮಾಪಕನು ತನ್ನ ಸೌಜನ್ಯದ ಘನ ಗಾಂಭೀರ್ಯಕ್ಕೆ ಪ್ರಖ್ಯಾತನಾಗಿದ್ದವನು; ಅಂಥವನು ಇಂದು ತನ್ನ ಸ್ವಂತ ಹಜಾರದಲ್ಲಿ ಖುದ್ದಾಗಿ ನಿಂತುಕೊಂಡಿದ್ದು, ತಾನು ಏರ್ಪಡಿಸಿದ್ದ ವಿಧಿವತ್ತಾದ ಉತ್ಸವವನ್ನು ಶೋಭಾಯಮಾನವಾಗಿ ಮಾಡಲು ನೆರೆದಿದ್ದ ಅಷ್ಟೊಂದು ಮಂದಿ ಗಣ್ಯ ಮಹನೀಯರನ್ನು ಮೊತ್ತಮೊದಲು ಸ್ವಾಗತಿಸಬೇಕಾಗಿತ್ತು. ಆತ ಇನ್ನೂ ಕಣ್ಮರೆಯಾಗಿಯೆ ಇದ್ದ; ಅತಿಥಿಗಳಲ್ಲಿ ಅತ್ಯಂತ ಬೇಕಾದವರೆ ಆತನ್ನಿನ್ನೂ ಕಂಡಿರಲಿಲ್ಲ. ಪ್ರಾಂತದ ದ್ವಿತೀಯ ಪರಮಾಧಿಕಾರಿ ಅಲ್ಲಿಗೆ ದಯಮಾಡಿಸಿದಾಗ ಆತನಿಗೆ ದೊರೆತ ಸ್ವಾಗತವೂ ಇದಕ್ಕಿಂತ ಹೆಚ್ಚು ಮರ್ಯಾದೆಯಿಂದ ಕೂಡಿರಲಿಲ್ಲ; ಆ ಸಂದರ್ಭದಲ್ಲಿಯಂತೂ, ಸರದಾರ ಪಿನ್ಚನ್ನನ ಈ ಜಡತನಕ್ಕೆ ಕಾರಣವೇನೆಂಬುದು ಅರ್ಥವಾಗುವಂತಿರಲಿಲ್ಲ. ಉಪ ಗೌರ್ನರ ಭೇಟಿ ಅಂದಿನ ವೈಭವಗಳಲ್ಲಿ ಒಂದೆಂದು ಮೊದಲೇ ನಿರೀಕ್ಷಿಸಿದ್ದ ಘಟನೆ; ಹಾಗಿದ್ದರೂ, ಆತನು ತನ್ನ ಕುದುರೆಯಿಂದ ಇಳಿದು, ಪಾರ್ಶ್ವದ ಜೀನಿನಿಂದ ತನ್ನ ಪತ್ನಿ ಇಳಿಯಲು ಸಹಾಯ ಮಾಡಿ, ಸರದಾರನ ಮನೆಯ ಹೊಸಿಲನ್ನು ದಾಟಿದಾಗ, ಆತನಿಗೆ ಸ್ವಾಗತ ಕೋರಿದ ಮಹಾವ್ಯಕ್ತಿ ಎಂದರೆ, ಮನೆಯ ಮುಖ್ಯ ಸೇವಕ!

ಬಹು ವಿನಯವಂತನೂ ಶಾಂತಸ್ವಭಾವದವನೂ ಆದ ತಲೆನರೆತ ಈ ವ್ಯಕ್ತಿ, ತನ್ನ ಯಜಮಾನರು ಇನ್ನೂ ತಮ್ಮ ವ್ಯಾಸಂಗದ ಕೋಣೆಯಲ್ಲೇ, ಎಂದರೆ

ಮೂಲಕ ಉಸಿರಾಡುತ್ತಿದೆಯೋ ಎಂಬಂತೆ ಕಾಣುತ್ತಿತ್ತು. ಸಣ್ಣ ಸಣ್ಣ ವಜ್ರಾಕೃತಿಯ ಗಾಜುಗಳನ್ನು ಹಾಕಿದ್ದ ಅನೇಕ ಜಾಳಂದರ ಕಿಟಕಿಗಳ ಮೂಲಕ ಹಜಾರದೊಳಕ್ಕೂ ಕೋಣೆಯೊಳಕ್ಕೂ ಬಿಸಿಲು ಬರಲು ಅವಕಾಶವೇನೋ ಇತ್ತು; ಆದರೂ ಮಹಡಿಯ ಎರಡನೆಯ ಅಂತಸ್ತು ಮೂರನೆಯ ಅಂತಸ್ತಿನ ಕೆಳಗಡೆ ಅದಕ್ಕಿಂತ ಹಿಂದಕ್ಕಿದ್ದರೂ ತಳಭಾಗದ ಕಟ್ಟಡದ ಮೇಲೆ ದೂರಕ್ಕೆ ಮುಂಚಾಚಿಕೊಂಡಿದ್ದುದರಿಂದ ಕೆಳಕೋಣೆಗಳೊಳಗೆ ವಿಷಣ್ಣವಾದ ಮಬ್ಬುಗತ್ತಲೆ ಕವಿಯುವಂತೆ ಮಾಡಿತ್ತು. ಚಾಚಿಕೊಂಡಿದ್ದ ಅಂತಸ್ತುಗಳ ತಳಭಾಗದಲ್ಲಿ ಕೆತ್ತನೆಕೆಲಸ ಮಾಡಿದ್ದ ಮರದ ಗೋಳಗಳನ್ನು ಜೋಡಿಸಿತ್ತು. ಏಳು ಶಿಖರಗಳಲ್ಲಿ ಪ್ರತಿಯೊಂದನ್ನೂ ಕಬ್ಬಿಣದ ತಿರುಪುಕಂಬಿಗಳು ಅಂದಗೊಳಿಸಿದ್ದುವು. ಬೀದಿಗೆ ಸಮೀಪವಾಗಿ ಅಭಿಮುಖವಾಗಿದ್ದ ಇಪ್ಪಾರಿನ ತ್ರಿಕೋಣ ಭಾಗದ ಮೇಲೆ ಅದೇ ಬೆಳಗ್ಗೆ ಒಂದು ನೆರಳು ಗಡಿಯಾರವನ್ನು ಜೋಡಿಸಲಾಗಿತ್ತು; ಅದರ ಮೇಲೆ ಭವಿಷ್ಯ ಇತಿಹಾಸದ ಮೊದಲ ಪ್ರಕಾಶಮಾನ ಘಂಟೆಯ ಗತಿಯನ್ನು ಬಿಸಿಲು ಇನ್ನೂ ಗುರುತಿಸುತ್ತಿತ್ತು; ಆದರೆ ಆ ಇತಿಹಾಸಮಾತ್ರ ಅಷ್ಟು ಪ್ರಕಾಶಮಾನವಾಗಿರುವುದು ಅದರ ಹಣೆಯಲ್ಲಿ ಬರೆದಿರಲಿಲ್ಲ. ಹತ್ತರಿಹಿಡಿದ ಮರದ ಸಿಪ್ಪೆ, ಚಕ್ಕೆ, ಜಲ್ಲಿಕಲ್ಲು, ಅರೆಮುರಿ ಇಟ್ಟಿಗೆ– ಎಲ್ಲ ಸುತ್ತಮುತ್ತ ಗೂರಾಡಿ ಬಿದ್ದಿದ್ದವು; ಜೊತೆಗೆ, ಆಗತಾನೆ ಅಗೆದುಹಾಕಿದ ಮಣ್ಣು ಬೇರೆ– ಅದರ ಮೇಲೆ ಹುಲ್ಲು ಇನ್ನೂ ಬೆಳೆಯತೊಡಗಿರಲಿಲ್ಲ; ಇವೆಲ್ಲದರ ಪರಿಣಾಮವಾಗಿ, ಮಾನವರ ನಿತ್ಯಾಸಕ್ತಿಯ ವಿಷಯಗಳಲ್ಲಿ ತನ್ನ ಸ್ಥಾನವನ್ನು ಇನ್ನೂ ಗಳಿಸಬೇಕಾಗಿದ್ದ ಮನೆಗೆ ಉಚಿತವಾದಂತಹ ಅಪೂರ್ವ ವಿಲಕ್ಷಣತೆಯ ಮುದ್ರೆ ಅಲ್ಲಿ ಬಿದ್ದಿದ್ದಿತು.

ಮುಂಭಾಗದ ಎರಡು ಇಪ್ಪಾರುಗಳ ನಡುವಣ ಕೋಣಭಾಗದಲ್ಲಿ ಹೆಬ್ಬಾಗಿಲು ಇತ್ತು; ಅದು ಬಹುಮಟ್ಟಿಗೆ ಚರ್ಚಿನ ಬಾಗಿಲಿನಷ್ಟೆ ಅಗಲವಾಗಿತ್ತು; ಅದಕ್ಕೆ ಮರೆಯಾಗಿ, ಸುತ್ತಲೂ ತೆರೆದ ವರಾಂಡ; ಅದರ ನೆರಳಲ್ಲಿ ಕೆಲವು ಬೆಂಚುಗಳು. ಇಂದು, ಪುರೋಹಿತರು, ನ್ಯಾಯಾಧಿಕಾರಿಗಳು, ಧರ್ಮಾಧಿಕಾರಿಗಳು, ಹಿರಿಯರು, ಮುಂತಾಗಿ ಊರಿನ ಮತ್ತು ಪ್ರಾಂತದ ಶ್ರೀಮಂತರು ಯಾರು ಯಾರು ಇದ್ದರೋ ಅವರೆಲ್ಲ ಈ ಕಮಾನು ಬಾಗಿಲ ಕೆಳಗಡೆ ಇನ್ನೂ ಸವೆಯದಿದ್ದ ಹೊಸಿಲ ಮೇಲೆ ತಮ್ಮ ಹೆಜ್ಜೆ ಉಜ್ಜುತ್ತ ನಡೆದಿದ್ದರು. ಇದೇ ಸ್ಥಳದಲ್ಲಿ ಸಾಮಾನ್ಯ ವರ್ಗದ ಜನ ಕೂಡ ತಮಗಿಂತ ಉತ್ತಮರೆನಿಸಿಕೊಂಡವರಷ್ಟೆ ಧಾರಾಳವಾಗಿ ಬಹುಸಂಖ್ಯೆಯಲ್ಲಿ ಗುಂಪು ನೆರೆದಿದ್ದರು. ಆದರೂ, ಬಾಗಿಲ ಒಳಗಡೆ, ಅತಿಥಿಗಳಲ್ಲಿ ಕೆಲವರಿಗೆ ಅಡಿಗೆ ಮನೆಯ ಕಡೆಗೆ ಕೈತೋರುತ್ತಲೂ, ಇತರರನ್ನು ಹೆಚ್ಚು ಘನವಾದ

ಹೊರಕ್ಕೆ ಬಂದರೋ ಸರಿಹೋಯಿತು; ಇಲ್ಲದೆಹೋದರೆ, ಈ ದಿನದ ಗೌರವಾರ್ಥವವಾಗಿ ಒಡೆಯಬೇಕಾಗಿದ್ದ ಮದ್ಯದ ಪೀಪಾಯಿಯಿಂದ, ಬಹು ದೀರ್ಘಾಲೋಚನೆ ಮಾಡಿ, ಒಂದು ಗುಟುಕು ಮದ್ಯವನ್ನು ಹೆಚ್ಚಾಗಿಯೆ ಸೇವಿಸಿಬಿಟ್ಟಿದ್ದಾರೆ ಎಂದು ನಾವು ಅನುಮಾನ ಪಡಬೇಕಾಗುತ್ತದೆ! ಆದರೆ, ಅವರು ಇಷ್ಟೊಂದು ತಡಮಾಡುತ್ತಿರುವುದರಿಂದ, ನಾನೇ ಅವರಿಗೆ ಜ್ಞಾಪಕಕೊಡುತ್ತೇನೆ" ಎಂದು ಕೂಗಿ ಹೇಳಿದನು.

ಅದೇ ಮೇರೆಗೆ, ಆತನ ತನ್ನ ಕುದುರೆಸವಾರಿಯ ಭಾರವಾದ ಬೂಡ್ಸುಗಳಿಂದ ನೆಲವನ್ನೊಮ್ಮೆ ಗಟ್ಟಿಸಿ, ಸೇವಕನು ತೋರಿಸಿದ ಬಾಗಿಲತ್ತ ನಡೆದು ಹೋದನು; ಆ ತುಳಿತದ ಶಬ್ದವೊಂದೇ ಸಾಕಾಗಿತ್ತು, ಏಳು ಇಪ್ಪಾರಿನ ಅಂಕಣಗಳಲ್ಲಿ ಅತ್ಯಂತ ದೂರದ ಅಂಕಣದಲ್ಲಿ ಅದನ್ನು ಕೇಳಬಹುದಾಗಿತ್ತು; ಆತ ಬಾಗಿಲನ್ನು ಯಾವ ನಿರ್ಬಂಧವೂ ಇಲ್ಲದೆ ಬಲವಾಗಿ ತಟ್ಟಿ, ಅದರ ಹಲಗೆಗಳು ಪ್ರತಿಧ್ವನಿಸುವಂತೆ ಬೇರೆ ಮಾಡಿದನು. ಬಳಿಕ, ಸುತ್ತ ಒಮ್ಮೆ ತಿರುಗಿ ನೋಡಿ, ಪ್ರೇಕ್ಷಕರ ಕಡೆ ಮುಗುಳುನಗೆಯನ್ನು ಬೀರಿ, ಪ್ರತ್ಯುತ್ತರಕ್ಕಾಗಿ ಕಾದನು. ಆದರೆ, ಯಾರೂ ಬಾರದೆ ಇದ್ದುದರಿಂದ ಆತ ಮತ್ತೊಮ್ಮೆ ಬಾಗಿಲು ತಟ್ಟಿದನು; ಆದರೆ ಅದರ ಫಲಮಾತ್ರ ಮೊದಲ ಬಾರಿಯಂತೆಯೆ ಅತೃಪ್ತಿಕರವಾಗಿತ್ತು. ಲೆಫ್ಟಿನೆಂಟ್ ಗೌರ್ನರ್ ಸ್ವಲ್ಪ ರೇಗುವ ಸ್ವಭಾವದವನು; ಆದ್ದರಿಂದ ಆತ ಈಗ ತನ್ನ ಕತ್ತಿಯ ಭಾರವಾದ ಹಿಡಿಯನ್ನು ಮೇಲಕ್ಕೆತ್ತಿ, ಅದರಿಂದ ಬಾಗಿಲನ್ನು ದಬದಬ ಹೊಡೆದು ಬಾರಿಸಿದನು; ಅದರಿಂದಾದ ಸದ್ದುಗದ್ದಲ ಎಷ್ಟರಮಟ್ಟಿಗಿತ್ತೆಂದರೆ, ಸತ್ತವರನ್ನು ಕೂಡ ಅದು ಎಬ್ಬಿಸಿಬಿಡಬಹುದೇನೋ ಎಂದು ಬಳಿಯಲ್ಲಿ ನಿಂತಿದ್ದ ಕೆಲವರು ಪಿಸುಗುಟ್ಟಿ ಕೊಂಡರು. ಅದು ಹೇಗಾದರೂ ಇದ್ದುಕೊಳ್ಳಲಿ, ಆ ಸದ್ದಗದ್ದಲ ಸರದಾರ ಪಿನ್ಚನ್ನನನ್ನು ಎಚ್ಚರಗೊಳಿಸುವ ಮಟ್ಟಿನ ಪರಿಣಾಮವನ್ನು ಬೀರಿದಂತೆ ಕಾಣ ಬರಲಿಲ್ಲ. ಆ ಸದ್ದು ಅಡಗಿದಾಗ, ಒಂದೆರಡು ಬಟ್ಟಲು ಮದ್ಯವನ್ನು ಆಗಲೇ ಕದ್ದು ಕುಡಿದಿದ್ದ ಅತಿಥಿಗಳ ನಾಲಗೆಗಳು ಸಡಿಲಗೊಂಡಿದ್ದರೂ, ಮನೆಯನ್ನು ಆವರಿಸಿದ್ದ ಮೌನವು ಗಾಢವಾಗತ್ತು, 'ಗೌವ್ವೆ'ನ್ನುತ್ತ ಅಸಹನೀಯವಾಗಿತ್ತು.

ಲೆಫ್ಟಿನೆಂಟ್ ಗೌರ್ನರನ ಮುಗುಳುನಗೆ ಮಾಸಿ ಹುಬ್ಬುಗಂಟಿಗೆ ಎಡೆ ಮಾಡಿಕೊಟ್ಟಿತು; ಆತ, "ವಿಚಿತ್ರ, ನಿಜವಾಗಿಯೂ ಬಲು ವಿಚಿತ್ರ! ಆದರೆ, ನಮ್ಮ ಆತಿಥೇಯ ಸತ್ಕಾರದ ಕಟ್ಟಳೆಯನ್ನು ಮರೆಯುವ ಸತ್ಸಂಪ್ರದಾಯವನ್ನು ಹಾಕಿಕೊಟ್ಟಿದ್ದಾರೆ; ಅದೇ ರೀತಿ ನಾನು ಕೂಡ ಆ ಕಟ್ಟಳೆಯನ್ನು ಕಡೆಗಣಿಸಿ, ಅವರ ಸ್ವಂತದ ಕೋಣೆಗೆ ಹೇಳದೆ ಕೇಳದೆ ನುಗ್ಗಿಬಿಡುತ್ತೇನೆ!" ಎಂದು ಒದರಿದನು.

ತಮ್ಮ ಸ್ವಂತದ ಕೋಣೆಯಲ್ಲೇ ಇದ್ದಾರೆ ಎಂದೂ, ಒಂದು ಗಂಟೆಯ ಹಿಂದೆ ಅಲ್ಲಿಗೆ ಹೋದಾಗ ಯಾವ ಕಾರಣದಿಂದಲೇ ಆಗಲಿ ತಮ್ಮನ್ನು ತೊಂದರೆಪಡಿಸಕೂಡದೆಂದು ಅಪೇಕ್ಷೆಪಟ್ಟಿದ್ದಾರೆಂದೂ ವಿವರಿಸಬೇಕಾಯಿತು.

ಪ್ರಾಂತದ ಉಚ್ಚ 'ಷರೀಫ್' (ನ್ಯಾಯಪಾಲನಾಧಿಕಾರಿ) ಸೇವಕನನ್ನು ಒಂದು ಪಕ್ಕಕ್ಕೆ ಕರೆದು, "ಎಲಾ, ನಿನಗೆ ಇಷ್ಟೂ ಕಾಣುವುದಿಲ್ಲವೆ? ಇವರು ಬೇರೆಯಾರೂ ಅಲ್ಲ, ಪ್ರಾಂತದ ಲೆಫ್ಟಿನೆಂಟ್ ಗೌರ್‍ನರು, ತಿಳಿಯಿತೆ? ಸರದಾರ ಪಿನ್ಚನ್ನರನ್ನು ಕೂಡಲೆ ಹೋಗಿ ಕರೆ! ಇವೊತ್ತು ಬೆಳಗ್ಗೆ ಅವರಿಗೆ ಇಂಗ್ಲೆಂಡಿನಿಂದ ಕಾಗದಗಳು ಬಂದಿವೆ, ನಾನು ಬಲ್ಲೆ; ಅವುಗಳನ್ನು ಓದುತ್ತಾ ಅವುಗಳ ವಿಚಾರವಾಗಿ ಯೋಚನೆಮಾಡುತ್ತಾ ಒಂದು ಗಂಟೆಯ ಕಾಲ ಕಳೆದುಹೋಗಿರುವುದು ಕೂಡ ಅವರ ಗಮನಕ್ಕೆ ಬಂದಿರಲಾರದು. ಗೌರ್‍ನರು ಇಲ್ಲದಿರುವಾಗ ಲೆಫ್ಟಿನೆಂಟ್ ಗೌರ್‍ನರೇ ನಮ್ಮ ವಿಲಿಯಂ ದೊರೆಗಳ ಪ್ರತಿನಿಧಿ, ಅವರು ನಮ್ಮ ಮುಖ್ಯ ಆಡಳಿತಗಾರರಲ್ಲಿ ಒಬ್ಬರು; ಹೀಗಿರುವಾಗ, ನಿಮ್ಮ ಯಜಮಾನರು ಅವರಿಗೆ ಸಲ್ಲಿಸಬೇಕಾದ ಗೌರವವನ್ನು ಸಲ್ಲಿಸದೆ ಉಪೇಕ್ಷೆ ಮಾಡಿದರು ಎನ್ನುವ ರೀತಿ ನೀನು ನಿಮ್ಮ ಯಜಮಾನರಿಗೆ ಅವಕಾಶಮಾಡಿಕೊಟ್ಟರೆ ಅವರಿಗೆ ಸಂತೋಷವೇನಾಗುವುದಿಲ್ಲ, ನನಗೆ ಗೊತ್ತು. ನಿಮ್ಮ ಯಜಮಾನರನ್ನು ಈ ಕ್ಷಣವೇ ಕರೆ!" ಎಂದು ತಿಳಿಸಿದನು.

"ದಯವಿಟ್ಟು ಬೇಡಿ, ಮಹಾಸ್ವಾಮಿ. ನಮ್ಮ ದಣಿಯೋರ ಅಪ್ಪಣೆ ಬಲು ಕಟ್ಟುನಿಟ್ಟು– ಅವರ ಬಳಿ ಊಳಿಗ ಮಾಡಬೇಕಾದೋರು ಅವರು ಹೇಳಿದಹಾಗೆ ನಡೆದುಕೊಳ್ಳೋ ವಿಚಾರದಲ್ಲಿ ತಮ್ಮ ತಮ್ಮ ಇಷ್ಟ ಬಂದ ಹಾಗೆ ಕೆಲಸ ಮಾಡಲು ಅವರು ಅವಕಾಶಕೊಡುವುದಿಲ್ಲ. ಮಹಾಸ್ವಾಮಿಯವರಾದ ತಮಗೂ ಇದು ಗೊತ್ತು. ಅಪ್ಪಣೆ ಮೀರಲು ಇಷ್ಟ ಉಳ್ಳೋರು ಹೋಗಿ ಬಾಗಿಲು ತೆರೆಯಲಿ. ಗೌರ್‍ನರ್ ಸಾಹೇಬರೇ ಖುದ್ದಾಗಿ ಅಪ್ಪಣೆ ಮಾಡಿದರೂ ನಾನು ಧೈರ್ಯಮಾಡಲಾರೆ" ಎಂದು ಆ ಸೇವಕನು ಬಹಳ ಗಾಬರಿಗೊಂಡು ಹೇಳಿದನು. ಅವನು ಹಾಗೆ ಹಿಂಜರಿದದ್ದು, ಸರದಾರ ಪಿನ್ಚನ್ನನ ಮನೆಯಾಡಳಿತ ಎಷ್ಟು ಬಿಗಿಯಾಗಿ ದರ್ಪದಿಂದ ಕೂಡಿತ್ತು ಎಂಬುದನ್ನು ಸೂಚಿಸುತ್ತಿತ್ತು.

ಈ ಮೇಲ್ಕಂಡ ವಾಗ್ವಾದವನ್ನು ಲೆಫ್ಟಿನೆಂಟ್ ಗೌರ್‍ನರ್ ಕೇಳಿಸಿಕೊಂಡಿದ್ದನು; ತನ್ನ ಘನತೆಯನ್ನು ತುಸು ಪ್ರದರ್ಶಿಸಬೇಕು, ಅಷ್ಟರಮಟ್ಟಿಗೆ ತಾನು ಉಚ್ಚಪದವಿಯಲ್ಲಿದ್ದೇನೆ ಎಂದು ಭಾವಿಸಿಕೊಂಡು, "ಛೇ ಛೇ, ಬಿಡಿ ಹೆಗ್ಗಡೆಗಳೇ! ಈ ವಿಚಾರವನ್ನ ನಾನು ನೋಡಿಕೊಳ್ಳುತ್ತೇನೆ. ನಮ್ಮ ಸರದಾರರು ತಮ್ಮ ಸ್ನೇಹಿತರನ್ನು ಎದುರುಗೊಳ್ಳುವ ಹೊತ್ತು ಮೀರುತ್ತ ಬಂತು; ಅವರು ಈಗ

ದಾರಿಬಿಡಿಸಿಕೊಂಡು ಕುಳಿತಿದ್ದ ವ್ಯಕ್ತಿಯ ಕಡೆಗೆ ಓಡಿಹೋದನು; ಆತನೊಂದಿಗೆ ಸಲಿಗೆಯಿಂದಿರಲು ಧೈರ್ಯಮಾಡಬಹುದಾದ ಏಕಮಾತ್ರ ಮಾನವ ಪ್ರಾಣಿಯೆಂದರೆ ಆ ಹುಡುಗ. ಹಾಗೆ ಓಡಿದವನು ನಡುದಾರಿಯಲ್ಲಿ ನಿಂತು, ಭಯದಿಂದ ಚೀರ ತೊಡಗಿದನು. ಮರದ ಎಲೆಗಳೆಲ್ಲವೂ ಒಟ್ಟಿಗೆ ಅಲುಗಾಡುತ್ತಿದ್ದರೆ ಹೇಗೋ ಹಾಗೆ ತರತರಗುಟ್ಟುತ್ತಿದ್ದ ಜನದ ನೆರವಿ ಹತ್ತಿರ ಹತ್ತಿರಕ್ಕೆ ಸಾರಿ, ಸರದಾರ ಪಿನ್ಚನ್ನನ ನಟ್ಟ ನೋಟದ ಅಚಲತೆಯಲ್ಲಿ ಒಂದು ಬಗೆಯ ಅಸ್ವಾಭಾವಿಕ ವಿಕಾರವಿದ್ದಿತೆಂದೂ, ಆತನ ಅಂಗಿಯ ತುಪ್ಪುಳ ಕೊರಳಂಚಿನ ಮೇಲೆ ರಕ್ತವಿದ್ದಿತೆಂದೂ, ಆತನ ನರೆತ ಗಡ್ಡ ರಕ್ತದಿಂದ ತೊಯ್ದು ಹೋಗಿದ್ದಿತೆಂದೂ ಕಂಡುಕೊಂಡಿತು. ನೆರವು ನೀಡಲು ಕಾಲ ಮೀರಿಹೋಗಿತ್ತು. ಪಾಷಾಣಹೃದಯದ ಆ ಪ್ಯೂರಿಟನ್, ನಿರ್ದಯನಾದ ಆ ಪೀಡಕ, ಎಲ್ಲವನ್ನೂ ದೋಚಿಕೊಳ್ಳುವ ಸ್ವಭಾವದ ಆ ದೃಢನಿಶ್ಚಯದ ಮಹಾನುಭಾವ ಮೃತಿಹೊಂದಿದ್ದನು! ತನ್ನ ನೂತನ ಭವನದಲ್ಲಿಯೆ ನಿಧನನಾಗಿದ್ದನು! ಅತಿಥಿಗಳ ಮಧ್ಯದಿಂದ ಒಂದು ಧ್ವನಿ ಗಟ್ಟಿಯಾಗಿ ನುಡಿಯಿತೆಂದು ಒಂದು ಪರಂಪರೆಯ ಹೇಳಿಕೆ ಇದೆ; ಬಹುಶಃ ಅದರ ಪ್ರಸ್ತಾಪವಿಲ್ಲದೆಯೆ ತಕ್ಕ ಮಟ್ಟಿಗೆ ವಿಷಣ್ಣವಾಗಿರುವ ಆ ದೃಶ್ಯಕ್ಕೆ ಮೂಢ ನಂಬಿಕೆಯ ಬೆರಗಿನ ಬಣ್ಣ ಕೊಡುವುದೆಂಬ ಕಾರಣದಿಂದ ಅದು ಉಲ್ಲೇಖಯೋಗ್ಯವಾಗಿದೆ, ಅಷ್ಟೆ. ಆ ಧ್ವನಿಯ ಉಚ್ಚಾರಗಳು ಗಲ್ಲಿಗೇರಿದ ಮುದುಕ ಮ್ಯಾತ್ಯೂಮಾಲ್‌ನ ಉಚ್ಚಾರಗಳ ಹಾಗೆಯೇ ಇದ್ದುವು– "ದೇವರು ಅವನಿಗೆ ಕುಡಿಯಲು ರಕ್ತವನ್ನು ನೀಡಿದ್ದಾನೆ!"

ಇಂತು, ಆ ಒಬ್ಬ ಅತಿಥಿ– ಒಂದಲ್ಲ ಒಂದು ಕಾಲದಲ್ಲಿ ಪ್ರತಿಯೊಂದು ಮಾನವ ನಿವಾಸವನ್ನೂ ಖಂಡಿತವಾಗಿ ಪ್ರವೇಶಿಸುವ ಆ ಏಕಮಾತ್ರ ಅತಿಥಿ– ಆ 'ಮೃತ್ಯು', ಏಳು ಇಪ್ಪಾರಿನ ಮನೆಯ ಹೊಸಿಲನ್ನು ಮುಂಚಿತವಾಗಿಯೆ ಮೆಟ್ಟಿಬಿಟ್ಟಿದ್ದನು!

ಸರದಾರ ಪಿನ್ಚನ್ನನ ಹಠಾತ್ತಾದ ಈ ರಹಸ್ಯಮಯ ಅವಸಾನವು ಅಂದಿನ ದಿನಗಳಲ್ಲಿ ಅಪಾರವಾದ ಗಲಭೆಯನ್ನುಂಟುಮಾಡಿತು. ಅನೇಕ ವದಂತಿಗಳು ಹುಟ್ಟಿಕೊಂಡುವು ಆಗ; ಅವುಗಳಲ್ಲಿ ಕೆಲವು ಅದು ಹೇಗೋ ಇಂದಿನ ತನಕ ಅಸ್ಪಷ್ಟ ರೂಪದಲ್ಲಿ ಉಳಿದು ಬಂದಿವೆ: ಅವುಗಳ ಪ್ರಕಾರ, ಹೊರ ಚಿಹ್ನೆಗಳು ಹಿಂಸಾಕೃತ್ಯ ನಡೆದಿದೆಯೆಂದು ಸೂಚಿಸುತ್ತಿದ್ದುವು; ಆತನ ಮೆಟ್ಟರೆಯ ಮೇಲೆ ಕೈ ಬೆರಳುಗಳ ಗುರುತುಗಳಿದ್ದುವಂತೆ; ಆತನ ಅಂಗಿಯ ಹೆಣಿಗೆಯ ತುಪ್ಪುಳ ಕೊರಳಂಚಿನ ಮೇಲೆ ರಕ್ತ ಮೆತ್ತಿದ ಅಂಗೈ ಮುದ್ರೆಯಿದ್ದಿತಂತೆ; ರಭಸದಿಂದ ಹಿಡಿದೆಳೆದ ರೀತಿಯಲ್ಲಿ ಆತನ ಚೂಪಾದ ಗಡ್ಡ ಕೆದರಿಹೋಗಿದ್ದಿತಂತೆ. ಅದೇ

ಆತ ಬಾಗಿಲನ್ನು ತೆರೆಯಲು ಪ್ರಯತ್ನಿಸಿದನು; ಅದನ್ನು ಕೈಯಿಂದ ನೂಕಿದಾಗ ಅದು ಸುಲಭವಾಗಿಯೇ ಕೈಗೆ ಬಂದು, ತಟ್ಟನೆ ಗಾಳಿ ನುಗ್ಗಿ ಹಾರಹೊಡೆಯುವಂತೆ ಅದನ್ನು ಪೂರ್ತಿ ತೆರೆದು, ಹೊಸ ಮನೆಯ ಹೊರ ಹೆಬ್ಬಾಗಿಲಿನಿಂದ ಹಿಡಿದು ಎಲ್ಲ ನಡವೆಗಳ ಹಾಗೂ ಕೋಣೆಗಳ ಮೂಲಕ ನಿಟ್ಟುಸಿರುಗರೆಯುತ್ತಿದೆಯೋ ಎಂಬಂತೆ ಹಾದುಹೋಯಿತು. ಆ ಗಾಳಿ ಮಹಿಳೆಯರ ರೇಶ್ಮೆಯ ಉಡುಪುಗಳನ್ನು ಪರಪರಗುಟ್ಟಿಸಿ, ಪುರುಷರ ಕೂದಲ ಟೋಪಿಯ ಉದ್ದನೆಯ ಗುಂಗುರು ಕುರುಳನ್ನು ಒಲೆದಾಡಿಸಿ, ಕಿಟಕಿಯ ತೆರೆಗಳನ್ನೂ ಶಯ್ಯಾಗೃಹಗಳ ಪರದೆಗಳನ್ನೂ ಅಲುಗಾಡಿಸಿ ಇನ್ನೂ ಬಹುಮಟ್ಟಿಗೆ ಮೌನವೇ ಎನ್ನಬಹುದಾಗಿದ್ದಂತಹ ಒಂದು ವಿಲಕ್ಷಣವಾದ ಕ್ಷೋಭೆಯನ್ನು ಎಲ್ಲೆಲ್ಲೂ ಉಂಟುಮಾಡಿತು. ಇದ್ದಕಿದ್ದಂತೆಯೇ ಅಲ್ಲಿ ನೆರೆದಿದ್ದವರೆಲ್ಲರ ಮೇಲೆ ಒಂದು ನಿಬ್ಬೆರಗಿನ ಭೀತಿಶಂಕೆಯ ಛಾಯೆ ಕವಿಯಿತು–ಎಲ್ಲಿಯದು ಏತರದ್ದು ಎಂಬುದನ್ನು ಮಾತ್ರ ಯಾರೂ ಅರಿಯರು.

ಅದು ಎಂತಿದ್ದರೂ, ಅವರೆಲ್ಲ ತಮ್ಮ ಕುತೂಹಲದ ತವಕದಲ್ಲಿ ಲೆಫ್ಟಿನೆಂಟ್ ಗೌರ್‍ನರನ್ನು ತಮಗಿಂತ ಮುಂದೆ ಕೋಣೆಯೊಳಕ್ಕೆ ನೂಕಿ, ತೆರೆದಿದ್ದ ಬಾಗಿಲ ಬಳಿ ಗುಂಪುಗಟ್ಟಿದರು. ಮೊದಲ ನೋಟದಲ್ಲಿ ಅವರು ಅಂತಹ ಅಸಾಧಾರಣವಾದದ್ದೇನನ್ನೂ ಕಾಣಲಿಲ್ಲ: ಪೀಠೋಪಸ್ಕರಗಳಿಂದ ಓರಣವಾಗಿ ಸಜ್ಜುಗೊಳಿಸಿದ್ದ, ತೆರೆಗಳಿಂದ ಸ್ವಲ್ಪ ಮಟ್ಟಿಗೆ ಕತ್ತಲುಗವಿದಿದ್ದ, ಸಾಧಾರಣ ಅಳತೆಯ ಒಂದು ಕೊಠಡಿ; ಬಡುಗಳ ಮೇಲೆ ಜೋಡಿಸಿಟ್ಟಿದ್ದ ಪುಸ್ತಕಗಳು; ಗೋಡೆಯ ಮೇಲೆ ಒಂದು ದೊಡ್ಡ ಭೂಪಟ, ಅಂತೆಯೆ ಸರದಾರ ಪಿನ್ಚನ್ನನ ಒಂದು ಭಾವಚಿತ್ರ–ಅದರ ಕೆಳಗೆ, ಒಂದು ಓಕ್‌ಮರದ ತೋಳುಕುರ್ಚಿಯ ಮೇಲೆ ಭಾವಚಿತ್ರದ ಮೂಲಮಾದರಿಯಾದ ಸ್ವಯಂ ಸರದಾರ ಪಿನ್ಚನ್ನನೇ ಕೈಲೊಂದು ಲೆಕ್ಕಣಿಕೆ ಹಿಡಿದು ಕುಳಿತಿದ್ದನು. ಅವನ ಮುಂದಣ ಮೇಜಿನ ಮೇಲೆ ಪತ್ರಗಳು, ಚರ್ಮ–ಕಾಗದಗಳು, ಖಾಲಿ ಕಾಗದದ ಹಾಳೆಗಳು ಬಿದ್ದಿದ್ದುವು. ಲೆಫ್ಟಿನೆಂಟ್ ಗೌರ್‍ನರನ್ನು ಮುಂದುಗಡೆ ನಿಲ್ಲಿಸಿಕೊಂಡಿದ್ದ ಕುತೂಹಲಭರಿತರಾದ ಜನದ ಗುಂಪನ್ನು ದುರುಗುಟ್ಟಿಕೊಂಡು ನೋಡುತ್ತಿದ್ದಂತೆ ಕಾಣಿಸುತ್ತಿದ್ದನಾತ. ತನ್ನ ಖಾಸಗಿ ಕೋಣೆಯೊಳಕ್ಕೆ ಬರುವಂತೆ ಅವರನ್ನು ಪ್ರೇರಿಸಿದ್ದ ಧೈರ್ಯವನ್ನು ಕಂಡು ತೀವ್ರವಾಗಿ ಅಸಮಾಧಾನಗೊಂಡಿರುವನೋ ಎಂಬಂತೆ ಆತನ ದೊಡ್ಡ ವಿಷಣ್ಣ ಮುಖ ಮುದ್ರೆಯಲ್ಲಿ ಹುಬ್ಬುಗಂಟಿತ್ತು.

ಆಗ ಒಬ್ಬ ಚಿಕ್ಕ ಹುಡುಗ–ಸರದಾರನ ಮೊಮ್ಮಗ–ಅತಿಥಿಗಳ ನಡುವೆ

ಕೊಲೆ ನಡೆದಿರಬಹುದೆಂದು ಪ್ರಬಲವಾದ ಅನುಮಾನ ಪಡಲು ಅವಕಾಶವಿತ್ತೆಂದಾಗಲಿ, ಅಂಥ ಕೊಲೆ ನಡಸಿದನೆಂದು ಯಾವೊಬ್ಬ ವ್ಯಕ್ತಿಯ ಮೇಲೆ ಆರೋಪಣೆ ಹೊರಿಸಲು ಆಧಾರವಿದ್ದುವೆಂದಾಗಲಿ ಊಹಿಸುವುದು ಕಷ್ಟ ಸಾಧ್ಯ. ಮೃತನ ಉಚ್ಚಪದವಿ ಐಶ್ವರ್ಯ ಹಾಗೂ ಘನವಾದ ಸ್ವಭಾವ– ಇವುಗಳನ್ನೆಲ್ಲ ಗಮನಿಸಿದರೆ, ಸಂದೇಹಾಸ್ಪದವಾದ ಪ್ರತಿಯೊಂದು ಸನ್ನಿವೇಶ ಸಂದರ್ಭವೂ ಕಟ್ಟು ನಿಟ್ಟಾದ ತನಿಖೆಗೆ ಒಳಪಟ್ಟಿರಬೇಕು. ಅಂತಹ ಸಂಗತಿಯ ಯಾವ ದಾಖಲೆಯೂ ಇಲ್ಲದಿರುವುದರಿಂದ, ಅಂಥದು ಯಾವುದೂ ಇರಲಿಲ್ಲವೆಂದೇ ಇಟ್ಟುಕೊಳ್ಳುವುದು ಕ್ಷೇಮ. ಕೆಲವು ವೇಳೆ ಇತಿಹಾಸವು ಕೈಬಿಟ್ಟಿರುವ ಸತ್ಯಸಂಗತಿಯನ್ನು ಪರಂಪರೆಯ ಹೇಳಿಕೆ ಉಳಿಸಿಕೊಂಡು ಬರುತ್ತದೆ; ಆದರೆ, ಒಲೆಯ ಮುಂದೆ ಆಡಿಕೊಳ್ಳುತ್ತಿದ್ದ ಅಂಥ ಹೇಳಿಕೆ ಅನೇಕ ವೇಳೆ ಆಯಾ ಕಾಲದ ಗೊಡ್ಡು ಹರಟೆಯಷ್ಟೆ; ಈಗ ಅವು ವೃತ್ತ ಪತ್ರಿಕೆಗಳಲ್ಲಿ ಸ್ಥಿರವಾಗಿ ನೆಲಸಿಬಿಟ್ಟಿರುತ್ತವೆ; ವಿರುದ್ಧವಾದ ಎಲ್ಲ ಅಭಿಪ್ರಾಯಕ್ಕೂ ಅಂಥ ಹೇಳಿಕೆಯೆ ಕಾರಣ. ಪೂಜ್ಯ ಹಿಗಿನ್‌ಸನ್ ಪಾದ್ರಿ ಮಹಾಶಯನು ಸರದಾರ ಪಿನ್ಚನ್ನನ ಶವಸಂಸ್ಕಾರಕಾಲದಲ್ಲಿ ಮಾಡಿದ ಭಾಷಣವು ಅಚ್ಚಾಗಿದ್ದು, ಈಗಲೂ ಉಪಲಬ್ಧವಾಗಿದೆ; ಅದರಲ್ಲಿ ಆತನು ತನ್ನ ಚರ್ಚಿನ ಸನ್ಮಾನ್ಯ ಭಕ್ತನ ಇಹಲೋಕ ಜೀವಿತದ ಅನೇಕಾನೇಕ ಸೌಭಾಗ್ಯ ವಿಶೇಷಗಳನ್ನೂ ಸುಖಮರಣದ ಕಾಲೌಚಿತ್ಯವನ್ನೂ ನಿರೂಪಿಸಿದ್ದಾನೆ. 'ಆತನು ತಾನು ಮಾಡಬೇಕಾದ ಕರ್ತವ್ಯಗಳನ್ನೆಲ್ಲ ಮಾಡಿದ್ದನು; ಅತ್ಯಂತ ಹೆಚ್ಚಿನ ಐಶ್ವರ್ಯಾಭಿವೃದ್ಧಿಯನ್ನು ಸಾಧಿಸಿದ್ದನು; ತನ್ನ ವಂಶಕ್ಕೂ ಮುಂದಿನ ಪೀಳಿಗೆಗಳಿಗೂ ಒಂದು ಸ್ಥಿರವಾದ ನೆಲೆಯನ್ನು ಕಲ್ಪಿಸಿದ್ದನು; ಶತಶತಮಾನಗಳ ಕಾಲ ಅವರಿಗೆ ನೆರಳಾಗಿರುವಂತೆ ಭವ್ಯ ಭವನವನ್ನು ಕಟ್ಟಿಸಿದ್ದನು. ಹೀಗಿರುವಲ್ಲಿ, ಭೂಲೋಕದಿಂದ ಸ್ವರ್ಗದ ಸ್ವರ್ಣದ್ವಾರಕ್ಕೊಯ್ಯುವ ಅಂತ್ಯ ಸೋಪಾನವನ್ನೇರುವುದನ್ನುಳಿದು ಈ ಸುತ್ಪುರಷನು ಏರಬೇಕಾದ ಬೇರೆ ಯಾವ ಉಚ್ಚ ಸೋಪಾನ ಉಳಿದಿದ್ದೀತು!' ಸರದಾರನನ್ನು ಮೆಟ್ಟರೆ ಮಿಸುಕಿ ಹಿಂಸಾಪೂರ್ವಕವಾಗಿ ಪರಲೋಕಕ್ಕೆ ಬಿದ್ದರೆಂದು ಧರ್ಮಿಷ್ಠನಾದ ಪಾದ್ರಿ ಮಹಾಶಯನಿಗೆ ಸ್ವಲ್ಪವಾದರೂ ಸಂಶಯವುಂಟಾಗಿದ್ದಿದ್ದರೆ, ಆತನು ಇಂತಹ ಮಾತುಗಳನ್ನು ಆಡುತ್ತಿದ್ದಿರಲಿಲ್ಲ.

ಮಾನವನ ವ್ಯವಹಾರಗಳೆಲ್ಲವೂ ಸ್ವಾಭಾವಿಕವಾಗಿಯೆ ಕ್ಷಣಭಂಗುರ; ಇದನ್ನು ಅನುಲಕ್ಷಿಸಿ ಹೇಳುವುದಾದರೆ, ಸರದಾರ ಪಿನ್ಚನ್ನನು ಮರಣ ಹೊಂದಿದ ಕಾಲದಲ್ಲಿ ಆತನ ಕುಟುಂಬ ವರ್ಗಕ್ಕೆ ಒಂದು ಶಾಶ್ವತ ಭಾಗ್ಯವೇ ಲಭಿಸಿತ್ತೆಂದು ಹೇಳಬೇಕು.

ರೀತಿ, ಸರದಾರ ಪಿನ್ಚನ್ನನ ಕುರ್ಚಿಯ ಬಳಿಯ ಜಾಳಂದರ ಕಿಟಕಿ ತೆರೆದಿತ್ತೆಂದೂ, ಈ ದುರಂತ ಘಟನೆ ನಡೆಯುವುದಕ್ಕೆ ಕೇವಲ ಕೆಲವು ನಿಮಿಷಗಳ ಮುನ್ನ ಪುರುಷಾಕೃತಿಯೊಂದು ಮನೆಯ ಹಿಂಭಾಗದ ತೋಟದ ಬೇಲಿಯ ಮೇಲ್ಗಡೆ ಕಷ್ಟಪಟ್ಟು ಹತ್ತಿ ಹೋಗುತ್ತಿದ್ದುದು ಕಂಡುಬಂದಿತೆಂದೂ ಖಡಾಖಂಡಿತವಾಗಿ ಹೇಳಿಕೊಳ್ಳಲಾಗುತ್ತಿತ್ತು. ಆದರೆ ಈ ತೆರನ ಕತೆಗಳಿಗೆ ವಿಶೇಷ ಪ್ರಾಮುಖ್ಯ ಕೊಡುವುದು ಅವಿವೇಕ; ಈಗ ನಿರೂಪಿಸಿದಂತಹ ಘಟನೆಯೊಂದರ ಸುತ್ತ ಅಂಥ ಕತೆಗಳು ಹುಟ್ಟಿಕೊಳ್ಳುವುದು ಖಂಡಿತ; ಅಲ್ಲದೆ, ಬಹಳ ಕಾಲದ ಹಿಂದೆಯೇ ಮಣ್ಣಿನೊಂದಿಗೆ ಹುಡಿಹುಡಿಯಾಗಿ ಕರಗಿಹೋಗಿರುವ ಮರವೊಂದರ ತಾಳು ಯಾವೆಡೆಯಲ್ಲಿ ಬಿದ್ದು ಹೂತುಹೋಯಿತು ಎಂಬುದನ್ನು ಸೂಚಿಸುವ ನಾಯಿ ಕೊಡೆಗಳಂತೆ, ಆ ಕತೆಗಳು ಕೆಲವು ವೇಳೆ (ಈ ಸಂದರ್ಭದಲ್ಲಿ ಆಗಿರುವ ಹಾಗೆ) ಯುಗಯುಗಗಳ ಆಚೆಗೂ ಪ್ರಚಾರಗೊಳ್ಳುತ್ತ ಹೋಗುತ್ತವೆ. ನಮ್ಮ ಮಟ್ಟಿಗೆ ಹೇಳುವುದಾದರೆ, ಲೆಫ್ಟಿನೆಂಟ್ ಗೌರ್‍ನರು ಕಣ್ಣಾರೆ ಕಂಡರೆಂದು ಹೇಳುವ ಘಟನೆಯ ಕಥೆ ಹೇಗೆ ವಿಶ್ವಾಸಾರ್ಹವಲ್ಲವೋ ಹಾಗೆಯೇ ಇವು ಕೂಡ ಎಂದು ಹೇಳುತ್ತೇವೆ. ಆ ಕಥೆ ಏನೆಂದರೆ, ಸರದಾರರ ಮೆಟ್ಟಿಲೆಯ ಮೇಲೆ ಒಂದು ಎಲುಬಿನ ಕೈಯನ್ನು ಲೆಫ್ಟಿನೆಂಟ್ ಗೌರ್‍ನರ್ ಕಂಡರಂತೆ; ಅವರು ಕೋಣೆಯೊಳಕ್ಕೆ ಮುಂದುವರಿದು ಹೋದಾಗ ಅದು ಮಾಯವಾಗಿ ಹೋಯಿತಂತೆ. ಅದು ಹೇಗಾದರೂ ಇರಲಿ, ಮೃತಶರೀರದ ವಿಷಯವಾಗಿ ವೈದ್ಯರು ದೊಡ್ಡ ಸಮಾಲೋಚನೆಯನ್ನೂ ಚರ್ಚೆಯನ್ನೂ ನಡಸಿದ್ದು ಖಂಡಿತ. ಒಬ್ಬ ವೈದ್ಯ– ಆತನ ಹೆಸರು ಜಾನ್ ಸ್ವಿನರ್‍ಟನ್, ಪ್ರಾಮುಖ್ಯತೆಯುಳ್ಳ ವ್ಯಕ್ತಿ ಎಂದು ಕಾಣುತ್ತದೆ– ಮೃತನಿಗೆ ತೀಕ್ಷ್ಣ ವಾಯು ಹೊಡೆಯಿತೆಂದು ಅಭಿಪ್ರಾಯಪಟ್ಟನು; ಆತನ ವೈದ್ಯವಿದ್ಯೆಯ ಪರಿಭಾಷೆಯನ್ನು ನಾವು ಸರಿಯಾಗಿ ಅರ್ಥಮಾಡಿಕೊಂಡಿದ್ದೇವೆ ಎಂದು ನಮ್ಮ ಭಾವನೆ. ಆತನ ವೃತ್ತಿ ಬಾಂಧವರಲ್ಲಿ ಪ್ರತಿಯೊಬ್ಬನೂ ಹೆಚ್ಚು ಕಡಮೆ ಸಂಭವನೀಯವೆಂದು ಕಾಣುವ ಬೇರೆ ಬೇರೆ ಊಹೆಗಳನ್ನು ಮುಂದಿಟ್ಟನು; ಅವೆಲ್ಲವೂ ರಹಸ್ಯಮಯ ಶಬ್ದಜಾಲದಲ್ಲಿ ಸಿಲುಕಿ ದಿಗ್ಭ್ರಮೆ ಹಿಡಿಸುವಂತಿದ್ದವು; ಅವು, ಒಂದೋ, ಆ ವೈದ್ಯಶಾಸ್ತ್ರವೇತ್ತರ ಮನಸ್ಸಿನ ಗೊಂದಲವನ್ನು ನಿರ್ದೇಶಿಸುತ್ತಿದ್ದವು; ಅದಿಲ್ಲವೊ, ಅವರ ಅಭಿಪ್ರಾಯಗಳನ್ನು ಕೇಳುತ್ತಿದ್ದ ಅವಿದ್ಯಾವಂತ ಶ್ರೋತೃಗಳಲ್ಲಿ ಖಂಡಿತ ಆ ಗೊಂದಲವನ್ನುಂಟುಮಾಡುತ್ತಿದ್ದುವು. ಮರಣ ವಿಚಾರಣಾಧಿಕಾರಿ ನೇಮಿಸಿದ್ದ ಪಂಚಾಯತರ ಸಭೆ ಶವದ ಸಮ್ಮುಖದಲ್ಲಿ ಕುಳಿತು, ವಿವೇಕಸ್ಥರ ಹಾಗೆ, “ಅನಿರೀಕ್ಷಿತ ಮರಣ!” ಎಂಬ ಖಂಡಿಸಲಾಗದಂತಹ ತೀರ್ಪನ್ನು ಕೊಟ್ಟಿತು!

ಅಲ್ಲದೆ, ಆ ಹಕ್ಕು ಬಾಧ್ಯತೆ ನ್ಯಾಯಸಮ್ಮತವಾಗಿದ್ದಿತೆಂಬ ಅಂಶ ಸರದಾರನು ಬದುಕಿದ್ದ ಕಾಲದಲ್ಲಿ ಎದ್ದು ಕಾಣುತ್ತಿದ್ದ ಹಾಗೆ ಆತ ಸತ್ತಮೇಲೆ ಅಷ್ಟು ಸ್ಪಷ್ಟಗೋಚರವಾಗಿರಲಿಲ್ಲ. ಸಾಕ್ಷ್ಯಸರಣಿಯಲ್ಲಿ ಯಾವುದೋ ಒಂದು ಕೊಂಡಿ ಕಳಚಿಹೋಗಿತ್ತು; ಅದು ಎಲ್ಲಿಯೂ ಕಾಣಸಿಕ್ಕಲಿಲ್ಲ.

ಪಿನ್ಚನ್ ವಂಶಸ್ಥನೇನೋ ಆಗ ಮಾತ್ರವಲ್ಲದೆ ಆಮೇಲೂ–ಸುಮಾರು ನೂರು ವರ್ಷಗಳ ವರೆಗೂ–ಬೇರೆ ಬೇರೆ ಕಾಲಗಳಲ್ಲಿ ತಾವು ಯಾವುದನ್ನು ತಮ್ಮ ಹಕ್ಕು ಎಂದು ಪಟ್ಟುಬಿಡದೆ ನಂಬಿದ್ದರೋ ಅದನ್ನು ದೊರಕಿಸಿಕೊಳ್ಳಲು ಪ್ರಯತ್ನಗಳನ್ನು ಮಾಡಿದ್ದರು ಎಂಬುದೇನೋ ನಿಜ. ಆದರೆ, ಕಾಲಕ್ರಮದಲ್ಲಿ, ಆ ಪ್ರದೇಶದ ಒಂದು ಭಾಗವನ್ನು ಹೆಚ್ಚು ಇಷ್ಟರಾದ ವ್ಯಕ್ತಿಗಳಿಗೆ ಪುನರ್ದಾನಮಾಡಲಾಯಿತು; ಉಳಿದ ಭಾಗದ ಕಾಡು ಮೇಡನ್ನು ಕಡಿದು, ಅಲ್ಲಿ ನೆಲಸಲು ಬಂದವರು ವಾಸಿಸುತ್ತಿದ್ದರು. ಇವರೇನಾದರೂ ಪಿನ್ಚನ್ ವಂಶಸ್ಥರ ಹಕ್ಕುದಾರಿಕೆಯ ವಿಷಯವನ್ನು ಕಿವಿಯಿಂದ ಕೇಳಿದ್ದೇ ಆದರೆ, ಬಹುಕಾಲದ ಹಿಂದೆ ಮೃತರಾಗಿ ವಿಸ್ಮೃತರಾಗಿದ್ದ ಗೌರ್ನರುಗಳ ಹಾಗೂ ಶಾಸಕರ ಮಾಸಿ ಹೋಗಿದ್ದ ರುಜುಗಳನ್ನುಳ್ಳ ಬೂಷ್ಟು ಹಿಡಿದ ಚರ್ಮ ಪತ್ರಗಳ ಬಲದ ಮೇಲೆ ಯಾವನೇ ಆಗಲಿ, ತಾವೂ ತಮ್ಮ ತಂದೆಗಳೂ ಪಟ್ಟು ಹಿಡಿದು ದುಡಿದು ನಿಸರ್ಗದ ಋಕ್ಷ ಹಿಡಿತದಿಂದ ಬಿಡಿಸಿಕೊಂಡಿದ್ದ ಜಮೀನುಗಳ ಮೇಲೆ ತನ್ನ ಹಕ್ಕನ್ನು ಸ್ಥಾಪಿಸುವ ಆಲೋಚನೆಯ ವಿಚಾರದಲ್ಲಿ ನಕ್ಕುಬಿಡುತ್ತಿದ್ದರು. ಆ ಕಾರಣದಿಂದ, ಈ ಅಸ್ಪಷ್ಟವಾದ ಹಕ್ಕುದಾರಿಕೆಯ ಫಲಿತಾಂಶವೇನಾಯಿತೆಂದರೆ, ವಂಶಪಾರಂಪರ್ಯವಾಗಿ ಎಲ್ಲರೂ ತಮ್ಮ ವಂಶದ ಅಗ್ಗಳಿಕೆಯ ಹುಚ್ಚು ಭ್ರಾಂತಿಯಿಟ್ಟುಕೊಂಡು ನಲಿಯುವುದರಲ್ಲಿ ಪರ್ಯವಸಾನವಾಯಿತು; ಅದಕ್ಕಿಂತ ಘನವಾದದ್ದೇನೂ ಸಾಧಿತವಾಗಲಿಲ್ಲ. ಈ ಆತ್ಮಪ್ರತ್ಯಯ ಪಿನ್ಚನ್ ವಂಶಸ್ಥರ ಹುಟ್ಟುಗುಣವಾಗಿತ್ತು. ಇದರಿಂದ ಏನಾಯಿತೆಂದರೆ, ಈ ವಂಶದ ದಟ್ಟದರಿದ್ರನೂ ಕೂಡ ತಾನು ಶ್ರೀಮಂತಿಕೆಯ ಕವಚವನ್ನು ತೊಟ್ಟು ಹುಟ್ಟಿರುವೆನೆಂದೂ ಮುಂದೆ ಎಂದಾದರೂ ಆ ಶ್ರೀಮಂತಿಕೆಗೆ ತಕ್ಕ ಭಾರಿ ಐಶ್ವರ್ಯವನ್ನು ಪಡೆಯುವೆನೆಂದೂ ಭಾವಿಸಿಕೊಳ್ಳುವಂತಾಯಿತು. ಈ ವಂಶದ ಉತ್ತಮರಾದವರ ವಿಚಾರದಲ್ಲಿ, ಈ ವೈಲಕ್ಷಣ್ಯವು ನಿಜವಾಗಿ ಅಮೂಲ್ಯವಾದ ಯಾವ ಗುಣವನ್ನೂ ಕಸಿದುಕೊಳ್ಳದೆ ಅವರ ಮಾನವ ಜೀವನದ ಕಾಠಿನ್ಯದ ಮೇಲೆ ಒಂದು ಆದರ್ಶಪ್ರಾಯವಾದ ಸೊಬಗನ್ನು ಬೀರಿತ್ತು. ಕೀಳಾದವರ ವಿಷಯದಲ್ಲಿ ಅದು ಹೇಗೆ ಪರಿಣಮಿಸಿತೆಂದರೆ, ಅವರ ಪರಾವಲಂಬನ ಸ್ವಭಾವವನ್ನೂ ಜಡತೆಯನ್ನೂ ಹೆಚ್ಚಿಸಿ,

ಕಾಲಕ್ರಮದಲ್ಲಿ ಅವರ ಭಾಗ್ಯವು ಹೆಚ್ಚುತ್ತ ಹೆಚ್ಚುತ್ತ ಫಲಕಾರಿಯಾಗುವಂತಿದ್ದಿತೇ ಹೊರತು ಕರಗಿ ಕರಗಿ ನಾಶಹೊಂದುವಂತಿರಲಿಲ್ಲವೆಂದು ಧಾರಾಳವಾಗಿ ನಿರೀಕ್ಷಿಸಬಹುದಾಗಿತ್ತು. ಏಕೆಂದರೆ, ಉತ್ತರಾಧಿಕಾರಿಯಾದ ಆತನ ಮಗನು ಅಮೂಲ್ಯವಾದ ಆಸ್ತಿಯ ಅನುಭೋಗವನ್ನು ಕೂಡಲೆ ಪಡೆದನು; ಅಷ್ಟು ಮಾತ್ರವಲ್ಲದೆ, ಇನ್ನೂ ಸುತ್ತಾಡಿ ಪರಿಶೀಲನೆಮಾಡಿ ಅಳತೆಮಾಡಿಲ್ಲದ, ಪೂರ್ವಪ್ರದೇಶದಲ್ಲಿನ ವಿಸ್ತಾರವಾದ ಜಮೀನಿನ ಮೇಲೆ ಅವನಿಗೆ 'ಇಂಡಿಯನ್' ಒಬ್ಬನು (ಅಮೆರಿಕದ ಮೂಲ ನಿವಾಸಿ) ಮಾಡಿಕೊಟ್ಟ ಪತ್ರದ ಮೂಲಕ ಹಕ್ಕು ದೊರೆತಿದ್ದು, ಸಾರ್ವತ್ರಿಕ ನ್ಯಾಯಾಲಯವು ಆ ಬಳಿಕ ನೀಡಿದ ಸನ್ನದಿನಿಂದ ಅದು ಸ್ಥಿರಪಟ್ಟಿತ್ತು. ಮೇಯ್ನ್ ಸಂಸಥಾನದಲ್ಲಿ (Maine), ಈಗ ವಾಲ್ಡೋ (Waldo) ಜಿಲ್ಲೆ ಎಂದು ಕರೆಯುವ ಪ್ರದೇಶದ ಹೆಚ್ಚಿನ ಭಾಗವನ್ನೆಲ್ಲ ಈ ಆಸ್ತಿಗಳು (ಈಗ ಖಂಡಿತವಾಗಿ ಅವುಗಳನ್ನು ಹಾಗೆಂದು ಪರಿಗಣಿಸಬಹುದಾಗಿತ್ತು) ಒಳಗೊಂಡಿದ್ದುವು; ಇವು ಯೂರೋಪು ಖಂಡದಲ್ಲಿದ್ದ ಅನೇಕಾನೇಕ ಡ್ಯೂಕ್‌ಪ್ರಾಂತ (ಶ್ರೀಮಂತ ಪ್ರಭುಗಳ ಜಹಗೀರು)ಗಳಿಗಿಂತ, ಅಥವಾ ಆಳರಸನೊಬ್ಬನ ದೇಶಕ್ಕಿಂತ ಹೆಚ್ಚು ವಿಸ್ತಾರವಾಗಿದ್ದುವು. ಈ ವನ್ಯರಾಜ್ಯವನ್ನು ಇನ್ನೂ ಮುಸುಕಿದ್ದ, ದಾರಿಯೆ ಇಲ್ಲದ ಕಾಡು ಇಂದಲ್ಲ: ಸಹಸ್ರಾರು ವರ್ಷಗಳ ಮೇಲಾದರೂ ಚಿನ್ನದ ಬೆಳೆಕೊಡುವ ಮಾನವ ಸಂಸ್ಕೃತಿ ನೆಲೆಯೂರಲು ಎಡೆಮಾಡಿಕೊಡಬೇಕಾದದ್ದು ಅನಿವಾರ್ಯ; ಅಂದು ಪಿನ್ಚನ್ ವಂಶಸ್ಥರಿಗೆ ಅದು ಅಗಣಿತ ಐಶ್ವರ್ಯದ ಗಣಿಯಾಗಿ ಪರಿಣಮಿಸುವುದು. ಸರದಾರನು ಇನ್ನು ಕೆಲವು ವಾರಗಳ ಕಾಲ ಮಾತ್ರ ಬದುಕಿದ್ದರೂ ಸಾಕಾಗಿತ್ತು; ಆತನ ಅಪಾರ ರಾಜಕೀಯ ಪ್ರಭಾವ, ಸ್ವದೇಶದಲ್ಲೂ ಪರದೇಶದಲ್ಲೂ ಆತನು ಹೊಂದಿದ್ದ ವ್ಯಕ್ತಿಸಂಬಂಧಗಳು– ಇವೆಲ್ಲ ಆ ಹಕ್ಕು ಕೈಗೂಡಲು ಏನೇನು ಆವಶ್ಯಕವಾಗಿದ್ದಿತೋ ಅದನ್ನೆಲ್ಲ ನೆರವೇರಿಸಿಕೊಡುತ್ತಿದ್ದುವು. ಆದರೆ, ಹಿಗಿನ್ ಸನ್ ಮಹಾಶಯನ ಸ್ತೋತ್ರಪಾಠದ ವೈಖರಿ ಒತ್ತಟ್ಟಿಗಿರಲಿ, ದೂರದೃಷ್ಟಿಯುಳ್ಳವನೂ ಚತುರನೂ ಆದ ಸರದಾರ ಪಿನ್ಚನ್ ಇದೊಂದು ವಿಷಯದಲ್ಲಿ ಮಾತ್ರ ಸಡಿಲಬಿಟ್ಟಂತೆ ಕಾಣುತ್ತದೆ. ಮುಂದೆ ದೊರೆಯಬಹುದಾಗಿದ್ದ ಭೂಮಿಯ ವಿಷಯದ ಮಟ್ಟಿಗೆ ಹೇಳುವುದಾದರೆ, ಆತನು ಬಹುಮುಂಚಿತವಾಗಿ ಸತ್ತುಹೋದನೆಂದು ಹೇಳಬೇಕಾಗುತ್ತದೆ. ಆತನ ಮಗನಿಗೆ ತಂದೆಯ ಉನ್ನತ ಸ್ಥಾನಮಾನ ಇಲ್ಲದಿದ್ದುದು ಮಾತ್ರವಲ್ಲದೆ, ಅದನ್ನು ಸಾಧಿಸಲು ಅಗತ್ಯವಾದ ಬುದ್ಧಿಶಕ್ತಿಯಾಗಲಿ ವ್ಯಕ್ತಿತ್ವಮಹಿಮೆಯಾಗಲಿ ಇರಲಿಲ್ಲ; ಆದ್ದರಿಂದ ಕೇವಲ ರಾಜಕೀಯ ಪ್ರಭಾವದಿಂದ ಅವನು ಏನನ್ನೂ ಸಾಧಿಸಲಾಗಲಿಲ್ಲ;

ಅದನ್ನು ಹೊಂದಿರಲು ತಮಗೆ ಯಾವ ನೈತಿಕ ಹಕ್ಕು ಇದೆ ಎಂಬ ಬಗೆಗೆ ಸಂದೇಹಗಳಿಂದ ತಳಮಳಗೊಳ್ಳುತ್ತಿದ್ದರು ಎಂಬ ನಂಬಿಕೆ. ಕಾನೂನು ಪ್ರಕಾರ ಅವರ ಸ್ವಾಮ್ಯಾಧಿಕಾರವನ್ನು ಪ್ರಶ್ನಿಸುವಂತಿರಲಿಲ್ಲ; ಆದರೆ ಮುದುಕ ಮ್ಯಾತ್ಯೂ ಮಾಲ್ ತನ್ನ ಸ್ವಂತ ಕಾಲದಿಂದ ಬಹು ಈಚಿನ ಕಾಲಕ್ಕೆ ಉದ್ದಕ್ಕೂ ಭಾರವಾದ ಹೆಜ್ಜೆಯಿಡುತ್ತ ನಡೆದುಬಂದು, ಒಬ್ಬ ಪಿನ್ಚನ್ನನ ಅಂತಃಕರಣವನ್ನು ತುಳಿಯುತ್ತಿದ್ದನೇನೋ ಎಂಬ ಭೀತಿಯಿತ್ತು. ಹಾಗಿದ್ದ ಪಕ್ಷದಲ್ಲಿ, ಆಸ್ತಿಯ ಪ್ರತಿ ಉತ್ತರಾಧಿಕಾರಿಯೂ– ನಡೆದಿದ್ದ ಅಪರಾಧದ ಅರಿವಿದ್ದೂ ಅದನ್ನ ನೇರ್ಪಡಿಸದೆ ಇದ್ದದ್ದರಿಂದ– ತನ್ನ ಪೂರ್ವಿಕನು ಎಸಗಿದ ಮಹಾ ಪಾಪ ಕೃತ್ಯವನ್ನು ಮತ್ತೆ ಹೊಸದಾಗಿ ತಾನೂ ಎಸಗಿದಂತಾಗಲಿಲ್ಲವೆ, ಆ ಕೃತ್ಯಸಂಬಂಧವಾದ ಮೊದಲಿನ ಎಲ್ಲ ಹೊಣೆಗಾರಿಕೆಯನ್ನೂ ಮರಳಿ ಹೊತ್ತಂತಾಗಲಿಲ್ಲವೇ? ಎಂಬ ಭಯಾನಕ ಪ್ರಶ್ನೆಯನ್ನು ಪರಿಹರಿಸಬೇಕಾದದ್ದು ನಮ್ಮ ಪಾಲಿಗೆ ಉಳಿದಿದೆ. ಸಂದರ್ಭ ಸನ್ನಿವೇಶ ಹೀಗಿದೆಯೆಂದು ಇಟ್ಟುಕೊಂಡರೆ, ಪಿನ್ಚನ್ ವಂಶದವರು ಮಹಾಭಾಗ್ಯದ ಹಕ್ಕುದಾರರಾಗುವ ಬದಲು ಮಹಾ ದೌರ್ಭಾಗ್ಯದ ಬಳುವಳಿಯನ್ನು ಪಡೆದರು ಎಂದು ಹೇಳುವುದು ಹೆಚ್ಚು ಸತ್ಯವಾದ ಉಕ್ತಿ ಕ್ರಮವಾಗುವುದಲ್ಲವೆ?

ಏಳು ಇಪ್ಪಾರಿನ ಮನೆಯೊಂದಿಗೆ ಅವಿಚ್ಛಿನ್ನವಾದ ಸಂಬಂಧವನ್ನು ಹೊಂದಿದ್ದ ದೃಷ್ಟಿಯಿಂದ ಪಿನ್ಚನ್ ಮನೆತನದ ಇತಿಹಾಸವನ್ನು ಪ್ರಾರಂಭದಿಂದ ನಿರೂಪಿಸಿಕೊಂಡು ಬರುವುದು ನಮ್ಮ ಉದ್ದೇಶವಲ್ಲ; ಅಂತೆಯೆ, ಆ ಭವ್ಯ ಭವನವು ಕಾಲ ಕಳೆದಂತೆ ಹೇಗೆ ಕಂದು ಬಣ್ಣಕ್ಕೆ ತಿರುಗಿ ಜೀರ್ಣವಾಗುತ್ತ ಬಂದಿತು ಎಂಬುದನ್ನು ಮಾಯಾಚಿತ್ರದಲ್ಲಿ ಹೇಗೋ ಹಾಗೆ ತೋರಿಸುವುದು ಕೂಡ ನಮ್ಮ ಉದ್ದೇಶವಲ್ಲ. ಇನ್ನು ಅದರ ಒಳ ಬದುಕಿನ ವಿಷಯವಾಗಿ ಹೇಳುವುದಾದರೆ, ಮನೆಯ ಕೋಣೆಗಳ ಪೈಕಿ ಒಂದರಲ್ಲಿ ಮಸುಕುಮಸುಕಾದ ಒಂದು ದೊಡ್ಡ ನಿಲುಗನ್ನಡಿ ನೇತುಹಾಕಿತ್ತು; ಅದರಲ್ಲಿ ಹಿಂದೆ ಆ ವರೆಗೆ ಪ್ರತಿಬಿಂಬಿತವಾಗಿದ್ದ ಎಲ್ಲ ಆಕೃತಿಗಳನ್ನೂ ಅದು ತನ್ನ ಅಂತರಾಳದಲ್ಲಿ ಒಳಕೊಂಡಿತ್ತೆಂದು ಕಥೆಯಿತ್ತು; ಅವುಗಳಲ್ಲಿ ಸ್ವಯಂ ಸರದಾರನ ವೃದ್ಧಾಕೃತಿಯೂ ಇದ್ದಿತ್ತು; ಜೊತೆಗೆ ಅವನ ವಂಶಿಕರು ಹಲವರು–ಅವರಲ್ಲಿ ಕೆಲವರು ಹಳೆಯ ಕಾಲದ ಶೈಶವದ ಉಡುಪಿನಲ್ಲಿದ್ದರು; ಇನ್ನಿತರರು ಅರಳುವ ಸೌಂದರ್ಯದ ಸ್ತ್ರೀಯರು, ಇಲ್ಲವೆ ಯೌವನ ಶಾಲಿಗಳಾದ ಪುರುಷರು, ಇಲ್ಲವೆ ಮುಪ್ಪಿನ ಸುಕ್ಕುದೆರೆಗಳಿಂದ ಖಿನ್ನರಾಗಿದ್ದವರು. ಆ ದರ್ಪಣದ ಒಳಮರ್ಮವೇನಾದರೂ ನಮಗೆ ಗೊತ್ತಿದ್ದ ಪಕ್ಷದಲ್ಲಿ, ನಾವು ಸಂತೋಷದಿಂದ ಅದರ ಮುಂದೆ ಕುಳಿತು ಅದು ಬಹಿರಂಗ

ಆಶಾಪಿಶಾಚಗ್ರಸ್ತರಾದ ಅವರು ತಮ್ಮ ಕನಸು ನನಸಾಗುವುದನ್ನೇ ಕಾಯುತ್ತ ಎಲ್ಲ ಸ್ವಪ್ರಯತ್ನವನ್ನೂ ಬಿಟ್ಟುಬಿಡುವಂತೆ ಪ್ರೇರಿಸಿತು. ಅವರ ಹಕ್ಕುಬಾಧ್ಯತೆಯ ವಿಚಾರ ಎಲ್ಲ ಜನರ ನೆನಪಿನಿಂದ ಜಾರಿಹೋದಮೇಲೂ ವರ್ಷ–ವರ್ಷಾಂತರಗಳವರಗೆ ಪಿನ್ಚನ್ ವಂಶಿಕರು 'ವಾಲ್ಡೊ' ಜಿಲ್ಲೆ ಇನ್ನೂ ಕಡಿಯದ ಕಾಡಾಗಿದ್ದಾಗ ರಚಿಸಿದ್ದ ಪುರಾತನ ಭೂನಕ್ಷೆಯನ್ನು ಪರೀಕ್ಷಿಸಿ ನೋಡುವ ಅಭ್ಯಾಸವಿಟ್ಟುಕೊಂಡಿದ್ದರು. ಹಳೆಗಾಲದ ಮೋಜಣಿದಾರನು ಎಲ್ಲೆಲ್ಲಿ ಕಾಡುಗಳನ್ನೂ ಸರೋವರಗಳನ್ನೂ ನದಿಗಳನ್ನೂ ಗುರುತಿಸಿದ್ದನೋ ಅಲ್ಲೆಲ್ಲ ಅವರು ತೆರಪುಮಾಡಿದ ಸ್ಥಳಗಳನ್ನು ಗುರುತಿಸಿ, ಹಳ್ಳಿಗಳನ್ನೂ ಪಟ್ಟಣಗಳನ್ನೂ ಚುಕ್ಕಿಯಿಟ್ಟು ನಿರ್ದೇಶಿಸಿ, ಕಡೆಗೊಮ್ಮೆ ಆ ಪ್ರಾಂತವು ತಮ್ಮ ರಾಜ್ಯವಾಗಿ ಪರಿಣಮಿಸುವ ಸಂಭವ ಇನ್ನೂ ಇದೆಯೇನೋ ಎಂಬಂತೆ ಅದರ ಬೆಲೆ ಕ್ರಮಕ್ರಮವಾಗಿ ಏರುವುದನ್ನು ಲೆಕ್ಕ ಹಾಕುತ್ತಿದ್ದರು.

ಹೀಗಿದ್ದರೂ ಕೂಡ, ವಂಶದ ಮೂಲ ಪುರುಷನಲ್ಲಿ ಅಷ್ಟೊಂದು ಗಮನಾರ್ಹವಾಗಿ ಎದ್ದು ಕಾಣುತ್ತಿದ್ದ ಆ ತೀಕ್ಷ್ಣ ಬುದ್ಧಿ ಕಾರ್ಯನಿಷ್ಠ ಸಾಮರ್ಥ್ಯ–ಇವುಗಳ ಒಂದು ಅಂಶವನ್ನು ಹೊತ್ತು ಹುಟ್ಟಿದ್ದ ವಂಶಿಕನು ಯಾವನಾದರೂ ಒಬ್ಬನಿದ್ದೇ ಇರುತ್ತಿದ್ದನು. ವಾಸ್ತವವಾಗಿ, ಅವನ ಶೀಲ ಸ್ವಭಾವವನ್ನು ವಂಶದುದ್ದಕ್ಕೂ ಎಷ್ಟು ಸ್ಪಷ್ಟವಾಗಿ ಗುರುತಿಸಬಹುದಾಗಿತ್ತೆಂದರೆ, ಸ್ವಯಂ ಸರದಾರನೇ ಸ್ವಲ್ಪ ಮಾರ್ಪಾಟಿನೊಂದಿಗೆ ಇಳೆಯ ಮೇಲೆ ಆಗಾಗ್ಗೆ ಅವತರಿಸಲು ಸಾಧ್ಯವಾಗುವಂತಹ ಒಂದು ಬಗೆಯ ಅಮರತ್ವವನ್ನು ಪಡೆದಿದ್ದನೇನೋ ಎನ್ನುವಂತಿತ್ತು. ವಂಶದ ಭಾಗ್ಯ ತಗ್ಗಿನ ಮಟ್ಟದಲ್ಲಿದ್ದ ಎರಡು ಮೂರು ಕಾಲಮಾನಗಳಲ್ಲಿ, ಆನುವಂಶಿಕ ಗುಣಗಳನ್ನುಳ್ಳ ಇಂತಹ ಪ್ರತಿನಿಧಿಯೊಬ್ಬನು ಕಾಣಿಸಿಕೊಂಡು, ಸಾಂಪ್ರದಾಯಿಕ ಹರಟೆಕೋರರು ತಮ್ಮತಮ್ಮಲ್ಲಿ– "ಇಕೋ ಇಲ್ಲಿ ಆ ಹಳೆಯ ಪಿನ್ಚನ್ ಮತ್ತೆ ಹುಟ್ಟಿಬಂದಿದ್ದಾನೆ! ಏಳು ಇಪ್ಪರುಗಳಿಗೆ ಮತ್ತೆ ಹೊಸ ಮರದ ಹೆಂಚು ಹೊದಿಸುವರು!" ಎಂದು ಪಿಸುಗುಟ್ಟಿಕೊಳ್ಳುವಂತೆ ಮಾಡಿದ್ದನು. ತಂದೆಯಿಂದ ಮಗನವರೆಗೆ ಎಲ್ಲರೂ ತಮ್ಮ ಮನೆ ಎಂಬ ಅಪೂರ್ವ ವಾಂಛಲ್ಯವನ್ನು ತಳೆದು ವಂಶಪಾರಂಪರ್ಯವಾಗಿ ಬಂದ ಆ ಮನೆಗೆ ಅಂಟಿಕೊಂಡಿದ್ದರು. ಅದು ಹೇಗಿದ್ದರೂ, ನಾನಾ ಕಾರಣಗಳಿಗಾಗಿ ಹಾಗೂ ಅನೇಕ ವೇಳೆ ತುಂಬ ಅಸ್ಪಷ್ಟ ಆಧಾರಗಳಿರುವ ಕಾರಣದಿಂದ ಬರೆದು ತಿಳಿಸಲು ಸಾಧ್ಯವಿಲ್ಲದಂತಹ ಭಾವನೆಗಳ ಪರಿಣಾಮವಾಗಿ ಈ ಲೇಖಕನು ಒಂದು ನಂಬಿಕೆಯನ್ನು ನೆಮ್ಮಿಕೊಂಡಿದ್ದಾನೆ; ಅದೇನೆಂದರೆ, ಈ ಆಸ್ತಿಯ ಮಾಲಿಕರ ಪರಂಪರೆಯಲ್ಲಿ ಬಹುಮಂದಿಯಲ್ಲದಿದ್ದರೆ ಹಲವರಾದರೂ

ಕಾಣುತ್ತಿದ್ದುವು; ಅಲ್ಲದೆ, ತಮ್ಮ ಕರಾಳಚ್ಛಾಯೆಯನ್ನು ಹಗಲಿನ ಗಳಿಗೆಗಳಿಗೆಯ ಸೂರ್ಯಪ್ರಕಾಶದೊಂದಿಗೆ ಹೇಗೆ ಬೆರೆಸುತ್ತಿದ್ದುವೆಂದರೆ, ಯಾವ ಸದ್ ಭಾವನೆಗಳಾಗಲಿ ಸದುದ್ದೇಶಗಳಾಗಲಿ ಅಲ್ಲಿ ಎಂದಿಗೂ ಮೊಳೆತು ಹೂವರಳಲಾರದಾಗಿದ್ದುವು. "ಎಂದೋ ನಿಧನನಾದ ವಂಶದ ಮೂಲಪುರುಷನೊಬ್ಬನ ಪ್ರೇತವು– ಬಹುಶಃ ಆತನು ಅನುಭವಿಸುವ ಶಿಕ್ಷೆಯ ಒಂದು ಅಂಶವಾಗಿ– ಆತನ ವಂಶದ 'ದುರ್ದೈವ'ವಾಗಿ ಪರಿಣಮಿಸುವುದು" ಎಂದು ಒತ್ತಿ ಹೇಳುವುದರ ಮೂಲಕ ಆಲಂಕಾರಿಕ ಭಾಷೆಯಲ್ಲಿ ತಿಳಿಸಿದರೆ, ವಿಚಾರಪರರಿಗೆ ಅದರಲ್ಲಿ ಮೂಢನಂಬಿಕೆಯ ಸುಳಿವು ಏನೂ ಕಂಡುಬರದು.

ಒಂದು ಮಾತಿನಲ್ಲಿ, ಪಿನ್ಚನ್ ಮನೆತನದವರು ಸುಮಾರು ಎರಡು ಶತಕಗಳ ಕಾಲ ಹೊರಗೆ ಕಾಣುವಂತೆ ಅಂತಹ ಹೆಚ್ಚಿನ ಪರಿವರ್ತನೆಗಳೇನೂ ಇಲ್ಲದೆ ಬಾಳಿದರು; ಆದ ಪರಿವರ್ತನೆಗಳಾದರೂ ಅದೇ ಕಾಲಾವಧಿಯಲ್ಲಿ ಹೊಸ ಇಂಗ್ಲೆಂಡಿನ ಬಹುಸಂಖ್ಯೆಯ ಇತರ ಕುಟುಂಬಗಳು ಹೊಂದಿದ್ದುದಕ್ಕಿಂತ ಬಹುಶಃ ಕಡಮೆಯೆಂದೇ ಹೇಳಬೇಕು. ತಮ್ಮವೇ ಆದ ಬಹು ವಿಶಿಷ್ಟ ಲಕ್ಷಣಗಳನ್ನು ಹೊಂದಿದ್ದ ಅವರು, ತಾವು ಯಾರ ನಡುವೆ ವಾಸಿಸುತ್ತಿದ್ದರೋ ಆ ಸಣ್ಣ ಜನಸಮುದಾಯದ ಸಾಮಾನ್ಯ ಲಕ್ಷಣಗಳನ್ನೂ :ಪಡೆದಿದ್ದರು; ಅವರಿದ್ದ ಆ ಪಟ್ಟಣವು ಮಿತವ್ಯಯಿಗಳೂ ವಿವೇಚನಾಪರರೂ ಸುವ್ಯವಸ್ಥೆಯುಳ್ಳವರೂ ಸ್ವಸ್ಥಳಪ್ರೇಮಿಗಳೂ ಆದ ನಿವಾಸಿಗಳಿಗೆ ಮಾತ್ರವಲ್ಲದೆ ಸ್ವಲ್ಪಮಟ್ಟಿಗೆ ಮಿತವ್ಯಾಪ್ತಿಯ ತನ್ನ ಸಹಾನುಭೂತಿಪರಭಾವನೆಗಳಿಗೂ ಹೆಸರಾಗಿದ್ದಿತು; ಆದರೆ, ಆ ಪಟ್ಟಣದಲ್ಲಿ ಹೆಚ್ಚು ವಿಚಿತ್ರ ವ್ಯಕ್ತಿಗಳೂ ಇದ್ದರು, ಅಲ್ಲದೆ ಬಹುಮಟ್ಟಿಗೆ ಬೇರೆ ಯಾವೆಡೆ ಕಾಣಬರುವುದಕ್ಕಿಂತ ಹೆಚ್ಚು ಅಪೂರ್ವವಾದ ಘಟನೆಗಳೂ ಅಲ್ಲಿ ಸಂಭವಿಸುತ್ತಿದ್ದುವು. ಕ್ರಾಂತಿಯ ಕಾಲದಲ್ಲಿ ಆಗಿನ ಪಿನ್ಚನ್ನನು ರಾಜಪಕ್ಷವನ್ನು ವಹಿಸಿ, ಪರಾಶ್ರಿತನಾದನು; ಆದರೆ, ತನ್ನ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿ, ಮುಟ್ಟುಗೋಲು ಹಾಕಿಕೊಳ್ಳುವುದರಲ್ಲಿದ್ದ ಏಳು ಇಪ್ಪಾರಿನ ಮನೆಯನ್ನು ಸಂರಕ್ಷಿಸಿಕೊಳ್ಳುವ ಹೊತ್ತಿಗೆ ಸರಿಯಾಗಿ ಮತ್ತೆ ಕಾಣಿಸಿಕೊಂಡನು. ಕಳೆದ ಎಪ್ಪತ್ತು ವರ್ಷಗಳಲ್ಲಿ, ಪಿನ್ಚನ್ ವಂಶದ ಇತಿಹಾಸದಲ್ಲಿ ಅತ್ಯಂತ ಪ್ರಖ್ಯಾತವಾದ ಘಟನೆ ಆ ವಂಶಕ್ಕೆ ಹಿಂದೆ ಎಂದೂ ಸಂಭವಿಸದಿದ್ದಂತಹ ಅತ್ಯಂತ ಪ್ರಬಲ ವಿಪತ್ತೂ ಆಗಿದ್ದಿತು; ಅದೇನೆಂದರೆ, ಆ ಮನೆತನದ ಒಬ್ಬ ವ್ಯಕ್ತಿಯ ಹಿಂಸಾಕೃತ್ಯದಿಂದ ಇನ್ನೊಬ್ಬನು ಅನುಭವಿಸಿದ ಘೋರ ಮರಣ–ಹಾಗೆಂದೇ ಅದು ತೀರ್ಮಾನವಾಯಿತು. ಈ ಘಾತಕ ಘಟನೆಗೆ ಸಂಬಂಧಪಟ್ಟ ಕೆಲವು ಸಂದರ್ಭಗಳು

ಪಡಿಸುತ್ತಿದ್ದ ಅಂಶಗಳನ್ನೆಲ್ಲ ನಮ್ಮ ಈ ಹೊತ್ತಗೆ ಹಾಳೆಗಳಿಗೆ ಇಳಿಸಿಬಿಡುತ್ತಿದ್ದೆವು. ಈ ಸಂಬಂಧದಲ್ಲಿ ಒಂದು ಕಥೆಯೂ ಇತ್ತು: ಅದಕ್ಕೆ ಯಾವ ಆಧಾರವಿತ್ತೆಂದು ಊಹಿಸುವುದು ಕಷ್ಟಸಾಧ್ಯ; ಆ ಕಥೆಯ ಪ್ರಕಾರ ಮ್ಯಾತ್ಯೂಮಾಲನ ಸಂತತಿಯವರು ಆ ಕನ್ನಡಿಯ ರಹಸ್ಯದೊಂದಿಗೆ ಅದೇನೋ ಸಂಬಂಧಹೊಂದಿದ್ದರಂತೆ; ಅದೊಂದು ಬಗೆಯ ಮೋಡಿಹಾಕುವ ವಿಧಾನದಿಂದ ಅದರ ಒಳ ಪ್ರದೇಶದಲ್ಲಿ ಸತ್ತ ಪಿನ್ಚನ್ ವಂಶಸ್ಥರೆಲ್ಲರೂ ಜೀವಂತರಾಗಿ ಕಾಣಿಸಿಕೊಳ್ಳುವಂತೆ ಮಾಡಬಲ್ಲವರಾಗಿದ್ದರಂತೆ; ಅವರು ಬದುಕಿದ್ದಾಗ ಪ್ರಪಂಚಕ್ಕೆ ಹೇಗೆ ಕಾಣಿಸಿಕೊಂಡಿದ್ದರೋ ಹಾಗಲ್ಲ, ಅಥವಾ ಅವರು ಹೆಚ್ಚು ಸುಖವಾಗಿದ್ದ ಕಾಲದಲ್ಲಿ ಯಾವ ಉತ್ತಮ ಸ್ಥಿತಿಯಲ್ಲಿದ್ದರೋ ಹಾಗೂ ಅಲ್ಲ; ಆದರೆ, ಯಾವುದೋ ಪಾಪಕೃತ್ಯವನ್ನು ಮತ್ತೆ ಎಸಗುತ್ತಿದ್ದ ಹಾಗೆ, ಇಲ್ಲವೆ ಜೀವನದ ಅತ್ಯಂತ ದಾರುಣವಾದ ದುಃಖದ ಉತ್ಕಟಾವಸ್ಥೆಯಲ್ಲಿ ಇದ್ದ ಹಾಗೆ. ವಾಸ್ತವವಾಗಿ, ಜನಸಾಮಾನ್ಯದ ಕಲ್ಪನಾರಾಜ್ಯದಲ್ಲಿ ವೃದ್ಧ ಪ್ಯೂರಿಟನ್ ಪಿನ್ಚನ್ ಮತ್ತು ಮಾಟಗಾರ ಮಾಲ್ ಇವರ ನಡುವಣ ವ್ಯವಹಾರವು ಬಹುಕಾಲದ ವರೆಗೆ ಜೀವಂತವಾಗಿತ್ತು; ಮಾಲ್ ತನ್ನ ಗಲ್ಲುಗಂಬದ ಜಗಲಿಯಿಂದ ಸಾರಿ ಹೇಳಿದ್ದ ಶಾಪವನ್ನು ಜನ ಜ್ಞಾಪಕದಲ್ಲಿಟ್ಟುಕೊಂಡಿದ್ದದು ಮಾತ್ರವಲ್ಲದೆ, ಅದು ಪಿನ್ಚನ್ ಮನೆತನದ ವಂಶಪಾರಂಪರ್ಯವಾದ ಆಸ್ತಿಯ ಒಂದು ಭಾಗವಾಗಿತ್ತೆಂಬ ಭಾವನೆಯನ್ನೂ ಅದರ ಜೊತೆಗೆ ಹೊಂದಿದ್ದಿತು. ಆ ಮನೆತನಕ್ಕೆ ಸೇರಿದ ಯಾವನಾದರೊಬ್ಬನು ತನ್ನ ಗಂಟಲಲ್ಲಿ ಗೊರ– ಗೊರ ಸದ್ದು ಮಾಡಿದರೆ ಸಾಕು, "ಮಾಲನ ರಕ್ತ ಕುಡಿಯುತ್ತಿದ್ದಾನೆ!" ಎಂದು ಪಕ್ಕದಲ್ಲಿದ್ದಾತನೊಬ್ಬನು ಅರ್ಧಹಾಸ್ಯವಾಗಿ ಅರ್ಧ ಮನಃಪೂರ್ವಕವಾಗಿ ಪಿಸುಗುಟ್ಟುವ ಸಂಭವವಿದ್ದಿತು. ಸುಮಾರು ನೂರು ವರ್ಷಗಳ ಹಿಂದೆ ಪಿನ್ಚನ್ ಮನೆತನದ ಅದೇ ಹೆಸರಿನವನೊಬ್ಬನು ಇದ್ದಕ್ಕಿದ್ದ ಹಾಗೆ ಸತ್ತು ಹೋದನು; ಆತ ಸತ್ತ ಸಂದರ್ಭಗಳು ಸರದಾರ ಪಿನ್ಚನ್ನನು ಸತ್ತ ಸಂದರ್ಭಗಳ ಹಾಗೆಯೆ ಇದ್ದುವು; ಈ ವಿಚಾರದಲ್ಲಿ ರೂಢಮೂಲವಾಗಿದ್ದ ಅಭಿಪ್ರಾಯವು ನಿಜವಿರಬಹುದೆಂಬ ನಂಬಿಕೆಗೆ ಆ ಘಟನೆ ಹೆಚ್ಚಿನ ಪುಷ್ಟಿ ಕೊಡುತ್ತದೆಯೆಂದು ಭಾವಿಸಲಾಯಿತು. ಇಷ್ಟು ಮಾತ್ರವಲ್ಲ: ಸರದಾರ ಪಿನ್ಚನ್ನನು ಬಿಟ್ಟು ಹೋಗಿದ್ದ ಉಯಿಲಿನ ಒಂದು ಷರತ್ತಿಗೆ ಅನುಗುಣವಾಗಿ ಅವನ ಚಿತ್ರಪಟವು ಅವನು ಮಡಿದ ಕೋಣೆಯ ಗೋಡೆಗೆ ಬಲವಾಗಿ ಕಚ್ಚಿಕೊಂಡುಬಿಟ್ಟಿತ್ತಂತೆ–ಇದೊಂದು ವಿಕಾರವಾದ ಅಪಶಕುನದ ಸಂಗತಿಯೆಂದು ಎಣಿಸಲಾಯಿತು. ಸ್ವಲ್ಪವೂ ಕುಗ್ಗದ ಕಾಠಿನ್ಯದ ಆ ಮುಖಲಕ್ಷಣಗಳು ಒಂದು ದುಷ್ಟಪ್ರಭಾವದ ಸಂಕೇತದಂತೆ

ಹಿಡಿಯುಬಹುದಾಗಿತ್ತು. ಪ್ರಾಚೀನ ಪ್ರಿಯನಾದ ಆ ವೃದ್ಧವಿಧುರನು ವರ್ತಮಾನಕಾಲದ ವಿದ್ಯಮಾನಗಳಲ್ಲಿ ಒಂದಿನಿತೂ ಆಸಕ್ತಿ ವಹಿಸದೆ ಗತಕಾಲಕ್ಕೇ ಬಲವಾಗಿ ಅಂಟಿಕೊಂಡಿದ್ದು, ಎಲ್ಲರಿಂದ ಪ್ರತ್ಯೇಕವಾಗಿದ್ದನು; ಅನ್ಯಾಯವಾಗಿರುವೆಡೆಯಲ್ಲಿ ನ್ಯಾಯವನ್ನು ಸ್ಥಾಪಿಸುವ ಔಚಿತ್ಯವನ್ನು ಮರೆಯುವ ಮಟ್ಟಿಗೆ ಒಂದೂವರೆ ಶತಮಾನ ಕಾಲವು ಅಷ್ಟೇನೂ ದೀರ್ಘವಾದ ಕಾಲಾವಧಿಯಾಗಿ ಅವನಿಗೆ ಕಂಡುಬರಲಿಲ್ಲ. ಪಿನ್ಚನ್ ಮನೆತನದ ಸಂಬಂಧಿಕರಲ್ಲಿ ಆ ವೃದ್ಧಮಹನೀಯನ ಸಂಕಲ್ಪದ ಬಗೆಗೆ ಉಂಟಾದ ಸಂಶಯವು ಅಸಾಧ್ಯವಾದ ಗೊಂದಲವೆಬ್ಬಿಸಿ ಬಿಟ್ಟಿತು; ಅದಿಲ್ಲದೆ ಹೋಗಿದ್ದಿದ್ದರೆ, ಆತ ಏಳು ಇಪ್ಪಾರಿನ ಮನೆಯನ್ನು ಮ್ಯಾತ್ಯೂಮಾಲನ ವಂಶದ ಪ್ರತಿನಿಧಿಗೆ ಬಿಟ್ಟುಕೊಟ್ಟುಬಿಡುವ ಬಹು ಅಸಾಧಾರಣ ಕಾರ್ಯವನ್ನು ಖಂಡಿತವಾಗಿ ಕೈಗೊಳ್ಳುತ್ತಿದ್ದ–ಎಂದು ಆತನನ್ನು ಬಹು ಚೆನ್ನಾಗಿ ಬಲ್ಲವರು ನಂಬಿದ್ದರು. ಅವರ ಪ್ರಯತ್ನಗಳು ಆತನ ಉದ್ದೇಶವನ್ನು ತಡೆಗಟ್ಟುವುದರಲ್ಲಿ ಪರಿಣಾಮಕಾರಿಯಾದವು; ಆದರೂ, ಯಾವುದನ್ನು ತನ್ನ ಜೀವಿತಕಾಲದಲ್ಲಿ ಮಾಡಲು ತಡೆಯುಂಟಾಯಿತೋ ಅದನ್ನು ಅವನು ತನ್ನ ಅಂತಿಮ ಇಷ್ಟಪತ್ರದ ಮೂಲಕ ತನ್ನ ಮರಣಾನಂತರ ನೆರವೇರಿಸಿಕೊಳ್ಳುವನೆಂಬ ಭೀತಿಯಿದ್ದಿತು. ಆದರೆ, ಪ್ರಚೋದನೆ ಅಥವಾ ಪ್ರೇರಣೆ ಏನೇ ಇರಲಿ, ಜನ ತಮ್ಮ ಪಿತ್ರಾರ್ಜಿತ ಸ್ವತ್ತನ್ನು ತಮ್ಮ ರಕ್ತಸಂಬಂಧಿಗಳನ್ನು ಬಿಟ್ಟು ಅನ್ಯರಿಗೆ ಕೊಟ್ಟುಬಿಡುವಂತಹ ಸಂದರ್ಭ ಅತಿವಿರಳ. ಅವರು ಇತರ ವ್ಯಕ್ತಿಗಳನ್ನು ತಮ್ಮ ಬಂಧುಗಳಿಗಿಂತ ಹೆಚ್ಚಾಗಿ ಪ್ರೀತಿಸಿಬಹುದು; ಮಾತ್ರವಲ್ಲ, ಬಂಧುಗಳ ವಿಷಯದಲ್ಲಿ ತಾತ್ಸಾರವನ್ನು, ಅಥವಾ ಪರಮದ್ವೇಷವನ್ನು ಕೂಡ ತಳೆಯಬಹುದು; ಆದರೂ ಕೂಡ, ಮರಣಸಮ್ಮುಖದಲ್ಲಿ, ಪ್ರಬಲವಾದ ಸಮೀಪಬಾಂಧವ್ಯ ಭಾವನೆ ಪುನರುಜ್ಜೀವನಗೊಂಡು, ಉಯಿಲು ಬರೆಯುವವನು ತನ್ನ ಆಸ್ತಿಯನ್ನು ಸಂಪ್ರದಾಯಸಮ್ಮತ ರೀತಿಯಲ್ಲಿ ವಂಶಸ್ಥರಿಗೇ ಬಿಟ್ಟು ಹೋಗುವಂತೆ ಪ್ರೇರಿಸುತ್ತದೆ; ಈ ಸಂಪ್ರದಾಯ ಎಷ್ಟು ಅನಾದಿಕಾಲದ್ದೆಂದರೆ, ಅದು ನೈಸರ್ಗಿಕ ಎಂಬಂತೆ ಕಾಣುತ್ತದೆ. ಪಿನ್ಚನ್ ಮನೆತನದವರಲ್ಲೆಲ್ಲ ಈ ಭಾವನೆ ರೋಗದಷ್ಟು ಪ್ರಬಲವಾಗಿತ್ತು. ಆ ವೃದ್ಧ ಬ್ರಹ್ಮಚಾರಿಯ ಧರ್ಮಸೂಕ್ಷ್ಮಗಳನ್ನು ಇಕ್ಕಿ ಮೆಟ್ಟುವಷ್ಟು ವಿಪರೀತ ಶಕ್ತಿಯುತವಾಗಿತ್ತು ಅದು; ಆದಕಾರಣ, ಆತನ ಮರಣಾನಂತರ ಆತನ ಇತರ ಸಂಪತ್ತುಗಳೊಂದಿಗೆ ಮಹಲು ಮನೆಯೂ ಕಾನೂನು ಮೇರೆಗೆ ಆತನ ತರುವಾಯದ ಉತ್ತರಾಧಿಕಾರಿಯ ಸ್ವಾಧೀನಕ್ಕೆ ಹೋಯಿತು.

ಇವನು ಸೋದರರನ ಮಗ; ತನ್ನ ದೊಡ್ಡಪ್ಪನ ಕೊಲೆಯ ಅಪರಾಧಕ್ಕೆ

ಕೃತ್ಯವನ್ನು ಸತ್ತ ಪಿನ್ಚನ್ನನ್ನ ಸೋದರ ಮಗನೊಬ್ಬನ ತಲೆಗೆ ಅಪರಿಹಾರ್ಯವಾಗಿ ಕಟ್ಟಿತು. ಆ ಯುವಕನನ್ನು ವಿಚಾರಣೆಗೆ ಗುರಿಪಡಿಸಿ, ಅವನು ಆ ಘೋರ ಕೃತ್ಯವೆಸಗಿದ ಅಪರಾಧಿ ಎಂದು ತೀರ್ಮಾನಿಸಲಾಯಿತು; ಆದರೆ, ಸಂದರ್ಭವಶವಾದ ಸಾಕ್ಷ್ಯದ ಸ್ವರೂಪವೋ, ಜೊತೆಗೆ ಶಿಕ್ಷಾಧಿಕಾರಿಯ ಹೃದಯದಲ್ಲಿ ಸುಳಿದಾಡುತ್ತಿದ್ದ ಯಾವುದೋ ಒಂದು ಸಂದೇಹವೋ, ಅಥವಾ, ಕಡೆಯದಾಗಿ, ಅಪರಾಧಿಯ ಸಂಬಂಧಿಗಳ ಉಚ್ಚ ಗೌರವ ಹಾಗೂ ರಾಜಕೀಯ ಪ್ರಭಾವಗಳೋ (ರಾಜಪ್ರಭುತ್ವದಲ್ಲಿ ಇರಬಹುದಾದುದಕ್ಕಿಂತ ಪ್ರಜಾಪ್ರಭುತ್ವರಾಜ್ಯದಲ್ಲಿ ಇವು ಹೆಚ್ಚಿನ ಮಹತ್ವವುಳ್ಳವು)– ಅಂತೂ, ಇವುಗಳಲ್ಲಿ ಯಾವುದೋ ಒಂದು ಅವನ ಮರಣದಂಡನೆಯನ್ನು ಚಿರ ಕಾರಾಗೃಹವಾಸ ಶಿಕ್ಷೆಗೆ ತಗ್ಗಿಸುವುದರಲ್ಲಿ ಫಲಕಾರಿಯಾಗಿದ್ದಿತು. ನಮ್ಮ ಕಥೆಯ ಕ್ರಿಯೆ ಮೊದಲಾಗುವುದಕ್ಕೆ ಮೂವತ್ತು ವರ್ಷಗಳ ಮುನ್ನ ಈ ದುಃಖಕರ ಸಂಗತಿ ನಡೆಯಿತು. ಆ ತರುವಾಯ, ಬಹುಹಿಂದೆಯೇ ಸಮಾಧಿಯಾದ ಈ ಮನುಷ್ಯನನ್ನು ಒಂದಲ್ಲ ಒಂದುಕಾರಣಕ್ಕಾಗಿ ಅವನ ಜೀವಂತ ಸಮಾಧಿಯಿಂದ ಕರೆತರುವ ಸಂಭವವಿತ್ತೆಂಬ ವದಂತಿಗಳಿದ್ದುವು. (ಇವನ್ನು ನಂಬಿದವರು ವಿರಳ; ಎಲ್ಲೋ ಒಬ್ಬಿಬ್ಬರು ಮಾತ್ರ ಅವುಗಳಲ್ಲಿ ಅಪಾರ ಆಸಕ್ತಿ ವಹಿಸಿದ್ದರು.)

ಈಗ ಬಹುಮಟ್ಟಿಗೆ ಮರೆತುಹೋಗಿರುವ ಈ ಕೊಲೆಗೆ ಬಲಿಯಾದವನ ವಿಷಯವಾಗಿ ಕೆಲವು ಮಾತು ಹೇಳಬೇಕಾದದ್ದು ಅಗತ್ಯ. ಆತನೊಬ್ಬ ವೃದ್ಧ ಬಹ್ಮಚಾರಿ; ಪಿನ್ಚನ್ ವಂಶದ ಪುರಾತನ ಆಸ್ತಿಯಾಗಿ ಬಂದ ಮನೆ ಮತ್ತು ಜಮೀನುಗಳ ಜೊತೆಗೆ ಭಾರಿ ಐಶ್ವರ್ಯವನ್ನು ಹೊಂದಿದ್ದನಾತ. ಅವನದ್ದು ಚಿಂತಾಕುಲವಾದ ಒಂದು ಬಗೆಯ ವಕ್ರಮನಸ್ಸು; ಹಳೆಯ ಕಾಗದ ಪತ್ರಗಳನ್ನು ಶೋಧಿಸುವುದು, ಹಳೆಯ ಪರಂಪರಾಗತ ಕಥೆಗಳನ್ನು ಆಸಕ್ತಿಯಿಂದ ಕೇಳುವುದು, ಅವನ ಅಭ್ಯಾಸ; ಹೀಗಿರುತ್ತ, ಮಾಟಗಾರ ಮ್ಯಾತ್ಯೂ ಮಾಲನನ್ನು ಅನ್ಯಾಯವಾಗಿ ಕೊಂದರು ಎಂದು ಇಟ್ಟುಕೊಳ್ಳಲಾಗದಿದ್ದರೂ ಅವನ ಮನೆಯಿಂದ ಅನ್ಯಾಯವಾಗಿ ಅವನನ್ನು ಉಚ್ಚಾಟನೆಮಾಡಿದ್ದರು ಎಂಬ ತೀರ್ಮಾನಕ್ಕೆ ಬಂದಿದ್ದನೀತ. ಇಂಥ ಪರಿಸ್ಥಿತಿಯಲ್ಲಿ, ಅನ್ಯಾಯರ್ಜಿತವಿತ್ತವನ್ನು ಹೊಂದಿದ್ದ ಆ ವೃದ್ಧ ಬ್ರಹ್ಮಚಾರಿಗೆ ಇಷ್ಟು ತಡವಾದ ಮೇಲಾದರು ಆ ಆಸ್ತಿಯನ್ನು ಮಾಲನ ಸಂತತಿಯವರಿಗೆ ಮತ್ತೆ ವಹಿಸಿಕೊಡುವುದ ತನ್ನ ಕರ್ತವ್ಯವಲ್ಲವೆ ಎಂಬ ಪ್ರಶ್ನೆ ತಲೆದೋರಿತು– ಏಕೆಂದರೆ, ರಕ್ತಪಾತದ ಕಪ್ಪುಕಳಂಕ ಆ ಆಸ್ತಿಯೊಳಕ್ಕೆ ಆಳವಾಗಿ ವ್ಯಾಪಿಸಿದ್ದು, ಧರ್ಮಸೂಕ್ಷ ಪ್ರಜ್ಞೆಯುಳ್ಳ ಯಾರೇ ಆಗಲಿ ಇನ್ನೂ ಆ ರಕ್ತವಾಸನೆಯನ್ನು

ಹಾಗೂ ಆತನ ಸಹೋದರಿ; ಈಕೆ ಅತ್ಯಂತ ಅಜ್ಞಾತ ರೀತಿಯಲ್ಲಿ ಏಳು ಇಪ್ಪಾರಿನ ಮನೆಯಲ್ಲಿ ವಾಸವಾಗಿದ್ದಳು; ವೃದ್ಧವಿಧುರನ ಉಯಿಲಿನ ಪ್ರಕಾರ ಅವಳಿಗೆ ಅದನ್ನು ಜೀವಾವಧಿಯವರೆಗೆ ಅನುಭೋಗಿಸುವ ಹಕ್ಕಿತ್ತು. ಅವಳು ದಟ್ಟದರಿದ್ರಳೆಂದು ಎಲ್ಲರ ಗ್ರಹಿಕೆ; ಐಶ್ವರ್ಯವಂತನಾದ ಸೋದರ ಸಂಬಂಧದ ನ್ಯಾಯಾಧಿಕಾರಿಯು ಅವಳಿಗೆ ಆ ಹಳೆಯ ಮನೆಯಲ್ಲಿಯಾಗಲಿ ಅಥವಾ ತನ್ನ ಸ್ವಂತ ಆಧುನಿಕ ನಿವಾಸದಲ್ಲಿಯೇ ಆಗಲಿ ಇರುವುದಕ್ಕೆ ಅವಶ್ಯವಾದ ಜೀವನಾನುಕೂಲಗಳನ್ನೆಲ್ಲ ಪದೇಪದೇ ಕಲ್ಪಿಸಿಕೊಡಬಂದಿದ್ದರೂ ಕೂಡ ಬಡತನದ ಬಾಳನ್ನೇ ಆಕೆ ಆರಿಸಿಕೊಂಡಿದ್ದಂತೆ ಕಾಣುತ್ತಿತ್ತು. ಪಿನ್ಚನ್ ವಂಶದ ಕಟ್ಟಕಡೆಯ ಹಾಗೂ ಎಲ್ಲರಿಗಿಂತ ಕಿರಿಯ ವ್ಯಕ್ತಿ ಎಂದರೆ ಹದಿನೇಳರ ಹರೆಯದ ಪುಟ್ಟ ಹಳ್ಳಿಯ ಹುಡುಗಿ; ನ್ಯಾಯಾಧಿಕಾರಿಯ ಸೋದರ ಸಂಬಂಧದವರ ಪೈಕಿ ಇನ್ನೊಬ್ಬನ ಮಗಳು ಇವಳು; ಈತ ಕುಲವಾಗಲಿ ಆಸ್ತಿಯಾಗಲಿ ಇಲ್ಲದ ಹೆಣ್ಣುಮಗಳೊಬ್ಬಳನ್ನು ಮದುವೆಯಾಗಿದ್ದು, ಚಿಕ್ಕ ವಯಸ್ಸಿನಲ್ಲಿಯೇ ಬಡತನದ ಸ್ಥಿತಿಯಲ್ಲಿ ಕಾಲವಾಗಿದ್ದನು. ಅವನ ವಿಧವೆ ಈಚೆಗೆ ಬೇರೊಬ್ಬನನ್ನು ಪತಿಯಾಗಿ ವರಿಸಿದ್ದಳು.

ಇನ್ನು ಮ್ಯಾತ್ಯೂಮಾಲನ ಸಂತತಿಯ ವಿಚಾರವಾಗಿ ಹೇಳುವುದಾದರೆ ಈ ಹೊತ್ತಿಗೆ ಅದು ನಾಮಾವಶೇಷವಾಗಿತ್ತೆಂದು ಭಾವಿಸಲಾಗಿತ್ತು. ಮಾಟಗಾರಿಕೆಯ ಭ್ರಾಂತಿಯ ಪ್ರಕರಣ ನಡೆದ ಮೇಲೆ ಕೂಡ ಬಹುಕಾಲದವರೆಗೆ, ಮಾಲ್ ಅಷ್ಟೊಂದು ಅನ್ಯಾಯದ ಮರಣಕ್ಕೆ ಎಲ್ಲಿ ಗುರಿಯಾಗಿದ್ದನೋ ಆ ಪಟ್ಟಣದಲ್ಲಿ ಅವನ ಸಂತತಿಯವರೂ ಇನ್ನೂ ವಾಸಮಾಡುತ್ತಿದ್ದರು. ಹೊರತೋರಿಕೆಗೆ, ಅವರೆಲ್ಲ ಶಾಂತಸ್ವಭಾವದ, ಪ್ರಾಮಾಣಿಕರಾದ, ಸದುದ್ದೇಶದ ಜನರ ಪಂಗಡ; ತಮಗೆ ಆಗಿದ್ದ ಅನ್ಯಾಯಕ್ಕಾಗಿ ಅವರು ವ್ಯಕ್ತಿಗಳ ಮೇಲಾಗಲಿ ಒಟ್ಟು ಜನದ ಮೇಲಾಗಲಿ ಯಾವ ವೈರಬುದ್ಧಿಯನ್ನೂ ಬೆಳಸಿಕೊಂಡಿರಲಿಲ್ಲ; ಅಥವಾ ಒಂದುವೇಳೆ ಅವರು ತಮ್ಮ ಮನೆಯ ಒಲೆಯ ಮುಂದೆ ಕುಳಿತು ಹಿಂದೆ ಆ ಮಾಟಗಾರನು ಅನುಭವಿಸಿದ ದುರದೃಷ್ಟದ ವಿಷಯವಾಗಿಯೂ ತಾವು ಕಳೆದುಕೊಂಡ ಪಿತ್ರಾರ್ಜಿತ ಆಸ್ತಿಯ ವಿಷಯವಾಗಿಯೂ ವೈರಭಾವನೆಯಿಂದ ಕೂಡಿದ ಯಾವುದೇ ನೆನಪಿನ ಸಂಗತಿಯನ್ನು ತಂದೆಯಿಂದ ಮಗನಿಗೆ ಹೇಳಿಕೊಂಡು ಬಂದಿದ್ದರೂ, ಕಾರ್ಯತಃ ಅವರು ವೈರವನ್ನು ಸಾಧಿಸಿರಲಿಲ್ಲ, ಇಲ್ಲವೆ ಅದನ್ನು ಬಹಿರಂಗವಾಗಿ ವ್ಯಕ್ತಪಡಿಸಿಯೂ ಇರಲಿಲ್ಲ. ಏಳು ಇಪ್ಪಾರಿನ ಮನೆಯ ಭಾರವಾದ ಕಟ್ಟಡವು ನ್ಯಾಯವಾಗಿ ತಮ್ಮದಾಗಿದ್ದ ಅಸ್ತಿವಾರದ ಮೇಲೆ ನೆಲಸಿತ್ತು ಎಂಬ ಸಂಗತಿಯನ್ನು ಅವರು ನೆನೆಯುವುದನ್ನು ನಿಲ್ಲಿಸಿಬಿಟ್ಟಿದ್ದರೆ

ಗುರಿಯಾಗಿದ್ದ ಬಡಪಾಯಿ ಯುವಕನ ಸೋದರಿಕೆಯ ಸಂಬಂಧದವನು. ಹಕ್ಕುದಾರಿಕೆಗೆ ಬರುವವರೆಗೂ ಈ ಹೊಸ ಉತ್ತರಾಧಿಕಾರಿ ಬಹು ಮಟ್ಟಿಗೆ ಸ್ವಚ್ಛಂದಚಾರಿಯಾದ ಯುವಕನೆಂಬ ಎಣಿಕೆಯಿತ್ತು; ಆದರೆ ಕೂಡಲೆ ಸುಧಾರಣೆ ಹೊಂದಿ, ಸಮಾಜದಲ್ಲಿ ಒಬ್ಬ ಗೌರವಸ್ಥನಾಗಿ ಪರಿಣಮಿಸಿದನು. ವಾಸ್ತವವಾಗಿ, ಮೂಲಪುರುಷನಾದ ಪ್ಯೂರಿಟನ್ನನ ಕಾಲದಿಂದೀಚೆಗೆ ವಂಶದಲ್ಲಿ ಯಾರೇ ಆಗಲಿ ಹೊಂದಿದ್ದುದಕ್ಕಿಂತ ಹೆಚ್ಚಿನ ಪ್ರಾಪಂಚಿಕ ಉನ್ನತಿಯನ್ನು ಗಳಿಸಿದ್ದನು. ಪೂರ್ವವಯಸ್ಸಿನಲ್ಲಿ ನ್ಯಾಯಶಾಸ್ತ್ರದ ವ್ಯಾಸಂಗದಲ್ಲಿ ನಿರತನಾಗಿ, ಅಧಿಕಾರನಿರ್ವಹಣೆಯಲ್ಲಿ ಒಂದು ಸಹಜವಾದ ಪ್ರವೃತ್ತಿಯನ್ನು ಹೊಂದಿದ್ದು, ಹಲವು ವರ್ಷಗಳ ಹಿಂದೆಯೇ ಅವನು ಯಾವದೋ ಕೆಳನ್ಯಾಯಸ್ಥಾನವೊಂದರಲ್ಲಿ ಒಂದು ನ್ಯಾಯಾಧಿಕಾರದ ಹುದ್ದೆಯನ್ನು ಪಡೆದಿದ್ದನು; ಇದರ ಫಲವಾಗಿ ಅವನಿಗೆ ಆಜೀವ ಪರ್ಯಂತ ಬಹು ಅಪೇಕ್ಷಣೀಯವೂ ಘನವೂ ಆದ 'ಜಡ್ಜ್' (ನ್ಯಾಯಾಧಿಕಾರಿ, ಧರ್ಮಾಧಿಕಾರಿ) ಎಂಬ ಬಿರುದು ದೊರಕಿತ್ತು. ಆಮೇಲೆ, ಆತನು ರಾಜಕೀಯಕ್ಕೂ ಪ್ರವೇಶಿಸಿ, 'ಕಾಂಗ್ರೆಸ್' ಸಭೆಯಲ್ಲಿ ಎರಡು ಬಾರಿ ಸ್ವಲ್ಪ ಕಾಲ ಸೇವೆಸಲ್ಲಿಸಿ, ಸಂಸ್ಥಾನದ ಶಾಸನ ಸಭೆಯ ಎರಡು ಶಾಖೆಗಳಲ್ಲಿಯೂ ತಕ್ಕಮಟ್ಟಿಗೆ ಪ್ರಮುಖ ವ್ಯಕ್ತಿಯೆನಿಸಿದ್ದನು. ಜಡ್ಜಿ ಪಿನ್ಚನ್ ನಿಸ್ಸಂಶಯವಾಗಿಯೂ ತನ್ನ ವಂಶಕ್ಕೇ ಗೌರವಾಸ್ಪದನಾಗಿದ್ದನು. ಆತನು ತಾನು ಹುಟ್ಟಿದ ಊರಿಗೆ ಕೆಲವು ಮೈಲಿಗಳ ದೂರದಲ್ಲಿ ಹಳ್ಳಿಗಾಡಿನ ಮನೆಯೊಂದನ್ನು ಕಟ್ಟಿಕೊಂಡು, ಸಾರ್ವಜನಿಕ ಸೇವೆಯಲ್ಲಿ ಎಷ್ಟು ಹೊತ್ತನ್ನು ಬಿಡುವುಮಾಡಿಕೊಳ್ಳಬಹುದೋ ಅಷ್ಟನ್ನು ಅಲ್ಲಿ ಕಳೆಯುತ್ತಿದ್ದನು. ಆ ಕಾಲದಲ್ಲಿ ಆತನು– ಒಂದು ಚುನಾವಣೆಗೆ ಮುಂಚೆ ಒಂದು ವಾರ್ತಾಪತ್ರಿಕೆ ವರ್ಣಿಸಿದಂತೆ– ಕ್ರೈಸ್ತಧರ್ಮೀಯನೂ ಸತ್‌ಪ್ರಜೆಯೂ ಉದ್ಯಾನ ಕೃಷಿಪ್ರೇಮಿಯೂ ಸಂಭಾವಿತನೂ ಆದ ವ್ಯಕ್ತಿಗೆ ಯೋಗ್ಯವಾದ ಪ್ರತಿಯೊಮದು ವಿಲಾಸ ವೈಭವವನ್ನೂ ಸದ್ಗುಣವನ್ನೂ ಮೆರೆದನು.

ನ್ಯಾಯಾಧಿಕಾರಿಯ ವೈಭವೋನ್ನತಿಯ ಹೊಂಬೆಳಕಿನಲ್ಲಿ ಮೀಯಲು ಪಿನ್ಚನ್ ವಂಶಸ್ಥರ ಪೈಕಿ ಯಾರೂ ಉಳಿದಿರಲಿಲ್ಲ. ನೈಸರ್ಗಿಕ ಸಂಖ್ಯಾಭಿವೃದ್ಧಿಯ ದೃಷ್ಟಿಯಿಂದ ವಂಶವು ಏಳಿಗೆಯನ್ನೆ ಹೊಂದಿರಲಿಲ್ಲ; ಅದು ಬಹುಮಟ್ಟಿಗೆ ಅವಸಾನ ಹೊಂದುವ ಹಾಗೆಯೆ ಕಂಡುಬರುತ್ತಿದ್ದಿತು. ತಿಳಿದಮಟ್ಟಿಗೆ ವಂಶದವರಾಗಿ ಉಳಿದು ಬಂದವರೆಂದರೆ, ಮೊದಲನೆಯದಾಗಿ, ನ್ಯಾಯಾಧಿಕಾರಿ ಹಾಗೂ ಸದ್ಯದಲ್ಲಿ ಯೂರೋಪಿನಲ್ಲಿ ಪ್ರವಾಸ ಮಾಡುತ್ತಿದ್ದ, ಉಳಿದಿದ್ದ ಏಕಮಾತ್ರ ಪುತ್ರ; ಆಮೇಲೆ, ಈಗಾಗಲೇ ತಿಳಿಸಿರುವ ಮೂವತ್ತು ವರ್ಷಗಳ ಕಾರಾಗೃಹವಾಸಿ

ವಿಂಗಡಿಸಿದಂತೆ ಅಲ್ಲ; ಆಡಿ ತೋರಿಸಬಹುದಾದ್ದಕ್ಕಿಂತ ಹೆಚ್ಚಾಗಿ, ಅನುಭವಿಸಿ ತಿಳಿಯಬಹುದಾದ ರೀತಿಯಲ್ಲಿ. ಹಾಗೆ ಪ್ರತ್ಯೇಕಿಸಲು ನೆರವಾಗುತ್ತಿದ್ದ ಗುಣ ಎಂದರೆ, ವಂಶಾನುಗತವಾಗಿ ಬಂದ ಅವರ ಮೌನಗಾಂಭೀರ್ಯದ ಸ್ವಭಾವ. ಮಾಲನ ವಂಶಜರ ಜೊತೆಗಾರರಿಗೆ, ಅಥವಾ ಜೊತೆಗಾರರಾಗಲು ಪ್ರಯತ್ನಿಸಿದವರಿಗೆ, ಮಾಲ್‌ಮನೆತನದವರ ಸುತ್ತಲೂ ಒಂದು ಮಂಡಲವಿದ್ದಂತೆ ಅರಿವಾಗುತ್ತಿತ್ತು; ಅವರು ಹೊರನೋಟಕ್ಕೆ ಮುಚ್ಚು ಮರೆಯಿಲ್ಲದ ಸ್ವಭಾವದವರಾಗಿಯೂ ಸತ್‌ಸಹವಾಸಯೋಗ್ಯರಾಗಿಯೂ ಕಂಡುಬರುತ್ತಿದ್ದರೂ ಕೂಡ, ಆಸುತ್ತಣ ಮಂಡಲದ ಪವಿತ್ರತೆಯ ಅಥವಾ ಮಂತ್ರ ಪ್ರಭಾವದ ವ್ಯಾಪ್ತಿಯೊಳಕ್ಕೆ ಹೆಜ್ಜೆಯಿಡಲು ಯಾವ ಮನುಷ್ಯನಿಗೇ ಆಗಲಿ ಅಸಾಧ್ಯವಾಗಿತ್ತು. ಬಹುಶಃ ವಿವರಿಸಲಾಗದ ಈ ವಿಲಕ್ಷಣತೆಯೇ ಅವರನ್ನು ಮಾನವಸಹಾಯದಿಂದ ಬೇರ್ಪಡಿಸಿ ದೂರವಿಟ್ಟು, ಬದುಕಿನಲ್ಲಿ ಅವರನ್ನು ಯಾವಾಗಲೂ ನಿರ್ಭಾಗ್ಯರನ್ನಾಗಿ ಇಟ್ಟದ್ದಿರಬೇಕು. ಅಂತೂ, ಆ ಪಟ್ಟಣದ ಜನ ತಮ್ಮ ಅಂದಿನ ಹುಚ್ಚುಕೆರಳಿನಿಂದ ಎಚ್ಚತ್ತಮೇಲೆ ಕೂಡ ಮಾಟಗಾರರೆಂದು ಹೆಸರಾಗಿದ್ದ ಅವರನ್ನು ಜುಗುಪ್ಸೆಯ ಭಾವನೆಯಿಂದಲೂ ಬಿಡವಿಲ್ಲದ ಅಂಧಭೀತಿಯಿಂದಲೂ ಕಾಣುತ್ತ ಹೋದರು; ಅವರ ವಿಚಾರದಲ್ಲಿ ಈ ಭಾವನೆಗಳು ಮುಂದುವರಿಯುವಂತೆಮಾಡಿ, ಆ ಭಾವನೆಗಳೇ ಅವರ ಪಾಲಿಗೆ ಉಳಿದುಬಂದ ಏಕಮಾತ್ರ ಪಿತ್ರಾರ್ಜಿತ ಆಸ್ತಿ ಎಂದು ಖಚಿತ ಪಡಿಸಿದ್ದು ಕೂಡ ಆ ವಿಲಕ್ಷಣತೆಯೆ. ಮುದುಕ ಮ್ಯಾತ್ಯೂಮಾಲನ ಮೇಲು ಹೊದಿಕೆ, ಅಲ್ಲ ಅಲ್ಲ, ಅವನ ಚಿಂದಿಚಿಂದಿಯಾದ ಹಚ್ಚಡ, ಅವನ ಮಕ್ಕಳ ಮೇಲೆ ಕವಿದಿದ್ದಿತು. ಅವರಿಗೆ ವಂಶಾನುಗತವಾಗಿ ರಹಸ್ಯವಾದ ಗುಣವಿಶೇಷಗಳು ಬಂದಿದ್ದುವೆಂದು ಒಂದು ನಸುನಂಬಿಕೆ; ಆ ಕುಟುಂಬದವರ ಕಣ್ಣೋಟದಲ್ಲಿ ಏನೋ ಒಂದು ವಿಲಕ್ಷಣಶಕ್ತಿಯಿದ್ದಿತೆಂದೂ ಒಂದು ಹೇಳಿಕೆ. ಕೆಲಸಕ್ಕೆ ಬಾರದ ಗುಣಗೌರವ ವಿಶೇಷಗಳಲ್ಲಿ ಒಂದನ್ನಂತೂ ಅವರ ತಲೆಗೆ ಕಟ್ಟಲಾಗಿತ್ತು– ಅದೇನೆಂದರೆ, ಜನರ ಸ್ವಪ್ನಗಳ ಮೇಲೆ ಅವರು ಒಂದು ಪ್ರಭಾವವನ್ನು ಬೀರಬಲ್ಲವರಾಗಿದ್ದರಂತೆ. ಎಲ್ಲ ಕಥೆಗಳೂ ನಿಜವಾಗಿದ್ದ ಪಕ್ಷದಲ್ಲಿ, ತಮ್ಮ ಹುಟ್ಟೂರಿನ ಬೀದಿಗಳಲ್ಲಿ ಹಗಲುಹೊತ್ತಿನಲ್ಲಿ ಬಿಂಕಬಡಿವಾರಗಳನ್ನು ಮೆರೆಯುತ್ತ ನಡೆಯುತ್ತಿದ್ದ ಪೆನ್‌ಚನ್ ಕುಲದವರು, ನಿದ್ರಾದೇವಿಯ ಬುಡ ಮೇಲಾದ ಜನತಾರಾಜ್ಯವನ್ನು ಪ್ರವೇಶಿಸಿದ ಕೂಡಲೆ, ಈ ಕೀಳುಕುಲದ ಮಾಲ್‌ಮನೆತನದ ಮಂದಿಯು ಜೀತದ ಆಳುಗಳಿಗಿಂತಲೇನೂ ಮೇಲಾಗಿರಲಿಲ್ಲವಂತೆ. ಆಧುನಿಕ ಮನಶ್ಶಾಸ್ತ್ರವು ಪ್ರೇತಪ್ರಪಂಚವ್ಯವಹಾರಗಳೆಂದು ಹೇಳಲಾದ ಈ ವಿದ್ಯಮಾನಗಳನ್ನು ಕೇವಲ

ಅದು ವಿಚಿತ್ರವಾಗಿರುತ್ತಿರಲಿಲ್ಲ. ಭದ್ರವಾಗಿ ನೆಲೆನಿಂತ ಪದವಿಯ ಹಾಗು ಅಪಾರ ಆಸ್ತಿಯ ಹೊರನೋಟದಲ್ಲಿಯೇ ಭಾರಿಯಾದ ಸ್ಥಿರವಾದ ಭವ್ಯವಾದ ಅದೊಂದು ಬಗೆಯ ಗುಣವಿದ್ದು, ಅವುಗಳ ಇರುವಿಕೆಯೇ ಅವು ಹಾಗೆ ಇದ್ದಿರಲು ಒಂದು ಹಕ್ಕನ್ನು ಕೊಡುವಂತೆ ಕಾಣುತ್ತದೆ; ಹಕ್ಕಲ್ಲದಿದ್ದರೂ, ಕಡೆಯಪಕ್ಷ ಹಕ್ಕಿನಂತೆ ಕಾಣುವ ಉತ್ಕೃಷ್ಟವಾದ ಹಕ್ಕಿನ ಹೊರವೇಷವನ್ನು ಕೊಟ್ಟಿರುತ್ತದೆ; ದರಿದ್ರರೂ ದೀನರೂ ಆದಂಥವರಲ್ಲಿ ಯಾರಿಗೂ ತಮ್ಮ ಮನಸ್ಸಿನಲ್ಲಿ ಗೋಪ್ಯವಾಗಿ ಕೂಡ ಅದನ್ನು ಪ್ರಶ್ನಿಸುವಷ್ಟು ನೈತಿಕಬಲವಿರುವುದಿಲ್ಲ. ಹಳೆಯಕಾಲದ ಅನೇಕ ಪೂರ್ವಗ್ರಹದೂಷಿತ ಭಾವನೆಗಳು ಬುಡ ಮೇಲಾಗಿರುವ ಇಂದು ಕೂಡ ಪರಿಸ್ಥಿತಿ ಹಾಗೆಯೇ ಇದೆ; ಕ್ರಾಂತಿಪೂರ್ವದ ಕಾಲದಲ್ಲಿ ಇನ್ನೂ ಮಿಗಿಲಾಗಿ ಹಾಗಿತ್ತು; ಆಗ ಶ್ರೀಮಂತರು ಗರ್ವದಿಂದಿರುವ ಸಾಹಸಮಾಡಲು ಸಾಧ್ಯವಿತ್ತು; ಕೆಳವರ್ಗದ ಜನ ದೀನರಾಗಿರುವುದರಲ್ಲಿಯೆ ತೃಪ್ತರಾಗಿರುತ್ತಿದ್ದರು. ಇಂತು, ಮಾಲನ ಸಂತತಿಯವರು ಅದೇನೇ ಇದ್ದರೂ ತಮ್ಮ ಅಸಮಾಧಾನಗಳನ್ನು ತಮ್ಮ ಹೃದಯದಲ್ಲಿಯೆ ಅಡಗಿಸಿಟ್ಟುಕೊಂಡಿದ್ದರು. ಸಾಧಾರಣವಾಗಿ ಅವರು ದಾರಿದ್ರ್ಯಪೀಡಿತರು; ಪಾಮರರು, ಹಾಗೂ ಯಾರ ಗಮನಕ್ಕೂ ಬೀಳದವರು; ಹಡಗುಕಟ್ಟೆಯಲ್ಲಿ ದುಡಿಯುವವರು, ಇಲ್ಲವೆ ನಾವಿಕರಾಗಿ ಹಡಗಿನಲ್ಲಿ ಕೆಲಸಮಾಡುವವರು; ಪಟ್ಟಣದಲ್ಲಿ ಅಲ್ಲಿ ಇಲ್ಲಿ ಬಾಡಿಗೆ ವಠಾರಗಳಲ್ಲಿ ವಾಸಮಾಡುತ್ತಿದ್ದು, ಕಟ್ಟಕಡೆಯಲ್ಲಿ ತಮ್ಮ ಮುದಿವಯಸ್ಸಿನ ಸಹಜವಾಸಸ್ಥಾನವೆಂದು ಧರ್ಮಶಾಲೆಯನ್ನು ಸೇರತಕ್ಕವರು. ಕಟ್ಟಕಡೆಗೆ, ಅಜ್ಞಾತವಾಸವೆಂಬ ಕೆಸರುಕೊಳದಂಚಿನ ಉದ್ದಕ್ಕೂ ಅಷ್ಟೊಂದು ದೀರ್ಘಕಾಲ ದೇಕಿಕೊಂಡುಬಂದು, ದುಡುಮ್ಮನೆ ಮುಳುಗಿಬಿಟ್ಟಿದ್ದರು; ಶ್ರೀಮಂತರಾಗಲಿ ಸಾಮಾನ್ಯರಾಗಲಿ, ಬೇಗನೆಯೋ ತಡವಾಗಿಯೋ, ಎಲ್ಲ ಕುಟುಂಬಗಳ ಗತಿಯೂ ಅದೇ. ಕಳೆದ ಮೂವತ್ತು ವರ್ಷಗಳಿಂದ, ಊರ ದಾಖಲೆ, ಗೋರಿಕಲ್ಲು, ಸ್ಥಳಕೈಪಿಡಿ,– ಇವು ಯಾವುದರಲ್ಲಿಯಾಗಲಿ, ಜನರ ತಿಳಿವಳಿಕೆ ಅಥವಾ ನೆನಪಿನಲ್ಲಿಯಾಗಲಿ, ಮ್ಯಾತ್ಯೂಮಾಲನ ವಂಶಸ್ಥರ ಬಗೆಗೆ ಯಾವ ಸುಳಿವೂ ಇರಲಿಲ್ಲ. ಆತನ ರಕ್ತ ಬಹುಶಃ ಬೇರೆಲ್ಲೋ ಹರಿಯುತ್ತಿದ್ದಿರಬಹುದು; ಆದರೆ ಇಲ್ಲಿ, ಆ ಹಿಂದಿನವರೆಗೆ ಗುರುತಿಸಬಹುದಾಗಿದ್ದ ಅದರ ಕೆಳಮಟ್ಟದ ಹರಿವು ಮುಂದಕ್ಕೆ ಹರಿಯದೆ ನಿಂತುಹೋಗಿತ್ತು.

ಎಲ್ಲಿಯವರೆಗೆ ಆ ವಂಶದ ಯಾರನ್ನೇ ಆಗಲಿ ಕಾಣಬಹುದಾಗಿತ್ತೊ ಆ ವರೆಗೆ ಅವರನ್ನು ಇತರರಿಂದ ಪ್ರತ್ಯೇಕಿಸುತ್ತಿದ್ದರು– ಸ್ಪಷ್ಟವಾಗಿ ಗೆರೆ ಹಾಕಿ

ಹೊಂದಿದೆ ಎಂಬ ಭಾವನೆಯುಂಟಾಗದೆ ಇರುತ್ತಿರಲಿಲ್ಲ. ಮುಂದುಗಡೆ, ನೆಲಗಟ್ಟು ಮಾಡಿಲ್ಲದ ಪಕ್ಕದ ಕಾಲುಹಾದಿಯ ಅಂಚಿನಲ್ಲಿ, 'ಪಿನ್ಚನ್' ಎಲ್ಮ್‌ವೃಕ್ಷ ಬೆಳೆದಿತ್ತು; ಸಾಧಾರಣವಾಗಿ ಎಲ್ಲರ ಕಣ್ಣಿಗೂ ಬೀಳುವ ಮರಗಳೊಂದಿಗೆ ಅದನ್ನು ಹೋಲಿಸುವುದಾದರೆ, ಅದು ದೈತ್ಯಾಕಾರದ್ದು ಎನ್ನಬಹುದು. ಮೊದಲ ಪಿನ್ಚನ್ನನ ಮರಿಮಗ ಅದನ್ನು ಹುಟ್ಟಿ ಹಾಕಿದ್ದನು; ಅದರ ವಯಸ್ಸು ಈಗ ಎಂಬತ್ತು ವರ್ಷ, ನೂರರ ಹತ್ತಿರ ಇದ್ದರೂ ಇರಬಹುದು; ಬೀದಿಯ ಆ ಕಡೆಯಿಂದ ಈ ಕಡೆಗೆ ತನ್ನ ನೆರಳನ್ನು ಚಾಚುತ್ತ, ಏಳು ಇಪ್ಪಾರುಗಳ ತುದಿಯನ್ನೂ ಮೀರಿ ಎತ್ತರಕ್ಕೆ ಬೆಳೆದು, ತನ್ನ ತೊನೆದಾಡುವ ಎಲೆಗಳಿಂದ ಕಪ್ಪುಚಾವಣಿಯನ್ನೆಲ್ಲ ಗುಡಿಸುತ್ತ, ಅದು ಇನ್ನೂ ತನ್ನ ಪ್ರಬಲವಾದ ಪ್ರೌಢಾವಸ್ಥೆಯಲ್ಲಿಯೆ ಇದ್ದಿತು. ಅದು ಆ ಪುರಾತನ ಕಟ್ಟಡಕ್ಕೊಂದು ಸೌಂದರ್ಯವನ್ನು ನೀಡಿ, ಅದನ್ನು ನಿಸರ್ಗದ ಒಂದು ಭಾಗವಾಗಿ ಮಾಡಿದ್ದಂತೆ ಕಂಡುಬರುತ್ತಿತ್ತು. ನಲವತ್ತು ವರ್ಷಗಳ ಹಿಂದೆ ಬೀದಿಯನ್ನು ಅಗಲಗೊಳಿಸಿದ್ದರಿಂದ, ಮುಂಗಡೆಯ ಇಪ್ಪಾರು ಅದರೊಂದಿಗೆ ಸರಿಯಾಗಿ ಸಮರೇಖೆಯಲ್ಲಿ ಹೊಂದಿಕೊಂಡಂತಿತ್ತು. ಪ್ರತಿ ಪಕ್ಕದಲ್ಲಿಯೂ ಉದ್ದಕ್ಕೂ ತೆರಪುಸಂದುಗಳಿದ್ದ ಜಾಲರಿಗೆಲಸದ ಮರದ ಕಟಕಟೆಯಿದ್ದು, ಮುರಿದುಬೀಳುವ ಸ್ಥಿತಿಯಲ್ಲಿತ್ತು; ಅದರ ಮೂಲಕ ನೋಡಿದರೆ, ಹುಲ್ಲುಬೆಳೆದ ಅಂಗಳ ಕಾಣುತ್ತಿತ್ತು; ಮುಖ್ಯವಾಗಿ, ಕಟ್ಟಡದ ಮೂಲೆ ಮೂಲೆಗಳಲ್ಲಿ, ಹುಚ್ಚು ಹೊರವಾಗಿ ಬೆಳೆದ 'ಬರ್‌ಡಾಕ್' ಗಿಡಗಳ ದೊಡ್ಡ ವನವನ್ನೆ ಕಾಣಬಹುದಾಗಿತ್ತು; ಆ ಗಿಡಗಳ ಎಲೆಗಳು ಎರಡು ಮೂರು ಅಡಿಗಳಷ್ಟು ಉದ್ದವಿದ್ದುವೆಂದರೆ ಅತಿಶಯೋಕ್ತಿಯಾಗದು. ಮನೆಯ ಹಿಂದುಗಡೆ ಒಂದು ತೋಟವಿದ್ದಂತೆ ಕಾಣಬರುತ್ತಿತ್ತು; ಅದು ನಿಸ್ಸಂದೇಹವಾಗಿಯೂ ಹಿಂದೊಮ್ಮೆ ವಿಶಾಲವಾಗಿತ್ತು; ಆದರೆ ಈಗ ಅದರ ಅಂಚಿನಲ್ಲಿ ಇತರ ಬೇಲಿಹಾಕಿದ್ದ ಆವರಣಗಳು ಒತ್ತಿಕೊಂಡು ಬಂದಿದ್ದುವು, ಇಲ್ಲವೋ ಇನ್ನೊಂದು ಬೀದಿಯಲ್ಲಿದ್ದ ವಸತಿಗಳೂ ಹೊರಗಟ್ಟಡಗಳೂ ಅದನ್ನು ಮರೆ ಮಾಡಿದ್ದುವು. ಕಿಟಕಿಗಳ ಮುಂಚಾಚುಗಳ ಮೇಲೂ ಚಾವಣಿಗಳ ಇಳಿಜಾರುಗಳ ಮೇಳು ಬಹುಕಾಲದಿಂದ ಬೆಳೆದುಬಂದಿದ್ದ ಹಸುರು ಹಾವಸೆಯನ್ನು ನಾವು ಮರೆತದ್ದೇ ಆದರೆ ಅದು ನಿಜವಾಗಿ ಅತ್ಯಲ್ಪವಾದರೂ ಅಕ್ಷಮ್ಯವಾದ ಲೋಪವೆನಿಸುವುದು; ಅದೇ ರೀತಿಯಲ್ಲಿ, ಹೊಗೆ ಕೊಳವೆಗೆ ಬಹು ದೂರವಲ್ಲದ ಎರಡು ಇಪ್ಪಾರುಗಳ ನಡುವಣ ಮೂಲೆಯೊಂದರಲ್ಲಿ ಗಾಳಿಯಲ್ಲಿ ಒಲೆದಾಡುತ್ತ ಬೆಳೆದಿದ್ದ ಹೂಗಿಡಗಳ–ಕಳೆಗಿಡಗಳಲ್ಲ ಹೂಗಿಡಗಳ ಗುತ್ತಿಗಳ ಬೆಳಸಿನ ಕಡೆಗೆ ವಾಚಕರ ಗಮನವನ್ನು ತಿರುಗಿಸಲು, ನಾವು ತಪ್ಪಕೂಡದು. ಅವಕ್ಕೆ ಆಯಲಿಸ್‌ನ

ಕಟ್ಟುಕತೆಗಳೆಂದು ನಿರಾಕರಿಸುವ ಬದಲು ಅವುಗಳನ್ನು ಒಂದು ಶಾಸ್ತ್ರಪದ್ಧತಿಯಾಗಿ ರೂಪಿಸುವ ಯತ್ನ ಮಾಡಬಹುದು.

ಏಳು ಇಪ್ಪಾರಿನ ಭವನದ ತೀರ ಇತ್ತೀಚಿನ ಸ್ವರೂಪಕ್ಕೆ ಸಂಬಂಧಪಟ್ಟಂತೆ ಒಂದೆರಡು ವರ್ಣನಾತ್ಮಕ ವಾಕ್ಯವೃಂದಗಳನ್ನು ಹೇಳಿಬಿಟ್ಟರೆ ಈ ಪೀಠಿಕಾ ಪ್ರಕರಣವನ್ನು ಮುಗಿತಾಯಗೊಳಿಸಿದಂತಾಗುವುದು. ಯಾವ ಬೀದಿಯಲ್ಲಿ ಆ ಮನೆ ತನ್ನ ಮಾನ್ಯಶಿಖರಗಳನ್ನು ಮೇಲೆತ್ತಿ ನಿಂತಿದೆಯೋ ಆ ಬೀದಿ ಪಟ್ಟಣದ ನವನಾಜೂಕಿನ ಭಾಗ ಎನ್ನಿಸಿರುವುದು ತಪ್ಪಿ ಬಹುಕಾಲವಾಯಿತು; ಹೀಗಿರುವುದರಿಂದ, ಈ ಹಳೆಯ ಕಟ್ಟಡದ ಸುತ್ತ ಆಧುನಿಕ ಕಾಲದ ವಸತಿಗಳಿದ್ದರೂ ಅವೆಲ್ಲ ಬಹುಮಟ್ಟಿಗೆ ಸಣ್ಣ ಸಣ್ಣವು, ಪೂರ್ತಿ ಮರದಿಂದ ಕಟ್ಟಿದವು; ಹಾಗೂ ಅತ್ಯಂತ ಸಾಧಾರಣ ತೆರನ, ದುಡಿಮೆಯ ಬಾಳಿನ ಏಕಪ್ರಕಾರತೆಯ ಪ್ರತೀಕಗಳು, ಆದರೂ ಕೂಡ, ನಿಸ್ಸಂದೇಹವಾಗಿಯೂ ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಮಾನವ ಜೀವಿತದ ಇಡಿಯ ಕಥೆಯೆ ಅವ್ಯಕ್ತವಾಗಿ ಅಡಗಿರಬಹುದು; ಆದರೆ ಅದನ್ನು ಅಲ್ಲಿ ಹುಡುಕಬೇಕೆನಿಸುವಂತೆ ನಮ್ಮ ಊಹಾಶಕ್ತಿಯನ್ನಾಗಲಿ ಸಹಾನುಭೂತಿಯನ್ನಾಗಲಿ ಸೆಳೆಯಬಲ್ಲ ಚಿತ್ರವತ್ತಾದ ಬಾಹ್ಯರಮ್ಯಗುಣ ಅದರಲ್ಲಿ ಇರಲಿಲ್ಲ. ಆದರೆ ನಮ್ಮ ಕಥೆಯ ಹಳೆಯ ಕಟ್ಟಡದ ವಿಷಯವಾಗಿ ಹೇಳುವುದಾದರೆ, ಅದರ ಬಿಳಿಯ ಓಕ್ ಮರದ ಒಳಗಟ್ಟಡ, ಅದರ ಹಲಗೆಗಳು, ಮರದ ಹೆಂಚುಗಳು, ಉದುರುತ್ತಿದ್ದ ಗಾರೆಗಚ್ಚು, ಅಲ್ಲದೆ ನಡುವಣ ಭಾರಿಯಾದ ಹೊಗೆಕೊಳವೆಗಳ ತಂಡ ಕೂಡ– ಇವೆಲ್ಲ ಅದರ ನಿಜಸ್ವರೂಪದ ಅತ್ಯಂತ ಕನಿಷ್ಠ ಹಾಗೂ ಅಧಮ ಭಾಗವನ್ನು ಮಾತ್ರ ಒಳಗೊಂಡಂತೆ ಕಾಣುತ್ತಿದ್ದುವು. ಮಾನವಕುಲದ ವಿವಿಧಾನುಭವಗಳು ಅಲ್ಲಿ ಎಷ್ಟೊಂದು ಸಾಗಿದ್ದುವೆಂದರೆ– ಅಲ್ಲಿ ತಿಂದ ನೋವೆಷ್ಟು ಉಂಡ ನಲಿವೆಷ್ಟು ಎಂದರೆ– ಹೃದಯದ ಆರ್ದ್ರತೆಯೇ ಒಡಬೆರತಿದೆಯೋ ಎಂಬಂತೆ ಅಲ್ಲಿನ ಮರಮುಟ್ಟು ಕೂಡ ದ್ರವವನ್ನು ಸೂಸುತ್ತಿದ್ದುವು. ತನ್ನದೇ ಆದ ಸ್ವಂತ ಜೀವಿತವನ್ನು ಹೊಂದಿ, ಸಮೃದ್ಧವಾದ ವಿಷಣ್ಣ ಸ್ಮರಣೆಗಳಿಂದ ತುಂಬಿ, ಅದೇ ಒಂದು ದೊಡ್ಡ ಮಾನವಹೃದಯ ದಂತಿದ್ದಿತು.

ಎರಡನೆಯ ಅಂತಸ್ತಿನ ಪ್ರಮುಖವಾದ ಮುಂಚಾಚು ಮನೆಗೊಂದು ಬಗೆಯ ಧ್ಯಾನಮುದ್ರೆಯನ್ನು ನೀಡಿತ್ತು; ಅದರ ಪರಿಣಾಮವಾಗಿ, ನೀವು ಮನೆಯ ಮುಂದೆ ಹಾದುಹೋದರೆ, ಅದು ಏನೋ ರಹಸ್ಯವನ್ನು ಒಳಗೊಂಡಿದೆ, ನೀತಿಬೋಧೆಗೆ ಅವಕಾಶಕೊಡುವ ಘಟನೆಗಳಿಂದ ತುಂಬಿದ ಇತಿಹಾಸವನ್ನು,

ಸಂಪಾದಿಸುವುದನ್ನು, ಅದಿಲ್ಲದಿದ್ದರೆ ಪೂರ್ವಪ್ರಾಂತದ ಜಮೀನುಗಳಲ್ಲಿ ತನಗಿದ್ದ ವಂಶಪಾರಂಪರ್ಯವಾದ ಹಕ್ಕಿಗಾಗಿ ಹೊಡೆದಾಡುವುದನ್ನು ಬಿಟ್ಟು, ತನ್ನ ಪೂರ್ವಿಕರ ಮನೆಯ ಪಕ್ಕದಲ್ಲಿ ಒಂದು ಅಂಗಡಿಬಾಗಿಲನ್ನು ಹಾಕಿಸಿ ಆ ಮೂಲಕ ಐಶ್ವರ್ಯ ಸಂಪಾದನೆಮಾಡುವ ಘನವಾದ ಉಪಾಯಕ್ಕಿಂತ ಮೇಲಾದದ್ದು ಅವನಿಗೆ ಹೊಳೆಯಲಿಲ್ಲ. ವರ್ತಕರು ತಮ್ಮ ಸ್ವಂತ ವಾಸ ಗೃಹಗಳಲ್ಲಿಯೆ ಸರಕನ್ನು ಶೇಖರಣೆಮಾಡಿ ವ್ಯಾಪಾರಮಾಡುವುದು ಆ ಕಾಲದ ಪದ್ಧತಿಯಾಗಿದ್ದಿತೆಂಬುದೇನೋ ನಿಜ. ಆದರೆ, ಈ ಮುದಿ ಪಿನ್ಚನ್ನನ ವಾಣಿಜ್ಯ ವ್ಯವಹಾರದ ನಿರ್ವಹಣೆಯ ವಿಧಾನದಲ್ಲಿ ಅದೊಂದು ಬಗೆಯ, 'ಅಯ್ಯೋ' ಎನ್ನುವಂತಹ ಸಣ್ಣತನವಿದ್ದಿತು. ಎಲ್ಲ ಕಡೆಯೂ ಸುಕ್ಕುಗಟ್ಟಿದ್ದ ತನ್ನ ಸ್ವಂತ ಕೈಗಳಿಂದ ಆತ ಒಂದು ಷಿಲಿಂಗಿಗೆ ಚಿಲ್ಲರೆ ಕೊಟ್ಟು, ಅರ್ಧ ಪೆನ್ನಿಯ ನಾಣ್ಯವೊಂದು ಒಳ್ಳೆಯದು ಹೌದೋ ಅಲ್ಲವೋ ಎಂದು ಖಚಿತ ಪಡಿಸಿಕೊಳ್ಳುವುದಕ್ಕಾಗಿ ಅದನ್ನು ಎರಡೆರಟು ಸಲ ತಿರುಗಿಸಿ ತಿರುಗಿಸಿ ನೋಡಿಕೊಳ್ಳುತಿದ್ದನಂತೆ; ಹೀಗೆಂದು ಪಿಸುಗುಟ್ಟುತ್ತಿದ್ದರು ಜನ. ಬೀದಿ ಬೀದಿ ತಿರುಗುವ ಚಿಲ್ಲರೆ ಮಾರಾಟಕಾರನ ರಕ್ತ ಆತನ ನರನಾಡಿಗಳಲ್ಲಿ ಹರಿಯುತ್ತಿದ್ದಿತು; ಅದು ಅಲ್ಲಿಗೆ ಯಾವ ಮೂಲಕ ದಾರಿಮಾಡಿಕೊಂಡು ಬಂದಿತೋ ಅದು ಹೇಗಾದರೂ ಇರಲಿ, ಆ ವಿಷಯದಲ್ಲಿಯಂತೂ ಪ್ರಶ್ನೆ ಮಾಡಬೇಕಾದದ್ದಿರಲಿಲ್ಲ.

ಆತನು ಮರಣ ಹೊಂದಿದ ಕೂಡಲೆ, ಅಂಗಡಿಯ ಬಾಗಿಲಿಗೆ ಬೀಗ ಹಾಕಿ, ಅಗುಣಿ ಹಾಕಿ, ಅದನ್ನು ಅಡ್ಡಪಟ್ಟಿಯಿಂದ ಭದ್ರಪಡಿಸಲಾಯಿತು; ನಮ್ಮ ಈ ಕಥೆ ಪ್ರಾರಂಭವಾಗುವ ಕಾಲದವರೆಗೂ ಬಹುಶಃ ಅದನ್ನು ಒಮ್ಮೆಯೂ ತೆರೆದಿರಲಿಲ್ಲ. ದುಡ್ಡೆಣಿಸುವ ಹಳೆಯ ಅಂಗಡಿ ಮೇಜು, ಬಡುಗಳು, ಮತ್ತು ಚಿಕ್ಕ ಅಂಗಡಿಯ ಇತರ ಜೋಡಣೆಗಳು– ಇವೆಲ್ಲ ಅವನು ಅವುಗಳನ್ನು ಬಿಟ್ಟು ಹೋದಾಗ ಹೇಗಿದ್ದುವೋ ಹಾಗೆಯೆ ಇದ್ದುವು. ಸತ್ತ ಆ ಅಂಗಡಿಕಾರ ಬಿಳಿಯ ಕೂದಲು ಟೋಪಿ ಹಾಕಿಕೊಂಡು, ಮಾಸಿಹೋದ ಮಕಮಲ್ಲು ಅಂಗಿ ತೊಟ್ಟು, ಸೊಂಟಕ್ಕೆ ಹಿಳಿ ಧೂಳು ಪಾವುಡ ಕಟ್ಟಿಕೊಂಡು, ಮುಂಗೈ ಹತ್ತಿರ ಅಂಗಿಯ ತೋಳಿನ ಕೈ ಪಟ್ಟಿಯ ನಿರಿಗೆಗಳನ್ನು ಎಚ್ಚರಿಕೆಯಿಂದ ಹಿಂದಕ್ಕೆ ಮಡಿಸಿಕೊಂಡು, ವರ್ಷದಲ್ಲಿ ಯಾವುದೇ ರಾತ್ರಿಯ ಹೊತ್ತು ತನ್ನ 'ಗಲ್ಲ'ವನ್ನು ಶೋಧಿಸುತ್ತಲೋ ಇಲ್ಲವೆ ತನ್ನ ರೋಜು ಪುಸ್ತಕದ ಕೊಳೆಕೊಳೆಯಾದ ಹಾಳೆಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಓದಿಕೊಳ್ಳುತ್ತಲೋ ಇರುವುದನ್ನು ಕಿಟಕಿಯ ಬಾಗಿಲ ಕಂಡಿಗಳ ಮೂಲಕ ಕಾಣಬಹುದಾಗಿತ್ತು– ಎಂದು ಜನ ಹೇಳಿಕೊಳ್ಳುವುದು ವಾಡಿಕೆಯಾಗಿತ್ತು. ತನ್ನ

'ಪೋಸಿ'ಗಳು (ಒಂದು ಬಗೆಯ ಹೂಗಿಡ) ಎಂದು ಹೆಸರಾಗಿತ್ತು. ಕಥೆ ಏನೆಂದರೆ, ಆಯಲಿಸ್ ಪಿನ್ಚನ್ ಎಂಬ ಒಬ್ಬಾಕೆ ವಿನೋದಾರ್ಥವಾಗಿ ಬೀಜಗಳನ್ನು ಮೇಲಕ್ಕೆ ಎಸೆದಿದ್ದಳು; ಬೀದಿಯ ಧೂಳೂ ಚಾವಣಿಯ ಕೊಳೆತ ಭಾಗಗಳೂ ಸೇರಿ ಆ ಬೀಜಗಳಿಗೆ ಒಂದು ಬಗೆಯ ಮಣ್ಣಿನಂತಾಗಿ, ಅದರಲ್ಲಿ ಅವು ಬೆಳೆದುವು; ಆ ವೇಳೆಗಾಗಲೆ ಆಯಲಿಸ್ ತನ್ನ ಗೋರಿಯಲ್ಲಿ ಮಲಗಿದ್ದಳು. ಆ ಹೂಗಿಡಗಳು ಅಲ್ಲಿಗೆ ಹೇಗಾದರೂ ಬಂದಿರಲಿ; ಪಿನ್ಚನ್ ಕುಟುಂಬದ ಜೀರ್ಣಶೀರ್ಣವಾಗುತ್ತಿದ್ದ, ಧೂಳೂ ಕವಿದಿದ್ದ, ಪಾಳುಬಿದ್ದಿದ್ದ ಈ ಪುರಾತನ ಮನೆಯನ್ನು ನಿಸರ್ಗವು ಹೇಗೆ ತನ್ನದನ್ನಾಗಿ ಮಾಡಿಕೊಂಡಿತ್ತು ಎಂಬುದನ್ನೂ, ಮರಳಿಮರಳಿ ಬರುತ್ತಿದ್ದ ಬೇಸಗೆ ಹೇಗೆ ಅದಕ್ಕೆ ಕೋಮಲವಾದ ಸೌಂದರ್ಯದ ಕಳೆಯಿತ್ತು ಅದನ್ನು ಗೆಲುವಾಗಿ ಮಾಡಲು ತನ್ನ ಸರ್ವಪ್ರಯತ್ನಗಳನ್ನೂ ಮಾಡಿ ಆ ಪ್ರಯತ್ನದಲ್ಲಿಯೇ ಖಿನ್ನವಾಗುತ್ತಿತ್ತು ಎಂಬುದನ್ನೂ ಗಮನಿಸುವುದರಿಂದ ಒಂದು ಕಡೆ ನೋವೂ ಇನ್ನೊಂದು ಕಡೆ ನಲಿವೂ ಆಗುತ್ತಿತ್ತು.

ಅತಿ ಮುಖ್ಯವಾಗಿ ಗಮನಿಸಬೇಕಾದ ಇನ್ನೊಂದು ಸಂಗತಿಯಿದೆ; ಆದರೆ, ಈ ಭವ್ಯ ಭವನವನ್ನು ಕುರಿತು ನಮ್ಮ ನಿರೂಪಣೆಗೆ ನಾವು ಕೊಡಲಿಚ್ಛಿಸಿರುವ ಚಿತ್ರವತ್ತಾದ ಹಾಗೂ ಅದ್ಭುತರಮ್ಯವಾದ ಪರಿಭಾವನೆಯನ್ನು ಅದು ಹಾಳುಮಾಡಬಹುದೆಂದು ನಮ್ಮ ಹೆದರಿಕೆ. ಮುಂಗಡೆಯ ಇಪ್ಪಾರಿನಲ್ಲಿ, ಹುಬ್ಬಿನಂತೆ ಮುಂಚಾಚಿದ್ದ ಅದರ ಎರಡನೆಯ ಅಂತಸ್ತಿನ ಅಡಿಯಲ್ಲಿ, ಬೀದಿಗೆ ಹಬ್ಬಿಕೊಂಡಂತೆ ಒಂದು ಅಂಗಡಿಬಾಗಿಲಿತ್ತು; ಅದು ಮಧ್ಯಭಾಗದಲ್ಲಿ ಅಡ್ಡನಾಗಿ ವಿಭಾಗವಾಗಿದ್ದು, ಮೇಲಿನ ವಿಭಾಗವು ಕಿಟಕಿಯ ರೂಪದಲ್ಲಿತ್ತು; ಇಂಥ ಏರ್ಪಾಡನ್ನು ಅನೇಕಾವೇಳೆ ಸ್ವಲ್ಪ ಹಳೆಯ ಕಾಲದ ಮನೆಗಳಲ್ಲಿ ಕಾಣಬಹುದಾಗಿತ್ತು. ಭವ್ಯವಾದ ಪಿನ್ಚನ್ ಭವನದಲ್ಲಿ ಈಗ ನೆಲಸಿದ್ದಾಕೆಗೂ, ಆಕೆಯ ಹಿಂದೆ ನೆಲಸಿದ್ದವರಲ್ಲಿ ಕೆಲವರಿಗೂ ಇದೇ ಅಂಗಡಿ ಬಾಗಿಲಿನ ನಿಮಿತ್ತ ಆದ ಭಂಗ ಅಷ್ಟಿಷ್ಟಲ್ಲ. ಈ ಸಂಗತಿ ಅಷ್ಟೇನೂ ಹಿತಕರವಲ್ಲದ ಸೂಕ್ಷ್ಮವಿಚಾರ; ಆದರೆ, ಆ ರಹಸ್ಯವನ್ನು ವಾಚಕನಿಗೆ ತಿಳಿಸಬೇಕಾದ್ದು ಅಗತ್ಯವಾದ್ದರಿಂದ, ಸುಮಾರು ಒಂದು ನೂರು ವರ್ಷ ಹಿಂದೆ, ಪಿನ್ಚನ್ ಕುಟುಂಬದ ಆಗಿನ ಯಜಮಾನನು ವಿಪರೀತ ಹಣಕಾಸಿನ ತೊಂದರೆಗೆ ಸಿಕ್ಕಿಹಾಕಿಕೊಂಡ ನೆಂಬುದನ್ನು ವಾಚಕಮಹಾಶಯನು ದಯವಿಟ್ಟು ಮೊದಲು ಅರಿತಿರಬೇಕು. ಆ ಮನುಷ್ಯ (ತಾನು ದೊಡ್ಡ ಮನುಷ್ಯ ಎಂದುಕೊಳ್ಳುತ್ತಿದ್ದನಾತ) ಅಲ್ಲಿಗೆ ಹಕ್ಕಿಲ್ಲದೆ ನುಗ್ಗಿಬಂದಿದ್ದ ಖೋಟಾ ವ್ಯಕ್ತಿಯಲ್ಲದೆ ಬೇರೆಯಾಗಿರಲಿಲ್ಲ; ಏಕೆಂದರೆ, ರಾಜನಿಂದಲೋ ಇಲ್ಲವೆ ರಾಜಪ್ರತಿನಿಧಿಯಾದ ಗೌರ್ನರನಿಂದಲೋ ಅಧಿಕಾರಸ್ಥಾನ

# ೨. ಚಿಕ್ಕ ಅಂಗಡಿ ಕಿಟಕಿ

ಹೊತ್ತು ಮೂಡುವುದಕ್ಕೆ ಇನ್ನೂ ಅರ್ಧ ಗಂಟೆಯಿತ್ತು; ಆಗ ಮಿಸ್ (ಕುಮಾರಿ) ಹೆಪ್ಸಿಬಾ ಪಿನ್ಚನ್ ಇನ್ನೂ ನಿದ್ರೆಯಿಂದ ಎಚ್ಚತ್ತಿರಲಿಲ್ಲ ಎಂದು ಹೇಳಲಾರೆವು– ಏಕೆಂದರೆ, ನಡುಬೇಸಗೆಯ ಲಘುರಾತ್ರಿಯಲ್ಲಿ ಆ ಬಡ ಮಹಿಳೆ ತನ್ನ ಕಣ್ಣನ್ನು ಕೂಡ ಮುಚ್ಚಿದ್ದಳೋ ಇಲ್ಲವೋ ಸಂದೇಹಾಸ್ಪದ; ಆದರೆ, ತನ್ನ ಒಂಟಿದಿಂಬನ್ನು ಬಿಟ್ಟು ಮೇಲೆದ್ದಿದ್ದಳು; ಹಾಗೂ ತನ್ನ ದೇಹವನ್ನು ಅಲಂಕರಿಸಿಕೊಳ್ಳುವುದಕ್ಕೆ– ಹಾಗೆನ್ನುವುದು ಆ ಪದದ ಆಭಾಸವೇ ಸರಿ– ತೊಡಗಿದ್ದಳು. ಕಲ್ಪನೆಯಲ್ಲಿ ಕೂಡ ಅವಿವಾಹಿತ ಮಹಿಳೆಯೊರ್ವಳ ಅಲಂಕರಣಕಾರ್ಯದಲ್ಲಿ ನಾವು ನೆರವಾಗುವುದು ಅಸಭ್ಯವರ್ತನೆ, ನಮಗೆ ಸಲ್ಲ! ಆದ್ದರಿಂದ, ಕುಮಾರಿ ಹೆಪ್ಸಿಬಾ ತನ್ನ ಕೋಣೆಯ ಹೊಸಿಲಬಳಿ ಬಂದು ನಿಲ್ಲುವವರೆಗೂ ನಮ್ಮ ಕಥೆ ತಡೆದಿರಬೇಕು; ಈ ನಡುವೆ, ಅವಳ ಎದೆಯಿಂದ ಪ್ರಯಾಸಪೂರ್ವಕವಾಗಿ ಹೊರಬರುತ್ತಿದ್ದ ಭಾರವಾದ ನಿಟ್ಟುಸಿರುಗಳಲ್ಲಿ ಕೆಲವನ್ನು ನಾವು ಗಮನಿಸುತ್ತೇವೆಂದು ಮಾತ್ರ ಇಟ್ಟುಕೊಳ್ಳಬಹುದು; ಅವುಗಳ ವಿಷಾದಪೂರ್ಣ ಸ್ವರದ ಪ್ರಮಾಣಕ್ಕೆ ಸ್ವಲ್ಪವೂ ಮಿತಿಯಿರಲಿಲ್ಲ; ಹೀಗಾಗಿ, ಅಶರೀರಿಯಾದ ನಮ್ಮಂಥ ಶ್ರೋತೃವಿಗೆ ಹೊರತು ಬೇರೆ ಯಾರಿಗೂ ಅದು ಕೇಳಿಸುವಂತಿರಲಿಲ್ಲ. ಈ ವೃದ್ಧಕನ್ಯೆ ಆ ಪುರಾತನ ಭವನದಲ್ಲಿ ಒಬ್ಬೊಂಟಿಗಳಾಗಿದ್ದಳು. ಎಂದರೆ, ಮರ್ಯಾದಸ್ಥನೂ ಅಚ್ಚು ಕಟ್ಟಿನವನೂ ಆದ ಯಾವನೋ ಒಬ್ಬ ಯುವಕನನ್ನು ಬಿಟ್ಟರೆ ಅವಳು ಒಬ್ಬೊಂಟಿಗಳೆ: (ಡಗೆರೋಟೈಪ್ ಎಂಬ) ಛಾಯಾಚಿತ್ರಣ ವಿಧಾನದಲ್ಲಿ ಕೆಲಸಮಾಡುತ್ತಿದ್ದ ಕಲಾವಿದ ಆ ಯುವಕ; ಸುಮಾರು ಮೂರು ತಿಂಗಳ ಹಿಂದೆ ಅವನು ದೂರದ ಒಂದು ಇಪ್ಪಾರು ವಿಭಾಗದ ಒಕ್ಕಲಾಗಿದ್ದನು; ವಾಸ್ತವವಾಗಿ, ಅದು ತನ್ನಮಟ್ಟಿಗೆ ಒಂದು ಮನೆ ಎನ್ನಬಹುದು. ಅಲ್ಲಿನ ಎಲ್ಲ ನಡುವೆಯ ಬಾಗಿಲುಗಳಿಗೂ ಬೀಗಗಳು, ಅಗುಳಿಗಳು, ಓಕ್ ಮರದ ಲಾಳವಿಂಡಿಗೆಗಳೂ ಇದ್ದುವು. ಇದೆಲ್ಲದರ ಪರಿಣಾಮವಾಗಿ, ಅವಳ ನಿಟ್ಟುಸಿರಿನ ನಿಶ್ವಾಸಗಳು ಕೇಳಬಾರದಂಥವು. ಹಾಸಿಗೆಯ ಬಳಿ ಅವಳು ಮೊಳಕಾಲೂರಿ ಕುಳಿತುಕೊಂಡಾಗ, ಅವಳ ಸೆಡೆತುಕೊಂಡ ಮಂಡಿಕೀಲುಗಳ ಕಿರುಗುಟ್ಟುವಿಕೆಯೂ ಕೇಳಿಬರುತ್ತಿರಲಿಲ್ಲ. ಅಲ್ಲದೆ, ಬಹುಮಟ್ಟಿಗೆ ನರಳಿಕೆಯಂತಿದ್ದ ಅವಳ ಪ್ರಾರ್ಥನೆ

ಲೆಕ್ಕಗಳನ್ನು ಸರಿದೂಗಿಸುವ ವ್ಯರ್ಥಪ್ರಯತ್ನದಲ್ಲಿ ಯುಗಯುಗಗಳನ್ನು ಕಳೆಯುವುದೇ ಆತನ ಹಣೆಯಬರಹವೆಂಬುದು ಆತನ ಮುಖದಲ್ಲಿ ಅಚ್ಚೊತ್ತಿದ್ದ ಅನಿರ್ವಚನೀಯ ದುಃಖದ ಮುದ್ರೆಯಿಂದ ವ್ಯಕ್ತಪಡುತ್ತಿತ್ತು.

ಇನ್ನು ಮುಂದೆ– ಬಹಳ ಸಾಧಾರಣ ರೀತಿಯಲ್ಲಿ (ಅದು ತಾನಾಗಿಯೇ ತಿಳಿಯುತ್ತದೆ)– ನಮ್ಮ ಕಥಾನಿರೂಪಣೆಯನ್ನು ಪ್ರಾರಂಭಿಸಲು ಮುಂದುವರಿಯುತ್ತೇವೆ.

* * * *

ಬೆಳಗ್ಗೆ ಸರಿಪಡಿಸುವುದಕ್ಕೂ ಅಂದಗೊಳಿಸುವುದಕ್ಕೂ ಇಷ್ಟೆಲ್ಲ ಅಮೂಲ್ಯ ಕಾಲವನ್ನು ಅಪವ್ಯಯಮಾಡುವುದು ಸರಿಯೆ?

ಈಗ ಅವಳು ಬಹುಮಟ್ಟಿಗೆ ಸಿದ್ಧಳಾಗಿದ್ದಾಳೆ. ಇನ್ನೊಮ್ಮೆ ವಿರಾಮ ಪಡೆಯಲು ಅವಳಿಗೆ ಅವಕಾಶಕೊಟ್ಟು ಕ್ಷಮಿಸೋಣ; ಏಕೆಂದರೆ, ಆ ಅವಕಾಶದಲ್ಲಿ ಅವಳು ತನ್ನ ಜೀವನದ ಏಕೈಕ ರಸಾನುಭವವನ್ನು, ಇಲ್ಲವೆ ತೀವ್ರವಾದ ಭಾವೋದ್ರೇಕವನ್ನು, ಅನುಭವಿಸುತ್ತಾಳೆ; ದುಃಖದಿಂದಲೂ ಏಕಾಂತವಾಸದಿಂದಲೂ ಅದು ಇನ್ನೂ ಗಾಢವಾಗಿದೆ, ತೀವ್ರತರವಾಗಿದೆ. ಒಂದು ಸಣ್ಣ ಬೀಗದಲ್ಲಿ ಬೀಗದಕೈ ಹಾಕಿ ತಿರುಗಿಸಿದ್ದು ನಮಗೆ ಕೇಳಿಸಿತು; ಒಂದು ವಾಟಮೇಜದ ಗೋಪ್ಯವಾದ ಸೆಳೆಖಾನೆಯನ್ನು ಅವಳು ಎಳೆದು, ಅದರಲ್ಲಿದ್ದ ಸೂಕ್ಷ್ಮ ಪ್ರತಿರೂಪಚಿತ್ರವನ್ನು ಬಹುಶಃ ನಿರುಕಿಸುತ್ತಿದ್ದಾಳೆ. ಅದು ಕಲಾವಿದ ಮ್ಯಾಲ್‌ಬೋನ್ ಎಂಬಾತನ ಪರಿಪೂರ್ಣ ಶೈಲಿಯಲ್ಲಿ ರಚಿಸಿದ್ದು; ಅದರಲ್ಲಿ ಕಾಣುತ್ತಿದ್ದ ಮುಖ ಅದನ್ನು ಬರೆದ ಕುಂಚಿಗೆಯಷ್ಟೆ ನಾಜೂಕಾಗಿತ್ತು. ಈ ಚಿತ್ರವನ್ನು ಅವಲೋಕಿಸುವ ಸೌಭಾಗ್ಯ ನಮಗೂ ಒಮ್ಮೆ ದೊರಕಿತ್ತು. ಓರ್ವ ಯುವಕನ ಪ್ರತಿರೂಪವದು; ಚಿಂತಾಮಗ್ನ ಮುಖಮುದ್ರೆಯ ತುಂಬಿದ ಕೋಮಲ ತುಟಿಗಳೂ ಚೆಲುವಾದ ಕಣ್ಣುಗಳೂ ವಿಚಾರಸಾಮರ್ಥ್ಯಕ್ಕಿಂತ ಹೆಚ್ಚಾಗಿ ಮೃದುವಾದ ಮತ್ತು ಭೋಗಾಸಕ್ತಿಯ ಮನೋಭಾವವನ್ನು ಸೂಚಿಸುವಂತಿದ್ದುವು; ಆತ ಧರಿಸಿದ್ದ ಹಳೆಯ ಮಾದರಿಯ ರೇಶ್ಮೆಯ ಮೇಲಂಗಿಯ ಸೌಮ್ಯ ಶ್ರೀಮಂತಿಕೆ ಆ ಮುಖಮುದ್ರೆಗೆ ಚೆನ್ನಾಗಿ ಹೊಂದಿಕೊಂಡಿದ್ದಿತು. ಅಂತಹ ಮುಖಲಕ್ಷಣಗಳನ್ನು ಹೊಂದಿರುವಾತ ನಿಷ್ಠುರಪ್ರಪಂಚವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ಅದರಲ್ಲಿ ನೆಮ್ಮದಿಯಿಂದಲೆ ಇರುವನು; ಇಷ್ಟು ಹೊರತಾಗಿ, ಅಂಥವನಿಂದ ಬೇರೆ ಏನನ್ನೂ ನಿರೀಕ್ಷಿಸುವ ಹಕ್ಕು ನಮಗಿಲ್ಲ. ಆತ ಕುಮಾರಿ ಹೆಪ್ಸಿಬಾನ ಮುಂಚಿನ ಪ್ರಿಯನಾಗಿದ್ದಿರಬಹುದೆ? ಇಲ್ಲ; ಅವಳಿಗೆ ಪ್ರಿಯನೇ ಇದ್ದಿರಲಿಲ್ಲ–ಪಾಪ, ಆ ಬಡಪ್ರಾಣಿಗೆ ಪ್ರಿಯನೆಲ್ಲಿ ಇದ್ದಾನೆ? ಅಲ್ಲದೆ, ಶಾಸ್ತ್ರೀಯವಾಗಿ ಪ್ರೇಮವೆಂದರೇನು ಎಂಬ ಸಂಗತಿ ಕೂಡ ಅವಳಿಗೆ ತಿಳಿದಿರಲಿಲ್ಲ; ಆ ಬಗೆಗೆ ಸ್ವಂತ ಅನುಭವವೇ ಇರಲಿಲ್ಲ. ಇಷ್ಟಾದರೂ ಕೂಡ, ಆ ಕಿರುಚಿತ್ರದ ಮೂಲ ವ್ಯಕ್ತಿಯ ಬಗೆಗೆ ಅವಳು ತಳೆದಿದ್ದ ಅಮರವಾದ ಭಕ್ತಿವಿಶ್ವಾಸ, ಅವಳಲ್ಲಿ ಇನ್ನೂ ಹೊಸದಾಗಿಯೆ ಇದ್ದ ನೆನಪು, ಮತ್ತು ನಿರಂತರವಾದ ಶ್ರದ್ಧೆ– ಇವೇ ಅವಳ ಹೃದಯದ ಉಣಿಸಿಗೆ ಏಕಮಾತ್ರ ಆಹಾರಸಾಮಗ್ರಿ.

ಆ ಚಿಕ್ಕ ಚಿತ್ರವನ್ನು ಅವಳು ಒಂದು ಬದಿಗಿರಿಸಿರುವ ಹಾಗೆ ಕಾಣುತ್ತದೆ; ಮರಳಿ ಅಲಂಕರಣದ ಕನ್ನಡಿಯ ಮುಂದೆ ನಿಂತಿದ್ದಾಳೆ. ಕಂಬನಿಯನ್ನು

ಕೂಡ ಮಾನವನ ಕಿವಿಗೆ ಕೇಳಿಸುವಂತಿರಲಿಲ್ಲ; ಒಮ್ಮೆ ಪಿಸುಗುಟ್ಟಿಕೊಂಡ, ಮತ್ತೊಮ್ಮೆ ನರಳಿಕೆಯಂತಿರುವ, ಮಗುದೊಮ್ಮೆ ಒಳಹೋರಾಟದ ಮೌನದ ಪ್ರಾರ್ಥನೆಯ ಮೂಲಕ ಅವಳು ಹಗಲೆಲ್ಲ ದೈವಸಹಾಯವನ್ನು ಕೋರುತ್ತಿದ್ದಳು; ಯಾರಿಗೂ ಕೇಳಿಸದ ಇಂತಹ ಪ್ರಾರ್ಥನೆಯನ್ನು ದೂರದ ಸ್ವರ್ಗವು ಅರ್ಥಮಾಡಿಕೊಂಡು ಪ್ರೀತಿ ಕರುಣೆಗಳಿಂದ ಕೇಳುತ್ತಿತ್ತು! ಈಗ್ಗೆ ಕಾಲು ಶತಮಾನಕ್ಕಿಂತ ಹೆಚ್ಚಿನ ಕಾಲ ಕುಮಾರಿ ಹೆಪ್ಸಿಬಾ ಬದುಕಿನ ವ್ಯವಹಾರಗಳಲ್ಲಿ ಯಾವ ಪಾಲನ್ನೂ ವಹಿಸದೆ, ಅದರ ಕೂಟಪಾಟ ನಲಿದಾಟಗಳಲ್ಲಿ ಸ್ವಲ್ಪವೂ ಬೆರೆಯದೆ ಕಟ್ಟೇಕಾಂತದಲ್ಲಿ ಇದ್ದವಳು; ಅಂಥವಳ ಪಾಲಿಗೆ ಇಂದು ಎಂದಿಗಿಂತ ಹೆಚ್ಚಿನ ಸತ್ತ್ವ ಪರೀಕ್ಷೆಯ ಸಮಯ ಎಂಬುದು ಸುಸ್ಪಷ್ಟ. ಜಡಸ್ವಭಾವದ ವಿರಕ್ತನು ಕೂಡ ಅಸಂಖ್ಯಾತ 'ನಿನ್ನೆ'ಗಳಂತಿರುವ ಅಂದಿನ ದಿನದ ಶೀತಲವೂ ಸೂರ್ಯ ಪ್ರಕಾಶರಹಿತವೂ ಸ್ತಬ್ಧವೂ ಆದ ಶಾಂತತೆಯನ್ನು ನಿರೀಕ್ಷಿಸುತ್ತ ಅಷ್ಟೊಂದು ಉತ್ಸಾಹದಿಂದ ಪ್ರಾರ್ಥನೆ ಮಾಡುವುದಿಲ್ಲ.

ಕನ್ಯಾಮಹಿಳೆಯ ಪ್ರಾರ್ಥನಾವಿಧಿಗಳು ಮುಗಿದಿವೆ. ಇನ್ನಾದರೂ ಆಕೆ ಹೊರಬಂದು ನಮ್ಮ ಕಥೆಯ ಹೊಸಿಲಮೇಲೆ ನಿಲ್ಲುವಳೆ? ಇನ್ನೂ ಇಲ್ಲ, ಅದಕ್ಕೆ ಹಲವು ಕ್ಷಣಗಳಾಗಬೇಕು. ಮೊತ್ತಮೊದಲು, ಎತ್ತರವಾದ ಹಳೆಯಮಾದರಿಯ ಬೀರುವಿನ ಪ್ರತಿಯೊಂದು ಸಂದೂಕವನ್ನೂ ಕಷ್ಟದಿಂದ, ಬಿಟ್ಟು ಬಿಟ್ಟು ಧಡಕ್ ಧಡಕ್ ಎಂದು ಒಂದೇ ಸಮನೆ ಸದ್ದುಮಾಡುತ್ತ ತೆರೆದಿಡಬೇಕು; ಆಮೇಲೆ, ಅದೇ ರೀತಿ ಇಷ್ಟವಿಲ್ಲದೆ ಚಡಪಡಿಸುತ್ತ ಅವುಗಳನ್ನು ಮುಚ್ಚಬೇಕು. ಅಗೋ, ಗರಿಮುರಿಯಾದ ರೇಶ್ಮೆ ಉಡುಪಿನ ಪರಪರಗುಟ್ಟುವಿಕೆ ಕೇಳುತ್ತಿದೆ; ಕೋಣೆಯ ಅತ್ತಿಂದಿತ್ತ ಹಿಂದಕ್ಕೂ ಮುಂದಕ್ಕೂ ಹೆಜ್ಜೆಗಳನ್ನಿಟ್ಟಿರಬೇಕು. ಅಲ್ಲದೆ, ತನ್ನ ಮೇಜಿನ ಮೇಲ್ಗಡೆ ನೇತುಹಾಕಿರುವ ಅಂಡಾಕಾರದ, ಕಟ್ಟು ಮಾಸಿರುವ, ಅಲಂಕರಣದ ಕನ್ನಡಿಯಲ್ಲಿ ಅಡಿಯಿಂದ ಮುಡಿಯವರೆಗೆ ತನ್ನ ಪೂರ್ಣ ಸ್ವರೂಪವನ್ನು ಎಚ್ಚರಿಕೆಯಿಂದ ನೋಡಿಕೊಂಡು ತಿದ್ದಿಕೊಳ್ಳುವುದಕ್ಕಾಗಿ ಕುಮಾರಿ ಹೆಪ್ಸಿಬಾ ಒಂದು ಹೆಜ್ಜೆಯನ್ನು ಮೇಲೆತ್ತಿ ಕುರ್ಚಿಯಮೇಲೆ ಇಟ್ಟಿದ್ದಿರಬೇಕೆಂದು ನಮಗೆ ಅನುಮಾನ. ನಿಜವಾಗಿ! ಸರಿ ಸರಿ, ಯಾರಿಗೆ ತಾನೆ ತೋರಬೇಕು ಹಾಗೆಂದು! ವಯಸ್ಸಾದ ಆಕೆ ಎಂದೂ ಹೊರಕ್ಕೆ ಹೋಗತಕ್ಕವಳಲ್ಲ; ಅವಳನ್ನು ಭೇಟಿ ಮಾಡಲು ಬರತಕ್ಕವರೂ ಯಾರೂ ಇಲ್ಲ; ತನ್ನ ಶಕ್ತಿ ಮೀರಿ ಅವಳು ಪೂರ್ತಿ ಅಲಂಕರಿಸಿಕೊಂಡ ಮೇಲೆ ಅವಳನ್ನು ಕಂಡ ಯಾರೇ ಆಗಲಿ ತಮ್ಮ ದೃಷ್ಟಿಯನ್ನು ಅವಳ ಕಡೆಯಿಂದ ಬೇರೆಯ ಕಡೆಗೆ ತಿರುಗಿಸಿದರೆ ಅದೇ ಅವರು ಅವಳಿಗೆ ಮಾಡಬಹುದಾದ ಪರಮೋಪಕಾರ! ಹೀಗಿರುವಾಗ, ವಯಸ್ಸಾದ ಶರೀರವನ್ನು

ಅತ್ಯಂತ ನಾಜೂಕಾಗಿ ರಚಿತವಾಗಿದ್ದು, ಅದರ ನೀಳವಾದ ತೆಳ್ಳನೆಯ ನಾಲ್ಕು ಕಾಲುಗಳು ಎಷ್ಟು ದುರ್ಬಲವಾಗಿದ್ದುವೆಂದರೆ, ಅವುಗಳ ಮೇಲೆ ಆ ಪುರಾತನ ಉಪಾಹಾರದ ಮೇಜು ಅಷ್ಟೊಂದು ದೀರ್ಘಕಾಲ ಅದು ಹೇಗೆ ನಿಂತಿತ್ತೆಂಬುದನ್ನು ಬಹುಮಟ್ಟಿಗೆ ನಂಬಲಾಗುತ್ತಿರಲಿಲ್ಲ. ಕೊಟಡಿಯಲ್ಲಿ ಅಲ್ಲಲ್ಲಿ ಅರ್ಧ ಡಜನ್ ಕುರ್ಚಿಗಳು ನೆಟ್ಟಗೆ ನಿಮಿರಿ ನಿಂತಿದ್ದುವು; ಅವುಗಳಲ್ಲಿ ಕುಳಿತ ಮನುಷ್ಯಪ್ರಾಣಿಗೆ ತೊಂದರೆಯಾಗುವ ರೀತಿಯಲ್ಲಿ ಅವನ್ನು ಹೇಗೆ ಬುದ್ಧಿವಂತಿಕೆಯಿಂದ ನಿರ್ಮಿಸಲಾಗಿತ್ತೆಂದರೆ, ಅವುಗಳನ್ನು ನೋಡುವುದರಿಂದಲೇ ಮನಸ್ಸಿಗೆ ಕಿರಿ ಕಿರಿಯಾಗುತ್ತಿತ್ತು; ಹಾಗೂ ಅವುಗಳನ್ನು ಬಳಸುವುದಕ್ಕೆ ಒಗ್ಗಿಕೊಂಡಿದ್ದ ಸಮಾಜದ ಸ್ಥಿತಿಯ ಬಗೆಗೆ ಅತ್ಯಂತ ವಕ್ರ ಕಲ್ಪನೆಯನ್ನು ಉಂಟುಮಾಡುತ್ತಿದ್ದುವು. ಆದಾಗ್ಯೂ, ಇದಕ್ಕೆ ಹೊರತೆನಿಸಿ, ಬಹಳ ಪುರಾತನವಾದ ಮೊಣಕೈಯಾಸರೆಯ ಕುರ್ಚಿಯೊಂದಿತ್ತು; ಅದರ ಎತ್ತರವಾದ ಓಕ್‌ಮರದ ಬೆನ್ನು ತುಂಬ ಕೆತ್ತನೆ ಕೆಲಸ ಮಾಡಿದ್ದು; ಅದರಲ್ಲಿ ಈಗಿನ ಕಾಲದ ಕುರ್ಚಿಗಳಲ್ಲಿರುವಂತೆ ಕಲಾತ್ಮಕವಾದ ತಿರುವುಮುರುವುಗಳಿಲ್ಲದಿದ್ದರೂ, ಅದರ ತೋಳುಗಳ ನಡುವಣ ವಿಶಾಲವಾದ ಸ್ಥಳಾವಕಾಶವು ಅವುಗಳಿಲ್ಲದ ಕೊರತೆಯನ್ನು ಹೋಗಲಾಡಿಸಿತ್ತು.

ಅಲಂಕಾರದ ಪದಾರ್ಥಗಳ ವಿಷಯ ಹೇಳುವುದಾದರೆ, ಅವುಗಳನ್ನು ಹಾಗೆಂದು ಕರೆಯಬಹುದಾದ ಪಕ್ಷಕ್ಕೆ, ನಮಗೆ ಅಂಥವು ಎರಡು ಮಾತ್ರ ನೆನಪಿಗೆ ಬರುತ್ತವೆ. ಒಂದು, ಪೂರ್ವದ ಕಡೆಗಿದ್ದ ಪಿನ್ಚನ್ ಮನೆತನಕ್ಕೆ ಸೇರಿದ್ದ ಭೂಮಿಯ ಭೂಪಟ; ಅದು ಕೆತ್ತಿ ಮಾಡಿದ್ದಲ್ಲ, ಯಾವನೋ ಒಬ್ಬ ಕುಶಲಿಯಾದ ಹಳೆಯಕಾಲದ ನಕ್ಷೆಗಾರ ರಚಿಸಿದ್ದು; ಅದರಲ್ಲಿ (ಅಮೆರಿಕದ) ಇಂಡಿಯನ್ನರ ಮತ್ತು ವನ್ಯಮೃಗಗಳ ವಿಕಟಚಿತ್ರಗಳನ್ನು ವಿವರಣೆಯ ರೂಪದಲ್ಲಿ ಬಿಡಿಸಲಾಗಿದ್ದು, ಮೃಗಗಳ ನಡುವೆ ಒಂದು ಸಿಂಹವನ್ನೂ ಕಾಣಬಹುದಾಗಿತ್ತು; ಆ ಪ್ರಾಂತದ ಪ್ರಕೃತಿ ಚರಿತ್ರೆಯ ವಿಷಯವಾಗಿಯಾಗಲಿ, ಭೂಲಕ್ಷಣಗಳ ವಿಷಯವಾಗಿಯಾಗಲಿ ಇದ್ದ ತಿಳಿವಳಿಕೆ ಅಲ್ಪವಾದರೂ, ಅವುಗಳ ವಿನ್ಯಾಸ ಅತ್ಯಂತ ವಿಚಿತ್ರವೂ ವಕ್ರವೂ ಆಗಿತ್ತು. ಇನ್ನೊಂದು ಅಲಂಕಾರ ಎಂದರೆ, ವೃದ್ಧ ಸರದಾರ ಪಿನ್ಚನ್ನನ ಮೇಲಾಯದ ಭಾವಚಿತ್ರ: ಸರಿಗಿಯ ಪಟ್ಟಿಯಿದ್ದ ಗುತ್ತನಾದ ಮಕಮಲ್ ಟೋಪಿ ಧರಿಸಿದ್ದ, ನರೆಗೂದಲ ಗಡ್ಡದ ಸರದಾರನ ಚಿತ್ರದಲ್ಲಿ ಮಹಾ ನೇಮನಿಷ್ಠೆಯ ಪ್ಯೂರಿಟನ್ನಿನೊಬ್ಬನ ಕಠಿನ ಮುಖಲಕ್ಷಣಗಳನ್ನು ಕಾಣಬಹುದಾಗಿತ್ತು; ಸರದಾರನು ಒಂದು ಕೈಯಲ್ಲಿ ಬೈಬಲ್ ಗ್ರಂಥವನ್ನೂ, ಮೇಲೆತ್ತಿದ್ದ ಇನ್ನೊಂದು ಕೈಯಲ್ಲಿ ಕತ್ತಿಯ ಕಬ್ಬಿಣದ ಹಿಡಿಯನ್ನೂ ಹಿಡಿದಿದ್ದನು. ಕಲಾವಿದನು ಎರಡನೆಯ ವಸ್ತುವನ್ನು ಹೆಚ್ಚು ಯಶಸ್ವಿಯಾಗಿ

ಒರಸಿಕೊಳ್ಳಬೇಕಾಗಿದೆ. ಮತ್ತೆ ಅತ್ತಿಂದಿತ್ತ ಕೆಲವು ಹೆಜ್ಜೆಗಳು ಸಾಗಿವೆ; ಕಟ್ಟಕಡೆಗೆ, ಇಗೋ– ಬಹಳ ಕಾಲ ಮುಚ್ಚಿದ್ದ ನೆಲಮಾಳಿಗೆಯ ಬಾಗಿಲನ್ನು ಆಕಸ್ಮಿಕವಾಗಿ ತೆಟ್ಟಂದೆರೆದರೆ ಹೊರನುಗ್ಗುವ ಶೀತನಾದ ಕುಳಿರ್ಗಾಳಿಯ ಹೊಡೆತದ ಹಾಗಿದ್ದ ಕರುಣಾಜನಕವಾದ ನಿಟ್ಟುಸಿರನ್ನು ಇನ್ನೊಮ್ಮೆ ಬಿಡುತ್ತ– ಇಗೋ ಇಲ್ಲಿ ಬರುತ್ತಿದ್ದಾಳೆ ಕುಮಾರಿ ಹೆಪ್ಸಿಬಾ ಪಿನ್ಚನ್! ಕಾಲದಿಂದ ಮಾಸಿ ಮಸುಕು–ಮಸುಕಾದ ನಡುವೆಗೆ ಕಾಲಿಟ್ಟಿದ್ದಾಳೆ. ಎತ್ತರವಾದ ಆಕೃತಿ ಅವಳದ್ದು; ಕಪ್ಪು ರೇಶ್ಮೆಯ ಉಡುಪು ಧರಿಸಿದ್ದಾಳೆ; ನೀಳವಾದ ಕುಗ್ಗಿದ ನಡುವಿನಾಕೆ; ಸಮೀಪದೃಷ್ಟಿ ದೋಷವಿರುತ್ತಿದ್ದಾಳೆ; ನಿಜವಾಗಿ ಅವಳಿಗೆ ಆ ದೃಷ್ಟಿದೋಷವಿದೆ.

ಈ ನಡುವೆ, ಸೂರ್ಯನು ಈಗಾಗಲೇ ಬಾನಂಚಿನ ಮೇಲ್ಗಡೆ ಇರದಿದ್ದರೂ ಅದರ ಅಂಚಿನ ಹತ್ತಿರಹತ್ತಿರಕ್ಕೆ ಏರುತ್ತಿದ್ದನು. ಮೇಲೆ ಎತ್ತರದಲ್ಲಿ ತೇಲುತ್ತಿದ್ದ ಕೆಲವು ಮೋಡಗಳು ಮೊದಲ ಮುಂಬೆಳಕಿನಲ್ಲಿ ಮಿಂದು, ಅದರ ಹೊನ್ನ ಹೊಗರನ್ನು ಬೀದಿಯ ಎಲ್ಲ ಮನೆಗಳ ಕಿಟಕಿಗಳ ಮೇಲೂ ಬೀರುತ್ತಿದ್ದುವು; ಏಳು ಇಪ್ಪಾರಿನ ಮನೆಯನ್ನೂ ಅವು ಮರೆತಿರಲಿಲ್ಲ; ಅನೇಕ ಅಂತಹ ಸೂರ್ಯೋದಯಗಳನ್ನು ಕಂಡಿದ್ದ ಆ ಮನೆ ಇಂದಿನದನ್ನೂ ಉಲ್ಲಾಸದಿಂದಲೇ ದರ್ಶನಮಾಡಿತು. ಮಹಡಿಯ ಮೆಟ್ಟಲನ್ನು ಇಳಿದ ಮೇಲೆ ಹೆಪ್ಸಿಬಾ ಪ್ರವೇಶಿಸಿದ ಕೊಟಡಿಯ ಹೊರನೋಟವನ್ನೂ ಅಣಿಪಾಡನ್ನೂ ತಕ್ಕಮಟ್ಟಿಗೆ ಸ್ಪಷ್ಟವಾಗಿ ತೋರಗೊಡಲು ಆ ಪ್ರತಿಫಲಿತಕಾಂತಿ ನೆರವಾಗಿತ್ತು. ಆ ಕೊಟಡಿಯ ಗೋಡೆಯ ಕೆಳಭಾಗದಲ್ಲಿ ಮರದ ದಬ್ಬೆ ಮತ್ತು ಗಾರೆಯಿಂದ ಕಟ್ಟಿದ ಮೇಜು ಕಟ್ಟಿದ್ದು, ಉಳಿದ ಭಾಗಕ್ಕೆ ಕಪ್ಪು ಮರದ ಹಲಗೆ ಹೊದ್ದಿಸಿತ್ತು; ಮೇಲ್ಚಾವಣಿಗೆ ಅಡ್ಡನಾಗಿ ಒಂದು ಜಂತೆ ಹಾಕಿತ್ತು; ಅಲ್ಲಿದ್ದ ದೊಡ್ಡ ಬೆಂಕಿಕಾಯಿಸುವ ಒಲೆಗೂಡಿನ ಮೇಲ್ಬಡುವಿನ ಸುತ್ತ ಚಿತ್ರಗಳಿದ್ದ ಚದರಬಿಲ್ಲೆಗಳನ್ನು ಮೆಟ್ಟಿದ್ದು, ಈಗ ಆ ಗೂಡನ್ನು ಕಬ್ಬಿಣದ ಫಲಕದಿಂದ ಮುಚ್ಚಲಾಗಿತ್ತು; ಅದರ ಮೂಲಕ, ಈಗಿನ ಕಾಲದ ಅಗ್ಗಿಷ್ಟಿಕೆಯ ಲಾಳಿಕೆಗೊಳವೆ ಹಾದುಹೋಗಿತ್ತು. ನೆಲಕ್ಕೆ ರತ್ನಗಂಬಳಿ ಹಾಸಿತ್ತು; ಮೊದಲು ಒತ್ತಾಗಿ ನೆಯ್ದು ಮಂದವಾಗಿದ್ದ ಅದು ಇತ್ತೀಚಿನ ವರ್ಷಗಳಲ್ಲಿ ಅದೆಷ್ಟೊಂದು ಜೀರ್ಣವಾಗಿ ಮಾಸಿಹೋಗಿತ್ತೆಂದರೆ, ಒಮ್ಮೆ ಪ್ರಕಾಶಮಾನವಾಗಿದ್ದ ಅದರ ಚಿತ್ರಗಿತ್ರವೆಲ್ಲ ವ್ಯತ್ಯಾಸ ತಿಳಿಯಲಾಗದ ಒಂದು ಬಣ್ಣದಲ್ಲಿ ಅಡಗಿಹೋಗಿತ್ತು. ಇನ್ನು ಅಲ್ಲಿದ್ದ ಪೀಠೋಪಕರಣಗಳೆಂದರೆ, ಎರಡು ಮೇಜುಗಳು; ಒಂದು, ದಿಗ್ಭ್ರಮೆ ಹಿಡಿಸುವಂತಹ ತೊಡಕುತೊಡಕಾದ ರೀತಿಯಲ್ಲಿ ನಿರ್ಮಾಣವಾಗಿದ್ದು, 'ಸಾವಿರಕಾಲು' ಹುಳುವಿನಷ್ಟು ಕಾಲುಗಳನ್ನು ತೋರ್ಪಡಿಸುವಂಥದು; ಇನ್ನೊಂದು,

ಆಗಿದ್ದು, ತರತರ ನಡುಗುವುದು, ಪಟಪಟ ಬಡಿದುಕೊಳ್ಳುವುದು; ಅದು ಈ ದೌರ್ಬಲ್ಯಗಳನ್ನು ಹೊಂದಿದ್ದ ಸಮಯದಲ್ಲೇ, ಅವಳ ಮುಖಮುದ್ರೆಯು ವಿಪರೀತ ಮೂರ್ಖತೆಯ ಕಾಠಿನ್ಯವನ್ನು ಮಾತ್ರವಲ್ಲದೆ ಭೀಕರತೆಯನ್ನು ಕೂಡ ಬೆಳೆಯಿಸಿಕೊಳ್ಳುತ್ತಿತ್ತು. ಅಲ್ಲದೆ, ಅವಳು ಎಂದೂ ಯಾವ ಧೈರ್ಯವನ್ನೂ ತೋರಿದವಳಲ್ಲ; ಅದು ಇದ್ದರೆ, ಅವಳ ಅತ್ಯಂತ ಗಾಢವಾದ ಪ್ರೇಮಭಾವದಲ್ಲಿ ಮಾತ್ರ.

ಅದು ಹೇಗಾದರೂ ಇರಲಿ, ಇಷ್ಟು ಹೊತ್ತೂ ಕಥೆಯ ಹೊಸಿಲ ಬಳಿ ಮಾತ್ರ ನಾವು ಅಳುಕುಮನಸ್ಸಿನಿಂದ ಸುಳಿದಾಡುತ್ತಿದ್ದೇವೆ. ನಿಜನುಡಿಯುವುದಾದರೆ, ಕುಮಾರಿ ಹೆಪ್ಸಿಬಾ ಪಿನ್ಚನ್ ಏನನ್ನು ಮಾಡುವುದರಲ್ಲಿದ್ದಳು ಎಂಬುದನ್ನು ಏನುಮಾಡಿದರೂ ಬಿಟ್ಟುಕೊಡುವ ಮನಸ್ಸಿಲ್ಲ ನಮಗೆ.

ಬೀದಿಗೆ ಅಭಿಮುಖವಾಗಿದ್ದ ಇಪ್ಪಾರಿನ ಮೊದಲಂತಸ್ತಿನ ತಳಗಟ್ಟಡದಲ್ಲಿ ಸುಮಾರು ಒಂದು ಶತಮಾನದ ಹಿಂದೆ ಗಣ್ಯನಲ್ಲದೆ ಪೂರ್ವಿಕನೊಬ್ಬ ಒಂದು ಅಂಗಡಿಯನ್ನು ಜೋಡಿಸಿದ್ದನೆಂಬ ಸಂಗತಿಯನ್ನು ಈ ಹಿಂದೆಯೆ ಉಲ್ಲೇಖಿಸಿದೆ. ಆ ವೃದ್ಧ ಮಹನೀಯನು ವ್ಯಾಪಾರದಿಂದ ನಿವೃತ್ತನಾಗಿ ತನ್ನ ಶವಪೆಟ್ಟಿಗೆಯ ಮುಚ್ಚಳದಡಿಯಲ್ಲಿ ಮಲಗಿ ನಿದ್ರೆ ಹೋದಂದಿನಿಂದ ಅಂಗಡಿಯ ಬಾಗಿಲು ಮಾತ್ರವಲ್ಲದೆ ಒಳಗಿನ ಅಣಿಪಾಡು ಕೂಡ ವ್ಯತ್ಯಾಸವಾಗದೆ ಇದ್ದಹಾಗೆಯೆ ಇದ್ದಿತು; ಬಡುಗಳ ಮೇಲೂ ದುಡ್ಡೆಣಿಸುವ ಮೇಜಿನ ಮೇಲೂ ಯುಗ ಯುಗಾಂತರದ ಧೂಳು ಅಂಗುಲದೆತ್ತರ ಶೇಖರವಾಗಿ, ತೂಕಮಾಡಬೇಕಾದಷ್ಟು ಬೆಲೆಬಾಳುವ ಪದಾರ್ಥವೆಂಬಂತೆ ಒಂದು ಹಳೆಯ ತಕ್ಕಡಿಯ ತಟ್ಟೆಗಳಲ್ಲಿ ಅರ್ಧದಷ್ಟು ಭರ್ತಿಯಾಗಿತ್ತು. ಅಲ್ಲದೆ, ಅರೆತೆರೆದಿದ್ದ 'ಗಲ್ಲ'ದಲ್ಲಿ ಅದು ನಿಧಿಯಾಗಿ ನೆಲಸಿತ್ತು; ಅಲ್ಲಿ ಒಂದು ಖೋಟಾ ಅರ್ಧಪೆನ್ನಿ ನಾಣ್ಯವು ಇನ್ನೂ ಉಳಿದುಕೊಂಡಿತ್ತು; ಹೀನಾಯಕ್ಕೆ ಒಳಗಾಗಿದ್ದ ವಂಶದ ಬಿಗುಮಾನದ ಬೆಲೆಗಿಂತ ಅದರ ಬೆಲೆ ಹೆಚ್ಚೂ ಇರಲಿಲ್ಲ, ಕಡಮೆಯೂ ಇರಲಿಲ್ಲ. ಮುದಿ ಹೆಪ್ಸಿಬಾ ಮಗುವಾಗಿದ್ದಾಗ ಅವಳೂ ಅವಳ ಸೋದರನೂ ಆ ಚಿಕ್ಕ ಅಂಗಡಿಯ ಒಳಗೆ ಯಾರೂ ಸುಳಿಯದಿದ್ದ ಅಕ್ಕಪಕ್ಕದೆಡೆಗಳಲ್ಲಿ ಕಣ್ಣು ಮುಚ್ಚಾಲೆಯಾಡುತ್ತಿದ್ದಾಗ, ಅದರ ಸ್ಥಿತಿಗತಿ ಹಾಗೆಯೇ ಇದ್ದಿತು, ಹಾಗೆಯೇ ಉಳಿದುಕೊಂಡುಬಂದಿತ್ತು, ಕೆಲದಿನಗಳ ಹಿಂದಿನವರೆಗೆ.

ಎಲ್ಲ ಜನರ ದೃಷ್ಟಿ ಬೀಳದ ಹಾಗೆ ಅಂಗಡಿಯ ಕಿಟಕಿಗೆ ಈಗಲೂ ದಟ್ಟ ತೆರೆಹಾಕಿತ್ತು; ಆದರೆ, ಈಗ ಅದರ ಒಳಗಡೆ ಒಂದು ಗಮನಾರ್ಹವಾದ

ಚಿತ್ರಿಸಿದ್ದುದರಿಂದ ಅದು ಪವಿತ್ರ ಗ್ರಂಥಕ್ಕಿಂತ ಹೆಚ್ಚು ಪ್ರಮುಖವಾಗಿ ಎದ್ದು ಕಾಣುತ್ತಿತ್ತು. ಕುಮಾರಿ ಹೆಪ್ಸಿಬಾ ಪಿನ್ಚನ್ ಕೊಟಡಿಯನ್ನು ಪ್ರವೇಶಿಸಿದಾಗ ಈ ಚಿತ್ರಕ್ಕೆ ಎದುರುಬದುರಾಗಿ ತಡೆದು ನಿಂತಳು; ವಿಲಕ್ಷಣವಾಗಿ ಮುಖ ಸಿಂಡರಿಸಿಕೊಂಡು, ವಿಚಿತ್ರವಾಗಿ ಹುಬ್ಬುಗಂಟುಹಾಕಿ, ಅದನ್ನು ನೋಡಿದಳೂ; ಅವಳನ್ನು ಅರಿಯದ ಜನ ಅವಳ ಈ ಮುಖಭಾವವನ್ನು ಕಡುಗೋಪದ ಹಾಗೂ ದ್ವೇಷದ ಕುರುಹೆಂದು ಬಹುಶಃ ಅರ್ಥಮಾಡುತ್ತಿದ್ದರು. ಆದರೆ ಅದು ಹಾಗೇನೂ ಆಗಿರಲಿಲ್ಲ. ವಾಸ್ತವವಾಗಿ, ಆ ಚಿತ್ರಿತ ಮುಖದ ವಿಷಯವಾಗಿ ಆಕೆಗೆ ಪೂಜ್ಯಭಾವನೆ ಇದ್ದಿತು; ಬಹು ದೂರದ ವಂಶಜಳೂ ಕಾಲಪುರುಷನ ಹೊಡೆತಕ್ಕೆ ಸಿಲುಕಿದ ಕನ್ಯೆಯೂ ಆದವಳಲ್ಲಿ ಮಾತ್ರ ಅಂಥ ಭಾವವುಂಟಾಗುವುದು ಸಾಧ್ಯ. ಅವಳ ಈ ನಿರೋಧಕವಾದ ಸಿಡುಕುಮೋರೆ ಅವಳ ಸಮೀಪ ದೃಷ್ಟಿಯ ನಿರ್ದುಷ್ಟ ಪರಿಣಾಮಮಾತ್ರ; ಹಾಗೂ, ನೋಡುವ ವಸ್ತುವಿನ ಅಸ್ಪಷ್ಟ ಸ್ಥೂಲಾಕೃತಿಯ ಸ್ಥಾನದಲ್ಲಿ ಖಚಿತವಾದ ಆಕೃತಿಯನ್ನು ಕಾಣಲೋಸುಗ ತನ್ನ ದೃಷ್ಟಿಪಾಟಲವನ್ನೆಲ್ಲ ಒಂದು ಕಡೆ ಶೇಖರಿಸುವ ಒಂದು ಪ್ರಯತ್ನವಷ್ಟೆ.

ಬಡಪಾಯಿ ಹೆಪ್ಸಿಬಾನ ಈ ದೌರ್ಭಾಗ್ಯದ ಭ್ರೂಭಂಗಿಯ ಸಂಬಂಧವಾಗಿ ನಾವು ಒಂದು ಕ್ಷಣ ತಳುವಬೇಕಾಗಿದೆ. ಕಿಟಕಿಯ ಮೂಲಕ ಅವಳ ಕ್ಷಣಿಕದರ್ಶನವನ್ನು ಪಡೆದ ಲೋಕ, ಅಥವಾ ಅದನ್ನು ಪಡೆದಂಥ ಲೋಕಭಾಗ, ಅವಳ ಹುಬ್ಬುಗಂಟಿನ ಮುಖಭಾವವನ್ನು ಸಿಡುಕುಮೋರೆ ಎಂದು ಕ್ರೂರವಾಗಿ ಕರೆಯುವ ಛಲ ತೊಟ್ಟಿತ್ತು; ಕುಮಾರಿ ಹೆಪ್ಸಿಬಾನ ವ್ಯಕ್ತಿತ್ವವನ್ನು 'ಸಿಡುಕುಮೋರೆಯ ವೃದ್ಧಕನ್ಯೆ' ಎಂದು ಸ್ಥಿರಪಡಿಸಲು ನೆರವಾಗಿ, ಅವಳ ಸಿಡುಕುಮೋರೆ ಅವಳಿಗೆ ದೊಡ್ಡ ಅಪಕಾರವನ್ನೆಸಗಿತ್ತು. ಅಲ್ಲದೆ, ಮಸುಕುಮಸುಕಾದ ಕನ್ನಡಿಯಲ್ಲಿ ತನ್ನ ಸ್ವರೂಪವನ್ನೇ ಪದೇ ಪದೇ ನಿಟ್ಟಿಸುತ್ತ, ಅದರ ಪೈಶಾಚಿಕ ವರ್ತುಲದಲ್ಲಿ ತನ್ನ ಹುಬ್ಬುಗಂಟನ್ನೇ ನಿರಂತರವೂ ಎದುರುಗಾಣುತ್ತ, ಆ ಮುಖಭಾವವನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುವುದರಲ್ಲಿ ಪ್ರಪಂಚ ಎಂಥ ಅನ್ಯಾಯಮಾಡಿತ್ತೋ ಬಹುಮಟ್ಟಿಗೆ ಅಂಥದೇ ಅನ್ಯಾಯವನ್ನು ತನಗೆ ತಾನೇ ಮಾಡಿಕೊಂಡಿದ್ದಳವಳು. "ಎಂಥ ಹಾಳು ಸಿಡುಕು–ಸ್ವಭಾವದವಳ ಹಾಗೆ ಕಾಣುತ್ತೇನಿ ನಾನು!" ಎಂದು ಅವಳು ಅನೇಕವೇಳೆ ತನಗೆ ತಾನು ಪಿಸುಗುಟ್ಟಿಕೊಂಡಿರಬೇಕು; ಕಟ್ಟ ಕಡೆಗೆ, ಅನಿವಾರ್ಯವಾದ ದುಷ್ಪ್ರಾಪ್ತಿಯಿದು ಎಂಬ ಭಾವನೆಯಿಂದ, ತಾನು ಇರುವುದು ಹಾಗೆಯೆ ಸರಿ ಎಂದುಕೊಂಡಿರಬೇಕು ಅವಳು. ಆದರೆ ಅವಳ ಹೃದಯ ಎಂದೂ ಸಿಡುಕುತೋರಿದ್ದಿಲ್ಲ; ಅದು ಸ್ವಾಭಾವಿಕವಾಗಿಯೇ ಕೋಮಲವೂ ಸೂಕ್ಷ್ಮವೂ

ಚೆನ್ನಾಗಿ ಪೊಟ್ಟಣಗಟ್ಟಿಟ್ಟಿದ್ದ ಸೊಗಸಾದ ಕಲ್ಲುಸಕ್ಕರೆ ಚೂರುಗಳಷ್ಟೆ! ಇದೂ ಅಲ್ಲದೆ, 'ಜಿಂಜರ್ ಬ್ರೆಡ್'ನಿಂದ (ಶುಂಠಿರೊಟ್ಟಿ) ಮಾಡಿದ್ದ 'ಜಿಂ ಕ್ರೋ' ಎಂಬವನ ಬೊಂಬೆಯೂ ಇತ್ತು; ಅವನು ತನ್ನ ಜಗತ್ ಪ್ರಸಿದ್ಧವಾದ ನೃತ್ಯವನ್ನು ನರ್ತಿಸುತ್ತಿರುವ ಭಂಗಿಯಲ್ಲಿತ್ತು ಆ ಬೊಂಬೆ. ಆಧುನಿಕ ರೀತಿಯ ಸಮವಸ್ತ್ರ ಧರಿಸಿ ಸುಸಜ್ಜಿತವಾಗಿದ್ದ; ಸೀಸದಿಂದ ನಿರ್ಮಿಸಿದ ರಾವುತ ತಂಡವೊಂದು ಒಂದು ಬಡುವಿನಮೇಲೆ ಉದ್ದಕ್ಕೆ ನಾಗಾಲೋಟದಲ್ಲಿ ಸಾಗಿತ್ತು. ಕೆಲವು ಸಕ್ಕರೆ ಗೊಂಬೆಗಳೂ ಇದ್ದುವು; ಅವು ಯಾವ ಕಾಲದ ಮನುಷ್ಯ ಜಾತಿಯ ಹೋಲಿಕೆಯನ್ನೂ ಹೊಂದಿರಲಿಲ್ಲ; ಅವುಗಳ ಉಡಿಗೆ ತೊಡಿಗೆಯ ಮಾದರಿಗಳನ್ನು ನೋಡಿದರೆ, ಅವು ನೂರು ವರ್ಷದ ಹಿಂದಿನವಕ್ಕಿಂತ ತಮ್ಮ ಕಾಲದ ಮಾದರಿಗಳನ್ನು ಅಷ್ಟೇನೂ ಅತೃಪ್ತಿಕರವಾಗಿರದಂತೆ ಅನುಸರಿಸಿದ್ದುವು. ಇವೆಲ್ಲಕ್ಕಿಂತ ಹೆಚ್ಚು ಆಧುನಿಕವಾಗಿ ಕಾಣುತ್ತಿದ್ದ ಇನ್ನೊಂದು ಸಂಗತಿ ಎಂದರೆ, ಅಲ್ಲಿದ್ದ ಗೀಚು ಬೆಂಕಿಕಡ್ಡಿಯ ಪೊಟ್ಟಣ. ಹಿಂದಿನ ಕಾಲದಲ್ಲಿಯಾಗಿದ್ದರೆ, ಆ ಬೆಂಕಿಯ ಕಡ್ಡಿಗಳು ಅಧೋಲೋಕವಾದ ನರಕದ ಅಗ್ನಿಯ ಸಂಪರ್ಕದಿಂದಲೇ ಹಾಗೆ ಕೂಡಲೇ ಹೊತ್ತಿಕೊಳ್ಳುತ್ತಿದ್ದುವು ಎಂದು ಜನ ಬಗೆಯುತ್ತಿದ್ದರು.

ಸಂಕ್ಷಿಪ್ತವಾಗಿ ಹೇಳಿ ಈ ವಿಷಯವನ್ನು ಈ ಕೂಡಲೆ ವಿರಮಿಸುವುದಾದರೆ, ಇಷ್ಟಂತೂ ನಿರ್ವಿವಾದವಾಗಿ ಸ್ಪಷ್ಟ: ಬಹಳ ಹಿಂದೆಯೇ ಅಂಗಡಿಯ ಕೆಲಸ ಬಿಟ್ಟು ಮರೆತುಹೋಗಿದ್ದ ಪಿನ್ಚನ್ನನಿಂದ ಅಂಗಡಿಯನ್ನೂ ಅದಕ್ಕೆ ಜೋಡಿಸಿದ್ದ ಸಾಮಾನು ಸರಂಜಾಮನ್ನೂ ಯಾರೋ ವಹಿಸಿಕೊಂಡಿದ್ದರು; ಅಲ್ಲದೆ, ಬೇರೆಯ ಗಿರಾಕಿಗಳ ಪಂಗಡವನ್ನು ನಂಬಿಕೊಂಡು, ಆ ದಿವಂಗತ ಮಹನೀಯನ ಉದ್ಯಮವನ್ನು ಹೊಸದಾಗಿ ಪ್ರಾರಂಭಮಾಡುವುದರಲ್ಲಿದ್ದರು. ಈ ಕೆಚ್ಚಿನ ಸಾಹಸಿಗ ಯಾರಾಗಿರಬಹುದು? ಅಲ್ಲದೆ, ಪ್ರಪಂಚದ ಎಲ್ಲಾ ಸ್ಥಳಗಳನ್ನೂ ಬಿಟ್ಟು ಆತ ತನ್ನ ವಾಣಿಜ್ಯವ್ಯವಹಾರದ ಆಶಾಗೋಪುರವನ್ನು ಕಟ್ಟಲು ಏಳು ಇಪ್ಪಾರಿನ ಮನೆಯನ್ನೇಕೆ ಆಯ್ದುಕೊಂಡಿದ್ದನು?

ಇನ್ನು ಆ ವೃದ್ಧಕನ್ಯೆಯತ್ತ ಹಿಂದಿರುಗೋಣ. ಕಟ್ಟ ಕಡೆಗೆ ಆಕೆ ಸರದಾರ ಪಿನ್ಚನ್ನನ ಭಾವಚಿತ್ರದತ್ತ ವಿಷಣ್ಣವದನದಿಂದ ತನ್ನ ದೃಷ್ಟಿಯನ್ನು ಹೊರಳಿಸಿದಳು, ಒಮ್ಮೆ ನಿಟ್ಟುಸಿರುಗರೆದಳು; ವಾಸ್ತವವಾಗಿ ಅಂದಿನ ಬೆಳಗ್ಗೆ ಅವಳ ಎದೆ ಕತ್ತಲೆಗವಿಯಾಗಿತ್ತು. ವಯಸ್ಸಾದ ಹೆಂಗಸರು ರೂಢಿಯಾಗಿ ನಡೆಯುವ ರೀತಿಯಲ್ಲಿ ಆಕೆ ಕೋಣೆಯ ಅಡ್ಡಲಾಗಿ ಮೆಟ್ಟುಂಗಾಲಿನಲ್ಲಿ ನಡೆದು ಹೋದಳು. ಮಧ್ಯೆ ಇದ್ದ ನಡುವೆಯೊಂದನ್ನು ಹಾದುಹೋಗಿ, ಈಗ ತಾನೆ ಬಹು ವಿವರವಾಗಿ

ವ್ಯತ್ಯಾಸವಾಗಿತ್ತು. ಒಳಮಾಳಿಗೆಯಲ್ಲಿ ಸಮೃದ್ಧವಾಗಿ ಕಟ್ಟಿದ್ದ ಜೇಡರ ಬಲೆಯ ತೋರಣಗಳನ್ನು ಎಚ್ಚರಿಕೆಯಿಂದ ತೊಡೆದುಹಾಕಿತ್ತು; ಅದನ್ನು ನೂತು ನೇಯಲು ಜೇಡರ ಹುಳುಗಳ ಪೀಳಿಗೆಯ ದೀರ್ಘಪರಂಪರೆಗೆ ಅವುಗಳ ಜೀವಮಾನದ ದುಡಿಮೆ ಅಗತ್ಯವಾಗಿತ್ತು. ದುಡ್ಡೆಣಿಸುವ ಮೇಜು, ಬಡುಗಳು, ನೆಲ–ಇವನ್ನೆಲ್ಲ ಉಜ್ಜಿ ಒರಸಲಾಗಿತ್ತು; ನೆಲದ ಮೇಲೆ ಹೊಸದಾದ ನೀಲಿಯ ಮರಳನ್ನು ಹರಡಿತ್ತು. ಕಂದುತಿರುಗಿದ್ದ ತಕ್ಕಡಿಗಳನ್ನು ಕೂಡ ಈ ಉಗ್ರ ಕಾರ್ಯಕ್ರಮಕ್ಕೆ ಒಳಪಡಿಸಿದ್ದುದು, ಸ್ಪಷ್ಟವಾಗಿಯೆ ಇತ್ತು; ಆದರೆ ಮಾತ್ರ, ಅದನ್ನು ಕೊರೆದು ಕೊರೆದು ಒಳಗೆಲ್ಲಾ ತಿಂದಿದ್ದ ತುಕ್ಕನ್ನು ಉಜ್ಜಿ ಹಾಕಲು ಮಾಡಿದ ಪ್ರಯತ್ನವೆಲ್ಲ ನಿಷ್ಫಲವಾಗಿತ್ತು, ಪಾಪ! ಅಲ್ಲದೆ, ಈ ಚಿಕ್ಕ ಹಳೆಯ ಅಂಗಡಿ ಮೊದಲಿನ ಹಾಗೆ ಮಾರಾಟದ ಸರಕಿಲ್ಲದೆ ಬರಿದಾಗಿಯೂ ಇರಲಿಲ್ಲ. ಅಂಗಡಿಯ ದಾಸ್ತಾನಿನ ಲೆಕ್ಕ ಹಿಡಿದು, ದುಡ್ಡೆಣಿಸುವ ಮೇಜಿನ ಹಿಂಭಾಗದಲ್ಲಿ ಶೋಧನೆಮಾಡುವ ಹಕ್ಕನ್ನೂ ಕುತೂಹಲವನ್ನೂ ಹೊಂದಿದ್ದವರೆಗೆ ಅಲ್ಲಿ ಒಂದು– ಒಂದೇಕೆ, ಎರಡು ಮೂರು ಪೀಪಾಯಿಗಳು ಮತ್ತೆ ಒಂದು ಪೀಪಾಯಿ– ಕಾಣಸಿಕ್ಕುತ್ತಿದ್ದುವು. ಅವುಗಳಲ್ಲಿ ಒಂದರ ತುಂಬ ಹಿಟ್ಟು, ಇನ್ನೊಂದರಲ್ಲಿ ಸೇಬು, ಮೂರನೆಯದರಲ್ಲಿ ಬಹುಶಃ 'ಇಂಡಿಯ'ದ ಹಿಟ್ಟು ಇದ್ದುವು. ಅದೇ ರೀತಿ, ಪೀತದಾರು ಮರದಿಂದ ಮಾಡಿದ ಚೌಕನೆಯ ಪೆಟ್ಟಿಗೆಯೊಂದಿದ್ದು, ಅದರ ತುಂಬ ಸಾಬೂನಿನ 'ಬಾರು' (ಉದ್ದ ತುಂಡು) ಗಳಿದ್ದುವು; ಅಂತಹದೇ ಇನ್ನೊಂದು ಪೆಟ್ಟಿಗೆ ಸಹ ಇದ್ದಿತು; ಅದರಲ್ಲಿ, ಒಂದು ಪೌಂಡ್ ತೂಕಕ್ಕೆ ಹತ್ತು ತೂಗುವ ಕೊಬ್ಬಿನ ಮೋಂಬತ್ತಿಗಳಿದ್ದುವು. ಯಾವಾಗಲೂ ಗಿರಾಕಿಯಿದ್ದು, ಹೆಚ್ಚಿನ ಪ್ರಮಾಣದಲ್ಲಿದ್ದ ಸರಕು ಎಂದರೆ– ಒಂದಿಷ್ಟು ಕಂದುಬಣ್ಣದ ಸಕ್ಕರೆ, ಸ್ವಲ್ಪ ಬಿಳಿಯ ತಿಂಗಳಹುರಳಿ, ಒಡೆದ ಬಟಾಣಿಕಾಳು, ಹಾಗೂ ಕಡಮೆ ಬೆಲೆಯ ಇತರ ಕೆಲವು ಪದಾರ್ಥಗಳು. ಇದನ್ನೆಲ್ಲ ನೋಡಿದರೆ, ಹಿಂದೆ ಅಂಗಡಿ ಇಟ್ಟಿದ್ದ ಅಂಗಡಿಕಾರ ಪಿನ್ಚನ್ನನು ಬಡುಗಳ ಮೇಲೆ ಅವ್ಯವಸ್ಥೆಯಲ್ಲಿ ಇರಿಸಿದ್ದ ಪದಾರ್ಥಗಳ ಪ್ರೇತರೂಪವೋ ಮಾಯಾರೂಪವೋ ಇಲ್ಲಿ ಅವತರಿಸಿರುವಂತೆ ಕಾಣುತ್ತಿತ್ತು; ಆದರೆ, ಕೆಲವು ಪದಾರ್ಥಗಳ ಲಕ್ಷಣವನ್ನೂ ಹೊರ ಸ್ವರೂಪವನ್ನೂ ಗಮನಿಸಿದರೆ, ಅವು ಆತನ ಕಾಲದಲ್ಲಿ ಯಾರಿಗೂ ಗೊತ್ತೇ ಇರಲಿಲ್ಲವೆನ್ನಬಹುದು. ಉದಾಹರಣೆಗಾಗಿ, ಉಪ್ಪಿನಕಾಯಿ ಹಾಕುವ ಗಾಜಿನ ಜಾಡಿಯೊಂದಿತ್ತು; ಅದರ ತುಂಬ 'ಜಿಬ್ರಾಲ್ಟರ್' ಕಲ್ಲಿನ ಚೂರುಗಳು ತುಂಬಿದ್ದವು; ಎಂದರೆ, ಪ್ರಸಿದ್ಧವಾದ ಜಿಬ್ರಾಲ್ಟರ್ ದುರ್ಗಕ್ಕೆ ಕಲ್ಲಿನ ಅಡಿಪಾಯದಂತಿರುವ ಬಂಡೆಯ ಚೂರುಗಳಲ್ಲ, ಬಿಳಿಯ ಕಾಗದದಲ್ಲಿ

ಆನೆಯಲ್ಲ, ಬೂಷ್ಟು ಹಿಡಿದ ಶುಂಠಿರೊಟ್ಟಿಯ ಕೆಲವು ಚೂರುಗಳು, ಅಷ್ಟೆ. ಅಗೋ, ಮತ್ತೆ ಅವಳು ಗೋಲಿಗಳು ತುಂಬಿದ್ದ ಲೋಟವನ್ನು ಉರುಟಿಸಿ ಬಿಟ್ಟಳು; ಎಲ್ಲವೂ ದಿಕ್ಕಾಪಾಲಾಗಿ ಉರುಳಿಹೋಗುತ್ತಿವೆ; ಇದು ಭೂತಚೇಷ್ಟೆಯೋ ಏನೋ ಎಂಬಂತೆ, ಒಂದೊಂದು ಗೋಲಿಯೂ ಒಂದೊಂದು ಕಾಣದ ಮೂಲೆ ಮುಡುಕನ್ನು ಹುಡುಕಿಕೊಂಡು ಹೋಗಿದೆ. ಪಾಪ, ಈ ಬಡ ಮುದಿ ಹೆಪ್ಸಿಬಾಗೆ ದೈವವೇ ಸಹಾಯಮಾಡಬೇಕು; ಅವಳ ಪೇಚಾಟವನ್ನು ಕಂಡು ಪರಿಹಾಸಮಾಡುತ್ತಿರುವ ನಮ್ಮನ್ನು ಆ ದೈವವೇ ಕ್ಷಮಿಸಬೇಕು! ಕಳ್ಳ ತಪ್ಪಿಸಿಕೊಂಡ ಗೋಲಿಗಳನ್ನು ಹುಡುಕುವುದಕ್ಕಾಗಿ ಶಿಥಿಲವಾದ ಅವಳ ಕಟ್ಟಿಗೆ ಮೈ ಈಗ ಅಂಬೆಗಾಲಿಡುತ್ತಿದೆ; ಈ ಸ್ಥಿತಿಯಲ್ಲಿ ಅವಳನ್ನು ಕಂಡು ಪಕ್ಕಕ್ಕೆ ತಿರುಗಿ ನಗಬೇಕು ನಾವು; ಆದರೆ ಅದೇ ವೇಳೆಯಲ್ಲಿ ಅವಳ ಬಗೆಗೆ ಕನಿಕರದಿಂದ ಕಂಬನಿಗರೆಯಬೇಕೆನಿಸುತ್ತದೆ. ಏಕೆಂದರೆ, ಸಾಮಾನ್ಯ ಜೀವನದಲ್ಲಿ ಸಂಭವಿಸುವ ನಿಜಕ್ಕೂ ನಿಜವಾದ ದುಃಖದ ಸಂಗತಿಗಳಲ್ಲಿ ಒಂದು ಇಲ್ಲಿದೆ– ಇದನ್ನು ಓದುಗರಿಗೆ ಮನದಟ್ಟಾಗುವಂತೆ ಅರುಹಲು ನಾವು ತಪ್ಪಿದರೆ, ತಪ್ಪು ನಮ್ಮದಾದೀತೆ ಹೊರತು ಕಥಾವಸ್ತುವಿನದಲ್ಲ. ಯಾವುದು ತಾನು ಶ್ರೀಮಂತವರ್ಗ ಎಂದು ಕರೆದುಕೊಂಡಿತ್ತೊ ಆ ವರ್ಗದ ಶ್ರೀಮಂತಿಕೆಯ ಸಾವು ಸಂಕಟದ ಕಡೆಯ ಉದ್ಗಾರವಾಗಿತ್ತು ಅದು. ಈ ಆಗರ್ಭ ಶ್ರೀಮಂತ ಮಹಿಳೆ ತಾನು ಮಗುವಾಗಿದ್ದ ಕಾಲದಿಂದಲೂ ತನ್ನ ಶ್ರೀಮಂತಿಕೆಯ ನೆನಪುಗಳನ್ನೇ ಮೇಲುಕು ಹಾಕುತ್ತ ಅವುಗಳನ್ನು ತನ್ನ ಆಹಾರವಾಗಿ ಮಾಡಿಕೊಂಡಿದ್ದಳು; ಕುಲೀನೆಯೆನಿಸಿದವಳು ಹೊಟ್ಟೆಯ ಪಾಡಿಗಾಗಿ ಯಾವ ಕೆಲಸ ಮಾಡಿದರೂ ಅವಳ ಕೈ ಕೊಳೆಯಾಗುತ್ತದೆ, ಏನು ಮಾಡಿದರೂ ಆ ಕೊಳೆ ಹೋಗುವುದಿಲ್ಲ– ಎಂಬ ಭಾವನೆ ಅವಳ ಮತ ಧರ್ಮವೆನಿಸಿತ್ತು; ಇಂಥವಳು, ಜೀವನಾಧಾರಕ್ಕಾಗಿ ಇದ್ದು ಬದ್ದುದೆಲ್ಲ ಕರಗುತ್ತ ಬಂದು ಅರುವತ್ತು ವರ್ಷಕಾಲ ಕಳೆದಮೇಲೆ ಈಗ ತನ್ನ ಕಾಲ್ಪನಿಕ ಶ್ರೀಮಂತಿಕೆಯ ಪೀಠದಿಂದ ಸಂತೋಷವಾಗಿ ಇಳಿಯಲು ಸಿದ್ಧವಾಗಿದ್ದಾಳೆ. ಜೀವಮಾನ ಕಾಲವೆಲ್ಲ ಬಹುಹತ್ತಿರವಾಗಿ ಹಿಂಬಾಲಿಸಿದ್ದ ದಾರಿದ್ರ್ಯ ಈಗ ಅವಳ ಜೊತೆಗೂಡಿ ನಿಂತಿದೆ. ಅವಳು ತನ್ನ ಅನ್ನವನ್ನು ತಾನು ದುಡಿದು ಸಂಪಾದಿಸಬೇಕು, ಇಲ್ಲವೋ ಉಪವಾಸವಿರಬೇಕು! ಉಚ್ಚವರ್ಗದ ಶ್ರೀಮಂತ ಮಹಿಳೆ ಕೀಳುವರ್ಗದ ಸಾಮಾನ್ಯ ಹೆಂಗುಸಾಗಿ ಪರಿವರ್ತನೆ ಹೊಂದಲಿರುವ ಕ್ಷಣದಲ್ಲಿಯೇ ಆಕೆಯನ್ನು– ಕುಮಾರಿ ಹೆಪ್ಸಿಬಾ ಪಿನ್ಚನ್ನಳನ್ನು– ಬಹು ಅಗೌರವವಾದ ರೀತಿಯಲ್ಲಿ ಕದ್ದು ನೋಡಹೋಗಿದ್ದೇವೆ ನಾವು.

ವರ್ಣಿಸಿರುವ ಅಂಗಡಿಯೊಂದಿಗೆ ಸಂಪರ್ಕಕಲ್ಪಿಸಿದ್ದ ಬಾಗಿಲೊಂದನ್ನು ತೆರೆದಳು. ಅಲ್ಲಿನ ನಸುಬೆಳಕು ಎಷ್ಟರ ಮಟ್ಟಿಗೆ ಬೆಳಗಿಗೆ ಹೊಂದಿ ಕೊಂಡಿತ್ತೋ ಅಷ್ಟರ ಮಟ್ಟಿಗೆ ಇರುಳಿಗೂ ಇನ್ನೂ ಕೂಡಿಕೊಂಡಿತ್ತು; ಇವಕ್ಕೆ ಕಾರಣ, ಮೇಲಂತಸ್ತಿನ ಮುಂಚಾಚು; ಅದಕ್ಕಿಂತ ಹೆಚ್ಚಾಗಿ, ನೇರವಾಗಿ ಇಪ್ಪಾರಿನ ಮುಂದುಗಡೆ ನಿಂತಿದ್ದ ಪಿನ್ಚನ್ ಎಲ್ಮ್ ಮರದ ದಟ್ಟವಾದ ನೆರಳು. ಕುಮಾರಿ ಹೆಪ್ಸಿಬಾ ಇನ್ನೊಮ್ಮೆ ನೀಳವಾಗಿ ನಿಟ್ಟುಸಿರುಬಿಟ್ಟಳು. ಅವಳು ಹೊಸಲಿನ ಮೇಲೆ ಒಂದು ಕ್ಷಣ ನಿಂತಳು; ಯಾರೋ ಕಡುವೈರಿಯನ್ನು ಕೋಪದಿಂದ ದುರುಗುಟ್ಟು ನೋಡುವಂತೆ, ಸಮೀಪದೃಷ್ಟಿ ದೋಷಕ್ಕೆ ಸಹಜವಾದ ಹುಬ್ಬುಗಂಟು ಹಾಕಿಕೊಂಡು ಕಿಟಕಿಯ ಮೂಲಕ ಇಣಿಕಿ ನೋಡುತ್ತ, ಅವಳು ತಟ್ಟನೆ ಅಂಗಡಿಯೊಳಕ್ಕೆ ಧಾವಿಸಿದಳು. ಆಗ ಅವಳು ತೋರಿದ ಆತುರ, ಚಲನೆಯ ಚುರುಕು– ಇವು ನಿಜವಾಗಿ ಬೆರಗುಗೊಳಿಸುವಂತಿದ್ದುವು.

ಅವಳು ಅಳುಕುತ್ತ ಅಳುಕುತ್ತ ಬಡುಗಳ ಮೇಲೂ ಅಂಗಡಿ ಕಿಟಕಿಯ ಬಳಿಯೂ ಕೆಲವು ಮಕ್ಕಳ ಆಟದ ಸಾಮಾನುಗಳನ್ನೂ ಇತರ ಚಿಕ್ಕ ಚಿಕ್ಕ ಸಾಮಾನುಗಳನ್ನೂ ಅಣಿಗೊಳಿಸುವ ಕೆಲಸದಲ್ಲಿ ತೊಡಗಿದಳು; ಆಗ, ಅವಳ ಮನಸ್ಸು ಒಂದು ವಿಧವಾಗಿ ಬಹುಮಟ್ಟಿಗೆ ತಲ್ಲಣಗೊಂಡಿತ್ತು ಎಂದೇ ಹೇಳಬಹುದು. ಕರಿಯುಡುಪು ಧರಿಸಿದ್ದ, ಬಿಳಿಚಿಕೊಂಡ ಮುಖದ ಈ ವೃದ್ಧ ಮಹಿಳೆಯ ನೋಟದಲ್ಲಿ ಅದೊಂದು ಬಗೆಯ ಆಗಾಧವಾದ ದುಃಖ ಸೂಚಕ ಲಕ್ಷಣವಿತ್ತು; ಅದಕ್ಕೂ, ಅವಳ ಕೆಲಸದ ಹಾಸ್ಯಾಸ್ಪದವಾದ ಸಣ್ಣತನಕ್ಕೂ ತಾಳಮೇಳವೇ ಆಗುತ್ತಿರಲಿಲ್ಲ. ವಿಷಣ್ಣವದನದ ಈ ಕೃಶಾಂಗಿ ಕೈಯಲ್ಲೊಂದು ಆಟದ ಸಾಮಾನನ್ನು ಹಿಡಿದಿರುವುದು ವಿಚಿತ್ರವಾದ ವಿರೋಧಾಭಾಸವಾಗಿ ಕಾಣುತ್ತಿತ್ತು; ಅಂತೆಯೆ, ಅವಳು ಹಿಡಿದಿದ್ದ ಆಟದ ಸಾಮಾನು ಮಂಗಮಾಯವಾಗದೆ ಇದ್ದದ್ದು ಒಂದು ಅದ್ಭುತವೆನಿಸಿತ್ತು; ಚಿಕ್ಕ ಹುಡುಗರನ್ನು ತನ್ನ ಮನೆಯ ಆವರಣದೊಳಕ್ಕೆ ಹೇಗೆ ಆಕರ್ಷಿಸಬೇಕೆಂಬ ವಿಚಾರದಲ್ಲಿ ತನ್ನ ಖಿನ್ನವಾದ ಮಂಕು ಕವಿದ ಮಂದಬುದ್ಧಿಯನ್ನು ಗೊಂದಲದಲ್ಲಿ ಸಿಕ್ಕಿಬೀಳಿಸಿಕೊಳ್ಳುತ್ತಿದ್ದುದಂತೂ ಅತ್ಯಂತ ಅವಿವೇಕದ ಸಂಗತಿಯಾಗಿ ತೋರುತ್ತಿತ್ತು! ಆದರೆ, ನಿಸ್ಸಂದೇಹವಾಗಿಯೂ ಅದೇ ಅವಳ ಉದ್ದೇಶ. ಈಗ ಅವಳು ಶುಂಠಿರೊಟ್ಟಿಯ ಆನೆಯನ್ನು ಕಿಟಕಿಗೆ ಎದುರಾಗಿ ಇಡುತ್ತಾಳೆ; ಆದರೆ ಅವಳ ಕೈ ಬಹಳ ನಡುಗುತ್ತಿದೆ. ಆದ್ದರಿಂದ ಅದು ಉರುಟಿಕೊಂಡು ನೆಲಕ್ಕೆ ಬೀಳುತ್ತದೆ, ಅದರ ಮೂರು ಕಾಲೂ ಸೊಂಡಿಲೂ ಮುರಿದು ಹೋಗಿವೆ; ಅದು ಇನ್ನು

ಅಂಗಡಿಯಿಡುವ ಈ ಉದ್ಯೋಗ. ಒಂದು ಕಡೆ ಸಮೀಪ ದೃಷ್ಟಿ, ಇನ್ನೊಂದು ಕಡೆ ಸೆಡೆತುಕೊಂಡು ಸೂಕ್ಷ್ಮವಾಗಿದ್ದ ನಡುಗುವ ಕೈ ಬೆರಳು– ಇವುಗಳನ್ನು ಇಟ್ಟುಕೊಂಡು ಅವಳು ಹೊಲಿಗೆ ಕೆಲಸ ಮಾಡುವುದು ಸಾಧ್ಯವಿರಲಿಲ್ಲ; ಐವತ್ತು ವರ್ಷಗಳ ಹಿಂದೆ ಅವಳು ಹಾಕಿದ್ದ ಕಸೂತಿ ಕೆಲಸದ ಮಾದರಿಯಲ್ಲಿ ಅತ್ಯಂತ ತೊಡಕಾದ ಕಸೂತಿ ಕೆಲಸದ ನಮೂನೆಗಳಲ್ಲಿ ಕೆಲವು ಪ್ರದರ್ಶಿತವಾಗಿದ್ದುದೇನೋ ದಿಟ. ಸಣ್ಣ ಮಕ್ಕಳ ಶಾಲೆಯೊಂದನ್ನು ತೆರೆಯಬಾರದೇಕೆ ಎಂದು ಅವಳು ಹಲವು ವೇಳೆ ಯೋಚಿಸಿದ್ದುಂಟು; ಮಾತ್ರವಲ್ಲ, ಶಿಕ್ಷಕಿಯ ಉದ್ಯೋಗಲ್ಲಿ ತರಪೇತಿ ಪಡೆಯುವ ಉದ್ದೇಶದಿಂದ ಒಮ್ಮೆ ಅವಳು 'ಹೊಸ ಇಂಗ್ಲೆಂಡ್ ಪ್ರಥಮ ಪಾಠ ಪುಸ್ತಕ'ದಲ್ಲಿ ತಾನು ಕಲಿತಿದ್ದ ಪಾಠಗಳನ್ನು ತಿರುವಿಹಾಕಲು ಮೊದಲುಮಾಡಿದ್ದಳು. ಹೆಪ್ಸಿಬಾಳ ಹೃದಯದಲ್ಲಿ ಮಕ್ಕಳ ಬಗೆಗೆ ಪ್ರೇಮ ಎಂದೂ ಜಾಗೃತವಾಗಿರಲಿಲ್ಲ; ಈಗಂತೂ ಅದು ಇಲ್ಲವೆನಿಸದಿದ್ದರೂ, ಜಡಗಟ್ಟಿಹೋಗಿತ್ತು; ನೆರೆಹೊರೆಯ ಚಿಕ್ಕಪುಟ್ಟವರನ್ನು ಅವಳು ತನ್ನ ಕೋಣೆಯ ಕಿಟಕಿಯಿಂದ ಗಮನಿಸಿ ನೋಡುತ್ತಿದ್ದಳು; ಆದರೆ ಅವರೊಂದಿಗೆ ಹೆಚ್ಚಿನ ಸಲುಗೆಯ ಸಂಬಂಧ ಬೆಳಸುವುದು ತನಗೆ ಒಗ್ಗೀತೇ ಎಂದು ಅವಳಿಗೇ ಸಂದೇಹ. ಅಲ್ಲದೆ ನಮ್ಮ ಕಾಲದಲ್ಲಿ, ಇನ್ನು ಮುಂದೆ ಅಕ್ಷರ ಅಕ್ಷರವನ್ನು ಗುಂಡುಸೂಜಿಯ ಮೊನೆಯಿಂದ ತೋರಿಸಿ ಕಲಿಸಲಾಗದಷ್ಟು 'ಎ.ಬಿ.ಸಿ.' ವರ್ಣಮಾಲೆ ಬಹು ಜಟಿಲವಾದ ಶಾಸ್ತ್ರವಿಷಯವಾಗಿಬಿಟ್ಟಿದೆ. ಮುದುಕಿ ಹೆಪ್ಸಿಬಾ ಈಗಿನ ಕಾಲದ ಮಗುವಿಗೆ ಕಲಿಸಬಹುದಾದುದಕ್ಕಿಂತ ಹೆಚ್ಚಾಗಿ ಆ ಮಗುವೇ ಆಕೆಗೆ ಕಲಿಸುವಂತಾಗಿದೆ. ಈವರೆಗೆ ಅವಳು ಪ್ರಪಂಚದಿಂದ ಬೇರೆಯಾಗಿದ್ದುದಾಯಿತು; ಕಟ್ಟಕಡೆಗೆ ಅದರೊಂದಿಗೆ ಹೊಸಲು ಸಂಪರ್ಕವಿಟ್ಟುಕೊಳ್ಳುವ ಆಲೋಚನೆ ಬಂದಾಗಲೆಲ್ಲ ಅನೇಕ ಸಲ ಅವಳ ಹೃದಯಚಳಿತು ಬಲವಾಗಿ ಕಳಕ್ ಎಂದಿದೆ; ಇತ್ತ, ಅವಳ ಏಕಾಂತವಾಸದ ಒಂದೊಂದು ದಿನವೂ ಅವಳ ಏಕಾಂತವಾಸ ಗುಹಾದ್ವಾರದ ಮುಂದೆ ಒಂದೊಂದು ಕಲ್ಲನ್ನು ಉರುಳಿಸಿ ಸಾಗುತ್ತಿದೆ. ಆದ್ದರಿಂದ, ಆ ಬಡಪ್ರಾಣಿ ಗತ್ಯಂತರವಿಲ್ಲದೆ ಆ ಹಳೆಯ ಅಂಗಡಿ ಕಿಟಕಿ, ತುಕ್ಕು ಹಿಡಿದ ತಕ್ಕಡಿ, ದೂಳು ಕವಿದ ದುಡ್ಡಿನ ಗಲ್ಲ– ಇವನ್ನು ಸ್ಮರಿಸಿಕೊಂಡಳು. ಅವಳು ಇನ್ನು ಕೆಲವು ಕಾಲ ತಡೆಯಬಹುದಾಗಿತ್ತು; ಆದರೆ ಇನ್ನೊಂದು ಸಂದರ್ಭ ಅವಳು ಬೇಗನೆ ಆ ನಿರ್ಧಾರಕ್ಕೆ ಬರುವಂತೆ ಮಾಡಿತ್ತು; ಅದು ಏನೆಂದು ಇನ್ನೂ ಸೂಚಿತವಾಗಿಲ್ಲವಷ್ಟೆ. ಆದ್ದರಿಂದ, ಅವಳ ಸಾಧಾರಣ ರೀತಿಯ ಸಿದ್ಧತೆಗಳೆಲ್ಲ ತಕ್ಕರೀತಿಯಲ್ಲಿ ಸಾಗಿದುವು; ಅವಳ ಉದ್ಯಮ ಈಗ ಪ್ರಾರಂಭವಾಗಬೇಕಾಗಿತ್ತು. ತನ್ನ ಗತಿ ಹೀಗಾಯಿತಲ್ಲಾ

ಈ ಪ್ರಜಾರಾಜ್ಯದಲ್ಲಿ, ನಮ್ಮ ಸಾಮಾಜಿಕ ಜೀವನದ ಏರಿ ಇಳಿಯುವ ತೆರೆಗಳ ಹೊಯ್ದಾಟದ ನಡುವೆ, ಯಾವಾಗಲೂ ಯಾರಾದರೂ ಒಬ್ಬರು ಮುಳುಗಿಹೋಗುವ ಸ್ಥಿತಿಯಲ್ಲಿರುವರು. ವಿರಾಮದಿನದಂದು ಪ್ರದರ್ಶಿತವಾಗುವ ಜನಪ್ರಿಯ ನಾಟಕದ ಹಾಗೆಯೆ ಈ ರುದ್ರನಾಟಕವೂ ನಿರಂತರವಾಗಿ ಪುನರಾವೃತ್ತಿಗೊಳ್ಳುತ್ತ ನಡೆಯುತ್ತದೆ. ಆದರೂ ಕೂಡ, ಶ್ರೀಮಂತವಂಶಕ್ಕೆ ಸೇರಿದವನು ತನ್ನ ಪದವಿಯಿಂದ ಚ್ಯುತನಾದಾಗ ಆ ಸಂಗತಿ ಮನಸ್ಸಿಗೆ ಎಷ್ಟು ನಾಟುವದೋ ಈ ನಿತ್ಯ ನಾಟಕ ಕೂಡ ಅಷ್ಟೇ ನಾಟುವುದು. ಇನ್ನು ಹೆಚ್ಚಾಗಿ ಎಂದು ಹೇಳಬಹುದು; ಏಕೆಂದರೆ, ನಮ್ಮ ಮಟ್ಟಿಗೆ ಹೇಳುವುದಾದರೆ, ಪದವಿಯೆನ್ನುವುದು ಐಶ್ವರ್ಯದ ಸ್ಥೂಲ ರೂಪ, ಬಹು ಸೊಗಸಾದ ಒಂದು ಏರ್ಪಾಟು; ಇವು ನಶಿಸಿ ಹೋದಮೇಲೆ ಅದಕ್ಕೆ ಪ್ರತ್ಯೇಕ ಚೈತನ್ಯರೂಪದ ಅಸ್ತಿತ್ವವಿಲ್ಲ; ಅವುಗಳೊಂದಿಗೆಯೇ ಹೇಳ ಹೆಸರಿದಲ್ಲದಂತೆ ತಾನೂ ಮಣ್ಣು ಮುಕ್ಕುತ್ತದೆ. ಇಂಥ ಒಂದು ಅಮಂಗಳಕರ ಸನ್ನಿವೇಶದಲ್ಲಿ ನಮ್ಮ ಕಥಾನಾಯಿಕೆಯನ್ನು ಪರಿಚಯ ಮಾಡಿಕೊಡಬೇಕಾದ ದೌರ್ಭಾಗ್ಯ ನಮ್ಮದು; ಆದ್ದರಿಂದ, ಅವಳ ಮುಂದಿನ ಗತಿಯನ್ನು ಕಣ್ಣಿಂದ ನೋಡಲಿರುವವರು ಯಥೋಚಿತವಾದ ಗಂಭೀರಭಾವದಿಂದಿರಬೇಕೆಂದು ಬೇಡಿಕೊಳ್ಳುತ್ತೇವೆ. ಈ ಬಡ ಹೆಪ್ಸಿಬಾಳಲ್ಲಿ ನಾವು ಕಾಣುವುದು ಓರ್ವ ಪುರಾತನ ಮಹಿಳೆಯ ಚೇತನ: ವಂಶದ ಈ ಕಡೆಯಿಂದ ನೋಡಿದರೆ, ಎರಡು ಶತಮಾನಗಳಷ್ಟು ಹಳಬಳು; ಆ ಕಡೆಯಿಂದ ನೋಡಿದರೆ, ಅದಕ್ಕೆ ಮೂರು ಪಟ್ಟು; ಇದಕ್ಕೆ ಸಾಕ್ಷಿ ನುಡಿಯುತ್ತಿವೆ ಅವಳ ಮನೆತನಕ್ಕೆ ಸೇರಿದ ಪುರಾತನ ಭಾವಚಿತ್ರಗಳು, ವಂಶಾವಳಿ, ವಂಶದ ಬಿರುದಾವಳಿಗಳು, ದಾಖಲೆಗಳು, ಸಂಪ್ರದಾಯಗಳು, ಹಿಂದೊಮ್ಮೆ ಬೆಂಗಾಡಾಗಿದ್ದು ಈಗ ಫಲವತ್ತಾಗಿರುವ ಮೂಡಗಡೆಯ ಜಹಗೀರು ಪ್ರಾಂತದಲ್ಲಿ ಅವಳಿಗಿರುವ ಸಮಾನ ಹಕ್ಕು, ಇವೆಲ್ಲ; ಇವುಗಳ ಜೊತೆಗೆ, ಅವಳು ಹುಟ್ಟಿರುವುದು ಪಿನ್ಚನ್ ಬೀದಿಯಲ್ಲಿ ಪಿನ್ಚನ್ ಎಲ್ಮ್ ಮರದಡಿಯಲ್ಲಿ, ಹಾಗೂ ಪಿನ್ಚನ್ ಭವನದಲ್ಲಿ– ಇಲ್ಲಿಯೆ ಅವಳು ತನ್ನ ದಿನಗಳನ್ನೆಲ್ಲ ಕಳೆದಿರುವುದು; ಅದೇ ಮನೆಯಲ್ಲಿ ಈಗ ಅವಳು 'ಸೆಂಟು'* (ಕಾಸಿನ) ಅಂಗಡಿಯ ಮಾರಾಟಗಾತಿಯ ಮಟ್ಟಕ್ಕೆ ಇಳಿದಿದ್ದಾಳೆ.

ನಮ್ಮ ಈ ನಿರ್ಭಾಗ್ಯೆಯಾದ ಒಬ್ಬೊಂಟಿಗಿತ್ತಿಯಿದ್ದಂತಹ ಪರಿಸ್ಥಿತಿಯಲ್ಲಿರುವ ಹೆಂಗಸರಿಗೆ ಜೀವನೋಪಾಯಕ್ಕಿರುವ ಒಂದೇ ಒಂದು ದಾರಿಯೆಂದರೆ, ಚಿಲ್ಲರೆ

---

*ಅಮೇರಿಕದ ಡಾಲರ್ ನಾಣ್ಯದ ನೂರನೆಯ ಒಂದು ಭಾಗದ ಬೆಲೆಯ ತಾಮ್ರದ ನಾಣ್ಯ. (ಇಲ್ಲಿ ಕಾಸು ಅದಕ್ಕೆ ಪರ್ಯಾಯವಾಗಿ ಬಳಕೆಯಾಗಿದೆ.)

ಆದ್ದರಿಂದ, ನಿಬ್ಬೆರಗಾಗಿ ನೋಡುತ್ತಿರುವ ಜಗತ್ತಿನೆದುರು ತಾನು ಹಠಾತ್ತನೆ ಹೊಳೆದು ಮೈದೋರಬೇಕೆಂದೇ ಅವಳು ಆಶಿಸಿದ್ದಳು.

ಬಂದೇತೀರಬೇಕಾದ ಆ ಕ್ಷಣಕ್ಕಾಗಿ ಇನ್ನು ಹೆಚ್ಚು ಕಾಲ ತಡೆಯಕೂಡದು. ಎದುರುಮನೆಯ ಮುಂಭಾಗದಿಂದ ಸೂರ್ಯಪ್ರಕಾಶವು ನುಸುಳಿ ಬರುತ್ತಿರುವುದನ್ನು ಈಗ ಕಾಣಬಹುದಾಗಿದೆ; ಪ್ರತಿಫಲಿತವಾದ ಒಂದು ಕಿರಣ ಆ ಮನೆಯ ಕಿಟಕಿಗಳಿಂದ ಹೊರಹೊರಟು, ಎಲ್ಮ್ ಮರದ ರೆಂಬೆಗಳ ಮೂಲಕ ಪ್ರಯಾಸದಿಂದ ಹಾದುಬಂದು, ಅಂಗಡಿಯ ಒಳಭಾಗವನ್ನು ಎಂದಿಗಿಂತ ಹೆಚ್ಚಾಗಿ ಬೆಳಗುತ್ತಿದೆ. ಊರು ಎಚ್ಚರಗೊಳ್ಳುವಂತೆ ಕಾಣುತ್ತಿದೆ. ರೊಟ್ಟಿಗಾರನ ಬಂಡಿ ತನ್ನ ಕರ್ಕಶನಾದದ ಗಂಟೆಗಳ ಗಣ ಗಣ ಸದ್ದಿನಿಂದ ಇರುಳಿನ ಪವಿತ್ರ ಮೌನದ ಕಡೆಕಡೆಯ ಸುಳಿದಾಟವನ್ನು ಹೊಡೆದೋಡಿಸುತ್ತ, ಬೀದಿಯಲ್ಲಿ ಆಗಲೇ ಗಡಗಡನೆ ಸಾಗಿಹೋಗಿದೆ. ಹಾಲಿನವನು ತನ್ನ ಡಬ್ಬಗಳ ಹಾಲನ್ನು ಮನೆಮನೆಗೆ ಹಂಚುತ್ತಿದ್ದನು; ಬೀದಿಯ ಮೂಲೆಯ ಆಚೆ, ಎಲ್ಲೋ ದೂರದಲ್ಲಿ ಬೆಸ್ತನೊಬ್ಬನು ಊದಿದ ಶಂಖದ ಕೀರಲು ಧ್ವನಿ ಕೇಳಿಬಂದಿತು. ಈ ಚಟುವಟಿಕೆಯ ಗುರುತುಗಳಲ್ಲಿ ಯಾವುದೂ ಹೆಪ್ಸಿಬಾಳ ಗಮನಕ್ಕೆ ಬಾರದೆ ಹೋಗಲಿಲ್ಲ. ಆ ಕ್ಷಣ ಬಂದಿತ್ತು. ಇನ್ನು ಹೆಚ್ಚು ತಡಮಾಡುವುದೆಂದರೆ ತನ್ನ ಸಂಕಟವನ್ನು ತಾನೇ ಮುಂದುವರಿಸಿಕೊಂಡಂತೆ. ಈಗ ಇನ್ನೇನೂ ಉಳಿದಿಲ್ಲ, ಅಂಗಡಿಯ ಬಾಗಿಲನ್ನು ಬಂಧಿಸಿದ್ದ ಅಡ್ಡಪಟ್ಟಿಯನ್ನು ತೆಗೆದಿಟ್ಟು, ದ್ವಾರವನ್ನು ಸಂಪೂರ್ಣವಾಗಿ ತೆರೆದಿಡುವುದು ಎಷ್ಟೋ ಅಷ್ಟೆ; ತೆರೆದಿಡುವುದಷ್ಟೇ ಅಲ್ಲ, ಕಿಟಕಿಯಬಳಿ ಇಟ್ಟ ಸಾಮಾನುಗಳು ಯಾರ ಯಾರ ಕಣ್ಣನ್ನು ಸೆಳೆಯುವುದೋ ಅಂತಹ ದಾರಿಗರನ್ನೆಲ್ಲ ಕುಟುಂಬವರ್ಗದ ಗೆಳೆಯರೆಂದೇ ಭಾವಿಸಿ, ಅವರಿಗೆಲ್ಲ ಸ್ವಾಗತ ಕೋರುವುದು. ತಾಪಾಳ ಪಟ್ಟಿಯನ್ನು ಕೆಳಕ್ಕೆ ಕೆಡವಿ, ಹೆಪ್ಸಿಬಾ ಈ ಕಟ್ಟಕಡೆಯ ಕರ್ತವ್ಯವನ್ನು ನೆರವೇರಿಸಿದಳು; ತಾಪಾಳ ಬಿದ್ದ ಬಲವಾದ ಸದ್ದಿಗೆ ಅವಳ ಉದ್ರೇಕಗೊಂಡ ನರಗಳು ಚಿಟಗುಟ್ಟಿ ಹೋಗುವಂತಾದವು. ಆ ಬಳಿಕ ತನಗೂ ಹೊರಗಣ ಪ್ರಪಂಚಕ್ಕೂ ನಡುವೆಯಿದ್ದ ಒಂದೇ ತಡೆ ಕಳಚಿ ಬಿದ್ದಂತಾಗಿ, ದುಷ್ಟ ಪರಿಣಾಮಗಳ ಮಹಾಪೂರವೇ ತೆರೆದ ತೆರಪಿನ ಮೂಲಕ ಉರುಳುರುಳಿ ಬರುವುದೊ ಎನಿಸಿ– ಅವಳು ದಿವಾನಖಾನೆಗೆ ಧಾವಿಸಿಹೋಗಿ, ಪೂರ್ವಜರು ಉಪಯೋಗಿಸುತ್ತಿದ್ದ ತೋಳು. ಕುರ್ಚಿಯ ಮೇಲೆ ಕುಕ್ಕರಿಸಿ ಬಿದ್ದು, ಕಂಬನಿಗರೆದಳು.

ನಮ್ಮ ವೃದ್ಧೆ ಹೆಪ್ಸಿಬಾಗೆ ಎಂತಹ ದಾರುಣ ದುಃಖ! ನಿಸರ್ಗವನ್ನು ಅದರ ವಿವಿಧಭಾವಗಳಲ್ಲಿ, ಬೇರೆ ಬೇರೆ ಸನ್ನಿವೇಶಗಳಲ್ಲಿ, ಅದರ ಹೊರ ರೂಪರಂಗುಗಳು

ಎಂದು ಗೊಣಗುಟ್ಟಲು ಅವಳಿಗೆ ಅವಕಾಶವಿರಲಿಲ್ಲ; ಏಕೆಂದರೆ, ಅದು ಗಮನಿಸುವ ಮಟ್ಟಿಗೆ ವಿಚಿತ್ರವಾಗಿರಲಿಲ್ಲ; ಅವಳ ಹುಟ್ಟೂರಿನಲ್ಲಿಯೇ ಅದೇ ಬಗೆಯ ಹಲವು ಚಿಕ್ಕ ಅಂಗಡಿಗಳನ್ನು ನಾವು ತೋರಿಸಬಹುದು; ಅವುಗಳಲ್ಲಿ ಕೆಲವು ಏಳು ಇಪ್ಪಾರಿನ ಮನೆಯಷ್ಟೇ ಪುರಾತನವಾದ ಮನೆಗಳಲ್ಲಿದ್ದುವು; ಬಹುಶಃ ಒಂದೆರಡು ಅಂಗಡಿಗಳಲ್ಲಿ ದುಡ್ಡೆಣಿಸುವ ಮೇಜಿನ ಹಿಂದೆ ಕುಮಾರಿ ಹೆಪ್ಸಿಬಾ ಪಿನ್ಚನ್ನಳಷ್ಟೇ ಕುಲದ ಹಮ್ಮುಬಿಮ್ಮಿನ ಗಂಭೀರ ಪ್ರತೀಕವಾದ ಜರ್ಜರಿತ ದೇಹದ ಮಹಿಳೆಯೊಬ್ಬಳು ನಿಂತಿರುವಳು.

ಜನ ನೋಡಲೆಂದು ತನ್ನ ಅಂಗಡಿಯನ್ನು ವ್ಯವಸ್ಥೆಗೊಳಿಸುತ್ತಿದ್ದಾಗ ಈ ಕನ್ಯಾ ಮಹಿಳಾಮಣಿ ವರ್ತಿಸುತ್ತಿದ್ದ ರೀತಿ ಅತ್ಯಂತ ಹಾಸ್ಯಾಸ್ಪದವಾಗಿದ್ದಿತು; ಈ ಅಂಶವನ್ನು ನಾವು ಮನಃಪೂರ್ವಕವಾಗಿ ಒಪ್ಪಿಕೊಳ್ಳಬೇಕು. ತನ್ನ ಪ್ರಾಣ ತೆಗೆಯುವ ಉದ್ದೇಶದಿಂದ ಎಲ್ಮ್ ವೃಕ್ಷದ ಹಿಂದೆ ಯಾವನೋ ಕೊಲೆ ಪಾತಕನೊಬ್ಬ ಹೊಂಚು ಕಾಯುತ್ತ ನಿಂತಿರುವನೆಂದು ಅವಳು ಭಾವಿಸಿಕೊಂಡಿದ್ದರೆ ಎಷ್ಟು ಎಚ್ಚರಿಕೆಯಿಂದ ಹೋಗುತ್ತಿದ್ದಳೋ ಅಷ್ಟು ಎಚ್ಚರಿಕೆಯಿಂದ ಅವಳು ಮೆಟ್ಟಂಗಾಲಿಡುತ್ತ ಮೆಲ್ಲನೆ ಕಿಟಕಿಯ ಕಡೆಗೆ ಯಾರೂ ಕಾಣದ ಹಾಗೆ ಸರಿದುಹೋದಳು. ಹಾಗೆ ಹೋಗಿ, ತನ್ನ ನೀಳವಾದ ಬಡಕಲು ಕಡ್ಡಿತೋಳನ್ನು ಚಾಚಿ, ಮುತ್ತಿನಚಿಪ್ಪಿನ ಗುಂಡಿಗಳನ್ನು ಜೋಡಿಸಿದ್ದ ಕಾಗದದ ತುಂಡೊಂದನ್ನೋ ಒಂದು 'ಮೋರ್ಚಿಂಗು' ವಾದ್ಯವನ್ನೋ (Jews-horp) ಇಲ್ಲವೆ ಯಾವುದಾದರೂ ಒಂದು ಸಣ್ಣ ಪದಾರ್ಥವನ್ನೋ ಅದಕ್ಕೆಂದು ಗೊತ್ತಾಗಿದ್ದ ಸ್ಥಳದಲ್ಲಿ ಇಡುತ್ತಿದ್ದಳು; ಹಾಗೆ ಇಟ್ಟುಕೊಳ್ಳಬೇಕಿಲ್ಲವೋ ಎಂಬಂತೆ, ಕತ್ತಲೆಗವಿದಿದ್ದ ಸ್ಥಳಕ್ಕೆ ತಟ್ಟನೆ ಹಿಂದಿರುಗಿ ಕಣ್ಮರೆಯಾಗಿಬಿಡುತ್ತಿದ್ದಳು. ಭಕ್ತಿಭಾವದಿಂದಲೂ ಬೆರಗಿನಿಂದಲೂ ತನ್ನ ಬಳಿಗೆ ಬಂದ ಗಿರಾಕಿಗಳಿಗೆ ತನ್ನ ಮಾರಾಟದ ಸರಕನ್ನು ಅದೃಶ್ಯವಾದ ಕೈಯಿಂದ ನೀಡುತ್ತ, ಅಶರೀರಿಯಾದ ದೇವತೆಯಂತೆಯೋ ಇಲ್ಲವೆ ಮಾಟಗಾತಿಯಂತೆಯೋ ಅದೃಶ್ಯಳಾಗಿದ್ದುಕೊಂಡು ಜನಸಮುದಾಯದ ಅಪೇಕ್ಷೆಗಳನ್ನು ಪೂರೈಸುವ ನಿರೀಕ್ಷೆಯನ್ನು ಅವಳು ಇಟ್ಟುಕೊಂಡಿದ್ದಳು ಎಂದು ಊಹಿಸಬಹುದಾಗಿತ್ತು. ಆದರೆ ಹೆಪ್ಸಿಬಾಗೆ ಅಂತಹ ಹೆಮ್ಮೆ ಹುಟ್ಟಿಸುವಂತಹ ಕನಸು ಯಾವುದೂ ಆಗಿರಲಿಲ್ಲ. ಇಂದಲ್ಲ ನಾಳೆ ತಾನು ಮುಂದೆ ಬರಬೇಕು, ತನ್ನ ಸರಿಯಾದ ವ್ಯಕ್ತಿತ್ವವನ್ನು ತೋರಗೊಟ್ಟು ನಿಲ್ಲಬೇಕು ಎಂಬುದನ್ನು ಅವಳು ಚೆನ್ನಾಗಿ ಅರಿತಿದ್ದಳು; ಆದರೆ ಇತರ ಎಲ್ಲ ಸೂಕ್ಷ್ಮ ಮನಸ್ಸಿನವರಂತೆ, ತಾನು ಹಾಗೆ ಕ್ರಮಕ್ರಮವಾಗಿ ಹೊರಕ್ಕೆ ಬರುವುದು ಇತರರ ಕಣ್ಣಿಗೆ ಬೀಳುವುದನ್ನು ಅವಳು ಸಹಿಸುತ್ತಿರಲಿಲ್ಲ;

ಈ ಸೃಷ್ಟಿಯಲ್ಲಿ ಸೌಂದರ್ಯವಿದೆ, ಘನತೆಯಿದೆ; ಆದರೆ ಅವು ಅತ್ಯಂತ ಹೊಲಸುವೇಷವನ್ನು ಧರಿಸುತ್ತವೆ; ಈ ಮರ್ಮವನ್ನು ಭೇದಿಸಿ ತಿಳಿಯುವ ಶಕ್ತಿಯೇ ಕಾವ್ಯದೃಷ್ಟಿ.

* * * *

ತಕ್ಕಮಟ್ಟಿಗೆ ಸರಿಯಾಗಿ ವ್ಯಕ್ತಪಡುವಂತೆ ನಿರೂಪಿಸಬೇಕೆಂದು ಲೇಖಕನು ಯತ್ನಿಸುವನು; ಹಾಗೆ ಯತ್ನಿಸುವಂದು, ತನಗೆ ಜೀವನವು ಎಲ್ಲೆಡೆಯೂ ಒದಗಿಸುವ ಅತ್ಯಂತ ಪರಿಶುದ್ಧವಾದ ಕಾರುಣ್ಯದೊಂದಿಗೆ ತುಚ್ಛವಾದದ್ದೂ ಹಾಸ್ಯಾಸ್ಪದವಾದದ್ದೂ ಕಲಬೆರಕೆಯಾಗಿರುವುದನ್ನು ಕಂಡಾಗ ಅವನಿಗೆ ಅಪಾರ ಜುಗುಪ್ಸೆಯಾಗುವುದು. ಉದಾಹರಣೆಗಾಗಿ, ಇಂತಹ ಒಂದು ದೃಶ್ಯದಲ್ಲಿ ಎಂತಹ ರುದ್ರ ಗಾಂಭೀರ್ಯವನ್ನು ಎತ್ತಿ ತೋರಿಸಬಹುದು! ನಮ್ಮ ಕಥನದ ಪ್ರಮುಖವ್ಯಕ್ತಿಗಳಲ್ಲಿ ಒಬ್ಬರಾಗಿ ನಾವು ಈಗ ಪರಿಚಯಮಾಡಿಕೊಡಬೇಕಾಗಿ ಬಂದಿರುವುದು ಚೆಲುವೆಯಾದ ತರುಣಿಯಲ್ಲ, ದುಃಖದಿಂದ ಜರ್ಜರಿತವಾದ ಸುಂದರ ವ್ಯಕ್ತಿಯ ಭವ್ಯ ಅವಶೇಷಕೂಡ ಅಲ್ಲ– ಉದ್ದನೆಯ ಸೊಂಟಭಾಗವುಳ್ಳ ಮೇಲಂಗಿ ತೊಟ್ಟ, ತಲೆಯ ಮೇಲೆ ವಿಚಿತ್ರವೂ ಭೀಕರವೂ ಆದ ರುಮಾಲು ಟೊಪ್ಪಿಗೆ ಧರಿಸಿರುವ, ಬಡಕಲು ಬಡಕಲಾಗಿ ಬಿಳಿಚಿಕೊಂಡಿರುವ, ಸೆಡೆತುಕೊಂಡ ಕೀಲುಗಳ ಕನ್ಯೆ! ಹೀಗಿರುವಾಗ, ಗತಕಾಲದ ಪಾಪಕಾರ್ಯದ ಫಲವನ್ನು ಚಿತ್ರಿಸುವ ನಮ್ಮ ಚರಿತ್ರೆಯನ್ನು ಮೇಲ್ಮಟ್ಟಕ್ಕೆ ಎತ್ತುವುದು ಹೇಗೆ ತಾನೇ ಸಾಧ್ಯವಾದೀತು! ಅವಳ ಮುಖಮುದ್ರೆ ಕುರೂಪವಾಗಿ ಕೂಡ ಇಲ್ಲ. ಸಮೀಪದೃಷ್ಟಿಯ ಕಿರುಗಣ್ಣಾಗುವಂತೆ ಇಕ್ಕಿದ ಹುಬ್ಬುಗಂಟು ಇಲ್ಲದೆ ಹೋಗಿದ್ದರೆ ಆ ಮುಖಮುದ್ರೆ ಲಕ್ಷ್ಯಕ್ಕೇ ಬರುತ್ತಿರಲಿಲ್ಲ. ಅರುವತ್ತು ವರ್ಷಕಾಲ ಸೋಮಾರಿಯಾಗಿ ಕಾಲ ಕಳೆದ ಮೇಲೆ, ಅವಳು ಆಡಂಬರವಿಲ್ಲದಂತೆ ಒಂದು ಸಣ್ಣ ಅಂಗಡಿ ತೆಗೆಯುವ ಮೂಲಕ ನೆಮ್ಮದಿಯಾಗಿ ಉದರನಿರ್ವಾಹ ಮಾಡಿಕೊಳ್ಳಲು ಅನುಕೂಲಪಡಿಸಿಕೊಂಡಿದ್ದಾಳೆ; ಇದು ಅವಳ ಜೀವನ ಸತ್ವಪರೀಕ್ಷೆಯ ಕಾಲವಾಗಿ ತೋರುತ್ತದೆ.

ಮಾನವ ಜಾತಿಯ ಸಾಹಸಪೂರ್ಣ ಕಾರ್ಯಸಾಧನೆಗಳನ್ನು ನಾವು ಪರಿಶೀಲಿಸಿದ್ದೇ ಆದರೆ, ಮಾನವ ಜೀವಿತದ ಸುಖ ದುಃಖಗಳಲ್ಲಿ ಹುದುಗಿರುವ ಘನತರವಾದ ಗುಣದೊಂದಿಗೆ ಅಲ್ಪವೂ ಕ್ಷುಲ್ಲಕವೂ ಆದ ಯಾವುದೋ ಒಂದು ಗುಣವಿಶೇಷವು ತೊಡಕಿಕೊಂಡಿರುವುದನ್ನು ಕಾಣುತ್ತೇವೆ. ಜೀವನವು ಹಾಲುಗಲ್ಲೂ ಮಣ್ಣೂ ಕೂಡಿಯೇ ಆಗಿದೆ. ನಮಗಿಂತ ಮೇಲೆ ಯಾವುದೋ ಒಂದು ವ್ಯಾಪಕವಾದ ಸಹಾನುಭೂತಿಯ ಶಕ್ತಿ ನೆಲಸಿದೆ; ಅದರಲ್ಲಿ ನಾವು ಬಲವಾದ ವಿಶ್ವಾಸವಿಡಬೇಕು. ಇಲ್ಲದೆ ಹೋದರೆ, ವಿಧಿಪುರುಷನ ಕಬ್ಬಿಣದ ಕಠೋರಮುಖಮುದ್ರೆಯಲ್ಲಿ ನಮ್ಮ ಬಗೆಗೆ ತಿರಸ್ಕಾರದ ನಗೆ ಹಾಗೂ ಶಮನವಾಗದ ಕಡು ಕ್ರೋಧ– ಇವು ಹೊರತು ಬೇರೇನೂ ಇಲ್ಲವೆಂದು ನಾವು ಶಂಕಿಸಬೇಕಾಗುತ್ತದೆ. ವಿವಿಧ ವಸ್ತುಗಳು ವಿಚಿತ್ರ ರೀತಿಯಲ್ಲಿ ಸಂಮಿಶ್ರಗೊಂಡ

ಅಚ್ಚೊತ್ತಿತ್ತು; ದುಶ್ಶಕುನಸೂಚಕವಾಗಿ ಹುಬ್ಬುಗಂಟಕ್ಕಿದ್ದಳು; ಈ ಸ್ಥಿತಿಯಲ್ಲಿ ಅವಳನ್ನು ನೋಡಿದರೆ, ಒಂದು ತಾಮ್ರದ ನಾಣ್ಯಕ್ಕೆ ಪ್ರತಿಯಾಗಿ ಸಣ್ಣ ಪುಟ್ಟ ಮಾರಾಟದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವ ಸಲುವಾಗಿ ವ್ಯಾಪಾರದ ಮೇಜಿನ ಹಿಂದೆ ಮುಗುಳುನಗೆ ನಗುತ್ತ ನಿಂತಿರುವ ಬದಲು, ಮನೆಗೆ ನುಗ್ಗಿ ಬಂದ ಕಳ್ಳನೊಬ್ಬನೊಂದಿಗೆ ಉಗ್ರವಾಗಿ ಕಾದಾಡಲು ಸಿದ್ಧಳಾಗಿ ನಿಂತಿರುವಳೋ ಎಂಬಂತೆ ಕಾಣುತ್ತಿತ್ತು. ನಿಜವಾಗಿ, ಯಾವನಾದರೂ ಸಾಧಾರಣ ಗಿರಾಕಿಯಾಗಿದ್ದರೆ ಆತ ಬೆನ್ನು ತಿರುಗಿಸಿ ಓಡಿ ಹೋಗಿಬಿಡುತ್ತಿದ್ದನು. ಇಷ್ಟಾದರೂ, ಹೆಪ್ಸಿಬಾಳ ಬಡ ಮುದಿಹೃದಯದಲ್ಲಿ ಯಾವ ಕ್ರೂರಭಾವವೂ ಇರಲಿಲ್ಲ; ಅಲ್ಲದೆ, ಆ ಕ್ಷಣದಲ್ಲಿ, ವಿಶಾಲಲೋಕದ ವಿರುದ್ಧವಾಗಿಯಾಗಲಿ ಯಾವ ಒಬ್ಬ ಪುರುಷ ಅಥವಾ ಸ್ತ್ರೀವ್ಯಕ್ತಿಯ ವಿರುದ್ಧವಾಗಿಯಾಗಲಿ ಅವಳು ಯಾವೊಂದು ಕಟುಭಾವನೆಯನ್ನೂ ಹೊಂದಿರಲಿಲ್ಲ. ಎಲ್ಲರಿಗೂ ಒಳಿತಾಗಲಿ ಎಂದೇ ಕೋರಿದ್ದಳವಳು; ಆದರೆ, ಎಲ್ಲರ ಸಂಬಂಧವನ್ನೂ ಕಡಿದುಕೊಂಡು, ಕಣ್ಣುಮುಚ್ಚಿ, ತನ್ನ ಸಮಾಧಿಯಲ್ಲಿ ಶಾಂತಿಯಿಂದಿರಬೇಕೆಂದೂ ಬಯಸಿದ್ದಳು.

ಈ ಹೊತ್ತಿಗೆ, ಅಭ್ಯರ್ಥಿಯು ಬಾಗಿಲು ದಾಟಿ ಒಳಗಡೆ ನಿಂತಿದ್ದನು. ಪ್ರಾತಃಕಾಲದ ಬೆಳಕಿನಲ್ಲಿ ಹೊಸತಾಗಿ ಬಂದದ್ದರಿಂದ, ಅವನು ತನ್ನೊಡನೆ ಅಂಗಡಿಯೊಳಕ್ಕೆ ಅದರ ಉಲ್ಲಾಸಕರ ಪ್ರಭಾವಗಳ ಕೆಲವಂಶವನ್ನು ಒಯ್ದು ತಂದಂತೆ ಕಾಣುತ್ತಿತ್ತು. ಅವನೊಬ್ಬ ತೆಳ್ಳನೆಯ ತರುಣ; ಇಪ್ಪತ್ತೊಂದು ಅಥವಾ ಇಪ್ಪತ್ತೆರಡು ವರ್ಷ ಮೀರಿದ ವಯಸ್ಸಿನವನು; ಗಂಭೀರವೂ ಚಿಂತಾಪೂರ್ಣವೂ ಆದ ಮುಖಭಾವ ಅವನ ವಯಸ್ಸಿಗೆ ಅನುಗುಣವಾಗಿರಲಿಲ್ಲ; ಅವನ ಉಕ್ಕುವ ಉತ್ಸಾಹ, ಕಸುವುಗಳೂ ಹಾಗೆಯೆ. ಈ ಗುಣಗಳು ಅವನ ಮೈಕಟ್ಟು ಹಾಗೂ ಚಲನವಲನಗಳಲ್ಲಿ ಭೌತಿಕವಾಗಿ ಸುಸ್ಪಷ್ಟವಾಗಿದ್ದುವಷ್ಟೇ ಅಲ್ಲ; ಅವು ಅವನ ಶೀಲಸ್ವಭಾವದಲ್ಲಿಯೇ, ಬಹುಮಟ್ಟಿಗೆ ಆ ಕೂಡಲೆಯೇ, ಹೊರಹೊಮ್ಮಿ ಕಾಣುತ್ತಿದ್ದುವು. ಅವಳ ಗಲ್ಲದ ಅಂಚಿನ ಉದ್ದಕ್ಕೂ ರೇಷ್ಮೆಯಷ್ಟು ಮೃದುವಲ್ಲದ ಕಂದುಕೂದಲಿನ ಗಡ್ಡ ಬೆಳೆದಿತ್ತು; ಆದರೆ ಅದು ಗಲ್ಲವನ್ನು ಪೂರ್ತಿ ಮುಚ್ಚಿಬಿಡುವಷ್ಟಿರಲಿಲ್ಲ; ಚಿಕ್ಕಮೀಸೆಯೂ ಇತ್ತವನಿಗೆ. ಈ ನಿಸರ್ಗದತ್ತ ಅಲಂಕಾರಗಳ ದೆಸೆಯಿಂದ ಆತನ ಶ್ಯಾಮಲವಾದ ಎದ್ದುಕಾಣುವ ಮುಖಲಕ್ಷಣಗಳು ಇನ್ನಷ್ಟು ಸೊಬಗುವಡೆದಿದ್ದವು. ಆತನ ಉಡುಪು ಅತ್ಯಂತ ಸರಳರೀತಿಯದಾಗಿತ್ತು: ಅಗ್ಗವಾದ ಸಾಧಾರಣ ಬಟ್ಟೆಯ, ಬೇಸಗೆ ಕಾಲದಲ್ಲಿ ತೊಡುವಂತಹ ದೊಗಲೆ ಅಂಗಿ; ಚೌಕಳಿ ನಮೂನೆಯ ತೆಳುಬಟ್ಟೆಯ ಷರಾಯಿ,

# ೩. ಮೊದಲ ಗಿರಾಕಿ

ಕುಮಾರಿ ಹೆಪ್ಸಿಬಾ ಪಿನ್ಚನ್ ಓಕ್ ಮರದ ಮೊಳಕೈಯಾಸರೆಯ ತೋಳುಕುರ್ಚಿಯಲ್ಲಿ ಕುಳಿತಿದ್ದಳು; ಅವಳ ಕೈಗಳು ಮುಖದ ಮೇಲಿದ್ದುವು; ಈಗ ಅವಳು ಹೃದಯದ ನಿರಾಶಾಭಾವಕ್ಕೆ ಸೋತುಬಿಟ್ಟಿದ್ದಳು; ಅನೇಕ ಮಂದಿ ಇಂಥ ಪರಿಸ್ಥಿತಿಯ ಅನುಭವವನ್ನು ಹೊಂದಿದ್ದಾರೆ; ಆಗ, ಸಂದೇಹಾಸ್ಪದವೂ ಬಹು ಪರಿಣಾಮಕಾರಿಯೂ ಆದ ಒಂದು ಉದ್ಯಮವನ್ನು ಕೈಗೊಳ್ಳುವ ಮುನ್ನ, ಆಶಾಪ್ರತಿಮೆ ಸೀಸದಿಂದ ಎರಕಹೊಯ್ದು ಭಾರೈಸಿ ಹೋಗಿರುವಂತೆ ಕಾಣುತ್ತದೆ. ಒಂದು ಚಿಕ್ಕ ಗಂಟೆಯ ಎಚ್ಚರಿಕೆಯ 'ಟಣ್ ಟಣ್' ನಾದವನ್ನು ಕೇಳಿ ಅವಳು ತಟ್ಟನೆ ಬೆಚ್ಚಿಬಿದ್ದಳು; ಬಿಟ್ಟು ಬಿಟ್ಟು ಬಾರಿಸಿದ ಗಂಟೆಯ ಸದ್ದು ಗಟ್ಟಿಯಾಗಿ ಕೇಳಿಸಿ, ಕಿವಿಕೊರೆಯುವಂತಿತ್ತು. ಗಂಟೆಯ ಸದ್ದು ಕೇಳಿ, ಕನ್ಯಾ ಮಹಿಳೆ ಮೇಲಕ್ಕೆದ್ದಳು; ಆಗವಳು ಕೋಳಿ ಕೂಗಿನ ವೇಳೆಯಲ್ಲಿ ಕಾಣಿಸಿಕೊಳ್ಳುವ ಪಿಶಾಚಿಯಂತೆ ಬಿಳಿಚಿಕೊಂಡಿದ್ದಳು. ಒಂದು ರೀತಿಯಲ್ಲಿ, ಅವಳು ಮಂತ್ರಬದ್ಧವಾದ ಪಿಶಾಚಸ್ವರೂಪಳೇ ಆಗಿದ್ದಳು: ಆ ಗಂಟೆಯೇ ಮಂತ್ರವುಳ್ಳ ಯಂತ್ರ, ಅದಕ್ಕವಳು ಶರಣುಹೋಗಿದ್ದಳು. ಇನ್ನೂ ಸ್ವಲ್ಪ ಬಿಡಿಸಿಹೇಳುವುದಾದರೆ, ಅಂಗಡಿಯ ಬಾಗಿಲ ಮೇಲೆ ಬಿಗಿದು ಕಟ್ಟಿದ್ದ ಈ ಕಿರುಗಂಟೆ ಒಂದು ಉಕ್ಕಿನ ಚಿಮ್ಮು ಪಟ್ಟಿಯ ಮೂಲಕ ಅಲುಗಾಡುವಂತೆ ವ್ಯವಸ್ಥೆ ಮಾಡಲಾಗಿತ್ತು; ಯಾರಾದರೂ ಗಿರಾಕಿ ಬಂದು ಹೊಸಿಲನ್ನು ದಾಟಿದಕೂಡಲೆ ಆ ಸುದ್ದಿ ಆ ರೀತಿ ಆಮನೆಯ ಒಳಭಾಗಕ್ಕೆ ತಲಪುತ್ತಿತ್ತು. ಅದರ ವಿಕಾರವಾದ, ಕೋಪಬರಿಸುವ, ಕಿರುದನಿ ಅವಳ ದೇಹದ ಪ್ರತಿಯೊಂದು ನರನಾಡಿಯನ್ನೂ ಪ್ರತಿಕ್ರಿಯಾರೂಪದಲ್ಲಿ ಥರಥರ ಗುಟ್ಟಿ ಕಂಪಿಸುವಂತೆ ಮಾಡಿತು. (ಹೆಪ್ಸಿಬಾಳ ಪೂರ್ವಿಕನು ವ್ಯಾಪಾರೋದ್ಯಮದಿಂದ ವಿಶ್ರಾಂತನಾದ ಮೇಲೆ ಆ ಗಂಟೆಯ ಸದ್ದು ಈಗ ಕೇಳಿ ಬಂದದ್ದು ಬಹುಶಃ ಇದೇ ಮೊದಲನೆಯ ಸಲ). ವಿಷಮ ಸನ್ನಿವೇಶ ಅವಳನ್ನು ಎದುರಿಸಿತು! ಅವಳ ಮೊದಲ ಗಿರಾಕಿ ಬಾಗಿಲ ಬಳಿಯಿದ್ದನು!

ಎರಡನೆಯ ಸಲ ಆಲೋಚನೆ ಮಾಡುವುದಕ್ಕೂ ಅವಕಾಶ ತೆಗೆದುಕೊಳ್ಳದೆ, ಅವಳು ಅಂಗಡಿಯೊಳಕ್ಕೆ ಧಾವಿಸಿದಳು; ಆಗವಳು ವಿವರ್ಣಳಾಗಿದ್ದಳು; ಕ್ಷೋಭೆಗೊಂಡಿದ್ದಳು; ಅವಳ ಭಾವಭಂಗಿಯಲ್ಲೂ ಮುಖಭಾವದಲ್ಲೂ ಹತಾಶೆ

ಇದ್ದಾನೆ. ನನ್ನನ್ನ ಇಲ್ಲಿ ಬಿಟ್ಟುಹೋಗುವ ಬದಲು ತನ್ನ ಬಳಿಗೆ ಕರೆದುಕೊಳ್ಳಬಾರದಾಗಿತ್ತೆ ಅವನು! ಈ ಲೋಕ ಹಿಮದ ಹಾಗೆ ತುಂಬ ಕೊರೆಯುತ್ತಿದೆ, ತುಂಬ ಕಠಿಣ. ನಾನೋ, ತುಂಬ ಮುದಿಯಾಗಿದ್ದೇನೆ, ಸ್ವಲ್ಪವೂ ಶಕ್ತಿಯಿಲ್ಲ, ತೀರ ಹತಾಶಳಾಗಿಬಿಟ್ಟದೇನೆ!"

"ನನ್ನ ಮಾತಿನಲ್ಲಿ ವಿಶ್ವಾಸವಿಡಿ, ಹೆಪ್ಸಿಬಾ. ಒಮ್ಮೆ ನಿಮ್ಮ ವ್ಯವಹಾರದ ಮಧ್ಯೆ ನೆಲೆನಿಂತಿರೆಂದರೆ, ಅಲ್ಲಿಂದ ಮುಂದೆ ಇಂಥ ಭಾವನೆಗಳು ನಿಮ್ಮನ್ನು ಕಾಡುವುದಿಲ್ಲ. ಈಗ ನೀವು ನಿಮ್ಮ ದೀರ್ಘಕಾಲದ ಏಕಾಂತ ವಾಸದ ಹೊರ ಅಂಚಿನಲ್ಲಿ ಬಂದು ನಿಂತಿದ್ದೀರಿ; ಪ್ರಪಂಚದ ತುಂಬ ವಿಕಾರ ಆಕೃತಿಗಳು ತುಂಬಿವೆ ಎಂದು ಕಲ್ಪಿಸಿಕೊಂಡಿದ್ದೀರೆ; ಅವೆಲ್ಲ ಮಕ್ಕಳ ಕತೆ ಪುಸ್ತಕಗಳ ಭೂತಪಿಶಾಚಗಳಷ್ಟೆ ಹುರುಳಿಲ್ಲದವು ಎಂದು ನಿಮಗೇ ಬೇಗನೆ ಅರಿವಿಗೆ ಬರುತ್ತದೆ; ಇಂಥ ಸನ್ನಿವೇಶದಲ್ಲಿ ನಿಮಗೆ ಆ ಬಗೆಯ ಭಾವನೆಗಳುಂಟಾಗುವುದು ಅನಿವಾರ್ಯ. ಯಾವುದೇ ಆಗಲಿ, ಅದರೊಂದಿಗೆ ನಾವು ಹೆಣಗತೊಡಗಿದಾಗ ಅದು ತನ್ನ ಸತ್ತ್ವವನ್ನು ಕಳುದುಕೊಳ್ಳುವ ಹಾಗೆ ಕಾಣುತ್ತದೆ; ಬದುಕಿನಲ್ಲಿ ಇದಕ್ಕಿಂತ ಆಶ್ಚರ್ಯಕರವಾದ ಸಂಗತಿಯನ್ನು ಬೇರೆ ಯಾವುದನ್ನೂ ನಾನು ಕಂಡಿಲ್ಲ. ನೀವು ಯಾವುದನ್ನು ಭಯಂಕರ ಎಂದು ತಿಳಿದಿದ್ದೀರೋ, ಅದರ ವಿಷಯವೂ ಹಾಗೆಯೆ ಸರಿ" ಎಂದು ಆ ತರುಣ ಶಾಂತನಾಗಿ ನುಡಿದ.

ಕರುಣಾಜನಕವಾಗಿ ಹೇಳಿದಳು ಹೆಪ್ಸಿಬಾ:

"ಆದರೆ, ನಾನೊಬ್ಬ ಹೆಂಗಸು! ಶ್ರೀಮಂತಮಹಿಳೆ ಎಂದು ಹೇಳುವುದರಲ್ಲಿದ್ದೆ. ಆದರೆ ಅದೆಲ್ಲ ಹಿಂದಿನ ಮಾತು ಎಂದು ತಿಳಿದಿದ್ದೇನೆ."

"ಒಳ್ಳೆಯದು, ಹಿಂದಿನ ಮಾತಾದರೆ ಅದರಿಂದ ಬಾಧಕವಿಲ್ಲ!" ಎಂದು ಚಿತ್ರಕಾರನು ಉತ್ತರಿಸಿದಾಗ, ಅವನ ನಡೆವಳಿಯಲ್ಲಿನ ದಯಾಭಾವದಲ್ಲಿ ಅರೆಮರೆಯಾಗಿದ್ದ ಕಟುವ್ಯಂಗ್ಯದ ವಿಚಿತ್ರ ಮಿನುಗು ಮಿನುಗಿತು. "ಅದು ಹೋಗಲಿ ಬಿಡಿ! ಅದು ಇಲ್ಲದ್ದರಿಂದ ನೀವು ಇನ್ನೂ ಮಲಗಿದ್ದೀರಿ. ನನ್ನ ಪ್ರೀತಿಪಾತ್ರರಾದ ಮಿಸ್ ಪಿನ್ಚನ್ನರೇ, ನಾವು ಮನಬಿಚ್ಚಿ ಮಾತಾಡುತ್ತಿದ್ದೇನೆ; ಏಕೆಂದರೆ, ನಾವು ಸ್ನೇಹಿತರಲ್ಲವೆ? ಇಂದಿನ ದಿನ ನಿಮ್ಮ ಜೀವಮಾನದ ಶುಭದಿನಗಳಲ್ಲಿ ಒಂದೆಂದು ನಾನು ಎಣಿಸಿದ್ದೇನೆ. ಅದು ಒಂದು ಯುಗವನ್ನು ಕೊನೆಗಾಣಿಸಿ, ಇನ್ನೊಂದನ್ನು ಮೊದಲು ಮಾಡಿದೆ. ಇದುವರೆಗೆ, ನಿಮ್ಮ ಶ್ರೀಮಂತಮಂಡಲಿಯ ನಡುವೆ ನೀವು ಪ್ರತ್ಯೇಕವಾಗಿ ಒಂದು ಕಡೆ ಕುಳಿತಿದ್ದಾಗ, ಜೀವರಕ್ತ ನಿಮ್ಮ ರಕ್ತನಾಳಗಳಲ್ಲಿ ಕ್ರಮಕ್ರಮವಾಗಿ ಹೆಪ್ಪುಗಟ್ಟುತ್ತಿತ್ತು; ಅದೇ ವೇಳೆಯಲ್ಲಿ ಇನ್ನುಳಿದ ಜಗತ್ತು ಒಂದಲ್ಲ

ಅಷ್ಟೇನೂ ನಯಹೆಣಿಗೆಯದಲ್ಲದ ಹುಲ್ಲಿನ ಟೋಪಿ. ತಾನು ಸಂಭಾವಿತನೆಂದು ಅವನೇನೂ ತಿಳಿದುಕೊಂಡಿದ್ದ ಹಾಗೆ ಕಾಣಲಿಲ್ಲ; ಆದರೆ ಅವನು ವಿಶೇಷವಾಗಿ ಹಾಗೆ ಕಾಣುತ್ತಿದ್ದುದು ಉಂಟು; ಅದಕ್ಕೆ ಕಾರಣ, ಅವನ ಶುಭ್ರವಾದ ಕೈವಸ್ತ್ರದ ಅಂದ ಹಾಗೂ ಕಡುಬಿಳುಪು.

ವೃದ್ಧೆ ಹೆಪ್ಸಿಬಾಳ ಸಿಡುಕುಮೋರೆಯನ್ನು ಕಂಡು, ಅದು ತನಗೆ ನಿತ್ಯವೂ ಪರಿಚಯವಾದದ್ದೆ ಎಂಬಂತೆ, ಅವನೇನೂ ಕಾಣುವ ಹಾಗೆ ಗಾಬರಿಗೊಳ್ಳಲಿಲ್ಲ; ಅದರಿಂದ ತನಗೇನೂ ಬಾಧಕವಿಲ್ಲವೆಂದುಕೊಂಡನು.

ಏಳು ಇಪ್ಪಾರಿನ ಮನೆಯಲ್ಲಿ ವಾಸವಾಗಿದ್ದ ಇನ್ನೊಬ್ಬನೇ ಒಬ್ಬನೆಂದರೆ ಈತ, ಈ ಛಾಯಾಚಿತ್ರಕಾರ. ಅವನೆಂದ: “ಒಳ್ಳೆಯದು, ಮಿಸ್ ಪಿನ್ಚನ್. ನಿಮ್ಮ ಸದುದ್ದೇಶವನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಹಿಂಜರಿಯದೆ ಇರುವುದನ್ನ ಕಂಡು ನನಗೆ ಸಂತೋಷವಾಗಿದೆ. ನಿಮಗೆ ಒಳ್ಳೆಯದಾಗಲಿ ಎಂದು ಕೋರಲು ಇಣಿಕಿನೋಡಿದೆ, ಅಷ್ಟೆ; ಸಿದ್ಧತೆಮಾಡಿಕೊಳ್ಳುವುದರಲ್ಲಿ ನಿಮಗೆ ಹೆಚ್ಚಿನ ನೆರವು ಏನಾದರೂ ಬೇಕಾದೀತೇನೋ ಎಂದು ಕೇಳಲು ಬಂದೆ.”

ಕಷ್ಟಕ್ಲೇಶಗಳಲ್ಲಿ ಸಿಲುಕಿರುವವರು, ಇಲ್ಲವೆ ತಮ್ಮ ಸುತ್ತಣ ಪ್ರಪಂಚದೊಂದಿಗೆ ಯಾವುದೇ ರೀತಿಯಲ್ಲಿ ಹೊಂದಿಕೊಂಡು ಹೋಗಲಾಗದವರು, ತಮ್ಮ ವಿಷಯದಲ್ಲಿ ಯಾರೇ ಆಗಲಿ ಎಷ್ಟು ಕಠಿನವಾಗಿ ನಡೆದುಕೊಂಡರೂ ಅದನ್ನವರು ಸಹಿಸಬಲ್ಲರು; ಇಂಥ ನಡವಳಿಕೆಯಿಂದ ಬಹುಶಃ ಅವರು ಇನ್ನಷ್ಟು ಬಲಗೊಳ್ಳುವರು. ನಿಜವಾದ ಸಹಾನುಭೂತಿಯನ್ನು ಪ್ರಕಟಪಡಿಸುವಂತಹದೆಂದು ತಮಗೆ ತೋರುವ ಅತ್ಯಂತ ಸಾಧಾರಣ ಸಂದರ್ಭದಲ್ಲಿ ಕೂಡ ಅಂಥವರು ಒಡನೆಯೇ ಕರಗಿ ನೀರಾಗಿಬಿಡುವರು. ಬಡ ಹೆಪ್ಸಿಬಾಳ ವಿಚಾರದಲ್ಲಿಯಂತೂ ಈ ಅಂಶ ದೃಷ್ಟಾಂತಕ್ಕೆ ಬಂದಿತು; ಧ್ಯಾನಪೂರ್ಣಮುಖದಲ್ಲಿ ಮೂಡಿದ್ದರಿಂದ ಹೆಚ್ಚು ಪ್ರಕಾಶಮಾನವಾಗಿ ಕಾಣುತ್ತಿದ್ದ ಮುಗುಳುನಗೆಯನ್ನು ಆ ತರುಣ ಸೂಸಿದ್ದನ್ನು ಕಂಡು, ಅವನ ದಯಾಮಯ ಧ್ವನಿಯನ್ನು ಕೇಳಿ, ಮೊದಲು ಹುಚ್ಚಿಯಂತೆ ಕಿಲ ಕಿಲ ನಕ್ಕಳು; ಬಳಿಕ ಅಳತೊಡಗಿದಳು.

ಮಾತನಾಡಲು ಸಾಧ್ಯವಾದ ಕೂಡಲೆ ಅವಳು ಹೇಳಿದಳು: “ಹಾಲ್ಗ್ರೇವರೇ, ನಾನು ಇದನ್ನು ಎಂದಿಗೂ ನಿಭಾಯಿಸಲಾರೆ! ಎಂದಿಗೂ, ಎಂದಿಗೂ, ಎಂದಿಗೂ ಸಾಧ್ಯವಿಲ್ಲ. ನಾನು ಸತ್ತುಹೋಗಿ, ನಮ್ಮ ವಂಶದ ಹಳೆಯ ಗೋರಿಯಲ್ಲಿ, ನನ್ನ ಪೂರ್ವಿಕರೆಲ್ಲರೊಂದಿಗೆ ಮಲಗಿದ್ದರೆ ಎಷ್ಟೋ ಚೆನ್ನಾಗಿತ್ತು. ನನ್ನ ತಂದೆ, ತಾಯಿ, ಮತ್ತು ಅಕ್ಕ– ಇವರೊಂದಿಗೆ. ಹೌದು, ನನ್ನ ತಮ್ಮ ಕೂಡ ಅಲ್ಲಿ

ಮಾಡೋಣ" ಎಂದು ಚಿತ್ರಕಾರ ಉತ್ತರಕೊಡತೊಡಗಿದಾಗ, ಅವನ ಮುಖದಮೇಲೆ ಹಿಂದಿನದಕ್ಕಿಂತ ಹೆಚ್ಚು ಸ್ನೇಹಪೂರ್ಣವಾದ ಮೆಲುನಗೆ ಆಡಿತು: "ಶ್ರೀಮಂತಮಹಿಳೆಯಾಗಿರುವುದಕ್ಕಿಂತ ನಿಜವಾದ ಹೆಂಗಸಾಗಿರುವುದು ಮೇಲಲ್ಲವೆ– ಎಂಬುದನ್ನು ಅನುಭವಿಸಿ ತಿಳಿಯುವ ವಿಷಯವನ್ನು ನಿಮಗೇ ಬಿಡುತ್ತೇನೆ. ಮಿಸ್ ಹೆಪ್ಸಿಬಾ, ಈ ಮನೆಯನ್ನು ಕಟ್ಟಿದಂದಿನಿಂದ ನೀವು ಅದರಲ್ಲಿ ಇಂದು ನೆರವೇರಿಸುತ್ತಿರುವುದಕ್ಕಿಂತ ಹೆಚ್ಚಿನ ಸಾಹಸದ ಕಾರ್ಯವನ್ನು ನಿಮ್ಮ ವಂಶದ ಮಹಿಳೆ ಎನ್ನಿಸಿಕೊಂಡಾಕೆ ಯಾರೇ ಆಗಲಿ ಎಂದೇ ಆಗಲಿ ಮಾಡಿದ್ದಾರೆ ಎಂದು ನೀವು ನಿಜವಾಗಿ ಭಾವಿಸುತ್ತೀರಾ? ಎಂದಿಗೂ ಇಲ್ಲ; ಪೂರ್ವಕಾಲದ ಆ ಮಾಟಗಾರ ಮಾಲನ ಶಾಪದ ವಿಚಾರ ನೀವು ನನಗೊಮ್ಮೆ ತಿಳಿಸಿರುವಿರಷ್ಟೆ; ಪಿನ್ಚನ್ ವಂಶದವರು ಉದ್ದಕ್ಕೂ ಅಷ್ಟೊಂದು ಘನವಾಗಿ ವರ್ತಿಸಿದ್ದಲ್ಲಿ, ಅವನ ಶಾಪವು ದೈವಶಕ್ತಿಯೊಂದಿಗೆ ಕೂಡಿಕೊಂಡು ಅವರಿಗೆ ವಿರುದ್ಧವಾಗಿ ಪ್ರಭಾವಬೀರುತ್ತಿತ್ತೇ ಎಂದು ನನಗೆ ಸಂದೇಹ."

ವಂಶಪಾರಂಪರ್ಯವಾಗಿ ಪ್ರಭಾವಶಾಲಿಯಾಗಿದ್ದ ಶಾಪದ ವಿಷಣ್ಣ ಮಹಿಮೆಯನ್ನು ಕುರಿತ ಪ್ರಸ್ತಾಪವನ್ನು ಕೇಳಿ ಹೆಪ್ಸಿಬಾಗೆ ಅಸಂತೋಷವೇನಾಗಲಿಲ್ಲ. ಅವಳು ಹೇಳಿದಳು: "ಅಯ್ಯೋ ಅಯ್ಯೋ, ಎಂದಿಗೂ ಇಲ್ಲ. ಮುದುಕ ಮಾಲನ ಪಿಶಾಚಿಯಾಗಲಿ, ಅವನ ವಂಶಿಕನಾಗಲಿ, ಇಂದು ಈ ವ್ಯಾಪಾರದ ಮೇಜಿನ ಬಳಿ ನನ್ನನ್ನು ನೋಡಿದ್ದೇ ಆದರೆ, ಆತನು ತನ್ನ ಅತ್ಯಂತ ತುಚ್ಛವಾದ ಹಾರೈಕೆ ಫಲಿಸಿತು ಎಂದುಕೊಳ್ಳವನು. ಆದರೆ, ನೀವು ನನ್ನಲ್ಲಿ ದಯೆ ತೋರಿಸಿ ತುಂಬ ಉಪಕಾರಮಾಡಿದ್ದೀರಿ, ಮಿಸ್ಟರ್ ಹಾಲ್ ಗ್ರೇವ್; ಅಂಗಡಿಯನ್ನು ಚೆನ್ನಾಗಿ ನಡಸಿಕೊಂಡುಹೋಗುವುದಕ್ಕಾಗಿ ನನ್ನ ಶಕ್ತಿಮೀರಿ ಪ್ರಯತ್ನಿಸುತ್ತೇನೆ."

ಹಾಲ್‌ಗ್ರೇವೆ–"ದಯವಿಟ್ಟು ಹಾಗೆಮಾಡಿ. ನಿಮ್ಮ ಮೊದಲನೆಯ ಗಿರಾಕಿಯಾಗಿರುವ ಸಂತೋಷ ನನ್ನ ಪಾಲಿಗಿರಲಿ. ನನ್ನ ಕೊಟಡಿಗಳಿಗೆ ಹಿಂದಿರುಗುವ ಮುನ್ನ ನಾನು ಕಡಲಕರೆಯ ಕಡೆ ಸಂಚಾರ ಹೊರಡಲಿದ್ದೇನೆ. ಅಲ್ಲಿ, ದೇವರು ದಯಪಾಲಿಸಿದ ಭಾಗ್ಯವೆನಿಸಿದ ಬಿಸಿಲನ್ನು ದುರುಪಯೋಗ ಪಡಿಸಿಕೊಂಡು, ಅದರ ಸಹಾಯದಿಂದ ಮಾನವಾಕೃತಿಗಳನ್ನು ಅಚ್ಚಿಳಿಸುತ್ತೇನೆ. ಆ ಬಿಸ್ಕತ್ತುಗಳಲ್ಲಿ ಕೆಲವನ್ನು ಕಡಲ ನೀರಿನಲ್ಲಿ ಅದ್ದಿದರೆ, ನನ್ನ ಬೆಳಗ್ಗಿನ ಉಪಾಹಾರಕ್ಕೆ ಬೇಕಾದಷ್ಟಾಯಿತು. ಅರ್ಧ ಡಜನ್ ಬಿಸ್ಕತ್ತಿಗೆ ಏನು ಬೆಲೆ?" ಎಂದನು.

"ಇನ್ನೊಂದು ಕ್ಷಣಕಾಲ ಶ್ರೀಮಂತ ಮಹಿಳೆಯಾಗಿಯೇ ಇರೋಣ"–

ಒಂದು ಬಗೆಯ ಆವಶ್ಯಕತೆಯನ್ನು ಪೂರೈಸಿಕೊಳ್ಳುವುದಕ್ಕಾಗಿ ತನ್ನ ಜೀವನಸಂಗ್ರಾಮವನ್ನು ಕಾಡುತ್ತಿತ್ತು. ಇನ್ನು ಮುಂದಾದರೋ, ಒಂದು ಉದ್ದೇಶಕ್ಕಾಗಿ ಹಿತಕರವಾದ ಸಹಜವಾದ ಪ್ರಯತ್ನ ಪಡುತ್ತಿದ್ದೇನೆ, ಅದು ಎಷ್ಟೇ ದೊಡ್ಡದಾಗಿರಲಿ ಸಣ್ಣದಾಗಿರಲಿ– ನನ್ನ ಬಲವನ್ನೆಲ್ಲ ಮಾನವ ಕೋಟಿಯ ಒಟ್ಟಿನ ಹೋರಾಟಕ್ಕೆ ಧಾರೆಯೆರೆಯುತ್ತಿದ್ದೇನೆ– ಎಂಬ ಭಾವನೆಯಾದರೂ ನಿಮಗಿರುತ್ತದೆ. ಇದೇ ಯಶಸ್ಸು. ಯಾರೇ ಆಗಲಿ ಪಡೆಯುವ ಯಶಸ್ಸೆಲ್ಲ ಇದೇ!"

ಈ ಮಾತನ್ನು ಕೇಳಿ, ತನ್ನ ಆತ್ಮಗೌರವಕ್ಕೆ ತುಸ ಪೆಟ್ಟಾಯಿತೆಂದುಕೊಂಡು, ತನ್ನ ಸಣಕಲು ಶರೀರವನ್ನು ನಿಮಿರಿಸಿಕೊಂಡು, ಹೆಪ್ಸಿಬಾ ಉತ್ತರಕೊಟ್ಟಳು: "ಹಾಲ್‌ಗ್ರೇವರೇ, ನೀವು ಇಂಥ ಭಾವನೆಗಳನ್ನು ಹೊಂದಿರುವುದು ಸಹಜವಾಗಿಯೆ ಇದೆ. ನೀವು ಗಂಡಸರು, ಅದರಲ್ಲಿ ತರುಣರು; ಈಗಿನ ಕಾಲದಲ್ಲಿ ಬಹುಮಟ್ಟಿಗೆ ಎಲ್ಲರಹಾಗೆ ಭಾಗ್ಯಸಂಪಾದನೆಯ ದೃಷ್ಟಿಯಿಂದ ಶಿಕ್ಷಣ ಪಡೆದವರು. ಆದರೆ ನಾನು ಹುಟ್ಟುವಾಗಲೇ ಶ್ರೀಮಂತೆಯಾಗಿ ಹುಟ್ಟಿದೆ, ಯಾವಾಗಲೂ ಹಾಗೆಯೇ ಬದುಕಿಬಾಳಿದ್ದೇನೆ; ಎಷ್ಟೇ ಮುಗ್ಗಟ್ಟಿನ ಜೀವನವಾಗಲಿ ಚಿಂತೆಯಿಲ್ಲ, ನಾನು ಸದಾ ಶ್ರೀಮಂತಮಹಿಳೆ!"

ಸ್ವಲ್ಪ ಮುಗುಳನಗೆ ನಗುತ್ತ ಹಾಲ್‌ಗ್ರೇವ್ ನುಡಿದ: "ಆದರೆ ನಾನು ದೊಡ್ಡ ಮನುಷ್ಯನಾಗಿ ಹುಟ್ಟಲಿಲ್ಲ; ದೊಡ್ಡ ಮನುಷ್ಯನ ಹಾಗೆ ಬದುಕು ಸಾಗಿಸಿಯೂ ಇಲ್ಲ. ಆದ್ದರಿಂದ ಈ ಬಗೆಯ ಸೂಕ್ಷ್ಮಭಾವನೆಗಳ ವಿಚಾರದಲ್ಲಿ ನನ್ನ ಸಹಾನುಭೂತಿಯಿದೆಯೆಂದು ನೀವು ನಿರೀಕ್ಷಿಸಲಾರಿರಿ; ಆದರೂ, ಅದು ಆತ್ಮವಂಚನೆಯ ಮಾತಲ್ಲದಿದ್ದರೆ, ಅವು ಏನೆಂಬುದರ ಸ್ಥೂಲ ಕಲ್ಪನೆ ಸ್ವಲ್ಪಮಟ್ಟಿಗೆ ಇದೆ. ಪ್ರಪಂಚದ ಹಿಂದಿನ ಇತಿಹಾಸದಲ್ಲಿ ದೊಡ್ಡ ಮನುಷ್ಯ, ಶ್ರೀಮಂತ ಮಹಿಳೆ, ಮುಂತಾದ ಹೆಸರುಗಳಿಗೆ ಒಂದು ಅರ್ಥವಿತ್ತು; ಆ ಹೆಸರುಗಳನ್ನು ಹೊಂದಲು ಅರ್ಹರಾದವರಿಗೆ, ಅಪೇಕ್ಷಣೀಯವೋ ಅಲ್ಲವೋ ಅಂತೂ ಅವುಗಳಿಂದ ಕೆಲವು ಹಕ್ಕುಗಳೂ ಲಭಿಸುತ್ತಿದ್ದವು. ಇಂದಿನ– ಅದಕ್ಕಿಂತ ಹೆಚ್ಚಾಗಿ ಇನ್ನು ಮುಂದಿನ ಸಮಾಜದ ಪರಿಸ್ಥಿತಿಯಲ್ಲಿ– ಅವು ಸೂಚಿಸುವುದು ಹಕ್ಕುಗಳನ್ನಲ್ಲ, ನಿರ್ಬಂಧಗಳನ್ನು!"

"ಇವೆಲ್ಲಾ ಹೊಸ ಭಾವನೆಗಳು. ಅವು ನನಗೆ ಅರ್ಥವಾಗುವುದೇ ಇಲ್ಲ, ಅರ್ಥಮಾಡಿಕೊಳ್ಳುವ ಅಪೇಕ್ಷೆಯೂ ಇಲ್ಲ" ಎಂದು ತಲೆಯಲ್ಲಾಡಿಸಿ ನುಡಿದಳು ಆ ವೃದ್ಧ ಮಹಿಳೆ.

"ಹಾಗಾದರೆ ಆ ವಿಚಾರವಾಗಿ ಮಾತಾಡುವುದನ್ನು ಇನ್ನು ಸಾಕು

ಆ ಕೂಡಲೆ, ಬಾಗಿಲ ಮೆಟ್ಟಲು ಬಳಿ ಯಾರೋ ಇಬ್ಬರ ಸಂವಾದ ಮೊದಲಾಯಿತು; ಅವರ ಒರಟು ದನಿಯಿಂದ ಅವರು ಕೂಲಿಯಾಳುಗಳೆಂದು ವ್ಯಕ್ತಪಡುತ್ತಿತ್ತು. ತಮ್ಮ ಸ್ವಂತ ವ್ಯವಹಾರಗಳನ್ನು ಕುರಿತು ತುಸ ಮಾತುಕತೆ ನಡಸಿದ ಮೇಲೆ, ಅವರಲ್ಲಿ ಒಬ್ಬನು ಅಂಗಡಿಯ ಕಿಟಕಿಯನ್ನು ಗಮನಿಸಿ, ಇನ್ನೊಬ್ಬನ ಗಮನವನ್ನೂ ಅದರತ್ತ ಸೆಳೆದನು.

"ನೋಡಯ್ಯಾ ಇಲ್ಲಿ! ಇದನ್ನು ನೋಡಿದರೆ ನಿನಗೆ ಏನನಿಸುತ್ತೆ? ಪಿನ್ಚನ್ ಬೀದಿಯಲ್ಲಿ ವ್ಯಾಪಾರ ಕುದುರುತ್ತಿರುವ ಹಾಗೆ ಕಾಣುತ್ತದೆ!" ಎಂದು ಅವನು ಒದರಿದನು.

"ಹೌದು, ಹೌದು. ಇದು ಖಂಡಿತವಾಗಿಯೂ ನೋಡಬೇಕಾದ್ದೆ! ಅದೂನೂ, ಪಿನ್ಚನ್ ಭವನದಲ್ಲಿ! ಪಿನ್ಚನ್ ಎಲ್ಮ್ ಮರದ ಕೆಳಗಡೆ! ಯಾರು ತಾನೆ ಹೀಗಾಗುವುದೆಂದು ಯೋಚಿಸಿದ್ದಾರು? ಮದುವೆಯಿಲ್ಲದ ಮುದುಕಿ ಪಿನ್ಚನ್ ಕಾಸಿನ ಅಂಗಡಿ ಇಡುತ್ತಿದ್ದಾಳೆ!" ಎಂದು ಇನ್ನೊಬ್ಬನು ಆಶ್ಚರ್ಯಗೊಂಡು ನುಡಿದನು.

ಆತನ ಗೆಳೆಯನೆಂದ: "ಅಂಗಡಿಯನ್ನ ಅವಳು ಮುಂದಕ್ಕೆ ತರುತ್ತಾಳೆಯೇ? ನಿನಗೇನು ತೋರುತ್ತೆ, ಡಿಕ್ಸಿ? ಇದು ಬಲು ಒಳ್ಳೆಯ ಸ್ಥಳ ಎಂದು ನನಗನ್ನಿಸುವುದಿಲ್ಲ. ಆ ಮೂಲೆತಿರುವಿನ ಬಳಿಯೆ ಇನ್ನೊಂದು ಅಂಗಡಿ ಇದೆ."

"ಮುಂದಕ್ಕೆ ತರುವುದು!" ಆ ಭಾವನೆಯನ್ನು ಇಟ್ಟುಕೊಳ್ಳುವುದೇ ಅಸಾಧ್ಯವೆಂಬಂತೆ ಅತ್ಯಂತ ತಿರಸ್ಕಾರಭಾವದಿಂದ ಒದರಿದ ಡಿಕ್ಸಿ: "ಒಂದು ಚೂರೂ ಸಾಧ್ಯವಿಲ್ಲ. ಏಕೆನ್ನುತ್ತಿಯೋ, ಅವಳ ಮುಖ ಇದೆಯಲ್ಲ, ನಾನದನ್ನು ನೋಡಿದ್ದೇನೆ– ಅವಳ ತೋಟದಲ್ಲಿ ನಾನು ವರ್ಷಕಾಲ ಅಗತೆ ಕೆಲಸ ಮಾಡಿದೇನೆ– ಅವಳ ಮುಖ ಇದೆಯಲ್ಲ, ಯಮಧರ್ಮರಾಯನಿಗೇನಾದರೂ ಇವಳ ಬಳಿ ವ್ಯಾಪಾರಮಾಡಬೇಕೆಂದು ತುಂಬ ಆಶೆಯಾಗಿ ಬಂದರೆ, ಅವನನ್ನೂ ಹೆದರಿಸಿಬಿಡುತ್ತೆ ಅದು. ನಾನು ಹೇಳ್ತೇನೆ ಕೇಳು, ಅದನ್ನು ನೋಡಿ ಸಹಿಸಲಾರರು! ಕಾರಣಗೀರಣ ಇರಲಿ ಇಲ್ಲದಿರಲಿ, ಶುದ್ಧ ವಕ್ರಸ್ವಭಾವದ ದೆಸೆಯಿಂದ, ಭಯಂಕರವಾಗಿ ಕಾಣುವ ಹಾಗೆ ಮುಖ ಸಿಂಡರಿಸಿಕೊಳ್ಳುತ್ತಾಳೆ!"

ಅದಕ್ಕೆ ಇನ್ನೊಬ್ಬನೆಂದ– "ಬಿಡು, ಅದೇನು ಅಂಥ ದೊಡ್ಡ ವಿಚಾರವಲ್ಲ. ಈ ಹುಳಿಮನಸ್ಸಿನ ಜನ ಇದಾರೆಯಲ್ಲ, ವ್ಯವಹಾರದಲ್ಲಿ ಒಳ್ಳೆ ಎತ್ತಿದ ಕೈ; ತಾವು ಏನುಮಾಡಬೇಕು ಎನ್ನುವುದನ್ನು ಚೆನ್ನಾಗಿ ಬಲ್ಲರು. ಆದರೂ, ನೀನು ಹೇಳುವ ಹಾಗೆ ಅವಳಿಗೆ ಚೆನ್ನಾಗಿ ವ್ಯಾಪಾರ ಆಗುತ್ತೆ ಎಂದು ನನಗನ್ನಿಸುವುದಿಲ್ಲ. ಇತರ

ಹೀಗೆಂದು ಹೆಪ್ಸಿಬಾ ಉತ್ತರಕೊಟ್ಟಾಗ ಒಂದು ಬಗೆಯ ಪೂರ್ವಕಾಲದ ಘನಗಂಭೀರತೆಯ ಸೋಗು ಧರಿಸಿದಳು; ಖಿನ್ನತೆಯ ಮುಗುಳುನಗೆ ಅದಕ್ಕೊಂದು ಬಗೆಯ ಸೊಗಸನ್ನು ನೀಡಿತ್ತು. ಅವಳು ಬಿಸ್ಕತ್ತುಗಳನ್ನು ತೆಗೆದುಕೊಂಡು ಅವನ ಕೈಗೆ ಹಾಕಿದಳು, ಆದರೆ ಬೆಲೆಯನ್ನು ನಿರಾಕರಿಸಿದಳು. "ಪಿನ್ಚನ್ ವಂಶಕ್ಕೆ ಸೇರಿದವಳು, ಅದರಲ್ಲಿಯೂ ತನ್ನ ಪೂರ್ವಿಕರ ಮನೆಯ ಸೂರಿನ ಕೆಳಗಿರುವಾಗ, ತಾನಿತ್ತ ಒಂದು ತುಣುಕು ರೊಟ್ಟಿಗಾಗಿ ತನ್ನ ಒಬ್ಬರೇ ಸ್ನೇಹಿತರಿಂದ ಏನೇ ಆಗಲಿ ಹಣ ತೆಗೆದುಕೊಳ್ಳಕೂಡದು!"

ಹಾಲ್‌ಗ್ರೇವ್ ತಾತ್ಕಾಲಿಕವಾಗಿ ಅವಳನ್ನು ಬಿಟ್ಟು ಹೊರಟುಹೋದ; ಆಗ ಅವಳ ಉತ್ಸಾಹ ಅಷ್ಟೊಂದು ಉಡುಗಿರಲಿಲ್ಲ. ಆದರೆ ಬೇಗನೆಯೇ ಅದು ತನ್ನ ಮೊದಲಿನ ಕನಿಷ್ಠ ಮಟ್ಟಕ್ಕೆ ಇಳಿದುಹೋಯಿತು. ಈಗ ಬೀದಿಯಲ್ಲಿ ಹೊತ್ತಿಗೆಮುಂಚೆ ಕಾಣಿಸಿಕೊಳ್ಳುವ ದಾರಿಗರ ಹೆಜ್ಜೆಯ ಸಪ್ಪುಳ ಮೇಲಿಂದಮೇಲೆ ಕೇಳತೊಡಗಿತು; ಅವಳು ತುಡಿಯುವ ಹೃದಯದೊಡನೆ ಅದಕ್ಕೆ ಕಿವಿಗೊಟ್ಟಳು. ಅಪರಿಚಿತರೋ ಇಲ್ಲವೆ ನೆರೆಹೊರೆಯವರೋ ಆಗಿದ್ದ ಈ ದಾರಿಗರು ಒಂದು ಸಲವೋ ಎರಡು ಸಲವೋ ಅಲ್ಲಿಯೇ ತಡೆದು ತಡೆದು ನಿಂತಂತೆ ಕಂಡಿತು; ನಿಂತು, ಅವಳ ಅಂಗಡಿಯ ಕಿಟಕಿಯಲ್ಲಿ ಪ್ರದರ್ಶಿಸಿದ್ದ ಆಟದ ಸಾಮನುಗಳನ್ನೂ ಚಿಲ್ಲರೆ ಸರಕನ್ನೂ ನೋಡುತ್ತಿದ್ದ ಹಾಗಿತ್ತು. ಅವಳಿಗೆ ಇಮ್ಮಡಿಯ ಚಿತ್ರ ಹಿಂಸೆಯಾಯಿತು; ಇದಕ್ಕೆ ಅರ್ಧ ಕಾರಣ, ಅಪರಿಚಿತರೂ ಪ್ರೇಮರಹಿತರೂ ಆದವರ ಕಣ್ಣುಗಳು ದೃಷ್ಟಿಸಿ ನೋಡುತ್ತಿರುವುದರಿಂದ ಉಂಟಾದ ಅಪಾರ ನಾಚಿಕೆ; ಕಿಟಕಿಯನ್ನು ಜಾಣತನದಿಂದಲೂ ಪ್ರಯೋಜನಕರವಾಗಿರುವಂತೆಯೂ ಯಾವ ರೀತಿ ಸಜ್ಜುಗೊಳಿಸಬೇಕೋ ಆ ರೀತಿ ಜೋಡಿಸಿಲ್ಲ ಎಂಬ ಭಾವನೆ ಮತ್ತೆ ಮತ್ತೆ ತಲೆದೋರಿದ್ದು ಇನ್ನರ್ಧ ಕಾರಣ. ಊರ್ಜಿತವಾಗುವುದೋ ಇಲ್ಲವೆ ಮುಚ್ಚಿ ಹೋಗುವುದೋ, ಅಂತೂ ಅವಳ ಅಂಗಡಿಯ ಭವಿಷ್ಯವೆಲ್ಲ ಬೇರೆಯ ಸಾಮಾನುಗಳ ತಂಡವನ್ನು ಪ್ರದರ್ಶಿಸುವುದರ ಮೇಲೆಯೋ, ಕಪ್ಪು ಚುಕ್ಕಿ ಕಾಣಿಸಿಕೊಂಡಿರುವ ಸೇಬಿನ ಹಣ್ಣಿಗೆ ಬದಲಾಗಿ ಇನ್ನೂ ಚೆನ್ನಾದ ಹಣ್ಣನ್ನು ಇಡುವುದರಮೇಲೆಯೋ ನಿಂತಿದೆಯೇನೊ ಎನ್ನುವಂತೆ ಕಾಣುತ್ತಿತ್ತು. ಅದೇ ಪ್ರಕಾರ ಅವಳು ಮಾಡಬೇಕಾದ ಮಾರ್ಪಾಟನ್ನು ಮಾಡಿದಳು; ಆ ಕೂಡಲೆ, ಅದರಿಂದ ಎಲ್ಲವೂ ಹಾಳಾಗಿಹೋಯಿತು ಎಂದು ಬಗೆದಳು. ಆ ಸಂದರ್ಭದಲ್ಲಿ ಉಂಟಾದ ಗಾಬರಿ, ಮದುವೆಯಿಲ್ಲದ ಮುದುಕಿಯಾದ ತನಗೆ ಸಹಜವಾದ ಬೇಸರಿಕೆ– ಇವೇ ಈ ತಂಟೆತಕರಾರಿಗೆಲ್ಲ ಕಾರಣವೆಂಬುದನ್ನು ಅವಳು ಗೊತ್ತು ಹಿಡಿಯಲಿಲ್ಲ.

ಹೆಂಗಸೊಬ್ಬಳು ತಾನು ಹಾಕಿದ ಬಂಡವಾಳದಲ್ಲಿ ಐದು ಡಾಲರ್‌ಗಳಷ್ಟು ನಷ್ಟಪಟ್ಟಿದ್ದಳೆಂದಮೇಲೆ– ಜೀವಮಾನದ ಅರ್ಧವನ್ನೆಲ್ಲ ಏಕಾಂತ ವಾಸದಲ್ಲಿ ಕಳೆದು ಪ್ರಪಂಚದ ಮುಖವನ್ನೇ ಕಾಣದ ಲೋಕ ವ್ಯವಹಾರದಲ್ಲಿ ಸಂಪೂರ್ಣವಾಗಿ ಅನನುಭವಿಯಾದ, ಅಭಿಜಾತ ಮಹಿಳೆಯೆನಿಸಿದ್ದ ತಾನು ಈಗ, ತನ್ನ ಅರವತ್ತರ ವಯಸ್ಸಿನಲ್ಲಿ, ಜಯಶೀಲಳಾಗುವ ಕನಸನ್ನಾದರೂ ಹೇಗೆ ತಾನೆ ಕಾಣಲಾದೀತು! ಜಯದಮಾತು ಅಸಾಧ್ಯವಾಗಿ ಕಂಡಿತು; ಅದರ ಆಶೆಕೂಡ ಒಂದು ಭ್ರಾಂತಿಯಾಗಿ ತೋರಿತು.

ಯಾವುದೋ ಒಂದು ದುಷ್ಟದೈವವು ಹೆಪ್ಸಿಬಾಗೆ ಬುದ್ಧಿ ವಿಕಲ್ಪವನ್ನುಂಟುಮಾಡಲು ತನ್ನ ಕೈಲಾದದ್ದನ್ನೆಲ್ಲ ಮಾಡುವ ಉದ್ದೇಶದಿಂದ, ಒಂದು ನಗರದಲ್ಲಿನ ಗಿರಾಕಿಗಳಿಂದ ಗುಜುಗುಟ್ಟುವ ದೊಡ್ಡ ರಾಜ ಮಾರ್ಗವನ್ನು ತೋರಿಸುವ ಒಂದು ಬಗೆಯ ದೃಶ್ಯಪರಂಪರೆಯ ಚಿತ್ರವನ್ನು ಅವಳ ಕಲ್ಪನೆಯ ಕಣ್ಣಿನ ಮುಂದೆ ಸುರುಳಿಬಿಚ್ಚಿ ಪ್ರದರ್ಶಿಸಿತು. ಅದರಲ್ಲಿ ಎಷ್ಟೊಂದು, ಹಾಗೂ ಎಂಥ ಭವ್ಯವಾದ ಅಂಗಡಿಯಗಳಿದ್ದುವು! ಕಿರಾಣಿಯಂಗಡಿಗಳು, ಆಟದ ಸಾಮಾನಿನ ಅಂಗಡಿಗಳು, ದಿನಸಿ ಅಂಗಡಿಗಳು: ಅವುಗಳ ಬಾಗಿಲುಗಳಿಗೆಲ್ಲ ಭಾರಿ ಭಾರಿ ಕನ್ನಡಿ ಗಾಜುಗಳ ಫಲಕಗಳು; ಅವುಗಳ ತುಂಬ ಬಗೆ ಬಗೆಯ ವ್ಯಾಪಾರದ ಸರಕು; ಸಮಸ್ತ ಐಶ್ವರ್ಯವನ್ನೆಲ್ಲ ಅವುಗಳ ಮೇಲೆ ಬಂಡವಾಳವಾಗಿ ಸುರಿದುಬಿಟ್ಟಿದ್ದರು! ಪ್ರತಿಯೊಂದು ಅಂಗಡಿಯ ಆಚೆಯ ಕೊನೆಯಲ್ಲಿ ಜೋಡಿಸಿದ್ದ ಅ ಭವ್ಯವಾದ ಕನ್ನಡಿಗಳೋ! ಥಳಥಳನೆ ಬೆಳುಗುವ ಮಿಥ್ಯಾರೂಪಗಳ ದೃಶ್ಯದ ಮೂಲಕ ಈ ಐಶ್ವರ್ಯವನ್ನೆಲ್ಲ ಇಮ್ಮಡಿಸಿದ್ದುವು! ಬೀದಿಯ ಒಂದು ಪಕ್ಕದಲ್ಲಿ ಸೊಗಸಾದ ಇಂಥ ಅಂಗಡಿಸಾಲು; ಅದರಲ್ಲಿ– ಸುಗಂಧದ್ರವ್ಯ ಲೇಪಿಸಿಕೊಂಡು ಘಮಘಮಾಯಿಸುವ, ಮಿರಮಿರ ಮಿರುಗುವ, ಕೃತಕನಗೆ ಬೀರುತ್ತ, ಮುಗುಳುನಗೆ ಸೂಸುತ್ತ, ಸೊಂಟ ಬಗ್ಗಿಸಿ ನಮಿಸುವ, ಸರಕನ್ನು ಅಳತೆ ಮಾಡಿ ಕೊಡುವ ಮಾರಾಟಗಾರರ ತಂಡ ತಂಡ! ಇನ್ನೊಂದು ಪಕ್ಕದಲ್ಲಿ, ಕತ್ತಲುಕವಿದ, ಪುರಾಣ ಕಾಲದ, ಏಳು ಇಪ್ಪಾರಿನ ಮನೆ! ಅದರ ಮುಂಚಾಚಿದ ಅಂತಸ್ತಿನ ಅಡಿಯಲ್ಲಿ ಅಷ್ಟೇ ಹಳತಾದ ಅಂಗಡಿ ಕಿಟಕಿ; ಅದರಲ್ಲಿ, ಸಾಗಿಹೋಗುತ್ತಿರುವ ಜಗತ್ತನ್ನು ಕಂಡು ಸಿಡುಕು ಮೋರೆ ಮಾಡುತ್ತ; ಪರಪರಗುಟ್ಟುವ ಕಪ್ಪು ರೇಷ್ಮೆಯ ಮೇಲಂಗಿ ಧರಿಸಿ, ವ್ಯಾಪಾರದ ಮೇಜಿನ ಹಿಂದೆ ಸಾಕ್ಷಾತ್ ಹೆಪ್ಸಿಬಾನೇ ನಿಂತಿದ್ದಾಳೆ! ಜೀವನಾಧಾರಕ್ಕಾಗಿ ಅವಳು ಅನೇಕ ಪ್ರತಿಕೂಲಗಳ ವಿರುದ್ಧವಾಗಿ ಹೋರಾಟವನ್ನು ಪ್ರಾರಂಭಿಸಬೇಕಾಗಿತ್ತು; ಅವುಗಳ ಸ್ಥೂಲ ನಿದರ್ಶನವಾಗಿ ಈ ಒಂದು ಅಗಾಧವಾದ

ಎಲ್ಲ ಬಗೆಯ ವ್ಯಾಪಾರ, ಕುಶಲಗಾರಿಕೆ ಕೆಲಸ, ದೇಹಶ್ರಮದ ಕೆಲಸ– ಇವುಗಳ ಹಾಗೆ, ಈ ಚಿಲ್ಲರೆ ಅಂಗಡಿ ಇಡುವುದೂ ಕೂಡ ಅತಿಯಾಗಿಹೋಗಿದೆ. ನಷ್ಟ ಅನುಭವಿಸಿರುವುದರಿಂದ ಆ ವಿಷಯ ನನಗೆ ಚೆನ್ನಾಗಿ ಗೊತ್ತು. ನನ್ನ ಹೆಂಡತಿ ಮೂರು ತಿಂಗಳ ಕಾಲ ಒಂದು 'ಕಾಸಿನ' ಅಂಗಡಿ ಇಟ್ಟಳು; ಹಾಕಿದ ಬಂಡವಾಳದಲ್ಲಿ ಐದು 'ಡಾಲರ್' ಕಳೆದುಕೊಂಡಳು!"

"ದರಿದ್ರ ವ್ಯಾಪಾರ! ದರಿದ್ರ ವ್ಯಾಪಾರ!" ಎಂದು ಡಿಕ್ಸಿ ಉತ್ತರಿಸಿದ. ತಲೆದೂಗುತ್ತಿದ್ದಾನೇನೋ ಎಂದು ತೋರುತ್ತಿತ್ತು ಅವನ ಧ್ವನಿಯಿಂದ.

ಮೇಲ್ಕಂಡ ಸಂಭಾಷಣೆಯನ್ನು ಕೇಳಿದಾಗ ಹೆಪ್ಸಿಬಾಳ ಹೃದಯ ಝಲ್ಲೆಂದಿತು; ಈ ವಿಚಾರದಲ್ಲಿ ಅವಳು ಈ ಹಿಂದೆ ಅನುಭವಿಸಿದ್ದ ಕ್ಲೇಶದಲ್ಲಿ ಇದರಷ್ಟು ಸಂಕಟಕರವಾದ ಸಂಗತಿ ಬೇರೊಂದು ಇರಲಿಲ್ಲ; ಇದಕ್ಕೆ ಕಾರಣವೇನೋ ಹೇಳಲಾಗದು, ಅದನ್ನು ಬಿಡಿಸಿ ಹೇಳುವುದು ಅಷ್ಟು ಸುಲಭವಲ್ಲ. ಅವಳ ಸಿಡುಕುಮೋರೆಯ ಬಗೆಗೆ ಕೇಳಿಬಂದ ಸಾಕ್ಷ್ಯ ಅತ್ಯಂತ ಮುಖ್ಯವಾಗಿತ್ತು; ಅದು ಅವಳ ಸ್ವಸ್ವರೂಪವನ್ನು ಅವಳ ಮುಂದೆ ಎತ್ತಿ ಹಿಡಿದು ತೋರಿಸಿತ್ತು; ಅದರಲ್ಲಿ ಅವಳು ತನ್ನ ಬಗೆಗೆ ಇಟ್ಟುಕೊಂಡಿದ್ದ ಸ್ವಪಕ್ಷಪಾತ ಭಾವನೆಯ ಹುಸಿ ಬೆಳಕೆಲ್ಲ, ಸಂಪೂರ್ಣ ಮಾಯವಾಗಿಬಿಟ್ಟು, ಅತ್ಯಂತ ಭೀಕರವಾಗಿತ್ತು ಅದು; ಅದನ್ನು ನೋಡಲು ಅವಳಿಗೆ ಧೈರ್ಯವಾಗಲಿಲ್ಲ. ಅಂಗಡಿ ಇಟ್ಟದ್ದು ಅವಳ ಪಾಲಿಗೆ ಅತ್ಯಂತ ಉತ್ಸಾಹದ ಘಟನೆಯೆನಿಸಿತ್ತು; ಆದರೆ ಜನದ ಮೇಲೆ ಅದು ಬೀರಿದ ಪರಿಣಾಮಮಾತ್ರ ಅತ್ಯಲ್ಪವೂ ನಿಷ್ಫಲವೂ ಆಗಿತ್ತೆಂಬುದು ಜನದ ಅತ್ಯಂತ ಸಮೀಪ ಪ್ರತಿನಿಧಿಗಳಂತಿದ್ದ ಈ ಇಬ್ಬರಿಂದ ಹೊರಪಟ್ಟಿತ್ತು; ಇದರಿಂದ ಅವಳಿಗೆ ಅಸಂಬದ್ಧವಾದ ರೀತಿಯಲ್ಲಿ ನೋವಾಗಿತ್ತು. ಒಂದು ಸಲ ನೋಡಿದರು, ಒಂದೆರಡು ಮಾತಾಡಿಕೊಂಡರು, ಒರಟೊರಟಾಗಿ ನಕ್ಕರು, ಬೀದಿಯ ಮೂಲೆಯನ್ನು ತಿರುಗುವಷ್ಟರಲ್ಲಿ ಅವಳನ್ನು ನಿಸ್ಸಂದೇಹವಾಗಿ ಮರೆತುಬಿಟ್ಟಿದ್ದರು ಅವರು. ಅವಳ ಗೌರವಕ್ಕೆ ಅವರು ಲಕ್ಷ್ಯವನ್ನೇ ಕೊಡಲಿಲ್ಲ ; ಅವಳ ಅವನತಿಯನ್ನೂ ಲಕ್ಷಿಸಲಿಲ್ಲ ಅವರು. ಇಷ್ಟು ಸಾಲದೆಂಬಂತೆ, ವ್ಯವಹಾರ ಊರ್ಜಿತವಾಗುವುದಿಲ್ಲವೆಂದು ಅನುಭವಜನ್ಯವಾದ ವಿವೇಕದಿಂದ ಅವರು ನುಡಿದ ಭವಿಷ್ಯವಾಕ್ಯವು ಗೋರಿಗೆ ಎಸೆದ ಮಣ್ಣು ಹೆಂಟೆಯಂತೆ ಅವಳ ಅರೆಮುರಿದ ಆಶೆಯ ಮೇಲೆ ಎರಗಿತು. ಆ ಮನುಷ್ಯನ ಹೆಂಡತಿ ಆಗಲೆ ಆ ಪ್ರಯೋಗವನ್ನು ಪ್ರಯತ್ನಿಸಿನೋಡಿ, ಅದರಲ್ಲಿ ವಿಫಲಳಾಗಿದ್ದಳು, ಗಟ್ಟಿಮುಟ್ಟಾದ, ಕೀಳುವರ್ಗದ, ಚುರುಕಾದ, ಚಟುವಟಿಕೆಯುಳ್ಳ, ದುಡಿದು ಪಳಗಿದ ಹೊಸ ಇಂಗ್ಲೆಂಡಿನ ಸಾಮಾನ್ಯ

ಒಂದು ಕ್ಷಣಕಾಲ ಹೆಪ್ಸಿಬಾಳನ್ನು ದಿಟ್ಟಿಸಿನೋಡಿದ; ತನ್ನ ಬಗೆಗೆ ಅವಳು ತಳೆದಿದ್ದ ಗಂಭೀರ ಭಾವವನ್ನೂ ವಿಚಿತ್ರ ಸಿಡುಕುಮೋರೆಯನ್ನೂ ಕಂಡು ಏನು ಅರ್ಥಮಾಡಿಕೊಳ್ಳಬೇಕೋ ಅವನಿಗೆ ಗೊತ್ತಾಗಿರಲಿಲ್ಲ.

ಎದುರಿಸಲು ಅಷ್ಟೊಂದು ಸುಲಭವಾಗಿದ್ದ ವ್ಯಕ್ತಿಯನ್ನು ಕಂಡು ಧೈರ್ಯಗೊಂಡು, “ಒಳ್ಳೆಯದು, ಮಗೂ, ನಿನಗೆ ಏನುಬೇಕು?” ಎಂದು ಅವಳು ಕೇಳಿದಳು.

“ಅಲ್ಲಿ ಕಿಟಕಿಯಲ್ಲಿದೆಯಲ್ಲ, ‘ಜಿಂ ಕ್ರೋ’ ಬೊಂಬೆ (ಕಾಗೆ ಕರಿಯಣ್ಣ), * ಕಾಲು ಮುರಿಯದೆ ಇರುವುದು, ಅದು ಬೇಕು” ಎಂದು ಆ ಹುಡುಗ ಕೈಲಿ ಒಂದು ಸೆಂಟ್ ನಾಣ್ಯವನ್ನು ಹಿಡಿದುಕೊಂಡು, ಶಾಲೆಗೆ ಅಡ್ಡಾಡುತ್ತ ಹೋಗುತ್ತಿದ್ದಾಗ ತನ್ನ ಗಮನವನ್ನು ಸೆಳೆದಿದ್ದ ಶುಂಠಿ ರೊಟ್ಟಿಯ ಬೊಂಬೆಯ ಕಡೆಗೆ ಕೈತೋರಿಸುತ್ತ ನುಡಿದ.

ಹೆಪ್ಸಿಬಾ ತನ್ನ ಸಣಕಲು ಕೈಯನ್ನು ಚಾಚಿ ಅಂಗಡಿ ಕಿಟಕಿಯಿಂದ ಆ ಬೊಂಬೆಯನ್ನು ತೆಗೆದುಕೊಂಡು, ತನ್ನ ಮೊದಲ ಗಿರಾಕಿಗೆ ಅದನ್ನು ಕೊಟ್ಟಳು.

“ದುಡ್ಡಿನ ವಿಷಯ ಪರವಾಯಿಲ್ಲ, ಮಗೂ. ಸೆಂಟಿನ ವಿಷಯ ಹಾಗಿರಲಿ, ‘ಜಿಂ ಕ್ರೋ’ ನನ್ನ ನೀನು ತೆಗೆದುಕೋ” ಎಂದಳು, ಅವನನ್ನು ಬಾಗಿಲ ಬಳಿಗೆ ಮೆಲ್ಲನೆ ದಬ್ಬುತ್ತ. ಆ ತಾಮ್ರದ ನಾಣ್ಯವನ್ನು ಕಂಡು ತನ್ನ ಪುರಾತನ ಶ್ರೀಮಂತಿಕೆಗೆ ಅವಮಾನವಾಯಿತೆಂದು ಅವಳಿಗೆ ಅಸಮಾಧಾನವಾಯಿತು; ಅಲ್ಲದೆ, ಹಳಸಲಾದ ಒಂದು ತುಣುಕು ಶುಂಠಿರೊಟ್ಟಿಗೆ ಪ್ರತಿಯಾಗಿ ಮಗುವಿನ ಜೇಬಿನಲ್ಲಿದ್ದ ಚಿಲ್ಲರೆ ವೆಚ್ಚದ ಹಣವನ್ನು ಕಸಿದುಕೊಳ್ಳುವುದು ತುಂಬ ಕೀಳಾಗಿ ಕಂಡಿತ್ತವಳಿಗೆ.

ಆ ಚಿಕ್ಕ ಹುಡುಗ ಕಾಸಿನ ಅಂಗಡಿಗಳಲ್ಲಿ ವ್ಯಾಪಾರ ಮಾಡುವುದರಲ್ಲಿ ತುಂಬ ಅನುಭವ ಹೊಂದಿದ್ದ; ಹಿಂದೆ ಎಂದೂ ಕಾಣದ ಔದಾರ್ಯದ ಈ ನಿದರ್ಶನವನ್ನು ಕಂಡು ತನ್ನ ಗುಂಡುಗಣ್ಣುಗಳನ್ನು ಅರಳಿಸಿ ದಿಟ್ಟಿಸಿ ನೋಡುತ್ತ, ಶುಂಠಿ ರೊಟ್ಟಿಯ ಬೊಂಬೆಯನ್ನು ತೆಗೆದುಕೊಂಡು ಆ ಸ್ಥಳವನ್ನು ಬಿಟ್ಟು ಹೊರಟುಹೋದ. ರಸ್ತೆಯ ಪಕ್ಕದ ನಡೆದಾರಿಯನ್ನು ಸೇರಿದ್ದೇ ತಡ, (ಪುಟ್ಟ ನರಭಕ್ಷಕನಾಗಿದ್ದ ಅವನು!) ‘ಜಿಂಕ್ರೋ’ನ ತಲೆ ಅವನ ಬಾಯೊಳಗಿತ್ತು. ಅವನು ಹೋಗುವಾಗ ಬಾಗಿಲು ಮುಚ್ಚಿಕೊಂಡು ಹೋಗುವಷ್ಟು ಎಚ್ಚರವಹಿಸಲಿಲ್ಲವಾದ್ದರಿಂದ, ಅವನು ಹೋದ ಮೇಲೆ ಅದನ್ನು ಮುಚ್ಚುವುದಕ್ಕೆ ಹೆಪ್ಸಿಬಾ ಸ್ವಲ್ಪ ಶ್ರಮಪಡಬೇಕಾಯಿತು; ಚಿಕ್ಕವರು, ಅದರಲ್ಲಿ ವಿಶೇಷವಾಗಿ ಸಣ್ಣ

---

* ನೀಗ್ರೋ ಮನುಷ್ಯನ ಅಡ್ಡ ಹೆಸರು.

ವೈಷಮ್ಯವು ಮುಂದಕ್ಕೆ ಚಾಚಿಕೊಂಡು ನಿಂತಿತ್ತು. ಯಶಸ್ಸೆ? ಅದು ಅಸಂಬದ್ಧ! ಅದನ್ನು ಕುರಿತು ಅವಳು ಮತ್ತೆ ಆಲೋಚಿಸಿದಳು. ಇತರ ಎಲ್ಲ ಮನೆಗಳೂ ಬಿಸಿಲಿಗೆ ಮೈಯೊಡ್ಡಿ ನಿಂತಿರುವಲ್ಲಿ ಈ ಮನೆ ನಿರಂತರವಾದ ಕಾವಳದಲ್ಲಿ ಮುಳುಗಿಹೋದರೂ ಹೋದೀತೆ; ಏಕೆಂದರೆ, ಯಾರೊಬ್ಬರೂ ಅದರ ಹೊಸಿಲನ್ನು ದಾಟಿ ಒಳಕ್ಕೆ ಬಾರರು, ಯಾರೂ ಅದರ ಬಾಗಿಲನ್ನು ನೂಕರು!

ಆದರೆ, ಅದೇ ಕ್ಷಣದಲ್ಲಿ, ಅವಳ ತಲೆಯಮೇಲೆ ಸರಿಯಾಗಿ ನೇತಾಡುತ್ತಿದ್ದ ಅಂಗಡಿಯ ಗಂಟೆ ಮಂತ್ರಚಾಲಿತವಾಯಿತೋ ಎಂಬಂತೆ ಕಣಕಣ ಎಂದಿತು. ಈ ವೃದ್ಧ ಶ್ರೀಮಂತೆಯ ಹೃದಯವೂ ಅದೇ ಉಕ್ಕಿನ ಚಿಮ್ಮು ಪಟ್ಟಿಗೆ ಬೆಸುಗೆಯಾಗಿತ್ತೋ ಏನೋ, ಆ ಶಬ್ದದೊಂದಿಗೆ ಸಮತಾನವಾಗಿ ಅವಳ ಹೃದಯವೂ ಒಂದೇ ಸಮನೆ ಕಂಪಿಸಿತು. ಅರ್ಧ ಕಿಟಕಿಯ ಆಚೆಯ ಕಡೆ ಯಾವ ಮನುಷ್ಯಾಕೃತಿಯೂ ಗೋಚರವಾಗದಿದ್ದರೂ, ಬಾಗಿಲು ನೂಕಿದಂತಾಗಿ ತೆರೆಯಿತು. ಆದರೂ, ಹೆಪ್ಸಿಬಾ ತನ್ನ ಕೈ ಬೆರಳುಗಳನ್ನು ಹೆಣೆದು ಹಿಡಿದುಕೊಂಡು, ನಟ್ಟ ನೋಟದೊಡನೆ ನಿಂತಳು; ಆಗ, ಒಂದು ದುಷ್ಟ ಭೂತವನ್ನು ಆವಾಹನೆಮಾಡಿ ಅದನ್ನು ಸಂಧಿಸುವ ಸಾಹಸವಮಾಡಲು ಹೆದರಿದ್ದರೂ ಆ ನಿಶ್ಚಯಮಾಡಿಕೊಂಡಿದ್ದಂತೆ ಕಾಣುತ್ತಿದ್ದಳು ಅವಳು.

“ದೇವರೇ ನನ್ನ ನೆರವಿಗೆ ಬರಬೇಕು ಈಗ! ನನಗೆ ನೆರವು ಅಗತ್ಯವಾದ ಗಳಿಗೆ ಈಗ ಬಂದಿದೆ” ಎಂದು ಅವಳು ಮನಸ್ಸಿನಲ್ಲಿಯೇ ನರಳಿದಳು. ಬಲಾತ್ಕಾರದಿಂದ ನೂಕಿ ತೆರೆದ ಬಾಗಿಲು, ಕಿರುಗುಟ್ಟುವ ಹಾಗೂ ತುಕ್ಕು ಹಿಡಿದ ಕೀಲುಗಳ ಮೇಲೆ ಬಹಳ ಕಷ್ಟದಿಂದ ಚಲಿಸಿತು; ಅದು ಹಾಗೆ ಪೂರ್ತಿ ತೆರೆದಾಗ, ಸೇಬಿನ ಹಣ್ಣಿನಂತೆ ಕೆಂಪುಕೆನ್ನೆಯುಳ್ಳ, ಚಚ್ಚೌಕವಾಗಿ ಮೈತುಂಬಿಕೊಂಡಿದ್ದ ಚಿಕ್ಕ ಹುಡುಗನೊಬ್ಬ ಕಾಣಿಸಿಕೊಂಡ. ಅವನು ಧರಿಸಿದ್ದ ಉಡುಪು ಸುಮಾರಾಗಿ ಕೊಳಕಾಗಿಯೆ ಇತ್ತು; (ಆದರೆ, ಅದಕ್ಕೆ ಕಾರಣ, ತಂದೆಯ ಬಡತನಕ್ಕಿಂತ ತಾಯಿಯ ಅಸಡ್ಡೆಯೇ ಹೆಚ್ಚು); ಆ ಉಡುಪೆಂದರೆ, ಒಂದು ಅಗಲವಾದ ನೀಲಬಣ್ಣದ ಧೂಳುಪಾವುಡ (Apron), ಮೋಟಾದ ಷರಾಯಿ, ಕಾಲ್ಬೆರಳಬಳಿ ಸ್ವಲ್ಪ ಹೊರಚಾಚಿಕೊಂಡಿದ್ದ ಜೋಡು, ಮತ್ತು ಸಿಗುರಿನಿಂದ ಮಾಡಿದ ಟೋಪಿ; ಟೋಪಿಯ ರಂಧ್ರಗಳಿಂದ ಅವನ ಗುಂಗುರು ಕೂದಲಿನ ಗುಂಗುರುಗಳು ಹೊರಹಾಯ್ದಿದ್ದವು. ಅವನ ಕಂಕುಳಿನಲ್ಲಿದ್ದ ಪುಸ್ತಕ, ಒಂದು ಸಣ್ಣ 'ಸ್ಲೇಟು'– ಇವು ಅವನು ಶಾಲೆಯ ಕಡೆಗೆ ಹೊರಟಿದ್ದನ್ನು ಸೂಚಿಸುತ್ತಿದ್ದುವು. ತನಗಿಂತ ಹೆಚ್ಚು ವಯಸ್ಸಾದ ಗಿರಾಕಿಯೊಬ್ಬನು ನೋಡುತ್ತಿರಬಹುದಾದ ರೀತಿಯಲ್ಲಿ ಅವನು

ಫಲವನ್ನು ಗಲ್ಲದೊಳಕ್ಕೆ ಹಾಕಿದಳು. ಕೆಲಸ ನಡೆದುಹೋಯಿತು! ಆ ತಾಮ್ರದ ನಾಣ್ಯದ ಹೊಲಸುಕಲೆಯನ್ನು ಅವಳ ಅಂಗೈಯಿಂದ ಎಂದಿಗೂ ತೊಳೆದು ಹೋಗಲಾಡಿಸುವಂತಿರಲಿಲ್ಲ. ಆ ಸಣ್ಣ ಶಾಲಾಬಾಲಕನು ನೀಗ್ರೋ ನರ್ತಕನ ತುಂಟ ಬೊಂಬೆಯ ನೆರವಿನಿಂದ ಸರಿಪಡಿಸಲಾಗದ ಹಾನಿಯನ್ನು ಎಸಗಿಬಿಟ್ಟಿದ್ದನು. ಅವನ ಹುಡುಗತನದ ಹಿಡಿತಕ್ಕೆ ಸಿಲುಕಿ ಏಳು ಇಪ್ಪಾರಿನ ಮನೆಯೇ ನೆಲಸಮವಾಯಿತೋ ಎಂಬಂತೆ, ಪುರಾತನವಾದ ಶ್ರೀಮಂತವರ್ಗದ ವ್ಯವಸ್ಥೆ ಅವನಿಂದ ನಿರ್ಮೂಲವಾಗಿಹೋಗಿತ್ತು. ಈಗ ಬೇಕಾದರೆ ಹೆಪ್ಸಿಬಾ ಪಿನ್ಚನ್ ವಂಶಿಕರ ಭಾವಚಿತ್ರಗಳ ಮುಖಗಳನ್ನು ಗೋಡೆಯ ಕಡೆಗೆ ತಿರುಗಿಸಿಬಿಡಲಿ, ತನ್ನ ಪೂರ್ವದಿಕ್ಕಿನ ಪ್ರದೇಶದ ಭೂಪಟವನ್ನು ತೆಗೆದುಕೊಂಡು ಅಡುಗೆಮನೆಯ ಒಲೆಯನ್ನು ಹೊತ್ತಿಸಲಿ, ತನ್ನ ವಂಶಪಾರಂಪರ್ಯವಾದ ಸಂಪ್ರದಾಯಗಳ ಹುಸಿಯುಸಿರು ಬಿಟ್ಟು ಉರಿಯನ್ನು ನಂದಿಸಿ ಬಿಡಲಿ! ತನ್ನ ವಂಶವನ್ನು ಕಟ್ಟಿಕೊಂಡು ಅವಳಿಗೆ ಆಗಬೇಕಾದದ್ದೇನು! ಏನೂ ಇಲ್ಲ; ಭವಿಷ್ಯ ಸಂತತಿಗೂ ಅವಳಿಗೂ ಎಷ್ಟು ಸಂಬಂಧವೋ ಅದಕ್ಕಿಂತ ಹೆಚ್ಚೇನೂ ಇಲ್ಲ. ಈಗ ಅವಳು ಶ್ರೀಮಂತ ಮಹಿಳೆಯಲ್ಲ; ಕೇವಲ ಹೆಪ್ಸಿಬಾ ಪಿನ್ಚನ್, ದಿಕ್ಕಿಲ್ಲದ ಮುದಿಕನ್ಯೆ, ಚಿಲ್ಲರೆ ಅಂಗಡಿಯ ಒಡತಿ!

ಆದರೂ ಕೂಡ, ಅವಳು ಈ ಎಲ್ಲ ಭಾವನೆಗಳನ್ನೂ ತನ್ನ ಮನೋರಂಗದಲ್ಲಿ ಸ್ವಲ್ಪ ಹೆಮ್ಮೆಯಿಂದಲೇ ಹರಿದಾಡಿಸುವಾಗಲೂ ಅವಳಲ್ಲಿ ಎಂಥ ಶಾಂತಿ ತುಂಬಿಬಂದಿತ್ತು ಎಂಬುದು ಅಚ್ಚರಿಯ ಸಂಗತಿಯೆ. ಅವಳ ಕಾರ್ಯ ಯೋಜನೆ ವಾಸ್ತವರೂಪವನ್ನು ಹೊಂದತೊಡಗಿದಂದಿನಿಂದ ನಿದ್ರೆ ಮಾಡುತ್ತಿರುವಾಗಾಗಲಿ ನಿರುತ್ಸಾಹಕರವಾದ ಹಗಲುಗನಸುಗಳಲ್ಲಿಯಾಗಲಿ ಅವನಳನ್ನು ಚಿತ್ರ ಹಿಂಸೆಮಾಡುತ್ತಿದ್ದ ಆತಂಕಗಳೂ ಸಂದೇಹಗಳೂ ಈಗ ಸಂಪೂರ್ಣವಾಗಿ ಮಾಯವಾಗಿಹೋಗಿದ್ದುವು. ತನ್ನ ಇಂದಿನ ಸ್ಥಿತಿಯ ಹೊಸತನ ಅವಳ ಅನುಭವಕ್ಕೆ ಬಂದಿತ್ತು; ಆದರೆ ಈಗ ಅವಳ ಮನಸ್ಸಿನಲ್ಲಿ ಮೊದಲಿನ ಗಾಬರಿ ಗೊಂದಲ ಗಳಿರಲಿಲ್ಲ. ಆಗೊಮ್ಮೆ ಈಗೊಮ್ಮೆ ಯೌವನ ಸಹಜವಾದ ಸುಖಾನುಭವದ ಹಿಗ್ಗಿನ ಜೊಮ್ಮು ತಟ್ಟುತ್ತಿತ್ತು. ಅವಳ ಬದುಕಿನ ದೀರ್ಘಕಾಲದ ಅಲಸಿಕೆಯೂ ವೈವಿಧ್ಯವಿಲ್ಲದ ಬೇಸರಿಕೆಯ ಒಂಟಿತನವೂ ಕೊನೆಗೊಂಡಮೇಲೆ, ಹೊಸದಾದ ಚೈತನ್ಯದಾಯಕವಾದ ಹೊರ ವಾತಾವರಣದಲ್ಲಿ ನಿರಾಳವಾಗಿ ಉಸಿರಾಡಿದಂತಾಯಿತು. ಪುರುಷ ಪ್ರಯತ್ನವೇ ಹಾಗೆ, ಅದೆಷ್ಟು ಹಿತಕಾರಿ! ನಮಗೆ ಅರಿವಿಲ್ಲದಂತೆ ಬರುವ ಶಕ್ತಿಯೋ, ಅದೆಷ್ಟು ಅದ್ಭುತ! ಇಂದು,

ಹುಡುಗರು ಕೊಡುವ ತೊಂದರೆಯ ಬಗೆಗೆ ಒಂದೆರಡು ಸಲ ರೇಗಿ ಉದ್ಗಾರತೆಗೆದಳು. ಪ್ರಸಿದ್ಧ 'ಜಿಂ ಕ್ರೋ'ನ ಇನ್ನೊಂದು ಪ್ರತಿಮೂರ್ತಿಯನ್ನು ಅವಳು ಕಿಟಕಿಯ ಬಳಿ ಅದೇ ತಾನೇ ಇರಿಸಿದ್ದಳು; ಆಗ ಮತ್ತೆ ಅಂಗಡಿಯ ಗಂಟೆ ಒಂದೇ ಸಮನೆ ಬಿಡದೆ ಗಣ ಗಣಿಸಿತ್ತು; ಮತ್ತೆ ಬಾಗಿಲನ್ನು ಯಾರೋ ನೂಕಿ ಅದು ತನ್ನ ವಿಶಿಷ್ಟ ರೀತಿಯಲ್ಲಿ ಕಟ್ ಕಟ್ ಜರ್‌ಜರ್ ಎಂದು ತಡೆದು ತಡೆದು ತೆರೆದುಕೊಂಡಿತು; ಸರಿಯಾಗಿ ಎರಡು ನಿಮಿಷಗಳ ಹಿಂದೆ ಹೊರಹೊರಟಿದ್ದ ಅದೇ ಗಟ್ಟಿ ಮುಟ್ಟಾದ ಚಿಕ್ಕ ಹುಡುಗ ಕಂಡುಬಂದ. ಇನ್ನೂ ಸಮಗ್ರವಾಗಿ ಪೂರೈಸಿರಲಿಲ್ಲದ ನರಭಕ್ಷಣ ಭೋಜನದ ಎಂಜಲುಚೂರುಗಳೂ ವರ್ಣವ್ಯತ್ಯಾಸವೂ ಅವನ ಬಾಯಿಯ ಸುತ್ತ ಮುತ್ತ ಚೆನ್ನಾಗಿ ವ್ಯಕ್ತವಾಗಿದ್ದವು.

"ಇನ್ನೇನು ಬೇಕು, ಮಗೂ? ಬಾಗಿಲು ಮುಚ್ಚಿಕೊಂಡು ಹೋಗಲು ಹಿಂದಕ್ಕೆ ಬಂದೆಯಾ?" ಎಂದು ತುಸ ಆತುರಪಟ್ಟು ಕೇಳಿದಳು ಆ ಕನ್ಯಾ ಮಹಿಳೆ.

ಆಗ ತಾನೆ ಇರಿಸಿದ್ದ ಬೊಂಬೆಯ ಕಡೆಗೆ ಬೆರಳು ಮಾಡಿ ಆ ಹುಡುಗನೆಂದ; ಇಲ್ಲ, ಆ ಇನ್ನೊಂದು 'ಜಿಂ ಕ್ರೋ'ನೂ ನನಗೆ ಬೇಕು."

ಹೆಪ್ಸಿಬಾ ಆ ಬೊಂಬೆಯನ್ನು ಎಟುಕಿಸಿಕೊಳ್ಳುತ್ತಾ, "ಒಳ್ಳೆಯದು, ಇಕೋ, ಅದನ್ನು ಹಿಡಿ" ಎಂದಳೂ; ಆದರೆ, ತನ್ನ ಅಂಗಡಿಯಲ್ಲಿ ಶುಂಠಿ ರೊಟ್ಟಿಯ ಬೊಂಬೆ ಇರುವವರೆಗೂ ಈ ಮೊಂಡು ಗಿರಾಕಿ ಬೇರೆ ಯಾವ ಕರಾರು ಹಾಕಿದರೂ ತನ್ನನ್ನು ಬಿಟ್ಟು ಕದಲುವುದಿಲ್ಲವೆಂದು ಅರಿತುಕೊಂಡು, ತನ್ನ ಚಾಚಿದ ಕೈಯನ್ನು ಅರ್ಧ ಹಿಂದಕ್ಕೆ ಎಳೆದುಕೊಂಡಳೂ, "ಸೆಂಟ್ ಎಲ್ಲಿ?" ಎಂದು ಕೇಳಿದಳು.

ಆ ಚಿಕ್ಕ ಹುಡುಗನ ಬಳಿ ಸೆಂಟೇನೋ ಸಿದ್ಧವಾಗಿತ್ತು; ಆದರೆ, ಹುಟ್ಟಾ 'ಯಾಂಕಿ'ಯಂತೆ,* ನಷ್ಟಕರವಾದ ವ್ಯಾಪಾರಕ್ಕಿಂತ ಲಾಭಕರವಾದ ವ್ಯಾಪಾರವನ್ನೇ ಪುರಸ್ಕರಿಸತಕ್ಕವನು ಅವನು. ಸ್ವಲ್ಪ ಮಟ್ಟಿಗೆ ನಿರಾಶೆಗೊಂಡವನಂತೆ ಕಾಣುತ್ತಾ, ಹೆಪ್ಸಿಬಾಳ ಕೈಗೆ ನಾಣ್ಯವನ್ನು ಹಾಕಿ, ಎರಡನೆಯ 'ಜಿಂ ಕ್ರೋ'ನನ್ನು ಮೊದಲನೆಯಾವನನ್ನು ಹುಡುಕಿಕೊಂಡುಬರಲು ಕಳಿಸಿಕೊಟ್ಟು, ತಾನು ಅಲ್ಲಿಂದ ತೆರಳಿದನು. ಹೊಸ ಅಂಗಡಿಕಾರ್ತಿ ತನ್ನ ವ್ಯಾಪಾರೋದ್ಯಮದ ಮೊದಲ ಗಟ್ಟಿ

---

* ಯಾಂಕಿ: ಅಮೆರಿಕದ ಸಂಯುಕ್ತ ಸಂಸ್ಥಾನಗಳ ಒಂದು ಭಾಗವಾಗಿದ್ದ 'ಹೊಸ ಇಂಗ್ಲೆಂಡ್'ನಲ್ಲಿ ಹುಟ್ಟಿದವನು; ಈಗ ಸಾಮಾನ್ಯ ಬಳಕೆಯಲ್ಲಿ ಅಮೆರಿಕದವನು.

ಮೇಘವು ಆ ಎಡೆಗೆ ಅಡ್ಡಲಾಗಿ ಬಂದು ಆಕಾಶದ ನೀಲಿಯ ಪಟ್ಟೆಯನ್ನು ಮತ್ತೆ ಮುಚ್ಚಿ ಬಿಡಲು ಹವಣಿಸುತ್ತದೆ.

ಬೆಳಗ್ಗೆ ಹೊತ್ತೇರಿದಂತೆ, ಗಿರಾಕಿಗಳೇನೋ ಬಂದರು; ಆದರೆ ನಿಧಾನವಾಗಿ. ಕೆಲವು ಸಂದರ್ಭಗಳಲ್ಲಿ, ಹಾಗೆ ಬಂದ್ದದರಿಂದ ಅವರಿಗಾಗಲಿ ಕುಮಾರಿ ಹೆಪ್ಸಿಬಾಗಾಗಲಿ ಆದ ತೃಪ್ತಿ ಮಾತ್ರ ಅತ್ಯಲ್ಪ; ಇದನ್ನೂ ಒಪ್ಪಿಕೊಳ್ಳಬೇಕು. ಅಲ್ಲದೆ, ಒಟ್ಟಿನ ಮೇಲೆ ಅದರ ಫಲವಾಗಿ ಗಲ್ಲಕ್ಕೆ ಬಹು ಭಾರಿ ಮೊಬಲಗೂ ಬಂದು ಬೀಳಲಿಲ್ಲ. ತಮ್ಮ ಬಳಿ ಇರುವ ಯಾವುದೋ ಒಂದು ವಿಚಿತ್ರ ಬಣ್ಣಕ್ಕೆ ಹೊಂದುವ ಹತ್ತಿಯ ದಾರದ ಒಂದು ಪಿಂಜಿಯನ್ನು ತೆಗೆದುಕೊಂಡು ಬರುವಂತೆ ತನ್ನ ತಾಯಿ ಹೇಳಿಕಳಿಸಿದ್ದಾಳೆಂದು ಚಿಕ್ಕ ಹುಡುಗಿಯೊಬ್ಬಳು ಬಂದಳು; 'ಇದು ಥೇಟ್ ಅದೇ ಬಣ್ಣದ್ದು' ಎಂದು ಸಮೀಪದೃಷ್ಟಿಯ ವೃದ್ಧಶ್ರೀಮಂತೆ ಸಾರಿ ಹೇಳಿದ್ದರ ಮೇರೆಗೆ, ಒಂದು ಪಿಂಜಿಯನ್ನು ತೆಗೆದುಕೊಂಡಳು; ಆದರೆ, ಒಡನೆಯೇ ಹಿಂತಿರುಗಿ ಓಡಿಬಂದು– 'ಅದು ಸರಿಯಾಗಿಲ್ಲ, ಜೊತೆಗೆ ಹೊಲಸಾಗಿದೆ'– ಎಂಬ ಒರಟಾದ ವಕ್ರವಾದ ಸುದ್ದಿಯನ್ನು ಅರುಹಿದಳು! ಆಮೇಲೆ ಬಂದವಳೆಂದರೆ, ಕಳೆಗುಂದಿದ, ಚಿಂತೆಯಿಂದ ಮುಖ ಸುಕ್ಕುಗಟ್ಟಿದ್ದ ಒಬ್ಬ ಹೆಂಗಸು; ಮುದುಕಿಯೇನಲ್ಲ, ಆದರೆ ಕೃಶಳಾಗಿದ್ದಳು; ಆಗಲೇ ಅವಳ ತಲೆ ತುಂಬ ಬೆಳ್ಳಿಯ ಪಟ್ಟಿಗಳಂತೆ ಕಾಣುವ ನರೆಗೂದಲ ಪಟ್ಟೆಗಳು ಮೂಡಿದ್ದವು. ಅವಳನ್ನು ನೋಡಿದ ತತ್‌ಕ್ಷಣ, ಗಂಡನೆನಸಿಕೊಂಡ ನರಪಶುವಿನ– ಬಹುಶಃ ಕುಡಿತದ ಚಾಳಿಯ ನರಪಶುವಿನ– ಮತ್ತು ಕಡೆಯಪಕ್ಷ ಒಂಬತ್ತು ಮಕ್ಕಳ ಕೈಕೆಳಗೆ ಬಿದ್ದು ಸಾಯುವ ಸ್ಥಿತಿಗೆ ಇಳಿದಿದ್ದ ಹೆಂಗಸರಲ್ಲಿ ಇವಳೊಬ್ಬಳು ಎಂದು ನೀವು ಗುರುತಿಸಿಬಿಡುವಿರಿ; ಅಲ್ಲದೆ, ಸ್ವಾಭಾವಿಕವಾಗಿಯೆ ಅವಳು ಸೂಕ್ಷ್ಮ. ಅವಳಿಗೆ ಕೆಲವು ಪೌಂಡಿನಷ್ಟು ರೊಟ್ಟಿಯ ಹಿಟ್ಟು ಬೇಕಾಗಿತ್ತು, ಅದಕ್ಕಾಗಿ ಹಣವನ್ನು ಕೊಟ್ಟಳು; ನಮ್ಮ ಜೀರ್ಣಮಹಿಳೆ ಅದನ್ನು ಮೌನವಾಗಿ ನಿರಾಕರಿಸಿ, ಹಣ ತೆಗೆದುಕೊಂಡಿದ್ದರೆ ಎಷ್ಟು ಕೊಡಬೇಕಾಗಿತ್ತೊ ಅದಕ್ಕಿಂತ ಹೆಚ್ಚು ಅಳತೆಯ ಹಿಟ್ಟನ್ನು ಆ ಬಡಪ್ರಾಣಿಗೆ ಕೊಟ್ಟಳು. ಸ್ವಲ್ಪ ಹೊತ್ತಾದ ಮೇಲೆ, ಬಹಳ ಕೊಳೆಯಾದ, ನೀಲಿಯ ಬಣ್ಣದ, ಹತ್ತಿಯ ಬಟ್ಟೆಯ ನಿಲುವಂಗಿಯನ್ನು ತೊಟ್ಟಿದ್ದ ಒಬ್ಬಾತ ಒಳಕ್ಕೆ ಬಂದು ಒಂದು ಚುಂಗಾಣಿಯನ್ನು ಕೊಂಡು ಕೊಂಡ; ಅವನು ಬಂದಾಗ, ತೀಕ್ಷ್ಣವಾದ ಮದ್ಯದ ಕಟುವಾಸನೆಯಿಂದ ಅಂಗಡಿಯನ್ನೆಲ್ಲ ತುಂಬಿಬಿಟ್ಟ; ಆ ವಾಸನೆ ಅವನ ಹೊಲಸು ಉಸಿರಿನಿಂದ ಹೊರಬರುತ್ತಿದ್ದುದು ಮಾತ್ರವಲ್ಲದೆ, ಹೊತ್ತಿ ಉರಿಯುವ ಅನಿಲದಂತೆ ಅವನ ಮೈಯನ್ನೆಲ್ಲಾ ವ್ಯಾಪಿಸಿಕೊಂಡು

ಏನಾಗುವುದೋ ಎಂದು ಹೆದರಿದ್ದ ಈ ವಿಷಮ ಘಟ್ಟದಲ್ಲಿ, ಪ್ರಪ್ರಥಮವಾಗಿ ತನ್ನ ನೆರವಿಗೆ ತಾನೇ ಕೈಯೆತ್ತಿದಾಗ ಅತ್ಯಂತ ಆರೋಗ್ಯಕರವಾದ ಕಳೆಯೊಂದು ಬಂದಿತ್ತು ಅವಳಿಗೆ; ವರ್ಷವರ್ಷಾಂತರಗಳಕಾಲ ಅದನ್ನವಳು ಕಂಡಿರಲಿಲ್ಲ. ಆ ಶಾಲಾಬಾಲಕನ ತಾಮ್ರದ ನಾಣ್ಯದ ಚಿಕ್ಕಬಿಲ್ಲೆ.– ಹೊಳಪಿಲ್ಲದೆ ಮಾಸಲಾಗಿದ್ದರೂ, ಪ್ರಪಂಚದಲ್ಲಿ ಅಲ್ಲಿ ಇಲ್ಲಿ ಓಡಿಯಾಡುತ್ತಾ ತನ್ನ ಕೈಲಾದ ಅಲ್ಪ ಸೇವೆಮಾಡುತ್ತಿದ್ದ ಆ ಚಿಕ್ಕ ಬಿಲ್ಲೆ– ತನ್ನ ಇಂಪಿನ ಕಂಪು ಬೀರುತ್ತಾ ರಕ್ಷಾಯಂತ್ರವಾಗಿ ಪರಿಣಮಿಸಿತ್ತು; ಈ ಕಾರಣದಿಂದ, ಅವಳು ಅದಕ್ಕೆ ಚಿನ್ನದ ಕುಂದಣ ಕಟ್ಟಿಸಿ ತನ್ನ ಹೃದಯಕ್ಕೆ ಸಮೀಪವಾಗಿ ಧರಿಸಿಕೊಳ್ಳಲು ಅದು ಅರ್ಹವಾಗಿತ್ತು. ವಿದ್ಯುತ್‌ಪ್ರವಾಹ ಹರಿಯುತ್ತಿರುವ ಉಂಗುರದಷ್ಟೇ ಶಕ್ತಿಯುತವಾಗಿತ್ತು ಅದು; ಬಹುಶಃ ಅದರಷ್ಟೇ ಪರಿಣಾಮಕಾರಿಗುಣವನ್ನು ಹೊಂದಿತ್ತು. ಅದು ಏನೇ ಆಗಲಿ, ತನ್ನ ಶರೀರದ ಮೇಲೂ ಚೈತನ್ಯದ ಮೇಲೂ ಅದು ಬೀರಿದ ಸೂಕ್ಷ್ಮ ಪರಿಣಾಮಕ್ಕಾಗಿ ಅವಳು ಅದಕ್ಕೆ ಋಣಿಯಾಗಿದ್ದಳು. ಅಷ್ಟೇ ಅಲ್ಲ, ಬೆಳಗಿನ ಉಪಾಹಾರವನ್ನು ಸಿದ್ಧ ಮಾಡಿಕೊಳ್ಳಲು ಅವಳಿಗೆ ಅದು ಶಕ್ತಿಯನ್ನು ತುಂಬಿತು; ತನ್ನ ಧೈರ್ಯವನ್ನು ಇನ್ನೂ ಚೆನ್ನಾಗಿ ಕಾಪಾಡಿಕೊಳ್ಳುವ ಉದ್ದೇಶದಿಂದ, ಉಪಾಹಾರದಲ್ಲಿ ತೆಗೆದುಕೊಳ್ಳುವ ಕಪ್ಪು ಚಹಾ ಕಷಾಯಕ್ಕೆ ಇನ್ನೊಂದು ಚಮಚಾ ಚಹಾ ಸೊಪ್ಪನ್ನು ಸೇರಿಸಿಕೊಂಡಳು.

ಹಾಗಿದ್ದರೂ, ಅವಳು ತನ್ನ ಅಂಗಡಿಯ ವ್ಯಾಪಾರವನ್ನು ಪ್ರಾರಂಭ ಮಾಡಿದ ಈ ಮೊದಲದಿನದಂದು ಅವಳ ಈ ಉಲ್ಲಾಸದ ಹುರಿಪಿಗೆ ಅನೇಕ ಪ್ರಬಲ ಅಡತಡೆಗಳು ಒದಗದೆ ಹೋಗಲಿಲ್ಲ. ಮನುಷ್ಯರು ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಸಾಧ್ಯ ಕಂಡಮಟ್ಟಿಗೆ ಸಂಪೂರ್ಣವಾಗಿ ವಿನಿಯೋಗಿಸಲು ಎಷ್ಟು ಸಾಕಾದೀತೋ ಅಷ್ಟು ಮಟ್ಟಿನ ಉತ್ತೇಜನಕ್ಕಿಂತ ಹೆಚ್ಚಿನದನ್ನು ದೇವರು ಅವರಿಗೆ ಎಂದೂ ದಯಪಾಲಿಸುವುದಿಲ್ಲ; ಇದು ಸಾಮಾನ್ಯನಿಯಮ. ನಮ್ಮ ವೃದ್ಧ ಶ್ರೀಮಂತೆಯ ವಿಷಯದಲ್ಲಿ ಹೇಳುವುದಾದರೆ, ಅವಳ ಹೊಸ ಪ್ರಯತ್ನದ ಉತ್ಸಾಹದ ಉರುಬು ತಗ್ಗಿದಮೇಲೆ, ಅವಳ ಸಮಸ್ತ ಜೀವನದ ನಿರಾಶೆಯೆಲ್ಲ ಈಗಲೋ ಆಗಲೋ ಹಿಂಮರಳುವ ಭೀತಿಯಿತ್ತು. ಅದು ಹೇಗಿತ್ತೆಂದರೆ, ಆಕಾಶವನ್ನು ಕವಿದಿರುವ ಭಾರಿ ಮೇಘಸ್ತೋಮದಂತಿತ್ತು; ಅದು ಎಲ್ಲೆಲ್ಲಿಯೂ ಮಬ್ಬು ಮಬ್ಬಾದ ನಸುಬೆಳಕನ್ನು ಉಂಟುಮಾಡಿ, ಇರುಳಾಗುವ ಹೊತ್ತಿಗೆ ಇದ್ದಕ್ಕಿದ್ದ ಹಾಗೆ ತಾತ್ಕಾಲಿಕವಾಗಿ ಬಿಸಿಲಿನ ಹೊಳಪಿಗೆ ದಾರಿ ಬಿಟ್ಟು ಕೊಡುತ್ತದೆ; ಅನೇಕ ಸಲ ಇದನ್ನು ನಾವು ನೋಡಿರಬಹುದು. ಆದರೆ, ಯಾವಾಗಲೂ, ಅಸೂಯಾಪರವಾದ ಇನ್ನೊಂದು

ಕತೆಮಾಡಿದ ಜನ ಒರಟಾಗಿಯಲ್ಲದಿದ್ದರೂ ಸಲುಗೆ ವಹಿಸಿ ಮಾತಾಡಿದ ರೀತಿ, ಅವಳ ಶ್ರೀಮಂತಿಕೆಯ ಮನೋಭಾವಕ್ಕೆ ಧಕ್ಕೆಯುಂಟು ಮಾಡಿತು. ಅವರೆಲ್ಲ ತಾವು ಅವಳ ಸರಿಸಮಾನರು ಎಂದು ತಿಳಿದಿರುವುದಿರಲಿ ತಾವು ಅವಳಿಗಿಂತ ಮೇಲ್ಪಟ್ಟವರು, ಅವಳಿಗೆ ಆಶ್ರಯದಾತರು ಎಂದು ಭಾವಿಸಿಕೊಂಡಿದ್ದುದು ಸ್ಪಷ್ಟವಾಗಿತ್ತು. ಹೆಪ್ಸಿಬಾ ಏನೋ ತನ್ನ ದೇಹದ ಸುತ್ತಲೂ ಯಾವುದೋಒಂದು ಬಗೆಯ ಪ್ರಕಾಶವ್ರೋ ಇಲ್ಲವೆ ಪ್ರಭಾವಲಯವ್ರೋ ಆವರಿಸಿಕೊಂಡಿದ್ದು, ಅದರಿಂದಾಗಿ ತನ್ನ ಅಪ್ಪಟ ಶ್ರೀಮಂತತನಕ್ಕೆ ಮರ್ಯಾದೆಯಲ್ಲದಿದ್ದರೆ ಕಡೆಯ ಪಕ್ಷ ಅದನ್ನು ಮೌನವಾಗಿ ಒಪ್ಪಿಕೊಳ್ಳುವ ಅನುಮೋದನೆಯಾದರೂ ಖಂಡಿತ ದೊರೆಯುವುದೆಂಬ ನೆಚ್ಚಿಕೆಯಿಟ್ಟುಕೊಂಡು, ತನಗೆ ಅರಿವಿಲ್ಲದಂತೆಯೇ ಅದರಿಂದ ಉಬ್ಬಿ ಹೋಗಿದ್ದಳು. ಅತ್ತ, ಆ ಅನುಮೋದನೆಯನ್ನು ಸುಸ್ಪಷ್ಟವಾಗಿ ಪ್ರಕಟಪಡಿಸಿದಾಗ ಅದರಿಂದ ಅವಳಿಗೆ ಸಹ್ಯವಾಗದಷ್ಟು ಚಿತ್ರ ಹಿಂಸೆಯಾಗುತ್ತಿತ್ತು. ಒಂದೆರಡು ಸಂದರ್ಭಗಳಲ್ಲಿ ತಮ್ಮ ಸಹಾನುಭೂತಿಯನ್ನು ಕ್ರಮಬದ್ಧವಾಗಿ ತಿಳಿಸಬಂದಾಗ, ಅದಕ್ಕೆ ಅವಳ ಪ್ರತಿಕ್ರಿಯೆ ಹೆಚ್ಚು ಕಡಮೆ ಕಠಿನವಾಗಿಯೇ ಇದ್ದಿತು; ಒಮ್ಮೆ, ತನ್ನ ಗಿರಾಕಿಗಳ ಪೈಕಿ ಒಬ್ಬಾಕೆ ಅವಳಿಗೆ ನಿಜವಾಗಿ ಬೇಕಿಲ್ಲದ ಒಂದು ಸಾಮಾನನ್ನು ಹುಡುಕುವ ನೆವಮಾಡಿಕೊಂಡು ತನ್ನನ್ನು ದುರುಗುಟ್ಟಿಕೊಂಡು ನೋಡುವ ಕ್ರೂರ ಅಪೇಕ್ಷೆಯಿಂದ ಅಂಗಡಿಗೆ ಬಂದಿದ್ದಳು ಎಂಬ ಸಂಶಯವುಂಟಾಗಿ, ಹೆಪ್ಸಿಬಾಳ ಮನಃಸ್ಥಿತಿ ನಿರ್ದಯವಾಗಿ ಪರಿಣಮಿಸಿತು; ಹೀಗೆಂದು ತಿಳಿಸಲು ನಮಗೂ ವ್ಯಥೆಯೆ. 'ಶ್ರೀಮಂತ ವರ್ಗದ ಬೂಷ್ಟು ಹಿಡಿದ ಒಂದು ಪದಾರ್ಥ' ಎನ್ನಬಹುದಾದ ಮಹಿಳೆಯೊಬ್ಬಳು ತನ್ನ ಜೀವನದ ಯೌವನವೆಲ್ಲವನ್ನೂ ಹಾಗೂ ಕಡೆಗಾಲದ ಬಹುಭಾಗವನ್ನೂ ವ್ಯರ್ಥವಾಗಿ ಹಾಳುಮಾಡಿಕೊಂಡ ಮೇಲೆ, ವ್ಯಾಪಾರದ ಮೇಜಿನ ಹಿಂದೆ ನಿಂತುಕೊಂಡಾಗ, ಅವಳ ಸ್ವರೂಪ ಹೇಗೆ ಕಮಡು ಬರುತ್ತದೆ ಎಂಬುದನ್ನು ತಾನೇ ಪ್ರತ್ಯಕ್ಷವಾಗಿ ನೋಡಬೇಕೆಂದು ಹಟ ತೊಟ್ಟಿದ್ದಳು ಆ ಒರಟು ಪ್ರಾಣೀ. ಹೆಪ್ಸಿಬಾಳ ಹುಬ್ಬುಗಂಟು ಬೇರೆಯ ಕಾಲಗಳಲ್ಲಿ ಎಷ್ಟೇ ಯಾಂತ್ರಿಕವಾಗಿ ನಿರ್ಬಾಧಕವಾಗಿ ಇದ್ದಿರಲಿ, ಈ ನಿರ್ದಿಷ್ಟ ಸಂದರ್ಭದಲ್ಲಿ ಅದು ಅವಳಿಗೆ ತುಂಬ ಉಪಕಾರಮಾಡಿತು.

ಕುತೂಹಲಿಯಾಗಿದ್ದ ಆ ಗಿರಾಕಿ ಈ ಘಟನೆಯನ್ನು ತನ್ನ ಪರಿಚಯಸ್ಥರೊಬ್ಬರಿಗೆ ವಿವರಿಸುವಾಗಿ "ನನ್ನ ಜೀವಮಾನದಲ್ಲಿಯೇ ನಾನು ಎಂದೂ ಅಷ್ಟು ಹೆದರಿರಲಿಲ್ಲ! ಅವಳು ನಿಜವಾಗಿಯೂ ಒಂದು ಮುದಿ ಹೆಣ್ಣು ನರಿ ಕಣ್ರೀ, ಶುದ್ಧ ಜಗಳಗಂಟಿ, ನನ್ನ ಮಾತು ಕೇಳಿ! ಅವಳು ಹೆಚ್ಚು ಮಾತೇನೋ

ಅದರಿಂದ ಜಿನುಗಿ ಬರುತ್ತಿತ್ತು. ಚಿಂತೆಯಿಂದ ಸುಕ್ಕುಗಟ್ಟಿದ್ದ ಮುಖದ ಹೆಂಗಸಿನ ಗಂಡ ಈತನೆ ಎಂದು ಹೆಪ್ಸಿಬಾಗೆ ಮನದಟ್ಟಾಯಿತು. ಕಾಗದದಲ್ಲಿ ಸುತ್ತಿದ್ದ ಹೊಗೆಯಸೊಪ್ಪು ಬೇಕೆಂದು ಅವನು ಕೇಳಿದನು; ಆ ಪದಾರ್ಥವನ್ನು ತಂದಿಟ್ಟುಕೊಳ್ಳುವುದನ್ನು ಅವಳು ಮರೆತುಬಿಟ್ಟಿದ್ದಳು; ಪಶುಸ್ವಭಾವದ ಆ ಗಿರಾಕಿ ತಾನು ಹೊಸದಾಗಿ ಕೊಂಡುಕೊಂಡಿದ್ದ ಚುಂಗಾಣಿಯನ್ನು ನೆಲಕ್ಕೊಗೆದು, ಶಾಪದಂತೆ ಕಟುವಾಗಿ ಕೇಳಿಬರುತ್ತಿದ್ದ ಅರ್ಥವಾಗದಂತಹ ಮಾತುಗಳನ್ನು ಗೊಣಗಿಕೊಳ್ಳುತ್ತ, ಅಂಗಡಿಯನ್ನು ಬಿಟ್ಟು ಹೊರಟನು. ಇದಾದ ಮೇಲೆ ಹೆಪ್ಸಿಬಾ ಕಣ್ಣನ್ನು ಮೇಲಕ್ಕೆ ಹೊರಳಿಸಿ, ದೈವದ ಕಡೆಗೆ ಸಿಡುಕು ಮೋರೆಮಾಡಿದಳು!

ಮಧ್ಯಾಹ್ನಕ್ಕೆ ಮೊದಲು ಐದು ಜನಕ್ಕೆ ಕಡಮೆಯಿಲ್ಲದಂತೆ ಬಂದು ಶುಂಠಿ ಬೆರಿಸಿದ ಬಿಯರ್ ಮದ್ಯ, ಬೇರು ಸಾರದ ಮದ್ಯ, ಇಲ್ಲವೇ ಅದೇ ಬಗೆಯ ಯಾವುದಾದರೂ ಮದ್ಯ ಬೇಕೆಂದು ಕೇಳಿ, ಅಂಥದು ಯಾವುದೂ ದೊರೆಯದೆ ಇರಲು ವಿಪರೀತ ಅಸಮಾಧಾನಗೊಂಡು ಹೊರಟುಹೋದರು. ಅವರಲ್ಲಿ ಮೂವರು ತೆರೆದಿದ್ದ ಬಾಗಿಲನ್ನು ತೆರೆದ ಹಾಗೆಯೆ ಬಿಟ್ಟು ನಡೆದರು; ಇನ್ನಿಬ್ಬರು ತಾವು ಹೋಗುವಾಗ ಹೊಟ್ಟೆಯಕಿಚ್ಚಿನಿಂದ ಅದನ್ನು ಎಷ್ಟು ರಭಸವಾಗಿ ಎಳೆದುಕೊಂಡು ಹೋದರೆಂದರೆ, ಕಿರುಗಂಟೆ ದೆವ್ವದ ಹಾಗೆ ಕಾಡಿ ಹೆಪ್ಸಿಬಾಳ ಬುದ್ಧಿಯನ್ನೇ ಕೆಡಿಸಿ ಬಿಟ್ಟಿತು. ದುಂಡು ಮೈಯಿನ ಚಡಪಡಗುಟ್ಟುವ, ಕೆಂಡಗೆಂಪಿನ, ನೆರೆಹೊರೆಯ ಮನೆಮಡದಿಯೊಬ್ಬಳು ಉಸಿರಾಡುವುದಕ್ಕೂ ಅವಕಾಶವಿಲ್ಲದಂತೆ ಅಂಗಡಿಯೊಳಕ್ಕೆ ಧಾವಿಸಿಬಂದು, 'ಯೀಸ್ಟ್' (ರೊಟ್ಟಿ ಮಾಡುವ ಹುದುಗು) ಬೇಕೆಂದು ಜೋರಾಗಿ ಕೇಳಿದಳು; ನಿರುದ್ವೇಗದ ಲಜ್ಜೆಯ ಸ್ವಭಾವದ ನಮ್ಮ ಬಡಮಹಿಳೆ ಆ ಪದಾರ್ಥವನ್ನು ತಾನು ಇಟ್ಟಿಲ್ಲವೆಂದು ಆ ಕಾವೇರಿದ ಗಿರಾಕಿಗೆ ತಿಳಿಸಿದಳು; ಬಹು ದಕ್ಷಳಾದ ಅದೇ ಗೃಹಿಣಿ ಅಚ್ಚುಕಟ್ಟಾಗಿ ನಿಂದಿಸುವ ಹೊಣೆಯನ್ನು ವಹಿಸಿಕೊಂಡಳು.

"ಸೆಂಟ್ ಅಂಗಡಿಯಂತೆ, 'ಯೀಸ್ಟಿ'ಗೆ ಗತಿಯಿಲ್ಲ! ಹೀಗಾದರೆ ನಡೆಯುವುದಿಲ್ಲ! ಇಂಥದನ್ನು ಯಾರು ತಾನೇ ಕೇಳಿಬಲ್ಲರು? ಈ ಹೊತ್ತು ನನ್ನ ರೊಟ್ಟಿಯೂ ಉಬ್ಬುವುದಿಲ್ಲ, ನಿನ್ನದು ಮೊದಲೇ ಉಬ್ಬುವುದಿಲ್ಲ. ನೀನು ಈ ಕೂಡಲೆ ಅಂಗಡಿಯನ್ನು ಮುಚ್ಚಿಬಿಡುವುದು ಒಳ್ಳೆಯದು" ಎಂದು ನುಡಿದಳು ಆಕೆ.

"ಒಳ್ಳೆಯದೆ ಆಯಿತು, ನಾನು ಹಾಗೆ ಮಾಡುವುದೇ ಮೇಲೆಂದು ಕಾಣುತ್ತದೆ" ಎಂದು ನೀಳವಾಗಿ ನಿಟ್ಟುಸಿರು ಬಿಡುತ್ತಾ ಹೇಳಿದಳು ಹೆಪ್ಸಿಬಾ.

ಮೇಲೆ ಹೇಳಿದ ನಿದರ್ಶನವಲ್ಲದೆ ಅನೇಕ ವೇಳೆ ಅವಳೊಂದಿಗೆ ಮಾತು

ಈ ದ್ವೇಷಭಾವನೆಯೊಂದೇ ಬಡವರನ್ನು ನಿಜವಾಗಿ ಕೀಳು ಗೈಯುವಂಥದು.

ಆಗ ಅವಳಿಗೆ ನಾಚಿಕೆಯೆನಿಸಿತು, ಪಶ್ಚಾತ್ತಾಪವಾಯಿತು; ತನ್ನ ಮುಖವನ್ನು ಮರೆಮಾಡಿಕೊಂಡಳು.

"ದೇವರು ನನ್ನನ್ನು ಕ್ಷಮಿಸಲಿ!" ಎಂದಳೂ ಅವಳು.

ನಿಸ್ಸಂಶಯವಾಗಿ, ದೇವರು ಅವಳನ್ನು ಕ್ಷಮಿಸಿದನು. ಆದರೆ, ಮೊದಲನೆಯ ದಿನಾರ್ಧದ ಅಂತರಂಗ ಬಹಿರಂಗಗಳ ಇತಿಹಾಸವನ್ನು ಪರಿಗಣಿಸಿದ್ದೇ ಆದರೆ, ತಾನು ಇಟ್ಟ ಅಂಗಡಿ ಬಹು ಮುಖ್ಯವಾದ ತನ್ನ ಐಹಿಕ ಸುಖಕ್ಕೆ ಕೂಡ ನೆರವಾಗದೆ, ನೈತಿಕ ದೃಷ್ಟಿಯಿಂದಲೂ ಧಾರ್ಮಿಕ ದೃಷ್ಟಿಯಿಂದಲೂ ತನ್ನ ವಿನಾಶಕ್ಕೆ ಕಾರಣವಾಗುವುದು ಎಂದು ಹೆಪ್ಸಿಬಾ ಭೀತಳಾಗತೊಡಗಿದಳು.

* * * *

ಆಡುವುದಿಲ್ಲ, ಅದು ಸರಿಯೆ; ಅವಳ ಕಣ್ಣನ್ನ ನೋಡಬೇಕು ನೀವು, ಅದರಲ್ಲಿ ಕಾಣುತ್ತೆ ಕುಚೇಷ್ಟೆಯ ಬುದ್ಧಿ!" ಎಂದು ಹೇಳಿದಳು.

ನಮ್ಮ ಈ ಗಳಿತಶರೀರದ ಶ್ರೀಮಂತೆ ತಾನು ನಿರ್ವಿವಾದವಾಗಿ ಮೇಲೆನಿಸಿದ್ದ ಒಂದು ಸಮಾಜ ಕ್ಷೇತ್ರಕ್ಕೆ ಸೇರಿರುವೆನೆಂದು ತಿಳಿದುಕೊಂಡಿದ್ದು, ಕೆಳ ವರ್ಗದ ಜನ ಎಂದು ತಾನು ಕರೆಯುತ್ತಿದ್ದವರನ್ನು ಕೀಳಾಗಿಯಾದರೂ ನಯವಾದ ಮತ್ತು ಕರುಣಾರ್ದ್ರವಾದ ಸೌಜನ್ಯದಿಂದ ಕಾಣುತ್ತಿದ್ದಳು; ಆದರೆ ಈಗ ಅವಳ ಅನುಭವವೇ ಬೇರೆಯಾಯಿತು; ಆದ್ದರಿಂದ, ಒಟ್ಟಿನಮೇಲೆ, ಆ ಜನದ ಮನೋಭಾವ ಮತ್ತು ನಡೆನುಡಿಗಳ ಬಗೆಗೆ ಅವಳು ಹಿತಕರವಲ್ಲದ ತೀರ್ಮಾನಗಳಿಗೆ ಬರಬೇಕಾಯಿತು. ಆದರೆ ಅವಳ ದುರ್ದೈವದಿಂದ, ನೇರವಾಗಿ ವಿರುದ್ಧ ಸ್ವಭಾವದ ಒಂದು ಕಟುವಾದ ರಾಗಭಾವದೊಂದಿಗೆ ಅವಳು ಅದೇ ರೀತಿಯಲ್ಲಿ ಹೋರಾಡಬೇಕಾಗಿತ್ತು: ಅದು ಯಾವುದೆಂದರೆ, ಯಾವುದಕ್ಕೆ ಸೇರಿರುವುದು ಇತ್ತೀಚಿನವರೆಗೂ ಹೆಮ್ಮೆಯೆನಿಸಿದ್ದಿತೋ ಆ ಶ್ರೀಮಂತವರ್ಗದ ಬಗೆಗೆ ವಿಷ ಕಾರುವ ದ್ವೇಷ ಭಾವನೆ. ಒಂದು ದಿನ ಒಬ್ಬ ಶ್ರೀಮಂತ ಮಹಿಳೆ ಈ ನಿರ್ಜನವಾದ ಬೀದಿಯಲ್ಲಿ ಹಾದುಹೋದಳು; ಬಹು ನವಿರಾದ ಬೆಲೆಬಾಳುವ ಬೇಸಗೆಯ ಉಡುಪನ್ನು ಧರಿಸಿದ್ದಳು; ಅವಳ ಮುಖಘರದೆ ತೇಲುತ್ತಾ ಹಾರಾಡುತ್ತಿತ್ತು, ಮೇಲಂಗಿ ಆ ಕಡೆಗೂ ಈ ಕಡೆಗೂ ಮನೋಹರವಾಗಿ ಒಲೆದಾಡುತ್ತಿತ್ತು; ಒಟ್ಟಿನ ಮೇಲೆ, ಅವಳು ಗಾಳಿಯಂತೆ ಹಗುರವಾಗಿ ತೇಲಿಹೋಗುತ್ತಿದ್ದಾಗ, ಅವಳು ಮಣ್ಣಿನ ಮೇಲೆ ನಡೆದುಹೋಗುತ್ತಿದ್ದಳೋ ಇಲ್ಲವೆ ಗಾಳಿಯಲ್ಲಿ ತೇಲಿಹೋಗುತ್ತಿರುವಳೋ ಎಂದು ಪರೀಕ್ಷಿಸುವುದಕ್ಕಾಗಿ, ಅಂದವಾಗಿ ಜೋಡು ಹಾಕಿರುವ ಅವಳ ಪಾದಗಳನ್ನು ನೋಡಬೇಕೆನಿಸುವುದು ನಿಮಗೆ. 'ಟೀ' ವಾಸನೆಯ ಗುಲಾಬಿ ಹೂಗಳ ಗೊಂಚಲನ್ನು ಒಯ್ಯುತ್ತಿರುವರೋ ಎಂಬಂತೆ ತೋರುವ ಹಾಗೆ ತನ್ನ ಹಿಂದೆ ಮೃದು ಮಧುರವಾದ ಪರಿಮಳವನ್ನು ಬೀರಿ ಆ ದರ್ಶನಭಾಗ್ಯ ಸಾಗಿಹೋದಾಗ, ಮತ್ತೆ ಆಗಲೂ ಕೂಡ ಹೆಪ್ಸಿಬಾಳ ಹುಬ್ಬುಗಂಟು ಪೂರ್ತಿಯಾಗಿ ಸಮೀಪ ದೃಷ್ಟಿಯ ನೆಪವನ್ನು ಮುಂದುಮಾಡಿಕೊಂಡು ಎಂದಿಗೂ ಸಮರ್ಥನೀಯವಾಗುತ್ತಿರಲಿಲ್ಲ.

"ಯಾವ ಉದ್ದೇಶಕ್ಕಾಗಿ, ಯಾವ ಸದುದ್ದೇಶಕ್ಕಾಗಿ, ಆ ಹೆಂಗಸು ಬದುಕಿದ್ದಾಳೆ? ಅದು ದೈವಸಮ್ಮತವೆ? ಅವಳ ಅಂಗೈಗಳು ಮಾತ್ರ ಬೆಳ್ಳಗೆ ಕೋಮಲವಾಗಿರಬೇಕೆಂದು ಪ್ರಪಂಚವೆಲ್ಲ ದುಡಿಯಬೇಕೆ?" ಎಂದು ತನ್ನ ದ್ವೇಷಭಾವನೆಯನ್ನು ಹೊರಹಾಕಿ, ಆಲೋಚಿಸಿದಳು. ಸಿರಿವಂತರ ಸಮ್ಮುಖದಲ್ಲಿ

ನಾವು ಹೊರಟಿದ್ದೇವೆ; ಅದು ಅವನ ಪದವಿ, ಜೀವನದ ಅಭ್ಯಾಸಗಳು ಮತ್ತು ಬಾಹ್ಯ ಸಂದರ್ಭಗಳು– ಇವನ್ನು ಮೀರಿ ಹೆಚ್ಚು ಆಳಕ್ಕೇನೂ ಹೋಗಿರಲಿಲ್ಲ. ಆತ ಸ್ಪಷ್ಟವಾದ ಪ್ರಭಾವವನ್ನೂ ಅಧಿಕಾರವನ್ನೂ ಹೊಂದಿರುವ ವ್ಯಕ್ತಿ ಎಂದು ಯಾರೇ ಆಗಲಿ ಕಂಡುಕೊಳ್ಳವರು. ಇಷ್ಟು ಮಾತ್ರವಲ್ಲ; ಆತನು ತನ್ನ ಬ್ಯಾಂಕಿನ ಲೆಕ್ಕವನ್ನು ಹೊರಕ್ಕೆ ತೋರಿಸಿದ್ದರೆ ಹೇಗೋ ಹಾಗೆ, ಅಥವಾ ಪಿನ್ಚನ್ ಎಲ್ಮ್ ಮರದ ಕೊನೆಗಳನ್ನು ಮುಟ್ಟಿ ಮೈದಾಸ್ ದೊರೆಯ ಹಾಗೆ ಅವನ್ನೆಲ್ಲಾ ಚಿನ್ನವಾಗಿ ಪರಿವರ್ತಿಸಿದ್ದನ್ನು ನೀವು ನೋಡಿದ್ದರೆ ಹೇಗೋ ಹಾಗೆ, ಖಂಡಿತವಾಗಿ ಆತ ಐಶ್ವರ್ಯವಂತನೆಂದು ನೀವು ಭಾವಿಸಿಕೊಳ್ಳಬಹುದಾಗಿತ್ತು.

ತನ್ನ ಯೌವನಕಾಲದಲ್ಲಿ ಆತ ಬಹುಶಃ ಸುಂದರಪುರುಷನೆಂದೇ ಎಲ್ಲರೂ ಎಣಿಸಿರಬೇಕು. ಅವನ ಈಗಿನ ವಯಸ್ಸಿನಲ್ಲಿ, ಕೇವಲ ಅವನ ದೈಹಿಕ ಸೌಂದರ್ಯಕ್ಕೆ ಯಾವ ಸಂಬಂಧವನ್ನೂ ಹೊಂದಿಲ್ಲವೆನ್ನುವ ರೀತಿಯಲ್ಲಿ, ಅವನ ಹುಬ್ಬು ತುಂಬ ಜೋತುಬಿದ್ದಿತ್ತು, ಅವನ ಕಪೋಲ ವಿಪರೀತ ಬೋಳುಬೋಳಾಗಿತ್ತು, ಅಳಿದುಳಿದ ಅವನ ಕೂದಲು ಬಹಳ ನರೆತಿತ್ತು, ಅವನ ಕಣ್ಣು ಅತಿ ನಿಸ್ತೇಜವಾಗಿದ್ದವು, ಅವನ ತುಟಿ ತುಂಬ ಒತ್ತಿ ಬಿಗಿದಿದ್ದುವು. ಸೊಗಸಾದ ಭಾರಿ ಭಾವಚಿತ್ರಕ್ಕೆ ತಕ್ಕ ವ್ಯಕ್ತಿಯಾಗಿದ್ದನವನು; ಚಿತ್ರದರಟ್ಟು ಬಟ್ಟೆಯ ಮೇಲೆ ಅವನ ಆಕೃತಿಯನ್ನು ಸ್ಥಿರಗೊಳಿಸುತ್ತಿರುವಾಗಲೇ ಆತನ ನೋಟ ಖಂಡಿತವಾಗಿಯೂ ಕಠಿನವಾಗಬಹುದಾಗಿದ್ದರೂ, ಅವನ ಜೀವನದ ಹಿಂದಿನ ಯಾವುದೇ ಕಾಲಕ್ಕಿಂತ ಬಹುಶಃ ಈಗಲೆ ಅವನ ಚಿತ್ರದ ರಚನೆಗೆ ಸಕಾಲವಾಗಿತ್ತು. ಚಿತ್ರಕಾರನು ಅವನ ಮುಖವನ್ನು ಈಗ ಚೆನ್ನಾಗಿ ಪರಿಶೀಲಿಸಿದರೆ, ಒಂದು ಹುಬ್ಬುಗಂಟನ್ನು ಬಿಡಿಸಿ ಆ ಮುಖವನ್ನು ಕರಾಳವಾಗಿ ಕಾಣುವಂತೆ ಮಾಡುವುದು, ಒಂದು ಮೆಲುನಗೆಯನ್ನು ಮೂಡಿಸಿ ಮುಖವನ್ನು ಬೆಳಗುವುದು– ಹೀಗೆ ಅದನ್ನು ಭಿನ್ನಭಾವಗಳಲ್ಲಿ ಚಿತ್ರಿಸುವುದು ಸಾಧ್ಯ ಎಂಬುದನ್ನು ತೋರಿಸಿಕೊಡುವುದು ಅಪೇಕ್ಷಣೀಯವೆಂದು ಆತ ಕಂಡುಕೊಳ್ಳುತ್ತಿದ್ದನು.

ವಯಸ್ಕನಾದ ಈ ದೊಡ್ಡ ಮನುಷ್ಯನು ಪಿನ್ಚನ್ ಭವನದ ಕಡೆಗೆ ನೋಡುತ್ತ ನಿಂತಿರಲು, ಅವನ ಮುಖಮುದ್ರೆಯ ಮೇಲ್ಗಡೆ ಹುಬ್ಬುಗಂಟೂ ಮೆಲುನಗೆಯೂ ಒಂದಾದಮೇಲೆ ಒಂದರಂತೆ ತೇಲಿಹೋದುವು. ಅವನ ಕಣ್ಣು ಅಂಗಡಿ ಕಿಟಕಿಯ ಮೇಲೆ ನೆಲಸಿದವು; ಕೈಲಿ ಹಿಡಿದಿದ್ದ ಚಿನ್ನದ ಕಟ್ಟಿನ ಕನ್ನಡಕವನ್ನು ಏರಿಸಿಕೊಂಡು, ಹೆಪ್ಸಿಬಾ ಸ್ವಲ್ಪ ಸ್ವಲ್ಪ ಜೋಡಿಸಿಟ್ಟಿದ್ದ ಆಟದ ಸಾಮಾನುಗಳನ್ನೂ ಸರಕುಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದನು. ಮೊದಲು ಆ ನೋಟ ಅವನಿಗೆ ಸಂತೋಷ

# ೪. ವ್ಯಾಪಾರದ ಮೇಜಿನ ಹಿಂದೆ ಒಂದು ದಿನ

ಮಧ್ಯಾಹ್ನದ ವೇಳೆಗೆ, ಬೆಳ್ಳಗೆ ಧೂಳು ಧೂಳಾಗಿದ್ದ ಬೀದಿಯ ಆಚೆಯ ಕಡೆಯ ಉದ್ದಕ್ಕೂ ಒಬ್ಬ ವಯಸ್ಕನಾದ ದೊಡ್ಡ ಮನುಷ್ಯನು ಹೋಗುತ್ತಿದ್ದುದನ್ನು ಹೆಪ್ಸಿಬಾ ನೋಡಿದಳು; ಆತ ಸ್ಥೂಲಕಾಯದ ಗಂಭೀರ ವ್ಯಕ್ತಿ; ಅವನ ನಡತೆಯೂ ಅಷ್ಟೆ, ವಿಶೇಷ ಗಂಭೀರವಾಗಿತ್ತು. ಪಿನ್ಚನ್ ಎಲ್ಮ್ ವೃಕ್ಷದ ನೆರಳಿಗೆ ಬಂದಾಗ, ಆತ ಅಲ್ಲಿಯೆ ನಿಂತುಕೊಂಡನು; ತನ್ನ ಹುಬ್ಬಿನ ಬಳಿಯಿದ್ದ ಬೆವರನ್ನು ಒರಸಿಕೊಳ್ಳುವುದಕ್ಕಾಗಿ ಟೋಪಿಯನ್ನು ತೆಗೆದುಹಿಡಿದುಕೊಂಡು, ಜೀರ್ಣವಾಗಿ ಹಾಳುಸುರಿಯುತ್ತಿದ್ದ ಏಳೂ ಇಪ್ಪಾರಿನ ಮನೆಯನ್ನು ವಿಶೇಷ ಆಸಕ್ತಿಯಿಂದ ಪರಿಶೀಲಿಸಿ ನೋಡುವಂತೆ ಕಂಡುಬಂದನು. ಮನೆಯಂತೆಯೇ ಅವನೂ ಕೂಡ, ಆದರೆ ಬೇರೊಂದು ವಿಧದಲ್ಲಿ, ನೋಡತಕ್ಕವನೆ ಆಗಿದ್ದನು. ಬಹು ಉಚ್ಚವರ್ಗದ ಗೌರವವು ಅವನ ಮುಖಲಕ್ಷಣ ಹಾಗೂ ಭಾವಭಂಗಿಗಳಲ್ಲಿ ವ್ಯಕ್ತಗೊಂಡಿದ್ದುದು ಮಾತ್ರವಲ್ಲದೆ, ಅವನ ಉಡುಗೆತೊಡುಗೆಯ ಶೈಲಿಯನ್ನು ಕೂಡ ನಿರ್ಧರಿಸಿ, ಅವು ಅವನಿಗೆ ಯೋಗ್ಯವಾಗಿಯೂ ಅಗತ್ಯವಾಗಿಯೂ ಕಾಣುವಂತೆ ಮಾಡಿದ್ದಿತು; ಇಂತಹ ಗೌರವಲಕ್ಷಣಕ್ಕೆ ಇವನಿಗಿಂತ ಮೇಲಾದ ಮಾದರಿಯನ್ನು ಹುಡುಕಬೇಕಾಗಿರಲಿಲ್ಲ, ಹುಡುಕಿದರೆ ದೊರಕುತ್ತಲೂ ಇರಲಿಲ್ಲ. ಆತನ ಉಡುಪು ಇತರ ಜನರ ಉಡುಪಿಗಿಂತ ಕಾಣುವಹಾಗೆ ಯಾವ ರೀತಿಯಲ್ಲಿಯೂ ಭಿನ್ನವಾಗಿರಲಿಲ್ಲ; ಆದರೂ ಅದರಲ್ಲಿ ಒಂದು ವ್ಯಾಪಕವಾದ ಸಂಪನ್ನವಾದ ಘನತೆಯಿತ್ತು; ಅದು ಉಡುಪನ್ನು ಕತ್ತರಿಸಿ ಹೊಲಿದಿರುವ ರೀತಿಗಾಗಲಿ ಉಡುಪಿನ ಬಟ್ಟೆಗಾಗಲಿ ಸಂಬಂಧಪಟ್ಟುದೆಂದು ವಿವರಿಸಲಾಗದಿರುವ ಪ್ರಯುಕ್ತ, ಉಡುಪನ್ನು ಧರಿಸಿರುವವನ ವಿಶೇಷಲಕ್ಷಣವಾಗಿದ್ದಿರಬೇಕು. ಅವನ ಚಿನ್ನದ ಹಿಡಿಯ ಬೆತ್ತ ಕೂಡ– ಕರಿಯ ಮರದಿಂದ ಮಾಡಿ ಮೆರುಗುಹಾಕಿದ್ದ, ಉಪಯೋಗಕರವಾದ ದೊಣ್ಣೆ ಅದು– ಅದೇ ಲಕ್ಷಣಗಳನ್ನು ಹೊಂದಿತ್ತು, ಅದು ತನ್ನಷ್ಟಕ್ಕೆ ತಾನೇ ನಡೆದು ಹೋಗಲು ಎಷ್ಟಪಟ್ಟಿದ್ದರೆ, ಅದು ಎಲ್ಲಿಯೇ ಹೋಗಲಿ ತನ್ನ ಯಜಮಾನನಿಗೆ ತಕ್ಕ ಪ್ರತಿನಿಧಿ ಎಂದು ಯಾರಾದರೂ ಗುರುತಿಸಬಹುದಾಗಿದ್ದಿತು. ಈ ಲಕ್ಷಣವು ಅವನಿಗೆ ಸಂಬಂಧಪಟ್ಟ ಪ್ರತಿಯೊಂದರಲ್ಲಿಯೂ ವ್ಯಕ್ತವಾಗಿದ್ದು, ಅದರ ಪರಿಣಾಮವೇನೆಂಬುದನ್ನು ವಾಚಕಮಹಾಶಯನಿಗೆ ತಿಳಿಯಪಡಿಸಬೇಕೆಂದು

ನಾನು ಜೀವಂತವಾಗಿರುವಾಗ, ಪಿನ್ಚನ್ ಭವನ ನನ್ನ ಸ್ವಂತದ್ದಲವೇ?"

ಈ ಘಟನೆಯಾದ ಮೇಲೆ, ಹೆಪ್ಸಿಬಾ ದಿವಾನ್‌ಖಾನೆಯ ಹಿಂಭಾಗಕ್ಕೆ ತೆರಳಿ, ಅಲ್ಲಿ ಅರೆಮುಗಿದಿದ್ದ ಕಾಲುಚೀಲವೊಂದನ್ನು ಕೈಗೆ ತೆಗೆದುಕೊಂಡು ಗಾಬರಿಯಿಂದ ನಡುನಡುವೆ ಬಿಟ್ಟು ಬಿಟ್ಟು ಹೆಣಿಗೆ ಹಾಕತೊಡಗಿದಳು; ಆದರೆ ಬೇಗನೆಯೆ ಹೆಣಿಗೆಗಳು ಹೇಗೆಹೇಗೋ ಆಗುತ್ತಿವೆಯೆಂಬುದನ್ನು ಕಂಡುಕೊಂಡು, ಅದನ್ನು ಒಕ್ಕಡೆ ಎಸೆದು, ಕೊಟಡಿಯಲ್ಲಿ ಆತುರಾತುರವಾಗಿ ನಡೆದಾಡತೊಡಗಿದಳು. ಕಟ್ಟ ಕಡೆಗೆ, ತನ್ನ ಪೂರ್ವಜನೂ ಭವನದ ನಿರ್ಮಾಪಕನೂ ಆ ಕಟ್ಟುನಿಟ್ಟಾದ 'ಪ್ಯೂರಿಟನ್ನ'ನ ಭಾವಚಿತ್ರದ ಮುಂದೆ ನಿಂತುಕೊಂಡಳು. ಒಂದು ದೃಷ್ಟಿಯಲ್ಲಿ, ಈ ಚಿತ್ರ ಅದನ್ನು ಬರೆದಿದ್ದ ರಟ್ಟು ಬಟ್ಟೆಯೊಳಕ್ಕೆ ಇಂಗಿಹೋಗಿ, ವರ್ಷವರ್ಷಾಂತರದ ಮಬ್ಬುಗತ್ತಲೆಯ ಮರೆಯಲ್ಲಿ ಅಡಗಿಹೋಗಿತ್ತು; ಇನ್ನೊಂದು ದೃಷ್ಟಿಯಲ್ಲಿ, ತಾನು ಮುಗುವಾಗಿದ್ದ ಕಾಲದಲ್ಲಿ ನೋಡಿನೋಡಿ ಅದು ತನಗೆ ಪಳಕೆಯಾಗಿದ್ದ ಮುಂಚಿನ ಕಾಲದಿಂದಲೂ ದಿನದಿನಕ್ಕೆ ಹೆಚ್ಚು ಹೆಚ್ಚು ಎದ್ದುಕಾಣುತ್ತ, ವಿಶೇಷ ಭಾವಪೂರ್ಣವಾಗುತ್ತಾ ಬರುತ್ತಿದೆ ಎಂದು ಅವಳು ಭಾವಿಸಿಕೊಳ್ಳದೆ ಇರಲಾಗಲಿಲ್ಲ. ಏಕೆಂದರೆ, ಭೌತಿಕವಾದ ಸ್ಥೂಲ ಹೊರರೇಖೆಯೂ ಚಿತ್ರವಸ್ತುವೂ ಪ್ರೇಕ್ಷಕನ ನೋಟಕ್ಕೆ ಮಬ್ಬು ಮಬ್ಬಾಗುತ್ತ ದೂರ ಸರಿಯುತ್ತಿದ್ದರೂ, ಚಿತ್ರದ ವ್ಯಕ್ತಿಯ ಎದ್ದು ಕಾಣುವ ಕಠಿನವಾದ ಪರೋಕ್ಷ ಸ್ವಭಾವು ಒಂದು ಬಗೆಯ ಚೈತನ್ಯಾತ್ಮಕ ಹಿನ್ನೆಲೆಯಲ್ಲಿ ಪ್ರಸ್ಫುಟಗೊಂಡಂತೆ ತೋರುತ್ತಿತ್ತು. ಇಂಥ ಒಂದು ಪರಿಣಾಮವನ್ನು ಪ್ರಾಚೀನಕಾಲದ ಚಿತ್ರಗಳಲ್ಲಿ ಆಗೊಮ್ಮೆ ಈಗೊಮ್ಮೆ ಕಾಣಬಹುದು. ಅವು ಒಂದು ಬಗೆಯ ಮೂಕಲಕ್ಷಣವನ್ನು ತಳೆಯುತ್ತವೆ; ಯಾವ ಚಿತ್ರಕಾರನಾಗಲಿ (ಈಗಿನ ಕಾಲದ ಚಿತ್ರಕಾರರು ಹೊಂದಿರುವಂತಹ ದಾಕ್ಷಿಣ್ಯ ಪರಸ್ವಭಾವವನ್ನು ಹೊಂದಿದ್ದೇ ಆದರೆ) ಆ ಮುಖಲಕ್ಷಣವನ್ನು ಚಿತ್ರ ಬರೆಯಿಸಿಕೊಂಡ ತನ್ನ ಆಶ್ರಯದಾತನಿಗೆ ಅವನ ಸ್ವಂತ ವಿಶಿಷ್ಟ ಲಕ್ಷಣವೆಂದು ಆರೋಪಿಸುವ ಕನಸನ್ನು ಕೂಡ ಎಂದಿಗೂ ಕಾಣನು; ಆದಾಗ್ಯೂ, ಒಂದು ಮಾನವವ್ಯಕ್ತಿಯ ಆತ್ಮಸ್ವರೂಪದ ಅಪ್ರಿಯ ಸತ್ಯವನ್ನು ಅದು ಪ್ರತಿ ಫಲಿಸುತ್ತದೆ ಎಂಬುದನ್ನು ನಾವು ಕೂಡಲೆ ಕಂಡುಕೊಳ್ಳುತ್ತೇವೆ. ಅಂಥ ಸಂದರ್ಭಗಳಲ್ಲಿ, ತನ್ನ ಚಿತ್ರದ ವಸ್ತುವಾದ ವ್ಯಕ್ತಿಯ ಆಂತರಿಕ ಗುಣಗಳ ಬಗೆಗೆ ವರ್ಣಚಿತ್ರಕಾರನು ಕಲ್ಪಿಸಿಕೊಂಡ ಆಳವಾದ ಭಾವನೆ ಚಿತ್ರದ ಅಂತಸ್ಸಾರದಲ್ಲಿ ವಿಲೀನವಾಗಿಹೋಗಿ, ಮೇಲುಮೇಲಿನ ವರ್ಣಸಾಮಗ್ರಿಯನ್ನು ಕಾಲವು ಅಳಿಸಿಹಾಕಿದ ಮೇಲೆ ವ್ಯಕ್ತವಾಗುವುದು.

ಭಾವಚಿತ್ರವನ್ನು ದಿಟ್ಟಿಸಿ ನೋಡುತ್ತಿದ್ದ ಹಾಗೆ ಅದರ ಕಣ್ನೋಟದ ಪ್ರಭಾವಕ್ಕೆ

ವನ್ನುಂಟುಮಾಡಿದಂತೆ ಕಂಡುಬರಲಿಲ್ಲ; ಮಾತ್ರವಲ್ಲ, ಅಸಂತೋಷಕ್ಕೆ ಕಾರಣವಾಯಿತು; ಆದರೂ, ಮರುಕ್ಷಣವೇ ಆತ ನಸುನಕ್ಕನು. ಎರಡನೆಯ ಮುಖಭಾವವಾದ ನಸುನಗೆ ಇನ್ನೂ ಅವನ ತುಟಿಗಳ ಮೇಲೆ ಇರುವಾಗಲೇ ಅದೇತಾನೆ ಕಿಟಕಿಯ ಕಡೆಗೆ ಮುಂದಕ್ಕೆ ಬಾಗಿದ್ದ ಹೆಪ್ಸಿಬಾಳನ್ನು ಕಂಡನು; ಆ ಬಳಿಕ ಅವನ ನಸುನಗೆ ತನ್ನಲ್ಲಿ ಅಡಗಿದ್ದ ಖಾರವನ್ನೂ ಅಸಂತುಷ್ಟಿಯನ್ನೂ ಬಿಟ್ಟು ಅತ್ಯಂತ ಪ್ರೇಮಪೂರ್ಣವಾದ ಸಂತೃಪ್ತಿಗೂ ಔದಾರ್ಯಕ್ಕೂ ಎಡೆಗೊಟ್ಟಿತು. ಘನತೆ ಹಾಗೂ ಮರ್ಯಾದೆಯಿಂದ ಕೂಡಿದ ದಯೆ– ಇವುಗಳ ಹದವಾದ ಸಂಮಿಶ್ರಭಾವದಿಂದ ಆತ ತಲೆಬಾಗಿಸಿ, ತನ್ನ ದಾರಿಯಲ್ಲಿ ಮುಂದಕ್ಕೆ ನಡೆದನು.

"ಅಗೋ, ಅವನು! ಇದನ್ನು ನೋಡಿ ಅವನು ಏನಂದುಕೊಂಡನೋ ನನಗೆ ಕುತೂಹಲವಾಗಿದೆ. ಅವನಿಗೆ ಸಂತೋಷವಾಗಿದೆಯೆ ಇದರಿಂದ? ಓಹೋ, ಅವನು ಹಿಂತಿರುಗಿ ನೋಡುತ್ತಿದ್ದಾನೆ!" ಹೀಗೆಂದು ತನ್ನಲ್ಲಿಯೇ ಹೇಳಿಕೊಂಡಳು ಹೆಪ್ಸಿಬಾ; ಆಗ ಬಹಳ ಕಹಿಯಾದ ಭಾವ ಮೂಡಿತು ಅವಳಲ್ಲಿ; ಅದನ್ನು ತನ್ನಿಂದ ಹೊರದೂಡಲಾಗದೆ, ಹಾಗೆಯೇ ನುಂಗಿಕೊಳ್ಳಲು ಪ್ರಯತ್ನಿಸಿದಳು.

ಆ ದೊಡ್ಡ ಮನುಷ್ಯನು ಬೀದಿಯಲ್ಲಿ ನಿಂತುಕೊಂಡು, ಅರ್ಧ ಹಿಂತಿರುಗಿದ್ದನು; ಅವನ ಕಣ್ಣುಗಳು ಇನ್ನೂ ಅಂಗಡಿಯ ಮೇಲೆ ನಟ್ಟು ಹೋಗಿದ್ದವು. ನಿಜವಾಗಿ, ಅವನು ಪೂರ್ತಿ ಒಂದು ಸುತ್ತು ತಿರುಗಿ, ಅಂಗಡಿಯನ್ನು ಪ್ರವೇಶಿಸುವ ಉದ್ದೇಶದಿಂದ ಎಂಬಂತೆ ಒಂದೆರಡು ಹೆಜ್ಜೆ ಹಾಕತೊಡಗಿದ್ದನು. ಆದರೆ, ಅಕಸ್ಮಾತ್ತಾಗಿ ಅಷ್ಟರಲ್ಲಿಯೆ, 'ಜಿಂಕ್ರೋ' ನನ್ನು ಕಬಳಿಸಿ ನರಭಕ್ಷಕನಾಗಿದ್ದ ಹೆಪ್ಸಿಬಾಳ ಮೊದಲನೆ ಗಿರಾಕಿ ಕಿಟಕಿಯ ಕಡೆ ದುರಗುಟ್ಟಿಕೊಂಡು ನೋಡಿದ, ಅಲ್ಲಿದ್ದ ಶುಂಠಿರೊಟ್ಟಿಯ ಆನೆಯನ್ನು ಕಂಡು ತಡೆಯಲಾಗದಷ್ಟು ಆಕರ್ಷಿತನಾದ. ಈ ಚಿಕ್ಕ ಹುಡುಗನಿಗೆ ಅದೆಂಥ ಸೊಗಸಾದ ಹಸಿವಿತ್ತು! ಬೆಳಗ್ಗಿನ ಉಪಾಹಾರವಾದ ಕೂಡಲೆ ಇಬ್ಬರು 'ಜಿಂಕ್ರೋ'ಗಳು; ಮತ್ತೆ ಈಗ, ಮುಖ್ಯ ಭೋಜನಕ್ಕೆ ಮುಂಚೆ ಹಸಿವು ಹುಟ್ಟಿಸುವ ರುಚಿಕಾರಕ, ಒಂದು ಆನೆ! ಈ ಎರಡನೆಯ ವಸ್ತುವನ್ನು ಕೊಂಡು ಪೂರೈಸುವಷ್ಟರಲ್ಲಿ, ಆ ವಯಸ್ಕ ದೊಡ್ಡ ಮನುಷ್ಯನು ತನ್ನ ದಾರಿ ಹಿಡಿದು, ಬೀದಿಯ ಮೂಲೆ ತಿರುವನ್ನು ತಿರುಗಿಬಿಟ್ಟಿದ್ದನು.

ಕನ್ಯಾ ಮಹಿಳೆ ಎಚ್ಚರಿಕೆಯಿಂದ ಹೊರಕ್ಕೆ ತಲೆಹಾಕಿ ಬೀದಿಯ ಆಕಡೆ ಈಕಡೆ ನೋಡಿದಮೇಲೆ, ಹಿಂದಕ್ಕೆ ಸರಿದು, ಗೊಣಗುಟ್ಟಿದಳು: "ನೀನು ಹೇಗೆಬೇಕಾದರೂ ಭಾವಿಸಿಕೋ, ಜಫ್ರಿಯಣ್ಣ, ಹೇಗೆಬೇಕಾದರೂ ಭಾವಿಸಿಕೋ! ನೀನು ನನ್ನ ಅಂಗಡಿಕಿಟಕಿಯನ್ನು ನೋಡಿರುವೆ! ಸರಿಯೆ! ನೀನು ಏನು ಹೇಳುವೆ?

ಸಾಮ್ಯವು ಪರಿಪೂರ್ಣವಾಗಿ ಉಳಿದಿತ್ತು. ಅದೇ ಮೂಲವ್ಯಕ್ತಿಯನ್ನು ಅನುಕರಿಸಿ ಬರೆದಿದ್ದ ಮ್ಯಾಲ್ಬೋನನ ಸೂಕ್ಷ್ಮ ಚಿತ್ರ ಗಾಲಿಯಲ್ಲಿ ಬರೆದ ಹೆಪ್ಸಿಬಾಳ ಚಿತ್ರಕ್ಕಿಂತ ಬಹು ಕೆಳಮಟ್ಟದ್ದಾಗಿದ್ದಿತು; ಹೆಪ್ಸಿಬಾಳ ಚಿತ್ರಕಲ್ಪನೆಯ ಹಿಂದೆ ಪ್ರೀತಿಯೂ ದುಃಖಮಯ ಸ್ಮರಣೆಯೂ ಒಂದುಗೂಡಿ ಪ್ರೇರಕವಾಗಿದ್ದುವು. ಮಾರ್ದವ; ಸೌಮ್ಯವಾದ ಉಲ್ಲಾಸಪೂರ್ಣವಾದ ಧ್ಯಾನಭಾವ; ಮುಗುಳುನಗೆಯನ್ನು ಸೂಸುವಂತಿರುವ ಕೆಂಪನೆಯ ತುಂಬುತುಟಿಗಳು, ತಮ್ಮ ಗುಡ್ಡೆಗಳನ್ನು ಮೃದುವಾಗಿ ಬೆಳಗುವ ಮೂಲಕ ಆ ಮುಗುಳ್ನಗೆಯ ಮುನ್‌ಸೂಚನೆ ಕೊಡುವಂತಿದ್ದ ಕಣ್ಣುಗಳು! ಪುರುಷಲಕ್ಷಣಗಳೊಂದಿಗೆ ಬೇರ್ಪಡಿಸಲಾಗದಂತೆ ಬೆಸೆದುಹೋದ ಸ್ತ್ರೀಸಹಜ ಲಕ್ಷಣಗಳು! ಮ್ಯಾಲ್ಬೋನನ ಸೂಕ್ಷ್ಮ ಪ್ರಮಾಣದ ಚಿತ್ರದಲ್ಲಿಯೂ ಅದೇ ರೀತಿ ಈ ಕಡೆಯ ಲಕ್ಷಣವಾದ ಕೋಮಲಭಾವವಿದ್ದಿತು; ಅದನ್ನು ನೋಡಿದರೆ, ಮೂಲವ್ಯಕ್ತಿಯು ತನ್ನ ತಾಯಿಯನ್ನು ಹೋಲುತ್ತಿದ್ದನು, ಆಕೆ ಚೆಲುವೆಯಾದ ಪ್ರೇಮಯೋಗ್ಯಳಾದ ರಮಣಿ, ಅವಳ ಶೀಲಸ್ವಭಾವದಲ್ಲಿ ಬಹುಶಃ ಒಂದು ಸುಂದರವಾದ ದೌರ್ಬಲ್ಯವಿದ್ದಿತು. ಆ ಕಾರಣದಿಂದಾಗಿ ಅವಳನ್ನು ಅರಿತುಕೊಳ್ಳುವುದೇ ಒಂದು ಸೊಗಸು, ಅವಳನ್ನು ಪ್ರೀತಿಸುವುದು ಹೆಚ್ಚು ಸುಲಭ– ಎಂದು ನೀವು ಆಲೋಚಿಸುವುದು ಅನಿವಾರ್ಯ.

"ಹೌದು, ಅವರು ಅವನಲ್ಲಿ ಅಡಗಿದ್ದ ಅವನ ತಾಯಿಯ ಸ್ವಭಾವವನ್ನು ಹಿಂಸಿಸಿದರು. ಅವನು ಎಂದಿಗೂ ಪಿನ್ಚನ್ ಕುಲದವನಂತಿರಲಿಲ್ಲ!" ಎಂದು ಹೆಪ್ಸಿಬಾ ಆಲೋಚಿಸಿದಳು ದುಃಖದಿಂದ; ಅದರ ಸಹ್ಯವಾದ ಭಾಗ ಮಾತ್ರ ಅವಳ ಹೃದಯದಿಂದ ಕಣ್ಣೆವೆಯ ಬಳಿಗೆ ಉಕ್ಕಿತು.

ಈ ವೇಳೆಗೆ ಅಂಗಡಿಯ ಗಂಟೆ ಬಾರಿಸಿತು; ಅವಳು ತನ್ನ ಹಿಂದಿನ ನೆನಪುಗಳ ಗೋರಿಯ ಆಳಕ್ಕೆ ಅದೆಷ್ಟು ಇಳಿದಿದ್ದಳೆಂದರೆ, ಆ ಗಂಟೆಯ ಸದ್ದು ಬಹು ದೂರದಿಂದ ಕೇಳಿಬರುತ್ತಿದೆಯೆಂಬಂತೆ ಭಾಸವಾಯಿತು. ಅಂಗಡಿಯನ್ನು ಪ್ರವೇಶಿಸಿದಾಗ, ಅಲ್ಲೊಬ್ಬ ಮುದುಕನಿದ್ದುದು ಅವಳಿಗೆ ಕಂಡುಬಂದಿತು; ಪಿನ್ಚನ್ ಬೀದಿಯ ಒಬ್ಬ ಸರ್ವಸಾಮಾನ್ಯ ನಿವಾಸಿ ಆತ; ಅನೇಕವರ್ಷ ಹಿಂದಿನಿಂದಲೂ ಅವನು ಈ ಮನೆಯಲ್ಲಿ ಹೋಗಿಬಂದು ಅವಳಿಗೆ ಪಳಕೆಯಾಗಿದ್ದವನು. ಅವನೊಬ್ಬ ತೀರ ಹಳಬನಾದ ವ್ಯಕ್ತಿ; ನರೆತತಲೆ, ಚರ್ಮದ ಸುಕ್ಕು– ಇವು ಯಾವಾಗಲೂ ಅವನ ಬಳಿವಳಿಯಾಗಿದ್ದುವೆಂಬಂತೆ ತೋರುತ್ತಿತ್ತು; ಅಲ್ಲದೆ, ಅವನ ಮೇಲುದವಡೆಯ ಮುಂಭಾಗದಲ್ಲಿ ಇದ್ದ ಅರ್ಧ ಹುಳುತುಹೋದ ಒಂಟಿ ಹಲ್ಲನ್ನು ಬಿಟ್ಟರೆ, ಬೇರೆ ಹಲ್ಲು ಎಂದೂ ಅವನಿಗೆ ಇದ್ದಂತೆ ತೋರುತ್ತಿರಲಿಲ್ಲ.

ಸಿಲುಕಿ ಹೆಪ್ಸಿಬಾ ತತ್ತರಿಸಿಹೋದಳು. ಚಿತ್ರದ ಮೂಲವ್ಯಕ್ತಿಯ ಶೀಲಸ್ವಭಾವ ಇಂಥದೆಂದು ನಿರ್ಣಯಿಸಿ ಹೇಳುವಂತೆ ಸತ್ಯಾಂಶದ ಅರಿವು ಅವಳನ್ನು ಒತ್ತಾಯಪಡಿಸುತ್ತಿತ್ತು; ಆದರೆ, ವಂಶಪಾರಂಪರ್ಯವಾಗಿ ಬಂದಿದ್ದ ಅವಳ ಪೂಜ್ಯಭಾವನೆಯ ಕಾರಣದಿಂದ ಹಾಗೆ ಮಾಡಲು ಅವಳು ಹೆದರುತ್ತಿದ್ದಳು. ಆದರೂ ಅವಳು ದಿಟ್ಟಿಸಿನೋಡುತ್ತಿದ್ದಳು; ಏಕೆಂದರೆ, ಅವಳು ಆಗತಾನೆ ಬೀದಿಯಲ್ಲಿ ನೋಡಿದ್ದ ಮುಖವನ್ನು ಹೆಚ್ಚು ನಿಷ್ಕೃಷ್ಟವಾಗಿಯೂ ಹೆಚ್ಚು ಒಳಹೊಕ್ಕೂ ಅರ್ಥಮಾಡಿಕೊಳ್ಳಲು ಚಿತ್ರದ ಮುಖವು ಅವಳಿಗೆ ನೆರವಾಗುತ್ತಿತ್ತು; ಕಡೆಯಪಕ್ಷ; ಹಾಗೆಂದು ಅವಳು ಭಾವಿಸಿಕೊಂಡಿದ್ದಳು.

"ಇವನು ಆ ಮನುಷ್ಯನೇ! ಜಫ್ರೀ ಪಿನ್ಚನ್ ತನಗೆ ಇಷ್ಟ ಬಂದಹಾಗೆ ನಸುನಗೆ ನಗಲಿ, ಅಡಿಯಲ್ಲಿ ಆ ಮುಖಭಾವ ಇದ್ದೇ ಇದೆ! ಗುಂಡು ಮಕಮಲ್‌ಟೋಪಿ, ಅಲಂಕಾರದ ಪಟ್ಟಿ, ಕಪ್ಪು ಅಂಗಿ, ಒಂದು ಕೈಯಲ್ಲಿ ಬೈಬಲ್ ಇನ್ನೊಂದು ಕೈಯಲ್ಲಿ ಒಂದು ಕತ್ತಿ– ಇಷ್ಟು ಕೊಟ್ಟರಾಯಿತು; ಅನಂತರ ಜಫ್ರೀ ತನ್ನ ಕೈಲಾದಷ್ಟು ನಗಲಿ; ಪೂರ್ವದ ಪಿನ್ಚನ್ನನ್ನೆ ಅವತಾರವೆತ್ತಿ ಬಂದಿದ್ದಾನೆ ಎಂಬುದನ್ನು ಯಾರೂ ಸಂದೇಹಪಡುವುದಿಲ್ಲ! ಒಂದು ಹೊಸ ಮನೆಯನ್ನು ಕಟ್ಟಲು ತಕ್ಕ ಮನುಷ್ಯ ತಾನೇ ಎಂಬುದನ್ನು ತೋರಿಸಿಕೊಟ್ಟಿದ್ದಾನೆ! ಬಹುಶಃ, ಒಂದು ಹೊಸ ಶಾಪವನ್ನು ಕೂಡ ತನ್ನ ತಲೆಯ ಮೇಲೆ ತಂದುಕೊಂಡಾನು!" ಎಂದು ತನ್ನಲ್ಲಿ ತಾನೆ ಪಿಸುಗುಟ್ಟಿಕೊಂಡಳು.

ಈ ರೀತಿಯಲ್ಲಿ ಹೆಪ್ಸಿಬಾ ಹಳೆಯಕಾಲದ ಈ ವಿಚಿತ್ರ ಕಲ್ಪನೆಗಳನ್ನು ಕಲ್ಪಿಸಿಕೊಂಡು ತನ್ನ ತಲೆ ಕೆಡಿಸಿಕೊಂಡಳು. ಅವಳು ಈ ಪಿನ್ಚನ್ ಭವನದಲ್ಲಿ ಅದೆಷ್ಟು ದೀರ್ಘಕಾಲ ಒಬ್ಬೊಂಟಿಗಳಾಗಿ ವಾಸಮಾಡಿದ್ದಳೆಂದರೆ, ಆ ಮನೆಗೆ ಉಪಯೋಗಿಸಿದ್ದ ಮರಮುಟ್ಟನ ಕೊಳೆತ ಹುಳತ ಒಣಹುಡಿಯೆಲ್ಲ ಅವಳ ಮೆದುಳಿನ ತುಂಬ ವ್ಯಾಪಿಸಿಕೊಂಡಿದ್ದಿತು. ತನ್ನ ಬುದ್ಧಿಯುನ್ನು ಹತೋಟಿಯಲ್ಲಿಟ್ಟುಕೊಳ್ಳಲು ಮಧ್ಯಾಹ್ನ ಬೀದಿಯಲ್ಲಿ ತಿರುಗಾಡಿಕೊಂಡು ಬರುವುದು ಅಗತ್ಯವೆನಿಸಿತ್ತು ಅವಳಿಗೆ.

ವೈಷಮ್ಯ ಪರಿಭಾವನೆಯ ಪ್ರಭಾವದಿಂದ, ಅವಳ ಬಗೆಗಣ್ಣ ಮುಂದೆ ಇನ್ನೊಂದು ಭಾವಚಿತ್ರ ಮೂಡಿನಿಂತಿತು; ಯಾವ ಚಿತ್ರಕಾರನೂ ಇರುವ ಸೌಂದರ್ಯವನ್ನು ಹಾಗೆ ಉತ್ಪ್ರೇಕ್ಷಿಸಿ ಚಿತ್ರಿಸುವ ಸಾಹಸಮಾಡಿರಲಾರ, ಅಂಥ ಒಂದು ಸಾಹಸದ ಉತ್ಪ್ರೇಕ್ಷೆಯಿಂದ ಚಿತ್ರಿತವಾಗಿತ್ತು ಆ ಕಲ್ಪನಾ ಚಿತ್ರ; ಆದರೂ ಕೂಡ, ಚಿತ್ರಣಕಾರ್ಯ ಎಷ್ಟು ಸೂಕ್ಷ್ಮವಾಗಿತ್ತೆಂದರೆ, ಮೂಲವ್ಯಕ್ತಿಗೂ ಚಿತ್ರಕ್ಕೂ

ರೊಟ್ಟಿಯ ಚೂರುಗಳನ್ನೂ ಭೋಜನಪಾತ್ರೆಯಿಂದ ಚೆಲ್ಲಿ ಸೂಚಿಸಿದ್ದನ್ನೂ ಸಂಗ್ರಹಿಸುವುದಕ್ಕಾಗಿ ಅವನು ಪ್ರತಿಬೆಳಗ್ಗೆಯೂ ಒಂದು ಸುತ್ತು ಹೋಗಿ ಬರುತ್ತಿದ್ದನು.

ತನ್ನ ಚಿಕ್ಕಂದಿನಂದು– 'ಚಿಕ್ಕವನು ಮಾತ್ರವಲ್ಲ, ಚಿಕ್ಕವರಲ್ಲಿ ಚಿಕ್ಕವನಾಗಿದ್ದ ಅವನು' ಎಂದು ಅಸ್ಪಷ್ಟವಾದ ಒಂದು ಹೇಳಿಕೆಯಿತ್ತು– ವೆನ್ನರ್ ಮಾವ ಬುದ್ಧಿಯಲ್ಲಿ ಕೊಂಚ 'ಐಬು' ಎಂದು ಸಾಮಾನ್ಯವಾದ ಗ್ರಹಿಕೆಯೊಂದಿತ್ತು. ವಾಸ್ತವವಾಗಿ, ಆ ಆರೋಪಣೆ ತನಗೆ ಸಲ್ಲುವುದೆಂದು ಅವನು ಕಾರ್ಯತಃ ಒಪ್ಪಿಕೊಂಡಿದ್ದನು: ಹೇಗೆಂದರೆ, ಇತರರು ಬದುಕಿನಲ್ಲಿ ಹುಡುಕುವ ಗೆಲುವನ್ನು ಅವನು ಎಂದೂ ಪಡೆಯಲು ಯತ್ನಿಸಿದವನಲ್ಲ, ಅಲ್ಲದೆ ಮಂದ ಬುದ್ಧಿಗಳು ಎನ್ನಿಸಿಕೊಂಡವರು ಜೀವನವ್ಯಾಪಾರದಲ್ಲಿ ವಹಿಸುವ ಕೇವಲ ಕೆಳದರ್ಜೆಯ ಪಾತ್ರಗಳನ್ನು ಮಾತ್ರ ವಹಿಸುತ್ತಿದ್ದನು. ಆದರೆ ಈಗ, ತನ್ನ ಅತ್ಯಂತ ಇಳಿವಯಸ್ಸಿನಲ್ಲಿ– ಅವನ ದೀರ್ಘಕಾಲದ ಕಷ್ಟಾನುಭವವು ಅವನ ಬುದ್ಧಿಯನ್ನು ಬೆಳಗಿದ್ದಿತೋ, ಇಲ್ಲವೆ ಅವನ ಅರುಳು ಮರಳು ಸ್ವರೂಪವನ್ನು ತಕ್ಕಮಟ್ಟಿಗೆ ಅಳೆದು ತಿಳಿದುಕೊಳ್ಳುವ ಸಾಮರ್ಥ್ಯವನ್ನು ಕುಗ್ಗಿಸಿತ್ತೋ– ಈ ಗೌರವಾನ್ವಿತ ಮನುಷ್ಯ ತಾನು ಅಪಾರ ಬುದ್ಧಿವಂತ ಎಂದುಕೊಳ್ಳುತ್ತಿದ್ದ; ಅಲ್ಲದೆ, ನಿಜವಾಗಿ ಆ ಹೆಸರನ್ನು ಪಡೆದಿದ್ದ. ಅದೇ ರೀತಿ, ಆಗೊಮ್ಮೆ ಈಗೊಮ್ಮೆ ಕವಿತೆಯಂತಹ ಯಾವುದೋ ಒಂದು ಲಹರಿ ಅವನಲ್ಲಿ ಮೂಡುತ್ತಿತ್ತು; ಅದು, ಸ್ವಲ್ಪ ಜೀರ್ಣವಾಗಿದ್ದ ಅವನ ಚಿತ್ತ ಭಿತ್ತಿಯ ಮೇಲೆ ಬೆಳೆದಿದ್ದ ಹಾವಸೆ, ಅಥವಾ ಗೋಡೆಹೂವು (Wallflower)*; ಅವನ ಪೂರ್ವವಯಸ್ಸಿನಲ್ಲಿ ಅಥವಾ ಮಧ್ಯವಯಸ್ಸಿನಲ್ಲಿ ಯಾವುದನ್ನು ಶುದ್ಧ ಗ್ರಾಮ್ಯ, ಸಾಧಾರಣ, ಎನ್ನಬಹುದಾಗಿತ್ತೋ ಆ ಸ್ವಭಾವಕ್ಕೆ ಅದು ಈಗ ಒಂದು ಸೊಬಗನ್ನೆ ಕೊಟ್ಟಿತ್ತು. ಅವನನ್ನು ಕಂಡರೆ ಹೆಪ್ಸಿಬಾಗೆ ತುಂಬ ಅಭಿಮಾನ; ಏಕೆಂದರೆ, ಊರಿನಲ್ಲಿ ಅವನ ಹೆಸರು ಬಹಳ ಹಳೆಯದು, ಹಾಗೂ ಹಿಂದೆ ಗೌರವಾರ್ಹವಾಗಿತ್ತು. ಅಲ್ಲದೆ, ಪಿನ್ಚನ್ ಬೀದಿಯಲ್ಲಿ, ಏಳು ಇಪ್ಪಾರಿನ ಮನೆ ಮತ್ತು ಅದನ್ನು ಕವಿದು ಮರೆಮಾಡಿದ್ದ ಎಲ್ಮ್ ವೃಕ್ಷ– ಇವನ್ನು ಬಿಟ್ಟರೆ, ಚರಾಚರ ವಸ್ತುಗಳಲ್ಲಿ ವೆನ್ನರ್ ಮಾವನೇ ಪ್ರಾಚೀನ ತಮವಾದ ಅಸ್ತಿತ್ವವನ್ನು ಪಡೆದಿದ್ದುದು; ಇದಕ್ಕಿಂತ ಮೇಲಾದ ಕಾರಣ ಬೇಕಾಗಿರಲಿಲ್ಲ, ಅವನಿಗೆ ಅದೊಂದು ತೆರನ ಸಲುಗೆಯ ಗೌರವವನ್ನು ಸಲ್ಲಿಸುವುದಕ್ಕೆ.

* ಯೂರೋಪಿನಲ್ಲಿ ಸಾಮಾನ್ಯವಾಗಿ ಹಾಳುಗೋಡೆಗಳ ಮೇಲೆ ಬೆಳೆಯುವ ಕಿತ್ತಿಳೆ ಬಣ್ಣದ ಹೂ ಬಿಡುವ, ಸಾಸಿವೆಜಾತಿಯ ಒಂದು ಸಸ್ಯ.

ನೆರೆಹೊರೆಯವರೆಲ್ಲಾ ಆತನನ್ನು ವೆನ್ನರ್‌ಮಾವ ಎಂದು ಕರೆಯುತ್ತಿದ್ದರು; ಗಡಸುದಾರಿಯಲ್ಲಿಯೋ ಇಲ್ಲವೆ ನೆಲಗಟ್ಟಿನ ಕಾಲುದಾರಿಯಲ್ಲಿಯೋ ಸ್ವಲ್ಪ ಗೂನುಮಾಡಿಕೊಂಡು ಆತ ಬೀದಿಯ ಉದ್ದಕ್ಕೂ ಆ ತುದಿಯಿಂದ ಈ ತುದಿಗೆ ನಡೆದುಹೋಗದೆ ಇರುವ ದಿನವನ್ನು ತುಂಬ ವಯಸ್ಸಾದ ಹೆಪ್ಸಿಬಾ ಜ್ಞಾಪಿಸಿಕೊಳ್ಳಲಾಗುತ್ತಿರಲಿಲ್ಲ. ಆದರೂ ಕೂಡ ಅವನಲ್ಲಿ ಅದು ಏನೋ ಒಂದು ಅಪೂರ್ವ, ಒಂದು ಕಸುವು, ಇದ್ದಿತು; ಅದು ಅವನನ್ನು ನಿತ್ಯ ಉಸಿರಾಡುವಂತೆ ಇಟ್ಟಿದ್ದುದು ಮಾತ್ರವಲ್ಲದೆ, ಜನನಿಬಿಡವಾಗಿ ಕಾಣುವ ಈ ಪ್ರಪಂಚದಲ್ಲಿ ಅವನಿಲ್ಲದೆ ಹೊದರೆ ತೆರಪಾಗಿ ಬಿಕೋ ಎನಿಸುವ ಒಂದು ಸ್ಥಾನವನ್ನು ಅವನು ಭರ್ತಿ ಮಾಡಲು ಸಮರ್ಥನಾಗುವಂತೆ ಮಾಡಿತ್ತು. ನಿಧಾನವಾಗಿ ಹೆಜ್ಜೆಯಮೇಲೆ ಹೆಜ್ಜೆ ಹಾಕುತ್ತ ಕಾಲೆಳೆದುಕೊಂಡು ಅವರಿವರ ಸಮಾಚಾರ ಒಯ್ಯುವುದು (ಆಗ ಆತನನ್ನು ನೋಡಿದರೆ, ಎಲ್ಲಿಗಾದರೂ ಸರಿಯೆ ಅವನು ತಲಪುವನೇ ಎಂದು ನಿಮಗೆ ಸಂದೇಹವಾಗುವುದು); ಒಂದು ಸಣ್ಣ ಸಂಸಾರಕ್ಕೆ ಒಂದೋ ಎರಡೋ ಅಡಿಯಷ್ಟು ಸೌದೆಯನ್ನು ಗರಗಸದಿಂದ ತುಂಡುಹಾಕಿಕೊಡುವುದು, ಹಳೆಯ ಪೀಪಾಯಿಯೊಂದನ್ನು ಚೂರುಚೂರಾಗಿ ಒಡೆದುಕೊಡುವುದು, ಇಲ್ಲವೆ ಬೆಂಕಿಹೊತ್ತಿಸುವುದಕ್ಕೆ ಉಪಯೋಗವಾಗುವಂತೆ 'ಪೈನ್' (ಪೀತದಾರು) ಮರದ ಹಲಗೆಯನ್ನು ಸೀಳಿಕೊಡುವುದು; ಬೇಸಗೆಯ ಕಾಲದಲ್ಲಿ, ಕಡಮೆ ಬಾಡಿಗೆಯ ವಠಾರದ ಮನೆಯೊಂದಕ್ಕೆ ಸೇರಿದ ಕೈತೋಟದ ಕೆಲವು ಗಜ ನೆಲವನ್ನು ಅಗೆದುಕೊಟ್ಟು, ತನ್ನ ದುಡಿಮೆಯ ಫಲದಲ್ಲಿ ಅರ್ಧಪಾಲನ್ನು ಹಂಚಿಕೊಳ್ಳುವುದು; ಚಳಿಗಾಲದಲ್ಲಿ, ದಾರಿಯ ಪಕ್ಕದಲ್ಲಿ ಬಿದ್ದಿರುವ ಮಂಜುಗಡ್ಡೆಯನ್ನು ಎಲೆಗುದ್ದಲಿಯಿಂದ ಬಾಚಿಹಾಕುವುದು, ಇಲ್ಲವೆ ಸೌದೆ ತುಂಬುವ ಮನೆಗೂ ಬಟ್ಟೆ ಒಣಗಹಾಕುವ ಹಗ್ಗದ ಬಳಿ ಉದ್ದಕ್ಕೂ ದಾರಿಮಾಡಿಕೊಡುವುದು– ಇಂಥವೇ, ಕಡೆಯಪಕ್ಷ ಒಂದು ಇಪ್ಪತ್ತು ಸಂಸಾರಗಳಿಗೆ ವೆನ್ನರ್ ಮಾವ ಮಾಡಿಕೊಡುತ್ತಿದ್ದ ಮುಖ್ಯ ಕಾರ್ಯಗಳಲ್ಲಿ ಕೆಲವು. ಪಾದ್ರಿಯೊಬ್ಬನು ತನ್ನ ಧಾರ್ಮಿಕ ಆಡಳಿತ ಪ್ರಾಂತಕ್ಕೆ ಸೇರಿದ ಶಿಷ್ಯವೃಂದದಲ್ಲಿ ಯಾವ ಬಗೆಯ ಹಕ್ಕನ್ನೂ ತೀವ್ರ ಆಸಕ್ತಿಯನ್ನೂ ಹೊಂದಿರುತ್ತಾನೆಯೋ ವೆನ್ನರ್ ಕೂಡ ಆ ಬಳಗದಲ್ಲಿ ಅದೇ ಬಗೆಯ ಹಕ್ಕನ್ನೂ ಆಸಕ್ತಿಯನ್ನೂ ತನ್ನವೆಂದು ಸಾಧಿಸುತ್ತಿದ್ದನು. ಎಂದ ಮಾತ್ರಕ್ಕೆ ವರ್ಷಾದಾಯದ ಹತ್ತನೆಯ ಒಂದು ಪಾಲಿನ ಕಾಣಿಕೆಯನ್ನು ಹಂದಿಯ ರೂಪದಲ್ಲಿ ಅವನು ಕೇಳುತ್ತಿದ್ದ ಎಂದು ಅರ್ಥವಲ್ಲ; ಆದರೆ, ಸಂಭಾವನೆಯ ಇನ್ನೊಂದು ವಿಧಾನವಾಗಿ, ತನ್ನ ಸ್ವಂತದ ಹಂದಿಗೆ ಆಹಾರ ಒದಗಿಸಲು ಭೋಜನಾನಂತರದ ಎಂಜಲು

ಆತನೇನಾದರೂ ಮುದುಕನಾಗಿರುವ ಬದಲು ಒಬ್ಬ ಮುದುಕಿಯಾಗಿದ್ದಿದ್ದರೆ, ಅವನು ವಹಿಸಿದ್ದ ಯಾವ ಸ್ವಾತಂತ್ರ್ಯಕ್ಕಾಗಿ ಅವಳು ಈಗ ಅಸಮಾಧಾನಪಟ್ಟಿರಲಿಲ್ಲವೊ ಅದನ್ನು ಅವಳು ಬಹುಶಃ ಸಹಿಸುತ್ತಿರಲಿಲ್ಲ. ಅವಳೆಂದಳು, "ಓಹೋ, ಈಗ ಕೆಲಸ ಪ್ರಾರಂಭಿಸುವ ಸಮಯವಾಯಿತು! ನಿಜ ಹೇಳುವುದಾದರೆ, ಕೆಲಸ ನಿಲ್ಲಿಸಬೇಕಾದ ಹೊತ್ತಿನಲ್ಲಿ ಅದನ್ನು ಈಗ ತಾನೆ ಪ್ರಾರಂಭಮಾಡಿದ್ದೇನೆ."

ಮುದುಕ ಮರುನುಡಿದ: "ಓ, ಹಾಗೆಂದಿಗೂ ಹೇಳಬೇಡ, ಮಿಸ್ ಹೆಪ್ಸಿಬಾ! ನೀನು ಇನ್ನೂ ಚಿಕ್ಕ ಹರೆಯದವಳೇ. ನಾನು ಈಗ ಇರುವುದಕ್ಕಿಂತ ಇನ್ನೂ ಚಿಕ್ಕವನಾಗಿದ್ದೆ ಎಂತ ಎಂದೂ ಭಾವಿಸಿಕೊಂಡಿಲ್ಲ. ಆಗ ನೀನಿನ್ನೂ ಸಣ್ಣ ಮಗು, ಹಳೆಯ ಮನೆಯ ಬಾಗಿಲ ಮುಂದೆ ನೀನು ಆಡುತ್ತಿರುವುದನ್ನ ನಾನು ನೋಡುತ್ತ ಇದ್ದೆ, ಅದೆಲ್ಲ ಇನ್ನೂ ತುಸ ಹಿಂದೆ ಎನ್ನುವಹಾಗಿದೆ; ಆದರೂ, ಅನೇಕಸಲ, ನೀನು ಹೊಸಿಲಬಳಿ ಕುಳಿತು, ಬೀದಿಯ ಕಡೆ ಗಂಭೀರವಾಗಿ ನೋಡುತ್ತಿದ್ದೆ. ಏಕೆ ಎನ್ನುತ್ತೀಯೋ, ನಿನ್ನದು ಯಾವಾಗಲೂ ಗಂಭೀರದ ರೀತಿ– ನನ್ನ ಮಂಡಿಯ ಎತ್ತರಕ್ಕೆ ಬರುತ್ತಿದ್ದಾಗಲೂ, ದೊಡ್ಡವರ ತರಹ, ನಿನ್ನದು. ನಿನ್ನನ್ನ ಈಗ ನೋಡಿದೆ ಎನ್ನುವ ಹಾಗಿದೆ. ನಿನ್ನ ಅಜ್ಜನೋ, ಕೆಂಪು ಕವುದಿ ಹಾಕಿಕೊಂಡು, ಬಿಳಿಯ ಕೂದಲು ಟೋಪಿ ಧರಿಸಿ, ಅದರ ಮೇಲೆ ಟೋಪಿಯನ್ನ ಓರೆಯಾಗಿಟ್ಟುಕೊಂಡು, ಕೈಲಿ ಬೆತ್ತಹಿಡಿದು, ಮನೆಯಿಂದ ಹೊರಹೊರಟು, ಬೀದಿಯಲ್ಲಿ ಠೀವಿಯಾಗಿ ಹೆಜ್ಜೆಹಾಕುತ್ತ ಹೋಗುತ್ತಿದ್ದ. ಕ್ರಾಂತಿಗೆ ಪೂರ್ವದಲ್ಲಿ ಬೆಳೆದ ಆ ಹಳೆಯಕಾಲದ ದೊಡ್ಡ ಮನುಷ್ಯರೇ ಹಾಗೆ, ತುಂಬ ಜಬರುದಸ್ತು, ನಾನು ಚಿಕ್ಕವನಾಗಿದ್ದಾಗ, ಊರಿನ ಹಿರಿಯನನ್ನು ಸಾಮಾನ್ಯವಾಗಿ 'ದೊರೆ' ಎಂದು ಕರೆಯುತ್ತಿದ್ದರು; ಅವನ ಹೆಂಡತಿಯನ್ನ, ರಾಣಿ ಎಂದು ಕರೆಯುತ್ತಿರಲಿಲ್ಲ, ಖಂಡಿತ; 'ಒಡತಿ' ಎನ್ನುತ್ತಿದ್ದರು. ಈಗಿನ ಕಾಲದಲ್ಲಿ, ಯಾರೇ ಆಗಲಿ 'ದೊರೆ' ಎಂದು ಕರಸಿಕೊಳ್ಳಲು ಆತನಿಗೆ ಧೈರ್ಯವಿರುವುದಿಲ್ಲ; ಸಾಮಾನ್ಯ ಜನಕ್ಕಿಂತ ತಾನು ಮೇಲು ಎಂಬ ಭಾವನೆ ಆತನಿಗಿದ್ದರೆ, ಆತ ಅವರ ಮಟ್ಟಕ್ಕೇ ಬಗ್ಗುತ್ತಾನೆ ಅಷ್ಟೆ. ಹತ್ತು ನಿಮಿಷ ಹಿಂದೆ ತಾನೆ ನಿಮ್ಮ ದಾಯಾದಿ ಅಣ್ಣ, ಜಡ್ಜರನ್ನ ಕಂಡಿದ್ದೆ; ನೀನು ನೋಡುವ ಹಾಗೆ ಕಿತ್ತಾನಾರಿನ ಬಟ್ಟೆಯ ಷರಾಯಿ ಹಾಕಿಕೊಂಡಿದ್ದೇನೆ, ಜಡ್ಜರು ನನ್ನನ್ನ ಕಂಡು ತಮ್ಮ ಟೋಪಿಯನ್ನ ಎತ್ತಿ ಹಿಡಿದು ಮರ್ಯಾದೆ ತೋರಿಸಿದರು, ಹಾಗಂತ ನಂಬಿದ್ದೇನೆ! ಅದು ಹೇಗಿದ್ದರೂ, ಜಡ್ಜರು ತಲೆಬಾಗಿ, ಮುಗುಳುನಗೆ ನಕ್ಕರು!"

"ಹೌದು, ನಮ್ಮ ಅಣ್ಣ ಜಫ್ರಿಯ ಮುಖದಲ್ಲಿ ಸೊಗಸಾದ ಮುಗುಳು ನಗೆ

ಈ ಹಿರಿಯ ಈಗ ಹೆಪ್ಸಿಬಾಳ ಸಮ್ಮುಖದಲ್ಲಿ ಹಾಜರಾದನು; ಅವನು ಒಂದು ಹಳೆಯ ನೀಲಿಯ ಅಂಗಿಯನ್ನು ತೊಟ್ಟಿದ್ದನು; ಯಾವನೋ 'ಷೋಕಿ'ಯ ಅಂಗಡಿಯ ಮಾರಾಟಗಾರ ಬಿಸುಟ್ಟಿದ್ದ ಉಡುಪಿನ ಪೈಕಿ ಇದು ಅವನಿಗೆ ದೊರೆತಿರಬೇಕು, ಅಂತೂ ಬಹು ಠೀಕಾಗಿತ್ತು. ಇನ್ನು ಅವನ ಷರಾಯಿಯ ವಿಚಾರ ಹೇಳುವುದಾದರೆ, ಅದು ಕಿತ್ತಾನಾರಿನ ಬಟ್ಟೆಯದು; ಕಾಲಿನ ಭಾಗ ತುಂಬ ಮೋಟು, ಪೃಷ್ಠಭಾಗ ವಿಚಿತ್ರ ರೀತಿಯಲ್ಲಿ ದಗಲೆಯಾಗಿ ಜೋಲಾಡುತ್ತಿತ್ತು; ಆದರೂ ಕೂಡ, ಅವನ ಇನ್ನುಳಿದ ಉಡುಪಿನಲ್ಲಿ ಸಂಪೂರ್ಣವಾಗಿ ಇಲ್ಲವಾಗಿದ್ದ, ಅವನ ಆಕಾರಕ್ಕೆ ಹೊಂದಿಕೆಯಾಗಿ ಕಾಣುವ ಗುಣವಿಶೇಷ ಅದರಲ್ಲಿದ್ದಿತು. ಅವನ ಟೋಪಿಗೂ ಅವನ ಉಡುಪಿನ ಇತರ ಯಾವ ಭಾಗಕ್ಕೂ ಯಾವ ಸಂಬಂಧವೂ ಇರಲಿಲ್ಲ; ಅದಕ್ಕೂ ಅದನ್ನು ಧರಿಸಿದ್ದ ತಲೆಗೂ ಇದ್ದ ನಂಟಾದರೂ ಅತ್ಯಲ್ಪವೇ. ಇಂತು, ನಮ್ಮ ವೆನ್ನರ್ ಮಾವಯ್ಯ ಒಬ್ಬ ಸಂಕೀರ್ಣಜಾತಿಯ ವೃದ್ಧ ಮಹಾಶಯನಾಗಿದ್ದ: ಅರ್ಧಮಟ್ಟಿಗೆ, ಅವನು ಅವನೇ; ಆದರೆ, ಬಹುಮಟ್ಟಿಗೆ, ಬೇರೆ ಇನ್ನು ಯಾರೋ; ಜೊತೆಗೆ, ಬೇರೆಬೇರೆ ಕಾಲಗುಣಗಳ ಬೆರಕೆಯ ಸೃಷ್ಟಿ; ಹಲವು ಕಾಲಗಳ, ಹಲವು ಮಾದರಿಗಳ ಸಂಕ್ಷಿಪ್ತ ಸ್ವರೂಪ.

ಆತ ನುಡಿದ: "ಹಾಗೋ, ನೀನು ನಿಜವಾಗಿ ವ್ಯಾಪಾರಕ್ಕೆ ಮೊದಲು ಮಾಡಿಬಿಟ್ಟಿದ್ದೀಯೆ! ಸರಿಯೆ, ಇದನ್ನ ಕಂಡು ನನಗೆ ತುಂಬ ಸಂತೋಷ. ಪ್ರಪಂಚದಲ್ಲಿ ಚಿಕ್ಕವರು ಎಂದಿಗೂ ಸೋಮಾರಿಗಳಾಗಿದ್ದುಕೊಂಡು ಬದುಕಬಾರದು; ದೊಡ್ಡವರಾದರೂ ಅಷ್ಟೆ; ಆದರೆ ಅವರಿಗೆ ಸಂಧಿವಾತ ಹಿಡಿದರೆ ಆ ಮಾತು ಬೇರೆ. ನನಗೆ ಅದು ಆಗಲೇ ಎಚ್ಚರಿಕೆ ಕೊಟ್ಟಿದೆ; ಇನ್ನು ಎರಡು ಮೂರು ವರ್ಷ ಆದಮೇಲೆ, ನನ್ನ ಉದ್ಯೋಗವನ್ನ ಒತ್ತಟ್ಟಿಗಿಟ್ಟು, ನನ್ನ ಹೊಲಮನೆಗೆ ಹೋಗಿ ನೆಲಸಬೇಕು ಅಂತಿದ್ದೀನಿ. ಅದು ಅಲ್ಲಿದೆ– ನಿನಗೆ ಗೊತ್ತಲ್ಲ, ಆ ದೊಡ್ಡ ಇಟ್ಟಿಗೆ ಮನೆ– ಕೆಲಸದ ಮನೆ (ಅನಾಥಾಲಯ) ಅಂತ ತುಂಬ ಜನ ಕರೀತಾರೆ ಅದನ್ನ; ಆದರೆ, ಮೊದಲು ನನ್ನ ಕೆಲಸ ಮಾಡಿ ಮುಗಿಸಿ, ಆಮೇಲೆ ಕೆಲಸಮಾಡದೆ ಸೋಮಾರಿಯಾಗಿ ಹಾಯಂತ ಇರೋದಕ್ಕೆ ಅಲ್ಲಿಗೆ ಹೋಗ್ತೀನಿ. ಅದಿರಲಿ, ನಿನ್ನ ಕೆಲಸ ಮಾಡುವುದಕ್ಕೆ ನೀನು ಮೊದಲು ಮಾಡಿದ್ದೀಯಲ್ಲ, ಅದನ್ನ ಕಂಡು ನನಗೆ ಎಷ್ಟೋ ಸಂತೋಷ ಮಿಸ್ ಹೆಪ್ಸಿಬಾ!"

"ನೀನು ಹೀಗೆ ಹೇಳಿದ್ದು ನನಗೆ ತುಂಬ ಉಪಕಾರವಾಯ್ತು, ವೆನ್ನರ್ ಮಾವಯ್ಯ" ಎಂದಳು ಹೆಪ್ಸಿಬಾ, ಮುಗುಳುನಗೆ ನಗುತ್ತ; ಸರಳಸ್ವಭಾವದ, ಹರಟೆಕೊಚ್ಚುವ ಈ ಮುದಕನನ್ನ ಕಂಡರೆ ಅವಳಿಗೆ ಯಾವಾಗಲೂ ಕನಿಕರ.

ಬೇಸಗೆಯಾಗಲಿ ಮಾಗಿಯಾಗಲಿ, ನನ್ನ ಹೊಲದ ಪರವಾಗಿ ಹೇಳಬೇಕಾದ್ದು ಬೇಕಾದಷ್ಟಿದೆ! ಅಲ್ಲದೆ, ಮಾಗಿಯ ಮುನ್ನ ಮಾಗುವ ಕಾಲವನ್ನೆ ತೆಗೆದುಕೊ: ಆಗ, ಕಣಜದ ಬಿಸಿಲುಬೀಳುವ ಕಡೆಯೋ ಇಲ್ಲವೆ ಕಟ್ಟಿಗೆ ರಾಶಿಯ ಬಳಿಯೋ ತನ್ನಷ್ಟೇ ವಯಸ್ಸಾದ ಯಾರಾದರೂ ಒಬ್ಬರ ಕೂಡ ಹರಟೆಕೊಚ್ಚುತ್ತ ದಿನವೆಲ್ಲಾ ಕಾಲಕಳೆಯುವುದು; ಅದೂ ಇಲ್ಲದೆ ಹೋದರೆ, ಹುಟ್ಟು ಬೆಪ್ಪನೊಂದಿಗೆ ಸೋಮಾರಿಯಾಗಿ ಕಾಲಕಳೆಯುವುದು–ಯಾಕೆಂದರೆ, ಸೋಮಾರಿಯಾಗಿರುವುದು ಹೇಗೆಂಬುದು ಅವನಿಗೆ ಗೊತ್ತು, ಉದ್ಯೋಗ ಶೀಲರಾದ ನಮ್ಮ 'ಯಾಂಕಿ'ಗಳಿಗೆ (ಅಮೆರಿಕದವರು) ಕೂಡ ಅವನಿಂದ ಕೆಲಸ ತೆಗೆಯುವ ಉಪಾಯ ಹೊಳೆದಿಲ್ಲ– ಇದಕ್ಕಿಂತ ಸೊಗಸಾದದ್ದು ಇನ್ನೇನಿದ್ದೀತು? ಮಿಸ್ ಹೆಪ್ಸಿಬಾ, ಆಣೆಯಿಟ್ಟು ಹೇಳುತ್ತೇನೆ, ಅನೇಕ ಜನ 'ಕೆಲಸದ ಮನೆ' ಎಂದು ಕರೆಯುತ್ತಾರಲ್ಲ, ಆ ನನ್ನ ಹೊಲಮನೆಯಲ್ಲಿ ನಾನು ಮುಂದೆ ಎಷ್ಟು ನೆಮ್ಮದಿಯಾಗಿರಬೇಕೆಂದು ಮಾಡಿಕೊಂಡಿದ್ದೇನೆಯೋ ಅಷ್ಟು ನೆಮ್ಮದಿಯಾಗಿ ನಾನು ಹಿಂದೆ ಎಂದಾದರೂ ಇದ್ದೆನೇ ಎಂದು ನನಗೆ ಸಂದೇಹ. ಆದರೆ ನೀನು, ನೀನಿನ್ನೂ ಪ್ರಾಯದವಳು; ನೀನು ಎಂದಿಗೂ ಅಲ್ಲಿಗೆ ಹೋಗಬೇಕಾದ ಅಗತ್ಯವಿಲ್ಲ! ಏನೋ ಇನ್ನೂ ಉತ್ತಮವಾದದ್ದು ನಿನಗೆ ಕಾದಿದೆ; ಅದು ನನಗೆ ಖಂಡಿತ ಗೊತ್ತು!"

ತನ್ನ ಈ ಗೌರವಸ್ಥನಾದ ಸ್ನೇಹಿತನ ನೋಟದಲ್ಲಿಯೂ ಧ್ವನಿಯಲ್ಲಿಯೂ ಏನೋ ವಿಲಕ್ಷಣವಾದದ್ದು ಇದೆ ಎಂದು ಹೆಪ್ಸಿಬಾ ಭಾವಿಸಿಕೊಂಡಳು; ಅದರಿಂದಾಗಿ, ಅವನ ಮುಖದಲ್ಲಿ ಏನಾದರೂ ರಹಸ್ಯವಾದ ಅರ್ಥ ಅಡಗಿಕೊಂಡಿದ್ದರೆ ಅದನ್ನು ಕಂಡುಹಿಡಿಯಲು ಪ್ರಯತ್ನಿಸುತ್ತ, ತಕ್ಕ ಮಟ್ಟಿನ ಉತ್ಸಾಹದಿಂದ ಅವನ ಮುಖವನ್ನು ನಿಟ್ಟಿಸಿನೋಡಿದಳು. ಯಾರ ವ್ಯವಹಾರಗಳು ಸಂಪೂರ್ಣವಾಗಿ ನಿರಾಶಾದಾಯಕವಾದ ವಿಷಮಘಟ್ಟವನ್ನು ಮುಟ್ಟಿರುತ್ತದೆಯೋ ಅಂತಹ ವ್ಯಕ್ತಿಗಳು ಬಹುಮಟ್ಟಿಗೆ ತಪ್ಪದೆ ಆಶೆಗಳ ಆಧಾರದಮೇಲೆ ಜೀವಹಿಡಿದುಕೊಂಡಿರುತ್ತಾರೆ; ಯಾವುದೇ ವಿವೇಕಪೂರ್ಣವಾದ, ಸಾಧಾರಣಮಟ್ಟದ ಶ್ರೇಯೋಕಾಂಕ್ಷೆಯನ್ನು ರೂಪಿಸಿಕೊಳ್ಳಲು ಅಗತ್ಯವಾದ ಆಂತರಿಕ ಸತ್ತ್ವವು ಅವರ ಬಳಿ ಕಡಮೆ ಯಾಗಿರುವುದರಿಂದ ಆ ಆಶೆಗಳು ಪೊಳ್ಳಾಗಿದ್ದರೂ ಭವ್ಯವಾಗಿರುತ್ತವೆ. ಇಂತು, ಹೆಪ್ಸಿಬಾ ತನ್ನ ಚಿಕ್ಕ ಅಂಗಡಿಯ ಯೋಜನೆಯನ್ನು ಪರಿಪೂರ್ಣಗೊಳಿಸುತ್ತಿದ್ದ ಕಾಲದಲ್ಲಿ, ಭಾಗ್ಯದೇವತೆಯ ಕೈವಾಡ ತನಗೆ ಅನುಕೂಲವಾಗಿ ಪರಿಣಮಿಸುವುದೆಂಬ ಭಾವನೆಯನ್ನು ಪೋಷಿಸಿಕೊಂಡು ಬಂದಿದ್ದಳು. ಉದಾಹರಣೆಗೆ, ಅವಳ ದೊಡ್ಡಪ್ಪನೊಬ್ಬನಿದ್ದ– ಆತ ಐವತ್ತು ವರ್ಷಗಳ ಹಿಂದೆ ಭಾರತ ದೇಶಕ್ಕೆ ಹಡಗಿನಲ್ಲಿ

ಇರುತ್ತದೆ ಎಂಬ ಭಾವನೆ ಇದೆ" ಎಂದಳು ಹೆಪ್ಸಿಬಾ; ಆಗ ಅವಳಿಗೆ ಗೊತ್ತಿಲ್ಲದ ಹಾಗೆ ಅವಳ ಧ್ವನಿಯಲ್ಲಿ ಏನೋ ಕರ್ಕಶತೆ ಬಂದು ಸೇರಿಕೊಂಡಿತ್ತು.

ವೆನ್ನರ್ ಮಾವ ಮಾರುತ್ತರವಾಗಿ– "ಅವರ ಮುಖದಲ್ಲಿ ಅದು ಇದ್ದೇ ಇದೆ. ಪಿನ್ಚನ್ ವಂಶದವನಲ್ಲಿ ಅದು ಇರುವುದು ವಿಶೇಷ ಸಂಗತಿಯೇ ಸರಿ. ಏಕೆಂದರೆ, ನಾನು ಹೀಗೆ ಹೇಳಿದ್ದಕ್ಕೆ ನನ್ನನ್ನ ಕ್ಷಮಿಸಬೇಕು, ಮಿಸ್ ಹೆಪ್ಸಿಬಾ; ಪಿನ್ಚನ್ ವಂಶದವರು ಎಂದೂ ಸುಲಭರಾದ ಹಿತವರಾದ ಜನ ಎಂದು ಹೆಸರು ಹೊಂದಿರಲಿಲ್ಲ. ಅವರ ಹತ್ತಿರ ಸುಳಿಯುವ ಮಾತೇ ಇರಲಿಲ್ಲ. ಆದರೆ ಈಗ, ಕೇಳಿ ಮಿ ಹೆಪ್ಸಿಬಾ, ನನ್ನಂಥ ಮುದುಕ ಧೈರ್ಯಮಾಡಿ ಕೇಳಬಹುದಾದರೆ, ತುಂಬ ಅನುಕೂಲಸ್ಥರಾಗಿರುವ ಜಡ್ಜ್ ಪಿನ್ಚನ್ ಸಾಹೇಬರು ಮುಂದೆ ಬಂದು ಈ ಕೂಡಲೆ ತನ್ನ ಚಿಕ್ಕ ಅಂಗಡಿ ಮುಚ್ಚುವಂತೆ ತಂಗಿಗೆ ಸಮಾನಳಾದವಳಿಗೆ ಹೇಳಬಾರದೆ? ಏನೋ ಒಂದು ಕೆಲಸ ಅಂತ ಮಾಡುತ್ತಿರುವುದು ನಿನ್ನ ಮರ್ಯಾದೆಗಾಗಿ; ಆದರೆ ಹಾಗೆ ನಿನ್ನನ್ನ ಮಾಡಗೂಡಿಸುವುದು ಜಡ್ಜರಿಗೆ ಮರ್ಯಾದೆಯಲ್ಲ! ಎಂದನು.

"ದಯವಿಟ್ಟು ಇನ್ನು ಈ ವಿಷಯ ಮಾತಾಡುವುದು ಬೇಡ, ವೆನ್ನರ್ ಮಾವ" ಎಂದಳು ಹೆಪ್ಸಿಬಾ, ಉದಾಸೀನಳಾಗಿ. "ಆದರೂ ನಾನು ಇಷ್ಟು ಹೇಳಬೇಕು: ನನ್ನ ಅನ್ನ ನಾನು ಸಂಪಾದಿಸಲು ಇಷ್ಟಪಟ್ಟರೆ ಅದು ಜಡ್ಜ್ ಪಿನ್ಚನ್ನನ ತಪ್ಪಲ್ಲ" ಎಂದು ಹೇಳಿ, ವೆನ್ನರ್ ಮಾವನ ವಯಸ್ಸಿಗೆ ಸಲ್ಲಬೇಕಾದ ಗೌರವವನ್ನೂ ಅವನು ವಹಿಸುತ್ತಿದ್ದ ಸಲುಗೆಯನ್ನೂ ನೆನೆದು, ಹೆಚ್ಚು ಕುರುಣೆತೋರಿ, ಹೀಗೆ ಸೇರಿಸಿದಳು: "ನಿನ್ನೊಂದಿಗೆ ನಿನ್ನ ಹೊಲ ಮನೆಗೆ ಹೋಗಿ ನೆಲಸುವುದು ಅನುಕೂಲವೆಂದು ನನಗೆ ಕಂಡುಬಂದು ಮುಂದೆ ನಾನು ಹಾಗೆ ಮಾಡಿದರೆ, ಆಗಲೂ ಆತನು ನಿಂದೆಗೆ ಪಾತ್ರನಾಗುವುದಿಲ್ಲ."

ಆ ಭವಿಷ್ಯದ ಸಂಗತಿಯಲ್ಲಿ ಏನೋ ಒಂದು ನಿಶ್ಚಿತ ಸುಖವಿದೆ ಎಂಬಂತೆ, ಆ ಮುದುಕ ಉಲ್ಲಾಸದಿಂದ ಘೋಷಿಸಿದ: "ಆ ನನ್ನ ಹೊಲ ಮನೆ ಇದೆಯಲ್ಲ, ಅಂತಹ ಕೆಟ್ಟ ಜಾಗವೇನಲ್ಲ. ನನ್ನಂಥವರಿಗೆ, ಅನೇಕ ಮಂದಿ ಮುದಿ ಗೆಳೆಯರು ಸಿಕ್ಕುತ್ತಾರೆ ಅಲ್ಲಿ! ಆದ್ದರಿಂದ ಆ ದೊಡ್ಡ ಇಟ್ಟಿಗೆಯ ಹೊಲಮನೆ ಕೆಟ್ಟ ಜಾಗವಲ್ಲ. ಮಾಗಿಯ ಸಂಜೆಯಲ್ಲಿ, ಕೆಲವು ವೇಳೆ, ನಾನು ಅವರ ನಡುವೆ ಇರಬೇಕೆಂದು ಹಾತೊರೆಯುತ್ತೇನೆ; ಏಕೆಂದರೆ, ಗಾಳಿತೂರದ ತನ್ನ ಅಗ್ಗಿಷ್ಟಿಕೆಯೊಂದನ್ನು ಬಿಟ್ಟರೆ ಯಾರ ಜೊತೆಯೂ ಇಲ್ಲದೆ ಗಂಟೆಗಟ್ಟಲೆ ತೂಕಡಿಸುತ್ತ ಇರುವುದೆಂದರೆ, ನನ್ನಂಥ ಒಬ್ಬೊಂಟಿಗನಾದ ವಯಸ್ಸಾದ ಮನುಷ್ಯನಿಗೆ ಬೇಸರದ ಉದ್ಯೋಗವೆ ಸರಿ.

ಅವಳು ಬಹಳ ಕಾಲದಿಂದಲೂ ಕನಸು ಕಂಡಿದ್ದ ವಿಚಿತ್ರ ಕಲ್ಪನೆಗಳಲ್ಲಿ ಇವು ಕೆಲವು. ಇವುಗಳ ನೆರವಿನಿಂದ ವೆನ್ನರ್ ಮಾವನು ಕೊಟ್ಟ ಪ್ರೋತಾಹದ ಆಕಸ್ಮಿಕ ಪ್ರಯತ್ನವು ಶೂನ್ಯವೂ ವಿಷಾದಪೂರ್ಣವೂ ಆದ ಅವಳ ಮನೋಮಂದಿರವನ್ನು, ಆ ಆಂತರಿಕಪ್ರಪಂಚವನ್ನು ಅನಿಲದಿಂದ ಹಠಾತ್ತನೆ ಹೊತ್ತಿಸಿತೋ ಎಂಬಂತೆ, ಒಂದು ವಿಚಿತ್ರವಾದ ಹಬ್ಬದ ಬೆಡಗಿನಿಂದ ಬೆಳಗಿತು. ಆದರೆ, ಅವನಿಗೆ ಅವಳ ಆ ಗಾಳಿಗೋಪುರಗಳ ವಿಷಯವಾಗಿ ಏನೂ ಗೊತ್ತಿರಲಿಲ್ಲ (ಅವನಿಗೆ ಹೇಗೆ ತಾನೆ ಗೊತ್ತಾಗಬೇಕು?); ಅದು ಇಲ್ಲವೋ, ಅವಳ ಮನಃಪೂರ್ವಕವಾದ ಸಿಡುಕುಮೋರೆ ಅವನಿಗಿಂತ ಹೆಚ್ಚು ಕೆಚ್ಚಿನವನನ್ನು ಕ್ಷೋಭೆಗೊಳಿಸುವಂತೆ ಅವನ ನೆನಪನ್ನು ಕಲಕಿರಬೇಕು. ಹೆಚ್ಚು ಗುರುತರವಾದ ವಿಷಯವನ್ನು ಪ್ರಸ್ತಾವಿಸುವುದರ ಬದಲು, ಹೆಪ್ಸಿಬಾಗೆ ಅವಳ ಅಂಗಡಿಯ ನಿರ್ವಾಹದ ಬಗೆಗೆ ವಿವೇಕದ ಸಲಹೆಯನ್ನು ನೀಡಿ ಅವಳಿಗೆ ಉಪಕಾರಮಾಡುವ ಮನಸ್ಸಾಯಿತು. ಅವನಿಗೆ.

ಅವನಿತ್ತ ಸುವರ್ಣಸೂಕ್ತಿಗಳಲ್ಲಿ ಕೆಲವು ಇವು– "ಸಾಲ ಕೊಡಬೇಡ!" "ಕಾಗದದ ಹಣವನ್ನು ಎಂದಿಗೂ ತೆಗೆದುಕೊಳ್ಳಬೇಡ! ನಾಲ್ಕು ಪೌಂಡಿನ ತೂಕದ ಬಟ್ಟಿನ ಮೇಲೆ ಬೆಳ್ಳಿಯನಾಣ್ಯವನ್ನು ಸದ್ದುಮಾಡಿ ನೋಡು! ಊರಿನಲ್ಲಿ ಹೇರಳವಾಗಿ ಚಲಾವಣೆಯಲ್ಲಿರುವ ಇಂಗ್ಲಿಷು ಅರ್ಧ ಪೆನ್ನಿ ನಾಣ್ಯಗಳನ್ನೂ ಇತರ ಖೋಟಾ ತಾಮ್ರದ ನಾಣ್ಯಗಳನ್ನೂ ಹಿಂದಕ್ಕೆ ತಳ್ಳು! ನಿನ್ನ ಬಿಡುವುಹೊತ್ತಿನಲ್ಲಿ, ಮಕ್ಕಳ ಉಣ್ಣೆಯ ಕಾಲುಚೀಲಗಳನ್ನೂ ಕೈಗವುಸುಗಳನ್ನೂ ಹೆಣಿಗೆ ಹಾಕು. ನಿನ್ನ ರೊಟ್ಟಿಯ ಹುದುಗನ್ನು ನೀನೆ ತಯಾರಿಸಿಕೋ, ನಿನ್ನ ಶುಂಠಿ ಬಿಯರ್ ಮದ್ಯವನ್ನು ನೀನೇ ಮಾಡಿಕೋ!"

ಅವನು ಆಗಲೇ ನುಡಿದ ವಿವೇಕದ ಚಿಕ್ಕ ಗಟ್ಟಿ ಗುಳಿಗೆಗಳನ್ನು ನುಂಗಿ ಜೀರ್ಣಿಸಿಕೊಳ್ಳಲು ಅವಳು ತನ್ನ ಸರ್ವಪ್ರಯತ್ನವನ್ನೂ ಮಾಡುತ್ತಿದ್ದಾಗ, ಅವನು ತನ್ನ ಕಟ್ಟ ಕಡೆಯ, ಹಾಗೂ ತನ್ನ ಸಲಹೆಗಳಲ್ಲಿ ಸರ್ವಮುಖ್ಯ ಎಂದು ಅವನು ಘೋಷಿಸಿದ್ದ ಸಲಹೆಯನ್ನು ಈ ಮುಂದಿನಂತೆ ಶ್ರುತ ಪಡಿಸಿದನು:–

"ನಿನ್ನ ಗಿರಾಕಿಗಳ ಎದುರಿನಲ್ಲಿ ಮುಖ ಗೆಲುವಾಗಿಟ್ಟುಕೊಂಡಿರು, ಅವರು ಕೇಳಿದ್ದನ್ನು ಅವರ ಕೈಗಿಡುವಾಗ ಸಂತೋಷವಾಗಿ ನಗುನಗುತ್ತಾ ಇರು! ಸಿಡುಕುಮೋರೆಮಾಡಿಕೊಂಡು ಕೊಟ್ಟ ಹೊಚ್ಚ ಹೊಸ ಸರಕಿಗಿಂತ ಒಳ್ಳೆಯ ವಿಶ್ವಾಸದ ಕಾಂತಿಯನ್ನು ಬೀರುವ ಮುಗುಳು ನಗೆಯಲ್ಲಿ ಅದ್ದಿಕೊಟ್ಟ ಬಲುಹಳೆಯ ಸಾಮಾನು ಚೆನ್ನಾಗಿ ಸಾಗಿಹೋಗುತ್ತದೆ."

ಪ್ರಯಾಣಮಾಡಿದ್ದ, ಅವನ ಸಮಾಚಾರವೇನೋ ಯಾರೂ ಕೇಳಿ ಅರಿಯರು; ಆತ ಹಿಂತಿರುಗಿದರೂ ಹಿಂತಿರುಗಬಹುದು; ಆಗ ತನ್ನ ಮುಪ್ಪಡಸಿದ ಕಡೆಗಾಲದಲ್ಲಿ ಶಾಂತಿಸಮಾಧಾನ ದೊರಕುವುದೆಂದು ಅವಳನ್ನು ದತ್ತುಮಾಡಿಕೊಳ್ಳಬಹುದು; ಮುತ್ತುಗಳು, ರತ್ನಗಳು, ಪೂರ್ವ ದೇಶಗಳ ಶಾಲುಗಳು ಮತ್ತು ಪೇಟಗಳು ಮುಂತಾದವುಗಳಿಂದ ಅವಳನ್ನು ಅಲಂಕರಿಸಿ, ತನ್ನ ಅಳತೆಮೀರಿದ ಐಶ್ವರ್ಯಕ್ಕೆ ಕಡೆಯಲ್ಲಿ ಅವಳನ್ನೆ ಉತ್ತರಾಧಿಕಾರಿಣಿಯನ್ನಾಗಿ ಮಾಡಬಹುದು. ಪಿನ್ಚನ್ ವಂಶದ ಇಂಗ್ಲಿಷು ಶಾಖೆಯೊಂದಿತ್ತು: ಅಟ್ಲಾಂಟಿಕ್ ಸಾಗರದ ಈ ಕಡೆಯ ಎಂದರೆ ಅಮೆರಿಕದ ಹಿರಿಯ ಪೀಳಿಗೆಗೂ ಅದಕ್ಕೂ ಕಳೆದ ಎರಡು ಶತಮಾನಗಳಿಂದ ಬಹುಮಟ್ಟಿಗೆ ಸಂಪರ್ಕವೇ ಇರಲಿಲ್ಲ; ಈಗ ಆ ಇಂಗ್ಲಿಷು ಪೀಳಿಗೆಯ ಯಜಮಾನನೂ ಪಾರ್ಲಿಮೆಂಟಿನ ಸದಸ್ಯನೂ ಆದ ಪ್ರಮುಖ ಶ್ರೀಮಂತನು ಹೆಪ್ಸಿಬಾಗೆ ಪಾಳುಬಿದ್ದ ಏಳು ಇಪ್ಪಾರಿನ ಮನೆಯನ್ನು ತ್ಯಜಿಸುವಂತೆ ಹೇಳಿ, ತನ್ನ ನಂಟರಿಷ್ಟರೊಡನೆ 'ಪಿನ್ಚನ್ ಹಾಲ್'ನಲ್ಲಿ ವಾಸಮಾಡಲು ಬರಬೇಕೆಂದು ಅವಳನ್ನು ಆಹ್ವಾನಿಸಬಹುದು. ಆದರೆ, ಅತ್ಯಂತ ಪ್ರಬಲ ಕಾರಣಗಳಿಗಾಗಿ, ಈ ಕೋರಿಕೆಗೆ ಅವಳು ಮನಸೋಲುವಹಾಗಿರಲಿಲ್ಲ. ಆದ್ದರಿಂದ, ಹೆಚ್ಚು ಸಂಭವವಾದ ಪ್ರಮೇಯ ಎಂದರೆ– ಹಿಂದಿನ ಯಾವುದೋ ತಲೆಮೊರೆಯ ಕಾಲದಲ್ಲಿ ಒಬ್ಬ ಪಿನ್ಚನ್ ವಂಶಿಕ 'ವರ್ಜಿನಿಯಾ' ಸಂಸ್ಥಾನಕ್ಕೆ ವಲಸೆಹೋಗಿದ್ದನು; ಅವನು ಅಲ್ಲಿ ಭಾರಿ ತೋಟಗಾರನಾದನು; ಆತನ ವಂಶಿಕರಲ್ಲಿ ವರ್ಜಿನಿಯಾದ ಗುಣವೂ ಬೆರೆತು ಅವರ ಹೊಸ ಇಂಗ್ಲೆಂಡಿನ ರಕ್ತವು ಸಂಪದ್ಯುಕ್ತವಾಗಿ ಪರಿಣಮಿಸಿ, ಅವರ ಸ್ವಾಭಾವಿಕವಾದ ಉದಾರಶೀಲಕ್ಕೆ ಕಳೆಯೇರಿತ್ತು; ಈ ಔದಾರ್ಯಗುಣದಿಂದ ಪ್ರೇರಿತರಾಗಿ ಅವರು ಅವಳಿಗೆ ಸಾವಿರ 'ಡಾಲರ್'ಗಳನ್ನು ಕಳಿಸಿಕೊಟ್ಟು, ವರ್ಷವರ್ಷವೂ ಅದೇ ರೀತಿ ಕಳಿಸಿಕೊಡುವ ಸೂಚನೆಯನ್ನೂ ಕೊಡಬಹುದು. ಅಥವಾ, 'ವಾಲ್ಡೋ' ಪ್ರಾಂತದ ಆಸ್ತಿಗೆ ಹೂಡಿದ್ದ ಭಾರಿ ಹಕ್ಕು ಪಿನ್ಚನ್ ವಂಶದವರಿಗೆ ಅನುಕೂಲವಾಗಿ ಇತ್ಯರ್ಥವಾಗಬಹುದಾಗಿತ್ತು– ನಿರ್ವಿವಾದವಾಗಿ ನ್ಯಾಯವಾದ ಈ ಹಕ್ಕು ಹಾಗೆ ಇತ್ಯರ್ಥವಾದೀತೆಂದು ನಿರೀಕ್ಷಿಸುವುದು ಊಹಾತೀತವಾಧ ವಿಷಯವೇನಾಗಿರಲಿಲ್ಲ; ಅಂಥ ಒಂದು ಸಂದರ್ಭದಲ್ಲಿ, 'ಕಾಸಿನ ಅಂಗಡಿ' ಇಟ್ಟುಕೊಳ್ಳುವ ಬದಲು ಹೆಪ್ಸಿಬಾ ಒಂದು ಅರಮನೆಯನ್ನೆ ಕಟ್ಟಿಸಿಕೊಳ್ಳುವಳು; ಅದರ ಅತ್ಯಂತ ಎತ್ತರವಾದ ಗೋಪುರದಿಂದ ಬೆಟ್ಟ, ಕಣಿವೆ, ಕಾಡು ಹೊಲ, ಊರು– ಇವೆಲ್ಲವನ್ನೂ ಪಿತ್ರಾರ್ಜಿತ ಪ್ರದೇಶದಲ್ಲಿ ತನಗೆ ಬಂದ ಪಾಲೆಂದು ಅಭಿಮಾನದಿಂದ ನೋಡುವಳು.

ಎಲ್ಲೆಯನ್ನು ಯಾವುದೇ ರೀತಿಯಲ್ಲಿ ದಾಟಿದಾಗ, ಶರೀರವು ಪ್ರಾಣಿಜೀವನದ ಯಂತ್ರ ವ್ಯವಸ್ಥೆಯ ನೆರವಿನಿಂದ ತಾನು ಇದ್ದ ಕಡೆಯೇ ಇದ್ದುಕೊಂಡು ತನ್ನ ಕೈಲಾದಮಟ್ಟಿಗೆ ತನಗೆ ತಾನೇ ಮಾರ್ಗದರ್ಶನಮಾಡಿಕೊಳ್ಳುತ್ತದೆ; ಇಂತಹ ಪರಿಸ್ಥಿತಿಯಲ್ಲಿ ನಿಜವಾಗಿಯೂ ಶೋಚನೀಯವಾದ ಗೊಂದಲವಿರುತ್ತದೆ. ಅದು ಮರಣಕ್ಕೆ ಸಮ; ಆದರೆ ಮರಣದ ಶಾಂತಿಯಾಗಲಿ ಮರಣಸ್ಥಿತಿಯಲ್ಲಿರುವ ನಿಶ್ಚಿಂತೆಯ ಸ್ವಾತಂತ್ರ್ಯವಾಗಲಿ ಇರದು. ಎಲ್ಲಕ್ಕಿಂತ ಹೀನಸ್ಥಿತಿಯೆಂದರೆ, ವೃದ್ಧಮಹಿಳೆಯ ಕೊರಗುವ ಅಂತರಾತ್ಮವನ್ನು ಈಗ ಕಾಡುತ್ತಿದ್ದ ಚಿಲ್ಲರೆ ವಿಷಯಗಳೆ ಅವಳು ಮಾಡಬೇಕಾಗಿದ್ದ ನಿಜವಾದ ಕರ್ತವ್ಯಗಳು ಎಂಬಂತಹ ಸ್ಥಿತಿ. ವಿಧಿ ಅವಳಮೇಲೆ ಹಗೆ ತೀರಿಸಿಕೊಳ್ಳುತ್ತಿದೆಯೋ ಎಂಬಂತೆ, ಅಂದಿನ ಮಧ್ಯಾಹ್ನವೆಲ್ಲಾ ಅಪಾರವಾದ ಗಿರಾಕಿಯ ಒತ್ತಡವಿತ್ತು. ತನ್ನ ಸಣ್ಣ ವ್ಯಾಪಾರದ ಸ್ಥಳದಲ್ಲಿ, ಹಿಂದೆಂದೂ ಯಾರೂ ಕೇಳಿರದಂತಹ ತಪ್ಪುಗಳನ್ನು ಮಾಡುತ್ತಾ, ಹೆಪ್ಸಿಬಾ ಹಿಂದಕ್ಕೂ ಮುಂದಕ್ಕೂ ತಬ್ಬರಿಸುತ್ತಾ ನಡೆದಾಡುತ್ತಿದ್ದಳು: ಒಂದು ಪೌಂಡು ತೂಕಕ್ಕೆ ಹತ್ತು ಮೇಣಬತ್ತಿಗಳನ್ನು ದಾರದಿಂದ ಸುತ್ತಿಕೊಡುವ ಬದಲು ಒಮ್ಮೆ ಹನ್ನೆರಡನ್ನು, ಇನ್ನೊಮ್ಮೆ ಏಳನ್ನು, ಕೊಡುವುದು; 'ಸ್ಕಾಚ್' ನಶ್ಯಕ್ಕೆ ಬದಲು ಶುಂಠಿಯನ್ನೂ ಊಜಿಗಳಿಗೆ ಬದಲಾಗಿ ಗುಂಡು ಸೂಜಿಗಳನ್ನೂ ಗುಂಡುಸೂಜಿಗಳಿಗೆ ಬದಲಾಗಿ ಸೂಜಿಗಳನ್ನೂ ಮಾರುವುದು; ತನ್ನ ಚಿಲ್ಲರೆಯನ್ನು ಎಣಿಸುವಾಗ ತಪ್ಪುಮಾಡಿ, ಕೆಲವು ಸಲ ಬಂದ ಜನಕ್ಕೂ ಅದಕ್ಕಿಂತ ಹೆಚ್ಚು ಸಲ ತನಗೂ ನಷ್ಟವುಂಟು ಮಾಡಿಕೊಳ್ಳುವುದು– ಈ ರೀತಿ, ಮರಳಿ ಅವ್ಯವಸ್ಥೆಯನ್ನು ನೆಲೆಗೊಳಿಸಲು ಅವಳು ಸರ್ವ ಪ್ರಯತ್ನವನ್ನೂ ಮಾಡುತ್ತಿದ್ದಳು; ಕಟ್ಟ ಕಡೆಯಲ್ಲಿ ದಿನದ ದುಡಿಮೆಯೆಲ್ಲಾ ಮುಗಿದ ಮೇಲೆ, ತನ್ನ ಹಣದ ಸೆಳೆಖಾನೆ ಬಹುಮಟ್ಟಿಗೆ ಬರಿದಾಗಿರುವುದನ್ನು ಕಂಡು ಅವಳಿಗೆ ವಿವರಿಸಲಾಗದ ಆಶ್ಚರ್ಯವುಂಟಾಗುತ್ತಿತ್ತು. ಕ್ಲೇಶಕರವಾದ ಅವಳ ವ್ಯಾಪಾರವೆಲ್ಲಾ ಮುಗಿದಮೇಲೆ, ಅಂದಿನ ಒಟ್ಟು ಮಾರಾಟದ ಫಲ ಎಂದರೆ ಬಹುಶಃ ಆರು ತಾಮ್ರದನಾಣ್ಯಗಳು ಹಾಗೂ ಸಂಶಯಹುಟ್ಟಿಸುವ ಒಂಬತ್ತು ಪೆನ್ನಿಯ ನಾಣ್ಯ ಒಂದು; ಆ ನಾಣ್ಯಕೂಡ ತಾಮ್ರದ್ದೆಂದೇ ತೀರ್ಮಾನವಾಗುತ್ತಿತ್ತು ಕಡೆಗೆ.

ಈ ಆದಾಯವನ್ನು, ಅಥವಾ ಯಾವುದೇ ಆದಾಯವನ್ನು ಕಂಡು, ದಿನ ಕೊನೆಮುಟ್ಟಿತಲ್ಲಾ ಎಂದು ಅವಳು ಹಿಗ್ಗುತ್ತಿದ್ದಳು. ಪ್ರಾತಃಕಾಲದಿಂದ ಸಂಜೆಯ ವರೆಗೆ ನಿಧಾನವಾಗಿ ಸಾಗುವ ಕಾಲದ ಅವಧಿ ಸಹಿಸಲಾಗದಷ್ಟು ದೀರ್ಘವೆಂಬ ಭಾವನೆಯಾಗಲಿ; ಮಾಡಲು ಕೆಲಸವಿದೆಯಲ್ಲಾ ಎಂಬ ಸಂಕಟಕರವಾದ

ಆ ಕಡೆಯ ಸೂಕ್ತಿಯನ್ನು ಕೇಳಿ ಬಡ ಹೆಪ್ಸಿಬಾ ಉತ್ತರರೂಪವಾಗಿ ಎಷ್ಟು ಆಳವಾದ ಬಲವಾದ ನಿಟ್ಟುಸಿರುಬಿಟ್ಟಳೆಂದರೆ, ಅದರ ರಭಸಕ್ಕೆ ಅವನು ಶರತ್ಕಾಲಾನಂತರ ಮಾಗುವ ಕಾಲದಲ್ಲಿ ಬೀಸುವ ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ– ಅವನಾದರೂ ಹಾಗೆಯೇ ಇದ್ದ– ತೂರಿಕೊಂಡು ಹೋದ. ಹಾಗಿದ್ದರೂ, ಸ್ವಲ್ಪ ಚೇತರಿಸಿಕೊಂಡು, ಮುಂದಕ್ಕೆ ಬಾಗಿ, ತನ್ನ ಮುದಿ ಮುಖದಲ್ಲಿ ಬೇಕಾದಷ್ಟು ಭಾವವನ್ನು ತುಂಬಿಕೊಂಡು, ಅವಳನ್ನು ಹತ್ತಿರಕ್ಕೆ ಕರೆದನು.

"ಅವನು ಯಾವಾಗ ಮನೆಗೆ ಬರುತ್ತಾನೆಂದು ನಿನ್ನ ನಿರೀಕ್ಷೆ?" ಎಂದು ಪಿಸುಗುಟ್ಟಿದನವನು.

"ಯಾರು ಅಂತ ನಿನ್ನ ಅಭಿಪ್ರಾಯ?" ವಿವರ್ಣಳಾಗಿ ಕೇಳಿದಳು ಹೆಪ್ಸಿಬಾ.

ವೆನ್ನರ್‌ಮಾವ ಹೇಳಿದ: "ಹಾಗೋ? ಅದರ ವಿಚಾರ ಮಾತಾಡಲು ನಿನಗೆ ಇಷ್ಟವಿಲ್ಲ ಅಂತ ಕಾಣುತ್ತೆ. ಹೋಗಲಿ ಬಿಡು, ಊರಿನ ಬಾಯಲ್ಲೆಲ್ಲಾ ಆ ಮಾತು ಇದೆ, ಆದರೂ ಆ ವಿಚಾರ ನಾವು ಇನ್ನು ಮಾತಾಡುವುದು ಬೇಡ. ಮಿಸ್ ಹೆಪ್ಸಿಬಾ, ಅವನು ಒಂಟಿಯಾಗಿ ಓಡಲು ಸಮರ್ಥನಾಗುವುದಕ್ಕಿಂತ ಮುಂಚನಿಂದಲೂ ಅವನ ನೆನಪಿದೆ ನನಗೆ!"

ದಿನದ ಉಳಿದ ಭಾಗದಲ್ಲಿ, ಅಂಗಡಿಕಾರಳಾಗಿ ಬಡ ಹೆಪ್ಸಿಬಾ ತನ್ನ ಮುಂಚಿನ ಪ್ರಯತ್ನಗಳಲ್ಲಿ ಎಷ್ಟು ಚೆನ್ನಾಗಿ ನಿಭಾಯಿಸಿದಳೋ ಅಷ್ಟು ಚೆನ್ನಾಗಿ ನಿಭಾಯಿಸಲಾಗಲಿಲ್ಲ. ಅವಳು ಕನಸಿನಲ್ಲಿ ನಡೆಯುತ್ತಿರುವಂತೆ ಕಂಡುಬಂದಳು; ಅಥವಾ, ಇನ್ನೂ ಸರಿಯಾಗಿ ಹೇಳುವುದಾದರೆ, ಅವಳ ಮನೋಭಾವಗಳು ಕಲ್ಪಿಸಿಕೊಂಡಿದ್ದ ವಿವರಪೂರ್ಣವಾದ ನಿಜಜೀವನದ ಸ್ವರೂಪವು ಎಲ್ಲ ಬಾಹ್ಯ ಘಟನೆಗಳನ್ನೂ ಅರೆಯೆಚ್ಚರದ ಗಾಢನಿದ್ರೆಯಲ್ಲಿ ಕಾಡುವ ಮಾಯಾರೂಪಗಳನ್ನಾಗಿ ಮಾಡಿದ್ದುವು. ಆದರೂ ಅವಳು ಪದೇ ಪದೇ ಬಾರಿಸುತ್ತಿದ್ದ ಅಂಗಡಿಯ ಗಂಟೆಯ ಕರೆಗಳಿಗೆ ಪ್ರತಿಯಾಗಿ ಯಾಂತ್ರಿಕವಾಗಿ ಉತ್ತರಕೊಡುತ್ತಿದ್ದಳು; ಮತ್ತು ತನ್ನ ಗಿರಾಕಿಗಳು ಒತ್ತಾಯಮಾಡಿ ಕೇಳಿದ್ದರ ಮೇರೆಗೆ, ಅವರಿಗೆ ಒಂದಾದಮೇಲೆ ಒಂದು ಸಾಮಾನನ್ನು ನೀಡುತ್ತ, ಅವರು ಕೇಳಿದ ಅದೇ ಪದಾರ್ಥವನ್ನು ಪಕ್ಕಕ್ಕೆ ತಳ್ಳಿಡುತ್ತ (ವಕ್ರ ಬುದ್ಧಿಯಿಂದ ಹಾಗೆ ಮಾಡುತ್ತಿದ್ದಳು ಎಂದು ಅವರ ಊಹೆ). ಯಾವ ನಿರ್ದಿಷ್ಟ ಉದ್ದೇಶವೂ ಇಲ್ಲದ ನೋಟದಿಂದ ಅಂಗಡಿಯೊಳಗೆಲ್ಲಾ ಕುತೂಹಲದಿಂದ ಹುಡುಕಾಡುವಂತೆ ಓಡಾಡುತ್ತಿದ್ದಳು. ಒಳಗಿನ ಚೇತಸ್ಸು ಗತಕಾಲಕ್ಕೋ ಅಥವಾ ಇನ್ನೂ ಭೀಕರವಾದ ಭವಿಷ್ಯದ್ಗರ್ಭಕ್ಕೋ ಹಾರಿ ಹೋದಾಗ, ಇಲ್ಲವೆ ತನ್ನ ಪ್ರಪಂಚಕ್ಕೂ ವಾಸ್ತವ ಪ್ರಪಂಚಕ್ಕೂ ನಡುವೆ ಇರುವ ದೇಶರಹಿತವಾದ

ಆ ಹುಡುಗಿ ಏಳು ಇಪ್ಪಾರಿನ ಮನೆಯಕಡೆಗೆ ತಿರುಗಿದಳು; ಈ ನಡುವೆ, ಬಸ್ಸಿನವನು ಒಂದು ಹಗುರವಾದ ಟ್ರಂಕನ್ನೂ ಒಂದು ಉಡುಪಿಡುವ ರಟ್ಟಿನ ಪೆಟ್ಟಿಗೆಯನ್ನೂ ಮನೆಯಬಾಗಿಲಿಗೆ– ಎಂದರೆ, ಅಂಗಡಿಯ ಬಾಗಿಲಿಗಲ್ಲ, ಪುರಾತನ ಮುಖಮಂಟಪಕ್ಕೆ ಕೊಂಡೊಯ್ದಿದ್ದನು. ಮೊದಲು, ಹಳೆಯ ಕಬ್ಬಿಣದ ಬಡಿಯುವ ಕೊಂಡಿಯಿಂದ ಬಾಗಿಲನ್ನು ಬಲವಾಗಿ ಬಡಿದು, ತನ್ನ ಪ್ರಯಾಣಿಕಳನ್ನೂ ಅವಳ ಸಾಮಾನನ್ನೂ ಬಾಗಿಲ ಮೆಟ್ಟಿಲಬಳಿ ಬಿಟ್ಟು, ಅವನು ಮರಳಿದನು.

"ಯಾರಿರಬಹುದು? ಈ ಹುಡುಗಿ ಎಲ್ಲೋ ಮನೆಯನ್ನು ತಪ್ಪಾಗಿ ತಿಳಿದಿರಬೇಕು!" ಎಂದು ಹೆಪ್ಸಿಬಾ ಬಗೆದಳು; ಆಗವಳು ತನ್ನ ಕಣ್ಣುಗಳನ್ನು ತಿರುಪ್ಪಿ ತಿರುಪ್ಪಿ, ದೃಷ್ಟಿಯನ್ನು ಎಷ್ಟು ಸಾಧ್ಯವೋ ಅಷ್ಟು ಕೀಲಿಸಿ ನೋಡುತ್ತಿದ್ದಳು.

ಅವಳು ಹಜಾರದೊಳಕ್ಕೆ ಮೆಲ್ಲನೆ ಕಾಣದಂತೆ ನಡೆದುಹೋದಳು; ತಾನು ಮಾತ್ರ ಕಾಣಿಸದಹಾಗೆ ಇದ್ದುಕೊಂಡು, ಮಂಕುಗವಿದ ಹಳೆಯ ಮನೆಯನ್ನು ಪ್ರವೇಶಿಸಲಿದ್ದ ಎಳಸಾದ ಅರಳಿದ ನಲಿನಲಿಯುವ ಮುಖವನ್ನು ಮುಖಮಂಟಪದ ಪಕ್ಕದಿಂದ ಹಾಯ್ದು ಬರುತ್ತಿದ್ದ ಧೂಳುಬೆರೆತ ಬೆಳಕಿನ ಮೂಲಕ ದೃಷ್ಟಿಸಿ ನೋಡಿದಳು. ಯಾವ ಬಾಗಿಲಾದರೂ ತನ್ನಷ್ಟಕ್ಕೆ ತಾನೇ ತೆರೆದು ಸ್ವಾಗತಿಸುವಹಾಗಿತ್ತು ಆ ಮುಖ.

ಆ ಕಿರಿಯ ಹುಡುಗಿಯನ್ನು ನೀವು ನೋಡಿದ ಕೂಡಲೆ, 'ಇವಳು ಎಷ್ಟು ನವೋನವವಾಗಿದ್ದಾಳೆ! ಎಷ್ಟು ಸ್ವತಂತ್ರ! ಆದರೂ ಅದೆಷ್ಟು ಒಪ್ಪ ಓರಣ! ಸರ್ವಸಾಮಾನ್ಯ ನಿಯಮಗಳಿಗೆ ಎಷ್ಟು ವಿಧೇಯಳು!' ಎಂದು ಕಂಡುಕೊಳ್ಳುವಿರಿ. ಆದರೆ, ಆ ಕ್ಷಣದಲ್ಲಿ, ಅವಳಿಗೂ ಅವಳ ಸುತ್ತಮುತ್ತ ಇದ್ದ ಪ್ರತಿಯೊಂದು ವಸ್ತುವಿಗೂ ಅಪಾರ ವೈಷಮ್ಯವಿದ್ದಿತು. ಮನೆಯ ಹೊರಗೆ ಒಂದು ಮೂಲೆಯಲ್ಲಿ ಹುಚ್ಚು ಹುಲುಸಾಗಿ ವಕ್ರವಾಗಿ ಬೆಳೆದಿದ್ದ ದೈತ್ಯಕಾರದ ಕಳೆಗಿಡಗಳ ಗುಂಪಲು, ಅವಳಮೇಲೆ ಕವಿದುಕೊಂಡಿದ್ದ ಭಾರಿಯಾದ ಮನೆಯ ಮುಂಚಾಚು, ಕಾಲಕಳೆದಂತೆ ಸವೆದುಹೋಗಿದ್ದ ಬಾಗಿಲವಾಡ– ಇವುಗಳಲ್ಲಿ ಯಾವುದೂ ಅವಳ ಕ್ಷೇತ್ರಕ್ಕೆ ಸೇರಿರಲಿಲ್ಲ. ಆದರೆ, ಬಿಸಿಲಿನ ಒಂದು ಕಿರಣ ಮಬ್ಬ ಗವಿದ ಸ್ಥಳದಲ್ಲಿಯೇ ಬೀಳಲಿ ಅದು ಅಲ್ಲಿ ತಾನಿರುವುದು ಉಚಿತ ಎಂಬಂತೆ ತತ್‌ಕ್ಷಣವೆ ಅಲ್ಲಿ ತನಗೊಂದು ಸ್ಥಾನವನ್ನು ಹೇಗೆ ಕಲ್ಪಿಸಿಕೊಳ್ಳುವುದೋ ಅದೇ ರೀತಿ ಆ ಹುಡುಗಿಯೂ ಆ ಹೊಸಿಲಬಳಿ ನಿಂತಿರುವುದು ಬಹಳ ಉಚಿತ ಎಂಬಂತೆ ಕಾಣುತ್ತಿತ್ತು. ಅವಳನ್ನು ಬರಮಾಡಿಕೊಳ್ಳಲು ಬಾಗಿಲು ಬೀಸಿ ತೆರೆಯಬೇಕಾದ್ದು ಅಷ್ಟೇ ಸ್ಪಷ್ಟವಾಗಿ ಉಚಿತವಾಗಿತ್ತು. ಆ ಕನ್ಯಾ ಮಹಿಳೆಕೂಡ ತಾನು ಆದರಣೆ

ಕಿರಿಕಿರಿಯಾಗಲಿ; ಬದುಕು, ಅದರಲ್ಲಿ ಪಡಬೇಕಾದ ಶ್ರಮ, ಅದು ಕೊಡುವ ಕಿರುಕುಳ ಇವೆಲ್ಲ ನೆಲದ ಮೇಲೆ ಕೆಡೆದುರುಳಿದ ತನ್ನ ದೇಹದ ಮೇಲೆ ತಮಗೆ ಇಷ್ಟಬಂದಂತೆ ತುಳಿದು ಸಾಗಲಿ ಎಂಬ ಸಮಾಧಾನದಿಂದ ಕೂಡಲೆ ಮಲಗಿಬಿಡುವುದೇ ಲೇಸು ಎಂಬ ವಿವೇಕದ ಭಾವನೆಯಾಗಲಿ– ಅವಳಿಗೆ ಈ ಹಿಂದೆ ಎಂದೂ ಉಂಟಾಗಿರಲಿಲ್ಲ. ಹೆಪ್ಸಿಬಾಳ ಕಟ್ಟ ಕಡೆಯ ಮಾರಾಟ 'ಜಿಂ ಕ್ರೋ'ನನ್ನೂ ಆನೆಯನ್ನೂ ಭಕ್ಷಿಸಿ ಆ ಚಿಕ್ಕ ಪೋರನೊಂದಿಗೆ ನಡೆದಿತ್ತು; ಅವನೀಗ ಒಂದು ಒಂಟೆಯನ್ನು ತಿನ್ನಲು ಮನಸ್ಸು ಮಾಡಿದ್ದ. ದಿಗ್ಭ್ರಮೆಗೊಂಡಿದ್ದ ಅವಳು ಅವನಿಗೆ ಮೊದಲು ಒಂದು ಮರದ ಕುದುರೆ ಸಿಪಾಯಿಯನ್ನೂ ಬಳಿಕ ಹಿಡಿತುಂಬ ಗೋಲಿಗಳನ್ನೂ ಕೊಡಹೋದಳು; ಆದರೆ ಅವುಗಳಲ್ಲಿ ಯಾವುವೂ ಅವನ ಸರ್ವಭಕ್ಷಕ ಸ್ವಭಾವದ ಹಸಿವಿಗೆ ಒಗ್ಗದೆ ಹೋದದ್ದರಿಂದ, ಅವಳು ತನ್ನ ಬಳಿ ಉಳಿದಿದ್ದ ಶುಂಟಿರೊಟ್ಟಿಯ ಪ್ರಾಣಿಪ್ರಪಂಚದ ಉಳಿದ ದಾಸ್ತಾನೆಲ್ಲವನ್ನೂ ಅವನಿಗೆ ಆತುರಾತುರವಾಗಿ ನೀಡಿ, ಆ ಪುಟ್ಟ ಗಿರಾಕಿಯನ್ನು ಅಂಗಡಿಯಿಂದ ಹೊರಕ್ಕೆ ಸಾಗಹಾಕಿದಳು. ಅನಂತರ ಅವಳು ಅರ್ಧ ಮುಗಿದಿದ್ದ ಒಂದು ಕಾಲುಚೀಲವನ್ನು ಗಂಟೆಗೆ ಮುಸುಕಿಟ್ಟು, ಬಾಗಿಲಿಗೆ ಅಡ್ಡಲಾಗಿ ಓಕ್ ಮರದ ಅಗುಳಿಯನ್ನು ಹಾಕಿದಳು.

ಅಗುಳಿಹಾಕುತ್ತಿದ್ದಾಗ, ಪ್ರಯಾಣದ 'ಬಸ್' ಬಂದು ಎಲ್ಮ್ ವೃಕ್ಷದ ಕೊಂಬೆಗಳಡಿಯಲ್ಲಿ ನಿಂತಿತು. ಹೆಪ್ಸಿಬಾಗೆ ಕರುಳು ಕಿವುಚಿದಂತಾಯಿತು. ಯಾವ ಸ್ಥಳದಿಂದ ಅವಳ ಏಕಮಾತ್ರ ಅತಿಥಿ ಬರಬಹುದೆಂಬ ನಿರೀಕ್ಷೆಯಿದ್ದಿತೋ ಆ ಸ್ಥಳ ಎಂದರೆ, ಗತಕಾಲದ ಪ್ರಪಂಚ! ಬಹು ದೂರದ ನಸುಗತ್ತಲೆಯ ಆ ಪ್ರಪಂಚಕ್ಕೂ ಈ ಪ್ರಪಂಚಕ್ಕೂ ನಡುವಣ ಪ್ರದೇಶದಲ್ಲಿ ಎಲ್ಲಿಯೂ ಬಿಸಿಲಿನ ಸುಳಿವಿರಲಿಲ್ಲ. ಅವಳು ಆತನನ್ನು ಈಗ ಸಂಧಿಸಬೇಕೆ?

ಅಂತೂ ಬಸ್ಸಿನ ಒಳಗಣ ಒಂದು ಕೊನೆಯಿಂದ ಪ್ರವೇಶದ್ವಾರದ ಕಡೆಗೆ ಯಾರೋ ಬರುತ್ತಿದ್ದರು. ಇಳಿದಾತ ಒಬ್ಬ ದೊಡ್ಡ ಮನುಷ್ಯ; ಆದರೆ ಆತ ಇಳಿದದ್ದು ಚಿಕ್ಕ ಹುಡುಗಿಯೊಬ್ಬಳಿಗೆ ಕೈನೆರವು ನೀಡುವುದಕ್ಕೆ; ಅಂಥ ಯಾವ ನೆರವಿನ ಅಗತ್ಯವೂ ಇಲ್ಲದಿದ್ದ ಆ ತೆಳ್ಳನೆಯ ಆಕೃತಿಯ ಹುಡುಗಿ ಹಗುರವಾಗಿ ಮೆಟ್ಟಿಲುಗಳನ್ನಿಳಿದು, ಕಡೆಯ ಮೆಟ್ಟಲಿನಿಂದ ಮೆಲ್ಲನೆ ಪಕ್ಕ ದಾರಿಗೆ ನೆಗೆದಳು. ತನಗೆ ಸಹಾಯಮಾಡಿದ ಆ ದೊಡ್ಡ ಮನುಷ್ಯನಿಗೆ ಅವಳು ಮುಗುಳುನಗೆಯ ಉಡುಗೊರೆಯಿತ್ತಳು; ಆತ ವಾಹನಕ್ಕೆ ಮರಳಿ ಪ್ರವೇಶಿಸುತ್ತಿದ್ದಾಗ ಆ ನಗೆಯ ಉಲ್ಲಾಸದ ಹೊಳಪು ಆತನ ಮುಖದಲ್ಲಿ ಪ್ರತಿಫಲಿಸಿದ್ದು ಕಂಡುಬಂದಿತು. ಬಳಿಕ

# ೫. ಮೇ ಮತ್ತು ನೊವೆಂಬರ್

**(ಸುಗ್ಗಿ–ಮಾಗಿ)**

ಫೀಬೆ ಪಿನ್ಚನ್ ರಾತ್ರಿ ಮಲಗಿಕೊಂಡಿದ್ದ ಕೋಣೆಯಿಂದ ನೋಡಿದರೆ ಕೆಳಗೆ ಹಳೆಯ ಮನೆಯ ತೋಟ ಕಾಣುತ್ತಿತ್ತು; ಅಲ್ಲದೆ, ಆ ಕೋಣೆ ಪೂರ್ವಾಭಿಮುಖವಾಗಿದ್ದುದರಿಂದ, ಒಂದು ಸರಿಯಾದ ಹೊತ್ತಿನಲ್ಲಿ ಕೆಂಬೆಳಕಿನ ಹೊಳಪಿನ ಹೊನಲು ಕಿಟಕಿಯ ಮೂಲಕ ಹರಿದುಬಂದು, ಹೊಗೆಗಪ್ಪಾದ ಒಳಮಾಳಿಗೆಯನ್ನೂ ಗೋಡೆಗೆ ಅಂಟಿಸಿದ್ದ ಕಾಗದವನ್ನೂ ತನ್ನ ಬಣ್ಣದಲ್ಲಿ ಮೀಯಿಸುತ್ತಿತ್ತು. ಫೀಬೆಯ ಹಾಸಿಗೆಯ ಸುತ್ತ ಫರದೆಗಳಿದ್ದುವು; ಕತ್ತಲೆಯಿಡಿದ, ಪುರಾತನಕಾಲದ ಮೇಲ್ಕಟ್ಟೂ ಇತ್ತು; ಒಂದು ಕಾಲದಲ್ಲಿ ಅಮೂಲ್ಯವಾದುದೂ ಘನವಾದುದೂ ಎನಿಸಿದ್ದ ಬಟ್ಟೆಯಿಂದ ತಯಾರಿಸಿದ ಭಾರಿಯಾದ ತೋರಣ ಕಟ್ಟಿತ್ತು. ಇವೆಲ್ಲ ಆ ಹುಡುಗಿಯಮೇಲೆ ಒಂದು ಮೋಡದಂತೆ ಕವಿದುಕೊಂಡು, ಬೇರೆಯ ಕಡೆಗಳಲ್ಲಿ ಹಗಲಾಗತೊಡಗಿದ್ದ ವೇಳೆಯಲ್ಲಿ ಆ ಒಂದು ಮೂಲೆಯಲ್ಲಿ ಮಾತ್ರ ಇರುಳಾಗುವಂತೆ ಮಾಡಿದ್ದವು. ಹೀಗಿದ್ದರೂ, ಪ್ರಾತಃಕಾಲದ ಬೆಳಕು ಹಾಸಿಗೆಯ ಅಡಿಯಲ್ಲಿ, ಮಾಸಿದ್ದ ಫರದೆಗಳ ನಡುವೆ ಕಂಡಿಯ ಮೂಲಕ ತೂರಿಬರುತ್ತಿತ್ತು. ಹೊಸ ಅತಿಥಿಯೊಬ್ಬಳು ಅಲ್ಲಿದ್ದಳು; ಬೆಳಗಿನ ಮೊಗದ ಹಾಗೆಯೆ ಅವಳ ಕೆನ್ನೆಗಳಲ್ಲಿಯೂ ಹೂವರಳಿದ್ದುವು; ಮುಂಜಾನೆಯ ಮೆಲುಗಾಳಿ ಗಿಡದೆಲೆಗಳನ್ನು ಅಲುಗಾಡಿಸುವಹಾಗೆ, ಹೊರಟುಹೋಗುತ್ತಿರುವ ನಿದ್ರೆಯ ಸೂಚನೆಯಾಗಿ ಅವಳ ಕೈಕಾಲುಗಳಲ್ಲಿ ಮೆಲ್ಲನೆಯ ಅಲುಗಾಟವಿತ್ತು– ಇಂತಿದ್ದ ಅವಳನ್ನು ಕಂಡು, ಬೆಳಗು ಅವಳ ಹುಬ್ಬನು ಮುತ್ತಿಟ್ಟಿತು. ಉಷಾದೇವಿ ಶಾಶ್ವತವಾಗಿ ಇಬ್ಬನಿಯೊಡಲಿನವಳು; ಅವಳು ನಿದ್ರೆಗೈಯುತ್ತಿರುವ ತನ್ನ ತಂಗಿಗೆ– ಅರ್ಧಪಾಲು ಅದಮ್ಯವಾದ ಪ್ರೀತಿಯ ಪ್ರೇರಣೆಯಿಂದ, ಇನ್ನರ್ಧಪಾಲು, ಅವಳು ತನ್ನ ಕಣ್ಣು ತೆರೆಯಲು ವೇಳೆಯಾಯಿತು ಎಂದು ಸೊಗಸಾದ ರೀತಿಯಲ್ಲಿ ಸೂಚನೆಕೊಡುವ ಉದ್ದೇಶದಿಂದ– ಕೊಟ್ಟ ಮುತ್ತಾಗಿತ್ತು ಅದು.

ಬೆಳಗಿನ ತುಟಿಗಳ ಆ ಸೋಂಕಿಗೆ ಫೀಬೆ ಮೆಲ್ಲನೆ ಎಚ್ಚರಗೊಂಡಳು; ತಾನು ಎಲ್ಲಿದ್ದೇನೆ, ಭಾರಿಯಾದ ಆ ಫರದೆಗಳು ಅದು ಹೇಗೆ ತನ್ನ ಸುತ್ತಲೂ

ತೋರದೆ ನಿಷ್ಠುರಳಾಗಿರಬೇಕೆಂದು ಮೊದಮೊದಲು ಉದ್ದೇಶಪಟ್ಟಿದ್ದರೂ ಆಮೇಲೆ ಬೇಗನೆಯೇ ಬಾಗಿಲನ್ನು ಹಿಂದಕ್ಕೆ ತಳ್ಳಿ, ತೆಗೆಯಬಾರದೆಂದಿದ್ದ ಬೀಗದಲ್ಲಿ ತುಕ್ಕು ಹಿಡಿದ ಕೀಲಿಕೈಯನ್ನು ತಿರುಗಿಸಬೇಕೆಂದೂ ಭಾವಿಸಿಕೊಂಡಳು.

"ಅವಳು ಫೀಬೆಯಾಗಿರಬಹುದೆ?" ಎಂದು ಹೆಪ್ಸಿಬಾ ತನಗೆ ತಾನೇ ಪ್ರಶ್ನಿಸಿಕೊಂಡಳು. "ಪುಟ್ಟ ಫೀಬೆಯೇ ಆಗಿರಬೇಕು; ಏಕೆಂದರೆ, ಅವಳು ಬೇರೆ ಯಾರೂ ಆಗಿರಲಾರಳು. ಅಲ್ಲದೆ, ಅವಳು ತನ್ನ ತಂದೆಯ ಹಾಗೂ ಕಾಣುತ್ತಿದ್ದಾಳೆ! ಆದರೆ, ಅವಳಿಗೆ ಬೇಕಾದ್ದು ಇಲ್ಲಿ ಏನಿದೆ? ಅದೂ ಅಲ್ಲದೆ, ಒಂದು ದಿನ ಮುಂಚಿತವಾಗಿ ತಿಳಿಸದೆ, 'ತಾನು ಬಂದರೆ ಅಡ್ಡಿಯಿಲ್ಲವೆ' ಎಂದು ಕೇಳಿ ತಿಳಿದುಕೊಳ್ಳದೆ, ಒಳ್ಳೇ ಹಳ್ಳಿಯ ಬಳಗದಹಾಗೆ ಈ ರೀತಿ ಬಡಪ್ರಾಣಿಯ ಮನೆಗೆ ನುಗ್ಗಿದ್ದಾಳೆಯಲ್ಲಾ! ಒಳ್ಳೆಯದು ಒಂದು ರಾತ್ರಿಯಮಟ್ಟಿಗೆ ಅವಳಿಗೆ ಇಳಿದುಕೊಳ್ಳಲು ಸ್ಥಳ ಬೇಕಾಗಿದೆಯೋ ಏನೋ ಪಾಪ; ಹೆಣ್ಣುಮಗು, ನಾಳೆ ತನ್ನ ತಾಯಿಯ ಹತ್ತಿರಕ್ಕೆ ಹಿಂದಿರುಗಿಹೋದಾಳು!

ತಿಳಿದಿರಬೇಕಾದ ಒಂದು ಅಂಶವಿದೆ: ಏನೆಂದರೆ, ಪಿನ್ಚನ್ ವಂಶದ ಒಂದು ಚಿಕ್ಕ ಕುಡಿ ಫೀಬೆ; ಅವಳು ಹೊಸ ಇಂಗ್ಲೆಂಡಿನ ಗ್ರಾಮಪ್ರದೇಶದಲ್ಲಿ ಹುಟ್ಟಿದವಳು; ಈ ಸಂಗತಿಯನ್ನು ಹಿಂದೆಯೇ ಪ್ರಸ್ತಾವಿಸಿದ್ದೇವೆ; ಅಲ್ಲಿ ಹಳೆಯ ರೀತಿನೀತಿಗಳೂ ಬಾಂಧವ್ಯ ಭಾವನೆಗಳೂ ಇನ್ನೂ ಸ್ವಲ್ಪಮಟ್ಟಿಗೆ ಉಳಿದುಬಂದಿವೆ. ಅವಳ ಸ್ವಂತ ಬಂಧುವರ್ಗದಲ್ಲಿ, ಆಹ್ವಾನವಿಲ್ಲದೆ ಅಥವಾ ಪೂರ್ವಭಾವಿಯಾಗಿ ಔಪಚಾರಿಕವಾಗಿ ಮುಂತಿಳಿವಳಿಕೆ ಕೊಡದೆ ಬಂಧುಗಳು ಒಬ್ಬರನ್ನೊಬ್ಬರು ನೋಡಹೋಗುವುದು ಯಾವ ರೀತಿಯಲ್ಲಿಯೂ ಅನುಚಿತವಲ್ಲ ಎಂಬ ಭಾವನೆಯಿದ್ದಿತು. ಆದರೂ, ಕುಮಾರಿ ಹೆಪ್ಸಿಬಾಳ ಒಂಟಿ ಬಾಳಿನ ಬಗೆಯನ್ನು ಗಮನಿಸಿ, ಫೀಬೆ ಭೇಟಿಕೊಡಲಿರುವಳೆಂಬ ಸಮಾಚಾರ ಕಳೆದ ಮೂರುನಾಲ್ಕುದಿನಗಳಿಂದಲೂ ಈ ಪತ್ರ ಅಂಚೆಯಾಳಿನ ಜೇಬಿನಲ್ಲಿಯೇ ಉಳಿದುಬಿಟ್ಟಿತ್ತು; ಆಗ ಪಿನ್ಚನ್ ಬೀದಿಯಲ್ಲಿ ಅವನಿಗೆ ಬೇರೆ ಯಾವ ಕೆಲಸವೂ ಬೀಳದೆ ಇದ್ದದ್ದರಿಂದ, ಏಳು ಇಪ್ಪರಿನ ಮನೆಯಕಡೆ ಬಂದುಹೋಗಲು ಅವನಿಗೆ ಇನ್ನೂ ಅನುಕೂಲವಾಗಿರಲಿಲ್ಲ.

"ಆಗುವುದಿಲ್ಲ! ಅವಳು ಒಂದು ರಾತ್ರಿ ಮಾತ್ರ ಇಲ್ಲಿ ಇರುವುದು ಸಾಧ್ಯ. ಕ್ಲಿಫರ್ಡ್ ಏನಾದರೂ ಅವಳನ್ನು ಇಲ್ಲಿ ಕಂಡದ್ದೇ ಆದರೆ, ಅವನಿಗೆ ತೊಂದರೆಯಗಬಹುದು!" ಎಂದು ಹೆಪ್ಸಿಬಾ ಬಾಗಿಲ ಅಗುಳಿಯನ್ನು ತೆಗೆಯುತ್ತ ನುಡಿದಳು.

* * * *

ಅದರ ಪರಿಶುದ್ಧತೆ ಕಡಮೆಯಾಗಲಿಲ್ಲ, ಅದು ಬೇಕೆನಿಸದೆ ಹೋಗಲಿಲ್ಲ. ಕಿರಗುಟ್ಟುತ್ತಿದ್ದ, ಜಮಖಾನ ಹಾಸಿರಲಿಲ್ಲದ ಮಹಡಿ ಮೆಟ್ಟಲುಗಳನ್ನು ಬೇಗ ಬೇಗನೆ ಇಳಿದು, ತೋಟದೊಳಕ್ಕೆ ಹೋಗಿ, ಉತ್ತಮೋತ್ತಮವಾದ ಕೆಲವು ಗುಲಾಬಿಹೂಗಳನ್ನು ಕೊಯ್ದುಕೊಂಡು, ಅವುಗಳನ್ನು ತನ್ನ ಕೋಣೆಗೆ ತಂದಳು.

ಎಲ್ಲವನ್ನೂ ಅಚ್ಚುಕಟ್ಟಾಗಿ ವ್ಯವಸ್ಥೆಗೊಳಿಸುವ ಹುಟ್ಟುಗುಣ ಕೆಲವರಿಗೆ ಇರುತ್ತದೆ; ಅದು ವಂಶಪಾರಂಪರ್ಯವಾಗಿ ಬಂದ ವಿಶೇಷ ಗುಣ; ಅಂಥ ಗುಣವುಳ್ಳವರಲ್ಲಿ ಪುಟ್ಟ ಫೀಬೆ ಒಬ್ಬಳು. ಈ ವಿಶೇಷಗುಣ ಒಂದು ಬಗೆಯ ಸಹಜ ಮಂತ್ರಶಕ್ತಿಯೆಂದೇ ಹೇಳಬಹುದು. ಇದರ ಸಹಾಯದಿಂದ ಅವರು ತಮ್ಮ ಸುತ್ತಮುತ್ತಣ ಪದಾರ್ಥಗಳಲ್ಲಿ ಅಡಗಿರುವ ಶಕ್ತಿಸಾಮರ್ಥ್ಯಗಳನ್ನು ಹೊರಕ್ಕೆ ಸೆಳೆಯಬಲ್ಲರು; ಯಾವುದಾದರೂ ಸ್ಥಳದಲ್ಲಿ ಅವರು ಎಷ್ಟೇ ಅಲ್ಪಕಾಲ ವಾಸಮಾಡಿಕೊಂಡಿರಲಿ, ಆ ಸ್ಥಳವನ್ನು ಅವರು ವಾಸಯೋಗ್ಯವಾದ ನೆಮ್ಮದಿಯ ಬೀಡಾಗಿ ಕಾಣುವಂತೆ ಮಾಡಬಲ್ಲರು. ಪ್ರಾಚೀನಕಾಲದ ಅರಣ್ಯದಲ್ಲಿ ದಾರಿಗರು ಎಸೆದು ಒಟ್ಟಿದ ಪೊದೆಗಳಿಂದ ನಿರ್ಮಿತವಾದ ಒರಟೊರಟಾದ ಗುಡಿಸಿಲಿನಲ್ಲಿ ಇಂಥ ಹೆಂಗಸು ಒಂದು ರಾತ್ರಿಯ ಮಟ್ಟಿಗೆ ತಂಗಿದ್ದರೂ ಸಾಕು, ಅದು ಗೃಹಲಕ್ಷಣವನ್ನು ತಳೆದು ಕಂಗೊಳಿಸೀತು; ಮಾತ್ರವಲ್ಲ, ಆ ಶಾಂತಮೂರ್ತಿ ಸುತ್ತಣ ಅಂಧಕಾರ ಪ್ರದೇಶದಲ್ಲಿ ಕಣ್ಮರೆಯಾಗಿಹೋದಮೇಲೂ ಆ ಲಕ್ಷಣವನ್ನು ಅದು ಉಳಿಸಿಕೊಂಡೀತು. ಈಗ ಫೀಬೆಯಿದ್ದುದು ಹಾಲುಸುರಿಯುವ ಗೆಲುವಿಲ್ಲದೆ ಕತ್ತಲಕೋಣೆ; ಬಹು ದೀರ್ಘಕಾಲದಿಂದ ಅದರಲ್ಲಿ ಜೇಡ, ಇಲಿ, ಹೆಗ್ಗಣ, ಭೂತಪ್ರೇತ– ಇವು ಹೊರತು ಯಾರೂ ವಾಸವಾಗಿರಲಿಲ್ಲ; ಇದರ ಪರಿಣಾಮವಾಗಿ, ಮನುಷ್ಯರು ಸುಖವಾಗಿ ಕಳೆದ ಕಾಲದ ಪ್ರತಿಯೊಂದು ಕುರುಹನ್ನೂ ಅಳಿಸಿಬಿಡಲು ಹೊಂಚುಹಾಕುವ ಸರ್ವನಾಶಕ ನಿರ್ಜನತ್ವವು ಅಲ್ಲಿ ತುಂಬಿಹೋಗಿತ್ತು. ಆ ಸ್ಥಳವನ್ನು ಪುನಃ ವಾಸಮಾಡುವುದಕ್ಕಾಗಿ ದಕ್ಕಿಸಿಕೊಳ್ಳಲು ಮೇಲೆ ಹೇಳಿದಂತಹ ಒಂದು ಸೌಮ್ಯವಾದ ಮಂತ್ರಶಕ್ತಿಯೇ ಬೇಕಾಗಿದ್ದಿತು. ಫೀಬೆಯ ಕಾರ್ಯವಿಧಾನವು ಎಂಥದಾಗಿತ್ತು ಎಂಬುದನ್ನು ಕಂಡುಹಿಡಿದು ಹೇಳುವುದು ಅಸಾಧ್ಯ. ಯಾವ ಒಂದು ಪೂರ್ವಭಾವಿ ಯೋಜನೆಯನ್ನೂ ಅವಳು ಇಟ್ಟುಕೊಂಡಂತೆ ಕಾಣಲಿಲ್ಲ; ಆದರೆ ಇಲ್ಲೊಮ್ಮೆ ಕೈಸೋಕಿಸಿದಳು, ಅಲ್ಲೊಮ್ಮೆ ಕೈಯಾಡಿಸಿದಳು; ಕುರ್ಚಿ ಮೊದಲಾದ ಕೆಲವು ಮರದ ಸಾಮಾನುಗಳನ್ನು ಬೆಳಕಿಗೆ ತಂದಿಟ್ಟಳು, ಉಳಿದವನ್ನು ಕತ್ತಲಿದ್ದ ಕಡೆಗೆ ಎಳೆದೊಯ್ದಳು; ಕಿಟಕಿಯ ತೆರೆಯೊಂದನ್ನು ಎತ್ತಿ ಕಟ್ಟಿದಳು,

ತೋರಣಗಟ್ಟಿದಹಾಗೆ ಇಳಿಯಬಿದ್ದಿವೆ– ಎಂಬುದನ್ನು ಒಂದು ಕ್ಷಣದಮಟ್ಟಿಗೆ ಅವಳು ಅರಿಯಲಾರದೆ ಹೋದಳು. ಈಗ ಬೆಳಗಾಗಿದೆ, ಮರುಗಳಿಗೆಯಲ್ಲಿ ಏನೇ ಸಂಭವಿಸಿಲಿ, ಮೊತ್ತಮೊದಲು ಮೇಲಕ್ಕೆದ್ದು ತನ್ನ ಪ್ರಾರ್ಥನೆಗಳನ್ನು ಹೇಳಬೇಕು– ಎಷ್ಟು ಹೊರತಾಗಿ ವಾಸ್ತವವಾಗಿ ಬೇರೆ ಏನೂ ಅವಳಿಗೆ ಸಂಪೂರ್ಣವಾಗಿ ಸ್ಪಷ್ಟವಾಗಿರಲಿಲ್ಲ. ಕೋಣೆಯ ಹಾಗೂ ಅದರಲ್ಲಿದ್ದ ಪೀಠ ಸಜ್ಜು– ವಿಶೇಷವಾಗಿ ಎತ್ತರವಾಗಿ ನಿಮಿರಿನಿಂತಿದ್ದ ಕುರ್ಚಿಗಳು– ಇವುಗಳ ಗಂಭೀರ ಸ್ವರೂಪವನ್ನು ಕಂಡು ಅವಳು ಇನ್ನೂ ಹೆಚ್ಚಾಗಿ ಭಕ್ತಿಭಾವದ ಕಡೆಗೆ ಒಲೆದಳು. ಆ ಕುರ್ಚಿಗಳಲ್ಲಿ ಒಂದಂತೂ ಅವಳ ಹಾಸಿಗೆಯ ಹತ್ತಿರದಲ್ಲಿಯೆ ಇದ್ದಿತು; ಅದನ್ನು ನೋಡಿದರೆ, ಯಾರೋ ಹಳೆಯ ಕಂದಾಚಾರದ ಮನುಷ್ಯನೊಬ್ಬನು ರಾತ್ರಿಯೆಲ್ಲಾ ಅಲ್ಲಿ ಕುಳಿತಿದ್ದು, ಕಣ್ಣಿಗೆ ಬೀಳದಂತೆ ತಪ್ಪಿಸಿಕೊಳ್ಳುವುದಕ್ಕಾಗಿ ಸಕಾಲದಲ್ಲಿ ಕಣ್ಮರೆಯಾಗಿದ್ದನೋ ಎಂಬಂತೆ ಕಾಣುತ್ತಿತ್ತು.

ಪೂರ್ತಿ ಉಡುಪು ಧರಿಸಿದಮೇಲೆ, ಫೀಬೆ ಕಿಟಕಿಯಿಂದ ಹೊರಕ್ಕೆ ಇಣಿಕಿ ನೋಡಿದಳು; ತೋಟದಲ್ಲಿ ಒಂದು ಗುಲಾಬಿಗಿಡವನ್ನು ಕಂಡಳು. ಅದು ಬಹು ಎತ್ತರವಾಗಿ ಹೊರವಾಗಿ ಬೆಳೆದಿದ್ದುದರಿಂದ ಅದನ್ನು ಮನೆಯ ಒಂದು ಪಕ್ಕಕ್ಕೆ ಆನಿಸಿ ನಿಲ್ಲಿಸಿತ್ತು; ಅಪೂರ್ವ ಸುಂದರ ಜಾತಿಯ ಬಿಳಿಯ ಗುಲಾಬಿಹೂಗಳಿಂದ ಗಿಡವೆಲ್ಲ ಸಂಪೂರ್ಣವಾಗಿ ಮುಚ್ಚಿಹೋಗಿತ್ತು. ಬಹು ಪಾಲು ಹೂಗಳ ಗರ್ಭದಲ್ಲಿ ಒಂದು ಬಗೆಯ ರೋಗ ಹಿಡಿದಿತ್ತು; ಇದು ಆ ಹುಡುಗಿಗೆ ಕಂಡುಬಂದದ್ದು ಆಮೇಲೆ. ಆದರೆ ತಕ್ಕಮಟ್ಟಿಗೆ ದೂರದಿಂದ ನೋಡಿದಾಗ ಇಡಿಯ ಗುಲಾಬಿಗಿಡ ಹೇಗೆ ಕಾಣುತ್ತಿತ್ತೆಂದರೆ, ಅದನ್ನು ಈ ಬೇಸಗೆಯಲ್ಲೆ ನೇರವಾಗಿ ಸ್ವರ್ಗದ ಉದ್ಯಾನದಿಂದ (ಈಡನ್) ಅದು ಬೇಳೆದಿದ್ದ ಫಲವತ್ತಾದ ಮಣ್ಣಿನ ಸಮೇತ ತಂದಿರುವರೋ ಎಂಬಂತೆ ಕಾಣುತ್ತಿತ್ತು. ನಿಜಾಂಶವೇನೆಂದರೆ, ಆಯಲಿಸ್‌ಪಿನ್ಚನ್ ಎಂಬವಳು ಅದನ್ನು ಹುಟ್ಟ ಹಾಕಿದ್ದಳು; ಆಕೆ ಫೀಬೆಯ ದೊಡ್ಡಜ್ಜಿಯ ದೊಡ್ಡಜ್ಜಿಯ ದೊಡ್ಡಜ್ಜಿ; ಅದನ್ನು ಹುಟ್ಟ ಹಾಕಿದ್ದ ಆ ಸ್ಥಳವನ್ನು ತೋಟದ ಭೂಮಿಯಾಗಿಯೇ ಕೃಷಿಮಾಡಲಾಗಿತ್ತು; ಸುಮಾರು ಇನ್ನೂರು ವರ್ಷಗಳಿಂದ ಸೊಪ್ಪುಸದೆಕೊಳೆತು ಅಲ್ಲಿನ ಮಣ್ಣು ಈಗ ಜಿಡ್ಡುಜಿಗುಟಾಗಿತ್ತು. ಆದಾಗ್ಯೂ, ಹಳೆಯ ಮಣ್ಣಿನಲ್ಲಿ ಬೆಳೆದ ಆ ಹೂಗಳು ಹೊಸ ಸುಗಂಧವನ್ನು ತಮ್ಮ ಸೃಷ್ಟಿಕರ್ತನಿಗೆ ಇನ್ನೂ ಸಮರ್ಪಿಸುತ್ತಿದ್ದುವು; ಆ ಪರಿಮಳ ಕಿಟಕಿಯ ಮುಂದೆ ತೇಲಿ ಹೋಗುವಾಗ ಎಳೆಯಳಾದ ಫೀಬೆಯ ಉಸಿರು ಅದರೊಂದಿಗೆ ಬೆರೆಯಿತು ಎಂಬ ಕಾರಣದಿಂದ

ಇನ್ನೊಂದು ಅಡ್ಡಿಯಾಗಿದ್ದಿತು. ಅವಳು ಹಾಗೆ ಬಂದಾಗ, ಮಹಡಿಯ ಮೆಟ್ಟಲು ಸಾಲಿನ ಮೇಲ್ಭಾಗದಲ್ಲಿ ಹೆಪ್ಸಿಬಾಳನ್ನು ಸಂಧಿಸಿದಳು; ಇನ್ನೂ ಹೊತ್ತಿಗೆಮುಂಚೆಯಾದ್ದರಿಂದ, ಹೆಪ್ಸಿಬಾ ಅವಳನ್ನು ತನ್ನ ಕೋಣೆಗೆ ಕರೆದಳು; ಅವಳ ವಿದ್ಯಾಭ್ಯಾಸದಲ್ಲಿ ಫ್ರೆಂಚ್ ಭಾಷೆಯ ವ್ಯಾಸಂಗವೂ ಸೇರಿದ್ದಿದ್ದರೆ ಅವಳದನ್ನು 'ಬೂಡ್ವಾರ್' (ಏಕಾಂತಗೃಹ) ಎಂದು ಕರೆಯುತ್ತಿದ್ದಳು. ಅಲ್ಲಿ ಕೆಲವು ಹಳೆಯ ಪುಸ್ತಕಗಳು ಚೆದರಿ ಬಿದ್ದಿದ್ದುವು; ಕೆಲಸದ ಸಾಮಾನಿನ ಬುಟ್ಟಿ, ಧೂಳು ಕವಿದಿದ್ದ ಬರೆಯುವ ಮೇಜು– ಇವು ಒಂದು ಕಡೆ ಇದ್ದುವು; ಮತ್ತೊಂದು ಕಡೆ, ಬಹು ವಿಚಿತ್ರವಾಗಿ ಕಾಣುತ್ತಿದ್ದ, ಕರಿಯ ಮರದ ದೊಡ್ಡ ಸಾಮಾನೊಂದಿದ್ದಿತು; ಅದು 'ಹಾರ್ಪ್ಸಿಕಾರ್ಡ್' (ಒಂದು ಬಗೆಯ ತಂತಿವಾದ್ಯ) ಎಂದು ವೃದ್ಧ ಶ್ರೀಮಂತೆ ಫೀಬೆಗೆ ತಿಳಿಸಿದಳು. ಅದು ತದ್ವತ್ ಶವದಪೆಟ್ಟಿಗೆಯ ಹಾಗೆ ಕಾಣುತ್ತಿತ್ತು; ಅನೇಕ ವರ್ಷಗಳ ಕಾಲ ಅದನ್ನು ಬಾರಿಸಿಯೇ ಇರಲಿಲ್ಲ, ತೆರೆದುಕೂಡ ನೋಡಿರಲಿಲ್ಲ; ಹೀಗಾಗಿ, ಗಾಳಿ ಸಾಲದೆ ಉಸಿರು ಕಟ್ಟಿ, ಅದರ ತುಂಬ ಅಪಾರ ಮೃತ ಸಂಗೀತ ಇದ್ದಿರಬೇಕು. ಆಯಲಿಸ್ ಪಿನ್ಚನ್ ಸಂಗೀತದ ಮಧುರಕಲೆಯನ್ನು ಯೂರೋಪಿನಲ್ಲಿ ಕಲಿತಿದ್ದಳು; ಅವಳ ತರುವಾಯ, ಮನುಷ್ಯರ ಬೆರಳು ಅದರ ತಂತಿಗಳಮೇಲೆ ಆಡಿದಂತೆ ಕಂಡುಬಂದಿಲ್ಲ.

ಹೆಪ್ಸಿಬಾ ತನ್ನ ಯುವತಿಥಿಗೆ ಕುಳಿತುಕೊಳ್ಳುವಂತೆ ಹೇಳಿ, ಹತ್ತಿರವಿದ್ದ ಒಂದು ಕುರ್ಚಿಯಮೇಲೆ ತಾನೂ ಕುಳಿತುಕೊಂಡಳು; ಕುಳಿತು, ಅವಳ ಸೊಗಸಾದ ಪುಟ್ಟ ಶರೀರಾಕೃತಿಯಲ್ಲಿ ಅಡಗಿರುವ ಮೂಲ ಪ್ರೇರಣೆಗಳ ರಹಸ್ಯಗಳನ್ನು ಭೇದಿಸಿ ನೋಡುವುದು ಸಾಧ್ಯವಾಗಿದ್ದರೆ ಹೇಗೋ ಹಾಗೆ ಅವಳನ್ನು ಅತ್ಯಾಸಕ್ತಿಯಿಂದ ನೋಡಿದಳೂ.

ಕಡೆಗೆ ಅವಳು ಹೇಳಿದಳು: "ನನ್ನ ತಂಗೀ, ಫೀಬೆ, ನಿನ್ನನ್ನ ನನ್ನ ಜೊತೆ ಇರಿಸಿಕೊಳ್ಳುವುದು ಹೇಗೆನ್ನುವುದೇ ನನಗೆ ಸರಿಯಾಗಿ ತೋರುತ್ತಾ ಇಲ್ಲವಲ್ಲಾ."

ಈ ನುಡಿಗಳಲ್ಲಿ ಅನಾದರಣೆಯ ಒರಟುತನ ಇದೆಯೆಂದು ತೋರಬಹುದು ವಾಚಕನಿಗೆ; ಆದರೆ ಇರಲಿಲ್ಲ; ಮಲಗುವ ಮುನ್ನ ಈ ನಂಟರಿಬ್ಬರೂ ಮಾತುಕತೆಯಾಡಿ ತಕ್ಕಮಟ್ಟಿನ ಪ್ರಮಾಣದಲ್ಲಿ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಿದ್ದರು. ಆ ಹುಡುಗಿಯ ತಾಯಿ ಎರಡನೆಯ ಸಲ ಮದುವೆಮಾಡಿಕೊಂಡಿದ್ದಳು; ಅದರಿಂದಾಗಿ ಫೀಬೆ ಬೇರೆ ಇನ್ನೊಂದು ಮನೆಯಲ್ಲ ನೆಲಸಬೇಕಾದದ್ದು ಅಪೇಕ್ಷಣೀಯವಾಗಿತ್ತು; ಈ ಪರಿಸ್ಥಿತಿ ಏನೆಂಬುದನ್ನು ಗ್ರಹಿಸುವ ಮಟ್ಟಿಗೆ ಹೆಪ್ಸಿಬಾ ಸಾಕಷ್ಟು ವಿಷಯವನ್ನು ಅರಿತಿದ್ದಳು. ಅಲ್ಲದೆ, ಫೀಬೆಯ

ಇನ್ನೊಂದನ್ನು ಇಳಿಯಬಿಟ್ಟಳು; ಹೀಗೆ, ಅರ್ಧಗಂಟೆಯ ಅವಧಿಯಲ್ಲಿ, ಕರುಣಾಪೂರಿತವಾಧ ಆದರಪೂರ್ಣವಾದ ಮಂದಹಾಸ ಕೋಣೆಯ ತುಂಬ ತುಂಬಿರುವಹಾಗೆ ಕಾಣುವಂತೆ ಮಾಡುವುದರಲ್ಲಿ ಅವಳು ಯಶಸ್ವಿಯಾದಳು. ಬಹಳ ಹಿಂದೇನೂ ಅಲ್ಲ, ಕೇವಲ ಹಿಂದಿನ ರಾತ್ರಿ ಆ ಕೋಣೆ ಮುದಿಕನ್ಯೆಯ ಹೃದಯವನ್ನು ಹೋಲುತ್ತಿತ್ತು. ಏಕೆಂದರೆ, ಒಂದರಲ್ಲಿ ಪ್ರೇಮದ ಹೊಂಬಿಸಿಲಿರಲಿಲ್ಲ, ಇನ್ನೊಂದರಲ್ಲಿ ಮನೆಯಬೆಂಕಿ ಇರಲಿಲ್ಲ; ಕಳೆದ ಹಲವಾರು ವರ್ಷಗಳಿಂದಲೂ ಪ್ರೇತಗಳ ಹೊರತು ಒಬ್ಬ ಅತಿಥಿಯೂ ಕೋಣೆಯನ್ನು ಪ್ರವೇಶಿಸಿರಲಿಲ್ಲ, ಪ್ರೇತಗಳ ನೆನಪು ಹೊರತು ಒಬ್ಬ ಅತಿಥಿಯ ನೆರಳೂ ಅವಳ ಹೃದಯದಲ್ಲಿ ಸುಳಿದಿರಲಿಲ್ಲ.

ವಿವರಿಸಲಾಗದ ಈ ಸೊಬಗಿನಲ್ಲಿ ಇನ್ನೂ ಒಂದು ವೈಲಕ್ಷಣ್ಯವಿದ್ದಿತು. ಮಾನವಜೀವಿತದ ಕ್ಷೇತ್ರವಾಗಿದ್ದ ಈ ಮಲಗುವ ಮನೆ ಬಹಳ ಮಹತ್ವದ ಹಾಗೂ ವೈವಿಧ್ಯಪೂರ್ಣವಾದ ಅನುಭವದ ತವರುಮನೆಯಾಗಿತ್ತು: ನವದಂಪತಿಗಳು ಕಳೆದ ಇರುಳುಗಳ ಸುಖಸಂಭ್ರಮ ಇಲ್ಲಿ ಮಿಡಿದು ಮಾಯವಾಗಿತ್ತು; ಹೊಸ ಚಿರಂಜೀವಿಗಳು ಇಲ್ಲಿ ಇಹಲೋಕದ ಮೊದಲುಸಿರನ್ನು ಎಳೆದಿದ್ದರು; ಮುದುಕರು ಮಡಿದಿದ್ದರು ಇಲ್ಲಿ. ಆದರೆ– ಬಿಳಿಯ ಗುಲಾಬಿಗಳ ಪ್ರಭಾವವೋ, ಇಲ್ಲವೆ ಬೇರೆ ಯಾವುದಾದರೂ ಸೂಕ್ಷ್ಮಪ್ರಭಾವವೋ, ಯಾವುದಾದರೂ ಆಗಿರಲಿ– ಅದು ಈಗ ಕನ್ಯೆಯೊಬ್ಬಳ ಮಲಗುವ ಮನೆಯಾಗಿತ್ತು, ಅವಳ ಮಧುರವಾದ ಉಸಿರಿನಿಂದಲೂ ಸುಖಕರವಾದ ವಿಚಾರಗಳಿಂದಲೂ ತನ್ನ ಮುನ್ನಿನ ಎಲ್ಲ ಕೆಡುಕನ್ನೂ ದುಃಖವನ್ನೂ ಕಳೆದುಕೊಂಡು ಪುನೀತವಾಗಿತ್ತು ಎಂಬುದನ್ನು ಸೂಕ್ಷ್ಮಗ್ರಹಣಶಕ್ತಿಯುಳ್ಳ ಯಾರೇ ಆದರೂ ಅರಿಯಬಹುದಾಗಿತ್ತು ಹಿಂದಿನ ರಾತ್ರಿ ಅವಳು ಕಂಡಿದ್ದ ಸ್ವಪ್ನಗಳು ಅಷ್ಟೊಂದು ಉಲ್ಲಾಸಕರವಾದುವಾದ್ದರಿಂದ, ಕವಿದಿದ್ದ ಮಂಕನ್ನು ಅವು ಉಚ್ಚಾಟನೆಮಾಡಿ, ಅದರ ಸ್ಥಾನವನ್ನು ಈಗ ತಾವೆ ಆಕ್ರಮಿಸಿಕೊಂಡು ಕೋಣೆಯಲ್ಲಿ ನೆಲಸಿದುವು.

ಫೀಬೆ ತನಗೆ ತೃಪ್ತಿಯಾಗುವಂತೆ ಎಲ್ಲವನ್ನೂ ವ್ಯವಸ್ಥೆಗೊಳಿಸಿದ ಮೇಲೆ, ಮತ್ತೆ ತೋಟದೊಳಕ್ಕೆ ಇಳಿದುಹೋಗುವ ಉದ್ದೇಶದಿಂದ ತನ್ನ ಕೋಣೆಯಿಂದ ಹೊರಬಂದಳು. ಗುಲಾಬಿಗಿಡವಲ್ಲದೆ, ಅಲ್ಲಿ ಬೆಳೆದಿದ್ದ ಇನ್ನೂ ಅನೇಕ ಜಾತಿಯ ಹೂಗಿಡಗಳನ್ನು ಅವಳು ನೋಡಿದ್ದಳು; ಅವುಗಳನ್ನು ಸರಿಯಾಗಿ ಕೃಷಿಮಾಡದೆ ಅಲಕ್ಷ್ಯಮಾಡಿದ್ದರಿಂದ, (ಮಾನವ ಸಮಾಜದಲ್ಲಿ ಕಂಡುಬರುವ ಅದೇ ರೀತಿಯ ಪರಿಸ್ಥಿತಿಯಂತೆ) ಅವು ಹುಚ್ಚಾ ಬಟ್ಟೆಯಾಗಿ ಬೆಳೆದು, ಒಂದರ ಬೆಳವಣಿಗೆಗೆ

ಅಷ್ಟು ಕೆಟ್ಟಿದೆ. ನಿನ್ನ ಜೀವನವನ್ನು ಸುಖಕರವನ್ನಾಗಿ ಮಾಡಲಾರೆ ನಾನು. ತಂಗಿ ಫೀಬೆ, ಅದಿರಲಿ, ತಿನ್ನುವುದಕ್ಕೆ ಒಂದು ಚೂರು ರೊಟ್ಟಿಯನ್ನು ಕೂಡ ನಾನು ನಿನಗೆ ಕೊಡಲಾರೆ."

"ನಾನು ಉಲ್ಲಾಸಭರಿತಳಾದ ಚಿಕ್ಕಹುಡುಗಿ ಎನ್ನುವುದು ನಿನಗೇ ಗೊತ್ತಾಗುತ್ತದೆ. ನನ್ನ ರೊಟ್ಟಿಯನ್ನು ನಾನು ದುಡಿದು ಸಂಪಾದಿಸಿಕೊಳ್ಳುತ್ತೇನೆ. ಪಿನ್ಚನ್ ವಂಶಕ್ಕೆ ಸೇರಿದವಳಂತೆ ನನ್ನನ್ನು ಬೆಳಸಿಲ್ಲ, ಇದು ನಿನಗೆ ಗೊತ್ತಿರಬೇಕು. ಹೊಸ ಇಂಗ್ಲೆಂಡಿನ ಹಳ್ಳಿಯಲ್ಲಿ ಒಬ್ಬ ಹುಡುಗಿ ಬೇಕಾದಷ್ಟು ವಿಷಯಗಳನ್ನು ಕಲಿತುಕೊಳ್ಳುವಳು" ಎಂದು ಫೀಬೆ ಮುಗುಳು ನಗೆ ನಗುತ್ತ, ಆದರೂ ಒಂದು ವಿಧವಾದ ಸೌಮ್ಯ ಘನತೆಯೊಂದಿಗೆ, ಉತ್ತರಕೊಟ್ಟಳು.

"ಅಯ್ಯೋ ಫೀಬೆ, ನೀನು ಸಂಪಾದಿಸಿರುವ ಜ್ಞಾನದಿಂದ ನಿನಗೆ ಇಲ್ಲಿ ಏನೂ ಸಹಾಯವಾಗುವುದಿಲ್ಲ! ಅಲ್ಲದೆ ನಿನ್ನ ಯೌವನದ ಕಾಲವನ್ನೆಲ್ಲಾ ಇಂತಹ ಸ್ಥಳದಲ್ಲಿ ವ್ಯರ್ಥಗೊಳಿಸುವುದೆಂದರೆ, ಬಹಳ ವ್ಯಸನಕರವಾದ ಆಲೋಚನೆ! ಒಂದೆರಡು ತಿಂಗಳಾದ ಮೇಲೆ, ನಿನ್ನ ಆ ಕೆನ್ನೆಗಳು ಗುಲಾಬಿ ಕೆಂಪಾಗಿರುವುದಿಲ್ಲ. ನನ್ನ ಮುಖ ನೋಡು!" (ನಿಜವಾಗಿಯೂ ಇಬ್ಬರ ಮುಖಗಳಿಗೂ ಇದ್ದ ವೈಷಮ್ಯ ಗಮನಾರ್ಹವಾಗಿದ್ದಿತು.) ನಾನೆಷ್ಟು ಬಿಳಿಚಿಕೊಂಡಿದ್ದೇನೆ, ನೋಡು! ಈ ಹಳೆಯ ಮನೆಗಳ ಧೂಳು, ಅವುಗಳ ಕೊಳೆತದ ನಾತ– ಇವು ಶ್ವಾಸಕೋಶಗಳಿಗೆ ಹಿತಕರವಲ್ಲ ಎಂದು ನನ್ನ ಭಾವನೆ"– ಎಂದು ಹೆಪ್ಸಿಬಾ ನಿಟ್ಟುಸಿರುಗರೆಯುತ್ತಾ ಹೇಳಿದಳು.

"ಅಲ್ಲಿ ತೋಟವಿದೆ, ಅದರ ಹೂವಿನಗಿಡಗಳನ್ನು ನೋಡಿಕೊಳ್ಳಬೇಕು. ಬಯಲಿನಲ್ಲಿ ವ್ಯಾಯಾಮಮಾಡಿ, ನಾನು ಆರೋಗ್ಯವಾಗಿರಬಹುದು" ಎಂದು ಅಭಿಪ್ರಾಯಪಟ್ಟಳು ಫೀಬೆ.

ಈ ವಿಷಯವನ್ನು ಅಷ್ಟಕ್ಕೆ ಸಾಕುಮಾಡಬೇಕು ಎಂಬಂತೆ ಹೆಪ್ಸಿಬಾ ಹಠಾತ್ತನೆ ಎದ್ದು ನಿಂತಳು; ನಿಂತು, ಉದ್ಗರಿಸಿದಳು; "ಮಗೂ, ಅದು ಹೇಗೆ ಇದ್ದರೂ, ಪುರಾತನ ಪಿನ್ಚನ್ ಭವನದಲ್ಲಿ ಯಾರು ಅತಿಥಿಯಾಗಿರಬೇಕು, ಯಾರು ವಾಸಮಾಡತಕ್ಕದ್ದು ಎಂದು ಹೇಳತಕ್ಕವಳು ನಾನಲ್ಲ ಅದರ ಯಜಮಾನ ಬರಲಿದ್ದಾನೆ."

---

* ದೊಡ್ಡಮ್ಮ, ಚಿಕ್ಕಮ್ಮ, ಇತ್ಯಾದಿ ಸಂಬಂಧದವರ ಮಗಳು; ಸೋದರ ಸಂಬಂಧಿ.

ಶೀಲಸ್ವಭಾವವನ್ನಾಗಲಿ ಅದರಲ್ಲಿ ವ್ಯಾಪಿಸಿಕೊಂಡಿದ್ದ ಸೌಜನ್ಯಪೂರ್ಣವಾದ ಚಟುವಟಿಕೆಯನ್ನಾಗಲಿ ಅವಳು ತಪ್ಪಾಗಿ ಅರ್ಥಮಾಡಿಕೊಳ್ಳಲಿಲ್ಲ; ಈ ಗುಣಗಳು ಹೊಸ ಇಂಗ್ಲೆಂಡಿನ ಸ್ತ್ರೀಯರ ಗುಣಗಳಲ್ಲಿ ಅತ್ಯಂತ ಅಮೂಲ್ಯವಾದವು; ಅವುಗಳಿಂದ ಪ್ರೇರಿತಳಾಗಿಯೆ ಫೀಬೆ ತನ್ನ ಭವಿಷ್ಯ ಭಾಗ್ಯವನ್ನು ಹುಡುಕಿಕೊಂಡು ಹೊರಟಿದ್ದು ಎಂದು ಹೇಳಬಹುದು; ಹಾಗೆ ಹೊರಟಾಗ, ತಾನು ಎಷ್ಟು ಪ್ರಯೋಜನವನ್ನು ಪಡೆಯಬೇಕೆಂದಿದ್ದಳೋ ಅಷ್ಟನ್ನು ಪ್ರತಿಯಾಗಿ ನೀಡಿ ಆತ್ಮಗೌರವವನ್ನು ಕಾಪಾಡಿಕೊಳ್ಳುವ ಉದ್ದೇಶದಿಂದ ಹೊರಟಿದ್ದಳು. ತನ್ನ ಅತ್ಯಂತ ಹತ್ತಿರದ ಬಂಧುಗಳಲ್ಲಿ ಒಬ್ಬಳಾದ ಹೆಪ್ಸಿಬಾಳ ಬಳಿಗೆ ಹೋಗಲು ಅವಳು ನಿಶ್ಚಯಿಸಿದ್ದು ಸಹಜವಾಗಿಯೇ ಇತ್ತು; ಆದರೆ ತನ್ನ ದಾಯಾದಿ 'ಅಕ್ಕನ'* ಆಶ್ರಯವನ್ನು ಬಲಾತ್ಕಾರವಾಗಿ ಪಡೆಯಬೇಕೆಂಬ ಅಭಿಪ್ರಾಯವಿರಲಿಲ್ಲ ಅವಳಿಗೆ; ಒಂದುವಾರ ಅಥವಾ ಎರಡುವಾರ ಮಾತ್ರ ಇದ್ದು; ಅದರಿಂದ ಇಬ್ಬರಿಗೂ ಸುಖವೆಂದು ಕಂಡುಬಂದರೆ, ಮುಂದೆ ಅನಿರ್ದಿಷ್ಟ ಕಾಲದವರೆಗೆ ತಾನು ಇರುವುದು ಎಂಬ ಅಭಿಪ್ರಾಯ ಹೊಂದಿದ್ದಳು.

ಆದ್ದರಿಂದ, ಹೆಪ್ಸಿಬಾಳ ಒರಟು ಮಾತಿಗೆ ಫೀಬೆ ಅಷ್ಟೇ ಬಿಚ್ಚು ಮನಸ್ಸಿನಿಂದ, ಅದಕ್ಕಿಂತ ಹೆಚ್ಚಿನ ಉತ್ಸಾಹದಿಂದ, ಉತ್ತರಕೊಟ್ಟಳು.

"ಅಕ್ಕಾ, ಅದು ಹೇಗಾಗುತ್ತದೆಯೋ ನಾನು ಹೇಳಲಾರೆ, ಆದರೆ, ನಿಜವಾಗಿಯೂ ನನಗೆ ತೋರುವುದೇನೆಂದರೆ, ನೀನು ಭಾವಿಸಿಕೊಂಡಿರುವುದಕ್ಕಿಂತ ಚೆನ್ನಾಗಿಯೇ ನಾವು ಪರಸ್ಪರ ಹೊಂದಿಕೊಂಡು ಹೋಗಬಹುದು" ಎಂದಳು ಅವಳು.

ಹೆಪ್ಸಿಬಾ ಮುಂದುವರಿದು ಹೇಳಿದಳು: "ನೀನು ಒಳ್ಳೆಯ ಹುಡುಗಿ, ಅದು ನನಗೆ ಚೆನ್ನಾಗಿ ಗೊತ್ತು. ನಾನು ಹಿಂದು ಮುಂದು ನೋಡುತ್ತಿರುವುದು ಆ ವಿಚಾರದ ಪ್ರಶ್ನೆಗೆ ಸಂಬಂಧಿಸಿಲ್ಲ. ಆದರೆ, ಫೀಬೆ, ಚಿಕ್ಕವರು ಇರಲು ನನ್ನ ಈ ಮನೆ ತಕ್ಕದ್ದಲ್ಲ, ದುಗುಡದುಮ್ಮಾನ ತುಂಬಿವೆ ಅದರಲ್ಲಿ, ಅದರೊಳಕ್ಕೆ ಗಾಳಿ ಮಳೆ ನುಗ್ಗುತ್ತವೆ; ಚಳಿಗಾಲದಲ್ಲಿ ಮಹಡಿಯ ಮೇಲೂ ಅದರ ಕೋಣೆಗಳಲ್ಲೂ ಹಿಮಕೂಡ ನುಗ್ಗುತ್ತೆ; ಆದರೆ ಈ ಮನೆಯೊಳಕ್ಕೆ ಬಿಸಿಲು ಬೀಳಲು ಎಂದೂ ಅವಕಾಶವಿಲ್ಲ! ಇನ್ನು ನನ್ನ ವಿಚಾರವೋ, ನಾನು ಹೇಗಿದ್ದೇನೆಂಬುದು ನಿನಗೇ ಕಾಣುತ್ತದೆ– ಒಬ್ಬೊಂಟಿಗಳಾದ ನಿರುತ್ಸಾಹ ಹುಟ್ಟಿಸುವ ಮುದುಕಿ ನಾನು– ಹೌದು, ಫೀಬೆ, ನಾನು ಹಾಗೆಂದು ಕರೆದುಕೊಳ್ಳತೊಡಗಿದ್ದೇನೆ; ನನ್ನ ಶಂಕೆ ಏನೆಂದರೆ, ನನ್ನ ಮನಸ್ಸು ಉತ್ತಮಸ್ಥಿತಿಯಲ್ಲಿಲ್ಲ, ನನ್ನ ಚೈತನ್ಯ ಎಷ್ಟು ಕೆಡಬೇಕೋ

"ಸರಿ, ಮಗೂ, ಸರಿ! ಬಹುಶಃ ಸತ್ತೂಹೋಗಿದ್ದಾನೆ! ಎಂದಳು ಹೆಪ್ಸಿಬಾ, ಖಿನ್ನಳಾಗಿ ಹೊಳ್ಳುನಗೆ ನಗುತ್ತಾ. "ಆದರೆ, ಇಂಥ ಪುರಾತನವಾದ ಮನೆಗಳಲ್ಲಿ ಅದು ನಿನಗೂ ಗೊತ್ತು ಅಂತ ಕಾಣುತ್ತೆ, ಸತ್ತ ಜನ ಮತ್ತೆ ಹಿಂದಿರುಗಿ ಬರುವ ಸಂಭವ ಇದೆ! ಹೇಗಾಗುತ್ತದೆಯೋ ನೋಡೋಣ. ಅದಿರಲಿ, ತಂಗಿ ಫೀಬೆ, ನಾನು ಇಷ್ಟೆಲ್ಲ ಹೇಳಿದಮೇಲೆ ನಿನ್ನ ಧೈರ್ಯ ಉಡುಗದೆ ಇರುವುದರಿಂದ, ನಾವು ಅಷ್ಟು ಬೇಗ ಅಗಲುವುದು ಬೇಡ. ಮಗೂ, ನಿನ್ನ ಬಂಧುವಾದ ನಾನು ನಿನ್ನನ್ನು ಇರಹೇಳಬಹುದಾದ್ದು ಇಂಥ ಮನೆಯಲ್ಲಿ; ಸದ್ಯದಮಟ್ಟಿಗೆ, ನೀನು ಇಲ್ಲಿರಲು ನನ್ನ ಅಭ್ಯಂತರವಿಲ್ಲ."

ಆದರಪೂರ್ವಕವಾಧ ಭರವಸೆಯನ್ನು ನೀಡುವ ಈ ಮಾತುಗಳನ್ನು ಹೆಪ್ಸಿಬಾ ತೂಕಮಾಡಿ ಹೇಳಿದ್ದರೂ ಅವುಗಳಲ್ಲಿ ತಾತ್ಸಾರವೇನಿರಲಿಲ್ಲ; ಎಷ್ಟು ಹೇಳಿ ಹೆಪ್ಸಿಬಾ ಅವಳ ಕೆನ್ನೆಯನ್ನು ಮುತ್ತಿಟ್ಟಳು.

ಅವರು ಈಗ ಮಹಡಿಯನ್ನಿಳಿದು ಕೆಳಕ್ಕೆ ಬಂದರು; ಅಲ್ಲಿ ಫೀಬೆ ಪ್ರಾತಃಕಾಲದ ತಿಂಡಿತೀರ್ಥವನ್ನು ಸಿದ್ಧಗೊಳಿಸುವುದರಲ್ಲಿ ಅತ್ಯಂತ ಚಟುವಟಿಕೆ ತೋರಿದಳು; ಆ ಕೆಲಸವನ್ನು ಅವಳು ತಾನಾಗಿ ವಹಿಸಿಕೊಂಡಳು ಎನ್ನುವುದಕ್ಕಿಂತ, ತನ್ನ ಸಹಜವಾದ ಯೋಗ್ಯತೆಯ ಆಕರ್ಷಕ ಗುಣದಿಂದ ಅದನ್ನೇ ತನ್ನೆಡೆಗೆ ಬರಮಾಡಿಕೊಂಡಳು ಎನ್ನಬಹುದು. ಆ ವೇಳೆಯಲ್ಲಿ ಮನೆಯ ಒಡತಿ ಬಹುಮಟ್ಟಿಗೆ ಒಂದು ಕಡೆ ಸುಮ್ಮನೆ ನಿಂತಿದ್ದಳು; ಅವಳಂತಹ ಕಠಿನ ಸ್ವಭಾವದ ಜನಕ್ಕೆ ಈ ವರ್ತನೆ ಸರ್ವಸಾಮಾನ್ಯ; ನೆರವು ನೀಡಲು ಅವಳಿಗೆ ಇಷ್ಟವಿದ್ದರೂ, ಸ್ವಾಭಾವಿಕವಾಗಿ ಚಾಕಚಕ್ಯತೆಯಿಲ್ಲದೆ ತಾನು ಕೆಲಸಕ್ಕೆ ಕೈ ಹಾಕಿದರೆ ಅದರಿಂದ ತಡೆಯುಂಟಾಗುವ ಸಂಭವವೇ ಹೆಚ್ಚು ಎಂಬ ಅರಿವಿದ್ದಿತು. ಫೀಬೆ, ಹಾಗೂ ಚಹಾ ಕೆಟಲಿನ ನೀರನ್ನು ಕುದಿಸುತ್ತಿದ್ದ ಅಗ್ನಿ– ಇಬ್ಬರೂ ಸಮಸಮವಾಗಿ ಪ್ರಕಾಶಮಾನರಾಗಿದ್ದರು, ಉಲ್ಲಾ ಸಭರಿತರಾಗಿದ್ದರು, ತಮ್ಮ ತಮ್ಮ ಉದ್ಯೋಗದಲ್ಲಿ ಬಲ್ಲಿದರಾಗಿದ್ದರು. ದೀರ್ಘಕಾಲದ ಏಕಾಂತವಾಸದ ಅವಶ್ಯ ಪರಿಣಾಮವಾಗಿ ಸೋಮಾರಿತನ ಹೆಪ್ಸಿಬಾಗೆ ಅಭ್ಯಾಸವಾಗಿಹೋಗಿತ್ತು; ಇನ್ನೊಂದು ಪ್ರಪಂಚದಿಂದಲೋ ಎಂಬಂತೆ ಆ ಸೋಮಾರಿತನದ ಪ್ರಪಂಚದಿಂದ ಅವಳು ನಿಟ್ಟಿಸಿನೋಡುತ್ತಿದ್ದಳು. ತನ್ನ ಹೊಸ ಸಹವಾಸಿ ಬಹುಬೇಗನೆ ಹೊಸ ಪರಿಸ್ಥಿತಿಗೆ ಹೊಂದಿಕೊಂಡು, ತನ್ನ ಉದ್ದೇಶಗಳಿಗೆ ಅನುಗುಣವಾಗಿ ಮನೆಯನ್ನೂ ಅದರ ತುಕ್ಕುಹಿಡಿದ ಎಲ್ಲ ಸಾಮಾನು ಸಲಕರಣೆಗಳನ್ನೂ ಉಪಯೋಗವಾಗುವಂತೆ ಅಳವಡಿಸಿಕೊಂಡಿದ್ದಳು; ಇದನ್ನೆಲ್ಲ ಕಂಡು ವಿನೋದಪಡದೆ ಇರಲು, ಅದರಲ್ಲಿ

"ನೀನು ಯಾರನ್ನು ಕುರಿತು ಹೇಳಿದ್ದು, ಜಡ್ಜ್ ಪಿನ್ಚನ್ನರೇ?" ಎಂದು ಅಚ್ಚರಿಗೊಂಡು ಕೇಳಿದಳು ಫೀಬೆ.

"ಜಡ್ಜ್ ಪಿನ್ಚನ್! ನಾನು ಬದುಕಿರುವಾಗ ಆತ ಇಲ್ಲಿನ ಹೊಸಿಲನ್ನು ಕೂಡ ಮೆಟ್ಟುವುದಿಲ್ಲ! ಇಲ್ಲ, ಇಲ್ಲ! ಆದರೆ, ನಾನು ಯಾರ ವಿಚಾರ ಎತ್ತಿದೆನೋ ಆತನ ಮುಖವನ್ನು ನೀನು ನೋಡುವೆ, ಫೀಬೆ" ಎಂದು ಕೆರಳಿ ಮಾರ್ನುಡಿದಳು ಅವಳ ದಾಯಾದಿ ಅಕ್ಕ.

ಈಗಾಗಲೇ ವರ್ಣಿಸಿರುವ ಸೂಕ್ಷ್ಮಾಕೃತಿಯ ಚಿತ್ರವನ್ನು ಹುಡುಕಿಕೊಂಡು ಅವಳು ಹೊರಟಳು; ಅದನ್ನು ಕೈಲಿ ಹಿಡಿದುಕೊಂಡು ಹಿಂತಿರುಗಿದಳು. ಅದನ್ನು ಫೀಬೆಗೆ ಕೊಟ್ಟು, ಚಿತ್ರವನ್ನು ನೋಡಿ ಪ್ರಭಾವಿತಳಾದ ಆ ಹುಡುಗಿ ಯಾವ ಮನೋಭಾವವನ್ನು ವ್ಯಕ್ತಪಡಿಸುವಳು ಎಂಬ ಬಗೆಗೆ ಒಂದು ವಿಧವಾದ ಅಸೂಯೆಯನ್ನು ತಳೆದು, ಅವಳ ಮುಖಮುದ್ರೆಯನ್ನು ಸೂಕ್ಷ್ಮವಾಗಿ ಗಮನಿಸಿದಳು.

"ಮುಖ ನಿನಗೆ ಇಷ್ಟವಾಗಿದೆಯೋ?" ಎಂದು ಕೇಳಿದಳು ಹೆಪ್ಸಿಬಾ.

"ಅದು ಸೊಸಗಾಸಿದೆ– ಬಹು ಸುಂದರವಾಗಿದೆ!" ಎಂದು ಫೀಬೆ ಮೆಚ್ಚಿ ನುಡಿದಳು. ಗಂಡಸಿನ ಮುಖ ಎಷ್ಟು ಅಂದವಾಗಿರಲು ಸಾಧ್ಯವೋ, ಎಷ್ಟು ಅಂದವಾಗಿರಬೇಕೋ ಅಷ್ಟು ಅಂದವಾಗಿದೆ. ಅದರಲ್ಲಿ ಮಗುವಿನ ಮುಖಭಾವ ತುಸ ಇದೆ– ಆದರೂ ಹುಡುಗು– ಹುಡುಗಾಗಿಲ್ಲ; ಅವನನ್ನು ಕಂಡು ಯಾರಿಗಾದರೂ ಕರುಣೆ ಉಂಟಾಗುತ್ತದೆ! ಅವನಿಗೆ ಯಾವ ದುಃಖವೂ ಅಡಸಕೂಡದು. ಆತನಿಗೆ ಕಷ್ಟ, ದುಃಖ ಒದಗದೆ ಇರಲಿ ಎಂದು ಅವನಿಗಾಗಿ ಯಾರೇ ಆಗಲಿ ಏನು ಬೇಕಾದರೂ ಸಹಿಸಿಯಾರು. ಅಕ್ಕಾ, ಹೆಪ್ಸಿಬಾ, ಆತ ಯಾರು?"

ಅಕ್ಕ ಅವಳ ಕಡೆಗೆ ಬಾಗಿ, ಪಿಸುಮಾತಿನಲ್ಲಿ ಹೇಳಿದಳು:

"ಕ್ಲಿಫರ್ಡ್ ಪಿನ್ಚನ್ನನ ವಿಚಾರ ನೀನು ಎಂದೂ ಕೇಳಿಲ್ಲವೆ?"

"ಎಂದೂ ಕೇಳಿಯೇ ಇಲ್ಲವಲ್ಲಾ! ನೀನು, ನಮ್ಮ ಸೋದರ ಸಂಬಂಧಿ ಜಫ್ರಿ– ನೀವಿಬ್ಬರಲ್ಲದೆ, ಪಿನ್ಚನ್ ವಂಶದವರು ಬೇರೆ ಯಾರೂ ಉಳಿದಿಲ್ಲವೆಂದೇ ನಾನು ಭಾವಿಸಿದ್ದೆ. ಆದರೂ, ಕ್ಲಿಫರ್ಡ್ ಪಿನ್ಚನ್ನನ ಹೆಸರನ್ನು ಕೇಳಿರುವ ಹಾಗೂ ತೋರುತ್ತೆ. ಹೌದು– ನಮ್ಮ ತಂದೆಯೋ ತಾಯಿಯೋ ಹೇಳಿದ್ದನ್ನು ಕೇಳಿರಬೇಕು. ಆದರೆ, ಆತ ಸತ್ತು ಬಹಳ ಕಾಲವಾಗಿರಬೇಕು. ಅಲ್ಲವೆ?" ಎಂದಳು ಫೀಬೆ ಉತ್ತರವಾಗಿ.

ಬಹುಶಃ ಹೆಪ್ಸಿಬಾಳ ತಾರುಣ್ಯದ ಕಾಲದಿಂದಲೂ ಆ ಬಟ್ಟಲುಗಳನ್ನು ಉಪಯೋಗಿಸದೆ ಇದ್ದುದರಿಂದ, ಅವು ಹೊತ್ತಿದ್ದ ಧೂಳಿನ ಹೊರೆ ಅಲ್ಪವೇನಾಗಿರಲಿಲ್ಲ; ಫೀಬೆ ಅದನ್ನು ಎಷ್ಟು ಎಚ್ಚರಿಕೆಯಿಂದಲೂ ನಯವಾಗಿಯೂ ತೊಡೆದುಹಾಕದಳೆಂದರೆ, ಈ ಅಮೂಲ್ಯ ಪಿಂಗಾಣಿ ಸಾಮಾನುಗಳ ಒಡತಿಗೆ ಕೂಡ ಅದರಿಂದ ತೃಪ್ತಿಯಾಯಿತು.

"ಎಂಥ ಸೊಗಸಾದ ಪುಟ್ಟ ಗೃಹಿಣಿ ನೀನು! ಇತರ ಕೆಲಸಗಳನ್ನೂ ನೀನು ಎಷ್ಟೇ ಚೆನ್ನಾಗಿ ಮಾಡುತ್ತೀಯಾ? ಚಹಾಬಟ್ಟಲುಗಳನ್ನು ತೊಳೆಯುವುದರಲ್ಲಿ ಎಷ್ಟು ಗಟ್ಟಿಗಳೋ ಓದುವುದರಲ್ಲಿಯೂ ಅಷ್ಟೇ ಗಟ್ಟಿಗಳಾಗಿದ್ದೀಯಾ?" ಎಂದು ಹೆಪ್ಸಿಬಾ ಏಕಕಾಲದಲ್ಲಿ ಮುಗುಳುನಗೆ ಬೀರುತ್ತಾ, ಹುಬ್ಬು ಗಂಟಿಕ್ಕುತ್ತಾ ಉದ್ಗಾರ ತೆಗೆದಳು; ಅವಳ ಹುಬ್ಬುಗಂಟು ಎಷ್ಟು ತೋರವಾಗಿತ್ತೆಂದರೆ, ಗುಡುಗು– ಮೋಡದ ಕೆಳಗೆ ಸೂರ್ಯನ ಕಿರಣ ಹರಡಿದಂತಿದ್ದಿತು.

ಹೆಪ್ಸಿಬಾ ಕೇಳಿದ ಪ್ರಶ್ನೆಯ ಸ್ವರೂಪದ ಬಗೆಗೆ ನಗುತ್ತಾ ನುಡಿದಳು ಫೀಬೆ: "ಅಷ್ಟೇನೂ ಗಟ್ಟಿಗಳಲ್ಲ ಅಂತ ಕಾಣುತ್ತೆ. ಆದರೆ, ಕಳೆದ ಬೇಸಗೆಯಂದು ನಮ್ಮ ಜಿಲ್ಲೆಯ ಚಿಕ್ಕಮಕ್ಕಳಿಗೆ ನಾನು ಶಾಲಾ ಉಪಾಧ್ಯಾಯಿನಿಯಾಗಿದ್ದೆ; ಇನ್ನೂ ಹಾಗೆಯೇ ಇರಬಹುದಾಗಿತ್ತು."

"ಓಹೋ! ಹಾಗಿದ್ದರೆ ಬಹಳ ಒಳ್ಳೆಯದು! ಆದರೆ ಇವೆಲ್ಲಾ ನಿನಗೆ ನಿನ್ನ ತಾಯಿಯ ರಕ್ತದಿಂದ ಹರಿದುಬಂದಿರಬೇಕು. ಪಿನ್ಚನ್ ವಂಶದಲ್ಲಿ ಯಾರಿಗೂ ಈ ಕಡೆ ಪ್ರವೃತ್ತಿಯಿದ್ದದ್ದು ನನಗೆ ಎಂದೂ ಕಂಡುಬಂದಿಲ್ಲ" ಎಂದು ಆ ಕನ್ಯಾಮಹಿಳೆ ಉಸುರಿದಳು, ಮೈಯನ್ನು ನೆಟ್ಟಗೆ ಮಾಡಿಕೊಳ್ಳುತ್ತ.

ಜನ ತಮ್ಮಲ್ಲಿರುವ ಸಹಜ ಶಕ್ತಿಸಾಮರ್ಥ್ಯಗಳ ವಿಚಾರದಲ್ಲಿ ಹೇಗೋ ಹಾಗೆ, ಅಥವಾ ಅದಕ್ಕಿಂತ ಹೆಚ್ಚಾಗಿ, ತಮ್ಮ ಕುಂದುಕೊರತೆಗಳ ಬಗೆಗೂ ಸಾಮಾನ್ಯವಾಗಿ ಜಂಬಪಡುತ್ತಾರೆ. ಇದು ಬಹಳ ವಿಚಿತ್ರ, ಆದರೆ ಅಷ್ಟೇ ಸತ್ಯ. ಪಿನ್ಚನ್ ವಂಶದವರು ಯಾವುದೇ ಉಪಯುಕ್ತ ಉದ್ದೇಶವನ್ನು ಸಾಧಿಸುವ ವಿಚಾರದಲ್ಲಿ ಜನ್ಮತಃ ಅಸಮರ್ಥರು ಎಂಬುದಾಗಿ ಹೆಪ್ಸಿಬಾ ತಳೆದಿದ್ದ ಅಭಿಪ್ರಾಯವೇ ಇದಕ್ಕೆ ಸಾಕ್ಷಿ. ಈ ಹುಟ್ಟುಗುಣ ವಂಶಪಾರಂಪರ್ಯವಾದ ಲಕ್ಷಣ ಎಂದು ಅವಳ ಎಣಿಕೆ; ಆ ಕಾರಣದಿಂದ ಇರಬಹುದು, ಅದೊಂದು ವಂಶದ ಜಾಡ್ಯವಾಗಿಯೇ ಕಾಣುತ್ತಿತ್ತು; ಬಹಳ ಕಾಲ ಸಮಾಜದ ಸಾಮಾನ್ಯ ಮಟ್ಟಕ್ಕಿಂತ ಬಹಳಮೇಲೆ ನೆಲಸಿರುವ ಕುಟುಂಬಗಳಲ್ಲಿ ಈ ಜಾಡ್ಯದಂತಹ ಗುಣ ಸಂಭವಿಸುವುದು ಸಹಜ.

ಆಸಕ್ತಿತೋರದೆ ಇರಲು ಹೆಪ್ಸಿಬಾಗೆ ಸಾಧ್ಯವಾಗಲಿಲ್ಲ. ಫೀಬೆ ಏನನ್ನೇ ಮಾಡಲಿ, ಅದನ್ನು ಉದ್ದೇಶಪೂರ್ವಕಪ್ರಯತ್ನವಿಲ್ಲದೆ ಸರಾಗವಾಗಿ ಮಾಡಿಬಿಡುತ್ತಿದ್ದಳು; ಅವಳ ಕೆಲಸದ ನಡುವೆ ಆಗಾಗ್ಗೆ ಹಾಡು ಹೊಮ್ಮಿ ಉಲಿಯುತ್ತಿದ್ದು, ಅದು ಕೇಳುವುದಕ್ಕೆ ಅತ್ಯಂತ ಸವಿಯಾಗಿರುತ್ತಿತ್ತು. ಅವಳ ಸಹಜವಾದ ಈ ಗಾನಮಾಧುರ್ಯದಿಂದಾಗಿ, ಒಂದು ನೆರಳು ಕೊಡುವ ವೃಕ್ಷದ ಮೇಲಿನ ಹಕ್ಕಿಯಂತೆ ಕಾಣುತ್ತಿದ್ದಳು ಫೀಬೆ; ಇನ್ನೊಮ್ಮೆ ಸೊಗಸಾದ ಚಿಕ್ಕ ಕಣಿವೆಯಲ್ಲಿ ಕಿರುತೊರೆಯೊಮದು ಕೆಲವುವೇಳೆ ಹಾಡುತ್ತಾ ಹರಿಯುವಹಾಗೆ, ಅವಳ ಹೃದಯದ ಮೂಲಕ ಬಾಳ ಹೊಳೆಯೇ ಉಲಿಯುತ್ತಾ ಹರಿಯುತ್ತಿದೆಯೋ ಎಂಬ ಭಾವನೆಯನ್ನು ಉಂಟುಮಾಡುತ್ತಿದ್ದಳು. ಅವಳ ಈ ಲಕ್ಷಣವು, ತನ್ನ ಚಟುವಟಿಕೆಯಲ್ಲಿಯೇ ನಲಿವನ್ನು ಕಾಣುತ್ತಾ ಅದನ್ನು ಅಂದಗೊಳಿಸುವ ಕಾರ್ಯಶೀಲವಾದ ಸ್ವಭಾವದ ಉತ್ಸಾಹಕ್ಕೆ ಸಾಕ್ಷಿಯಾಗಿತ್ತು; ಅದೊಂದು ಹೊಸ ಇಂಗ್ಲೆಂಡಿನ ಸ್ವಭಾವ ಲಕ್ಷಣ– ಪ್ಯೂರಿಟನ್ ಮತದವರ ಕಾಠಿನ್ಯದ ಬಂಡೆಗಲ್ಲಿನ ನಡುವಣ ಚಿನ್ನದ ಎಳೆ.

ವಂಶ ಲಾಂಛನವನ್ನು ಕೆತ್ತಿದ್ದ ಕೆಲವು ಹಳೆಯ ಬೆಳ್ಳಿಯ ಚಮಚಗಳನ್ನೂ, ಪಿಂಗಾಣಿಯ ಚಹಾಬಟ್ಟಲು ತಟ್ಟೆಗಳ ಅಣಿಯನ್ನೂ ಹೆಪ್ಸಿಬಾ ಹೊರಕ್ಕೆ ತಂದಳು; ಪಿಂಗಾಣಿ ಪಾತ್ರೆಗಳ ಮೇಲೆ ವಿಚಿತ್ರವಾಧ ಭೂದೃಶ್ಯ ಚಿತ್ರದಲ್ಲಿ ವಿಚಿತ್ರಾಕೃತಿಯಲ್ಲಿದ್ದ ಮಾನವ ಮೃಗಪಕ್ಷಿಗಳನ್ನು ಬಣ್ಣದಲ್ಲಿ ಚಿತ್ರಿಸಲಾಗಿತ್ತು. ಈ ಚಿತ್ರಿತ ಜನ ತಮ್ಮದೇ ಆದ ಪ್ರಪಂಚದಲ್ಲಿದ್ದ, ವಿಲಕ್ಷಣ ಹಾಸ್ಯಗಾರರಾಗಿದ್ದರು; ಚಹಾಪಾತ್ರೆಯೂ ಸಣ್ಣ ಬಟ್ಟಲುಗಳೂ ಚಹಾಕುಡಿಯುವ ಪದ್ಧತಿಯಷ್ಟೇ ಪುರಾತನವಾಗಿದ್ದರೂ, ವರ್ಣದ ದೃಷ್ಟಿಯಿಂದ ಅವುಗಳ ಚಿತ್ರಪ್ರಪಂಚ ವಿಶೇಷ ಪ್ರಕಾಶಮಾನವಾಗಿ, ಇನ್ನೂ ಮಾಸದೆ ಇದ್ದಿತು.

ಹೆಪ್ಸಿಬಾ ಫೀಬೆಗೆ ಹೀಗೆ ತಿಳಿಸಿದಳು: "ನಿನ್ನ ಮುತ್ತಜ್ಜಿಯ ಮುತ್ತಜ್ಜಿಯ ಮುತ್ತಜ್ಜಿಯ ಮುತ್ತಜ್ಜಿ ಮದುವೆಯಾದಾಗ ಆಕೆಗೆ ಕೊಟ್ಟವು ಈ ಬಟ್ಟಲುಗಳು. ಆಕೆ ಡೆವನ್‌ಪೋರ್ಟಿನವಳು. ಒಳ್ಳೆಯ ವಂಶಕ್ಕೆ ಸೇರಿದವಳು; ಹೊಸದಾಗಿ ನೆಲಸಿದ ಪ್ರಾಂತದಲ್ಲಿ ಕಣ್ಣಿಗೆ ಬಿದ್ದ ಮೊದಲ ಚಹಾ ಕಪ್ಪುಗಳು ಇವೇ ಎನ್ನಬಹುದು; ಅವುಗಳಲ್ಲಿ ಒಂದು ಒಡೆದುಹೋದರೂ ಸರಿಯೇ, ಅದರೊಂದಿಗೆ ನನ್ನ ಹೃದಯವೂ ಒಡೆದುಹೋಗುವುದು. ಆದರೆ, ಒಡೆಹೋಗದೆಯೇ ನನ್ನ ಹೃದಯ ಏನೇನು ಅನುಭವಿಸಿದೆ ಎಂಬುದನ್ನು ನೆನೆದರೆ, ಒಡೆದುಹೋಗುವ ಸ್ವಭಾವದ ಚಹಾಬಟ್ಟಲಿನ ವಿಚಾರವಾಗಿ ಹಾಗೆ ಮಾತನಾಡುವುದು ಅವಿವೇಕ."

ವೃದ್ಧ ಶ್ರೀಮಂತೆ ಫೀಬೆಯ ಹಿಂದೆಯೇ ಕದ್ದುಹೋಗಿ, ಅವಳು ತಾನು ಕೈಕೊಂಡ ಕಾರ್ಯವನ್ನು ಹೇಗೆ ನಿರ್ವಹಿಸುತ್ತಾಳೆ ಎಂಬುದನ್ನು ಗಮನಿಸುವುದಕ್ಕಾಗಿ ನಡವೆಯಲ್ಲಿ ನಿಂತು ಅಂಗಡಿಯ ಕಡೆ ಹಣಿಕಿ ನೋಡಿದಳು. ಅದು ಸ್ವಲ್ಪ ತೊಡಕಿನ ವ್ಯವಹಾರವಾಗಿತ್ತು. ಬಹಳ ಮುದುಕಿಯಾದ ಹೆಂಗಸೊಬ್ಬಳು ಅಂಗಡಿಯ ಸರಕಿಗೆ ಬದಲಾಗಿ ಕೊಟ್ಟು ಅದನ್ನು ಕೊಂಡುಕೊಳ್ಳಲು ಒಂದಿಷ್ಟು ನೂಲನ್ನು ತಂದಿದ್ದಳು; ಅವಳು ಒಂದು ಬಿಳಿಯ ಮೋಟು ಕವುದಿಯನ್ನೂ ಹಸುರು ಒಳಲಂಗವನ್ನೂ ಮಲಗುವಾಗ ಹಾಕಿಕೊಳ್ಳುವ ಟೋಪಿಯನ್ನೂ ಧರಿಸಿದ್ದಳು; ಕೊರಳಿಗೆ ಚಿನ್ನದ ಗುಂಡುಗಳ ಸರವೊಂದನ್ನು ಹಾಕಿಕೊಂಡಿದ್ದಳು. ಬಹಳ ಕಾಲದಿಂದ ಮನ್ನಣೆಗಳಿಸಿದ್ದ ನೂಲುವ ಚಕ್ರವನ್ನು (ಚರಕವನ್ನು) ಇನ್ನೂ ಸದಾ ಗಿರಗಿರ ತಿರುಗಿಸುತ್ತ ಇಟ್ಟುಕೊಂಡಿದ್ದವರ ಪೈಕಿ ಊರಿನವರಲ್ಲೆಲ್ಲಾ ಬಹುಶಃ ಇವಳೇ ಕಟ್ಟ ಕಡೆಯವಳು. ಆ ಮುದುಕಿಯ ಗೊರಗುಟ್ಟುವ ಟೊಳ್ಳು ಶಬ್ದವೂ ಫೀಬೆಯ ಇಂಪಾದ ಧ್ವನಿಯೂ ಸಂಭಾಷಣೆಯಲ್ಲಿ ಹೆಣೆದುಕೊಂಡು ಒಂದು ಎಳೆಯಾಗಿ ಬೆರೆಯುವುದನ್ನು ಕೇಳುವುದು ಪ್ರಯೋಜನಕರವಾಗಿತ್ತು; ಅವರಿಬ್ಬರ ಶರೀರಾಕೃತಿಗಳನ್ನು ಪರಸ್ಪರ ಹೋಲಿಸುವುದು ಇನ್ನೂ ಮೇಲಾದುದು; ಒಬ್ಬರ ಆಕೃತಿ ಹೂವಿನಷ್ಟು ಹಗುರ, ಚೆಂದದರಳು; ಇನ್ನೊಬ್ಬರದು, ದುರ್ಬಲ ಮತ್ತು ಕಾಂತಿಹೀನ; ಒಂದು ದೃಷ್ಟಿಯಿಂದ, ಇಬ್ಬರ ನಡುವೆ ಇದ್ದದ್ದು ಮಾರಾಟದ ಮೇಜು ಮಾತ್ರ; ಇನ್ನೊಂದು ದೃಷ್ಟಿಯಲ್ಲಿ ಎಪ್ಪತ್ತು ವರ್ಷಗಳಿಗಿಂತ ಹೆಚ್ಚಿನ ಅಂತರ.

ಗಿರಾಕಿ ಹೊರಟುಹೋದಮೇಲೆ, ಫೀಬೆ ನಗುತ್ತ ಕೇಳಿದಳು; ಚೆನ್ನಾಗಿ ವ್ಯಾಪಾರ ಮಾಡಲಿಲ್ಲವೆ?"

"ನಿಜವಾಗಿಯೂ, ಸೊಗಸಾಗಿ ಮಾಡಿದೆ, ಮಗೂ! ಅದನ್ನು ಅಷ್ಟೊಂದು ಚೆನ್ನಾಗಿ ನಿರ್ವಹಿಸುವುದಕ್ಕೆ ನನ್ನ ಕೈಲಿ ಆಗುತ್ತಿರಲಿಲ್ಲ. ನೀನು ಹೇಳುವ ಹಾಗೆ, ಅದು ನಿನಗೆ ತಾಯಿಯ ಕಡೆಯಿಂದ ಬಂದ ಜಾಣತನವಾಗಿರಬೇಕು" ಎಂದು ಹೆಪ್ಸಿಬಾ ಉತ್ತರಕೊಟ್ಟಳು. ಕಾರ್ಯಚಟುವಟಿಕೆಯಿಂದ ಗಿಜಿಗುಟ್ಟುವ ಈ ಪ್ರಪಂಚದಲ್ಲಿ ತಮ್ಮ ಪಾತ್ರವನ್ನು ತಕ್ಕಂತೆ ವಹಿಸಲು ಸಂಕೋಚಪಡುವ ಇಲ್ಲವೆ ಹೊಂದಕೊಳ್ಳದ ಜನರು ಜೀವನನಾಟಕದ ಸ್ಫೂರ್ತಿದಾಯಕ ದೃಶ್ಯಗಳಲ್ಲಿ ನಿಜವಾಗಿ ಪಾತ್ರವಹಿಸುವವರ ಬಗೆಗೆ ತೋರುವ ಮೆಚ್ಚಿಗೆ ಬಹು ಪ್ರಾಮಾಣಿಕವಾದುದು; ವಾಸ್ತವವಾಗಿ ಎಷ್ಟು ಪಾಮಾಣಿಕ ಎಂದರೆ, ಮೊದಲು ಹೇಳಿದ ಸಂಕೋಚ ಸ್ವಭಾವದ ಜನ ಹಾಗೆ ಮೆಚ್ಚುವುದರಿಂದ ತಮ್ಮ ಸ್ವಾಭಿಮಾನಕ್ಕೆ ಭಂಗವಿಲ್ಲವೆಂದು

ಉಪಾಹಾರದ ಮೇಜವನ್ನು ಅವರು ಬಿಟ್ಟು ಏಳುವ ಮುನ್ನ, ಅಂಗಡಿಯ ಗಂಟೆ ಬಲವಾಗಿ ಬಾರಿಸಿತು; ಆಗ ಹೆಪ್ಸಿಬಾ ತಾನು ಕುಡಿಯುತ್ತಿದ್ದ ಚಹದ ಕಡೆಯ ಸಲದ ಬಟ್ಟಲಲ್ಲಿ ಉಳಿದದ್ದನ್ನು ಹಾಗೆಯೇ ಕೆಳಗಿಟ್ಟಳು; ನಿರಾಶೆಯಿಂದ ವಿವರ್ಣವಾದ ಅವಳ ಮುಖದ ಆಗಿನ ನೋಟ ನಿಜವಾಗಿ ಕರುಣಾಜನಕವಾಗಿ ಕಾಣುತ್ತಿತ್ತು. ಹಿತಕರವಲ್ಲದ ಉದ್ಯೋಗವನ್ನು ಮಾಡುವುದಕ್ಕೆ ತೊಡಗಿದಾಗ, ಮೊದಲನೆಯ ದಿನಕ್ಕಿಂತ ಎರಡನೆಯದು ಸಾಮಾನ್ಯವಾಗಿ ಹೆಚ್ಚು ಅನಿಷ್ಟವಾದದ್ದು; ಕೈಕಾಲುಗಳಿಗೆ ಹಿಂದೆ ಉಂಟಾದ ಹಿಂಸೆಯ ನೋವನ್ನೆಲ್ಲ ಸಹಿಸಿಕೊಂಡು ಮತ್ತೆ ಅದೇ ಚಿತ್ರಹಿಂಸೆಯ ಸ್ಥಳಕ್ಕೆ ಹಿಂದಿರುಗುತ್ತೇವೆ. ಗದ್ದಲಮಾಡಿ ರೇಗಿಸುವ ಈ ಚಿಕ್ಕ ಗಂಟೆಗೆ ಎಂದೇ ಆಗಲಿ ಒಗ್ಗಿಕೊಳ್ಳುವುದು ಅಸಾಧ್ಯ ಎಂಬ ಬಗೆಗೆ ಹೆಪ್ಸಿಬಾ ಸಂಪೂರ್ಣವಾಗಿ ಸಮಾಧಾನಗೊಂಡಿದ್ದಳು. ಅದು ಎಷ್ಟೇ ಸಲ ಬಾರಿಸಲಿ, ಅದರ ಶಬ್ದ ಯಾವಾಗಲೂ ಅವಳ ನರಮಂಡಲಕ್ಕೆ ಹಠಾತ್ತನೆ ಒರಟೊರಟಾಗಿ ಪೆಟ್ಟುಕೊಡುವಂತೆ ಕರ್ಕಶವಾಗಿ ಕೇಳಿಬರುತ್ತಿತ್ತು. ಅದರಲ್ಲಿಯೂ ಈಗ, ತನ್ನ ಲಾಂಛನಲಕ್ಷಿತ ಚಮಚಗಳನ್ನು ಪುರಾತನ ಪಿಂಗಾಣಿ ಪಾತ್ರೆ ಪರಟೆಗಳನ್ನೂ ಮುಂದಿಟ್ಟುಕೊಂಡು ಶ್ರೀಮಂತಿಕೆಯ ಭಾವನೆಯಿಂದ ಬೀಗುತ್ತಿದ್ದಾಗ, ಗಿರಾಕಿಯೊಬ್ಬನನ್ನು ಎದುರುಗೊಳ್ಳುವುದೆಂದರೆ ಅವಳಿಗೆ ಹೇಳಲಾಗದಷ್ಟು ಬೇಸರಿಕೆಯಾಯಿತು.

ಫೀಬೆ ಲಘುವಾಗಿ ಮೇಲಕ್ಕೆದ್ದು, "ನೀನು ತೊಂದರೆ ತೆಗೆದುಕೊಳ್ಳಬೇಡ, ಅಕ್ಕಾ! ಈ ಹೊತ್ತು ನಾನು ಅಂಗಡಿ ನೋಡಿಕೊಳ್ಳುತ್ತೇನೆ" ಎಂದು ಗಟ್ಟಿಯಾಗಿ ಹೇಳಿದಳು.

ಅದಕ್ಕೆ ಹೆಪ್ಸಿಬಾ, "ಮಗೂ, ನೀನು ನೋಡಿಕೊಳ್ಳುವೆಯಾ! ಹಳ್ಳಿಯ ಪುಟ್ಟ ಹುಡುಗಿಗೆ ಇಂಥ ವಿಷಯಗಳು ಹೇಗೆ ತಿಳಿದಿರಲು ಸಾಧ್ಯ?" ಎಂದು ಉದ್ಗಾರ ತೆಗೆದಳು.

"ಓ, ನಮ್ಮ ಹಳ್ಳಿಯ ಅಂಗಡಿಯಲ್ಲಿ ನಮ್ಮ ಮನೆಯ ವ್ಯಾಪಾರವನ್ನೆಲ್ಲಾ ಮಾಡುತ್ತಿದ್ದವಳು ನಾನೆ. ಅಲ್ಲದೆ, ವಿಚಿತ್ರ ವಸ್ತುಗಳ ಮಾರಾಟದ ಸಂತೆಯಲ್ಲಿ ನಾನೂ ಒಂದು ಮಾರಾಟದ ಮೇಜಿನ ಮುಂದೆ ಕುಳಿತಿದ್ದೇನೆ. ಎಲ್ಲರಿಗಿಂತಲೂ ಚೆನ್ನಾಗಿ ಮಾರಾಟಮಾಡಿದ್ದೇನೆ. ಇವುಗಳನ್ನೆಲ್ಲ ಕಲಿಯುವುದಕ್ಕಾಗುವುದಿಲ್ಲ; ಅದೆಲ್ಲಾ ತಾನಾಗಿ ತಾಯಿಯ ರಕ್ತದೊಂದಿಗೆ ಬರುವ ಒಂದು ಜಾಣತನ ಎಂದು ನನಗೆ ತೋರುತ್ತೆ" ಎಂದು ಫೀಬೆ ಮುಗುಳುನಗೆ ನಗುತ್ತಾ ಹೇಳಿ, ಮುಂದುವರಿಸಿದಳು: "ನಾನು ಎಂಥ ಪುಟ್ಟ ಗೃಹಿಣಿಯೋ ಅಂಥ ಮಾರಾಟಗಾತಿಯೂ ಆಗಬಲ್ಲೆ, ನೀನೇ ನೋಡುವಿಯಂತೆ."

ಅದರ ಅಗತ್ಯವಾದ ಭಾಗವೆನಿಸಲು ಬೇಕಿಲ್ಲದ ಎಷ್ಟೋ ಗುಣಗಳಿರುತ್ತವೆ; ಅವುಗಳೊಂದಿಗೆ ಶ್ರೀಮಂತಮಹಿಳೆಗೆ ಉಚಿತವಾದ ಹಲವಾರು ಗುಣಗಳೂ ಬೆರೆತಿರುವಂತಹ ವ್ಯಕ್ತಿಯನ್ನು ಹೊಸ ಇಂಗ್ಲೆಂಡಿನಲ್ಲಿ ಎಲ್ಲಿಯೂ ಸಂಧಿಸುವುದು ಅಸಾಧ್ಯ. 'ಶ್ರೀಮಂತೆ' ಎಂಬ ಕಲ್ಪನೆಗಂತೂ ಅವಳ ಶರೀರಾಕೃತಿ ಖಂಡಿತವಾಗಿ ಒಪ್ಪುತ್ತಿರಲಿಲ್ಲ; ಮಗುವಿನದು ಎನ್ನುವಷ್ಟು ಸಣ್ಣ ಆಕಾರ; ಒಂದು ಕಡೆ ಸುಮ್ಮನೆ ಇರುವುದಕ್ಕಿಂತ ಚಲಿಸುತ್ತಿರುವುದೇ ಸುಲಭ ಎಂಬಂತಹ ಚಟುಲತೆ. ಅವಳ ಮುಖವಾದರೂ ಅಷ್ಟೆ– ಎರಡು ಕಡೆಯೂ ಕಂದುಬಣ್ಣದ ಕೂದಲ ಉಂಗುರಗಳು, ಸ್ವಲ್ಪ ಮಟ್ಟಿಗೆ ಚುರುಕಾದ ಮೂಗು, ಮುಖದ ಹಿತಕರವಾದ ಅರಳು, ಸ್ಪಷ್ಟವಾಗಿ ಕಾಣುವ ಬಿಸಿಲುಗಂದುಬಣ್ಣದ ಛಾಯೆ, ಮತ್ತು ಐದಾರು ಕಂದು ಬಣ್ಣದ ಮಚ್ಚೆಗಳು– ಇವೆಲ್ಲ ಏಪ್ರಿಲ್ ತಿಂಗಳ ಬಿಸಿಲು ಗಾಳಿಗಳೊಂದಿಗೆ ಅವಳು ಬೆಳಸಿದ್ದ ಕೆಳೆಯ ನೆನಪುಗಳಾಗಿದ್ದುವು– ಈ ಲಕ್ಷಣಗಳನ್ನುಳ್ಳ ಅವಳ ಮುಖ ಅವಳನ್ನು ಚೆಲುವೆ ಎಂದು ಕರೆಯಲು ನಮಗೆ ಖಚಿತವಾಗಿ ಅಧಿಕಾರಕೊಡುವಂಥದಾಗಿರಲಿಲ್ಲ. ಆದರೆ ಅವಳ ಕಣ್ಣುಗಳಲ್ಲಿ ಕಾಂತಿ ಮತ್ತು ಗಂಭೀರತೆ– ಎರಡೂ ಇದ್ದುವು. ಅವಳು ಬಹಳ ಅಂದವಾಗಿದ್ದಳು; ಹಕ್ಕಿಯಷ್ಟೇ ಮನೋಹರವಾಗಿದ್ದಳು; ಮಿನುಮಿನುಗುವ ಎಲೆಗಳ ನೆರಳಿನ ಬಲೆಯ ಮೂಲಕ ತೂರಿಬಂದು ನೆಲದಮೇಲೆ ಬೀಳುವ ಸೂರ್ಯಕಿರಣದ ಹಾಗೆ, ಅಥವಾ ಸಂಧ್ಯಾಕಾಲವು ಸಮೀಪಿಸುತ್ತಿರುವಾಗ ಗೋಡೆಯಮೇಲೆ ಹೊಳೆದು ನರ್ತಿಸುವ ಬೆಂಕಿಬೆಳಕಿನ ಕಿರಣದ ಹಾಗೆ, ಮನೆಯಲ್ಲಿರುವಂದು ಸೊಗಸಾಗಿ ಕಾಣುತ್ತಿದ್ದಳು. ಶ್ರೀಮಂತಮಹಿಳೆಯರ ಶ್ರೇಣಿಯಲ್ಲಿ ನಿಲ್ಲಲು ಅವಳಿಗೆ ಅಧಿಕಾರವುಂಟೆ ಎಂಬುದನ್ನು ಚರ್ಚಿಸುವ ಬದಲು, ಶ್ರೀಮಂತೆ ಮಹಿಳೆಯರೇ ಇಲ್ಲದ ಸಮಾಜದ ಪರಿಸ್ಥಿತಿಯಲ್ಲಿ (ಅಂಥ ಪರಿಸ್ಥಿತಿ ಒಂದಿದ್ದರೆ) ದೊರಕುವ ಸ್ತ್ರೀಲಾವಣ್ಯದ ಒಂದು ನಿದರ್ಶನ ಎಂದು ಫೀಬ್ಬೆಯನ್ನು ಪರಿಗಣಿಸುವುದು ಮೇಲು. ಅಂಥ ಎಡೆಯಲ್ಲಿ ಹೆಂಗಸಿನ ಕರ್ತವ್ಯವೆಂದರೆ, ಮನೋಹರವಾದ ಮತ್ತು ಸಂತೋಷದಿಂದ ಕೂಡಿದ ವಾತಾವರಣದಲ್ಲಿ ಪ್ರಯೋಜನಕರವಾದ ಗೃಹವ್ಯವಹಾರಗಳ ನಡುವೆ ಓಡಾಡುವುದು, ಅವಕ್ಕೆಲ್ಲ ಒಂದು ಮೆರುಗನ್ನು ಕೊಡುವುದು; ತಪ್ಪಲೆಗಳನ್ನೂ ಕೆಟಲುಗಳನ್ನೂ ತಿಕ್ಕಿ ಬೆಳಗುವುದಾದರೂ ಸರಿಯೇ, ಗೃಹಕೃತ್ಯಕ್ಕೆ ಅತ್ಯಂತ ಅಗತ್ಯವಾದ ಕಾರ್ಯಗಳವು.

ಇಂಥದಾಗಿದ್ದಿತು ಫೀಬೆಯ ಕಾರ್ಯಕ್ಷೇತ್ರ. ಇನ್ನೊಂದು ಕಡೆ, ಅಭಿಜಾತೆಯೂ ವಿದ್ಯಾವಂತೆಯೂ ಆದ ಮಹಿಳೆಯೊಬ್ಬಳನ್ನು ಹುಡುಕಬೇಕಾದರೆ ಇದೋ ನಮ್ಮ

ಸಂತೋಷದಿಂದ ಒಪ್ಪಿಕೊಳ್ಳುತ್ತಾರೆ; ಏಕೆಂದರೆ, ಕಾರ್ಯಚಟುವಟಿಕೆಯ ಮತ್ತು ಶಕ್ತಿಸಾಮರ್ಥ್ಯದ ಆ ಗುಣಗಳಿಗೂ ಇತರ ಗುಣಗಳಿಗೂ ಹೊಂದಿಕೆಯಾಗುವುದಿಲ್ಲ ವೆಂದೂ, ಅವಕ್ಕಿಂತ ಇವೇ ಮೇಲಾದುವು ಹಾಗು ಹೆಚ್ಚು ಮುಖ್ಯವಾದವು ಎಂದೂ ಅವರ ಭಾವನೆ. ಈ ರೀತಿ, ಅಂಗಡಿಯನ್ನು ನಿರ್ವಹಿಸುವುದರಲ್ಲಿ ಫೀಬೆಗೆ ಇದ್ದ, ತನಗಿಂತ ಮೇಲಾದ ಅಪಾರ ಶಕ್ತಿ ಸಾಮರ್ಥ್ಯಗಳನ್ನು ಒಪ್ಪಿಕೊಳ್ಳುವುದರಲ್ಲಿ ಹೆಪ್ಸಿಬಾಗೆ ತುಂಬ ತೃಪ್ತಿಯೆ ಇದ್ದಿತು. ನಷ್ಟವಾಗಬಹುದೆಂಬ ಹೆದರಿಕೆ ಹುಟ್ಟಿಸುವಷ್ಟು ಬಂಡವಾಳ ಹಾಕದೆ, ವ್ಯಾಪಾರದ ವಹಿವಾಟನ್ನು ಹೆಚ್ಚಿಸಿ ಅದನ್ನು ಲಾಭದಾಯಕವಾಗಿ ಮಾಡುವ ಬೇರೆ ಬೇರೆ ವಿಧಾನಗಳ ಬಗೆಗೆ ಅವಳು ನೀಡಿದ ಸಲಹೆಯನ್ನು ಹೆಪ್ಸಿಬಾ ಕಿವಿಗೊಟ್ಟು ಆಲಿಸಿದಳು. ಅಲ್ಲದೆ, ಈ ಗ್ರಾಮಕನ್ಯೆ– ದ್ರವರೂಪದ ಹಾಗು ಬಿಲ್ಲೆಯ ರೂಪದ ಹುದುಗನ್ನು ತಯಾರಿಸುವುದಕ್ಕೂ; ಅಮೃತ ಸಮಾನವಾದ ರುಚಿಯುಳ್ಳದ್ದೂ ಅಪೂರ್ವ ಜೀರ್ಣಕಾರಿ ಗುಣಗಳನ್ನುಳ್ಳದ್ದೂ ಆದ ಒಂದು ವಿಧವಾದ ಬಿಯರ್ ಮದ್ಯವನ್ನು ತಯಾರಿಸುವುದಕ್ಕೂ; ಯಾರೇ ಆಗಲಿ, ಒಂದು ಸಲ ರುಚಿನೋಡಿದರೆ ಮತ್ತೊಮ್ಮೆ ರುಚಿನೋಡಲು ಆಸೆಪಡುವಂತಹ ಕೆಲವು ಸಣ್ಣ ಮಸಾಲೆ ರೊಟ್ಟಿಗಳನ್ನು ಸುಟ್ಟು ಮಾರಾಟಕ್ಕಾಗಿ ಪ್ರದರ್ಶಿಸುವುದಕ್ಕೂ ಅವಳು ಒಪ್ಪಿದಳು. ಯಾವುದಕ್ಕೂ ಸಮ್ಮತಿಸುವ ಮನಸ್ಸು ಹಾಗೂ ಕುಶಲತೆಯ ಕೈಕೆಲಸ– ಇವಕ್ಕೆ ಸಾಕ್ಷಿಯಾದ ಅವಳ ಎಲ್ಲ ಕೆಲಸ ಕಾರ್ಯಗಳೂ ಆ ಶ್ರೀಮಂತ ಚಿಲ್ಲರೆ ವ್ಯಾಪಾರಿಗೆ ಬಹಳ ಸಮ್ಮತವಾಗಿದ್ದುವು; ಎಷ್ಟರವರೆಗೆ ಎಂದರೆ– ನಿಷ್ಕರುಣೆಯ ಮುಗುಳುನಗೆ ನಗುತ್ತ, ಅರ್ಧಸಹಜವಾದ ರೀತಿಯಲ್ಲಿ ನಿಟ್ಟುಸಿರು ಬಿಡುತ್ತ, ಆಶ್ಚರ್ಯ ಕನಿಕರ ಹಾಗೂ ಹೆಚ್ಚುತ್ತಿರುವ ವಿಶ್ವಾಸ ಇವನ್ನುಳ್ಳ ಮನೋಭಾವದೊಡನೆ:

"ಎಂಥ ಸೊಗಸಾದ ಪುಟ್ಟ ಹುಡುಗಿ! ಅವಳ ಶ್ರೀಮಂತಮಹಿಳೆ ಎನ್ನಿಸಕೊಳ್ಳಲೂ ಸಾಧ್ಯವಾಗಿದ್ದಿದ್ದರೆ ಇನ್ನೆಷ್ಟು ಚೆನ್ನಾಗಿರುತ್ತಿತ್ತು! ಆದರೆ ಅದು ಸಾಧ್ಯವಿಲ್ಲ! ಫೀಬೆ ಪಿನ್ಚನ್ ವಂಶಕ್ಕೆ ಸೇರಿದವಳಲ್ಲ. ಅವಳು ಸಂಪೂರ್ಣವಾಗಿ ತನ್ನ ತಾಯಿಯನ್ನು ಹೋಲುತ್ತಾಳೆ"

–ಎಂದು ತನ್ನಲ್ಲಿ ತಾನು ಗೊಣಗುಟ್ಟಿಕೊಳ್ಳುವುದಕ್ಕೆ ಸಾಧ್ಯವಾಗಿರುವವರೆಗೆ.

ಫೀಬೆ ಶ್ರೀಮಂತಮಹಿಳೆಯಾಗಿದ್ದಳೆ ಅಥವಾ ಆಗಿರಲಿಲ್ಲವೆ ಎಂಬ ವಿಷಯವನ್ನು ಬಹುಶಃ ನಿರ್ಧರಿಸುವುದು ಕಷ್ಟ; ಆದರೆ, ನ್ಯಾಯದೃಷ್ಟಿಯುಳ್ಳ ಹಾಗೂ ಸ್ವಸ್ಥವಾದ ಯಾವ ಮನಸ್ಸಿನ ಮುಂದೆಯೂ ಆ ವಿಷಯ ತೀರ್ಮಾನಕ್ಕೆ ಬಂದು ನಿಲ್ಲುತ್ತಿರಲಿಲ್ಲ. ಶೀಲಸ್ವಭಾವದಲ್ಲಿ (ಪರಸ್ಪಪ ಹೊಂದಿಕೆಯಾಗುವಂತಿದ್ದರೂ)

ಝಣಿಸುತ್ತ ಬಂದು ಬಿದ್ದಿದ್ದ ಬೆಳ್ಳಿಯ ನಾಣ್ಯಗಳೂ ಬೆರೆತಿದ್ದ, ತಾಮ್ರದ ನಾಣ್ಯಗಳ ಹೊಲಸು ರಾಶಿಯನ್ನು ಎಣಿಸಿದಳು.

ಚಿಕ್ಕ ಮಾರಾಟಗಾತಿ ಗಟ್ಟಿಯಾಗಿ ಹೇಳಿದಳು: "ಅಕ್ಕ ಹೆಪ್ಸಿಬಾ, ಹೊಸ ಸರಕನ್ನು ತಂದು ದಾಸ್ತಾನು ಮಾಡಬೇಕು. ಶುಂಠಿರೊಟ್ಟಿಯ ಬೊಂಬೆಗಳೆಲ್ಲಾ ಖರ್ಚಾಗಿ ಹೋಗಿವೆ; ಹಾಗೆಯೆ ಮರದ ಡಚ್‌ಕವಾಡಿಗಿತ್ತಿಗಳೂ ಹೊರಟುಹೋಗಿವೆ; ನಮ್ಮ ಆಟದ ಸಾಮಾನುಗಳಲ್ಲಿ ಬಹು ಮಟ್ಟಿಗೆ ಎಲ್ಲ ಖರ್ಚಾಗಿವೆ. ಅಗ್ಗದ ಒಣದ್ರಾಕ್ಷಿಗೆ ಸದಾ ಬೇಡಿಕೆಯಿದೆ. 'ಸೀಟಿ'ಗಳು, ತುತ್ತೂರಿಗಳು, ಮೋರ್ಚಿಂಗುಗಳು– ಇವಕ್ಕೂ ಭಾರಿ ಬೇಡಿಕೆಯಿದೆ; ಕಡೆಯಪಕ್ಷ ಆರುಮಂದಿ ಚಿಕ್ಕ ಹುಡುಗರು ಕಾಕಂಬಿಯ ಕಲ್ಲು ಸಕ್ಕರೆ ಕೇಳಿದ್ದಾರೆ. ಬೂದುಸೇಬಿನ ಕಾಲ ಈಗ ಮೀರಿಹೋಗಿದೆ; ಆದರೂ ಹೇಗಾದರೂ ಮಾಡಿ ಒಂದು 'ಪೆಕ್'* ಸೇಬನ್ನು ತಂದಿಡಬೇಕು. ಆದರೆ, ಅಕ್ಕಾ, ತಾಮ್ರದ ನಾಣ್ಯಗಳ ರಾಶಿ ಎಷ್ಟು ಭಾರಿಯಾಗಿದೆ! ಖಂಡಿತವಾಗಿಯೂ ಅದು ತಾಮ್ರದ ಬೆಟ್ಟವೇ ಸರಿ!

ಆ ದಿನ ವೆನ್ನರ್ ಮಾವ ಬಂದು, ಹಲವು ಬಾರಿ ಅಂಗಡಿಯ ಒಳಕ್ಕೂ ಹೊರಕ್ಕೂ ತಾರಾಡುತ್ತಾ ಇದ್ದವನು, ಹೇಳಿದ: "ಚೆನ್ನಾಗಿದೆ ಕೆಲಸ! ಬಹಳ ಚೆನ್ನಾಗಿದೆ! ಭೇಷಾಗಿದೆ! ತನ್ನ ಆಯುಷ್ಯವನ್ನು ನನ್ನ ಹೊಲಮನೆಯಲ್ಲಿ ಮುಗಿಸದ ಹುಡುಗಿ ಒಬ್ಬಳು ಇಲ್ಲಿದ್ದಾಳೆ! ಕಣ್ಣು ಇದ್ದದ್ದಕ್ಕೆ ಇಂದು ಸಾರ್ಥಕವಾಯಿತು, ಎಂಥ ಚಿಕ್ಕ ಚಟುವಟಿಕೆಯ ಪ್ರಾಣೀ!"

ಗಂಭೀರವಾಗಿ ಸಮ್ಮತಿ ಸೂಚಿಸುವ ಹುಬ್ಬುಗಂಟಿಕ್ಕುತ್ತ ಹೆಪ್ಸಿಬಾ ಹೇಳಿದಳು; "ಹೌದು, ಫೀಬೆ ಒಳ್ಳೆಯ ಸೊಗಸಾದ ಹುಡುಗಿ! ಆದರೆ, ವೆನ್ನರ್ ಮಾವಯ್ಯ, ನಮ್ಮ ವಂಶದ ವಿಚಾರ ನಿನಗೆ ಅನೇಕ ವರ್ಷಗಳಿಂದ ಗೊತ್ತು. ಪಿನ್ಚನ್ ವಂಶದವರಲ್ಲಿ ಯಾರನ್ನಾದರೂ ಇವಳು ಹೋಲುತ್ತಾಳೆಯೇ? ಅಂಥವರು ಯಾರಾದರೂ ಇದ್ದರೆ, ನೀನು ತಿಳಿಸಬಲ್ಲೆಯಾ?"

ಆ ಪೂಜ್ಯವ್ಯಕ್ತಿ ಉತ್ತರಕೊಟ್ಟ, "ಎಂದೂ ಯಾರೂ ಇದ್ದಹಾಗೆ ನನಗೆ ತೋರುವುದಿಲ್ಲ. ಅದು ಹೇಗಿದ್ದರೂ, ಈ ವಂಶದಲ್ಲಿಯೆ ಆಗಲಿ, ಬೇರೆ ಎಲ್ಲಿಯೆ ಆಗಲಿ, ಇವಳ ಹಾಗೆ ಇರುವವರನ್ನು ನೋಡುವ ಅದೃಷ್ಟ ನನಗಿರಲಿಲ್ಲ. ನಾನು ಬೇಕಾದಷ್ಟು ಪ್ರಪಂಚ ಕಂಡಿದ್ದೇನೆ: ಜನರ ಅಡಿಗೆ ಮನೆ ಮತ್ತು ಹಿತ್ತಿಲುಗಳಲ್ಲಿ ಮಾತ್ರ ಅಲ್ಲ; ರಸ್ತೆಯ ಮೂಲೆಗಳಲ್ಲಿ, ಬಂದರುಕಟ್ಟೆಗಳಲ್ಲಿ, ಮತ್ತು ಎಲ್ಲೆಲ್ಲಿ ಕೆಲಸದ ಮೇಲೆ

* ಸುಮಾರು ಎರಡು ಗ್ಯಾಲನ್ನಿನಷ್ಟು ಒಂದು ಅಳತೆ.

ಹತಾಶಳಾದ ವೃದ್ಧಕನ್ಯೆ ಹೆಪ್ಸಿಬಾ ಇದ್ದಾಳೆ–ಪರಪರಗುಟ್ಟುವ ಜೀರ್ಣವಾದ ರೇಷ್ಮೆಯ ಉಡುಪು ಧರಿಸಿದವಳು, ಬಹಳ ಪುರಾತನ ವಂಶದಿಂದ ಬಂದವಳು ಎಂಬ ಹಾಸ್ಯಾಸ್ಪದವಾದ ಭಾವನೆಯನ್ನು ಹೃದಯದಾಳದಲ್ಲಿ ಪೋಷಿಸಿಕೊಂಡು ಬಂದಿರುವವಳು, ದೊರೆ ಆಳುವಂತಹ ಪ್ರದೇಶಕ್ಕೆ ಸಂದೇಹಾಸ್ಪದವಾದ ಹಕ್ಕನ್ನು ಹೂಡಿರುವವಳು, 'ಹಾರ್ಪ್ಸಿಕಾರ್ಡ್' ವಾದ್ಯದ ಮೇಲೆ ಹಿಂದೊಮ್ಮೆ ಬೆರಳಾಡಿಸಿರುವೆನೆಂಬ ತನ್ನ ನೆನಪುಗಳ ಆಧಾರದಮೇಲೆ ತನಗೆ ಕುಶಲವಿದ್ಯೆಯ ಕೋಡು ಇದೆ ಎಂದುಕೊಳ್ಳುವವಳು, 'ಮಿನ್ಯುಯೆಟ್' ನೃತ್ಯದಲ್ಲಿ ಹೆಜ್ಜೆ ಹಾಕಿದವಳು, ಮತ್ತು ತನ್ನ ಕಸೂತಿ ಕೆಲಸದ ಮಾದರಿಯಮೇಲೆ ಪುರಾತನಕಾಲದ ತೆರೆಯ ಬಟ್ಟೆಯಲ್ಲಿ ಕಾಣುವಂತಹ ಚಿತ್ರ ಮೂಡಿಸಲೆಂದು ಒಂದೆರಡು ಹೆಣಿಗೆ ಹಾಕಿದವಳು–ಇವಳನ್ನು ಬಿಟ್ಟು ನಾವು ದೂರ ಅರಸಿಕೊಂಡು ಹೋಗಬೇಕಾಗಿಲ್ಲ. ಹೊಸ ಕಾಲದ ಜನಸಾಮಾನ್ಯ, ಹಳೆಯಕಾಲದ ಶ್ರೀಮಂತವರ್ಗ– ಇವೆರಡಕ್ಕೆ ಒಳ್ಳೆಯ ಹೋಲಿಕೆ ಈ ಇಬ್ಬರು.

ಏಳು ಇಪ್ಪಾರಿನ ಮನೆಯ ಮುಖಸ್ವರೂಪ ಮೊದಲಿನ ಹಾಗೆಯೆ ಇನ್ನೂ ಇಪ್ಪಿಡಿದು ಜೋಲುಹುಬ್ಬು ಹೊಂದಿರುವಂತೆ ಕಾಣುತ್ತಿದ್ದಿತು; ಫೀಬೆ, ಮನೆಯೊಳಗೆ ಅತ್ತಿಂದಿತ್ತ ಓಡಾಡಿದಾಗ ಅದು ತನ್ನ ಕತ್ತಲು ಕತ್ತಲಾದ ಕಿಟಕಿಗಳ ಮೂಲಕ ಒಂದು ವಿಧವಾದ ಉಲ್ಲಾಸದ ಕಾಂತಿಯನ್ನು ಹೊರಕ್ಕೆ ಕಾಣಿಸಿರಬೇಕು. ಇಲ್ಲದೆಹೋದರೆ, ಹುಡುಗಿ ಅಲ್ಲಿರುವಳೆಂಬ ಸಂಗತಿಯನ್ನು ಅಷ್ಟು ಬೇಗನೆ ನೆರೆಹೊರೆಯ ಜನ ಹೇಗೆ ಅರಿತುಕೊಂಡರೆಂಬುದನ್ನು ವಿವರಿಸುವುದು ಅಸಾಧ್ಯ. ಬೆಳಗ್ಗೆ ಹತ್ತು ಗಂಟೆಯಿಂದ ಮೊದಲುಗೊಂಡು ನಡುಹಗಲಿನವರೆಗೆ ಗಿರಾಕಿಗಳು ಬರುವುದು ಒಂದೇ ಸಮನಾಗಿ ಹೆಚ್ಚುತ್ತಿತ್ತು; ಅದು ಮಧ್ಯಾಹ್ನದ ಭೋಜನದ ವೇಳೆಗೆ ಸುಮಾರಾಗಿ ಕಡಮೆಯಾಗಿ, ಮಧ್ಯಾಹ್ನವಾದ ಮೇಲೆ ಮತ್ತೆ ಪ್ರಾರಂಭವಾಗಿ, ದೀರ್ಘವಾದ ದಿನದಲ್ಲಿ ಸೂರ್ಯ ಮುಳುಗುವುದಕ್ಕೆ ಸುಮಾರು ಅರ್ಧಗಂಟೆಗೆ ಮುಂಚೆ ಕಟ್ಟ ಕಡೆಯಲ್ಲಿ ನಿಂತುಹೋಗುತ್ತಿತ್ತು. ಅಂಗಡಿಗೆ ಒಂದೇಸಮನಾಗಿ ಪ್ರೋತ್ಸಾಹ ಕೊಟ್ಟುಕೊಂಡು ಬಂದವರಲ್ಲಿ, 'ಜಿಂ ಕ್ರೋ'ನನ್ನೂ ಆನೆಯನ್ನೂ ಭಕ್ಷಿಸಿದ ಚಿಕ್ಕ ನೆಡ್ ಹಿಗ್ಗಿನ್ಸ್ ಒಬ್ಬ; ಅವನು ಇಂದು ಎರಡು ಒಂಟೆಗಳನ್ನೂ ಒಂದು ರೈಲುಗಾಡಿಯನ್ನೂ ನುಂಗಿ ತನ್ನ ಸರ್ವಭಕ್ಷಣಸಾಮರ್ಥ್ಯವನ್ನು ಪ್ರಕಟಪಡಿಸಿದ್ದನು. ತನ್ನ ಮಾರಾಟದ ಒಟ್ಟು ಆದಾಯವನ್ನು ಸ್ಲೇಟು ಹಲಗೆಯ ಮೇಲೆ ಸುರಿದು ಕೂಡಿ ನೋಡಿದಾಗ, ಫೀಬೆ ನಕ್ಕಳು; ಹೆಪ್ಸಿಬಾ ಮೊದಲು ಎರಡು ರೇಷ್ಮೆಯ ಕೈಗವುಸುಗಳನ್ನು ಧರಿಸಿ, ಅಂದು ಗಲ್ಲದೊಳಕ್ಕೆ ಝಣ–

ವೃದ್ಧಶ್ರೀಮಂತೆ ಫೀಬೆಯನ್ನು ಮನೆಯ ಕೊಟಡಿಯಿಂದ ಕೊಟಡಿಗೆ ಕರೆದೊಯ್ದು, ದುಃಖದ ಸಂಗತಿಯಗಳನ್ನು ಚಿತ್ರಿಸಿದ್ದ ಭಿತ್ತಿಚಿತ್ರಗಳ ಹಿನ್ನೆಲೆಯಲ್ಲಿ ಅಡಗಿದ್ದ ಸಂಪ್ರದಾಯಗಳನ್ನು ವಿವರಿಸಿದಳು; ಹೀಗೆ ಮಾಡುವುದರಲ್ಲಿ ಅವಳಿಗೆ ನೀರಸವಾದ, ಹೆಮ್ಮೆಯಿಂದ ಕೂಡಿದ ತೃಪ್ತಿಯಿದ್ದಿತು. ಕೊಟಡಿಯ ಬಾಗಿಲ ಹಲಗೆಗಳ ಮೇಲೆ ಲೆಫ್ಟಿನೆಂಟ್ ಗೌರ್ನರ್ (ಉಪರಾಜ್ಯಪಾಲ) ಕತ್ತಿಯ ಹಿಡಿ ತಾಕಿ ತಾಕಿ ಆದ ಕಚ್ಚುಗಳನ್ನು ತೋರಿಸಿದಳು; ಈ ಕೊಟಡಿಯಲ್ಲಿಯೆ, ಗೃಹದ ಮೃತ ಆತಿಥೇಯನಾದ ವೃದ್ಧಸರದಾರ ಪಿನ್ಚನ್ನನು ತನ್ನನ್ನು ಸಂದರ್ಶಿಸಲು ಬಂದಿದ್ದ ಭೀತರಾದ ಅತಿಥಿಗಳನ್ನು ಭಯಂಕರವಾದ ಸಿಡುಕುಮೋರೆಯಿಂದ ಬರಮಾಡಿಕೊಂಡದ್ದು. ಆ ಸಿಡುಕುಮೋರೆಯ ಕರಾಳಭೀಕರಚ್ಛಾಯೆ ಅಂದಿನಿಂದಲೂ ಓಡಾಡುವ ನಡುವೆಯಲ್ಲಿ ಸುಳಿದಾಡುತ್ತಿದೆ ಎಂದು ಹೆಪ್ಸಿಬಾ ತಿಳಿಸಿದಳು. ಎತ್ತರವಾದ ಒಂದು ಕುರ್ಚಿಯಮೇಲೆ ಹತ್ತಿ ನಿಂತುಕೊಂಡು, ಪಡುವಣ ಸೀಮೆಯಲ್ಲಿ ಪಿನ್ಚನ್ ವಂಶಕ್ಕೆ ಸೇರಿದ್ದ ಪ್ರದೇಶದ ಪುರಾತನ ನಕ್ಷೆಯನ್ನು ಪರಿಶೀಲಿಸುವಂತೆ ಅವಳು ಫೀಬೆಗೆ ಅನುಜ್ಞೆ ಕೊಟ್ಟಳು. ಅವಳು ಬೆರಳಿಟ್ಟು ತೋರಿಸಿದ ಭೂಭಾಗವೊಂದರಲ್ಲಿ, ಒಂದು ಬೆಳ್ಳಿಯ ಗಣಿಯಿದ್ದಿತು; ಅದು ನಿಕರವಾಗಿ ಯಾವ ಎಡೆಯಲ್ಲಿದೆ ಎಂಬುದನ್ನು ಸರದಾರ ಪಿನ್ಚನ್ನನು ತಾನೇ ಬರೆದಿಟ್ಟಿದ್ದ ಕೆಲವು ನೆನಪಿನ ಟಿಪ್ಪಣಿಗಳಲ್ಲಿ ನಿರ್ದೇಶಿಸಿಲಾಗಿತ್ತು; ಆದರೆ, ವಂಶದ ಹಕ್ಕನ್ನು ಸರಕಾರವು ಅಂಗೀಕರಿಸಿದಾಗ ಮಾತ್ರ ಆ ಅಂಶವನ್ನು ಪ್ರಕಟಪಡಿಸಬೇಕಾಗಿದ್ದಿತು. ಈ ರೀತಿಯಲ್ಲಿ, ಪಿನ್ಚನ್ ವಂಶಕ್ಕೆ ನ್ಯಾಯ ದೊರಕಬೇಕಾದದ್ದು ಹೊಸ ಇಂಗ್ಲೆಂಡ್ ಎಲ್ಲದರ ಹಿತದೃಷ್ಟಿಯಿಂದಲೇ ಆಗಿದ್ದಿತು. ಅಲ್ಲದೆ, ಮನೆಯೊಳಗೆ ಯಾವುದೋ ಸ್ಥಳದಲ್ಲಿ, ಇಲ್ಲವೋ ನೆಲಮಾಳಿಗೆಯಲ್ಲಿ, ಅದೂ ಇಲ್ಲವೋ ಬಹುಶಃ ತೋಟದಲ್ಲಿ ಇಂಗ್ಲಿಷ್ ಗಿನಿ ನಾಣ್ಯಗಳ ಅಪಾರ ನಿಧಿಯನ್ನು ನಿಸ್ಸಂದೇಹವಾಗಿ ಹೂತಿಟ್ಟಿದೆ ಎಂಬ ಸಂಗತಿಯನ್ನೂ ತಿಳಿಸಿದಳು.

ಹೆಪ್ಸಿಬಾ ಗಂಭೀರವಾದ ಆದರೂ ದಯೆಯಿಂದ ಕೂಡಿದ ಮುಗುಳು ನಗೆಯೊಂದಿಗೆ ಫೀಬೆಯ ಕಡೆ ತಿರುಗಿ ನೋಡಿ, ಹೇಳಿದಳು: "ಫೀಬೆ, ಒಂದು ವೇಳೆ ನೀನೇನಾದರೂ ಅದನ್ನು ಕಂಡದ್ದೇ ಆದರೆ, ಒಳ್ಳೆಯದೇ ಆಯಿತು, ಅಂಗಡಿಯ ಗಂಟೆಯನ್ನು ಬಿಗಿದು ಕಟ್ಟಿ ಬಿಡೋಣ."

"ಆಗಲಿ, ಅಕ್ಕಾ. ಆದರೆ, ಈಗ, ಅದು ಯಾರೋ ಅದನ್ನು ಬಾರಿಸುತ್ತಿರುವುದು ನನಗೆ ಕೇಳಿಬರುತ್ತಿದೆ" ಎಂದು ಫೀಬೆ ಉತ್ತರಿಸಿದಳು.

ಆ ಗಿರಾಕಿ ಹೊರಟುಹೋದ ಮೇಲೆ, ಯಾರೋ ಒಬ್ಬಳು ಆಯಲಿಸ್

ಹೋಗುತ್ತೇನೆಯೋ ಅಲ್ಲೆಲ್ಲ ಕಂಡಿದ್ದೇನೆ; ಮಿಸ್ ಹೆಪ್ಸಿಬಾ, ನನಗೆ ತೋರಿದ್ದನ್ನು ಹೇಳುವ ಸ್ವಾತಂತ್ರ್ಯ ನನಗಿದೆ, ದೇವರು ಕಳಿಸಿದ ದೇವತೆಯೇ ಇಳಿದುಬಂದು ಮಾಡುತ್ತಿದ್ದಾಳೆಯೋ ಎನ್ನುವ ರೀತಿ ಈ ಮಗು ಫೀಬೆ ಮಾಡುವಹಾಗೆ ಅವಳ ಕೆಲಸ ಮಾಡುವ ಬೇರೊಬ್ಬ ಮನುಷ್ಯ ಪ್ರಾಣಿಯನ್ನು ನಾನು ಎಂದೂ ಕಂಡಿಲ್ಲ!"

ವೆನ್ನರ್ ಮಾವನ ಈ ಪ್ರಶಂಸೆ ಯಾರನ್ನು ಕುರಿತದ್ದು, ಯಾವ ಸಂದರ್ಭದಲ್ಲಿ ಹೇಳಿದ್ದು ಎಂಬುದನ್ನು ಗಮನಿಸಿದರೆ ಅದು ತುಂಬ ಮಿತಿ ಮೀರಿದ್ದು ಎಂದು ಕಾಣಬಹುದು; ಆದರೂ, ಅದು ಸೂಕ್ಷ್ಮವಾದ ನಿಜವಾದ ಅರ್ಥವನ್ನು ಒಳಗೊಂಡಿತ್ತು. ಫೀಬೆಯ ಕಾರ್ಯಚಟುವಟಿಕೆಯಲ್ಲಿ ಒಂದು ದಿವ್ಯವಾದ ಗುಣವಿತ್ತು. ಅವಳು ದೀರ್ಘವಾದ, ಚಟುವಟಿಕೆಯಿಂದ ಕೂಡಿದ ದಿನದಲ್ಲಿ ಮಾಡುತ್ತಿದ್ದ ಉದ್ಯೋಗಗಳು ಬಹು ಸುಲಭವಾಗಿ ಹೊಲಸಾಗಿಯೂ ಅಡ್ಡಾದಿಡ್ಡಿಯಾಗಿಯೂ ಪರಿಣಮಿಸಬಹುದಾಗಿತ್ತು; ಆದರೆ, ಈ ಗೃಹಕೃತ್ಯಗಳು ಅವಳ ಶೀಲಸ್ವಭಾವದಿಂದ ತಾವಾಗಿ ಸಹಜರಮ್ಯತೆಯಿಂದ ಹೂವರಳಿದಂತೆ ಹೇಗೆ ಹೊರಹೊಮ್ಮುತ್ತಿದ್ದುವೆಂದರೆ, ಅವು ಆ ದಿನವನ್ನು ಸುಖಮಯವನ್ನಾಗಿಯೂ ಮನೋಹರವನ್ನಾಗಿಯೂ ಮಾಡುತ್ತಿದ್ದುವು; ಅದರ ಪರಿಣಾಮವಾಗಿ, ಅವಳ ಕೈಯಲ್ಲಿ ದುಡಿಮೆಯೆಂಬುದು ಲೀಲಾಜಾಲವಾದ ಆಟದ ಸೊಬಗನ್ನು ತಳೆಯುತ್ತಿತ್ತು. ದಿವ್ಯಪುರುಷರು ದುಡಿಯುವುದಿಲ್ಲ, ಆದರೆ ಸತ್ಕಾರ್ಯಗಳು ತಮ್ಮಿಂದ ವರ್ಧಿಸುವಂತೆ ಮಾಡುತ್ತಾರೆ; ಫೀಬೆ ಮಾಡಿದ್ದಾದರೂ ಹಾಗೆಯೆ.

ಈ ಇಬ್ಬರು ಬಂಧುಗಳು– ಎಳೆಯ ಕನ್ಯೆ ಮತ್ತು ಮುದಿ ಕನ್ಯೆ– ಇರುಳಾಗುವುದಕ್ಕೆ ಮುಂಚೆ, ವ್ಯಾಪಾರದ ನಡುವಣ ವಿರಾಮವೇಳೆಗಳಲ್ಲಿ ಪರಸ್ಪರ ಪ್ರೇಮ ವಿಶ್ವಾಸಗಳು ಬೇಗಬೇಗನೆ ಬೆಳೆಯಲು ಅವಕಾಶ ಹೊಂದಿದ್ದರು. ಹೆಪ್ಸಿಬಾಳಂತಹ ಏಕಾಂತವಾಸಿ ಪೂರ್ತಿ ಆಸಕ್ತಿವಹಿಸಿದಾಗ, ಮತ್ತು ವೈಯಕ್ತಿಕವಾಗಿ ಪರಸ್ಪರ ವ್ಯವಹಾರಮಾಡಬೇಕಾಗಿ ಬಂದಾಗ, ಗಮನಾರ್ಹವಾದ ನಿಷ್ಕಾಪಟ್ಯವನ್ನೂ, ಕಡೆಯಪಕ್ಷ ತಾತ್ಕಾಲಿಕವಾದ ಸೌಜನ್ಯವನ್ನೂ, ಸಾಧಾರಣವಾಗಿ ಮೆರೆಯುತ್ತಾರೆ; ಜೇಕಬ್*ನೊಡನೆ ಕಾದಾಡಿದ ದೇವದೂತನ ಹಾಗೆ, ಸೋತಾಗ ನಿಮ್ಮನ್ನು ಹರಸಲು ಅವಳು ಸಿದ್ಧಳಾಗಿರುತ್ತಾಳೆ.

---

*ಜೇಕಬ್; ಬೈಬಲಿನ Genesis ವಿಭಾಗದಲ್ಲಿ ಇವನ ಕಥೆ ಬರುತ್ತದೆ. ಐಸ್ಯಾಕ್ ಮತ್ತು ರೆಬೆಕ್ಕ ಎಂಬವರ ಇಬ್ಬರು ಪುತ್ರರಲ್ಲಿ ಒಬ್ಬ. ತನ್ನ ಸಹೋದರನೊಂದಿಗೆ ಕಾದಿದ ಕಲಹದಲ್ಲಿ ದೇವತೆಯ ನೆರವು ದೊರೆಯುತ್ತದೆ. ಒಂದಿರುಳು ಆ ದೇವತೆಯೊಂದಿಗೂ ಹೋರಾಡಿ, ಗೆದ್ದ ಗುರುತಾಗಿ ವರ ಪಡೆಯುತ್ತಾನೆ.

ಶಿಸ್ತಿನ ಆ ತರುಣ ಈಗ ಸ್ವಲ್ಪ ಬಡತನದಲ್ಲಿದ್ದನು; ಏಳು ಇಪ್ಪಾರುಗಳ ಪೈಕಿ ಒಂದರಲ್ಲಿ ಅವನು ವಾಸಮಾಡಿಕೊಂಡಿರಲು ಅವಳು ಅವನಿಗೆ ಅನುಮತಿ ಕೊಟ್ಟಿದ್ದಳು. ಆದರೆ, ಹಾಲ್‌ಗ್ರೇವ್‌ನನ್ನು ಹೆಚ್ಚು ಹೆಚ್ಚು ಪರಿಚಯಮಾಡಿಕೊಳ್ಳುತ್ತ ಬಂದಂತೆ, ಅವನು ಎಂಥವನೆಂಬುದನ್ನು ಅರಿಯುವುದೇ ಕಷ್ಟವಾಗಿತ್ತು ಅವಳಿಗೆ. ಆತನ ಜೊತೆಗಾರರೆಲ್ಲ ಅತ್ಯಂತ ವಿಚಿತ್ರ ವ್ಯಕ್ತಿಗಳು, ಕಲ್ಪಿಸಿಕೊಳ್ಳುವುದು ಕೂಡ ಕಷ್ಟ; ಉದ್ದನೆಯ ಗಡ್ಡ ಬಿಟ್ಟವರು, ಮತ್ತು ನಾರುಬಟ್ಟೆಯ ಕುಪ್ಪಸದಂಥ ಜುಬ್ಬ ಮತ್ತು ಅದೇ ರೀತಿಯ ಅತಿರೇಕವಾದ ಹೊಸತನದ, ಮೈಗೆ ಸರಿಯಾಗಿ ಹೊಂದದ ಉಡುಪನ್ನು ತೊಟ್ಟವರು; ಸಮಾಜಸುಧಾರಕರು, ಮದ್ಯಪಾನನಿಷೇಧದ ಬಗೆಗೆ ಉಪನ್ಯಾಸಮಾಡುವವರು; ಯಾವ ನ್ಯಾಯನಿಬಂಧನೆಗಳನ್ನೂ ಒಪ್ಪದ, ಗಟ್ಟಿ ಆಹಾರವನ್ನು ತಿನ್ನದ, ಇತರರು ಅಟ್ಟ ಅಡುಗೆಯ ವಾಸನೆಯನ್ನು ಕುಡಿದೇ ಜೀವಿಸುವ, ಆಹಾರವನ್ನು ಕಂಡರೆ ಮೂಗುಮುರಿಯುವ ಜನರು– ಇವರೆಲ್ಲಾ ತಮ್ಮದೇ ಆದ ಗುಂಪುಕಟ್ಟಿಕೊಂಡು ವಾಸಿಸುವವರು, ಸಮಾಜದಿಂದ ಹೊರಬಿದ್ದವರು, ಎಂದು ಹೆಪ್ಸಿಬಾ ನಂಬಿದ್ದಳು. ಆ ಛಾಯಾ ಚಿತ್ರಕಾರನ ವಿಷಯ ಹೇಳುವುದಾದರೆ, ಕೆಲವು ದಿನದ ಹಿಂದೆ ಒಂದು ಪೆನ್ನಿ ಬೆಲೆಯ ಸುದ್ದಿ ಪತ್ರಿಕೆಯಲ್ಲಿ ಅವನ ವಿಚಾರವಾಗಿ ಬರೆದಿದ್ದದನ್ನು ಓದಿದ್ದಳು; ಡಕಾಯಿತರ ತಂಡದಂತಹ ತನ್ನ ಸಂಗಡಿಗರ ಒಂದು ಸಭೆಯಲ್ಲಿ ಹುಚ್ಚಾಬಟ್ಟೆಯಾದ, ವ್ಯವಸ್ಥೆಯನ್ನು ಕೆಡಿಸುವಂತಹ, ಭಾಷಣವನ್ನು ಮಾಡಿದನೆಂದು ಆ ಬರಹದಲ್ಲಿ ಅವನ ಮೇಲೆ ನಿಂದಾರೋಪಣೆಮಾಡಲಾಗಿತ್ತು. ಅವಳ ಮಟ್ಟಿಗೆ ಹೇಳುವುದಾದರೆ ಪ್ರಾಣಿಗಳನ್ನು ಆಕರ್ಷಿಸಿ ವಶಪಡಿಸಿಕೊಳ್ಳುವ ವಿದ್ಯೆಯನ್ನು ಅವನು ಸಾಧನೆ ಮಾಡುತ್ತಿದ್ದನೆಂದು ನಂಬಲು ಅವಳಿಗೆ ಆಧಾರವಿದ್ದಿತು; ಅಂಥ ವಿಷಯಗಳು ಈಗಿನ ಕಾಲದಲ್ಲಿ ಬಳಕೆಯಲ್ಲಿದ್ದುದೇ ಆದರೆ, ಅವನು ತನ್ನ ಏಕಾಂತವಾದ ಕೋಣೆಯಲ್ಲಿ ಮಾಟಮಂತ್ರದ ವಿದ್ಯೆಯನ್ನು ವ್ಯಾಸಂಗ ಮಾಡುತ್ತಿದ್ದನೆಂದು ಶಂಕಿಸಲು ಅವಳಿಗೆ ಅವಕಾಶವಿದ್ದಿತು.

'ಆದರೆ, ಅಕ್ಕಾ, ಆ ತರುಣ ಅಷ್ಟು ಅಪಾಯಕಾರಿಯಾಗಿದ್ದರೆ, ಅವನು ಇಲ್ಲಿರಲು ಅವಕಾಶವೇಕೆ ಕೊಟ್ಟಿದ್ದೀಯೆ? ಅವನು ಕೆಟ್ಟದ್ದು ಇನ್ನೇನೂ ಮಾಡದಿದ್ದರೂ, ಅವನು ಮನೆಗೆ ಬೆಂಕಿ ಇಡಬಹುದಲ್ಲಾ!" ಎಂದಳು ಫೀಬೆ.

ಹೆಪ್ಸಿಬಾ ಉತ್ತರಕೊಟ್ಟಳು. "ಅಷ್ಟೇಕೆ, ನಾನು ಅವನನ್ನು ಆಚೆಗೆ ಕಳುಹಿಸಿಬಿಡಬಾರದೇಕೆ ಎಂದು ನಿಜವಾಗಿಯೂ ಪ್ರಶ್ನೆಹಾಕಿಕೊಂಡಿದ್ದೇನೆ. ಆದರೆ, ಅವನಲ್ಲಿ ಈ ಎಲ್ಲ ವಿಚಿತ್ರ ಲಕ್ಷಣಗಳಿದ್ದರೂ, ಅವನು ಸೌಮ್ಯ ರೀತಿಯ ಮನುಷ್ಯ;

ಪಿನ್ಚನ್ನಳ ವಿಷಯವಾಗಿ ಹೆಪ್ಸಿಬಾ ಬಹುಮಟ್ಟಿಗೆ ಅಸ್ಪಷ್ಟವಾಗಿ, ವಿಸ್ತಾರವಾಗಿ ಮಾಡನಾಡಿದಳು; ನೂರು ವರ್ಷಗಳ ಹಿಂದೆ, ಆಕೆ ತನ್ನ ಜೀವಮಾನದಲ್ಲಿ ಅತ್ಯಂತ ಚೆಲುವೆಯೆನಿಸಿದ್ದಳು, ನಿಪುಣೆಯಾಗಿದ್ದಳು. ಸಂದೂಕದಲ್ಲಿಟ್ಟಿದ್ದ ಗುಲಾಬಿಯ ಮೊಗ್ಗು ಅಲ್ಲಿಯೇ ಬಾಡಿ ನಾಶವಾದರೆ ಅದು ಆ ಸ್ಥಳವನ್ನು ಹೇಗೆ ಪರಿಮಳದಿಂದ ತುಂಬುತ್ತದೆಯೋ, ಅದೇ ರೀತಿ ಅವಳು ಎಲ್ಲಿ ಜೀವಿಸಿದ್ದಳೋ ಆ ಸ್ಥಳದ ತುಂಬೆಲ್ಲ ಅವಳ ಸಂಪನ್ನವಾದ ಸಂತೋಷ ಭರಿತವಾದ ಶೀಲಸ್ವಭಾವದ ಪರಿಮಳವು ಇನ್ನು ಉಳಿದಿತ್ತು. ಈ ಸುಂದರಿಯಾದ ಆಯಲಿಸ್ ಯಾವುದೋ ರಹಸ್ಯಪೂರ್ಣವಾದ ಮಹಾವಿಪತ್ತಿಗೆ ಸಿಲುಕಿ, ಕೃಶವಾಗಿ ಬಿಳಿಚಿಕೊಂಡು, ಈ ಪ್ರಪಂಚದಿಂದ ಕ್ರಮೇಣ ಕಣ್ಮರೆಯಾಗಿ ಹೋಗಿದ್ದಳು. ಆದರೆ, ಈಗಲೂ ಕೂಡ ಅವಳು ಏಳು ಇಪ್ಪಾರಿನ ಮನೆಯಲ್ಲಿ ಪ್ರೇತರೂಪದಲ್ಲಿ ಕಾಣಿಸಿಕೊಳ್ಳುತ್ತಿದ್ದಳೆಂದೂ, ಅನೇಕಾನೇಕ ವೇಳೆ–ಅದರಲ್ಲಿಯೂ ವಿಶೇಷವಾಗಿ ಪಿನ್ಚನ್ ವಂಶಸ್ಥರು ಯಾರಾದರೂ ಸಾಯುವ ವೇಳೆ– ಅವಳು ಖಿನ್ನಳಾಗಿ, ಬಹು ಚೆನ್ನಾಗಿ, ಹಾರ್ಪ್ಸಿಕಾರ್ಡ್ ವಾದ್ಯವನ್ನು ಬಾರಿಸುತ್ತಿರುವುದು ಕೇಳಿಬಂದಿದೆಯೆಂದೂ ಭಾವನೆಯಿದೆ. ತನ್ನ ದಿವ್ಯ ಹಸ್ತಸ್ಪರ್ಶದಿಂದ ಅವಳು ಬಾರಿಸಿದರಾಗಗಳಲ್ಲಿ ಒಂದನ್ನು, ಅದು ಮೂಡಿಬಂದಹಾಗೆಯೇ ಸಂಗೀತವಿನೋದಿಯೊಬ್ಬನು ಬರೆದಿಟ್ಟಿರುವನು; ಅದು ಎಂಥ ದಿವ್ಯವಾದ ದುಃಖಭಾವದ ರಾಗವೆಂದರೆ, ಇಂದಿಗೂ ಕೂಡ, ಅದನ್ನು ಬಾರಿಸಿದಾಗ ಅದನ್ನು ಕೇಳಿ ಸಹಿಸಲು ಯಾರಿಗೂ ಆಗುತ್ತಿರಲಿಲ್ಲ; ಯಾವುದಾದರೂ ಭಾರಿ ದುಃಖದ ಸನ್ನಿವೇಶವೊದಗಿ, ಅದು ಆ ರಾಗದ ಇನ್ನೂ ಅಗಾಧವಾದ ಮಾಧುರ್ಯವನ್ನು ಅವರಿಗೆ ಎತ್ತಿ ತೋರಿಸಿ ಕೊಡಬೇಕು, ಆಗ ಮಾತ್ರ ಸಾಧ್ಯವಾಗುತ್ತಿತ್ತು.

"ನೀನು ನನಗೆ ತೋರಿಸಿದ ಹಾರ್ಪ್ಸಿಕಾರ್ಡ್ ವಾದ್ಯ ಅದೇಯೆ?" ಎಂದು ಕೇಳಿದಳು ಫೀಬೆ.

ಹೆಪ್ಸಿಬಾ ನುಡಿದಳು: "ಅದೇಯೆ. ಅದು ಆಯಲಿಸ್ ಪಿನ್ಚನ್ನಳ ಹಾರ್ಪ್ಸಿಕಾರ್ಡ್. ನಾನು ಸಂಗೀತ ಕಲಿಯುತ್ತಿದ್ದಾಗ, ಅದನ್ನು ಹೊರಕ್ಕೆ ತೆಗೆಯುವುದಕ್ಕೇ ಅವಕಾಶಕೊಡುತ್ತಿರಲಿಲ್ಲ ನಮ್ಮ ತಂದೆ. ಆದ್ದರಿಂದ, ನನ್ನ ಶಿಕ್ಷಕರ ವಾದ್ಯದಲ್ಲಿಯೇ ನಾನು ಬಾರಿಸಬೇಕಾದ್ದುದರಿಂದ, ಕಲಿತಷ್ಟು ಸಂಗೀತವನ್ನು ನಾನು ಬಹುಹಿಂದೆಯೇ ಮರೆತುಬಿಟ್ಟೆ."

ಈ ಹಳೆಯ ವಿಷಯಗಳನ್ನೆಲ್ಲಾ ಬಿಟ್ಟು ಆ ವೃದ್ಧಮಹಿಳೆ ಛಾಯಾ ಚಿತ್ರಕಲಾವಿದನ ವಿಷಯವಾಗಿ ಮಾತನಾಡತೊಡಗಿದಳು; ಸದುದ್ದೇಶವುಳ್ಳ ಒಳ್ಳೆಯ

# ೬. ಮಾಲನ ಬಾವಿ

ಬೆಳಗ್ಗೆ ಹೊತ್ತಿಗೆಮುಂಚೆ ಚಹಾ ಸೇವಿಸಿಯಾದ ಮೇಲೆ, ಆ ಚಿಕ್ಕ ಹಳ್ಳಿಯ ಹುಡುಗಿ ತೋಟದೊಳಕ್ಕೆ ನುಗ್ಗಿದಳು. ತೋಟದ ಆವರಣ ಹಿಂದೆ ಬಹು ವಿಸ್ತಾರವಾಗಿದ್ದಿತು; ಆದರೆ ಈಗ ಅದು ಸಣ್ಣ ಅಳತೆಗೆ ಕುಗ್ಗಿತ್ತು. ಅದರ ಸುತ್ತಲೂ, ಅರ್ಧಭಾಗಕ್ಕೆ ಎತ್ತರವಾದ ಮರದ ಕಟಕಟೆಗಳೂ ಇನ್ನರ್ಧಭಾಗಕ್ಕೆ ಇನ್ನೊಂದು ಬೀದಿಗೆ ಅಭಿಮುಖವಾಗಿದ್ದ ಹೊರಕಟ್ಟಡಗಳೂ ಅಂಚುಗಟ್ಟಿದ್ದವು. ಅದರ ಮಧ್ಯಭಾಗದಲ್ಲಿ ಹುಲ್ಲು ಬೆಳೆದ ಜಾಗವೊಂದೂ ಇದ್ದಿತು. ಅದು ಪಾಳುಬಿದ್ದ ಒಂದು ಚಿಕ್ಕ ಕಟ್ಟಡವನ್ನು ಬಳಸಿಕೊಂಡಿತ್ತು; ಆ ಕಟ್ಟಡ ಒಂದು ಕಾಲಕ್ಕೆ ಬೇಸಗೆಯ ವಾಸದ ಮನೆಯಾಗಿತ್ತು ಎಂಬುದನ್ನು ಸೂಚಿಸುವಷ್ಟು ಮಟ್ಟಿಗೆ ಮಾತ್ರ ಅದರ ಮೂಲವಿನ್ಯಾಸ ಉಳಿದುಕೊಂಡು ಬಂದಿದ್ದಿತು. ಹಿಂದಿನ ವರ್ಷದ ಬೇರಿನಿಂದ ಮೊಳೆತಿದ್ದ ಹಾನ್‌ಕಾಯಿಯ ಬಳ್ಳಿಯೊಂದು ಆ ಕಟ್ಟಡದ ಮೇಲೆ ಹಬ್ಬ ತೊಡಗಿತ್ತು; ಆದರೆ, ಬಳ್ಳಿ ತನ್ನ ಹಸುರು ಎಲೆ ಹೊದಿಕೆಯಿಂದ ಅದರ ಚಾವಣಿಯನ್ನು ಆಚ್ಛಾದಿಸಲು ಇನ್ನೂ ತುಂಬ ಕಾಲ ಹಿಡಿಯುತ್ತಿತ್ತು. ಏಳು ಇಪ್ಪಾರುಗಳಲ್ಲಿ ಮೂರು ತೋಟಕ್ಕೆ ಅಭಿಮುಖವಾಗಿಯೊ ಇಲ್ಲವೆ ಪಕ್ಕಕ್ಕೆ ತಿರುಗಿಕೊಂಡೋ ವಿಷಣ್ಣವಾದ ಗಂಭೀರ ಸ್ವರೂಪದಿಂದ, ಕೆಳಗಡೆ ತೋಟವನ್ನೇ ನೋಡುತ್ತಿರುವಂತೆ ಕಾಣುತ್ತಿದ್ದುವು. ಕೆಳಗೆ ಉದುರಿದ ಎಲೆಗಳು, ಹೂವಿನ ಎಸಳುಗಳು, ಗೊತ್ತುಗುರಿಯಿಲ್ಲದೆ ಸಿಕ್ಕಾಬಟ್ಟೆ ಎಲ್ಲೆಲ್ಲೊ ಬೆಳೆಯುವ ಕಾಡುಗಿಡಗಳ ಕಡ್ಡಿಗಳು ಹಾಗೂ ಬೀಜಕೋಶಗಳು ಮುಂತಾಗಿ, ಬಿಸಿಲಿನಲ್ಲಿ ತಲೆಯತ್ತಿ ಮೆರೆಯುತ್ತಿದ್ದ ಕಾಲಕ್ಕಿಂತ ತಮ್ಮ ಮರಣಾನಂತರ ಹೆಚ್ಚು ಉಪಯುಕ್ತವಾದವುಗಳು– ಬಹು ದೀರ್ಘಕಾಲ ಕೊಳೆತು ನಾರಿದ್ದರಿಂದ ಉಂಟಾದ ಗೊಬ್ಬರದಿಂದ ಪೋಷಣೆಪಡೆದಿದ್ದಿತು ಅಲ್ಲಿನ ಫಲವತ್ತಾದ ಕಪ್ಪುಭೂಮಿ. ಕಳೆದುಹೋದ ಈ ವರ್ಷಗಳಲ್ಲಿ ಸಂಚಯವಾದ ಕೆಡುಕೆಲ್ಲಾ (ಸಮಾಜದಿಂದ ಸಾಗಿಬಂದ ದುರ್ಗುಣಗಳ ಸಂಕೇತವಾಗಿ ಸಹಜವಾಗಿಯೇ ಇಂತಹ ಕಾಡು ಕಾಡಾಗಿ ಬೆಳೆಯುವ ಕಳೆಗಿಡಗಳ ರೂಪದಲ್ಲಿ ಮೊಳೆತಿರಬೇಕು, ಅಲ್ಲದೆ, ಅವು ಯಾವಾಗಲೂ ಮನುಷ್ಯರ ವಾಸಸ್ಥಾನದ ಸುತ್ತಮುತ್ತ ಬೇರು ಬಿಡುವ ಸಂಭವವೂ ಹೆಚ್ಚು. ಆದಾಗ್ಯೂ, ತೋಟದಲ್ಲಿ ಪ್ರತಿನಿತ್ಯವೂ ಕ್ರಮಬದ್ಧವಾಗಿ, ಒಂದು ಅಳತೆಯಲ್ಲಿ, ಎಚ್ಚರಿಕೆಯಿಂದ

ನಾನೇನೋ ಈ ತರುಣನ ವಿಚಾರ ಸಾಕಷ್ಟು ತಿಳಿದಿಲ್ಲ; ಒಬ್ಬರ ಮೇಲೆ ಅವನಿಗೆ ಇಷ್ಟವಾಗದಿದ್ದರೂ, ಅವರ ಮನಸ್ಸನ್ನು ಹೇಗೆ ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುತ್ತಾನೆ ಎಂದರೆ, ಅದಕ್ಕೆ ನಾನೇ ನಿದರ್ಶನ; ಅವನನ್ನು ಪೂರ್ತಿಯಾಗಿ ನೋಡದೆಯೇ ಇರುವುದೆಂದರೆ ನನಗೆ ವ್ಯಸನವಾಗುತ್ತದೆ. ಹೆಂಗಸಾದವಳು ನಾನು ಇರುವಂತೆ ತೀರ ಒಬ್ಬೊಂಟಿಗಳಾಗಿ ವಾಸಮಾಡುತ್ತಿದ್ದರೆ, ಎಷ್ಟೇ ಅಲ್ಪ ಪರಿಚಯದವರಾದರೂ ಸರಿಯೆ, ಅವರಿಗೆ ಜೋತುಬೀಳುತ್ತಾಳೆ."

ನ್ಯಾಯನಿಬಂಧನೆಗಳ ಇತಿಮಿತಿಗಳಿಗೆ ಒಳಪಟ್ಟಿರಬೇಕು ಎನ್ನುವುದು ಫೀಬೆಯ ಅಂತಃಸತ್ತ್ವದ ಒಂದು ಭಾಗವಾಗಿದ್ದಿತು; ಆದ್ದರಿಂದ ಅವಳು, "ಆದರೆ, ಹಾಲ್‌ಗ್ರೇವರು ನ್ಯಾಯಬಾಹಿರವ್ಯಕ್ತಿಯಾಗಿದ್ದರೆ!" ಎಂದು ಪ್ರತಿಭಟಿಸಿದಳು.

ಹೆಪ್ಸಿಬಾ ಏನೋ ವಿಧಿವಿಹಿತವಾಗಿ ನಡೆದುಕೊಳ್ಳುವ ವ್ಯಕ್ತಿಯೇ ಆಗಿದ್ದಳು; ಆದರೂ, ಅವಳು ತನ್ನ ಬದುಕಿನ ಅನುಭವದಲ್ಲಿ, ಮಾನವ ನಿರ್ಮಿತ ನ್ಯಾಯನೀತಿಯ ವಿರುದ್ಧವಾಗಿ ಹಲ್ಲುಕಡಿದಿದ್ದಳು; ಆದ್ದರಿಂದ ಅವಳು ಉದಾಸೀನಳಾಗಿ, "ಓಹೋ, ಹಾಗೋ ಅವನು ತನ್ನದೇ ಆದ ನ್ಯಾಯನೀತಿಯನ್ನು ಅನುಸರಿಸುತ್ತಾನೆ ಎಂದು ನನಗೆ ತೋರುತ್ತದೆ" ಎಂದಳು.

* * * *

ಇರಲಿಲ್ಲ; ಏಕಾಂತವಾಸದ ಅಭ್ಯಾಸ ಮತ್ತು ಮನೆಯ ಮಂಕುಗವಿದ ನೆರಳಿನಲ್ಲಿಯೇ ಅಡಗಿಕೊಂಡಿರುವ ಅವಳ ಪ್ರವೃತ್ತಿ ಇವುಗಳಿಂದಾಗಿ, ತಿಂಗಳ ಹುರಳಿ ಮತ್ತು ಕುಂಬಳ ಗಿಡಗಳ ನಡುವೆ ಹೋಗಿ ಕಳೆಗುದ್ದಲಿ ಹಿಡಿಯುವುದಕ್ಕೂ ಕಳೆಕೀಳುವುದಕ್ಕೂ ತೃಣ ಮಾತ್ರ ಆಕಾಶದ ಕೆಳಗೆ ಅವಳೆಂದೂ ಬರುತ್ತಿರಲಿಲ್ಲ.

ಗ್ರಾಮ ಸಂಬಂಧದ ವಸ್ತುಗಳನ್ನು ಬಿಟ್ಟು ಸಂಪೂರ್ಣವಾಗಿ ಅಗಲಿ ಬಂದ ಮೊದಲ ದಿನವಾಗಿತ್ತು ಇದು; ಆದ್ದರಿಂದ, ಹುಲ್ಲು, ಹಸಿರುವಾಣಿ, ಶ್ರೀಮಂತ ಪುಷ್ಪಗಳು, ಸಾಧಾರಣ ತರಕಾರಿ ಗಿಡಗಳು ಇವುಗಳಿಂದ ಕೂಡಿದ ಈ ಚಿಕ್ಕ ಮೂಲೆಯೆಡೆಯಲ್ಲಿ ಫೀಬೆ ಅನಿರೀಕ್ಷಿತವಾದ ಸೊಬಗನ್ನು ಕಂಡಳು. ಪ್ರಕೃತಿದೇವಿ ಇತರ ಎಲ್ಲ ಕಡೆಯೂ ದಮನಕ್ಕೆ ಒಳಗಾಗಿ, ಧೂಳೀಮಯವಾದ ಪಟ್ಟಣಗಳಿಂದ ಬಹಿಷ್ಕೃತಳಾಗಿ, ಉಸಿರಾಡುವುದಕ್ಕೆ ಒಂದಿಷ್ಟು ಸ್ಥಳವನ್ನು ಇಲ್ಲಿ ಉಳಿಸಿಕೊಂಡಿದ್ದಳು; ಜಗಚ್ಚಕ್ಷುವು ಇದನ್ನೆಲ್ಲಾ ಕಂಡು ಸಂತಸಗೊಂಡಿರುವನೋ ಎಂಬಂತೆ, ಪ್ರಸನ್ನನಾಗಿ ವಿಲಕ್ಷಣವಾದ ಮುಗುಳ್ನಗೆಯಿಂದ ಈ ಕಡೆ ನೋಡುತ್ತಿರುವನೋ ಎಂಬಂತೆ ಕಾಣುತ್ತಿತ್ತು. ಪೇರು ಹಣ್ಣಿನ ಮರದಲ್ಲಿ ಒಂದು ಜೊತೆ ರಾಬಿನ್ ಹಕ್ಕಿಗಳು ತಮ್ಮ ಗೂಡನ್ನು ಕಟ್ಟಿಕೊಂಡು, ಅದರ ಕೊಂಬೆಗಳ ತಮೋ ಜಾಲದಲ್ಲಿ ಅತ್ಯಂತ ಚಟುವಟಿಕೆಯಿಂದ ಕೂಡಿ, ನೆಮ್ಮದಿಯಾಗಿದ್ದವು; ಈ ಕಾರಣದಿಂದ ಆ ಸ್ಥಳದಲ್ಲಿ ಕಾಡಿನಲ್ಲಿ ಕಾಣಬರುವಂತಹ, ಆದರೂ ಸೌಮ್ಯವಾದ ಒಂದು ವಿಧವಾದ ರಮ್ಯತೆ ನೆಲಸಿದ್ದಿತು. ದುಂಬಿಗಳು ಕೂಡ ಇಲ್ಲಿಗೆ ಬರುವುದು ಪ್ರಯೋಜನಕರ ಎಂದು ತಿಳಿದಿದ್ದುವು– ಈ ಸಂಗತಿ ಅಪೂರ್ವವೆಂದೇ ಹೇಳಬೇಕು; ಬಹುಶಃ ಇದಕ್ಕೆ ಕಾರಣವೆಂದರೆ, ಮೈಲಿಗಳಾಚೆ ಯಾವುದೋ ಹೊಲಮನೆಯ ಹತ್ತಿರ ಜೇನುಗೂಡುಗಳ ತಂಡವಿದ್ದುದು. ಮುಂಜಾನೆಯಿಂದ ಸಂಜೆಯವರೆಗೆ ಮಧುವನ್ನು ಅರಸುತ್ತಲೋ ಇಲ್ಲವೆ ಮಧುವನ್ನು ತುಂಬಿಕೊಂಡೋ ಅವು ಎಷ್ಟು ಸಲ ವಾಯುಪ್ರಯಾಣಗಳನ್ನು ಮಾಡಿರಬಹುದು! ಈಗ ಬಹಳ ಹೊತ್ತಾಗಿದ್ದರೂ ಕೂಡ, ಒಂದು ಅಥವಾ ಎರಡು ಕುಂಬಳ ಹೂಗಳ ಒಡಲಿಂದ ಇಂಪಾದ ಝೇಂಕಾರವು ಇನ್ನೂ ಕೇಳಿ ಬರುತ್ತಿತ್ತು; ಏಕೆಂದರೆ, ಅವುಗಳ ಗರ್ಭದ ಆಳದಲ್ಲಿ ಈ ದುಂಬಿಗಳು ತಮ್ಮ ಬಂಗಾರದಂಥ ಕಾಯಕದಲ್ಲಿ ತೊಡಗಿದ್ದವು. ಮಾನವನು ಅದನ್ನು ತನ್ನದು ಎಂದು ಸಾಧಿಸಲು ಏನೇ ಮಾಡಲಿ, ಪರಭಾರೆಮಾಡಲಾಗದ ತನ್ನ ಸ್ವತ್ತು ಎಂದು ಪ್ರಕೃತಿದೇವಿ ಹಕ್ಕು ಹೂಡಲು ತಕ್ಕಮಟ್ಟಿನ ಅವಕಾಶವಿದ್ದ ಇನ್ನೊಂದು ವಸ್ತು ಆ ತೋಟದಲ್ಲಿದ್ದಿತು. ಅದು ಒಂದು ನೀರಿನ ಚಿಲುಮೆ;

ಪರಿಶ್ರಮಪಟ್ಟಿದ್ದರ ಫಲವಾಗಿ ಅವುಗಳ ಬೆಳೆಯನ್ನು ತಡೆಗಟ್ಟಿರಬೇಕು ಎಂಬುದು ಫೀಬೆಯ ಗೋಚರಕ್ಕೆ ಬಂದಿತು. ಬಿಳಿಯ ಗುಲಾಬಿಗಿಡದ ಜೊತೆಯನ್ನು, ಅವು ಹೂಬಿಡುವ ಕಾಲ ಮೊದಲಾದಂದು ಹೊಸದಾಗಿ ಮನೆಗೆ ಆನಿಸಿ ಎತ್ತಿ ನಿಲ್ಲಿಸಿರುವುದು ಸ್ಪಷ್ಟವಾಗಿತ್ತು; ದ್ವೀಪದ್ರಾಕ್ಷಿಯ ಗಿಡಗಳ ಒಂದು ಸಾಲನ್ನು ಬಿಟ್ಟರೆ, ಅಲ್ಲಿದ್ದ ಒಟ್ಟು ಹಣ್ಣಿನ ಗಿಡಗಳ ಜಾತಿಗಳು ಇಷ್ಟೆ: ಒಂದು ಪೇರು ಹಣ್ಣಿನ ಗಿಡ, ಮತ್ತು ಮೂರು 'ಡ್ಯಾಮ್‌ಸನ್' ಹಣ್ಣಿನ ಗಿಡ; ಅ ಗಿಡಗಳಲ್ಲಿ ಹೆಚ್ಚಿನ ಅಥವಾ ಕೆಟ್ಟುಹೋದ ಕವಲು ಕಡ್ಡಿಗಳನ್ನು ಈಚೆಗೆ ಕತ್ತರಿಸಿಹಾಕಿದ ಗುರುತುಗಳು ಕಾಣುತ್ತಿದ್ದುವು. ಇವಲ್ಲದೆ, ವಂಶಪಾರಂಪರ್ಯವಾಗಿ ಬೆಳೆಸಿಕೊಂಡು ಬಂದ ಹಳೆಯ ಕಾಲದ ಕೆಲವು ಜಾತಿಯ ಹೂವಿನ ಗಿಡಗಳೂ ಇದ್ದುವು; ಅವೇನೂ ಅಷ್ಟು ಪ್ರವರ್ಧಮಾನ ಸ್ಥಿತಿಯಲ್ಲಿರಲಿಲ್ಲ; ಆದರೆ ಯಾವನೋ ಒಬ್ಬಾತ ಪ್ರೀತಿಯಿಂದಲೋ ಇಲ್ಲವೆ ಕುತೂಹಲದಿಂದಲೋ ಅವು ಎಷ್ಟು ಪರಿಪೂರ್ಣಸ್ಥಿತಿಯನ್ನು ಹೊಂದಲು ಸಾಧ್ಯವೊ ಅಷ್ಟು ಪರಿಪೂರ್ಣ ಸ್ಥಿತಿಗೆ ಅವುಗಳನ್ನು ತರಲು ಆಸಕ್ತಿ ಹೊಂದಿದ್ದನೋ ಎಂಬಂತೆ, ಬಹು ಎಚ್ಚರಿಕೆಯಿಂದ ಅವುಗಳ ಸುತ್ತಣ ಕಳೆಯನ್ನು ಕೀಳಲಾಗಿತ್ತು. ತೋಟದ ಇನ್ನುಳಿದ ಭಾಗದಲ್ಲಿ ಚೆನ್ನಾಗಿ ಆಯ್ದ ಬೇರೆ ಬೇರೆ ಬಗೆಗಳ ಆಹಾರಯೋಗ್ಯ ತರಕಾರಿ ಗಿಡಗಳು ಕಾಣಬರುತ್ತಿದ್ದುವು; ಅವು ಹೊಗಳುವ ಮಟ್ಟಿಗೆ ಏಳಿಗೆಯಾದ ಸ್ಥಿತಿಯಲ್ಲಿದ್ದುವು. ಹೊನ್ನು ಬಣ್ಣದ ಹೂಬಿಟ್ಟ ಬೇಸಗೆಯ ಕುಂಬಳ ಬಳ್ಳಿಗಳು; ಈಗ ಮುಖ್ಯ ಬಳ್ಳಿಯಿಂದ ಕವಲೊಡೆದು, ಆಚೆ ಈಚೆ ಬಹು ದೂರ ಹರಡಿಕೊಳ್ಳುವ ಪ್ರವೃತ್ತಿಯನ್ನು ತೋರುತ್ತಿದ್ದ ಸೌತೆಕಾಯಿಯ ಗಿಡಗಳು; ತಿಂಗಳಹುರುಳಿ ಗಿಡಗಳ ಎರಡು ಮೂರು ಸಾಲುಗಳು, ಮತ್ತು ಕೋಲುಗಳ ಮೇಲೆ ತೋರಣವಾಗಿ ಹಬ್ಬುವದರಲ್ಲಿದ್ದ ಹಬ್ಬುವ ತಿಂಗಳ ಹುರಳಿ ಗಿಡಗಳ ಎರಡು ಮೂರು ಸಾಲುಗಳು; ಒಳ್ಳೆಯ ನೆರಳಾಸರೆಯನ್ನೂ ಹೊಂದಿ, ಚೆನ್ನಾಗಿ ಬಿಸಿಲೂ ಬೀಳುವ ಜಾಗದಲ್ಲಿ ಆಗಲೇ ದೈತ್ಯಾಕಾರದಲ್ಲಿ ಬೆಳೆದು, ಬೇಗನೆ ಹೇರಳವಾದ ಫಲಕೊಡುವ ಆಶೆ ಹುಟ್ಟಿಸುತ್ತಿದ್ದ ಟೊಮ್ಯಾಟೋ ಗಿಡಗಳು.

ಈ ತರಕಾರಿಯ ಗಿಡಗಳನ್ನು ಬಹು ಎಚ್ಚರಿಕೆಯಿಂದ, ಶ್ರಮಬಿಟ್ಟು, ಹುಟ್ಟಹಾಕಿ ಬೆಳಸಿ, ಹಾಗೂ ಭೂಮಿಯನ್ನು ಹಸನಾಗಿಯೂ ಅಚ್ಚುಕಟ್ಟಾಗಿಯೂ ಇಟ್ಟಿದ್ದವರು ಯಾರಿರಬಹುದು ಎಂದು ಫೀಬೆ ಅಚ್ಚರಿಪಟ್ಟಳು. ಖಂಡಿತವಾಗಿಯೂ ತನ್ನ ಅಕ್ಕ ಹೆಪ್ಸಿಬಾ ಅಲ್ಲ; ಶ್ರೀಮಂತೆಗೆ ತಕ್ಕ ಉದ್ಯೋಗವಾದ ಪುಷ್ಪೋದ್ಯಾನ ಕೃಷಿಯನ್ನು ಮಾಡುವುದಕ್ಕೆ ಅವಳಿಗೆ ಅಭಿರುಚಿಯಾಗಲಿ ಉತ್ಸಾಹವಾಗಲಿ

ಮತ್ತು ಸಂಕಟದ ಧ್ವನಿ ಕೇಳಿಬರುತ್ತಿತ್ತು. ಈ ಕೋಳಿಗಳ ಜಾತಿಯನ್ನು ಶುದ್ಧವಾಗಿ ಕಾಯ್ದಿಡಬೇಕೆಂದು ಅತ್ಯಂತ ಕಟ್ಟುನಿಟ್ಟಾದ ಎಚ್ಚರಿಕೆ ವಹಿಸಿದ್ದರ ಪರಿಣಾಮವಾಗಿ, ಅನೇಕ ಸತ್ಕುಲಗಳ ಹಾಗೆ ಈ ಕುಕ್ಕುಟ ವಂಶವೂ ಹೀನಸ್ಥಿತಿಗೆ ಇಳಿದಿದ್ದಿತು ಎಂಬುದು ಸ್ಪಷ್ಟವಾಗಿತ್ತು. ಈ ಪಕ್ಷಿ ಪ್ರಪಂಚದ ಪ್ರಜೆಗಳು ತಮ್ಮ ವಿಶಿಷ್ಟ ಪ್ರಭೇದದ ಸ್ವರೂಪದಲ್ಲಿ ಇರಬೇಕಾದಷ್ಟು ಕಾಲಕ್ಕಿಂತ ಹೆಚ್ಚುಕಾಲ ಜೀವಿಸಿಕೊಂಡು ಬಂದಿದ್ದುವು; ಆ ವಂಶದ ಈಗಿನ ಪ್ರತಿನಿಧಿಗಳಿಗೆ ಈ ಸತ್ಯಾಂಶದ ಅರಿವು ಇದ್ದಿತೆಂಬುದು ಅವುಗಳ ಮಂಕುಗವಿದ ಸ್ಥಿತಿಗತಿಯಿಂದ ವ್ಯಕ್ತವಾಗುತ್ತಿದ್ದಿತು. ಅವು ಹೇಗೋ ಜೀವಂತವಾಗಿದ್ದುವು ಎಂಬ ಬಗೆಗೆ ಪ್ರಶ್ನೆಯೇ ಇಲ್ಲ! ಆಗೊಮ್ಮೆ ಈಗೊಮ್ಮೆ ಮೊಟ್ಟೆಯನ್ನೂ ಇಡುತ್ತಿದ್ದುವು; ಇಷ್ಟನ್ನೆಲ್ಲಾ ಮಾಡುತ್ತಿದ್ದುದು ತಮ್ಮ ಸಂತೋಷಕ್ಕಾಗಿಯಲ್ಲ, ಹಿಂದೊಂದು ಕಾಲದಲ್ಲಿ ಅಷ್ಟೊಂದು ಮೆಚ್ಚುಗೆಗೆ ಪಾತ್ರವಾಗಿದ್ದ ಕುಕ್ಕುಟ ಜಾತಿಯನ್ನು ಪ್ರಪಂಚವು ಪೂರ್ತಿಯಾಗಿ ಕಳೆದುಕೊಳ್ಳದೆ ಇರಲಿ ಎಂದು. ಈ ಕೋಳಿಗಳ ವಿಶಿಷ್ಟ ಲಾಂಛನ ಎಂದರೆ, ಈಚಿನ ದಿನಗಳಲ್ಲಿ ಅಯ್ಯೋ ಎನಿಸುವಂತೆ ವಿರಳವಾಗಿ ಬೆಳೆದಿದ್ದ ತಲೆಜುಟ್ಟು; ಅದು ಎಷ್ಟರಮಟ್ಟಿಗೆ ವಿಚಿತ್ರವಾಗಿ ಕ್ರೂರ ರೀತಿಯಲ್ಲಿ ಹೆಪ್ಸಿಬಾಳ ರುಮಾಲು ಟೋಪಿಯನ್ನು ಹೋಲುತ್ತಿತ್ತು ಎಂದರೆ, ಈ ನಿರ್ಭಾಗ್ಯ ದ್ವಿಪಾದಿಗಳಿಗೂ ತನ್ನ ಪೂಜ್ಯ ಬಂಧುವಿಗೂ ಒಂದು ಸಾಮಾನ್ಯ ಹೋಲಿಕೆಯಿದೆಯೆಂದು ಫೀಬೆ ಕಲ್ಪಿಸಿಕೊಳ್ಳುವಂತಾಗಿತ್ತು; ಹಾಗೆ ಕಲ್ಪಿಸಿಕೊಳ್ಳುವುದು ಅವಳ ಅಂತಃಕರಣವನ್ನು ಚುಚ್ಚಿದಂತೆ ಇರಿಯುತ್ತಿತ್ತು ಆದರೆ ಅದು ಅನಿವಾರ್ಯವಾಗಿತ್ತು.

ಕೋಳಿಗಳ ಹಸಿವನ್ನು ತಣಿಸಲು ತಕ್ಕ ಕೆಲವು ರೊಟ್ಟಿಯ ಚೂರುಗಳು, ಹಸಿಯ ಅಲೂಗಡ್ಡೆ, ಮತ್ತು ಅಂಥ ಇತರ ಚೂರು ಪಾರುಗಳನ್ನು ತರಲು ಆ ಹುಡುಗಿ ಮನೆಯೊಳಕ್ಕೆ ಓಡಿಹೋದಳು. ಹಿಂದಿರುಗಿ, ಅವಳು ಒಂದು ಬಗೆಯ ವಿಲಕ್ಷಣವಾದ ಕೂಗು ಹಾಕಿದಳು; ಅವುಗಳು ಅದರ ಗುರುತು ಹಿಡಿದಂತೆ ತೋರುತ್ತದೆ. ಕೋಳಿಯಮರಿ ಹಂಜರದ ಕಡ್ಡಿಗಳ ನಡುವೆ ನುಸುಳಿ ಬಂದು, ಸ್ವಲ್ಪ ಉತ್ಸಾಹವನ್ನು ತೋರಿಸುತ್ತಾ, ಅವಳ ಪಾದಗಳ ಬಳಿಗೆ ಓಡಿಹೋಯಿತು; ಇತ್ತ ಹುಂಜನೂ ಅದರ ಕುಟುಂಬವರ್ಗದ ಹೆಣ್ಣು ಕೋಳಿಗಳೂ ಅವಳನ್ನು ವಿಲಕ್ಷಣವಾದ ಕಡೆಗಣ್ಣ ನೋಟದಿಂದ ನೋಡಿದುವು; ಆ ಬಳಿಕ, ಅವಳ ಶೀಲಸ್ವಭಾವದ ಕುರಿತು ತಮ್ಮ ಪ್ರಾಜ್ಞ ಅಭಿಪ್ರಾಯಗಳನ್ನು ತಿಳಿಯಪಡಿಸುವ ರೀತಿಯಲ್ಲಿ, ಒಂದಕ್ಕೊಂದು ವಟಗುಟ್ಟಿಕೊಂಡುವು. ಅವುಗಳ ಸ್ವರೂಪ ಎಷ್ಟು ಪ್ರಾಜ್ಞವಾಗಿ, ಪುರಾಣಕಾಲದ್ದಾಗಿ ಕಾಣುತ್ತಿತ್ತು ಎಂದರೆ, ಬಹಳ ಕಾಲದಿಂದ

ಹಳೆಯ ಪಾಚಿಗಟ್ಟಿದ ಕಲ್ಲುಗಳಿಂದ ಅದರ ಸುತ್ತಲೂ ಅಂಚುಕಟ್ಟಿತ್ತು; ಅದರ ತಳದಲ್ಲಿ ಬಣ್ಣ ಬಣ್ಣದ ಸಣ್ಣ ಗೋಲಿ ಕಲ್ಲುಗಳನ್ನು ಹೂತಿದ್ದು, ಒಂದು ವಿಧವಾದ ಗಾಜು ಚೂರಿನ ಚಿತ್ರದಂತೆ ಕಾಣುವಹಾಗೆ ಮಾಡಿದ್ದಿತು. ನೀರು ಮೇಲಕ್ಕೆ ಚಿಮ್ಮುವಾಗ ಅದರ ಆಟದ ಮತ್ತು ತುಸು ಕಲಕಾಟದ ಪರಿಣಾಮವಾಗಿ, ಈ ಬಣ್ಣ ಬಣ್ಣದ ಗೋಲಿಕಲ್ಲುಗಳು ಒಂದು ಐಂದ್ರಜಾಲಿಕ ಪ್ರಭಾವಕ್ಕೆ ಒಳಗಾದಂತಾಗಿ, ನಿರಂತರವಾಗಿ ಪರಿವರ್ತನೆ ಹೊಂದುವ ವಿಚಿತ್ರಾಕೃತಿಗಳ ದರ್ಶನವು ಮೂಡಿಬರುತ್ತಿತ್ತು; ಆ ಆಕೃತಿಗಳ ಸ್ವರೂಪ ಸ್ಪಷ್ಟವಾಗುವುದಕ್ಕೆ ಮೊದಲೇ ಅವು ತಟ್ಟನೆ ಮಾಯವಾಗಿ ಬಿಡುತ್ತಿದ್ದುವು. ನೀರು ಉಕ್ಕಿ ಅಲ್ಲಿಂದ ಪಾಚಿಕಟ್ಟಿದ್ದ ಕಲ್ಲುಗಳ ಕಟ್ಟೆಯಮೇಲೆ ಹಾಯ್ದು, ತೋಟದ ಬೇಲಿಯ ಕೆಳಗಡೆ ಕಾಣದಹಾಗೆ ಹರಿದು ಹೊರಟು ಹೋಗುತ್ತಿತ್ತು; ಅದು ಹಾಗೆ ಹರಿದು ಹೋಗುತ್ತಿದ್ದ ಸ್ಥಳವನ್ನು ಕಾಲುವೆ ಎನ್ನುವುದಕ್ಕಿಂತ ಚರಂಡಿ ಎಂದು ಕರೆಯಬೇಕು; ಹಾಗೆ ಕರೆಯಲು ನಮಗೂ ವ್ಯಸನವೆ.

ಬಹಳ ಪುರಾತನವಾದ ಕೋಲಿಯ ಹಂಜರವೊಂದರ ವಿಷಯವಾಗಿ ಉಲ್ಲೇಖಿಸುವುದನ್ನು ನಾವು ಮರೆಯುವಹಾಗಿಲ್ಲ; ಅದು ತೋಟದ ದೂರದ ಮೂಲೆಯೊಂದರಲ್ಲಿ ನಿಂತಿತ್ತು, ಚಿಲುಮೆಗೆ ಬಹುದೂರವೇನಲ್ಲ. ಅದರಲ್ಲಿ ಈಗ ಒಂದು ಹುಂಜ, ಅದರ ಜೊತೆಯ ಹೆಣ್ಣು ಕೋಳಿ ಎರಡು, ಒಂದು ಒಂಟಿ ಮರಿ– ಇಷ್ಟು ಮಾತ್ರ ಇದ್ದುವು. ಇವೆಲ್ಲವೂ ಪಿನ್ಚನ್ ವಂಶದಲ್ಲಿ ತಲೆತಲಾಂತರದಿಂದ ವಂಶದ ಆಸ್ತಿಯಾಗಿ ಉಳಿದುಬಂದ ಕೋಳಿತಳಿಯ ಪರಿಶುದ್ಧ ಮಾದರಿಗಳಾಗಿದ್ದುವು; ಅಲ್ಲದೆ, ಅವು ತಮ್ಮ ಉಚ್ಛ್ರಾಯ ಕಾಲದಲ್ಲಿ 'ಟರ್ಕಿ' ಕೋಳಿಯಷ್ಟು ಗಾತ್ರವನ್ನು ಹೊಂದಿದ್ದುವೆಂದೂ, ಸೊಗಸಾದ ಮಾಂಸದ ದೃಷ್ಟಿಯಿಂದ ಹೇಳುವುದಾದರೆ ರಾಜಕುಮಾರನ ಭೋಜನಕ್ಕೆ ಯೋಗ್ಯವಾಗಿದ್ದುವೆಂದೂ ಹೇಳುತ್ತಿದ್ದರು. ಐತಿಹ್ಯದಂತೆ ಹಬ್ಬಿದ್ದ ಈ ಪ್ರಸಿದ್ಧಿಯ ನಿಜಾಂಶಕ್ಕೆ ಸಾಕ್ಷೀಭೂತವಾಗಿ, ಹೆಪ್ಸಿಬಾ ಒಂದು ಭಾರಿ ಮೊಟ್ಟೆಯ ಚಿಪ್ಪನ್ನು ಪ್ರದರ್ಶಿಸುವುದಕ್ಕೆ ಸಿದ್ಧವಾಗಿದ್ದಳು; ಅದನ್ನು ಕಂಡು ಉಷ್ಟ್ರಪಕ್ಷಿಯೇನೂ ನಾಚಿಕೊಳ್ಳಬೇಕಾದ ಆವಶ್ಯಕತೆಯಿರಲಿಲ್ಲ. ಅದು ಹೇಗಾದರೂ ಇದ್ದುಕೊಳ್ಳಲಿ, ಈಗಂತೂ ಆ ಕೋಳಿಗಳು ಪಾರಿವಾಳಗಳಿಗಿಂತ ದೊಡ್ಡವಾಗಿರಲಿಲ್ಲ. ಅವು ಸಪ್ಪೆಯಾಗಿ, ಒಣಕಲಾಗಿ, ತರತರಕಲಾಗಿ, ವಿಚಿತ್ರವಾಗಿ ಕಾಣುತ್ತಿದ್ದುವು; ಸಂಧಿವಾತದವರು ನಡೆಯುವಹಾಗೆ ಕುಂಟುತ್ತಾ ಚಲಿಸುತ್ತಿದ್ದುವು; 'ಕ್ಲಕ್‌ಕ್ಲುಕ್' ಎಂದು ಕೂಗುವ ಅವುಗಳ ಎಲ್ಲ ಬಗೆಯ ಸ್ವರವೈವಿಧ್ಯದ ಕೂಗುಗಳಲ್ಲಿಯೂ ನಿದ್ರೆಯ ಜೋಂಪಿನ

ಸಲಿಗೆ ಬೆಳಸಿ, ಅವು ನನಗೆ ಗೌರವ ತೋರಿಸಿಲ್ಲ. ಮಿಸ್ ಹೆಪ್ಸಿಬಾ ಈ ಸಂಗತಿಯನ್ನು ತನ್ನ ಇತರ ಸಂಪ್ರದಾಯದ ಸಂಗತಿಗಳೊಂದಿಗೆ ನೆಯ್ದು, 'ಖೋಲಿಗಳು ನಿನ್ನನ್ನು ಪಿನ್ಚನ್ ವಂಶಕ್ಕೆ ಸೇರಿದವಳು ಎಂದು ತಿಳಿದಿವೆ' ಎಂದು ಹೇಳಿಬಿಡುತ್ತಾಳೆ."

"ರಹಸ್ಯವೇನೆಂದರೆ, ಕೋಳಿಗಳು ಮತ್ತು ಕೋಳಿಮರಿಗಳೊಂದಿಗೆ ಹೇಗೆ ಮಾತನಾಡಬೇಕೆಂಬುದನ್ನು ನಾನು ಕಲಿತಿದ್ದೇನೆ" ಎಂದು ಫೀಬೆ ಮುಗುಳುನಗೆ ನಗುತ್ತಾ ನುಡಿದಳು.

ಆ ತರುಣನು ಹೀಗೆ ಉತ್ತರ ಕೊಟ್ಟನು; "ಆಹಾ, ಅದು ಸರಿ, ಆದರೆ ಶ್ರೀಮಂತ ವಂಶದ ಈ ಕೋಳಿಗಳು ರೈತನ ಹಟ್ಟಿಯ ಕೋಳಿಯ ಕೀಳು ಭಾಷೆಯನ್ನು ಅರ್ಥ ಮಾಡಿಕೊಳ್ಳಲು ಮೂಗುಮುರಿಯುತ್ತವೆ. ಒಂದೇ ಮನೆತನಕ್ಕೆ ಸೇರಿದವರ ಧ್ವನಿಯನ್ನು ಅವು ಗುರುತುಹಿಡಿಯಬಲ್ಲವು; ನನಗಂತೂ ಹಾಗೆ ತೋರುತ್ತದೆ, ಹೆಪ್ಸಿಬಾಗೂ ಹಾಗೆಯೇ ತೋರೀತು. ನೀನು ಪಿನ್ಚನ್ ಮನೆತನದವಳು ತಾನೆ?"

"ನನ್ನ ಹೇಸರು ಫೀಬೆ ಪಿನ್ಚನ್ ಎಂದು ಆ ಹುಡುಗಿ ಸ್ವಲ್ಪ ಬಿಗಿಯಾದ ವರ್ತನೆಯಿಂದಲೇ ನುಡಿದಳು; ಏಕೆಂದರೆ, ತನ್ನ ಈ ಹೊಸ ಪರಿಚಯದವನು ಛಾಯಾ ಚಿತ್ರಕಾರನಲ್ಲದೆ ಬೇರೆಯಾರೂ ಅಲ್ಲವೆಂಬುದು ಅವಳಿಗೆ ಗೊತ್ತಿತ್ತು; ಅಲ್ಲದೆ ಕಾನೂನು ಕಟ್ಟಳೆಗಳನ್ನು ಮೀರುವ ಅವನ ಸ್ವಭಾವದ ಬಗೆಗೆ ಹೆಪ್ಸಿಬಾ ಹಿತಕರವಲ್ಲದ ಭಾವನೆಯನ್ನು ಉಂಟುಮಾಟಿದ್ದಳು. "ನನ್ನ ಅಕ್ಕ ಹೆಪ್ಸಿಬಾಳ ತೋಟವನ್ನು ಇನ್ನೊಬ್ಬರು ನೋಡಿಕೊಳ್ಳುತ್ತಿದ್ದಾರೆ ಎಂದು ನನಗೆ ಗೊತ್ತಿರಲಿಲ್ಲ."

ಹಾಲ್‌ಗ್ರೇವ್ ಹೇಳಿದ, "ಹೌದು, ಈ ಹಳೆಯ ಕಪ್ಪು ಮಣ್ಣನ್ನು ನಾನು ಅಗೆಯುತ್ತೇನೆ, ಕಳೆಗುದ್ದಲಿಯಿಂದ ಅದರಲ್ಲಿನ ಕಳೆಕೀಳುತ್ತೇನೆ. ಎಷ್ಟೋ ಜನ ಇಲ್ಲಿ ಬಹಳ ಕಾಲ ಬೀಜ ಬಿತ್ತಿ, ಬೆಳೆ ತೆಗೆದಿದ್ದಾರೆ; ಅದರಲ್ಲಿ ಅಳಿದುಳಿದಿರುವ ಸ್ವಲ್ಪ ನಿಸರ್ಗದಿಂದಲೂ ಸರಳತೆಯಿಂದಲೂ ಹೊಸಹುಮ್ಮಸ್ಸು ಪಡೆಯುವುದೇ ನನ್ನ ಉದ್ದೇಶ ನೆಲ ಅಗೆಯುವುದೇ ನನಗೊಂದು ಹವ್ಯಾಸ. ಒಂದು ನಿಜವಾದ ಉದ್ಯೋಗ ಎನ್ನುವುದು ನನಗಿದ್ದರೆ, ಮಣ್ಣಿಗಿಂತ ಹಗುರವಾದ ಪದಾರ್ಥ ಉಪಯೋಗಿಸಿ ಮಾಡುವಂಥದು. ಸಂಕ್ಷೇಪವಾಗಿ ಹೇಳುವುದಾದರೆ, ಬಿಸಿಲಿನ ಸಹಾಯದಿಂದ ಚಿತ್ರ ಮೂಡಿಸುತ್ತೇನೆ; ಅಲ್ಲದೆ, ನನ್ನ ಸ್ವಂತ ಕಸುಬಿನ ದೆಸೆಯಿಂದ ನಾನು ಅತಿಯಾಗಿ ಪ್ರಕಾಶಕ್ಕೆ ಬರಬಾರದು ಎಂಬ ಉದ್ದೇಶದಿಂದ, ಕತ್ತಲಿಡಿದ ಈ ಇಪ್ಪಾರುಗಳಲ್ಲಿ ಒಂದರಲ್ಲಿ ವಾಸಮಾಡಲು ಅವಕಾಶ

ಮಾನ್ಯವಾದ ವಂಶದಲ್ಲಿ ಅವು ಹುಟ್ಟಿರುವುದು ಮಾತ್ರವಲ್ಲದೆ, ಏಳು ಇಪ್ಪಾರಿನ ಮನೆ ಸ್ಥಾಪಿತವಾದಂದಿನಿಂದಲೂ ತಮ್ಮ ಸ್ವಸಾಮರ್ಥ್ಯದಿಂದ ಬದುಕಿಬಾಳಿ ಅದರ ಆಗುಹೋಗಿನೊಂದಿಗೆ ಅದು ಹೇಗೋ ಬೆರೆತು ಹೋಗಿದ್ದುವು ಎಂಬ ಭಾವನೆಗೆ ಬಣ್ಣ ಕಟ್ಟುತ್ತಿದ್ದಿತು ಅವು ಒಂದು ಜಾತಿಯ ರಕ್ಷಕದೈವಗಳಾಗಿದ್ದುವು; ಆದರೆ ಇತರ ಅನೇಕ ರಕ್ಷಕ ದೇವತೆಗಳಿಗಿದ್ದಂತಹ ರೆಕ್ಕೆಗಳನ್ನೂ ಗರಿಗಳನ್ನೂ ಹೊಂದಿರದೆ, ಬೇರೆಯ ರೀತಿಯವನ್ನು ಹೊಂದಿದ್ದುವು.

"ಇಗೋ, ಏ, ಪುಟ್ಟ ಕೋಳಿಮರಿಯೇ! ಒಳ್ಳೇ ಸೊಗಸಾದ ರೊಟ್ಟಿಯ ಚೂರು ಸ್ವಲ್ಪ ತಂದಿದ್ದೇನೆ ನಿನಗಾಗಿ ಹಿಡಿ!" ಎಂದಳು ಫೀಬೆ.

ಇದನ್ನು ಕೇಳಿ, ಆ ಕೋಳಿಮರಿ ಅದು ಬಹುಮಟ್ಟಿಗೆ ತನ್ನ ತಾಯಿಯಷ್ಟೇ ಗೌರವ ಭಾವವನ್ನು ಹುಟ್ಟಿಸುವಂತಿದ್ದರೂ ತನ್ನ ವಂಶದ ಪೂರ್ವಜಪಕ್ಷಿಗಳೆಲ್ಲವುಗಳ ಪ್ರಾಚೀನ ಲಕ್ಷಣಗಳೆಲ್ಲವನ್ನೂ ತನ್ನ ಸೂಕ್ಷ್ಮ ರೂಪದಲ್ಲಿ ಒಳಕೊಂಡಿದ್ದಿತು. ಮೇಲಕ್ಕೆ ಹಾರಿ, ಫೀಬೆಯ ಹೆಗಲ ಮೇಲೆ ಬಂದು ಕುಳಿತುಕೊಳ್ಳುವಷ್ಟರ ಮಟ್ಟಿಗೆ ಚೈತನ್ಯವನ್ನು ಕೂಡಿಸಿಕೊಂಡಿತು.

"ಆ ಮರಿಕೋಳಿ ನಿನಗೆ ತುಂಬ ಗೌರವಕೊಡುತ್ತಿದೆ!" ಎಂದು ಫೀಬೆಯ ಹಿಂದುಗಡೆಯಿಂದ ಒಂದು ದನಿ ನುಡಿಯಿತು.

ಅವಳು ತಟ್ಟನೆ ತಿರುಗಿ, ಒಬ್ಬ ತರುಣನನ್ನು ಕಂಡುದಕ್ಕಾಗಿ ಅಚ್ಚರಿಪಟ್ಟಳು. ತಾನು ಬಂದ ಇಪ್ಪಾರಿನಿಂದ ಅವನು ಬಂದಿರಲಿಲ್ಲ; ಬೇರೊಂದು ಇಪ್ಪಾರಿನ ಬಾಗಿಲಿನಿಂದ ಅವನು ತೋಟದೊಳಕ್ಕೆ ಬಂದಿರುವನೆಂದು ಅವಳಿಗೆ ಗೊತ್ತಾಯಿತು. ಅವನು ಕೈಯಲ್ಲಿ ಒಂದು ಕಳೆಗುದ್ದಲಿ ಹಿಡಿದಿದ್ದನು; ಫೀಬೆ ರೊಟ್ಟಿಯ ಚೂರುಗಳನ್ನು ಹುಡುಕಿಕೊಂಡು ಹೋಗಿದ್ದಾಗ, ಅವನು ಟೊಮ್ಯಾಟೋ ಗಿಡಗಳ ಬೇರುಗಳ ಸುತ್ತ ಹೊಸ ಮಣ್ಣನ್ನು ಗೋರಿಹಾಕುವ ಕೆಲಸದಲ್ಲಿ ನಿರತನಾಗಿದ್ದನು.

"ಈ ಕೋಳಿಮರಿ ನಿನ್ನನ್ನು ಒಬ್ಬ ಹಳೆಯ ಪರಿಚಯಸ್ಥಳಹಾಗೆ ಕಾಣುತ್ತಿದೆ" ಎಂದು ಅವನು ಶಾಂತವಾದ ರೀತಿಯಲ್ಲಿ ತನ್ನ ಮಾತನ್ನು ಮುಂದುವರಿಸಿದನು; ಆಗ ಒಂದು ಮುಗುಳುನಗೆ ಅವನ ಮುಖವನ್ನು ಫೀಬೆ ಮೊದಲು ಭಾವಿಸಿಕೊಂಡಿದ್ದುದಕ್ಕಿಂತ ಹೆಚ್ಚು ಮನೋಹರವಾಗಿ ಮಾಡಿತು. "ಆ ಹಂಜರದಲ್ಲಿರುವ ಪೂಜ್ಯ ವ್ಯಕ್ತಿಗಳು ಕೂಡ ಬಹಳ ವಿಶ್ವಾಸಪರವಾಗಿರುವಂತೆ ಕಾಣುತ್ತಿವೆ. ಇಷ್ಟು ಬೇಗ ನೀನು ಅವುಗಳ ಕೃಪೆಯನ್ನು ಪಡೆದಿರುವುದು ನಿನ್ನ ಅದೃಷ್ಟ. ನನ್ನನ್ನು ಅವು ಬಹಳ ಕಾಲದಿಂದ ಬಲ್ಲವು; ನಾನು ಅವುಗಳಿಗೆ ಒಂದು ದಿನವಾದರೂ ಆಹಾರವನ್ನು ತಂದು ಕೊಡದೆ ಇರುವುದಿಲ್ಲ; ಆದರೂ ನನ್ನೊಂದಿಗೆ

ತಿಳಿದರೆ ನನಗೆ ತೃಪ್ತಿ."

ಒಂದು 'ಮೊರಾಕೊ' ಚರ್ಮದ ಸಂಪುಟದಲ್ಲಿದ್ದ ಒಂದು ಸೂಕ್ಷ್ಮಾಕಾರದ ಚಾಯಾಚಿತ್ರವನ್ನು ಅವನು ತೋರಿಸಿದನು. ಫೀಬೆ ಸುಮ್ಮನೆ ಒಂದು ಸಲ ಅದರ ಕಡೆ ನೋಡಿ, ಅದನ್ನು ಹಾಗೆಯೆ ಹಿಂದಕ್ಕೆ ಕೊಟ್ಟಳು.

ಅವಳು ಉತ್ತರ ಕೊಟ್ಟಳು: "ಆ ಮುಖ ನನಗೆ ಪರಿಚಯವಿದೆ; ಏಕೆಂದರೆ, ಅದರ ತೀಕ್ಷ್ಣವಾದ ನೋಟ ದಿನವೆಲ್ಲಾ ನನ್ನನ್ನು ಹಿಂಬಾಲಿಸಿ ನೋಡುತ್ತಿರುತ್ತದೆ. ಆ ದಿವಾನ ಖಾನೆಯಲ್ಲಿ ನೇತುಹಾಕಿರುವ ಚಿತ್ರದಲ್ಲಿರುವ ನನ್ನ 'ಪೂರಿಟನ್' ಪೂರ್ವಜನೇ ಈತ. ಆ ಭಾವ ಚಿತ್ರದ ಕರಿಯಮಲ್ಲು ಟೋಪಿಯನ್ನೂ ಬಿಳಿಯ ಗಡ್ಡವನ್ನೂ ತೆಗೆದುಬಿಟ್ಟು, ಅವನ ಕವುದಿ ಮತ್ತು ಬಟ್ಟೆಯ ಪಟ್ಟಿ ಇವುಗಳಿಗೆ ಬದಲಾಗಿ ಈಗಿನ ಕಾಲದ ಅಂಗಿಯನ್ನೂ ಸಾಟೀನು ಬಟ್ಟೆಯ ಕಂಠವಸ್ತ್ರವನ್ನೂ ತೊಡಿಸಿ, ಯಾವುದೋ ರೀತಿಯಲ್ಲಿ ಆ ಚಿತ್ರವನ್ನೇ ಪ್ರತಿಮಾಡಿರುತ್ತೀರೆ, ನೀವು; ಇದು ನಿಶ್ಚಯ. ನೀವು ಮಾಡಿರುವ ವ್ಯತ್ಯಾಸಗಳಿಂದ ಆತ ಉತ್ತಮಗೊಂಡಿದ್ದಾನೆ ಎಂದು ನನಗನ್ನಿಸುವುದಿಲ್ಲ."

ಇದನ್ನು ಕೇಳಿ ಹಾಲ್‌ಗ್ರೇವ್ ನಕ್ಕನು; ಆದರೂ ಅವನಿಗೆ ಬಹಳ ಅಚ್ಚರಿಯೆನಿಸಿತು. ಅವನು ಹೇಳಿದ "ನೀನು ಇನ್ನು ಸ್ವಲ್ಪ ಹೆಚ್ಚು ಹೊತ್ತು ನೋಡಿದ್ದರೆ ನಿನಗೆ ಇತರ ವ್ಯತ್ಯಾಸಗಳೂ ಕಾಣಿಸುತ್ತಿದ್ದುವು. ಇದೇನೋ ಈಗಿನ ಕಾಲದ ವ್ಯಕ್ತಿಯ ಮುಖ, ಅಷ್ಟು ಭರವಸೆ ನಿನಗೆ ಕೊಡಬಲ್ಲೆ ನಾನು; ಅದನ್ನು ನೀನು ಸಂಧಿಸುವ ಸಂಭವವೂ ಹೆಚ್ಚು. ಈಗ, ಗಮನಿಸಬೇಕಾದ ಅಂಶ ಏನೆಂದರೆ, ಪ್ರಪಂಚದ ಕಣ್ಣಿಗೆ ಕಾಣುವಂತೆ– ಮಾತ್ರವಲ್ಲ, ನನಗೆ ತೋರುವ ಮಟ್ಟಿಗೆ, ಆತನ ಅತ್ಯಂತ ಆಪ್ತರಾದ ಸ್ನೇಹಿತರ ಕಣ್ಣಿಗೆ ಕೂಡ.– ಈ ಚಿತ್ರದ ಮೂಲ ವ್ಯಕ್ತಿ ಅತ್ಯಂತ ಮನೋಹರವಾದ ಮುಖ ಮುದ್ರೆಯನ್ನು ಹೊಂದಿದ್ದಾನೆ. ಅದು ಔದಾರ್ಯವನ್ನೂ ಹೃದಯ ವೈಶಾಲ್ಯವನ್ನೂ ಸ್ನೇಹಪರವಾದ ಒಳ್ಳೆಯ ಮನಸ್ಸನ್ನೂ, ಮತ್ತು ಅದೇ ಬಗೆಯ ಇತರ ಮೆಚ್ಚತಕ್ಕ ಗುಣಗಳನ್ನೂ ಸೂಚಿಸುತ್ತದೆ. ನೀನು ಕಾಣುವಂತೆ, ಸೂರ್ಯ ತಿಳಿಸುವುದೇ ಬೇರೆಯ ಕಥೆ; ನಾನು ತಾಳ್ಮೆಯಿಂದ ಐದಾರು ಸಲ ಪ್ರಯತ್ನಪಟ್ಟ ಮೇಲೂ, ನನ್ನ ಪುಸಲಾವಣೆಗೆ ಜಗ್ಗಲಿಲ್ಲ ಅವನು. ಇಲ್ಲಿ ನಾವು ನೋಡುವ ಮನುಷ್ಯ– ಕಪಟ, ಸೂಕ್ಷ್ಮ ಬುದ್ಧಿಯವನು, ಕಠಿಣ, ದರ್ಪದಸ್ವಭಾವದವನು, ಜೊತೆಗೆ ಪ್ರೇಮದ ಕಾವಿಲ್ಲದ ಹಿಮಶೈತ್ಯವುಳ್ಳವನು. ಆ ಕಣ್ಣನ್ನು ನೋಡು! ನೀನು ಅದರ ಕೃಪಾಶ್ರಯದಲ್ಲಿ ಅಧೀನವಾಗಿ ಇರಲು ಇಷ್ಟಪಡುವೆಯಾ? ಹೀಗಿದ್ದರೂ, ಆ ಮೂಲವ್ಯಕ್ತಿಯ ಮುಖದ ಮೇಲೆ ಆಡುವ

ಕೊಡುವಂತೆ ಮಿಸ್ ಹೆಪ್ಸಿಬಾನನ್ನು ಬಲಾತ್ಕಾರಮಾಡಿ ಒಪ್ಪಿಸಿದ್ದೇನೆ. ಅದಿರಲಿ, ನಾನು ತಯಾರಿಸಿದ ಚಿತ್ರಗಳ ಒಂದು ಮಾದರಿಯನ್ನು ನೋಡಲು ನಿನಗೆ ಇಷ್ಟವಿದೆಯೋ?"

"ಛಾಯಾ ಚಿತ್ರದಲ್ಲಿ ಮೂಡಿಬರುವ ರೂಪದ ವಿಷಯ ತಾನೆ ನೀವು ಹೇಳುವುದು?" ಎಂದು ಫೀಬೆ ತನ್ನ ಬಿಗುವನ್ನು ಸಡಿಲಿಸಿ ಕೇಳಿದಳು; ಏಕೆಂದರೆ, ಪೂರ್ವಕಲ್ಪಿತ ಭಾವನೆಯಿದ್ದರೂ ಕೂಡ, ಅವಳ ಸ್ವಂತ ತಾರುಣ್ಯ ಅವನ ತಾರುಣ್ಯವನ್ನು ಸಂಧಿಸಲು ಮುಂದಕ್ಕೆ ಚಿಮ್ಮಿತು. ಆ ಬಗೆಯ ಚಿತ್ರಗಳನ್ನು ಕಂಡರೆ ನನಗಾಗುವುದಿಲ್ಲ– ಅವು ಅಷ್ಟೊಂದು ಕಠಿನವಾಗಿ, ತೀಕ್ಷ್ಣವಾಗಿ ಕಾಣುತ್ತವೆ; ಅಲ್ಲದೆ, ಕಣ್ಣು ತಪ್ಪಿಸಿಕೊಂಡು, ಪಲಾಯನ ಮಾಡುವ ಹಾಗೆಯೇ ಇರುತ್ತವೆ. ಕೆಟ್ಟ ಸ್ವಭಾವದವಾಗಿ ಕಾಣುವ ಪ್ರಜ್ಞೆ ಅವಕ್ಕೆ ಇರುವಹಾಗೆ ನನಗೆ ತೋರುತ್ತದೆ; ಆದ್ದರಿಂದಲೇ ಕಾಣಿಸಿಕೊಳ್ಳುವುದೆಂದರೆ ಅವಕ್ಕೆ ಅಷ್ಟು ದ್ವೇಷ."

ಕಲಾವಿದನು ಫೀಬೆಯ ಕಡೆ ನೋಡುತ್ತ ಹೇಳಿದನು: "ನೀನು ಅವಕಾಶಕೊಟ್ಟದ್ದೇ ಆದರೆ, ಪೂರ್ಣವಾಗಿ ಸೌಜನ್ಯವುಳ್ಳ ಮುಖದಲ್ಲಿ ಅನಿಷ್ಟವಾದ ಲಕ್ಷಣಗಳನ್ನು ಛಾಯಾಚಿತ್ರ ಕಲೆ ಹೊರತರುತ್ತದೆಯೇ ಇಲ್ಲವೆ ಎಂಬುದನ್ನು ಪ್ರಯತ್ನಿಸಿ ನೋಡಲು ನನಗೆ ಆಸೆ. ಆದರೆ ನೀನು ಹೇಳಿದ್ದರಲ್ಲಿಯೂ ಖಂಡಿತವಾಗಿ ಸತ್ಯಾಂಶವಿದೆ. ನಾನು ತೆಗೆದಿರುವ ಪ್ರತಿ ರೂಪಗಳಲ್ಲಿ ಬಹು ಸಂಖ್ಯೆಯುವು ಸೌಜನ್ಯವಿಲ್ಲದವಾಗಿ ಕಾಣುತ್ತವೆ, ದಿಟ. ಅದಕ್ಕೆ ಸರಿಯಾದ ತಕ್ಕ ಕಾರಣ, ನಾನು ಭಾವಿಸಿರುವ ಹಾಗೆ, ಅವುಗಳ ಮೂಲವ್ಯಕ್ತಿಗಳು ಹಾಗಿರುವುದೇ ಆಗಿದೆ. ಅಂತರಿಕ್ಷದ ವಿಶಾಲವಾದ ಆಡಂಬರವಿಲ್ಲದ ಸೂರ್ಯ ಪ್ರಕಾಶದಲ್ಲಿ ಒಂದು ಆಶ್ಚರ್ಯಕರವಾದ, ಒಳಹೊಕ್ಕು ನೋಡುವ ಶಕ್ತಿಯಿದೆ. ಕೇವಲ ಮೇಲ್ಮೈಯನ್ನು ಚಿತ್ರಿಸುವ ಅದರ ಬಲ್ಮೆಗೆ ಮಾತ್ರ ನಾವು ಬೆಲೆ ಕೊಡುತ್ತೇವೆ; ಆದರೆ ವಾಸ್ತವವಾಗಿ ಅದು ರಹಸ್ಯ ಸ್ವಭಾವವನ್ನು ಯಥಾರ್ಥವಾಗಿ ಎತ್ತಿ ತೋರಿಸುತ್ತದೆ; ಯಾವ ವರ್ಣಚಿತ್ರಕಾರನೇ ಆಗಲಿ, ಅದನ್ನು ಕಂಡುಹಿಡಿಯಲು ಅವನು ಸಮರ್ಥನಾದರೂ ಚಿತ್ರಿಸುವ ಸಾಹಸವನ್ನೂ ಎಂದೂ ಮಾಡಲಾರನು. ಕಡೆಯಪಕ್ಷ, ನನ್ನ ಕಲೆಯ ನಮ್ರವಾದ ವಿಧಾನದಲ್ಲಿ ಮುಖಸ್ತುತಿಯ ಉತ್ಪ್ರೇಕ್ಷೆಗೆ ಅವಕಾಶವಿಲ್ಲ. ಈಗ, ಮರಳಿಮರಳಿ ಹಲವು ಬಾರಿ ತೆಗೆದುಕೊಂಡಿರುವ ಒಂದು ಪ್ರತಿರೂಪ ಇಲ್ಲಿದೆ; ಎಷ್ಟೇ ಸಲ ತೆಗೆದರೂ ಪರಿಣಾಮ ಮಾತ್ರ ಇನ್ನೂ ಉತ್ತಮವಾಗಿಲ್ಲ. ಆದರೂ ಸಾಮಾನ್ಯರ ದೃಷ್ಟಿಯಲ್ಲಿ ಚಿತ್ರದ ಮೂಲವ್ಯಕ್ತಿ ತೀರಭಿನ್ನವಾದ ಮುಖ ಭಾವವನ್ನು ಹೊಂದಿರುತ್ತಾನೆ. ಈ ವ್ಯಕ್ತಿ ಚಿತ್ರದ ಬಗೆಗೆ ನಿನ್ನ ನಿರ್ಣಯವೇನು ಎಂದು

ಸ್ನೇಹಿತರಾದ್ದರಿಂದ, ಆ ಚಿತ್ರವನ್ನು ನಿಮಗೆ ತೋರಿಸುವಂತೆ ನೀವು ಆಕೆಯನ್ನು ಕೇಳಬೇಕು" ಎಂದು ಫೀಬೆ ಸ್ವಲ್ಪ ಆತುರಳಾಗಿಯೇ ನುಡಿದಳು.

ಛಾಯಾಚಿತ್ರಕಲಾವಿದ ಸಮಾಧಾನಚಿತ್ರನಾಗಿಯೆ ನುಡಿದನು: "ಮೂಲವ್ಯಕ್ತಿಯನ್ನೇ ನೋಡುವುದು ನನ್ನ ಉದ್ದೇಶಕ್ಕೆ ಇನ್ನೂ ಚೆನ್ನಾಗಿ ಸರಿಹೋಗುತ್ತದೆ. ಇನ್ನು ಬೇರೆ ಆತನ ಶೀಲಸ್ವಭಾವದ ವಿಷಯತೆಗೆದುಕೊಂಡರೆ, ಅದರ ವಿವರಗಳ ಬಗೆಗೆ ನಾವು ಚರ್ಚಿಸಬೇಕಾಗಿಲ್ಲ; ಒಂದು ಸಮರ್ಥವಾದ ನ್ಯಾಯಾಸ್ಥಾನ, ಅಥವಾ ತಾನು ಸಮರ್ಥ ಎಂದು ತನ್ನನ್ನು ತಾನು ಕರೆದುಕೊಂಡಿದ್ದ ನ್ಯಾಯಸ್ಥಾನ, ಆ ವಿಚಾರವನ್ನು ಆಗಲೇ ತೀರ್ಮಾನಮಾಡಿಬಿಟ್ಟಿದೆ. ಆದರೆ, ಸ್ವಲ್ಪ ನಿಲ್ಲು! ದಯವಿಟ್ಟು ಈಗಲೇ ಹೋಗಬೇಡ! ನಾನು ನಿನ್ನ ಮುಂದಿಡಬೇಕಾದ ಸೂಚನೆಯೊಂದಿದೆ."

ಫೀಬೆ ಹೊರಟುಹೋಗುವುದರಲ್ಲಿದ್ದಳು, ಆದರೆ ಸ್ವಲ್ಪ ಹಿಂದೆ ಮುಂದೆ ನೋಡಿದಮೇಲೆ, ಹಿಂತಿರುಗಿದಳು; ಏಕೆಂದರೆ, ಅವನ ನಡವಳಿಕೆಯನ್ನು ಅವಳು ಸರಿಯಾಗಿ ಅರ್ಥಮಾಡಿಕೊಂಡಿರಲಿಲ್ಲ; ಚೆನ್ನಾಗಿ ಪರಿಶೀಲಿಸಿದಮೇಲೆ, ಮನನೋಯಿಸುವ ಒರಟುತನಕ್ಕಿಂತ ಹೆಚ್ಚಾಗಿ ಶಿಷ್ಟಾಚಾರದ ಕೊರತೆಯೆ ಅದರ ಲಕ್ಷಣ ಎಂದು ಕಂಡುಬಂದಿತು. ಅಲ್ಲದೆ, ಅವನು ಈಗ ಏನುಹೇಳಬೇಕೆಂದು ಹೊರಟಿದ್ದನೋ ಅದರಲ್ಲಿ ಇಂದು ವಿಚಿತ್ರರೀತಿಯ ಅಧಿಕಾರವೂ ಇದ್ದಿತು; ಹೆಪ್ಸಿಬಾಳ ತೋಟದಲ್ಲಿ ಅವನಿಗೆ ನೆಲೆ ದೊರೆತಿದ್ದುದು ಅವಳ ಕೃಪೆಯಿಂದಮಾತ್ರ; ಆದರೆ ತೋಟ ತನ್ನದೇ ಎಂಬ ಭಾವವಿದ್ದಿತು ಅವನ ಮಾತಿನಲ್ಲಿ.

"ನಿನಗೆ ಒಪ್ಪಿಗೆಯಾಗಿರುವ ಪಕ್ಷಕ್ಕೆ, ಈ ಹೂವಿನ ಗಿಡಗಳನ್ನೂ ಆ ಗಂಭೀರವಾಗಿ ಕಾಣುವ ಹಳೆಕಾಲದ ಕೋಳಿಗಳನ್ನೂ ನಿನ್ನ ವಶಕ್ಕೆ ಒಪ್ಪಿಸುವುದರಿಂದ ನನಗೆ ಸಂತೋಷವಾಗುವುದು. ಹಳ್ಳಿಯ ವಾತಾವರಣ ಹಾಗೂ ಉದ್ಯೋಗಗಳನ್ನು ಹೊಸದಾಗಿ ಬಿಟ್ಟು ಬಂದಿರುವ ನಿನಗೆ, ಅಂತಹ ಯಾವುದಾದರೂ ಮನೆಯ ಹೊರಗಿನ ಉದ್ಯೋಗದ ಆವಶ್ಯಕತೆ ಬೇಗನೆಯೇ ತೋರುತ್ತದೆ. ನನ್ನ ಕಾರ್ಯಕ್ಷೇತ್ರ ಹೂಗಿಡಗಳ ನಡುವೆ ಅಷ್ಟಾಗಿಲ್ಲ. ಆದ್ದರಿಂದ, ನಿನಗೆ ಇಷ್ಟಬಂದಂತೆ ನಾನು ಅವುಗಳನ್ನು ಕತ್ತರಿಸಬಹುದು, ಬೆಳಸಬಹುದು; ಮಿಸ್ ಹೆಪ್ಸಿಬಾಳ ಪುಷ್ಕಳ ಭೋಜನಕ್ಕಾಗಿ ನಾನು ಒಳ್ಳೆಯ, ಪ್ರಾಮಾಣಿಕವಾಗಿ ಬೆಳೆದ ಕಾಯಿಪಲ್ಯವನ್ನು ಒದಗಿಸುವ ಉದ್ದೇಶಹೊಂದಿದ್ದೇನೆ; ಅದಕ್ಕೆ ಪ್ರತಿಯಾಗಿ ನಾನು ಆಗಾಗ್ಗೆ ಕೇಳುವ ಅತ್ಯಂತ ಅಲ್ಪ ಪ್ರತಿಫಲ ಎಂದರೆ, ಒಂದು ಹೂವು. ಹೀಗೆ, ಹೆಚ್ಚು ಕಡಿಮೆ ಸಾಂಘಿಕಜೀವನ ಪದ್ಧತಿಗೆ ಅನುಗುಣವಾಗಿ, ನಾವು

ಆ ದಯಾಮಯವಾದ ಮಂದಹಾಸವನ್ನು ನೀನು ನೋಡಬೇಕು! ಆತ ತಕ್ಕಮಟ್ಟಿನ ಉಚ್ಚ ಪದವಿಯಲ್ಲಿರುವ ಸಾರ್ವಜನಿಕ ವ್ಯಕ್ತಿ; ಅಲ್ಲದೆ, ಆತನ ಪ್ರತಿರೂಪವನ್ನು ಚಿತ್ರಿಸುವ ಉದ್ದೇಶವೂ ಇದ್ದಿತು; ಆದ್ದರಿಂದ, ಇನ್ನೂ ವ್ಯಸನಕರವಾದ ಸಂಗತಿ."

ತನ್ನ ದೃಷ್ಟಿಯನ್ನು ಬೇರೆಯ ಕಡೆಗೆ ತಿರುಗಿಸಿ, ಫೀಬೆ ಹೇಳಿದಳು: "ಒಳ್ಳೆಯದು, ಅದನ್ನು ಇನ್ನು ಹೆಚ್ಚು ನೋಡಲು ನನಗೆ ಇಷ್ಟವಿಲ್ಲ. ಅದು ನಿಶ್ಚಯವಾಗಿ ಬಹುಮಟ್ಟಿಗೆ ಆ ಹಳೆಯ ಭಾವಚಿತ್ರದ ಹಾಗೆಯೆ ಇದೆ. ಆದರೆ, ನನ್ನ ಅಕ್ಕ ಹೆಪ್ಸಿಬಾಳ ಬಳಿ ಇನ್ನೊಂದು ಚಿತ್ರವಿದೆ, ಸೂಕ್ಷ್ಮಾಕೃತಿಯ ಚಿತ್ರ. ಅದರ ಮೂಲವ್ಯಕ್ತಿ ಇನ್ನೂ ಪ್ರಪಂಚದಲ್ಲಿ ಇರುವುದಾದರೆ, ತಾನು ನಿಷ್ಠುರನಾಗಿಯೂ ಕಠಿನನಾಗಿಯೂ ಕಾಣುವಂತೆ ಮಾಡು ಎಂದು ಸೂರ್ಯನನ್ನೇ ಪ್ರತಿಭಟಿಸಿಯಾನು ಆತ ಎಂದು ನನಗೆ ತೋರುತ್ತದೆ."

ಬಹು ಆಸಕ್ತಿಯಿಂದ ಕೂಡಿದ ಮುಖಭಾವದೊಂದಿಗೆ ಕಲಾವಿದ ಉದ್ಗಾರತೆಗೆದ: "ಆ ಚಿತ್ರವನ್ನು ನೀನು ನೋಡಿದ್ದೀಯಾ, ಹಾಗಿದ್ದ ಮೇಲೆ! ನಾನು ನೋಡಿಯೇ ಇಲ್ಲ; ಆದರೆ ಅದನ್ನು ನೋಡಬೇಕೆಂದು ತುಂಬ ಕುತೂಹಲವಿದೆ. ಆ ಮುಖದ ಬಗೆಗೆ ನಿನ್ನ ಅಭಿಪ್ರಾಯ ಏನು, ಅನುಕೂಲ ವಾಗಿದೆಯೊ?"

"ಅದಕ್ಕಿಂತ ಮನೋಹರವಾದ ಮುಖ ಬೇರೆ ಇದ್ದಿರಲಾರದು. ಗಂಡಸಿನ ಮುಖ ಅಷ್ಟೊಂದು ಸೌಮ್ಯವಾಗಿ, ಕೋಮಲವಾಗಿ ಇರಲಾರದು" ಎಂದಳು ಫೀಬೆ.

"ಕಣ್ಣಿನಲ್ಲಿ ಕ್ರೂರಲಕ್ಷಣ ಏನೂ ಇಲ್ಲವೆ?" ಎಂದು ಹಾಲ್‌ಗ್ರೇವ್ ಮುಂದುವರಿಸಿದನು. ಅವನು ತೋರಿದ ಉತ್ಸಾಹ, ತಮ್ಮ ತೀರ ಇತ್ತೀಚಿನ ಪರಿಚಯದ ಆಧಾರವಷ್ಟರಿಂದಲೇ ಅವನು ವಹಿಸಿದ್ದ ನಿರಾಳವಾದ ಸ್ವಾತಂತ್ರ್ಯ– ಇವು ಫೀಬೆಯನ್ನು ಇಕ್ಕಟ್ಟಿಗೆ ಸಿಲುಕಿಸಿದುವು. "ಅದರಲ್ಲಿ ಎಲ್ಲಿಯೂ ಕರಾಳವಾದದ್ದು, ದುಷ್ಟತನದ್ದು, ಏನೂ ಇಲ್ಲವೆ? ಅದರ ಮೂಲ ವ್ಯಕ್ತಿ ಒಂದು ಘೋರವಾದ ಅಪರಾಧದ ದೋಷಕ್ಕೆ ಪಾತ್ರನಾಗಿದ್ದನೆ ಎಂದು ಭಾವಿಸಲು ನಿನಗೆ ಸಾಧ್ಯವಾಗಲಿಲ್ಲವೆ?" ಎಂದು ಅವನು ಪ್ರಶ್ನಿಸಿದ.

"ನೀವು ನೋಡಿಯೇ ಇಲ್ಲದ ಚಿತ್ರದ ವಿಷಯವಾಗಿ ನಾವು ಮಾತನಾಡುವುದು ಅವಿವೇಕ. ನೀವು ಅದನ್ನು ಬೇರೆ ಇನ್ನೊಂದು ಎಂದು ತಪ್ಪಾಗಿ ತಿಳಿದಿದ್ದೀರಿ. ಘೋರ ಅಪರಾಧವೆ, ನಿಜವಾಗಿ! ನೀವು ನನ್ನ ಅಕ್ಕ ಹೆಪ್ಸಿಬಾ ಅವರ

ಅದು ಬಹುಮಟ್ಟಿಗೆ ಅಂತಃಕರಣಪೂರ್ವಕವಾಗಿದ್ದಿತು.

ಅವನು ಹೇಳಿದ: "ಮಾಲ್‌ನ ಬಾವಿಯ ನೀರನ್ನು ಕುಡಿಯಬೇಡ ಜೋಕೆ! ಅದರ ನೀರನ್ನು ಕುಡಿಯಲೂಬೇಡ, ಅದರಲ್ಲಿ ಮುಖವನ್ನೂ ತೊಳೆಯಬೇಡ."

ಫೀಬೆ ಉತ್ತರಿಸಿದಳೂ: "ಮಾಲ್‌ನ ಬಾವಿ! ಯಾವುದು, ಪಾಚಿಗಟ್ಟಿದ ಕಲ್ಲುಕಟ್ಟೆ ಇದೆಯಲ್ಲಾ, ಅದೇ? ಅಲ್ಲಿ ನೀರು ಕುಡಿಯುಬೇಕೆಂಬ ಆಲೋಚನೆಯೋನೂ ನನಗಿಲ್ಲ– ಆದರೆ, ಯಾಕೆ ಕುಡಿಯಕೂಡದು?"

ಛಾಯಾಚಿತ್ರಕಲಾವಿದ ಮರುನುಡಿದ: "ಓ ಏಕೆಂದರೆ, ಮುದುಕಿಯ ಕೈಯಲ್ಲಿರುವ ಚಹಾಬಟ್ಟಲಿನಂತೆ ಅದರ ನೀರಿಗೆ ಮಂತ್ರಹಾಕಿದೆ!"

ಅವನು ಕಣ್ಮರೆಯಾದ; ಒಂದು ಕ್ಷಣಕಾಲ ಅಲ್ಲಿಯೇ ಹಿಂದುಳಿದ ಫೀಬೆ, ಇಪ್ಪಾರಿನ ಒಂದು ಕೊಟಡಿಯಲ್ಲಿ ಮೊದಲು ಮಿನುಗುಟ್ಟುವ ಬೆಳಕನ್ನೂ, ಆ ಬಳಿಕ ಒಂದು ದೀಪದ ಸ್ಥಿರವಾದ ಕಿರಣವನ್ನೂ ಕಂಡಳು. ಮನೆಯಲ್ಲಿ ಹೆಪ್ಸಿಬಾಳ ಕೋಣೆಗೆ ಹಿಂದಿರುಗಿದಮೇಲೆ, ತಗ್ಗು ಚೌಕಟ್ಟಿನ ದಿವಾನಖಾನೆ ಬಹಳವಾಗಿ ಮಬ್ಬು ಕವಿದು ಕತ್ತಲಾಗಿದ್ದುದು ಕಂಡುಬಂದಿತು; ಅದರ ಒಳಭಾಗವನ್ನು ಭೇದಿಸಿ ನೋಡಲಾಗಲಿಲ್ಲ ಅವಳ ಕಣ್ಣುಗಳಿಗೆ. ಆದಾಗ್ಯೂ, ನೇರಬೆನ್ನಿನ ಕುರ್ಚಿಗಳಲ್ಲಿ ಒಂದರಲ್ಲಿ ಕೃಶಾಂಗಿಯಾದ ವೃದ್ಧ ಶ್ರೀಮಂತೆ ಕುಳಿತಿರುವುದು ಅವಳಿಗೆ ಅಸ್ಪಷ್ಟವಾಗಿ ಗೋಚರಕ್ಕೆ ಬಂದಿತು; ಕಿಟಕಿಯಿಂದ ಸ್ವಲ್ಪ ಹಿಂದಕ್ಕೆ ಸರಿದು ಕುಳಿತಿದ್ದಳು ಅವಳು; ಅದರ ಮೂಲಕ ಬಂದ ನಸುಬೆಳಕು, ಒಂದು ಮೂಲೆಯ ಕಡೆಗೆ ಪಕ್ಕಕ್ಕೆ ತಿರುಗಿದ್ದ ಅವಳ ಕೆನ್ನೆಯ ಬಿಳಿಚಿಕೊಂಡ ವಿವರ್ಣನೆಯನ್ನು ಎತ್ತಿತೋರಿಸುತ್ತಿತ್ತು.

"ಒಂದು ದೀಪ ಹೊತ್ತಿಸಿಡಲೇ, ಅಕ್ಕ ಹೆಪ್ಸಿಬಾ?"– ಪ್ರಶ್ನಿಸಿದಳು ಫೀಬೆ.

"ನಿನಗೆ ಬೇಕಾದರೆ ಹಾಗೆ ಮಾಡು, ಮಗೂ. ಆದರೆ, ನಡುವೆಯ ದಾರಿಯ ಮೂಲೆಯಲ್ಲಿರುವ ಮೇಜಿನಮೇಲೆ ಇರಿಸು. ನನ್ನ ಕಣ್ಣು ತುಂಬ ದುರ್ಬಲ; ದೀಪದ ಬೆಳಕು ಅದರಮೇಲೆ ಬಿದ್ದರೆ ನನಗೆ ತಡೆಯುವುದಕ್ಕಾಗುವುದಿಲ್ಲ.

ಎಂಥ ಯಂತ್ರ ಸಾಧನ ಮನುಷ್ಯನ ಕಂಠಧ್ವನಿ! ಮನುಷ್ಯನ ಅಂತರಾತ್ಮದ ಪ್ರತಿಯೊಂದು ರಾಗಭಾವವನ್ನೂ ಎಷ್ಟು ಆಶ್ಚರ್ಯಕರವಾಗಿ ಪ್ರತಿಬಿಂಬಿಸುತ್ತದೆ ಅದು! ಆ ಕ್ಷಣದಲ್ಲಿ, ಅವಳಾಡಿದ ಸರ್ವಸಾಧಾರಣವಾದ ನುಡಿಗಳು ಕೂಡಾ ಅವಳ ಹೃದಯದ ಪ್ರೇಮಭಾವದಲ್ಲಿ ತೊಯ್ದು ಬಂದಿವೆಯೋ ಎಂಬಂತೆ, ಹೆಪ್ಸಿಬಾಳ ಕಂಠಧ್ವನಿಯಲ್ಲಿ ಒಂದು ಬಗೆಯ ಗಂಭೀರತೆಯೂ ಆರ್ದ್ರತೆಯೂ ಇದ್ದುವು. ಮತ್ತೆ, ಅಡುಗೆಮನೆಯಲ್ಲಿ ದೀಪವನ್ನು ಹೊತ್ತಿಸಿಡುವಾಗ, ತನ್ನ ಅಕ್ಕ ತನ್ನನ್ನು

ಜೊತೆಯ ದುಡಿಮೆಗಾರರಾಗಿರುತ್ತೇವೆ"– ಎಂದು ಅವನು ಹೇಳಿದನು.

ಅದೇ ಮೇರೆಗೆ ಫೀಬೆ ಮೌನವಾಗಿ, ತನ್ನ ಸಮ್ಮತಿಗಾಗಿ ತಾನೇ ಅಚ್ಚರಿಗೊಂಡು, ಒಂದು ಹೂವಿನಗಿಡದ ಪಾತಿಯ ಕಳೆಯನ್ನು ಕೀಳತೊಡಗಿದಳು; ಅದಕ್ಕಿಂತ ಹೆಚ್ಚಾಗಿ, ಯಾರೊಂದಿಗೆ ತಾನು ಸಲಿಗೆಯೆನ್ನಬಹುದಾದ ಸಂಬಂಧವನ್ನು ಬೆಳಸಿದ್ದಳೋ ಆ ತರುಣನ ವಿಚಾರವಾಗಿ ಆಲೋಚನಾಮಗ್ನಳಾದಳು. ಅವಳು ಅವನನ್ನು ಸಂಪೂರ್ಣವಾಗಿ ಮೆಚ್ಚಿಕೊಳ್ಳಲಿಲ್ಲ. ಅವನ ಸ್ವಭಾವ ಈ ಪುಟ್ಟ ಹಳ್ಳಿಯ ಹುಡುಗಿಯನ್ನು ದಿಗ್ಭ್ರಮೆಗೊಳಿಸಿತು; ಸ್ವಭಾವವನ್ನು ಪರಿಶೀಲಿಸುವುದರಲ್ಲಿ ಅನುಭವವುಳ್ಳವರನ್ನೇ ಅದು ದಿಗ್ಭ್ರಮೆಹಿಡಿಸಬಹುದಾಗಿದ್ದಿತು; ಏಕೆಂದರೆ, ಅವನ ಮಾತುಕತೆಯ ಧ್ವನಿ ಸಾಮಾನ್ಯವಾಗಿ ಸರಸದಿಂದ ಕೂಡಿದ್ದರೂ, ಅವಳ ಮನಸ್ಸಿನಮೇಲೆ ಬಿದ್ದ ಪ್ರಭಾವಮುದ್ರೆಮಾತ್ರ ಗಂಭೀರತೆಯಿಂದಲೂ, ಬಹುಮಟ್ಟಿಗೆ ನಿಷ್ಠುರತೆಯಿಂದಲೂ ಕೂಡಿದ್ದಿತು; ಅವನ ಯೌವನ ನಿಷ್ಠುರತೆಯ ಲಕ್ಷಣವನ್ನು ತಗ್ಗಿಸಿದ್ದಿತು. ಈ ಕಲಾವಿದನ ಸ್ವಭಾವದಲ್ಲಿ ಒಂದು ವಿಧದ ಆಕರ್ಷಕ ಗುಣವಿದ್ದಿತು; ಬಹುಶಃ ತನಗೆ ಅರಿವಿದಲ್ಲದೆಯೇ ಅವನು ಅದನ್ನು ಅವಳಮೇಲೆ ಬೀರುತ್ತಿದ್ದನು; ಈ ಆಕರ್ಷಕ ಗುಣದ ವಿರುದ್ಧವಾಗಿ ಅವಳು ಒಂದುರೀತಿಯಲ್ಲಿ ಬಂಡಾಯವೆದ್ದಳು ಎಂದು ಹೇಳಬಹುದು.

ಸ್ವಲ್ಪ ಹೊತ್ತಾದಮೇಲೆ, ಹಣ್ಣಿನ ಗಿಡಗಳ ಹಾಗೂ ಸುತ್ತಮುತ್ತಣ ಕಟ್ಟಡಗಳ ನೆರಳು ಬಿದ್ದ ಪರಿಣಾಮವಾಗಿ ಗಾಢವಾದ ಸಂಜೆಗತ್ತಲು ತೋಟದಲ್ಲೆಲ್ಲಾ ಒಂದು ಅಸ್ಪಷ್ಟತೆಯನ್ನು ಕವಿಯಿತು.

"ಅಗೋ ಕೆಲಸವನ್ನು ನಿಲ್ಲಿಸುವ ವೇಳೆಯಾಯಿತು. ಕಳೆಗುದ್ದಲಿಯ ಆ ಕಡೆಯ ಸಲದ ಹೊಡೆತ ತಿಂಗಳ ಹುರುಳಿಗಿಡದ ಕಡ್ಡಿಯನ್ನು ಕತ್ತರಿಸಿಬಿಟ್ಟಿದೆ. ನಮಸ್ತೆ, ಮಿಸ್ ಫೀಬೆ ಪಿನ್ಚನ್! ಚೆನ್ನಾಗಿ ಬಿಸಿಲಿರುವ ಯಾವತ್ತಾದರೂ ನೀನು ಆ ಗುಲಾಬಿ ಮೊಗ್ಗುಗಳಲ್ಲಿ ಒಂದನ್ನು ನಿನ್ನ ಕೂದಲಿಗೆ ಸೆಕ್ಕಿಸಿಕೊಂಡು, 'ಸೆಂಟ್ರಲ್‌ಸ್ಟ್ರೀಟ' (ನಡುಬೀದಿ)ನಲ್ಲಿರುವ ನನ್ನ ಕೊಟಡಿಗೆ ಬಂದರೆ, ಅತ್ಯಂತ ಶುಭ್ರವಾದ ಸೂರ್ಯಕಿರಣವನ್ನು ಹಿಡಿದಿಟ್ಟು, ಹೂವಿನ ಹಾಗೂ ಅದನ್ನು ಮುಡಿದಿರುವವರ ಒಂದು ಚಿತ್ರವನ್ನು ತಯಾರಿಸುತ್ತೇನೆ"– ಎಂದು ಹಾಲ್‌ಗ್ರೇವ್ ನುಡಿದನು.

ಅವನು ತನ್ನ ಸ್ವಂತದ ಒಂಟಿ ಇಪ್ಪಾರಿನ ಕಡೆಗೆ ತೆರಳಿದನು; ಬಾಗಿಲನ್ನು ತಲಪಿದಾಗ, ತನ್ನ ತಲೆಯನ್ನು ತಿರುಗಿಸಿ, ಫೀಬೆಯನ್ನು ಕೂಗಿ ಕರೆದನು; ಹಾಗೆ ಕರೆದಾಗ ಅವನ ಧ್ವನಿಯಲ್ಲಿ ಖಂಡಿತವಾಗಿಯೂ ನಗೆಯಿದ್ದಿತು; ಆದರೂ

ಚುರುಕಾಗಿದ್ದುವಾದ್ದರಿಂದ ಕೋಣೆಯ ಒಂದು ಅಗೋಚರವಾದ ಮೂಲೆಯಲ್ಲಿ ತಡೆದು ತಡೆದು ಉಸಿರಾಡುತ್ತಿರುವುದು ಬೇಗನೆಯೆ ಅವಳ ಅರಿವಿಗೆ ಬಂದಿತು. ಅದೂ ಅಲ್ಲದೆ, ಅವಳ ಶರೀರರಚನೆ ಸೂಕ್ಷ್ಮವಾಗಿದ್ದರೂ ಆರೋಗ್ಯಸ್ಥಿತಿಯಲ್ಲಿದ್ದುದರಿಂದ, ಬಹುಮಟ್ಟಿಗೆ ಪ್ರೇತಶಕ್ತಿಯ ವಾಹಕದಂತೆ (spiritual medium) ವರ್ತಿಸಿ, ಯಾರೋ ಹತ್ತಿರದಲ್ಲಿಯೇ ಇದ್ದಾರೆ ಎಂಬ ಅರಿವನ್ನು ತಂದುಕೊಟ್ಟಿತು.

ಹೇಳುವುದಕ್ಕೆ ಇಷ್ಟವಿಲ್ಲದಿದ್ದರೂ ವಿವರಿಸಲಾಗದ ಆ ಮನೋಭಾವವನ್ನು ಹೇಗೋ ತಡೆದುಕೊಂಡು, ಅವಳು ಕೇಳಿದಳು: "ಅಕ್ಕಾ, ಕೋಣೆಯಲ್ಲಿ ನಮ್ಮೊಂದಿಗೆ ಯಾರೋ ಇದ್ದಾರೆ, ಅಲ್ಲವೆ?"

ಒಂದು ಕ್ಷಣ ತಡೆದು, ಹೆಪ್ಸಿಬಾ ಹೇಳಿದಳು: "ಫೀಬೆ ನನ್ನ ಪುಟ್ಟ ಮುದ್ದು ಹುಡುಗಿ, ನೀನು ಬಹಳ ಹೊತ್ತಿಗೆ ಮುಂಚೆ ಎದ್ದು, ದಿನವೆಲ್ಲಾ ದುಡಿದಿದ್ದೀಯೆ. ಹೋಗಿ ಮಲಗಿಕೋ ತಾಯಿ; ನಿನಗೆ ವಿಶ್ರಾಂತಿ ಬೇಕಾಗಿದೆ, ಅದು ಖಂಡಿತ. ನಾನು ತುಸಹೊತ್ತು ದಿವಾನಖಾನೆಯಲ್ಲಿ ಕುಳಿತಿದ್ದು ಮನಸ್ಸನ್ನು ಒಂದು ಸ್ತಿಮಿತಕ್ಕೆ ತಂದುಕೊಳ್ಳುತ್ತೇನೆ. ಮಗೂ, ನಿನಗೆ ಈಗ ಎಷ್ಟು ವರ್ಷವಾಗಿವೆಯೋ ಅದಕ್ಕಿಂತ ಹೆಚ್ಚುವರ್ಷಗಳಿಂದ ಅದು ನನ್ನ ಪದ್ಧತಿಯಾಗಿದೆ."

ಅವಳನ್ನು ಹೀಗೆ ಬೀಳ್ಕೊಳ್ಳುವಾಗ, ಕನ್ಯಾಮಹಿಳೆ ಒಂದು ಹೆಜ್ಜೆ ಮುಂದಕ್ಕಿಟ್ಟು, ಫೀಬೆಯನ್ನು ಮುತ್ತಿಟ್ಟು, ಅವಳನ್ನು ತನ್ನ ಎದೆಗೆ ಅವಚಿಕೊಂಡಳು; ಆಗ ಅವಳ ಎದೆ ಹುಡುಗಿಯ ಎದೆಗೆ ತಾಕಿ, ಕ್ಷುಬ್ಧಗೊಂಡು ಬಲವಾಗಿ ಉಬ್ಬಿ, ಅವ್ಯಾಹತವಾಗಿ ಬಡಿಯತೊಡಗಿತು. ಈ ರೀತಿ ಹೇರಳವಾಗಿ ಉಕ್ಕಿ ಹರಿಯಲು, ಈ ಹಾಳು ಬಿದ್ದ ಮುದಿ ಹೃದಯದಲ್ಲಿ ಅಷ್ಟೊಂದು ಪ್ರೀತಿ ಅದೆಂತು ಬಂದಿತೊ?

ಹೆಪ್ಸಿಬಾಳ ವರ್ತನೆಯಿಂದ ವಿಚಿತ್ರ ರೀತಿಯಲ್ಲಿ ಪ್ರಭಾವಿತಳಾದ ಫೀಬೆ, "ಒಳ್ಳೆಯದು, ಬರುತ್ತೀನಿ ಅಕ್ಕಾ! ನೀನು ನನ್ನನ್ನು ಪ್ರೀತಿಸಿತೊಡಗಿದರೆ, ನನಗೆ ಎಷ್ಟೋ ಸಂತೋಷ!" ಎಂದಳು.

ಅವಳು ತನ್ನ ಕೋಣೆಗೆ ತೆರಳಿದಳು; ಆದರೆ ಬೇಗ ನಿದ್ರೆ ಹೋಗಲಿಲ್ಲ, ಆ ಬಳಿಕ ಗಾಢವಾಗಿಯೂ ನಿದ್ರಿಸಲಿಲ್ಲ. ನಟ್ಟಿರುಳಿನಾಳದ ಯಾವುದೋ ವೇಳೆಯಲ್ಲಿ, ಒಂದು ಕನಸಿನ ತೆಳು ತೆರೆಯ ಮೂಲಕ ಎಂಬಂತೆ, ಯಾರೋ ಭಾರವಾಗಿ ಹೆಜ್ಜೆಯಿಡುತ್ತಾ ಮಹಡಿಯ ಮೆಟ್ಟಲನ್ನು ಹತ್ತಿಹೋಗುತ್ತಿದ್ದಂತೆ ಅವಳಿಗೆ ಅರಿವಾಯಿತು; ಆದರೆ, ಇಟ್ಟ ಹೆಜ್ಜೆ ಬಲವಾಗಿರಲಿಲ್ಲ, ನಿರ್ಧಾರವಾದುದಾಗಿರಲಿಲ್ಲ. ಆ ಹೆಜ್ಜೆಗಳೊಡನೆ ಹೆಪ್ಸಿಬಾಳ ಕಂಠಸ್ವರವೂ ಮೇಲೆ ಸಾಗುತ್ತಿತ್ತು;

ಮಾತನಾಡಿಸಿದಳೇನೋ ಎಂದು ಭಾವಿಸಿಕೊಂಡಳು.

"ಒಂದು ಕ್ಷಣ, ಅಕ್ಕಾ, ಬಂದೆ! ಈ ಬೆಂಕಿಯ ಕಡ್ಡಿಗಳು ಸುಮ್ಮನೆ ಮಿನುಗಿ, ಆರಿಹೋಗುತ್ತವೆ" ಎಂದು ಉತ್ತರಕೊಟ್ಟಳು ಹೆಪ್ಸಿಬಾ.

ಆದರೆ, ಹೆಪ್ಸಿಬಾಳಿಂದ ಪ್ರತ್ಯುತ್ತರವನ್ನು ಕೇಳುವ ಬದಲು ಒಂದು ಅಪರಿಚಿತ ಧ್ವನಿಯ ಗೊಣಗಾಟವನ್ನು ಕೇಳಿದಂತೆ ತೋರಿತು ಅವಳಿಗೆ. ಅದು ವಿಚಿತ್ರವಾದ ರೀತಿಯಲ್ಲಿ ಅಸ್ಪಷ್ಟವಾಗಿದ್ದಿತು; ಅದು ಬಹುಮಟ್ಟಿಗೆ ಉಚ್ಚಾರಣೆಹೊಂದುವ ಮಾತಿಗಿಂತ ಹೆಚ್ಚಾಗಿ ನಿರ್ದಿಷ್ಟ ರೂಪವನ್ನು ತಳೆಯದ ಶಬ್ದ ಮಾತ್ರವಾಗಿತ್ತು; ಬುದ್ಧಿಪೂರ್ವಕ ನುಡಿದ ನುಡಿಯಂತಿರದೆ, ಭಾವನಾನುಭೂತಿಗಳು ಮಿಡಿದ ನುಡಿಕಾರವಾಗಿತ್ತು. ಅದು ಎಷ್ಟು ಅಸ್ಫುಟವಾಗಿದ್ದಿತೆಂದರೆ, ಫೀಬೆಯ ಮನಸ್ಸಿನಲ್ಲಿ ಅದು ಬೀರಿದ ಪ್ರಭಾವ ಮುದ್ರೆಯಾಗಲಿ ಹುಟ್ಟಿಸಿದ ಪ್ರತಿಧ್ವನಿಯಾಗಲಿ ನೈಜತೆಯಿಂದ ಕೂಡಿರಲಿಲ್ಲ. ಯಾವುದೋ ಬೇರೊಂದು ಶಬ್ದವನ್ನು ಮಾನವ ಕಂಠಸ್ವರವೆಂದು ತಾನು ಭ್ರಮಿಸಿರುವುದಾಗಿ ಅವಳು ತೀರ್ಮಾನಿಸಿದಳು; ಹಾಗಲ್ಲದೆಹೋದ ಪಕ್ಷದಲ್ಲಿ, ಅದು ಕೇವಲ ತನ್ನ ಕಲ್ಪನೆಯಿರಬೇಕೆಂದು ನಿಶ್ಚಯಿಸಿದಳು.

ಅವಳು ಹೊತ್ತಿಸಿದ ದೀಪವನ್ನು ನಡುವೆಯ ದಾರಿಯಲ್ಲಿ ಇಟ್ಟಳು; ಮತ್ತೆ ದಿವಾನಖಾನೆಯನ್ನು ಪ್ರವೇಶಿಸಿದಳು. ಹೆಪ್ಸಿಬಾಳ ಆಕೃತಿಯ ಕಪ್ಪಾದ ಹೊರರೇಖೆ ನಸುಗತ್ತಲೆಯೊಂದಿಗೆ ಬೆರೆತುಹೋಗಿದ್ದರೂ ಈಗ ಸ್ವಲ್ಪಮಟ್ಟಿಗೆ ಗೋಚರವಾಗುವಂತಿತ್ತು. ಆದರೂ ಕೂಡ, ಕೊಟಡಿಯ ದೂರದ ಭಾಗಗಳಲ್ಲಿ, ಅಲ್ಲಿನ ಗೋಡೆಗಳು ಬೆಳಕನ್ನು ಪ್ರತಿಫಲಿಸುವ ರೀತಿಯಲ್ಲಿ ಇರಲಿಲ್ಲವಾದುದರಿಂದ, ಅಲ್ಲಿ ಹೆಚ್ಚು ಕಡಮೆ ಮೊದಲಿನ ಅಗೋಚರತೆಯೇ ಇದ್ದಿತು.

"ಅಕ್ಕಾ, ಈಗತಾನೆ ನನ್ನನ್ನು ಮಾತಾಡಿಸಿದವಳು ನೀನೆ?" ಎಂದಳು ಫೀಬೆ.

"ಇಲ್ಲ ಮಗೂ!" ಹೆಪ್ಸಿಬಾ ಉತ್ತರಕೊಟ್ಟಳು.

ಮೊದಲಿಗಿಂತ ಕಡಮೆಯ ಮಾತುಗಳು; ಆದರೆ ಅವುಗಳಲ್ಲಿ ಅದೇರಹಸ್ಯ ಮಯಸಂಗೀತ! ಧ್ವನಿ ಲಲಿತವೂ ಖಿನ್ನವೂ ಆಗಿದ್ದರೂ ದುಃಖಪೂರ್ಣವಾಗಿರಲಿಲ್ಲ; ಅದು ಅತ್ಯಂತ ಗಾಢವಾದ ರಾಗಭಾವದಲ್ಲಿ ಆರ್ದ್ರವಾದ ಹೆಪ್ಸಿಬಾಳ ಆಳವಾದ ಹೃದಯಕೂಪದಿಂದ ಚಿಲುಮೆಯುಕ್ಕಿ ಬಂದಂತೆ ಕಾಣುತ್ತಿತ್ತು. ಎಲ್ಲ ಪ್ರಬಲ ಮನೋಭಾವವೂ ವಿದ್ಯುತ್ ಸ್ವಭಾವದ್ದಾದ್ದರಿಂದ, ಆ ಧ್ವನಿಯಲ್ಲಿ ಕಂಪನವೂ ಇದ್ದಿತು; ಅದರ ಒಂದುಭಾಗ ಫೀಬೆಗೂ ಹರಿದುಮುಟ್ಟಿತು. ಆಹುಡುಗಿ ಒಂದು ಕ್ಷಣಕಾಲ ಮೌನವಾಗಿ ಕುಳಿತಿದ್ದಳು. ಆದರೆ, ಅವಳ ಇಂದ್ರಿಯಗಳು ಬಹಳ

## ೭. ಅತಿಥಿ

ಪೇರು ಮರದಲ್ಲಿ ರಾಬಿನ್ ದಂಪತಿ ಹಕ್ಕಿಗಳು ಹೊತ್ತಿಗೆ ಮುಂಚೆ ಚಿಲಿಪಿಲಿಗುಟ್ಟಿದಾಗ, ಫೀಬೆ ನಿದ್ದೆಯಿಂದ ಎಚ್ಚತ್ತಳು; ಆಗ ಅವಳು ಮಹಡಿಯ ಕೆಳಗೆ ಯಾರೋ ಓಡಾಡಿದ ಸದ್ದನ್ನು ಕೇಳಿದಳು; ಆತುರದಿಂದ ಕೆಳಗಿಳಿದಾಗ, ಹೆಪ್ಸಿಬಾ ಆಗಲೇ ಅಡುಗೆಯಮನೆಯಲ್ಲಿದ್ದುದು ಅವಳಿಗೆ ಕಂಡುಬಂದಿತು. ಅವಳು ತನ್ನ ಮೂಗಿನ ಸಮೀಪದಲ್ಲಿ ಒಂದು ಪುಸ್ತಕವನ್ನು ಹಿಡಿದುಕೊಂಡು ಕಿಟಕಿಯ ಬಳಿ ನಿಂತಿದ್ದಳು; ತನ್ನ ದೃಷ್ಟಿ ಪಾಟಲ ಸರಿಯಾಗಿಲ್ಲದಿದ್ದುದರಿಂದ ಪುಸ್ತಕದ ವಿಷಯವನ್ನು ಓದುವುದು ಸುಲಭವಾಗಿರಲಿಲ್ಲವಾದ ಪ್ರಯುಕ್ತ, ತನ್ನ ಘ್ರಾಣೇಂದ್ರಿಯದ ಮೂಲಕ ಅದರ ಪರಿಚಯವನ್ನು ಹೊಂದಬಯಸಿದ್ದಾಳೆಯೇ ಎನ್ನುವಂತೆ ಕಾಣುತ್ತಿತ್ತು. ಯಾವುದಾದರೂ ಗ್ರಂಥರತ್ನವು ತನ್ನಲ್ಲಿ ಅಡಕವಾಗಿರುವ ಸಾರವತ್ತಾದ ಜ್ಞಾನವನ್ನು ಮೇಲೆ ಸೂಚಿಸಿದ ವಿಧಾನದಲ್ಲಿ ಪ್ರಕಟಪಡಿಸುವುದು ಸಾಧ್ಯವಿದ್ದಲ್ಲಿ, ಅಂಥ ಗ್ರಂಥ ಖಂಡಿತವಾಗಿಯೂ ಈಗ ಹೆಪ್ಸಿಬಾಳ ಕೈಯಲ್ಲಿದ್ದುದೇ ಆಗಿರಬೇಕು; ಅಂತಹ ಸಂದರ್ಭದಲ್ಲಿ, ಬಹಳ ಪರಿಷ್ಕಾರವಾಗಿ ಬಗೆಬಗೆಯ ಪಾಕ ವಿಧಾನಗಳಲ್ಲಿ ಸಂಮಿಶ್ರಮಾಡಿ ಅಟ್ಟ ಜಿಂಕೆಯಮಾಂಸ, ಟರ್ಕಿಕೋಳಿಗಳು, ಬಲಿತ ಹುಂಜಗಳು, ಮಧ್ಯೆ ಹಂದಿಯ ಮಾಂಸವನ್ನು ಹುದುಗಿಸಿದ ಕವುಜಗ ಹಕ್ಕಿಗಳು, ಹೊಯ್ಗಡುಬುಗಳು, ಕಜ್ಜಾಯಗಳು, ಕ್ರಿಸ್‌ಮಸ್ ಹಬ್ಬದ ಹೂರಣ ಗಡುಬುಗಳು ಮುಂತಾದ ಭಕ್ಷ್ಯಭೋಜ್ಯಗಳ ಪರಿಮಳದಿಂದ ಅಡುಗೆಯ ಮನೆ ಆ ಕೂಡಲೆ ಘಮಘಮಾಯಿಸುತ್ತಿದ್ದಿರಬೇಕು. ಅವಳ ಕೈಯಲ್ಲಿದ್ದುದು ಪಾಕಶಾಸ್ತ್ರದ ಪುಸ್ತಕ; ಅದರ ತುಂಬ ಅಸಂಖ್ಯಾತ ಹಳೆಯ ಮಾದರಿಯ ಆಂಗ್ಲದೇಶದ ಭಕ್ಷ್ಯಭೋಜ್ಯಗಳ ವಿವರಣೆಯಿದ್ದಿತು; ಅಲ್ಲಿನ ಶ್ರೀಮಂತನೊಬ್ಬನು ತನ್ನ ದುರ್ಗಭವನದಲ್ಲಿ ಏರ್ಪಡಿಸಲು ತಕ್ಕ ಔತಣಕೂಟದಲ್ಲಿ ಭೋಜನವ್ಯವಸ್ಥೆಯನ್ನು ಹೇಗೆ ಮಾಡಬೇಕೆಂಬುದನ್ನು ತೋರಿಸುವ ಚಿತ್ರಗಳೂ ಇದ್ದುವು ಪುಸ್ತಕದಲ್ಲಿ. ಅಡಿಗೆಮಾಡುವ ಕಲೆಗೆ ಸಂಬಂಧಪಟ್ಟ ಹೇರಳವಾದ ಪರಿಣಾಮಕಾರಿಯಾದ ಈ ವಿಧಾನಗಳಲ್ಲಿ ಒಂದನ್ನಾದರೂ ಪರೀಕ್ಷಿಸಿ ನೋಡಿದಂತೆ ಯಾರೊಬ್ಬರ ಅಜ್ಜನಿಗೂ ನೆನಪಿದ್ದಂತೆ ಕಾಣಲಿಲ್ಲ; ಆದರೂ, ಒಂದು ಸುಲಭವಿಧಾನದ ಚಿಕ್ಕ ಚುಟಕಕ್ಕಾಗಿ ಬಡ ಹೆಪ್ಸಿಬಾ ಅವುಗಳಲ್ಲಿ ಹುಡುಕಾಡುತ್ತಿದ್ದಳು; ತನ್ನ ಜಾಣತನ,

ಅದರ ಸದ್ದು ಒಳಗೊಳಗೆ ಅಡಗಿತ್ತು; ತನ್ನ ಅಕ್ಕನ ಧ್ವನಿಗೆ ಉತ್ತರವಾಗಿ ಬಂದ ಆ ವಿಚಿತ್ರವಾದ, ಅಸ್ಪಷ್ಟವಾದ ಗೊಣಗುದನಿಯನ್ನು ಫೀಬೆ ಪುನಃ ಕೇಳಿದಳು; ಅದು ಮನುಷ್ಯನ ಉಚ್ಚಾರಣೆಯ ಅಸ್ಪಷ್ಟವಾದ ಛಾಯೆಯನ್ನು ಹೋಲುತ್ತಿತ್ತು ಎನ್ನಬಹುದು.

* * * *

ಸ್ಥಳವಾಯಿತು. ಅಲ್ಲಿ, ಕೆಟ್ಟ ಕೆಟ್ಟದ್ದಾಗಿ ಕಟ್ಟಿದ್ದ ಹೊಗೆ ಕೊಳವೆಯಿಂದ ಸುಳಿಸುಳಿಯಾಗಿ ಹೊಗೆ ಹೊರಬರುತ್ತಿದ್ದಿತು; ತಮಗೆ ಉಚಿತವಾಗಿದ್ದ ಆ ಹೊಗೆಯ ವಾತಾವರಣದ ನಡುವಣಿಂದ ಸತ್ತ ಬಾಣಸುಗಿತ್ತಿಯರ ಪಿಶಾಚಗಳು ತಮ್ಮ ಮುಂದೆ ಸಿದ್ಧವಾಗುತ್ತಿದ್ದ ಊಟದ ಸಾಧಾರಣತೆಯನ್ನು ಕಂಡು ತಿರಸ್ಕಾರವನ್ನು ಸೂಚಿಸಿದರೂ, ಇನ್ನೂ ಪೂರ್ತಿಯಾಗಿ ಬೇಯದಿದ್ದ ಪ್ರತಿಯೊಂದು ತಿಂಡಿಯ ಪದಾರ್ಥದಲ್ಲಿಯೂ ತಮ್ಮ ನೆರಳ ಬೆರಳನ್ನು ಇಟ್ಟು ನೋಡಬೇಕೆಂದು ವ್ಯರ್ಥವಾಗಿ ಹಾತೊರೆಯುತ್ತಾ ಬೆರಗುಗೊಂಡು ನೋಡುತ್ತಿದ್ದುವು, ಇಲ್ಲವೆ ಬಹು ವಿಶಾಲವಾದ ಹೊಗೆಕೊಳವೆಯ ಮೂಲಕ ಇಣಿಕುತ್ತಿದ್ದುವು. ಅದು ಹೇಗಾದರೂ ಇರಲಿ, ಅರೆಹೊಟ್ಟೆಯಾದ ಇಲಿಗಳಂತೂ ಮರೆಯಾಗಿದ್ದ ತಮ್ಮ ಸ್ಥಳಗಳಿಂದ ಕಾಣುವಂತೆಯೇ ಹೊರಕ್ಕೆ ಬಂದು, ವಿನೋದಕರವಾಗಿದ್ದ ವಾತಾವರಣವನ್ನು ಮೂಸಿನೋಡುತ್ತ, ತಿಂಡಿಯನ್ನು ಕಚ್ಚಿ ತಿನ್ನುವ ಸದವಕಾಶಕ್ಕಾಗಿ ಆಶೆಯಿಂದ ಹೊಂಚುಕಾಯುತ್ತ, ತಮ್ಮ ಹಿಂಗಾಲುಗಳ ಮೇಲೆ ಕುಳಿತಿದ್ದುವು.

ಅಡುಗೆಕೆಲಸದಲ್ಲಿ ಹೆಪ್ಸಿಬಾಗೆ ಸಹಜವಾದ ಒಲವಿರಲಿಲ್ಲ; ದಿಟವನ್ನು ನುಡಿಯಬೇಕಾದರೆ, ಅನೇಕವೇಳೆ, ಮಾಂಸ ಬೇಯಿಸುವ ಸಲಾಕಿ ತಿರುಗಿಸುವ ಕೆಲಸವನ್ನೋ ಇಲ್ಲವೆ ತಪ್ಪಲೆ ಕುದಿಯುವುದನ್ನೋ ಕಾಯುತ್ತಾ ಕುಳಿತುಕೊಂಡಿರುವುದಕ್ಕಿಂತ ಭೋಜನವಿಲ್ಲದಿರುವುದೇ ವಾಸಿಯೆಂದುಕೊಂಡು ಬಹುಮಟ್ಟಿಗೆ ತನ್ನ ಇಂದಿನ ಮೈಬಡವನ್ನು ತಾನೇ ತಂದುಕೊಂಡಿದ್ದಳು. ಆದ್ದರಿಂದ, ಒಲೆಯ ಮುಂದೆ ಅವಳು ಉತ್ಸಾಹತೋರಿಸುವುದೆಂದರೆ, ಭಾವಪ್ರದರ್ಶದಲ್ಲಿ ಒಂದು ಮಹಾ ಸಾಹಸದ ಸತ್ತ್ವ ಪರೀಕ್ಷೆಯಾಗಿತ್ತು. ಅವಳು ಕನಲುವ ಹೊಸ ಕೆಂಡದ ಒಟ್ಟಿಲನ್ನು ಕೆದಕುವುದನ್ನಾಗಲಿ, ವ್ಯಾಕರೆಲ್ ಮೀನನ್ನು ಬಾಡಿಸಹೊರಡುವುದನ್ನಾಗಲಿ ನೋಡುವುದೆಂದರೆ ಅದು ಕರುಣಾಜನಕ ಮಾತ್ರವಲ್ಲ, ಕಂಬನಿತರಿಸುವುದೂ ಖಂಡಿತ; ಆದರೆ ಮೇಲೆ ಹೇಳಿದ ಇಲಿಗಳನ್ನೂ ಪಿಶಾಚಗಳನ್ನೂ ಬಿಟ್ಟರೆ, ಏಕಮಾತ್ರ ಪ್ರೇಕ್ಷಕಳೆನಿಸಿದ್ದ ಫೀಬೆಗೆ ಕಣ್ಣೀರು ಸುರಿಸುವುದಕ್ಕಿಂತ ಮೇಲಾದ ಬೇರೆ ಉದ್ಯೋಗವಿದ್ದಿತು. ಸಾಧಾರಣವಾಗಿ ಬಿಳಿಚಿಕೊಂಡಿದ್ದ ಹೆಪ್ಸಿಬಾಳ ಕೆನ್ನೆಗಳು ಇಂದು ಸೆಕೆಯಿಂದಲೂ ತವಕದಿಂದಲೂ ಧಗಧಗಿಸುತ್ತಿದ್ದುವು. ತನ್ನ ಹೃದಯವೇ ಮಾಂಸ ಬೇಯಿಸುವ ಕಂಬಿಚೌಕಟ್ಟಿನ ಮೇಲಿದೆಯೋ, ಒಂದು ಸುತ್ತೂ ಹೆಚ್ಚ ಕಡಮೆಯಾಗದಂತೆ ಅದನ್ನು ಬೇಯಿಸುವುದರಲ್ಲಿ ತನ್ನ ಶಾಶ್ವತಸುಖವು ನೆಲಸಿದೆಯೋ ಎಂಬಂತೆ ಅವಳು ಮೀನನ್ನು ಪ್ರೀತಿ ಪೂರ್ವಕವಾದ ಎಚ್ಚರಿಕೆಯಿಂದಲೂ ಸೂಕ್ಷ್ಮವಾದ

ಕೈಗೆ ಸಿಕ್ಕುವಂತಿದ್ದ ಪದಾರ್ಥಗಳು– ಇವುಗಳ ಸಹಾಯದಿಂದ ಬೆಳಗ್ಗೆಯ ಉಪಾಹಾರವನ್ನು ಆ ವಿಧಾನದಂತೆ ಮಾಡಬಯಸಿದ್ದಳು.

ಆ ಕೂಡಲೆ, ಬಲವಾದ ನಿಟ್ಟುಸಿರು ಬಿಟ್ಟು, ಆ ರುಚಿಕರವಾದ ಗ್ರಂಥವನ್ನು ಒಕ್ಕಡೆ ಇಟ್ಟಳು; ಮುದಿ 'ಸ್ಪೆಕಲ್ (ಒಂದು ಕೋಳಿಗೆ ಅವಳು ಇಟ್ಟಿದ್ದ ಹೆಸರು) ಹಿಂದಿನ ದಿನ ಒಂದು ಮೊಟ್ಟೆಯನ್ನೇನಾದರೂ ಇಕ್ಕಿದ್ದಿತೆ ಎಂದು ಫೀಬೆಯನ್ನು ವಿಚಾರಿಸಿದಳು. ಅದನ್ನು ನೋಡಲು ಫೀಬೆ ಓಡಿಹೋದಳು, ಆದರೆ ನಿರೀಕ್ಷಿಸಿದ್ದ ನಿಧಿಯಿಲ್ಲದೆ ಬರಿಗೈಯಲ್ಲಿ ಹಿಂದಿರುಗಿದಳು. ಆ ಕ್ಷಣದಲ್ಲಿ, ಮೀನು ಮಾರಾಟಗಾರನ ಶಂಖದ ಕೂಗು ಕೇಳಿಸಿತು; ಬೀದಿಯಲ್ಲಿ ಅವನು ಬರುತ್ತಿದ್ದುದನ್ನು ಸಾರುತ್ತಿತ್ತು ಆ ಕೂಗು. ಅಂಗಡಿಯ ಕಿಟಕಿಯನ್ನು ಬಲವಾಗಿ ತಟ್ಟಿ ತಟ್ಟಿ, ಹೆಪ್ಸಿಬಾ ಆ ಮಾರಾಟಗಾರನನ್ನು ಒಳಕ್ಕೆ ಕರೆದು, ಒಂದು 'ಮ್ಯಾಕೆರೆಲ್' ಮೀನನ್ನು ಕೊಂಡುಕೊಂಡಳು; ಅದು ತನ್ನ ಗಾಡಿಯಲ್ಲಿ ಇರುವ ಮೀನುಗಳಲ್ಲೆಲ್ಲಾ ಅತ್ಯುತ್ತಮವಾದುದೆಂದೂ, ಮೀನುದೊರೆಯುವ ಕಾಲದಲ್ಲಿ ಇಷ್ಟು ಮುಂಚೆ ತಾನು ಬೆರಳಿನಿಂದ ಮುಟ್ಟಿ ನೋಡಿರುವ ಕೊಬ್ಬಿದ ಮೀನುಗಳಲ್ಲಿ ಯಾವುದಕ್ಕೂ ಇದು ಕಡಮೆಯಲ್ಲವೆಂದೂ ಅವನು ಭರವಸೆ ಕೊಟ್ಟಿದ್ದನು. ಬಳಿಕ, ಸ್ವಲ್ಪ ಕಾಫೀ ಬೀಜವನ್ನು ಹುರಿಯುವಂತೆ ಫೀಬೆಯನ್ನು ಅವಳು ಕೇಳಿಕೊಂಡಳು; ಆಗ, ಅದು ನಿಜವಾದ 'ಮೋಕ' (Mocha ಅರಬ್ಬೀ ದೇಶದ ಒಂದು ಪಟ್ಟಣ) ಬೀಜವೆಂದೂ, ಅದು ಎಷ್ಟು ದೀರ್ಘಕಾಲ ಇಟ್ಟು ಹಳೆಯದಾಗಿದೆಯೆಂದರೆ, ಅದರ ಒಂದೊಂದು ಸಣ್ಣ ಬೀಜವೂ ಅದರ ತೂಕದ ಚಿನ್ನದ ಬೆಲೆ ಬಾಳುವುದೆಂದೂ ಪ್ರಾಸ್ತಾವಿಕವಾಗಿ ತಿಳಿಸಿದಳು. ಇಷ್ಟು ಹೇಳಿ, ಅವಳು ವಿಶಾಲವಾದ ಒಲೆಯ ಗೂಡಿಗೆ ಉರುವಲ ರಾಶಿಯನ್ನು ಒಟ್ಟಿದಳು; ಇನ್ನೂ ಉಳಿದಿದ್ದ ಕತ್ತಲೆಯನ್ನು ಬೇಗನೆ ಹೊರಕ್ಕಟ್ಟುವ ಉದ್ದೇಶದಿಂದ ಹಾಕಿದಂತಿದ್ದಿತು ಆ ಉರುವಲ ರಾಶಿ. ತನ್ನ ಶಕ್ತಿ ಮೀರಿ ನೆರವಾಗಲು ಸಿದ್ಧಳಾಗಿದ್ದ ಆ ಹಳ್ಳಿಯ ಹುಡುಗಿ 'ಇಂಡಿಯನ್ನ'ರು (ಅಮೆರಿಕದ ಮೂಲನಿವಾಸಿಗಳು) ಮಾಡುವಂತಹ ರೊಟ್ಟಿಯೊಂದನ್ನು ತನ್ನ ತಾಯಿ ಮಾಡುತ್ತಿದ್ದ ಹಾಗೆ ಬಹು ಅಪೂರ್ವವಿಧಾನದಲ್ಲಿ ಸುಲಭವಾಗಿ ಮಾಡುವುದಾಗಿ ಸೂಚಿಸಿದಳು; ಅದನ್ನು ಸರಿಯಾಗಿ ಮಾಡಿದ್ದೇ ಆದರೆ ಪುಷ್ಟಿಕರಗುಣದಲ್ಲಿಯೂ ರುಚಿಯಲ್ಲಿಯೂ ಅದನ್ನು ಸರಿಗಟ್ಟುವ ಬೆಳಗ್ಗಿನ ಉಪಹಾರದ ರೊಟ್ಟಿ ಯಾವುದೂ ಇರದೆಂದು ತಾನು ಭರವಸೆ ಕೊಡುವುದಾಗಿಯೂ ಅವಳು ತಿಳಿಸಿದಳು. ಇದಕ್ಕೆ ಹೆಪ್ಸಿಬಾ ಸಂತೋಷವಾಗಿ ಒಪ್ಪಿದಳು; ಬೇಗನೆಯೆ ಅಡುಗೆಮನೆ ರುಚಿಕರವಾದ ತಿಂಡಿಯ ತಯಾರಿಕೆಯ

ಹೊಳೆಯುವ ಹೊನ್ನಾಗಿ ಮಾರ್ಪಟ್ಟ ರೊಟ್ಟಿಗಳನ್ನು ಹೋಲುತ್ತಿದ್ದುವು. ಈ ಸಂದರ್ಭದಲ್ಲಿ, ಬೆಣ್ಣೆಯನ್ನು ಮರೆಯಕೂಡದು– ಅದನ್ನು ಫೀಬೆ ತನ್ನ ಹಳ್ಳಿಯ ಮನೆಯಲ್ಲಿ ತಾನೇ ಸ್ವಂತವಾಗಿ ಕಡೆದು, ತನ್ನ ಅಕ್ಕನ ಸಂತೋಷಾರ್ಥವಾಗಿ ಅವಳಿಗೆ ಕೊಡಲೆಂದು ತಂದಿದ್ದಳು; ಅದು ಲವಂಗದ ಹೂವಿನ ವಾಸನೆಯನ್ನು ಕೊಡುತ್ತಿತ್ತು, ಮತ್ತು ಗೋಡೆಗೆ ಕರಿಯ ಮರದ ಹಲಗೆಸೇರುವೆ ಮಾಡಿದ ದಿವಾನಖಾನೆಯ ತುಂಬ ಹಳ್ಳಿಯ ನಿಸರ್ಗದೃಶ್ಯದ ಸೊಬಗನ್ನು ಹರಡುತ್ತಿತ್ತು. ಇವೆಲ್ಲವುಗಳೊಂದಿಗೆ ಹಳೆಯ ಪಿಂಗಾಣಿ ಬಟ್ಟಲುಗಳ ಮತ್ತು ಬಸಿಗಳ ವಿಚಿತ್ರವಾದ ವರ್ಣಕಾಂತಿ, ವಂಶದ ಲಾಂಛನವುಳ್ಳ ಚಮಚಗಳು, (ಮತ್ತು ಹೆಪ್ಸಿಬಾಳ ಇನ್ನುಳಿದ ಒಂದೇ ಒಂದು ಊಟದ ಪಾತ್ರೆಯೆನಿಸಿ, ಅತ್ಯಂತ ಮೊದ್ದಾದ ಊಟದ ಗಂಗಳದಂತಿದ್ದ) ಕೆನೆ ಇಡುವ ಬೆಳ್ಳಿಯ ಜಾಡಿ ಇವೂ ಸೇರಿ, ಅವಳ ಊಟದ ಮೇಜದ ಅಣಿಯನ್ನು ಪೂರೈಸಿದ್ದುವು; ಪೂರ್ವದ ಸರದಾರ ಪಿನ್ಚನ್ನನ ಅತಿಥಿಗಳ ಪೈಕಿ ಅತ್ಯಂತ ಘನವೆತ್ತವರು ಕೂಡ ಅದರ ಮುಂದೆ ಕುಳಿತು ಊಟಮಾಡಲು ತಿರಸ್ಕರಿಸಬೇಕಾಗಿರಲಿಲ್ಲ. ಆದರೆ, ಮೇಜಿನ ಮೇಲಿನ ಯಾವ ಭೋಜನ ಪದಾರ್ಥವಾಗಲಿ ತನ್ನ ಹಸಿವನ್ನು ತಣಿಸುವಂತಿರಲಿಲ್ಲ ಎಂಬಂತೆ, ಚಿತ್ರದಲ್ಲಿನ ಆ ಪ್ಯೂರಿಟನ್ನನ ಮುಖ ಹುಬ್ಬು ಗಂಟಿಕ್ಕಿ ಕೆಳಗೆ ನೋಡುತ್ತಿತ್ತು.

ತನ್ನ ಕೈಲಾದಮಟ್ಟಿಗೆ ಅಲ್ಲಿನ ಸೊಬಗನ್ನು ಹೆಚ್ಚಿಸುವ ಉದ್ದೇಶದಿಂದ, ಸುವಾಸನೆಯನ್ನೂ ಇಲ್ಲ ಸೌಂದರ್ಯವನ್ನೂ ಹೊಂದಿದ್ದ ಕೆಲವು ಗುಲಾಬಿ ಹೂಗಳನ್ನೂ ಇನ್ನಿತರ ಕೆಲವು ಹೂಗಳನ್ನೂ ಫೀಬೆ ತಿರಿದು ತಂದು, ಒಂದು ಗಾಜಿನ ಹೂಜಿಯಲ್ಲಿ ಜೋಡಿಸಿಟ್ಟಳು; ಬಹು ಹಿಂದೆಯೇ ಅದರ ಹಿಡಿ ಮುರಿದುಹೋಗಿದ್ದುದರಿಂದ, ಪುಷ್ಪ ಪಾತ್ರೆಯ ಸ್ಥಾನಕ್ಕೆ ಅದು ಹೆಚ್ಚು ತಕ್ಕದ್ದಾಗಿತ್ತು. ಈವ್ ಮತ್ತು ಆ್ಯಡಂ ಪ್ರಾತಃಕಾಲದ ಉಪಾಹಾರಕ್ಕೆಂದು ಕುಳಿತಾಗ ಈವ್‌ನ ಬಳ್ಳಿ ಮನೆಯೊಳಕ್ಕೆ ಇಣಿಕಿದ ಹೊಂಬಿಸಿಲು ಎಷ್ಟು ಹೊಸದಾಗಿದ್ದಿತೋ ಅಷ್ಟೇ ಹೊಸದಾದ ಮುಂಬಿಸಿಲು ಪೇರು ಮರದ ಕೊಂಬೆ ರೆಂಬೆಗಳ ಮೂಲಕ ಮಿನುಗುತ್ತಾ ತೂರಿಬಂದು, ಮೇಜಿನ ಮೇಲೆ ಹರಡಿ ಬಿದ್ದಿತು. ಈಗ ಎಲ್ಲವೂ ಸಿದ್ಧವಾದಂತಾಯಿತು. ಅಲ್ಲಿ ಮೂವರಿಗೆಂದು ಕುರ್ಚಿ, ಊಟದ ತಟ್ಟೆ ಏರ್ಪಾಡಾಗಿದ್ದುವು. ಒಂದು ಕುರ್ಚಿ, ಒಂದು ತಟ್ಟೆ ಹೆಪ್ಸಿಬಾಗೆ, ಒಂದೊಂದು ಫೀಬೆಗೆ– ಅವಳ ಅಕ್ಕ ನಿರೀಕ್ಷಿಸಿಕೊಂಡಿದ್ದ ಬೇರೊಬ್ಬ ಅತಿಥಿ ಯಾರು?

ಈ ಸಿದ್ಧತೆಯನ್ನೆಲ್ಲಾ ಮಾಡುವಾಗ, ಹೆಪ್ಸಿಬಾಳ ಶರೀರ ಎಡೆಬಿಡದೆ ಕಂಪಿಸುತ್ತಿತ್ತು; ಆ ನಡುಕ ಎಷ್ಟು ಪ್ರಬಲವಾಗಿತ್ತೆಂದರೆ, ಉರಿಯ ಬೆಳಕಿನಲ್ಲಿ

ಗಮನದಿಂದಲೂ ಕಣ್ಣಿಟ್ಟು ಕಾಯುತ್ತಿದ್ದಳು.

ಚೆನ್ನಾಗಿ ವ್ಯವಸ್ಥೆಗೊಳಿಸಿದ ಮತ್ತು ಪುಷ್ಕಳ ಆಹಾರಪದಾರ್ಥಗಳಿಂದ ಸಮೃದ್ಧವಾದ ಪ್ರಾತಃಕಾಲದ ಭೋಜನ– ಇದಕ್ಕಿಂತ ಹೆಚ್ಚು ಸುಖಕರವಾದ ಭಾಗ್ಯ ಗೃಹಜೀವನದಲ್ಲಿ ಯಾವುದೂ ಇಲ್ಲ. ದಿನದ ಯೌವನವೆನಿಸಿದ ಇಬ್ಬನಿ ಸುರಿಯುವ ಹೊತ್ತಿನಲ್ಲಿ ನಾವು ಈ ಊಟಕ್ಕೆಂದು ಹೊಚ್ಚ ಹೊಸಬರಾಗಿ ಬಂದಿರುತ್ತೇವೆ; ಆಮೇಲೆ ಇರುವುದಕ್ಕಿಂತ ಆಗ ನಮ್ಮ ಆತ್ಮ ವಿಷಯಕವಾದ ಹಾಗೂ ಇಂದ್ರಿಯಸಂಬಂಧವಾದ ಮೂಲಭೂತ ಅಂಶಗಳು ಹೆಚ್ಚು ಹೊಂದಿಕೊಂಡಿರುತ್ತವೆ; ಇದರ ಪರಿಣಾಮವಾಗಿ ಬೆಳಗ್ಗಿನ ಊಟದ ಐಹಿಕಸುಖಸಂತೋಷಗಳನ್ನು ಸಂಪೂರ್ಣವಾಗಿ ಅನುಭೋಗಿಸಲು ಸಾಧ್ಯವಾಗುವುದು; ನಮ್ಮ ಸ್ವಭಾವದ ಒಂದು ವಿಭಾಗವಾಗಿರುವ ಪಾಶಕಪ್ರವೃತ್ತಿಯನ್ನು ತಣಿಸಲು ಅದಕ್ಕೆ ಸೋತು ಕೇವಲ ಒಂದು ತುತ್ತನ್ನು ಹೆಚ್ಚಾಗಿ ಭುಂಜಿಸಲು ಹೊಟ್ಟೆ ಕೆಟ್ಟಿದೆಯೆಂದೋ ಮನಸ್ಸಿಲ್ಲವೆಂದೋ ಆಗ ನಾವು ಬಹಳ ನೊಂದುಕೊಂಡು ನಿಂದಿಸಿಕೊಳ್ಳಬೇಕಾಗಿರುವುದಿಲ್ಲ. ಅಲ್ಲದೆ, ಆಗ ಪರಿಚಿತ ಅತಿಥಿಗಳ ವೃಂದದ ಸುತ್ತ ಹರಿಯುವ ನಮ್ಮ ವಿಚಾರಲಹರಿಯಲ್ಲಿ ಕೂಡ ಒಂದು ಚುರುಕು, ಒಂದು ನಲಿವು, ಇರುತ್ತದೆ; ಅನೇಕ ವೇಳೆ ಒಂದು ಸ್ಪಷ್ಟ ಸತ್ಯವೂ ಇರುತ್ತದೆ; ಹಗಲೂಟದ ವಿಸ್ತಾರವಾದ ವ್ಯವಹರಣೆಯಲ್ಲಿ ಇವು ಕಂಡುಬರುವುದು ಅಪರೂಪ. ಹೆಪ್ಸಿಬಾಳ ಹಳೆಯ ಕಾಲದ ಸಣ್ಣ ಮೇಜಿಗೆ ತೆಳ್ಳನೆಯ ಸೊಗಸಾದ ಕಾಲುಗಳಿದ್ದುವು; ಅದರ ಮೇಲೆ ಅತ್ಯಂತ ಬೆಲೆಬಾಳುವ 'ದಮಾಸ್ಕು' ರೇಷ್ಮೆಯ ಬಟ್ಟೆಯನ್ನು ಹಾಸಿದ್ದಿತು; ಅತ್ಯಂತ ಉಲ್ಲಾಸಪೂರ್ಣವಾದ ಗೋಷ್ಠಿ ನೆರೆಯಲು ಯೋಗ್ಯವಾದ ಸ್ಥಳವಾಗಿ ಕಾಣುತ್ತಿದ್ದಿತು ಅದು. ಬಾಡಿಸಿದ ಮೀನಿನಿಂದ ಮೇಲೇಳುತ್ತಿದ್ದ ಆವಿಯು ಅನಾಗರಿಕರ ಪೂಜಾಮೂರ್ತಿಯ ದೇವಾಲಯದ ಮುಂದಣ ಧೂಪದ ಹಾಗೆ ಕಾಣುತ್ತಿದ್ದಿತು; ಅತ್ತ 'ಮೋಕ' ಕಾಫಿಯ ಪರಿಮಳವಾದರೋ ರೋಮನ್ ಮನೆದೇವರ ಮೂಗಿನ ಹೊಳ್ಳೆಗಳಿಗೋ, ಇಲ್ಲವೆ ಈಗಿನ ಕಾಲದ ಪ್ರಾತಃಕಾಲದ ಭೋಜನದ ಮೇಲೆ ಅಧಿಕಾರವುಳ್ಳ ಯಾವುದೇ ಶಕ್ತಿಗೋ ತೃಪ್ತಿಯನ್ನುಂಟುಮಾಡಬಹುದಾಗಿತ್ತು. ಫೀಬೆ ಮಾಡಿದ್ದ ಇಂಡಿಯನ್ನರ ಕಜ್ಜಾಯವಂತೂ ಎಲ್ಲಕ್ಕಿಂತ ಬಹು ಸವಿಯಾದ ನೈವೇದ್ಯವಾಗಿತ್ತು– ಅವುಗಳ ಬಣ್ಣದ ದೃಷ್ಟಿಯಿಂದ, ಮುಗ್ಧಜನರಿದ್ದ ಸ್ವರ್ಣಯುಗದಲ್ಲಿ ಗ್ರಾಮದ ಧ್ಯಾನಪೀಠದ ಬಳಿ ನೈವೇದ್ಯವಾಗಿ ಅರ್ಪಿಸಲು ಯೋಗ್ಯವಾಗಿತ್ತು; ಅಥವಾ, ಅವು ಎಷ್ಟು ಹಳದಿಯಾಗಿ ಹೊಳೆಯುತ್ತಿದ್ದಿತೆಂದರೆ, ಮೈದಾಸ್ ದೊರೆ ತಿನ್ನಲು ಪ್ರಯತ್ನಪಟ್ಟಾಗ

ಇಷ್ಟಾದರೂ ಕೂಡ ಒಂದೇ ಸಮನೆ ಆಗಾಗ್ಗೆ ಸಿಡಿಗುಟ್ಟುತ್ತಿದ್ದಳು, ರೇಗಾತ್ತಿದ್ದಳು. ಅವಳೊಂದಿಗೆ ಕಟುವಾಗಿ ಮಾತನಾಡುವಳು; ಬಳಿಕ, ತನ್ನ ಪ್ರತಿನಿತ್ಯದ ಶ್ರೀಮದ್ಗಾಂಭೀರ್ಯದ ಬಿಗುಮಾನವನ್ನು ಅತ್ತ ಬಿಸುಟು, ಕ್ಷಮೆಯನ್ನು ಕೇಳುವಳು; ಮರುಕ್ಷಣದಲ್ಲಿಯೆ, ಆಗತಾನೆ ಕ್ಷಮಿಸಿದ ಅಪರಾಧವನ್ನು ಮತ್ತೆ ಮಾಡುವಳು.

ಕಡೆಗೆ, ಅವರಿಬ್ಬರ ದುಡಿಮೆಯೆಲ್ಲ ಮುಗಿದಮೇಲೆ, ಅವಳು ಫೀಬೆಯ ಕೈಯನ್ನು ತನ್ನ ನಡುಗುವ ಕೈಯಲ್ಲಿ ಹಿಡಿದುಕೊಂಡಳು.

"ನನ್ನ ಮುದ್ದು ಕಂದ, ನನ್ನನ್ನು ಕಂಡರೆ ಸಹಿಸಿಕೊ; ನಿಜವಾಗಿಯೂ ನನ್ನ ಹೃದಯ ಪ್ರೀತಿಯಿಂದ ತುಂಬಿತುಳುಕುತ್ತಿದೆ! ಸ್ವಲ್ಪ ಸಹಿಸಿಕೊ; ನಾನು ಅಷ್ಟೊಂದು ಒರಟೊರಟಾಗಿ ಮಾತಾಡಿದರೂ ನಾನು ನಿನ್ನನ್ನು ಪ್ರೀತಿಸುತ್ತೇನೆ, ಫೀಬೆ! ನನ್ನ ಮುದ್ದು ಕಂದಾ, ಅದನ್ನೆಲ್ಲಾ ತಲೆಗೆ ಹಚ್ಚಿಕೊಳ್ಳಬೇಡ! ಕ್ರಮೇಣ, ನಾನು ದಯೆತೋರಿಸುತ್ತೇನೆ, ದಯೆಯಲ್ಲದೆ ಬೇರೇನೂ ಇರದು!" ಎಂದು ಆರ್ತಳಾಗಿ ನುಡಿದಳು.

"ಪ್ರಿಯ ಅಕ್ಕಾ, ಏನು ನಡೆಯಿತು, ನನಗೆ ನೀನು ಹೇಳಲಾಗದೆ? ನಿನ್ನ ಮನಸ್ಸನ್ನು ಕರಗಿಸುತ್ತಿರುವ ಆ ಸಂಗತಿಯಾದರೂ ಯಾವುದು?" ಎಂದು, ಹುರಿಪುಹುಟ್ಟಿಸುವ, ಕಂಬನಿಗೂಡಿದ ಸಹಾನುಭೂತಿಯಿಂದ ಫೀಬೆ ಕೇಳಿದಳು.

"ಹುಷ್! ಹುಷ್! ಆತ ಬರುತ್ತಿದ್ದಾನೆ!" ಎಂದು ಹೆಪ್ಸಿಬಾ ಆತುರಾತುರವಾಗಿ ತನ್ನ ಕಣ್ಣುಗಳನ್ನು ಒರಸಿಕೊಂಡು ಹೇಳಿದಳು: "ಫೀಬೆ, ಆತ ಮೊದಲು ನಿನ್ನನ್ನ ನೋಡಲಿ; ಏಕೆಂದರೆ, ನೀನು ಚಿಕ್ಕವಳು, ಗುಲಾಬಿಯಂತೆ ಗೆಲವಾಗಿದ್ದೀಯೆ; ನಿನಗೆ ಇಷ್ಟವಿರಲಿ ಇಲ್ಲದಿರಲಿ, ನಿನ್ನ ಮುಖದಲ್ಲಿ ಮುಗುಳುನಗೆ ಒಡೆದು ಮೂಡುತ್ತದೆ. ಅವನಿಗೆ ಯಾವಾಗಲೂ ಗೆಲುವಾದ ಮುಖಗಳನ್ನು ಕಂಡರೆ ಇಷ್ಟ! ನನ್ನದು ಈಗ ಮುದಿಯಾಗಿ ಹೋಗಿದೆ, ಅದರ ಮೇಲೆ ಕಣ್ಣೀರು ಆರಿರುವುದೇ ಇಲ್ಲ. ಎಂದು ಅವನಿಗೆ ಕಣ್ಣೀರೆಂದರೆ ಆಗದು. ಅಗೋ; ತೆರೆಯನ್ನು ಸ್ವಲ್ಪ ಎಳೆ, ಅವನ ಕಡೆಯ ಮೇಜದ ಭಾಗಕ್ಕೆ ನೆರಳು ಬೀಳಲಿ! ಆದರೆ, ಬಿಸಿಲೂ ಧಾರಾಳವಾಗಿ ಬೀಳಲಿ; ಏಕೆಂದರೆ, ಕೆಲವರಿಗೆ ಇರುವ ಹಾಗೆ, ಅವನಿಗೆ ಮಂಕು ಮಬ್ಬು ಎಂದರೆ ಇಷ್ಟವಿಲ್ಲ. ಅವನು ತನ್ನ ಜೀವನದಲ್ಲಿ ಕಂಡಿರುವ ಬಿಸಿಲು ಸ್ವಲ್ಪ–ಬಡ ಕ್ಲಿಫರ್ಡ್–ಅಯ್ಯೋ; ಎಂಥ ಕರಿ ನೆರಳು! ಬಡಪ್ರಾಣಿ, ಕ್ಲಿಫರ್ಡ್!"

ಫೀಬೆಗಿಂತ ಹೆಚ್ಚಾಗಿ ತನ್ನ ಹೃದಯವನ್ನು ಕುರಿತು ನುಡಿಯುತ್ತಿರುವಳೋ ಎಂಬಂತೆ, ತಗ್ಗಿದ ದನಿಯಲ್ಲಿ ಗೊಣಗುಟ್ಟಿಕೊಳ್ಳುತ್ತಾ, ಆ ವಿಷಮ ಸನ್ನಿವೇಶದಲ್ಲಿ ಹೇಗೆ ಹೇಗೆ ಹೊಳೆದುವೋ ಹಾಗೆ ಏರ್ಪಾಡುಗಳನ್ನು ಮಾಡುತ್ತಾ,

ಅಡುಗೆಮನೆಯ ಗೋಡೆಯಮೇಲೆ ಬಿದ್ದ, ಇಲ್ಲವೆ ಬಿಸಿಲಿನಲ್ಲಿ ದಿವಾನಖಾನೆಯ ನೆಲದಮೇಲೆ ಬಿದ್ದ, ಅವಳ ತೆಳ್ಳನೆಯೊಡಲಿನ ನೆರಳು ಕೂಡ ಅಲುಗುತ್ತಿದ್ದುದನ್ನು ಫೀಬೆ ಕಾಣಬಹುದಾಗಿದ್ದಿತು. ಅದು ಎಷ್ಟು ವಿವಿಧಾ ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಿತೆಂದರೆ, ಒಂದು ಇನ್ನೊಂದರೊಡನೆ ಹೊಂದಿಕೊಳ್ಳುತ್ತಿರಲಿಲ್ಲ; ಅದನ್ನ ಕಂಡು ಹುಡುಗಿಗೆ ಏನೂ ಅರ್ಥವಾಗಲಿಲ್ಲ. ಕೆಲವು ವೇಳೆ ಸುಖಸಂತೋಷಗಳ ಆವೇಶದ ಹಾಗೆ ಕಂಡುಬರುತ್ತಿತ್ತು. ಅಂಥ ವೇಳೆಯಲ್ಲಿ ಹೆಪ್ಸಿಬಾ ತನ್ನ ತೋಳುಗಳನ್ನು ಚಾಚಿ, ಅವುಗಳಿಂದ ಫೀಬೆಯನ್ನು ಬಾಚಿ ತಬ್ಬಿಕೊಂಡು, ಅವಳ ತಾಯಿ ಮಾಡಿದ್ದ ಹಾಗೆ, ಅಷ್ಟೇ ಮೃದುವಾಗಿ, ಅವಳ ಕೆನ್ನೆಯನ್ನು ಮುತ್ತಿಡುವಳು. ಅನಿವಾರ್ಯವಾದ ಒಂದು ಪ್ರೇರಣೆಯಿಂದ ಅವಳು ಹಾಗೆ ಮಾಡುತ್ತಿದ್ದಂತೆ ಕಂಡುಬರುತ್ತಿತ್ತು; ಅಲ್ಲದೆ, ಅವಳ ಹೃದಯ ಕರುಣೆಯಿಂದ ತುಂಬಿ ಒತ್ತುತ್ತಿದ್ದು, ಅದನ್ನು ಸ್ವಲ್ಪವಾದರೂ ಹೊರಸೂಸಿದಲ್ಲದೆ ಉಸಿರಾಡುವುದಕ್ಕೆ ಎಡೆಯಿರದೇನೋ ಎಂಬಂತೆ ಅವಳು ಹಾಗೆ ಮಾಡುತ್ತಿದ್ದಂತೆಯೂ ಕಂಡುಬರುತ್ತಿತ್ತು. ಮರುಕ್ಷಣವೆ, ಅವಳ ಅಪರೂಪವಾದ ಸಂತಸ ದಿಗಿಲುಗೊಂಡಿತೋ ಎಂಬಂತೆ ಹಿಮ್ಮೆಟ್ಟಿ, ದುಃಖದ ಮುಸುಕು ಹಾಕಿಕೊಂಡಿತು; ಅಥವಾ ಹೀಗೂ ಹೇಳಬಹುದು: ಎಲ್ಲಿ ಆ ಸಂತಸವು ಸಂಕೋಲೆ ತೊಟ್ಟು ನಿಡುಗಾಲ ಮಲಗಿದ್ದಿತೋ ಆ ಹೃದಯದ ಕತ್ತಲಗವಿಗೆ ಅದು ಓಡಿಹೋಗಿ ಅಲ್ಲಿ ಅಡಗಿಕೊಂಡಿತು; ಬಿಡುಗಡೆಹೊಂದಲು ಹೆದರಿ ಬಂಧನದಲ್ಲಿಯೆ ಇದ್ದ ಆ ಸಂತಸದ ಮೊದಲಿನ ಎಡೆಯಲ್ಲಿ ಭಾವಶೂನ್ಯವಾದ ಪ್ರೇತಸ್ವರೂಪದ ದುಃಖವು ಬಂದು ನೆಲಸಿತು; ಸಂತಸವದು ಎಷ್ಟು ಪ್ರಕಾಶಮಾನವಾಗಿದ್ದಿತೋ ದುಃಖವಿದು ಅಷ್ಟೂ ಅಷ್ಟು ಕಪ್ಪಗಿದ್ದಿತು. ಈ ಎಲ್ಲ ಮಾರ್ಪಾಟಿಗೆ ಗೋಚರವಾದ ಕಾರಣ ಯಾವುದೂ ಇರಲಿಲ್ಲ. ಅವಳು ಆಗಾಗ್ಗೆ ಗಾಬರಿಕೊಂಡು ಸ್ವಲ್ಪ ಸ್ವಲ್ಪ ಉನ್ಮಾದದ ನಗು ನಗುತ್ತಿದ್ದಳು; ಯಾವ ಕಣ್ಣೀರಿಗಿಂತಲೂ ಅದು ಕರುಣಾಜನಕವಾಗಿತ್ತು; ಆ ಕೂಡಲೆಯೆ, ಯಾವುದು ಹೆಚ್ಚು ಕರುಣಾಜನಕ ಎಂಬುದನ್ನು ಪರೀಕ್ಷಿಸಲೆಂಬಂತೆ, ಕಂಬನಿಯ ಕೋಡಿ ಹಿಂಬಾಲಿಸಿ ಬರುತ್ತಿತ್ತು; ಇಲ್ಲವೆ, ಬಹುಶಃ ನಗು ಕಂಬನಿ ಎರಡೂ ಒಟ್ಟಿಗೆ ಬಂದು, ನಮ್ಮ ಬಡ ಹೆಪ್ಸಿಬಾಳನ್ನು ಒಂದು ಬಗೆಯ ತೆಳುಬಣ್ಣದ ಮಸುಕುಮಸುಕಾದ ಕಾಮನ ಬಿಲ್ಲಿನಿಂದ ನೈತಿಕ ಅರ್ಥದಲ್ಲಿ ಸುತ್ತುವರಿಯುತ್ತಿತ್ತು. ನಾವು ಆಗಲೇ ತಿಳಿಸಿರುವಂತೆ, ಫೀಬೆಯನ್ನು ಕಂಡರೆ ಅವಳಿಗೆ ಪ್ರೀತಿಯೆ; ಅವರ ಅಲ್ಪಕಾಲದ ಪರಿಚಯದಲ್ಲಿ ಹಿಂದಿನ ರಾತ್ರಿ ಕೊಟ್ಟ ಒಂದು ಮುತ್ತನ್ನು ಬಿಟ್ಟರೆ, ಅವಳು ಹಿಂದೆ ಇದ್ದುದಕ್ಕಿಂತ ಹೆಚ್ಚು ಕರುಣೆಯಿಂದ ಕೂಡಿದ್ದಳು;

ಅವನು ಧರಿಸಿದ್ದುದು, ಮಾಸಿಹೋದ ದಮಾಸ್ಕು ರೇಷ್ಮೆಬಟ್ಟೆಯ, ಹಳೆಯ ಮಾದರಿಯ, ಉಡುಪಿನ ಮೇಲೆ ಹಾಕಿಕೊಳ್ಳುವ ಮೇಲಂಗಿ; ಅಸಾಧಾರಣವಾಗಿ ಉದ್ದವಾಗಿದ್ದ ಅವನ ತಲೆಗೂದಲು ಬೂದು ಅಥವಾ ಬಹುಮಟ್ಟಿಗೆ ಬಿಳಿಯಬಣ್ಣದ್ದೇ ಆಗಿತ್ತು. ಅದು ಅವನ ಹಣೆಯನ್ನು ಪೂರ್ತಿ ಮುಚ್ಚಿಬಿಟ್ಟಿದ್ದಿತು; ಅವನು ಅದನ್ನು ಹಿಂದಕ್ಕೆ ತಳ್ಳಿ, ಗುರಿಯಿಲ್ಲದೆ ಕೋಣೆಯ ಸುತ್ತ ನಿಟ್ಟಿಸಿ ನೋಡಿದನು. ಬಹಳ ಸ್ವಲ್ಪಕಾಲ ಅವನ ಮುಖವನ್ನು ಪರೀಕ್ಷಿಸಿದ ಮೇಲೆ, ಮಗು ಮೊದಲ ಸಲ ನೆಲದ ಮೇಲೆ ಹೇಗೆ ನಿಧಾನವಾಗಿ ಗೊತ್ತು ಗುರಿಯಿಲ್ಲದೆ ತಪ್ಪು ಹೆಜ್ಜೆಯಿಡುತ್ತ ನಡೆಯುತ್ತದೆಯೋ ಅದೇ ರೀತಿಯಲ್ಲಿ ಅವನು ಇತ್ತ ನಡೆದುಬರಬೇಕಾದದ್ದು ಅಗತ್ಯವಾಗಿತ್ತು ಎಂಬುದನ್ನು ಊಹಿಸುವುದು ಸುಲಭವಾಗಿತ್ತು. ಆದರೂ, ಸರಾಗವಾಗಿ ನಿರ್ಧಾರದ ಹೆಜ್ಜೆಯಿಡುತ್ತಾ ನಡೆಯಲು ಅವನ ಶಾರೀರಕ ಬಲ ಸಾಲದಾಗಿದ್ದಿರಬಹುದು ಎನ್ನಲು ಚಿಹ್ನೆಗಳೇನೂ ಇರಲಿಲ್ಲ. ನಡೆಯಲಾರದೆಹೋದದ್ದು ವ್ಯಕ್ತಿಯ ಅಂತರಾತ್ಮ. ಅವನ ಮುಖಭಾವದಲ್ಲಿ ವಿವೇಚನಾಶಕ್ತಿಯ ಬೆಳಕಿದ್ದಿತು; ಆದರೂ ಅದು ಹಿಂಜರಿಯುತ್ತಾ, ಮಿನುಗುತ್ತಾ, ಮಾಯುವಾಗುತ್ತಾ ಇರುವಂತೆಯೂ, ಪುನಃ ದುರ್ಬಲವಾಗಿ ತಲೆದೋರುವಂತೆಯೂ ಕಾಣುತ್ತಿತ್ತು. ಅರೆವಾಸಿ ಆರಿದ ಕೆಂಡಗಳ ನಡುವೆ ಮಿಣುಕು ಮಿಣುಕೆಂದು ಉರಿಯುವ ಉರಿಯಂತಿತ್ತು ಅದು; ಅದನ್ನು ನಾವು ಧಗಧಗಿಸುತ್ತಾ ಮೇಲಕ್ಕೆ ನೆಗೆಯುತ್ತಿರುವ ಜ್ವಾಲೆಯನ್ನು ನೋಡುವುದಕ್ಕಿಂತ ಹೆಚ್ಚು ಕಣ್ಣಿಟ್ಟೇನೋ ನೋಡುತ್ತೇವೆ, ಅದರೆ ಒಂದು ವಿಧವಾದ ಆತುರದಿಂದ; ಅದು ತೃಪ್ತಿಕರವಾಗಿ ಪ್ರಜ್ವಲಿಸುವಂತೆ ಹೊತ್ತಿಕೊಂಡು ಉರಿಯಬೇಕು, ಇಲ್ಲವೋ ತತ್‌ಕ್ಷಣವೇ ಆರಿಹೋಗಬೇಕು,– ಎಂಬ ನಿರೀಕ್ಷೆಯಿಂದ.

ಅತಿಥಿ ಕೊಟಡಿಯನ್ನು ಪ್ರವೇಶಿಸಿದಮೇಲೆ ಒಂದು ಕ್ಷಣಕಾಲ ಸುಮ್ಮನೆ ನಿಂತಿದ್ದನು; ಆಗ, ತನಗೆ ದಾರಿತೋರುವ ದೊಡ್ಡವನ ಕೈಯನ್ನು ಮಗು ಹೇಗೆ ಸಹಜಪ್ರೇರಣೆಯಿಂದ ಹಿಡಿದುಕೊಂಡಿರುವುದೋ ಅದೇ ರೀತಿ ಅವನು ಹೆಪ್ಸಿಬಾಳ ಕೈಯನ್ನು ತನ್ನ ಕೈಮೇಲೆ ಉಳಿಸಿಕೊಂಡಿದ್ದನು. ಅವನು ಫೀಬೆಯನ್ನೇನೋ ನೋಡಿದನು, ಹಾಗೂ ಅವಳ ಪ್ರಾಯದ ಸೊಬಗಿನಿಂದ ಒಂದು ಬೆಳಕನ್ನೂ ಗ್ರಹಿಸಿದನು: ಬಿಸಿಲಿನಲ್ಲಿ ನಿಂತಿದ್ದ ಗಾಜಿನ ಹೂದಾನಿಯ ಸುತ್ತ ಪ್ರತಿಫಲಿಸಿದ್ದ ಪ್ರಭಾವಲಯದಂತೆ, ಅವಳ ಪ್ರಾಯದ ಸೊಬಗು ಕೂಡ ದಿವಾನಖಾನೆಯ ತುಂಬ ಗೆಲವನ್ನು ಚೆಲ್ಲಿದ್ದಿತು. ಅವನು ವಂದನೆ ಸಲ್ಲಿಸಿದನು; ಅಥವಾ ನಿಜ ನುಡಿಯುವುದಾದರೆ, ಬಾಗಿ ಪ್ರಣಾಮಮಾಡುವಂತೆ ಕಾಣುವ ಒಂದು

ಆ ವೃದ್ಧಶ್ರೀಮಂತೆ ಕೋಣೆಯ ಸುತ್ತಲೂ ಮೆಟ್ಟುಂಗಾಲಿಟ್ಟು ಹೆಜ್ಜೆ ಹಾಕುತ್ತಿದ್ದಳು.

ಈ ನಡುವೆ, ಮಹಡಿಯ ಮೇಲಣ ನಡುವೆದಾರಿಯಲ್ಲಿ ಹೆಜ್ಜೆಯಿಟ್ಟದ್ದು ಕೇಳಿಸಿತು. ರಾತ್ರಿಯವೇಳೆ, ತನ್ನ ಸ್ವಪ್ನದಲ್ಲಿ ಹೇಗೋ ಹಾಗೆ ಮೇಲೇರಿಹೋದ ಅದೇ ಹೆಜ್ಜೆಸದ್ದು ಇದು ಎಂದು ಫೀಬೆ ಗುರುತು ಹಿಡಿದಳು. ಬರಲಿದ್ದ ಅತಿಥಿ ಯಾರೇ ಆಗಿರಲಿ, ಆತ ಮಹಡಿಯ ಮೆಟ್ಟಲು ಸಾಲಿನ ಮೇಲ್ಭಾಗದಲ್ಲಿ ನಿಂತಂತೆ ತೋರಿತು; ಇಳಿಯುವಾಗಲೂ ಎರಡು ಸಲವೋ ಮೂರು ಸಲವೋ ಆತ ನಿಂತನು; ಕೆಳಗಡೆ ಮತ್ತೆ ನಿಂತುಕೊಂಡನು. ಪ್ರತಿ ಸಲವೂ, ಹಾಗೆ ತಡೆದುನಿಂತದ್ದಕ್ಕೆ ಉದ್ದೇಶ ಯಾವುದೂ ಇದ್ದಂತೆ ಕಂಡುಬರಲಿಲ್ಲ; ಆದರೆ ಯಾವ ಉದ್ದೇಶದಿಂದ ಹೊರಟಿದ್ದನೋ ಅದನ್ನು ಮರೆತದ್ದೇ ಹಾಗೆ ತಡೆದು ನಿಲ್ಲಲು ಕಾರಣವೆಂಬಂತೆ ಕಂಡು ಬಂದಿತು; ಅಥವಾ, ಅವನನ್ನು ಮುನ್ನಡಸುವ ಚಾಲನಶಕ್ತಿ ಬಹು ದುರ್ಬಲವಾಗಿ ಪರಿಣಮಿಸಿದ್ದರಿಂದ ಅವನ ಕಾಲುಗಳು ತಾವಾಗಿಯೇ ತಟಸ್ಥವಾಗುತ್ತಿದ್ದಿರಬೇಕು. ಕಟ್ಟ ಕಡೆಯಲ್ಲಿ, ದಿವಾನಖಾನೆಯ ಹೊಸಿಲ ಬಳಿ ಅವನು ತುಂಬ ಹೊತ್ತು ತಳುವಿದನು. ಅವನು ಕದದ ಗುಂಡುಹಿಡಿಯನ್ನು ಹಿಡಿದುಕೊಂಡು, ಬಾಗಿಲನ್ನು ತೆರೆಯದೆಯೇ ಹಿಡಿಯಿಂದ ಕೈ ತೆಗೆದನು. ಅದಿರುತ್ತಿದ್ದ ಕೈಗಳನ್ನು ಕೂಡಿಸಿ ಹಿಡಿದುಕೊಂಡು, ಹೆಪ್ಸಿಬಾ ಬಾಗಿಲ ಕಡೆ ದಿಟ್ಟಿಸಿ ನೋಡುತ್ತಾ ನಿಂತುಕೊಂಡಳು.

"ಅಕ್ಕ ಹೆಪ್ಸಿಬಾ, ದಯವಿಟ್ಟು ಹಾಗೆ ನೋಡಬೇಡ!" ಎಂದು ಕಂಪಿಸುತ್ತಾ ನುಡಿದಳು ಫೀಬೆ; ಏಕೆಂದರೆ, ಅವಳ ಅಕ್ಕನ ಭಾವೋದ್ರೇಕ, ಈ ರಹಸ್ಯಪೂರ್ಣವಾದ ಒಲ್ಲದ ಹೆಜ್ಜೆ– ಇವು ಒಂದು ಪ್ರೇತವು ಕೋಣೆಯೊಳಕ್ಕೆ ಬರುತ್ತಿದೆಯೋ ಎಂಬ ಭಾವನೆಯನ್ನು ಅವಳಲ್ಲಿ ಉಂಟುಮಾಡಿದುವು. "ನಿನ್ನನ್ನು ಕಂಡು ನನಗೆ ನಿಜವಾಗಿಯೂ ಭಯವಾಗುತ್ತಿದೆ! ಭಯಂಕರವಾದದ್ದು ಏನಾದರೂ ಸಂಭವಿಸಲಿದೆಯೇನು?"

"ಹುಷ್! ಗೆಲುವಾಗಿರು! ಏನೇ ಸಂಭವಿಸಲಿ, ಹೇಗೂ ಇರಬೇಡ, ಗೆಲುವಾಗಿರು!" ಎಂದು ಪಿಸುಮಾತಿನಲ್ಲಿ ಹೇಳಿದಳು ಹೆಪ್ಸಿಬಾ.

ಬಂದಾತ ಕಡೆಯಸಲ ಹೊಸಿಲ ಬಳಿ ಬಹಳ ಹೊತ್ತು ನಿಂತದ್ದರಿಂದ ಉಂಟಾದ ಆತಂಕವನ್ನು ಹೆಪ್ಸಿಬಾ ಸಹಿಸಲಾರದೆ ಮುಂದಕ್ಕೆ ಧಾವಿಸಿ ಹೋದಳು, ಕದವನ್ನು ಬೀಸಿ ತೆರೆದಳು, ಆಗಂತುಕನನ್ನು ಕೈಹಿಡಿದು ಕರೆದುಕೊಂಡು ಬಂದಳು. ಮೊತ್ತಮೊದಲ ನೋಟದಲ್ಲಿ ಕಂಡಂತೆ, ಫೀಬೆ ನೋಡಿದಾತ ವಯಸ್ಕನಾಗಿದ್ದನು;

ಮುಂದುವರಿಸುವುದಕ್ಕಾಗದೆ, ಪಡೆದ ಗೆಲವು ತೃಣಮಾತ್ರವಾಗಿತ್ತು. ಅವನು ತನ್ನ ಸ್ಥಳವನ್ನು ಬಿಟ್ಟು ಕ್ರಮಕ್ರಮವಾಗಿ ಕಣ್ಮರೆಯಾಗಿ ಹೋದನು ಎಂದು ಬೇಕಾದರೆ ಹೇಳಬಹುದು; ಬೇರೆಯ ಮಾತಿನಲ್ಲಿ ತಿಳಿಸುವುದಾದರೆ, ಅವನ ಮನಸ್ಸೂ ಪ್ರಜ್ಞೆಯೂ ಹೊರಟುಹೋಗಿದ್ದುವು; ಮೇಜಿನ ಮುಂದೆ ಅವನ ಸ್ಥಳದಲ್ಲಿರಲು, ಅವನ ನಶಿಸಿಹೋದ ಮಾಸಲಾದ ಖಿನ್ನವಾದ ಆಕಾರವನ್ನು– ವಾಸ್ತವಿಕ ಶೂನ್ಯತೆಯನ್ನು, ಭೌತಶರೀರವುಳ್ಳ ಪ್ರೇತವನ್ನು –ಹಿಂದುಳಿಸಿಹೋಗಿದ್ದವು. ಪುನಃ ಒಂದು ಶೂನ್ಯಕ್ಷಣ ಕಳೆದಮೇಲೆ, ಅವನ ಕಣ್ಣಾಲಿಗಳಲ್ಲಿ ಮೇಣಬತ್ತಿಯ ದೀಪದಂತಹ ಮಿನುಗುಬೆಳಕೊಂದು ಬೆಳಗಿತು. ಅವನ ಅಂತರಾತ್ಮವು ತನ್ನ ಶರೀರಗೃಹಕ್ಕೆ ಹಿಂದಿರುಗಿ, ಅಲ್ಲಿ ಹೃದಯದ ಮನೆ ಬೆಂಕಿಯನ್ನು ಹೊತ್ತಿಸಲು ಸರ್ವವಿಧದಲ್ಲಿಯೂ ಪ್ರಯತ್ನಿಸಿ, ಆ ಕತ್ತಲಿಡಿದ ಪಾಳುಬಿದ್ದ ಭವನದಲ್ಲಿ ಬೌದ್ಧಿಕ ದೀಪಗಳನ್ನು ಹೊತ್ತಿಸಿ, ಅಲ್ಲಿ ನೆಲಸಿದ್ದಕ್ಕೆ ಆ ಕಣ್ಣ ಬೆಳಕು ಸಾಕ್ಷಿನುಡಿಯುತ್ತಿತ್ತು; ಆದರೆ ಅಲ್ಲಿ ಏಕಾಂಗಿಯಾದ ನಿವಾಸಿಯಾಗಿ ನೆಲಸಬೇಕಾದದ್ದು ಅದರ ದೌರ್ಭಾಗ್ಯವಾಗಿದ್ದಿತು.

ಅಲಸ್ಯ ಕಡಿಮೆಯಾಗಿದ್ದ, ಆದರೂ ಇನ್ನೂ ಪೂರ್ತಿ ಗೆಲುವಿರದ ಇಂತಹ ಒಂದು ಕ್ಷಣದಲ್ಲಿ ಫೀಬೆ ತಾನು ಮೊದಲು ನಂಬಲಾಗದ್ದು ಹಾಗೂ ಆಶ್ಚರ್ಯಕರವಾದದ್ದು ಎಂದು ನಿರಾಕರಿಸಿದ್ದ ಭಾವನೆಯನ್ನು ಈಗ ದೃಢವಾಗಿ ನಂಬಿದ್ದಳು. ತನ್ನ ಅಕ್ಕ ಹೆಪ್ಸಿಬಾಳ ಬಳಿಯಿದ್ದ ಸೂಕ್ಷ್ಮಾಕಾರದ ಸುಂದರ ಚಿತ್ರದ ಮೂಲವ್ಯಕ್ತಿ ತನ್ನ ಮುಂದೆ ಇದ್ದಾತನೇ ಆಗಿದ್ದಿರಬೇಕು ಎಂದು ಅವಳಿಗೆ ಕಂಡಿತು. ವಾಸ್ತವವಾಗಿ, ಅವನನ್ನು ಈಗ ಆಚ್ಛಾದಿಸಿದ್ದ ದಮಾಸ್ಕು ಬಟ್ಟೆಯ ಮೇಲಂಗಿ– ಆಕೃತಿಯಲ್ಲಿ, ಬಟ್ಟೆಯಲ್ಲಿ, ಮತ್ತು ಮಾದರಿಯಲ್ಲಿ– ವಿವರಪೂರ್ಣವಾಗಿ ಚಿತ್ರದಲ್ಲಿ ಬಿತ್ರಿಸಿದ್ದ ಮೇಲಂಗಿಯಂಥದೆ ಎಂಬುದನ್ನು ಸ್ತ್ರೀಸಹಜವಾದ ಸೂಕ್ಷ್ಮದೃಷ್ಟಿಯಿಂದ ತತ್‌ಕ್ಷಣವೇ ಅವಳು ಗುರುತುಹಿಡಿದಳು. ತನ್ನ ವಿನಿಷ್ಟ ಪೂರ್ವವೈಭವದಿಂದ ಮೆರೆಯುತ್ತಿದ್ದ ಈ ಹಳೆಯ ಮಾಸಿಹೋದ ಉಡುಪು ಅದನ್ನು ಧರಿಸಿರುವವನ ಅಪಾರ ದೌರ್ಭಾಗ್ಯವನ್ನು ಯಾವುದೋ ಅವರ್ಣನೀಯವಾದ ರೀತಿಯಲ್ಲಿ ಪ್ರಕಾಶಪಡಿಸಿ, ಅದನ್ನು ನೋಟಕನ ದೃಷ್ಟಿಗೆ ಗೋಚರವಾಗುವಂತೆ ಮಾಡುವಹಾಗೆ ಕಾಣುತ್ತಿದ್ದಿತು. ಅಂತರಾತ್ಮನಿಗೆ ಹೆಚ್ಚು ಸಮೀಪವರ್ತಿಯಾದ ಉಡುಪು ಎನಿಸಿದ ದೇಹ, ಅದರ ಆಕೃತಿ ಮತ್ತು ಮುಖಮುದ್ರೆ ಅದರ ಸೊಬಗು ಮತ್ತು ಸೌಂದರ್ಯ– ಇವು ಅತ್ಯಂತ ನಿಪುಣರಾದ ಚಿತ್ರಕಾರರ ಕೌಶಲ್ಯಕ್ಕೂ ಸಿಲುಕದೆ ಮೀರಿದ್ದುವು; ಅದೇ ದೇಹ ಇಂದು ಎಷ್ಟು ಜೀರ್ಣಶೀರ್ಣವಾಗಿ, ಮುದಿಯಾಗಿದ್ದಿತು ಎಂಬುದನ್ನು ಈಗಣ ಹೊರ ಉಡುಪಿನ ಮಾದರಿಯಿಂದ ಚೆನ್ನಾಗಿ ಅರಿಯಬಹುದಾಗಿದ್ದಿತು.

ನಿಷ್ಫಲಪ್ರಯತ್ನವನ್ನು ಮಾಡಿದನು. ಆದರೂ, ಅಸಮಗ್ರವಾದ ಆ ಪ್ರಮಾಣವು ಅವರ್ಣನೀಯವಾದ ರಮ್ಯತೆಯ ಭಾವನೆಯನ್ನಲ್ಲದಿದ್ದರೂ ಅದರ ಒಂದು ಸುಳಿವನ್ನು ತೋರುತ್ತಿದ್ದಿತು: ಬಹಿರಾಚರಣೆಯನ್ನು ಒಂದು ಕಲೆಯಾಗಿ ಅಭ್ಯಾಸ ಮಾಡಿದ್ದರೂ ಆ ಸೊಬಗನ್ನು ಸಾಧಿಸಲು ಸಾಧ್ಯವಾಗುತ್ತಿರಲಿಲ್ಲ, ಆ ಕ್ಷಣದಲ್ಲಿ ಅದನ್ನು ಗ್ರಹಿಸಲಾಗದಷ್ಟು ಅತ್ಯಲ್ಪವಾಗಿದ್ದಿತು ಅದು; ಆದರೂ, ಆಮೇಲೆ ನೆನಪುಮಾಡಿಕೊಂಡಾಗ, ಇಡಿಯ ಮನುಷ್ಯನ ಸ್ವರೂಪವನ್ನೇ ಮಾರ್ಪಡಿಸುವಂತೆ ಕಾಣುತ್ತಿದ್ದಿತು.

"ಪ್ರಿಯ ಕ್ಲಿಫರ್ಡ್, ಇವಳು ನನ್ನ ಸೋದರ ಸಂಬಂಧಿ– ತಂಗಿ ಫೀಬೆ– ಪುಟ್ಟ ಫೀಬೆ ಪಿನ್ಚನ್– ನಿನಗೆ ಗೊತ್ತಲ್ಲ, ಆರ್ಥರ್‌ನ ಒಂದೇ ಮಗು. ಕೆಲವು ಕಾಲ ನಮ್ಮ ಜೊತೆ ಇದ್ದು ಹೋಗಲು ಹಳ್ಳಿಗಾಡಿನಿಂದ ಬಂದಿದ್ದಾಳೆ; ನಮ್ಮ ಹಳೆಯ ಮನೆಯೂ ಈಗ ಬಹಳ ನಿರ್ಜನವಾಗಿದೆ" ಎಂದು ಹೆಪ್ಸಿಬಾ ತುಂಟಮಗುವನ್ನು ಸಮಾಧಾನಮಾಡುವ ಧ್ವನಿಯಲ್ಲಿ ಹೇಳಿದಳು.

"ಫೀಬೆ? ಫೀಬೆ ಪಿನ್ಚನ್" ಫೀಬೆಯೇ?" ಎಂದು ಅತಿಥಿ ವಿಚಿತ್ರವಾಗಿ, ಅಲಸಿಕೆಯಿಂದ, ಅಸ್ಫುಟವಾಗಿ ಉಚ್ಚರಿಸುತ್ತ ಪುನಃ ಪುನಃ ಹೇಳಿದನು; "ಆರ್ಥರನ ಮಗಳೆ! ಓಹೊ, ನನಗೆ ಮರೆತೇಹೋಗಿದೆ! ಪರವಾಯಿಲ್ಲ! ಧಾರಾಳವಾಗಿ ಬಂದಿರಬಹುದಲ್ಲ ಅವಳು!"

"ಬಾ, ಪ್ರಿಯ ಕ್ಲಿಫರ್ಡ್ ಈ ಕುರ್ಚಿಯಮೇಲೆ ಕುಳಿತುಕೊ" ಎಂದು ಹೆಪ್ಸಿಬಾ ಅವನನ್ನು ಅವನಿಗಾಗಿದ್ದ ಸ್ಥಳಕ್ಕೆ ಕರೆದುಕೊಂಡು ಹೋದಳು; "ಫೀಬೇ, ದಯವಿಟ್ಟು ಆ ತೆರೆಯನ್ನು ಇನ್ನು ಸ್ವಲ್ಪ ಕೆಳಕ್ಕೆ ಇಳಿಯಬಿಡು. ಇನ್ನು ಉಪಾಹಾರ ತೆಗೆದುಕೊಳ್ಳೋಣ" ಎಂದಳು.

ಅತಿಥಿ ತನಗೆಂದು ಗೊತ್ತಾಗಿದ್ದ ಕುರ್ಚಿಯಲ್ಲಿ ಕುಳಿತುಕೊಂಡು, ಹೊಸಬನಂತೆ ಸುತ್ತ ತಿರುಗಿನೋಡಿದನು. ಈಗ ತಾನಿದ್ದ ಸ್ಥಳವನ್ನು ತನ್ನ ಮನಸ್ಸಿನಲ್ಲಿ ಹೆಚ್ಚು ತೃಪ್ತಿಕರವಾಗಿ ಖಚಿತಪಡಿಸಿಕೊಳ್ಳಲು, ಅದರೊಡನೆ ಹೊಂದಿಕೊಳ್ಳಲು ಅವನು ಪ್ರಯತ್ನಪಡುತ್ತಿದ್ದುದು ಸ್ಪಷ್ಟವಾಗಿದ್ದಿತು. ಇನ್ನೇನಿಲ್ಲದಿದ್ದರೂ ಕಡೆಯಪಕ್ಷ ಇಲ್ಲಿ– ತಗ್ಗು ಮಾಳಿಗೆಯ, ಅಡ್ಡ ಜಂತಿ ಹಾಕಿದ್ದ, ಓಕ್ ಮರದ ಹಲಗೆ ಸೇರ್ವೆಮಾಡಿದ್ದ ದಿವಾನಖಾನೆಯಲ್ಲಿ–ತನ್ನ ಇಂದ್ರಿಯಗಳಲ್ಲಿ ಏಕಪ್ರಕಾರವಾಗಿ ಅಚ್ಚೊತ್ತಿ ಪ್ರಭಾವಬೀರಿದ್ದ ಬೇರೆ ಯಾವುದೋ ಸ್ಥಳದಲ್ಲಿ ಅಲ್ಲ– ಎಂಬುದನ್ನು ಖಚಿತಪಡಿಸಿಕೊಳ್ಳಲು ಅವನು ಇಷ್ಟಪಟ್ಟನು.

ಆದರೆ ಪ್ರಯತ್ನ ಅತ್ಯಧಿಕವಾಗಿದ್ದುದರಿಂದ, ಅದನ್ನು

ಆದರೂ ಆ ಧ್ವನಿಯಲ್ಲಿದ್ದ ಒಂದು ಅನಿರ್ದಿಷ್ಟ ಲಕ್ಷಣವನ್ನು ಆ ರಾಗ ಸೌಮ್ಯಗೊಳಿಸಿರಲಿಲ್ಲ; ಮಂದಬುದ್ಧಿಯ ಶ್ರೋತೃವೊಬ್ಬನು ಆ ಲಕ್ಷಣವನ್ನು ಕರ್ಕಶತೆಯೆಂದೇ ತಪ್ಪು ತಿಳಿಯುವಂತಿದ್ದಿತು. ಅದು ಹೇಗಿದ್ದಿತೆಂದರೆ, ಅತ್ಯುತ್ತಮ ಸಂಗೀತಗಾರನೊಬ್ಬನು ಒಂದು ಬಿರಿದ ಸಂಗೀತ ವಾದ್ಯದಿಂದ ಆತ್ಮಾನಂದಕರವಾದ ಮಾಧುರ್ಯವನ್ನು ಹೊರಡಿಸಿದಂತಿದ್ದಿತು; ದಿವ್ಯವಾದ ಸಂಗೀತದ ನಡುವೆಯೂ ಆ ವಾದ್ಯದ ಮುರಿದ ಒಡಲ ನಾದ ಕೇಳಬರುವಂತೆ ಮಾಡುವುದು ಆ ಮಾಧುರ್ಯ– ಹೆಪ್ಸಿಬಾಳ ಕಂಠಸ್ವರವನ್ನು ವಾದ್ಯದಂತೆ ನುಡಿಸಿದ ಭಾವಾವೇಗಸೂಕ್ಷ್ಮತೆ ಅಷ್ಟು ಗಾಢವಾಗಿತ್ತು!

"ಇಲ್ಲಿ ಪ್ರೀತಿಯಿಲ್ಲದೆ ಬೇರೆ ಏನೂ ಇಲ್ಲ, ಕ್ಲಿಫರ್ಡ್; ಪ್ರೀತಿಯಲ್ಲದೆ ಬೇರೆ ಏನೂ ಇಲ್ಲ! ಇದು ನಿನ್ನ ಮನೆ!" ಎಂದು ಸೇರಿಸಿದಳು ಅವಳು.

ಅತಿಥಿ ಅವಳ ಈ ಧ್ವನಿಗೆ ಮುಗುಳುನಗೆಯ ಉತ್ತರವಿತ್ತನು; ಅದು ಅವನ ಮುಖವನ್ನು ಅರ್ಧದಷ್ಟೂ ಬೆಳಗಲಿಲ್ಲ. ದುರ್ಬಲವಾಗಿದ್ದ ಅದು ಕ್ಷಣದಲ್ಲಿಯೇ ಕಣ್ಮರೆಯಾದರೂ, ಬೆರಗುಗೊಳಿಸುವ ಚೆಲುವಿನ ಮನೋಹರತೆಯಿತ್ತು ಅದರಲ್ಲಿ. ಅದರ ತರುವಾಯ ನಯವಿಲ್ಲದ ಮುಖಭಾವ ಮೂಡಿತು; ಅಥವಾ, ಅವನ ಮುಖಮುದ್ರೆಯ ಸೊಗಸಾದ ಮಾಟದ ಮೇಲೆ ಒರಟುತನದ ಪರಿಣಾಮವನ್ನು ಬೀರಿದ ಮುಖಭಾವ ಮೂಡಿತೆನ್ನಬಹುದು; ಏಕೆಂದರೆ ಅದನ್ನು ಸೌಮ್ಯಗೊಳಿಸುವಂತಹ ಬುದ್ಧಿಯ ಬೆಳಕು ಯಾವುದೂ ಇರಲಿಲ್ಲ. ಹಸಿವನ್ನು ಸೂಚಿಸುತ್ತಿದ್ದ ನೋಟವದು. ಅವನು ಹೊಟ್ಟೆ ಬಾಕತನದಿಂದ ಆಹಾರವನ್ನು ಭುಂಜಿಸಿದನು ಎಂದೇ ಹೇಳಬಹುದು. ಮೇಜಿನಮೇಲೆ ಬಡಿಸಿದ್ದ ಪುಷ್ಕಲವಾದ ಭಕ್ಷ್ಯಭೋಜನ ರಸನೇಂದ್ರಿಯ ಸೌಖ್ಯವನ್ನು ಒದಗಿಸುವಂತಿತ್ತು; ಆ ಸೌಖ್ಯಾನುಭವದಲ್ಲಿ ಅವನು ತನ್ನನ್ನು ಮಾತ್ರವಲ್ಲದೆ ಹೆಪ್ಸಿಬಾ, ಆ ಪುಟ್ಟ ಹುಡುಗಿ, ಮತ್ತು ತನ್ನ ಸುತ್ತಮುತ್ತಲಿದ್ದ ಪ್ರತಿಯೊಂದನ್ನೂ ಮರೆತಂತೆ ಕಾಣುತ್ತಿತ್ತು. ಅವನ ಶರೀರದ ನೈಸರ್ಗಿಕ ರಚನೆ ಬಹಳ ಉದ್ರೇಕಗೊಳ್ಳುವಂತಿದ್ದು, ಬಹು ಸೂಕ್ಷ್ಮವಾಗಿದ್ದರೂ ಕೂಡ ರಸನೇಂದ್ರಯಸುಖವನ್ನು ಗ್ರಹಿಸುವ ಸೂಕ್ಷ್ಮ ಶಕ್ತಿ ಬಹುಶಃ ಸಹಜವಾಗಿತ್ತು. ಆತನ ಇತರ ಸೂಕ್ಷ್ಮ ಸ್ವಭಾವಲಕ್ಷಣಗಳು ತಮ್ಮ ಸತ್ತ್ವವನ್ನು ಉಳಿಸಿಕೊಂಡಿದ್ದಿದ್ದರೆ, ಆ ಜಿಹ್ವಾಸಾಮರ್ಥ್ಯವನ್ನು ಹದ್ದಿನಲ್ಲಿಟ್ಟು ಕೊಳ್ಳಬಹುದಾಗಿದ್ದುದು ಮಾತ್ರವಲ್ಲದೆ ಅದನ್ನು ಒಂದು ಸಹಜ ಕೌಶಲವಾಗಿಯೂ ಬೌದ್ಧಿಕಸಂಸ್ಕೃತಿಯ ಸಾವಿರ ಪ್ರಕಾರಗಳಲ್ಲಿ ಒಂದನ್ನಾಗಿಯೂ ಕೂಡ ಪರಿವರ್ತಿಸಬಹುದಾಗಿದ್ದಿತು. ಆದರೆ ಅದು ಈಗ ಇದ್ದ ರೀತಿಯಲ್ಲಿ, ಪರಿಣಾಮವು

ಅಲ್ಲದೆ, ಆ ಮನುಷ್ಯನ ಅಂತರಾತ್ಮವು ತನ್ನ ಐಹಿಕ ಅನುಭವದಲ್ಲಿ ಯಾವುದೋ ಕ್ಲೇಶಕರವಾದ ಅನ್ಯಾಯವನ್ನು ಸಹಿಸಿರಬೇಕು ಎಂಬ ಅಂಶವನ್ನೂ ಹೆಚ್ಚು ಸರಿಯಗಿ ತಿಳಿಯಬಹುದಾಗಿದ್ದಿತು. ಅವನು ಅಲ್ಲಿ ಕುಳಿತಿದ್ದಾಗ ಅವನಿಗೂ ಪ್ರಪಂಚಕ್ಕೂ ನಡುವೆ ಮುಪ್ಪು ಮತ್ತು ನಾಶಗಳ ಒಂದು ಮಸುಕು ತೆರೆಯಿತ್ತು; ಅದರ ಮೂಲಕ, ಕಲಾವಿದ ಮಾಲ್‌ಬೋನನು (ತನ್ನ ಉಸಿರನ್ನು ಬಿಗಿಹಿಡಿದು ಒಂದು ಸೊಗಸನ್ನು ಸಾಧಿಸಲು ಪ್ರಯತ್ನಪಟ್ಟು) ತನ್ನ ಸೂಕ್ಷ್ಮಾಕಾರದ ಚಿತ್ರದಲ್ಲಿ ಮೂಡಿಸಿದ್ದ ನಯವಾದ ಭಾವಪೂರ್ಣವಾದ ಅದೇ ಮುಖಭಾವವನ್ನು ಉಚಿತ ಕಾಲಾಂತರಗಳಲ್ಲಿ ಗ್ರಹಿಸಬಹುದಾಗಿದ್ದಿತು. ಈ ನೋಟದಲ್ಲಿ ಯಾವುದೋ ಒಂದು ಸಹಜವಾದ ವೈಲಕ್ಷಣ್ಯವಿದ್ದಿತು.; ಆ ಎಲ್ಲ ದುಃಖಮಯ ವರ್ಷಗಳೂ, ಅವನನ್ನು ಅಡಸಿದ್ದ ಅನ್ಯಾಯದ ವಿಪತ್ತಿನ ಹೊರೆಯೂ ಅದನ್ನು ನಾಶಪಡಿಸಲು ಸಾಲದಾಗಿದ್ದವು.

ಹೆಪ್ಸಿಬಾ ಈಗ ಒಂದು ಬಟ್ಟಲತುಂಬ ಘಮಘಮಿಸುವ ರುಚಿಕರವಾದ ಕಾಫಿಯನ್ನು ಹಾಕಿ, ಅದನ್ನು ತನ್ನ ಅತಿಥಿಗೆ ನೀಡಿದಳು. ಅವನ ಕಣ್ಣುಗಳು ಅವಳನ್ನು ಸಂಧಿಸಿದಾಗ, ಅವನು ಬೆರಗುಗೊಂಡು ಅಶಾಂತನಾದಂತೆ ಕಂಡನು.

"ಹೆಪ್ಸಿಬಾ, ನಾನು ನೋಡುತ್ತಿರುವುದು ನೀನೆಯೇನು?" ಎಂದು ಖಿನ್ನನಾಗಿ ನುಡಿದನು ಅವನು; ಬಳಿಕ, ಹೆಚ್ಚು ಪ್ರತ್ಯೇಕವಾಗಿ ಬಹುಶಃ ತಾನು ಆಡುವುದನ್ನು ಯಾರಾದರೂ ಕೇಳಿಸಿಕೊಳ್ಳುತ್ತಿದ್ದಾರೆ ಎಂಬ ಅರಿವಿಲ್ಲದೆ, "ಎಷ್ಟು ಮಾರ್ಪಾಟಾಗಿದ್ದೀಯೆ! ಎಷ್ಟೊಂದು ಮಾರ್ಪಾಟು! ನನ್ನ ಮೇಲೆ ನಿನಗೆ ಸಿಟ್ಟೇನು! ಹುಬ್ಬನ್ನು ಏಕೆ ಹಾಗೆ ಇಳಿಬಿಡುತ್ತಿದ್ದೀಯೆ?" ಎಂದು ಕೇಳಿದನು.

ಅಯ್ಯೋ ಬಡ ಹೆಪ್ಸಿಬಾ! ಆ ಹಾಳು ಹುಬ್ಬುಗಂಟು; ಕಾಲ, ಅವಳ ಸಮೀಪದೃಷ್ಟಿ, ಅಸ್ವಸ್ಥಮನಸ್ಸಿನ ಕಿರಿಕಿರಿ–ಇವೆಲ್ಲ ಆ ಹುಬ್ಬುಗಂಟು ಹಾಕುವುದನ್ನು ಒಂದು ಅಭ್ಯಾಸವನ್ನಾಗಿ ಮಾಡಿಬಿಟ್ಟಿದ್ದುವು; ಹೀಗಾಗಿ, ಮನೋಭಾವದ ಯಾವ ಪ್ರಕಾರದ ಉದ್ವೇಗವೇ ಆಗಲಿ ಅದನ್ನು ಪ್ರಚೋದಿಸುತ್ತಿದ್ದಿತು. ಆದರೆ ಅವನ ಅಸ್ಪಷ್ಟವಾದ ಗೊಣಗುನುಡಿಗಳನ್ನು ಕೇಳಿ, ಅವಳ ಮುಖವೆಲ್ಲವೂ ಖೇದಭಾವಕ್ಕೆ ಒಳಗಾಗಿ ಕರುಣಾಮಯವಾಯಿತು, ಮನೋಹರವೂ ಆಯಿತು.

"ಸಿಟ್ಟೇ? ನಿನ್ನ ಮೇಲೆ ನನಗೆ ಸಿಟ್ಟೆ, ಕ್ಲಿಫರ್ಡ್! ಎಂದು ಅವಳು ಮತ್ತೆ ಮತ್ತೆ ಹೇಳಿದಳು.

ಅವಳು ಹಾಗೆ ಉದ್ಗಾರವನ್ನು ತೆಗೆದಾಗ ಅವಳ ಕಂಠಧ್ವನಿಯಲ್ಲಿ ದುಃಖಸೂಚಕವಾದ, ನಿಜವಾಗಿ ಉತ್ಕೃಷ್ಟವಾದ ರಾಗವು ಮಿಡಿಯುತ್ತಿದ್ದತು;

ಹೊಂದಿಕೊಂಡಿರಲು ಅವಕಾಶವಿತ್ತು, ಅವನ ಸ್ವಂತ ವ್ಯಕ್ತಿತ್ವದ ಬೆಳವಣಿಗೆಗಳಲ್ಲಾ ಅದೇ ರೀತಿ ಸುಂದರವಾಗಿರುವುವು. ಅಂಥ ಮನುಷ್ಯನಿಗೂ ದುಃಖಕ್ಕೂ ಯಾವ ಸಂಬಂಧವೂ ಇರದು; ಕಲಹಕ್ಕೂ ಅವನಿಗೂ ದೂರ; ಧೈರ್ಯಸಾಧನೆಗಾಗಿ ಬಲಿಯಾಗುವವನು; ಹಾಗೆ ಧರ್ಮಬಲಿಯಾಗುವ ಪುಣ್ಯ ಅನಂತ ವೈವಿಧ್ಯದ ರೂಪಪ್ರಕಾರಗಳಲ್ಲಿ ಯಾರು ಪ್ರಪಂಚದೊಂದಿಗೆ ಹೋರಾಡುವ ಕೆಚ್ಚು, ಮನಸ್ಸು, ಮತ್ತು ಆತ್ಮಸಾಕ್ಷಿಯ ನಿಷ್ಠೆ– ಇವನ್ನು ಹೊಂದಿರುತ್ತಾರೆಯೋ ಅವರಿಗಾಗಿ ಕಾದಿರುತ್ತದೆ. ಈ ಸಾಹಸವಂತ ಮನಃಪ್ರಕೃತಿಯವರಿಗೆ ಪ್ರಪಂಚವು ನೀಡಬಹುದಾದ ಅತ್ಯಂತ ಸಂಪನ್ನವಾದ ಪ್ರತಿಫಲವೆಂದರೆ ಹಾಗೆ ಆ ಹುತಾತ್ಮನಾಗುವ ಭಾಗ್ಯ. ನಮ್ಮ ಮುಂದಿರುವ ವ್ಯಕ್ತಿಗಾದರೋ, ಅದು ಕೇವಲ ದುಃಖಾನುಭವ; ದುಃಖ ಒದಗುವ ಸಂದರ್ಭ ಎಷ್ಟು ತೀಕ್ಷ್ಣವೋ ಅದಕ್ಕನುಗುಣವಾಗಿರಲು ದುಃಖವೂ ಅಷ್ಟೇ ತೀವ್ರ. ಆ ಹುತಾತ್ಮನಾಗಿರಲು ಅವನಿಗೆ ಅಧಿಕಾರವೇ ಇಲ್ಲ. ಸುಖವಾಗಿರಲು ಮಾತ್ರ ತಕ್ಕವನಾಗಿ, ಉಳಿದೆಲ್ಲ ಉದ್ದೇಶಗಳಿಗಾಗಿಯೂ ಅಷ್ಟೊಂದು ದುರ್ಬಲನಾಗಿದ್ದ ಅವನನ್ನು ಉದಾರಿಯೂ ಬಲಶಾಲಿಯೂ ಉದಾತ್ತಚೇತನೂ, ಆದವನೊಬ್ಬನು ನೋಡಿದ್ದರೆ– ನಮ್ಮ ಈ ಕಠಿನ ಪ್ರಪಂಚದ ಮಾಗಿಯ ಚಳಿಗಾಳಿಗಳ ಹೊಡೆತವು ತನ್ನ ತ್ಯಾಗದ ಫಲವಾಗಿ ಅಂಥವನ ಪಾಲಿಗೆ ಸೌಮ್ಯವಾಗುವ ಪಕ್ಷದಲ್ಲಿ– ತನಗಾಗಿ ಏರ್ಪಡಿಸಿಕೊಂಡಿದ್ದ ಅಲ್ಪ ಸುಖಾನುಭವಸಾಧನವನ್ನು ಕೂಡ ತ್ಯಾಗಮಾಡಲು ಸಿದ್ಧನಾಗಿರುತ್ತಿದ್ದನು, ತನ್ನ ಗಣನೆಯಲ್ಲಿ ಬಹು ಕ್ಷುದ್ರವೆಂದು ಕಂಡ ತನ್ನ ಎಲ್ಲ ಆಸೆ ಕನಸುಗಳನ್ನೂ ಬಿಸಾಡಿಬಿಡುತ್ತಿದ್ದನು.

ಕ್ಲಿಫರ್ಡ್‌ನ ಸ್ವಭಾವವು ಭೋಗವಿಲಾಸಪ್ರಿಯವಾಗಿದ್ದಿತು; ಇದು ಕಠಿನತೆಯಿಂದಾಗಲಿ ತಿರಸ್ಕಾರದಿಂದಾಗಲಿ ಹೇಳುವ ಮಾತಲ್ಲ. ಅಲ್ಲಿ ಕೂಡ, ಆ ಹಳೆಯ ಕಾಲದ ಕತ್ತಲಿಡಿದ ದಿವಾನಖಾನೆಯಲ್ಲಿ, ನೆರಳು ನೆರಳಾದ ಗಿಡಮರದೆಲೆಗಳ ಮೂಲಕ ತೂರಿಬರುತ್ತಿದ್ದ ಸೂರ್ಯಕಿರಣಗಳ ಲೀಲಾವಿಲಾಸವನ್ನು ಕಂಡು ಅವನ ಕಣ್ಣುಗಳು ಅನಿವಾರ್ಯವಾಗಿ ಆಕರ್ಷಿತವಾದ ಬಗೆಯಲ್ಲಿ, ಆ ಸ್ವಭಾವ ಸುಗೋಚರವಾಗಿತ್ತು. ಪುಷ್ಪಪಾತ್ರೆಯನ್ನವರು ಮೆಚ್ಚಿಕೊಂಡು ಗಮನಿಸುತ್ತಿದ್ದ ರೀತಿಯಲ್ಲಿಯೂ ಅದು ಕಂಡುಬಂದಿತು: ಹೂಗಳ ಪರಿಮಳವನ್ನವನು ಪರಮಾಸಕ್ತಿಯಿಂದ ಆಘ್ರಾಣಿಸಿದನು; ಬಹು ನಾಜೂಕಾದ ಭೌತಶರೀರವ್ಯವಸ್ಥೆಯಲ್ಲಿ ಚೈತನ್ಯ ರೂಪದ ಸಾಮಗ್ರಿಯೂ ಬೆರೆತಿದ್ದರೆ ಮಾತ್ರ ಅಂಥ ಪರಮಾಸಕ್ತಿಯ ವೈಲಕ್ಷಣ್ಯ ಕಂಡುಬರುವುದು. ಅವನು ಫೀಬೆಯನ್ನು ಕಂಡು ತನಗರಿವಿಲ್ಲದೆಯೆ

ಸಂಕಟಕರವಾಗಿತ್ತು, ಫೀಬೆ ತನ್ನ ಕಣ್ಣುಗಳನ್ನು ತಗ್ಗಿಸುವಂತೆ ಮಾಡಿತು.

ಸ್ವಲ್ಪ ಹೊತ್ತಿನೊಳಗಾಗಿ, ಅತಿಥಿ ತಾನು ಇನ್ನೂ ರುಚಿ ನೋಡದಿದ್ದ ಕಾಫಿಯ ಸುವಾಸನೆಯನ್ನು ಗ್ರಹಿಸಿದನು. ಅವನು ಕಾಫಿಯನ್ನು ಉತ್ಸಾಹದಿಂದ ಕುಡಿದನು. ಅದರ ಸೂಕ್ಷ್ಮ ಸಾರವು ಮಂತ್ರಿಸಿದ ಪಾನೀಯದಂತೆ ಅವನಮೇಲೆ ಪರಿಣಾಮ ಬೀರಿ, ಅವನ ಮೃಗತ್ವದ ಅಪಾರದರ್ಶನ ವಸ್ತುವನ್ನು ಪಾರದರ್ಶಕವನ್ನಾಗಿಯಲ್ಲದಿದ್ದರೂ ಅರ್ಧಪಾರದರ್ಶಕವನ್ನಾಗಿ ಮಾಡಿತು; ಇದರಿಂದಾಗಿ, ಅಂತರಾತ್ಮದ ಪ್ರಭಾವಕಿರಣವು ಇದುವರೆಗೆಗಿಂತ ಹೆಚ್ಚು ಸ್ಪಷ್ಟವಾದ ಕಾಂತಿಯಿಂದ ಅದರ ಮೂಲಕ ಸಾಗಿಬಂತು.

"ಇನ್ನು ಸ್ವಲ್ಪ, ಇನ್ನೂ ಸ್ವಲ್ಪ!" ಎಂದು, ತನ್ನಿಂದ ತಪ್ಪಿಸಿಕೊಂಡು ಹೋಗಲಿರುವುದನ್ನು ತನ್ನ ಹಿಡಿತದಲ್ಲಿಯೇ ಉಳಿಸಿಕೊಳ್ಳಲು ಕಳವಳಗೊಂಡವನಂತೆ, ಗಾಬರಿಯಿಂದ ಕೂಡಿದ ತವಕದಿಂದ ಗಟ್ಟಿಯಾಗಿ ಹೇಳಿದನು: "ನನಗೆ ಬೇಕಾದ್ದು ಇದು! ಇನ್ನು ಸ್ವಲ್ಪ ಕೊಡಿ!"

ಸೂಕ್ಷ್ಮವಾದ ಶಕ್ತಿಯುತವಾದ ಈ ಪ್ರಭಾವಕ್ಕೆ ಸಿಲುಕಿ, ಅವನು ಹೆಚ್ಚು ನೆಟ್ಟನೆ ಕುಳಿತನು, ತನ್ನ ಕಣ್ಣುಗಳ ಅಂತರಾಳದಿಂದ ಒಂದು ನೋಟವನ್ನು ಬೀರಿದನು; ಅದು ಯಾವುದರಮೇಲೆ ಬಿದ್ದಿತೋ ಅದನ್ನು ಗ್ರಹಿಸಿತು. ಇದರಿಂದ ಅವನ ಮುಖಭಾವವು ಹೆಚ್ಚು ಭೌತಿಕವಾಯಿತೆಂದಲ್ಲ; ಅದರ ಭಾಗವೂ ಇದ್ದಿತಾದರೂ, ಇದು ಅತ್ಯಂತ ವಿಲಕ್ಷಣವಾದ ಪರಿಣಾಮವೂ ಆಗಿರಲಿಲ್ಲ. ನಾವು ಯಾವುದನ್ನು ನೈತಿಕಸ್ವಭಾವವೆಂದು ಕರೆಯುತ್ತೇವೆಯೋ ಅದು ಗಮನಾರ್ಹವಾಗಿರುವಷ್ಟು ಪ್ರಮುಖವಾಗಿ ತೋರಿ ಬರುವಂತೆ, ಅಷ್ಟೊಂದು ಬಲವಾಗಿ ಜಾಗೃತವಾಗಿರಲಿಲ್ಲ. ಆದರೆ ವ್ಯಕ್ತಿತ್ವದ ಒಂದು ನಿರ್ದಿಷ್ಟವಾದ ಸೂಕ್ಷ್ಮ ಮನೋಧರ್ಮ ಪೂರ್ತಿ ಎದ್ದು ಕಾಣುವಂತೆ ಈಗ ವ್ಯಕ್ತಗೊಂಡಿರಲಿಲ್ಲ; ಆದರೆ, ಪರಿವರ್ತನಹೊಂದುವಂತೆ ಅಪರಿಪೂರ್ಣವಾಗಿ ಹೊರಪಟ್ಟಿತ್ತು; ಸುಂದರವಾದ, ಭೋಗಿಸಿ ಆನಂದಪಡಬಹುದಾದ ಎಲ್ಲ ಪದಾರ್ಥಗಳ ವಿಷಯದಲ್ಲಿ ಪ್ರವೃತ್ತವಾಗುವುದೇ ಅದರ ಕಾರ್ಯ. ಯಾವ ವ್ಯಕ್ತಿಯಲ್ಲಿ ಆ ಮನೋಧರ್ಮ ಪ್ರಧಾನಗುಣವಾಗಿ ಇರಬೇಕೋ ಆತನಲ್ಲಿ ಹಾಗೆ ಇದ್ದಲ್ಲಿ, ಅದನ್ನುಳ್ಳ ಅವನಿಗೆ ಒಂದು ಪರಮೋತ್ಕೃಷ್ಟವಾದ ಅಭಿರುಚಿಯನ್ನೂ, ಅಸೂಯೆಪಡಬಹುದಾದಂತಹ ಸುಖಾಸಕ್ತಿಯನ್ನೂ ಅದು ನೀಡುವುದು. ಸೌಂದರ್ಯವೇ ಅವನ ಜೀವನವಾಗುವುದು; ಅವನ ಎಲ್ಲ ಬಯಕೆಗಳೂ ಅದರತ್ತಲೇ ಒಲೆಯುವುವು; ಅಲ್ಲದೆ, ಅವನ ಮನಃಪ್ರವೃತ್ತಿಯೂ ದೇಹದ ಅವಯವಗಳೂ ಪರಸ್ಪರ

ಹೊಂದಿರಲಿಲ್ಲ; ಅದನ್ನು ಎಂದಾದರೂ ಹೊಂದಿದ್ದರೆ, ಅವನಿಗಾಗಿ ಅವಳು ಪಟ್ಟ ವ್ಯಥೆಯ ವ್ರಣ ಅದನ್ನು ನಾಶಪಡಿಸಿಬಿಟ್ಟಿದ್ದಿರಬೇಕು.

ಅತಿಥಿ ತನ್ನ ಕುರ್ಚಿಯಲ್ಲಿ ಹಿಂದಕ್ಕೆ ಒರಗಿಕೊಂಡನು. ಅವನ ಮುಖದಲ್ಲಿದ್ದ ಸ್ವಪ್ನದ ನಲಿವಿನೊಂದಿಗೆ ಪ್ರಯಾಸದ ಹಾಗೂ ಅಶಾಂತಿಯ ಕಳವಳದ ನೋಟವೂ ಮಿಶ್ರವಾಗಿತ್ತು. ತನ್ನ ಸುತ್ತಮುತ್ತಣ ದೃಶ್ಯವನ್ನು ಪೂರ್ಣವಾಗಿ ತನ್ನ ಅರಿವಿಗೆ ತಂದುಕೊಳ್ಳಲು ಅವನು ಪ್ರಯತ್ನಿಸುತ್ತಿದ್ದನು; ಇಲ್ಲವೋ, ಅದೊಂದು ಸ್ವಪ್ನವಾಗಿರಬಹುದು ಇಲ್ಲವೆ ಕಲ್ಪನಾವಿಲಾಸವಾಗಿದ್ದೀತು ಎಂದು ಭೀತನಾಗಿ, ಅದು ಹೆಚ್ಚು ಪ್ರಕಾಶದಿಂದ ಕೂಡಿ ಹೆಚ್ಚು ಕಾಲ ಉಳಿಯುವ ಭ್ರಮಾದೃಶ್ಯವಾಗಿ ತನ್ನ ಪಾಲಿಗಿರಲಿ ಎಂದು ಆ ಸುಂದರಕ್ಷಣದೊಂದಿಗೆ ಕಾದಾಡುತ್ತಿದ್ದನು.

"ಎಷ್ಟು ಸೊಗಸಾಗಿದೆ! ಎಷ್ಟು ಸಂತೋಷಕರವಾಗಿದೆ!" ಎಂದು ಯಾರನ್ನೂ ಕುರಿತು ಮಾತಾಡದ ರೀತಿಯಲ್ಲಿ ಗುಣಗುಣಿಸಿದನು! "ಇದು ಬಹುಕಾಲ ನಿಲ್ಲುವುದೆ? ಆ ತೆರೆದ ಕಿಟಕಿಯ ಮೂಲಕ ಕಾಣುವ ವಾತಾವರಣ ಎಷ್ಟು ಹಿತಕರವಾಗಿದೆ! ತೆರೆದ ಕಿಟಕಿ! ಆ ಬಿಸಿಲಿನ ಲೀಲೆ ಎಷ್ಟು ಸುಂದರ! ಆ ಹೂವುಗಳೋ, ಎಷ್ಟು ಸುವಾಸನೆಯಾಗಿವೆ! ಆ ಪುಟ್ಟ ಹುಡುಗಿಯ ಮುಖ, ಎಷ್ಟು ಉಲ್ಲಾಸದಿಂದ ಕೂಡಿದೆ, ಹೇಗೆ ಹೂವಿನಂತೆ ಅರಳುತ್ತಿದೆ– ಹೂವೇ ಅದು, ಮಂಜು ಮುಸುಕಿದೆ ಅದರ ಮೇಲೆ, ಮಂಜು ಹನಿಗಳಲ್ಲಿ ಸೂರ್ಯಕಿರಣಗಳು ಹೊಳೆಯುತ್ತಿವೆ! ಆಹಾ! ಇದೆಲ್ಲಾ ಒಂದು ಕನಸಾಗಿರಬೇಕು! ಒಂದು ಕನಸು, ಕನಸು! ಆದರೆ ಅದು ನಾಲ್ಕು ಕಲ್ಲು ಗೋಡೆಗಳನ್ನೂ ಮುಚ್ಚಿಬಿಟ್ಟಿದೆ!"

ಒಂದು ಗುಹೆಯ, ಇಲ್ಲವೆ ನೆಲಮಾಳಿಗೆಯ ಕತ್ತಲು ಬಂದು ಕವಿಯಿತೋ ಎಂಬಂತೆ ಅವನ ಮುಖ ಕಪ್ಪಿಟ್ಟಿತು; ಮುಖಭಾವದಲ್ಲಿ, ಸೆರೆಮನೆಯ ಕಿಟಕಿಯ ಕಬ್ಬಿಣದ ಸಲಾಕಿಗಳ ಮೂಲಕ ತೂರಿ ಬರುವಷ್ಟು ಬೆಳಕೂ ಇರಲಿಲ್ಲ; ಅವನು ಪಾತಾಳದಾಳದೊಳಕ್ಕೆ ಮುಳುಗುತ್ತಿದ್ದಾನೆಯೇನೋ ಎಂದೆನ್ನುವಂತೆ, ಅದು ಇನ್ನೂ ಕಡಮೆಯಾಗುತ್ತಿತ್ತು. ಫೀಬೆಯದು ಚುರುಕಾದ, ಚಟುವಟಿಕೆಯ ಪ್ರಕೃತಿ; ತನ್ನ ಮುಂದೆ ನಡೆಯುವ ವ್ಯವಹಾರದಲ್ಲಿ ಅವಳು ಬಹಳಕಾಲ ಪಾತ್ರವನ್ನು– ಸಾಮಾನ್ಯವಾಗಿ ಒಂದು ಒಳ್ಳೆಯ ಪಾತ್ರವನ್ನು– ವಹಿಸದೆ ಇರುತ್ತಿರಲಿಲ್ಲ; ಆದ್ದರಿಂದ, ಅವಳಿಗೆ ಈಗ ಆ ಆಗಂತುಕನೊಂದಿಗೆ ಸಂಭಾಷಿಸಬೇಕೆಂದೆನಿಸಿತು.

ಪುಷ್ಪಪಾತ್ರೆಯಲ್ಲಿದ್ದ ಹೂಗಳ ಮಧ್ಯದಿಂದ ಒಂದು ಕಡುಗೆಂಪು ಬಣ್ಣದ ಗುಲಾಬಿ ಹೂವೊಂದನ್ನು ಆಯ್ದುಕೊಂಡು; ಅವಳು ಹೇಳಿದಳು: "ಇಲ್ಲೊಂದು ಹೊಸ ಬಗೆಯ ಗುಲಾಬಿಯಿದೆ; ಈ ಹೊತ್ತು ಬೆಳಗ್ಗೆ ಅದನ್ನು ತೋಟದಲ್ಲಿ

ನಕ್ಕ ಮುಗುಳುನಗೆಯಲ್ಲಿಯೂ ಆ ಸ್ವಭಾವ ಹೊರಪಟ್ಟಿತ್ತು; ಅವಳ ನವಯೌವನದ ಕನ್ಯೋಚಿತವಾದ ಆಕೃತಿ ಬಿಸಿಲೂ ಹೂವೂ ಮಿಲನವಾದಂತಿದ್ದಿತು– ಮಾತ್ರವಲ್ಲ, ಅವುಗಳ ಸಾರವೇ ಇನ್ನೂ ಅಂದವಾದ ಇನ್ನೂ ಪ್ರಿಯವಾದ ಪ್ರಕಾರದಲ್ಲಿ ವ್ಯಕ್ತರೂಪವನ್ನು ಪಡೆದಂತಿದ್ದಿತು. ಅಷ್ಟೇ ಅಲ್ಲ; ಬಹುಶೀಘ್ರವಾಗಿ ಅವನ ಕಣ್ಣುಗಳು ಸಹಜ ಪ್ರವೃತ್ತಿಯ ಜಾಗರೂಕತೆಯಿಂದ ತನ್ನ ಆತಿಥ್ಯಕಾರಳಿಂದ ಬೇರೆಯ ಕಡೆಗೆ ತಿರುಗಿ ಮತ್ತೆ ಅವಳ ಕಡೆಗೆ ಹಿಂದಿರುಗಲೊಲ್ಲದೆ ಯಾವಯಾವುದೋ ಕಡೆ ಅಲೆಯುತ್ತಿದ್ದುವು; ಅವನ ಈ ಸೌಂದರ್ಯಪ್ರೇಮ, ಅವನಿಗಿದ್ದ ಸೌಂದರ್ಯದ ಆವಶ್ಯಕತೆ– ಇವು ಆ ಜಾಗರೂಕ ನಡೆವಳಿಕೆಯಲ್ಲಿ ಚೆನ್ನಾಗಿ ವ್ಯಕ್ತಗೊಂಡಿದ್ದವು. ಇದೆಲ್ಲವೂ ಹೆಪ್ಸಿಬಾಳ ದೌರ್ಭಾಗ್ಯ; ಕ್ಲಿಫರ್ಡನ ತಪ್ಪಲ್ಲ. ಅವಳೆಷ್ಟು ಹಳದಿ ಬಣ್ಣಕ್ಕೆ ತಿರುಗಿದ್ದಳು, ಎಷ್ಟು ಸುಕ್ಕುಗಟ್ಟಿತ್ತು ಅವಳ ಮೈ, ಎಷ್ಟು ಖಿನ್ನವಾಗಿತ್ತು ಅವಳ ಮುಖಭಾವ, ಜೊತೆಗೆ ಅವಳ ತಲೆಯ ಮೇಲೆ ರುಮಾಲು ಟೋಪಿಯ ಆ ವಿಚಿತ್ರ ವಕ್ರತೆ ಬೇರೆ, ಹಾಗೂ ಅವಳ ಹುಬ್ಬನ್ನು ತಿರಿಚು ಮುರಿಚುಗೊಳಿಸಿದ್ದ ಆ ಅತ್ಯಂತ ವಕ್ರವಾದ ಸಿಡುಕು ಮೋರೆ– ಇಂಥವಳನ್ನು ದೃಷ್ಟಿಸಿ ನೋಡಲು ಅವನಿಗೆ ಹೇಗೆ ತಾನೆ ಪ್ರೀತಿ ಹುಟ್ಟೀತು? ಆದರೆ, ಅವಳು ಮೌನವಾಗಿ ಅವನಿಗೆ ಇತ್ತುದಕ್ಕೆಲ್ಲಾ ಅವನು ಪ್ರತಿಯಾಗಿ ತೋರಿಸಬೇಕಾದ ವಿಶ್ವಾಸ ಏನೂ ಇರಲಿಲ್ಲವೆ? ಅವನು ಅವಳಿಗೆ ಪ್ರತಿಯಾಗಿ ಕೊಡಬೇಕಾದ್ದು ಏನೂ ಇರಲಿಲ್ಲ. ಕ್ಲಿಫರ್ಡನ ಸ್ವಭಾವದಂತಹ ಸ್ವಭಾವವು ಆಬಗೆಯ ಯಾವ ಋಣಗಳಿಗೂ ಒಳಗಾಗದು. ಅದು ಸಾರತಃ ಯಾವಾಗಲೂ ಸ್ವಾರ್ಥಪರ, ದೋಷಾರೋಪಣೆ ಮಾಡದೆ, ಬೇರೆಯ ಸ್ವಭಾವದ ವ್ಯಕ್ತಿಗಳ ಮೇಲೆ ಅದು ಕಳೆಯಲಾಗದಂತೆ ಹೊಂದಿರುವ ಹಕ್ಕನ್ನು ಕಡಮೆ ಮಾಡದೆ, ಇದನ್ನು ಹೇಳುತ್ತಿದ್ದೇವೆ; ಅದು ಹಾಗಿರಲು ನಾವು ಅವಕಾಶಕೊಡಬೇಕು, ಹಾಗೂ ಪ್ರತಿಫಲವನ್ನು ಬಯಸದೆ ನಮ್ಮ ಸಾಹಸಯುತವಾದ ಮತ್ತು ನಿರಾಸಕ್ತವಾದ ಪ್ರೇಮವನ್ನು ಅದರ ಮೇಲೆ ಒಟ್ಟಬೇಕು. ಬಡ ಹೆಪ್ಸಿಬಾಗೆ ಈ ಸತ್ಯದ ಅರಿವಿದ್ದಿತು; ಅದಿಲ್ಲವೊ, ಸಹಜಪ್ರಜ್ಞೆಗೆ ಅದು ಹೊಳೆದಂತೆ ನಡೆದುಕೊಂಡಳು. ಕ್ಲಿಫರ್ಡ್ ಹಿಂದೆ ಮನೋಹರವಾಗಿದ್ದನು; ಮನೋಹರನಾಗಿದ್ದ ಆ ಕ್ಲಿಫರ್ಡನನ್ನು ಅವಳು ಅಗಲಿ ಬಹಳ ಕಾಲವಾಗಿತ್ತು; ಈಗ ಅವನ ಕಣ್ಣ ಮುಂದೆ ತನ್ನ ಮುದಿಯಾದ ವಿಕೃತ ಮುಖಲಕ್ಷಣಕ್ಕಿಂತ ಹೆಚ್ಚು ಪ್ರಕಾಶಮಾನವಾದ ವಸ್ತುಗಳಿದ್ದುದಕ್ಕಾಗಿ ಅವಳು ಹಿಗ್ಗಿದಳು; ಆದರೆ ಹಾಗೆ ಹಿಗ್ಗುವಾಗ, ಈಗ ನಿಟ್ಟುಸಿರು ಬಿಟ್ಟಳು, ಮತ್ತು ತನ್ನ ಸ್ವಂತ ಕೋಣೆಯಲ್ಲಿ ಕಂಬನಿ ಸುರಿಸುವ ರಹಸ್ಯ ಉದ್ದೇಶವನ್ನು ಹೊಂದಿದ್ದಳು. ಅದು ಎಂದೂ ಮನೋಹರತೆಯನ್ನು

ನನ್ನ ದುರ್ದೇವತೆ! ಅದನ್ನು ಕೂಡಲೆ ತೆಗೆದುಹಾಕಿ ಬಿಡು" ಎಂದು ಕಡು ಖಂಡಿತವಾಗಿ, ಶಕ್ತಿಯನ್ನೆಲ್ಲ ಉಪಯೋಗಿಸಿ ಕೂಗಿ ಹೇಳಿದನು.

ಹೆಪ್ಸಿಬಾ ಖಿನ್ನಳಾಗಿ ಹೇಳಿದಳು: "ಪ್ರಿಯ ಕ್ಲಿಫರ್ಡ್, ಅದು ಸಾಧ್ಯವಿಲ್ಲ, ನಿನಗೂ ಗೊತ್ತು!"

"ಹಾಗಿದ್ದ ಮೇಲೆ ಇನ್ನೇನು ಸಾಧ್ಯವಿಲ್ಲದಿದ್ದರೂ, ದಯವಿಟ್ಟು ಅದನ್ನು ಒಂದು ಕಡುಗೆಂಪುಬಣ್ಣದ ತೆರೆಯಿಂದ ಮುಚ್ಚಿಬಿಡು; ಆ ತೆರೆ ನೆರಿನೆರಿಯಾಗಿ ತೂಗುಬೀಳುವಷ್ಟು ಅಗಲವಾಗಿರಲಿ, ಅದಕ್ಕೆ ಚಿನ್ನದ ಜರಿಯ ಅಂಚಿರಲಿ, ಕುಚ್ಚುಗಳಿರಲಿ. ಆ ಚಿತ್ರವನ್ನು ನಾನು ಸಹಿಸಲಾರೆ! ಅದು ನನ್ನ ಮುಖವನ್ನು ದುರುಗುಟ್ಟಿಕೊಂಡು ನೋಡಕೂಡದು!" ಎಂದು ಇನ್ನೂ ಸ್ವಲ್ಪ ಬಿರುಸಿನಿಂದಲೇ ನುಡಿದನು.

"ಹಾಗೆಯೇ ಆಗಲಿ, ಪ್ರಿಯ ಕ್ಲಿಫರ್ಡ್, ಚಿತ್ರವನ್ನು ಮುಚ್ಚಿಬಿಡೋಣ. ಮಹಡಿಯಮೇಲೆ ಒಂದು ಟ್ರಂಕಿನಲ್ಲಿ ಒಂದು ಕಡುಗೆಂಪು ಬಣ್ಣದ ತೆರೆಯಿದೆ; ಅದು ಸ್ವಲ್ಪ ಮಾಸಿಹೋಗಿ, ಹುಳು ತಿಂದಿದೆ ಎಂದು ನನಗೆ ಶಂಕೆ. ಆದರೆ ಫೀಬೆಯೂ ನಾನೂ ಸೇರಿಕೊಂಡು ಅದರಿಂದ ಏನುಬೇಕಾದರೂ ಸಾಧಿಸಬಲ್ಲೆವು" ಎಂದು ಸಮಾಧಾನಗೊಳಿಸುತ್ತಾ ಹೇಳಿದಳು ಹೆಪ್ಸಿಬಾ.

"ಈ ಹೊತ್ತೇ, ನೆನಪಿರಲಿ!" ಎಂದು ಹೇಳಿ, ಅವನು ತನಗೆ ತಾನೇ ಹೇಳಿಕೊಳ್ಳುವಂತೆ ತಗ್ಗಿದ ಧ್ವನಿಯಲ್ಲಿ ಮುಂದುವರಿಸಿದನು; "ಈ ಮಂಕು ಕವಿದ ಮನೆಯಲ್ಲಿ ನಾವು ಯಾಕೆ ವಾಸಮಾಡಬೇಕು? ದಕ್ಷಿಣ ಫ್ರಾನ್ಸ್ ದೇಶಕ್ಕೆ, ಇಟಲಿಗೆ, ಪ್ಯಾರಿಸ್, ನೇಪಲ್ಸ್, ವೆನಿಸ್, ರೋಮ್– ಯಾವುದಾದರೂ ಒಂದು ಪಟ್ಟಣಕ್ಕೆ ಯಾಕೆ ಹೋಗಬಾರದು? ನಮಗೆ ಅನುಕೂಲತೆಯಿಲ್ಲವೆಂದು ಹೆಪ್ಸಿಬಾ ಹೇಳಬಹುದು. ಹಾಗೆ ಹೇಳಿದರೆ ಅದು ತಮಾಷೆಯಾದೀತು!"

ಅವನು ತನಗೆ ತಾನೇ ಮುಗುಳುನಗೆ ನಕ್ಕನು; ಸೊಗಸಾದ ವ್ಯಂಗ್ಯಾರ್ಥದ ನೋಟವೊಂದನ್ನು ಹೆಪ್ಸಿಬಾಳತ್ತ ಎಸೆದನು.

ಅತ್ಯಲ್ಪ ಕಾಲಾವಧಿಯಲ್ಲಿ ಅಷ್ಟು ಖಚಿತವಲ್ಲದ ಹಲವು ವಿಧದ ಭಾವ ಭಾವನೆಗಳ ಸಂವೇದನೆಯನ್ನು ಅವನು ಅನುಭವಿಸಿದ್ದನು; ಅವೆಲ್ಲವೂ ಈ ಆಗಂತುಕನನ್ನು ಬಳಲಿಸಿದ್ದುದು ಸ್ಪಷ್ಟ. ಅವನು ಬಹುಶಃ ಜೀವನದ ಖೇದಕರ ಏಕಪ್ರಕಾರತೆಗೆ ಒಗ್ಗಿಹೋಗಿದ್ದಿರಬೇಕು; ಏಕಪ್ರಕಾರತೆಯೆಂದರೆ, ಎಷ್ಟೇ ಅಲಸಗತಿಯಿಂದಲಾದರೂ ಸರಿಯೆ, ಹೊನಲು ಹರಿಯುವ ರೀತಿಯದಲ್ಲ; ಅವನ ಅಡಿಗಳ ಸುತ್ತ ಮಡುಗಟ್ಟಿ ನಿಂತು ನಾರುವ ತೆರದ್ದು. ಅವನ ಮುಖದ

ಕಂಡೆ. ಈ ಸಲದ ಹೂವಿನ ಕಾಲದಲ್ಲಿ, ಗಿಡದಲ್ಲಿ ನಾಲ್ಕೈದು ಹೂವು ಬಿಟ್ಟರೆ ಹೆಚ್ಚು. ಅವುಗಳಲ್ಲೆಲ್ಲಾ ಇದು ತುಂಬ ಉತ್ಕೃಷ್ಟವಾದದ್ದು; ಅದರಲ್ಲಿ ಎಷ್ಟು ರೋಗದ, ಕಾಡಿಗೆ ರೋಗದ ಲವಲೇಶವೂ ಇಲ್ಲ. ಅಲ್ಲದೆ, ಎಷ್ಟು ಮಧುರವಾಗಿದೆ ಅದು– ಬೇರೆ ಯಾವ ಗುಲಾಬಿಯೂ ಇಷ್ಟು ಮಧುರವಾಗಿರದು! ಆ ಪರಿಮಳವನ್ನು ಯಾರೂ ಮರೆಯಲಾರರು!"

"ಓಹೋ! ಎಲ್ಲಿ ನೋಡೋಣ– ಎಲ್ಲಿ, ಕೈಲಿ ಹಿಡಿದು ನೋಡೋಣ" ಎಂದು ಆ ಅತಿಥಿ ಉತ್ಸುಕನಾಗಿ ಆ ಹೂವನ್ನು ಕಸಿದುಕೊಂಡು, ನುಡಿದನು; ನೆನಪಿನಲ್ಲಿ ಉಳಿಯುವ ಸುವಾಸನೆಗಳು ಹೊಂದಿರುವಂತಹ ವಿಶಿಷ್ಟವಾದ ಪ್ರಭಾವವನ್ನು ಹೊಂದಿದ್ದ ಆ ಹೂವು ತಾನು ಸೂಸಿದ ಸುವಾಸನೆಯ ಜೊತೆಯಲ್ಲಿ ಅಸಂಖ್ಯಾಕ ಹಳೆಯ ನೆನಪುಗಳನ್ನು ತಂದಿತು. "ನಿನ್ನಿಂದ ತುಂಬ ಉಪಕಾರವಾಯಿತು! ಇದರಿಂದ ನನಗೆ ಎಷ್ಟೋ ಒಳಿತಾಗಿದೆ. ಈ ಹೂವನ್ನು ನಾನು ಹೇಗೆ ಮೆಚ್ಚಿಕೊಳ್ಳುತ್ತಿದ್ದೆ ಎಂಬುದು ನನಗೆ ನೆನಪಿದೆ–ಎಂದರೆ, ಬಹಳ ಕಾಲದ ಹಿಂದೆ ಎಂದು ನನಗೆ ತೋರುತ್ತದೆ; ಇಲ್ಲವೆ ನಿನ್ನೆಯ ದಿನವೋ? ಒಂದೋ, ಈ ನೆನಪು ವಿಚಿತ್ರ ರೀತಿಯಲ್ಲಿ ವಿಶಿಷ್ಟವಾಗಿರಬೇಕು ಇಲ್ಲವೋ, ಈ ಅರಿವೇ ಅಪೂರ್ವರೀತಿಯಲ್ಲಿ ಮಸುಕಾಗಿರಬೇಕು! ಆದರೆ ಎಷ್ಟು ದಯಾಳು ಈ ಚೆಲುವೆ ಹುಡುಗಿ! ಒಳ್ಳೆಯದು, ತುಂಬ ಉಪಕಾರವಾಯಿತು ನಿನ್ನಿಂದ!"

ಈ ಚಿಕ್ಕ ಚೆಂಗುಲಾಬಿಯಿಂದ ದೊರೆತ ಪ್ರಿಯವಾದ ಭಾವೋದ್ರೇಕದಿಂದಾಗಿ, ಕ್ಲಿಫರ್ಡ್ ಪ್ರಾತಃಕಾಲದ ಉಪಾಹಾರಮಾಡುವಾಗ ಒಂದು ಕ್ಷಣಕಾಲವನ್ನು ಅತ್ಯಂತ ಸುಖದಿಂದ ಗೆಲುವಾಗಿ ಕಳೆಯಲು ಅವಕಾಶವಾಯಿತು. ಆ ಸುಖಾನುಭವ ಇನ್ನೂ ಕೆಲವು ಕಾಲ ಇರಬಹುದಾಗಿತ್ತು; ಆದರೆ ಆಮೇಲೆ ಬಹು ಬೇಗನೆ ಅವನ ಕಣ್ಣುಗಳು ವೃದ್ಧ ಪ್ಯೂರಿಟನ್ನನ ಮುಖದ ಮೇಲೆ ನೆಲಸಿದುವು; ಆ ವೃದ್ಧನು ತಾನಿದ್ದ ಚಿತ್ರದ ಮಾಸಿದ ಚೌಕಟ್ಟುಗಳ ಹಾಗೂ ಕಾಂತಿಹೀನವಾದ ಚಿತ್ರದ ರಟ್ಟುಬಟ್ಟೆಯ ಮೂಲಕ ಅತ್ಯಂತ ದುಷ್ಟ ಸ್ವಭಾವದ ಕೇಡು ಬಗೆಯುವ ಪ್ರೇತದ ಹಾಗೆ ಅಲ್ಲಿನ ದೃಶ್ಯವನ್ನು ಮೇಲಿನಿಂದ ನೋಡುತ್ತಿದ್ದನು. ಅತಿಥಿ ತಾಳ್ಮೆಗೆಟ್ಟವನಂತೆ ಕೈಯಾಡಿಸಿ, ಕುಟುಂಬವರ್ಗದಲ್ಲಿ ಎಲ್ಲರ ಮುದ್ದಿಗೆ ಒಳಗಾದವನು ಸಲಿಗೆ ವಹಿಸಿರೇಗುವಂತೆ ರೇಗಿ ಹೆಪ್ಸಿಬಾಳನ್ನು ಕುರಿತು ಮಾತಾಡಿದನು.

"ಹೆಪ್ಸಿಬಾ! ಹೆಪ್ಸಿಬಾ! ಅಸಹ್ಯವಾದ ಆ ಚಿತ್ರವನ್ನು ಅದೇಕೆ ಗೋಡೆಯಮೇಲೆ ಹಾಕಿಕೊಂಡಿರುವೆ? ಹೌದು! ಹೌದು! ನಿನ್ನ ಅಭಿರುಚಿ ನಿಜವಾಗಿ ಅಷ್ಟೇ. ನಾನು ನಿನಗೆ ಸಾವಿರಸಲ ಹೇಳಿದ್ದೇನೆ, ಅದು ನಮ್ಮ ಮನೆಯ ದುರ್ದೇವತೆ– ಮುಖ್ಯವಾಗಿ,

ಅತ್ಯಂತ ಪರಿಪೂರ್ಣಸ್ಥಿತಿಗೆ ಬರುವಂತೆ ತಿದ್ದಿಕೊಳ್ಳುವ ಸಾಧನವನ್ನು ಹೊಂದಿದ್ದರೂ ಆ ಸೂಕ್ಷ್ಮವಾದ ಗುಣವಿಶೇಷವು ಈ ಕಾಲಕ್ಕೆ ಮುಂಚೆಯೆ ಅವನ ರಾಗಭಾವಗಳನ್ನು ಪೂರ್ತಿಯಾಗಿ ನಾಶಪಡಿಸಿಬಿಟ್ಟಿರಬೇಕು, ಇಲ್ಲವೆ ಸಮೆಯಿಸಿಬಿಟ್ಟಿರಬೇಕು; ಇಂಥ ಅನೇಕ ಸಂದರ್ಭಗಳು ಸಂಭವಿಸಿವೆ. ಆದ್ದರಿಂದ, ಅವನ ಜೀವನ ದೀರ್ಘಕಾಲದ ಕರಾಳವಾದ ವಿಪತ್ತಿನ ತಳದಲ್ಲಿ ಅದರ ದುಷ್ಪಪ್ರಭಾವವನ್ನು ಕಡಮೆ ಮಾಡುವ ಕರುಣೆಯ ಹನಿಯೊಂದು ಇದ್ದಿರಲಾರದು ಎಂದು ನುಡಿಯುವ ಸಾಹಸವನ್ನು ಮಾಡೋಣವೆ?

"ಪ್ರಿಯ ಕ್ಲಿಫರ್ಡ್, ಆ ಶಬ್ದ ನಿನ್ನ ಕಿವಿಗೆ ಬೀಳದಂತೆ ಮಾಡಲು ನನಗೆ ಸಾಧ್ಯವಿದ್ದರೆ ಚೆನ್ನಾಗಿತ್ತು. ನನಗೆ ಕೂಡ ಅದನ್ನು ಸಹಿಸಲು ಸಾಧ್ಯವಿಲ್ಲ, ಅದಿರಲಿ, ಕ್ಲಿಫರ್ಡ್, ನಿನಗೆ ಹೇಳಬೇಕಾದ ಒಂದು ವಿಷಯ ಇದೆ, ನಿನಗೆ ಗೊತ್ತೆ? ಈ ವಿಕಾರವಾದ ಸದ್ದು– ಫೀಬೆ, ದಯವಿಟ್ಟು ಓಡಿಹೋಗಿ ನೋಡು, ಯಾರು ಬಂದಿದ್ದಾರೆ! ಚೇಷ್ಟೆ ಮಾಡುವ ಈ ಸಣ್ಣ ಝುಣಝುಣ ಸದ್ದು ಬೇರೆ ಯಾವುದೂ ಅಲ್ಲ, ನಮ್ಮ ಅಂಗಡಿಯ ಗಂಟೆ!" ಎಂದು ಹೆಪ್ಸಿಬಾ ತಾಳ್ಮೆಯಿಂದ ನುಡಿದಳು; ಅದರೆ ಖೇದಪೂರ್ಣವಾದ ಲಜ್ಜಾಭಾವದಿಂದ ಅವಳು ಕೆಂಪೇರಿದಳು.

"ಅಂಗಡಿಯ ಗಂಟೆ!" ಎಂದು ಕ್ಲಿಫರ್ಡ್ ಬೆರಗಿನ ನಟ್ಟನೋಟದಿಂದ ಅದೇ ಮಾತನ್ನು ಮತ್ತೆ ಉಚ್ಚರಿಸಿದನು.

"ಹೌದು, ನಮ್ಮ ಅಂಗಡಿಯ ಗಂಟೆ" ಎಂದಳು ಹೆಪ್ಸಿಬಾ; ಈಗ ಅವಳ ನಡೆವಳಿಕೆಯಲ್ಲಿ ಆಳವಾದ ಭಾವೋದ್ರೇಕದೊಡನೆ ಬೆರೆತ ಒಂದು ಬಗೆಯ ಸಹಜ ಗೌರವಭಾವ ಮೇಲುಗೈಯಾಗಿತ್ತು: "ಪ್ರಿಯ ಕ್ಲಿಫರ್ಡ್, ಇದು ನಿನಗೆ ಗೊತ್ತಿರಬೇಕು, ನಾವು ಬಹಳ ಬಡವರು. ನಮಗೆ ಬೇರೆ ಯಾವ ಉಪಾಯವೂ ಇರಲಿಲ್ಲ. ನಾವು ಒಂದು ಚೂರು ರೊಟ್ಟಿಗಾಗಿ ಹಾತೊರೆಯುತ್ತ ಸಾಯುತ್ತಿದ್ದಾಗ, ನಾನು ಪಕ್ಕಕ್ಕೆ ತಳ್ಳಿಬಿಡಬೇಕೆಂದು ಇಷ್ಟಪಡುವ ಕೈಯೆ (ನೀನು ಕೂಡ ಹಾಗೆಯೇ ಮಾಡಲು ಇಷ್ಟಪಡುವೆ) ಅದನ್ನು ನೀಡಬಂದಾಗ ಆ ಕೈಯಿಂದ ನಾನು ಸಹಾಯವನ್ನು ಸ್ವೀಕರಿಸಬೇಕು; ಅವನಿಂದ ಪಡೆಯದಿದ್ದರೆ, ಬೇರೆ ಸಹಾಯವೆ ಇಲ್ಲ; ಅದಿಲ್ಲವೋ, ನಮ್ಮ ಕೈಗಳಿಂದಲೇ ದುಡಿದು ನಮ್ಮ ಜೀವನಾಧಾರವನ್ನು ಸಂಪಾದಿಸಿಕೊಳ್ಳಬೇಕು! ಒಬ್ಬಳೇ ಆಗಿದ್ದರೆ ಉಪವಾಸವಿದ್ದರೂ ನನಗೆ ತೃಪ್ತಿಯೆನಿಸುತ್ತಿತ್ತು; ಆದರೆ ನೀನು ನನ್ನ ಬಳಿಗೆ ಹಿಂದಿರುಗಿ ಬರುವುದಿತ್ತು," ಎಂದು ಒಂದು ಶೋಚನೀಯವಾದ ಮುಗುಳುನಗೆಯನ್ನು ನಕ್ಕು, ಮುಂದುವರಿಸಿದಳು: "ಪ್ರಿಯ ಕ್ಲಿಫರ್ಡ್, ಹಾಗಿದ್ದ ಮೇಲೆ, ಮುಂದುಗಡೆಯ

ಮೇಲೆ ನಿದ್ರೆಯ ತೆರೆಯೊಂದು ಹರಡಿಕೊಂಡಿತು. ಬಿಸಿಲ ಸುಳಿವೂ ಇಲ್ಲದ ಮಂಜಿನ ಮಬ್ಬು ತೆರೆ ಭೂದೃಶ್ಯದ ಸ್ವರೂಪದ ಮೇಲೆ ಎಸಗುವಂತಹ ಪರಿಣಾಮವೊಂದನ್ನು ಆ ನಿದ್ರೆಯತೆರೆ ಸಹಜ ಕೋಮಲವಾದ ಸುಂದರವಾದ ಅವನ ಮುಖಾಕೃತಿಯ ಮೇಲೆ ಬೀರಿತು, ಆಗ ಅವನು ಹೆಚ್ಚು ಒರಟಾಗಿ– ಬಹುಮಟ್ಟಿಗೆ ಮಡ್ಡಿಯಂತೆ– ಕಂಡು ಬಂದನು. ಆಸಕ್ತಿ ಹುಟ್ಟಿಸುವ ಗುಣದ, ಇಲ್ಲವೆ ಸೌಂದರ್ಯದ– ಭಗ್ನ ಸೌಂದರ್ಯವಾದರೂ ಸರಿಯೆ– ಅಂಶವೇನಾದರೂ ಈ ವ್ಯಕ್ತಿಯಲ್ಲಿ ಈವರೆಗೆ ಕಂಡುಬಂದಿದ್ದರೆ, ಅದನ್ನು ನೋಡಿದವನು ತಾನು ನೋಡಿದ್ದುಂಟೇ ಎಂದು ಈಗ ಸಂದೇಹಪಡುತ್ತಿದ್ದನು; ಆ ಮುಖದ ಮೇಲೆ ಮಿನುಗಿದ್ದ ಯಾವುದೇ ಸೊಬಗಿನ ಮೂಲಕ, ಆ ಪೊರೆಗಟ್ಟಿದಂತಿದ್ದ ಆ ಕಣ್ಣುಗಳಲ್ಲಿ ಹೊಳೆದಿದ್ದ ಯಾವುದೇ ಸೊಗಸಾದ ಕಾಂತಿಯ ಮೂಲಕ ತನ್ನನ್ನು ವಂಚಿಸಿದ್ದ ತನ್ನ ಸ್ವಂತ ಕಲ್ಪನಾಶಕ್ತಿಯನ್ನೇ ನಿಂದಿಸಿಕೊಳ್ಳತೊಡಗಿದ್ದನು.

ಅವನು ಪೂರ್ತಿಯಾಗಿ ನಿದ್ರೆಯಲ್ಲಿ ಮುಳುಗುವ ಮುನ್ನ, ಅಂಗಡಿ ಗಂಟೆಯ ಕೀರಲು ಝಣತ್ಕಾರ ಕೇಳಿ ಬಂದಿತು. ಕ್ಲಿಫರ್ಡನ ಶ್ರವಣೇಂದ್ರಿಯಗಳಿಗೂ, ಸ್ವಾಭಾವಿಕವಾಗಿ ಸೂಕ್ಷ್ಮವಾದ ಅವನ ನರಗಳಿಗೂ ಅತ್ಯಂತ ಅಸಹನೀಯವಾಗುವಂತೆ ಅದು ಬಾರಿಸಿ, ಅವನು ಬೆಚ್ಚಿ ತನ್ನ ಕುರ್ಚಿಯಲ್ಲಿ ನೆಟ್ಟಗೆ ಕುಳಿತುಕೊಳ್ಳುವಂತೆ ಮಾಡಿತು.

"ಅಯ್ಯೋ ದೇವರೆ! ಹೆಪ್ಸಿಬಾ! ಏನು ಹಾಳು ಗಲಭೆ ಈ ಮನೆಯಲ್ಲಿ ಈಗ? ಇಂಥ ಅಸಹ್ಯ ಕೂಗಾಟವನ್ನು ನಾನು ಎಂದೂ ಕೇಳಿಲ್ಲ! ಅದಕ್ಕೆ ಯಾಕೆ ಅವಕಾಶ ಕೊಟ್ಟಿದ್ದೀಯೆ? ಇದು ಎಂಥ ಅಪಸ್ವರವಿದು?" ಎಂದು ಕೂಗಿಕೊಂಡು, ಪ್ರಪಂಚದಲ್ಲಿ ತನ್ನನ್ನು ಪ್ರೀತಿಸುತ್ತಿದ್ದ ಏಕಮಾತ್ರ ವ್ಯಕ್ತಿಯಮೇಲೆ ತನ್ನ ಅಸಮಾಧಾನಪೂರ್ಣವಾದ ಅಸಹನೆಯನ್ನು ತೋರಿಸಿ ತೀರಿಸಿಕೊಂಡನು; ಈ ನಡವಳಿಕೆ ಅವನಿಗೆ ಸರ್ವಸಾಮಾನ್ಯವಾಗಿದ್ದು, ಬಹು ಹಿಂದಿನ ಅಭ್ಯಾಸವಾಗಿತ್ತು. ಈ ಗಂಟೆಯ ಸದ್ದಿನ ಅತ್ಯಲ್ಪವಾದ ಕಿರುಕುಳದಿಂದ ಕ್ಲಿಫರ್ಡನ ಸ್ವಭಾವವು ಹೇಗೆ ಮೇಲಕ್ಕೆದ್ದು ಕಾಣುವಂತಾಯಿತು ಎಂಬ ಸಂಗತಿ– ಮಾಸಲು ಚಿತ್ರವೊಂದು ತನ್ನ ರಟ್ಟುಬಟ್ಟೆಯಿಂದ ತಟ್ಟನೆ ನೆಗೆದುಬಂದಷ್ಟೆ– ಬಹಳ ಗಮನಾರ್ಹವಾಗಿತ್ತು. ರಹಸ್ಯವೇನೆಂದರೆ, ಅವನ ಮನೋಧರ್ಮವುಳ್ಳ ವ್ಯಕ್ತಿಯನ್ನು ಅವನ ಹೃದಯದ ಮೂಲಕ ಪ್ರಚೋದಿಸುವುದಕ್ಕಿಂತ ಅವನ ಸೌಂದರ್ಯಭಾವನೆಯ ಮೂಲ, ಸಾಮರಸ್ಯ ದೃಷ್ಟಿಯ ಮೂಲಕ, ತೀಕ್ಷ್ಣ ತರವಾಗಿ ಯಾವಾಗಲೂ ಪ್ರಚೋದಿಸಲು ಸಾಧ್ಯ. ಒಂದು ವೇಳೆ ಕ್ಲಿಫರ್ಡ್ ತನ್ನ ಈ ಹಿಂದಿನ ಬದುಕಿನಲ್ಲಿ ತನ್ನ ಅಭಿರುಚಿಯನ್ನು

ಕರಗಿ ಕಣ್ಣೀರಾಯಿತು; ಅವಳ ಅಂತರಾತ್ಮದ ಆಳದಿಂದ ತಗ್ಗಾದ, ಮೃದುವಾದ, ಆದರೆ ಅನಿರ್ವಚನೀಯವಾಗಿ ದುಃಖಪೂರ್ಣವಾದ, ನರಳುವ ದನಿ ಹೊರಬಂದಿತು. ದುಃಖ ಕನಿಕರಗಳಲ್ಲಿ ಮುಳುಗಿದ್ದ ಅವಳು, ಅವನ ಮಾರ್ಪಟ್ಟ, ಮುದಿಯಾದ, ಕಳೆಗುಂದಿದ, ಅಂದಗೆಟ್ಟ ಮುಖವನ್ನು ಹಾಗೆ ದಿಟ್ಟಿಸಿ ನೋಡುವುದರಲ್ಲಿ ಅಗೌರವವೇನೂ ಇಲ್ಲ ಎಂದು ಭಾವಿಸಿದಳು. ಆದರೆ ಅವಳು ಸ್ವಲ್ಪ ಚೇತರಿಸಿಕೊಂಡಳೋ ಇಲ್ಲವೋ, ಈಗ ಅಷ್ಟೊಂದು ಮಾರ್ಪಟ್ಟ ಅವನನ್ನು ಕುತೂಹಲದಿಂದ ದಿಟ್ಟಿಸಿ ನೋಡಿದ್ದಕ್ಕಾಗಿ ಅವಲ ಆತ್ಮಸಾಕ್ಷಿ ಅವಳನ್ನು ತಟ್ಟಿತು; ಅವಳೂ ಆತುರವಾಗಿ ಬೇರೆಯ ಕಡೆಗೆ ತಿರುಗಿ, ಬಿಸಿಲು ಬರುತ್ತಿದ್ದ ಕಿಟಕಿಯಮೇಲೆ ತೆರೆಯೆಳೆದು, ಕ್ಲಿಫರ್ಡ್ ಚೆನ್ನಾಗಿ ನಿದ್ದೆಹೋಗಗೊಟ್ಟಳು.

* * * *

ಇಪ್ಪಾರಿನಲ್ಲಿ ಒಂದು ಸಣ್ಣ ಅಂಗಡಿಯನ್ನು ತೆರೆದು ಪೂರ್ವಕಾಲದ ಈ ಮನೆಗೆ ತೊಡೆಯಲಾಗದಂತಹ ಅಪಮಾನವನ್ನು ತಂದಿದ್ದೇನೆ ಎಂದು ನೀನು ಭಾವಿಸುತ್ತೀಯಾ? ನಮ್ಮ ಮುತ್ತಜ್ಜನ ಮುತ್ತಜ್ಜ ಮಾಡಿದ್ದಾದರೂ ಇದೆಯೆ; ಆಗ ಇಷ್ಟು ಆವಶ್ಯಕತೆಯೂ ಇರಲಿಲ್ಲ! ನನ್ನಿಂದಾಗಿ ನೀನು ನಾಚಿಕೆಪಡಬೇಕಾಗಿದೆಯೇನು?"

"ನಾಚಿಕೆ! ಅಪಮಾನ! ಈ ಮಾತುಗಳನ್ನು ನನಗೆ ಹೇಳುತ್ತಿದ್ದೀಯಾ, ಹೆಪ್ಸಿಬಾ?" ಎಂದು ಹೇಳಿದ ಕ್ಲಿಫರ್ಡ್, ಆದರೂ ಕೋಪಗೊಂಡಿರಲಿಲ್ಲ; ಏಕೆಂದರೆ, ಒಬ್ಬನ ಚೈತನ್ಯವನ್ನು ಸಂಪೂರ್ಣವಾಗಿ ದಮನಮಾಡಿದಾಗ, ಸಣ್ಣ ಸಣ್ಣ ಅಪರಾಧಗಳ ವಿಷಯದಲ್ಲಿಯೂ ಆತ ರೇಗಬಹುದು, ಆದರೆ ದೊಡ್ಡ ದೊಡ್ಡವುಗಳ ಬಗೆಗೆ ಎಂದೂ ಅಸಮಾಧಾನಗೊಳ್ಳನು. ಹೀಗಾಗಿ, ಅವನು ಮನೋಭಾವದಲ್ಲಿ ನೊಂದು ಮಾತ್ರ ನುಡಿದನು: "ಹಾಗೆ ಹೇಳಿದ್ದರಲ್ಲಿ ದಯೆ ಇರಲಿಲ್ಲ, ಹೆಪ್ಸಿಬಾ! ಈಗ ನನಗೆ ನಾಚಿಕೆಪಡುವಂಥದು ಏನು ತಾನೆ ಸಂಭವಿಸೀತು?"

ಬಳಿಕ, ಚೈತನ್ಯ ಉಡುಗಿದ ಅವನು–ಭೋಗಾನುಭವಕ್ಕೆಂದೇ ಹುಟ್ಟಿದ್ದು, ಅತ್ಯಂತ ನಿಕೃಷ್ಟವಾದ ಹೀನಸ್ಥಿತಿಗೆ ಇಳಿದಿದ್ದವನು– ಹೆಂಗಸರ ಹಾಗೆ ಭಾವೋದ್ರೇಕದಿಂದ ಕಣ್ಣೀರು ಸುರಿಸತೊಡಗಿದನು. ಆದರೆ, ಅತ್ತದ್ದು ಬಹು ಅತ್ಯಲ್ಪಕಾಲ; ಬೇಗನೆಯೇ ಶಾಂತನಾದನು; ಅವನ ಮುಖ ನೋಡಿ ಹೇಳುವುದಾದರೆ, ಅವನು ನೆಮ್ಮದಿಯನ್ನೂ ಹೊಂದಿದನು. ಈ ಮನೋಭಾವದಿಂದ ಕೂಡ ಒಂದು ಕ್ಷಣಕಾಲ ಅವನು ಸ್ವಲ್ಪಮಟ್ಟಿಗೆ ವಿಮುಕ್ತನಾದನು; ಹೆಪ್ಸಿಬಾಳನ್ನು ಮುಗುಳುನಗೆಯೊಂದಿಗೆ ನೋಡಿದನು; ಆ ನಗೆಯ ಅರ್ಧ ತಿರಸ್ಕಾರದ ಚುಚ್ಚುವ ಭಾವ ಅವಳ ಪಾಲಿಗೆ ಒಂದು ಒಗಟೆಯಾಯಿತು.

"ನಾವು ಅಷ್ಟೊಂದು ದರಿದ್ರರೆ, ಹೆಪ್ಸಿಬಾ?" ಎಂದನು ಅವನು.

ಅವನು ಕುಳಿತಿದ್ದ ಕುರ್ಚಿ ತಗ್ಗಾಗಿದ್ದು, ಅದಕ್ಕೆ ಮೃದುವಾದ ಮೆತ್ತೆಯನ್ನು ಹಾಕಿತ್ತು; ಕಟ್ಟ ಕಡೆಯಲ್ಲಿ, ಅವನು ಅದರಲ್ಲಿ ಹಾಗೆಯೇ ನಿದ್ದೆಹೋದನು. ಆಗ ಅವನ ಉಸಿರಾಟದ ಏರಿಳಿತ ಹೆಚ್ಚು ಕ್ರಮವಾಗಿತ್ತು (ಆದಾಗ್ಯೂ, ಆಗಲೂ ಕೂಡ ಅದು ಬಲವಾಗಿ, ತುಂಬಿಕೊಂಡಿರಲಿಲ್ಲ; ಅವನ ಸ್ವಭಾವದಲ್ಲಿದ್ದ ಸತ್ವಾಭಾವಕ್ಕೆ ಅನುಗುಣವಾಗಿ ದುರ್ಬಲವಾದ ಕಂಪನದಿಂದ ಕೂಡಿತ್ತು)– ನಿದ್ರೆ ಹತ್ತಿದ್ದಕ್ಕೆ ಇದು ಗುರುತಾಗಿತ್ತು; ಇದನ್ನು ಕಂಡ ಹೆಪ್ಸಿಬಾ ಅವನ ಮುಖವನ್ನು ಹೆಚ್ಚು ಗಮನಿಸಿ ನೋಡಲು ಆ ಅವಕಾಶವನ್ನು ಉಪಯೋಗಿಸಿಕೊಂಡಳು; ಈವರೆಗೆ ಹಾಗೆ ಗಮನಿಸಿ ನೋಡುವ ಧೈರ್ಯಮಾಡಿರಲಿಲ್ಲ ಅವಳು. ಅವಳ ಹೃದಯ

ಬಾಗಿಲನ್ನು ಅರ್ಧ ಮುಚ್ಚಿದಮೇಲೆ, ಆ ಹುಡುಗ ಹಿಂದಿರುಗಿ ಫೀಬೆಗೆ ಏನೋ ಗೊಣಗುಟ್ಟಿದನು; ಆ ತಿಮಿಂಗಿಲವು ಅರ್ಧಮಟ್ಟಿಗೆ ಸಾಗಿದ್ದರಿಂದ, ಅವನು ಏನು ಹೇಳಿದನೆಂಬುದನ್ನು ಅವಳು ಪೂರ್ಣವಾಗಿ ಅರ್ಥಮಾಡಿಕೊಳ್ಳಲಾರದೆ ಹೋದಳು.

"ಅಪ್ಪಾ ಮಗೂ, ನೀನು ಏನು ಹೇಳಿದೆ?" ಎಂದು ಅವಳು ಕೇಳಿದಳು.

ನೆಡ್ ಹಿಗ್ಗಿನ್ಸ್ ಸ್ವಲ್ಪ ಹೆಚ್ಚು ಸ್ಪಷ್ಟವಾಗಿ ಮತ್ತೆ ಹೇಳಿದ: "ಮದುವೆಯಾಗದೆ ಇರೋ ಹಿರಿಯ ಮುತ್ತೈದೆ ಪಿನ್ಚನ್ ಅವರ ತಮ್ಮ ಇದ್ದಾರಲ್ಲ, ಅವರು ಹೇಗಿದ್ದಾರೆ ಎಂದು ನಮ್ಮ ತಾಯಿ ಕೇಳಿದರು. ಅವರು ಮನೆಗೆ ಬಂದಿದ್ದಾರೆ ಅಂತ ಜನ ಹೇಳುತ್ತಾ ಇದಾರೆ."

"ನನ್ನ ಅಕ್ಕ ಹೆಪ್ಸಿಬಾ ಅವರ ತಮ್ಮಂದಿರೆ!" ಎಂದು ಫೀಬೆ ಉದ್ಗರಿಸಿದಳೂ; ಹೆಪ್ಸಿಬಾ ಮತ್ತು ಅವಳ ಅತಿಥಿಯ ನಡುವಣ ಸಂಬಂಧದ ವಿವರಣೆ ಹೀಗೆ ತಟ್ಟನೆ ತಿಳಿದುಬಂದು ಅವಳು ಬೆರಗಾದಳು: "ಅವರ ತಮ್ಮಂದಿರೆ! ಆತ ಎಲ್ಲಿದ್ದಾರೆ?"

ಆ ಪುಟ್ಟ ಹುಡುಗ ಚುರುಕುಬುದ್ಧಿಯ ನೋಟವನ್ನು ಬೀರುತ್ತಾ ತನ್ನ ಹೆಬ್ಬೆರಳನ್ನು ತನ್ನ ಅಗಲವಾದ ಚಪ್ಪಟೆ ಮೂಗಿನ ಕೆಳಕ್ಕೆ ಇಟ್ಟುಕೊಂಡನು; ಬಹಳ ಹೊತ್ತನ್ನು ಬೀದಿಯಲ್ಲಿಯೇ ಕಳೆಯುವ ಇಂಥ ಮಕ್ಕಳು ತಾವು ನಿಜವಾಗಿ ಎಷ್ಟೇ ದಡ್ಡರಾಗಿರಲಿ ಬಹು ಬುದ್ಧಿವಂತರೆಂದು ಕಾಣುವ ರೀತಿಯಲ್ಲಿ ಮುಖಭಾವವನ್ನು ಈ ರೀತಿ ಮಾರ್ಪಡಿಸಿಕೊಳ್ಳುವುದನ್ನು ಬಹುಬೇಗ ಕಲಿತುಬಿಡುತ್ತಾರೆ. ಆ ಬಳಿಕ, ಅವನ ತಾಯಿ ಹೇಳಿ ಕಳಿಸಿದ್ದ ಮಾತಿಗೆ ಉತ್ತರವನ್ನೇ ಕೊಡದೆ ಫೀಬೆ ಇನ್ನೂ ಹಾಗೆಯೇ ಅವನನ್ನು ದಿಟ್ಟಿಸಿ ನೋಡುತ್ತಿದ್ದಾಗ, ಅವನು ಹೊರಟುಬಿಟ್ಟನು.

ಆ ಹುಡುಗ ಇತ್ತ ಮೆಟ್ಟಲುಗಳನ್ನು ಇಳಿದುಹೋಗುತ್ತಿದ್ದ. ಅತ್ತ ದೊಡ್ಡಮನುಷ್ಯನೊಬ್ಬನು ಮೆಟ್ಟಲುಗಳನ್ನು ಹತ್ತಿಬಂದು, ಅಂಗಡಿಯನ್ನು ಪ್ರವೇಶಿಸಿದನು. ತಕ್ಕಮಟ್ಟಿಗೆ ಇಳಿವಯಸ್ಸಿನಲ್ಲಿದ್ದ ಅವನು ಸ್ಥೂಲಕಾಯನಾಗಿದ್ದನು; ಅವನ ಆಕೃತಿಗೆ ಇನ್ನಷ್ಟು ಎತ್ತರವೂ ಸೇರಿದ್ದರೆ ಅದು ಭವ್ಯವಾಗಿಯೂ ಇರುತ್ತಿದ್ದಿತು. ಬಹುಮಟ್ಟಿಗೆ ಬನಾತುಬಟ್ಟೆಯನ್ನು ಹೋಲುತ್ತಿದ್ದ, ಯಾವುದೋ ತೆಳ್ಳನೆಯ ಬಟ್ಟೆಯ ಕರಿಯ 'ಸೂಟ'ನ್ನು ಧರಿಸಿದ್ದನಾತ. ಬಹು ವಿರಳವಾದ, ಪೂರ್ವದೇಶಗಳ ಮರದಿಂದ ಮಾಡಿದ್ದ ಬಂಗಾರದ ಹಿಡಿಯ ಬೆತ್ತ, ಹಿಮಧಾವಳ್ಯದಷ್ಟು ಪರಿಶುದ್ಧವಾದ ಕರವಸ್ತ್ರ, ಬೂಡ್ಸುಗಳಿಗೆ ಬಹು ಎಚ್ಚರಿಕೆಯಿಂದ ಕೊಟ್ಟಿದ್ದ ಮೆರಗು– ಇವೆಲ್ಲಾ ಅವನ ಒಟ್ಟಿನ ಸ್ವರೂಪಕ್ಕೆ ಉಚ್ಚವಾದ ಘನಗಾಂಭೀರ್ಯವನ್ನು ನೀಡಿದ್ದುವು.

# ೮. ಇಂದಿನ ಪಿನ್ಚನ್

ಅಂಗಡಿಯನ್ನು ಪ್ರವೇಶಿಸಿ ಕೂಡಲೇ ಫೀಬೆ ತನಗೆ ಆಗಲೇ ಪರಿಚಿತನಾಗಿದ್ದ ಆ ಕಿರಿಯ ಸರ್ವಭಕ್ಷಕನ– ಅವನ ಅಗಾಧಕಾರ್ಯಗಳನ್ನು ನಾವು ಸರಿಯಾಗಿ ಗ್ರಹಿಸಬಲ್ಲೆವಾದರೆ– 'ಜಿಂ ಕ್ರೋ', ಆನೆ, ಒಂಟೆ, ರೈಲುಬಂಡಿ ಇವನ್ನೆಲ್ಲಾ ನುಂಗಿದ್ದ ಆ ಸರ್ವಭಕ್ಷಕನ ಮುಖವನ್ನು ಕಂಡಳು. ಎಂದೂ ಯಾರೂ ಕಿವಿಯಿಂದ ಕೇಳಿರದ, ಈ ಮೇಲ್ಕಂಡ ಭೋಗವಸ್ತುಗಳನ್ನು ಕೊಳ್ಳುವುದರಲ್ಲಿ ಹಿಂದಿನ ಎರಡು ದಿನವೂ ಅವನು ತನ್ನ ಸ್ವಂತ ನಿಧಿಯನ್ನು ವ್ಯಯಮಾಡಿಬಿಟ್ಟಿದ್ದನು; ಈ ಕಿರಿಯ ಮಹಾಶಯನ ಸದ್ಯದ ಕಾರ್ಯಭಾರವು ಅವನ ತಾಯಿಯ ಪರವಾಗಿತ್ತು; ಆಕೆಗೆ ಮೂರು ಮೊಟ್ಟೆಗಳೂ ಅರ್ಧ ಪೌಂಡು ದ್ವೀಪದ್ರಾಕ್ಷಿಯೂ ಬೇಕಾಗಿದ್ದುವು. ಅದರಂತೆ, ಈ ಪದಾರ್ಥಗಳನ್ನು ಫೀಬೆ ಸರಬರಾಯಿ ಮಾಡಿದಳು; ಮತ್ತು ಅವನು ಈ ಹಿಂದೆ ನೀಡಿದ್ದ ಉದಾರಾಶ್ರಯಕ್ಕೆ ಕೃತಜ್ಞತೆಯನ್ನು ಸಲ್ಲಿಸುವ ಗುರುತಾಗಿ, ಬೆಳಗಿನ ಉಪಹಾರಕ್ಕೆ ಒಂದು ಮೇಲುತುತ್ತಿನ ಕೊಸರಾಗಿ, ಅವನ ಕೈಗೆ ಒಂದು ತಿಮಿಂಗಿಲವನ್ನು ಹಾಕಿದಳು. ಆ ಮಹಾಮತ್ಸ್ಯವು, ನಿನೆವೆಯ (Nineveh) ಪ್ರವಾದಿಯೊಂದಿಗೆ ತಾನು ಹೊಂದಿದ್ದ ಅನುಭವವನ್ನು ವ್ಯತ್ಯಯಮಾಡಿ, ತನಗಿಂತ ಹಿಂದೆ ಸಾಗಿಹೋಗಿದ್ದ 'ಕಾರವಾನೆ' ತಂಡವು† ಹಿಡಿದಿದ್ದ ಅದೇ ಕೆಂಪಾದ ಭಾಗ್ಯಪಥವನ್ನು ಅನುಸರಿಸಿ ತನ್ನ ಅಧೋಮುಖವಾದ ಮುನ್ನಡೆಯನ್ನು ಪ್ರಾರಂಭಿಸಿದ್ದಿತು. ವಾಸ್ತವವಾಗಿ, ಈ ಅಪೂರ್ವಬಾಲಕನು ಕಾಲಪಿತಾಮಹನ ಯಥಾರ್ಥ ಪ್ರತೀಕವಾಗಿದ್ದನು; ಮನುಷ್ಯರನ್ನೂ ಪದಾರ್ಥಗಳನ್ನೂ ಬಿಡದೆ ತಿನ್ನುವ ವಿಚಾರದಲ್ಲಿ ಇಬ್ಬರಿಗೂ ಒಂದೇ ವಿಧವಾದ ಸರ್ವಭಕ್ಷಣಶೀಲವಾದ ಕ್ಷುಧೆ; ಅಂತೆಯೆ, ಅವನೂ ಕಾಲ ಪುರುಷನೂ ಸೃಷ್ಟಿಯ ಅಷ್ಟು ಭಾಗವನ್ನು ನುಂಗಿದಮೇಲೆಯೂ ಆಗತಾನೆ ನಿರ್ಮಾಣವಾದವರಂತೆ ಅಷ್ಟೇ ಎಳೆಯರಾಗಿ ಕಾಣುತ್ತಿದ್ದರು.

---

† ಮರಳುಗಾಡುಗಳಲ್ಲಿ ಒಟ್ಟಿಗೆ ಪ್ರಯಾಣಮಾಡುವ ವರ್ತಕರು, ಯಾತ್ರಿಕರು, ಮೊದಲಾದವರ ತಂಡದ ಸಾಲು.

ಮೊದಲು ಅವನು ಹುಬ್ಬು ಗಂಟಿಕ್ಕಿದನು; ಅನಂತರ ಹಿಂದೆ ಎಂದೇ ಆಗಲಿ ಮರೆದಿದ್ದುದಕ್ಕಿಂತ ಹೆಚ್ಚು ಕೃತಕನಯದ ಔದಾರ್ಯದಿಂದ ಮುಗುಳುನಗೆ ಬೀರಿದನು.

"ಆಹಾ, ಸಂದರ್ಭ ಹೇಗಿದೆ ಎಂದು ತಿಳಿಯಿತು!" ಎಂದು ಆತ ದಪ್ಪ ದನಿಯಲ್ಲಿ ಹೇಳಿದನು; ಅಸಂಸ್ಕೃತದ ಗಂಟಲಿಂದ ಹೊರಬಂದಿದ್ದರೆ ಅದು ಒರಟುದನಿ ಎನಿಸಿಕೊಳ್ಳುತ್ತಿತ್ತು; ಆದರೆ ಎಚ್ಚರಿಕೆಯಿಂದ ಅದನ್ನು ತಿದ್ದಿದ್ದುದರಿಂದ ಅದು ಈಗ ಸಾಕಷ್ಟು ಹಿತಕರವಾಗಿತ್ತು: "ಮಿಸ್ ಹೆಪ್ಸಿಬಾ ಪಿನ್ಚನ್ ಇಂತಹ ಅನುಕೂಲವಾದ ಸನ್ನಿವೇಶದಲ್ಲಿ ವ್ಯಾಪಾರವನ್ನು ಪ್ರಾರಂಭಿಸಿರುವಳೆಂಬ ಸಂಗತಿ ನನಗೆ ತಿಳಿದಿರಲಿಲ್ಲ. ನೀನು ಆಕೆಯ ಸಹಾಯಕಳು, ಅಲ್ಲವೆ?"

"ಹೌದು, ನಾನು ಆಕೆಗೆ ಸಹಾಯಮಾಡುತ್ತೇನೆ" ಎಂದು ಫೀಬೆ ಉತ್ತರಕೊಟ್ಟಳು; ತಾನೂ ಶ್ರೀಮಂತೆ ಎಂಬ ಭಾವನೆಯನ್ನು ಕೊಂಚಮಟ್ಟಿಗೆ ತೋರ್ಪಡಿಸುತ್ತಾ ಮುಂದುವರಿಸಿ ಹೇಳಿದಳು: "ನಾನು ಮಿಸ್ ಹೆಪ್ಸಿಬಾ ಅವರ ತಂಗಿ, ಎಂದರೆ ಸೋದರ ಸಂಬಂಧದವರ ಮಗಳು, ಅವರನ್ನು ನೋಡಿಕೊಂಡು ಹೋಗಲು ಬಂದಿದ್ದೇನೆ. (ಆ ದೊಡ್ಡ ಮನುಷ್ಯನು ಅವಳನ್ನು ಮರ್ಯಾದೆಯಿಂದಲೇ ಮಾತನಾಡಿಸಿದ್ದನು; ಆದರೆ ಅವಳು ಕೂಲಿಗಾಗಿ ಕೆಲಸ ಮಾಡುತ್ತಿದ್ದ ಚಿಕ್ಕಹುಡುಗಿ ಎಂದು ತಿಳಿದಿದ್ದುದು ಸ್ಪಷ್ಟ.)

"ಆಕೆಯ ತಂಗಿಯ ಸಂಬಂಧದವಳು– ಹಳ್ಳಿಗಾಡಿನಿಂದ ಬಂದಿದ್ದೀಯೆ? ಹಾಗಿದ್ದ ಮೇಲೆ, ನಾನು ಹಾಗೆ ಹೇಳಿದ್ದು ತಪ್ಪಾಯಿತು" ಎಂದು ಆ ದೊಡ್ಡ ಮನುಷ್ಯನು ಮರ್ಯಾದೆಯಿಂದ ಮಣಿಯುತ್ತಾ, ಮುಗುಳುನಗೆ ನಗುತ್ತಾ ನುಡಿದನು; ಈ ಹಿಂದೆ ಫೀಬೆಗೆ ಯಾರೂ ಹಾಗೆ ಬಾಗಿ ನಮಸ್ಕಾರಮಾಡಿರಲಿಲ್ಲ, ಮುಗುಳುನಗೆ ನಕ್ಕಿರಲಿಲ್ಲ. "ಆ ಸಂದರ್ಭದಲ್ಲಿ ನಾವು ಪರಸ್ಪರ ಚೆನ್ನಾಗಿ ಪರಿಚಯಮಾಡಿಕೊಳ್ಳಬೇಕು; ಏಕೆಂದರೆ, ನನ್ನ ಭಾವನೆ ತಪ್ಪಾಗಿರುವ ಪಕ್ಷಕ್ಕೆ, ನೀನೂ ಅದೇರೀತಿ ನನ್ನ ಸ್ವಂತ ಪುಟ್ಟ ನಂಟಳೇ ಆಗಬೇಕು! ಯಾರಾಗಿರಬಹುದು, ನೋಡೋಣ– ಮೇರಿಯೆ? ಡಾಲಿಯೆ? ಫೀಬೆಯೆ? ಹೌದು, ಫೀಬೆಯ ಆ ಹೆಸರು! ನನ್ನ ಸೋದರಸಂಬಂಧದವನು, ಸಹಪಾಠಿ ಆರ್ಥರ್, ಅವನ ಒಬ್ಬಳೇ ಮಗಳು, ಫೀಬೆ ಪಿನ್ಚನ್– ಅವಳು ನೀನೇ ಏನು? ನಿನ್ನ ಬಾಯಿಯನ್ನು ನೋಡಿದರೆ, ನಿನ್ನ ತಂದೆ ಎಲ್ಲಿ ಎನ್ನುವ ಹಾಗಿಲ್ಲ! ನಾನು ನಿನ್ನ ಬಂಧು, ತಾಯೀ, ಜಡ್ಜ್ ಪಿನ್ಚನ್ನನ ಹೆಸರನ್ನು ನೀನು ಖಂಡಿತ ಕೇಳಿರಬೇಕಲ್ಲಾ?"

"ಫೀಬೆ ಪ್ರತಿಯಾಗಿ ಸೊಂಟಬಗ್ಗಿಸಿ ಮರ್ಯಾದೆ ತೋರಿಸಿದಳು: ಆಗ

ಅವನ ಶ್ಯಾಮಲವಾದ ಚಚ್ಚೌಕನೆಯ ಮುಖವು ತನ್ನ ದಟ್ಟವಾದ ಕುರುಚು ಹುಬ್ಬಿನೊಂದಿಗೆ ಸಹಜವಾಗಿಯೇ ಪರಿಣಾಮಕಾರಿಯಾಗಿ ಕಾಣುತ್ತಿತ್ತು; ಅದು ತಕ್ಕಮಟ್ಟಿಗೆ ಕಠಿನವಾಗಿಯೂ ತೋರಬಹುದಾಗಿತ್ತು; ಆದರೆ ಆತನು ಅತ್ಯಂತ ಹರ್ಷ ಚಿತ್ತದ ಹಾಗೂ ಔದಾರ್ಯದ ನೋಟವನ್ನು ಪ್ರಯತ್ನಪೂರ್ವಕವಾಗಿ ತಂದುಕೊಂಡು, ಆ ಕಠಿನತೆಯನ್ನು ಕಡಮೆ ಮಾಡಿಕೊಂಡಿದ್ದನು. ಆದರೂ ಅವನ ಮುಖದ ಕೆಳಪ್ರದೇಶದಲ್ಲಿ ತಕ್ಕಮಟ್ಟಿಗೆ ಭಾರಿಯಾದ ಪ್ರಮಾಣದಲ್ಲಿ ಮಾಂಸದ ಮುದ್ದೆ ಶೇಖರವಾಗಿದ್ದ ಪ್ರಯುಕ್ತ, ಅವನ ಮುಖದನೋಟ ಅಂತರಂಗ ಚೈತನ್ಯದ ಕಳೆಯನ್ನು ಬೀರುವುದಕ್ಕಿಂತ ಹೆಚ್ಚಾಗಿ ಮೇಲುಮೇಲಿನ ಕೃತಕವಾದ ನಯವನ್ನು ಬೀರುತ್ತಿದ್ದಿತು; ಅಲ್ಲದೆ, ಅದು ಒಂದು ವಿಧವಾದ ಮಾಂಸಖಂಡದ ಮೆರುಗನ್ನೂ ಪಡೆದಿದ್ದಿತು; ಒಟ್ಟಿನಲ್ಲಿ ಆ ನೋಟ ಅವನು ಭಾವಿಸಿಕೊಂಡಿದ್ದಂತೆ ತೃಪ್ತಿಕರವಾಗಿರಲಿಲ್ಲ. ಆ ಮುಖಭಾವವು ಆತ್ಮದ ಔದಾರ್ಯದ ಬಾಹ್ಯಪ್ರತಿಬಿಂಬ ಎಂಬ ಎಣಿಕೆಯಿದ್ದಿತು; ಅದು ಹೇಗಿದ್ದರೂ, ಸೂಕ್ಷ್ಮಗ್ರಾಹಿಯಾದ ನೋಟಕನಿಗೆ ಆ ಔದಾರ್ಯಕ್ಕೆ ಯಾವ ಸಾಕ್ಷ್ಯದ ಲವಲೇಶವೂ ಆ ಮುಖಭಾವದಲ್ಲಿ ದೊರಕುತ್ತಿರಲಿಲ್ಲ. ಆ ನೋಟಕನು ಸೂಕ್ಷ್ಮಗ್ರಾಹಿಯಾಗಿರುವುದರ ಜೊತೆಗೆ ಕುಚೇಷ್ಟೆಯ ಸ್ವಭಾವದವನೂ ಆಗಿದ್ದಿದ್ದರೆ, ಆ ದೊಡ್ಡಮನುಷ್ಯನ ಮುಖದಮೇಲಿನ ಮುಗುಳುನಗೆಗೂ ಅವನ ಬೂಡ್ಸಿನ ಮೇಲಿನ ಹೊಳಪಿಗೂ ನಿಕಟಬಾಂಧವ್ಯ ವಿದ್ದಿರಬೇಕೆಂದು ಬಹುಶಃ ಸಂಶಯಪಡುತ್ತಿದ್ದನು; ಅಲ್ಲದೆ ಆ ಮುಗುಳುನಗೆಯನ್ನು ಬರಿಸಿಕೊಳ್ಳುವುದಕ್ಕೆ ಅವನಿಗೆ ಅಪಾರ ಶ್ರಮವೂ, ಬೂಡ್ಸುಗಳನ್ನು ಕಾಪಾಡುವುದಕ್ಕೆ ಬೂಡ್ಸಿನ ಕಪ್ಪುಬಣ್ಣಕ್ಕೆ ಅಪಾರಬೆಲೆಯೂ ಆಗುತ್ತಿದ್ದುವು ಎಂದೂ ಆ ನೋಟಕನು ಸಂಶಯಪಡುತ್ತಿದ್ದನು.

ಆ ಆಗಂತುಕನು ಚಿಕ್ಕ ಅಂಗಡಿಯನ್ನು ಪ್ರವೇಶಿಸುತ್ತಿದ್ದಂತೆ, ಎರಡನೆಯ ಅಂತಸ್ತಿನ ಮುಂಚಾಚೂ ಎಲ್ಮ್‌ವೃಕ್ಷದ ದಟ್ಟವಾದ ಎಲೆಗುಂಪಲೂ ಕಿಟಕಿಯ ಬಳಿಯಿದ್ದ ಮಾರಾಟದ ಸರಕೂ ಒಂದು ವಿಧವಾದ ಬೂದುಬಣ್ಣದ ಮಾಧ್ಯಮವನ್ನು ಸೃಷ್ಟಿಸಿದ್ದುವು: ಆಗ ಅವನು ಅಲ್ಲಿನ ಎಲ್ಲ ವಾತಾವರಣದ ಮಂಕನ್ನೂ (ಜೊತೆಗೆ ಹೆಪ್ಸಿಬಾಳ ಹಾಗೂ ಅವಳ ಜೊತೆ ಮನೆಯಲ್ಲಿ ಇದ್ದವರ ಯಾವುದೇ ನೈತಿಕವಾದ ಮಂಕನ್ನೂ) ತನ್ನ ಮುಖದ ತೇಜಸ್ಸಿನ ನೆರವಿಲ್ಲದೆಯೇ ಹೋಗಲಾಡಿಸಲು ಮನಸ್ಸು ಮಾಡಿದ್ದನೋ ಎಂಬಂತೆ, ಅವನ ಮುಗುಳುನಗೆ ತೀವ್ರವಾಯಿತು. ಮುದಿಕನ್ಯೆಯ ಬಡ ಕಲುತನವನ್ನು ಕಾಣುವೆಡೆಯಲ್ಲಿ ಗುಲಾಬಿಯ ಮೊಗ್ಗಿನಂತಿದ್ದ ಬಾಲಿಕೆಯನ್ನು ಕಂಡು, ಅವನಲ್ಲಿ ಬೆರಗಿನ ನೋಟ ಮೂಡಿತು.

ಅತ್ಯಾಸಕ್ತಿಯುಳ್ಳದ್ದೆನಿಸುವುದು. ನ್ಯಾಯಮೂರ್ತಿಯ ಇಂತಹ ಭಾವಪ್ರದರ್ಶನಗಳಲ್ಲಿ, ಅದು ಹೇಗೋ ಏನೋ, ಅಂತೂ ಪುರುಷಸ್ವಭಾವ, ಲೈಂಗಿಕ ಪ್ರವೃತ್ತಿ, ಅತ್ಯಂತ ಪ್ರಮುಖವಾಗಿಬಿಡುತ್ತಿತ್ತು. ಫೀಬೆಯ ಕಣ್ಣುಗಳು ಕುಸಿದವು; ಕಾರಣ ಗೊತ್ತಿಲ್ಲದೆಯೆ, ಅವನು ತನ್ನನ್ನು ನೋಡುತ್ತಿದ್ದಾಗ ತಾನು ಗಾಢವಾಗಿ ನಾಚಿ ಕೆಂಪೇರುತ್ತಿರುವೆಂದು ಅವಳಿಗೆನ್ನಿಸಿತು. ಆದರೂ, ಈ ಹಿಂದೆ ಸುಮಾರು ಆರೇಳುಮಂದಿ ಸೋದರಸಂಬಂಧದ ಗಂಡಸರು ಅವಳನ್ನು ಮುತ್ತಿಟ್ಟಿದ್ದಾಗ ಅವಳು ಎಂದೂ ಜುಗುಪ್ಸೆಪಟ್ಟಿರಲಿಲ್ಲ; ಅವರಲ್ಲಿ ಈ ಕಪ್ಪುಹುಬ್ಬಿನ, ನರೆತ ಗಡ್ಡದ, ಬಿಳಿಪು ಕಂಠ ವಸ್ತ್ರವುಳ್ಳ, ಕೃತಕನಯದ, ಉದಾರಶೀಲದ ನ್ಯಾಯ ಮೂರ್ತಿಗಿಂತ ಚಿಕ್ಕವರೂ ಇದ್ದರು, ದೊಡ್ಡವರೂ ಇದ್ದರು! ಹಾಗಿದ್ದ ಮೇಲೆ, ಅವನು ಮುತ್ತಿಟ್ಟರೇನು ಬಾಧಕ?

ಫೀಬೆ ಕಣ್ಣುಗಳನ್ನು ಎತ್ತಿ ನೋಡಿದಾಗ, ನ್ಯಾಯಮೂರ್ತಿ ಪಿನ್ಚನ್ನನ ಮುಖದಲ್ಲಿ ಆಗಿದ್ದ ಪರಿವರ್ತನೆಯನ್ನು ಕಂಡು ಅವಳು ಚಕಿತಗೊಂಡಳು. ಹೊಂಬಿಸಿಲು ಹರಡಿರುವ ಭೂದೃಶ್ಯಕ್ಕೂ ಬಿರುಗಾಳಿ ಮಳೆ ಬರುವುದಕ್ಕೆ ತುಸ ಮುಂಚೆ ಕಾಣುವ ಭೂದೃಶ್ಯಕ್ಕೂ ಇರುವ ವ್ಯತ್ಯಾಸದಷ್ಟೇ ಗಮನಾರ್ಹವಾಗಿತ್ತು ಆ ಮುಖದಲ್ಲಿನ ವ್ಯತ್ಯಾಸ, ಪ್ರಮಾಣ ಮಾತ್ರ ಬೇರೆ ಬೇರೆ, ಅಷ್ಟೆ. ಎಂದಮಾತ್ರಕ್ಕೆ, ಬಿರುಗಾಳಿ ಮಳೆಯ ಭೂದೃಶ್ಯದ ಸ್ವರೂಪದ ಉಗ್ರತೆ ಮುಖದಲ್ಲಿ ಇದ್ದಿತೆಂದಲ್ಲ; ದಿನಪೂರ್ತಿ ಚಲಿಸದೆ ನಿಂತಿರುವ ಮೋಡದಂತೆ, ಭಾವಶೂನ್ಯವಾಗಿ, ಕಠಿನವಾಗಿ, ತೀಕ್ಷ್ಣತೆಯನ್ನು ತಗ್ಗಿಸಲಾಗದಂತೆ ಇದ್ದಿತು.

"ಅಯ್ಯೋ ದೇವರೆ, ಈಗ ಏನು ಮಾಡಲಿ?" ಎಂದು ಆ ಹಳ್ಳಿಯ ಹುಡುಗಿ ತನ್ನಲ್ಲಿ ತಾನು ಆಲೋಚಿಸಿದಳು. "ಅವನ ಆಂತರ್ಯದಲ್ಲಿ ಬಂಡೆಗಿಂತ ಮೃದುವಾದದ್ದು, ಪೂರ್ವದ ಗಾಳಿಗಿಂತ ಸೌಮ್ಯವಾದದ್ದು ಏನೂ ಇಲ್ಲವೇನೋ ಎಂಬಂತೆ ಕಾಣುತ್ತಿದ್ದಾನೆ ಅವನು! ನಾನು ಅವನಿಗೆ ಏನೂ ಕೇಡು ಬಗೆಯಲಿಲ್ಲವಲ್ಲ! ಆತ ನಿಜವಾಗಿಯೂ ನನ್ನ ಸೋದರ ಸಂಬಂಧದವನಾದ್ದರಿಂದ, ಸಾಧ್ಯವಾಗಿದ್ದರೆ ಅವನು ನನ್ನನ್ನು ಮುತ್ತಿಡಲು ಅವಕಾಶ ಕೊಡುತ್ತಿದ್ದೆ!"

ಆಗ, ಇದ್ದಕ್ಕಿದ್ದ ಹಾಗೆಯೇ, ಛಾಯಾಚಿತ್ರ ಕಲಾವಿದನು ತನಗೆ ತೋಟದಲ್ಲಿ ತೋರಿಸಿದ್ದ ಸೂಕ್ಷ್ಮಾಕಾರದ ಚಿತ್ರದ ಮೂಲವ್ಯಕ್ತಿ ಈ ಇದೇ ಜಡ್ಜ್ ಪಿನ್ಚನ್ನನೆಂದು ಅವಳಿಗೆ ಹೊಳೆಯಿತು; ಈಗ ಅವನ ಮುಖದ ಮೇಲೆ ಮೂಡಿದ್ದ ಕಠಿನವಾದ, ನಿಷ್ಠುರವಾದ, ನಿರ್ಘೃಣವಾದ ಭಾವವು ಆ ಚಿತ್ರದಲ್ಲಿ ಸೂರ್ಯನು ಪಟ್ಟು ಹಿಡಿದು ಹೊರತಂದದ್ದೇ ಆಗಿದ್ದಿತು. ಆದ್ದರಿಂದ, ಚಿತ್ರದಲ್ಲಿ ಎಷ್ಟೇ ಕೌಶಲದಿಂದ

ನ್ಯಾಯಮೂರ್ತಿಯು ಬಾಂಧವ್ಯದ ಹಾಗೂ ಸಹಜ ಪ್ರೇಮದ ಗುರುತಾಗಿ ತನ್ನ ಕಿರಿಯ ಬಂಧುವಿಗೆ ಒಂದು ಮುತ್ತನ್ನು ಕೊಡುವ ಉದ್ದೇಶದಿಂದ ಮುಂದಕ್ಕೆ ಬಾಗಿದನು: ಅವರಿಬ್ಬರ ಹತ್ತಿರವಾದ ರಕ್ತ ಸಂಬಂಧವನ್ನೂ ವಯಸ್ಸಿನ ವ್ಯತ್ಯಾಸವನ್ನೂ ಪರಿಗಣಿಸಿದರೆ ಅವನ ಆ ಉದ್ದೇಶ ಕ್ಷಮ್ಯಮಾತ್ರವಲ್ಲ, ಮೆಚ್ಚತಕ್ಕದ್ದೂ ಆಗಿದ್ದಿತು. (ಪೂರ್ವೋದ್ದೇಶವಿಲ್ಲದೆಯೋ ಅಥವಾ ಬುದ್ಧಿಪೂರ್ವಕವಾಗಿ ವಿಚಾರಮಾಡದೆ ಸಹಜಪ್ರೇರಣೆಯಿಂದಲೋ, ಅಂತೂ) ದುರದೃಷ್ಟವಶಾತ್, ಆ ಸಮಯಕ್ಕೆ ಸರಿಯಾಗಿ, ಫೀಬೆ ಹಿಂದಕ್ಕೆ ಸರಿದುಬಿಟ್ಟಳೂ; ಇದರ ಪರಿಣಾಮವಾಗಿ, ತುಂಬ ಪೂಜ್ಯನಾದ ಅವಳ ಬಂಧು ಮಾರಾಟದ ಮೇಜಿನ ಮೇಲೆ ತನ್ನ ಮೈ ಬಾಗಿಸಿ, ತನ್ನ ತುಟಿಗಳನ್ನು ಮುಂದಕ್ಕೆ ಚಾಚಿಕೊಂಡು, ಬರಿಯ ಗಾಳಿಯನ್ನು ಮುತ್ತಿಡಬೇಕಾದ ಹಾಸ್ಯಾಸ್ಪದವಾದ ಅವಸ್ಥೆಗೆ ಸಿಕ್ಕಿಕೊಳ್ಳಬೇಕಾಯಿತು. ಇಕ್ಸಿಯನ್ (Ixion)* ಮೋಡವನ್ನು ಆಲಿಂಗಿಸಿಕೊಂಡ ಸಂದರ್ಭವನ್ನು ಹೋಲುವ ಆಧುನಿಕಕಾಲದ ನಿದರ್ಶನವಿದು: ಅದಕ್ಕಿಂತ ಇದು ಹಾಸ್ಯಾಸ್ಪದ; ಏಕೆಂದರೆ, ಗಾಳಿಯಂಥ ಪೊಳ್ಳು ವಿಷಯಗಳನ್ನೆಲ್ಲಾ ತಾನು ವರ್ಜಿಸುವುದಾಗಿಯೂ, ಹುರುಳನ್ನು ಬಿಟ್ಟು ನೆರಳನ್ನು ಎಂದಿಗೂ ಹಿಡಿಯುವುದಿಲ್ಲವಾಗಿಯೂ ಆತ ಜಂಬಕೊಚ್ಚಿಕೊಳ್ಳುತ್ತಿದ್ದನು. ನಿಜಾಂಶವಿಷ್ಟು– ಫೀಬೆ ಹಾಗೆ ಹಿಂದೆ ಸರಿದದ್ದಕ್ಕೆ ಒಂದೇ ಒಂದಾದ ನೆಪವಾದರೂ ಇದೇ: ನ್ಯಾಯಮೂರ್ತಿ ಪಿನ್ಚನ್ನನನ್ನು ನೋಡುವ ಯಾವ ಹೆಂಗಸಿಗೇ ಆಗಲಿ– ಆಕೆಗೂ ಆತನಿಗೂ ನಡುವೆ ಒಂದು ಬೀದಿಯಷ್ಟು ಅಂತರವೊ, ಇಲ್ಲವೆ ಕಡೆಯ ಪಕ್ಷ ಸಾಧಾರಣ ಅಳತೆಯ ಕೊಟಡಿಯಷ್ಟು ತೆರಪೋ ಇದ್ದಾಗ– ಆತನ ಉತ್ಸಾಹ ಪೂರ್ಣವಾದ ಔದಾರ್ಯವು ಅಪ್ರಿಯವೆನಿಸದು; ಆದರೆ, ಈ ಶ್ಯಾಮಲವಾದ, ಯಾವ ಕ್ಷೌರದಕತ್ತಿಯೂ ಎಂದಿಗೂ ನಯವಾಗಿ ಮಾಡಲಾಗುದಂತಹ ಒರಟೊರಟಾದ ಗಡ್ಡವುಳ್ಳ, ಚೆನ್ನಾಗಿ ತಿಂದುಕೊಬ್ಬಿದ ಮುಖವು ತನ್ನ ವಿಶ್ವಾಸಕ್ಕೆ ಪಾತ್ರವಾದ ವಸ್ತುವಿನ ನಿಕಟಸಂಪರ್ಕವನ್ನು ಹೊಂದಬಯಸಿದಾಗ ಆ ಔದಾರ್ಯ ಮಿತಿಮೀರಿದ

---

* ಗ್ರೀಕ್ ಪುರಾಣದ ಪ್ರಕಾರ, ಥೆಸಲಿ ದೇಶದ ಇಕ್ಸಿಯನ್ ಎಂಬವನು ತನ್ನ ಮಾವನನ್ನು ಕೊಲೆಮಾಡಿದ ಪಾಪಕೃತ್ಯಕ್ಕೆ ಸ್ಯೂಸ್ (ಅಗ್ನಿ) ದೇವತೆಯಿಂದ ಪ್ರಾಯಶ್ಚಿತ್ತ ಪಡೆಯುತ್ತಾನೆ. ದುಷ್ಟ ಸ್ವಭಾವದ ಇಕ್ಸಿಯನ್ ಸ್ಟೆರ (Stera) ಎಂಬವಳನ್ನು ಒಲಿದು ಮಡದಿಗೆ ದ್ರೋಹ ವೆಸುಗುತ್ತಾನೆ. ಸ್ಟೆರಳನ್ನು ಹೋಲುವಂತೆ ಸ್ಯೂಸ್ ದೇವತೆ ಸೃಷ್ಟಿಸಿದ ನೆಫೆತೆ (Nephete) ಎಂಬ ಮೋಡವನ್ನು ಆಲಿಂಗಿಸಿಕೊಂಡು, ನರಾಶ್ವಪ್ರಾಣಿವರ್ಗದ (Centaurs) (ಕಿಂಪುರಷ) ಜನಕನಾಗುತ್ತಾನೆ.

ಉದ್ದೇಶಪಟ್ಟಿರಲಿಲ್ಲ" ಎಂದು, ನಕ್ಕು ಆ ವಿಷಯವನ್ನು ಮರೆಯಿಸಲು ಪ್ರಯತ್ನಪಟ್ಟು, ನುಡಿದಳು.

ಆದರೂ ಕೂಡ, ಅವಳು ತನ್ನ ಬಿಚ್ಚು ಮನಸ್ಸಿನ ಸೌಜನ್ಯದ ಸ್ವಭಾವಕ್ಕೆ ಎಷ್ಟುಮಾತ್ರಕ್ಕೂ ಅದು ಗುಣವಾಗಿಲ್ಲದ ಒಂದು ಬಗೆಯ ಬಿಗಿಯಿಂದಲೇ ಇನ್ನೂ ನಡೆದುಕೊಳ್ಳುತ್ತಿದ್ದಳು; ಅವರ ಪರಸ್ಪರ ಪರಿಚಯ ಪ್ರಾರಂಭವು ಸುಮುಖವಾಗಿಲ್ಲದಿದ್ದುದೇ ಅದಕ್ಕೆ ಸಂಪೂರ್ಣವಾಗಿ ಕಾರಣವಿದ್ದಿತೋ ಇಲ್ಲವೋ, ಅದು ಹೇಗಾದರೂ ಇರಲಿ. ನ್ಯೂ ಇಂಗ್ಲೆಂಡಿನ ಸಮಸ್ತ ಪಿನ್ಚನ್ ವಂಶದವರ ಮೂಲಪುರುಷನೂ, ಏಳೂ ಇಪ್ಪಾರಿನ ಮನೆಯ ನಿರ್ಮಾಪಕನೂ, ಮತ್ತು ಅದರಲ್ಲಿ ವಿಚಿತ್ರ ರೀತಿಯಲ್ಲಿ ಅವಸಾನ ಹೊಂದಿದವನೂ ಆದ ವಂಶದ ಮೊದಲ ಪ್ಯೂರಿಟನ್ನನ ವಿಷಯವಾಗಿ ಅವಳು ಅನೇಕ ವಿಷಣ್ಣವಾದ ಐತಿಹ್ಯಗಳನ್ನು ಕೇಳಿದ್ದಳು; ಅವನೇ ಈಗ ಅಂಗಡಿಯೊಳಕ್ಕೆ ಕಾಲಿಟ್ಟದ್ದನು ಎಂಬ ವಿಚಿತ್ರಕಲ್ಪನೆ ಅವಳನ್ನು ಬಿಟ್ಟು ಹೋಗುವಹಾಗಿರಲಿಲ್ಲ. ಮನಸ್ಸಿಗೆ ತೋರಿದ ಕೂಡಲೇ ಸಜ್ಜುಮಾಡಿಕೊಳ್ಳಲಾಗುವ ಈ ದಿನಗಳಲ್ಲಿ, ಬೇರೆಯ ಪ್ರಪಂಚದಿಂದ ಆತ ಬಂದು ಕೂಡಲೆ, ಕ್ಷೌರಕನ ಅಂಗಡಿಯಲ್ಲಿ ಅವನು ಕಾಲುಗಂಟೆ ಕಳೆಯಬೇಕಾಗಿದ್ದುದು ಎಷ್ಟೋ ಅಷ್ಟೆ; ಕ್ಷೌರಕನು ಆ ಪ್ಯೂರಿಟನ್ನನ ತುಂಬುಗಡ್ಡವನ್ನು ಕತ್ತರಿಸಿ, ಒಂದು ಜೊತೆ ಕೆನ್ನೆ ಮೀಸೆಯನ್ನು ಬಿಡಿಸಿದ್ದನು; ಬಳಿಕ ಹೊಲಿದು ಸಿದ್ಧಪಡಿಸಿದ ಅಂಗಡಿಯೊಂದಕ್ಕೆ ಪ್ಯೂರಿಟನ್ನನು ಭೇಟಿಯಿತ್ತು ಅಲ್ಲಿ ತನ್ನ ಮಕಮಲ್ಲಿನ ಮೋಟು ಅಂಗಿ ಮತ್ತು ಕಪ್ಪು ಕವುದಿ ಇವುಗಳಿಗೆ ಬದಲಾಗಿ ತನ್ನ ಗಲ್ಲದ ಕೆಳಗಿನ, ತುಂಬ ಅಲಂಕಾರದ ಕೆಲಸಮಾಡಿದ್ದ ಪಟ್ಟಿ, ಬಿಳಿಯ ಕೊರಳಪಟ್ಟಿ ಮತ್ತು ಕಂಠವಸ್ತ್ರ, ಅಂಗಿ, ಒಳಅಂಗಿ, ಷರಾಯಿ– ಇವುಗಳನ್ನು ಪಡೆದಿದ್ದನು; ಕಡೆಯದಾಗಿ, ತನ್ನ ಉಕ್ಕಿನ ಹಿಡಿಯ ಅಗಲವಾದ ಅಲಗಿನ ಕತ್ತಿಯನ್ನು ಆ ಕಡೆ ಇಟ್ಟು ಅದರೆಡೆಯಲ್ಲಿ ಬಂಗಾರದ ಹಿಡಿಯ ಬೆತ್ತವನ್ನು ಹಿಡಿದು, ಎರಡು ಶತಮಾನಗಳ ಹಿಂದಿನ ಸರದಾರ ಪಿನ್ಚನ್ನನು ಸದ್ಯಃ ಕ್ಷಣದ ನ್ಯಾಯಮೂರ್ತಿಯಾಗಿ ಮುಂದೆ ಬಂದಿದ್ದನು!

ಆದರೆ, ಫೀಬೆ ಅತ್ಯಂತ ವಿವೇಕವುಳ್ಳವಳಾದ್ದರಿಂದ, ಈ ಮೇಲ್ಕಂಡ ಭಾವನೆಯ ವಿಷಯವಾಗಿ ಮುಗುಳುನಗೆಯೊಂದನ್ನು ನಕ್ಕು ಸುಮ್ಮನಾಗುವುದೇ ವಿಹಿತವೆಂದು ತಿಳಿದಿದ್ದಳು. ಅಲ್ಲದೆ, ಅವಳ ಕಣ್ಣಮುಂದೆ ಆ ಇಬ್ಬರು ವ್ಯಕ್ತಿಗಳು ಒಟ್ಟಿಗೆ ನಿಂತಿದ್ದರೂ ಕೂಡ, ಇಬ್ಬರಿಗೂ ಇದ್ದ ಎಷ್ಟೋ ವ್ಯತ್ಯಾಸದ ಅಂಶಗಳು ಗಮನಕ್ಕೆ ಬರುತ್ತಿದ್ದುವು; ಬಹುಶಃ ಒಂದು ಸಾಮಾನ್ಯವಾದ ಹೋಲಿಕೆ ಮಾತ್ರ

ಮರೆಮಾಚಿದ್ದರೂ ಅಲ್ಲಿ ಅಡಗಿದ್ದುದು ಕ್ಷಣಿಕಭಾವವಾಗಿರದೆ, ಅವನ ಜೀವನದ ಸ್ಥಾಯಿಭಾವವಾಗಿದ್ದೀತೆ? ಅಷ್ಟು ಮಾತ್ರವಲ್ಲದೆ, ಅವನಿಗೆ ಅದು ಆ ಗಡ್ಡವುಳ್ಳ ಪೂರ್ವಜನಿಂದ ಅಮೂಲ್ಯವಾದ ಆಸ್ತಿಯಾಗಿ ಇಳಿದುಬಂದು, ವಂಶಪಾರಂಪರ್ಯವಾದ ಗುಣವಾಗಿ ನೆಲಸಿದ್ದಿತೆ? ಇಂದಿನ ನ್ಯಾಯಮೂರ್ತಿಯ ಮುಖಭಾವ, ಹಾಗೂ ಮುಖಲಕ್ಷಣಗಳು ಒಂದು ಆಶ್ಚರ್ಯಕರವಾದ ಪ್ರಮಾಣದಲ್ಲಿ, ಭವಿಷ್ಯ ಸೂಚಕವಾದ ರೀತಿಯಲ್ಲಿ, ಆ ಪೂರ್ವಜನ ಚಿತ್ರದಲ್ಲಿ ಚಿತ್ರಿತವಾಗಿದ್ದುವೆ? ಫೀಬೆಗಿಂತ ಹೆಚ್ಚಾಗಿ ತಾತ್ತ್ವಿಕ ದೃಷ್ಟಿಯುಳ್ಳಾತನು ಈ ಮೇಲ್ಕಂಡ ಭಾವನೆಯಲ್ಲಿ ಬಹಳ ಭಯಂಕರವಾದ ಯಾವುದೋ ಒಂದು ಸೂಚನೆಯನ್ನು ಕಾಣ ಬಹುದಾಗಿದ್ದಿತು. ದೌರ್ಬಲ್ಯಗಳು ಮತ್ತು ದೋಷಗಳು, ದುಷ್ಟ ರಾಗ ಭಾವೋದ್ರೇಕಗಳು, ತುಚ್ಛ ಪ್ರವೃತ್ತಿಗಳು, ನೈತಿಕ ರೋಗಗಳು– ಘೋರಾಪರಾಧವನ್ನು ಎಸಗಲು ಕಾರಣಭೂತಗಳಾದ ಈ ಎಲ್ಲ ದುರ್ಗುಣಗಳೂ ಒಂದು ತಲೆಮೊರೆಯಿಂದ ಇನ್ನೊಂದು ತಲೆಮೊರೆಗೆ ಬಹಳ ಖಂಡಿತವಾದ ವಿಧಾನದಲ್ಲಿ ಸಾಗಿಬರುತ್ತವೆ ಎಂಬುದನ್ನು ಅದು ಸೂಚಿಸುತ್ತಿತ್ತು; ಐಶ್ವರ್ಯ ಮತ್ತು ಗೌರವಪದವಿಗಳು ತಲೆತಲಾಂತರದ ವರೆಗೆ ವಂಶಪಾರಂಪರ್ಯವಾಗಿ ಸಾಗಿಬರುವ ವಿಚಾರದಲ್ಲಿ ಮಾನವನಿರ್ಮಿತ ಕಾನೂನು ಕೂಡ ಅಷ್ಟು ಪರಿಣಾಮಕಾರಿಯಾದ ವಿಧಾನವನ್ನು ಸ್ಥಾಪಿಸಲು ಸಾಧ್ಯವಾಗಿಲ್ಲ.

ಆದರೆ, ನಡೆದದ್ದೇನೆಂದರೆ, ಫೀಬೆಯ ದೃಷ್ಟಿ ನ್ಯಾಯಮೂರ್ತಿಯ ಮುಖದ ಮೇಲೆ ಇನ್ನೂ ನೆಲಸಿರಲಿಲ್ಲ, ಅಷ್ಟರಲ್ಲಿಯೇ ಅದರ ವಿಕೃತ ನಿಷ್ಠುರತೆ ಕಣ್ಮರೆಯಾಗಿ ಹೋಗಿತ್ತು; ಈ ಶ್ರೇಷ್ಠ ವ್ಯಕ್ತಿ ತನ್ನ ಘನವಾದ ಹೃದಯದಿಂದ ಸುತ್ತಮುತ್ತಣ ವಾತಾವರಣಕ್ಕೆ ತನ್ನ ಔದಾರ್ಯದ ಧಗೆ ಧಗೆಯಾದ ಶಾಖವನ್ನು ಹರಡಿದನು– ಸರ್ಪವು ಆಕರ್ಷಣೆ ಮಾಡುವುದಕ್ಕೆ ಮುಂಚೆ ತನ್ನ ಅಸಾಧಾರಣವಾದ ವಾಸನೆಯನ್ನು ಗಾಳಿಯ ತುಂಬ ಬೀರುತ್ತದೆಯಂತೆ, ಹಾಗೆ; ಫೀಬೆ ಆ ಔದಾರ್ಯದ ಧಗೆಯ ಪ್ರಭಾವಕ್ಕೆ ಸಂಪೂರ್ಣವಾಗಿ ವಶವಾಗಿ ಹೋದಳು.

"ಅದನ್ನ ನಾನು ಮೆಚ್ಚಿಕೊಂಡೆ, ಫೀಬೆ! ಬಹುವಾಗಿ ಮೆಚ್ಚಿಕೊಂಡೆ, ತಂಗಿ! ನೀನು ಬಲು ಒಳ್ಳೆಯವಳು, ನಿನ್ನ ವಿಚಾರದಲ್ಲಿ ಎಚ್ಚರವಾಗಿರುವುದನ್ನ ನೀನು ಬಲ್ಲೆ. ಪುಟ್ಟ ಹುಡುಗಿ– ಅದರಲ್ಲಿಯೂ ತಾನು ಬಹಳ ಅಂದವಾಗಿದ್ದರಂತೂ– ತನ್ನ ತುಟಿಗಳ ವಿಚಾರದಲ್ಲಿ ಎಷ್ಟು ಎಚ್ಚರಿಕೆ ವಹಿಸಿದರೂ ಸಾಲದು" ಎಂದು, ಮೆಚ್ಚಿಕೆಯನ್ನು ಸೂಚಿಸುವಂತೆ ಬಲವಾಗಿ ತಲೆತೂಗಿ, ನುಡಿದನು.

"ನಿಜವಾಗಿಯೂ, ನಾನು ನಿರ್ದಯಿಯಾಗಿರಬೇಕು ಅಂತ

ಮೇಲುಮೇಲಕ್ಕೇರುವಾಗ ಇಟ್ಟ ಪ್ರತಿಯೊಂದು ಹೆಜ್ಜೆಯೂ ನಮ್ಮ ಮೃಗಸ್ವಭಾವದ ಶಕ್ತಿಯನ್ನು ಕುಗ್ಗಿಸುತ್ತಾ ಹೋಗುವುದರಿಂದ, ಆ ಪ್ರಗತಿ ವಿಧಾನವು ನಮ್ಮ ದೇಹದ ಸ್ಥೂಲರೂಪದ ಒರಟು ಗುಣಗಳನ್ನು ಸಂಸ್ಕಾರಗೊಳಿಸುವುದರ ಮೂಲಕ ನಮ್ಮನ್ನು ಕ್ರಮೇಣ ಉದಾತ್ತರನ್ನಾಗಿ ಮಾಡಬಹುದು. ಹಾಗಿರುವ ಪಕ್ಷಕ್ಕೆ, ಇತರ ಅನೇಕಾನೇಕ ಮಂದಿ ಮಾನವರ ಹಾಗೆಯೆ ನ್ಯಾಯಮೂರ್ತಿ ಪಿನ್ಚನ್ನನು ಕೂಡ ಇನ್ನೂ ಒಂದೆರಡು ಶತಮಾನಗಳ ಕಾಲ ಅಂತಹ ಸಂಸ್ಕಾರವನ್ನು ಪಡೆಯುತ್ತ ಹೋಗಬೇಕಾದೀತು.

ನ್ಯಾಯಮೂರ್ತಿಗೂ ಆತನ ಪೂರ್ವಜನಿಗೂ ಇದ್ದ ಬೌದ್ಧಿಕ ಮತ್ತು ನೈತಿಕ ಸಾಮ್ಯವು, ಕಡೆಯಪಕ್ಷ ಅವರ ಭಾವಭಂಗಿ ಮತ್ತು ಮುಖಲಕ್ಷಣಗಳ ನಡುವೆ ಇದ್ದ ಸಾಮ್ಯದಿಂದ ಊಹಿಸಬಹುದಾದಷ್ಟು ಮಾತ್ರವಾದರೂ ಬಲವಾಗಿಯೆ ಇದ್ದಿತು. ಸರದಾರ ಪಿನ್ಚನ್ನನ ಶವಸಂಸ್ಕಾರಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ, ಚರ್ಚಿನ ಪುರೋಹಿತನು ತನ್ನ ಮತದ ಭಕ್ತನನ್ನು ಸಂಪೂರ್ಣವಾಗಿ ಸಂತನ ಪದವಿಗೇ ಏರಿಸಿಬಿಟ್ಟಿದ್ದನು: ಚರ್ಚಿನ ಮಾಳಿಗೆಯ ಮೂಲಕ ಒಂದು ದೃಶ್ಯವೇ ತೆರೆದು ಕಾಣುವಹಾಗೆ ಮಾಡಿ, ಅಲ್ಲಿ ಅಂತರಿಕ್ಷದ ಮೇಲ್ಗಡೆ ಸಂತನಾದ ತನ್ನ ಭಕ್ತನು ಕೈಯಲ್ಲಿ ಹಾರ್ಪ್ ವಾದ್ಯವನ್ನು ಹಿಡಿದು, ದೇವಲೋಕದ ಕಿರೀಟಧಾರಿಗಳಾದ ಮೇಳಗಾಯಕರ ಮಧ್ಯೆ ಕುಳಿತಿರುವಂತೆ ತೋರಿಸಿದ್ದನು. ಅವನ ಸಮಾಧಿಶಿಲೆಯ ಮೇಲೆ ಕೆತ್ತಿರುವ ಉಲ್ಲೇಖನ ಕೂಡ ಬಹಳ ಪ್ರಶಂಸಾತ್ಮಕವಾಗಿಯೆ ಇದೆ; ಅಲ್ಲದೆ, ಇತಿಹಾಸದ ಪುಟಗಳಲ್ಲಿ ಅವನಿಗೆ ಯಾವ ಸ್ಥಾನವಿದೆಯೋ ಆ ಮಟ್ಟಿಗೆ ಇತಿಹಾಸವು ಕೂಡ ಅವನ ಏಕಪ್ರಕಾರವಾದ ನೇರವಾದ ನಡತೆಯನ್ನು ಖಂಡಿಸಿರಲಿಲ್ಲ. ಅದೇ ರೀತಿಯಲ್ಲಿ, ಇಂದಿನ ನ್ಯಾಯಮೂರ್ತಿ ಪಿನ್ಚನ್ನನ ವಿಚಾರವಾಗಿ ಹೇಳುವುದಾದರೆ, ಚರ್ಚಿನ ಪುರೋಹಿತನಾಗಲಿ ನ್ಯಾಯವಿಚಾರ ವಿಮರ್ಶಕನಾಗಲಿ ಸಮಾಧಿಶಿಲೆಗಳಮೇಲೆ ಚರಮಶ್ಲೋಕಗಳನ್ನು ಕೆತ್ತುವವನಾಗಲಿ ಸಾಮಾನ್ಯ ಅಥವಾ ಸ್ಥಳೀಯ ರಾಜಕೀಯವನ್ನು ಕುರಿತು ಬರೆಯುವ ಇತಿಹಾಸಕಾರನಾಗಲಿ; ಕ್ರೈಸ್ತಮತೀಯನಾಗಿ ಈ ಶ್ರೇಷ್ಠವ್ಯಕ್ತಿಯ ಪ್ರಾಮಾಣಿಕತೆಯ ವಿರುದ್ಧವಾಗಿಯಾಗಲಿ, ಸಾಮಾನ್ಯ ಮನುಷ್ಯನಾಗಿ ಈತನ ಪೂಜ್ಯತೆಯ ವಿರುದ್ಧವಾಗಿಯಾಗಲಿ, ನ್ಯಾಯಮೂರ್ತಿನಾಗಿ ಈತನ ಋಜುತ್ವದ ವಿಚಾರವಾಗಿಯಾಗಲಿ, ತನ್ನ ರಾಜಕೀಯ ಪಕ್ಷದ ಅನುಭವಸ್ಥಪ್ರತಿನಿಧಿಯಾಗಿ ಈತನ ಧೈರ್ಯ ಹಾಗೂ ನಿಷ್ಠೆಗಳ ವಿರುದ್ಧವಾಗಿಯಾಗಲಿ ಒಂದು ಚಕಾರವೆತ್ತುವ ಸಾಹಸ ಮಾಡಿರಲಿಲ್ಲ. ಸರ್ವಜನರ

ಕಂಡುಬರುತ್ತಿದ್ದಿತು, ಅಷ್ಟೆ. ಇಬ್ಬರ ನಡುವೆ ಎಷ್ಟೋ ವರ್ಷಗಳ ಅಂತರವಿದ್ದಿತು; ಅಲ್ಲದೆ, ಪೂರ್ವಜನಾದ ಇಂಗ್ಲಿಷರವನು ಹುಟ್ಟಿ ಬೆಳೆದ ಹವಾಗುಣವೇ ಬೇರೆ, ಇವನು ಹುಟ್ಟಿ ಬೆಳೆದ ಹವಾಗುಣವೇ ಬೇರೆ; ಆದ್ದರಿಂದ, ಆತನ ವಂಶದಲ್ಲಿ ಹುಟ್ಟಿದ ಇವನ ದೈಹಿಕ ರಚನೆಯಲ್ಲಿ ಮುಖ್ಯವಾದ ವ್ಯತ್ಯಾಸಗಳನ್ನು ಅವು ಉಂಟುಮಾಡಿರಲೇಬೇಕು, ಅದು ಅನಿವಾರ್ಯ. ಈ ನ್ಯಾಯಮೂರ್ತಿಯ ಮಾಂಸಖಂಡದ ಪ್ರಮಾಣ ಆ ಸರದಾರನ ಮಾಂಸಖಂಡದ ಪ್ರಮಾಣದಷ್ಟಿರಲು ಸಾಧ್ಯವೆ ಇರಲಿಲ್ಲ; ನ್ಯಾಯಮೂರ್ತಿಯ ಮೈತುಂಬು ನಿಸ್ಸಂದೇಹವಾಗಿ ಬಹಳ ಕಡಮೆಯಾಗಿತ್ತು. ಭೌತಶರೀರದ ದೃಷ್ಟಿಯಿಂದ ಆತ ತನ್ನ ಸಮಕಾಲೀನರಲ್ಲೆಲ್ಲ ತೂಕಿಯಾದ ಮನುಷ್ಯನೆಂಬ ಎಣಿಕೆಯೆ ಇದ್ದಿತು; ನ್ಯಾಯಪೀಠವನ್ನು ಅಲಂಕರಿಸಲು ಅವನನ್ನು ತಕ್ಕವನಾಗಿ ಮಾಡುವ ಮಜಬೂತಾದ ಬೆಳೆವಣಿಗೆ ಗಮನಾರ್ಹವಾದ ಪ್ರಮಾಣದಲ್ಲಿ ಅವನಿಗೆ ಲಭಿಸಿತ್ತು ಎಂಬ ಭಾವನೆಯೂ ಇದ್ದಿತು; ಆದರೂ ಕೂಡ, ಇಂದಿನ ನ್ಯಾಯಮೂರ್ತಿ ಪಿನ್ಚನನ್ನೂ ಆತನ ಪೂರ್ವಜನನ್ನೂ ಒಂದೇ ತಕ್ಕಡಿಯಲ್ಲಿ ಕೂರಿಸಿ ತೂಗಿದರೆ, ಅದನ್ನು ಏರುಪೇರಾಗದಂತೆ ಸಮಸ್ಥಿತಿಯಲ್ಲಿರಿಸಲು ನ್ಯಾಯಮೂರ್ತಿಗೆ ಕನಿಷ್ಠಪಕ್ಷ ಹಳೆಯಕಾಲದ ಐವತ್ತಾರು ಪೌಂಡುಗಳಷ್ಟು ತೂಕ ಹೆಚ್ಚಿಗೆ ಬೇಕಾಗುತ್ತಿದ್ದಿತು. ಇದರ ಜೊತೆಗೆ, ಸರದಾರನ ಕೆನ್ನೆಗಳು ಬಿಸಿಲುಗಾಳಿಗಳ ಹೊಡೆತದಿಂದ ಎಷ್ಟೇ ಕಪ್ಪು ತಿರುಗಿದ್ದರೂ ಇಂಗ್ಲಿಷರಿಗೆ ಸಹಜವಾದ ಕೆಂಬಣ್ಣ ಅವುಗಳಲ್ಲಿ ಕಂಗೊಳಿಸುತ್ತಿತ್ತು; ಆದರೆ, ನ್ಯಾಯಮೂರ್ತಿಯ ಮುಖ ಆ ಬಣ್ಣವನ್ನು ಕಳೆದುಕೊಂಡು, ಅವನ ನಾಡವರ ಸ್ಥಿರವರ್ಣವಾದ ಮಾಸಲು ಹಳದಿಯ ಛಾಯೆಯನ್ನು ಹೊಂದಿದ್ದತು. ಇದೂ ಅಲ್ಲದೆ, ನಮ್ಮ ತಿಳಿವಳಿಕೆ ತಪ್ಪಾಗದಿರುವ ಪಕ್ಷಕ್ಕೆ, ಈಗ ನಮ್ಮ ಚರ್ಚೆಗೆ ಒಳಗಾಗಿರುವ, ಪ್ಯೂರಿಟನ್ ವಂಶಕ್ಕೆ ಘನವಾದ ಮಾದರಿಯ ವ್ಯಕ್ತಿ ಎನಿಸಿರುವ ಆ ದೊಡ್ಡ ಮನುಷ್ಯನಲ್ಲಿ ಕೂಡ ಒಂದು ಬಗೆಯ ಗಾಬರಿಪಡುವ ಸ್ವಭಾವಗುಣ ಹೆಚ್ಚು ಕಡಮೆ ವ್ಯಕ್ತಗೊಂಡಿತ್ತು. ಅದರ ಪರಿಣಾಮಪ್ರಭಾವಗಳಲ್ಲಿ ಒಂದಾಗಿ, ವೃದ್ಧ ಇಂಗ್ಲಿಷರವನಲ್ಲಿದ್ದುದಕ್ಕಿಂತ ಹೆಚ್ಚಾಗಿ ಅವನ ಮುಖದಲ್ಲಿ ತೀವ್ರವಾದ ಚಂಚಲ ಗುಣ ಒಂದು ಹಾಗೂ ಹೆಚ್ಚು ಚುರುಕಾದ ಗೆಲವು ಒಂದು, ಕೂಡಿಕೊಂಡಿದ್ದುವು; ಆದರೆ ಈ ತೀಕ್ಷ್ಣ ಗುಣಗಳು ಘನತರವಾದ ಯಾವುದೋ ಒಂದು ಗುಣವನ್ನು, ಕರಗಿಸುವ ಶಕ್ತಿಯುಳ್ಳ ಆಮ್ಲಗಳಂತೆ, ತಿಂದುಹಾಕಿಬಿಟ್ಟಿದ್ದುವು. ನಾವು ಬಲ್ಲಮಟ್ಟಿಗೆ, ಈ ಕ್ರಿಯಾವಿಧಾನ ಮಾನವಪ್ರಗತಿಯ ಮಹಾ ವ್ಯವಸ್ಥೆಗೆ ಹೊಂದಿಕೊಂಡಿರುವ ಹಾಗೆ ಕಾಣಬಹುದು; ಪ್ರಗತಿ ಪಥದಲ್ಲಿ

ಹೇಳುವ ವಿಚಿತ್ರ ಕಥೆಗಳು ಸುಳ್ಳಾಗದೆ ಇರುವ ಪಕ್ಷದಲ್ಲಿ, ಆ ಪ್ಯೂರಿಟನ್ನನು ಕೆಲವು ಪ್ರಕಾರಗಳಲ್ಲಿ ಅತಿಕ್ರಮಿಸಿ ವರ್ತಿಸಿದ್ದನು; ಅವನ ಹಾಗೆ ಭಾರಿ ಪುರುಷಮೃಗವಾಗಿ ಬೆಳೆದಿರುವವರು, ಅವರ ನಂಬಿಕೆ ಅಥವಾ ತತ್ತ್ವಗಳು ಏನೇ ಇರಲಿ, ಅಪರಿಶುದ್ಧತೆಯನ್ನೂ ಅದಕ್ಕೆ ಅಂಟಿಕೊಂಡಿರುವ ಕೀಳಾದ ಐಹಿಕ ಕಶ್ಮಲ ಪದಾರ್ಥವನ್ನೂ ವಿಸರ್ಜಿಸುವವರೆಗೂ ಆ ಅತಿಕ್ರಮವರ್ತನೆಗಳಿಗೆ ಒಳಗಾಗುತ್ತಿರಲೇಬೇಕು. ನ್ಯಾಯಮೂರ್ತಿಯು ವಿರುದ್ಧವಾಗಿ ಪಿಸುಗುಟ್ಟಿರಬಹುದಾದ, ಅದೇ ತಾತ್ಪರ್ಯದ ಯಾವುದೇ ಸಮಕಾಲೀನ ಅಪವಾದವನ್ನು ಇಲ್ಲಿ ಉಲ್ಲೇಖಿಸಿ ನಮ್ಮ ಈ ಪುಟಗಳನ್ನು ಮಲಿನಮಾಡಕೂಡದು. ಇನ್ನೂ ಹೇಳುವುದಾದರೆ, ತನ್ನ ಸ್ವಂತ ಮನೆಯಲ್ಲಿ ಸ್ವಯಂಪ್ರಭುವೆನಿಸಿದ್ದ ಪ್ಯೂರಿಟನ್ನನು ತನ್ನ ಮೂವರು ಹೆಂಡಿರನ್ನು ಸಮೆದು ಕೃಶರಾಗುವಂತೆ ಮಾಡಿದ್ದನು; ದಾಂಪತ್ಯ ಸಂಬಂಧದಲ್ಲಿ ಅವನು ತೋರಿಸುತ್ತಿದ್ದ ನಿಷ್ಕರುಣೆಯ ದರ್ಪ ಹಾಗೂ ಕಠಿನಸ್ವಭಾವ– ಇವುಗಳಿಂದಾಗಿ ಅವನು ಆ ಮೂವರನ್ನೂ ಒಬ್ಬರಾದಮೇಲೆ ಒಬ್ಬರಂತೆ ಭಗ್ನ ಹೃದಯರನ್ನಾಗಿ ಮಾಡಿ ಅವರವರ ಗೋರಿಗಳಿಗೆ ಕಳಿಸಿಬಿಟ್ಟಿದ್ದನು. ಇಲ್ಲಿ, ಸಾಮ್ಯ ಯಾವುದೋ ರೀತಿಯಲ್ಲಿ ತಪ್ಪಿಹೋಗುತ್ತದೆ. ನ್ಯಾಯಮೂರ್ತಿ ಮದುವೆಯಾಗಿದ್ದುದು ಒಬ್ಬಳೇ ಹೆಂಡತಿಯನ್ನು; ಮದುವೆಯಾದ ಮೂರನೆಯ ಇಲ್ಲವೆ ನಾಲ್ಕನೆಯ ವರ್ಷದಲ್ಲಿ ಅವನು ಅವಳನ್ನು ಕಳೆದುಕೊಂಡಿದ್ದನು. ಆದಾಗ್ಯೂ, ಈ ಸಂಬಂಧವಾಗಿ ಒಂದು ಕಟ್ಟು ಕಥೆಯಿದ್ದಿತು: ನವದಂಪತಿಗಳು ಪ್ರೇಮವಿಹಾರಯಾತ್ರೆಯಲ್ಲಿದ್ದಾಗ ಪತ್ನಿ ಮರಣಾಘಾತಕ್ಕೆ ಈಡಾಗಿ, ಮತ್ತೆ ಎಂದಿಗೂ ಮುಗುಳುನಗೆಯನ್ನು ಬೀರಲೇ ಇಲ್ಲ; ಕಾರಣ, ನಿಷ್ಠಾವಂತ ಪತಿಯೂ ಯಜಮಾನನೂ ಆದವನಿಗೆ ಪತ್ನಿ ತೋರಿಸಬೇಕಾದ ಭಕ್ತಿಯ ಕುರುಹಾಗಿ ಅವಳು ಪ್ರತಿದಿನ ಬೆಳಗ್ಗೆಯೂ ತನ್ನ ಹಾಸಿಗೆಯ ಬಳಿಗೇ ಕಾಫಿಯನ್ನು ತಂದು ಒಪ್ಪಿಸಬೇಕೆಂದು ಅವಳ ಪತಿ ಬಲಾತ್ಕಾರ ಮಾಡಿದ್ದನು. ಇದು ಕಟ್ಟು ಕಥೆಯೆಂದೇ ನಾವು ಎಣಿಸಲೆಳಸುತ್ತೇವೆ; ಆದರೂ, ನ್ಯಾಯಮೂರ್ತಿ ಪಿನ್ಚನ್ನನ ದಾಂಪತ್ಯ ಜೀವನದ ನಡವಳಿಕೆ ಇದೊಂದು ಮಾದರಿಯಾಗಿರುವುದು ಅಸಾಧ್ಯವೇನಲ್ಲ.

ನೇರವಾಗಿ ನಡೆದು ಬಂದ ಒಂದು ವಂಶದಲ್ಲಿ ವಂಶಪಾರಂಪರ್ಯವಾಗಿ ಈ ಬಗೆಯ ಹೋಲಿಕೆಗಳು ಮರಳಿ ಮರಳಿ ಹೇಗೆ ಕಾಣಿಸಿಕೊಳ್ಳುತ್ತವೆ ಎಂಬುದನ್ನು ಸಕಾರಣವಾಗಿ ವಿವರಿಸುವುದು ನಿಜವಾಗಿ ಸಾಧ್ಯವಲ್ಲ; ಆದರೆ ಪ್ರತಿಯೊಬ್ಬ ಮನುಷ್ಯನ ಹಿಂದೆಯೂ ಒಂದೆರಡು ಶತಮಾನಗಳಷ್ಟು ಆಚೆಯಲ್ಲಿ ಅಪಾರವಾದ ವಂಶಾರ್ಜಿತ ಗುಣಗಳ ಶೇಖರಣೆ ಹೇಗೆ ಅಡಗಿ ನೆಲಸಿರುತ್ತದೆ ಎಂಬ ವಿಷಯ

ನೋಟಕ್ಕಾಗಿಯೂ ಚಿರಕಾಲ ಉಳಿಯಲೆಂದೂ ಉಳಿ ಕೆತ್ತುವ, ಧ್ವನಿ ನುಡಿಯುವ, ಲೇಖನಿ ಬರೆಯುವ ಈ ವಿಶ್ವಾಸರಹಿತವಾದ ವಿಧಿಗನುಸಾರವಾದ ಬರಿಯ ಮಾತುಗಳ ವಿಷಯ ಹಾಗಿರಲಿ; ತಿಳಿದೂ ತಿಳಿದೂ ಹಾಗೆ ಮಾಡುವುದರಿಂದ ಅವುಗಳ ಸತ್ಯತೆಯೂ ಸ್ವತಂತ್ರಶಕ್ತಿಯೂ ಅನಿವಾರ್ಯವಾಗಿ ನಷ್ಟವಾಗಿ ಹೋಗುತ್ತವೆ; ಅವುಗಳಲ್ಲದೆ, ಪೂರ್ವಿಕನ ವಿಷಯವಾಗಿ ಪರಂಪರಾಗತಕಥೆಗಳೂ ನ್ಯಾಯಮೂರ್ತಿಯ ವಿಷಯವಾಗಿ ಹಗಲುಹೊತ್ತು ಏಕಾಂತದಲ್ಲಿ ಆಡುವ ಹರಟೆ ಮಾತುಗಳೂ ಇದ್ದವು; ಅವುಗಳ; ಸಾಕ್ಷ್ಯವು ಗಮನಾರ್ಹವಾದ ರೀತಿಯಲ್ಲಿ ತಾಳೆಯಾಗುತ್ತಿದ್ದುವು. ಒಬ್ಬ ಸಾರ್ವಜನಿಕ ಮನುಷ್ಯನ ವಿಚಾರವಾಗಿ ಹೆಂಗಸೊಬ್ಬಳು ನುಡಿಯುವ ಸ್ವಂತದ, ಮನೆವಾರ್ತೆಗೆ ಸಂಬಂಧಪಟ್ಟ ಅಭಿಪ್ರಾಯವನ್ನು ಪಡೆಯುವುದು ಅನೇಕವೇಳೆ ಬೋಧಪ್ರದವಾಗಿರುತ್ತದೆ; ಅಲ್ಲದೆ, ಫಲಕದಮೇಲೆ ಕೆತ್ತುವುದಕ್ಕೆಂದು ಬರೆದ ಭಾವಚಿತ್ರಗಳಿಗೂ ಮೂಲವ್ಯಕ್ತಿಯ ಬೆನ್ನಹಿಂದೆ ಕೈಯಿಂದ ಕೈಯಿಗೆ ಸಾಗಿಹೋಗುವ ಸೀಸದ ಕಡ್ಡಿಯ ಚಿತ್ರಗಳಿಗೂ ಇರುವ ಅಪಾರವಾದ ವ್ಯತ್ಯಾಸವು ಅತ್ಯಂತ ಕುತೂಹಲಕಾರಿಯಾಗಿರುತ್ತದೆ.

ಉದಾಹರಣೆಯಾಗಿ ಹೇಳುವುದಾದರೆ,– ಪ್ಯೂರಿಟನ್ನನು ಐಶ್ವರ್ಯ ಸಂಗ್ರಹಣ ವಿಚಾರದಲ್ಲಿ ದುರಾಶೆಯುಳ್ಳವನಾಗಿದ್ದನೆಂದು ಐತಿಹ್ಯದ ಹೇಳಿಕೆ; ನ್ಯಾಯಮೂರ್ತಿಯೂ ಕೂಡ, ಧಾರಾಳವಾಗಿ ವೆಚ್ಚಮಾಡುತ್ತಿದ್ದುದಾಗಿ ತೋರಿಸಿಕೊಳ್ಳುತ್ತಿದ್ದರೂ, ಅವನ ಕೈಹಿಡಿತವು ಕಬ್ಬಿಣದ್ದೋ ಎಂಬಂತೆ ವೆಚ್ಚದ ವಿಚಾರದಲ್ಲಿ ಬಿಗಿಮುಷ್ಟಿಯವನಾಗಿದ್ದನೆಂದು ಹೇಳಿಕೆಯಿದ್ದಿತು. ವಂಶದ ಪೂರ್ವಜನು ದಯಾಪರತೆಯ ಒಂದು ಗಂಭೀರ ತೋರಿಕೆ, ಒರಟಾದರೂ ಸೌಹಾರ್ದ ಪೂರ್ಣವಾದ ನಡೆನುಡಿ– ಇವುಗಳ ಒಂದು ವೇಷವನ್ನು ಧರಿಸಿದ್ದನು; ಇದನ್ನು, ಗಂಡಸುತನವೆಂಬ ದಪ್ಪನಾದ ಮೆತುವಲ್ಲದ ಚರ್ಮದ ಮೂಲಕ ಸೂಸುವ ನಿಜವಾದ ಸ್ನೇಹಸ್ವಭಾವವೆಂದು ಬಹುಮಂದಿ ಭಾವಿಸಿದ್ದರು. ಅವನ ವಂಶಜನಾದರೋ, ಹೆಚ್ಚು ನಯನಾಜೂಕಾದ ಕಾಲದ ಆವಶ್ಯಕತೆಗಳಿಗೆ ಅನುಗುಣವಾಗಿ, ಈ ಒರಟೊರಟಾದ ಸ್ಥೂಲ ದಯಾಪರತೆಯನ್ನು ಮುಗುಳು ನಗೆಯೆಂಬ ಸೂಕ್ಷ್ಮ ದಯಾಪರತೆಯನ್ನಾಗಿ ಪರಿವರ್ತಿಸಿಕೊಂಡಿದ್ದನು; ಅಂತಹ ಮುಗುಳುನಗೆಯೊಂದಿಗೆ ಅವನು ನಡುಬೀದಿಯಲ್ಲಿ ನಡೆದುಬರುವಾಗ ನಡಗಹಲಿನಲ್ಲಿ ಸೂರ್ಯನಂತೆ ಹೊಳೆಯುತ್ತಿದ್ದನು; ಇಲ್ಲವೋ ತನ್ನ ಆತ್ಮೀಯ ಪರಿಚಿತರ ದಿವಾನಖಾನೆಗಳಲ್ಲಿ ಮನೆಗೆಲಸದ ಅಗ್ನಿಯಂತೆ ಬೆಳಗುತ್ತಿದ್ದನು. ಕಥೆ ಹೇಳುವವನು ಇಂದಿಗೂ ಕೂಡ ಬಲು ಮೆಲ್ಲನೆ ಪಿಸುದನಿಯಲ್ಲಿ ಗೊಣಗುಟ್ಟಿದಂತೆ

ಪುನರುಕ್ತಿಯಲ್ಲಿ ತುಟಿಯಿಂದ ಕಿವಿಗೆ ಸಾಗಿಬಂದು, ನಿಚ್ಚಳವಾದ ದಿಟದಂತೆ ಕಾಣುವ ಒಂದು ಪರಿಣಾಮವನ್ನು ಹೊಂದುತ್ತವೆ. ಮನೆಯ ಬೆಂಕಿಗೂಡಿನ ಹೊಗೆ ಕೂಡ ಅವುಗಳ ವಾಸನೆಯನ್ನು ಸಂಪೂರ್ಣವಾಗಿ ಗ್ರಹಿಸಿರುತ್ತವೆ. ಈ ನಂಬಿಕೆಗಳು ಮನೆವಾರ್ತೆಯ ಸಂಗತಿಗಳ ಜೊತೆ ಜೊತೆಗೆ ಬಹು ಕಾಲದಿಂದ ಸಾಗಿ ಬಂದಿರುವುದರಿಂದ ಅವುಗಳಂತೆಯೇ ಕಾಣುತ್ತ ಹೋಗುತ್ತವೆ; ಅಲ್ಲದೆ, ಅವು ಪರಿಚಯವಿರುವ ರೀತಿಯಲ್ಲಿ ಹೇಗೆ ಹೊಂದಿಕೊಂಡು ನೆಲಸಿಬಿಡುತ್ತವೆ ಯೆಂದರೆ, ಅವುಗಳ ಪ್ರಭಾವವು ನಾವು ಶಂಕಿಸಬಹುದಾದ್ದಕ್ಕಿಂತ ಸಾಮಾನ್ಯವಾಗಿ ಹೆಚ್ಚಿನದಾಗಿರುತ್ತದೆ. ನಡದ ಸಂದರ್ಭ ಏನೆಂದರೆ, ನ್ಯಾಯಮೂರ್ತಿ ಪಿನ್ಚನ್ನನ ಗಂಟಲಿನಲ್ಲಿ, ಒಂದು ಬಗೆಯ ಸದ್ದನ್ನು– ವಿಚಿತ್ರವಾದ, ವಿಕಾರವಾದ, ಒಳನುಂಗುವ ಸದ್ದನ್ನು ಫಿಬೆ ಕೇಳಿದಾಗ, ಅವಳು ಬಹು ತಿಳಿಗೇಡಿತನದಿಂದ ಬೆಚ್ಚಿಬಿದ್ದು, ಕೈಗಳನ್ನು ಕೂಡಿಸಿ ಹಿಡಿದುಕೊಂಡಳು; (ಈ ಲೇಖಕನು ಆ ಸದ್ದನ್ನು ಎಂದೂ ಕೇಳಿಲ್ಲವಾದ್ದರಿಂದ, ಅದನ್ನು ವರ್ಣಿಸಲಾರನು.) ಆ ಸದ್ದು ಬಹುಮಟ್ಟಿಗೆ ಅನೈಚ್ಛಿಕವಾಗಿದ್ದು, ಅವನಿಗೆ ಅಭ್ಯಾಸವಾಗಿಬಿಟ್ಟಿದ್ದಿತು; ಆದರೂ ಅದು ಏನನ್ನೂ ಸೂಚಿಸುತ್ತಿರಲಿಲ್ಲ; ಏನನ್ನಾದರೂ ಸೂಚಿಸುವಂತಿದ್ದರೆ, ಅದು ಎಲ್ಲೋ ಕೊಂಚಮಟ್ಟಿನ ಗಂಟಲಬೇನೆಯನ್ನೋ ಇಲ್ಲವೆ ತೀಕ್ಷ್ಣ ವಾಯುರೋಗದ ಲಕ್ಷಣವನ್ನೋ ಸೂಚಿಸುವಂತಿದ್ದಿತು.

ಅಂತಹ ಅಲ್ಪವಿಷಯದ ಬಗೆಗೆ ಫೀಬೆ ತನ್ನ ಮನಶ್ಶಾಂತಿಯನ್ನು ಕೆಡಿಸಿಕೊಂಡದ್ದು ಅತ್ಯಂತ ಹಾಸ್ಯಾಸ್ಪದವಾಗಿದ್ದಿತು; ಮತ್ತು ಅದಕ್ಕೆ ವಿಶೇಷವಾಗಿ ಸಂಬಂಧಪಟ್ಟ ವ್ಯಕ್ತಿಗೆ ತನ್ನ ಆ ಮನಃಕ್ಷೋಭೆಯನ್ನು ತೋರಿಸಿಕೊಂಡದ್ದು ಇನ್ನೂ ಅಕ್ಷಮ್ಯವಾಗಿದ್ದಿತು. ಆದರೆ, ಸರದಾರನ ವಿಚಾರವಾಗಿಯೂ ನ್ಯಾಯಮೂರ್ತಿಯ ವಿಚಾರವಾಗಿಯೂ ಅವಳು ಈ ಹಿಂದೆ ಇಟ್ಟುಕೊಂಡಿದ್ದ ಕಲ್ಪನೆಗಳೊಂದಿಗೆ ಆ ಘಟನೆ ಎಷ್ಟು ವಿಚಿತ್ರವಾಗಿ ದನಿ ಗೂಡಿಸಿ ಹೊಂದಿಕೊಂಡಿ ತೆಂದರೆ, ಅದು ಅವರಿಬ್ಬರ ವ್ಯಕ್ತಿತ್ವಗಳನ್ನೂ ಸಂಪೂರ್ಣವಾಗಿ ಒಂದುಗೂಡಿಸಿ ಬಿಡುವಂತೆ ಕಂಡುಬಂದಿತು.

"ಏನಾಗಿದೆ ನಿನಗೆ, ಏನು ಸಮಾಚಾರವಮ್ಮಾ? ನಿನಗೆ ಏನಾದರೂ ಹೆದರಿಕೆಯಾಗಿದೆಯೇನು?" ಎಂದು ಕಠಿನವಾಗಿ ಅವಳನ್ನು ನೋಡುತ್ತಾ ನುಡಿದನು.

"ಓ, ಏನೂ ಇಲ್ಲ! ಈ ಪ್ರಪಂಚದಲ್ಲಿ ಯಾವುದರ ಹೆದರಿಕೆಯೂ ಇಲ್ಲ ನನಗೆ! ನಮ್ಮ ಅಕ್ಕ ಹೆಪ್ಸಿಬಾ ಅವರೊಂದಿಗೆ ಮಾತನಾಡಬೇಕೆಂದು ನಿಮಗೆ ಅಪೇಕ್ಷೆಯಿರಿಬಹುದು. ಆಕೆಯನ್ನು ಕರೆಯಲೇನು?" ಎಂದು, ತನ್ನ ವಿಷಯದಲ್ಲಿ

ವಿಚಾರಮಾಡಲು ಬಹು ಫಲಪ್ರದವಾದುದು. ಆದ್ದರಿಂದ ನಾವು ಇಷ್ಟನ್ನು ಮಾತ್ರ ಹೇಳುವೆವು: ಪ್ಯುರಿಟನ್ನನು ಧೈರ್ಯಶಾಲಿ, ದರ್ಪಿಷ್ಠ, ದಯಾದಾಕ್ಷಿಣ್ಯವಿಲ್ಲದವನು, ಚತುರ; ತನ್ನ ಹಂಚಿಕೆಗಳನ್ನು ಬಲವಾಗಿ ಹಾಕಿ, ಅವುಗಳನ್ನು ಪಟ್ಟು ಹಿಡಿದು ಸಾಧಿಸುವುದರಲ್ಲಿ ವಿಶ್ರಾಂತಿಯನ್ನಾಗಲಿ ಆತ್ಮಸಾಕ್ಷಿಯನ್ನಾಗಲಿ ಅರಿಯದವನು; ದುರ್ಬಲರನ್ನು ತುಳಿದು, ತನ್ನ ಉದ್ದೇಶ ಸಾಧನೆಗೆ ಅಗತ್ಯವೆನಿಸಿದಾಗ ಸಬಲರನ್ನು ಸದೆ ಬಡಿಯಲು ತನ್ನ ಶಕ್ತಿಮೀರಿ ಪ್ರಯತ್ನಿಸತಕ್ಕವನು. ಇದಿಷ್ಟು, ಹೊಗೆಕೊಳವೆಯ ಮೂಲೆಯಲ್ಲಿ ಜನ ಹೇಳಿಕೊಳ್ಳುತ್ತಿದ್ದ ಪರಂಪರಾಗತ ಕಥೆ; ಆಶ್ಚರ್ಯವಾಗುವಮಟ್ಟಿನ ಪ್ರಾಮಾಣಿಕರೀತಿಯಲ್ಲಿ ಅದು ಅನೇಕ ವೇಳೆ ಸ್ವಭಾವಲಕ್ಷಣಗಳನ್ನು ಕಾಪಾಡಿಕೊಂಡು ಬರುತ್ತದೆ. ನ್ಯಾಯಮೂರ್ತಿ ಎಷ್ಟರ ಮಟ್ಟಿಗೆ ಆತನನ್ನು ಹೋಲುತ್ತಿದ್ದನು ಎಂಬ ಅಂಶವು ನಮ್ಮ ಕಥನದ ಮುಂದಿನ ಬೆಳವಣಿಗೆಯಿಂದ ವ್ಯಕ್ತಪಡಬಹುದು.

ಮೇಲೆ ಚಿತ್ರಿಸಿರುವ ಸಾಮ್ಯದಲ್ಲಿ ಯಾವ ಒಂದು ಅಂಶವಾಗಲಿ ಫೀಬೆಗೆ ತೋರಿಬರಲಿಲ್ಲ; ಅವಳ ಹಳ್ಳಿಗಾಡಿನ ಹುಟ್ಟು ಮತ್ತು ವಾಸಗಳ ಪರಿಣಾಮವಾಗಿ, ಮನೆತನದ ಪರಂಪರಾಗತ ಸಂಗತಿಗಳ ಬಹುಪಾಲಿನ ಬಗೆಗೆ ಅವಳು ನಿಜವಾಗಿ ಏನೂ ಅರಿಯದವಳಾಗಿದ್ದಳು; ಆ ಸಂಗತಿಗಳೇನೋ ಏಳು ಇಪ್ಪಾರಿನ ಮನೆಯ ಕೋಣೆಗಳಲ್ಲಿಯೂ ಹೊಗೆಕೊಳವೆಯ ಮೂಲೆಗಳಲ್ಲಿಯೂ ಜೇಡನ ಬಲೆಯಂತೆ, ಇಲ್ಲಣದಂತೆ, ಬಹುಕಾಲದಿಂದ ಉಳಿದು ಬಂದಿದ್ದುವು. ಆದರೂ, ಅದರಮಟ್ಟಿಗೆ ಬಹು ಅಲ್ಪವೆಂದು ಕಂಡುಬರುವ ಒಂದು ಸಂದರ್ಭವು ಅವಳ ಮೇಲೆ ವಿಚಿತ್ರಪ್ರಮಾಣದಲ್ಲಿ ಒಂದು ಭಯಂಕರ ಪರಿಣಾಮವನ್ನು ಬೀರಿತು. ಗಲ್ಲಿಗೇರಿದ ಮಾಟಗಾರ ಮಾಲನು–'ದೇವರು ಅವರಿಗೆ ಕುಡಿಯಲು ರಕ್ತವನ್ನು ಕೊಡಲಿ'– ಎಂಬುದಾಗಿ ಸರದಾರ ಪಿನ್ಚನ್ನನನ್ನೂ ಅವನ ಪೀಳಿಗೆಯವರನ್ನೂ ಶಪಿಸಿದ್ದನಷ್ಟೆ; ಜೊತೆಗೆ, ಈ ಅದ್ಭುತರಕ್ತವು ಆಗೊಮ್ಮೆ ಈಗೊಮ್ಮೆ ಅವರ ಗಂಟಲುಗಳಲ್ಲಿ ಗೊರಗೊರಗುಟ್ಟುವ ಶಬ್ದ ಕೇಳಿಬರುವುದು ಎಂಬ ಜನರ ಭಾವನೆಯೂ ಇದ್ದಿತಷ್ಟೆ; ಈ ಎರಡನ್ನೂ ಅವಳು ಕೇಳಿಬಲ್ಲಳು. ವಿವೇಕವಂತರಿಗೂ, ಅದಕ್ಕಿಂತ ಹೆಚ್ಚಾಗಿ ಪಿನ್ಚನ್ ಮನೆತನಕ್ಕೆ ಸೇರಿದ ವ್ಯಕ್ತಿಗೂ ಉಚಿತವೆನಿಸುವ ರೀತಿಯಲ್ಲಿ ಫೀಬೆ ಆ ಎರಡನೆಯ ಜನಾಪವಾದವನ್ನು ಅಸಬಂದ್ಧ ಪ್ರಲಾಪವೆಂದು ನಿಶ್ಚಯಿಸಿಬಿಟ್ಟಿದ್ದಳು; ನಿಸ್ಸಂದೇಹವಾಗಿ ಅದು ಇದ್ದುದಾದರೂ ಹಾಗೆಯೇ. ಆದರೆ ಪುರಾತನ ಮೂಢ ನಂಬಿಕೆಗಳು ತಲೆತಲಾಂತರಗಳ ಕಾಲ ಮಾನವಹೃದಯಗಳಲ್ಲಿ ಅದ್ದಿ ತೊಯ್ದು, ಮಾನವ ಶ್ವಾಸೋಚ್ಛಾಸದಲ್ಲಿ ಅಂತರ್ಗತವಾಗಿ, ಬಹುವಿಧದ

ನೀನು. ಅವನು ಹಿಂದೆ ಮಾಡಿದ ಪಾಪಕೃತ್ಯಗಳಿಗೆ ಮರುಗುವಷ್ಟಾದರೂ ಬುದ್ಧಿಯನ್ನು ದೇವರು ಅವನಿಗೆ ಕೊಡಲಿ!" ಎಂದು ಉದಾರಶೀಲನಾದ ನ್ಯಾಯಮೂರ್ತಿ ಹೇಳಿದನು.

ಅದಕ್ಕೆ ಫೀಬೆ ಹೇಳಿದಳು: "ಮರುಗುವ ಮಾತು ಬಂದರೆ, ಅವನಿಗಿಂತ ಕಡಮೆ ಪಾಪಕೃತ್ಯಮಾಡಿರುವವರು ಯಾರೂ ಇರಲಾರರು ಎಂದು ನನ್ನ ಭಾವನೆ."

ಕರುಣಾಪೂರ್ಣವಾದ ನೋಟವನ್ನು ಬೀರಿ, ನ್ಯಾಯಮೂರ್ತಿ ಮಾರ್ನುಡಿ ನುಡಿದನು: "ಕ್ಲಿಫರ್ಡ್ ಪಿನ್ಚನ್ನನ ವಿಚಾರವಾಗಿ, ನೀನು ಹಿಂದೆ ಎಂದೂ ಏನೂ ಕೇಳಿರಲಾರೆ, ಅಲ್ಲವೆ? ಅವನ ಚರಿತ್ರೆಯ ವಿಷಯ ನಿನಗೆ ಏನೂ ತಿಳಿದಿರಲಾರದು, ಅಲ್ಲವೆ? ಒಳ್ಳೆಯದು, ಸರಿಯಾಯ್ತು, ಬಿಡು; ನಿನ್ನ ತಾಯಿ ತಾನು ಸಂಬಂಧ ಪಡೆದಿದ್ದ ಕುಟುಂಬದ ಒಳ್ಳೆಯ ಹೆಸರನ್ನು ಕಾಪಾಡುವುದಕ್ಕಾಗಿ, ಅದಕ್ಕೆ ಬಹು ಉಚಿತವಾದ ಗೌರವವನ್ನು ತೋರಿಸಿದ್ದಾಳೆ. ಈ ನಿರ್ಭಾಗ್ಯ ಮನುಷ್ಯನ ವಿಚಾರವಾಗಿ ನಿನಗೆ ಸಾಧ್ಯವಿರುವಷ್ಟು ಉತ್ತಮವಾದುದನ್ನೆ ನಂಬು, ಉತ್ತಮವಾದುದನ್ನೇ ಹಾರೈಸು! ಕ್ರೈಸ್ತರು ಒಬ್ಬರು ಇನ್ನೊಬ್ಬರ ವಿಚಾರವಾಗಿ ತಮ್ಮ ಅಭಿಪ್ರಾಯವನ್ನು ಹೇಳುವಾಗ ಯಾವಾಗಲೂ ಅನುಸರಿಸಬೇಕಾದ ನಿಯಮ ಅದು; ಅದರಲ್ಲಿಯೂ, ಹತ್ತಿರದ ಬಂಧುಬಳಗದವರ ವಿಚಾರ ನುಡಿಯುವಾಗ ಅದು ಸರಿಯಾದದ್ದು, ವಿವೇಕದ ದಾರಿ; ಏಕೆಂದರೆ, ಬಂಧುಗಳ ನಡತೆ ಸ್ವಲ್ಪ ಮಟ್ಟಿಗೆ ಒಂದನ್ನೊಂದು ಹೊಂದಿಕೊಂಡಿರುತ್ತವೆ. ಅದು ಹೋಗಲಿ, ಕ್ಲಿಫರ್ಡ್ ಹಜಾರದಲ್ಲಿ ಇದ್ದಾನೆಯೋ? ಹಾಗೆಯೇ ಒಳಹೊಕ್ಕು, ನೋಡಿಕೊಂಡು ಹೋಗುತ್ತೇನೆ."

"ನಮ್ಮ ಅಕ್ಕ ಹೆಪ್ಸಿಬಾ ಅವರನ್ನೇ ಕರೆಯುವುದು ಮೇಲು ಎಂದು ತೋರುತ್ತದೆ" ಎಂದಳು ಫೀಬೆ; ಅಷ್ಟು ವಿಶ್ವಾಸಪರನಾದ ಬಂಧುವೊಬ್ಬನನ್ನು ಮನೆಯ ಸ್ವಂತ ಉಪಯೋಗದ ಒಳಭಾಗಕ್ಕೆ ಪ್ರವೇಶಿಸದಂತೆ ತಡೆಯಬೇಕೆ ಬೇಡವೆ ಎಂಬುದು ಅವಳಿಗೆ ಗೊತ್ತಾಗಲಿಲ್ಲ. "ಬೆಳಗ್ಗೆ ತಿಂಡಿ ತಿಂದಾದ ಮೇಲೆ ಆಕೆಯ ಸಹೋದರ ಆಗ ತಾನೆ ನಿದ್ದೆಹೋದಂತೆ ಕಾಣುತ್ತದೆ; ಅವನನ್ನು ತೊಂದರೆ ಮಾಡಲು ಅವಳಿಗೆ ಇಷ್ಟವಿರಲಾರದು, ಅದು ನನಗೆ ಖಂಡಿತ ಗೊತ್ತು. ನೀವು ಬಂದಿರುವ ವಿಚಾರ ಆಕೆಗೆ ತಿಳಿಸಲೆ?"

ತಾನು ಬಂದಿರುವುದನ್ನು ಮುಂದಾಗಿ ತಿಳಿಸದೆಯೇ ಪ್ರವೇಶಿಸಬೇಕೆಂದಿದ್ದ ತನ್ನ ವಿಚಿತ್ರವಾದ ಸಂಕಲ್ಪವನ್ನು ನ್ಯಾಯಮೂರ್ತಿ ತೋರ್ಪಡಿಸಿದನು; ಆಲೋಚನೆ ಮಾಡಿಕೂಡಲೆ ಅರಿವಿಲ್ಲದೆಯೇ ಅದರಂತೆ ನಡೆದುಕೊಳ್ಳುವ ಚಟುವಟಿಕೆಯ

ತಾನೇ ಬೇಸರಗೊಂಡು, ಅದಕ್ಕಾಗಿ ತುಸು ನಕ್ಕು, ಮಾರುತ್ತರ ಕೊಟ್ಟಳು.

"ನಿನಗೆ ಇಷ್ಟವಾದರೆ, ಒಂದು ಕ್ಷಣ ನಿಲ್ಲು" ಎಂದು ನ್ಯಾಯಮೂರ್ತಿ ಮರಳಿ ತನ್ನ ಮುಖದಿಂದ ನಗೆಯ ಬೆಳಕನ್ನು ಚೆಲ್ಲುತ್ತಾ ನುಡಿದನು: "ಈ ಬೆಳಗ್ಗೆ ನೀನು ಸ್ವಲ್ಪಮಟ್ಟಿಗೆ ಗಾಬರಿಗೊಂಡಿರುವಂತೆ ಕಾಣುತ್ತಿದ್ದೀಯೆ. ತಂಗಿ ಫೀಬೆ, ಈ ಪಟ್ಟಣದ ಗಾಳಿ ನಿನ್ನ ಒಳ್ಳೆಯ, ಸೊಗಸಾದ, ಹಳ್ಳಿಯ ಅಭ್ಯಾಸಗಳಿಗೆ ಒಗ್ಗುವುದಿಲ್ಲ. ಅಥವಾ, ಏನಾದರೂ ನಡೆದು, ಅಕ್ಕ ಹೆಪ್ಸಿಬಾ ಅವರ ಕುಟುಂಬದಲ್ಲಿ ಏನಾದರೂ ವಿಶೇಷವಾದ್ದು ಸಂಭವಿಸಿ, ಅದರಿಂದ ನಿನ್ನ ಮನಸ್ಸು ಕಲಕಿದೆಯೇನು? ಯಾರಾದರು ಬಂದಿದ್ದಾರೆಯೇನು? ನನಗೆ ಹಾಗೆಯೇ ತೋರಿತು! ನನ್ನ ಪುಟ್ಟ ತಂಗಮ್ಮಾ, ನಿನ್ನ ನೆಮ್ಮದಿ ಕೆಟ್ಟಿರುವುದರಲ್ಲಿ ಆಶ್ಚರ್ಯವೇನಿಲ್ಲ. ಅಂತಹ ಅತಿಥಿಯೊಂದಿಗೆ ವಾಸಮಾಡುವುದು ಏನೂ ಅರಿಯದ ನಿನ್ನಂಥ ಚಿಕ್ಕ ಹುಡುಗಿಯನ್ನು ದಿಕ್ಕು ತೋಚದ ಹಾಗೆ ಮಾಡಬಹುದು!"

"ಅಪ್ಪಾ, ನೀನು ಹೇಳುವುದು ನನಗೆ ಅರ್ಥವೇ ಆಗುವುದಿಲ್ಲ!" ಎಂದು ನ್ಯಾಯಮೂರ್ತಿಯನ್ನು ಬೆದಕಿನೋಡುತ್ತಾ ಅವಳು ಉತ್ತರಿಸಿದಳು: "ಮನೆಯಲ್ಲಿ ಹೆದರಿಕೆ ಹುಟ್ಟಿಸುವಂತಹ ಅತಿಥಿ ಯಾರೂ ಇಲ್ಲ; ಇಲ್ಲಿ ಇರುವವರೆಂದರೆ, ಒಬ್ಬ ಸಾಧುವಾದ ಬಡಪ್ರಾಣಿ, ಹಸುಗೂಸಿನಂಥ ಮನುಷ್ಯ; ಅಕ್ಕ ಹೆಪ್ಸಿಬಾ ಅವರ ಸಹೋದರ ಎಂದು ನನ್ನ ನಂಬಿಕೆ. ಅವರ ಬುದ್ಧಿ ಅಷ್ಟೊಂದು ಪೂರ್ತಿ ಸರಿಯಾಗಿರಲಾರದು ಎಂದು ನನಗೆ ಶಂಕೆ; ಈ ವಿಚಾರ ನನಗಿಂತ ನಿಮಗೆ ಚೆನ್ನಾಗಿ ತಿಳಿದೀತು; ಆದರೆ ಆತ ಎಷ್ಟು ಸೌಮ್ಯವಾಗಿ ಸಾಧುವಾಗಿ ಕಾಣುತ್ತಾರೆ ಎಂದರೆ, ತಾಯಿಯೊಬ್ಬಳು ತನ್ನ ಮಗುವನ್ನು ಆತನ ವಶಕ್ಕೆ ಸುರಕ್ಷಿತವಾಗಿ ಒಪ್ಪಿಸಿ ಹೋಗಬಹುದು; ಅಷ್ಟೇ ಅಲ್ಲ, ತಾನು ಆ ಮಗುವಿಗಿಂತ ಎಲ್ಲೋ ಕೆಲವು ವರ್ಷ ಮಾತ್ರ ದೊಡ್ಡವನು ಎಂದು ತಿಳಿದು ಅದರೊಂದಿಗೆ ಆಟವಾಡಿಯಾನು! ಆತ ನನ್ನನ್ನು ಗಾಬರಿಗೊಳಿಸುತ್ತಾನೆಯೆ! ಒಹ್, ಖಂಡಿತವಾಗಿ ಇಲ್ಲ!"

"ನನ್ನ ಸೋದರ ಸಂಬಂಧಿ ಕ್ಲಿಫರ್ಡನ ವಿಚಾರವಾಗಿ ಇಷ್ಟೊಂದು ಒಳ್ಳೆಯ ಅಭಿಪ್ರಾಯದ, ಮರೆಮಾಚದ ಮಾತನ್ನು ಕೇಳಿ ನನಗೂ ಸಂತೋಷವೆನಿಸಿದೆ. ಅನೇಕ ವರ್ಷಗಳ ಹಿಂದೆ, ನಾನೂ ಅವನೂ ಹುಡುಗರಾಗಿ, ತರುಣರಾಗಿ, ಒಟ್ಟಿಗೆ ಇದ್ದಾಗ ಅವನನ್ನು ಕಂಡರೆ ನನಗೆ ತುಂಬ ವಿಶ್ವಾಸವಿತ್ತು; ಈಗಲೂ ಕೂಡ ಅವನಿಗೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲಿಯೂ ನನಗೆ ವಿಶ್ವಾಸದ ಆಸಕ್ತಿಯಿದೆ. ಫೀಬೆ ಅವನು ದುರ್ಬಲ ಮನಸ್ಸಿನವನಾಗಿ ಕಾಣುತ್ತಾನೆ ಎನ್ನುತ್ತೀಯೆ

ವೈರಭಾವವನ್ನು ಸೂಚಿಸುತ್ತಿತ್ತು; ಅದರ ನೈತಿಕಬಲವನ್ನು ಅವನು ಅಳೆಯಹೋಗಿದ್ದರೆ, ಅವನು ಬೆಚ್ಚದಿದ್ದರೂ ಬೆರಗಾಗುತ್ತಿದ್ದನು. ಅವಳು ತನ್ನ ಕೈಯಿಂದ ಹೊರಕ್ಕಟ್ಟುವ ಸನ್ನೆಯನ್ನು ಮಾಡಿ, ಮನೆಬಾಗಿಲ ಕಪ್ಪು ಚೌಕಟ್ಟಿನ ನಡುವೆ, ಪ್ರತಿಬಂಧಕ ಶಕ್ತಿಯೇ ಪೂರ್ಣಾಕೃತಿಯ ಪರಿಪೂರ್ಣಚಿತ್ರ ರೂಪವನ್ನು ತಳೆದಿದೆಯೋ ಎಂಬಂತೆ, ಚಿತ್ರವತ್ತಾಗಿ ನಿಂತಿದ್ದಳು. ಆದರೆ, ಈಗಲೀಗ ನಾವು ಹೆಪ್ಸಿಬಾಳ ರಹಸ್ಯವನ್ನು ಹೊರಗೆಡವಲೇ ಬೇಕು: ಅವಳ ಸ್ವಭಾವಕ್ಕೆ ಅಂಟಿಬಂದ ಸಹಜ ಕಂಪನಶೀಲವು ಈಗ ತೀವ್ರಕಂಪನವಾಗಿಯೇ ಕಾಣಿಸಿಕೊಂಡು, ಅವಳ ಕೀಲುಗಳನ್ನೆಲ್ಲಾ ಒಂದಕ್ಕೊಂದು ಸಂಬಂಧವಿಲ್ಲದಂತೆ ಚಲಿಸುವಹಾಗೆ ಮಾಡಿದ್ದಿತು; ಇದು ಅವಳ ಅರಿವಿಗೂ ಬಂದ ಸಂಗತಿ.

ಹೆಪ್ಸಿಬಾಳ ಎದುರಿಸಲಾಗದ ಹೋರಾಟದ ಪ್ರಯತ್ನದ ಹಿಂದೆ ನಿಜವಾದ ಧೈರ್ಯ ಎಷ್ಟು ಸ್ವಲ್ಪ ಇದ್ದಿತೆಂಬುದನ್ನು ನ್ಯಾಯಮೂರ್ತಿ ತಿಳಿದಿದ್ದನೆಂದು ಕಾಣುತ್ತದೆ. ಅದು ಹೇಗಾದರೂ ಇರಲಿ, ಅವನು ಸಮಾಹಿತಮನಸ್ಕನಾಗಿದ್ದುದರಿಂದ, ಬೇಗನೆ ಚೇತರಿಸಿಕೊಂಡು, ಕೈಚಾಚಿ ತನ್ನ ಸೋದರೀ ಸಮಾನಳ ಬಳಿಗೆ ಸಾರಿದನು; ಹಾಗೆ ಸಾರಿದಾಗ, ತಾನು ಮುಂದುವರಿದುದು ವಿಶ್ವಾಸದ ಕಾವನ್ನು ಸೂಸುವಂತೆ ಕಾಣುವ ತುಂಬುನಗೆಯ ಮರೆಯಲ್ಲಿ ಅರಿವಿಗೆ ಬಾರದಂತೆ ಮಾಡುವ ವಿವೇಕದ ಎಚ್ಚರಿಕೆಯನ್ನು ವಹಿಸಿದ್ದನು; ಆ ವಿಶ್ವಾಸದ ನಗೆಯ ಶಾಖವು ಆಗ ಇದ್ದುದಕ್ಕಿಂತ ಅರ್ಧದಷ್ಟು ಕಡಮೆಯಾಗಿದ್ದರೂ ಕೂಡ, ತಡಕೆಗೆ ಹಬ್ಬಿಸಿದ್ದ ದ್ರಾಕ್ಷಿಯಬಳ್ಳಿ ಅದರ ಬೇಸಗೆಯಂತಹ ಪ್ರಭಾವಕ್ಕೆ ಸಿಲುಕಿದ್ದರೆ ತಟ್ಟನೆ ಕಂದುಗೆಂಪು ಬಣ್ಣಕ್ಕೆ ತಿರುಗಿ ಬಿಡಬಹುದಾಗಿತ್ತು. ನಿಜವಾಗಿ, ಹೆಪ್ಸಿಬಾ ಒಂದು ವೇಳೆ ಹಳದಿಯ ಮೇಣದ ಬೊಂಬೆಯಾಗಿದ್ದಿದ್ದರೆ, ಅವಳನ್ನು ಇದ್ದೆಡೆಯಲ್ಲಿಯೇ ಕರಗಿಸಿಬಿಡುವುದು ಅವನ ಉದ್ದೇಶವಾಗಿದ್ದಿರಬಹುದು.

"ಹೆಪ್ಸಿಬಾ, ನನ್ನ ಪ್ರಿಯ ಸಹೋದರೀ, ನಾನು ಸಂತೋಷದಿಂದ ಹಿಗ್ಗುವಂತಾಗಿದೆ!" ಎಂದು ನ್ಯಾಯಮೂರ್ತಿ ಅತ್ಯಂತ ಜೋರಾಗಿ ಕೂಗಿ ಹೇಳಿದನು: "ಕಟ್ಟಕಡೆಗೆ ಈಗಲಾದರೂ ನೀನು ಯಾವುದೋ ಒಂದು ಉದ್ದೇಶಕ್ಕಾಗಿ ಬದುಕುವಂತಾಗಿದೆ. ಹೌದು ನಾವೆಲ್ಲರೂ,– ನಿನ್ನ ಸ್ನೇಹಿತರು ಮತ್ತು ಬಂಧುಗಳು,– ನಾವೆಲ್ಲರೂ ನಿನ್ನೆಯವರೆಗೆಗಿಂತ ಇಂದು ಬದುಕಿರಬೇಕಾದ ಅಗತ್ಯ ಹೆಚ್ಚಾಗಿದೆ. ಕ್ಲಿಫರ್ಡ್ ನೆಮ್ಮದಿಯಿಂದಿರುವ ಸಲುವಾಗಿ ನನ್ನ ಶಕ್ತಿಯಲ್ಲಿರುವ ಯಾವ ಸಹಾಯವನ್ನಾದರೂ ನೀಡುವುದಕ್ಕೆ ತವಕಗೊಂಡು ಮುಂದೆ ಹೋಗಲು ನಾನು ತಡಮಾಡಿಲ್ಲ. ಆತ ನಮಗೆಲ್ಲರಿಗೂ ಸೇರಿದವನು. ನವುರಾದ ಅಭಿರುಚಿಯಳ್ಳ,

ಸ್ವಭಾವದ ಫೀಬೆ ಬಾಗಿಲ ಕಡೆಗೆ ಹೆಜ್ಜೆ ಹಾಕಿದಾಗ, ಸ್ವಲ್ಪವೂ ಮರ್ಯಾದೆಯನ್ನು ಲೆಕ್ಕಿಸದೆ ಅವನು ಅವಳನ್ನು ಪಕ್ಕಕ್ಕೆ ಎಳೆದನು.

"ಕೂಡದು, ಮಿಸ್ ಫೀಬೆ, ಕೂಡದು" ಎಂದು ನುಡಿದನು ನ್ಯಾಯಮೂರ್ತಿ ಪಿನ್ಚನ್; ಆಗ ಅವನ ಧ್ವನಿ ಗುಡುಗಿನ ಗರ್ಜನೆಯಂತೆ ಗಂಭೀರವಾಗಿತ್ತು, ಇಕ್ಕಿದ ಹುಬ್ಬುಗಂಟು ಗುಡುಗನ್ನು ಮೊಳಗಿಸುವ ಮೇಘದಷ್ಟು ಕಪ್ಪಗಿತ್ತು. "ನಿಲ್ಲು ನೀನಿಲ್ಲ! ನನಗೆ ಮನೆ ಗೊತ್ತಿದೆ, ನನ್ನ ಸೋದರ ಸಂಬಂಧಿ ಹೆಪ್ಸಿಬಾನೂ ನನಗೆ ಗೊತ್ತು; ಅವಳ ತಮ್ಮ ಕ್ಲಿಫರ್ಡ್‌ನನ್ನೂ ಬಲ್ಲೆ! ನಾನು ಬಂದಿರುವ ಸಮಾಚಾರವನ್ನು ತಿಳಿಸಬೇಕಾದ ತೊಂದರೆಯನ್ನು ನನ್ನ ಪುಟ್ಟ ಹಳ್ಳಿಯ ತಂಗಿ ವಹಿಸಬೇಕಾಗಿಲ್ಲ!" ಮಧ್ಯೆ ಒಂದು ಮಾತು ಹೇಳುವುದಾದರೆ, ಈ ಆಮೇಲಿನ ಮಾತುಗಳಲ್ಲಿ ಅವನ ತಟ್ಟನೆಯ ಕಾಠಿನ್ಯವು ಅವನ ಮೊದಲಿನ ಸೌಮ್ಯವರ್ತನೆಗೆ ತಿರುಗಿದ ಕುರುಹುಗಳಿದ್ದುವು.– "ಫೀಬೇ, ನಿನಗೆ ನೆನಪಿರತಕ್ಕದ್ದು, ನಾನು ಇಲ್ಲಿಗೆ ಪರಿಚಯಸ್ಥ, ನೀನು ಹೊಸಬಳು. ಹೀಗಿರುವುದರಿಂದ, ಸುಮ್ಮನೆ ಒಳಕ್ಕೆ ಹೋಗಿ ಕ್ಲಿಫರ್ಡ್ ಹೇಗಿದ್ದಾನೆಯೋ ನಾನೇ ಪ್ರತ್ಯಕ್ಷವಾಗಿ ನೋಡಿಬರುತ್ತೇನೆ; ಅವನಿಗೂ ಹೆಪ್ಸಿಬಾಗೂ ನನ್ನ ಮನಸ್ಸು ಎಷ್ಟು ದಯೆಯಿಂದ ಕೂಡಿದೆ ಎನ್ನುವುದನ್ನು ತಿಳಿಸಿ, ಅವರಿಗೆ ಒಳ್ಳೆಯದನ್ನು ಕೋರಿಬರುತ್ತೇನೆ. ಈ ಸನ್ನಿವೇಶದಲ್ಲಿ, ಅವರಿಗೆ ಉಪಕಾರ ಮಾಡಬೇಕೆಂದು ನನಗೆ ಎಷ್ಟು ಬಯಕೆಯಿದೆ ಎನ್ನುವುದನ್ನು ಅವರು ನನ್ನ ಬಾಯಿಂದಲೇ ಕೇಳಬೇಕಾದ್ದು ಸರಿ. ಆಹಾ! ಇಗೋ, ಹೆಪ್ಸಿಬಾ ತಾನೇ ಇಲ್ಲಿ ಬಂದುಬಿಟ್ಟಳು!"

ಅದು ಹಾಗೆಯೇ ಆಗಿತ್ತು. ನ್ಯಾಯಮೂರ್ತಿಯ ಕಂಠಸ್ವರಕಂಪನಗಳು ದಿವಾನಖಾನೆಯಲ್ಲಿದ್ದ ವೃದ್ಧ ಮಹಿಳೆಯನ್ನು ಮುಟ್ಟಿದ್ದುವು; ಅಲ್ಲಿ ಅವಳು ನಿದ್ದೆ ಮಾಡುತ್ತಿದ್ದ ತನ್ನ ಸಹೋದರನನ್ನು ಕಾಯುತ್ತಾ ಕುಳಿತಿದ್ದಳು. ಅವಳು ಈಗ ಮನೆಯ ದ್ವಾರವನ್ನು ರಕ್ಷಿಸಬಂದಳೋ ಎಂಬಂತೆ ಹೊರಬಂದಳು; ಆಗ ಅವಳು ಹೇಗೆ ಕಾಣುತ್ತಿದ್ದಳೆಂದರೆ,– ಅದ್ಭುತ ಕತೆಗಳಲ್ಲಿ, ಮಂತ್ರದ ಬಂಧನಕ್ಕೊಳಗಾದ ಸುಂದರಿಯನ್ನು ಕಾವಲುಕಾಯುವ 'ಡ್ರ್ಯಾಗನ್' ಮೃಗದ ಹಾಗೆಯೇ ಕಾಣುತ್ತಿದ್ದಳು. ಆ ಕ್ಷಣದಲ್ಲಿ, ಅವಳ ಮುಖದ ಮೇಲೆ ಅಭ್ಯಾಸವಾಗಿ ಕಾಣಿಸಿಕೊಳ್ಳುತ್ತಿದ್ದ ಸಿಡುಕಿನ ಹುಬ್ಬು ಗಂಟು ನಿರ್ವಿವಾದವಾಗಿ ಅತಿ ಭಯಂಕರವಾಗಿ ಕಾಣುತ್ತಿತ್ತು; ಸಮೀಪ ದೃಷ್ಟಿಯ ಪರಿಣಾಮ ಎಂಬ ಸರಳವಾದ ವಿವರಣೆಯಿಂದ ಅದನ್ನು ಅಲಕ್ಷ್ಯ ಮಾಡುವ ಹಾಗಿರಲಿಲ್ಲ; ಅದರ ವಕ್ರತೆ ನ್ಯಾಯಮೂರ್ತಿ ಪಿನ್ಚನ್ನನ ಕಡೆಗೇ ತಿರುಗಿತ್ತು; ಆಳವಾಗಿ ನೆಲಸಿದ್ದ, ಸ್ವಭಾವಸಿದ್ಧ

ಕಂಡುಬಂದು, ಅದನ್ನು ಎಂದಿಗಿಂತಲೂ ಹತ್ತುಮಡಿ ಹೆಚ್ಚು ಹುಳಿಯಾಗಿ ಮಾಡಿತು.

"ಕ್ಲಿಫರ್ಡನಿಗೆ ಈ ಮನೆಯಲ್ಲಿ ಒಂದು ನೆಲೆ ಇದೆ!" ಎಂದಳೂ ಅವಳು; ಅವಳ ಮನಸ್ಸು ಇನ್ನೂ ವಿಪರೀತ ಕಲಕಿಹೋಗಿತ್ತು, ತಟ್ಟನೆ ಒಂದು ವಾಕ್ಯಕ್ಕಿಂತ ಹೆಚ್ಚಾಗಿ ಆಡಲಾರದವಳಾಗಿದ್ದಳು.

"ದೇವರು ನಿನ್ನನ್ನು ಕ್ಷಮಿಸಲಿ ಹೆಪ್ಸಿಬಾ" ಎಂದು ನ್ಯಾಯಮೂರ್ತಿ ಪಿನ್ಚನ್ನನು, ನ್ಯಾಯವಿತರಣೆಯ ಆ ಪರಮ ನ್ಯಾಯಸ್ಥಾನದ ಸನ್ನಿಧಿಯಲ್ಲಿ ತನ್ನ ಪ್ರಾರ್ಥನೆಯನ್ನು ಸಲ್ಲಿಸುತ್ತಾ ಭಕ್ತಿಯಿಂದ ಕಣ್ಣೆತ್ತಿ ಆ ಕಡೆ ನೋಡಿದನು: "ಈ ವಿಚಾರದಲ್ಲಿ ಬಹಳ ಹಳೆಯದಾದ ಪೂರ್ವಕಲ್ಪಿತ ದುರಭಿಪ್ರಾಯವಾಗಲಿ ವೈರಬುದ್ಧಿಯಾಗಲಿ ನಿನ್ನನ್ನು ಬಾಧಿಸುತ್ತಿದ್ದರೆ, ದೇವರೇ ನಿನ್ನನ್ನು ಕ್ಷಮಿಸಲಿ! ನಾನು ಬಿಚ್ಚುಹೃದಯದಿಂದ ಇಲ್ಲಿ ನಿಂತಿದ್ದೇನೆ, ನಿನಗು ಕ್ಲಿಫರ್ಡನಿಗೂ ಅಲ್ಲಿ ಎಡೆಗೊಡಲು ಇಷ್ಟವುಳ್ಳವನಾಗಿದ್ದೇನೆ, ತವಕಪಡುತ್ತಿದ್ದೇನೆ. ನನ್ನ ಸಹಾಯವನ್ನು, ನಿನ್ನ ಕ್ಷೇಮಕ್ಕಾಗಿ ನಾನು ಮನಃಪೂರ್ವಕವಾಗಿ ಮುಂದಿಟ್ಟಿರುವ ಸಲಹೆಗಳನ್ನು, ನಿರಾಕರಿಸಬೇಡ! ಅವು ಸರ್ವವಿಧದಲ್ಲಿಯೂ ನಿನ್ನ ಅತ್ಯಂತ ಹತ್ತಿರದ ಬಂಧುವೊಬ್ಬನು ಮಾಡಲು ತಕ್ಕವಾಗಿವೆ. ನಿನ್ನ ಹಳ್ಳಿಗಾಡಿನ ನಿವಾಸವು ಒದಗಿಸುವ ಸಂತೋಷಕರವಾದ ಸ್ವಾತಂತ್ರ್ಯವು ಅಪೇಕ್ಷೆಪಟ್ಟ ಮಾತ್ರಕ್ಕೆ ಅವನದಾಗಿರುವಾಗ, ಗಾಳಿಯಾಡದ ಮಂಕುಕವಿದ ಈ ಮನೆಯಲ್ಲಿ ನಿನ್ನ ಸಹೋದರನನ್ನು ಬಂಧಿಸಿಟ್ಟರೆ, ಅದು ಬಹು ಭಾರಿ ಹೊಣೆಯಾಗುವುದು."

"ಅದು ಕ್ಲಿಫರ್ಡ್‌ನಿಗೆ ಎಂದಿಗೂ ಸರಿಹೋಗುವುದಿಲ್ಲ" ಎಂದು ಹೆಪ್ಸಿಬಾ ಮೊದಲಿನಂತೆಯೆ ಸಂಗ್ರಹವಾಗಿ ತಿಳಿಸಿದಳು.

ನ್ಯಾಯಮೂರ್ತಿ ಅಸಮಾಧಾನವನ್ನು ತೋರಿಸುತ್ತಾ ಕಿಡಿಕಾರಿದನು: "ಎಲೆ ಹೆಣ್ಣೇ! ಏನಿದೆಲ್ಲದರ ಅರ್ಥ? ನಿನಗೆ ಬೇರೆ ಯಾವುದಾದರೂ ಜೀವನಾಧಾರವಿದೆಯೋ? ಇಲ್ಲ, ಅಷ್ಟರಮಟ್ಟಿನ ಸಂಶಯವಿತ್ತು ನನಗೆ! ಜೋಕೆ, ಹೆಪ್ಸಿಬಾ ಜೋಕೆ! ಅವನಿಗೆ ಹಿಂದೆ ಎಂದೂ ಸಂಭವಿಸಲಾರದು, ಅಂತಹ ಸರ್ವನಾಶದ ಕತ್ತಲಕೂಪದ ಅಂಚಿನಲ್ಲಿದ್ದಾನೆ ಕ್ಲಿಫರ್ಡ್. ನೀನೋ ಹೆಣ್ಣು ಹೆಂಗಸು, ನಿನ್ನ ಕೂಡ ಎಂತಹ ಮಾತುಕತೆ ನನಗೆ? ದಾರಿಬಿಡು! ನಾನು ಕ್ಲಿಫರ್ಡ್‌ನನ್ನು ನೋಡಬೇಕು!"

ಹೆಪ್ಸಿಬಾ ತನ್ನ ಕೃಶವಾದ ಒಡಲನ್ನು ಬಾಗಿಲಿಗೆ ಅಡ್ಡವಾಗಿ ಚಾಚಿನಿಂತಳು; ಆಗ ಗಾತ್ರದಲ್ಲಿ ನಿಜವಾಗಿಯೂ ಹೆಚ್ಚುವಂತೆ ಕಂಡಳು; ಅಲ್ಲದೆ ಅವಳ ಹೃದಯದ

ಸೌಂದರ್ಯ ಪ್ರೇಮಿಯಾದ ಅವನಿಗೆ ಏನೇನು ಎಷ್ಟೆಷ್ಟು ಬೇಕಾಗಿದೆ– ಅವನಿಗೆ ಎಷ್ಟು ಬೇಕಾಗುತ್ತಿದ್ದಿತು– ಎಂಬುದನ್ನು ನಾನು ಬಲ್ಲೆ. ನನ್ನ ಮನೆಯಲ್ಲಿ ಯಾವುದಿದೆಯೋ ಅದನ್ನು–ಚಿತ್ರಗಳು, ಪುಸ್ತಕಗಳು, ದ್ರಾಕ್ಷಾಮದ್ಯ, ಉತ್ಕೃಷ್ಟ ಭೋಜನಪದಾರ್ಥಗಳು–ಅವೆಲ್ಲವನ್ನೂ ತನ್ನ ಇಷ್ಟದಂತೆ ಅವನು ಕೇಳಿ ಪಡೆಯಬಹುದು! ಅವನನ್ನು ನೋಡಿದರೆ ನನಗೆ ಅತ್ಯಂತ ಹೃದಯಪೂರ್ವಕವಾದ ತೃಪ್ತಿಯುಂಟಾಗುವುದು. ಈ ಕ್ಷಣವೆ ಒಳಕ್ಕೆ ಬರಲೇನು?"

"ಕೂಡದು, ಭೇಟಿಗೆ ಬಂದವರನ್ನು ಆತ ನೋಡಲಾರ" ಎಂದು ಹೆಪ್ಸಿಬಾ ಉತ್ತರಕೊಟ್ಟಳು; ಅವಳ ಧ್ವನಿ ತುಂಬ ನೋವಿನಿಂದ ನಡುಗುತ್ತಿದ್ದುದರಿಂದ, ಹಲವು ಮಾತುಗಳಿಗೆ ಅವಕಾಶವಿರಲಿಲ್ಲ.

"ಭೇಟಿಗಾಗಿ ಬಂದವನೆ ನಾನು? ನನ್ನನ್ನು ಹಾಗೆ ಕರೆಯುತ್ತೀಯಾ, ನನ್ನ ಪ್ರಿಯ ಸಹೋದರೀ" ಎಂದು ಗಟ್ಟಿಯಾಗಿ ಹೇಳಿದನು ನ್ಯಾಯಮೂರ್ತಿ; ಆದರಶೂನ್ಯವಾದ ಆ ಮಾತಿನಿಂದ ಅವನ ಸೂಕ್ಷ್ಮ ಮನಸ್ಸು ನೊಂದಂತೆ ಕಾಣುತ್ತದೆ: "ಹೋಗಲಿ, ಹಾಗಿದ್ದಮೇಲೆ, ಕ್ಲಿಫರ್ಡನೇ ನನ್ನ ಅತಿಥಿಯಾಗಲಿ, ನೀನೂ ಹಾಗೆಯೇ ನನ್ನ ಅತಿಥಿಯಾಗು. ಈ ಕೂಡಲೆ ನನ್ನ ಮನೆಗೆ ಬಾ. ಹಳ್ಳಿಗಾಡಿನ ಗಾಳಿ, ಮತ್ತು ನಾನು ನನ್ನ ಬಳಿ ಕೂಡಿ ಹಾಕಿರುವ ಎಲ್ಲಾ ಅನುಕೂಲತೆಗಳು– ಅನುಕೂಲತೆಗಳೇನು, ಭೋಗವಸ್ತುಗಳು ಎಂದೇ ಹೇಳಬಹುದು– ಇವೆಲ್ಲಾ ಅವನಿಗೆ ಅದ್ಭುತ ರೀತಿಯಲ್ಲಿ ಉಪಕಾರಮಾಡುತ್ತವೆ. ಅಲ್ಲದೆ, ಪ್ರಿಯ ಹೆಪ್ಸಿಬಾ, ನಮ್ಮ ಪ್ರಿಯ ಕ್ಲಿಫರ್ಡನನ್ನು ಸುಖಿಯಾಗಿ ಮಾಡುವುದಕ್ಕಾಗಿ, ನಾನೂ ನೀನೂ ಒಟ್ಟುಗೂಡಿ ಆಲೋಚನೆ ಮಾಡೋಣ, ಒಟ್ಟಿಗೆ ಅವನನ್ನು ಕಾಯೋಣ, ಒಟ್ಟಿಗೆ ಶ್ರಮಿಸೋಣ! ಬಾ! ಆ ರೀತಿ ಮಾಡುವುದು ನನ್ನ ಕರ್ತವ್ಯ ಮಾತ್ರವಲ್ಲ, ಅದರಿಂದ ನನಗೆ ಸಂತೋಷವೂ ಆಗುವುದು; ಅದರ ವಿಚಾರವಾಗಿ ನಾವು ಹೆಚ್ಚು ಮಾತಾಡಲೇಕೆ? ಈ ಕೂಡಲೆ ನನ್ನ ಬಳಿಗೆ ಹೊರಟು ಬಾ!"

ಉಪಕಾರ ಮಾಡುವ ಅಪೇಕ್ಷೆಯನ್ನು ತೋರುವ ಈ ಮಾತುಗಳನ್ನೂ ಬಂಧುಬಳಗದವರ ಅಗತ್ಯಗಳನ್ನು ಗುರುತಿಸಿ ಅರಿಯುವ ಅಂಥ ಉದಾರ ಬುದ್ಧಿಯನ್ನೂ ಕಂಡು, ನ್ಯಾಯಮೂರ್ತಿ ಪಿನ್ಚನ್ನನ ಬಳಿಗೆ ಓಡಿಹೋಗಿ, ಅತ್ಯಲ್ಪಕಾಲದ ಹಿಂದೆ ತಾನು ನೀಡಲು ಹಿಂದೆಗೆದಿದ್ದ ಮುತ್ತನ್ನು ಈಗ ತಾನಾಗಿ ಕೊಡಬೇಕೆಂದೆನಿಸಿತು ಫೀಬೆಗೆ. ಆದರೆ ಹೆಪ್ಸಿಬಾಳ ವಿಚಾರದಲ್ಲಿ ಪ್ರತಿಕ್ರಿಯೆ ಬೇರೆಯಾಗಿತ್ತು; ನ್ಯಾಯಮೂರ್ತಿಯ ಮುಗುಳುನಗೆ, ದ್ರಾಕ್ಷಿಹುಳಿಯ ಮೇಲೆ ಬಿಸಿಲು ಕೆಲಸಮಾಡುವಂತೆ, ಅವಳ ಹುಳಿಮನಸ್ಸಿನ ಮೇಲೆ ಬಿಸಿಲು ಕೆಲಸಮಾಡುವಂತೆ, ಅವಳ ಹುಳಿಮನಸ್ಸಿನ ಮೇಲೆ ಪರಿಣಾಮ ಬೀರುವಂತೆ

ಇಷ್ಟಾದರೂ ಕೂಡ ಒಬ್ಬ ಶ್ರೇಷ್ಠ ಸ್ನೇಹಪರವ್ಯಕ್ತಿಯನ್ನು ನಾವು ನಿಂದಿಸುತ್ತಿಲ್ಲವೆ? ನ್ಯಾಯಮೂರ್ತಿಯನ್ನು ಈಗ ನೋಡಿ! ತನ್ನ ಪ್ರೇಮ ದಯಾಪೂರ್ವಕವಾದ ಉಪಕಾರ ಕೃತ್ಯಗಳನ್ನು ಮೆಚ್ಚಿಕೊಳ್ಳಲು ಅಸಮರ್ಥರಾದವರ ಮೇಲೆ ಅವುಗಳನ್ನು ತಾನು ಅತ್ಯುತ್ಸಾಹದಿಂದ ಹೇರಹೋಗುತ್ತಿರುವುದು ತಪ್ಪು ಎಂಬುದನ್ನು ಅವನು ಅರಿತುಕೊಂಡಿರುವುದು ಸ್ಪಷ್ಟವಾಗಿದೆ. ಅವರ ಮನಸ್ಸು ಮಾರ್ಪಾಟುಹೊಂದಿ ಮೇಲಾಗುವವರೆಗೂ ಅವನು ಕಾದಿರುವನು; ಈಗಿಗಿಂತ ಆಗ ಅವರಿಗೆ ಸಹಾಯಮಾಡಲು ಅವನು ಹೆಚ್ಚು ಸಿದ್ಧನಾಗಿರುವನು. ಬಾಗಿಲಿಂದ ಅವನು ಹಿಂದಕ್ಕೆ ಸರಿಯುತ್ತಿರುವಾಗ, ಸರ್ವಗ್ರಾಹಿಯಾದ ದಯಾಗುಣವು ಅವನ ಮುಖದಲ್ಲಿ ಪ್ರಜ್ವಲಿಸುತ್ತಿದೆ; ಸರ್ವಪ್ರಪಂಚದೊಂದಿಗೆ ಹೆಪ್ಸಿಬಾ, ಪುಟ್ಟ ಫೀಬೆ, ಹಾಗೂ ಕಣ್ಣಿಗೆ ಕಾಣದಿದ್ದ ಕ್ಲಿಫರ್ಡ್—ಈ ಮೂವರನ್ನೂ ತನ್ನ ವಿಶ್ವ ವಿಶಾಲ ಹೃದಯದಲ್ಲಿ ಒಳಕೊಂಡು, ಅಲ್ಲಿ ಅವರಿಗೆ ಅದರ ಪ್ರೇಮಪೂರದ ಸುಖೋಷ್ಣ ಸ್ನಾನವನ್ನು ಮಾಡಿಸುವನು— ಎಂಬುದನ್ನೂ ಆ ದಯಾಗುಣವು ಸೂಚಿಸುತ್ತದೆ.

"ಪ್ರಿಯ ಹೆಪ್ಸಿಬಾ, ನನಗೆ ನೀನು ಪರಮ ಅನ್ಯಾಯ ಮಾಡುತ್ತಿದ್ದಿಯೇ" ಎಂದು ಅವನು ಹೇಳಿದನು; ಹಾಗೆ ಹೇಳುವಾಗ, ಮೊದಲು ಬಹು ಕರುಣೆಯಿಂದ ತನ್ನ ಕೈಯನ್ನು ಅವಳೆಡೆಗೆ ನೀಡಿ, ಅನಂತರ ಹೊರಡುವುದಕ್ಕೆ ಸಿದ್ಧನಾಗಿ ಕೈಗೆ ಗವುಸು ಹಾಕಿಕೊಂಡನು. "ಬಹುದೊಡ್ಡ ಅನ್ಯಾಯ! ಆದರೆ ನಾನು ಅದನ್ನು ಕ್ಷಮಿಸುತ್ತೇನೆ; ನನ್ನ ವಿಚಾರವಾಗಿ ನೀನು ಇನ್ನೂ ಒಳ್ಳೆಯ ಭಾವನೆಯನ್ನು ಹೊಂದಲು ಸಾಧ್ಯವಾಗುವಂತೆ ನಾನು ಪ್ರಯತ್ನಪಡುತ್ತೇನೆ. ನಮ್ಮ ಬಡ ಕ್ಲಿಫರ್ಡ್ ಇಷ್ಟು ಶೋಚನೀಯವಾದ ಮನಃಸ್ಥಿತಿಯಲ್ಲಿರುವಾಗ, ಸದ್ಯದಲ್ಲಿ ಅವನನ್ನು ಭೇಟಿಮಾಡಬೇಕೆಂದು ಒತ್ತಾಯಪಡಿಸಲಾರೆ, ಅದು ಸರಿಯೆ. ಆದರೆ, ಅವನು ನನ್ನ ಸ್ವಂತ ಸಹೋದರನೆಂಬ ಭಾವನೆಯಿಂದ ಅವನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆ; ಅಲ್ಲದೆ, ನೀವು ಮಾಡಿರುವ ಅನ್ಯಾಯವನ್ನು ಒಪ್ಪಿಕೊಳ್ಳುವಂತೆ ನಿನ್ನನ್ನೂ ಅವನನ್ನೂ ಬಲವಂತಪಡಿಸುವ ವಿಚಾರದಲ್ಲಿ ನಾನು ಎಂದಿಗೂ ನಿರಾಶನಾಗುವುದಿಲ್ಲ, ನನ್ನ ಪ್ರಿಯ ಸಹೋದರಿ. ಆ ಸಂದರ್ಭ ಒದಗಿದಾಗ, ನಿಮಗೆ ಮಾಡಲು ನನ್ನ ಕೈಲಾಗುವ ಅತ್ಯುತ್ತಮ ಉಪಕಾರವನ್ನು ನೀವು ಪಡೆದುಕೊಳ್ಳುವಂತೆ ಮಾಡುತ್ತೇನೆ, ಇದಕ್ಕಿಂತ ಬೇರೆ ಯಾವ ಸೇಡನ್ನೂ ನಾನು ತೀರಿಸಿಕೊಳ್ಳಬಯಸುವುದಿಲ್ಲ."

ಅವನು ಹೆಪ್ಸಿಬಾಗೆ ತಲೆಬಾಗಿಸಿ, ಫೀಬೆಯ ಕಡೆ ತಿರುಗಿ ತಲೆಯನ್ನು

ತುಂಬ ಅಪಾರ ದಿಗಿಲೂ ಕ್ಷೋಭೆಯೂ ಇದ್ದುದರಿಂದ, ಬಹಳ ಭಯಂಕರವಾಗಿಯೂ ಕಾಣುತ್ತಿದ್ದಳು. ಆದರ, ಒಳಗಿನ ಕೋಣೆಯಿಂದ ಒಂದು ಧ್ವನಿ ಕೇಳಿಬಂದು, ಬಲಾತ್ಕಾರವಾಗಿ ದಾರಿಮಾಡಿಕೊಂಡು ಹೋಗಬೇಕೆಂದಿದ್ದ ನ್ಯಾಯಮೂರ್ತಿಯ ಸ್ಪಷ್ಟ ಉದ್ದೇಶಕ್ಕೆ ತಡೆಯುಂಟಾಯಿತು; ದುರ್ಬಲವಾದಧ, ನಡುಕವುಳ್ಳ, ಗೋಳುಕರೆಯ ಧ್ವನಿಯಾಗಿತ್ತು ಅದು; ಆತ್ಮರಕ್ಷಣೆಮಾಡಿಕೊಳ್ಳಲು ಬೆಚ್ಚಿಬಿದ್ದ ಹಸಿಗೂಸಿಗಿರುವಷ್ಟು ಶಕ್ತಿಗಿಂತ ಹೆಚ್ಚಿನ ಶಕ್ತಿಯಿಲ್ಲದ, ನಿಸ್ಸಹಾಯಕವಾದ ಆರ್ತತೆಯನ್ನು ಸೂಚಿಸುವ ಧ್ವನಿಯಾಗಿತ್ತು ಅದು.

"ಹೆಪ್ಸಿಬಾ, ಹೆಪ್ಸಿಬಾ! ಆತನ ಮುಂದೆ ಮಂಡಿಯೂರಿ ಕುಳಿತುಕೋ! ಅವನ ಪಾದಗಳನ್ನು ಮುತ್ತಿಡು! ಒಳಕ್ಕೆ ಬರಬೇಡವೆಂದು ಅವನನ್ನು ಬೇಡಿಕೊ! ಓಹ್, ನನ್ನ ಮೇಲೆ ದಯೆ ತೋರಲಿ ಅವನು! ದಯೆ ತೋರಲಿ, ದಯೆ!" ಎಂದು ಚೀರಿತು ಆ ಧ್ವನಿ.

ಕ್ಷಣಮಾತ್ರ, ಹೆಪ್ಸಿಬಾಳನ್ನು ಪಕ್ಕಕ್ಕೆ ತಳ್ಳಿ, ಎಲ್ಲಿಂದ ಹರುಕು ಮುರುಕು ಮಾತಿನ ಗೋಳುಕರೆಯ ಬೇಡಿಕೆಯ ಗೊಣಗಾಟ ಕೇಳಿಬರುತ್ತಿತ್ತೋ ಆ ದಿವಾನಖಾನೆಗೆ ಹೊಸಲು ದಾಟಿ ಹೋಗುವುದು ನ್ಯಾಯಮೂರ್ತಿಯ ದೃಢನಿರ್ಧಾರವಾಗಿರಲಿಲ್ಲವೇ ಎಂಬುದು ಸಂದೇಹಾಸ್ಪದವಾಗಿ ಕಂಡುಬಂದಿತು. ಅವನನ್ನು ತಡೆಹಿಡಿದದ್ದು ಕನಿಕರವಿಲ್ಲ; ಏಕೆಂದರೆ, ಆ ದುರ್ಬಲಧ್ವನಿಯ ಮೊದಲ ಕೂಗು ಕೇಳಿದೊಡನೆಯೆ ಅವನ ಕಣ್ಣುಗಳಲ್ಲಿ ಕೆಂಪು ಬೆಂಕಿ ಹೊತ್ತಿಕೊಂಡಿತು; ತ್ವರೆಯಿಂದ ಒಂದು ಹೆಜ್ಜೆಯನ್ನು ಮುಂದಕ್ಕೆ ಇಟ್ಟನವನು; ಆಗ, ಆತನ ಇಡಿಯ ದೇಹದಿಂದ ಅನಿರ್ವಚನೀಯವೂ ಭೀಕರವೂ ಕಠೋರವೂ ಆದ ಒಂದು ಶಕ್ತಿ ಕತ್ತಲಿಸುತ್ತಾ ಹೊರಹಾಯ್ದಿತು. ನ್ಯಾಯಮೂರ್ತಿ ಪಿನ್ಚನ್ನನನ್ನು ಅರಿಯಬೇಕೆಂದರೆ, ಆ ವೇಳೆಯಲ್ಲಿ ನೋಡಬೇಕಾಗಿತ್ತು ಅವನನ್ನು. ಅಂತು ಹೊಸ ಅರಿವು ಆದಮೇಲೆ, ತನಗೆ ಇಷ್ಟ ಬಂದಷ್ಟು ಉಷ್ಣವನ್ನು ಚೆಲ್ಲಿ ಅವನು ಮುಗುಳುನಗೆ ನಗಲಿ,– ಕಾದ ಕಬ್ಬಿಣದ ಸಲಾಕಿಯಿಂದ ಒತ್ತಿದ ಮುದ್ರೆಯನ್ನು ಪ್ರೇಕ್ಷಕನ ನೆನಪಿನಿಂದ ಕರಗಿಸಿ ಕಳೆಯುವುದಕ್ಕಿಂತ ಬೇಗನೆ ದ್ರಾಕ್ಷಿಯನ್ನು ಕೆಂಗಂದು ಬಣ್ಣಕ್ಕೂ. ಕುಂಬಳಕಾಯನ್ನು ಹಳದಿ ಬಣ್ಣಕ್ಕೂ ತಿರುಗಿಸಬಲ್ಲವನಾಗಿದ್ದನು. ಅಲ್ಲದೆ, ಅದು ಅವನ ಮುಖವನ್ನು ಹೆಚ್ಚು ಭಯಂಕರವಾಗಿ ಮಾಡಿದ್ದಿತೇ ಹೊರತು ಕಡಮೆಯಾಗಿ ಅಲ್ಲ; ಅದು ಕ್ರೋಧವನ್ನಾಗಲಿ ದ್ವೇಷವನ್ನಾಗಲಿ ವ್ಯಕ್ತಪಡಿಸದೆ, ತನ್ನನ್ನು ಬಿಟ್ಟು ಉಳಿದೆಲ್ಲವನ್ನೂ ನಾಶಮಾಡುವ ಒಂದು ಬಗೆಯ ತೀಕ್ಷ್ಣವಾದ ಕ್ರೂರ ಉದ್ದೇಶವನ್ನು ವ್ಯಕ್ತ ಪಡಿಸುತ್ತಿತ್ತು.

ಹೆಪ್ಸಿಬಾ ಉತ್ತರಕೊಟ್ಟಳು: "ಅವುಗಳ ವಿಚಾರ ಮಾತಾಡಬೇಡ; ಅವನ ಹೃದಯ ಕಬ್ಬಿಣದ್ದು! ಈಗ ಹೋಗಿ, ಕ್ಲಿಫರ್ಡನನ್ನು ಸ್ವಲ್ಪ ಮಾತಾಡಿಸು! ಅವನನ್ನು ವಿನೋದಪಡಿಸಿ, ಶಾಂತನನ್ನಾಗಿರಿಸು! ಈಗಿನಂತೆ ನನ್ನ ಮನಸ್ಸು ಕಲಕಿರುವುದನ್ನು ಅವನು ಕಂಡರೆ, ಅವನ ಶಾಂತಿಗೆ ವಿಪರೀತ ಭಂಗವಾದೀತು. ಹೋಗು, ನನ್ನ ಕಂದಮ್ಮಾ, ನಾನು ಅಂಗಡಿಯನ್ನು ನೋಡಿಕೊಳ್ಳುತ್ತೇನೆ."

ಅದೇ ಮೇರೆಗೆ ಫೀಬೆ ಹೊರಟುಹೋದಳು; ಆದರೆ, ತಾನು ಅದೇ ತಾನೆ ಕಂಡಿದ್ದ ದೃಶ್ಯದ ತಾತ್ಪರ್ಯದ ಬಗೆಗೆ ತನಗೆ ತಾನೇ ಪ್ರಶ್ನಿಸಿಕೊಂಡು ಗೊಂದಲದಲ್ಲಿ ಬಿದ್ದಳು; ಅಲ್ಲದೆ ನ್ಯಾಯಮೂರ್ತಿಗಳು, ಚರ್ಚಿನ ಪುರೋಹಿತರು ಮತ್ತು ಅದೇ ಪ್ರಕಾರದ ಉನ್ನತ ಲಕ್ಷಣದ ಹಾಗೂ ಮಾನ್ಯರಾದ ಇತರ ವ್ಯಕ್ತಿಗಳು ಯಾವುದೇ ಒಂದು ಸಂದರ್ಭದಲ್ಲಿ ನ್ಯಾಯಪರರಾಗಿಯೂ ಋಜುಸ್ವಭಾವದವರಾಗಿಯೂ ಇರುವುದು ಬಿಟ್ಟು ನಿಜವಾಗಿಯೂ ಬೇರೆ ಹೇಗೆ ತಾನೆ ಇರಬಲ್ಲರು ಎಂಬ ಪ್ರಶ್ನೆಯೂ ಅವಳನ್ನು ಗೊಂದಲದಲ್ಲಿ ಕೆಡವಿತು. ಈ ಪರಿಯ ಸಂದೇಹವು ಅತ್ಯಂತವಾಗಿ ಮನಶ್ಶಾಂತಿಯನ್ನು ಕೆಡಿಸುವ ಪ್ರಭಾವವನ್ನು ಹೊಂದಿರುತ್ತದೆ; ಅದು ಸತ್ಯಾಂಶವೆಂದು ತೋರಿಬಂದರಂತೂ, ಅಚ್ಚುಕಟ್ಟಾದ ಕ್ರಮವಾದ ಹಿತಮಿತವಾದ ಜೀವನವನ್ನು ನಡೆಸುವ ಸ್ವಭಾವದವರ ಮನಸ್ಸಿನ ಮೇಲೆ ಭಯಂಕರವಾದ ಮತ್ತು ಚಕಿತಗೊಳಿಸುವ ಪರಿಣಾಮದೊಂದಿಗೆ ಎರಗುತ್ತದೆ. ನಮ್ಮ ಈ ಪುಟ್ಟ ಹಳ್ಳಿಯ ಹುಡುಗಿ ಅಂಥ ಜನರ ಗುಂಪಿಗೆ ಸೇರಿದವಳು. ಹೆಚ್ಚು ಧೈರ್ಯದಿಂದ ತತ್ತ್ವಚಿಂತೆಮಾಡುವ ಮನೋಭಾವದವರು ಎಂಥ ಸತ್ಯಾಂಶವನ್ನು ಅರಿತಾಗ ಅದರಿಂದಲೂ ಒಂದು ನಿಷ್ಠುರವಾದ ನಲಿವನ್ನು ಪಡೆಯಬಹುದು; ಕೆಡಕು ಲೋಕದಲ್ಲಿ ಇರತಕ್ಕದ್ದೇ ಆದ್ದರಿಂದ, ನೀಚನಂತೆಯೇ ಉಚ್ಚನೂ ಅದರಲ್ಲಿನ ತನ್ನ ಪಾಲನ್ನು ಗ್ರಹಿಸುವ ಸಂಭವವಿದೆ ಎಂದು ಅವರ ಸಮಾಧಾನ. ಹೆಚ್ಚು ವಿಶಾಲವಾದ ದೃಷ್ಟಿ, ಹೆಚ್ಚು ಆಳವಾಗಿ ಒಳಹೊಕ್ಕು ನೋಡುವ ಸಾಮರ್ಥ್ಯ– ಇವನ್ನುಳ್ಳವರಿಗೆ ಸ್ಥಾನಮಾನ, ಘನತೆ, ಪದವಿ ಇತರರ ಗೌರವವನ್ನು ಪಡೆಯಲು ಅರ್ಹತೆ ಹೊಂದಿರುವ ದೃಷ್ಟಿಯಿಂದ ಇವೆಲ್ಲವೂ ಭ್ರಾಂತಿಯೆಂದು ಮನದಟ್ಟಾಗುವುದು; ಆದರೂ ಅಷ್ಟರಿಂದಲೆ ವಿಶ್ವವೆಲ್ಲವೂ ಅವ್ಯವಸ್ಥೆಯಲ್ಲಿ ಮುಳುಗಿಹೋಗುವುದೇನೋ ಎಂಬ ಭಾವನೆಯೂ ಅವರಲ್ಲಿ ಉಂಟಾಗದು. ಆದರೆ ಫೀಬೆ, ವಿಶ್ವವನ್ನು ಅದರ ಹಳೆಯ ಸ್ಥಾನದಲ್ಲಿಯೆ ಇರಿಸುವ ಸಲುವಾಗಿ, ನ್ಯಾಯಮೂರ್ತಿ ಪಿನ್ಚನ್ನನ ಶೀಲ ಸ್ವಭಾವಕ್ಕೆ ಸಂಬಂಧಪಟ್ಟಂತೆ ತನ್ನ ಸ್ವಂತ ಸಹಜಜ್ಞಾನವನ್ನು ಸ್ವಲ್ಪಮಟ್ಟಿಗೆ ಅಡಗಿಸಿಬಿಡಲು ಅವಳಿಗೆ ಸಂತೋಷವೇ ಆಯಿತು.

ತೂಗುವುದರ ಮೂಲಕ, ಬೀದಿಯುದ್ದಕ್ಕೂ ಮುಗುಳುನಗೆ ಚೆಲ್ಲುತ್ತಾ ಸಾಗಿದನು. ಹಾಗೆ ಸಾಗುವಾಗ, ತನ್ನ ಐಶ್ವರ್ಯ, ಯಶಸ್ಸು, ಉಚ್ಚಪದವಿ– ಇವೆಲ್ಲವನ್ನೂ ತಾನು ಅನುಭೋಗಿಸುತ್ತಿರುವುದು ತಪ್ಪೋ ಎಂಬಂತೆ, ತನ್ನನ್ನು ಬಲ್ಲವರನ್ನು ಅವನು ಸಂಧಿಸಿದಾಗ ಅವರೊಡನೆ ಅಪಾರ ಸಲಿಗೆಯಿಂದಲೂ ವಿಶ್ವಾಸದಿಂದಲೂ ನಡೆದುಕೊಂಡು ಅವರ ಕ್ಷಮೆಯನ್ನು ಕೇಳಿಕೊಳ್ಳುತ್ತಿದ್ದನು; ಪ್ರಜಾರಾಜ್ಯದಲ್ಲಿ ಜನರ ಮನ್ನಣೆ ಗಳಿಸುವ ಧ್ಯೇಯವುಳ್ಳ ಐಶ್ವರ್ಯವಂತರೆಲ್ಲರೂ ಅನುಸರಿಸುವ ಪದ್ಧತಿ ತಾನೆ ಇದು. ಇಷ್ಟು ಮಾತ್ರವಲ್ಲ: ವಂದಿಸುವಾಗ, ತಾನು ವಂದಿಸಿದ ವ್ಯಕ್ತಿಯ ಕೀಳುತನಕ್ಕೆ ಅನುಗುಣವಾಗಿ ತನ್ನ ಘನತೆಯನ್ನು ಹೆಚ್ಚು ಹೆಚ್ಚಾಗಿ ಮೆರೆಯುತ್ತಿದ್ದನು; ಆ ಮೂಲಕ ತಾನು ಪಡೆದಿರುವ ಅನುಕೂಲತೆಗಳ ಬಗೆಗೆ ತಾನು ಪಡುತ್ತಿರುವ ಗರ್ವದ ಅರಿವನ್ನು ತೋರಿಸಿ ಕೊಡುತ್ತಿದ್ದನು; ಒಂದು ವೇಳೆ, ಅವನು ಮುಂದೆ ಸಾಗಿಹೋಗುತ್ತಿದ್ದಾಗ ಹಿಂದೆ ಅನುಚರರ ತಂಡವೊಂದು ಅವನನ್ನು ಹಿಂಬಾಲಿಸುತ್ತಿದ್ದರೆ ಆ ವೈಭವವನ್ನು ಹೇಗೆ ಅಲ್ಲಗೆಳೆಯಲಗುತ್ತಿರಲಿಲ್ಲವೋ, ಅವನ ಗರ್ವದ ಭಾವನೆಯನ್ನೂ ಹಾಗೆಯೆ ಅಲ್ಲಗಳೆಯಲಾಗುತ್ತಿರಲಿಲ್ಲ. ಮುಖ್ಯವಾಗಿ ಅಂದಿನ ಬೆಳಗ್ಗೆ, ನ್ಯಾಯಮೂರ್ತಿ ಪಿನ್ಚನ್ನನ ದಯಾಪೂರ್ಣ ಮುಖಕಾಂತಿಯ ಶಾಖ ಎಷ್ಟು ಹೆಚ್ಚಾಗಿದ್ದಿತೆಂದರೆ, ಎಂದಿಗಿಂತ ಹೆಚ್ಚಿನ ಬಿಸಿಲು ಬಂದು ಅದರ ಪರಿಣಾಮವಾಗಿ ಮೇಲೆದ್ದ ದೂಳನ್ನು ಅಡಗಿಸುವುದಕ್ಕಾಗಿ ಇನ್ನೊಂದು ಸಲ ನೀರುತುಂಬಿದ ಗಾಡಿಗಳನ್ನು ಬೀದಿಯಲ್ಲಿ ಹೊಡೆಯಿಸುವ ಅಗತ್ಯ ಕಂಡುಬಂದಿತು! (ಇದು ದಿಟವೊ ಸಟೆಯೊ, ಊರಿನ ವದಂತಿಯಂತೂ ಹೀಗಿದ್ದಿತು.)

ಅವನು ಅತ್ತ ಹೊರಟುಹೋದನೋ ಇಲ್ಲವೋ, ಇತ್ತ ಹೆಪ್ಸಿಬಾ ಅಸಾಧ್ಯವಾಗಿ ಬಿಳುಪೇರಿದಳು; ಫೀಬೆಯ ಹತ್ತಿರಕ್ಕೆ ತತ್ತರಿಸಿಕೊಂಡು ಹೋಗಿ, ಆ ಎಳೆಯ ಹುಡುಗಿಯ ಹೆಗಲಮೇಲೆ ತನ್ನ ತಲೆಯನ್ನು ಜೋಲಬಿಟ್ಟಳು.

"ಅಯ್ಯೊ, ಫೀಬೆ! ನನ್ನ ಬದುಕಿನ ಒಂದು ಭೀಕರವಸ್ತುವಾಗಿದ್ದಾನೆ ಆತ! ಅವನು ಎಂಥವನು ಎಂದು ಅವನಿಗೆ ತಿಳಿಸುವುದಕ್ಕೆ ನನಗೆ ಎಂದೆಂದಿಗೂ ಧೈರ್ಯವೇ ಬರುವುದಿಲ್ಲವೆ, ನನ್ನ ಕಂಠ ಬಹಳ ಹೊತ್ತು ನಡುಗುವುದು ಎಂದಿಗೂ ನಿಲ್ಲುವುದೇ ಇಲ್ಲವೆ?" ಎಂದು ಗೊಣಗುಟ್ಟಿದಳು.

"ಅವನು ಅಷ್ಟೊಂದು ಕ್ರೂರಿಯೇ?" ಎಂದು ಫೀಬೆ ಕೇಳಿದಳು. "ಆದರೂ ಸಹಾಯ ಮಾಡುವುದಾಗಿ ಅವನು ಕೊಟ್ಟ ವಾಗ್ದಾನಗಳು ಖಂಡಿತವಾಗಿ ದಯೆಯಿಂದ ಕೂಡಿದ್ದುವು."

# ೯. ಕ್ಲಿಫರ್ಡ್ ಮತ್ತು ಫೀಬೆ

ನಮ್ಮ ಬಡ ಹೆಪ್ಸಿಬಾಳ ಸಹಜ ಸತ್ತ್ವರಚನೆಯಲ್ಲಿ ನಿಜವಾಗಿಯೂ ಒಂದು ಉನ್ನತವಾದ, ಉದಾರವಾದ, ಘನವಾದ ಗುಣವಿದ್ದಿತು! ಅದಿಲ್ಲವೋ, ಬಡತನದ ಪರಿಣಾಮವಾಗಿ ಅವಳು ಗುಣಸಂಪನ್ನಳಾಗಿದ್ದಳು, ದುಃಖದ ದೆಸೆಯಿಂದ ಅವಳ ವ್ಯಕ್ತಿತ್ವ ಬೆಳೆದಿತ್ತು, ತನ್ನ ಸ್ಥಿರವಾದ ಹಾಗೂ ಏಕಾಂತವಾಸದ ಪ್ರಭಾವದಿಂದ ಮೇಲ್ಮಟ್ಟಕ್ಕೆ ಏರಿದ್ದಳು; ಈ ರೀತಿ ಅವಳಿಗೆ ಒಂದು ಸಾಹಸವಂತಿಕೆ ಪ್ರಾಪ್ತವಾಗಿತ್ತು; ಹೆಚ್ಚು ಸುಖಕರವಾದ ಸನ್ನಿವೇಶದಲ್ಲಿ ಅದು ಅವಳ ಸ್ವಭಾವಲಕ್ಷಣವಾಗಿ ಸೇರಿಕೊಳ್ಳುತ್ತಿರಲಿಲ್ಲ– ಸಂದರ್ಭ ಬಹುಶಃ ಮೇಲೆ ಹೇಳಿರುವಂತೆಯೇ ಇದ್ದಿರಬೇಕು. ಹೆಪ್ಸಿಬಾ ತಾನು ಈಗ ಯಾವ ಸ್ಥಿತಿಯಲ್ಲಿದ್ದಳೋ ಅದೇ ಸ್ಥಿತಿಗಾಗಿ ಹಾತೊರೆಯುತ್ತ ಬೇಸರದ ವರ್ಷಗಳನ್ನು ಕಳೆದಿದ್ದಳು; ಆಗೆಲ್ಲ ಬಹುಮಟ್ಟಿಗೆ ನಿರಾಶೆಯಿಂದಲೇ ಇದ್ದಳು; ಆಶೆಯ ಭರವಸೆ ಎಂದೂ ಇರಲಿಲ್ಲ ಅವಳಿಗೆ; ಆದರೆ ಆ ಸ್ಥಿತಿ ಒದಗುವುದು ಸಾಧ್ಯ, ಆ ಸಾಧ್ಯತೆ ಬಹಳ ಸ್ಪಷ್ಟವಾಗಿದೆ, ಎಂಬ ಭಾವನೆಯೇನೋ ಅವಳಿಗೆ ಯಾವಾಗಲೂ ಇದ್ದಿತು. ತನ್ನ ಸಹೋದರನಿಗಾಗಿ ತನ್ನನ್ನು ಮೀಸಲಾಗಿರಿಸಿಕೊಳ್ಳುವ ಅವಕಾಶವೊಂದನ್ನು ಬಿಟ್ಟು, ಅವಳು ತನಗಾಗಿ ದೈವದಲ್ಲಿ ಏನೂ ಬೇಡಿಕೊಂಡಿರಲಿಲ್ಲ; ಅವನು ಏನಾಗಿದ್ದನೋ, ಅಥವಾ ಏನಾಗಬಹುದಾಗಿದ್ದಿತೋ, ಅದಕ್ಕಾಗಿ ಅವಳು ಅವನನ್ನು ಬಹುವಾಗಿ ಪ್ರೀತಿಸಿದ್ದಳು, ಅಷ್ಟೊಂದು ಮೆಚ್ಚಿಕೊಂಡಿದ್ದಳು; ಮಾತ್ರವಲ್ಲ. ಅವನ ವಿಷಯವಾಗಿ ಪ್ರಪಂಚದಲ್ಲಿ ಇವಳೊಬ್ಬಳೇ ಹೀಗಿರುವವಳು ಎನ್ನುವಮಟ್ಟಿಗೆ ಅವಳು ಅವನಲ್ಲಿ ಸಂಪೂರ್ಣವಾದ, ತಪ್ಪದ, ನಿಷ್ಠೆಯನ್ನು ಜೀವನದುದ್ದಕ್ಕೂ ಪ್ರತಿಕ್ಷಣದಲ್ಲಿಯೂ ಇಟ್ಟಿದ್ದಳು. ಎಲ್ಲರೂ ಕೈಬಿಟ್ಟಿದ್ದ ಅವನು ಈಗ ತನ್ನ ಇಳಿವಯಸ್ಸಿನಲ್ಲಿ, ತನ್ನ ದೀರ್ಘಕಾಲದ ವಿಚಿತ್ರವಾದ ದೌರ್ಭಾಗ್ಯದಿಂದ ಹೊರಬಿದ್ದು ಇಲ್ಲಿ ಅವಳ ಸಹಾನುಭೂತಿಯ ಮಡಿಲಿಗೆ ಬಂದು ಬಿದ್ದಿದ್ದನು; ಹಾಗೆ ಆಶ್ರಯ ಪಡೆದದ್ದು ತಾನು ಶರೀರದೊಡನೆ ಉಳಿದಿರುವುದಕ್ಕಾಗಿ. ಒಂದು ಚೂರು ರೊಟ್ಟಿ ಪಡೆಯಲು ಮಾತ್ರವಲ್ಲ, ತಾನು ನೈತಿಕವಾಗಿ ಜೀವಿಸಿರಲು ಅಗತ್ಯವಾದುದೆಲ್ಲವನ್ನೂ ಪಡೆಯುವುದಕ್ಕೆ. ಅವನ ಕರೆಗೆ ಅವಳು ಪ್ರತ್ಯುತ್ತರಕೊಟ್ಟಿದ್ದಳು. ಕೃಶದೇಹದ, ಹಳೆಯ ಮಾಸಲು ರೇಷ್ಮೆಯ ಉಡುಪು ಧರಿಸಿದ್ದ, ಸೆಡೆತ ಕೀಲುಗಳ, ಸಿಡುಕು

ಆದರೆ ಆ ಬಗೆಗೆ ತನ್ನ ಅಕ್ಕ ಹೆಪ್ಸಿಬಾ ತಿರಸ್ಕಾರಭಾವವನ್ನು ತಳೆದುದಕ್ಕೆ ಒಂದು ಕುಟುಂಬಕಲಹದ ಪರಿಣಾಮವಾಗಿ ಅವಳ ಅಭಿಪ್ರಾಯವು ದ್ವೇಷಪೂರ್ಣವಾದುದೇ ಕಾರಣವೆಂದು ಫೀಬೆ ತಿರ್ಮಾನಿಸಿದಳು; ಕುಟುಂಬಕಲಹವು ಬತ್ತಿಹೋದ ಕಲುಷಿತ ಪ್ರೇಮವನ್ನು ದ್ವೇಷದ ಸಹಜವಿಷಯದೊಂದಿಗೆ ಬೆರಸಿ ಆ ದ್ವೇಷವನ್ನು ಇನ್ನೂ ಭಯಂಕರವನ್ನಾಗಿ ಮಾಡುತ್ತದೆ.

* * * *

ಹೊಂದಲಾರದ ಮನಸ್ಸನ್ನು ಅವರು ಸ್ವಲ್ಪವಾದರೂ ಆಕರ್ಷಿಸಿಯಾರು ಎಂದು ಊಹಿಸುವುದು ಕಷ್ಟ. ಆ ಬಳಿಕ, ಹೆಪ್ಸಿಬಾ 'ರಾಸೆಲಸ್'* ಎಂಬ ಗ್ರಂಥವನ್ನು ತೆಗೆದುಕೊಂಡು ಅದರಲ್ಲಿನ 'ಸುಖದ ಕಣಿವೆ' ಎಂಬ ಭಾಗವನ್ನು ಓದ ತೊಡಗಿದಳು; ನೆಮ್ಮದಿಯ ಬದುಕಿನ ರಹಸ್ಯವೇನೆಂಬುದನ್ನು ಆ ಭಾಗದಲ್ಲಿ ವಿವರಿಸಿರಬಹುದು, ಕಡೆಯ ಪಕ್ಷ ಈ ಒಂದು ದಿನದ ಮಟ್ಟಿಗಾದರೂ ಅದು ಕ್ಲಿಫರ್ಡನಿಗೂ ತನಗೂ ಉಪಯುಕ್ತವಾಗಬಹುದು ಎಂದು ಅವಳ ಸ್ಥೂಲ ಕಲ್ಪನೆ. ಆದರೆ ಆ 'ಸುಖದ ಕಣಿವೆ'ಯ ಮೇಲೆ ಒಂದು ಮೋಡ ಮುಸುಕಿತ್ತು. ಅದೂ ಅಲ್ಲದೆ, ಹೆಪ್ಸಿಬಾ ತಾನು ಓದುತ್ತಿದ್ದ ಭಾಗದ ಅರ್ಥಕ್ಕೆ ಯಾವ ಸಂಬಂಧವೂ ಇಲ್ಲದಂತೆ ಅದನ್ನು ಲೆಕ್ಕವಿಲ್ಲದಷ್ಟು ಸಲ ಒತ್ತಿ ಒತ್ತಿ ಓದಿ ಓದಿ ಹೇಳುವ ತಪ್ಪು ಕೆಲಸ ಮಾಡಿ, ತನ್ನ ಶ್ರೋತೃವಿಗೆ ತೊಂದರೆಕೊಡುತ್ತಿದ್ದಳು; ಅದನ್ನು ಅವನೂ ಕಂಡುಹಿಡಿದಂತೆ ತೋರಿಬಂದಿತು. ಅವನಾದರೂ ಅವಳು ಓದಿದ್ದರ ಅರ್ಥವನ್ನು ವಿಶೇಷವಾಗಿ ಗಮನಿಸಿದಂತೆ ಕಂಡುಬರಲಿಲ್ಲ; ಪ್ರತಿಯಾಗಿ, ಅದರಿಂದ ಲಾಭವನ್ನು ಹೊಂದುವ ಬದಲು ಅವಳ ವಾಚನದಿಂದ ಬೇಸರಗೊಂಡನೆಂಬುದು ಸ್ಪಷ್ಟವಾಗಿತ್ತು. ಅಲ್ಲದೆ, ಸ್ವಾಭಾವಿಕವಾಗಿಯೇ ಕರ್ಕಶವಾಗಿದ್ದ ಅವನ ಸಹೋದರಿಯ ಧ್ವನಿ ಅವಳ ದುಃಖಪೂರ್ಣ ಜೀವನದ ಪರಿಣಾಮವಾಗಿ ಒಂದು ವಟಗೊಟ್ಟುವ ಗುಣವನ್ನು ಪಡೆದಿದ್ದತು; ಆ ಬಗೆಯ ಧ್ವನಿ ಮಾನವಕಂಠಕ್ಕೆ ಅಂಟಿಕೊಂಡುಬಿಟ್ಟರೆ, ಪಾಪವನ್ನು ತೊಡೆದುಹಾಕುವುದು ಎಷ್ಟು ಕಷ್ಟವೋ ಅದನ್ನು ತೊಡೆದು ಹಾಕುವುದೂ ಅಷ್ಟೇ ಕಷ್ಟ. ಗಂಡಸಾಗಲಿ ಹೆಂಗಸಾಲಿ, ಆಗಾಗ್ಗೆ ನಲಿವಿನ ಅಥವಾ ನೋವಿನ ನುಡಿಯೊಂದಿಗೆ ಶ್ರುತಿಗೊಡುವ ಈ ಜೀವನಪರ್ಯಂತವಾದ ವಟಗುಟ್ಟುವಿಕೆ ಸ್ಥಿರ ದುಃಖದ ಲಕ್ಷಣಗಳ್ಲಿ ಒಂದು; ಅದು ಎಲ್ಲೆಲ್ಲಿ ಕಾಣಿಸಿಕೊಳ್ಳುತ್ತದೆಯೋ ಅಲ್ಲಿ ಅದರ ಅತ್ಯಲ್ಪ ಉಚ್ಚಾರಣೆಯೇ ಸಾಕು, ಅದು ವ್ಯಕ್ತಿಯ ದೌರ್ಭಾಗ್ಯದ ಸಮಸ್ತ ಇತಿಹಾಸವನ್ನು ಪ್ರಕಟಪಡಿಸುತ್ತದೆ. ಧ್ವನಿಯನ್ನು ಕಪ್ಪು ಬಣ್ಣದಲ್ಲಿ ಅದ್ದಿ ತೆಗೆದರೆ ಹೇಗೋ ಹಾಗೆ ಅದರ ಪರಿಣಾಮ; ಅಥವಾ– ಇನ್ನೂ ಹೆಚ್ಚು ಸೌಮ್ಯವಾದ ಹೋಲಿಕೆಯನ್ನು ನಾವು ಕೊಡಬೇಕೆನ್ನುವುದಾದರೆ,– ಧ್ವನಿಯ ಎಲ್ಲ ಪ್ರಭೇದಗಳ ಮೂಲಕವೂ ಸಾಗುವ ಈ ಸಂಕಟಕರವಾದ ವಟುಗುಟ್ಟುವಿಕೆ, ಮಾತೆಂಬ ಹರಳು ಮಣಿಗಳ ನಡುವೆ ಹಾದುಹೋಗಿ ಅವುಗಳಿಗೂ ತನ್ನ

---

*೧೮ನೆಯ ಶತಮಾನದಲ್ಲಿದ್ದ ಇಂಗ್ಲಿಷ್ ಕವಿ ಸ್ಯಾಮುಯಲ್ ಜಾನ್ಸನ್ನನ ಪ್ರಸಿದ್ಧವಾದ ಕೃತಿ.

ಮೋರೆಯ ದುಃಖಕರ ವಕ್ರತೆಯ ನಮ್ಮ ಬಡ ಹೆಪ್ಸಿಬಾ ತನ್ನ ಶಕ್ತಿ ಮೀರಿ ಸಹಾಯ ಮಾಡಲು ಸಿದ್ಧಳಾಗಿ ಮುಂದು ಬಂದಿದ್ದಳು; ಅವನು ಕೋರಿದ್ದರ ನೂರುಮಡಿಯಷ್ಟು ಸಹಾಯಮಾಡುಲು ಸಾಲುವಷ್ಟು ವಿಶ್ವಾಸವನ್ನು ಹೊಂದಿದ್ದಳು; ಅಂದಿನ ಮಧ್ಯಾಹ್ನದ ಮೇಲೆ ಹೆಪ್ಸಿಬಾ ಕಂಡುಬಂದುದಕ್ಕಿಂತ ಹೆಚ್ಚಾಗಿ ಕಂಬನಿ ತರುವ, ಹೆಚ್ಚು ಕರುಣುಮಾಯವಾದ ದೃಶ್ಯಗಳು ಬೇರೆ ಇರಲಾರವು– ಅದನ್ನು ಕಲ್ಪಿಸಿಕೊಳ್ಳುವಾಗ, ತಡೆಯಲಾಗದೆ ಒಂದು ಮುಗುಳು ನಗೆ ಮೂಡಿದರೆ ದೇವರು ನಮ್ಮನ್ನು ಕ್ಷಮಿಸಲಿ!

ತನ್ನ ಅಪಾರವಾದ ಪ್ರೇಮದಿಂದ ಆವನನ್ನು ಅಚ್ಛಾದಿಸಿ, ಅವನ ಸಮಸ್ತ ಪ್ರಪಂಚವೂ ಅದೇ ಎನ್ನುವಂತೆ ಮಾಡಿ, ಹೊರಪ್ರಪಂಚದ ಅನಾದರಣೆಯ ಮತ್ತು ನಿರುತ್ಸಾಹದ ಭಾವವು ಅವನನ್ನು ಸ್ವಲ್ಪವೂ ಕಾಡದಿರುವಂತೆ ಮಾಡಲು ಅವಳು ಅದೆಷ್ಟು ತಾಳ್ಮೆಯಿಂದ ಪ್ರಯತ್ನಪಟ್ಟಳು! ಅವನನ್ನು ವಿನೋದಗೊಳಿಸಲು ಅವಳು ಮಾಡಿದ ಆ ಸಣ್ಣ ಪುಟ್ಟ ಪ್ರಯತ್ನಗಳೋ! ಎಂಥ ಕನಿಕರಹುಟ್ಟಿಸುವಂಥವು ಆದರೂ ಎಷ್ಟು ಉದಾರಶೀಲದಿಂದ ಕೂಡಿದವು!

ಕವಿತೆ ಮತ್ತು ಕಥೆ ಎಂದರೆ ಅವನಿಗೆ ಮುಂಚಿನಿಂದಲೂ ಪ್ರೇಮ; ಇದನ್ನು ನೆನೆದು, ಒಂದು ಪುಸ್ತಕದ ಪೆಟ್ಟಿಗೆಯ ಬೀಗವನ್ನು ತೆಗೆದು ಅವು ಪ್ರಚಾರದಲ್ಲಿದ್ದ ಕಾಲದಲ್ಲಿ ಓದುವುದಕ್ಕೆ ಅತ್ಯತ್ತಮವೆನಿಸಿದ್ದ ಹಲವು ಪುಸ್ತಕಗಳನ್ನು ತೆಗೆದಿಟ್ಟಳು. ಒಂದು 'ಪೋಪ್' ಕವಿಯ ಗ್ರಂಥ; ಅದರಲ್ಲಿ 'ದಿ ರೇಪ್ ಆಫ್ ದಿ ಲಾಕ್' (The Rape of the Lock) ಕೂಡ ಅಚ್ಚಾಗಿತ್ತು. ಇನ್ನೊಂದು 'ಟ್ಯಾಟ್ಲರ್' (The Tatler) ಪತ್ರಿಕೆಯೂ, ಡ್ರೈಡನ್ನನ (Dryden) 'ಮಿಸೆಲನೀಸ್' (Miscellanies) ಸಂಪುಟದ ಯಾವುದೋ ಮಧ್ಯದ ಸಂಚಿಕೆಯೂ ಕೂಡಿ ಆದ ಪುಸ್ತಕ; ಅವುಗಳ ರಕ್ಷಾಕವಚದ ಮೇಲಿನ ಚಿನ್ನದ ರೇಕಿನ ಕೆಲಸವೆಲ್ಲಾ ಮಾಸಿಹೋಗಿದ್ದುವು; ಅವುಗಳ ಒಳಗೆ ಅಡಕವಾಗಿದ್ದ ಉಜ್ವಲ ಭಾವನೆಗಳೂ ಮಾಸಿಹೋಗಿದ್ದುವು. ಅವು ಕ್ಲಿಫರ್ಡ್‌ನಿಗೆ ಹಿಡಿಸಲಲ್ಲ. ಇವರೂ ಮತ್ತು ಸುಸಂಸ್ಕೃತ ಸಮಾಜಕ್ಕೆಂದು ಬರೆಯುವ ಇನ್ನಿತರ ಲೇಖಕರೂ ಬರೆಯುವ ಹೊಸ ಗ್ರಂಥಗಳು, ಆಗ ತಾನೆ ನೆಯ್ದ ರತ್ನಗಂಬಳಿಯ ವರ್ಣರಂಜಿತ ನೆಯ್ಗೆಯ ಹಾಗೆ ಪ್ರಕಾಶಮಾನವಾಗಿರುತ್ತವೆ; ಆದರೆ ಅಂಥ ಲೇಖಕರು ಎಲ್ಲ ಕಾಲಕ್ಕೂ ಪ್ರತಿಯೊಬ್ಬ ಲೇಖಕನನ್ನೂ ಆಕರ್ಷಿಸುತ್ತಾರೆ ಎನ್ನಲಾಗುವುದಿಲ್ಲ; ಕೆಲವು ಕಾಲ ಕಳೆದ ಮೇಲೆ ಅವರು ತಮ್ಮ ಆ ಆಕರ್ಷಕ ಶಕ್ತಿಯನ್ನು ಬಿಟ್ಟುಕೊಡಲು ಸಿದ್ಧವಾಗಿರಬೇಕು. ಆ ಕಾಲದ ರೀತಿನೀತಿಗಳನ್ನೂ ನಡೆನುಡಿಗಳನ್ನೂ ಕುರಿತು ಒಂದು ಸ್ಥೂಲ ಅಭಿಪ್ರಾಯವನ್ನು

ಬಾಹ್ಯಲಕ್ಷಣಗಳಾಗಿರುವಲ್ಲಿ, ಸಹಜ ಸೌಂದರ್ಯ ಪ್ರೇಮಿಯಾದ ಅವನು ತನ್ನ ಕಣ್ಣುಗಳನ್ನು ಎತ್ತಲೋ ದೂರಕ್ಕೆ ತಿರುಗಿಸಲು ಅವನಿಗೆ ಸಂತೋಷವೆನಿಸಿದ್ದರೆ, ಅದು ಅತ್ಯಂತ ಕನಿಕರಕ್ಕೆ ಪಾತ್ರವಾದ ಸಂಗತಿಯಾದರೂ ಅದರಲ್ಲಿ ಆಶ್ಚರ್ಯವೇನಿಲ್ಲ. ಬೇರೆ ಗತ್ಯಂತರವೇ ಇರಲಿಲ್ಲ. ಹಾಗೆ ಮಾಡಬೇಕೆಂಬ ಪ್ರೇರಣೆ ಅವನಲ್ಲಿ ಕಡೆಯವರೆಗೂ ಉಳಿಯುತ್ತಿದ್ದಿತು. ಅವನ ಕಡೆಗಾಲದಲ್ಲಿ, ಕ್ಲಿಫರ್ಡನ ತುಟಿಗಳ ಮೂಲಕ ಅವನ ಕೊನೆಯುಸಿರು ಮಂದಮಂದವಾಗಿ ತಪ್ಪಿಸಿಕೊಂಡು ಬರುತ್ತಿರುವಾಗ, ಅವಳು ತನ್ನ ಮೇಲೆ ಚೆಲ್ಲಾಡಿಬಿಟ್ಟ ಎಲ್ಲ ಪ್ರೀತಿಯನ್ನೂ ಮನಸಾರೆ ಒಪ್ಪಿಕೊಂಡ ಗುರುತಾಗಿ ಅವನು ನಿಸ್ಸಂದೇಹವಾಗಿಯೂ ಹೆಪ್ಸಿಬಾಳ ಕೈಹಿಡಿದು ಅದನ್ನು ಮೃದುವಾಗಿ ಒತ್ತಿ, ಅನಂತರ ಕಣ್ಣು ಮುಚ್ಚುವನು– ಸಾಯಬೇಕೆಂಬ ಉದ್ದೇಶದಿಂದ ಅಲ್ಲದಿದ್ದರೂ ಅವಳ ಮುಖವನ್ನು ಇನ್ನು ನೋಡಲಾರದ್ದಕ್ಕಾಗಿ ಬೇರೆ ಯತ್ನವಿಲ್ಲದೆ ಕಣ್ಣುಮುಚ್ಚುವನು! ಅಯ್ಯೊ ಬಡ ಹೆಪ್ಸಿಬಾ! ಏನುಮಾಡಬಹುದೆಂಬುದನ್ನು ಕುರಿತು ಅವಳು ತನ್ನಲ್ಲಿಯೇ ವಿಚಾರಮಾಡಿ, ತನ್ನ ರುಮಾಲು ಟೋಪಿಯನ್ನು ಬಣ್ಣದ ಬಟ್ಟೆ ಪಟ್ಟಿಗಳಿಂದ ಸಿಂಗರಿಸಬಾರದೇಕೆ ಎಂದು ಆಲೋಚಿಸಿದಳು; ಆದರೆ, ಹಲವಾರು ರಕ್ಷಕ ದೈವಗಳು ಆ ಕ್ಷಣವೇ ಧಾವಿಸಿ ಬಂದು, ಆ ಪ್ರಯೋಗವನ್ನು ಕೈಕೊಳ್ಳದಂತೆ ತಡೆಯುಂಟಾಯಿತು; ಅವಳು ಹಾಗೇನಾದರೂ ಮಾಡಿಬಿಟ್ಟಿದ್ದರೆ, ಯಾರ ವಿಚಾರದಲ್ಲಿ ಅವಳು ಆತಂಕಗೊಂಡಿದ್ದಳೋ ಆ ಪ್ರಿಯ ವ್ಯಕ್ತಿಗೆ ಅದು ಮಾರಕವಾಗಿ ಪರಿಣಮಿಸುತ್ತಿತ್ತು.

ಸಂಗ್ರಹಿಸಿ ಹೇಳುವುದಾದರೆ, ಹೆಪ್ಸಿಬಾಳ ರೂಪದ ಪ್ರತಿಕೂಲಗಳ ಜೊತೆಗೆ, ಅವಳು ಮಾಡುತ್ತಿದ್ದ ಎಲ್ಲ ಕಾರ್ಯಗಳಲ್ಲಿಯೂ ಒಂದು ಒರಟುತನ ತುಂಬಿಕೊಂಡಿತ್ತು; ಆ ಅನಿರ್ದಿಷ್ಟವಾದ ಯಾವುದೋ ಒಂದು ರೀತಿಯ ಅಂದಗೇಡಿತನವು ಯಾವ ಉಪಯೋಗಕ್ಕೂ ಬಾರದಂತಿತ್ತು; ಅದು ಅವಳಿಗೆ ಎಷ್ಟು ಮಾತ್ರಕ್ಕೂ ಭೂಷಣಪ್ರಾಯವಾಗಿರಲಿಲ್ಲ. ಅವಳು ಕ್ಲಿಫರ್ಡನ ವಿಷಾದಕ್ಕೆ ಎಡೆಗೊಟ್ಟಿದ್ದಳು; ಇದು ಅವಳಿಗೂ ಗೊತ್ತಿತ್ತು. ಈ ವಿಷಮಘಟ್ಟದಲ್ಲಿ, ಈ ವೃದ್ಧಕನ್ಯೆ ನೆರವಿಗಾಗಿ ಫೀಬೆಯ ಕಡೆಗೆ ತಿರುಗಿದಳು. ಅವಳ ಹೃದಯದಲ್ಲಿ ಯಾವ ಅಸೂಯೆಯೂ ಕಾಡುತ್ತಿರಲಿಲ್ಲ. ಕ್ಲಿಫರ್ಡನ ಸೌಖ್ಯಕ್ಕೆ ಅವಳು ವೈಯಕ್ತಿಕವಾಗಿ ಸಾಧನವಾಗುವಂತೆ ಮಾಡುವುದರ ಮೂಲಕ ಅವಳು ಯಾವಜ್ಜೀವವೂ ಅವನಲ್ಲಿ ಇಟ್ಟಿದ್ದ ಸಾಹಸಪೂರ್ಣವಾದ ಭಕ್ತಿ ವಿಶ್ವಾಸಗಳನ್ನು ದೈವವು ಸಾರ್ಥಕಗೊಳಿಸಿದ್ದರೆ, ಮೇಲು ನೋಟಕ್ಕೆ ಗೆಲುವಾದ ಬಣ್ಣದ ಕಳೆಯನ್ನು ಹೊಂದಿರದಿದ್ದರೂ ನಿಜವಾದ ಹಾಗೂ

ಬಣ್ಣವನ್ನು ಕೊಡುವ ಕಪ್ಪು ರೇಷ್ಮೆಯ ದಾರದಂತೆ ಎಂದು ಹೇಳಬಹುದು. ಸತ್ತ ಬಯಕೆಗಳಿಗಾಗಿ ದುಃಖವನ್ನು ಸೂಚಿಸುವ ಕರಿಯ ವಸ್ತ್ರವನ್ನು ಧರಿಸಿರುತ್ತವೆ ಅಂತಹ ಧ್ವನಿಗಳು; ಇವು ಕೂಡ ಅವುಗಳೊಂದಿಗೆಯೇ ಸತ್ತು ಸಮಾಧಿ ಯಾಗುವುದೊಳ್ಳಿತು.

ತನ್ನ ಪ್ರಯತ್ನಗಳಿಂದ ಕ್ಲಿಫರ್ಡನು ಸಂತಸಗೊಳ್ಳಲಿಲ್ಲವೆಂಬುದನ್ನು ಅರಿದು, ಇನ್ನೂ ಹೆಚ್ಚಾಗಿ ಹುರಿದುಂಬಿಸುವ ವಿನೋದಸಾಧನೋಪಾಯಗಳಿಗಾಗಿ ಹೆಪ್ಸಿಬಾ ಮನೆಯನ್ನೆಲ್ಲಾ ಹುಡುಕಾಡಿದಳು. ಒಂದು ಸಲ, ಆಯಲಿಸ್ ಪಿನ್ಚನ್ನಳ 'ಹಾರ್ಪ್ಸಿಕಾರ್ಡ್' ವಾದ್ಯದ ಮೇಲೆ ಅವಳ ಕಣ್ಣು ನೆಲಸಿತು. ಅದೊಂದು ಮಹಾ ಅಪಾಯದ ಗಳಿಗೆಯಾಗಿದ್ದಿತು. ಕಾರಣವೇನೆಂದರೆ, ಈ ಸಂಗೀತವಾದ್ಯದ ಸುತ್ತಲೂ, ಹಾಗೂ ಭೂತಪ್ರೇತಗಳ ಬೆರಳುಗಳು ಅದರಲ್ಲಿ ನುಡಿಸುತ್ತಿದ್ದ ಶೋಕಗೀತೆಗಳ ಸುತ್ತಲೂ ಪರಂಪರಾಗತವಾಗಿ ಬೆಳೆದುಬಂದ ಒಂದು ಭೀಕರತೆಯಿದ್ದಿತಷ್ಟೆ; ಅದನ್ನೂ ಲೆಕ್ಕಿಸದೆ, ಈ ನೆಚ್ಚಿನ ಸಹೋದರಿ ಕ್ಲಿಫರ್ಡನ ಪ್ರಯೋಜನಾರ್ಥವಾಗಿ ಆ ವಾದ್ಯದ ತಂತಿಯ ಮೇಲೆ ಕೈಯಾಡಿಸುತ್ತಾ, ಅದರ ವಾದನದೊಂದಿಗೆ ತನ್ನ ಧ್ವನಿಯ ಸೊಬಗನ್ನೂ ಜೊತೆಗೂಡಿಸುವ ಘನವಾದ ಆಲೋಚನೆಯನ್ನು ಹೊಂದಿದ್ದಳು. ಬಡಪಾಯಿ ಕ್ಲಿಫರ್ಡ್! ಬಡಪಾಯಿ ಹೆಪ್ಸಿಬಾ! ಬಡವಾದ್ಯ! ಮೂರೂ ಕೂಡಿಬಿಟ್ಟಿದ್ದರೆ, ಗೋಳುಕರೆಯ ಮೇಳ ವಾಗುತ್ತಿತ್ತು! ಯಾವುದೋ ಒಂದು ಒಳ್ಳೆಯ ಕಾರ್ಯಸಾಧನದ ಸಹಾಯದಿಂದ– ಬಹುಶಃ ಬಹಳ ಕಾಲದ ಹಿಂದೆ ಸಮಾಧಿಯಾಗಿದ್ದ ಆಯಲಿಸ್ಸಿನ ಅವ್ಯಕ್ತ ಮಧ್ಯಸ್ಥಿಕೆಯೆ ಇದ್ದರೂ ಇರಬಹುದು–ಎರಗುವುದರಲ್ಲಿದ್ದ ವಿಪತ್ತು ನಿವಾರಣೆ ಯಾಯಿತು.

ಆದರೆ ಎಲ್ಲಕ್ಕಿಂತ ಅತ್ಯಂತ ಕೆಟ್ಟದ್ದು ಎಂದರೆ–ಬಹುಶಃ ಹೆಪ್ಸಿಬಾಳಿಗೆ ಎಂತೊ ಅಂತೆ ಕ್ಲಿಫರ್ಡನಿಗೂ ಸಹಿಸಲು ಅತ್ಯಂತ ಕಷ್ಟಕರವಾದ ದುರದೃಷ್ಟದ ಸಂಗತಿ ಎಂದರೆ, ಅವಳ ಸ್ವರೂಪದ ಬಗೆಗೆ ಅವನಿಗಿದ್ದ ಅಜೇಯವಾದ ಜುಗುಪ್ಸೆ. ಎಂದೂ ಮನಸ್ಸಿಗೆ ಹಿಡಿಸದಂತಹ, ಈಗಲಂತೂ ವಯಸ್ಸಿನ ಹಾಗೂ ದುಃಖದ ಕಾರಣದಿಂದ ಕಠಿನವಾದ ಅವಳ ಮುಖಮುದ್ರೆ, ಮತ್ತು ಅವನ ಸಲುವಾಗಿ ಲೋಕದ ವಿರುದ್ಧ ಅವಳು ತಳೆದಿದ್ದ ತೀವ್ರ ಅಸಮಾಧಾನ; ಅವಳ ಉಡುಪು, ಅದರಲ್ಲಿ ವಿಶೇಷವಾಗಿ ಅವಳ ರುಮಾಲುಟೋಪಿ; ಅವಳ ಏಕಾಂತವಾಸದ ಪರಿಣಾಮವಾಗಿ ಅವಳಿಗೆ ಅರಿವಿಲ್ಲದಂತೆಯೇ ಅವಳಲ್ಲಿ ರೂಢಮೂಲವಾಗಿದ್ದ ವಿಚಿತ್ರವಾದ ವಿಲಕ್ಷಣವಾದ ನಡೆನುಡಿ– ಇವು ಆ ಬಡ ಮಹಿಳೆಯ

ಬೆಳೆಯಗೊಡಲು ಪುರಾತನ ಪಿನ್ಚನ್ ಭವನ ತಕ್ಕ ಸ್ಥಳವಾಗಿತ್ತು. ಆದರೆ ಈಗ ಅವಳ ಚೈತನ್ಯವು ಶಕ್ತಿಯಲ್ಲಿ– ಹೆಪ್ಸಿಬಾಳ ಭಾರಿಯಾದ ಕಬ್ಬಿಣದ ಕಟ್ಟುಹಾಕಿದ್ದ ಟ್ರಂಕುಗಳಲ್ಲಿ ಒಂದರಲ್ಲಿ ಇರಿಸಿದ್ದ ಗುಲಾಬಿ ಅತ್ತರಿನ ಸೂಕ್ಷ್ಮ ಪ್ರಮಾಣವನ್ನು ಹೋಲುತ್ತಿತ್ತು; ಲಿನೆನ್ ನಾರುಬಟ್ಟೆ, ಹೆಣಿಗೆಯ ಅಲಂಕಾರ ಪಟ್ಟಿ, ಕರವಸ್ತ್ರಗಳು, ಟೋಪಿಗಳು, ಕಾಲುಚೀಲಗಳು, ಮಡಿಸಿಟ್ಟ ಉಡುಪುಗಳು, ಕೈಗವುಸುಗಳು, ಮತ್ತು ಆ ಟ್ರಂಕಿನಲ್ಲಿ ಅಮೂಲ್ಯವೆಂದು ಕಾಪಾಡಿಕೊಂಡಿದ್ದ ಬೇರೆ ಏನೇನಿದ್ದುವೋ ಆ ಎಲ್ಲ ಪದಾರ್ಥಗಳಲ್ಲಿಯೂ ಆ ಅತ್ತರು ತನ್ನ ಸುಗಂಧವನ್ನು ಹರಡುತ್ತಿತ್ತು. ಆ ಭಾರಿ ಟ್ರಂಕಿನಲ್ಲಿದ್ದ ಪ್ರತಿಯೊಂದು ಪದಾರ್ಥವೂ ಗುಲಾಬಿ ಪರಿಮಳದಿಂದಾಗಿ ಅದು ಹೇಗೆ ಹೆಚ್ಚು ಮಧುರವಾಗಿ ಪರಿಣಮಿಸಿದ್ದಿತೋ ಅದೇ ರೀತಿಯಲ್ಲಿ ಫೀಬೆ ಅವರೊಂದಿಗೆ ಕಲೆತುಹೋಗಿದ್ದುದರಿಂದ ಹೆಪ್ಸಿಬಾ ಮತ್ತು ಕ್ಲಿಫರ್ಡ್ ಇವರ ಎಲ್ಲ ಆಲೋಚನೆಗಳೂ ರಾಗಭಾವಗಳೂ– ಅವು ಎಷ್ಟೇ ಖಿನ್ನವಾಗಿ ಕಾಣುತ್ತಿರಲಿ– ಸೌಖ್ಯದ ಸೂಕ್ಷ್ಮ ಲಕ್ಷಣವನ್ನು ಹೊಂದಿದ್ದುವು. ಅವಳ ದೇಹದ, ಬುದ್ಧಿಯ ಮತ್ತು ಹೃದಯದ ಎಲ್ಲ ಚಟುವಟಿಕೆಯೂ ಅವಳ ಸುತ್ತಮುತ್ತ ಕೈಗೆ ಬಂದ ಸಾಧಾರಣವಾದ ಸಣ್ಣ ಪುಟ್ಟ ಕೆಲಸ ಕಾರ್ಯಗಳನ್ನು ನಿರಂತರವಾಗಿ ಮಾಡುವಂತೆ ಅವಳನ್ನು ಪ್ರಚೋದಿಸುತ್ತಿದ್ದುವು; ಹಾಗೂ, ಆ ಕ್ಷಣಕ್ಕೆ ಉಚಿತವಾದ ವಿಚಾರವನ್ನು ಕುರಿತು ಆಲೋಚಿಸುವಂತೆಯೂ, ಮತ್ತು ಹೆಪ್ಸಿಬಾಳ ನಿರಾಶೆಯ ಚಿಂತೆಯ ಬಗೆಗೋ, ಇಲ್ಲವೆ ಅವಳ ಸಹೋದರನ ಅಸ್ಪಷ್ಟವಾದ ನರಳಾಟದ ಬಗೆಗೋ– ಒಮ್ಮೆ ಪೇರು ಮರದ ಮೇಲಿನ ರಾಬಿನ್ ಹಕ್ಕಿಗಳ ಚಿಲಿಪಿಲಿಯ ಉಲ್ಲಾಸದಿಂದ, ಇನ್ನೊಮ್ಮೆ ಅವಳಿಗೆ ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟರಮಟ್ಟಿಗೆ ಗಂಭೀರತೆಯಿಂದ– ಸಹಾನುಭೂತಿಯನ್ನು ತೋರುವಂತೆ ಪ್ರೇರಿಸುತ್ತಿದ್ದುವು.

ಫೀಬೆಯ ಸ್ವಭಾವದಂತಹ ಸ್ವಭಾವವು ತನಗೆ ಉಚಿತವಾದ ಪ್ರಭಾವವನ್ನು ಹೊಂದಿರುತ್ತದೆ; ಆದರೆ ಅದಕ್ಕೆ ಸಲ್ಲಬೇಕಾದ ಗೌರವ ಸಲ್ಲುವುದು ಮಾತ್ರ ವಿರಳ. ಆದರೂ, ಮನೆಯೊಡತಿಯನ್ನು ಆವರಿಸಿಕೊಂಡಿದ್ದಂತಹ ಬಹು ಕಟ್ಟುನಿಟ್ಟಿನ ಪರಿಸ್ಥಿತಿಯಲ್ಲಿಯೂ ಅವಳು ತನಗೊಂದು ಸ್ಥಾನವನ್ನು ದೊರಕಿಸಿಕೊಂಡಿದ್ದಳು; ಅಲ್ಲದೆ, ದೇಹದ ಒಟ್ಟು ಮೊತ್ತದ ದೃಷ್ಟಿಯಿಂದ ತನಗಿಂತ ದೊಡ್ಡ ವ್ಯಕ್ತಿಯ ಮೇಲೆ ಅವಳೊಂದು ಪರಿಣಾಮವನ್ನು ಬೀರಿದ್ದಳು; ಇಷ್ಟರಿಂದ ಅವಳ ಸ್ವಭಾವದಲ್ಲಿ ಅಡಗಿದ್ದ ಆತ್ಮಶಕ್ತಿಯನ್ನು ಅರ್ಧಮಟ್ಟಿಗೆ ಅಳೆಯಬಹುದು. ಒಂದು ಕಡೆ ಹೆಪ್ಸಿಬಾಳ ಕೃಶವಾದ ಮೂಳೆ ಮೂಳೆಯಾದ ಮೈಕಟ್ಟು ಮತ್ತು ಕೈಕಾಲು, ಇನ್ನೊಂದು ಕಡೆ

ಆಳವಾದ ಹರ್ಷವು ಅವಳಿಗೆ ಲಭಿಸಿ, ಅವಳ ಹಿಂದಿನ ಜೀವನದ ಎಲ್ಲ ತ್ಯಾಗಕ್ಕೂ ಪ್ರತಿಫಲವು ದೊರೆತಂತಾಗುತ್ತಿದ್ದಿತು; ಹೆಚ್ಚು ಗೆಲವಿನಿಂದ ಕೂಡಿದ ಆನಂದಪರವಶತೆಗೆ ಅದು ಸಾವಿರಪಾಲು ಮಿಗಿಲಾಗಿರುತ್ತಿದ್ದಿತು. ಆದರೆ ಇದು ಕೂಡಿ ಬರಲಿಲ್ಲ. ಆದ್ದರಿಂದ ಅವಳು ಫೀಬೆಯ ಕಡೆಗೆ ಹೊರಳಿ, ಕರ್ತವ್ಯವನ್ನೆಲ್ಲಾ ಆ ಎಳೆಯಳ ಕೈಗೆ ಒಪ್ಪಿಸಿಬಿಟ್ಟಳು. ಅವಳು ಎಲ್ಲವನ್ನೂ ಕೈಗೊಳ್ಳುವಂತೆ ಅದನ್ನು ಉಲ್ಲಾಸದಿಂದಲೇ ಕೈಗೊಂಡಳು; ಆದರೆ ಅದನ್ನು ಮಾಡುವಲ್ಲಿ ಅವಳಿಗೆ ಯಾವ ಜೀವನಧ್ಯೇಯ ಸಾಧನೆಯ ಪರಮೋದ್ದೇಶವೂ ಇರಲಿಲ್ಲ; ಆದರೆ, ಕೇವಲ ಕರ್ತವ್ಯನಿರ್ವಹಣೆಯ ಸರಳವಾದ ಉದ್ದೇಶವನ್ನು ಹೊಂದಿದ್ದರಿಂದಲೇ ಅವಳು ಕರ್ತವ್ಯನಿರ್ವಹಣೆಯಲ್ಲಿ ಹೆಚ್ಚು ಯಶಸ್ವಿಯಾದಳು.

ಸ್ನೇಹಪರ ಪ್ರಕೃತಿಯ ಅನೈಚ್ಛಿಕ ಪರಿಣಾಮದಿಂದಾಗಿ, ತನ್ನ ಇಬ್ಬರ ಅದೃಷ್ಟಹೀನರಾದ ಜೊತೆಗಾರರಿಗೆ ಫೀಬೆ ನಿತ್ಯಜೀವನಕ್ಕಲ್ಲದಿದ್ದರೂ ನಿತ್ಯದ ನೆಮ್ಮದಿಗೆ ಬಹು ಬೇಗನೆ ತೀರ ಅಗತ್ಯವೆನಿಸಿಬಿಟ್ಟಳು. ಅವಳು ಅಲ್ಲಿ ಕಾಣಿಸಿಕೊಂಡಾಗಿನಿಂದ ಏಳು ಇಪ್ಪಾರಿನ ಮನೆಯ ಕೊಳಕೊ ಹೊಲಸುತನವೂ ಮಾಯವಾದಂತೆ ಕಂಡಿತು; ಆ ಮನೆಯ ಅಸ್ಥಿಪಂಜರದಂತಿದ್ದ ಚೌಕಟ್ಟಿನ ಹಳೆಯ ಮರದ ಸಾಮಗ್ರಿ ಲೊಡ್ಡುಹಿಡಿದು ತರಕಲಾಗಿ ಸಮೆದುಹೋಗುವುದು ತಪ್ಪಿತು; ಪುರಾತನವಾದ ಒಳಮಾಳಿಗೆಗಳಿಂದ ದೂಳು ಉದುರಿ, ಕೆಳಗಡೆ ಕೋಣೆಗಳಲ್ಲಿನ ನೆಲದ ಮೇಲೂ ಕುರ್ಚಿಮೇಜುಗಳ ಮೇಲೂ ಬಹು ಮಂದವಾಗಿ ನೆಲಸುವುದು ನಿಂತುಹೋಯಿತು; ಕಡೆಯಪಕ್ಷ ಇನ್ನೇನಿಲ್ಲದಿದ್ದರೂ, ಉದ್ಯಾನದ ಕಾಲುದಾರಿಯ ಮೇಲೆ ಗುಡಿಸಿಕೊಂಡು ಬೀಸುವ ಮೆಲುಗಾಳಿಯಂತೆ ಮೆಲ್ಲನೆ ಹೆಜ್ಜೆ ಹಾಕುತ್ತಾ, ಅದೆಲ್ಲವನ್ನು ತೊಡೆದು ಹಾಕಲು ಅಲ್ಲಿಂದಿಲ್ಲಿಗೆ ಸುಳಿದಾಡುತ್ತಿದ್ದ ಪುಟ್ಟ ಗೃಹಿಣಿಯೊಬ್ಬಳು ಇದ್ದಂತಾಯಿತು. ಬೇರೆ ಬೇರೆಯಾಗಿ ಒಂಟೊಂಟಿಯಾಗಿ ಹಾಳುಹಾಳು ಸುರಿಯುತ್ತಿದ್ದ ಕೋಣೆಗಳನ್ನು ದೆವ್ವದಂತೆ ಕಾಡುತ್ತಿದ್ದ ವಿಷಣ್ಣ ಘಟನೆಗಳ ಪರಿಣಾಮಚ್ಛಾಯೆಗಳೂ; ಬಹುಕಾಲದ ಹಿಂದೆ ಮೃತ್ಯುದೇವತೆ ಒಂದಕ್ಕಿಂತ ಹೆಚ್ಚು ಶಯ್ಯಾಗೃಹಗಳಿಗೆ ಹಲವುಸಲ ಭೇಟಿಕೊಟ್ಟು ಅಲ್ಲಿ ಉಳಿಸಿಹೋಗಿದ್ದ ಬಲವಾದ ಹೆಣವಾಸನೆ– ಇವು, ಯೌವನಪೂರ್ಣವಾದ ಹೊಚ್ಚಹೊಸತಾದ ಹರ್ಷವುಕ್ಕುವ ಹೃದಯವುಳ್ಳ ವ್ಯಕ್ತಿಯೊಂದು ಇದ್ದು ಮನೆಯ ವಾತಾವರಣದ ತುಂಬೆಲ್ಲ ಹರಡುತ್ತಿದ್ದ ಪರಿಶುದ್ಧಕಾರಕ ಪ್ರಭಾವದಷ್ಟು ಶಕ್ತಿಪೂರ್ಣವಾಗಿರಲಿಲ್ಲ. ಫೀಬೆಯಲ್ಲಿ ಜಾಡ್ಯದ ಲಕ್ಷಣ ಯಾವುದೂ ಇರಲಿಲ್ಲ; ಹಾಗೇನಾದರೂ ಇದ್ದಿದ್ದರೆ, ಅದನ್ನು ವಾಸಿಮಾಡಲಾಗದ ರೋಗವನ್ನಾಗಿ

ಫೀಬೆಹಾಡುತ್ತಿರುವವರೆಗೂ, ಅವಳು ಮನೆಯಲ್ಲೆಲ್ಲಾ ತನ್ನ ಇಷ್ಟಬಂದಂತೆ ಇಷ್ಟ ಬಂದ ಕಡೆ ಓಡಾಡಬಹುದಾಗಿತ್ತು. ಅವಳ ಸಂಗೀತ ಸ್ವರಗಳ ಮಧುರವಾಧ ನಿರಾಳವಾದ ಸರಳತೆ– ಮಹಡಿಯ ಮೇಲಿನ ಕೋಣೆಗಳಿಂದಲೋ, ಇಲ್ಲವೆ ಅಂಗಡಿಯಿಂದ ಹೊರಟು ಬರುವ ದಾರಿಯಲ್ಲೋ, ಇಲ್ಲವೆ ತೋಟದೊಳಗೆ ಪೇರು ಮರದ ಎಲೆಗುಂಪಲಿನ ಮೂಲಕ ಮಿನುಗುವ ಸೂರ್ಯಕಿರಣಗಳೊಂದಿಗೆ ಚಿಮುಕಿಸಿದಂತೆಯೋ– ಅದು ಎಲ್ಲಿಂದಲೇ ಬರಲಿ ಹೇಗೇ ಬರಲಿ, ಕ್ಲಿಫರ್ಡ್ ಅದರಿಂದ ತೃಪ್ತನಾಗುತ್ತಿದ್ದನು. ಅವನು ಹಾಗೆ ಶಾಂತನಾಗಿ ಕುಳಿತಿರುವಂದು, ಅವನ ಮುಖದ ಮೇಲೆಲ್ಲಾ ಒಂದು ಸೌಮ್ಯವಾದ ಸಂತೋಷ ಹೊಳೆಯುವುದು; ಹಾಡು ಅವನ ಹತ್ತಿರ ತೇಲಿಬಂದಾಗ ಆ ಸಂತೋಷದ ಹೊಳಪು ಈಗೊಮ್ಮೆ ಹೆಚ್ಚು ಪ್ರಕಾಶಮಾನವಾಗುವುದು, ಅದು ದೂರದಿಂದ ಕೇಳಿ ಬಂದಾಗ ಆಗೊಮ್ಮೆ ಸ್ವಲ್ಪ ಮಸುಕಾಗುವುದು. ಆದರೆ, ಅವಳು ಅವನ ಮಂಡಿಯ ಬಳಿ ಒಂದು ತಗ್ಗಾದ ಕಾಲುಮಣೆಯ ಮೇಲೆ ಕುಳಿತಿದ್ದಾಗ ಅವನಿಗೆ ಅತ್ಯಂತ ಸಂತೋಷವಾಗುತ್ತಿತ್ತು.

ಫೀಬೆಯ ಮನೋಧರ್ಮವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಚಾರ ಮಾಡಿದರೆ, ಅವಳು ಹಾಡುವಾಗ ಅನೇಕ ವೇಳೆ ಗೆಲವಿನ ರಾಗಕ್ಕಿಂತ ಹೆಚ್ಚಾಗಿ ಕರುಣಾರಸದ ರಾಗವನ್ನೆ ಆಯ್ದುಕೊಳ್ಳುತ್ತಿದ್ದುದು ಬಹುಶಃ ಗಮನಾರ್ಹವಾದ ಸಂಗತಿಯೆ. ಎಳೆಯರೂ ಸುಖಿಗಳೂ ಆದವರು ಒಂದು ತೆಳುವಾದ ದುಃಖದ ಛಾಯೆಯಿಂದ ತಮ್ಮ ಬಾಳನ್ನು ಒಂದು ಹದಕ್ಕೆ ತಂದುಕೊಳ್ಳಲು ಅಸಂತುಷ್ಟರಾಗಿರುವುದಿಲ್ಲ. ಅದೂ ಅಲ್ಲದೆ, ಫೀಬೆಯ ಧ್ವನಿ ಮತ್ತು ಹಾಡುಗಳ ಅಗಾಧವಾದ ಕರುಣಾರಸವು ಅವಳ ಉಲ್ಲಾಸಪೂರ್ಣ ಚೇತನದ ಸ್ವರ್ಣರಚನೆಯ ಮೂಲಕ ಪರಿಷ್ಕಾರಗೊಂಡು ಬರುತ್ತಿತ್ತು, ಮತ್ತು ಅಲ್ಲಿ ಪಡೆದ ಗುಣದೊಂದಿಗೆ ಅದು ಹೇಗೋ ಬೆರೆತುಹೋಗಿತ್ತು; ಇದರ ಪರಿಣಾಮವಾಗಿ, ಆ ಕಾರುಣ್ಯಕ್ಕೆ ಕರಗಿ ಅತ್ತವರ ಹೃದಯ ಇನ್ನೂ ಹಗುರವಾಗಿಯೆ ಆಗುತ್ತಿತ್ತು. ದಟ್ಟ ದೌರ್ಭಾಗ್ಯದ ಪವಿತ್ರ ಸಮ್ಮುಖದಲ್ಲಿ ಹದ್ದು ಮೀರಿದ ಉಲ್ಲಾಸವನ್ನು ಪ್ರಕಟಪಡಿಸುವುದು, ಹೆಪ್ಸಿಬಾಳ ಹಾಗೂ ಆಕೆಯ ಸಹೋದರನ ಜೀವನದಲ್ಲಿ ಅಂತರ್ಗಾಮಿಯಾಗಿ ತನ್ನ ಮಂದ್ರ ಸ್ವರಗಳನ್ನು ಧ್ವನಿಸುತ್ತಿದ್ದ ಸಂಗೀತ– ಮೇಳಕ್ಕೆ ಕರ್ಕಶವಾದ, ಅಗೌರವದ, ಅಪಶ್ರುತಿಯನ್ನು ಹಿಡಿದಂತಾಗುತ್ತಿದ್ದಿತು. ಆದ್ದರಿಂದ, ಫೀಬೆ ಅನೇಕ ಸಲ ದುಃಖದ ಸ್ವರಸಂಗತಿಗಳನ್ನೇ ಆಯ್ದುಕೊಳ್ಳುತ್ತಿದ್ದುದು ಒಳ್ಳಿತೇ ಆಗುತ್ತಿತ್ತು, ಹಾಗೂ ಅವಳು ಅವುಗಳನ್ನು ಹಾಡುತ್ತಿದ್ದಾಗ ಅವು ಅಷ್ಟು ದುಃಖಕರವಾಗಿ

ಫೀಬೆಯ ಹಕ್ಕಿಯಂತೆ ಹಗುರವಾದ ಪುಟ್ಟ ಆಕೃತಿ– ಇವುಗಳನ್ನು ಪರಸ್ಪರ ಹೋಲಿಸಿ ನೋಡಿದರೆ, ಬಹುಶಃ ಅವು ಕ್ರಮವಾಗಿ ಆ ಹೆಂಗಸಿನ ಮತ್ತು ಹುಡುಗಿಯ ನೈತಿಕ ಬಲ ಹಾಗೂ ಸತ್ತ್ವಗಳಿಗೆ ಒಂದು ಯೋಗ್ಯ ಪ್ರಮಾಣದಲ್ಲಿ ಅನುಗುಣವಾಗಿದ್ದುವು ಎನ್ನಬಹುದು.

ಹೆಪ್ಸಿಬಾಳ ಸಹೋದರನಾದ ಆ ಅತಿಥಿಗಂತೂ– ಈಗ ಫೀಬೆ ಆತನನ್ನು 'ಅಣ್ಣ ಕ್ಲಿಫರ್ಡ್' ಎಂದು ಕರೆಯತೊಡಗಿದ್ದಳು– ಅವಳು ವಿಶೇಷ ಅಗತ್ಯವಾಗಿ ಬಿಟ್ಟಿದ್ದಳು. ಎಂದಮಾತ್ರಕ್ಕೆ, ಅವನು ಅವಳೊಂದಿಗೆ ಸಂಭಾಷಿಸುತ್ತಿದ್ದನೆಂದು ಹೇಳುವಂತಿರಲಿಲ್ಲ; ಅಥವಾ, ತಾನು ಅವಳ ಜೊತೆ ಇದ್ದಾಗ ಒಂದು ಆಕರ್ಷಣೆಗೆ ಒಳಗಾಗಿದ್ದುದನ್ನು ಯಾವುದೇ ಸ್ಪಷ್ಟರೀತಿಯಲ್ಲಿ ಅನೇಕ ವೇಳೆ ಅವನು ಪ್ರಕಟಗೊಳಿಸಿದ್ದನು ಎಂದೂ ಹೇಳಲಾಗದು. ಆದರೆ, ಅವಳು ಬಹಳ ಹೊತ್ತು ಇಲ್ಲದೆ ಹೋದರೆ ಅವನು ರೇಗುತ್ತಾ ಚಡಪಡಿಸುತ್ತಾ ಗಾಬರಿಯಿಂದ ಕಳವಳಗೊಂಡು, ತನ್ನ ಎಲ್ಲ ಚಲನವಲನಕ್ಕೂ ವಿಶಿಷ್ಟವಾದ ರೀತಿಯಲ್ಲಿ ಗೊತ್ತುಗುರಿಯಿಲ್ಲದೆ ಕೋಣೆಯಲ್ಲಿ ಶತಪಥ ತಿರುಗುತ್ತಿದ್ದನು; ಅದಿಲ್ಲವೋ, ತನ್ನ ದೊಡ್ಡ ಕುರ್ಚಿಯಲ್ಲಿ ಕೈಗಳ ಮೇಲೆ ತಲೆಯಿಟ್ಟುಕೊಂಡು ಚಿಂತಾಮಗ್ನನಾಗಿ ಕುಳಿತಿರುವನು; ಹೆಪ್ಸಿಬಾ ಯಾವಾಗಲಾದರೂ ಅವನನ್ನು ಎಚ್ಚರಗೊಳಿಸಲು ಪ್ರಯತ್ನಪಟ್ಟರೆ, ಸಿಡುಕಿನ ವಿದ್ಯುತ್ ಕಿಡಿಯನ್ನು ಹಾರಿಸಿ ಜೀವಂತ ಲಕ್ಷಣವನ್ನು ತೋರಿಸುವನು. ಸಾಮಾನ್ಯವಾಗಿ ಅವನಿಗೆ ಅಗತ್ಯವಾಗಿದ್ದ ಸರ್ವಸ್ವವೆಂದರೆ, ಫೀಬೆ ತನ್ನ ಬಳಿ ಇರುವುದು ಮತ್ತು ತನ್ನ ಬತ್ತಿಹೋದ ಜೀವನಕ್ಕೆ ಅವಳ ನವಜೀವನದ ಸಂತತ ಪ್ರವಾಹ. ಚಿಲುಮೆ ಉಕ್ಕಿ ಹರಿಯುವಾಗ ಅಲೆಗಳನ್ನು ರಚಿಸದೆ ಇದ್ದೀತೆ, ಕಲಕಲನಾದವನ್ನು ಉಂಟುಮಾಡದೆ ಇದ್ದೀತೆ? ಅದೇ ರೀತಿ, ಅವಳೂ ಕೂಡ ಎಂದೂ ಏನೂ ಕೆಲಸಮಾಡದೆ ಚಟುವಟಿಕೆಯನ್ನು ತೋರದೆ ಸುಮ್ಮನೆ ಇದ್ದುದಿಲ್ಲ; ವಾಸ್ತವವಾಗಿ, ಅವಳ ಚೈತನ್ಯ ಹಾಗೆ ಸ್ವಾಭಾವಿಕವಾಗಿ ಹೊರಹೊಮ್ಮುತ್ತಿತ್ತು, ವಿಲಾಸದಿಂದ ಮೆರೆಯುತ್ತಿತ್ತು. ಹಾಡುವುದು ಅವಳಿಗೆ ಹುಟ್ಟು ಗುಣವಾಗಿ ಬಂದಿತ್ತು; ಅದು ಎಷ್ಟು ಸ್ವಾಭಾವಿಕವಾಗಿತ್ತೆಂದರೆ, ಅದು ಅವಳಿಗೆ ಹೇಗೆ ಬಂದಿತು, ಅವಳಿಗೆ ಅದನ್ನು ಕಲಿಸಿದ ಗುರು ಯಾರು, ಎಂದು ಕೇಳುವ ಯೋಚನೆಯೆ ನಿಮಗೆ ತೋರುತ್ತಿರಲಿಲ್ಲ. ಹಕ್ಕಿಗೆ ಯಾರಾದರೂ ಅಂತಹ ಪ್ರಶ್ನೆಗಳನ್ನು ಹಾಕುವರೆ? ಸೃಷ್ಟಿಕರ್ತನ ಮೇಘಗರ್ಜನೆಯ ಅತ್ಯಂತ ಗಟ್ಟಿಯಾದ ಮೊಳಗಿನಲ್ಲಿ ಅವನ ಕಂಠಧ್ವನಿಯನ್ನು ಗುರುತಿಸುವ ಹಾಗೆ, ಹಕ್ಕಿಯ ಹಾಡಿನ ಮೆಲ್ಲುಲಿಯಲ್ಲಿಯೂ ಅದನ್ನು ಅಷ್ಟೇ ಸ್ಪಷ್ಟವಾಗಿ ಗುರುತಿಸುತ್ತೇವೆ.

ಪಾಲಿಗೆ ಅತ್ಯಂತ ಹಿತಕರವಾದ ಬೇಸಗೆಯ ಗಾಳಿಯೇ ಆಗಿದ್ದಿರಬೇಕು. ಐಹಿಕ ಜೀವನದಲ್ಲಿ ವಿಧಿ ಅವರ ಭಾಗಕ್ಕೆ ಎಷ್ಟೇದಯೆಯಿಂದ ಕೂಡಿರಲಿ, ಅವರ ಸ್ವಭಾವಕ್ಕೆ ಸೌಂದರ್ಯವನ್ನುಳಿದು ಬೇರೆಯ ಆಹಾರ ಒಗ್ಗದು; ಇಂಥವರ ವಿಚಾರದಲ್ಲಿಯೂ ಅದೇ ಬಗೆಯ ದಿಗ್ಭ್ರಾಂತಿ ನಮ್ಮನ್ನು ತಪ್ಪದೆ ಕಾಡುವುದು.

ಫೀಬೆ ಯಾರ ಮೇಲೆ ತನ್ನ ಔದಾರ್ಯದ ಮಂತ್ರ ಪ್ರಭಾವವನ್ನು ಬೀರಿದ್ದಳೋ ಆ ವ್ಯಕ್ತಿಯನ್ನು ಅವಳು ಬಹು ಅಪೂರ್ಣವಾಗಿ ಅರ್ಥಮಾಡಿಕೊಂಡಿದ್ದರೆ, ಅದು ಸಂಭವನೀಯವೆ. ಹಾಗೆ ಅರ್ಥಮಾಡಿಕೊಳ್ಳಬೇಕಾದ ಆವಶ್ಯಕತೆಯೂ ಇರಲಿಲ್ಲ. ಒಲೆಗೂಡಿನ ಉರಿ ತನ್ನ ಸುತ್ತ ಅರ್ಧ ವೃತ್ತಾಕಾರದಲ್ಲಿ ಕುಳಿತಿರುವವರೆಲ್ಲರ ಮುಖಗಳನ್ನೂ ಬೆಳಗಿ ಅವರನ್ನು ಸಂತಸಗೊಳಿಸಬಲ್ಲದು, ಆದರೆ ಅವರೆಲ್ಲರಲ್ಲಿ ಒಬ್ಬರ ವ್ಯಕ್ತಿತ್ವವನ್ನೂ ಅದು ಅರಿತಿರಬೇಕಾಗಿಲ್ಲ. ವಾಸ್ತವವಾಗಿ, ಕ್ಲಿಫರ್ಡನ ಸ್ವಭಾವ ಲಕ್ಷಣಗಳಲ್ಲಿ ಬಹು ಸೂಕ್ಷ್ಮವೂ ಕೋಮಲವಾದ ಯಾವುದೋ ಒಂದು ಗುಣ ವಿಶೇಷವಿದ್ದಿತು; ಫೀಬೆಯ ಕಾರ್ಯಕ್ಷೇತ್ರವಾಧರೋ ಬಹು ಮಟ್ಟಿಗೆ ವಾಸ್ತವಿಕದಲ್ಲಿ ನೆಲಸಿದ್ದಿತು; ಆದ್ದರಿಂದ, ಫೀಬೆಯಂಥವರು ಅವನ ಸ್ವಭಾವವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲಾಗುತ್ತಿರಲಿಲ್ಲ. ಹೀಗಿದ್ದರೂ, ಆ ಹುಡುಗಿಯ ಸ್ವಭಾವದ ನೈಜತೆ, ಸರಳತೆ, ಮತ್ತು ಸಂಪೂರ್ಣ ನಿರಾಡಂಬರತೆಗಳು ಕ್ಲಿಫರ್ಡನ ಪಾಲಿಗೆ ಅವಳಲ್ಲಿದ್ದ ಉಳಿದ ಯವುದೇ ಮೋಹಕಗುಣದಷ್ಟೇ ಪ್ರಬಲ ಮೋಹಕ ಶಕ್ತಿಯಾಗಿದ್ದುವು. ತನ್ನದೇ ಆದ ಪ್ರಕಾರದಲ್ಲಿ ಬಹುಮಟ್ಟಿಗೆ ಪರಿಪೂರ್ಣವಾದ ಸೌಂದರ್ಯವು ಅತ್ಯಗತ್ಯವಾಗಿತ್ತೆಂಬುದೇನೋ ನಿಜ. ಒಂದು ವೇಳೆ ಫೀಬೆ ಒರಟಾದ ಮುಖಲಕ್ಷಣ, ವಕ್ರಾಕೃತಿ, ಕರ್ಕಶವಾದ ಕಂಠಸ್ವರ, ಒರಟಾದ ನಡೆನುಡಿ– ಇವೆಲ್ಲವನ್ನೂ ಹೊಂದಿ, ಈ ದುರದೃಷ್ಟದ ಹೊರರೂಪದ ಮೋರೆಯಲ್ಲಿ ಅದೆಷ್ಟೇ ಸದ್ಗುಣ ಸಂಪನ್ನೆಯಾಗಿದ್ದರೂ, ಸ್ತ್ರೀ ವೇಷವನ್ನು ಧರಿಸಿದ್ದಷ್ಟು ಕಾಲವೂ ಅವಳು ಕ್ಲಿಫರ್ಡನಿಗೆ ಅತ್ಯಂತ ಅಸಹ್ಯವನ್ನುಂಟುಮಾಡಿ, ತನ್ನ ಸೌಂದರ್ಯದ ಅಭಾವದಿಂದ ಅವನ ಮನಸ್ಸನ್ನು ಕುಗ್ಗಿಸುತ್ತಿದ್ದಳು. ಆದರೆ, ಫೀಬೆಗಿಂತಲೂ ಹೆಚ್ಚು ಚೆಲುವಾದದ್ದು– ಚೆಲುವಲ್ಲದಿದ್ದರೆ ಕಡೆಯ ಪಕ್ಷ ಹೆಚ್ಚು ಅಂದವಾದದ್ದು ಯಾವುದೂ ಸೃಷ್ಟಿಯಾಗಿರಲಿಲ್ಲ. ಅವನ ಅಲ್ಪವಾದ ಅಸ್ಪಷ್ಟವಾದ ಜೀವನಸುಖಾನುಭವವೆಲ್ಲವೂ ಇದುವರೆಗೂ– ಅವನ ಹೃದಯದ ಸಂವೇದನಾ ಶಕ್ತಿಯೂ ಭಾವನಾಶಕ್ತಿಯೂ ಅವನಲ್ಲಿಯೇ ಉಡುಗಿ ಹೋಗುವವರೆಗೂ– ಒಂದು ಸ್ವಪ್ನವಾಗಿತ್ತು; ಅವನು ಕಂಡಿದ್ದ ಸ್ತ್ರೀ ಮೂರ್ತಿಗಳೆಲ್ಲವೂ ಹೆಚ್ಚು ಹೆಚ್ಚಾಗಿ ತಮ್ಮ ಕಾವನ್ನೂ ತಿರುಳನ್ನೂ ಕಳೆದುಕೊಂಡು, ಏಕಾಂತವಾಸಿಗಳಾದ ಕಲಾವಿದರ ಚಿತ್ರಗಳಂತೆ ಹಿಂದಂತೆ

ಪರಿಣಮಿಸದೆ ಹೋಗುತ್ತಿದ್ದುದೂ ತಪ್ಪಾಗುತ್ತಿರಲಿಲ್ಲ.

ಅವಳ ಸಹವಾಸದಲ್ಲಿರುವುದು ಅಭ್ಯಾಸವಾಗುತ್ತಾ ಬಂದಂತೆ, ತನ್ನ ಸ್ವಭಾವವು ಮೊದಲು ಹೇಗೆ ಎಲ್ಲ ಕಡೆಗಳಿಂದಲೂ ಉಲ್ಲಾಸದ ಬೆಳಕಿನ ಸೊಗಸಾದ ಛಾಯೆಗಳನ್ನೂ ಹೊಳಪನ್ನೂ ಹೀರಿಕೊಳ್ಳಲು ಸಮರ್ಥವಾಗಿತ್ತು ಎಂಬುದನ್ನು ಕ್ಲಿಫರ್ಡ್ ಒಡನೆಯೇ ತೋರಿಕೊಟ್ಟನು. ಅವಳು ಅವನ ಬಳಿ ಕುಳಿತಿರುತ್ತಿದ್ದಾಗ ಅವನು ಯುವಕನಂತಾಗುತ್ತಿದ್ದನು. ಒಂದು ಸೌಂದರ್ಯವು–ಅದು ಅತ್ಯಂತ ಸ್ಫುಟವಾಗಿ ವ್ಯಕ್ತಗೊಂಡಿದ್ದಾಗಲೂ ಖಚಿತವಾಗಿ ವಾಸ್ತವವಲ್ಲದ, ಆದರೂ ಕೇವಲ ಸ್ವಪ್ನಪ್ರಾಯವೂ ಅಲ್ಲದ ಸೌಂದರ್ಯವು ಕೆಲವು ವೇಳೆ ಅವನ ಮುಖದ ಮೇಲೆ ಸುಳಿದಾಡಿ ಅದನ್ನು ಬೆಳಗುತ್ತಿತ್ತು; ಒಬ್ಬ ವರ್ಣ ಚಿತ್ರಕಾರನು ಯಾವುದನ್ನು ತನ್ನ ಪಟದ ಮೇಲೆ ಸೆರೆಹಿಡಿದು ಸ್ಥಿರಗೊಳಿಸುವ ಸಲುವಾಗಿ ಬಹುಕಾಲ ಗಮನಿಸಿ ನೋಡಿ ಕಡೆಗೂ ತನ್ನ ಪ್ರಯತ್ನದಲ್ಲಿ ನಿಷ್ಫಲವಾಗುತ್ತಿದ್ದನೋ ಅಂತಹ ಸೌಂದರ್ಯವದು; ಅವನ ಮುಖವನ್ನು ಬೆಳಗುವುದಕ್ಕಿಂತ ಹೆಚ್ಚಾಗಿ ಅದು ಅವನಿಗೆ ಒಂದು ಮುಖಭಾವವನ್ನಿತ್ತು ಅವನ ಸ್ವರೂಪವನ್ನೆ ಮಾರ್ಪಡಿಸಿಬಿಡುತ್ತಿತ್ತು; ಅತ್ಯುತ್ಕೃಷ್ಟವಾದ ಸುಖಿಯಾದ ಚೇತನದ ಪ್ರಕಾಶವೆಂದೇ ಆ ಮುಖಭಾವವನ್ನು ವಿವರಿಸಬೇಕು. ಅವನ ಆ ನರೆಗೂದಲು; ಆ ಸುಕ್ಕು ಗೆರೆಗಳು– ಇವು ಆ ಕ್ಷಣದ ಮಟ್ಟಿಗೆ ಮಾಯವಾಗಿದ್ದುವು. ಅವನ ಹುಬ್ಬಿನ ಮೇಲ್ಗಡೆ ಅಡ್ಡನಾಗಿ ಅಚ್ಚೊತ್ತಿದ್ದ ಆ ಸುಕ್ಕು ಗೆರೆಗಳಲ್ಲಿ ಅವನ ಕತೆಯನ್ನೆಲ್ಲಾ ಅಡಗಿಸಿಬಿಡಬೇಕೆಂಬ ವ್ಯರ್ಥ ಪ್ರಯತ್ನವನ್ನು ಮಾಡಿದೆಯೋ ಎಂಬಂತೆ, ಅನಂತ ದುಃಖವು ಅವುಗಳಲ್ಲಿ ಎಷ್ಟು ಆಳವಾಗಿ ಕೊರೆದು ಒತ್ತೊತ್ತಾಗಿ ಲಿಖಿತವಾಗಿತ್ತೆಂದರೆ, ಇಡಿಯ ಬರಹವು ಓದಲಾಗದಷ್ಟು ಅಸ್ಪಷ್ಟವಾಗಿತ್ತು. ಅವನು ಮುಂದೆ ಏನಾಗಬಹುದು ಎಂಬುದರ ಛಾಯೆಯ ಸುಳಿವು ಅವನಲ್ಲಿದ್ದುದು ಸೂಕ್ಷ್ಮಗ್ರಾಹಿಯಾದ, ಕರುಣೆಯ ದೃಷ್ಟಿಗೆ ಗೋಚರವಾಗುತ್ತಿತ್ತು. ಬೇಗನೆ, ಮಂಕುಗವಿದ ಸಂಜೆಗತ್ತಲಿನ ಹಾಗೆ ಮುಪ್ಪು ಅವನ ಬೆನ್ನ ಹಿಂದೆ ಸುಳಿವು ತೋರದೆ ಕದ್ದು ಬಂದಾಗ ವಿಧಿಯೊಂದಿಗೆ ವಾದಮಾಡಿ,– ಅವನನ್ನು ಮರ್ತ್ಯನನ್ನಾಗಿ ಸೃಷ್ಟಿ ಮಾಡಬಾರದಾಗಿತ್ತು, ಇಲ್ಲವೋ ಮರ್ತ್ಯ ಜೀವನವು ಅವನ ಗುಣಗಳಿಗೆ ಹೊಂದಿಕೊಳ್ಳುವಂತೆ ಅದನ್ನು ಹದಗೊಳಿಸಬೇಕಾಗಿತ್ತು– ಎಂದು ವಿಧಿಗೆ ಒತ್ತಿ ಹೇಳಬೇಕು ಎಂದೆನಿಸುತ್ತಿತ್ತು ನಿಮಗೆ. ಅವನು ಹುಟ್ಟಿ ಉಸಿರೆಳೆದುಕೊಳ್ಳಬೇಕಾದ ಆವಶ್ಯಕತೆಯೇ ಇದ್ದಂತೆ ಕಂಡುಬರಲಿಲ್ಲ; ಲೋಕಕ್ಕೆ ಅವನು ಎಂದೂ ಬೇಕಾಗಿರಲಿಲ್ಲ; ಆದರೆ, ಅವನು ಉಸಿರೆಳೆದುಕೊಂಡು ಬಿಟ್ಟನಾದ್ದರಿಂದ, ಅವನು ಉಸಿರಾಡುವ ಗಾಳಿ ಅವನ

ನಡುವೆ ಬೆಳೆದು ಬಂದ ಸಂಬಂಧದಲ್ಲಿ ಅದು ಯಾವುದೋ ಒಂದು ಬಹು ಚೆಲುವಾದ ಅಂಶವಿದ್ದಿತು; ಆದರೂ ಅವನ ಹುಟ್ಟಿದ ದಿನದಿಂದ ಹಿಡಿದು ವ್ಯರ್ಥವಾಗಿ ಉರುಳಿಹೋಗಿದ್ದುವು. ಕ್ಲಿಫರ್ಡನ ಪಾಲಿನ ಮಟ್ಟಿಗೆ ಹೇಳುವುದಾದರೆ, ಹೆಣ್ಣಿನ ಪ್ರಭಾವವನ್ನು ಬಹು ಚೆನ್ನಾಗಿ ಗ್ರಹಿಸಬಲ್ಲ ಶಕ್ತಿಯನ್ನು ಸಹಜವಾಗಿ ಹೊಂದಿರುವಾತನ ಅನುಭವ ಅವನದಾಗಿತ್ತು; ಆದರೆ ಭಾವಾವೇಶ ಪೂರ್ಣವಾದ ಪ್ರೇಮದ ಬಟ್ಟಲನ್ನು ಅವನು ಎಂದೂ ಹೀರಿರಲಿಲ್ಲ; ಅದಕ್ಕೆ ಈಗ ಕಾಲ ಮೀರಿಹೋಗಿತ್ತು ಎಂಬ ಅರಿವೂ ಅವನಿಗಿತ್ತು. ತನ್ನ ಬುದ್ಧಿ ಶಕ್ತಿಯು ನಶಿಸಿಹೋದಮೇಲೆ ಉಳಿದು ಬಂದಿದ್ದ ಸಹಜ ಪ್ರಜ್ಞೆಯ ಸೂಕ್ಷ್ಮತೆಯಿಂದ ಅವನದನ್ನು ಅರಿತಿದ್ದನು. ಇಂತು, ಫೀಬೆಯ ಬಗೆಗೆ ಅವನು ತಳೆದಿದ್ದ ಭಾವವು ತಂದೆಯಂತಹದಾಗಿರದಿದ್ದರೂ, ಅವಳು ತನ್ನ ಮಗಳಾಗಿದ್ದಿದ್ದರೆ ಅದು ಹೇಗಿರುತ್ತಿದ್ದಿತೋ ಅದಕ್ಕಿಂತ ಕಡಮೆಯಾಗಿರಲಿಲ್ಲ ಪವಿತ್ರತೆಯಲ್ಲಿ. ಅವನು ಗಂಡಸು, ಅದು ದಿಟ; ಅವಳನ್ನು ಹೆಂಗಸೆಂದೇ ಭಾವಿಸಿದ್ದನು. ಅವನ ಪಾಲಿಗೆ ಅವಳು ಸ್ತ್ರೀಜಾತಿಯ ಏಕ ಮಾತ್ರ ಪ್ರತಿನಿಧಿಯಾಗಿದ್ದಳು. ಅವಳ ಸ್ತ್ರೀಜಾತಿಗೆ ಸಂಬಂಧಿಸಿದ ಪ್ರತಿಯೊಂದು ಮೋಹಕ ಅಂಶವನ್ನೂ ಅವನು ತಪ್ಪದೆ ಗಮನಿಸಿದನು; ಅವಳ ತುಟಿಹಣ್ಣುಗಳ ಪಕ್ವತೆಯನ್ನೂ ಅವಳ ಕನ್ಯಾಸಹಜವಾದ ಎದೆಯ ಬೆಳವಣಿಗೆಯನ್ನೂ ಅವನು ಕಂಡಿದ್ದನು. ಅವಳ ಹೆಣ್ಣುತನದ ಎಲ್ಲ ಸಣ್ಣಪುಟ್ಟ ಹಾವಭಾವ ವಿಲಾಸಗಳೂ ಎಳೆಯ ಹಣ್ಣಿನಮರದ ಹೂಗಳಂತೆ ಅವಳಲ್ಲಿ ಮೊಗ್ಗೊಡೆದು ಅವನ ಮೇಲೆ ಪರಿಣಾಮಬೀರಿದ್ದುವು; ಮಾತ್ರವಲ್ಲ, ತೀವ್ರವಾದ ಹರ್ಷೋದ್ರೇಕದ ರೋಮಾಂಚನದಿಂದ ಕೆಲವು ವೇಳೆ ಅವನ ಹೃದಯವೇ ಝುಲ್ಲೆನ್ನುವಂತೆ ಮಾಡುತ್ತಿದ್ದವು. ಆ ಪರಿಣಾಮ ಕೇವಲ ಕ್ಷಣಿಕವಾಗಿತ್ತು. ಅಂತಹ ಕ್ಷಣಗಳಲ್ಲಿ, ಬಹುಕಾಲದಿಂದ ಮೌನವಾಗಿದ್ದ 'ಹಾರ್ಪ್' ವಾದ್ಯವು ಸಂಗೀತಗಾರನ ಬೆರಳು ತನ್ನ ಮೇಲೆ ಓಡಾಡಿದೊಡನೆಯೇ ಧ್ವನಿಯಿಂದ ತುಂಬಿಕೊಳ್ಳುವಂತೆ, ಅರ್ಧಜಡಗಟ್ಟಿದ್ದ ಅವನೂ ಕೂಡ ಸಮರಸ ಜೀವನದಿಂದ ಚೈತನ್ಯಪೂರ್ಣನಾಗುತ್ತಿದ್ದನು. ಆದರೆ, ಎಷ್ಟೆಂದರೂ, ಅದು ಬಹುಮಟ್ಟಿಗೆ ಮನಸ್ಸಿನ ಗ್ರಹಿಕೆ, ಇಲ್ಲವೆ ಸಹಾನುಭೂತಿಯಾಗಿ ಕಂಡುಬಂದಿದ್ದಿತೇ ಹೊರತು, ವ್ಯಕ್ತಿಶಃ ತನ್ನದೇ ಆದ ಭಾವಾನುಭವವಾಗಿರಲಿಲ್ಲ. ಒಂದು ಸರಳ ಸುಂದರೆ ಕಥೆಯನ್ನು ಓದುವಂತೆ, ಅವನು ಫೀಬೆಯನ್ನು ಅರ್ಥಮಾಡಿಕೊಂಡಿದ್ದನು. ಅವಳು ಸಾಂಸಾರಿಕ ಕಾವ್ಯದ ಒಂದು ಪದ್ಯವಾಗಿದ್ದರೆ ಹೇಗೋ ಹಾಗೆ ಅವಳಿಗೆ ಅವನು ಕಿವಿಗೊಡುತ್ತಿದ್ದನು; ಅವನ ಶೂನ್ಯವಾದ ಖೇದಮಯವಾದ ದೌರ್ಭಾಗ್ಯಕ್ಕೆ

ಕೊರೆಯುವ ನಿರ್ಜೀವ ಆದರ್ಶವಾಗಿ ಘನೀಭೂತವಾಗಿಬಿಟ್ಟಿದ್ದುವು; ಆದ್ದರಿಂದ, ಇಂಥ ಮನುಷ್ಯನನ್ನು ಮತ್ತೆ ಉಸಿರಾಡುವ ಜೀವಂತ ಪ್ರಪಂಚಕ್ಕೆ ಕರೆತರಲು ಬೇಕಾಗಿದ್ದುದೇನೆಂದರೆ, ಅತ್ಯಂತ ಉಲ್ಲಾಸಕರವಾದ ಗೃಹಜೀವನವನ್ನು ನಡೆಸಬಲ್ಲ ಈ ಪುಟ್ಟ ಮೂರ್ತಿ. ಸಾಮಾನ್ಯ ದಿನಚರಿಯ ದಾರಿಯನ್ನು ಬಿಟ್ಟು ದೂರ ಹೋದವರು, ಅಥವಾ ಅದರಿಂದ ಬಹಿಷ್ಕೃತರಾದವರು– ಹಾಗೆ ಬೇರೆ ಹೋಗಿ ಇನ್ನೂ ಉತ್ತಮವಾದ ಜೀವನವ್ಯವಸ್ಥೆಯಲ್ಲಿ ಇದ್ದರೂ ಸಹ– ಯಾರಾದರೂ ತಮ್ಮನ್ನು ಹಿಂದಕ್ಕೆ ಕರೆದುಕೊಂಡು ಬಂದಾರೋ ಎಂದು ಹಂಬಲಿಸುವರು. ಅದು ಬೆಟ್ಟದ ನೆತ್ತಿಯಾಗಿರಲಿ, ಇಲ್ಲವೆ ನೆಲಮಾಳಿಗೆಯಾಗಿರಲಿ, ತಮ್ಮ ಏಕಾಂತವಾಸದಲ್ಲಿ ಅವರು ತರತರ ನಡುಗುತ್ತಿರುವರು. ಇಂದು, ಫೀಬೆ ಇದ್ದಲ್ಲಿ ಒಂದು ಗೃಹವಾತಾವರಣ ಏರ್ಪಟ್ಟಿತ್ತು– ಬಹಿಷ್ಕೃತ, ಸೆರೆಯಾಳು, ದೊರೆ; ಮಾನವ ಜಾತಿಯಲ್ಲಿ ಕೆಳಮಟ್ಟದಲ್ಲಿರುವ ನೀಚ, ಅದರಿಂದ ದೂರಸರಿದ ಹತಭಾಗ್ಯ, ಮೇಲ್ಮಟ್ಟದಲ್ಲಿರುವ ನಿರ್ಭಾಗ್ಯ; ಇವರೆಲ್ಲರೂ ಸಹಜವಾಗಿ ಹಾತೊರೆಯುವುದು ಒಂದಕ್ಕಾಗಿ– ಅದು ಒಂದು ಮನೆ! ಅವಳು ವಾಸ್ತವವಾಗಿದ್ದಳು! ಅವಳ ಕೈ ಹಿಡಿದರೆ ಸಾಕು, ನಿಮಗೆ ಏನೋ ಒಂದು ಅನುಭವವಾಗುವುದು; ಏನೋ ಕೋಮಲವಾದದ್ದು; ಸತ್ತ್ವವುಳ್ಳದ್ದು, ಬೆಚ್ಚನೆ ಹಿತವಾದದ್ದು– ಮೃದುವಾದ ಅದರ ಹಿಡಿತ ನಿಮ್ಮನ್ನು ಹಿಡಿದುಕೊಂಡಿದೆ ಎಂಬ ಭಾವನೆ ನಿಮಗೆ ಇರುವ ತನಕವೂ, ಮಾನವ ಸ್ವಭಾವದ ಸಹಾನುಭೂತಿಯ ಸರಣಿಯಲ್ಲಿ ನಿಮ್ಮ ಸ್ಥಾನ ಒಳ್ಳೆಯದೆಂದು ನೀವು ಖಂಡಿತವಾಗಿರಬಹುದು. ಪ್ರಪಂಚವು ಇನ್ನೆಂದಿಗೂ ಮಾಯೆ ಎನಿಸದು.

ಈ ದಿಸೆಯಲ್ಲಿ ನಮ್ಮ ದೃಷ್ಟಿಯನ್ನು ಇನ್ನು ಕೊಂಚ ಮುಂದಕ್ಕೆ ಹಾಯಿಸಿ, ಹಲವು ಸಲ ಸೂಚಿತವಾಗಿರುವ ರಹಸ್ಯವೊಂದಕ್ಕೆ ಒಂದು ವಿವರಣೆಯನ್ನು ನಾವು ಮುಂದಿಡಬಹುದು. ಕವಿಗಳು ತಮ್ಮ ಜೀವನದ ಸಂಗಾತಿಗಳನ್ನು ಆಯ್ದುಕೊಳ್ಳುವುದು ಅವರಲ್ಲಿಯೂ ಕವಿತಾಶಕ್ತಿ ಇದೆಯೆಂದಲ್ಲ; ಆದರೆ, ಅತ್ಯಂತ ಒರಟಾದ ಕೈ ಕಸಬಿನವನಿಗೆ ಹೇಗೋ ಹಾಗೆ ಚೇತನವನ್ನು ರೂಪಿಸುವ ಆದರ್ಶ ಶಿಲ್ಪಿಗೂ ಸೌಖ್ಯವನ್ನು ದೊರಕಿಸಿಕೊಡುವ ಗುಣಗಳಿಗಾಗಿ. ಇದು ಏಕೆ? ಏಕೆಂದರೆ, ಬಹುಶಃ ಕವಿ ತನ್ನ ಅತ್ಯುಚ್ಚ ಉತ್ಕರ್ಷ ಸ್ಥಿತಿಯಲ್ಲಿರುವಾಗ ಅವನಿಗೆ ಮಾನವ ಸಂಪರ್ಕದ ಅಗತ್ಯವಿಲ್ಲ; ಆ ಮಟ್ಟದಿಂದ ಕೆಳಗಿಳಿದು, ತಾನೊಬ್ಬ ಅಪರಿಚಯಸ್ಥ ನಂತಿರುವುದು ಅವನಿಗೆ ಬೇಸರ.

ಬಹು ಹತ್ತಿರವಾಗಿ ಸತತವಾಗಿ ಒಟ್ಟಿಗೆ ಕೂಡಿಕೊಂಡಿದ್ದ ಈ ಇರ್ವರ

ಕ್ಲಿಫರ್ಡನನ್ನು ಕಂಡರೆ ಫೀಬೆಗೆ ಹೇಗೆನಿಸುತ್ತಿತ್ತು? ಮನುಷ್ಯ ಸ್ವಭಾವದಲ್ಲಿ ಅಪೂರ್ವವಾದ, ಅಸಾಧಾರಣವಾದ ಗುಣದಿಂದ ಅತ್ಯಂತ ಆಕರ್ಷಿತರಾಗುವ ಸ್ವಭಾವವುಳ್ಳವರು ಉಂಟು; ಫೀಬೆ ಅಂಥವಳಾಗಿರಲಿಲ್ಲ. ಅವಳಿಗೆ ಉತ್ತಮವಾಗಿ ಒಗ್ಗುವ ಹಾದಿಯೆಂದರೆ, ಚೆನ್ನಾಗಿ ಸವೆದ ಸಾಧಾರಣ ಜೀವನದ ಹಾದಿ; ಅವಳಿಗೆ ಅತ್ಯಂತ ನಲಿವನ್ನು ನೀಡಬಲ್ಲವರಾಗಿದ್ದ ಒಡನಾಡಿಗಳೆಂದರೆ, ಬೀದಿಯ ಪ್ರತಿಯೊಂದು ಮೂಲೆ ತಿರುವಿನಲ್ಲಿಯೂ ಸಿಕ್ಕುವಂಥ ಜನ. ಕ್ಲಿಫರ್ಡನನ್ನು ಮುಸುಕಿದ್ದ ರಹಸ್ಯವು ಅವಳ ಮೇಲೆ ಏನಾದರೂ ಪರಿಣಾಮ ಬೀರಿದ್ದರೆ, ಅದು ಬೇಸರ ಹುಟ್ಟಿಸುವಂಥದು; ಹಲವುಮಂದಿ ಹೆಂಗಸರು ಅದರಲ್ಲಿ ಒಂದು ಗೆಲುವಾದ ಮೋಹಕತೆಯನ್ನೆ ಕಾಣುವ ಸಂಭವವಿತ್ತು. ಇಷ್ಟಾದರೂ, ಅವಳಿಗೆ ಸಹಜವಾದ ದಯಾಪರತೆ ವಿಶೇಷವಾಗಿ ಪ್ರಕಾಶಗೊಂಡಿತ್ತು; ಅದಕ್ಕೆ ಕಾರಣ, ಅವನಿದ್ದ ಸನ್ನಿವೇಶದ ವಿಷಣ್ಣ ವೈಚಿತ್ರ್ಯವೂ ಅಲ್ಲ, ಅಥವಾ ಅವನ ವ್ಯಕ್ತಿತ್ವದ ನವಿರಾದ ಸೊಗಸುಗಳೂ ಅಲ್ಲ; ತೀರ ಹತಾಶನಾಗಿದ್ದವನ ಹೃದಯದ ಸರಳವಾದ ಮೊರೆ ನಿಜವಾದ ಸಹಾನುಭೂತಿಯಿಂದ ತುಂಬಿತುಳುಕುತ್ತಿದ್ದ ಅವಳ ಹೃದಯವನ್ನು ಮುಟ್ಟಿದ್ದೇ ಕಾರಣ. ಅವಳು ಅವನನ್ನು ಅತ್ಯಾದರದಿಂದ ಕಂಡಳು; ಏಕೆಂದರೆ, ಅವನಿಗೆ ಬೇಕಾಗಿದ್ದುದು ಅಪಾರ ಪ್ರೇಮ, ಅವನು ಪಡೆದಿದ್ದುದಾದರೋ ಅತ್ಯಲ್ಪ. ಸದಾ ಚುರುಕಾಗಿದ್ದ, ಹಸನಾದ ಗ್ರಹಣಶಕ್ತಿಯಿದ್ದುದರ ಫಲವಾಗಿ ಅವಳಲ್ಲಿ ಅವನಿಗೆ ಯಾವುದು ಒಳ್ಳಿತೆಂಬುದನ್ನು ಗ್ರಹಿಸಿ ಅದನ್ನು ಮಾಡುತ್ತಿದ್ದಳು. ಅವನ ಮನಸ್ಸು ಹಾಗೂ ಅನುಭವಗಳಲ್ಲಿ ಜಾಡ್ಯಲಕ್ಷಣ ಅವಳು ತನ್ನ ಇಡಿಯ ನಡೆವಳಿಯಲ್ಲಿ ಎಚ್ಚರತಪ್ಪಿದ್ದೆಂದು ಕಾಣುವ, ಆದರೆ ದೈವಪ್ರೇರಿತವಾದ ಒಂದು ಸ್ವಾತಂತ್ರ್ಯವನ್ನು ವಹಿಸಿ ತಮ್ಮಿಬ್ಬರ ನಡುವಣ ಸಂಪರ್ಕವನ್ನು ಆರೋಗ್ಯಕರವಾಗಿಟ್ಟುಕೊಂಡಿದ್ದಳು. ಮಾನಸಿಕವಾಗಿಯೂ, ಬಹುಶಃ ದೈಹಿಕವಾಗಿಯೂ ರೋಗಿಷ್ಠರಾಗಿರುವವರ ರೋಗವು ಅವರ ಸುತ್ತಮುತ್ತ ಇರುವವರ ನಡೆವಳಿಯೆಂಬ ಕನ್ನಡಿಯಲ್ಲಿ ಹಲವುಮಡಿ ಪ್ರತಿಫಲಿತವಾಗುವುದರಿಂದ, ಅವರು ಆಶೆಯನ್ನು ತೊರೆದುಕೊಂಡು ಅಂಧಕಾರದಲ್ಲಿ ಮುಳುಗಿ ಇನ್ನೂ ಹೆಚ್ಚು ರೋಗಿಷ್ಠರಾಗಿ ಪರಿಣಮಿಸುತ್ತಾರೆ. ಕೊನೆಮೊದಲಿಲ್ಲದಂತೆ ಅವರು ಮತ್ತೆ ಮತ್ತೆ ತಮ್ಮ ಸ್ವಂತ ಉಸಿರಿನ ವಿಷವನ್ನು ತಾವೇ ಕುಡಿಯಬೇಕು. ಆದರೆ ಫೀಬೆ ತನ್ನ ಬಡ ರೋಗಿಗೆ ಶುದ್ಧವಾದ ಗಾಳಿಯನ್ನು ಒದಗಿಸಿದಳು. ಅಲ್ಲದೆ, ಅವಳು ಅದರ ತುಂಬ ಹೂವಿನ ಸುಗಂಧವನ್ನು ತುಂಬಿದಳು– ಕಾಡು ಹೂವಿನ ಸುಗಂಧವಲ್ಲ. ಏಕೆಂದರೆ, ಕಾಡುಹುಟ್ಟಿನ ಲಕ್ಷಣ ಅವಳಲ್ಲಿ ಯಾವುದೂ ಇರಲಿಲ್ಲ;

ಪ್ರತಿಯಾಗಿ ಅಂತಹ ಕಾವ್ಯವನ್ನು ಅವನಿಗಾಗಿ ಮನೆಯಲ್ಲಿ ಹಾಡುವಂತೆ ಅವನ ಮೇಲೆ ಅತ್ಯಂತ ಕರುಣೆಯುಳ್ಳ ದೇವದೂತನೊಬ್ಬನಿಗೆ ದೇವರೇ ಅಪ್ಪಣೆಕೊಟ್ಟಂತಿದ್ದಿತು ಸಂದರ್ಭ. ಅವಳು ಅವನ ಭಾಗಕ್ಕೆ ವಾಸ್ತವಾಂಶವಾಗಿರಲಿಲ್ಲ; ಆದರೆ ಈ ಪ್ರಪಂಚದಲ್ಲಿ ಅವನಿಗೆ ಯಾವಯಾವುದರ ಅಭಾವವಿದ್ದಿತೋ ಅದೆಲ್ಲವನ್ನೂ ಅವನ ಭಾವನೆಗೆ ಅನುಗುಣವಾಗಿ, ಹೃದಯಂಗಮವಾಗಿ ತಿಳಿಸುವ ಅರ್ಥವಿವರಣೆಯಂತಿದ್ದಳು; ಇದರ ಪರಿಣಾಮವಾಗಿ, ಈ ಬರಿಯ ಸಂಕೇತ, ಅಥವಾ ಜೀವಂತವಾಗಿ ಕಾಣುವ ಚಿತ್ರ, ವಾಸ್ತವಿಕತೆಯಿಂದ ದೊರೆಯುವ ನೆಮ್ಮದಿಯನ್ನೇ ಕೊಡುತ್ತಿತ್ತು.

ಆದರೆ, ನಮ್ಮ ಭಾವನೆಯನ್ನು ಮಾತುಗಳ ಮೂಲಕ ವ್ಯಕ್ತಪಡಿಸಲು ಪಡುತ್ತಿರುವ ನಮ್ಮ ಪ್ರಯತ್ನ ವ್ಯರ್ಥ. ಅದು ನಮ್ಮಲ್ಲಿ ಅಚ್ಚೊತ್ತಿರುವ ಸೌಂದರ್ಯವನ್ನೂ ಆಳವಾದ ಕಾರುಣ್ಯಭಾವವನ್ನೂ ತಕ್ಕರೀತಿಯಲ್ಲಿ ನಿರೂಪಿಸುವುದು ನಮ್ಮಿಂದ ಅಸಾಧ್ಯ. ಈ ವ್ಯಕ್ತಿಯು ಸುಖಾನುಭವಕ್ಕಾಗಿಯೆ ಹುಟ್ಟಿದವನು; ಸುಖವಾಗಿರಬೇಕೆಂಬ ಪ್ರಯತ್ನದಲ್ಲಿ ಈವರೆಗೆ ಶೋಚನೀಯವಾದ ರೀತಿಯಲ್ಲಿ ಸೋತಿದ್ದನು; ಅವನ ಪ್ರವೃತ್ತಿಗಳೆಲ್ಲವೂ ಅತ್ಯಂತ ಘೋರರೀತಿಯಲ್ಲಿ ಭಂಗಹೊಂದಿ, ಯಾವುದೋ ಅಜ್ಞಾತ ಕಾಲದ ಹಿಂದೆ, ನೈತಿಕವಾಗಿಯಾಗಲಿ ಬೌದ್ಧಿಕವಾಗಿಯಾಗಲಿ ಎಂದೂ ಬಲಿಷ್ಠವಾಗಿರದಿದ್ದ ಅವನ ಶೀಲಸ್ವಭಾವದ ಸೂಕ್ಷ್ಮ ಮೂಲ ಪ್ರೇರಣೆಗಳು ಕುಸಿದುಬಿದ್ದದ್ದರಿಂದ ಅವನೀಗ ಬಲಹೀನನಾಗಿದ್ದನು; 'ಸ್ವರ್ಗ ಸುಖಾನುಭವಿಗಳ ದ್ವೀಪ'ದಿಂದ ಹೊರಟು ಅಲ್ಲಕಲ್ಲೋಲವಾದ ಸಮುದ್ರದ ಮೇಲೆ ಒಂದು ಶಿಥಿಲವಾದ ದೋಣಿಯಲ್ಲಿ ಸಾಗಿಬಂದ ಈ ಹತಾಶನಾದ ಬಡ ಪ್ರಯಾಣಿಕನು ಹಡಗೊಡೆದು ಕಡಲ ಪಾಲಾದಮೇಲೆ ಅವನನ್ನು ಕಟ್ಟಕಡೆಯ ಬೆಟ್ಟದೆತ್ತರದ ಅಲೆಯೊಂದು ಶಾಂತವಾದ ಬಂದರಿನ ಆಸರೆಗೆ ಎಸೆದುಬಿಟ್ಟಿತು. ಅಲ್ಲಿ, ಸಮುದ್ರತೀರದಲ್ಲಿ ಅವನು ಅರೆಜೀವವಾಗಿ ಬಿದ್ದಿದ್ದಾಗ, ಭೂಲೋಕದ ಗುಲಾಬಿ ಮೊಗ್ಗಿನ ಪರಿಮಳವು ಅವನ ಮೂಗನ್ನು ಪ್ರವೇಶಿಸಿತ್ತು; ಮತ್ತು ಅದು ಎಲ್ಲ ಬಗೆಯ ಪರಿಮಳಕ್ಕೂ ಸಹಜವಾದ ರೀತಿಯಲ್ಲಿ, ಯಾವ ಜೀವಂತವಾದ ಉಸಿರಾಡುವ ಸೌಂದರ್ಯದ ನಡುವೆ ಅವನು ತನ್ನ ಮನೆ ಮಾಡಿಕೊಂಡಿರಬೇಕಾಗಿದ್ದಿತೋ ಅದೆಲ್ಲದರ ನೆನಪುಗಳನ್ನೋ ಇಲ್ಲವೆ ನೋಟಗಳನ್ನೋ ಬರಮಾಡಿತ್ತು. ಸುಖಪ್ರಭಾವಗಳಿಗೆ ಸುಲಭವಾಗಿ ಒಳಗಾಗುವ ಅವನು ಆ ಅಲ್ಪವಾದ ದಿವ್ಯವಾದ ಆನಂದಪರವಶತೆಯನ್ನು ತನ್ನ ಅಂತರಾತ್ಮದೊಳಕ್ಕೆ ಉಸಿರಿನೊಂದಿಗೆ ಎಳೆದುಕೊಂಡು ಪ್ರಾಣಬಿಡುತ್ತಾನೆ!

ಕಥೆಯ ಹಳೆಯ ಮನೆಯಲ್ಲಿ ಬದುಕಿನ ದಿನಚರಿ ಬಹುಮಟ್ಟಿಗೆ ಏಕಪ್ರಕಾರವಾಗಿ ರೂಪಗೊಂಡು ನೆಲಸಿತ್ತು. ಪ್ರಾತಃಕಾಲ ತಿಂಡಿತೀರ್ಥವಾದ ಸ್ವಲ್ಪ ಹೊತ್ತಿನ ಮೇಲೆ ತನ್ನ ಕುರ್ಚಿಯಲ್ಲಿ ಕುಳಿತು ನಿದ್ರೆಹೋಗುವುದು ಕ್ಲಿಫರ್ಡನ ರೂಢಿಯಾಗಿತ್ತು; ಅಲ್ಲದೆ, ಅಕಸ್ಮಾತ್ತಾಗಿ ನಿದ್ರಾಭಂಗವಾದ ಹೊರತು, ದಟ್ಟವಾಗಿ ಕವಿದ ನಿದ್ದೆ ಮೋಡದಿಂದಾಗಲಿ ಅತ್ತಿಂದಿತ್ತ ಸುಳಿದಾಡುತ್ತಿದ್ದ ತೆಳ್ಳನೆಯ ಮಂಜಿನತೆರೆಯಿಂದಾಗಲಿ ನಡುಹಗಲು ಸಮೀಪಿಸುವವರೆಗೂ ಅವನು ಹೊರಬರುತ್ತಿರಲಿಲ್ಲ. ಅವನು ಹಾಗೆ ತೂಕಡಿಸುತ್ತಿದ್ದ ಈ ಕೆಲವು ಗಂಟೆಗಳ ಕಾಲದಲ್ಲಿ ಆ ವೃದ್ಧ ಮಹಿಳೆ ತನ್ನ ಸಹೋದರನ ಬಳಿ ಇದ್ದ ಅವನನ್ನು ನೋಡಿಕೊಳ್ಳುತ್ತಿದ್ದಳು. ಈ ಏರ್ಪಾಡನ್ನು ಜನ ಬೇಗನೆ ಅರ್ಥ ಮಾಡಿಕೊಂಡರು; ಅಂಗಡಿಯ ವ್ಯವಹಾರಗಳ ಆಡಳಿತ ಅವಳ ಕೈಲಿದ್ದಾಗ ಅನೇಕಸಲ ಅಲ್ಲಿಗೆ ಬಂದುಹೋಗುವುದರ ಮೂಲಕ ಖಂಡಿತವಾಗಿಯೂ ಈ ಎಳೆಯ ಅಂಗಡಿಕಾರ್ತಿ ತಮಗೆ ಹೆಚ್ಚು ಬೇಕಾದವಳೆಂಬುದನ್ನು ವ್ಯಕ್ತ ಪಡಿಸಿದರು. ಭೋಜನವಾದಮೇಲೆ, ಹೆಪ್ಸಿಬಾ ಕಸೂತಿ ಕೆಲಸಕ್ಕೆ ತೊಡಗುತ್ತಿದ್ದಳು– ತನ್ನ ಸಹೋದರನು ಚಳಿಗಾಲದಲ್ಲಿ ಧರಿಸಲೆಂದು, ಬೂದು ಬಣ್ಣದ ದಾರದ ನೀಳವಾದ ಕಾಲುಚೀಲವೊಂದನ್ನು ಅವಳು ಹಾಕುತ್ತಿದ್ದಳು; ಆಮೇಲೆ, ಒಮ್ಮೆ ನಿಟ್ಟುಸಿರುಬಿಟ್ಟು, ಕ್ಲಿಫರ್ಡನನ್ನು ಬೀಳ್ಕೊಳ್ಳುವ ರೀತಿಯಲ್ಲಿ ಒಮ್ಮೆ ಆದರದ ಹುಬ್ಬುಗಂಟಿಕ್ಕಿ, ಜಾಗ್ರತೆಯಿಂದಿರಬೇಕೆಂದು ಫೀಬೆಗೆ ಸನ್ನೆಯ ಮೂಲಕ ಅಪ್ಪಣೆಮಾಡಿ, ಅಂಗಡಿಯ ಮೇಜಿನ ಹಿಂದೆ ಕುಳಿತುಕೊಳ್ಳಲು ತೆರಳುತ್ತಿದ್ದಳು. ಈಗ ಆ ನರೆಗೂದಲ ಮನುಷ್ಯನ ದಾದಿ, ಪೋಷಕಳು, ಆಟದ ಗೆಳತಿ–ಅಥವಾ ಹೆಚ್ಚು ಉಚಿತವಾದ ಮಾತು ಬೇರೆ ಯಾವುದಾದರೂ ಇರಲಿ– ಎಂದೆನಿಸುವುದು ಆ ಎಳೆಯ ಹುಡುಗಿಯ ಸರದಿಯಾಗಿತ್ತು.

* * * *

ಗುಲಾಬಿಹೂಗಳು, ಪಿಂಕ್ ಹೂಗಳ ಮತ್ತು ವಿಶೇಷ ಮಾಧುರ್ಯವುಳ್ಳ ಇತರ ಬಗೆಯ ಹೂಗಳ ನರುಗಂಪಿನಿಂದ ತುಂಬಿದಳು; ಆ ಹೂಗಳು ವಸಂತದಿಂದ ವಸಂತಕ್ಕೆ, ಶತಮಾನದಿಂದ ಶತಮಾನಕ್ಕೆ ನಿರಂತರವಾಗಿ ಬೆಳೆಯುವಂತೆ ಮಾಡುವಲ್ಲಿ ಪ್ರಕೃತಿಯೂ ಮನವನೂ ಸಮ್ಮತಿಸಿ ಸಹಕರಿಸಿದ್ದಾರೆ. ಕ್ಲಿಫರ್ಡನೊಡನೆ ಅವಳು ಇಟ್ಟುಕೊಂಡಿದ್ದ ಬಂಧುಭಾವನೆಯಲ್ಲಿ, ಅಂಥ ಒಂದು ಹೂವಾಗಿದ್ದಳು ಫೀಬೆ; ಅಂಥದೊಂದು ನಲಿವನ್ನು ಅವನು ಅವಳಿಂದ ಆಘ್ರಾಣಿಸಿ ಪಡೆಯುತ್ತಿದ್ದ.

ಆದರೂ, ಅವಳ ಸುತ್ತಲೂ ಕವಿದಿದ್ದ ಉಸಿರುಕಟ್ಟುವ ವಾತಾವರಣದಲ್ಲಿ ಅದರ ಹೂದಳಗಳು ಬಾಡಿ ತುಸು ಜೋತುಬಿದ್ದಿದ್ದುವು ಎನ್ನಬೇಕು. ಎಂದಿಗಿಂತ ಅವಳು ಹೆಚ್ಚು ಆಲೋಚನಾಪರಳಾಗಿದ್ದಳು. ಪಕ್ಕಕ್ಕೆ ತಿರುಗಿ ಕ್ಲಿಫರ್ಡನ ಮುಖವನ್ನು ನೋಡಿ, ಮಸುಕಾಗಿದ್ದ ಅತೃಪ್ತಿಕರವಾಗಿದ್ದ ಸೊಬಗನ್ನೂ ಬಹುಮಟ್ಟಿಗೆ ಅಡಗಿಹೋಗಿದ್ದ ಬುದ್ಧಿಶಕ್ತಿಯನ್ನೂ ಕಂಡು, ಅವನ ಜೀವನ ಎಂಥದಾಗಿತ್ತು, ಎಂದು ವಿಚಾರಮಾಡಲು ಅವಳು ಯತ್ನಿಸುವಳು. ಅವನು ಯಾವಾಗಲೂ ಹೀಗೆಯೇ ಇದ್ದನೆ? ಅವನ ಚೇತನದ ಬಹು ಭಾಗವನ್ನು ತೋರಗೊಡುವುದಕ್ಕಿಂತ ಹೆಚ್ಚಾಗಿ ಮರೆಮಾಡಿದ್ದ ಈ ಮುಸುಕು– ಯಾವುದರ ಮೂಲಕ ಅವನು ವಾಸ್ತವ ಪ್ರಪಂಚವನ್ನು ಅಸ್ಪಷ್ಟವಾಗಿ ಮಾತ್ರ ಕಾಣುತ್ತಿದ್ದನೋ ಆ ಮುಸುಕು– ಅವನು ಹುಟ್ಟಿದಂದಿನಿಂದಲೂ ಅವನ ಮೇಲೆ ಕವಿದಿದ್ದಿತೆ? ಅಥವಾ ಅವರ ವಿಷಾದಪೂರ್ಣವಾದ ಹಾಸುಹೊಕ್ಕಿನಲ್ಲಿ ಯಾವುದಾದರೂ ಘೋರವಿಪತ್ತಿನ ಎಳೆಗಳಿದ್ದುವೆ? ಫೀಬೆಗೆ ಒಗಟೆಗಳನ್ನು ಕಂಡರೆ ಇಷ್ಟವಿರಲಿಲ್ಲ; ಈ ಒಗಟೆಯ ತೊಡಕಿನಿಂದ ಪಾರಾಗುವಂತಿದ್ದರೆ ಅವಳಿಗೆ ಸಂತೋಷವೆನಿಸುತ್ತಿತ್ತು. ಹೀಗಿದ್ದರೂ ಕೂಡ, ಕ್ಲಿಫರ್ಡನ ವ್ಯಕ್ತಿತ್ವವನ್ನು ಕುರಿತು ಅವಳು ಚಿಂತನೆ ಮಾಡಿದ್ದರ ಪರಿಣಾಮವಾಗಿ ಈವರೆಗೆ ಒಂದು ಒಳ್ಳೆಯ ಫಲ ದೊರಕಿತ್ತು: ಅವಳ ಅನೈಚ್ಛಿಕವಾದ ಊಹಾಪೋಹಗಳು, ಪ್ರತಿಯೊಂದು ಅಪೂರ್ವ ಸಂದರ್ಭವೂ ತನ್ನದೇ ಆದ ಒಂದು ಕತೆಯನ್ನು ತಿಳಿಸುವ ಕಡೆಗೆ ಒಲೆಯುತ್ತಿದ್ದುದು– ಇವೆರಡೂ ಕೂಡಿ ಅವಳಿಗೆ ಸತ್ಯಾಂಶವನ್ನು ಅರುಹಿದಾಗ, ಅದು ಅವಳ ಮೇಲೆ ಭಯಂಕರ ಪರಿಣಾಮವನ್ನು ಬೀರಲಿಲ್ಲ. ಪ್ರಪಂಚವು ಅವನಿಗೆ ಎಷ್ಟೇ ಅಪಾರ ಅನ್ಯಾಯವನ್ನು ಮಾಡಿದ್ದಿರಲಿ, ಅಣ್ಣ ಕ್ಲಿಫರ್ಡನ ತೆಳ್ಳನೆಯ ಕೋಮಲವಾದ ಬೆರಳುಗಳು ಸೋಂಕಿದ ಮಾತ್ರಕ್ಕೆ ಅವಳು ಕಂಪಿಸಬೇಕಾಗಿರಲಿಲ್ಲ; ಏಕೆಂದರೆ, ಅವಳು ಅವನನ್ನು ಚೆನ್ನಾಗಿ ಬಲ್ಲವಳಾಗಿದ್ದಳು, ಅಥವಾ ಹಾಗೆಂದುಕೊಂಡಿದ್ದಳು.

ಈ ಅಪೂರ್ವ ನಿವಾಸಿ ಬಂದಮೇಲೆ ಕೆಲವು ದಿನಗಳೊಳಗಾಗಿ, ನಮ್ಮ

ಅವಳ ಅಪೂರ್ವ ಶ್ರೋತೃವಿಗೆ ಸ್ವಲ್ಪವೂ ಹಿಡಿಸಲಿಲ್ಲ; ಆ ಬಗೆಯ ಕೃತಿಗಳ ಪರಿಚಯವಿಲ್ಲದಿದ್ದ ಆ ಹಳ್ಳಿಯ ಹುಡುಗಿಯೇನೋ ಅನೇಕವೇಳೆ ಅವುಗಳಲ್ಲಿ ತುಂಬ ಮಗ್ನಳಾಗಿ ಬಿಡುತ್ತಿದ್ದಳು. ಜೀವನ ಚಿತ್ರಗಳು, ಭಾವೋದ್ರೇಕವುಳ್ಳ ಅಥವಾ ರಸವತ್ತಾದ ದೃಶ್ಯಗಳು, ಬುದ್ಧಿಚಾತುರ್ಯ, ಹಾಸ್ಯ, ಕರುಣೆ– ಇವೆಲ್ಲಾ ಕ್ಲಿಫರ್ಡನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡದೆ, ಓದಿದ್ದು ವ್ಯರ್ಥವೆನಿಸುತ್ತಿತ್ತು; ಕಾರಣ, ಅವುಗಳ ಯಥಾರ್ಥತೆಯನ್ನು ಪರೀಕ್ಷಿಸಿ ನೋಡಲು ಅವನಿಗೆ ಅನುಭವದ ಹಿನ್ನೆಲೆಯಿರಲಿಲ್ಲ; ಅದಿಲ್ಲವೋ, ಅವನ ಸ್ವಂತ ದುಃಖಾನುಭವವೇ ಸತ್ಯ ಪರೀಕ್ಷಣದ ಒರೆಗಲ್ಲಾಗಿದ್ದು, ಕಾಲ್ಪನಿಕ ಭಾವ ಭಾವನೆಗಳು ಅದರ ಪರೀಕ್ಷೆಗೆ ತಡೆಯುತ್ತಿರಲಿಲ್ಲ. ಫೀಬೆ ತಾನು ಯಾವುದನ್ನೋ ಓದಿ, ಗೊಳ್ಳನೆ ನಕ್ಕಾಗ, ಅವನೂ ಆಗೊಮ್ಮೆ ಈಗೊಮ್ಮೆ ಸಹಾನುಭೂತಿಯಿಂದ ನಗುತ್ತಿದ್ದನು; ಆದರೆ, ಅನೇಕವೇಳೆ ತಳಮಳಗೊಂಡು ಪ್ರಶ್ನಾರ್ಥಕ ನೋಟವನ್ನು ಬೀರುತ್ತಿದ್ದುದೇ ಹೆಚ್ಚು. ಶೋಕಭಾವದ ಭಾಗವುಳ್ಳ ಪುಟದ ಮೇಲೆ ಒಂದು ಕಂಬನಿ– ಕಾಲ್ಪನಿಕ ದುಃಖದ ಬಗೆಗೆ ಕನ್ನೆಯೊಬ್ಬಳು ಸುರಿಸಿದ ಮಿನುಗುವ ಕಂಬನಿ– ಉದುರಿದರೆ, ಅದನ್ನು ನಿಜವಾದ ದುಃಖಘಟನೆಯ ಕುರುಹೆಂದು ಕ್ಲಿಫರ್ಡ್ ಭಾವಿಸುತ್ತಿದ್ದನು, ಇಲ್ಲವೆ ಆ ಬಗೆಗೆ ಸಿಡಿಮಿಡಿಗೊಂಡು, ಪುಸ್ತಕವನ್ನು ಮುಚ್ಚಿಡುವಂತೆ ಅವಳಿಗೆ ಕೋಪದಿಂದ ಸನ್ನೆಮಾಡಿ ತಿಳಿಸುತ್ತಿದ್ದನು. ಅವನು ಆ ರೀತಿ ಮಾಡುತ್ತಿದ್ದುದೂ ವಿವೇಕದ ಕೆಲಸವೆ! ನಿಜವಾಗಿ, ಅಣಕದ ದುಃಖವನ್ನು ಒಂದು ವಿನೋದವನ್ನಾಗಿ ಮಾಡಿಕೊಳ್ಳದೆಯೇ ಪ್ರಪಂಚ ಸಾಕಷ್ಟು ದುಃಖದಿಂದ ತುಂಬಿಲ್ಲವೆ?

ಕವಿತೆಯ ವಿಚಾರ ಇನ್ನು ಸ್ವಲ್ಪ ಮೇಲಾಗಿತ್ತು. ಲಯದ ಏರಿಳಿತಗಳಲ್ಲಿಯೂ ಪ್ರಾಸದ ಹಿತಕರವಾದ ಪುನರುಕ್ತಿಯಲ್ಲಿಯೂ ಅವನು ನಲಿಯುತ್ತಿದ್ದನು. ಅಲ್ಲದೆ, ಕವಿತೆಯ ರಸವನ್ನು ಅನುಭವಿಸಲು ಅವನು ಅಸಮರ್ಥನಾಗಿಯೂ ಇರಲಿಲ್ಲ– ರಸವು ಉತ್ಕರ್ಷವಾಗಿದ್ದ ಅಥವಾ ಆಳವಾಗಿದ್ದ ಸ್ಥಾನದಲ್ಲಿ ಅಲ್ಲದಿದ್ದರೂ, ಅದು ಅಲ್ಲಲ್ಲಿ ಸುಳಿಯುತ್ತ ಸೂಕ್ಷ್ಮವಾಗಿದ್ದ ಕಡೆಗಳಲ್ಲಿ ಅದನ್ನು ಆಸ್ವಾದಿಸಬಲ್ಲವನಾಗಿದ್ದನು. ಯಾವ ಉತ್ಕೃಷ್ಟ ಪದ್ಯದಲ್ಲಿ ಅವನನ್ನು ಜಾಗೃತನನ್ನಾಗಿ ಮಾಡುವ ಮಂತ್ರಶಕ್ತಿ ಅಡಗಿಕೊಂಡಿರುತ್ತಿತ್ತೊ ಅದನ್ನು ಮುಂದಾಗಿ ತಿಳಿದು ಹೇಳುವುದು ಅಸಾಧ್ಯವಾಗಿತ್ತು; ಆದರೆ, ಫೀಬೆ ತನ್ನ ಕಣ್ಣನ್ನು ಪುಟದಿಂದ ಕ್ಲಿಫರ್ಡನ ಮುಖದ ಕಡೆಗೆ ಮೇಲೆತ್ತಿದಾಗ, ತನ್ನದಕ್ಕಿಂತ ಹೆಚ್ಚು ಸೂಕ್ಷ್ಮಗ್ರಾಹಿಯಾದ ಬುದ್ಧಿಶಕ್ತಿಯು ತಾನು ಓದುತ್ತಿದ್ದ ಗ್ರಂಥಭಾಗದ ಸೌಮ್ಯಪ್ರಕಾಶದ ಭಾವಜ್ವಾಲೆಯನ್ನು ಗ್ರಹಿಸಿತ್ತು ಎಂಬುದನ್ನು ಅವನ ಮುಖದಿಂದ ಹೊರಹೊಮ್ಮುತ್ತಿದ್ದ ಕಾಂತಿಯ ನೆರವಿನಿಂದ

# ೧೦. ಪಿನ್ಚನ್ ಉದ್ಯಾನ

ಫೀಬೆಯ ಚುರುಕಾದ ಪ್ರಚೋದನೆಯಿಲ್ಲದಿದ್ದರೆ, ಕ್ಲಿಫರ್ಡನು ಸಾಧಾರಣವಾಗಿ ಜಡತನಕ್ಕೆ ಬಲಿಯಾಗಿ ಬಿಡುತ್ತಿದ್ದ; ಅದು ಅವನ ಜೀವಿಕೆಯ ಎಲ್ಲ ವಿಧಾನಗಳಿಗೂ ವ್ಯಾಪಿಸಿ, ತನ್ನ ಪ್ರಾತಃಕಾಲದ ಕುರ್ಚಿಯಲ್ಲಿ ಸಂಜೆಯವರೆಗೂ ಕುಳಿತಿರುವಂತೆ ಅವನಿಗೆ ಸೋಮಾರಿತನದ ಸಲಹೆ ಮಾಡಿತ್ತು. ಆದರೆ, ಉದ್ಯಾನಕ್ಕೆ ಹೋಗುವಂತೆ ಫೀಬೆ ಸಲಹೆ ಮಾಡಲು ಎಂದೂ ತಪ್ಪಲಿಲ್ಲ; ಅಲ್ಲಿ ಹಾಳುಬಿದ್ದಿದ್ದ ಬಳ್ಳಿಮನೆಯ, ಅಥವಾ ಬೇಸಗೆಯ ಮನೆಯ ಚಾವಣಿಯನ್ನು ವೆನ್ನರ್ ಮಾವನೂ ಛಾಯಾಚಿತ್ರಕಾರನೂ ಸೇರಿಕೊಂಡು ತಕ್ಕಮಟ್ಟಿಗೆ ಸರಿಪಡಿಸಿದ್ದರು; ಅದರಿಂದಾಗಿ, ಅದು ಬಿಸಿಲಿನಲ್ಲಿಯೂ ಆಕಸ್ಮಿಕ ಮಳೆಯಲ್ಲಿಯೂ ಸಾಕಷ್ಟು ಆಶ್ರಯವನ್ನು ಕೊಡುತ್ತಿತ್ತು. ಆ ಪುಟ್ಟ ಕಟ್ಟಡದ ಪಕ್ಕಗಳ ಮೇಲ್ಗಡೆ 'ಹಾಪ್' ಬಳ್ಳಿ ಕೂಡ ಈಗ ಹೊರವಾಗಿ ಬೆಳೆಯತೊಡಗಿತ್ತು; ಅದರ ಅಸಂಖ್ಯಾತ ಕಂಡಿಗಳ ಮೂಲಕ ಉದ್ಯಾನದ ವಿಶಾಲ ಹೊರವಲಯದ ಏಕಾಂತತೆಯ ಇಣಿಕುನೋಟಗಳೆಷ್ಟೋ ದೊರೆಯುತ್ತಿದ್ದುವು; ಒಳಗೂ ಕೂಡ ಹಸುರು ಹೊದೆದ ಏಕಾಂತಸ್ಥಳವನ್ನು ಅದು ನಿರ್ಮಿಸಿಕೊಟ್ಟಿತ್ತು.

ಇಲ್ಲಿ, ಈ ಮಿನುಗುಬೆಳಕಿನ ಹಸುರು ಆಡುಂಬೊಲದಲ್ಲಿ, ಫೀಬೆ ಕ್ಲಿಫರ್ಡನಿಗೆ ಗ್ರಂಥವಾಚನಮಾಡುತ್ತಿದ್ದಳು. ಅವಳ ಪರಿಚಯಸ್ಥನಾದ ಆ ಕಲಾವಿದನಿಗೆ ಸಾಹಿತ್ಯಾಭಿರುಚಿಯಿದ್ದಿತು; ಅವನು ಬಿಡಿ ಸಂಚಿಕೆಗಳ ರೂಪದಲ್ಲಿದ್ದ ಕಥಾಸಾಹಿತ್ಯಕೃತಿಗಳನ್ನೂ ಕೆಲವು ಕವಿತಾಗ್ರಂಥಗಳನ್ನೂ ಅವಳಿಗೆ ಒದಗಿಸಿದ್ದನು; ಅವು ಶೈಲಿಯಲ್ಲಿಯೂ ರುಚಿಯಲ್ಲಿಯೂ ಹೆಪ್ಸಿಬಾ ಕ್ಲಿಫರ್ಡನ ವಿನೋದಕ್ಕೆಂದು ಆಯ್ಕೆಮಾಡಿದ್ದ ಗ್ರಂಥಗಳಿಗಿಂತ ಸಂಪೂರ್ಣವಾಗಿ ಬೇರೆಯಾಗಿದ್ದುವು. ಆದಾಗ್ಯೂ, ಅವಳ 'ಅಕ್ಕ'ನು ಓದುವುದಕ್ಕಿಂತ ಫಿಬೆ ಓದುವುದು ಹೆಚ್ಚು ಯಶಸ್ವಿಯಾಗಿದ್ದ ಭಾಗದಲ್ಲಿ, ಆ ಪುಸ್ತಕಗಳ ಉಪಕಾರ ಅಷ್ಟು ಹೆಚ್ಚಲ್ಲವೆನ್ನಬೇಕು. ಫೀಬೆಯ ಧ್ವನಿಯಲ್ಲಿ ಯಾವಾಗಲೂ ಒಂದು ಅಂದವಾದ ಸಂಗೀತ ಗುಣವಿದ್ದಿತು; ಅದು ತನ್ನ ಶುದ್ಧವಾದ ಗೆಲುವಾದ ಸ್ವರದಿಂದ ಕ್ಲಿಫರ್ಡನನ್ನು ಹುರಿದುಂಬಿಸುವುದಕ್ಕೂ, ಅಂತೆಯೆ, ನಿರಂತರವಾಗಿ ಹರಿಯುವ ತೊರೆಯ ಕಲಕಲನಾದದಿಂದ ಅವನನ್ನು ಸಮಾಧಾನಪಡಿಸುವುದಕ್ಕೂ ಸಮರ್ಥವಾಗಿತ್ತು. ಆದರೆ ಕಥೆಯ ಪುಸ್ತಕಗಳು

ಮರೆತುಬಿಟ್ಟಿದ್ದನು; ಆದರೆ, ಅವನು ತನ್ನ ಜೀವನದ ನಿರುತ್ಸಾಹಕರ ಜಡತೆಯನ್ನು ಬಿಟ್ಟು ನಿಧಾನವಾಗಿ ಚೇತರಿಸಿಕೊಂಡಂತೆ, ಈಗ ಅದನ್ನು ಮರಳಿ ಕಂಡುಕೊಂಡನು.

ತೋಟದ ಆ ಏಕಾಂತ ಸ್ಥಳದಲ್ಲಿ ಫೀಬೆ ಹಿತಕರವಾದ ಸಂಗತಿಗಳನ್ನು ನಿರೀಕ್ಷಿಸುತ್ತ ಹೊರಟಳೋ ಇಲ್ಲವೋ, ಅಂತಹ ಅನೇಕ ಸಂಗತಿಗಳು ಎಡಬಿಡದೆ ಸಂಭವಿಸುತ್ತಿದ್ದುವು; ಇದು ನಿಜವಾಗಿ ಆಶ್ಚರ್ಯಕರ. ಅವಳು ಆ ಎಡೆಯ ಪರಿಚಯವನ್ನು ಹೊಂದಿದ ಮೊದಲದಿನ, ಅವಳು ಅಲ್ಲಿ ಒಂದು ತುಂಬಿಯನ್ನು ಕಂಡಿದ್ದಳು, ಇಲ್ಲವೆ ಅದರ ಝುಂಕೃತಿಯನ್ನು ಕೇಳಿದ್ದಳು: ಆ ತರುವಾಯ, ಅನೇಕವೇಳೆ– ಬಹುಮಟ್ಟಿಗೆ ಸರ್ವದಾ ಎಂದೇ ಹೇಳಬಹುದು– ತುಂಬಿಗಳು ಈ ಕಡೆ ಬಹು ದೂರದ ಸವಿತಿನಿಸಿಗಾಗಿ ಬರುತ್ತಲೇ ಇದ್ದುವು; ಇಲ್ಲಿಗಿಂತ ಇನ್ನೂ ಬಹು ಹತ್ತಿರದಲ್ಲಿಯೇ ಬಹು ವಿಶಾಲವಾದ 'ಕ್ಲೋವರ್' ಸೊಪ್ಪಿನ ಹೊಲಗಳೂ ಎಲ್ಲ ಬಗೆಯ ತೋಟದ ಬೆಳೆಯೂ ಇದ್ದಿರುವಲ್ಲಿ ಅವು ಇಲ್ಲಿಗೇ ಏಕೆ ಬರುತ್ತಿದ್ದುವೋ, ಯಾವ ಮೊಂಡುತನದ ಬಯಕೆಯಿಂದ ಬರುತ್ತಿದ್ದುವೋ, ದೈವವೇ ಬಲ್ಲುದು. ಅದು ಹೇಗಾದರೂ ಇರಲಿ, ತುಂಬಿಗಳು ಇಲ್ಲಿಗೆ ಬಂದೇ ಬಂದುವು, ಕುಂಬಳದ ಹೂಗಳೊಳಕ್ಕೆ ನುಗ್ಗಿಯೇ ನುಗ್ಗಿದುವು; ಇದನ್ನು ನೋಡಿದರೆ, ಒಂದು ದಿನದ ಹಾರಿಕೆಯ ದೂರದಲ್ಲಿ ಬೇರೆ ಯಾವ ಕುಂಬಳ ಬಳ್ಳಿಯೂ ಇರಲಿಲ್ಲವೇನೋ, ಅಥವಾ ಹೊಸ ಇಂಗ್ಲೆಂಡ್ ಪ್ರಾಂತದಲ್ಲಿ ತಾವು ಕಟ್ಟಿದ್ದ ಎಲ್ಲ ಗೂಡುಗಳ ಜೇನಿಗೂ ವಿಶೇಷ ಬಗೆಯ ಪರಿಮಳವನ್ನು ಕೊಡುವ ಸಲುವಾಗಿ ಈ ದುಡಿಯುವ ಚಿಕ್ಕ ಮಾಟಗಾರ– ತುಂಬಿಗಳು ಅಪೇಕ್ಷಿಸುತ್ತಿದ್ದಂತಹ ಅದೇ ಗುಣವನ್ನು ಹೆಪ್ಸಿಬಾಳ ತೋಟದ ಮಣ್ಣು ತನ್ನ ಬೆಳೆಗೆಲ್ಲಾ ಕೊಡುತ್ತಿತ್ತೇನೋ, ಎಂಬಂತೆ ಕಾಣುತ್ತಿತ್ತು. ಆ ದೊಡ್ಡ ಹಳದಿಯ ಹೂಗಳ ಗರ್ಭದಲ್ಲಿ ಅವುಗಳ ಉಲ್ಲಾಸದ ಝೇಂಕಾರವನ್ನು ಕ್ಲಿಫರ್ಡ್ ಕೇಳಿದಾಗ, ತನ್ನ ಸುತ್ತಲೂ ಇದ್ದ ನೀಲಿಯ ಆಕಾಶ, ಹಸುರು ಹುಲ್ಲು, ನೆಲದಿಂದ ಬಾನೆತ್ತರದವರೆಗೆ ದೇವರು ಧಾರಾಳವಾಗಿ ಒದಗಿಸಿರುವ ಗಾಳಿ– ಇವೆಲ್ಲವುಗಳನ್ನೂ ತನ್ನ ಸುತ್ತಮುತ್ತ ಕಂಡು ಹರ್ಷಭಾವದಲ್ಲಿ ಮುಳುಗುತ್ತಿದ್ದನು. ಏನೇ ಇರಲಿ, ಧೂಳು ತುಂಬಿದ ಊರಿನ ಆ ಒಂದು ಹಸುರುಮೂಲೆಗೆ ತುಂಬಿಗಳು ಏಕೆ ಬರುತ್ತಿದ್ದುವು ಎಂಬ ಬಗೆಗೆ ಪ್ರಶ್ನೆಯೇ ಬೇಕಿಲ್ಲ. ನಮ್ಮ ಕ್ಲಿಫರ್ಡನನ್ನು ಸಂತಸಗೊಳಿಸಲೆಂದು ದೇವರೇ ಅವುಗಳನ್ನು ಕಳಿಸುತ್ತಿದ್ದನು. ತುಸು ಜೇನಿಗೆ ಪ್ರತಿಯಾಗಿ ಅವು ತಮ್ಮೊಡನೆ ಸಮೃದ್ಧವಾದ ಬೇಸಗೆಯನ್ನು ತರುತ್ತಿದ್ದುವು.

ಕೋಲುಗಳ ಮೇಲೆ ಹಬ್ಬಿದ್ದ ತಿಂಗಳ ಹುರಳಿ ಬಳ್ಳಿಗಳು ಹೂಬಿಡ

ಅರಿತುಕೊಳ್ಳುತ್ತಿದ್ದಳು. ಆದರೂ ಕೂಡ, ಅನೇಕವೇಳೆ, ಈ ಬಗೆಯ ಕಾಂತಿಯ ಒಂದು ಹೊಳಪು ಮುಂದೆ ಅನೇಕ ಗಂಟೆಗಳ ಕಾಲ ಕವಿದಿರುತ್ತಿದ್ದ ಮಂಕಿನ ಮುನ್ಸೂಚನೆಯಾಗಿರುತ್ತಿತ್ತು; ಏಕೆಂದರೆ ಆ ಕಾಂತಿ ಅವನನ್ನು ಬಿಟ್ಟು ಹೋದಾಗ, ಒಂದು ಇಂದ್ರಿಯ ಹಾಗೂ ಒಂದು ಶಕ್ತಿ ನಷ್ಟವಾದಂತೆ ಅವನಿಗೆ ತೋರಿ, ಒಬ್ಬ ಕುರುಡನು ಕಳೆದುಹೋದ ತನ್ನ ದೃಷ್ಟಿಯನ್ನು ಹುಡುಕಿಕೊಂಡು ಹೊರಟಂತೆ, ಅವನು ಅವುಗಳಿಗಾಗಿ ತಡಕಾಡುತ್ತಿದ್ದನು.

ಓದುವಾಗ ಫೀಬೆ ಮಾತಾಡಬೇಕು, ಮತ್ತು ಅದರೊಂದಿಗೆ ತನ್ನ ವಿವರಣೆಗಳಿಂದಲೂ ಟೀಕೆಗಳಿಂದಲೂ ಹಾದುಹೋಗುವ ಸಂಗತಿಗಳು ಅವನ ಮನಸ್ಸಿಗೆ ಸ್ಪಷ್ಟವಾಗುವಂತೆ ಮಾಡಬೇಕು– ಇದು ಅವನಿಗೆ ಹೆಚ್ಚು ಇಷ್ಟ; ಅಲ್ಲದೆ, ಅವನ ಅಂತರಂಗದ ನೆಮ್ಮದಿಗೂ ಅದರಿಂದ ಮೇಲಾಗುತ್ತಿತ್ತು. ಕ್ಲಿಫರ್ಡನಿಗೆ ಉತ್ತಮವಾಗಿ ಸರಿಹೋಗುವ ಅಂತಹ ಮಾತುಕತೆಗೆ ಸಾಕಾಗುವಷ್ಟು ವಿಷಯಗಳು ತೋಟದ ಬದುಕಿನಲ್ಲಿ ದೊರಕುತ್ತಿದ್ದುವು. ನಿನ್ನೆಯಿಂದ ಈಚೆಗೆ ಯಾವ ಯಾವ ಹೂಗಳು ಅರಳಿದ್ದುವು ಎಂದು ವಿಚಾರಿಸಲು ಅವನು ತಪ್ಪುತ್ತಿರಲಿಲ್ಲ. ಹೂಗಳ ವಿಷಯದಲ್ಲಿ ಅವನ ಭಾವನೆ ಬಹು ಉತ್ಕೃಷ್ಟವಾಗಿತ್ತು; ಅದು ಅಭಿರುಚಿಗಿಂತ ಹೆಚ್ಚಾಗಿ ಒಂದು ರಾಗಭಾವ ಎನಿಸುತ್ತಿತ್ತು; ಒಂದು ಕೈಯಲ್ಲಿ ಹೂವನ್ನು ಹಿಡಿದುಕೊಂಡು, ಅದನ್ನು ದೃಷ್ಟಿಸಿ ನೋಡುತ್ತಾ, ತೋಟದ ಹೂವು ಗೃಹಕೃತ್ಯದ ಕನ್ಯೆಯ ತಂಗಿಯೋ ಎಂಬಂತೆ ಅದರ ದಳಗಳಿಂದ ಫೀಬೆಯ ಕಡೆಗೆ ನೋಟವನ್ನು ಹೊರಳಿಸತ್ತಾ ಕುಳಿತಿರುವುದೆಂದರೆ ಅವನಿಗೆ ಇಷ್ಟ. ಹೂವಿನ ಸುಗಂಧ, ಅಥವಾ ಅದರ ಸುಂದರವಾದ ಆಕೃತಿ, ಅಥವಾ ಅದರ ಬಣ್ಣದ ನಯ ಇಲ್ಲವೆ ಹೊಳಪು– ಇಷ್ಟರಿಂದ ಮಾತ್ರವೇ ಅವನಿಗೆ ಸಂತೋಷವುಂಟಾಗುತ್ತಿರಲಿಲ್ಲ; ಆ ತೋಟದ ಹೂಗಳಿಗೆ ಭಾವಾನುಭೂತಿ ಮತ್ತು ಬುದ್ಧಿಶಕ್ತಿಗಳು ಇವೆಯೇನೋ ಎನ್ನುವಂತೆ, ಅವುಗಳ ಜೀವನ, ಸ್ವಭಾವ, ಮತ್ತು ವ್ಯಕ್ತಿತ್ವ– ಇವುಗಳ ಅರಿವು ಅವನ ಆನಂದಾನುಭವದೊಂದಿಗೆ ಸೇರಿಕೊಂಡಿತ್ತು; ಅದರಿಂದಾಗಿ ಅವನು ಅವುಗಳನ್ನು ಪ್ರೀತಿಸುವಂತಾಗಿತ್ತು. ಹೂಗಳ ಮೇಲಿನ ಈ ಪ್ರೇಮ ಸಹಾನುಭೂತಿಗಳು ವಿಶೇಷವಾಗಿ ಹೆಂಗಸಿನ ಸ್ವಭಾವ ಲಕ್ಷಣ. ಒಂದುವೇಳೆ ಆ ಲಕ್ಷಣ ಗಂಡಸರಲ್ಲಿಯೂ ಪ್ರಕೃತಿಸಿದ್ಧವಾಗಿ ಇದ್ದುದೇ ಆದರೆ, ಹೂಗಳಿಗಿಂತಲೂ ಒರಟಾದ ಪದಾರ್ಥಗಳೊಂದಿಗೆ ಅವರು ಇಟ್ಟುಕೊಳ್ಳುವ ಸಂಪರ್ಕದ ಪರಿಣಾಮವಾಗಿ ಆ ಸ್ವಭಾವಲಕ್ಷಣವನ್ನು ಅವರು ಕಳೆದುಕೊಳ್ಳುತ್ತಾರೆ, ಮರೆಯುತ್ತಾರೆ, ಇಲ್ಲವೆ ಅದನ್ನು ತಿರಸ್ಕರಿಸಕಲಿಯುತ್ತಾರೆ. ಕ್ಲಿಫರ್ಡನೂ ಸಹ ಅದನ್ನು ಬಹುಹಿಂದೆಯೇ

ಅವಳ ಸ್ವರೂಪದಲ್ಲಿ ತಾಯ್ತನದ ಮತ್ತು ಸೋದರಭಾವದ, ಹಾಗೂ ಸುಖ ದುಃಖಗಳ ಒಂದು ಅಪೂರ್ವ ಮಿಶ್ರಣವಿರುತ್ತಿದ್ದಿತು. ಹಾಡುಹಕ್ಕಿಗಳು ಬಂದಾಗ ಕ್ಲಿಫರ್ಡ್ ಯಾವಾಗಲೂ–ಮಗುವಾಗಿದ್ದಂದಿನಿಂದ ಯಾವಾಗಲೂ– ಹಾಗೆಯೇ ವರ್ತಿಸುತ್ತಿದ್ದನು. ಸುಂದರವಾದ ವಸ್ತುಗಳಲ್ಲಿ ತನಗಿದ್ದ ಪ್ರೇಮವನ್ನು ತೋರಿಸುತ್ತಿದ್ದ ಬಹು ಮುಂಚಿನ ಕುರುಹುಗಳಲ್ಲಿ ಆ ಹಕ್ಕಿಗಳಿಂದ ಪಡೆಯುತ್ತಿದ್ದ ಆನಂದವೂ ಒಂದು– ಎಂದು ಹೆಪ್ಸಿಬಾ ಹೇಳುತ್ತಿದ್ದಳು. ಹಾಡುಹಕ್ಕಿಗಳು ಬಹು ದೂರದಿಂದ ಹುಡುಕಿಕೊಂಡು ಬರುತ್ತಿದ್ದ ಈ ಕಡುಗೆಂಪು ಹೂಬಿಡುವ ತಿಂಗಳ ಹುರುಳಿಯನ್ನು ಕ್ಲಿಫರ್ಡ್ ಹಿಂದಿರುಗಿ ಬಂದ ಬೇಸಗೆಯಲ್ಲಿಯೇ ಆ ಕಲಾವಿದನು ಹುಟ್ಟುಹಾಕಿದ್ದು ಒಂದು ಆಶ್ಚರ್ಯಕರ ಕಾಕತಾಳೀಯತೆ ಎಂದು ಆ ಒಳ್ಳೆಯ ಮಹಿಳೆ ಯೋಚಿಸಿದಳು; ಏಕೆಂದರೆ ಪಿನ್ಚನ್ ಉದ್ಯಾನದಲ್ಲಿ ಆ ಗಿಡಗಳು ಬೆಳೆದು ನಲವತ್ತು ವರ್ಷಗಳಾಗಿದ್ದುವು.

ಆಗಲೀಗ ಬಡ ಹೆಪ್ಸಿಬಾಳ ಕಣ್ಣುಗಳಲ್ಲಿ ನೀರು ನಿಲ್ಲುವುದು, ಅಥವಾ ಅವುಗಳಿಂದ ಧಾರಾಳವಾಗಿ ಉಕ್ಕಿ, ತುಂಬಿ ತುಳುಕಿ ಹರಿಯುವುದು; ಆಗ ಕ್ಲಿಫರ್ಡ್ ಎಲ್ಲಿ ತನ್ನ ಮನಸಿನ ಕ್ಷೋಭೆಯನ್ನು ಕಂಡುಬಿಡುವನೋ ಎಂಬ ಅಳುಕಿನಿಂದ ಯಾವುದಾದರೂ ಒಂದು ಮೂಲೆಗೆ ಹೋಗಿ ಸೇರಿಕೊಳ್ಳಲು ಅವಳಿಗೆ ಸಂತಸವೆನಿಸುವುದು. ವಾಸ್ತವವಾಗಿ, ಈ ಕಾಲಾವಧಿಯಲ್ಲಿ ಪಟ್ಟ ಸುಖಾನುಭವಗಳೆಲ್ಲವೂ ಕಂಬನಿಯನ್ನೇ ತರುತ್ತಿದ್ದುವು. ಅಷ್ಟೊಂದು ತಡವಾಗಿ ಕಾಣಿಸಿಕೊಂಡ ಆ ಬೇಸಗೆ ಒಂದು ವಿಧವಾದ 'ಇಂಡಿಯಾದ ಬೇಸಗೆ'*ಯಾಗಿತ್ತು; ಅದರ ಅತ್ಯಂತ ಹಿತಕರವಾದ ಬಿಸಿಲಿನಲ್ಲಿ ಮಬ್ಬು ಕವಿದಿತ್ತು, ಅದರ ಅತ್ಯಂತ ಆಡಂಬರದ ನಲಿವಿನಲ್ಲಿ ನಾಶವೂ ಸಾವೂ ಹುದುಗಿದ್ದುವು. ಶಿಶುಸಹಜವಾದ ಸೌಖ್ಯವನ್ನು ಕ್ಲಿಫರ್ಡ್ ಹೆಚ್ಚು ಹೆಚ್ಚಾಗಿ ಸವಿದಂತೆಲ್ಲಾ, ಕಾಣಬರುತ್ತಿದ್ದ ವ್ಯತ್ಯಾಸವು ಹೆಚ್ಚು ಹೆಚ್ಚು ದುಃಖಕರವಾಗಿತ್ತು. ಅವನ ಹಿಂದೆ ಇದ್ದುದು, ಅವನ ನೆನಪನೆಲ್ಲಾ ಅಳಿಸಿಬಿಟ್ಟಿದ್ದ ರಹಸ್ಯಪೂರ್ಣ ಭೀಕರ ಭೂತಕಾಲ; ಮುಂದಿದ್ದುದು ಶೂನ್ಯವಾದ ಭವಿಷ್ಯ; ಇವೆರಡರ ನಡುವೆ, ಸ್ವಪ್ನಪ್ರಾಯವಾದ ಹಿಡಿತಕ್ಕೆ ಸಿಕ್ಕಿದ ವರ್ತಮಾನಕಾಲ; ಇದನ್ನು ಒಮ್ಮೆ ಹತ್ತಿರದಿಂದ ಪರಿಶೀಲಿಸಿದರೆ, ಅಲ್ಲಿ ಏನೂ ಇಲ್ಲ. ತನ್ನ ಸುಖ ಸಂತೋಷದ ಹಿಂದೆ ಅವನು ತಾನೇ ಮಂಕಾಗಿ ಹುದುಗಿಕೊಂಡಿದ್ದನು; ಅದೊಂದು ಮಕ್ಕಳಾಟವೆಂದು ಅವನು ಬಲ್ಲ, ಅದನ್ನು ಸಂಪೂರ್ಣವಾಗಿ ನಂಬುವೆಡೆ

* ಉತ್ತರ ಅಮೆರಿಕಾ ಸಂಸ್ಥಾನಗಳಲ್ಲಿ ಶರತ್ಕಾಲದ ಅಂತ್ಯದಲ್ಲಿ ಕಾಣಿಸಿಕೊಳ್ಳುವ ಮಬ್ಬಾದ, ನಿರಾರ್ದ್ರ, ಪ್ರಶಾಂತ ವಾಯುಸ್ಥಿತಿ.

ತೊಡಗಿದಾಗ, ಶುದ್ಧ ಕಡುಗೆಂಪು ಬಣ್ಣದ ಹೂಬಿಡುತ್ತಿದ್ದ ಒಂದು ವಿಶಿಷ್ಟ ಜಾತಿಯ ಬಳ್ಳಿಯನ್ನು ಕಾಣಬಹುದಾಗಿತ್ತು. ಏಳು ಇಪ್ಪಾರುಗಳಲ್ಲಿ ಒಂದರ ಅಟ್ಟದ ಕೋಣೆಯಲ್ಲಿ ಈ ಜಾತಿಯ ತಿಂಗಳ ಹುರಳಿಯ ಬೀಜಗಳು ಛಾಯಾಚಿತ್ರ ಕಲಾವಿದನಿಗೆ ಸಿಕ್ಕಿದ್ದುವು; ಅವುಗಳನ್ನು ತೋಟಗಾರಿಕೆಯಲ್ಲಿ ಆಸಕ್ತಿಯುಳ್ಳ ಯಾವನೋ ಒಬ್ಬ ಪಿನ್ಚನ್ ವಂಶೀಯನು ಅಲ್ಲಿ ಒಂದು ಹಳೆಯ ಸೆಳೆಖಾನೆಗಳುಳ್ಳ ಪೆಟ್ಟಿಗೆಯಲ್ಲಿ ಇಟ್ಟಿದ್ದನು; ಮುಂದಿನ ಬೇಸಗೆಯಲ್ಲಿ ಅವುಗಳನ್ನು ಬಿತ್ತಬೇಕೆಂದು ಅವನು ನಿಸ್ಸಂದೇಹವಾಗಿಯೂ ಉದ್ದೇಶಪಟ್ಟಿದ್ದನು; ಆದರೆ ಮೃತ್ಯುದೇವತೆಯ ಉದ್ಯಾನಭೂಮಿಯಲ್ಲಿ ಅವನೇ ಮೊದಲು ಬಿತ್ತನೆಯಾಗಿ ಹೋದನು. ಅಷ್ಟು ಪುರಾತನವಾದ ಬೀಜಗಳಲ್ಲಿ ಜೀವಂತ ಮೊಳಕೆ ಇನ್ನೂ ಇದ್ದೀತೆ ಎಂಬುದನ್ನು ಪರೀಕ್ಷಿಸುವ ಸಲುವಾಗಿ ಅವುಗಳಲ್ಲಿ ಕೆಲವನ್ನು ಹಾಲ್‌ಗ್ರೇವ್ ನಟ್ಟಿದ್ದನು; ಅವನ ಪ್ರಯೋಗದ ಫಲವಾಗಿ, ತಿಂಗಳ ಹುರಳಿಯ ಬಳ್ಳಿಗಳ ಒಂದು ಸೊಗಸಾದ ಸಾಲು ಬಂದಿತ್ತು; ಬಹು ಮುಂಚಿತವಾಗಿಯೆ ಅವು ಗಣೆಗಳ ಪೂರ್ತಿ ಎತ್ತರಕ್ಕೆ ಅಡರಿ, ಮೇಲಿನಿಂದ ಕೆಳಗಿನ ವರೆಗೆ ಸುರುಳಿಯಾಗೆ ಏರುತ್ತ ಸಮೃದ್ಧವಾಗಿ ಹೂತಿದ್ದ ಕೆಂಪು ಹೂಗಳಿಂ ಆ ಗಣೆಗಳನ್ನು ಸಿಂಗರಿಸಿದ್ದುವು. ಮತ್ತು, ಮೊದಲ ಮೊಗ್ಗು ದಳಬಿಚ್ಚಿದಂದಿನಿಂದ ಹಾಡುಹಕ್ಕಿಗಳ ಬಳಗ ಈಯೆಡೆಗೆ ಆಕರ್ಷಿತವಾಗಿದ್ದಿತು. ಕೆಲವು ವೇಳೆ, ನೂರು ಹೂವುಗಳಲ್ಲಿ ಪ್ರತಿಯೊಂದಕ್ಕೂ ಒಂದರಂತೆ ಗಗನದ ಕಿಕ್ಕಿರುಹಕ್ಕಿ ಇದ್ದಿತೇನೋ ಎಂಬಂತೆ ಕಾಣುತ್ತಿತ್ತು– ಹೆಬ್ಬೆರಳ ಗಾತ್ರದ, ಮಿರುಗುಟ್ಟುವ ಗರಿಯ ಆ ಹಕ್ಕಿಗಳು ತಿಂಗಳ ಹುರಳಿಯ ಗಣೆಗಳ ಸುತ್ತ ಚಕ ಚಕ ಸುಳಿದಾಡುತ್ತಿದ್ದುವು. ಅವರ್ಣನೀಯವಾದ ಆಸಕ್ತಿಯಿಂದಲೂ, ಅದಕ್ಕಿಂತ ಹೆಚ್ಚಾಗಿ ಶಿಶುಸಹಜವಾದ ಸಂತೋಷದಿಂದಲೂ ಕ್ಲಿಫರ್ಡ್ ಆ ಹಾಡುಹಕ್ಕಿಗಳನ್ನು ಗಮನಿಸಿ ನೋಡುತ್ತಿದ್ದನು. ಅವುಗಳನ್ನು ಇನ್ನೂ ಚೆನ್ನಾಗಿ ನೋಡಲೆಂದು ಬಳ್ಳಿ ಮನೆಯಿಂದ ಹೊರಕ್ಕೆ ಅವನು ಮೆಲ್ಲನೆ ತಲೆಚಾಚುತ್ತಿದ್ದನು; ಆ ಸಮಯದಲ್ಲಿ ಅವನು ಫೀಬೆಗೆ ನಿಶ್ಶಬ್ದವಾಗಿರಬೇಕೆಂದು ಸನ್ನೆ ಮಾಡುತ್ತಾ, ಅವಳ ಸಹಾನುಭೂತಿಯಿಂದ ತನ್ನ ಆನಂದಾನುಭವದ ರಾಶಿಯನ್ನು ಇನ್ನೂ ಎತ್ತರಕ್ಕೆ ಏರಿಸಿಕೊಳ್ಳಲಾಗುವಂತೆ ಅವಳ ಮುಖದಮೇಲೆ ಆಡುತ್ತಿದ್ದ ಮುಗುಳ್ನಗೆಯ ದರ್ಶನವನ್ನು ಪಡೆಯುತ್ತಿದ್ದನು. ಅವನು ಈಗ ಯುವಕನಾಗಿದ್ದುದು ಮಾತ್ರವಲ್ಲ– ಮರಳಿ ಮಗುವೇ ಆಗಿಬಿಟ್ಟಿದ್ದನು.

ಸೂಕ್ಷ್ಮ ಪ್ರಮಾಣದ ಉತ್ಸಾಹದ ಈ ಆವೇಶಗಳಲ್ಲಿ ಒಂದನ್ನು ಯಾವಾಗಲಾದರೂ ಹೆಪ್ಸಿಬಾ ಕಂಡದ್ದೇ ಆದರೆ, ತಲೆತೂಗುತ್ತಿದ್ದಳು; ಆಗ

ಗ್ರಂಥಕರ್ತನು ತನ್ನ ಓದುಗನ ಸಹಾನುಭೂತಿಯಲ್ಲಿ ಅಪಾರ ನಂಬಿಕೆಯನ್ನು ಹೊಂದಿರಬೇಕು; ಅದಿಲ್ಲದೆ ಹೋದರೆ, ಈ ತೋಟದ ಬದುಕಿನ ಕಲ್ಪನೆಯನ್ನು ಉಂಟುಮಾಡಿಕೊಡಲು ಅವಶ್ಯವಾದ ಬಹು ಸೂಕ್ಷ್ಮ ವಿವರಗಳನ್ನೂ ಕ್ಷುದ್ರವೆಂದು ತೋರುವ ಘಟನೆಗಳನ್ನೂ ತಿಳಿಸಲು ಆತ ಹಿಂದೆಗೆಯಬೇಕಾಗುತ್ತದೆ. ಆ್ಯಡಂ ಎಂಬ ಆದಿಮಾನವನನ್ನು ಈಡನ್ ಉದ್ಯಾನದಿಂದ ನಿರುತ್ಸಾಹಕರವೂ ಅಪಾಯನಿಬಿಡವೂ ಆದ ಬೆಂಗಾಡಿಗೆ ಹೊರಹಾಕಲಾಯಿತಷ್ಟೆ; ಅಂಥ ಬೆಂಗಾಡಿನಿಂದ ಆಶ್ರಯಸ್ಥಾನವನ್ನು ಹುಡುಕಿಕೊಂಡು ಬಂದ, ಸಿಡಿಲೇಟಿಗೆ ಸಿಲುಕಿದ್ದ ಆ್ಯಡಮ್ಮಿನ ಈಡನ್ ಉದ್ಯಾನವಾಗಿತ್ತು ಈ ತೋಟ.

ಕ್ಲಿಫರ್ಡನ ಸಲುವಾಗಿ ಫೀಬೆ ವಿಶೇಷವಾಗಿ ಉಪಯೋಗಿಸಿಕೊಂಡ ವಿನೋದಸಾಧನಗಳಲ್ಲಿ ಒಂದೆಂದರೆ,ಆ ಪಕ್ಷಿಸಮಾಜ, ಎಂದರೆ ಕೋಳಿಗಳು; ನಾವು ಈ ಮೊದಲೇ ಹೇಳಿರುವಂತೆ, ಅವುಗಳ ಒಂದು ತಳಿಯ ವಂಶವು ಪಿನ್ಚನ್ ಮನೆತನದಲ್ಲಿ ಅನಾದಿಕಾಲದಿಂದ ಬಂದ ಆಸ್ತಿಯಾಗಿತ್ತು. ಅವು ಬಂಧನದಲ್ಲಿದ್ದು, ಅದರಿಂದ ಕ್ಲಿಫರ್ಡನ ಮನಸ್ಸಿಗೆ ಹಿಂಸೆಯಾಗಿತ್ತು; ಅವನ ವಿಚಿತ್ರವಾದ ಅಪೇಕ್ಷೆಗೆ ಅನುಗುಣವಾಗಿ, ಅವುಗಳನ್ನು ಬಂಧನದಿಂದ ವಿಮೋಚನೆ ಮಾಡಲಾಗಿತ್ತು; ಅವು ಈಗ ತೋಟದಲ್ಲೆಲ್ಲಾ ತಮ್ಮ ಮನಬಂದಂತೆ ಅಲೆದಾಡುತ್ತಿದ್ದುವು; ಅವು ಅಲ್ಪ ಸ್ವಲ್ಪ ಚೇಷ್ಟೆಯನ್ನೂ ಮಾಡುತ್ತಿದ್ದುವು, ಆದರೆ ಮೂರು ಕಡೆ ಕಟ್ಟಡಗಳೂ ಇನ್ನೊಂದು ಕಡೆ ದಾಟಲು ಕಷ್ಟವಾದ ಮರದ ಬೇಲಿಯ ಚೂಪು ತುದಿಗಳೂ ಇದ್ದುವಾದ್ದರಿಂದ ತಪ್ಪಿಸಿಕೊಂಡು ಹೋಗಲು ತಡೆಯುಂಟಾಗಿತ್ತು. ಅವು ತಮ್ಮ ಅಪಾರವಾದ ಬಿಡುವು ಹೊತ್ತನ್ನು ಮಾಲನ ಬಾವಿಯ ದಂಡೆಯಲ್ಲಿ ಕಳೆಯುತ್ತಿದ್ದುವು; ಕಾರಣ, ಒಂದು ಜಾತಿಯ ಬಸವನ ಹುಳುಗಳು ಅಲ್ಲಿಗೆ ಯಾವಾಗಲೂ ಬರುತ್ತಿದ್ದು, ಅವುಗಳ ನಾಲಗೆಗೆ ಅವು ಸವಿತಿನಿಸಾಗಿದ್ದುವು; ಜೊತೆಗೆ, ಬಾವಿಯ ಉಪ್ಪುಪ್ಪಾದ ನೀರು ಇನ್ನುಳಿದ ಪ್ರಪಂಚಕ್ಕೆ ಅದೆಷ್ಟೋ ಓಕರಿಕೆ ಬರಿಸುವಂತಿರಲಿ, ಈ ಕೋಳಿಗಳಿಗೆ ಅತ್ಯಂತ ಪ್ರಿಯವಾಗಿದ್ದುವು; ಎಷ್ಟು ಪ್ರಿಯವಾಗಿತ್ತೆಂದರೆ ಅವು ತಮ್ಮ ತಲೆಯನ್ನು ಮೇಲಕ್ಕೆತ್ತಿಕೊಂಡು, ಪರೀಕ್ಷೆಮಾಡಬೇಕಾಗಿದ್ದ ಮದ್ಯದ ಪೀಪಾಯಿಯ ಸುತ್ತ ಮುತ್ತಿಕೊಂಡಿರುವ ಅತಿಕುಡುಕರ ಗತ್ತಿನಲ್ಲಿ ತಮ್ಮ ಕೊಕ್ಕನ್ನು ಚಪ್ಪರಿಸುತ್ತಾ, ನೀರನ್ನು ರುಚಿನೋಡುತ್ತಿದ್ದುದನ್ನು ಕಾಣಬಹುದಾಗಿತ್ತು. ಫಲವತ್ತಾದ ಕಪ್ಪು ಮಣ್ಣಿನಿಂದ ಹುಳುಗಳನ್ನು ಅವು ಕೆದಕಿ ತೆಗೆಯುವಾಗಲೋ, ಇಲ್ಲವೇ ತಮ್ಮ ರುಚಿಗೆ ಒಗ್ಗುವಂತಹ ಗಿಡಗಳನ್ನು ಕುಟುಕಿ ತಿನ್ನುವಾಗಲೋ, ಸಾಮಾನ್ಯವಾಗಿ

ಅದರೊಂದಿಗೆ ಅವನು ಸುಮ್ಮನೆ ಆಟವಾಡಬೇಕಾಗಿತ್ತು. ನಿವಾರಿಸಲಾಗದಂಥ ದೈವವು ಅಸಂಖ್ಯಾತ ಜನಸಮುದಾಯವನ್ನು ಪ್ರಪಂಚಕ್ಕೆ ವಿರುದ್ಧವಾದ ಉದ್ದೇಶಗಳ ಸುಳಿಯಲ್ಲಿ ನಿರಂತರವಾಗಿ ಸಿಲುಕಿಸುತ್ತಿರುತ್ತದೆ: ತಾನೇ ಕೊಟ್ಟ ವಚನವನ್ನು ಅವರ ಸ್ವಭಾವದ ವಿಷಯದಲ್ಲಿ ಮುರಿಯುವುದು; ಅವರಿಗೆ ತಕ್ಕ ಆಹಾರವನ್ನು ಕೊಡದೆ, ಔತಣದೂಟವೆಂದು ಹೇಳಿ ಅವರ ಮುಂದೆ ವಿಷವನ್ನು ಮುಂದಿಡುವುದು; (ಯಾರಿಗಾಗಲಿ ಹೊಳೆಯುವಂತೆ, ಬಹು ಸುಲಭವಾಗಿ ಬೇರೆಯ ರೀತಿಯಲ್ಲಿ ವ್ಯವಸ್ಥೆ ಮಾಡಬಹುದಾಗಿದ್ದಾಗಲೂ) ಅವರ ಬದುಕನ್ನು ಅಪೂರ್ವವಾಗಿ, ಒಂಟಿತನದ್ದಾಗಿ, ಚಿತ್ರಹಿಂಸೆಯದಾಗಿ ಮಾಡುವುದು. ಕ್ಲಿಫರ್ಡ್ ತಾನು ಇಂಥ ಜನವರ್ಗದ ಒಂದು ನಿದರ್ಶನ, ಪ್ರತಿನಿಧಿ ಎಂಬುದನ್ನು ತನ್ನೊಳಗಿನ ಪ್ರಜ್ಞೆಯೆಂಬ ಕನ್ನಡಿಯಲ್ಲಿ ಕಂಡನು. ಅವನು ತನ್ನ ಜೀವನದುದ್ದಕ್ಕೂ, ಪರಭಾಷೆಯನ್ನು ಕಲಿಯುವಂತೆ, ಹೀನದೀನನಂತೆ ಇರುವುದು ಹೇಗೆ ಎಂಬುದನ್ನು ಕಲಿಯುತ್ತಿದ್ದನು; ಆ ಪಾಠವನ್ನು ಸಮಗ್ರವಾಗಿ ಕಂಠಪಾಠಮಾಡಿಕೊಂಡಾದಮೇಲೆ, ಈಗ, ತನ್ನ ಅಸ್ಪಷ್ಟವಾದ ಅಲ್ಪ ಸುಖವನ್ನು ಅರ್ಥಮಾಡಿಕೊಳ್ಳುವುದು ಅವನಿಗೆ ಕಷ್ಟವೆನಿಸಿತು. ಆಗಾಗ್ಗೆ, ಅವನ ಕಣ್ಣುಗಳನ್ನು ಸಂದೇಹದ ನಸುನೆರಳು ಕವಿಯುತ್ತಿತ್ತು. ಆಗ ಅವನು, "ಫೀಬೆ, ನನ್ನ ಕೈಹಿಡಿದುಕೋ. ನಿನ್ನ ಪುಟ್ಟ ಬೆರಳುಗಳಿಂದ ಅದನ್ನು ಚಿವುಟು! ಒಂದು ಗುಲಾಬಿಯ ಹೂವು ಕೊಡು; ಅದರ ಮುಳ್ಳುಗಳನ್ನು ಒತ್ತಿ, ನೋವಿನ ಚುರುಕು ಸೋಂಕಿನಿಂದ ನಾನು ಎಚ್ಚರವಾಗಿರುವುದನ್ನು ಸಿದ್ಧಪಡಿಸಿಕೊಳ್ಳುತ್ತೇನೆ!" ಎನ್ನುವನು. ಅವನಿಗೆ ಇಂಥ ಒಂದು ಅಲ್ಪಯಾತನೆಯ ಒಂದು ಚುಚ್ಚು ಬೇಕಾಗಿದ್ದಿತೆಂಬುದು ಸ್ಪಷ್ಟ; ಏಕೆಂದರೆ, ನಿಜವೆಂದು ತನಗೆ ನಂಬಿಕೆಯಾಗಿದ್ದ ವಿಶಿಷ್ಟ ಗುಣದಿಂದ, ಆ ತೋಟ ಮತ್ತು ಗಾಳಿಮಳೆಗೆ ಒಡ್ಡಿದ್ದ ಏಳು ಇಪ್ಪಾರುಗಳು, ಹೆಪ್ಸಿಬಾಳ ಸಿಡುಕು ಮೋರೆ, ಫೀಬೆಯ ಮುಗುಳು ನಗೆ– ಇವೆಲ್ಲವೂ ಅದೇ ರೀತಿ ನಿಜವೆಂದು ತನಗೆ ತಾನು ಖಚಿತಪಡಿಸಿಕೊಳ್ಳಲು ಅಪೇಕ್ಷೆಪಟ್ಟನು. ಅವನು ಈವರೆಗೆ ತನ್ನ ಚೇತನಕ್ಕೆ ಕೇವಲ ಕಾಲ್ಪನಿಕ ದೃಶ್ಯಗಳ ತಿರುಳಿಲ್ಲದ ಕಲಸುಮೆಲಸನ್ನು ಆಹಾರವಾಗಿ ಒದಗಿಸಿದ್ದನು; ತನ್ನ ಮಾಂಸ ಖಂಡಕ್ಕೆ ಅಂಥ ಒಂದು ಯಾತನೆಯ ಮುದ್ರೆಯಿಲ್ಲದೆ ಹೋದರೆ, ಈ ಕಾಲ್ಪನಿಕ ದೃಶ್ಯಗಳ ಯಥಾರ್ಥತೆಗಿಂತ ಹೆಚ್ಚಿನ ಯಾಥಾರ್ಥತೆಯನ್ನು ಅವನು ಮೇಲ್ಕಂಡ ನಿಜದ ಸಂಗತಿಗಳಿಗೂ ಆರೋಪಿಸಲು ಅವನಿಗೆ ಸಾಧ್ಯವಾಗುತ್ತಿರಲಿಲ್ಲ; ಮಾತ್ರವಲ್ಲ, ತನಗೆ ಆಧಾರವಾಗಿದ್ದ ಆ ಅಲ್ಪ ಕಾಲ್ಪನಿಕ ಆಹಾರವೂ ಮುಗಿದು ಹೋಗುತ್ತಿತ್ತು.

ಎಂದು ಅದರ ತಾಯಿ ಭಾವಸಿದ್ದಿತು; ಅಲ್ಲದೆ, ಪ್ರಪಂಚ ಮುಂದುವರಿಯುವುದಕ್ಕೂ, ಚರ್ಚುಗಳ ಮತ್ತು ಸರ್ಕಾರದ ವ್ಯವಹಾರಗಳ ಸಧ್ಯದ ವ್ಯವಸ್ಥೆ ಏರುಪೇರಾಗದೆ ಸಮಸ್ಥಿತಿಯಲ್ಲಿರುವುದಕ್ಕೂ ತನ್ನ ಮರಿ ಅತ್ಯಗತ್ಯ ಎಂದು ತಿಳಿದಿದ್ದಿತು. ಗರಿಗೆದರಿ ತನ್ನ ಸಣ್ಣ ಗಾತ್ರವನ್ನು ಅದರ ಸರಿಯಾದ ಆಕೃತಿಯ ಎರಡರಷ್ಟಕ್ಕೆ ಹಿಗ್ಗಿಸುತ್ತಾ, ಮುಂದೆ ಏಳಿಗೆಗೆ ಬರಲಿರುವ ತನ್ನ ಸಂತಾನವನ್ನು ನೋಡಿ ಎನ್ನುವಂತೆ ಪ್ರತಿಯೊಬ್ಬರ ಮುಖದ ಬಳಿಯೂ ಹಾರಾಡುತ್ತಾ ತಾಯಿ ಕೋಳಿ ತನ್ನ ಮರಿಯ ಯೋಗಕ್ಷೇಮವನ್ನು ಒಂದೇ ಸಮನೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿತ್ತು. ಮರಿಕೋಳಿ ಅಷ್ಟು ಪ್ರಾಮುಖ್ಯವಲ್ಲ ಎಂಬ ಭಾವನೆಯಿದ್ದಿದ್ದರೆ, ತಾಯಿ ಕೂಡ ಅಷ್ಟು ಎಚ್ಚರಿಕೆ ವಹಿಸಬೇಕಾದ್ದಿರಲಿಲ್ಲ. ಅಲ್ಲದೆ, ಶ್ರಮವೇ ಕಾಣದಷ್ಟು ಅತ್ಯುತ್ಸಾಹದಿಂದ, ಅತ್ಯುತ್ಕೃಷ್ಟವಾದ ಹೂಗಿಡವನ್ನೋ ಇಲ್ಲವೆ ತರಕಾರಿಯ ಗಿಡವನ್ನೋ ಅದರ ಬುಡದಲ್ಲಿರುವ ಕೊಬ್ಬಿದ ಎರಹುಳುವಿನ ಸಲುವಾಗಿ ಯಾವ ಲಕ್ಷ್ಯವೂ ಇಲ್ಲದೆ ಆ ತಾಯಿ ಅಗೆದು ಕಿತ್ತುಹಾಕಿಬಿಡುತ್ತಿತ್ತು; ತನ್ನ ಮರಿಯ ಬಗೆಗೆ ಅದು ಹೆಮ್ಮೆಯ ಭಾವನೆಯನ್ನು ಹೊಂದಿರದಿದ್ದರೆ, ಅದರ ಈ ಕಾರ್ಯ ಸಮರ್ಥನೀಯವಾಗುತ್ತಿರಲಿಲ್ಲ. ತನ್ನ ಮರಿಕೋಳಿ ನೀಳವಾದ ಹುಲ್ಲಿನ ನಡುವೆಯೋ ಇಲ್ಲವೆ ಕುಂಬಳದ ಎಲೆಗಳ ಅಡಿಯಲ್ಲಿಯೋ ಅಡಗಿಕೊಂಡಿದ್ದಾಗ ತಾಯಿ ಗಾಬರಿಗೊಂಡು ಮಾಡುತ್ತಿದ್ದ 'ಕ್ಲಕ್' ಎಂಬ ಧ್ವನಿ; ಅದು ತನ್ನ ರೆಕ್ಕೆಯ ಕೆಳಗೆ ಸುರಕ್ಷಿತವಾಗಿದೆಯೆಂದು ಖಂಡಿತವಾದಾಗ ಹೊರಡಿಸುತ್ತಿದ್ದ, ತೃಪ್ತಿಸೂಚಕವಾದ ಮೃದುವಾದ ಪತ್ರಗುಟ್ಟುವಿಕೆ; ತನ್ನ ಪರಮವೈರಿಯಾದ ನೆರೆಮನೆಯ ಬೆಕ್ಕು ಎತ್ತರವಾದ ಬೇಲಿಯ ಮೇಲ್ಗಡೆ ಕುಳಿತಿರುವುದನ್ನು ಕಂಡಾಗ ತಾಯಿಕೋಳಿ ತೋರುತ್ತಿದ್ದ, ಅಡಗಿಸಿಕೊಳ್ಳಲಾಗದ ಭೀತಿಯ ಕೂಗು ಮತ್ತು ಗದ್ದಲದ ಪ್ರತಿಭಟನೆ– ಈ ಶಬ್ದಗಳಲ್ಲಿ ಯಾವುದಾದರೂ ಒಂದನ್ನು ಹಗಲು ಹೊತ್ತಿನಲ್ಲಿ ಸರಿಸುಮಾರು ಪ್ರತಿ ಕ್ಷಣದಲ್ಲಿಯೂ ಕೇಳಬಹುದಾಗಿತ್ತು. ಕ್ರಮಕ್ರಮವಾಗಿ, ಇದನ್ನೆಲ್ಲಾ ನೋಡುವವರಿಗೆ ಆ ತಾಯಿಕೋಳಿಯಲ್ಲಿ ಎಷ್ಟು ಆಸಕ್ತಿಯುಂಟಾಗುತ್ತಿದ್ದಿತೋ ಪ್ರಸಿದ್ಧವಂಶದ ಈ ಮರಿಕೋಳಿಯಲ್ಲಿಯೂ ಹೆಚ್ಚು ಕಡಮೆ ಅಷ್ಟೇ ಆಸಕ್ತಿ ಬಲಿಯುತ್ತಿತ್ತು.

ಮುದಿ ಹೆಣ್ಣುಕೋಳಿಯ ಪರಿಚಯವನ್ನು ಚೆನ್ನಾಗಿ ಮಾಡಿಕೊಂಡಾದಮೇಲೆ ಫೀಬೆ ಕೆಲವು ವೇಳೆ ಮರಿಕೋಳಿಯನ್ನು ತನ್ನ ಕೈಯಿಂದ ಹಿಡಿದುಕೊಳ್ಳಲು ಅವಳಿಗೆ ಅನುಮತಿ ದೊರೆಯಿತು; ಆ ಮರಿಕೋಳಿಯ ಒಂದೋ ಎರಡೋ ಘನಅಂಗುಲದ ಘನವಾದ ಒಡಲನ್ನು ಹಿಡಿದುಕೊಳ್ಳಲು ಅವಳ ಕೈ ಪೂರ್ತಿ

ಶಾಂತರೀತಿಯಲ್ಲಿ, ಆದರೂ ಅನೇಕ ವೇಳೆ ಚುರುಕಾಗಿ, ಯಾವಾಗಲೂ ವೈವಿಧ್ಯ ಪೂರ್ಣವಾಗಿ ತಮ್ಮ ತಮ್ಮಲ್ಲಿ ಇಲ್ಲವೇ ಒಂಟಿಯಾಗಿ ಮಾತಾಡಿಕೊಳ್ಳುತ್ತಿದ್ದುವು; ಅವುಗಳ ಮಾತಿನಲ್ಲಿ ಎಂತಹ ಗೃಹಕೃತ್ಯದ ಲಕ್ಷಣ ಕಂಡುಬರುತ್ತಿತ್ತೆಂದರೆ, ಮನುಷ್ಯಜಾತಿಗೆ ಇಲ್ಲವೆ ಕುಕ್ಕುಟಜಾತಿಗೆ ಸಂಬಂಧಪಟ್ಟ ಹಾಗೆ ಸಾಂಸಾರಿಕ ವಿಷಯಗಳಲ್ಲಿ ಕ್ರಮವಾದ ವಿಚಾರ ವಿನಿಮಯವನ್ನು ಇಟ್ಟುಕೊಳ್ಳಬಾರದೇಕೆ ಎಂದು ಅಚ್ಚರಿಪಡುವಂತಾಗುತ್ತಿತ್ತು. ಅವುಗಳ ನಡೆವಳಿಕೆಯಲ್ಲಿ ಕಂಡುಬರುವ ಅಪಾರ ವೈವಿಧ್ಯ ಮತ್ತು ಚುರುಕು– ಇವುಗಳ ದೃಷ್ಟಿಯಿಂದ ಎಲ್ಲ ಕೋಳಿಗಳನ್ನೂ ಚೆನ್ನಾಗಿ ಪರಿಶೀಲನೆ ಮಾಡುವುದು ಪ್ರಯೋಜನಕರ; ಆದರೆ ಈ ಪುರಾತನ ವಂಶದ ಕೋಳಿಗಳ ಹಾಗೆ ವಿಚಿತ್ರ ಸ್ವರೂಪವನ್ನೂ ನಡೆವಳಿಕೆಯನ್ನೂ ಉಳ್ಳ ಇತರ ಕೋಳಿಗಳು ಇರುವುದು ಸಾಧ್ಯವಿರಲಿಲ್ಲ. ಬಹುಶಃ, ಅವಿಚ್ಛಿನ್ನವಾದ ಒಂದು ಅಂಡ ಪರಂಪರೆಯಿಂದ ಸಾಗಿಬಂದ ತಮ್ಮ ಇಡಿಯ ಪೂರ್ವವಂಶದ ಎಲ್ಲ ಗುಣ ವೈಲಕ್ಷಣ್ಯಗಳನ್ನೂ ಅವು ತಮ್ಮಲ್ಲಿ ತಳೆದಿದ್ದುವು; ಅದಿಲ್ಲವೋ, ಈ ಒಬ್ಬ ಹುಂಜಪ್ಪನೂ ಅವನ ಇಬ್ಬರು ಕೋಳಿ ಹೆಂಡಿರೂ ಹಾಸ್ಯಗಾರರಾಗಿಬಿಟ್ಟಿದ್ದರು; ಜೊತೆಗೆ ತಲೆಯೂ ಸ್ವಲ್ಪ ಕೆಟ್ಟಿತ್ತು; ಇದಕ್ಕೆಲ್ಲ ಕಾರಣ, ಅವರ ಒಂಟಿಬಡಕ ಜೀವನ, ಹಾಗೂ ತಮ್ಮ ಆಶ್ರಯದಾತಳಾಗಿದ್ದ ಹೆಪ್ಸಿಬಾಳ ಬಗೆಗೆ ಇದ್ದ ಸಹಾನುಭೂತಿ.

ನಿಜವಾಗಿಯೂ ಅವರು ವಿಚಿತ್ರವಾಗಿ ಕಾಣುತ್ತಿದ್ದರು! ಸನಾತನ ವಂಶದ ಘನತೆಗಾಂಭೀರ್ಯವನ್ನೆಲ್ಲಾ ತನ್ನ ಭಾವಭಂಗಿಗಳಲ್ಲಿ ತುಂಬಿಕೊಂಡು ನಡೆ–ಗಣೆಗಳಂತಿದ್ದ ತನ್ನ ಎರಡು ಕಾಲುಗಳಿಂದ ದರ್ಪವಾಗಿ ನಡೆಯುತ್ತಿದ್ದ ಹುಂಜಪ್ಪನೇ ಒಂದು ಸಾಧಾರಣ ಗವುಜು ಹಕ್ಕಿಗಿಂತ ದೊಡ್ಡವನಾಗಿರಲಿಲ್ಲ; ಅವನ ಇಬ್ಬರ ಹೆಂಡಿರಂತೂ ಲಾವಕ್ಕಿಗಳ ಗಾತ್ರ ಇದ್ದರು; ಇನ್ನೂ ಒಂದು ಮರಿಯ ವಿಷಯ ಹೇಳುವುದಾದರೆ, ಇನ್ನೂ ಮೊಟ್ಟೆಯೊಳಗಡೆಯೇ ಇರಬೇಕಾದಷ್ಟು ಸಣ್ಣಗಿದ್ದಿತು; ಆದರೂ ಕೂಡ, ಪುರಾತನ ವಂಶದ ಸ್ಥಾಪಕನೆನಿಸಿಕೊಳ್ಳುವಮಟ್ಟಿಗೆ ಸಾಕಷ್ಟು ವಯಸ್ಸಾಗಿ, ಬಾಡಿ ಬತ್ತಿಹೋಗಿ, ಸುರುಟಿಮುರುಟಿಕೊಂಡು, ತುಂಬ ಅನುಭವ ಶಾಲಿಯಾಗಿ ಕಾಣುತ್ತಿತ್ತು. ಕುಟುಂಬ ವರ್ಗದಲ್ಲಿ ಅತ್ಯಂತ ಕಿರಿಯದಾಗಿರು ವೆಡೆಯಲ್ಲಿ, ಕುಲದಲ್ಲಿ ಈಗ ಬದುಕಿರುವ ಮಾದರಿಗಳಲ್ಲದೆ ಹಿಂದಿನ ತಲೆಗಳ ಎಲ್ಲ ಪೂರ್ವಜರ ವಯಸ್ಸುಗಳನ್ನೂ ತನ್ನಲ್ಲಿಯೆ ಒಟ್ಟುಗೂಡಿಸಿಕೊಂಡು, ಅವರೆಲ್ಲರ ಒಟ್ಟಿನ ಉತ್ಕೃಷ್ಟತೆಗಳನ್ನೂ ವಿಲಕ್ಷಣತೆಗಳನ್ನೂ ತನ್ನ ಕಿರಿಯೊಡಲಿನಲ್ಲಿ ಹಿಂಡಿಟ್ಟುಕೊಂಡಂತೆ ಕಾಣುತ್ತಿತ್ತು. ಪ್ರಪಂಚದಲ್ಲಿ ಕೋಳಿಮರಿ ಎಂದರೆ ಇದೊಂದೆ

ಬಿಟ್ಟರುವರುಂಟೆ– ದ್ವೀಪದ್ರಾಕ್ಷಿ ಗಿಡಗಳ ಅಡಿಯಲ್ಲಿ, ಕಳೆದ ವರ್ಷದ ಹುಲ್ಲಿನ ಕೆಲವು ಒಣ ಕಡ್ಡಿಗಳ ಮೇಲೆ ಅದನ್ನು ಬಹು ಚಾತುರ್ಯದಿಂದ ಮರೆಸಿಟ್ಟಿತ್ತು. ಈ ಸಂಗತಿ ಗೊತ್ತಾದಮೇಲೆ, ಹೆಪ್ಸಿಬಾ ಮೊಟ್ಟೆಯನ್ನು ತನ್ನ ವಶಕ್ಕೆ ತೆಗೆದುಕೊಂಡು, ಅದನ್ನು ಕ್ಲಿಫರ್ಡನ ಪ್ರಾತಃಕಾಲದ ಉಪಾಹಾರಕ್ಕಾಗಿ ವಿನಿಯೋಗಿಸಿದಳು; ಏಕೆಂದರೆ, ಒಂದು ಬಗೆಯ ಸೂಕ್ಷ್ಮ ರುಚಿಗೆ ಈ ಮೊಟ್ಟೆಗಳು ಯಾವಾಗಲೂ ಪ್ರಖ್ಯಾತವೆಂದು ಅವಳ ಖಂಡಿತವಾದ ಹೇಳಿಕೆ. ಈ ರೀತಿಯಲ್ಲಿ, ಒಂದು ಪುರಾತನ ಪಕ್ಷಿಕುಲ ಬಹುಶಃ ಮುಂದುವರಿಯುವುದನ್ನು ಹಿಂದುಮುಂದು ನೋಡದೆ ಈ ವೃದ್ಧ ಮಹಿಳೆ ಬಲಿಕೊಟ್ಟಳು; ಉದ್ದೇಶವಾದರೂ ಮೇಲಾದುದಲ್ಲ, ಒಂದು ಚಹಾ ಚಮಚದಷ್ಟೂ ಇಲ್ಲದ ಸವಿತಿಂಡಿಯನ್ನು ತನ್ನ ಸಹೋದರನಿಗೆ ಒದಗಿಸುವುದು! ಈ ಕ್ರೂರಕಾರ್ಯದ ಸಂಬಂಧವಾಗಿಯೆ ಇರಬೇಕು, ಮಾರನೆಯ ದಿನ ಹುಂಜನು ಮೊಟ್ಟೆಯನ್ನು ಕಳೆದುಕೊಂಡು ದುಃಖಕ್ಕೀಡಾದ ತಾಯಿಯರನ್ನೂ ಜೊತೆಯಲ್ಲಿ ಕರೆದೊಯ್ದು, ಫೀಬೆ ಮತ್ತು ಕ್ಲಿಫರ್ಡರ ಮುಂದುಗಡೆ ಸ್ಥಾನಪಡೆದು, ಉಚ್ಚಧ್ವನಿಯಲ್ಲಿ ಒಂದು ಕುಕ್ಕುಟ ಭಾಷಣವನ್ನು ಮಾಡಿತು; ಮಧ್ಯೆ ಫೀಬೆ ವಿನೋದಗೊಂಡು ತಡೆಯುಂಟು ಮಾಡದಿದ್ದರೆ, ಆ ಭಾಷಣ ಅದರ ವಂಶಾವಳಿಯಷ್ಟೇ ದೀರ್ಘವಾಗಿ ಪರಿಣಮಿಸುತ್ತಿತ್ತು. ಇಷ್ಟೆಲ್ಲ ಆದಮೇಲೆ, ಮನನೊಂದ ಆ ಹುಂಜ ತನ್ನ ಉದ್ದವಾಧ ನಡೆಗಣೆಗಾಲಿಕ್ಕುತ್ತ, ಗತ್ತಿನಿಂದ ನಡೆದುಕೊಂಡು ಹೊರಟುಹೋಗಿ, ಫೀಬೆಯನ್ನೂ ಉಳಿದ ಮಾನವಜಾತಿಯನ್ನೂ ಕಣ್ಣೆತ್ತಿನೋಡುವುದನ್ನೇ ಬಿಟ್ಟು ಬಿಟ್ಟಿತು; ಕಡೆಗೆ ಫೀಬೆ ಅದಕ್ಕೊಂದು ಮಸಾಲೆ ಕಜ್ಜಾಯವನ್ನಿತ್ತು, ಅದರೊಂದಿಗೆ ಶಾಂತಿಸಂಧಾನ ಮಾಡಕೊಳ್ಳಬೇಕಾಯಿತು; ಬಸವನ ಹುಳು ಬಿಟ್ಟರೆ, ಮಸಾಲೆಕಜ್ಜಾಯ ಅದರ ಅಭಿಜಾತರುಚಿಗೆ ಅತ್ಯಂತ ಪ್ರಿಯವಾಗಿತ್ತು.

ಪಿನ್ಚನ್ ಭವನದ ಉದ್ಯಾನದ ಮೂಲಕ ಹರಿಯುತ್ತಿದ್ದ ಈ ಕ್ಷುದ್ರವಾದ ಬದುಕಿನ ಕಿರುದೊರೆಯ ಪಕ್ಕದಲ್ಲಿ ನಾವು ಬಹುಕಾಲ ತಳುವಿಬಿಟ್ಟದ್ದೇವೆ, ಅದರಲ್ಲಿ ಸಂದೇಹವಿಲ್ಲ. ಆದರೆ ಈ ಕ್ಷುಲ್ಲಕ ಸಂಗತಿಗಳನ್ನೂ ಅಲ್ಪ ಸಂತೋಷಗಳನ್ನೂ ಉಲ್ಲೇಖಿಸುವುದು ಕ್ಷಮ್ಯವೆಂದು ಭಾವಿಸಿದ್ದೇವೆ; ಏಕೆಂದರೆ, ಅವು ಕ್ಲಿಫರ್ಡನಿಗೆ ಅತ್ಯಂತ ಉಪಯುಕ್ತವಾಗಿ ಪರಿಣಮಿಸಿದ್ದುವು. ಅವುಗಳಲ್ಲಿ ಮಣ್ಣಿನ ಸೊಗಡಿದ್ದು, ಅವನಿಗೆ ಆರೋಗ್ಯವನ್ನೂ ಸತ್ತ್ವವನ್ನೂ ಕೊಡಲು ನೆರವಾಗಿದ್ದುವು. ಅವನ ಕೆಲಸಕಾರ್ಯಗಳಲ್ಲಿ ಕೆಲವು ಅವನ ಮೇಲೆ ಅಷ್ಟಾಗಿ ಇಷ್ಟಪಡಬಹುದಾದಂತಹ ಪರಿಣಾಮವನ್ನು ಬೀರಲಿಲ್ಲ. ಉದಾಹರಣೆಗಾಗಿ, ಮಾಲನ ಬಾವಿಯ ಮೇಲೆ

ಸಮರ್ಥವಾಗಿತ್ತು. ಅದರ ಗರಿಯ ಮೇಲಿನ ವಿಚಿತ್ರ ಮಚ್ಚೆಗಳು, ಅದರ ತಲೆಯ ಮೇಲಿನ ತಮಾಷೆಯಾದ ಜುಟ್ಟು, ಅದರ ಪ್ರತಿಯೊಂದು ಕಾಲಿನ ಮೇಲೂ ಇದ್ದ ಗಂಟು– ಈ ವಂಶಪಾರಂಪರ್ಯವಾದ ಚಿಹ್ನೆಗಳನ್ನು ಅವಳು ಕುತೂಹಲದಿಂದ ಪರೀಕ್ಷಿಸುತ್ತಿದ್ದಾಗ, ಅವಳ ಒತ್ತಾಯಕ್ಕೆ ಒಳಗಾಗಿ ಆ ಚಿಕ್ಕ ದ್ವಿಪಾದಿ ಬುದ್ಧಿವಂತಿಕೆಯ ಮಿಟುಕುನೋಟವನ್ನು ಅವಳ ಕಡೆ ಬೀರುತ್ತಲೇ ಇದ್ದಿತು. ಈ ಚಿಹ್ನೆಗಳು ಪಿನ್ಚನ್ ಮನೆತನದ ವಿಲಕ್ಷಣತೆಗಳಿಗೆ ಸಾಕ್ಷಿಯಾಗಿವೆಯೆಂದೂ; ಆ ಕೋಳಿಮರಿಯೇ ಹಳೆಯ ಮನೆಯ ಬದುಕಿನ ಸಂಕೇತವಾಗಿದೆಯೆಂದೂ; ಇಂಥ ಗುರುತುಗಳು ಸಾಮಾನ್ಯವಾಗಿ ಅರ್ಥವಾಗದೆ ಇರುವ ರೀತಿಯಲ್ಲಿ, ಆ ಬದುಕಿನ ಬಗೆಗೆ ಅರ್ಥವಾಗದ ವಿವರಣೆಯೊಂದನ್ನು ಅದು ಒಳಗೊಂಡಿದೆಯೆಂದೂ ಛಾಯಾಚಿತ್ರಕಲಾವಿದನು ಒಮ್ಮೆ ಅವಳಿಗೆ ಕಿವಿಮಾತಿನಲ್ಲಿ ತಿಳಿಸಿದ್ದನು. ಅದೊಂದು ಗರಿಮುಚ್ಚಿದ ಒಗಟೆ; ಮೊಟ್ಟೆಯೊಡೆದು ಹೊರಬಂದಿದ್ದ ರಹಸ್ಯ; ಮೊಟ್ಟೆ ಒಂದು ವೇಳೆ ಗೊಡ್ಡಾಗಿದ್ದಿದ್ದರೆ ಹೇಗೋ ಹಾಗೆ ಅಷ್ಟೇ ರಹಸ್ಯಪೂರ್ಣ!

ಹುಂಜನ ಇಬ್ಬರು ಕೋಳಿ ಹೆಂಡಿರಲ್ಲಿ ಎರಡನೆಯ ಹೆಂಡತಿ ಫೀಬೆ ಬಂದಾಗಿನಿಂದ ಗುರುತರವಾದ ನಿರಾಶೆಯ ಸ್ಥಿತಿಯಲ್ಲಿದ್ದಿತು; ತಾನು ಮೊಟ್ಟೆಯಿಡಲಾಗದಿದ್ದುದೇ ಇದಕ್ಕೆ ಕಾರಣ ಎಂದು ಆಮೇಲೆ ಕಂಡು ಬಂದಿತು. ಆದಾಗ್ಯೂ, ಒಂದು ದಿನ, ಅದರ ಪ್ರತಿಷ್ಠೆಯ ನಡಗೆ, ಅದರ ತಲೆಯ ಪಕ್ಕದೊಲೆತ, ತೋಟದ ಆ ಮೂಲೆಯೊಳಕ್ಕೊ ಈ ಮೂಲೆಯೊಳಕ್ಕೊ ಇಣಿಕನೋಡುವಾಗಿನ ಅದರ ಕಣ್ಣಿನ ಓರೆನೋಟ– ಈ ಸಂದರ್ಭಗಳಲ್ಲಿ ಅದು ಅನಿರ್ವಚನೀಯವಾದ ಆತ್ಮತೃಪ್ತಿಯಿಂದ ತನ್ನಲ್ಲಿ ತಾನು ಉದ್ದಕ್ಕೂ ವಟಗುಟ್ಟಿಕೊಳ್ಳುತ್ತಿದ್ದುದು– ಇವುಗಳ ಮೂಲಕ, ಅದೇ ಹೇಂಟೆ (ಮಾನವಜಾತಿ ಅದಕ್ಕೆ ಎಷ್ಟೇ ಕಡಮೆಯ ಬೆಲೆ ಕಟ್ಟಿರಲಿ) ತನ್ನ ಒಡಲಲ್ಲಿ ಏನೋ ಒಂದು ಪದಾರ್ಥವನ್ನು ಹೊತ್ತಿತ್ತೆಂದೂ ಚಿನ್ನದಿಂದಾಗಲಿ ರತ್ನಗಳಿಂದಾಗಲಿ ಅದರ ಬೆಲೆ ಕಟ್ಟಲಾಗುತ್ತಿರಲಿಲ್ಲವೆಂದೂ ಸ್ಪಷ್ಟವಾಗಿತ್ತು. ಸ್ವಲ್ಪ ಹೊತ್ತಾದಮೇಲೆ, ಹೆಣ್ಣು ಕೋಳಿ ಮೊಟ್ಟೆಯಿಟ್ಟಮೇಲೆ ಹಾಕುವ ದೊಡ್ಡ ಕೇಕೆಯ ಕೂಗೂ ಹುಂಜನ ಹಾಗೂ ಅದರ ಎಲ್ಲ ಕುಟುಂಬವರ್ಗದ ಅಭಿನಂದನೆಯ ಕೂಗೂ ಕೇಳಿಬಂದುವು; ಈ ಕೂಗಿನಲ್ಲಿ ಆ ಬಡಕಲ ಕೋಳಿಮರಿಯೂ ಸೇರಿಕೊಂಡಿತ್ತು; ತನ್ನ ಅಪ್ಪ, ಅಮ್ಮ ಅಥವಾ ಚಿಕ್ಕಮ್ಮ ಇವರಿಗೆ ತಿಳಿದಿದ್ದ ಹಾಗೆಯೇ ಅದಕ್ಕೂ ಸಮಾಚಾರವೇನೆಂಬುದು ಗೊತ್ತಿದ್ದ ಹಾಗಿದ್ದಿತು. ಅಂದು ಮಧ್ಯಾಹ್ನವಾದಮೇಲೆ, ಫೀಬೆ ಒಂದು ಚಿಕ್ಕಮೊಟ್ಟೆಯನ್ನು ಕಂಡಳು– ಕ್ರಮವಾದ ಗೂಡಿನಲ್ಲಿ ಅಮೂಲ್ಯವಾದ ಮೊಟ್ಟೆಯನ್ನು ಅಲ್ಲಿ ನಂಬಿ

ಫೀಜಿ ಇವರ ಜೊತೆಗೆ ಗೋಷ್ಠಿಯಲ್ಲಿ ಇಬ್ಬರು ಅತಿಥಿಗಳಿರುತ್ತಿದ್ದರು. ಒಬ್ಬನು ಕಲಾವಿದ ಹಾಲ್‌ಗ್ರೇವ್; ಅವನು ಸಮಾಜಸುಧಾರಕರೊಂದಿಗೆ ಓಡಾಡುತ್ತ ಕಲೆಯುತ್ತಿದ್ದರೂ ಕೂಡ, ವಿಚಿತ್ರವಾದ ಸಂದೇಹಾಸ್ಪದವಾದ ಸ್ವಭಾವಲಕ್ಷಣಗಳನ್ನು ಹೊಂದಿದ್ದರೂ ಕೂಡ ಹೆಪ್ಸಿಬಾಳ ಗಣನೆಯಲ್ಲಿ ಒಂದು ಉನ್ನತಸ್ಥಾನವನ್ನು ಇನ್ನೂ ಹೊಂದಿದ್ದನು. ಇನ್ನೊಬ್ಬನೆಂದರೆ, ಪೂಜ್ಯ ವೆನ್ನರ್ ಮಾವ (ಇದನ್ನು ತಿಳಿಸಲು ನಮಗೆ ಬಹುಮಟ್ಟಿಗೆ ನಾಚಿಕೆಯೆನಿಸುವುದು); ಅವನು ಒಂದು ಶುಭ್ರವಾದ ಷರಟನ್ನೂ ನಯವಾದ ಉಣ್ಣೆಯಬಟ್ಟೆಯ ಅಂಗಿಯನ್ನೂ ಧರಿಸುತ್ತಿದ್ದನು; ಇವನು ಸಾಧಾರಣವಾಗಿ ಧರಿಸುತ್ತಿದ್ದ ಉಡುಪಿಗಿಂತ ಇವು ಹೆಚ್ಚು ಭೂಷಣವಾಗಿ ಕಾಣುತ್ತಿದ್ದುವು– ಎಂದರೆ, ಪ್ರತಿ ಮೊಣಕೈಭಾಗದಲ್ಲಿಯೂ ಹಾಕಿದ್ದ ತೇಪೆ ಹೆಚ್ಚು ಅಚ್ಚುಕಟ್ಟಾಗಿತ್ತು; ಅಲ್ಲದೆ, ಎರಡರ ಸೊಂಟದ ಕೆಳಭಾಗಗಳ ಉದ್ದಳತೆಯಲ್ಲಿದ್ದ ಸ್ವಲ್ಪಮಟ್ಟಿನ ಅಸಮತೆಯನ್ನು ಬಿಟ್ಟುಬಿಟ್ಟರೆ, ಅವು ಒಟ್ಟಿನಮೇಲೆ ಸಮಗ್ರವಾದ ಉಡುಪಾಗಿತ್ತು. ಕ್ಲಿಫರ್ಡ್ ಈ ವೃದ್ಧನೊಂದಿಗೆ ಕಲೆತು ಮಾತನಾಡುವುದರಲ್ಲಿ ಹಲವುಸಲ ತನ್ನ ಸಂತೋಷವನ್ನು ತೋರ್ಪಡಿಸಿದ್ದನು; ಅದಕ್ಕೆ ಕಾರಣ, ಅವನಲ್ಲಿ ಕಾಣಬರುತ್ತಿದ್ದ ಪಕ್ವವಾದ, ಉಲ್ಲಾಸಪೂರ್ಣವಾದ ವಿಶಿಷ್ಟ ಸ್ವಭಾವ; ಇದು ಹೇಗಿತ್ತೆಂದರೆ, ಡಿಸೆಂಬರ್ ತಿಂಗಳಿನಲ್ಲಿ ಸೇಬಿನ ಮರದಡಿಯಲ್ಲಿ ಯಾರಾದರೂ ಕೈಗೆತ್ತಿಕೊಳ್ಳಸಿಕ್ಕುವ, ಹಿಮದ ಹೊಡೆತಕ್ಕೆ ಸಿಲುಕಿದ ಸೇಬಿನ ಹಣ್ಣಿನ ಮಧುರವಾದ ರುಚಿಯಂತಿತ್ತು. ಸಮಾಜದ ವರ್ಗಶ್ರೇಣಿಯಲ್ಲಿ ಮಧ್ಯಮ ಮಟ್ಟಗಳ ಒಬ್ಬ ವ್ಯಕ್ತಿಯನ್ನು ಸಂಧಿಸುವುದಕ್ಕಿಂತಲೂ ಅತ್ಯಂತ ಕೆಳಮಟ್ಟದ ಮನುಷ್ಯನನ್ನು ಸಂಧಿಸುವುದು ಈ ಪತಿತನಾದ ದೊಡ್ಡ ಮನುಷ್ಯನಿಗೆ ಹೆಚ್ಚು ಸುಲಭವೂ ಹಿತಕರವೂ ಆಗಿತ್ತು; ಅದೂ ಅಲ್ಲದೆ, ಕ್ಲಿಫರ್ಡನ ಪುರಷತ್ವದ ಯೌವನ ಭಾಗ ನಷ್ಟವಾಗಿ ಹೋಗಿದ್ದುದರಿಂದ, ಈಗ ಮುದಿ ಮಯಸ್ಸಿನ ವೆನ್ನರ್ ಮಾವನ ಜೊತೆಯಲ್ಲಿ ಹೋಲಿಸಿಕೊಂಡರೆ ತಾನು ತಕ್ಕಮಟ್ಟಿಗೆ ಯೌವನಸ್ಥನೆ ಎಂದು ಭಾವಿಸಿಕೊಳ್ಳಲು ಅವನಿಗೆ ಇಷ್ಟವಾಗಿತ್ತು. ನಿಜವಾಗಿ, ಕ್ಲಿಫರ್ಡ್ ತಾನು ವಯೋಧರ್ಮದಿಂದ ಕುಗ್ಗಿಹೋಗಿರುವ ಅಂಶವು ತನ್ನ ಅರಿವಿಗೆ ಬಾರದಂತೆ ಉದ್ದೇಶಪೂರ್ವಕ ಅದನ್ನು ತನ್ನಿಂದಲೇ ಮರೆಸಿಟ್ಟದ್ದನು, ಮತ್ತು ತನ್ನ ಮುಂದೆ ಇನ್ನೂ ಕಾದಿರುವ ಇಹಜೀವನದ ಭವಿಷ್ಯದ ಕಲ್ಪನೆಗಳನ್ನು ನೆಮ್ಮಿಕೊಂಡಿದ್ದನು; ಇದು ಕೆಲವು ವೇಳೆ ಸ್ಪಷ್ಟ ಗೋಚರವಾಗಿತ್ತು. ಆದರೂ, ಮನಸ್ಸು ಕುಗ್ಗಿದ ವೇಳೆಯಲ್ಲಿ ಯಾವಾಗಲಾದರೂ ಆಕಸ್ಮಿಕ ಘಟನೆಯೊಂದರಿಂದಲೋ ಇಲ್ಲವೆ ಯಾವುದೋ ನೆನಪಿನಿಂದಲೋ ತನ್ನ ಬಾಳಿನ ಗಿಡದ ಎಲೆ ಬಾಡಿದೆಯೆಂಬುದು ಅವನ ಮನಸ್ಸಿಗೆ ಬಂದಾಗ ಕೂಡ ಆ

ಬಗ್ಗಿ, ಅದರ ತಳದಲ್ಲಿದ್ದ ಬಣ್ಣ ಬಣ್ಣದ ಉರುಟುಗಲ್ಲುಗಳ ಶಬಲ ಚಿತ್ರರಚನೆಯ ಮೇಲೆ ನೀರು ಕಲಕಾಡುವುದರಿಂದ ಉಂಟಾದ ನಿರಂತರವಾಗಿ ಎಡೆಕದಲುತ್ತಿದ್ದ, ಮಾಯಾದೃಶ್ಯಪರಂಪರೆಯನ್ನು ನೋಡುವುದರಲ್ಲಿ ಅವನಿಗೆ ವಿಚಿತ್ರ ಒಲವು. ಅಲ್ಲಿ ಮುಖಗಳು ತನ್ನ ಕಡೆ ಎತ್ತಿ ನೋಡುತ್ತಿದ್ದುವು ಎಂದು ಅವನು ಹೇಳುತ್ತಿದ್ದನು– ಅವು ಮರುಳ್ಗೊಳಿಸುವ ಮುಗುಳ್ನಗೆಗಳಿಂದ ಅಲಂಕೃತವಾದ ಸುಂದರ ಮುಖಗಳು– ಪ್ರತಿಯೊಂದು ಕ್ಷಣಿಕ ಮುಖವೂ ಅದೆಷ್ಟು ಅಂದವಾಗಿಯೂ ಆಶಾದಾಯಕವಾಗಿಯೂ, ಪ್ರತಿಯೊಂದು ಮುಗುಳುನಗೆಯೂ ಅದೆಷ್ಟು ಉತ್ಸಾಹದಾಯಕವಾಗಿಯೂ ಇದ್ದಿತೆಂದರೆ, ಅದು ಕಣ್ಮರೆಯಾದೊಡನೆ ತನಗೆ ಏನೋ ಅನ್ಯಾಯವಾದಂತೆ ಅವನು ಭಾವಿಸುತ್ತಿದ್ದನು; ಕಡೆಗೆ ಅದೇ ಕ್ಷಣಿಕವಾದ ಮಾಟವಿದ್ಯೆ ಅವನ ಕಣ್ಮುಂದೆ ಇನ್ನೊಂದು ಮುಖವನ್ನು ನಿರ್ಮಿಸುತ್ತಿದ್ದಿತು. ಆದರೆ ಕೆಲವು ವೇಳೆ ಅವನು– "ಆ ಕಪ್ಪು ಮುಖ ನನ್ನನ್ನೇ ದೃಷ್ಟಿಸಿ ನೋಡುತ್ತಿದೆ!" ಎಂದು ಇದ್ದಕ್ಕಿದ್ದ ಹಾಗೆಯೇ ಗಟ್ಟಿಯಾಗಿ ಕೂಗಿಕೊಂಡು, ಆಮೇಲೆ ಇಡಿಯ ದಿನವೆಲ್ಲಾ ಕ್ಲೇಶಪಡುತ್ತಿದ್ದನು. ಆದರೆ ಫೀಬೆ ಕ್ಲಿಫರ್ಡನ ಪಕ್ಕದಲ್ಲಿ ನಿಂತು ಅವನ ಹಾಗೆಯೇ ಬಗ್ಗಿ ನೋಡಿದಾಗ ಅವಳಿಗೆ– ಇತ್ತ ಸುಂದರರೂಪವಾಗಲಿ ಅತ್ತ ಕುರೂಪವಾಗಲಿ– ಏನೊಂದೂ ಕಾಣಬರುತ್ತಿರಲಿಲ್ಲ; ನೀರಿನ ನುಗ್ಗಾಟದಿಂದ ಅಲುಗಿ ಅಣೆಗಟ್ಟಂತೆ ಕಾಣುತ್ತಿವೆಯೋ ಎಂಬಂತಿದ್ದ ಬಣ್ಣ ಬಣ್ಣದ ಉರುಟುಗಲ್ಲುಗಳು ಮಾತ್ರ ಗೋಚರಿಸುತ್ತಿದ್ದವು. ಕ್ಲಿಫರ್ಡನನ್ನು ಹಾಗೆ ಕಾಡಿದ್ದ ಕಪ್ಪು ಮುಖ ಎಂದರೆ, 'ಡ್ಯಾಮ್‌ಸನ್' ಮರವೊಂದರಿಂದ ಬಿದ್ದ ನೆರಳು; ಅದು ಮಾಲನ ಬಾವಿಯೊಳಗಿನ ಬೆಳಕನ್ನು ಛಿನ್ನ ಛಿನ್ನ ಮಾಡುತ್ತಿತ್ತು. ನಿಜಾಂಶವೇನೆಂದರೆ, ಅವನ ಕಲ್ಪನಾಶಕ್ತಿಯು ಅವನ ಇಚ್ಛಾಶಕ್ತಿ ಮತ್ತು ವಿವೇಚನಾಶಕ್ತಿಗಳಿಗಿಂತ ಬೇಗಬೇಗನೆ ಜಾಗ್ರತಗೊಂಡು, ಯಾವಾಗಲೂ ಅವುಗಳಿಗಿಂತ ಹೆಚ್ಚು ಪ್ರಬಲವಾಗಿದ್ದುದರಿಂದ ಅವನ ಹುಟ್ಟುಗುಣವನ್ನು ಸಂಕೇತಿಸುತ್ತಿದ್ದ ಮನೋಹರಾಕೃತಿಗಳನ್ನೂ ಆಗೊಮ್ಮೆ ಈಗೊಮ್ಮೆ ಅವನ ಹಣೆಯಬರಹದ ಮಾದರಿಯಂತಿದ್ದ ಘೋರಾಕೃತಿಯನ್ನೂ ಸೃಷ್ಟಿಸುತ್ತಿದ್ದಿತು.

ಫೀಜೆಯದು ಚರ್ಚಿಗೆ ಹೋಗುವ ಧಾರ್ಮಿಕ ಬುದ್ಧಿ; ಚರ್ಚಿನ ಪ್ರಾರ್ಥನೆ, ಉಪದೇಶಭಾಷಣ, ಗಾಯನ, ಸ್ವಸ್ತಿವಾಚನ– ಇವುಗಳಲ್ಲಿ ಯಾವುದು ತಪ್ಪಿದರೂ ಅವಳಿಗೆ ಮನಸ್ಸಿನಲ್ಲಿ ನೆಮ್ಮದಿ ಇರುತ್ತಿರಲಿಲ್ಲ. ಆದ್ದರಿಂದ ಭಾನುವಾರದ ದಿನಗಳಲ್ಲಿ ಚರ್ಚಿಗೆ ಹೋಗಿಬಂದಾದಮೇಲೆ ಸಾಧಾರಣವಾಗಿ ತೋಟದಲ್ಲಿ ಹೆಚ್ಚು ಕುಡಿತವಿಲ್ಲದ, ಒಂದು ಪುಟ್ಟ ಹಬ್ಬದೂಟ ಏರ್ಪಾಡಾಗುತ್ತಿತ್ತು. ಕ್ಲಿಫರ್ಡ್, ಹೆಪ್ಸಿಬಾ,

ಯೋಜನೆ ತಯಾರಿಸಬಹುದು; ಆದರೆ ನನ್ನ ಸ್ವಂತದ ಈ ಯೋಜನೆಯನ್ನು ನಾನು ಕೈಬಿಡುವುದಿಲ್ಲ, ಅದನ್ನು ನಾನು ಎಂದಿಗಾದರೂ ನೆರವೇರಿಸಿಕೊಳ್ಳದೆ ಹೋದರೂ ಚಿಂತೆಯಿಲ್ಲ, ಆಸ್ತಿಯ ಮೇಲೆ ಆಸ್ತಿಯನ್ನು ಪೇರಿಸಿಟ್ಟುಕೊಳ್ಳಲು ಪ್ರಯತ್ನಿಸುವುದರಲ್ಲಿ ಮನುಷ್ಯರು ಒಂದು ಅದ್ಭುತವಾದ ತಪ್ಪು ಮಾಡುತ್ತಾರೆ ಅಂತ ನನಗೆ ತೋರುತ್ತೆ. ನಾನೇನಾದರೂ ಹಾಗೆ ಮಾಡಿದ್ದರೆ, ನನ್ನ ವಿಷಯದಲ್ಲಿ ದೈವವು ಜಾಗ್ರತೆವಹಿಸಬೇಕಾಗಿಲ್ಲ ಎಂದುಕೊಳ್ಳುತ್ತಿದ್ದೆ; ಏನಾದರೂ ಆಗಲಿ, ಊರೇ ಇರುತ್ತಿರಲಿಲ್ಲ! ನಮ್ಮನ್ನೆಲ್ಲಾ ಒಳಕೊಳ್ಳುವಷ್ಟು ಅಪಾರ ವಿಶ್ವ ದೊಡ್ಡದಾಗಿದೆ, ಅನಂತಕಾಲ ದೀರ್ಘವಾಗಿದೆ ಎಂದು ಭಾವಿಸುವವರಲ್ಲಿ ನಾನೊಬ್ಬ" ಎಂದು ನುಡಿದ ತೇಪೆಯ ಮನುಷ್ಯ.

ಸ್ವಲ್ಪ ತಡೆದು, ಫೀಬೆ– "ಸಂದೇಹವೇನು, ಅವು ಹಾಗೆಯೇ ಸರಿ, ವೆನ್ನರ್ ಮಾವಯ್ಯಾ" ಎಂದಳು; ಈ ಮುಕ್ತಾಯದ ಸಾರವಚನದ ಅಗಾಧತೆಯನ್ನೂ ಔಚಿತ್ಯವನ್ನೂ ಒಳಹೊಕ್ಕು ತಿಳಿದುಕೊಳ್ಳಲು ಅವಳು ಪ್ರಯತ್ನಿಸುತ್ತಿದ್ದಳು. "ನಮ್ಮ ಬಾಳು ಇಷ್ಟು ಕಿರಿದಾಗಿಲ್ಲದೆ ಹೋಗಿದ್ದರೆ, ತನ್ನದೇ ಆದ ಒಂದು ಮನೆ, ಒಂದು ಸಾಧಾರಣದ ತೋಟಕ್ಕಾಗುವಷ್ಟು ಜಾಗ– ಇಷ್ಟನ್ನು ಯಾರಾದರೂ ಬಯಸುವರು."

"ವೆನ್ನರ್ ಮಾವಯ್ಯನವರ ವಿವೇಕದ ಬುಡದಲ್ಲಿ ಫ್ಯೂರಿಯರ್‌ನ (Fourier) ತತ್ತ್ವಗಳು ಅಡಗಿವೆ ಅಂತ ನನಗೆ ತೋರುತ್ತದೆ; ಒಂದೇನೆಂದರೆ, ಆ ವ್ಯವಸ್ಥಾಕಾರಿ ಫ್ರೆಂಚರವನ ಮನಸ್ಸಿನಲ್ಲಿ ಅವು ಸ್ಪಷ್ಟವಾಗಿರುವಂತೆ ಇವರ ಮನಸ್ಸಿನಲ್ಲಿ ಅವು ಅಷ್ಟು ಸ್ಪಷ್ಟವಾಗಿಲ್ಲ, ಅಷ್ಟೆ" ಎಂದು ಆ ಛಾಯಾಚಿತ್ರ ಕಲಾವಿದನು ಮುಗುಳುನಗೆ ನಗುತ್ತಾ ನುಡಿದನು.

"ಇಲ್ಲಿ ಬಾ, ಫೀಬೆ, ದ್ವೀಪದ್ರಾಕ್ಷಿ ತರುವ ಸಮಯವಾಯಿತು" ಎಂದಳು ಹೆಪ್ಸಿಬಾ.

ಆ ಬಳಿಕ, ಇಳಿಬಿಸಿಲಿನ ಹಳದಿಯ ಹೆಚ್ಚಳವು ತೋಟದ ತೆರಪೆಡೆಯಲ್ಲೆಲ್ಲಾ ಇನ್ನೂ ಬೀಳುತ್ತಿದ್ದಾಗ, ಫೀಬೆ ಒಂದು ರೊಟ್ಟಿಯ ತುಂಡನ್ನೂ ಪಿಂಗಾಣಿಯ ಬೋಗುಣಿಯಲ್ಲಿ, ಆಗತಾನೆ ಗಿಡದಿಂದ ಕೊಯ್ದು ಸಕ್ಕರೆಯೊಂದಿಗೆ ಜಜ್ಜಿದ ದ್ವೀಪದ್ರಾಕ್ಷಿಯನ್ನೂ ತಂದಳು. ನೀರೂ ಸೇರಿ, ಇವು ಸರ್ವೋಪಭೋಗ ಸಾಮಗ್ರಿಯಾಗಿ ಸಮಾಪ್ತಿಯಾದುವು; ನೀರು ಮಾತ್ರ, ಹತ್ತಿರದಲ್ಲೇ ಇದ್ದ, ಆ ಅಪಶಕುನದ ಬಾವಿಯಿಂದ ತಂದದ್ದಲ್ಲ. ಈ ನಡುವೆ, ಹಾಲ್‌ಗ್ರೇವ್ ಕ್ಲಿಫರ್ಡನೊಂದಿಗೆ ಒಂದು ವ್ಯವಹಾರಸಂಬಂಧವನ್ನು ಕಲ್ಪಿಸಿಕೊಳ್ಳಲು ಸ್ವಲ್ಪ ಹೆಣಗಿದ; ಆ ಏಕಾಂತವಾಸಿ ಹಿಂದೆ ಕಳೆದಿದ್ದ ಅಥವಾ ಮುಂದೆ ವಿಧಿವಶದಿಂದ

ಕಲ್ಪನೆಗಳ ಬೆನ್ನಹಿಂದೆ ನಿರಾಶೆಯಿರುತ್ತಿರಲಿಲ್ಲ; ಏಕೆಂದರೆ, ಅವು ನಿರಾಶೆಯುಂಟು ಮಾಡುವಷ್ಟು ಖಚಿತವಾಗಿ ಮೂಡಿರುತ್ತಿರಲಿಲ್ಲ.

ಹೀಗೆ, ವಿಚಿತ್ರವಾಗಿ ಏರ್ಪಟ್ಟ ಈ ಚಿಕ್ಕ ಸಂತೋಷಕೂಟ ಪಾಳುಬಿದ್ದ ಲತಾಗೃಹದಲ್ಲಿ ಸೇರುತ್ತಿತ್ತು. ಹೆಪ್ಸಿಬಾ ಎಂದಿನಂತೆ ಆಂತರ್ಯದಲ್ಲಿ ಘನ ಗೌರವಾನ್ವಿತೆ; ತನ್ನ ಪುರಾತನ ಶ್ರೀಮಂತಿಕೆಯಲ್ಲಿ ಗುಲಗಂಜಿಯಷ್ಟನ್ನೂ ಬಿಟ್ಟುಕೊಡಲು ಸಿದ್ಧಳಾಗಿರಲಿಲ್ಲ; ರಾಜಕುಮಾರಿಯೊಬ್ಬಳು ಅನುಗ್ರಹ ತೋರುವ ಬಿಂಕದಿಂದಿರುವುದು ಎಷ್ಟು ಸಹಜವೋ ಅಷ್ಟೇ ಸಹಜವಾಗಿ ಅವಳು ತನ್ನ ಶ್ರೀಮಂತಿಕೆಯನ್ನು ಇನ್ನೂ ಹೆಚ್ಚು ಹೆಚ್ಚಾಗಿ ನೆಮ್ಮಿಕೊಂಡಿದ್ದಳು. ಇಂಥವಳ ಆತಿಥ್ಯ ನಯ ನಾಜೂಕಿನಿಂದಲೇ ಕೂಡಿತ್ತು. ಅವಳು ಆ ಅಲೆಮಾರಿ ಕಲಾವಿದನೊಂದಿಗೆ ದಯೆತೋರಿ ಮಾತಾಡುತ್ತಿದ್ದಳು; ತಾನು ಶ್ರೀಮಂತಮಹಿಳೆಯಾಗಿದ್ದರೂ, ಪ್ರತಿಯೊಬ್ಬರ ಸಣ್ಣ ಪುಟ್ಟ ಸುದ್ದಿಗಳನ್ನು ಒಯ್ಯುವ ದೂತನೂ ಹರುಕುಮುರುಕು ವೇದಾಂತಿಯೂ ಆಗಿದ್ದ ಮರಕೊಯ್ಯುವವನ ಬುದ್ಧಿವಾದದ ಸಲಹೆಯನ್ನು ಕೇಳುತ್ತಿದ್ದಳು. ವೆನ್ನರ್ ಮಾವನಾದರೋ– ಬೀದಿಮೂಲೆಗಳಲ್ಲಿಯೂ ನಿಷ್ಪಕ್ಷಪಾತ ಪರಿಶೀಲನೆಗೆ ಅಷ್ಟೇ ಯೋಗ್ಯವಾಗಿ ಕಾಣುವ ಇತರ ಸ್ಥಳಗಳಲ್ಲಿಯೂ ಪ್ರಪಂಚವನ್ನು ಚೆನ್ನಾಗಿ ನೋಡಿ ತಿಳಿದುಕೊಂಡಿದ್ದ ಲೋಕಾನುಭವಿ– ಊರಿನಲ್ಲಿ ಹೇಗೆ ನೀರನ್ನು ಸುರಿಸಲು ಸಿದ್ಧವೋ ಹಾಗೆ ತನ್ನ ವಿವೇಕವನ್ನು ಧಾರೆಯೆರೆಯಲು ಸಿದ್ಧನಾಗಿದ್ದನು.

ಅವರೆಲ್ಲಾ ಒಟ್ಟಿಗೆ ಕೂಡಿ ಉಲ್ಲಾಸವಾಗಿದ್ದಮೇಲೆ ಒಮ್ಮೆ ಅವನೆಂದನು; "ತಾಯೀ, ಮಿಸ್ ಹೆಪ್ಸಿಬಾ, ಸಬ್ಬತು ದಿನ* ಮಧ್ಯಾಹ್ನದ ಮೇಲೆ ಇಂಥ ಶಾಂತವಾದ ಪುಟ್ಟ ಕೂಟಗಳೆಂದರೆ ನನಗೆ ನಿಜವಾಗಿ ಸಂತೋಷ. ನನ್ನ ಹೊಲಮನೆಗೆ ಹೋದಮೇಲೆ ನಾನು ಭಾಗವಹಿಸುವ ಕೂಟಗಳು ಬಹಳ ಮಟ್ಟಿಗೆ ಹೀಗೆಯೇ ಇರುತ್ತವೆ!"

"ವೆನ್ನರ್ ಮಾವ ಯಾವಾಗಲೂ ತಮ್ಮ ಹೊಲಮನೆಯ ವಿಚಾರ ಮಾತಾಡುತ್ತಲೇ ಇರುತ್ತಾರೆ. ಆದರೆ, ಸದ್ಯದಲ್ಲಿಯೇ ಅವರಿಗಾಗಿ ನಾನು ಇನ್ನೂ ಉತ್ತಮವಾದ ಯೋಜನೆಯನ್ನು ಏರ್ಪಡಿಸಬೇಕೆಂದಿದ್ದೇನೆ. ಹೇಗಾಗುತ್ತದೆಯೋ ನೋಡೋಣ!" ಎಂದು ಕ್ಲಿಫರ್ಡ್ ತೂಕಡಿಕೆಯ ಒಳದನಿಯಲ್ಲಿ ಹೇಳಿದನು.

"ಆಹಾ, ಮಿಸ್ಟರ್ ಕ್ಲಿಫರ್ಡ್ ಪಿನ್ಚನ್ನರೇ! ನೀವು ನನಗಾಗಿ ಎಷ್ಟು ಬೇಕಾದರೂ

---

* Sabbath=ಕ್ರೈಸ್ತರ ವಿಶ್ರಾಂತಿದಿನ, ಭಾನುವಾರ.

ಕೂಡಲೇ ಒಳಗಾಗುವುದು ಕೇವಲ ಸಹಜ. ಅದೇ ರೀತಿಯಲ್ಲಿ, ಅವನು ತನ್ನ ಆಲೋಚನೆಗಳನ್ನು ಒಂದು ಅಸ್ಪಷ್ಟವಾದ ಕಾಲ್ಪನಿಕತೆಯ ಕಾಂತಿಯಿಂದ ವ್ಯಕ್ತಪಡಿಸಿದನು; ಇದರಿಂದಾಗಿ, ಅವು ಲತಾಗೃಹದ ಮೂಲಕ ಹೊಳೆಹೊಳೆದು, ಎಲೆಗುಂಪಿನ ಕಂಡಿಗಳ ನಡುವೆ ನುಸುಳಿ ತಪ್ಪಿಸಿಕೊಂಡು ಹೊರಬರುತ್ತಿದ್ದವೋ ಎಂಬಂತೆ ಕಾಣುತ್ತಿದ್ದುವು. ಅವನು ಫೀಬೆಯೊಡನೆ ಒಬ್ಬನೇ ಇದ್ದಾಗಲೂ ನಿಸ್ಸಂದೇಹವಾಗಿ ಅಷ್ಟೇ ಉಲ್ಲಾಸದಿಂದಿರುತ್ತಿದ್ದನು; ಆದರೆ ಆ ಸಂದರ್ಭದಲ್ಲಿ ಎಂದೂ (ಪೂರ್ತಿಯಲ್ಲದಿದ್ದರೂ ಅರ್ಧದಷ್ಟು) ತೀಕ್ಷ್ಣವಾದ ಬುದ್ಧಿಶಕ್ತಿಯ ಅಂತಹ ಕುರುಹುಗಳು ಕಂಡುಬಂದಿರಲಿಲ್ಲ.

ಆದರೆ, ಸೂರ್ಯನ ಬೆಳಕು ಏಳು ಇಪ್ಪಾರಿನ ಮನೆಯ ಶಿಖರಗಳನ್ನು ಬಿಟ್ಟು ಸರಿದ ಹಾಗೆಯೆ ಕ್ಲಿಫರ್ಡನ ಕಣ್ಣುಗಳಿಂದಲೂ ಉತ್ಸಾಹದ ಕಾಂತಿ ಮರೆಯಾಯಿತು. ತಾನು ಯಾವುದೋ ಅಮೂಲ್ಯವಾದದ್ದನ್ನು ಕಳೆದುಕೊಂಡಿದ್ದರೆ ಹೇಗೋ ಹಾಗೆ, ಅದು ಏನೆಂಬುದು ತಿಳಿಯದ ಕಾರಣದಿಂದ ಆ ನಷ್ಟದ ಭಾವನೆ ಹೆಚ್ಚು ಉತ್ಸಾಹಶೂನ್ಯವಾಗಿ ಪರಿಣಮಿಸಿ, ಅವನು ನಿರ್ದಿಷ್ಟಗುರಿಯಿಲ್ಲದೆ ಖೇದದಿಂದ ತನ್ನ ಸುತ್ತ ನಿಟ್ಟಿಸಿ ನೋಡಿದನು.

"ನನಗೆ ನನ್ನ ಸೌಖ್ಯ ಬೇಕು!" ಎಂದು ಕಟ್ಟಕಡೆಗೆ ಅವನು ಕರ್ಕಶವಾಗಿ, ಅಸ್ಪಷ್ಟವಾಗಿ, ಮಾತುಗಳಿಗೆ ಸರಿಯಾದ ಉಚ್ಚಾರಣೆಯ ರೂಪವನ್ನೂ ಕೊಡದೆ ಗೊಣಗಿದನು. "ಅದಕ್ಕಾಗಿ ನಾನು ಹಲವು ವರ್ಷ, ಹಲವಾರು ವರ್ಷ ಕಾದಿದ್ದೇನೆ; ತಡವಾಯಿತು! ತಡವಾಯಿತು! ನನಗೆ ನನ್ನ ಸೌಖ್ಯ ಬೇಕು!"

ಅಯ್ಯೋ, ಬಡ ಕ್ಲಿಫರ್ಡ್! ನೀನು ಮುದಿಯಾಗಿದ್ದೀಯೆ; ಕಷ್ಟಗಳಿಂದ ಜರ್ಜರಿತನಾಗಿರುವೆ, ಅವು ನಿನಗೆ ಸಂಭವಿಸಬಾರದಾಗಿತ್ತು. ನೀನು ಅರೆ ಮರುಳಾಗಿದ್ದೀಯೆ, ಅರ್ಧ ಬಲಹೀನನಾಗಿದ್ದೀಯೆ; ಬಹುಮಟ್ಟಿಗೆ ಪ್ರತಿಯೊಬ್ಬರೂ ಆಗಿರುವಂತೆ– ನೀನು ನಾಶವಾಗಿದ್ದೀಯೆ, ಸೋತಿದ್ದೀಯೆ; ಕೆಲವರು ತಮ್ಮ ಜೊತೆಯವರಿಗಿಂತ ಕಡಮೆಯ ಪ್ರಮಾಣದಲ್ಲಿ ಹೀಗಾಗಿರುತ್ತಾರೆ, ಕೆಲವರು ಹೀಗಾಗಿರುವುದು ಗೋಚರಕ್ಕೆ ಬರುವುದಿಲ್ಲ, ಅಷ್ಟೆ. ವಿಧಿ ನಿನಗಾಗಿ ಸೌಖ್ಯವನ್ನು ಕಾದಿಟ್ಟಿಲ್ಲ; ವಂಶಪಾರಂಪರ್ಯವಾದ ಈ ಹಳೆಯ ಮನೆಯಲ್ಲಿ ನಿಷ್ಠಾವಂತಳಾದ ಹೆಪ್ಸಿಬಾಳೊಂದಿಗೆ ನೀನು ಹಾಯಾಗಿ ನೆಲಸಿರುವುದು, ಫೀಬೆಯೊಂದಿಗೆ ಬೇಸಗೆಯ ದೀರ್ಘ ಅಪರಾಹ್ಣಗಳನ್ನು ಕಳೆದಿರುವುದು, ವೆನ್ನರ್ ಮಾವ ಮತ್ತು ಛಾಯಾಚಿತ್ರ ಕಲಾವಿದನೊಂದಿಗೆ ಈ ಭಾನುವಾರದ ಹಬ್ಬದೂಟಗಳು– ಇವು 'ಸೌಖ್ಯ' ಎಂದು ಕರೆಸಿಕೊಳ್ಳಲು ಅರ್ಹವಾಗಿದ್ದರೆ, ನೀನು ಸುಖವಾಗಿಯೆ ಇದ್ದೀಯೆ!

ಕಳೆಯಬೇಕಾಗಿರುವ ಎಷ್ಟೋ ಕಾಲಕ್ಕಿಂತ ಸದ್ಯದಲ್ಲಿ ಕಳೆಯಬೇಕಾಗಿದ್ದ ಗಂಟೆಯಷ್ಟು ಕಾಲವು ಹೆಚ್ಚು ಉಲ್ಲಾಸಮಯವಾಗಿರಲೆಂದು, ಸಂಪೂರ್ಣವಾಗಿ ದಯಾಭಾವದಿಂದ ಪ್ರೇರಿತನಾಗಿ ಹಾಗೆ ಮಾಡಿದ್ದನೆಂದು ತೋರಬಹುದು. ಅದು ಹೇಗಿದ್ದರೂ, ಆ ಕಲಾವಿದನ ಆಳವಾದ, ಚಿಂತನಪೂರ್ಣವಾದ, ಸರ್ವಸಮೀಕ್ಷಕ ದೃಷ್ಟಿಯಲ್ಲಿ ಆಗೊಮ್ಮೆ ಈಗೊಮ್ಮೆ ದುಷ್ಟವಲ್ಲದಿದ್ದರೂ ಸಂದೇಹಾಸ್ಪದವಾದ ಭಾವ ಇರುತ್ತಿತ್ತು; ಆಗ ಅವನನ್ನು ನೋಡಿದರೆ, ಆಗಂತುಕನೂ ಯೌವನಸ್ಥನೂ ಆದ ಸಾಹಸಿಗನು ಹೊಂದಿರಬಹುದಾದ್ದಕ್ಕಿಂತ ಬೇರೆಯಾದ ಯಾವುದೋ ಆಸಕ್ತಿಯನ್ನು ಇಂದಿನ ಘಟನೆಯ ಸ್ಥಳದಲ್ಲಿ ಹೊಂದಿದ್ದನೆಂದು ತೋರುತ್ತಿತ್ತು. ಅದು ಏನಿದ್ದರೂ, ಈಗ ಅವನು ತನ್ನ ಬಾಹ್ಯಚರ್ಯೆಯಲ್ಲಿ ವಿಶೇಷ ಚಟುವಟಿಕೆಯನ್ನು ತೋರುತ್ತ, ಗೋಷ್ಠಿಯಲ್ಲಿ ಗೆಲವು ತುಂಬುವ ಕಾರ್ಯದಲ್ಲಿ ತೊಡಗಿದನು; ಅವನ ಈ ಪ್ರಯತ್ನ ಎಷ್ಟು ಯಶಸ್ವಿಯಾಯಿತೆಂದರೆ, ಶ್ಯಾಮಲ ವರ್ಣ ಹೆಪ್ಸಿಬಾ ಕೂಡ ತನ್ನ ಖಿನ್ನತೆಯ ಒಂದು ಛಾಯೆಯನ್ನು ಕಿತ್ತೊಗೆದು, ಉಳಿದಭಾಗದೊಂದಿಗೆ ಅದು ಹೇಗೋ ನಿಭಾಯಿಸಿಕೊಂಡಳು. “ಆತ ಎಷ್ಟು ಸಂತೋಷವಾಗಿರಬಲ್ಲ!” ಎಂದು ಫೀಬೆ ತನ್ನಲ್ಲಿ ತಾನು ಹೇಳಿಕೊಂಡಳು. ವೆನ್ನರ್ ಮಾವನ ವಿಷಯ ಹೇಳುವುದಾದರೆ, ಊರಿಗೆಲ್ಲ ಬಹುಪರಿಚಿತವಾದ ತನ್ನ ಮುಖದ ಛಾಯಾಚಿತ್ರವನ್ನು ಹಾಲ್‌ಗ್ರೇವನ ಚಿತ್ರಶಾಲೆಯ ದ್ವಾರದಲ್ಲಿ ಪ್ರದರ್ಶಿಸಲು ಅವಕಾಶವಿತ್ತು, ಆ ಮೂಲಕ ಆ ತರುಣನ ಕಸುಬಿನ ಪ್ರಯೋಜನಾರ್ಥವಾಗಿ ತನ್ನ ಮುಖದ ಉಪಯೋಗವನು (ರೂಪಕಾರ್ಥದಲ್ಲಿ ಅಲ್ಲ, ವಾಸ್ತವವಾಗಿ) ಸ್ನೇಹದ ಮತ್ತು ಮೆಚ್ಚಿಗೆಯ ಗುರುತಾಗಿ ನೀಡಲು ಕೂಡಲೆ ಒಪ್ಪಿಕೊಂಡನು.

ನೆರೆದಿದ್ದವರು ತಮ್ಮ ಚಿಕ್ಕ ಔತಣದೂಟವನ್ನು ಮಾಡುತ್ತಿದ್ದಾಗ ಎಲ್ಲರಿಗಿಂತ ಹೆಚ್ಚಾಗಿ ಕ್ಲಿಫರ್ಡ್ ತುಂಬ ಉತ್ಸಾಹಭರಿತನಾದನು. ಅವನ ಈ ಸ್ಥಿತಿ– ಒಂದೋ, ಚೇತನದಿಂದ ಮೇಲಕ್ಕೆ ಚಿಮ್ಮಿದ ಒಂದು ಹೊಳಹಾಗಿರಬೇಕು; ಮನಸ್ಸಿನ ವೈಪರೀತ್ಯವುಳ್ಳವರಲ್ಲಿ ಇದು ಸಾಧಾರಣ; ಅದಲ್ಲವೋ, ಸಂಗೀತಸ್ವರ ಕಂಪನ ಗಳನ್ನುಂಟುಮಾಡುವ ಯಾವುದೋ ತಂತಿಯನ್ನು ಆ ಕಲಾವಿದನು ಸೂಕ್ಷ್ಮವಾಗಿ ಮಿಡಿದಿರಬೇಕು. ವಾಸ್ತವವಾಗಿ, ಸೊಗಸಾದ ಬೇಸಗೆಯ ಸಂಜೆಯೂ ನಿರ್ದಯರಲ್ಲದವರ ಈ ಸಣ್ಣ ಬಳಗದ ಸಹಾನುಭೂತಿಯೂ ಇರಲಾಗಿ, ಅನ್ಯಪ್ರಭಾವಕ್ಕೆ ಸುಲಭವಾಗಿ ಒಳಗಾಗುವ ಕ್ಲಿಫರ್ಡನಂತಹ ವ್ಯಕ್ತಿಯ ಸ್ವಭಾವವು ಲವಲವಿಕೆಯನ್ನು ಹೊಂದಿ, ಸುತ್ತ ಮುತ್ತ ನಡೆದ ಮಾತುಕತೆಯ ಪ್ರಭಾವಕ್ಕೆ

# ೧೧. ಕಮಾನು ಕಿಟಕಿ

ಕ್ಲಿಫರ್ಡನ ಸಾಧಾರಣ ಮನೋಭಾವ ಜಡಸ್ವಭಾವದ್ದು, ಅಥವಾ ಇದ್ದ ಕಡೆ ಬಿದ್ದುಕೊಂಡಿರುವ ಸಸ್ಯಪ್ರಾಯವಾದ ಸೋಮಾರಿತನದ್ದು; ಈ ಕಾರಣದಿಂದಾಗಿ, ಈ ಹಿಂದಿನ ಪುಟಗಳಲ್ಲಿ ವರ್ಣಿಸಿರುವಂತಹ ಪ್ರಕಾರದ ಬದುಕನ್ನು ನೂಕುತ್ತ ಕೊನೆಯಿಲ್ಲದಹಾಗೆ–ಅದಿಲ್ಲದಿದ್ದರೆ ಕಡೆಯ ಪಕ್ಷ ಬೇಸಗೆಯ ಕಾಲದುದ್ದಕ್ಕೂ– ಅವನು ದಿನವಾದ ಮೇಲೆ ದಿನವನ್ನು ಕಳೆಯುತ್ತ ಇರುವುದರಲ್ಲಿಯೆ ಬಹುಶಃ ತೃಪ್ತನಾಗಿರುತ್ತಿದ್ದನೆಂದು ಕಾಣುತ್ತದೆ. ಹಾಗಿದ್ದರೂ, ಜೀವನಕ್ಷೇತ್ರವನ್ನು ಆಗ್ಗಾಗ್ಗೆ ಬದಲಾಯಿಸುವುದು ಅವನಿಗೆ ಪ್ರಯೋಜನಕರವಾಗಬಹುದೆಂದು ಬಗೆದು, ಬೀದಿಯ ಬದುಕನ್ನು ನೋಡಬೇಕೆಂದು ಫೀಬೆ ಕೆಲವೊಮ್ಮೆ ಅವನಿಗೆ ಸೂಚಿಸುತ್ತಿದ್ದಳು. ಈ ಉದ್ದೇಶಕ್ಕಾಗಿ, ಅವರಿಬ್ಬರೂ ಒಟ್ಟಿಗೆ ಮಹಡಿಯ ಮೆಟ್ಟಲನ್ನು ಹತ್ತಿ ಮನೆಯ ಎರಡನೆಯ ಅಂತಸ್ತಿಗೆ ಹೋಗುತ್ತಿದ್ದರು; ಅಲ್ಲಿ, ಅಗಲವಾದ ಒಂದು ಪ್ರವೇಶದ್ವಾರದ ಕಡೆಯಲ್ಲಿ, ಅಸಾಧಾರಣವಾಗಿ ದೊಡ್ಡ ಅಳತೆಯ ಕಮಾನಿನ ಕಿಟಕಿಯೊಂದಿತ್ತು; ಒಂದು ಜೊತೆ ಘರದೆ ಹಾಕಿ ಅದನ್ನು ಮರೆಮಾಡಿತ್ತು. ಅದು ಮನೆಯ ಮುಖಮಂಟಪದ ಮೇಲ್ಗಡೆ ತೆರೆದಿತ್ತು; ಹಿಂದೆ ಅಲ್ಲೊಂದು ಉಪ್ಪರಿಗೆಯ ಮೊಗಸಾಲೆಯಿತ್ತು; ಅದರ ಕಟಕಟೆ ಬಹಳ ಹಿಂದೆಯೇ ಮುರಿದುಹೋಗಿದ್ದರಿಂದ, ಅದನ್ನು ಈಗ ತೆಗೆದುಬಿಟ್ಟಿತ್ತು. ಈ ಕಮಾನು ಕಿಟಕಿಯ ಬಳಿ, ಅದನ್ನು ತೆರೆದುಕೊಂಡು ತಾನು ಮಾತ್ರ ಅದರ ತೆರೆಗಳ ಮರೆಯಲ್ಲಿ ತಕ್ಕಮಟ್ಟಿಗೆ ಕಾಣದ ಹಾಗೆ ಇದ್ದುಕೊಂಡು, ಅಷ್ಟೇನೂ ಬಹಳ ಜನಭರಿತವಲ್ಲದ ನಗರದ ಶಾಂತವಾದ ಬೀದಿಗಳ ಪೈಕಿ ಒಂದರ ಮೂಲಕ ಸಾಗಿಹೋಗುತ್ತಿದ್ದ ಮಹಾ ಪ್ರಪಂಚದ ಚಲನವಲನದ ಒಂದು ಭಾಗವನ್ನು ನೋಡುವ ಅವಕಾಶ ಕ್ಲಿಫರ್ಡನಿಗೆ ಇದ್ದಿತು. ಆದರೆ ಅವನೂ ಫೀಬೆಯೂ ಕೂಡಿ, ನಗರದಲ್ಲಿ ಕಾಣಬಹುದಾಗಿದ್ದ ಯಾವುದೇ ನೋಟದಷ್ಟೆ ನೋಡಲು ಯೋಗ್ಯವಾದ ನೋಟವನ್ನು ಒದಗಿಸಿದ್ದರು. ಕ್ಲಿಫರ್ಡನ ಬಿಳಿಚಿಕೊಂಡ, ನರೆಗೂದಲ, ಮಗುವಿನಂತಹ, ಮುದಿಯಾದ, ಖಿನ್ನವಾದ, ಆದರೆ ಕೆಲವೇಳೆ ಕೇವಲ ಉಲ್ಲಾಸಪೂರ್ಣವಾದ ಕೆಲವುವೇಳೆ ಸೂಕ್ಷ್ಮ ರೀತಿಯಲ್ಲಿ ಬುದ್ಧಿವಂತಿಕೆಯನ್ನು ಸೂಚಿಸುವ ಮುಖವು ಮಾಸಿಹೋಗಿದ್ದ ಕಡುಗೆಂಪು ತೆರೆಯ ಹಿಂದಿನಿಂದ

ಏಕಾಗಬಾರದು? ಅದು ವಾಸ್ತವವಾಗಿ ಸೌಖ್ಯವೇ ಅಲ್ಲದಿದ್ದರೂ, ಅಚ್ಚರಿಪಡುವಂತೆ ಅದರ ಹಾಗೆಯೇ ಇದೆ; ಅದರ ಅಸ್ಪಷ್ಟ ಅಗ್ರಾಹ್ಯ ಗುಣದಿಂದಾಗಿ ಇನ್ನೂ ಹೆಚ್ಚಾಗಿಯೆ ಹಾಗೆ ಕಂಡೀತು; ಅದನ್ನು ಅಂತರಂಗದಲ್ಲಿ ಬಹು ಸಮೀಪದಲ್ಲಿ ಪರಿಶೀಲಿಸಿದರೆ, ಆ ಗುಣ ಅದನ್ನು ಮಾಯವಾಗುವಂತೆಯೇ ಮಾಡಿಬಿಟ್ಟೀತು. ಆದ್ದರಿಂದ, ಅವಕಾಶವಿರುವಾಗ ಅದನ್ನು ಅನುಭವಿಸಿಬಿಡು! ಗೊಣಗಬೇಡ–ಪ್ರಶ್ನಿಸಬೇಡ–ಅದರಿಂದ ಎಷ್ಟು ಸಾಧ್ಯವೋ ಅಷ್ಟು ಪ್ರಯೋಜನ ಪಡೆ!

* * * *

ಈ ನೀರಿನ ಬಂಡಿಯ ಪರಿಚಯವನ್ನು ಬೆಳಸಿಕೊಳ್ಳಲಾರದೆ ಹೋದನು; ಅವನು ಅದನ್ನು ಕಂಡಾಗಲೆಲ್ಲ ಮೊದಲ ಸಲ ಹೇಗೆ ಅಚ್ಚರಿಪಡುತ್ತಿದ್ದನೋ ಹಾಗೆಯೇ ಅಚ್ಚರಿಪಡುತ್ತಿದ್ದನು. ಅವನ ಮನಸ್ಸಿನ ಮೇಲೆ ಬಂಡಿಯ ಭಾವಮುದ್ರೆ ಬಲವಾಗಿಯೇ ಬೀಳುತ್ತಿತ್ತು; ಆದರೆ ಬಂಡಿ ಸುರಿಸುತ್ತಿದ್ದ ಜಲವರ್ಷವನ್ನು ಅದು ಮತ್ತೆ ಕಾಣಿಸಿಕೊಳ್ಳುವುದಕ್ಕೆ ಮುಂಚೆಯೆ ಬಿಸಿಲ ಝಳದಿಂದ ಮರಳಿ ಬಿಳಿಯ ಧೂಳು ತುಂಬಿದ ಬೀದಿ ಹೇಗೆ ಮರೆತುಬಿಡುವಂತೆ ಕಾಣುತ್ತಿತ್ತೋ ಅವನ ಮನಸ್ಸೂ ಹಾಗೆಯೇ ಮರೆತುಬಿಡುತ್ತಿತ್ತು. ರೈಲುದಾರಿಯ ವಿಚಾರವೂ ಹಾಗೆಯೆ. ಆವಿಯುಗುಳುವ ಭೂತದ ಚೀರಾಟದ ಹುಯಿಲನ್ನು ಅವನು ಕೇಳಬಲ್ಲವನಾಗಿದ್ದನು; ಮತ್ತು ಕಮಾನು ಕಿಟಕಿಯಿಂದ ಸ್ವಲ್ಪ ದೂರಕ್ಕೆ ಬಗ್ಗಿ ತಿರುಗಿ ನೋಡಿದರೆ, ಬೀದಿಯ ಕೊನೆಯಲ್ಲಿ ಅಡ್ಡನಾಗಿ ತುಸಕಾಲಮಾತ್ರ ಹೊಳೆದಂತೆ ಹಾದುಹೋಗುತ್ತಿದ್ದ ರೈಲುಬಂಡಿಗಳ ಸಾಲಿನ ನೋಟ ಅವನಿಗೆ ಸಿಕ್ಕುತ್ತಿತ್ತು. ಅವನ ಮೇಲೆ ಹಾಗೆ ಎರಗಿಬಿದ್ದ ಭಯಂಕರಶಕ್ತಿಯ ಭಾವನೆ ಪ್ರತಿಸಲ ಉಂಟಾದಾಗಲೂ ಅವನಿಗೆ ಹೊಸದಾಗಿಯೇ ಇರುತ್ತಿತ್ತು; ಮತ್ತು ಮೊದಲ ಸಲ ಹೇಗೋ ನೂರನೆಯ ಬಾರಿಯೂ ಹಾಗೆಯೇ ಅವನ ಮೇಲೆ ಅಹಿತಕರವಾದ ಪರಿಣಾಮವನ್ನುಂಟುಮಾಡಿ, ಅವನಿಗೆ ಅಷ್ಟೇ ಆಶ್ಚರ್ಯವನ್ನುಂಟುಮಾಡುತ್ತಿತ್ತು.

ಅಭ್ಯಾಸವಿಲ್ಲದ ವಸ್ತುಗಳೊಂದಿಗೆ ವ್ಯವಹರಿಸುವ, ಮತ್ತು ಸರಿದು ಹೋಗುತ್ತಿರುವ ಕ್ಷಣದ ವೇಗಕ್ಕೆ ಹೊಂದಿಕೊಳ್ಳುವ ಶಕ್ತಿಯನ್ನು ಸಂಪೂರ್ಣವಾಗಿಯೋ ಇಲ್ಲವೇ ತಾತ್ಕಾಲಿಕವಾಗಿಯೋ ಕಳೆದುಕೊಳ್ಳುವುದಕ್ಕಿಂತಲೂ ಹೆಚ್ಚು ವ್ಯಸನಕರವಾದ ನಾಶಭಾವನೆಯನ್ನು ಬೇರೆ ಯಾವುದೂ ಉಂಟು ಮಾಡುವುದಿಲ್ಲ. ಸಾಯದೆ ಕೇವಲ ನಿಶ್ಶೇಷ್ಷವಾಗಿರುವ ಸ್ಥಿತಿಯಾಗಿರಬಹುದು ಅದು; ಏಕೆಂದರೆ, ಆ ಶಕ್ತಿ ನಿಜವಾಗಿ ನಾಶಹೊಂದುವುದಾದಲ್ಲಿ, ಅಮರ್ತ್ಯತೆಯಿಂದ ಏನೂ ಉಪಯೋಗವಿರದು. ಇಂಥ ವಿಪತ್ತು ನಮಗೆ ಸಂಭವಿಸಿದಾಗಲೆಲ್ಲ, ತಾತ್ಕಾಲಿಕವಾಗಿಯಾದರೂ, ನಾವು ಪ್ರೇತಗಳಿಗೆ ಸಮ.

ಕ್ಲಿಫರ್ಡ್ ಸಂಪ್ರದಾಯಶರಣರಲ್ಲಿ ನಿಜವಾಗಿಯೂ ಅತ್ಯಂತ ನಿಷ್ಠಾವಂತನಾಗಿದ್ದನು. ಬೀದಿಯಲ್ಲಿನ ಪುರಾತನ ಶೈಲಿ ಸಂಪ್ರದಾಯಗಳೆಲ್ಲವೂ ಅವನಿಗೆ ಪ್ರಿಯವಾಗಿದ್ದುವು; ಅವನ ಅತಿಸೂಕ್ಷ್ಮ ಇಂದ್ರಿಯಗಳನ್ನು ಸಹಜವಾಗಿಯೇ ಬೇಸರಗೊಳಿಸುವಂತಹ ಒರಟುತನದ ಲಕ್ಷಣವುಳ್ಳವು ಕೂಡ ಹಳೆಯ

ಇಣಿಕಿನೋಡುತ್ತಿತ್ತು– ಮತ್ತು ಪ್ರತಿನಿತ್ಯದ ಏಕಪ್ರಕಾರವಾದ ಘಟನೆಗಳನ್ನು ಒಂದು ಬಗೆಯ ನಿರ್ಲಿಪ್ತವಾದ ಆಸಕ್ತಿಯಿಂದಲೂ ಉತ್ಸಾಹದಿಂದಲೂ ಗಮನಿಸುತ್ತಿತ್ತು; ಹಾಗೂ, ಸೂಕ್ಷ್ಮವಾದ ಮನಸ್ಸು ಅಲ್ಪಸ್ವಲ್ಪ ಮಿಡಿದಾಗಲೆಲ್ಲ ಸಹಾನುಭೂತಿಗಾಗಿ ಆ ಗೆಲುವಾದ ಪುಟ್ಟ ಹುಡುಗಿಯ ಕಣ್ಣುಗಳ ಕಡೆಗೆ ತಿರುಗುತ್ತಿತ್ತು!

ಕ್ಲಿಫರ್ಡ್ ಒಮ್ಮೆ ಕಿಟಕಿಯ ಬಳಿ ಸ್ಥಿರವಾಗಿ ಕುಳಿತನೆಂದರೆ ಸಾಕು, ಪಿನ್ಚನ್ ಬೀದಿ ಕೂಡ ಅಷ್ಟು ಮಂಕಾಗಿ ನಿರ್ಜನವಾಗಿ ಇರುತ್ತಿರಲಿಲ್ಲ; ಬೀದಿಯಲ್ಲಿ ಆ ಕೊನೆಯಿಂದ ಈ ಕೊನೆಯವರೆಗೆ ಎಲ್ಲಿಯಾದರೂ ಒಂದು ಕಡೆ ಅವನ ಕಣ್ಣಿಗೆ ನೋಡಲು ಏನಾದರೂ ಒಂದು ಸಂಗತಿ ಕಾಣಬರುತ್ತಿತ್ತು, ಅವನ ಗಮನವನ್ನು ಸೆಳೆದುಹಿಡಿಯುವಂಥದಲ್ಲದಿದ್ದರೂ ಅದನ್ನು ತಿರುಗಿಸುವಂತಹ ಸಂಗತಿ ಅವನಿಗೆ ಗೋಚರವಾಗುತ್ತಿತ್ತು. ಬದುಕನ್ನು ಕುತೂಹಲದಿಂದ ಆಗತಾನೆ ನೋಡತೊಡಗಿದ್ದ ಹಸುಗೂಸಿಗೆ ಕೂಡ ಪರಿಚಿತವಾದಂತಹ ವಸ್ತುಗಳು ಅವನಿಗೆ ಹೊಚ್ಚ ಹೊಸತಾಗಿದ್ದುವು. ಪೆಟ್ಟಿಗೆ ಬಂಡಿ; ಗೊತ್ತುಗುರಿಯಿಲ್ಲದೆ ಎಲ್ಲೆಡೆಯೂ ಸಂಚರಿಸಿದರೂ ನಿರ್ದಿಷ್ಟವಾಗಿ ಒಂದು ಕಡೆಗೆ ಹೋಗದ, ಉರುಳುತ್ತಿರುವ ಈ ಅಪಾರ ಜಗತ್ತನ್ನು ಸಂಕೇತಿಸುವ ರೀತಿಯಲ್ಲಿ ಅಲ್ಲಲ್ಲಿ ಒಬ್ಬೊಬ್ಬ ಪ್ರಯಾಣಿಕನನ್ನು ಇಳಿಸುತ್ತ, ಇನ್ನೊಬ್ಬ ಪ್ರಯಾಣಿಕನನ್ನು ಹತ್ತಿಸಿಕೊಳ್ಳುತ್ತ ಹೋಗುತ್ತಿದ್ದ, ಒಳಗೆ ಜನ ತುಂಬಿದ ಸಾರ್ವಜನಿಕ ಬಸ್ಸು– ಇವು ಹೋದಕಡೆಯೇ ಉತ್ಸುಕತೆಯಿಂದ ತನ್ನ ಕಣ್ಣನ್ನು ಹಾಯಿಸುತ್ತಿದ್ದ, ಆದರೆ ಕುದುರೆಗಳೂ ಚಕ್ರಗಳೂ ಎಬ್ಬಿಸಿದ ಧೂಳು ಅವು ಹೋದ ದಾರಿಯಲ್ಲಿ ಅಡಗುವಷ್ಟರಲ್ಲಿಯೇ ಅವುಗಳನ್ನು ಮರೆತುಬಿಡುತ್ತಿದ್ದ. ನವೀನ ವಸ್ತುಗಳೆಂದು ಪರಿಗಣಿತವಾದವುಗಳ ವಿಷಯದಲ್ಲಿ (ಪೆಟ್ಟಿಗೆ ಬಂಡಿಗಳೂ ಸಾರ್ವಜನಿಕ ಬಸ್ಸುಗಳೂ ನವೀನವೆಂದೇ ಎಣಿಕೆಯಾಗಿದ್ದುವು) ಹೇಳುವುದಾದರೆ, ಅವನ ಮನಸ್ಸು ಸರಿಯಾದ ಗ್ರಹಣಶಕ್ತಿಯನ್ನೂ ಧಾರಣಶಕ್ತಿಯನ್ನೂ ಕಳೆದುಕೊಂಡುಬಿಟ್ಟಿದ್ದಂತೆ ಕಾಣುತ್ತಿತ್ತು. ಉದಾಹರಣೆಗಾಗಿ, ಎರಡು ಅಥವಾ ಮೂರು ಸಲ, ಹಗಲು ಬಿಸಿಲುಹೊತ್ತಿನಲ್ಲಿ, ಪಿನ್ಚನ್‌ಭವನದ ಬಳಿ ನೀರಿನ ಬಂಡಿಯೊಂದು ಹೋಗುತ್ತಿತ್ತು. ಅಲ್ಲಿ ಮೊದಲು ಮಹಿಳೆಯೊಬ್ಬಳು ಹಗುರವಾಗಿ ಹೆಜ್ಜೆಯಿಟ್ಟ ಪ್ರಯುಕ್ತ ಬಿಳಿಯ ಧೂಳು ಎದ್ದಿತ್ತು; ಅದರ ಎಡೆಯಲ್ಲಿ ಬಂಡಿ ತೊಯ್ದ ನೆಲದ ಜಾಡನ್ನು ಬಿಟ್ಟುಹೋಗಿತ್ತು; ಇದು ಹೇಗೆ ಕಾಣುತ್ತಿತ್ತೆಂದರೆ, ನಗರಾಧಿಕಾರಿಗಳು ಬೇಸಗೆಯ ಮಳೆಯನ್ನು ಹಿಡಿದುಹಾಕಿ, ಪಳಗಿಸಿ, ತಮ್ಮ ಸೌಕರ್ಯಕ್ಕಾಗಿ ಅತ್ಯಂತ ಸಾಧಾರಣವಾದ ಕಾರ್ಯಕ್ರಮವನ್ನು ಬಲಾತ್ಕಾರಮಾಡಿ ಅದರ ಕೈಯಿಂದ ಮಾಡಿಸಿಕೊಂಡಹಾಗಿತ್ತು. ಕ್ಲಿಫರ್ಡ್ ಎಂದಿಗೂ

ಎಂಬ ಶಬ್ದ ಕೇಳುವವರ ಮೇಲೆ ಸೇಡು ತೀರಿಸಿಕೊಳ್ಳುವಂತೆ ದೀರ್ಘಕಾಲ ಸಾಗಿತು; ಈ ಶಬ್ದದ ವ್ಯಾಪ್ತಿ ಬಹು ಕಿರಿದಾಗಿದ್ದರೂ, 'ಪ್ಯಾಂಡಿಮೋನಿಯಂ' ಎಂಬ ನರಕದಲ್ಲಿ ಸೈತಾನನೂ ಅವನ ಜೊತೆಗಾರರೂ ಹೊರಬಿಡುತ್ತಿದ್ದ ಶಬ್ದಗಳಷ್ಟೇ ಭಯಂಕರವಾಗಿತ್ತು. ಅದೊಂದು ವಿಕಾರವಾದ ಸಣ್ಣ ವಿಷಪೂರಿತ ಸರ್ಪರೂಪದ ಶಬ್ದ; ಎಂದೇ ಆಗಲಿ ಮಾನವನ ಕಿವಿಗಳಿಗೆ ಹಿಂಸೆಯನ್ನುಂಟುಮಾಡಲು ಇಷ್ಟು ಸಾಕು. ಆದರೆ ಕ್ಲಿಫರ್ಡ್ ಅದನ್ನು ಪರಮಾನಂದದಿಂದ ಆಲಿಸಿದನು. ಆ ಶಬ್ದ ಎಷ್ಟೇ ಅಹಿತವಾಗಿದ್ದಾಗ್ಯೂ ಅದರಲ್ಲಿ ಚುರುಕಾದ ಜೀವಂತಲಕ್ಷಣವಿತ್ತು; ಅತ್ತ ಚಕ್ರ ಸುತ್ತುತ್ತಿರುವುದನ್ನು ಗಮನಿಸುತ್ತಾ ನಿಂತಿದ್ದ ಕುತೂಹಲಿಗಳಾದ ಮಕ್ಕಳ ವೃಂದದ ನೋಟವೂ ಸೇರಿ, ಅವನಿಗೆ ಬೇರೆ ಯಾವ ರೀತಿಯಲ್ಲಿ ದೊರೆತಿದ್ದುದಕ್ಕಿಂತ ಹೆಚ್ಚಾಗಿ ಆ ಶಬ್ದ ಪ್ರಪಂಚದಿಂದ ಉತ್ಸಾಹಪೂರ್ಣವಾದ, ಚಟುವಟಿಕೆಯ ಮತ್ತು ಗಡಿಬಿಡಿಯ ಬದುಕಿನ ಸ್ಪಷ್ಟವಾದ ಭಾವನೆ ಉಂಟಾಗಿತ್ತು. ಆದರೂ ಕೂಡ ಅದರ ಆಕರ್ಷಣೆ ಮುಖ್ಯವಾಗಿ ಗತಕಾಲಕ್ಕೆ ಸಂಬಂಧಪಟ್ಟದ್ದಾಗಿತ್ತು; ಏಕೆಂದರೆ, ಕತ್ತರಿ ಸಾಣೆಹಿಡಿಯುವವನ ಚಕ್ರವು ಅವನು ಮಗುವಾಗಿದ್ದಾಗ ಅವನ ಕಿವಿಗಳಲ್ಲಿ 'ಹಿಸ್' ಎಂದು ಮೊರೆದಿದ್ದಿತು.

ಈಗಿನ ಕಾಲದಲ್ಲಿ ಮಜಲು ಬಂಡಿಗಳೇ ಇಲ್ಲವೆಂದು ಅವನು ಕೆಲವು ವೇಳೆ ಗೋಳುಗರೆಯುತ್ತ ದೂರಿದ್ದುಂಟು. ಪೂರ್ವಕಾಲದಲ್ಲಿ ಇನ್ನೊಂದು ಬಗೆಯ ಮಜಲು ಬಾಡಿಗೆ ಬಂಡಿಗಳಿದ್ದುವು; ಅಂಥ ಬಂಡಿಯ ಮೇಲ್ಭಾಗ ಚೌಕವಾಗಿದ್ದು, ಅದರ ಎರಡು ಪಾರ್ಶ್ವಗಳೂ ಹೊರಚಾಚಿಕೊಂಡಿರುತ್ತಿದ್ದುವು; ಅದನ್ನು ಸಾಧಾರಣವಾಗಿ ಎಳೆಯುತ್ತಿದ್ದುದು ಉಳುವ ಕುದುರೆ, ಹೊಡೆಯುತ್ತಿದ್ದವರು ರೈತನ ಹೆಂಡತಿ ಮತ್ತು ಮಗಳು; ಅವರು ಅದರಲ್ಲಿ 'ವ್ಹಾರ್ಟಲ್‌ಬೆರಿ' ಮತ್ತು 'ಬ್ಲ್ಯಾಕ್‌ಬೆರಿ' ಎಂಬ ಹಣ್ಣುಗಳನ್ನು ತುಂಬಿಕೊಂಡು ಮಾರುತ್ತಿದ್ದರು. ಈ ಬಂಡಿಗಳು ಏನಾದವು ಎಂದು ಕ್ಲಿಫರ್ಡ್ ನೊಂದದನಿಯಲ್ಲಿ ಕೇಳುತ್ತಿದ್ದನು. ಅವು ಕಣ್ಮರೆಯಾದ್ದರಿಂದ, ವಿಶಾಲವಾದ ಹುಲ್ಲುಗಾವಲುಗಳಲ್ಲಿಯೂ ನೆರಳಾದ ಹಳ್ಳಿಯ ಕಿರುಬೀದಿಗಳಲ್ಲಿಯೂ ಆ ಹಣ್ಣಿನ ಗಿಡಗಳು ಬೆಳೆಯುವುದೇ ನಿಂತುಹೋಯಿತೇನೋ ಎಂದು ತಾನು ಸಂದೇಹಪಡುವಂತಾಗಿದೆ ಎಂದೂ ಅವನು ಹೇಳುತ್ತಿದ್ದನು.

ಆದರೆ ಎಷ್ಟೇ ಅತ್ಯಲ್ಪ ರೀತಿಯಲ್ಲಾಗಲೀ, ಸೌಂದರ್ಯಭಾವನೆಗೆ ಸೊಗಸಿದ್ದು ಯಾವುದೇ ಆಗಲಿ, ಅದಕ್ಕೆ ಈ ಹಳೆಯ ಸಂಬಂಧಪರಿಚಯದ ಶಿಫಾರಸು ಯಾವುದೂ ಅಗತ್ಯವಿರಲಿಲ್ಲ. ನಮ್ಮ ಬೀದಿಗಳಲ್ಲಿ ಇತ್ತೀಚೆಗೆ ಕಾಣಿಸಿಕೊಳ್ಳುತ್ತಿರುವ

ಮಾದರಿಯವಾಗಿದ್ದರೆ ಸರಿ, ಪ್ರಿಯವೆನಿಸುತ್ತಿದ್ದುವು. ಗಡಗಡ ಸದ್ದು ಮಾಡುವ ಕುಲುಕಾಡುವ ಹಳೆಯ ಕಾಲದ ಬಂಡಿಗಳೆಂದರೆ ಅವನಿಗೆ ಪ್ರೀತಿ; ಪ್ರಾಚೀನ ಗ್ರೀಸಿನ ಮಹಾವೀರ ಹರ್‌ಕ್ಯುಲೀಸನು ಸಾಹಸಕಾರ್ಯಗಳನ್ನು ಮೆರೆದ ಸ್ಥಳದಲ್ಲಿ ಇಂದಿನ ವೀಕ್ಷಕನೊಬ್ಬನು ಪ್ರಾಚೀನವಾಹನಗಳ ಚಕ್ರದ ಜಾಡುಗಳನ್ನು ಕಾಣುವಂತೆ, ಬಹಳ ಹಿಂದೆಯೇ ಹೂತುಹೋದ ನೆನಪಿನಲ್ಲಿ ಆ ಗಾಡಿಗಳ ಹಿಂದಿನ ಜಾಡನ್ನು ಕ್ಲಿಫರ್ಡ್ ಇನ್ನೂ ಕಾಣುತ್ತಿದ್ದನು. ಮಾಂಸವ್ಯಾಪಾರಿಯ ಹಿಮಕವಿದ ಮೇಲ್ಕಟ್ಟಿನ ಬಂಡಿ ಒಪ್ಪಿಗೆಯಾದ ಒಂದು ವಸ್ತು; ಅಂತೆಯೇ ಕೊಂಬಿನ ಕೂಗಿನ ಘೋಷಣೆಯೊಂದಿಗೆ ಬರುತ್ತಿದ್ದ ಮೀನಿನ ಬಂಡಿ; ಇದೇ ರೀತಿ ಪ್ರಿಯವಾದದ್ದು ಹಳ್ಳಿಯವನ ತರಕಾರಿಯ ಬಂಡಿ: ಅದು ಮನೆಯಿಂದ ಮನೆಗೆ ನಿಧಾನವಾಗಿ ಸಾಗುತ್ತಿದ್ದಾಗ, ತಾಳ್ಮೆಯುಳ್ಳ ಕುದುರೆ ಅಲ್ಲಲ್ಲಿ ತುಂಬಹೊತ್ತು ನಿಂತಿರುತ್ತಿತ್ತು; ಆಗ ಅದರ ಯಜಮಾನ 'ಟರ್ನಿಸ್' ಗೆಡ್ಡೆ, ಕೆಂಪುಮೂಲಂಗಿ, ಬೇಸಗೆಯ ಕುಂಬಳಕಾಯಿ, ತಿಂಗಳಹುರುಳಿ, ಹಸಿಬಟಾಣಿ, ಹೊಸ ಆಲೂಗೆಡ್ಡೆ– ಇವುಗಳ ವ್ಯಾಪಾರವನ್ನು ಭರಾಟಯಿಂದ ಮಾಡುತ್ತಿದ್ದನು; ನೆರೆಹೊರೆಯ ಗೃಹಿಣಿಯರಲ್ಲಿ ಅರ್ಧಮಂದಿ ಅಲ್ಲಿ ನೆರೆದಿರುತ್ತಿದ್ದರು. ಕರ್ಕಶನಾದದ ಗಂಟೆಗಳಿದ್ದ ರೊಟ್ಟಿ ಮಾರುವವನ ಬಂಡಿ ಕ್ಲಿಫರ್ಡನಮೇಲೆ ಸೊಗಸಾದ ಪರಿಣಾಮವನ್ನು ಹೊಂದಿತ್ತು; ಏಕೆಂದರೆ, ಬಹಳ ಹಿಂದಿನ ಕಾಲದ ಅಪಸ್ವರದ ಅವತಾರವನ್ನು ಝಣಝಣಸದ್ದಿನಲ್ಲಿ ಮೂಡಿಸಬಲ್ಲ ಶಕ್ತಿ ಅದಕ್ಕಿದ್ದ ಹಾಗೆ ಬೇರೆ ಯಾವುದಕ್ಕೂ ಇರಲಿಲ್ಲ. ಒಂದು ದಿನ ಮಧ್ಯಾಹ್ನವಾದ ಮೇಲೆ, ಕತ್ತರಿ ಸಾಣೆಹಿಡಿಯುವವನೊಬ್ಬ ಬಂದು ಪಿನ್ಚನ್ ಎಲ್ಮ್ ವೃಕ್ಷದಡಿಯಲ್ಲಿ, ಕಮಾನು ಕಿಟಕಿಯ ಮುಂಭಾಗದಲ್ಲಿಯೆ ತನ್ನ ಚಕ್ರವನ್ನು ತಿರುಗಿಸತೊಡಗಿದನು. ಅಲ್ಲಿಗೆ ಮಕ್ಕಳು ತಮ್ಮ ತಾಯಂದಿರ ಕತ್ತರಿಗಳನ್ನೋ, ಅಥವಾ ಕೊಯ್ಯುವ ಚಾಕುವನ್ನೋ ಇಲ್ಲವೆ ತಂದೆಯ ಕ್ಷೌರದಕತ್ತಿಯನ್ನೋ ಇಲ್ಲವೆ (ಬಡ ಕ್ಲಿಫರ್ಡನ ಬುದ್ಧಿಯೊಂದನ್ನು ಬಿಟ್ಟು) ಹರಿತವಾದ ಏಣು ಇಲ್ಲದ ಬೇರೆ ಯಾವುದಾದರೂ ಪದಾರ್ಥವನ್ನೋ ಹಿಡಿದುಕೊಂಡು ಓಡೋಡಿ ಬರುತ್ತಿದ್ದರು; ಸಾಣೆಹಿಡಿಯುವವನು ತಾವು ತಂದ ಪದಾರ್ಥವನ್ನು ತನ್ನ ಮಾಯದ ಚಕ್ರಕ್ಕೆ ಒಡ್ಡಿ; ಅದನ್ನು ಹೊಸದರಷ್ಟೇ ಚೆನ್ನಾಗಿ ಮಾಡಿ ಹಿಂದಿರುಗಿಸಿ ಕೊಡಲೆಂದು ಅವರ ಆಶೆ. ಬಿಡುವಿಲ್ಲದೆ ತಿರುಗುವ ಯಂತ್ರ ಸುತ್ತತೊಡಗಿತು; ಕತ್ತರಿ ಸಾಣೆ ಹಿಡಿಯುವವನ ಕಾಲಿನ ಒತ್ತಾಟದಿಂದ ಅದು ನಿಲ್ಲದೆ ಚಲಿಸುತ್ತ ಕಠಿನವಾದ ಕಲ್ಲಿಗೆ ಕಠಿನವಾದ ಉಕ್ಕನ್ನು ಒಡ್ಡಿ ಅದನ್ನು ಸವೆಯಿಸಿಬಿಟ್ಟಿತು; ಇವೆರಡರ ಸಂಘರ್ಷಣೆಯಿಂದ ಬಲು ಜೋರಾದ 'ಹಿಸ್'

ಹೌದು; ಅದೇ ಪ್ರೇರಣೆಗೆ ಒಳಗಾಗಿ, ಪ್ರೇಮಿಯೊಬ್ಬನು ತನ್ನ ಪ್ರಿಯೆಗೆ ತುಟಿಮುತ್ತಿನ ಗೌರವ ಸಲ್ಲಿಸುತ್ತಿದ್ದನು. ಏಕಕಾಲದಲ್ಲಿ ಸಂತೋಷಚಿತ್ತನೂ ಕಟುಮನಸ್ಕನೂ ಆದ ಯಾವನೋ ವಿಕಟವಿನೋದಿಯೊಬ್ಬನು ಈ ಮೂಕಾಭಿನಯದ ದೃಶ್ಯದಲ್ಲಿ ಒಂದು ಸತ್ಯಾಂಶವನ್ನು ಸೂಚಿಸಲು ಅಪೇಕ್ಷೆ ಪಟ್ಟಿದ್ದಂತೆ ಕಾಣುತ್ತದೆ; ಅದೇನೆಂದರೆ– ನಮ್ಮ ಉದ್ಯೋಗ ಅಥವಾ ವಿನೋದ ಏನೇ ಆಗಿರಲಿ– ಅದು ಎಷ್ಟೇ ಗಂಭೀರವಾಗಿರಲಿ ಇಲ್ಲವೇ ಕ್ಷುಲ್ಲಕವಾಗಿರಲಿ– ಮರ್ತ್ಯರಾದ ನಾವೆಲ್ಲರೂ ಕುಣಿಯುವುದು ಒಂದೇ ರಾಗವನ್ನು ಹಿಡಿದು; ಹಾಗೂ, ಹಾಸ್ಯಾಸ್ಪದವಾಗುವಷ್ಟು ಕಾರ್ಯಚಟುವಟಿಕೆಯನ್ನು ನಿರ್ವಹಿಸಿದ್ದರೂ ಕೂಡ, ನಾವು ಪಡೆಯುವ ಫಲ ಸೊನ್ನೆ! ಈ ಕಾರ್ಯಕಲಾಪದಲ್ಲಿ ಅತ್ಯಂತ ಗಮನಾರ್ಹ ಅಂಶವೆಂದರೆ, ಸಂಗೀತವು ನಿಂತಕೂಡಲೇ ಪ್ರತಿಯೊಂದು ವ್ಯಕ್ತಿಯೂ ಅತಿವರ್ತನೆಯ ಬದುಕನ್ನು ಬಿಟ್ಟು ಸಾವಿನ ನಿಶ್ಚೇಷ್ಟಸ್ಥಿತಿಯನ್ನು ಹೊಂದಿ ತಟ್ಟನೆ ಸ್ತಬ್ಧವಾಗಿಬಿಡುತ್ತಿತ್ತು. ಚಮ್ಮಾರನ ಜೋಡಿನ ಕೆಲಸ ಮುಗಿದೇ ಇರುತ್ತಿರಲಿಲ್ಲ, ಕಮ್ಮಾರನು ಕುಟ್ಟುತ್ತಿದ್ದ ಕಬ್ಬಿಣ ಒಂದು ಆಕಾರಕ್ಕೆ ತಿರುಗಿಯೆ ಇರಲಿಲ್ಲ; ಅಥವಾ, ಕುಡುಕನ ಶೀಶೆಯಲ್ಲಿ ಒಂದು ತೊಟ್ಟು ಬ್ರಾಂದಿ ಕಡಿಮೆಯಾಗುತ್ತಿರಲಿಲ್ಲ, ಇಲ್ಲವೆ ಗೊಲ್ಲಿತಿಯ ಹಾಲಿನ ಪಾತ್ರೆಯಲ್ಲಿ ಒಂದು ತೊಟ್ಟು ಹಾಲು ಹೆಚ್ಚಿರುತ್ತಿರಲಿಲ್ಲ; ಜಿಪುಣನ ಪೆಟ್ಟಿಗೆಗೆ ಒಂದು ಹೆಚ್ಚಿನ ನಾಣ್ಯ ಬಂದು ಬೀಳುತ್ತಿರಲಿಲ್ಲ, ಇಲ್ಲವೆ ವಿದ್ವಾಂಸನು ತನ್ನ ಪುಸ್ತಕದಲ್ಲಿ ಒಂದು ಪುಟ ಹೆಚ್ಚು ಓದಿರಲಿಲ್ಲ. ಅವರೆಲ್ಲರೂ ದುಡಿಯುವುದಕ್ಕೆ, ಚಿನ್ನವನ್ನು ಶೇಖರಿಸುವುದಕ್ಕೆ, ಬುದ್ಧಿವಂತರಾಗುವುದಕ್ಕೆ ತವಕಪಟ್ಟು ಅಷ್ಟೊಂದು ಹಾಸ್ಯಾಸ್ಪದರಾಗುವುದಕ್ಕೆ ಮುಂಚೆ ಹೇಗಿದ್ದರೋ ತದ್ವತ್ ಅದೇ ಸ್ಥಿತಿಯಲ್ಲಿದ್ದರು. ಮೇಲಾಗಿ, ಅತ್ಯಂತ ದುಃಖದ ಸಂಗತಿಯೆಂದರೆ, ಕನ್ಯೆ ದಯೆಗೈದ ಚುಂಬನವನ್ನು ಪಡೆದಿದ್ದರೂ ಕೂಡ ಆ ಪ್ರೇಮಿಯೇನೂ ಹೆಚ್ಚು ಸುಖಿಯಾಗಿರಲಿಲ್ಲ! ಆದರೆ, ಬಹು ಕಟುವಾದ ಈ ಕಡೆಯ ಸಾಮಗ್ರಿಯನ್ನು ನುಂಗುವುದಕ್ಕಿಂತ, ಆಟದ ನೀತಿಯೆಲ್ಲವನ್ನೂ ನಾವು ನಿರಾಕರಿಸಿಬಿಡುತ್ತೇವೆ.

ಈ ಮಧ್ಯೇ, ಕೋತಿ ತನ್ನ ಪಪ್ಪಳಿ ಉಡುಪಿನ ಕೆಳಗಡೆ ದಪ್ಪ ಬಾಲವನ್ನು ಅತಿ ವಕ್ರವಾಗಿ ಲಂಬಿಸುವಂತೆ ಕೊಂಕಿಸಿಕೊಂಡು, ಆ ಇಟ್ಯಾಲಿಯನ್ನಿನ ಕಾಲಿನ ಬಳಿ ತನ್ನ ಸ್ಥಾನವನ್ನು ಹಿಡಿಯಿತು. ಹಾದುಹೋಗುತ್ತಿದ್ದ ಪ್ರತಿಯೊಬ್ಬರಿಗೂ, ಅಲ್ಲಿ ಬೇಗನೆ ಸುತ್ತಲೂ ನೆರೆದ ಮಕ್ಕಳ ಗುಂಪಿಗೂ, ಹೆಪ್ಸಿಬಾಳ ಅಂಗಡಿಯ ಬಾಗಿಲಿಗೂ, ಫೀಬೆ ಮತ್ತು ಕ್ಲಿಫರ್ಡ್ ಕೆಳಗಡೆ ನೋಡುತ್ತ ನಿಂತಿದ್ದ ಕಮಾನು ಕಿಟಕಿಯ ಕಡೆಗೆ ಮೇಲಕ್ಕೂ ಕೋತಿ ತನ್ನ ಸುಕ್ಕುಗಟ್ಟಿದ ಅಸಹ್ಯವಾದ ಚಿಕ್ಕ

ಇಟಲಿದೇಶದ ಬಾಲಕರ ವಿಷಯದಲ್ಲಿ ಈ ಅಂಶ ಸ್ಪಷ್ಟ ಗೋಚರವಾಗಿತ್ತು; ಯಾರಾದರೂ ಒಬ್ಬ ಇಟಲಿಯ ಬಾಲಕನು ತನ್ನ 'ಬ್ಯಾರೆಲ್‌ಆರ್ಗನ್' ವಾದ್ಯದೊಂದಿಗೆ ಬಂದು, ಎಲ್ಮ್ ಮರದ ಕೆಳಗೆ ವಿಸ್ತಾರವಾಗಿ ಹರಡಿಕೊಂಡಿದ್ದ ತಂಪುನೆರಳಿನಲ್ಲಿ ನಿಲ್ಲುತ್ತಿದ್ದನು. ಅವನು ತನ್ನ ಚುರುಕಾದ ಕಸಬಹುದಾರಿಕೆಯ ಕಣ್ಣಿನಿಂದ, ಕಮಾನು ಕಿಟಕಿಯ ಬಳಿ ತನ್ನನ್ನೆ ನೋಡುತ್ತಿದ್ದ ಎರಡು ಮುಖಗಳನ್ನು ಗಮನಿಸಿ, ತನ್ನ ವಾದ್ಯ ಸಂಗೀತದ ರಾಗಗಳನ್ನು ಸುತ್ತಲೂ ಬೀರತೊಡಗುತ್ತಿದ್ದನು. ಹೈಲೆಂಡಿನವರು ತೊಡುವ ಪಪ್ಪಳಿಬಟ್ಟೆಯ ಉಡುಪು ಹಾಕಿದ್ದ ಕೋತಿಯೊಂದು ಅವನ ಹೆಗಲನ್ನಡರಿತ್ತು. ಅವನ ಆರ್ಗನ್ ವಾದ್ಯದ 'ಮಹಾಗನಿ' ಮರದ ಪೆಟ್ಟಿಗೆಯಲ್ಲಿ ಚಿಕ್ಕ ಬೊಂಬೆಗಳ ತಂಡವೊಂದಿತ್ತು; ಪೆಟ್ಟಿಗೆಯ ಅವುಗಳ ಕಾರ್ಯ ಕ್ಷೇತ್ರ ಹಾಗೂ ವಸತಿ; ಇಟ್ಯಾಲಿಯನ್ನನು ತನ್ನ ಉದ್ಯೋಗವಾಗಿ ಬಾಜಿಸುತ್ತಿದ್ದ ಸಂಗೀತವೇ ಆ ಬೊಂಬೆಗಳ ಜೀವನದ ಪ್ರಾಣತತ್ವವಾಗಿತ್ತು; ಅವನು ಜನದ ಮುಂದೆ ಒಡ್ಡಿದ ಸೊಗಸಾದ ಆಕರ್ಷಣೆಗಳ ವೊತ್ತವನ್ನು ಅವು ಪೂರ್ಣಗೊಳಿಸುದ್ದುವು. ಚಮ್ಮಾರ, ಕಮ್ಮಾರ, ಸಿಪಾಯಿ, ಬೀಸಣಿಗೆ ಹಿಡಿದಿದ್ದ ಮಹಿಳೆ, ಮದ್ಯದ ಶೀಶೆ ಹಿಡಿದಿದ್ದ ಕುಡುಕ, ತನ್ನ ಹಸುವಿನ ಬಳಿ ಕುಳಿತಿದ್ದ ಗೊಲ್ಲತಿ– ಮುಂತಾಗಿ ತಮ್ಮ ಕಸುಬಿನ ವೈವಿಧ್ಯವನ್ನು ಮೆರೆಯುತ್ತಿದ್ದ ಈ ಅದೃಷ್ಟಶಾಲಿಯಾದ ಪುಟ್ಟ ಸಮಾಜವು ನಿಜವಾಗಿಯೂ ಒಂದು ಸಮರಸ ಜೀವನವನ್ನು ಅನುಭೋಗಿಸುತ್ತ, ಜೀವನವನ್ನು ಅರ್ಥಾತ್ ಒಂದು ನೃತ್ಯವಾಗಿ ಮಾಡಿಕೊಂಡಿದ್ದಿತು ಎಂದು ಹೇಳಬಹುದು. ಇಟ್ಯಾಲಿಯನ್ನನು ಒಂದು ಹಿಡಿಯನ್ನು ತಿರುಗಿಸಿದನೋ ಇಲ್ಲವೋ, ಅಗೋ! ಈ ಸಣ್ಣ ವ್ಯಕ್ತಿಗಳಲ್ಲಿ ಪ್ರತಿಯೊಬ್ಬರೂ ಅತ್ಯಂತ ವಿಚಿತ್ರವಾದ ಕಾರ್ಯಚಟುವಟಿಕೆಯನ್ನು ಪ್ರಾರಂಭಿಸುತ್ತಿದ್ದರು; ಚಮ್ಮಾರನು ಒಂದು ಜೋಡುಹಿಡಿದು ಕೆಲಸಕ್ಕೆ ತೊಡಗುತ್ತಿದ್ದನು; ಕಮ್ಮಾರನು ಕಬ್ಬಿಣವನ್ನು ಸುತ್ತಿಗೆಯಿಂದ ಬಡಿಯುತ್ತಿದ್ದನು; ಸಿಪಾಯಿ ತನ್ನ ಮಿರುಗುವ ಕತ್ತಿಯನ್ನು ಎತ್ತುತ್ತಿದ್ದನು; ಮಹಿಳೆ ತನ್ನ ಬೀಸಣಿಗೆಯಿಂದ ಸುಳಿಗಾಳಿಯನ್ನು ಸುಳಿಸುತ್ತಿದ್ದಳು; ಆನಂದಗೊಂಡಿದ್ದ ಕುಡುಕನು ತನ್ನ ಶೀಸೆಯನ್ನೆತ್ತಿ ಹೀರುತ್ತಿದ್ದನು; ವಿದ್ವಾಂಸನೊಬ್ಬನು ಜ್ಞಾನದಾಹದ ಉತ್ಸುಕತೆಯಿಂದ ತನ್ನ ಪುಸ್ತಕವನ್ನು ತೆರೆದು ತನ್ನ ತಲೆಯನ್ನು ಪುಟದುದ್ದಕ್ಕೂ ಅತ್ತಿಂದಿತ್ತ ಆಡಿಸುತ್ತಿದ್ದು; ಗೊಲ್ಲಿತಿ ತನ್ನ ಹಸುವನ್ನು ಒಂದು ತೊಟ್ಟೂ ಬಿಡದಂತೆ ಕರೆದು ಬಿಡುತ್ತಿದ್ದಳು; ಮತ್ತು ಜಿಪುಣನೊಬ್ಬನು ತನ್ನ ಕಬ್ಬಿಣದ ಪೆಟ್ಟಿಗೆಗೆ ಚಿನ್ನದ ನಾಣ್ಯವನ್ನು ಎಣಿಸಿ ಹಾಕುತ್ತಿದ್ದನು– ಒಂದೇ ಸಲ ಹಿಡಿಯನ್ನು ತಿರುಗಿಸಿದ ಮಾತ್ರಕ್ಕೇ ಇಷ್ಟೆಲ್ಲಾ ನಡೆಯುತ್ತಿತ್ತು.

ಆದರೆ, ಪಿಶಾಚದ ಮರಿಯಂತಿದ್ದ ಆ ನಿಡುಬಾಲದ ಕೋತಿಯನ್ನು ಕೆಲಹೊತ್ತು ನೋಡಿದ ಮೇಲೆ, ಅದರ ಚೇತನಾತ್ಮಕ ಹಾಗೂ ಶಾರೀರಕವಾದ ಭಯಂಕರ ವಿಕಾರವನ್ನು ಕಂಡು ಅತ್ಯಂತ ಚಕಿತನಾದನು; ಅದರ ಪರಿಣಾಮವಾಗಿ ಅವನು ನಿಜವಾಗಿಯೂ ಕಂಬನಿ ಸುರಿಸತೊಡಗಿದನು; ಇದೊಂದು ದೌರ್ಬಲ್ಯ; ಸೂಕ್ಷ್ಮವಾದ ಕೆಲವು ಸಹಜ ಶಕ್ತಿಗಳನ್ನು ಮಾತ್ರ ಹೊಂದಿದ್ದು, ಕ್ರೂರವೂ ಅಗಾಧವೂ ರುದ್ರಗಂಭಿರವೂ ಆದ ನಗೆಯ ಸಾಮರ್ಥ್ಯವನ್ನು ಹೊಂದಿಲ್ಲದಿರುವವರು, ಅತ್ಯಂತ ನೀಚವಾದ ಕೀಳಾದ ಬದುಕಿನ ಒಂದು ನೋಟವು ತಮ್ಮ ಕಣ್ಮುಂದೆ ಗೋಚರವಾದಾಗ ಆ ದೌರ್ಬಲ್ಯದಿಂದ ತಪ್ಪಿಸಿಕೊಳ್ಳಲಾರರು.

ಪಿನ್ಚನ್ ಬೀದಿ ಕೆಲವು ವೇಳೆ ಮೇಲೆ ಹೇಳಿದವಕ್ಕಿಂತ ಹೆಚ್ಚು ಪ್ರಭಾವಶಾಲಿಯಾದ, ಆಡಂಬರವಾಗಿ ಕಾಣುವ ನೋಟಗಳಿಂದ ಕಳೆಗೂಡುತ್ತಿತ್ತು; ಆ ನೋಟಗಳೊಂದಿಗೆ ಜನಜಂಗುಳಿಯೂ ಸಾಗಿಬರುತ್ತಿತ್ತು. ಆ ಮಾನವಸಮುದ್ರದ ಅಬ್ಬರ ಆರ್ಭಟಗಳು ಬಲವಾಗಿ ಕ್ಲಿಫರ್ಡನ ಕಿವಿ ಮುಟ್ಟಿದಾಗ, ಒಂದು ಪ್ರಬಲವಾದ ಪ್ರೇರಣೆ ಅವನನ್ನು ಆಕ್ರಮಿಸುತ್ತಿತ್ತು; ಆದರೆ ಪ್ರಪಂಚದೊಂದಿಗೆ ವ್ಯಕ್ತಿಗತ ಸಂಪರ್ಕವಿಟ್ಟುಕೊಳ್ಳುವ ಆಲೋಚನೆಯ ಬಗೆಗೆ ಮೈಯನ್ನು ಝುಲ್ಲೆನ್ನಿಸುವ ಹೇವರಿಕೆಯೂ ಇರುತ್ತಿತ್ತು ಆ ಪ್ರೇರಣೆಯೊಂದಿಗೆ, ಒಂದು ಇದು ಸ್ಪಷ್ಟವಾಯಿತು; ನೂರಾರು ಮೆರೆಯುವ ಬಾವುಟಗಳು, ತಮಟೆಗಳು, ರಣಕೊಳಲುಗಳು, ಕಹಳೆಗಳು, ಝಾಲರಿಗಳು, ಇವು ಕಟ್ಟಡಗಳ ಸಾಲುಗಳ ನಡುವೆ ಮೊಳಗುತ್ತಿರಲು ರಾಜಕೀಯ ಮೆರವಣಿಗೆಯೊಂದು ಊರಲ್ಲೆಲ್ಲಾ ಸಾಗಿಹೋಯಿತು; ಹಾಗೆ ಸಾಗುವಾಗ, ದಾರಿಯ ಉದ್ದಕ್ಕೂ ಹೆಜ್ಜೆಗಳನ್ನು ಗಟ್ಟಿಸುತ್ತಾ, ಆಗೊಮ್ಮೆ ಈಗೊಮ್ಮೆ ಹುಯಿಲೆಬ್ಬಿಸುತ್ತಾ, ಸಾಧಾರಣವಾಗಿ ಶಾಂತವಾಗಿರುತ್ತಿದ್ದ ಏಳು ಇಪ್ಪಾರಿನ ಮನೆಯ ಮುಂದೆ ನಡೆದುಹೋಯಿತು. ನೋಡತಕ್ಕ ನೋಟ ಎಂಬ ದೃಷ್ಟಿಯಿಂದ ಮಾತ್ರ ಹೇಳುವುದಾದರೆ, ಕಿರಿದಗಲದ ಬೀದಿಗಳಲ್ಲಿ ಹಾದುಹೋಗುವಾಗ ನೋಡುವ ಮೆರವಣಿಗೆಯಲ್ಲಿ ಚಿತ್ರ ರಮ್ಯವಾದ ಲಕ್ಷಣಗಳು ಏನೇನೂ ಇರುವುದಿಲ್ಲ. ಮೆರವಣಿಗೆಯಲ್ಲಿರುವ ಪ್ರತಿಯೊಬ್ಬ ಮನುಷ್ಯನ ಮುಖದ ಬೇಸರಗೊಳಿಸುವ ಸರ್ವಸಾಧಾರಣತೆಯನ್ನೂ ಅದರಲ್ಲಿನ ಬೆವರು ಮತ್ತು ಬಳಲಿದ ಬಿಂಕವನ್ನೂ, ಅವನ ಷರಾಯಿಗಳನ್ನೂ ಕತ್ತರಿಸಿರುವ ರೀತಿಯನ್ನೂ, ಅವನ ಷರಟಿನ ಕೊರಳುಪಟ್ಟಿಯ ಗರಿಮುರಿಯಾಗಿದೆಯೊ ಇಲ್ಲವೆ ಸಡಿಲ ಬಿದ್ದಿದೆಯೆ ಎಂಬುದನ್ನೂ, ಅವನ ಕರಿಯ ಅಂಗಿಯ ಬೆನ್ನಮೇಲಿನ ಧೂಳನ್ನೂ ಪ್ರೇಕ್ಷಕನು ಬೇರ್ಪಡಿಸಿ ತಿಳಿಯಬಲ್ಲವನಾಗಿರುವಾಗ, ಅದೆಲ್ಲವನ್ನೂ ಅವಿವೇಕಿಯ ಆಟವೆಂದು

ಮೋರೆಯನ್ನು ತಿರುಗಿಸುತ್ತಿತ್ತು. ಅಲ್ಲದೆ, ಪ್ರತಿಕ್ಷಣವೂ ಅದು ತನ್ನ ಹೈಲ್ಯಾಂಡಿನವರ ಸ್ಕಾಚ್ ಟೋಪಿಯನ್ನು ಮೇಲಕ್ಕೆತ್ತಿ, ಒಂದು ಹೆಜ್ಜೆಯನ್ನು ಹಿಂದಕ್ಕೆ ಸರಿಸಿ ನಮಸ್ಕಾರಮಾಡುತ್ತಿತ್ತು. ಇದೂ ಅಲ್ಲದೆ, ಅದು ಕೆಲವು ವೇಳೆ ತನ್ನ ಸಣ್ಣ ಕಪ್ಪು ಅಂಗೈಯನ್ನು ನೀಡಿ, ಪ್ರತಿಯೊಬ್ಬರಿಗೂ ಖುದ್ದಾಗಿ ಪ್ರಾರ್ಥನೆ ಸಲ್ಲಿಸುತ್ತಿತ್ತು; ಮತ್ತು ಯಾರ ಜೇಬಿನಲ್ಲಿಯೇ ಆಗಲಿ ಇದ್ದಿರಬಹುದಾದ ಅನ್ಯಾಯದ ಸಂಪಾದನೆಯ ಹಣದ ಮೇಲೆ ತನಗಿದ್ದ ಅತ್ಯಾಶೆಯನ್ನು ಬೇರೆಯ ರೀತಿಯಲ್ಲಿಯೂ ಸೂಚಿಸುತ್ತಿತ್ತು. ಕೋತಿಯ ಬತ್ತಿದ ಮುಖದ ಹೀನ ದೀನವಾದರೂ ಪುರುಷಲಕ್ಷಣದ ಭಾವ; ಎಷ್ಟೇ ತುಚ್ಛವಾದ ಪ್ರಯೋಜನವಾಗಿರಲಿ, ಅದನ್ನು ತುಡುಕಲು ಸಿದ್ಧ ಎಂದು ತೋರಿಸುವ ಕುಯುಕ್ತಿಯ ತುಡುಕುನೋಟ: ಅದರ ಭಾರಿ ಬಾಲ (ಅಂಗಿಯ ಕೆಳಗಡೆ ಮರ್ಯಾದೆಯಿಂದ ಮುಚ್ಚಿಟ್ಟುಕೊಳ್ಳಲಾಗದಷ್ಟು ಭಾರಿಯಾದ ಬಾಲ); ಮತ್ತು ಅದು ಸೂಚಿಸುತ್ತಿದ್ದ ಕುಚೇಷ್ಟೆಯ ದುಷ್ಟಸ್ವಭಾವ– ಸಂಗ್ರಹವಾಗಿ, ಈ ಲಕ್ಷಣಗಳ ಈ ಲಕ್ಷಣಗಳ ಈ ಕೋತಿಯನ್ನು ಅದು ಹೇಗಿದೆಯೋ ಹಾಗೆ ಪರಿಗಣಿಸಿದರೆ ಸಾಕು, ಹಣದ ಪ್ರೇಮದ ಅತ್ಯಂತ ಕೀಳಾದ ರೂಪವನ್ನು ಸಂಕೇತಿಸುವ, ತಾಮ್ರದ ನಾಣ್ಯದ ಧನದೇವತೆಯ ವಿಗ್ರಹವನ್ನು ನೋಡಲು ನೀವು ಆ ಕೋತಿಗಿಂತ ಮೇಲಾದ ಮಾದರಿಯನ್ನು ಅಪೇಕ್ಷಿಸಲಾರಿರಿ. ಅಲ್ಲದೆ, ಈ ದುರಾಶೆಯ ಪುಟ್ಟ ಪಿಶಾಚಿಯನ್ನು ತೃಪ್ತಿಪಡಿಸುವ ಬೇರೆಯ ಸಾಧ್ಯತೆ ಯಾವುದೂ ಇರಲಿಲ್ಲ. ಫೀಬೆಯೇನೋ ಹಿಡಿತುಂಬ ಸೆಂಟ್‌ನಾಣ್ಯಗಳನ್ನು ಕೆಳಕ್ಕೆ ಎರಚಿದಳು; ಕೋತಿ ಅವುಗಳನ್ನು ಸಂತೋಷರಹಿತ ಉತ್ಸುಕತೆಯಿಂದ ಆರಿಸಿಕೊಂಡು, ಸುರಕ್ಷಿತವಾಗಿಡಲು ಅವನ್ನು ಇಟ್ಯಾಲಿಯನ್ನನ ವಶಕ್ಕೊಪ್ಪಿಸಿ, ಇನ್ನೂ ಹೆಚ್ಚಿನ ಹಣವನ್ನು ಬೇಡುವ ಮೂಕಾಭಿನಯ ಪ್ರದರ್ಶನ ಪರಂಪರೆಯನ್ನು ಕೂಡಲೆ ಮತ್ತೆ ಪ್ರಾರಂಭಿಸಿತು.

ನಿಸ್ಸಂದೇಹವಾಗಿ ಅನೇಕಮಂದಿ ಹೊಸ ಇಂಗ್ಲೆಂಡಿನವರು– ಅಥವಾ ಅವರು ಯಾವ ನಾಡಿನವರೇ ಆಗಲಿ, ಸಂದರ್ಭ ಹಾಗೆಯೆ ಇರುವುದು– ಅಲ್ಲಿಯೆ ಹಾದು ಹೋದರು; ತಮ್ಮ ಸ್ವಂತ ನೈತಿಕಸ್ಥಿತಿ ಇಲ್ಲಿ ಹೇಗೆ ದೃಷ್ಟಾಂತಗೊಂಡಿತ್ತು ಎಂಬುದನ್ನು ಕಲ್ಪನೆಗೆ ತಂದುಕೊಳ್ಳದೆಯೇ ಅವರು ಕೋತಿಯ ಕಡೆಗೆ ಒಮ್ಮೆ ನೋಟವನ್ನು ಬೀರಿ, ಮುಂದಕ್ಕೆ ಹೊರಟು ಹೋದರು. ಕ್ಲಿಫರ್ಡನೇನೋ ಇನ್ನೊಂದು ವರ್ಗಕ್ಕೆ ಸೇರಿದ್ದ ಪ್ರಾಣಿಯಾಗಿದ್ದನು. ಅವನು ಸಂಗೀತದಲ್ಲಿ ಶಿಶುಸಹಜವಾದ ನಲಿವನ್ನು ಹೊಂದಿದ್ದನು; ಹಾಗೂ ಅದು ಚಲಿಸುವಂತೆ ಮಾಡಿದ್ದ ಬೊಂಬೆಗಳನ್ನು ನೋಡಿ ಮುಗುಳುನಗೆಯನ್ನೂ ನಕ್ಕಿದ್ದನು.

ತೇಲಾಡುತ್ತಿದ್ದುವು; ಅವನು ಇದುವರೆಗೆ ಮಾನವಕುಲದಿಂದ ದೂರವಾಗಿದ್ದ ಒಬ್ಬಂಟಿಗ ವ್ಯಕ್ತಿ; ಆದರೆ ಈಗ ಒಂದು ಅದಮ್ಯವಾದ ಸಹಜಪ್ರೇರಣೆ ಆವೇಶಬಂದಂತೆ ಅವನನ್ನು ಆವರಿಸಿ, ತಾನು ಮತ್ತೆ ಒಬ್ಬ ಮನುಷ್ಯನಾಗಿದ್ದೇನೆ ಎಂಬ ಭಾವನೆ ಅವನಲ್ಲುಂಟಾಗಿತ್ತು. ಒಂದು ವೇಳೆ ಕ್ಲಿಫರ್ಡನೇನಾದರೂ ಉಪ್ಪರಿಗೆಯ ಮೊಗಸಾಲೆಯನ್ನು ತಲುಪಿಬಿಟ್ಟಿದ್ದರೆ, ಅವನು ಬಹುಶಃ ಬೀದಿಗೆ ನೆಗೆದುಬಿಡುತ್ತಿದ್ದನು; ಆದರೆ, ಯಾವ ಪ್ರಪಾತದಿಂದ ಧುಮುಕಿ ಬೀಳಲು ಭೀತನಾದವನು ಹಿಂದೆಗೆಯುತ್ತಾನೆಯೋ ಅಲ್ಲಿಂದಲೇ ಬೀಳುವಂತೆ ಪ್ರಚೋದಿಸುವ ಆ ವಿಚಿತ್ರ ರೀತಿಯ ಭೀತಿಗೆ ಒಳಗಾಗಿಯೋ, ಇಲ್ಲವೇ ಮಾನವಕೋಟಿಯ ಮಹಾಕೇಂದ್ರದ ಕಡೆಗೆ ಸೆಳೆಯುವ ಸಹಜ ಕಾಂತಶಕ್ತಿಗೆ ಒಳಗಾಗಿಯೋ, ಅಂತೂ ಯಾವ ಕಾರಣದಿಂದ ಅವನು ಬೀಳುವುದರಲ್ಲಿದ್ದನು ಎಂಬುದನ್ನು ನಿಶ್ಚಯಿಸುವುದು ಸುಲಭವಲ್ಲ. ಎರಡು ವಿಧವಾದ ಪ್ರೇರಕಶಕ್ತಿಗಳೂ ಅವನ ಮೇಲೆ ಪರಿಣಾಮಬೀರಿದ್ದಿರಬಹುದು.

ಆದರೆ ಅವನ ಜೊತೆಯಲ್ಲಿದ್ದವರು ಅವನ ಅಂಗಚಲನೆಯ ಸನ್ನೆಯಿಂದ ಭೀತರಾದರು; ತನಗೆ ಇಷ್ಟವಿಲ್ಲದಿದ್ದರೂ ಬಲವಂತಕ್ಕೆ ಒಳಗಾಗಿ ಅವಸರವಸರವಾಗಿ ಹೋಗುವವನಹಾಗಿತ್ತು ಅವನ ಅಂಗಭಂಗಿ; ಅವನ ಬಟ್ಟೆಯನ್ನು ಹಿಡಿದುಕೊಂಡು, ಅವರು ಅವನನ್ನು ಹಿಂದಕ್ಕೆ ಹಿಡಿದೆಳೆದರು. ಹೆಪ್ಸಿಬಾ ಕಿರಿಚಿಕೊಂಡಳು. ಯಾವ ಬಗೆಯ ಅತಿರೇಕವನ್ನು ಕಂಡರೂ ಫೀಬೆಗೆ ಮಹಾ ಭೀತಿ; ಅವಳು ಬಿಕ್ಕಿಬಿಕ್ಕಿ ಅಳತೊಡಗಿದಳು.

"ಕ್ಲಿಫರ್ಡ್, ಕ್ಲಿಫರ್ಡ್! ನಿನಗೇನು ಹುಚ್ಚುಗಿಚ್ಚೋ?" ಎಂದು ಕೂಗಿಕೊಂಡಳು ಅವನ ಸಹೋದರಿ.

"ನನಗೆ ಏನೂ ತಿಳಿಯದು, ಹೆಪ್ಸಿಬಾ" ಎಂದು ನೀಳವಾಗಿ ಉಸಿರೆಳೆದುಕೊಂಡು ನುಡಿದ ಕ್ಲಿಫರ್ಡ್: "ಹೆದರಿಕೊಳ್ಳಬೇಡ– ಈಗ ಎಲ್ಲಾ ಮುಗಿದ ಹಾಗೆ, ಇನ್ನು ಭಯವಿಲ್ಲ– ನಾನೇದರೂ ಕೆಳಕ್ಕೆ ಧುಮುಕಿ ಬದುಕಿಬಿಟ್ಟಿದ್ದರೆ, ನಾನು ಬೇರೊಬ್ಬ ಮನುಷ್ಯನಾಗಿಬಿಡುತ್ತಿದ್ದೆ ಎಂದು ನನಗೆ ತೋರುತ್ತೆ!"

ಯಾವುದೋ ಒಂದು ಅರ್ಥದಲ್ಲಿ ಕ್ಲಿಫರ್ಡ್ ಹೇಳಿದ್ದು ಸರಿಯಾಗಿದ್ದಿರಲು ಸಾಧ್ಯ. ಅವನಿಗೊಂದು ಮಾನಸಿಕ ಆಘಾತ ಅಗತ್ಯವಾಗಿತ್ತು; ಅಥವಾ ಅವನು ಬಹುಶಃ ಮಾನವಸಾಗರದಾಳದೊಳಕ್ಕೆ ಧುಮುಕಿ, ಅದರ ತಳಕ್ಕೆ ಮುಳುಗಿ, ಅದರ ಅಗಾಧತೆಯಿಂದ ಆಚ್ಛಾದಿತನಾಗಿ, ತರುವಾಯ ಸಮಾಹಿತಮನಸ್ಕನಾಗಿ ನವಚೈತನ್ಯಪೂರ್ಣನಾಗಿ ತನ್ನ ಪಾಲಿಗೂ ಲೋಕದ ಪಾಲಿಗೂ ಉಳಿದು

ಅವನು ಭಾವಿಸುತ್ತಾನೆ. ಮೆರೆಮಣಿಗೆಯು ಭವ್ಯವೆನಿಸಬೇಕಾದರೆ, ಅದು ವಿಶಾಲವಾದ ಬಯಲಿನ ಮಧ್ಯಭಾಗದಲ್ಲಿಯೋ ಇಲ್ಲವೆ ನಗರವೊಂದರ ಘನವಾದ ಸಾರ್ವಜನಿಕ ಚೌಕದಲ್ಲಿಯೋ ತನ್ನ ಪ್ರತಿಯೊಂದು ಭಾಗವೂ ಕಾಣಿಸುವ ಹಾಗೆ ನಿಧಾನವಾಗಿ ಉದ್ದಕ್ಕೆ ಸಾಗಿಹೋಗುತ್ತಿರುವಾಗ, ಒಂದು ಆಯಕಟ್ಟಾದ ಸ್ಥಳದಿಂದ ಅದನ್ನು ನೋಡಬೇಕು; ಏಕೆಂದರೆ, ದೂರವಿರುವ ಕಾರಣ ಆಗ ಅದು ತನ್ನ ಅಂಗಗಳಾದ ಎಲ್ಲ ಕ್ಷುಲ್ಲಕ ವ್ಯಕ್ತಿಗಳನ್ನೂ ಬದುಕಿನ ಒಂದು ದೊಡ್ಡ ಮೊತ್ತವನ್ನಾಗಿ– ಒಂದು ಮಹಾಜೀವನವನ್ನಾಗಿ– ಸಮರೂಪದ ಒಂದು ಮಹಾಚೈತನ್ಯವನ್ನು ಪ್ರಾಣಾಧಾರವಾಗಿ ಉಳ್ಳ ಮಾನವವರ್ಗದ ಒಂದು ಸಂಘಟಿತ ಶರೀರವನ್ನಾಗಿ ಕರಗಿಸಿಬಿಡುತ್ತದೆ. ಆದರೆ, ಇದಕ್ಕೆ ಪ್ರತಿಯಾಗಿ, ಸುಲಭವಾಗಿ ವನ್ಯಪ್ರಭಾವಕ್ಕೆ ಒಳಗಾಗುವ ಒಬ್ಬ ವ್ಯಕ್ತಿಯು ಇಂಥ ಒಂದು ಮೆರೆವಣಿಗೆಯ ಅಂಚಿನಲ್ಲಿ ನಿಂತು ಅದನ್ನು ಜೀವನದ ಒಂದು ಮಹಾನದಿಯಾಗಿ ಭಾವಿಸಿ, ಅದನ್ನು ಅಂಶಅಂಶವಾಗಿಯಲ್ಲದೆ ಒಟ್ಟಿನಲ್ಲಿ ಒಂದು ಮೊತ್ತವಾಗಿ ನೋಡುವನೆಂದು ಇಟ್ಟುಕೊಳ್ಳೋಣ; ಆ ನದಿಯ ಉಬ್ಬರ ಘನ, ಅದರ ಆಂತರ್ಯ ರಹಸ್ಯಮಯವಾಗಿದ್ದು ಘೋರಕರಾಳ; ಅದು ತನ್ನ ಅಂತರಾಳದಿಂದ ಸಮಾನಧರ್ಮದ ಅವನ ಅಂತರಾಳವನ್ನು ಕೂಗಿ ಕರೆಯುತ್ತದೆ ಎಂದುಕೊಳ್ಳೋಣ; ಆಗ ಅಂತು ಏರ್ಪಟ್ಟ ಸಂಪರ್ಕವು ಪರಿಣಾಮವನ್ನು ಹೆಚ್ಚಿಸುವುದು. ಅದು ಅವನನ್ನು ಎಷ್ಟು ಮೋಹಮುಗ್ಧನನ್ನಾಗಿ ಮಾಡಬಹುದು ಎಂದರೆ, ಮಾನವೀಯ ಸಹಾನುಭೂತಿಗಳ ಉಕ್ಕಿ ಹರಿಯುವ ಪ್ರವಾಹದಲ್ಲಿ ಮುಳುಗದೆ ಇರಲಾರನು.

ಕ್ಲಿಫರ್ಡನ ವಿಷಯದಲ್ಲಿ ಇದು ದಿಟವಾಯಿತು. ಅವನು ತತ್ತರಿಸಿ ಹೋದನು, ವಿವರ್ಣನಾದನು; ಕಿಟಕಿಯ ಬಳಿ ತನ್ನ ಬಳಿ ಇದ್ದ ಹೆಪ್ಸಿಬಾ ಮತ್ತು ಫೀಬೆ– ಇವರನ್ನು ಬೇಡಿಕೊಳ್ಳುವ ರೀತಿಯಲ್ಲಿ ನೋಡಿದನು. ಅವರಿಗೆ ಅವನ ಮನೋಭಾವ ಏನೂ ಅರ್ಥವಾಗಲಿಲ್ಲ; ಅಭ್ಯಾಸವಾಗಿದಲ್ಲದ ಗೊಂದಲದಿಂದ ಅವನ ನೆಮ್ಮದಿಗೆ ಸ್ವಲ್ಪ ಭಂಗಬಂದಿದೆಯೆಂದು ಮಾತ್ರ ಎಣಿಸಿದರು. ಕಟ್ಟಕಡೆಗೆ, ಕೈಕಾಲು ನಡುಗುತ್ತಿರಲು, ಅವನು ಮೇಲಕ್ಕೆದ್ದು ಕಿಟಕಿಯ ಚೌಕಟ್ಟಿನ ಅಡಿಭಾಗದಮೇಲೆ ಕಾಲಿಟ್ಟು, ಇನ್ನೊಂದು ಕ್ಷಣ ಮಾತ್ರದಲ್ಲಿ ರಕ್ಷಣೆಯಿಲ್ಲದ ಉಪ್ಪರಿಗೆಯ ಮೊಗಸಾಲೆಯಲ್ಲಿ ಇರುತ್ತಿದ್ದನು. ಆ ಸ್ಥಿತಿಯಲ್ಲಿ, ಇಡಿಯ ಮೆರೆವಣಿಗೆಯ ಜನ ಅವನನ್ನು ನೋಡಬಹುದಾಗಿತ್ತು; ಅವನ ತೆಳ್ಳನೆಯ ಆಕೃತಿ ಹುಚ್ಚು ಹುಚ್ಚಾಗಿ ಕಾಣಿಸುತ್ತಿತ್ತು; ಮೆರವಣಿಗೆಯವರ ಬಾವುಟಗಳನ್ನು ಹಾರಾಡಿಸುತ್ತಿದ್ದ ಗಾಳಿಯಲ್ಲಿಯೇ ಅವನ ನರೆಗೂದಲ ಸುರುಳಿಗಳೂ

ನಾದಸ್ವರಘೋಷಣೆಗಳನ್ನು ಸುತ್ತಲೂ ಬೀರುತ್ತಾ ಘಂಟೆಗಳು ಇಡಿಯ ನಗರದಮೇಲೆ ಪುಣ್ಯನಾದವನ್ನು ವರ್ಷಿಸಿದುವು. ದೇವರ ಮಧುರತಮವಾದ ಕೋಮಲತಮವಾದ ಸೂರ್ಯ–ಕಾಂತಿಯಿಂದ ಬೆರೆತ ವಾಯು, ಮಾನವಕೋಟಿ ತಮ್ಮ ಹೃದಯದೊಳಕ್ಕೆ ಶ್ವಾಸಮೂಲಕ ಎಳೆದುಕೊಂಡು, ಮತ್ತೆ ಅದನ್ನು ಸ್ತೋತ್ರಪಠನರೂಪದಲ್ಲಿ ಹೊರಬಿಡಲು ಯೋಗ್ಯವಾಗಿತ್ತು.

ನೆರೆಹೊರೆಯವರು ಬೀದಿಗೆ ಹೊರಬರುತ್ತಿದ್ದುದನ್ನು ಗಮನಿಸುತ್ತಾ, ಕ್ಲಿಫರ್ಡ್ ಹೆಪ್ಸಿಬಾಳೊಂದಿಗೆ ಕಿಟಕಿಯಬಳಿ ಕುಳಿತಿದ್ದನು. ಇತರ ದಿನಗಳಂದು ಅವರೆಲ್ಲರೂ ಅದೆಷ್ಟೇ ಅಧಾರ್ಮಿಕವಾಗಿರಲಿ, ಸಬ್ಬತು ದಿನದ ಪ್ರಭಾವ ಅವರನ್ನು ಪರಿವರ್ತನೆಗೊಳಿಸುತ್ತಿತ್ತು; ಅದರ ಪರಿಣಾಮವಾಗಿ, ಅವರ ಉಡುಪುತೊಡಪೆಲ್ಲ– ಸಾವಿರಸಲ ಧೂಳು ಒರಸಿದ, ಮುದುಕನೊಬ್ಬನ ಸೊಗಸಾದ ಅಂಗಿಯಾಗಿರಲಿ, ಅಥವಾ ಅವನ ತಾಯಿ ಹಿಂದಿನ ದಿನ ತಾನೆ ಹೊಲಿದು ಮುಗಿಸಿ, ಚಿಕ್ಕ ಹುಡುಗನ ಮೊದಲಸಲದ ದಗಲೆ ಅಂಗಿ ಷರಾಯಿಯಾಗಿರಲಿ– ಅವೆಲ್ಲ ಕ್ರಿಸ್ತನು ಸ್ವರ್ಗಾರೋಹಣದ ದಿನ ಧರಿಸುವ ವಸ್ತ್ರದ ಗುಣವನ್ನು ಸ್ವಲ್ಪ ಮಟ್ಟಿಗೆ ತಳೆದಿದ್ದುವು. ಅದೇ ಪ್ರಕಾರ, ಫೀಬೆಕೂಡ, ತನ್ನ ಸಣ್ಣ ಹಸರು ಕೊಡೆಯನ್ನು ಬಿಚ್ಚಿ ಹಿಡಿದುಕೊಂಡು ಪುರಾತನ ಭವನದ ಬಾಗಿಲಿನಿಂದ ಹೊರಬಂದಳು; ಬರುವಾಗ ಕಮಾನು ಕಿಟಕಿಯ ಬಳಿ ಕಂಡ ಮುಖಗಳ ಕಡೆಗೆ ಬೀಳ್ಕೊಳ್ಳುವ ದಯಾಪೂರ್ಣವಾದ ನಸುನೋಟವನ್ನೂ ನಸುನಗೆಯನ್ನೂ ಮೇಲಕ್ಕೆ ಬೀರಿದಳು. ಅವಳ ನೋಟದಲ್ಲಿ ಸುಪರಿಚಿತ ಸಂತೋಷಭಾವವೂ, ನೀವು ಸಲಿಗೆಯಿಂದ ಕಂಡರೂ ಎಂದಿನಂತೆಯೆ ಗೌರವಿಸಬಹುದಾದ ಪವಿತ್ರಭಾವವೂ ಇದ್ದುವು. ಅತ್ಯಂತ ಸರಳ ಸೌಂದರ್ಯವುಳ್ಳ ತಾಯ್ನುಡಿಯಲ್ಲಿ ಸಲ್ಲಿಸಿದ ಪ್ರಾರ್ಥನೆಯಂತಿದ್ದಳು ಅವಳು. ಅದೂ ಅಲ್ಲದೆ, ಹೊಚ್ಚ ಹೊಸತಾಗಿದ್ದಳು ಫೀಬೆ; ತನ್ನ ಉಡಿಗೆತೊಡಿಗೆಯಲ್ಲಿ ನಾಜೂಕಾಗಿಯೂ ಮಧುರವಾಗಿಯೂ ಕಾಣುತ್ತಿದ್ದಳು; ಅವಳ ಮೇಲುಹೊದಿಕೆ, ಅವಳ ಸಣ್ಣ ಹುಲ್ಲುಹೆಣಿಗೆಯ ಟೋಪಿ, ಅವಳ ಚಿಕ್ಕ ಕರವಸ್ತ್ರ, ಅವಳ ಹಿಮಧವಳವಾದ ಕಾಲುಚೀಲಗಳು– ಅವಳು ಧರಿಸಿದ್ದ ಇವುಗಳಲ್ಲಿ ಯಾವುದೂ ಅವಳು ಹಿಂದೆಂದೂ ಧರಿಸಿಯೇ ಇರಲಿಲ್ಲವೇನೋ ಎನ್ನುವಂತಿತ್ತು; ಅಥವಾ, ಒಂದುವೇಳೆ ಧರಿಸಿದ್ದರೂ, ಆ ಕಾರಣದಿಂದಲೇ ಹೆಚ್ಚು ಹೊಸತಾಗಿದ್ದಂತೆಯೂ, ಗುಲಾಬಿಮೊಗ್ಗುಗಳ ನಡುವೆ ಇಟ್ಟಿದ್ದರೆ ಹೇಗೋ ಹಾಗೆ ಸುವಾಸನೆಯಿಂದ ಕೂಡಿಯೂ ಇದ್ದಿತು.

ಆ ಬಾಲೆ ಹೆಪ್ಸಿಬಾ ಮತ್ತು ಕ್ಲಿಫರ್ಡ್ ಇವರ ಕಡೆಗೆ ಕೈಬೀಸಿ ಬೀಳ್ಕೊಂಡು, ಬೀದಿಯಲ್ಲಿ ಮುಂದೆ ನಡೆದುಹೋದಳು; ಪ್ರೇಮಮಯಿಯೂ

ಬರಬೇಕಾಗಿತ್ತು. ಅದೂ ಇಲ್ಲವೋ, ಬಹುಶಃ ಅವನಿಗೆ ಅಗತ್ಯವಾಗಿದ್ದದ್ದು, ಕಟ್ಟ ಕಡೆಯ ಮಹಾಪರಿಹಾರ– ಮರಣ! ಅದಕ್ಕಿಂತ ಕಡಮೆಯದಲ್ಲ.

ಮಾನವವರ್ಗದೊಂದಿಗೆ ಅವನು ಹೊಂದಿದ್ದ ಭ್ರಾತೃಭಾವದ ಸಂಬಂಧ ಕಡಿದುಹೋಗಿದ್ದಿತಷ್ಟೆ; ಅದನ್ನು ಮತ್ತೆ ಹೊಂದಬೇಕೆಂಬ ತೀವ್ರಾಪೇಕ್ಷೆ ಇನ್ನೂ ಸ್ವಲ್ಪ ಸೌಮ್ಯರೂಪದಲ್ಲಿ ಕೆಲವುವೇಳೆ ವ್ಯಕ್ತಪಡುತ್ತಿತ್ತು; ಅವನ ಆ ಅಪೇಕ್ಷೆಗಿಂತಲೂ ಆಳವಾಗಿ ನೆಲಸಿದ್ದ ಧಾರ್ಮಿಕಭಾವನೆಯಿಂದ ಅದು ಸುಂದರವಾಗಿ ಪರಿಣಮಿಸಿತ್ತು. ಈಗ ಚಿತ್ರಿಸಲಿರುವ ಘಟನೆಯಲ್ಲಿ, ತನ್ನ ಬಗೆಗೆ ದೇವರು ತಳೆದಿದ್ದ ಜಾಗರೂಕತೆ ಮತ್ತು ಪ್ರೇಮ ಎಂಥದೆಂಬುದನ್ನು ಹೃದಯಪೂರ್ವಕವಾಗಿ ಕ್ಲಿಫರ್ಡ್ ಅರಿತಿದ್ದನೆಂಬುದು ಇದೀಗ ಚಿತ್ರಿಸಲಿರುವ ಘಟನೆಯಲ್ಲಿ ಕಂಡುಬರುತ್ತದೆ. ಕ್ಲಿಫರ್ಡನೊಬ್ಬ ಎಲ್ಲರೂ ಕೈಬಿಟ್ಟ ಬಡಪ್ರಾಣಿ; ತನ್ನನ್ನು ಪಕ್ಕಕ್ಕೆ ಎಸೆದು, ಮರೆತುಬಿಟ್ಟು, ಯಾವನೋ ಒಬ್ಬ ರಕ್ಕಸನ ದುಷ್ಟ ಕ್ರೀಡಾವಿಲಾಸದ ಆಟದ ವಸ್ತುವಾಗಿರಲು ತೊರೆದು ಬಿಟ್ಟಿದಾರೆ ಎಂದು ಕ್ಲಿಫರ್ಡ್ ಭಾವಿಸಿಕೊಂಡಿದ್ದನು; ಈ ರೀತಿ ಭಾವಿಸಿಕೊಂಡದ್ದಕ್ಕಾಗಿ ಯಾರನ್ನಾದರೂ ಕ್ಷಮಿಸಲು ಸಾಧ್ಯವಿದ್ದರೆ, ಕ್ಲಿಫರ್ಡನನ್ನೂ ಕ್ಷಮಿಸಬಹುದಾಗಿತ್ತು.

ಅಂದು 'ಸಬ್ಬತು' ಭಾನುವಾರದ ಪ್ರಾತಃಕಾಲ; ಪವಿತ್ರವಾತಾವರಣದಿಂದ ಕೂಡಿದ, ಪ್ರಕಾಶಮಾನವಾದ ಶಾಂತವಾದ ಸಬ್ಬತು ದಿನಗಳಲ್ಲಿ ಒಂದು; ಅಂದು ಸ್ವರ್ಗವು ಇಳೆಯ ಮುಖದಮೇಲೆ ಗಂಭೀರವಾದ ಮುಗುಳ್ನಗೆಯಾಗಿ ಗರಡಿಕೊಂಡಿದೆಯೋ ಏನೋ ಎನ್ನುವಂತೆ ಕಾಣುತ್ತದೆ; ಎಷ್ಟು ಗಂಭೀರವೋ ಅಷ್ಟೇ ಮಧುರ. ಅಂತಹ ಒಂದು ಸಬ್ಬತು ದಿನದ ಬೆಳಗ್ಗೆ, ನಾವು ಅದರ ಮಾಧ್ಯಮವಾಗಿರುವಷ್ಟು ಮಟ್ಟಿಗೆ ಪರಿಶುದ್ಧರಾಗಿರುವ ಪಕ್ಷಕ್ಕೆ, ನಾವು ನೆಲದ ಯಾವೆಡೆಯಲ್ಲಿಯೇ ನಿಂತಿರಲಿ, ಭೂಮಿಯ ನೈಸರ್ಗಿಕ ಆರಾಧನೆ ನಮ್ಮ ದೇಹಗಳ ಮೂಲಕ ಮೇಲಕ್ಕೇರುವುದರ ಅರಿವು ನಮಗಾಗಬೇಕು. ಚರ್ಚಿನ ಘಂಟೆಗಳೆಲ್ಲವೂ ವಿವಿಧ ಸ್ವರಗಳಲ್ಲಿ, ಆದರೆ ಎಲ್ಲವೂ ಸಾಮರಸ್ಯದಿಂದ, "ಇಂದು ಸಬ್ಬತು!– ಸಬ್ಬತು!– ಹೌದು, ಸಬ್ಬತು!"– ಎಂದು ಕೂಗಿ ಕರೆಯುತ್ತಿದ್ದುವು, ಒಂದಕ್ಕೊಂದು ಉತ್ತರ ಪ್ರತ್ಯುತ್ತರ ಕೊಡುತ್ತಿದ್ದುವು. ಈಗೊಮ್ಮೆ ಒಂದು ಘಂಟೆ ಒಂಟಿಯಾಗಿ, ಮತ್ತೊಮ್ಮೆ ಎಲ್ಲಘಂಟೆಗಳೂ ಒಟ್ಟಾಗಿ, ಈಗೊಮ್ಮೆ ನಿಧಾನವಾಗಿ ಇನ್ನೊಮ್ಮೆ ಗೆಲವುಗೂಡಿದ ನಲಿವಿನಿಂದ– "ಇಂದು ಸಬ್ಬತು!" ಎಂದು ಹುಮ್ಮಸ್ಸಿನಿಂದ ಘೋಷಿಸುತ್ತಾ, ಗಾಳಿಯಲ್ಲಿ ಲೀನವಾಗಿಹೋಗುವಂತೆಯೂ ಅದರ ತುಂಬ ಆ ಪವಿತ್ರ ಪದ ವ್ಯಾಪಿಸುವಂತೆಯೂ ತಮ್ಮ

ಇದ್ದುದರಲ್ಲಿ ಮೇಲಾದ ಹಳೆಯ ಮಾದರಿಯ ಉಡುಪುಧರಿಸಿ ಎಷ್ಟರಮಟ್ಟಿಗೆ ಯಥೋಚಿತವಾಗಿ ಸಿದ್ಧವಾಗಬಹುದೋ ಹಾಗೆ ಸಿದ್ಧರಾದರು; ಆ ಉಡುಪುಗಳನ್ನು ಗೂಟದಮೇಲೆ ನೇತುಹಾಕಿ, ಇಲ್ಲವೇ ಟ್ರಂಕುಗಳಲ್ಲಿ ಉಪಯೋಗಿಸದೆ ಇಟ್ಟು ಎಷ್ಟು ಕಾಲವಾಗಿತ್ತೋ ಏನೋ. ಅವು ತೇವಹಿಡಿದು ಮುಗ್ಗಲುವಾಸನೆ ಹೊಡೆಯುತ್ತಿದ್ದುವು. ಅವರಿಬ್ಬರೂ– ಕೃಶಳಾದ ಕಂದು ಹಳದಿಯ ಹೆಪ್ಸಿಬಾ ಮತ್ತು ಬಿಳಿಚಿಕೊಂಡು ಬಡಕಲಾದ ಮುಪ್ಪಡರಿದ ಕ್ಲಿಫರ್ಡ್!– ಒಟ್ಟಿಗೆ ಮಹಡಿಯ ಮೆಟ್ಟಲುಗಳನ್ನಿಳಿದರು. ಮುಂಬಾಗಿಲನ್ನು ಎಳೆದು ತೆರೆದು, ಹೊಸಿಲನ್ನು ದಾಟಿಹೋದರು; ಆಗ ಸಮಸ್ತ ಪ್ರಪಂಚದ ಎದುರಿನಲ್ಲಿ ತಾವು ನಿಂತಿರುವೆವೋ ಏನೋ, ಮಾನವಜಾತಿಯ ಮಹಾಕ್ರೂರದ್ರಷ್ಟಿ ತಮ್ಮ ಮೇಲೆ ಮಾತ್ರ ಬಿದ್ದಿದೆಯೋ ಏನೋ ಎಂದು ಅವರು ಭಾವಿಸಿಕೊಂಡರು. ದೈವದ ದೃಷ್ಟಿ ದೂರಕ್ಕೆ ಹಿಂಜರಿದಂತಾಗಿ, ಅವರಿಗೆ ಯಾವ ಒತ್ತಾಸೆಯನ್ನೂ ಕೊಡಲಿಲ್ಲ. ಬೆಚ್ಚನೆಯ ಬಿಸಿಲಿನಲ್ಲಿ ಬೀಸಿದ ಬೀದಿಯ ಗಾಳಿ ಅವರಿಗೆ ನಡುಕ ಹುಟ್ಟಿಸಿತು. ಇನ್ನು ಒಂದು ಹೆಜ್ಜೆಯನ್ನೂ ಮುಂದಿಡಲಾಗದೆ, ಅವರ ಹೃದಯಗಳು ಕಂಪಿಸಿದುವು.

ಕ್ಲಿಫರ್ಡ್ ಬಹು ಖಿನ್ನನಾಗಿ ನುಡಿದ: “ಸಾಧ್ಯವಿಲ್ಲ, ಹೆಪ್ಸಿಬಾ! ಕಾಲ ಮೀರಿಹೋಗಿದೆ. ನಾವು ಪ್ರೇತಗಳು! ಮಾನವಪ್ರಾಣಿಗಳ ನಡುವೆ ಇರಲು ನಮಗೆ ಹಕ್ಕಿಲ್ಲ. ಈ ಹಳೆಯ ಮನೆ ಬಿಟ್ಟು, ಬೇರೆಲ್ಲಿಯೂ ನಮಗೆ ಹಕ್ಕಿಲ್ಲ. ಈ ಮನೆಗೆ ಶಾಪ ಬಡಿದಿದೆ, ಆದ್ದರಿಂದ ನಾವಿಲ್ಲಿ ದೆವ್ವಗಳಾಗಿ ಓಡಾಡಬೇಕಾದ್ದು ನಮ್ಮ ಹಣೆಯಬರಹ. ಇಷ್ಟರಮೇಲೆ–” ಎಂದು ತುಸನಿಲ್ಲಿಸಿ, ಅವನಿಗೆ ವಿಶಿಷ್ಟವಾಗಿದ್ದ ಅತಿ ಸೂಕ್ಷ್ಮ ಪ್ರಜ್ಞೆಯಿಂದ ಮುಂದುವರಿಸಿದನು: “ನಾವು ಹೋಗುವುದು ತರವೂ ಅಲ್ಲ ಚೆನ್ನೂ ಅಲ್ಲ. ನನ್ನ ಜೊತೆಯವರಿಗೆ ನಾನು ಭಯಂಕರವಾಗಿ ಕಂಡೇನು, ನನ್ನನ್ನು ಕಂಡು ಮಕ್ಕಳು ತಮ್ಮ ತಾಯಂದಿರ ಲಂಗಕ್ಕೆ ಜೋತುಬಿದ್ದಾವು! ಎಂಥ ಕೆಟ್ಟ ಆಲೋಚನೆ!”

ಅವರು ಮಬ್ಬುಗವಿದ ನಡುವೆಯ ದಾರಿಗೆ ಹಿಂದಕ್ಕೆ ಸರಿದರು; ಬಾಗಿಲನ್ನು ಮುಚ್ಚಿದರು. ಆದರೆ, ಮತ್ತೆ ಮಹಡಿಯನ್ನು ಹತ್ತಿ ಹೋದಾಗ, ಈಗತಾನೆ ಅವರು ಕ್ಷಣಕಾಲ ಪಡೆದಿದ್ದ ಸ್ವಾತಂತ್ರ್ಯದ ನೋಟ ಮತ್ತು ಉಸಿರಾಟಗಳ ಅನುಭವದೊಂದಿಗೆ ಹೋಲಿಸಲಾಗಿ, ಮನೆಯ ಒಳಭಾಗವೆಲ್ಲಾ ಹತ್ತುಮಡಿ ಹೆಚ್ಚು ಮಂಕುಗವಿದಿತ್ತು. ಅವರು ಓಡಿಹೋಗಲಾರದವರಾಗಿದ್ದರು; ಅವರ ಸೆರೆಮನೆಯ ಅಧಿಕಾರಿ ಬಾಗಿಲನ್ನು ತೆಟ್ಟಂದೆರೆದು, ಅವರು ಕದ್ದು ಹೊರಕ್ಕೆ ಹೋಗುವುದನ್ನು ಗಮನಿಸಿನೋಡಲೆಂದು ಅದರ ಹಿಂದೆ ಅವಿತು

ಸರಳಸ್ವಭಾವದವಳೂ ಪ್ರಾಮಾಣಿಕಳೂ ಆದ ಅವಳು ಧರ್ಮವೇ ಮೈತಳೆದಂತಿದ್ದಳು; ಅವಲ ಭೌತಿಕಶರೀರ ನೆಲದಮೇಲೆ ನಡೆಯಬಲ್ಲದಾಗಿದ್ದರೆ, ಅವಳ ಆತ್ಮ ಸ್ವರ್ಗದಲ್ಲಿ ವಿಹರಿಸಲು ಯೋಗ್ಯವಾಗಿತ್ತು.

ಫೀಬೆ ಬೀದಿಯ ಮೂಲೆಯವರೆಗೂ ಹೋಗುವುದನ್ನು ನೋಡುತ್ತಾ ಇದ್ದು, ಆಮೇಲೆ ಕ್ಲಿಫರ್ಡ್– "ಹೆಪ್ಸಿಬಾ, ನೀನು ಚರ್ಚಿಗೆ ಹೋಗುವುದೇ ಇಲ್ಲವೇ?" ಎಂದು ಕೇಳಿದನು.

"ಇಲ್ಲ, ಕ್ಲಿಫರ್ಡ್! ಹಲವು, ಹಲವು ವರ್ಷಗಳಿಂದ ಈಚೆಗೆ ಇಲ್ಲ" ಎಂದು ಆಕೆ ಉತ್ತರಿಸಿದಳು.

"ನಾನು ಅಲ್ಲಿ ಇದ್ದಿದ್ದರೆ, ಅಷ್ಟೊಂದು ಜನ ನನ್ನ ಸುತ್ತಲೂ ಪ್ರಾರ್ಥಿಸುತ್ತಿರುವಾಗ, ನಾನೂ ಇನ್ನೊಮ್ಮೆ ಪ್ರಾರ್ಥಿಸಬಹುದಾಗಿದ್ದಿತು ಎಂದು ನನಗೆ ತೋರುತ್ತದೆ" ಎಂದು ಅವನು ಮಾರುತ್ತರ ಕೊಟ್ಟನು.

ಅವಳು ಕ್ಲಿಫರ್ಡನ ಮುಖವನ್ನು ಒಳಹೊಕ್ಕು ನೋಡಿದಳು; ಅಲ್ಲಿ ಸಹಜವಾಗಿ ಹೊಮ್ಮಿದ್ದ ಒಂದು ಮಾರ್ದವತೆಯನ್ನು ಕಂಡಳು; ದೈವಭಕ್ತಿಯ ಆನಂದಪರವಶತೆಯಿಂದಲೂ, ಮಾನವರ ಬಗೆಗೆ ದಯಾಮಯವಾದ ಸಹೋದರಪ್ರೇಮದಿಂದಲೂ ಅವನ ಹೃದಯ ತುಂಬಿ, ಕಣ್ಣುಗಳ ಮೂಲಕ ತುಳುಕುತ್ತಿತ್ತು. ಆ ರಾಗಭಾವ ಹೆಪ್ಸಿಬಾಳನ್ನೂ ಬಂದು ಮುಟ್ಟಿತು. ತಾವಿಬ್ಬರೂ ಬಹುಕಾಲದಿಂದಲೂ ಪ್ರಪಂಚದಿಂದ ಬೇರೆಯಾಗಿದ್ದು, ಎಂದೂ ದೈವಪ್ರೇಮಕ್ಕೆ ಪಾತ್ರರಾಗದೆ ಇದ್ದವರು ಎಂಬುದು ಅವಳಿಗೀಗ ಗೋಚರವಾಯಿತು; ತಾನು ಹೋಗಿ ಅವನ ಕೈಹಿಡಿದು ಕರೆದೊಯ್ದು, ಇಬ್ಬರೂ ಒಟ್ಟಿಗೆ ಇತರ ಜನರ ನಡುವೆ ಮಂಡಿಯೂರಿ ಬಾಗಿ ಕುಳಿತು, ಒಮ್ಮೆಲೇ ದೈವದೊಂದಿಗೂ ಮಾನವರೊಂದಿಗೂ ಆತ್ಮೀಯ ಸಂಬಂಧವನ್ನು ಕಲ್ಪಿಸಿಕೊಳ್ಳಲು ಹಾತೊರೆದಳು.

"ಮುದ್ದು ತಮ್ಮಾ, ಹೋಗೋಣ ಬಾ! ನಾವು ಎಲ್ಲಿಗೂ ಸೇರಿದವರಲ್ಲ. ಯಾವ ಚರ್ಚಿನಲ್ಲಿಯೂ ಮಂಡಿಯೂರಿ ಕುಳಿತುಕೊಳ್ಳಲು ಒಂದು ಅಡಿಯಷ್ಟು ಸ್ಥಳವೂ ನಮಗಿಲ್ಲ; ಕಡೆಗೆ ನಾವು ವಿಶಾಲವಾದ ಪಕ್ಕದ ಹಜಾರದಲ್ಲಿ ನಿಂತಿದ್ದರೂ ಸರಿಯೇ, ಯಾವುದಾದರೂ ಒಂದು ಪೂಜಾಮಂದಿರಕ್ಕೆ ಹೋಗೋಣ. ನಾವು ಬಡವರು, ಎಲ್ಲರೂ ಕೈಬಿಟ್ಟವರು, ಅಲ್ಲಿ ಪ್ರತ್ಯೇಕ ಪೀಠಗಳ ಬಳಿ ನಮಗಾಗಿ ಯಾವುದಾದರೂ ಒಂದು ಬಾಗಿಲು ತೆರೆಯುವುದು!" ಎಂದು ಅವಳು ಉತ್ಸಾಹದಿಂದ ನುಡಿದಳು.

ಇಂತು ಹೆಪ್ಸಿಬಾ ಮತ್ತು ಅವಳ ಸೋದರ ಚರ್ಚಿಗೆ ಹೋಗಲು ಸಿದ್ಧರಾದರು;

ಹೆಂಗಸರು ನಿಷ್ಕೃಷ್ಟರಾಗಿರುವರೆಂದು ಹೆಮ್ಮೆಪಟ್ಟು, ಕ್ಲಿಫರ್ಡ್ ವರ್ಣಿಸಿದ್ದಕ್ಕಿಂತ ಅದು ಸ್ವಲ್ಪ ಬೇರೆಯ ತೆರನಾಗಿತ್ತೆಂದು ಹೆಪ್ಸಿಬಾ ವಾದಿಸಿದಳು; ಆದರೆ, ಒಂದು ಹಳೆಯ ಟ್ರಂಕಿನಿಂದ ಅದೇ ಮೇಲಂಗಿಯನ್ನು ತೆಗೆದು ಮುಂದೆ ಹಿಡಿದಾಗ, ಅದರ ಬಗೆಗೆ ಅವನು ಹೊಂದಿದ್ದ ನೆನಪಿನ ಚಿತ್ರವು ತದ್ವತ್ತಾಗಿತ್ತೆಂದು ಸಿದ್ಧವಾಯಿತು. ಕ್ಲಿಫರ್ಡ್ ತಾನು ಕಂಡ ಕನಸುಗಳಲ್ಲಿ ಅಷ್ಟೊಂದು ಯಥಾವತ್ತಾಗಿ ಜೀವನದ ಅನುಭವವನ್ನು ಪಡೆದು ಎಚ್ಚರಗೊಂಡು ಕನಸಿನ ಪ್ರಪಂಚದಿಂದ ಹೊರಬಂದ ಪ್ರತಿಸಲವೂ ಹುಡುಗನಾಗಿದ್ದವನು ಜರ್ಜರಿತನಾದ ಮುದುಕನಾಗಿ ಪರಿವರ್ತನೆ ಹೊಂದುವ ಚಿತ್ರಹಿಂಸೆಯನ್ನು ಅನುಭವಿಸದಿದ್ದರೆ, ಪ್ರತಿದಿನವೂ ಮತ್ತೆ ಮತ್ತೆ ಉಂಟಾಗುತ್ತಿದ್ದ ಮಾನಸಿಕ ಧಕ್ಕೆ ತಡೆಯಲಸಾಧ್ಯವಾಗುತ್ತಿತ್ತು, ಆಗ ಬೆಳಗಿನ ನಸುಕಿನಿಂದ ರಾತ್ರಿ ಮಲಗುವವರೆಗೂ ಇಡಿಯ ದಿನವೆಲ್ಲಾ ತೀವ್ರವಾದ ವೇದನೆ ಮೈಯಲ್ಲಿ ಚಿಟಗುಟ್ಟುವಂತೆ ಮಾಡುತ್ತಿತ್ತು ಆ ಮಾನಸಿಕ ಧಕ್ಕೆ; ಅಲ್ಲದೆ, ಆಗಲೂ ಕೂಡ, ಅವನ ನಿದ್ರೆಯ ಕಾಲ್ಪನಿಕ ಪ್ರಾಯದ ವಿಕಾಸದ ಹೊಸತನದೊಂದಿಗೆ ಅಷ್ಟು ತೀವ್ರವಲ್ಲದ ಅರಿಯಲಾಗದ ನೋವನ್ನೂ ದೌರ್ಭಾಗ್ಯದ ವಿವರ್ಣ ಚ್ಛಾಯೆಯನ್ನೂ ಅದು ಬೆರಸುತ್ತಿತ್ತು. ಆದರೆ, ರಾತ್ರಿಯ ಬೆಳುದಿಂಗಳು ಬೆಳಗಿನ ಮಂಜಿನೊಂದಿಗೆ ಹಾಸುಹೊಕ್ಕಾಗಿ ಬೆರೆತಂತಹ ಒಂದು ಅನುಭವವು ಮೇಲುಹೊದಿಕೆಯಂತೆ ಅವನನ್ನು ಆವರಿಸುತ್ತಿತ್ತು; ಅವನು ಬಿಡದೆ ಅದಕ್ಕೆ ಜೋತುಬಿದ್ದು, ಸತ್ಯಸಂಗತಿಗಳು ಅದನ್ನು ಭೇದಿಸಿಕೊಂಡುಬರಲು ಅವಕಾಶ ಕೊಡುತ್ತಿರಲಿಲ್ಲ; ಅವನು ಅನೇಕೆ ವೇಳೆ ಪೂರ್ತಿ ಎಚ್ಚರವಾಗಿರುತ್ತಿರಲಿಲ್ಲ, ಆದರೆ ಕಣ್ಣುಬಿಟ್ಟುಕೊಂಡೇ ನಿದ್ರಿಸುತ್ತಿದ್ದನು; ಬಹುಶಃ ಆಗ ತಾನು ಅತ್ಯಂತ ಹೆಚ್ಚಾಗಿ ಕನಸುಕಾಣುತ್ತಿರುವುದಾಗಿ ಅವನು ಭಾವಿಸಿಕೊಳ್ಳುತ್ತಿದ್ದನು.

ಇಂತು, ಯಾವಾಗಲೂ ತನ್ನ ಶೈಶವದ ಹತ್ತಿರಹತ್ತಿರವೇ ಹಿಂದುಳಿಯುತ್ತಿದ್ದ ಅವನು ತನ್ನ ಸಹಾನುಭೂತಿಯನ್ನೆಲ್ಲ ಮಕ್ಕಳ ಕಡೆಗೇ ತಿರುಗಿಸಿದ್ದನು; ಅದರಿಂದಾಗಿ ಮೂಲ ಉಗಮಸ್ಥಾನದಿಂದ ಬಹು ದೂರವಿಲ್ಲದ ಕಿರುದೊರೆಗಳೆಲ್ಲಾ ಜಲಾಶಯಕ್ಕೆ ನೀರು ಸುರಿಸುವಂತೆ, ತನ್ನ ಹೃದಯವನ್ನು ಹೊಚ್ಚ ಹೊಸದಾಗಿ ಇಟ್ಟುಕೊಂಡಿದ್ದನು. ಬೀದಿಯ ಪಕ್ಕದ ದಾರಿಯಲ್ಲಿ ಒಬ್ಬ ಚಿಕ್ಕ ಹುಡುಗಿ ತನ್ನ ಕಬ್ಬಿಣದ ಬಳೆಯನ್ನು ಉರುಳಿಸಿಕೊಂಡು ಹೋಗುವುದನ್ನೋ, ಇಲ್ಲವೇ ಶಾಲಬಾಲಕರು ಚೆಂಡಾಟವಾಡುವುದನ್ನೋ ಕಮಾನು ಕಿಟಕಿಯಮೂಲಕ ನೋಡುವುದೆಂದರೆ ಬೇರೆ ಯಾವುದಕ್ಕಿಂತಲೂ ಅವನಿಗೆ ಹೆಚ್ಚಿನ ಪ್ರೀತಿ; ಆದರೂ ಅವರೊಂದಿಗೆ ಕಲೆಯಬೇಕೆಂಬ ಅವನ ಅಪೇಕ್ಷೆಗೆ ಸೂಕ್ಷ್ಮವಾದ ಔಚಿತ್ಯಜ್ಞಾನ

ನಿಂತಿದ್ದನು. ಹೊಸಲಬಳಿ, ಅವನ ನಿಷ್ಕರುಣೆಯ ಬಲವಾದ ಹಿಡಿತ ಅವರಿಗೆ ಅರಿವಾಯಿತು. ಒಬ್ಬನ ಸ್ವಂತ ಹೃದಯಕ್ಕಿಂತ ಬೇರೆಯ ಕತ್ತಲಗುಹೆ ಯಾವುದಿದ್ದೀತು! ತನ್ನನ್ನು ಕನಿಕರವಿಲ್ಲದೆ ಬಂಧಿಸಿರುವ ಬಂಧನಾಧಿಕಾರಿ ತಾನೆ ಅಲ್ಲದೆ ಬೇರೆ ಯಾರಿದ್ದಾರು!

ಆದರೆ, ಕ್ಲಿಫರ್ಡನು ನಿರಂತರವಾಗಿ, ಅಥವಾ ಪ್ರಧಾನವಾಗಿ ದೀನಹೀನನಾಗಿದ್ದನು ಎಂದು ನಿರೂಪಿಸುವುದು ಅವನ ಮನಸ್ಸ್ಥಿತಿಯ ನ್ಯಾಯವಾದ ಚಿತ್ರಣವಾಗದು. ಅದಕ್ಕೆ ವಿರುದ್ಧವಾಗಿ, ಅವನ ವಯಸ್ಸಿನಲ್ಲಿ ಅರ್ಧಕ್ಕಿಂತ ಕಡಮೆಯ ವಯಸ್ಸಿನವರು ಕೂಡ ಅವನು ಅನುಭೋಗಿಸಿದ್ದಷ್ಟು ಉಲ್ಲಾಸಭರಿತ ದುಃಖರಹಿತ ಕ್ಷಣಗಳನ್ನು ಅನುಭೋಗಿಸಿದ್ದವರು ಆ ಊರಿನಲ್ಲಿ ಯಾರೂ ಇರಲಿಲ್ಲವೆಂದು ನಾವು ಧೈರ್ಯವಾಗಿ ಹೇಳುತ್ತೇವೆ. ಅವನ ಮೇಲೆ ಚಿಂತೆಯ ಭಾರ ಯಾವುದೂ ಕವಿದಿರಲಿಲ್ಲ. ಭವಿಷ್ಯಕಾಲದಲ್ಲಿ ಪರಿಹರಿಸಿಕೊಳ್ಳಬೇಕಾದ ಪ್ರಶ್ನೆಗಳೂ ಎದುರಿಸಬೇಕಾದ ಸನ್ನಿವೇಶಸಂದರ್ಭಗಳೂ ಇದ್ದರೆ, ಅವು ಇತರ ಎಲ್ಲರ ಪ್ರಾಣಗಳನ್ನೂ ಹಿಂಡಿ, ಅವುಗಳನ್ನು ಉಳಿಸಿಕೊಳ್ಳಲು ಪಡಬೇಕಾದ ಪಾಡಿನ ದೃಷ್ಟಿಯಿಂದ ಅವು ಉಳಿಸಿಕೊಳ್ಳಲು ಯೋಗ್ಯವಲ್ಲ ಎನ್ನಿಸಿಬಿಡುತ್ತವೆ. ಈ ವಿಚಾರದಲ್ಲಿ ಅವನು ಒಂದು ಮಗುವಾಗಿದ್ದನು– ಬದುಕು ದೀರ್ಘವಾಗಿರಲಿ ಹ್ರಸ್ವವಾಗಿರಲಿ, ಅವನ ಬದುಕಿನ ಇಡಿಯ ಕಾಲವೆಲ್ಲಾ ಅವನು ಮಗುವೆ. ವಾಸ್ತವವಾಗಿ, ಅವನ ಬದುಕು ಶೈಶವಕ್ಕಿಂತ ಅಷ್ಟೇನೂ ಹೆಚ್ಚು ಮುಂದುವರಿಯದೆ ಅಷ್ಟಕ್ಕೇ ಸ್ತಬ್ಧವಾಗಿ, ಆ ಕಾಲದ ನೆನವುಗಳನ್ನೆಲ್ಲಾ ತನ್ನಲ್ಲಿ ಕೂಡಿಸಿಕೊಂಡಿದ್ದಂತೆ ಕಾಣುತ್ತಿತ್ತು; ಅದು ಹೇಗಿತ್ತೆಂದರೆ, ಬಲವಾದ ಪೆಟ್ಟನ್ನು ತಿಂದು ಪ್ರಜ್ಞೆಯನ್ನು ಕಳೆದುಕೊಂಡಮೇಲೆ, ತಿಳಿಯುತ್ತಿರುವ ಪ್ರಜ್ಞೆ ಪೆಟ್ಟು ಬಿದ್ದ ಘಟನೆಗಿಂತ ಸ್ವಲ್ಪಮಟ್ಟಿಗೆ ಹಿಂದಿನ ಕ್ಷಣಕ್ಕೆ ಹಿಂದಿರುಗುವ ಹಾಗಿದ್ದಿತು. ಅವನು ಕೆಲವು ವೇಳೆ ಫೀಬೆಗೂ ಹೆಪ್ಸಿಬಾಳಿಗೂ ತನ್ನ ಕನಸುಗಳ ವಿಚಾರವಾಗಿ ತಿಳಿಯಹೇಳುತ್ತಿದ್ದನು; ಅವುಗಳಲ್ಲಿ ಅವನು ಸಾಧಾರಣವಾಗಿ ಮಗುವಿನ ಪಾತ್ರವನ್ನೋ ಇಲ್ಲವೆ ಬಹು ಎಳೆಯ ಪ್ರಾಯದವನ ಪಾತ್ರವನ್ನೋ ವಹಿಸಿರುತ್ತಿದ್ದನು. ಅವನಿಗೂ ಕನಸುಗಳಿಗೂ ಇರುತ್ತಿದ್ದ ಸಂಬಂಧದ ದೃಷ್ಟಿಯಿಂದ ಅವು ಎಷ್ಟು ಕಣ್ಣಿಗೆ ಕಟ್ಟಿದಂತೆ ಇದ್ದುವೆಂದರೆ, ಚೀಟಿಯಬಟ್ಟೆಯ ಒಂದು ಪ್ರಾತಃಕಾಲದ ಉಡುಪಿನ ನಿರ್ದಿಷ್ಟ ಆಕಾರದ ವಿಷಯವಾಗಿಯೋ ಇಲ್ಲವೆ ನಮೂನೆಯ ಮುದ್ರಣದ ವಿಷಯವಾಗಿಯೋ ಒಮ್ಮೆ ತನ್ನ ಸಹೋದರಿಯೊಂದಿಗೆ ವಾದ ಮಾಡಿದ್ದನು; ಹಿಂದಿನ ರಾತ್ರಿಯ ಕನಸಿನಲ್ಲಿ ಅವರ ತಾಯಿ ಅದನ್ನು ತೊಟ್ಟದ್ದಂತೆ ಕಂಡಿದ್ದನು. ಇಂಥ ವಿಚಾರಗಳಲ್ಲಿ

ಭೂಮ್ಯಾಕಾಶಗಳ ಚಿತ್ರವೆಲ್ಲದರೊಂದಿಗೆ, ತಾನು ಹಿಂದೆ ಇರಲಿಲ್ಲವೆಏನೋ ಎಂಬಂತೆ ಕಣ್ಮರೆಯಾದಾಗ, ವಕ್ರವಾದ ರೀತಿಯಲ್ಲಿ ತೃಪ್ತಿಗೊಳ್ಳುತ್ತಿದ್ದರು, ಅದರಲ್ಲಿ ಸಂದೇಹವಿಲ್ಲ.

ಹೀಗಿರುವಾಗ, ಕಡೆಯಲ್ಲಿ, ಬಹು ಗೌರವಸ್ಥನಂತೆ ಕಾಣುತ್ತಿದ್ದ ವಯಸ್ಕನಾದ ದೊಡ್ಡ ಮನುಷ್ಯನೊಬ್ಬನು ಹಾದುಹೋಗುತ್ತಿದ್ದ ವೇಳೆಗೆ ಸರಿಯಾಗಿ ಒಂದು ದೊಡ್ಡ ನೀಗುಳ್ಳೆ ಗಂಭೀರವಾಗಿ ಕೆಳಕ್ಕೆ ತೇಲಿಬಂದು, ಅವನ ಮೂಗಿಗೆ ತಾಗಿ ಒಡೆದುಹೋಯಿತು! ಆತ ಮೊದಲು ನಿಷ್ಠುರವಾದ ತೀಕ್ಷ್ಣ ದೃಷ್ಟಿಯಿಂದ ಮೇಲೆ ನೋಡಿದನು; ಆ ಕೂರ್ನೋಟ ಕಮಾನು ಕಿಟಕಿಯ ಹಿಂದಿನ ಮಬ್ಬುಗತ್ತಲೆಯನ್ನು ಭೇಸಿದಿಕೊಂಡು ಹೋಯಿತು; ಅನಂತರ ಮುಗುಳ್ನಗೆಯೊಂದಿಗೆ ನೋಡಿದನು; ಆ ನಗೆ, ಅತ್ಯಂತ ಸೆಕೆಯ ದಿನದ ಬೇಗೆಯನ್ನು ತನ್ನ ಸುತ್ತಲೂ ಹಲವು ಗಜಗಳ ದೂರಕ್ಕೆ ಹರಡುತ್ತಿದ್ದನೇನೋ ಎಂಬ ಕಲ್ಪನೆಗೆ ಅವಕಾಶಕೊಡುತ್ತಿತ್ತು.

"ಓಹೋ, ಕಸಿನ್ ಕ್ಲಿಫರ್ಡ್! ಏನಿದು! ಇನ್ನೂ ಸಾಬೂನಿನ ನೀರ್ಗುಳ್ಳೆಗಳನ್ನು ಊದಿ ಬಿಡುತ್ತಿರುವೆಯಾ!" ಎಂದು ನ್ಯಾಯಮೂರ್ತಿ ಪಿನ್ಚನ್ ಕೂಗಿ ಹೇಳಿದನು.

ಧ್ವನಿಯೇನೋ ದಯೆಯಿಂದ ಕೂಡಿ ಸಂತೈಸುವ ಹಾಗೆ ಕಾಣುತ್ತಿತ್ತು; ಆದರೆ ಅದರಲ್ಲಿ ವ್ಯಂಗ್ಯದ ತೀಕ್ಷ್ಣತೆಯೂ ಅಡಗಿತ್ತು. ಕ್ಲಿಫರ್ಡನ ವಿಷಯ ತೆಗೆದುಕೊಂಡರೆ, ಭೀತಿಯ ಪಾರ್ಶ್ವವಾಯು ಸಂಪೂರ್ಣವಾಗಿ ಅವನ ಮೇಲೆರಗಿತು. ಅವನ ಈ ಭೀತಿಗೆ ಅವನ ಹಿಂದಿನ ಅನುಭವ ಕಾರಣವಾಗಿದ್ದಿರಬಹುದು; ಅದು ಹೇಗಿದ್ದರೂ, ಆ ಶ್ರೇಷ್ಠ ನ್ಯಾಯಾಧೀಶನ ಬಗೆಗೆ ಅವನು ಸಹಜವಾದ ರೂಢಮೂಲವಾದ ಭೀತಿಯನ್ನೂ ಹೊಂದಿದ್ದು; ಅವನು ಸಹಜವಾದ ರೂಢಮೂಲವಾದ ಭೀತಿಯನ್ನೂ ಹೊಂದಿದ್ದನು; ಅಪಾರವಾದ ಬಲದ ಸಮ್ಮುಖದಲ್ಲಿ ದುರ್ಬಲನೂ ಸೂಕ್ಷ್ಮ ಪ್ರಕೃತಿಯವನೂ ಹೆದರಿಕೆಯ ಸ್ವಭಾವದವನೂ ಆದ ವ್ಯಕ್ತಿ ಆ ರೀತಿ ಭೀತಿಪಡುವುದು ಸರಿಯೆ. ದುರ್ಬಲರು ಬಲವೇನೆಂಬುದನ್ನು ಅರಿಯಲಾರರು; ಆದುದರಿಂದ, ಅದು ಭೀಕರತರವಾಗಿ ಕಾಣುತ್ತದೆ. ತನ್ನ ಬಂಧುಬಳಗದ ಪೈಕಿ ದೃಢಚಿತ್ರದ ಬಂಧು ಇರುವುದಕ್ಕಿಂತ ಹೆಚ್ಚಿನ ಭೀತಿಶಂಕೆ ಬೇರೆ ಯಾವುದೂ ಇರಲಾರದು.

* * * *

ತಡೆಯುಂಟುಮಾಡುತ್ತಿತ್ತು. ಬೆಳಕಿರುವ ಕೊಟಡಿಯಲ್ಲಿ ನೊಣಗಳು ಒಟ್ಟಿಗೆ ಮುತ್ತಿ ಮುಸುರಿ ಕಲೆಯುವಂತೆ, ಒಂದರೊಡನೊಂದು ಬೆರೆತು ಒಡಗೂಡಿ ದೂರದಿಂದ ಕೇಳಿಬರುತ್ತಿದ್ದ ಅವರ ಧ್ವನಿಗಳು ಕೂಡ ಅವನಿಗೆ ಬಹಳ ಹಿತಕರವಾಗಿದ್ದುವು.

ಅವರ ಆಟಪಾಟಗಳಲ್ಲಿ ಪಾಲುಗೊಳ್ಳಲು ಕ್ಲಿಫರ್ಡನಿಗೇನೋ ನಿಸ್ಸಂದೇಹವಾಗಿ ಸಂತೋಷವೆನಿಸುತ್ತಿತ್ತು. ಒಂದು ದಿನ ಮಧ್ಯಾಹ್ನವಾದಮೇಲೆ, ಸಾಬೂನಿನ ನೊರೆಯ ಗುಳ್ಳೆಗಳನ್ನು ಊದಬೇಕೆಂದು ತಡೆಯಲಾಗದ ಬಯಕೆಯುಂಟಾಯಿತು ಅವನಿಗೆ. ತಾನೂ ತನ್ನ ಸಹೋದರನೂ ಮಕ್ಕಳಾಗಿದ್ದಾಗ ಅದು ಅವನಿಗೆ ಇಷ್ಟವಾಗಿದ್ದ ಒಂದು ವಿನೋದವಾಗಿದ್ದಿತ್ತೇಂದು ಹೆಪ್ಸಿಬಾ ಫೀಬೆಯೊಂದಿಗೆ ಗುಟ್ಟಾಗಿ ತಿಳಿಸಿದ್ದಳು. ಅದಕ್ಕೆ ತಕ್ಕಹಾಗೆ, ಆಗೋ ನೋಡಿ ಅಲ್ಲಿ, ಬಾಯಲ್ಲಿ ಮಣ್ಣಿನ ಚುಂಗಾಣಿಯನ್ನು ಇಟ್ಟುಕೊಂಡು ಅವನು ಕಮಾನುಕಿಟಕಿಯ ಬಳಿ ನಿಂತಿದ್ದಾನೆ! ಅಗೋ ನೋಡಿ, ನರೆಗೂದಲಿನ ಅವನ ಮುಖದ ಮೇಲೆ ಕಳೆಯಿಲ್ಲದ ಹುಸಿನಗೆ ಆಡುತ್ತಿದೆ; ಅಲ್ಲಿ ಚೆಲುವಾದ ವಿಲಾಸ ಇನ್ನೂ ಸುಳಿದಾಡುತ್ತಿದೆ; ಅದು ಇಷ್ಟು ದೀರ್ಘಕಾಲ ಉಳಿದುಬಂದಿರುವುದರಿಂದ ಅವನ ಕಡುವೈರಿ ಕೂಡ ಅದನ್ನು ದಿವ್ಯವೆಂದೂ ಅಮರ್ತ್ಯವೆಂದೂ ಒಪ್ಪಿಕೊಂಡಿರಬೇಕು! ಕಿಟಕಿಯಿಂದ ಬೀದಿಗೆ ಗಾಳಿಯ ಗೋಳಗಳನ್ನು ತೇಲಿಬಿಡುತ್ತಿರುವ ಅವನನ್ನು ನೋಡಿ! ಬಲುಸೂಕ್ಷ್ಮವಾದ ಚಿಕ್ಕ ಪ್ರಪಂಚಗಳು ಆ ಸಾಬೂನಿನ ಗುಳ್ಳೆಗಳು; ಶೂನ್ಯಕ್ಕೆ ಸಮವಾದ ಅವುಗಳ ಮೇಲ್ಮೈ ಮೇಲೆ ಕಲ್ಪನೆಯಂತೆ ಪ್ರಕಾಶಮಾನವಾದ ವರ್ಣಗಳಿಂದ ಚಿತ್ರಿತವಾಗಿದೆ ನಮ್ಮ ಈ ದೊಡ್ಡ ಪ್ರಪಂಚ. ಊ ಉಜ್ಜ್ವಲ ಕಲ್ಪನಾಚಿತ್ರಗಳು ಕೆಳಕ್ಕೆ ತೇಲುತ್ತಾ ಬಂದು, ತಮ್ಮ ಸುತ್ತಣ ಮಂಕಾದ ವಾತಾವರಣಕ್ಕೆ ಒಂದು ಕಲ್ಪನೆಯ ಬಣ್ಣವನ್ನು ಕೊಡುವಾಗ ಅವುಗಳ ಬಗೆಗೆ ದಾರಿಹೋಕರ ಭಾವನೆ ಏನು ಎಂಬುದನ್ನು ಅರಿಯುವುದು ಕುತೂಹಲಕರವಾಗಿತ್ತು. ಕೆಲವರು ನಿಟ್ಟಿಸಿನೋಡಲು ನಿಲ್ಲುತ್ತಿದ್ದರು; ಬಹುಶಃ ಅವರು ಬೀದಿಯ ಮೂಲೆ ತಿರುವನ್ನು ತಲಪುವವರೆಗೂ ಆ ನೀರ್ಗುಳ್ಳೆಗಳ ಸವಿನೆನಪನ್ನು ತಮ್ಮೊಡನೆ ಒಯ್ಯುತ್ತಿದ್ದರು; ಕೆಲವರು, ತಮ್ಮ ಧೂಳಿಡಿದ ಹಾದಿಗೆ ಅಷ್ಟು ಸಮೀಪದಲ್ಲಿ ಚೆಲುವಿನ ಪ್ರತಿಬಿಂಬವೊಂದನ್ನು ತೇಲಬಿಟ್ಟು ಬಡ ಕ್ಲಿಫರ್ಡ್ ತಮಗೆ ಅನ್ಯಾಯವೆಸಗಿರುವನೆಂಬಂತೆ, ಕೋಪದಿಂದ ಮೇಲ್ಗಡೆ ನೋಡುತ್ತಿದ್ದರು. ಬಹುಮಂದಿ ಆ ನೀರ್ಗುಳ್ಳೆಗಳನ್ನು ಮುಟ್ಟಿನೋಡಲೆಂದು ತಮ್ಮ ಬೆರಳುಗಳನ್ನೋ ಇಲ್ಲವೇ ತಮ್ಮ ಕೈಕೋಲುಗಳನ್ನೋ ಚಾಚುತ್ತಿದ್ದರು; ತಾನು ಒಳಗೊಂಡಿದ್ದ

ಕಿಟಕಿಯ ತೆರೆಗಳ ಮೂಲಕ ಇನ್ನೂ ತೂರಿಬರುತ್ತಿರುವಾಗಲೇ, ಇಲ್ಲವೆ ಅವುಗಳ ಅಂತಿಮಕಾಂತಿ ಕೋಣೆಯ ಗೋಡೆಗಳ ಮೇಲೆ ಇನ್ನೂ ಬಿದ್ದಿರುವಾಗಲೇ, ಪೂರ್ತಿ ಆಯಾಸಗೊಂಡಿದ್ದ ಕ್ಲಿಫರ್ಡ್ ಸಾಧಾರಣವಾಗಿ ವಿಶ್ರಾಂತಿ ಪಡೆಯ ತೊಡಗುತ್ತಿದ್ದನು. ಅವನು ಈ ರೀತಿ ಇತರ ಮಕ್ಕಳು ಮಾಡುವಹಾಗೆ ಹೊತ್ತಿಗೆಮುಂಚೆಯೆ ಮಲಗಿ ತನ್ನ ಬಾಲ್ಯದ ಕನಸು ಕಾಣುತ್ತಿದ್ದಾಗ, ಹಗಲು ಸಂಜೆಗಳ ಉಳಿದ ಕಾಲಗಳಲ್ಲಿ ಫೀಬೆ ತನ್ನ ಅಭಿರುಚಿಗಳಿಗೆ ಅನುಗುಣವಾಗಿ ನಡೆದುಕೊಳ್ಳಲು ಸ್ವತಂತ್ರಳಾಗಿರುತ್ತಿದ್ದಳು.

ಫೀಬೆಯು ಸ್ವಭಾವ ಜಾಡ್ಯಲಕ್ಷಣದ ಪ್ರಭಾವಗಳಿಗೆ ಸ್ವಲ್ಪವೂ ಒಳಗಾಗುವಂಥದಲ್ಲ; ಹಾಗಿದ್ದರೂ ಕೂಡ, ಆ ಬಗೆಯ ಸ್ವಾತಂತ್ರ್ಯ ಅವಳ ಆರೋಗ್ಯಕ್ಕೆ ಅಗತ್ಯವಾಗಿತ್ತು. ನಾವು ಈ ಹಿಂದೆಯೇ ತಿಳಿಸಿರುವಂತೆ, ಹಳೆಯ ಮನೆಯ ಗೋಡೆ ತೇವವಿಲ್ಲದ ಕಡೆಯೂ ತೇವವಿರುವ ಕಡೆಯೂ ಲೊಡ್ಡು ಹಿಡಿದಿತ್ತು; ಅಲ್ಲಿಯದನ್ನು ಬಿಟ್ಟರೆ ಬೇರೆ ಯಾವ ವಾಯುವೂ ಉಸಿರಾಡಲು ಒಳ್ಳೆಯದಾಗಿರಲಿಲ್ಲ. ಹೆಪ್ಸಿಬಾಳ ಸ್ವಭಾವದಲ್ಲಿ ಅಮೂಲ್ಯವಾದ, ದೋಷಗಳನ್ನು ಮುಚ್ಚುವ, ಒಳ್ಳೆಯ ಗುಣಾಂಶಗಳೇನೋ ಇದ್ದುವು; ಆದರೆ, ಒಂದೇ ಜಾಡಿನಲ್ಲಿ ಹರಿಯುವ ಅಭಿಪ್ರಾಯಗಳು, ಯಾವುದೋ ಒಂದರಲ್ಲಿ ಮಾತ್ರ ಒಲವು, ತನಗೆ ಅನ್ಯಾಯವಾಗಿದೆಯೆಂಬ ಮನಸ್ಸು ಕೊರೆಯುವ ಒಂದು ಭಾವನೆ– ಇವುಗಳನ್ನು ಬಿಟ್ಟು ಬೇರೆ ಯಾವುದರ ಸಹವಾಸವೂ ಇಲ್ಲದೆ ಬಹುಕಾಲ ಒಂದೇ ಕಡೆ ತನ್ನನ್ನು ತಾನು ಬಂಧನದಲ್ಲಿರಿಸಿಕೊಂಡಿದ್ದಳು; ಆದಕಾರಣ ಅವಳು ಒಂದು ಬಗೆಯ ಹುಚ್ಚಿಯಾಗಿದ್ದಳು. ತನ್ನೊಂದಿಗೆ ತನ್ನ ಜೊತೆಯವರ ಸಂಬಂಧ ಅದೆಷ್ಟೇ ಆತ್ಮೀಯವಾಗಿ, ನಿಕಟವಾಗಿ, ಇರಲಿ– ಕ್ಲಿಫರ್ಡ್ ಅವರ ಮೇಲೆ ನೈತಿಕ ಪ್ರಭಾವವನ್ನು ಬೀರಲಾರದಷ್ಟು ಜಡವಾಗಿದ್ದನು; ಓದುಗರಿಗೆ ಬಹುಶಃ ಇದು ಹೊಳೆದಿರಬಹುದು. ಆದರೆ ಮಾನವಪ್ರಾಣಿಗಳ ನಡುವೆ ಪರಸ್ಪರ ಕಂಡುಬರುವ ಸಹಾನುಭೂತಿ ಅಥವಾ ಆಕರ್ಷಣೆ ನಾವು ಭಾವಿಸಿರುವುದಕ್ಕಿಂತ ಹೆಚ್ಚು ಸೂಕ್ಷ್ಮವೂ ಸರ್ವವ್ಯಾಪಿಯೂ ಆದದ್ದು; ನಿಜವಾಗಿ, ಸಂಘಟಿತ ಜೀವನದ ಬೇರೆ ಬೇರೆ ವರ್ಗಗಳ ನಡುವೆ ಅದು ನೆಲಸಿರುತ್ತದೆ ಉದಾಹರಣೆಗಾಗಿ, ಫೀಬೆ ತಾನೇ ಸ್ವಂತವಾಗಿ ಕಂಡಿದ್ದಂತೆ, ಒಂದು ಹೂವು ತನ್ನ ಕೈಯಲ್ಲಿ ಬಾಡುವುದಕ್ಕಿಂತ ಕ್ಲಿಫರ್ಡನ ಕೈಯಲ್ಲಿ ಅಥವಾ ಹೆಪ್ಸಿಬಾಳ ಕೈಯಲ್ಲಿ ಬೇಗನೆ ಬಾಡಿಹೋಗುತ್ತಿತ್ತು; ಅದೇ ನಿಯಮದಂತೆ, ಈ ಇಬ್ಬರು ರೋಗಿಷ್ಟ ಆತ್ಮಗಳ ಪ್ರಯೋಜನಾರ್ಥವಾಗಿ ತನ್ನ ಇಡಿಯ ದಿನದ ಬದುಕನ್ನು ಒಂದು ಪುಷ್ಪ ಪರಿಮಳವನ್ನಾಗಿ

# ೧೨. ಛಾಯಾಚಿತ್ರ ಕಲಾವಿದ

ಫೀಬೆಯಂತೆ ಸಹಜವಾಗಿಯೆ ಚಟುವಟಿಕೆಯಿಂದ ಕೂಡಿದ ವ್ಯಕ್ತಿಯ ಜೀವನವು ಹಳೆಯ ಪಿನ್ಚನ್ ಭವನದ ಆವರಣದಷ್ಟಕ್ಕೆ ಮಾತ್ರ ಪೂರ್ತಿ ಪರಿಮಿತವಾಗಿರುವುದೆಂದು ಊಹಿಸಲಾಗದು. ಆ ದೀರ್ಘ ದಿನಗಳಲ್ಲಿ ಕ್ಲಿಫರ್ಡಿಗಾಗಿ ಅವಳು ವಿನಿಯೋಗಿಸಬೇಕಾಗಿದ್ದ ಕಾಲವನ್ನೆಲ್ಲ ಸಾಧಾರಣವಾಗಿ ಸೂರ್ಯಾಸ್ತಕ್ಕೆ ಮುಂಚೆಯೇ ವಿನಿಯೋಗಿಸಿಬಿಡುತ್ತಿದ್ದಳು. ಅವನ ನಿತ್ಯದ ಬದುಕು ಶಾಂತ ವಾಗಿಯೇನೋ ಕಾಣುತ್ತಿದ್ದಿತು; ಆದರೂ ಅವನ ಬದುಕಿನ ಬಂಡವಾಳವನ್ನೆಲ್ಲ ಅದು ಬರಿದುಮಾಡಿಬಿಡುತ್ತಿದ್ದಿತು. ಅವನನ್ನು ಅತಿಯಾಗಿ ಬಳಲಿಸುತ್ತಿದ್ದುದು ಶಾರೀರಕಪರಿಶ್ರಮವಲ್ಲ– ಅವನು ಕೆಲವು ವೇಳೆ ಕಳೆಗುದ್ದಲಿ ಹಿಡಿದು ಸ್ವಲ್ಪ ಕೆಲಸಮಾಡುತ್ತಿದ್ದನು; ಅಲ್ಲವೆ ತೋಟದ ಕಾಲುದಾರಿಯಲ್ಲಿ ನಡೆದಾಡುತ್ತಿದ್ದನು; ಅದೂ ಇಲ್ಲದಿದ್ದರೆ, ಮಳೆಗಾಲದಲ್ಲಿ, ಯಾರೂ ವಾಸವಾಗಿಲ್ಲದ ದೊಡ್ಡ ಕೊಟಡಿಯೊಂದರಲ್ಲಿ ಶತಪಥ ತಿರುಗುತ್ತಿದ್ದನು; ಇಷ್ಟು ಹೊರತಾಗಿ, ಕೈಕಾಲುಗಳನ್ನೂ ಮಾಂಸಖಂಡಗಳನ್ನೂ ಉಪಯೋಗಿಸಿ ಮಾಡುವ ಯಾವುದೇ ದುಡಿಮೆಯ ವಿಚಾರದಲ್ಲಿಯಾಗಲಿ ಏನೂ ಮಾಡದೆ ಸುಮ್ಮನಿದ್ದು ಬಿಡುವುದೇ ಅವನ ಪ್ರವೃತ್ತಿ. ಆದರೆ, ಅವನ ಆಂತರ್ಯದಲ್ಲಿ ಅವನ ಸತ್ತ್ವ ಸಾಮರ್ಥ್ಯವನ್ನೆಲ್ಲಾ ದಹಿಸಿಬಿಡುವ, ಹೊಗೆಯಾಡುವ ಅಗ್ನಿಯಿರುತ್ತಿದ್ದಿತು; ಅದಿಲ್ಲವೊ, ಬೇರೆಯ ಸನ್ನಿವೇಶದಲ್ಲಿ ಇದ್ದ ಇತರರ ಮನಸ್ಸನ್ನು ಜಡಗಟ್ಟಿಸಿಬಿಡುತ್ತಿದ್ದ ಏಕಪ್ರಕಾರತೆ ಕ್ಲಿಫರ್ಡನ ಪಾಲಿಗೆ ಏಕಪ್ರಕಾರತೆಯೆನಿಸುತ್ತಿರಲಿಲ್ಲ. ಬಹುಶಃ ಅವನು ಎರಡನೆಯ ಸಲ ಬೆಳೆದು ಚೈತನ್ಯವನ್ನು ಕೂಡಿಸಿಕೊಳ್ಳುತ್ತಿದ್ದಂತಹ ಒಂದು ಸ್ಥಿತಿಯಲ್ಲಿದ್ದನು; ಹಾಗೂ ಪ್ರಪಂಚದಲ್ಲಿ ಹೆಚ್ಚು ನುರಿತವರಿಗೆ ಸಂಪೂರ್ಣ ಶೂನ್ಯವೆಂದು ತೋರಬಹುದಾಗಿದ್ದ ನೋಡಗಳು, ಶಬ್ದಗಳು, ಘಟನೆಗಳು ಮುಂತಾದವುಗಳಿಂದ ಅವನು ಯಾವಾಗಲೂ ತನ್ನ ಚೇತನಕ್ಕೂ ಬುದ್ಧಿಗೂ ಪೋಷಣೆಯನ್ನು ರೂಢಿಸಿಕೊಳ್ಳುತ್ತಿದ್ದನು. ಮಗುವಿನ ಹೊಸಮನಸ್ಸಿಗೆ ಸಕಲವೂ ಕಾರ್ಯಶೀಲ, ಪರಿವರ್ತನಶೀಲ; ತನ್ನ ಕಾರ್ಯಪಟುತ್ವ ಬಹುಕಾಲ ತಟಸ್ಥವಾಗಿದ್ದಮೇಲೆ, ಒಂದು ವಿಧವಾದ ನೂತನ ಸೃಷ್ಟಿಯನ್ನು ಹೊಂದಿದ್ದ ಮನಸ್ಸಿನ ವಿಚಾರದಲ್ಲಿಯೂ ಹಾಗೆಯೇ ಹೇಳಬಹುದು.

ಕಾರಣವೇನಾದರೂ ಆಗಿರಲಿ, ಸೂರ್ಯನ ಕಿರಣಗಳು ಅವನ ಕೋಣೆಯ

ಹೇಳುತ್ತಿದ್ದಳು. ಅವಳ ಕಣ್ಣುಗಳು ಹೆಚ್ಚು ದೊಡ್ಡವಾಗಿಯೂ, ಹೆಚ್ಚು ಕಪ್ಪಾಗಿಯೂ, ಹೆಚ್ಚು ಆಳವಾಗಿಯೂ ಕಾಣುತ್ತಿದ್ದುವು; ಎಷ್ಟು ಆಳವೆಂದರೆ, ಕೆಲವು ನಿಶ್ಶಬ್ದ ಕ್ಷಣಗಳಲ್ಲಿ, ಕೆಳಗೆ ಪಾತಾಳಕ್ಕೆ ಇಳಿದುಹೋಗಿವೆಯೋ ಎನ್ನುವಂತಿದ್ದ 'ಆರ್ಟೀಸಿಯನ್' ಬುಗ್ಗೆಯ ಬಾವಿಗಳಂತೆ ಅವು ಕಾಣುತ್ತಿದ್ದುವು. ಜನತಾಬಸ್ಸಿನಿಂದ ಇಳಿದ ಅವಳನ್ನು ನಾವು ಮೊದಲಸಲ ನೋಡಿದಾಗ ಕಾಣುತ್ತಿದ್ದಷ್ಟು ಹುಡುಗಿಯ ಹಾಗೆ ಈಗ ಕಾಣುತ್ತಿರಲಿಲ್ಲ; ಅಷ್ಟು ಹುಡುಗಿಯಲ್ಲ, ಹೆಚ್ಚು ಹೆಂಗಸಿನ ಹಾಗೆ ಕಾಣುತ್ತಿದ್ದಳು.

ಫೀಬೆ ಆಗಾಗ್ಗೆ ಸಂಪರ್ಕಹೊಂದುವ ಅವಕಾಶವಿದ್ದ ಎಳೆಯ ಪ್ರಾಯದ ಮನಸ್ಸಿನವನೆಂದರೆ, ಆ ಛಾಯಾಚಿತ್ರ ಕಲಾವಿದ. ತಮ್ಮ ತಮ್ಮ ಏಕಾಂತವಾಸದ ಒತ್ತಾಯಕ್ಕೆ ಸಿಲುಕಿ, ಅನಿವಾರ್ಯವಾಗಿ, ಅವರಿಬ್ಬರೂ ಸ್ವಲ್ಪಮಟ್ಟಿಗೆ ಪರಸ್ಪರ ಪರಿಚಯಹೊಂದಲವಕಾಶಕೊಡುವಂತಹ ಅಭ್ಯಾಸಗಳನ್ನು ಇಟ್ಟುಕೊಂಡಿದ್ದರು. ಅವರು ಬೇರೆಯ ಸನ್ನಿವೇಶ ಸಂದರ್ಭಗಳಲ್ಲಿ ಸಂಧಿಸಿದ್ದರೆ, ಈ ಎಳೆಯರಲ್ಲಿ ಯಾರೊಬ್ಬರೂ ಒಬ್ಬರನ್ನು ಕುರಿತು ಇನ್ನೊಬ್ಬರು ಬಹುವಾಗಿ ಆಲೋಚಿಸುವ ಸಂಭವವಿರುತ್ತಿರಲಿಲ್ಲ; ಹಾಗೇನಾದರೂ ಅವರಲ್ಲಿ ಪರಸ್ಪರ ಆಕರ್ಷಣೆ ಯಿದ್ದುದಾದರೆ, ಅವರ ಸ್ವಭಾವದಲ್ಲಿದ್ದ ಅತ್ಯಂತ ವೈಷಮ್ಯವೇ ಅದಕ್ಕೆ ಕಾರಣವಾಗಿ ಪರಿಣಮಿಸಿದ್ದಿರಬೇಕು. ಅವರಿಬ್ಬರೂ ಹೊಸ ಇಂಗ್ಲೆಂಡಿನ ಜೀವನಕ್ರಮಕ್ಕೆ ತಕ್ಕಂತಿದ್ದ ವ್ಯಕ್ತಿಗಳೆಂಬುದೇನೊ ದಿಟ; ಆದ್ದರಿಂದ, ಹೊರಕ್ಕೆ ಕಾಣುವಂತಹ ಅವರ ಬೆಳವಣಿಗೆಗೆ ಒಂದು ಸಮಾನವಾದ ನೆಲೆಯಿತ್ತು; ಆದರೆ, ಅವರ ಜನ್ಮಸ್ಥಳಗಳ ನಡುವೆ ಪ್ರಪಂಚದಷ್ಟು ಅಗಲವಾದ ಅಂತರವಿದ್ದಿತೋ ಎಂಬಂತೆ ಅವರ ಒಳಸ್ವರೂಪಗಳಲ್ಲಿ ಅಷ್ಟೇ ಭೇದವಿದ್ದಿತು. ಅವರ ಪರಸ್ಪರ ಪರಿಚಯದ ಮೊದಲ ಹಂತದಲ್ಲಿ, ಹಾಲ್‌ಗ್ರೇವನೇ ಸ್ನೇಹ ಬೆಳೆಸಲು ಸ್ವಲ್ಪಮಟ್ಟಿಗೆ ಮುಂದೆ ಬಂದಿದ್ದನು; ಆದರೆ ಫೀಬೆ ತನ್ನ ಮುಚ್ಚುಮರೆಯಿಲ್ಲದ ಸರಳ ಸ್ವಭಾವಕ್ಕೆ ವ್ಯತಿರಿಕ್ತವೆನ್ನುವಂತೆ ಸ್ವಲ್ಪ ಹೆಚ್ಚಾಗಿಯೆ ಹಿಂಜರಿದಿದ್ದಳು. ಅವರು ಬಹುಮಟ್ಟಿಗೆ ಪ್ರತಿನಿತ್ಯವೂ ಸಂಧಿಸಿ, ದಯೆ ಸ್ನೇಹ ಸಲಿಗೆಗಳಿಂದಲೇ ಮಾತಾಡುತ್ತಿದರೂ ಕೂಡ, ತಾನು ಅವನನ್ನು ಚೆನ್ನಾಗಿ ಬಲ್ಲೆ ಎನ್ನುವಮಟ್ಟಿಗೆ ಅವಳಿಗಿನ್ನೂ ತೃಪ್ತಿಯಾಗಿರಲಿಲ್ಲ.

ಕಲಾವಿದನು ತನ್ನ ಆತ್ಮಚರಿತ್ರೆಯ ಸ್ವಲ್ಪ ವಿಷಯವನ್ನು ಅಷ್ಟೇನೂ ಕ್ರಮವಲ್ಲದ ರೀತಿಯಲ್ಲಿ ಫೀಬೆಗೆ ತಿಳಿಸಿದ್ದನು. ತರುಣನಾಗಿದ್ದ ಅವನ ವೃತ್ತಿ ಈಗ ಯಾವ ನೆಲೆಯನ್ನು ಮುಟ್ಟಿದ್ದಿತೋ ಅಲ್ಲಿಗೇ ನಿಂತುಹೋಗಿತ್ತು; ಆದರೂ; ಒಂದು ಆತ್ಮಚರಿತ್ರೆಯ ಸಂಪುಟವನ್ನು ತುಂಬುವಷ್ಟು ಘಟನಾವಳಿ ಅವನ ಜೀವನದಲ್ಲಿ

ಮಾರ್ಪಡಿಸುತ್ತಿದ್ದುದರಿಂದ ಅರಳುತ್ತಿದ್ದ ಈ ಕನ್ಯಾಕುಸುಮವು ಇನ್ನೂ ಚಿಕ್ಕ ವಯಸ್ಸಿನ ಹೆಚ್ಚು ಸುಖಿಯಾದವನೊಬ್ಬನ ವಕ್ಷಸ್ಥಲದ ಮೇಲೆ ಇದ್ದರೆ ಬಾಡುವುದಕ್ಕಿಂತ ಹೆಚ್ಚು ಬೇಗನೆ ಬಾಡಿ ಕಳೆಗುಂದುವುದು ಅನಿವಾರ್ಯವಾಗಿತ್ತು. ಊರ ಹೊರಗಡೆ ಸಂಚಾರಮಾಡಿ ಹಳ್ಳಿಯದರಂತಹ ಗಾಳಿಯನ್ನೋ ಇಲ್ಲವೆ ಕರಾವಳಿಯಲ್ಲಿ ಸುತ್ತಾಡುತ್ತ ಕಡಲಗಾಳಿಯನ್ನೋ ಸೇವಿಸುವುದು; ಹೊಸ ಇಂಗ್ಲೆಂಡಿನ ಹುಡುಗಿಯರಲ್ಲಿ ಸಹಜವಾದ ನೈಸರ್ಗಿಕ ಪ್ರೇರಣೆಗನುಗುಣವಾಗಿ ಆಗಾಗ್ಗೆ ಆಧ್ಯಾತ್ಮಿಕ ಅಥವಾ ದಾರ್ಶನಿಕ ವಿಷಯಸಂಬಂಧವಾದ ಉಪನ್ಯಾಸವನ್ನು ಕೇಳಲು ಹೋಗುವುದು; ಏಳು ಮೈಲಿಗಳ ಉದ್ದಕ್ಕೂ ಹಬ್ಬಿದ್ದ ಅಖಂಡವಾದ ಪ್ರಕೃತಿದೃಶ್ಯಪರಂಪರೆಯನ್ನು ನೋಡುವುದು; ಅಥವಾ ಸಂಗೀತ ಕಚೇರಿ ಕೇಳುವುದು; ಅಥವಾ ಊರಿನ ಅಂಗಡಿಗಳಲ್ಲಿ ವ್ಯಾಪಾರಮಾಡುವುದಕ್ಕೆ ಹೊರಟು, ಉತ್ಕೃಷ್ಟವಾದ ಮಾರಾಟದ ಸರಕನ್ನುಳ್ಳ ಎಲ್ಲ ಅಂಗಡಿಗಳನ್ನೂ ಚೆನ್ನಾಗಿ ಶೋಧಿಸಿ, ಮನೆಗೆ ಒಂದು 'ರಿಬ್ಬನ್' (ಬಟ್ಟೆಪಟ್ಟಿ) ತರುವುದು; ಇಲ್ಲವೆ ತನ್ನ ಕೋಣೆಯಲ್ಲಿ ಕುಳಿತು ಬೈಬಲ್ಲನ್ನು ಓದಲು ಸ್ವಲ್ಪ ಹೊತ್ತನ್ನು ವಿನಿಯೋಗಿಸುವುದು; ತನ್ನ ತಾಯಿಯನ್ನೂ ತನ್ನ ತವರೂರನ್ನೂ ಕುರಿತು ನೆನೆಯಲು ಇನ್ನು ಸ್ವಲ್ಪ ಹೆಚ್ಚು ಹೊತ್ತನ್ನು ಕವಿಯುವುದು– ಮುಂತಾಗಿ ಆಗೊಮ್ಮೆ ಈಗೊಮ್ಮೆ ತನ್ನ ಚುರುಕಾದ ಪ್ರೇರಣೆಗಳಂತೆ ನಡೆದುಕೊಳ್ಳುತ್ತಾ, ಮೇಲ್ಕಂಡಂತಹ ನೈತಿಕ ಔಷಧಗಳನ್ನು ಫೀಬೆ ತೆಗೆದುಕೊಳ್ಳದೆಹೋಗಿದ್ದಿದ್ದರೆ, ನಾವು ಕಾಣುತ್ತಿದ್ದ ಫೀಬೆಯ ಬೇರೆಯಾಗಿರುತ್ತಿದ್ದಳು: ಅವಳು ಕೃಶಳಾಗಿ, ಬಿಳಿಚಿಕೊಂಡು ಅಸಹ್ಯ ಹುಟ್ಟಿಸುವ ಮುಖಹೊಂದಿರುತ್ತಿದ್ದಳು; ಉಲ್ಲಾಸರಹಿತವಾದ ಭವಿಷ್ಯವನ್ನೂ ವೃದ್ಧಕನ್ಯೆಯಾಗಿ ಉಳಿಯುವುದನ್ನೂ ಸೂಚಿಸುವ ವಿಚಿತ್ರವಾದ, ಲಜ್ಜೆಯಿಂದ ಕೂಡಿದ ರೀತಿಗಳಲ್ಲಿ ನಡೆದು ಕೊಳ್ಳುತ್ತಿದ್ದಳು.

ಇದ್ದದ್ದರಲ್ಲಿಯೇ ಒಂದು ಮಾರ್ಪಾಟು ಗೋಚರವಾಗತೊಡಗಿತ್ತು; ಅದರಿಂದ ನಷ್ಟ ಹೊಂದಿದ ರಮ್ಯತೆ ಅದಕ್ಕಿಂತ ಅಮೂಲ್ಯವಾದ ಮತ್ತೊಂದು ರಮ್ಯಗುಣದಿಂದ ಸರಿಹೊಂದಿದರೂ ಕೂಡ, ಆ ಮಾರ್ಪಾಟಿಗಾಗಿ ಸ್ವಲ್ಪ ವ್ಯಸನಪಡಬೇಕಾಗಿತ್ತು. ಅವಳು ಯಾವಾಗಲೂ ಗೆಲವಾಗಿರುತ್ತಿರಲಿಲ್ಲ, ಕೆಲವು ವೇಳೆ ಚಿಂತಾಮಗ್ನಳಾಗಿರುತ್ತಿದ್ದಳು; ಒಟ್ಟಿನ ಮೇಲೆ, ಕ್ಲಿಫರ್ಡನೇನೋ ಅವಳ ಶುದ್ಧವಾದ ಉಲ್ಲಾಸಕ್ಕಿಂತ ಅವಳ ಚಿಂತಾಭಾವವನ್ನೇ ಹೆಚ್ಚಾಗಿ ಮೆಚ್ಚಿಕೊಂಡಿದ್ದನು; ಏಕೆಂದರೆ, ಆಗ ಅವಳು ಅವನನ್ನು ಚೆನ್ನಾಗಿ, ಹೆಚ್ಚು ಸೂಕ್ಷ್ಮವಾಗಿ ಅರ್ಥಮಾಡಿಕೊಂಡು, ಕೆಲವು ವೇಳೆ ಅವನ ಸ್ವಭಾವವನ್ನು ಅವನಿಗೇ ವಿವರಿಸಿ

ಕಸುಬಾಗಿ ಇಟ್ಟುಕೊಂಡಿದ್ದನು. ಅಂಚೆಯ ಹಡಗಿನಲ್ಲಿ ಯಾವುದಾದರೂ ಒಂದು ಪ್ರಕಾರದ ಹೆಚ್ಚಿನ ಅಧಿಕಾರಿಯ ಕೆಲಸದಲ್ಲಿದ್ದುಕೊಂಡು, ಅವನು ಯೂರೋಪುಖಂಡಕ್ಕೆ ಹೋಗಿ ಬಂದಿದ್ದನು; ಹಿಂದಿರುಗಿ ಬರುವ ಮುನ್ನ, ಇಟಲಿ ದೇಶವನ್ನೂ ಫ್ರಾನ್ಸ್ ಮತ್ತು ಜರ್ಮನಿ ದೇಶಗಳ ಕೆಲವು ಭಾಗಗಳನ್ನೂ ನೋಡಲು ಅವಕಾಶ ಮಾಡಿಕೊಂಡಿದ್ದನು. ಆಮೇಲಿನ ಒಂದು ಕಾಲದಲ್ಲಿ ಫೂರಿಯೆರ್ ಪಂಥದ ಸಮತಾವಾದಿಗಳ ಸಮುದಾಯದ ನಡುವೆ ಕೆಲವು ತಿಂಗಳುಗಳನ್ನು ಕಳೆದಿದ್ದನು. ತೀರ ಇತ್ತೀಚೆಗೆ, ಸುಪ್ತ್ಯಾವಹನ ವಿದ್ಯೆಯ ಮೇಲೆ ಸಾರ್ವಜನಿಕದಲ್ಲಿ ಭಾಷಣಗಳನ್ನು ಕೊಡುವ ಉದ್ಯೋಗವನ್ನೂ ಕೈಗೊಂಡಿದ್ದನು; ಆ ಶಾಸ್ತ್ರದಲ್ಲಿ ಅವನಿಗೆ ವಿಶೇಷವಾದ ಸಾಮರ್ಥ್ಯವಿದ್ದಿತು. (ಅವನು ಒಮ್ಮೆ ನೆಲ ಕೆರೆಯುತ್ತಿದ್ದ ಹುಂಜನ ಮೇಲೆ ಆ ವಿದ್ಯೆಯನ್ನು ಪ್ರಯೋಗಿಸಿ ಅದಕ್ಕೆ ನಿದ್ದೆ ಬರಿಸಿ, ಫೀಬೆಯ ಎದುರಿನಲ್ಲಿ ತನ್ನ ವಿದ್ಯೆಯನ್ನು ನಿಜವೆಂದು ದೃಢಪಡಿಸಿ, ಅವಳಿಗೆ ನಂಬಿಕೆ ಹುಟ್ಟಿಸಿದ್ದನು.,)

ಛಾಯಾಚಿತ್ರ ಕಲಾವಿದನಾಗಿ ಅವನ ಜೀವನದಲ್ಲಿನ ಸದ್ಯದ ಅವಸ್ಥೆಯು ಅವನ ದೃಷ್ಟಿಯಲ್ಲಿಯೇ ಹಿಂದಿನ ಅವಸ್ಥೆಗಳಿಗಿಂತ ಹೆಚ್ಚು ಮುಖ್ಯವೆನಿಸಿರಲಿಲ್ಲ, ಹೆಚ್ಚು ಸ್ಥಿರವಾಗಿ ಉಳಿಯುವ ಸಂಭವವನ್ನು ಹೊಂದಿರಲಿಲ್ಲ. ಹೊಟ್ಟೆಯ ಪಾಡಿಗಾಗಿ ಮಾತ್ರ ಸಂಪಾದನೆ ಮಾಡಲು ಹೊರಟಿದ್ದ ಸಾಹಸಿಗನೊಬ್ಬನ ನಿರ್ಲಕ್ಷ್ಯಭಾವದ ಉತ್ಸಾಹದ ಚುರುಕಿನಿಂದ ಅದನ್ನು ಅವನು ಕೈಗೊಂಡಿದ್ದನು. ಅಷ್ಟೇ ಸುಲಭವಾಗಿ ಬೇರೆಯ ಮಾರ್ಗದಲ್ಲಿ ಅನ್ನ ಹುಟ್ಟಿಸಿಕೊಳ್ಳಲು ಅವನಿಗೆ ಇಷ್ಟವಾದಲ್ಲಿ, ಆ ವೃತ್ತಿಯನ್ನು ಅವನು ಅಷ್ಟೇ ನಿರ್ಲಕ್ಷ್ಯವಾಗಿ ಅತ್ತ ಕಿತ್ತೊಗೆದುಬಿಡುತ್ತಿದ್ದನು. ಆದರೆ, ಈ ತರುಣನ ವಿಚಾರದಲ್ಲಿ ಒಂದು ಸಂಗತಿ ಅತ್ಯಂತ ಗಮನಾರ್ಹವಾಗಿದ್ದುದ್ದು ಮಾತ್ರವಲ್ಲದೆ, ಅವನ ಅಸಾಧರಣವಾದ ಸಮಾಧಾನಚಿತ್ತವನ್ನು ತೋರಿಸುತ್ತಿತ್ತು; ಅದೇನೆಂದರೆ, ತನ್ನ ಈ ಎಲ್ಲ ಪರಿವರ್ತನೆಗಳ ನಡುವೆಯೂ ಅವನು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡಿರಲಿಲ್ಲ. ಅವನಿಗೆ ಸ್ವಂತ ಮನೆಯೆಂಬುದಿರಲಿಲ್ಲ; ಸತತವಾಗಿ ತನ್ನ ನೆಲೆಯನ್ನು ಬದಲಾಯಿಸುತ್ತಿದ್ದುದರಿಂದ, ಅವನು ಸಾರ್ವಜನಿಕ ಅಭಿಪ್ರಾಯಕ್ಕಾಗಲಿ ವ್ಯಕ್ತಿಗಳಿಗಾಗಲಿ ಜವಾಬುದಾರ ನಾಗಿರಲಿಲ್ಲ; ಒಂದು ಹೊರವೇಷವನ್ನು ಕಳಚಿಹಾಕಿ, ಇನ್ನೊಂದನ್ನು ತೊಟ್ಟು, ಮೂರನೆಯದೊಂದನ್ನು ಧರಿಸಲು ಅದನ್ನೂ ತೆಗದುಹಾಕಿಬಿಡುತ್ತಿದ್ದನು; ಇಷ್ಟಾದರೂ ಕೂಡ, ಅವನು ತನ್ನ ಅಂತರಾತ್ಮನಿಗೆ ವಿರೋಧವಾಗಿ ನಡೆದುಕೊಂಡಿರಲಿಲ್ಲ, ತನ್ನ ಆತ್ಮಸಾಕ್ಷಿಗೆ ಅನುಗುಣವಾಗಿಯೂ ಸಾಗಿದ್ದನು. ಈ

ಸಾಗಿತ್ತು. ಸ್ಪೆಯ್ನ್ ದೇಶದ ಗಿಲ್ ಬ್ಲಾಸ್ (Gil Blas) ಎಂಬಾತನನ್ನು ಕುರಿತ ರಮ್ಯ ಸಾಹಸಕಥೆಯ ಮಾದರಿಯನ್ನು ಅಮೇರಿಕದ ಸಮಾಜಕ್ಕೂ ನಡೆನುಡಿಗಳಿಗೂ ಹೊಂದುವಂತೆ ತಿರುಗಿಸಿಕೊಂಡದ್ದೇ ಆದರೆ ಅದು ರಮ್ಯಕಥೆಯಾಗಿ ಉಳಿಯದು. ನಮ್ಮಲ್ಲಿ ಅನೇಕ ವ್ಯಕ್ತಿಗಳ ಅನುಭವವು ಇತರರಿಗೆ ತಿಳಿಯಹೇಳಲು ಯೋಗ್ಯವಲ್ಲ ಎಂದು ನಾವು ಭಾವಿಸುತ್ತೇವೆ; ಆದರೆ, ಅದು ಆ ಸ್ಪೆಯ್ನಿನ ವೀರನ ಪೂರ್ವಜೀವನದಲ್ಲಿನ ಏರುಪೇರಾದ ಘಟನೆಗಳಿಗೆ ಸಮನಾಗಿರುವುದು; ಆದರೆ ಅವುಗಳ ಪರಿಣಾಮವಾದ ಅಂತಿಮಜಯ, ಅಥವಾ ಅವು ಯಾವತ್ತ ಸಾಗುವುವೋ ಆ ಗುರಿ, ಯಾವ ಕಾದಂಬರಿಕಾರನೇ ಆಗಲಿ ತನ್ನ ಕಥಾನಾಯಕನಿಗಾಗಿ ಕಲ್ಪಿಸಿಕೊಳ್ಳುವ ಅಂತ್ಯಕ್ಕಿಂತ ಹೋಲಿಸಲಾಗದಷ್ಟು ಉಚ್ಚತರವಾಗಿರಬಹುದು. ಹಾಲ್‌ಗ್ರೇವನು ತನ್ನ ಹುಟ್ಟಿನ ಹೆಚ್ಚಳವನ್ನು ಕುರಿತು ಹೇಳಿಕೊಳ್ಳುವಂತಿರಲಿಲ್ಲ; ಹೇಳಿಕೊಂಡರೆ, ತನ್ನ ಹುಟ್ಟು ಅತ್ಯಂತ ಕೀಳು ಎಂದು ಹೇಳಿಕೊಳ್ಳಬೇಕಾಗಿತ್ತು; ತನ್ನ ವಿದ್ಯಾಭ್ಯಾಸದ ವಿಷಯವಾದರೂ ಅಷ್ಟೆ, ಅತ್ಯಂತ ಅಲ್ಪವೆಂದು ಹೇಳಿಕೊಳ್ಳಬೇಕಾಗಿತ್ತು: ಚಳಿಗಾಲದ ಕೆಲವು ತಿಂಗಳಕಾಲ ಜಿಲ್ಲೆಯ ಶಾಲೆಯೊಂದಕ್ಕೆ ಹೋಗಿ ಅದನ್ನು ಸಂಪಾದಿಸಿದ್ದನು. ಇದನ್ನೆಲ್ಲಾ ಅವನು ಫೀಬೆಗೆ ಸ್ವಲ್ಪ ಹೆಮ್ಮೆಯಿಂದಲೇ ತಿಳಿಸಿದ್ದನು. ಅವನು ಹುಡುಗನಾಗಿದ್ದಾಗ ಚಿಕ್ಕಂದಿನಲ್ಲಿಯೇ ತನ್ನ ದಾರಿಯನ್ನು ತಾನೇ ಹುಡುಕಿಕೊಳ್ಳಬೇಕಾಗಿ ಬಂದು, ಅವನು ತನ್ನ ಕಾಲಮೇಲೆ ತಾನು ನಿಲ್ಲತೊಡಗಿದ್ದನು; ಅವನ ನೈಸರ್ಗಿಕವಾದ ಸಂಕಲ್ಪ ಬಲಕ್ಕೆ ಆ ಸ್ಥಿತಿ ಚೆನ್ನಾಗಿಯೆ ಹೊಂದಿಕೊಂಡಿತ್ತು. ಅವನಿಗೆ ಈಗ ಕೇವಲ ಇಪ್ಪತ್ತೆರಡು ವರ್ಷವಯಸ್ಸು (ಇಪ್ಪತ್ತೆರಡಾಗಲು ಇನ್ನು ಕೆಲವು ತಿಂಗಳಿದ್ದುವು; ಅಂಥವನ ಬದುಕಿನಲ್ಲಿ ಅವು ವರ್ಷಗಳಿಗೆ ಎಣೆ); ಆದಾಗ್ಯೂ, ಅವನು ಈಗಾಗಲೇ, ಮೊದಲನೆಯದಾಗಿ, ಒಬ್ಬ ಹಳ್ಳಿಯ ಶಾಲಾ ಉಪಾಧ್ಯಾಯನಾಗಿ ಕೆಲಸ ಮಾಡಿದ್ದನು; ಆಮೇಲೆ, ಹಳ್ಳಿಯ ಅಂಗಡಿಯಲ್ಲಿ ಮಾರಾಟಗಾರನಾಗಿದ್ದನು; ಅದೇ ಕಾಲದಲ್ಲಿ ಅಥವಾ ಆಮೇಲೆ, ಹಳ್ಳಿಗಾಡಿನ ಸುದ್ದಿ ಪತ್ರಿಕೆಯೊಂದರ ರಾಜಕೀಯ ಸಂಪಾದಕನಾಗಿದ್ದನು. ಆ ತರುವಾಯ, ಕನೆಕ್ಟಿಕಟ್ ಸಂಸ್ಥಾನದಲ್ಲಿ ಪನ್ನೀರನ್ನೂ ಇತರ ಸುಗಂಧದ್ರವ್ಯಗಳನ್ನೂ ತಯಾರುಮಾಡುವ ಸಂಸ್ಥೆಯೊಂದರಲ್ಲಿ ತಿರುಗು ವ್ಯಾಪಾರಿಯಾಗಿ ಕೆಲಸಕ್ಕೆ ಸೇರಿ ಹೊಸ ಇಂಗ್ಲೆಂಡಿನಲ್ಲಿಯೂ ಮಧ್ಯಭಾಗದ ಸಂಸ್ಥಾನಗಳಲ್ಲಿಯೂ ಸುತ್ತಾಡಿದ್ದನು. ಅವನು ಪ್ರಾಸಂಗಿಕವಾಗಿ ದಂತ ವೈದ್ಯವನ್ನು ವ್ಯಾಸಂಗ ಮಾಡಿದ್ದುದಲ್ಲದೆ, ವಿಶೇಷವಾಗಿ ನಮ್ಮ ಒಳನಾಡಿನ ನದಿಗಳ ಪಕ್ಕದ ಕಾರ್ಖಾನೆಗಳ ಪಟ್ಟಣಗಳಲ್ಲಿ ಆ ವಿದ್ಯೆಯನ್ನು ಬಹುವಾಗಿ ಹೊಗಳಿಸಿಕೊಳ್ಳುವಮಟ್ಟಿಗೆ ಒಂದು

ಅವನು ಎಂದೂ ಅವರನ್ನು ಸ್ವಲ್ಪವೂ ಗಣನೆಗೆ ತಂದುಕೊಂಡಿರಲಿಲ್ಲ; ಆದ್ದರಿಂದ, ತನ್ನ ಸ್ನೇಹಿತರಲ್ಲಿಯೂ ತನ್ನಲ್ಲಿಯೂ ಆತ ಅಷ್ಟೊಂದು ಆಸಕ್ತಿ ವಹಿಸಲು ಕಾರಣವೇನೆಂಬುದನ್ನು ಫೀಬೆ ಊಹಿಸಿಕೊಳ್ಳಲಾರದೆಹೋದಳು.

ಕಲಾವಿದನು ಫೀಬೆಯನ್ನು ಭೇಟಿಮಾಡಿದ ಸಂದರ್ಭಗಳಲ್ಲೆಲ್ಲ ಯಾವಾಗಲೂ ಕ್ಲಿಫರ್ಡನ ಯೋಗಕ್ಷೇಮವನ್ನು ಕುರಿತು ವಿಶೇಷವಾಗಿ ವಿಚಾರಿಸುತ್ತಿದ್ದನು; ಭಾನುವಾರದ ಹಬ್ಬದೂಟದ ಸಂದರ್ಭವನ್ನು ಬಿಟ್ಟರೆ, ಉಳಿದಂತೆ ಅವನು ಕ್ಲಿಫರ್ಡನನ್ನು ನೋಡುತ್ತಿದ್ದುದೇ ವಿರಳ.

"ಆತ ಈಗಲೂ ಸುಖವಾಗಿರುವ ಹಾಗೆಯೇ ಕಾಣುತ್ತಾನೆಯೋ?" ಎಂದು ಒಂದು ದಿನ ಅವನು ಪ್ರಶ್ನಿಸಿದನು.

"ಮಗುವಿನಷ್ಟೆ ಸುಖವಾಗಿದ್ದಾನೆ. ಆದರೆ, ಮಗುವಿನಷ್ಟೆ ಬಹು ಸುಲಭವಾಗಿ ಅವನ ಮನಸ್ಸು ಕಲಕಿಹೋಗುತ್ತದೆ" ಎಂದು ಫೀಬೆ ಉತ್ತರ ಕೊಟ್ಟಳು.

"ಅವನ ಮನಸ್ಸು ಹೇಗೆ ಕಲಕುತ್ತದೆ? ಹೊರಗಿನ ವಿಷಯಗಳಿಂದಲೇ, ಅಥವಾ ಒಳಗಿನ ಆಲೋಚನೆಗಳಿಂದಲೇ?" ಎಂದು ಹಾಲ್‌ಗ್ರೇವ್ ವಿಚಾರ ಮಾಡಿದನು.

ಫಿಬೆ ಬಹಳ ಸರಳವಾಗಿ ಚುರುಕಿನಿಂದ ಉತ್ತರಕೊಟ್ಟಳು: "ಅವನ ಆಲೋಚನೆಗಳನ್ನು ನಾನು ಕಾಣಲಾರೆ! ಕಾಣುವುದಾದರೂ ಹೇಗೆ? ಸೂರ್ಯನನ್ನು ಮೋಡ ಬಂದು ಕವಿಯುವ ಹಾಗೆ, ಅವನ ಮನಸ್ಸು ಇದ್ದಕ್ಕಿದ್ದ ಹಾಗೆ ಊಹಿಸಬಹುದಾದ ಯಾವ ಕಾರಣವೂ ಇಲ್ಲದೆ ಬದಲಾಗಿಬಿಡುತ್ತದೆ. ಈಚೆಗೆ ನಾನು ಅವನನ್ನು ಮೊದಲಿಗಿಂತ ಚೆನ್ನಾಗಿ ಅರಿತುಕೊಳ್ಳತೊಡಗಿದ್ದೇನೆ; ಆದ್ದರಿಂದ, ಅವನ ಮನೋಭಾವಗಳನ್ನು ಬೆದಕಿನೋಡುವುದು ಅಷ್ಟು ಸರಿಯಲ್ಲವೆಂದು ನನಗೆ ತೋರುತ್ತದೆ. ಅವನು ಅಪಾರ ದುಃಖಕ್ಕೀಡಾಗಿದ್ದಾನೆ; ಆ ದುಃಖದಲ್ಲಿ ಮಿಂದು ಅವನ ಹೃದಯ ಗಂಭೀರವಾಗಿದೆ, ಪವಿತ್ರವಾಗಿದೆ. ಅವನು ಉಲ್ಲಾಸದಿಂದಿರುವಾಗ– ಸೂರ್ಯನ ಪ್ರಕಾಶವು ಅವನ ಮನಸ್ಸಿನ ಕತ್ತಲಕೋಣೆಯನ್ನು ಬೆಳಗಿದಾಗ– ಆ ಬೆಳಕು ಮುಟ್ಟಿರುವವರೆಗೂ ಇಣಿಕಿ ನೋಡಲು ನಾನೂ ಧೈರ್ಯ ಮಾಡುತ್ತೇನೆ; ಆದರೆ ಅದಕ್ಕಿಂತ ಮುಂದಕ್ಕೆ ಕಣ್ಣು ಹಾಯಿಸುವುದಿಲ್ಲ. ನೆರಳು ಬಿದ್ದಿರುವೆಡೆ ಪವಿತ್ರ ಭೂಮಿ!"

"ಈ ಭಾವವನ್ನು ಎಷ್ಟು ಚೆನ್ನಾಗಿ ತಿಳಿಯಹೇಳುತ್ತೀ ನೀನು! ಆ ಮನೋಭಾವನೆಯನ್ನು ನಾನು ಹೊಂದಿರದಿದ್ದರೂ, ಅದನ್ನು ಅರ್ಥಮಾಡಿಕೊಳ್ಳಬಲ್ಲೆ ನಾನು. ನಿನಗಿರುವ ಅವಕಾಶಗಳು ನನಗಿದ್ದಿದ್ದರೆ, ಯಾವ

ಸತ್ಯಾಂಶವನ್ನು ಪರಿಗಣಿಸದೆ, ಹಾಲ್‌ಗ್ರೇವ್‌ನನ್ನು ಅರಿಯುವುದು ಅಸಾಧ್ಯವಾಗಿತ್ತು. ಹೆಪ್ಸಿಬಾ ಅದನ್ನು ಕಂಡುಕೊಂಡಿದ್ದಳು. ಅದೇ ರೀತಿ ಫೀಬೆಯೂ ಬೇಗನೆಯೇ ಅದನ್ನು ಅರಿತುಕೊಂಡು, ಅಂತಹ ನಿಶ್ಚಿತಸ್ವಭಾವವು ಯಾವ ಬಗೆಯ ನಂಬಿಕೆಯನ್ನು ಹುಟ್ಟಿಸುತ್ತದೆಯೋ ಅದನ್ನು ಅವನಲ್ಲಿ ಇಟ್ಟಿದ್ದಳು. ಆದರೂ ಕೂಡ, ಅವನ ಬಗೆಗೆ ಅವಳು ಚಕಿತಳಾಗುತ್ತಿದ್ದಳು, ಹಾಗೂ ಕೆಲವುವೇಳೆ ಅವನಿಂದ ದೂರ ಸರಿಯುತ್ತಿದ್ದಳು; ಇದಕ್ಕೆ ಕಾರಣ, ಅವನು ಯಾವ ಜೀವನನಿಯಮವನ್ನು ಅಂಗೀಕರಿಸಿದ್ದನೋ ಅದರಲ್ಲಿ ಅವನಿಗೆ ನಿಷ್ಠೆಯಿಲ್ಲ ಎಂಬ ಸಂದೇಹವಲ್ಲ, ಆದರೆ ಅದು ತನ್ನ ನಿಯಮಕ್ಕೆ ಭಿನ್ನವಾದದ್ದು ಎಂಬ ಭಾವನೆ. ರೂಢ ಮೂಲವಾದದ್ದರಲ್ಲಿ ಅವನಿಗೆ ಪೂಜ್ಯಭಾವನೆಯಿರಲಿಲ್ಲ; ಕ್ಷಣಕಾಲ ಮುಂದಾಗಿ ಮುನ್ನೆಚ್ಚರಿಕೆ ಪಡೆದು, ಅದು ತನ್ನ ಅಧಿಕಾರವನ್ನು ಸ್ಥಾಪಿಸಿಕೊಂಡು ಸ್ಥಿರವಾಗಿರಲು ಪ್ರಯತ್ನಪಟ್ಟಲ್ಲಿ ಮಾತ್ರ, ಅವನಿಂದ ಬಾಧಕವಿರಲಿಲ್ಲ. ಇದರಿಂದಾಗಿ, ಅವನು ಅವಳ ನೆಮ್ಮದಿಯನ್ನು ಕೆಡಿಸಿ, ಅವಳ ಸುತ್ತ ಮುತ್ತಣ ಪ್ರತಿಯೊಂದನ್ನೂ ಕದಲಿಬಿಡುವ ಹಾಗೆ ಕಾಣುತ್ತಿದ್ದನು.

ಇದೂ ಅಲ್ಲದೆ, ಅವನು ಸ್ವಭಾವತಃ ಸ್ನೇಹಪರ ಎಂದು ಅವಳು ಭಾವಿಸಿಯೆ ಇರಲಿಲ್ಲ. ಅವನು ಎಲ್ಲವನ್ನೂ ಶಾಂತನಾಗಿ ಉದ್ವೇಗವಿಲ್ಲದೆ ಪರಿಶೀಲಿಸುತ್ತಿದ್ದನು. ಅವನ ಕಣ್ಣು ತನ್ನನ್ನು ನಿರುಕಿಸುತ್ತಿದೆ ಎಂಬುದನ್ನು ಅವಳು ಹಲವುವೇಳೆ ತನ್ನ ಅನುಭವಕ್ಕೆ ತಂದುಕೊಳ್ಳುತ್ತಿದ್ದಳು; ಆದರೆ ಅವನ ಹೃದಯ ತನ್ನನ್ನು ಸೋಕಿದ್ದನ್ನು ಅವಳು ಅರಿಯುತ್ತಿದ್ದುದ್ದು ವಿರಳ, ಅಥವಾ ಎಂದೂ ಅರಿತವಳೇ ಅಲ್ಲ. ಅವನು ಹೆಪ್ಸಿಬಾ ಮತ್ತು ಅವಳ ಸಹೋದರನಲ್ಲಿ, ಹಾಗೂ ಫೀಬೆಯಲ್ಲಿ, ಒಂದು ನಿರ್ದಿಷ್ಟ ರೀತಿಯ ಆಸಕ್ತಿಯನ್ನು ವಹಿಸಿದ್ದನು; ಅವನು ಅವರನ್ನು ಗಮನವಿಟ್ಟು ಪರೀಕ್ಷಿಸುತ್ತಿದ್ದನು; ಅವರ ವ್ಯಕ್ತಿತ್ವಗಳ ಅತ್ಯಲ್ಪ ಸಂಗತಿ ಕೂಡ ತನ್ನ ಗಮನದಿಂದ ತಪ್ಪಿಸಿಕೊಂಡು ಹೋಗಲು ಅವಕಾಶಕೊಡುತ್ತಿರಲಿಲ್ಲ. ಅವರಿಗೆ ತನ್ನ ಕೈಲಾದಷ್ಟು ಒಳಿತನ್ನು ಮಾಡಲು ಅವನು ಸಿದ್ಧನಾಗಿದ್ದನು; ಆದರೆ, ಏನೇ ಆಗಲಿ, ಅವನು ಎಂದೂ ನಿಷ್ಕೃಷ್ಟವಾಗಿ ಅವರ ಪಕ್ಷವನ್ನು ವಹಿಸಿದ್ದಿಲ್ಲ; ಅಲ್ಲದೆ, ತಾನು ಅವರನ್ನು ಹೆಚ್ಚುಹೆಚ್ಚಾಗಿ ಅರಿತಂತೆಲ್ಲಾ ಆ ಅರಿವಿನ ಪ್ರಮಾಣಕ್ಕೆ ಅನುಗುಣವಾಗಿ ಅವರನ್ನು ಹೆಚ್ಚು ಹೆಚ್ಚು ಪ್ರೀತಿಸುತ್ತೇನೆ ಎಂಬ ಬಗೆಗೆ ಯಾವುದೇ ನಂಬಲರ್ಹವಾದ ಸೂಚನೆಯನ್ನೂ ಅವನು ತೋರಿಸುತ್ತಿರಲಿಲ್ಲ. ತನ್ನ ಅವರ ಪರಸ್ಪರ ಸಂಬಂಧದಲ್ಲಿ ಅವನು ತನ್ನ ಮನಸ್ಸಿಗೆ ಆಹಾರವನ್ನು ಹುಡುಕುತ್ತಿದ್ದಂತೆ ಕಂಡುಬರುತ್ತಿತ್ತು, ಹೃದಯಕ್ಕೆ ಪೋಷಣೆಯನ್ನಲ್ಲ. ಅವರು ಮಾನವಪ್ರೇಮಕ್ಕೆ ಅರ್ಹರಾದವರೆಂದು

ಇನ್ನೂ ಕಠಿಣವಾಗಿಲ್ಲ, ಅದನ್ನು ತಾನು ಇಷ್ಟಪಟ್ಟ ಆಕೃತಿಗೆ ಕರುವಿಡಬಹುದು, ಎಂದು ಕಲ್ಪಿಸಿಕೊಳ್ಳುತ್ತಾನೆ. ಹಾಲ್‌ಗ್ರೇವನ ವಿಚಾರದಲ್ಲಿ ಅದು ಹಾಗೆಯೇ ಇದ್ದಿತು. ಅವನು ಪ್ರಪಂಚದ ವಾರ್ಧಿಕ್ಯವನ್ನು ಕುರಿತು ಜ್ಞಾನಿಯಂತೆ ಮಾತಾಡಬಲ್ಲವನಾಗಿದ್ದನು, ಆದರೆ ವಾಸ್ತವವಾಗಿ ಅವನಿಗೆಂದೂ ತಾನು ಹೇಳಿದ್ದರಲ್ಲಿಯೇ ನಂಬಿಕೆಯಿರಲಿಲ್ಲ; ಅವನು ಇನ್ನೂ ತರುಣನಾಗಿಯೇ ಇದ್ದನು; ಆದ್ದರಿಂದ, ಪ್ರಪಂಚವನ್ನು– ನರೆತಗಡ್ಡದ, ದುರ್ವ್ಯಸನಿಯಾದ, ಗಳಿತಶರೀರಿಯಾಗಿದ್ದರೂ ಗೌರವಾರ್ಹನಾಗಿಲ್ಲದ ಮುದುಕನಂತಿದ್ದ ಪ್ರಪಂಚವನ್ನು– ಎಳೆಯ ಹುಡುಗನಿಗೆ ಸಮವೆಂದು ಭಾವಿಸಿದ್ದನು; ಅದು ಹೇಗೆ ಪರಿಣಮಿಸಬೇಕೋ ಹಾಗೆ ಅದನ್ನು ತಿದ್ದಲು ಸಾಧ್ಯವಿದ್ದಿತು, ಆದರೆ ಹಾಗೆ ಪರಿಣಮಿಸುವ ಅತ್ಯಂತ ದೂರದ ಆಶೋತ್ತರವನ್ನೂ ಅದು ಇನ್ನೂ ತೋರಿಸಿರಲಿಲ್ಲ. ಹಳೆಯ ಕೆಟ್ಟ ರೀತಿಯಲ್ಲಿಯೇ ಎಂದೆಂದಿಗೂ ತೆವಳುತ್ತಾ ಸಾಗುವುದು ನಮ್ಮ ಹಣೆಯಬರಹವಲ್ಲ; ಇದೀಗಲೇ, ತನ್ನ ಜೀವಿತಕಾಲದಲ್ಲಿಯೇ ಸಾಧಿಸಬೇಕಾದ ಸುವರ್ಣಯುಗವನ್ನು ಸಾರಿತರುವ ಹರಿಕಾರರು ಎಲ್ಲೆಲ್ಲಿಯೂ ಇದ್ದಾರೆ– ಎಂಬ ಪ್ರಜ್ಞಾವಿಶೇಷ ಅಥವಾ ಅಂತರ್ಬೋಧೆ ಇಲ್ಲದಿರುವುದಕ್ಕಿಂತಲೂ ಅವನು ಹುಟ್ಟದಿರುವದೇ ಮೇಲು; ಪ್ರಬುದ್ಧನಾದ ಮನುಷ್ಯನು ಅದನ್ನು ಸಂಪೂರ್ಣವಾಗಿ ತೊರೆದುಬಿಡುವುದಕ್ಕಿಂತಲೂ ಕೂಡಲೆ ಸಾಯುವುದೇ ಮೇಲು. ಹಿಂದೆಂದಿಗಿಂತಲೂ ಹೆಚ್ಚಾಗಿ ಈ ಯುಗದಲ್ಲಿ, ಪಾಚಿಗಟ್ಟಿ ಕೊಳೆತು ನಾರುವ ಹಿಂದಿನದೆಲ್ಲವನ್ನೂ ಕಿತ್ತೊಗೆಯಬೇಕು, ನಿರ್ಜೀವವಾದ ಸಂಸ್ಥೆಗಳೆಲ್ಲವನ್ನೂ ದಾರಿಗಡ್ಡಲಾಗದಂತೆ ಅತ್ತ ನೂಕಿಬಿಡಬೇಕು, ಅವುಗಳ ಸತ್ತ ಕಳೇಬರಗಳನ್ನೆಲ್ಲಾ ಹೂಳಿಬಿಡಬೇಕು, ಪ್ರತಿಯೊಂದೂ ನವೋನವವಾಗಿ ಪ್ರಾರಂಭವಾಗಬೇಕು– ಎಂದು ಹಾಲ್‌ಗ್ರೇವನಿಗೆ ತೋರಿತು; ಆ್ಯಡಮ್ಮನ ಮೊಮ್ಮಕ್ಕಳ ಕಾಲದಿಂದೀಚೆಗೆ ಪ್ರತಿ ಶತಮಾನದಲ್ಲಿಯೂ ಆಶಾಭರಿತರಾದವರಿಗೆ ನಿಸ್ಸಂದೇಹವಾಗಿಯೂ ಹಾಗೆ ತೋರಿರಬೇಕು.

ಮುಖ್ಯವಾದ ಅಂಶದ ವಿಚಾರದಲ್ಲಿ,– ಅದನ್ನು ಸಂದೇಹಪಡಲು ನಾವು ಬದುಕಿರುವುದೇ ಬೇಡ!– ಎಂದರೆ, ಮುಂಬರಲಿರುವ ಇನ್ನೂ ಉತ್ತಮವಾದ ಶತಮಾನಗಳ ವಿಚಾರದಲ್ಲಿ, ಕಲಾವಿದನು ಖಂಡಿತವಾಗಿಯೂ ಸರಿಯಾದ ಅಭಿಪ್ರಾಯಹೊಂದಿದ್ದನು. ಅವನ ಅಭಿಪ್ರಾಯದ ದೋಷವೆಂದರೆ, ಪ್ರಾಚೀನಕಾಲಪುರುಷನು ತನ್ನ ಹರಿದುಹೋದ ಉಡುಪುಗಳನ್ನು ತೇಪೆಹಾಕಿಕೊಂಡು ಕ್ರಮೇಣ ಹೊಸತುಮಾಡಿಕೊಳ್ಳುವ ಬದಲು ಅದನ್ನು

ಅಳುಕೂ ಇಲ್ಲದೆ ಕ್ಲಿಫರ್ಡನ ಮನಸ್ಸಿನ ಅಂತರಾಳವನ್ನು ನನ್ನ ಅಳೆಯುವ ಸಾಮರ್ಥ್ಯವಿರುವಷ್ಟೂ ಪೂರ್ತಿಯಾಗಿ ಅಳೆದು ನೋಡಿಬಿಡುತ್ತಿದ್ದೆ!" ಎಂದನು ಆ ಕಲಾವಿದ.

"ನೀನು ಹಾಗೆ ಬಯಸುವುದು ಎಷ್ಟು ವಿಚಿತ್ರವಾಗಿದೆ! ಅಣ್ಣ ಕ್ಲಿಫರ್ಡ್ ನಿನಗೇನಾಗಬೇಕು?" ಎಂದು ಅನೈಚ್ಛಿಕವಾಗಿ ನುಡಿದಳು ಫೀಬೆ.

"ಓ, ಏನೂ ಇಲ್ಲ– ಅಂಥದೇನೂ ಇಲ್ಲ!" ಎಂದು ಹಾಲ್‌ಗ್ರೇವ್ ಮುಗುಳುನಗೆ ನಗುತ್ತ ಉತ್ತರಕೊಟ್ಟನು: "ಇದು ವಿಚಿತ್ರವಾದ, ಅರ್ಥವಾಗದ ಪ್ರಪಂಚ, ಅಷ್ಟೆ! ಅದನ್ನು ನೋಡಿದಷ್ಟೂ ಅದು ನನಗೆ ಬಿಡಿಸಲಾಗದ ಒಗಟೆಯಾಗಿ ಕಾಣುತ್ತದೆ; ಒಬ್ಬನಿಗೆ ಎಷ್ಟರಮಟ್ಟಿಗೆ ಬೆರಗು ಉಂಟಾಗುತ್ತದೆಯೋ ಅಷ್ಟರಮಟ್ಟಿಗೆ ಅವನು ವಿವೇಕಿ ಎಂದು ನನಗೆ ಸಂಶಯವಾಗತೊಡಗಿದೆ. ಗಂಡಸರು, ಹೆಂಗಸರು, ಮಕ್ಕಳೂ ಕೂಡ, ಎಷ್ಟು ವಿಚಿತ್ರ ಪ್ರಾಣಿಗಳೆಂದರೆ, ಅವರನ್ನು ತಾನು ನಿಜವಾಗಿ ಬಲ್ಲೆ ಎಂದು ಯಾರೂ ಖಂಡಿತವಾಗಿರಲಾರನು; ಅಲ್ಲದೆ, ಅವರು ಈಗ ಹೇಗೆ ಕಾಣಬರುತ್ತಾರೆ ಎಂಬಷ್ಟರಿಂದ ಅವರು ಎಂಥವರು ಎಂಬುದನ್ನು ಊಹಿಸಲೂ ಆರರು. ಜಡ್ಜ್ ಪಿನ್ಚನ್! ಕ್ಲಿಫರ್ಡ್! ಅವರು ಎಂತಹ ತೊಡಕಿನ ಸಮಸ್ಯೆಯನ್ನು– ತೊಡಕುಗಳ ತೊಡಕನ್ನು– ನಮ್ಮ ಮುಂದಿಡುತ್ತಾರೆ! ಅದನ್ನು ಬಿಡಿಸಲು, ಚಿಕ್ಕ ಹುಡುಗಿಗೆ ಇರುವ ಹಾಗೆ, ಸಹಜವಾಗಿ ಚಿಮ್ಮುವ ಸಹಾನುಭೂತಿ ಬೇಕು. ನನ್ನಲ್ಲಿ ಯಾವುದೇ ಬಗೆಯ ಅಂತಃಪ್ರೇರಣೆ ಎಂದೂ ಉಂಟಾಗದು; ಹೆಚ್ಚೆಂದರೆ, ನನಗೆ ಸೂಕ್ಷ್ಮಗ್ರಹಣಶಕ್ತಿಯಿದೆ, ಚುರುಕು ಬುದ್ಧಿಯಿದೆ, ಅಷ್ಟೆ. ನನ್ನಂತಹ ಕೇವಲ ನೋಟಗಾರನು ತಪ್ಪು ತಿಳಿಯುವುದು ಬಹುಮಟ್ಟಿಗೆ ಖಂಡಿತ."

ಈಗ, ಅವರು ಈವರೆಗೆ ಪ್ರಸ್ತಾವಮಾಡಿದ್ದ ವಿಷಯಗಳಷ್ಟು ವಿಷಣ್ಣವಲ್ಲದ ವಿಷಯಗಳನ್ನು ಕುರಿತು ಕಲಾವಿದನು ಸಂಭಾಷಿಸತೊಡಗಿದನು. ಫೀಬೆಯೂ ಅವನೂ ಒಂದಿಗೆಯೆ ಎಳೆಯ ಪ್ರಾಯದವರಾಗಿದ್ದರು; ಅಲ್ಲದೆ, ಅಪಕ್ವವಾದ ಜೀವನಾನುಭವವನ್ನು ಹೊಂದಿದ್ದ ಹಾಲ್‌ಗ್ರೇವನು ತನ್ನ ಯೌವನದ ಸುಂದರವಾದ ಹುಮ್ಮಸ್ಸನ್ನು ಸಂಪೂರ್ಣವಾಗಿ ಹಾಳು ಮಾಡಿಕೊಂಡಿರಲಿಲ್ಲ; ಒಂದು ಸಣ್ಣದಾದ ಹೃದಯದಿಂದ, ಕಲ್ಪನಾವಿಲಾಸದಿಂದ, ಹೊರಚಿಮ್ಮಿ ಬರುತ್ತಿದ್ದ ಆ ಹುಮ್ಮಸ್ಸು ವಿಶ್ವಾದ್ಯಂತ ಹರಡಿಕೊಂಡು, ವಿಶ್ವವು ಸೃಷ್ಟಿಯಾದ ಮೊದಲ ದಿನದಂದು ಎಷ್ಟು ಪ್ರಕಾಶಮಾನವಾಗಿದ್ದಿತೋ ಅದನ್ನು ಅಷ್ಟೇ ಪ್ರಕಾಶಮಾನವಾಗಿ ಮಾಡುತ್ತಿದ್ದಿತು. ಮಾನವನ ಸ್ವಂತ ಯೌವನವು ಪ್ರಪಂಚದ ಯೌವನವೆ; ಕಡೆಯ ಪಕ್ಷ ಅವನು ಹಾಗೆಂದು ಭಾವಿಸಿಕೊಳ್ಳುತ್ತಾನೆ; ಹಾಗೂ, ಭೂಮಿಯ ಕಗ್ಗಲ್ಲಿನಂತಹ ಸತ್ವವು

ವಿಚಾರಶೀಲನೆಂದು ಅವನು ಭಾವಿಸಿಕೊಂಡಿದ್ದನು, ವಿಚಾರಪರಪ್ರವೃತ್ತಿಯೂ ಅವನಲ್ಲಿದ್ದಿತು; ಆದರೆ, ತನ್ನದೇ ಆದ ಮಾರ್ಗವನ್ನು ಕಂಡುಹಿಡಿದುಕೊಳ್ಳಬೇಕಾಗಿದ್ದ ಅವನು, ವಿದ್ಯಾವಂತನಾದವನು ಯಾವ ಘಟ್ಟದಲ್ಲಿ ವಿಚಾರ ಮಾಡ ತೊಡಗುತ್ತಾನೆಯೋ ಆ ಘಟ್ಟವನ್ನು ಬಹುಶಃ ಇನ್ನೂ ಮುಟ್ಟಿರಲಿಲ್ಲ. ಅವನ ಶೀಲಸ್ವಭಾವದ ನಿಜವಾದ ಬೆಲೆ ಅವನ ಆಂತರಿಕಶಕ್ತಿಯ ಆಳವಾದ ಅರಿವಿನಲ್ಲಿ ಅಡಗಿದ್ದಿತು; ಆ ಅರಿವಿನಿಂದಾಗಿ, ಅವನ ಹಿಂದಿನ ಪರಿವರ್ತನೆಗಳೆಲ್ಲವೂ ಸುಮ್ಮನೆ ಉಡುಪು ಬದಲಾಯಿಸಿದಂತೆ ತೋರುತ್ತಿದ್ದುವು. ಆ ಸ್ವಭಾವದ ಬೆಲೆ ಅವನ ಉತ್ಸಾಹದಲ್ಲಿಯೂ ನೆಲಸಿತ್ತು; ಆ ಉತ್ಸಾಹ ಅದೆಷ್ಟು ಶಾಂತವಾಗಿತ್ತೆಂದರೆ, ಅದು ತನ್ನಲ್ಲಿದೆಯೆಂಬ ಅರಿವು ಕೂಡ ಅವನಿಗಿರಲಿಲ್ಲ; ಆದರೆ ಅವನು ಕೈಯಿಟ್ಟ ಪ್ರತಿಯೊಂದಕ್ಕೂ ಆ ಉತ್ಸಾಹವು ಒಂದು ಸ್ನೇಹಸಂಬಂಧವನ್ನು ಕಲ್ಪಿಸುತ್ತಿತ್ತು. ಅಲ್ಲದೆ, ಆ ಸ್ವಭಾವಮೌಲ್ಯವು ಅವನ ಸ್ವಂತದ ಹೆಬ್ಬಯಕೆಯಲ್ಲಿ ಇತರ ಉದಾರವಾದ ಪ್ರೇರಣೆಗಳೊಂದಿಗೆ ನೆಲಸಿತ್ತು. ಆ ಹೆಬ್ಬಯಕೆ ಅವನಿಗೆಂತೋ ಅಂತು ಇತರರಿಗೂ ಕಣ್ಮರೆಯಾಗಿ ಅಡಗಿಕೊಂಡಿತ್ತು; ಆದರೆ, ತಾತ್ತ್ವಿಕನಾಗಿದ್ದ ಅವನನ್ನು ಯಾವುದಾದರೂ ಒಂದು ಕಾರ್ಯ ಸಾಧ್ಯವಾದ ಉದ್ದೇಶಕ್ಕಾಗಿ ಹೋರಾಡುವ ವೀರನನ್ನಾಗಿ ಮಾರ್ಪಡಿಸಬಲ್ಲ ಒಂದು ಬಗೆಯ ಪರಿಣಾಮಕಾರಿತ್ವವು ಆ ಹೆಬ್ಬಯಕೆಯಲ್ಲಿ ಸುಳಿದಾಡುತ್ತಿತ್ತು. ಒಟ್ಟಿನ ಮೇಲೆ, ಅವನ ಸಂಸ್ಕೃತಿಯಲ್ಲಿಯೂ ಸಂಸ್ಕೃತಿಯ ಅಭಾವದಲ್ಲಿಯೂ– ಅವನ ಒರಟಾದ, ಅನಾಗರಿಕವಾದ, ಅಸ್ಪಷ್ಟವಾದ ತತ್ತ್ವವಿಚಾರದಲ್ಲಿಯೂ, ಹಾಗೂ ಅದರ ಪ್ರವೃತ್ತಿಗಳಲ್ಲಿ ಕೆಲವನ್ನು ತಡೆಗಟ್ಟುವ ಕಾರ್ಯನಿಷ್ಠ ಅನುಭವದಲ್ಲಿಯೂ; ಮಾನವನ ಯೋಗಕ್ಷೇಮವನ್ನು ಕುರಿತ ಅವನ ಉದಾರವಾದ ಉತ್ಸಾಹದಲ್ಲಿಯೂ, ಹಾಗೂ ಮಾನವನ ಉಪಯೋಗಕ್ಕೆಂದು ಯುಗ ಯುಗಗಳಿಂದ ಸ್ಥಿರವಾಗಿ ನೆಲಸಿದ್ದ ಎಲ್ಲದರ ಬಗ್ಗೆಯೂ ಅವನು ತಳೆದಿದ್ದ ನಿರ್ಲಕ್ಷ್ಯಭಾವದಲ್ಲಿಯೂ; ಅವನ ಶ್ರದ್ಧೆಯಲ್ಲಿ, ಅವನ ಅಶ್ರದ್ಧೆಯಲ್ಲಿ; ಅವನು ಹೊಂದಿದ್ದುದರಲ್ಲಿ, ಹೊಂದಿರದೆ ಇದ್ದುದರಲ್ಲಿ– ಇವೆಲ್ಲದರಲ್ಲಿಯೂ ಈ ಕಲಾವಿದನು ತನ್ನ ಹುಟ್ಟು ನಾಡಿನಲ್ಲಿದ್ದ ಸಮಾನಸ್ಕಂಧರ ಪ್ರತಿನಿಧಿಯಾಗಿ ಮುಂದೆ ಬಂದು ನಿಲ್ಲಲು ತಕ್ಕವನಾಗಿದ್ದನು.

ಅವನ ವೃತ್ತಿಜೀವನವನ್ನು ಮೊದಲೇ ಚಿತ್ರಿಸುವುದು ಕಷ್ಟವಾದೀತು. ಪ್ರಪಂಚದ ಬೆಲೆಯುಳ್ಳ ವಸ್ತುಗಳನ್ನು ಅವನ ಕೈಗೆ ಸಿಕ್ಕುವಂತೆ ಮಾಡುವ ಗುಣಗಳು ಹಾಲ್‌ಗ್ರೇವನಲ್ಲಿ ಇದ್ದಂತೆ ಕಂಡುಬಂದುವು; ಅದರಲ್ಲಿಯೂ, ಸಿಕ್ಕಿದ್ದನ್ನು ತೆಗೆದುಕೊಳ್ಳಬಲ್ಲ ಕೈಗೆ ಎಲ್ಲವೂ ಉಚಿತವಾಗಿಯೇ ದೊರೆಯುವ ನಾಡಿನಲ್ಲಿ,

ಕಳಚಿಹಾಕಿ ಹೊಸ ಉಡುಪನ್ನು ಧರಿಸುವುದನ್ನು ಹಿಂದಿನ ಅಥವಾ ಮುಂದಿನ ಯಾವುದೇ ಕಾಲಕ್ಕಿಂತ ಹೆಚ್ಚಾಗಿ ಇಂದಿನ ಕಾಲವು ನೋಡುವ ಅದೃಷ್ಟವನ್ನು ಪಡೆದಿದೆ– ಎಂದು ಊಹಿಸುತ್ತಿದ್ದುದು; ಮತ್ತು ತನ್ನ ಸ್ವಂತ ಹ್ರಸ್ವಜೀವನದ ಅವಧಿಯನ್ನೇ ಅನಂತಸಾಧನೆ ಸಿದ್ಧಿಗಳ ಅಳತೆಗೋಲಾಗಿ ಉಪಯೋಗಿಸಿದ್ದು; ಹಾಗೂ, ಎಲ್ಲಕ್ಕಿಂತ ಹೆಚ್ಚಾಗಿ, ದೃಷ್ಟಿ ಪಥದಲ್ಲಿದ್ದ ಆ ಮಹೋದ್ದೇಶದ ಸಾಧನೆಯ ಪರವಾಗಿ ಅಥವಾ ವಿರುದ್ಧವಾಗಿ ತಾನೇ ಸ್ವತಃ ಹೋರಾಡುವುದು ಅದರ ಆಗುಹೋಗುಗಳನ್ನು ಹೇಗಾದರೂ ಇತ್ಯರ್ಥ ಮಾಡತಕ್ಕದ್ದು ಎಂದು ಕಲ್ಪಿಸಿಕೊಳ್ಳುತ್ತಿದ್ದುದು. ಆದರೂ, ಹಾಗೆ ಆಲೋಚನೆಮಾಡುವುದು ಅವನಿಗೆ ಒಳಿತಾಗಿತ್ತು. ಅವನ ಸ್ವಭಾವದ ಪ್ರಶಾಂತಗುಣದಲ್ಲಿ ಬೆರೆತು ಒಂದಾಗಿದ್ದ, ನಿಶ್ಚಿತ ವಿಚಾರಧೋರಣೆ ಹಾಗೂ ವಿವೇಕಗಳ ಸ್ವರೂಪವನ್ನು ಹೊಂದಿದ್ದ ಈ ಉತ್ಸಾಹವು ಅವನ ಯೌವನವನ್ನು ಪರಿಶುದ್ಧವಾಗಿರಿಸಲು ಸಹಾಯಕವಾಗಿತ್ತು, ಮತ್ತು ಅವನ ಆಶೆ ಆಕಾಂಕ್ಷೆಗಳನ್ನು ಎತ್ತರಕ್ಕೇರಿಸಿತ್ತು. ಉರುಳಿಹೋದ ವರ್ಷಗಳು ಅವನ ಮೇಲೆ ಹೆಚ್ಚು ಭಾರವಾಗಿ ಕುಳಿತಂತಾಗಿ, ಅನಿವಾರ್ಯವಾಗಿ ದೊರಕುವ ಅನುಭವವು ಅವನ ಮುಂಚಿನ ಶ್ರದ್ಧೆ ವಿಶ್ವಾಸಗಳನ್ನು ಮಾರ್ಪಡಿಸಿದಾಗಲೂ, ಅವನ ಭಾವನೆಗಳಲ್ಲಿ ಯಾವ ಕಠಿನವಾದ ಅನಿರೀಕ್ಷಿತವಾದ ಕ್ರಾಂತಿಯೂ ಉಂಟಾಗದಂತೆ ಸಾಗುತ್ತಿತ್ತು ಆ ಮಾರ್ಪಾಟು. ಉಜ್ಜ್ವಲವಾಗುತ್ತಿರುವ ಮಾನವನ ಭವಿಷ್ಯದಲ್ಲಿ ಅವನಿಗೆ ಇನ್ನೂ ನಂಬಿಕೆ ಉಳಿದಿರುವುದು; ಅಲ್ಲದೆ, ತನ್ನಂತೆಯೆ ಮಾನವನ ಅಸಹಾಯಕತೆಯನ್ನು ಅವನು ಕಂಡುಕೊಳ್ಳಬೇಕಾದ ಅಗತ್ಯವುಂಟಾಗಿ, ಬಹುಶಃ ಅವನನ್ನು ಇನ್ನೂ ಹೆಚ್ಚಾಗಿ ಪ್ರೀತಿಸುವನು; ಹಾಗೂ, ಅವನು ಜೀವನವನ್ನು ಪ್ರಾರಂಭಿಸಿದಾಗ ಯಾವ ಒಂದು ದರ್ಪಯುಕ್ತವಾದ ಶ್ರದ್ಧೆಯಿದ್ದಿತೋ ಅದು ಜೀವನದ ಅಂತ್ಯಭಾಗದಲ್ಲಿ ವಿನಯವಂತ ಶ್ರದ್ಧೆಗೆ ಎಡೆಗೊಡುವುದು; ಆಗ, 'ಮಾನವನು ಉತ್ತಮವಾಗಿ ನಿರ್ವಹಿಸಿದ ಪ್ರಯತ್ನವೆಲ್ಲ ಒಂದು ಬಗೆಯ ಸ್ವಪ್ನವನ್ನು ಮಾತ್ರ ಸಾಧಿಸಬಲ್ಲನು, ಸತ್ಯಪ್ರಪಂಚದ ಏಕೈಕ ನಿರ್ಮಾಪಕನೆಂದರೆ ದೇವರು'– ಎಂಬುದು ಗೋಚರಕ್ಕೆ ಬರುವುದು.

ಹಾಲ್‌ಗ್ರೇವ್ ಓದಿದ್ದುದು ಬಹಳ ಸ್ವಲ್ಪ; ಆ ಸ್ವಲ್ಪವೂ ಕೂಡ ಜೀವನದ ರಾಜಮಾರ್ಗದಲ್ಲಿ ಸಾಗುವ ಸಮಯದಲ್ಲಿ; ಅಲ್ಲಿ, ಅವನ ಗ್ರಂಥಗಳ ರಹಸ್ಯಾರ್ಥವೂ ಜನಜಂಗುಳಿಯ ಗೊಡ್ಡುಹರಟೆಯೂ ಬೆರೆತುಹೋಗಿದ್ದುವು; ಇದರ ಪರಿಣಾಮವಾಗಿ, ಸರಿಯಾಗಿ ತಮ್ಮದೇ ಆಗಿರಬಹುದಾದ ಯಾವುದೇ ಅರ್ಥವನ್ನು ಅತ್ತ ಅದೂ ಇತ್ತ ಇದೂ ಕಳೆದುಕೊಳ್ಳುವ ಸಂಭವವಿದ್ದಿತು. ತಾನೊಬ್ಬ

ಅವನಿಗೆ ಆಗಮಾಡಿಕೊಟ್ಟಿದ್ದಳು. ತನಗೆ ಅಂತರ್ದೃಷ್ಟಿಯಿದೆಯೆಂದು ಅವನ ಹೆಮ್ಮೆ; ಅದರ ನೆರವಿನಿಂದ ತಾನು ಅವಳ ಒಳಹೊರಗುಗಳನ್ನೆಲ್ಲಾ ಭೇದಿಸಿ ನೋಡಬಲ್ಲೆನೆಂದೂ, ಮಗುವಿನ ಕಥೆಯ ಪುಸ್ತಕವೊಂದರ ಪುಟವನ್ನು ಓದುವ ಹಾಗೆ ಅವಳನ್ನು ತಾನು ಪರಿಶೀಲಿಸಿ ಅರ್ಥಮಾಡಿಕೊಳ್ಳಬಲ್ಲೆನೆಂದೂ ಅವನು ಕಲ್ಪಿಸಿಕೊಂಡಿದ್ದನು. ಆದರೆ ಯಾವ ಮುಚ್ಚು ಮರೆಯೂ ಇಲ್ಲದ ಈ ತಿಳಿಯಾದ ಸ್ವಭಾವಗಳು ಅನೇಕ ವೇಳೆ ಆಳವಾಗಿರುವಂತೆ ಕಂಡು ಮೋಸಮಾಡುತ್ತವೆ; ಚಿಲುಮೆಯ ತಳದ ನೊರಜು ಕಲ್ಲುಗಳು ನಾವು ಎಣಿಸಿರುವುದಕ್ಕಿಂತ ಹೆಚ್ಚು ದೂರದಲ್ಲಿರುತ್ತವೆ. ಈ ರೀತಿ, ಫೀಬೆಯ ಶಕ್ತಿ ಸಾಮರ್ಥ್ಯಗಳ ವಿಚಾರದಲ್ಲಿ ಅವನು ಯಾವ ತೀರ್ಮಾನಕ್ಕೆ ಬೇಕಾದರೂ ಬಂದಿರಲಿ, ಅವಳ ಯಾವುದೋ ಒಂದು ಮೂಕ ಮೋಹಕಗುಣದಿಂದ ವಂಚಿತನಾಗಿ, ಪ್ರಪಂಚದಲ್ಲಿ ತಾನು ಏನನ್ನು ಸಾಧಿಸಬೇಕೆಂದು ಕನಸುಕಾಣುತ್ತಿದ್ದನೋ ಅದರ ವಿಚಾರವಾಗಿ ಅವಳೊಂದಿಗೆ ಮನಬಿಚ್ಚಿ ಮಾತಾಡಿದ್ದನು. ಇನ್ನೊಂದು ಆತ್ಮಕ್ಕೆ ಎಂತೋ ಅಂತೆ ತನ್ನ ಆಂತರ್ಯವನ್ನೆಲ್ಲಾ ಹೊರಸುರಿದು ಬರಿದುಮಾಡಿಕೊಂಡನು. ಅವನು ಫೀಬೆಯೊಂದಿಗೆ ಮಾತಾಡುವಾಗ ಅವಳನ್ನು ಮರೆತಿದ್ದಿರುವುದೂ ಬಹುಮಟ್ಟಿಗೆ ಸಾಧ್ಯ; ಉತ್ಸಾಹ ಹಾಗೂ ಭಾವಾವೇಶಗಳಿಂದ ಸಹಾನುಭೂತಿ ಉಕ್ಕಿದಾಗ, ತಾನು ಕಂಡ ಮೊದಲ ಸುರಕ್ಷಿತ ಪಾತ್ರಕ್ಕೆ ಹರಿದುಹೋಗಲು ಅವನ ಸರ್ವಸ್ವವೂ ಅನಿವಾರ್ಯವಾದ ವಿಚಾರಧಾರೆಯ ಪ್ರವೃತ್ತಿಯಿಂದ ಪ್ರೇರಿತವಾಗುತ್ತಿತ್ತು. ಆದರೆ, ತೋಟದ ಬೇಲಿಯ ಕಂಡಿಗಳ ಮೂಲಕ ನೀವು ಅವರನ್ನು ಇಣಿಕಿ ನೋಡಿದ್ದುದೇ ಆದರೆ, ಆ ತರುಣನ ಉತ್ಸಾಹವನ್ನೂ ಏರಿದ್ದ ಮುಖವರ್ಣವನ್ನೂ ಕಂಡು, ಆ ಎಳೆಯ ಬಾಲಿಕೆಯನ್ನು ಅವನು ಒಲಿಸಿಕೊಳ್ಳುತ್ತಿದ್ದಾನೆ ಎಂದು ಊಹಿಸುತ್ತಿದ್ದಿರಿ!

ಕಡೆಯಲ್ಲಿ, ಹಾಲ್‌ಗ್ರೇವ್ ಯಾವುದೋ ಒಂದು ವಿಷಯವನ್ನು ಪ್ರಸ್ತಾಪಿಸಿದನು; ಅದರಿಂದಾಗಿ, ಅವನು 'ಅಕ್ಕ' ಹೆಪ್ಸಿಬಾಳೊಂದಿಗೆ ಮೊದಲ ಸಲ ಪರಿಚಯ ಬೆಳಸಿಕೊಂಡದ್ದು ಹೇಗೆ, ಈಗ ಈ ಹಾಳುಬಿದ್ದ ಪಿನ್ಚನ್ ಭವನದಲ್ಲಿ ವಾಸಮಾಡಲು ಇಷ್ಟಪಟ್ಟದ್ದು ಏಕೆ ಎಂದು ಅವನನ್ನು ಕೇಳಲು ಫೀಬೆಗೆ ಅನುಕೂಲವಾಯಿತು. ಅವನು ಅವಳಿಗೆ ನೇರವಾಗಿ ಉತ್ತರಕೊಡದೆ, ಇದುವರೆಗೆ ಅವನ ಮಾತುಕತೆಯ ವಿಷಯವಾಗಿದ್ದ ಭವಿಷ್ಯತ್ತಿನ ವಿಚಾರದಿಂದ ಗತಕಾಲದ ಪ್ರಭಾವಗಳ ವಿಚಾರವಾಗಿ ಮಾತನಾಡತೊಡಗಿದನು. ವಾಸ್ತವವಾಗಿ, ಒಂದು ವಿಷಯವು ಇನ್ನೊಂದರ ಪ್ರತಿಧ್ವನಿ ಮಾತ್ರವಷ್ಟೆ.

ಅವನು ತನ್ನ ಹಿಂದಿನ ಸಂಭಾಷಣೆಯಲ್ಲಿ ತೋರಿದ್ದ ಶ್ರದ್ಧಾಸಕ್ತಿಯ

ಆ ಗುಣಗಳುಳ್ಳವನಿಗೆ ಎಲ್ಲವೂ ದೊರೆತೇ ದೊರೆಯುವುವು. ಆದರೆ ಈ ವಿಚಾರಗಳಲ್ಲಿ ಖಂಡಿತವಾಗಿ ಏನನ್ನೂ ಹೇಳಲಾಗದು; ಅದೊಂದು ಸಂತೋಷದ ಸಂಗತಿ. ಜೀವನದಲ್ಲಿ ಬಹುಮಟ್ಟಿಗೆ ಹೆಜ್ಜೆ ಹೆಜ್ಜೆಗೂ ಸರಿಸುಮಾರು ಹಾಲ್‌ಗ್ರೇವನಷ್ಟು ವಯಸ್ಸಿನ ತರುಣರನ್ನು ನಾವು ಸಂಧಿಸುತ್ತೇವೆ; ಅವರ ವಿಚಾರದಲ್ಲಿ ಆಶ್ಚರ್ಯಕರ ಸಂಗತಿಗಳು ನಡೆಯುತ್ತವೆ ಎಂದು ನಾವು ನಿರೀಕ್ಷಿಸುತ್ತೇವೆ; ಆದರೆ, ಅವರ ಕುರಿತು ಬಹಳವಾಗಿ, ಎಚ್ಚರಿಕೆಯಿಂದ, ವಿಚಾರಣೆಮಾಡಿದ ಮೇಲೆ ಕೂಡ ಅವರ ವಿಷಯವಾಗಿ ಇನ್ನೊಂದು ಹೆಚ್ಚಿನಮಾತು ನಮಗೆ ಕೇಳಿಬರುವ ಸಂಭವವಿರುವುದಿಲ್ಲ. ಯೌವನದ ಮತ್ತು ಭಾವೋದ್ರೇಕದ ಉಕ್ಕು, ಬುದ್ಧಿಯ ಹಾಗೂ ಕಲ್ಪನಾಶಕ್ತಿಯ ಹೊಸ ಮೆರುಗು,– ಇವು ಅವರಿಗೆ ಒಂದು ಹುಸಿ ತೇಜಸ್ಸನ್ನು ನೀಡುತ್ತವೆ; ಅದು ಅವರನ್ನೂ ಇತರರನ್ನು ತಿಳಿಗೇಡಿಗಳನ್ನಾಗಿ ಮಾಡಿ ಮೋಸಗೊಳಿಸುತ್ತವೆ. ಕೆಲವು ಬಗೆಯ ಚೀಟಿಯಬಟ್ಟೆ, 'ಕ್ಯಾಲಿಕೊ' ಬಟ್ಟೆ, 'ಗಿಂಗಮ್' ಬಟ್ಟೆ– ಇವುಗಳ ಹಾಗೆ ಅವು ಹೊಚ್ಚ ಹೊಸತಾಗಿದ್ದಾಗ ಮೊದಲ ಸಲ ಸೊಗಸಾಗಿ ಕಾಣುತ್ತವೆ; ಆದರೆ ಬಿಸಿಲನ್ನೂ ಮಳೆಯನ್ನೂ ತಡೆಯಲಾರವು; ಒಗೆದ ಮೇಲೆ ಬಹು ಸಾಧಾರಣವಾಗಿ ಕಾಣುತ್ತವೆ.

ಆದರೆ, ಹಾಲ್‌ಗ್ರೇವನೊಡನೆ ನಮ್ಮ ವ್ಯವಹಾರವೆಲ್ಲ ಇಂದಿನ ಮಧ್ಯಾಹ್ನಾತ್ಪರ ಪಿನ್ಚನ್ ಉದ್ಯಾನದ ಬಳಿ ಮನೆಯಲ್ಲಿ ಅವನು ನಮಗೆ ಹೇಗೆ ಕಂಡುಬರುತ್ತಿರುವನೋ ಅಷ್ಟಕ್ಕೆ ಮಾತ್ರ ಸಂಬಂಧಪಟ್ಟಿದೆ. ಆ ದೃಷ್ಟಿ ಕೋಣದಿಂದ ಅವಲೋಕಿಸಿದರೆ, ಈ ತರುಣನನ್ನು ನೋಡುವುದೇ ಒಂದು ಸಂತೋಷದ ನೋಟವಾಗಿತ್ತು– ಅಷ್ಟೊಂದು ಆತ್ಮವಿಶ್ವಾಸವುಳ್ಳ, ಅಷ್ಟೊಂದು ಪ್ರಶಂಸನೀಯ ಸಾಮರ್ಥ್ಯಗಳ ಸೊಗಸಾದ ತೋರಿಕೆಯುಳ್ಳ, ಅವನ ಸತ್ತ್ವವನ್ನು ಪರೀಕ್ಷೆಗೊಡ್ಡಿದ್ದ ಅನೇಕ ಪರೀಕ್ಷೆಗಳಿಗೆ ಒಳಗಾಗಿದ್ದರೂ ಸ್ವಲ್ಪವೂ ಹಾನಿಹೊಂದದಿದ್ದ ಅವನು ಫೀಬೆಯೊಂದಿಗೆ ಮರುಕದಿಂದ ಮಾತುಕತೆಯಾಡುವುದನ್ನು ನೋಡುವುದೇ ಒಂದು ಸಂತೋಷದ ಸಂಗತಿಯಾಗಿತ್ತು. ಅವನು ವಿಶ್ವಾಸರಹಿತನೆಂದು ಅವಳು ನಿರ್ಣಯಿಸಿದಾಗ, ಅವಳ ಮನಸ್ಸು ಅವನ ಬಗೆಗೆ ನ್ಯಾಯದಿಂದ ಪ್ರವರ್ತಿಸಲಿಲ್ಲವೆನ್ನಬೇಕು; ಅದುಬಿಟ್ಟು, ಅವನು ನಿಜವಾಗಿಯೂ ಹಾಗಿದ್ದುದೇ ಆದರೆ, ಅವನು ಈಗ ಹೆಚ್ಚು ಸ್ನೇಹಶೀಲನಾಗಿದ್ದನೆನ್ನಬೇಕು. ತನ್ನ ಮಟ್ಟಿಗೆ ಅಂಥ ಯಾವ ಉದ್ದೇಶವೂ ಇಲ್ಲದೆ, ಅವನಮಟ್ಟಿಗೂ ಅರಿಯದೆಯೂ ಯಾವ ಉದ್ದೇಶವೂ ಇಲ್ಲದೆ, ಅವಳು ಏಳು ಇಪ್ಪಾರಿನ ಮನೆಯನ್ನು ಅವನ ನಿವಾಸವನ್ನಾಗಿಯೂ, ತೋಟವನ್ನು ಒಂದು ಪರಿಚಿತವಾದ ಸ್ಥಳವನ್ನಾಗಿಯೂ

ಕೈ ನಮ್ಮನ್ನು ತಡೆದು ನಿಲ್ಲಿಸುತ್ತದೆ! ನಾವು ಯಾವ ದಿಕ್ಕಿಗೆ ಬೇಕಾದರೂ ನಮ್ಮ ಕಣ್ಣುಗಳನ್ನು ತಿರುಗಿಸಲಿ, ಮೃತಮಾನವನೊಬ್ಬನ ಬೆಳ್ಳಂಬಿಳಿಚಿಕೊಂಡ, ಶಾಂತಿಹೊಂದದ ಮುಖವು ಅವುಗಳನ್ನು ಎದುರಿಸುತ್ತದೆ; ಹಾಗೂ ನಮ್ಮ ಹೃದಯವನ್ನೇ ಘನಿಸಿಬಿಡುತ್ತದೆ! ಅಲ್ಲದೆ, ನಮ್ಮ ಸ್ವಂತ ಪ್ರಪಂಚದ ಮೇಲೆ ನಮ್ಮ ಸರಿಯಾದ ಪ್ರಭಾವವನ್ನು ಬೀರತೊಡುಗುವುದಕ್ಕೆ ಮುಂಚೆ ನಾವೇ ಸತ್ತುಹೋಗಿರಬೇಕಾಗುತ್ತದೆ; ಆಗ ಅದು ಇನ್ನೆಂದಿಗೂ ನಮ್ಮ ಪ್ರಪಂಚವಾಗಿ ಉಳಿದಿರುವುದಿಲ್ಲ, ಇನ್ನೊಂದು ತಲೆಮಾರಿನ ಪ್ರಪಂಚವಾಗಿಬಿಟ್ಟಿರುತ್ತದೆ; ಅದರ ವ್ಯವಹಾರದಲ್ಲಿ ಕೈಹಾಕಲು ನಮಗೆ ತೃಣಮಾತ್ರ ಅಧಿಕಾರವೂ ಇರದು. ಮೃತಪಟ್ಟವರ ಮನೆಗಳಲ್ಲಿ ನಾವು ವಾಸಮಾಡುತ್ತಿರುತ್ತೇವೆ ಎಂದೂ ನಾನು ಹೇಳುವುದು ಅಗತ್ಯವಾಗಿತ್ತು; ಉದಾಹರಣೆ, ಏಳು ಇಪ್ಪಾರುಗಳ ಈ ಮನೆಯಲ್ಲಿ ಇರುವಂತೆ!"

"ನಾವು ಅವುಗಳಲ್ಲಿ ಹಾಯಾಗಿ ಇರಲು ಸಾಧ್ಯವಿರುವವರೆಗೂ ಯಾಕೆ ವಾಸಮಾಡಬಾರದು?" ಎಂದು ಪ್ರಶ್ನಿಸಿದಳು ಫೀಬೆ.

ಕಲಾವಿದನು ಮುಂದುವರಿಸಿದನು: "ಯಾವ ಮನುಷ್ಯನೂ ಶಾಶ್ವತವಾಗಿ ಇರಲೆಂಬ ಉದ್ದೇಶದಿಂದ ತನ್ನ ಮನೆಯನ್ನು ಕಟ್ಟದಿರುವ ಕಾಲವೂ ಬರುತ್ತದೆ. ಹಾಗೆ ಕಟ್ಟುವುದಾದರೂ ಯಾಕೆ ಕಟ್ಟಬೇಕು ಅವನು? ಅದು ನ್ಯಾಯವಾಗಿರುವ ಪಕ್ಷಕ್ಕೆ, ಚರ್ಮದಿಂದಲೋ 'ಗಟಪರ್ಚ'*ದಿಂದಲೋ ಅಥವಾ ಅತ್ಯಂತ ದೀರ್ಘಕಾಲ ಬಾಳಿಕೆ ಬರುವ ಬೇರೆ ಯಾವುದಾದರೂ ಪದಾರ್ಥದಿಂದಲೋ ತನ್ನ ಮರಿಮಕ್ಕಳಿಗಾಗಿ ಬಾಳಿಕೆಬರುವ ಉಡುಪಿನ ಜೊತೆಗಳನ್ನು ಹೊಲಿಯ ಹಾಕುವುದು ಅಷ್ಟೇ ನ್ಯಾಯವಾಗಿದ್ದೀತು; ಅವರಿಗೆ ಅವು ಉಪಯೋಗ ವಾಗುವುವಲ್ಲದೆ, ಪ್ರಪಂಚದಲ್ಲಿ ಅವನು ಯಾವ ಬಗೆಯ ವ್ಯಕ್ತಿಯಾಗಿ ಕಾಣುವನೋ ಅವರೂ ಕೂಡ ತದ್ವತ್ ಹಾಗೆಯೇ ಕಾಣುವರು. ಪ್ರತಿ ತಲೆಮಾರಿನ ಜನವೂ ತಮ್ಮ ಕಾಲಕ್ಕೆ ಬೇರೆಯಾಗಿ ತಮ್ಮ ಸ್ವಂತ ಮನೆ ಕಟ್ಟಿಕೊಳ್ಳಲು ಅವಕಾಶಕೊಟ್ಟರೆ, ಹಾಗೆ ಕಟ್ಟಿಕೊಳ್ಳಬೇಕೆಂದು ನಿರೀಕ್ಷಿಸಿದರೆ, ಆ ಒಂದು ವ್ಯತ್ಯಾಸವು– ಇತರವುಗಳೊಂದಿಗೆ ಹೋಲಿಸಿದಾಗ ಅದು ತನ್ನ ಮಟ್ಟಿಗೆ ಅದೆಷ್ಟೇ ಅಮುಖ್ಯವಾಗಿ ಕಾಣಲಿ– ನಮ್ಮ ಸಮಾಜಕ್ಕೆ ಅತ್ಯಗತ್ಯವಾಗಿ ಬೇಕಾಗಿರುವ ಪ್ರತಿಯೊಂದು ಸುಧಾರಣೆಯನ್ನೂ ಸೂಚಿಸುತ್ತದೆ. ನಮ್ಮ ನ್ಯಾಯವಿಧಾಯಕ ಸಭಾಭವನಗಳು, ಸರ್ಕಾರದ ಭವನಗಳು, ನ್ಯಾಯಾಲಯಗಳು, ಪುರಭವನ, ಚರ್ಚುಗಳು– ಇವೇ ಮುಂತಾದ ನಮ್ಮ ಸಾರ್ವಜನಿಕ ಕಟ್ಟಡಗಳನ್ನು ಕೂಡ ಕಲ್ಲು ಅಥವಾ ಇಟ್ಟಿಗೆಯಂತಹ ಶಾಶ್ವತವಾಗಿರುವ ಪದಾರ್ಥಗಳಿಂದ ಕಟ್ಟಬೇಕಾದದ್ದು ಆವಶ್ಯಕವೇ

ಧ್ವನಿಯನ್ನು ಮುಂದುವರಿಸುತ್ತಾ, ಗಟ್ಟಿಯಾಗಿ ಹೇಳಿದನು: "ಈ ಭೂತಕಾಲದ ಪ್ರಭಾವದಿಂದ ನಾವು ಪಾರಾಗುವುದು ಎಂದಿಗೂ ಸಾಧ್ಯವೇ ಇಲ್ಲವೆ? ವರ್ತಮಾನದ ಮೃತ ಕಳೇಬರದ ಮೇಲೆ ಅದು ದೈತ್ಯನಂತೆ ಕುಳಿತಿರುತ್ತದೆ! ವಾಸ್ತವವಾಗಿ, ಅದು ಹೇಗಿದೆಯೆಂದರೆ– ಒಬ್ಬ ಎಳೆಯ ದೈತ್ಯನಿದ್ದಾನೆ ಎಂದು ಇಟ್ಟುಕೊಳ್ಳೋಣ; ಅವನ ಅಜ್ಜ ಮುದಿ ದೈತ್ಯ ಸತ್ತು ಬಹಳ ಕಾಲವಾಗಿದೆ; ಅವನ ಶವವನ್ನು ಚೆನ್ನಾಗಿ ಹೂಳಬೇಕಾದ್ದು ಮಾತ್ರ ಉಳಿದಿದೆ; ಆ ಶವವನ್ನು ಹೊತ್ತುಕೊಂಡು ತಿರುಗುತ್ತಾ ತನ್ನ ಶಕ್ತಿಯನ್ನೆಲ್ಲಾ ಹಾಳುಮಾಡಿಕೊಳ್ಳುವಂತೆ ಆ ಎಳೆಯ ದೈತ್ಯನನ್ನು ಬಲಾತ್ಕಾರಪಡಿಸಿದ ಹಾಗಿದೆ. ಒಂದು ಕ್ಷಣಕಾಲ ಮಾತ್ರ ಯೋಚಿಸಿನೋಡು: ಕಳೆದುಹೋದ ಕಾಲಕ್ಕೆ– ಅದನ್ನು ಸರಿಯಾದ ಒಂದು ಮಾತಿನಿಂದ ತಿಳಿಸುವುದಾದರೆ, ಮೃತ್ಯುವಿಗೆ– ನಾವು ಎಂಥ ಗುಲಾಮರಾಗಿದ್ದೇವೆ ಎಂಬುದನ್ನು ಕಂಡುಕೊಂಡರೆ, ನೀನು ಬೆಚ್ಚಿ ಬೆರಗಾಗುವೆ!"

"ಆದರೆ, ಅದು ನನಗೆ ಹಾಗೆ ಕಾಣುತ್ತಿಲ್ಲ" ಎಂದಳು ಫೀಬೆ.

ಹಾಲ್‌ಗ್ರೇವ್ ಮುಂದುವರಿಸಿದನು: "ಹಾಗಿದ್ದ ಮೇಲೆ, ಒಂದು ಉದಾಹರಣೆಯನ್ನು ಕೊಡುತ್ತೇವೆ. ಮೃತನಾದವನೊಬ್ಬನು ಒಂದು ಉಯಿಲನ್ನು ಮಾಡಿರುತ್ತಾನೆ ಎಂದು ಇಟ್ಟುಕೊಳ್ಳೋಣ. ಆ ಸಂದರ್ಭದಲ್ಲಿ ಅವನು ಇನ್ನು ಮುಂದೆ ತನ್ನ ಸ್ವಂತದ್ದಲ್ಲದ ಐಶ್ವರ್ಯವನ್ನು ವಿನಿಯೋಗ ಮಾಡಿದಹಾಗಾಗುತ್ತದೆ; ಹಾಗಿಲ್ಲದೆ, ಅವನು ಸರಿಯಾದ ಉಯಿಲನ್ನು ಮಾಡದೆ ಸತ್ತದ್ದೇ ಆದರೆ, ಅವನಿಗಿಂತಲೂ ಬಲು ಹಿಂದೆಯೇ ಸತ್ತವರ ವಿಚಿತ್ರ ಭಾವನೆಗಳಿಗೆ ಅನುಗುಣವಾಗಿ ಆ ಐಶ್ವರ್ಯವನ್ನು ಹಂಚಲಾಗುತ್ತದೆ. ಇಂತು, ನಮ್ಮೆಲ್ಲರ ಸಂಬಂಧವಾದ ನ್ಯಾಯತೀರ್ಮಾನದ ಪೀಠಗಳ ಮೇಲೆ ಸತ್ತವನೊಬ್ಬನು ಕುಳಿತಿರುವನು; ಜೀವಂತರಾದ ನ್ಯಾಯಾಧೀಶರು ಮಾಡುವ ಕೆಲಸವೆಂದರೆ, ಅವನ ತೀರ್ಮಾನಗಳನ್ನು ಹುಡುಕಿ ತೆಗೆದು ಸುಮ್ಮನೆ ಪುನರುಚ್ಚರಿಸುತ್ತಾರೆ, ಅಷ್ಟೆ! ಸತ್ತವರ ಹಾಸ್ಯೋಕ್ತಿಗಳನ್ನು ಕೇಳಿ ನಾವು ನಗುತ್ತೇವೆ, ಸತ್ತವರ ದುಃಖಕ್ಕಾಗಿ ನಾವು ಅಳುತ್ತೇವೆ! ಸತ್ತ ಮಂದಿಯ ದೈಹಿಕ ಹಾಗೂ ಮಾನಸಿಕ ರೋಗಗಳಿಂದಲೇ ನಾವೂ ನರಳುತ್ತಿದ್ದೇವೆ; ಸತ್ತ ವೈದ್ಯರು ತಮ್ಮ ರೋಗಿಗಳಾದ ಅವರನ್ನು ಯಾವ ಔಷಧಚಿಕಿತ್ಸೆಗಳಿಂದ ಕೊಂದರೋ ಅವುಗಳಿಂದಲೇ ನಾವೂ ಸಾಯುತ್ತೇವೆ! ಜೀವಂತ ದೈವತ್ವವನ್ನು ನಾವು ಸತ್ತ ಜನರ ವಿಧಿಗಳು ಮತ್ತು ನಂಬಿಕೆಗಳಿಗೆ ಅನುಗುಣವಾಗಿ ಪೂಜಿಸುತ್ತೇವೆ. ನಮ್ಮ ಸ್ವಂತದ ಸ್ವತಂತ್ರ ಚಲನೆಯಿಂದ ನಾವು ಏನನ್ನೇ ಮಾಡಹೋಗಲಿ, ಸತ್ತ ಮನುಷ್ಯನೊಬ್ಬನ ಮಂಜಿನಂತೆ ಕೊರೆಯುವ

ಹಿಂದೆ ನಮ್ಮ ತಂದೆ ಹೇಳಿದ್ದನ್ನು ಕೇಳಿದ್ದೆ; ನಾನು ಇಲ್ಲಿ ಬಂದು ಇರುವ ಈ ತಿಂಗಳ ದಿನದಲ್ಲಿ ಎರಡು ಮೂರು ಸಲ ನನ್ನ ಅಕ್ಕ ಹೆಪ್ಸಿಬಾಳಿಂದ ಕೇಳಿದ್ದೇನೆ. ನೀವು ಮಾಟಗಾರ ಎಂದು ಕರೆದಿರಲ್ಲಾ, ಆತನೊಂದಿಗೆ ನಡೆದ ಜಗಳದಿಂದಲೇ ಪಿನ್ಚನ್ ಮನೆತನದವರ ವಿಪತ್ತುಗಳೆಲ್ಲಾ ಪ್ರಾರಂಭವಾದುವು ಎಂದು ಆಕೆ ಭಾವಿಸುವಂತೆ ತೋರುತ್ತದೆ. ಮಿಸ್ಟರ್ ಹಾಲ್‌ಗ್ರೇವ್, ನೀವು ಕೂಡ ಹಾಗೆಯೇ ಎಣಿಸಿರುವಂತೆ ಕಾಣುತ್ತದೆ. ನಂಬಿಕೆಗೆ ಎಷ್ಟೋ ಪಾಲು ಮಿಗಿಲಾಗಿ ಅರ್ಹವಾಗಿರುವ ಅನೇಕ ಸಂಗತಿಗಳನ್ನು ನೀವು ನಿರಾಕರಿಸುತ್ತೀರಿ; ಅಷ್ಟೊಂದು ಅವಿವೇಕದ ವಿಚಾರವನ್ನು ನೀವು ನಂಬುವುದೆಂದರೆ, ಅದೆಂಥ ಆಶ್ಚರ್ಯದ ವಿಷಯ!"

"ನಾನು ಅದನ್ನು ನಂಬಿಯೇ ನಂಬುತ್ತೇನೆ" ಎಂದು ಕಲಾವಿದನು ಮನಃಪೂರ್ವಕವಾಗಿ ಹೇಳತೊಡಗಿದನು: "ಎಂದರೆ ಮೂಢನಂಬಿಕೆಯಿಂದಲ್ಲ; ಆದರೆ, ನಿರ್ವಿವಾದವಾದ ಸತ್ಯಸಂಗತಿಗಳಿಂದ ತೀರ್ಮಾನವಾಗಿರ ತಕ್ಕದೆಂದು, ಒಂದು ಸಿದ್ಧಾಂತಕ್ಕೆ ದೃಷ್ಟಾಂತವಾಗಿದೆಯೆಂದು, ನಂಬುತ್ತೇನೆ. ಈಗ ನೋಡು: ಈಗ ನಾವು ಕತ್ತೆತ್ತಿ ಮೇಲೆ ನೋಡುತ್ತೇವೆಯಲ್ಲಾ, ಆ ಏಳು ಇಪ್ಪಾರುಗಳು– ವರ್ತಮಾನಕಾಲಕ್ಕಿಂತ ಬಹು ಮುಂದಿನ ಕಾಲದವರೆಗೂ, ಏಳಿಗೆಯಲ್ಲಿ ಹಾಗೂ ಸುಖದಲ್ಲಿ, ತನ್ನ ವಂಶದವರ ಮನೆಯಾಗಿರಬೇಕೆಂದು ವೃದ್ಧ ಸರದಾರ ಪಿನ್ಚನ್ನನು ಉದ್ದೇಶಿಸಿದ್ದನು, ಆ ಮನೆಯ ಚಾವಣಿಯ ಕೆಳಗಡೆ, ಮೂರು ಶತಕಗಳ ಕಾಲದ ಒಂದು ಭಾಗದಲ್ಲಿ,– ಅಂತಃಕರಣದ ಸಂತಾಪ, ನಿರಂತರವಾದ ಸೋಲುಂಡ ಆಶೆ, ಬಂಧುಬಳಗದಲ್ಲಿ ಅಂತಃಕಲಹ, ಬಗೆಬಗೆಯ ಕ್ಲೇಶ, ವಿಚಿತ್ರ ರೀತಿಯ ಸಾವು, ಕರಾಳ ಸಂಶಯ, ಹೇಳಲಾಗದಂಥ ಅಪಮಾನ– ಇವು ನಿರಂತರವಾಗಿ ಸಾಗಿವೆ; ಈ ಎಲ್ಲ ವಿಪತ್ತಿಗೂ, ಇಲ್ಲವೆ ಅದರ ಬಹುಪಾಲಿಗೆ, ತನ್ನ ವಂಶವನ್ನು ನೆಲೆಗೊಳಿಸಿ ಅದಕ್ಕೆ ಆಸ್ತಿಯನ್ನು ಬಿಟ್ಟುಹೋಗಬೇಕೆಂಬ ಆ ವೃದ್ಧ ಪ್ಯೂರಿಟನ್ನನ ಅತ್ಯಾಶೆಯೇ ಮೂಲಕಾರಣ; ಅದನ್ನು ಕಂಡುಹಿಡಿಯಲು ನನಗೆ ಸಾಧನಗಳಿವೆ. ವಂಶವನ್ನು ಸ್ಥಾಪಿಸುವುದು! ಮನುಷ್ಯರು ಎಸಗುವ ಬಹುಪಾಲಿನ ಅನ್ಯಾಯಕ್ಕೂ ಕೇಡಿಗೂ ಈ ಭಾವನೆ ಕಾರಣವಾಗಿ ಬುಡದಲ್ಲಿ ಕುಳಿತಿದೆ. ಸತ್ಯಾಂಶವೇನೆಂದರೆ, ಬಹು ಹೆಚ್ಚೆಂದರೆ ಅರ್ಧ ಶತಮಾನಕ್ಕೆ ಒಮ್ಮೆ ಒಂದು ಮನೆತನವೆನ್ನುವುದು ಮಾನವಕೋಟಿಯ ಅಜ್ಞಾತವಾದ ಮಹಾರಾಶಿಯಲ್ಲಿ ಅಡಗಿಹೋಗಿ, ತನ್ನ ಪೂರ್ವಜರ ವಿಷಯವನೆಲ್ಲ ಮರೆತು ಬಿಡಬೇಕು. ಜಲಾಶಯದ ನೀರನ್ನು ನೆಲದಡಿಯ ನಳಿಕೆಗಳ ಮೂಲಕ ಸಾಗಿಸುವಂತೆ, ಮಾನವ ರಕ್ತವು ತನ್ನ ಹೊಸತನವನ್ನು ಕಾಪಾಡಿಕೊಳ್ಳಬೇಕಾದರೆ ಗುಪ್ತಗಾಮಿ ಪ್ರವಾಹಗಳಾಗಿ

ಎಂದು ನನಗೆ ಸಂದೇಹ. ಇಪ್ಪತ್ತು ವರ್ಷಗಳಿಗೊಮ್ಮೆ ಅಥವಾ ಆ ಸುಮಾರಿನಲ್ಲಿ ಅವು ಸಂಕೇತವಾಗಿರುವ ಸಂಸ್ಥೆಗಳನ್ನು ಪರೀಕ್ಷೆಮಾಡಿ ಸುಧಾರಣೆ ಮಾಡಬೇಕೆಂಬ ಸೂಚನೆಯಾದರೂ ಜನಕ್ಕೆ ದೊರಕೀತು."

"ಹಳೆಯದಾದ ಪ್ರತಿಯೊಂದನ್ನು ಕಂಡರೂ ನಿಮಗೆ ಅದೆಂತಹ ದ್ವೇಷ! ಹಾಗೆ ಬದಲಾಯಿಸುತ್ತಿರುವ ಜಗತ್ತನ್ನು ನೆನೆದರೇ ನನಗೆ ತಲೆ ತಿರುಗಿದಂತಾಗುತ್ತದೆ!"– ಎಂದು ಆಶಾಭಂಗಳಾಗಿ ನುಡಿದಳು ಫೀಬೆ.

"ಹಳತಾಗಿ ಬೂಷ್ಟು ಹಿಡಿದದ್ದು ಯಾವುದನ್ನು ಕಂಡರೂ ನನಗೆ ಖಂಡಿತವಾಗಿಯೂ ಪ್ರೀತಿಯಿಲ್ಲ. ಈಗ, ಈ ಪಿನ್ಚನ್ ಭವನವನ್ನೆ ತೆಗೆದುಕೋ! ಅದರ ಕಪ್ಪು ಮರಹೆಂಚುಗಳೋ, ಅವು ಎಷ್ಟು ತೇವ ಹಿಡಿದಿವೆ ಎಂದು ತೋರಿಸುವ ಆ ಹಸುರು ಪಾಚಿಯೋ; ಅದರ ಕತ್ತಲುಗವಿದ ತಗ್ಗು ಚಾವಣಿಯ ಕೊಟಡಿಗಳೋ; ಅತೃಪ್ತಿಯಿಂದಲೂ ಸಂಕಟದಿಂದಲೂ ಎಳೆದು ಬಿಟ್ಟ ಮನುಷ್ಯರ ಶ್ವಾಸೋಚ್ಛ್ವಾಸದ ಉಸಿರು ಅದರ ಗೋಡೆಗಳ ಮೇಲೆ ಕುಳಿತು ಹಳುಕುಗಟ್ಟಿದ ಆ ಇಲ್ಲಣವೋ, ಹೊಲಸೋ– ಇಂಥ ಮನೆವಾಸಮಾಡಲು ಹಿತಕರವಾದದ್ದೆ? ಈ ಮನೆಗೆ ಅಗತ್ಯವಾಗಿ ಅಗ್ನಿಸಂಸ್ಕಾರವಾಗಬೇಕು– ಅದರ ಬೂದಿ ಮಾತ್ರ ಉಳಿಯುವವರೆಗೆ ಅದಕ್ಕೆ ಸಂಸ್ಕಾರವಾಗಬೇಕು!" ಎಂದು ಹಾಲ್‌ಗ್ರೇವ್ ಉತ್ತರಕೊಟ್ಟನು.

"ಹಾಗಿದ್ದಮೇಲೆ, ನೀನು ಅದರಲ್ಲಿ ಯಾಕೆ ವಾಸಮಾಡುತ್ತಿದ್ದೀಯೆ?" ಎಂದು ಫೀಬೆ ಸ್ವಲ್ಪ ಕೆರಳಿಯೆ ಕೇಳಿದಳು.

"ಓಹೋ, ಹಾಗೋ; ನನ್ನ ವ್ಯಾಸಂಗವನ್ನು ನಾನು ಇಲ್ಲಿ ಮುಂದುವರಿಸುತ್ತಿದ್ದೇನೆ; ಎಂದರೆ, ಪುಸ್ತಕಗಳ ವ್ಯಾಸಂಗವಲ್ಲ" ಎಂದು ಹಾಲ್‌ಗ್ರೇವ್ ಉತ್ತರಿಸಿದನು; "ನನ್ನ ಅಭಿಪ್ರಾಯದಲ್ಲಿ, ಈ ಮನೆ, ತನ್ನ ಎಲ್ಲ ದುಷ್ಟ ಪ್ರಭಾವಗಳಿಂದ ಕೂಡಿದ, ಅಸಹ್ಯಕರವಾದ, ಹೇಯವಾದ ಗತಕಾಲವನ್ನು ವ್ಯಕ್ತಪಡಿಸುತ್ತದೆ; ಅದರ ವಿರುದ್ಧವಾಗಿ ನಾನು ಇದೇ ತಾನೆ ಸಾರಿ ಹೇಳಿದ್ದೇನೆ. ಅದನ್ನು ದ್ವೇಷಿಸುವುದು ಹೇಗೆ ಎಂಬುದನ್ನು ಇನ್ನೂ ಚೆನ್ನಾಗಿ ತಿಳಿದುಕೊಳ್ಳುವುದಕ್ಕಾಗಿ ಕೆಲಕಾಲ ಅದರಲ್ಲಿ ವಾಸಮಾಡುತ್ತೇನೆ. ಅದು ಹಾಗಿರಲಿ, ಮಾಟಗಾರ ಮಾಲನ ಕತೆಯನ್ನ, ಅವನಿಗೂ ನಿನ್ನ ತಲೆ ತಲಾಂತರದ ಮುತ್ತಜ್ಜನಿಗೂ ನಡುವೆ ಏನು ನಡೆಯಿತೆಂಬುದನ್ನ, ನೀನು ಎಂದಾದರೂ ಕೇಳಿಬಲ್ಲೆಯಾ?"

ಫೀಬೆ ನುಡಿದಳು: "ಓಹೋ, ನಿಜವಾಗಿಯೂ ಕೇಳಿದ್ದೇನೆ. ಬಹುಕಾಲದ

---

* ಒಂದು ಜಾತಿಯ ಮರದಿಂದ ಸ್ರವಿಸುವ ಗೋಂದಿನಂತಹ ಪದಾರ್ಥ.

ಕಳೆದುಕೊಳ್ಳುವ ಒಂದು ವಿಧಾನ ಎಂದು ತಿಳಿದು ಪಿನ್ಚನ್ ವಂಶಾವಳಿಯ ಚರಿತ್ರೆಯಲ್ಲಿ ನನಗೆ ಪರಿಚಯವಿರುವ ಒಂದು ಘಟನೆಯನ್ನು ಕಥೆಯ ರೂಪದಲ್ಲಿ ಬರೆದಿದೇನೆ; ಅದನ್ನು ಒಂದು ಪತ್ರಿಕೆಯಲ್ಲಿ ಪ್ರಕಟಿಸಬೇಕೆಂದಿದ್ದೇನೆ."

"ನೀವು ಪತ್ರಿಕೆಗಳಿಗೆ ಲೇಖನ ಬರೆಯುತ್ತೀರಾ?" ಎಂದು ಕೇಳಿದಳು ಫೀಬೆ.

"ನಿನಗೆ ಈ ವಿಷಯ ಗೊತ್ತಿರಲಿಲ್ಲ, ಅಲ್ಲವೆ? ಅದು ಸರಿಯೆ, ಸಾಹಿತ್ಯದಿಂದ ಬರುವ ಕೀರ್ತಿಯ ಸ್ವರೂಪವೆ ಹಾಗೆ! ಹೌದು, ಮಿಸ್ ಫೀಬೆ ಪಿನ್ಚನ್, ನನಗಿರುವ ಅನೇಕಾನೇಕ ಶಕ್ತಿಗಳಲ್ಲಿ ಕಥೆ ಬರೆಯುವ ಶಕ್ತಿಯೂ ಒಂದು. "ಗ್ರಾಹಂ ಮತ್ತು ಗೋಡೀ" (Graham and Godey) ಪತ್ರಿಕೆಯ ರಕ್ಷಾಪತ್ರಗಳ ಮೇಲೆ ನನ್ನ ಹೆಸರು ಕಾಣಿಸಿಕೊಂಡಿದೆ, ನನ್ನ ಮಾತನ್ನು ನೀನು ನಂಬಬಹುದು; ಸಾಧುಸಂತರ ಪಟ್ಟಿಗೆ ಸೇರಿದವರ ಹೆಸರುಪಟ್ಟಿಯ ಸಂಬಂಧ ಹೊಂದಿತ್ತು ಆ ಪತ್ರಿಕೆ; ನನಗೆ ತೋರುವ ಮಟ್ಟಿಗೆ, ಅದರಷ್ಟೇ ಗೌರವಾರ್ಹವಾಗಿ ಕಾಣುತ್ತಿತ್ತು ಪ್ರಕಟವಾದ ನನ್ನ ಹೆಸರುಕೂಡ. ಹಾಸ್ಯ ಲೇಖನಪ್ರಕಾರದಲ್ಲಿ, ನನ್ನದೊಂದು ಬಲು ಅಂದವಾದ ರೀತಿಯಿದೆಯೆಂಬ ಭಾವನೆಯಿದೆ; ಇನ್ನು ಕರುಣರಸದ ವಿಷಯ ತೆಗೆದುಕೊಂಡರೆ, ಕಣ್ಣೀರು ಬರಿಸುವ ವಿಚಾರದಲ್ಲಿ ಈರುಳ್ಳಿಯಷ್ಟೇ ಚುರುಕು ನಾನು. ಅದಿರಲಿ, ನನ್ನ ಕತೆಯನ್ನ ನಿನಗೆ ಓದಿ ಹೇಳಲೆ?" ಎಂದು ನುಡಿದನು.

"ಬಹಳ ಉದ್ದವಾಗಿಲ್ಲದಿದ್ದರೆ, ಆಗಬಹುದು" ಎಂದಳು ಫೀಬೆ; "ಅಲ್ಲದೆ, ತುಂಬ ಬೇಸರಹಿಡಿಸುವಂತೆ ಇರದಿದ್ದರೆ" ಎಂದು ನಗುತ್ತಾ ಕೂಡಿಸಿ ಹೇಳಿದಳು.

ಈ ಎರಡನೆಯ ಅಂಶದ ವಿಚಾರವಾಗಿ ಛಾಯಾಚಿತ್ರಕಲಾವಿದನು ತಾನೇ ಏನೂ ನಿಶ್ಚಯಮಾಡಲಾರದವನಾಗಿದ್ದನು; ಆದ್ದರಿಂದ, ಅವನು ಕೂಡಲೆ ತನ್ನ ಹಸ್ತಪ್ರತಿಯ ಸುರುಳಿಯನ್ನು ಹೊರತೆಗೆದನು; ಕಡೆಕಡೆಯ ಸೂರ್ಯಕಿರಣಗಳು ಏಳು ಇಪ್ಪಾರುಗಳಿಗೆ ಚಿನ್ನದ ಮೆರುಗು ಕೊಡುತ್ತಿರುವಾಗ ಓದತೊಡಗಿದನು.

* * * *

ಹರಿಯಬೇಕು. ಉದಾಹರಣೆಗಾಗಿ, ಈ ಪಿನ್ಚನ್ನರ ಮನೆತನದ ಬದುಕಿನಲ್ಲಿ ನಾನು ಹೀಗೆ ಹೇಳುತ್ತಿರುವುದಕ್ಕಾಗಿ ನನ್ನನ್ನು ಕ್ಷಮಿಸು, ಫೀಬೆ; ಆದರೆ, ನೀನು ಅವರಲ್ಲಿ ಒಬ್ಬಳೆಂದು ನಾನು ಎಣಿಸಲಾರೆ– ಹೊಸ ಇಂಗ್ಲೆಂಡಿನಲ್ಲಿ ಕೆಲವು ಕಾಲ ಸಾಗಿಬಂದ ಅವರ ವಂಶಾವಳಿಯಲ್ಲಿ, ಅವರೆಲ್ಲರಿಗೂ ಒಂದಲ್ಲ ಒಂದು ಬಗೆಯ ಹುಚ್ಚು ಹಿಡಿಯಲು ಸಾಕಾದಷ್ಟು ಕಾಲಾವಕಾಶವಿದೆ!"

ತನಗೆ ಅಪಚಾರವಾಯಿತೆಂದು ತಿಳಿಯಬೇಕೆ ಬೇಡವೆ ಎಂದು ಫಿಬೆ ತನ್ನಲ್ಲಿಯೆ ವಿಚಾರಮಾಡಿ, ನುಡಿದಳು: "ನನ್ನ ನಂಟರ ವಿಚಾರದಲ್ಲಿ ನೀವು ಮರ್ಯಾದೆ ತೋರದೆ ಮಾತನಾಡುತ್ತಿರುವ ಹಾಗಿದೆಯಲ್ಲಾ."

"ಪ್ರಾಮಾಣಿಕವಾದ ಒಂದು ಮನಸ್ಸಿಗೆ ಸತ್ಯವಾದ ವಿಚಾರಗಳನ್ನೇ ನಾನು ತಿಳಿಯಹೇಳುತ್ತಿದ್ದೇನೆ!" ಎಂದು ಹಾಲ್‌ಗ್ರೇವ್ ಉದ್ರೇಕದಿಂದಲೇ ಉತ್ತರಕೊಟ್ಟನು; ಅವನಲ್ಲಿ ಆ ಉದ್ರೇಕವನ್ನು ಫೀಬೆ ಹಿಂದೆ ಎಂದೂ ಕಂಡಿರಲಿಲ್ಲ: "ನಾನು ಸತ್ಯವಾದದ್ದನ್ನೆ ನುಡಿದಿದ್ದೇನೆ! ಇನ್ನೂ ಹೆಚ್ಚಿನದೆಂದರೆ, ಈ ಉಪದ್ವ್ಯಾಪಕ್ಕೆಲ್ಲ ಮೂಲ ಕಾರಣಕರ್ತನಾದವನು ತಾನು ಶಾಶ್ವತವಾಗಿ ಉಳಿದಿರುವ ಹಾಗೆ ಮಾಡಿಕೊಂಡು, ಬೀದಿಯಲ್ಲಿ ಇನ್ನೂ ಸಂಚರಿಸುತ್ತಿರುವಹಾಗೆ ಕಾಣುತ್ತದೆ– ಕಡೆಯಪಕ್ಷ, ಅವನಲ್ಲದಿದ್ದರೂ ಮಾನಸಿಕವಾಗಿ, ದೈಹಿಕವಾಗಿ ಅವನ ತದ್ರೂಪವಾದ ಪ್ರತಿಮೆ ಸಂಚರಿಸುತ್ತಿದೆ; ತನ್ನ ಪೂರ್ವಿಕರಿಂದ ತಾನು ಎಂಥ ಅಮೂಲ್ಯವಾದ, ಎಂಥ ಗತಿಗೆಟ್ಟ ಆಸ್ತಿಯನ್ನು ಪಡೆದಿದ್ದನೋ ಅಂಥದನ್ನೇ ಮುಂದಿನ ಕಾಲದ ತನ್ನ ವಂಶಜರಿಗೆ ಬಿಟ್ಟುಹೋಗುವ ಒಂದು ಸರಿಯಾದ ನಿರೀಕ್ಷೆಯಿಂದ ಸಂಚರಿಸುತ್ತಿದೆ! ಆ ಛಾಯಾಚಿತ್ರ, ಆ ಹಳೆಯ ಕಾಲದ ಭಾವಚಿತ್ರಕ್ಕೂ ಅದಕ್ಕೂ ಇರುವ ಹೋಲಿಕೆ– ಇವುಗಳ ಜ್ಞಾಪಕವಿದೆಯಷ್ಟೆ ನಿನಗೆ?"

ಫೀಬೆ ಆಶ್ಚರ್ಯಚಕಿತಳಾಗಿ, ದಿಗ್ಭ್ರಮೆಹಿಡಿದು ಅವನನ್ನು ನೋಡುತ್ತಿದ್ದಳು; ಅವಳಿಗೆ ಅರ್ಧ ಗಾಬರಿ, ಅರ್ಧ ನಗಬೇಕೆಂಬ ಮನಸ್ಸು. ಹೀಗಿದ್ದ ಅವಳು– "ಎಂಥ ವಿಚಿತ್ರವಾಗಿದೆ ಈ ವಿಚಾರದಲ್ಲಿ ನೀನು ತೋರುತ್ತಿರುವ ಶ್ರದ್ಧೆ! ಪಿನ್ಚನ್ ವಂಶದವರ ಬುದ್ಧಿವಿಕಲ್ಪದ ಬಗೆಗೆ ನೀವು ಪ್ರಸ್ತಾಪಿಸಿದ್ದೀರಿ; ಅದು ಅಂಟುಜಾಡ್ಯವೆ?" ಎಂದು ಉದ್ಗಾರತೆಗೆದು ಕೇಳಿದಳು.

"ನಿನ್ನ ಮನಸ್ಸು ನನಗೆ ಅರ್ಥವಾಯಿತು!" ಎಂದು ಬಣ್ಣವೇರಿ, ನಗುತ್ತಾ ನುಡಿದನವನು: "ನನಗೆಲ್ಲೋ ಸ್ವಲ್ಪ ಹುಚ್ಚು ಹಿಡಿದಿದೆ, ನಾನು ಬಲ್ಲೆ. ಆ ಹಳೆಯ ಇಪ್ಪಾರಿಗೆ ನಾನು ಒಕ್ಕಲಾಗಿ ಬಂದಂದಿನಿಂದ, ಈ ವಿಷಯವು ನನ್ನ ಮನಸ್ಸನ್ನು ವಿಚಿತ್ರವಾದ ರೀತಿಯಲ್ಲಿ ಪಟ್ಟಾಗಿ ಹಿಡಿದು ಬಿಟ್ಟಿದೆ. ಮನಸ್ಸಿನಿಂದ ಅದರ ಭಾರವನ್ನು

“ನಿನ್ನಷ್ಟಕ್ಕೆ ನೀನೆ ಆಡಿಕೊಂಡೆಯಲ್ಲಾ, ಅದು ಏನಪ್ಪಾ, ಮ್ಯಾತೂಮಾಲ್? ಅದ್ಯಾಕೆ, ನನ್ನ ಕಡೆ ಹಂಗೆ ಕಪ್ಪು ಮೋರೆಮಾಡಿಕೊಂಡು ನೋಡೀಯಾ?” ಎಂದು ಕೇಳಿದನು ಸ್ಕಿಪಿಯೋ.

“ಇರಲಿ ಬಿಡು, ಕಪ್ಪಣ್ಣ! ನಿನ್ನನ್ನ ಬಿಟ್ಟರೆ ಬೇರೆ ಯಾರೂ ಕಪ್ಪಗೆ ಕಾಣಲೇ ಕೂಡದೋ? ಹೋಗು, ನಾನು ಬರುತೀನಿ ಅಂತ ನಿನ್ನ ದಣಿಯೋರಿಗೆ ತಿಳಿಸು. ಮತ್ತೆ, ಅವರ ಮಗಳು ಆಯಲಿಸ್ ಅವ್ವನನ್ನ ನೀನು ಕಂಡರೆಗಿಂಡರೆ, ನನ್ನ ಭಕ್ತಿಯ ನಮಸ್ಕಾರಗಳನ್ನ ಆಕೆಗೆ ತಿಳಿಸಪ್ಪಾ. ಇಟಲಿಯಿಂದ ಬರುವಾಗ ಮುಖವನ್ನ ಒಳ್ಳೇ ಅಂದಮಾಡಿಕೊಂಡು ಬಂದಿದ್ದಾರೆ– ಅದೇ, ಆ ಆಯಲಿಸ್ ಪಿನ್ಚನ್– ಅಂದದ ಜೊತೆಗೆ ನಯವೂ ಇದೆ, ಗರ್ವವೂ ಇದೆ!” ಎಂದು ನುಡಿದು ಬಡಗಿ.

ತನ್ನ ಸುದ್ದಿ ಮುಟ್ಟಿಸುವ ಕೆಲಸ ಮಾಡಿ ಹಿಂದಿರುಗುವಾಗ ಸ್ಕಿಪಿಯೋ ಗಟ್ಟಿಯಾಗಿಯೇ ಹೇಳಿದ: “ಆಯಲಿಸ್ ಅವ್ವಾವರ ವಿಚಾರ ಅವ ಮಾತಾಡೋದು ಅಂದ್ರೇನು! ಬಡಗೀಕೆಲ್ಸಮಾಡೋ ಕಳಪೆ ಆಳೂ! ತುಂಬಾ ದೂರದಾಗೆ ನಿಂತ್ಕೊಂಡು ಅವರನ್ನು ನೋಡೋಕೆ ಕೂಡ ಆಗದು ಅವ!” ಬಡಗಿಯ ಕೆಲಸದ ಈ ತರುಣ ಮ್ಯಾಥ್ಯೂ ಮಾಲನನ್ನು ಅವನು ವಾಸವಾಗಿದ್ದ ಊರಿನಲ್ಲಿ ಯಾರೂ ಚೆನ್ನಾಗಿ ಅರ್ಥಮಾಡಿಕೊಂಡಿರಲಿಲ್ಲ; ಅಲ್ಲದೆ ಅವನನ್ನು ಕಂಡರೆ ಯಾರಿಗೂ ಆಗುತ್ತಿರಲಿಲ್ಲ; ಹಾಗೆಂದಮಾತ್ರಕ್ಕೆ, ಅವನ ಪ್ರಾಮಾಣಿಕತೆಯ ಬಗೆಗೆ ಆಗಲಿ, ಇಲ್ಲವೆ ಅವನು ಮಾಡುತ್ತಿದ್ದ ಕೈಕಸುಬಿನಲ್ಲಿ ಅವನಿಗಿದ್ದ ನಿಪುಣತೆ ಮತ್ತು ಶ್ರದ್ಧೆಗಳ ಬಗೆಗಾಗಲಿ ಯಾವುದೇ ಆರೋಪವನ್ನು ಹೊರಿಸಲಾಗುತ್ತಿರಲಿಲ್ಲ. ಅನೇಕ ಮಂದಿ ಅವನನ್ನು ತಿರಸ್ಕಾರಭಾವದಿಂದಲೇ (ಹಾಗೆಂದೇ ಅದನ್ನು ಕರೆಯುವುದು ನ್ಯಾಯ) ಕಾಣುತ್ತಿದ್ದರು; ಅದಕ್ಕೆ ಅವನ ಸ್ವಂತ ಶೀಲಸ್ವಭಾವ ಮತ್ತು ನಡೆವಳಿಕೆ ಅರ್ಧ ಕಾರಣ; ಇನ್ನರ್ಧ ಪೂರ್ವಾರ್ಜಿತದ ಫಲ.

ಹಿಂದಿನ ಒಬ್ಬ ಮ್ಯಾಥ್ಯೂ ಮಾಲನ ಮೊಮ್ಮಗ ಇವನು; ಆತ ಪಟ್ಟಣದಲ್ಲಿ ಮೊದಮೊದಲು ನೆಲಸಲು ಬಂದವರಲ್ಲಿ ಒಬ್ಬ, ತನ್ನ ಕಾಲದಲ್ಲಿ ಹೆಸರಾಂತ ಭಯಂಕರ ಮಾಟಗಾರನೆನಿಸಿದ್ದನು. ಕಾತನಾಮ್ಯಾತರ್ ಮತ್ತು ಆತನ ಜೊತೆಯ ಚರ್ಚಿನ ಪುರೋಹಿತರು, ವಿದ್ವಾಂಸರಾದ ನ್ಯಾಯಾಧೀಶರು ಮತ್ತು ಇತರ ಬುದ್ಧಿಶಾಲಿಗಳು, ಜಾಣ ಗೌರ್ನರ್ ಸರ್ ವಿಲಿಯಂ ಫಿಪ್ಸ್–ಇವರೆಲ್ಲ ಸೇರಿಕೊಂಡು, ಶುದ್ಧಾತ್ಮಗಳ ಪರಮ ಶತ್ರುವಾದ ಸೈತಾನನ ಅನುಯಾಯಿಗಳ ತಂಡವನ್ನು ‘ಗಲ್ಲಿನ ಗುಡ್ಡದ’ (Gallows Hill) ಬಂಡೆಗಲ್ಲ ಹಾದಿಯನ್ನು ಹತ್ತಿಸಿ ಕಳಿಸಿ, ಆ ಮೂಲಕ ಅವನನ್ನು ದುರ್ಬಲಗೊಳಿಸಬೇಕೆಂದು ಸ್ತೋತ್ರಾರ್ಹವಾದ

# ೧೩. ಆಯಲಿಸ್ ಪಿನ್ಚನ್

ಒಂದು ದಿನ, ಪೂಜ್ಯ ಗರ್ವೆಸ್ ಪಿನ್ಚನ್ನರಿಂದ ಬಡಗಿ ತರುಣ ಮ್ಯಾಥ್ಯೂ ಮಾಲನಿಗೆ ಒಂದು ಸುದ್ದಿ ಬಂದು ಮುಟ್ಟಿತು; ಅದರಲ್ಲಿ, ಅವನು ಆ ಕೂಡಲೆ ಏಳು ಇಪ್ಪಾರಿನ ಮನೆಗೆ ಬರಬೇಕೆಂಬ ಕೋರಿಕೆಯಿತ್ತು.

"ನಿಮ್ಮ ಧಣಿಗಳಿಗೆ ನನ್ನಿಂದ ಏನು ಬೇಕಾಗಿದೆ?" ಎಂದು ಬಡಗಿ ಪಿನ್ಚನ್ ಮಹಾಶಯರ ಕಪ್ಪು ಸೇವಕನನ್ನು ಕುರಿತು ಹೇಳಿದನು: "ಮನೆಯಲ್ಲಿ ಸರಿಪಡಿಸುವ ಕೆಲಸ ಏನಾದರೂ ಇದೆಯೇನು? ಏನಾದರೂ ಇದ್ದರೂ ಇರಬಹುದು, ಈ ವೇಳೆಗೆ; ಅದನ್ನು ಕಟ್ಟಿದ ನಮ್ಮ ತಂದೆಯ ಮೇಲೆ ದೂರು ಏನೂ ಇದ್ದಿರಲಾರದು! ಬಹಳ ಕಾಲವೇನಾಗಿಲ್ಲ, ಕಳೆದ ಸಬ್ಬತು ದಿನ ತಾನೆ, ವೃದ್ಧ ಸರದಾರರ ಗೋರಿಕಲ್ಲಿನ ಬರವಣಿಗೆಯನ್ನು ಓದುತ್ತಿದ್ದೆ; ಅದರ ತಾರೀಖಿನಿಂದ ಲೆಕ್ಕಹಾಕಿ ನೋಡಿದರೆ, ಮನೆ ಮೂವತ್ತೇಳುವರ್ಷಕಾಲ ತಡೆದುಬಂದಿದೆ. ಚಾವಣಿಯಲ್ಲಿ ಮಾಡಬೇಕಾದ ಕೆಲಸ ಏನಾದರೂ ಇದ್ದರೆ ಅದರಲ್ಲಿ ಆಶ್ಚರ್ಯವೇನಿಲ್ಲ."

"ದಣಿಯೋರಿಗೆ ಏನು ಬೇಕಾಗದೋ ನಾ ಕಾಣೆ" ಎಂದು ಉತ್ತರ ಕೊಡತೊಡಗಿದ ಸ್ಕಿಪಿಯೋ: "ಹಟ್ಟಿ ಒಳ್ಳೇ ಬಲು ಪಸಂದಾದ ಹಟ್ಟಿ. ಮುದುಕಪ್ಪ ಸರದಾರ ಪಿಂಚಿಣಿಯೋರಿಗೂ ಹಂಗೇ ಅನಿಸಿರಭೋದು ಅಂತ ನನ್ನ ಲೆಕ್ಕ. ಹಂಗಿಲ್ದೆವೋದ್ರೆ, ಮುದುಕಪ್ಪ ಹಂಗ್ಯಾಕೆ ಕಾಡ್ಬೇಕು ಹಟ್ಟೇನ? ನನ್ನಂತ ಬಡ ನಿಗ್ಗರ ಹೈದನ್ನ ಯಾಕೆ ಬೆದರಸ್ಬೇಕು?"

"ಒಳ್ಳೆಯದು, ಸ್ಕಿಪಿಯೋ ನಾನು ಬರುತ್ತೇನೆ ಅಂತ ನಿನ್ನ ದಣಿಯೋರಿಗೆ ತಿಳಿಸು" ಎಂದು ಬಡಗಿ ನಗುತ್ತಾ ಹೇಳಿದನು: "ಪಕ್ಕಾ ಕೆಲಸಗಾರನ ಕೆಲಸ ಆಗಬೇಕಾಗಿದ್ದರೆ, ನಾನು ತಕ್ಕವನು ಅಂತ ಅವರಿಗೆ ಗೊತ್ತಾಗುತ್ತೆ. ಹಾಗಾದರೆ, ಮನೆಯಲ್ಲಿ ದೆವ್ವದ ಕಾಟ ಇದೆಯೋ! ಏಳು ಇಪ್ಪಾರುಗಳಿಂದ ದೆವ್ವಗಳನ್ನು ಹೊರಕ್ಕಟ್ಟಬೇಕಾದರೆ ನನಗಿಂತ ಬಲವಾದ ಕೆಲಸಗಾರನಾಗಬೇಕು" ಎಂದು ಹೇಳಿ, ತನ್ನಲ್ಲಿ ತಾನು ಗೊಣಗಿಕೊಳ್ಳತೊಡಗಿದನು: "ಸರದಾರನು ಕಾಡದೆ ಸುಮ್ಮನಿದ್ದರೂ ಕೂಡ, ನನ್ನ ಮುದಿಯಜ್ಜ, ಆ ಮಾಟಗಾರ, ಪಿನ್ಚನ್ ಮನೆತನದವರ ಆ ಮನೆಯ ಗೋಡೆಗಳು ಭದ್ರವಾಗಿರುವ ತನಕ ಅವರನ್ನು ಬಿಡದೆ ಅಂಟಿಕೊಂಡಿರುವುದು ಖಂಡಿತ."

ಅದಾಗದಿದ್ದರೆ, ತಾನು– ಪ್ರೇತರೂಪದ ಸಾಲಿಗೆ– ತಾನು ಸತ್ತಮೇಲೆ ಸಾವಿರ ವರ್ಷವಾದರೂ ಸರಿಯೆ, ಪಿನ್ಜನ್ ಮನೆತನದವರ ಎಲ್ಲ ವ್ಯವಹಾರಗಳಲ್ಲಿಯೂ ಕೈಹಾಕಿ, ಅವರ ಸಂಬಂಧವಾದ ಪ್ರತಿಯೊಂದೂ ಕೆಟ್ಟು ಹಾಳಾಗಿ ಹೋಗುವಂತೆ ಮಾಡುವುದು ಖಂಡಿತ. ಬಹುಶಃ ಅದೊಂದು ಹುಚ್ಚುಕತೆ; ಆದರೆ, ಈ ಮಾಟಗಾರ ಮಾಲ್ ಎಂಥ ಪಟ್ಟುಹಿಡಿಯುವ ಛಲಗಾರ ಮುದುಕನಾಗಿದ್ದನೆಂಬುದನ್ನು ಜ್ಞಾಪಿಸಿಕೊಳ್ಳಬಲ್ಲವರಿಗೆ ಅಷ್ಟೇನೂ ನಂಬಲಾಗದಂತಹದಾಗಿ ಕಾಣುತ್ತಿರಲಿಲ್ಲ.

ಇನ್ನು, ಆ ಮಾಟಗಾರನ ಮೊಮ್ಮಗ. ನಮ್ಮ ಕಥೆಯ ತರುಣ ಮ್ಯಾಥ್ಯೂಮಾಲ್, ಅವನ ವಿಷಯ ತೆಗೆದುಕೊಂಡರೆ, ಅವನು ತನ್ನ ಈ ಪೂರ್ವಜನ ಸಂದೇಹಾಸ್ಪದವಾದ ಗುಣಗಳನ್ನು ವಂಶಗತವಾಗಿ ಪಡೆದಿದ್ದನು ಎಂದು ಜನರ ಊಹೆ, ಈ ತರುಣನ ಸಂಬಂಧವಾಗಿ ಎಷ್ಟೊಂದು ಅಸಂಬದ್ಧ ವಿಚಾರಗಳು ಪ್ರಚಾರಗೊಂಡಿದ್ದುವು ಎಂಬ ಸಂಗತಿ ಆಶ್ಚರ್ಯಕರ. ಉದಾಹರಣೆಗೆ, ಜನರ ಸ್ವಪ್ನಗಳಲ್ಲಿ ಪ್ರವೇಶಿಸಿ, ಬಹುಮಟ್ಟಿಗೆ ನಾಟಕಶಾಲೆಯ ಸೂತ್ರಧಾರನಂತೆ ಅಲ್ಲಿನ ವಿಷಯಗಳನ್ನೆಲ್ಲ ತನ್ನ ಸ್ವಂತ ಕಲ್ಪನೆಗೆ ತಕ್ಕಂತೆ ನೇರ್ಪಡಿಸುವ ಒಂದು ವಿಚಿತ್ರ ಶಕ್ತಿಯನ್ನು ಪಡೆದಿದ್ದನೆಂದು ಒಂದು ಕಟ್ಟು ಕಥೆಯಿತ್ತು. ನೆರೆಹೊರೆಯವರು, ಮುಖ್ಯವಾಗಿ ಹೆಂಗಸರು, ಮಾಲನ ಕಣ್ಣಿನ ಮಂತ್ರಶಕ್ತಿ ಎಂದು ಅವರು ಕರೆಯುತ್ತಿದ್ದ ಒಂದು ವಿಷಯವಾಗಿ ಬಹಳ ಮಾತುಕತೆ ನಡಸುತ್ತಿದ್ದರು. ಅವನು ಜನರ ಮನಸ್ಸನ್ನು ಒಳಹೊಕ್ಕು ನೋಡಬಲ್ಲವ ಎಂದು ಕೆಲವರ ಹೇಳಿಕೆ; ಈ ಕಣ್ಣಿನ ಆಶ್ಚರ್ಯಕರವಾದ ಶಕ್ತಿಯಿಂದ ಅವನು ಜನರನ್ನು ತನ್ನ ಮನೋಮಂದಿರದೊಳಕ್ಕೆ ಸೆಳೆದುಕೊಳ್ಳಬಲ್ಲವನಾಗಿದ್ದನು, ಇಲ್ಲವೆ ತನಗೆ ಇಷ್ಟಬಂದರೆ ಪ್ರೇತಪ್ರಪಂಚದಲ್ಲಿ ತನ್ನ ಅಜ್ಜನು ಹೇಳಿದ ಕೆಲಸಗಳನ್ನು ಮಾಡುವುದಕ್ಕಾಗಿ ಅವರನ್ನು ಅಲ್ಲಿಗೆ ಕಳಿಸಬಲ್ಲವನಾಗಿದ್ದನು ಎಂದು ಇತರರು ಹೇಳುತ್ತಿದ್ದರು; ಅದು 'ಕೆಡುಕಿನ ಕಣ್ಣು' ಎಂದೂ, ಧಾನ್ಯವನ್ನು ಒಣಗಿಸಿಬಿಡುವ ಶಕ್ತಿ ಅದಕ್ಕುಂಟೆಂದೂ, ಮಕ್ಕಳಿಗೆ ಎದೆಯುರಿ ಬರಿಸಿ ಅವುಗಳನ್ನು ಬತ್ತಿಸಿ ಒಣಹೆಣವಾಗಿ ಮಾಡುವ ಶಕ್ತಿಯೂ ಉಂಟೆಂದೂ ಇನ್ನಿತರರು ಹೇಳುತ್ತಿದ್ದರು. ಆದರೆ, ಅದು ಏನೇ ಇರಲಿ, ತರುಣ ಬಡಗಿಗೆ ಅತ್ಯಂತ ಪ್ರತಿಕೂಲವಾಗಿದ್ದ ಸಂಗತಿಗಳೆಂದರೆ– ಒಂದನೆಯದಾಗಿ, ಅವನ ಸಹಜಮನೋವೃತ್ತಿಯ ಬಿಗುವು ಮತ್ತು ನಿರ್ದಾಕ್ಷಿಣ್ಯ; ಎರಡನೆಯದಾಗಿ, ಅವನು ಚರ್ಚಿನ ಪ್ರಭುಭೋಜನ ಸಂಸ್ಕಾರದಲ್ಲಿ ಭಾಗವಹಿಸದಿದ್ದುದು ಹಾಗೂ ಮತಧರ್ಮ ಮತ್ತು ರಾಜ್ಯಾಡಳಿತ ವಿಚಾರಗಳಲ್ಲಿ ಪಾಷಂಡಮತದ ತತ್ತ್ವಗಳನ್ನು ನಂಬುತ್ತಾನೆ ಎಂಬ ಸಂಶಯ.

ಪ್ರಯತ್ನಗಳನ್ನು ಕೈಕೊಂಡಿದ್ದರು; ಆಗ ನೊಂದವರಲ್ಲಿ ಪರಮಪಟಿಂಗನೆನಿಸಿದ್ದ ಆ ಮುದುಕನೂ ಒಬ್ಬ. ತನ್ನ ಮಟ್ಟಿಗೆ ಪ್ರಶಂಶನೀಯವಾದ ಕಾರ್ಯವನ್ನು ಅತಿರೇಕವಾಗಿ ಮಾಡಿದ್ದರ ಪರಿಣಾಮವಾಗಿ ಆ ಕಾಲದಿಂದ ಈಚೆಗೆ ಒಂದು ಶಂಕೆ ಹುಟ್ಟಿಕೊಂಡಿತ್ತು, ಅದರಲ್ಲಿ ಸಂದೇಹವಿಲ್ಲ; ಅದೇನೆಂದರೆ, ಅವರೆಲ್ಲ ತಾವು ಮಾಟಗಾರನ ಮೇಲೆ ಹೂಡಿದ್ದ ನ್ಯಾಯವಿಚಾರಣೆಯ ಮೂಲಕ ಆ ಪರಮಶತ್ರು ಸೈತಾನನನ್ನು ಸಂಪೂರ್ಣವಾಗಿ ಭಂಗಿಸಿ ಪರಾಭವಗೊಳಿಸಬೇಕೆಂದು ಉದ್ದೇಶಪಟ್ಟಿದ್ದರು; ಆದರೆ ಆ ಕಾರ್ಯ ಸೈತಾನನಿಗಿಂತ ಹೆಚ್ಚಾಗಿ ಆ ದಯಾಮಯವಾದ ದೇವರಿಗೇ ಅಷ್ಟು ಒಪ್ಪಿಗೆಯಾಗುವಂತಿರಲಿಲ್ಲ. ಮಾಟವಿದ್ಯೆಯ ಈ ಘೋರಾಪರಾಧಕ್ಕಾಗಿ ಮಡಿದವರ ನೆನಪುಗಳು ಒಂದು ರೌದ್ರ ಭೀಕರಭಾವನೆಯನ್ನು ಹುಟ್ಟಿಸಿತ್ತು ಎಂಬುದಂತೂ ಖಂಡಿತ. ಬಂಡೆಗಳ ಸಂದಿಗೊಂದಿಗಳ ಗೋರಿಗಳಲ್ಲಿ ಅವರನ್ನೆಲ್ಲ ಆತುರಾತುರವಾಗಿ ತುರುಕಲಾಗಿತ್ತು; ಅವು ಅವರನ್ನು ಒಳಕೊಳ್ಳಲು ಸಾಲದಾಗಿದ್ದವು. ಒಂದು ವಿಶೇಷ ಸಂಗತಿಯೇನೆಂದರೆ, ಸಾಮಾನ್ಯ ಮನುಷ್ಯನು ತಾನು ಮಲಗಿರುವ ಹಾಸಿಗೆಯಿಂದ ಹೇಗೆ ಹಿಂದೆ ಮುಂದೆ ನೋಡದೆ ಸರಾಗವಾಗಿ ಎದ್ದುಬಿಡುತ್ತಾನೆಯೋ ಅದೇ ರೀತಿಯಲ್ಲಿ ಮ್ಯಾಥ್ಯೂಮಾಲ್ ಕೂಡ ತನ್ನ ಗೋರಿಯಿಂದ ಸ್ವಲ್ಪವೂ ಹಿಂದೆಮುಂದೆ ನೋಡದೆ ಕಷ್ಟವಿಲ್ಲದೆ ಹೊರಕ್ಕೆ ಎದ್ದು ಬರುವನೆಂಬ ಪ್ರತೀತಿಯಿತ್ತು; ಅಲ್ಲದೆ, ಬದುಕಿರುವವನು ಹಗಲುಹೊತ್ತು ನೋಡುವ ಹಾಗೆ ಅವನನ್ನು ನಟ್ಟಿರುಳಿನಲ್ಲಿ ಅನೇಕ ವೇಳೆ ಕಾಣಬಹುದಾಗಿತ್ತಂತೆ. ಈ ಕಾಟಕೊಡುವ ಸ್ವಭಾವದ ಮಾಟಗಾರನು (ಅವನಿಗೆ ನ್ಯಾಯವಾಗಿ ವಿಧಿಸಿದ್ದ ಶಿಕ್ಷೆ ಅವನಲ್ಲಿ ಯಾವ ನೇರ್ಪಾಡನ್ನೂ ಉಂಟುಮಾಡಿದ ಹಾಗೆ ಕಾಣಲಿಲ್ಲ) 'ಏಳು ಇಪ್ಪಾರಿನ ಮನೆ' ಎಂಬ ಹೆಸರಿನ ಮಹಲನ್ನು ಪ್ರೇತರೂಪದಲ್ಲಿ ಕಾಡುವ ಒಂದು ಬಿಡಲಾಗದ ಅಭ್ಯಾಸವನ್ನು ಹೊಂದಿದ್ದನಂತೆ; ಆ ಮನೆಯ ಮಾಲಿಕನು ಆ ಮನೆಯ ಜಾಗಕ್ಕೆ ಕೊಡಬೇಕಾದ ಬಾಡಿಗೆಯನ್ನು ಇನ್ನೂ ತೀರಿಸದೆ ಇದ್ದ ಕಾರಣ, ಅದರ ಮೇಲೆ ತನಗೆ ಹಕ್ಕಿದೆಯೆಂದು ಹೇಳಿಕೊಳ್ಳುತ್ತಿದ್ದನಂತೆ ಈ ಮಾಟಗಾರ. ಅವನು ಬದುಕಿದ್ದಾಗ ಅವನು ಹೊಂದಿದ್ದ ವಿಶೇಷ ಗುಣಗಳಲ್ಲಿ ಛಲವೂ ಒಂದು; ಅವನ ಪ್ರೇತವೂ ಕೂಡ ಅದೇ ಛಲದಿಂದ ಮನೆ ಕಟ್ಟಿದ್ದ ನಿವೇಶನದ ನ್ಯಾಯವಾದ ಒಡೆಯ ತಾನೇ ಎಂದು ಸಾಧಿಸುತ್ತಿತ್ತಂತೆ. ಅದರ ಷರತ್ತುಗಳು ಹೀಗಿದ್ದುವು: ನೆಲಮಾಳಿಗೆಯನ್ನು ಅಗೆಯತೊಡಗಿದ ದಿನದಿಂದ ಹಿಡಿದು ಮೇಲೆ ಹೇಳಿದ ನೆಲಬಾಡಿಗೆಯನ್ನು ಕೊಟ್ಟುಬಿಡಬೇಕು, ಇಲ್ಲವೋ ಮಹಲನ್ನೇ ಬಿಟ್ಟುಕೊಡಬೇಕು;

ಹಿಂಭಾಗದಲ್ಲಿದ್ದ ಹೊರಕಟ್ಟಡಗಳ ಕಡೆಗೆ ಮುಂಬಾಗಿಲ ಮೂಲಕ ಸಾಗಿಹೋಗುತ್ತಿತ್ತು; ಬೊಜ್ಜು ಮೈಯಿನ ಅಡಿಗೆಯ ಕೆಲವು ಟರ್ಕಿಕೋಳಿಗಳನ್ನೂ ಕೋಳಿಗಳನ್ನೂ ಚೌಕಾಶಿಯ ವ್ಯಾಪಾರ ಮಾಡುತ್ತಾ ಪಕ್ಕದ ಬಾಗಿಲ ಬಳಿ ನಿಂತಿದ್ದನು; ಅವುಗಳನ್ನು ಒಬ್ಬ ಹಳ್ಳಿಯವನು ಮಾರಾಟಕ್ಕಾಗಿ ತಂದಿದ್ದನು. ಮನೆಯ ಕೆಳಭಾಗದಲ್ಲಿ, ಅಚ್ಚುಕಟ್ಟಾಗಿ ಉಡುಪು ಧರಿಸಿದ್ದ ಮನೆಯ ಕೆಲಸಗಿತ್ತಿಯೊಬ್ಬಳು ಆಗೊಮ್ಮೆ ಈಗೊಮ್ಮೆ ಸಡಗರದಿಂದ ಓಡಾಡುವುದನ್ನೂ, ಇನ್ನೊಮ್ಮೆ ಜೀತದಾಳಿನ ಮಿರುಗುಟ್ಟುವ ಕಪ್ಪು ಮುಖ ಸುಳಿದಾಡುವುದನ್ನೂ ಕಿಟಕಿಗಳ ಮೂಲಕ ಕಾಣಬಹುದಾಗಿತ್ತು. ಎರಡನೆಯ ಅಂತಸ್ತಿನ ಕೋಣೆಯೊಂದರ ತೆರೆದ ಕಿಟಕಿಯಲ್ಲಿ ಅಂದವಾದ, ಕೋಮಲವಾದ ಹೂಗಿಡಗಳ ಕೆಲವು ಕುಂಡಗಳಿದ್ದುವು; ಪರದೇಶದ ಹೂಗಿಡಗಳವು, ಹೊಸ ಇಂಗ್ಲೆಂಡಿನಲ್ಲಿ ಶರತ್ಕಾಲಾ ನಂತರ ಕಂಡುಬರುವ ಬಿಸಿಲಿಗಿಂತ ಹೆಚ್ಚು ಹಿತಕರವಾದ ಬಿಸಿಲನ್ನು ಅವು ಎಂದೂ ಕಂಡಿರಲಿಲ್ಲ; ಆ ಕುಂಡಗಳ ಮೇಲೆ ಬಾಗಿ ನಿಂತಿತ್ತು ತರುಣಿಯೊಬ್ಬಳ ಮನೋಹರಾಕೃತಿ; ಆ ಹೂವುಗಳಂತೆ ಅವಳೂ ಪರದೇಶದವಳೆ, ಅಂತೆಯೆ ಅವುಗಳಷ್ಟೆ ಅಂದವಾಗಿದ್ದಳು, ಕೋಮಲವಾಗಿದ್ದಳು. ಅವಳು ಅಲ್ಲಿದ್ದುದು ಆ ಭವನಕ್ಕೆಲ್ಲಾ ಒಂದು ಅವರ್ಣನೀಯವಾದ ಸೊಬಗನ್ನೂ ಮಾಟಗಾರಿಕೆಯ ಗಾಡಿಯ ನಸುಛಾಯೆಯನ್ನೂ ನೀಡಿತ್ತು. ಇನ್ನಿತರ ವಿಧಗಳಲ್ಲಿ ಅದು ಒಳ್ಳೆಯ ಧಡೂತಿಯಾದ, ಸೊಗಸಾಗಿ ಕಾಣುವ ಭವನವಾಗಿದ್ದು, ಕುಲದ ಹಿರಿಯನ ನಿವಾಸವಾಗಿರಲು ಯೋಗ್ಯವಾಗಿ ಕಾಣುತ್ತಿತ್ತು; ಮುಂದುಗಡೆಯ ಇಪ್ಪಾರು ಭಾಗದಲ್ಲಿ ಅವನು ತನ್ನ ಮುಖ್ಯ ನಿವಾಸವನ್ನು ಏರ್ಪಡಿಸಿಕೊಂಡು, ಉಳಿದವುಗಳಲ್ಲಿ ಪ್ರತಿಯೊಂದನ್ನೂ ತನ್ನ ಆರುಜನ ಮಕ್ಕಳಿಗೆಂದು ಗೊತ್ತುಮಾಡಬಹುದಾಗಿತ್ತು; ಮಧ್ಯಭಾಗದ ದೊಡ್ಡ ಹೊಗೆಕೊಳವೆಯಾದರೋ, ಆ ವೃದ್ಧನ ಉದಾರ ಹೃದಯದ ಸಂಕೇತವಾಗಿದ್ದು, ಎಲ್ಲರನ್ನೂ ಬೆಚ್ಚನೆ ನೆಮ್ಮದಿಯಾಗಿಟ್ಟಿರುವುದು, ಹಾಗೂ ಉಳಿದ ಏಳು ಸಣ್ಣ ಹೊಗೆಕೊಳವೆಗಳನ್ನು ಒಂದಾಗಿ ಬಂಧಿಸಿಟ್ಟಿರುವುದು. ಮುಂದುಗಡೆಯ ಇಪ್ಪಾರಿನ ಮೇಲೆ ನೆಟ್ಟಗೆನಿಂತ ನೆರಳುಗಡಿಯಾರವೊಂದಿತ್ತು; ಬಡಗಿ ಅದರ ಕೆಳಗೆ ಹಾದುಹೋದಾಗ, ಮೇಲೆ ನೋಡಿ, ಗಂಟೆಯನ್ನು ನೋಡಿಕೊಂಡನು.

"ಮೂರು ಗಂಟೆ ಆಗಲೆ!" ಎಂದು ಅವನು ತನ್ನಲ್ಲಿ ತಾನು ಹೇಳಿಕೊಂಡನು; "ಮುದಿ ಸರದಾರನು ಸಾಯುವುದಕ್ಕೆ ಒಂದು ಗಂಟೆ ಮುಂಚೆ ಆ ಗಡಿಯಾರವನ್ನು ಅಲ್ಲಿ ಹಾಕಿದರು ಎಂದು ನಮ್ಮ ತಂದೆ ನನಗೆ ತಿಳಿಸಿದ್ದರು. ಮೂವತ್ತೇಳು

ಪಿನ್ಚನ್ ಮಹಾಶಯನು ಕಳಿಸಿದ ಸುದ್ದಿಯನ್ನು ಕೇಳಿದಮೇಲೆ, ಬಡಗಿ ತನ್ನ ಕೈಮೇಲಿದ್ದ ಒಂದು ಸಣ್ಣ ಕೆಲಸವನ್ನು ಮುಗಿಸುವುದಕ್ಕಾಗಿ ಮಾತ್ರ ಸ್ವಲ್ಪ ಹೊತ್ತು ತಡೆದುನಿಂತು, ಆ ಬಳಿಕ ಏಳು ಇಪ್ಪಾರಿನ ಮನೆಯ ದಾರಿ ಹಿಡಿದನು. ಈ ಪ್ರಸಿದ್ಧ ಭವನದ ಸ್ವರೂಪಶೈಲಿ ಹಳೆಯ ಮಾದರಿಯದು ಎನಿಸಿಕೊಳ್ಳತೊಡಗಿದ್ದರೂ, ಊರಿನ ಯಾವ ದೊಡ್ಡ ಮನುಷ್ಯನ ನಿವಾಸದಷ್ಟೆ ಗೌರವಾರ್ಹವಾದ ವಾಸಗೃಹವಾಗಿ ಇನ್ನೂ ಉಳಿದಿತ್ತು. ಮನೆಯ ಸದ್ಯದ ಒಡೆಯನಾದ ಗರ್ವೆಸ್ ಪಿನ್ಚನು ಅದರ ಬಗೆಗೆ ತಾತ್ಸಾರ ಭಾವನೆಯನ್ನು ತಳೆದಿದ್ದನಂತೆ; ಅದಕ್ಕೆ ಕಾರಣ, ಅವನ ಚಿಕ್ಕಂದಿನಲ್ಲಿ ಅವನ ಅಜ್ಜನು ಇದ್ದಕ್ಕಿದ್ದ ಹಾಗೆ ಸತ್ತುಹೋದದ್ದರಿಂದ ಅವನ ಸೂಕ್ಷ್ಮ ಮನಸ್ಸಿಗೆ ಪೆಟ್ಟುಬಿದ್ದದ್ದು. ಸರದಾರ ಪಿನ್ಚನ್ನನ ತೊಡೆಯೇರಿ ಕುಳಿತುಕೊಳ್ಳಬೇಕೆಂದು ಓಡೋಡಿಹೋಗುತ್ತಿದ್ದಾಗಲೆ, ಮುದಿ ಪೂರಿಟನ್ನನು ಸತ್ತು ಹೆಣವಾಗಿದ್ದನು ಎಂದು ಆ ಹುಡುಗನು ಕಂಡುಕೊಂಡಿದ್ದನು! ಪ್ರಾಯಕ್ಕೆ ಬಂದಮೇಲೆ, ಪಿನ್ಚನ್ ಮಹಾಶಯನು ಇಂಗ್ಲೆಂಡಿಗೆ ಭೇಟಿಕೊಟ್ಟಿದ್ದನು; ಅಲ್ಲಿ ಒಬ್ಬ ಭಾಗ್ಯವಂತೆಯನ್ನು ಮದುವೆಯಾದನು. ಆ ತರುವಾಯ ಕೆಲವು ಕಾಲ ತಾಯ್ನಾಡಿನಲ್ಲಿ, ಕೆಲವು ಕಾಲ ಯೂರೋಪು ಖಂಡದ ಬೇರೆ ಬೇರೆ ನಗರಗಳಲ್ಲಿ– ಹೀಗೆ ಅನೇಕ ವರ್ಷಗಳನ್ನು ಕಳೆದನು. ಆ ಅವಧಿಯಲ್ಲಿ, ಪೂರ್ವವಂಶದವರಿಂದ ಬಂದ ಮನೆಯನ್ನು ಒಬ್ಬ ಬಂಧುವಿನ ವಶಕ್ಕೆ ಒಪ್ಪಿಸಲಾಯಿತು; ಆತ ಅಲ್ಲಿ ತಾತ್ಕಾಲಿಕವಾಗಿ ವಾಸಮಾಡಿಕೊಂಡಿರುವ ಅವಕಾಶವಿದ್ದು, ಅದಕ್ಕೆ ಪ್ರತಿಯಾಗಿ ಅವನು ಮನೆಯನ್ನು ಸುಸ್ಥಿತಿಯಲ್ಲಿಟ್ಟು ಕೊಂಡಿರಬೇಕಾಗಿತ್ತು. ಈ ಒಪ್ಪಂದವನ್ನು ಎಷ್ಟು ಶ್ರದ್ಧೆಯಿಂದ ಪಾಲಿಸಲಾಗಿತ್ತೆಂದರೆ, ಬಡಗಿ ಮನೆಯ ಹತ್ತಿರಕ್ಕೆ ಹೋದಾಗ, ಅದರ ಸ್ಥಿತಿಯಲ್ಲಿ ಟೀಕೆಮಾಡಲು ಏನೂ ಅವನ ಪಳಗಿದ ಕಣ್ಣಿಗೆ ಬೀಳಲಿಲ್ಲ. ಏಳು ಇಪ್ಪಾರುಗಳ ಶಿಖರಗಳು ಚೂಪಾಗಿ ಎದ್ದುನಿಂತಿದ್ದವು; ಮರಹೆಂಚಿನ ಚಾವಣಿ ಸ್ವಲ್ಪವೂ ನೀರುಸೋರದ ರೀತಿಯಲ್ಲಿ ಭದ್ರವಾಗಿತ್ತು; ಮಿರುಗುಟ್ಟುವ ಗಾರೆಯ ಕೆಲಸವು ಹೊರಗೋಡೆಗಳನ್ನು ಪೂರ್ತಿಯಾಗಿ ಮುಚ್ಚಿ, ಒಂದು ವಾರದ ಹಿಂದೆ ತಾನೆ ಹಾಕಿದೆಯೊ ಎಂಬಂತೆ ಅಕ್ಟೋಬರಿನ ಬಿಸಿಲಿನಲ್ಲಿ ಫಳಫಳಿಸುತ್ತಿತ್ತು.

ಮಾನವನ ಮುಖದಲ್ಲಿ ನೆಮ್ಮದಿಯ ಚಟುವಟಿಕೆಯನ್ನು ವ್ಯಕ್ತಪಡಿಸುವ ಉಲ್ಲಾಸದ ಭಾವದಂತಹ ಒಂದು ನಲಿವಿನ ಜೀವನಸ್ವರೂಪವು ಮನೆಯಲ್ಲಿ ಕಂಡುಬರುತ್ತಿತ್ತು. ಒಂದು ದೊಡ್ಡ ಕುಟುಂಬದ ಸಡಗರ ಅಲ್ಲಿದ್ದುದು ತಟ್ಟನೆ ನಿಮಗೆ ವೇದ್ಯವಾಗುತ್ತಿತ್ತು. ಓಕ್‌ಮರದ ಸೌದೆಯ ಒಂದು ಭಾರಿಯ ಹೇರು

ಸಂಗೀತದ ಸುಸ್ವರವೊಂದು ಕಂಪನಗೂಡಿ ಹೊಳಲಿಡುತ್ತಿತ್ತು; ಅದು ಉಪ್ಪರಿಗೆಯ ಕೋಣೆಯೊಂದರಿಂದ ಹೊರಟು ಬರುತ್ತಿತ್ತು. ಆಯಲಿಸ್ ಪಿನ್ಚನ್ ಕಡಲಾಚೆಯಿಂದ ತನ್ನೊಡನೆ ತಂದಿದ್ದ ಹಾರ್ಪ್ಸಿಕಾರ್ಡ್ ವಾದ್ಯವಾಗಿತ್ತು ಅದು. ಚೆಲುವೆ ಆಯಲಿಸ್ ತನ್ನ ಕನ್ನೆತನದ ಬಿಡುವು ಹೊತ್ತನ್ನೆಲ್ಲಾ ಹೂಗಳೊಂದಿಗೂ ಸಂಗೀತದಲ್ಲೂ ಕಳೆಯುತ್ತಿದ್ದಳು; ಆದರೇನು, ಹೂಗಳು ಬಾಡಿ ಬಾಗುತ್ತಿದ್ದುವು, ರಾಗಗಳು ಬಹುತೇಕ ದುಃಖಸೂಚಕವಾಗಿರುತ್ತಿದ್ದುವು. ಅವಳು ವಿದೇಶಿಯ ವಿದ್ಯಾಭ್ಯಾಸ ಮಾಡಿದ್ದವಳು; ಹೊಸ ಇಂಗ್ಲೆಂಡಿನ ಜೀವನವಿಧಾನಗಳ ಬಗೆಗೆ ಅವಳ ಮನಸ್ಸು ಕರಗಲಾರದಾಗಿತ್ತು; ಅವುಗಳಲ್ಲಿ ಅಂತಹ ಅಂದವಾದದ್ದೇನೂ ಬೆಳೆದು ಬಂದಿರಲಿಲ್ಲ.

ಪಿನ್ಚನ್ ಮಹಾಶಯನು ಮಾಲನ ಆಗಮನವನ್ನು ತಾಳ್ಮೆಗೆಟ್ಟು ನಿರೀಕ್ಷಿಸುತ್ತಿದ್ದನು; ಆದಕಾರಣ, ಕಪ್ಪು ಸ್ಕಿಪಿಯೋ ತನ್ನ ಧಣಿಯ ಸಮ್ಮುಖಕ್ಕೆ ಬಡಗಿಯನ್ನು ಕರೆದೊಯ್ದು ಬಿಡುವುದರಲ್ಲಿ ಸ್ವಲ್ಪವೂ ಹೊತ್ತುಗಳೆಯಲಿಲ್ಲ. ಈ ದೊಡ್ಡ ಮನುಷ್ಯನು ಕುಳಿತಿದ್ದ ಕೋಣೆ ಸಾಧಾರಣ ಅಳತೆಯ ದಿವಾನಖಾನೆ; ಅಲ್ಲಿಂದ ಹೊರಗಡೆ ನೋಡಿದರೆ ಮನೆಯ ತೋಟ ಕಾಣುತ್ತಿತ್ತು; ಹಣ್ಣಿನ ಗಿಡಗಳ ಎಲೆಗುಂಪಲು ದಿವಾನಖಾನೆಯ ಕಿಟಕಿಗಳ ಮೇಲೆ ಅರೆಪಾಲು ನೆರಳು ಚೆಲ್ಲಿದ್ದುವು. ಅದು ಪಿನ್ಚನ್ ಮಹಾಶಯನ ವೈಶಿಷ್ಟ್ಯ ಪೂರ್ಣವಾದ ಕೋಣೆಯಾಗಿದ್ದು, ಪ್ರಧಾನವಾಗಿ ಪ್ಯಾರಿಸ್ ನಗರದಿಂದಲೆ ತರಿಸಿದ್ದ ಸೊಗಸಾದ, ಬೆಲೆಬಾಳುವ ಮಾದರಿಯ ಪೀಠಪರಿಕರಗಳಿಂದ ಸುಸಜ್ಜಿತವಾಗಿತ್ತು; ನೆಲಕ್ಕೆ ರತ್ನಗಂಬಳಿ ಹಾಸಿತ್ತು (ಆ ಕಾಲದಲ್ಲಿ ಅದು ಅಪರೂಪ); ಅದು ಜೀವಂತಪುಷ್ಪಗಳಿಂದ ಅಲಂಕೃತವಾಗಿದೆಯೋ ಎಂಬಂತೆ ಬಹು ಕುಶಲತೆಯಿಂದ ಮಾಡಿದ್ದು. ಒಂದು ಮೂಲೆಯಲ್ಲಿ ಅಮೃತಶಿಲೆಯ ರಮಣಿ ನಿಂತಿದ್ದಳು; ಅವಳಿಗೆ ಅವಳ ಸೌಂದರ್ಯವೇ ಸಾಕೆನಿಸುವ ಏಕಮಾತ್ರ ವಸ್ತ್ರವಾಗಿತ್ತು. ಕೆಲವು ಚಿತ್ರಪಟಗಳನ್ನು ಗೋಡೆಗಳಿಗೆ ತೂಗಹಾಕಲಾಗಿತ್ತು; ಅವು ಹಳೆಯವಾಗಿ ಕಾಣುತ್ತಿದ್ದುವು; ಅವುಗಳ ಕೃತ್ರಿಮಶೋಭೆಯಲ್ಲಿ ಒಂದು ಗೆಲವಾದ ನಸುಬಣ್ಣ ವ್ಯಾಪಿಸಿತ್ತು. ಬೆಂಕಿಗೂಡಿನ ಹತ್ತಿರ ಒಂದು ದೊಡ್ಡ, ಬಲು ಅಂದವಾದ, ದಂತದ ಕೆತ್ತನೆ ಕೆಲಸ ಮಾಡಿದ್ದ, ಕರಿಯಮರದ ಅಲಮಾರಿತ್ತು; ಬಹು ಪ್ರಾಚೀನವಾದ ಮರದ ಸಾಮಾನು ಅದು; ಪಿನ್ಚನ್ ಮಹಾಶಯನು ಅದನ್ನು ವೆನಿಸ್ ನಗರದಲ್ಲಿ ಕೊಂಡಿದ್ದನು; ಆತ ಅದರಲ್ಲಿ ಮೆಡಲುಗಳು, ಪುರಾತನ ನಾಣ್ಯಗಳು, ಮತ್ತು ತನ್ನ ಪ್ರವಾಸಕಾಲದಲ್ಲಿ ಸಂಗ್ರಹಿಸಿದ್ದ ಯಾವಯಾವುವೋ ಸಣ್ಣಪುಟ್ಟ, ಬೆಲೆಬಾಳುವ ಅಪೂರ್ವ

ವರ್ಷಗಳಿಂದಲೂ ಒಂದೇ ಸಮನಾಗಿ ಅದು ಹೇಗೆ ಸರಿಯಾದ ಹೊತ್ತನ್ನು ತೋರಿಸಿಕೊಂಡು ಬಂದಿದೆ! ನೆರಳು ಮುಂದು ಮುಂದಕ್ಕೆ ಸರಿಯುತ್ತಲೇ ಇರುತ್ತದೆ, ಯಾವಾಗಲೂ ಸೂರ್ಯನ ಬೆಳಕಿನ ಹೆಗಲೇರಿ ಕುಳಿತು ಮೇಲಿನಿಂದ ನೋಡುತ್ತಿರುತ್ತದೆ!"

ಮ್ಯಾತ್ಯೂಮಾಲನಂಥ ಕೈಕಸಬಿನವರಿಗೆ ದೊಡ್ಡ ಮನುಷ್ಯರ ಮನೆಯಿಂದ ಹೇಳಿಕಳಿಸಿದಾಗ ಅವರು ಹಿತ್ತಿಲ ಬಾಗಿಲಿನಿಂದ ಹೋಗುವುದು ಅವರಿಗೆ ಉಚಿತವಾಗಿರಬಹುದು; ಆಳುಗಳಿಗೂ ಕೆಲಸಗಾರರಿಗೂ ಸಾಮಾನ್ಯವಾಗಿ ಅಲ್ಲಿಂದಲೇ ಒಳಕ್ಕೆ ಪ್ರವೇಶ; ಅದಿಲ್ಲದಿದ್ದರೆ, ಕಡೆಯ ಪಕ್ಷ ಪಕ್ಕದ ಬಾಗಿಲಿನಿಂದ– ಸ್ವಲ್ಪ ಮೇಲಿನ ಮಟ್ಟದ ಕಸಬುದಾರರು ಅಲ್ಲಿಂದ ಬರುತ್ತಿದ್ದರು. ಆದರೆ, ಬಡಗಿಯ ಸ್ವಭಾವದಲ್ಲಿ ತುಂಬ ಹೆಮ್ಮೆ, ಬಿಂಕ ಇದ್ದುವು; ಈ ಗಳಿಗೆಯಲ್ಲಿಯಂತೂ ತನ್ನ ವಂಶಕ್ಕೆ ಅನ್ಯಾಯವಾಗಿದೆಯೆಂಬ ಭಾವವು ಅವನ ಹೃದಯವನ್ನು ವಿಶೇಷವಾಗಿ ಕೊರೆಯುತ್ತಿತ್ತು; ಏಕೆಂದರೆ, ತನ್ನ ಸ್ವಂತಕ್ಕೇ ಸೇರಬೇಕಾಗಿದ್ದ ಭೂಮಿಯ ಮೇಲೆ ದೊಡ್ಡ ಪಿನ್ಚನ್ ಭವನವು ನೀರಿನ ಚಿಲುಮೆಯೊಂದರ ಪಕ್ಕದಲ್ಲಿ, ಅವನ ಅಜ್ಜನು ಪೈನ್ ಮರಗಳನ್ನು ಕಡಿದುಹಾಕಿ, ಒಂದು ಗುಡಿಸಲನ್ನು ಕಟ್ಟಿದ್ದನು; ಅಲ್ಲಿ ಅವನಿಗೆ ಮಕ್ಕಳು ಹುಟ್ಟಿದ್ದುವು; ಸತ್ತವನ ಸೆಡೆತ ಬೆರಳುಗಳ ಹಿಡಿತದಿಂದ ಮಾತ್ರವೇ ಸರದಾರ ಪಿನ್ಚನ್ನನು ಹಕ್ಕಿನ ಪತ್ರಗಳನ್ನು ಕಸಿದುಕೊಳ್ಳಲು ಸಾಧ್ಯವಾಗಿತ್ತು. ಹೀಗಿದ್ದುದರಿಂದ, ಕೆತ್ತನೆಕೆಲಸಮಾಡಿದ್ದ ಓಕ್‌ಮರದ ಬಾಗಿಲುವಾಡವಿದ್ದ ಹೆಬ್ಬಾಗಿಲ ಕಡೆಗೇ ನೇರವಾಗಿ ನಡೆದನವನು; ಅಲ್ಲಿ ಕಬ್ಬಿಣದ ಬಡಿಯುವ ಚಿಲಕವನ್ನು ಹೇಗೆ ಎಡೆಬಿಡದೆ ಬಲವಾಗಿ ಕುಟ್ಟಿದನೆಂದರೆ, ಹೊಸಿಲ ಬಳಿ ಉಗ್ರಮೂರ್ತಿಯಾದ ವೃದ್ಧ ಮಾಟಗಾರನೇ ಬಂದು ನಿಂತಿರುವನೆಂದು ನೀವು ಊಹಿಸಿಕೊಳ್ಳುತ್ತಿದ್ದಿರಿ.

ಕಪ್ಪು ಸ್ಕಿಪಿಯೋ ಮಹಾ ಆತುರದಲ್ಲಿ ಬಂದು ಕರೆಗೆ ಓಗೊಟ್ಟನು; ಆದರೆ, ಕೇವಲ ಬಡಗಿಯನ್ನು ಕಂಡಾಗ, ನಿಬ್ಬೆರಗಾಗಿ ತನ್ನ ಕಣ್ಣುಗಳ ಬಿಳಿಗುಡ್ಡೆಗಳನ್ನು ತೋರಿದನು.

"ದೇವರೇ ಕಾಪಾಡಬೇಕು! ಈ ಬಡಗಿಯಾಳು, ಅವನೆಂತ ದೊಡ್ಡ ಮನ್ಸ! ತನ್ನ ದೊಡ್ಡ ಕೊಡತಿ ತಗೊಂಡು ಕುಟ್ಟಿದ ಅಂತ ತಿಳಕೊಂಡಾರು ಯಾರಾದ್ರೂ!" ಎಂದು ಅವನು ತನ್ನ ಗಂಟಲಿನಲ್ಲಿಯೇ ಗೊಣಗುಟ್ಟಿಕೊಂಡನು.

"ಇದೋ ನಾನಿಲ್ಲಿ! ನಿನ್ನ ದಣಿಯ ದಿವಾನಖಾನೆಗೆ ದಾರಿತೋರಿಸು ನನಗೆ!" ಎಂದು ಮಾಲ್ ಕಠೋರವಾಗಿ ನುಡಿದನು.

ಅವನು ಮನೆಯೊಳಕ್ಕೆ ಅಡಿಯಿಟ್ಟಾಗ, ಇಂಪಾದ ಕರುಣಾಪೂರ್ಣವಾದ

ಕರಸಿಕೊಂಡಿದ್ದ ಅತಿಥಿಯನ್ನು ಆ ಕೂಡಲೆ ಗಮನಿಸಲೇ ಇಲ್ಲ. ಒರಟಾಗಿರಬೇಕೆಂದಾಗಲಿ, ಅನುಚಿತವಾಗಿ ಉದಾಸೀನತೆಯನ್ನು ತೋರಬೇಕೆಂದಾಗಲಿ ಆತನ ಉದ್ದೇಶವಾಗಿರಲಿಲ್ಲ; ನಿಜವಾಗಿ, ಆ ಬಗೆಯ ಅಪರಾಧ ಮಾಡಲು ಆತ ಲಜ್ಜೆಪಡುತ್ತಿದ್ದನು; ಆದರೆ, ಮಾಲನ ಸ್ಥಾನದಲ್ಲಿದ್ದ ಯಾವನೇ ಆಗಲಿ ತನ್ನಿಂದ ಮರ್ಯಾದೆಯನ್ನು ಪಡೆಯುವ ಹಕ್ಕು ಹೊಂದಿದ್ದಾನೆ ಎಂಬುದು ಅವನಿಗೆ ಹೊಳೆಯಲೇ ಇಲ್ಲ; ಅಲ್ಲದೆ, ಅಂಥವನು ಈ ವಿಚಾರವನ್ನು ಒಂದಲ್ಲ ಒಂದು ರೀತಿಯಲ್ಲಿ ಮನಸ್ಸಿಗೆ ಹಚ್ಚಿಕೊಂಡಾನು ಎಂಬುದೂ ತೋರಲಿಲ್ಲ.

ಅದು ಹೇಗಿದ್ದರೂ, ಬಡಗಿ ತಟ್ಟನೆ ಬೆಂಕಿಗೂಡಿನ ಹತ್ತಿರಕ್ಕೆ ಬಂದು, ಪಿನ್ಚನ್ ಮಹಾಶಯನನ್ನು ಮುಖಾಮುಖಿ ನೋಡಲಾಗುವಂತೆ ಒಂದು ಸುತ್ತು ತಿರುಗಿ ನಿಂತನು.

"ನೀವು ನನಗೆ ಹೇಳಿಕಳಿಸಿದಿರಿ. ದಯವಿಟ್ಟು ನನ್ನಿಂದ ನಿಮಗಾಗಬೇಕಾದ ಕೆಲಸವೇನು ಎಂಬುದನ್ನು ವಿವರಿಸಿದರೆ, ನನ್ನ ಸ್ವಂತ ಕೆಲಸ ಕಾರ್ಯಗಳಿಗೆ ನಾನು ಹಿಂತಿರುಗಬಹುದು" ಎಂದನು ಅವನು.

"ಹಾಗೋ! ದಯವಿಟ್ಟು ಕ್ಷಮಿಸಯ್ಯಾ. ತಕ್ಕ ಪ್ರತಿಫಲವಿಲ್ಲದೆ ನಿನ್ನ ಹೊತ್ತನ್ನು ಹಾಳುಮಾಡಬೇಕೆಂಬ ಉದ್ದೇಶ ನನಗಿಲ್ಲ. ನಿನ್ನ ಹೆಸರು ಮಾಲ್‌ಥಾಮಸ್ ಇಲ್ಲ ಮ್ಯಾತ್ಯೂಮಾಲ್– ಅಲ್ಲವೆ? ಈ ಮನೆಯನ್ನು ಕಟ್ಟಿದವನ ಮಗನೋ ಮೊಮ್ಮಗನೋ ಅಲ್ಲವೇನಯ್ಯಾ?" ಎಂದು ಪಿನ್ಚನ್ ಮಹಾಶಯನು ಶಾಂತನಾಗಿ ನುಡಿದನು.

ಅದಕ್ಕೆ ಬಡಗಿ– "ನನ್ನ ಹೆಸರು ಮ್ಯಾತ್ಯೂಮಾಲ್; ಈ ಮನೆಕಟ್ಟಿದವರ ಮಗ, ಈ ಭೂಮಿಗೆ ನ್ಯಾಯವಾಗಿ ಮಾಲಿಕರಾದವರ ಮೊಮ್ಮಗ" ಎಂದು ಉತ್ತರಕೊಟ್ಟನು.

"ನೀನು ಪ್ರಸ್ತಾಪಿಸುವ ವಿವಾದದ ವಿಚಾರ ನಾನು ಬಲ್ಲೆ" ಎಂದು ಪಿನ್ಚನ್ ಮಹಾಶಯನು ಕಲಕದ ಮನಶ್ಶಾಂತಿಯಿಂದ ಉತ್ತರಕೊಟ್ಟನು: ಈ ಕಟ್ಟಡ ನಿಂತಿರುವ ಅಡಿಪಾಯದ ನಿವೇಶನಕ್ಕೆ ತನಗಿರುವ ಹಕ್ಕನ್ನು ಸ್ಥಾಪಿಸಿಕೊಳ್ಳುವುದಕ್ಕಾಗಿ ನನ್ನ ಅಜ್ಜನವರು ನ್ಯಾಯಸ್ಥಾನದಲ್ಲಿ ಮೊಕದ್ದಮೆ ಹೂಡಬೇಕಾದ ಪ್ರಮೇಯಕ್ಕೆ ಕಟ್ಟು ಬಿದ್ದರು ಎಂಬುದನ್ನ ನಾನು ಚೆನ್ನಾಗಿ ಬಲ್ಲೆ. ನೀನು ಒಪ್ಪುವುದಾದರೆ, ನಾವು ಆ ಚರ್ಚೆಯನ್ನು ಮತ್ತೆ ಎತ್ತಿಕೊಳ್ಳುವುದು ಬೇಡ. ವಿಷಯವೆಲ್ಲ ಅಂದು ಸಮರ್ಥರಾದ ಅಧಿಕಾರಿಗಳಿಂದ ನಿಷ್ಪಕ್ಷಪಾತವಾಗಿ, ಮಾರ್ಪಡಿಸಲಾಗದಂತೆ, ಇತ್ಯರ್ಥವಾಗಿ ಹೋಗಿದೆ ಎಂದು ಪರಿಗಣಿಸಬಹುದು. ಆದರೂ ಕೂಡ, ವಿಚಿತ್ರ

ವಸ್ತುಗಳನ್ನಿಡುವ ಭಂಡಾರವನ್ನಾಗಿ ಉಪಯೋಗಿಸುತ್ತಿದ್ದನು. ಹೀಗಿದ್ದರೂ, ಇಷ್ಟೆಲ್ಲಾ ಅಲಂಕರಣವೈವಿಧ್ಯದ ನಡುವೆ, ಆ ಕೋಣೆ ತನ್ನ ಮೊದಲಿನ ಲಕ್ಷಣಗಳನ್ನು, ಎಂದರೆ– ಅದರ ತಗ್ಗು ಚಾವಣಿ, ಅದರ ಅಡ್ಡಜಂತಿ, ಹಳೆಯ ಮಾದರಿಯ 'ಡಚ್' ಹೆಂಚುಗಳನ್ನು, ಹೊದ್ದಿಸಿ ಕಟ್ಟಿದ್ದ ಒಲೆಗೂಡಿನ ಅಲಂಕಾರ ಭಾಗ– ಇವನ್ನೆಲ್ಲ ಎತ್ತಿತೋರಿಸುತ್ತಿತ್ತು. ಪರಿಣಾಮದಲ್ಲಿ ಬಹಳ ಕಷ್ಟಪಟ್ಟು ಕಲೆಹಾಕಿದ ಪರಕೀಯಭಾವನೆಗಳಿಂದ ತುಂಬಿ ಕೃತಕವಾದ ರೀತಿಯಲ್ಲಿ ಸುಸಂಸ್ಕೃತವಾಗಿ ಕಾಣುತ್ತಿದ್ದರೂ ಮೊದಲಿಗಿಂತ ವಿಶಾಲವಾಗಿಯಾಗಲಿ ಸೊಗಸಾಗಿಯಾಗಲಿ ಆಗಿರದ ಮನಸ್ಸಿನ ಸಂಕೇತವಾಗಿತ್ತು ಆ ಕೋಣೆ.

ಬಲು ಅಂದವಾದ ಸುಸಜ್ಜಿತವಾಗಿದ್ದ ಈ ಕೋಣೆಯಲ್ಲಿ ಬಹುಮಟ್ಟಿಗೆ ಹೊಂದಿಕೆಯಿಲ್ಲದ ಹಾಗೆ ಕಾಣುತ್ತಿದ್ದ ಎರಡು ವಸ್ತುಗಳಿದ್ದುವು. ಅವುಗಳಲ್ಲಿ ಒಂದು, ಭೂಪ್ರದೇಶವೊಂದರ ದೊಡ್ಡ ಭೂಪಟ ಅಥವಾ ಮೋಜಿಣಿದಾರರ ನಕ್ಷೆ; ಅದು ಅನೇಕ ವರ್ಷಗಳ ಹಿಂದೆ ಬರೆದಿದ್ದು, ಈಗ ಹೊಗೆಯಿಂದ ಕಪ್ಪು ತಿರುಗಿರುವಂತೆಯೂ ಬೆರಳುಗಳು ಸೋಕಿ ಅಲ್ಲಿ ಇಲ್ಲಿ ಕೊಳಕಾಗಿರುವಂತೆಯೂ ಕಾಣುತ್ತಿತ್ತು. ಇನ್ನೊಂದು, ಪ್ಯೂರಿಟನ್ನಿನ ಉಡುಪಿನಲ್ಲಿದ್ದ ನಿಷ್ಠುರಪ್ರಕೃತಿಯ ವೃದ್ಧನೊಬ್ಬನ ಭಾವಚಿತ್ರ; ಒರಟೊರಟಾಗಿ ಬಣ್ಣ ಹಾಕಿ ಬರೆದಿದ್ದರೂ ಚಿತ್ರ ಬಹು ಪರಿಣಾಮಕಾರಿಯಾಗಿ ಕಾಣುತ್ತಿದ್ದು, ಅದರ ಮುಖಭಾವ ವ್ಯಕ್ತಿಯ ಸ್ವಭಾವವನ್ನು ಚೆನ್ನಾಗಿ ಪ್ರಕಟಪಡಿಸುತ್ತಿತ್ತು. ಪಿನ್ಚನ್ ಮಹಾಶಯನು ಒಂದು ಸಣ್ಣ ಮೇಜಿನ ಮುಂದೆ ಕುಳಿತು, ಇಂಗ್ಲೆಂಡಿನ ಕಲ್ಲಿದ್ದಲ ಬೆಂಕಿ ಕಾಯಿಸಿಕೊಳ್ಳುತ್ತಾ, ಕಾಫಿಯನ್ನು ನಿಧಾನವಾಗಿ ಚಪ್ಪರಿಸಿ ಕುಡಿಯುತ್ತಿದ್ದನು; ಆತ ಫ್ರಾನ್ಸ್ ದೇಶದಲ್ಲಿದ್ದಾಗ ಕಾಫಿ ಬಹು ಇಷ್ಟವಾದ ಪಾನೀಯವಾಗಿ ಅಭ್ಯಾಸವಾಗಿಬಿಟ್ಟಿತ್ತು. ಮಧ್ಯವಯಸ್ಕನಾದ ಆತ ನಿಜವಾಗಿ ಸುಂದರಪುರುಷನಾಗಿದ್ದನು; ಅವನು ಧರಿಸಿದ್ದ ಕೂದಲ ಟೋಪಿಯ ಕೂದಲು ಅವನ ಹೆಗಲುಗಳ ಮೇಲೆ ಇಳಿಯಬಿದ್ದಿದ್ದುವು; ಅವನ ನೀಲಿಯ ಬಣ್ಣದ ಮಕಮಲ್ಲಿನ ಅಂಗಿಯ ಅಂಚುಗಳಿಗೂ ಜಾಜಗಳ ಬಳಿಯೂ ಜರಿಯ ಕೆಲಸಮಾಡಿತ್ತು; ಎಲ್ಲೆಡೆಯೂ ಚಿನ್ನದ ಜರಿಯ ಹೂಗಳಿಂದ ಅಲಂಕೃತವಾದ ಅವನ ಸೊಂಟದಂಗಿಯ (ವೇಸ್ಟ್ ಕೋಟ್) ವಿಶಾಲವಾದ ಅಡ್ಡಗಲವನ್ನು ಬೆಂಕಿಯ ಬೆಳಕು ಬೆಳಗಿತ್ತು. ಬಡಗಿಯನ್ನು ಕರೆದುಕೊಂಡು ಒಂದು ಸ್ಕಿಪಿಯೋ ಪ್ರವೇಶಿಸಿದಾಗ ಪಿನ್ಚನ್ ಮಹಾಶಯನು ಅರ್ಧಸುತ್ತು ತಿರುಗಿ, ಬಳಿಕ ಮೊದಲಿನಂತೆಯೇ ಕುಳಿತು, ತಾನು ಹಿಡಿದಿದ್ದ ಬಟ್ಟಲ ಕಾಫಿಯನ್ನು ಉದ್ದೇಶಪೂರ್ವಕವಾಗಿ ಕುಡಿದು ಮುಗಿಸತೊಡಗಿದನು. ತನ್ನ ಸಮ್ಮುಖಕ್ಕೆ

ಆ ವಿಷಯವನ್ನು ನಾನು ಹೇಳಲೇಬೇಕಾಗಿಲ್ಲ; ಸ್ವಂತದ ಮತ್ತು ಸಾರ್ವಜನಿಕ ವಿಚಾರಗಳಲ್ಲಿ ಅವರು ಚೆನ್ನಾಗಿ ಪರಿಚಿತರಾಗಿದ್ದರು; ಅವರು ಎಂದಿಗೂ ಸರಿಯಾದ ಆಧಾರವಿಲ್ಲದೆ ಆಶೆಗಳನ್ನು ಇಟ್ಟುಕೊಳ್ಳತಕ್ಕವರಲ್ಲ, ಹಾಗೂ ಕಾರ್ಯಸಾಧ್ಯವಲ್ಲದ ಯೋಜನೆಯನ್ನು ಮುಂದುವರಿಸುವ ಪ್ರಯತ್ನ ಮಾಡತಕ್ಕವರಲ್ಲ. ಆದ್ದರಿಂದ, ಆ ಮೂಡಣ ಪ್ರಾಂತದ ಹಕ್ಕಿನ ವಿಚಾರದಲ್ಲಿ ತಮಗೆ ವಿಜಯ ದೊರಕುವುದೆಂದು ನಂಬಿ ನಿರೀಕ್ಷಿಸಲು ಅವರಿಗೆ ಆಧಾರಗಳಿದ್ದುವೆಂಬ ತೀರ್ಮಾನಕ್ಕೆ ಬರಬೇಕಾದ್ದು ಸ್ಪಷ್ಟ; ಆದರೆ, ಆ ಆಧಾರಗಳಿದ್ದ ವಿಚಾರ ಅವರ ಉತ್ತರಾಧಿಕಾರಿಗಳಿಗೆ ಮಾತ್ರ ತಿಳಿಯದು, ಅಷ್ಟೆ. ಒಂದು ಮಾತಿನಲ್ಲಿ, ನನ್ನ ಅಜ್ಜಂದಿರ ಬಳಿ ಈ ಹಕ್ಕಿನ ಸಾಧನೆಗೆ ಅಗತ್ಯವಾದ ಯಾವುದೋ ಒಂದು ಪತ್ರ ಇಲ್ಲವೆ ದಾಖಲೆ ಇದ್ದಿತು; ಈಚೆಗೆಂದೋ ಅದು ಕಣ್ಣರೆಯಾಗಿ ಹೋಗಿದೆ: ಇದು ನನ್ನ ನಂಬಿಕೆ; ನನ್ನ ನ್ಯಾಯಸಲಹೆಗಾರರೂ ಇದನ್ನು ಅನುಮೋದಿಸುತ್ತಾರೆ; ಅಲ್ಲದೆ, ಕೆಲಮಟ್ಟಿಗೆ ಮನೆತನದ ಸಂಪ್ರದಾಯದ ಹೇಳಿಕೆಗಳೂ ಅದನ್ನೇ ಅಧಿಕಾರಯುತವಾಗಿ ಬಲಪಡಿಸುತ್ತವೆ."

"ಇದ್ದರೂ ಇರಬಹುದು; ಆದರೆ ನನ್ನಂಥ ಬಡ ಬಡಗಿಗೂ ಪಿನ್ಚನ್ ಮನೆತನದ ಮಹತ್ವದ ವ್ಯವಹಾರಗಳಿಗೂ ಏನು ಸಂಬಂಧವಿದ್ದೀತು?" ಎಂದು ನುಡಿದ ಮ್ಯಾತ್ಯೂಮಾಲ್; ಮತ್ತೆ ಅವನ ಮುಖದ ಮೇಲೆ ಕರಾಳವಾದ ಮಂದಹಾಸವೊಂದು ಮೂಡಿತ್ತೆಂದು ಹೇಳಿಕೆಯಿದೆ.

"ಬಹುಶಃ ಏನೂ ಇರಲಾರದು; ಬಹಳ ಸಂಬಂಧ ಇರುವುದೂ ಸಾಧ್ಯ!" ಎಂದು ಪಿನ್ಚನ್ ಮಾರುತ್ತರ ಕೊಟ್ಟನು.

ಈ ಘಟ್ಟದಲ್ಲಿ, ಏಳು ಇಪ್ಪಾರಿನ ಮನೆಯ ಒಡೆಯನು ಪ್ರಸ್ತಾಪಿಸಿದ ವಿಷಯವಾಗಿ ಆತನಿಗೂ ಮ್ಯಾತ್ಯೂಮಾಲನಿಗೂ ಅನೇಕ ಮಾತುಗಳು ನಡೆದುವು. ಮಾಲ್ ಮನೆತನದವರಿಗೂ, ಪಿನ್ಚನ್ ಮನೆತನದವರ ಸ್ವಾಧೀನದಲ್ಲಿರಬೇಕಾಗಿದ್ದು ಇನ್ನೂ ವಶಕ್ಕೆ ಬಂದಿಲ್ಲದಿದ್ದ ಈ ಅಪಾರ ಆಸ್ತಿಗೂ ಯಾವುದೋ ನಿಗೂಢವಾದ ಸಂಬಂಧ ಹಾಗೂ ಅವಲಂಬನೆ ಇವೆ ಎಂಬ ಬಗೆಗೆ ಜನರ ನಂಬಿಕೆಯೂ ಸುಳಿವು ತೋರುತ್ತಿದ್ದಿತಂತೆ. (ಆದರೆ, ಪಿನ್ಚನ್ ಮಹಾಶಯನೇನೋ ವಿಪರೀತ ಅಸಂಬದ್ಧ ಪ್ರಲಾಪವಾಗಿ ಕಾಣುವ ಕತೆಗಳ ವಿಷಯ ಎತ್ತಲು ಸ್ವಲ್ಪ ಹಿಂಜರಿಯುತ್ತಿದ್ದನು.) ಆ ಮುದಿ ಮಾಟಗಾರನನ್ನು ಗಲ್ಲಿಗೇನೋ ಹಾಕಲಾಯಿತು; ಆದರೆ, ಸರದಾರ ಪಿನ್ಚನ್ನನೊಂದಿಗೆ ಅವನು ನಡಸಿದ ಹೋರಾಟದಲ್ಲಿ ಅವನೇ ಅತ್ಯಂತ ಹೆಚ್ಚಿನ ಲಾಭವನ್ನು ಪಡೆದಿದ್ದನೆಂಬುದು ಸರ್ವಸಾಧಾರಣವಾದ

ಸಂಗತಿ ಏನೆಂದರೆ, ಈಗ ನಾನು ನಿನಗೆ ಹೇಳಬೇಕೆಂದಿರುವ ಮಾತು ಪ್ರಸಂಗವಶಾತ್ ಅದೇ ವಿಷಯಕ್ಕೆ ಸಂಬಂಧಪಟ್ಟಿದೆ. ಹಾಗೂ, ನೀನು ಈಗ ತಾನೇ ವ್ಯಕ್ತಪಡಿಸಿದ ಈ ಬದ್ಧದ್ವೇಷ– ತಪ್ಪು ತಿಳಿದುಕೊಳ್ಳಬೇಡ, ನಿನ್ನ ಮನಸ್ಸು ನೋಯಿಸಬೇಕೆಂದು ನನ್ನ ಉದ್ದೇಶವಲ್ಲ– ಈ ರೇಗುವ ಸ್ವಭಾವ, ವಿಷಯಕ್ಕೆ ಸಂಬಂಧಪಡದೆ ಇರುವುದೇನಲ್ಲ."

"ಮಿಸ್ಟರ್ ಪಿನ್ಚನ್ನರೇ, ತನ್ನ ರಕ್ತಸಂಬಂಧದವರಿಗೆ ಅನ್ಯಾಯವಾಯಿತೆಂದು ಒಬ್ಬಾತ ಪಡುವ ಸಹಜವಾದ ಅಸಮಾಧಾನಕ್ಕೂ ನಿಮ್ಮ ಇಂದಿನ ಉದ್ದೇಶಕ್ಕೂ ಸಂಬಂಧವಿದೆಯೆಂದು ನೀವು ಭಾವಿಸುವುದಾದರೆ, ಅದು ನಿಮ್ಮ ಸಂತೋಷ!" ಎಂದು ಹೇಳಿದನು ಆ ಬಡಗಿ.

ಏಳು ಇಪ್ಪಾರಿನ ಮನೆಯ ಒಡೆಯನು ಮುಗುಳುನಗೆಯೊಂದಿಗೆ ನುಡಿದನು: "ನೀನು ಒಳ್ಳೆಯವ ಮಾಲ್, ನಿನ್ನ ಮಾತನ್ನು ನಿಜವೆಂದು ನಂಬಿ ಅದರಂತೆ ನಡೆಯುತ್ತೇನೆ; ಮತ್ತು ಒಂದು ಕಾರ್ಯವಿಧಾನವನ್ನು ಸೂಚಿಸುತ್ತೇನೆ; ವಂಶಪಾರಂಪರ್ಯವಾಗಿ ನಿನ್ನಲ್ಲಿ ನೆಲಸಿರುವ ಅಸಮಾಧಾನಗಳು– ಅವನ್ನು ಸಮರ್ಥಿಸಲು ಆಧಾರವಿರಲಿ ಇಲ್ಲದಿರಲಿ– ಆ ಕಾರ್ಯ ವಿಧಾನದಲ್ಲಿನ ನನ್ನ ವ್ಯವಹಾರಗಳಿಗೆ ಸಂಬಂಧಪಟ್ಟಿದ್ದರೂ ಇರಬಹುದು. ನನ್ನ ಅಜ್ಜನವರ ಕಾಲದಿಂದಲೂ ಮೂಡಣ ಸೀಮೆಯಲ್ಲಿನ ಒಂದು ಬಹು ದೊಡ್ಡ ಪ್ರಾಂತಕ್ಕೆ ತನಗೆ ಹಕ್ಕಿದೆಯೆಂದು ಪಿನ್ಚನ್ ಮನೆತನ ವಾದವನ್ನು ಹೂಡುತ್ತ ಬಂದಿದೆಯೆಂಬ ಸಂಗತಿಯನ್ನು ನೀನು ಕೇಳಿಬಲ್ಲೆ ಎಂದು ನಾನು ಊಹಿಸುತ್ತೇನೆ, ಅದು ಸರಿ ತಾನೆ?"

"ಅನೇಕವೇಳೆ. ಅನೇಕವೇಳೆ ಕೇಳಿದ್ದೇನೆ, ನಮ್ಮ ತಂದೆಯಿಂದ" ಎಂದು ಮಾಲ್ ಉತ್ತರಕೊಟ್ಟನು. ಆಗ ಅವನ ಮುಖದ ಮೇಲೆ ಮುಗುಳುನಗೆಯಾಡಿತೆಂದು ಹೇಳಿಕೆಯಿದೆ.

ಬಡಗಿಯ ಮುಖದ ಮೇಲಿನ ಮುಗುಳುನಗೆಯ ಅರ್ಥವೇನಿರ ಬಹುದೆಂದು ವಿಚಾರಮಾಡುವುದಕ್ಕಾಗಿಯೇನೋ ಎಂಬಂತೆ ಕ್ಷಣಕಾಲ ಸುಮ್ಮನಿದ್ದು ಪಿನ್ಚನ್ ಮಹಾಶಯನು ಮುಂದುವರಿಸಿದನು: ನನ್ನ ಅಜ್ಜನವರ ಮರಣಕಾಲದಲ್ಲಿ, ಈ ಹಕ್ಕಿನ ಪ್ರಶ್ನೆ ಇನ್ನೇನು ತೀರ್ಮಾನವಾಗುವುದರಲ್ಲಿದ್ದು, ಅದರ ಪೂರ್ಣ ಪ್ರಯೋಜನ ದೊರೆಯುವುದರಲ್ಲಿತ್ತು. ಯಾವ ವಿಧವಾದ ತೊಂದರೆಯಾಗಲಿ ತಡವಾಗಲಿ ಆದೀತೆಂದು ಅವರು ನಿರೀಕ್ಷಿಸಿರಲಿಲ್ಲವೆಂಬ ಸಂಗತಿ ಅವರ ನಂಬಿಕೆಗೆ ಪಾತ್ರರಾಗಿದ್ದವರಿಗೆ ಚೆನ್ನಾಗಿ ಗೊತ್ತಿತ್ತು. ಸರದಾರ ಪಿನ್ಚನ್ನರು ಕಾರ್ಯಪರರು;

ಸರದಾರ ಪಿನ್ಚನ್ನನ ಮೊಮ್ಮಗನಾದ ಈತನಿಗೆ ಸ್ಪಷ್ಟವಾಗಿ ನೆನಪಿದ್ದಂತೆ, ಆತನ ಕೆಲವು ಕಾಗದ ಪತ್ರಗಳು ಮೇಜಿನ ಮೇಲೆ ಚೆದರಿ ಬಿದ್ದಿದ್ದುವು.

ವ್ಯಂಗ್ಯವಾಗಿ ತಿಳಿಸಿದ ಸಂಶಯವು ಮ್ಯಾತ್ಯೂಮಾಲನಿಗೆ ಅರ್ಥವಾಯಿತು.

"ಆ ಹಾಳು ಮುದಿ ಸರದಾರನಿಗಿಂತ ನಮ್ಮ ತಂದೆ ಎಷ್ಟೋ ಪಾಲು ಪ್ರಾಮಾಣಿಕರಾಗಿದ್ದರು! ತಮ್ಮ ಹಕ್ಕುಗಳನ್ನು ಮರಳಿ ಪಡೆಯಲಾಗದಿದ್ದುದಕ್ಕೆ ಅವರು ಆ ಕಾಗದ ಪತ್ರಗಳನ್ನು ಮರಳಿ ಪಡೆಯಲಾಗದಿದ್ದುದಕ್ಕೆ ಅವರು ಆ ಕಾಗದ ಪತ್ರಗಳಲ್ಲಿ ಒಂದನ್ನು ಒಯ್ದುಬಿಡುತ್ತಿದ್ದರೋ!" ಎಂದು ನುಡಿದ ಮ್ಯಾತ್ಯೂಮಾಲ್; ಅವನ ಮುಖದ ಮೇಲೆ ಆ ಕರಾಳ ಮುಗುಳ್ನಗೆ ಇದ್ದೇ ಇದ್ದಿತು; ಅದು ಅವನ ಮುಖಭಾವವನ್ನು ಒಂದು ಒಗಟೆಯಾಗಿಸಿದ್ದಿತು.

"ನಿನ್ನೊಂದಿಗೆ ನಾನು ಮಾತಿಗೆ ಮಾತು ಎಸೆದಾಡುವುದಿಲ್ಲ" ಎಂದು ಪರದೇಶದಲ್ಲಿ ಬೆಳೆದ ಪಿನ್ಚನ್ ಮಹಾಶಯನು ದರ್ಪಯುಕ್ತವಾದ ಮನಶ್ಯಾಂತಿಯಿಂದ ನುಡಿದನು: "ಅಲ್ಲದೆ, ನಮ್ಮ ಅಜ್ಜನವರ ಬಗೆಗಾಗಲಿ ನನ್ನ ಬಗೆಗಾಗಲಿ ತೋರಿದ ಯಾವುದೇ ಅವಿನಯವರ್ತನೆಯನ್ನು ಪ್ರತಿಭಟಿಸುವುದು ನನಗೆ ಯೋಗ್ಯವಲ್ಲ. ನಿನ್ನ ಸ್ಥಾನದಲ್ಲಿರುವ, ಮತ್ತು ನಿನ್ನ ಅಭ್ಯಾಸಗಳನ್ನು ಇಟ್ಟುಕೊಂಡಿರುವಂತಹ ಒಬ್ಬನೊಂದಿಗೆ ಒಬ್ಬ ದೊಡ್ಡ ಮನುಷ್ಯನು ವ್ಯವಹರಿಸುವುದಕ್ಕೆ ಮುಂಚೆ, ತಾನು ಕಾರ್ಯಸಾಧನೆಗಾಗಿ ಅನುಸರಿಸುವ ಮಾರ್ಗ ಮನಸ್ಸಿಗೆ ಹಿತಕರವಲ್ಲದಿದ್ದರೂ ಕಡೆಯ ಪಕ್ಷ ಕಾರ್ಯಸಿದ್ಧಿಯಾದರೂ ಶೀಘ್ರವಾಗಿ ನೆರವೇರಿ ಆ ಅಹಿತವನ್ನು ಹೋಗಲಾಡಿಸುವುದೇ ಇಲ್ಲವೇ ಎಂಬುದನ್ನು ಮೊತ್ತಮೊದಲು ವಿಚಾರಮಾಡುತ್ತಾನೆ. ಪ್ರಕೃತಸಂದರ್ಭದಲ್ಲಿ, ಮನಸ್ಸಿಗೆ ಬೇಸರವಾದರೂ ಚಿಂತೆಯಿಲ್ಲ, ಕಾರ್ಯಸಿದ್ಧಿಯಾಗುತ್ತದೆ."

ಆ ಬಳಿಕ ಆತನು ಸಂಭಾಷಣೆಯನ್ನು ಮುಂದುವರಿಸಿ, ಕಳೆದುಹೋದ ಕಾಗದಪತ್ರ ಮತ್ತೆ ದೊರಕಲು ಸಾಧಕವಾಗುವಂತಹ ಸಮಾಚಾರವನ್ನು ಬಡಗಿ ಕೊಟ್ಟು, ಅದರ ಪರಿಣಾಮವಾಗಿ ಮೂಡಣ ಸೀಮೆಯ ಹಕ್ಕಿನ ಸಂಬಂಧದಲ್ಲಿ ಜಯ ದೊರೆತೀತೆಂಬ ನಿರೀಕ್ಷೆಯಿಂದ ಅವನಿಗೆ ಅಪಾರ ಹಣದಾಸೆಯನ್ನು ತೋರಿಸಿದನು. ಬಹಳಹೊತ್ತಿನವರೆಗೆ, ಮ್ಯಾತ್ಯೂಮಾಲನು ಈ ಎಲ್ಲ ಸಲಹೆ ಸೂಚನೆಗಳನ್ನೂ ಕಿವುಡುಗೇಳಿದನೆಂದು ಹೇಳಲಾಗಿದೆ. ಅದು ಹೇಗಾದರೂ ಇರಲಿ, ಕಟ್ಟಕಡೆಗೆ ಅವನು ವಿಚಿತ್ರವಾದ ನಗುವನ್ನು ನಕ್ಕು, ಅಷ್ಟೊಂದು ಜರೂರಾಗಿ ಬೇಕಾಗಿರುವ ಪತ್ರದ ಸಾಕ್ಷ್ಯಕ್ಕೆ ಪ್ರತಿಯಾಗಿ ಮುದಿಮಾಟಗಾರನ ಮನೆಯಿದ್ದ ಜಮೀನನ್ನೂ ಅದರೊಂದಿಗೆ ಅದರ ಮೇಲೆ ಈಗ ಕಟ್ಟಲಾಗಿರುವ ಏಳು

ಹೇಳಿಕೆಯಾಗಿತ್ತು; ಅದು ಹೇಗೆಂದರೆ, ತೋಟದ ಜಮೀನಿನ ಒಂದೋ ಅಥವಾ ಎರಡೋ ಎಕರೆಗಳಿಗೆ ಬದಲಾಗಿ ಅವನು ಆ ಮೂಡಣ ಪ್ರಾಂತದ ಮೇಲಿನ ಹಕ್ಕಿನ ಸ್ವಾಮ್ಯವನ್ನು ಪಡೆದಿದ್ದನು. ಈಚೆಗೆ ಮರಣಹೊಂದಿದ ಬಹಳ ವಯಸ್ಸಾದ ಹೆಂಗಸೊಬ್ಬಳು ಒಲೆಯ ಪಕ್ಕದಲ್ಲಿ ಕುಳಿತು ಬೆಂಕಿಕಾಯಿಸಿಕೊಳ್ಳುವಾಗ ಆಡುವ ಮಾತುಕತೆಯಲ್ಲಿ ಈ ಪ್ರಕರಣವನ್ನು ಆಲಂಕಾರಿಕವಾದ ಭಾಷೆಯಲ್ಲಿ ಹೀಗೆ ಹೇಳುತ್ತಿದ್ದಳು; ಪಿನ್ಚನ್ ಮನೆತನಕ್ಕೆ ಸೇರಿದ ಮೈಲಿಗಟ್ಟಲೆ ಭೂಮಿಯನ್ನು ಎಲೆಗುದ್ದಲಿಯಿಂದ ತೋಡಿ ತೋಡಿ ಮಾಲನ ಗೋರಿಯನ್ನು ಭರ್ತಿಮಾಡಲಾಗಿತ್ತಂತೆ; ಅಂದಹಾಗೆ, ಆ ಗೋರಿ 'ಗಲ್ಲಿನ ಗುಡ್ಡ'ದ ನೆತ್ತಿಯ ಬಳಿ ಎರಡು ಬಂಡೆಗಳ ನಡುವೆ ಇದ್ದ, ಅಷ್ಟೇನೂ ಆಳವಿಲ್ಲದ ಒಂದು ಮೂಲೆ ಮುಡುಕು ಮಾತ್ರ. ಅಲ್ಲದೆ, ಕಣ್ಮರೆಯಾಗಿದ್ದ ಕಾಗದ ಪತ್ರಕ್ಕಾಗಿ ನ್ಯಾಯವಾದಿಗಳು ವಿಚಾರಮಾಡುತ್ತಿದ್ದಾಗ, ಆ ಮಾಟಗಾರನ ಮೂಳೆಕೈಯಲ್ಲಿ ಹೊರತು ಬೇರೆ ಇನ್ನೆಲ್ಲಿಯೂ ಅದು ಎಂದಿಗೂ ಸಿಕ್ಕುವುದಿಲ್ಲವೆಂಬುದು ಗಾದೆ ಮಾತಿನಂತಾಗಿತ್ತು. ಈ ಕಟ್ಟು ಕತೆಗಳಿಗೆ ಜಾಣವಕೀಲರು ಎಷ್ಟು ಬೆಲೆಕೊಟ್ಟಿದ್ದರೆಂದರೆ, ಅವರು ಆ ಮಾಟಗಾರನ ಗೋರಿಯನ್ನು ಹುಡುಕಿಸಲು ಗೋಪ್ಯವಾಗಿ ಏರ್ಪಾಡುಮಾಡಿದ್ದರು; (ಆದರೆ, ಈ ಸಂಗತಿಯನ್ನು ಬಡಗಿಗೆ ತಿಳಿಸುವುದು ಪಿನ್ಚನ್ ಮಹಾಶಯನಿಗೆ ಉಚಿತವೆಂದು ತೋರಲಿಲ್ಲ). ಹಾಗೆ ಹುಡುಕಿಸಿದಾಗ ಕೊನೆಗೂ ಏನೂ ಸಿಕ್ಕಲಿಲ್ಲ; ಆದರೆ ಮಾತ್ರ, ಅಸ್ಥಿಪಂಜರದ ಬಲಗೈ ಹೊರಟುಹೋಗಿತ್ತು; ಅದು ಹೇಗೆ ಎಂಬುದು ಮಾತ್ರ ತಿಳಿದಿರಲಿಲ್ಲ.

ನಿರ್ವಿವಾದವಾಗಿ ಮುಖ್ಯವಾಗಿದ್ದ ಸಂಗತಿ ಏನೆಂದರೆ, ಜನರ ಈ ವದಂತಿಗಳ ಒಂದು ಭಾಗಕ್ಕೆ, ಗಲ್ಲಿಗೇರಿದ ಮಾಟಗಾರನ ಮಗನೂ ಈಗಿನ ಮ್ಯಾತ್ಯೂಮಾಲನ ತಂದೆಯೂ ಆದವನು ಆಕಸ್ಮಿಕವಾಗಿ ಆಡುತ್ತಿದ್ದ ಮಾತುಗಳಲ್ಲಿಯೂ ಅಸ್ಪಷ್ಟಸೂಚನೆಗಳಲ್ಲಿಯೂ ಮೂಲವನ್ನು ಕಂಡು ಹಿಡಿಯಬಹುದಾಗಿತ್ತು; ಆದರೆ ಅದು ಸಂದೇಹಾಸ್ಪದ ಹಾಗೂ ಅಸ್ಪಷ್ಟ. ಈ ಸಂದರ್ಭದಲ್ಲಿ ಪಿನ್ಚನ್ ಮಹಾಶಯನು ತನ್ನ ಸ್ವಂತ ಸಾಕ್ಷ್ಯದ ಒಂದು ಅಂಶವನ್ನು ಮುಂದಿಡಲು ಸಾಧ್ಯವಾಗಿತ್ತು. ಆ ಕಾಲದಲ್ಲಿ ಅವನು ಕೇವಲ ಮಗುವಾಗಿದ್ದುದು ದಿಟ; ಸರದಾರನು ಮರಣಹೊಂದಿದ ದಿನ, ಅಥವಾ ಅದೇ ದಿನ ಬೆಳಗ್ಗೆ ಇದ್ದರೂ ಇರಬಹುದು, ಸರದಾರನ ಸ್ವಂತಕೋಣೆಯಲ್ಲಿ ಮಾಡಬೇಕಾಗಿದ್ದ ಯಾವುದೋ ಒಂದು ಕೆಲಸದ ಸಂಬಂಧವಾಗಿ ಆತ ಬಡಗಿಯಾದ ಮ್ಯಾತ್ಯೂಮಾಲನ ತಂದೆಯೊಡನೆ ಮಾತನಾಡುತ್ತಿದ್ದಂತೆ ಈ ಪಿನ್ಚನ್ ಮಹಾಶಯನ ನೆನಪು, ಇಲ್ಲವೆ ಭಾವನೆ.

ಮೊದಲು ಅಸಾಧ್ಯವಾಗಿ ಕಂಡಿತು; ಆದರೂ, ಎರಡನೆಯ ಸಲ ಪರಿಶೀಲಿಸಿದಾಗ, ಆ ಸಲಹೆ ಸೂಚನೆಗಳನ್ನು ಕುರಿತು ಕಡೆಯಪಕ್ಷ ಚರ್ಚೆಮಾಡಬಹುದೆಂದು ಅಭಿಪ್ರಾಯಪಟ್ಟನು. ಸ್ವಂತವಾಗಿ ಅವನಿಗೆ ಮನೆಯಮೇಲೆ ಅಂತಹ ವ್ಯಾಮೋಹವೇನೂ ಇರಲಿಲ್ಲ; ತಾನು ಚಿಕ್ಕವನಾಗಿದ್ದಂದು ಅದರಲ್ಲಿ ವಾಸವಾಗಿದ್ದ ಕಾಲದ ಸವಿನೆನಪು ಕೂಡ ಯಾವುದೂ ಇರಲಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ, ಮೂವತ್ತೇಳು ವರ್ಷ ಸಂದ ಮೇಲೆ ಕೂಡ, ತನ್ನ ಅಜ್ಜ ಸತ್ತ ದಿನ ಹೇಗಿದ್ದನೋ ಹಾಗೆ ಮನೆಯಲ್ಲಿ ಎಲ್ಲೆಲ್ಲಿಯೂ ಸರ್ವವ್ಯಾಪಕನಾಗಿ ಇದ್ದಂತೆಯೆ ಭಾಸವಾಗುತ್ತಿತ್ತು; ಆತ ಸತ್ತ ದಿನದ ಬೆಳಗ್ಗೆ, ಬೆದರಿದ ಬಾಲಕನಾದ ತಾನು ಕುರ್ಚಿಯಲ್ಲಿ ತನ್ನ ಅಜ್ಜ ಭೀಕರವಾಗಿ ಕಾಣುತ್ತ ಸೆಟೆತು ಕುಳಿತಿದ್ದನ್ನು ಕಂಡಿದ್ದನು. ಪರದೇಶ ಪ್ರಾಂತಗಳಲ್ಲಿ ಅವನು ದೀರ್ಘಕಾಲದ ವಾಸ ಮಾಡಿದ್ದನು; ಮತ್ತು ಇಂಗ್ಲೆಂಡಿನಲ್ಲಿನ ಹಲವಾರು ದುರ್ಗಗಳು ಮತ್ತು ಪೂರ್ವಿಕರ ಸೌಧಗಳ ಸಭಾಮಂದಿರಗಳು, ಹಾಗೂ ಇಟಲಿದೇಶದಲ್ಲಿನ ಅಮೃತಶಿಲಾನಿರ್ಮಿತ ರಾಜಭವನಗಳು– ಇವುಗಳ ಪರಿಚಯವಿತ್ತವನಿಗೆ; ಇವೆಲ್ಲದರ ಪರಿಣಾಮವಾಗಿ, ಅವನು ಏಳು ಇಪ್ಪಾರಿನ ಮನೆಯನ್ನು ತಿರಸ್ಕಾರಭಾವದಿಂದ ಕಾಣುವಂತಾಗಿತ್ತು; ಅದರಲ್ಲಿ ಅವನಿಗೆ ವೈಭವವಾಗಲಿ ಅನುಕೂಲತೆಯಾಗಲಿ, ಯಾವುದೂ ಕಂಡುಬಂದಿರಲಿಲ್ಲ. ಭೂಸಂಬಂಧವಾದ ಹಕ್ಕುಗಳು ತನ್ನ ವಶಕ್ಕೆ ಬಂದಮೇಲೆ, ಪಿನ್ಚನ್ ಮಹಾಶಯನ ಜೀವನಕ್ರಮವೇ ಬೇರೆಯಾಗುವುದು; ಅದರ ಘನತೆಯನ್ನು ಕಾಪಾಡಿಕೊಳ್ಳಲು ಆ ಮನೆ ಎಂದಿಗೂ ಸಾಕಾಗದು. ಅವನ ಮನೆವಾರ್ತೆಯವನು ಅದರಲ್ಲಿ ವಾಸಮಾಡಲು ಹಾಗೂ ಹೀಗೂ ಒಪ್ಪಬಹುದು; ಆದರೆ, ಭಾರಿ ಜಮೀನದಾರನಾದ ತಾನು ಅದರಲ್ಲಿ ವಾಸಮಾಡಲಾದೀತೆ! ಖಂಡಿತ ಸಾಧ್ಯವಿಲ್ಲ. ವಾಸ್ತವವಾಗಿ, ಜಯ ದೊರಕಿದ ಸಂದರ್ಭದಲ್ಲಿ, ಇಂಗ್ಲೆಂಡಿಗೆ ಹಿಂದಿರುಗುವುದು ಅವನ ಉದ್ದೇಶವಾಗಿತ್ತು; ದಿಟನುಡಿಯುವುದಾದರೆ, ತನ್ನ ಸ್ವಂತ ಭಾಗ್ಯವೂ ನಿಧನಹೊಂದಿದ ತನ್ನ ಹೆಂಡತಿಯ ಭಾಗ್ಯವೂ ಇಳಿಮುಖವಾಗುವ ಸೂಚನೆಗಳನ್ನು ತೋರದೆ ಹೋಗಿದ್ದರೆ, ಹೆಚ್ಚು ಹಿತಕರವಾಗಿದ್ದ ತನ್ನ ನಿವಾಸವನ್ನು ಅವನು ಈಚೆಗೆ ಬಿಟ್ಟು ಬರುತ್ತಲೇ ಇರಲಿಲ್ಲ. ಮೂಡಣ ಪ್ರಾಂತದ ಮೇಲಣ ಹಕ್ಕು ಕಡೆಗೊಮ್ಮೆ ತೀರ್ಮಾನವಾಗಿ, ಅದು ವಾಸ್ತವವಾಗಿ ಸ್ವಾಧೀನಕ್ಕೆ ಬಂದು ಅದರ ನೆಲೆ ಭದ್ರವಾದರೆ, ಪಿನ್ಚನ್ ಮಹಾಶಯನ ಆಸ್ತಿ (ಅದನ್ನು ಎಕರೆಗಳ ಲೆಕ್ಕದಲ್ಲಿ ಅಲ್ಲ, ಮೈಲಿಗಳ ಲೆಕ್ಕದಲ್ಲಿ ಅಳೆಯ ತಕ್ಕದ್ದು) 'ಅರ್ಲ್' ದರ್ಜೆಯ ಶ್ರೀಮಂತನ ಪದವಿಯಷ್ಟು ಬೆಲೆಬಾಳುವುದು; ಅಲ್ಲದೆ, ಬ್ರಿಟಿಷ್ ದೊರೆಯಿಂದ ಆ ಉನ್ನತ

ಇಪ್ಪಾರಿನ ಮನೆಯನ್ನೂ ಪಿನ್ಚನ್ ಮಹಾಶಯನು ತನಗೆ ಕೊಡಲು ಸಿದ್ಧನಾಗಿರುವನೇ ಎಂದು ಕೇಳಿದನು.

ಒಲೆಗೂಡಿನ ಮೂಲೆಯಲ್ಲಿ ಜನ ಹೇಳಿಕೊಳ್ಳುತ್ತಿದ್ದ ಕಟ್ಟು ಕಥೆಯ ಪ್ರಕಾರ (ನನ್ನ ಈ ಕಥನ ಕೂಡ ಅದರ ಎಲ್ಲ ವೈಪರೀತ್ಯ ವೈಚಿತ್ರ್ಯಗಳನ್ನೂ ಅನುಕರಿಸದಿದ್ದರೂ ಬಹುಮಟ್ಟಿಗೆ ಅದನ್ನೆ ಅನುಸರಿಸಿದೆ), ಸರದಾರ ಪಿನ್ಚನ್ನನ ಭಾವಚಿತ್ರದಲ್ಲಿ ಬಹು ವಿಚಿತ್ರವಾದ ಒಂದು ಬಗೆಯ ವರ್ತನೆ ಕಂಡುಬಂದಿತು. ಅಗತ್ಯವಾಗಿ ತಿಳಿದಿರಬೇಕಾದ ಒಂದು ಅಂಶವೇನೆಂದರೆ, ಮನೆಯ ಸ್ಥಿತಿಗತಿಗೂ ಈ ಚಿತ್ರಕ್ಕೂ ಅತ್ಯಂತ ನಿಕಟವಾದ ಸಂಬಂಧವಿದ್ದಿತಂತೆ; ಅದನ್ನು ಮಾಯಾಮಂತ್ರ ಶಕ್ತಿಯಿಂದ ಗೋಡೆಗಳಲ್ಲಿ ಲೀನವಾಗುವಂತೆ ಸ್ಥಾಪಿಸಲಾಗಿದ್ದು, ಅದನ್ನೇನಾದರೂ ಒಮ್ಮೆ ಅದರ ಸ್ಥಳದಿಂದ ತೆಗೆದುಬಿಟ್ಟಿದ್ದೇ ಆದರೆ, ಅದೇ ಕ್ಷಣದಲ್ಲಿ ಕಟ್ಟಡವೆಲ್ಲವೂ ಗುಡುಗುಡಿಸುತ್ತಾ ಪಾಳುಧೂಳಿನ ರಾಶಿಯಾಗಿ ಕೆಳಕ್ಕೆ ಕುಸಿದು ಬಿದ್ದುಬಿಡುತ್ತಿದ್ದಿತಂತೆ. ಪಿನ್ಚನ್ ಮಹಾಶಯನಿಗೂ ಬಡಗಿಗೂ ಮೇಲೆ ಹೇಳಿದ ಸಂಭಾಷಣೆ ನಡೆಯುತ್ತಿದ್ದ ಅಷ್ಟು ಹೊತ್ತೂ ಆ ಭಾವಚಿತ್ರವು ಸಿಡುಕುಮೋರೆ ಮಾಡುತ್ತಾ, ತನ್ನ ಕೈಮುಷ್ಟಿಯನ್ನು ತಿರುವುತ್ತಾ, ತನ್ನ ಅಪಾರ ಅಸಂತುಷ್ಟಿಯನ್ನು ಸೂಚಿಸುವ ಅಂತಹ ಹಲವಾರು ಕುರುಹುಗಳನ್ನು ತೋರಿಸುತ್ತಿದ್ದಿತಂತೆ; ಆದರೆ, ಆ ಮೂಲಕ ಸಂಭಾಷಿಸುತ್ತಿದ್ದ ಇಬ್ಬರಲ್ಲಿ ಯಾರೊಬ್ಬರ ಗಮನವನ್ನೂ ಅದು ಸೆಳೆಯುತ್ತಿರಲಿಲ್ಲವಂತೆ. ಕಡೆಯಲ್ಲಿ, ಏಳು ಇಪ್ಪಾರಿನ ಮನೆಯನ್ನು ತನಗೆ ವರ್ಗಮಾಡಿಕೊಡಬೇಕೆಂದು ಕೇಳುವ ಧಾರ್ಷ್ಟ್ಯವನ್ನು ಮ್ಯಾತ್ಯೂಮಾಲ್ ವಹಿಸಿದಾಗ, ಪ್ರೇತರೂಪದ ಆ ಭಾವಚಿತ್ರವು ತಾಳ್ಮೆಯನ್ನೆಲ್ಲಾ ಕಳೆದುಕೊಂಡು, ತಾನಿದ್ದ ಚೌಕಟ್ಟಿನೊಳಗಿಂದ ಮೈತಳೆದು ಇನ್ನೇನು ಇಳಿದು ಬರುವಹಾಗೆ ಕಾಣಿಸಿಕೊಂಡಿತಂತೆ. ಆದರೆ ಇಂತಹ ನಂಬಿಕೆಗರ್ಹವಲ್ಲದ ಸಂಗತಿಗಳು ಕೇವಲ ಕಿವಿಮಾತಾಗಿ ಹೇಳಲುಮಾತ್ರ ತಕ್ಕವು.

"ಏನು, ಮನೆಯನ್ನು ಬಿಟ್ಟುಕೊಡುವುದೆ!" ಎಂದು ಬಡಗಿಯ ಸೂಚನೆಯನ್ನು ದಿಗ್ಭ್ರಾಂತನಾದ ಪಿನ್ಚನ್ ಮಹಾಶಯನು ಉದ್ಗಾರ ತೆಗೆದನು: "ನಾನು ಹಾಗೆ ಮಾಡಿದ್ದೇ ಆದರೆ, ನಮ್ಮ ಅಜ್ಜ ತಮ್ಮ ಸಮಾಧಿಯಲ್ಲಿ ಶಾಂತಿಯಿಂದಿರಲಾರರು!"

ಬಡಗಿ ಮನಸ್ಸಮಾಧಾನದಿಂದಲೇ ನುಡಿದನು: "ಎಲ್ಲ ಕತೆಗಳೂ ನಿಜವಾಗಿರುವ ಪಕ್ಷಕ್ಕೆ, ಅವರು ಎಂದೂ ಶಾಂತಿಯಿಂದ ಇದ್ದಿಲ್ಲ. ಆದರೆ, ಆ ವಿಷಯ ಮ್ಯಾತ್ಯೂಮಾಲನಿಗಿಂತ ಹೆಚ್ಚಾಗಿ ಅವರ ಮೊಮ್ಮಗನಿಗೆ ಸಂಬಂಧಪಟ್ಟದ್ದು. ನಿಮಗೆ ಸಲಹೆಮಾಡಲು ನನ್ನ ಇತರ ಷರತ್ತುಗಳು ಯಾವವೂ ಇಲ್ಲ."

ಮಾಲನ ನಿಬಂಧನೆಗಳಂತೆ ನಡೆಯುವುದು ಪಿನ್ಚನ್ ಮಹಾಶಯನಿಗೆ

ಕಂಡಂತೆ ಅವನು ಭಾವಿಸಿಕೊಂಡನಂತೆ.

"ಈ ಷೆರಿ ಮದ್ಯದಲ್ಲಿ ನನ್ನ ಶಕ್ತಿಗೆ ಮೀರಿದ ತೀಕ್ಷ್ಣತೆಯಿದೆ; ನನ್ನ ಮಿದುಳಿಗೆ ಅದು ಆಗಲೇ ವ್ಯಾಪಿಸಿಬಿಟ್ಟಿದೆ" ಎಂದು ಆತ ಚಿತ್ರವನ್ನು ನೋಡಿ, ಸ್ವಲ್ಪಮಟ್ಟಿಗೆ ಬೆಚ್ಚಿ, ನುಡಿದನು: "ಯೂರೋಪಿಗೆ ಹಿಂದಿರುಗಿದ ಮೇಲೆ, ಇಟಲಿ ಮತ್ತು ಫ್ರಾನ್ಸು ಪ್ರದೇಶಗಳ ಹೆಚ್ಚು ಮೃದುಮಧುರವಾದ ದ್ರಾಕ್ಷಾಮದ್ಯಗಳನ್ನು ಮಾತ್ರ ಸೇವಿಸುತ್ತೇನೆ; ಅವುಗಳಲ್ಲಿ ಉತ್ಕೃಷ್ಟವಾದವನ್ನು ಸಾಗಿಸುವುದಕ್ಕಾಗುವುದಿಲ್ಲ."

"ನನ್ನ ಧಣಿಗಳಾದ ಪಿನ್ಚನ್ ಮಹಾಸ್ವಾಮಿಯವರು ತಮಗೆ ಇಷ್ಟ ಬಂದ ಮದ್ಯವನ್ನು ಇಷ್ಟ ಬಂದ ಕಡೆ ಕುಡಿಯಬಹುದು" ಎಂದು ಬಡಗಿ, ಪಿನ್ಚನ್ ಮಹಾಶಯನ ಘನವಾದ ಯೋಜನೆಗಳ ಆಪ್ತಕಾರ್ಯದರ್ಶಿಯಾಗಿದ್ದಿದ್ದರೆ ಹೇಗೋ ಹಾಗೆ ಉತ್ತರಕೊಟ್ಟನು: "ಆದರೆ, ಮೊದಲನೆಯದಾಗಿ, ಈ ಕಳೆದುಹೋದ ಕಾಗದಪತ್ರಕ್ಕೆ ಸಂಬಂಧಪಟ್ಟ ಸುದ್ದಿಯುನ್ನು ತಾವು ಬಯಸುವುದಾದಲ್ಲಿ, ತಮ್ಮ ಚೆಲುವೆಯಾದ ಮಗಳು ಆಯಲಿಸ್ ಆಕೆಯೊಂದಿಗೆ ನಾನು ಸ್ವಲ್ಪ ಮಾತಾಡುವ ಅವಕಾಶವನ್ನು ತಾವು ಕೃಪೆಮಾಡಿ ದಯಪಾಲಿಸಬೇಕು."

"ನಿನಗೆಲ್ಲೋ ಹುಚ್ಚು, ಮಾಲ್!" ಎಂದು ಪಿನ್ಚನ್ ಮಹಾಶಯನು ದರ್ಪದಿಂದ ಉದ್ಗರಿಸಿದನು; ಈಗಲೀಗ, ಕಡೆಗೊಮ್ಮೆ, ಆತನ ಗರ್ವದೊಂದಿಗೆ ಕೋಪವೂ ಬೆರೆತಿತ್ತು; "ಈಬಗೆಯ ವ್ಯವಹಾರಕ್ಕೂ ನನ್ನ ಮಗಳಿಗೂ ಏನು ಸಂಬಂಧ?" ಎಂದು ಆತ ಪ್ರಶ್ನಿಸಿದನು.

ಬಡಗಿ ಮುಂದಿಟ್ಟ ಈ ಹೊಸ ಬೇಡಿಕೆಯನ್ನು ಕೇಳಿ, ಏಳು ಇಪ್ಪಾರಿನ ಮನೆ ಯಜಮಾನನಿಗೆ ನಿಜವಾಗಿ ಸಿಡಿಲುಬಡಿದಂತಾಯಿತು; ತನ್ನ ಮನೆಯನ್ನು ಬಿಟ್ಟುಕೊಡಬೇಕೆಂಬ ಸೂಚನೆಯನ್ನು ಕೇಳಿದಾಗಲೂ ಹಾಗಾಗಿರಲಿಲ್ಲ. ಮೊದಲನೆಯ ಷರತ್ತಿನ ಸಂಬಂಧವಾಗಿ ಕಡೆಯ ಪಕ್ಷ ಬಡಗಿಗೆ ಆರೋಪಿಸಬಹುದಾದ ಒಂದು ಉದ್ದೇಶವಾದರೂ ಇದ್ದಿತು; ಈ ಕಡೆಯದರ ಸಂಬಂಧವಾಗಿ ಯಾವುದೂ ಇದ್ದಂತೆ ಕಾಣಲಿಲ್ಲ. ಆದಾಗ್ಯೂ, ಆ ತರುಣಿಯನ್ನು ಕರೆಯಿಸಲೇಬೇಕೆಂದು ಮ್ಯಾತ್ಯೂಮಾಲ್ ಬಲವಾಗಿ ಒತ್ತಾಯಪಡಿಸಿದ; ಅಲ್ಲದೆ, ಅಗತ್ಯವಾದ ತಿಳಿವಳಿಕೆಯನ್ನು ಪಡೆಯಬೇಕಾದರೆ, ಚೆಲುವೆ ಆಯಲಿಸ್‌ನ ಬುದ್ಧಿಶಕ್ತಿಯಂತಹ ಪರಿಶುದ್ಧವಾದ ಕನ್ಯಾಸಹಜವಾದ ಬುದ್ಧಿಶಕ್ತಿಯ ಸ್ಫಟಿಕಶುಭ್ರ ಮಾಧ್ಯಮದ ಮೂಲಕ ಮಾತ್ರ ಸಾಧ್ಯವೆಂದೂ, ಇರುವ ಏಕಮಾತ್ರ ಅವಕಾಶ ಅದೊಂದೇ ಎಂದೂ ಅವಳ ತಂದೆಗೆ ಅವನು ಒಂದು ಬಗೆಯ ರಹಸ್ಯಾತ್ಮಕವಾದ ರೀತಿಯಲ್ಲಿ ವಿವರಿಸಿ ತಿಳಿಯಹೇಳಿದ್ದನು; ಆ ವಿವರಣೆಯಿಂದ ವಿಷಯವು

ಪದವಿಯನ್ನು ಪ್ರಾರ್ಥಿಸಿ ಪಡೆದುಕೊಳ್ಳಲು ನ್ಯಾಯವಾದ ಅರ್ಹತೆಯನ್ನು ಅವನಿಗೆ ಕೊಡುವುದು, ಇಲ್ಲವೋ ಅದನ್ನು ಕೊಂಡುಕೊಳ್ಳಲು ಅವಕಾಶವೀಯುವುದು. 'ಲಾರ್ಡ್' ಪಿನ್ಚನ್! ಅಥವಾ ವಾಲ್ಡೋ ಪ್ರಾಂತದ 'ಅರ್ಲ್'! ಅಂಥ ಘನತೆವೆತ್ತ ವ್ಯಕ್ತಿ ತನ್ನ ವೈಭವವನ್ನು ಈ ಏಳು ಮರಹೆಂಚಿನ ಇಪ್ಪಾರುಗಳ ಕ್ಷುದ್ರವಾದ ಕಿರಿದಳತೆಗೆ ಕುಗ್ಗಿಸಿಕೊಳ್ಳತಕ್ಕದ್ದೆಂದು ನಿರೀಕ್ಷಿಸುವುದಾದರೂ ಹೇಗೆ?

ಸಂಕ್ಷೇಪವಾಗಿ ಹೇಳುವುದಾದರೆ, ಈ ವ್ಯವಹಾರವನ್ನು ವಿಸ್ತಾರವಾದ ದೃಷ್ಟಿಯಿಂದ ನೋಡಿದಾಗ, ಬಡಗಿ ವಿಧಿಸಿದ ಷರತ್ತುಗಳು ಎಷ್ಟು ಹಾಸ್ಯಾಸ್ಪದವಾಗಿ ಸುಲಭವಾಗಿದ್ದುವೆಂದರೆ, ಪಿನ್ಚನ್ ಮಹಾಶಯನು ಅವನ ಎದುರಿಗೆಯೆ ನಗದಿರಲಾಗಲಿಲ್ಲ. ಮೇಲ್ಕಂಡಂತೆ ಪರ್ಯಾಲೋಚನೆ ಮಾಡಿದ ಮೇಲೆ, ತನಗೆ ಸಲ್ಲಿಸಬೇಕಾಗಿದ್ದ ಅಪಾರ ಸೇವೆಗೆ ಪ್ರತಿಯಾಗಿ ತಾನು ಕೊಡಬೇಕಾಗಿದ್ದ ಅಷ್ಟೊಂದು ಕಡಮೆಯ ಪ್ರಮಾಣದ ಪ್ರತಿಫಲವನ್ನು ಇನ್ನೂ ಕಡಮೆ ಮಾಡಿಕೊಳ್ಳಬೇಕೆಂದು ಸೂಚಿಸಲು ಅವನಿಗೆ ತುಂಬ ನಾಚಿಕೆಯೆನಿಸಿತು.

"ನಿನ್ನ ಸಲಹೆಗೆ ನಾನು ಒಪ್ಪುತ್ತೇನೆ, ಮಾಲ್. ನನ್ನ ಹಕ್ಕನ್ನು ಸ್ಥಾಪಿಸಿಕೊಳ್ಳಲು ಅವಶ್ಯವಾದ ಕಾಗದಪತ್ರಗಳನ್ನು ನನ್ನ ವಶಕ್ಕೆ ಕೊಡು, ಏಳಪ ಇಪ್ಪಾರಿನ ಮನೆ ನಿನ್ನ ಸ್ವಂತದ್ದೇ ಆಗುವುದು" ಎಂದನಾತ.

ಕಥೆಯ ಯಾವುದೋ ಒಂದು ರೂಪದ ಪ್ರಕಾರ, ಮೇಲ್ಕಂಡ ಆಶಯಕ್ಕೆ ಅನುಗುಣವಾಗಿ ವಕೀಲರಿಂದ ಒಂದು ಕ್ರಮವಾದ ಕರಾರುಪತ್ರವನ್ನೂ ಬರೆಯಿಸಲಾಯಿತು; ಸಾಕ್ಷಿಗಳ ಸಮ್ಮುಖದಲ್ಲಿ ಅದಕ್ಕೆ ಸಹಿಮಾಡಿ, ಮೊಹರು ಹಾಕಲಾಯಿತು. ಇನ್ನು ಕೆಲವರ ಹೇಳಿಕೆಯಂತೆ, ಖಾಸಗಿಯಾದ ಲಿಖಿತ ಒಪ್ಪಂದವಷ್ಟರಿಂದಲೇ ಮ್ಯಾತ್ಯೂಮಾಲ್ ತೃಪ್ತಿಹೊಂದಿದನಂತೆ; ಅದರಲ್ಲಿ, ಪಿನ್ಚನ್ ಮಹಾಶಯನು ತನ್ನ ಗೌರವ ಹಾಗೂ ಪ್ರಾಮಾಣಿಕತೆಗಳ ಆಣೆಯಿಟ್ಟು, ತೀರ್ಮಾನವಾದ ಷರತ್ತುಗಳನ್ನು ಪಾಲಿಸಲು ಒಪ್ಪಿದನಂತೆ. ಅನಂತರ ಆ ದೊಡ್ಡ ಮನುಷ್ಯನು ದ್ರಾಕ್ಷಾಮದ್ಯವನ್ನು ತರಹೇಳಿ, ಒಪ್ಪಂದಕ್ಕೆ ಬಂದ ತಮ್ಮ ವ್ಯವಹಾರವನ್ನು ಸ್ಥಿರಪಡಿಸುವುದಕ್ಕಾಗಿ ಮದ್ಯವನ್ನು ಇಬ್ಬರೂ ಒಟ್ಟಿಗೆ ಕುಡಿದರು. ಚರ್ಚೆ, ಅದಾದ ಮೇಲೆ ಒಪ್ಪಂದದ ಸಂಬಂಧವಾಗಿ ನಡೆದ ವಿಧಿವಿಧಾನಗಳ ಅನುಸರಣೆ– ಇವೆಲ್ಲ ಆಗುತ್ತಿದ್ದಾಗ ಆ ವೃದ್ಧ ಪ್ಯೂರಿಟನ್ನಿನ ಭಾವಚಿತ್ರವು ಅಸ್ಪಷ್ಟ ಭಾವಭಂಗಿಗಳ ಮೂಲಕ ತನ್ನ ಅಸಮ್ಮತಿಯನ್ನು ಬಿಡದೆ ಸೂಚಿಸುತ್ತಿತ್ತಂತೆ; ಆದರೆ ಅದರಿಂದ ಪರಿಣಾಮವೇನೂ ಆಗಲಿಲ್ಲ; ಆದರೆ, ಪಿನ್ಚನ್ ಮಹಾಶಯನು ಕುಡಿದು ಬರಿದಾದ ಮದ್ಯಪಾತ್ರೆಯನ್ನು ಕೆಳಗಿಟ್ಟಾಗ ಮಾತ್ರ ತನ್ನ ಅಜ್ಜ ಹುಬ್ಬುಗಂಟಿಕ್ಕಿದ್ದನ್ನು ತಾನು

ಮೂಲಧಾತುಗಳಿಂದ ಸೃಷ್ಟಿಯಾಗಿದ್ದಾಳೆಯೋ ತನ್ನ ಒಡಲಿನಲ್ಲಿ ಇರುವವೂ ಅವೇ– ಎಂಬ ಒಪ್ಪಿಗೆ ದೊರೆತರೆ ಸಾಕು; ಅವನಿಗೆ ಬೇಕಾಗಿದ್ದುದೆಲ್ಲ ಅಷ್ಟೆ.

ಆಯಲಿಸ್ ಕೋಣೆಯೊಳಕ್ಕೆ ಬರುತ್ತಿದ್ದಾಗಲೇ ಅವಳ ಕಣ್ಣು ಬಡಗಿಯ ಮೇಲೆ ಬಿದ್ದುವು; ಅವನು ಕೋಣೆಯ ಮಧ್ಯಭಾಗದ ಬಳಿ ನಿಂತಿದ್ದನು. ಅವನು ತೊಟ್ಟಿದ್ದುದು ಹಸುರುಬಣ್ಣದ, ಉಣ್ಣೆಯಬಟ್ಟೆಯ ಮೋಟಂಗಿ; ಅವನು ಧರಿಸಿದ್ದ ಚಲ್ಲಣ ಸಡಿಲವಾಗಿದ್ದು, ಮಂಡಿಯ ಬಳಿ ಕತ್ತರಿಸಿತ್ತು; ಅದರ ಒಂದ ಕಡೆ ಅವನ ಅಳತೆಯಪಟ್ಟಿಗಾಗಿ ಒಂದು ಉದ್ದನೆಯ ಜೇಬಿತ್ತು. ಅಳತೆಯಪಟ್ಟಿಯ ಒಂದು ತುದಿ ಹೊರಕ್ಕೆ ಚಾಚಿಕೊಂಡಿತ್ತು; ಪೂರ್ತಿ ಪೋಷಾಕು ಹಾಕಿಕೊಂಡಾಗ ಪಿನ್ಚನ್ ಮಹಾಶಯನು ಧರಿಸುತ್ತಿದ್ದ ಕತ್ತಿ ಹೇಗೆ ಆ ದೊಡ್ಡ ಮನುಷ್ಯನ ಶ್ರೀಮಂತ ಪದವಿಯ ಲಾಂಛನವಾಗಿತ್ತೋ ಅದೇ ರೀತಿಯಲ್ಲಿ ಆ ಅಳತೆಯಪಟ್ಟಿ ಆ ಕಸಬುದಾರನ ಕಸುಬಿನ ಗುರುತಾಗಿತ್ತು. ಕಲಾಭಿರುಚಿಯನ್ನು ಸೂಚಿಸುವ ಮೆಚ್ಚುಗೆಯ ಮಿನುಗೊಂದು ಆಯಲಿಸ್ ಪಿನ್ಚನ್ನಳ ಮುಖವನ್ನು ಬೆಳಗಿತು; ಮಾಲನ ಮೈಕಟ್ಟಿನ ಗಮನಾರ್ಹವಾದ ಅಂದಚೆಂದ, ಶಕ್ತಿಸಾಮರ್ಥ್ಯ ಇವುಗಳನ್ನು ಕಂಡು ಬೆರಗಾಗಿ, ಮೆಚ್ಚಿಕೊಂಡಳು; ತನ್ನ ಮೆಚ್ಚುಗೆಯನ್ನು ಮುಚ್ಚಿಟ್ಟುಕೊಳ್ಳುವ ಪ್ರಯತ್ನವನ್ನವಳು ಮಾಡಲಿಲ್ಲ. ಆದರೆ ಆ ಮೆಚ್ಚುಗೆಯ ಕಡೆಗಣ್ಣ ನೋಟಕ್ಕಾಗಿ ಅವಳನ್ನು ಬಡಗಿ ಎಂದೂ ಕ್ಷಮಿಸಲಿಲ್ಲ. (ಬಹುಶಃ, ಇತರ ಬಹುಮಂದಿ ಜನ ತಾವು ಬದುಕಿರುವವರೆಗೂ ಆ ನೋಟದ ಸವಿನೆನಪನ್ನು ಅಮೂಲ್ಯವೆಂದು ಮನಸ್ಸಿನಲ್ಲಿಟ್ಟುಕೊಳ್ಳುತ್ತಿದ್ದರು.) ಮಾಲನ ಗ್ರಹಣಶಕ್ತಿಯನ್ನು ಅಷ್ಟು ಸೂಕ್ಷ್ಮವಾಗಿ ಮಾಡಿದವನು ಸೈತಾನನೇ ಇರಬೇಕು.

“ಈ ಹುಡುಗಿ ನನ್ನನ್ನು ಕಾಡುಮೃಗವೆಂದು ತಿಳಿದು ಹಾಗೆ ನೋಡುತ್ತಿದಾಳೆಯೋ? ನನ್ನಲ್ಲಿಯೂ ಮನುಷ್ಯನ ಚೇತನ ಇದೆಯೋ ಇಲ್ಲವೋ ಎನ್ನುವುದನ್ನ ಅವಳು ಅರಿತುಕೊಳ್ಳುವಳು; ಅವಳದ್ದಕ್ಕಿಂತ ನನ್ನದೇ ಹೆಚ್ಚು ಬಲಶಾಲಿ ಎಂದಾದರೆ, ಅದರಿಂದ ಅವಳಿಗೇ ಕೇಡು” ಎಂದು ಅವನು ಹಲ್ಲು ಕಚ್ಚಿಕೊಂಡು, ತನ್ನಲ್ಲಿಯೇ ಆಲೋಚಿಸಿದನು.

“ಅಪ್ಪಾ, ನೀನು ನನಗೆ ಹೇಳಿಕಳಿಸಿದೆಯಂತೆ” ಎಂದು ಆಯಲಿಸ್ ತನ್ನ ಇಂಪಾದ, ಹಾರ್ಪ್‌ವಾದ್ಯದಂತಹ ದನಿಯಲ್ಲಿ ನುಡಿದಳು: “ಆದರೆ, ಈ ಯುವಕರೊಂದಿಗೆ ನಿನ್ನ ವ್ಯವಹಾರವೇನಾದರೂ ಇದ್ದರೆ, ದಯವಿಟ್ಟು ಬಿಟ್ಟುಕೊಡು, ನಾನು ಹೊರಟುಹೋಗುತ್ತೇನೆ. ನೀನೇನೋ ಆ ‘ಕ್ಲಾಡ್’ನನ್ನು ಇಲ್ಲಿ ಬಿಟ್ಟು ಸವಿನೆನಪುಗಳನ್ನು ತರಬೇಕೆಂದು ಯತ್ನಿಸುತ್ತೀಯೆ, ಆದರೆ ನನಗೇನೋ ಈ

ಮೊದಲು ತೋರುತ್ತಿದ್ದುದಕ್ಕಿಂತ ಹೆಚ್ಚು ರಹಸ್ಯಗರ್ಭಿತವಾಗಿ ಕಾಣತೊಡಗಿತು. ಪಿನ್ಚನ್ ಮಹಾಶಯನ ಮನಸ್ಸಾಕ್ಷಿ, ಅಭಿಮಾನ, ತಂದೆಗೆ ಮಗಳಲ್ಲಿರುವ ವಾತ್ಸಲ್ಯ– ಇವುಗಳಿಗೆ ಸಂಬಂಧಪಟ್ಟ ಹಾಗೆ ಅವನು ಹೊಂದಿದ್ದ ಅಳುಕುಗಳ ಪ್ರಸ್ತಾಪದಿಂದ ನಮ್ಮ ಕಥೆಯನ್ನು ಗಿಡಿಯಲು ನಮಗೆ ಇಷ್ಟವಿಲ್ಲ; ಕಡೆಗೆ, ಅವನು ತನ್ನ ಮಗಳನ್ನು ಕರೆಯಲು ಅಪ್ಪಣೆಮಾಡಿದನೆಂದು ತಿಳಿಸಿದರೆ ಸಾಕು. ಅವಳು ತನ್ನ ಕೋಣೆಯಲ್ಲಿದ್ದಳೆಂದೂ, ತಟ್ಟನೆ ಬಿಟ್ಟು ಬರಲಾರದಂತಹ ಯಾವ ಕೆಲಸದಲ್ಲಿಯೂ ಅವಳು ನಿರತಳಾಗಿರಲಿಲ್ಲವೆಂದೂ ಅವನು ಚೆನ್ನಾಗಿ ಅರಿತಿದ್ದನು; ಏಕೆಂದರೆ, ಆಯಲಿಸ್‌ನ ಹೆಸರನ್ನು ಎತ್ತಿದಾಗಿನಿಂದ, ಅವಳ ತಂದೆ ಮತ್ತು ಬಡಗಿ ಇಬ್ಬರೂ ಅವಳು ಬಾರಿಸುತ್ತಿದ್ದ ಹಾರ್ಪ್ಸಿಕಾರ್ಡಿನ ಶೋಕಪೂರ್ಣವಾದ ಮಧುರ ಸಂಗೀತವನ್ನೂ, ಅದರ ಜೊತೆಗೂಡಿ ಬರುತ್ತಿದ್ದ ಅವಳ ವಾಣಿಯ ಮಧುರತರ ಶೋಕಭಾವವನ್ನೂ ಆಲಿಸಿದ್ದರು.

ಅಂತೂ ಆಯಲಿಸ್ ಪಿನ್ಚನ್ನಳನ್ನು ಕರೆಯಲಾಯಿತು; ಅವಳು ಬಂದು ಕಾಣಿಸಿಕೊಂಡಳು. ವೆನಿಸ್‌ನಗರದ ಚಿತ್ರಗಾರನೊಬ್ಬನು ಈ ತರುಣಿಯ ಭಾವಚಿತ್ರವನ್ನು ಬರೆದಿದ್ದನು; ಅದನ್ನು ಅವಳ ತಂದೆ ಇಂಗ್ಲೆಂಡಿನಲ್ಲಿಯೆ ಬಿಟ್ಟು ಬಂದಿದ್ದನು; ಅದು ಡೆವನ್‌ಷೈರ್ ಪ್ರಾಂತದ 'ಡ್ಯೂಕ್'ನ ಕೈಗೆ ಬಿದ್ದು ಈಗ 'ಚ್ಯಾಟ್ಸ್‌ವರ್ತ್" ಭವನದಲ್ಲಿ ಜೋಪಾನವಾಗಿಡಲಾಗಿದೆಯಂತೆ. ಅದಕ್ಕೆ ಕಾರಣ, ಚಿತ್ರದ ಮೂಲವ್ಯಕ್ತಿಗೆ ಸಂಬಂಧಪಟ್ಟ ಯಾವುದೇ ಬಂಧುಭಾವನೆಯಲ್ಲ; ಆದರೆ, ಬೆಲೆ ಬಾಳುವ ಚಿತ್ರ ಎಂಬ ಕಾರಣದಿಂದ, ಹಾಗೂ ಮುಖಭಾವದಲ್ಲಿ ನೆಲಸಿದ್ದ ಶ್ರೇಷ್ಠ ಸೌಂದರ್ಯಗುಣಕ್ಕೋಸುಗ. ಶ್ರೀಮಂತ ಮಹಿಳೆಯೊಬ್ಬಳು ಎಂದಾದರೂ ಜನ್ಮತಾಳಿದ್ದರೆ, ಒಂದು ಬಗೆಯ ನಯುವಾದ ನಿರ್ಲಕ್ಷ್ಯಭಾವದ ಘನಗಾಂಭೀರ್ಯಗುಣದ ನಿಮಿತ್ತ ಅವಳು ಪ್ರಪಂಚದ ಕೀಳುಜನಜಂಗುಳಿಯಿಂದ ಪ್ರತ್ಯೇಕವಾಗಿರುವವಳಾದರೆ, ಈ ಆಯಲಿಸ್ ಪಿನ್ಚನ್‌ಳೇ ಅವಳು. ಆದರೂ ಕೂಡ ಅವಳಲ್ಲಿ ಹೆಂಗಸುತನ ಬೆರೆತಿತ್ತು; ಅದು ಕೋಮಲಸ್ವಭಾವವಲ್ಲದಿದ್ದರೂ, ಕಡೆಯ ಪಕ್ಷ, ಕೋಮಲವಾಗಬಹುದಾದ ಸಾಧ್ಯತೆಯನ್ನು ಹೊಂದಿತ್ತು. ದೋಷಗಳನ್ನು ಮರಸುವ ಆ ಒಂದು ಗುಣಕ್ಕಾಗಿ, ಉದಾರಸ್ವಭಾದವನೊಬ್ಬನು ಅವಳ ಎಲ್ಲ ಗರ್ವವನ್ನೂ ಮನ್ನಿಸಿ, ಅವಳು ನಡೆದುಬರುವ ಹಾದಿಯಲ್ಲಿ ಮಲಗಿಕೊಂಡು, ಅವಳ ಮೃದುಪಾದದಿಂದ ತನ್ನ ಎದೆಯನ್ನು ತುಳಿಸಿಕೊಳ್ಳಲು ಸಿದ್ಧನಾಗಿ, ಅಷ್ಟರಿಂದ ತೃಪ್ತಿಪಡುತ್ತಿದ್ದನು. ವಾಸ್ತವವಾಗಿ ತಾನೂ ಒಬ್ಬ ಮನುಷ್ಯ, ತಾನೂ ಒಬ್ಬ ಸಹವಾಸಯೋಗ್ಯವಾದ ಪ್ರಾಣಿ, ಅವಳು ಯಾವ

ಬಗೆಯ ಅಂಜಿಕೆಯೂ ಇಲ್ಲ. ಅಷ್ಟು ಮಾತ್ರವಲ್ಲ, ತನ್ನಲ್ಲಿ ತಾನು ನಂಬಿಕೆಯುಳ್ಳ ಯಾವ ಮಹಿಳೆಯೇ ಆದರೂ ಯಾರಿಂದಲಾಗಲಿ ಯಾವ ಸಂದರ್ಭಗಳಲ್ಲಿಯೇ ಆಗಲಿ ಯಾವ ಭಯವನ್ನೂ ಇಟ್ಟುಕೊಳ್ಳಬೇಕಾಗಿಲ್ಲ ಎಂದು ನನ್ನ ಭಾವನೆ!" ಎಂದು ಆಯಲಿಸ್ ಕನ್ಯೆಗೆ ಸಹಜವಾದ ಗಾಂಭೀರ್ಯದಿಂದ ನುಡಿದಳು.

ಅಯ್ಯೊ ಬಡ ಆಯಲಿಸ್! ಯಾವ ಒಂದು ಬಲವನ್ನು ತಾನು ಇಷ್ಟೆಂದು ಅಳತೆಮಾಡಲಾರದವಳಾಗಿದ್ದಳೋ ಅದನ್ನು ಪ್ರತಿಭಟಿಸುವಂತಹ ನೆಲೆಯಲ್ಲಿ ನಿಲ್ಲಲು ಅವಳಿಗೆ ಒತ್ತಾಸೆಕೊಟ್ಟ ಆ ದುರದೃಷ್ಟದ ಪ್ರೇರಣೆಯಾದರೂ ಯಾವುದು?

ಕಸಬುಗಾರನೊಬ್ಬರಲ್ಲಿ ಸಾಧಾರಣವಾಗಿ ಇರದ ನಯನಾಜೂಕಿನಿಂದ ಒಂದು ಕುರ್ಚಿಯನ್ನು ಮುಂದಿಡುತ್ತಾ ಮ್ಯಾತ್ಯೂಮಾಲ್ ಇಂತು ನುಡಿದನು:

"ಹಾಗಿದ್ದಮೇಲೆ, ಆಯಲಿಸ್ ಅಮ್ಮನವರೆ, ದಯವಿಟ್ಟು ಕುಳಿತುಕೊಂಡು, ನನ್ನ ಕಣ್ಣುಗಳನ್ನು ನೇರವಾಗಿ ದೃಷ್ಟಿಸಿ ನೋಡುವ ಉಪಕಾರ ಮಾಡುವಿರಾ? ಅದನ್ನು ನಿರೀಕ್ಷಿಸುವ ಯೋಗ್ಯತೆ ಬಡಬಡಗಿಯಾದ ನನಗಿಲ್ಲವೆಂದು ನಾನು ಬಲ್ಲೆ."

ಅವನ ಇಷ್ಟಪ್ರಕಾರ ನಡೆದುಕೊಂಡಳು ಆಯಲಿಸ್. ಅವಳಿಗೆ ಆಗ ಹೆಮ್ಮೆಯಾಗಿತ್ತು. ತನ್ನ ಸ್ಥಾನಮಾನದ ಎಲ್ಲ ಅನುಕೂಲತೆಗಳನ್ನೂ ಅತ್ತ ಬದಿಗಿಟ್ಟು, ಈ ಸುಂದರ ಕನ್ಯೆ– ತನ್ನನ್ನು ಅಭೇದ್ಯವಾದ ಒಂದು ನೆಲೆಯಲ್ಲಿ ಇರಿಸುವ ಶಕ್ತಿ ತನಗಿದೆ, ಒಳಗೆ ವಂಚನೆಯ ವಿದ್ರೋಹ ನಡೆಯದಿದ್ದರೆ ಸರಿ– ಎಂಬ ಅರಿವನ್ನು ಹೊಂದಿದ್ದಳು; ಆ ಶಕ್ತಿಯೊಂದಿಗೆ– ಸೌಂದರ್ಯ, ಉಚ್ಚಮಟ್ಟದ ಅಕಳಂಕಿತ ಪರಿಶುದ್ಧತೆ, ಸ್ತ್ರೀತ್ವದ ತಾರಕಶಕ್ತಿ– ಇವೂ ಕೂಡಿಕೊಂಡಿದ್ದುವು; ಅದನ್ನೂ ಅವಳು ಬಲ್ಲವಳಾಗಿದ್ದಳು. ಯಾವುದೋ ಒಂದು ದುರ್ಭಾವನೆಯ ಅಥವಾ ದುಷ್ಟವಾದ ಶಕ್ತಿ ಈಗ ಅವಳ ಸುತ್ತಣ ತಡೆಗಟ್ಟುಗಳನ್ನು ಹಾದುಹೋಗಲು ಹವಣಿಸುತ್ತಿದ್ದಿತೆಂದು ಅವಳು ಸಹಜ ಅಂತಃಪ್ರೇರಣೆಯಿಂದ ಅರಿತಳು; ಹೋರಾಟವನ್ನು ಅವಳು ನಿರಾಕರಿಸುವವಳಾಗಿರಲಿಲ್ಲ. ಇಂತು ಪುರುಷಬಲದ ಇದಿರಿನಲ್ಲಿ ಸ್ತ್ರೀಶಕ್ತಿಯನ್ನು ಅವಳು ಮುಂದೊಡ್ಡಿದಳು; ಅನೇಕವೇಳೆ ಈ ಜೋಡಿ ಹೆಂಗಸಿನ ಭಾಗಕ್ಕೆ ಸಮನೆನಿಸದು.

ಈ ಮಧ್ಯೆ ಅವಳ ತಂದೆ ಅತ್ತ ತಿರುಗಿಕೊಂಡು, ಕ್ಲಾಡ್ ಎಂಬಾತನ ಭೂದೃಶ್ಯಚಿತ್ರದ ಪರಿಭಾವನೆಯಲ್ಲಿ ಮಗ್ನನಾಗಿದ್ದನು; ನೆರಳು ಮತ್ತು ಸೂರ್ಯಕಿರಣಗಳ ಪರಿಣಾಮದ ದೂರನೋಟವು ಒಂದು ಪುರಾತನ ಕಾಡಿನೊಳಕ್ಕೆ ಅದೆಷ್ಟು ದೂರ ಭೇದಿಸಿಕೊಂಡು ಹೋಗಿತ್ತೆಂದರೆ, ಚಿತ್ರದ ದಿಗ್ಭ್ರಮೆಹಿಡಿಸುವ ಅಗಾಧತೆಯಲ್ಲಿ

ಕೋಣೆಯೆಂದರೆ ಆಗದು, ಅದನ್ನ ನೀನೂ ಬಲ್ಲೆ.

"ದಯವಿಟ್ಟು ಒಂದು ಕ್ಷಣ ನಿಲ್ಲಿ, ತಾಯೀ, ನಿಮ್ಮ ಅಭ್ಯಂತರವಿಲ್ಲದಿದ್ದರೆ!" ಎಂದ ಮ್ಯಾತ್ಯೂಮಾಲ್: "ನಿಮ್ಮ ತಂದೆಯ ಜೊತೆ ನನ್ನ ಕೆಲಸ ಮುಗಿಯಿತು. ನಿಮ್ಮ ಜೊತೆ ಅದು ಈಗ ಪ್ರಾರಂಭವಾಗಬೇಕಾಗಿದೆ" ಎಂದನು ಮ್ಯಾತ್ಯೂಮಾಲ್.

ಆಯಲಿಸ್ ಬೆರಗಾಗಿ, ವಿಚಾರವೇನೆಂದು ಕೇಳುವ ರೀತಿಯಲ್ಲಿ ತನ್ನ ತಂದೆಯ ಕಡೆ ನೋಡಿದಳು.

ಪಿನ್ಚನ್ ಮಹಾಶಯನು ತುಸ ಮನಃಕ್ಷೋಭೆಗೊಂಡವನಾಗಿ, ಗೊಂದಲಕ್ಕೀಡಾಗಿ, ನುಡಿದನು: "ಹೌದು, ಆಯಲಿಸ್. ನಾನು ಅವನನ್ನು ಅರ್ಥಮಾಡಿಕೊಂಡಿರುವಮಟ್ಟಿಗೆ ಈ ತರುಣ– ಅವನ ಹೆಸರು ಮ್ಯಾತ್ಯೂಮಾಲ್– ನೀನು ಹುಟ್ಟುವುದಕ್ಕೆ ಬಹುಕಾಲ ಮುಂಚೆ ನಷ್ಟವಾಗಿಹೋಗಿದ್ದ ಯಾವುದೋ ಒಂದು ಕಾಗದವನ್ನು, ಅಥವಾ ಚರ್ಮಕಾಗದವನ್ನು ನಿನ್ನ ನೆರವಿನಿಂದ ಕಂಡುಹಿಡಿಯಲು ತನಗೆ ಸಾಧ್ಯ ಎಂದು ಹೇಳಿಕೊಳ್ಳುತ್ತಿದ್ದಾನೆ. ಸದ್ಯಕ್ಕೆ ಬೇಕಾದ ಆ ಕಾಗದಪತ್ರ ಎಷ್ಟು ಮುಖ್ಯವಾದದ್ದೆಂದರೆ, ಅದನ್ನು ಪುನಃ ಪಡೆಯಲು ಸಾಧ್ಯವೆಂದು ಕಾಣುವ ಯಾವುದೇ ವಿಧಾನವನ್ನಾಗಲಿ, ಅದು ಅಸಂಭವವಾಗಿ ಕಾಣುತ್ತಿದ್ದರೂ ಕೂಡ, ಅಲಕ್ಷಿಸುವಹಾಗಿಲ್ಲ. ಆದ್ದರಿಂದ, ನನ್ನ ಮುದ್ದು ಆಯಲಿಸ್, ಈತ ಕೇಳುವ ಪ್ರಶ್ನೆಗಳಿಗೆ ಉತ್ತರಕೊಟ್ಟು ಕಾನೂನಿಗನುಸಾರವಾದ ನ್ಯಾಯವಾದ ಅವನ ಬೇಡಿಕೆಗಳನ್ನು ನಡಸಿಕೊಟ್ಟು, ನೀನು ನನಗೆ ಉಪಕಾರಮಾಡಬೇಕಮ್ಮಾ; ಆತನ ಪ್ರಶ್ನೆಗಳೂ ಬೇಡಿಕೆಗಳೂ ಮೇಲ್ಕಂಡ ಉದ್ದೇಶಕ್ಕೆ ಸಂಬಂಧಪಟ್ಟಿರುವಂತೆ ತೋರಬೇಕಷ್ಟೆ. ನಾನು ಕೋಣೆಯಲ್ಲಿಯೆ ಇರುವೆನಾದ್ದರಿಂದ, ಈ ತರುಣನು ಅಸಭ್ಯವಾಗಿ ಇಲ್ಲವೆ ಅನುಚಿತರೀತಿಯಲ್ಲಿ ನಡೆದುಕೊಂಡಾನೆಂದು ನೀನು ಹೆದರಬೇಕಾಗಿಲ್ಲ; ಏನೇ ಆಗಲಿ, ನೀನು ಲವಲೇಶ ಅಪೇಕ್ಷೆಪಟ್ಟರೂ ಸಾಕು, ಈ ಪರಿಶೋಧನೆ ಅಥವಾ ಅದನ್ನು ಏನೆಂದಾದರೂ ಕರೆಯೋಣ, ಆ ಕೂಡಲೆ ಅದನ್ನು ನಿಲ್ಲಿಸಿ ಬಿಡಲಾಗುವುದು.

"ಆಯಲಿಸ್ ಪಿನ್ಚನ್ ಒಡತಿಯವರು ತಮ್ಮ ತಂದೆಯವರ ಎದುರಿನಲ್ಲಿ, ಹಾಗೂ ಅವರ ಸಂಪೂರ್ಣ ಸಂರಕ್ಷಣೆಯಲ್ಲಿ, ತಾವು ಪೂರ್ತಿ ಸುರಕ್ಷಿತ ಎಂದು ನಿಸ್ಸಂದೇಹವಾಗಿ ಭಾವಿಸಿಕೊಳ್ಳುವರು" ಎಂದು ಮ್ಯಾತ್ಯೂಮಾಲ್ ಅತ್ಯಂತ ಗೌರವದಿಂದ ನುಡಿದನು; ಆದರೂ, ಅವನ ನೋಟದಲ್ಲಿಯೂ ಧ್ವನಿಯಲ್ಲಿಯೂ ವ್ಯಂಗ್ಯವು ಅರೆಮರೆಯಾಗಿತ್ತು.

"ನಮ್ಮ ತಂದೆ ಬಳಿಯಲ್ಲಿರುವಾಗ ನನಗೆ ಖಂಡಿತವಾಗಿಯೂ ಯಾವ

ಅಪ್ಪಾ, ದಯವಿಟ್ಟು ಈ ತರುಣನನ್ನು ತಡೆಯಬೇಡ. ಆತನ ಪ್ರಯತ್ನಗಳು ಏನೂ ಕೆಡುಕುಮಾಡುವುದಿಲ್ಲವೆಂದು ನಾನು ಭರವಸೆ ಕೊಡುತ್ತೇನೆ."

ಪಿನ್ಚನ್ ಮಹಾಶಯನು ಮರಳಿ ಕ್ಲಾಡ್‌ನ ಚಿತ್ರದ ಕಡೆಗೆ ಕಣ್ಣು ಹೊರಳಿಸಿದನು. ತನ್ನ ಸ್ವಂತ ಇಚ್ಛೆಗೆ ವಿರುದ್ಧವಾಗಿ, ಆ ಪ್ರಯೋಗವನ್ನು ಪೂರ್ತಿ ಪರೀಕ್ಷಿಸಬಿಡಬೇಕೆಂದು ಆತನ ಮಗಳ ಸಂಕಲ್ಪವಾಗಿತ್ತು ಆಗ, ಆದ್ದರಿಂದ, ಅಲ್ಲಿಂದ ಮುಂದಕ್ಕೆ, ಅವನು ಸಮ್ಮತಿಯನ್ನು ಮಾತ್ರಕೊಟ್ಟನು, ಒತ್ತಾಸೆ ಕೊಡಲಿಲ್ಲ. ತನಗಿಂತ ಹೆಚ್ಚಾಗಿ ಅವಳಿಗೋಸುಗತಾನೆ ಅಲ್ಲವೆ ಆ ಪ್ರಯೋಗ ಯಶಸ್ವಿಯಾಗಬೇಕೆಂದು ತಾನು ಬಯಸಿದ್ದು? ಆ ಕಳೆದುಹೋದ ಚರ್ಮಪತ್ರ ಸಿಕ್ಕಿತೆಂದರೆ ಸಾಕು, ತಾನು ಅವಳಿಗೆ ಕೊಡಲಿರುವ ಸಂಪದ್ಯುಕ್ತವಾದ ಬಳುವಳಿಯೊಂದಿಗೆ ಚೆಲುವೆಯಾದ ಆಯಲಿಸ್ ಪಿನ್ಚನ್ ಒಬ್ಬ ಇಂಗ್ಲಿಷು ಡ್ಯೂಕನನ್ನೋ ಇಲ್ಲವೆ ಜರ್ಮನಿಯ ಆಳರಸನೊಬ್ಬನನ್ನೋ ಮದುವೆಯಾಗಬಹುದು, ಹೊಸ ಇಂಗ್ಲೆಂಡಿನ ಯಾವನೋ ಒಬ್ಬ ಮಠದ ಪುರೋಹಿತ ಅಥವಾ ವಕೀಲನನ್ನಲ್ಲ! ಈ ಆಲೋಚನೆ ಬಂದು, ಈ ಮಹಾ ಧ್ಯೇಯಸಾಧನೆಗೆ ಸೈತಾನನ ಶಕ್ತಿಯೇ ಬೇಕಾಗಿದ್ದಲ್ಲಿ ಮಾಲನು ಅವನನ್ನು ಅವಾಹನೆ ಮಾಡಿದರೂ ಚಿಂತೆಯಿಲ್ಲ ಎಂದು ಹೆಬ್ಬಯಕೆಯ ಆ ತಂದೆ ತನ್ನ ಆಂತರ್ಯದಲ್ಲಿ ಬಹುಮಟ್ಟಿಗೆ ಒಪ್ಪಿಗೆಕೊಟ್ಟನು. ಆಯಲಿಸಳ ಸ್ವಂತ ಪರಿಶುದ್ಧತೆಯೇ ಅವಳ ರಕ್ಷಣೆಯಾಗಿರುವುದು.

ಪಿನ್ಚನ್ ಮಹಾಶಯನ ಮನಸ್ಸಿನ ತುಂಬ ಕಾಲ್ಪನಿಕ ಘನತೆ ತುಂಬಿ ತುಳುಕುತ್ತಿದ್ದಾಗ, ತನ್ನ ಮಗಳು ಅರ್ಧ ಮಾತ್ರ ಉಚ್ಚರಿಸಿ ಉದ್ಗಾರ ತೆಗೆದಂತೆ ಅವನಿಗೆ ಕೇಳಿಬಂತು. ಅದು ಬಹಳ ಅಸ್ಪಷ್ಟವಾಗಿ, ಅದರ ದನಿ ತಗ್ಗಿತ್ತು; ಎಷ್ಟು ಅಸ್ಪಷ್ಟವಾಗಿತ್ತೆಂದರೆ, ಶಬ್ದಗಳನ್ನು ಸರಿಯಾದ ರೂಪದಲ್ಲಿ ಉಚ್ಚರಿಸಲು ಪೂರ್ತಿ ಇಚ್ಛೆಯೆ ಇದ್ದಂತಿರಲಿಲ್ಲ; ಅದರ ಉದ್ದೇಶವಾದರೂ ಅಷ್ಟೆ, ಅರ್ಥವಾಗದಷ್ಟು ಅನಿರ್ದಿಷ್ಟವಾಗಿತ್ತು. ಆದರೂ ಕೂಡ, ಸಹಾಯ ಬೇಕೆಂಬ ಕರೆಯಾಗಿತ್ತು ಅದು– ಆ ಬಗೆಗೆ ಅವನ ಅಂತಃಕರಣದಲ್ಲಿ ಸಂದೇಹವಿರಲಿಲ್ಲ; ಅಲ್ಲದೆ, ಅದು ಅವನ ಕಿವಿಗೆ ಬಹುಮಟ್ಟಿಗೆ ಒಂದು ಪಿಸುಮಾತಿನಂತೆ ಕೇಳಿಬಂದರೂ, ಅವನ ಹೃದಯದ ಸುತ್ತಣ ಎಡೆಯಲ್ಲಿ ಅದೊಂದು ನಿರಾಶೆಯ ಚೀತ್ಕಾರರೂಪದಲ್ಲಿ ಬಹುಕಾಲ ಹೊಳಲುಗೊಡುತ್ತಿತ್ತು! ಆದರೆ, ಈ ಸಲ, ತಂದೆ ತಿರುಗಿನೋಡಲಿಲ್ಲ.

ಇನ್ನೂ ಸ್ವಲ್ಪ ಕಾಲ ಬಿಟ್ಟು, ಮಾಲ್ ನುಡಿದನು. "ನಿಮ್ಮ ಮಗಳನ್ನು ನೋಡಿ!" ಎಂದನವನು.

ಅವನ ಕಲ್ಪನೆ ದಾರಿತಪ್ಪಿದ್ದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಆದರೆ, ದಿಟವಾಗಿ, ಆ ಕ್ಷಣದಲ್ಲಿ ಅವನ ಪಾಲಿಗೆ ಆ ಚಿತ್ರವು ಅದನ್ನು ತೂಗಹಾಕಿದ್ದ ಬೋಳುಗೋಡೆಗಿಂತ ಹೆಚ್ಚಿನದೇನೂ ಆಗಿರಲಿಲ್ಲ. ಮಾಲ್ ಮನೆತನದ ಈಚಿನ ಇಬ್ಬರು ಪೂರ್ವಿಕರು ಮತ್ತು ಇಲ್ಲಿದ್ದ ಮೊಮ್ಮಗ ಇವರ ಸಂಬಂಧವಾಗಿ ಹುಟ್ಟಿಕೊಂಡಿದ್ದ ಕತೆಗಳು ಅವರಿಗೆ ಅಲೌಕಿಕವಲ್ಲದಿದ್ದರೂ ನಿಗೂಢವಾದ ಶಕ್ತಿಯಿದೆಯೆಂದು ಹೇಳುತ್ತಿದ್ದುವು; ಅಪೂರ್ವವಾದ ಆ ಹಲವಾರು ಕತೆಗಳು ಅವನ ಮನಸ್ಸನ್ನು ಮುತ್ತಿಕಾಡುತ್ತಿದ್ದುವು ಈಗ. ಪಿನ್ಚನ್ ಮಹಾಶಯನು ಯೂರೋಪುಖಂಡದಲ್ಲಿ ಮಾಡಿದ್ದ ದೀರ್ಘಕಾಲದ ವಾಸ; ಆಸ್ಥಾನಿಕರು, ಲೌಕಿಕರು, ಸ್ವತಂತ್ರ ವಿಚಾರಿಗಳು, ಇವರೇ ಮುಂತಾದ ಕುಶಾಗ್ರಮತಿಗಳೂ ಸೊಗಸುಗಾರರೂ ಆದವರೊಡನೆ ಸಹವಾಸ ಸಂಪರ್ಕ– ಇವು ಆತನ ಪ್ಯೂರಿಟನ ಮತೀಯವಾದ ಘೋರಮೂಢನಂಬಿಕೆಗಳನ್ನು ಬಹುಮಟ್ಟಿಗೆ ತೊಡೆದುಹಾಕಿದ್ದುವು; ಆ ಮುಂಚಿನ ದಿನಗಳಲ್ಲಿ ಹೊಸ ಇಂಗ್ಲೆಂಡಿನಲ್ಲಿ ಹುಟ್ಟಿದ ಯಾವಾತನೂ ಸಂಪೂರ್ಣವಾಗಿ ಆ ನಂಬಿಕೆಗಳ ಪ್ರಭಾವದಿಂದ ತಪ್ಪಿಸಿಕೊಳ್ಳಲಾಗುತ್ತಿರಲಿಲ್ಲ. ಆದರೆ, ಮತ್ತೊಂದು ಕಡೆ, ಒಂದು ಇಡಿಯ ಜನಸಮುದಾಯವೇ ಮಾಲನ ಅಜ್ಜ ಮಾಟಗಾರನಾಗಿದ್ದನೆಂದು ನಂಬಿರಲಿಲ್ಲವೆ? ಆ ಘೋರಾಪರಾಧವನ್ನು ದೃಢಪಡಿಸಿರಲಿಲ್ಲವೆ? ಅದಕ್ಕಾಗಿ ಆ ಮಾಟಗಾರ ಸತ್ತಿರಲಿಲ್ಲವೆ? ಪಿನ್ಚನ್ ಮನೆತನದವರ ಮೇಲೆ ದ್ವೇಷಸಾಧಿಸುವುದನ್ನೇ ಒಂದು ಆಸ್ತಿಯಾಗಿ ಆತ ಈ ಒಬ್ಬನೇ ಮೊಮ್ಮಗನಿಗೆ ಬಿಟ್ಟು ಹೋಗಿರಲಿಲ್ಲವೆ? ಈಗ ಆ ಮೊಮ್ಮಗ ತನ್ನ ಶತ್ರುವಿನ ಮನೆಯ ಮಗಳಮೇಲೆ ಒಂದು ಸೂಕ್ಷ್ಮವಾದ ಪ್ರಭಾವವನ್ನು ಬೀರುವುದರಲ್ಲಿದ್ದನೆಂದು ಕಾಣುತ್ತಿದ್ದಿತಲ್ಲವೆ? ಮಾಟವಿದ್ಯೆ ಎಂದು ಯಾವುದನ್ನು ಕರೆಯಲಾಗುತ್ತಿದ್ದಿತೋ ಅದು ಇದೇ ಬಗೆಯ ಪ್ರಭಾವವಾಗಿದ್ದಿರಬಹುದಲ್ಲವೆ?

ಅರ್ಧ ಸುತ್ತು ತಿರುಗಿ, ಆತ ಕನ್ನಡಿಯಲ್ಲಿ ಮಾಲನ ಒಂದು ನಸುನೋಟವನ್ನು ಕಂಡನು. ಆಯಲಿಸ್ಸಿಗೆ ಕೆಲವು ಹೆಜ್ಜೆಗಳನ್ನು ದೂರದಲ್ಲಿ ನಿಂತು, ತನ್ನ ತೋಳುಗಳನ್ನು ಮೇಲೆತ್ತಿ ಹಿಡಿದು ಆ ಕನ್ಯೆಯ ಮೇಲೆ ಅದೃಶ್ಯವಾದ ವಿಪರೀತ ದೊಡ್ಡ ಭಾರದ ಹೊರೆಯನ್ನು ನಿಧಾನವಾಗಿ ಕೆಳಕ್ಕೆ ಇಳುಹುತ್ತಿದ್ದಾನೆಯೋ ಎಂಬಂತೆ ಬಡಗಿ ಕೈಸನ್ನೆ ಮಾಡಿದನು.

"ನಿಲ್ಲಿಸು, ಮಾಲ್! ನೀನದನ್ನು ಇನ್ನು ಮುಂದುವರಿಸಕೂಡದು!" ಎಂದು ಪಿನ್ಚನ್ ಮಹಾಶಯನು ಮುಂದಕ್ಕೆ ಹೆಜ್ಜೆಯಿಟ್ಟು ಉದ್ಗಾರ ತೆಗೆದನು.

ತಾನಿದ್ದ ಶರೀರಭಂಗಿಯನ್ನು ಮಾರ್ಪಡಿಸದೆ ಆಯಲಿಸ್ ನುಡಿದಳು!

ಎಂದು ಬಲವಾಗಿ ಬಡಿಯಿತು; ಆ ಬಡಿತ ಎಷ್ಟು ಬಲವಾಗಿತ್ತೆಂದರೆ, ಅದು ಅವಳ ಅನುಭವಕ್ಕೂ ಬಂದಿರಬೇಕೆನ್ನಿಸಿತು ಅವನಿಗೆ. ಬಳಿಕ, ಮೈಮರವನ್ನು ಕಂಡು, ಕೋಪದ ಭರದಲ್ಲಿ ಅವಳ ಎಳೆಯ ಶರೀರವನ್ನು ಬಲು ಜೋರಾಗಿ ಅಲುಗಾಡಿಸಿದನು; ಮರುಗಳಿಗೆಯೆ, ಅಷ್ಟು ಜೋರಾಗಿ ಅಲುಗಾಡಿಸಿದ್ದನ್ನು ನೆನೆಯಲೂ ಅವನು ಅಂಜಿದನು. ಅವನು ಮಗಳನ್ನು ಬಳಸಿದ್ದ ತೋಳುಗಳನ್ನು ಹಿಂದಕ್ಕೆ ತೆಗೆದುಕೊಂಡನು; ಆಯಲಿಸಳ ಮೈ ಬಳುಕುವಂಥದಾದರೂ ಈಗ ಯಾವ ವೇದನೆಯೂ ತಟ್ಟದಂತೆ ಜಡಗಟ್ಟಿಹೋಗಿತ್ತು; ಅವಳನ್ನು ಎಚ್ಚರಿಸಲು ಪ್ರಯತ್ನಮಾಡುವ ಮುನ್ನ ಅವಳು ಯಾವ ಸ್ಥಿತಿಯಲ್ಲಿದ್ದಳೋ ಅದೇ ಸ್ಥಿತಿಯನ್ನು ಹೊಂದಿದ್ದಳು. ಮಾಲ್ ತಾನು ನಿಂತಿದ್ದ ಸ್ಥಾನದಿಂದ ಕದಲಿದ್ದರಿಂದ, ಅವಳ ಮುಖ ಸ್ವಲ್ಪ ಅವನ ಕಡೆಗೇ ಓರೆಯಾಗಿ ತಿರುಗಿತ್ತು; ಅವನ ನಿರ್ದೇಶದಂತೆ ಅವಳು ಸುಷುಪ್ತಿಯನ್ನು ಹೊಂದಿದ್ದುದಕ್ಕೆ ಏನೋ ಸಂಬಂಧವನ್ನು ಸೂಚಿಸುವಂತಿತ್ತು ಆ ಮುಖಚಲನೆ.

ಆಗ, ಸಂಪ್ರದಾಯಶರಣನಾದ ಪಿನ್ಚನ್ ಮಹಾಶಯನು ಹೇಗೆ ತನ್ನ ಕೂದಲಟೋಪಿಗೆ ಹಾಕಿದ್ದ ಸುಗಂಧಪುಡಿಯನ್ನು ಕೊಡವಿದನು; ಬಿಗುಮಾನದ, ಘನವಂತ ದೊಡ್ಡ ಮನುಷ್ಯನು ಅದು ಹೇಗೆ ತನ್ನ ಘನತೆ ಗಾಂಭೀರ್ಯಗಳನ್ನು ಮರೆತನು; ಚಿನ್ನದ ಜರಿಯ ಕಸೂತಿಗೆಲಸ ಮಾಡಿದ್ದ ಅವನ ನಡುವಂಗಿಯ ಕೆಳಗೆ ಬಡಿಯುತ್ತಿದ್ದ ಮಾನವಹೃದಯಲ್ಲಿ ಆಕ್ರೋಶ, ಭೀತಿ, ದುಃಖ– ಇವುಗಳಿಂದ ಉಂಟಾದ ಸಂಕ್ಷೋಭೆಯ ಪರಿಣಾಮವಾಗಿ ಆ ಅಂಗಿ ಬೆಂಕಿಯ ಬೆಳಕಿನಲ್ಲಿ ಅದು ಹೇಗೆ ಮಿನುಮಿನುಗಿ ಥಳಥಳಿಸುತ್ತಿತ್ತು– ಎಂಬೀ ವಿದ್ಯಮಾನವನ್ನೆಲ್ಲಾ ನೋಡುವುದು ಒಂದು ಅಪೂರ್ವವಾದ ನೋಟವೇ ಆಗಿತ್ತು.

"ಎಲವೋ ಖೂಳನೇ!" ಎಂದು ಪಿನ್ಚನ್ ಮಹಾಶಯನು ಮಾಲನ ಕಡೆ ತನ್ನ ಮುಷ್ಟಿಯನ್ನು ತಿರುವುತ್ತಾ ಗರ್ಜಿಸಿದನು: "ನೀನೂ ಸೈತಾನನೂ ಕೂಡಿಕೊಂಡು ನನ್ನ ಮಗಳನ್ನು ನನ್ನಿಂದ ಕಸಿದುಕೊಂಡುಬಿಟ್ಟಿದ್ದೀರಿ! ಎಲೋ, ಮುದಿ ಮಾಟಗಾರನ ಮರಿಯೇ, ಅವಳನ್ನು ಹಿಂದಕ್ಕೆ ಕೊಡು, ಇಲ್ಲದೆ ಹೋದರೆ ನಿನ್ನ ಅಜ್ಜನ ದಾರಿ ಹಿಡಿದು ನೀನೂ ಸಹ 'ಗಲ್ಲಿನ ಗುಡ್ಡ' ಹತ್ತಬೇಕಾದೀತು!"

"ಪಿನ್ಚನ್ ಮಹಾಶಯರೇ, ಮೆಲ್ಲಗೆ, ಮೆಲ್ಲಗೆ!" ಎಂದು ಬಡಗಿ ತಿರಸ್ಕಾರಯುತವಾದ ಮನಸ್ಸಮಾಧಾನದಿಂದ ನುಡಿದನು: "ಮೆಲ್ಲಗೆ; ಇಷ್ಟರ ಮೇಲೆ ನಿಮ್ಮ ಸಂತೋಷ; ಇಲ್ಲದಿದ್ದರೆ, ನಿಮ್ಮ ಮುಂಗೈ ಬಳಿಯ ಸೊಗಸಾದ ಅಂಚುಕಟ್ಟಿನ ನಿರಿಗೆಯನ್ನು ಹಾಳುಮಾಡಿಕೊಳ್ಳುತ್ತೀರಿ! ಹಳದಿಯ ಚರ್ಮಕಾಗದದ

ಪಿನ್ಚನ್ ಮಹಾಶಯನು ಆತುರದಿಂದ ಮುಂದೆ ಬಂದನು. ಬಡಗಿ ಆಯಲಿಸ್ನಳ ಕುರ್ಚಿಯ ಮುಂದೆ ನೆಟ್ಟಗೆ ನಿಂತಿದ್ದನು; ಮತ್ತು, ಜಯಶಾಲಿಯಾದ ತನ್ನ ಶಕ್ತಿಯನ್ನು ಸೂಚಿಸುವ ಮುಖಭಾವದೊಂದಿಗೆ ಅವನು ಆ ಕನ್ಯೆಯ ಅಷ್ಟಿಷ್ಟೆಂದು ನಿರ್ದೇಶಿಸಿ ಹೇಳಲಾಗುತ್ತಿರಲಿಲ್ಲ; ವಾಸ್ತವವಾಗಿ, ಅದರ ವ್ಯಾಪ್ತಿ ಅಗೋಚರ ಅನಂತ ದೂರದವರೆಗೆ ಅಸ್ಪಷ್ಟವಾಗಿ ಚಾಚಿತ್ತು. ಆಯಲಿಸ್ ಅಪಾರ ಶಾಂತಿಯಲ್ಲಿ ಮುಳುಗಿದ್ದಂತೆ ಕುಳಿತಿದ್ದಳು; ಅವಳ ನೀಳವಾದ ಕಂದುಬಣ್ಣದ ಎವೆಗಳು ಕಣ್ಣ ಮೇಲೆ ಜೋಲಬಿದ್ದಿದ್ದುವು.

"ಅವಳು ಅಗೋ ಅಲ್ಲಿ! ಅವಳೊಂದಿಗೆ ಮಾತಾಡಿ!" ಎಂದ ಬಡಗಿ.

"ಆಯಲಿಸ್! ನನ್ನ ಮಗಳೇ! ನನ್ನ ಆಯಲಿಸ್!" ಎಂದು ಪಿನ್ಚನ್ ಮಹಾಶಯನು ಉದ್ಗಾರ ತೆಗೆದನು.

ಅವಳು ಕದಲಲಿಲ್ಲ.

"ಇನ್ನೂ ಗಟ್ಟಿಯಾಗಿ!" ಎಂದ ಮಾಲ್, ಮುಗುಳುನಗೆ ನಗುತ್ತ.

"ಆಯಲಿಸ್! ಎಚ್ಚರಮಾಡಿಕೊ! ನೀನು ಹೀಗಿರುವುದನ್ನ ನೋಡುವುದೆಂದರೆ ನನಗೆ ಕಸಿವಿಸಿಯಾಗುತ್ತದೆ! ಎಚ್ಚರಮಾಡಿಕೊ!" ಎಂದು ತಂದೆ ಕೂಗಿದನು.

ಪ್ರತಿಯೊಂದು ಅಪಸ್ವರದ ವಿಚಾರದಲ್ಲಿಯೂ ಅವಳ ಕಿವಿ ಯಾವಾಗಲೂ ಬಹು ಸೂಕ್ಷ್ಮ; ಅಂಥ ಕಿವಿಯ ಹತ್ತಿರದಲ್ಲಿ, ಭಯತುಂಬಿದ ದನಿಯಲ್ಲಿ, ಅವನು ಗಟ್ಟಿಯಾಗಿ ಮಾತಾಡಿದನು. ಆದರೆ ಶಬ್ದ ಅವಳಿಗೆ ಕೇಳಿಸಲಿಲ್ಲವೆಂಬುದು ಸ್ಪಷ್ಟ. ತನ್ನ ಧ್ವನಿ ಅವಳಿಗೆ ಕೇಳಿಸುವುದು ಅಸಾಧ್ಯವಾಗಿದ್ದ ಪ್ರಯುಕ್ತ, ತನ್ನ ಮತ್ತು ಆಯಲಿಸಳ ನಡುವೆ ಮಸುಕಾದ, ಬಹು ಆಚೆಗಿರುವ, ಸೇರಲಾಗದ ಒಂದು ದೂರದ ಭಾವನೆ ಆ ತಂದೆಯಲ್ಲಿ ಅಚ್ಚೊತ್ತಿ ನೆಲಸಿತು; ಅದು ಎಂಥದೆಂಬುದನ್ನು ವರ್ಣಿಸಲು ಸಾಧ್ಯವಿಲ್ಲ.

"ಅವಳನ್ನು ಮುಟ್ಟುವುದು ಉತ್ತಮ! ಆ ಹುಡುಗಿಯನ್ನು ಅಲುಗಾಡಿಸಿ, ಸ್ವಲ್ಪ ಒರಟಾಗಿ ಅಲುಗಾಡಿಸಿದರೂ ಒಳ್ಳೆಯದೆ! ಕೊಡಲಿ, ಗರಗಸ, ಹತ್ತರಿಹಿಡಿಯುವ ಮಣೆ ಇವನ್ನೆಲ್ಲ ಹಿಡಿದು ಹಿಡಿದು ನನ್ನ ಕೈ ಕಠಿನವಾಗಿ ಬಿಟ್ಟಿವೆ– ಇಲ್ಲದಿದ್ದರೆ ನಾನು ನಿಮಗೆ ಸಹಾಯಮಾಡುತ್ತಿದ್ದೆ!" ಎಂದ ಮಾಲ್.

ಪಿನ್ಚನ್ ಮಹಾಶಯನು ಅವಳ ಕೈಯನ್ನು ಹಿಡಿದುಕೊಂಡು, ಬೆಚ್ಚಿ ಬಿದ್ದಾಗ ಉಂಟಾಗುವಂತಹ ಭಾವೋದ್ರೇಕದ ರಭಸದಿಂದ ಅದನ್ನು ಅದುಮಿದನು. ಅವನು ಅವಳನ್ನು ಮುತ್ತಿಟ್ಟನು: ಆಗ ಅವನ ಹೃದಯ ಮುತ್ತಿನೊಡನೆ ಕಲೆತು 'ಡಬಾರ್'

ನಿರ್ದಾಕ್ಷಿಣ್ಯ ಪ್ರಕೃತಿಯ ದೊಡ್ಡ ಮನುಷ್ಯ; ಧಾರ್ಮಿಕ ಹಬ್ಬದಂದು ಧರಿಸುವಹಾಗೆ ಆತ ಗಂಭೀರವಾದ, ಬಹಳ ಬೆಲೆಬಾಳುವ ಕಸೂತಿಕೆಲಸಮಾಡಿದ್ದ ಅದರ ಅಂಚುಪಟ್ಟಿಯಮೇಲೆ ದೊಡ್ಡ ರಕ್ತದ ಕಲೆಯಿತ್ತು. ಎರಡನೆಯಾತನೂ ವಯಸ್ಸಾದವನೆ; ಆದರೆ, ಕೀಳಾದ ಉಡುಪು ಧರಿಸಿದ್ದನು; ಅವನ ಮುಖಮುದ್ರೆ ಕರಾಳವಾಗಿದ್ದು, ಕೇಡುಂಟುಮಾಡುವ ಹಾಗೆ ಕಾಣುತ್ತಿತ್ತು; ಅವನ ಕೊರಳಲ್ಲಿ ಕಡಿದುಹೋದ ಗಲ್ಲುನೇಣಿತ್ತು. ಮೂರನೆಯವನು ಮೊದಲಿನ ಇಬ್ಬರಂತೆ ಬದುಕಿನಲ್ಲಿ ಬಹುದೂರ ಸಾಗಿದವನಲ್ಲ, ಆದರೆ ಮಧ್ಯವಯಸ್ಸನ್ನು ದಾಟಿದ್ದ; ಒರಟಾದ ಉಣ್ಣೆಯಬಟ್ಟೆಯ ನಡುವಂಗಿಯನ್ನೂ ಚರ್ಮದ ಚಲ್ಲಣವನ್ನೂ ಅವನು ಧರಿಸಿದ್ದ; ಅವನ ಪಕ್ಕದ ಜೇಬಿನಿಂದ ಬಡಗಿಯ ಅಳತೆಯಕಡ್ಡಿ ಹೊರಹಾಯ್ದಿತ್ತು. ಈ ಮೂವರು ಕಾಲ್ಪನಿಕವ್ಯಕ್ತಿಗಳು ಕಳೆದುಹೋಗಿದ್ದ ಕಾಗದಪತ್ರ ವಿಷಯಕವಾದ ತಿಳಿವಕೆಯನ್ನು ಕೂಡಿಯೆ ಹೊಂದಿದ್ದರು. ವಾಸ್ತವವಾಗಿ, ಅವರಲ್ಲಿ ಒಬ್ಬನು– ತನ್ನ ಕೈಮೇಲೆ ರಕ್ತದ ಕಲೆಯನ್ನು ಹೊಂದಿದ್ದಾತ– ಆ ಚರ್ಮ ಕಾಗದವನ್ನು ತನ್ನ ಬಳಿ ಕೈಗೆ ಸಿಕ್ಕುವಂತೆಯೆ ಎಲ್ಲೊ ಇಟ್ಟುಕೊಂಡಿದ್ದಂತೆ ತೋರುತ್ತಿತ್ತು; ಅವನ ಅಂಗಭಂಗಿಯನ್ನು ತಪ್ಪಾಗಿ ಅರ್ಥಮಾಡಿಕೊಳ್ಳದಿದ್ದ ಪಕ್ಷಕ್ಕೆ, ಅದರಿಂದ ಹಾಗೆ ತೋರುತ್ತಿತ್ತು. ಆದರೆ ರಹಸ್ಯದಲ್ಲಿ ಪಾಲುಗಾರರಾಗಿದ್ದ ಆ ಇನ್ನಿಬ್ಬರು ಜೊತೆಗಾರರು ತನ್ನಲ್ಲಿ ನ್ಯಾಸವಾಗಿದ್ದ ಅದನ್ನು ಹೊರಕ್ಕೆ ತೆಗೆಯದಂತೆ ಅವನನ್ನು ತಡೆಹಿಡಿದಿದ್ದರು. ಕಡೆಯಲ್ಲಿ, ರಹಸ್ಯವನ್ನು ಗಟ್ಟಿಯಾಗಿ ತನ್ನ ಪ್ರಪಂಚದಿಂದ ಮರ್ತ್ಯಪ್ರಪಂಚಕ್ಕೆ ಕೇಳಿಸುವವಷ್ಟು ಗಟ್ಟಿಯಾಗಿ– ಸಾರಿಹೇಳಿಬಿಡಬೇಕೆಂಬ ಉದ್ದೇಶವನ್ನು ಅವನು ತೋರ್ಪಡಿಸಿದಾಗ, ಅವನ ಜೊತೆಯವರು ಅವನೊಂದಿಗೆ ಹೋರಾಡಿ, ತಮ್ಮ ಕೈಗಳಿಂದ ಅವನ ಬಾಯನ್ನು ಮುಚ್ಚಿದರು; ಆ ಕೂಡಲೆಯೆ– ಅದರಿಂದ ಉಸಿರು ಕಟ್ಟಿದಂತಾಯಿತೊ, ಇಲ್ಲವೇ ಆ ರಹಸ್ಯವೇ ಕಡುಗೆಂಪು ಬಣ್ಣದ್ದೊ ಅವನ ಕೈಮೇಲೆ ಹೊಸದಾಗಿ ರಕ್ತ ಸುರಿಯಿತು. ಆ ಮೇಲೆ ಕೀಳಾಗಿ ಉಡುಪುಧರಿಸಿದ್ದ ಆ ಇಬ್ಬರು ಬಹುವಾಗಿ ಕಂಗೆಟ್ಟಿದ್ದ ಆ ವೃದ್ಧ ಗೌರವಸ್ಥನನ್ನು ಹಂಗಿಸಿ ಭಂಗಿಸಿ, ರಕ್ತದ ಕಲೆಯ ಕಡೆಗೆ ಬೆರಳುಮಾಡಿ ತೋರಿಸಿದರು.

ಈ ಸನ್ನಿವೇಶದಲ್ಲಿ, ಮಾಲ್ ಪಿನ್ಚನ್ ಮಹಾಶಯನ ಕಡೆಗೆ ತಿರುಗಿದನು.

"ಅದಕ್ಕೆ ಎಂದಿಗೂ ಅವಕಾಶ ಕೊಡುವುದಿಲ್ಲ. ಅವನ ಉತ್ತರಾಧಿಕಾರಿಗಳನ್ನು ಅಪಾರ ಐಶ್ವರ್ಯವಂತರನ್ನಾಗಿಮಾಡುವ ಈ ರಹಸ್ಯದ ಸ್ವಾಧೀನವು ನಿಮ್ಮ ಅಜ್ಜನಮೇಲೆ ಕೈಗೊಂಡ ಪ್ರತೀಕಾರದ ಒಂದು ಭಾಗ. ಅದಕ್ಕೆ ಇನ್ನೇನೂ ಬೆಲೆಯಿಲ್ಲ

ಒಂದು ಹಾಳೆಯನ್ನು ನಿಮ್ಮ ಹಿಡಿತಕ್ಕೆ ಪಡೆಯುವ ಬರಿಯ ಆಶೆಗಾಗಿ ನಿಮ್ಮ ಮಗಳನ್ನು ನೀವು ಮಾರಿಕೊಂಡಿದ್ದರೆ, ಅದರಲ್ಲಿ ನನ್ನ ಅಪರಾಧವೇನಿದೆ? ಅಲ್ಲಿ ಕುಳಿತಿದ್ದಾಳೆ ನಮ್ಮ ಒಡತಿ ಆಯಲಿಸ್ ಶಾಂತವಾಗಿ ನಿದ್ರಿಸುತ್ತ! ಕೊಂಚಕಾಲ ಹಿಂದೆ ಬಡಗಿ ಅವಳನ್ನು ಕಂಡಾಗ ಹೇಗೆ ಗರ್ವದಿಂದ ಇದ್ದಳೋ ಹಾಗೆಯೇ ಈಗಲೂ ಇರುತ್ತಾಳೆಯೆ ಇಲ್ಲವೆ ಎಂದುನ್ನು ಮ್ಯಾತ್ಯೂಮಾಲ್ ಪರೀಕ್ಷಿಸಿ ನೋಡಲಿ."

ಅವನು ಮಾತಾಡಿದನು; ಆಯಲಿಸ್ ಮೃದುವಾಗಿ, ಅಡಗಿಸಿಕೊಂಡು, ಒಳಗೊಳಗೇ ಸಮ್ಮತಿಯನ್ನು ಸೂಚಿಸಿ, ತನ್ನ ಒಡಲನ್ನು ಅವನ ಕಡೆಗೆ ಬಾಗಿಸಿ ಪ್ರತಿಕ್ರಿಯೆಯನ್ನು ತೋರಿದಳು; ಅವಳು ಬಾಗಿದ್ದು, ಮೆಲ್ಲನೆ ಗಾಳಿ ಬೀಸಿದ್ದನ್ನು ಸೂಚಿಸುವ ದೀವಟಿಗೆಯ ಜ್ವಾಲೆಯಂತಿತ್ತು. ಅವನು ತನ್ನ ಕೈಬೀಸಿ ಕರೆದನು; ತನ್ನ ಕುರ್ಚಿಯಿಂದ ಮೇಲಕ್ಕೆದ್ದು,– ನಿಶ್ಚಿತವಾದ, ಅಪರಿಹಾರ್ಯವಾದ, ತನ್ನ ಕೇಂದ್ರಸ್ಥಾನಕ್ಕೆ ಒಲೆಯುವ ರೀತಿಯಲ್ಲಿ– ಬಿಂಕದ ಆಯಲಿಸ್ ಅವನ ಬಳಿಸಾರಿದಳು. ಅವಳು ಹಿಂದಕ್ಕೆ ಹೋಗಬೇಕೆಂದು ಅವನು ಕೈಬೀಸಿದನು; ಅಂತೆಯೆ ಹಿಂದಕ್ಕೆ ಸರಿದು, ಆಯಲಿಸ್ ತನ್ನ ಕುರ್ಚಿಯಲ್ಲಿ ಕುಸಿದು ಕುಳಿತಳು.

"ಅವಳು ನನ್ನವಳು! ಅತ್ಯಂತ ಬಲಶಾಲಿಯಾದ ಪ್ರೇತಶಕ್ತಿಯ ಅಧಿಕಾರಬಲದಿಂದ ಅವಳು ನನ್ನವಳು!" ಎಂದನು ಮ್ಯಾತ್ಯೂಮಾಲ್.

ಈ ಐತಿಹ್ಯದ ಕತೆಯ ಮುಂದಿನ ಬೆಳವಣಿಗೆಯ ಮೇರೆಗೆ, ಕಳೆದು ಹೋದ ದಾಖಲೆಯನ್ನು ಕಂಡುಹಿಡಿಯುವ ಉದ್ದೇಶದಿಂದ ಬಡಗಿ ಉಚ್ಚರಿಸಿದ ಮಂತ್ರಗಳ ಕುರಿತು (ಮಂತ್ರಗಳೆಂದು ಅವನ್ನು ಕರೆಯಬಹುದಾದರೆ), ದೀರ್ಘವಾದ ಚಿತ್ರ ವಿಚಿತ್ರವಾದ ಹಾಗೂ ಒಮ್ಮೊಮ್ಮೆ ದಿಗಿಲು ಹುಟ್ಟಿಸುವ ನಿರೂಪಣೆಯಿದೆ. ಆಯಲಿಸಳ ಮನಸ್ಸನ್ನು ಒಂದು ಬಗೆಯ ದೂರ ದರ್ಶಕ ಸಾಮರ್ಥ್ಯವುಳ್ಳ ಮಾಧ್ಯಮವನ್ನಾಗಿ ಪರಿವರ್ತಿಸಿ, ಆ ಮೂಲಕ ಪಿನ್ಚನ್ನನೂ ತಾನೂ ಪ್ರೇತಪ್ರಪಂಚದ ಒಂದು ನಸುನೋಟವನ್ನು ಪಡೆಯಬಹುದೆಂಬುದು ಅವನ ಉದ್ದೇಶವಿದ್ದ ಹಾಗೆ ಕಾಣುತ್ತದೆ. ಅದೇ ಪ್ರಕಾರ, ಮೃತರಾದ ವ್ಯಕ್ತಿಗಳೊಂದಿಗೆ ಒಮ್ಮೆಂದೊಮ್ಮೆಗೆ ಒಂದು ವಿಧವಾದ ಅಸಮಗ್ರ ಸಂಪರ್ಕವನ್ನು ಏರ್ಪಡಿಸಿಕೊಳ್ಳುವುದರಲ್ಲಿ ಅವನು ಯಶಸ್ವಿಯಾದನು; ಅಷ್ಟೊಂದು ಅಮೂಲ್ಯವಾದ ರಹಸ್ಯವು ಈ ಭೂಲೋಕದ ಎಲ್ಲೆ ಕಟ್ಟನ್ನು ದಾಟಿಹೋಗಿ ಅವರ ಕೈಸೇರಿತ್ತು. ತಾನು ವಶ್ಯಸುಪ್ತಿಯಲ್ಲಿದ್ದ ಕಾಲದಲ್ಲಿ, ತನ್ನ ಪ್ರೇತಾವಾಹನೆಯಾದ ಸೂಕ್ಷ್ಮ ದೃಷ್ಟಿಗೆ ಕಂಡವರೆಂದು ಮೂವರ ಆಕೃತಿಗಳನ್ನು ಆಯಲಿಸ್ ವರ್ಣಿಸಿದಳು. ಒಬ್ಬನು ವಯಸ್ಸಾದ, ಘನತೆಯುಳ್ಳ,

ಅವಳು ಸ್ವಲ್ಪಮಟ್ಟಿಗೆ ಉದಾಸೀನವಾದ ಆದರೆ, ಸೌಮ್ಯ ಗಾಂಭೀರ್ಯದ ಧೋರಣೆಯನ್ನು ತಳೆದಳು; ಬಡಗಿಯ ಮುಖದ ಮೇಲೆ ಒಂದು ಬಗೆಯ ವಿಲಕ್ಷಣವಾದ ಮುಗುಳುನಗೆಯಿದ್ದು, ಚೆಂದದ ಆಯಲಿಸಳ ಹುಟ್ಟುಗುಣವಾದ ಗರ್ವವನ್ನು ಅದು ಪ್ರಚೋದಿಸಿತ್ತು. ತತ್ಕಾಲಕ್ಕೆ, ಹೀಗೆ ಮುಗಿತಾಯಗೊಂಡಿತು ಪಿನ್ಚನ್ ಮನೆತನದ ಅನ್ವೇಷಣ; ಅಲ್ಲದೆ, ಅದನ್ನು ಆಮೇಲೆ ಅನೇಕವೇಳೆ ನಡಸಿದ್ದರೂ, ಪಿನ್ಚನ್ ವಂಶಸ್ಥನು ಯಾವನಿಗೂ ಆ ಚರ್ಮಕಾಗದದ ಮೇಲೆ ಕಣ್ಣುಹಾಕುವ ಪ್ರಸಂಗ ಎಂದೂ ಒದಗಿಲ್ಲ.

ಆದರೆ, ಆ ಚೆಲುವೆ, ಕೋಮಲೆ, ಆದರೂ ಬಿಂಕದ ಆಯಲಿಸಳನ್ನು ನೆನೆದರೆ ಅಯ್ಯೋ ಎನಿಸುತ್ತದೆ. ತಾನು ಕನಸಿನಲ್ಲಿಯೂ ಕಾಣದಿದ್ದಂತಹ ಶಕ್ತಿಯೊಂದು ಅವಳ ಕನ್ಯಾವಸ್ಥೆಯಲ್ಲಿದ್ದ ಆತ್ಮವನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿತ್ತು. ಅವಳ ಇಚ್ಛಾಶಕ್ತಿಗಿಂತ ತೀರ ವಿರುದ್ಧವಾದ ಇಚ್ಛಾಶಕ್ತಿಯೊಂದು ತನ್ನ ವಿಕಟವೂ ಚಿತ್ರವಿಚಿತ್ರವೂ ಆದ ಆಜ್ಞೆಯನ್ನು ಇಷ್ಟಕ್ಕೆ ವಿರುದ್ಧವಾಗಿ ಮಾಡುವಂತೆ ಅವಳನ್ನು ಬಲಾತ್ಕರಿಸಿತ್ತು. ಅವಳ ತಂದೆಯಾದರೋ ತನ್ನ ಭೂಮಿಯನ್ನು ಎಕರೆಗಳಿಗೆ ಬದಲು ಮೈಲಿ ಮೈಲಿಗಳಾಗಿ ಅಳೆದುಕೊಳ್ಳಬೇಕೆಂಬ ಉತ್ಕಟಾಪೇಕ್ಷೆಗೆ ಬಲಿಯಾಗಿ ತನ್ನ ಮಗಳನ್ನೇ ಜೀವಂತಬಲಿಯಾಗಿ ಅರ್ಪಿಸಿಬಿಟ್ಟಿದ್ದನು; ಇದು ಆಮೇಲೆ ಸ್ಪಷ್ಟವಾಯಿತು. ಹೀಗೆ, ಆಯಲಿಸ್ ಪಿನ್ಚನ್ ತನ್ನ ಜೀವಿತಕಾಲದಲ್ಲಿ ಮಾಲನ ದಾಸಿಯಾಗಿದ್ದಳು; ದೇಹವನ್ನು ಬಂಧಿಸುವ ಸರಪಣಿಗಿಂತ ಸಾವಿರು ಪಾಲುಮಿಗಿಲಾಗಿ ಅಪಮಾನಕರವಾದ ಬಂಧನಕ್ಕೊಳಗಾಗಿದ್ದಳು ಅವಳು. ತನ್ನ ಸಾಧಾರಣವಾದ ಒಲೆಬೆಂಕಿಯ ಪಕ್ಕದಲ್ಲಿ ಕುಳಿತು ಅವನು ಕೈಬೀಸಿದರೆ ಸಾಕು, ಆ ಬಿಂಕದ ಶ್ರೀಮಂತಕನ್ಯೆ ತಾನು ಎಲ್ಲಿಯೆ ಇರಲಿ– ತನ್ನ ಕೋಣೆಯಲ್ಲಿಯೋ, ಇಲ್ಲವೆ ತನ್ನ ತಂದೆಯ ಘನ ಅತಿಥಿಗಳನ್ನು ಸಂತೋಷಪಡಿಸುತ್ತಲೋ, ಇಲ್ಲವೆ ಚರ್ಚಿನಲ್ಲಿ ಆರಾಧಿಸುತ್ತಲೋ– ಅಂತೂ ಅವಳು ಯಾವ ಸ್ಥಳದಲ್ಲಿಯೇ ಇರಲಿ, ಯಾವ ಉದ್ಯೋಗದಲ್ಲಿಯೆ ತೊಡಗಿರಲಿ, ಅವಳ ಚೈತನ್ಯವು ಅವಳ ಸ್ವಾಧೀನವನ್ನು ತಪ್ಪಿಸಿಕೊಂಡು ಮಾಲನಿಗೆ ಮಣಿಯುತ್ತಿತ್ತು. ಆಯಲಿಸ್, ನಗು! "ಎಂದು ಒಲೆಗೂಡಿನ ಪಕ್ಕದಲ್ಲಿ ಕುಳಿತಿದ್ದ ಮಾಲ್ ಹೇಳುವನು; ಅಥವಾ, ಹಾಗಲ್ಲದಿದ್ದರೆ, ಬಹುಶಃ ಒಂದು ಮಾತನ್ನೂ ಆಡದೆ ಹಾಗೆಂದು ತೀವ್ರವಾಗಿ ಇಚ್ಛಿಸುವನು. ಅದು ಪ್ರಾರ್ಥನಾಕಾಲವಾಗಲಿ, ಶವಸಂಸ್ಕಾರದ ಬಳಿಯಾಗಿರಲಿ, ಆಯಲಿಸ್ ಹುಚ್ಚುಹುಚ್ಚಾಗಿ ನಗಲೇಬೇಕಾಗಿದ್ದತು. "ಆಯಲಿಸ್ ದುಃಖಪಡು!" ಎಂದ ಕ್ಷಣದಲ್ಲಿಯೆ, ಹಬ್ಬದ ಕಿಚ್ಚಿನ ಮೇಲೆ ತಟ್ಟನೆ ಮಳೆ ಸುರಿದಂತೆ, ಸುತ್ತಮುತ್ತ

ಎನ್ನುವವರೆಗೂ, ಅದರಿಂದಲೇ ಅವನ ಉಸಿರು ಕಟ್ಟಿಹೋಗಬೇಕು. ಏಳು ಇಪ್ಪಾರಿನ ಮನೆಯನ್ನು ನೀವೇ ಇಟ್ಟುಕೊಳ್ಳಿ! ಅಪಾರ ಬೆಲೆಯನ್ನು ತೆತ್ತು ಕೊಂಡ ಆಸ್ತಿಯದು, ತನ್ನ ಮೇಲೆ ಎರಗಿದ ಶಾಪದ ಭಾರದಿಂದ ಅದು ಕುಸಿದುಹೋಗಿದೆ; ಅದನ್ನು ಸರದಾರರ ಸಂತತಿಯವರಿಂದ ಈಗಲೇ ತೆಗೆದುಕೊಂಡವರುಂಟೆ!" ಎಂದನವನು

ಪಿನ್ಚನ್ ಮಹಾಶಯನು ಮಾತಾಡಲು ಪ್ರಯತ್ನಿಸಿದನು; ಆದರೆ ಭೀತಿಯಿಂದಲೂ ಭಾವೋದ್ರೇಕದಿಂದಲೂ ಕೂಡಿ, ಗಂಟಲಿನಲ್ಲಿ ಗೊರಗೊರ ಎಂದು ಗೊಣಗಲು ಮಾತ್ರ ಅವನಿಗೆ ಸಾಧ್ಯವಾಯಿತು. ಬಡಗಿ ಮುಗುಳುನಗೆ ನಕ್ಕನು.

"ಆಹಾ, ಪೂಜ್ಯ ಸ್ವಾಮಿಗಳೇ! ಕಡೆಗೂ, ಮುದಿ ಮಾಲನ ರಕ್ತ ನಿಮಗೆ ಕುಡಿಯಲು ದೊರಕಿತು!" ಎಂದು ಹಂಗಿಸಿ ನುಡಿದನು ಅವನು.

"ಎಲವೋ, ಮನುಷ್ಯಾಕಾರದ ಸೈತಾನ್! ನನ್ನ ಕಂದನಮೇಲೆ ಇನ್ನೂ ಏಕೆ ನಿನ್ನ ಆಡಳಿತ?" ಎಂದು, ಕಟ್ಟಿಹೋಗಿದ್ದ ಮಾತು ಹೊರಡುವಂತಾದಾಗ ಅವನು ಕೂಗಿದನು: "ನನ್ನ ಮಗಳನ್ನು ನನಗೆ ಹಿಂದಕ್ಕೆ ಕೊಡು! ಆಮೇಲೆ ನಿನ್ನ ದಾರಿ ಹಿಡಿದುಹೋಗು; ಮರಳಿ ನಾವಿಬ್ಬರೂ ಎಂದೆಂದಿಗೂ ಸಂಧಿಸುವುದು ಬೇಡ!"

"ನಿಮ್ಮ ಮಗಳು! ಹಾಗೆಂದರೇನು, ಅವಳು ಬಹುಮಟ್ಟಿಗೆ ನನ್ನವಳು! ಆದರೂ ಕೂಡ, ಚೆಂದದ ಒಡತಿ ಆಯಲಿಸರವರೊಂದಿಗೆ ತುಂಬ ಕಠಿನವಾಗಿ ವರ್ತಿಸಲು ನನಗೆ ಇಷ್ಟವಿಲ್ಲ: ಆದ್ದರಿಂದ ಅವಳನ್ನು ನಿಮ್ಮ ವಶದಲ್ಲಿಯೆ ಬಿಟ್ಟಿರುತ್ತೇನೆ; ಆದರೆ, ಬಡಗಿ ಮಾಲನನ್ನು ನೆನೆಯುವ ಸಂದರ್ಭ ಅವಳಿಗೆ ಎಂದಿಗೂ ಒದಗದು ತಂಬ ಭರವಸೆಯನ್ನು ನಾನು ನಿಮಗೆ ಕೊಡೆನು" ಎಂದು ಹೇಳಿದ ಮ್ಯಾತ್ಯೂಮಾಲ್.

ಮೇಲ್ಮುಖವಾದ ಚಲನೆಯೊಂದಿಗೆ ಅವನು ಕೈಬೀಸಿದನು; ಅದೇ ರೀತಿ ಕೆಲವು ಸಲ ಕೈಯಾಡಿಸಿದ ಮೇಲೆ, ಚೆಲುವೆ ಆಯಲಿಸ್ ಪಿನ್ಚನ್ ತನ್ನ ಅಪೂರ್ವವಾದ ಸುಷುಪ್ತಿಯಿಂದ ಎಚ್ಚೆತ್ತಳು. ತನ್ನ ಸುಪ್ತಿದರ್ಶನದ ಅನುಭವದ ಲವಲೇಶ ನೆನಪೂ ಇಲ್ಲದೆ ಎಚ್ಚೆತ್ತಳು; ಬೆಂಕಿಗೂಡಿನ ತಗ್ಗುತ್ತಿರುವ ಉರಿ ಹೊಗೆಕೊಳವೆಯೊಳಕ್ಕೆ ಕಂಪಿಸುತ್ತ ಮೇಲೇರುವಷ್ಟು ಅತ್ಯಲ್ಪ ಕಾಲಾವಧಿಯಲ್ಲಿ, ಕ್ಷಣಕಾಲದ ಮಟ್ಟಿಗೆ ಧ್ಯಾನದಲ್ಲಿ ಮೈಮರೆತು ಮತ್ತೆ ನಿಜಪ್ರಪಂಚದ ಅರಿವಿಗೆ ಹಿಂದಿರುಗುವಂತೆ, ಅವಳು ಎಚ್ಚೆತ್ತಳು. ಮ್ಯಾತ್ಯೂಮಾಲನನ್ನು ಗುರುತಿಸಿದ ಕೂಡಲೆ,

ಮಳೆಯನ್ನು ಹೊಡೆದುಕೊಂಡುಬಂದು ಅವಳ ರಕ್ಷಣೆಸಾಲದ ಎದೆಯನ್ನು ಬಡಿಯಿತು; ಅವಳು ಕೆಸರುಹಾದಿಗಳಲ್ಲಿ ನಡೆದುಹೋದಂತೆ, ಅವಳ ಸಾಟೀನು ಜೋಡು ಒದ್ದೆ ಮುದ್ದೆಯಾದುವು; ಮಾರನೆಯ ದಿನವೆ, ನೆಗಡಿ; ಬೇಗನೆ, ಮನೆಮಾಡಿಕೊಂಡಿತು ಕೆಮ್ಮು; ಕೂಡಲೆ ಜ್ವರಸೂಚಿಸುವ ಕೆನ್ನೆ, ಸವೆದುಹೋದ ಮೈ; ಈ ಸ್ಥಿತಿಯಲ್ಲಿ ಅವಳು ಹಾರ್ಪ್ಸಿಕಾರ್ಡ್ ವಾದ್ಯದ ಪಕ್ಕದಲ್ಲಿ ಕುಳಿತು, ಮನೆಯನ್ನೆಲ್ಲಾ ಸಂಗೀತದಿಂದ ತುಂಬಿದಳು! ಆ ಸಂಗೀತದಲ್ಲಿ ಸ್ವರ್ಗದ ದಿವ್ಯಗಾಯಕರ ರಾಗ ಹೊಳಲುಗೂಡುತ್ತಿತ್ತು; ಓ, ಏನು ಸಂತೋಷ! ಆಯಲಿಸ್ ಕಡೆಯ ಸಲ ಅಪಮಾನವನ್ನು ಸಹಿಸಿದ್ದಳು! ಓ, ಇಮ್ಮಡಿಯ ಸಂತೋಷದ ಸಂಗತಿ! ಆಯಲಿಸ್ ತಾನು ಭೂಮಿಯ ಮೇಲೆ ಹುಟ್ಟಿ ಮಾಡಿದ್ದ ಒಂದು ಪಾಪಕೃತ್ಯಕ್ಕಾಗಿ ಪಶ್ಚಾತ್ತಾಪಪಟ್ಟಿದ್ದಳು; ಅವಳಲ್ಲಿ ಇನ್ನೆಂದೂ ಆ ಬಿಂಕವಿರದು!

ಪಿನ್ಚನ್ ವಂಶಸ್ಥರೆಲ್ಲ ಸೇರಿ ಆಯಲಿಸಳ ಶವಸಂಸ್ಕಾರವನ್ನು ವೈಭವದಿಂದ ಮಾಡಿದರು. ಬಂಧುಬಳಗವೆಲ್ಲಾ ಅಲ್ಲಿದ್ದರು; ಊರಿನ ಗಣ್ಯ ಮಹನೀಯರ ಸಮುದಾಯವೆಲ್ಲ ನೆರೆದಿತ್ತು. ಆದರೆ, ಮ್ಯಾತ್ಯೂಮಾಲ್ ಮೆರವಣಿಗೆಯ ಕೊನೆಯಲ್ಲಿದ್ದ; ತನ್ನ ಹೃದಯವನ್ನೇ ಇಬ್ಭಾಗವಾಗಿ ಕಡಿದುಕೊಳ್ಳುತ್ತಿರುವನೋ ಎಂಬಂತೆ ಅವನು ಹಲ್ಲು ಕಡಿಯುತ್ತಿದ್ದ; ಎಂದೇ ಆಗಲಿ, ಹೆಣದ ಹಿಂದೆ ನಡೆದುಹೋದವರಲ್ಲಿ ಅತ್ಯಂತ ವಿಷಣ್ಣನಾಗಿ, ದುಃಖಿಯಾಗಿ, ಕಾಣುತ್ತಿದ್ದವನೆಂದರೆ ಅವನು! ಆಯಲಿಸಳ ಸೊಕ್ಕು ಮುರಿಯುವುದಷ್ಟೆ ಅವನ ಉದ್ದೇಶವಾಗಿತ್ತು, ಕೊಲ್ಲುವುದಿಲ್ಲ; ಆದರೆ, ಅವನು ತನ್ನ ಋಕ್ಷವಾದ ಹಿಡಿತಕ್ಕೆ ಒಂದು ಹೆಣ್ಣಿನ ಸೂಕ್ಷ್ಮವಾದ ಜೀವವನ್ನು ಸಿಕ್ಕಿಸಿಕೊಂಡು, ಅದರೊಂದಿಗೆ ಆಟವಾಡಿದ್ದನು– ಅವಳು ಸತ್ತುಹೋದಳು!

* * * *

ಇದ್ದವರೆಲ್ಲರ ನಲಿವನ್ನೂ ಅಡಗಿಸುತ್ತಾ ಬಳಬಳನೆ ಸುರಿಯುವುದುಬ ಅವಳ ಕಣ್ಣೀರು. "ಆಯಲಿಸ್, ಕುಣಿ!" ಎಂದೊಡನೆಯೆ ಕುಣಿಯುವಳವಳು; ಆದರೆ, ಹಾಗೆ ಕುಣಿಯುತ್ತಿದ್ದುದು, ಪರದೇಶಗಳಲ್ಲಿ ಅವಳು ಕಲಿತಿದ್ದ ರಾಜಾಸ್ಥಾನಯೋಗ್ಯವಾದ ನೃತ್ಯವಲ್ಲ, ಹಳ್ಳಿಗಾಡಿನ ವಿನೋದಕೂಟಗಳಲ್ಲಿ ಚುರುಕುಹುಡುಗಿಯರಿಗೆ ಯೋಗ್ಯವಾದ ಯಾವುದೋ ಒಂದು ಬಗೆಯ ನೆಗೆತ ಕುಣಿತ, ಆಯಲಿಸಳನ್ನು ನಾಶಮಾಡುವುದಾಗಲಿ, ಇಲ್ಲವೆ ಅವಳ ದುಃಖಪರಂಪರೆಗೆ ರುದ್ರನಾಟಕದ ಸೊಬಗಿನ ಕಿರೀಟವಿಡುವಂತಹ ಯಾವುದೇ ಮಾಟವಿದ್ಯೆಯ ಅಥವಾ ಇತರ ಬಗೆಯ ಭಾರಿ ಕೆಡುಕನ್ನು ಉಂಟು ಮಾಡುವುದಾಗಲಿ ಮಾಲನ ಪ್ರೇರಣೆಯಾಗಿರಲಿಲ್ಲ; ಆದರೆ, ತುಚ್ಛವಾದ, ಅನುದಾರವಾದ ತಿರಸ್ಕಾರವನ್ನು ಅವಳ ಮೇಲೆ ಹೇರುವುದೇ ಅವನ ಉದ್ದೇಶವಾಗಿತ್ತು. ಈ ರೀತಿ ಜೀವನದ ಘನತೆಯೆಲ್ಲವೂ ಹಾಳಾಗಿಹೋಯಿತು. ತಾನು ಅತ್ಯಂತ ಕ್ಷುದ್ರವಾಗಿ ಪರಿಣಮಿಸಿರುವೆನೆಂಬ ಭಾವನೆ ಅವಳಿಗುಂಟಾಗಿ, ಯಾವುದಾದರೂ ಒಂದು ಹುಳುವಿನೊಂದಿಗೆ ಸ್ವಭಾವವಿನಿಮಯಮಾಡಿಕೊಳ್ಳಲು ಅವಳು ಹಂಬಲಿಸಿದಳು.

ಒಂದು ಸಂಜೆ, ಒಂದು ವಿವಾಹೋತ್ಸವದಲ್ಲಿ (ಆದರೆ ಅದು ಅವಳದ್ದಲ್ಲ; ಏಕೆಂದರೆ, ಆತ್ಮನಿಗ್ರಹವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದ ಅವಳು ಮದುವೆಯಾಗುವುದು ಪಾಪಕಾರ್ಯವೆಂದು ಭಾವಿಸುತ್ತಿದ್ದಳು), ಅವಳ ಅದೃಶ್ಯನಾದ ದುಷ್ಟಪ್ರಭು ಬಡ ಆಯಲಿಸಳನ್ನು ಕರೆದನು; ನವಿರಾದ ಬಿಳಿಯ ಉಡುಪನ್ನೂ ಸಾಟೀನು ಬಟ್ಟೆಯ ಜೋಡನ್ನೂ ಧರಿಸಿದ್ದ ಅವಳು ಬೀದಿಯುದ್ದಕ್ಕೂ ನಡೆದುಕೊಂಡು ಒಬ್ಬ ದುಡಿಮೆಗಾರನ ಕೀಳುನಿವಾಸಕ್ಕೆ ಆತುರಾತುರವಾಗಿ ಹೋಗಬೇಕಾದ ನಿರ್ಬಂಧಕ್ಕೆ ಕಟ್ಟುಬಿದ್ದಳು. ಆ ಮನೆಯೊಳಗೆ ನಗುವಿನ ಕಿಲಕಿಲವೂ ಒಳ್ಳೆಯ ಉಲ್ಲಾಸವೂ ತುಂಬಿದ್ದುವು; ಏಕೆಂದರೆ, ಅಂದಿನಿರುಳು ಮ್ಯಾತ್ಯೂಮಾಲ್ ಆ ದುಡಿಮೆಗಾರನ ಮಗಳನ್ನು ಮದುವೆಯಾಗುವವನಿದ್ದು, ಬಿಂಕದ ಆಯಲಿಸಳನ್ನು ತನ್ನ ಮದುವಣಿಗಿತ್ತಿಯ ಪರಿಚಾರಿಕೆಮಾಡಲು ಕರಸಿಕೊಂಡಿದ್ದನು. ಅವಳು ಹಾಗೆಯೆ ಮಾಡಿದಳು; ಅವರಿಬ್ಬರೂ ವಿವಾಹವಾಗಿ ಒಂದುಗೂಡಿದಾಗ, ಆಯಲಿಸ್ ಮೋಹನಿದ್ರೆಯಿಂದ ಎಚ್ಚೆತ್ತಳು. ಆದರೂ, ಹಿಂದಿನ ಬಿಂಕವನ್ನು ಬಿಟ್ಟು, ನಮ್ರಳಾಗಿ, ಖಿನ್ನತೆಯಲ್ಲಿ ಮುಳುಗಿದ ಮುಗುಳ್ನಗೆಯಿಂದ ಕೂಡಿ, ಮಾಲನ ಹೆಂಡತಿಯನ್ನು ಮುದ್ದಿಟ್ಟು, ತನ್ನ ದಾರಿಯನ್ನು ಹಿಡಿದುಹೋದಳು. ಅಂದಿನಿರುಳ ಹವಾ ಬಿರುಸಾಗಿತ್ತು; ಆಗ್ನೇಯದ ಗಾಳಿ ಹಿಮಗಡ್ಡೆ ಬೆರೆತ

ಆದರೆ ಅದು ಶರೀರದ ವ್ಯಕ್ತಸ್ವರೂಪಕ್ಕೆ ಸಹಜವಾಗಿ ಸೇರಿದ್ದಂತೆ ಕಾಣುತ್ತಿರಲಿಲ್ಲ. ಒಂದೇ ಒಂದು ಸಲ ಕೈಬೀಸಿ, ಅದಕ್ಕನುಗುಣವಾಗಿ ತನ್ನ ಇಚ್ಛಾಶಕ್ತಿಯ ಒಂದು ಪ್ರಯತ್ನದಿಂದ ಅವನು ಫೀಬೆಯ ಸ್ವತಂತ್ರವಾದ, ಕನ್ಯಾವಸ್ಥೆಯ ಚೇತನದ ಮೇಲೆ ತನ್ನ ಸ್ವಾಮ್ಯವನ್ನು ಸಂಪೂರ್ಣಗೊಳಿಸಬಲ್ಲವನಾಗಿದ್ದನು: ಮಾತ್ರವಲ್ಲ, ಒಳ್ಳೆಯ, ಪರಿಶುದ್ಧವಾದ, ಸರಳ ಸ್ವಭಾವದ ಮುಗ್ಧ ಹೆಣ್ಣು ಮಗುವಿನ ಮೇಲೆ ಅವನು ಒಂದು ಪ್ರಭಾವವನ್ನು ಸ್ಥಾಪಿಸಬಲ್ಲವನಾಗಿದ್ದನು; ಹಾಗೆ ಮಾಡಿದ್ದರೆ, ಅವನ ಕಟ್ಟುಕತೆಯ ಬಡಗಿ ದುರದೃಷ್ಟದ ಆಯಲಿಸಳ ಮೇಲೆ ಪಡೆದು ಪ್ರಯೋಗಿಸಿದ್ದಂತಹ ಪ್ರಭಾವದಷ್ಟೇ ಅಪಾಯಕಾರಿಯೂ ವಿನಾಶಕಾರಿಯೂ ಆಗಿರುತ್ತಿತ್ತು ಆ ಪ್ರಭಾವ.

ಏಕಕಾಲದಲ್ಲಿ ಚಿಂತನಪರವೂ ಕ್ರಿಯಾಶೀಲವೂ ಆದ ಹಾಲ್‌ಗ್ರೇವನ ಮನಃಪ್ರವೃತ್ತಿಯಂತಹದಕ್ಕೆ ಮಾನವಚೇತನದ ಮೇಲೆ ಪ್ರಭುತ್ವವನ್ನು ಪಡೆಯುವುದಕ್ಕಿಂತ ಹೆಚ್ಚಿನ ಪ್ರಲೋಭನ ಬೇರೆ ಯಾವುದೂ ಇಲ್ಲ; ಅದೇ ರೀತಿ, ಪ್ರಾಯದ ಹುಡುಗಿಯೊಬ್ಬಳ ಭವಿಷ್ಯದ ನಿರ್ಧಾರಕನಾಗುವುದಕ್ಕಿಂತ ಹೆಚ್ಚು ಆಕರ್ಷಕವಾದ ಭಾವನೆ ತರುಣನೊಬ್ಬನಿಗೆ ಬೇರೆ ಯಾವುದೂ ಇರಲಾರದು. ಆದ್ದರಿಂದ, ಅವನ ಸ್ವಭಾವ ಮತ್ತು ವಿದ್ಯಾಭ್ಯಾಸಗಳಲ್ಲಿನ ಕುಂದುಕೊರತೆಗಳು ಏನೇ ಇರಲಿ, ಮತದ ಬಗೆಗೂ ಸಂಸ್ಥೆಗಳ ಬಗೆಗೂ ಅವನಿಗಿದ್ದ ತಿರಸ್ಕಾರಬುದ್ಧಿ ಒತ್ತಟ್ಟಿಗಿರಲಿ,– ಇನ್ನೊಬ್ಬರ ವ್ಯಕ್ತಿತ್ವಕ್ಕೆ ಗೌರವಕೊಡುವ ಅಪೂರ್ವವೂ ಉದಾತ್ತವೂ ಆದ ಗುಣ ಆ ಛಾಯಾ ಚಿತ್ರಕಲಾವಿದನಲ್ಲಿ ಇದ್ದಿತೆಂಬುದನ್ನು ನಾವು ಒಪ್ಪಬೇಕು. ಅವನು ಮನಸ್ಸು ಮಾಡಿದ್ದರೆ, ಉಳಿದಿದ್ದ ಒಂದು ಕುಣಿಕೆಯನ್ನು ಬಿಗಿಮಾಡಿ ಫೀಬೆಯ ಮೇಲಿನ ತನ್ನ ವಶೀಕರಣವನ್ನು ನಿವಾರಿಸಲಾಗದಂತೆ ಮಾಡಬಹುದಾಗಿತ್ತು; ಆದರೆ ಹಾಗೆ ಮಾಡದೆ ತನ್ನನ್ನು ತಾನು ತಡೆದುಕೊಂಡನು; ಎಂದೆಂದೂ ಅದು ವಿಶ್ವಾಸಾರ್ಹವಾಗಿರುವುದೆಂಬುದನ್ನೂ ಒಪ್ಪಿಕೊಳ್ಳೋಣ.

ಅವನು ತನ್ನ ಕೈಯನ್ನು ಮೇಲಕ್ಕೆತ್ತಿ ಸ್ವಲ್ಪ ಆಡಿಸಿದನು.

"ಪ್ರಿಯ ಮಿಸ್ ಫೀಬೇ, ನೀನು ನಿಜವಾಗಿ ನನ್ನ ಗರ್ವವನ್ನು ಇಳಿಸಿಬಿಟ್ಟಿದ್ದೀಯೆ!" ಎಂದು ಅವಳನ್ನು ಕುರಿತು ಅರ್ಧವ್ಯಂಗ್ಯವಾಗಿ ಮುಗುಳ್ನಗೆ ನಗುತ್ತ ಉದ್ಗಾರತೆಗೆದನು: "ಅಯ್ಯೋ ನನ್ನ ಬಡ ಕತೆಯೆ, ಅದು ಸ್ಪಷ್ಟಾತಿ ಸ್ಪಷ್ಟ! 'ಗೋಡಿ' (Godey) ಅಥವಾ 'ಗ್ರ್ಯಾಹಂ' (Graham ) ಪತ್ರಿಕೆಗಳಲ್ಲಿ ಯಾವುದಕ್ಕೂ ಅದು ಸರಿಹೋಗುವುದಿಲ್ಲ! ವೃತ್ತಪತ್ರಿಕೆಯ ವಿಮರ್ಶಕರು ಯಾವುದನ್ನು ಎಂಥ ಉಜ್ಜ್ವಲವಾದ, ಶಕ್ತಿಯುತವಾದ, ಕಲ್ಪನಾ ಪೂರ್ಣವಾದ, ಕರುಣಾಜನಕವಾದ,

# ೧೪. ಫೀಬೆಯ ಬೀಳ್ಕೊಡಿಗೆ

ತರುಣ ಗ್ರಂಥಕರ್ತನಿಗೆ ಸಹಜವಾದ ಹುರುಪಿನಿಂದಲೂ ತನ್ಮಯತೆಯಿಂದಲೂ ಹಾಲ್‌ಗ್ರೇವ್ ತನ್ನ ಕಥೆಯಲ್ಲಿ ಮುಳುಗಿ, ಬೆಳಸಬಹುದಾದ ಹಾಗೂ ಕ್ರಿಯಾತ್ಮಕವಾದ ದೃಷ್ಟಾಂತಗಳನ್ನು ಕೊಡಬಹುದಾದ ಕಥಾಭಾಗಗಳಿಗೆ ಬೇಕಾದಷ್ಟು ಕ್ರಿಯೆಯನ್ನು ತುಂಬಿದ್ದನು. ಕಥೆಯನ್ನು ಕೇಳುತ್ತಿದ್ದ ತನ್ನ ಶ್ರೋತೃವಿನ ಇಂದ್ರಿಯಗಳ ಮೇಲೆ ಒಂದು ವಿಧದ ಗಮನಾರ್ಹವಾದ ನಿದ್ದೆಯ ಜೊಂಪು ಕವಿದಿರುವುದನ್ನು ಆತ ಈಗ ಕಂಡನು (ಬಹುಶಃ ನಮ್ಮ ವಾಚಕಮಹಾಶಯನಿಗೆ ಈಗ ಬಂದಿರಬಹುದಾದಂತಹ ತೂಕಡಿಕೆಗಿಂತ ಅದು ಸಂಪೂರ್ಣವಾಗಿ ಭಿನ್ನವಾದುದು). ವಶ್ಯಸುಪ್ತಿಯನ್ನು ಉಂಟುಮಾಡುತ್ತಿದ್ದ ಬಡಗಿಯ ಚಿತ್ರವು ಫೀಬೆಯ ಬಗೆಗಣ್ಣ ಮುಂದೆ ಮೈತಳೆದು ನಿಲ್ಲುವಂತೆ ಮಾಡಬೇಕೆಂಬ ಉದ್ದೇಶದಿಂದ ಅವನು ತೋರುತ್ತಿದ್ದ ರಹಸ್ಯ ರೀತಿಯ ಆಂಗಿಕ ಅಭಿನಯದ ಪರಿಣಾಮವಾಗಿತ್ತು ಅದು; ಅದರಲ್ಲಿ ಸಂದೇಹವಿರಲಿಲ್ಲ. ಅವಳ ಕಣ್ಣುಗಳ ಮೇಲೆ ಎವೆಗಳು ಜೋತುಬಿದ್ದಿದ್ದುವು– ಕ್ಷಣಮಾತ್ರ ಅವು ಮೇಲಕ್ಕೆ ತೆರೆದುಕೊಂಡು, ಸೀಸದ ಭಾರದಿಂದ ಎಂಬಂತೆ ಮತ್ತೆ ಇಳಿಯಬಿದ್ದುವು; ಆ ಸ್ಥಿತಿಯಲ್ಲಿ ಅವಳು ಅವನ ಕಡೆಗೆ ನಸುಬಾಗಿ, ಅವನ ಉಸಿರಾಡಕ್ಕೆ ಅನುಗುಣವಾಗಿ ತನ್ನದನ್ನು ಕ್ರಮಪಡಿಸಿಕೊಳ್ಳುತ್ತಿರುವಂತೆ ಕಂಡುಬಂದಳು. ತನ್ನ ಹಸ್ತಪ್ರತಿಯನ್ನು ಸುರುಳಿಸುತ್ತಿಕೊಳ್ಳುವಾಗ ಹಾಲ್‌ಗ್ರೇವ್ ಅವಳನ್ನು ದೃಷ್ಟಿಸಿನೋಡಿದನು; ಮತ್ತು ಆ ವಿಲಕ್ಷಣವಾದ ಮನೋವೈಜ್ಞಾನಿಕ ಸ್ಥಿತಿಯ ಪ್ರಾರಂಭಾವಸ್ಥೆಯನ್ನು ಗುರುತಿಸಿದನು; ಫೀಬೆಗೆ ತಾನೆ ತಿಳಿಸಿದ್ದಂತೆ, ಆ ಸ್ಥಿತಿಯನ್ನುಂಟು ಮಾಡುವ ಸಾಧಾರಣಶಕ್ತಿಗಿಂತ ಹೆಚ್ಚಿನ ಶಕ್ತಿಯನ್ನು ಅವನು ಹೊಂದಿದ್ದನು. ಅವಳಮೇಲೆ ಒಂದು ತೆರೆ ಕವಿಯತೊಡಗಿತ್ತು; ಅದರ ಮೂಲಕ ಅವಳು ಅವನನ್ನು ಮಾತ್ರ ನೋಡಬಲ್ಲವಳಾಗಿ, ಅವನ ಆಲೋಚನೆಗಳು ಮತ್ತು ರಾಗಭಾವಗಳಲ್ಲಿ ಮಾತ್ರ ಜೀವಿಸಿರಬಲ್ಲವಳಾಗಿದ್ದಳು. ಆ ಪ್ರಾಯದ ಹುಡುಗಿಯಮೇಲೆ ತನ್ನ ಕಿರುನೋಟವನ್ನು ಅವನು ಕೀಲಿಸಿದ ಹಾಗೆಲ್ಲಾ, ಅನೈಚ್ಛಿಕವಾಗಿ ಅದು ಹೆಚ್ಚು ಹೆಚ್ಚು ಶಕ್ತಿಯುತವಾಯಿತು; ಅವನ ಭಾವಭಂಗಿಯಲ್ಲಿ ಸ್ವಸಾಮರ್ಥ್ಯದ ಪ್ರಜ್ಞೆಯಿದ್ದು, ಅಷ್ಟೇನೂ ಪ್ರೌಢವಲ್ಲದ ಅವನ ಶರೀರಾಕೃತಿಗೆ ಒಂದು ಗಾಂಭೀರ್ಯವನ್ನು ನೀಡಿತ್ತು;

ಚಿತ್ರತರವಾಯ್ತು; ಹಣ್ಣಿನ ಗಿಡಗಳು, ಪೊದೆಗಿಡಗಳು, ಹೂಗಿಡಗಳು– ಇವನ್ನೆಲ್ಲಾ ಕಗ್ಗತ್ತಲೆಯ ಅಸ್ಪಷ್ಟತೆಯೊಂದು ಆವರಿಸಿತ್ತು–ಸರ್ವಸಾಧಾರಣ ಲಕ್ಷಣಗಳು– ಹಗಲುಹೊತ್ತಿನಲ್ಲಿ, ಅವೆಲ್ಲಾ ಒಟ್ಟುಗೂಡಲು ಶತಮಾನ ಕಾಲದ ಹೊಲಸುಬದುಕೇ ಬೇಕೇನೋ ಎನಿಸುವಂತಿದ್ದ ಲಕ್ಷಣಗಳು– ಒಂದು ಅದ್ಭುತರಮ್ಯ ಮೋಹಕತೆಯಿಂದ ಈಗ ಮಾರ್ಪಾಟುಹೊಂದಿದ್ದುವು. ತುಸ ಕಡಲುಗಾಳಿ ಅದು ಹೇಗೋ ಇತ್ತ ನುಸುಳಿಬಂದು ಎಲೆಗಳನ್ನು ಅಲುಗಾಡಿಸಿದಾಗಲೆಲ್ಲಾ, ಅವುಗಳ ನಡುವೆ ನೂರು ರಹಸ್ಯಪೂರ್ಣ ವರ್ಷಗಳು ತಮ್ಮ ತಮ್ಮಲ್ಲಿ ಪಿಸುಗುಟ್ಟಿಕೊಳ್ಳುತ್ತಿದ್ದುವು. ಚಿಕ್ಕ ಬೇಸಗೆಮನೆಯ ಮೇಲೆ ಚಾವಣಿಯಂತೆ ಕವಿದಿದ್ದ ಎಲೆಗುಂಪಲ ನಡುನಡುವೆ ಬೆಳುದಿಂಗಳು ಹಿಂದಕ್ಕೂ ಮುಂದಕ್ಕೂ ಮಿನುಗುಟ್ಟುತ್ತಾ, ಕಪ್ಪು ನೆಲ, ಮೇಜ, ಗುಂಡು ಬೆಂಚು–ಇವುಗಳ ಮೇಲೆ ಬೆಳ್ಳಿ ಬೆಳಕಾಗಿ ಬಿದ್ದಿದ್ದುವು; ಹಾಗೆ ಬೀಳುವಾಗ,–ರೆಂಬೆಗಳ ನಡುವಣ ಚಂಚಲವಾದ ಕಂಡಿಗಳೂ ತೆರಪುಗಳೂ ಮಿನುಗಾತಕ್ಕೆ ಅವಕಾಶಕೊಡುತ್ತಿದ್ದುವೋ ಇಲ್ಲವೋ ಎಂಬುದಕ್ಕೆ ಅನುಗುಣವಾಗಿ,– ಅದು ನಿರಂತರ ಪರಿವರ್ತನಲೀಲೆಯನ್ನು ಮೆರೆಯುತ್ತಿತ್ತು.

ಜ್ವರದ ಬೇಗೆಯಂತಿದ್ದ ಹಗಲು ಮುಗಿದ ಮೇಲೆ ವಾತಾವರಣ ಅದೆಷ್ಟು ಮಧುರವಾಗಿ ತಂಪಾಗಿತ್ತೆಂದರೆ, ಹಿಮಗಡ್ಡೆಯ ಶೈತ್ಯದ ಹದವನ್ನು ಕೊಟ್ಟ ಇಬ್ಬನಿಯನ್ನೂ ದ್ರವರೂಪದ ತಿಂಗಳ ಬೆಳಕನ್ನೂ ಬೇಸಗೆಯ ಬೈಗು ಬೆಳ್ಳಿಯ ಪಾತ್ರೆಯಿಂದ ಚಿಮುಕಿಸುತ್ತಿದೆಯೇನೋ ಎಂದು ಕಲ್ಪಿಸಿಕೊಳ್ಳಬಹುದಾಗಿತ್ತು. ಅಲ್ಲಲ್ಲಿ ಈ ಹೊಸತನದ ಕೆಲವು ಹನಿಗಳು ಮಾನವ ಹೃದಯದಮೇಲೆ ಚೆದರಿಬಿದ್ದು, ಅದಕ್ಕೆ ಮರಳಿ ಯೌವನವನ್ನೂ ಪ್ರಕೃತಿಯ ಚಿರಂತನ ಯೌವನದೊಂದಿಗೆ ಸಹಾನುಭೂತಿಯನ್ನೂ ನೀಡಿದುವು. ಅಂಥ ಹೃದಯವುಳ್ಳವರಲ್ಲಿ ಕಲಾವಿದನೂ ಒಬ್ಬನಾಗಿದ್ದು, ಅವನು ಆ ಪುನರುಜ್ಜೀವನಗೊಳಿಸುವ ಪ್ರಭಾವಕ್ಕೆ ಒಳಗಾಗಿದ್ದನು. ಮಾನವರಲ್ಲಿ ಪರಸ್ಪರ ನಡೆಯುವ ಕಠಿನವಾದ ಕಾದಾಟದ ಸುಳಿಗೆ ಅವನು ಬಹುಮುಂಚೆಯೆ ಸಿಲುಕಬೇಕಾಗಿ ಬಂದು, ತಾನು ಯುವಕನೆಂಬುದನ್ನೆ ಅವನು ಕೆಲವುವೇಳೆ ಮರೆತುಬಿಟ್ಟಿದ್ದ; ತಾನು ಇನ್ನೂ ಎಷ್ಟು ಯೌವನಶಾಲಿಯಾಗಿದ್ದೇನೆ ಎಂದು ಅವನು ಭಾವಿಸಿಕೊಳ್ಳುವಂತೆ ಮಾಡಿತು ಆ ಪ್ರಭಾವ.

“ಇಷ್ಟೊಂದು ಚೆಂದವಾದ ಸಂಜೆ ಬರುವುದನ್ನು ನಾನೆಂದೂ ಗಮನಿಸಿಯೇ ಇರಲಿಲ್ಲ, ಈ ಗಳಿಗೆಯಲ್ಲಿ ನನಗಿರುವಷ್ಟು ಸೌಖ್ಯ ಎನ್ನಬಹುದಾದ ಅನುಭವವನ್ನು ನಾನೂ ಎಂದೂ ಅನುಭವಿಸಿರಲಿಲ್ಲ, ಎಂದು ನನಗೆ ತೋರುತ್ತದೆ. ಏನೇ ಹೇಳಿದರೂ, ನಾವು ವಾಸಿಸುವ ಈ ಪ್ರಪಂಚ ಎಷ್ಟು ಒಳ್ಳೆಯದು! ಎಷ್ಟು

ಸ್ವೋಪಜ್ಞನಾದ ಸಮಾಪ್ತಿ ಎಂದು ಅಭಿಪ್ರಾಯಪಡುತ್ತಾರೆ ಎಂದು ನಾನು ಆಶಿಸಿದ್ದನೋ ಅದು ನಿನಗೆ ನಿದ್ರೆ ಬರಿಸಿತು ಎಂಬುದನ್ನು ಕುರಿತು ಯೋಚಿಸಿದರೇ ಸಾಕು! ಹಸ್ತಪ್ರತಿ ದೀಪಗಳನ್ನು ಹೊತ್ತಿಸಲು ಉಪಯುಕ್ತವಾಗುತ್ತದೆ ಎನ್ನಲಡ್ಡಿಯಿಲ್ಲ! ಅಂದರೆ, ನನ್ನ ಸೌಮ್ಯವಾದ ಬುದ್ಧಿಮಾಂದ್ಯದಿಂದ ತುಂಬಿರುವ ಅದು ನಿಜವಾಗಿ ಇನ್ನುಮುಂದೆ ಹೊತ್ತಿಕೊಂಡು ಉರಿಯಬಲ್ಲದಾಗಿದ್ದರೆ ಮಾತ್ರ!"

"ನಾನು ನಿದ್ದೆಹೋಗಿದ್ದೆನೆ! ನೀವು ಅದು ಹೇಗೆ ಹಾಗೆ ಹೇಳಬಲ್ಲಿರಿ?" ಎಂದು ಉತ್ತರಕೊಟ್ಟಳು; ಆಗ, ಪ್ರಪಾತದ ಅಂಚಿಗೆ ಉರುಳಿಕೊಂಡು ಬಂದಿರುವ ಮಗುವಿಗೆ ಅದರ ಅರಿವು ಹೇಗೆ ಇರುವುದಿಲ್ಲವೋ, ಅದೇ ರೀತಿ ಅವಳು ಅದೇ ತಾನೆ ಹಾಯ್ದು ಬಂದಿದ್ದ ವಿಷಯಘಟ್ಟದ ಅರಿವನ್ನು ಹೊಂದಿರಲಿಲ್ಲ: "ಇಲ್ಲ, ಇಲ್ಲ! ನಾನು ಬಹಳ ಗಮನಕೊಟ್ಟು ಕೇಳುತ್ತಿದ್ದೆ ಎಂದು ನನ್ನ ಭಾವನೆ; ಘಟನೆಗಳು ನನಗೆ ಸ್ಪಷ್ಟವಾಗಿ ನೆನಪಿಲ್ಲದೆ ಹೋದರೂ, ಅಪಾರ ತೊಂದರೆಯೂ ವಿಪತ್ತೂ ಸಂಭವಿಸಿದ ಹಾಗೆ ನನಗೆನ್ನಿಸಿದೆ; ಆದ್ದರಿಂದ, ಕತೆ ಅತ್ಯಂತ ಆಕರ್ಷಕವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ."

ಈ ವೇಳೆಗೆ, ಸೂರ್ಯ ಮುಳುಗಿದ್ದನು; ಹಾಗೂ ಬಾನಿನ ನೆತ್ತಿಯ ಹತ್ತಿರ ಮೋಡಗಳಿಗೆ ಉಜ್ಜ್ವಲ ವರ್ಣಗಳನ್ನು ಲೇಪಿಸುತ್ತಿದ್ದನು; ಸೂರ್ಯ ಮುಳುಗಿದ ಮೇಲೆ ಸ್ವಲ್ಪ ಹೊತ್ತಿನವರೆಗೆ, ಹಾಗೂ ಬಾನಂಚಿನ ತನಿ ಬೆಳಕು ಕಣ್ಮರೆಯಾಗುವವರೆಗೆ ಆ ಬಗೆಯ ವರ್ಣ ಗೋಚರವಾಗುವುದಿಲ್ಲ. ಬಹಳ ಹೊತ್ತಿನಿಂದ ಮೇಲೇರುತ್ತಿದ್ದ ಚಂದ್ರನೂ ಕೂಡ, ತಾತ್ಕಾಲಿಕವಾಗಿ ತನ್ನ ವರ್ತುಲಾಕೃತಿಯನ್ನು ಬಾನಿನ ದಟ್ಟ ನೋಲಿಯಲ್ಲಿ ವಿಲೀನಮಾಡಿಕೊಂಡಿದ್ದ; ಅದು ಹೇಗಿತ್ತೆಂದರೆ, ಹೆಬ್ಬಯಕೆಯ ಜನನಾಯಕನೊಬ್ಬನು ಜನಸಾಮಾನ್ಯದ ತತ್ಕಾಲದ ಭಾವನೆಯ ಬಣ್ಣವನ್ನು ತಾನು ತಳೆದು ಅದರ ಮರೆಯಲ್ಲಿ ತನ್ನ ಆಶೋತ್ತರಗಳನ್ನು ಬೈತಿಡುವ ಹಾಗಿತ್ತು; ಅದೇ ಚಂದ್ರ ಈಗ ತನ್ನ ಸಂಚಾರಪಥದ ಮಧ್ಯದಲ್ಲಿ ವಿಶಾಲವಾದ ಅಂಡಾಕೃತಿಯನ್ನು ಮೆರೆಯುತ್ತ ಪ್ರಕಾಶಿಸತೊಡಗಿದ. ಈ ಬೆಳ್ಳಿ ಕಿರಣಗಳು ಇನ್ನೂ ಹಿಂದುಳಿದಿದ್ದ ಹಗಲ ಬೆಳಕಿನ ಸ್ವಭಾವವನ್ನು ಮಾರ್ಪಡಿಸುವ ಮಟ್ಟಿಗೆ ಆಗಲೇ ಸಾಕಷ್ಟು ಸಮರ್ಥವಾಗಿದ್ದುವು. ಹಳೆಯಮನೆಯ ಸ್ವರೂಪವನ್ನು ಸೌಮ್ಯವಾಗಿಮಾಡಿ, ಅಂದಗೊಳಿಸಿದ್ದುವು; ಆದರೆ, ಅದರ ಇಪ್ಪಾರುಗಳ ಮೂಲೆ ಮುಡುಕುಗಳೊಳಕ್ಕೆ ನೆರಳೂ ಹೆಚ್ಚು ದಟ್ಟವಾಗಿ ಕವಿದು, ಮುಂಚಾಚಿಕೊಂಡಿದ್ದ ಅಂತಸ್ತಿನ ಕೆಳಗೂ ಅರೆತೆರೆದಿದ್ದ ಬಾಗಿಲ ಒಳಗೂ ಚಿಂತೆಕವಿದಂತೆ ಕವಿದಿತ್ತು. ಪ್ರತಿಕ್ಷಣವೂ ಕಳೆದಂತೆಲ್ಲಾ, ಉದ್ಯಾನ ಹೆಚ್ಚು ಹೆಚ್ಚು

ಫೀಬೆ ಉತ್ತರಕೊಟ್ಟಳು: "ಎಂದೂ ಇಲ್ಲ. ಈಗ ಅದನ್ನು ನಾನು ಅನುಭವಿಸಿರುವೆನಾದ್ದರಿಂದ, ಬದುಕು ಮೊದಲಿನ ಹಾಗೆ ಕಾಣುತ್ತಿಲ್ಲ. ಇದುವರೆಗೆ, ನಾನು ಪ್ರತಿಯೊಂದನ್ನೂ ಹಾಡಿಹಗಲಿನಲ್ಲಿಯೋ, ಇಲ್ಲವೆ ಗೆಲವಿನಿಂದ ಕೂಡಿದ ಉರಿಯ ಕೆಂಬೆಳಕಿನಲ್ಲಿ ಕೋಣೆಯೊಳಗೆ ಹೊಳೆ ಹೊಳೆಯುತ್ತ ಕುಣಿಯುತ್ತಿರುವ ಹಾಗೆಯೋ ನೋಡುತ್ತಿದ್ದೆ ಎಂದು ನನಗೆ ತೋರುತ್ತದೆ. ನನ್ನ ಕಂಡರೆ ನನಗೇ ಅಯ್ಯೋ ಎನಿಸುತ್ತದೆ" ಎಂದು ಅರ್ಧವಿಷಾದದಿಂದ ಕೂಡಿದ ನಗುವಿನೊಂದಿಗೆ ಮುಂದುವರಿಸಿದಳು: "ಅಕ್ಕ ಹೆಪ್ಸಿಬಾಳನ್ನೂ, ಆ ಬಡಪ್ರಾಣಿ ಅಣ್ಣ ಕ್ಲಿಫರ್ಡನನ್ನೂ ಕಾಣುವ ಮುನ್ನ ನಾನು ಎಷ್ಟು ಉಲ್ಲಾಸದಿಂದಿದ್ದೆನೋ ಅಷ್ಟು ಉಲ್ಲಾಸವಾಗಿರಲಾರೆ ಇನ್ನು ಮುಂದೆ. ಈ ಅಲ್ಪಕಾಲದಲ್ಲಿ ನನಗೆ ಬಹಳ ವಯಸ್ಸಾಗಿ ಬಿಟ್ಟಿದೆ. ಹೆಚ್ಚು ವಯಸ್ಸಾಗಿರುವುದು ಮಾತ್ರವಲ್ಲದೆ, ಹೆಚ್ಚು ಬುದ್ಧಿವಂತಳೂ ಆಗಿದ್ದೇನೆ. ಹಾಗೆಂದು ನನ್ನ ಎಣಿಕೆ; ಆದರೆ ಮೊದಲಿಗಿಂತ ಅಷ್ಟೇನೂ ಹೆಚ್ಚು ಖಿನ್ನಳಲ್ಲ; ಆದರೆ ನನ್ನ ಚೈತನ್ಯಮಾತ್ರ ಮೊದಲಿದ್ದ ಅರ್ಧದಷ್ಟೂ ಹಗುರವಾಗಿಲ್ಲ! ನನ್ನ ಹೊಂಬಿಸಿಲಿನಂಥ ಹರ್ಷವನ್ನು ಅವರಿಗೆ ಕೊಟ್ಟು ಬಿಟ್ಟಿದ್ದೇನೆ; ಸಂತೋಷವಾಗಿಯೆ ಕೊಟ್ಟಿದ್ದೇನೆ; ಆದರೆ, ಕೊಟ್ಟುಮೇಲೆ ಅದನ್ನು ಉಳಿಸಿಕೊಳ್ಳಲಾರೆ, ಅದು ಸ್ಪಷ್ಟವಾಗಿಯೆ ಇದೆ. ಹೀಗಿದ್ದರೂ ಕೂಡ, ಅವರು ಅದನ್ನು ಸಂತೋಷವಾಗಿ ಅನುಭವಿಸಲಿ?"

ಸ್ವಲ್ಪ ತಡೆದು, ಹಾಲ್‌ಗ್ರೇವ್ ನುಡಿದ: "ಉಳಿಸಿಕೊಳ್ಳಲು ಯೋಗ್ಯವಾದುದನ್ನು, ಅಥವಾ ಉಳಿಸಕೊಳ್ಳಲು ಸಾಧ್ಯವಾದುದನ್ನು ನೀನು ಏನೂ ಕಳೆದುಕೊಂಡಿಲ್ಲ. ನಮ್ಮ ಮೊದಲ ಯೌವನಕ್ಕೆ ಬೆಲೆಯಿಲ್ಲ; ಏಕೆಂದರೆ, ಅದು ಹೊರಟುಹೋದ ಆಮೇಲಿನವರೆಗೆ ನಮಗೆ ಅದರ ಅರಿವಾಗುವುದಿಲ್ಲ. ಆದರೆ, ಕೆಲವು ವೇಳೆ– ಒಬ್ಬನು ಅತ್ಯಂತ ದುರದೃಷ್ಟಶಾಲಿಯಾಗಿದ್ದ ಹೊರತು, ಯಾವಾಗಲೂ ಎಂದು ಬೇಕಾದರೂ ಹೇಳಬಹುದೇನೋ– ಒಲಿದಾಗ ಉಂಟಾಗುವ ಹೃದಯದ ನಲಿವಿನಿಂದ ಹೊರಚಿಮ್ಮುವ ಎರಡನೆಯ ಯೌವನವೊಂದು ಬರುತ್ತದೆ; ಅಥವಾ ಜೀವನದ ಬೇರೆ ಯಾವುದಾದರೂ ಒಂದು ಮಹೋತ್ಸವಕ್ಕೆ– ಬೇರೆ ಅಂಥದು ಯಾವುದಾದರೂ ಇರುವುದಾದರೆ– ಕಿರೀಟಪ್ರಾಯವಾಗಿ ಅದು ಬರುವುದೂ ಸಾಧ್ಯ. ಕಳೆದು ಹೋದ ಯೌವನದ ನಿರ್ಲಕ್ಷ್ಯವಾದ, ಮೇಲುಮೇಲಿನ ಮೊದಲ ನಲಿವಿಗಾಗಿ (ನೀನು ಈಗ ಕೊರಗುತ್ತಿರುವಂತೆ) ಕೊರಗುವುದು, ಹಾಗೂ ನಾವು ಕಳೆದುಕೊಂಡದ್ದಕ್ಕಿಂತ ಹೆಚ್ಚು ಗಾಢವೂ ಶ್ರೀಮಂತವೂ ಆದ, ಮತ್ತೆ ಪಡದ ಯೌವನದ ಈ ಪರಮಸೌಖ್ಯ– ಇವೆರಡೂ ಆತ್ಮದ ಬೆಳವಣಿಗೆಗೆ ಆವಶ್ಯಕ. ಕೆಲವು ಸಂದರ್ಭಗಳಲ್ಲಿ ಈ ಎರಡು ಸ್ಥಿತಿಗಳೂ ಬಹುಮಟ್ಟಿಗೆ

ಒಳ್ಳೆಯದು, ಹಾಗೂ ಎಷ್ಟು ಸುಂದರ! ಅಲ್ಲದೆ, ಎಷ್ಟು ಎಳೆಯಪ್ರಾಯದ್ದು! ಅದರಲ್ಲಿ ಕಾಲಮಹಿಮೆಯಿಂದ ಹಳತಾದದ್ದು ಕೊಳೆತದ್ದು ಯಾವುದೂ ಇಲ್ಲ! ಉದಾಹರಣೆಗೆ, ಈ ಮನೆ– ಅದು ತನ್ನ ಕೊಳೆತು ನಾರುವ ಮರದ ವಾಸನೆಯಿಂದ ಕೆಲವು ವೇಳೆ ಖಂಡಿತವಾಗಿಯೂ ನನ್ನ ಉಸಿರುಕಟ್ಟುವಹಾಗೆ ಮಾಡಿದೆ! ಈ ತೋಟವೊ, ನಾನೊಬ್ಬ ಗೋರಿಯಅಂಗಳ ಅಗೆಯುವ ಚರ್ಚಿನ ಕೆಲಸಗಾರ ಎಂಬಂತೆ, ಕಪ್ಪು ಬೂಷ್ಟು ನನ್ನ ಎಲೆಗುದ್ದಲಿಗೆ ಯಾವಾಗಲೂ ಮೆತ್ತಿಕೊಂಡಿರುತ್ತದೆ! ನನ್ನನ್ನು ವಶಪಡಿಸಿಕೊಂಡಿರುವ ಈ ಭಾವನೆಯನ್ನು ನಾನು ಉಳಿಸಿಕೊಂಡಿರಬಲ್ಲೆನಾದರೆ, ಈ ತೋಟವು ಪ್ರತಿದಿನವೂ ನನ್ನ ಪಾಲಿಗೆ ಕೈಸೋಕಿಸದ ಹೊಸ ಭೂಮಿಯಾಗಿಯೇ ಇರುವುದು; ಅದರಲ್ಲಿ ಬೆಳೆಯುವ ತಿಂಗಳ ಹುರಳಿ ಮತ್ತು ಕುಂಬಳಗಳ ಸುವಾಸನೆಯಲ್ಲಿ ನೆಲದ ಮೊದಲ ಹೊಸತನವಿರುವುದು! ಇನ್ನು ಈ ಮನೆಯೋ! ಈಡನ್ ಸ್ವರ್ಗದ ಲತಾಗೃಹವೇ ಆಗಿರುವುದು ಅದು; ದೇವರು ಸೃಷ್ಟಿಸಿದ ಮೊಮ್ಮದಲಿನ ಗುಲಾಬಿ ಹೂಗಳನ್ನೇ ಬಿಡುವುದು ಅದು! ಬೆಳುದಿಂಗಳು, ಹಾಗೂ ಅದಕ್ಕೆ ಪ್ರತಿಸ್ಪಂದನವಾಗಿ ಮಾನವ ಹೃದಯದಲ್ಲಿ ಮಿಡಿಯುವ ಭಾವನೆ– ಇವೆರಡು ಎಲ್ಲವನ್ನೂ ಹೊಸತು ಮಾಡುವ ಮತ್ತು ಸುಧಾರಣೆಮಾಡುವ ಶಕ್ತಿಗಳಲ್ಲಿ ಬಲು ದೊಡ್ಡವು. ಇನ್ನುಳಿದ ಎಲ್ಲ ಸುಧಾರಣೆಗಳೂ ನವೀಕರಣ ಪ್ರಯತ್ನಗಳೂ ಕೇವಲ ಮನಸ್ಸಿನ ಭ್ರಾಂತಿ, ಅದಕ್ಕಿಂತ ಹೆಚ್ಚಿನವಾಗಿ ಪರಿಣಮಿಸವು ಎಂದು ನನ್ನ ಭಾವನೆ!" ಎಂದು ಅವನು ಅಭಿಪ್ರಾಯಪಟ್ಟನು.

"ಈ ಹಿಂದೆ, ನಾನು ಈಗ ಇರುವುದಕ್ಕಿಂತಲೂ ಹೆಚ್ಚು ಸುಖಿಯಾಗಿದ್ದೇನೆ; ಕಡೆಯಪಕ್ಷ ಹೆಚ್ಚು ಗೆಲವಾಗಿದ್ದೇನೆ" ಎಂದು ಆಲೋಚನಾಪರಳಾಗಿ ನುಡಿದಳು ಫೀಬೆ: "ಆದರೂ ಈ ಬೆಳಗುವ ಬೆಳುದಿಂಗಳಿನಲ್ಲಿ ಅಪಾರ ಮೋಹಕತೆ ಇದೆಯೆಂದು ಅರಿತಿದ್ದೇನೆ; ಅಲ್ಲದೆ, ಬಳಲಿ ಇಷ್ಟವಿಲ್ಲದೆ ಹಿಂದಕ್ಕೆ ಸರಿಯುತ್ತಿರುವ ದಿನ ಬಹುಬೇಗನೆ 'ನಿನ್ನೆ' ಎಂದೆನಿಸಿಕೊಳ್ಳಲು ಅದು ಹೇಗೆ ದ್ವೇಷಿಸುತ್ತಿದೆ ಎಂಬುದನ್ನು ಗಮನಿಸುವುದರಲ್ಲಿ ನನಗೆ ಪ್ರೀತಿ. ಈ ಹಿಂದೆ ಬೆಳುದಿಂಗಳೆಂದರೆ ಎಂದು ನಾನು ಲಕ್ಷಿಸಿದವಳಲ್ಲ. ಇಂದಿನಿರುಳು ಅದರಲ್ಲಿ ಅಂತಹ ಚೆಲುವೇನಿದೆಯೋ, ನನಗೇ ಅಚ್ಚರಿಯಾಗಿದೆ."

ಸಂಜೆಬೆಳಕಿನಲ್ಲಿ ಆ ಹುಡುಗಿಯನ್ನು ಉತ್ಸುಕತೆಯಿಂದ ನೋಡುತ್ತ ಕಲಾವಿದನು ಪ್ರಶ್ನಿಸಿದನು:

"ಈ ಹಿಂದೆ ನಿನಗೆ ಇದರ ಅನುಭವ ಎಂದೂ ಆಗಿಲ್ಲವೆ?"

ಹೊರಟುಹೋದ ಮೇಲೆ ಅವೂ ಮಾಯವಾಗುವುವು. ಮಿಸ್ ಹೆಪ್ಸಿಬಾ ಸಮಾಜದಿಂದ ಹೊರಚ್ಚಾಗಿದ್ದುಕೊಂಡು ಅದರೊಂದಿಗೆ ನಿಜವಾದ ಸಂಬಂಧವನ್ನೆಲ್ಲಾ ಕಳೆದುಕೊಂಡುಬಿಟ್ಟಿದ್ದಾಳೆ; ವಾಸ್ತವವಾಗಿ, ಅವಳು ಸತ್ತೇಹೋಗಿದ್ದಾಳೆ: ಅವಳು ತನ್ನಲ್ಲಿ ತಾನು ಹುರುಪು ತುಂಬಿಕೊಂಡು, ವಿಶೇಷವಾಗಿ ತಿರಸ್ಕಾರಾರ್ಹವಾದ ತನ್ನ ಸಿಡುಕುಮೋರೆಯಿಂದ ಪ್ರಪಂಚಕ್ಕೆಲ್ಲಾ ನೋವುಂಟುಮಾಡುತ್ತಾ, ಮಾರಾಟದ ಮೇಜಿನ ಹಿಂದೆ ಬದುಕಿರುವ ಹಾಗೆ ನಿಂತಿರುತ್ತಾಳೆಂಬುದೇನೋ ದಿಟ. ನಿನ್ನ ಆ ಬಡ ಅಣ್ಣ ಕ್ಲಿಫರ್ಡ್, ಅವನಿನ್ನೊಬ್ಬ ಮೃತಮನುಷ್ಯ, ಎಂದೋ ಗೋರಿಸೇರಿದವನು; ಅವನೊಂದಿಗೆ ಗವರ್ನರೂ ಆಡಳಿತಮಂಡಲಿಯೂ ಪ್ರೇತವ್ಯವಹಾರ ನಡಸಿ, ಏನೋ ಪವಾಡಮಾಡಿದ್ದಾರೆ. ನೀನು ಹೊರಟು ಹೋದಮೇಲೆ ಎಂದೋ ಒಂದು ದಿನ ಬೆಳಗ್ಗೆ ಅವನು ಚೂರುಚೂರಾಗಿ ಬಿದ್ದು ಬಿಡುತ್ತಾನೆ; ಆಮೇಲೆ, ಧೂಳಿನ ಒಂದು ರಾಶಿ ಹೊರತು, ಅವನದಾಗಿ ಏನೂ ನೋಡಲಿರುವುದಿಲ್ಲ; ಅದರಲ್ಲಿ ಆಶ್ಚರ್ಯವಿಲ್ಲ. ಅದು ಹೇಗಿದ್ದರೂ, ಮಿಸ್ ಹೆಪ್ಸಿಬಾಳಂತೂ ತನ್ನ ಅಲ್ಪಸ್ವಲ್ಪ ಹೊಂದಿಕೊಳ್ಳುವ ಸ್ವಭಾವವನ್ನೂ ಕಳೆದುಕೊಳ್ಳುತ್ತಾಳೆ. ನಿನ್ನಿಂದಾಗಿ ಅವರಿಬ್ಬರೂ ನೆಪಮಾತ್ರಕ್ಕೆ ಬದುಕಿದ್ದಾರೆ."

"ಹಾಗೆಂದು ಎಣಿಸಲು ನನಗೆ ವ್ಯಸನವಾಗುತ್ತದೆ" ಎಂದು ಫೀಬೆ ಗಂಭೀರವಾಗಿ ಉತ್ತರಕೊಟ್ಟಳು: "ಆದರೆ ಇದಿಷ್ಟು ನಿಜ; ಅವರಿಗೆ ಅವಶ್ಯವಾಗಿದ್ದುದಾದರೂ ನನ್ನ ಅಲ್ಪ ಸಾಮರ್ಥ್ಯವೇ; ಅವರ ಯೋಗಕ್ಷೇಮದಲ್ಲಿ ನನಗೆ ನಿಜವಾದ ಆಸಕ್ತಿಯಿದೆ– ತಾಯಿಯಾದವಳಿಗೆ ಇರುವಂತಹ ಒಂದು ವಿಚಿತ್ರ ರೀತಿಯ ಭಾವನೆ; ಅದನ್ನು ಕಂಡು ನೀವು ನಗಕೂಡದು, ಅದು ನನ್ನ ಕೋರಿಕೆ. ಹಾಗ್‌ಗ್ರೇವರೆ, ನಿಮಗೆ ಮುಚ್ಚುಮರೆಯಿಲ್ಲದೆ ಹೇಳುತ್ತೇನೆ– ನೀವು ಅವರಿಗೆ ಒಳಿತನ್ನು ಕೋರುವಿರೋ ಕೆಟ್ಟದ್ದನ್ನು ಕೋರುವಿರೋ ಎಂದು ತಿಳಿಯೋಣವೆಂದರೆ, ಕೆಲವುವೇಳೆ ಕಕ್ಕಾಬಿಕ್ಕಿಯಾಗುತ್ತದೆ."

ಅದಕ್ಕೆ ಛಾಯಾಚಿತ್ರ ಕಲಾವಿದನು ಹೀಗೆಂದನು: "ಪುರಾಣ ಕಾಲದ, ಬಡತನ ಅಡಸಿದ, ಮುದಿಯಾದ ಈ ಕನ್ಯಾಮಹಿಳೆಯಲ್ಲಿ, ಹಾಗೂ ಕೀಳುಮಟ್ಟಕ್ಕಿಳಿದ ಜರ್ಜರಿತನಾದ ವ್ಯರ್ಥಸೌಂದರ್ಯಪ್ರೇಮಿಯಾದ ಈ ಮಹನೀಯನಲ್ಲಿಯೂ ನನಗೆ ನಿಸ್ಸಂದೇಹವಾಗಿಯೂ ಒಂದು ಆಸಕ್ತಿಯಿದೆ. ಕರುಣೆಯಿಂದ ಕೂಡಿದ ಆಸಕ್ತಿ ಅದು, ಅವರು ನಿಸ್ಸಹಾಯಕರಾದ ಮುದಿ ಮಕ್ಕಳಾದ್ದರಿಂದ! ಆದರೆ ನಿನ್ನ ಹೃದಯಕ್ಕಿಂತ ನನ್ನದು ಹೇಗೆ ಬೇರೆ ಬಗೆಯದು ಎಂಬುದರ ಕಲ್ಪನೆ ನಿನಗಿಲ್ಲ. ಈ ಇಬ್ಬರ ವಿಚಾರದಲ್ಲಿ, ಅವರಿಗೆ ಸಹಾಯ

ಏಕಕಾಲದಲ್ಲಿ ಒದಗಿ, ಖಿನ್ನತೆಯನ್ನೂ ಆನಂದವನ್ನೂ ಒಂದು ರಹಸ್ಯಪೂರ್ಣವಾದ ರಾಗಭಾವವಾಗಿ ಬೆರಸುತ್ತದೆ."

"ನೀವು ಹೇಳಿದ್ದು ನನಗೆ ಅರ್ಥವಾದ ಹಾಗೆ ಕಾಣುವುದಿಲ್ಲ" ಎಂದಳು ಫೀಬೆ.

"ಅದರಲ್ಲಿ ಆಶ್ಚರ್ಯವೇನಿಲ್ಲ ಎಂದು ಮುಗುಳುನಗುತ್ತ ಹಾಲ್‌ಗ್ರೇವ್ ಮರುನುಡಿದ: "ಏಕೆಂದರೆ, ನಾನು ನಿನಗೊಂದು ಗುಟ್ಟಾದ ಸಂಗತಿಯನ್ನು ತಿಳಿಸಿದ್ದೇನೆ; ಅದನ್ನು ನಾನು ಹೇಳುತ್ತಿದ್ದೇನೆ ಎಂದು ಗೊತ್ತಾಗುವ ಮುನ್ನ ಅದೇನೆಂಬುದು ನನಗೇ ತಿಳಿದಿರಲಿಲ್ಲ, ಅದು ಹೇಗಾದರೂ ಇರಲಿ, ಅದನ್ನು ನೆನಪಿನಲ್ಲಿಟ್ಟುಕೊ; ಸತ್ಯಸಂಗತಿ ಏನೆಂಬುದು ನಿನಗೆ ಸ್ಪಷ್ಟವಾದಾಗ, ಈ ಬೆಳುದಿಂಗಳಿನ ಸನ್ನಿವೇಶವನ್ನು ಕುರಿತು ಯೋಚಿಸು!"

"ಆ ಕಟ್ಟಡಗಳ ನಡುವೆ, ಪಶ್ಚಿಮದಿಂದ ಸ್ವಲ್ಪ ಮೇಲ್ಗಡೆ, ತೆಳುಗೆಂಪಿನ ತುಸ ರಂಗನ್ನು ಬಿಟ್ಟು ಬಿಟ್ಟರೆ, ಈಗ ಸಂಪೂರ್ಣವಾಗಿ ಬೆಳುದಿಂಗಳೇ ಎಲ್ಲ ಕಡೆಯೂ, ಎಂದಳು ಫೀಬೆ: "ನಾನಿನ್ನು ಒಳಕ್ಕೆ ಹೋಗಬೇಕು. ಅಕ್ಕ ಹೆಪ್ಸಿಬಾ ಲೆಕ್ಕಾಚಾರದಲ್ಲಿ ಅಷ್ಟು ಚುರುಕಿಲ್ಲ; ನಾನು ಆಕೆಗೆ ಸಹಾಯಮಾಡದಿದ್ದರೆ, ಇಂದಿನ ದಿನದ ಲೆಕ್ಕ ಬರೆಯುವುದರಲ್ಲಿ ತಲೆ ನೋವು ಬರಿಸಿಕೊಳ್ಳುತ್ತಾಳೆ."

ಆದರೆ ಹಾಲ್‌ಗ್ರೇವ್ ಅವಳನ್ನು ಇನ್ನು ಸ್ವಲ್ಪ ಹೊತ್ತು ಉಳಿಸಿಕೊಂಡನು.

"ನೀನು ಇನ್ನು ಕೆಲವು ದಿನಗಳಲ್ಲಿ ಹಳ್ಳಿಗೆ ಹಿಂದಿರುಗುವೆ ಎಂದು ಮಿಸ್ ಹೆಪ್ಸಿಬಾ ನನಗೆ ಹೇಳಿದಳು" ಎಂದನು ಅವನು.

"ಹೌದು, ಆದರೆ ಕೆಲವು ಕಾಲದ ವರೆಗೆ ಮಾತ್ರ; ಏಕೆಂದರೆ, ಇದನ್ನೇ ನನ್ನ ಸದ್ಯದ ಮನೆಯಾಗಿ ಭಾವಿಸಿದ್ದೇನೆ. ಕೆಲವು ಏರ್ಪಾಡುಗಳನ್ನು ಮಾಡುವುದಕ್ಕಾಗಿ, ಹಾಗೂ ನನ್ನ ತಾಯಿಯನ್ನೂ ಸ್ನೇಹಿತರನ್ನೂ ಕ್ರಮವಾಗಿ ಬೀಳ್ಕೊಂಡುಬರಲು ಹೋಗುತ್ತಿದ್ದೇನೆ. ತಾವು ಬೇಕಾಗಿ, ಪ್ರಯೋಜನಕರವಾಗಿರುವ ಕಡೆ ವಾಸಮಾಡುವುದೆಂದರೆ ಯಾರಿಗಾದರೂ ಸಂತೋಷವೆನಿಸುವುದು; ಇಲ್ಲಿ ನನಗೆ ಹಾಗೆ ಭಾವಿಸಿಕೊಂಡಿರುವ ತೃಪ್ತಿಯಿದೆ ಎಂದು ಕಾಣುತ್ತದೆ," ಎಂದು ಫೀಬೆ ಉತ್ತರಕೊಟ್ಟಳು.

ಕಲಾವಿದನು ಹೇಳಿದನು: "ನೀನು ಊಹಿಸಿರುವುದಕ್ಕಿಂತ ಹೆಚ್ಚಾಗಿ ಖಂಡಿತವಾಗಿ, ಹಾಗೆ ಭಾವಿಸಿಕೊಂಡಿರಬಹುದು. ಈ ಮನೆಯಲ್ಲಿ ಏನಾದರೂ ಆರೋಗ್ಯ, ನೆಮ್ಮದಿ, ಸಹಜವಾದ ಬದುಕು ಇದ್ದರೆ ಅವೆಲ್ಲಾ ನಿನ್ನಲ್ಲಿ ಮೈತಳೆದು ನೆಲಸಿವೆ. ಈ ವರಗಳು ನಿನ್ನೊಡನೆ ಬಂದುವು, ನೀನು ಇಲ್ಲಿನ ಹೊಸಿಲು ಬಿಟ್ಟು

ಬರುತ್ತಾ ಇರುವ ವಿಚಾರದಲ್ಲಿ ನಿಮಗೆ ದೃಢನಂಬಿಕೆ ಇದೆ ಎಂದು ನನಗೆ ತಿಳಿಸಿದಿರಲ್ಲಾ, ಏನದರ ಅರ್ಥ? ನನ್ನ ಬಂಡ ಬಂಧುಗಳಿಗೆ ಹೊಸ ತೊಂದರೆ ಏನಾದರೂ ಸಂಭವಿಸಲಿರುವ ವಿಚಾರ ನಿಮಗೆ ತಿಳಿದಿದೆಯೆ? ಹಾಗಿದ್ದರೆ, ನನಗೆ ಕೂಡಲೆ ತಿಳಿಸಿ, ನಾನು ಅವರನ್ನು ಬಿಟ್ಟುಹೋಗುವುದಿಲ್ಲ!"

"ಫೀಬೆ, ನನ್ನನ್ನು ಕ್ಷಮಿಸು!" ಎಂದು ಛಾಯಾಚಿತ್ರಕಲಾವಿದನು ತನ್ನ ಕೈಯನ್ನು ನೀಡಿದನು; ಇಷ್ಟವಿಲ್ಲದ್ದಿರೂ ಅವಳೂ ತನ್ನ ಕೈಯನ್ನು ಅವನಿಗೆ ಒಪ್ಪಿಸಬೇಕಾಯಿತು; ಅವನು ಮುಂದುವರಿಸಿದನು: "ನಾನು ಹೆಚ್ಚು ಕಡಮೆ ಒಬ್ಬ ಅನುಭಾವಿ, ಹಾಗೆಂದು ಒಪ್ಪಿಕೊಳ್ಳಬೇಕು. ವಶೀಕರಣವಿದ್ಯೆಯೊಂದಿಗೆ, ಆ ಪ್ರವೃತ್ತಿ ನನ್ನ ರಕ್ತದಲ್ಲಿ ಇದೆ; ಮಾಟಮಂತ್ರ ಪ್ರಚಾರದಲ್ಲಿದ್ದ ಹಳೆಯ ಕಾಲದಲ್ಲಾಗಿದ್ದರೆ, ನಾನೂ 'ಗಲ್ಲುಗುಡ್ಡ'ವನ್ನು ಏರಬೇಕಾಗಿತ್ತು. ನೀನು ನನ್ನ ಈ ಮಾತನ್ನು ನಂಬಬೇಕು: ಅವರು ಹೇಗೆ ನಿನ್ನ ಗೆಳೆಯರೋ, ಹಾಗೆ ನನ್ನ ಗೆಳೆಯರೂ ಆಗಿದ್ದಾರೆ; ನನಗೆ ಯಾವುದಾದರೂ ಗುಟ್ಟು ತಿಳಿದಿದ್ದು ಅದನ್ನು ಹೊರಪಡಿಸುವುದರಿಂದ ಅವರಿಗೆ ಪ್ರಯೋಜನವಾಗುವುದಾದರೆ, ನಾವು ಅಗಲುವುದಕ್ಕಿಂತ ಮುಂಚೆ ಅದು ನಿನಗೆ ತಿಳಿಯಬೇಕು. ಆದರೆ ನನಗೆ ಅಂಥದು ಯಾವುದೂ ತಿಳಿದಿಲ್ಲ."

"ನೀವು ಏನನ್ನೋ ತಿಳಿಸದೆ ಬಚ್ಚಿಟ್ಟುಕೊಂಡಿದ್ದೀರಿ!" ಎಂದಳು ಫೀಬೆ.

"ಯಾವುದೂ ಇಲ್ಲ– ನನಗೆ ಸಂಬಂಧಪಟ್ಟ ಗುಟ್ಟುಗಳ ಹೊರತು ಬೇರೆ ಯಾವುದೂ ಇಲ್ಲ" ಎಂದು ಹಾಲ್‌ಗ್ರೇವ್ ಉತ್ತರಕೊಟ್ಟನು: "ನಿಜವಾಗಿ, ಜಡ್ಜ್ ಪಿನ್ಚನ್ ಕ್ಲಿಫರ್ಡನ ಮೇಲೆ ಇನ್ನೂ ಒಂದು ಕಣ್ಣಿಟ್ಟಿದ್ದಾನೆ; ಅವನನ್ನು ಹಾಳುಮಾಡುವುದರಲ್ಲಿ ಅವನ ಪಾಲು ದೊಡ್ಡದಾಗಿಯೇ ಇತ್ತು; ಇಷ್ಟು ನನಗೆ ವೇದ್ಯ. ಅದರ ಹಿಂದಿನ ಪ್ರೇರಣೆಗಳೇನು ಉದ್ದೇಶಗಳೇನು, ಇವು ನನಗೆ ರಹಸ್ಯವಾಗಿಯೆ ಇವೆ. ಅವನು ದೃಢನಿಶ್ಚಯದ, ನಿರ್ಘೃಣವಾದ ಮನುಷ್ಯ, ಪಾಷಂಡ ವಿಚಾರಣಾಧಿಕಾರಿಯ ಅಪ್ಪಟ ಸ್ವಭಾವ ಅವನಲ್ಲಿದೆ; ಕ್ಲಿಫರ್ಡನನ್ನು ಚಿತ್ರ ಹಿಂಸೆಯ ಯಂತ್ರಕ್ಕೆ ಒಡ್ಡುವುದರಿಂದ ತನ್ನ ಯಾವುದಾದರೂ ಉದ್ದೇಶಸಾಧನೆಯಾಗುವುದಿದ್ದರೆ, ಅದನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಅವನು ಕ್ಲಿಫರ್ಡನ ಕೀಲುಗಳನ್ನು ಕಳಚಿ ಕೀಳುವನು ಎಂದು ನಾನು ನಿಜವಾಗಿ ನಂಬಿದ್ದೇನೆ. ಆದರೆ, ಆತ ಅಷ್ಟೊಂದು ಐಶ್ವರ್ಯವಂತನಾಗಿ, ಘನತೆಯುಳ್ಳವನಾಗಿದ್ದಾನೆ; ತನ್ನ ಸ್ವಂತ ಸಾಮರ್ಥ್ಯ, ಹಾಗೂ ಎಲ್ಲ ಕಡೆಯಿಂದಲೂ ದೊರೆಯುತ್ತಿರುವ ಸಮಾಜದ ಬೆಂಬಲ– ಇವುಗಳಿಂದ ಅಷ್ಟೊಂದು ಶಕ್ತಿವಂತನಾಗಿದ್ದಾನೆ– ಹೀಗಿರುವಾಗ, ಬಲಹೀನನೂ, ಕಳಂಕಹೊತ್ತವನೂ, ಅರ್ಧಜಡನೂ ಆದ

ಮಾಡುವುದಾಗಲಿ ಅಡ್ಡಿಯಾಗಿ ನಿಲ್ಲುವುದಾಗಲಿ ನನ್ನ ಮನಸ್ಸಿನ ಪ್ರೇರಣೆಯಾಗಿಲ್ಲ; ಯಾವ ನೆಲದ ಮೇಲೆ ನಾನೂ ನೀನೂ ನಡೆದಾಡುತ್ತಿರುವೆವೋ ಅದರ ಮೇಲೆ ಸುಮಾರು ಇನ್ನೂರು ವರ್ಷಗಳಿಂದಲೂ ನಾಟಕವೊಂದು ನಿಧಾನಗತಿಯಲ್ಲಿ ಸಾಗುತ್ತಿದೆ; ಅದನ್ನು ನೋಡುವುದು, ವಿಭಜನೆ ಮಾಡುವುದು, ಅದರ ವಿಚಾರವನ್ನು ನನಗೆ ನಾನೇ ವಿವರಿಸಿಕೊಳ್ಳುವುದು, ಮತ್ತು ಅದನ್ನು ಅರ್ಥಮಾಡಿಕೊಳ್ಳುವುದು– ಇಷ್ಟೇ ನನ್ನ ಆಶಯ. ಸಂಗತಿಗಳು ಹೇಗಾದರೂ ನಡೆಯಲಿ, ಆ ನಾಟಕದ ಮುಗಿತಾಯವನ್ನು ನೋಡುವ ಅವಕಾಶ ನನಗೆ ದೊರೆತರೆ, ಅದರಿಂದ ನನಗೆ ನೈತಿಕ ತೃಪ್ತಿಯೊಂದು ಲಭಿಸುವುದರಲ್ಲಿ ನನಗೆ ಸಂದೇಹವಿಲ್ಲ. ಆ ಮುಗಿತಾಯ ಹತ್ತಿರಕ್ಕೆ ಬರುತ್ತಿದೆ ಎಂದು ನನ್ನ ಆಂತರ್ಯದಲ್ಲಿ ದೃಢನಂಬಿಕೆಯಿದೆ. ಆದರೆ, ಸಹಾಯಮಾಡಲೆಂದು ದೈವವು ನಿನ್ನನ್ನು ಇಲ್ಲಿಗೆ ಕಳಿಸಿದ್ದರೂ ಕೂಡ, ನನ್ನನ್ನು ಯೋಗ್ಯ ಪ್ರೇಕ್ಷಕನನ್ನಾಗಿ ಮಾತ್ರ ಗೌರವಿಸಿ ಕಳಿಸಿದ್ದರೂ ಸಹ, ಈ ನಿರ್ಭಾಗ್ಯ ಪ್ರಾಣಿಗಳಿಗೆ ನನ್ನ ಕೈಲಾದ ನೆರವು ನೀಡುವುದಾಗಿ ನಾನು ಶಪಥಮಾಡುತ್ತೇನೆ!"

ಫೀಬೆಗೆ ದಿಗ್ಭ್ರಮೆಯಾಯಿತು, ಅಸಮಾಧಾನವೂ ಆಯಿತು; ಅವಳು ಹೇಳಿದಳು: "ನೀವು ಇನ್ನೂ ಹೆಚ್ಚು ಸ್ಪಷ್ಟವಾಗಿ ಮಾತಾಡಬೇಕೆಂದು ನನ್ನ ಇಷ್ಟ. ಎಲ್ಲಕ್ಕಿಂತ ಹೆಚ್ಚಾಗಿ, ನಾನು ಒಬ್ಬ ಕ್ರೈಸ್ತ, ಒಬ್ಬ ಮಾನವ ಪ್ರಾಣಿ, ಎಂಬ ಭಾವನೆಯನ್ನು ನೀವು ಇಟ್ಟುಕೊಳ್ಳಬೇಕು! ಜನ ಕ್ಲೇಶಪಡುತ್ತಿರುವಾಗ, ಎಲ್ಲಕ್ಕಿಂತ ಹೆಚ್ಚಾಗಿ ಅವರಿಗೆ ಸಹಾಯಮಾಡಿ, ಅವರನ್ನು ಸಂತೈಸಬೇಕೆಂದು ಇಷ್ಟಪಡದೆ ಇರುವುದಾದರೂ ಹೇಗೆ ಸಾಧ್ಯ? ಈ ಹಳೆಯ ಮನೆ ನಾಟಕಶಾಲೆ ಎಂಬಂತೆ ನೀವು ಮಾತಾಡುತ್ತೀರಿ; ಅಲ್ಲದೆ, ಹೆಪ್ಸಿಬಾ ಮತ್ತು ಕ್ಲಿಫರ್ಡ‌ರ ಹಾಗೂ ಅವರ ಹಿಂದಿನ ತಲೆಯವರ ಆಪತ್ತು ವಿಪತ್ತುಗಳನ್ನು ಒಂದು ದುಃಖಾಂತನಾಟಕವಾಗಿ ಭಾವಿಸುವ ಹಾಗೆ ಕಾಣುತ್ತದೆ; ಹಳ್ಳಿಗಾಡಿನ ಹೋಟೆಲಿನಲ್ಲಿ ಅಂಥ ನಾಟಕ ಆಡಿರುವುದನ್ನು ನಾನು ನೋಡಿದ್ದೇನೆ. ಈಗಿನ ಈ ನಾಟಕ ಮಾತ್ರ ಕೇವಲ ನಿಮ್ಮ ವಿನೋದಕ್ಕಾಗಿ ನಡೆಯುತ್ತಿರುವ ಹಾಗೆ ಕಾಣುತ್ತದೆ. ಈ ನಾಟಕದಿಂದ ಆಟಗಾರರಿಗೆ ಅಪಾರ ವ್ಯಯವಾಗುತ್ತಿದೆ; ಪ್ರೇಕ್ಷಕರಾದರೋ, ಅದರ ಬಗೆಗೆ ತುಂಬ ಉದಾಸೀನರಾಗಿದ್ದಾರೆ."

ತನ್ನ ಮನೋಭಾವವನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ ಈ ನಿರೂಪಣೆಯಲ್ಲಿ ಸ್ವಲ್ಪಮಟ್ಟಿನ ಸತ್ಯಾಂಶವನ್ನು ಹಾಲ್‌ಗ್ರೇವ್ ಕಾಣಲೇಬೇಕಾಗಿ ಬಂದು, ಅವನು– "ನೀನು ತುಂಬ ಕಠಿನವಾಗಿದ್ದೀಯೆ" ಎಂದನು.

ಫೀಬೆ ಮುಂದುವರಿಸಿದಳು: "ಇಷ್ಟರ ಜೊತೆಗೆ, ಮುಗಿತಾಯ ಹತ್ತಿರಕ್ಕೆ

ಮೊಳಕೈಮೇಲೆ ಶಾಲನ್ನೂ ಇನ್ನೊಂದರ ಮೇಲೆ ಒಂದು ಚಿಕ್ಕ ಜಮಖಾನೆಯ ಚೀಲವನ್ನೂ ಹಾಕಿಕೊಂಡು, ಅಕ್ಕ ಹೆಪ್ಸಿಬಾಗೂ ಅಣ್ಣ ಕ್ಲಿಫರ್ಡನಿಗೂ ಬೀಳ್ಕೊಡಿಗೆಯನ್ನು ತಿಳಿಸುತ್ತಾ ಇದ್ದುದನ್ನು ಕಾಣಬಹುದಾಗಿತ್ತು. ಮುಂದೆ ಹೊರಡಲಿದ್ದ ಗಾಡಿಗಳ ಸಾಲು ಒಂದರಲ್ಲಿ ಸ್ಥಳಪಡೆದು, ಅವಳು ಪ್ರಯಾಣ ಮಾಡಲಿದ್ದಳು; ಅದು ಅವಳನ್ನು ಆರುಮೈಲಿ ದೂರದಲ್ಲಿದ್ದ ಅವಳ ಹಳ್ಳಿಗೆ ಕರೆದೊಯ್ಯಲಿತ್ತು.

ಫೀಬೆಯ ಕಣ್ಣುಗಳು ಹನಿಗೂಡಿದ್ದುವು; ಪ್ರೀತಿತುಂಬಿದ ವಿಷಾದದಿಂದ ಆರ್ದ್ರವಾದ ಮುಗುಳನಗೆಯೊಂದು ಅವಳ ಮುದ್ದಾದ ಬಾಯ ಸುತ್ತಲೂ ಮಿನುಗುತ್ತಿತ್ತು. ಖಿನ್ನತೆ ತುಂಬಿದ ಈ ಹಳೆಯ ಮನೆಯಲ್ಲಿ ತಾನು ಕಳೆದ ಕೆಲವು ವಾರಗಳ ಕಾಲದ ಬದುಕು ಅದು ಹೇಗೆ ತನ್ನನ್ನು ಸೆಳೆದು ಹಿಡಿದಿತ್ತು, ತನ್ನ ಇರವಿನಲ್ಲಿ ಅದು ಹೇಗೆ ಲೀನವಾಗಿ ಹೋಗಿತ್ತು, ಅದಕ್ಕಿಂತ ಹಿಂದೆ ಅನುಭವಕ್ಕೆ ಬಂದ ಎಲ್ಲ ಸಂಗತಿಗಳಿಗಿಂತ ಹೆಚ್ಚಾಗಿ ಅದು ಹೇಗೆ ನೆನಪಿನಲ್ಲಿ ಪ್ರಮುಖವಾಗಿ ಉಳಿಯುವ ಕೇಂದ್ರ ಸಂಗತಿಯಾಗಿ ಪರಿಣಮಿಸಿತ್ತು– ಎಂಬುದನ್ನೆಲ್ಲಾ ನೆನೆದು ಅವಳಿಗೆ ಆಶ್ಚರ್ಯವಾಯಿತು. ತುಂಬಿತುಳುಕುತಿದ್ದ ತನ್ನ ಸೌಹಾರ್ದಭಾವಕ್ಕೆ ಸ್ವಲ್ಪವೂ ಪ್ರತಿಕ್ರಿಯೆತೋರದೆ, ತುಟಿಪಟಕ್ಕೆನ್ನದೆ, ಮನಸ್ಸು ಕರಗದಿದ್ದ ಹೆಪ್ಸಿಬಾ ಅದು ಹೇಗೆ ಅಷ್ಟೊಂದು ಪ್ರೇಮವನ್ನು ಗಳಿಸಕೊಳ್ಳಲು ಸಮರ್ಥಳಾದಳು? ಅತ್ತ ಕ್ಲಿಫರ್ಡ್– ಕಾಲಕ್ಕೆ ಮುಂಚಿನ ಮುಪ್ಪು, ಸುತ್ತುಗಟ್ಟಿದ ಭೀಕರ ಘೋರಾಪರಾಧದ ರಹಸ್ಯಭಾವ, ಅವನ ಉಸಿರಿನಲ್ಲಿ ಇನ್ನೂ ಅಡಗಿಕೊಂಡಿದ್ದ ಸಂಕುಚಿತ ಸೆರೆಮನೆಯ ವಾತಾವರಣ– ಇಷ್ಟೆಲ್ಲ ಪ್ರತಿಬಂಧಕಗಳಿದ್ದರೂ, ಅದು ಹೇಗೆ ಅವನು ಅತಿಮುಗ್ಧ ಶಿಶುವಿನಂತೆ ಪರಿವರ್ತನೆ ಹೊಂದಿದ್ದನು! ಅಲ್ಲದೆ, ಅವನ ಮೇಲೆ ಕಾವಲಿದ್ದು, ಇನ್ನೂ ನಿರ್ಣಯಕ್ಕೆ ಒಳಗಾಗದಿದ್ದ ಅವನ ಪ್ರತಿಗಳಿಗೆಯ ಬದುಕನ್ನು ನಿರ್ಣಯಿಸುವ ಅವನ ಭಾಗದ ದೈವವಾಗಿರುವುದು ತನ್ನ ಕರ್ತವ್ಯ ಎಂದು ಅದು ಹೇಗೆ ಭಾವಿಸಿದ್ದಳು ಫೀಬೆ! ಬೀಳ್ಕೊಳ್ಳುವ ಆ ಕ್ಷಣದಲ್ಲಿ ಪ್ರತಿಯೊಂದು ಸಂಗತಿಯೂ ಅವಳ ದೃಷ್ಟಿಗೆ ಪ್ರಮುಖವಾಗಿ ಎದ್ದುನಿಂತು ಕಾಣುತ್ತಿತ್ತು. ಅವಳು ಎಲ್ಲಿಯೆ ನೋಡಲಿ, ಯಾವುದರ ಮೇಲೆ ಕೈಯಿಡಲಿ, ಆರ್ದ್ರವಾದ ಮಾನವಹೃದಯ ಅದರಲ್ಲಿ ಸ್ಪಂದಿಸುತ್ತಿದೆಯೋ ಎಂಬಂತೆ ಆ ವಸ್ತು ಅವಳ ಅರಿವಿಗೆ ಗೋಚರವಾಗುತ್ತಿತ್ತು.

ಅವಳು ಕಿಟಕಿಯಿಂದ ತೋಟವನ್ನು ಇಣಿಕಿ ನೋಡಿದಳು; ತನ್ನ ಪೀತದಾರು ಮರಗಳ ಕಾಡಿನ ಹಾಗೂ ಕ್ಲೋವರ್ ಸಸ್ಯದ ಹೊಲಗಳ ಸುವಾಸನೆಯನ್ನು

ಕ್ಲಿಫರ್ಡನಿಂದ ಅವನ ಯಾವ ಆಶೆ ನೆರವೇರೀತು. ಯಾವ ಹೆದರಿಕೆ ತಾನೆ ಇದ್ದೀತು?"

"ಆದರೂ, ಯಾವುದೋ ವಿಪತ್ತು ಸನ್ನಿಹಿತವಾಗಿದೆ ಎಂಬಂತೆ ನೀವು ಮಾತಾಡಿದಿರಲ್ಲಾ? ಎಂದು ಫೀಬೆ ಒತ್ತಾಯದಿಂದ ಕೇಳಿದಳು.

"ಓ, ಅದೇ! ಅದು ಯಾಕೆಂದರೆ, ನನಗೊಂದು ಜಾಡ್ಯ ಹಿಡಿದಿದೆ!" ಎಂದು ಕಲಾವಿದನು ಉತ್ತರಕೊಟ್ಟನು: "ನನ್ನ ಮನಸ್ಸು ಒಕ್ಕಡೆಗೆ ತಿರಿಚಿಕೊಂಡಿದೆ; ನಿನ್ನದನ್ನು ಬಿಟ್ಟರೆ, ಪ್ರತಿಯೊಬ್ಬರದೂ ಹಾಗೆಯೇ ಇದೆ. ಅದೂ ಅಲ್ಲದೆ, ಈ ಹಳೆಯ ಪಿನ್ಚನ್ ಭವನದಲ್ಲಿ ನಾನು ಒಬ್ಬ ಒಕ್ಕಲಾಗಿದ್ದುಕೊಂಡು, ಈ ಹಳೆಯ ತೋಟದಲ್ಲಿ ಕುಳಿತಿರುವುದು ಎಷ್ಟು ವಿಚಿತ್ರವಾಗಿದೆಯೆಂದರೆ, (ಅಕೋ ಕೇಳು, ಮಾಲನ ಬಾವಿಯಲ್ಲಿ ಅದೇನೋ ಗೊಣಗುವ ಮರ್ಮರಧ್ವನಿ ಕೇಳಿಬರುತ್ತಿದೆ!), ಈ ಒಂದು ಸಂದರ್ಭವನ್ನೇ ಗಣನೆಗೆ ತೆಗದುಕೊಂಡರೂ ಸಾಕು– 'ಅಂತಿಮ ದುರಂತಘಟನೆಗೆ ಪೂರ್ವಭಾವಿಯಾದ ಐದನೆಯ ಅಂಕವನ್ನು ವಿಧಿ ಸಜ್ಜುಗೊಳಿಸುತ್ತಿದೆ' ಎಂದು ಊಹಿಸದೆ ಇರಲಾರೆ."

"ಅಕೋ! ಎಂದಿಗಿಂತ ಹೆಚ್ಚಾಗಿ ನನಗೆ ಭ್ರಾಂತಿ ಹಿಡಿಸುತ್ತೀರಿ!" ಎಂದು ಹೊಸದಾದ ಕೋಪದಿಂದ ಫೀಬೆ ಹೇಳಿದಳು; ಏಕೆಂದರೆ, ಕತ್ತಲು ಕವಿದ ಮೂಲೆಗೂ ಸೂರ್ಯನ ಬೆಳಕಿಗೂ ಎಂಥ ವೈರವೋ, ರಹಸ್ಯವೆಂದರೆ ಸ್ವಭಾವತಃ ಅವಳಿಗೂ ಅದೇ ವೈರ.

ಅವಳ ಕೈಯನ್ನು ಒತ್ತುತ್ತಾ ಹಾಲ್‌ಗ್ರೇವ್ ನುಡಿದ: "ಹಾಗಿದ್ದ ಮೇಲೆ, ಸ್ನೇಹಿತರಾಗಿ ನಾವು ಅಗಲೋಣ! ಅಥವಾ, ಸ್ನೇಹಿತರಾಗಲ್ಲದಿದ್ದರೆ, ನೀನು, ಪ್ರಪಂಚದಲ್ಲಿ ಇನ್ನುಳಿದ ಪ್ರತಿಯೊಬ್ಬರನ್ನೂ ಪ್ರೀತಿಸುವ ನೀನು, ನನ್ನನ್ನು ಪೂರ್ತಿ ದ್ವೇಷಿಸುವುದಕ್ಕೆ ಮೊದಲು ಅಗಲೋಣ!"

"ಹಾಗಿದ್ದ ಮೇಲೆ, ನಮಸ್ತೆ" ಎಂದಳು ಫೀಬೆ, ಬಿಚ್ಚು ಮನಸ್ಸಿನಿಂದ: "ಬಹಳ ಹೊತ್ತು ಮುನಿಸಿಕೊಂಡಿರಬೇಕೆಂದು ನನ್ನ ಉದ್ದೇಶವಲ್ಲ; ನೀವು ಹಾಗೆಂದು ಭಾವಿಸುವ ಹಾಗೆ ಮಾಡುವುದೆಂದರೆ, ನನಗೆ ವ್ಯಥೆಯಾಗುವುದು. ಅಗೋ ಅಲ್ಲಿ, ಬಾಗಿಲ ನೆರಳಿನಲ್ಲಿ, ಈಗ ಸುಮಾರು ಕಾಲುಗಂಟೆಯಿಂದಲೂ ಅಕ್ಕ ಹೆಪ್ಸಿಬಾ ನಿಂತಿದ್ದಾರೆ! ಈ ತೇವ ಹಿಡಿದ ತೋಟದಲ್ಲಿ ನಾನು ಬಹಳಕಾಲ ಇದ್ದು ಬಿಟ್ಟಿದ್ದೇನೆ ಎಂದು ಆಕೆ ಯೋಚಿಸಿರಬಹುದು. ಆದ್ದರಿಂದ, ಈ ರಾತ್ರಿ ಶುಭವಾಗಲಿ, ನಮಸ್ತೆ!"

ಆ ಬಳಿಕ, ಮಾರನೆಯ ಬೆಳಗ್ಗೆ, ಹುಲ್ಲಿನಟೋಪಿ ಧರಿಸಿ, ಒಂದು

ಸಹಜಶಕ್ತಿ ಸಾಮರ್ಥ್ಯಗಳನ್ನು ಪುನರುಜ್ಜೀವನಗೊಳಿಸಿದ್ದರೂ ಇರಬಹುದು. ಅದು ಹೇಗಾದರೂ ಇರಲಿ; ದ್ರಷ್ಟಾರನಿಗಿರುವ ಅಗಾಧವಾದ ಅಂತರ್ದೃಷ್ಟಿಯಲ್ಲಿದಿದ್ದರೂ ಹೆಣ್ಣಿಗೆ ಸಹಜವಾದ ಸೂಕ್ಷ್ಮಾಭಿ ರುಚಿಗಿಂತ ಹೆಚ್ಚಿನದಾದ ಒಂದು ಮೆಚ್ಚಿಕೊಳ್ಳುವ ಶಕ್ತಿ ಅವಳಿಗಿದ್ದಿತು; ಆ ಶಕ್ತಿಗೆ ಒಳಗಾಗಿತ್ತು ಅವಳ ಹೃದಯ; ಫೀಬೆಗೆ ಈ ಭಾವನೆಯ ಅರಿವಾಯಿತು. ಒಂದು ಕ್ಷಣದ ಹಿಂದೆ, ತಾನು ಮರೆಮಾಜಬೇಕೆಂದು ಬಯಸಬಹುದಾದ ಯಾವ ಸಂಗತಿಯೂ ಅವಳಿಗೆ ಗೊತ್ತಿರಲಿಲ್ಲ. ಈಗಲಾದರೋ, ಇನ್ನೊಬ್ಬರ ಗ್ರಹಣಶಕ್ತಿಯ ಮಾಧ್ಯಮದ ಮೂಲಕ ತನ್ನ ಸ್ವಂತ ಅರಿವಿಗೆ ಯಾವುದೋ ಒಂದು ರಹಸ್ಯವನ್ನು ಸೂಚಿಸಲಾಗಿದೆಯೋ ಎಂಬಂತೆ, ಕ್ಲಿಫರ್ಡನ ನಟ್ಟ ನೋಟಕ್ಕೆ ಸಿಲುಕದ ರೀತಿಯಲ್ಲಿ ತನ್ನ ರೆಪ್ಪೆಗಳನ್ನು ಕೆಳತಗ್ಗಿಸಲು ಅವಳಿಗೆ ಸಂತೋಷವೆನಿಸಿತ್ತು. ಕೆನ್ನೆ ಸಹ ಕೆಂಪೇರಿತು– ರಂಗೇರುವುದನ್ನು ಅವಳು ಅಡಗಿಸಿಕೊಳ್ಳಲು ಅವಳು ಬಹಳ ಪ್ರಯತ್ನಿಸಿದ್ದರಿಂದ ಕೆನ್ನೆ ಇನ್ನೂ ಕೆಂಪಾಯಿತು; ಅದು ಸಿಕ್ಕಾಬಟ್ಟೆ ಹೆಚ್ಚುವ ಭರದಲ್ಲಿ ಮೇಲು ಮೇಲಕ್ಕೆ ಏರಿಹೋಗಿ, ಕಡೆಗೆ ಅವಳ ಹುಬ್ಬಿಗೆ ಕೂಡ ಅದು ವ್ಯಾಪಿಸಿತು.

ಖಿನ್ನತೆಯಿಂದ ಕೂಡಿದ ಮುಗುಳುನಗೆ ನಗುತ್ತ ಕ್ಲಿಫರ್ಡ್ ಹೇಳಿದ: "ಇನ್ನು ಸಾಕು, ಫೀಬೆ. ನಾನು ನಿನ್ನನ್ನು ಮೊದಲು ನೋಡಿದಾಗ, ಪ್ರಪಂಚದಲ್ಲೆಲ್ಲಾ ನೀನೇ ಅತ್ಯಂತ ಅಂದವಾದ ಕನ್ಯೆಯಾಗಿ ಕಂಡುಬಂದೆ; ಈಗಲಂತೂ ನೀನು ಪರಮ ಸುಂದರಿಯಾಗಿ ಪರಿಣಮಿಸಿಬಿಟ್ಟಿದ್ದೀಯೆ! ಕನ್ಯಾವಸ್ಥೆ ಪ್ರೌಢಸ್ತ್ರೀತ್ವವಾಗಿಬಿಟ್ಟಿದೆ; ಮೊಗ್ಗು ಅರಳಿ ಹೂವಾಗಿದೆ! ಇನ್ನು ಹೊರಡು! ನಾನು ಒಂಟಿ ಎಂಬ ಭಾವ ಈಗ ಮೊದಲಿಗಿಂತ ಹೆಚ್ಚಾಗಿದೆ."

ಫೀಬೆ ಇಬ್ಬರನ್ನೂ ಬೀಳ್ಕೊಂಡು, ಅಂಗಡಿಯ ಮೂಲಕ ಹಾದುಹೋದಳು; ಹಾಗೆ ಹೋಗುವಾಗ, ಒಂದು ಕಂಬನಿಯನ್ನು ಉದುರಿಸುವುದಕ್ಕಾಗಿ, ರೆಪ್ಪೆಗಳನ್ನು ಮಿಟುಕಿಸಿದಳು, ಅಷ್ಟೆ; ಏಕೆಂದರೆ, ಅವಳು ಅಗಲಿ ಹೋಗುತ್ತಿದ್ದುದು ಸ್ವಲ್ಪ ಕಾಲ ಮಾತ್ರ, ಅದಕ್ಕಾಗಿ ಮನಸ್ಸಿನಲ್ಲಿ ಕುಗ್ಗುವುದು ಅವಿವೇಕ; ಹೀಗಿದ್ದುದರಿಂದ, ತನ್ನ ಕರವಸ್ತ್ರದಿಂದ ಕಂಬನಿಯನ್ನು ಒರಸಿಕೊಂಡು, ತಾನು ಕಂಬನಿ ಸುರಿಸಿದ್ದೇನೆ ಎಂದು ಒಪ್ಪಿಕೊಳ್ಳಲು ಅವಳು ಸಿದ್ಧಳಾಗಿರಲಿಲ್ಲ. ಬಾಗಿಲ ಮೆಟ್ಟಲಮೇಲೆ, ಅವಳು ಭಕ್ಷಣವಿದ್ಯೆಯಲ್ಲಿ ಗಟ್ಟಿಗನಾಗಿದ್ದ ಆ ಪುಟ್ಟ ಬಾಲಕನನ್ನು ಸಂಧಿಸಿದಳು; ಆ ವಿದ್ಯೆಯಲ್ಲಿ ಅವನು ಮೆರೆದ ಆಶ್ಚರ್ಯಕರವಾದ ಸಾಧನೆಗಳನ್ನು ನಾವು ಆಗಲೇ ನಮ್ಮ ಕಥೆಯ ಮುಂಚಿನ ಪುಟಗಳಲ್ಲಿ ಉಲ್ಲೇಖಿಸಿದ್ದೇವೆ. ಅವಳು ಕಿಟಕಿಯಿಂದ ಪ್ರಾಣಿಜೀವನಚರಿತ್ರೆಯ ಯಾವವೋ ಕೆಲವು ಮಾದರಿಗಳನ್ನು ತೆಗೆದುಕೊಂಡಳು–

ಮತ್ತೆ ಆಘ್ರಾಣಿಸಬಹುದು ಎಂಬ ಭಾವನೆಯಿಂದ ಉಂಟಾದ ನಲಿವಿಗಿಂತ ಹೆಚ್ಚಾಗಿ, ಬಹಳಕಾಲದಿಂದ ಕಳೆಗಿಡಗಳು ಬೆಳೆದು ಹಾಳಾಗಿಹೋದ ಈ ಕಪ್ಪು ನೆಲದ ಸ್ಥಳವನ್ನು ತೊರೆದುಹೋಗಬೇಕಲ್ಲಾ ಎಂಬ ಭಾವನೆಯಿಂದ ಹೆಚ್ಚು ವ್ಯಸನಪಟ್ಟಳು. ಹುಂಜನನ್ನೂ ಅದರ ಜೊತೆಯ ಎರಡು ಹೆಣ್ಣುಕೋಳಿಗಳನ್ನೂ ಗಣ್ಯವಾದ ಕೋಳಿಮರಿಯನ್ನೂ ಕೂಗಿ ಕರೆದು, ಬೆಳಗ್ಗೆಯ ಉಪಹಾರದ ಮೇಜಿನಮೇಲಿದ್ದ ಕೆಲವು ರೊಟ್ಟಿಯ ಚೂರುಗಳನ್ನು ಅವುಗಳ ಬಳಿಗೆ ಎಸೆದಳು. ಅವುಗಳನ್ನು ಆತುರಾತುರವಾಗಿ ನುಂಗಿಬಿಟ್ಟು, ಆ ಕೋಳಿಮರಿ ತನ್ನ ರೆಕ್ಕೆಗಳನ್ನು ಬಿಚ್ಚಿ, ಫೀಬೆಯ ಹತ್ತಿರ ಕಿಟಕಿಯ ಚೌಕಟ್ಟು ತಳದ ಮೇಲೆ ಹಾರಿಬಂದು ಕುಳಿತುಕೊಂಡಿತು; ಹಾಗೂ, ತನ್ನ ಮನೋಭಾವವನ್ನು ವಟಗುಟ್ಟಿ ಪ್ರಕಟಪಡಿಸಿತು. ತಾನು ಇಲ್ಲದಿರುವಾಗ ಒಳ್ಳೆಯ ಕೋಳಿಮರಿ ಎನಿಸಿಕೊಳ್ಳುವಂತೆ ವರ್ತಿಸಬೇಕೆಂದು ಅದಕ್ಕೆ ಹೇಳಿ, ಒಂದು ಚಿಕ್ಕ ಚೀಲದ ತುಂಬ 'ಬಕ್‌ವ್ಹೀಟ್' ಧಾನ್ಯ ತಂದು ಕೊಡುವುದಾಗಿ ಅದಕ್ಕೆ ಮಾತುಕೊಟ್ಟಳು ಫೀಬೆ.

"ಫೀಬೇ! ನೀನು ನಮ್ಮ ಮನೆಗೆ ಬಂದಾಗ ಹೇಗೆ ನಸುನಗುತ್ತಿದ್ದೆಯೊ ಹಾಗೆ ಸ್ವಾಭಾವಿಕವಾಗಿ ಈಗ ನಗುತ್ತಿಲ್ಲ! ಆಗ್ಗೆ, ನಗೆ ತಾನಾಗಿ ಹೊರ ಹೊಮ್ಮಿ ಹೊಳೆಯುತ್ತಿತ್ತು; ಈಗ, ನೀನು ಅದನ್ನು ಬರಿಸಿಕೊಳ್ಳುತ್ತೀಯೆ. ನೀನು ಹುಟ್ಟಿ ಬೆಳೆದ ವಾತಾವರಣಕ್ಕೆ ನೀನು ಸ್ವಲ್ಪ ಕಾಲ ಹಿಂದಿರುಗಿ ಹೋಗುತ್ತಿದ್ದೀಯೆ, ಅದು ಒಳ್ಳೆಯದೆ ಆಯಿತು. ನಿನ್ನ ಒಳಗಿನ ಶಕ್ತಿಯಮೇಲೆ ತುಂಬ ಭಾರ ಹೇರಿಕೊಂಡಂತಾಗಿದೆ. ಮನೆತುಂಬ ಮಂಕು ಕವಿದಿದೆ, ಒಂಟಿಯಾಗಿದೆ; ಅಂಗಡಿಯಲ್ಲಿ ತುಂಬ ಕಿರುಕುಳ; ಇನ್ನು ನನ್ನ ವಿಷಯ ತೆಗೆದುಕೊಂಡರೋ, ಯಾವುದನ್ನೇ ಆಗಲಿ ಇರುವುದಕ್ಕಿಂತ ಹೆಚ್ಚ ಗೆಲುವಾಗಿ ಕಾಣುವಂತೆ ಮಾಡಲಾರೆ. ನಿನ್ನ ಮನಸ್ಸಿಗೆ ಒಂದೇ ನೆಮ್ಮದಿ ಎಂದರೆ, ಪ್ರಿಯ ಕ್ಲಿಫರ್ಡನ ಸಹವಾಸ!" ಎಂದು ತಿಳಿಸಿದಳು ಹೆಪ್ಸಿಬಾ.

ಇದ್ದಕ್ಕಿದ್ದ ಹಾಗೆ ಅವಳ ಸೋದರ ಕ್ಲಿಫರ್ಡ್ ಕೂಗಿ ಹೇಳಿದ; ಬೆಳಗ್ಗೆಯೆಲ್ಲಾ ಅವನು ಮಾತಾಡಿದ್ದುದೇ ಬಹು ಸ್ವಲ್ಪ: "ಇಲ್ಲಿ ಬಾ, ಫೀಬೆ! ಹತ್ತಿರ, ಇನ್ನೂ ಹತ್ತಿರ– ನನ್ನ ಮುಖವನ್ನ ದೃಷ್ಟಿಸಿ ನೋಡು, ಸ್ವಲ್ಪ!"

ಫೀಬೆ ತನ್ನ ಎರಡು ಸಣ್ಣ ಕೈಗಳನ್ನೂ ಕುರ್ಚಿಯ ಎರಡೂ ಕೈಗಳಮೇಲೆ ಊರಿ, ಅವನು ತನ್ನ ಮುಖವನ್ನು ಎಷ್ಟು ಸಾಧ್ಯವೋ ಅಷ್ಟು ಎಚ್ಚರಿಕೆಯಿಂದ ಪರಿಶೀಲಿಸಲಾಗುವಂತೆ ಅದನ್ನು ಅವನ ಕಡೆಗೆ ತಗ್ಗಿಸಿದಳು. ಈ ಅಗಲಿಕೆಯ ಗಳಿಗೆಯ ಸುಪ್ತ ರಾಗಭಾವಗಳು ಅವನ ಮಬ್ಬುಗವಿದ ಮತ್ತು ದುರ್ಬಲಗೊಂಡ

ಪ್ರಾಣಿಗಳು, ಅವರ ಸಲುವಾಗಿ ಇನ್ನೂ ಬೇಗ ಬರಬೇಕಮ್ಮಾ, ಫೀಬೆ. ನೀನಿಲ್ಲದೆ ಅವರಿಗೆ ಎಂದಿಗೂ ಸಾಗುವುದಿಲ್ಲ– ಎಂದಿಗೂ ಇಲ್ಲ, ಫೀಬೆ, ಎಂದಿಗೂ ಇಲ್ಲ! ದೇವದೂತನೇ ಒಬ್ಬ ಬಂದು ಅವರ ಜೊತೆ ವಾಸಿಸುತ್ತ, ಅವರ ಮುಂಕುಕವಿದ ಮನೆಯನ್ನು ಸುಖಸಂತೋಷಗಳಿಂದ ತುಂಬಿರುವಂತೆ ಮಾಡಿದ್ದ ಅಂತ ಇಟ್ಟುಕೋ. ಅವನನ್ನ ಬಿಟ್ಟಿರುವುದು ಅವರಿಗೆ ಹೇಗೆ ಸಾಧ್ಯವಿಲ್ಲವೋ ಹಾಗೆಯೆ ನಿನ್ನನ್ನೂ ಬಿಟ್ಟಿರಲಾರರು! ಇಂಥ ಒಂದು ಸಂತೋಷದ ಬೇಸಗೆಯ ಬೆಳಗ್ಗೆ ಅ ದೇವದೂತ ತನ್ನ ರೆಕ್ಕೆ ಬಿಚ್ಚಿಕೊಂಡು ತಾನು ಯಾವ ಸ್ಥಳದಿಂದ ಬಂದಿದ್ದನೋ ಅಲ್ಲಿಗೆ ಹಾರಿಹೊರಟುಹೋದ ಅಂತ ಇಟ್ಟುಕೋ; ಆಗ ಅವರಿಗೆ ದುಃಖವಾಗುವುದೆಂದು ನಿನಗೆ ತೋರುವುದಿಲ್ಲವೆ? ನೋಡಿದೆಯಾ, ಈಗ ನೀನು ರೈಲುಮಾರ್ಗವಾಗಿ ನಿನ್ನ ಮನೆಗೆ ಹೋಗುತ್ತಿರುವೆಯಷ್ಟೆ; ಅವರಿಗೆ ಹಾಗೆಯೆ ಅನ್ನಿಸುತ್ತಿದೆ! ಅವರದನ್ನು ಸಹಿಸಲಾರರು, ಫೀಬೆ: ಆದ್ದರಿಂದ, ಖಂಡಿತ ಬೇಗ ಬಂದುಬಿಡು ಹಿಂದಕ್ಕೆ!"

"ನಾನೇನು ದೇವದೂತನಲ್ಲವಲ್ಲಾ, ವೆನ್ನರ್ ಮಾವಯ್ಯ" ಎಂದು, ಬೀದಿಯ ಮೂಲೆ ತಿರುವಿನಲಿ ಅವನಿಗೆ ತನ್ನ ಕೈನೀಡುತ್ತಿರುವಾಗ, ಮುಗುಳು ನಗೆ ನಗುತ್ತಾ ಹೇಳಿದಳು ಫೀಬೆ: "ಆದರೆ, ನನಗೆ ತೋರುತ್ತೆ, ಜನ ತಮ್ಮ ಕೈಲಾದಷ್ಟು ಒಳಿತನ್ನು ಮಾಡುವಾಗ ತಾವು ದೇವದೂತರ ಹಾಗೆ ಎಂದು ಭಾವಿಸಿಕೊಳ್ಳುವಂತೆ ಬೇರೆ ಎಂದೂ ಭಾವಿಸಿಕೊಳ್ಳಲಾರರು. ಆದ್ದರಿಂದ ನಾನು ಖಂಡಿತ ಹಿಂದಿರುಗಿ ಬರುತ್ತೇನೆ!"

ಅಂತು ಅಗಲಿದರು ಆ ಮುದುಕ ಮತ್ತು ಆಶಾಭರಿತಳಾದ ಆ ಹುಡುಗಿ; ಫೀಬೆ ಬೆಳಗಿನ ಉತ್ಸಾಹದ ರೆಕ್ಕೆ ಬೆಳಸಿಕೊಂಡು, ವೆನ್ನರ್ ಮಾವ ಅಷ್ಟೊಂದು ನಲ್ಮೆಯಿಂದ ಅವಳನ್ನು ಯಾರಿಗೆ ಹೋಲಿಸಿದ್ದನೊ ಆ ದೇವದೂತರ ಆಕಾಶಗಮನ ಶಕ್ತಿಯನ್ನು ಹೊಂದಿರುವಳೋ ಎಂಬಂತೆ, ಅಷ್ಟೇ ವೇಗವಾಗಿ ಬೇಗನೆ ಹೊರಟುಹೋದಳು.

* * * *

ಅದು ಮೊಲವೋ ಇಲ್ಲವೆ ಫೇಂಡಾಮೃಗವೋ ಎಂಬುದನ್ನು ಅವಳಿಗೆ ಖಚಿತವಾಗಿ ತಿಳಿಯಪಡಿಸಲು ಅವಳ ಕಣ್ಣುಗಳಿಗೆ ಸಾಧ್ಯವಿರಲಿಲ್ಲ; ಏಕೆಂದರೆ, ಅವು ತೇವದಿಂದ ಮಂಜಾಗಿದ್ದುವು; ಅಂತೂ ಅದನ್ನು ಅವಳು ಬಿಟ್ಟು ಹೋಗುವಾಗಿನ ಬಹುಮಾನವಾಗಿ ಆ ಹುಡುಗನ ಕೈಗೆ ಹಾಕಿ, ತನ್ನ ಹಾದಿಯಲ್ಲಿ ಹೋದಳು. ವೃದ್ಧ ವೆನ್ನರ್ ಮಾವ ಅದೇ ತಾನೆ ತನ್ನ ಹೆಗಲ ಮೇಲೆ ಒಂದು ಮರದ ಚೌಕಟ್ಟನ್ನೂ ಗರಗಸವನ್ನೂ ಹೊತ್ತುಕೊಂಡು ತನ್ನ ಮನೆಯ ಬಾಗಿಲಿಂದ ಹೊರಹೊರಟುಬರುತ್ತಿದ್ದನು; ಬೀದಿಯಲ್ಲಿ ಕಾಲೆಳೆದುಕೊಂಡುಹೋಗುತ್ತಿದ್ದ ಅವನು, ತಮ್ಮಿಬ್ಬರ ಹಾದಿ ಒಂದಿಗೆ ಸಾಗುವತನಕ ಫೀಬೆಯ ಜೊತೆಗೂಡಿ ಹೋಗಲು ಹಿಂದೆಮುಂದೆ ನೋಡಲಿಲ್ಲ; ಅವನು ಧರಿಸಿದ್ದ ತೇಪೆಯ ಅಂಗಿ, 'ಬೀವರ್' ಚರ್ಮದ ಕೆಂಗಂದು ತಿರುಗಿದ ಟೋಪಿ, ಕಿತ್ತಾನಾರುಬಟ್ಟೆಯ ಷರಾಯಿಯ ವಿಚಿತ್ರ ಮಾದರಿ– ಇವನ್ನು ಗಮನಿಸಿಯೂ ಕೂಡ, ಅವನನ್ನು ಹಿಂದೆಹಾಕಿ ಮುಂದೆ ನಡೆದುಹೋಗಲು ಅವಳಿಗೆ ಮನಸ್ಸು ಬರಲಿಲ್ಲ.

ಈ ಬೀದಿಯ ತಾತ್ವಿಕ ನುಡಿದ: "ಮುಂದಿನ ಸಬ್ಬತು ದಿನದ ಮಧ್ಯಾಹ್ನ ನಿನ್ನ ಜೊತೆ ನಮಗೆ ತಪ್ಪಿಹೋಗುತ್ತೆ. ಒಬ್ಬನಿಗೆ ಉಸಿರಾಡುವುದು ಎಷ್ಟು ಸಹಜ ಅಷ್ಟು ತುಸಹೊತ್ತು ಹಿಡಿಯುತ್ತೆ ಕೆಲವರು ಬೆಳೆಯುವುದಕ್ಕೆ; ಅದು ಯಾಕೋ ಹೇಗೋ ಹೇಳುವುದು ಕಷ್ಟ; ಹೀಗಂದ ಅಂತ ಏನೂ ತಿಳಿದಕೋಬೇಡ, ಮಿೀಸ್ ಫೀಬೆ; (ಇಷ್ಟಕ್ಕೂ, ಮುದುಕ ಹಾಗೆ ಹೇಳುವುದರಲ್ಲಿ ಅಪರಾಧವೂ ಇಲ್ಲ ಅಂತ ಇಟ್ಟುಕೋ); ನನ್ನ ಪಾಲಿಗೆ ನೀನು ಬೆಳೆದಿರುವುದು ಹಾಗೆ! ನನಗೆ ಆಗಿವೆ ಬಹಳ ವರ್ಷ; ನಿನ್ನ ಬದುಕು ಈಗ ತಾನೆ ತೊಡಗಿದೆ; ಆದರೂ, ಅದು ಹೇಗೋ ಏನೋ,– ನಮ್ಮಮ್ಮನ ಮನೆಯ ಬಾಗಿಲಿನಲ್ಲಿ ನಿನ್ನನ್ನ ಕಂಡಿದ್ದೆ ಅಂತ ಇಟ್ಟುಕೋ, ನನ್ನ ದಾರಿ ಯುದ್ದಕ್ಕೂ ಹಬ್ಬಿದ ಬಳ್ಳಿಯಹಾಗೆ ನೀನು ಹೂತಿದ್ದೆ ಅಂತ ಇಟ್ಟುಕೋ, ಆವಾಗ ಎಷ್ಟು ನನಗೆ ಪರಿಚಯವಾಗಿರುತ್ತಿದ್ದೆಯೋ ಅಷ್ಟು ಪರಿಚಯವಾಗಿದ್ದೀ ಈಗ. ನೀನು ಬೇಗ ಹಿಂತಿರುಗಿ ಬರಬೇಕು, ತಿಳಿಯಿತೊ; ಇಲ್ಲದಿದ್ದರೆ, ನಾನು ನನ್ನ ಹೊಲಕ್ಕೆ ಹೊರಟುಹೋಗುವೆ. ಯಾಕೆ ಅಂತೀಯೋ, ಈ ಮರಕೊಯ್ಯುವ ಕೆಲಸ ಇದೆಯಲ್ಲಾ, ತುಂಬಾ ಕಷ್ಟದ್ದು, ನನ್ನ ಬೆನ್ನುನೋವು ಅದನ್ನ ತಡೆಯಲಾರದು."

"ಬಹಳ ಬೇಗ ಬಂದುಬಿಡುತ್ತೇನೆ, ವೆನ್ನರ್ ಮಾವಯ್ಯ" ಎಂದು ಫೀಬೆ ಉತ್ತರಕೊಟ್ಟಳು.

ಅವಳ ಜೊತೆಗಾರ ಮುಂದುವರಿಸಿದ: "ಪಾಪ, ಅಲ್ಲಿದಾರಲ್ಲ ಆ ಬಡ

ತೊಟ್ಟು, ತನ್ನ ತಲೆಯಮೇಲೆ ಮುಗಿಲಮಾಲೆಯ ರುಮಾಲುಟೋಪಿ ಧರಿಸಿದ್ದ ಗಾಳಿ! ಅಂಗಡಿಯ ಗಿರಾಕಿ ಬಿದ್ದುಹೋಯಿತು; ಕಾರಣ, ಬಿಯರ್ ಮದ್ಯ ಹಾಗೂ ಇತರ ಕೆಟ್ಟು ಹೋಗುವ ಸರಕಿನ ಇದ್ದಬದ್ದ ತನ್ನ ಸ್ವಲ್ಪ ದಾಸ್ತಾನನ್ನು ಸಿಡುಕುಮೋರೆ ಮಾಡಿಕೊಂಡು ನೋಡುವುದರ ಮೂಲಕ ಅವುಗಳನ್ನು ಹುಳಿಚು ಮಾಡಿದಳು ಎಂಬ ಕತೆಯೊಂದು ಹಬ್ಬಿತು. ಅವಳ ನಡೆವಳಿಕೆಯ ಕುರಿತು ಜನ ನ್ಯಾಯವಾಗಿಯೇ ಏನಾದರೂ ದೂರು ಮಾಡಲು ಅವಕಾಶವಿತ್ತೆಂಬುದು ಬಹುಶಃ ನಿಜ; ಆದರೆ, ಕ್ಲಿಫರ್ಡನ ವಿಷಯದಲ್ಲಿ ಸಿಡುಕುತ್ತಲೂ ಇರಲಿಲ್ಲ ನಿರ್ದಯಳಾಗಿಯೂ ಇರಲಿಲ್ಲ; ಅಲ್ಲದೆ, ತನ್ನ ಹೃದಯದ ಪ್ರೇಮಭಾವವು ಅವನನ್ನು ಮುಟ್ಟುವಂತೆ ಮಾಡುವುದು ಸಾಧ್ಯವಾಗಿದ್ದ ಪಕ್ಷದಲ್ಲಿ, ಅವಳು ಇಟ್ಟುಕೊಂಡಿದ್ದ ಆ ಭಾವ, ಎಂದಿಗಿಂತಲೂ ಕಡಮೆಯೇನಾಗಿರಲಿಲ್ಲ. ಆದಾಗ್ಯೂ, ಅವಳ ಸರ್ವಪ್ರಯತ್ನಗಳೂ ಉಪಯೋಗಕ್ಕೆ ಬಾರದವಾದ್ದರಿಂದ, ಆ ಬಡ ವೃದ್ಧೆ ನಿಶ್ಚೇತನಳಾದಳು. ಕೋಣೆಯ ಒಂದು ಮೂಲೆಯಲ್ಲಿ ಮೌನವಾಗಿ ಕುಳಿತುಕೊಂಡಿರುವುದು ಹೊರತಾಗಿ, ಬೇರೆ ಏನುಮಾಡುವುದಕ್ಕೂ ಅವಳಿಗೆ ಸಾಧ್ಯವಿರಲಿಲ್ಲ; ಆ ವೇಳೆಯಲ್ಲಿ, ತೊಯ್ದ ಪೇರುಮರದ ಕೊಂಬೆಗಳು ಸಣ್ಣ ಕಿಟಕಿಗಳಿಗೆ ಅಡ್ಡಸಾಗಿ ಅತ್ತಿಂದಿತ್ತ ಒಲೆದಾಡುತ್ತಾ, ನಡುಹಗಲಿನಲ್ಲಿಯೂ ಒಂದು ಕಳವಳವನ್ನುಂಟುಮಾಡುತ್ತಿದ್ದವು; ಹೆಪ್ಸಿಬಾ ತನಗೆ ಅರಿವಿಲ್ಲದೆಯೆ ಆ ಕಾವಳವನ್ನು ತನ್ನ ದುಃಖವಡಸಿದ ಮುಖಮುದ್ರೆಯಿಂದ ಇನ್ನಷ್ಟು ಕತ್ತಲಾಗಿ ಮಾಡುತ್ತಿದ್ದಳು. ಅದು ಹೆಪ್ಸಿಬಾಳ ತಪ್ಪಲ್ಲ. ಪ್ರತಿಯೊಂದು ಪದಾರ್ಥವೂ....ಅವಳ ಜೀವಿತಕಾಲದಂಥದೇ ಮೂರುನಾಲ್ಕು ಜೀವಿತಕಾಲಗಳಲ್ಲಿ ಹವಾಮಾನ ಹೇಗಿದ್ದಿರೆಂಬುದನ್ನು ಕಂಡಿದ್ದ ಹಳೆಯ ಕುರ್ಚಿಮೇಜುಗಳು ಕೂಡ– ಇಂದಿನ ತಮ್ಮ ಅನುಭವದ ಅತ್ಯಂತ ಹೀನವಾದದ್ದೆಂಬಂತೆ ತುಂಬ ತೇವಹಿಡಿದು ತಣ್ಣಗಾಗಿರುವಂತೆ ಕಾಣುತ್ತಿದ್ದುವು. ಗೋಡೆಯಮೇಲಿದ್ದ ಪ್ಯೂರಿಟನ್ ಸರದಾರನ ಚಿತ್ರ ನಡುಗುತ್ತಿತ್ತು. ತನ್ನ ಏಳು ಇಪ್ಪಾರುಗಳ ಪ್ರತಿಯೊಂದು ಮೇಲಿನ ಅಟ್ಟದ ಕೋಣೆಯಿಂದ ಹಿಡಿದು ಕೆಳಗೆ ಅಡಿಗೆಮನೆಯ ದೊಡ್ಡ ಬೆಂಕಿಗೂಡಿನವರೆಗೆ ಮನೆಗೆ ಮನೆಯೇ ತರತರಗುಟ್ಟುತ್ತಿತ್ತು; ಬೆಚ್ಚಗಿರಲೆಂದು ಕಟ್ಟಿದ ಅದು ಆ ಮಹಲಿನ ಹೃದಯವೊ ಎಂಬಂತೆ ಹೆಚ್ಚು ಉಪಯುಕ್ತವಾಗಿದ್ದುದು ಇಂದು ಸುಖ ಕೊಡಲಾರದೆ, ಬರಿದಾಗಿತ್ತು.

ಹಜಾರದಲ್ಲಿ ಒಂದು ಬೆಂಕಿಯನ್ನು ಉರಿಸಿ, ಪರಿಸ್ಥಿತಿಯನ್ನು ಇದ್ದದ್ದರಲ್ಲಿ ಗೆಲವಾಗಿ ಮಾಡಲು ಹೆಪ್ಸಿಬಾ ಪ್ರಯತ್ನಪಟ್ಟಳು. ಆದರೆ, ಆ ಹಾಳು ಬಿರುಗಾಳಿಮಳೆಯ ಭೂತ ಮೇಲೆ ಕಾವಲಿದ್ದು, ಉರಿ ಹೊತ್ತಿಸಿದಾಗಲೆಲ್ಲ,

# ೧೫. ಸಿಡುಕು ಮೋರೆ–ಮುಗುಳು ನಗೆ

ನಿರುತ್ಸಾಹಕರವಾದ, ಬೇಸರಗೊಳಿಸುವ ಹಲವಾರು ದಿನಗಳು ಏಳು ಇಪ್ಪಾರುಗಳನ್ನು ಸೋಕಿ ಸಾಗಿಹೋದುವು. (ಫೀಬೆಯ ನಿರ್ಗಮನದ ಆ ಒಂದು ದೌರ್ಭಾಗ್ಯದ ಸಂದರ್ಭಕ್ಕೂ, ಭೂಮ್ಯಾಕಾಶಗಳನ್ನು ಕವಿದಿದ್ದ ಆ ಎಲ್ಲ ಮಬ್ಬಿಗೂ ಯಾವ ಸಂಬಂಧವನ್ನೂ ಕಲ್ಪಿಸಬೇಕಾಗಿಲ್ಲದಿದ್ದರೂ), ವಾಸ್ತವವಾಗಿ, ಒಂದು ಮೂಡಣ ಬಿರುಗಾಳಿ ಮಳೆ ಪ್ರಾರಂಭವಾಗಿ, ಆ ಹಳೆಯ ಮನೆಯ ಕಪ್ಪುಗಟ್ಟಿದ ಚಾವಣಿಯನ್ನೂ ಗೋಡೆಗಳನ್ನೂ ಹಿಂದೆಂದೂ ಇಲ್ಲದಷ್ಟು ಉಲ್ಲಾಸರಹಿತವಾಗಿ ಕಾಣುವಂತೆ ಮಾಡುವ ಕಾರ್ಯದಲ್ಲಿ ಅವ್ಯಾಹತವಾಗಿ ನಿರತವಾಗಿತ್ತು. ಆದರೂ ಕೂಡ, ಮನೆಯ ಹೊರಭಾಗ ಮನೆಯ ಒಳಭಾಗದ ಅರ್ಧದಷ್ಟೂ ಉಲ್ಲಾಸಹೀನವಾಗಿರಲಿಲ್ಲ. ಬಡ ಕ್ಲಿಫರ್ಡನ ಸುಖಾನುಭೋಗದ ಸಾಧನೋಪಾಯವೆಲ್ಲಾ ಮೊದಲೇ ಅತ್ಯಲ್ಪ; ಈಗ ಅದೂ ಇಲ್ಲವಾಯಿತು. ಫೀಬೆ ಅಲ್ಲಿರಲಿಲ್ಲ; ಸೂರ್ಯಪ್ರಕಾಶವೂ ನೆಲದ ಮೇಲೆ ಬೀಳುತ್ತಿರಲಿಲ್ಲ. ಕೆಸರು ಕೆಸರಾದ ಕಾಲುಹಾದಿಗಳು, ಸದಾ ನೀರು ತೊಟ್ಟಿಕ್ಕುತ್ತ ಶೀತಹಿಡಿಸುವ ಬೇಸಗೆಮನೆಯ ಎಲೆಗುಂಪಲು–ಇವನ್ನುಳ್ಳ ಉದ್ಯಾನದ ಚಿತ್ರವೇ ಸಾಕು, ನಡುಕಹುಟ್ಟಿಸುತ್ತಿತ್ತು. ಕಡಲ ಗಾಳಿಯ ಉಪ್ಪಿಡಿದ ಹಬೆಯಿಂದ ಕೂಡಿ ತೇಲಿಹೋಗುತ್ತಿದ್ದ ಅಲ್ಲಿನ ಶೀತದ ತೇವವಾದ, ನಿರ್ದಯೆಯ ವಾತಾವರಣದಲ್ಲಿ ಏನೂ ಬೆಳೆಯುತ್ತಿರಲಿಲ್ಲ; ಹಾಗೇನಾದರೂ ಬೆಳೆಯುವುದಾಗಿದ್ದರೆ, ಮರಹೆಂಚು ಹೊದಿಸಿದ್ದ ಚಾವಣಿಯ ಸಂದುಗಳ ಉದ್ದಕ್ಕೂ ಇದ್ದ ಪಾಚಿ, ಹಾಗೂ ಮುಂಭಾಗದ ಎರಡು ಇಪ್ಪಾರುಗಳ ನಡುವಣ ಮೂಲೆಯಲ್ಲಿದ್ದ ಕಳೆಗಿಡಗಳ ದೊಡ್ಡ ಗುತ್ತಿ, ಇಷ್ಟು ಮಾತ್ರ; ಆ ಕಳೆ ಕೂಡ ಬಹುಕಾಲ ಮಳೆಯಿಲ್ಲದಿದ್ದ ಕಾರಣ ಇತ್ತೀಚೆಗೆ ಸೊರಗಿಹೋಗಿದ್ದುವು.

ಇನ್ನು ಹೆಪ್ಸಿಬಾಳ ವಿಷಯ ತೆಗೆದುಕೊಂಡರೆ, ಅವಳು ಮೂಡಣ ಗಾಳಿಯ ಪ್ರಭಾವಕ್ಕೆ ಒಳಗಾಗಿದ್ದದು ಮಾತ್ರವಲ್ಲದೆ, ಬೂದುಬಣ್ಣ ಹರಡಿ ವಿಷಣ್ಣವಾಗಿ ಕಾಣುತ್ತಿದ್ದ ಹವಾಪರಿಸ್ಥಿತಿಯ ಇನ್ನೊಂದು ಪ್ರಕಾರವೆ ರೂಪಾದಂತೆ ಕಾಣುತ್ತಿದ್ದಳು– ರೂಪಾದಂತೆ ಕಾಣುವುದೇನು, ಮೂಡಣ ಗಾಳಿಯೆ ಅವಳು: ಉಲ್ಲಾಸರಹಿತ ಕಾಠಿನ್ಯದಿಂದ ಕೂಡಿ, ಕಂದುತಿರುಗಿದ್ದ ಕಪ್ಪು ರೇಷ್ಮೆ ಬಟ್ಟೆಯ ಮೇಲಂಗಿಯನ್ನು

ಬೆಳಸಿಕೊಂಡಿದ್ದ ಸಂಗೀತಾಭಿರುಚಿಯನ್ನೂ ಸಂಗೀತದ ಅಭ್ಯಾಸದಲ್ಲಿ ತಕ್ಕಮಟ್ಟಿನ ನೈಪುಣ್ಯವನ್ನೂ ಹೊಂದಿದ್ದನೆಂಬುದನ್ನು ಅರಿತಿದ್ದಳು. ಈಗ ಅವಳು ಕಿವಿಯ ಮೇಲೆ ಬೀಳುತ್ತಿದ್ದ ರಾಗವು ಅತ್ಯಂತ ಶೋಕಪೂರ್ಣಗಿದ್ದರೂ ಮೇಲ್ಮಟ್ಟದ ನೈಪುಣ್ಯಸಿದ್ಧಿಯನ್ನು ಸೂಚಿಸುವ ಮಟ್ಟಿಗೆ ಇಂಪಾಗಿಯೂ, ಸೊಗಸಾಗಿಯೂ, ನಾಜೂಕಾಗಿಯೂ ಇತ್ತು; ಆ ಮಟ್ಟದ ನೈಪುಣ್ಯವನ್ನು ಅವನು ಉಳಿಸಿಕೊಂಡಿದ್ದನೆಂದು ಊಹಿಸುವುದು ಕಷ್ಟವಾಗಿತ್ತು; ಏಕೆಂದರೆ, ಅದಕ್ಕೆ ಸತತಾಭ್ಯಾಸವು ಅತ್ಯಗತ್ಯವಾಗಿತ್ತು. ಬಹಳಕಾಲ ನಿಶ್ಯಬ್ದವಾಗಿದ್ದ ವಾದ್ಯವು ಇಂದು ಅಷ್ಟೊಂದು ಮಧುರನಾದವನ್ನು ಸೂಸಬಲ್ಲದ್ದಾಗಿತ್ತೆಂಬ ಸಂಗತಿಕೂಡ ಕಡಮೆಯ ಅಚ್ಚರಿಯದಾಗಿರಲಿಲ್ಲ. ಹೆಪ್ಸಿಬಾ ಅನೈಚ್ಛಿಕವಾಗಿ ಪ್ರೇತದ ಸಂಗೀತಧ್ವನಿಗಳನ್ನು ಕುರಿತು ಆಲೋಚಿಸತೊಡಗಿದಳು; ಅವು ಕುಟುಂಬದಲ್ಲಿ ಸಂಭವಿಸುವ ಸಾವಿನ ಮುನ್ಸೂಚನೆಯಾಗಿರುತ್ತಿದ್ದುವು; ಅಲ್ಲದೆ, ಅವು ಹಿಂದಿನ ಕಥೆಯ ವ್ಯಕ್ತಿಯಾಗಿದ್ದ ಆಯಲಿಸಳವೆಂದೂ ಹೇಳಲಾಗುತ್ತಿತ್ತು. ಆದರೆ, ಕೆಲವು ಮೀಟುಗಳಾದಮೇಲೆ, ತಂತಿಗಳು ತಮ್ಮ ಕಂಪನದಿಂದಲೇ ತಾವು ಕತ್ತರಿಸಿಹೋದಂತೆ ಕಂಡುಬಂದು ಸಂಗೀತವು ನಿಂತುಹೋಯಿತು; ಈ ಸಂಗತಿ ಬಹುಶಃ ಸಂಗೀತವು ಪ್ರೇತದ ಬೆರಳುಗಳಿಂದ ಮೂಡಿ ಬರದೆ ಬೇರೆಯ ಸಾಧನದಿಂದ ಮೂಡಿ ಬರುತ್ತಿತ್ತು ಎಂಬುದಕ್ಕೆ ಸಾಕ್ಷ್ಯವಾಗಿತ್ತು.

ಆದರೆ, ಈ ರಹಸ್ಯಾತ್ಮಕ ಸಂಗೀತವು ನಿಂತಮೇಲೆ ಅದರೆಡೆಯಲ್ಲಿ ಕರ್ಕಶವಾದ ಶಬ್ದವೊಂದು ಕೇಳಿಬಂದಿತು; ಅಷ್ಟೇ ಅಲ್ಲದೆ, ಆ ಭಾನುವಾರ ಇನ್ನೂ ಒಂದು ಘಟನೆ ನಡೆಯಿತು; ಅದು ಹೆಪ್ಸಿಬಾ ಮತ್ತು ಕ್ಲಿಫರ್ಡ್ ಇವರ ದೃಷ್ಟಿಯಿಂದ, ಹಾಡುಹಕ್ಕಿಗಳನ್ನು ತನ್ನೊಡನೆ ಕರೆತರುವ ಅತ್ಯಂತ ಹಿತಕರವಾದ ಗಾಳಿಯನ್ನು ಕೂಡ ವಿಷಮಯವಾಗಿ ಮಾಡಲು ಸಾಕಾಗಿತ್ತು. ಆಯಲಿಸ್ ಪಿನ್ಚನ್ನಳ ವಾದ್ಯಸಂಗೀತದ (ಅಥವಾ, ಕ್ಲಿಫರ್ಡನದೇ ಎಂದು ಪರಿಗಣಿಸಬೇಕಾದರೆ ಅವನ ಸಂಗೀತದ) ಕಡೆಕಡೆಯ ಪ್ರತಿಧ್ವನಿಗಳನ್ನು ಅಂಗಡಿ ಗಂಟೆಯನ್ನು ಬಾರಿಸಿದ್ದರಿಂದುಂಟಾದ ಕೀಳು ಕರ್ಕಶಧ್ವನಿ ಹೊಡೆದೋಡಿಸಿ ಬಿಟ್ಟಿತು. ಹೊಸಿಲಮೇಲೆ ಪಾದವನ್ನು ಉಜ್ಜಿದ ಸದ್ದು ಕೇಳಿಬಂದು, ಆ ಬಳಿಕ ನೆಲದಮೇಲೆ ಭಾರವಾಗಿ ಹೆಜ್ಜೆ ಹಾಕುತ್ತಿದ್ದಂತೆ ಕೇಳಿಬಂತು. ಮಾಸಿದ ಶಾಲೊಂದನ್ನು ಹೊದೆದುಕೊಳ್ಳುತ್ತಿದ್ದ ಹೆಪ್ಸಿಬಾ ಒಂದು ಕ್ಷಣ ತಡ ಮಾಡಿದಳು; ಪೂರ್ವದ ಗಾಳಿಯ ವಿರುದ್ಧವಾಗಿ ಅವಳು ನಲವತ್ತು ವರ್ಷಗಳಿಂದಲೂ ನಡಸಿಕೊಂಡು ಬಂದ ಹೋರಾಟದಲ್ಲಿ ಆ ಶಾಲು ಅವಳ ರಕ್ಷಾ ಕವಚವಾಗಿತ್ತು. ಒಂದು

ಹೊಗೆಯನ್ನು ಮತ್ತೆ ಹಿಂದಕ್ಕೇ ಅಟ್ಟಿ, ಹೊಗೆಕೊಳವೆಯ ಇಲ್ಲಣಗಟ್ಟಿದ ಗಂಟಲನ್ನು ಅದರ ಉಸಿರಿನಿಂದಲೇ ಅಡಚಿಬಿಡುತ್ತಿತ್ತು. ಹೀಗಿದ್ದರೂ ಕೂಡ, ಈ ಕ್ಲೇಶಕರವಾದ ಬಿರುಗಾಳಿಮಳೆ ಹೊಡೆದ ನಾಲ್ಕು ದಿನಗಳ ಕಾಲವೂ ಕ್ಲಿಫರ್ಡ್ ಒಂದು ಹಳೆಯ ಕವುದಿಯಿಂದ ಮೈಮುಚ್ಚಿಕೊಂಡು, ನಿತ್ಯವೂ ಕುಳಿತುಕೊಳ್ಳುತ್ತಿದ್ದ ತನ್ನ ಕುರ್ಚಿಯಲ್ಲಿ ಕುಳಿತಿರುತ್ತಿದ್ದನು. ಐದನೆಯ ದಿನ ಬೆಳಗ್ಗೆ, ಉಪಾಹಾರಕ್ಕೆ ಬರಬೇಕೆಂದು ಕರೆದಾಗ, ಹಾಸಿಗೆಯನ್ನು ಬಿಟ್ಟು ಏಳುವುದಿಲ್ಲವೆಂಬ ದೃಢನಿಶ್ಚಯವನ್ನು ಸೂಚಿಸುವ ನಿರುತ್ಸಾಹದ ಗೊಣಗಾಟದಿಂದ ಮಾತ್ರ ಉತ್ತರವಿತ್ತನು. ಅವನ ಉದ್ದೇಶವನ್ನು ಕದಲಿಸುವ ಯಾವ ಪ್ರಯತ್ನವನ್ನೂ ಅವನ ಸೋದರಿ ಮಾಡಲಿಲ್ಲ. ವಾಸ್ತವವಾಗಿ, ಅವನ ಬಗೆಗೆ ಹೆಪ್ಸಿಬಾಳ ಪ್ರೇಮ ಸಂಪೂರ್ಣವಾಗಿದ್ದರೂ ಕೂಡ, ಅವನನ್ನು ವಿನೋದಗೊಳಿಸುವ ಒಂದು ಸಾಧನೋಪಾಯವನ್ನು ಹುಡುಕುವ ಕ್ಲೇಶದ ಕರ್ತವ್ಯವನ್ನು ನಿರ್ವಹಿಸುವ ಹೊರೆಹೊರುವುದು ಅವಳಿಗಿನ್ನೆಂದೂ ಆಗುತ್ತಿರಲಿಲ್ಲ; ಅಲ್ಲದೆ, ಅವಳ ಸಹಜಶಕ್ತಿ ಸಾಮರ್ಥ್ಯಗಳು ಕೆಲಸವು ಕೂಡ ಉಡುಗಿಹೋಗಿದ್ದುದರಿಂದ ಅದು ಕಾರ್ಯ ಸಾಧ್ಯವೂ ಆಗುತ್ತಿರಲಿಲ್ಲ; ಅತ್ತ, ಅವನ ಮನಸ್ಸಾದರೋ, ಇನ್ನೂ ಸೂಕ್ಷ್ಮ ಗ್ರಾಹಿಯಾಗಿದ್ದರೂ ಕೆಟ್ಟು ಹಾಳಾಗಿಹೋಗಿತ್ತು, ವಿಚಾರವಿಮರ್ಶೆ ಮಾಡಬಲ್ಲದ್ದಾಗಿ ಅತಿ ನಾಜೂಕಾಗಿದ್ದರೂ ಸಾಮರ್ಥ್ಯವನ್ನೂ ಸಂಕಲ್ಪ ಶಕ್ತಿಯನ್ನೂ ಕಳೆದು ಕೊಂಡಿತ್ತು. ಇಂದು ಅವಳು ಒಬ್ಬಳೇ ನಡುಗುತ್ತ ಕುಳಿತಿದ್ದಿರಬಹುದು, ಆದರೆ ತನ್ನ ಸಹದುಃಖಿ ನಿಟ್ಟುಸಿರುಬಿಟ್ಟ ಪ್ರತಿಸಲವೂ ಅವಳು ಹೊಸ ದುಃಖವೊಂದನ್ನು ನಿರಂತರವಾಗಿ ಅನುಭವಿಸಬೇಕಾಗಿರಲಿಲ್ಲ, ಅನ್ಯಾಯವಾಗಿ ಪಶ್ಚಾತ್ತಾಪದ ವೇದನೆಯನ್ನು ಪಡಬೇಕಾಗಿರಲಿಲ್ಲ; ಈ ಪರಿಸ್ಥಿತಿ, ಇನ್ನೇನಲ್ಲದಿದ್ದರೂ ಕಡೆಯಪಕ್ಷ, ತೀರ ನಿರಾಶೆಯದು ಎನ್ನುವಂತಿರದೆ ಯಾವುದೋ ಭಾಗದಲ್ಲಿ ಕಡಮೆ ಯೆನ್ನುವಂತಿತ್ತು.

ಆದರೆ, ಕ್ಲಿಫರ್ಡ್ ಮಹಡಿಯಿಂದ ಕೆಳಕ್ಕೆ ಇಳಿದುಬರುತ್ತಿರಲಿಲ್ಲ; ಆದರೂ, ಅವನು ಕಡೆಗೂ ವಿನೋದದ ಅನ್ವೇಷಣೆಯಲ್ಲಿ ತೊಡಗುವ ಮಟ್ಟಿಗೆ ಜಾಗೃತನಾಗಿದ್ದನೆಂದು ಕಂಡುಬರುತ್ತದೆ. ಮಧ್ಯಾಹ್ನಕ್ಕೆ ಸ್ವಲ್ಪ ಮುಂಚೆ, ಹೆಪ್ಸಿಬಾ ಸಂಗೀತದ ನುಡಿತವೊಂದನ್ನು ಕೇಳಿದಳು; (ಏಳು ಇಪ್ಪಾರಿನ ಮನೆಯಲ್ಲಿ ಬೇರೆ ಯಾವ ಸಂಗೀತಸಾಧನವೂ ಇಲ್ಲದ್ದರಿಂದ) ಅದು ಆಯಲಿಸ್ ಪಿನ್ಚನ್ನಳ ಹಾರ್ಪ್ಸಿಕಾರ್ಡ್ ವಾದ್ಯದಿಂದ ಹೊರಟುಬಂದದ್ದಾಗಿರಬೇಕೆಂಬುದನ್ನು ಅವಳು ಬಲ್ಲವಳಾಗಿದ್ದಳು. ಕ್ಲಿಫರ್ಡ್ ತರುಣನಾಗಿದ್ದಂದು ಪ್ರಯತ್ನಪೂರ್ವಕ

"ಪ್ರಿಯ ಸೋದರೀ, ಇಷ್ಟು ಮಾತ್ರ ಸಲಹೆಕೊಡಲು ನನಗೆ ಅವಕಾಶ ಕೊಡು. ಇಷ್ಟೆಲ್ಲ ವಿಶ್ವಾಸ ದಯೆ ಇಟ್ಟುಕೊಂಡಿದ್ದರೂ, ನಿನ್ನ ಉದ್ದೇಶಗಳೆಲ್ಲ ಅತ್ಯುತ್ತಮವಾಗಿದ್ದರೂ ನಿನ್ನ ಸಹೋದರನನ್ನು ಅಷ್ಟೊಂದು ಪ್ರತ್ಯೇಕವಾಗಿ ಇರಿಸಿಕೊಂಡಿರುವುದರಲ್ಲಿ ನೀನು ತಪ್ಪು ಮಾಡುತ್ತಿದ್ದೀಯೆ. ಸಹಾನುಭೂತಿ, ದಯೆ– ಇವೆಲ್ಲಾ ಅವನನ್ನು ಸ್ವಲ್ಪವೂ ಸೋಕದಂತೆ ಅವನಿಗೆ ಏಕೆ ತಡೆಗಟ್ಟಿದ್ದೀಯೆ? ಅಯ್ಯೋ ಪಾಪ, ಕ್ಲಿಫರ್ಡನ ಏಕಾಂತವಾಸ ಅತಿಯಾಯಿತು. ಈಗ ಅವನು ಜನರ ಸಹವಾಸದಲ್ಲಿರಲು ಪ್ರಯತ್ನಿಸಲಿ– ಎಂದರೆ, ಬಂಧು ಬಳಗದವರ, ಹಳೆಯ ಸ್ನೇಹಿತರ, ಸಹವಾಸ, ಉದಾಹರಣೆಗೆ, ಕ್ಲಿಫರ್ಡನನ್ನು ನೋಡಲು ಮಾತ್ರ ನನಗೆ ಅವಕಾಶಕೊಡು; ಭೇಟಿಯಿಂದ ಸತ್ಪರಿಣಾಮವುಂಟಾಗುವುದಕ್ಕೆ ನಾನು ಉತ್ತರವಾದಿಯಾಗುವೆ" ಎಂದು ನ್ಯಾಯಮೂರ್ತಿ ಉತ್ತರಕೊಟ್ಟನು.

"ನೀನು ಅವನನ್ನು ನೋಡಲಾರೆ, ಕ್ಲಿಫರ್ಡ್ ನಿನ್ನೆಯಿಂದ ಹಾಸಿಗೆ ಹಿಡಿದಿದ್ದಾನೆ" ಎಂದು ಉತ್ತರಿಸಿದಳು ಹೆಪ್ಸಿಬಾ.

"ಏನು! ಅದು ಹೇಗೆ! ಆತ ಅಸ್ವಸ್ಥನಾಗಿದಾನೆಯೆ!" ಎಂದು, ಕೋಪದಿಂದ ತಳಮಳಗೊಂಡವನಂತೆ ನೆಗೆದೆದ್ದು, ನ್ಯಾಯಮೂರ್ತಿ ಪಿನ್ಚನ್ ಉದ್ಗರಿಸಿದನು; ಏಕೆಂದರೆ, ಅವನು ಮಾತಾಡುತ್ತಿದ್ದಂತೆ, ವೃದ್ಧ ಪ್ಯೂರಿಟನ್ನನ ಕ್ರೋಧಮುದ್ರೆ ಕೋಣೆಯನ್ನೆಲ್ಲಾ ಕತ್ತಲಿಸಿತು: "ಹಾಗಿದ್ದ ಮೇಲೆ, ಸಾಧ್ಯವಿಲ್ಲ, ನಾನು ಅವನನ್ನು ನೋಡುತ್ತೇನೆ, ನೋಡಲೇ ಬೇಕು! ಅವನು ಸತ್ತರೆ ತಾನೆ ಅದರಿಂದೇನು ಪ್ರಮಾದ?"

"ಅವನಿಗೆ ಮರಣದ ಅಪಾಯವೇನೂ ಇಲ್ಲ ಎಂದು ತಿಳಿಸಿ, ರೋಸಿಹೋದ ಮನಸ್ಸನ್ನು ತಡೆಯಲಾಗದೆ ಸೇರಿಸಿಹೇಳಿದಳು: "ಯಾವುದೂ ಇಲ್ಲ; ಬಹಳ ಹಿಂದೆ ಯಾವಾತ ಅವನನ್ನು ಸಾಯುವಂತೆ ಚಿತ್ರ ಹಿಂಸೆಮಾಡಲು ಪ್ರಯತ್ನಿಸಿದರೋ ಆತನೇ ಈಗಲೂ ಅದೇ ರೀತಿ ಮಾಡಿದರೆ ಹೊರತಾಗಿ, ಅವನಿಗೆ ಯಾವ ಪ್ರಾಣಾಪಾಯವೂ ಇಲ್ಲ!"

"ಸೋದರಿ ಹೆಪ್ಸಿಬಾ" ಎಂದು ನ್ಯಾಯಮೂರ್ತಿ ಪ್ರಭಾವಶಾಲಿಯಾದ ಅತ್ಯಾಸಕ್ತಿಯನ್ನು ವಹಿಸಿ ನುಡಿದನು; ಅವನು ಮಾತನ್ನು ಮುಂದುವರಿಸಿದಂತೆ, ಕಂಬನಿಯೊಡಗೂಡಿದ ಕರುಣೆಯಾಗಿ ಕೂಡ ಪರಿಣಮಿಸಿತು ಆ ಆಸಕ್ತಿ: "ಹೆಪ್ಸಿಬಾ, ನೀನು ನನ್ನ ವಿಷಯದಲ್ಲಿ ತಳೆದಿರುವ ಈ ನಿರಂತರವಾದ, ಬಹಳ ಕಾಲದಿಂದಲೂ ಮುಂದುವರಿಸಿಕೊಂಡು ಬಂದಿರುವ ಈ ಕಹಿಮನೋಭಾವ ಅದೆಷ್ಟು ಅನ್ಯಾಯವಾಗಿದೆ, ಅದೆಷ್ಟು ನಿರ್ದಯವಾಗಿದೆ, ಕ್ರೈಸ್ತಧರ್ಮದ ನಡವಳಿಕೆಗೆ

ವಿಶಿಷ್ಟಪ್ರಕಾರದ ಸದ್ದು– ಅದು ಕೆಮ್ಮಿದ ಸದ್ದೂ ಅಲ್ಲ, 'ಹಂ' ಎಂದ ಸದ್ದೂ ಅಲ್ಲ; ಯಾರದ್ದೋ ವಿಶಾಲವಾದ ಎದೆಯಾಳದಲ್ಲಿ ಗುಡುಗುಡಿಸಿ ಪ್ರತಿಧ್ವನಿಸಿದ ಒಂದು ಬಗೆಯ ಎಳೆತದ ಧ್ವನಿ– ಆತುರದಿಂದ ಮುಂದಕ್ಕೆ ಹೋಗುವಂತೆ ಅವಳನ್ನು ಬಲಾತ್ಕರಿಸಿತು; ಅಪಾಯ ಸೂಚಕ ಸನ್ನಿವೇಶಗಳಲ್ಲಿ ಹೆಂಗಸರು ಸರ್ವಸಾಧಾರಣವಾಗಿ ವ್ಯಕ್ತಪಡಿಸುವ ಭಯಂಕರವಾದ ಅಂಜುಗುಳಿತನ ಆಗ ಅವಳ ಮುಖಭಾವದಲ್ಲಿ ಮೂಡಿತ್ತು. ಅಂತಹ ಸಂದರ್ಭಗಳಲ್ಲಿ ನಮ್ಮ ಬಡಪ್ರಾಣಿ ಸಿಡುಕುಮೋರೆಯ ಹೆಪ್ಸಿಬಾಳಂತೆ ಭಯಂಕರವಾಗಿ ಕಂಡಿರುವ ಹೆಂಗಸರ ಸಂಖ್ಯೆ ವಿರಳ. ಆದರೆ ಭೇಟಿಗೆ ಬಂದಾತ ಅಂಗಡಿಯ ಬಾಗಿಲನ್ನು ತನ್ನ ಹಿಂದೆಯೆ ತೆಪ್ಪನೆ ಹಾಕಿಕೊಂಡು, ತನ್ನ ಕೊಡೆಯನ್ನು ಮಾರಾಟದ ಮೇಜಿಗೆ ಒರಗಿಸಿಟ್ಟು, ತಾನು ಕಾಣಿಸಿಕೊಂಡದ್ದರಿಂದ ಕೆರಳಿದ್ದ ಗಾಬರಿಯ ಹಾಗೂ ಕೋಪದ ಸನ್ನಿವೇಶವನ್ನು ಎದುರಿಸಲು ಸಮಾಹಿತಚಿತ್ತದ, ಉದಾರಭಾವದ ಮುಖಮುದ್ರೆಯನ್ನು ತಳೆದನು.

ಹೆಪ್ಸಿಬಾಳ ಮುನ್ನೆಚ್ಚರಿಕೆ ಅವಳನ್ನು ವಂಚಿಸಿರಲಿಲ್ಲ. ಬಂದಾತ ಬೇರೆ ಯಾರೂ ಆಗಿರದೆ ನ್ಯಾಯಮೂರ್ತಿ ಪಿನ್ಚನ್ ಆಗಿದ್ದನು; ಆತ ಮುಂಬಾಗಿಲನ್ನು ತೆಗೆಯಿಸಿಕೊಂಡು ವ್ಯರ್ಥವಾಗಿ ಪ್ರಯತ್ನಿಸಿದ ಮೇಲೆ, ಅಂಗಡಿಯೊಳಕ್ಕೆ ಪ್ರವೇಶ ದೊರಕಿಸಿಕೊಂಡಿದ್ದನು.

"ನೀನು ಕ್ಷೇಮವಾಗಿದ್ದೀಯಾ, ಕಸಿನ್ ಹೆಪ್ಸಿಬಾ? ಈ ಕೆಟ್ಟ ಹವಾ ನಮ್ಮ ಬಡ ಕ್ಲಿಫರ್ಡನ ಮೇಲೆ ಏನು ಪರಿಣಾಮ ಮಾಡಿಲ್ಲವಷ್ಟೆ?'' ಎಂದು ನ್ಯಾಯಮೂರ್ತಿ ಮಾತಿಗೆ ತೊಡಗಿದನು. ಅವನ ಮುಗುಳುನಗೆಯ ಸ್ನೇಹಪೂರ್ಣ ಔದಾರ್ಯವು ಮೂಡಣ ಬಿರುಗಾಳಿ ಮಳೆಯನ್ನು ನಾಚಿಕೆಗೀಡು ಮಾಡಲಿಲ್ಲ, ಅದು ಹೋಗಲಿ ಎಂದರೆ, ಕಡೆಯಪಕ್ಷ, ಅದರ ಬಿರುಸನ್ನು ಸ್ವಲ್ಪವಾದರೂ ತಗ್ಗಿಸಲಿಲ್ಲ: ಇದು ನಿಜವಾಗಿ ಆಶ್ಚರ್ಯಕರವಾಗಿ ಕಂಡಿತು. "ಅವನ ನೆಮ್ಮದಿಯನ್ನು ಇಲ್ಲವೆ ನಿನ್ನ ನೆಮ್ಮದಿಯನ್ನು, ಯಾವುದಾದರೂ ಬಗೆಯಲ್ಲಿ ನಾನು ಹೆಚ್ಚಿಸಬಲ್ಲೆನೆ ಎಂದು ಇನ್ನೊಂದು ಸಲ ನಿನ್ನನ್ನು ಕೇಳೋಣವೆಂದು ಬಂದೆ; ಅಲ್ಲಿಯವರೆವಿಗೂ ನನಗೆ ವಿಶ್ರಾಂತಿಯೇ ಸಾಧ್ಯವಿರಲಿಲ್ಲ" ಎಂದನು.

ತನ್ನ ಮನಃಕ್ಷೋಭೆಯನ್ನು ಸಾಧ್ಯಕಂಡಮಟ್ಟಿಗೂ ತಡೆದುಕೊಂಡು, ಹೆಪ್ಸಿಬಾ ಹೇಳಿದಳು: "ನೀನು ನಮಗಾಗಿ ಏನನ್ನೂ ಮಾಡಲಾರೆ. ಕ್ಲಿಫರ್ಡನಿಗಾಗಿ ನನ್ನನ್ನು ನಾನು ಮೀಸಲಾಗಿಟ್ಟುಕೊಂಡಿದ್ದೇನೆ. ಅವನ ಪರಿಸ್ಥಿತಿಯಲ್ಲಿ ಏನೆಲ್ಲ ಸಾಧ್ಯವೋ ಆ ಪ್ರತಿಯೊಂದು ಸೌಕರ್ಯವೂ ಅವನಿಗಿದೆ."

ಕಠಿನಸ್ವಭಾವದ ವ್ಯಕ್ತಿಯೊಬ್ಬನಲ್ಲಿ ಅಷ್ಟಿಷ್ಟೆಂದು ಹೇಳಲಾಗದ ಮರುಕ ಈ ರೀತಿ ಉಕ್ಕಿ ಬಂದದ್ದನ್ನು ಕಂಡು ಅವಳ ಕ್ರೋಧವು ತೀವ್ರತರವಾಗಿ ಕೆರಳಿತು; ಆಗ ಹೆಪ್ಸಿಬಾ ಸಾರಿಹೇಳಿದಳು: "ದೇವರ ಆಣೆಯಿಟ್ಟು ಕೇಳಿಕೊಳ್ಳುತ್ತೇನೆ– ಆ ದೇವರಿಗೇ ನೀನು ಅಪಚಾರ ಬಗೆದಿದ್ದೀಯೆ; ನಿನ್ನ ನಾಲಗೆ ಸೇದಿಹೋಗುವ ಹಾಗೆ ಮಾಡದೆ ನೀನು ಅಷ್ಟೊಂದು ಸುಳ್ಳು ಮಾತುಗಳನ್ನು ಆಡುವುದನ್ನೂ ಅವನು ಕೇಳುವುದರಿಂದ, ಅವನ ಸಾಮರ್ಥ್ಯವನ್ನೇ ಬೇಕಾದರೆ ನಾನು ಪ್ರಶ್ನಿಸಬಲ್ಲೆ– ಆದರೂ ಆ ದೇವರ ಆಣೆಯಿಟ್ಟು ಕೇಳಿಕೊಳ್ಳುತ್ತೇನೆ, ನಿನಗೆ ಬಲಿಬಿದ್ದಿರುವವನ ವಿಷಯದಲ್ಲಿ ನೀನು ನಟಿಸುತ್ತಿರುವ ಈ ಹೇಯವಾದ ಬೂಟಾಟಿಕೆಯ ವಿಶ್ವಾಸವನ್ನು ಬಿಟ್ಟು ಬಿಡು! ನೀನು ಅವನನ್ನು ದ್ವೇಷಿಸುತ್ತೀಯೆ! ಈ ಕ್ಷಣದಲ್ಲಿ ಕೂಡ ನೀನು ಅವನ ವಿರುದ್ಧವಾಗಿ ನಿನ್ನ ಹೃದಯದಲ್ಲಿ ಯಾವುದೋ ನೀಚ ಉದ್ದೇಶವನ್ನು ಹೊಂದಿದ್ದೀಯೆ! ಈ ಕೂಡಲೆ ಅದೇನೆಂಬುದನ್ನು ಸ್ಪಷ್ಟವಾಗಿ ತಿಳಿಸಿಬಿಡು! ಇಲ್ಲವೋ, ಅದು ಇನ್ನೂ ಚೆನ್ನಾಗಿ ನೆರವೇರಬೇಕೆಂದು ನೀನು ಆಶೆಯಿಟ್ಟುಕೊಂಡಿರುವುದಾದಲ್ಲಿ, ಅದು ಯಶಸ್ವಿಯಾಗಿ, ನೀನು ಜಯಶಾಲಿಯಾಗುವವರೆಗೂ ಅದನ್ನು ಮುಚ್ಚಿಟ್ಟುಕೊಂಡಿರು! ಆದರೆ, ನನ್ನ ಬಡ ಸೋದರನ ಬಗೆಗೆ ನಿನ್ನ ಪ್ರೀತಿಯ ಮಾತನ್ನು ಮಾತ್ರ ಮತ್ತೆ ಇನ್ನೆಂದೂ ಆಡಬೇಡ! ಹೆಣ್ಣಿನ ಮರ್ಯಾದೆ ಮೀರಿ ನಡೆಯುವಂತೆ ಅದು ನನ್ನನ್ನು ಕೆರಳಿಸೀತು! ಅದು ನನಗೆ ಹುಚ್ಚು ಹಿಡಿಸೀತು! ಸಾಕು! ಇದ್ದೊಂದು ಮಾತೂ ಬೇಡ! ನಿನ್ನನ್ನು ತುಚ್ಛವಾಗಿ ಕಾಣುವ ಹಾಗೆ ಮಾಡೀತು ಅದು!"

ಇಷ್ಟು ಕಾಲಕ್ಕೆ ಒಮ್ಮೆ, ಹೆಪ್ಸಿಬಾಳ ರೋಷ ಅವಳಿಗೆ ಕೆಚ್ಚನ್ನು ನೀಡಿತ್ತು. ಅವಳು ಸ್ಪಷ್ಟವಾಗಿ ನುಡಿದಿದ್ದಳು. ಆದರೆ, ಕಡೆಗೂ, ನ್ಯಾಯಮೂರ್ತಿ ಪಿನ್ಚನ್ನನ ಬಗೆಗೆ ಅದಮ್ಯವಾದ ಈ ಅಪನಂಬಿಕೆ, ಮಾನವ ಸ್ನೇಹಸಹಾನುಭೂತಿಗಳ ನೆಲೆಯಲ್ಲಿ ನಿಲ್ಲಲು ಅವನಿಗಿದ್ದ ಹಕ್ಕಿನ ಈ ನಿರಾಕರಣೆ– ಇವಕ್ಕೆ ಅವನ ಶೀಲಸ್ವಭಾವದಲ್ಲಿಯೇ ಯಾವುದಾದರೂ ನ್ಯಾಯವಾದ ಆಧಾರ ಕಂಡುಬಂದಿತ್ತೆ, ಅಥವಾ ಯಾವ ಆಧಾರವೂ ಇಲ್ಲದೆ ಒಬ್ಬ ಹೆಂಗಸಿನ ಅವಿಚಾರದ ಪೂರ್ವಕಲ್ಪಿತ ಅಭಿಪ್ರಾಯದಿಂದ ಮಾತ್ರ ಹುಟ್ಟಿದ್ದುವೋ?

ನ್ಯಾಯಮೂರ್ತಿ ಘನ ಗೌರವವನ್ನು ಹೊಂದಿದ್ದ ವ್ಯಕ್ತಿ; ಆ ವಿಚಾರದಲ್ಲಿ ಪ್ರಶ್ನೆಯೆತ್ತುವ ಹಾಗೆಯೇ ಇರಲಿಲ್ಲ. ಅದಕ್ಕೆ ಮತದ ಮುದ್ರೆ ಬಿದ್ದಿತ್ತು; ಸರಕಾರ ಅದನ್ನು ಒಪ್ಪಿಕೊಂಡಿತ್ತು. ಯಾರೂ ಅದನ್ನು ನಿರಾಕರಿಸಿರಲಿಲ್ಲ. ಅವನ ಸಾರ್ವಜನಿಕ ಅಧಿಕಾರಸ್ಥಾನದಲ್ಲಿಯೆ ಆಗಲಿ ಇಲ್ಲವೆ ಖಾಸಗಿ ವ್ಯಕ್ತಿಯೆಂದಾಗಲಿ,

ಅದೆಷ್ಟು ವಿರುದ್ಧವಾಗಿದೆ ಎಂಬುದನ್ನು ನೀನು ಗ್ರಹಿಸಿಲ್ಲದಿರುವುದು ಸಾಧ್ಯವೇ? ನಿನ್ನಲ್ಲಿ ಆ ಮನೋಭಾವವುಂಟಾಗಲು ನಾನು ಕೈಕೊಂಡ ಕಾರ್ಯ ಕೆಲಮಟ್ಟಿಗೆ ಕಾರಣ; ಕರ್ತವ್ಯ ದೃಷ್ಟಿಯಿಂದಲೂ, ನನ್ನ ಆತ್ಮಸಾಕ್ಷಿಗೆ ಅನುಗುಣವಾಗಿಯೂ, ಕಾನೂನಿಗೆ ಬದ್ಧನಾಗಿಯೂ, ಸ್ವಂತ ಅಪಾಯವನ್ನು ಗಮನಿಸದೆ ನಾನು ಹಾಗೆ ವರ್ತಿಸಬೇಕಾಯಿತು. ಕ್ಲಿಫರ್ಡನಿಗೆ ಕೆಡುಕುಮಾಡುವಂಥದನ್ನು ಮಾಡದೆ ಬಿಡಲು ಸಾಧ್ಯವಾಗುವಂತಹದನ್ನು ನಾನು ಏನು ತಾನೆ ಮಾಡಿದ್ದೇನೆ? ಅದರಿಂದ ನಿನಗೆಷ್ಟು ಮುಗಿವೇ ಇಲ್ಲದ ದುಃಖವಾಗಿದೆಯೋ ನನಗೂ ಅಷ್ಟೇ ಆಗಿದೆ; ನಾನು ಏನು ಮಾಡಿದೆನೆಂಬುದು ನಿನಗೆ ಗೊತ್ತಿದ್ದಿದ್ದರೆ, ಅವನ ಸಹೋದರಿ ಎನಿಸಿದ ನೀನು ಹೆಚ್ಚು ಕರುಣೆಯನ್ನು ಹೇಗೆ ತೋರಿಸಬಲ್ಲವಳಾಗಿರುತ್ತಿದ್ದೆ? ನನ್ನ ಮನಸ್ಸಿಗೆ ತೀವ್ರ ಯಾತನೆ ಆಗಿಲ್ಲವೆಂದು ನೀನು ಭಾವಿಸುತ್ತೀಯಾ? ದೈವವು ನನಗೆ ಕರುಣಿಸಿರುವ ಈ ಎಲ್ಲಾ ಸೌಭಾಗ್ಯದ ನಡುವೆ ಅಂದಿನಿಂದ ಇಂದಿನವರೆಗೆ ಅದು ನನ್ನ ಹೃದಯದಲ್ಲಿ ಸಂಕಟವನ್ನು ಉಳಿಸಿಲ್ಲವೆಂದು ನಿನ್ನ ಭಾವನೆಯೆ? ಈ ಪ್ರಿಯಬಂಧು, ಈ ಪೂರ್ವಸ್ನೇಹಿತ, ಈ ಸೂಕ್ಷ್ಮವಾದ ಸ್ವಭಾವವುಳ್ಳವನು, ನಮ್ಮವನೇ ಆದ ಈ ಕ್ಲಿಫರ್ಡ್ ಬಹು ದುರದೃಷ್ಟಶಾಲಿ ಎನ್ನೋಣ; ಅಂತೆಯೆ, ಅಪರಾಧಿ ಎನ್ನದಿರೋಣ– ಇಂಥವನಿಗೆ ಜೀವನದಾನಮಾಡಿ, ಅವನು ಅದರ ಸುಖವನ್ನು ಅನುಭವಿಸುವಂತೆ ಅವಕಾಶ ಕಲ್ಪಿಸಿಕೊಡುವುದು ಸಾರ್ವಜನಿಕ ನ್ಯಾಯವಿತರಣೆಯ ದೃಷ್ಟಿಯಿಂದಲೂ ಸಮಾಜದ ಯೋಗಕ್ಷೇಮದ ದೃಷ್ಟಿಯಿಂದಲೂ ಸಮಂಜಸ ಎಂದು ಎಣಿಸುವಂತಾಗಿದ್ದರೆ, ನಾನು ಈಗ ಆ ಬಗೆಗೆ ಸಂತೋಷಪಡುವುದಿಲ್ಲ ಎಂದು ನೀನು ಭಾವಿಸುವೆಯಾ? ಆಹಾ, ಹೆಪ್ಸಿಬಾ, ನೀನು ನನ್ನನ್ನು ಸ್ವಲ್ಪವೂ ಅರಿತುಕೊಂಡಿಲ್ಲ! ಈ ಹೃದಯವನ್ನು ಸ್ವಲ್ಪವೂ ಅರಿಯೆ! ಅವನನ್ನು ಕಾಣುವ ಆಲೋಚನೆಯಿಂದಾಗಿ ಅದು ಈಗ ತುಡಿಯುತ್ತಿದೆ! (ನಿನ್ನನ್ನು ಬಿಟ್ಟು– ನೀನು ಕೂಡ ನನಗಿಂತ ಹೆಚ್ಚಾಗಿ ಏನಲ್ಲ) ಕ್ಲಿಫರ್ಡನ ವಿಪತ್ತಿಗಾಗಿ ಅಷ್ಟೊಂದು ಕಣ್ಣೀರು ಸುರಿಸಿರುವ ಮಾನವಪ್ರಾಣಿ ಯಾರೂ ಬದುಕಿಲ್ಲ! ಆ ಕಣ್ಣೀರಿನಲ್ಲಿ ಸ್ವಲ್ಪವನ್ನು ಈಗ ನೀನು ನೋಡುತ್ತಿದ್ದೀಯೆ. ಅವನ ಸೌಖ್ಯವನ್ನು ಹೆಚ್ಚಿಸುವುದರಲ್ಲಿ ಇಷ್ಟೊಂದು ಸಂತೋಷಪಡಿಸುತ್ತಿರುವವರು ಯಾರೂ ಇಲ್ಲ! ನನ್ನನ್ನು ಪರೀಕ್ಷಿಸು, ಹೆಪ್ಸಿಬಾ– ನನ್ನನ್ನು ಪರೀಕ್ಷಿಸು– ನಿನ್ನ ಹಾಗೂ ಕ್ಲಿಫರ್ಡನ ಶತ್ರು ಎಂದು ನೀನು ಕಾಣುತ್ತಿರುವ ಮನುಷ್ಯನನ್ನು ಪರೀಕ್ಷಿಸಿನೋಡು– ಜಫ್ರೀ ಪಿನ್ಚನ್ನನನ್ನು ಪರೀಕ್ಷಿಸಿನೋಡು, ಹೃದಯಾಂತರಾಳದಲ್ಲಿ ಅವನು ಪ್ರಾಮಾಣಿಕನಾಗಿರುವುದನ್ನು ನೀನೇ ಕಾಣುವೆ."

ಸೂಕ್ಷ್ಮ ಗ್ರಹಣಶಕ್ತಿ– ಇವನ್ನೆಲ್ಲ ಉಳ್ಳವರು ಕೂಡ ಈ ಬಗೆಯ ತಪ್ಪುಗಳನ್ನು ಮಾಡಲಾರರು. ಅಂಥವರ ದೃಷ್ಟಿಯಲ್ಲಿ ಬಾಹ್ಯರೂಪಗಳಿಗೆ ಅತ್ಯಂತ ಪ್ರಾಮುಖ್ಯತೆ. ಅವರ ಕಾರ್ಯಕ್ಷೇತ್ರವೆಲ್ಲ ಜೀವನ ಬಾಹ್ಯಘಟನಾವಳಿಗಳ ನಡುವೆ. ಬಂಗಾರ, ಭೂಸ್ವತ್ತು, ನಂಬಿಕೆ ಬೇಕಾಗುವ ಹಾಗೂ ವರಮಾನವುಳ್ಳ ಅಧಿಕಾರಸ್ಥಾನಗಳು, ಸಾರ್ವಜನಿಕ ಗೌರವಗಳು ಇವೇ ಮುಂತಾದ ದೊಡ್ಡ, ತೂಕವುಳ್ಳ, ಘನವಾದ, ಅಶಾಶ್ವತ ವಸ್ತುಗಳನ್ನು ಸಂಗ್ರಹಿಸಿ, ವ್ಯವಸ್ಥೆಮಾಡಿ, ತಮ್ಮ ವಶಕ್ಕೆ ದಕ್ಕಿಸಿಕೊಳ್ಳುವುದರಲ್ಲಿ ಆ ಜನ ಬಹುಸಮರ್ಥರು. ಈ ವಸ್ತುಸಂಚಯವನ್ನು ಇಟ್ಟುಕೊಂಡು, ಸಾರ್ವಜನಿಕ ದೃಷ್ಟಿಯಲ್ಲಿ ಬಹು ಒಳ್ಳೆಯವೆಂದು ಕಾಣುವ ಕಾರ್ಯಗಳನ್ನು ಮಾಡಿ, ಈ ವರ್ಗಕ್ಕೆ ಸೇರಿದ ಒಬ್ಬ ವ್ಯಕ್ತಿ ಒಂದು ಎತ್ತರವಾದ ಭವ್ಯವಾದ ಮಂದಿರವನ್ನು ನಿರ್ಮಿಸುತ್ತಾನೆ; ಇತರ ಜನರ ದೃಷ್ಟಿಯಲ್ಲಿಯೂ, ಕಟ್ಟಕಡೆಯಲ್ಲಿ ತನ್ನ ಸ್ವಂತ ದೃಷ್ಟಿಯಲ್ಲಿಯೂ, ಆತ ಕಟ್ಟುವ ಮಂದಿರ ಎಂದರೆ ಅವನ ಶೀಲಸ್ವಭಾವದ ಸೌಧ, ವ್ಯಕ್ತಿತ್ವದ ಭವನ, ಬೇರೆ ಏನೂ ಅಲ್ಲ. ಆದ್ದರಿಂದ ಅಗೋ ನೋಡಿ, ಆ ರಾಜಭವನ. ಅದರ ಭವ್ಯವಾದ ಹಜಾರಗಳೂ ವಿಶಾಲವಾದ ಕೋಣೆಗಳ ಸಾಲುಗಳೂ ಬೆಲೆಬಾಳುವ ಅಮೃತಶಿಲೆಗಳ: ಚಿತ್ರ ವಿಚಿತ್ರಾ ಕೃತಿಗಳ ಕಲಾಕೌಶಲದಿಂದ ನಿರ್ಮಿತವಾದ ನೆಲಗಟ್ಟುಗಳಿಂದ ಶೋಭಿಸುತ್ತಿವೆ; ಅದರ ಕಿಟಕಿಗಳೋ, ಪ್ರತಿ ಕೋಣೆಯ ಎತ್ತರದಷ್ಟಕ್ಕೂ ನಿಂತಿದ್ದು, ಅತ್ಯಂತ ಪಾರದರ್ಶಕವಾದ ದಪ್ಪ ಗಾಜುಹಲಗೆಗಳ ಮೂಲಕ ಸೂರ್ಯ ಪ್ರಕಾಶವನ್ನು ಹಾಯಗೂಡುತ್ತವೆ; ಅದರ ಎತ್ತರವಾದ ಒಳಮಾಳಿಗೆಯ ಅಂಚುಕಟ್ಟುಗಳಿಗೆ ಚಿನ್ನದ ಗಿಲೀಟು ಮಾಡಿದೆ; ಒಳಮಾಳಿಗೆಗಳ ಮೈ ವೈಭವಯುತ ವರ್ಣಗಳಿಂದ ಶೋಭಿತವಾಗಿದೆ; ಇವೆಲ್ಲದರ ಮೇಲೆ ಗೋಳ ಗುಮ್ಮಟವಿದೆ– ಅದರ ಮೂಲಕ, ಮಧ್ಯದ ನೆಲಗಟ್ಟಿನ ಮೇಲೆ ನಿಂತು, ನಡುವೆ ಯಾವ ತಡೆಯೂ ಇಲ್ಲದೆ, ನೀವು ಆಕಾಶವನ್ನು ನಿಟ್ಟಿಸಿ ನೋಡಿಬಹುದು. ಇದಕ್ಕಿಂತಲೂ ಚೆನ್ನಾದ, ಇದಕ್ಕಿಂತಲೂ ಘನವಾದ, ಬೇರೆ ಯಾವ ಸಂಕೇತದಿಂದ ಯಾವಾತನೇ ಆಗಲಿ ತನ್ನ ಶೀಲಸ್ವಭಾವದ ಪ್ರತಿಚ್ಛಾಯೆಯನ್ನು ಬೀರಲಾಶಿಸಬಹುದು? ಆಹಾ! ಆದರೆ ಯಾವುದೋ ಒಂದು ತಗ್ಗಾದ ಅಗೋಚರವಾದ ಮೂಲೆಯಲ್ಲಿ– ಅಥವಾ ಯಾವುದೋ ಕೆಳಅಂತಸ್ತಿನ ಕಿರುಕೋಣೆಯಲ್ಲಿ ಬಾಗಿಲು ಮುಚ್ಚಿ, ಅಗುಣಿ ಬೀಗಹಾಕಿ, ಬೀಗದ ಕೈಯನ್ನು ಎಲ್ಲೋ ಆಚೆಗೆ ಬೀಸಾಡಿಬಿಟ್ಟು– ಅಥವಾ, ಮೇಲ್ಭಾಗದಲ್ಲಿ ಅತ್ಯಂತ ಕಲಾಪೂರ್ಣ ಮಾದರಿಯ ಶಬಲ ಚಿತ್ರಗೆಲಸವುಳ್ಳ ಅಮೃತಶಿಲೆಯ ನೆಲಗಟ್ಟಿನ ಕೆಳಗಡೆ, ಕೊಳೆತು ನಾರುವ ನೀರಿನ ಹಳ್ಳದಲ್ಲಿ– ಅರ್ಧ ಕೊಳೆತು ಹೋಗಿ, ಇನ್ನೂ ಕೊಳೆಯುತ್ತಿರುವ,

ಅವನನ್ನು ಬಲ್ಲವರ ಕ್ಷೇತ್ರ ಬಹುವಿಶಾಲವಾಗಿಯೇ ಇತ್ತು; ಅದರಲ್ಲಿ– ಹೆಪ್ಸಿಬಾ, ಛಾಯಾಚಿತ್ರಕಲಾವಿದನಂತಹ ಯಾವನೋ ಒಬ್ಬ ನ್ಯಾಯಬಾಹಿರನಾದ ರಹಸ್ಯತತ್ತ್ವವಾದಿ, ಬಹುಶಃ ಕೆಲವು ರಾಜಕೀಯ ವಿರೋಧಿಗಳು ಇವರನ್ನು ಬಿಟ್ಟರೆ– ಪ್ರಪಂಚದ ದೃಷ್ಟಿಯಲ್ಲಿ ಒಂದು ಉನ್ನತವಾದ ಗೌರವಾನ್ವಿತವಾದ ಸ್ಥಾನವನ್ನು ಪಡೆಯಲು ಅವನಿಗಿದ್ದ ಹಕ್ಕನ್ನು ಪ್ರತಿಭಟಿಸಬೇಕೆಂದು ಕನಸುಕಾಣುವ ವ್ಯಕ್ತಿ ಕೂಡ ಒಬ್ಬನೂ ಆ ವಿಶಾಲಕ್ಷೇತ್ರದಲ್ಲಿ ಇರಲಿಲ್ಲ. ಅಲ್ಲದೆ, ಅಸೂಯೆ ಹುಟ್ಟಿಸುವಂತಹ ತನ್ನ ಕೀರ್ತಿ ತನ್ನ ಯೋಗ್ಯತೆಗೆ ತಕ್ಕದ್ದಾಗಿದೆ ಎಂಬ ಬಗೆಗೆ ಬಹುಶಃ ನ್ಯಾಯಮೂರ್ತಿ ಪಿನ್ಷನ್ನನೇ ಸ್ವತಃ ಹಲವು ಸಂದೇಹಗಳನ್ನು ಪದೇಪದೇ ಇಟ್ಟುಕೊಂಡಿರಲಿಲ್ಲ (ಇಷ್ಟನ್ನು ಹೇಳುವ ನ್ಯಾಯವನ್ನು ನಾವು ಅವನಿಗೆ ಸಲ್ಲಿಸಬೇಕು). ಒಬ್ಬ ವ್ಯಕ್ತಿಯ ಪ್ರಾಮಾಣಿಕತೆಗೆ ಅವನ ಆತ್ಮಸಾಕ್ಷಿಯೆ ಖಂಡಿತವಾದ ಪ್ರಮಾಣ. ಅವನ ಆತ್ಮಸಾಕ್ಷಿ ಲೋಕದ ಸ್ತುತಿಪರ ವಾಣಿಗೆ ಹೊಂದಿಕೊಳ್ಳುವಂತಹ ಸಾಕ್ಷ್ಯವನ್ನೇ ನೀಡಿತು; ದಿನದ ಇಪ್ಪತ್ತುನಾಲ್ಕು ಗಂಟೆಗಳಲ್ಲಿ ಎಲ್ಲೋ ಐದು ನಿಮಿಷಗಳಷ್ಟು ಅಲ್ಪಕಾಲ, ಅಥವಾ ಇಡಿಯ ವರ್ಷಚಕ್ರದಲ್ಲಿ ಎಂದೋ ಒಂದು ಕರಾಳದಿನದಂದು, ಹಾಗೆ ಸಾಕ್ಷ್ಯ ನೀಡಲು ತಪ್ಪಿರಬಹುದು, ಅಷ್ಟೆ. ಆದರೂ ಕೂಡ, ಈ ಪ್ರಮಾಣವು ಎಷ್ಟೇ ಬಲವತ್ತರವಾಗಿ ಕಂಡುಬರಲಿ, ನ್ಯಾಯಮೂರ್ತಿ ಹಾಗೂ ಅವನನ್ನು ಒಪ್ಪಿಕೊಂಡ ಲೋಕವು ಸರಿಯೆಂದೂ, ತನ್ನ ಪೂರ್ವಕಲ್ಪಿತ ಅಭಿಪ್ರಾಯದಲ್ಲಿ ಒಂಟಿಗಳಾದ ಹೆಪ್ಸಿಬಾ ತಪ್ಪೆಂದೂ ಹೇಳಿ ನಮ್ಮ ಸ್ವಂತ ಆತ್ಮಸಾಕ್ಷಿಯನ್ನು ಅಪಾಯಕ್ಕೆ ಸಿಲುಕಿಸಲು ನಾವು ಹಿಂತೆಗೆಯಬೇಕು. ಮಾನವಕೋಟಿಗೆ ಗೋಚರವಾಗದ ರೀತಿಯಲ್ಲಿ ಯಾವುದೋ ಕೆಡುಕಿನ, ವಿಕಾರವಾದ, ಸಂಗತಿ ಹೊಂಚುತ್ತ ಅಡಗಿಕೊಂಡಿದ್ದಿರಬಹುದು– ಅದನ್ನು ಅವನೇ ಮರೆತಿದ್ದಿರಬಹುದು; ಇಲ್ಲವೆ, ಆಡಂಬರದ ಕಾರ್ಯಕಲಾಪಗಳ ಅಲಂಕೃತ ಶಿಲ್ಪರಚನೆಯ ರಾಶಿಯ ಕೆಳಗೆ ಆಳವಾಗಿ ಹೂತುಹೋಗಿ, ಅವನ ಪ್ರತಿದಿನದ ಬದುಕಿನ ಗಮನಕ್ಕೆ ಅದು ಬಾರದೆ ಹೋಗಿರಬಹುದು. ಹಾಗಲ್ಲ, ಇನ್ನೂ ಮುಂದುವರಿದು ನಾವು ಬಹುಮಟ್ಟಿಗೆ ಧೈರ್ಯಮಾಡಿ ಹೀಗೆ ಹೇಳಬಹುದು: ಅವನು ಪ್ರತಿದಿನವೂ ಒಂದು ಅಪರಾಧವನ್ನು ಎಸಗುತ್ತಿದ್ದು, ಅದು ನಿರಂತರವಾಗಿ ಹೊಸದಾಗುತ್ತಿದ್ದಿರಬಹುದು; ಅಲ್ಲದೆ, ಕೊಲೆಗೆಲಸವೊಂದರ ಅದ್ಭುತ ಅಮಾನುಷ ರಕ್ತ ಕಳಂಕದಂತೆ ಅದು ಹೊಸಹೊಸದಾಗಿ ಕೆಂಪುತಿರುಗುತ್ತಿದ್ದಿರಬಹುದು, ಇದು ಅವಶ್ಯವಾಗಿ ಪ್ರತಿಕ್ಷಣದಲ್ಲಿಯೂ ಅವನ ಅರಿವಿಗೆ ಬಾರದಿರಬಹುದು.

ದೃಢಮನಸ್ಸಿನ, ಅಪಾರ ಶೀಲಶಕ್ತಿಯುಳ್ಳ, ದೃಢವಾಗಿ ರೂಪಗೊಂಡ

ಅನುಸರಿಸುವುದರಲ್ಲಿ ಅಥವಾ ಅದರ ವ್ಯವಸ್ಥಿತ ಚಳವಳಿಗಳೊಂದಿಗೆ ಸಮಗತಿಯಲ್ಲಿ ನಡೆಯುವುದರಲ್ಲಿ ಕಂಡುಬರುತ್ತಿದ್ದ ಆತನ ಹೊಂದಿಕೆ; ಬೈಬಲ್ ಸಂಘವೊಂದರ ಅಧ್ಯಕ್ಷನಾಗಿ ಆತ ತೋರುತ್ತಿದ್ದ ಗಮನಾರ್ಹವಾದ ಉತ್ಸಾಹ; ಒಬ್ಬ ವಿಧವೆಯ ಹಾಗೂ ಒಬ್ಬ ತಬ್ಬಲಿಯ ನಿಧಿಯ ಕೋಶಾಧಿಕಾರಿಯಾಗಿ ಆಕ್ಷೇಪಣೆಗೊಳಗಾಗದ ಆತನ ಪ್ರಾಮಾಣಿಕತೆ; ಪೇರು ಹಣ್ಣಿನ ಎರಡು ಬಹು ಅಮೂಲ್ಯವಾದ ಪ್ರಕಾರಗಳನ್ನು ಬೆಳೆಯಿಸುವುದರ ಮೂಲಕ ತೋಟಗಾರಿಕೆಗೆ ಆತ ಎಸಗಿದ ಉಪಕಾರ; ಪ್ರಸಿದ್ಧವಾದ 'ಪಿನ್ಚನ್ ಗೂಳಿ'ಯ ತಳಿಯನ್ನು ಎಬ್ಬಿಸುವ ಮೂಲಕ ಆತ ವ್ಯವಸಾಯಕ್ಕೆ ಸಲ್ಲಿಸಿದ ಸೇವೆ; ಅನೇಕಾನೇಕ ವರ್ಷಗಳ ಹಿಂದಿನಿಂದಲೂ ನಡೆದುಬಂದ ಆತನ ನೈತಿಕ ನಡವಳಿಕೆಯ ಪರಿಶುದ್ಧಿ; ಬಹಳ ಖರ್ಚುಮಾಡಿಸುತ್ತಿದ್ದ ಹಾಗೂ ವ್ಯಭಿಚಾರಿಯಾಗಿದ್ದ ಹರೆಯದ ಮಗನನ್ನು, ಅವನ ಅಲ್ಪಜೀವಿತದ ಕಡೆಯ ಗಳಿಗೆಯವರೆಗೂ ಕ್ಷಮಿಸದೆ ತಡಮಾಡಿ, ಕಡೆಗೂ ಅವನ ಮೇಲೆ ಕ್ಷುದ್ರನಾಗಿ ಪರಿತ್ಯಜಿಸುವುದರಲ್ಲಿ ಆತ ತೋರಿದ ಕಾಠಿನ್ಯ; ಬೆಳಗ್ಗೆ ಮತ್ತು ಸಂಜೆ ಆತ ಮಾಡುತ್ತಿದ್ದ ಪ್ರಾರ್ಥನೆಗಳು, ಊಟದ ವೇಳೆಯ ದೇವರ ಪ್ರಾರ್ಥನೆ; ಮದ್ಯಪಾನವರ್ಜನೆಯ ಚಳವಳಿಯನ್ನು ಮುಂದುವರಿಸುವುದರಲ್ಲಿ ಆತ ಪಟ್ಟ ಪ್ರಯತ್ನಗಳು; ಸಂಧಿವಾತ ಹಿಂದೆ ಹೊಡೆದಂದಿನಿಂದೀಚೆಗೆ, ಹಗಲುಹೊತ್ತು ಮಾತ್ರ ಐದು ಲೋಟ ಹಳೆಯ 'ಷೆರಿ' ದ್ರಾಕ್ಷಾ ಮದ್ಯವನ್ನು ಸೇವಿಸುವಷ್ಟಕ್ಕೇ ತನ್ನ ಮದ್ಯಪಾನವನ್ನು ಮಿತಿಗೊಳಿಸಿಕೊಂಡಿರುವುದು; ಆತನ ಲಿನೆನ್ ಬಟ್ಟೆಯ ಉಡುಪಿನ ಹಿಮಬಿಳುಪು; ಆತನ ಬೂಡ್ಸುಗಳ ಥಾಳಥಳ್ಯ; ಚಿನ್ನದ ಹಿಡಿಯ ಬೆತ್ತದ ಚೆಲುವು; ಆತನ ಅಂಗಿಯ ಚಚ್ಚೌಕನಾದ ದೊಡ್ಡಳತೆಯ ಮಾದರಿ, ಅದರ ಬಟ್ಟೆಯ ನಯ; ಒಟ್ಟಿನ ಮೇಲೆ ಆತನ ಉತುಪುತೊಡಪಿನ ಮತ್ತು ಸಲಕರಣೆಸಜ್ಜುಗಳ ಪ್ರಯತ್ನಪೂರ್ವಕ ಔಚಿತ್ಯ; ಬೀದಿಯಲ್ಲಿ ಬಡವ ಬಲ್ಲಿದನೆನ್ನದೆ ತನ್ನ ಪರಿಚಯಸ್ಥರಲ್ಲಿ ಯಾರನ್ನೇ ಆಗಲಿ ಕಂಡವೇಳೆ ತಲೆಬಾಗಿಸಿಯೋ, ಟೋಪಿಯನ್ನು ತಲೆಯಿಂದ ತೆಗೆದು ಎತ್ತಿಹಿಡಿದೋ, ಇಲ್ಲವೆ ಕೈಯಾಡಿಸಿಯೋ ವಂದನೆ ಸಲ್ಲಿಸಿ ಸಾರ್ವಜನಿಕರನ್ನು ಗಮನಿಸುತ್ತಿದ್ದ ರೀತಿಯಲ್ಲಿ ಆತ ವಹಿಸುತ್ತಿದ್ದ ಸೂಕ್ಷ್ಮವಾದ ಎಚ್ಚರಿಕೆ; ಸಕಲ ಲೋಕವನ್ನೂ ಸಂತೋಷಪಡಿಸಬೇಕೆಂಬ ನಿಶ್ಚಯದಿಂದ ಆತ ಮೂಡಿಸುತ್ತಿದ್ದ ಅಪಾರ ಔದಾರ್ಯ ಸೂಚಕವಾದ ಮುಗುಳುನಗೆ– ಇಂತಹ ರೇಖೆಗಳಿಂದ ರಚಿತವಾದ ಭಾವಚಿತ್ರದಲ್ಲಿ ಅವಲಕ್ಷಣದ ಕುರುಹುಗಳಿಗೆ ಅವಕಾಶವೆಲ್ಲಿ? ಈ ಸರಿಯಾದ ಮುಖವನ್ನೆ ಅವನು ಕನ್ನಡಿಯಲ್ಲಿ ಕಂಡದ್ದು. ಈ ಪ್ರಶಂಸಾರ್ಹವಾದ ಸುವ್ಯವಸ್ಥಿತ ಜೀವನವೇ ಪ್ರತಿದಿನ ಹಗಲಿರುಳೂ

ಅರಮನೆಯಲ್ಲೆಲ್ಲಾ ತನ್ನ ಸಾವಿನ ನಾತವನ್ನು ಹರಡುತ್ತಾ, ಒಂದು ಹೆಣ ಬಿದ್ದಿರಬಹುದು! ಅಲ್ಲಿನ ನಿವಾಸಿಗೆ ಅದರ ಅರಿವು ಇರುವುದಿಲ್ಲ, ಏಕೆಂದರೆ ಬಹಳಕಾಲದಿಂದ ಅದು ಅವನ ನಿತ್ಯದುಸಿರಾಗಿದೆ! ಭೇಟಿಗೆಂದು ಬಂದವರಿಗೂ ಅದರ ಅರಿವಿರುವುದಿಲ್ಲ; ಏಕೆಂದರೆ, ಯಜಮಾನನು ಶ್ರಮವಹಿಸಿ ತನ್ನ ಅರಮನೆಯಲ್ಲೆಲ್ಲಾ ಹರಡಿರುವ ನರುಗಂಪನ್ನೂ ತಾವೇ ತಂದು ಅವನ ಮುಂದೆ ಸಂತೋಷದಿಂದ ಉರಿಸುವ ಧೂಪವನ್ನೂ– ಇಷ್ಟನ್ನು ಮಾತ್ರ ಅವರು ಆಘ್ರಾಣಿಸುತ್ತಾರೆ! ಬಹುಶಃ, ಆಗೊಮ್ಮೆ ಈಗೊಮ್ಮೆ ದಿವ್ಯಜ್ಞಾನಿಯೊಬ್ಬನು ಬರುವನು: ಮರುಕ ತುಂಬಿದ ಅವನ ದಿವ್ಯದೃಷ್ಟಿಯೆದುರಿನಲ್ಲಿ ಇಡಿಯ ಕಟ್ಟಡವೇ ಚೆದರುಗಾಳಿಯಲ್ಲಿ ಕರಗಿಹೋಗುತ್ತದೆ; ಹಾಗೆ ಕರಗಿಹೋದಾಗ, ಮರೆಯಲ್ಲಿರುವ ಆ ಮೂಲೆಯನ್ನು ಮಾತ್ರ, ಅಗುಣಿಹಾಕಿದ ಕಿರುಕೋಣೆಯನ್ನು ಮಾತ್ರ, ಹಿಂದುಳಿಸುವುದು; ಕೋಣೆಯ ಮರೆತುಹೋದ ಬಾಗಿಲ ಮೇಲೆ ಜೇಡರಬಲೆಯ ತೋರಣಗಟ್ಟಿರುವುದು, ನೆಲಗಟ್ಟಿನ ಕೆಳಗಣ ಆ ಭಯಂಕರ ಕುಳಿಯಲ್ಲಿ ಕೊಳೆತುನಾರುವ ಹೆಣವಿರುವುದು. ಆದ್ದರಿಂದ, ಆ ಮನುಷ್ಯನ ಶೀಲ ಸ್ವಭಾವದ, ಹಾಗೂ ಅವನ ಬದುಕಿಗೆ ತನ್ನಲ್ಲಿರುವ ವಾಸ್ತವಿಕತೆಯನ್ನು ನೀಡಿರುವ ಕೃತ್ಯದ ನಿಜವಾದ ಸಂಕೇತಮುದ್ರೆಯನ್ನು ನಾವು ಇಲ್ಲಿ ಹುಡುಕಬೇಕು. ಇಂತು, ಅಮೃತಶಿಲೆಯ ರಾಜಮಂದಿರದ ಮರೆತದ ಕೆಳಗೆ– ಅನೇಕ ಕಷ್ಮಲಗಳಿಂದ ಹೊಲಸಾದ, ಬಹುಶಃ ರಕ್ತದ ಛಾಯೆ ಬೆರೆತ, ಕೊಳೆತುನಾರುವ ನೀರಿನ ಕೊಳ– ಆ ಗುಪ್ತ ನೀಚಸ್ಥಳ– ಇಲ್ಲಿದೆ ಆ ಮನುಷ್ಯನ ಶೋಚನೀಯ ಆತ್ಮ! ಕೆಳಗೆ ಏನಿದೆಯೆಂಬುದನ್ನು ನೆನೆಯದೆ, ಮೇಲೆ ನಡೆಯುತ್ತಿದೆ ಅವನ ಪ್ರಾರ್ಥನೆ!

ಈ ಉಕ್ತಿಯ ಸರಣಿಯನ್ನು ಸ್ವಲ್ಪ ಹೆಚ್ಚು ಸಮೀಪವಾಗಿ ನ್ಯಾಯಮೂರ್ತಿ ಪಿನ್ಚನ್ನಿಗೆ ಅನ್ವಯಿಸಿ ನೋಡಬಹುದು: (ಅವನಂತಹ ಉನ್ನತ ಗೌರವವುಳ್ಳ ವ್ಯಕ್ತಿಗೆ ಘೋರಾಪರಾಧದ ದೋಷವನ್ನು ಎಷ್ಟುಮಾತ್ರಕ್ಕೂ ಆರೋಪಿಸದೆ), ನ್ಯಾಯಮೂರ್ತಿಯ ಎಚ್ಚತ್ತ ಸೂಕ್ಷ್ಮ ಆತ್ಮಶಕ್ತಿಯನ್ನು ಅಡಗಿಸಿ ನಿಶ್ಚೇಷ್ಟವಾಗಿ ಮಾಡಲು ಸಾಕಾಗುವಷ್ಟು ಸೊಗಸಾದ ಹೊಲಸು ಸಾಮಗ್ರಿ ಅವನ ಬದುಕಿನಲ್ಲಿದ್ದಿತು; ಅವನ ಆತ್ಮಸಾಕ್ಷಿ ಎಂದೂ ಧರ್ಮ ಸಂಕಟಕ್ಕೆ ಸಿಲುಕಿ ತೊಳಲಿದ್ದುದಿಲ್ಲ. ನ್ಯಾಯಪೀಠಕ್ಕೆ ಸಂಬಂಧಪಟ್ಟಂತೆ ಆತನ ಶೀಲಶುದ್ಧಿ. ಆ ತರುವಾಯದ ಅಧಿಕಾರಸ್ಥಾನಗಳಲ್ಲಿ ಆತ ಸಲ್ಲಿಸಿದ ಸಾರ್ವಜನಿಕ ಸೇವೆಯಲ್ಲಿ ತೋರುತ್ತಿದ್ದ ಶ್ರದ್ಧೆ; ತನ್ನ ಪಕ್ಷಕ್ಕೆ ಆತ ತೋರುತ್ತಿದ್ದ ನಿಷ್ಠೆ, ಹಾಗೂ ಅದರ ತತ್ತ್ವಗಳನ್ನು

ಆಶ್ಚರ್ಯವೆನಿಸಿತ್ತು ಮಾತ್ರವಲ್ಲ, ನಿಜವಾಗಿ ದಿಗಿಲಾಗಿತ್ತು.

ಅಲ್ಲಿಯವರೆಗೆ, ನ್ಯಾಯಮೂರ್ತಿಯ ಮುಖಮುದ್ರೆಯಲ್ಲಿ ಮೃದುವಾದ ಸಹನೆ ವ್ಯಕ್ತಗೊಂಡಿತ್ತು– ತನ್ನ ಸೋದರಸಂಬಂಧಿಯ ಅನುಚಿತವಾದ ಜೋರಿನ ಬಗೆಗೆ ಗಂಭೀರವಾದ, ಬಹುಮಟ್ಟಿಗೆ ಮೃದುವಾದ, ಅಸಮ್ಮತಿಯ ಸೂಚನೆಯಾಗಿತ್ತು ಅದು; ಅವಳ ಮಾತಿನಿಂದಾದ ಅನ್ಯಾಯವನ್ನು ಕ್ರೈಸ್ತನಿಗೆ ಒಪ್ಪುವ ರೀತಿಯಲ್ಲಿ ಧಾರಾಳವಾಗಿ ಕ್ಷಮಿಸಿದಂತೆ ಇತ್ತು ಅದು ಆದರೆ ಆಡಿದ ಆ ಮಾತುಗಳನ್ನು ಹಿಂತೆಗೆದುಕೊಳ್ಳುವಂತಿರಲಿಲ್ಲ ಆಗ ಅವನು ನೋಟವೂ ಕಾಠಿನ್ಯವನ್ನು ಶಕ್ತಿಸಾಮರ್ಥ್ಯಗಳ ಭಾವವನ್ನು, ಅಚಲ ನಿರ್ಧಾರವನ್ನು ತಳೆಯಿತು; ಇದರಿಂದ ಉಂಟಾದ ಮಾರ್ಪಾಟು ಅದೆಷ್ಟು ಸಹಜವಾಗಿ ಕಂಡೂಕಾಣದಂತೆ ಇತ್ತೆಂದರೆ, ಮೊದಲಿಂದಲೂ ಅಲ್ಲಿ ನಿಂತಿದ್ದವನು ಕಬ್ಬಿಣದಂತಹ ಮನುಷ್ಯ, ಮೃದುವಾದ ಮನುಷ್ಯನಲ್ಲವೇ ಅಲ್ಲ, ಎನ್ನುವಂತಿತ್ತು, ಪರಿಣಾಮ ಹೇಗಿತ್ತೆಂದರೆ– ಕಡಿದಾದ ಪರ್ವತದ ಪಾರ್ಶ್ವಮುಖದಲ್ಲಿ ಕಲ್ಲಿನ ಹುಬ್ಬು ಕಾಣುವುದು; ಅದನ್ನು ಆವರಿಸಿದ್ದ ಹಗುರವಾದ, ನಸುಬಣ್ಣದಿಂದ ಬೆಳಗುವ, ಹಬೆಹಬೆಯಾದ ಮೋಡಗಳು ತಟ್ಟನೆ ಕಣ್ಮರೆಯಾಗುವುವು; ಆಗ ಹಿಂದೆ ಉಳಿದು ಕಾಣುವುದು ಕೋಪದಿಂದ ಗಂಟಿಕ್ಕಿದ ಹುಬ್ಬು; ಅದು ಶಾಶ್ವತ ಎಂದು ತಟ್ಟನೆ ನಿಮಗೆ ತೋರುವುದು. ಹೆಪ್ಸಿಬಾ ಆದರೋ, ತನ್ನ ಹೃದಯದ ಕಹಿ ವಿಷವನ್ನು ಇದೇತಾನೆ ಕಾರುತ್ತಿದ್ದುದು ತನ್ನ ಪೂರ್ವಜನಾದ ವೃದ್ಧ ಪ್ಯೂರಿಟನ್ನನ ಮೇಲೆ, ಇಂದಿನ ನ್ಯಾಯಮೂರ್ತಿಯ ಮೇಲಲ್ಲ– ಎಂಬ ಹುಚ್ಚು ನಂಬಿಕೆಯನ್ನು ಬಹುಮಟ್ಟಿಗೆ ಅಂಗೀಕರಿಸಿದಳು. ಈ ವಿಷಮಘಟ್ಟದಲ್ಲಿ ಒಳಕೋಣೆಯಲ್ಲಿದ್ದ ಭಾವಚಿತ್ರಕ್ಕೂ ತನಗೂ ಇದ್ದ ತಪ್ಪದ ಹೋಲಿಕೆಯ ಮೂಲಕ, ತನಗೆ ಆರೋಪಿತವಾದ ವಂಶಲಕ್ಷಣಕ್ಕೆ ಇದಕ್ಕಿಂತ ಪ್ರಬಲವಾದ ಸಾಕ್ಷ್ಯವನ್ನು ಬೇರೆ ಯಾರೂ ತೋರಿಸಲಿಲ್ಲ ಎನ್ನಿಸಿಬಿಟ್ಟನು ನ್ಯಾಯಮೂರ್ತಿ ಪಿನ್ಚನ್."

ಅವನು ಬಹಳ ಶಾಂತನಾಗಿ ನುಡಿದನು: "ಕಸಿನ್ ಹೆಪ್ಸಿಬಾ, ಈ ವಿಚಾರವನ್ನು ಇತ್ಯರ್ಥಮಾಡಲು ಕಾಲ ಒದಗಿಬಂದಿದೆ."

"ಮನಃಪೂರ್ವಕವಾಗಿ ಅದನ್ನು ನಾನು ಒಪ್ಪುತ್ತೇನೆ! ಹಾಗಿದ್ದ ಮೇಲೆ, ನಮ್ಮನ್ನು ಇನ್ನೂ ಏಕೆ ಪೀಡಿಸುತ್ತಿದ್ದೀಯೆ? ಬಡ ಕ್ಲಿಫರ್ಡನನ್ನೂ ನನ್ನನ್ನೂ ಶಾಂತಿಯಿಂದಿರಗೊಡು. ಅದಕ್ಕಿಂತ ಮೇಲಾದದ್ದನ್ನು ನಾವು ಬೇರೆ ಏನನ್ನೂ ಅಪೇಕ್ಷಿಸುವುದಿಲ್ಲ!" ಎಂದು ಅವಳು ಉತ್ತರಕೊಟ್ಟಳು.

ನ್ಯಾಯಮೂರ್ತಿ ಮುಂದುವರಿಸಿದನು: "ಈ ಮನೆಯನ್ನು ಬಿಟ್ಟು

ಅವನ ಅರಿವಿಗೆ ಬರುತ್ತಿದ್ದುದು. ಹೀಗಿರುವಲ್ಲಿ, ಅದರ ಸಾರಫಲ ತಾನೇ ಎಂದುಕೊಳ್ಳುವ ಹಕ್ಕು ತನಗಿದೆಯೆಂದುಕೊಂಡು, "ಅಗೋ ಅಲ್ಲಿ ನೋಡಿ, ನ್ಯಾಯಮೂರ್ತಿ ಪಿನ್ಚನ್!" ಎಂದು ತನಗೂ ಜನಸಮುದಾಯಕ್ಕೂ ತೋರಿಸಿ ತಾನು ಹೇಳಬಾರದೆ?

ಅನೇಕಾನೇಕ ವರ್ಷಗಳ ಹಿಂದೆ, ಯಾವುದರ ಲಕ್ಷ್ಯವೂ ಇಲ್ಲದ ಅವನ ಪೂರ್ವಯೌವನದಲ್ಲಿ ಅವನು ಯಾವುದೋ ಒಂದು ತಪ್ಪು ಕೆಲಸ ಮಾಡಿದ್ದಾನೆ– ಅಥವಾ, ಈಗಲೂ ಕೂಡ, ಅನಿವಾರ್ಯ ಸಂದರ್ಭ ಸನ್ನಿವೇಶಗಳ ವಶಕ್ಕೆ ಸಿಲುಕಿ, ಸಾವಿರ ಹೊಗಳತಕ್ಕ ಕಾರ್ಯಗಳಲ್ಲದಿದ್ದರೂ ತೆಗಳತಕ್ಕವಲ್ಲದ ಕಾರ್ಯಗಳ ನಡುವೆ ಒಂದು ಸಂದೇಹಾಸ್ಪದ ಕೃತ್ಯವನ್ನು ಅವನು ಮಾಡಿದ್ದಾನೆ– ಎಂದು ಇಟ್ಟುಕೊಳ್ಳೋಣ. ಇಷ್ಟು ಮಾತ್ರದಿಂದ, ಆ ಒಂದು ಅವಶ್ಯಕಾರ್ಯದಿಂದ, ಆ ಅರ್ಧ ಮರೆತುಹೋದ ಕೃತ್ಯದಿಂದ, ನ್ಯಾಯಮೂರ್ತಿಯ ಶೀಲವನ್ನು ನಿರ್ಧರಿಸಬಹುದೆ? ಇಡಿಯ ಜೀವಿತಕಾಲದ ಅಂದು ಆದ ನೋಟವನ್ನು ಅದು ಮುಚ್ಚಿಬಿಡಲು ಅವಕಾಶಕೊಡಬಹುದೆ? ತಕ್ಕಡಿಯ ಒಂದು ತಟ್ಟೆಯಲ್ಲಿ ರಾಶಿಹಾಕಿರುವ ಕೆಡುಕಲ್ಲದ ಪದಾರ್ಥಗಳ ಮೊತ್ತವನ್ನು ತೂಕದಲ್ಲಿ ಮೀರಿಸುವಂತಹ ಭಾರಿಯಾದ ತೂಕವು ಇನ್ನೊಂದು ತಟ್ಟೆಯಲ್ಲಿರುವ ಕೆಡುಕಿನ ಪದಾರ್ಥದ ಹೆಬ್ಬೆರಳು ಗಾತ್ರದಷ್ಟರಲ್ಲಿ ಏನಿದ್ದೀತು! ಈ ತಕ್ಕಡಿ– ತೂಕದ ವ್ಯವಸ್ಥೆ ನ್ಯಾಯಮೂರ್ತಿ ಪಿನ್ಚನ್ನನ ವೃತ್ತಿಬಾಂಧವವರ್ಗದ ಜನರಲ್ಲಿ ಬಹು ಪ್ರಿಯವಾದದ್ದು. ಹೀಗೆ, ಅದೃಷ್ಟಹೀನ ಪರಿಸ್ಥಿತಿಯಲ್ಲಿರುವ, ಕಠಿನಮನಸ್ಕನಾದ, ಉದಾಸೀಭಾವದ, ಎಂದೂ ಅಂತರ್ಮುಖಿಯಾಗಿ ತನ್ನನ್ನು ತಾನು ಅರಿಯದ, ಸಾರ್ವಜನಿಕ ಅಭಿಪ್ರಾಯವೆಂಬ ಕನ್ನಡಿಯಲ್ಲಿ ಕಾಣುವುದೇ ತನ್ನ ನಿಜವಾದ ಪ್ರತಿಬಿಂಬವೆಂಬ ಗ್ರಹಿಕೆಯ ಆಧಾರದ ಮೇಲೆ ಸ್ವವಿಷಯಕವಾದ ಭಾವನೆಯನ್ನು ನಿಶ್ಚಿತಮನಸ್ಸಿನಿಂದ ರೂಪಿಸಿಕೊಳ್ಳುವ ಮನುಷ್ಯನು ತನ್ನ ಆಸ್ತಿಯನ್ನೋ ಕೀರ್ತಿಯನ್ನೋ ಕಳೆದುಕೊಂಡಲ್ಲದೆ ನಿಜವಾದ ಆತ್ಮಪರಿಜ್ಞಾನವನ್ನು ಪಡೆಯಲಾರನು. ಆ ಕಾರ್ಯದಲ್ಲಿ ರೋಗವು ಅವನಿಗೆ ಸದಾ ನೆರವಾಗದು; ಸಾವಿನ ಗಳಿಗೆ ಕೂಡ ಯಾವಾಗಲೂ ಸಹಾಯಮಾಡದು!

ಆದರೆ ಈಗ ನಾವು ವ್ಯವಹರಿಸಬೇಕಾದದ್ದು, ಹೆಪ್ಸಿಬಾಳ ಕ್ರೋಧದ ಭಯಂಕರವಾದ ಉದ್ರೇಕವನ್ನು ಎದುರಿಸುತ್ತ ನಿಂತಿದ್ದ ನ್ಯಾಯಮೂರ್ತಿ ಪಿನ್ಚನ್ನನೊಂದಿಗೆ, ಅವಳು ಈ ಬಂಧುವಿನ ವಿರುದ್ಧವಾಗಿ ಮೂವತ್ತು ವರ್ಷದಿಂದಲೂ ತನ್ನಲ್ಲಿ ರೂಢಮೂಲವಾಗಿದ್ದ ತೀವ್ರ ಅಸಮಾಧಾನವನ್ನು ಯಾವ ಪೂರ್ವಾಲೋಚನೆಯೂ ಇಲ್ಲದೆ ವ್ಯಕ್ತಪಡಿಸಿದ್ದಳು; ಆ ಬಗೆಗೆ ಅವಳಿಗೇ

ಮರೆಮಾಡುತ್ತಾನೆ."

"ಅದಷ್ಟೇ ಆದರೆ, ನನ್ನ ದೃಷ್ಟಿಯಲ್ಲಿ ಅವನು ಸಾಕಷ್ಟು ಪ್ರೇಮವನ್ನು ಕಾಣುತ್ತಾನೆ!" ಎಂದು ತನ್ನ ಮುಖಮುದ್ರೆಯ ಉದಾರಭಾವದಲ್ಲಿ ಸಕಾರಣವಾಧ ಭರವಸೆಯನ್ನು ಹೊಂದಿ, ನ್ಯಾಯಮೂರ್ತಿ ನುಡಿದನು:" "ಆದರೆ, ಕಸಿನ್ ಹೆಪ್ಸಿಬಾ, ನೀನು ಬೇಕಾದಷ್ಟು ಸಂಗತಿಯನ್ನು ಒಪ್ಪಿಕೊಂಡಿದ್ದೀಯೆ; ಅದು ನನ್ನ ಉದ್ದೇಶಕ್ಕೆ ಅನುಗುಣವಾಗಿಯೂ ಇದೆ. ಇನ್ನು, ನನ್ನ ಮಾತಿಗೆ ಕಿವಿಗೊಡು, ಈ ಭೇಟಿ ಆಗಲೇಬೇಕೆಂದು ನಾನು ಒತ್ತಾಯಪಡಿಸುತ್ತಿರುವುದಕ್ಕೆ ಮುಚ್ಚು ಮರೆಯಿಲ್ಲದೆ ನನ್ನ ಕಾರಣಗಳನ್ನು ವಿವರಿಸುತ್ತೇನೆ. ಮೂವತ್ತು ವರ್ಷಗಳ ಹಿಂದೆ, ನಮ್ಮ ದೊಡ್ಡಪ್ಪ ಜಫ್ರಿ ಸತ್ತಾಗ– ಆ ಘಟನೆಯ ಸುತ್ತ ಕವಿದಿದ್ದ ಹೆಚ್ಚು ದುಃಖದ ಸಂಗತಿಗಳ ನಡುವೆ ಆ ಸಂದರ್ಭ ನಿನ್ನ ಗಮನವನ್ನು ಅಷ್ಟಾಗಿ ಸೆಳೆಯಿತೋ ಇಲ್ಲವೋ ನಾನು ಕಾಣೆ– ಅವನಿಗೆ ಸೇರಿದ್ದ ಪ್ರತಿಯೊಂದು ಬಗೆಯ ಪ್ರತ್ಯಕ್ಷ ಆಸ್ತಿಯೂ ಎಂದೇ ಆಗಲಿ ಅಂದಾಜಾಗಿದ್ದುದಕ್ಕಿಂತ ಬಹಳ ಕಡಮೆಯಾಗಿದ್ದುದು ಕಂಡುಬಂದಿತು. ಆತನು ಅಪಾರ ಐಶ್ವರ್ಯವಂತನಾಗಿದ್ದನೆಂಬ ಭಾವನೆಯಿದ್ದಿತು. ತನ್ನ ಕಾಲದ ಅತ್ಯಂತ ಧಡೂತಿಯಾದವರಲ್ಲಿ ಅವನೂ ಒಬ್ಬನೆಂಬ ಬಗೆಗೆ ಯಾರೂ ಸಂದೇಹಪಡುತ್ತಿರಲಿಲ್ಲ. ಅವನು ತನ್ನ ಆಸ್ತಿಯ ಮೊಬಲಗನ್ನು ದೂರದ ಪರದೇಶಗಳಲ್ಲಿ, ಬಹುಶಃ ತನ್ನ ಹೆಸರಿನಲ್ಲಲ್ಲದೆ ಬೇರೆ ಹೆಸರುಗಳಲ್ಲಿ, ಬಂಡವಾಳಗಾರರಿಗೆ ಪರಿಚಿತವಾದ ಬೇರೆಬೇರೆ ವಿಧಾನಗಳಲ್ಲಿ, ಶೇಖರಿಸಿಡುತ್ತಿದ್ದನು; ಅದನ್ನೆಲ್ಲ ಇಲ್ಲಿ ಬಿಡಿಸಿ ಹೇಳಬೇಕಾದದ್ದು ಅನಾವಶ್ಯಕ; ಅವನು ಹೀಗೆ ಮಾಡುತ್ತಿದ್ದುದು ಅವನ ವಕ್ರ ನಡೆವಳಿಗಳಲ್ಲಿ ಒಂದಾಗಿತ್ತು; ಆದರೆ ಅದು ಸಂಪೂರ್ಣವಾಗಿ ಅವಿವೇಕದ ಕಾರ್ಯವೇನಾಗಿರಲಿಲ್ಲ. ಜಫ್ರಿ ದೊಡ್ಡಪ್ಪನ ಅಂತಿಮ ಇಷ್ಟಪತ್ರದ ಪ್ರಕಾರ ಅವನ ಸಮಸ್ತ ಆಸ್ತಿಯೂ ನನ್ನ ಪಾಲಿಗೆ ಬಂತು: ಇದು ನಿನಗೂ ಗೊತ್ತಿದೆ; ಒಂದೇ ಒಂದು ವಿನಾಯಿತಿಯೆಂದರೆ, ವಂಶಪಾರಂಪರ್ಯವಾಗಿ ಬಂದ ಈ ಹಳೆಯ ಮಹಲು, ಹಾಗೂ ಅದಕ್ಕೆ ಸೇರಿಕೊಂಡು ಉಳಿದು ಬಂದಿರುವ ಪಿತ್ರಾರ್ಜಿತ ಜಮೀನಿನ ತುಂಡು– ಇವುಗಳಲ್ಲಿ ನಿನಗಿರುವ ಜೀವಾವಧಿಯ ಅನುಭೋಗದ ಹಕ್ಕು."

ತನ್ನ ಕಟುವಾದ ತಿರಸ್ಕಾರವನ್ನು ತಡೆದುಕೊಳ್ಳಲಾಗದೆ, ಹೆಪ್ಸಿಬಾ, ಕೇಳಿದಳು: "ಅವುಗಳನ್ನು ನಮ್ಮಿಂದ ಕಿತ್ತುಕೊಳ್ಳುವುದು ನಿನ್ನ ಉದ್ದೇಶವೇನು? ಬಡ ಕ್ಲಿಫರ್ಡನನ್ನು ಹಿಂಸೆಮಾಡದೆ ಇರುವುದಕ್ಕೆ ಇದು ಬೆಲೆಯೇನು?"

ದಯಾಪೂರ್ಣವಾದ ಮಂದಹಾಸದಿಂದ ನ್ಯಾಯಮೂರ್ತಿ ಉತ್ತರ ಕೊಟ್ಟನು:

ಹೋಗುವುದಕ್ಕೆ ಮುಂಚೆ ಕ್ಲಿಫರ್ಡನನ್ನು ನೋಡಬೇಕೆಂಬುದು ನನ್ನ ಉದ್ದೇಶ. ಹೆಪ್ಸಿಬಾ, ಹುಚ್ಚಿಯಂತೆ ವರ್ತಿಸಬೇಡ! ನಾನು ಅವನ ಏಕಮಾತ್ರ ಮಿತ್ರ, ಹಾಗೂ ಸರ್ವಶಕ್ತನಾದವನು. ಕೇವಲ ನನ್ನ ಒಪ್ಪಿಗೆ ಮಾತ್ರವಲ್ಲ, ರಾಜಕೀಯವಾಗಿ, ಅಧಿಕಾರಸ್ಥಾನದಿಂದ ಮತ್ತು ವೈಯಕ್ತಿಕವಾಗಿ ನಾನು ಮಾಡಿದ ಪ್ರಯತ್ನಗಳು, ನಾನು ಸಲ್ಲಿಸಿದ ಮನವಿಗಳು, ನಾನು ಉಪಯೋಗಿಸಿದ ನನ್ನ ಸರ್ವಪ್ರಭಾವಗಳು– ಇವು ಯಾವುವೂ ಇಲ್ಲದೆ ಕ್ಲಿಫರ್ಡ್ ನೀನು ಹೇಳುವಂತೆ ಸ್ವತಂತ್ರನಾಗಿರಲು ಸಾಧ್ಯವಿರುತ್ತಿರಲಿಲ್ಲ ಎಂಬುದು ನಿನಗೆ ಎಂದೂ ಹೊಳೆದಿಲ್ಲವೆ? ಅದನ್ನು ಕಾಣದಷ್ಟು ಕುರುಡಾಗಿದ್ದೀಯಾ ನೀನು? ಅವನ ಬಿಡುಗಡೆ ನನ್ನ ಮೇಲಿನ ವಿಜಯ ಎಂದು ನೀನು ಭಾವಿಸಿದ್ದೀಯಾ? ಎಂದಿಗೂ ಹಾಗಲ್ಲ, ಹಾಗಾಗದು, ನನ್ನ ಪ್ರಿಯ ಸೋದರೀ! ಅದಕ್ಕೂ ಇದಕ್ಕೂ ಬಹು ಬಹು ದೂರ! ಹಾಗಲ್ಲ ಅದು; ನಾನು ಬಹಳ ಕಾಲದಿಂದ ಇಟ್ಟುಕೊಂಡಿದ್ದ ಒಂದು ಉದ್ದೇಶವನ್ನು ನೆರವೇರಿಸಿದ್ದೇನೆ, ಅಷ್ಟೆ. ನಾನು ಅವನನ್ನು ಬಿಡುಗಡೆಮಾಡಿದೆ, ನಾನು!"

"ನೀನೆ! ನಾನೆಂದಿಗೂ ಅದನ್ನು ನಂಬುದಿಲ್ಲ! ಅವನ ನೆಲಮಾಳಿಗೆಯ ವಾಸಕ್ಕೆ ನೀನು ಕಾರಣ; ಅವನ ಸ್ವಾತಂತ್ರ್ಯ ದೇವರ ಕೃಪೆ!" ಎಂದು ಉತ್ತರಿಸಿದಳು ಹೆಪ್ಸಿಬಾ.

"ಅವನನ್ನು ಬಿಡುಗಡೆ ಮಾಡಿದವನು ನಾನು! ಅವನು ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವನೆ ಎಂಬುದನ್ನು ಈಗ ನಿಶ್ಚಯಿಸಲು ನಾನು ಇಲ್ಲಿಗೆ ಬಂದೆ. ಅದು ಅವನನ್ನೇ ಅವಲಂಬಿಸಿದೆ. ಈ ಉದ್ದೇಶಕ್ಕಾಗಿ ನಾನು ಅವನನ್ನು ನೋಡಲೇಬೇಕು" ಎಂದು ಅತ್ಯಂತ ಶಾಂತಿಸಮಾಧಾನಗಳಿಂದ ಒತ್ತಿ ನುಡಿದನು, ನ್ಯಾಯಮೂರ್ತಿ ಪಿನ್ಚನ್.

"ಎಂದಿಗೂ ಸಾಧ್ಯವಿಲ್ಲ! ಹಾಗೆಮಾಡಿದರೆ ಅವನಿಗೆ ಹುಚ್ಚುಹಿಡಿದೀತು!" ಎಂದು, ಒಂದು ಬಗೆಯ ಅನಿಶ್ಚಯತೆಯಿಂದ ಉದ್ಗರಿಸಿದಳು: ನ್ಯಾಯಮೂರ್ತಿಯ ಚುರುಕುಕಣ್ಣಿಗೆ ಅದು ತಕ್ಕಮಟ್ಟಿಗೆ ಗೋಚರವಾಯಿತು; ಅವನ ಸದುದ್ದೇಶಗಳಲ್ಲಿ ಲವಲೇಶವಾದರೂ ನಂಬಿಕೆಯಿಲ್ಲದ ಅವಳು, ಅವನಿಗೆ ಸೋಲುವುದಕ್ಕೆ ಅತ್ಯಂತ ಹೆದರಬೇಕೋ ಇಲ್ಲವೆ ಪ್ರತಿಭಟಿಸುವುದಕ್ಕೆ ಅತ್ಯಂತ ಹೆದರಬೇಕೋ ಎಂಬುದನ್ನು ಅವಳು ತಿಳಿಯಲಾರದೆ ಹೋದಳು; ಆದಕಾರಣ ಆ ಅನಿಶ್ಚಯತೆ. ಅವಳೆಂದಳು: "ಅದಿರಲಿ, ಈ ನಿರ್ಭಾಗ್ಯನಾದ ಗತಿಗೆಟ್ಟ ಮನುಷ್ಯನನ್ನು ನೀನು ನೋಡಬಯಸುವುದಾದರೂ ಏಕೆ? ಅವನ ಬುದ್ಧಿಶಕ್ತಿಯಲ್ಲಿ ಒಂದು ತುಣುಕೂ ಈಗ ಉಳಿದಿಲ್ಲ; ಪ್ರೇಮವಿಲ್ಲದ ದೃಷ್ಟಿಗೆ ಬೀಳದಂತೆ ಅದನ್ನು ಕೂಡ ಅವನು

ಹೇಳಿದ್ದರಲ್ಲಿ ನಿಜಾಂಶವಿತ್ತೆಂದು ನನಗೆ ಪೂರ್ತಿಯಾಗಿ ಮನದಟ್ಟಾಗಿದೆ. ಈ ಕ್ಷಣದಲ್ಲಿ ಕ್ಲಿಫರ್ಡ್ ಮನಸ್ಸು ಮಾಡಿದರೆ– ಮನಸ್ಸು ಮಾಡಲೇ ಬೇಕು! ಜಫ್ರೀ ದೊಡ್ಡಪ್ಪನ ಕಣ್ಮರೆಯಾದ ಆಸ್ತಿಯ ಭಾರಿ ಮೊತ್ತಕ್ಕೆ ಸಂಬಂಧಪಟ್ಟ ವಿವರಪಟ್ಟಿ, ಕಾಗದ ಪತ್ರಗಳು, ಸಾಕ್ಷ್ಯ ಪ್ರಮಾಣಗಳು– ಅವು ಯಾವ ರೂಪದಲ್ಲೇ ಇದ್ದರೂ ಸರಿಯೆ– ಅವನ್ನೆಲ್ಲಾ ಎಲ್ಲಿ ಕಂಡುಹಿಡಿಯಬೇಕೆಂಬ ಬಗೆಗೆ ತಿಳಿವಳಿಕೆಕೊಡಬಲ್ಲನು. ಅವನ ಬಳಿ ಆ ರಹಸ್ಯವಿದ್ದೇ ಇದೆ. ಅವನ ಜಂಬದಮಾತು ಪೊಳ್ಳು ಮಾತಲ್ಲ. ಅವನು ಹೇಳಿದಷ್ಟನ್ನು ನೇರವಾಗಿ ಹೇಳಿದ, ಒತ್ತಿ ನುಡಿದ, ವಿಶಿಷ್ಟ ರೀತಿಯಲ್ಲಿ ತಿಳಿಸಿದ: ಅದರಿಂದಾಗಿ, ಅವನ ಹೇಳಿಕೆಯ ರಹಸ್ಯದ ಆಂತರ್ಯದಲ್ಲಿ ಘನವಾದ ಅರ್ಥದ ತಿರುಳು ಇತ್ತೆಂಬುದು ವ್ಯಕ್ತವಾಗುತ್ತಿತ್ತು."

"ಅಷ್ಟೊಂದು ದೀರ್ಘಕಾಲ ಅದನ್ನು ಮುಚ್ಚಿಡುವುದರಲ್ಲಿ ಕ್ಲಿಫರ್ಡನ ಉದ್ದೇಶವೇನಿದ್ದೀತು?" ಎಂದು ಹೆಪ್ಸಿಬಾ ಪ್ರಶ್ನಿಸಿದಳು.

ನ್ಯಾಯಮೂರ್ತಿ ಕಣ್ಣುಗಳನ್ನು ಮೇಲಕ್ಕೆತ್ತಿ ಉತ್ತರಕೊಟ್ಟನು: "ನಮ್ಮ ಅವನತಿಹೊಂದಿದ ಸ್ವಭಾವದ ದುಷ್ಪ್ರೇರಣೆಗಳಲ್ಲಿ ಅದು ಒಂದು. ಅವನು ನನ್ನನ್ನು ತನ್ನ ಹಗೆಯೆಂಬುದಾಗಿ ಭಾವಿಸಿದ್ದನು. ಅವನು ನನ್ನನ್ನು ತನ್ನ ಅಪರಿಮಿತ ಅಪಮಾನದ, ತಪ್ಪದೆ ಸಂಭವಿಸಲಿದ್ದ ತನ್ನ ಮರಣಾಪಾಯದ, ತಪ್ಪಿಸಲಾಗದ ತನ್ನ ವಿನಾಶದ ಕಾರಣ ಎಂಬುದಾಗಿ ಎಣಿಸಿದ್ದನು. ಆದ್ದರಿಂದ, ಭಾಗ್ಯಶ್ರೇಣಿಯಲ್ಲಿ ನನ್ನನ್ನು ಇನ್ನೂ ಮೇಲಕ್ಕೆ ಕೊಂಡೊಯ್ಯುವ ತಿಳಿವಳಿಕೆಯನ್ನು ಅವನು ತನ್ನ ನೆಲಮಾಳಿಗೆಯ ವಾಸಕಾಲದಲ್ಲಿ ತಾನಾಗಿ ಬಿಟ್ಟುಕೊಡುವ ಸಂಭವ ಬಹಳವಾಗಿರಲಿಲ್ಲ. ಆದರೆ ತನ್ನಲ್ಲಿರುವ ಗುಟ್ಟನ್ನು ಬಿಟ್ಟುಕೊಡಬೇಕಾದ ಕ್ಷಣ ಇದೀಗ ಬಂದಿದೆ."

"ಅವನು ಅದನ್ನು ತಿಳಿಸಲು ನಿರಾಕರಿಸಿದರೋ? ಅಥವಾ, ನಾನು ದೃಢವಾಗಿ ನಂಬಿರುವಂತೆ, ಈ ಐಶ್ವರ್ಯದ ವಿಚಾರ ಅವನಿಗೆ ತಿಳಿಯದಿದ್ದರೋ?" ಎಂದು ಹೆಪ್ಸಿಬಾ ಕೇಳಿದಳು.

"ನನ್ನ ಪ್ರಿಯ ಸೋದರೀ" ಎಂದು ಪ್ರಶಾಂತನಾಗಿ ನ್ಯಾಯಮೂರ್ತಿ ಪಿನ್ಚನ್ ಪ್ರಾರಂಭಿಸಿದನು; ಯಾವುದೇ ಬಗೆಯ ಹಿಂಸೆಗಿಂತ ಅದನ್ನು ಭಯಂಕರವಾಗಿ ಮಾಡುವ ಶಕ್ತಿ ಅವನಿಗಿದ್ದಿತು: "ನಿನ್ನ ಸಹೋದರನು ಹಿಂದಿರುಗಿದಂದಿನಿಂದ, ಅವನ ನಡವಳಿಕೆಯನ್ನೂ ಅಭ್ಯಾಸಗಳನ್ನೂ ನಿರಂತರವಾಗಿ, ಬಹು ಎಚ್ಚರಿಕೆಯಿಂದ, ಅಲಕ್ಷ್ಯ ಮಾಡುವ ಮುಂಜಾಗ್ರತೆಯನ್ನು ವಹಿಸಿದ್ದೇನೆ; (ಹಾಗೆ ಮಾಡಬೇಕಾದ್ದು, ಅಂಥ ಪರಿಸ್ಥಿತಿಯಲ್ಲಿರುವ ಒಬ್ಬನ ಸಹಜ ರಕ್ಷಕನೂ

"ಖಂಡಿತ ಇಲ್ಲ, ನನ್ನ ಪ್ರಿಯ ಸೋದರೀ! ಅದಕ್ಕೆ ಪ್ರತಿಯಾಗಿ, ನಿನ್ನ ಬಂಧುವಿನ ಕೈಯಿಂದ ಆ ಬಗೆಯ ಉಪಕಾರವನ್ನು ನೀನು ಎಂದು ಸ್ವೀಕರಿಸಲು ಮನಸ್ಸು ಮಾಡುತ್ತೀಯೋ ಅಂದು ನಿನ್ನ ಉಪಪತಿಯನ್ನು ಎರಡರಷ್ಟು ಮೂರರಷ್ಟು ಹೆಚ್ಚಿಸಲು ನಾನು ಸಿದ್ಧವಾಗಿದೇನೆಂದು ನಾನು ಯಾವಾಗಲೂ ತಿಳಿಸುತ್ತ ಬಂದಿದ್ದೇನೆ; ನನಗೆ ನ್ಯಾಯ ಬಗೆಯುವ ಮನಸ್ಸಿದ್ದರೆ, ನೀನಿದನ್ನು ಒಪ್ಪಿಕೊಳ್ಳಬೇಕು. ಇಲ್ಲ, ಇಲ್ಲ! ಈ ವಿಚಾರದ ಮುಖ್ಯಾಂಶ ಇಲ್ಲಿದೆ. ನಾನು ಈಗಾಗಲೇ ತಿಳಿಸಿರುವಂತೆ, ನನ್ನ ದೊಡ್ಡಪ್ಪನ ಜಮೀನಿನ ಆಸ್ತಿ ನಿಸ್ಸಂದೇಹವಾಗಿಯೂ ಅಪಾರವಾಗಿತ್ತು; ಅದರಲ್ಲಿ ಅರ್ಧ ಇರಲಿ, ಮೂರನೆಯ ಒಂದು ಪಾಲುಕೂಡ ಆತನ ಮರಣಾನಂತರ ಕಣ್ಣಿಗೆ ಬೀಳಲಿಲ್ಲ; ಈ ಬಗೆಗೆ ನನಗೆ ಪೂರ್ತಿ ಮನದಟ್ಟಾಗಿದೆ. ಈಗ ಉಳಿದ ಆಸ್ತಿಯನ್ನು ಪುನಃ ಪಡೆಯಲು ನಿನ್ನ ಸೋದರ ಕ್ಲಿಫರ್ಡ್ ನನಗೆ ಸುಳಿವು ಕೊಡಬಲ್ಲ; ಹೀಗೆಂದು ನಂಬಲು ನನಗೆ ಬಹು ಒಳ್ಳೆಯ ಕಾರಣಗಳಿವೆ."

"ಕ್ಲಿಫರ್ಡ್! ಬಚ್ಚಿಟ್ಟ ನಿಧಿಯ ವಿಚಾರ ಕ್ಲಿಫರ್ಡನಿಗೆ ಗೊತ್ತಿದೆಯೆ? ನಿನ್ನನ್ನು ಐಶ್ವರ್ಯವಂತನನ್ನಾಗಿ ಮಾಡುವ ಸಾಮರ್ಥ್ಯ ಕ್ಲಿಫರ್ಡನಿಗಿದೆಯೇ? ಅದು ಅಸಾಧ್ಯ! ನಿನ್ನನ್ನು ನೀನು ವಂಚಿಸಿಕೊಳ್ಳುತ್ತಿದ್ದೀಯೆ! ಇದು ನಿಜವಾಗಿ ನಗೆಗೀಡಾದ ವಿಷಯ!" ಎಂದು ಆ ವೃದ್ಧಮಹಿಳೆ ಗಟ್ಟಿಯಾಗಿ ಹೇಳಿದಳು; ಆ ವಿಚಾರ ಹಾಸ್ಯಾಸ್ಪದ ಎಂಬ ಭಾವನೆಯುಂಟಾಗಿತ್ತು ಅವಳಿಗೆ.

"ನಾನು ಇಲ್ಲಿ ನಿಂತಿರುವುದು ಎಷ್ಟು ಖಂಡಿತವೋ ಅದು ಅಷ್ಟೇ ಖಂಡಿತ!" ಎಂದು, ತನ್ನ ಧಡೂತಿಯಾದ ಶರೀರಭಾರವನ್ನೆಲ್ಲಾ ಬಿಟ್ಟು ಹೆಚ್ಚು ಶಕ್ತಿಯುತವಾಗಿ ವ್ಯಕ್ತಪಡಿಸಲೆಂಬಂತೆ, ತನ್ನ ಚಿನ್ನದ ಹಿಡಿಯ ಬೆತ್ತವನ್ನು ನೆಲದ ಮೇಲೆ ಕುಟ್ಟುತ್ತ, ಅದೇ ಕಾಲದಲ್ಲಿ ತನ್ನ ಪಾದದಿಂದ ನೆಲವನ್ನು ಘಟ್ಟಿಸುತ್ತ, ನ್ಯಾಯಮೂರ್ತಿ ನುಡಿದನು. "ಕ್ಲಿಫರ್ಡ್ ತಾನೇ ಹಾಗೆ ನನಗೆ ತಿಳಿಸಿದನು!"

"ಇಲ್ಲ, ಇಲ್ಲ! ನೀನೆಲ್ಲೋ ಕನಸುಕಾಣುತ್ತಿರುವೆ, ಕಸಿನ್ ಜಫ್ರೀ!" ಎಂದು, ನಂಬಲಾಗದೆ, ಹೆಪ್ಸಿಬಾ ಉದ್ಗರಿಸಿದಳು.

ನ್ಯಾಯಮೂರ್ತಿ ಸಮಾಧಾನದಿಂದ ನುಡಿದನು: "ನಾನು ಕನಸುಗಾರರ ಪಂಗಡಕ್ಕೆ ಸೇರಿದವನಲ್ಲ. ನನ್ನ ದೊಡ್ಡಪ್ಪನ ಮರಣಕ್ಕೆ ಕೆಲವು ತಿಂಗಳುಗಳ ಮುನ್ನ, ಅಗಣಿತ ಐಶ್ವರ್ಯದ ರಸಹ್ಯವು ತನ್ನ ಬಳಿ ಇದೆಯೆಂದು ಕ್ಲಿಫರ್ಡ್ ಜಂಬ ಕೊಚ್ಚಿಕೊಂಡನು. ನನ್ನನ್ನು ಕೆಣಕಿ, ನನ್ನ ಕುತೂಹಲವನ್ನು ಕೆರಳಿಸುವುದು ಅವನ ಉದ್ದೇಶ. ಅದು ನನಗೆ ಚೆನ್ನಾಗಿ ಗೊತ್ತು. ಆದರೆ, ನಮ್ಮ ಸಂಭಾಷಣೆಯ ವಿವರಗಳ ತಕ್ಕಮಟ್ಟಿನ ಸ್ಪಷ್ಟವಾದ ನೆನಪಿನಿಂದ ಹೇಳುವುದಾದರೆ, ಅವನು

ಅನುಸರಿಸುತ್ತೇನೆ ಎಂಬ ಬಗೆಗೆ ನೀನು ಸಂದೇಹ ಪಡಲಾರೆ; ಏಕೆಂದರೆ, ನನ್ನನ್ನು ನೀನು ಚೆನ್ನಾಗಿ ಬಲ್ಲೆ. ಅಲ್ಲವೆ, ಕಸಿನ್ ಹೆಪ್ಸಿಬಾ?"

"ಓ, ಜಫ್ರೀ, ಕಸಿನ್ ಜಫ್ರೀ!" ಎಂದು ಹೆಪ್ಸಿಬಾ ಭಾವೋದ್ರೇಕದಿಂದಲ್ಲದಿದ್ದರೂ ಅಲವತ್ತು ನುಡಿದಳು: "ಮನೋರೋಗವಿರುವುದು ನಿನಗೆ, ಕ್ಲಿಫರ್ಡನಿಗಲ್ಲ! ಹೆಣ್ಣೊಬ್ಬಳು ನಿನ್ನ ತಾಯಿಯಾಗಿದ್ದಳು, ನಿನಗೂ ಸೋದರಸೋದರಿಯರು, ಸ್ವಂತ ಮಕ್ಕಳು ಇದ್ದರು– ಮನುಷ್ಯ ಮನುಷ್ಯರಲ್ಲಿ ಪರಸ್ಪರ ವಿಶ್ವಾಸವಿದ್ದೀತು, ಈ ದುಃಖತುಂಬಿದ ಪ್ರಪಂಚದಲ್ಲಿ ಒಬ್ಬನು ಇನ್ನೊಬ್ಬನನ್ನು ಕಂಡು ಮರುಗುವನು– ಇದೆಲ್ಲವನ್ನೂ ನೀನು ಮರೆತಿದ್ದೀಯೆ! ಇಲ್ಲದಿದ್ದರೆ, ಇದರ ಕನಸನ್ನಾದರೂ ನೀನು ಹೇಗೆ ಕಾಣುತ್ತಿದ್ದೆ? ನೀನು ಯುವಕನಲ್ಲ; ಕಸಿನ್ ಜಫ್ರೀ– ಅಲ್ಲ, ಮಧ್ಯವಯಸ್ಸಿನವನೂ ಅಲ್ಲ– ಆದರೆ ಆಗಲೇ ಮುದುಕನಾಗಿಬಿಟ್ಟಿದ್ದೀಯೆ! ನಿನ್ನ ತಲೆಯ ಮೇಲಿನ ಕೂದಲು ಬೆಳ್ಳಗಾಗಿದೆ! ನೀನು ಇನ್ನು ಎಷ್ಟು ವರ್ಷ ಬದುಕಿದ್ದಿಯೆ? ಆ ಉಳಿದ ಅಲ್ಪಕಾಲಕ್ಕೆ ಸಾಕಾಗುವಷ್ಟು ಐಶ್ವರ್ಯವಿಲ್ಲವೆ ನಿನ್ನಲ್ಲಿ? ನಿನಗೆ ಹಸಿವಿನ ಬಾಧೆಯಿದ್ದೀತೆ? ಬಟ್ಟೆ ಬರೆಯ ಕೊರತೆಯಿದ್ದೀತೆ? ಇಲ್ಲಿಂದ ಮುಂದೆ ಗೋರಿಯನ್ನು ಕಾಣುವ ತನಕ, ನಿನಗೆ ಆಸರೆಕೊಡಲು ತಲೆಯ ಮೇಲೆ ಸೂರಿಲ್ಲವೆ? ನಿನಗೆ ಯಾವುದರ ಕೊರತೆಯೂ ಇಲ್ಲ! ನಿನಗೆ ಈಗ ಇರುವುದರ ಅರ್ಧದಷ್ಟನ್ನು ಇಟ್ಟುಕೊಂಡು, ಬೆಲೆಬಾಳುವ ಆಹಾರ ಮತ್ತು ದ್ರಾಕ್ಷಾಮದ್ಯಗಳನ್ನು ತಿಂದು ಕುಡಿದು ನಲಿದಾಡಬಹುದು, ಈಗ ನೀನು ವಾಸವಾಗಿರುವ ಮನೆಗಿಂತ ಎರಡರಷ್ಟು ಸೊಗಸಾಗಿರುವ ಮನೆಯನ್ನು ಕಟ್ಟಿಕೊಳ್ಳಬಹುದು ಹಾಗೂ ಪ್ರಪಂಚಕ್ಕೆ ಇನ್ನೂ ಹೆಚ್ಚಿನ ವೈಭವವನ್ನು ಮೆರೆಯಬಹುದು– ಇಷ್ಟೆಲ್ಲ ಮಾಡಿಯೂ, ನಿನ್ನ ಏಕಮಾತ್ರ ಪುತ್ರನು ನೀನು ಸತ್ತ ಗಳಿಗೆಯಲ್ಲಿ ನಿನ್ನನ್ನು ಹಾಡಿ ಹೊಗಳುವ ಮಟ್ಟಿಗೆ ನೀನು ಅವನಿಗೆ ಐಶ್ವರ್ಯವನ್ನು ಉಳಿಸಿ ಹೋಗಬಹುದು! ಹೀಗಿರುವಾಗ, ಈ ಕ್ರೂರ, ಕ್ರೂರಕಾರ್ಯವನ್ನು ನೀನೇಕೆ ಮಾಡಬೇಕು? ಎಂಥ ಹುಚ್ಚು ಕೆಲಸ! ಅದನ್ನು ಕ್ರೂರತನ ಎಂದು ಕರೆಯಲೇಬೇಕೆ ಎಂಬುದು ಕೂಡ ನನಗೆ ತಿಳಿಯುವುದಿಲ್ಲ! ಅಯ್ಯೊ, ಕಸಿನ್ ಜಫ್ರೀ, ಈ ಕಠಿನವಾದ ದೋಚಿಕೊಳ್ಳುವ ಬುದ್ಧಿ ಈ ಇನ್ನೂರು ವರ್ಷಗಳಿಂದ ನಮ್ಮ ರಕ್ತದಲ್ಲಿ ಹರಿದುಬಂದಿದೆ! ನಿನಗಿಂತ ಹಿಂದೆ ನಿನ್ನ ಪೂರ್ವಜನು ಏನು ಮಾಡಿದನೋ ಅದನ್ನೆ ನೀನು ಈಗ ಇನ್ನೊಂದು ರೂಪದಲ್ಲಿ ಮತ್ತೆ ಮಾಡಿ, ಆತನಿಂದ ನೀನು ಪಿತ್ರಾರ್ಜಿತವಾಗಿ ಪಡೆದ ಶಾಪವನ್ನು ನಿನ್ನ ಮುಂದಿನ ಪೀಳಿಗೆಗೆ ಸಾಗಿಸುತ್ತೀಯೆ!"

"ವಿವೇಕವಾಗಿ ಮಾತನಾಡು, ಹೆಪ್ಸಿಬಾ, ದೇವರಿಗಾದರೂ ಪ್ರೀತಿಯಾಗಲಿ!"

ಹತ್ತಿರದ ಬಂಧುವೂ ಆದವನಲ್ಲಿ ಅತ್ಯಂತ ಉಚಿತ). ತೋಟದಲ್ಲಿ ಏನೇನು ನಡೆಯಿತೋ ಅದಕ್ಕೆಲ್ಲ ನಿನ್ನ ನೆರೆಹೊರೆಯವರು ಪ್ರತ್ಯಕ್ಷ ಸಾಕ್ಷಿಗಳಾಗಿದ್ದಾರೆ. ಮಾಂಸವ್ಯಾಪಾರಿ, ರೊಟ್ಟಿಸುಡುವವನು, ಮೀನುಮಾರುವವನು, ನಿನ್ನ ಅಂಗಡಿಯ ಕೆಲವು ಗಿರಾಕಿಗಳು, ಹಣಿಕಿನೋಡುವ ಸ್ವಭಾವದ ಅನೇಕ ಮುದುಕಿಯರು– ಇವರೆಲ್ಲಾ ನಿನ್ನ ಮನೆಯೊಳಗಿನ ರಹಸ್ಯಗಳಲ್ಲಿ ಹಲವನ್ನು ನನಗೆ ತಿಳಿಯಹೇಳಿದ್ದಾರೆ. ಇನ್ನೂ ದೊಡ್ಡ ಜನಮಂಡಲಿಗೆ ಸೇರಿದವರು– ಅವರಲ್ಲಿ ನಾನೂ ಸೇರಿದ್ದೇನೆ– ಕಮಾನು ಕಿಟಕಿಯ ಬಳಿ ಕಂಡ ಅವನ ವಿಪರೀತ ವರ್ತನೆಗಳಿಗೆ ಸಾಕ್ಷಿ ನೀಡಬಲ್ಲರು. ಒಂದೆರಡು ವಾರಗಳ ಹಿಂದೆ, ಅವನು ಬೀದಿಗೆ ಇನ್ನೇನು ನೆಗೆದು ಬೀಳುವುದರಲ್ಲಿದ್ದಾಗ, ಸಾವಿರಾರು ಮಂದಿ ಅವನನ್ನು ನೋಡಿದರು. ಈ ಎಲ್ಲ ಸಾಕ್ಷ್ಯಗಳಿಂದ, ನನಗೆ ಇಷ್ಟವಿಲ್ಲದೆ ಹಾಗೂ ಬಹು ದುಃಖದಿಂದ, ಕ್ಲಿಫರ್ಡನ ದುರುದೃಷ್ಟಪರಂಪರೆ ಎಂದೂ ಬಹಳ ದೃಢವಾಗಿಲ್ಲದಿದ್ದ ಅವನ ಬುದ್ಧಿಶಕ್ತಿಯನ್ನು ಕೆಡಿಸಿದೆ ಎಂದು ಶಂಕಿಸಬೇಕಾಗಿ ಬಂದಿದೆ; ಈ ಸ್ಥಿತಿಯಲ್ಲಿ ಅವನು ಸ್ವತಂತ್ರನೆನಿಸಿಕೊಂಡು ಸುರಕ್ಷಿತವಾಗಿರಲಾರನು. ಇನ್ನೊಂದು ಆಯ್ಕೆಯೆಂದರೆ, ಅದು ನಿನಗೆ ಗೊತ್ತಿರಬೇಕು, ಅವನ ಹಾಗೆ ಶೋಚನೀಯ ಮನಃಸ್ಥಿತಿಯಲ್ಲಿರುವವರಿಗಾಗಿ ಏರ್ಪಡಿಸಿರುವ ಸಾರ್ವಜನಿಕ ರಕ್ಷಣಾಲಯದಲ್ಲಿ ಬಹುಶಃ ಅವನ ಉಳಿದ ಜೀವಮಾನ ಕಾಲಪರ್ಯಂತವೂ ನಿರ್ಬಂಧದಲ್ಲಿಡುವುದು; ಈ ಕಾರ್ಯವನ್ನು ಕೈಗೊಳ್ಳುವ ವಿಚಾರ, ನಾನು ಈಗ ಮಾಡಲಿರುವ ತೀರ್ಮಾನವನ್ನು ಪೂರ್ತಿಯಾಗಿ ಅವಲಂಬಿಸಿದೆ."

"ಅದು ನಿನ್ನ ಉದ್ದೇಶವಿರಲಾರದು!" ಎಂದು ಹೆಪ್ಸಿಬಾ ಚೀರಿದಳು.

ನ್ಯಾಯಮೂರ್ತಿ ಪಿನ್ಚನ್ನನು ಸ್ವಲ್ಪವೂ ಮನಸ್ಸು ಕಲಕದವನಾಗಿ ಮುಂದುವರಿದನು: "ಯಾರ ಹಿತಾಸಕ್ತಿಗಳು ತನಗೆ ಸಹಜವಾಗಿ ಪ್ರಿಯವಾಗಿರಬೇಕೋ ಅವರ ಮೇಲೆ ನಿಷ್ಕಾರಣವಾಗಿ ಮತ್ಸರವನ್ನೂ ದ್ವೇಷವನ್ನೂ ಸಾಧಿಸಬೇಕೆಂಬ ಉದ್ದೇಶದಿಂದ ನನ್ನ ಸೋದರಸಂಬಂಧಿ ಕ್ಲಿಫರ್ಡ್ ನನಗೆ ಬಹುಮುಖ್ಯವಾದ ಸಮಾಚಾರವನ್ನು ಕೊಡಲು ನಿರಾಕರಿಸಿದ್ದೇ ಆದರೆ, ಅವನ ಹುಚ್ಚಿನ ಬಗೆಗೆ ನನ್ನ ಮನಸ್ಸಿನಲ್ಲಿ ತೃಪ್ತಿಹೊಂದಲು ಅವನ ನಿರಾಕರಣೆಯನ್ನೇ ಅವಶ್ಯವಾದ ಒಂದು ಚೂರು ಸಾಕ್ಷ್ಯವನ್ನಾಗಿ ಎಣಿಸುತ್ತೇನೆ; ಅಲ್ಲದೆ, ದ್ವೇಷಸಾಧನೆಯ ಉದ್ದೇಶ ಕೂಡ ಅನೇಕ ವೇಳೆ ಮನೋರೋಗವನ್ನು ಸೂಚಿಸುವ ಒಂದು ವಿಧವಾದ ಭಾವಾವೇಶ. ನನ್ನ ಆತ್ಮಸಾಕ್ಷಿ ಸೂಚಿಸಿದ ಕಾರ್ಯವಿಧಾನವು ಸರಿಯೆಂದು ನನಗೆ ಖಚಿತವಾದರೆ ಮುಗಿಯಿತು, ನಾನು ಅದನ್ನು

ನೋಡುತ್ತಿದ್ದಾನೆ, ಜಫ್ರೀ ಪಿನ್ಚನ್!"

ಇಷ್ಟೆಲ್ಲ ಸಂಭಾಷಣೆ ಅಂಗಡಿಯಲ್ಲಿಯೇ ಸಾಗಿತು; ಅಲ್ಲಿಂದ ನ್ಯಾಯಮೂರ್ತಿ ತನ್ನ ಸೋದರಸಂಬಂಧಿಯೊಂದಿಗೆ ದಿವಾನಖಾನೆಗೆ ಹೋಗಿ, ಅಲ್ಲಿದ್ದ ಪೂರ್ವಿಕರ ದೊಡ್ಡ ಕುರ್ಚಿಯಲ್ಲಿ ಧೊಪ್ಪನೆ ಕೆಡೆದು ಕುಳಿತನು. ಅದರ ಎರಡು ತೋಳುಗಳ ನಡುವಣ ವಿಶಾಲಸ್ಥಳದಲ್ಲಿ ಹಿಂದಣ ಎಷ್ಟೋ ಮಂದಿ ಪಿನ್ಚನ್ನರು ವಿಶ್ರಾಂತಿ ಪಡೆದಿದ್ದರು: ಪ್ರೇಮದ ಸ್ವಪ್ನ ಪ್ರಪಂಚದಲ್ಲಿ ಕಾಲಿಟ್ಟ ಯುವಕರು; ಚಿಂತಾಭಾರದಿಂದ ಬಳಲಿದ ವಯಸ್ಕರು; ಅನೇಕ ಮಾಗಿಗಳನ್ನು ಕಂಡ ಮುಪ್ಪಿನ ಭಾರದಿಂದ ಕುಗ್ಗಿದ ಮುದುಕರು– ಇವರೆಲ್ಲ ಅಲ್ಲಿ ಚಿಂತಿಸಿದ್ದರು, ನಿದ್ರಿಸಿದ್ದರು, ಇನ್ನೂ ಗಾಢವಾದ ನಿದ್ರೆಯ ಲೋಕಕ್ಕೆ ತೆರಳಿದ್ದರು. ನ್ಯಾಯಮೂರ್ತಿಯ ಹೊಸ ಇಂಗ್ಲೆಂಡಿನ ಪೂರ್ವಜರಲ್ಲಿ ಅತ್ಯಂತ ಮೊದಲಿಗನು ಇದೇ ಕುರ್ಚಿಯಲ್ಲಿ ಕುಳಿತು ಸನ್ಮಾನ್ಯ ಅತಿಥಿಗಳ ಕಿಕ್ಕಿರಿದ ಗುಂಪಿಗೆ ಮರಣಾನಂತರದ ಕಠೋರಮೌನದ ಸ್ವಾಗತವನ್ನು ನೀಡಿದ್ದನು (ಸಂದೇಹಾಸ್ಪದವಾದರೂ, ಹೀಗೆಂದು ಬಹಳಕಾಲದಿಂದ ಪರಂಪರಾಗತವಾದ ಹೇಳಿಕೆಯಿದ್ದಿತು); ಗೋಡೆಯಮೇಲೆ ತೂಗಾಡುತ್ತಿದ್ದುದು ಆತನ ಚಿತ್ರವೇ. ಆ ಕೆಟ್ಟ ಶಕುನದ ಗಳಿಗೆಯಿಂದ ಇಂದಿನ ತನಕ, ಕುರ್ಚಿಯಲ್ಲಿ ಕುಳಿತವರಲ್ಲಿ ಈ ನ್ಯಾಯಮೂರ್ತಿ ಪಿನ್ಚನ್ನನಿಗಿಂತ ಹೆಚ್ಚು ಬಳಲಿ, ಹೆಚ್ಚು ಖಿನ್ನರಾಗಿ ಕುಳಿತಿದ್ದವರು ಬಹುಶಃ ಯಾರೂ ಇದ್ದಿರಲಾರರು; ಇಷ್ಟರ ಮೇಲೆ ಅವನ ಹೃದಯಾಂತರಾಳದ ರಹಸ್ಯವನ್ನು ನಾವರಿಯೆವು; ಕುಗ್ಗದ ಕಾಠಿನ್ಯದ ಮತ್ತು ದೃಢನಿಶ್ಚಯದ ಆತನನ್ನು ನಾವು ಇದೇ ತಾನೆ ನೋಡಿದ್ದೇವೆ. ಹೀಗೆ ಅವನು ತನ್ನ ಆತ್ಮವನ್ನು ಕಬ್ಬಿಣದಿಂದ ಬಲಪಡಿಸಿಕೊಳ್ಳಲು ಅಪಾರವಾದ ಬೆಲೆಯನ್ನೇ ತೆತ್ತಿರಬೇಕು, ಅದು ಖಂಡಿತ. ದುರ್ಬಲರಾದವರು ಜೋರುಮಾಡುವುದಕ್ಕೆ ಬೇಕಾದುದಕ್ಕಿಂತ ಹೆಚ್ಚು ಬಲಯುತವಾದ ಪ್ರಯತ್ನಬೇಕು. ಅಂಥ ಪ್ರಶಾಂತತೆಯನ್ನು ತೋರುವುದಕ್ಕೆ. ಅಲ್ಲದೆ, ಅವನು ಮಾಡಬೇಕಾದ ಗುರುತರವಾದ ಕಾರ್ಯ ಇನ್ನೂ ಉಳಿದಿತ್ತು. ಮೂವತ್ತು ವರ್ಷಗಳಾದ ಮೇಲೆ ಅವನು ಇಂದು ಜೀವಂತಸಮಾಧಿಯಿಂದೆದ್ದು ಬಂದ ಬಂಧುವನ್ನು ಎದುರಿಸಿ, ಅವನಿಂದ ರಹಸ್ಯವೊಂದನ್ನು ಬಲತ್ಕಾರದಿಂದ ಕಸಿದುಕೊಳ್ಳಬೇಕಾಗಿತ್ತು, ಅದಿಲ್ಲವೋ ಜೀವಂತ ಸಮಾಧಿಗೆ ಅವನನ್ನು ಮತ್ತೆ ಸೇರಿಸಬೇಕಾಗಿತ್ತು– ಒಂದೇ ಕ್ಷಣದಲ್ಲಿ ಎಲ್ಲವನ್ನೂ ಸಿದ್ಧಗೊಳಿಸಿ, ಮರುಕ್ಷಣದಲ್ಲಿ ವಿಶ್ರಾಂತಿಪಡೆಯಬಹುದಾದಷ್ಟು ಅಲ್ಪ ವಿಷಯವೆ ಅದು?

"ನೀನು ಏನಾದರು ಹೇಳಿದೆಯೇನು?" ಎಂದು ಹೆಪ್ಸಿಬಾ ದಿವಾನಖಾನೆಯ

ಎಂದು ನ್ಯಾಯಮೂರ್ತಿ ಉದ್ಗರಿಸಿದನು; ವ್ಯವಹಾರಸಂಬಂಧವಾದ ಚರ್ಚೆಯಲ್ಲಿ ಮೇಲ್ಕಂಡಂತಹ ತೀರ ಅವಿವೇಕದ ಸಂಗತಿಯ ಪ್ರಸ್ತಾಪವನ್ನು ಕೇಳಿ, ವಿವೇಚನೆಯುಳ್ಳ ಯಾರೇ ಆಗಲಿ ತಾಳ್ಮೆಗೆಡುವಂತೆ ಅವನೂ ತಾಳ್ಮೆಗೆಟ್ಟು ನುಡಿದನು:

"ನನ್ನ ನಿರ್ಧಾರವನ್ನು ನಾನು ತಿಳಿಸಿದ್ದೇನೆ. ನಾನು ಮಾರ್ಪಡುವ ಸಂಭವವಿಲ್ಲ. ಕ್ಲಿಫರ್ಡ್ ತನ್ನ ರಹಸ್ಯವನ್ನು ಬಿಟ್ಟುಕೊಡಬೇಕು, ಇಲ್ಲವೊ ಮುಂದಿನ ಪರಿಣಾಮಗಳಿಗೆ ಸಿದ್ಧನಾಗಿರಬೇಕು. ಅವನು ಬೇಗನೆ ಒಂದು ತೀರ್ಮಾನಕ್ಕೆ ಬರಲಿ; ಏಕೆಂದರೆ, ಈ ಬೆಳಗ್ಗೆ ನಾನು ಹಲವಾರು ವ್ಯವಹಾರಗಳನ್ನು ನಿರ್ವಹಿಸಬೇಕಾಗಿದೆ; ಅಲ್ಲದೆ, ಕೆಲವು ರಾಜಕೀಯ ಸ್ನೇಹಿತರೊಂದಿಗೆ ಒಂದು ಮುಖ್ಯವಾದ ಭೋಜನಕೂಟದಲ್ಲಿ ಭಾಗವಹಿಸಬೇಕಾಗಿದೆ."

"ಕ್ಲಿಫರ್ಡನ ಬಳಿ ಯಾವ ರಹಸ್ಯವೂ ಇಲ್ಲ! ನೀನು ಯೋಚನೆ ಮಾಡಿರುವ ಕೃತ್ಯವನ್ನು ಮಾಡಲು ದೇವರು ಆಗಗೊಡುವುದಿಲ್ಲ!" ಎಂದು ಹೆಪ್ಸಿಬಾ ಉತ್ತರಕೊಟ್ಟಳು.

ನ್ಯಾಯಮೂರ್ತಿ ಸ್ವಲ್ಪವೂ ಜಗ್ಗದೆ ನುಡಿದನು: "ನೋಡೋಣ. ಅಷ್ಟರೊಳಗೆ, ನೀನೇ ಕ್ಲಿಫರ್ಡನನ್ನು ಕರೆದು, ಇಬ್ಬರು ಬಂಧುಗಳು ಕಲೆತು ಮಾತನಾಡಿ ಈ ವ್ಯವಹಾರವನ್ನು ತಮ್ಮ ತಮ್ಮಲ್ಲಿ ಸೌಹಾರ್ದದಿಂದ ತೀರ್ಮಾನಮಾಡಿಕೊಳ್ಳಲು ಅವಕಾಶ ಮಾಡಿಕೊಡುತ್ತೀಯೋ, ಇಲ್ಲವೆ, ಇನ್ನೂ ಉಗ್ರವಾದ ಕಾರ್ಯಕ್ರಮಗಳನ್ನು ಕೈಕೊಳ್ಳುವ ನಿರ್ಬಂಧಕ್ಕೆ ನನ್ನನ್ನು ದೂಡುತ್ತೀಯೋ– ನೀನೇ ನಿರ್ಧರಿಸಿಕೋ; ಆ ಉಗ್ರಕಾರ್ಯ ಕ್ರಮಗಳನ್ನು ಕೈಕೊಳ್ಳದೆ ಬಿಡುವುದೇ ನ್ಯಾಯ ಎಂದು ಭಾವಿಸುವಂತಾದರೆ, ನನಗೆ ಅತ್ಯಂತ ಸುಖವೆನಿಸುವುದು."

ಸ್ವಲ್ಪಕಾಲ ವಿಚಾರಮಾಡಿ, ಹೆಪ್ಸಿಬಾ ಹೇಳಿದಳು: "ನೀನು ನನಗಿಂತ ಬಲವಾಗಿದ್ದೀಯೆ; ಆದರೆ, ನಿನ್ನ ಬಲದಲ್ಲಿ ಮರುಕದ ಸೆಲೆಯಿಲ್ಲ: ಕ್ಲಿಫರ್ಡ್ ಈಗ ಬುದ್ಧಿಭ್ರಮಣೆಹೊಂದಿಲ್ಲ; ಆದರೆ, ಈಗ ನೀನು ಆಗಿಯೇ ತೀರಬೇಕೆಂದು ಒತ್ತಾಯಪಡಿಸುತ್ತಿರುವ ಭೇಟಿಯಿಂದ ಅವನಿಗೆ ಬಹುಮಟ್ಟಿಗೆ ಹಾಗಾದೀತು. ಆದರೂ ಕೂಡ, ನನಗೆ ತಿಳಿದಿರುವ ಮಟ್ಟಿಗೆ, ಅವನ ಬಳಿ ಅಮೂಲ್ಯವಾದ ಯಾವುದೇ ರಹಸ್ಯವಿರುವುದು ಅಸಂಭವ; ಅದನ್ನು ನೀನೆ ಇತ್ಯರ್ಥಮಾಡಿ ಮನದಟ್ಟು ಮಾಡಿಕೊಳ್ಳಲು ನಿನಗೆ ಅವಕಾಶಕೊಡುವುದೇ ನನಗೆ ಅತ್ಯುತ್ತಮಮಾರ್ಗವೆಂದು ನನ್ನ ನಂಬಿಕೆ. ಕ್ಲಿಫರ್ಡನನ್ನು ಕರೆಯುತ್ತೇನೆ. ಅವನೊಂದಿಗೆ ವ್ಯವಹರಿಸುವಾಗ, ನಿನ್ನಲ್ಲಿ ದಯೆಯೆಂಬುದಿರಲಿ– ನಿನ್ನ ಅಂತಃಕರಣ ಹೇಳುವುದಕ್ಕಿಂತ ಹೆಚ್ಚು ದಯೆ ತೋರು– ಏಕೆಂದರೆ, ದೇವರು ನಿನ್ನನ್ನು

# ೧೬. ಕ್ಲಿಫರ್ಡನ ಕೋಣೆ

ಬಡ ಹೆಪ್ಸಿಬಾ ಆ ಹೀನಕಾರ್ಯವನ್ನು ಮಾಡಲು ತೆರಳಿದಾಗ, ಆ ಹಳೆಯ ಮನೆ ಇದ್ದಕ್ಕಿದ್ದ ಹಾಗೆ ಅತ್ಯಂತ ಮಂಕುಕವಿದಂತೆ ಕಂಡಿತು; ಹಿಂದೆಂದೂ ಅವಳಿಗೆ ಹಾಗೆ ಕಂಡಿರಲಿಲ್ಲ. ಅದರಲ್ಲೇನೋ ಒಂದು ವಿಚಿತ್ರ ಸ್ವರೂಪವಿದ್ದಿತು, ನಡೆದು ನಡೆದು ಸಮೆದ ನಡವೆಗಳನ್ನು ಅವಳು ತುಳಿದು ಹೋಗಿ, ಒಂದಾದ ಮೇಲೆ ಒಂದರಂತೆ ಅಡ್ಡಾದಿಡ್ಡಿಯಾಗಿದ್ದ ಬಾಗಿಲುಗಳನ್ನು ತೆರೆದು, ಕಿರುಗುಟ್ಟುವ ಮಹಡಿಮೆಟ್ಟಲುಗಳನ್ನು ಏರಿಹೋಗುವಾಗ, ಹತಾಶಳಾಗಿ ಭೀತಿಯಿಂದ ಒಮ್ಮೆ ಸುತ್ತಲೂ ನಿಟ್ಟಿಸಿ ನೋಡಿದಳು. ಅವಳ ಹಿಂದೆ ಅಥವಾ ಪಕ್ಕದಲ್ಲಿ, ಸತ್ತ ಜನರ ಉಡುಪುತೊಡಪುಗಳ ಪರಪರ ಗುಟ್ಟುವಿಕೆ ಕೇಳಿಬಂದಿದ್ದರೆ, ಅಥವಾ ಮೆಟ್ಟಲು ಸಾಲ ಮೇಲು– ತುದಿಯ ನಿಲ್ಲುವ ಸ್ಥಳದಲ್ಲಿ ವಿವರ್ಣಮುಖಗಳು ಅವಳಿಗಾಗಿ ಕಾದಿರುವುದು ಕಂಡು ಬಂದಿದ್ದರೆ, ಉದ್ರೇಕಗೊಂಡ ಅವಳ ಮನಸ್ಸಿಗೆ ಯಾವುದೂ ಅದ್ಭುತವೆನಿಸುತ್ತಿರಲಿಲ್ಲ. ಅವಳು ಅದೇ ತಾನೆ ಭಾವಾವೇಶಪೂರ್ಣವಾದ ಭೀಕರ ಸನ್ನಿವೇಶವೊಂದರೊಡನೆ ಹೋರಾಡಿ, ಅದನ್ನು ಹಾದು ಬಂದಿದ್ದಳು; ಅದು ಅವಳ ನರಮಂಡಲವನ್ನೆಲ್ಲ ಅಸ್ತವ್ಯಸ್ತಮಾಡಿತ್ತು. ವಂಶದ ಮೂಲ ಪುರುಷನ ಸ್ವರೂಪವನ್ನೂ ಗುಣಗಣಗಳನ್ನೂ ಅಷ್ಟೊಂದು ಪರಿಪೂರ್ಣವಾಗಿ ಪ್ರತಿನಿಧಿಸುತ್ತಿದ್ದ ನ್ಯಾಯಮೂರ್ತಿ ಪಿನ್ಚನ್ನನೊಂದಿಗೆ ಅವಳು ನಡಸಿದ್ದ ಸಂಭಾಷಣೆ ಹಾಳುಸುರಿಯುವ ಹಿಂದಿನ ಬದುಕನ್ನೆಲ್ಲಾ ನೆನಪಿಗೆ ತಂದಿತ್ತು. ಅದು ಅವಳ ಹೃದಯದ ಮೇಲೆ ಭಾರವಾಗಿ ಕುಳಿತಿತ್ತು. ಪಿನ್ಚನ್ ಮನೆತನದವರ ಸೌಭಾಗ್ಯ ದೌರ್ಭಾಗ್ಯಗಳ ಸಂಬಂಧವಾಗಿ ಐತಿಹ್ಯಪುರುಷರಾಗಿದ್ದ ತನ್ನ ದೊಡ್ಡಮ್ಮ ಚಿಕ್ಕಮ್ಮಂದಿರುಗಳಿಂದಲೂ ಅಜ್ಜಿಯರಿಂದಲೂ ತಾನು ಏನೇನು ಕೇಳಿದ್ದಳೋ ಅದೆಲ್ಲವೂ– ಒಲೆಗೂಡಿನ ಮೂಲೆಯ ಹತ್ತಿರ ಹೇಳಿದ್ದರಿಂದ ಅದರ ಕಾವಿನ ಸಂಬಂಧದ ಪರಿಣಾಮವಾಗಿ ಅವಳ ನೆನಪಿನಲ್ಲಿ ಇನ್ನೂ ಬೆಚ್ಚಗೆ ಜೀವಂತವಾಗಿದ್ದ ಆ ಕಥೆಗಳೆಲ್ಲವೂ– ಖಿನ್ನ ಮನೋಭಾವದಲ್ಲಿದ್ದಾಗ ಕುರಿತು ಚಿಂತಿಸಿದ ವಂಶೇತಿಹಾಸದ ಬಹುಸಂಖ್ಯಾತ ಭಾಗಗಳಂತೆ ವಿಷಣ್ಣವಾಗಿ, ಭೀಕರವಾಗಿ, ನಿರುತ್ಸಾಹಕರವಾಗಿ ಅವಳಿಗೆ ಈಗ ಮತ್ತೆ ನೆನಪಿಗೆ ಬಂದುವು. ಅವೆಲ್ಲ ಇಡಿಯಾಗಿ ಒಂದು ವಿಪತ್ ಪರಂಪರೆಯಾಗಿ ಕಂಡಿತು; ಒಂದಾದ ಮೇಲೆ ಒಂದರಂತೆ

ಹೊಸಿಲ ಮೇಲಿನಿಂದ ಒಳಕ್ಕೆ ಇಣಿಕುತ್ತಾ ಕೇಳಿದಳು; ಏಕೆಂದರೆ, ನ್ಯಾಯಮೂರ್ತಿ ಏನೋ ಶಬ್ದೋಚ್ಚಾರಣೆ ಮಾಡಿದಂತಾಗಿ, ಅದು ಕರಗದ ಮನಸ್ಸಿನಿಂದ ಸ್ಫುರಿಸಿದ ಪ್ರೇರಣೆಯೆಂಬುದಾಗಿ ಅರ್ಥಮಾಡಲು ಅವಳು ಆತುರಳಾಗಿದ್ದಳು. "ನೀನು ನನ್ನನ್ನು ಹಿಂದಕ್ಕೆ ಕರೆದೆ ಎಂದುಕೊಂಡೆ" ಎಂದಳು ಅವಳು.

"ಇಲ್ಲ, ಇಲ್ಲ" ಎಂದು ನ್ಯಾಯಮೂರ್ತಿ ಪಿನ್ಚನ್ ಗರ್ಗರಧ್ವನಿಯಿಂದ ಉತ್ತರಕೊಟ್ಟನು; ಆಗ ಅವನ ಹುಬ್ಬು ಗಂಟಕ್ಕಿತ್ತು; ಕೋಣೆಯ ನೆರಳಿನಲ್ಲಿ ಅದು ಬಹುಮಟ್ಟಿಗೆ ಒಂದು ಕಪ್ಪು ನೇರಿಳೆ ಬಣ್ಣದ್ದಾಗಿ ಕಂಡಿತು.

"ನಾನು ನಿನ್ನನ್ನು ಹಿಂದಕ್ಕೆ ಕರೆಯಲು ಕಾರಣವೇನು? ಕಾಲ ಓಡುತ್ತಿದೆ! ನನ್ನನ್ನು ಬಂದು ಕಾಣಬೇಕೆಂದು ಕ್ಲಿಫರ್ಡನಿಗೆ ತಿಳಿಸು!"

ನ್ಯಾಯಮೂರ್ತಿಯು ತನ್ನ ನಡುವಂಗಿಯ ಜೇಬಿನಿಂದ ಗಡಿಯಾರವನ್ನು ಆಗಲೆ ತೆಗೆದಿದ್ದನು; ಅದನ್ನೀಗ ಕೈಯಲ್ಲಿಟ್ಟುಕೊಂಡು, ಕ್ಲಿಫರ್ಡ್ ಕಾಣಿಸಿಕೊಳ್ಳುವುದಕ್ಕೆ ಮುಂಚೆ ಎಷ್ಟು ಹೊತ್ತು ಸಾಗೀತು ಎಂಬುದನ್ನು ಲೆಕ್ಕ ಹಾಕುತ್ತಿದ್ದನು.

* * * *

ಒಂದು ಗೊತ್ತಾದ ಕಿಟಕಿಯನ್ನು ಹೆಚ್ಚು ಸ್ಪಷ್ಟವಾಗಿ ಗುರುತಿಸಬೇಕೆಂಬ ಆಶೆಯಿಂದ ಅವಳು ತನ್ನ ಮಂಜಾದ ಕಣ್ಣನ್ನು ಸಾಧ್ಯವಿದ್ದಷ್ಟೂ ಚುರುಕುಗೊಳಿಸಲು, ತಿರುಪ್ಪಿ ನೋಡಿದಳು; ಅಲ್ಲಿ ಒಬ್ಬ ದರ್ಜಿಯವಳು ತನ್ನ ಕೆಲಸ ಮಾಡುತ್ತ ಕುಳಿತಿದ್ದಾಳೆಂದು ಅರ್ಧ ಕಂಡು, ಇನ್ನರ್ಧ ಊಹಿಸಿಕೊಂಡಳು. ಅಷ್ಟು ದೂರವಿದ್ದರೂ ಸಹ, ಆ ಅರಿಯದ ಹೆಂಗಸಿನ ಸಹವಾಸಕ್ಕೆ ಕಲ್ಪನೆಯಲ್ಲೆ ಜೋತುಬಿದ್ದಳು ಹೆಪ್ಸಿಬಾ. ಅನಂತರ, ವೇಗವಾಗಿ ಓಡಿಹೋಗುತ್ತಿದ್ದ ಗಾಡಿಯೊಂದು ಅವಳ ಗಮನವನ್ನು ಸೆಳೆಯಿತು; ಗಾಡಿ ಮೂಲೆಯನ್ನು ತಿರುಗುವವರೆಗೂ, ತೊಯ್ದು ಮಿರುಗುತ್ತಿದ್ದ ಅದರ ಮೇಲ್ಭಾಗವನ್ನೂ ಕೆಸರು ಸಿಡಿದುತ್ತಿದ್ದ ಅದರ ಚಕ್ರಗಳನ್ನೂ ಅವಳು ಗಮನಿಸಿ ನೋಡುತ್ತಿದ್ದಳು; ಬೆರಗುಗೊಂಡು ಚಿಂತಾಭಾರದಿಮದ ಕುಗ್ಗಿದ್ದ ಕಾರಣದಿಂದ ಸೋಮಾರಿಯಾಗಿ ಅಲೆಯುತ್ತಿದ್ದ ಅವಳ ಮನಸ್ಸನ್ನು ಆ ಗಾಡಿ ಇನ್ನು ಹೆಚ್ಚು ದೂರ ಒಯ್ಯಲು ನಿರಾಕರಿಸಿತ್ತು, ಗಾಡಿ ಕಣ್ಮರೆಯಾದ ಮೇಲೆ, ಅವಳು ಇನ್ನೊಂದು ಕ್ಷಣಕಾಲ ಮನಸ್ಸನ್ನು ಅಲೆಯಬಿಟ್ಟಳು; ಏಕೆಂದರೆ, ಬೀದಿಯ ಆ ತುದಿಯಿಂದ ಇತ್ತಕಡೆಗೆ ಕುಂಟುತ್ತ ನಿಧಾನವಾಗಿ ಬರುತ್ತಿದ್ದ ವೆನ್ನರ್ ಮಾವನ ತೇಪೆಬಟ್ಟೆಯ ಆಕೃತಿ ಬರುತ್ತಿತ್ತು; ಪೂರ್ವದ ಗಾಳಿ ಅವನ ಕೀಲುಗಳಿಗೆ ಹೊಕ್ಕು ಸಂಧಿವಾತ ಹಿಡಿದಿದ್ದರಿಂದ, ಅವನು ಕುಂಟುತ್ತ ಬರುತ್ತಿದ್ದ. ಅವನು ಇನ್ನೂ ನಿಧಾನವಾಗಿ ನಡದು ಹೋಗಿ, ತನ್ನ ನಡುಕಹುಟ್ಟಿಸುವಂತಹ ಒಂಟಿತನದಲ್ಲಿ ಇನ್ನೂ ತುಸ ಹೆಚ್ಚು ಕಾಲ ತನಗೆ ಸ್ನೇಹದ ಜೊತೆಯಾಗಿದ್ದಿದ್ದರೆ ಮೇಲಾಗಿತ್ತು ಎಂದು ಹೆಪ್ಸಿಬಾ ಬಯಸಿದಳು. ದುಃಖಕರವಾಧ ವರ್ತಮಾನ ಕಾಲದಿಂದ ತನ್ನನ್ನು ಹೊರಕ್ಕೆ ಕರೆದೊಯ್ದು, ತನಗೂ ತನಗೆ ಈಗ ಯಾವುದು ಅತ್ಯಂತ ಸಮೀಪವಾಗಿತ್ತೋ ಆ ಕಾರ್ಯಕ್ಕೂ ನಡುವೆ ಮಾನವ ಪ್ರಾಣಿಗಳನ್ನು ಬಿಟ್ಟು ಹೋಗುವ ಯಾವುದೇ ಆಗಲಿ; ತಾನು ಈಗ ಮಾಡಲೇಬೇಕಾಗಿದ್ದ ಅನಿವಾರ್ಯ ಕಾರ್ಯವನ್ನು ಒಂದು ಕ್ಷಣದ ಮಟ್ಟಿಗಾದರೂ ಮುಂದುವರಿಸಬಲ್ಲ ಏನೇ ಆಗಲಿ– ಅಂತಹ ಪ್ರತಿಬಂಧಕಗಳೆಲ್ಲ ಅವಳಿಗೀಗ ಸ್ವಾಗತಾರ್ಹವಾಗಿದ್ದುವು. ಸಂತೋಷದಿಂದ ಅತ್ಯಂತ ಹಗುರವಾದ ಮನಸ್ಸನ್ನು ಬಿಟ್ಟರೆ, ಅತ್ಯಂತ ದುಃಖದಿಂದ ಭಾರವಾದ ಮನಸ್ಸೇ ಅತ್ಯಂತ ವಿನೋದಪ್ರಿಯವಾಗಿರುವ ಸಂಭವ ಹೆಚ್ಚು.

ಹೆಪ್ಸಿಬಾಗೆ ತನ್ನ ಸ್ವಂತ ನೋವನ್ನು ಸಹಿಸಲು ಇದ್ದ ಶಕ್ತಿಯೇ ಅಲ್ಪ; ಕ್ಲಿಫರ್ಡನಿಗೆ ಅವಳು ವಿಧಿಸಲೇಬೇಕಾಗಿದ್ದುದನ್ನು ಸಹಿಸಲು ಇದ್ದ ಶಕ್ತಿ ಅದಕ್ಕಿಂತ ಕಡಮೆ. ಅವನ ಪ್ರಕೃತಿಯೋ ಮೊದಲೇ ಸೂಕ್ಷ್ಮ; ಜೊತೆಗೆ, ಹಿಂದಿನ ವಿಪತ್ಪರಂಪರೆಗಳಿಂದ ಅದು ನುಚ್ಚು ನೂರಾಗಿತ್ತು; ಅಂಥವನನ್ನು ಕಠಿನಮನಸ್ಕನೂ

ಪ್ರತಿ ತಲೆಮಾರಿನಲ್ಲಿಯೂ ಒಂದು ಸರ್ವಸಾಮಾನ್ಯ ವರ್ಣವನ್ನು ತಳೆದು ತಾನೇ ಪುನರ್ಜನ್ಮಹೊಂದಿ ಕಾಣಿಸಿಕೊಳ್ಳುತ್ತಿತ್ತು; ಬಾಹ್ಯರೂಪರೇಖೆ ಹೊರತಾಗಿ, ಸ್ವಲ್ಪವೂ ವ್ಯತ್ಯಾಸಹೊಂದುತ್ತಿರಲಿಲ್ಲ. ಆದರೆ, ನ್ಯಾಯಮೂರ್ತಿ, ಕ್ಲಿಫರ್ಡ್ ಮತ್ತು ತಾನು– ಮೂವರೂ ಕೂಡಿ ಮನೆತನದ ಇತಿಹಾಸಕ್ಕೆ ಇನ್ನೊಂದು ಘಟನೆಯನ್ನು ಸೇರಿಸಲಿರುವುದಾಗಿ ಹೆಪ್ಸಿಬಾ ಈಗ ಭಾವಿಸಿದಳು; ಆ ಘಟನೆಯ ಹಿನ್ನೆಲೆಯಲ್ಲಿ ಹೆಚ್ಚಿನ ಅನ್ಯಾಯ ದುಃಖಗಳು ನೆಲಸಿದ್ದು, ಅವು ಆ ಘಟನೆ ಇತರ ಉಳಿದೆಲ್ಲ ಹಿಂದಿನ ಘಟನೆಗಳನ್ನೂ ಮೆಟ್ಟಿ ನಿಲ್ಲುವ ಹಾಗೆ ಮಾಡುವಂತಿತ್ತು. ಈ ರೀತಿ, ಸಧ್ಯದ ಗಳಿಗೆಯ ದುಃಖವು ತನ್ನದೇ ಆದ ಒಂದು ವ್ಯಕ್ತಿತ್ವವನ್ನೂ ಪರಾಕಾಷ್ಠೆಯ ಸ್ವಭಾವವನ್ನೂ ಪಡೆಯುವುದು; ಸ್ವಲ್ಪ ಕಾಲವಾದ ಮೇಲೆ ಅದು ಆ ಲಕ್ಷಣಗಳನ್ನು ಕಳೆದುಕೊಂಡು, ಅನೇಕ ವರ್ಷಗಳ ಹಿಂದಿನ ನೋವು ನಲಿವಿನ ಸಂಗತಿಗಳಿಗೆ ಸಾಮಾನ್ಯವಾದ ಮಾಸಲುಗಪ್ಪು ಪರಂಪರೆಯ ಜಾಲದಲ್ಲಿ ವಿಲೀನವಾಗಿ ಹೋಗುವುದು. ಯಾವುದೇ ಆಗಲಿ, ಕೇವಲ ಕ್ಷಣಕಾಲ ಮಾತ್ರ ಅಪೂರ್ವವಾಗಿಯೋ ಚಕಿತಕಾರಿಯಾಗಿಯೋ ಕಾಣಬಲ್ಲುದು– ಕಹಿ ಸಿಹಿಗಳೆರಡನ್ನೂ ತನ್ನಲ್ಲಿ ಒಳಕೊಂಡ ಸತ್ಯವಿದು.

ಆದರೆ, ಆ ಕ್ಷಣದಲ್ಲಿ ನಡೆದು ನೆರವೇರಲಿರುವ ಘಟನೆ ಹಿಂದೆಂದೂ ನಡೆಯದೆ ಇದ್ದದ್ದು ಎಂಬ ಭಾವನೆಯನ್ನು ತೊರೆಯಲಾರದೆ ಹೋದಳು ಹೆಪ್ಸಿಬಾ. ಅವಳ ನರನಾಡಿಗಳು ಅದುರಿ ಅಲ್ಲಾಡುತ್ತಿದ್ದುವು. ಸಹಜ ಪ್ರೇರಣೆಯಿಂದ ಅವಳು ಕಮಾನುಕಿಟಕಿಯ ಬಳಿ ನಿಂತಳು; ಬೀದಿಯಲ್ಲಿನ ಸ್ಥಿರವಸ್ತುಗಳ ಸ್ವರೂಪವನ್ನು ಮನಸ್ಸಿನಲ್ಲಿ ಧಾರಣಮಾಡಿಕೊಂಡು, ಆ ಮೂಲಕ ತಾನು ಸದ್ಯದಲ್ಲಿದ್ದ ಸಮೀಪಕ್ಷೇತ್ರದಲ್ಲಿ ಅನುಭವಿಸುತ್ತಿದ್ದ ಭ್ರಮಣ ಮತ್ತು ಕಂಪನಗಳನ್ನು ಸ್ತಿಮಿತಕ್ಕೆ ತಂದುಕೊಳ್ಳುವ ಉದ್ದೇಶದಿಂದ ಹೊರಬಾಗಿ ಬೀದಿಯ ಕಡೆ ನೋಡಿದಳು. ಬೀದಿಯಲ್ಲಿ ಪ್ರತಿಯೊಂದು ವಸ್ತುವೂ ಹಿಂದಿನ ದಿನದಂದು, ಹಾಗೂ ಅದರ ಹಿಂದಿನ ಅಸಂಖ್ಯಾತ ದಿನಗಳಲ್ಲಿ ಹೇಗಿದ್ದಿತೋ ಹಾಗೆಯೇ ಇದ್ದುದನ್ನು ಅವಳು ಕಂಡಾಗ, ಆ ನೋಟದಿಂದ ಅವಳಿಗೊಂದು ವಿಧವಾದ ಧಕ್ಕೆ ಹೊಡೆದಂತಾಗಿ, ಅವಳು ಚೇತರಿಸಿಕೊಂಡಳು; ಕಂಡುಬಂದ ಒಂದೇ ವ್ಯತ್ಯಾಸವೆಂದರೆ, ಬಿಸಿಲು ಕಾಯುವ ಹವಕ್ಕೂ ಬಿರುಗಾಳಿ ಮಳೆಯ ಹವಕ್ಕೂ ಇದ್ದ ವ್ಯತ್ಯಾಸ. ಅವಳ ಕಣ್ಣು ಹಾಗೆಯೇ ಉದ್ದಕ್ಕೂ ಮನೆಮನೆಯ ಹೊಸಿಲಿಂದ ಹೊಸಿಲಿಗೆ ಹಾದುಹೋಗಿ, ಒದ್ದೆಯಾದ ಪಕ್ಕದಾರಿಗಳನ್ನೂ, ನೀರು ನಿಲ್ಲುವವರೆಗೂ ಗೋಚರಕ್ಕೇ ಬಾರದಿದ್ದ ಮಳೆನೀರಿನ ಹಳ್ಳಗಳನ್ನೂ ಗಮನಿಸಿತು. ಯಾವುದೋ

ಭಗ್ನವಾಗಿ ಹೋಗಿತ್ತು! ಹಾಳಾಗಿ ಹೋಗಿತ್ತು! ಸರ್ವನಾಶದ ಹಾದಿ ಹಿಡಿದಿತ್ತು! ಇನ್ನೇನು ಸರ್ವನಾಶವಾಗುವುದರಲ್ಲಿತ್ತು!

ಸತ್ತು ಹೋದ ತಮ್ಮ ದೊಡ್ಡಪ್ಪನ ಕಣ್ಮರೆಯಾದ ಆಸ್ತಿಯ ಸಂಬಂಧವಾದ ಸಮಾಚಾರವು ಕ್ಲಿಫರ್ಡನಿಗೆ ತಿಳಿದಿದೆಯೆಂದು ನ್ಯಾಯಮೂರ್ತಿ ಆಪಾದನೆಮಾಡುತ್ತಿದ್ದ ಹಾಗೆ, ಅದು ಅವನಿಗೆ ತಿಳದಿರಬಹುದಲ್ಲವೆ ಎಂಬ ಆಲೋಚನೆ ಒಂದು ಕ್ಷಣಕಾಲ ಹೆಪ್ಸಿಬಾಳ ಮನಸ್ಸಿನಲ್ಲಿ ಹಾದುಹೋಯಿತು. ತನ್ನ ಸಹೋದರನ ಕೆಲವು ಅಸ್ಪಷ್ಟ ಸೂಚನೆಗಳು ಅವಳ ನೆನಪಿಗೆ ಬಂದುವು; ಅವುಗಳ ಆಧಾರದ ಮೇಲೆ ಮಾಡಬಹುದಾಗಿದ್ದ ಊಹೆ ಮುಖ್ಯವಿಚಾರದಲ್ಲಿ ಅಸಂಬಂದ್ಧವಾಗಿದ್ದರೆ, ಅವುಗಳನ್ನು ಹಾಗೆ ಅರ್ಥ ಮಾಡಬಹುದಾಗಿತ್ತು. ಯೂರೋಪಿನಲ್ಲಿ ಪ್ರವಾಸಮಾಡಿ ಅಲ್ಲಿಯೆ ನೆಲಸಬೇಕೆಂಬ ಯೋಜನೆಗಳು, ಸ್ವದೇಶದಲ್ಲಿಯೆ ಉಜ್ಜ್ವಲ ಜೀವನವನ್ನು ನಡಸಬೇಕೆಂಬ ಹಗಲುಗನಸುಗಳು, ಹಾಗೂ ಭವ್ಯವಾದ ಗಾಳಿಗೋಪುರಗಳ ನಿರ್ಮಾಣ– ಇವೆಲ್ಲಾ ನಡೆದಿದ್ದುವು; ಆ ಗಾಳಿಗೋಪುರಗಳನ್ನು ಕಟ್ಟಿ ಕಾಣಬೇಕಾಗಿದ್ದರೆ ಅಪಾರ ಐಶ್ವರ್ಯ ಆವಶ್ಯಕವಾಗಿತ್ತು. ಈ ಐಶ್ವರ್ಯವೆಲ್ಲ ತನ್ನ ಸ್ವಾಧೀನದಲ್ಲಿದ್ದಿದ್ದರೆ, ಕ್ಲಿಫರ್ಡನ ಸ್ವಾತಂತ್ರ್ಯವನ್ನೂ ಈ ಹಾಳು ಬಿದ್ದ ಹಳೆಯ ಮನೆಯಲ್ಲಿ ಅವನು ಏಕಾಂತವಾಗಿ ವಾಸಮಾಡುವ ಅವಕಾಶವನ್ನೂ ಕೊಂಡುಕೊಳ್ಳಲು ಅವಳು ಅದನ್ನೆಲ್ಲಾ ತನ್ನ ಪಾಷಾಣ ಹೃದಯದ ಬಂಧುವಿಗೆ ಸೂರೆಗೊಟ್ಟುಬಿಡುತ್ತಿದ್ದಳು! ಆದರೆ ತನ್ನ ಸಹೋದರನ ಯೋಜನೆಗಳೆಲ್ಲವೂ, ತನ್ನ ತಾಯ ತೊಡೆಯಬಳಿ ಒಂದು ಪುಟ್ಟ ಕುರ್ಚಿಯಲ್ಲಿ ಕುಳಿತಿರುವಾಗ ಮಗುವೊಂದು ತನ್ನ ಭವಿಷ್ಯಜೀವನದ ಬಗೆಗೆ ಚಿತ್ರಿಸಿಕೊಳ್ಳುವ ಕಲ್ಪನಾಚಿತ್ರಗಳಂತೆ, ಸ್ಪಷ್ಟಧ್ಯೇಯವೂ ಹುರುಳೂ ಇಲ್ಲವಾಗಿದ್ದುವು. ಕ್ಲಿಫರ್ಡನ ಬಳಿಯಿದ್ದುದೆಲ್ಲಾ ನೆರಳುನಿಧಿ; ನ್ಯಾಯಮೂರ್ತಿ ಪಿನ್ಚನ್ನನನ್ನು ತಣಿಸಬಲ್ಲ ಹುರುಳು ಹೊನ್ನಾಗಿರಲಿಲ್ಲ.!

ಅವರ ಈ ಉತ್ಕಟ ಪರಿಸ್ಥಿತಿಯಲ್ಲಿ ಅವರಿಗೆ ನೆರವೇ ಇರಲಿಲ್ಲವೆ? ಸುತ್ತಮುತ್ತ ನಗರವಿದ್ದೂ ಕೂಡ ಅವರಿಗೆ ಯಾವ ನೆರವೂ ಇರಲಿಲ್ಲವೆಂದರೆ ಅದು ವಿಚಿತ್ರವಾಗಿ ಕಾಣುತ್ತಿತ್ತು. ಕಿಟಕಿಯ ಬಾಗಿಲನ್ನು ತೆರೆದು ಚೀತ್ಕಾರ ಮಾಡಿದರೆ ಸಾಕು, ಆ ವಿಚಿತ್ರ ಸಂಕಟದ ಧ್ವನಿಯನ್ನು ಕೇಳಿ ಅದು ಭಯಂಕರವಾದ ವಿಷಮಾವಸ್ಥೆಯಲ್ಲಿ ಸಿಲುಕಿರುವ ಮಾನವಪ್ರಾಣಿಯ ಕೂಗೆಂದು ಚೆನ್ನಾಗಿ ಅರಿತು, ಅವರನ್ನು ಉಳಿಸಲು ಪ್ರತಿಯೊಬ್ಬರೂ ಧಾವಿಸಿ ಬರುವರು. ಸನ್ನಿ ಹಿಡಿದಂತಿರುವ ಈ ಜಡಪ್ರಪಂಚದಲ್ಲಿ ಯಾರೇ ಆಗಲಿ, ಎಂಥ ದಯಾಮಯ ಉದ್ದೇಶವನ್ನು ಬೇಕಾದರೂ

ನಿರ್ದಯನೂ ಆದವನ ಎದುರಿಗೆ ಮುಖಾಮುಖಿಯಾಗಿ ತಂದು ನಿಲ್ಲಿಸುವುದೆಂದರೆ, ಅವನ ಸಂಪೂರ್ಣ ವಿನಾಶಕ್ಕೆ ಕಡಮೆಯಾದುದೇನಲ್ಲ; ಆ ಕ್ರೂರಿ ಅವನ ಬದುಕಿನುದ್ದಕ್ಕೂ ಅವನ ಭಾಗದ ದುರ್ದೈವವಾಗಿದ್ದನು. ಅವರಿಬ್ಬರ ನಡುವೆ ಕಹಿಯಾದ ನೆನಪುಗಳಾಗಲಿ ಹಗೆತೀರಿಸಿಕೊಳ್ಳುವ ಯಾವ ಉದ್ದೇಶವಾಗಲಿ ಅಪಾಯಶಂಕೆಯನ್ನು ಹುಟ್ಟಿಸುವಂತಹ ಸ್ಥಿತಿಯಲ್ಲಿ ಈಗ ಇರಲಿಲ್ಲವೆಂದು ಇಟ್ಟುಕೊಂಡರೂ, ಭಾರಿಯಾದ ತೂಕವುಳ್ಳ ಪ್ರಭಾವಶಾಲಿಯಲ್ಲದ ಸ್ವಭಾವದವನನ್ನು ಕಂಡರೆ ಹೆಚ್ಚು ಸೂಕ್ಷ್ಮ ಸ್ವಭಾವದವನಲ್ಲಿ ತಲೆದೋರುವ ಕೇವಲ ಜುಗುಪ್ಸೆಯೊಂದೇ ಸಾಕು, ಈತನಿಗೆ ವಿನಾಶಕಾರಿಯಾಗಿ ಪರಿಣಮಿಸುವುದು. ಆಗಲೇ ಬಿರುಕು ಬಿಟ್ಟಿರುವ ಪಿಂಗಾಣಿ ಹೂಜಿಯನ್ನು ಕಗ್ಗಲ್ಲಿನ ಸ್ತಂಭದ ಮೇಲೆ ಎಸೆದಂತಾಗುವುದು ಅದು. ಹೆಪ್ಸಿಬಾ ತನ್ನ ಸೋದರ ಸಂಬಂಧಿ ಜಫ್ರಿಯ ಸ್ವಭಾವದ ಶಕ್ತಿ ಸಾಮರ್ಥ್ಯವನ್ನು ಇಷ್ಟೊಂದು ಯಥೋಚಿತವಾಗಿ ಎಂದೂ ಅಂದಾಜು ಮಾಡಿರಲಿಲ್ಲ; ಬುದ್ಧಿಶಕ್ತಿ, ಸಂಕಲ್ಪಶಕ್ತಿ, ಜನರೊಂದಿಗೆ ವ್ಯವಹರಿಸುವುದರಲ್ಲಿದ್ದ ದೀರ್ಘಕಾಲದ ಅಭ್ಯಾಸಬಲ, ಸ್ವಾರ್ಥದ ಉದ್ದೇಶಗಳನ್ನು ಸಾಧಿಸಿಕೊಳ್ಳುವುದರಲ್ಲಿ ಯಾವುದಕ್ಕೂ ಹೇಸದೆ ದುರ್ಮಾರ್ಗಗಳನ್ನು ಅನುಸರಿಸುವುದು (ಹಾಗೆಂದು ಅವಳು ನಂಬಿದ್ದಳು)– ಇವೆಲ್ಲದರಲ್ಲಿಯೂ ಅವನು ಬಲಿಷ್ಠನಾಗಿದ್ದನು. ಕ್ಲಿಫರ್ಡನು ಒಂದು ರಹಸ್ಯವನ್ನು ಹೊಂದಿದ್ದನೆಂಬ ಬಗೆಗೆ ನ್ಯಾಯಮೂರ್ತಿ ಪಿನ್ಚನ್ನನು ಭ್ರಾಂತಿಗೊಂಡಿದ್ದುದು ಇದ್ದ ಕ್ಲೇಶವನ್ನು ಇನ್ನೂ ಹೆಚ್ಚು ಮಾಡಿತ್ತು. ಅವನ ಹಾಗೆ ಧ್ಯೇಯನಿಷ್ಠೆಯನ್ನೂ ರೂಢಿಯಾದ ಚಾತುರ್ಯವನ್ನೂ ಉಳ್ಳವರು ವ್ಯವಹಾರ ವಿಷಯಗಳಲ್ಲಿ ಒಂದು ತಪ್ಪು ಅಭಿಪ್ರಾಯವನ್ನು ಅಕಸ್ಮಾತ್ ಹೊಂದಿದ್ದೇ ಆದರೆ; ಅವರದನ್ನು ಸತ್ಯವೆಂದು ತಿಳಿದುಬಂದ ಸಂಗತಿಗಳ ನಡುವೆ ಹೇಗೆ ಬಲವಾಗಿ ಸ್ಥಾಪಿಸಿಬಿಡುತ್ತಾರೆಂದರೆ, ಅದನ್ನು ತಮ್ಮ ಮನಸ್ಸಿನಿಂದ ಹೊರಕ್ಕೆ ಕಿತ್ತು ತೆಗೆಯುವುದು ಓಕ್ ಮರವನ್ನು ಬೇರುಸಹಿತ ಕೀಳುವಷ್ಟೇ ಕಷ್ಟಸಾಧ್ಯ. ಹೀಗೆ, ನ್ಯಾಯಮೂರ್ತಿ ಕ್ಲಿಫರ್ಡ್‌ನಿಂದ ಅಸಾಧ್ಯವಾದುದನ್ನು ಕೋರಿದ್ದನು; ಅವನ ಇಷ್ಟವನ್ನು ನೆರವೇರಿಸಲಾರದವನಾಗಿದ್ದುದರಿಂದ, ಅವನು ನಾಶ ಹೊಂದಲೇಬೇಕಾಗಿದ್ದಿತು. ಅಂಥ ಮನುಷ್ಯನ ಹಿಡಿತಕ್ಕೆ ಸಿಕ್ಕಿದಮೇಲೆ, ಕ್ಲಿಫರ್ಡನ ಮೃದುವಾದ ಕಾವ್ಯಮಯವಾದ ಸ್ವಭಾವದ ಗತಿ ಅಷ್ಟೇ ತಾನೆ! ಸಂಗೀತದ ಸ್ವರತರಂಗಗಳ ಲಯಬದ್ಧವಾದ ಲಹರಿಗೆ ಅನುಗುಣವಾಗಿ ಸುಂದರ ಸುಖಾನುಭೋಗದ ಜೀವನವನ್ನು ಅಳವಡಿಸುವುದಕ್ಕಿಂತ ಹೆಚ್ಚಿನ ಕಠಿನಕಾರ್ಯವನ್ನು ಅಂತಹ ಸ್ವಭಾವ ಎಂದೂ ಕಾಣದು! ವಾಸ್ತವವಾಗಿ, ಈಗಾಗಲೇ ಅದರ ಗತಿ ಏನಾಗಿದ್ದಿತು!

ಕೊಂಡಿದ್ದನೋ ಆ ಇಪ್ಪಾರುಭಾಗಕ್ಕೂ ಸಂಪರ್ಕಸಾಧನವಾಗಿ ಅದು ಉಪಯೋಗವಾಗಿತ್ತು. ಅವನು ಅಲ್ಲಿ ಇರಲಿಲ್ಲ ಮೇಜಿನ ಮೇಲೆ ಮುಖ ಮಗುಚಿಬಿದ್ದಿದ್ದ ಒಂದು ಪುಸ್ತಕ, ಹಸ್ತಪ್ರತಿಯ ಒಂದು ಸುರುಳಿ, ಅರ್ಧ ಬರೆದಿದ್ದ ಒಂದು ಹಾಳೆ, ಒಂದು ವಾರ್ತಾಪತ್ರಿಕೆ, ಅವನ ಸದ್ಯದ ಉದ್ಯೋಗದ ಕೆಲವು ಸಲಕರಣೆಗಳು, ಒಪ್ಪಿಗೆಯಾಗದಿದ್ದ ಹಲವಾರು ಛಾಯಾಚಿತ್ರಗಳು– ಇವೆಲ್ಲಾ ಅವನು ಅಲ್ಲೇ ಎಲ್ಲೋ ಹತ್ತಿರದಲ್ಲಿಯೇ ಇದ್ದನೆಂಬ ಭಾವನೆಯನ್ನುಂಟು ಮಾಡುತ್ತಿತ್ತು. ಆದರೆ, ಹಗಲಿನ ಈ ಹೊತ್ತಿನಲ್ಲಿ ಅವನು ಜನರನ್ನು ಕಾಣುವ ತನ್ನ ಹೊರಗಿನ ಕೋಣೆಗಳಲ್ಲಿ ಇರುತ್ತಿದ್ದನು; ಅದನ್ನು ಹೆಪ್ಸಿಬಾ ನಿರೀಕ್ಷಿಸಬಹುದಾಗಿತ್ತು. ಅವಳ ಮನಸ್ಸಿನ ಮೇಲೆ ಹೊರೆಯಾಗಿದ್ದ ಆಲೋಚನೆಗಳ ನಡುವೆ ಸ್ಫುರಿಸಿದ, ಸೋಮಾರಿತನದ ಕುತೂಹಲದ ಒಂದು ಸಹಜ ಪ್ರೇರಣೆಯಿಂದ ಅವಳು ಛಾಯಾಚಿತ್ರಗಳಲ್ಲಿ ಒಂದನ್ನು ನೋಡಿದಳು; ಅದರಲ್ಲಿ, ತನ್ನ ಕಡೆ ಹುಬ್ಬು ಗಂಟಿಕ್ಕಿ ನೋಡುತ್ತಿದ್ದ ನ್ಯಾಯಮೂರ್ತಿ ಪಿನ್ಚನ್ನನನ್ನು ಕಂಡಳು. ವಿಧಿಯೇ ಅವಳ ಮುಖವನ್ನು ದುರುಗುಟ್ಟಿ ನೋಡಿದಾಗ ಹೃದಯವನ್ನು ಕುಗ್ಗಿಸುವ ನಿರಾಶಾಭಾವದಿಂದ ಅವಳು ತನ್ನ ನಿಷ್ಫಲ ಅನ್ವೇಷಣೆಯನ್ನು ಬಿಟ್ಟು ಬೆನ್ನು ತಿರುಗಿಸಿದಳು. ತನ್ನ ಏಕಾಂತವಾಸದ ಈ ಎಲ್ಲ ವರ್ಷಗಳಲ್ಲಿ ಎಂದೇ ಆಗಲಿ ಒಂಟಿಯಾಗಿರುವುದು ಏನೆಂಬುದನ್ನು ಅವಳು ಈಗ ಅನುಭವಿಸಿದಂತೆ ಅನುಭವಿಸಿರಲಿಲ್ಲ. ಮನೆ ಒಂದು ಮರುಭೂಮಿಯಲ್ಲಿ ನೆಲಸಿದೆಯೋ, ಇಲ್ಲವೆ ಸುತ್ತಮುತ್ತ ವಾಸಿಸುತ್ತಿದ್ದವರಿಗೆ ಅದು ಯಾವುದೋ ಮಂತ್ರ ಪ್ರಭಾವದಿಂದ ಅದೃಶ್ಯವಾಗಿ ಮಾರ್ಪಟ್ಟಿತೋ, ಇಲ್ಲವೆ ಅದರ ಪಕ್ಕದಲ್ಲಿಯೇ ಸಾಗಿಹೋಯಿತೋ ಎಂಬಂತೆ ಕಂಡಿತು; ಅದರ ಪರಿಣಾಮವಾಗಿ, ಯಾವುದೇ ವಿಧವಾದ ದುರದೃಷ್ಟವಾಗಲಿ, ಸಂಕಟಕರವಾದ ಆಕಸ್ಮಿಕವಾಗಲಿ, ಘೋರವಾದ, ಕೃತ್ಯವಾಗಲಿ, ಯಾವ ಸಹಾಯವೂ ದೊರೆಯುವ ಸಾಧ್ಯತೆ ಇಲ್ಲದ ರೀತಿಯಲ್ಲಿ ಸಂಭವಿಸಬಹುದಾಗಿತ್ತು. ಒಂದು ಕಡೆ ದುಃಖ, ಇನ್ನೊಂದು ಕಡೆ ಅಭಿಮಾನಭಂಗ– ಇವುಗಳ ನಡುವೆ, ತನ್ನ ಸ್ನೇಹಿತರನ್ನೆಲ್ಲಾ ತೊರೆದುಕೊಂಡು ಹೆಪ್ಸಿಬಾ ತನ್ನ ಬಾಳನ್ನು ನೂಕಿದ್ದಳು; ತನ್ನ ಸೃಷ್ಟಿಯಲ್ಲಿನ ಜೀವಿಗಳು ಒಬ್ಬರಿಗೊಬ್ಬರು ಕಷ್ಟಕಾಲಕ್ಕೊದಗಬೇಕು ಎಂಬುದು ದೇವರ ನಿಯಾಮಕ, ಆ ಅವಲಂಬನವನ್ನು ಅವಳು ಬೇಕೆಂದು ಕಿತ್ತೊಗೆದಿದ್ದಳು; ಆದ್ದರಿಂದ, ಕ್ಲಿಫರ್ಡನೂ ತಾನೂ ತಮ್ಮ ಸಂಬಂಧಿಯಾದ ವೈರಿಗೆ ಬಲಿಗಳಾಗಿ ಬೀಳಬೇಕಾದ್ದು ಅವಳಿಗೊದಗಿದ ಶಿಕ್ಷೆಯಾಗಿತ್ತು.

ಇಟ್ಟುಕೊಂಡಿರಲಿ, ಸಹಾಯಮಾಡಲೆಂದು ಬಂದದ್ದೇ ಆದರೆ ಅತ್ಯಂತ ಬಲವಾದ ಪಕ್ಷಕ್ಕೇ ತಮ್ಮ ಸಹಾಯವನ್ನು ನೀಡುವರು– ನಿರಂತರವಾಗಿ ನಡೆಯುತ್ತಿರುವ ಈ ವಿಧಿವಿಲಾಸ ಎಷ್ಟು ವಿಚಿತ್ರ, ಎಷ್ಟು ಪರಿಹಾಸಕ್ಕೀಡಾಗುವಂಥದು ಎಂದು ಹೆಪ್ಸಿಬಾ ಬಗೆದಳು. ಬಲವೂ ಅನ್ಯಾಯವೂ ಒಟ್ಟುಗೂಡಿದರೆ, ಕಾಂತಶಕ್ತಿಯನ್ನು ತುಂಬಿದ ಕಬ್ಬಿಣದಂತೆ, ತಡೆಯಲಾಗದ ಆಕರ್ಷಣಶಕ್ತಿಯನ್ನು ಪಡೆಯುವುವು. ಇತ್ತ ಈ ನ್ಯಾಯಮೂರ್ತಿ ಪಿನ್ಚನ್ ಇರುವನು– ಸಾರ್ವಜನಿಕ ದೃಷ್ಟಿಯಲ್ಲಿ ಉನ್ನತ ವ್ಯಕ್ತಿ, ಉಚ್ಚಪದವಿಯಲ್ಲಿರುವವನು, ಅಪಾರ ಐಶ್ವರ್ಯವುಳ್ಳವನು, ಜನೋಪಕಾರಿ, ಕಾಂಗ್ರೆಸ್ಸಿನ ಹಾಗೂ ಕ್ರೈಸ್ತಮತದ ಸದಸ್ಯ, ಒಳ್ಳೆಯ ಹೆಸರನ್ನು ತರುವ ಎಲ್ಲದರೊಡನೆಯೂ ಸಂಬಂಧ ಹೊಂದಿರುವನು– ಇಷ್ಟೆಲ್ಲ ಅನುಕೂಲ ಪರಿಸ್ಥಿತಿಯಲ್ಲಿ ಭವ್ಯವಾಗಿ ಕಾಣುತ್ತಿದ್ದನು. ಎಷ್ಟು ಭವ್ಯವಾಗಿ ಕಾಣುತ್ತಿದ್ದನೆಂದರೆ, ಅವನ ಹುರುಳಿಲ್ಲದ ಪ್ರಾಮಾಣಿಕತೆಯ ಬಗೆಗೆ ಹೆಪ್ಸಿಬಾ ತಾನು ಮಾಡಿಕೊಂಡಿದ್ದ ತೀರ್ಮಾನವನ್ನು ಕಂಡು ತಾನೇ ಹೆದರಿ ಹಿಮ್ಮೆಟ್ಟದಿರಲು ಸಾಧ್ಯವಾಗಲಿಲ್ಲ. ಒಂದು ಪಕ್ಷದಲ್ಲಿ, ಈ ನ್ಯಾಯಮೂರ್ತಿ! ಇನ್ನೊಂದು ಪಕ್ಷದಲ್ಲಿ ಯಾರು? ಅಪರಾಧಿ ಕ್ಲಿಫರ್ಡ್! ಒಂದು ಕಾಲದಲ್ಲಿ, ಪ್ರಸಿದ್ಧಪುರುಷ! ಈಗ, ಅಸ್ಪಷ್ಟವಾಗಿ ನೆನಪಿನಲ್ಲಿ ಉಳಿದಿರುವ ಒಬ್ಬ ಅಪಮಾನಿತ ವ್ಯಕ್ತಿ!

ನ್ಯಾಯಮೂರ್ತಿ ಲಭ್ಯವಾದ ಎಲ್ಲ ಮನುಷ್ಯ ಸಹಾಯವನ್ನು ತನ್ನ ಕಡೆಗೇ ಎಳೆದುಕೊಳ್ಳುವನೆಂಬ ಗ್ರಹಿಕೆಯಿದ್ದರೂ ಕೂಡ, ತಾನಾಗಿ ಕಾರ್ಯದಲ್ಲಿ ತೊಡಗುವ ಅಭ್ಯಾಸ ಸ್ವಲ್ಪವೂ ಇರಲಿಲ್ಲ ಹೆಪ್ಸಿಬಾಗೆ; ಆದ್ದರಿಂದ, ಸಲಹೆಯ ಒಂದೇ ಮಾತು ಯಾವ ಬಗೆಯ ಕಾರ್ಯಕ್ಕೆ ಬೇಕಾದರೂ ಅವಳು ಒಲೆಯುವಂತೆ ಮಾಡಿಬಿಡುತ್ತಿತ್ತು. ಪುಟ್ಟ ಫೀಬೆ ಪಿನ್ಚನ್ ಯಾವ ಸಲಹೆ ಸೂಚನೆಯನ್ನು ಕೊಡಲಾರದವಳಾಗಿದ್ದರೂ ತನ್ನ ಸ್ವಭಾವದ ಸ್ನೇಹಪರ ಚಾಕಚಕ್ಯತೆಯಿಂದ ಒಂದೇ ಸಲಕ್ಕೆ ದೃಶ್ಯವೆಲ್ಲವನ್ನೂ ಬೆಳಗಿ ಬಿಡುತ್ತಿದ್ದಳು. ಕಲಾವಿದನನ್ನು ಕುರಿತ ಆಲೋಚನೆ ಹೆಪ್ಸಿಬಾಗೆ ಹೊಳೆಯಿತು. ತರುಣನೂ ಅಜ್ಞಾತನೂ ಅಲೆಮಾರಿಯಾದ ಸಾಹಸಿಗನೂ ಆದ ಹಾಲ್‌ಗ್ರೇವ್‌ನಲ್ಲಿ ಒಂದು ಶಕ್ತಿ ಅಡಗಿದೆಯೆಂದು ಅವಳು ಬಲ್ಲಳು; ಅದು ವಿಷಮಪರಿಸ್ಥಿತಿಯಲ್ಲಿ ಅವನನ್ನು ಉದ್ಧಾರಕನನ್ನಾಗಿ ಪರಿವರ್ತಿಸಬಲ್ಲದಾಗಿತ್ತು. ಮನಸ್ಸಿನಲ್ಲಿ ಈ ಆಲೋಚನೆಯನ್ನಿಟ್ಟುಕೊಂಡು, ಒಂದು ಬಾಗಿಲ ಅಗುಳಿಯನ್ನು ತೆಗೆದಳು: ಆ ಬಾಗಿಲನ್ನು ಬಹಳ ಕಾಲದಿಂದ ಉಪಯೋಗಿಸದೆ, ಅದರ ಮೇಲೆಲ್ಲಾ ಜೇಡರಬಲೆ ಕಟ್ಟಿತ್ತು; ಆದರೆ, ಮನೆಯಲ್ಲಿ ಅವಳ ಸ್ವಂತ ಭಾಗಕ್ಕೂ, ಆ ಅಲೆಮಾರಿ ಛಾಯಾ ಚಿತ್ರಕಲಾವಿದನು ತನ್ನ ತಾತ್ಕಾಲಿಕ ನಿವಾಸವನ್ನು ಈಗ ಎಲ್ಲಿ ಏರ್ಪಡಿಸಿ

ಕೋಣೆಯ ಬಾಗಿಲ ಬಳಿಗೆ ನಿಧಾನವಾಗಿ ಸರಿದುಹೋದಳು; ಹೋಗಿ, ಬಾಗಿಲನ್ನು ಬಡಿದಳು!

ಉತ್ತರವೇ ಇಲ್ಲ!

ಹೇಗೆ ತಾನೇ ಬಂದೀತು ಉತ್ತರ? ಹಿಂಜರಿಯುತ್ತಿದ್ದ ಉದ್ದೇಶ ಬಲದಿಂದ ನಡೆಯುತ್ತಿದ್ದ ಅವಳ ಕೈ ನಡುಗುತ್ತಿದ್ದುದರಿಂದ, ಅದು ಬಾಗಿಲನ್ನು ಬಡಿದದ್ದು ಬಹು ದುರ್ಬಲವಾಗಿತ್ತು, ಆ ಶಬ್ದ ಒಳಕ್ಕೇ ಹೋಗಿದ್ದಿರಲಾರದು. ಅವಳು ಮತ್ತೆ ಬಾಗಿಲು ತಟ್ಟಿದಳು. ಇನ್ನೂ ಉತ್ತರವಿಲ್ಲ! ಆ ಬಗೆಗೆ ಆಶ್ಚರ್ಯಪಡಬೇಕಾಗಿಲ್ಲ. ತನ್ನ ಹೃದಯದ ಸರ್ವಶಕ್ತಿಯನ್ನೂ ಉಪಯೋಗಿಸಿ ಅವಳು ಬಾಗಿಲನ್ನು ತಟ್ಟಿದ್ದಳು, ಯಾವುದೋ ಒಂದು ಸೂಕ್ಷ್ಮ ಆಕರ್ಷಣಶಕ್ತಿಯಿಂದ ತನ್ನ ದಿಗಿಲನ್ನು ಆ ಕರೆಯ ಮೂಲಕ ಶ್ರುತಪಡಿಸಿದ್ದಳು. ನಡುರಾತ್ರಿಯಲ್ಲಿ ಬೆಚ್ಚಿಬೀಳುವ ಮಗುವಿನಂತೆ, ಕ್ಲಿಫರ್ಡ್ ದಿಂಬಿನ ಮೇಲೆ ಮುಖ ಹಾಕಿಕೊಂಡು, ಹಾಸಿಗೆಯ ಬಟ್ಟೆಗಳನ್ನೆಲ್ಲಾ ತನ್ನ ತಲೆಯಮೇಲೆ ಕವಿಚಿಕೊಳ್ಳುವನು. ಅವಳು ಮೂರನೆಯ ಸಲ ಮೆಲ್ಲನೆ, ಆದರೆ ಸುಸ್ಪಷ್ಟವಾಗಿ ಕೇಳುವಂತೆ, ತನ್ನ ಇಂಗಿತ ಸೂಚಿತವಾಗುವಂತೆ, ಕ್ರಮವಾಗಿ ಮೂರುಬಾರಿ ತಟ್ಟಿದಳು; ನಾವು ಮಾಡುವ ಸದ್ದನ್ನು ಎಷ್ಟೇ ಎಚ್ಚರಿಕೆ ವಹಿಸಿ ನಿಪುಣತೆಯಿಂದ ಸಂದರ್ಭೋಚಿತವಾಗಿ ಮಾರ್ಪಡಿಸಲಿ, ಕೈ ಸುಮ್ಮನಿರದೆ ನಮ್ಮ ಮನೋಭಾವನೆಯನ್ನು ಪ್ರಕಟಪಡಿಸುವ ರೀತಿಯಲ್ಲಿ ಜಡವಾದ ಮರದ ಮೇಲೆ ರಾಗಲಯಬದ್ಧವಾಗಿ ಆಡುವುದು.

ಕ್ಲಿಫರ್ಡ್ ಪ್ರತ್ಯುತ್ತರ ಕೊಡಲಿಲ್ಲ.

"ಕ್ಲಿಫರ್ಡ್; ಮುದ್ದು ತಮ್ಮಾ! ನಾನು ಒಳಕ್ಕೆ ಬರಬಹುದಷ್ಟೆ?" ಎಂದಳು ಹೆಪ್ಸಿಬಾ.

ಮೌನ.

ಎರಡು ಮೂರು ಸಲ, ಇನ್ನೂ ಅನೇಕ ಬಾರಿ, ಹೆಪ್ಸಿಬಾ ಅವನ ಹೆಸರನ್ನು ಮತ್ತೆ ಮತ್ತೆ ಉಚ್ಚರಿಸಿದಳು; ಫಲವಿಲ್ಲ; ಕಡೆಗೆ, ತನ್ನ ಸಹೋದರನು ಎಂದೂ ಎಂದಿನಂತಲ್ಲದೆ ಗಾಢವಾಗಿ ನಿದ್ರಿಸುತ್ತಿರುವನೆಂದು ಬಗೆದು, ಬಾಗಿಲನ್ನು ತಾನೆ ತೆರೆದು, ಕೋಣೆಯೊಳಕ್ಕೆ ಹೋದಳು; ಅದು ಬರಿದಾಗಿತ್ತು. ತನಗೆ ಗೊತ್ತಿಲ್ಲದಹಾಗೆ ಅವನು ಹೇಗೆ, ಯಾವಾಗ, ಹೊರಬಂದಿದ್ದಾನು? ಮನೆಯೊಳಗಿನ ಬೇಸರದಿಂದ ಬಳಲಿ, ಅಂದು ಬಿರುಗಾಳಿ ಮಳೆಯಿದ್ದರೂ ಕೂಡ, ತೋಟದಲ್ಲಿ ತಾನು ರೂಢಿಯಾಗಿ ಹೋಗಿಬರುತ್ತಿದ್ದ ಸ್ಥಳಕ್ಕೆ ಹೋಗಿ, ಅಲ್ಲಿ, ಬೇಸಗೆಮನೆಯ ಉಲ್ಲಾಸರಹಿತವಾದ ಆಶ್ರಯಸ್ಥಳದಲ್ಲಿ ಈಗ ನಡುಗುತ್ತ ಇದ್ದಿರಬಹುದೆ? ಅವಳು

ಹೆಪ್ಸಿಬಾ ಕಮಾನು ಕಿಟಕಿಯ ಬಳಿಗೆ ಹಿಂದಿರುಗಿದಳು; ಹುಬ್ಬು ಗಂಟಿಕ್ಕಿದ, ಮಂಜುಗಣ್ಣಿನ ಆ ಬಡಪ್ರಾಣಿ ಕಣ್ಣೆತ್ತಿ ಆಕಾಶದ ಕಡೆ ನೋಡುತ್ತ, ದಟ್ಟವಾದ ಬೂದಮೋಡಗಳ ಮಾಳಿಗೆಯ ಮೂಲಕ ತನ್ನ ಪ್ರಾರ್ಥನೆಯನ್ನು ಮೇಲೆಕ್ಕೆ ಕಳಿಸಲು ಬಲವಾಗಿ ಪ್ರಯತ್ನಿಸಿದಳು. ಮನುಷ್ಯರ ಸಂಕಷ್ಟ, ಸಂದೇಹ, ಮನಸ್ಸಿನ ಗೊಂದಲ, ತೀವ್ರ ಔದಾಸೀನ್ಯ ಇವೆಲ್ಲದರ ಅಪಾರ ರಾಶಿಯನ್ನು ಸಂಕೇತಿಸಲೋ ಎಂಬಂತೆ ಭೂಮಿಗೂ ಅದಕ್ಕಿಂತ ಇನ್ನೂ ಉತ್ತಮವೆನಿಸಿದ ಲೋಕಕ್ಕೂ ನಡುವೆ ಆ ಮಂಜುಮೋಡಗಳು ಒಟ್ಟಾಗಿ ದಟ್ಟೈಸಿದ್ದುವು. ಅವಳ ನಂಬಿಕೆ ಬಹು ಶಿಥಿಲವಾಗಿತ್ತು; ಅವಳ ಪ್ರಾರ್ಥನೆ ಮೇಲಕ್ಕೇರಲಾರದಂತೆ ಬಹು ಭಾರವಾಗಿತ್ತು. ಅದು ಸೀಸದ ಗಟ್ಟಿಯಂತೆ ಅವಳ ಹೃದಯದಮೇಲೆ ಹಿಮ್ಮರಳಿ ಬಿದ್ದಿತು. ಒಬ್ಬ ಮಾನವ ತನ್ನ ಸೋದರ ಮಾನವನಿಗೆ ಎಸಗುವ ಈ ಕ್ಷುದ್ರ ಅನ್ಯಾಯಗಳ ವಿಷಯದಲ್ಲಿ ದೈವವು ಕೈಹಾಕುವುದಿಲ್ಲ, ಒಬ್ಬೊಂಟಿಗ ವ್ಯಕ್ತಿಯ ಈ ಅಲ್ಪ ಸಂಕಟಗಳಿಗೆ ಅದು ಯಾವ ಉಪಶಾಮಕ ಪರಿಹಾರವನ್ನೂ ಹೊಂದಿಲ್ಲ, ಆದರೆ, ತನ್ನ ನ್ಯಾಯವಿತರಣೆಯನ್ನೂ ಕರುಣೆಯನ್ನೂ ವಿಶ್ವದ ಅರ್ಧಭಾಗಕ್ಕೆ ಏಕಕಾಲದಲ್ಲಿ ಬಿಸಿಲು ಹರಿಯುವಂತೆ ಹರಡುತ್ತದೆ ಎಂಬ ಹಾಳು ದೃಢನಿಶ್ಚಯದ ಆಘಾತ ಅವಳ ಮೇಲೆರಗಿತು. ಅದರ ಅಪಾರ ವ್ಯಾಪಕತೆಯಿಂದಾಗಿ ಅದು ಇದ್ದೂ ಇಲ್ಲದಂತಾಗಿತ್ತು. ಆದರೆ, ಪ್ರತಿಯೊಂದು ಕುಟೀರದ ಕಿಟಕಿಯ ಮೂಲಕವೂ ಬೆಚ್ಚನೆಯ ಸೂರ್ಯಕಿರಣವು ಹರಿದು ಬರುವಂತೆ, ಪ್ರತಿಯೊಂದು ಪ್ರತ್ಯೇಕ ಆವಶ್ಯಕತೆಗೂ ತಕ್ಕಂತೆ ದೇವರ ಪಾಲನೆ ಹಾಗೂ ಕರುಣೆಗಳ ಒಂದು ಪ್ರೇಮಕಿರಣವು ಬರುತ್ತದೆ ಎಂಬುದನ್ನು ಹೆಪ್ಸಿಬಾ ಕಾಣದಾದಳು.

ಕಡೆಗೆ, ಕ್ಲಿಫರ್ಡನಿಗೆ ತಾನು ಕೊಡಬೇಕಾಗಿದ್ದ ಚಿತ್ರಹಿಂಸೆಯನ್ನು ಮುಂದಕ್ಕೆ ತಳ್ಳಲು ಬೇರೆ ಯಾವ ನೆಪವನ್ನೂ ಕಾಣದೆ, (ಆ ಚಿತ್ರಹಿಂಸೆಯನ್ನು ಕೊಡಲು ಅವಳಿಗೆ ಇಷ್ಟವಿಲ್ಲದಿದ್ದುದೇ ಅವಳು ಕಿಟಕಿಯ ಬಳಿ ಸುತ್ತಾಡುತ್ತಿರುವುದಕ್ಕೂ, ಕಲಾವಿದನನ್ನು ಹುಡುಕಾಡುತ್ತಿದ್ದುದಕ್ಕೂ, ಅವಳ ನಿಷ್ಫಲವಾದ ಪ್ರಾರ್ಥನೆಗೂ ಕೂಡ ನಿಜವಾದ ಕಾರಣವಾಗಿತ್ತು), ಮಹಡಿಯ ಕೆಳಗೆ ನಿಂತು ತಾನು ತಡಮಾಡಿದ್ದಕ್ಕಾಗಿ ಝಂಕಿಸುವ ನ್ಯಾಯಮೂರ್ತಿಯ ಕಠೋರಧ್ವನಿ ಮಹಡಿಯ ಕೆಳಗಿನಿಂದ ಎಲ್ಲಿ ಕೇಳಿಬರುವುದೋ ಎಂದು ಹೆದರುತ್ತ, ಅವಳು– ಆ ಬಿಳಿಚಿಕೊಂಡ ದುಃಖಪೀಡಿತ ಆಕೃತಿ, ಆ ವಿಷಣ್ಣ ಸ್ತ್ರೀಮೂರ್ತಿ– ಬಹುಮಟ್ಟಿಗೆ ಜಡಗಟ್ಟಿಹೋಗಿದ್ದ ಕಾಲುಗಳನ್ನು ಎಳದುಹಾಕುತ್ತ, ತನ್ನ ಸಹೋದರನಿದ್ದ

ಅರಿತು, ನ್ಯಾಯಮೂರ್ತಿ ಮತ್ತು ಹೆಪ್ಸಿಬಾ ಅಂಗಡಿಯಲ್ಲಿ ಮಾತಾಡುತ್ತಾ ನಿಂತಿದ್ದ ವೇಳೆಯಲ್ಲಿ ಮಹಡಿಯ ಮೆಟ್ಟಲುಗಳನ್ನು ನಿಶ್ಯಬ್ದವಾಗಿ ಇಳಿದು ಕೆಳಕ್ಕೆ ಬಂದು, ಹೊರ ಬಾಗಿಲ ಅಗುಳಿಯನ್ನು ಮೆಲ್ಲನೆ ಕಳಚಿ, ಮನೆಯಿಂದ ತಪ್ಪಿಸಿಕೊಂಡು ಬೀದಿಗೆ ಹೊರಟುಹೋಗಿದ್ದಿರಬಹುದೆ? ಈ ಆಲೋಚನೆ ಬಂದು, ಮನೆಯಲ್ಲಿದ್ದಾಗ ಅವನು ಧರಿಸುತ್ತಿದ್ದ ಹಳೆಯ ಮಾದರಿಯ ಉಡುಪು ತೊಟ್ಟ, ನರೆಗೂದಲಿನ ಸುಕ್ಕುಗಟ್ಟಿದ್ದ, ಆದರೂ ಮಗುವಿನಂತೆ ಕಾಣುತ್ತಿದ್ದ ಅವನ ಸ್ವರೂಪವನ್ನು ಕಂಡಂತೆ ತೋರಿತು ಅವಳಿಗೆ; ದುಃಸ್ವಪ್ನವೊಂದರಲ್ಲಿ, ಪ್ರಪಂಚದ ಕಣ್ಣೆಲ್ಲಾ ತನ್ನ ಮೇಲೆಯೇ ಇರುವಾಗ ತಾನು ಹೀಗೆ ಕಾಣುತ್ತೇನೆ ಎಂದು ಸ್ವಪ್ನಕಾಣುವವನು ಊಹಿಸಿಕೊಳ್ಳುವ ಆಕೃತಿಯ ಹಾಗಿತ್ತು ಹೆಪ್ಸಿಬಾ ಕಂಡೆನೆಂದುಕೊಂಡ ಆ ಸ್ವರೂಪ. ತನ್ನ ಹತಭಾಗ್ಯ ಸಹೋದರನ ಈ ಮೂರ್ತಿಯು ಪಟ್ಟಣದಲ್ಲೆಲ್ಲಾ ಪ್ರೇತದಂತೆ ಅಲೆದಾಡುತ್ತಾ ಹೋಗುವುದು; ಎಲ್ಲರ ಕಣ್ಣನ್ನೂ ಆಕರ್ಷಿಸುವುದು ಅದು; ಅದನ್ನು ಕಂಡು ಪ್ರತಿಯೊಬ್ಬರೂ ಆಶ್ಚರ್ಯಪಡುವರು, ಅಸಹ್ಯಪಡುವರು; ಹಗಲು ಹೊತ್ತು ಕಂಡದ್ದರಿಂದ, ಎಲ್ಲರೂ ಹೆಚ್ಚಾಗಿ ಹೆದರಿ ನಡುಗುವರು. ಪರಿಚಯವಿಲ್ಲದ ಚಿಕ್ಕವಯಸ್ಸಿನವರು ಅವನನ್ನು ಕಂಡು ಗೇಲಿ ಮಾಡುವರು; ಹಿಂದೊಮ್ಮೆ ಸುಪರಿಚಿತವಾಗಿದ್ದ ಅವನ ಸ್ವರೂಪಲಕ್ಷಣಗಳನ್ನು ನೆನಪಿಗೆ ತಂದುಕೊಳ್ಳಬಹುದಾದ ಕೆಲಮಂದಿ ಮುದುಕರು ಕಟುವಾದ ತಿರಸ್ಕಾರವನ್ನೂ ಕ್ರೋಧವನ್ನೂ ವ್ಯಕ್ತಪಡಿಸುವರು! ಬೆಳೆದ ಹುಡುಗರ ವಿನೋದಕ್ಕೆ ಕಾರಣನಾಗುವನು ಅವನು– ಬೀದಿಯಲ್ಲಿ ಓಡಾಡುವ ಮಟ್ಟಿಗೆ ಬೆಳೆದ ಆ ಹುಡುಗರಿಗೆ, ಸುಂದರವೂ ಪವಿತ್ರವೂ ಆದ ವಸ್ತುವಿನಲ್ಲಿ ಗೌರವ ಬುದ್ಧಿಯಿರದು, ದುಃಖದ ಪ್ರಸಂಗದಲ್ಲಿ ಕರುಣೆ ಉಕ್ಕದು; ಒಂದು ವೇಳೆ ಸೈತಾನನೇ ತಮ್ಮ ತಂದೆಯಾಗಿದ್ದ ಪಕ್ಷದಲ್ಲಿ ಹೇಗೋ ಹಾಗೆ, ಮಾನವಶರೀರದಲ್ಲಿ ಮೈದೋರಿ ಅದನ್ನು ಪುನೀತಗೊಳಿಸುವ ಪವಿತ್ರಕಾರಕ ದುಃಖಾನುಭೂತಿಯ ಕಲ್ಪನೆಯೇ ಇರುವುದಿಲ್ಲ ಅವಕ್ಕೆ! ಅವರ ಕೆಣಕು ನುಡಿ, ಅವರ ಗಟ್ಟಿಯಾದ ಕೀರಲು ಕೂಗು, ಕ್ರೂರತನದ ನಗು,– ಇವೆಲ್ಲ ಅವನನ್ನು ಚುಚ್ಚುವುವು; ಇವೆಲ್ಲ ಜನರ ಎದುರಿಗೆ ಆಗುವುದರಿಂದ, ಅವು ಅವನ ಮೇಲೆ ಹೊಲಸನ್ನು ಸುರಿದಂತಾಗಿ ಅವನಿಗೆ ಅಪಮಾನವಾಗುವುದು; ಇವು ಯಾವುವೂ ಇಲ್ಲದಿದ್ದರೂ, ಒಂದು ಅವಿಚಾರದ ಮಾತಿನಿಂದಾಗಲಿ ಯಾರೊಬ್ಬರೂ ಅವನ ಮನಸ್ಸಿಗೆ ವೇದನೆಯನ್ನುಂಟುಮಾಡದಿದ್ದರೂ, ವಿಚಿತ್ರವಾದ ಸನ್ನಿವೇಶದಲ್ಲಿ ತಾನು ಸಿಲುಕಿರುವುದೇ ಕಾರಣವಾಗಿ ಅವನ ಬುದ್ಧಿ ಭ್ರಮಣೆಗೊಳ್ಳಬಹುದು; ಪರಿಸ್ಥಿತಿ

ಅವಸರವಸರವಾಗಿ ಒಂದು ಕಿಟಕಿಯ ಬಾಗಿಲನ್ನು ಎತ್ತಿ ತೆರೆದು, ರುಮಾಲುಟೋಪಿ ಧರಿಸಿದ್ದ ತನ್ನ ತೆಳ್ಳನೆಯೊಡಲ ಅರ್ಧಭಾಗವನ್ನೂ ಮುಂದಕ್ಕೆ ಚಾಚಿ, ತನ್ನ ಮಂಜಾದ ಕಣ್ಣಿನಿಂದ ಎಷ್ಟು ಸಾಧ್ಯವೋ ಅಷ್ಟರಮಟ್ಟಿಗೆ ಇಡಿಯ ತೋಟವನ್ನೆಲ್ಲಾ ತಡಕಾಡಿದಳು. ಬೇಸಗೆಮನೆಯ ಒಳಭಾಗವನ್ನೂ ಅಲ್ಲಿದ್ದ ವರ್ತುಲ ಪೀಠವನ್ನೂ ಅವಳು ನೋಡಬಲ್ಲವಳಾಗಿದ್ದಳು; ಮೇಲ್ಛಾವಣಿಯಿಂದ ನೀರು ತೊಟ್ಟಿಕ್ಕಿ ಪೀಠ ತೊಯ್ದಿದ್ದಿತು. ಅಲ್ಲಿ ಯಾರೂ ಇರಲಿಲ್ಲ; ಅಲ್ಲಿನ ಸುತ್ತ ಮುತ್ತಣೆಡೆಯಲ್ಲಿ ಕ್ಲಿಫರ್ಡ್ ಕಂಡುಬರಲಿಲ್ಲ. ಅವನೇನಾದರೂ ಅಲ್ಲಿದ್ದಿದ್ದರೆ, ತೊಯ್ದು ಹೋಗಿದ್ದ ಅಗಲವಾದ ಎಲೆಗಳು ಒಂದರೊಡನೊಂದು ಸೇರಿಕೊಂಡು ಒತ್ತಾಗಿದ್ದ ದೊಡ್ಡ ಎಲೆಗುಂಪಲ ನೆರಳ ಮರೆಯಲ್ಲಿ ಅವಿತುಕೊಳ್ಳಲು ಹೋಗಿದ್ದಿರಬೇಕು (ಒಂದು ಕ್ಷಣದ ಮಟ್ಟಿಗೆ, ಹಾಗಿದ್ದರೂ ಇರಬಹುದೆಂದು ಹೆಪ್ಸಿಬಾ ಊಹಿಸಿದಳು); ಅಲ್ಲಿ, ಒಂದು ಹಳೆಯ ಮರದ ಚೌಕಟ್ಟನ್ನು ಬೇಲಿಗೆ ಓರೆಯಾಗಿ ಒರಗಿಸಿ ಇಟ್ಟಿತ್ತು; ಅದರ ಮೇಲೆ ಕುಂಬಳ ಬಳ್ಳಿಗಳು ಸಿಕ್ಕಾಬಟ್ಟೆ ಹಬ್ಬಿ ಹರಡಿದ್ದುವು. ಅವನು ಅಲ್ಲಿರುವುದೂ ಸಾಧ್ಯವಿರಲಿಲ್ಲ; ಇರಲೂ ಇಲ್ಲ; ಏಕೆಂದರೆ, ಹೆಪ್ಸಿಬಾ ಹಾಗೆ ನೋಡುತ್ತಿದ್ದಾಗ, ಒಂದು ಮುದಿ ಬೆಕ್ಕು ಅದೇ ಎಡೆಯಿಂದ ಕದ್ದು ಹೊರಕ್ಕೆ ಬಂದು, ತೋಟದ ನಡುವೆ ಹಾದುಹೋಯಿತು. ಅದು ಎರಡು ಸಲ ನಿಂತು ಗಾಳಿಯನ್ನು ಮೂಸಿನೋಡಿ, ಆ ಬಳಿಕ ಹೊಸದಾಗಿ ತನ್ನ ದಾರಿಯನ್ನು ದಿವಾನ ಖಾನೆಯ ಕಿಟಕಿಯ ಕಡೆಗೆ ತಿರುಗಿಸಿತು. ಬೆಕ್ಕಿನ ಜಾತಿಗೇ ಸಹಜವಾದ, ಕದ್ದು ಹೊಂಚು ನೋಡುವ ಸ್ವಭಾವದ ಕಾರಣದಿಂದ ಮಾತ್ರವೋ, ಅಥವಾ ಈ ಬೆಕ್ಕಿನ ತಲೆಯಲ್ಲಿ ಸರ್ವಸಾಮಾನ್ಯವಾದ ತುಂಟತನಕ್ಕಿಂತ ಹೆಚ್ಚಿನ ತುಂಟತನದ ಆಲೋಚನೆ ಇದ್ದುದು ಕಂಡುಬಂದಿತೋ, ಅಂತೋ ಈ ವೃದ್ಧ ಮಹಿಳೆ ದಿಕ್ಕುತೋಚದ ಸ್ಥಿತಿಯಲ್ಲಿ ಇದ್ದರೂ ಕೂಡ, ಆ ಪ್ರಾಣಿಯನ್ನು ಆಚೆಗೆ ಓಡಿಸಬೇಕು ಎಂದುಕೊಂಡಳು; ಅದೇ ಪ್ರಕಾರ, ಕಿಟಕಿಯ ಬಳಿಯಿದ್ದ ಒಂದು ಕೋಲನ್ನು ಕೆಳಕ್ಕೆಸೆದಳು. ಸಿಕ್ಕಿಬಿದ್ದ ಕಳ್ಳನ ಹಾಗೆ, ಇಲ್ಲವೆ ಕೊಲೆಪಾತಕನ ಹಾಗೆ, ಬೆಕ್ಕು ಅವಳನ್ನು ದುರಗುಟ್ಟಿಕೊಂಡು ನೋಡಿತು; ಮರುಕ್ಷಣದಲ್ಲಿಯೇ, ಓಟಕಿತ್ತಿತು. ತೋಟದಲ್ಲಿ ಬೇರೆ ಯಾವ ಜೀವಂತ ಪ್ರಾಣಿಯೂ ಗೋಚರವಾಗಲಿಲ್ಲ. ಕೊನೆಮೊದಲಿಲ್ಲದ ಮಳೆಯಿಂದ ಎದೆಗೆಟ್ಟು, ಹುಂಜನೂ ಅದರ ಕುಟುಂಬವರ್ಗವೂ ತಮ್ಮ ಗೂಡನ್ನು ಬಿಟ್ಟು ಹೊರಬಂದಿರಲಿಲ್ಲ; ಅದಿಲ್ಲವೋ, ಸಕಾಲದಲ್ಲಿ ಅದಕ್ಕೆ ಹಿಂದಿರುಗಿ, ಬಹು ಬುದ್ಧಿವಂತಿಕೆಯ ಕೆಲಸ ಮಾಡಿದ್ದುವು. ಹೆಪ್ಸಿಬಾ ಕಿಟಕಿಯನ್ನು ಮುಚ್ಚಿದಳು.

ಆದರೆ, ಕ್ಲಿಫರ್ಡ್ ಎಲ್ಲಿದ್ದನು? ತನ್ನ ದುರ್ದೈವವು ಸನ್ನಿಹಿತವಾಗಿದ್ದುದನ್ನು

ಇವೆಲ್ಲದೆ ಪರಿಣಾಮವಾಗಿ ಕೋಣೆಯಲ್ಲಿ ಹಗಲ ಬೆಳಕೆಂಬುದೇ ಇಲ್ಲವಾಗಿ, ಹೆಪ್ಸಿಬಾಳ ಮಂದವಾದ ದೃಷ್ಟಿ ನ್ಯಾಯಮೂರ್ತಿಯ ಆಕೃತಿಯನ್ನು ಸ್ಪಷ್ಟವಾಗಿ ಗುರುತಿಸಲಾರದೆ ಹೋಯಿತು. ಆದಾಗ್ಯೂ, ನೆಲದ ಮಧ್ಯದೆಡೆಯ ಹತ್ತಿರ, ತನ್ನ ಮುಖವನ್ನು ಸಲ್ಪಮಟ್ಟಿಗೆ ಒಕ್ಕೆಡೆಗೆ ತಿರುಗಿಸಿಕೊಂಡು ಒಂದು ಕಿಟಕಿಯ ಕಡೆ ನೋಡುತ್ತ, ಪಿತ್ರಾರ್ಜಿತವಾಗಿ ಬಂದ ತೋಳುಕುರ್ಚಿಯಲ್ಲಿ ಆತನು ಕುಳಿತಿದ್ದುದನ್ನು ತಾನು ಕಂಡಿದ್ದು ಖಂಡಿತ ಎಂದು ಅವಳು ತಿಳಿದಿದ್ದಳು. ನ್ಯಾಯಮೂರ್ತಿ ಪಿನ್ಚನ್ನನಂತಹರ ನರಮಂಡಲದ ವ್ಯವಸ್ಥೆ ಎಷ್ಟು ಶಾಂತ ಎಂದರೆ, ಅವಳು ಅಲ್ಲಿಂದ ಹೋದಮೇಲೆ ಅವನು ಬಹುಶಃ ಎಲ್ಲೋ ಒಂದು ಸಲಮಾತ್ರ ಅಲುಗಾಡಿದ್ದನಷ್ಟೆ; ಆದರೆ, ತನ್ನ ಮನಃಪ್ರಕೃತಿಯ ಸ್ಥಿರವಾದ ಸಮಾಧಾನಗುಣದಿಂದಾಗಿ, ಆಕಸ್ಮಿಕ ಸಂದರ್ಭವಶಾತ್ ಯಾವ ಸ್ಥಿತಿಯಲ್ಲಿ ಇರಬೇಕಾಗಿ ಒದಗಿಬಂದಿದ್ದಿತೋ ಆ ಸ್ಥಿತಿಯನ್ನು ಉಳಿಸಿ ಕೊಂಡಿದ್ದನು.

ಇತರ ಕೋಣೆಗಳಲ್ಲಿ ಹುಡುಕಲೋಸುಗ ಹೆಪ್ಸಿಬಾ ದಿವಾನಖಾನೆಯ ಬಾಗಿಲಿನಿಂದ ತಿರುಗಿದಾಗ, "ಜಫ್ರೀ, ನಾನು ಹೇಳಿದ್ದು ಕೇಳಿತೆ, ನನ್ನ ಸಹೋದರ ಅವನ ಕೋಣೆಯಲ್ಲಿಲ್ಲ! ಅವನನ್ನು ಹುಡುಕಲು ನೀನು ನನಗೆ ಸಹಾಯ ಮಾಡಬೇಕು, ತಿಳಿಯಿತೆ!" ಎಂದು ತಾಳ್ಮೆಗೆಟ್ಟು ಕೂಗಿಕೊಂಡಳು.

ಆದರೆ, ಒಬ್ಬ ಭ್ರಾಂತಳಾದ ಹೆಂಗಸು ಹುಯಿಲೆಬ್ಬಿಸಿದಳೆಂದು, ನ್ಯಾಯಮೂರ್ತಿ ಪಿನ್ಚನ್ ತನ್ನ ಶೀಲಸ್ವಭಾವದ ಘನತೆಗಾಗಲಿ ತನ್ನ ವಿಶಾಲವಾದ ವೈಯಕ್ತಿಕ ಸ್ಥಿತಿಗತಿಗಾಗಲಿ ಯುಕ್ತವಲ್ಲದ ಅವಸರದಿಂದ ಬೆಚ್ಚಿ ಬೆದರಿ ತನ್ನ ಆರಾಮಕುರ್ಚಿಯನ್ನು ಬಿಟ್ಟು ಏಳುವಂತಹ ಮನುಷ್ಯನಾಗಿರಲಿಲ್ಲ. ಆದರೂ, ಈ ವಿಚಾರದಲ್ಲಿ ತಾನು ಸ್ವತಃ ಆಸಕ್ತಿಹೊಂದಿದ್ದುದನ್ನು ಲಕ್ಷಿಸಿ, ಇನ್ನು ತುಸು ಹೆಚ್ಚು ಚಟುವಟಿಕೆಯಿಂದ ವರ್ತಿಸಬಹುದಾಗಿತ್ತು.

ಹೆಪ್ಸಿಬಾ ಬೇರೆಯ ಕಡೆಗಳಲ್ಲಿ ವ್ಯರ್ಥವಾಗಿ ಹುಡುಕಾಡಿದ ಮೇಲೆ, ದಿವಾನಖಾನೆಯ ಬಾಗಿಲಬಳಿ ಮತ್ತೆ ಬಂದಿದ್ದಳು; ಆಗ "ಜಫ್ರೀ ಪಿನ್ಚನ್, ನಾನು ಹೇಳಿದ್ದು ನಿನಗೆ ಕೇಳಿಸಿತೆ? ಕ್ಲಿಫರ್ಡ್ ಹೊರಟುಹೋಗಿದ್ದಾನೆ!" ಎಂದು ಅವಳು ಚೀರಿದಳು.

ಆ ಕ್ಷಣಕ್ಕೆ ಸರಿಯಾಗಿ, ಒಳಗಿನಿಂದ ಸ್ವಯಂ ಕ್ಲಿಫರ್ಡನೇ ಬಂದು, ದಿವಾನಖಾನೆಯ ಹೊಸಿಲ ಮೇಲೆ ನಿಂತಿದ್ದನು! ಅವನ ಮುಖವು ವಿಚಿತ್ರ ರೀತಿಯಲ್ಲಿ ಬಿಳಿಚಿಕೊಂಡಿತ್ತು; ಹೆಣದ ಮುಖದಹಾಗೆ ಅದು ಎಷ್ಟು

ಹೀಗಿರಲು, ಕ್ಲಿಫರ್ಡ್ ಅತಿರೇಕವಾಗಿ ವರ್ತಿಸತೊಡಗಿ, ಅದನ್ನು ಮುಚ್ಚು ಎಂದು ಖಂಡಿತವಾಗಿ ಹೇಳಬಹುದಾದರೆ, ಅದರಲ್ಲಿ ಆಶ್ಚರ್ಯವೇನು? ಈ ರೀತಿಯಲ್ಲಿ, ನ್ಯಾಯಮೂರ್ತಿ ಪಿನ್ಚನ್ನನ ರಾಕ್ಷಸೀ ಯೋಜನೆಯು ಕಾರ್ಯಗತವಾಗಿ ಅವನ ಕೈಸಾರುವುದು!

ಅನಂತರ, ಪಟ್ಟಣವನ್ನೆಲ್ಲಾ ಬಹುಮಟ್ಟಿಗೆ ನೀರು ಸುತ್ತುಗಟ್ಟಿರುವುದನ್ನು ಕುರಿತು ಹೆಪ್ಸಿಬಾ ಆಲೋಚಿಸಿದಳು. ಬಂದರು ಕಟ್ಟೆಗಳು ಬಂದರಿನ ಮಧ್ಯಭಾಗದ ಕಡೆಗೆ ಚಾಚಿಕೊಂಡಿದ್ದುವು; ಈ ಕೆಟ್ಟ ಹವದಲ್ಲಿ, ವರ್ತಕರು, ಕೂಲಿಕಾರರು, ನಾವಿಕರು ಮುಂತಾದವರ ಸರ್ವಸಾಧಾರಣ ನೆರವಿ ಎಂದಿನಂತೆ ನೆರೆಯದೆ ಅವೆಲ್ಲಾ ಜನಶೂನ್ಯವಾಗಿದ್ದುವು; ಮಂಜುಕವಿದಂತಿದ್ದ ಪ್ರತಿಯೊಂದು ಬಂದರು ಕಟ್ಟೆಯ ಉದ್ದಕ್ಕೂ ನೌಕೆಗಳನ್ನು ಕಟ್ಟಿ ಹಾಕಿದ್ದು, ಅದು ನಿರ್ಜನ ಪ್ರದೇಶವಾಗಿತ್ತು. ಅವಳ ಸಹೋದರನ ಗುರಿಗಾಣದ ಹೆಜ್ಜೆಗಳು ದಾರಿಬಿಟ್ಟು ಅವನನ್ನು ಈ ಕಡೆಗೆ ಎಳೆದುಕೊಂಡು ಬಂದು, ಅವನು ಒಂದು ಕ್ಷಣ ಅಲ್ಲಿನ ಅಗಾಧವಾದ ಕಾಳಿಮವಾದ ಭರತದ ನೀರಿನ ಮೇಲೆ ಬಗ್ಗಿ ನೋಡಿದರೆ ಸಾಕು,– ತನಗೆ ಸುಲಭವಾಗಿ ಎಟುಕುವ ಖಂಡಿತವಾದ ಆಶ್ರಯಸ್ಥಾನ ಇಲ್ಲಿದೆ, ತಾನು ಮುಂದಕ್ಕೆ ಕೇವಲ ಒಂದು ಹೆಜ್ಜೆ ಇಟ್ಟರೂ ಸಾಕು, ಅಥವಾ ಲೇಶಮಾತ್ರ ತನ್ನ ದೇಹ ತೂಕ ತಪ್ಪಿದರೂ ಸರಿಯೆ ತಾನು ಎಂದೆಂದಿಗೂ ತನ್ನ ಬಂಧುವಿನ ಹಿಡಿತದಿಂದ ತಪ್ಪಿಸಿಕೊಂಡು ದೂರವಿರಬಹುದು ಎಂದು ಅವನು ಯೋಚಿಸದಿರುವನೆ? ಆಹಾ, ಎಂತಹ ಪ್ರಲೋಭನೆ! ತನ್ನ ದುಃಖಭಾರವನ್ನೆ ಒಂದು ರಕ್ಷಣೆಯಾಗಿ ಕಲ್ಪಿಸಿಕೊಳ್ಳುವುದು! ತನ್ನ ಮೇಲೆ ಅದರ ಭಾರ ಕವಿದಿರಲು, ಮುಳುಗುವುದು; ಮತ್ತೆ ಎಂದೆಂದಿಗೂ ಮೇಲೇಳದಿರುವುದು!

ಈ ಕಡೆಯ ಕಲ್ಪನೆಯ ಘೋರಸ್ವರೂಪ ಹೆಪ್ಸಿಬಾಳಿಗೆ ಅಸಹನೀಯವಾಗಿ ಪರಿಣಮಿಸಿತು. ಜಫ್ರೀ ಪಿನ್ಚನ್ ಕೂಡ ಅವಳಿಗೀಗ ನೆರವು ನೀಡಬೇಕು! ಅವಳು ಅವಸರವಸರವಾಗಿ, ಉದ್ದಕ್ಕೂ ಚೀರುತ್ತಾ, ಮಹಡಿ ಮೆಟ್ಟಲುಗಳನ್ನಿಳಿದಳು.

"ಕ್ಲಿಫರ್ಡ್ ಹೊರಟುಹೋಗಿದ್ದಾನೆ! ನನ್ನ ಸಹೋದರ ಎಲ್ಲಿಯೂ ಕಣ್ಣಿಗೆ ಬೀಳುವುದಿಲ್ಲ! ಜಫ್ರೀ ಪಿನ್ಚನ್, ನಿನ್ನ ಸಹಾಯ ಬೇಕು! ಅವನಿಗೆ ಏನೋ ಕೇಡು ಸಂಭವಿಸಲಿದೆ! ಎಂದು ಅವಳು ಕೂಗಿಕೊಂಡಳು.

ಅವಳು ದಿವಾನಖಾನೆಯ ಬಾಗಿಲನ್ನು ಧಡಾರನೆ ತೆರೆದಳು. ಆದರೆ, ಕಿಟಕಿಗಳಿಗೆ ಅಡ್ಡನಾಗಿ ಬಿದ್ದಿದ್ದ ಕೊಂಬೆಗಳು ನೆರಳು, ಹೊಗೆಯಿಂದ ಕಪ್ಪಿಟ್ಟ ಒಳಮಾಳಿಗೆ, ಗೋಡೆಗಳಿಗೆ ಹದ್ದಿಸಿದ ಕಪ್ಪು ಓಕ್‌ಮರದ ಹಲಗೆ ಸೇರ್ವೆ–

ಬಹುದು, ನಗಬಹುದು, ಆಟವಾಡಬಹುದು, ನಮಗೆ ಇಷ್ಟಬಂದದ್ದನ್ನು ಮಾಡಬಹುದು! ನಮ್ಮ ಮೇಲಿನ ಭಾರ ತೊಲಗಿದೆ, ಹೆಪ್ಸಿಬಾ! ಆಯಾಸದಿಂದ ತುಂಬಿದ ಈ ಹಳೆಯ ಜಗತ್ತಿನಿಂದಲೇ ಅದು ತೊಲಗಿಹೋಗಿದೆ; ಆ ಪುಟ್ಟ ಫೀಬೆಯಷ್ಟೆ ನಾವೂ ಇನ್ನು ಮೇಲೆ ಹಗುರವಾದ ಮನಸ್ಸಿನಿಂದ ಇರಬಹುದು!"

ತನ್ನ ಮಾತಿಗೆ ಅನುಸಾರವಾಗಿ, ಅವನು ನಗತೊಡಗಿದನು: ದಿವಾನಖಾನೆಯೊಳಗಿದ್ದ ಆ ವಸ್ತುವಿನ ಕಡೆಗೆ ಬೆರಳುಮಾಡಿ ಇನ್ನೂ ತೋರಿಸುತ್ತಲೇ ಇದ್ದನು; ಅದು ಹೆಪ್ಸಿಬಾಳಿಗೆ ಮಾತ್ರ ಅಗೋಚರವಾಗಿತ್ತು. ಅವಳಿಗೆ ಇದ್ದಕ್ಕಿದ್ದ ಹಾಗೆಯೇ ಯಾವುದೋ ಘೋರವಾದ ಕಲ್ಪನೆಯ ಸುಳಿವು ಸ್ಫುರಿಸಿ, ಅವಳನ್ನು ಆಕ್ರಮಿಸಿತು. ಅವಳು ಕ್ಲಿಫರ್ಡನನ್ನು ನೂಕಿಕೊಂಡು ನುಗ್ಗಿ ಹೋಗಿ, ಕೋಣೆಯೊಳಗೆ ಕಣ್ಮರೆಯಾದಳು; ಆದರೆ, ಉಸಿರು ಕಟ್ಟುವ ಹಾಗೆ ಚೀತ್ಕಾರಮಾಡಿ, ಬಹುಮಟ್ಟಿಗೆ ಕೂಡಲೆಯೆ ಹಿಂದಿರುಗಿದಳು. ಬೆದರುನೋಟದಿಂದ ಪ್ರಶ್ನಿಸುವಂತೆ ಅವಳು ತನ್ನ ಸಹೋದರನನ್ನು ದೃಷ್ಟಿಸಿ ನೋಡಿದಳು; ಅಡಿಯಿಂದ ಮುಡಿಯವರೆಗೆ ಅವನ ದೇಹವೆಲ್ಲ ಗಡಗಡ ನಡುಗುತ್ತಿದ್ದುದನ್ನು ಅವಳು ಕಂಡಳು; ಭಾವಾವೇಶದ ಅಥವಾ ಭಯಪೂರ್ಣವಾದ ಈ ಪ್ರಕ್ಷುಬ್ಧ ಸನ್ನಿವೇಶದಲ್ಲಿಯೂ ಅವನ ಹುಚ್ಚುನಗೆ ಇನ್ನೂ ಮಿನುಗುತ್ತಿತ್ತು.

"ಅಯ್ಯೋ ದೇವರೆ! ಇನ್ನು ನಮ್ಮ ಗತಿ ಏನು? ಎಂದು ಹೆಪ್ಸಿಬಾ ಏದುತ್ತ ನುಡಿದಳು.

"ಬಂದುಬಿಡು! ನಾವು ಇಲ್ಲಿ ಇರಬೇಕಾದ್ದಕ್ಕಿಂತ ಹೆಚ್ಚುಕಾಲ ಇದ್ದೇವೆ! ಈ ಹಳೆಯ ಮನೆಯನ್ನು ನಮ್ಮ ಸೋದರಸಂಬಂಧಿ ಜಫ್ರಿಗೇ ಬಿಟ್ಟುಕೊಡೋಣ! ಅವನದನ್ನು ಜೋಪಾನವಾಗಿ ನೋಡಿಕೊಳ್ಳುತ್ತಾನೆ!" ಎಂದು ಕ್ಲಿಫರ್ಡ್ ಶೀಘ್ರ ನಿರ್ಧಾರದ ಧ್ವನಿಯಲ್ಲಿ ನುಡಿದನು; ಇದು ಅವನಿಗೆ ಅಭ್ಯಾಸವಾಗಿದ್ದ ಪರಿಯಾಗಿರಲಿಲ್ಲ.

ಕ್ಲಿಫರ್ಡ್ ಒಂದು ಕವುದಿಯನ್ನು ಧರಿಸಿದ್ದನೆಂಬುದನ್ನು ಹೆಪ್ಸಿಬಾ ಈಗ ಗಮನಿಸಿದಳು; ಅದು ಬಹಳ ಹಳೆಯಕಾಲದ್ದು; ಪೂರ್ವದಿಂದ ಬೀಳುತ್ತಿದ್ದ ಈಗಿನ ಬಿರುಗಾಳಿಮಳೆಯ ದಿನಗಳಲ್ಲಿ ಅವನು ಅದನ್ನು ಯಾವಾಗಲೂ ಮೈಮೇಲೆ ಕವಿದುಕೊಳ್ಳುತ್ತಿದ್ದನು. ಅವನು ತನ್ನ ಕೈಯಿಂದ ಕರೆಯುವ ಸಂಜ್ಞೆ ಮಾಡಿ, ಅವಳು ತನ್ನನ್ನು ಎಷ್ಟರಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲವಳಾಗಿದ್ದಳೋ ಅಷ್ಟರಮಟ್ಟಿಗೆ, ತಾವಿಬ್ಬರೂ ಒಟ್ಟಿಗೆ ಮನೆಯನ್ನು ಬಿಟ್ಟು ಹೊರಡಬೇಕಾದ್ದು

ಬಿಳಿಚಿಕೊಂಡಿತ್ತೆಂದರೆ, ಆ ನಡುವೆಯ ದಾರಿಯ ಮಿನುಗು ಬೆಳಕಿನ ಮಬ್ಬುಗತ್ತಲೆಯ ಅಸ್ಪಷ್ಟತೆಯಲ್ಲಿ, ತಮ್ಮ ಮೇಲೆ ಮಾತ್ರ ಯಾವುದೋ ಬೆಳಕು ಬಿದ್ದಿದೆಯೇನೋ ಎಂಬಂತೆ ಹೆಪ್ಸಿಬಾ ಅವನ ಮುಖಲಕ್ಷಣಗಳನ್ನು ಕಾಣಬಲ್ಲವಳಾಗಿದ್ದಳು. ಅವುಗಳ ಸ್ಪಷ್ಟವಾದ ಹಾಗೂ ಹುಚ್ಚು ಹುಚ್ಚಾಗಿ ಕಾಣುವ ಭಾವ ಕೂಡ ಅದೇ ರೀತಿ ಅವುಗಳನ್ನು ಬೆಳಗಲು ಸಾಕಾಗಿತ್ತೆಂಬಂತೆ ಕಂಡಿತು; ಆ ಭಾವದಲ್ಲಿ ತಿರಸ್ಕಾರವೂ ಅಪಹಾಸ್ಯವೂ ಕಂಡುಬರುತ್ತಿದ್ದುವು; ಅವನ ಅಂಗಭಂಗಿಗಳು ಕೂಡ ಅದೇ ಭಾವಗಳನ್ನು ಸೂಚಿಸುತ್ತಿದ್ದುವು. ಕ್ಲಿಫರ್ಡ್ ಹೊಸಿಲ ಮೇಲೆ ಅರ್ಧ ಹಿಂದಕ್ಕೆ ತಿರುಗಿಕೊಂಡು ನಿಂತಿದ್ದಾಗ, ಅವನು ದಿವಾನಖಾನೆಯ ಒಳಗಡೆಗೆ ಬೆರಳನ್ನು ತೋರಿ, ಅದನ್ನು ನಿಧಾನವಾಗಿ ಅಲುಗಿಸಿದನು; ಅದನ್ನು ನೋಡಿದರೆ, ಹೆಪ್ಸಿಬಾ ಒಬ್ಬಳನ್ನು ಮಾತ್ರವಲ್ಲ, ಇಡಿಯ ಪ್ರಪಂಚವನ್ನೇ ಯಾವುದೋ ಒಂದು ಊಹಿಸಲಾಗದಷ್ಟು ಹಾಸ್ಯಾಸ್ಪದವಾದ ವಸ್ತುವನ್ನು ನಿಟ್ಟಿಸಿನೋಡಲು ಕರೆಯುವಂತೆ ಕಾಣುತ್ತಿತು. ಅಕಾಲಿಕವೂ ಅತಿರೇಕದ್ದೂ ಆದ ಆ ಕಾರ್ಯದ ಜೊತೆಗೆ ಸಂತೋಷಸೂಚಕವಾದ ನೋಟವು ಕೂಡಿಕೊಂಡಿತ್ತು; ಬೇರೆಯ ಬಗೆಯ ಯಾವ ಭಾವೋದ್ರೇಕವೂ ಆ ನೋಟದಲ್ಲಿ ಕಂಡುಬರುತ್ತಿರಲಿಲ್ಲ. ಇವು ಎರಡೂ ಕೂಡಿ, ತನ್ನ ನಿರ್ದಾಕ್ಷಿಣ್ಯದ ಬಂಧುವಿನ ಕೆಟ್ಟ ಭೇಟಿ ತನ್ನ ಸಹೋದರನಿಗೆ ಸಂಪೂರ್ಣವಾಗಿ ಹುಚ್ಚು ಹಿಡಿಯುವಂತೆ ಮಾಡಿತ್ತು ಎಂದು ಹೆಪ್ಸಿಬಾ ದಿಗಿಲುಗೊಳ್ಳಲು ಕಾರಣವಾಗಿತ್ತು. ಅಲ್ಲದೆ, ಕ್ಲಿಫರ್ಡನಲ್ಲಿ ಬುದ್ಧಿ ಭ್ರಂಶದ ಈ ಚಿಹ್ನೆಗಳು ತಲೆದೋರುತ್ತಿದ್ದಾಗ ನ್ಯಾಯಮೂರ್ತಿ ಪಿನ್ಚನ್ನನು ಅವನನ್ನು ಚತುರತೆಯಿಂದ ಪರೀಕ್ಷಿಸಿ ನೋಡುತ್ತಿದ್ದನು ಎಂದು ಊಹಿಸುವುದರ ಹೊರತಾಗಿ ನ್ಯಾಯಮೂರ್ತಿಯ ಶಾಂತ ಮನೋಭಾವಕ್ಕೆ ಬೇರೆಯ ಕಾರಣವನ್ನು ಅವಳು ಕೊಡಲಾರದವಳಾಗಿದ್ದಳು.

"ಸುಮ್ಮನಿರು, ಕ್ಲಿಫರ್ಡ್!" ಎಂದು, ಎಚ್ಚರಿಕೆಯನ್ನು ಮನದಟ್ಟಾಗುವಂತೆ ಸೂಚಿಸುವುದಕ್ಕಾಗಿ ತನ್ನ ಕೈಯನ್ನು ಮೇಲೆತ್ತಿ, ಪಿಸುಮಾತಿನಲ್ಲಿ ನುಡಿದಳು: "ಓ, ಶಬ್ದ ಮಾಡದೆ ಸುಮ್ಮನಿರು, ಇಲ್ಲದಿದ್ದರೆ ದೇವರಾಣೆ!"

"ಅವನು ನಿಶ್ಯಬ್ದವಾಗಿರಲಿ! ನಿಶ್ಯಬ್ದವಾಗಿರದೆ ಅವನು ಬೇರೆ ಏನು ತಾನೆ ಮಾಡಿಯಾನು?" ಎಂದು ತಾನು ಅದೇ ತಾನೆ ಬಿಟ್ಟುಬಂದಿದ್ದ ಕೋಣೆಯ ಕಡೆಗೆ ಕೈಮಾಡಿ ತೋರಿಸುತ್ತ ಮೊದಲಿಗಿಂತ ಇನ್ನೂ ಹೆಚ್ಚು ಹುಚ್ಚು ಹುಚ್ಚಾಗಿ ಅಂಗಚೇಷ್ಟೆ ಮಾಡುತ್ತ, ಕ್ಲಿಫರ್ಡ್ ಉತ್ತರಕೊಟ್ಟನು: "ಹೆಪ್ಸಿಬಾ, ಇನ್ನು ನಮ್ಮ ಮಟ್ಟಿಗೆ ಹೇಳುವುದಾದರೆ, ನಾವು ಈಗ ಕುಣಿದಾಡಬಹುದು– ಹಾಡ

ಎಚ್ಚರಗೊಳ್ಳಲಿಲ್ಲ, ತಲೆತಿರುಗಿಸುವಂತಹ ಅಸಹನೀಯವಾದ ಇನ್ನೂ ಎತ್ತರವಾದ ಮಟ್ಟದಲ್ಲಿ ಬವಣೆಗೊಂಡ ತನ್ನ ಚೈತನ್ಯ ಆ ಕ್ಲೇಶದ ತೊಡಕಿನಿಂದ ಬಿಡಿಸಿಕೊಂಡು ಬಂದು, ನಿಜವಾಗಿ ಏನೂ ಸಂಭವಿಸಲಿಲ್ಲವೆಂಬ ಅರಿವನ್ನು ತನಗೇಕೆ ತಂದುಕೊಡಲಿಲ್ಲ– ಎಂದು ಅವಳು ಆಶ್ಚರ್ಯಪಡತೊಡಗಿದ್ದು ನಿಜ. ಅದು ನಿಜವಾಗಿರಲಿಲ್ಲ, ಅದು ಸರಿಯೆ; ಪೂರ್ವದ ಗಾಳಿ ಬೀಸುವ ಇಂತಹ ಕರಾಳದಿನ ಇನ್ನೂ ತೊಡಗಿರಲಿಲ್ಲ; ನ್ಯಾಯಮೂರ್ತಿ ಪಿನ್ಚನ್ ತನ್ನೊಡನೆ ಮಾತುಕತೆಯಾಡಿರಲಿಲ್ಲ; ಕ್ಲಿಫರ್ಡ್ ನಕ್ಕಿರಲಿಲ್ಲ, ಕೈತೋರಿ ತನ್ನನ್ನು ಕರೆದೊಯ್ದಿರಲಿಲ್ಲ; ಒಂಟಿಯಾಗಿ ನಿದ್ರಿಸುವವರು ಅನುಭವಿಸುವಂತೆ, ಮುಂಜಾನೆಯ ಕನಸಿನಲ್ಲಿ ನಿಷ್ಕಾರಣವಾದ ಅಪಾರ ವ್ಯಥೆಗೆ ಅವಳು ಗುರಿಯಾಗಿದ್ದಳು, ಅಷ್ಟೆ.

"ಇನ್ನೇನು– ಇನ್ನೇನು– ನಾನು ಖಂಡಿತ ಎಚ್ಚರಗೊಳ್ಳುವೆ! ಅದನ್ನು ಇನ್ನು ಮುಂದೆ ನಾನು ಸಹಿಸಲಾರೆ! ನಾನೀಗ ಎಚ್ಚರಗೊಳ್ಳಲೇಬೇಕು" ಎಂದು, ತನ್ನ ಸಣ್ಣ ಪುಟ್ಟ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾ ಹೆಪ್ಸಿಬಾ ಆಲೋಚಿಸಿದಳು.

ಆದರೆ ಅದು ಬರಲಿಲ್ಲ, ಆ ಎಚ್ಚರದ ಗಳಿಗೆ! ಅವರು ಮನೆಯನ್ನು ಬಿಟ್ಟು ಹೊರಡುವುದಕ್ಕೆ ಮುನ್ನ ಕ್ಲಿಫರ್ಡ್ ದಿವಾನಖಾನೆಯ ಬಾಗಿಲಬಳಿಗೆ ಕಾಣದಂತೆ ಹೋಗಿ, ಕೋಣೆಯ ಏಕೈಕ ನಿವಾಸಿಯಾಗಿದ್ದಾತನಿಗೆ ಬೀಳ್ಕೊಳ್ಳುವ ವಂದನೆಯನ್ನು ಸಲ್ಲಿಸಿದಾಗ ಕೂಡ ಆ ಗಳಿಗೆ ಬರಲಿಲ್ಲ.

"ಆ ಮುದುಕನ ಆಕಾರ ಎಷ್ಟು ವಿಚಿತ್ರವಾಗಿ ಕಾಣುತ್ತಿದೆ ಈಗ!" ಎಂದು ಅವನು ಹೆಪ್ಸಿಬಾಳಿಗೆ ಕಿವಿಮಾತಿನಲ್ಲಿ ಹೇಳಿದನು: "ಅವನು ನನ್ನನ್ನು ಸಂಪೂರ್ಣವಾಗಿ ತನ್ನ ಕೈಕೆಳಗೆ ಇಟ್ಟುಕೊಂಡಿದ್ದೇನೆ ಎಂದು ಭಾವಿಸಿದಾಗಲೇ ಹೀಗಾಗಬೇಕೆ! ಬಾ, ಬಾ; ಜಾಗ್ರತೆ ಮಾಡು; ಇಲ್ಲದೆ ಹೋದರೆ ಅವನು, ಕ್ರೈಸ್ತನನ್ನೂ ಆಶಾಪೂರ್ಣನನ್ನೂ ಬೆಂಬತ್ತಿದ ನಿರಾಶಾ ದೈತ್ಯನಂತೆ, ನಮ್ಮನ್ನು ಹಿಡಿದುಬಿಡುವನು!"

ಅವರು ಬೀದಿಯನ್ನು ಸೇರಿದಾಗ, ಮುಂಬಾಗಿಲ ಕಂಬಗಳಲ್ಲಿ ಒಂದರ ಮೇಲಿದ್ದ ಯಾವುದೋ ಒಂದರ ಕಡೆಗೆ ಕ್ಲಿಫರ್ಡ್ ಹೆಪ್ಸಿಬಾಳ ಗಮನವನ್ನು ಸೆಳೆದನು. ಅದು ಅವನ ಹೆಸರಿನ ಮೊದಲಕ್ಷರಗಳ ಬರಹ; ಅವನಿಗೆ ವಿಶಿಷ್ಟವಾಗಿದ್ದ ಅಕ್ಷರಗಳ ಮಾಟದ ಸೊಗಸಿನಿಂದ ಅವನು ಅದನ್ನು ತಾನು ಹುಡುಗನಾಗಿದ್ದಾಗ ಅಲ್ಲಿ ಕೊರೆದಿದ್ದನು. ನ್ಯಾಯಮೂರ್ತಿ ಪಿನ್ಚನ್ನನು ತನ್ನ ಪೂರ್ವಿಕರ ಹಳೆಯ ಮನೆಯಲ್ಲಿ ತನ್ನ ಪಾಡಿಗೆ ತಾನು ಒಂಟಿಯಾಗಿ ಕುಳಿತಿರಲು ಅವನನ್ನು ಬಿಟ್ಟು ಬಿಟ್ಟು, ಅಕ್ಕನೂ ತಮ್ಮನೂ ಹೊರಟುಹೋಗಿದ್ದರು; ಅವನೀಗ ಭಾರವಾಗಿ

ಅಗತ್ಯ ಎಂದು ತನ್ನ ಉದ್ದೇಶವನ್ನು ಅವಳಿಗೆ ತಿಳಿಯಪಡಿಸಿದನು. ನಿಜವಾದ ಶೀಲಶಕ್ತಿ ಸಾಲದ ವ್ಯಕ್ತಿಗಳ ಬದುಕಿನಲ್ಲಿ ಅವ್ಯವಸ್ಥೆಯ, ದಿಕ್ಕುಗಾಣದ, ಅಥವಾ ಅಮಲೇರಿದಂತೆ ಕಾಣುವ ಗಳಿಗೆಗಳು– ಆದರೆ, ಈ ಗಳಿಗೆಗಳಲ್ಲಿ ಇಂಥವರನ್ನು ಅವರ ಪಾಡಿಗೆ ಅವರನ್ನು ಬಿಟ್ಟು ಬಿಟ್ಟರೆ, ಅವರು ಗೊತ್ತು ಗುರಿಯಿಲ್ಲದೆ ಉದ್ದಕ್ಕೂ ತತ್ತರಿಸುತ್ತಾ ನಡೆಯುತ್ತಾರೆ, ಇಲ್ಲವೋ, ಕಡೆಗೆ ಒಂದು ಮಗುವಿನದಾದರೂ ಸರಿಯೆ, ತಮಗೆ ದೊರೆಯಬಹುದಾದ ಮಾರ್ಗದರ್ಶನವನ್ನು ತಪ್ಪದೆ ಅನುಸರಿಸುತ್ತಾ ಸಾಗುತ್ತಾರೆ. ಅದು ಎಷ್ಟೇ ಅತಿರೇಕದ್ದಾಗಿರಲಿ ಇಲ್ಲವೇ ಹುಚ್ಚು ಕಲ್ಪನೆಯಾಗಿರಲಿ, ಒಂದು ಧ್ಯೇಯ ಕಂಡರೆ ಅದು ಅವರ ಪಾಲಿಗೆ ದೈವಾನುಗ್ರಹ. ಹೆಪ್ಸಿಬಾ ಈ ಘಟ್ಟಕ್ಕೆ ಬಂದು ಮುಟ್ಟಿದ್ದಳು. ಕಾರ್ಯದಲ್ಲಿ ತೊಡಗುವ ಅಥವಾ ಹೊಣೆ ಹೊತ್ತುಕೊಳ್ಳುವ ಅಭ್ಯಾಸವಿರಲಿಲ್ಲ ಅವಳಿಗೆ; ಜೊತೆಗೆ, ತಾನು ಕಂಡದ್ದರ ಬಗೆಗೆ ತುಂಬಾ ಭೀತಿ ಬೇರೆ; ಅದು ಹೇಗೆ ಸಮನಿಸಿತು ಎಂದು ವಿಚಾರಿಸುವುದಕ್ಕಾಗಲಿ, ಕಡೆಗೆ ಊಹಿಸುವುದಕ್ಕಾಗಲಿ, ಹೆದರಿಕೆ ಒಂದು ಕಡೆ; ತನ್ನ ಸಹೋದರನನ್ನು ಬೆನ್ನಟ್ಟಿ ಬರುತ್ತಿರುವಂತೆ ಕಂಡ ವಿಧಿವಿಪಾಕದ ಬಗೆಗೆ ದಿಗಿಲು ಇನ್ನೊಂದು ಕಡೆ; ಇದೆಲ್ಲವನ್ನೂ ಮೀರಿಸಿ– ಸ್ಪಷ್ಟವಾಗಿ ವಿಚಾರ ಮಾಡುವ ಸಾಧ್ಯತೆಯನ್ನು ಅಳಿಸಿಬಿಟ್ಟು, ಮನೆಯನ್ನೆಲ್ಲಾ ಹೆಣದ ನಾತದಿಂದ ತುಂಬಿದಂತಿದ್ದ ಮಬ್ಬು ಮಬ್ಬಾದ ದಟ್ಟವಾದ ಉಸಿರುಕಟ್ಟಿಸುವ ಭೀಕರ ವಾತಾವರಣದಿಂದ ಅವಳಿಗುಂಟಾದ ನಿಬ್ಬೆರಗಿನ ಮಂಕು: ಈ ಪರಿಸ್ಥಿತಿಯಲ್ಲಿ, ಮರುಪ್ರಶ್ನೆಯಿಲ್ಲದೆ, ಆ ಕೂಡಲೆ ಅವಳು ಕ್ಲಿಫರ್ಡ್ ವ್ಯಕ್ತಪಡಿಸಿದ ಇಚ್ಛೆಗೆ ತಲೆಬಾಗಿದಳು. ಅವಳ ಮಟ್ಟಿಗೆ ಹೇಳುವುದಾದರೆ, ಸಂಕಲ್ಪ ಶಕ್ತಿ ಸುಪ್ತವಾಗಿರುವ ಸ್ವಪ್ನಾವಸ್ಥೆಯಲ್ಲಿನ ವ್ಯಕ್ತಿಯಂತಿದ್ದಳು ಅವಳು. ಕ್ಲಿಫರ್ಡನಿಗೆ ಸಾಮಾನ್ಯವಾಗಿ ಈ ಶಕ್ತಿಯಿರಲೇ ಇಲ್ಲ; ಈ ವಿಷಮಘಟ್ಟದ ತುಯ್ತದಲ್ಲಿ ಅವನದನ್ನು ದೊರಕಿಸಿಕೊಂಡಿದ್ದನು.

"ಯಾಕೆ ಅಷ್ಟೊಂದು ತಡಮಾಡುತ್ತಿದ್ದೀಯೆ? ನಿನ್ನ ಮೇಲಂಗಿಯನ್ನೂ ತಲೆಮುಸುಕನ್ನೂ, ಅಥವಾ ನಿನಗೆ ಇಷ್ಟಬಂದುದನ್ನು, ಧರಿಸಿಕೋ! ಏನಾದರೂ ಅಷ್ಟೆ; ಅಯ್ಯೋ, ಹೆಪ್ಸಿಬಾ, ನೀನು ಚೆಲುವಾಗಿ, ಠೀಕಾಗಿ, ಕಾಣುವುದಿಲ್ಲ. ನಿನ್ನ ಹಣದ ಚೀಲ ತೆಗೆದುಕೊ, ಅದರಲ್ಲಿ ಹಣ ಇರಲಿ! ಹೊರಟು ಬಂದುಬಿಡು" ಎಂದು ಕರ್ಕಶವಾಗಿ ಕೂಗಿಕೊಂಡನು.

ಬೇರೇನನ್ನೂ ಮಾಡಬೇಕಾದ್ದಿಲ್ಲ ಅಥವಾ ಯೋಚಿಸಬೇಕಾದ್ದಿಲ್ಲ, ಎಂಬಂತೆ, ಅವನು ಕೊಟ್ಟ ಸೂಚನೆಗಳನ್ನು ಅವಳು ಪಾಲಿಸಿದಳು. ತಾನು ಏಕೆ

# ೧೭. ಹಾರಿಹೋದ ಎರಡು ಗೂಬೆಗಳು

ಅದು ಬೇಸಗೆಯ ಕಾಲ; ಹೆಪ್ಸಿಬಾ ಮತ್ತು ಕ್ಲಿಫರ್ಡ್ ಇಬ್ಬರೂ ಪಿನ್ಚನ್ ಬೀದಿಯ ಮೂಲಕ ಪಟ್ಟಣದ ಮಧ್ಯಭಾಗದ ಕಡೆಗೆ ಹೊರಟಿದ್ದಾಗ ಪೂರ್ವದ ಗಾಳಿಯನ್ನು ಎದುರಿಸಬೇಕಾಗಿತ್ತು; ಬಡ ಹೆಪ್ಸಿಬಾ ತನ್ನ ಕಳೆದುಳಿದಿದ್ದ ಹಲ್ಲುಗಳನ್ನು ಕಟಕಟ ಕಡಿಯುವಂತೆ ಮಾಡಿತ್ತು ಆ ಗಾಳಿ. ಈ ನಿರ್ದಯವಾದ ಕುಳಿರ್ಗಾಳಿಯಿಂದಾಗಿ ಅವಳ ಶರೀರಕ್ಕೆ ಮಾತ್ರ ನಡುಕವುಂಟಾಗಿರಲಿಲ್ಲ (ಮುಖ್ಯವಾಗಿ ಅವಳ ಕೈ ಕಾಲುಗಳು ಇಂದಿನಷ್ಟು ಎಂದೂ ಅಂತಹ ಶವಶೈತ್ಯವನ್ನು ಹೊಂದಿರಲಿಲ್ಲವೆಂಬುದೇನೋ ದಿಟ); ಆದರೆ, ಅವಳ ಮೈ ಚಳಿಯೊಂದಿಗೆ ಒಂದು ಬಗೆಯ ನೈತಿಕವಾದ ಭಾವನೆಯೂ ಬೆರೆತು, ಅದು ಅವಳ ದೇಹಕ್ಕಿಂತ ಹೆಚ್ಚಾಗಿ ಚೈತನ್ಯದಲ್ಲಿ ನಡುಕವನ್ನು ಹುಟ್ಟಿಸಿತ್ತು. ಪ್ರಪಂಚದ ವ್ಯಾಪಕವಾದ ನಿರುತ್ಸಾಹಕರವಾದ ವಾತಾವರಣದಲ್ಲಿ ನೆಮ್ಮದಿ ತರುವ ಗುಣ ಏನೇನೂ ಇರಲಿಲ್ಲ! ವಾಸ್ತವವಾಗಿ, ಪ್ರತಿಯೊಬ್ಬ ಸಾಹಸಿಗನ ಮೇಲೂ ಅದು ಬೀರುವ ಪ್ರಭಾವವೇ ಅಂತಹದು; ಅವನ ರಕ್ತನಾಳಗಳಲ್ಲಿ ಜೀವನೋತ್ಸಾಹ ಕಾವೇರಿ ಉಕ್ಕಿ ಉಕ್ಕಿ ಹರಿಯುತ್ತಿದ್ದರೂ ಅದು ಗಣನೆಗೆ ಬರುವುದಿಲ್ಲ. ಹೆಪ್ಸಿಬಾ ಮತ್ತು ಕ್ಲಿಫರ್ಡ್ ಕಾಲದ ಹೊಡೆತಕ್ಕೆ ಸಿಕ್ಕಿ ಗುಗ್ಗಿದ್ದರು; ಆದರೂ ಮಕ್ಕಳ ಹಾಗೆ ಅಷ್ಟೊಂದು ಅನನುಭವಿಗಳಾಗಿದ್ದರು; ಇಂಥವರು, ಮನೆಯ ಹೊಸಿಲನ್ನು ದಾಟಿ, ಪಿನ್ಚನ್ ಎಲ್ಮ್ ವೃಕ್ಷದ ವಿಶಾಲವಾದ ನೆರಳಾಸರೆಯ ಕೆಳಗೆ ಹಾದುಹೋದಾಗ, ಅವರ ವಿಷಯದಲ್ಲಿ ಹೇಳುವುದೇನಿದೆ? ಬಾಲಕನೊಬ್ಬನು ತನ್ನ ಜೇಬಿನಲ್ಲಿ ಬಹುಶಃ ಆರುಪೆನ್ನಿಗಳನ್ನೂ ಒಂದು ಬಿಸ್ಕತ್ತನ್ನೂ ಇಟ್ಟುಕೊಂಡು ಪ್ರಪಂಚದ ಕೊನೆಗೆ ಪ್ರಯಾಣ ಹೊರಟಿರುವೆನೆಂದು ಅನೇಕ ವೇಳೆ ಧ್ಯಾನ ಮಾಡುವ ಹಾಗೆ, ಅವರೂ ಕೂಡ ಅದೇ ರೀತಿಯಲ್ಲಿ ಹೊರಹೊರಟುಬಿಟ್ಟಿದ್ದರು. ತಾನು ಗೊತ್ತುಗುರಿಯಿಲ್ಲದೆ ಎಲ್ಲಿಗೋ ಹೋಗುತ್ತಿರುವೆನೆಂಬ ದುಃಖಕರವಾದ ಅರಿವು ಹೆಪ್ಸಿಬಾಳ ಮನಸ್ಸಿನಲ್ಲಿತ್ತು. ತನಗೆ ತಾನು ಮಾರ್ಗದರ್ಶನ ಮಾಡಿಕೊಳ್ಳುವ ಶಕ್ತಿಯನ್ನೇ ಅವಳು ಕಳೆದುಕೊಂಡುಬಿಟ್ಟಿದ್ದಳು; ಆದರೆ, ತನ್ನನ್ನು ಸುತ್ತುಗಟ್ಟಿದ್ದ ಕಷ್ಟಪರಂಪರೆಯನ್ನು ಗಮನಿಸಿ, ಆ ಶಕ್ತಿಯನ್ನು ಮತ್ತೆ ಪಡೆಯಲು ಪ್ರಯತ್ನ ಪಡುವುದು ಪ್ರಯೋಜನಕರವಲ್ಲವೆಂದು ಅವಳು ಭಾವಿಸಿದ್ದಳು; ಅದೂ ಅಲ್ಲ,

ಮುದ್ದೆ ಮುದ್ದೆಯಾಗಿ ಕುಳಿತಿದ್ದನು; ತನ್ನ ಕ್ರೂರ ಕಾರ್ಯವನ್ನು ಮಾಡುತ್ತಿರುವಾಗಲೇ ಸತ್ತುಹೋಗಿ, ತಾನು ಯಾರನ್ನು ಪೀಡಿಸುತ್ತಿತ್ತೋ ಆ ವ್ಯಕ್ತಿಯ ಎದೆಯ ಮೇಲೆ ತನ್ನ 'ಅಬ್ಬಲು ಜಬ್ಬಲಾ'ದ ನಿಸ್ಸಾರ ದೇಹವನ್ನು ಬಿಟ್ಟುಹೋದ ಸ್ವಪ್ನ ಪಿಶಾಚಕ್ಕೆ ಅವನನ್ನೀಗ ಹೋಲಿಸಬಹುದಾಗಿತ್ತು.

* * * *

ಇವು, ಬಹಳ ನಿರುತ್ಸಾಹಕರವಾದ ದೃಶ್ಯದಲ್ಲಿ ಹೆಚ್ಚು ಸ್ಪಷ್ಟವಾಗಿ ಕಾಣಬರುತ್ತಿದ್ದ ಅಂಶಗಳು ಪಟ್ಟಣದ ಚಲನವಲನ ಮತ್ತು ಜನಜೀವನಗಳ ಸಂಬಂಧವಾಗಿ ಹೇಳುವುದಾದರೆ,– ಗಾಡಿ ಹೊಡೆಯುವವನು ರಕ್ಷಣೆಗಾಗಿ ತಲೆಯ ಮೇಲೂ ಹೆಗಲುಗಳ ಮೇಲೂ ನೀರಿಳಿಯದ ಬಟ್ಟೆಯ ಟೋಪಿ ಹಾಕಿಕೊಂಡು ಹೊಡೆಯುತ್ತಿದ್ದ ಬಾಡಿಗೆಯ 'ಕ್ಯಾಬ್' ಬಂಡಿ ಇಲ್ಲವೆ ಕೋಚ್ ಗಾಡಿ ಮಾಡುತ್ತಿದ್ದ, ಆತುರದೋಟದ ಗಡಗಡ ಸದ್ದು ಕೇಳಿಬರುತ್ತಿತ್ತು; ಯಾವುದೋ ನೆಲದಡಿಯ ಚರಂಡಿಯೊಳಗಿಂದ ತೆವಳಿಕೊಂಡು ಹೊರಕ್ಕೆ ಬಂದಂತೆ ಕಾಣುತ್ತಿದ್ದ ಒಂಟಿ ಮುದುಕನೊಬ್ಬ ಕೀಳ್ತರದ ಮನೆಯ ಮುಂದೆ ಬಗ್ಗಿಕೊಂಡು, ತುಕ್ಕು ಹಿಡಿದ ಮೊಳೆಗಳಿಗಾಗಿ ಹುಡುಕಾಡುತ್ತಾ, ನೆನೆದ ಕಸದ ರಾಶಿಯನ್ನು ಒಂದು ಕೋಲಿನಿಂದ ಬೆದಕಿ ನೋಡುತ್ತಿದ್ದನು; ಅಂಚೆಕಚೇರಿಯ ಮುಂದೆ ತಡವಾಗಿದ್ದ ಅಂಚೆಗಾಗಿ ಒಬ್ಬಿಬ್ಬರು ವರ್ತಕರು, ಚಿಲ್ಲರೆ ರಾಜಕಾರಣಿ, ಹಾಗೂ ಒಬ್ಬ ಪತ್ರಿಕಾ ಸಂಪಾದಕ ಕಾಯುತ್ತಿದ್ದರು; ಒಂದು ವಿಮಾಕಚೇರಿಯ ಕಿಟಕಿಯ ಮುಂದೆ, ಬರಿದಾದ ಬೀದಿಯನ್ನು ಯಾವ ಉದ್ದೇಶವೂ ಇಲ್ಲದೆ ನೋಡುತ್ತಾ, ಹವಾಗುಣವನ್ನು ಬಯ್ಯುತ್ತಾ, ಸ್ಥಳದ ಕಾಡುಹರಟೆ ಹಾಗೂ ಸಾರ್ವಜನಿಕ ಸುದ್ದಿ ಇವುಗಳಿಗೆ ಏನು ಬರ ಬಂದಿವೆ ಎಂದು ಸಿಡಿಗುಟ್ಟುತ್ತಾ ನಿಂತಿದ್ದ ಕೆಲವು ನಿವೃತ್ತ ನೌಕಾನಾಯಕರ ಮುಖಗಳು ಕಾಣಬರುತ್ತಿದ್ದುವು. ಹೆಪ್ಸಿಬಾ ಮತ್ತು ಕ್ಲಿಫರ್ಡ್ ತಮ್ಮೊಂದಿಗೆ ಒಯ್ಯುತ್ತಿದ್ದ ರಹಸ್ಯವನ್ನು ಅವರು ಊಹಿಸಿ ತಿಳಿಯಬಲ್ಲವರಾಗಿದ್ದಿದ್ದರೆ, ಈ ಗಣ್ಯ ಸುದ್ದಿಕೋರನಿಗೆ ಅದೆಂತಹ ನಿಕ್ಷಿಪ್ತ ನಿಧಿ ಸಿಕ್ಕಿದಂತಾಗುತ್ತಿತ್ತು! ಆದರೆ, ಅದೇ ಕ್ಷಣದಲ್ಲಿ, ತನ್ನ ಲಂಗವನ್ನು ಹಿಮ್ಮಡಿಯಿಂದ ಮೇಲಕ್ಕೆ ಸ್ವಲ್ಪ ಅತಿಯಾಯಿತೋ ಎನ್ನುವ ಮಟ್ಟಿಗೆ ಎತ್ತರಕ್ಕೆ ಎತ್ತಿಕೊಂಡು ಅದೇ ಮಾರ್ಗವಾಗಿ ಹೋಗುತ್ತಿದ್ದ ಚಿಕ್ಕ ಹುಡುಗಿಯೊಬ್ಬಳು ಸೆಳೆದಷ್ಟು ಗಮನವನ್ನು ಕೂಡ ಅವರಿಬ್ಬರ ಆಕೃತಿಗಳು ಸೆಳೆಯಲಿಲ್ಲ. ಅಂದೇನಾದರೂ ಬಿಸಿಲು ಬಿದ್ದು ಉಲ್ಲಾಸಪೂರ್ಣವಾದ ದಿನವಾಗಿದ್ದಿದ್ದರೆ, ಅನಿಷ್ಟದ ಟೀಕೆಗೆ ಗುರಿಯಾಗದೆ ಅವರು ಬೀದಿಯಲ್ಲಿ ಹಾದುಹೋಗಲು ಸಾಧ್ಯವಾಗುತ್ತಿರಲಿಲ್ಲ. ಈಗ, ಬಹುಶಃ, ಅವರು ಮಂಕಾದ ಕೊರೆಯುವ ಚಳಿಯ ಹವದೊಂದಿಗೆ ಅನುಗುಣವಾಗಿದ್ದಾರೆಂಬ ಭಾವನೆಯುಂಟಾಗಿದ್ದುದರಿಂದ, ಅವರು ಅಷ್ಟೊಂದು ಪ್ರಮುಖವಾಗಿ ಕಣ್ಣಿಗೆ ಬೀಳುವಂತಿರಲಿಲ್ಲ; ಬಿಸಿಲು ಅವರ ಮೇಲೆ ಬಿದ್ದು ಪ್ರಕಾಶಿಸಿದರೂ ಮಬ್ಬುಗತ್ತಲೆಯಲ್ಲಿ ಅದು ಕರಗಿಹೋಯಿತೇನೋ ಎಂಬಂತೆ, ಅವರು ಹೊರಟುಹೋದೊಡನೆಯೇ ಮರೆತು ಹೋದರು.

ಅಂಥ ಪ್ರಯತ್ನವನ್ನು ಮಾಡಲು ಅಸಮರ್ಥಳಾಗಿದ್ದಳು.

ಅವರು ತಮ್ಮ ಅಪೂರ್ವ ಪ್ರಯಾಣದಲ್ಲಿ ಮುಂದೆ ಮುಂದೆ ಸಾಗುತ್ತಿದ್ದಾಗ, ಅವಳು ಆಗೊಮ್ಮೆ ಈಗೊಮ್ಮೆ ಪಕ್ಕಕ್ಕೆ ತಿರುಗಿ ಕ್ಲಿಫರ್ಡನ ಕಡೆಗೆ ನೋಡುತ್ತಿದ್ದಳು; ಆಗೆಲ್ಲಾ, ಯಾವುದೋ ಒಂದು ಶಕ್ತಿ ಪೂರ್ಣವಾದ ಭಾವಾವೇಶವು ಅವನ ಮೈಮೇಲೆ ಬಂದು, ಅವನನ್ನು ತೂಗಾಡಿಸುತ್ತಿತ್ತು ಎಂಬುದನ್ನು ಅವಳು ಗಮನಿಸದೆ ಇರಲಾಗಲಿಲ್ಲ. ಅವನಿಗೆ ಒಂದು ಹತೋಟಿಯನ್ನು ಕೊಟ್ಟಿದ್ದುದೇ ಅದು; ಅದನ್ನವನು ತನ್ನ ಚಲನೆಗಳ ಮೇಲೆ ಆ ಕೂಡಲೆ ತಪ್ಪದೆ ಸ್ಥಾಪಿಸಿಬಿಟ್ಟಿದ್ದನು. ಅದು ಬಹುಮಟ್ಟಿಗೆ ದ್ರಾಕ್ಷಾಮದ್ಯಪಾನದಿಂದುಂಟಾಗುವ ಹುಮ್ಮನಸ್ಸನ್ನು ಹೋಲುತ್ತಿತ್ತು. ಅಥವಾ, ಇನ್ನೂ ಕಲ್ಪನಾಚಮತ್ಕಾರವುಳ್ಳ ಹೋಲಿಕೆಯನ್ನು ಕೊಡುವುದಾದರೆ, ವ್ಯವಸ್ಥೆಗೆಟ್ಟ ವಾದ್ಯದ ಮೇಲೆ ಆವೇಶಪೂರ್ಣವಾಗಿ ಬಾರಿಸಿದ ಆನಂದದಾಯಕ ಸಂಗೀತಕೃತಿಯಂತಿತ್ತು. ಅಂಥ ಸಂಗೀತದಲ್ಲಿ ಕರ್ಕಶವಾದ ಅಪಸ್ವರವನ್ನು ಯಾವಾಗಲೂ ಕೇಳಲು ಸಾಧ್ಯ; ರಾಗದ ಅತ್ಯುನ್ನತ ಆನಂದಭಾವದ ಮಧ್ಯೆ ಆ ಕರ್ಕಶಸ್ವರವು ಕೂಡ ಅತ್ಯಂತ ಉಚ್ಚಧ್ವನಿಯಲ್ಲಿ ಕೇಳಿಸುತ್ತದೆ. ಅದೇ ರೀತಿ ಕ್ಲಿಫರ್ಡನಲ್ಲಿಯೂ ಒಂದು ನಿರಂತರವಾದ ಕಂಪನವು ಕಂಡುಬರುತ್ತಿತ್ತು; ಅವನು ಗೆಲವಿನ ಮುಗುಳುನಗೆಯಿಂದ ಕೂಡಿ, ನಡೆಯುವಾಗ ಚಿಗಿಯಲೇಬೇಕಾಗಿದೆ ಎಂದು ಕಾಣುತ್ತಿರುವಾಗ ಅವನು ಬಹು ಹೆಚ್ಚಾಗಿ ನಡುಗುವಂತೆ ಮಾಡುತ್ತಿತ್ತು ಆ ಕಂಪನ ಪ್ರವೃತ್ತಿ.

ಅವರು ಹೊರಗಡೆ ಬಹಳ ಜನರನ್ನು ಸಂಧಿಸಲಿಲ್ಲ; ಏಳು ಇಪ್ಪಾರಿನ ಮನೆಯಿದ್ದ ಪ್ರಶಾಂತವಾದ ಸ್ಥಳವನ್ನು ಬಿಟ್ಟು, ಪಟ್ಟಣದಲ್ಲಿ ಸರ್ವ ಸಾಮಾನ್ಯವಾಗಿ ಹೆಚ್ಚು ಚಟುವಟಿಕೆಯಿಂದ ಕೂಡಿದ್ದ ಹಾಗು ಜನ ನಿಬಿಡವಾದ ಭಾಗದೊಳಕ್ಕೆ ಪ್ರವೇಶಿಸಿದಾಗಲೂ ಅಷ್ಟೆ. ಅವುಗಳ ಹಳ್ಳ ತಿಟ್ಟಾದ ಮೇಲ್ಮೈಯ ಮೇಲೆ ಉದ್ದಕ್ಕೂ ಅಲ್ಲಲ್ಲಿ ಮಳೆನೀರು ಚಿಕ್ಕಪುಟ್ಟ ಗುಂಡಿಗಳಿಂದ ಕೂಡಿ, ಫಳಫಳಿಸುತ್ತಿದ್ದ ಪಕ್ಕದ ನಡೆದಾರಿಗಳು; ವ್ಯಾಪಾರದ ವಹಿವಾಟೆಲ್ಲಾ ಈ ಒಂದು ಪದಾರ್ಥವನ್ನೇ ಅವಲಂಬಿಸಿದೆಯೇನೋ ಎಂಬಂತೆ ಅಂಗಡಿಯ ಕಿಟಕಿಗಳಲ್ಲಿ ಪ್ರಮುಖವಾಗಿ ಕಾಣುವಂತೆ ಪ್ರದರ್ಶಿಸಿದ್ದ ಕೊಡೆಗಳು; ಬಿರುಗಾಳಿಯ ಹೊಡೆತದಿಂದ ಕಾಲಕ್ಕೆ ಮುಂಚೆ ಕಿತ್ತು ಬಿದ್ದು, ಜನ ನಡೆಯುವ ದಾರಿಯುದ್ದಕ್ಕೂ ಚೆಲ್ಲಾಡಿದ್ದ ಕಾಡು "ಚೆಸ್ನಟ್" ಮರದ ಹಾಗೂ ಎಲ್ಮ್ ಮರದ ತೊಯ್ದು ಎಲೆಗಳು; ಬಹಳ ಕಾಲ ಮತ್ತು ಬಹಳ ಕಷ್ಟದಿಂದ ಮಾರ್ಗಮಧ್ಯದಲ್ಲಿದ್ದ ಮಣ್ಣಿನ ರಾಶಿಯನ್ನು ಮಳೆ ಕೊಚ್ಚಿ ತೊಳೆದುಹಾಕಿದ್ದರಿಂದ, ಇನ್ನೂ ಹೆಚ್ಚು ಹೊಲಸಾಗಿ ಕಾಣುತ್ತಿದ್ದ ಬೀದಿ–

ಜೀವನವು ತನ್ನ ಆತುರದ ಗತಿಯಲ್ಲಿ ನಮಗೆ ದಯಪಾಲಿಸುವ ಅಲ್ಪಕಾಲಿಕ ಆಹ್ವಾನಗಳನ್ನು ಆ ಥಣತ್ಕಾರವು ಬಹು ಚೆನ್ನಾಗಿ ವ್ಯಕ್ತಪಡಿಸುತ್ತಿತ್ತು. ಪ್ರಶ್ನೆ ಮರುಪ್ರಶ್ನೆಗಳಿಗೆ ಅವಕಾಶವಿಲ್ಲದಂತೆ, ಸ್ವಲ್ಪವೂ ತಡಮಾಡದೆ, ನಿರ್ಲಕ್ಷ್ಯಭಾವದಿಂದ ಎನ್ನಲಾಗದಿದ್ದರೂ ಪ್ರತಿಭಟಿಸಲಾಗದ ನಿರ್ಧಾರದಿಂದ ಕ್ಲಿಫರ್ಡ್ ಹೆಪ್ಸಿಬಾಳನ್ನು ಬಂಡಿಗಳ ಕಡೆಗೆ ತಳ್ಳಿಕೊಂಡುಹೋಗಿ, ಒಳಕ್ಕೆ ಹೋಗಲು ಅವಳಿಗೆ ನೆರವಾದನು. ಆ ಬಗೆಯ ಮನಃಸ್ಥಿತಿ ಅವರಿಬ್ಬರನ್ನೂ ಅಪೂರ್ವವಾಗಿ ಆಕ್ರಮಿಸಿಕೊಂಡಿತ್ತು. ಸಂಜ್ಞೆಯನ್ನು ಕೊಡಲಾಯಿತು: ಎಂಜಿನ್ನು ಬೇಗೆ ಬೇಗನೆ ಭುಗ್ ಭುಗ್ ಎನ್ನತೊಡಗಿತು; ರೈಲುಬಂಡಿ ಚಲಿಸತೊಡಗಿತು; ಇತರ ನೂರಾರು ಪ್ರಯಾಣಿಕರೊಡನೆ, ಪ್ರಯಾಣದ ಅಭ್ಯಾಸವಿಲ್ಲದ ಈ ಇಬ್ಬರು ಪ್ರಯಾಣಿಕರು ವಾಯವೇಗದಲ್ಲಿ ಧಾವಿಸಿದರು.

ಕಟ್ಟಕಡೆಗೆ, ಪ್ರಪಂಚದ ಪ್ರತಿಯೊಂದು ವ್ಯವಹಾರದಿಂದಲೂ ಸುಖಾನುಭೋಗದಿಂದಲೂ ಅಷ್ಟೊಂದು ದೀರ್ಘಕಾಲ ದೂರವಾಗಿದ್ದ ಮೇಲೆ ಇಂದು, ವಿಧಿಯೇ ಅವರನ್ನು ಹೀಗೆ ಒಳಕ್ಕೆಳೆದುಕೊಂಡಿದೆಯೋ ಎಂಬಂತೆ ಅವರು ಮಾನವ ಜೀವನದ ಮಹಾಪೂರಕ್ಕೆ ಸಿಲುಕಿ ಅದರಲ್ಲಿ ಕೊಚ್ಚಿಕೊಂಡು ಹೋಗಿದ್ದರು.

ನ್ಯಾಯಮೂರ್ತಿ ಪಿನ್ಚನ್ನನು ಭೇಟಿ ಕೊಟ್ಟದ್ದು ಮುಂತಾದ ಹಿಂದಿನ ಘಟನೆಗಳಲ್ಲಿ ಒಂದಾದರೂ ನಿಜವಲ್ಲವೆಂಬ ಭಾವನೆ ಅವಳನ್ನು ಇನ್ನೂ ಕಾಡುತ್ತಿತ್ತು; ಆಗ, ಏಳು ಇಪ್ಪಾರಿನ ಮನೆಯ ಏಕಾಂತವಾಸಿ ತನ್ನ ಸಹೋದರನ ಕಿವಿಯಲ್ಲಿ ಮೆಲ್ಲನೆ ಉಸುರಿದಳು:

"ಕ್ಲಿಫರ್ಡ್! ಕ್ಲಿಫರ್ಡ್! ಇದೊಂದು ಕನಸಲ್ಲವೆ?"

"ಹೆಪ್ಸಿಬಾ! ಕನಸು, ಕನಸೆ!" ಎಂದು ಬಹುಮಟ್ಟಿಗೆ ಅವಳನ್ನು ಪರಿಹಾಸ ಮಾಡುವಂತೆ ಆ ಮಾತನ್ನು ಪುನರುಚ್ಚರಿಸಿ, ನುಡಿದನು:

"ಅಲ್ಲ, ಅಲ್ಲ; ಈಗಿನಂತೆ ನಾನು ಹಿಂದೆ ಎಂದೂ ಎಚ್ಚರವಾಗಿದ್ದುದಿಲ್ಲ!"

ಈ ನಡುವೆ, ಪ್ರಪಂಚವು ಅವರನ್ನು ಮೀರಿಸಿ ಹಿಂದಕ್ಕೆ ಧಾವಿಸುತ್ತಿರುವುದನ್ನು ಕಿಟಕಿಯಿಂದ ಹೊರಗೆ ನೋಡುತ್ತಿದ್ದ ಅವರು ಕಾಣಬಹುದಾಗಿತ್ತು. ಒಂದು ಕ್ಷಣದಲ್ಲಿ, ನಿರ್ಜನಪ್ರದೇಶದ ನಡುವೆ ಅವರು ಗಡಗಡ ಸದ್ದಿನೊಂದಿಗೆ ಸಾಗುತ್ತಿದ್ದರು; ಮರುಕ್ಷಣದಲ್ಲಿ, ಹಳ್ಳಿಯೊಂದು ಅವರ ಕಣ್ಮುಂದೆ ಬೆಳೆದು ನಿಂತಿತ್ತು; ಎರಡು ಮೂರು ಸಲ ಉಸಿರಾಡುವಷ್ಟರಲ್ಲಿ, ಭೂಕಂಪವೊಂದು ಅದನ್ನು ನೊಣೆದು ನುಂಗಿತ್ತೋ ಎಂಬಂತೆ ಅದು ಮಾಯವಾಗಿತ್ತು. ಸಭಾಭವನಗಳ ಗೋಪುರ

ಅಯ್ಯೋ ಬಡ ಹೆಪ್ಸಿಬಾ! ಈ ಅಂಶವನ್ನು ಅವಳು ಅರಿಯಬಲ್ಲವಳಾಗಿದ್ದರೆ, ಅವಳ ಮನಸ್ಸಿಗೆ ಅಲ್ಪಸ್ವಲ್ಪ ನೆಮ್ಮದಿಯುಂಟಾಗುತ್ತಿತ್ತು; ಏಕೆಂದರೆ, ಅವಳ ಇತರ ಎಲ್ಲ ತೊಂದರೆಗಳ ಜೊತೆಗೆ, ತನ್ನ ಉಡುಪು ಚೆನ್ನಾಗಿ ಕಾಣುತ್ತಿಲ್ಲವೆಂಬ ಭಾವದಿಂದ ಉಂಟಾದ ಸ್ತ್ರೀಸಹಜವಾದ, ವೃದ್ಧಕನ್ಯೋಚಿತವಾದ ಕೊರಗೊಂದು ಸೇರಿಕೊಂಡಿತ್ತು– ಹೀಗೆಂದರೆ, ವಿಚಿತ್ರವಾಗಿ ಕಂಡೀತು! ಬಿರುಗಾಳಿ ಮಳೆಯ ನಡುವೆ ಜೂಲುಜೂಲಾದ ಹಾಗೂ ವಿಪರೀತ ಮಾಸಿಹೋದ ಒಂದು ಕವುದಿ ಮತ್ತು ತಲೆಮುಸುಕು ಮಾತ್ರ ಗಾಳಿಯಾಡಲು ಸಾಗಿಹೋಗುತ್ತಿದೆ, ಅವುಗಳನ್ನು ಧರಿಸಿರುವ ವ್ಯಕ್ತಿಯೇ ಇಲ್ಲ– ಎಂಬ ಭಾವನೆಯನ್ನು ಜನರಲ್ಲಿ ಉಂಟುಮಾಡುವ ಆಶೆ ತನಗೆ ಒಂದುವೇಳೆ ಇದ್ದಿದ್ದರೆ ಹೇಗೋ ಹಾಗೆ, ತನ್ನೊಳಕ್ಕೆ ತಾನು ಅಡಗಿ ಹೋಗಿದ್ದರೆ ಅವಳಿಗೆ ಎಷ್ಟೋ ಸಂತೋಷವಾಗುತ್ತಿತ್ತು!

ಅವರು ಮುಂದುವರಿದಂತೆ, ಅವಳ ಸುತ್ತಲೂ ಒಂದು ಅಸ್ಪಷ್ಟತೆಯ ಹಾಗೂ ಅವಾಸ್ತವತೆಯ ಭಾವವು ಸುಳಿದಾಡುತ್ತಲೇ ಇದ್ದಿತು; ಅದು ಎಷ್ಟರಮಟ್ಟಿಗೆ ಅವಳ ದೇಹದೊಳಕ್ಕೆಲ್ಲಾ ವ್ಯಾಪಿಸಿಕೊಳ್ಳುತ್ತಿತ್ತೆಂದರೆ, ಅವಳ ಒಂದು ಕೈ ಇನ್ನೊಂದರ ಸೋಂಕನ್ನು ಅರಿಯಲಾರದಷ್ಟು ಜಡಗಟ್ಟಿ ಹೋಗಿತ್ತು. ಇದಕ್ಕಿಂತಲೂ ಸ್ಪಷ್ಟವಾದ ನಿಶ್ಚಯಜ್ಞಾನ ಮೇಲಾಗಿರುತ್ತಿತ್ತು. ಅವಳು ಮತ್ತೆ ಮತ್ತೆ, "ನಾನು ಎಚ್ಚರವಾಗಿದ್ದೇನೆಯೆ? ನಾನು ಎಚ್ಚರವಾಗಿದ್ದೇನೆಯೆ?" ಎಂದು ತನಗೆ ತಾನೆ ಪಿಸುಗುಟ್ಟಿಕೊಳ್ಳುತ್ತಿದ್ದಳು; ತಾನು ಎಚ್ಚತ್ತಿದ್ದೇನೆ ಎಂದು ಒಂದು ವಿಧವಾದ ಒರಟು ರೀತಿಯಲ್ಲಿ ದೃಢಪಡಿಸಿಕೊಳ್ಳಲು ಅವಳು ಕೆಲವುವೇಳೆ ತನ್ನ ಮುಖವನ್ನು ಗಾಳಿಯ ಕೊರೆತದ ಹೊಡೆತಕ್ಕೆ ಒಡ್ಡುತ್ತಿದ್ದಳು ಅವರನ್ನು ಈ ಎಡೆಗೆ ಕರೆತಂದದ್ದು ಕ್ಲಿಫರ್ಡನ ಉದ್ದೇಶವೋ ಇಲ್ಲವೆ ಅದು ಆಕಸ್ಮಿಕ ಮಾತ್ರವೋ, ಅಂತೂ ಒಂದು ದೊಡ್ಡ ಬೂದುಬಣ್ಣದ ಕಲ್ಲಿನ ಕಟ್ಟೆದ ಕಾಮಾನು ದ್ವಾರದ ಅಡಿಯಲ್ಲಿ ತಾವಿದ್ದುದು ಅವರ ಅರಿವಿಗೆ ಬಂದಿತು. ಒಳಗಡೆ, ಅಡ್ಡಗಲವು ವಿಶಾಲವಾಗಿಯೂ ನೆಲದಿಂದ ಚಾವಣಿಯವರೆಗಿನ ಎತ್ತರದಾಯವು ಗಾಳಿಬೀಸುವಂತೆಯೂ ಇದ್ದುವು; ಮೇಲ್ಗಡೆಯ ಅರ್ಧಭಾಗವೆಲ್ಲಾ ಈಗ ಹೊಗೆಯಿಂದಲೂ ಆವಿಯಿಂದಲೂ ತುಂಬಿತ್ತು; ಆ ಹೊಗೆ ಮೇಲುಮೇಲಕ್ಕೆ ವಿಪುಲವಾಗಿ ಸುಳಿಸುಳಿಯಾಗಿ ಎದ್ದು, ಅವರ ತಲೆಗಳ ಮೇಲೆ ಒಂದು ಕೃತಕ ಮೋಡದ ಪ್ರದೇಶವನ್ನು ರಚಿಸಿತ್ತು; ಗಾಡಿಗಳ ಸಾಲೊಂದು ಹೊರಡಲು ಅದೇ ತಾನೆ ಸಿದ್ಧವಾಗಿತ್ತು; ಧಾವಿಸಿ ಮುಂದೆ ನುಗ್ಗಲು ತವಕಿಸುತ್ತಿರುವ ಕುದುರೆಯಂತೆ ಸ್ವಯಂಚಲಿ ಎಂಜಿನ್ನು ಹೊಗೆ ಕಿಡಿ ಕಾರುತ್ತ ಚಡಪಡಿಸುತ್ತಿತ್ತು: ಗಂಟೆ ಆತುರಾತುರವಾಗಿ ಢಣ ಢಣಿಸಿತು;

ಹಿಂದೆಯೆ ಬಿಟ್ಟು, ತಮಗರಿವಿಲ್ಲದೆಯೇ ಮುಂದೆಮುಂದೆ ಸಾಗುತ್ತಿದ್ದರು; ಅವರು ಯಾವ ಆಕಾಶಪ್ರದೇಶದ ಕೆಳಗೆ ತಮ್ಮ ಆಟವನ್ನು ಪ್ರಾರಂಭಿಸಿದ್ದರೋ ಅದನ್ನು ಬಿಟ್ಟು ಬೇರೊಂದು ಆಕಾಶಪ್ರದೇಶದ ಕೆಳಗೆ ತಮ್ಮ ಆಟವನ್ನು ಮುಗಿಸುತ್ತಿದ್ದರು. ಸೇಬಿನ ಹಣ್ಣು, ರೊಟ್ಟಿ, ಕಲ್ಲುಸಕ್ಕರೆ, ಬಗೆಬಗೆಯ ಬಣ್ಣ ಹಾಕಿದ್ದ ಬತ್ತಾಸು– ಇವನ್ನು ಮಾರುತ್ತಿದ್ದ ಹುಡುಗರು, ಕ್ಷಣಕಾಲ ಮಾತ್ರ ರೈಲು ನಿಲ್ಲುತ್ತಿದ್ದ ಪ್ರತಿ ನಿಲ್ದಾಣದಲ್ಲಿಯೂ ಕಾಣಿಸಿಕೊಂಡು, ಆತುರಾತುರವಾಗಿ ತಮ್ಮ ವ್ಯಾಪಾರವನ್ನು ಮುಗಿಸಿಬಿಡುತ್ತಿದ್ದರು (ಈ ವ್ಯಾಪಾರದ ಸಾಮಾನುಗಳು ಹೆಪ್ಸಿಬಾಗೆ ತಾನು ತೊರೆದುಬಂದಿದದ ಅಂಗಡಿಯನ್ನು ನೆನಪಿಗೆ ತರುತ್ತಿದ್ದುವು); ಇಲ್ಲವೋ, ಗಿರಾಕಿಗಳು ಆ ಸರಕನ್ನೆಲ್ಲ ಎಲ್ಲಿ ತಮ್ಮೊಂದಿಗೆಯೇ ಅಪಹರಿಸಿಬಿಡುವರೋ ಎಂಬ ಶಂಕೆಯಿಂದ ಅರ್ಧಕ್ಕೇ ವ್ಯಾಪಾರವನ್ನು ನಿಲ್ಲಿಸಿಬಿಡುತ್ತಿದ್ದರು. ಹೊಸ ಜನ ಎಡೆಬಿಡದೆ ಒಳಕ್ಕೆ ಬರುತ್ತಲೇ ಇದ್ದರು. ಹಳೆಯ ಪರಿಚಿತರು– ಈ ಶೀಘ್ರವಾದ ವ್ಯವಹಾರ ಪ್ರವಾಹದಲ್ಲಿ ಎಲ್ಲರೂ ಬೇಗನೆ ಪರಸ್ಪರ ಪರಿಚಿತರಾಗಿ ಬಿಡುತ್ತಿದ್ದರು– ಒಂದೇ ಸಮನೆ ಹೊರಟುಹೋಗುತ್ತಿದ್ದರು. ಅಲ್ಲಲ್ಲಿ, ಈ ಎಲ್ಲ ತುಮುಲ ತಾಕಲಾಟಗಳ ನಡುವೆ, ಒಬ್ಬ ನಿದ್ರಿಸುತ್ತ ಕುಳಿತಿರುತ್ತಿದ್ದನು. ನಿದ್ರೆ, ಆಟ; ವ್ಯಾಪಾರ ವ್ಯವಹಾರ; ಗಂಭೀರವೋ ಲಘುವೋ ಆದ ವ್ಯಾಸಂಗವಾಚನ: ಇದೆಲ್ಲವನ್ನೂ ಒಳಕೊಂಡ, ಸರ್ವಸಾಮಾನ್ಯವಾದ ಹಾಗೂ ಅನಿವಾರ್ಯವಾದ ಮುಂಚಲನೆ. ಅದು ತದ್ವತ್ ಜೀವನವೇ ಆಗಿದ್ದಿತು!

ಕ್ಲಿಫರ್ಡನ ಸ್ವಾಭಾವಿಕವಾಗಿಯೇ ಚುರುಕಾದ ಸಹಾನುಭೂತಿಗಳು ಜಾಗೃತವಾದುವು. ತನ್ನ ಸುತ್ತಮುತ್ತ ನಡೆಯುತ್ತಿದ್ದುದೆಲ್ಲದರ ವರ್ಣವನ್ನು ಅವನು ಗ್ರಹಿಸಿ, ಕೊಂಡದ್ದಕ್ಕಿಂತ ಹೆಚ್ಚು ಸ್ಪಷ್ಟತೆಯಿಂದ ಅದನ್ನು ಹಿಂದಿರುಗಿಸಿದನು; ಆದರೂ, ಹಾಗೆ ಹಿಂತಿರುಗಿದ ವರ್ಣವು ಭಯಂಕರವಾದ, ಉತ್ಪಾತಸೂಚಕವಾದ ಛಾಯೆಯಿಂದ ಬೆರೆತಿರುತ್ತಿತ್ತು. ಅತ್ತ ಹೆಪ್ಸಿಬಾಳಾದರೋ, ತಾನು ಅದೇ ತಾನೆ ಬಿಟ್ಟು ಬಂದಿದ್ದ ಏಕಾಂತವಾಸದಲ್ಲಿ ಇದ್ದುದಕಿಂತಲೂ ಹೆಚ್ಚಾಗಿ ಮಾನವ ಜಾತಿಯಿಂದ ದೂರವಾಗಿದ್ದುದಾಗಿ ಭಾವಿಸಿಕೊಳ್ಳುತ್ತಿದ್ದಳು.

"ನೀನು ನೆಮ್ಮದಿಯಿಂದಿಲ್ಲ, ಹೆಪ್ಸಿಬಾ!" ಎಂದು ಕ್ಲಿಫರ್ಡ್ ಆಕ್ಷೇಪಿಸುವ ಧ್ವನಿಯಲ್ಲಿ ಅವಳಿಗೆ ಪ್ರತ್ಯೇಕವಾಗಿ ಹೇಳಿದನು: "ನೀನು ಆ ಮಂಕುಕವಿದ ಮನೆಯನ್ನೂ ಕಸಿನ್ ಜಫ್ರಿಯನ್ನೂ ಕುರಿತು ಚಿಂತಿಸುತ್ತಿದ್ದೀಯೆ," (ಆಗ ಅವನ ಮೈಯಲ್ಲೆಲ್ಲಾ ಕುರಿತು ಆಲೋಚಿಸುತ್ತಿದ್ದೀಯೆ! ನನ್ನ ಸಲಹೆಯನ್ನು ತೆಗೆದುಕೊ– ನನ್ನ ಮೇಲ್ಪಂಕ್ತಿಯನ್ನು ಅನುಸರಿಸು– ಅಂಥ ವಿಷಯಗಳು ತಾವಾಗಿ ಅತ್ತ

ಶಿಖರಗಳು ತಮ್ಮ ತಳಗಟ್ಟಡಗಳಿಂದ ಬೇರ್ಪಟ್ಟು ತೇಲಿಹೋಗುತ್ತಿರುವಂತೆ ಕಂಡುಬಂದುವು; ಬಿತ್ತರದ ಬುಡದ ಬೆಟ್ಟ ಗುಡ್ಡಗಳು ಜಾರಿಹೋದುವು. ಪ್ರತಿಯೊಂದು ವಸ್ತುವೂ ತನ್ನ ಯುಗ ಯುಗಾಂತರದ ನೆಲೆಯಿಂದ ಕಿತ್ತು ಬಂದು, ಅವರು ಹೋಗುತ್ತಿದ್ದ ದಿಕ್ಕಿಗೆ ಎದುರು ದಿಕ್ಕಿನಲ್ಲಿ ಚಂಡಮಾರುತದ ಪ್ರಚಂಡವೇಗದಲ್ಲಿ ಚಲಿಸುತ್ತಿದ್ದಿತು.

ಗಾಡಿಯೊಳಗಡೆ, ರೈಲುಪ್ರಯಾಣದಲ್ಲಿ ಸರ್ವಸಾಧಾರಣವಾಗಿ ಕಂಡುಬರುವ ಒಳ ಜೀವನವೇ ಇದ್ದಿತು; ಇತರ ಪ್ರಯಾಣಿಕರ ಪರಿಶೀಲನೆಗೆ ಅದರಲ್ಲಿದ್ದ ಹೊಸತು ಅತ್ಯಲ್ಪ; ಆದರೆ, ವಿಚಿತ್ರ ಬಂಧನದಿಂದ ಬಿಡುಗಡೆ ಹೊಂದಿದ್ದ ಈ ಬಂದಿಗಳ ಜೋಡಿಗೆ ಅದು ಸಂಪೂರ್ಣವಾಗಿ ನವೋನವವಾಗಿತ್ತು. ಒಂದು ಉದ್ದವಾದ ಕಿರಿದಗಲದ ಚಾವಣಿಯ ಕೆಳಗೆ, ಐವತ್ತು ಮಂದಿ ಮಾನವ ಪ್ರಾಣಿಗಳೊಂದಿಗೆ ನಿಕಟ ಬಾಂಧವ್ಯವನ್ನು ಹೊಂದಿದ್ದರು ಅವರೀಗ; ಅವರಿಬ್ಬರನ್ನೂ ವಶಪಡಿಸಿಕೊಂಡಿದ್ದ ಅದೇ ಮಹತ್ ಪ್ರಭಾವವು ಅವರನ್ನು ಮುಂದುಮುಂದಕ್ಕೆ ಸೆಳೆದೊಯ್ಯುತ್ತಿತ್ತು: ಅವರ ಪಾಲಿಗೆ ಇದು ನಿಜವಾಗಿ ಹೊಸತೆ. ಅಲ್ಲಿ ಕುಳಿತಿದ್ದವರೆಲ್ಲರಿಗೋಸುಗ ಒಂದು ಶಕ್ತಿ ಗಲಭೆ ಮಾಡುತ್ತ ಕಾರ್ಯನಿರತವಾಗಿದ್ದಾಗ, ಈ ಎಲ್ಲ ಜನ ತಮ್ಮ ತಮ್ಮ ಸ್ಥಳಗಳಲ್ಲಿ ಅದು ಹೇಗೆ ಸುಮ್ಮನೆ ಕುಳಿತಿದ್ದರು ಎಂಬ ಸಂಗತಿ ಆಶ್ಚರ್ಯಕರವಾಗಿ ಕಾಣುತ್ತಿತ್ತು. ಕೆಲವರು ದೂರ ಪ್ರಯಾಣಿಕರು; ಅವರ ಮುಂದೆ ಇನ್ನೂ ನೂರು ಮೈಲಿಗಳಷ್ಟು ರೈಲುದಾರಿ ಪ್ರಯಾಣ ಮಾಡಬೇಕಾದದ್ದಿತ್ತು; ಅಂಥ ಕೆಲವರು, ಟಿಕೀಟುಗಳನ್ನು ತಮ್ಮ ಟೋಪಿಯಲ್ಲಿ ಸಿಕ್ಕಿಸಿಕೊಂಡು, ಲಘು ಕಾದಂಬರೀಗ್ರಂಥಗಳಲ್ಲಿ ವರ್ಣಿತವಾಗಿದ್ದ ಇಂಗ್ಲೆಂಡಿನ ಪ್ರಕೃತಿ ದೃಶ್ಯಗಳು, ಸಾಹಸಕಾರ್ಯಗಳು– ಇವುಗಳಲ್ಲಿ ತಲ್ಲೀನರಾಗಿ, 'ಡ್ಯೂಕ್' ಮತ್ತು 'ಅರ್ಲ್' ಪ್ರಭುಗಳೊಂದಿಗೆ ಜೊತೆಗೂಡಿದ್ದರು ಅಷ್ಟೊಂದು ಗಹನವಾದ ಗ್ರಂಥವ್ಯಾಸಂಗದಲ್ಲಿ ನಿರತರಾಗಲು ಹೆಚ್ಚು ಕಾಲಾವಕಾಶವಿಲ್ಲದಿದ್ದ ಮತ್ತೆ ಕೆಲವರು ಪ್ರಯಾಣಮಾರ್ಗದ ಅಲ್ಪಸ್ವಲ್ಪ ಬೇಸರವನ್ನು ಪೆನ್ನಿ ಬೆಲೆಯ ಸುದ್ದಿಪತ್ರಿಕೆಗಳ ವಾಚನದಿಂದ ಕಳೆದುಕೊಳ್ಳುತ್ತಿದ್ದರು. ಹುಡುಗಿಯ ಒಂದು ತಂಡ ಹಾಗೂ ಒಬ್ಬ ಯುವಕ ಬಂಡಿಯಲ್ಲಿ ಎದುರು ಬದುರಾಗಿ ಕುಳಿತು ಚೆಂಡಾಟವಾಡುತ್ತ ಅಪಾರವಾಗಿ ವಿನೋದಪಡುತ್ತಿದ್ದರು. ಅವರು ಚೆಂಡನ್ನು ಅತ್ತಿಂದಿತ್ತ ಎಸೆದಾಡುತ್ತ, ನಗೆಯ ಅಲೆಗಳನ್ನು ಎಬ್ಬಿಸುತ್ತಿದ್ದರು; ಅವುಗಳನ್ನು ಮೈಲಿಗಳ ಲೆಕ್ಕಾಚಾರದಿಂದ ಅಳೆಯಬಹುದಾಗಿತ್ತು: ಏಕೆಂದರೆ, ಆ ಚುರುಕಾದ ಚೆಂಡು ಹಾರುವುದಕ್ಕಿಂತ ವೇಗವಾಗಿ, ಈ ನಲಿದಾಡುವ ಆಟಗಾರರು ತಮ್ಮ ನಲಿವಿನ ಜಾಡನ್ನು ಬಹು

ಅವಳ ಸಹೋದರನಿಗೂ ಇದುವರೆಗೂ ಇದ್ದ ಸಂಬಂಧವು ಹೀಗೆ ಮಾರ್ಪಾಡಾಗುವಂತಾಯಿತು. ಮನೆಯಲ್ಲಿ, ಅವಳು ಅವನ ರಕ್ಷಕಳಾಗಿದ್ದಳು; ಇಲ್ಲಿ, ಕ್ಲಿಫರ್ಡ್ ಅವಳ ರಕ್ಷಕನಾಗಿದ್ದುದು ಮಾತ್ರವಲ್ಲದೆ, ತಮ್ಮ ಹೊಸ ಪರಿಸ್ಥಿತಿಗೆ ಅಗತ್ಯವಾದುದೆಲ್ಲವನ್ನೂ ವಿಚಿತ್ರವಾದ ತೀವ್ರಗತಿಯಲ್ಲಿ ಓಡುವ ಬುದ್ಧಿಯಿಂದ ಅರಿತುಕೊಳ್ಳುತ್ತಿದ್ದಂತೆ ಕಂಡು ಬಂದಿತು. ಅವನು ಇದ್ದಕ್ಕಿದ್ದಹಾಗೆ ಬೆರಗಿನ ಗರಹೊಡೆದು, ಅದರ ಪರಿಣಾಮವಾಗಿ ನವಪ್ರಾಯವನ್ನೂ ಬುದ್ಧಿಸಾಮರ್ಥ್ಯವನ್ನೂ ಪಡೆದುಬಿಟ್ಟಿದ್ದನು; ಅವಲ್ಲದಿದ್ದರೆ, ಕಡೆಯಪಕ್ಷ ಅವನ್ನು ಹೋಲುವ ಒಂದು ಮನಃಸ್ಥಿತಿಯನ್ನು ಹೊಂದಿದ್ದನು; ಅವೆರಡೂ ಶಕ್ತಿಗಳು ಜಾಡ್ಯಹಿಡಿದು, ಕ್ಷಣಿಕವಾಗಿದ್ದುವು ಎಂದರೂ ಸರಿಯೆ.

ರೈಲಿನ 'ಕಂಡಕ್ಟರು' (ಪ್ರಯಾಣಿಕರ ವಿಚಾರಕ) ಅವರ ಟಿಕೀಟುಗಳನ್ನು ಈಗ ವಿಚಾರಿಸಬಂದನು; ಹಣದ ಚೀಲವನ್ನು ಇಟ್ಟುಕೊಳ್ಳುವ ಹೊಣೆ ಹೊತ್ತಿದ್ದ ಕ್ಲಿಫರ್ಡ್ ಅವನ ಕೈಗೆ ಒಂದು ಬ್ಯಾಂಕಿನ ಹುಂಡಿಯನ್ನು ಇಟ್ಟನು; ಇತರರು ಹಾಗೆ ಮಾಡಿದ್ದನ್ನು ಅವನು ಕಂಡಿದ್ದನು.

"ಆ ಹೆಂಗಸರಿಗೂ ಮತ್ತು ನಿಮಗೂ ತಾನೆ? ಎಲ್ಲಿಯವರೆಗೆ?" ಎಂದು ಕಂಡಕ್ಟರು ಕೇಳಿದನು.

"ಅದು ಎಲ್ಲಿಯವರೆಗೆ ನಮ್ಮನ್ನು ಒಯ್ಯುತ್ತದೆಯೋ ಅಲ್ಲಿಯವರೆಗೆ. ಅದೇನು ಅಂತಹ ದೊಡ್ಡ ವಿಚಾರವಲ್ಲ. ನಾವು ಬರಿಯ ಸಂತೋಷಕ್ಕಾಗಿ ಪ್ರಯಾಣ ಹೊರಟಿದ್ದೇನೆ!" ಎಂದನು ಕ್ಲಿಫರ್ಡ್.

"ಸ್ವಾಮೀ, ನೀವು ಅದಕ್ಕಾಗಿ ಒಳ್ಳೆಯ ಭೇಷಾದ ದಿನವನ್ನೆ ಆರಿಸಿಕೊಂಡಿದ್ದೀರಿ" ಎಂದು ಬಂಡಿಯ ಎದುರುಗಡೆ ಕುಳಿತಿದ್ದ ಬೈರಿಗೆಯಂತಹ ತಿರುಪುಗಣ್ಣಿನ ವೃದ್ಧ ಮಹಾಶಯನೊಬ್ಬನು ನುಡಿದನು; ಕ್ಲಿಫರ್ಡ್ ಮತ್ತು ಅವನ ಜೊತೆಗಾತಿಯ ಪ್ರಯಾಣದ ಉದ್ದೇಶವನ್ನು ತಿಳಿಯಲು ಕುತೂಹಲಗೊಂಡಿದ್ದನೋ ಎಂಬಂತೆ ಆತ ಅವರ ಕಡೆ ನೋಡುತ್ತಿದ್ದನು: "ಮೂಡಲ ಮಳೆ ಹುಯ್ಯುತ್ತಿರುವಾಗ, ನನ್ನ ಅಭಿಪ್ರಾಯದಲ್ಲಿ, ಸಂತೋಷಪಡಲು ಅತ್ಯುತ್ತಮ ಅವಕಾಶ ಎಂದರೆ, ತನ್ನ ಸ್ವಂತಮನೆಯಲ್ಲಿ, ಒಲೆಗೂಡಿನಲ್ಲಿ ಉರಿಯುವ ಸೊಗಸಾದ ಸಣ್ಣ ಉರಿಯ ಪಕ್ಕದಲ್ಲಿ" ಎಂದನಾತ.

"ನೀವು ಹೇಳಿದ್ದನ್ನ ನಾನು ಪೂರ್ತಿ ಒಪ್ಪಲಾರೆ" ಎಂದು, ಆ ವೃದ್ಧ ಮಹಾಶಯನಿಗೆ ಮರ್ಯಾದೆಯಿಂದ ಮಣಿದು, ಆತ ಹಾಕಿದ್ದ ಸಂಭಾಷಣೆಯ ಜಾಡನ್ನು ಹಿಡಿದು ಕ್ಲಿಫರ್ಡ್ ನುಡಿದನು: "ನೀವು ಹೇಳಿದ್ದಕ್ಕೆ ವ್ಯತಿರಿಕ್ತವಾಗಿ

ಜಗುಳಿ ಮಾಯವಾಗಲಿ, ಬಿಟ್ಟು ಬಿಡು ಹೆಪ್ಸಿಬಾ, ನಾವು ಈ ಪ್ರಪಂಚದಲ್ಲಿ ಇಲ್ಲಿದ್ದೇವೆ– ಬದುಕಿನ ನಟ್ಟ ನಡುವೆ– ನಮ್ಮ ಜೊತೆಯ ಜನರ ಗುಂಪಿನ ನಡುವೆ! ನೀನು ನಾನು– ಇಬ್ಬರು ಸುಖವಾಗಿರೋಣ! ತಮ್ಮ ಚೆಂಡಾಟದಲ್ಲಿ ಮಗ್ನರಾಗಿರುವ ಆ ಯುವಕ, ಆ ಅಂದವಾದ ಹುಡುಗಿಯರು– ಅವರಷ್ಟೆ ಸುಖಿಗಳಾಗಿರೋಣ!"

"ಸುಖವಾಗಿ!" ಎಂದು ಯೋಚಿಸಿದಳು ಹೆಪ್ಸಿಬಾ; ಆ ಮಾತನ್ನು ಕೇಳಿ, ಹೆಪ್ಪುಗಟ್ಟಿದ್ದ ನೋವನ್ನು ಒಳಗೊಂಡಿದ್ದ ತನ್ನ ಜಡವಾದ ಭಾರವಾದ ಹೃದಯದ ಅರಿವು ತೀವ್ರವಾಗಿ ಅನುಭವಕ್ಕೆ ಬಂದಿತು ಅವಳಿಗೆ: "ಸುಖವಾಗಿ! ಅವನಾಗಲೇ ಹುಚ್ಚನಾಗಿದ್ದಾನೆ; ನಾನು ಪೂರ್ತಿ ಎಚ್ಚರವಾಗಿದ್ದೇನೆ ಎಂದು ಒಮ್ಮೆ ನಾನು ಭಾವಿಸಿಕೊಂಡರೆ ಮುಗಿಯಿತು; ನನಗೂ ಸಹ ಹುಚ್ಚು ಹಿಡಿದುಬಿಡುತ್ತೆ!"

ಸ್ಥಿರವಾಗಿ ನೆಲಸಿದ ಒಂದೇ ಭಾವನೆಯನ್ನು ಹುಚ್ಚು ಎನ್ನುವುದಾದರೆ, ಬಹುಶಃ ಅವಳಿಗೂ ಹುಚ್ಚಿಗೂ ಅಷ್ಟೇನೂ ದೂರದ ಅಂತರವಿರಲಿಲ್ಲ. ಬಹು ಬೇಗನೆ ಬಲು ದೂರ ಅವರು ಕಬ್ಬಿಣದ ಕಂಬಿಗಳ ಮೇಲೆ ಕಟಕಟ ಗಡಗಡ ಸದ್ದಿನೊಂದಿಗೆ ಸಾಗಿಹೋಗುತ್ತಿದ್ದ ವೇಳೆಯಲ್ಲೇ, ಹೆಪ್ಸಿಬಾಳ ಮಾನಸಿಕ ಚಿತ್ರಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಹೇಳುವುದಾದರೆ, ಪಿನ್ಚನ್ ಬೀದಿಯಲ್ಲಿ ಮೇಲಕ್ಕೂ ಕೆಳಕ್ಕೂ ಓಡಾಡುತ್ತಿದ್ದರು ಎಂದು ಹೇಳಬಹುದು. ಮೈಲಿಮೈಲಿಗಳ ದೃಶ್ಯ ವೈವಿಧ್ಯದ ನಡುವೆ, ಅವಳ ಪಾಲಿಗೆ ಯಾವ ನೋಟವೂ ಇರಲಿಲ್ಲ; ಅವಳು ಕಾಣುತ್ತಿದ್ದ ನೋಟಗಳೆಂದರೆ– ಪಾಚಿಗಟ್ಟಿದ್ದ, ಇಪ್ಪಾರುಗಳ ನಡುವಣ ಮೂಲೆಯೊಂದರಲ್ಲಿ ಬೆಳೆದಿದ್ದ ಕಳೆಗಿಡಗಳ ತಲೆಗುತ್ತಿ ಕಾಣಿಸುತ್ತಿದ್ದ, ಏಳು ಹಳೆಯ ಇಪ್ಪಾರು ಕೋಡುಗಳು; ಅಂಗಡಿಯ ಕಿಟಕಿ; ನ್ಯಾಯಮೂರ್ತಿ ಪಿನ್ಚನ್ನಿಗೆ ತೊಂದರೆಯಾಗದಂತೆ, ಅಂಗಡಿಯ ಬಾಗಿಲನ್ನು ಅಲ್ಲಾಡಿಸಿ ಕಿರುಗಂಟೆ ಬಹುಜೋರಾಗಿ ಗಣ ಗಣಿಸುವಂತೆ ಮಾಡುತ್ತಿದ್ದ ಒಬ್ಬ ಗಿರಾಕಿ! ಎಲ್ಲೆಲ್ಲಿಯೂ ಈ ಒಂದು ಹಳೆಯ ಮನೆಯೇ! ಅವಳು ಯಾವೆಡೆಯ ಮೇಲೆ ತನ್ನ ಎಸೆನೋಟ ಹಾಯಿಸಲಿ, ಅಲ್ಲಿ ಅದು ತನ್ನ ಭಾರಿಯಾದ, ತನಗೇ ಹೊರೆಯಾಗಿ ಕಾಣುತ್ತಿದ್ದ ಒಡಲನ್ನು,– ರೈಲುಗಾಡಿಯ ವೇಗವನ್ನೂ ಮೀರಿಸುವ ವೇಗದಿಂದ ಸಾಗಿಸಿ,– ಜಡವಾಗಿ ಕುಳಿತುಬಿಡುತ್ತಿತ್ತು. ಕ್ಲಿಫರ್ಡನ ಮನಸ್ಸಿನಂತೆ ಹೊಸ ಹೊಸ ಪ್ರಭಾವ ಮುದ್ರೆಗಳನ್ನು ಕೂಡಲೆ ಪಡೆಯುವಷ್ಟು ಮೆತುವಾಗಿರಲಿಲ್ಲ ಹೆಪ್ಸಿಬಾಳ ಮನಸ್ಸು. ಅವನದು ಹೇಗೆಂದರೆ ಹಾಗೆ ಹಾರುವ ಸ್ವಭಾವ; ಬೇರು ಸಹಿತ ಕಿತ್ತುಹಾಕಿಬಿಟ್ಟರೆ ಬಹಳ ಕಾಲ ಬದುಕಲಾರದ ಸಸ್ಯಜಾತಿಗೆ ಸೇರಿದವಳು ಇವಳು. ಅವಳಿಗೂ

ತಾತ್ಕಾಲಿಕವಾದ ಗುಡಿಸಿಲುಗಳಲ್ಲಿ, ಕೊಂಬೆಗಳ ಮಂಟಪಗಳಲ್ಲಿ, ವಾಸಿಸುತ್ತಿದ್ದರು; ಅವುಗಳನ್ನು ಕಟ್ಟುವುದು, ಹಕ್ಕಿಗೂಡು ಕಟ್ಟುವಷ್ಟು ಸುಲಭವಾಗಿತ್ತು; ಬೇಸಗೆಯ ಕೊನೆಯ ಕರ್ಕಾಟಕ ಸಂಕ್ರಾಂತಿಯಲ್ಲಿ ಅಂತಹ ಸೊಗಸಾದ ವಸತಿಗಳು ಕೈಗಳಿಂದ ನಿರ್ಮಿತವಾದುವು ಎನ್ನುವುದಕ್ಕಿಂತ ತಾವಾಗಿ ಬೆಳೆದುವು ಎನ್ನಬೇಕಾಗಿರುವಾಗ, ಅದನ್ನು ಕಟ್ಟಡ ಎಂದೇ ಕರೆಯಬೇಕಾದರೆ, ಅದನ್ನು ಕಟ್ಟಿಕೊಂಡರು ಎಂದು ಹೇಳಬಹುದು; ಎಲ್ಲಿ ಹಣ್ಣು ಹಂಪಲು ಹೇರಳವಾಗಿದ್ದುವೋ, ಎಲ್ಲಿ ಮೀನೂ ಬೇಟೆಯ ಮೃಗಗಳೂ ಸಮೃದ್ಧವಾಗಿದ್ದುವೋ, ಎಲ್ಲಿ ಸರೋವರ ಕಾಡು ಬೆಟ್ಟ ಗುಡ್ಡ– ಇವುಗಳ ಸೊಗಸಾದ ವಿನ್ಯಾಸವು ಬೇರೆಯೆಡೆಗಳಲ್ಲಿರುವುದಕ್ಕಿಂತ ಒಂದು ಬಣ್ಣ ಮಿಗಿಲಾಗಿ ಸೌಂದರ್ಯ ದೃಷ್ಟಿಯನ್ನು ತಣಿಸುತ್ತಿದ್ದಿತೋ ಅಲ್ಲಿ ಅವರು ತಮ್ಮ ನಿವಾಸಗಳನ್ನು ನಿರ್ಮಿಸಿಕೊಳ್ಳಲು ನಿಸರ್ಗವು ನೆರವಾಗಿತ್ತು ಎನ್ನೋಣ. ಅಲ್ಲಿನ ಬದುಕಿನಲ್ಲಿ ಒಂದು ಮೋಹಕ ಗುಣವಿತ್ತು; ಮಾನವನು ಅದನ್ನು ತೊರೆದಂದಿನಿಂದ, ಆ ಗುಣ ಕಣ್ಮರೆಯಾಗಿ ಹೋಗಿದೆ. ಅದು ತನಗಿಂತ ಮೇಲಾದುದನ್ನು ಸಂಕೇತಿಸುತ್ತಿತ್ತು. ಆ ಬದುಕಿನಲ್ಲಿ ಕುಂದುಕೊರತೆಗಳೂ ಇದ್ದುವು: ಉದಾಹರಣೆಗೆ, ಹಸಿವು ಬಾಯಾರಿಕೆ; ಹಿತಕರವಲ್ಲದ ಹವಾಗುಣ; ಸುಡುವ ಬಿಸಿಲು; ಫಲವತ್ತಾದ ಹಾಗೂ ಸುಂದರವಾದ ಸ್ಥಳಗಳನ್ನು ಅಪೇಕ್ಷಿಸಿ ಅಲ್ಲಿಗೆ ಹೋಗಬೇಕಾದರೆ ನಡುವೆ ವಿಕಾರವಾದ ಬಂಜರುನಾಡಿನ ಮೇಲೆ ಮಾಡಬೇಕಾಗಿದ್ದ ಆಯಾಸಕರವಾದ, ಅಡಿಗಳಿಗೆ ಹೊಪ್ಪಳೆ ಬರಿಸುವ ನಿಡುಪಯಣಗಳು. ಆದರೆ, ನಮ್ಮ ಕಲ್ಪನೆಯ ಏರುವ ಸುರುಳಿಸುತ್ತಿನ ವ್ಯವಸ್ಥೆಯಲ್ಲಿ, ನಾವು ಇವನ್ನೆಲ್ಲಾ ತಪ್ಪಿಸಿಕೊಳ್ಳುತ್ತೇವೆ. ರೈಲಿನ ಸಿಳ್ಳು ಸಂಗೀತದಂತೆ ಇಂಪಾಗಿರುವಂತೆ ಅದನ್ನು ಉತ್ತಮಪಡಿಸಿ, ಅದರ ಗಡಗಡ ಸದ್ದಿನ ಕಿರಿಕಿರಿಯನ್ನು ತಪ್ಪಿಸುವುದು ಸಾಧ್ಯವಾದರೆ, ಈ ರೈಲುಮಾರ್ಗಗಳು ಖಂಡಿತವಾಗಿಯೂ ಕಾಲಪುರುಷನು ನಮಗೆ ನೀಡಿರುವ ಅತ್ಯಂತ ದೊಡ್ಡ ವರ. ಅವು ನಮಗೆ ರೆಕ್ಕೆಗಳನ್ನು ಕೊಟ್ಟಿವೆ; ಅವು ಯಾತ್ರೆಯ ಕಾಲದ ಶ್ರಮವನ್ನೂ ಧೂಳನ್ನೂ ನಾಶ ಮಾಡುತ್ತವೆ; ಅವು ಪ್ರಯಾಣವನ್ನು ಉದಾತ್ತಗೊಳಿಸುತ್ತದೆ! ಸ್ಥಳದಿಂದ ಸ್ಥಳಕ್ಕೆ ಸಾಗಿಹೋಗುವುದು ಇಷ್ಟು ಸುಖಕರವಾಗಿರುವಾಗ, ಒಂದೇ ಸ್ಥಳದಲ್ಲಿ, ನಿಲ್ಲಲು ಯಾರಿಗೇ ಆಗಲಿ ಇರುವ ಆಕರ್ಷಣೆಯಾದರೂ ಏನು? ಆದ್ದರಿಂದ, ತನ್ನೊಡನೆ ಇಷ್ಟ ಬಂದಾಗ ಒಯ್ಯಲಾಗುವುದಕ್ಕಿಂತ ಹೆಚ್ಚು ಹೊರೆಯೆನಿಸುವ ವಾಸಸ್ಥಳವನ್ನು ಅವರೇಕೆ ಕಟ್ಟಿಕೊಳ್ಳಬೇಕು? ಒಂದು ದೃಷ್ಟಿಯಲ್ಲಿ, ಅವನು ಎಲ್ಲಿಯೂ ವಾಸಮಾಡಬೇಕಾಗಿಯೆ ಇಲ್ಲ; ಇನ್ನೂ ಉತ್ತಮವಾದ ದೃಷ್ಟಿಯಲ್ಲಿ, ಎಲ್ಲಿ ಅವನಿಗೆ ಸುಂದರವಾದ,

ನನಗೆ ಈಗ ತಾನೆ ಹೊಳೆದಿರುವುದೇನೆಂದರೆ, ಈ ರೈಲುಮಾರ್ಗವನ್ನು ಕಂಡುಹಿಡಿದಿರುವುದು ತುಂಬ ಮೆಚ್ಚತಕ್ಕದ್ದು– ಅದರಲ್ಲಿ ವೇಗ ಮತ್ತು ಅನುಕೂಲತೆಗಳ ದೃಷ್ಟಿಯಿಂದ ಇನ್ನೂ ಆಗಲೇಬೇಕಾದ ಅಭಿವೃದ್ಧಿಗಳು ಬೇಕಾದಷ್ಟು ಇವೆ; ಇವೊತ್ತಲ್ಲ ನಾಳೆ ಅದು, ಮನೆ ಮತ್ತು ಮನೆಯ ಒಲೆಗೂಡು ಎಂಬ ಹಳೆಯ ಕಂದಾಚಾರದ ಭಾವನೆಗಳನ್ನು ಹೊಡೆದಟ್ಟಿ, ಅವುಗಳ ಸ್ಥಾನದಲ್ಲಿ ಇನ್ನೂ ಉತ್ತಮವಾದುವನ್ನು ತರುವುದು ನಿಶ್ಚಯ."

"ವ್ಯವಹಾರಜ್ಞಾನದ ದೃಷ್ಟಿಯಿಂದ ನೋಡುವುದಾದರೆ, ತನ್ನ ಸ್ವಂತ ದಿವಾನಖಾನೆ ಮತ್ತು ಒಲೆಗೂಡಿನ ಮೂಲೆ– ಇವಕ್ಕಿಂತ ಮೇಲಾದದ್ದು ಯಾವಾತನಿಗೇ ಆಗಲಿ ಬೇರೆ ಏನಿದೆ?" ಎಂದು, ಆ ವೃದ್ಧ ಮಹಾಶಯನು ಕೆಲಮಟ್ಟಿಗೆ ಪರೀಕ್ಷಿಸುವ ಉದ್ದೇಶದಿಂದ ಕೇಳಿದನು.

ಕ್ಲಿಫರ್ಡ್ ಇಂತು ಉತ್ತರಿಸಿದ:

"ಅನೇಕ ಒಳ್ಳೆಯ ಜನ ಅವಕ್ಕೆ ಆರೋಪಿಸುವ ಗುಣ ಈ ವಸ್ತುಗಳಿಗೆ ಇಲ್ಲ. ಕೆಲವು ಸಾರವತ್ತಾದ ಮಾತುಗಳಲ್ಲಿ ಹೇಳುವುದಾದರೆ, ಒಂದು ಕೀಳ್ತರದ ಉದ್ದೇಶವನ್ನು ಅವು ಅಪ್ರಯೋಜಕವಾದ ರೀತಿಯಲ್ಲಿ ನೆರವೇರಿಸಿವೆ ಎಂದು ಹೇಳಬಹುದು. ಆಶ್ಚರ್ಯಕರವಾದ ರೀತಿಯಲ್ಲಿ ಹೆಚ್ಚಿರುವ, ಇನ್ನೂ ಹೆಚ್ಚುತ್ತಿರುವ, ನಮ್ಮ ಈ ರೈಲುಪ್ರಯಾಣದ ಸೌಕರ್ಯಗಳು ನಮ್ಮನ್ನು ಮತ್ತೆ ಅಲೆದಾಡುವ ಪೂರ್ವಸ್ಥಿತಿಗೆ ಸುತ್ತಿಸಿಕೊಂಡು ತರುವುದು ಖಂಡಿತ; ಇದು ನನ್ನ ಭಾವನೆ, ಸ್ವಾಮೀ, ಎಲ್ಲ ಮಾನವಪ್ರಗತಿಯೂ ಒಂದು ವೃತ್ತಾಕೃತಿಯಲ್ಲಿದೆ; ಅಥವಾ ಇನ್ನೂ ನಿಷ್ಕೃಷ್ಟವಾದ, ಸುಂದರವಾದ ಆಕೃತಿಗೆ ಹೋಲಿಸುವುದಾದರೆ, ಮೇಲೇರುವ ಸುರುಳಿಸುತ್ತಿನ ವಂಕಿಮಾಕೃತಿಯಲ್ಲಿದೆ; ಇದು ನಿಮಗೆ ಗೊತ್ತಿದೆ, ನಿಮ್ಮ ಸ್ವಂತ ಅನುಭವದಲ್ಲಿ ನೀವಿದನ್ನು ಪರಿಶೀಲಿಸಿರಬೇಕು. ನಾವು ನೇರವಾಗಿ ಮುಂದೆ ಸಾಗುತ್ತಿದ್ದೇವೆ, ಪ್ರತಿ ಹೆಜ್ಜೆಗೂ ಪೂರ್ತಿಯಾಗಿ ಹೊಸದಾದ ಕಾರ್ಯಕ್ಷೇತ್ರವನ್ನು ಮುಟ್ಟುತ್ತಿದ್ದೇವೆ ಎಂದು ಭಾವಿಸಿಕೊಳ್ಳುತ್ತೇವೆ; ಆದರೆ, ವಾಸ್ತವವಾಗಿ, ಬಹುಕಾಲದ ಹಿಂದೆಯೇ ಪರೀಕ್ಷೆ ಮಾಡಿ ಕೈಬಿಟ್ಟದ್ದಕ್ಕೇ ಹಿಂದಿರುಗುತ್ತಿರುತ್ತೇವೆ; ಆದರೆ ಈಗ ಅದು ಸೂಕ್ಷ್ಮಸ್ವರೂಪವನ್ನು ಹೊಂದಿ, ಸಂಸ್ಕಾರಗೊಂಡು, ಪರಿಪೂರ್ಣತೆಯ ಆದರ್ಶವನ್ನು ಮುಟ್ಟಿರುವುದಾಗಿ ಕಾಣುತ್ತೇವೆ. ಗತಕಾಲವೆಂದರೆ, ವರ್ತಮಾನ ಕಾಲದ ಹಾಗೂ ಭವಿಷ್ಯತ್ ಕಾಲದ ಒಂದು ಒರಟಾದ, ಇಂದ್ರಿಯಗೋಚರವಾದ ಮುಂಗಾಣ್ಕೆ ಮಾತ್ರ. ಈ ಸತ್ಯವನ್ನು ಈಗ ಚರ್ಚೆಯಾಗುತ್ತಿರುವ ವಿಷಯಕ್ಕೆ ಅನ್ವಯಿಸೋಣ: ನಮ್ಮ ಮಾನವ ಕುಲದ ಮುಂಚಿನ ಯುಗಗಳಲ್ಲಿ, ಮನುಷ್ಯರು

ಬೆಂಕಿಗೂಡಿನ ಸುತ್ತಮುತ್ತ ನೆರೆದು, ಮನೆಮಂದಿಯ ಬದುಕನ್ನು ಹೊಲೆಗೆಡಿಸುತ್ತವೆ. ಹಳೆಯ ಮನೆಯ ವಾತಾವರಣಕ್ಕಿಂತ ಅನಿಷ್ಟಕರವಾದದ್ದು ಬೇರೆ ಯಾವುದೂ ಇಲ್ಲ; ಅದು ಸತ್ತುಹೋದ ಪೂರ್ವಿಕರಿಂದಲೂ ಬಂಧುಬಳಗದವರಿಂದಲೂ ವಿಷಮಯವಾಗಿ ಪರಿಣಮಿಸಿರುತ್ತದೆ. ನಾನು ಬಲ್ಲ ವಿಚಾರವಾಗಿಯೇ ಮಾತಾಡುತ್ತಿದ್ದೇನೆ. ನೆನಪಿರುವ ಮಟ್ಟಿಗೆ ನನಗೆ ಪರಿಚಯವಾದ ಒಂದು ಮನೆಯಿದೆ; ಚೂಪು ಶಿಖರದ ಇಪ್ಪಾರಿನ (ಅಂಥ ಏಳು ಇಪ್ಪಾರುಗಳಿವೆ), ಮುಂಚಾಚಿರುವ ಮಹಡಿಯಂತಸ್ತಿನ ಕಟ್ಟಡ ಅದು; ನಮ್ಮ ಹಳೆಯಕಾಲದ ಪಟ್ಟಣಗಳಲ್ಲಿ ನೀವು ಆಗಾಗ್ಗೆ ಅಂಥದನ್ನು ಕಾಣಬಹುದು; ಮಣ್ಣುತಿಂದು, ಗಾಳಿ ಮಳೆಯಿಂದ ಲೊಡ್ಡು ಲೊಡ್ಡಾಗಿ, ಕಿರುಗುಟ್ಟುತ, ಅಲ್ಲಾಡುವ, ತೇವವಿಡಿದ, ಕತ್ತಲುಗವಿದ, ಮಂಕು ಕವಿದುಕೊಂಡ, ಹಾಳು ಸುರಿಯುವ, ಹಳೆಯ ಪಾತಾಳಗವಿ, ಅದು! ಅದರ ಮುಖಮಂಟಪದ ಮೇಲ್ಗಡೆ ಒಂದು ಕಮಾನು ಕಿಟಕಿ; ಒಂದು ಪಕ್ಕದಲ್ಲಿ ಒಂದು ಚಿಕ್ಕ ಅಂಗಡಿ ಬಾಗಿಲು; ಮುಂದುಗಡೆ, ಗೋಳು ಹೇಳಿಕೊಳ್ಳುವ ಒಂದು ಮಹಾ ಎಲ್ಮ್ ವೃಕ್ಷ! ನೋಡಿ ಸ್ವಾಮೀ, ನನ್ನ ಯೋಚನೆಗಳು ಈ ಏಳು ಇಪ್ಪಾರಿನ ಮಹಲಿನ ಕಡೆಗೆ ಹಿಂದಿರುಗಿದಾಗಲೆಲ್ಲಾ– ಆ ಸಂಗತಿ ಅಷ್ಟು ವಿಚಿತ್ರವಾಗಿದೆ, ನಾನು ಅದನ್ನು ಹೇಳಲೇಬೇಕು– ಆ ಕೂಡಲೇ, ಒಬ್ಬ ವಯಸ್ಸಾದ ಮನುಷ್ಯನ ನೋಟ ಅಥವಾ ಚಿತ್ರ ನನ್ನ ಕಣ್ಣಿಗೆ ಕಟ್ಟುತ್ತೆ: ಅವನ ಮುಖಮುದ್ರೆ ವಿಶೇಷವಾಗಿ ಕಠೋರ; ಆತ ಒಂದು ಓಕ್ ಮರದ ತೋಳುಕುರ್ಚಿಯಲ್ಲಿ ಕುಳಿತಿದ್ದಾನೆ; ಸತ್ತು, ಸತ್ತು ಹೆಣವಾಗಿ ಕುಳಿತಿದ್ದಾನೆ, ಸ್ವಾಮೀ! ಅವನ ಷರಟಿನ ಎದೆಭಾಗದ ಮೇಲೆ ರಕ್ತ ಹರಿದು ವಿಕಾರವಾಗಿ ಕಾಣುತ್ತಿದೆ! ಸತ್ತಿದ್ದಾನೆ, ಆದರೆ ಕಣ್ಣು ತೆರೆದಿವೆ! ನನಗೆ ಜ್ಞಾಪಕ ಇರುವಮಟ್ಟಿಗೆ, ಮನೆಯನ್ನೆಲ್ಲಾ ಹೊಲೆಗೆಡಿಸುತ್ತಿದ್ದಾನೆ ಆತ! ನಾನು ಅಲ್ಲಿ ಏಳಿಗೆ ಹೊಂದಲಾರೆ, ಸುಖವಾಗಿರಲಾರೆ; ನಾನು ಏನು ಕೆಲಸಮಾಡಬೇಕು, ಏನನ್ನು ಹೊಂದಲಾರೆ, ಸುಖವಾಗಿರಲಾರೆ; ನಾನು ಏನು ಕೆಲಸಮಾಡಬೇಕು, ಏನನ್ನು ಭೋಗಿಸಬೇಕು ಎಂದು ದೇವರ ಇಚ್ಛೆ ಇದೆಯೋ ಅದನ್ನು ಅಲ್ಲಿ ಮಾಡಲಾರೆ, ಭೋಗಿಸಲಾರೆ!"

ಅವನ ಮುಖ ಕಪ್ಪಿಟ್ಟು, ಕುಗ್ಗಿ ಹೋಗಿ, ಬತ್ತಿ ಬಾಡಿ ಮುಪ್ಪಿಟ್ಟಂತೆ ಕಂಡುಬಂದಿತು.

"ಸಾಧ್ಯವಾಗಲಿಲ್ಲ, ಸ್ವಾಮೀ, ಎಂದಿಗು ನನಗೆ ಸಾಧ್ಯವಾಗಲಿಲ್ಲ. ಉಲ್ಲಾಸದಿಂದ ಉಸಿರಾಡುವುದಕ್ಕೇ ಆಗಲಿಲ್ಲ ನನಗೆ ಅಲ್ಲಿ!" ಎಂದು ಮತ್ತೆ ಹೇಳಿದ ಅವನು.

"ಸಾಧ್ಯವಿಲ್ಲವೆಂದು ನನಗೂ ತೋರುತ್ತೆ. ನಿಮ್ಮ ತಲೆಯನ್ನು ಆ ಭಾವನೆ

ಯೋಗ್ಯವಾದ ನೆಲೆ ದೊರಕುವುದೋ ಅಲ್ಲಿ ಅವನು ಸುಲಭವಾಗಿ ವಾಸಮಾಡ ಬಹುದು. ಹೀಗಿರುವಾಗ, ಇಟ್ಟಿಗೆ, ಕಲ್ಲು ಮತ್ತು ಹುಳುತಿಂದ ಮರಗಳ ನಡುವೆ ಅವನೇಕೆ ಯಾವಜ್ಜೀವವೂ ಸೆರೆಯಾಳಾಗಿ ನರಳಬೇಕು?"

ಕ್ಲಿಫರ್ಡ್ ತನ್ನ ಈ ಸಿದ್ಧಾಂತವನ್ನು ಹೊರಗೆಡಹಿದಾಗ ಅವನ ಮುಖಮುದ್ರೆ ಬೆಳಗಿತು; ತಾರುಣ್ಯ ಸಹಜ ಲಕ್ಷಣವೊಂದು ಒಳಗಿಂದ ಹೊಮ್ಮಿ, ವಯೋನುಗುಣವಾದ ಸುಕ್ಕುಗಳನ್ನೂ ವಿವರ್ಣವಾದ ನಿಸ್ತೇಜವನ್ನೂ ಒಂದು ಪಾರದರ್ಶಕವಾದ ಮುಸುಕಾಗಿ ಮಾರ್ಪಡಿಸಿಬಿಟ್ಟಿತು. ನಲಿದಾಡುತ್ತಿದ್ದ ಹುಡುಗಿಯರು ಚೆಂಡನ್ನು ನೆಲದ ಮೇಲೆ ಕೆಡವಿಬಿಟ್ಟು, ಅವನನ್ನೆ ನಿಟ್ಟಿಸಿ ನೋಡಿದರು. ಅವನ ಕೂದಲು ನರೆತುಹೋಗುವುದಕ್ಕೆ ಮುಂಚೆ, ಕಣತಲೆಯ ಮೇಲೆ ಕಾಕಪಾದ* ಮೂಡುವ ಮುನ್ನ, ಈಗ ಜೀರ್ಣಶೀರ್ಣವಾಗುತ್ತಿರುವ ಈ ಮನುಷ್ಯ ಹಲವಾರು ಹೆಣ್ಣುಗಳ ಎದೆಯ ಮೇಲೆ ತನ್ನ ಮುಖಮುದ್ರೆಯ ಅಚ್ಚನ್ನು ಒತ್ತಿರಬೇಕು ಎಂದು ಅವರು ಬಹುಶಃ ತಮ್ಮ ತಮ್ಮಲ್ಲಿಯೇ ಹೇಳಿಕೊಂಡಿರಬೇಕು. ಆದರೆ, ಅಯ್ಯೊ, ಅವರಿಗೇನು ಗೊತ್ತು ಪಾಪ! ಅವನ ಮುಖ ಚೆಲುವಾಗಿದ್ದಾಗ ಅದನ್ನು ಯಾವ ಹೆಣ್ಣಿನ ಕಣ್ಣೂ ನೋಡಿರಲಿಲ್ಲ!

"ಯಾವ ಸ್ಥಿರವಾದ ನೆಲೆಯೂ ಇಲ್ಲದೆ, ಎಲ್ಲೆಲ್ಲಿಯೂ ವಾಸ ಮಾಡುತ್ತಿರು ವಂತಹ ಸ್ಥಿತಿಯನ್ನು ಉತ್ತಮವಾದ ಪರಿಸ್ಥಿತಿ ಎಂದು ನಾನು ಹೇಳಲಾರೆ!" ಎಂದು ಕ್ಲಿಫರ್ಡನ ಹೊಸ ಪರಿಚಯದ ವ್ಯಕ್ತಿ ಅಭಿಪ್ರಾಯಪಟ್ಟನು.

"ನೀವು ಹಾಗೆ ಹೇಳುವುದಿಲ್ಲವೆ!" ಎಂದು ಅದ್ಭುತಶಕ್ತಿಯಿಂದ ಕ್ಲಿಫರ್ಡ್ ಉದ್ಗರಿಸಿದನು: "ಆ ವಿಚಾರ ನನಗೆ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ– ಈಗ ಆಕಾಶದಲ್ಲಿ ಅದು ಇಲ್ಲವಷ್ಟೆ– ಅದೇನೆಂದರೆ: ಗಾರೆಗಚ್ಚಿನಿಂದ ಭದ್ರಪಡಿಸಿದ ಈ ಇಟ್ಟಿಗೆ ಕಲ್ಲುಗಳ ರಾಶಿಗಳು, ಇಲ್ಲವೆ ದಪ್ಪ ದಪ್ಪ ಮೊಳೆ ಜಡಿದು ಒಟ್ಟು ಸೇರಿಸಿದ ಈ ಕೊಯ್ದ ಮರಗಳು– ಇವನ್ನೆಲ್ಲಾ ಬಹು ಪ್ರಯಾಸದಿಂದ ಒಟ್ಟಿಗೆ ಅಳವಡಿಸಿ, ತಮ್ಮನ್ನು ತಾವೇ ಚಿತ್ರಹಿಂಸೆಗೆ ಒಳಪಡಿಸಿಕೊಂಡು, ಅವನ್ನು ಕಟ್ಟಡ ಮನೆ ಎಂದು ಕರೆದುಕೊಳ್ಳುತ್ತಾರೆ ಜನ; ಮಾನವನ ಸುಖದ ಹಾಗೂ ಏಳಿಗೆಯ ಹಾದಿಯಲ್ಲಿ ಅತ್ಯಂತ ಭಾರಿ ಅಡಚಣೆ ಎಂದರೆ ಅವೇ! ಆತ್ಮಕ್ಕೆ ಗಾಳಿ ಬೇಕು, ಸ್ವಾಮೀ; ಅಡ್ಡಗಲ ಬೀಸುತ್ತಿರಬೇಕು ಅದು, ಆಗಾಗ್ಗೆ ಬದಲಾಯಿಸುತ್ತಿರಬೇಕು. ಸಾವಿರ ಮಡಿಯಷ್ಟು ವಿವಿಧ ರೀತಿಗಳಲ್ಲಿ ಜಾಡ್ಯ ಮುಸುಕಿದ ದುಷ್ಟ ಪ್ರಭಾವಗಳು

---

* ಕಾಗೆಯ ಹೆಜ್ಜೆ ಗುರುತಿನಂತಹ ತಹ ಮೂರು ಸುಕ್ಕುಗೆರೆ (Crow's feet).

ಎಂದುಕೊಳ್ಳುತ್ತಾರೆ ಅವರು" ಎಂದು ಅವನ ಅಕ್ಕ ಪಿಸುಗುಟ್ಟಿದಳು.

"ಸುಮ್ಮನಿರಬೇಕಾದವಳು ನೀನು, ಹೆಪ್ಸಿಬಾ! ಅವರು ಏನೆಂದುಕೊಂಡರೂ ಚಿಂತೆಯಿಲ್ಲ. ನನಗೇನೂ ಹುಚ್ಚು ಹಿಡಿದಿಲ್ಲ. ಈ ಮೂವತ್ತು ವರ್ಷಗಳಲ್ಲಿ ಮೊತ್ತಮೊದಲ ಸಲ, ನನ್ನ ಭಾವನೆಗಳು ಉಕ್ಕಿಬಂದು, ಅವಕ್ಕೆ ತಕ್ಕ ಮಾತುಗಳು ಒದಗಿಬರುತ್ತಿವೆ. ನಾನು ಮಾತಾಡಲೇಬೇಕು, ಮಾತಾಡುತ್ತೇನೆ" ಎಂದು ಅವನು ಮಾರುತ್ತರಕೊಟ್ಟನು.

ಹೀಗೆ ಹೇಳಿ, ಅವನು ಮತ್ತೆ ಆ ವೃದ್ಧ ಮಹಾಶಯನ ಕಡೆಗೆ ತಿರುಗಿ, ಸಂಭಾಷಣೆಯನ್ನು ಮುಂದುವರಿಸಿದನು. ಅವನು ನುಡಿದ:

"ಹೌದು ಸ್ವಾಮಿ, ತಲೆಯ ಮೇಲಿನ ಸೂರು, ಒಲೆಯ ಕಲ್ಲು– ಈ ಮಾತುಗಳು ಬಹಳ ಕಾಲದಿಂದ ಯಾವುದೋ ಪವಿತ್ರ ಭಾವನೆಗೆ ಸಂಕೇತವಾಗಿ ನಿಂತಿವೆ; ಆದರೆ ಇವು ಬೇಗನೆಯೇ ಜನರ ನಿತ್ಯಬಳಕೆಯಿಂದ ಹೊರಟುಹೋಗಿ, ಮರೆತುಹೋಗುತ್ತವೆ; ಇದು ನನ್ನ ದೃಢನಂಬಿಕೆ, ಹಾಗೂ ಆಶೆ. ದಯವಿಟ್ಟು ಒಂದು ಕ್ಷಣಕಾಲ ಇದನ್ನು ಮನಸ್ಸಿಗೆ ತಂದುಕೊಳ್ಳಿ: ಇದೊಂದು ಮಾರ್ಪಾಟಿನಿಂದ ಮಾನವಜಾತಿಯ ದುಷ್ಕೃತ್ಯದ ಎಷ್ಟೊಂದು ಪಾಲು ಧ್ವಂಸವಾಗಿಹೋಗುತ್ತದೆ! ನಾವು ಯಾವುದನ್ನು ಸ್ಥಿರಾಸ್ತಿ ಎಂದು ಕರೆಯುತ್ತೇವೆಯೋ– ಒಂದು ಮನೆ ಕಟ್ಟಿಕೊಳ್ಳಲು ಅಗತ್ಯವಾದ ಗಟ್ಟಿನೆಲ– ಅದೇ ವಿಶಾಲವಾದ ಅಸ್ತಿಭಾರ, ಈ ಪ್ರಪಂಚದ ಬಹುಮಟ್ಟಿನ ಎಲ್ಲ ಪಾಪಕೃತ್ಯಕ್ಕೂ ತಳಪಾಯ. ತಾನು ಸಾಯುವುದಕ್ಕಾಗಿ, ಹಾಗೂ ವಂಶದವರು ಕ್ಲೇಶಪಡುವುದಕ್ಕಾಗಿ, ಒಂದು ದೊಡ್ಡದಾದ, ಮಂಕುಗವಿದ, ಕತ್ತಲೆಕೋಣೆಗಳುಳ್ಳ ಭವ್ಯಮಂದಿರವನ್ನು ಕಟ್ಟುವುದಕ್ಕಾಗಿಯೆ ಮನುಷ್ಯ ಯಾವ ಅನ್ಯಾಯವನ್ನು ಬೇಕಾದರೂ ಮಾಡುತ್ತಾನೆ– ಕಗ್ಗಲ್ಲಿನಷ್ಟು ಕಠಿನವಾದ, ಅಷ್ಟೇ ಭಾರವಾಗಿ ತನ್ನ ಆತ್ಮದ ಮೇಲೆ ಅನಂತಕಾಲದವರೆಗೆ ಅಗತುಕುಳಿತಿರುವ ಕ್ರೌರ್ಯದ ಅಪಾರರಾಶಿಯನ್ನೇ ಬೇಕಾದರೂ ಅವನು ಗುಡ್ಡೆ ಹಾಕುತ್ತಾನೆ. ಅವನು ತನ್ನ ಸತ್ತ ಹೆಣವನ್ನು ಮನೆಯ ಅಡಿಪಾಯದ ಕೆಳಗಿಟ್ಟು, ತನ್ನ ಸಿಡುಕುಮೋರೆಯ ಚಿತ್ರವನ್ನು ಗೋಡೆಯಮೇಲೆ ತೂಗಹಾಕುತ್ತಾನೆ; ಹೀಗೆ, ತನ್ನನ್ನು ತಾನು ದುರ್ದೈವದ ಅಪರಾವತಾರವಾಗಿ ಪರಿವರ್ತಿಸಿಕೊಂಡ ಮೇಲೆ, ತನ್ನ ಮರಿಮಕ್ಕಳ ಮರಿಮಕ್ಕಳು ಅಲ್ಲಿ ಸುಖವಾಗಿರಲಿ ಎಂದು ನಿರೀಕ್ಷಿಸುತ್ತಾನೆ! ನಾನು ಹುಚ್ಚು ಹುಚ್ಚಾಗಿ ಮಾತಾಡುತ್ತ ಇಲ್ಲ. ನನ್ನ ಬಗೆಗಣ್ಣಿನ ಮುಂದೆ ಅಂಥದೇ ಒಂದು ಮನೆಯಿದೆ!"

"ಸ್ವಾಮಿ, ಹಾಗಿದ್ದಮೇಲೆ, ಅದನ್ನು ಬಿಟ್ಟು ಬರುವುದರಲ್ಲಿ ನಿಮ್ಮ ತಪ್ಪೇನೂ ಇಲ್ಲ" ಎಂದನು ಆ ವೃದ್ಧ ಮಹಾಶಯ; ಆ ವಿಷಯವನ್ನು ಬಿಟ್ಟುಬಿಡಲು

ಹೊಕ್ಕಿರುವಾಗ, ಹಾಗೆ ನಾನು ಊಹಿಸಲೂ ಆರೆ!" ಎಂದು ಆ ವೃದ್ಧ ಮಹಾಶಯನು ಕ್ಲಿಫರ್ಡನ ಮೇಲೆ ಉತ್ಸುಕತೆಯಿಂದ ಕಣ್ಣಾಡಿಸುತ್ತಾ, ಸ್ವಲ್ಪ ಶಂಕೆಯಿಂದಲೇ ನುಡಿದನು.

"ಖಂಡಿತ ಇಲ್ಲ" ಎಂದು ಕ್ಲಿಫರ್ಡ್ ಮುಂದುವರಿಸಿದನು: "ಆ ಮನೆಯನ್ನು ಬುಡಮುಟ್ಟಿ ಉರುಳಿಸಿಬಿಟ್ಟರೆ, ಇಲ್ಲವೆ ಅದು ಸುಟ್ಟು ಭಸ್ಮವಾಗಿ ಹೋದರೆ, ಹಾಗಾದರೆ ಭೂಭಾರ ಕಡಮೆಯಾಗಿ ಅದರ ತಳಗಟ್ಟಡದ ಜಾಗದಲ್ಲಿ ಹೇರಳವಾಗಿ ಹುಲ್ಲು ಬೆಳಸಿಬಿಟ್ಟರೆ, ಆಗಲೀಗ ನನ್ನ ಮನಸ್ಸಿನ ಭಾರ ಕಡಮೆಯಾಗುತ್ತದೆ. ಎಂದರೆ, ಆ ಸ್ಥಳಕ್ಕೆ ಎಂದೇ ಆಗಲಿ ಮತ್ತೆ ಭೇಟಿ ಕೊಡುವ ಉದ್ದೇಶ ನನಗಿದೆ ಎಂದು ತಿಳಿಯಬೇಡಿ! ಸ್ವಾಮೀ, ಏಕೆನ್ನುವಿರೋ, ನಾನು ಅದರಿಂದ ಎಷ್ಟೆಷ್ಟು ದೂರ ಆಚೆಗೆ ಹೊರಟುಹೋಗುತ್ತೇನೆಯೋ ಅಷ್ಟೂ ಅಷ್ಟು ಹೆಚ್ಚಾಗಿ ಸಂತೋಷ, ಲಘುವಾದ ಹೊಸತನ, ಎದೆಯ ಹಿಗ್ಗು, ಬುದ್ಧಿಯ ಓಟ, ತಾರುಣ್ಯ– ಒಂದು ಮಾತಿನಲ್ಲಿ, ನನ್ನ ತಾರುಣ್ಯ, ನನ್ನ ಪ್ರಾಯ ಇವೆಲ್ಲಾ ಹಿಂದಕ್ಕೆ ಲಭಿಸುತ್ತವೆ ನನಗೆ. ಬಹಳ ಹಿಂದೇನಲ್ಲ, ಇಂದಿನ ಬೆಳಗ್ಗೆ ನಾನು ಮುದಿಯಾಗಿಬಿಟ್ಟೆ. ಕನ್ನಡಿಯಲ್ಲಿ ನೋಡಿಕೊಂಡಾಗ, ನನ್ನ ನರೆತ ಕೂದಲು, ನನ್ನ ಹುಬ್ಬಿನ ಮೇಲ್ಗಡೆ ಆಳವಾಗಿ ಅಡ್ಡಡ್ಡನಾಗಿ ಗೆರೆಯೊತ್ತಿದ್ದ ಸುಕ್ಕುಗಳು, ಕೆನ್ನೆಯ ಮೇಲೆ ಕೆಳಗಿಳಿದಿದ್ದ ಹಳ್ಳಗೆರೆಗಳು, ನನ್ನ ಕಡೆಗಣ್ಣಿನ ಕಾಕಪಾದದ ಸುಕ್ಕು– ಇದನ್ನೆಲ್ಲಾ ಕಂಡು ನನಗೇ ಆಶ್ಚರ್ಯವಾದದ್ದು ನನಗೆ ನೆನಪಿದೆ! ಎಷ್ಟು ಬೇಗೆ ಮುದಿಯಾಗಿಬಿಟ್ಟಿದ್ದೆ! ನನಗೆ ಅದನ್ನು ಸಹಿಸಲಾಗಲಿಲ್ಲ! ನನ್ನ ಹತ್ತಿರ ಸುಳಿಯಲು ಮುಪ್ಪಿಗೆ ಅಧಿಕಾರವಿರಲಿಲ್ಲ! ನಾನು ಜೀವನದಲ್ಲಿ ಅನುಭವಿಸಬೇಕಾದ್ದನ್ನು ಅನುಭವಿಸಿರಲಿಲ್ಲ! ಆದರೆ, ಈಗ ನಾನು ಮುದಿಯಾಗಿ ಕಾಣುತ್ತೇನೆಯೆ? ಹಾಗೆ ಕಂಡರೆ, ನನ್ನ ಮುಖ ವಿಚಿತ್ರವಾಗಿ ಮೋಸಮಾಡುತ್ತಿದೆ; ಏಕೆಂದರೆ– ನನ್ನ ಮನಸ್ಸಿನ ಮೇಲಿನಿಂದ ದೊಡ್ಡ ಹೊರೆ ಇಳಿದಂತಾಗಿ– ನನ್ನ ಯೌವನದ ಉಚ್ಛ್ರಾಯಕಾಲದಲ್ಲಿದ್ದೇನೆ, ಪ್ರಪಂಚವೆಲ್ಲ ನನ್ನದೇ ಆಗಿದೆ, ನನ್ನ ಅತ್ಯುತ್ತಮ ಸುಖದ ದಿನಗಳು ಮುಂದೆ ನನಗಾಗಿ ಕಾದಿವೆ, ಎಂದು ನನಗೆ ತೋರುತ್ತಿದೆ!"

"ನಿಮಗೆ ಹಾಗೆ ಕಂಡೀತೆಂದು ನನಗೆ ವಿಶ್ವಾಸವಿದೆ. ಆ ಬಗೆಗೆ, ನಿಮಗೆ ಒಳ್ಳೆಯದಾಗಲಿ ಎಂದು ಹಾರೈಸುತ್ತೇನೆ" ಎಂದನು ಆ ವೃದ್ಧ ಮಹಾಶಯ; ಆತ ಉಭಯಸಂಕಟಕ್ಕೆ ಸಿಕ್ಕಿದ್ದ; ಕ್ಲಿಫರ್ಡನ ಹುಚ್ಚುಹರಟೆಯ ಬಗೆಗೆ ಆತ ತನ್ನ ಅಭಿಪ್ರಾಯ ಹೇಳಬೇಕಾಗಿ ಬಂದಿತ್ತು; ಅದು ಆತನಿಗೆ ಇಷ್ಟವಿರಲಿಲ್ಲ.

"ನೀನು ಸುಮ್ಮನಿರದಿದ್ದರೆ ದೇವರಾಣೆ, ಕ್ಲಿಫರ್ಡ್. ನಿನಗೆ ಎಲ್ಲೋ ಹುಚ್ಚು

ಬೇರೆಯ ರೀತಿ ಹೇಳುವುದಾದರೆ, ಈ ಗುಂಡನೆಯ ಭೂಗೋಳವು ಬುದ್ಧಿಶಕ್ತಿಯಿಂದ ತುಂಬಿರುವ ಒಂದು ದೊಡ್ಡ ತಲೆ, ಮೆದುಳು! ಅಥವಾ, ಹೀಗೂ ಹೇಳಬಹುದು,– ಅದು ತಾನೊಂದು ಭಾವ, ಬರಿಯ ಭಾವ, ಬೇರೇನೂ ಅಲ್ಲ; ನಾವು ತಿಳಿದುಕೊಂಡಂತೆ ಅದು ಪದಾರ್ಥವಲ್ಲ!"

ರೈಲುರಸ್ತೆಯ ಪಕ್ಕದಲ್ಲಿ ಇದ್ದ ತಾರು ತಂತಿಯನ್ನು ಕಡೆಗಣ್ಣಿನಿಂದ ನೋಡುತ್ತಾ, ವೃದ್ಧ ಮಹಾಶಯನೆಂದ: "ನಿಮ್ಮ ಮನಸ್ಸಿನಲ್ಲಿರುವುದು ಆ ಟೆಲಿಗ್ರ್ಯಾಫ್ ಆದರೆ, ಅದು ತುಂಬ ಶ್ರೇಷ್ಠವಾದದ್ದು– ಆದರೆ ಮಾತ್ರ, ಹತ್ತಿಯ ಸಟ್ಟಾವ್ಯಾಪಾರಿಗಳೂ ರಾಜಕೀಯ ಕ್ಷೇತ್ರದ ಜೂಜುಕೋರರೂ ಅದರ ಮೇಲೆ ಹತೋಟಿ ಪಡೆಯಕೂಡದು, ಅಷ್ಟೆ. ಸ್ವಾಮಿ, ನಿಜವಾಗಿಯೂ ಮಹತ್ವದ ಏರ್ಪಾಟು ಅದು; ಅದರಲ್ಲಿಯೂ ವಿಶೇಷವಾಗಿ, ಬ್ಯಾಂಕನ್ನು ದರೋಡೆ ಮಾಡುವವರನ್ನೂ ಕೊಲೆಪಾತಕರನ್ನೂ ಕಂಡು ಹಿಡಿಯುವ ಸಂಬಂಧದಲ್ಲಿ, ತುಂಬ ಮಹತ್ವದ್ದು."

ಕ್ಲಿಫರ್ಡ್ ಉತ್ತರಿಸಿದ: "ಆ ದೃಷ್ಟಿಯಿಂದ ನೋಡಿದರೆ, ನನಗೆ ಅದು ಅಷ್ಟು ಮೆಚ್ಚಿಗೆಯಾಗದು. ಬ್ಯಾಂಕನ್ನು ದರೋಡೆಮಾಡುವವನು, ಅದೇ ರೀತಿ ಕೊಲೆಪಾತಕ ಎಂದು ನೀವು ಕರೆಯುವಾತ– ಇವರಿಗೆ ಕೂಡ ಅವರದ್ದೇ ಆದ ಹಕ್ಕಿದೆ; ಮಾನವೀಯತೆಯನ್ನೂ ಅಂತಃಕರಣವನ್ನೂ ಹೊಂದಿರುವ ತಿಳಿವಳಿಕೆಯುಳ್ಳ ಜನ ಆ ಹಕ್ಕನ್ನು ವಿಶಾಲಭಾವದಿಂದ ನೋಡಬೇಕು; ಏಕೆಂದರೆ, ಅವರು ಜೀವಸಹಿತ ಇರಬೇಕೆನ್ನುವ ವಿಚಾರದಲ್ಲಿ ಸಮಾಜದ ಬಹು ಮಂದಿ ವಿರೋಧಿಗಳಾಗಿದ್ದಾರೆ. ವಿದ್ಯುಚ್ಛಕ್ತಿಯ ಟೆಲಿಗ್ರ್ಯಾಫಿನಂತಹ ಸಾಧನಗಳು ಬಹುಮಟ್ಟಿಗೆ ಆಧ್ಯಾತ್ಮಿಕ; ಅವುಗಳನ್ನು ಉಚ್ಚವಾದ, ಗಂಭೀರವಾದ, ಹರ್ಷದಾಯಕವಾದ, ಪವಿತ್ರವಾದ ಪ್ರಚಾರೋದ್ದೇಶಗಳಿಗೆ ಮಿಸಲಾಗಿಡಬೇಕು. ಪ್ರೇಮಿಗಳು– ತಮಗೆ ಪದೇಪದೇ ಹಾಗೆನ್ನಿಸಿದರೆ– ದಿನಕ್ಕೊಂದು ಸಲವೋ ಗಂಟೆಗೊಂದು ಸಲವೋ ತಮ್ಮ ಹೃದಯದೊಲವಿನ ತುಡಿತಮಿಡಿತಗಳನ್ನು 'ಮೆಯ್ನ್'ನಿಂದ 'ಫ್ಲಾರಿಡಾ'ಕ್ಕೆ ಸರಿಸುಮಾರು ಇಂತಹ ಮಾತುಗಳ ಮೂಲಕ ಕಳಿಸಬಹುದು: 'ನಾನು ನಿನ್ನನ್ನು ಎಂದೆಂದಿಗೂ ಪ್ರೀತಿಸುತ್ತೇನೆ!' 'ನನ್ನ ಹೃದಯ ಪ್ರೇಮದಿಂದ ತುಂಬಿ ತುಳುಕುತ್ತಿದೆ?' 'ನನ್ನ ಶಕ್ತಿಮೀರಿ ನಿನ್ನನ್ನು ಪ್ರೀತಿಸುತ್ತಿದ್ದೇನೆ!' ಎಂದೂ, ಮತ್ತೆ ಮರುಸಂದೇಶದಲ್ಲಿ, 'ನನ್ನ ಆಯುಸ್ಸು ಒಂದು ಗಂಟೆಯಷ್ಟು ಹೆಚ್ಚಿದೆ, ನಿನ್ನನ್ನು ಎರಡರಷ್ಟು ಪ್ರೀತಿಸುವೆ' ಎಂದೂ ತಿಳಿಸಬಹುದು. ಅಥವಾ, ಸತ್ಪುರುಷನೊಬ್ಬ ಈ ಲೋಕವನ್ನು ಬಿಟ್ಟು ತೆರಳಿದಾಗ, ಆತನ ದೂರದ ಗೆಳೆಯನಿಗೆ ಸುಖಜೀವಿಗಳಾದ ಚೈತನ್ಯಗಳ ಪ್ರಪಂಚದಿಂದ ಬಂದಿತೋ ಎಂಬಂತೆ ಒಂದು

ಅವನು ತವಕಪಡುತ್ತಿದ್ದನು.

ಆದರೆ ಕ್ಲಿಫರ್ಡ್ ಮುಂದುವರಿಸಿದನು:

"ಈಗಾಗಲೇ ಹುಟ್ಟಿರುವ ಮಗುವಿನ ಜೀವಮಾನಕಾಲದಲ್ಲಿಯೇ ಇದೆಲ್ಲವೋ ನಾಶವಾಗಿ ಹೋಗುವುದು. ಪ್ರಪಂಚವು ಈ ವೈಪರೀತ್ಯಗಳನ್ನು ಇನ್ನು ಬಹಳ ಕಾಲ ಸಹಿಸಲಾರದು, ಅದು ಅಷ್ಟು ಸೂಕ್ಷ್ಮಸ್ವಭಾವದ್ದಾಗುತ್ತಿದೆ, ಉದಾತ್ತವಾಗುತ್ತಿದೆ. ತಕ್ಕಮಟ್ಟಿಗೆ ಗಣನೀಯವಾದ ಕಾಲವನ್ನು ನಾನು ವಿಶೇಷವಾಗಿ ಏಕಾಂತವಾಸದಲ್ಲಿಯೆ ಕಳೆದಿದ್ದೇನೆ; ಅನೇಕ ಮಂದಿಗೆ ತಿಳಿದಿರುವಷ್ಟು ಆ ವಿಚಾರ ನನಗೆ ತಿಳಿದಿಲ್ಲ; ಅಂಥ ನನಗೆ, ನನಗೆ ಕೂಡ, ಮುಂಬರುವ ಉತ್ತಮ ಯುಗದ ಮುನ್ಸೂಚನೆಗಳು ತಪ್ಪದೆ ಗೋಚರವಾಗುತ್ತಿವೆ. ಸುಪ್ತ್ಯಾವಾಹನದ ಮೂಲಕ ವಶೀಕರಣ ಮಾಡಿಕೊಳ್ಳುವ 'ಮೆಸ್ಮೆರಿಸಂ' ವಿದ್ಯೆ ತೆಗೆದುಕೊಳ್ಳಿ! ಮಾನವಜೀವನದ ಹೊಲಸನ್ನೆಲ್ಲಾ ಗುಡಿಸಿ ಹೊರಹಾಕಲು ಅದು ಯಾವ ಪರಿಣಾಮವನ್ನೂ ಬೀರಲಾರದು ಎನ್ನಿಸುತ್ತದೆಯೆ ನಿಮಗೆ?"

"ಎಲ್ಲಾ ಒಂದು ಠಕ್ಕು!" ಎಂದು ಆ ವೃದ್ಧ ಮಹಾಶಯನು ಗೊಣಗುಟ್ಟಿದನು.

"ಅಂದು ನಮ್ಮ ಪುಟ್ಟ ಫೀಬೆ ನಮಗೆ ತಿಳಿಯಹೇಳಿದ ಆ 'ಬಾಗಿಲು ತಟ್ಟುವ' ಚೈತನ್ಯಜೀವಿಗಳಿವೆಯಲ್ಲ, ಅವು ಈ ಜಡಪ್ರಪಂಚದ ಬಾಗಿಲನ್ನು ತಟ್ಟಿ ಒಳಬರಲು ಹವಣಿಸುತ್ತಿರುವ, ಚೇತನಾತ್ಮಕಪ್ರಪಂಚದ ದೂತರಲ್ಲದೆ ಬೇರೆ ಯಾರು? ಆ ಬಾಗಿಲು ವಿಶಾಲವಾಗಿ ತೆರೆದು ನಿಲ್ಲುವುದರಲ್ಲಿ ಸಂದೇಹವಿಲ್ಲ" ಎಂದು ನುಡಿದನು ಕ್ಲಿಫರ್ಡ್.

ಕ್ಲಿಫರ್ಡನ ಆಧ್ಯಾತ್ಮಿಕ ವಿದ್ಯೆಯ ವಿಚಾರವಾಗಿ ಆ ವೃದ್ಧ ಮಹಾಶಯನು ಪಡೆದ ಈ ನಸುನೋಟಗಳಿಂದ ಆತನ ಪರೀಕ್ಷಕಬುದ್ಧಿ ಹೆಚ್ಚಾಗಿ, ಆತ ಗಟ್ಟಿಯಾಗಿ ಹೇಳಿದನು: "ಅದೂ ಒಂದು ಠಕ್ಕು! ಇಂಥ ತಿಳಿಗೇಡಿ ತನವನ್ನು ಪ್ರಚಾರಮಾಡುವ ಈ ದಡ್ಡರ ಖಾಲಿ ತಲೆಬುರುಡೆಗಳ ಮೇಲೆ ಒಳ್ಳೆಯ ದೊಣ್ಣೆ ತೆಗೆದುಕೊಂಡು ಟಪಟಪ ಎಂದು ತಟ್ಟಲು ನನಗೂ ಆಶೆಯಾಗುತ್ತಿದೆ!"

ಕ್ಲಿಫರ್ಡ್ ಉದ್ಗಾರತೆಗೆಯುತ್ತಲೇ ಇದ್ದ:

"ಅದಿರಲಿ, ವಿದ್ಯುಚ್ಛಕ್ತಿಯನ್ನು ತೆಗೆದುಕೊಳ್ಳಿ– ದೈತ್ಯರೂಪಿ, ದೈವರೂಪಿ; ಪ್ರಬಲ ಭೌತಶಕ್ತಿ; ಸರ್ವವ್ಯಾಪೀ ಬುದ್ಧಿಶಕ್ತಿ! ಅದೂ ಒಂದು ಠಕ್ಕೇ, ಹಾಗಾದರೆ? ಈ ವಿದ್ಯುಚ್ಛಕ್ತಿಯ ಮೂಲಕ ಈ ಜಡ ಪ್ರಪಂಚವು ಕಣ್ಣುಮಿಟುಕಿಸುವಷ್ಟರಲ್ಲಿ ಸಾವಿರಾರು ಮೈಲಿಗಳ ಉದ್ದಕ್ಕೂ ಸ್ಪಂದಿಸುವ ಒಂದು ದೊಡ್ಡ ನರವಾಗಿ ಪರಿಣಮಿಸಿರುವುದು– ಸತ್ಯಾಂಶವೋ? ಅಥವಾ ನಾನು ಕಂಡ ಸ್ವಪ್ನವೋ?

ಎಲ್ಲಿಗೋ ದೇವರೇ ಬಲ್ಲ– ಓಡಿಹೋಗುತ್ತಿದ್ದಾನೆ ಎಂದು ಕಲ್ಪಿಸಿಕೊಳ್ಳೋಣ! ಈಗ ಹೇಳಿ ಸ್ವಾಮೀ, ಪಲಾಯನ ಮಾಡಿದಾತ ಯಾವುದೋ ಒಂದು ದೂರದ ಊರಿನಲ್ಲಿ ಇಳಿದಾಗ, ಯಾವ ಸತ್ತ ಮನುಷ್ಯನ ನೋಟವನ್ನೂ ಅವನ ಸಂಬಂಧವಾದ ಆಲೋಚನೆಯನ್ನೂ ತಪ್ಪಿಸಿಕೊಳ್ಳುವುದಕ್ಕಾಗಿ ಇಷ್ಟು ದೂರ ಓಡಿಬಂದನೋ ಅವನ ವಿಚಾರವಾಗಿಯೇ ಅಲ್ಲಿನ ಜನರೆಲ್ಲಾ ಹರಟುತ್ತಾ ಇರುವುದು ಕಂಡುಬಂದರೆ, ಆ ಪಲಾಯನ ಮಾಡಿಬಂದವನ ಸಹಜವಾದ ಹಕ್ಕುಬಾಧ್ಯತೆಗಳಿಗೆ ಭಂಗವುಮಟಾಯಿತೆಂಬುದನ್ನು ನೀವು ಒಪ್ಪುವಿರೋ ಇಲ್ಲವೋ? ಅವನಿಗೆ ಆ ಊರಿನಲ್ಲಿ ಆಶ್ರಯ ಪಡೆಯುವ ಅವಕಾಶವನ್ನು ತಪ್ಪಿಸಿದ ಹಾಗಾಯಿತು; ಮತ್ತು, ನನ್ನ ನಮ್ರ ಅಭಿಪ್ರಾಯದಲ್ಲಿ, ಆತ ಅಪರಿಮಿತ ಅನ್ಯಾಯವನ್ನು ಅನುಭವಿಸಬೇಕಾಯಿತು."

"ನೀವು ವಿಚಿತ್ರ ಮನುಷ್ಯರು, ಸ್ವಾಮಿ! ನಿಮ್ಮನ್ನು ಒಳಹೊಕ್ಕು ನಾನು ನೋಡಲಾರೆ!" ಎಂದು, ಕ್ಲಿಫರ್ಡನನ್ನು ಕೊರೆದುಕೊಂಡು ಒಳಹೋಗಲೋ ಎಂಬಂತೆ ತನ್ನ ತಿರುಪುಗಣ್ಣನ್ನು ಅವನ ಮೇಲೆ ನಟ್ಟು ನುಡಿದನು ಆ ವೃದ್ಧಮಹಾಶಯ.

ಕ್ಲಿಫರ್ಡ್ ನಗುತ್ತ ಹೇಳಿದನು: "ಇಲ್ಲ, ಅದು ನಿಮಗೆ ಸಾಧ್ಯವಿಲ್ಲ ಎಂದು ನಾನು ಆಣೆಯಿಟ್ಟು ಹೇಳುತ್ತೇನೆ! ಸ್ವಾಮಿ, ಆದರೂ ಕೂಡ, ಮಾಲನ ಬಾವಿಯ ನೀರು ಎಷ್ಟು ತಿಳಿಯಾಗಿದೆಯೋ ನಾನು ಅಷ್ಟೇ ಸುವ್ಯಕ್ತವಾಗಿದ್ದೇನೆ! ಆದರೆ, ಬಾ, ಹೆಪ್ಸಿಬಾ! ನಾವು ಇದೊಮ್ಮೆ ಬಹಳ ದೂರ ಹಾರಿ ಬಂದುಬಿಟ್ಟಿದ್ದೇವೆ. ಹಕ್ಕಿಗಳ ಹಾಗೆ ನಾವೂ ಕೆಳಕ್ಕಿಳಿದು, ಅತ್ಯಂತ ಸಮೀಪದಲ್ಲಿ ಯಾವ ರೆಂಬೆ ಸಿಕ್ಕುತ್ತದೆಯೋ ಅದರ ಮೇಲೆ ತಂಗೋಣ, ಮುಂದಕ್ಕೆ ಎಲ್ಲಿಗೆ ಹಾರಿಹೋಗಬೇಕು ಎಂಬುದನ್ನು ಆಲೋಚಿಸೋಣ!"

ಆಗ ತಾನೆ, ರೈಲುಬಂಡಿಯೂ ಕೂಡ ಒಂಟಿಯಾದ ಒಂದು ಮಾರ್ಗ ಮಧ್ಯದ ನಿಲ್ದಾಣವನ್ನು ಮುಟ್ಟಿತು. ಅದು ಸ್ವಲ್ಪ ಹೊತ್ತು ನಿಂತ ಅವಕಾಶವನ್ನು ಉಪಯೋಗಿಸಿಕೊಂಡು, ಕ್ಲಿಫರ್ಡ್ ರೈಲುಬಂಡಿಯನ್ನು ಬಿಟ್ಟು ಇಳಿದು, ಹೆಪ್ಸಿಬಾಳನ್ನೂ ತನ್ನೊಡನೆ ಎಳೆದೊಯ್ದನು, ಒಂದು ಕ್ಷಣವಾದ ಮೇಲೆ, ರೈಲುಬಂಡಿ ದೂರದೂರಕ್ಕೆ ಸರಿದುಹೋಗಿ, ಬೇಗನೆ ಒಂದು ಚುಕ್ಕಿಯಳತೆಗೆ ಕುಗ್ಗಿ, ಇನ್ನೊಂದು ಕ್ಷಣದಲ್ಲಿ ಅದೂ ಕಣ್ಮರೆಯಾಯಿತು; ಸಮಗ್ರ ಜೀವನವನ್ನು ಒಳಗೊಂಡಿದ್ದ ಅದರಲ್ಲಿಯೆ, ಕ್ಲಿಫರ್ಡ್ ಅಷ್ಟೊಂದು ಪ್ರಮುಖ ವಸ್ತುವಾಗಿ ಪರಿಣಮಿಸಿದ್ದುದು. ಈ ಇಬ್ಬರು ಅಲೆಮಾರಿಗಳನ್ನು ಬಿಟ್ಟು ಬಿಟ್ಟು ಪ್ರಪಂಚ ಓಡಿ ಹೊರಟುಹೋಗಿತ್ತು.

ವಿದ್ಯುಚ್ಛಕ್ತಿಯ ಸ್ಪಂದನದ ಅರಿವುಂಟಾಗಿ, 'ನಿನ್ನ ಗೆಳೆಯನು ಸ್ವರ್ಗಸುಖದಲ್ಲಿದ್ದಾನೆ' ಎಂದು ಅದು ಹೇಳಿದಂತಾಗಬೇಕು. ಅಥವಾ, ಮನೆಯಲ್ಲಿಲ್ಲದ ಪತಿದೇವನಿಗೆ– 'ಒಂದು ಅಮರಜೀವಿಯ ತಂದೆಯಾಗಿರುವೆ ನೀನು; ದೇವರೇ ಅದನ್ನು ಈಗ ನಮ್ಮ ಬಳಿಗೆ ಕಳಿಸಿರುವನು'– ಎಂಬೀ ಸುದ್ದಿ ಮುಟ್ಟಿ, ಆ ಕೂಡಲೆ ಅದರ ಕಿರುದನಿ ಅಲ್ಲಿಯುವರೆಗೆ ಧಾವಿಸಿ, ಆತನ ಹಿಗ್ಗಿನ ಹೃದಯುದಲ್ಲಿ ಹೊಳಲುಗೊಡುತ್ತಿರಬೇಕು. ಇನ್ನು ಈ ಬಡ ಕೇಡಿಗರ ವಿಚಾರ ತೆಗೆದುಕೊಳ್ಳೋಣ: ಬ್ಯಾಂಕಿನ ದರೋಡೆಕಾರರು ಇನ್ನೇನಿಲ್ಲವೆಂದರೂ ಹತ್ತು ಜನರಲ್ಲಿ ಒಂಬತ್ತು ಮಂದಿಯಷ್ಟೇ ಪ್ರಾಮಾಣಿಕರಾಗಿದ್ದಾರೆ; ಒಂದೇನೆಂದರೆ, ರೂಢಿಯ ನಿಯಮಗಳನ್ನು ಉಲ್ಲಂಘಿಸಿ, ಹಣಕಾಸಿನ ವ್ಯವಹಾರದ ಕಾಲವನ್ನು ಬಿಟ್ಟು ನಟ್ಟಿರುಳಿನಲ್ಲಿ ತಮ್ಮ ವ್ಯವಹಾರ ನಡಸಲು ಇಷ್ಟಪಡುತ್ತಾರೆ ಅಷ್ಟೆ. ಇನ್ನು, ನೀವು ಕೊಲೆಪಾತಕರು ಎಂದು ಹೆಸರು ಕೊಟ್ಟಿದ್ದೀರಲ್ಲ, ಅವರ ವಿಚಾರ: ಅವರ ಕೃತ್ಯವನ್ನು ಪ್ರೇರಿಸುವ ಮೂಲಕಾರಣಗಳನ್ನೂ; ಅದರ ಫಲವನ್ನೂ ಮಾತ್ರ ನಾವು ಪರಿಗಣಿಸುವುದಾದರೆ, ಅವರು ಕ್ಷಮಾರ್ಹರಾಗಿರುವುದು ಮಾತ್ರವಲ್ಲದೆ, ಜನೋಪಕಾರಿಗಳ ಶ್ರೇಣಿಗೆ ಸೇರಲು ಅರ್ಹರಾಗಿರುತ್ತಾರೆ. ಇಂತಹ ನಿರ್ಭಾಗ್ಯ ವ್ಯಕ್ತಿಗಳ ವಿಷಯದಲ್ಲಿ, ಅವರನ್ನು ಪ್ರಪಂಚದಲ್ಲೆಲ್ಲಾ ಬೆನ್ನಟ್ಟಿ ಬೇಟೆಯಾಡುವ ಈ ವಿಶ್ವವ್ಯಾಪಕ ಕಾರ್ಯಕ್ರಮದಲ್ಲಿ ಅಭೌತಿಕವಾದ ಅದ್ಭುತಶಕ್ತಿಯನ್ನು ವಿನಿಯೋಗಿಸುವುದನ್ನು ನಾನು ನಿಜವಾಗಿ ಮೆಚ್ಚಿಕೊಳ್ಳಲಾರೆ!"

"ನೀವು ಮೆಚ್ಚಿಕೊಳ್ಳಲಾರಿರಾ, ಹಾಗೇನು?" ಎಂದು ಆ ವೃದ್ಧ ಮಹಾಶಯನು ನಿಷ್ಠುರವಾಗಿ ನೋಡುತ್ತ ಗಟ್ಟಿಯಾಗಿ ಹೇಳಿದನು.

"ಖಂಡಿತವಾಗಿಯೂ ಇಲ್ಲ" ಎಂದು ಕ್ಲಿಫರ್ಡ್ ಉತ್ತರಕೊಟ್ಟನು: "ಹಾಗೆ ಮಾಡಿದಲ್ಲಿ, ಅವರನ್ನು ತುಂಬ ಶೋಚನೀಯವಾದ, ಅನನುಕೂಲ ಅವಸ್ಥೆಗೆ ಗುರುಪಡಿಸಿದ ಹಾಗಾಗುತ್ತದೆ. ಉದಾಹರಣೆಗೆ– ಒಂದು ಹಳೆಯ ಮನೆಯೊಂದರಲ್ಲಿ ಕತ್ತಲಿಡಿದ, ತಗ್ಗಾದ, ಅಡ್ಡಜಂತೆ ಹಾಕಿದ, ಗೋಡೆಗೆಲ್ಲ ಹಲಗೆಸೇರ್ವೆ ಮಾಡಿದ ಕೋಣೆಯಲ್ಲಿ ಒಬ್ಬ ಸತ್ತ ಮನುಷ್ಯ ಒಂದು ತೋಳು ಕುರ್ಚಿಯಲ್ಲಿ ಕುಳಿತಿದ್ದಾನೆ, ಅವನ ಷರಟಿನ ಎದೆಭಾಗದ ಮೇಲೆಲ್ಲಾ ರಕ್ತದ ಕಲೆಯಿದೆ– ಎಂದು ಊಹಿಸಿಕೊಳ್ಳೋಣ; ಮನೆಯೆಲ್ಲಾ ಆ ಮೃತನ ಇರವಿನಿಂದ ತುಂಬಿಹೋಗಿದೆ ಎಂಬ ಭಾವನೆಯಿಂದ ಇನ್ನೊಬ್ಬ ಮನುಷ್ಯ ಆ ಮನೆಯಿಂದ ಹೊರಬರುತ್ತಿದ್ದಾನೆ ಎಂಬ ಅಂಶವನ್ನು ನಮ್ಮ ಊಹಾಚಿತ್ರಕ್ಕೆ ಸೇರಿಸೋಣ; ಕಡೆಯದಾಗಿ, ಅವನು ರೈಲು ಮಾರ್ಗದ ಮೂಲಕ ಬಿರುಗಾಳಿಯ ಭರದಲ್ಲಿ–

ಭಗವಂತನು ನೋಡುತ್ತಿರುವನೆ ಎಂದು ಪ್ರಶ್ನಿಸುವುದಕ್ಕೆ ತಕ್ಕ ಸಂದರ್ಭವಾಗಿರಲಿಲ್ಲ.

"ಓ, ದೇವರೇ!" ಎಂದು ಬಡಕಲು ದೇಹದ ಬಡ ಹೆಪ್ಸಿಬಾ ಉದ್ಗರಿಸಿ, ತಾನು ಮಾಡುವ ಪ್ರಾರ್ಥನೆ ಹೇಗಿರಬೇಕೆಂದು ಯೋಚಿಸಲು ಒಂದು ಕ್ಷಣ ತಳುವಿ, "ಓ ದೇವರೇ– ಓ ನಮ್ಮ ತಂದೆಯೇ– ನಾವು ನಿನ್ನ ಮಕ್ಕಳಲ್ಲವೆ? ನಮ್ಮ ಮೇಲೆ ಕೃಪೆಮಾಡು!" ಎಂದು ಮೊರೆಯಿಟ್ಟಳು.

* * * *

ಅವರು ಶೂನ್ಯದೃಷ್ಟಿಯನ್ನು ಬೀರಿ ತಮ್ಮ ಸುತ್ತಲೂ ನಿಟ್ಟಿಸಿ ನೋಡಿದರು. ಸ್ವಲ್ಪ ದೂರದಲ್ಲಿ ಮರದಿಂದ ಕಟ್ಟಿದ್ದ ಒಂದು ಚರ್ಚು ಕಂಡುಬಂದಿತು; ಬಹಳ ಹಳೆಯ ಕಾಲದ್ದಾದ್ದರಿಂದ, ಕಪ್ಪಿಡಿದಿತ್ತು; ಮುರಿದುಹೋದ ಕಿಟಕಿಗಳು, ಕಟ್ಟಡದ ಒಡಲಲ್ಲಿ ಒಂದು ದೊಡ್ಡ ಬಿರುಕು, ಚೌಕನೆಯ ಗೋಪುರದ ತುದಿಯಿಂದ ನೇತಾಡುತ್ತಿದ್ದ ಚಾವಣಿಯ ತೀರು– ಇವೆಲ್ಲ ಅದರ ಶೋಚನೀಯ ಜೀರ್ಣಸ್ಥಿತಿಯನ್ನು ಸಾರುತ್ತಿದ್ದುವು ಅದಕ್ಕೂ ದೂರದಲ್ಲಿ, ಹಳೆಯ ಮಾದರಿಯ ಒಂದು ಹೊಲಮನೆಯಿತ್ತು; ಚರ್ಚಿನಷ್ಟೇ ಹಳಗಪ್ಪಾಗಿತ್ತು ಅದು; ಅದರ ಮೂರಂತಸ್ತಿನ ಕೋಡಿನಿಂದ ಚಾವಣಿ ಇಳಿಜಾರಾಗಿ ಇಳಿದಿದ್ದು, ನೆಲಮಟ್ಟದಿಂದ ಆಳೆತ್ತರದಲ್ಲಿತ್ತು. ಅದರಲ್ಲಿ ಯಾರೂ ವಾಸವಾಗಿದ್ದಂತೆ ಕಂಡುಬರಲಿಲ್ಲ. ಅದರ ಬಾಗಿಲಬಳಿ ಕಟ್ಟಿಗೆಯ ಒಟ್ಟಲಿದ್ದ ಕುರುಹುಗಳಿದ್ದುವು; ಆದರೆ ಚೆದರಿಬಿದ್ದಿದ್ದ ಕಟ್ಟಿಗೆ ತುಂಡುಗಳ ಹಾಗೂ ಚಕ್ಕೆ ಚೂರುಗಳ ನಡುನಡುವೆ ಗರಿಕೆ ಮೊಳೆಯುತ್ತಿತ್ತು. ಸಣ್ಣ ಮಳೆಹನಿಗಳು ಓರೆಯಾಗಿ ಉದುರುತ್ತಿದ್ದುವು; ಗಾಳಿ ಬಿರುಸಾಗಿರದಿದ್ದರೂ, ಕೊರೆಯುವ ಚಳಿಯಿಂದಲೂ ತೇವದಿಂದಲೂ ಕೂಡಿಕೊಂಡು, ನಿರುತ್ಸಾಹಕರವಾಗಿತ್ತು.

ಕ್ಲಿಫರ್ಡ್ ತಲೆಯಿಂದ ಕಾಲವರೆಗೆ ನಡುಗತೊಡಗಿದನು. ಅವನ ಮನೋಭಾವದ ಹುಚ್ಚುಕೆರಳು ಈ ವರೆಗೆ ಬೇಕುಬೇಕೆಂದಾಗ ಭಾವನೆಗಳನ್ನೂ ವಿಚಿತ್ರ ಕಲ್ಪನೆಗಳನ್ನೂ ಅಪೂರ್ವ ವಾಗ್ವೈಖರಿಯನ್ನೂ ಒದಗಿಸಿಕೊಟ್ಟು, ಈ ನೊರೆಯುಕ್ಕುತ್ತಿದ್ದ ಭಾವನಾಪ್ರವಾಹಕ್ಕೆ ಹರಿದುಹೋಗಲು ಅವಕಾಶ ಕಲ್ಪಿಸಬೇಕಾದ ಆವಶ್ಯಕತೆಯಿಂದ ಅವನನ್ನು ಮಾತಾಡುವಂತೆ ಪ್ರಚೋದಿಸಿತ್ತು; ಆದರೆ ಈಗ ಆ ಭಾವಾವೇಶ ಸಂಪೂರ್ಣವಾಗಿ ಇಳಿದುಹೋಗಿತ್ತು; ಒಂದು ಪ್ರಬಲವಾದ ಉದ್ರೇಕವು ಅವನಿಗೆ ಶಕ್ತಿಯನ್ನೂ ಲವಲವಿಕೆಯನ್ನೂ ನೀಡಿತ್ತು. ಆದರ ಕಾರ್ಯ ಮುಗಿದುಹೋಗಿ, ಅವನು ಆ ಕೂಡಲೆ ಕುಸಿಯತೊಡಗಿದನು.

"ನೀನು ಈಗ ಮುಂದಾಗಬೇಕು, ಹೆಪ್ಸಿಬಾ! ನನ್ನ ವಿಚಾರದಲ್ಲಿ, ನಿನ್ನ ಇಷ್ಟ ಬಂದ ಹಾಗೆ ಮಾಡು!" ಎಂದು ಅವನು ಮಾತುಗಳನ್ನು ಆಲಸ್ಯದಿಂದ, ಇಷ್ಟವಿಲ್ಲದೆ ಉಚ್ಚರಿಸುತ್ತ, ಗೊಣಗುಟ್ಟಿದ್ದನು.

ತಾನು ನಿಂತಿದ್ದ ರೈಲುನಿಲ್ದಾಣದ ಜಗಲಿಯ ಮೇಲೆ ಅವಳು ಮಂಡಿಯೂರಿ ಕುಳಿತು, ತನ್ನ ಮುಗಿದ ಕೈಯನ್ನು ಆಕಾಶದತ್ತ ಎತ್ತಿದಳು. ಮಂಕಾದ, ಬೂದಬಣ್ಣದ ಮೋಡ ಕವಿದು, ಅದು ಗೋಚರವಾಗಿರಲಿಲ್ಲ; ಅಪನಂಬಿಕೆಪಡುವ ಕಾಲವಾಗಿರಲಿಲ್ಲ ಅದು; ಆದರೆ, ಮೇಲೆ ಆಕಾಶವಿದೆಯೆ, ಅಲ್ಲಿಂದ ಸರ್ವಶಕ್ತನಾದ

ನವಚೈತನ್ಯವುಂಟುಮಾಡುವಂತಹ ಗಾಢನಿದ್ರೆ! ಹಾಗಿದ್ದರೂ ಕೂಡ, ನ್ಯಾಯಮೂರ್ತಿ ನಿದ್ರೆ ಮಾಡುತ್ತಿದ್ದಿರಲಾರ. ಅವನ ಕಣ್ಣುಗಳು ತೆರೆದುಕೊಂಡಿವೆ! ಅವನಂತಹ ಪಳಗಿದ ರಾಜಕಾರಣಿ ಹೀಗೆ ಪೂರ್ತಿ ಕಣ್ಣು ಬಿಟ್ಟುಕೊಂಡು ಎಂದೂ ನಿದ್ರೆಮಾಡನು. ಏಕೆಂದರೆ, ಅವನು ಹೀಗೆ ಎಚ್ಚರ ತಪ್ಪಿರುವಾಗ, ಯಾವನಾದರೊಬ್ಬ ಶತ್ರುವಾಗಲಿ ಕೀಟಲೆಕೋರನಾಗಲಿ ಅವನ ಪ್ರಜ್ಞೆಯೊಳಕ್ಕೆ ಈ ಕಿಟಕಿಗಳ ಮುಲಕ ಇಣಿಕಿ ನೋಡಬಹುದು; ಹಾಗೆ ಇಣಿಕಿನೋಡಿ, ಅವನ ಹಳೆನೆನಪುಗಳು, ಯೋಜನೆಗಳು, ಆಶೆಆಕಾಂಕ್ಷೆಗಳು, ಭಯಭೀತಿಗಳು, ದೌರ್ಬಲ್ಯಗಳು, ಮತ್ತು ಅವನು ಈವರೆಗೆ ಯಾರೊಂದಿಗೂ ಹೇಳಿಕೊಳ್ಳದ ತನ್ನ ಪ್ರಾಬಲ್ಯದ ಸಂಗತಿಗಳು– ಇವುಗಳನ್ನೆಲ್ಲಾ ಸಮೀಕ್ಷಿಸಿ, ಅವುಗಳ ನಡುವೆ ವಿಚಿತ್ರ ವಿಷಯಗಳನ್ನು ಕಂಡುಹಿಡಿಯಬಹುದು. ಜಾಗರೂಕ ಮನುಷ್ಯನು ಯಾವಾಗಲೂ ಒಂದು ಕಣ್ಣು ಬಿಟ್ಟುಕೊಂಡು ನಿದ್ರಿಸುತ್ತಾನೆ ಎಂದು ಗಾದೆ ಮಾತಿದೆ. ಅದನ್ನು ವಿವೇಕ ಎನ್ನಬಹುದು. ಆದರೆ ಎರಡನ್ನೂ ಬಿಟ್ಟುಕೊಂಡು ಅಲ್ಲ; ಏಕೆಂದರೆ, ಇದು ಅಲಕ್ಷ್ಯ ಎನ್ನಿಸಿಕೊಂಡೀತು! ಇಲ್ಲ, ಇಲ್ಲ! ನ್ಯಾಯಮೂರ್ತಿ ಪಿನ್ಚನ್ ನಿದ್ರೆಮಾಡುತ್ತ ಇದ್ದಿರಲಾರನು.

ಅದು ಹೇಗಾದರೂ ಇರಲಿ, ಅಂತೂ, ಅನೇಕ ಕಾರ್ಯಭಾರಗಳುಳ್ಳ, ಸಮಯಪಾಲನೆಗೆ ಹೆಸರಾದ ದೊಡ್ಡ ಮನುಷ್ಯನೊಬ್ಬನು, ತಾನು ಭೇಟಿ ಕೊಡಲು ಎಂದೂ ಇಷ್ಟಪಡದಿದ್ದ ಹಳೆಯಕಾಲದ ಒಂಟಿ ಮಹಲಿನಲ್ಲಿ ಈ ರೀತಿ ಬಲು ಹೊತ್ತು ಉಳಿದುಕೊಳ್ಳುವುದು ವಿಚಿತ್ರವೇ ಸರಿ. ಆ ಓಕ್ ಮರದ ಕುರ್ಚಿಯ ವಿಶಾಲತೆ ಅವನನ್ನು ಆಕರ್ಷಿಸಿರಬಹುದು ವಾಸ್ತವವಾಗಿ, ಅದು ವಿಶಾಲವಾಗಿಯೇ ಇತ್ತು; ಅದನ್ನು ಒರಟುತನದ ಕೆಲಸದ ಕಾಲದಲ್ಲಿ ಮಾಡಿದರು ಎಂಬುದನ್ನು ಗಮನಿಸಿದರೆ, ಅದು ತಕ್ಕಮಟ್ಟಿಗೆ ಸುಖಕರವಾದ ಪೀಠವೂ ಆಗಿತ್ತು; ಇನ್ನೇನಿಲ್ಲದಿದ್ದರೂ, ಅದರಲ್ಲಿ ತಕ್ಕಷ್ಟು ಸ್ಥಳಾವಕಾಶವಿದ್ದು, ನ್ಯಾಯಮೂರ್ತಿಯ ಅಡ್ಡಗಲಕ್ಕೆ ಯಾವ ತಡೆಯನ್ನೂ ಒಡ್ಡುತ್ತಿರಲಿಲ್ಲ. ಅವನಿಗಿಂತ ದೊಡ್ಡ ಆಳಿಗೂ ಅಲ್ಲಿ ಸಾಕಷ್ಟು ಸ್ಥಳಾವಕಾಶವಿತ್ತು. ಈಗ ಗೋಡೆಯ ಮೇಲೆ ಚಿತ್ರಗತನಾಗಿದ್ದ ಅವನ ಪೂರ್ವಜನಿಗೆ ಇಂಗ್ಲಿಷು ಜನರಂತಹ ತುಂಬು ಮೈ ಇದ್ದರೂ, ಈ ಕುರ್ಚಿಯ ಎರಡು ತೋಳುಗಳ ನಡುವಣ ಸ್ಥಳವನ್ನು ಆಕ್ರಮಿಸಿಕೊಳ್ಳುವಷ್ಟು ಅಡ್ಡಡ್ಡ ಮೈ ಆತನಿಗೆ ಎಂದೂ ಇರಲಿಲ್ಲ, ಅಥವಾ ಅದರ ಮೆತ್ತೆಯ ಸ್ಥಳವನ್ನೆಲ್ಲಾ ತುಂಬುವ ತಳವಿರಲಿಲ್ಲ. ಇದಕ್ಕಿಂತ ಮೇಲ್ತರದ ಕುರ್ಚಿಗಳು ಎಷ್ಟೋ ಇವೆ– 'ಮಹಗನಿ' ಮರದ್ದು, 'ಕರಿಯ ವಾಲ್‌ನಟ್' ಮರದ್ದು, ಕರಿಯ ಮರದ್ದು, 'ಸ್ಪ್ರಿಂಗು' (ಎಗುರುಪಟ್ಟಿ) ಇರುವ ತಳದ್ದು, ದಮಾಸ್ಕು ಬಟ್ಟೆಯ ಮೆತ್ತೆಯದು;

# ೧೮. ಪ್ರಾಂತಾಧಿಪತಿ ಪಿನ್ಚನ್

ತನ್ನ ಇಬ್ಬರು ಬಂಧುಗಳು ಈ ರೀತಿ ಸರಿಯಾಗಿ ವಿಚಾರಮಾಡದೆ ಆತುರದಿಂದ ಮನೆಯಬಿಟ್ಟು ಓಡಿಹೋಗಿರುವಲ್ಲಿ, ಅದರ ನಿತ್ಯನಿವಾಸಿಗಳು ಇಲ್ಲದಿರುವಾಗ, ನ್ಯಾಯಮೂರ್ತಿ ಪಿನ್ಚನ್ನನು ಮಾತ್ರ ಮನೆಯಲ್ಲಿಯೆ ಇದ್ದುಕೊಂಡು, ಹಳೆಯ ದಿವಾನಖಾನೆಯಲ್ಲಿ ಇನ್ನೂ ಕುಳಿತಿದ್ದಾನೆ. ಹಗಲು ಹೊತ್ತಿನಲ್ಲಿ ದಿಕ್ಕುಗಾಣದಿದ್ದ ಗೂಬೆ ತನ್ನ ಟೊಳ್ಳುಮರಕ್ಕೆ ಹಿಂದಿರುಗುವಂತೆ ನಮ್ಮ ಕಥೆಯೂ ಕೂಡ ಈಗ ಆತನ ಬಳಿಗೂ, ಪುರಾಣಪೂಜ್ಯವಾದ ಏಳು ಇಪ್ಪಾರಿನ ಭವನಕ್ಕೂ ಹಿಮ್ಮರಳುತ್ತದೆ.

ಬಹಳ ಕಾಲವಾದರೂ ನ್ಯಾಯಮೂರ್ತಿ ತನ್ನ ಭಂಗಿಯನ್ನು ಬದಲಾಯಿಸಿಲ್ಲ. ಅವನು ತನ್ನ ಕೈಯನ್ನಾಗಲಿ ಕಾಲನ್ನಾಗಲಿ ಕದಲಿಸಿಲ್ಲ; ಕೋಣೆಯ ಮೂಲೆಯ ಕಡೆಗೆ ನಟ್ಟಿದ್ದ ನೋಟವನ್ನು ಒಂದು ಕೂದಲೆಳೆಯಷ್ಟು ಕೂಡ ಅವನ ಕಣ್ಣುಗಳು ಅಲ್ಲಿಂದ ಹಿಂದೆಗೆದಿಲ್ಲ; ಹೆಪ್ಸಿಬಾ ಮತ್ತು ಕ್ಲಿಫರ್ಡ್ ಅವರ ಹೆಜ್ಜೆಗಳು ನಡವೆಯಲ್ಲಿ ಕಿರುಗುಟ್ಟುತ್ತಾ ಹೋದಂದಿನಿಂದ, ಹೊರಬಾಗಿಲನ್ನು ಅವರು ಬಹು ಎಚ್ಚರಿಕೆಯಿಂದ ತಮ್ಮ ಹಿಂದೆಯೆ ಮುಚ್ಚಿಕೊಂಡು ನಡೆದಂದಿನಿಂದ, ಅವು ಹಾಗೆಯೆ ಇವೆ. ಅವನು ತನ್ನ ಗಡಿಯಾರವನ್ನು ಎಡಗೈಯಲ್ಲಿ ಹಿಡಿದುಕೊಂಡಿದ್ದಾನೆ, ಆದರೆ ಅದನ್ನು ಬಿಗಿಯಾಗಿ ಹಿಡಿದಿರುವ ರೀತಿಯಲ್ಲಿ ಅದರ ಅಂಕಿಗಳ ಮುಖ ಕಾಣದಾಗಿದೆ. ಎಂಥ ಗಾಢವಾದ ಧ್ಯಾನಸಮಾಧಿ! ಅಥವಾ, ಅವನು ನಿದ್ರಿಸುತ್ತಿರುವನೆಂದು ಇಟ್ಟುಕೊಳ್ಳೋಣ: ಬೆಚ್ಚಿಬೀಳುವುದು, ಕೈಕಾಲು ಹಿಡಿದುಕೊಳ್ಳುವುದು, ಮೈ ಕೈ ಹಾರುವುದು, ಕನವರಿಕೆ, ಘ್ರಾಣೇಂದ್ರಿಯದ ಮೂಲಕ ಹೊರಡುವ ಕಹಳೆ ಕೂಗುಗಳು, ಇಲ್ಲವೆ ಉಸಿರಾಟದಲ್ಲಿ ಅತ್ಯಲ್ಪ ಅಕ್ರಮ– ಇವುಗಳಿಂದ ಸ್ವಲ್ಪವೂ ಭಂಗವಾಗದ ಗಾಢನಿದ್ರೆಯಿಂದ, ಅದೆಂಥ ಶಿಶುಸಹಜವಾದ ಅಂತಃಕರಣಶಾಂತಿ, ಹಾಗೂ ಜಠರಪ್ರದೇಶದ ಸುವ್ಯವಸ್ಥೆ ವ್ಯಕ್ತಪಡುವುವು! ಅವನು ಉಸಿರಾಡುತ್ತಿದ್ದಾನೆಯೋ ಇಲ್ಲವೋ ಎಂಬುದನ್ನು ನಿಮ್ಮ ಮನಸ್ಸಮಾಧಾನವಾಗುವಂತೆ ಕಂಡುಕೊಳ್ಳಲು, ನೀವು ನಿಮ್ಮ ಉಸಿರನ್ನೇ ಕಟ್ಟಬೇಕು. ಅದು ಚೆನ್ನಾಗಿ ಕೇಳಿಸುತ್ತಿದೆ. ಅವನ ಗಡಿಯಾರದ 'ಟಿಕ್ ಟಿಕ್' ನಿಮಗೆ ಕೇಳುತ್ತಿದೆ; ಅವನ ಉಸಿರಾಟ ನಿಮಗೆ ಕೇಳಿಸುತ್ತಿಲ್ಲ. ನಿಸ್ಸಂದೇಹವಾಗಿಯೂ

ಇಪ್ಪತ್ತೈದು ವರ್ಷಗಳು! ಒಳ್ಳೆಯ ಕಾಲ! ಉತ್ಕೃಷ್ಟವಾದದ್ದು! ಇಷ್ಟು ಸಾಕು!

ಆ ಹಳೆಯ ಕುರ್ಚಿಯಲ್ಲೇ ಇನ್ನೂ ಕಾಲ ಕಳೆಯುತ್ತಿರುವುದಾಗಿದೆಯಲ್ಲಾ! ಹಾಗೆ ವ್ಯರ್ಥವಾಗಿ ಹಾಳುಮಾಡಲು ನ್ಯಾಯಮೂರ್ತಿಗೆ ಸ್ವಲ್ಪ ಕಾಲಾವಕಾಶವಿದ್ದರೆ, ಆಗಾಗ್ಗೆ ರೂಢಿಯಾಗಿ ಹೋಗುವ ಹಾಗೆ ಅವನು ವಿಮಾಕಚೇರಿಗೆ ಏಕೆ ಹೋಗಬಾರದು? ಅಲ್ಲಿ ಚಕ್ಕಳದ ಮೆತ್ತೆಯ ತೋಳು ಕುರ್ಚಿಗಳ ಪೈಕಿ ಒಂದರಲ್ಲಿ ಸ್ವಲ್ಪ ಹೊತ್ತು ಕುಳಿತು, ಅಂದಿನ ಕಾಡು ಹರಟೆಗೆ ಕಿವಿಗೂಡುತ್ತಾ, ಆಳವಾಗಿ ಆಲೋಚಿಸಿ ಅಕಸ್ಮಾತ್ ಹೊಳೆದ ಮಾತನ್ನು ಲೆಕ್ಕಾಚಾರವಾಗಿ ಆಡಿದರೆ, ಅದು ನಾಳಿನ ಬೀದಿಮಾತಾಗಿ ಪರಿಣಮಿಸುವುದು ಖಂಡಿತ! ಬ್ಯಾಂಕಿನ ಡೈರೆಕ್ಟರುಗಳ (ಕಾರ್ಯನಿರ್ವಾಹಕರ) ಸಭೆ ಒಂದು ಇದ್ದಿತಲ್ಲವೆ? ಅದರಲ್ಲಿ ಹಾಜರಾಗಿರಬೇಕೆಂದು ನ್ಯಾಯಮೂರ್ತಿ ಉದ್ದೇಶಿಸಿರಲಿಲ್ಲವೆ? ಆ ಸಭೆಯ ಅಧ್ಯಕ್ಷತೆ ವಹಿಸಬೇಕಾದದ್ದು ಅವನ ಅಧಿಕಾರಕ್ಕೆ ಸೇರಿದ್ದಲ್ಲವೆ? ನಿಜವಾಗಿಯೂ ಅವರ ಸಭೆ ಒಂದಿದೆ; ಅದು ಸೇರುವ ಹೊತ್ತನ್ನು ಒಂದು ಚೀಟಿಯ ಮೇಲೆ ಗುರುತುಹಾಕಿದೆ; ನ್ಯಾಯಮೂರ್ತಿ ಪಿನ್ಚನ್ನನ ನಡುವಂಗಿಯ ಬಲ ಜೇಬಿನಲ್ಲಿ ಅದು ಇದೆ, ಅಥವಾ ಇರಬೇಕಾಗಿತ್ತು. ಅವನು ಅಲ್ಲಿಗೆ ಹೋಗಲಿ, ತನ್ನ ಹಣದ ಥೈಲಿಗಳ ಮೇಲೆ ಹಾಯಾಗಿ ಒರಗಿ ಬಿದ್ದಿರಲಿ! ಅವನು ಹಳೆಯ ಕುರ್ಚಿಯ ಮೇಲೆ ಆರಾಮವಾಗಿ ಕುಳಿತು ಬಹಳ ಕಾಲವಾಯಿತು!

ಇಂದು ಅಂತಹ ಒಂದು ಬಿಡುವಿಲ್ಲದ ಚಟುವಟಿಕೆಯ ದಿನವಾಗಿರ ಬೇಕಾಗಿತ್ತು! ಮೊತ್ತ ಮೊದಲನೆಯದಾಗಿ, ಕ್ಲಿಫರ್ಡನೊಂದಿಗೆ ಸಂದರ್ಶನ. ನ್ಯಾಯಮೂರ್ತಿಯ ಲೆಕ್ಕಾಚಾರದ ಪ್ರಕಾರ ಅದಕ್ಕೆ ಅರ್ಧಗಂಟೆ ಸಾಕು; ಬಹುಶಃ ಇನ್ನೂ ಕಡಮೆಯೆ ಸಾಕಾದೀತು; ಆದರೆ– ಮೊತ್ತಮೊದಲು ಹೆಪ್ಸಿಬಾಳೊಡನೆ ಅವನು ವ್ಯವಹರಿಸಬೇಕಾಗಿತ್ತೆಂಬುದನ್ನೂ, ಕೆಲವು ಮಾತುಗಳನ್ನು ಉಪಯೋಗಿಸುವುದೇ ಸಾಕಾಗಿರುವಾಗ ಈ ಹೆಂಗಸರು ಹಲವು ಮಾತುಗಳನ್ನು ಉಪಯೋಗಿಸುತ್ತಾರೆಂಬುದನ್ನೂ ಪರಿಗಣಿಸುವುದಾದರೆ– ಅರ್ಧ ಗಂಟೆಯಷ್ಟು ಅವಕಾಶಕೊಡುವುದು ಅತ್ಯಂತ ಕ್ಷೇಮಕರ. ಅರ್ಧಗಂಟೆಯೆ? ನ್ಯಾಯಮೂರ್ತಿಗಳೇ, ನಿಮ್ಮ ಸ್ವಂತದ, ಕರಾರುವಾಕಾದ ಗಡಿಯಾರದ ಪ್ರಕಾರವೇ ಈಗಾಗಲೇ ಎರಡು ಗಂಟೆಗಳಾಗಿ ಹೋಗಿವೆ! ಸ್ವಲ್ಪ ನಿಮ್ಮ ಕಣ್ಣನ್ನು ಕೆಳಗೆ ತಗ್ಗಿಸಿ, ಅವನ್ನು ನೋಡೋಣವಾಗಲಿ! ಆಹಾ! ಈ ನಂಬಿಕೆಯ ಗಡಿಯಾರವನ್ನು ಕಾಣುವಷ್ಟು ಹತ್ತಿರಕ್ಕೆ ತರಲು ತನ್ನ ತಲೆಯನ್ನು ತಗ್ಗಿಸುವ, ಇಲ್ಲವೆ ಕೈಯನ್ನು ಮೇಲಕ್ಕೆತ್ತುವ ತೊಂದರೆಯನ್ನು ಆತ ತೆಗೆದುಕೊಳ್ಳುತ್ತಿಲ್ಲ! ಇದಕ್ಕಿದ್ದ ಹಾಗೆ, ನ್ಯಾಯಮೂರ್ತಿಗಳ

ಅವು ಹಾಯಾಗಿರುವಂತೆಯೂ, ಆದರೆ ಅತಿ ಹಾಯಾಗಿಬಿಟ್ಟು ಅದರಿಂದುಟಾಗುವ ಮುಜಗರವನ್ನು ಹೋಗಲಾಡಿಸುವಂತೆಯೂ ವಿವಿಧ ರೀತಿಯ ಇಳಿಜಾರುಗಳೂ ಅಸಂಖ್ಯಾಕ ಸಾಧನೋಪಾಯಗಳೂ ಅವಕ್ಕುಂಟು; ಇಂಥ ಇಪ್ಪತ್ತು ಕುರ್ಚಿಗಳು ಬೇಕಾದರೂ ನ್ಯಾಯಮೂರ್ತಿಯ ಸೇವೆಗೆ ಸದಾ ಸಿದ್ಧ. ಹೌದು! ಹತ್ತಿಪ್ಪತ್ತು ದಿವಾನಖಾನೆಗಳಲ್ಲಿ ಅವನಿಗೆ ಕೇವಲ ಸ್ವಾಗತಕ್ಕಿಂತ ಹೆಚ್ಚಿನ ಆದರಣೆ ಕಾದಿದೆ. ಮನೆಯ ಯಜಮಾನಿ ಅವನನ್ನು ಎದುರುಗೊಳ್ಳಲು ಕೈಚಾಚಿಕೊಂಡು ಬರುವಳು;; ಮದುವೆಯಾಗಿಲ್ಲದ ಮಗಳು ನ್ಯಾಯಮೂರ್ತಿಗಾಗಿ ಕುರ್ಚಿಯ ಮೆತ್ತೆಯ ಧೂಳು ಕೊಡವಿ, ಅವನನ್ನು ಸುಖಿಯಾಗಿ ಮಾಡಲು ತನ್ನ ಕೈಲಾದದ್ದನ್ನೆಲ್ಲಾ ಮಾಡುವಳು: ಈಗವನು ವಯಸ್ಕನಾಗಿ ಕಾಣಿಸಿಕೊಳ್ಳಬೇಕು; ಅವನೇ ನಗುನಗುತ್ತಾ ಹೇಳಿಕೊಳ್ಳುವಂತೆ, ಮುದಿ ವಿಧುರ ಅವನು. ಇಷ್ಟೆಲ್ಲಾ ಉಪಚಾರ ಏಕೆಂದರೆ, ನ್ಯಾಯಮೂರ್ತಿ ಈಗ ಉಚ್ಛ್ರಾಯದಶೆಯಲ್ಲಿದ್ದಾನೆ. ಅದೂ ಅಲ್ಲದೆ, ಇತರ ಜನರಂತೆ ಅವನೂ ಕೂಡ ತನ್ನ ಯೋಜನೆಗಳನ್ನು ಆಸಕ್ತಿಯಿಂದ ನೆಮ್ಮಿಕೊಂಡಿದ್ದಾನೆ; ನ್ಯಾಯುವಾಗಿಯೆ, ಅನೇಕ ಮಂದಿಗಿಂತ ಹೆಚ್ಚು ಆಶಾಭಾವನೆಯಿಂದ ನೆಮ್ಮಿಕೊಂಡಿದ್ದಾನೆ; ಅಥವಾ, ಕಡೆಯ ಪಕ್ಷ, ಹಾಗೆ ನೆಮ್ಮಿಕೊಂಡಿದ್ದನು– ಇಂದಿನ ಬೆಳಗ್ಗೆ, ದಿನದ ವ್ಯವಹಾರಗಳ ಯೋಜನೆ ಹಾಕುತ್ತಾ, ಮುಂದಿನ ಹದಿನೈದು ವರ್ಷಗಳ ಅವಧಿಯಲ್ಲಿ ಸಂಭವಿಸಬಹುದಾದದ್ದರ ಬಗೆಗೆ ಊಹಾಪೋಹ ಮಾಡುತ್ತಾ, ಹಿತಕರವಾದ ಅರೆನಿದ್ದೆಯಲ್ಲಿದ್ದಾಗ, ಹಾಗೆ ನೆಮ್ಮಿಕೊಂಡಿದ್ದನು. ಅವನಿಗೆ ದೃಢವಾದ ಆರೋಗ್ಯವಿತ್ತು; ವಯಸ್ಸು ಅವನ ಮೇಲೆ ಮಾಡಿದ್ದ ದಾಳಿ ಅತ್ಯಲ್ಪ; ಹದಿನೈದು ಇಪ್ಪತ್ತು ವರ್ವ, ಅಥವಾ ಇಪ್ಪತ್ತು ಇಪ್ಪತ್ತೈದು ವರ್ಷ– ತನ್ನದೆಂದು ಸರಿಸುಮಾರಾಗಿ ಕರೆದುಕೊಳ್ಳಬಹುದಾಗಿದ್ದ ಕಾಲಾವಧಿ ಇಷ್ಟು. ಪಟ್ಟಣವಾಸದಲ್ಲೂ ಹಳ್ಳಿಗಾಡಿನಲ್ಲೂ ಇದ್ದ ಅವನ ಸ್ಥಿರಾಸ್ತಿ, ಅವನ ಸ್ವಂತ ರೈಲು ಮಾರ್ಗ, ಬ್ಯಾಂಕು ಮತ್ತು ವಿಮಾ ಸಂಸ್ಥೆಗಳಲ್ಲಿ ಹಾಕಿದ್ದ ಬಂಡವಾಳಪಾಲುಗಳು, ಸಂಯುಕ್ತ ಸಂಸ್ಥಾನಗಳ ಸರ್ಕಾರದಲ್ಲಿದ್ದ ಅವನ ಬಂಡವಾಳದ ಹಣ– ಒಟ್ಟಿನಲ್ಲಿ, ಒಂದು ಮಾತಿನಲ್ಲಿ ಹೇಳುವುದಾದರೆ, ಅವನ ಸಂಪತ್ತು– ಅದನ್ನು ಯಾವ ರೂಪದಲ್ಲಿ ಬೇಕಾದರು ಇಟ್ಟಿರಲಿ, ಈಗ ಸ್ವಾಧೀನದಲ್ಲಿರುವುದಾಗಲಿ ಇಲ್ಲವೆ ಮುಂದೆ ಶೀಘ್ರದಲ್ಲಿಯೆ ಸಂಪಾದನೆ ಯಾಗುವುದಿರಲಿ– ಅವನ ಈ ಸಂಪತ್ತು, ಅದರ ಜೊತೆಗೆ ಅವನಿಗೆ ಈಗ ಲಭಿಸಿರುವ ಸಾರ್ವಜನಿಕ ಗೌರವಪ್ರಶಸ್ತಿಗಳು ಮತ್ತು ಲಭಿಸಲಿರುವ ಇನ್ನೂ ಘನತರವಾದ ಗೌರವಗಳು– ಇವನ್ನೆಲ್ಲಾ ಅನುಭೋಗಿಸಲು ಅವನದಾಗಿದ್ದುದ್ದು

ತೀರ್ಮಾನವಾದರೆ, ಅವನು ಒಂದು ದಾನಧರ್ಮದ ಸಂಘದ ಸಭೆಗೆ ಹೋದರೂ ಹೋಗಬಹುದು; ಅವನ ಬಹು ಮುಖವಾದ ಧರ್ಮಕಾರ್ಯಗಳ ಸಂಬಂಧದ ಮಧ್ಯೆ, ಹಾಳಾದದ್ದು ಅದರ ಹೆಸರೇ ಮರೆತುಹೋಗಿದೆ; ಆದ್ದರಿಂದ, ಈ ಕಾರ್ಯಕ್ರಮವನ್ನು ಪೂರೈಸದಿದ್ದರೂ ನಡೆಯುತ್ತದೆ; ಆದ್ದರಿಂದ ಅಂಥ ಹೆಚ್ಚಿನ ಬಾಧಕವೇನೂ ಇಲ್ಲ. ಹೆಚ್ಚು ತುರ್ತಾದ ಕಾರ್ಯಭಾರಗಳ ಒತ್ತಾಯದ ನಡುವೆಯೂ ಅವನಿಗೇನಾದರೂ ಹೊತ್ತು ಉಳಿದರೆ, ಶ್ರೀಮತಿ ಪಿನ್ಚನ್ನಿನ ಗೋರಿಕಲ್ಲನ್ನು ಹೊಸತು ಮಾಡಲು ಏರ್ಪಾಡುಮಾಡಬೇಕು; ಏಕೆಂದರೆ, ಅಮೃತಶಿಲೆಯಿಂದ ಮಾಡಿದ ಅದರ ಮುಂಭಾಗದ ಮೇಲೆ ಅದು ಮಗುಚಿಕೊಂಡಿದೆಯೆಂದೂ, ಪೂರ್ತಿ ಇಬ್ಭಾಗವಾಗಿ ಸೀಳಿಹೋಗಿದೆಯೆಂದೂ ಸಮಾಧಿಭೂಮಿಯ ಮೇಲ್ವಿಚಾರಕ ಹೇಳಿದ್ದಾನೆ. ಅವಳದ್ದು ಯಾವಾಗಲೂ ಗಾಬರಿಯ ಸ್ವಭಾವ, ಕಣ್ಣಿಂದ ನೀರು ತೊಟ್ಟಿಕ್ಕಿಸುತ್ತಲೇ ಇದ್ದಳು, ಕಾಫಿಯ ವಿಚಾರದಲ್ಲಿ ಅವಳ ವರ್ತನೆ ಅವಿವೇಕದ್ದು; ಇಷ್ಟಾದರೂ, ಆಕೆ ಪ್ರಶಂಸೆಗೆ ತಕ್ಕಮಟ್ಟಿಗೆ ಪಾತ್ರಳೆಂದೇ ನ್ಯಾಯಮೂರ್ತಿಯ ಎಣಿಕೆ; ಅಲ್ಲದೆ, ಅವಳು ಅಷ್ಟೊಂದು ಸಕಾಲದಲ್ಲಿ ಅವನನ್ನು ಬೀಳ್ಕೊಂಡು ತೆರಳಿರುವುದರಿಂದ, ಎರಡನೆಯ ಗೋರಿಕಲ್ಲನ್ನು ಅಗತ್ಯವಿರಲಿಲ್ಲ ಎನ್ನುವ ಸ್ಥಿತಿಗಿಂತ ಇದು ಎಷ್ಟೋ ಮೇಲು! ಅವನ ಪಟ್ಟಿಯಲ್ಲಿದ್ದ ಮುಂದಿನ ಕಾರ್ಯಾಂಶ, ಅಪೂರ್ವಜಾತಿಯ ಕೆಲವು ಹಣ್ಣಿನ ಗಿಡಗಳನ್ನು ಕೊಳ್ಳುವುದಕ್ಕಾಗಿ ಕೋರಿಕೆ ಕಳಿಸುವುದು; ಅವುಗಳನ್ನು ಬರುವ ಶರತ್ಕಾಲವಾದ ಮೇಲೆ ಅವನ ಹಳ್ಳಿಯ ನಿವಾಸಕ್ಕೆ ಕಳಿಸುವ ಹಾಗೆ ಏರ್ಪಾಡು ಮಾಡಬೇಕಾಗಿತ್ತು. ನ್ಯಾಯಮೂರ್ತಿ ಪಿನ್ಚನ್ನರೇ, ಅಗತ್ಯವಾಗಿ ಅವುಗಳನ್ನು ಕೊಂಡುಕೊಳ್ಳಿ; 'ಪೀಚ್' ಹಣ್ಣುಗಳು ನಿಮ್ಮ ಬಾಯಲ್ಲಿ ರಸವತ್ತಾಗಿರಲಿ! ಇದಾದ ಮೇಲೆ ಇನ್ನೂ ಮುಖ್ಯವಾದ ವಿಚಾರ ಬರುತ್ತದೆ. ಅವನ ರಾಜಕೀಯಪಕ್ಷದ ಸಮಿತಿಯೊಂದು ಅವನು ಈ ಹಿಂದೆ ಕೊಟ್ಟಿರುವ ಹಣದ ಜೊತೆಗೆ ಮತ್ತೆ ನೂರಿನ್ನೂರು 'ಡಾಲರು'ಗಳನ್ನು ಕೊಡಬೇಕೆಂದು ಕೇಳಿಕೊಂಡಿದೆ; ಅದು ಮುಂದಿನ ಪ್ರಚಾರಕ್ಕೆ ಅಗತ್ಯ. ನ್ಯಾಯಮೂರ್ತಿ ದೇಶಾಭಿಮಾನಿ; ನಾಡಿನ ಆಗುಹೋಗುಗಳು ಬರುವ ನೊವೆಂಬರ್ ತಿಂಗಳ ಚುನಾವಣೆಯನ್ನು ಅವಲಂಭಿಸಿವೆ; ಆ ದೊಡ್ಡ ಆಟದಲ್ಲಿ ಅವನು ಒಡ್ಡಿರುವ ಪಣ ಅತ್ಯಲ್ಪವಾದದ್ದೇನಲ್ಲ. ಸಮಿತಿ ಕೇಳಿದ್ದನ್ನು ಅವನು ಮಾಡತಕ್ಕವನು; ಮಾತ್ರವಲ್ಲ, ಅವರ ನಿರೀಕ್ಷೆಯನ್ನು ಮೀರಿ ಅವನು ಉದಾರವಾಗಿರುವನು; ಅವರಿಗೆ ಐದುನೂರು ಡಾಲರುಗಳಿಗೆ ಒಂದು ಚೆಕ್ಕನ್ನು ಕೊಡಲಾಗುವುದು; ಅಗತ್ಯವಾದರೆ, ಬೇಗನೆಯೆ ಇನ್ನೂ ಹೆಚ್ಚಿಗೆ ಕೊಡಲಾಗುವುದು.

ದೃಷ್ಟಿಯಲ್ಲಿ ಕಾಲವೆಂಬುದು ಏನೂ ಬೆಲೆಯಿಲ್ಲದ ವಿಷಯವಾಗಿ ಪರಿಣಮಿಸಿರುವ ಹಾಗೆ ಕಾಣುತ್ತದೆ!

ಅಲ್ಲದೆ, ತನ್ನ ಜ್ಞಾಪಕಪತ್ರದ ಇತರ ಎಲ್ಲ ಅಂಶಗಳನ್ನೂ ಆತ ಮರೆತುಬಿಟ್ಟಿರುವನೇ? ಕ್ಲಿಫರ್ಡನ ವ್ಯವಹಾರವನ್ನು ವ್ಯವಸ್ಥೆಗೊಳಿಸಿದ ಮೇಲೆ ಆತ ಸರ್ಕಾರದ ಷೇರುಬಂಡವಾಳದ ವ್ಯವಹಾರದ ಬೀದಿದಳ್ಳಾಳಿಯೊಬ್ಬನನ್ನು ಸಂಧಿಸಬೇಕಾಗಿತ್ತು; ನ್ಯಾಯಮೂರ್ತಿಯ ಬಳಿ ಇನ್ನೂ ಬಂಡವಾಳದ ಮೇಲೆ ಹಾಕದೆ ಇದ್ದ ಕೆಲವು ಚಿಲ್ಲರೆ ಸಾವಿರಗಳಷ್ಟು ಹಣವಿತ್ತು; ಅದಕ್ಕೆ ಭಾರಿ ಶೇಕಡಾ ದರದಲ್ಲಿ ಲಾಭವನ್ನೂ ಅತ್ಯಂತ ಖಾತರಿಯಾದ ಬಂಡವಾಳ ಪತ್ರವನ್ನೂ ದೊರಕಿಸಿಕೊಡುವುದಾಗಿ ಆ ದಳ್ಳಾಳಿ ಹೊಣೆಹೊತ್ತುಕೊಂಡಿದ್ದನು. ಸುಕ್ಕುಗಟ್ಟಿದ ಮುಖದ ಆ ಬಂಡವಾಳಪತ್ರ ದಳ್ಳಾಳಿ ವ್ಯರ್ಥವಾಗಿ ರೈಲುಪ್ರಯಾಣಮಾಡಿರುತ್ತಾನೆ. ಅರ್ಧಗಂಟೆಯಾದ ಮೇಲೆ, ಇದರ ಪಕ್ಕದ ಬೀದಿಯಲ್ಲಿ, ಸ್ಥಿರಾಸ್ತಿಯ ಹರಾಜೊಂದು ನಡೆಯುವುದಿತ್ತು; ಮೊದಲು ಮಾಲನ ತೋಟದ ಜಮೀನಾಗಿದ್ದ, ಹಳೆಯ ಪಿನ್ಚನ್ ಆಸ್ತಿಯೂ ಆ ಸ್ಥಿರಾಸ್ತಿಯಲ್ಲಿ ಸೇರಿತ್ತು. ಈಗ ಎಂಬತ್ತು ವರ್ಷಗಳಿಂದಲೂ ಅದು ಪಿನ್ಚನ್ ವಂಶಸ್ಥರ ಕೈತಪ್ಪಿಹೋಗಿತ್ತು; ಆದರೆ ನ್ಯಾಯಮೂರ್ತಿ ಅದರ ಮೇಲೆ ತನ್ನ ಕಣ್ಣಿಟ್ಟಿದ್ದನು, ಹಾಗೂ ಏಳು ಇಪ್ಪಾರಿನ ಮನೆಯ ಸುತ್ತ ಇನ್ನೂ ಉಳಿದಿದ್ದ ಸಣ್ಣ ಪ್ರದೇಶಕ್ಕೆ ಅದನ್ನು ಸೇರಿಸಿಕೊಳ್ಳಲು ಮನಸ್ಸು ಮಾಡಿದ್ದನು; ಈಗ, ಅವನು ವಿಚಿತ್ರರೀತಿಯಲ್ಲಿ ಹೀಗೆ ಮೈಮರೆತಿದ್ದಾಗ, ದುರ್ದೈವದ ಹರಾಜುಕೊಡತಿಯ ಹೊಡೆತ ಬಿದ್ದು, ನಮ್ಮ ಪುರಾತನ ಪಿತ್ರಾರ್ಜಿತ ಆಸ್ತಿ ಯಾರೋ ಹೊರಗಿನವರ ಕೈಸೇರಿರಬೇಕು! ಹವಾಗುಣ ಚೆನ್ನಾಗುವ ವರೆಗೆ ಹರಾಜುಮಾರಾಟವನ್ನು ಮುಂದುವರಿಸಿದ್ದಿರಬಹುದು; ನಿಜವಾಗಿ ಅದೂ ಸಾಧ್ಯ. ಹಾಗಿರುವ ಪಕ್ಷಕ್ಕೆ, ನ್ಯಾಯಮೂರ್ತಿ ಹರಾಜಿಗೆ ಹೋಗಲು ಅನುಕೂಲಮಾಡಿಕೊಂಡು, ಮುಂದಿನ ಸಲ ತನ್ನ ಕಡೆಗೆ ವ್ಯಾಪಾರ ನಿಲ್ಲುವಂತೆ ಹರಾಜಿನಲ್ಲಿ ಕೂಗಿ, ಹರಾಜುವ್ಯಾಪಾರಿಗೆ ಉಪಕಾರ ಮಾಡುವನೆ?

ತಾನೇ ಸ್ವಂತವಾಗಿ ಗಾಡಿಹೊಡೆಯುವುದಕ್ಕಾಗಿ ಒಂದು ಕುದುರೆಯನ್ನು ಕೊಳ್ಳಬೇಕಾಗಿತ್ತು; ಅದು ಮುಂದಿನ ವ್ಯವಹಾರ. ಇಂದಿನವರೆಗೂ ಅವನ ನಚ್ಚಿನದೆನಿಸಿದ್ದ ಕುದುರೆ ಇದೇ ದಿನ ಬೆಳಗ್ಗೆ ಊರಿಗೆ ಬರುವ ಮಾರ್ಗದಲ್ಲಿ ಮುಗ್ಗರಿಸಿತ್ತು; ಅದನ್ನು ಈ ಕೂಡಲೆ ತೊಲಗಿಸಿಬಿಡಬೇಕು. ಒಂದು ಮುಗ್ಗರಿಸುವ ಕುದುರೆಯಿಂದ ಸಂಭವಿಸುವ ಅಪಾಯಕ್ಕೆ ಒಡ್ಡುವಷ್ಟು ಅಗ್ಗವಲ್ಲ ನ್ಯಾಯಮೂರ್ತಿ ಪಿನ್ಚನ್ನನ ಕೊರಳು. ಮೇಲ್ಕಂಡ ವ್ಯವಹಾರಗಳೆಲ್ಲ ಸಕಾಲದಲ್ಲಿ ಸರಿಯಾಗಿ

ವೇಳೆಗೆ ಇನ್ನು ಹತ್ತು ನಿಮಿಷಗಳು ಮಾತ್ರ ಉಳಿದಿವೆ! ಅದರ ಪರಿಣಾಮಗಳ ದೃಷ್ಟಿಯಿಂದ, ನೀವು ಈತನಕ ಭುಂಜಿಸಿರುವ ಮಧ್ಯಾಹ್ನ ಭೋಜನಗಳೆಲ್ಲಕ್ಕಿಂತ ಇಂದಿನ ಭೋಜನವು ಅತ್ಯಂತ ಮುಖ್ಯವೆಂಬುದು ಖಂಡಿತ ನಿಮ್ಮ ನೆನಪಿನಿಂದ ಜಗುಳಿಹೋಗಿರಲಾರದಲ್ಲವೇ? ಹೌದು, ಖಂಡಿತವಾಗಿಯೂ ಅತ್ಯಂತ ಮುಖ್ಯವಾದದ್ದು. ನಿಮ್ಮ ತಕ್ಕಮಟ್ಟಿನ ಘನವಾದ ವೃತ್ತಿಯ ಕಾಲದಲ್ಲಿ, ನೀವು ಸೊಗಸಾದ ಭೋಜನಕೂಟಗಳಿಗೆ ಹೋಗಿದ್ದೀರಿ; ಅಲ್ಲಿ ಊಟದ ಮೇಜದ ಅಗ್ರಪಂಕ್ತಿಯಲ್ಲಿ ನಿಮಗೆ ಉಚ್ಚಸ್ಥಾನವೇ ದೊರಕಿದೆ; ವೆಬ್‌ಸ್ಟರ್‌ಅವರ ಮಹೋನ್ನತವಾದ ಆರ್ಗನ್‌ವಾದ್ಯವಾದನದ ಸ್ವರಗಳು ಇನ್ನೂ ಮೊಳಗುತ್ತಿರುವ ಕಿವಿಗಳಿಗೆ ನೀವು ನಿಮ್ಮ ಔತಣ ಭಾಷಣದ ವಾಗ್ವೈಖರಿಯನ್ನು ವರ್ಷಿಸಿದ್ದೀರಿ. ಆದರೂ ಇಂದಿನ ಭೋಜನಕ್ಕೆ ಅತ್ಯಂತ ಮುಖ್ಯವಾದದ್ದು– ಆದಾಗ್ಯೂ, ಇದು ಸಾರ್ವಜನಿಕ ಭೋಜನವಲ್ಲ. ಸಂಸ್ಥಾನದ ಹಲವು ಜಿಲ್ಲೆಗಳಿಂದ ಬಂದು ನೆರೆಯುವ ಹತ್ತು ಹನ್ನೆರಡು ಮಂದಿ ಸ್ನೇಹಿತರ ಕೂಟ ಮಾತ್ರ; ಅವರೆಲ್ಲರೂ ವಿಶಿಷ್ಟವ್ಯಕ್ತಿತ್ವವುಳ್ಳ, ಪ್ರಭಾವಶಾಲಿಗಳಾದ ಜನ; ತಮ್ಮಂತೆಯೇ ವಿಶಿಷ್ಟಗುಣವುಳ್ಳ, ತಮ್ಮೆಲ್ಲರಿಗೂ ಸಮಾನವಾಗಿ ಮಿತ್ರನಾಗಿದ್ದಾತನೊಬ್ಬನ ಮನೆಯಲ್ಲಿ ಅವರು ಬಹುಮಟ್ಟಿಗೆ ಅಕಸ್ಮಾತ್ತಾಗಿ ನೆರೆದಿದ್ದರು; ಆತನ ಪ್ರತಿನಿತ್ಯದ ಭೋಜನಕ್ಕಿಂತ ಮೇಲಾದದ್ದು ಅವರನ್ನು ಸ್ವಾಗತಿಸಲು ಕಾದಿತ್ತು. ಎಂದಮಾತ್ರಕ್ಕೆ ಫ್ರೆಂಚು ಮಾದರಿಯ ಭಕ್ಷ್ಯಭೋಜ್ಯಗಳೇನಲ್ಲ; ಆದಾಗ್ಯೂ, ಉತ್ಕೃಷ್ಟವಾದ ಭೋಜನವೇ. ಗ್ರಾಮಾಂತರಗಳಿಂದ ಬಂದಿದ್ದ ಗೌರವಸ್ಥರಾದ ದೊಡ್ಡ ಮನುಷ್ಯರುಗಳಿಗೆ ಯೋಗ್ಯವೆನಿಸಿದ– ನಿಜವಾದ ಆಮೆ, 'ಸಾಲ್‌ಮನ್' ಮೀನು, ಬಾತು ಕೋಳಿಗಳು, ಹಂದಿ, ಇಂಗ್ಲಿಷು ಕುರಿಯ ಮಾಂಸ, ಚೆನ್ನಾಗಿ ಸುಟ್ಟ ದನದ ಮಾಂಸ ಇತ್ಯಾದಿ ಇತ್ಯಾದಿ, ಇವೆಲ್ಲಾ ಸೇರಿದ್ದುವು ಆ ಭಕ್ಷ್ಯಭೋಜ್ಯಗಳಲ್ಲಿ, ಒಂದು ಮಾತಿನಲ್ಲಿ, ಋತುವಿಗೆ ತಕ್ಕ ಸವಿತಿನಿಸುಗಳು. ಅವಕ್ಕೆ ರುಚಿ ಕೊಡಲು, ಜೊತೆಗೆ 'ಮಾಡೀರ' ದ್ವೀಪದ ದ್ರಾಕ್ಷಾಮದ್ಯ; ಅನೇಕ ವರ್ಷಕಾಲದ ಹೆಮ್ಮೆಯ ಹಳೆಯ ಮದ್ಯ; ಅದು 'ಜೂನೋ' ದೇವತೆಯ ಗುರುತಿನ, ಭೇಷಾದ ಸುವಾಸನೆಯ, ಸೌಮ್ಯ ಶಕ್ತಿಯ ಮದ್ಯ; ಮುಂದಿನ ಉಪಯೋಗಕ್ಕೆಂದು ಶೀಸೆಗಳಲ್ಲಿ ಶೇಖರಿಸಿಟ್ಟ ಸುಖಸಾರ; ದ್ರವರೂಪದ ಚಿನ್ನಕ್ಕಿಂತ ಹೆಚ್ಚು ಬೆಲೆಬಾಳತಕ್ಕ, ಉತ್ಕೃಷ್ಟವಾದ ಹೊಂಬಣ್ಣದ ದ್ರವ; ಪಳಗಿದ ಅತಿಕುಡುಕರು ಕೂಡ ಅದನ್ನು ರುಚಿ ನೋಡಿದ್ದೇ ಒಂದು ಸುವರ್ಣಸಂಧಿ ಎಂದು ಎಣಿಸುವಮಟ್ಟಿಗೆ ಅಪೂರ್ವವೂ ಶ್ಲಾಘ್ಯವೂ ಆಗಿತ್ತು ಅದು! ಅದು ಎದೆಯ ಬೇನೆಯನ್ನು ಹೊಡೆದೋಡಿಸಿ, ಅದರೆಡೆಯಲ್ಲಿ

ಮುಂದೇನು? ಒಬ್ಬಳು ವಯೋವೃದ್ಧಳಾದ ವಿಧವೆ ಇದ್ದಾಳೆ; ಆಕೆಯ ಗಂಡ ನ್ಯಾಯಮೂರ್ತಿ ಪಿನ್ಚನ್ನನ ಪೂರ್ವಸ್ನೇಹಿತ; ಬಹಳ ಹೃದಯ ವಿದ್ರಾವಕ ಪತ್ರ ಬರೆದು, ಅದರಲ್ಲಿ ತನ್ನ ನಿರ್ಗತಿಕತೆಯನ್ನು ವಿವರಿಸಿದ್ದಾಳೆ. ಅವಳಿಗೂ, ಅವಳ ಚೆಲುವೆಯಾದ ಮಗಳಿಗೂ ತಿನ್ನಲು ತುಣುಕು ರೊಟ್ಟಿಯೊ ಇಲ್ಲ. ತನ್ನ ಬಳಿ ಸ್ವಲ್ಪ ಮೊತ್ತದ ಒಂದು ಬ್ಯಾಂಕು ಹುಂಡಿಯೇನಾದರೂ ಇದ್ದರೆಗಿದ್ದರೆ, ಜೊತೆಗೆ ಬಿಡುವಾಗಿಯೂ ಇದ್ದರೆ, ಅವನು ಇಂದು ಅವಳನ್ನು ಕಂಡುಬರಬೇಕೆಂದು ಅರ್ಧ ಮನಸ್ಸು ಮಾಡಿದ್ದಾನೆ– ಎಂದರೆ, ಕಾಣಲು ಬಹುಶಃ ಹೋಗಬಹುದು, ಹೋಗದೆಯೂ ಇರಬಹುದು.

ಇನ್ನೊಂದು ಕೆಲಸ, ತನ್ನ ಕುಟುಂಬದ ವೈದ್ಯರ ಸಲಹೆ ಪಡೆಯುವುದು; ಆದರೆ, ಆ ವಿಷಯಕ್ಕೆ ಆತ ಅಷ್ಟೊಂದು ಮಹತ್ವ ಕೊಟ್ಟಿಲ್ಲ (ಏಕೆಂದರೆ, ತಮ್ಮ ಸ್ವಂತ ಆರೋಗ್ಯದ ವಿಚಾರದಲ್ಲಿ ಎಚ್ಚರಿಕೆಯಿಂದಿರುವುದು ಒಳ್ಳೆದು, ಅವನ್ನು ನೀವೂ ಬಲ್ಲಿರಿ; ಆದರೆ ಅತಿ ಗಾಬರಿ ಪಡಬಾರದು). ಯಾವ ಖಾಯಿಲೆಯ ವಿಚಾರವಾಗಿ? ರೋಗಲಕ್ಷಣಗಳನ್ನು ವಿವರಿಸುವುದು ಸ್ವಲ್ಪ ಕಷ್ಟವೆ, ಬರಿಯ ದೃಷ್ಟಿಮಾಂದ್ರತೆಯ, ಮತ್ತು ತಲೆತಿರುಗುವಿಕೆಯೆ? ಅಥವಾ, ದೇಹರಚನಾಶಾಸ್ತ್ರಜ್ಞರು ಮುಂಡ ಅಥವಾ ಉರೋಭಾಗ ಎಂದು ಕರೆಯುತ್ತಾರಲ್ಲಾ, ಆ ಪ್ರದೇಶದಲ್ಲಿ ಬೇಸರವಾಗುವ ರೀತಿಯಲ್ಲಿ ಗಂಟಲು ಹಿಡಿದುಕೊಳ್ಳುವುದೇ, ಉಸಿರುಕಟ್ಟಿದ ಹಾಗಾಗುವುದೇ, ಗೊರಗುಟ್ಟುವುದೇ, ಇಲ್ಲವೇ ನೊರೆಗತೆಯುವುದೇ? ಅಥವಾ, ಹೃದಯವು ತಕ್ಕಮಟ್ಟಿಗೆ ಬಲವಾಗಿಯೆ 'ಡಬ್ ಡಬ್' ಎಂದು ಹೊಡೆದುಕೊಳ್ಳುವುದೆ, ಜರ್ಜರಿಸುವುದೆ? ಹಾಗಿದ್ದರೆ, ಅವನ ಭಾಗಕ್ಕೆ ಅದು ಒಳ್ಳೆಯದೆ ಎನ್ನಬೇಕು; ಏಕೆಂದರೆ, ನ್ಯಾಯಮೂರ್ತಿಯ ಶರೀರರಚನಾವ್ಯವಸ್ಥೆಯಲ್ಲಿ ಆ ಅಂಗವು ಸೇರದೆ ಬಿಟ್ಟು ಹೋಗಿಲ್ಲ ಎಂಬುದು ಅದರಿಂದ ವ್ಯಕ್ತವಾಗುವುದು. ಅದು ಏನಾದರೂ ಇದ್ದುಕೊಳ್ಳಲಿ. ವೈದ್ಯನು ಅಂತಹ ಕ್ಷುಲ್ಲಕ ಸಂಗತಿಗಳ ವರದಿಯನ್ನು ವೃತ್ತಿಯಲ್ಲಿ ಪಳಗಿದ ತನ್ನ ಕಿವಿಯಿಂದ ಕೇಳಿ ಬಹುಶಃ ನಸುನಗುವನು; ಪ್ರತಿಯಾಗಿ ನ್ಯಾಯಮೂರ್ತಿಯೂ ನಸುನಗುವನು; ಆಮೇಲೆ, ಇಬ್ಬರೂ ಒಬ್ಬರನ್ನೊಬ್ಬರು ನೋಡಿ, ಒಟ್ಟಿಗೆ ಮನಸ್ತೃಪ್ತಿಯಾಗುವಂತೆ ನಕ್ಕು ನಲಿಯುವರು? ಇಷ್ಟರಮೇಲೆ, ವೈದ್ಯಕೀಯ ಸಲಹೆಗೆ ಒಂದು ಕವಡೆಯ ಬೆಲೆ! ನ್ಯಾಯಮೂರ್ತಿಗೆ ಅದರ ಅಗತ್ಯವೇ ಇಲ್ಲ.

ನ್ಯಾಯಮೂರ್ತಿ ಪಿನ್ಚನ್ನರೇ, ದಯವಿಟ್ಟು ನಿಮ್ಮ ಗಡಿಯಾರವನ್ನು ನೋಡಿಕೊಳ್ಳಿ ಈಗ! ಏನಿದು ಕಡೆಗಣ್ಣ ನೋಟ ಕೂಡ ಇಲ್ಲ! ಹಗಲೂಟದ

ಮಾತ್ರ ಆ ಜನವಾಣಿ. ತಮ್ಮ ಪರವಾದ ಅಭ್ಯರ್ಥಿ ಯಾರಿರಬೇಕೆಂಬುದನ್ನು ನಿರ್ಧರಿಸಲು ಅವರು ಸಮಾವೇಶಗೊಂಡಿದ್ದಾರೆ. ಸೂಕ್ಷ್ಮಬುದ್ಧಿಯ ಸಂಚುಗಾರರ ಈ ಪುಟ್ಟ ಪಂಗಡವು ಮಹಾಸಭೆಯನ್ನು ತನ್ನ ಹತೋಟಿಯಲ್ಲಿಟ್ಟುಕೊಂಡು, ಅದರ ಮೂಲಕ ಪಕ್ಷದಲ್ಲಿ ತಮ್ಮ ಆಜ್ಞೆ ನೆರವೇರುವಂತೆ ಮಾಡಿಕೊಳ್ಳುವರು. ಇಲ್ಲಿ ನಮ್ಮ ಮುಂದಿರುವ ನ್ಯಾಯಮೂರ್ತಿ ಪಿನ್ಚನ್ ಅವರಿಗಿಂತ ಹೆಚ್ಚು ಅರ್ಹರಾದ ಅಭ್ಯರ್ಥಿಗಳು ಬೇರೆ ಯಾರು ತಾನೆ ಇದ್ದಾರೆ?

ಅದ್ದರಿಂದ ತರೆಮಾಡಿ! ನಿಮ್ಮ ಪಾತ್ರವಹಿಸಿ ! ನೀವು ಯಾವುದಕ್ಕಾಗಿ ಇದುವರೆಗೆ ದುಡಿದಿದ್ದೀರೋ, ಹೋರಾಡಿದ್ದೀರೋ, ಮೇಲೇರಿದ್ದಿರೋ, ತೆವಳಿ ತೆವಳಿ ಮುಂದೆ ಬಂದಿದ್ದೀರೋ ಆ ಪ್ರತಿಫಲವು ನೀವು ಕೈನೀಡಿ ಹಿಡಿದರೆ ಸಾಕು, ನಿಮ್ಮದಾಗುವುದು: ಈ ಭೋಜನ ಕೂಟದಲ್ಲಿ ಭಾಗವಹಿಸಿ – ಆ ಘನವಾದ ದ್ರಾಕ್ಷಾಮದ್ಯದ ಒಂದೆರಡು ಲೋಟಗಳನ್ನು ಕುಡಿಯಿರಿ– ನೀವು ಕೊಡಬೇಕಾದ ವಚನಗಳನ್ನು ಆಸಷ್ಟು ಪಿಸುಮಾತಿನಲ್ಲಿ ನುಡಿಯಿರಿ – ಇಷು ಮಾಡಿದರೆ, ಊಟದ ಮೇಜನ್ನು ಬಿಟ್ಟು ಏಳುವಾಗ ಬಹುಮಟ್ಟಿಗೆ ಈ ವೈಭವಯುತವಾದ ಹಳೆಯ ಸಂಸ್ಥಾನದ ಗೌವರ್ನರಾಗಿಯೆ ಎದ್ದು ನಿಲ್ಲುವಿರಿ! ಮಸಾಚುಸೆಟ್ಸ್ ಸಂಸ್ಥಾನದ ಪ್ರಾತಾಂಥಿಪತಿ ಪಿನ್ಚನ್ !

ಇಂಥ ಒಂದು ನಿಶ್ಚಿಂತ ವಿಷಯದಲ್ಲಿ ಶಕ್ತಿಯತವಾದ, ಉತ್ಸಾಹದಾಯಕವಾದ, ಉತ್ತೇಜಕ ಗುಣವಿಲ್ಲವೆ? ಅದನ್ನು ಪಡೆಯುವುದೇ ನಿಮ್ಮ ಜೀವಮಾನದ ಅರ್ಥ ಭಾಗದ ಮಹೋದ್ದೇಶವಾಗಿದೆ. ಈಗ, ನಿಮ್ಮ ಸಮ್ಮತಿಯನ್ನು ಸೂಚಿಸುವುದಕ್ಕಿಂತ ಹೆಚ್ಚಿನದೇನನ್ನೂ ಮಾಡಬೇಕಿಲ್ಲದಿರುವಾಗ, ನಿಮ್ಮ ಮುತ್ತಜನ ಓಕ್ ಮರದ ಕುರ್ಚಿಯಲ್ಲಿ ಅದೇಕೆ ಹೀಗೆ ಒಂದು ಮುದ್ದೆಯಾದ ಹಾಗೆ ಕುಳಿತಿರುವಿರಿ? ಗೌವರ್ನರ ಕುರ್ಚಿಗಿಂತ ಅದೇ ನಿಮಗೆ ಇಷ್ಟವೇ? 'ಮೊದ್ದು ದೊರೆ'ಯ (King Log) ವಿಚಾರವಾಗಿ ನಾವೆಲ್ಲ ಕೇಳಿದ್ದೇವೆ : ಆದರೆ, ಮುಂದೆ ನುಗ್ಗಬೇಕಾದ ಈ ಕಾಲದಲ್ಲಿ ಚುನಾಚಣಿಯಾಗಬೇಕಾದ ಆ ಮುಖ್ಯ 'ಮ್ಯಾಜಿಸ್ಟ್ರೇಟ್'ರ ಸ್ಥಾನಕ್ಕಾಗಿ ನಡೆಯುವ ಪಂದ್ಯದಲ್ಲಿ ಆ ದೊರೆಯ ನಂಟರಾರೂ ಗೆಲ್ಲುವಹಾಗಿಲ್ಲ, ಒಳ್ಳೆಯದು: ಭೋಜನಕ್ಕೆ ತುಂಬ ತಡವಾಗಿ ಹೋಯಿತು. ಆಮೆ, 'ಸಾಲ್‌ಮಾನ್' ಮೀನು, ಕಾಡುಕೋಳಿ, ಬೇಯಿಸಿದ 'ಟರ್ಕಿಕೋಳಿ, ಕುರಿಯಮಾಂಸ, ಹಂದಿ, ಸುಟ್ಟ ದನದಮಾಂಸ–ಇವೆಲ್ಲಾ ಕಣ್ಮರೆಯಾಗಿ ಹೋಗಿವೆ; ಅಥವಾ ಒಂದುವೇಳೆ ಇದ್ದರೂ,

* ಮಿಲ್ಟನ್ ಎಂಬ ಆಂಗ್ಲ ಮಹಾಕವಿಯ ಸಾಂಕೇತಿಕ ಪದ್ಯನಾಟಕ.

ತಲೆನೋವನ್ನು ತರತಕ್ಕದ್ದಲ್ಲ! ನಮ್ಮ ನ್ಯಾಯಮೂರ್ತಿಗಳು ಒಂದು ಲೋಟ ಈ ಮದ್ಯವನ್ನು ಹೀರಿದರೆ ಸಾಕು. ಈ ಮುಖ್ಯವಾದ ಭೋಜನಕೂಟಕ್ಕೆ ಆತ ಹೋಗದೆ ಹಿಂದುಳಿಯುವಂತೆ ಮಾಡಿರುವ ಅಕಾರಣವಾದ ಅನಿಸಿಕೆಯನ್ನು ಕೊಡವಿಹಾಕಲು ಅದು ನೆರವಾಗಬಹುದು. (ಈ ನಡುವೆ ಈಗಾಗಲೆ ಹತ್ತುನಿಮಿಷಗಳು, ಮತ್ತೆ ಮೇಲೆ ಐದು ನಿಮಿಷಗಳು ಕಳೆದುಹೋಗಿವೆ) ಸತ್ತ ಮನುಷ್ಯನನ್ನು ಕೂಡ ಪುನರುಜ್ಜೀವನಗೊಳಿಸಬಲ್ಲುದು ಅದು! ನ್ಯಾಯ ಮೂರ್ತಿ ಪಿನ್ಚನ್ನರೇ, ಅದರ ಒಂದು ಗುಟುಕನ್ನು ಚಪ್ಪರಿಸಲು ನಿಮಗೆ ಇಷ್ಟವಿದೆಯೇನು?

ಅಯ್ಯೋ, ಎಂಥ ಭೋಜನವಿದು! ಅದರ ನಿಜವಾದ ಉದ್ದೇಶವನ್ನು ನೀವು ನಿಜವಾಗಿಯೂ ಮರೆತುಬಿಟ್ಟಿದ್ದೀರಾ? ಹಾಗಿದ್ದರೆ, ಆ ಉದ್ದೇಶ ವೇನೆಂಬುದನ್ನು ಪಿಸುಮಾತಿನಲ್ಲಿ ಉಸಿರೋಣ; ಅದರಿಂದಲಾದರೂ ನೀವು ಓಕ್‌ಮರದ ಕುರ್ಚಿಯನ್ನು ಬಿಟ್ಟು ಮೇಲೆದ್ದು ಹೊರಡುವಂತಾಗಲಿ. ಆ ಕುರ್ಚಿಯೋ, 'ಕೋಮಸ್' * ನಾಟಕದಲ್ಲಿ ಬರುವ ಕುರ್ಚಿಯ ಹಾಗೆ, ಇಲ್ಲವೆ ನಿಮ್ಮ ಸ್ವಂತ ಅಜ್ಜಂದಿರನ್ನು 'ಮಾಲ್ ಪಿಚರ್' ಎಂಬ ಮಂತ್ರವಾದಿ ಯಾವ ಕುರ್ಚಿಯಲ್ಲಿ ದಿಗ್ಬಂಧನ ಮಾಡಿದ್ದನೋ ಅದರ ಹಾಗೆ, ಮಾಟ ಮಂತ್ರಕ್ಕೆ ಒಳಗಾಗಿರುವ ಹಾಗೆ ಕಾಣುತ್ತದೆ. ಆದರೆ, ಮಹತ್ವಾಕಾಂಕ್ಷೆ ಮಾಟ ಮಂತ್ರಗಳಿಗಿಂತಲೂ ಹೆಚ್ಚು ಪ್ರಬಲವಾದ ರಕ್ಷಾಯಂತ್ರ. ಆದ್ದರಿಂದ, ಎದ್ದೇಳಿ; ಎದ್ದು ಬೀದಿಗಳಲ್ಲಿ ಧಾವಿಸಿಹೋಗಿ, ಗೋಷ್ಠಿಗೆ ನುಗ್ಗಿ ಸೇರಿಕೊಳ್ಳಿರಿ; ಮೀನು ಕೆಟ್ಟುಹೋಗುವ ಮೊದಲೇ ಅವರು ಭೋಜನವನ್ನು ಪ್ರಾರಂಭಿಸಲಿ! ಅವರೆಲ್ಲಾ ನಿಮಗಾಗಿ ಕಾದಿರುತ್ತಾರೆ; ನಿಮ್ಮ ಹಿತದ ದೃಷ್ಟಿಯಿಂದ ಅವರು ಹಾಗೆ ಕಾದಿರತಕ್ಕದ್ದು ಹೆಚ್ಚಿನದಲ್ಲ. ಈ ದೊಡ್ಡ ಮನುಷ್ಯರುಗಳು ಸಂಸ್ಥಾನದ ಪ್ರತಿ ಮೂಲೆಯಿಂದಲೂ ಉದ್ದೇಶವಿಲ್ಲದೆ ಸಭೆ ಸೇರಿಲ್ಲ– ಆ ವಿಷಯವನ್ನು ನಿಮಗೆ ಹೇಳಬೇಕಾಗಿಲ್ಲವಷ್ಟೆ? ಅವರಲ್ಲಿ ಪ್ರತಿಯೊಬ್ಬನೂ ಕಾರ್ಯವಾಸಿಯಾದ ರಾಜಕಾರಣಿ; ಜನರು ತಮ್ಮ ಆಡಳಿತಗಾರರನ್ನು ತಾವೇ ಆರಿಸಿಕೊಳ್ಳುವ ಸಾಮರ್ಥ್ಯವನ್ನು ಅವರ ಅರಿವಿಗೆ ಬಾರದಂತೆ ಅವರಿಂದ ಅಪಹರಿಸುವ ಆ ಪೂರ್ವಭಾವಿ ಹಂಚಿಕೆಗಳನ್ನು ಹೊಂದಿಸುವುದರಲ್ಲಿ ಆ ನಿಮ್ಮ ಸ್ನೇಹಿತರು ನಿಪುಣರು. ಮುಂದಿನ 'ಗೌರ್ನರ' ಚುನಾವಣೆಯಲ್ಲಿ ಜನವಾಣಿ ಗುಡುಗಿನಂತೆ ಮೊಳಗುವುದು; ಆದರೆ, ವಾಸ್ತವವಾಗಿ, ನಿಮ್ಮ ಸ್ನೇಹಿತನ ಭೋಜನಕೂಟದಲ್ಲಿ ನಿಮ್ಮ ಆ ಸಂಭಾವಿತರು ಮೆಲ್ಲನೆ ಗುಸುಗುಸನೆ ಏನು ಮಾತಾಡಿಕೊಳ್ಳುವರೋ ಅದರ ಪ್ರತಿಧ್ವನಿಯಾಗಿರುವುದು

ಕುಡಿದ ಮೇಲೆ, ಕುರಿಯ ಮಾಂಸದ ಒಂದು ತುಂಡು, ಹಸುವಿನ ಮಾಂಸದ ಒಂದು ತುಂಡು, ಒಂದು ಬಾಡಿಸಿದ ಕೋಳಿ, ಅಥವಾ ಅಂಥ ಇನ್ನಿತರ ಭೋಜ್ಯವಸ್ತುಗಳಿಂದ ತಯಾರಿಸಿದ ಹಗಲೂಟವನ್ನೂ ಇರುಳೂಟವನ್ನೂ ಒಟ್ಟಿಗೆ ಸೇರಿಸಿ, ಒಂದು ಅಲ್ಪ ಲಘು ಭೋಜನವನ್ನು ಆತುರಾತುರವಾಗಿ ಭುಂಜಿಸಿ, ಸಂಜೆಯನ್ನು ಬೆಂಕಿಗೂಡಿನ ಪಕ್ಕದಲ್ಲಿ ಅವನು ಹಾಯಾಗಿ ಕಳೆಯುವುದು ಲೇಸು.

ಈ ನಡುವೆ, ಕೋಣೆಯ ಮೂಲೆ ಮೂಲೆಗಳಿಂದ ಸಂಧ್ಯಾರಾಗವು ಮಂಕುಮಸುಕಾಗುತ್ತ ಮೇಲೇರುತ್ತಿದೆ. ಎತ್ತರವಾದ ಪೀಠಪರಿಕರ ಮುಂತಾದ ಸಾಮಾನುಗಳ ನೆರಳುಗಳು ಬರುಬರುತ್ತ ದಟ್ಟೈಸಿ, ಮೊದಲು ಹೆಚ್ಚು ಸ್ಪಷ್ಟವಾಗಿ ಕಾಣುತ್ತಿವೆ; ಆದರೆ, ಆ ಬಳಿಕ ಅವು ವಿಸ್ತಾರಗೊಂಡ ಹಾಗೆಲ್ಲಾ, ಬೇರೆ ಬೇರೆ ಪದಾರ್ಥಗಳ ಮೇಲೆ ನಿಧಾನವಾಗಿ ಸರಿದು ಕವಿಯುತ್ತಿರುವ ಒಂದು ವಿಧವಾದ ಮಬ್ಬುಮರೆವಿನ ಬೂದುಗಪ್ಪಿನ ಉಬ್ಬರದಲ್ಲಿ ಲೀನವಾಗಿ ತಮ್ಮ ಆಕೃತಿಯ ಸ್ಪಷ್ಟತೆಯನ್ನು ಕಳೆದುಕೊಳ್ಳುತ್ತಿವೆ. ಮಬ್ಬುಗತ್ತಲೆ ಹೊರಗಿಂದ ಬಂದುದಲ್ಲ; ಹಗಲೆಲ್ಲಾ ಅದು ಇಲ್ಲಿಯೇ ಹೊಂಚಿಕುಳಿತಿದೆ; ಈಗ, ಅನಿವಾರ್ಯವಾಗಿ ತನ್ನ ಸಮಯ ಸಾಧಿಸಿ ಪ್ರತಿಯೊಂದು ಪದಾರ್ಥವನ್ನೂ ವಶಪಡಿಸಿಕೊಳ್ಳುತ್ತಿದೆ. ಆದರೆ, ಸೆಟೆತುಕೊಂಡು ವಿಲಕ್ಷಣವಾಗಿ ಬಿಳುಪಾಗಿರುವ ನ್ಯಾಯಮೂರ್ತಿಯ ಮುಖವು ಸರ್ವವನ್ನೂ ಸಮನಾಗಿ ಕರಗಿಸಿ ತನ್ನ ಒಳಕೊಳ್ಳುವ ಈ ಕತ್ತಲಲ್ಲಿ ಕರಗಿ ಹೋಗಲು ನಿರಾಕರಿಸಿದೆ. ಬೆಳಕು ಹೆಚ್ಚು ಹೆಚ್ಚು ಮಸುಕಾಗುತ್ತ ಬರುತ್ತಿದೆ. ಇನ್ನು ಎರಡು ಹಿಡಿತುಂಬ ಕತ್ತಲನ್ನು ಗಾಳಿಯಲ್ಲಿ ತೂರಿಬಿಟ್ಟಿದೆಯೋ ಏನೋ ಎಂಬಂತಾಗಿದೆ. ಈಗ ಬೂದು ಛಾಯೆ ಹೋಗಿ, ಕಪ್ಪು ಬಣ್ಣಕ್ಕೆ ತಿರುಗಿದೆ. ಕಿಟಕಿಯ ಬಳಿ ಇನ್ನೂ ಅದೇನೋ ಒಂದು ಮಸುಕು ತೋರಿಕೆ ಉಳಿದಿದೆ; ಅದು ಮಿನುಗಲ್ಲ, ಮಿರುಗಲ್ಲ, ಹೊಳವಲ್ಲ– ಬೆಳಕನ್ನು ಸೂಚಿಸುವ ಇಂಥ ಯಾವ ಮಾತಾದರೂ ಸರಿಯೆ, ಅಲ್ಲಿ ಒಂದು ಕಿಟಕಿ ಇದೆ ಎಂಬ ಸಂದೇಹಾಸ್ಪದವಾದ ಗ್ರಹಿಕೆ ಅಥವಾ ಭಾವನೆಗಿಂತ ಹೆಚ್ಚು ಪ್ರಕಾಶಮಾನವಾದದ್ದನ್ನು ವ್ಯಕ್ತಪಡಿಸುವುದು. ಈಗಲಾದರೂ ಅದು ಕಣ್ಮರೆಯಾಗಿದೆಯೆ? ಇಲ್ಲ! ಮರೆಯಾಗಿದೆ! ಪೂರ್ತಿ ಮರೆಯಾಗಿಲ್ಲ! ಇನ್ನೂ ಆ ಶ್ಯಾಮ ಶ್ವೇತವರ್ಣಹೊಂದದ ಎರಡು ಮಾತುಗಳನ್ನು ಒಂದುಗೂಡಿಸುವ ಸಾಹಸಮಾಡೋಣ– ನ್ಯಾಯಮೂರ್ತಿ ಪಿನ್ಚನ್ನನ ಮುಖದ ಕರ್‌ಬಿಳುಪು ಇದ್ದೇ ಇದೆ. ಮುಖದ ಲಕ್ಷಣವಿವರಗಳೆಲ್ಲ ಅಳಿಸಿ ಹೋಗಿವೆ; ಅವುಗಳ ವಿವರ್ಣತೆಯೊಂದೇ ಉಳಿದಿರುವುದು. ಈಗ

ಮಾಂಸದ ಸಾರಿನಲ್ಲಿ ಹೆಪ್ಪು ಗಟ್ಟಿದ ಕೊಬ್ಬಿನ ಜೊತೆ ಹಾಗೂ ತುಸ ಬೆಚ್ಚಗಿರುವ ಆಲೂಗಡ್ಡೆಗಳ ಜೊತೆ ಚೂರುಪಾರಾಗಿ ಉಳಿದುಕೊಂಡಿವೆ. ನ್ಯಾಯಮೂರ್ತಿ ಇನ್ನೇನು ಮಾಡುವುದಕ್ಕಾಗದಿದ್ದರೂ ತನ್ನ ಊಟದ ಚಾಕು ಮತ್ತು ಮುಳ್ಳು ಚಮಚ ಹಿಡಿದುಕೊಂಡು ಅದ್ಭುತಗಳನ್ನು ಸಾಧಿಸಬಹುದಾಗಿತ್ತು. ಅವನ ಬಕಾಸುರನಂತಹ ಹಸಿವನ್ನು ಕುರಿತು ಆಡಿಕೊಳ್ಳುತ್ತ, ಸೃಷ್ಟಿಕರ್ತನು ಅವನನ್ನು ಒಂದು ದೊಡ್ಡ ಜೀವಿಯನ್ನಾಗಿ ಸೃಷ್ಟಿಸಿದ್ದನೆಂದೂ, ಆದರೆ ಊಟದ ಹೊತ್ತು ಅವನನ್ನು ಒಂದು 'ಮೃಗ'ವಾಗಿ ಮಾಡುತ್ತಿತ್ತೆಂದೂ ಜನ ಹೇಳಿಕೊಳ್ಳುತ್ತಿದ್ದರು; ಇದು ನಿಮಗೂ ಗೊತ್ತು. ಆತನ ಹಾಗೆ ಅಪಾರ ಇಂದ್ರಿಯಪಟುತ್ವವುಳ್ಳವರು ಆಹಾರದ ವೇಳೆಯಲ್ಲಿ ತಮ್ಮ ಜಿಹ್ವಾಚಾಪಲ್ಯವನ್ನು ತೀರಿಸಿಕೊಳ್ಳುವ ಹಕ್ಕನ್ನು ಚಲಾಯಿಸಬೇಕು. ಆದರೆ, ಇದೊಮ್ಮೆ, ನ್ಯಾಯಮೂರ್ತಿ ಭೋಜನಕ್ಕೆ ಬಹಳ ತಡಮಾಡಿಬಿಟ್ಟಿದ್ದಾನೆ! ಕಡೆಯ ಪಕ್ಷ, ಅವರು ಮದ್ಯಪಾನಮಾಡುವ ವೇಳೆಗಾದರೂ ಹೋಗಿ ಕೂಟಕ್ಕೆ ಸೇರಿಕೊಳ್ಳಲು ಕೂಡ ಮೀರಿಮೀರಿ ತಡವಾಗಿಹೋದಿದೆಯೆಂದು ನಮ್ಮ ಶಂಕೆ! ಅತಿಥಿಗಳೆಲ್ಲಾ ಉತ್ಸಾಹಪೂರಿತರಾಗಿ, ಗೆಲವಾಗಿದ್ದಾರೆ; ನ್ಯಾಯಮೂರ್ತಿ ಬರುವ ನಿರೀಕ್ಷೆಯನ್ನು ಬಿಟ್ಟುಬಿಟ್ಟಿದ್ದಾರೆ; ಅವನನ್ನು ಬೇರೆಯ ಪಕ್ಷದವರು ತಮ್ಮ ಕಡೆಗೆ ಒಲಿಸಿಕೊಂಡುಬಿಟ್ಟಿದ್ದಾರೆ ಎಂದು ತೀರ್ಮಾನಿಸಿ, ಬೇರೊಬ್ಬ ಅಭ್ಯರ್ಥಿಯನ್ನು ಅವರು ಗೊತ್ತು ಮಾಡಿಕೊಳ್ಳುವರು. ನಮ್ಮ ಸ್ನೇಹಿತನೇನಾದರೂ ಈಗ ಹುಚ್ಚು ಹುಚ್ಚಾಗಿಯೂ ಭಾವಶೂನ್ಯವಾಗಿಯೂ ಕಾಣುವ ಬಿಟ್ಟಗಣ್ಣಿನ ನಟ್ಟನೋಟದಿಂದ ನೋಡುತ್ತ ಅವರ ನಡುವೆ ಗಂಭೀರವಾಗಿ ನಡೆದುಹೋದನೆಂದರೆ, ಆತನ ಅಹಿತವಾದ ಆಗಮನವು ಅವರ ಉಲ್ಲಾಸವನ್ನು ಕೆಡಿಸುವ ಸಂಭವವುಂಟು. ಅಲ್ಲದೆ, ತನ್ನ ಉಡುಪಿನ ವಿಚಾರದಲ್ಲಿ ಸರ್ವಸಾಮಾನ್ಯವಾಗಿ ಬಹು ಸೂಕ್ಷ್ಮವಾಗಿ ಎಚ್ಚರಿಕೆ ವಹಿಸುವ ನ್ಯಾಯಮೂರ್ತಿ ಪಿನ್ಚನ್ನನು ತನ್ನ ಷರಟಿನ ಎದೆಭಾಗದಮೇಲೆ ಕಡುಗೆಂಪಿನ ಕಲೆಯಿರುವಾಗ ಭೋಜನದ ಮೇಜಿನ ಬಳೀ ಆ ಸ್ಥಿತಿಯಲ್ಲಿ ಕಾಣಿಸಿಕೊಳ್ಳುವುದು ಯೋಗ್ಯವಾಗಿ ತೋರುವುದಿಲ್ಲ. ಅದು ಹಾಗಿರಲಿ, ಆ ಕಲೆ ಹೇಗೆ ಉಂಟಾಯಿತು? ಅದು ಹೇಗಿದ್ದರೂ, ನೋಡುವುದಕ್ಕಂತೂ ಅದು ವಿಕಾರವಾಗಿದೆ; ಈಗ ನ್ಯಾಯಮೂರ್ತಿ ಮಾಡಬಹುದಾದ ಅತ್ಯಂತ ವಿವೇಕದ ಕೆಲಸ ಎಂದರೆ, ತನ್ನ ಎದೆ ಚೆನ್ನಾಗಿ ಮುಚ್ಚಿಕೊಳ್ಳುವಂತೆ ಅಂಗಿಯ ಗುಂಡಿಗಳನ್ನು ಹಾಕಿಕೊಂಡು, ಲಾಯದಿಂದ ತನ್ನ ಕುದುರೆಯನ್ನೂ ಬಂಡಿಯನ್ನೂ ತೆಗೆದುಕೊಂಡು, ತನ್ನ ಸ್ವಗೃಹಕ್ಕೆ ಅತ್ಯಂತ ವೇಗವಾಗಿ ಧಾವಿಸುವುದು. ಅಲ್ಲಿ, ಒಂದು ಲೋಟ ಬ್ರ್ಯಾಂದಿಗೆ ನೀರುಬೆರಸಿ

ಶತಮಾನದ ಹಗೆತನದ ನಿಕಟಸಂಬಂಧಕ್ಕೆ ಉಚಿತವಾಗಿಯೆ ಇದೆ ಈ ವರ್ತನೆ. ಬೆಂಕಿಗೂಡಿನ ಫಲಕದ ಹಿಂದುಗಡೆ ಗಡಗಡ ಸದ್ದುಮಾಡುವ ಒಂದು ವಿಧವಾದ ಭೋರ್ಗರೆತ ಗರ್ಜಿಸುತ್ತಿದೆ. ಮಹಡಿಯ ಮೇಲೆ ಒಂದು ಬಾಗಿಲು ಧಡಾರನೆ ಮುಚ್ಚಿಕೊಂಡಿದೆ. ಬಹುಶಃ, ಒಂದು ಕಿಟಕಿಯನ್ನು ಬಾಗಿಲು ಮುಚ್ಚದೆ ಹಾಗೆಯೆ ಬಿಟ್ಟಿದೆ, ಇಲ್ಲವೆ ತಡೆಯಲಾಗದ ಗಾಳಿಯ ಹೊಡೆತ ಅದನ್ನು ಒಳಕ್ಕೆ ನೂಕಿದೆ, ಬರಿಯ ಮರದಿಂದ ಕಟ್ಟಿದ ಈ ಹಳೆಯ ಕಾಲದ ಮಹಲುಗಳು ಎಂತಹ ಅದ್ಭುತವಾದ ಗಾಳಿವಾದ್ಯಗಳಾಗಿ ಪರಿಣಮಿಸುತ್ತವೆ, ಅವುಗಳಲ್ಲಿ ಎಂತೆಂತಹ ವಿಲಕ್ಷಣವಾದ ಶಬ್ದಗಳು ಸುಳಿದಾಡುತ್ತವೆ ಎಂಬುದನ್ನು ಮುಂದಾಗಿಯೆ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆ ಶಬ್ದಗಳು ಇದ್ದಕ್ಕಿದ್ದ ಹಾಗೆಯೇ ಹಾಡತೊಡಗುತ್ತವೆ, ನಿಟ್ಟುಸಿರ್ಗರೆಯುತ್ತವೆ, ಅಳುತ್ತವೆ, ಚೀರುತ್ತವೆ; ಯಾವುದೋ ದೂರದ ಕೋಣೆಯಲ್ಲಿ ಚಮ್ಮಟಿಗೆಯಿಂದ ಎತ್ತಿ ಬಾರಿಸಿದ ಹಾಗೆ ಕೇಳಿಸುತ್ತವೆ; ಗಂಭೀರವಾಗಿ ಹೆಜ್ಜೆಹಾಕುತ್ತ ನಡೆದಾಡುತ್ತಿವೆಯೇನೋ ಎಂಬಂತೆ ಬಾಗಿಲುಗಳ ಮೂಲಕ ಓಡಾಡುತ್ತವೆ; ಅದ್ಭುತರೀತಿಯಲ್ಲಿ ಗರಿಮುರಿಯಾಗಿರುವ ರೇಶ್ಮೆಯ ವಸ್ತ್ರ ಧರಿಸಿರುವ ರೀತಿಯಲ್ಲಿ, ಮಹಡಿಯ ಮೆಟ್ಟಲುಗಳ ಮೇಲಕ್ಕೂ ಕೆಳಕ್ಕೂ ಪರಪರಗುಟ್ಟುತ್ತ ಸಂಚರಿಸುತ್ತವೆ; ಇಷ್ಟೆಲ್ಲಾ ನಡೆಯಬೇಕಾದರೆ ಯಾವುದಾದರೂ ಕಿಟಕಿಯ ಬಾಗಿಲು ತೆರೆದಿರಬೇಕು, ಬಿರುಗಾಳಿ ಅದರ ಮೂಲಕ ಮನೆಯೊಳಕ್ಕೆ ನುಗ್ಗಿ ಅದನ್ನು ಆಕ್ರಮಿಸಿಕೊಳ್ಳಬೇಕು. ನಾವು ಪೊಳ್ಳುಮಸುಕಾಗುತ್ತಂಬ ಮನೆಯನ್ನು ಹೊಕ್ಕು ಅಲ್ಲಿರದಿದ್ದರೆ ಚೆನ್ನಾಗಿತ್ತು. ಸನ್ನಿವೇಶ ಅಷ್ಟು ಭೀಕರವಾಗಿದೆ! ಈ ಒಂಟಿ ಮನೆಯಲ್ಲಿ ಆ ಗಾಳಿಯ ಕೂಗಾಟ ಚೀರಾಟ; ಅದೃಶ್ಯನಾಗಿ ಕುಳಿತಿರುವ ನ್ಯಾಯಮೂರ್ತಿಯ ಶಾಂತಸ್ಥಿತಿ; ಮತ್ತು ಅವನ ಗಡಿಯಾರನ ಪಟ್ಟುಹಿಡಿದ 'ಟಿಕ್ ಟಿಕ್' ಬಡಿತ!

ನ್ಯಾಯಮೂರ್ತಿ ಅಗೋಚರನಾಗಿರುವ ವಿಷಯವೇನೋ ಸದ್ಯದಲ್ಲಿಯೇ ಬಗೆಹರಿಯಲಿದೆ. ವಾಯವ್ಯದ ಗಾಳಿ ಆಕಾಶವನ್ನು ನಿರ್ಮಲವಾಗಿ ಝಾಡಿಸಿಬಿಟ್ಟಿದೆ. ಕಿಟಕಿ ಈಗ ಸ್ಪಷ್ಟವಾಗಿ ಕಾಣುತ್ತಿದೆ. ಅಲ್ಲದೆ, ಅದರ ಬಾಗಿಲ ಗಾಜುಗಳ ಮೂಲಕ ಹೊರಗಡೆ ಕಪ್ಪಾಗಿ ಕಾಣುತ್ತಿರುವ ಎಲೆಗುಂಪಲ ತೊಂಗಲು ತೂಗಾಡುತ್ತಿರುವುದನ್ನು ಮಸುಕುಮಸುಕಾಗಿ ನಾವು ಕಾಣಬಹುದಾಗಿದೆ; ಅದು ಒಂದು ಗೊತ್ತು ಗುರಿಯಿಲ್ಲದೆ ಅತ್ತ ಇತ್ತ ಹಾರಾಡುತ್ತ. ಒಮ್ಮೆ ಅಲ್ಲಿ ಒಮ್ಮೆ ಇಲ್ಲಿ, ನಕ್ಷತ್ರಪ್ರಕಾಶದ ಕಿರಣವನ್ನು ಒಳಕ್ಕೇ ಬಿಡುತ್ತಿದೆ. ಈ ಬೆಳಕಿನ ಇಣಿಕುಗಳು ಬೇರೆ ಯಾವುದೇ ಪದಾರ್ಥಕ್ಕಿಂತ ಹೆಚ್ಚಾಗಿ ನ್ಯಾಯಮೂರ್ತಿಯ ಮುಖವನ್ನು ಬೆಳಗುತ್ತಿದೆ. ಆದರೆ,

ಹೇಗೆ ಕಾಣುತ್ತಿದೆ? ಕಿಟಕಿಯೇ ಇಲ್ಲ! ಮುಖವೂ ಇಲ್ಲ! ಅನಂತವಾದ, ನಿಗೂಢವಾದ ಕಗ್ಗಪ್ಪು ಕಾಣ್ಕೆಯನ್ನು ಕೊಲೆಮಾಡಿದೆ! ನಮ್ಮ ವಿಶ್ವವೆಲ್ಲಿ? ಎಲ್ಲವೂ ನುಚ್ಚುನೂರಾಗಿ ನಮ್ಮಿಂದ ಚೆದರಿಹೋಗಿದೆ; ನಾವೋ? ಅಗೋ, ಹಿಂದೆ ಪ್ರಪಂಚ ಎನಿಸಿಕೊಂಡಿದ್ದನ್ನು ಹುಡುಕಿಕೊಂಡು ನೆಲೆಯಿಲ್ಲದೆ ಬೀಸುತ್ತಿರುವ ಗಾಳಿ ನಿಟ್ಟುಸಿರ್ಗರೆಯುತ್ತಾ, ಮರ್ಮರಿಸುತ್ತಾ, ಅಲೆಯುತ್ತಿದೆ: ಅವ್ಯವಸ್ಥೆಯಲ್ಲಿ ತೇಲಿಹೋಗುತ್ತಿರುವ ನಾವು ಅದಕ್ಕೆ ಕಿವಿಗೊಡಬಹುದು.

ಬೇರೆಯ ಶಬ್ದ ಅಲ್ಲಿ ಯಾವುದೂ ಇಲ್ಲವೆ? ಬೇರೊಂದು ಇದೆ, ಭಯಂಕರವಾದದ್ದು. ಅದು, ನ್ಯಾಯಮೂರ್ತಿಯ ಗಡಿಯಾರದ 'ಟಿಕ್ ಟಿಕ್' ಸದ್ದು; ಕ್ಲಿಫರ್ಡನನ್ನು ಹುಡುಕಿಕೊಂಡು ಹೆಪ್ಸಿಬಾ ಕೋಣೆಯನ್ನು ಬಿಟ್ಟು ಹೊರಟಂದಿನಿಂದ ಅವನು ಅದನ್ನು ಕೈಯಲ್ಲಿ ಹಿಡಿದಿದ್ದಾನೆ. ಕಾರಣ ಏನಾಧರೂ ಇದ್ದುಕೊಳ್ಳಲಿ; ಕಾಲಪುರುಷನ ನಾಡಿಯ ಈ ಮೆಲ್ಲನೆಯ ನಿಲುಗಡೆಯಿಲ್ಲದ ಕಿರುಮಿಡಿತವು ಅಷ್ಟೊಂದು ಚಟುವಟಿಕೆಯಿಂದ ಕ್ರಮವಾಗಿ ನ್ಯಾಯಮೂರ್ತಿಯ ನಿಶ್ಚಲ ಹಸ್ತದಲ್ಲಿ 'ಟಿಕ್ ಟಿಕ್' ಎಂದು ಹೊಡೆದುಕೊಳ್ಳುತ್ತಿರುವುದು ಒಂದು ಭಯಂಕರ ಪರಿಣಾಮವನ್ನು ಹೊಂದಿದೆ; ದೃಶ್ಯದ ಜೊತೆಗೂಡಿರುವ ಬೇರೆ ಯಾವುದರಲ್ಲಿಯೂ ಆ ಪರಿಣಾಮವಿಲ್ಲ.

ಆದರೆ, ಅದೋ ಆಲಿಸಿ ! ಗಾಳಿಯ ಆ ಬೀಸಾಟ ಹೆಚ್ಚು ಗಟ್ಟಿಯಾಗಿದೆ. ಕಳೆದ ಇದು ದಿನಗಳಿಂದಲೂ ಮಾನವಕೋಟಿಯೊಂದಿಗೆ ದುಃಖ ಸಹಾನುಭೂತಿಯನ್ನು ತೋರುತ್ತ ಗೋಗರೆಯುತ್ತಿದ್ದ ಬೇಸರದ ವಿಷಣ್ಣ ಧ್ವನಿಯಂತಿಲ್ಲ. ಗಾಳಿ ಒಂದು ಸುತ್ತ ದಿಕ್ಕು ಬದಲಾಯಿಸಿದೆ! ಈಗ ಅದು ಗಲಭೆಯೆಬ್ಬಿಸುತ್ತ ವಾಯವ್ಯದ ಕಡೆಯಿಂದ ಬರುತ್ತಿದೆ; ಏಳು ಇಪ್ಪಾರುಗಳ ಹಳೆಯ ಚೌಕಟ್ಟನ್ನು ಹಿಡಿದುಕೊಂಡು, ಒಬ್ಬ ಜಟ್ಟಿ ತನ್ನ ಎದುರಾಳಿಯ ಜೊತೆ ಹೋರಾಡಿ ತನ್ನ ಬಲ ಪರೀಕ್ಷೆ ಮಾಡಿಕೊಳ್ಳುವಂತೆ, ಅದನ್ನು ಜಗ್ಗಿಸುತ್ತಿದೆ. ಬೀಸುಗಾಳಿಯೊಂದಿಗೆ ಇನ್ನೊಂದು, ಮತ್ತೂ ಒಂದು ಬಲವಾದ ಹೋರಾಟ! ಹಳೆಯ ಮನೆ ಮತ್ತೆ ಕಿರಗುಟ್ಟುತ್ತದೆ; ಹಾಗೂ ತನ್ನ ಇಲ್ಲಣ ಅಡಚಿಕೊಂಡ ಗಂಟಲಿನಿಂದ (ಎಂದರೆ, ಅದರ ಅಗಲವಾದ ಹೊಗೆಕೊಳವೆಯ ಹೊಗೆ ಹೋಗುವ ದಾರಿಯಿಂದ) ಗಾಳಿಯ ಒರಟುತನದ ಬಗೆಗೆ ಕೆಲಮಟ್ಟಿಗೆ ದೂರುವ ರೀತಿಯಲ್ಲಿ, ಅದಕ್ಕಿಂತ ಹೆಚ್ಚಾಗಿ ಪ್ರಬಲವಾದ ಪ್ರತಿಭಟನೆಯ ರೂಪದಲ್ಲಿ ಗುಟರು ಹಾಕುವ ಹಾಗೆ ಶಬ್ದ ಮಾಡುತ್ತಿದೆ; ಧ್ವನಿ ಜೋರಾಗಿದ್ದರೂ, ಅರ್ಥವಾಗುವಂತಿಲ್ಲ; ಗಾಳಿಗೂ ಹೊಗೆಕೊಳವೆಗೂ ನಡುವೆ ನಡೆದು ಬಂದಿರುವ ಒಂದೂವರೆ

ಕಥೆಗಳನ್ನು ಕೇಳಿದರೆ ಮಕ್ಕಳಿಗೆ ಕೂಡ ಹೆದರಿಕೆಯಿಂದ ಕೂದಲು ನಿಮಿರಿ ನಿಲ್ಲುವುದಿಲ್ಲ; ಅಷ್ಟೊಂದು ಅಸಂಬದ್ಧವಾದವು ಅವು. ಉದಾಹರಣೆಗಾಗಿ, ಮಧ್ಯರಾತ್ರಿಯ ಹೊತ್ತಿನಲ್ಲಿ ಎಲ್ಲ ಮೃತ ಪಿನ್ಚನ್ನರೂ ಈ ದಿವಾನಖಾನೆಯಲ್ಲಿ ಖಂಡಿತ ಸಭೆಸೇರುತ್ತಾರೆ ಎಂಬ ಆಡಿಕೆಯ ಕಥೆ: ದೆವ್ವದ ಕಥೆಗಳಲ್ಲಿಯಾದರೂ ಒಂದು ಅರ್ಥ, ನೀತಿ, ಇದ್ದೀತು; ಈ ಹಾಸ್ಯಾಸ್ಪದವಾದ ಕಥೆಯಲ್ಲಿ, ಯಾವ ಅರ್ಥವನ್ನಾಗಲಿ, ಭಾವವನ್ನಾಗಲಿ ನೀತಿಯನ್ನಾಗಲಿ ಶೋಧಿಸಿ ತೆಗೆಯಬಹುದೆ? ಸಭೆ ಸೇರುತ್ತಾರೆ ಎಂದೇ ಇಟ್ಟುಕೊಳ್ಳೋಣ. ಹಾಗೆ ಸೇರುವುದರ ಉದ್ದೇಶವಾದರೂ ಏನು? ಏಕೆಂದರೆ, ತಮ್ಮ ಪೂರ್ವಜನು ಮಾಡಿದ್ದ ಉಯಿಲಿನ ನಿರ್ದೇಶದ ಪ್ರಕಾರ ಆತನ ಭಾವಚಿತ್ರ ಗೋಡೆಯಮೇಲೆ ಎಂದಿನಂತೆ ಸ್ವಸ್ಥಾನದಲ್ಲಿ ಸುಭದ್ರವಾಗಿ ಇನ್ನೂ ಇದೆಯೋ ಇಲ್ಲವೋ ಎಂಬುದನ್ನು ಕಣ್ಣಾರೆ ನೋಡಿ ಖಚಿತಪಡಿಸಿಕೊಳ್ಳುವುದಕ್ಕಂತೆ! ಅವರೆಲ್ಲ ತಮ್ಮ ಸಮಾಧಿಯಿಂದ ಎದ್ದು ಹೊರಬರುವಷ್ಟು ಮುಖ್ಯವಾದದ್ದೆ, ಉಪಯುಕ್ತವಾದದ್ದೆ, ಅದು?

ಈ ವಿಚಾರದಲ್ಲಿ ಸ್ವಲ್ಪ ತಮಾಷೆಮಾಡೋಣ ಎನ್ನಿಸುತ್ತದೆ ನಮಗೆ, ಅಷ್ಟೆ. ಏಕೆಂದರೆ, ದೆವ್ವದ ಕಥೆಗಳಲ್ಲಿ ಇನ್ನು ಮೇಲೆ ವಿಶ್ವಾಸವಿಡುವುದು ಸಾಧ್ಯವಿಲ್ಲ. ಮೃತ ಪಿನ್ಚನ್ನರ ಕೌಟುಂಬಿಕ ಸಭೆ ಈ ರೀತಿ ನಡೆದಿರಬಹುದುದೆಂದು ನಮ್ಮ ಕಲ್ಪನೆ.

ಮೊತ್ತಮೊದಲು ಸ್ವಯಂ ಮೂಲಪುರುಷನೇ ಬರುತ್ತಾನೆ; ಆತ ಕರಿಯ ಅಂಗಿಯನ್ನೂ, ಎತ್ತರವಾದ ಚೂಪು ತುದಿಯ ಟೊಪ್ಪಿಗೆಯನ್ನೂ ಧರಿಸಿದ್ದಾನೆ; ಮೊಣಕಾಲುವರೆಗೆ ಬರುವ ಷರಾಯಿ ಹಾಕಿಕೊಂಡಿದ್ದಾನೆ: ಅದರ ಸೊಂಟದ ಸುತ್ತ ಚಕ್ಕಳದ 'ಬೆಲ್ಟು' ಬಳಸಿದೆ, ಅದರಿಂದ ನೇತಾಡುತ್ತಿದೆ ಅವನ ಉಕ್ಕಿನ ಹಿಡಿಯ ಕತ್ತಿ; ಇಳಿವಯಸ್ಸಿನ ದೊಡ್ಡ ಮನುಷ್ಯರು ಸಾಧಾರಣವಾಗಿ ಹಿಡಿದುಕೊಳ್ಳುತ್ತಿದ್ದಂತಹ ಉದ್ದವಾದ ದೊಣ್ಣೆಯೊಂದು ಅವನ ಕೈಲಿದೆ; ಅದನ್ನು ಹಿಡಿದುಕೊಳ್ಳುವುದು ಒಂದು ಗೌರವ ಎಂಬ ಎಣಿಕೆಯ ಜೊತೆಗೆ, ಅದು ಊರೆಗೋಲಾಗಿಯೂ ನೆರವಾಗುತ್ತಿತ್ತು. ಆತ ಭಾವಚಿತ್ರವನ್ನು ನೋಡುತ್ತಾನೆ: ಹುರುಳಿಲ್ಲದ ನೆರಳಿನಂಥ ಪದಾರ್ಥವು, ಬಣ್ಣದಲ್ಲಿ ಬರೆದ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುತ್ತಿದೆ! ಎಲ್ಲವೂ ಸುರಕ್ಷಿತವಾಗಿದೆ. ಚಿತ್ರ ಇನ್ನೂ ಇದ್ದ ಕಡೆಯೇ ಇದೆ. ತಾನು ಗೋರಿಯಲ್ಲಿ ಹೂತುಹೋಗಿ ಗೋರಿಗರಿಕೆಯಲ್ಲಿ ಬೆರೆತು ಮೊಳೆತು ಬಹುಕಾಲವಾದ ಮೇಲೂ ತನ್ನ ಮೆದುಳು ಬಗೆದ ಉದ್ದೇಶವನ್ನು ಈ ವರೆಗೆ ಪವಿತ್ರವಾಗಿ ಕಾದಿಡಲಾಗಿದೆ. ನೋಡಿರಿ! ಅವನು ತನ್ನ ಕೆಲಸಕ್ಕೆ ಬಾರದ ಕೈಯನ್ನು

ಇಗೋ, ಇಲ್ಲಿ ಬಳಿಸಾರುತ್ತಿದೆ ಇನ್ನೂ ಪರಿಣಾಮಕಾರಿಯಾದ ಬೆಳಕು. ಪೇರು ಹಣ್ಣಿನ ಗಿಡದ ಮೇಲ್ಗಡೆಯ ರೆಂಬೆಕೊಂಬೆಗಳ ಮೇಲೆ ಬೆಳ್ಳಿ ಬೆಳಕಿನ ಕುಣಿತವನ್ನು ಗಮನಿಸಿರಿ; ಈಗ ಇನ್ನೂ ಸ್ವಲ್ಪ ಕೆಳಗಡೆ, ಮತ್ತೀಗ ಕೊಂಬೆಗಳ ಒಟ್ಟು ಮೊತ್ತದ ಮೇಲೆ, ಆ ಬೆಳಕಿನ ಕುಣಿತವನ್ನು ಕಾಣಬಹುದು; ಅದೇ ವೇಳೆಯಲ್ಲಿ, ಸ್ಥಳ ಬದಲಾಯಿಸುತ್ತಿರುವ ಕಂಡಿಗಳ ಮೂಲಕ ಚಂದ್ರನ ಕಿರಣಗಳು ಕೋಣೆಯೊಳಗೆ ಓರೆಯಾಗಿ ಬೀಳುತ್ತಿವೆ. ಅವು ನ್ಯಾಯಮೂರ್ತಿಯ ಆಕೃತಿಯ ಮೇಲೆ ನಲಿದಾಡುತ್ತ, ಕತ್ತಲಿದ್ದ ವೇಳೆಯಲ್ಲೆಲ್ಲಾ ಯಾವಾಗಲೂ ಅವನು ಅಲಗಾಡಿಯೆ ಇಲ್ಲ ಎಂಬುದನ್ನು ತೋರ್ಪಡಿಸುತ್ತಿದೆ. ಅವನ ಮಾರ್ಪಾಟಾಗದ ಮುಖಮುದ್ರೆಯ ಮೇಲೆ ಅವು ನೆರಳುಗಳೊಂದಿಗೆ ಕಣ್ಣುಮುಚ್ಚಾಲೆಯಾಡುತ್ತಿವೆ. ಅವು ಅವನ ಗಡಿಯಾರದ ಮೇಲೂ ಫಳಫಳಿಸುತ್ತಿವೆ. ಅವನ ಹಿಡಿತದಲ್ಲಿ ಗಡಿಯಾರದ ಮುಖಫಲಕ ಮರೆಯಾಗಿದೆ; ಆದರೆ ಶ್ರದ್ಧೆಯಿಂದ ಚಲಿಸುವ ಅದರ ಮುಳ್ಳುಗಳು ಸಂಧಿಸಿವೆ ಎಂಬುದನ್ನು ನಾವು ಬಲ್ಲೆವು; ಏಕೆಂದರೆ, ನಗರದ ಗಡಿಯಾರಗಳಲ್ಲಿ ಒಂದು ಮಧ್ಯರಾತ್ರಿಯಾಯಿತೆಂದು ತಿಳಿಸಿದೆ.

ನ್ಯಾಯಮೂರ್ತಿ ಪಿನ್ಚನ್ನನಂತಹ ಪ್ರಾಜ್ಞನಿಗೆ ನಟ್ಟಿರುಳಿನ ಹನ್ನೆರಡು ಗಂಟೆಯೂ ಒಂದೆ, ನಡುಹಗಲಿನ ಹನ್ನೆರಡೂ ಒಂದೆ. ಆತನಿಗೂ, ಆತನ ಪ್ಯೂರಿಟನ್ ಪೂರ್ವಜನಿಗೂ ಇದ್ದ ಸಾಮ್ಯದ ನಿರೂಪಣೆ ಅದೆಷ್ಟೇ ನ್ಯಾಯವಾಗಿದ್ದಿರಲಿ, ಈ ಒಂದು ಅಂಶದಲ್ಲಿ ಅದು ತಪ್ಪಾಗುತ್ತದೆ. ಎರಡು ಶತಮಾನಗಳ ಹಿಂದಿನ ಪಿನ್ಚನ್ನನು ತನ್ನ ಬಹುಮಂದಿ ಸಮಕಾಲೀನರ ಹಾಗೆ ಭೂತಪ್ರೇತಸಂಬಂಧವಾದ ಕಾರ್ಯಕಲಾಪಗಳಲ್ಲಿ ಪೂರ್ಣವಿಶ್ವಾಸವನ್ನಿಟ್ಟದ್ದನು; ಆದರೆ ಆ ಪ್ರೇತಗಳೆಲ್ಲ ಮುಖ್ಯವಾಗಿ ದುಷ್ಟ ಸ್ವಭಾವದವೆಂಬ ಭಾವನೆಯಿತ್ತು, ಇಂದಿನ ಇರುಳು ಅಲ್ಲಿ ತೋಳುಕುರ್ಚಿಯ ಮೇಲೆ ಕುಳಿತಿರುವ ಪಿನ್ಚನ್ನನು ಅಂಥ ಅರ್ಥವಿಲ್ಲದ ಅವಿವೇಕದಲ್ಲಿ ಯಾವ ನಂಬಿಕೆಯನ್ನೂ ಹೊಂದಿಲ್ಲ. ಕಡೆಯಪಕ್ಷ, ಕೆಲವು ಗಂಟೆಗಳ ಹಿಂದಂತೂ ಅವನ ನಂಬಿಕೆ ಅಂಥದಾಗಿತ್ತು. ಆದ್ದರಿಂದ, ಆತನ ಪೂರ್ವಿಕರ ಈ ಮನೆಯ ಇದೇ ಕೋಣೆಯ ವಿಚಾರವಾಗಿ ಹೇಳಿಕೊಳ್ಳುತ್ತಿದ್ದ ಕಥೆಗಳನ್ನು ಕೇಳಿ ಅವನ ಕೂದಲು ನಿಮಿರಿ ನಿಲ್ಲುವುದಿಲ್ಲ. ಹಿಂದಿನ ಕಾಲಗಳಲ್ಲಿ, ಬೆಂಕಿಗೂಡಿನ ಮೂಲೆಯಲ್ಲಿ ಬೆಂಚುಗಳಿರುತ್ತಿದ್ದುವು; ಅಲ್ಲಿ ಮನೆಯ ಮುದುಕರು ಕುಳಿತು ಬೂದಿಯನ್ನು ಬೆದಕುವಂತೆ ಹಿಂದಿನ ಕಾಲದ ನೆನಪುಗಳನ್ನು ತೋಡಿಕೊಳ್ಳುತ್ತ, ಸಾಂಪ್ರದಾಯಿಕ ಕಥೆಗಳನ್ನು ಕೆಂಡ ಕೆದಕುವಂತೆ ಮಗುಚಿ ಮಗುಚಿ ಹೇಳಿಕೊಳ್ಳುತ್ತಾ ಕುಳಿತಿರುತ್ತಿದ್ದರು. ನಿಜ ನುಡಿಯುವುದಾದರೆ, ಈ

ಕಂಡುಬರುತ್ತಿದೆ; ಆತ ಗುತ್ತನಾದ ಚರ್ಮದ ನಡುವಂಗಿಯನ್ನೂ ಷರಾಯನ್ನೂ ಧರಿಸಿದ್ದಾನೆ; ಅವನ ಪಕ್ಕ ಜೇಬಿನಿಂದ ಬಡಗಿಯ ಅಳತೆಯ ಪಟ್ಟಿ ಹೊರಹಾಯ್ದು ಇಣಿಕಿ ನೋಡುತ್ತಿದೆ; ಅವನು ಗಡ್ಡದ ಸರದಾರನ ಹಾಗೂ ಅವನ ವಂಶಸ್ಥರ ಕಡೆಗೆ ಬೆರಳು ತೋರಿಸುತ್ತಾ, ತಲೆದೂಗುತ್ತಾ, ಹಂಗಿಸುತ್ತಾ, ಅಣಕಿಸುತ್ತಾ, ಕಟ್ಟಕಡೆಯಲ್ಲಿ ಗೊಳ್ಳನೆ ನಗುತ್ತಿದ್ದಾನೆ; ಆ ನಗು ಮಾತ್ರ ಕೇಳಿಸದು.

ಈ ಕಲ್ಪನಾವಿಲಾಸದ ವೈಚಿತ್ರ್ಯದಲ್ಲಿ ನಲಿಯುತ್ತಾ, ನಾವು ನಮ್ಮ ಸಂಯಮವನ್ನೂ ಮಾರ್ಗದರ್ಶನ ಸಾಮರ್ಥ್ಯವನ್ನೂ ಕಳೆದುಕೊಂಡು ಬಿಟ್ಟಿದ್ದೇವೆ. ನಮ್ಮ ಈ ಕಾಲ್ಪನಿಕ ದೃಶ್ಯದಲ್ಲಿ ಒಬ್ಬ ಅನಿರೀಕ್ಷಿತ ವ್ಯಕ್ತಿಯ ಆಕೃತಿಯನ್ನು ನಾವು ಪ್ರತ್ಯೇಕಮಾಡಿ ಗುರುತಿಸಬಹುದಾಗಿದೆ. ಆ ಪೂರ್ವ ವಂಶಸ್ಥರ ನಡುವೆ, ಇಂದಿನ ಕಾಲದ ಹೊಚ್ಚ ಹೊಸ ಮಾದರಿಯ ಉಡುಪು ತೊಟ್ಟ ಕಿರಿಯನೊಬ್ಬನಿದ್ದಾನೆ; ಬಹುಮಟ್ಟಿಗೆ ಕೆಳಗಿನ ಜೋಲಾಡುವ ಭಾಗವೇ ಇಲ್ಲದ ಕರಿಯ ಗಿಡ್ಡಂಗಿಯನ್ನೂ, ಬೂದುಬಣ್ಣದ ಷರಾಯನ್ನೂ, ಕಪ್ಪು ಮೆರುಗಿನ ನಯವಾದ ತೊಗಲಿನ ಬೂಡ್ಸುಗಳನ್ನೂ ಅವನು ಧರಿಸಿದ್ದಾನೆ; ಸೊಗಸಾಗಿ ತಯಾರಿಸಿದ ಚಿನ್ನದ ಸರಪಣಿಯೊಂದು ಅವನ ಎದೆಯ ಮೇಲೆ ಅಡ್ಡಡ್ಡನಾಗಿ ನೇತಾಡುತ್ತಿದೆ; ತಿಮಿಂಗಿಲದ ಎಲುಬಿನಿಂದ ಮಾಡಿದ, ಬೆಳ್ಳಿಯ ಹಿಡಿಯ ಚಿಕ್ಕ ಕೋಲೊಂದು ಅವನ ಕೈಯಲ್ಲಿದೆ. ಈ ವ್ಯಕ್ತಿಯನ್ನು ನಾವು ಹಗಲುಹೊತ್ತು ಸಂಧಿಸಿದ್ದೇ ಆದರೆ, ಕಿರಿಯ ಜಫ್ರಿ ಪಿನ್ಚನ್ ಎಂದು ಅವನನ್ನು ಅಭಿವಂದಿಸುವೆವು; ಅವನು ನ್ಯಾಯಮೂರ್ತಿಯ ಬದುಕಿರುವ ಏಕಮಾತ್ರ ಪುತ್ರ; ಅವನು ಕಳೆದ ಎರಡು ವರ್ಷಗಳಿಂದಲೂ ಪರದೇಶಪ್ರವಾಸದಲ್ಲಿ ಕಾಲಕಳೆಯುತ್ತಿದ್ದಾನೆ. ಅವನು ಇನ್ನೂ ಜೀವಂತವಾಗಿರುವ ಪಕ್ಷಕ್ಕೆ, ಅವನ ನೆರಳು ಇಲ್ಲಿಗೆ ಹೇಗೆ ಬಂದಿತು? ಸತ್ತಿರುವ ಪಕ್ಷಕ್ಕೆ, ಎಂತಹ ದುರದೃಷ್ಟ! ಆ ಹಳೆಯ ಪಿನ್ಚನ್‌ವಂಶದ ಆಸ್ತಿ, ಜೊತೆಗೆ ಈ ತರುಣನ ತಂದೆ ಗಳಿಸಿದ ಭಾರಿ ಜಮೀನು– ಇವೆಲ್ಲಾ ಯಾರಿಗೆ ಸೇರುತ್ತವೆ? ತಿಳಿಗೇಡಿಯಾದ ಬಡಪ್ರಾಣಿ ಕ್ಲಿಫರ್ಡ್, ಸಣಕಲಿ ಹೆಪ್ಸಿಬಾ, ಹಾಗೂ ಹಳ್ಳಿಯ ಹುಡುಗಿ ಪುಟ್ಟ ಫೀಬೆ– ಇವರಿಗೆ ಸೇರುತ್ತವೆ. ಆದರೆ, ಇನ್ನೊಂದು ದೊಡ್ಡ ಅದ್ಭುತ ನಮಗಾಗಿ ಕಾದಿದೆ! ನಮ್ಮ ಕಣ್ಣನ್ನು ನಾವು ನಂಬಲು ಸಾಧ್ಯವೆ? ಸ್ಥೂಲಕಾಯನಾದ, ವಯಸ್ಸಾದ, ಒಬ್ಬ ದೊಡ್ಡ ಮನುಷ್ಯ ಕಾಣಿಸಿಕೊಂಡಿದ್ದಾನೆ; ಘನಗೌರವವುಳ್ಳ ಸ್ವರೂಪ ಅವನದ್ದು; ಕರಿಯ ಅಂಗಿ ದಗಲೆ ಷರಾಯಿಗಳನ್ನು ಧರಿಸಿದ್ದಾನೆ; ಉಡುಪಿನ ಅಚ್ಚು ಕಟ್ಟಿನ ವಿಚಾರದಲ್ಲಿ ಬಹು ಎಚ್ಚರಿಕೆ ವಹಿಸತಕ್ಕವನು ಎಂದು ಖಂಡಿತವಾಗಿ ಹೇಳಬಹುದು; ಹೀಗಿದ್ದೂ ಕೂಡ, ಅವನ ಹಿಮಬಿಳುಪಿನ ಕೊರಳವಸ್ತ್ರದ ಮೇಲೂ ಷರಟಿನ

ಎತ್ತಿ, ಚಿತ್ರದ ಚೌಕಟ್ಟನ್ನು ಮುಟ್ಟಿ ಮುಟ್ಟಿ ಪರೀಕ್ಷಿಸುತ್ತಿದ್ದಾನೆ. ಎಲ್ಲವೂ ಸುರಕ್ಷಿತ! ಆದರೆ, ಅದೇನು. ಅಲ್ಲಿ ಕಾಣುವುದು ಮುಗುಳುನಗೆಯೆ? ಘೋರವಾದ ವಿಪತ್ಸೂಚನೆಯನ್ನು ಒಳಕೊಂಡ ಸಿಡುಕಿನ ಹುಬ್ಬು ಗಂಟು ಎನ್ನುವುದೇ ಮೇಲಲ್ಲವೆ? ಅವನ ಮುಖಮುದ್ರೆಯ ಛಾಯೆಯ ಮೇಲೆ ಕರಾಳವಾಗಿ ಕಾಣುತ್ತಿದೆ ಅದು. ಸ್ಥೂಲಕಾಯದ ಸರದಾರ ಅಸಮಾಧಾನಗೊಂಡಿದ್ದಾನೆ! ಅವನ ಅಸಮಾಧಾನದ ನೋಟ ಎಷ್ಟು ನಿಶ್ಚಿತವಾಗಿದೆಯೆಂದರೆ, ಅದರಿಂದಾಗಿ ಅವನ ಮುಖಮುದ್ರೆಗೆ ಹೆಚ್ಚಿನ ಸ್ಪಷ್ಟತೆಯುಂಟಾಗಿದೆ; ಆದರೂ, ಬೆಳುದಿಂಗಳು ಅದರ ಮೂಲಕವಾಗಿಯೆ ತೂರಿಕೊಂಡು ಹೋಗಿ, ಅದರಾಚೆಯ ಗೋಡೆಯ ಮೇಲೆ ಮಿನುಗುತ್ತಿದೆ. ಯಾವುದೋ ಒಂದು ಸಂಗತಿ ಈ ಪೂರ್ವಿಕನನ್ನು ವಿಚಿತ್ರವಾಗಿ ಕೆರಳಿಸಿದೆ! ಗಂಭೀರವಾಗಿ ತಲೆಯಲ್ಲಾಡಿಸಿ, ಆತ ಅತ್ತ ತಿರುಗಿಬಿಟ್ಟಿದ್ದಾನೆ. ಇಗೋ ಇಲ್ಲಿ ಬಂದರು ಇತರ ಪಿನ್ಚನ್ ಮನೆತನದವರು; ವಂಶಕ್ಕೆ ವಂಶವೇ, ಆರು ತಲೆಗಳ ಜನ, ಒಬ್ಬರನ್ನೊಬ್ಬರು ನೂಕಾಡುತ್ತಾ ಮೊಣಕೈಯಿಂದ ತಿವಿದಾಡುತ್ತಾ, ಭಾವಚಿತ್ರದ ಬಳಿಗೆ ಹೋಗಲು ಹೆಣಗುತ್ತಿದ್ದಾರೆ, ವಯಸ್ಸಾದ ಗಂಡಸರು, ಅಜ್ಜಿಯರು, ಉಡುಪಿನಲ್ಲೂ ಗತ್ತಿನಲ್ಲೂ ಪ್ಯೂರಿಟನ್ ಪೆಡಸನ್ನು ಇನ್ನೂ ತೋರುತ್ತಿರುವ ಮತದ ಪುರೋಹಿತನೊಬ್ಬ, ಹಿಂದಿನ ಒಂದು ಯುದ್ಧದಲ್ಲಿ ಫ್ರೆಂಚರೊಡನೆ ಕಾದಿದ ಕೆಂಪಂಗಿಯ ಸೈನ್ಯಾಧಿಕಾರಿ– ಇವರನ್ನೆಲ್ಲಾ ನಾವು ಕಾಣುತ್ತಿದ್ದೇವೆ; ಅಗೋ ಅಲ್ಲಿ ಬರುತ್ತಿದ್ದಾನೆ, ಒಂದು ಶತಮಾನದ ಹಿಂದೆ ಅಂಗಡಿಯಿಟ್ಟಿದ್ದ ಪಿನ್ಚನ್– ತನ್ನ ಮುಂಗೈ ಬಳಿ ಅಂಗಿಯ ತೋಳಿನ ನೆರಿಯನ್ನು ಮೇಲಕ್ಕೆ ಮುದುರಿಕೊಂಡು; ಮತ್ತೆ ಅಲ್ಲಿ ಕಾಣಿಸುತ್ತಿದ್ದಾನೆ, ಕಲಾವಿದನ ಕಟ್ಟು ಕಥೆಯ ದೊಡ್ಡ ಮನುಷ್ಯ– ಕೂದಲ ಟೋಪಿ ಹಾಕಿಕೊಂಡಿದ್ದಾನೆ, ಅವನ ಅಂಗಿಗೆ ಜರಿಯ ಕಸೂತಿ ಕೆಲಸ ಮಾಡಿದೆ, ಖಿನ್ನಮುಖಿಯಾದ ಚೆಲುವೆ ಆಯಲಿಸ್ ಜೊತೆಗಿದ್ದಾಳೆ; ಕನ್ಯೆಯಾಗಿ ಹೊಕ್ಕ ತನ್ನ ಗೋರಿಯಿಂದ ಯಾವ ಬಿಗುಮಾನವನ್ನೂ ಹೊತ್ತು ಬಂದಿಲ್ಲ ಅವಳು. ಎಲ್ಲರೂ ಚಿತ್ರಪಟದ ಚೌಕಟ್ಟನ್ನು ಪರೀಕ್ಷಿಸಿ ನೋಡುತ್ತಿದ್ದಾರೆ. ಈ ಪ್ರೇತರೂಪದ ಜನ ಅದೇನನ್ನು ಹುಡುಕುತ್ತಿದ್ದಾರೆ? ತಾಯೊಬ್ಬಳು ತನ್ನ ಮಗುವನ್ನು ಮೇಲಕ್ಕೆ ಎತ್ತಿ ಹಿಡಿಯುತ್ತಿದ್ದಾಳೆ; ಅದರ ಪುಟ್ಟ ಕೈಗಳು ಪಟವನ್ನು ಮುಟ್ಟಲಿ ಎಂದು ಅವಳ ಆಶೆ! ಈ ಚಿತ್ರಪಟದಲ್ಲಿ ಅದೇನೋ ರಹಸ್ಯವಡಗಿದೆಯೆಂಬುದು ಸ್ಪಷ್ಟ; ಈ ಬಡ ಪಿನ್ಚನ್ನರ ಸಮಾಧಿಯಲ್ಲಿ ಶಾಂತವಾಗಿ ಮಲಗಿ ನಿದ್ರಿಸುತ್ತಿರಬೇಕಾದ ವೇಳೆಯಲ್ಲಿ ಅದು ಇವರನ್ನು ಗೊಂದಲಕ್ಕೀಡುಮಾಡಿದೆ. ಈ ನಡುವೆ, ಒಂದು ಮೂಲೆಯಲ್ಲಿ ಒಬ್ಬ ವಯಸ್ಸಾದ ವ್ಯಕ್ತಿಯ ಆಕೃತಿ ನಿಂತಿರುವುದು

ನೋಡಲು ಅದು ಅಲ್ಲಿ ಠಿಕಾಣಿ ಹಾಕಿರುವ ಹಾಗೆ ಕಾಣುತ್ತದೆ. ಬಹು ವಿಕಾರವಾದ ನೋಟ ಈ ಬೆಕ್ಕಿನದು. ಅದೇನು ಬೆಕ್ಕು ಇಲಿಗಾಗಿ ಕಾಯುತ್ತ ಕುಳಿತಿದೆಯೋ, ಇಲ್ಲವೆ ಮಾನವನ ಆತ್ಮಕ್ಕಾಗಿ ಸೈತಾನನೆ ಕುಳಿತಿದ್ದಾನೆಯೋ? ಅವನನ್ನು ಕಿಟಕಿಯಿಂದ ಆಚೆಗೆ ಬೆದರಿಸಿ ಓಡಿಸಲು ನಮಗೆ ಸಾಧ್ಯವಾಗಿದ್ದರೆ ಚೆನ್ನಾಗಿತ್ತು!

ದೇವರ ಕೃಪೆ, ರಾತ್ರಿ ಬಹುಮಟ್ಟಿಗೆ ಕಳೆದುಹೋಯಿತು. ಚಂದ್ರ ಕಿರಣಗಳಿಗೆ ಮೊದಲಿನ ಹಾಗೆ ಈಗ ಬೆಳ್ಳಿಯ ಹೊಳಪಿಲ್ಲ; ಅಲ್ಲದೆ, ಅವು ಯಾವ ನೆರಳುಗಳೊಂದಿಗೆ ಚೆಲ್ಲಾಟವಾಡುತ್ತಿದ್ದುವೋ ಅವುಗಳ ಕಪ್ಪಿನೊಂದಿಗೆ ಮೊದಲಿನಷ್ಟು ಪ್ರಬಲವಾದ ವೈಷಮ್ಯ ಹೊಂದಿಲ್ಲ. ಈಗ ಅವು ಮೊದಲಿಗಿಂತ ಮಾಸವಾಗಿವೆ; ನೆರಳುಗಳು ಕೂಡ ಕಪ್ಪಾಗಿರದೆ, ಬೂದು ತಿರುಗಿವೆ. ಗಲಭೆಮಾಡುತ್ತಿದ್ದ ಗಾಳಿಯ ಸದ್ದಡಗಿದೆ. ಗಂಟೆ ಎಷ್ಟಿರಬಹುದು? ಓಹೋ! ಕಡೆಗೊಮ್ಮೆ ಗಡಿಯಾರ 'ಟಿಕ್ ಟಿಕ್' ಎನ್ನುವುದನ್ನು ನಿಲ್ಲಿಸಿಬಿಟ್ಟಿದೆ; ಏಕೆಂದರೆ, ನ್ಯಾಯಮೂರ್ತಿ ತಾನು ಮಲಗುವುದಕ್ಕೆ ಸುಮಾರು ಅರ್ಧಗಂಟೆ ಮುಂಚೆ, ಹತ್ತು ಗಂಟೆಗೆ ಸರಿಯಾಗಿ, ಗಡಿಯಾರಕ್ಕೆ ಕೀಲು ಕೊಡುತ್ತಿದ್ದನು; ಎಂದಿನ ಹಾಗೆ ಕೀಲು ಕೊಡುವುದನ್ನು ಅಲಕ್ಷ್ಯ ಮಾಡಿ ಮರೆತುಬಿಟ್ಟವೆ ಅವನ ಕೈಬೆರಳು; ಆದ್ದರಿಂದ ಐದು ವರ್ಷಗಳಲ್ಲಿ ಮೊದಲ ಸಲ ಅದು ನಿಂತುಹೋಗಿದೆ. ಆದರೆ, ಪ್ರಪಂಚದ ಕಾಲವೆಂಬ ಆ ಭಾರಿ ಗಡಿಯಾರವು ತನ್ನ ತಾಳಗತಿಯನ್ನು ತೋರಿಸುತ್ತಲೇ ಇದೆ. ಹಾಳು ಸುರಿಯುವ ರಾತ್ರಿ ಹೊಚ್ಚ ಹೊಸತಾದ, ಸ್ವಚ್ಛವಾದ, ಮೋಡವಿಲ್ಲದ ಪ್ರಾತಃಕಾಲಕ್ಕೆ ಎಡೆಗೊಟ್ಟಿದೆ. (ಹಾಗೆಯೆ ನೆನೆದರೆ, ನಮ್ಮ ಹಿಂದಕ್ಕೆ ಸರಿದುಹೋದ, ಪ್ರೇತಗಳು ಕಾಡುತ್ತಿದ್ದ ರಾತ್ರಿಯ ಹಾಳು ಅದೆಷ್ಟು ಉತ್ಸಾಹಶೂನ್ಯವಾಗಿತ್ತು!) ಧನ್ಯ, ಧನ್ಯ ಕಿರಣಕಾಂತಿ! ದಿನದ ಬೆಳಕಿನ ಕಿರಣ– ಯಾವಾಗಲೂ ಮಂಕು ಕವಿದ ಈ ದಿವಾನಖಾನೆಗೆ ಹೇಗೋ ನುಸುಳಿ ಬರುವ ಕಿರಣಾಂಶ ಕೂಡ– ಕೆಡುಕನ್ನು ತೊಡೆದುಹಾಕಿ, ಎಲ್ಲ ಒಳಿತಕ್ಕೂ ಎಡೆ ಕಲ್ಪಿಸಿ, ಸುಖವನ್ನು ಲಭ್ಯವಾಗಿ ಮಾಡಿ ಕೊಡುವ ವಿಶ್ವ ವ್ಯಾಪಕ ದೈವಾನುಗ್ರಹದ ಒಂದು ಮುಖವಾಗಿ ಕಂಡುಬರುತ್ತದೆ. ಈಗಲಾದರೂ ನ್ಯಾಯಮೂರ್ತಿ ಪಿನ್ಚನ್ನನು ತನ್ನ ಕುರ್ಚಿಯಿಂದ ಮೇಲೇಳುವನೆ? ಅವನು ಮುಂದಕ್ಕೆ ಹೋಗಿ, ಬೆಳಗಿನ ಮುಂಗಿರಣಗಳು ತನ್ನ ಹಣೆಯನ್ನು ಸೋಂಕಲು ಅವಕಾಶ ಮಾಡಿಕೊಡುವನೆ? ಅವನು ಈ ಹೊಸ ದಿನವನ್ನು– ದೇವರು ಮಂದಹಾಸವನ್ನು ಬೀರುತ್ತ ಮಾನವಕೋಟಿಗೆ ವರವಾಗಿ ನೀಡಿರುವ ಈ ಹೊಸ ದಿನವನ್ನು– ಹಿಂದೆ ತಾನು ಸಾಧಿಸಿದ ದುರುದ್ದೇಶಗಳನ್ನೆಲ್ಲ ಮರಸು ವಂತಹ ಸದುದ್ದೇಶಗಳನ್ನು ಇಟ್ಟುಕೊಂಡು ಪ್ರಾರಂಭಿಸುವನೆ? ಅಥವಾ, ಬಲವಾಗಿ

ಎದೆಭಾಗದ ಮೇಲೂ ಅಗಲವಾದ ಕಡುಗೆಂಪಿನ ಕಲೆ ಕಂಡುಬರುತ್ತದೆ. ಅವನು ನ್ಯಾಯಮೂರ್ತಿ ಹೌದೋ, ಅಲ್ಲವೋ? ನ್ಯಾಯಮೂರ್ತಿ ಹೇಗಾಗಬಲ್ಲನಾತ? ಮಿನುಮಿನುಗುತ್ತಿರುವ ಚಂದ್ರಕಿರಣಗಳ ಬೆಳಕಿನಲ್ಲಿ ಯಾವ ವಸ್ತುವೇ ಆಗಲಿ ಎಷ್ಟು ಸ್ಪಷ್ಟವಾಗಿ ಕಾಣಿಸಬಹುದೋ ಅಷ್ಟ ಸ್ಪಷ್ಟವಾಗಿ ಅವನ ಆಕೃತಿಯನ್ನು ನಾವು ಕಾಣಬಹುದಾಗಿದೆ; ಅವನು ಇನ್ನೂ ಅದೇ ಓಕ್‌ಮರದ ಕುರ್ಚಿಯಮೇಲೆ ಕುಳಿತಿದ್ದಾನೆ! ಯಾರ ಪ್ರೇತವಾದರೂ ಆಗಿರಲಿ ಅದು, ಅದು ಚಿತ್ರದ ಹತ್ತಿರಕ್ಕೆ ಹೋಗಿ ಅದರ ಚೌಕಟ್ಟನ್ನು ತುಡುಕುವಂತೆ ಕಾಣುತ್ತದೆ; ಪಟದ ಹಿಂದೆ ಇಣಿಕಿನೋಡಿ ಪರೀಕ್ಷಿಸಿ, ಪೂರ್ವಜನ ಸಿಡುಕುಮೋರೆಯಷ್ಟೆ ಕರಾಳವಾದ ಸಿಡುಕುಮೋರೆ ಮಾಡಿಕೊಂಡು, ಅತ್ತ ತಿರುಗಿ ಹೊರಟುಹೋಗಿದೆ.

ಈಗ ತಾನೆ ಸೂಚನಾರೂಪವಾಗಿ ತಿಳಿಸಿದ ವಿಚಿತ್ರಕಲ್ಪನಾದೃಶ್ಯ ವಿಚಾರವು ನಮ್ಮ ಕಥೆಯ ಒಂದು ನಿಜವಾದ ಭಾಗವೆಂದು ಎಣಿಸಲಾಗದು. ಈ ಲಘು ಕಲ್ಪನಾತಿರೇಕದಲ್ಲಿ ವಿಹರಿಸುವಂತೆ ನಮ್ಮನ್ನು ವಂಚಿಸಿದ್ದು ಚಂದ್ರಕಿರಣಗಳ ಅಲುಗಾಟ; ಅವು ನೆರಳುಗಳೊಡನೆ ಕೈಹಿಡಿದು ಕುಣಿಯುತ್ತವೆ. ಮತ್ತು ಕನ್ನಡಿಯಲ್ಲಿ ಪ್ರತಿಬಿಂಬಿತವಾಗುತ್ತವೆ; ಕನ್ನಡಿ ಯಾವಾಗಲೂ ಪ್ರೇತಪ್ರಪಂಚಕ್ಕೆ ಒಂದು ಕಿಟಕಿ ಅಥವಾ ಬಾಗಿಲು ಇದ್ದಂತೆ, ಇದನ್ನು ನೀವೂ ಬಲ್ಲಿರಿ. ಅದೂ ಅಲ್ಲದೆ, ಕುರ್ಚಿಯಲ್ಲಿ ಕುಳಿತಿದ್ದ ಆಕೃತಿಯನ್ನು ಕುರಿತು ಪ್ರತ್ಯೇಕವಾದ, ಬಹು ದೀರ್ಘವಾದ ಪರಿಭಾವನೆಯಲ್ಲಿ ನಿರತರಾಗಿಬಿಟ್ಟಿದ್ದೆವು; ಅದರಿಂದ ನಮಗೂ ಸ್ವಲ್ಪ ವಿಶ್ರಾಂತಿ ಬೇಕಾಗಿದ್ದಿತು. ಈ ಹುಚ್ಚುಗಾಳಿ ಕೂಡ ನಮ್ಮ ವಿಚಾರಗಳನ್ನು ವಿಚಿತ್ರ ಗೊಂದಲಕ್ಕೀಡುಮಾಡಿದೆ; ಆದರೆ ಅವುಗಳ ನಿಶ್ಚಿತಕೇಂದ್ರದಿಂದ ಅವುಗಳನ್ನು ಕಿತ್ತುಹಾಕಿಲ್ಲ. ಅಲ್ಲಿ ನ್ಯಾಯಮೂರ್ತಿ ಅಚಲನಾಗಿ ಸೀಸದ ಗುಂಡಿನ ಹಾಗೆ ನಮ್ಮ ಅಂತರಾತ್ಮದ ಮೇಲೆ ಭಾರವಾಗಿ ಕುಳಿತಿದ್ದಾನೆ. ಅವನು ಮತ್ತೆ ಕದಲುವುದೇ ಇಲ್ಲವೇ? ಅವನು ಕದಲದಿದ್ದರೆ, ನಮಗೆ ಹುಚ್ಚುಹಿಡಿದೀತು! ನ್ಯಾಯಮೂರ್ತಿ ಪಿನ್ಚನ್ನನ ಕಾಲಿನ ಹತ್ತಿರದಲ್ಲಿ, ಬೆಳುದಿಂಗಳ ಪಟ್ಟೆಯ ಮೇಲೆ ಒಂದು ಚಿಕ್ಕ ಇಲಿ ತನ್ನ ಹಿಂಗಾಲುಗಳಮೇಲೆ ಕುಳಿತಿದೆ; ಈ ಭಾರಿಯ ಕರಾಳಮೂರ್ತಿಯ ಮೇಲೆ ಅನ್ವೇಷಣದ ಪ್ರವಾಸವನ್ನು ನಡಸುವುದು ಹೇಗೆ ಎಂಬುದನ್ನು ಕುರಿತು ಅದು ಚಿಂತನೆಮಾಡುತ್ತಿರುವ ಹಾಗೆ ಕಾಣುತ್ತಿದೆ; ಅದರ ನಿರ್ಭೀತಿಯಿಂದ ಅವನ ಸ್ತಬ್ಧತೆಯನ್ನು ಇನ್ನೂ ಚೆನ್ನಾಗಿ ಊಹೆಮಾಡಿ ಅರಿಯಬಹುದು. ಹಾಹಾ! ಆ ಚುರುಕಾದ ಚಿಕ್ಕ ಇಲಿಯನ್ನು ಬೆಚ್ಚು ಬೀಳಿಸಿದ್ದು ಯಾವುದು? ಕಿಟಕಿಯ ಹೊರಗಡೆ ಕಾಣುತ್ತಿರುವ ಮುದಿ ಬೆಕ್ಕಿನ ಮುಖ; ಉದ್ದೇಶಪೂರ್ವಕವಾಗಿ ಹೊಂಚು

ಇದ್ದುವು; ಇನ್ನಾದರೂ ಆ ಸೋಗನ್ನು ತೊರೆದು, ತನ್ನ ಪಾಪದ ಹೊರೆಯಿಂದಲೇ ಕುಸಿದು ಕೊರಗಿ ಮರುಗುತ್ತಿರುವ ಹೃದಯದ ಖಿನ್ನತೆಯ ಕೋಮಲ ಭಾವವನ್ನು ಮೆರೆಯುವನೆ? ಈತನು ತನ್ನ ವ್ಯಕ್ತಿತ್ವದ ಮೂರ್ತಿಗೆ ಎಂಥ ಗೌರವದ ಕಿರೀಟವನ್ನೆ ಧಾರಣೆ ಮಾಡಿಸಿರಲಿ, ಅದರ ಪೀಠದಡಿಯಲ್ಲಿ ಪಾಪದ ಭಾರ ಕುಳಿತಿತ್ತು; ಇದು ನಮ್ಮ ನಂಬಿಕೆ.

ನ್ಯಾಯಮೂರ್ತಿ ಪಿನ್ಚನ್, ಮೇಲೇಳು! ಪ್ರಾತಃಕಾಲದ ಸೂರ್ಯ ಪ್ರಕಾಶವು ಎಲೆಗುಂಪಲ ಮೂಲಕ ಮಿರುಗುತ್ತಿದೆ; ಸುಂದರವೂ ಪವಿತ್ರವೂ ಆದ ಆ ಪ್ರಕಾಶವು ನಿನ್ನ ಮುಖವನ್ನು ಬೆಳಗುವುದಕ್ಕೂ ತಿರಸ್ಕಾರ ತೋರಿಲ್ಲ. ಮೇಲೇಳು, ಎಲವೋ, ಕುಟಿಲಬುದ್ಧಿಯು, ಪ್ರಾಪಂಚಿಕವಾದ, ಸ್ವಾರ್ಥಪರವಾದ ಪಾಷಾಣಹೃದಯದ ಆಷಾಢಭೂತಿಯೇ, ಆಯ್ಕೆ ಮಾಡಿಕೋ– ಮೊದಲಿನ ಹಾಗೆಯೇ ಇನ್ನೂ ಕುಟಿಲಮತಿಯಾಗಿ, ಪ್ರಾಪಂಚಿಕನಾಗಿ, ಸ್ವಾರ್ಥಿಯಾಗಿ, ಪಾಷಾಣಹೃದಯವುಳ್ಳವನಾಗಿ, ಗೋಮುಖ ವ್ಯಾಘ್ರನಾಗಿಯೇ ಇರುವೆಯೋ, ಇಲ್ಲವೆ, ನಿನ್ನ ಸ್ವಭಾವದಿಂದ ಈ ಪಾಪಗಳನ್ನೆಲ್ಲಾ– ಅವು ನಿನಗೆ ನಿನ್ನ ಜೀವಿತದ ರಕ್ತವನ್ನೇ ತಂದುಕೊಡುತ್ತಿದ್ದರೂ ಚಿಂತೆಯಿಲ್ಲ– ಈ ಪಾಪಗಳನ್ನೆಲ್ಲಾ ನಿನ್ನ ಸ್ವಭಾವದಿಂದ ಕಿತ್ತೊಗೆಯುವೆಯೋ? ಸೇಡು ತೀರಿಸಿಕೊಳ್ಳುವವನು ನಿನ್ನ ಮೇಲೆ ಎರಗಿ ಬರುತ್ತಿದ್ದಾನೆ! ಕಾಲ ಮಿಂಚುವುದಕ್ಕೆ ಮೊದಲೇ ಎದ್ದೇಳು!

ಏನು! ಈ ಕಟ್ಟ ಕಡೆಯ ಮನವಿಯಿಂದಲೂ ನೀನು ವಿಚಲಿತನಾಗಿಲ್ಲವೆ? ಅಗೋ, ಅಲ್ಲಿ ನಮಗೊಂದು ನೊಣ ಕಾಣಬರುತ್ತಿದೆ– ಕಿಟಕಿಯ ಗಾಜಿನ ಮೇಲೆ ಸದಾ 'ಬಸ್ ಎನ್ನುತ್ತಾ ಸುಳಿದಾಡುತ್ತಿರುವ ಮನೆಯ ನೊಣಗಳಲ್ಲಿ ಒಂದು ಅದು– ಗೌರ್ನರ್ ಪಿನ್ಚನ್ನನ ವಾಸನೆ ಹಿಡಿದುಬಿಟ್ಟಿದೆ ಅದು! ಹಿಡಿದು, ಈಗ ಅವನ ಹಣೆಯಮೇಲೆ ಇಳಿದು ಕುಳಿತಿದೆ, ಈಗ ಅವನ ಗಲ್ಲದ ಮೇಲೆ; ಮತ್ತೀಗ, ಅಯ್ಯೋ ದೇವರೆ, ಅವನ ಮೂಗಿನ ಏಣಿನಮೇಲೆ ಹರಿದುಹೋಗುತ್ತಿದೆ, ಮುಂದೆ ಮುಖ್ಯ 'ಮ್ಯಾಜಿಸ್ಟ್ರೇಟ್' ಆಗಲಿರುವವನ ಅಗಲವಾಗಿ ತೆರೆದ ಕಣ್ಣುಗಳ ಕಡೆಗೆ ಹೊರಟಿದೆ! ಆ ನೊಣವನ್ನು ನೀನು ಝಾಡಿಸಿಕೊಳ್ಳಲಾರೆಯಾ? ನೀನು ಅಷ್ಟೊಂದು ಅಲಸನೆ? ಎಲವೋ ಪ್ರಾಣಿ, ನಿನ್ನೆ ಅದೆಷ್ಟೊಂದು ಚಟುವಟಿಕೆಯ ಕಾರ್ಯಯೋಜನೆಗಳನ್ನು ನೀನು ಇಟ್ಟುಕೊಂಡಿದ್ದೆ? ಅಷ್ಟೊಂದು ಬಲಶಾಲಿಯಾಗಿದ್ದ ನೀನು ಇಷ್ಟೊಂದು ದುರ್ಬಲನಾಗಿಬಿಟ್ಟೆಯಾ? ಒಂದು ನೊಣವನ್ನು ಝಾಡಿಸಲಾರೆ? ಹಾಗಿದ್ದಮೇಲೆ, ಹೋಗಲಿ, ನಿನ್ನ ಮೇಲಿನ ಆಸೆಯನ್ನೆ ಬಿಟ್ಟು ಬಿಡುತ್ತೇವೆ ನಾವು!

ಹೂಡಿದ ನಿನ್ನಿನ ದುಷ್ಟ ಹಂಚಿಕೆಗಳೆಲ್ಲಾ ಎಂದಿನಂತೆಯೇ ಇನ್ನೂ ಅವನ ಹೃದಯದಲ್ಲಿ ಸ್ಥಿರವಾಗಿ ನೆಲಸಿ, ಮಿದುಳಿನಲ್ಲಿ ಕೆಲಸಮಾಡುತ್ತಿವೆಯೊ?

ಎರಡನೆಯ ಸಂದರ್ಭವಾದಲ್ಲಿ, ಮಾಡಬೇಕಾದದ್ದು ಬಹಳವಿದೆ. ಕ್ಲಿಫರ್ಡನನ್ನು ಸಂದರ್ಶಿಸಬೇಕೆಂದು ನ್ಯಾಯಮೂರ್ತಿ ಹೆಪ್ಸಿಬಾಳನ್ನು ಇನ್ನೂ ಒತ್ತಾಯಪಡಿಸುವನೆ? ವಯಸ್ಕನಾದ ದೊಡ್ಡ ಮನುಷ್ಯನು ಸುರಕ್ಷಿತವಾಗಿ ಸವಾರಿಮಾಡಲು ತಕ್ಕ ಕುದುರೆಯನ್ನು ಅವನು ಕೊಂಡುಕೊಳ್ಳುವನೆ? ಹಳೆಯ ಪಿನ್ಚನ್ ಆಸ್ತಿಯನ್ನು ಕೊಂಡುಕೊಂಡವನು ಅದನ್ನು ತನಗೇ ಹಿಂದಕ್ಕೆ ಕೊಡುವಂತೆ ಅವನನ್ನು ಬಲಾತ್ಕಾರಪಡಿಸುವನೆ? ಅವನು ತನ್ನ ಕುಟುಂಬದ ವೈದ್ಯನನ್ನು ನೋಡಿ, ತನ್ನ ವಂಶದಲ್ಲಿ ಅತ್ಯಂತ ದೀರ್ಘಾಯುಗಳಾಗಿ ಬಾಳಿದವರ ದೀರ್ಘಾಯುಸ್ಸನ್ನು ದೊರಕಿಸಿಕೊಟ್ಟು ತನ್ನನ್ನು ವಂಶಕ್ಕೇ ಭೂಷಣವಾಗಿಯೂ ಭಾಗ್ಯದಾತನನ್ನಾಗಿಯೂ ಮಾಡಬಲ್ಲ, ತನ್ನನ್ನು ಆ ವರೆಗೆ ಕಾದಿಡಬಲ್ಲ ಔಷಧವನ್ನು ಅವನಿಂದ ಪಡೆಯುವನೆ? ಎಲ್ಲಕ್ಕಿಂತ ಮೇಲಾಗಿ, ಆ ಗೌರವಾನ್ವಿತ ಗೆಳೆಯರ ಗೋಷ್ಠಿಗೆ ಯಥೋಚಿತವಾಗಿ ಕ್ಷಮಾಪಣೆ ಸಲ್ಲಿಸಿ, ಭೋಜನಕೂಟದಲ್ಲಿ ತಾನು ಭಾಗ ವಹಿಸದಿದ್ದುದು ಅನಿವಾರ್ಯವಾಗಿತ್ತೆಂದು ಅವರಿಗೆ ಸಮಾಧಾನ ಹೇಳಿ ಮಸ್ಸಾಚುಸೆಟ್ಸ್ ಪ್ರಾಂತದ ಗೌರ್ನರಾಗಲು ತಾನು ಇನ್ನೂ ಯೋಗ್ಯ ಅಭ್ಯರ್ಥಿಯಾಗಿ ಉಳಿದಿರುವೆನೆಂಬ ಬಗೆಗೆ ಅವರ ಸದಭಿಪ್ರಾಯವನ್ನು ಸಂಪೂರ್ಣವಾಗಿ ಪುನಸ್ಸಂಪಾದನೆ ಮಾಡುವನೆ? ಇಷ್ಟೆಲ್ಲ ಮಹೋದ್ದೇಶಗಳನ್ನು ನೆರವೇರಿಸಿದ ಮೇಲೆ, ನೊಣಗಳು ಕೂಡ ಬಳಿಗೆ ಬಂದು ಅಲ್ಲಿ 'ಬಸ್' ಎಂದು ಹಾರಾಡುತ್ತ ವಿಹರಿಸುವ ಹಾಗೆ ಆಕರ್ಷಿಸಬಲ್ಲ ಬೇಸಗೆಯ ಬೇಗೆಯನ್ನು ಬೀರುವಮಟ್ಟಿನ ಕಾವುಳ್ಳ ಆದರಪೂರ್ಣವಾದ, ಪರಮೌದಾರ್ಯದ ಮುಗುಳುನಗೆಯನ್ನು ಚೆಲ್ಲುತ್ತಾ, ಅವನು ಮತ್ತೆ ಬೀದಿಯಲ್ಲಿ ನಡೆದಾಡುವನೆ? ಅಥವಾ, ಹಿಂದಿನ ಹಗಲು ಮತ್ತು ಇರುಳಿನ ಸಮಾಧಿ ಸದೃಶವಾದ ಏಕಾಂತವಾಸವು ಪೂರೈಸಿದ ಮೇಲೆ, ಗರ್ವಭಂಗಹೊಂದಿದವನಾಗಿ, ಪಶ್ಚಾತ್ತಾಪದಿಂದ ಬೆಂದು, ದುಃಖಪೂರ್ಣನೂ ಸೌಮ್ಯನೂ ಆಗಿ, ಲಾಭಕ್ಕಾಗಿ ಬಾಯಿಬಿಡದೆ, ಪ್ರಾಪಂಚಿಕ ಸ್ಥಾನಮಾನಗಳಿಂದ ಹಿಮ್ಮೆಟ್ಟುತ್ತ, ದೇವರನ್ನು ಪ್ರೇಮಿಸುವ ಸಾಹಸಮಾಡದೆ, ಆದರೆ ಜೊತೆಯ ಮಾನವನನ್ನು ಪ್ರೀತಿಸಿ ಅವನಿಗೆ ತನ್ನ ಕೈಲಾದ ಒಳಿತನ್ನು ಮಾಡಲು ಧೈರ್ಯವುಳ್ಳವನಾಗಿ, ಬಹಿರಂಗವಾಗಿ ಮುನ್ನಡೆಯುವನೆ? ಈ ಹಿಂದೆ ಅವನು ಬೂಟಾಟಿಕೆಯ ಔದಾರ್ಯವನ್ನು ಸೂಚಿಸಲು ಅಸಹ್ಯಕರವಾದ ಹಲ್ಲುಕಿರಿತವನ್ನು ಮೆರೆಯುತ್ತಿದ್ದನು; ಅದರ ಸೋಗಿನಲ್ಲಿ ಸೊಕ್ಕೂ, ಹುಸಿತನದಲ್ಲಿ ಹೇಸಿಕೆಯೂ

# ೧೯. ಆಯಲಿಸ್‌ನ ಹೂಗಳು

ಬಿರುಗಾಳಿಮಳೆ ಬಂದ ಮಾರನೆಯ ದಿನ ಬೆಳಗ್ಗೆ ಸುತ್ತಮುತ್ತ ಎಲ್ಲರಿಗಿಂತ ಮುಂಚೆ ಹೊರಕ್ಕೆ ಕದಲಿದವನೆಂದರೆ, ಒಂದು ಚಕ್ರದ ಕೈಬಂಡಿಯನ್ನು ತಳ್ಳಿಕೊಂಡು ಹೋಗುತ್ತಿದ್ದ ವೆನ್ನರ್ ಮಾವ.

ಏಳು ಇಪ್ಪಾರಿನ ಮನೆಯ ಮುಂದಿನ ಪಿನ್ಚನ್ ಬೀದಿ ಯಾವುದೇ ಅಡ್ಡ ಓಣಿಗಿಂತ ನೋಡಲು ಹೆಚ್ಚು ಉಲ್ಲಾಸಕರವಾಗಿತ್ತು; ಹರುಕು ಮುರುಕು ಬೇಲಿಗಳು ಸುತ್ತುವರಿದ, ಅಂಚಿನ ಉದ್ದಕ್ಕೂ ಕೀಳುವರ್ಗದ ಜನ ವಾಸಮಾಡುವ ಮರದ ವಸತಿಗಳಿರುವ ಅಡ್ಡ ಓಣಿ ಹಾಗೆ ಉಲ್ಲಾಸಕರವಾಗಿದ್ದೀತು ಎಂದು ನಿರೀಕ್ಷಿಸಿದರೆ ಅನ್ಯಾಯವಾದೀತು. ಹಿಂದಿನ ಐದು ದಿನಗಳು ನಿಷ್ಕರುಣೆಯಿಂದ ಕೂಡಿದ್ದಕ್ಕೆ ಪ್ರತಿಯಾಗಿ ಅಂದಿನ ಬೆಳಗ್ಗೆ ಪ್ರಕೃತಿದೇವಿ ನೀಡಿದ ಪರಿಹಾರ ಸವಿಯಾಗಿತ್ತು. ಮತ್ತೆ ಸೂರ್ಯಪ್ರಕಾಶದಿಂದ ಪ್ರಸನ್ನವಾಗಿ ಕಾಣುವ ಆಕಾಶದ ವಿಶಾಲ ಕರುಣೆಯನ್ನಾಗಲಿ, ಇಲ್ಲವೆ ಮನೆಗಳ ನಡುನಡುವೆ ಎಷ್ಟು ಕಂಡಿತೋ ಅಷ್ಟು ಆ ಆಕಾಶಭಾಗವನ್ನಾಗಲಿ ಕತ್ತೆತ್ತಿ ನೋಡುವುದಕ್ಕೆಂದೇ ಬದುಕಿರುವುದು ಸಾಕಾಗಿತ್ತು: ಸ್ಥೂಲವಾಗಿ ಒಟ್ಟಿನಲ್ಲಿ ನೋಡುವುದಕ್ಕಾದರೂ ಸರಿಯೆ, ಪ್ರತಿಯೊಂದು ವಸ್ತುವೂ ನೋಟಕ್ಕೆ ಹಿತಕರವಾಗಿತ್ತು. ದೃಷ್ಟಾಂತಕ್ಕೆ, ಪಕ್ಕದ ನಡೆದಾರಿಯಲ್ಲಿನ ಚೆನ್ನಾಗಿ ತೊಳೆದ ನೊರುಜುಗ್ಗಲ್ಲು ಮತ್ತು ಜಲ್ಲಿಕಲ್ಲು; ಬೀದಿಯ ನಡುಭಾಗದಲ್ಲಿ, ಆಕಾಶವನ್ನು ಪ್ರತಿಫಲಿಸಿ ಫಳಫಳಿಸುತ್ತಿದ್ದ ನೀರಿನ ಗುಂಡಿಗಳು; ಬೇಲಿಗಳ ಬುಡದಲ್ಲಿ ಉದ್ದಕ್ಕೂ ಅಂಚುಗಟ್ಟಿ ಹೊಚ್ಚ ಹೊಸದಾಗಿ ಹಚ್ಚ ಹಸುರಾಗಿ ಬೆಳೆದಿದ್ದ ಹುಲ್ಲು, ಹಾಗೂ ಬೇಲಿಯಾಚೆ ಇಣಿಕಿದರೆ ಕಾಣ ಬರುತ್ತಿದ್ದ ತೋಟಗಳ ವಿವಿಧ ಸಸ್ಯಸಂವೃದ್ಧಿ– ಇವೆಲ್ಲಾ ಹಿತಕರವಾಗಿದ್ದುವು. ಸಸ್ಯದ ಬೆಳೆಗಳು, ಅವು ಯಾವ ಬಗೆಯವೆ ಆಗಿರಲಿ, ತಮ್ಮ ರಸಸಮೃದ್ಧವಾದ ಬದುಕಿನಲ್ಲಿ ನಿಜವಾದ ನೆಮ್ಮದಿಯಿಂದಿರುವಂತೆ ಕಾಣುತ್ತಿದ್ದುವು. ಪಿನ್ಚನ್ ಎಲ್ಮ್ ವೃಕ್ಷವು ತನ್ನ ದೊಡ್ಡ ಸುತ್ತಳತೆಯ ತುಂಬ ಮುಂಬೆಳಗಿನ ಬಿಸಿಲನ್ನೂ ಪ್ರಸನ್ನತೆಯಿಂದ ಕೂಡಿದ ಮೆಲುಗಾಳಿಯನ್ನೂ ತುಂಬಿಕೊಂಡು, ಪೂರ್ತಿ ಜೀವಂತವಾಗಿತ್ತು; ಹಸುರಾಸರೆಯಲ್ಲಿ ಉಳಿದು ಸುಳಿದಾಡುತ್ತಿದ್ದ ಆ ಮೆಲುಗಾಳಿ ಸಾವಿರಾರು ಎಲೆನಾಲಗೆಗಳು ಏಕಕಾಲದಲ್ಲಿ ಪಿಸುಮಾತನಾಡಿಕೊಳ್ಳುವಂತೆ ಮಾಡುತ್ತಿತ್ತು. ಈ ಮುದಿ ಮರ ಬಿರುಗಾಳಿಯಿಂದ

ಅಗೋ ಕೇಳಿತೆ! ಅಂಗಡಿಯ ಗಂಟೆ ಬಾರಿಸುತ್ತಿದೆ. ವಿಷಣ್ಣವಾದ ಕಥೆಯನ್ನು ನಿರೂಪಿಸಿಕೊಂಡು ಹೀಗೆ ಕೆಲವು ಗಂಟೆಗಳ ಹೊತ್ತನ್ನು ಕಳೆದ ಮೇಲೆ, ಒಂದು ಜೀವಂತ ಪ್ರಪಂಚ ಹೊರಗಿದೆ, ಈ ಹಳೆಯಕಾಲದ ಒಂಟಿ ಮಹಲು ಕೂಡ ಅದರೊಂದಿಗೆ ಯಾವುದೋ ಒಂದು ವಿಧವಾದ ಸಂಬಂಧವನ್ನು ಹೊಂದಿದೆ ಎಂಬ ಪ್ರಜ್ಞೆಯನ್ನು ಪಡೆಯುವುದು ಒಳ್ಳಿತು. ನ್ಯಾಯಮೂರ್ತಿ ಪಿನ್ಚನ್ನನ ಸಮ್ಮುಖದಿಂದ ಏಳು ಇಪ್ಪಾರಿನ ಮನೆಯ ಮುಂದಿನ ಬೀದಿಗೆ ನಾವೀಗ ಬಂದು, ಹೆಚ್ಚು ನಿರಾಳವಾಗಿ ಉಸಿರಾಡುವಂತಾಗಿದೆ.

* * * *

ತಳಗಟ್ಟಡದ ಅಂತಸ್ತಿನ ಮೇಲ್ಭಾಗದ ಪ್ರಮುಖವಾದ ಮುಂಚಾಚು; ಮುರಿದುಹೋದ ಬಾಗಿಲ ಮೇಲೆ ತೆರೆದು ನಿಂತಿರುವ. ಘನವಾಗಿ ಕಾಣದಿದ್ದರೂ ಪುರಾತನವೆಂಬ ಕಾರಣದಿಂದ ಗೌರವಾಸ್ಪದವಾಗಿ ಕಾಣುತ್ತಿದ್ದ ಕಮಾನು ಕಿಟಕಿ; ಹೊಸಿಲಬಳಿ ಹೊರವಾಗಿ ಬೆಳೆದಿದ್ದ ದೈತ್ಯಾಕಾರದ 'ಬರ್ ಡಾಕ್' ಹೂಗಿಡಗಳು;– ಇವೆಲ್ಲವನ್ನೂ, ಎಲ್ಲ ವಿಶೇಷಲಕ್ಷಣಗಳನ್ನೂ ಆತ ಗಮನಿಸುತ್ತಿದ್ದ! ಗಮನಿಸಿ, ತಾನು ಕಂಡದ್ದಕ್ಕಿಂತ ಹೆಚ್ಚಿನದು ಏನೋ ಅಂತರಾಳದಲ್ಲಿ ಅಡಗಿದೆಯೆಂಬ ಅರಿವನ್ನು ಹೊಂದುತ್ತಿದ್ದ. ಹಾಗೂ, ಈ ಭವನವು ಪ್ರಾಮಾಣಿಕತೆಯೆ ಮೂರ್ತಿಮತ್ತಾದ, ಕಡುನಿಷ್ಠೆಯ ಹಿರಿಯ 'ಪ್ಯೂರಿಟನ್' ಪಂಗಡದವನ ನಿವಾಸವಾಗಿದ್ದಿರಬೇಕು ಎಂದು ಆತ ಭಾವಿಸಿಕೊಳ್ಳುತ್ತಿದ್ದ. ಯಾವುದೋ ಮರೆವಿನಲ್ಲಿ ಹುದುಗಿಹೋದ ಒಂದು ತಲೆಮಾರಿನಲ್ಲಿ ಆ ಪ್ಯೂರಿಟನ್ ಸತ್ತು ಹೋಗಿರಬೇಕು, ಭವನದ ಎಲ್ಲ ಕೋಣೆಗಳಲ್ಲಿಯೂ ತನ್ನ ಹರಕೆಯನ್ನು ಬಿಟ್ಟು ಹೋಗಿರಬೇಕು, ಅದರ ಶಕ್ತಿಯನ್ನು ಅವನ ಇಂದಿನ ವಂಶಸ್ಥರ ಧಾರ್ಮಿಕತೆ ಪ್ರಾಮಾಣಿಕತೆ, ಮಿತಿಗೊಳಪಟ್ಟ ಸಾಮರ್ಥ್ಯ, ಬಡತನದಲ್ಲಿಯೂ ಕಂಡುಬರುವ ಋಜುತ್ವ ಮತ್ತು ಘನವಾದ ಸೌಖ್ಯ– ಇವುಗಳಲ್ಲಿ ಇಂದಿಗೂ ಕಾಣಬಹುದು, ಎಂದೂ ಆತ ಕಲ್ಪಿಸಿಕೊಳ್ಳುತ್ತಿದ್ದ.

ಇತರ ಎಲ್ಲ ಸಂಗತಿಗಳಿಗಿಂತ ಮಿಗಿಲಾಗಿ ಒಂದು ವಸ್ತು ಕಲ್ಪಕ ಶಕ್ತಿಯುಳ್ಳ ಈ ನೋಟಕನ ನೆನಪಿನಲ್ಲಿ ಬೇರೂರುವುದು. ಅದೇನೆಂದರೆ, ಮುಂಭಾಗದ ಎರಡು ಇಪ್ಪಾರುಗಳ ನಡುವಣ ಮೂಲೆದೋಣಿಯಲ್ಲಿ ಬೆಳೆದಿದ್ದ, ಕಡುಗೆಂಪುಮಚ್ಚೆಯ ಹೂಗಳ ತಲೆಗುತ್ತಿ– ಕೇವಲ ಒಂದು ವಾರದ ಹಿಂದೆ ಅವುಗಳನ್ನು ಕಳೆಗಿಡಗಳು ಎಂದು ಕರೆದುಬಿಡುತ್ತಿದ್ದಿರಿ ನೀವು. ಹಳಬರಾದ ಜನ ಚೆಲುವೆಯಾಗಿದ್ದ ಆಯಲಿಸ್ ಪಿನ್ಚನ್ನಳ ಸ್ಮರಣಾರ್ಥವಾಗಿ ಅವುಗಳಿಗೆ 'ಆಯಲಿಸ್‌ನ ಹೂಗಳು' ಎಂದು ಹೆಸರಿಟ್ಟಿದ್ದರು; ಅವುಗಳ ಬೀಜಗಳನ್ನು ಆಯಲಿಸ್ ಇಟಲಿ ದೇಶದಿಂದ ತಂದಿದ್ದಳೆಂದು ಒಂದು ನಂಬಿಕೆ. ಇಂದು ಅವು ತಮ್ಮ ತನಿಚೆಲುವನ್ನೂ ತುಂಬು ಅರಳನ್ನೂ ಹೆಮ್ಮೆಯಿಂದ ಮೆರೆಯುತ್ತಿದುವು; ಹಾಗೂ, ಮನೆಯೊಳಗೆ ಯಾವುದೋ ಸಿದ್ಧಿ ಫಲಿಸಿರುವುದರ ನಿಗೂಢ ಸಂಕೇತವೇನೋ ಎಂಬಂತೆ ಕಾಣುತ್ತಿದ್ದುವು.

ವೆನ್ನರ್ ಮಾವ ಕಾಣಿಸಿಕೊಂಡಾಗ ಸೂರ್ಯೋದಯವಾಗಿ ಸ್ವಲ್ಪ ಹೊತ್ತಾಗಿತ್ತು, ಅಷ್ಟೆ; ಮೇಲೆ ಹೇಳಿದಂತೆ, ಅವನು ಬೀದಿಯುದ್ದಕ್ಕೂ ಒಂದು ಕೈಬಂಡಿಯನ್ನು ನೂಕಿಕೊಂಡು ಸಾಗುತ್ತಿದ್ದ. ಕೋಸುಗಡ್ಡೆಯ ಎಲೆಗಳು, ಟರ್ನಿಪ್‌ಗಡ್ಡೆಯ ಮೇಲ್ಭಾಗ,

ಯಾವ ಬಗೆಯ ಬಾಧೆಗೂ ಒಳಗಾದಂತೆ ಕಾಣಲಿಲ್ಲ. ಅದರ ಕೊಂಬೆಗಳು ಯಾವುವೂ ಮುರಿದಿರಲಿಲ್ಲ, ಎಲೆಗಳಲ್ಲಿ ಒಂದೂ ಉದಿರಿರಲಿಲ್ಲ, ಎಲ್ಲವನ್ನೂ ಅದು ಹಾಗೆಯೆ ಉಳಿಸಿಕೊಂಡಿತ್ತು; ಎಲ್ಲವೂ ಹಚ್ಚ ಹಸುರಾಗಿತ್ತು. ಒಂದು ಕೊಂಬೆ ಮಾತ್ರ ಬಹಳ ಮುಂಚೆಯೆ ಪರಿವರ್ತನೆ ಹೊಂದಿ ಪ್ರಕಾಶಮಾನವಾದ ಹೊಂಬಣ್ಣಕ್ಕೆ ತಿರುಗಿತ್ತು; ಎಲ್ಮ್ ವೃಕ್ಷ ಕೆಲವು ವೇಳೆ ಈ ರೀತಿಯಾಗಿ ಶರದಾಗಮನವನ್ನು ಸೂಚಿಸುತ್ತಿತ್ತು. 'ಈನಿಯಸ್' ಮತ್ತು 'ಸಿಬಿಲ್' ಎಂಬವರಿಗೆ 'ಹೇಡೀಸ್' ಎಂಬ ಅಧೋಲೋಕಕ್ಕೆ ಪ್ರವೇಶವನ್ನು ದೊರಕಿಸಿಕೊಟ್ಟ ಚಿನ್ನದ ಕೊಂಬೆಯ ಹಾಗಿತ್ತು ಆ ಕೊಂಬೆ.

ಈ ಒಂದು ರಹಸ್ಯಪೂರ್ಣಶಾಖೆ ಏಳು ಇಪ್ಪಾರಿನ ಮನೆಯ ಮುಖ್ಯದ್ವಾರದ ಮುಂದುಗಡೆ ನೆಲ ಸೋಕುವಂತೆ ನೇತಾಡುತ್ತಿತ್ತು; ಅಲ್ಲಿ ಸಾಗಿಹೋಗುವವರು ಯಾರು ಬೇಕಾದರೂ ಮೆಟ್ಟುಂಗಾಲಿನಲ್ಲಿ ನಿಂತು, ಅದನ್ನು ಕಿತ್ತು ಹಾಕಿಬಿಡಬಹುದಾಗಿತ್ತು. ಅದನ್ನು ಹಿಡಿದು ಬಾಗಿಲ ಮುಂದೆ ತೂರಿಸಿದರೆ, ಒಳಕ್ಕೆ ಪ್ರವೇಶಿಸಿ, ಮನೆಯ ರಹಸ್ಯವೆಲ್ಲದರ ಪರಿಚಯ ಹೊಂದಲು ಅವನಿಗಿದ್ದ ಹಕ್ಕಿನ ಸಂಕೇತವಾಗುತ್ತಿತ್ತು ಅದು. ಹೊರತೋರ್ಕೆಯಲ್ಲಿ ಹೆಚ್ಚಿನ ವಿಶ್ವಾಸ ಇಡಬೇಕಾದ ಪ್ರಕೃತವಿಲ್ಲ ಎನ್ನುವ ರೀತಿಯಲ್ಲಿ, ಈ ಪುರಾತನವಾದ ಕಟ್ಟಡ ನಿಜವಾಗಿ ಎಲ್ಲರಿಗೂ ಆಹ್ವಾನ ನೀಡುವಂತೆ ಕಾಣುವ ಸ್ವರೂಪವನ್ನು ಹೊಂದಿತ್ತು; ಅದರ ಪೂರ್ವೇತಿಹಾಸವು ಘನತೆಯುಳ್ಳದ್ದಾಗಿಯೂ ಸಂತೋಷಕರವಾಗಿಯೂ ಇದ್ದು, ಬೆಂಕಿಗೂಡಿನ ಪಕ್ಕದಲ್ಲಿ ಕುಳಿತು ವಿನೋದವಾಗಿ ಕತೆ ಹೇಳಿಕೊಳ್ಳಲು ತಕ್ಕದ್ದಾಗಿತ್ತು. ಓರೆಯಾಗಿ ಬೀಳುತ್ತಿದ್ದ ಸೂರ್ಯನ ಕಿರಣಗಳಲ್ಲಿ ಅದರ ಕಿಟಕಿಗಳು ಉಲ್ಲಾಸಕರವಾಗಿ ಹೊಳೆಯುತ್ತಿದ್ದುವು. ಅಲ್ಲಲ್ಲಿ ಗೆರೆಗೆರೆಯಾಗಿಯೂ ಗಂಟುಗಂಟಾಗಿಯೂ ಬೆಳೆದಿದ್ದ ಹಸುರಪಾಚಿ ನಿಸರ್ಗದೊಂದಿಗೆ ಬೆಳೆದಿದ್ದ ಸಲಿಗೆಯ ಹಾಗೂ ಸೊದರಿಬಾಂಧವ್ಯದ ವಾಗ್ದಾನಚಿಹ್ನೆಗಳಂತೆ ಕಾಣುತ್ತಿದ್ದುವು. ಪ್ರಾಚೀನಕಾಲದ ಓಕ್ ಮರಗಳೂ ಮತ್ತು ಇತರ ವಸ್ತುಗಳೂ ಬಹಳಕಾಲದಿಂದ ಇರುವ ಕಾರಣ ಮುಂದೆಯೂ ಇರುವ ಹಕ್ಕನ್ನು ಪಡೆದುಕೊಂಡಿರುವರೀತಿಯಲ್ಲಿ ಅವುಗಳೊಂದಿಗೆ ಸೇರಿಕೊಂಡು ಬಹು ಹಳೆಯಕಾಲದ ಈ ಮಾನವ ವಸತಿ ಕೂಡ ಅದೇ ರೀತಿಯ ಹಕ್ಕನ್ನು ಸ್ಥಾಪಿಸಿಕೊಂಡಿರುವಂತೆ ಕಾಣುತ್ತಿತ್ತು. ಕಲ್ಪನಾಸಾಮರ್ಥ್ಯವುಳ್ಳ ಯಾರೇ ಆಗಲಿ ಮನೆಯ ಮುಂದೆ ಹಾದುಹೋದರೆ, ಮತ್ತೆ ಮತ್ತೆ ಆ ಕಡೆ ತಿರುಗಿನೋಡಿ ಅದನ್ನು ಚೆನ್ನಾಗಿ ಪರಿಶೀಲಿಸಿ ನೋಡುವನು: ಅದರ ಹೊಗೆಕೊಳವೆಗಳ ಗುಂಪಿನಲ್ಲಿ ಒಟ್ಟುಗೂಡಿದ ಅದರ ಹಲವು ಶಿಖರಗಳು;

ಹಿರಿಯ ತನ್ನಲ್ಲಿ ತಾನೆ ಹೇಳಿಕೊಂಡನು.

ಹೀಗೆ ಆಲೋಚಿಸುತ್ತ, ಆ ಮುದುಕ ಚಿಕ್ಕ ಹಿತ್ತಲಿನ ಹೊರ ಬಾಗಿಲನ್ನು ಮುಚ್ಚಿಕೊಳ್ಳುತ್ತಿದ್ದನು. ಆದರೂ ಕೂಡ, ಆ ಮನೆಗೆ ಸೇರಿದ ಉಳಿದೆಲ್ಲ ಒಳಬಾಗಿಲು ಹೊರಬಾಗಿಲುಗಳಂತೆ, ಅದು ಕೂಡ ಕಿರಕಿರ ಗುಟ್ಟಿತು; ಆ ಸದ್ದು ಉತ್ತರದಿಕ್ಕಿನ ಇಪ್ಪಾರು ಭಾಗದಲ್ಲಿದ್ದವರ ಕಿವಿಮುಟ್ಟಿತು; ಅದರ ಕಿಟಕಿಗಳಲ್ಲಿ ಒಂದು, ಈ ಹೊರ ಬಾಗಿಲ ಕಡೆ ನೋಡಿಲಾಗುವಂತೆ, ಪಕ್ಕದಲ್ಲಿತ್ತು.

"ವೆನ್ನರ್ ಮಾವಯ್ಯಾ, ಸುಪ್ರಭಾತ! ಯಾರೂ ಎದ್ದು ಓಡಾಡುವುದು ನಿನಗೆ ಕೇಳಲಿಲ್ಲವೋ?" ಎಂದು ಛಾಯಾಚಿತ್ರಕಲಾವಿದನು ಕಿಟಕಿಯ ಹೊರಕ್ಕೆ ಬಾಗಿ ಹೇಳಿದನು.

ಅದಕ್ಕೆ ತೇಪೆಯ ಆಳು ಹೇಳಿದ, "ಒಂದು ಪ್ರಾಣಿಯೂ ಇಲ್ಲ. ಆದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ಹೊತ್ತು ಮೂಡಿ ಇನ್ನೂ ಅರ್ಧಗಂಟೆ ಕೂಡ ಆಗಿಲ್ಲ. ಆದರೆ, ಮಿ॥ ಹಾಲ್‌ಗ್ರೇವ್, ನಿಮ್ಮನ್ನ ನೋಡಿ ನಿಜವಾಗಿಯೂ ನನಗೆ ತುಂಬ ಸಂತೋಷವಾಯ್ತು. ಈ ಕಡೆಯಿಂದ ನೋಡಿದರೆ, ಈ ಮನೆ ಒಂದು ತರಹ ವಿಚಿತ್ರವಾಗಿ, ಒಂಟಿಬಡಕನಾಗಿ ಕಾಣಿಸುತ್ತದೆ; ಅದು ಏಕೋ ಏನೋ ನಾನು ಕಾಣೆ, ನನ್ನ ಮನಸ್ಸಿನ ಅಳುಕು ಹಾಗಿದೆ, ಅದರಲ್ಲಿ ಯಾರೂ ವಾಸವಾಗಿಲ್ಲವೋ ಏನೋ ಎಂದು ನನಗನ್ನಿಸುತ್ತೆ. ಮನೆಯ ಮುಂಭಾಗವೇನೋ ಒಳ್ಳೇ ಗೆಲವಾಗಿದೆ; ಆಯಲಿಸ್ ಹೂವು ಅಲ್ಲಿ ಒಳ್ಳೇಚೆಂದವಾಗಿ ಅರಳುತ್ತಾ ಇವೆ; ಮಿ॥ ಹಾಲ್‌ಗ್ರೇವ್, ನಾನೇನಾದರೂ ಹರೆಯದವನಾಗಿದ್ದರೆ, ನನ್ನ ಮೆಚ್ಚಿನ ಹೆಣ್ಣಿಗೆ ಎದೆಯ ಮೇಲೆ ಸೆಕ್ಕಿಸಿಕೊಳ್ಳಲು ಆ ಹೂಗಳಲ್ಲಿ ಒಂದನ್ನ ತಂದುಕೊಡುತ್ತಿದ್ದೆ, ಅದಕ್ಕಾಗಿ ಹತ್ತಿಹೋಗುವುದರಲ್ಲಿ ನನ್ನ ಕೊರಳು ಮುರಿದಿದ್ದರೂ ಚಿಂತೆಯಿರಲಿಲ್ಲ! ಒಳ್ಳೆಯದು, ಹೋದ ಇರುಳು, ಈ ಹಾಳು ಗಾಳಿಯಿಂದಾಗಿ ನೀವು ಎಚ್ಚರವಾಹೇ ಇದ್ದಿರಬೇಕು, ಅಲ್ಲಾ?"

"ಹೌದು, ಎಚ್ಚರವಾಗೇ ಇರಬೇಕಾಗಿತ್ತು!" ಎಂದು ಮುಗುಳುನಗೆಯೊಂದಿಗೆ ಕಲಾವಿದ ಉತ್ತರಕೊಟ್ಟ: "ನಾನು ದೆವ್ವಗಳಲ್ಲಿ ನಂಬಿಕೆಯುಳ್ಳವನಾಗಿದ್ದರೆ– ನನಗೆ ನಂಬಿಕೆ ಇದೆಯೋ ಇಲ್ಲವೋ ನನಗೇ ಸರಿಯಾಗಿ ಗೊತ್ತಿಲ್ಲ– ಪಿನ್ಚನ್ ವಂಶದ ಹಳೆಯ ತಲೆಗಳೆಲ್ಲಾ ಸೇರಿಕೊಂಡು ಕೆಳಗಣ ಕೋಣೆಗಳಲ್ಲಿ, ಅದರಲ್ಲಿಯೂ ವಿಶೇಷವಾಗಿ ಮಿಸ್ ಹೆಪ್ಸಿಬಾ ಅವರು ವಾಸವಾಗಿರುವ ಮನೆಯ ಭಾಗದಲ್ಲಿ ಗಲಭೆಯೆಬ್ಬಿಸುತ್ತಿದ್ದರು ಎಂದು ತೀರ್ಮಾನ ಮಾಡುತ್ತಿದ್ದೆ. ಆದರೆ, ಅದು ಈಗ ಶಾಂತವಾಗಿದೆ."

ಆಲೂಗಡ್ಡೆಯ ಸಿಪ್ಪೆ, ಭೋಜನ ಪಾತ್ರೆಯಲ್ಲಿ ಬಳಸಿ ಮಿಕ್ಕ ಎಂಜಲುಪಂಜಲು– ಇವನ್ನೆಲ್ಲ ನೆರೆಹೊರೆಯ ಉಳಿತಾಯಬುದ್ಧಿಯ ಗೃಹಿಣಿಯರು ಹಂದಿಗೆ ಹಾಕಲು ತಕ್ಕ ಆಹಾರ ಎಂದು ಒಂದು ಕಡೆ ಹಾಕಿರುತ್ತಿದ್ದರು; ಅವುಗಳನ್ನು ಸಂಗ್ರಹಿಸುವುದಕ್ಕಾಗಿ ಅವನು ತನ್ನ ಬೆಳಗಿನ ಸುತ್ತಾಟಕ್ಕೆಂದು ಹೊರಟ್ಟಿದ್ದ. ವೆನ್ನರ್ ಮಾವನ ಹಂದಿಗೆ ಈ ಉದಾರವಾದ ದಾನ ಪೂರ್ತಿ ಆಹಾರವನ್ನು ಒದಗಿಸಿ, ಅದನ್ನು ತಿಂದೇ ಅದು ಚೆನ್ನಾಗಿ ಬೆಳೆದಿತ್ತು; ಈ ಕಾರಣದಿಂದ, ತಾನು ತನ್ನ ಹೊಲಮನೆಗೆ ಹಿಂದಿರುಗಿ ಹೋಗುವ ಮುನ್ನ ಆ ಕೊಬ್ಬಿದ ಹಂದಿಯಿಂದ ಒಂದು ಔತಣವನ್ನು ಏರ್ಪಡಿಸುವುದಾಗಿಯೂ, ನೆರೆಹೊರೆಯವರೆಲ್ಲಾ ಅದನ್ನು ಕೊಬ್ಬಿಸುವುದರಲ್ಲಿ ಸಹಾಯಮಾಡಿದ್ದರಾದ್ದರಿಂದ ಅದರ ಕೀಲುಗಳ ಹಾಗೂ ಎದೆಮೂಳೆಗಳ ಮಾಂಸವನ್ನು ಭುಂಜಿಸಲು ಅವರೆಲ್ಲರನ್ನೂ ತಾನು ಆಹ್ವಾನಿಸುವುದಾಗಿಯೂ ನಮ್ಮ ತೇಪೆಯಬಟ್ಟೆಯ ತತ್ತ್ವಜ್ಞಾನಿ ಮಾತುಕೊಡುತ್ತಿದ್ದನು. ಕ್ಲಿಫರ್ಡ್ ಕುಟುಂಬದಲ್ಲಿ ಒಬ್ಬನಾಗಿ ಬಂದು ಸೇರಿಕೊಂಡ ಮೇಲೆ ಮಿಸ್ ಹೆಪ್ಸಿಬಾ ಪಿನ್ಚನ್ನಳ ಗೃಹಕೃತ್ಯ ಎಷ್ಟು ಅಪಾರವಾಗಿ ಅಭಿವೃದ್ಧಿಗೊಂಡಿತ್ತೆಂದರೆ, ಔತಣಕೂಟದಲ್ಲಿ ಅವಳ ಪಾಲು ಅಲ್ಪವಾದದ್ದಾಗಿರುತ್ತಿರಲಿಲ್ಲ; ಹೀಗಿದ್ದುದರಿಂದ, ಏಳು ಇಪ್ಪಾರಿನ ಮನೆಯ ಹಿತ್ತಿಲ್ಲ ಬಾಗಿಲ ಮೆಟ್ಟಿಲ ಬಳಿ ಬಂದಾಗ ಸಾಧಾರಣವಾಗಿ ತನಗಾಗಿ ಕಾದಿರುತ್ತಿದ್ದ, ತಿಂಡಿ ತಿನಿಸುಗಳ ಚೂರುಪಾರುಗಳಿಂದ ತುಂಬಿರುತ್ತಿದ್ದ ದೊಡ್ಡ ಮಣ್ಣಿನ ಬಾಣಲಿಯನ್ನು ಕಾಣದಿದ್ದುದಕ್ಕಾಗಿ ವೆನ್ನರ್ ಮಾವನು ಬಹಳ ನಿರಾಶೆಗೊಂಡನು.

"ಮಿಸ್ ಹೆಪ್ಸಿಬಾ ಇಷ್ಟೊಂದು ಮರೆವಿನವಳು ಎಂದು ಹಿಂದೆ ನಾನೆಂದೂ ಕಂಡಿರಲಿಲ್ಲ. ನಿನ್ನೆ ಅವಳು ಒಂದು ಹಬ್ಬದ ಊಟವನ್ನ ಹಾಕಿಯೇ ಇರಬೇಕು– ಆ ಬಗ್ಗೆ ಕೇಳಬೇಕಾದ್ದೇ ಇಲ್ಲ! ಅವಳು ಯಾವಾಗಲೂ ಒಂದು ಹಬ್ಬದೂಟ ಹಾಕಿಯೇ ಹಾಕುತ್ತಾಳೆ, ಈಚೀಚೆಗೆ. ಆದ್ದರಿಂದ ನಾನು ಕೇಳ್ತೀನಿ, ಮದ್ಯದ ಮಡಕೆ ಎಲ್ಲಿ? ಆಲೂಗಡ್ಡೆಯ ಸಿಪ್ಪೆ ಎಲ್ಲಿ? ಅಂತ. ಒಂದು ಸಲ ಬಾಗಿಲು ತಟ್ಟಿ, ಅವಳು ಇನ್ನೂ ಹಾಸಿಗೆ ಬಿಟ್ಟು ಕದಲಿದ್ದಾಳೆಯೋ ಇಲ್ಲವೋ ನೋಡಲೆ? ಬೇಡ, ಬೇಡ! ಅದು ಸರಿಯಾಗಿರುವುದಿಲ್ಲ. ಪುಟ್ಟ ಫೀಬೆ ಏನಾದರೂ ಮನೆಯಲ್ಲಿ ಇದ್ದಿದ್ದರೆ, ಬಾಗಿಲು ತಟ್ಟಿ ನೋಡಲು ಅಡ್ಡಿಯಿರಲಿಲ್ಲ. ಆದರೆ, ಮಿಸ್ ಹೆಪ್ಸಿಬಾ ಕಿಟಕಿಯಿಂದ ಹೊರಕ್ಕೆ ಮುಖಹಾಕಿ, ತಾನು ಗೆಲುವಾಗಿದ್ದರೂ ಕೂಡ, ನನ್ನ ಕಡೆ ಕೆಳಕ್ಕೆ ನೋಡಿ ಹುಬ್ಬು ಗಂಟಿಕ್ಕುವಳು, ರೇಗಿದಂತೆ ಕಾಣುವಳು, ಅದು ಖಂಡಿತ. ಆದ್ದರಿಂದ, ಮಧ್ಯಾಹ್ನವಾದ ಮೇಲೆ ಮತ್ತೆ ಬರೋಣ" ಎಂದು ಆ

ಮೇಲೆ ಕೋಪಿಸಿಕೊಂಡಂತೆ ಗಣಗಣಿಸಿತು.

"ಈ ಮುದಿಗನ್ನೆ ಪಿನ್ಚನ್ನಿಗೆ ಪಿಶಾಚ ಹಿಡಿಯ!" ಎಂದು ರೇಗುವ ಸ್ವಭಾವದ ಗೃಹಿಣಿ ಗೊಣಗಿದಳು: "ಚಿಲ್ಲರೆ ಅಂಗಡಿ ಇಟ್ಟಿರುವ ಹಾಗೆ ನಟಿಸುವುದೇನು, ಮಧ್ಯಾಹ್ನದ ವರೆಗೂ ಮಲಗಿರುವುದು ಎಂದರೇನು! ಇದನ್ನೇ ಏನೋ ಅವಳು ದೊಡ್ಡ ಮನುಷ್ಯರ ಬಿನ್ನಾಣ ಎನ್ನುವುದು, ನನಗೆ ಹಾಗೆಯೆ ತೋರುತ್ತೆ! ಆ ಬಿನ್ನಾಣಗಿತ್ತಿಯನ್ನು ಎಬ್ಬಿಸುತ್ತೇನೆ, ಇಲ್ಲವೋ ಬಾಗಿಲನ್ನು ಒಡೆದು ಕೆಡವುತ್ತೇನೆ!"

ಅದೇ ಮೇರೆಗೆ ಅವಳು ಬಾಗಿಲನ್ನು ಅಲುಗಾಡಿಸಿದಳು. ಅಲ್ಲಿನ ಗಂಟೆಗೆ ತನ್ನದೇ ಆದ ಒಂದು ವಿಧವಾದ ಸೇಡು ತೀರಿಸಿಕೊಳ್ಳುವ ಸ್ವಭಾವವಿತ್ತು; ತನ್ನ ಪ್ರತಿಭಟನೆ ಕೇಳಿಸುವಂತೆ ಅದು ಗಲಾಟೆ ಮಾಡುತ್ತ ಬಾರಿಸತೊಡಗಿತು– ನಿಜವಾಗಿ ಆ ಪ್ರತಿಭಟನೆ ಯಾರಿಗೆ ಕೇಳಿಸಬೇಕೋ ಅವರಿಗೆ ಕೇಳಿಸಲಿಲ್ಲ; ಬೀದಿಯ ಎದುರುಗಡೆ ಸಾಧ್ವಿಯೊಬ್ಬಳಿಗೆ ಕೇಳಿಸಿತು. ಅವಳು ತನ್ನ ಮನೆಯ ಕಿಟಕಿಯ ಬಾಗಿಲನ್ನು ತೆರೆದು, ತಾಳ್ಮೆಗೆಟ್ಟ ಗಿರಾಕಿಯನ್ನು ಕುರಿತು ಹೇಳಿದಳು.

"ಗುಬ್ಬಿನ್ಸ್ ಅಮ್ಮಾ, ನಿಮಗೆ ಅಲ್ಲಿ ಯಾರೂ ಕಾಣಸಿಕ್ಕುವುದಿಲ್ಲ."

"ಆದರೆ, ನಾನು ಯಾರನ್ನಾದರೂ ಕಾಣಲೇ ಬೇಕು, ಕಂಡೇ ಕಾಣುತ್ತೇನೆ" ಎಂದು ಗಂಟೆಯ ಮೇಲೆ ಇನ್ನೊಂದು ಸಲ ತನ್ನ ರೋಷವನ್ನು ತೀರಿಸಿಕೊಂಡಳು: "ಮಿ. ಗುಬ್ಬಿನ್ಸರ ಮುಂಜಾನೆಯ ಫಳಾರಕ್ಕೆ ಒಳ್ಳೇ ಸೊಗಸಾದ ಚಪ್ಪಟೆಮೀನು ಬಾಡಿಸುವುದಕ್ಕೋಸ್ಕರ ಅರ್ಧ ಪೌಂಡು ಹಂದಿಯ ಮಾಂಸ ಬೇಕು ನನಗೆ; ಮುದಿಗನ್ನೇ ಪಿನ್ಚನ್ ದೊಡ್ಡ ಮನುಷ್ಯೆಯೋ ಅಲ್ಲವೋ, ಅದು ಕಟ್ಟಿಕೊಂಡು ನನಗೇನು; ಅಮ್ಮಾವರು ಎದ್ದು, ಅದನ್ನ ನನಗೆ ಕೊಡೋಣಾಗಲಿ!"

ಎದುರುಗಡೆಯ ಮಹಿಳೆ ಉತ್ತರಕೊಟ್ಟಳು: "ಅಮ್ಮಾ ಗುಬ್ಬಿನ್ಸ್, ನಿಜ ಹೇಳ್ತೀನಿ, ಕೇಳಿ. ಅವಳು, ಅವಳ ತಮ್ಮ ಇಬ್ಬರೂ ದಾಯಾದಿ ಜಡ್ಜಿ ಪಿನ್ಚನ್ ಅವರ ಹಳ್ಳಿಗಾಡಿನ ಮನೆಗೆ ಹೋಗಿದಾರಮ್ಮಾ. ಆ ಮನೆಯ ಉತ್ತರದ ಇಪ್ಪಾರು ಇದೆಯಲ್ಲಾ, ಅಲ್ಲಿ ಮಲಗಕೊಳ್ಳುವ ಆ ತರುಣ ಕಲಾವಿದನನ್ನ ಬಿಟ್ಟರೆ ಮನೆಯಲ್ಲಿ ಒಂದು ಪ್ರಾಣಿಯೂ ಇಲ್ಲ. ಮುದುಕಮ್ಮ ಹೆಪ್ಸಿಬಾ, ಕ್ಲಿಫರ್ಡ್, ಇವರಿಬ್ಬರೂ ಹೊರಟುಹೋಗುವುದನ್ನ ನಿನ್ನೆ ನಾನೇ ಕಂಡೆ; ಅವರು ಕೆಸರು ಗುಂಡಿಗಳನ್ನ ಹಾದು ಹೋಗುತ್ತ ಇರಬೇಕಾದರೆ, ಒಳ್ಳೇ ವಿಚಿತ್ರ ಬಾತುಕೋಳಿಯ ಜೋಡಿಯ ಹಾಗೆ ಕಂಡರು! ಅವರು ಹೊರಟುಹೋಗಿದ್ದಾರೆ, ನನ್ನ ಮಾತನ್ನ ನಂಬಿ."

ಶ್ರೀಮತಿ ಗುಬ್ಬಿನ್ಸ್ ಪ್ರಶ್ನಿಸಿದಳು: "ಅದು ಸರಿ, ಜಡ್ಜಿಯ ಮನೆಗೆ ಹೋಗಿದ್ದಾರೆ ಅವರು ಅಂತ ನಿಮಗೆ ಹೇಗೆ ಗೊತ್ತು? ಆತ ಐಶ್ವರ್ಯವಂತ; ಆತನಿಗೂ ಹೆಪ್ಸಿಬಾಗೂ

"ಎಷ್ಟು ಗಂಟೆಯ ಹೊತ್ತಿನಲ್ಲಿ?" ಎಂದು ಹಾಲ್‌ಗ್ರೇವ್ ಪ್ರಶ್ನಿಸಿದ.

ಮುದುಕ ಹೇಳಿದ: "ಓ ಮಧ್ಯಾಹ್ನದ ಹತ್ತಿರ ಹತ್ತಿರ. ಒಳ್ಳೆಯದು, ನನ್ನ ಸುತ್ತಾಟಕ್ಕೆ ನಾನಿನ್ನು ಹೊರಡಬೇಕಲ್ಲ, ಹಾಗೆಯೇ ನನ್ನ ಜೊತೆ ನನ್ನ ಕೈಬಂಡಿಯೂ ಹೊರಡಬೇಕು. ಆದರೆ ಹಗಲೂಟದ ಹೊತ್ತಿಗೆ ಇಲ್ಲಿಗೆ ಮತ್ತೆ ಬಂದುಬಿಡುತ್ತೇನೆ; ಯಾಕೆ ಅಂತೀರೋ, ನಮ್ಮ ಹಂದಿಗೆ ಬೆಳಗಿನ ಫಳಾರ ಎಷ್ಟು ಇಷ್ಟವೋ ಹಗಲೂಟವೋ ಅಷ್ಟೇ ಇಷ್ಟ. ನಮ್ಮ ಹಂದಿಗೆ ಎಂದೇ ಆಗಲಿ ಯಾವ ಊಟದ ಹೊತ್ತೂ, ಬೇಡದ್ದಲ್ಲ, ಯಾವ ಬಗೆಯ ಊಟವೂ ಸೇರದ್ದಲ್ಲ. ಇನ್ನು ನಿಮಗೆ ಸುಪ್ರಭಾತ! ಅದಿರಲಿ, ಮಿ॥ ಹಾಲ್‌ಗ್ರೇವ್, ನಿಮ್ಮ ಹಾಗೆ ನಾನು ಹರೆಯದವನಾಗಿದ್ದರೆ, ಆ ಆಯಲಿಸ್ ಹೂಗಳಲ್ಲಿ ಒಂದನ್ನು ಕಿತ್ತುಕೊಂಡು, ಫೀಬೆ ಹಿಂದಕ್ಕೆ ಬರುವವರೆಗೂ ಅದನ್ನ ನೀರಿನಲ್ಲಿಟ್ಟಿರುತ್ತಿದ್ದೆ."

"ಮಾಲನ ಬಾವಿಯ ನೀರು ಈ ಹೂವಿನ ಗಿಡಗಳಿಗೆ ಬಹಳ ಚೆನ್ನಾಗಿ ಒಗ್ಗುತ್ತದೆ ಎಂದು ಕೇಳಿದ್ದೇನೆ" ಎಂದು, ಛಾಯಾಚಿತ್ರಕಲಾವಿದ ಕಿಟಕಿಯೊಳಕ್ಕೆ ತಲೆಯೆಳೆದುಕೊಳ್ಳುತ್ತಾ ನುಡಿದ.

ಇಲ್ಲಿಗೆ ಸಂಭಾಷಣೆ ನಿಂತಿತು; ವೆನ್ನರ್ ಮಾವ ತನ್ನ ದಾರಿ ಹಿಡಿದು ಹೊರಟ. ಅಲ್ಲಿಂದ ಅರ್ಧ ಗಂಟೆಯ ವರೆಗೆ ಏಳು ಇಪ್ಪಾರಿನ ಮನೆಯ ಶಾಂತಿಯನ್ನು ಯಾವುದೂ ಕಲಕಲಿಲ್ಲ; ಸಾಮಾನು ಸಾಗಿಸುವ ಒಬ್ಬ ಹುಡುಗನನ್ನು ಬಿಟ್ಟರೆ, ನೋಡಬರುವವರೂ ಯಾರೂ ಇರಲಿಲ್ಲ; ಆ ಹುಡುಗ ಮನೆಯ ಮುಂಬಾಗಿಲ ಮೆಟ್ಟಿಲ ಬಳಿ ಹಾದುಹೋದಾಗ, ತನ್ನಲ್ಲಿದ್ದ ಸುದ್ದಿ ಪತ್ರಿಕೆಗಳಲ್ಲಿ ಒಂದನ್ನು ಕೆಳಕ್ಕೆ ಎಸೆದು ಹೋದ; ಏಕೆಂದರೆ, ಹೆಪ್ಸಿಬಾ ಈಚೀಚೆಗೆ ಅದನ್ನು ಕ್ರಮವಾಗಿ ತೆಗೆದುಕೊಳ್ಳುತ್ತಿದ್ದಳು. ಸ್ವಲ್ಪ ಹೊತ್ತಾದ ಮೇಲೆ, ಬಹಳ ವೇಗವಾಗಿ ಒಬ್ಬ ದಪ್ಪನೆಯ ಹೆಂಗಸು ಬಂದಳು; ಬಂದು, ಅಂಗಡಿಯ ಬಾಗಿಲ ಮೆಟ್ಟಿಲುಗಳನ್ನು ಓಡೋಡುತ್ತಾ ಹತ್ತುವಾಗ, ಎಡವಿದಳು. ಆಗ ಅವಳ ಮುಖ ಕೆಂಡಕಾವಿನಿಂದ ಕನಲಿತು; ಅಂದಿನ ಬೆಳಗ್ಗೆ ತಕ್ಕಮಟ್ಟಿಗೆ ಸೆಕೆಯಾಗಿಯೇ ಇದ್ದದ್ದರಿಂದ, ಹೊಗೆಕೊಳವೆಯ ಬಿಸಿ, ಬೇಸಗೆಯ ಧಗೆ, ತನ್ನದೇ ಬೊಜ್ಜು ಮೈಯ ವೇಗದ ಕಾವು– ಇವೆಲ್ಲದರಲ್ಲಿ ಹುರಿದು ಕರಿದು ಬೆಂದುಹೋಗಿದ್ದಾಳೆಯೋ ಎಂಬಂತೆ ಚೊಂಯ್‌ಚೊಂಯ್‌ಗುಟ್ಟಿದಳು, ಕೊತಕೊತಗುಟ್ಟಿದಳು, ಬುಸ ಬುಸಗುಟ್ಟಿದಳು. ಅಂಗಡಿಯ ಬಾಗಿಲನ್ನು ಅವಳು ತೆರೆಯಲು ಪ್ರಯತ್ನಪಟ್ಟಳು; ಅದು ಬಲವಾಗಿ ಹಾಕಿತ್ತು. ಅವಳು ಕೋಪಗೊಂಡು ಅದನ್ನು ಬಲವಾಗಿ ತಳ್ಳಿ ಮತ್ತೊಮ್ಮೆ ತೆರೆಯಲು ಪ್ರಯತ್ನಪಟ್ಟಳು; ಗಂಟೆಯೂ ಪ್ರತಿಯಾಗಿ ಅವಳ

ಮೇಲಿತ್ತು, ಅದರಲ್ಲಿ ಸಂದೇಹವಿಲ್ಲ; ಅಥವಾ, ಒಂದು ಮೊಸಳೆಯನ್ನು ತಿನ್ನಬೇಕೆಂದು ಅವನು ಉದ್ದೇಶಿಸಿದ್ದಿರಬಹುದು. ಅವನ ಹೆಚ್ಚು ಬಿಟುಸಾದ ಆಕ್ರಮಣಗಳಿಗೆ ಪ್ರತ್ಯುತ್ತರವಾಗಿ ಗಂಟೆ ಆಗೊಮ್ಮೆ ಈಗೊಮ್ಮೆ ಸಾಧಾರಣವಾದ ಝಣತ್ಕಾರಮಾಡುತ್ತಿತ್ತು; ಆದರೆ ಆ ಸಣ್ಣ ಹುಡುಗ ಮೆಟ್ಟುಂಗಾಲಿನಲ್ಲಿ ನಿಂತು ಪಟ್ಟ ಯಾವ ಬಾಲಿಶ ಪ್ರಯಾಸವೂ ಅದು ಒಂದೇ ಸಮನೆ ಅರಚಿಕೊಳ್ಳುವ ಹಾಗೆ ಬಾರಿಸುವಂತೆ ಅದನ್ನು ಅಲ್ಲಾಡಿಸಲಾಗಲಿಲ್ಲ. ಬಾಗಿಲ ಹಿಡಿಯನ್ನು ಆತುಕೊಂಡು, ಬಾಗಿಲ ತೆರೆಯ ಒಂದು ಕಂಡಿಯ ಮೂಲಕ ಅವನು ಇಣಿಕಿ ನೋಡಿದಾಗ, ದಿವಾನಖಾನೆಗೆ ಹೋಗುವ ನಡವೆಯ ಒಳಬಾಗಿಲು ಮುಚ್ಚಿಕೊಂಡಿದ್ದಂತೆ ಅವನಿಗೆ ಕಂಡಿತು.

"ಮಿಸ್ ಪಿನ್ಚನ್! ನನಗೊಂದು ಆನೆ ಬೇಕು!" ಎಂದು ಆ ಹುಡುಗ ಕಿಟಕಿಯ ಗಾಜಿನ ಮೇಲೆ ತಟ್ಟುತ್ತಾ ಕಿರಿಚಿಕೊಂಡನು.

ಅನೇಕ ಸಲ ಮತ್ತೆ ಮತ್ತೆ ಕರೆ ಕೊಟ್ಟರೂ ಉತ್ತರ ಬಾರದಿರಲು, ನೆಡ್ ತಾಳ್ಮೆಗೆಡುತ್ತಾ ಹೋದನು; ಅವನ ಭಾವೋದ್ರೇಕದ ಚಿಕ್ಕ ಪಾತ್ರೆ ಬೇಗನೆ ಕುದಿ ಬಂದು, ಅವನು ಒಂದು ಕಲ್ಲನ್ನು ಎತ್ತಿಕೊಂಡನು; ಅದನ್ನು ಕಿಟಕಿಯ ಮೂಲಕ ಎಸೆಯುವುದೇ ಅವನ ತುಂಟತನದ ಗುರಿ; ಅದೇ ಕಾಲದಲ್ಲಿ, ಅಳುತ್ತಳುತ್ತಾ ಏನೇನೋ ಒದರಾಡುತ್ತಿದ್ದನು. ಆಗ, ಇಬ್ಬರು ಆ ದಾರಿಯಲ್ಲಿ ಹೋಗುತ್ತಿದ್ದರು; ಅವರಲ್ಲಿ ಒಬ್ಬನು ಆ ಹುಡುಗನ ತೋಳನ್ನು ಹಿಡಿದುಕೊಂಡನು.

"ಅದೇನಯ್ಯಾ ತೊಂದರೆ, ಮಹಾರಾಯ?" ಎಂದು ಆತ ಪ್ರಶ್ನಿಸಿದನು.

"ಮುದುಕಿ ಹೆಪ್ಸಿಬಾ, ಇಲ್ಲ ಫೀಬೆ, ಇಲ್ಲ ಯಾರಾದರೂ ಸರಿ, ನನಗೆ ಬೇಕು!" ಎಂದು ನೆಡ್ ಅಳುತ್ತಲೇ ಉತ್ತರಕೊಟ್ಟನು: "ಅವರು ಬಾಗಿಲನ್ನೇ ತೆಗೆಯುವುದಿಲ್ಲ: ನನೆಗೆ ನನ್ನ ಆನೆ ಸಿಕ್ಕುವುದಿಲ್ಲ!"

"ಏಯ್, ತುಂಟ ಪೋರಾ, ಸ್ಕೂಲಿಗೆ ಹೋಗು! ಎಂದ ಆ ದಾರಿ ಹೋಕ ಮನುಷ್ಯ. ಮತ್ತೆ ತನ್ನ ಜೊತೆಯವನ ಕಡೆ ತಿರುಗಿ, "ಇದು ಬಹಳ ವಿಚಿತ್ರವಾಗಿದೆ, ಡಿಕ್ಸೀ. ಈ ಪಿನ್ಚನ್ನರೆಲ್ಲಾ ಏನಾದರು! ಕುದುರೆ ಲಾಯದ ಉಸ್ತುವಾರಿ ನೋಡಿಕೊಳ್ಳುವ ಸ್ಮಿತ್ ನನಗೆ ಹೇಳುತ್ತಾನೆ. ಜಡ್ಜಿ ಪಿನ್ಚನ್ ನಿನ್ನೆ ದಿನ ತನ್ನ ಕುದುರೆಯನ್ನು ಸಿದ್ಧಮಾಡಿಸಿ, ಹಗಲೂಟ ಆದಮೇಲೂ ಕಾದು ನಿಂತಿರುವ ಹಾಗೆ ಮಾಡಿದ್ದು, ಇನ್ನೂ ಕುದುರೆಯನ್ನು ಆಚೆಗೆ ತೆಗೆದುಕೊಂಡೇ ಹೋಗಿಲ್ಲವಂತೆ. ಜಡ್ಜಿಯ ಕೂಲಿಯ ಆಳುಗಳ ಪೈಕಿ ಒಬ್ಬ ಅವರ ಬಗೆಗೆ ವಿಚಾರಿಸಿಕೊಂಡು ಬರಲು ಈ ಬೆಳಗ್ಗೆ ಒಳಕ್ಕೆ ಹೋಗಿದ್ದಾನಂತೆ. ಜಡ್ಜಿಗಳು ಎಂಥ ಮನುಷ್ಯರು ಎಂದರೆ,

ಈಚೀಚೆಗೆ ಆಗಾಗ್ಗೆ ಜಗಳ ಇದ್ದೇ ಇತ್ತು; ಆತ ಆಕೆಗೆ ಜೀವನಮಾಡುವುದಕ್ಕೆ ಏನೂ ಕಲ್ಪಿಸಿಕೊಟ್ಟಿರಲಿಲ್ಲವಂತೆ. ಅವಳು ಸೆಂಟು ಅಂಗಡಿ ಇಡುವುದಕ್ಕೆ ಅದೇ ಮುಖ್ಯ ಕಾರಣ."

"ಅದನ್ನ ನಾನೂ ಸಾಕಷ್ಟು ಚೆನ್ನಾಗಿ ಬಲ್ಲೆ," ಎಂದಳು ನೆರೆಯಾಕೆ. "ಆದರೆ ಅವರು ಹೊರಟುಹೋದರು– ಅದು ಒಂದಂತೂ ಖಂಡಿತ. ಅಲ್ಲಾ ಆ ರೇಗುವ ಪ್ರಕೃತಿಯ ಮುದಿಗನ್ನೆಯನ್ನೂ, ಆ ಭಯಂಕರ ಕ್ಲಿಫರ್ಡನನ್ನೂ ರಕ್ತಸಂಬಂಧಿಯಲ್ಲದೆ ಬೇರೆ ಯಾರು ತಾನೆ, ಅದೂ ಕೂಡ ನಿರ್ವಾಹವಿಲ್ಲದ ಹೊರತು, ಹತ್ತಿರಕ್ಕೆ ಕರೆದುಕೊಳ್ಳುತ್ತಾರೆ? ಅದೇ ಒಳಗಿನ ಗುಟ್ಟು, ನೀವು ನಂಬಬಹುದು."

ಶ್ರೀಮತಿ ಗುಬ್ಬಿನ್ಸ್ ಹೊರಟುಹೋದಳು; ಮನೆಯಲ್ಲಿಲ್ಲದ ಹೆಪ್ಸಿಬಾಳ ಮೇಲೆ ಅವಳು ತಳೆದ ಕುದಿಯುವ ಕೋಪದಿಂದ ಇನ್ನೂ ತುಂಬಿ ತುಳುಕುತ್ತಿದ್ದಳು. ಇನ್ನು ಅರ್ಧಗಂಟೆಯ ವರೆಗೆ, ಅಥವಾ ಇನ್ನೂ ಸ್ವಲ್ಪ ಹೆಚ್ಚು ಕಾಲ, ಮನೆಯ ಒಳಗೆ ಹೇಗೋ ಹೊರಗೂ ಅಷ್ಟೇ ಶಾಂತವಾಗಿತ್ತು. ಆದರೆ, ಎಲ್ಮ್ ವೃಕ್ಷ ಮಾತ್ರ, ಎಲ್ಲೋ ಕಂಡೂ ಕಾಣದ ಹಾಗೆ ಬೀಸುತ್ತಿದ್ದ ಮೆಲುಗಾಳಿಗೆ ಮಾರುಲಿಗೊಡುವಂತೆ ಉಲ್ಲಾಸಕರವಾದ, ಗೆಲವಿನ, ಉತ್ಸಾಹಪೂರಿತವಾದ ನಿಟ್ಟುಸಿರಿನ ದನಿಮಾಡುತ್ತಿತ್ತು. ಕೀಟಗಳ ಹಿಂಡೊಂದು ಅದರ ಜೋಲುಗೊಂಬೆಗಳ ನೆರಳಾಸರೆಯಲ್ಲಿ 'ಬಸ್' ಎಂದು ಶಬ್ದ ಮಾಡುತ್ತಾ, ಬಿಸಿಲಿನೆಡೆಗೆ ಚಿಮ್ಮಿದಾಗಲೆಲ್ಲಾ ಬೆಳಕಿನ ಹನಿಗಳಾಗಿ ಹೊಳೆಯುತ್ತಿದ್ದುವು; ಮರದ ಯಾವುದೋ ಕಾಣದ ಮೂಲೆಯಲ್ಲಿ ಒಂದು ಮಿಡಿತೆ ಒಂದೆರಡು ಸಲ ಹಾಡಿತು; ಮಾಸಲು ಹೊಂಬಣ್ಣದ ಗರಿಯ ಪುಟ್ಟ ಒಂಟಿ ಹಕ್ಕಿಯೊಂದು ಬಂದು, ಆಯಲಿಸ್ ಪುಷ್ಪಗುಚ್ಛದ ಬಳಿ ಹಾರಾಡಿತು.

ಕಟ್ಟ ಕಡೆಗೆ, ನಮ್ಮ ಪರಿಚಯದ ಪೋರ ನೆಡ್ ಹಿಗ್ಗಿನ್ಸ್ ತನ್ನ ಶಾಲೆಗೆ ಹೋಗುತ್ತಾ ದಾರಿಯಲ್ಲಿ ಬೀದಿಯುದ್ದಕ್ಕೂ ಕಾಲೆಳೆದುಕೊಂಡು ಹೋಗುತ್ತಿದ್ದ. ಈಚೆಗೆ ಹದಿನೈದು ದಿನಗಳಲ್ಲಿ ಮೊದಲ ಸಲ ಅವನ ಕೈಗೆ ಒಂದು 'ಸೆಂಟು' ಸಿಕ್ಕಿತ್ತು; ಏಳು ಇಪ್ಪಾರಿನ ಮನೆಯ ಅಂಗಡಿ ಬಾಗಿಲ ಮುಂದೆ ಬಂದಾಗ ಅದನ್ನು ತಟಹಾಯ್ದು ಹೋಗಲು ಅವನಿಗೆ ಏನು ಮಾಡಿದರೂ ಸಾಧ್ಯವಾಗಲಿಲ್ಲ. ಆದರೆ ಅದು ಮಾತ್ರ ತೆರೆಯದು. ಆದಾಗ್ಯೂ, ಮರಳಿ ಮರಳಿ, ಇನ್ನೂ ಆರೇಳು ಸಲ ಮರಳಿ, ತನಗೆ ಮುಖ್ಯವಾದ ಯಾವುದೋ ಒಂದು ವಸ್ತುವಿನ ಮೇಲೆ ಮನಸ್ಸು ನಟ್ಟ ಮಗುವಿನ ಬಿಡದ ಛಲದಿಂದ, ಅಂಗಡಿಯ ಒಳಕ್ಕೆ ಹೋಗಲು ಮತ್ತೆ ಮತ್ತೆ ಪ್ರಯತ್ನಿಸುತ್ತಲೇ ಇದ್ದನು. ಅವನ ಮನಸ್ಸೆಲ್ಲಾ ಒಂದು ಆನೆಯ

ರಚಿಸುವ ಮಾನ ಜೀವನಪ್ರವಾಹವನ್ನು ಆತ ನೋಡಿದಾಗ ಅದು ಅವನಿಗೆ ಒಂದು ವಿಚಿತ್ರವಾದ ಭೀಕರಾಕೃತಿಯ ಸ್ವರೂಪದರ್ಶನ ಮಾಡಿಸಿ ಅವನ ಮನಸ್ಸಿನ ಮೇಲೆ ಪರಿಣಾಮ ಬೀರುವುದು.

ಮಾಂಸದ ವ್ಯಾಪಾರಿ ತಾನು ತಂದಿದ್ದ ಕುರಿಮರಿಯ ಮೇದೋಜೀರ ಕಾಂಗದಲ್ಲಿ (ಅಥವಾ ಅದು ಬೇರೆ ಯಾವ ರುಚಿತಿಂಡಿಯಾಗಿದ್ದೂ, ಅದರಲ್ಲಿ) ಅತ್ಯಂತ ಅಭಿಮಾನಪೂರ್ವಕವಾದ ಆಸಕ್ತಿ ಹೊಂದಿದ್ದುದರಿಂದ, ಅವನು ಏಳು ಇಪ್ಪಾರಿನ ಮನೆಯ ಪ್ರವೇಶಸಾಧ್ಯವಾಗಿದ್ದ ಪ್ರತಿಯೊಂದು ಬಾಗಿಲನ್ನೂ ತೆರೆಯಿಸಲು ಪ್ರಯತ್ನಿಸಿ ನೋಡಿದನು; ಕಡೆಯಲ್ಲಿ, ತನಗೆ ಸಾಧಾರಣವಾಗಿ ಪ್ರವೇಶ ದೊರಕುತ್ತಿದ್ದ ಅಂಗಡಿಯ ಹತ್ತಿರಕ್ಕೆ ಮತ್ತೆ ಬಂದನು.

ಬಂದು, ತನ್ನಲ್ಲಿ ತಾನು ಹೇಳಿಕೊಂಡನು: "ಇದೊಳ್ಳೆ ಸೊಗಸಾದ ಪದಾರ್ಥ, ಆ ಮುದುಕಿ ಇದನ್ನು ಕಂಡ ಕೂಡಲೇ ಕುಣಿದು ನೆಗೆದಾಳು. ಅವಳು ಹೊರಟು ಹೋಗಿರಲಾರಳು: ನಾನೂವೆ ಈ ಹದಿನೈದು ವರ್ಷಕಾಲ ಪಿನ್ಚನ್ ಬೀದಿಯಲ್ಲಿ ನನ್ನ ಬಂಡಿ ಹೊಡಿದುಕೊಂಡು ತಿರುಗಾಡಿದ್ದೇನೆ; ಅವಳು ಎಂದೂ ಮನೆಬಿಟ್ಟು ಆಚೆ ಹೋದದ್ದನ್ನೇ ಕಾಣೆ; ಅಷ್ಟೇ ಅಲ್ಲ, ಅನೇಕ ವೇಳೆ ಯಾರಾದರೂ ಬಂದು ದಿನವೆಲ್ಲಾ ಬಾಗಿಲು ತಟ್ಟುತ್ತಿದ್ದರೂ ಅವಳು ಬಾಗಿಲು ತೆರೆಯಲು ಬರುತ್ತಿರಲಿಲ್ಲ, ಮಹಾರಾಯಿತಿ. ಆದರೆ, ಅದು ತನ್ನ ಒಬ್ಬಳ ಹೊಟ್ಟೆಯಪಾಡನ್ನು ಮಾತ್ರ ನೋಡಿಕೊಳ್ಳಬೇಕಾಗಿದ್ದಾಗ."

ಸ್ವಲ್ಪ ಹೊತ್ತಿನ ಹಿಂದೆ, ಗಜಭಕ್ಷಣಾತುರನಾಗಿದ್ದ ಬಾಲಕನು ಯಾವ ಬಾಗಿಲ ತೆರೆಯ ಕಂಡಿಯ ಮೂಲಕ ಇಣಿಕಿನೋಡಿದ್ದನೋ ಅದೇ ಕಂಡಿಯ ಮೂಲಕ ಇಣಿಕಿ ನೋಡಿದಾಗ, ಒಳಬಾಗಿಲೇನೋ ಮಾಂಸವ್ಯಾಪಾರಿಗೆ ಕಂಡಿತು; ಆದರೆ, ಹುಡುಗನಿಗೆ ಕಂಡಿದ್ದಂತೆ ಅದು ಮುಚ್ಚಿರದೆ, ಅರೆತೆರೆದಿತ್ತು, ಅಥವಾ ಬಹುಮಟ್ಟಿಗೆ ಪೂರ್ತಿಯಾಗಿಯೇ ತೆರೆದಿತ್ತು. ಅದು ಹೇಗೆ ತೆರೆದುಕೊಂಡಿತ್ತೋ ಏನೋ, ತೆರೆದಿದ್ದುದಂತೂ ನಿಜ. ನಡವೆಯ ದಾರಿಯ ಮೂಲಕ ಮೊದಲು ದಿವಾನಖಾನೆಯ ಕತ್ತಲಿಡಿದ ಭಾಗದ ನೋಟವೂ, ಅದರಾಚೆಗೆ ಸ್ವಲ್ಪ ಬೆಳಕಾಗಿದ್ದ, ಆದರೆ ಇನ್ನೂ ಅಸ್ಪಷ್ಟವಾಗಿಯೇ ಇದ್ದ ಒಳಭಾಗವೂ ಕಾಣಬರುತ್ತಿದ್ದುವು. ಜೊತೆಗೆ, ಒಂದು ಭಾರಿ ಓಕ್‌ಮರದ ಕುರ್ಚಿಯಲ್ಲಿ ಒಬ್ಬ ಮನುಷ್ಯನು ಕುಳಿತಿದ್ದುದು ಕಾಣಬರುತ್ತಿರುವುದಾಗಿ ಮಾಂಸವ್ಯಾಪಾರಿಗೆ ಕಂಡಿತು; ಕುರ್ಚಿಯ ಬೆನ್ನು ಮರೆಯಾಗಿದ್ದುದರಿಂದ ಆತನ ಉಳಿದ ಆಕಾರ ಕಾಣಬರುತ್ತಿರಲಿಲ್ಲವಾದರೂ, ಕರಿಯ ದಗಲೆ ಷರಾಯಿಗಳನ್ನು ಧರಿಸಿದ್ದ ಅವನ ಮಜಬೂತಾದ ಕಾಲುಗಳನ್ನು

ಎಂದೂ ತಮ್ಮ ಅಭ್ಯಾಸ ಬಿಟ್ಟು ನಡೆಯುವುದಿಲ್ಲವಂತೆ, ರಾತ್ರಿಯ ಹೊತ್ತು ಮನೆ ಬಿಟ್ಟು ಹೊರಗಡೆ ಹೋಗುವುದಿಲ್ಲವಂತೆ, ಹೀಗಂತ ಹೀಳ್ತಾರೆ ಅವರು" ಎಂದು ಸೇರಿಸಿ ಹೇಳಿದನು.

ಅದಕ್ಕೆ ಡಿಕ್ಸಿ ಎಂಬಾತ ಹೇಳಿದ, "ಅಯ್ಯೋ ಬಿಡಯ್ಯಾ' ಅವರು ಸುರಕ್ಷಿತವಾಗಿ ಹಿಂದಿರುಗುತ್ತಾರೆ! ಇನ್ನು ಆ ಮುದಿಗನ್ನೆ ಪಿನ್ಚನ್ನಳ ವಿಚಾರ, ನಾನು ಏನು ಹೇಳಿದೆ ಎನ್ನು, ಅವಳು ಸಾಲಮಾಡಿಬಿಟ್ಟಿದ್ದಾಳೆ, ಸಾಲಗಾರರಿಂದ ತಪ್ಪಿಸಿಕೊಳ್ಳಲು ಹೊರಟುಹೋಗಿದ್ದಾಳೆ. ನಿನಗೆ ಜ್ಞಾಪಕವಿದೆ ತಾನೆ, ಅವಳು ಅಂಗಡಿ ಇಟ್ಟ ಮೊದಲ ಬೆಳಗ್ಗೆಯೆ ನಾನು ಮುಂದಾಗಿ ಹೇಳಿದೆ, ಅವಳ ಸೈತಾನಿ ಸಿಡುಕುಮೋರೆ ಗಿರಾಕಿಗಳನ್ನ ಬೆದರಿಸಿ ಓಡಿಸಿಬಿಡುತ್ತೆ ಅಂತ. ಅವರಿಗೆ ಸಹಿಸುವುದಕ್ಕಾಗಲಿಲ್ಲ!"

"ಅವಳು ಅಂಗಡಿಯನ್ನ ಸರಿಯಾಗಿ ನಡಸಿಕೊಂಡು ಹೋಗುತ್ತಾಳೆ ಅಂತ ನನಗೂ ಎಂದೂ ಅನ್ನಿಸಲಿಲ್ಲ. ಈ ಹೆಣ್ಣು ಪಡೆ ಸೆಂಟು ಅಂಗಡಿ ಇಡುವ ಕಸುಬನ್ನು ಅತಿ ಮಾಡಿಬಿಟ್ಟಿದಾರೆ. ನನ್ನ ಹೆಂಡತಿಯೂ ಒಂದು ಅಂಗಡಿ ಇಟ್ಟು ನೋಡಿದಳು, ಬಂಡವಾಳದ ಮೇಲೆ ಐದು 'ಡಾಲರ್' ನಷ್ಟ ಮಾಡಿಕೊಂಡಳು!" ಎಂದು ಅವನ ಸ್ನೇಹಿತ ಹೇಳಿದ.

"ಕೆಲಸಕ್ಕೆ ಬಾರದ ವ್ಯಾಪಾರ! ಕೆಲಸಕ್ಕೆ ಬಾರದ ವ್ಯಾಪಾರ!" ಎಂದು ತಲೆಯಲ್ಲಾಡಿಸುತ್ತಾ ಹೇಳಿದ ಡಿಕ್ಸಿ.

ಪ್ರಾತಃಕಾಲವೆಲ್ಲ, ಈ ನಿಶ್ಯಬ್ದವಾದ, ದುರ್ಭೇದ್ಯವಾದ ಭವನದೊಂದಿಗೆ ಸಂಪರ್ಕಹೊಂದಲು ಬೇರೆಬೇರೆ ಇತರ ಪ್ರಯತ್ನಗಳು ನಡೆದುವು. ಬಿಯರ್ ಮದ್ಯ ಸರಬರಾಯಿ ಮಾಡುವವನು ಸೊಗಸಾಗಿ ಬಣ್ಣ ಬಳಿದಿದ್ದ ತನ್ನ ಸಾಮಾನುಬಂಡಿಯಲ್ಲಿ ಬಂದಿದ್ದನು; ಅವನು ಎರಡು 'ಡಜನ್' ಮದ್ಯ ತುಂಬಿದ್ದ ಶೀಸೆಗಳನ್ನು ಕೊಟ್ಟು, ಅವುಗಳ ಬದಲು ಖಾಲಿ ಶೀಸೆಗಳನ್ನು ಪಡೆಯಬೇಕಾಗಿತ್ತು. ಹೆಪ್ಸಿಬಾ ತನ್ನ ಚಿಲ್ಲರೆ ಮಾರಾಟಕ್ಕಾಗಿ ಬೇಕಾದಷ್ಟು ಪಟಾಕಿ ಬೇಕೆಂದು ರೊಟ್ಟಿ ವ್ಯಾಪಾರಿಯ ಹತ್ತಿರ ಬೇಡಿಕೆ ಸಲ್ಲಿಸಿದ್ದಳು; ಅವನು ಬಂದಿದ್ದ. ಬಂದ ಇನ್ನೊಬ್ಬನೆಂದರೆ, ಮಾಂಸವ್ಯಾಪಾರಿ; ಕ್ಲಿಫರ್ಡನಿಗಾಗಿ ಅವಳು ಆಸೆಯಿಂದ ಅದನ್ನು ತೆಗೆದುಕೊಳ್ಳಬಹುದೆಂದು ಅವನು ಒಂದು ಸವಿತಿನಿಸನ್ನು ತಂದಿದ್ದ. ಈ ಹೊರಬದುಕಿನ ನಡೆವಳಿಕೆಯನ್ನು ನೋಡಿದ ಯಾವನೇ ಆಗಲಿ ಮನೆಯೊಳಗೆ ಅಡಗಿದ್ದ ಭೀಕರ ರಹಸ್ಯವನ್ನು ಬಲ್ಲವನಾಗಿದ್ದರೆ, ಮೃತಕಳೇಬರವನ್ನು ಒಳಕೊಂಡ ಕರಾಳಮಡುವಿನ ಮೇಲ್ಗಡೆ ಸರಿಯಾಗಿ ಗಿರ್ರನೆ ಸುತ್ತು ತಿರುಗುವ ಹುಲ್ಲು, ಕಸಕಡ್ಡಿ– ಇವುಗಳಿಂದಾದ ನೀರಿನ ಸುಳಿಯಂತಹ ಈ ಸಣ್ಣದೊಂದು ಸುಳಿಯನ್ನು

ಕಮಾನು ಕಿಟಕಿಯ ಕೆಳಗೆ ತನ್ನ ಕೋತಿಯ ಹಾಗೂ ಸೂತ್ರದ ಬೊಂಬೆಗಳ ಆಟ ತೋರಿಸುತ್ತ, ತನ್ನ 'ಹರ್ಡಿಗರ್ಡಿ' ತಂತಿವಾದ್ಯವನ್ನು ಬಾರಿಸಿದ್ದನು. ಫೀಬೆಯ ಸೊಗಸಾದ ಮುಖ– ಮತ್ತು ಅವಳು ಅವನ ಬಳಿಗೆ ಎಸೆದಿದ್ದ ಧಾರಾಳವಾದ ಬಹುಮಾನ– ಅವು ಇನ್ನೂ ಅವನ ನೆನಪಿನಲ್ಲಿ ನೆಲಸಿದ್ದುವು. ಅವನ ಅಲೆದಾಟದ ಬದುಕಿನಲ್ಲಿ ಅಕಸ್ಮಾತ್ ಸಂಭವಿಸಿದ ಈ ಅಲ್ಪ ಘಟನೆ ನಡೆದಿದ್ದ ಸ್ಥಳವನ್ನು ಅವನು ಗುರುತಿಸುತ್ತಿದ್ದ ಹಾಗೆಯೆ, ಅವನ ಭಾವ ಸೂಚಕ ಮುಖಮುದ್ರೆ ಬೆಳಗಿತು. ಅವನು ಉಪೇಕ್ಷೆಗೊಳಗಾಗಿದ್ದ ಅಂಗಳವನ್ನು ಪ್ರವೇಶಿಸಿದನು (ಈಗ ಅಲ್ಲಿ 'ಹಾಗ್ ವೀಡ್' ಮತ್ತು 'ಬರ್‌ಡಾಕ್' ಕಳೆಗಿಡಗಳು ಎಂದಿಗಿಂದ ಹುಚ್ಚುಬೆಳೆ ಬೆಳೆದಿದ್ದುವು) ಮುಖ್ಯದ್ವಾರದ ಮೆಟ್ಟಲ ಬಳಿ ನಿಂತು, ಪ್ರದರ್ಶನದ ಪೆಟ್ಟಿಗೆ ತೆರೆದು, ವಾದ್ಯವನ್ನು ಬಾರಿಸತೊಡಗಿದನು. ಸ್ವಯಂಚಾಲಿತ ಸಮುದಾಯದ ಪ್ರತಿ ವ್ಯಕ್ತಿಯೂ– ಹೆಣ್ಣು ಗಂಡು ಎಲ್ಲ– ತನ್ನ ತನ್ನ ಉದ್ಯೋಗಕ್ಕೆ ಉಚಿತವಾದ ರೀತಿಯಲ್ಲಿ ಕೆಲಸಮಾಡತೊಡಗಿತು: ಕೋತಿ ತನ್ನ ಮೇಲ್ನಾಡುಮಾದರಿಯ ಕುಲಾವಿಯನ್ನು ತಲೆಯ ಮೇಲಿಂದ ತೆಗೆದು, ಕಾಲೆಳೆದುಕೊಂಡು, ಸುತ್ತ ಮುತ್ತ ನಿಂತಿದ್ದವರಿಗೆ ಅತ್ಯಂತ ಗೌರವದಿಂದ ಬಗ್ಗಿ ನಮಸ್ಕರಿಸಿತು; ಹಾಗೆ ಮಾಡುವಾಗ, ಅಲ್ಲಿ ಇಲ್ಲಿ ಬಿದ್ದ 'ಸೆಂಟನ್ನು' ಆರಿಸಿಕೊಳ್ಳಲು ಚುರುಕಾದ ಕಣ್ಣನ್ನು ಇಟ್ಟೇ ಇತ್ತು. ಪರದೇಶದ ತರುಣ ತಾನೇ, ತನ್ನ ಯಂತ್ರದ ಹಿಡಿಯನ್ನು ತಿರುಗಿಸುತ್ತಾ, ಕಮಾನುಕಿಟಕಿಯ ಕಡೆಗೆ ಮೇಲ್ನೋಟವನ್ನು ಬೀರಿದನು; ತನ್ನ ಸಂಗೀತವನ್ನು ಹೆಚ್ಚು ಗೆಲವಾಗಿ, ಹೆಚ್ಚು ಮಧುರವಾಗಿ ಮಾಡುವ ವ್ಯಕ್ತಿ ಅಲ್ಲಿ ಕಾಣಿಸಿಕೊಳ್ಳುವುದೆಂದು ಅವನ ನಿರೀಕ್ಷೆ. ಮಕ್ಕಳ ನೆರವಿ ಹತ್ತಿರದಲ್ಲಿಯೆ ನಿಂತಿದ್ದಿತು– ಕೆಲವರು ಪಕ್ಕದ ನಡೆದಾರಿಯಲ್ಲಿ, ಕೆಲವರು ಅಂಗಳದೊಳಗೆ; ಇಬ್ಬರು ಮೂವರು ಬಾಗಿಲ ಮೆಟ್ಟಲುಗಳ ಮೇಲೆಯೇ ಝೂಂಡಾಹಾಕಿಬಿಟ್ಟಿದ್ದರು; ಒಬ್ಬನಂತೂ ಹೊಸಿಲ ಮೇಲೆಯೆ ಕುಳಿತುಬಿಟ್ಟಿದ್ದ. ಈ ನಡುವೆ, ದೊಡ್ಡ ಮುದಿ ಪಿನ್ಚನ್ ಎಲ್ಮ್ ಮರದಲ್ಲಿ ಆ ಮಿಡಿತೆ ಹಾಡುತ್ತಲೇ ಇದ್ದಿತು.

"ಮನೆಯಲ್ಲಿ ಯಾರೂ ಇದ್ದ ಶಬ್ದವೇ ಕೇಳಿಸುವುದಿಲ್ಲ. ಮಂಗನಿಗೆ ಆರಿಸಿಕೊಳ್ಳಲು ಇಲ್ಲಿ ಏನೂ ಸಿಕ್ಕುವುದಿಲ್ಲ" ಎಂದು ಅಲ್ಲಿದ್ದ ಮಕ್ಕಳ ಪೈಕಿ ಒಬ್ಬ ಹುಡುಗ ಇನ್ನೊಬ್ಬನಿಗೆ ಹೇಳಿದ.

ಹೊಸಿಲಮೇಲಿದ್ದ ಹುಡುಗ, "ಮನೆಯಲ್ಲಿ ಯಾರೋ ಇದ್ದೇ ಇದಾರೆ, ನನಗೆ ಹೆಜ್ಜೆಯ ಶಬ್ದ ಕೇಳಿಸಿತು" ಎಂದು ಖಡಾಖಂಡಿತವಾಗಿ ಹೇಳಿದ.

ತರುಣ ಇಟ್ಯಾಲಿಯನ್ನನ ಕಡೆಗಣ್ಣ ನೋಟ ಮಾತ್ರ ಇನ್ನೂ ಮೇಲ್ಗಡೆಗೆ

ತಾನು ತಕ್ಕಮಟ್ಟಿಗೆ ಸ್ಪಷ್ಟವಾಗಿಯೇ ಕಾಣಬಹುದಾಗಿದೆಯೆಂದು ಮಾಂಸ ವ್ಯಾಪಾರಿಗೆ ತೋರಿತು. ಗಮನವನ್ನು ಸೆಳೆಯಲು ಆಯಾಸಗೊಳ್ಳದೆ ಮಾಂಸ ವ್ಯಾಪಾರಿ ಪಟ್ಟ ಪ್ರಯತ್ನಗಳಿಗೆ ಉತ್ತರವಾಗಿ ಮನೆಯಲ್ಲಿದ್ದ ಆ ಮನುಷ್ಯ ತೋರಿದ ನಿರ್ಲಕ್ಷ್ಯವಾದ ಶಾಂತತೆಯನ್ನು ಕಂಡು, ಈ ಮಾಂಸದ ಮನುಷ್ಯನಿಗೆ ರೇಗಿತು; ಅವನು ಹಿಂದಕ್ಕೆ ಹೊರಟುಹೋಗಲು ನಿಶ್ಚಯಿಸಿದನು.

"ಅಲ್ಲಾ, ನಾನು ಎಷ್ಟೆಲ್ಲಾ ಅನಾವಶ್ಯಕವಾದ ತೊಂದರೆ ತೆಗೆದುಕೊಳ್ಳುತ್ತಿರುವಾಗ, ಆ ಮುದಿಗನ್ನೆ ಪಿನ್ಚನ್ನಳ ಸೊಕ್ಕಿದ ಸಹೋದರ ಅಲ್ಲಿ ಕಾಲುಚಾಚಿಕೊಂಡು ಕುಳಿತಿದ್ದಾನೆ. ಹಂದಿಯಾಗಿದ್ದು ಹೀಗೆ ನಡೆದುಕೊಂಡಿದ್ದರೆ ಅದನ್ನ ಕೊಲಿನಿಂದ ಬಾರಿಸಿಬಿಡುತ್ತಿದ್ದೆ! ಇಂಥ ಜನರೊಂದಿಗೆ ವ್ಯಾಪಾರಮಾಡುವುದು ನಮ್ಮ ಕಸುಬಿಗೇ ಅವಮಾನ ಅನ್ನುತ್ತೀನೆ ನಾನು! ಇಲ್ಲಿಂದ ಮುಂದೆ ಅವರಿಗೇನಾದರೂ ಒಂದು 'ಸಾಸಿಜ್' (ಮಾಂಸಭಕ್ಷ್ಯ) ಅಥವಾ ಒಂದು ಔನ್ಸ್ 'ಲಿವರ್' (ಯಕೃತ್ತು) ಬೇಕಾಗಿದ್ದರೆ, ಅದಕ್ಕಾಗಿ ಅವರು ನನ್ನ ಗಾಡಿಯ ಹಿಂದೆ ಓಡಿಬರಬೇಕು!" ಎಂದು ಅವನು ಆಲೋಚಿಸಿದನು.

ಅವನು ಕೈಲಿ ಹಿಡಿದ ಮಾಂಸದ ರುಚಿತಿಂಡಿಯನ್ನು ಮತ್ತೆ ಕೋಪದಿಂದ ಬಂಡಿಯೊಳಕ್ಕೆ ಎಸೆದು, ಕೋಪಾವೇಶದಲ್ಲಿ ಬಂಡಿಯನ್ನು ಮುಂದಕ್ಕೆ ಹೊಡೆದುಕೊಂಡು ಹೋದನು.

ಅವನು ಹೋಗಿ ಬಹಳ ಹೊತ್ತೇನಾಗಿರಲಿಲ್ಲ, ಒಂದು ಸಂಗೀತದ ಶಬ್ದ ಬೀದಿಯ ಮೂಲೆತಿರುವಿನ ಬಳಿ ತಿರುಗಿಕೊಂಡು ಈ ಕಡೆಯೇ ಬರುತ್ತಿತ್ತು; ಅದು ಹಲವು ಸಲ ನಡುನಡುವೆ ನಿಂತು ನಿಂತು, ಹತ್ತಿರ ಬಂದಾಗ ತ್ವರಿತಗತಿಯ ರಾಗದಲ್ಲಿ ರಭಸದಿಂದ ಕೇಳಿಬರುತ್ತಿತ್ತು. ಆ ಸಂಗೀತಧ್ವನಿಗೆ ಅನುಗುಣವಾಗಿ ಮುಂದೆ ಸಾಗುತ್ತಲೋ ಇಲ್ಲವೆ ನಿಲ್ಲುತ್ತಲೋ ಇದ್ದ ಮಕ್ಕಳ ನೆರವಿಯೊಂದು ಕಂಡುಬಂದಿತು; ಸಂಗೀತದ ಶಬ್ದ ಗುಂಪಿನ ಮಧ್ಯಭಾಗದಿಂದ ಹೊರಡುವಂತೆ ತೋರುತ್ತಿತ್ತು; ಹೀಗಾಗಿ ಸಂಗೀತದ ನಾದಧಾರೆಯ ಎಳೆಗಳಿಂದ ಅವರೆಲ್ಲ ಒಟ್ಟಿಗೆ ಸಡಿಲವಾಗಿ ಕಟ್ಟುವಡೆದು, ಅದಕ್ಕೆ ಸೆರೆಯಾಗಿ ಮುಂದೆ ಸಾಗುತ್ತಿದ್ದ ಹಾಗಿತ್ತು; ಬೇಗಬೇಗ ಆಗೊಮ್ಮೆ ಈಗೊಮ್ಮೆ ಮನೆ ಬಾಗಿಲಿಂದಲೋ ಹೊರಬಾಗಿಲಿಂದಲೋ ಚಿಗಿಯುತ್ತ ಹೊರಬಂದು, ಹಲ್ಲುಹೆಣಿಗೆ ಟೋಪಿಯನ್ನೂ ದೂಳುಪಾವುಡವನ್ನೂ ಕಟ್ಟಿಕೊಂಡಿದ್ದ ಚಿಕ್ಕ ಹುಡುಗ ಗುಂಪಿಗೆ ಸೇರಿಕೊಳ್ಳುತ್ತಲೇ ಇದ್ದ. ಪಿನ್ಚನ್ ಎಲ್ಮ್ ಮರದ ನೆರಳಿಗೆ ಆ ಗುಂಪು ಬಂದಾಗ, ಗುಂಪಿನ ಮಧ್ಯೆ ಇದ್ದವನು ಇಟಲಿಯ ಹುಡುಗ ಎಂಬುದು ನಿಶ್ಚಿತವಾಯಿತು; ಅವನು ಹಿಂದೊಮ್ಮೆ

ಮುಂದಕ್ಕೆ ಹೋಗಬಾರದೆ ನೀನು?"

"ಅಯ್ಯೋ ಬೆಪ್ಪ, ಅದನ್ನ ಅವನಿಗೆ ನೀನು ಯಾಕೆ ಹೇಳುತ್ತೀ?" ಎಂದು ಒಬ್ಬ ಚದುರನಾದ ಪುಟ್ಟ 'ಯಾಂಕಿ'* ಪಿಸುಗುಟ್ಟಿದನು; ಅವನಿಗೆ ಸಂಗೀತದ ಮೇಲೇನೂ ಅಷ್ಟು ಅಭಿಮಾನವಿರಲಿಲ್ಲ, ಆದರೆ ಅಷ್ಟು ಅಗ್ಗದ ದರದಲ್ಲಿ ದೊರೆಯುತ್ತಿದ್ದ ಕಾರಣ ಅದು ಅವನಿಗೆ ಬೇಕೆನಿಸಿತ್ತು. "ಅವನಿಗೆ ಇಷ್ಟ ಬಂದಷ್ಟು ಹೊತ್ತು ಅವನು ಬಾರಿಸಿಕೊಳ್ಳಲಿ! ಅವನಿಗೆ ಹಣ ಕೊಡುವವರು ಯಾರೂ ಇಲ್ಲದೆ ಹೋದರೆ, ಅದರ ವಿಚಾರ ಅವನಿಗೆ ಸೇರಿದ್ದು!"

ಆದರೂ ಕೂಡ, ಆ ಇಟ್ಯಾಲಿಯನ್ ಹುಡುಗ ಇನ್ನೂ ಒಂದು ಸಲ ತನಗೆ ಬರುವ ಹಾಡುಗಳನ್ನೆಲ್ಲ ಒಂದು ಸುತ್ತು ಬಾರಿಸಿದ. ಅಲ್ಲಿ ನಡೆಯುತ್ತಿದ್ದ ಸಂಗೀತ ಮತ್ತು ಬಾಗಿಲ ಈಚೆಯ ಕಡೆ ಹರಡಿದ್ದ ಬಿಸಿಲು– ಇಷ್ಟನ್ನು ಬಿಟ್ಟು ಅಲ್ಲಿ ಸಂದರ್ಭವೇನೆಂಬುದನ್ನು ಅರಿಯದ ಸಾಮಾನ್ಯ ಪ್ರೇಕ್ಷಕನಿಗೆ, ಈ ಬೀದಿಯ ಆಟಗಾರನ ಮೊಂಡುತನವನ್ನು ನಿಂತುನೋಡುವುದು ವಿನೋದಕರವಾಗಿದ್ದಿರ ಬಹುದು. ಕಡೆಗಾದರೂ ಅವನು ಗೆದ್ದಾನೇ? ಆ ಮೊಂಡು ಕದ ಇದ್ದಕ್ಕಿದ್ದ ಹಾಗೆಯೆ ತೆಟ್ಟೆಂದೆರೆದು ನಿಲ್ಲುವುದೆ? ಸಂತಸದಿಂದ ನಲಿಯುವ ಮಕ್ಕಳ ತಂಡವೊಂದು– ಮನೆಯ ಚಿಕ್ಕ ಪುಟಾಣಿಗಳು– ಕುಣಿದಾಡುತ್ತಾ, ಕಿರಿಚುತ್ತಾ, ನಗುತ್ತಾ ಹೊರಗಡೆ ಬಯಲಿಗೆ ಬರುವರೆ? ಬಂದು, ಸೂತ್ರದ ಬೊಂಬೆಗಳನ್ನು ಉತ್ಸಾಹದಿಂದಲೂ ಹಿಗ್ಗಿನಿಂದಲೂ ನೋಡುತ್ತಾ, ನಿಡುಬಾಲದ ಧನಪಿಶಾಚಿಗೆ (ಎಂದರೆ ಮಂಗಣ್ಣನಿಗೆ) ಆಯ್ದುಕೊಳ್ಳಲೆಂದು ಪ್ರತಿಯೊಬ್ಬರೂ ಒಂದೊಂದು ತಾಮ್ರದ ಬಿಲ್ಲೆ ಎಸೆಯುತ್ತಾ, ತಮಾಷೆಯ ಪೆಟ್ಟಿಗೆ ಸುತ್ತ ಮುತ್ತಿಕೊಳ್ಳುವರೆ?

ಆದರೆ ನಮಗೆ, ಏಳು ಇಪ್ಪಾರಿನ ಮನೆಯ ಒಳ ಹೃದಯವನ್ನೂ, ಅಂತೆಯೇ ಅದರ ಹೊರ ಮುಖವನ್ನೂ ಬಲ್ಲ ನಮಗೆ, ಅದರ ಬಾಗಿಲ ಮೆಟ್ಟಿಲ ಬಳಿ ಮತ್ತೆ ಮತ್ತೆ ಕೇಳಿಬರುತ್ತಿರುವ ಈ ಜನಮೆಚ್ಚಿನ ಲಘುಗೀತೆಗಳ ಪುನರಾವೃತ್ತಿಯಲ್ಲಿ ಒಂದು ಭೀಕರ ಪರಿಣಾಮ ಕಂಡುಬರುತ್ತದೆ. (ಸಂಗೀತದ ಅತ್ಯುತ್ತಮವಾದ ಮನೋಧರ್ಮದಲ್ಲಿದ್ದಾಗ 'ಪಗಾ ನಿನಿ' ಬಾರಿಸುವ ಪಿಟೀಲುವಾದನಕ್ಕೆ ಕವಡೆಯ ಬೆಲೆಯನ್ನೂ ಕೊಡದ) ನ್ಯಾಯಮೂರ್ತಿ ಪಿನ್ಚನ್ನನು, ರಕ್ತದ ಕಲೆ ಕಾಣುವ ಷರಟಿನ ಮುಂಭಾಗವನ್ನು ತೋರುತ್ತ, ಬಿಳಿಚಿಕೊಂಡ

---

* ಯಾಂಕಿ (Yankee)= ಅಮೆರಿಕದವನಿಗೆ, ವಿಶೇಷವಾಗಿ ನ್ಯೂ ಇಂಗ್ಲೆಂಡಿನ ನಿವಾಸಿಗೆ, ಅಡ್ಡ ಹೆಸರು.

ತಿರುಗಿತ್ತು; ಅವನಲ್ಲಿ ಆಗ ಉಂಟಾಗಿದ್ದ ರಾಗಭಾವವು ಕೇವಲ ಅತ್ಯಲ್ಪ, ಮತ್ತು ಬಹುಮಟ್ಟಿಗೆ ವಿನೋದಪರ; ಆದರೂ, ಆ ರಾಗಭಾವ ಸ್ಪರ್ಶವು ಪ್ರಾಮಾಣಿಕ ವಾಗಿತ್ತಾದ್ದರಿಂದ ಅದು ಅವನ ನೀರಸವಾದ ಯಾಂತ್ರಿಕ ಸಂಗೀತ ವಿಧಾನಕ್ಕೆ ಒಂದು ಹೆಚ್ಚಿನ ರಸಮಾಧುರ್ಯವನ್ನು ನೀಡಿತ್ತು. ಈ ದೇಶಸಂಚಾರಿಗಳು ತಮ್ಮ ಜೀವನಯಾತ್ರೆಯ ದಾರಿಪಕ್ಕದಲ್ಲಿ ಯಾರೇ ಆಗಲಿ ಸಹಜವಾದ ರೀತಿಯಲ್ಲಿ ದಯೆ ತೋರಿದರೆ– ಅದು ಕೇವಲ ಒಂದು ನಸುನಗೆಯಾಗಿರಲಿ ಇಲ್ಲವೇ ಅರ್ಥವಾಗದ ಮಾತಾಗಿರಲಿ, ಅದರಲ್ಲಿ ವಿಶ್ವಾಸದ ಸೂಚನೆಯಿದ್ದರಾಯಿತು– ಅವರು ಆ ಕೂಡಲೇ ಕರಗಿಹೋಗುತ್ತಾರೆ. ಅವರು ಈ ವಿಶ್ವಾಸತೋರುವ ಸಂಗತಿಗಳನ್ನು ನೆನಪಿಡುತ್ತಾರೆ; ಏಕೆಂದರೆ, ಅವು ಚಿಕ್ಕ ಮೋಹಪ್ರಪಂಚಗಳು; ಅವು ತತ್‌ಕ್ಷಣಕ್ಕೆ– ಸಾಬೂನಿನ ನೀರ್ಗುಳ್ಳೆಯಲ್ಲಿ ಪ್ರಕೃತಿದೃಶ್ಯವು ಪ್ರತಿಬಿಂಬಿತ ವಾಗುವಷ್ಟರ ಅವಕಾಶದಲ್ಲಿ– ಅವರ ಸುತ್ತ ಮನೆಯ ವಾತಾವರಣವನ್ನು ನಿರ್ಮಿಸಿಕೊಡುತ್ತವೆ. ಆದ್ದರಿಂದ ಅವನ ವಾದ್ಯದ ಸಂಗೀತದ ಗೆಲವಿಗೆ ತಡೆಯುಂಟುಮಾಡುವುದರಲ್ಲಿ ಸ್ಥಿರಸಂಕಲ್ಪ ಹೊಂದಿದ್ದಂತೆ ಕಾಣುತ್ತಿದ್ದ ಆ ಪುರಾತನ ಭವನದ ಅಗಾಧ ಮೌನವನ್ನು ಕಂಡು ಆ ತರುಣ ಇಟ್ಯಾಲಿಯನ್ನನು ನಿರಾಶನಾಗಲು ಸಿದ್ಧನಾಗಿರಲಿಲ್ಲ. ರಾಗಾಲಾಪನೆಯ ಮೂಲಕ ಮೊರೆಯಿಡು ವುದರಲ್ಲಿ ಅವನು ಪಟ್ಟುಹಿಡಿದು ಮುಂದುವರಿದನು; ತನ್ನ ಶ್ಯಾಮಲವಾದ ಪರಕೀಯ ಮುಖಮುದ್ರೆ ಫೀಬೆಯ ಮುಖಕಾಂತಿಯಿಂದ ಬೇಗನೆಯೆ ಬೆಳಗುವುದೆಂಬ ನೆಚ್ಚಿಕೆಯಿಂದ ಅವನು ಇನ್ನೂ ಮೇಲ್ಗಡೆಯೇ ನೋಡುತ್ತಿದ್ದನು. ಕ್ಲಿಫರ್ಡನನ್ನು ಮತ್ತೊಮ್ಮೆ ನೋಡದೆಯೆ ಹೊರಟುಹೋಗುವುದಕ್ಕೂ ಅವನಿಗೆ ಇಷ್ಟವಿರಲಿಲ್ಲ; ಏಕೆಂದರೆ, ಫೀಬೆಯ ನಸುನಗೆಯಂತೆಯೆ ಕ್ಲಿಫರ್ಡನ ಸೂಕ್ಷ್ಮಸ್ವಭಾವ ಕೂಡ ಪರಕೀಯನಾದ ಅವನೊಂದಿಗೆ ಒಂದು ಬಗೆಯ ಹೃದಯದ ಭಾಷೆಯಲ್ಲಿ ಸಂಭಾಷಿಸಿತ್ತು. ತನ್ನ ಶ್ರೋತೃಗಳು ಬೇಸರಗೊಳ್ಳುವವರೆಗೆ ತಾನು ಬಲ್ಲ ಸಂಗೀತವನ್ನೆಲ್ಲ ಅವನು ಮತ್ತೆ ಮತ್ತೆ ಬಾರಿಸತೊಡಗಿದ. ಅವನ ಪ್ರದರ್ಶನದ ಪೆಟ್ಟಿಗೆಯಲ್ಲಿದ್ದ ಮರದ ಮಂದಿಗೆ ಕೂಡ ಬೇಸರ ಹಿಡಿಯಿತು; ಎಲ್ಲಕ್ಕಿಂತ ಹೆಚ್ಚಾಗಿ ಕಪಿಗೆ. ಇಷ್ಟೆಲ್ಲಾ ಆದರೂ, ಮಿಡಿತೆಯ ಹಾಡಿಕೆ ಹೊರತು, ಬೇರೆ ಯಾವ ಪ್ರತ್ಯುತ್ತರವೂ ಬರಲಿಲ್ಲ.

ಕಡೆಗೆ ಒಬ್ಬ ಶಾಲೆಯ ಹುಡುಗ ಹೇಳಿದ: "ಈ ಮನೆಯಲ್ಲಿ ಮಕ್ಕಳಿಲ್ಲ. ಮದುವೆಯಿಲ್ಲದ ಮುದುಕಿ ಒಬ್ಬಳು, ಮುದುಕ ಒಬ್ಬ, ಇವರಿಬ್ಬರನ್ನ ಬಿಟ್ಟರೆ ಬೇರೆ ಯಾರೂ ಇಲ್ಲಿ ವಾಸವಾಗಿಲ್ಲ. ನಿನಗೆ ಇಲ್ಲಿ ಏನೂ ಸಿಕ್ಕುವುದಿಲ್ಲ! ಸುಮ್ಮನೆ

ಕಾರ್ಡನ್ನು ಮಾತಾಡಿಸಿದಾತನಿಗೆ ಓದಲೆಂದು ಕೊಟ್ಟ, ವಾಸ್ತವವಾಗಿ, ಅದು ನ್ಯಾಯಮೂರ್ತಿ ಪಿನ್ಚನ್ನನ ಹೆಸರು ಕೆತ್ತಿದ ಕಾರ್ಡು; ಅದರ ಹಿಂಬದಿಯಲ್ಲಿ, ನೆನಪಿಟ್ಟುಕೊಳ್ಳಬೇಕಾದ ಕೆಲವು ಸಂಗತಿಗಳನ್ನು ಗುರುತಿಸಿತ್ತು; ಅವನು ಹಿಂದಿನ ದಿನ ನಡಸಬೇಕೆಂದು ಉದ್ದೇಶಿಸಿದ್ದ ಬೇರೆ ಬೇರೆ ವ್ಯವಹಾರಗಳಿಗೆ ಸಂಬಂಧಪಟ್ಟಿತ್ತು ಆ ನೆನಪಿನ ಟಿಪ್ಪಣಿ. ನಡೆಯಬೇಕಾಗಿದ್ದ ದಿನದ ಸಂಕ್ಷಿಪ್ತ ಇತಿಹಾಸವಾಗಿತ್ತು ಅದು; ಆದರೆ ಮಾತ್ರ, ಹಾಕಿಕೊಂಡಿದ್ದ ಕಾರ್ಯಕ್ರಮಕ್ಕೆ ಪೂರ್ತಿ ಅನುಸಾರವಾಗಿ ಎಲ್ಲ ವ್ಯವಹಾರಗಳೂ ನಡೆದಿರಲಿಲ್ಲವಷ್ಟೆ, ನ್ಯಾಯಮೂರ್ತಿ ಮನೆಯ ಹೆಬ್ಬಾಗಿಲಿನಿಂದ ಹೋಗುವುದಕ್ಕೆ ಮೊದಲು ಪ್ರಯತ್ನಪಟ್ಟಾಗ, ಅದು ಅವನ ನಡುವಂಗಿಯ ಜೇಬಿನಿಂದ ಬಿದ್ದು ಕಳೆದು ಹೋಗಿರಬೇಕು. ಅದು ಮಳೆಯಲ್ಲಿ ಚೆನ್ನಾಗಿ ನೆನೆದಿದ್ದರೂ, ಅದು ಇನ್ನೂ ಅರ್ದಮಟ್ಟಿಗೆ ಓದುವ ಹಾಗಿತ್ತು.

"ಇಲ್ಲಿ ನೋಡು, ಡಿಕ್ಸೀ! ಜಡ್ಜಿ ಪಿನ್ಚನ್ನನಿಗೆ ಇದು ಸ್ವಲ್ಪ ಸಂಬಂಧ ಪಟ್ಟಿದೆ. ನೋಡಿಲ್ಲಿ, ಅವನ ಹೆಸರು ಅದರ ಮೇಲೆ ಅಚ್ಚಾಗಿದೆ; ಅಲ್ಲದೆ, ಇಲ್ಲಿ ಅವನ ಕೈಬರಹವೂ ಕೊಂಚ ಇರುವ ಹಾಗಿದೆ" ಎಂದ ಆ ಮನುಷ್ಯ.

"ಹಾಗಾದರೆ ಅದರೊಂದಿಗೆ ಊರಿನ 'ಮಾರ್ಷಲ್'ರ ಬಳಿಗೆ ಹೋಗೋಣ! ಆತನಿಗೆ ಬೇಕಾಗಿರುವ ಸುಳಿವನ್ನು ಅದು ಕೊಡಬಹುದು" ಎಂದು ಹೇಳಿ, ತನ್ನ ಜೊತೆಯವನ ಕಿವಿಯಲ್ಲಿ ಮೆಲ್ಲನೆ ಉಸುರಿದ: ಇಷ್ಟೆಲ್ಲಾ ಆದಮೇಲೆ, ಜಡ್ಜಿ ಆ ಬಾಗಿಲಿನಿಂದ ಒಳಕ್ಕೆ ಹೋಗಿ, ಹಿಂದಿರುಗಿ ಬಾರದೆಯೇ ಇದ್ದರೆ, ಅದರಲ್ಲಿ ಆಶ್ಚರ್ಯವಿಲ್ಲ! ಅವನ ಯಾವನೋ ಒಬ್ಬ ದಾಯಾದಿ ತನ್ನ ಹಳೆಯ ವಿದ್ಯ ತೆಗೆದಿರಬಹುದಲ್ಲ. ಆ ಮುದಿಗನ್ನೆ ಪಿನ್ಚನ್ ಇದ್ದಾಳಲ್ಲ, 'ಸೆಂಟು' ಅಂಗಡಿ ಇಟ್ಟು ಸಾಲಗಾತಿಯಾಗಿದ್ದಾಳೆ– ಜಡ್ಜಿಯ ಕಿಸೆಪುಸ್ತಕದ ತಂಬ ಬೇಕಾದ್ದು ಇದೆ– ಇವೆಲ್ಲವನ್ನೂ ಒಟ್ಟಿಗೆ ಕೂಡಿ, ಆಗ ನೋಡು ಅವು ಏನು ಅರ್ಥವನ್ನು ಕೊಡುತ್ತವೆ ಅಂತ!"

ಇನ್ನೊಬ್ಬನೂ ಪಿಸುಗುಟ್ಟಿದ: ಹಷ್! ಷ್! ಅಂಥ ವಿಚಾರದಲ್ಲಿ ನಾವು ಮೊದಲು ಮಾತೆತ್ತುವುದು, ಪಾಪಕೃತ್ಯ ಮಾಡಿದ ಹಾಗೆಯೇ ಸರಿ! ಮಾಡಿದವರ ಪಾಪ ಆಡಿದವರ ಬಾಯಲ್ಲಿ: ಆದರೆ, ನಾವು ಮೊದಲು ಊರಿನ 'ಮಾರ್ಷಲ್'ರ ಬಳಿ ಹೋಗುವುದೇ ಮೇಲು ಅಂತ, ನಿನ್ನ ಹಾಗೆಯೆ ನನಗೂ ತೋರುತ್ತೆ."

ಅದಕ್ಕೆ ಡಿಕ್ಸಿ, ನುಡಿದ, "ಹೌದು, ಹೌದು! ಅದು ಸರಿ, ಆ ಹೆಂಗಸಿನ ಸಿಡುಕುಮೋರೆಯಲ್ಲಿ ಏನೋ ಪಿಶಾಚದ ಸುಳಿವು ಇದೆ ಅಂತ ನಾನು ಯಾವಾಗಲೂ ಹೇಳುತ್ತಿದ್ದೆ!

ಬಿಳಿಮುಖದ ಮೇಲೆ ಭಯಂಕರವಾದ ಹುಬ್ಬು ಗಂಟುಹಾಕಿಕೊಂಡು ಬಾಗಿಲ ಬಳಿ ಕಾಣಿಸಿಕೊಂಡು, ಈ ಪರದೇಶದ ಅಲೆಮಾರಿಯನ್ನು ಸಂಜ್ಞೆಮಾಡಿ ಆಚೆಗೆ ಕಳಿಸಿದ ಎಂದು ಇಟ್ಟುಕೊಳ್ಳೋಣ; ಅದು ನಿಜವಾಗಿಯೂ ಒಂದು ವಿಕಟ ವ್ಯವಹಾರವಾಗಿ ಕಾಣುವುದು! ನೃತ್ಯ ಮಾಡುವುದಕ್ಕೆ ತಮ್ಮ ಸರದಿ ಕಾಯುತ್ತ ಸಾಲಿನಲ್ಲಿ ಯಾರೂ ನಿಂತಿಲ್ಲದಿರುವಾಗ, ಹಿಂದೆ ಎಂದಾದರೂ 'ಜಿಗ್' ನೃತ್ಯದ ಹಾಗೂ 'ವಾಲ್ಟ್ಸ್' ನೃತ್ಯದ ಸಂಗೀತವನ್ನು ಹೀಗೆ ಬಾರಿಸಿದ್ದುಂಟೆ? ಹೌದು, ಅನೇಕವೇಳೆ ಬಾರಿಸಿರುವುದುಂಟು. ಈ ವೈಷಮ್ಯ, ಅಥವಾ ನೋವು ನಲಿವುಗಳ ಬೆರಕೆ ಪ್ರತಿದಿನವೂ, ಪ್ರತಿಗಂಟೆಯೂ, ಪ್ರತಿಕ್ಷಣವೂ ಕಂಡುಬರುತ್ತಿದೆ. ಈ ಮಂಕು ಕವಿದ ಮತ್ತು ಪಾಳುಬಿದ್ದು ನಿರ್ಜನವಾದ, ಅದರ ನಟ್ಟನಡುವೆಯಲ್ಲಿ ಘೋರಮೃತ್ಯು ನಿರ್ದಯವಾಗಿ ಏಕೈಕ ಆಧಿಪತ್ಯ ನಡಸುತ್ತಿರುವ, ಈ ಪುರಾತನ ಭವನವು ಅನೇಕ ಮಾನವ ಹೃದಯಗಳ ಸಂಕೇತವಾಗಿತ್ತು; ಆದಾಗ್ಯೂ, ಅದು ಈಗ ತನ್ನ ಸುತ್ತ ಮುತ್ತಣ ಪ್ರಪಂಚದ ಉಲ್ಲಾಸದ ಉದ್ವೇಗಕ್ಕೂ ಪ್ರತಿಧ್ವನಿಗೂ ಕಿವಿಗೊಡಬೇಕಾಗಿದೆ.

ಇಟ್ಯಾಲಿಯನ್ನನ ಆಟ ಮತ್ತು ಸಂಗೀತ ಮುಗಿಯುವ ಮುನ್ನ ಯಾರೊ ಇಬ್ಬರು ಹಗಲೂಟಕ್ಕೆ ಹೋಗುತ್ತ ಆ ಮಾರ್ಗವಾಗಿ ಬಂದರು.

ಅವರಲ್ಲಿ ಒಬ್ಬನು ಗಟ್ಟಿಯಾಗಿ ಕೂಗಿ ಕರೆದು, ಹೇಳಿದ; "ಲೋ ಫ್ರೆಂಚ್ ಹುಡುಗಾ! ಆ ಬಾಗಿಲಮೆಟ್ಟಲು ಬಿಟ್ಟು ಈ ಕಡೆ ಬಾ, ನಿನ್ನ ಈ ಕಂತೆ ಎತ್ತಿಕೊಂಡು ಬೇರೆ ಎಲ್ಲಿಗಾದರೂ ಹೋಗು! ಪಿನ್ಚನ್ ಕುಟುಂಬದವರು ಅಲ್ಲಿ ವಾಸಮಾಡುತ್ತಾರೆ; ಬಹುಶಃ ಈ ವೇಳೆಗೆ ಅವರು ತುಂಬ ತೊಂದರೆಗೆ ಸಿಕ್ಕಿಕೊಂಡಿದ್ದಾರೆ. ಅವರಿಗೆ ಇವೊತ್ತು ಸಂಗೀತದ ಕಡೆಗೆ ಮನಸ್ಸಿಲ್ಲ. ಈ ಮನೆಯ ಮಾಲಿಕರಾದ ಜಡ್ಜಿ ಪಿನ್ಚನ್ನರನ್ನು ಯಾರೋ ಕೊಲೆ ಮಾಡಿದ್ದಾರಂತೆ, ಊರಲ್ಲೆಲ್ಲಾ ಅದೇ ಮಾತು; ಊರಿನ ಸೈನ್ಯದ ಮುಖ್ಯಾಧಿಕಾರಿಗಳು ಈ ವಿಚಾರದಲ್ಲಿ ಪರಿಶೀಲನೆ ನಡಸುತ್ತಾರೆ. ಆದ್ದರಿಂದ, ಈ ಕೂಡಲೆ ಹೊರಟುಹೋಗು!"

ಇಟ್ಯಾಲಿಯನ್ ಹುಡುಗ ತನ್ನ 'ಹರ್ಡಿ–ಗರ್ಡಿ' ವಾದ್ಯವನ್ನು ಹೆಗಲಿಗೇರಿಸಿಕೊಳ್ಳುವಾಗ, ಬಾಗಿಲ ಮೆಟ್ಟಿಲ ಮೇಲೆ ಒಂದು ಕಾರ್ಡು ಬಿದ್ದಿದ್ದುದನ್ನು ಕಂಡ; ಸಾಮಾನುತರುವ ಹುಡುಗ ಅದರ ಮೇಲೆ ಎಸೆದಿದ್ದ ಸುದ್ದಿ ಪತ್ರಿಕೆಯ ಕೆಳಗೆ ಅದು ಬೆಳಗ್ಗೆಯೆಲ್ಲಾ ಮುಚ್ಚಿಹೋಗಿತ್ತು; ಯಾವಾಗಲೋ ಪತ್ರಿಕೆ ಅತ್ತ ಸರಿದು, ಈಗ ಅದು ಕಣ್ಣಿಗೆ ಬೀಳುವಂತಾಗಿತ್ತು. ಅವನು ಅದನ್ನು ಕೈಗೆತ್ತಿಕೊಂಡು ನೋಡಿದ; ಅದರ ಮೇಲೆ ಏನೋ ಪೆನ್ಸಿಲ್ಲಿನಿಂದ ಬರೆದಿದ್ದುದನ್ನು ನೋಡಿ,

ಒಂಟು ರಟ್ಟು ಬಟ್ಟೆಯ ಚೀಲವನ್ನೂ ಮತ್ತು ವಸ್ತ್ರ ಪರಿಕರಣಗಳನ್ನಿಡುವ ರಟ್ಟಿನ ಪೆಟ್ಟಿಗೆಯನ್ನೂ ಬಂಡಿಯ ಮೇಲ್ಭಾಗದಿಂದ ತೆಗೆದುಕೊಂಡು, ಅವುಗಳನ್ನು ಆ ಹಳೆಯಮನೆಯ ಬಾಗಿಲ ಮೆಟ್ಟಲ ಮೇಲೆ ಇರಿಸಿದನು; ಬಂಡಿಯ ಒಳಗಡೆಯಿಂದ ಮೊದಲು ಹುಲ್ಲಿನ ಟೊಪ್ಪಿಗೆ, ಆಮೇಲೆ ಒಬ್ಬ ಚಿಕ್ಕ ಹುಡುಗಿಯ ಚೆಲುವಾಕೃತಿ ಗೋಚರವಾದುವು. ಕಾಣಿಸಿಕೊಂಡವಳು ಫೀಬೆ! ಅವಳು ನಮ್ಮ ಕಥೆಗೆ ಮೊದಲು ಪ್ರವೇಶಮಾಡಿದಾಗ ಇದ್ದಷ್ಟು ಕಾಂತಿಯುಕ್ತವಾಗಿರಲಿಲ್ಲ– ಏಕೆಂದರೆ, ನಡುವಣ ಕೆಲವು ವಾರಗಳ ಅವಧಿಯಲ್ಲಿ, ತನ್ನ ಅಂತರಾಳದ ಸ್ವಸ್ವರೂಪನ್ನು ಅರ್ಥಮಾಡಿಕೊಳ್ಳ ತೊಡಗಿದ್ದ ಹೃದಯದ ಕುರುಹಾಗಿ, ಅವಳ ಅನುಭವಗಳು ಅವಳನ್ನು ಹೆಚ್ಚು ಗಂಭೀರವಾಗಿ, ಹೆಚ್ಚು ಪ್ರೌಢೆಯನ್ನಾಗಿ, ಹೆಚ್ಚು ರಹಸ್ಯಪೂರ್ಣ ದೃಷ್ಟಿಯುಳ್ಳವಳನ್ನಾಗಿ ಮಾಡಿದ್ದುವು; ಆದರೂ ಅವಳ ಸುತ್ತಲೂ ಸಹಜ ಸೂರ್ಯಪ್ರಕಾಶದ ಪ್ರಶಾಂತಪ್ರಭೆಯೊಂದು ಹರಡಿತ್ತು. ಅಲ್ಲದೆ, ತನ್ನ ಪ್ರಭಾವಕ್ಕೆ ಒಳಗಾದ ಪದಾರ್ಥಗಳನ್ನು ವಿಚಿತ್ರವಾಗಿ ಕಾಣುವಂತೆ ಮಾಡುವ ಬದಲು ವಾಸ್ತವವಾಗಿ ಕಾಣುವಂತೆ ಮಾಡುವ ತನ್ನ ಸ್ವಭಾವೋಚಿತ ಶಕ್ತಿಯನ್ನು ಅವಳು ಕಳೆದುಕೊಂಡಿರಲಿಲ್ಲ. ಆದರೂ, ಈ ವಿಷಮ ಸಂಧಿಯಲ್ಲಿ, ಏಳು ಇಪ್ಪಾರಿನ ಮನೆಯ ಹೊಸಿಲು ದಾಟಿ ಒಳಹೋಗುವುದು ಫೀಬೆಯಂಥವಳಿಗೆ ಕೂಡ ಸಂದೇಹಾಸ್ಪದವಾದ ಸಾಹಸವೆಂದು ನಾವು ಭಾವಿಸುತ್ತೇವೆ. ಅವಳು ಹೊರಟುಹೋದ ಮೇಲೆ ಮನೆಯೊಳಕ್ಕೆ ನುಗ್ಗಿರುವ ವಿವರ್ಣವಾದ, ಘೋರವಾದ, ಪಾಪಪೂರಿತವಾದ ಪಿಶಾಚ ಜಂಗುಳಿಯನ್ನು ತರುಬಿ ಓಡಿಸಲು ಅವಳ ಹಿತಕರವಾದ ಪ್ರಭಾವವುಳ್ಳ ಇರುವಿಕೆ ಶಕ್ತಿಪೂರ್ಣವಾಗಿರುವುದೇ? ಅಥವಾ, ಅವಳೂ ಕೂಡ ಅದೇ ರೀತಿಯಲ್ಲಿ ಕುಸಿದು ಕುಗ್ಗಿ, ರೋಗಹಿಡಿದು, ಕುರೂಪವನ್ನು ಹೊಂದಿ, ಇನ್ನೊಂದು ಪೇಲವ ಪ್ರೇತವಾಗುವಳೆ? ಹಾಗಾಗಿ, ನಿಶ್ಯಬ್ದವಾಗಿ ಮಹಡಿಯ ಮೆಟ್ಟಲುಗಳನ್ನು ಹತ್ತಿ ಇಳಿದು, ಕಿಟಕಿಯ ಬಳಿ ನಿಂತು ಮಕ್ಕಳನ್ನು ಬೆದರಿಸುವಳೆ?

ಕಡೆಯಪಕ್ಷ, ಅವಳನ್ನು ಎದುರುಗೊಂಡು ಬರಮಾಡಿಕೊಂಡು ಅಲ್ಲಿ ಯಾವುದೇ ಮಾನುಷರೂಪವಾಗಲಿ ಮಾನುಷರೂಪದ ವಸ್ತುವಾಗಲಿ ಅಲ್ಲಿ ಇಲ್ಲ ಎಂದು ಏನೂ ಅರಿಯದ ಆ ಬಾಲಿಕೆಗೆ ನಾವು ಸಂತೋಷದಿಂದ ಮುನ್ನೆಚ್ಚರಿಕೆ ಕೊಡುವೆವು; ಯಾವುದಾದರೂ ಇದ್ದರೆ, ಅದು ನ್ಯಾಯ ಮೂರ್ತಿ ಪಿನ್ಚನ್ನನ ಆಕೃತಿ; ಅವನು ಇನ್ನೂ ಓಕ್‌ಮರದ ಕುರ್ಚಿಯಲ್ಲಿ ಯಥಾಸ್ಥಿತನಾಗಿದ್ದಾನೆ; ನೋಡುವುದಕ್ಕೆ ಅಸಹ್ಯಕರವಾದ ಅವನೊಂದಿಗೆ ನಾವು

ಆ ಇಬ್ಬರೂ ಸರ್ರನೆ ತಿರುಗಿ, ಬಂದ ದಾರಿಯಲ್ಲಿ ಹೆಜ್ಜೆಹಾಕುತ್ತ ನಡೆದರು. ಇಟ್ಯಾಲಿಯನ್ ಬಾಲಕನೂ ಸಹ, ಬೀಳ್ಕೊಳ್ಳುವ ಮುನ್ನ ಆ ಕಮಾನು ಕಿಟಕಿಯ ಕಡೆ ಒಮ್ಮೆ ಕಡೆಗಣ್ಣ ನೋಟವನ್ನು ಬೀರಿ, ಬೇಗನೆ ಅಲ್ಲಿಂದ ಕಾಲು ಕಿತ್ತ. ಅಲ್ಲಿ ನೆರೆದಿದ್ದ ಮಕ್ಕಳೆಲ್ಲಾ ಒಂದೇ ಮನಸ್ಸಿನಿಂದ ಓಟ ಕಿತ್ತರು; ದೆವ್ವವೋ ಭೂತವೋ ತಮ್ಮನ್ನು ಬೆನ್ನಟ್ಟಿ ಬರುತ್ತಿದ್ದರೆ ಹೇಗೋ ಹಾಗೆ ಸಿಕ್ಕಾಬಿಟ್ಟೆ ಚೆದರಿದರು; ಕಡೆಗೆ, ಮನೆಯಿಂದ ಬಹುದೂರ ಸಾಗಿದಮೇಲೆ, ಇದ್ದಕ್ಕಿದ್ದ ಹಾಗೆ ಎಲ್ಲರೂ ಒಟ್ಟಿಗೆ ನಿಂತರು. ತಾನಾಗಿ ಅವರ ಕಿವಿಯಮೇಲೆ ಬಿದ್ದ ಸುದ್ದಿಯಿಂದಾಗಿ, ಅವರ ಸೂಕ್ಷ್ಮವಾದ ಎಳೆಯ ಮನಸ್ಸು ಅಸ್ಪಷ್ಟವಾಗಿ ಗಾಬರಿಗೊಂಡಿತು. ಆ ಹಳೆಯ ಮಹಲಿನ ವಿಚಿತ್ರವಾದ ಕೋಡುಗಳನ್ನು ನೆರಳು ಕವಿದ ಮೂಲೆಮೂಲೆಯ ಓರೆಕೋರೆಗಳನ್ನೂ ಹಿಂದಿರುಗಿ ನೋಡಿ, ಬಿಸಿಲಿನ ಯಾವ ಪ್ರಕಾಶವೂ ಹೋಗಲಾಡಿಸದಂತಹ ಒಂದು ಮಬ್ಬುಗತ್ತಲೆ ಮನೆಯ ಸುತ್ತ ಹರಡಿಕೊಂಡಿದೆಯೆಂದು ಅವರು ಭಾವಿಸಿದರು. ಒಬ್ಬ ಕಾಲ್ಪನಿಕ ಹೆಪ್ಸಿಬಾ ಒಂದೇ ಕ್ಷಣದಲ್ಲಿ ಹಲವು ಕಿಟಕಿಗಳಲ್ಲಿ ಒಟ್ಟಿಗೆ ಕಾಣಿಸಿಕೊಂಡು, ಅವರ ಕಡೆ ಸಿಡುಕು ಮೋರೆಮಾಡಿ, ಬೆರಳಾಡಿಸಿ ಬೆದರಿಸಿದಳು. ಅಂತೆಯೆ, ಒಬ್ಬ ಕಾಲ್ಪನಿಕ ಕ್ಲಿಫರ್ಡ್ ಆ ಅವಾಸ್ತವ ಹೆಪ್ಸಿಬಾಳ ಹಿಂದೆ ನಿಂತಿದ್ದನು (ಈ ಚಿಕ್ಕವರಿಗೆ ಅವನನ್ನು ಕಂಡರೆ ಯಾವಾಗಲೂ ದಿಗಿಲೆ; ಈ ಸಂಗತಿ ಅವನಿಗೆ ಗೊತ್ತಾಗಿದ್ದರೆ, ಅವನ ಮನಸ್ಸಿಗೆ ತುಂಬಾ ನೋವಾಗುತ್ತಿತ್ತು); ಅವನು ಅಲಂಕಾರ ಮಾಡಿಕೊಳ್ಳುವಾಗ ಹಾಕಿಕೊಳ್ಳುವ, ಬಣ್ಣ ಮಾಸಿದ್ದ ಮೇಲಂಗಿಯನ್ನು ಧರಿಸಿದ್ದನು; ಅವನು ಮಾಡುತ್ತಿದ್ದ ಅಂಗಚೇಷ್ಟೆ ಭಯಂಕರವಾಗಿತ್ತು. ಒಬ್ಬರಿಂದೊಬ್ಬರಿಗೆ ಹರಡುವ ತೀವ್ರಭಯದ ಗಾಬರಿ ದೊಡ್ಡವರಿಗಿಂತ ಹೆಚ್ಚಾಗಿ ಚಿಕ್ಕವರಿಗೆ ಅಂಟುವ ಸಂಭವ ಹೆಚ್ಚು. ಉಳಿದ ದಿನವೆಲ್ಲಾ, ಹೆಚ್ಚು ಅಂಜುಕುಳಿಗಳಾದವರು ಏಳು ಇಪ್ಪಾರಿನ ಮನೆಯ ನೋಟವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಬೇರೆಯ ಬೀದಿಗಳಲ್ಲಿ ಬಳಸಿಕೊಂಡು ಸುತ್ತಾಡುತ್ತಿದ್ದರು; ಹೆಚ್ಚು ಧೈರ್ಯಶಾಲಿಗಳಾದವರು, ಈ ಮನೆಯ ಮುಂದೆಯೇ ಪೂರ್ಣ ವೇಗದಿಂದ ಓಡಲು ತಮ್ಮ ಜೊತೆಯವರಿಗೆ ಕರೆಕೊಟ್ಟು ತಮ್ಮ ಪೌರುಷವನ್ನು ಪ್ರದರ್ಶಿಸುತ್ತಿದ್ದರು.

ಸಂದರ್ಭೋಚಿತವಲ್ಲದ ಸಂಗೀತಪ್ರದರ್ಶನ ಮಾಡುತ್ತಿದ್ದ ಆ ಇಟ್ಯಾಲಿಯನ್ ಬಾಲಕನು ಕಣ್ಮರೆಯಾಗಿ ಇನ್ನೂ ಅರ್ಧಗಂಟೆ ಕೂಡ ಆಗಿರಲಿಲ್ಲ; ಆಗ ಒಂದು ಕ್ಯಾಬ್ ಬಂಡಿ ಬೀದಿಯ ಈ ಕಡೆಗೆ ಬಂದಿತು. ಅದು ಪಿನ್ಚನ್ ಎಲ್ಮ್ ಮರದ ಕೆಳಗೆ ನಿಂತುಕೊಂಡಿತು; ಕ್ಯಾಬ್ ಬಂಡಿ ನಡಸುವವನು ಒಂದು ಟ್ರಂಕನ್ನೂ,

ಆ ಸಾಧುಮಹಿಳೆಯ ಹೊರನಡವಳಿಕೆ ಮಕ್ಕಳನ್ನು ಬುದ್ಧಿ ಪಲ್ಲಟವಾಗುವ ರೀತಿಯಲ್ಲಿ ಬೆದರುವಂತೆ ಮಾಡುತ್ತಿತ್ತು, ಇಲ್ಲವೋ ಅಸಭ್ಯವಾದ ರೀತಿಯಲ್ಲಿ ನಗುವಂತೆ ಮಾಡುತ್ತಿತ್ತು. ಈ ಘಟನೆಗಾಗಿ, ಮತ್ತು ಕಾರಣವೇನೆಂದು ಅರಿಯಲಾಗದ ರೀತಿಯಲ್ಲಿ ಮನೆ ಎಷ್ಟೊಂದು ನಿಶ್ಯಬ್ದವೂ ಅಭೇದ್ಯವೂ ಆಗಿ ಪರಿಣಮಿಸಿದೆಯೆಂದು ಅವಳು ತುಂಬಾ ಮರುಗಿದಳು. ತಾನು ಹೋಗಿ ನೋಡಲು ಪ್ರಯತ್ನಸಿಬಹುದಾದ ಎರಡನೆಯ ಸ್ಥಳ ತೋಟ ಎಂದುಕೊಂಡು, ಅವಳು ಅಲ್ಲಿಗೆ ಹೋದಳು; ಅಷ್ಟೊಂದು ಬೆಚ್ಚಗೆ ಹೊಳವಾಗಿದ್ದ ಇಂದಿನ ದಿನದಂಥ ದಿನದಂದು, ಕ್ಲಿಫರ್ಡನೂ, ಬಹುಶಃ ಹೆಪ್ಸಿಬಾ ಕೂಡ, ಹಗಲೇರುವ ಹೊತ್ತನ್ನು ಬಳ್ಳಿಮಂಟಪದ ನೆರಳಿನಲ್ಲಿ ಹಾಯಾಗಿ ಸೋಮಾರಿತನದಿಂದ ಕಳೆಯುತ್ತಿರುತಾರೆ; ಆದ್ದರಿಂದ ತಾನು, ಅವರನ್ನು ಕಾಣುವುದರಲ್ಲಿ ಸಂದೇಹವಿಲ್ಲ, ಎಂದುಕೊಂಡಳು ಅವಳು. ಅವಳು ತೋಟದ ಬಾಗಿಲನ್ನು ಹೊಕ್ಕಳೋ ಇಲ್ಲವೊ, ಹೆಣ್ಣು ಕೋಳಿಗಳ ಕುಟುಂಬವರ್ಗ ಅರ್ಧ ಓಡುತ್ತ. ಅರ್ಧ ಹಾರುತ್ತ, ಅವಳನ್ನು ಎದುರುಗೊಳ್ಳಲು ಬಂದುವು; ಅದೇ ಕಾಲದಲ್ಲಿ ದಿವಾನಖಾನೆಯ ಕಿಟಕಿಯ ಕೆಳಗೆ ಹೊಂಚುಹಾಕುತ್ತಿದ್ದ ಹಿಂದೆ ಕಾಣದಿದ್ದ ಮುದಿ ಬೆಕ್ಕೊಂದು ಸರ್ರನೆ ಓಡಿಹೋಗಿ, ಆತುರಾತುರವಾಗಿ ಬೇಲಿಯನ್ನು ಅಡರಿ, ಮಂಗಮಾಯವಾಯಿತು. ಬಳ್ಳಿಮಂಟಪ ಬರಿದಾಗಿತ್ತು; ಅಲ್ಲಿನ ನೆಲ, ಮೇಜು ಸುತ್ತು ಬೆಂಚು– ಇವೆಲ್ಲ ಇನ್ನೂ ತೇವವಾಗಿಯೇ ಇದ್ದುವು; ಮೊನ್ನಿನ ಬಿರುಗಾಳಿಯಿಂದಾಗಿ, ಅವುಗಳ ಮೇಲೆಲ್ಲಾ ಕಸಕಡ್ಡಿ ಚೆದರಿಬಿದ್ದಿದ್ದು, ಎಲ್ಲಾ ಅಸ್ತವ್ಯಸ್ತವಾಗಿದ್ದುವು. ತೋಟದ ಬೆಳೆಯೆಲ್ಲಾ ಮಿತಿಮಿರಿ ಬೆಳೆದಿಂದ್ದಂತೆ ಕಂಡುಬಂದುವು; ಫೀಬೆ ಇಲ್ಲದಿದ್ದ ಅವಕಾಶ, ಹಾಗೂ ಬಹಳ ಕಾಲ ಬಿದ್ದ ಮಳೆ ಇವುಗಳ ಪ್ರಯೋಜನ ಹೊಂದಿ ಕಳೆಗಿಡಗಳು ಹೂಗಿಡಗಳ ಮೇಲೂ ತರಕಾರಿ ಗಿಡಗಳ ಮೇಲೂ ಕವಿದು ಹುಚ್ಚುಹುಲುಸಾಗಿ ಬೆಳೆದಿದ್ದುವು. ಮಾಲನ ಬಾವಿ ತನ್ನ ಕಲ್ಲುಕಟ್ಟೆಯ ಮೇಲೂ ತುಂಬಿ ತುಳುಕಿ ಹರಿದು, ತೋಟದ ಆ ಮೂಲೆಯಲ್ಲಿ ವಿಪರೀತ ಅಗಲವಾದ ನೀರಿನ ಮಡುವನ್ನು ನಿರ್ಮಿಸಿತ್ತು.

ಒಟ್ಟು ದೃಶ್ಯವನ್ನು ನೋಡಿದ ಮೇಲೆ, ಕಳೆದ ಹಲವು ದಿನಗಳಿಂದಲೂ– ಬಹುಶಃ ಫೀಬೆ ತೆರಳಿದಂದಿನಿಂದಲೂ– ಆ ಸ್ಥಳದಲ್ಲಿ ಕಾಲಿಟ್ಟ ಹೆಜ್ಜೆ ಗುರುತನ್ನು ಬಿಟ್ಟ ಹಾಗೆ ಕಂಡುಬರಲಿಲ್ಲ; ಏಕೆಂದರೆ, ಬಳ್ಳಿಮಂಟಪದ ಮೇಜಿನ ಕೆಳಗೆ ತನ್ನ ಸ್ವಂತದ ಬಾಚಣಿಗೆಯೊಮದು ಬಿದ್ದಿದ್ದುದನ್ನು ಕಂಡಳು; ಕಡೆಯ ದಿನ ಮಧ್ಯಾಹ್ನ ಅವಳೂ ಕ್ಲಿಫರ್ಡನೂ ಅಲ್ಲಿ ಒಟ್ಟಿಗೆ ಕುಳಿತಿದ್ದರು, ಆಗ ಅದು ಕೆಳಕ್ಕೆ ಬಿದ್ದಿರಬೇಕು.

ರಾತ್ರಿಯೆಲ್ಲ ಜಾಗರಣೆ ಮಾಡಿದ್ದು, ನಮ್ಮ ನೆನಪಿನಲ್ಲ ಅವನು ಭಯಂಕರನಾಗಿ ಉಳಿದಿದ್ದಾನೆ.

ಫೀಬೆ ಮೊದಲು ಅಂಗಡಿಯ ಬಾಗಿಲನ್ನು ತೆರೆಯಲು ಪ್ರಯತ್ನಪಟ್ಟು ನೋಡಿದಳು. ಅದು ಅವಳ ಕೈಗೆ ಜಗ್ಗಲಿಲ್ಲ, ಕಿಟಕಿಯ ರೂಪದಲ್ಲಿ ಬಾಗಿಲ ಮೇಲ್ಭಾಗಕ್ಕೆ ಅಡ್ಡನಾಗಿ ಕಟ್ಟಿದ್ದ ಬಿಳಿಯತೆರೆ ಅವಳ ಸೂಕ್ಷ್ಮಗ್ರಹಣಶಕ್ತಿಗೆ ಅಸಾಧಾರಣವಾಗಿ ಕಂಡಿತು. ಇಲ್ಲಿಂದ ಒಳಕ್ಕೆ ಹೋಗಲು ಅವಳು ಇನ್ನೊಮ್ಮೆ ಪ್ರಯತ್ನಪಡದೆ, ಕಮಾನುಕಿಟಕಿಯ ಅಡಿಯ ಹೆಬ್ಬಾಗಿಲ ಬಳಿಗೆ ನಡೆದಳು. ಅದೂ ಕೂಡ ಹಾಕಿದ್ದುದರಿಂದ, ಅದನ್ನು ತಟ್ಟಿದಳು. ಒಳಗಿನ ಶೂನ್ಯತೆಯಿಂದ ಪ್ರತಿಧ್ವನಿಯೊಂದು ಬಂದಿತ್ತು. ಅವಳು ಮತ್ತೊಮ್ಮೆ ಬಾಗಿಲು ತಟ್ಟಿದಳು. ಮೂರನೆಯ ಸಲವೂ ತಟ್ಟಿದಳು; ತಟ್ಟಿ, ಕಿವಿಗೊಟ್ಟು ಆಲಿಸಿದಳು; ಅವಳನ್ನು ಒಳಕ್ಕೆ ಬರಮಾಡಿ ಕೊಳ್ಳಲು ಹೆಪ್ಸಿಬಾ ತನಗೆ ಅಭ್ಯಾಸವಾಗಿದ್ದ ರೀತಿಯಲ್ಲಿ ಮೆಟ್ಟುಂಗಾಲಿಕ್ಕಿ ನಡೆಯುತ್ತಾ ಬಂದಿದ್ದರೆ ಹೇಗೋ ಹಾಗೆ, ನೆಲದಮೇಲೆ ಕಿರುಗಟ್ಟುವ ಸದ್ದು ಆಗುತ್ತಿದೆಯೆಂದು ಅವಳು ಭಾವಿಸಿದಳು. ಆದರೆ ಆ ಕಾಲ್ಪನಿಕಶಬ್ದದ ಬೆನ್ನ ಹಿಂದೆಯೇ ಶ್ಮಶಾನಮೌನವು ತೊಡಗಲು, ಮನೆಯ ಹೊರಭಾಗವೆಲ್ಲಾ ತನಗೆ ಪರಿಚಯವಾಗಿದ್ದದ್ದೆ ಎಂದು ಯೋಚಿಸಿದರೂ ಕೂಡ, ತಾನು ಮನೆಯನ್ನು ತಪ್ಪಾಗಿ ತಿಳಿದು ಇಲ್ಲಿಗೆ ಬಂದಿರಬಹುದೆ ಎಂದು ಪ್ರಶ್ನಿಸಿಕೊಳ್ಳತೊಡಗದಿಳು.

ಈಗ ಸ್ವಲ್ಪ ದೂರದಲ್ಲಿನ ಒಂದು ಮಗುವಿನ ಧ್ವನಿ ಅವಳ ಗಮನವನ್ನು ಸೆಳೆಯಿತು. ಅದು ತನ್ನನ್ನು ಹೆಸರು ಹಿಡಿದು ಕೂಗಿದಂತೆ ಭಾಸವಾಯಿತು. ಅದು ಎಲ್ಲಿಂದ ಬಂದಿತೋ ಆ ಕಡೆಗೆ ತಿರುಗಿ ನೋಡಲಾಗಿ, ಫೀಬೆ ಚಿಕ್ಕ ನೆಡ್ ಹಿಗ್ಗಿನ್ಸ್ ಕಂಡುಬಂದ; ಅವನು ಬೀದಿಯ ಈ ಕಡೆ ತಕ್ಕಮಟ್ಟಿಗೆ ದೂರದಲ್ಲಿ, ನೆಲವನ್ನು ಘಟ್ಟಿಸುತ್ತಾ, ಎರಡೂ ಕೈಗಳಿಂದ ಅಲ್ಲಗಳೆಯುವ ಸನ್ನೆಗಳನ್ನು ಮಾಡುತ್ತಾ, ಅಗಲವಾಗಿ ಬಾಯಿ ತೆರೆದು ಅವಳನ್ನು ಸಂಬೋಧಿಸಿ ಅರಚಿಕೊಂಡು ಮಾತಾಡುತ್ತಾ, ಬರುತ್ತಿದ್ದನು.

"ಬೇಡ, ಫೀಬೆ, ಬೇಡಾ! ಒಳಕ್ಕೆ ಹೋಗಬೇಡ! ಅಲ್ಲಿ ತುಂಬಾ ಕೆಟ್ಟದ್ದು ಏನೋ ಇದೆ! ಬೇಡ–ಬೇಡ–ಖಂಡಿತ ಒಳಕ್ಕೆ ಹೋಗಬೇಡ!"

ಆದರೆ, ಸಂದರ್ಭ ಏನೆಂದು ವಿವರವಾಗಿ ಕೇಳಿ ತಿಳಿದುಕೊಳ್ಳಲು ಆ ಹುಡುಗನನ್ನು ಪುಸಲಾಯಿಸಲು ಸಾಧ್ಯವಾಗದಿದ್ದುದರಿಂದ, ಅವನು ಯಾವಾಗಲೋ ಕೆಲವು ಸಲ ಅಂಗಡಿಗೆ ಹೋಗಿದ್ದಾಗ ತನ್ನ ದಾಯಾದಿ ಹೆಪ್ಸಿಬಾ ಅವನನ್ನು ಎಲ್ಲೊ ಬೆದರಿಸಿರಬೇಕೆಂದು ಫೀಬೆ ತೀರ್ಮಾನಿಸಿದಳು; ಏಕೆಂದರೆ, ನಿಜವಾಗಿ,

# ೨೦. ಈಡನ್ನಿನ* ಹೂವು

ಬಿಸಿಲು ಬೆಳಗುತ್ತಿದ್ದ ಹಗಲ ಮಧ್ಯದಿಂದ ಫೀಬೆ ಹಾಗೆ ಇದ್ದಕ್ಕಿದ್ದಂತೆ ಬಂದದ್ದರಿಂದ, ಆ ಹಳೆಯ ಮನೆಯ ನಡೆದಾಡಬಹುದಾದ ಸಂದಿಗೊಂದಿಗಳಲ್ಲೆಲ್ಲ ಅಡಗಿಕೊಂಡಿದ್ದ ದಟ್ಟವಾದ ನೆರಳಿನಲ್ಲಿ ಅವಳಿಗೂ ಬಹುಮಟ್ಟಿಗೆ ಕಣ್ಣುಗತ್ತಲೆ ಕವಿಯಿತು. ತನ್ನನ್ನು ಒಳಕ್ಕೆ ಬರಮಾಡಿಕೊಂಡವರು ಯಾರು ಎಂಬುದು ಅವಳಿಗೂ ಮೊದಲು ಗೊತ್ತಾಗಲೇ ಇಲ್ಲ. ಅವಳ ಕಣ್ಣು ಅಲ್ಲಿನ ಮಬ್ಬುಗತ್ತಲೆಗೆ ಹೊಂದಿಕೊಳ್ಳುವುದಕ್ಕೆ ಮುಂಚೆಯೇ ಒಂದು ಕೈ ಅವಳ ಕೈಯನ್ನು ಹಿಡಿದುಕೊಂಡಿತು; ಆ ಕೈಯ ಹಿಡಿತ ದೃಢವಾಗಿದ್ದರೂ, ಮೃದುವಾಗಿ ಬೆಚ್ಚನೆ ಹಿತಕರವಾಗಿತ್ತು; ಅದರಲ್ಲಿ ಒಂದು ಆದರದ ಸ್ವಾಗತ ಕಂಡುಬಂದು, ಒಂದು ಅನಿರ್ವಚನೀಯವಾದ ಹರ್ಷ ರೋಮಾಂಚನವುಂಟಾಗಿ, ಅವಳ ಹೃದಯ ಹಿಗ್ಗಿ ಕುಣಿಯಿತು. ತನ್ನನ್ನು ಉದ್ದಕ್ಕೂ ಎಳೆದುಕೊಂಡು ಹೋದಂತೆ ಅವಳಿಗೆ ಭಾಸವಾಯಿತು; ಆದರೆ, ದಿವಾನಖಾನೆಗಲ್ಲ, ಯಾರೂ ವಾಸವಾಗಿಲ್ಲದ ಒಂದು ದೊಡ್ಡ ಕೋಣೆಗೆ; ಹಿಂದೊಮ್ಮೆ ಅದು ಏಳು ಇಪ್ಪಾರಿನ ಭವ್ಯವಾದ ಅತಿಥಿಸತ್ಕಾರದ ಕೋಣೆಯಾಗಿತ್ತು. ಈ ಕೋಣೆಯ ತೆರೆಹಾಕಿಲ್ಲದಿದ್ದ ಎಲ್ಲ ಕಿಟಕಿಗಳ ಮೂಲಕವೂ ಸೂರ್ಯಪ್ರಕಾಶವು ಧಾರಾಳವಾಗಿ ಬಂದು, ಧೂಳು ಕವಿದ ನೆಲದ ಮೇಲೆ ಬಿದ್ದಿತ್ತು; ಅದರಿಂದಾಗಿ, ತನ್ನ ಕೈಹಿಡಿದುಕೊಂಡು ಆದರಪೂರ್ವಕವಾಗಿ ತನ್ನನ್ನು ಒಳಕ್ಕೆ ಕರೆದೊಯ್ದುವರು ಹೆಪ್ಸಿಬಾ ಅಥವಾ ಕ್ಲಿಫಡ ಆಗಿರದೆ ಹಾಲ್‌ಗ್ರೇವ್ ಆಗಿದ್ದನೆಂಬುದು ಅವಳಿಗೆ ಈಗ ಸ್ಪಷ್ಟವಾಗಿ ಕಂಡುಬಂದಿತು; ಆ ಸನ್ನಿವೇಶದಲ್ಲಿ ಅವಳಿಗೆ ಅರ್ಥವಾಗದ ರಹಸ್ಯವೂ ಯಾವುದೂ ಇರಲಿಲ್ಲ. ಸೂಕ್ಷ್ಮವಾದ, ಸಹಜಪ್ರೇರಣೆಯಿಂದಾದ ಒಂದು ಭಾವಸಂಪರ್ಕ, ಅಥವಾ ಬೇರೆಯ ವಿಧವಾಗಿ ಹೇಳುವುದಾದರೆ, ಏನೋ ತಿಳಿಸಬೇಕೆಂಬ ಅಸ್ಪಷ್ಟವಾದ ಅನಿರ್ದಿಷ್ಟವಾದ ಒಂದು ಭಾವನೆ ಅವಳಿಗುಂಟಾಗಿ, ಅವಳು ಸ್ವಲ್ಪವೂ ಪ್ರತಿಭಟಿಸದೆ ಅವನ ಸಹಜಪ್ರೇರಣೆಯ ಪ್ರಭಾವಕ್ಕೆ ಒಳಗಾದಳು. ತನ್ನ ಕೈಯನ್ನು ಅವನ ಹಿಡಿತದಿಂದ ಬಿಡಿಸಿಕೊಳ್ಳದೆ, ಅವಳು ಹೊರಟು ಹೋದ ಮೇಲೆ ಕುಟುಂಬದ ಸ್ಥಿತಿಗತಿ ವ್ಯತ್ಯಾಸ ಹೊಂದಿತ್ತೆಂದೂ ಅದರ

---

* ಈಡನ್= ಆ್ಯಡಂ ಮತ್ತು ಈವ್ ಸೃಷ್ಟಿಗೊಂಡಾಗ ಅವರಿಗಾಗಿ ಕಲ್ಪಿಸಿದ್ದ ಸುಖದ ವಾಸಸ್ಥಾನ; ಸ್ವರ್ಗೋದ್ಯಾನ.

ತನ್ನ ಇಬ್ಬರು ಬಂಧುಗಳು ಈಗ ತಮ್ಮ ಹಳೆಯ ಮನೆಯಲ್ಲಿ ಬಾಗಿಲು ಹಾಕಿಕೊಂಡು ಒಳಗೇ ಅಡಗಿಕೊಂಡು ಕುಳಿತಿದ್ದಿರಬಹುದೆಂದು ಅವಳಿಗೆ ತೋರಿತು; ಇದಕ್ಕಿಂತಲೂ ಹೆಚ್ಚು ವಿಚಿತ್ರವಾದ ಕೆಲಸಗಳನ್ನು ಅವರು ಮಾಡಬಲ್ಲವರಾಗಿದ್ದರೆಂಬುದನ್ನು ಅವಳು ಚೆನ್ನಾಗಿ ಬಲ್ಲಳು. ಆದರೂ ಕೂಡ, ಎಲ್ಲೋ ಏನೋ ತಪ್ಪು ನಡೆದಿದೆ ಎಂಬ ಅಸ್ಪಷ್ಟ ಸಂದೇಹದಿಂದಲೂ ತಾನು ವ್ಯಕ್ತರೂಪದಲ್ಲಿ ಹೊರಪಡಿಸಲಾಗದ ಭೀತಿಯಿಂದಲೂ ಅವಳು ಮನೆಗೂ ತೋಟಕ್ಕೂ ಬಳಕೆಯ ದಾರಿಯಾಗಿದ್ದ ಬಾಗಿಲನ್ನು ಸಮೀಪಿಸಿದಳು. ಈ ಹಿಂದೆ ಅವಳು ತೆರೆಯಲು ಪ್ರಯತ್ನಪಟ್ಟಿದ್ದ ಇನ್ನೆರಡು ಬಾಗಿಲುಗಳಂತೆ, ಇವನ್ನೂ ಕೂಡ ಒಳಗಿನಿಂದ ಭದ್ರಪಡಿಸಲಾಗಿತ್ತು. ಆದರೂ ಅವಳು ಬಾಗಿಲು ತಟ್ಟಿದಳು; ಆ ಕೂಡಲೆಯೆ, ಅವಳ ಕೋರಿಕೆಯನ್ನು ಮೊದಲೇ ನಿರೀಕ್ಷಿಸಿದ್ದರೆ ಹೇಗೋ ಹಾಗೆ, ಯಾರೋ ಕಣ್ಣಿಗೆ ಬೀಳದ ವ್ಯಕ್ತಿ ತಕ್ಕಮಟ್ಟಿನ ಬಲವನ್ನೆಲ್ಲಾ ಉಪಯೋಗಿಸಿ ಬಾಗಿಲನ್ನು ಎಳೆದು ತೆರೆದರು; ಬಾಗಿಲನ್ನು ಪೂರ್ತಿ ತೆರೆಯದಿದ್ದರೂ, ಅವಳು ಪಕ್ಕ ಪಕ್ಕನಾಗಿ ಒಳಕ್ಕೆ ಹೋಗುವಷ್ಟು ಅವಕಾಶವಿರುವ ಮಟ್ಟಿಗೆ ತೆರೆಯಲಾಗಿತ್ತು. ಇತರರು ಹೊರಗಿನಿಂದ ತನ್ನನ್ನು ಪರೀಕ್ಷಿಸಿ ನೋಡದೇ ಇರಲೆಂದು ಹೆಪ್ಸಿಬಾ ತಪ್ಪದೆ ಇದೇ ರೀತಿಯಲ್ಲಿ ಬಾಗಿಲು ತೆರೆಯುತ್ತಿದ್ದಳಾದ್ದರಿಂದ, ತನ್ನನ್ನು ಒಳಕ್ಕೆ ಬಿಟ್ಟವಳು ತನ್ನ ದಾಯದ ಸೋದರಿಯೇ ಇರಬೇಕೆಂದು ಫೀಬೆ ತೀರ್ಮಾನಿಸಿದಳು.

ಆದ್ದರಿಂದ, ಅವಳು ಹಿಂದೆಮುಂದೆ ನೋಡದೆ ಹೊಸಿಲುದಾಟಿ ಒಳಕ್ಕೆ ಹೋದಳು; ಅವಳು ಪ್ರವೇಶಿಸಿದಳೋ ಇಲ್ಲವೋ, ಅವಳ ಹಿಂದೆಯೇ ಬಾಗಿಲು ಮುಚ್ಚಿಕೊಂಡಿತು.

* * * *

ಉತ್ತರಕೊಟ್ಟನು.

"ಹೆಪ್ಸಿಬಾ, ಕ್ಲಿಫರ್ಡ್ ಹೊರಟುಹೋಗಿದ್ದಾರೆಯೆ? ಅದು ಸಾಧ್ಯವಿಲ್ಲ! ದಿವಾನಖಾನೆಯನ್ನು ಬಿಟ್ಟು, ಈ ಕೋಣೆಗೆ ಏಕೆ ನೀನು ನನ್ನನ್ನು ಕರೆದುಕೊಂಡು ಬಂದಿದ್ದೀಯೆ? ಓಹೋ, ಏನೋ ಭಯಂಕರವಾದ ಸಂಗತಿ ನಡೆದಿರಬೇಕು ಅಲ್ಲಿ! ನಾನು ಬೇಗ ಹೋಗಿ, ಅದೇನೆಂದು ನೋಡಿ ಬರಬೇಕು!" ಎಂದು ನುಡಿದಳು ಅವಳು.

ಅವಳನ್ನು ಹಿಂದಕ್ಕೆ ಎಳೆದುಕೊಂಡು, ಹಾಲ್‌ಗ್ರೇವ್ ಹೇಳಿದ: "ಕೂಡದು ಫೀಬೆ, ಕೂಡದು! ನಾನು ನಿನಗೆ ಹೇಳಿದ್ದು ದಿಟ. ಅವರು ಹೊರಟುಹೋಗಿದ್ದಾರೆ, ಎಲ್ಲಿಗೆ ಎಂದು ನಾನು ಕಾಣೆ. ಒಂದು ಘೋರ ಕೃತ್ಯವೇನೋ ನಡೆದಿರುವುದು ದಿಟ; ಆದರೆ ಅವರಿಗೆ ಏನೂ ಆಗಿಲ್ಲ; ಅಲ್ಲದೆ ಅವರ ಮೂಲಕವೂ ಅದು ನಡೆದಿಲ್ಲ ಎಂದು ನನ್ನ ಬಲವಾದ ನಂಬಿಕೆ. ಫೀಬೆ, ನಿನ್ನ ಸ್ವಭಾವವನ್ನು ನಾನು ಸರಿಯಾಗಿ ಅರ್ಥಮಾಡಿಕೊಂಡಿರುವುದಾದರೆ," ಎಂದು ತುಸ ನಿಲ್ಲಿಸಿ, ನಿಷ್ಠುರವಾದ ಕಳವಳ ಮನಸ್ಸನ್ನು ಕಾಡಿಸರೂ ಬಹಳ ಕೋಮಲಭಾವದಿಂದ ಅವಳನ್ನು ದೃಷ್ಟಿಸಿ ನೋಡುತ್ತಾ, ಅವನು ಮುಂದುವರಿಸಿದನು: "ನೀನು ಬಹಳ ಮೆದುಗಲು; ಸಾಮಾನ್ಯ ವಿಷಯಗಳ ನಡುವೆ ನಿನ್ನ ಕಾರ್ಯಕ್ಷೇತ್ರ ಇರುವ ಹಾಗೆ ಕಾಣುತ್ತದೆ; ಆದರೂ ಕೂಡ, ನಿನ್ನ ಶಕ್ತಿ ಅದ್ಭುತ. ನಿನ್ನಲ್ಲಿ ಒಂದು ಆಶ್ಚರ್ಯಕರವಾದ ಸಮತೆ, ಸಹಜಶಕ್ತಿ ಇವೆ; ಅವುಗಳನ್ನು ಪರೀಕ್ಷೆಗೊಡ್ಡಿದಾಗ, ಸಾಧಾರಣ ನಿಯಮಗಳಿಗೆ ಒಳಪಡದ ವ್ಯವಹಾರಗಳನ್ನು ನಿರ್ವಹಿಸಲು ಅವು ಸಮರ್ಥವಾಗಿ ಪರಿಣಮಿಸುತ್ತವೆ."

"ಇಲ್ಲ, ಇಲ್ಲ, ನನ್ನಲ್ಲಿ ಏನೂ ಶಕ್ತಿಯಿಲ್ಲ! ಆದರೆ, ನಡೆದಿರುವುದೇನು, ನನಗೆ ಹೇಳು" ಎಂದು ಫೀಬೆ ನಡುಗುತ್ತ ಉತ್ತರಕೊಟ್ಟಳು.

ಆದರೆ, ಹಾಲ್‌ಗ್ರೇವ್ ಪಟ್ಟುಹಿಡಿದ; "ನೀನು ಶಕ್ತಿವಂತೆ. ನೀನು ಶಕ್ತಿವಂತೆಯೂ ಆಗಿರಬೇಕು, ಬುದ್ಧಿವಂತೆಯೂ ಆಗಿರಬೇಕು; ನನ್ನ ಮನಸ್ಸು ಎಲ್ಲೆಲ್ಲೋ ಓಡುತ್ತದೆ, ನನಗೆ ನಿನ್ನ ಸಲಹೆಯ ಅಗತ್ಯವಿದೆ. ಮಾಡಬೇಕಾದ ಕೆಲಸ ಸರಿಯಾದದ್ದು ಯಾವುದು ಎಂಬುದನ್ನು ಸಲಹೆ ಮಾಡಲು ಬಹುಶಃ ನಿನಗೆ ಸಾಧ್ಯವಾದೀತು."

"ಅದೇನು ಹೇಳು; ನನಗೆ ಹೇಳು! ಈ ರಹಸ್ಯ– ನನ್ನನ್ನು ಪೀಡಿಸುತ್ತಿದೆ, ದಿಗಿಲುಪಡಿಸುತ್ತಿದೆ! ಬೇರೆ ಏನನ್ನಾದರೂ ಸಹಿಸಬಲ್ಲೆ!" ಎಂದು ನಡುನಡುಗುತ್ತ ನುಡಿದಳವಳು.

ಬಗೆಗೆ ವಿವರಣೆ ನೀಡಲು ತಾನು ತವಕಗೊಂಡಿರುವುದಾಗಿಯೂ ತಿಳಿಸಬೇಕೆಂಬ ಆತಂಕವೇನೋ ಅವನ ಮುಖದಲ್ಲಿತ್ತು; ಅನಿಷ್ಟ ಸೂಚನೆಯೇನೂ ಅದರಲ್ಲಿ ಕಂಡುಬರಲಿಲ್ಲ.

ಕಲಾವಿದನು ಎಂದೂ ಎಂದಿಗಿಂತ ಹೆಚ್ಚು ಬಿಳಿಚಿಕೊಂಡಿದ್ದನು; ಚಿಂತಾಭಾರದಿಂದ ಅವನ ಹಣೆ ಬಹಳವಾಗಿ ಸಂಕೋಚಗೊಂಡು, ಹುಬ್ಬುಗಳ ನಡುವೆ ಆಳವಾದ ನೆಟ್ಟನೆಯ ಗೆರೆ ಮುದ್ರಿತವಾಗಿತ್ತು. ಆದರೂ, ಅವನ ಮುಗುಳುನಗೆಯಲ್ಲಿ ನಿಜವಾದ ಆದರ ತುಂಬಿದ್ದು, ನಲಿವು ಕಂಡುಬರುತ್ತಿತ್ತು. ತನ್ನ ಹೃದಯಕ್ಕೆ ಸಮೀಪವಾದ ಭಾವವನ್ನು ಹೊಸ ಇಂಗ್ಲೆಂಡ್ ಜನಕ್ಕೆ ಸಹಜವಾದ ಬಿಗುವಿನ ವರ್ತನೆಯಿಂದ ಮರೆಮಾಚುವುದು ಹಾಲ್‌ಗ್ರೇವನಿಗೆ ರೂಢಿಯಾಗಿತ್ತು; ಆ ಬಿಗುವಿನ ಭಾವವನ್ನೂ ಭೇದಿಸಿಕೊಂಡು ಬಂದಿತ್ತು ಇಂದಿನ ಅವನ ಆ ನಲಿವಿನ ಭಾವ; ಮನೋಭಾವ ಇಷ್ಟು ಸ್ಪಷ್ಟವಾಗಿ ಅವನ ಮುಖದಲ್ಲಿ ಪ್ರಕಟವಾದದ್ದನ್ನು ಅವಳು ಎಂದೂ ಕಂಡಿರಲಿಲ್ಲ. ಈಗ ಅವನ ಮುಖದ ನೋಟ ಹೇಗಿತ್ತೆಂದರೆ,– ಒಂದು ನಿರ್ಜನವಾದ ಕಾಡಿನಲ್ಲಿಯೋ ಇಲ್ಲವೆ ಅಪಾರ ವಿಸ್ತಾರದ ಮರಳುಗಾಡಿನಲ್ಲಿಯೋ ಒಬ್ಬನು ಒಂಟಿಯಾಗಿ ಯಾವುದೋ ಒಂದು ಭಯಂಕರ ವಸ್ತುವನ್ನು ಕುರಿತು ಚಿಂತಿಸುತ್ತಿದ್ದಾಗ, ತನ್ನ ಅತ್ಯಂತ ಪ್ರಿಯಸ್ನೇಹಿತನ ಪರಿಚಿತ ಮುಖವನ್ನು ಅಲ್ಲಿ ಕಾಣುವನು; ಆ ಆಕಸ್ಮಾತ್ ದರ್ಶನವು ಮನೆಗೆ ಸಂಬಂಧಪಟ್ಟ ಹಾಗೂ ಗಲಭೆಯಿಲ್ಲದೆ ಮೆಲ್ಲನೆ ಸಾಗುವ ನಿತ್ಯ ವ್ಯವಹಾರಗಳಿಗೆ ಸಂಬಂಧಪಟ್ಟ ಪ್ರಶಾಂತಭಾವನೆಗಳನ್ನು ಸ್ಮರಣೆಗೆ ತರುವುದು; ಆ ಸಂದರ್ಭದಲ್ಲಿ ಆ ಒಬ್ಬೊಂಟಿಗನ ನೋಟ ಹೇಗಿದ್ದಿರಬಹುದೋ ಹಾಗಿತ್ತು ಹಾಲ್‌ಗ್ರೇವನ ಈಗಿನ ಮುಖದ ನೋಟ. ಆದರೂ ಕೂಡ, ಅವಳ ಪ್ರಶ್ನಾರ್ಥಕವಾದ ಕುತೂಹಲದ ನೋಟಕ್ಕೆ ಉತ್ತರ ಕೊಡಬೇಕಾದ ಅಗತ್ಯ ಅವನಿಗೆ ಕಂಡುಬಂದದ್ದರಿಂದ, ಈ ಮುಗುಳುನಗೆ ಮಾಸಿಹೋಯಿತು.

"ನೀನು ಬಂದೆಯೆಂದು ನಾನು ಹಿಗ್ಗಲಾರೆ ಫೀಬೆ. ಒಂದು ವಿಚಿತ್ರವಾದ ಗಳಿಗೆಯಲ್ಲಿ ನಾವು ಸೇರುತ್ತಿದ್ದೇವೆ" ಎಂದನು ಅವನು.

"ಏನು ನಡೆದಿದೆ? ಏಕೆ ಮನೆ ಅಷ್ಟೊಂದು ಹಾಳು ಸುರಿಯುತ್ತಿದೆ? ಹೆಪ್ಸಿಬಾ, ಕ್ಲಿಫರ್ಡ್, ಇವರು ಎಲ್ಲಿ, ಕಾಣುವುದಿಲ್ಲವಲ್ಲಾ" ಎಂದು ಅವಳು ಉದ್ಗಾರ ತೆಗೆದಳು.

"ಅವರು ಹೊರಟುಹೋಗಿದ್ದಾರೆ! ಅವರು ಎಲ್ಲಿದ್ದಾರೋ ನಾನು ಊಹಿಸಲಾರೆ. ಮನೆಯಲ್ಲಿ ನಾವಿಬ್ಬರೇ ಈಗ!" ಎಂದು ಹಾಲ್‌ಗ್ರೇವ್

ದಿವಾನಖಾನೆಯಲ್ಲಾಗಲಿ, ಹೆಪ್ಸಿಬಾಳ ಕೋಣೆಯಲ್ಲಾಗಲಿ, ಕ್ಲಿಫರ್ಡನ ಕೋಣೆಯಲ್ಲಾಗಲಿ, ದೀಪವಿಲ್ಲದ್ದನ್ನು ಕಂಡೆ. ಇಂದಿನ ಬೆಳಗ್ಗೆ, ಅದೇ ಮರಣಸದೃಶವಾದ ಮೌನ ನೆಲಸಿತ್ತು. ನಿನ್ನೆಯ ದಿನದ ಬಿರುಗಾಳಿಮಳೆಯಲ್ಲಿಯೆ ನಿನ್ನ ಬಂಧುಗಳು ಮನೆಬಿಟ್ಟು ಹೋದದ್ದನ್ನ ಕಂಡದ್ದಾಗಿ ಒಬ್ಬ ನೆರೆಯಾತ ಹೇಳಿದ ಸಾಕ್ಷ್ಯವನ್ನು ಮರೆಯಲ್ಲಿದ್ದು ಕೇಳಿಸಿಕೊಂಡೆ. ಜಡ್ಜಿ ಪಿನ್ಚನ್ ಎಲ್ಲಿಯೂ ಕಾಣಿಸುತ್ತಿಲ್ಲ ಎಂಬ ವದಂತಿಯೂ ನನಗೆ ಮುಟ್ಟಿತು. ಆಗ ನನಗೊಂದು ಭಾವನೆಯುಂಟಾಯಿತು– ಯಾವುದೋ ವಿಪತ್ತಿನ, ಕಾರ್ಯಸಿದ್ಧಿಯ, ಅಸ್ಪಷ್ಟವಾದ ಭಾವನೆ ಅದು, ಅದನ್ನು ನಾನು ಹೀಗೆಂದು ವರ್ಣಿಸಲಾರೆ; ಆ ಭಾವನೆ, ಮನೆಯ ಈ ಭಾಗಕ್ಕೆ ಹೋಗುವಂತೆ ನನ್ನನ್ನು ನೂಕಿತು; ನೀನು ಈಗ ಇಲ್ಲಿ ನೋಡಿದ್ದನ್ನ ನಾನು ಆಗ ಅಲ್ಲಿ ಕಂಡೆ. ಮುಂದೆ ಎಂದಾದರೂ ಕ್ಲಿಫರ್ಡನಿಗೆ ಉಪಯೋಗವಾಗಬಹುದಾದ ಸಾಕ್ಷ್ಯವಾಗುವುದೆಂದು, ಜಡ್ಜಿ ಪಿನ್ಚನ್ನರ ಮರಣದ ಈ ಚಿತ್ರ ರೂಪದ ದಾಖಲೆಯನ್ನು ರಕ್ಷಿಸಿಡಲು ನನ್ನ ಬಳಿ ಇದ್ದ ಸಾಧನವನ್ನು ನಾನು ಉಪಯೋಗಿಸಿದೆ; ಫೀಬೆ, ಆ ಸ್ಮಾರಕ ನನಗೇಕೆ ಬೆಲೆಯುಳ್ಳದ್ದೆಂದರೆ, ಆ ಮನುಷ್ಯನ ಅದೃಷ್ಟಕ್ಕೂ ನನಗೂ ಸಂಬಂಧ ಕಲ್ಪಿಸಿರುವ ವಂಶಾನುಗತವಾಗಿ ಬಂದ ಕಾರಣಗಳಿವೆ."

ತನ್ನ ಕಳವಳದ ಸ್ಥಿತಿಯಲ್ಲಿ ಕೂಡ, ಹಾಲ್‌ಗ್ರೇವ್‌ನ ನಡೆನುಡಿಯಲ್ಲಿ ಕಂಡುಬಂದ ಶಾಂತತೆಯನ್ನು ಕುರಿತು ಫೀಬೆ ಮಾತಾಡದೆ ಇರಲಾಗಲಿಲ್ಲ. ನ್ಯಾಯಮೂರ್ತಿಯ ಮರಣದ ಸಮಗ್ರ ಘೋರಸ್ವರೂಪ ಅವನ ಮನಸ್ಸಿನ ಮೇಲೆ ಪರಿಣಾಮವುಂಟುಮಾಡಿತ್ತು, ದಿಟ; ಆದರೆ ಅವನು ಆ ಸಂಗತಿಯನ್ನು ಯಾವ ಆಶ್ಚರ್ಯಭಾವದ ಸೋಂಕೂ ಇಲ್ಲದೆ ಮನಸ್ಸಿಗೆ ತೆಗೆದುಕೊಂಡಿದ್ದನು; ಅವನ ಭಾವನೆಯಲ್ಲಿ, ಅದು ಅನಿವಾರ್ಯವಾಗಿ ನಡೆಯಲೇಬೇಕಾದ, ಪೂರ್ವನಿಯಾಮಕವಾದ ಘಟನೆ; ಹಿಂದಿನ ಘಟನೆಗಳೊಂದಿಗೆ ಅದು ಎಷ್ಟು ಸಮಂಜಸವಾಗಿ ಹೊಂದಿಕೊಂಡಿತ್ತೆಂದರೆ, ಆ ಬಗೆಗೆ ಬಹುಮಟ್ಟಿಗೆ ಭವಿಷ್ಯ ನುಡಿಯಬಹುದಾಗಿತ್ತು.

"ಬಾಗಿಲುಗಳನ್ನೆಲ್ಲಾ ತೆರೆದುಬಿಟ್ಟು, ಸಾಕ್ಷಿಗಳನ್ನು ಬರಮಾಡಿ ಕೊಳ್ಳಬಹುದಾಗಿತ್ತಲ್ಲಾ? ಹಾಗೇಕೆ ಮಾಡಲಿಲ್ಲ? ಇಲ್ಲಿ ಒಂಟಿಯಾಗಿರುವು ದೆಂದರೆ, ತುಂಬಾ ದಿಗಿಲಾಗುತ್ತದೆ! ಎಂದು, ನೊಂದಂತೆ ನಡುಗಿ, ಕೇಳಿದಳು ಅವಳು.

ಕಲಾವಿದ ಹೀಗೆ ಸೂಚಿಸಿ: "ಆದರೆ, ಕ್ಲಿಫರ್ಡನ ವಿಚಾರ ಒಂದಿದೆಯಲ್ಲಾ! ಕ್ಲಿಫರ್ಡ್ ಮತ್ತು ಹೆಪ್ಸಿಬಾ! ಅವರ ಪರವಾಗಿ ಏನು ಮಾಡಿದರೆ ಅತ್ಯುತ್ತಮ

ಕಲಾವಿದನು ಹಿಂದೆ ಮುಂದೆ ನೋಡಿದನು. ಮನಸ್ಸಿನ ಸಮತೂಕವನ್ನು ಕಳೆದುಕೊಳ್ಳದ ಫೀಬೆಯ ಸಾಮರ್ಥ್ಯ ಅವನ ಮೇಲೆ ಪರಿಣಾಮ ಬೀರಿತ್ತು; ಆ ಬಗೆಗೆ ಅವನು ಈಗ ತಾನೆ ಮನಃಪೂರ್ವಕವಾಗಿಯೆ ಪ್ರಸ್ತಾಪಮಾಡಿದ್ದ; ಆದರೂ ಕೂಡ, ಹಿಂದಿನ ದಿನದ ಭಯಂಕರ ರಹಸ್ಯವನ್ನು ಅವಳಿಗೆ ತಿಳಿಸುವುದು ಬಹುಮಟ್ಟಿಗೆ ಕ್ರೂರತನವಾಗಿ ಅವನಿಗೆ ಕಂಡಿತು. ಹಾಗೆ ಮಾಡಿದರೆ, ಗೃಹಕೃತ್ಯದ ಅಗ್ನಿಯ ಹಾಗೂ ಅದರ ಸುತ್ತಮುತ್ತಣ ಸಾಂಸಾರಿಕ ಪರಿಕರಗಳ ಶುಭ್ರವೂ ಉಲ್ಲಾಸಕರವೂ ಆದ ಪವಿತ್ರ ಸ್ಥಳದ ಮುಂದೆ ತನ್ನ ಎಲ್ಲ ವಿಕೃತ ಸ್ವರೂಪವನ್ನೂ ತೋರಿಸುವ ಮೃತ್ಯುವಿನ ಘೋರಾಕೃತಿಯನ್ನು ಎಳೆದು ತಂದಿಟ್ಟ ಹಾಗಾಗುತ್ತಿತ್ತು. ಇಷ್ಟಾದರೂ, ಅದನ್ನು ಅವಳಿಂದ ಮರೆಮಾಚುವುದಕ್ಕೆ ಸಾಧ್ಯವಿರಲಿಲ್ಲ; ಅದನ್ನವಳು ತಿಳಿಯಲೇಬೇಕು.

"ಫೀಬೆ, ನಿನಗೆ ಇದರ ನೆನಪಿದೆಯೆ?" ಎಂದನವನು.

ಹಾಗೆ ಹೇಳಿ, ಅವನು ಅವಳ ಕೈಗೆ ಒಂದು ಛಾಯಾಚಿತ್ರ ಪ್ರತಿಯನ್ನು ಕೊಟ್ಟನು ಅವರಿಬ್ಬರೂ ತೋಟದಲ್ಲಿ ಮೊದಲ ಸಲ ಸಂದರ್ಶಿಸಿದಾಗ ತೋರಿಸಿದ್ದ ಚಿತ್ರವೇ ಅದು; ಮೂಲವ್ಯಕ್ತಿಯ ಕಠಿನವೂ ನಿರ್ದಯವೂ ಆದ ಲಕ್ಷಣಗಳನ್ನು ಅದು ಗಮನಾರ್ಹವಾದ ರೀತಿಯಲ್ಲಿ ಹೊರಪಡಿಸಿತ್ತು.

"ಇದಕ್ಕೂ ಹೆಪ್ಸಿಬಾಗೂ ಮತ್ತು ಕ್ಲಿಫರ್ಡ್‌ಗೂ ಏನು ಸಂಬಂಧ?" ಎಂದು ಫೀಬೆ ಕೇಳಿದಳು; ಇಂಥ ವೇಳೆಯಲ್ಲಿ ಹಾಲ್‌ಗ್ರೇವ್ ತನ್ನೊಂದಿಗೆ ಹೀಗೆ ತಮಾಷೆ ಮಾಡುತ್ತಿರುವನೆ ಎಂದು ಅವಳಿಗೆ ತವಕದ ಆಶ್ಚರ್ಯ: "ಅದು ಜಡ್ಜಿ ಪಿನ್ಚನ್ನರ ಚಿತ್ರ! ನೀನು ಅದನ್ನ ನನಗೆ ಹಿಂದೆಯೇ ತೋರಿಸಿದ್ದೆ!"

ಕಲಾವಿದನು ಅವಳಿಗೆ ಇನ್ನೊಂದು ಸೂಕ್ಷ್ಮಚಿತ್ರವನ್ನು ತೋರಿಸುತ್ತ ಹೇಳಿದನು: "ಆದರೆ ನೋಡಿಲ್ಲಿ ಈ ಅರ್ಧಗಂಟೆಯೊಳಗೆ ತೆಗೆದ ಅದೇ ಮುಖದ ಇನ್ನೊಂದು ಚಿತ್ರ. ಬಾಗಿಲ ಬಳಿ ನೀನು ಸದ್ದು ಮಾಡಿದ್ದನ್ನು ಕೇಳಿದಾಗ, ಅದನ್ನು ಆಗತಾನೆ ನಾನು ಮುಗಿಸಿದ್ದೆ."

"ಇದು ಮೃತ್ಯು! ಜಡ್ಜಿ ಪಿನ್ಚನ್ ಸತ್ತುಹೋಗಿದ್ದಾರೆ!" ಎಂದು ಫೀಬೆ ಬಹು ವಿವರ್ಣಳಾಗಿ, ನಡನಡ ನಡುಗಿ ನುಡಿದಳು.

ಹಾಲ್‌ಗ್ರೇವ ನುಡಿದ: "ಅಲ್ಲಿ ಚಿತ್ರಿತವಾಗಿರುವ ಹಾಗೆ ಅವನು ಪಕ್ಕದ ಕೋಣೆಯಲ್ಲಿ ಕುಳಿತಿದ್ದಾನೆ. ಜಡ್ಜಿ ಸತ್ತು ಹೋಗಿದ್ದಾನೆ, ಕ್ಲಿಫರ್ಡ್ ಮತ್ತು ಹೆಪ್ಸಿಬಾ ಮಾಯವಾಗಿದ್ದಾರೆ! ಇನ್ನು ಹೆಚ್ಚಿನದು ನನಗೆ ತಿಳಿಯದು. ಮುಂದಿನದೆಲ್ಲಾ ಊಹೆಯ ವಿಷಯ. ಕಳೆದ ಸಂಜೆ ನನ್ನ ಒಂಟಿ ಕೋಣೆಗೆ ನಾನು ಹಿಂದಿರುಗಿದಾಗ,

ಸಂಭವಿಸಿದ ಸಾವಿನ ಸಂಬಂಧವಾದ ದಾಖಲೆಗಳಲ್ಲಿ ಹೇಳಿರುವ ಹೊರತೋರಿಕೆಗಳಲ್ಲಿಯೂ ಒಂದು ಸೂಕ್ಷ್ಮವಾದ ಹಾಗೂ ಅತ್ಯಂತ ಕರಾರುವಾಕಾದ ಸಾಮ್ಯವು ಗೋಚರಿಸುತ್ತದೆ. ಮುದುಕನಾಗಿದ್ದ ಜಫ್ರಿ ಪಿನ್ಚನ್ನನ ಘೋರ ಮರಣದ ವಿಷಯ ತೆಗೆದುಕೊಂಡರೆ, ಆ ಸಂಬಂಧವಾಗಿ ಕೆಲವು ಸಂದರ್ಭಗಳು ಒಂದು ಗೊತ್ತಾದ ರೀತಿಯಲ್ಲಿ ವ್ಯವಸ್ಥೆಗೊಂಡಿದ್ದುವು; ಅವು ಯಾವುವೆಂಬ ವಿವರಣೆ ಅಪ್ರಕೃತ; ಜನ ಇಂಥ ವಿಷಯಗಳನ್ನು ಯಾವ ಭಾವನೆಯಿಂದ ನೋಡುತ್ತಾರೆ ಎಂಬುದನ್ನು ಗಮನಿಸಿದರೆ, ಆ ಜಫ್ರಿ ಪಿನ್ಚನ್ನನ ದುರ್ಮರಣವು ಕ್ಲಿಫರ್ಡನ ಕೈಯಿಂದಲೇ ಆಗಿರುವುದು ಸಾಧ್ಯ, ಆಗಿರುವ ಸಂಭವವುಂಟು, ಆಗಿಯೇ ಇರಬೇಕು ಎನ್ನುವ ಹಾಗೆ ಮಾಡುತ್ತದೆ ಆ ಸಂದರ್ಭಗಳ ಜೋಡಣೆ."

"ಆ ಸಂದರ್ಭಗಳು ಎಲ್ಲಿಂದ ಉದ್ಭವವಾದುವು? ನಾವು ಬಲ್ಲಹಾಗೆ, ಅವನು ನಿರ್ದೋಷಿ!" ಎಂದ ಫ್ಹೀಬೆ ಉದ್ಗಾರ ತೆಗೆದಳು.

ಹಾಲ್‌ಗ್ರೇವ್ ನುಡಿದ: "ದೊಡ್ಡಪ್ಪನ ಮರಣದ ತರುವಾಯ, ಅದು ಹೊರಕ್ಕೆ ತಿಳಿಯಪಡುವುದಕ್ಕಿಂತ ಮುಂಚೆ, ಆ ಸಂದರ್ಭಗಳನ್ನು ಏರ್ಪಾಡು ಮಾಡಲಾಯಿತು; ಏರ್ಪಡಿಸಿದಾತ, ಈಗ ಆ ದಿವಾನಖಾನೆಯಲ್ಲಿ ಕುಳಿತಿದ್ದಾನೆಯಲ್ಲಾ, ಅವನೆ; ಅವನು ಹೌದೋ ಅಲ್ಲವೋ, ನನ್ನ ಬಹು ಕಾಲದ ನಂಬಿಕೆಯಂತೂ ಅದು. ಅವನ ಮರಣ ಮೊದಲಿನದರ ಹಾಗೆಯೆ ಇದೆ; ಆದರೂ ಆ ಸಂಶಯಾಸ್ಪದ ಸಂದರ್ಭಗಳು ಯಾವವೂ ಇದಕ್ಕೆ ಅಂಟಿಕೊಂಡಿಲ್ಲ; ಈ ಮರಣ ದೇವರು ಅವನಿಗೆ ಕೊಟ್ಟ ಹೊಡೆತ; ಏಕಕಾಲದಲ್ಲಿ ಅವನ ಕ್ರೂರತನಕ್ಕೆ ಶಿಕ್ಷೆಯೂ ಆಗಿ, ಕ್ಲಿಫರ್ಡನು ನಿರ್ದೋಷಿಯೆಂಬುದನ್ನು ಸ್ಪಷ್ಟಪಡಿಸಿದೆ. ಆದರೆ ಈ ಪಲಾಯನ– ಅದು ಪ್ರತಿಯೊಂದನ್ನೂ ತಿರುಗು ಮುರುಗು ಮಾಡಿ ಅಪಾರ್ಥಕ್ಕೆ ಎಡೆಗೊಡುತ್ತದೆ! ಅವನು ಇಲ್ಲೇ ಎಲ್ಲೋ ಹತ್ತಿರದಲ್ಲಿ ಅಡಗಿಕೊಂಡಿದ್ದರೂ ಇರಬಹುದು. ಜಡ್ಜಿಯ ಮರಣದ ಸಂಗತಿ ಬಹಿರಂಗವಾಗುವುದಕ್ಕೆ ಮೊದಲೇ ನಾವು ಅವನನ್ನು ಹಿಂದಕ್ಕೆ ಕರೆದು ಕೊಂಡುಬರುವುದು ಮಾತ್ರ ಸಾಧ್ಯವಾದರೆ, ಕೆಡುಕನ್ನು ಸರಿಪಡಿಸಬದುದು."

"ನಾವು ಈ ಸಂಗತಿಯನ್ನು ಇನ್ನು ಒಂದುಕ್ಷಣ ಕಾಲಕೂಡ ಹೆಚ್ಚಾಗಿ ಬಚ್ಚಿಡಕೂಡದು! ನಮ್ಮ ಹೃದಯದಲ್ಲಿ ಅದನ್ನು ಅಷ್ಟು ಭದ್ರವಾಗಿ ಇಟ್ಟುಕೊಳ್ಳುವುದು ತುಂಬ ಭಯಂಕರವಾದದ್ದು. ಕ್ಲಿಫರ್ಡ್ ನಿರ್ದೋಷಿ. ದೇವರೆ ಅದನ್ನು ಪ್ರಕಟಪಡಿಸುವನು! ನಾವು ಬಾಗಿಲುಗಳನ್ನೆಲ್ಲಾ ತೆರೆದುಬಿಡೋಣ; ನಿಜ ಸಂಗತಿ ಏನೆಂಬುದನ್ನು ನೋಡಲಿ, ನೆರೆಹೊರೆಯವರನ್ನೆಲ್ಲಾ ಕರೆದು ಬಿಡೋಣ!" ಎಂದಳು

ಎನ್ನುವುದನ್ನು ನಾವು ಪರ್ಯಾಲೋಚಿಸಬೇಕು. ಅವರು ಕಣ್ಮರೆಯಾಗಿ ಹೊರಟುಹೋದದ್ದು ಒಂದು ದುರ್ದೈವ! ಅವರು ಹಾಗೆ ಪಲಾಯನ ಮಾಡಿದ್ದು ಈ ಘಟನೆಗೆ ಎಷ್ಟು ಸಾಧ್ಯವೊ ಅಷ್ಟು ಮಟ್ಟಿಗೆ ಒಂದು ಕೆಟ್ಟ ಬಣ್ಣವನ್ನು ಕೊಡುತ್ತದೆ. ಆದರೂ ಕೂಡ, ಅವರನ್ನು ಬಲ್ಲವರಿಗೆ ಅದೆಷ್ಟು ಸುಲಭವಾಗಿ ವಿವರಣೆ ಸಿಕ್ಕುತ್ತದೆ! ಹಿಂದೆ ಸಂಭವಿಸಿದ್ದ ಒಂದು ಸಾವಿನ ಸಂಗತಿಗೂ ಇದಕ್ಕೂ ಇದ್ದ ಸಾಮ್ಯದಿಂದ ದಿಗ್ಭ್ರಮೆಗೊಂಡು ಭಯಚಕಿತರಾಗಿ, ಆ ಹಿಂದಿನ ಸಾವು ಕ್ಲಿಫರ್ಡನ ಮೇಲೆ ಅದೆಂಥ ವಿಪತ್ಕಾರಕ ದುಷ್ಪರಿಣಾವನ್ನುಂಟುಮಾಡಿತ್ತೆಂಬುದನ್ನು ನೆನೆದು, ಘಟನೆ ನಡೆದ ಸ್ಥಳದಿಂದ ಬಿಟ್ಟು ಓಡಿಹೋಗುವುದಲ್ಲದೆ ಬೇರೆ ಯೋಚನೆಯೇ ಅವರಿಗೆ ಇರಲಿಲ್ಲ. ಎಂಥ ಶೋಚನೀಯ ದುರ್ವಿಧಿ! ಹೆಪ್ಸಿಬಾ ಸುಮ್ಮನೆ ಗಟ್ಟಿಯಾಗಿ ಕಿರಿಚಿಕೊಂಡಿದ್ದರೆ ಸಾಕಾಗಿತ್ತು– ಕ್ಲಿಫರ್ಡ್ ಬಾಗಿಲನ್ನು ಪೂರ್ತಿ ತೆರೆದುಬಿಟ್ಟು ಜಡ್ಜಿ ಪಿನ್ಚನ್ನನ ಸಾವಿನ ವಿಚಾರವನ್ನು ಸಾರಿಹೇಳಿದ್ದರೆ ಸಾಕಾಗಿತ್ತು, ತನ್ನ ಮಟ್ಟಿಗೆ ಅದು ಎಷ್ಟೇ ಘೋರವಾಗಿ ಕಾಣಲಿ, ಅದು ಅವರ ಪಾಲಿಗೆ ಒಳ್ಳೆಯ ಪರಿಣಾಮಗಳನ್ನೇ ಉಂಟುಮಾಡುವ ಘಟನೆಯಾಗಿರುತ್ತಿತ್ತು, ನನ್ನ ಅಭಿಪ್ರಾಯದಲ್ಲಿ, ಕ್ಲಿಫರ್ಡನ ಸ್ವಭಾವಕ್ಕೆ ಅಂಟಿಕೊಂಡಿರುವ ಕಪ್ಪು ಕಳಂಕವನ್ನು ಅಳಿಸಿಹಾಕುವುದರಲ್ಲಿ ಅದು ತುಂಬಾ ನೆರವಾಗುತ್ತಿತ್ತು."

"ಅದು ಹೇಗೆ ಸಾಧ್ಯ? ಅಷ್ಟೊಂದು ಘೋರವಾದ ಕೃತ್ಯದಿಂದ ಒಳ್ಳೆಯದು ಹೇಗಾದೀತು?" ಎಂದು ಫೀಬೆ ಕೇಳಿದಳು.

ಕಲಾವಿದನು ಹೇಳಿದ,– "ಏಕೆಂದರೆ, ಈ ವಿಚಾರವನ್ನು ನ್ಯಾಯವಾಗಿ ಪರ್ಯಾಲೋಚಿಸಿ, ಬಿಚ್ಚು ಮನಸ್ಸಿನಿಂದ ವಿವರಿಸುವುದಾದರೆ, ಜಡ್ಜಿ ಪಿನ್ಚನ್ನನಿಗೆ ಒದಗಿದ ಅವಸಾನ ಅನ್ಯಾಯವಲ್ಲವೆಂಬುದು ಸ್ಪಷ್ಟವಾಗಬೇಕು. ಅನೇಕ ತಲೆಮಾರುಗಳಿಂದ, ಈ ಬಗೆಯ ಸಾವು ಆತನ ಕುಟಂಬದಲ್ಲಿ ಕಂಡುಬರುವ ಒಂದು ವಿಶಿಷ್ಟ ವೈಲಕ್ಷಣ್ಯವಾಗಿದೆ; ಅದು ಆಗಿಂದಾಗ್ಗೆ ಸಂಭವಿಸುವುದಿಲ್ಲವಾದರೂ, ಸಂಭವಿಸಿದಾಗ– ಸುಮಾರು ಜಡ್ಜಿಯ ವಯಸ್ಸಿನಲ್ಲಿಯೇ ವ್ಯಕ್ತಿಗಳನ್ನು ಬಲಿತೆಗೆದುಕೊಳ್ಳುತ್ತದೆ, ಮತ್ತು ಈ ದುರ್ಘಟನೆ ಸಾಮಾನ್ಯವಾಗಿ ಅವರ ಮನಸ್ಸು ಒಂದು ವಿಷಮಸ್ಥಿತಿಯಲ್ಲಿದ್ದು ಉದ್ವೇಗಗೊಂಡಿರುವಾಗ, ಅಥವಾ ಕೋಪಾವೇಶದಲ್ಲಿರುವಾಗ ಸಂಭವಿಸುತ್ತದೆ. ಮುದುಕ ಮಾಲನ ಭವಿಷ್ಯದ ನುಡಿಗೆ ಬಹುಶಃ ಪಿನ್ಚನ್ ಮನೆತನದವರಲ್ಲಿ ಕಂಡುಬರುತ್ತಿದ್ದ ಮನಃಸ್ಥಿತಿಯ ಪರಿಜ್ಞಾನ ಆಧಾರವಾಗಿತ್ತೆಂದು ತೋರುತ್ತದೆ. ಈಗ ನೋಡು, ನಿನ್ನೆ ಸಂಭವಿಸಿದ ಸಾವಿನ ಹೊರತೋರಿಕೆಗಳಲ್ಲಿಯೂ ಮೂವತ್ತು ವರ್ಷಗಳ ಹಿಂದೆ ಕ್ಲಿಫರ್ಡನ ದೊಡ್ಡಪ್ಪನಿಗೆ

ಬೇರೆ ಯಾವ ವಿಧದಲ್ಲಿಯೂ ವಿಕಾಸಗೊಳ್ಳದಿದ್ದ ರಾಗಭಾವಗಳ ಬೆಳೆವಣಿಗೆಯನ್ನು ಈ ಪ್ರಭಾವಗಳು ತ್ವರಿತಗೊಳಿಸಿದುವು. ಇನ್ನೂ ಬೆಳೆಯದಿದ್ದ ಅವುಗಳ ಮೊಳಕೆಗಳನ್ನು ಸಾಯುಗೊಡುವುದು ಹಾಲ್‌ಗ್ರೇವನ ಉದ್ದೇಶವಾಗಿದ್ದಿರಬಹುದು.

"ನಾವು ಇನ್ನೇಕೆ ತಡಮಾಡಬೇಕು?" ಎಂದು ಫೀಬೆ ಕೇಳಿದಳು: "ಈ ರಹಸ್ಯ ನನ್ನ ಉಸಿರನ್ನೇ ತೆಗೆಯುತ್ತಿದೆ! ಬಾಗಿಲುಗಳನ್ನು ತೆರೆದುಬಿಡೋಣ!"

"ನಮ್ಮ ಜೀವಮಾನದಲ್ಲೆಲ್ಲಾ ಇಂಥ ಗಳಿಗೆ ಮತ್ತೊಂದು ಬರಲಾರದು! ಇದೆಲ್ಲ ಕೇವಲ ಭಯವೊಂದೇಯೆ– ಭಯವಲ್ಲದೆ ಬೇರೆ ಇನ್ನೇನೂ ಇಲ್ಲವೆ, ಫೀಬೆ? ನನ್ನ ಹಾಗೆ ನಿನಗೆ ಒಂದು ಬಗೆಯ ಆನಂದದ ಅರಿವಾಗುತ್ತಿಲ್ಲವೆ? ಈ ಆನಂದದಿಂದಾಗಿಯೆ ಅಲ್ಲವೆ, ಜೀವನದ ಈ ಒಂದು ಘಟ್ಟ ಮಾತ್ರ ಸಾರ್ಥಕವಾಗಿ ಕಾಣುತ್ತಿರುವುದು?" ಎಂದು ನುಡಿದ ಹಾಲ್‌ಗ್ರೇವ್.

"ಇಂಥ ಒಂದು ಸಮಯದಲ್ಲಿ ಸಂತೋಷದ ವಿಚಾರವಾಗಿ ಯೋಚಿಸುವುದೂ ಪಾಪಕರ," ಎಂದು ಫೀಬೆ ಕಂಪಿಸುತ್ತ ಉತ್ತರಕೊಟ್ಟಳು.

"ಫೀಬೆ, ನೀನು ಇಲ್ಲಿಗೆ ಬರುವುದಕ್ಕೆ ಮುಂಚೆ ಒಂದು ಗಂಟೆಯ ಕಾಲ ನನ್ನ ಸ್ಥಿತಿ ಹೇಗಿತ್ತು ಎನ್ನುವುದನ್ನ ನೀನು ತಿಳಿಯುವುದು ಸಾಧ್ಯವಾಗಿದ್ದಿದ್ದರೆ ಅದು ನಿನಗೆ ಅರ್ಥವಾಗುತ್ತಿತ್ತು!" ಎಂದು ಉದ್ಗರಿಸಿ, ಅವನು ನುಡಿದ: ವಿಷಣ್ಣವಾದ, ಉತ್ಸಾಹ ಕುಗ್ಗಿಸುವ, ಕ್ಲೇಶಕರವಾದ ಗಂಟೆಯ ಕಾಲ ಅದು! ಆ ಮೃತಮನುಷ್ಯನ ಇರವು ಪ್ರತಿಯೊಂದು ವಸ್ತುವಿನ ಮೇಲೂ ಒಂದು ಕರಾಳ ಛಾಯೆಯನ್ನು ಕವಿದಿತ್ತು; ನನ್ನ ಗ್ರಹಣ ಶಕ್ತಿಗೆ ಗೋಚರವಾಗುವ ಮಟ್ಟಿಗೆ, ಅವನು ಇಡಿಯ ವಿಶ್ವವನ್ನೆ ಅಪರಾಧ ನಡೆಯುವ, ಮತ್ತು ಅಪರಾಧಕ್ಕಿಂತ ಘೋರವಾದ ಶಿಕ್ಷೆ ವಿಧಿಸುವ ಸ್ಥಳವನ್ನಾಗಿ ಮಾಡಿದ್ದನು. ಅದರ ಅನುಭಾವ ನನ್ನ ತಾರುಣ್ಯವನ್ನೇ ಅಪಹರಿಸಿಬಿಟ್ಟಿತು. ಮತ್ತೆ ತರುಣನೆಂದುಕೊಳ್ಳುವ ಆಶೆಯನ್ನೇ ನಾನು ಇಟ್ಟುಕೊಳ್ಳಲಿಲ್ಲ! ಪ್ರಪಂಚವು ವಿಚಿತ್ರವಾಗಿ, ಹುಚ್ಚು ಹುಚ್ಚಾಗಿ, ಕೆಡುಕಿನದಾಗಿ ದ್ವೇಷವುಳ್ಳದ್ದಾಗಿ ಕಂಡಿತು; ನನ್ನ ಹಿಂದಿನ ಜೀವನವೆಲ್ಲಾ ವಿಪರೀತ ಒಂಟಿತನದ್ದು, ಜುಗುಪ್ಸೆಗೊಳಿಸುವಂಥದು; ನನ್ನ ಭವಿಷ್ಯವೋ, ನಿರಾಕಾರವಾದ ನಿರಾಶೆಯ ಮಬ್ಬಿನ ಮುದ್ದೆ, ಅದರಿಂದ ನಾನು ನನಗೆ ಬೇಕುಬೇಕಾದ ಮಬ್ಬಿನ ಆಕೃತಿಗಳನ್ನೆ ನಿರ್ಮಿಸಿಕೊಳ್ಳಬೇಕು! ಆದರೆ, ಫೀಬೆ, ನೀನು ಹೊಸಿಲು ತುಳಿದು ಬಂದೆ; ಆಶೆಯನ್ನ, ಆದರವನ್ನ, ನಲಿವನ್ನ ನಿನ್ನೊಡನೆ ತಂದೆ! ಆ ಕರಾಳ ಕ್ಷಣ ಒಡನೆಯೆ ಕಲ್ಯಾಣಕಾರವಾದದ್ದಾಯಿತು! ಆಡಿದ ನುಡಿಯಿಲ್ಲದೆ ಅದು ಹಾಗೆಯೆ ಕಳೆದು

ಫೀಬೆ.

"ನೀನು ಹೇಳುವುದು ಸರಿ, ಫೀಬೆ. ನಿಸ್ಸಂದೇಹವಾಗಿಯೂ ನೀನು ಹೇಳುವುದು ಸರಿ," ಎಂದು ಹಾಲ್‌ಗ್ರೇವ್ ಉತ್ತರಕೊಟ್ಟನು.

ಇಷ್ಟಾದರೂ ಆ ಕಲಾವಿದನು ಸನ್ನಿವೇಶದ ಭೀಕರತೆಯನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ; ಫೀಬೆಯಂತೂ ಈಗ ಸಮಾಜವನ್ನು ಎದುರಿಸಬೇಕಾದ ಪರಿಸ್ಥಿತಿಯಲ್ಲಿದ್ದು, ಸಾಮಾನ್ಯ ನಿಯಮಗಳನ್ನು ಮೀರಿದಂತಹ ಘಟನೆಯೊಂದರಲ್ಲಿ ಸಿಕ್ಕಿಹಾಕಿಕೊಂಡಿದ್ದಳು; ತಾನು ಇಂತಹ ಪೇಚಿನಲ್ಲಿ ಬಿದ್ದುದಕ್ಕಾಗಿ ದಿಗಿಲುಗೊಳ್ಳುವುದು ಮಧುರವಾದ, ಸುವ್ಯವಸ್ಥೆಯಲ್ಲಿ ಪ್ರೀತಿಯುಳ್ಳ ಅವಳ ಸ್ವಭಾವಕ್ಕೆ ಉಚಿತವಾಗಿತ್ತು. ಅವಳ ಹಾಗೆ ಅವನು ಸರ್ವ ಸಾಮಾನ್ಯವಾದ ಬದುಕಿನ ಪರಿಸರದ ನಡುವೆ ಸಿಲುಕಲು ತವಕಪಡುತ್ತಿರಲಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ, ಅವನು ತನ್ನ ಸದ್ಯದ ಪರಿಸ್ಥಿತಿಯಲ್ಲಿಯೇ ಒಂದು ಹುಚ್ಚು ನಲಿವನ್ನು ಪಡೆದುಕೊಂಡಿದ್ದನು; ಒಂದು ಪಾಳುಭೂಮಿಯಲ್ಲಿ ಹುಟ್ಟಿ ಬೆಳೆದು, ಗಾಳಿಯಲ್ಲಿ ಅರಳಿದ, ಅಪೂರ್ವ ಸೌಂದರ್ಯದ ಹೂವನ್ನು– ಕ್ಷಣಿಕ ಸುಖದ ಹೂವನ್ನು– ತಾನಿದ್ದೆಡೆಯಲ್ಲಿ ಕೊಯ್ದುಕೊಂಡಿದ್ದನು. ಅದು ಅವನನ್ನೂ ಫೀಬೆಯನ್ನೂ ಸುತ್ತಣ ಪ್ರಪಂಚದಿಂದ ಬೇರ್ಪಡಿಸಿ, ಅವರಿಬ್ಬರನ್ನೂ ಪರಸ್ಪರ ಬಂಧಿಸಿತ್ತು; ಹಾಗೆ ಒಗ್ಗೂಡಿಸಲು ನೆರವಾಗಿದ್ದ ಸಾಧನ ಎಂದರೆ, ಅವರಿಗೆ ಮಾತ್ರ ಗೊತ್ತಿದ್ದ ನ್ಯಾಯಮೂರ್ತಿ ಪಿನ್ಚನ್ನನ ಮರಣವೃತ್ತಾಂತ ಹಾಗೂ ಆ ಬಗೆಗೆ ಅವರು ನಡಸಲೇಬೇಕಾಗಿದ್ದ ವಿಚಾರವಿನಿಮಯ. ರಹಸ್ಯವು ರಹಸ್ಯವಾಗಿಯೇ ಉಳಿಯಬೇಕಾಗಿರುವ ತನಕ, ಅದು ಅವರನ್ನು ಮಂತ್ರಹಾಕಿದ ಒಂದು ಸುತ್ತುಗೆರೆಯ ನಡುವೆ ಕಟ್ಟಿಹಾಕಿದಹಾಗಿತ್ತು; ಜನರ ನಡುವೆ ಒಂದು ಸುತ್ತುಗೆರೆಯ ನಡುವೆ ಕಟ್ಟಿಹಾಕಿದಹಾಗಿತ್ತು; ಜನರ ನಡುವೆ ಒಂದು ಏಕಾಂತಸ್ಥಳದಲ್ಲಿ, ಸಾಗರ ಮಧ್ಯದಲ್ಲಿ ಒಂದು ದ್ವೀಪವಿದ್ದಷ್ಟು ದೂರದೆಡೆಯಲ್ಲಿ, ಅದು ಅವರನ್ನು ಪ್ರತ್ಯೇಕಿಸಿ ಇರಿಸಿತ್ತು; ರಹಸ್ಯ ಹೊರಬಿದ್ದ ಕೂಡಲೇ, ಸಾಗರವು ಅವರಿಬ್ಬರ ನಡುವೆ ಹರಿದುಬರುವುದು, ವಿಶಾಲವಾಗಿ ಬೇರ್ಪಟ್ಟ ತೀರಗಳ ಬಳಿ ಅವರು ನಿಂತಿರುವರು. ಈ ನಡುವೆ, ಅವರಿದ್ದ ಸನ್ನಿವೇಶದ ಎಲ್ಲ ಸಂದರ್ಭಗಳೂ ಅವರನ್ನು ಒಟ್ಟಿಗೆ ಸೆಳೆಯುವಂತೆ ಕಾಣುತ್ತಿತ್ತು; ದೆವ್ವದ ಕಾಟದ ದಾರಿಯಲ್ಲಿ ಒಬ್ಬರನ್ನೊಬ್ಬರು ಬಲವಾಗಿ ತಬ್ಬಿಕೊಂಡು ಕೈಕೈ ಹಿಡಿದು ಹೋಗುವ ಇಬ್ಬರು ಮಕ್ಕಳಂತಿದ್ದರು ಅವರು. ಮನೆಯನ್ನೆಲ್ಲ ತುಂಬಿಕೊಂಡಿದ್ದ ಭಯಾನಕ ಮೃತ್ಯುದೇವತೆಯ ಮೂರ್ತಿ ತನ್ನ ವಜ್ರ ಮುಷ್ಟಿಯಿಂದ ಅವರನ್ನು ಒಂದುಗೂಡಿಸಿ ಹಿಡಿದುಕೊಂಡಿದ್ದಿತು.

ಮುನ್ನಳುಕು ಇದೆ, ನನ್ನ ಯಾವುದೇ ತೂಗಾಡುವ ಪ್ರವೃತ್ತಿಗಿಂತ ನಿನ್ನ ಸಮಸ್ಥಿತಿ ಹೆಚ್ಚು ಶಕ್ತಿಯುತವಾಗಿರುತ್ತದೆ."

"ನನಗೆ ಹಾಗಿರುವುದು ಬೇಕಿಲ್ಲ!" ಎಂದು ಫೀಬೆ ಉತ್ಸುಕಳಾಗಿ ನುಡಿದಳು.

"ನೀನು ನನ್ನನ್ನ ಪ್ರೀತಿಸುವೆಯಾ?" ಎಂದು ಹಾಲ್‌ಗ್ರೇವ್ ಕೇಳಿದನು: "ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸಿದರೆ, ಆ ಕ್ಷಣದ ಕಾಲಾವಕಾಶದಲ್ಲಿ ಬೇರೆ ಹೆಚ್ಚಿನದು ಯಾವುದಕ್ಕೂ ಎಡೆಯಿಲ್ಲ. ನಾವು ಅಲ್ಲಯೇ ತಂಗಿ, ತೃಪ್ತರಾಗೋಣ, ನೀನು ನನ್ನನ್ನ ಪ್ರೀತಿಸುತ್ತೀಯಾ, ಫೀಬೆ?"

"ನನ್ನ ಹೃದಯದೊಳಗೆ ನೋಡು," ಎಂದು ತನ್ನ ದೃಷ್ಟಿಯನ್ನು ಕೆಳಕ್ಕೆ ತಗ್ಗಿಸಿ, ಅವಳು ನುಡಿದಳು: "ನಾನು ನಿನ್ನನ್ನು ಪ್ರೀತಿಸುತ್ತೇನೆ, ಅದನ್ನ ನೀನು ಬಲ್ಲೆ!"

ಅಷ್ಟೊಂದು ಸಂಶಯ ಭೀತಿಗಳಿಂದ ಇಡಿಕಿರಿದಿದ್ದ ಈ ಸಮಯದಲ್ಲಿ ಒಂದು ಪವಾಡವೇ ನಡೆದುಹೋಯಿತು; ಅದಿಲ್ಲದ ಪ್ರತಿಯೊಂದು ಮಾನವ ಜೀವನವೂ ಶೂನ್ಯ. ಎಲ್ಲ ವಸ್ತುಗಳನ್ನೂ ಸತ್ಯವನ್ನಾಗಿ, ಸುಂದರವನ್ನಾಗಿ, ಮತ್ತು ಪವಿತ್ರವನ್ನಾಗಿ ಮಾಡುವ ಸ್ವರ್ಗಸುಖವು ಈ ತರುಣ ತರುಣಿಯರ ಸುತ್ತ ತನ್ನ ಪ್ರಭೆಯನ್ನು ಹರಡಿತು. ದುಃಖ, ಮುಪ್ಪು ಇವುಗಳಲ್ಲಿ ಯಾವುದರ ಅರಿವೂ ಅವರಿಗಿರಲಿಲ್ಲ. ಅವರು ಈ ಭೂಮಿಯನ್ನು ರೂಪಾಂತರಗೊಳಿಸಿ, ಅದನ್ನು ಮತ್ತೆ 'ಈಡನ್' ನಂದನವನ್ನಾಗಿಸಿ, ತಮ್ಮನ್ನು ಅದರಲ್ಲಿನ ಮೊದಲ ಇರ್ವರು ನಿವಾಸಿಗಳನ್ನಾಗಿ ಮಾಡಿಕೊಂಡರು. ಅವರ ಬಳಿ ಅಷ್ಟೊಂದು ಸಮೀಪದಲ್ಲಿದ್ದ ಆ ಮೃತಮನುಷ್ಯನು ಮರೆತೇ ಹೋದನು. ಅಂಥ ಒಂದು ಸಂಧಿಕಾಲದಲ್ಲಿ, ಮರಣವೆಂಬುದಿಲ್ಲ; ಏಕೆಂದರೆ, ಅಮರತ್ವವು ಪುನಃ ನೂತನವಾಗಿ ಪ್ರಕಟಗೊಂಡು, ತನ್ನ ಪವಿತ್ರ ವಾತಾವರಣದಲ್ಲಿ ಪ್ರತಿಯೊಂದನ್ನು ಒಳಕೊಳ್ಳುವುದು.

ಆದರೆ, ಅದೆಷ್ಟು ಶೀಘ್ರವಾಗಿ ನೆಲದಿಂದ ಹೊಮ್ಮಿದ ಭಾರವಾದ ಕನಸು ಮರಳಿ ನೆಲಕ್ಕೇ ಕುಸಿಯಿತು!

"ಕೇಳಿದೆಯಾ! ಬೀದಿಯ ಬಾಗಿಲ ಬಳಿ ಅದು ಯಾರೋ ಬಂದಿದ್ದಾರೆ!" ಎಂದು ಫೀಬೆ ಪಿಸುಗುಟ್ಟಿದಳು.

"ಇನ್ನು ಪ್ರಪಂಚವನ್ನು ಎದುರಿಸೋಣ! ಜಡ್ಜಿ ಪಿನ್ಚನ್ ಈ ಮನೆಗೆ ಭೇಟಿಕೊಟ್ಟ ವಿಚಾರ, ಹಾಗೂ ಹೆಪ್ಸಿಬಾ ಮತ್ತು ಕ್ಲಿಫರ್ಡರ ಪಲಾಯನ– ಇವುಗಳ ವದಂತಿ ಹರಡಿ, ಈ ಸ್ಥಳದ ಶೋಧನೆ ನಡೆಯುವುದರಲ್ಲಿದೆ; ಅದರಲ್ಲಿ ಸಂದೇಹವಿಲ್ಲ. ನಾವು ಅದಕ್ಕೆ ಸಿದ್ಧವಾಗಿರಬೇಕು, ಬೇರೆ ದಾರಿಯೆ ಇಲ್ಲ. ಕೂಡಲೆ ಬಾಗಿಲು

ಹೋಗಕೂಡದು. ನಾನು ನಿನ್ನನ್ನ ಪ್ರೀತಿಸುತ್ತೇನೆ!"

"ನನ್ನಂಥ ಏನೂ ಅರಿಯದ ಹುಡುಗಿಯನ್ನ ನೀನು ಪ್ರೀತಿಸುವುದೆ?" ಎಂದು ಫೀಬೆ ಕೇಳಿದಳು; ಅವನ ಉತ್ಸುಕತೆ ಅವಳನ್ನು ಮಾತಾಡುವಂತೆ ಒತ್ತಾಯಪಡಿಸಿತ್ತು: "ನೀನು ವಿಚಾರವಂತ, ಅನೇಕ ವಿಚಾರಗಳಲ್ಲಿ ತೊಡಗಿದ್ದೀಯೆ; ಅವುಗಳಲ್ಲಿ ಸಹಾನುಭೂತಿಯಿಡಲು ನಾನು ಎಷ್ಟೇ ಪ್ರಯತ್ನಿಸಿದರೂ, ಅದು ವ್ಯರ್ಥಪ್ರಯತ್ನವಾಗುವುದು. ನನಗೆ– ನನಗೂ ಕೂಡ– ಮನೋವೃತ್ತಿಗಳಿವೆ; ಅವುಗಳ ವಿಚಾರದಲ್ಲಿ ನೀನು ಸಹಾನುಭೂತಿ ತೋರಲಾರೆ. ಆದರೆ ಅದು ಸಣ್ಣ ವಿಷಯ. ಆದರೆ, ನಿನ್ನನ್ನು ಸುಖಿಯಾಗಿ ಮಾಡಲು ನಾನು ಸಾಕಷ್ಟು ಸಮರ್ಥಳಲ್ಲ."

"ನಾನು ಸುಖವಾಗಿರುವುದು ಸಾಧ್ಯವಿದ್ದ ಪಕ್ಷದಲ್ಲಿ, ಅದು ನಿನ್ನಿಂದ ಮಾತ್ರ ಸಾಧ್ಯ! ನೀನು ನನಗೆ ದೊರಕಿಸಿಕೊಡುವ ಸೌಖ್ಯದ ಹೊರತು, ನನಗೆ ಸೌಖ್ಯದಲ್ಲಿ ನಂಬಿಕೆಯೇ ಇಲ್ಲ" ಎಂದು ಹಾಲ್‌ಗ್ರೇವ್ ಉತ್ತರಕೊಟ್ಟ.

"ಹಾಗಿದ್ದ ಮೇಲೆ– ನನಗೇನೋ ಹೆದರಿಕೆ!" ಎಂದು ಫೀಬೆ ಮುಂದುವರಿಸಿದಳು; ಅವನು ಅವಳ ಮನಸ್ಸಿನಲ್ಲಿ ಬಿತ್ತಿದ್ದ ಸಂದೇಹಗಳ ವಿಚಾರವಾಗಿ ಅವಳು ತುಂಬ ಬಿಚ್ಚು ಮನಸ್ಸಿನಿಂದ ಅವನಿಗೆ ತಿಳಿಯಹೇಳುವಾಗ ಕೂಡ, ಅವಳು ಅವನ ಬಗೆಗೆ ಹಿಂಜರಿಯುತ್ತಿದ್ದಳು: "ನೀನು ನನ್ನದೇ ಆದ ಶಾಂತಿಯಿಂದ ಕೂಡಿದ ಹಾದಿಯಿಂದ ಬಿಡಿಸಿ ಬೇರೆಯೆಡೆಗೆ ಕರೆದೊಯ್ಯುವೆ. ಎಲ್ಲಿ ಹಾದಿಯೆ ಇಲ್ಲವೊ ಅಲ್ಲಿ ನಿನ್ನನ್ನು ನಾನು ಹಿಂಬಾಲಿಸಲು ಪ್ರಯತ್ನಿಸುವಂತೆ ನೀನು ಮಾಡುವೆ. ನಾನು ಹಾಗೆ ಮಾಡಲಾರೆ. ಅದು ನನ್ನ ಸ್ವಭಾವವಲ್ಲ. ನಾನು ಕುಸಿದುಬಿದ್ದು, ನಾಶಹೊಂದುವೆ!"

"ಓ, ಫೀಬೆ!" ಎಂದು ಹಾಲ್‌ಗ್ರೇವ್ ಬಹುಮಟ್ಟಿಗೆ ನಿಟ್ಟುಸಿರ್ಗರೆಯುತ್ತಾ, ವಿಚಾರಭಾರದಿಂದ ಕೂಡಿದ ಮುಗುಳ್ನಗೆಯೊಂದಿಗೆ ಉದ್ಗರಿಸಿ, ಹೇಳಿದ: "ನೀನು ಕೇಡನ್ನೆ ಮುಂಗಾಣುತ್ತಿದ್ದೀಯೆ; ಅದು ಹಾಗಾಗುವುದಿಲ್ಲ. ಪ್ರಪಂಚವು ತನ್ನ ಮುನ್ನಡೆಯ ಪ್ರೇರಣೆಗಳಿಗೆಲ್ಲ ನೆಮ್ಮದಿಯಿಲ್ಲದ ಜನಕ್ಕೆ ಋಣಿಯಾಗಿರಬೇಕು. ಸುಖಪುರುಷನು ತನ್ನ ಹಳೆಯ ಎಲ್ಲೆ ಕಟ್ಟುಗಳ ನಡುವೆ ತನ್ನನ್ನು ತಾನು ನಿರ್ಬಂಧದಲ್ಲಿಟ್ಟುಕೊಳ್ಳುವುದು ಅನಿವಾರ್ಯ. ಇನ್ನು ಮುಂದೆ, ಗಿಡಗಳನ್ನು ನೆಡುವುದು, ಬೇಲಿಗಳನ್ನು ಹಾಕುವುದು– ಬಹುಶಃ, ತಕ್ಕ ಕಾಲದಲ್ಲಿ ಇನ್ನೊಂದು ತಲೆಮಾರಿಗಾಗಿ ಮನೆ ಕಟ್ಟುವುದು– ಒಂದು ಮಾತಿನಲ್ಲಿ, ನಿಯಮಗಳಿಗೆ ಒಳಪಡುವುದು, ಹಾಗೂ ಸಮಾಜದ ಶಾಂತಿಯುತ ಕಾರ್ಯಾಚರಣೆಗಳಲ್ಲಿ ನಿರತನಾಗುವುದು– ಇವೆಲ್ಲಾ ನನ್ನ ಪಾಲಿಗೆ ಬಿದ್ದದ್ದು ಎಂದು ನನಗೊಂದು

ಆದರೆ ಆ ಮನೆ ಕ್ಲಿಫರ್ಡ್ ಊಹಿಸಿಕೊಂಡಿದ್ದಷ್ಟು ಹಾಳು ಸುರಿಯುತ್ತಿರಲಿಲ್ಲ. ಅವರು ಇನ್ನೂ ಹಲವು ಹೆಜ್ಜೆ ಸಾಗಿಹೋಗಿರಲಿಲ್ಲ– ನಿಜವಾಗಿ ಉದ್ದೇಶವನ್ನು ಸಾಧಿಸಿದ ಮೇಲೆ ಉಂಟಾಗುವ ಉದಾಸೀನತೆಯಿಂದ, ಮುಂದೇನು ಮಾಡಬೇಕೆಂಬ ನಿಶ್ಚಯವಿಲ್ಲದೆ; ಅವರು ಬಾಗಿಲ ಬಳಿಯೇ ಸುಳಿದಾಡುತ್ತಿದ್ದರು– ಆಗ ಫೀಬೆ ಅವರನ್ನು ಎದುರುಗೊಳ್ಳಲು ಓಡಿಹೋದಳು. ಅವಳನ್ನು ನೋಡಿದೊಡನೆಯೆ, ಹೆಪ್ಸಿಬಾಳ ಕಣ್ಣೀರಿನ ಕಟ್ಟೆಯೊಡೆಯಿತು. ಅವಳು ತನ್ನ ದುಃಖದ ಹಾಗೂ ಹೊಣೆಗಾರಿಕೆಯ ಭಾರವನ್ನು ಹೊತ್ತು, ತನ್ನ ಬಲವನ್ನೆಲ್ಲಾ ಉಪಯೋಗಿಸಿ, ಮುಂದಿಕ್ಕೆ ತತ್ತರಿಸಿಕೊಂಡು ಹೋಗಿದ್ದಳು; ಕಡೆಗೆ ಈಗ, ಆ ಹೊರೆಯನ್ನು ನೆಲಕ್ಕೊಗೆಯುವುದು ಕ್ಷೇಮವೆನ್ನಿಸಿತ್ತು ಅವಳಿಗೆ. ವಾಸ್ತವವಾಗಿ, ಅದನ್ನು ಕೆಳಕ್ಕೊಗೆಯಲು ಅವಳಿಗೆ ಶಕ್ತಿಯಿರಲಿಲ್ಲ. ಆದರೆ ಅದನ್ನು ಎತ್ತಿ ಹಿಡಿಯಲಾರದೆ ಕೈಬಿಟ್ಟು, ಅದು ತನ್ನನ್ನು ನೆಲಕ್ಕೆ ಅದುಮಿಹಾಕಲು ಎಡೆಗೊಟ್ಟಿದ್ದಳು, ಅಷ್ಟೆ. ಇಬ್ಬರಲ್ಲಿ ಕ್ಲಿಫರ್ಡನೆ ಹೆಚ್ಚು ಶಕ್ತಿವಂತನಾಗಿ ಕಂಡನು.

"ಓಹೋ, ನಮ್ಮ ಪುಟ್ಟ ಫೀಬೆಯೆ! ಜೊತೆಗೆ ಹಾಲ್‌ಗ್ರೇವ್ ಇದಾನೆ," ಎಂದು ತೀಕ್ಷ್ಣವಾದ ಹಾಗೂ ಸೂಕ್ಷ್ಮವಾದ ಗ್ರಹಣಶಕ್ತಿಯುಳ್ಳ ನಸುನೋಟದಿಂದಲೂ, ಚೆಲುವಾದ ದಯಾಪೂರ್ಣವಾದ, ಆದರೆ ಖಿನ್ನತೆಯಿಂದ ಕೂಡಿದ ಮುಗುಳುನಗೆಯೊಡನೆಯೂ ಅವನು ಉದ್ಗರಿಸಿದನು: "ನಾವು ಬೀದಿಯಲ್ಲಿ ಈ ಕಡೆಗೆ ಬರುವಾಗ, ಚೆನ್ನಾಗಿ ಅರಳಿದ್ದ ಆಯಲಿಸ್ ಹೂಗಳನ್ನು ನೋಡುತ್ತ, ನಿಮ್ಮಿಬ್ಬರ ವಿಚಾರವಾಗಿಯೇ ಯೋಚಿಸುತ್ತಿದ್ದೆ. ಅಂತೂ ಅದೇ ರೀತಿಯಲ್ಲಿ, ಇಂದಿನ ಈ ಹಳೆಯ ಮಂಕುಕವಿದ ಮನೆಯಲ್ಲಿ ಈಡನ್ನಿನ ಹೂವು ಅರಳಿದ ಹಾಗಾಯಿತು."

* * * *

ತೆಗೆದುಬಿಡೋಣ" ಎಂದನು ಹಾಲ್‌ಗ್ರೇವ್.

ಆದರೆ, ಅವರ ಆಶ್ಚರ್ಯಕ್ಕೆ, ಅವರು ಬೀದಿಯ ಬಾಗಿಲನ್ನು ತಲಪುವುದಕ್ಕೆ ಮುಂಚೆ– ತಾವು ಸಂದರ್ಶಿಸಿ ಮಾತುಕತೆಯಾಡಿದ್ದ ಕೋಣೆಯನ್ನು ಅವರು ಬಿಟ್ಟು ಹೋಗುವುದಕ್ಕೆ ಮುಂಚೆಯೇ– ದೂರದ ನಡುವೆಯ ದಾರಿಯಲ್ಲಿ ಹೆಜ್ಜೆಗಳ ಸದ್ದಾಗುತ್ತಿದ್ದುದನ್ನು ಅವರು ಕೇಳಿದರು. ಆದ್ದರಿಂದ, ಹೊರಗಡೆಯಿಂದಲೇ ಬಾಗಿಲನ್ನು ತೆರೆದಿರಬೇಕು; ಅದನ್ನು ಬೀಗಹಾಕಿ ಭದ್ರಪಡಿಸಿತ್ತೆಂದು ಅವರು ಊಹಿಸಿದ್ದರು; ವಾಸ್ತವವಾಗಿ, ಬೀಗಹಾಕಿದ್ದುದನ್ನು ಹಾಲ್‌ಗ್ರೇವ್ ನೋಡಿದ್ದನು; ಫೀಬೆಯಂತೂ ಆ ಬಾಗಿಲಿನಿಂದ ಒಳಕ್ಕೆ ಹೋಗಲು ವ್ಯರ್ಥವಾಗಿ ಪ್ರಯತ್ನಿಸಿದ್ದಳು. ತಾವು ಅಧಿಕಾರಬಲದಿಂದ ಪ್ರವೇಶಿಸುವ ಮನೆಯಲ್ಲಿ ತಮಗೆ ಆದರದ ಸ್ವಾಗತ ಕಾದಿಲ್ಲವೆಂದು ಬಲ್ಲ ಹೊಸಬರ ನಡಗೆಯ ಹೆಜ್ಜೆ ಸದ್ದು ಕರ್ಕಶವಾಗಿ, ಧೈರ್ಯಸೂಚಕವಾಗಿ, ದೃಢವಾಗಿ, ಒಳಕ್ಕೆ ನುಗ್ಗುವ ರೀತಿಯಲ್ಲಿ ಇರುವುದು ಸ್ವಾಭಾವಿಕ; ಆದರೆ ಈ ಹೆಜ್ಜೆಗಳ ಸದ್ದು ಹಾಗಿರಲಿಲ್ಲ. ಆಶಕ್ತರಾದವರ ಇಲ್ಲವೆ ಆಯಾಸಗೊಂಡವರ ಹೆಜ್ಜೆ ಸದ್ದಿನಂತೆ ಅದು ದುರ್ಬಲವಾಗಿತ್ತು; ಎರಡು ಧ್ವನಿಗಳು ಕೂಡಿ ಆದ, ಇಬ್ಬರು ಶ್ರೋತೃಗಳಿಗೂ ಪರಿಚಿತವಾಗಿದ್ದಂಥ, ಗೊಣಗುಟ್ಟುವ ಧ್ವನಿ ಕೇಳಿಬಂತು.

"ಅದು ಅವರದ್ದಾಗಿರಬಹುದೇ?" ಎಂದು ಹಾಲ್‌ಗ್ರೇವ್ ಪಿಸುಗುಟ್ಟಿದನು.

"ಅದು ಅವರೇ! ದೇವರ ದಯೆ! ದೇವರ ದಯೆ!" ಎಂದು ಫೀಬೆ ಉತ್ತರಿಸಿದಳು.

ಆ ಬಳಿಕ, ಫೀಬೆ ಪಿಸು ಮಾತಿನಲ್ಲಿ ತೆಗೆದ ಉದ್ಗಾರದೊಂದಿಗೆ ಸಹಾನುಭೂತಿ ತೋರುವ ರೀತಿಯಲ್ಲಿ, ಅವರು ಹೆಪ್ಸಿಬಾಳ ಧ್ವನಿಯನ್ನು ಮೊದಲಿಗಿಂತ ಹೆಚ್ಚು ಸ್ಪಷ್ಟವಾಗಿ ಕೇಳಿದರು.

"ದೇವರ ಕೃಪೆಯಿಂದ ನಾವು ಮನೆ ಸೇರಿಕೊಂಡ ಹಾಗಾಯಿತು, ತಮ್ಮಾ!"

"ಸರಿ! ಹೌದು! ದೇವರು ದೊಡ್ಡವನು!" ಎಂದು ಕ್ಲಿಫರ್ಡ್ ಮಾರ್ನುಡಿದ: "ಜುಗುಪ್ಸೆ ಹುಟ್ಟಿಸುವ ಮನೆ, ಹೆಪ್ಸಿಬಾ! ಆದರೆ ನೀನು ನನ್ನನ್ನು ಇಲ್ಲಿಗೆ ಕರೆದುಕೊಂಡುಬಂದದ್ದು ಒಳ್ಳೆಯದಾಯಿತು! ಸ್ವಲ್ಪ ನಿಂತುಕೋ! ಆ ದಿವಾನಖಾನೆಯ ಬಾಗಿಲು ತೆರೆದಿದೆ! ನಾನು ಅದರ ಹತ್ತಿರ ಸುಳಿಯಲಾರೆ. ಆ ಬಳ್ಳಿಯ ಮಂಟಪದಲ್ಲಾದರೂ ಹೋಗಿ ಸುದಾರಿಸಿಕೊಳ್ಳುತ್ತೇನೆ– ನಡೆದದ್ದನ್ನೆಲ್ಲಾ ನೆನಸಿಕೊಂಡರೆ, ಅದರಲ್ಲಾ ಬಹು ಕಾಲದ ಹಿಂದೆ ಎಂದು ನನಗೆ ತೋರುತ್ತದೆ– ಅಲ್ಲಿ ಪುಟ್ಟ ಫೀಬೆಯೊಂದಿಗೆ ಅದೆಷ್ಟು ಸುಖವಾಗಿರುತ್ತಿದ್ದೆ. ನಾನು!"

ಬದುಕಿದ್ದನೆಂಬ ಸಂಗತಿಯನ್ನೇ ಮರೆಯತೊಡಗಿತು; ಸಂಕ್ಷೇಪವಾಗಿ ಹೇಳುವುದಾದರೆ, ಜಿಲ್ಲೆಯ ಸುದ್ದಿ ಪತ್ರಿಕೆಗಳಲ್ಲಿ ಅರ್ಧಸಂಖ್ಯೆಯುವು ತಮ್ಮ ಪುಟಗಳಲ್ಲಿ ಸಂತಾಪಸೂಚನೆಯನ್ನೂ, ಬಹು ಪ್ರಶಂಸಾತ್ಮಕರೀತಿಯಲ್ಲಿ ಅವನ ಮರಣವಾರ್ತೆಯನ್ನೂ ಪ್ರಕಟಿಸಲು ಅವಕಾಶಮಾಡಿಕೊಳ್ಳುವುದಕ್ಕೆ ಮುಂಚೆಯೇ ಮಾನ್ಯ ನ್ಯಾಯಮೂರ್ತಿಯು ವಿಚಾರವು ಒಂದು ಹಳಸಲು ವಿಷಯವಾಗತೊಡಗಿತ್ತು.

ಆದರೂ ಕೂಡ, ಈ ಶ್ರೇಷ್ಠ ಮಹನೀಯನು ತನ್ನ ಜೀವಿತಕಾಲದಲ್ಲಿ ಸುತ್ತಿ ಸುಳಿದಾಡಿದ್ದ ಎಡೆಗಳಲ್ಲೆಲ್ಲಾ ಜನರ ಅಂತರಂಗದ ಮಾತುಕತೆಯ ಗುಪ್ತಗಾಮಿಯಾದ ಪ್ರವಾಹವೊಂದು ಕತ್ತಲಮರೆಯಲ್ಲಿ ನಿಧಾನವಾಗಿ ಸರಿಯುತ್ತಲೇ ಇದ್ದಿತು; ಅದನ್ನು ಬೀದಿಮೂಲೆಗಳಲ್ಲಿ ಗಟ್ಟಿಯಾಗಿ ಬಹಿರಂಗಪಡಿಸಿದ್ದರೆ ಸಭ್ಯನಡವಳಿಕೆಗೆ ಅಯ್ಯೋಗ್ಯವೆನಿಸುತ್ತಿತ್ತು. ಒಬ್ಬ ಮನುಷ್ಯನು ಜನರ ನಡುವೆ ಬದುಕಿದ್ದು ವ್ಯವಹರಿಸುತ್ತಿರುವಾಗ ಅವನ ಗುಣಶೀಲದ ಬಗೆಗೆ ಅವರಿಗೆ ದೊರೆಯಬಹುದಾದ ಕಲ್ಪನೆಗಿಂತ ಹೆಚ್ಚು ನಿಜವಾದ ಕಲ್ಪನೆ ಅವನು ಸತ್ತಾಗ ಉಂಟಾಗುತ್ತದೆ; ಒಳ್ಳೆಯದಕ್ಕಾದರೂ ಆಗಲಿ ಕೆಟ್ಟದ್ದಕ್ಕಾದರೂ ಆಗಲಿ, ಅಂತೂ ಅದು ಬಹು ಆಶ್ಚರ್ಯಕರವಾದ ವಿಚಾರ, ಮರಣವು ಎಷ್ಟು ಶುದ್ಧ ಸತ್ಯಾಂಶವೆಂದರೆ, ಅದು ಸುಳ್ಳನ್ನು ಹೊರಹಾಕಿಬಿಡುತ್ತದೆ. ಇಲ್ಲವೋ ಪೊಳ್ಳುತನವನ್ನು ಬಯಲುಮಾಡಿಬಿಡುತ್ತದೆ; ಚಿನ್ನವನ್ನು ಚಿನ್ನವೆಂದು ನಿರ್ಧರಿಸಿ, ಕೀಳು ಲೋಹವನ್ನು ಅಲ್ಲಗಳೆಯುವ ಒರೆಗಲ್ಲು ಅದು. ಮೃತನಾದವನು, ಅವನು ಯಾರೇ ಆಗಿರಲಿ, ತಾನು ಮರಣಹೊಂದಿದ ಒಂದು ವಾರದಲ್ಲಿ ಹಿಂದಿರುಗಿದ್ದೇ ಆದರೆ, ಜನಮೆಚ್ಚುಗೆಯ ಶ್ರೇಣಿಯಲ್ಲಿ ತಾನು ಹಿಂದೆ ಪಡೆದಿದ್ದ ಸ್ಥಾನಕ್ಕಿಂತ ಒಂದು ಮೇಲಿನ ಇಲ್ಲವೆ ಕೆಳಗಿನ ಸ್ಥಾನಕ್ಕೆ ಪಲ್ಲಟಹೊಂದಿರುವುದನ್ನು ಬಹುಮಟ್ಟಿಗೆ ತಪ್ಪದೆ ಕಂಡುಕೊಳ್ಳುತ್ತಾನೆ. ನಾವು ಈಗ ಪ್ರಸ್ತಾಪಿಸಿರುವ ಮಾತುಕತೆ ಅಥವಾ ಜನಾಪವಾದವು ಬಹು ಹಳೆಯ ಕಾಲದ ವಿಚಾರಕ್ಕೆ ಸಂಬಂಧಪಟ್ಟದ್ದು; ಎಂದರೆ, ಮೂವತ್ತು ನಲವತ್ತು ವರ್ಷಗಳ ಹಿಂದೆ ನಡೆಯಿತೆಂದು ಭಾವಿಸಲಾದ ದಿವಂಗತ ನ್ಯಾಯಮೂರ್ತಿ ಪಿನ್ಚನ್ನನ ದೊಡ್ಡಪ್ಪನ ಕೊಲೆಗೆ ಸಂಬಂಧಪಟ್ಟದ್ದು. ಈಚೆಗೆ ನಡೆದ, ಆತನ ಸ್ವಂತ ಶೋಚನೀಯ ಮರಣದ ವಿಷಯವನ್ನೇ ತೆಗೆದುಕೊಂಡರೆ, ಆತನ ಕೊಲೆ ನಡೆಯಿತೆಂಬ ಆಲೋಚನೆಯನ್ನು ಬಹುಮಟ್ಟಿಗೆ ಸಂಪೂರ್ಣವಾಗಿ ಕೈಬಿಟ್ಟಿತ್ತು, ವೈದ್ಯರು ಆ ಬಗೆಗೆ ನೀಡಿದ ಅಭಿಪ್ರಾಯ. ಆದರೆ, ದೊರೆತ ದಾಖಲೆಯ ಪ್ರಕಾರ, ಮುದುಕ ಜಫ್ರಿ ಪಿನ್ಚನ್ನನ ಮರಣದ ವೇಳೆಯಲ್ಲಿ ಅಥವಾ ಆ ಸಮೀಪದ

## ೨೧. ಬೀಳ್ಕೊಳಿಕೆ

ಸಾಮಾಜಿಕ ಕ್ಷೇತ್ರದಲ್ಲಿ ಅಷ್ಟು ಪ್ರಮುಖ ವ್ಯಕ್ತಿಯಾಗಿದ್ದ ಸನ್ಮಾನ್ಯ ನ್ಯಾಯಮೂರ್ತಿ ಜಫ್ರಿ ಪಿನ್ಚನ್ನನ ಅನಿರೀಕ್ಷಿತ ಮರಣವು ಇನ್ನೆಲ್ಲಿ ಅಲ್ಲದಿದ್ದರೂ ಕಡೆಯಪಕ್ಷ ಮೃತನ ಹೆಚ್ಚು ಸಮೀಪಸಂಬಂಧದ ಬಂಧುಮಿತ್ರ ವರ್ಗಗಳಲ್ಲಿ, ಒಂದು ಕೋಲಾಹಲವನ್ನೆಬ್ಬಿಸಿತು; ಎರಡು ವಾರಗಳಾದರೂ ಅದು ಇನ್ನೂ ಪೂರ್ತಿಯಾಗಿ ಶಾಂತವಾಗಿರಲಿಲ್ಲ.

ಆದಾಗ್ಯು, ಒಬ್ಬ ವ್ಯಕ್ತಿಯ ಜೀವನಚರಿತ್ರೆಯೆನ್ನಿಸುವ ಘಟನೆಗಳಲ್ಲೆಲ್ಲಾ ಅವನ ಮರಣಕ್ಕೆ ಪ್ರಪಂಚವು ಸುಲಭವಾಗಿ ಹೊಂದಿಕೊಳ್ಳುವಂತೆ ಅದೇ ರೀತಿಯ ಪ್ರಾಮುಖ್ಯವುಳ್ಳ ಬೇರೆ ಯಾವ ಘಟನೆಗೂ ಅಷ್ಟು ಸುಲಭವಾಗಿ ಹೊಂದಿಕೊಳ್ಳುವುದಿಲ್ಲವೆಂದು ಹೇಳಬಹುದು. ಬಹುಮಟ್ಟಿಗೆ ಇತರ ಎಲ್ಲ ಸನ್ನಿವೇಶ ಸಂದರ್ಭಗಳಲ್ಲಿಯೂ ಸಂಬಂಧಪಟ್ಟ ವ್ಯಕ್ತಿ ನಮ್ಮೊಡನೆಯೆ ಇದ್ದು, ನಿತ್ಯ ವ್ಯವಹಾರಗಳ ಪರಿಭ್ರಮಣೆಯಲ್ಲಿ ಸಿಲುಕಿ, ನಮ್ಮ ಪರಿಶೀಲನೆಗೆ ಒಂದು ನಿರ್ದಿಷ್ಟ ಅಂಶವನ್ನು ಒದಗಿಸಿಕೊಡುತ್ತಾನೆ. ಅವನ ಮರಣ ಕಾಲದಲ್ಲಿ, ಒಂದು ತೆರಪು ಮಾತ್ರ ಇರುತ್ತದೆ, ಮತ್ತು ಕ್ಷಣಿಕವಾದ ಒಂದು ಸುಳಿ ಏರ್ಪಟ್ಟೀತು; ಹಾಗೂ, ಕರಾಳವಾದ ಆಳದಿಂದ ಮೇಲಕ್ಕೆದ್ದು, ಮೇಲ್ಭಾಗದಲ್ಲಿ ಒಡೆದುಹೋಗುವ ಒಂದೆರಡು ಗುಳ್ಳೆಗಳು ಕಂಡುಬಂದಾವು; ಆ ಅಂತರಾಳವು ಒಳನುಂಗಿಕೊಂಡ ವಸ್ತುವಿನೊಂದಿಗೆ ಹೋಲಿಸಿದರೆ, ಆ ಸುಳಿ ಬಹು ಸಣ್ಣದೆನ್ನಬೇಕು. ನ್ಯಾಯಮೂರ್ತಿ ಪಿನ್ಚನ್ನನ ವಿಷಯ ತೆಗೆದುಕೊಂಡರೆ, ಮೊದಲ ನೋಟಕ್ಕೆ ಆತನ ಅಂತ್ಯನಿರ್ಗಮನದ ವಿಧಾನವು ಪ್ರಸಿದ್ಧಪುರುಷನೊಬ್ಬನ ನೆನಪಿನೊಂದಿಗೆ ಸಾಧಾರಣವಾಗಿ ಉಳಿಯುವ ಜನಮೆಚ್ಚುಗೆಗಿಂತ ಹೆಚ್ಚಾದ ದೀರ್ಘಕಾಲವಿರುವ, ಮರಣಾನಂತರದ ಜನಮೆಚ್ಚುಗೆಯನ್ನು ಆತನಿಗೆ ದೊರಕಿಸಿಕೊಡಬಹುದೆಂಬುದು ಸಂಭವನೀಯವಾಗಿ ಕಾಣುತ್ತಿತ್ತು. ಆದರೆ, ಸ್ವಲ್ಪ ವಿಲಕ್ಷಣತೆಯನ್ನು ಸೂಚಿಸುವ ಕೆಲವು ಅಮುಖ್ಯವಾದ ವಿವರಾಂಶಗಳನ್ನು ಬಿಟ್ಟರೆ, ಆ ಘಟನೆಯು ಸ್ವಾಭಾವಿಕವಾದದ್ದೂ ಹೇಗೂ ಅಸಾಧಾರಣವಲ್ಲದ್ದೂ ಆದ ಮರಣವೆಂಬ ಸಂಗತಿ ಅತ್ಯುಚ್ಚಸ್ಥಾನದಲ್ಲಿದ್ದ ಅಧಿಕಾರಿಗಳ ಬಾಯಿಂದ ಅಧಿಕಾರವತ್ತಾಗಿ ತಿಳಿಯಬಂದಿತು; ಆಗ, ಜನಸಾಮಾನ್ಯವು ತನಗೆ ರೂಢಿಯಾದ ತ್ವರಿತಗತಿಯಿಂದ ಅವನು ಹಿಂದೊಮ್ಮೆ

ಇರಲಿಲ್ಲ, ಅದಕ್ಕೆಲ್ಲಾ ಅವನ ದೊಡ್ಡಪ್ಪನು ಉದಾರವಾಗಿ ಕೊಡುತ್ತಿದ್ದ ಹಣ ಬಿಟ್ಟರೆ ಬೇರೆ ಯಾವ ಸಾಧನಸಂಪತ್ತೂ ಇರಲಿಲ್ಲ. ಹಿಂದೊಮ್ಮೆ ಆ ವೃದ್ಧವಿಧುರನ ವಿಶ್ವಾಸವೆಲ್ಲಾ ಇವನ ಮೇಲೆಯೆ ನೆಲಸಿತ್ತು; ಅವನ ಈ ಬಗೆಯ ನಡವಳಿಕೆ ಆ ವಿಶ್ವಾಸವನ್ನು ಕಳೆದುಕೊಳ್ಳುವಂತೆ ಮಾಡಿತ್ತು, ಒಂದು ರಾತ್ರಿ ಈ ತರುಣನು ಸೈತಾನನ ಪ್ರಲೋಭನೆಗೆ ಒಳಗಾಗಿ, ತನ್ನ ದೊಡ್ಡಪ್ಪನ ಸ್ವಂತ ಸಂದೂಕಗಳನ್ನು ಶೋಧಿಸಿದನು; ಯಾವ ಸಂಶಯಕ್ಕೂ ಒಳಗಾಗದೆ ಅವನು ಅವುಗಳನ್ನು ತೆರೆಯಲು ಅವನಿಗೆ ಅವಕಾಶವಿತ್ತು ಎಂದೇ ಈಗ ಕಂಠೋಕ್ತವಾಗಿ ಹೇಳಲಾಗುತ್ತಿದೆ– ಇದಕ್ಕೆ ನ್ಯಾಯಸ್ಥಾನದಲ್ಲಿ ದೊರೆಯುವ ಅಧಿಕಾರವತ್ತಾದ ದಾಖಲೆ ಇದೆಯೋ ಏನೋ, ನಾವು ಅದನ್ನು ಪರಿಶೋಧಿಸಿದ್ದೇವೆ ಎಂದು ಹೇಳಿಕೊಳ್ಳುತ್ತಿಲ್ಲ. ಹೀಗೆ ಅಪರಾಧಕೃತ್ಯವೆಸಗುವುದರಲ್ಲಿ ತೊಡಗಿದ್ದಾಗ, ಕೋಣೆಯ ಬಾಗಿಲು ತೆರೆದು, ಅವನು ಬೆಚ್ಚಿಬಿದ್ದನು. ರಾತ್ರಿಯ ಉಡುಪು ಧರಿಸಿ, ಮುದುಕ ಜಫ್ರಿ ಪಿನ್ಚನ್ ನಿಂತಿದ್ದನು! ಅನಿರೀಕ್ಷಿತವಾದದ್ದನ್ನು ಕಂಡದ್ದರಿಂದ ಉಂಟಾದ ಆಶ್ಚರ್ಯ, ಮನಃಕ್ಷೋಭೆ, ಗಾಬರಿ, ದಿಗಿಲು– ಇವೆಲ್ಲ ಒಟ್ಟುಗೂಡಿ ಬೀರಿದ ಒಂದು ವಿಷಮ ಪರಿಣಾಮದಿಂದಾಗಿ, ಅವನ ಬುದ್ಧಿಯಲ್ಲಿ ಒಂದು ಅವ್ಯವಸ್ಥೆಯುಂಟಾಯಿತು; ಇದು ಆ ವೃದ್ಧವಿಧುರನಲ್ಲಿದ್ದ ವಂಶಾನುಗತ ದೌರ್ಬಲ್ಯ; ರಕ್ತ ಉಕ್ಕಿ ಬಂದು ಅವನ ಗಂಟಲು ಕಟ್ಟಿದಂತೆ ಕಂಡುಬಂದು, ಅವನು ನೆಲದಮೇಲೆ ಬಿದ್ದು ಬಿಟ್ಟನು; ಆಗ ಅವನ ಕಪೋಲವು ಒಂದು ಮೇಜಿನ ಮೂಲೆಗೆ ತಗುಲಿ, ಬಲವಾದ ಪೆಟ್ಟು ಬಿದ್ದಿತು. ಏನು ಮಾಡತಕ್ಕದ್ದು? ಮುದುಕ ಖಂಡಿತವಾಗಿಯೂ ಸತ್ತುಹೋಗಿದ್ದ! ಸಹಾಯ ಒದಗಿಬರುವ ಹೊತ್ತಿಗೆ ತುಂಬ ತಡವಾಗಿ ಹೋಗಿರುತ್ತದೆ! ಆ ಸಹಾಯ ಬಹಳ ಬೇಗನೆಯೆ ಬಂದರಂತೂ, ಎಂತಹ ದೌರ್ಭಾಗ್ಯ! ಏಕೆಂದರೆ, ತನ್ನ ತಮ್ಮನ ಮಗ ಮಾಡುತ್ತಿರುವಾಗಲೇ ಕಣ್ಣಾರೆ ಕಂಡಿದ್ದ ನಾಚಿಕೆಗೇಡಿನ ಹೀನಕೃತ್ಯವನ್ನು ನೆನಪಿಗೆ ತರುತ್ತಿದ್ದಿತು ಅವನ ಜಾಗೃತಗೊಳ್ಳುತ್ತಿರುವ ಪ್ರಜ್ಞೆ!

ಆದರೆ ಅವನು ಎಚ್ಚರಗೊಳ್ಳಲೇ ಇಲ್ಲ. ತನಗೆ ಸ್ವಭಾವವಾಗಿ ಬಂದಿದ್ದ ನಿಷ್ಠುರವಾದ ಚಿತ್ತಸ್ಥೈರ್ಯದಿಂದ ತರುಣನು ಸಂದೂಕಗಳ ಶೋಧನೆಯನ್ನು ಮುಂದುವರಿಸಿದನು; ಆಗ, ಕ್ಲಿಫರ್ಡನ ಹೆಸರಿಗೆ ಬರೆದಿದ್ದ ಈಚಿನ ತಾರೀಖಿನ ಒಂದು ಉಯಿಲು ಅವನ ಕೈಗೆ ಸಿಕ್ಕಿತು, ಅದನ್ನವನು ನಾಶಪಡಿಸಿಬಿಟ್ಟನು; ತನ್ನ ಹೆಸರಿಗೇ ಬರೆದಿದ್ದ ಮುಂಚಿನದೊಂದೂ ಸಿಕ್ಕಿತು, ಅದನ್ನವನು ಉಳಿಸಿಕೊಂಡನು. ಆದರೆ, ಹೀನ ಉದ್ದೇಶಗಳಿಂದ ಕೋಣೆಗೆ ಯಾರೋ ಬಂದಿದ್ದರೆಂಬ ಬಗೆಗೆ

ಹೊತ್ತಿನಲ್ಲಿ ಆತನ ಸ್ವಂತ ಕೋಣೆಗೆ ಯಾರೋ ಒಬ್ಬಾತ ಪ್ರವೇಶವನ್ನು ದೊರಕಿಸಿಕೊಂಡಿದ್ದನು, ಎಂಬ ಬಗೆಗೆ ಖಂಡಿಸಲಾಗದಂತಹ ಸುಳಿವನ್ನು ಕೊಡುತ್ತಿದ್ದ ಸಂದರ್ಭಗಳಿದ್ದುವು. ಅವನ ಮಲಗುವ ಕೋಣೆಗೆ ಸೇರಿಕೊಂಡಿದ್ದಂತಿದ್ದ ಕೋಣೆಯಲ್ಲಿನ ಅವನ ಬರೆಯುವ ಮೇಜನ್ನೂ ಸ್ವಂತದ ಸಂದೂಕಗಳನ್ನೂ ಪೂರ್ತಿ ಶೋಧಿಸಿ ನೋಡಲಾಗಿತ್ತು; ಹಣ ಹಾಗೂ ಬೆಲೆಬಾಳುವ ಪದಾರ್ಥಗಳು ಕಾಣವಾಗಿದ್ದವು; ಮುದುಕನ ಬಿಳಿಯ ಬಟ್ಟೆಯ ಮೇಲೆ ರಕ್ತದ ಅಂಗೈ ಗುರುತು ಮೆತ್ತಿಕೊಂಡಿತು; ಒಳ್ಳೆಯ ಬಲವಾದ ಸಾಕ್ಷ್ಯಪ್ರಮಾಣಗಳ ಸರಣಿಯ ಅನುಮಾನದ ಆಧಾರದ ಮೇಲೆ, ದರೋಡೆಯ ಹಾಗೂ ಕೊಲೆಯಂತೆಯೆ ಕಾಣುತ್ತಿದ್ದ ಕೃತ್ಯದ ಅಪರಾಧವನ್ನು ಆಗ ತನ್ನ ದೊಡ್ಡಪ್ಪನೊಂದಿಗೆ ಏಳು ಇಪ್ಪಾರಿನ ಮನೆಯಲ್ಲಿ ವಾಸವಾಗಿದ್ದ ಕ್ಲಿಫರ್ಡನ ಮೇಲೆ ಹೊರಿಸಲಾಗಿತ್ತು.

ಅದು ಎಲ್ಲಿಂದಲೇ ಹುಟ್ಟಿಕೊಂಡಿರಲಿ, ಈಗ ಒಂದು ವಾದವು ಮೇಲೆದ್ದಿತು; ಈ ಕೃತ್ಯಗಳಿಗೆ ಕ್ಲಿಫರ್ಡ್ ಕಾರಣನೆಂಬ ಭಾವನೆಯನ್ನು ತಳ್ಳಿಹಾಕಲು ಸಾಧ್ಯವಾಗುವಂತೆ ಈ ಸಂದರ್ಭಗಳನ್ನು ವಿವರಿಸಲು ಆ ವಾದ ಯತ್ನಿಸಿತು. ಬಹುಕಾಲದಿಂದ ರಹಸ್ಯವಾಗಿದ್ದ ಸತ್ಯಾಂಶಗಳ ಚರಿತ್ರೆಯನ್ನೂ ವಿವರಣೆಯನ್ನೂ ವಶೀಕರಣ ಸುಪ್ತ್ಯಾವಹನ ವಿದ್ಯೆಯನ್ನು ಬಲ್ಲ ದ್ರಷ್ಟಾರರಲ್ಲಿ ಒಬ್ಬರಿಂದ ಛಾಯಾಚಿತ್ರ ಕಲಾವಿದನು ಪಡೆದುಕೊಂಡಿದ್ದನೆಂದು ಅನೇಕಮಂದಿ ಒತ್ತಿ ಹೇಳಿದರು: 'ರಹಸ್ಯಾವಲೋಕನ ವಿದ್ಯೆ'ಯನ್ನು ಬಲ್ಲ ಆ ದ್ರಷ್ಟಾರರು ಈಚೀಚೆಗೆ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡು ಕಾಣುವ ಅದ್ಭುತಸಂಗತಿಗಳಿಂದ ಮಾನವವ್ಯವಹಾರಗಳ ಸ್ವರೂಪವನ್ನು ವಿಚಿತ್ರವಾಗಿ ಗೊಂದಲಕ್ಕೀಡುಮಾಡಿ, ಪ್ರತಿಯೊಬ್ಬರ ಸಹಜ ದರ್ಶನಶಕ್ತಿಯನ್ನೂ ನಾಚಿಕೆಗೀಡುಮಾಡುತ್ತಾರೆ.

ಕಥೆಯ ಈ ಪಾಠಾಂತರದ ಪ್ರಕಾರ, ನಮ್ಮ ನಿರೂಪಣೆಯಲ್ಲಿ ನಾವು ಚಿತ್ರಿಸಿರುವಂತೆ ಆದರ್ಶಪ್ರಾಯನಾದ ನ್ಯಾಯಮೂರ್ತಿ ಪಿನ್ಚನ್ನನು ತನ್ನ ತಾರುಣ್ಯದಲ್ಲಿ ಎಲ್ಲರೂ ಕಾಣುವಮಟ್ಟಿಗೆ ತಿದ್ದಲಾಗದ ತುಂಟನಾಗಿದ್ದ. ಅನೇಕ ವೇಳೆ ಸಂಭವಿಸುವಂತೆ, ಅವನ ಬೌದ್ಧಿಕಗುಣಗಳೂ ಶೀಲ ಸಾಮರ್ಥ್ಯವೂ ರೂಪಗೊಳ್ಳುವುದಕ್ಕೆ ಮೊದಲೇ ನಿಷ್ಕರುಣೆಯ ಪಾಶವ ಪ್ರವೃತ್ತಿಗಳು ಅವನಲ್ಲಿ ರೂಪಗೊಂಡಿದ್ದುವು; ಆ ಮೊದಲ ಗುಣಗಳಿಗಾಗಿ ಅವನು ಆಮೇಲೆ ಗಮನಾರ್ಹವಾದನು. ಆ ಕಾಲದಲ್ಲಿ ಅವನು ಒರಟೊರಟಾಗಿ, ವಿಷಯಾಸಕ್ತನಾಗಿ, ಕೀಳುತೆರನ ಸುಖಭೋಗಗಳಿಗೆ ಬಲಿಯಾಗಿ, ತನ್ನ ವೃತ್ತಿ ಪ್ರವೃತ್ತಿಗಳಲ್ಲಿ ಬಹುಮಟ್ಟಿಗೆ ಅಸಂಸ್ಕೃತನಂತೆಯೆ ತೋರ್ಪಡಿಸಿಕೊಂಡಿದ್ದನು; ವೆಚ್ಚವೆಂದರೆ ಅವನಿಗೆ ಲಕ್ಷ್ಯವೇ

ಒಂದು ಪಕ್ಕಕ್ಕೆ ತಳ್ಳಿ ಬಿಟ್ಟನು: ಅದನ್ನು ಕುರಿತು ಅವನು ಮತ್ತೆ ಯೋಚಿಸಲೇ ಇಲ್ಲ.

ಇನ್ನು ನ್ಯಾಯಮೂರ್ತಿಯನ್ನು ತನ್ನ ವಿಶ್ರಾಂತಿಯನ್ನು ಪಡೆಯುವುದಕ್ಕಾಗಿ ಅಲ್ಲಿಯೇ ಬಿಟ್ಟು ಬಿಡುತ್ತೇವೆ. ಮರಣಕಾಲದಲ್ಲಿ ಅವನು ಅದೃಷ್ಟಶಾಲಿಯೆಂದು ಹೇಳಲಾಗದು. ತನ್ನ ಏಕಮಾತ್ರಪುತ್ರನ ಆಸ್ತಿಗೆ ಇನ್ನೂ ಹೆಚ್ಚಿನ ಐಶ್ವರ್ಯವನ್ನು ಸೇರಿಸಬೇಕೆಂಬ ಪ್ರಯತ್ನದಲ್ಲಿದ್ದಾಗಲೇ ತನಗೆ ತಿಳಿಯದಂತೆಯೆ ಅವನು ಅಪುತ್ರವಂತನಾಗಿದ್ದನು. ಅವನು ಮರಣ ಹೊಂದಿ ಇನ್ನೂ ಒಂದು ವಾರ ಕೂಡ ಕಳೆದಿರಲಿಲ್ಲ. ನ್ಯಾಯಮೂರ್ತಿ ಪಿನ್ಚನ್ನನ ಮಗನು ತನ್ನ ತಾಯ್ನಾಡಿಗೆ ಹಿಂದಿರುಗಲು ಹಡಗು ಹತ್ತಬೇಕೆಂದಿದ್ದ ವೇಳೆಗೆ ಸರಿಯಾಗಿ ಕಾಲರಾ ಬೇನೆಯಿಂದ ಮೃತಿಹೊಂದಿದನೆಂಬ ಸುದ್ದಿ 'ಕನಾರ್ಡ್' ಜಹಜುಗಳಲ್ಲಿ ಒಂದರ ಮೂಲಕ ಬಂದು ಮುಟ್ಟಿತು. ಈ ದುರ್ದೈವದಿಂದಾಗಿ, ಕ್ಲಿಫರ್ಡ್ ಐಶ್ವರ್ಯವಂತನಾದನು; ಅದೇ ರೀತಿ ಹೆಪ್ಸಿಬಾ ಕೂಡ; ಹಾಗೆಯೇ ನಮ್ಮ ಪುಟ್ಟ ಹಳ್ಳಿಯ ಕನ್ಯೆ; ಮತ್ತು, ಅವಳ ಮೂಲಕ, ಐಶ್ವರ್ಯದ ಹಾಗೂ ಎಲ್ಲ ಬಗೆಯ ಸಂಪ್ರದಾಯಶರಣತೆಯ ಬದ್ಧವೈರಿಯಾದ, ಹುಚ್ಚು ಸುಧಾರಕನಾದ– ಹಾಲ್‌ಗ್ರೇವ್!

ಕ್ಲಿಫರ್ಡ್ ಈಗ ಸಮಾಜದ ಒಳ್ಳೆಯ ಅಭಿಪ್ರಾಯವನ್ನು ಸಂಪಾದಿಸಬೇಕಾಗಿದ್ದರೆ, ತಾನು ತಪ್ಪಿತಸ್ಥನಲ್ಲವೆಂದು ವಿಧಿವತ್ತಾಗಿ ಸ್ಥಾಪಿಸಿಕೊಳ್ಳುವ ಶ್ರಮವನ್ನೂ ಮನಃಕ್ಲೇಶವನ್ನೂ ಸಹಿಸಬೇಕಾಗಿತ್ತು; ಅಷ್ಟೊಂದು ಬೆಲೆ ತೆರಲು, ಈಗ ಅವನ ಜೀವನದಲ್ಲಿ ತುಂಬ ಕಾಲ ಮೀರಿಹೋಗಿತ್ತು. ಅವನಿಗೆ ಅಗತ್ಯವಾಗಿದ್ದುದು ಕೇವಲ ಕೆಲವು ಜನರ ಪ್ರೇಮ ಮಾತ್ರ; ಗೊತ್ತಿಲ್ಲದ ಹಲವರ ಮೆಚ್ಚಿಗೆಯಲ್ಲ, ಗೌರವ ಕೂಡ ಅಲ್ಲ. ಅವನ ಯೋಗಕ್ಷೇಮದ ಭಾರವನ್ನು ವಹಿಸಿಕೊಂಡಿದ್ದವರು ಕಳೆದುಹೋದ ವಿಚಾರಗಳನ್ನು ಮತ್ತೆ ಕೆದಕಿ ಕ್ಲಿಫರ್ಡನನ್ನು ಅದೇ ಶೋಚನೀಯಾವಸ್ಥೆಗೆ ಒಡ್ಡುವುದು ಸರಿಯೆಂದು ಭಾವಿಸಿದ್ದರೆ, ಆ ಗೊತ್ತಿಲ್ಲದ ಹಲವರನ್ನು ಅವನ ಕಡೆಗೆ ಒಲಿಸಿಕೊಳ್ಳಬಹುದಾಗಿತ್ತು; ಆದರೆ ಅವನು ನಿರೀಕ್ಷಿಸಬಹುದಾದ ಯಾವುದೇ ಬಗೆಯ ನೆಮ್ಮದಿಯೆನ್ನುವುದು ವಿಸ್ಮೃತಿಯ ಶಾಂತಸ್ಥಿತಿಯಿಂದ ಮಾತ್ರ ಅವನಿಗೆ ದೊರಕುವುದಾಗಿತ್ತು. ಅವನು ಅನುಭವಿಸಿದ್ದಂತಹ ಅನ್ಯಾಯವನ್ನು ಅನುಭವಿಸಿಯಾದಮೇಲೆ, ಅದಕ್ಕೆ ಯಾವ ಪರಿಹಾರವೂ ಇಲ್ಲ. ಅಂಥ ಪರಿಹಾರವನ್ನು ನೀಡಲು ಲೋಕವು ಸಾಕಷ್ಟು ಸಿದ್ಧವಾಗಿದ್ದಿರಬಹುದಾಗಿದ್ದರೂ, ಅನುಭವಿಸಿದ ಮನೋವೇದನೆಯಿಂದ ಆಗಬೇಕಾದ ಹಾನಿಯೆಲ್ಲ ಆದಮೇಲೆ ಬಹು ತಡವಾಗಿ ದೊರೆಯುವ ಆ

ಈ ತಡಕಾಡಿಬಿಟ್ಟ ಸಂದೂಕಗಳಲ್ಲಿ ಸಾಕ್ಷ್ಯಗಳು ದೊರಕುವುವೆಂದು ಅಲ್ಲಿಂದ ಹೊರಡುವ ಮುನ್ನ ಅವನು ಆಲೋಚಿಸಿದನು. ಸಂಶಯಕ್ಕೆ ಎಡೆಗೊಟ್ಟರೆ ಅದು ನಿಜವಾದ ಅಪರಾಧಿ ಯಾರೆಂಬುದನ್ನು ತೋರಿಸಿಕೊಡುವುದು, ಆದ್ದರಿಂದ, ಕ್ಲಿಫರ್ಡನನ್ನು ಅಪರಾಧಿಯನ್ನಾಗಿ ಮಾಡಿ ತನ್ನನ್ನು ಪಾರುಮಾಡಬಲ್ಲಂತಹ ಒಂದು ಹಂಚಿಕೆಯನ್ನು ಮೃತನ ಸಮ್ಮುಖದಲ್ಲಿಯೇ ಅವನು ಹೂಡಿದನು; ಕ್ಲಿಫರ್ಡನ ಸ್ವಭಾವವನ್ನು ಕಂಡರೆ ಅವನಿಗೆ ಎಂದಿನಿಂದಲೂ ಒಂದು ಬಗೆಯ ತಿರಸ್ಕಾರ, ಹಾಗೂ ಜುಗುಪ್ಸೆ. ಕ್ಲಿಫರ್ಡನನ್ನು ಕೊಲೆಗೆಲಸದ ಆಪಾದನೆಗೆ ಗುರಿಪಡಿಸಬೇಕೆಂಬ ಯಾವುದೇ ನಿಶ್ಚಿತ ಉದ್ದೇಶದಿಂದ ಅವನು ಹಾಗೆ ವರ್ತಿಸಿದ ಸಂಭವ ಕಾಣಲಿಲ್ಲ; ಅದನ್ನಿಲ್ಲಿ ಹೇಳಬೇಕು. ತನ್ನ ದೊಡ್ಡಪ್ಪನು ಯಾರ ಘಾತುಕತನದಿಂದಲೂ ಸಾಯಲಿಲ್ಲವೆಂದು ಬಲ್ಲ ಅವನಿಗೆ, ಅಂಥ ಒಂದು ಅನುಮಾನವನ್ನು ಮಾಡಬಹುದೆಂದು ಆ ವಿಷಮಘಟನೆಯ ಗಡಿಬಿಡಿಯಲ್ಲಿ ಹೊಳೆಯದೆ ಹೋಗಿದ್ದಿರಬಹುದು. ಆದರೆ, ವ್ಯವಹಾರವು ಈ ಘೋರ ಸ್ವರೂಪಕ್ಕೆ ತಿರುಗಿದಾಗ, ಜಫ್ರಿ ಹಿಂದೆ ಕೈಕೊಂಡಿದ್ದ ಕಾರ್ಯಕ್ರಮದ ಪರಿಣಾಮವಾಗಿ ಇನ್ನುಳಿದ ಕಾರ್ಯಕ್ರಮಗಳನ್ನೂ ಅವನು ಕೈಕೊಳ್ಳಲೇಬೇಕಾಗಿ ಬಂದಿತು. ಅವನು ಅದೆಷ್ಟು ಉಪಾಯಚತುರತೆಯಿಂದ ಸಂದರ್ಭಗಳನ್ನು ನಿಯೋಜಿಸಿದ್ದನೆಂದರೆ, ಕ್ಲಿಫರ್ಡನ ವಿಚಾರಣೆಯ ಕಾಲದಲ್ಲಿ ಅವನು ಯಾವ ಒಂದು ಸುಳ್ಳನ್ನೂ ಪ್ರಮಾಣಮಾಡಿ ಸಾಧಿಸಬೇಕಾದ ಅವಶ್ಯಕತೆಯೇ ಕಂಡುಬರಲಿಲ್ಲ; ತಾನೇ ಸ್ವತಃ ಮಾಡಿದ್ದನ್ನೂ ಕಣ್ಣಾರೆ ಕಂಡದ್ದನ್ನೂ ಹೇಳದೆ ಇರುವುದರ ಮೂಲಕ ಒಂದು ನಿರ್ಧಾರಕ ವಿವರಣೆಯನ್ನು ತಡೆ ಹಿಡಿಯುವುದೊಂದೇ ಅವನ ಕೆಲಸವಾಗಿತ್ತು.

ಹೀಗೆ, ಕ್ಲಿಫರ್ಡನಿಗೆ ಸಂಬಂಧಪಟ್ಟಂತೆ ಜಫ್ರಿ ಪಿನ್ಚನ್ನನ ಆಂತರಿಕ ಅಪರಾಧಸ್ವರೂಪವೂ ನಿಜವಾಗಿಯೂ ನೀಚವಾಗಿತ್ತು, ನಿಂದಾರ್ಹವಾಗಿತ್ತು; ಅದರ ಹೊರತೋರಿಕೆ ಹಾಗೂ ಸ್ಪಷ್ಟ ಕಾರ್ಯರೂಪವು ಅಂತಹ ದೊಡ್ಡ ಪಾಪಕೃತ್ಯದೊಂದಿಗೆ ಕೂಡಿಕೊಳ್ಳಲಾಗದಷ್ಟು ಅತ್ಯಲ್ಪವಾಗಿದ್ದಿತು. ಘನವಾದ ಗೌರವವುಳ್ಳ ವ್ಯಕ್ತಿ ಅತ್ಯಂತ ಸುಲಭವಾಗಿ ಪರಿಹರಿಸಿಕೊಳ್ಳಬಹುದಾದ ಅಪರಾಧದೋಷವೆಂದರೆ, ಇಂಥದೇ. ಮಾನ್ಯ ನ್ಯಾಯಮೂರ್ತಿ ಪಿನ್ಚನ್ನನು ಆಮೇಲೆ ತನ್ನ ಸ್ವಂತ ಜೀವಿತವನ್ನು ತಾನೇ ಪರಿಶೀಲಿಸಿಕೊಂಡಾಗ, ಆ ದೋಷವು ದೃಷ್ಟಿಗೋಚರವಾಗದಂತೆ ಅಡಗಿಹೋಗುವುದಕ್ಕೋ, ಇಲ್ಲವೆ ಒಂದು ಕ್ಷಮ್ಯವಾದ ವಿಚಾರವೆಂದು ಪರಿಗಣನೆಯಾಗುವುದಕ್ಕೋ ಬಿಟ್ಟುಬಿಟ್ಟನು. ತನ್ನ ತಾರುಣ್ಯದ ಮರೆತುಹೋದ ಹಾಗೂ ಕ್ಷಮೆಗೊಳಗಾದ ದೌರ್ಬಲ್ಯಗಳ ನಡುವೆ ಅದನ್ನವನು

ತಳೆಯುವಂತಾಗಿತ್ತು. ಅವನು ಸುಖಿಯಾಗಿದ್ದನೆಂಬುದು ಸ್ಪಷ್ಟ. ಈಗ ಅವನ ಸೌಂದರ್ಯಾಭಿರುಚಿಯನ್ನು ತಣಿಸಲು ಎಲ್ಲ ಸಾಧನ ಸಲಕರಣೆಗಳೂ ಕೋರಿದಾಗ ದೊರೆಯುವಂತಿದ್ದು, ಅವನ ನಿತ್ಯದ ಬದುಕು, ಅದರ ಒಂದು ಭಾಗವಾದ ಆ ಉದ್ಯಾನದೃಶ್ಯಗಳು, ಇವು ಅವನ ಪಾಲಿಗೆ ಮಧುರವಾಗಿ ಪರಿಣಮಿಸಿದ್ದಂತೆ ಕಂಡುಬಂದುವು; ಈ ಬದುಕಿನ ಇನ್ನೊಂದು ಚಿತ್ರವನ್ನು ಚಿತ್ರಿಸಲು ನಾವು ತೊಡಗಿದ್ದೇ ಆದರೆ, ಅದರೊಂದಿಗೆ ಹೋಲಿಕೆಗೆ ಬಂದು ಅದು ಅಲ್ಪವೂ ಕ್ಷುಲ್ಲಕವೂ ಆಗಿ ಕಾಣುವುದು.

ತಮ್ಮ ಭಾಗ್ಯವು ಪರಿವರ್ತನೆಯಾದ ಕೂಡಲೆ, ಕ್ಲಿಫರ್ಡ್, ಹೆಪ್ಸಿಬಾ ಮತ್ತು ಪುಟ್ಟ ಫೀಬೆ– ಇವರುಗಳು ಕಲಾವಿದನ ಒಪ್ಪಿಗೆಯನ್ನು ಪಡೆದು ಹಾಳುಸುರಿಯುತ್ತಿದ್ದ ಆ ಹಳೆಯ ಏಳು ಇಪ್ಪಾರಿನ ಮನೆಯನ್ನು ಬಿಟ್ಟು ದಿವಗಂತ ನ್ಯಾಯಮೂರ್ತಿ ಪಿನ್ಚನ್ನನ ಭವ್ಯವಾದ ಗ್ರಾಮಭವನದಲ್ಲಿ ಸಧ್ಯದ ಮಟ್ಟಿಗೆ ವಾಸಮಾಡಲು ತೀರ್ಮಾನಿಸಿದರು. ಹುಂಜವನ್ನೂ ಅದರ ಕುಟುಂಬವರ್ಗವನ್ನೂ ಆಗಲೇ ಅಲ್ಲಿಗೆ ಸಾಗಿಸಲಾಗಿತ್ತು; ಅಲ್ಲಿ ಆ ಕೂಡಲೆ ಎರಡು ಹೆಣ್ಣು ಕೋಳಿಗಳೂ ಶ್ರಮವನ್ನೇ ಅರಿಯದೆ ಮೊಟ್ಟೆಯಿಡುವ ಕಾರ್ಯದಲ್ಲಿ ತೊಡಗಿಬಿಟ್ಟುವು; ಒಂದು ಶತಮಾನದ ಹಿಂದೆ ಇದ್ದುದಕ್ಕಿಂತ ಉತ್ತಮವಾದ ಆಶ್ರಯದಲ್ಲಿ ತಮ್ಮ ಪ್ರಖ್ಯಾತ ಸಂತತಿಯನ್ನು ಮುಂದುವರಿಸುವುದು ತಮ್ಮ ಕರ್ತವ್ಯದ ಹಾಗೂ ಆತ್ಮಸಾಕ್ಷಿಯನ್ನು ಮೆಚ್ಚಿಸುವ ವಿಚಾರವೆಂಬಂತೆ ಒಂದು ಸ್ಪಷ್ಟವಾದ ಯೋಜನೆಯ ಮೇರೆಗೆ ಆ ಕಾರ್ಯದಲ್ಲಿ ಅವು ತೊಡಗಿದ್ದುವು. ಅವರು ಹೊರಡುವುದಕ್ಕೆ ಗೊತ್ತಾಗಿದ್ದ ದಿನದಂದು ಒಳ್ಳೆಯ ಪ್ರಾಣಿಯಾದ ವೆನ್ನರ್ ಮಾವನೂ ಸೇರಿ ನಮ್ಮ ಕಥೆಯ ಪ್ರಧಾನ ವ್ಯಕ್ತಿಗಳೆಲ್ಲಾ ದಿವಾನಖಾನೆಯಲ್ಲಿ ನೆರೆದಿದ್ದರು.

"ಒಟ್ಟಿನ ನಕ್ಷೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ, ಹಳ್ಳಿಯಮನೆ ಖಂಡಿತವಾಗಿಯೂ ಸೊಗಸಾದದ್ದೆ," ಎಂದು, ನೆರೆದಿದ್ದವರು ತಮ್ಮ ಮುಂದಿನ ಏರ್ಪಾಟುಗಳನ್ನು ಚರ್ಚಿಸುತ್ತಿದ್ದಾಗ, ಹಾಲ್‌ಗ್ರೇವ್ ತನ್ನ ಅಭಿಪ್ರಾಯ ಹೇಳಿದನು: "ಆದರೆ, ನನಗೆ ಆಶ್ಚರ್ಯವಾಗಿ ಕಾಣುವ ಸಂಗತಿ ಎಂದರೆ, ಮೃತರಾದ ಜಡ್ಜಿ– ಅಷ್ಟೊಂದು ಐಶ್ವರ್ಯವಂತರಾಗಿದ್ದು, ಸ್ವಂತ ವಂಶಸ್ಥರಿಗೇ ತಮ್ಮ ಐಶ್ವರ್ಯವನ್ನೆಲ್ಲಾ ಬಿಟ್ಟುಹೋಗುತ್ತೇನೆಂಬ ನ್ಯಾಯವಾದ ನಿರೀಕ್ಷೆ ಇಟ್ಟುಕೊಂಡಿದ್ದವರು– ಗೃಹವಾಸ್ತು ಶಿಲ್ಪಕ್ಕೆ ಉತ್ಕೃಷ್ಟ ಮಾದರಿಯಾಗಿರುವಂಥ ಕಟ್ಟಡವನ್ನು ಮರದಲ್ಲಿ ಕಟ್ಟದೆ ಕಲ್ಲಿನಲ್ಲಿ ಕಟ್ಟುವುದು ಉಚಿತ ಎಂದು ಯೋಚಿಸದೆ ಇದ್ದದ್ದು; ಅದೇ ಆಶ್ಚರ್ಯ. ಕಲ್ಲಿನಲ್ಲಿ ಕಟ್ಟಿದ್ದಿದ್ದರೆ, ವಂಶದ ಪ್ರತಿಯೊಂದು ತಲೆಮಾರಿನ ಜನವೂ ತನ್ನ ಸ್ವಂತ ಅಭಿರುಚಿ

ಪರಿಹಾರವು ಕರುಣಾಜನಕವಾದ ಪರಿಹಾಸಮಾತ್ರವಾಗುತ್ತಿದ್ದಿತು; ಬಡಪ್ರಾಣಿ ಕ್ಲಿಫರ್ಡ್ ನಗಲು ಸಾಧ್ಯವಾದುದಕ್ಕಿಂತ ಹೆಚ್ಚು ನೋವಿನ ಕಹಿನಗೆಯನ್ನು ಉಂಟು ಮಾಡಲು ಮಾತ್ರ ತಕ್ಕದ್ದಾಗಿರುತ್ತಿದ್ದಿತು. ನಮ್ಮ ಈ ಮರ್ತ್ಯಲೋಕದಲ್ಲಿ ನಾವು ಎಸಗಿದ ಅಥವಾ ಸಹಿಸದ ಯಾವ ಭಾರಿಯಾದ ತಪ್ಪೊ ಎಂದೇ ಆಗಲಿ ಸರಿಪಟ್ಟುದಿಲ್ಲ; ಇದೊಂದು ಸತ್ಯ (ಅದು ಮೇಲಾದ ಆಶಾ ಭಾವನೆಗಳನ್ನು ಸೂಚಿಸುವುದಾಗಿಲ್ಲದೆ ಹೋಗಿದ್ದರೆ, ಅದು ಬಹು ವ್ಯಸನಕರವೂ ಆಗಿರುತ್ತಿತ್ತು). ಕಾಲ, ಪರಿಸ್ಥಿತಿಯ ಪರಿವರ್ತನೆ, ಮರಣವು ತಪ್ಪದೆ ಅಕಾಲದಲ್ಲಿಯೆ ಒದಗುವುದು– ಇವೆಲ್ಲವೂ ಹಾಗೆ ಸರಿಪಡುವುದನ್ನು ಅಸಾದ್ಯವಾಗಿ ಮಾಡುತ್ತವೆ. ವರ್ಷವರ್ಷಾಂತರಗಳು ಸಂದು ಬಹುಕಾಲವಾದಮೇಲೆ, ಆ ಸರಿಯಾದುದು ನಮ್ಮ ಸಾಮರ್ಥ್ಯಕ್ಕೆ ಅಳವಟ್ಟಿದ್ದರೂ, ಅದನ್ನು ನೆಲೆಗೊಳಿಸಲು ಸರಿಯಾದ ಎಡೆ ನಮಗೆ ದೊರಕುವುದಿಲ್ಲ. ಕ್ಲೇಶಪಡುತ್ತಿರುವವನಿಗೆ ಇದಕ್ಕಿಂತ ಮೇಲಾದ ಪರಿಹಾರೋಪಾಯವೆಂದರೆ, ತಾನು ಯಾವುದನ್ನು ಸರಿಪಡಿಸಲಾಗದಂತಹ ಹಾನಿ ಎಂದು ಒಮ್ಮೆ ಭಾವಿಸಿದ್ದನೋ ಅದನ್ನು ಸುಮ್ಮನೆ ಹಿಂದೆ ಬಿಟ್ಟು ಮುಂದುವರಿಯುವುದು.

ನ್ಯಾಯಮೂರ್ತಿಯ ಮರಣದಿಂದ ಉಂಟಾದ ಆಘಾತವು ಕ್ಲಿಫರ್ಡನ ಮೇಲೆ ಶಾಶ್ವತವಾಗಿ ಶಕ್ತಿದಾಯಕವಾದ, ಹಾಗೂ ಕಟ್ಟಕಡೆಯಲ್ಲಿ ಪ್ರಯೋಜನಕರವಾದ ಪರಿಣಾಮವನ್ನು ಹೊಂದಿತ್ತು. ಬಲಿಷ್ಠನೂ ತೂಕವುಳ್ಳವನೂ ಆದ ಆ ಮನುಷ್ಯ ಕ್ಲಿಫರ್ಡನ ಸ್ವಪ್ನಪಿಶಾಚಿಯಾಗಿದ್ದನು. ಅಷ್ಟೊಂದು ದುಷ್ಟಪ್ರಭಾವಕ್ಕೆ ಸಿಲುಕಿರುವಾಗ, ನಿರಾಳವಾಗಿ ಉಸಿರಾಡುವುದಕ್ಕೂ ಅವಕಾಶವಿರಲಿಲ್ಲ. ಕ್ಲಿಫರ್ಡನ ಉದ್ದೇಶರಹಿತ ಪಲಾಯನದ ಸಂದರ್ಭದಲ್ಲಿ ನಾವು ನೋಡಿರುವಂತೆ, ಸ್ವಾತಂತ್ರ್ಯದ ಮೊದಲ ಪರಿಣಾಮವೆಂದರೆ, ಅವನು ಅನುಭವಿಸುತ್ತಿದ್ದ, ತುಸ ಹೆದರಿಕೆಯಿಂದ ಕೂಡಿದ್ದ ಉಲ್ಲಾಸ. ಆ ಉಲ್ಲಾಸ ತಗ್ಗಿದಮೇಲೆ, ತನ್ನ ಮೊದಲಿನ ಬೌದ್ಧಿಕ ಉದಾಸೀನತೆಗೆ ಅವನು ಕುಸಿಯಲಿಲ್ಲ. ತನ್ನ ಮೊದಲಿನ ಸಹಜ ಶಕ್ತಿ ಸಾಮರ್ಥ್ಯಗಳ ಪೂರ್ಣ ಪ್ರಮಾಣವನ್ನು ಅವನು ಮತ್ತೆ ಎಂದಿಗೂ ಪಡೆಯಲಿಲ್ಲವೆಂಬುದೇನೋ ನಿಜ. ಆದರೆ ಅವುಗಳಲ್ಲಿ ಸಾಕಷ್ಟು ಪ್ರಮಾಣವನ್ನು ಅವನು ಹಿಂದಕ್ಕೆ ಪಡೆದಿದ್ದನು. ಅದರಿಂದಾಗಿ, ಅವನ ಸ್ವಭಾವಕ್ಕೆ ಸ್ವಲ್ಪ ಕಾಂತಿ ಕೂಡಿಬಂದಿತ್ತು, ಆ ಸ್ವಭಾವದಲ್ಲಿ ಅಂತರ್ಗತವಾಗಿದ್ದು ಕಾಣಿಸಿಕೊಳ್ಳುವುದಕ್ಕೆ ಮೊದಲೇ ಅಡಗಿಹೋಗಿದ್ದ ಅದ್ಭುತವಾದ ಸೊಗಸು ತುಸಮಟ್ಟಿಗೆ ಪ್ರಕಾಶಕ್ಕೆ ಬಂದಿತ್ತು, ಮತ್ತು ಅವನ ಬಗೆಗೆ ಇತರರು ಮೊದಲಿನಷ್ಟೇ ಆಳವಾದ, ಆದರೆ ಅಷ್ಟು ಖಿನ್ನತೆಯಿಂದ ಕೂಡಿಲ್ಲದ ಆಸಕ್ತಿಯನ್ನು

"ಬಹುಶಃ, ನಾನು ಅದನ್ನು ಸ್ಮರಿಸಿಕೊಳ್ಳಬಲ್ಲೆ," ಎಂದು ಹಾಲ್‌ಗ್ರೇವ್ ಉತ್ತರಕೊಟ್ಟನು: "ಆ ರಹಸ್ಯದ ಪರಿಚಯವಿಲ್ಲದ ಯಾವಾತನೂ ಈ ಕೀಳನ್ನು ಎಂದೂ ಮುಟ್ಟಲೂ ಆರ; ನೂರಕ್ಕೆ ತೊಂಬತ್ತೊಂಬತ್ತು ಸಲ ಅದು ನಿಜವಾದೀತು."

"ರಹಸ್ಯವಾದ ಕೀಲೆ!" ಎಂದು ಗಟ್ಟಿಯಾಗಿ ಹೇಳಿದ ಕ್ಲಿಫರ್ಡ್: "ಆಹಾ, ಈಗ ಜ್ಞಾಪಕಕ್ಕೆ ಬಂತು ನನಗೆ! ಬೇಸಗೆಯಲ್ಲಿ ಒಂದು ದಿನ ಮಧ್ಯಾಹ್ನ, ಮನೆಯೊಳಗೆ ಸೋಮಾರಿತನದಿಂದ ಕಾಲಕಳೆಯುತ್ತಾ ತಿರುಗಾಡುತ್ತಿದ್ದಾಗ, ಬಹಳ ಕಾಲದ ಹಿಂದೆ ನಾನದನ್ನು ಕಂಡುಕೊಂಡಿದ್ದೆ, ಆದರೆ ಅದರ ರಹಸ್ಯ ನನಗೆ ಸಿಕ್ಕಿಲ್ಲ."

ಕಲಾವಿದನು ತಾನು ಸೂಚಿಸಿದ್ದಂತಹ ಆ ಕೀಲುಜೋಡಣೆಯಮೇಲೆ ಬೆರಳಿಟ್ಟನು. ಹಿಂದಿನ ದಿನಗಳಲ್ಲಿ, ಹಾಗೆ ಒತ್ತಿದ್ದರ ಪರಿಣಾಮವಾಗಿ, ಬಹುಶಃ ಚಿತ್ರಪಟವು ಮುಂದಕ್ಕೆ ಓಲುತ್ತಿತ್ತು. ಆದರೆ, ಬಹಳಕಾಲ ಉಪಯೋಗಿಸದೆ ಮರೆಯಲ್ಲಿದ್ದುದರಿಂದ ಆ ಯಂತ್ರಜೋಡಣೆ ತುಕ್ಕು ಹಿಡಿದು ತಿಂದುಹೋಗಿತ್ತು; ಹೀಗಾಗಿ, ಹಾಲ್‌ಗ್ರೇವ್ ಅದನ್ನು ಹಾಗೆ ಒತ್ತಿದಾಗ, ಚಿತ್ರಪಟವು ಚೌಕಟ್ಟು ಸಮೇತ ತಟ್ಟನೆ ಉರುಳಿ, ಮುಖವಡಿಯಾಗಿ ನೆಲದಮೇಲೆ ಬಿದ್ದಿತು. ಹೀಗೆ, ಗೋಡೆಯಲ್ಲಿದ್ದ ಒಂದು ಗೂಡು ಬೆಳಕಿಗೆ ಬಂದಿತ್ತು; ಅಲ್ಲಿ ಬಿದ್ದಿದ್ದ ಒಂದು ವಸ್ತುವನ್ನು, ಚರ್ಮಕಾಗದದ ಮಡಿಸಿದ ಹಾಳೆ ಎಂದು ಒಡನೆಯೆ ಗುರುತಿಸುವುದು ಸಾಧ್ಯವಾಗಲಿಲ್ಲ; ಏಕೆಂದರೆ, ಅದರ ಮೇಲೆ ಒಂದು ಶತಮಾನಕಾಲದ ಧೂಳು ಕವಿದಿತ್ತು. ಹಾಲ್‌ಗ್ರೇವ್ ಅದನ್ನು ಬಿಚ್ಚಿ, ಒಂದು ಪುರಾತನ ಲಿಖಿತ ಪತ್ರವಿದ್ದುದನ್ನು ತೋರಿಸಿದನು; ಆ ಪತ್ರಕ್ಕೆ ಹಲವರು ಅಮೆರಿಕದ 'ಇಂಡಿಯನ್' ಮುಖಂಡರು ಚಿತ್ರಲಿಪಿಯಲ್ಲಿ ರುಜುಹಾಕಿದ್ದರು; ಆ ಪತ್ರದ ಮೂಲಕ ಸರದಾರ ಪಿನ್ಚನ್ನನಿಗೂ ಅವನ ಉತ್ತರಾಧಿಕಾರಿಗಳಿಗೂ ಮೂಡಗಡೆಯಲ್ಲಿದ್ದ ಅಪಾರ ವಿಸ್ತಾರದ ಭೂಪ್ರದೇಶದ ಅನುಭೋಗದ ಹಕ್ಕು ಸರ್ವಕಾಲಕ್ಕೂ ದೊರಕಿತ್ತು.

"ಇದೇ ಆ ಚರ್ಮಕಾಗದ ಪತ್ರ; ಇದನ್ನು ಪುನಃ ಪಡೆಯಲು ಪ್ರಯತ್ನಿಸಿದಾಗಲೇ ಚೆಲುವೆ ಆಯಲಿಸ್ ಪಿನ್ಚನ್ ತನ್ನ ಸೌಖ್ಯವನ್ನೂ ಜೀವವನ್ನೂ ಅದಕ್ಕೆ ಬೆಲೆ ತೆರಬೇಕಾಯಿತು," ಎಂದು ಕಲಾವಿದನು ತನ್ನ ಕಟ್ಟು ಕತೆಯ ಸಂದರ್ಭವನ್ನು ಸೂಚಿಸಿ, ಹೇಳಿದನು: "ಅದಕ್ಕೆ ಬೆಲೆಯಿದ್ದಾಗ, ಪಿನ್ಚನ್ ವಂಶಸ್ಥರು ಅದಕ್ಕಾಗಿ ವ್ಯರ್ಥವಾಗಿ ಹುಡುಕಾಡಿದರು; ಈಗ ಅವರಿಗೆ ಆ ಐಶ್ವರ್ಯ ಸಿಕ್ಕಿದೆ, ಆದರೆ ಅದು ತನ್ನ ಬೆಲೆ ಕಳೆದುಕೊಂಡು ಬಹು ಕಾಲವಾಯಿತು."

"ಅಯ್ಯೋ, ಬಡ ಕಸಿನ್ ಜಫ್ರೀ! ಅವನನ್ನು ಮೋಸಗೊಳಿಸಿದ್ದು ಇದೇ," ಎಂದು ಹೆಪ್ಸಿಬಾ ಉದ್ಗರಿಸಿದಳು. "ಅವರಿಬ್ಬರೂ ಒಟ್ಟಿಗೆ ಚಿಕ್ಕವರಾಗಿದ್ದಾಗ,

ಹಾಗು ಅನುಕೂಲಕ್ಕೆ ತಕ್ಕಂತೆ ಮನೆಯ ಒಳಭಾಗವನ್ನು ಬದಲಾಯಿಸಿಕೊಳ್ಳಬಹುದಾಗಿತ್ತು; ಅದೇ ಕಾಲಕ್ಕೆ, ವರ್ಷಗಳು ಕಳೆದಂತೆಲ್ಲಾ, ಹೊರಭಾಗವು ಕಟ್ಟಡದ ಶಾಶ್ವತ ಸ್ವರೂಪಕ್ಕೆ ಪೂಜ್ಯತೆಯನ್ನೂ ಸೇರಿಸುತ್ತಾ ಹೋಗುತ್ತಿದ್ದಿತು; ಯಾವುದೇ ಒಂದು ಗಳಿಗೆಯಲ್ಲಿ ಸುಖವಾಗಿರಬೇಕಾದರೆ ಇದು ಆವಶ್ಯಕ."

ಫ಼ೀಬೆ ಕಲಾವಿದನ ಮುಖವನ್ನು ಅಪಾರ ಆಶ್ಚರ್ಯಭಾವದಿಂದ ದಿಟ್ಟಿಸಿ ನೋಡುತ್ತಾ, ಗಟ್ಟಿಯಾಗಿ ಹೇಳಿದಳು: "ಇದೇನಿದು, ನಿನ್ನ ಭಾವನೆಗಳೆಲ್ಲಾ ಅದೆಷ್ಟು ಆಶ್ಚರ್ಯಕರವಾಗಿ ಮಾರ್ಪಾಟುಹೊಂದಿವೆ! ಕಲ್ಲಿನ ಮನೆಯೆ, ನಿಜವಾಗಿಯೂ! ಹಕ್ಕಿಯ ಗೂಡಿನಷ್ಟು ಸೂಕ್ಷ್ಮವಾದ, ಕ್ಷಣಭಂಗುರವಾದ ವಸತಿಯಲ್ಲಿ ಜನ ವಾಸಿಸಬೇಕೆಂದು ನಿನ್ನ ಅಪೇಕ್ಷೆಯನ್ನು ತಿಳಿಸಿ ಇನ್ನೂ ಎರಡು ಮೂರು ವಾರ ಕೂಡ ಆಗಿಲ್ಲ!"

"ಆಹಾ, ಫ಼ೀಬೆ, ಅದು ಹೇಗಾದೀತು ಎಂದು ನಾನು ನಿನಗೆ ಹೇಳಲಿಲ್ಲವೆ," ಎಂದು ಅರ್ಧ ವ್ಯಸನಬೆರೆತ ನಗುವಿನೊಂದಿಗೆ ಕಲಾವಿದನು ನುಡಿದನು: "ಆಗಲೇ ನಾನು ಸಂಪ್ರದಾಯಶರಣನೆಂದು ಎಂದೂ ಯೋಚಿಸಿರಲಿಲ್ಲ. ವಂಶಪಾರಂಪರ್ಯವಾದ ದೌರ್ಭಾಗ್ಯ ತುಂಬಿರುವ ಈ ಮನೆಯಲ್ಲಿ, ಮಾದರಿಯಾದ ಸಂಪ್ರದಾಯಶರಣನ ಆ ಭಾವಚಿತ್ರದ ಸಮ್ಮುಖದಲ್ಲಿ ಹಾಗಾಗುವುದು ವಿಶೇಷವಾಗಿ ಅಕ್ಷಮ್ಯ; ಅದೇ ಪಾತ್ರಧರಿಸಿಯೇ ಅವನು ಅಷ್ಟು ದೀರ್ಘಕಾಲ ತನ್ನ ವಂಶದ ದುರ್ದೈವವಾಗಿ ಪರಿಣಮಿಸಿದ್ದು"

"ಆ ಚಿತ್ರ!" ಎಂದನು ಕ್ಲಿಫರ್ಡ್; ಆಗ, ಅದರ ನಿಷ್ಠುರವಾದ ನೋಟಕ್ಕೆ ಸಿಲುಕದೆ ಹಿಮ್ಮೆಟ್ಟಿದಂತೆ ಕಂಡುಬಂದನು ಅವನು: "ನಾನು ಅದನ್ನು ನೋಡಿದಾಗಲೆಲ್ಲಾ, ಸ್ವಪ್ನಪ್ರಾಯವಾದ ಸ್ಮರಣೆಯೊಂದು ನನ್ನನ್ನು ಕಾಡುತ್ತದೆ, ಆದರೆ ನನ್ನ ಮನಸ್ಸಿನ ಹಿಡಿತಕ್ಕೆ ಸಿಲುಕದೆ ದೂರವೇ ಇರುತ್ತದೆ. 'ಐಶ್ವರ್ಯ', ಎಂದು ಹೇಳುವಹಾಗೆ ಕಾಣುತ್ತದೆ ಅದು– ಅಪಾರ ಐಶ್ವರ್ಯ– ಊಹಿಸಲಾಗದಷ್ಟು ಐಶ್ವರ್ಯ! ನಾನು ಮಗುವಾಗಿದ್ದಾಗಲೋ, ಇಲ್ಲವೆ ತರುಣನಾಗಿದ್ದಾಗಲೋ, ಆ ಭಾವಚಿತ್ರ ನನ್ನೊಂದಿಗೆ ಮಾತನಾಡಿ ನನಗೊಂದು ಅಮೂಲ್ಯವಾದ ರಹಸ್ಯವನ್ನು ತಿಳಿಸಿತ್ತು; ಅಥವಾ, ಬೈತಿಟ್ಟ ನಿಧಿಯನ್ನು ಕುರಿತು ಬರಹದ ದಾಖಲೆಯನ್ನು ಹಿಡಿದುಕೊಂಡ ಕೈಯನ್ನು ನನ್ನೆಡೆಗೆ ಚಾಚಿತ್ತು– ಹೀಗೆಂದು ನನ್ನ ಕಲ್ಪನೆ. ಆದರೆ, ಈಚೀಚೆಗೆ, ಆ ಹಳೆಯ ವಿಚಾರಗಳೆಲ್ಲಾ ತುಂಬ ಮಸುಕುಮಸುಕಾಗಿಬಿಟ್ಟಿವೆ, ನನ್ನ ಪಾಲಿಗೆ! ಈ ಸ್ವಪ್ನ ಏನನ್ನು ಕುರಿತಿದ್ದರಬಹುದು?"

ಹೊಸ ತೋಟದಲ್ಲಿ ಒಂದು ಸಣ್ಣ ಮನೆಯಿದೆ– ತುಂಬ ಅಂದವಾದ, ಚಿಕ್ಕ, ಹಳದಿಗಂದು ಬಣ್ಣದ ಮನೆ, ಅಂಥದನ್ನು ನೀನು ಎಂದು ನೋಡಿರಲಾರೆ; ತುಂಬ ಮನೋಹರವಾಗಿ ಕಾಣುವ ಸ್ಥಳ ಅದು, ಶುಂಠಿರೊಟ್ಟಿಯಿಂದ ಮಾಡಿದ್ದೋ ಎನ್ನುವ ಹಾಗೆ ಕಾಣುತ್ತದೆ– ಅದನ್ನು ನಿನಗಾಗಿಯೆ ಸಿದ್ಧಗೊಳಿಸಿ, ಸಜ್ಜುಮಾಡಿಸಿಕೊಡುತ್ತೇವೆ, ಅಲ್ಲಿ, ನಿನಗೆ ಇಷ್ಟ ಬಂದ ಕೆಲಸದ ಹೊರತು, ಬೇರೆ ಏನನ್ನೂ ನೀನು ಮಾಡಬೇಕಾಗಿಲ್ಲ; ಹಗಲು ಎಷ್ಟು ದೀರ್ಘಕಾಲ ಇರುತ್ತದೋ, ಅಷ್ಟು ಸುಖವಾಗಿರುವೆ ನೀನು; ಜೊತೆಗೆ, ನಿನ್ನ ಬಾಯಿಂದ ಯಾವಾಗಲೂ ತೊಟ್ಟಿಕ್ಕುತ್ತ ಇರುತ್ತದೆಯಲ್ಲಾ, ವಿವೇಕ ಮತ್ತು ವಿನೋದದ ವಚನಮಧು, ಅದರಿಂದ ನೀನು ಕ್ಲಿಫರ್ಡನ್ನು ಗೆಲುವಾಗಿಟ್ಟಿರಬೇಕು, ತಿಳಿಯಿತೆ!"

"ಆಹಾ, ನನ್ನ ಮುದ್ದು ಕಂದಮ್ಮಾ" ಎಂದು ಸಾಧುಪ್ರಾಣಿ ವೆನ್ನರ್ ಮಾವ ಭಾವಾವೇಶದಿಂದ ಹೃದಯ ಕರಗಿ ಮಾತಾಡಿದನು:

"ಒಬ್ಬ ಮುದುಕನೊಂದಿಗೆ ಮಾತಾಡುವಹಾಗೆ ಒಬ್ಬ ಹರೆಯದವನ ಕೂಡ ನೀನು ಮಾತಾಡಿದರೆ, ಅವನು ತನ್ನ ಹೃದಯವನ್ನು ತನ್ನ ವಶದಲ್ಲಿ ಒಂದು ನಿಮಿಷ ಹೆಚ್ಚಿಗೆ ಇಟ್ಟುಕೊಂಡದ್ದೇ ಆದರೆ, ಅದಕ್ಕೆ– ಆ ಹೃದಯಕ್ಕೆ– ನನ್ನ ನಡುವಂಗಿಯ ಗುಂಡಿಗಳಲ್ಲಿ ಒಂದರ ಬೆಲೆ ಕೂಡ ಇರಲಾರದು, ತಾಯಿ. ಅದಿರಲಿ ಕಣಮ್ಮಾ,– ನನ್ನ ಜೀವ ಇನ್ನೂ ಬದುಕಿದೆ ಸದ್ಯ!– ನಾನು ಆ ದೊಡ್ಡ ನಿಟುಸಿರು ಬಿಡುವಹಾಗೆ ನೀನು ಮಾಡಿದೆಯಲ್ಲಾ, ಅದು ಇದ್ದ ಕಟ್ಟ ಕಡೆಯ ಒಂದು ಗುಂಡಿಯನ್ನ ಕೂಡ ಹಾರಿಸಿಬಿಟ್ಟಿದೆಯಮ್ಮಾ! ಹೋದರೆ ಹೋಗಲಿ, ಬಿಡು! ಆದರೆ, ನಾನು ಎಷ್ಟೋ ಸಲ ನಿಟ್ಟುಸಿರು ಬಿಟ್ಟಿದೇನೆಯಮ್ಮಾ. ಇದರಷ್ಟು ಸುಖವಾದದ್ದು ಯಾವುದೂ ಇರಲಿಲ್ಲ, ನನಗೆ ತೋರುತ್ತೆ, ಆ ನಿಟ್ಟುಸಿರುಬಿಡಲು, ಸ್ವರ್ಗದ ಗಾಳಿಯನ್ನೆ ಒಂದೇ ಗುಟುಕಿಗೆ ಗಟಕ್ಕನೆ ಕುಡಿದುಬಿಟ್ಟಿರಬೇಕು! ಒಳ್ಳೆಯದು, ಒಳ್ಳೆಯದು, ಮಿಸ್ ಫೀಬೆ! ಇನ್ನು ಮೇಲೆ ನಾನು ಈ ತೋಟದಲ್ಲಿ ಅಲ್ಲಿ ಇಲ್ಲಿ, ಹಿತ್ತಿಲ ಬಾಗಿಲ ಬಳಿ, ಬಂದು ಹೋಗುವುದನ್ನು ಜನ ಕಾಣಲಾರರು; ಅಲ್ಲದೆ, ಮುದುಕ ವೆನ್ನರ್ ಮಾವನಿಲ್ಲದೆ, ಪಿನ್ಚನ್ ಬೀದಿ ಮೊದಲೆಲ್ಲ ಕಂಡ ಹಾಗೆ ಇನ್ನು ಮುಂದೆ ಕಾಣಲಾರದು; ಆದರೆ, ಆ ಮುದುಕಪ್ಪನೇನೋ, ಒಂದು ಕಡೆ ಕೊಯ್ಲುಗುತ್ತಿರುವ ಹೊಲ, ಇನ್ನೊಂದು ಕಡೆ ಈ ಏಳು ಇಪ್ಪಾರಿನ ಮನೆಯ ತೋಟ– ಇರುವ ಆ ಬೀದಿಯನ್ನು ನೆನೆಯದೆ ಇರುವುದಿಲ್ಲ. ಒಂದೋ, ನಾನು ನಿಮ್ಮ ಹಳ್ಳಿಯ ಮನೆಗೆ ಬರಬೇಕು, ಇಲ್ಲವೋ ನೀನು ನನ್ನ ಹೊಲಮನೆಗೆ ಬರಬೇಕು– ಇವೆರಡರಲ್ಲಿ ಒಂದು ಖಂಡಿತ; ಯಾವುದು ಬೇಕೋ ಅದನ್ನ

ಕ್ಲಿಫರ್ಡನ ಪಾಲಿಗೆ ಇದರ ಅನ್ವೇಷಣೆ ಬಹುಶಃ ಒಂದು ಬಗೆಯ ಯಕ್ಷಕಥೆಯ ಸಾಹಸಕಾರ್ಯವಾಗಿ ಪರಿಣಮಿಸಿತ್ತು. ಅವನು ಯಾವಾಗಲೂ ಮನೆಯಲ್ಲೆಲ್ಲಾ ಅಲ್ಲಿ ಇಲ್ಲಿ ಕನಸುಕಾಣುತ್ತ ಸುಳಿದಾಡುತ್ತಿದ್ದನು; ಅದರ ಕತ್ತಲಿಡಿದ ಮೂಲೆಗಳನ್ನು ತನ್ನ ಸುಂದರವಾದ ಕತೆಗಳ ಕಥನದಿಂದ ಬೆಳಗುತ್ತಿದ್ದನು. ಆ ಬಡಪ್ರಾಣಿ ಜಫ್ರಿ, ಎಲ್ಲವನ್ನೂ ನಿಜವೆಂದು ನಂಬಿ ಅದಕ್ಕೆ ಜೋತುಬಿದ್ದು, ತನ್ನ ದೊಡ್ಡಪ್ಪನ ನಿಧಿಯನ್ನು ಅವನು ಕಂಡುಕೊಂಡಿದ್ದನೆಂದು ಭಾವಿಸಿದನು. ಅವನು ತನ್ನ ಮನಸ್ಸಿನಲ್ಲಿ ಈ ಭ್ರಮೆಯನ್ನು ಇಟ್ಟುಕೊಂಡೇ ಸತ್ತನು!"

"ಆದರೆ, ಆ ರಹಸ್ಯ ನಿನಗೆ ಹೇಗೆ ಗೊತ್ತಾಯಿತು?" ಎಂದು ಫೀಬೆ ಹಾಲ್‌ಗ್ರೇವನಿಗೆ ಮಾತ್ರ ಪ್ರತ್ಯೇಕವಾಗಿ ಹೇಳಿದಳು.

ಅದಕ್ಕೆ ಹಾಲ್‌ಗ್ರೇವ್ ಹೇಳಿದ,– "ನನ್ನ ಮುದ್ದು ಫೀಬೆ, ಮಾಲ್‌ನ ಹೆಸರನ್ನು ನೀನು ಇಟ್ಟುಕೊಂಡರೆ, ಅದರಿಂದ ನಿನಗೆ ಎಷ್ಟರಮಟ್ಟಿಗೆ ಸಂತೋಷವಾದೀತು? ಇನ್ನು ರಹಸ್ಯದ ವಿಚಾರ: ನನ್ನ ಪೂರ್ವಜರಿಂದ ನನಗೆ ಉಳಿದುಬಂದಿರುವ ಆಸ್ತಿಯೆಂದರೆ, ಅದೊಂದೇ. ಅನ್ಯಾಯ ಮತ್ತು ಅದಕ್ಕೆ ಆಗುವ ಶಿಕ್ಷೆ– ಇದನ್ನು ನಿರೂಪಿಸುವ ಈ ದೀರ್ಘ ನಾಟಕದಲ್ಲಿ ನಾನು ಆ ಮುದುಕ ಮಾಟಗಾರನನ್ನು ಪ್ರತಿನಿಧಿಸುತ್ತೇನೆ; ಅಷ್ಟೇ ಅಲ್ಲ, ಅವನು ಎಷ್ಟರಮಟ್ಟಿಗೆ ಮಾಟಗಾರನಾಗಿದ್ದನೋ ಬಹುಶಃ ನಾನೂ ಅಷ್ಟರ ಮಟ್ಟಿಗೆ ಆಗಿದ್ದೇನೆ; ಈ ವಿಚಾರವನ್ನು ನಾನು ಮೊದಲೇ ನಿನಗೆ ತಿಳಿಸಬೇಕಾಗಿತ್ತು; (ತಿಳಿಸಿದರೆ, ಎಲ್ಲಿ ನಿನ್ನನ್ನು ದಿಗಿಲುಗೊಳಿಸುತ್ತೇನೆಯೋ ಎಂದು ನನಗೆ ಭಯ). ಗಲ್ಲಿಗೇರಿದ ಮ್ಯಾತ್ಯೂಮಾಲನ ಮಗ ಈ ಮನೆಯನ್ನು ಕಟ್ಟುವಾಗ, ಆ ಗೂಡನ್ನೂ ನಿರ್ಮಿಸಲು ಅವಕಾಶ ದೊರಕಿಸಿಕೊಂಡನು; ಮತ್ತು, ಇಂಡಿಯನ್ನರ ಆ ಪತ್ರವನ್ನು ಅಲ್ಲಿ ಬಚ್ಚಿಟ್ಟು ಬಿಟ್ಟನು; ಪಿನ್ಚನ್ ವಂಶಸ್ಥರ ಭಾರಿ ಭೂಸ್ವಾಮ್ಯದ ಹಕ್ಕು ಅದನ್ನೇ ಅವಲಂಬಿಸಿತ್ತು. ಹೀಗೆ, ಅವರು ಮಾಲನ ತೋಟದ ಜಮೀನಿಗೆ ಬದಲಾಗಿ ತಮ್ಮ ಮೂಡಲ ಪ್ರಾಂತವನ್ನು ವಿನಿಮಯಮಾಡಿಕೊಂಡಹಾಗಾಯಿತು"

"ಈಗ, ಅಲ್ಲಿ ದೂರದಲ್ಲಿದೆಯಲ್ಲಾ ನನ್ನ ಹೊಲ, ಅದರಲ್ಲಿ ಒಬ್ಬ ಆಳಿಗೆ ಬರುವ ಪಾಲಿನ ಬೆಲೆಯಿಲ್ಲ ಅವರ ಎಲ್ಲಾ ಹಕ್ಕಿಗೆ, ಅಂತ ನನಗೆ ತೋರುತ್ತೆ," ಎಂದ ವೆನ್ನರ್ ಮಾವ.

ತೇಪೆಬಟ್ಟೆಯ ತತ್ತ್ವಜ್ಞಾನಿಯ ಕೈಹಿಡಿದುಕೊಂಡು, ಫೀಬೆ ಹೇಳಿದಳು: "ವೆನ್ನರ್ ಮಾವಯ್ಯಾ, ನೀನು ಇನ್ನು ನಿನ್ನ ಹೊಲದ ವಿಚಾರ ಮಾತಾಡಕೂಡದು, ತಿಳಿಯತೆ! ನೀನು ಜೀವಿಸಿರುವತನಕ ಎಂದೂ ಅಲ್ಲಿಗೆ ಹೋಗಕೂಡದು! ನಮ್ಮ

ಹೇಗೋ ಹಾಗೆ, ಯಾವ ಭಾವೋದ್ವೇಗವೂ ಇಲ್ಲದೆ, ಕ್ಲಿಫರ್ಡ್ ಮತ್ತು ಹೆಪ್ಸಿಬಾ ತಮ್ಮ ಪೂರ್ವಜರ ನಿವಾಸವನ್ನು ಕಡೆಯದಾಗಿ ಬೀಳ್ಕೊಂಡರು; ಭಾವೋದ್ವೇಗದಿಂದ ನಮ್ಮ ಹೃದಯ ಮಿಡಿಯಬೇಕಾದ ಹೊತ್ತಿನಲ್ಲಿ, ಅನೇಕವೇಳೆ ನಾವು ಹಾಗೆ ನಿರುದ್ವಿಗ್ನರಾಗುವುದೂ ಉಂಟು. ಬೂದುಬಣ್ಣದ ಜೋಡುಕುದುರೆ ಕಟ್ಟಿದ್ದ ನಾಲ್ಕುಚಕ್ರದ ಬಂಡಿ ಎಂದರೆ ಬಹು ಅಪೂರ್ವವಾದ ನೋಟವೇ ಆಗಿತ್ತು; ಅದರಿಂದ ಆಕರ್ಷಿತರಾಗಿ ಹಲವು ಮಂದಿ ಮಕ್ಕಳು ಅಲ್ಲಿ ನೆರೆದಿದ್ದರು. ಅವರ ನಡುವೆ ಚಿಕ್ಕ ನೆಡ್ ಹಿಗ್ಗಿನ್ಸ್ ಇದ್ದುದನ್ನು ಗುರುತಿಸಿದ ಹೆಪ್ಸಿಬಾ ತನ್ನ ಜೇಬಿನೊಳಕ್ಕೆ ಕೈಹಾಕಿ, ತನ್ನ ಮೊತ್ತಮೊದಲಿನ ಹಾಗೂ ಅತ್ಯಂತ ನೆಚ್ಚಿನ ಗಿರಾಕಿಯಾಗಿದ್ದ ಆ ಬಾಲಕನಿಗೆ ಬೆಳ್ಳಿಯ ನಾಣ್ಯಗಳನ್ನು ಬಹುಮಾನವಾಗಿ ಕೊಟ್ಟಳು; ಪ್ರಳಯಕಾಲದಲ್ಲಿ 'ನೋವ'ನ ತೇಲುಬುಟ್ಟಿಗೆ ಎಷ್ಟು ವಿವಿಧ ಚತುಷ್ಪಾದಿ ಪ್ರಾಣಿಗಳನ್ನು ಸಾಗಿಸಲಾಯಿತೋ ಅಷ್ಟು ಚತುಷ್ಪಾದಿಗಳ ಒಂದು ದಿಬ್ಬಣವನ್ನೆ ಅವನ ಉದರದ ಪಾತಾಳ ಗವಿಗೆ ತೆರಳಿಸಿ ತುಂಬಲು ಅವಳು ಕೊಟ್ಟ ಹಣ ಸಾಕಾಗುವಷ್ಟಿತ್ತು.

ಅತ್ತ ನಾಲ್ಕು ಚಕ್ರದ ಬಂಡಿ ಹೊರಟುಹೋಯಿತು, ಇತ್ತ ಇಬ್ಬರು ಹಾದು ಹೋಗುತ್ತಿದ್ದರು.

ಅವರಲ್ಲಿ ಒಬ್ಬನು ಹೇಳಿದ, "ಒಳ್ಳೆದು, ಡಿಕ್ಸೀ, ನಿನಗೇನು ತೋರುತ್ತೆ, ಈ ವಿಚಾರದಲ್ಲಿ? ನನ್ನ ಹೆಂಡತಿ ಒಂದು 'ಸೆಂಟು' (ಚಿಲ್ಲರೆ) ಅಂಗಡಿಯನ್ನ ಮೂರು ತಿಂಗಳ ಕಾಲ ನಡಸಿ, ತನ್ನ ಬಂಡವಾಳದಲ್ಲಿ ಐದು ಡಾಲರ್ ಹಣ ನಷ್ಟಮಾಡಿಕೊಂಡಳು. ನಮ್ಮ ಮುದಿಗನ್ನೆ ಪಿನ್ಚನ್ ಅಷ್ಟೇ ಕಾಲ ವ್ಯಾಪಾರಮಾಡಿದಾಳೆ; ಮಾಡಿ,– ಅವಳ ಪಾಲು, ಕ್ಲಿಫರ್ಡ್‌ನ ಪಾಲು, ಫೀಬೆಯ ಪಾಲು, ಇದೆಲ್ಲವನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ– ಸುಮಾರು ಎರಡು ಲಕ್ಷ ಮಾಡಿಕೊಂಡು, ತನ್ನ ಬಂಡಿಯಲ್ಲಿ ಸವಾರಿ ಮಾಡಿಕೊಂಡು ಪರಾರಿಯಾದಳು! ಕೆಲವರು ಹೇಳುತ್ತಾರೆ, ನಾನು ಹೇಳಿದ ಎರಡರಷ್ಟು ಹಣ ಅಂತ! ಅದನ್ನ ಅದೃಷ್ಟದ ಹೊಡೆತ ಅಂತ ಹೇಳಲು ನೀನು ಇಷ್ಟಪಟ್ಟರೆ, ಒಳ್ಳೆಯದು, ನನ್ನ ಅಡ್ಡಿಯಿಲ್ಲ; ಆದರೆ ಅದನ್ನ ದೈವಚಿತ್ತ ಎಂದು ನಾವು ತಿಳಿಯುವುದಾದರೆ, ಅದರ ಅಡಿ ಆಳವನ್ನ ನಾನು ಸರಿಯಾಗಿ ಕಂಡುಹಿಡಿಯಲಾರೆ!"

"ಒಳ್ಳೇ ಸೊಗಸಾದ ವಹಿವಾಟು! ಒಳ್ಳೇ ಸೊಗಸಾದ ವಹಿವಾಟು!" ಎಂದು ಚತುರನಾದ ಡಿಕ್ಸಿ ನುಡಿದ.

ಮಾಲನ ಬಾವಿ ಒಂಟಿಯಾಗಿಯೆ ಉಳಿದಿತ್ತಾದರೂ ಈ ಎಲ್ಲ ಕಾಲದಲ್ಲೂ ಅದು 'ಕಲೈಡೊಸ್ಕೋಪ್' (ವಿವಿಧ ಚಿತ್ರದರ್ಶಕ) ನೋಟದ ಕೊಳವಿಯಲ್ಲಿ

ಆರಿಸಿಕೊಳ್ಳುವ ಅವಕಾಶವನ್ನ ನಿನಗೇ ಬಿಟ್ಟಿದೇನೆ!"

"ಓಹೋ, ಅದಕ್ಕೇನು, ಅಗತ್ಯವಾಗಿ ನಮ್ಮೊಂದಿಗೆ ಬಾ, ವೆನ್ನರ್ ಮಾವಯ್ಯ!" ಎಂದನು ಕ್ಲಿಫರ್ಡ್; ಆ ಮುದುಕನ ಮಾಗಿದ, ನೆಮ್ಮದಿಯಾದ, ಸರಳವಾದ ಸ್ವಭಾವವನ್ನು ಕಂಡರೆ ಅವನಿಗೊಂದು ವಿಶೇಷ ರೀತಿಯ ಸಂತೋಷ: "ನಾನು ನನ್ನ ಕುರ್ಚಿಯನ್ನು ಬಿಟ್ಟು ಎದ್ದು ನಿನಗಾಗಿ ಹುಡುಕಿಕೊಂಡು ಹೊರಟರೆ, ಐದು ನಿಮಿಷಗಳೊಳಗಾಗಿ ನೀನು ನನಗೆ ಯಾವಾಗಲೂ ಸಿಕ್ಕುವಹಾಗಿರಬೇಕು. ತಳದಲ್ಲಿ ಒಂದು ತೊಟ್ಟು ಕಹಿಯಾದ ಗಸಿಯೂ ಇಲ್ಲದ ವಿವೇಕಸಾರವನ್ನು ಉಳ್ಳ ತತ್ತ್ವಜ್ಞಾನಿ ಎಂದರೆ ನೀನೆ, ಬೇರೆ ಯಾರನ್ನೂ ನಾನು ಇದುವರೆಗೆ ಕಂಡಿಲ್ಲ!"

ತಾನು ಎಂಥ ಮನುಷ್ಯ ಎಂಬುದನ್ನು ಅರ್ಧಮಟ್ಟಿಗೆ ಅರ್ಥಮಾಡಿಕೊಳ್ಳತೊಡಗಿದ ವೆನ್ನರ್ ಮಾವ ಹೇಳಿದ: "ಅಯ್ಯೋ ದೇವರೆ! ಹೀಗಿದ್ದೂ ಕೂಡ, ನಾನು ಎಳೆಯವನಾಗಿದ್ದಾಗ, ಜನ ನನ್ನನ್ನ ದಡ್ಡರ ಗುಂಪಿಗೆ ಸೇರಿಸಿ ಬಿಟ್ಟಿದ್ದರಲ್ಲಾ! ಆದರೆ, ನನಗೆ ತೋರುತ್ತೆ, ನಾನು ಕೈಮಗ್ಗದ ಒರಟು 'ರಸೆಟ್' ಬಟ್ಟೆಯ ಹಾಗೆ– ನಾನು ಹೆಚ್ಚು ಕಾಲ ಇದ್ದಷ್ಟೂ, ಅದಕ್ಕಿಂತ ಮೇಲು. ಹೌದು; ನೀನೂ ಫೀಬೆಯೂ ನನಗೆ ಹೇಳುತ್ತೀರಲ್ಲಾ, ನನ್ನ ಬುದ್ಧಿಯ ಮಾತುಗಳ ವಿಚಾರ, ಅವು ಹೊನ್ನು ಹಳದಿಯ 'ಡ್ಯಾಂಡಿಲಿಯನ್' ಹೂವುಗಳ ಹಾಗೆ– ಅವು ಬೇಸಗೆಯ ದಿನಗಳಲ್ಲಿ ಬೆಳೆಯುವುದೇ ಇಲ್ಲ; ಆದರೆ, ಕೆಲವು ವೇಳೆ ಡಿಸೆಂಬರ್ ತಿಂಗಳಿನಷ್ಟು ತಡವಾದಮೇಲೆ ಕೂಡ, ಒಣಗಿಹೋದ ಹುಲ್ಲಿನ ನಡುವೆ, ತರಗೆಲೆಗಳ ಕೆಳಗೆ, ಅವು ಹೊಳೆಯುತ್ತ ಇರುವುದನ್ನ ಕಾಣಬಹುದು. ನನ್ನ ಆ ಡ್ಯಾಂಡಿಲಿಯನ್ ಹೂವಿನ ಕಲಸುಮೆಲಸಿನ ಪ್ರಪಂಚಕ್ಕೆ, ಅದು ಎರಡರಷ್ಟು ಬೆಳೆದರೂ ಚಿಂತೆಯಿಲ್ಲ, ಅಲ್ಲಿಗೆ ನನ್ನ ಗೆಳೆಯರಾದ ನೀವೆಲ್ಲಾ ಸಂತೋಷವಾಗಿ ಬನ್ನಿ!"

ಸಾಧಾರಣ ತೆರನ, ಆದರೆ ಸುಂದರವಾದ, ದಟ್ಟ ಹಸುರುಬಣ್ಣದ ನಾಲ್ಕುಚಕ್ರದ ಬಂಡಿಯೊಂದು ಪುರಾತನ ಭವನದ ಮುರುಕು ಮುಖದ್ವಾರದ ಮುಂದೆ ಬಂದು ನಿಂತಿತ್ತು; ಪ್ರಯಾಣದ ತಂಡದವರು ಹೊರಕ್ಕೆ ಬಂದು, ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಳ್ಳಲು ಹೊರಟರು; (ತಂಡದಲ್ಲಿ, ವೆನ್ನರ್ ಮಾವ ಮಾತ್ರ ಇರಲಿಲ್ಲ; ಕೆಲವು ದಿನ ಬಿಟ್ಟು ಅವನು ಅವರನ್ನು ಹಿಂಬಾಲಿಸುವುದೆಂದು ಗೊತ್ತಾಗಿತ್ತು.) ಅವರೆಲ್ಲಾ ಒಟ್ಟಿಗೆ ಕಲೆತು ಬಹಳ ಸಂತೋಷವಾಗಿ ಹರಟುತ್ತಾ, ನಗುತ್ತಾ ಇದ್ದರು. ಮನೆಗೆ ಟೀ ಹೊತ್ತಿಗೆ ಹಿಂದಿರುಗುವ ಏರ್ಪಾಡು ಮಾಡಿಕೊಂಡಿದ್ದರೆ

ಕಾಣುವಂತಹ ವಿವಿಧ ಚಿತ್ರಪರಂಪರೆಯನ್ನು ಹೊರತೋರುತ್ತಿತ್ತು; ವಿಶೇಷ ದರ್ಶನ ಶಕ್ತಿಯುಳ್ಳವನು ಅಲ್ಲಿ ನೋಡಿದ್ದರೆ, ಹೆಪ್ಸಿಬಾ ಮತ್ತು ಕ್ಲಿಫರ್ಡ್, ಕಟ್ಟು ಕಥೆಯ ಮಾಟಗಾರನ ವಂಶಿಕ ಮತ್ತು ಅವನು ಯಾರ ಮೇಲೆ ಪ್ರೇಮದ ಮಂತ್ರಜಾಲವನ್ನು ಬೀಸಿದ್ದನೋ ಆ ಹಳ್ಳಿಯ ಕನ್ಯೆ– ಇವರೆಲ್ಲರ ಬರಲಿರುವ ಭಾಗ್ಯಗಳ ಮುನ್‌ಚಿತ್ರಗಳನ್ನು ಕಾಣಬಹುದಾಗಿತ್ತು. ಇದರ ಜೊತೆಗೆ, ಪಿನ್ಚನ್ ಎಲ್ಮ್ ವೃಕ್ಷವು ಸೆಪ್ಟೆಂಬರ್– ಬಿರುಗಾಳಿ ಮಳೆ ಉಳಿಸಿಕೊಟ್ಟಿದ್ದ ಎಲೆಗಳ ಮೂಲಕ ಅರ್ಥವಾಗದ ಭವಿಷ್ಯದ ನುಡಿಗಳನ್ನು ಪಿಸುಗುಟ್ಟುತ್ತಿತ್ತು. ಜ್ಞಾನಿಯಾದ ವೆನ್ನರ್ ಮಾವ ಹಾಳುಬಿದ್ದ 'ವರಾಂಡ'ದಿಂದ ನಿಧಾನವಾಗಿ ಹೊರಟುಬರುತ್ತಿದ್ದಾಗ, ಸಂಗೀತದ ರಾಗವೊಂದು ಕಿವಿಗೆ ಬಿದ್ದಹಾಗೆ ಅವನಿಗೆ ತೋರಿತು; ಆಗ– ಸವಿ ಬೀರುವ ಆಯಲಿಸ್ ಪಿನ್ಚನ್ ತನ್ನ ಬಂಧುವರ್ಗದ ಮರ್ತ್ಯಜೀವಿಗಳ ಈ ಕೃತ್ಯಗಳು, ಕಳೆದುಹೋದ ಈ ದುಃಖ ಮತ್ತು ಇಂದಿನ ಈ ಸುಖ, ಇವೆಲ್ಲವನ್ನು ಕಣ್ಣಾರೆ ಕಂಡಾದಮೇಲೆ, ಏಳು ಇಪ್ಪಾರಿನ ಮನೆಯಿಂದ ಸ್ವರ್ಗದತ್ತ ತೇಲಿಹೋಗುವಾಗ, ಆತ್ಮದ ಆನಂದವನ್ನು ಸೂಚಿಸುವ ಬೀಳ್ಕೊಳಿಕೆಯ ನುಡಿಯೊಂದನ್ನು ತನ್ನ 'ಹಾರ್ಪ್ಸಿಕಾರ್ಡ್' ವಾದ್ಯದಲ್ಲಿ ನುಡಿಸಿದ್ದಳು– ಎಂದು ಅವನು ಭಾವಿಸಿಕೊಂಡನು.

* * * *

# ಜೂಡಿಲಕ್ಷ್ಮಿ

## ೧. ಮದರಾಸಿನಲ್ಲಿ ಜೂಡಿ

ಇರುಳೆಲ್ಲ ಚೀಮಂಡೆಗಳ ಸದ್ದು ಚಿಕ್ಕ ಗಂಟೆಗಳ ನಾದದಂತೆ ಕೇಳಿ ಬರುತ್ತಿತ್ತು. ಮಗ್ಗಲುಹಾಸಿಗೆಯ ತಣ್ಣಗಿದ್ದಕಡೆಯಮೇಲೆ ಮಲಗೋಣ ಎಂದು ಅತ್ತ ಹೊರಳಿದರೆ ಸರಿ, ರಾತ್ರಿ ಜೂಡಿಗೆ ಎಚ್ಚರವಾಗಿಬಿಡುತ್ತಿತ್ತು ; ಆಗ, ಪಂಜರದಂತೆ ಸುತ್ತುಬಳಿಸಿಕೊಂಡು ದೊಡ್ಡ ಕಿಟಕಿಯಕಡೆ ಮಸುಕು ಮಸುಕಾಗಿ ಕಾಣುತ್ತಿದ್ದ ಸೊಳ್ಳೆಯಪರದೆಯ ಮೂಲಕ ಬೋಗಿನವಿಲಿಯ ಹೂ ಅಲ್ಲಲ್ಲಿ ನಿಶ್ಚಲವಾಗಿ ಕಪ್ಪು ಚಿಮುಕಿಸಿದ್ದಂತೆ ಅವಳಿಗೆ ಕಾಣುವುದು ಹಗಲು ಹೊತ್ತು ಆ ಹೂವಿನ ಬಣ್ಣ ಊದಾ, ಹಾಗೂ ಕೆನ್ನೀರಿಳೆ. ಚೀಮಂಡೆಯ ಸದ್ದಂತೂ ಇದ್ದೇ ಇತ್ತು ; ಕೆಲವು ವೇಳೆ, ಎಲ್ಲೋ ಒಂದು ನಾಯಿಯ ಬಗುಳಾಟ. ಜೊತೆಗೆ, ಮನೆಗಳ ಸುತ್ತ ಗಸ್ತುತಿರುಗುತ್ತಿದ್ದ ಗೂರ್ಖ ಕಾವಲುಗಾರನ ದೊಣ್ಣೆಯ ಟಪಟಪ ಹೊಡೆತ; ಅದರಿಂದೇನೋ ಮನಸ್ಸಿಗೆ ನೆಮ್ಮದಿ ; ಅವನು ಕಳ್ಳರನ್ನು ಮಾತ್ರವಲ್ಲದೆ ಬಹುಶಃ ಹಾವುಗಳನ್ನೂ ಹೆದರಿಸಿ ಓಡಿಸುತ್ತಿದ್ದಿರಬೇಕು. ಬೆಳಗಾಗುವುದಕ್ಕೆ ತುಸ ಮುಂಚೆ ಕಾಗೆಗಳು ಎಚ್ಚರಗೊಂಡು, ಮರದಿಂದ ಮರಕ್ಕೆ ಹಾರಾಡುತ್ತ, 'ಕಾ ಕಾ' ಎಂದು ಅರಚಿಕೊಳ್ಳುತ್ತಿದ್ದುವು. ಬಳಿಕ ಕಾಣಿಸಿಕೊಳ್ಳುತ್ತಿದ್ದುವು, ಒಂದರೊಡನೊಂದು ಕಿಚಕಿಚಗುಟ್ಟುವ ಮೈನಾಹಕ್ಕಿ. ಕೆಲವುವೇಳೆ ಬೇರೆ ಹಕ್ಕಿಗಳೂ ಇರುತ್ತಿದ್ದುವು, ಇನ್ನೂ ಸೊಗಸಾದವು. ಆಮೇಲೆ, ಬಹುಬೇಗನೆ ಬೆಳಕಾಗತೊಡಗುತ್ತಿತ್ತು.

ಹೀಗೆ ಬೆಳಗಾದಮೇಲೆ, ಯಾವಾಗಲಾದರೊಮ್ಮೆ, ಜೂಡಿ, 'ಒಳ್ಳೆ ಸೊಗಸಾಗಿದೆ ಈ ಬೆಳಗ್ಗೆ' ಎಂದು ತನ್ನಲ್ಲಿ ತಾನು ಹೇಳಿಕೊಳ್ಳದೆ ಇರಲು ಆಗುತ್ತಿರಲಿಲ್ಲ. ಏಕೆಂದರೆ, ಅದೇ ಅಭ್ಯಾಸ ಅವಳಿಗೆ ; ಇಂಗ್ಲೆಂಡಿನಲ್ಲಿ ಇಂತಹ ಬೆಳಗ್ಗೆ ಎಂದರೆ ಹಾಗಿರುತ್ತಿತ್ತು. ಆದರೆ, ಇದು ಇಂಗ್ಲೆಂಡ್ ಅಲ್ಲವಲ್ಲ. ಇದು ಮದರಾಸು ; ಭಾರತ ದೇಶದ ಸೆಕೆಯ ದಿನವನ್ನು ಅಂದು ಕಳೆಯಬೇಕು ; ಇನ್ನು ಜೂಡಿ ಶಾಲೆಗೆ ಹೋಗುವಾಗಲಂತೂ ಅವಳ ಮೈಯೆಲ್ಲ ಬೆವತು ಒದ್ದೆಮುದ್ದೆಯಾಗಿ ವಿಪರೀತ ಅಂಟಂಟಾಗುವುದು ಖಂಡಿತ; ಮಧ್ಯಾಹ್ನವಾದ ಮೇಲೆ ಜೂಗರಿಕೆಸಿದ್ಧ. ಅವಳು ಬಹುಮಟ್ಟಿಗೆ ತನ್ನ ಪಾಠದ ಮನೆಯ ಅಭ್ಯಾಸಗಳನ್ನು ಬೆಳಗ್ಗೆ ಹೊತ್ತಿಗೆಮುಂಚೆಯೆ ಮಾಡಿಬಿಡುತ್ತಿದ್ದಳು ; ಏಕೆಂದರೆ,

ಕೆಲವುವೇಳೆ ಅವರು ಎಲಿಯಟ್ ಬೀಚಿಗೆ (ಸಮುದ್ರತೀರಕ್ಕೆ) ಹೋಗುತ್ತಿದ್ದರು; ಅಲ್ಲಿ ಅವರು ತೆಂಗಿನಗರಿಯಿಂದ ಕಟ್ಟಿಸಿಕೊಂಡಿದ್ದ ಗುಡಿಸಿಲೊಂದು ಇತ್ತು ; ಆದರೆ ಬೇಸಗೆಯಲ್ಲಿ ಅಲ್ಲಿನ ಮರಳು ನಡೆಯಲಾಗದಷ್ಟು ಕಾದುಬಿಡುತ್ತಿತ್ತು. ಅಲ್ಲಿ ಐಸ್‌ಕ್ಯಾಂಡಿ ಮಾತ್ರ ದೊರೆಯುತ್ತಿರಲಿಲ್ಲ ; ಆದರೆ, ಸವಿಯಾದ ನೀರುತುಂಬಿದ, ಒಂದು ವಿಧವಾದ ಹಸುಕಲುರುಚಿಯ, ಬಂಬಲು ತಿರುಳಿನ ಎಳನೀರು ಸಿಕ್ಕುತ್ತಿತ್ತು. ಇಂಗ್ಲೆಂಡಿನಲ್ಲಿ ತೆಂಗಿನಕಾಯಿಯಮೇಲೆ ಚೆಂಡೆಸೆಯುವ ಆಟದಲ್ಲಿ ಉಪಯೋಗಿಸುವ ಒರಟಾದ ಕಂದುಬಣ್ಣದ ಎಳನೀರುಗಳಂತಲ್ಲ ಈ ಎಳನೀರುಗಳು ; ಇವು ಹೊರಗಡೆ ನಯವಾಗಿ ಹಸಿರು ಹೊಂಬಣ್ಣದವು. ಭಾರತದ ಜನರೂ ಇಂಗ್ಲಿಷ್‌ಜನರೂ ಹೇಗೆ ಒಬ್ಬರಂತೆ ಒಬ್ಬರಿಲ್ಲವೊ, ಹಾಗೆ–ಎಂದರೆ, ಹೊರನೋಟಕ್ಕೆ ಮಾತ್ರ.

ಕೆಲವು ಸಲ ಜೂಡಿಯೇನೋ ಅವರು ನಿಜವಾಗಿಯೂ ತಮಗಿಂತ ಬೇರೆಯೇ ಎಂದು ಎಣಿಸುತ್ತಿದ್ದಳು. ಶಾಲೆಯಲ್ಲಿ ಅವಳ ತರಗತಿಯವರೆಲ್ಲ ಬಹುಮಟ್ಟಿಗೆ ಭಾರತೀಯ ಹೆಣ್ಣುಮಕ್ಕಳೇ ; ಅವರೊಂದಿಗೆ ಮಾತುಕತೆ ಆಡಲು ಅವಳಿಗೆ ಯಾವಾಗಲೂ ಅಷ್ಟೇನೂ ಸುಲಭ ಎನಿಸುತ್ತಿರಲಿಲ್ಲ. ಅವರಲ್ಲಿ ಕೆಲವರಿಗಂತೂ ಸಿನಿಮಾ ತಾರೆಯರಲ್ಲಿಯೇ ಆಸಕ್ತಿ ಎಂಬಂತೆ ಕಾಣಬರುತ್ತಿತ್ತು. ಅದಿಲ್ಲವೋ, ಜೂಡಿಗೆ ಬೇಡದ ಸಂಗತಿಗಳಲ್ಲಿ ಮಾತ್ರ ಅವರ ಆಸಕ್ತಿ. ಕೆಲವು ವೇಳೆ, ಅಂಥ ಸಂಗತಿ ಎಂದರೆ, ಮನೆಯ ಮದುವೆ ; ಅದರಲ್ಲಿ ಬಹುಭಾಗ ಅರ್ಥವಿಲ್ಲದ್ದಾಗಿ ತೋರಿತು ಜೂಡಿಗೆ ; ಅಲ್ಲ, ಜನ ಜಾತಕಗಳ ವಿಚಾರವಾಗಿ ಇಷ್ಟೆಲ್ಲ ಏಕೆ ಕಟಪಟ ಮಾಡಬೇಕು ? ಜೂಡಿಯ ಚಿಕ್ಕಮ್ಮ ಮಾರ್ಗರೆಟ್ ಮಾಡಿದ ಹಾಗೆ, ಮದುವೆಯಾಗಬೇಕು ಅಂತ ಅವರು ತಮ್ಮ ತಮ್ಮಲ್ಲಿ ನಿಶ್ಚಯಮಾಡಿಕೊಂಡು, ಬೇರೆ ಯಾರೂ ತಲೆಹಾಕಲು ಅವಕಾಶ ಕೊಡದೆ, ತಮ್ಮಪಾಡಿಗೆ ತಾವು ನೆಟ್ಟಗೆ ಏಕೆ ಮದುವೆಯಾಗಿಬಿಡಬಾರದು ? ಪಕ್ಕದ ಮನೆಯಲ್ಲಿ ಒಂದು ಸಲ ಮದುವೆ ನಡೆದಾಗ, ಎರಡು ದಿನ ಎರಡು ಸೆಟ್ಟು ಬ್ಯಾಂಡುಗಳು ರಾತ್ರಿಯೆಲ್ಲ ಬಾಜಿಸುತ್ತಿದ್ದವು–ಅದರಲ್ಲೂ ವರ್ಷದ ಕೊನೆಯ ಪರೀಕ್ಷೆಗಳು ನಡೆಯುತ್ತಿದ್ದಾಗ.

ಶಾಲೆಯಲ್ಲಿ ಕೆಲವು ವಿಷಯಗಳು ಜೂಡಿಗೆ ಹೆಚ್ಚು ಕಷ್ಟವಾಗಿದ್ದುವು ; ಉದಾಹರಣೆಗೆ, ಎಲ್ಲರೂ ಹಿಂದಿಯನ್ನು ಕಲಿಯಬೇಕಾಗಿತ್ತು. ಪ್ರಾರಂಭದಲ್ಲಿ ಉಪಾಧ್ಯಾಯರು ಅವರಿಗೆಲ್ಲ ಒಂದು ಉಪನ್ಯಾಸಮಾಡಿ, ಭಾರತವೆಲ್ಲ ಒಂದು ದೇಶವೆಂದೂ, ಆದ್ದರಿಂದ ಅದಕ್ಕೆ ಒಂದೇ ಭಾಷೆ ಇರಬೇಕೆಂದೂ ಹೇಳಿದ್ದರು.

ಸಂಜೆ ಶಾಲೆ ಬಿಟ್ಟಮೇಲೆ ಅವಳಿಗೆ ಬಲು ಸಕೆ, ಬಳಲಿಕೆ ; ಆದರೆ ಬೆನ್ ಸಾಧಾರಣವಾಗಿ ಅವಳ ಕೆಲಸಕ್ಕೆ ಅಡ್ಡಿತರುತ್ತಿದ್ದ ; ಅವನನ್ನು ತಡೆಯುವುದೆಂದರೆ ಅವನ ದಾದಿಗೆ ಸಾಧ್ಯವೇ ಆಗುತ್ತಿರಲಿಲ್ಲ, ಅದು ಅವಳಿಗೆ ಇಷ್ಟವೂ ಇರಲಿಲ್ಲ. ಬೆನ್ನನ ವಯಸ್ಸು ಮೂರೇ ಮೂರು ; ಆದರೆ ತಾನು ಇಷ್ಟಪಟ್ಟದ್ದನ್ನು ತನ್ನ ದಾದಿ ಮೇರಿಯಿಂದ ಮಾಡಿಸಿಕೊಳ್ಳುವ ಶಕ್ತಿ ಅವನಿಗಿದ್ದಂತಿತ್ತು ; ಬಹುವೇಳೆ, ಅವನು ಮಾಡಲು ಇಷ್ಟಪಡುತ್ತಿದ್ದುದು ಏನಾದರೂ ಒಂದು ತುಂಟತನವೆ.

ಕೆಲವೊಮ್ಮೆ ಮುಂಜಾನೆ ಜೂಡಿ ತನ್ನ ದೊಡ್ಡಅಣ್ಣ ಜಾನನಿಗೆ ಕಾಗದ ಬರೆಯುವಳು ; ಅವನು ಇಂಗ್ಲೆಂಡಿಗೆ ಹಿಂದಿರುಗಿ ಶಾಲೆಯಲ್ಲಿ ಓದುತ್ತಿದ್ದ. ಭಯಂಕರ ಚಳಿಗಾಳಿಯಲ್ಲಿ ಚೆಂಡಾಟ ಆಡಬೇಕು, ಒಂದು ಹೆಚ್ಚಿನ ಸ್ವೆಟರ್ ತೊಡಬೇಕು–ಎಂದು ಮುಂತಾಗಿ ಅವನು ಉತ್ತರ ಬರೆಯುತ್ತಿದ್ದ. ಅದು ಸಾಧ್ಯ ಎಂದು ತೋರಲೇ ಇಲ್ಲ. ಜೂಡಿಯ ತಂದೆ ವೈದ್ಯರು ; ಅವಳ ತಾಯಿ ಸಮಾಜ ಕ್ಷೇಮಾಭಿವೃದ್ಧಿಯ ಕೆಲಸ ಮಾಡುತ್ತಿದ್ದರು ; ಕ್ಷೇಮಾಭಿವೃದ್ಧಿಯ ಕಾರ್ಯ ಎಂದರೆ ಅದೇನೋ ಸಪ್ಪೆಯಾಗಿ ಕಾಣುತ್ತಿತ್ತು. ಅವಳ ತಂದೆ ಬಹಳ ಮುಂಚೆಯೆ ತಮ್ಮ ಆಸ್ಪತ್ರೆಗೆ ಹೊರಟುಬಿಡುತ್ತಿದ್ದರು ; ತಾಯಿ ತಾವು ಕೆಲಸಮಾಡುತ್ತಿದ್ದ ಕಾರ್ಯಕೇಂದ್ರಕ್ಕೆ ಹೋಗುವಾಗ ದಾರಿಯಲ್ಲಿ ಜೂಡಿಯನ್ನು ಶಾಲೆಯಲ್ಲಿ ಬಿಟ್ಟು ಹೋಗುತ್ತಿದ್ದರು. ಖಾಯಿಲೆಗಳ ವಿಚಾರವಾಗಿ ಕಿವಿತುಂಬ ಕೇಳುತ್ತಿದ್ದಳು ಜೂಡಿ; ಅದರಿಂದಾಗಿ ಕೆಲವುವೇಳೆ ಅವಳಿಗೆ ನಿಜವಾಗಿ ಚಿಂತೆಗಿಟ್ಟುಕೊಳ್ಳುತ್ತಿತ್ತು ಇನ್ನುಳಿದವೇಳೆ, ಶಾಲೆಯ ಬಗೆಗೇ ಹೆಚ್ಚುಚಿಂತೆ ಅವಳಿಗೆ.

ಆದರೆ, ಶಾಲೆ ಮುಗಿದಮೇಲೆ, ಆಗಿಂದಾಗ್ಗೆ ಅವರು ಕ್ಲಬ್ಬಿನ ಬಳಿ ಈಜುವುದಕ್ಕೆ ಹೋಗುತ್ತಿದ್ದರು. ದುಮುಕಿ ಮುಳುಗೀಜು ಹೊಡೆಯುವುದಕ್ಕೆ ಚೆನ್ನಾಗಿ ಬರುತ್ತಿತ್ತು ಜೂಡಿಗೆ ; ಬೆನ್ ನಗುನಗುತ್ತ ದುಡುಮ್ಮನೆ ಮಗುಚಿಕೊಡು, ಮೀನಿನಹಾಗೆ ಈಜುತ್ತಿದ್ದ. ಮೂರುವರ್ಷ ವಯಸ್ಸಾಗಿದ್ದಾಗ ಜೂಡಿಗೆ ಈಜುವುದಕ್ಕೇ ಬರುತ್ತಿರಲಿಲ್ಲ; ಆದರೆ ಆಗ ಅವಳು ಇಂಗ್ಲೆಂಡಿನಲ್ಲಿದ್ದಳು; ಅಲ್ಲಿದ್ದುದೆಂದರೆ, ಮನೆಯೊಳಗಿನ ಈಜುವ ತೊಟ್ಟಿ, ಇಲ್ಲವೊ ಬೇಸಗೆಯ ರಜಾದಿನಗಳಲ್ಲಿ ಅಲ್ಲಕಲ್ಲೋಲವಾಗಿರುತ್ತಿದ್ದ ಸಮುದ್ರ. ಇಲ್ಲಿನ ಸೊಗಸಾದ ಕೊಳ, ಅದರ ಹಿಂದಿನ ದೊಡ್ಡದೊಡ್ಡ ಮರಗಳು, ನೀಲಿಯ ಆಕಾಶದ ಹಿನ್ನೆಲೆಯಮುಂದೆ ಚಿಮ್ಮುವ ನೀರಿನ ಧಾರೆ, ಈಜು ಮುಗಿದಮೇಲೆ ಈಜುವ ಉಡುಪು ಹಾಕಿಕೊಂಡೇ ತಕ್ಕಮಟ್ಟಿಗೆ ತಣ್ಣನೆ ಹಾಯಾಗಿ ಕುಳಿತಿದ್ದಾಗ ನಿಂಬೆಯ ಪಾನಕದ ಜೊತೆಗೆ ಉಪ್ಪೇರಿ, ಅದೃಷ್ಟವಿದ್ದರೆ ಐಸ್‌ಕ್ಯಾಂಡಿ–ಇವೊಂದೂ ಅಲ್ಲಿ ಇರಲಿಲ್ಲ.

ದಟ್ಟನೀಲಿಯ ಪಾಟಲವರ್ಣದ ಹೂ. ಅವರ ಮನೆಗೂ ಮದುವೆ ನಡೆದ ಮನೆಗೂ ನಡುವೆ ಗಾರೆಹಾಕಿದ್ದ ಗೋಡೆ ಅಡ್ಡವಾಗಿತ್ತು ; ಹಾಗೆಯೆ, ಅವರ ಮನೆಗೂ ಆಚೆಯ ಕಡೆಯ ಮನೆಗೂ ನಡುವೆ ಲಾಂಟಾನ ಗಿಡದ ಬೇಲಿ ಇತ್ತು; ಅದರ ಕೆಂದು ಹಳದಿ ಹೂ, ಕಟುವಾದರೂ ಸೊಗಸಾದ ವಾಸನೆ ಬೀರುತ್ತಿತ್ತು. ಇವುಗಳಲ್ಲದೆ ತೋಟದಲ್ಲಿ ಕಣಗಿಲೆ ಗಿಡಗಳೂ, ಒಂದು ಮಾವಿನ ಮರವೂ, ಹಳದಿಯ ಕೊಳವಿ ಹೂ ಬಿಡುವ ಅಲಮಾಂಡ್ರಗಳೂ, ಬಹು ಸುವಾಸನೆಯಾದ ಬಿಳಿ ಹೂ ಬಿಡುವ ಜಾಜಿಯ ಗಿಡವೂ ಇದ್ದುವು. ಆದರೆ, ಮಾಲಿಗೆ ಅತ್ಯಂತ ಪ್ರಿಯವಾಗಿದ್ದುದೆಂದರೆ, ಬಹಳ ಸಾಮಾನ್ಯವಾದ ಚಿಕ್ಕಸೇವಂತಿಗೆ; ಏಕೆಂದರೆ, ಮದರಾಸಿನಲ್ಲಿ ಅದನ್ನು ಬೆಳೆಯುವುದೇ ಬಹು ಕಷ್ಟವಾಗಿತ್ತು. ತೋಟಗಾರರಗೆಲ್ಲ ಯಾವಾಗಲೂ ಹಾಗೆಯೆ.

ಮುಖ್ಯವಾಗಿ ಗಿಡಗಳಿಗೆ ನೀರೆರೆಯುವ ಕೆಲಸದಲ್ಲಿ ಜೂಡಿ ಮಾಲಿಗೆ ಆಗಾಗ್ಗೆ ನೆರವಾಗುತ್ತಿದ್ದಳು. ಮಳೆಗಾಲದಲ್ಲಿ ಹೊರತಾಗಿ, ಅವನು ಪ್ರತಿ ದಿನವೂ ಗಿಡಕ್ಕೆಲ್ಲಾ ನೀರುಹಾಕಬೇಕಾಗಿತ್ತು. ಇಷ್ಟಾದರೂ ಕೂಡ, ಸೆಕೆಗಾಲದಲ್ಲಿ ಹುಲ್ಲು ಬಲು ಕಂದುತಿರುಗಿ, ಕಳಪೆಯಾಗಿ ಕಾಣುತ್ತಿತ್ತು ; ಇದಕ್ಕೂ ಇಂಗ್ಲೆಂಡಿನಲ್ಲಿನ ಹುಲ್ಲು ಹಸಲೆಗೂ ಅಜಗಜಾಂತರ. ಈ ತೋಟದ ಒಂದು ಸೊಗಸು ಎಂದರೆ, ಅದರ ತುಂಬ ನೆರೆಯುತ್ತಿದ್ದ ಹಲವಾರು ಹಕ್ಕಿ. ಹಾರುವಾಗ ಹೊಳಪಾದ ಗರಿಗಳನ್ನು ಕಪ್ಪು ಬಿಳುಪಾಗಿ ಕೆದರುವ ಮೈನಾಹಕ್ಕಿಗಳಂತೂ ಯಾವಾಗಲೂ ಇದ್ದೇ ಇರುವುವು ; ಇವುಗಳ ಒಡನಾಡಿಗಳೆಂದರೆ, ಬೂದು ನೀಲಿಯ ಬುಲ್‌ಬುಲ್ ಹಕ್ಕಿಗಳು; ಹಾಗೂ, ಹಲವೊಮ್ಮೆ ಹಾರಿ ಬಂದು ಹೂರಸ ಹೀರುವ, ಹೊಳಪಿನ ಊದಾಬಣ್ಣದ ಕಿರು ಹಕ್ಕಿಗಳು ; ಇವು ಎಷ್ಟು ವೇಗವಾಗಿ ರೆಕ್ಕೆ ಬಡಿಯುವುವುವೆಂದರೆ, ಬಡಿಯುವಾಗ ರೆಕ್ಕೆ ಕಣ್ಣಿಗೆ ಬೀಳುತ್ತಲೇ ಇರಲಿಲ್ಲ. ಹೊತ್ತು ಗೊತ್ತಿಲ್ಲದೆ ಸದಾ ಸುಳಿದಾಡುವ ಹಾಳು ಮುದಿ ಕಾಗೆಗಳ ವಿಚಾರ ಹೇಳಲೇಬೇಕಾಗಿಲ್ಲ ; ಏನನ್ನಾದರೂ ಕಚ್ಚಿಕೊಂಡು ಹೋಗಬೇಕೆಂದೆನಿಸಿದಾಗ, ಪಟಪಟ ರೆಕ್ಕೆ ಬಡಿಯುತ್ತ ವರಾಂಡದೊಳಕ್ಕೇ ನುಗ್ಗುವುವು ; ಕಿಟಕಿಯ ಚೌಕಟ್ಟು ತಳದ ಮೇಲೆ ಕೂರುವುವು.

ಹೊರಗಡೆ ಬೀದಿಯಲ್ಲಿ ಎತ್ತಿನ ಬಂಡಿಗಳು ಗಡಗಡ ಸದ್ದು ಮಾಡುತ್ತ ಸಾಗುತ್ತಿದ್ದುವು ; ಹೂವುಗಳನ್ನು ಮೆಲ್ಲಲು ಆಸೆಪಟ್ಟ ಆಡುಗಳು ಬೇಲಿಯನ್ನು ಮೆಯ್ಯುಜ್ಜಿಕೊಂಡು ತೂರಿಬರಲು ಯತ್ನಿಸುತ್ತಿದ್ದುವು. ಕಾರುಗಳೂ, ಲಾರಿಗಳೂ ಓಡಾಡುವುವು ; ಒಮ್ಮೊಮ್ಮೆ ಒಂದು ರಿಕ್ಷಾ ಗಾಡಿಯೂ ಕಾಣಿಸುವುದುಂಟು. ಸೆಣಕಲು ಕಾಲಿನ ಬಡಪಾಯಿಯೊಬ್ಬ ಓಡುತ್ತಾ ಎಳೆಯುವ ರಿಕ್ಷಾ ಗಾಡಿಯಲ್ಲಿ

ಆ ಭಾಷೆ ಇಂಗ್ಲಿಷ್ ಆಗಿರಲು ಸಾಧ್ಯವಿರಲಿಲ್ಲ ; ಏಕೆಂದರೆ, ಎಷ್ಟೇ ಆಗಲಿ, ಇಂಗ್ಲಿಷ್ ಪರಕೀಯ ಭಾಷೆ. ಇಷ್ಟನ್ನು ಯಾರೇ ಆಗಲಿ ಒಪ್ಪಲೇಬೇಕು. ಹಿಂದಿ ರಾಜಧಾನಿಯಲ್ಲಿ ಆಡುವ ಭಾಷೆ; ಅದು ಸಂಸ್ಕೃತದಿಂದ ಬಂದದ್ದು. ಸಂಸ್ಕೃತ ಹಿಂದೂದೇಶದ ನಾಗರಿಕತೆಗೆ ಬಹು ಮುಖ್ಯವೆನಿಸಿರುವ ಪುರಾತನ ಗ್ರಂಥಗಳನ್ನು ಬರೆದಿರುವ ಪ್ರಾಚೀನ ಭಾಷೆ. ಭಾರತದ ಇತಿಹಾಸವನ್ನೂ ವಿಚಾರಮಾರ್ಗವನ್ನೂ ಅರಿಯಬೇಕಾದರೆ ಹಿಂದಿಯನ್ನು ಕಲಿಯಲೇಬೇಕು. ಆದರೆ ಮದರಾಸಿನ ಹಾದಿಬೀದಿಗಳಲ್ಲಿ ಯಾರೂ ಹಿಂದಿಯನ್ನು ಆಡುತ್ತಿರಲಿಲ್ಲ; ಎಲ್ಲರೂ ಮಾತಾಡುತ್ತಿದ್ದುದು ತಮಿಳು ; ಶಾಲೆಯಲ್ಲಿ ಹೆಣ್ಣುಮಕ್ಕಳು ತಮ್ಮ ತಮ್ಮಲ್ಲಿ ಮಾತುಕತೆಯಾಡುತ್ತಿದ್ದಾಗ, ಆಟವಾಡುತ್ತಿದ್ದಾಗ, ಆಡುತ್ತಿದ್ದುದೂ ತಮಿಳೇ, ಜೂಡಿಗೆ ಸ್ವಲ್ಪ ತಮಿಳು ಬರುತ್ತಿತ್ತು, ಆದರೆ ಚೆನ್ನಾಗಿ ಬರುತ್ತಿರಲಿಲ್ಲ; ಆ ಎಲ್ಲ ಹಿಂದಿಯ ಬದಲು ಇನ್ನಷ್ಟು ತಮಿಳು ಕಲಿತೇನು ಎಂದು ಅವಳ ಆಸೆ. ಆದರೂ ಕೂಡ, ಹಿಂದಿಯನ್ನೆ ಏಕೆ ಕಲಿಸಬೇಕು ಎಂಬ ಸಂಗತಿ ಅವಳಿಗೆ ಹೆಚ್ಚು ಕಡಮೆ ಅರ್ಥವಾದಂತಿತ್ತು.

ಅವಳು ಆಳುಗಳೊಂದಿಗೆ ಚೂರುಪಾರು ಹಿಂದಿ ಮಾತಾಡುತ್ತಿದ್ದಳು. ಜಾರ್ಜ್ ಕಪ್ಪುಮೀಸೆಯ ಒಬ್ಬ ಪರಿಚಾರಕ. ತಾನು ಸೊಗಸಾಗಿ ಇಂಗ್ಲಿಷ್ ಮಾತಾಡಬಲ್ಲೆ ಎಂದು ಅವನ ಎಣಿಕೆ ; ಆದರೆ ಕೆಲವು ಸಲ ಅವನನ್ನು ಅರ್ಥ ಮಾಡಿಕೊಳ್ಳುವುದೇ ಕಷ್ಟವಾಗುತ್ತಿತ್ತು ; ನಾವು ಹೇಳುವುದನ್ನು ಅವನು ಅರ್ಥಮಾಡಿಕೊಳ್ಳಲು ಒಲ್ಲದೆಹೋದರೆ, ಅವನೊಂದಿಗೆ ಮಾತಾಡುತ್ತ ಹೋಗುವುದರಿಂದ ಏನೂ ಪ್ರಯೋಜನವಿಲ್ಲ. ಬಟ್ಟೆ ಒಗೆಯುವ ದಾದಿ ಒಬ್ಬಳಿದ್ದಳು; ಅವಳ ಹೆಸರು ವಾಸಿಕಿ ; ಅವಳು ಅಂದವಾಗಿಯೆ ಇದ್ದಳು ; ಇನ್ನೂ ಹೆಚ್ಚು ಅಂದವಾಗಿ ಕಾಣಬೇಕೆಂದು ಕಿವಿಗೆ ಚಿಕ್ಕ ಕುಂಡಲಗಳನ್ನೂ ಮೂಗಿಗೆ ಮೂಗುತಿಗಳನ್ನು ಧರಿಸಿದ್ದಳು. ಇವರಾದಮೇಲೆ ತೋಟದ ಮಾಲಿ : ತರಗೆಲೆ ಗುಡಿಸಿಹಾಕುವುದು, ಗಿಡಕ್ಕೆ ನೀರು ಎರೆಯುವುದು, ಕುಂಡಗಳಲ್ಲಿ ಗಿಡ ಬೆಳಸುವುದು,–ಅವನ ಕೆಲಸ. ಅವನು ಒಳ್ಳೆಯ ಚೆಲುವಾದ ದೊಡ್ಡದೊಡ್ಡ ಜಿನಿಯಾ, ಹೊಳಪು ಬಣ್ಣದ ಕರ್ಣಕುಂಡಲ, ಚೆಂಡುಮಲ್ಲಿಗೆ ಇವನ್ನು ಬೆಳೆದಿದ್ದ; ಜೊತೆಗೆ, ಕಡುಗೆಂಪು ಮತ್ತು ಕಿತ್ತಳೆ ಬಣ್ಣದ ಹೂ ಬಿಡುವ ಎತ್ತರವಾದ ಕಾಬಾಳೆ, ಹೂ ಕೋಸು, ಬೆಂಡೆಯಕಾಯಿ, ದೊಡ್ಡ ಕುಂಬಳ ಬಳ್ಳಿ ಇವನ್ನೂ ಬೆಳಸಿದ್ದ. ಅವರ ಮನೆಯ ತೋಟ ಮತ್ತು ಹಿಂದಣ ಮನೆಯ ನಡುವಣ ಬೇಲಿಯಮೇಲೆ 'ಬೆಳಗಿನ ಬೆಡಗಿ' (Morning glory)ಗಳನ್ನು ಹಬ್ಬಿಸಿದ್ದ ; ಅವುಗಳ ತುಂಬ

ಹಾಗೆ ಮಾಡಿ ಅವರನ್ನು ಆಸ್ಪತ್ರೆಗೆ ಕಳಿಸಿಕೊಟ್ಟರೆ. ಅವರು ಮರಳಿ ಆರೋಗ್ಯ ಹೊಂದುವ ಅವಕಾಶವಿರುತ್ತಿತ್ತು. ಬಹಳ ಬಡಕಲಾಗಿ ಕಾಣುವ ಎಷ್ಟೋ ಮಂದಿ ಇದ್ದರು; ಬೇರೆಬೇರೆ ರುಚಿ ಕೊಡುವಂತೆ ಮಾಡಿದ ಅನ್ನ ಹೊರತಾಗಿ ಅವರಿಗೆ ಊಟ ಮಾಡಲು ಏನೇನೂ ಇರಲಿಲ್ಲವೆಂದೇ ಜೂಡಿಯ ತಾಯಿ ಹೇಳುತ್ತಿದ್ದರು; ಅವರಿಗೆ ಕುಡಿಯಲು ಇನ್ನಷ್ಟು ಹಾಲು ದೊರಕಿದ್ದೇ ಆದರೆ ಅವ ಸ್ಥಿತಿ ಇಷ್ಟೊಂದು ಕೆಟ್ಟಿರದು. "ಎಂದಾದರೂ ಒಂದು ದಿನ ರಾಷ್ಟ್ರೀಯ ವಿಸ್ತಾರಣ ಸೇವಾ ಕೇಂದ್ರಕ್ಕೆ ಹೋಗೋಣ, ಅಲ್ಲಿ ಪರಿಸ್ಥಿತಿ ಹೇಗಿದೆ ನೋಡೋಣ" ಎಂದು ಜೂಡಿಯ ತಾಯಿ ಹೇಳಿದರು.

"ಅದು ಯಾವುದು ಅದು?" ಎಂದು ಜೂಡಿ ಪ್ರಶ್ನಿಸಿದಳು.

ಭಾರತದೇಶದ ಕೋಟ್ಯಂತರ ಜನ ಹಳ್ಳಿಗಳಲ್ಲಿ ವಾಸ ಮಾಡುತ್ತಾರೆ, ಆಹಾರವನ್ನೆಲ್ಲ ಬೆಳೆಯಬೇಕಾದದ್ದು ಅಲ್ಲಿ, ಆದ್ದರಿಂದ ಆ ಹಳ್ಳಿಗಳಿಗೆ ಸಹಾಯ ಒದಗಿಸಬೇಕಾದದ್ದು ಈಗ ಅತ್ಯಂತ ಮುಖ್ಯ ಎಂದು ಅವಳ ತಾಯಿ ವಿವರಿಸಿದರು. ಭಾರತ ಸರ್ಕಾರ ಎರಡು ಕಾರ್ಯಗಳನ್ನು ಮಾಡಲು ಪ್ರಯತ್ನಿಸುತ್ತಿದೆ; ಒಂದು, ವ್ಯವಸಾಯವನ್ನು ಉತ್ತಮಪಡಿಸುವುದು ; ಎಂದರೆ, ಇನ್ನೂ ಉತ್ತಮವಾದ ಹಾಗೂ ಬೇರೆಬೇರೆಯ ಬಗೆಯ ಬೆಳೆ ಬೆಳೆಯುವುದು, ಇನ್ನೂ ಒಳ್ಳೆಯ ದನಕರು ಸಾಕುವುದು ಮುಂತಾದ್ದು; ಎರಡನೆಯದಾಗಿ, ಇನ್ನೂ ಹೆಚ್ಚು ಉಪಯುಕ್ತವಾದ ರೀತಿಯಲ್ಲಿ ಬಾಳುವೆ ಮಾಡಲು ಜನಕ್ಕೆ ಸಹಾಯಮಾಡಿ, ಸಣ್ಣ ಸಣ್ಣ ಉದ್ಯೋಗಗಳ ಮೂಲಕ ಅವರು ಸ್ವಲ್ಪ ಹಣ ಸಂಪಾದಿಸಲು ಅವಕಾಶ ಕಲ್ಪಿಸುವುದು. "ಹಳ್ಳಿಗಳಲ್ಲಿ ತಯಾರಿಸಿದ ರಗ್ಗುಗಳು. ಪರದೆಗಳು, ಹತ್ತಿಯ ಬಟ್ಟೆ ಇವನ್ನೆಲ್ಲಾ ಕೊಳ್ಳಬೇಕೆಂದು ನಾವು ಪ್ರಯತ್ನ ಮಾಡುವುದು ನಿನಗೆ ಗೊತ್ತೇ ಇದೆಯಲ್ಲ?" ಎಂದರು ಅವರು.

"ಹ್ಞೂ, ಗೊತ್ತು" ಎಂದಳು ಜೂಡಿ ; ಆದರೆ ಹಾಗೆ ಕೊಳ್ಳಹೋಗುವುದು ಕೆಲವೊಮ್ಮೆ ಬೇಡವೆನ್ನಿಸಿತ್ತು ಅವಳಿಗೆ ; ಏಕೆಂದರೆ, ಇಂಗ್ಲೆಂಡು ಮತ್ತು ಸ್ವಿಡ್ಜ ರ್ಲೆಂಡುಗಳಿಂದ ಬಂದ ಇನ್ನೂ ಠೀಕಾದ ಹತ್ತಿಯ ಬಟ್ಟೆ ಅಂಗಡಿಗಳಲ್ಲಿ ದೊರಕುತ್ತಿದ್ದುವು; ತನ್ನ ಲಂಗಗಳನ್ನು ಆ ಬಟ್ಟೆಗಳಿಂದ ಹೊಲಿಸಿಕೊಳ್ಳಬೇಕೆಂದು ಅವಳ ಬಯಕೆ.

"ಭಾರತ ಸರ್ಕಾರ ಮಾಡಬೇಕೆಂದು ಹೊರಟಿರುವ ಅದರ ಎಲ್ಲ ಕಾರ್ಯ ಪ್ರಯತ್ನಗಳಲ್ಲಿಯೂ ನೆರವಾಗಬೇಕಾದದ್ದು ಭಾರತದಲ್ಲಿ ವಾಸಿಸುತ್ತಿರುವ ನಮ್ಮೆಲ್ಲರ ಕರ್ತವ್ಯ ಎಂದು ನನ್ನ ಭಾವನೆ. ಬಡಜನರ ಸ್ಥಿತಿಗಳನ್ನು ಸ್ವಲ್ಪಮಟ್ಟಿಗಾದರೂ

ಹೋಗುವುದೆಂದರೆ ಎಂದಿಗೂ ಆಗದು ಜೂಡಿಗೆ. ಆದರೆ ಶಾಲೆಯ ಕೆಲವರು ಹುಡುಗಿಯರೇನೋ ರಿಕ್ಷಾ ಗಾಡಿಯಲ್ಲೇ ಮನೆಗೆ ಹೋಗುತ್ತಿದ್ದರು. ಮದರಾಸಿನ ಬಸ್ಸುಗಳೂ ಕೂಡ ಲಂಡನ್ನಿನ ಬಸ್ಸುಗಳ ಹಾಗೆಯೆ ಸೊಗಸಾಗಿ, ಹಾಯಾಗಿ, ತಂಪಾಗಿ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದುಕೊಳ್ಳುವಳು ಜೂಡಿ. ಆದರೆ ಅವು ಹಾಗಿರಲಿಲ್ಲ.

ಚಳಿಗಾಲದಲ್ಲಿ ಅಷ್ಟೊಂದು ಕೇಡಾಗಿರುತ್ತಿರಲಿಲ್ಲ ; ಆದರೆ ಚಳಿಗಾಲ ಇರುತ್ತಿದ್ದುದು ಕೆಲವು ವಾರ ಮಾತ್ರ. ಆಗ ಇಂಗ್ಲೆಂಡಿನ ಸೆಕೆಗಾಲದ ಅತ್ಯಂತ ಸೆಕೆಯ ದಿನಗಳಂತೆ ಇರುತ್ತಿತ್ತು ; ಆದರೂಕೂಡ, ಸ್ನಾನ ಮಾಡಲಾಗದಷ್ಟು ಚಳಿ ಎಂದು ಕೆಲವರ ಭಾವನೆ. ಕಾರಿನ ಹೊರಭಾಗವನ್ನು ಮುಟ್ಟಿದರೆ ಕೈಸುಡುತ್ತಿರಲಿಲ್ಲ. ಚಳಿಗಾಲದಂದು ವಾರದ ಕೊನೆಯಲ್ಲಿ ಅವರು ಪ್ರವಾಸ ಕೈಗೊಳ್ಳುತ್ತಿದ್ದರು. ಒಮ್ಮೆ ಅವರು ಮಹಾಬಲಿಪುರಕ್ಕೆ ಹೋಗಿದ್ದರು ; ಅಲ್ಲಿ ದೊಡ್ಡದೊಡ್ಡ ಕಲ್ಲಿನ ಬಸವಗಳೂ ಆನೆಗಳೂ ಶತಶತಮಾನಗಳ ಕಾಲ ನಿಂತಿದ್ದಿರುವಹಾಗೆ ಈಗಲೂ ಬಿಸಿಲಿನಲ್ಲಿ ಶಾಂತವಾಗಿ ನಿಂತಿವೆ ; ಪುರಾತನ ದೇವಾಲಯ ಇರುವೆಡೆ ಭೂಭಾಗದ ಸುತ್ತ ನೀಲಿಯ ಸಮುದ್ರ ಅಪ್ಪಳಿಸಿ ಬಡಿದು, ಬಿಳಿನೊರೆಯ ಕಿರೀಟ ಧರಿಸುವುದು ; ಅಲ್ಲಿ ಹೆಬ್ಬಂಡೆಯೊಂದರ ಮೇಲೆ ತಪಸ್ವಿಗಳು, ಅವರನ್ನೆ ದಿಟ್ಟಿಸಿ ನೋಡುತ್ತಿರುವ ವನದೇವತೆಗಳು, ಕಪಿಗಳು, ಧ್ಯಾನ ಮಾಡುವಂತೆ ಕಾಣುವ ಬೆಕ್ಕು, ಪಳಗಿ ಸಾಧುವಾದ ಆನೆಗಳು–ಇವನ್ನೆಲ್ಲ ಬರೆದಿರುವ ಭಿತ್ತಿಚಿತ್ರ ಇದೆ ; ಅಲ್ಲಿ ಇನ್ನೂ ಒಂದು ಬಂಡೆಯ ಮೇಲೆ ಕೃಷ್ಣನ ಚಿತ್ರ ಇದೆ–ಬೆದರಿರುವ ಗೊಲ್ಲರಿಗೂ ಬೆದರದಿರುವ ಹಸುಗಳಿಗೂ ಭಯಂಕರ ಗುಡುಗು ಮಿಂಚಿನ ಮಳೆಯಿಂದ ಹಾನಿಯಾಗದಂತೆ ರಕ್ಷಣೆ ನೀಡುತ್ತಿರುವ ಗೋವರ್ಧನ ಪರ್ವತವನ್ನು ಅವನು ಎತ್ತಿಹಿಡಿದಿರುವನು.

ಅವರು ಪಕ್ಷಿಗಳ ಆಶ್ರಯಸ್ಥಾನಕ್ಕೂ ಹೋಗಿದ್ದರು ; ಅಲ್ಲಿ ಮರಗಳ ತುಂಬ ಗೂಡು ಕಟ್ಟುವ ಕೊಕ್ಕರೆಗಳಿದ್ದುವು. ಅಲ್ಲಲ್ಲಿ ಇದ್ದ ದೇವಾಲಯಗಳನ್ನೂ ಸಂದರ್ಶಿಸಿದರು. ಆದರೆ ಹವಾ ಸೆಕೆಯೇರುತ್ತಬಂದಂತೆ ಮೋಟಾರುನಡೆಸುವುದು ತುಂಬ ಆಯಾಸಕರವೆನಿಸುತ್ತಿತ್ತು ; ಒಂದು ಶನಿವಾರ, ಜನಸಮುದಾಯದ 'ಎಕ್ಸ್‌ರೇ' ಛಾಯಾಚಿತ್ರಗ್ರಹಣ (Mass Radiography) ತಂಡದೊಂದಿಗೆ ಅವರು ಒಂದುಹಳ್ಳಿಗೆ ಹೋಗಿದ್ದರು ; ಹೆಸರಿನ ಪಟ್ಟಿಗಳಲ್ಲಿ ಹೆಸರುಗಳ ಪಕ್ಕದಲ್ಲಿ ಗುರುತು ಹಾಕಿ ಜೂಡಿ ವೈದ್ಯರಿಗೆ ನೆರವಾಗುತ್ತಿದ್ದಳು. ಎಷ್ಟು ಜನಕ್ಕೆ ಕ್ಷಯರೋಗ ತಗುಲಿದೆ ಎಂಬುದನ್ನು ಕಂಡುಹಿಡಿಯುವುದಕ್ಕಾಗಿ ಇದನ್ನೆಲ್ಲಾ ಮಾಡಲಾಗುತ್ತಿತ್ತು;

ಸಪ್ಪೆಯಾಗಿ ಬಿಡುತ್ತಿತ್ತು. ಅವಳೂ ಸ್ಟ್ಯಾಂಪು ಸಂಗ್ರಹಿಸುತ್ತಿದ್ದ ಹುಡುಗನೂ ಬೇಟೆಯಾಡುವುದಕ್ಕೆಂದು ಮೀಸಲಾಗಿದ್ದ ಒಂದು ಸ್ಥಳಕ್ಕೆ ಹೋದರು ; ಅಲ್ಲಿ ಅವರು ಮಹಾಬಲಿಪುರದ ಆನೆಯಷ್ಟೇ ಸೊಗಸಾಗಿದ್ದ ಆನೆಯೊಂದರಮೇಲೆ ಗಂಟೆಗಟ್ಟಲೆ ಸವಾರಿ ಮಾಡಿದರು ; ದಾರಿಗೆ ಅಡ್ಡಲಾಗುತ್ತಿದ್ದ ಮರದ ಕೊಂಬೆಗಳನ್ನು ಆ ಆನೆ ಬಹು ಜಾಣತನದಿಂದ ಮುರಿದುಹಾಕುತ್ತಿತ್ತು ; ಇಲ್ಲದಿದ್ದರೆ, ಅವು ಅವರನ್ನು ಹಿಂದಕ್ಕೆ ದೂಡಿಬಿಡುತ್ತಿದ್ದುವು. ಬಹುದೂರದ ಆಚೆ ಒಂದು ಬಯಲು ಪ್ರದೇಶದಲ್ಲಿ ಕೆಲವು ಕಾಡಾನೆಗಳನ್ನು ಅವರು ನೋಡಿದರು. ಅಲ್ಲಿ ಅವುಗಳ ಕಾಲು ಮುಚ್ಚುವವರೆಗೂ ಬೆಳೆದಿದ್ದ ಹುಲ್ಲಿನ ಗುತ್ತಿಗಳನ್ನು ಅವು ಎಳೆದೆಳೆದು ಕಿತ್ತು ತಿನ್ನುತ್ತ, ತಮ್ಮ ಸೊಂಡಿಲುಗಳನ್ನು ಅತ್ತ ಇತ್ತ ಬೀಸುತ್ತಿದ್ದುವು. ದೊಡ್ಡ ನೆರಳುಗಳಹಾಗೆ, ಅವು ಬಹು ಸಾಧುವಾಗಿ ಕಾಣುತ್ತಿದ್ದುವು ; ಅದರೆ ಹೊರಟು ಹೋಗಬೇಕೆಂದು ಅವು ನಿಶ್ಚಯಿಸಿದಾಗ, ಅವುಗಳಲ್ಲಿ ಒಂದು ಆನೆ ವಿನೋದಕ್ಕಾಗಿ ಮರವೊಂದನ್ನು ಧಡಾರನೆ ಮುರಿದುಹಾಕಿಬಿಟ್ಟಿತು. ಆ ಪ್ರದೇಶಗಳಲ್ಲಿ ಆನೆಗಳು ತಮ್ಮ ಬೆಳೆಯ ಹತ್ತಿರ ಸುಳಿಯದಂತೆ ಮಾಡುವುದಕ್ಕಾಗಿ ಜನ ಆಳವಾಗ ಕಂದಕಗಳನ್ನು ತೋಡಬೇಕಾಗುತ್ತು. ಮೃಗಾಲಯದ ಆನೆಗಳಿಗೆ ಈ ಸಚ್ಛಂದವಾದ ತಿರುಗಾಟ, ಮೇವು, ಆಟ ಒಂದೂ ಇಲ್ಲವಲ್ಲಾ ಎಂದು ಜೂಡಿ ಅವುಗಳ ಬಗೆಗೇಂಯೊಚಿಸುತ್ತ ಹೋದಳು. ಅದಾದಮೇಲೆ ಅವರು ಒಂದು ಕಾಡುಕೋಣವನ್ನು ನೋಡಿದರು ; ಬಳಿಕ, ಕುರುಚಲು ಪೊದರುಗಳು ಮತ್ತು ಬಿದಿರುಮಳೆಗಳ ನಡುವೆ ಏನೋ ದೊಡ್ಡದಾಗಿ ಕಠ್ರಗೆ ಕಂಡಿತು ; ಅದು ಒಂದು ಕರಡಿ ಎಂದು ಗೊತ್ತಾಯಿತು. ಅಂಚೆಚೀಟಿ ಕಲೆಹಾಕುವ ಹುಡುಗನ ಆಸಕ್ತಿಕೂಡ ಆಗ ಕೆರಳಿತು. ಇನ್ನೂ ಅನೇಕ ಪ್ರಾಣಿಗಳನ್ನು ನೋಡಬೇಕೆಂದು ಜೂಡಿಯ ಹಂಬಲ. ಮಂಗಗಳು ಹಾಗೂ ಅಳಿಲುಗಳಂತೂ ಯಾವಾಗಲೂ ಇದ್ದೇ ಇರಬೇಕು ; ಅವುಗಳನ್ನು ನೋಡದೆಯೇ ಇರುವುದೆಂದರೆ ತಲೆತಗ್ಗಿಸಬೇಕಾದ ಸಂಗತಿ. ಪ್ರತಿ ರಾತ್ರಿಯೂ ಮಲಗುವಮುನ್ನ ಜೂಡಿಯ ತಲೆತುಂಬ ಆನೆಗಳ ವಿಚಾರವೆ.

ಉತ್ತಮಪಡಿಸಿಬೇಕೆಂದು ಅವರು ಪಾಂಚವಾರ್ಷಿಕ ಯೋಜನೆಯನ್ನು ಮೊದಲು ಮಾಡಿದರು ; ಮುಂದಿನ ಪಾಂಚವಾರ್ಷಿಕ ಯೋಜನೆಯಲ್ಲಿ ಅವರ ಸ್ಥಿತಿ ಕೊಂಚ ಮೇಲಾಗುವುದು; ಭಾರತದಲ್ಲಿ ಸಂಪಾದಿಸಿದ ಹಣ ಶ್ರೀಮಂತರಿಗೆ ಈಗಿಗಿಂತ ಕಡಮೆ ಸೇರಿ, ಬಡವರಿಗೆ ಹೆಚ್ಚುಹೆಚ್ಚಾಗಿ ಸೇರುವುದು. ನೆಹರೂರವರಂಥ ನಿಜವಾದ ದೇಶನಾಯಕರ ಅಪೇಕ್ಷೆಯಂತೂ ಅದು. ಆದರೆ ಸ್ವಾರ್ಥಪರರಾದ ಕೆಲವು ಜನ ಯಾವಾಗಲೂ ಇದ್ದೇ ಇರುತ್ತಾರೆ.''

ತನ್ನ ತಾಯಿಯ ವಿಚಾರಸರಣಿ ಏನೆಂಬುದು ತನಗೆ ಗೊತ್ತು ಎಂದು ಜೂಡಿಯ ಎಣಿಕೆ. ತಾವು ಸುಖವಾಗಿದ್ದರೆ ಸರಿ, ಇತರರ ಬದುಕು ಹೇಗಿದ್ದರೆ ಏನು ಎಂದು ಸುತ್ತಮುತ್ತ ತಿರುಗಿಯೂ ನೋಡದ ಮೇಲು ಅಂತಸ್ತಿನ ಒಬ್ಬಿಬ್ಬರೊಂದಿಗೆ ಅವಳ ತಾಯಿ ಜಗಳವಾಡುತ್ತಲೇ ಇದ್ದರು. ಬಹುಶಃ ತನ್ನ ತಾಯಿಯ ವಾದವೇ ಸರಿ ಎಂದು ಜೂಡಿಗೆ ತೋರುತ್ತಿತ್ತು ; ಆದರೂ, ಹಾಗೆ ಜಗಳ ಕಾಯುವುದು ಅವಳಿಗೆ ಇಷ್ಟವಿರಲಿಲ್ಲ. ಒಂದುಸಲ ತನ್ನ ಶಾಲೆಯ ಹುಡುಗಿಯೊಬ್ಬಳ ತಂದೆಯೊಂದಿಗೆ ಅಂತಹ ಕಲಹ ನಡೆಯಿತು ; ಹುಡುಗಿಯೂ ಅಂಥ ಒಳ್ಳೆಯವಳೇನಲ್ಲ ; ಆದರೂ........ನನ್ನ ತಾಯಿ ತುಂಬ ಅಸಮಾಧಾನಗೊಂಡು ಕೆರಳಿಬಿಟ್ಟಿದ್ದರು. ಹಾಗೆ ಕೋಪಗೊಳ್ಳುವಷ್ಟು ದೊಡ್ಡ ವಿಷಯವೇ ಅದು?

ಶಾಲೆಯ ರಜಾದಿನಗಳಲ್ಲಿ ಅವರು ಬೆಟ್ಟಕ್ಕೆ ವಿಹಾರಕ್ಕೆಂದು ಹೋಗುತ್ತಿದ್ದರು: ಆದರೆ ಜೂಡಿಯ ತಂದೆತಾಯಿ ಉದ್ದಕ್ಕೂ ಜೊತೆಯಲ್ಲಿರಲು ಸಾಧ್ಯವಿರಲಿಲ್ಲ. ಹೀಗಾಗಿ, ಅವಳು, ಬೆನ್ ಮತ್ತು ದಾದಿ ಇಷ್ಟು ಮಂದಿ ಮಾತ್ರ ವಸತಿಗೃಹದಲ್ಲಿ ಉಳಿದುಕೊಳ್ಳುತ್ತಿದ್ದರು. ಜೊತೆಗೆ ಕೆಲವರು ಸ್ನೇಹಿತರೇನೋ ಇದ್ದರು ; ಅವರ ಸಂಗಡ ಒಬ್ಬ ಹುಡುಗನೂ ಇದ್ದ ; ಅವನಿಗೆ ಸ್ಟ್ಯಾಂಪುಗಳನ್ನು ಕೂಡಿಹಾಕುವುದರಲ್ಲಿ ಮಾತ್ರ ಆಸಕ್ತಿ. ಅಲ್ಲಿ ಬಹಳ ಸೊಗಸಾಗಿ, ತಂಪಾಗಿತ್ತು–ಸಂಜೆಯ ಹೊತ್ತು 'ಜರ್ಸಿ' ಹಾಕಿಕೊಳ್ಳಬೇಕು ಎನಿಸುವುದು, ರಾತ್ರಿ ಕಂಬಳಿ ಬೇಕಾಗುವುದು; ಹೊರಗೆ ಓಡಾಡಿಕೊಂಡು ಆಟ ಆಡಬೇಕು ಎನಿಸುವುದು; ಮದರಾಸಿನಲ್ಲಾದರೆ ಹೀಗಿರಬೇಕೆಂದು ಯಾರಿಗೂ ಎಂದೂ ಎನಿಸುತ್ತಿರಲಿಲ್ಲ. ಅಂತೂ, ಅಷ್ಟು ತಂಪಾಗಿತ್ತು. ಆದರೂ ಏನೋ ಮಂಕು ಮಂಕು.

ಹೀಗಿದ್ದರೂ, ಜೂಡಿ ತನ್ನ ಹನ್ನೊಂದನೆಯ ಹುಟ್ಟಿದ ಹಬ್ಬದಂದು ಒಂದು ಸೊಗಸಾದ ಕೆಲಸ ಮಾಡಿದಳು. ಹಾಗೆ ಮಾಡದೆ ಹೋಗಿದ್ದರೆ, ತನಗೆ ಬೇಕಾದ ಕೆಲವು ಪುಸ್ತಕಗಳನ್ನು ತರಿಸಿಕೊಂಡಿದ್ದರೂ ಕೂಡ, ಹುಟ್ಟಿದಹಬ್ಬ

ಕಾಣುತ್ತಿತ್ತು ; ಆ ತೋಟ ಒಳ್ಳೇ ಸೊಗಸಾದದ್ದು. ಆ ಮನೆಯಾಕೆ ತಾವೇ ತೋಟದಕೆಲಸ ಎಷ್ಟೋ ಮಾಡುತ್ತಿದ್ದರು ; ವರಾಂಡದ ಸುತ್ತಲೂ ಕುಂಡಗಳ ಸಾಲುಸಾಲೇ ಇರುತ್ತಿದ್ದುವು ಯಾವಾಗಲೂ. ಬೆಳಗ್ಗೆ ಹೊತ್ತಿಗೆಮುಂಚೆ ಆಕೆ ಹೂ ಕೊಯ್ಯಲು ಬರುತ್ತಿದ್ದರು ; ಆಕೆ ಉಟ್ಟಿರುತ್ತಿದ್ದ ಸೀರೆಗಳೊ, ಹೂಗಳಂತೆಯೆ ಬಗೆಬಗೆಯ ಬಣ್ಣದವು–ಕಿತ್ತಳೆ, ಎಲ್ಲ ಬಗೆಯ ಕೆಂಪು, ಎಳೇ ಬಾಳೆಯೆಲೆಯ ಹಸಿರು, ಮೆರೀನಾ ತೀರದಾಚೆಯ (Marina Beach) ಸಮುದ್ರದ ನೀಲಿ–ಹಸಿರು, ಇಲ್ಲವೊ ರಾತ್ರಿಯಾಕಾಶದ ದಟ್ಟನೀಲಿ. ಹಲವೊಮ್ಮೆ ಅವುಗಳ ಚಿನ್ನದ ಜರಿಯ ಅಂಚು ಮಿರಮಿರ ಮಿರುಗುತ್ತಿದ್ದವು. ಕೆಲವೊಮ್ಮೆ ಜೂಡಿ ತೋಟದಲ್ಲಿ ಮಕ್ಕಳನ್ನು ನೋಡುವಳು ; ಆದರೆ ಅವರು ಮನೆಯಾಕೆಯ ಸ್ವಂತ ಮಕ್ಕಳು ಎಂಬ ಬಗೆಗೆ ಅವಳಿಗೆ ನಿಶ್ಚಯವಿಲ್ಲ. ಭಾರತಜನದ ಮನೆಯಲ್ಲಿ ಯಾವಾಗಲೂ ಸ್ನೇಹಿತರು, ನಂಟರಿಷ್ಟರು ಬಹಳಮಂದಿ, ಕೆಲವೂ ವೇಳೆ ಗೊಂದಲವೋ ಗೊಂದಲ ಎಂದು ಅವಳು ತನಗೆ ತಾನೆ ಹೇಳಿಕೊಳ್ಳುವಳು. ಅವಳ ಶಾಲೆಯ ಗೆಳತಿ ಒಬ್ಬಳಿದ್ದಳು ; ಅವಳ ಮನೆಗೆ ಚಹಾ ಕುಡಿಯಲು ಜೂಡಿ ಕೆಲವು ಸಲ ಹೋಗಿದ್ದಳು ; ಅಲ್ಲಿ ತನ್ನ ಗೆಳತಿಯ ಜೊತೆ ಇದ್ದ ಇತರ ಮಕ್ಕಳು ಅವಳ ಅಣ್ಣತಮ್ಮಂದಿರೋ ಅಕ್ಕತಂಗಿಯರೋ ಚಿಕ್ಕಮ್ಮದೊಡ್ಡಮ್ಮಂದಿರ ಮಕ್ಕಳೋ ಒಂದೂ ಗೊತ್ತಾಗುವಂತಿರಲಿಲ್ಲ ; ಅವರಪೈಕಿ ಒಬ್ಬಳು ಬಹುಶಃ ದಾದಿಯ ಪುಟ್ಟ ಹುಡುಗಿಯೆ ಆಗಿದ್ದಿರಬಹುದು ; ಅಂತೂ ಅವರೆಲ್ಲ ಯಾರು ಎಂಬ ಪ್ರಶ್ನೆ ಜೂಡಿಗೆ ಕೊನೆಗೂ ಬಗೆಹರಿಯಲಿಲ್ಲ !

ಅವಳ ಶಾಲೆಯ ಸ್ನೇಹಿತರಲ್ಲಿ ಕೆಲವರು ಕ್ರಮವಿಲ್ಲದೆ ಕಟ್ಟಿದ ದೊಡ್ಡ ಮನೆಗಳಲ್ಲಿ ವಾಸಮಾಡುತ್ತಿದ್ದರು ; ಮದರಾಸಿನ ಮಧ್ಯಪ್ರದೇಶದಲ್ಲಿದ್ದರೂ ಕೂಡ, ಗಿಡಮರಗಳಿಂದ ತುಂಬಿ ಸುಮಾರಾಗಿ ದೊಡ್ಡವಾಗಿಯೆ ಇದ್ದ ತೋಟಗಳೂ ಇದ್ದವು ಅವುಗಳಿಗೆ. ಕತ್ತಲೆಕತ್ತಲೆಯಾದ, ಮಂಕುಮಂಕಾಗಿ ಕಾಣುವ, ಹೊಲಸುತೀರಿನ ಹಜಾರವೊಂದರ ಮೂಲಕ ಮನೆಯೊಳಕ್ಕೆ ಹಾದುಹೋದರೆ, ವಿಶಾಲವಾದ ಹೆಂಚಿನ ವರಾಂಡ ಸಿಕ್ಕುವುದು ; ಅದು ಸ್ವಲ್ಪ ಹೆಚ್ಚುಕಡಮೆ ಹೊಲಮನೆಯ ಅಂಗಳದಹಾಗೆ ಎನ್ನಬಹುದು ; ಅಲ್ಲಿ, ಅಡಿಗೆ ಮಾಡುವುದು, ಪಾತ್ರೆ ತೊಳೆಯುವುದು, ಕುರ್ಚಿಗಳನ್ನು ಸರಿಪಡಿಸುವುದು, ಮಕ್ಕಳನ್ನು ತೂಗುವುದು, ಕುಚ್ಚುಕುಚ್ಚಾಗಿ ಹೂ ಕಟ್ಟುವುದು–ಹೀಗೆ, ಬಗೆ ಬಗೆಯ ಜನ ಬಗೆಬಗೆಯ ಕೆಲಸ ಮಾಡುತ್ತಿರುವವರು. ಇಷ್ಟೇ ಅಲ್ಲ ಅಲ್ಲಿ; ಕೋಳಿಗಳೂ ಆಡುಗಳೂ ಇರುವುದು; ಒಂದೆರಡು ಎಮ್ಮೆ ಹಾಯಾಗಿ ಮಲಗಿರುವುವು ; ಹಸುಗಳಂತೂ ಇದ್ದೇ

# ೨. ಬೇಲಿಯ ಸಂದು

ಲಾಂಟಾನ ಬೇಲಿಯ ಆಚೆಯ ನೆರೆಯವರು ಬೆನ್ನನಿಗೆ ಸರಿಹೋಗಿದ್ದರು; ಆದರೆ ಜೂಡಿಗೆ ಅವರೆಂದರೆ ತುಸು ಬೇಸರವೆ. ಅವರ ತೋಟ ಅಷ್ಟೇನೂ ಅಚ್ಚುಕಟ್ಟಾಗಿರಲಿಲ್ಲ ; ಅಲ್ಲಿನ ಜಾಗವನ್ನೆಲ್ಲ ಅವರ ಹಸುವೇ ಆಕ್ರಮಿಸಿಕೊಂಡು ಬಿಟ್ಟಿತ್ತು. ಅವರ ಮನೆಯ ಮಕ್ಕಳೆಂದರೆ, ಏಳು ಮತ್ತು ಎಂಟು ವರ್ಷ ವಯಸ್ಸಿನ ಇಬ್ಬರು ಪುಟ್ಟಹುಡುಗಿಯರು, ಒಂದು ಗಂಡುಮಗು, ಮಗುವಿನ ಹೆಸರು ರಾಮಕೃಷ್ಣ ; ಅಷ್ಟು ಚಿಕ್ಕ ಮಗುವಿಗೆ ಹೆಸರು ಬಹು ದೊಡ್ಡದಾಗಿ, ಗೌರವವಾಗಿ, ಕಾಣುತ್ತಿತ್ತು. ಅವನೇನೋ ಅವರು ಎತ್ತಲಾರದಷ್ಟು ಭಾರವಾಗಿ ಕಂಡುಬರುತ್ತಿದ್ದರೂ, ಅವನ ಹುಡುಗಿಯರಲ್ಲಿ ತಂಗಿ ವಾರಂತಿಯನ್ನು ಕಂಡರೆ ಜೂಡಿಗೆ ಇಷ್ಟ. ವಾರಂತಿಗೆ ಬಗೆಬಗೆಯ ಚೆಂಡಾಟ, ಬುಗರಿ, ಹಗ್ಗದ ಕುಣಿತ ಎಂದರೆ ಹಿಗ್ಗು. ಜೂಡಿ ಅವಳಿಗೆ ಎಷ್ಟೋ ಆಟಪಾಟಗಳನ್ನು ಇಂಗ್ಲಿಷಿನಲ್ಲಿ ಹೇಳಿಕೊಟ್ಟಳು ; ಅವಳೂ ಅವುಗಳನ್ನು ಬೇಗನೆಯ ಕಲಿತಳು, ಅಲ್ಲದೆ ಪ್ರತಿಯಾಗಿ ತಮಿಳಿನಲ್ಲಿ ಆಡುವ ಆಟಗಳಿಗೆ ಬೇಕಾದ ಪ್ರಾಸದ ಪದ್ಯಗಳನ್ನು ಜೂಡಿಗೆ ಹೇಳಿಕೊಟ್ಟಳು ; ಆದರೆ ಮಾತ್ರ, ಅವುಗಳನ್ನು ಹೇಳುವಾಗ ಯಾವಾಗಲೂ ಮಧ್ಯದಲ್ಲಿ ನಗು ತಡೆಯಲಾರದೆ ನಕ್ಕುಬಿಡುವಳು. ಅವರ ತಂದೆ ಸರ್ಕಾರ ಕಚೇರಿಯೊಂದರಲ್ಲಿ ಯಾವುದೋ ಹುದ್ದೆಯಲ್ಲಿದ್ದರು ; ಯಾವಾಗಲೂ ಏನೋ ಚಿಂತೆ ಹಚ್ಚಿಕೊಂಡಿದ್ದಂತೆ ಕಾಣುತ್ತಿದ್ದರು.

ತಮ್ಮ ಮನೆಯಲ್ಲಿ ಮದುವೆ ನೆರವೇರಿಸಿದ ನೆರೆಮನೆಯವರು ಸ್ವಲ್ಪ ಬಡಿವಾರದವರು. ಅವರಲ್ಲಿ ಒಂದು ದೊಡ್ಡ ಕಾರ್ ಇತ್ತು: ಅವರ ಮಗ, ಅವನೊಬ್ಬ ವಿದ್ಯಾರ್ಥಿ, ಮೋಟಾರು ಬೈಸಿಕಲ್ ಇಟ್ಟುಕೊಂಡಿದ್ದ; ಯಾವಾಗಲೂ ಅದನ್ನು ಮಿತಿಮೀರಿ ವೇಗವಾಗಿ ಬಿಡುತ್ತಿದ್ದ. ಅವರಿಗೆ ಒಬ್ಬಳೇ ಮಗಳು; ಅವಳಿಗೇ ಮದುವೆಯಾದದ್ದು.

ಇನ್ನುಳಿದ ನೆರೆಮನೆಯವರ ವಿಚಾರ?

'ಬೆಳಗಿನ ಬೆಡಗಿ' ಹಬ್ಬಿದ್ದ ಬೇಲಿಯಾಚೆಯ ಹಿಂಭಾಗದ ಮನೆಯ ವಿಚಾರವಾಗಿ ಜೂಡಿಗೆ ಹಲವೊಮ್ಮೆ ಕುತೂಹಲ ಹುಟ್ಟಿತು ಅವಳ ಮನೆಯ ಚಪ್ಪಟೆ ಮೇಲುಚಾವಣಿಯಿಂದ ಅವರ ಮನೆಯ ತೋಟದ ಒಳಭಾಗವೆಲ್ಲ

ಬರುತ್ತಿತ್ತು. ಆಗ ಕೆಳಮಟ್ಟದಲ್ಲಿದ್ದ ಆ ಜನ ಈಗ ಹರಿಜನರು ಎಂದು ಹೆಸರಾಗಿದ್ದಾರೆ; ಅವರಿಗೆ ಬ್ರಾಹ್ಮಣರನ್ನು ಕಂಡರೆ ಆಗದು ; ತಮ್ಮದನ್ನು ತಾವು ಹಿಂದಕ್ಕೆ ಪಡೆಯಲು ಯತ್ನಿಸುತ್ತಿದ್ದಾರೆ. ಹೀಗಾಗಿ ಭಯಂಕರ ಜಗಳಗಳೂ ಆಗಿವೆ; ಕೆಲವು ವೇಳೆ ಜನ ಕೊಲೆಯೂ ಆಗಿದ್ದಾರೆ.

'ಬೆಳಗಿನ ಬೆಡಗಿ' ಹಬ್ಬಿದ್ದ ಬೇಲಿಯ ಆಚೆಇದ್ದ ಕುಟುಂಬದ ವಿಚಾರವಾಗಿ ಜೂಡಿ ತನ್ನ ತಂದೆಯನ್ನು ಪ್ರಶ್ನಿಸಿದಾಗ, ಅವರು ಆ ಕುಟುಂಬದವರು ಬ್ರಾಹ್ಮಣರೆಂದು ಹೇಳಿದರು. ಯಜಮಾನ ಸಂಸ್ಕೃತ ವಿದ್ವಾಂಸರು ; ಹಿಂದೂಗಳಲ್ಲದ ಜನರ ಪರಿಚಯವನ್ನು ಮಾಡಿಕೊಳ್ಳಲು ಆ ಮನೆಯವರಿಗೆ ಇಷ್ಟವಿತ್ತೊ ಇಲ್ಲವೋ ಜೂಡಿಯ ತಂದೆಗೆ ಹೇಳಬರುವಂತಿರಲಿಲ್ಲ.

"ಜೂಡಿ, ಅವರು ಒಂದುವೇಳೆ ಹಳೆಯ ಸಂಪ್ರದಾಯದವರಾದರೆ, ನಿನ್ನನ್ನಾಗಲಿ ನನ್ನನ್ನಾಗಲಿ ಅವರು ಮನೆಯೊಳಕ್ಕೆ ಸೇರಿಸರು. ಅವರ ಭಾಗಕೆ ನಾವು ಹರಿಜನರ ಸಮಾನ. ಅವರ ಮನೆಯನ್ನು ನಾವು ಹೊಲಸು ಮಾಡಿದೆವು ಎಂದು ಅವರು ಭಾವಿಸುವರು" ಎಂದು ಜೂಡಿಯ ತಂದೆ ತಿಳಿಸಿದರು.

"ಏನೋ ತುಂಬ ಅವಿವೇಕವಾಗಿ ಕಾಣುತ್ತೆ," ಎಂದಳು ಜೂಡಿ.

ಅವಳ ತಂದೆ ಹೇಳಿದರು, "ಆದರೆ ನಿಜವಾಗಿ ಕೆಲವು ವಿಚಾರಗಳಲ್ಲಿ ನಾವು ಕೊಳಕೇ ಸರಿ. ನಾವು ಹೊರಗಡೆ ಹಾಕಿಕೊಳ್ಳುವ ಜೋಡುಗಳನ್ನೇ ಮನೆಯೊಳಗೂ ಹಾಕಿಕೊಳ್ಳುತ್ತೇವೆ. ನೋಡು, ಜೂಡಿ ! ನಿನ್ನ ಚಪ್ಪಲಿಗಳ ಮೇಲೆ ಅದೆಷ್ಟೊಂದು ಧೂಳು ಕೂತಿದೆ ! ನೀರಿನಲ್ಲಿ ಕುಳಿತು ಒಮ್ಮೆ ಮೈತೊಳೆದ ನೀರಿನಿಂದಲೇ ಮತ್ತೆ ಸ್ನಾನಮಾಡುತ್ತೇವೆ ; ನಾವು ಮಾಂಸ ಎಂದು ತಿನ್ನುವುದು, ನಿಜವಾಗಿ ಸತ್ತಪ್ರಾಣಿಗಳು."

"ತರಕಾರಿ ಪಲ್ಯ, ಬದನೆಕಾಯಿ–ಟೊಮ್ಯಾಟೊ–ಮೊಸರು–ತುಂಬ ಪಪ್ಪು–ಉಪ್ಪಳ–ಎಲ್ಲೋ ಒಂದೊಂದುಸಲ ಕೋಳಿಮರಿ, ಇಷ್ಟು ಇದ್ದುಬಿಟ್ಟರೆ ಮಾಂಸ ತಿನ್ನುವುದೇ ಬೇಕಿಲ್ಲ ನನಗೆ."

ಅದಕ್ಕೆ ಅವಳ ತಂದೆಹೇಳಿದರು, "ಕೋಳಿಮರಿಯೂ ಮಾಂಸವೆ ; ಮೊಟ್ಟೆಗಳೂ ಮಾಂಸ. ನಿಜವಾದ ಬ್ರಾಹ್ಮಣ ಮೊಟ್ಟೆಗಳನ್ನು ತಿನ್ನುವುದಿಲ್ಲ."

'ಓಹೋ, ಹಾಗಿದ್ದರೆ ನನ್ನನ್ನು ಆ ಮನೆಯೊಳಕ್ಕೆ ಸೇರಿಸುವುದಿಲ್ಲ,' ಎಂದುಕೊಂಡಳು ಜೂಡಿ. ಅವಳು ಆ ವಿಚಾರವಾಗಿ ಯೋಚಿಸಿದಷ್ಟೂ ಬೇಲಿಯಾಚೆಯ ಆ ಮನೆಯ ಒಳಗಡೆ ಹೇಗಿದೆಯೋ ಎಂದು ಅವಳಿಗೆ ಅಷ್ಟೂ ಅಷ್ಟು ಕುತೂಹಲವಾಗುತ್ತಿತ್ತು. ಅವಳ ಗೆಳತಿಯರಲ್ಲಿ ಹಲವರ ಮನೆಗಳು

ಇರುವುವು ; ಅಲ್ಲಿನ ದೊಡ್ಡವರೆಲ್ಲಾ ಅತ್ತೆಮಾವಂದಿರು, ಕಕ್ಕಕಕ್ಕಿಯರು, ಇಲ್ಲವೋ ಅಜ್ಜಅಜ್ಜಿಯರು ; ಒಮ್ಮೊಮ್ಮೆ ಹಣ್ಣುಹಣ್ಣು ಮುದುಕಿ ಒಬ್ಬಳಿರುವಳು, ಅವಳನ್ನು ಕಂಡರೆ ಪ್ರತಿಯೊಬ್ಬರಿಗೂ ಏನೋ ದಿಗಿಲು. ಇಂಥ ಮನೆಗಳಿಗೆ ಹೋಗುವುದೂ ಒಂದು ರೀತಿ ವಿನೋದವೇ ಆದರೂ ಅವೆಲ್ಲಾ ಬಹುಮಟ್ಟಿಗೆ ಹಳೆಯ ಮಾದರಿಯ ಮನೆಗಳು. ಅವಳ ಸ್ನೇಹಿತರಲ್ಲಿ ಬಹುಮಂದಿ ಬಿಡಿಬಿಡಿಯಾದ ಸಣ್ಣ ಸಣ್ಣ ಮನೆಗಳಲ್ಲಿಯೋ, ಇಲ್ಲ ಮಹಡಿಮನೆಗಳ ಮಹಡಿಗಳಲ್ಲಿಯೋ ವಾಸಮಾಡುತ್ತಿದ್ದರು. ಆದರೆ ಸೆಕೆಯ ದಿನಗಳಲ್ಲಿ ಆ ಮಹಡಿಗಳಲ್ಲಿ ವಿಪರೀತ ಸೆಕೆ.

ಸೆಕೆಗಾಲದ ರಜಾದಿನಗಳನ್ನು ಬೆಟ್ಟದಮೇಲೆ ಕಳೆದು ಅವಳು ಶಾಲೆಗೆ ಹಿಂದಿರುಗಿದಾಗ, ಅಲ್ಲಿ ಅವಳ ತರಗತಿಯಲ್ಲಿ ಬೇರೆಯ ಇಂಗ್ಲೀಷ್ ಹುಡುಗಿಯರು ಯಾರೂ ಇರಲಿಲ್ಲ. ಅವಳಿಗಿಂತ ಚಿಕ್ಕವರೇನೋ ಕೆಲವರಿದ್ದರು ; ಜೂಡಿಗಾದರೆ ಈಗ ಹನ್ನೊಂದು ವರ್ಷ ; ಅವಳ ಸರಿಪ್ರಾಯದವರು ಬೆಟ್ಟದ ಮೇಲಿನ ಶಾಲೆಗಳಿಗೆ ಹೋಗಿ ಸೇರಿಕೊಂಡಿದ್ದರು, ಇಲ್ಲವೆ ಅವರ ತಂದೆತಾಯಿ ಭಾರತವನ್ನು ಬಿಟ್ಟು ಸ್ವದೇಶಕ್ಕೆ ಮರಳಿದ್ದರು. ಜೂಡಿಯ ತಂದೆ ತಾಯಿ ಹಾಗೆ ಹಿಂದಿರುಗಿ, ಅವಳು ತನ್ನ ಹಿರಿಯ ಅಣ್ಣ ಜಾನನನ್ನು ಮತ್ತೆ ನೋಡಲು ಇನ್ನೂ ಒಂದು ವರ್ಷ ಆಗಬೇಕಾಗಿತ್ತು. ಭಾರತದಲ್ಲಿ ಇರುವುದೆ ಒಂದು ವಿಧದಲ್ಲಿ ತಮಾಷೆಯಾಗಿತ್ತು. ಭಾರತ ಭಾರತೀಯರಿಗೆ ಸೇರಿದ್ದು ; ಅಲ್ಲಿ ಫ್ರೆಂಚರು, ಜರ್ಮನರು, ಆಫ್ರಿಕದ ಜನರು ಎಷ್ಟರಮಟ್ಟಿಗೆ ಪರಕೀಯರೋ ಬ್ರಿಟಿಷ್ ಜನರೂ ಅಷ್ಟೇ ಪರಕೀಯರು. ಆದರೂ, ಬ್ರಿಟಿಷರನ್ನು ಕಂಡರೆ ಭಾರತೀಯರಿಗೆ ಹೆಚ್ಚು ವಿಶ್ವಾಸವೆಂಬಂತೆ ಕಾಣುತ್ತಿತ್ತು ಬೀದಿಗಳ ಮೂಲೆಗಳಲ್ಲೀ ಅಂಗಡಿಗಳ ಮುಂಭಾಗದಲ್ಲೂ ಇಂಗ್ಲಿಷಿನ ಪ್ರಕಟನೆಗಳಿದ್ದುವು; ಅವಳ ತಂದೆ ಓದುತ್ತಿದ್ದುದು, ಪೂರ್ತಿ ಇಂಗ್ಲಿಷ್ ಪತ್ರಿಕೆಯಾದ 'ಹಿಂದೂ'. ಚಿತ್ರಗಳಿರುತ್ತಿದ್ದ ಕೆಲವು ಭಾನುವಾರದ ಸಂಚಿಕೆಗಳನ್ನು ಬಿಟ್ಟರೆ, ಒಟ್ಟಿನಮೇಲೆ ಆ ಪತ್ರಿಕೆ ಸಪ್ಪೆಯೆಂದು ಜೂಡಿಗೆ ಎನಿಸಿತು ; ಹಾಗೆ ನೋಡಹೊರಟರೆ, ದೊಡ್ಡವರು ಇಷ್ಟಪಡುತ್ತಿದ್ದ ಪತ್ರಿಕೆಗಳೆಲ್ಲ ಸಪ್ಪೆಯೇ.

ಎಷ್ಟೋ ವಿಷಯಗಳನ್ನು ಅರ್ಥಮಾಡಿಕೊಳ್ಳುವುದೇ ಕಷ್ಟವಾಗಿತ್ತು ; ಉದಾಹರಣೆಗೆ, ಬ್ರಾಹ್ಮಣರ ವಿಚಾರ. ಹಿಂದಿನ ಕಾಲದಲ್ಲಿ ಪ್ರತಿಯೊಬ್ಬರಿಗೂ ಅಪ್ಪಣೆಮಾಡುತ್ತಿದ್ದವರು ಅವರು. ತಾವು ಮಾಡಲಾಗದೆ ಬಿಟ್ಟ ಸಾಧಾರಣ ಕೆಲಸಗಳನ್ನು ಮಾಡಲೇಬೇಕಾಗಿದ್ದ ಕೀಳುಜಾತಿಯ ಜನರನ್ನು ತಾವು ಮುಟ್ಟಿಸಿಕೊಳ್ಳಲು ಕೂಡದು ಎನ್ನುವಷ್ಟು ಪವಿತ್ರರು ಅವರು ಎಂಬಂತೆ ತೋರಿ

(ಶೀತ ಕಪಾಟು), ಇವೇ ಮುಂತಾದ ಸೌಕರ್ಯಗಳೂ ಅವರಲ್ಲಿ ಕಡಿಮೆ.

ಮರುದಿವಸ ಶುಕ್ರವಾರ. ಇನ್ನು ಎರಡು ದಿನ ಶಾಲೆ ಇಲ್ಲ ; ಆದರೆ, ಅಬ್ಬಾ, ಎಷ್ಟೊಂದು ಮನೆಯ ಅಭ್ಯಾಸ! ಜೂಡಿ ಮೊದಲು ಚರಿತ್ರೆಯ ಪಾಠದಿಂದ ಪ್ರಾರಂಭಮಾಡಿದಳು ; ಆದರೆ ಅದೆಲ್ಲಾ ಒಂದು ಕಿವಿಯಿಂದ ಹೊಕ್ಕು ಇನ್ನೊಂದು ಕಿವಿಯಿಂದ ಹೊರಟುಹೋಯಿತು. ಆಗ ದಾದಿ ಕಿರಿಚಿದ್ದು ಅವಳಿಗೆ ಕೇಳಿಸಿತು– ಅದು ಏನು ಸಮಾಚಾರವೋ ? ಹಾವೋ ಅಥವಾ ಬೇರೆ ಏನಾದರೂ ಭಯಂಕರವಾಗಿದ್ದೇ ಇದ್ದಿರಲಾರದು. ಅಲ್ಲವೆ? ಬಟ್ಟೆ ಒಗೆಯುವ ದಾದಿ ವಾಸಕಿಯೂ ಕಿರಿಚತೊಡಗಿದಳು. ಜೂಡಿ ಜಗ್ಗನೆ ಎದ್ದು ನಿಂತು, ಏನೆಂದು ಅವರನ್ನು ಕೇಳಿದಳು. ಬೆನ್ ಅವರ ಕೈಯಿಂದ ತಪ್ಪಿಸಿಕೊಂಡುಬಿಟ್ಟಿದ್ದ ! ಅವನು ತೋಟದಲ್ಲಿಯೇ ಆಡಿಕೊಳ್ಳುತ್ತಿದ್ದವನು ಇದ್ದಕ್ಕಿದ್ದ ಹಾಗೆಯೆ ಮಂಗಮಾಯವಾಗಿಬಿಟ್ಟಿದ್ದ ! ಜೂಡಿ ಸುಡುತ್ತಿದ್ದ ಬೀದಿ, ಓಡಿಹೋಗಿ ನೋಡಿದಳು ; ಅಲ್ಲಿ ಯಾರೂ ಇಲ್ಲ ಬೆನ್ ಮೊದಲೇ ಇಲ್ಲ ಅವಳಿಗೆ ತಟ್ಟನೆ ಆ ಬೇಲಿಯ ಮೂಲೆ ನೆನಪಿಗೆ ಬಂತು– ಹೌದು, ಅಲ್ಲಿ ಹೂವನ್ನೆಲ್ಲ ತುಳಿದುಹಾಕಿತ್ತು ! ಅವಳು ಒಂದು ಕುರ್ಚಿಯಮೇಲೆ ಹತ್ತಿನಿಂತು, ಬೇಲಿಯಮೇಲಿನಿಂದ ನೋಡಿದಳು. ಚೆಲುವಾದ ಆ ಇನ್ನೊಂದು ತೋಟದಲ್ಲಿ ಬೆನ್ ಇದ್ದೇ ಇದ್ದ ; ಅವನ ಕೈ ಮನೆಯಾಕೆಯ ಕೈಯಲ್ಲಿ ಹುದುಗಿತ್ತು ; ಜಾಜಿಯ ಹೂವಿನಂತೆ ಕೆನೆಬಿಳುಪಿನ ಬಣ್ಣದ, ಅಂಚಿನ ಉದ್ದಕ್ಕೂ ಚಿನ್ನದ ಜರಿಯ ತೊಡತೊಡಕಾದ ಚಿತ್ರನಮೂನೆ ನೆಯ್ದಿದ್ದ, ತಮ್ಮ ಮನೋಹರವಾದ ಸೀರೆಗಳಲ್ಲಿ ಒಂದನ್ನು ಉಟ್ಟಿದ್ದರು ಆಕೆ. ಬೆನ್ನನ ಎತ್ತರಕ್ಕೆ ಆಕೆ ಬಗ್ಗಿದಾಗ, ಆಕೆಯ ಕಿವಿಯೋಲೆಯ ವಜ್ರಗಳು ಬಿಸಿಲಿನಲ್ಲಿ ಫಳಫಳನೆ ಹೊಳೆದವು. ಆಕೆ ತಮ್ಮ ಮನೆಯ ಮಾವಿನ ಮರಗಳಲ್ಲಿ ಒಂದರ ಕಡೆಗೆ ಕೈತೋರಿಸುತ್ತಿದ್ದರು ಬೆನ್ ಜೋರಾಗಿ ತಲೆಯಲ್ಲಾಡಿಸುತ್ತಿದ್ದ. ಅವನು ಬಹು ಮೋಟಾದ ನೀಲಿಯ ಪ್ಯಾಂಟು (Pant) ಧರಿಸಿದ್ದ ; ಜೋಡು ಹಾಕಿಕೊಂಡಿರಲಿಲ್ಲ. ಜೋಡುಗಳನ್ನು ಹಾಕಿಕೊಳ್ಳುವುದೆಂದರೇ ಅವನಿಗೆ ಆಗುತ್ತಿರಲಿಲ್ಲ ; ಕಾದ ಮಣ್ಣು ಅವನನ್ನು ಸುಡುತ್ತಲೇ ಇರಲಿಲ್ಲವೆಂದು ಕಾಣುತ್ತದೆ, ಅವನ ಅಡಿಗಳು ಈಹೊತ್ತಿಗೆ ಅಷ್ಟೊಂದು ಜಡ್ಡುಗಟ್ಟಿಹೋಗಿದ್ದುವು.

ಮನೆಯ ಯಜಮಾನಿ ಒಂದು ಮಾವಿನ ಹಣ್ಣನ್ನು ಕೈಗೆ ಎಟುಕಿಸಿಕೊಂಡು ಕಿತ್ತರು–ಪೂರ್ತಿ ಹೊಂಬಣ್ಣವಾಗಿ, ಅಷ್ಟು ಸುಂದರವಾಗಿತ್ತು ಅದು. ಅವರು ತಮ್ಮ ಸೀರೆಯ ಸೆರಗಿನ ಕೊನೆಯೊಂದನದ್ನು ಬಿಚ್ಚಿ, ಒಂದು ಚಿಕ್ಕ ಬೆಳ್ಳಿಯ ಚಾಕುವನ್ನು ಹೊರತೆಗೆದರು. ಅವರು ಮಾವಿನ ಹಣ್ಣನ್ನು ಕೊಯ್ದುಕೊಟ್ಟರು ;

ಬಹುಮಟ್ಟಿಗೆ ಹೆಚ್ಚಿನ ಅಲಂಕಾರವಿಲ್ಲದೆ ಸರಳವಾಗಿರುತ್ತಿದ್ದುವು; ಸಾಮಾನ್ಯವಾಗಿ ಗೋಡೆಗೆ ತಿಳಿಗೆಂಪಿನ ಇಲ್ಲವೆ ನೀಲಿಯಬಣ್ಣ ಬಳಿದಿರುತಿತ್ತು; ಛಾಯಾ ಚಿತ್ರಗಳು, ಒಂದು ಕ್ಯಾಲೆಂಡರು, ಒಂದೋ ಎರಡೋ ಬಣ್ಣದ ಅಂಚಿನ ಚಿತ್ರಗಳು ಇರುತ್ತಿದ್ದುವು; ಅವುಗಳಲ್ಲಿ ಅವನು ನಿಜವಾದ ಚಿಕ್ಕಹುಡುಗನಿಗೆ ತಕ್ಕಹಾಗೆ ಮುದ್ದುಮುದ್ದಾಗಿ ತಮಾಷೆಮಾಡುತ್ತಿರುವ ಹಾಗೆ ಕಾಣುತ್ತಿರುವನೇ ಹೊರತು, ಮೊದ್ದುಮೊದ್ದಾಗಿ ಎಂದಿಗೂ ಅಲ್ಲ. ಇತರ ದೇವ ದೇವಿಯರ ಚಿತ್ರಗಳು ಕೆಲವುವೇಳೆ ಭಯಂಕರವಾಗಿರುತ್ತಿದ್ದುವು. ಈ ದೊಡ್ಡ ಮನೆಯಲ್ಲಿ ಇನ್ನೂ ದೊಡ್ಡದೊಡ್ಡ ಚಿತ್ರಗಳೇ ಇರುವುವೋ? ಅವರ ಬಳಿ ರೇಡಿಯೋ ಇದ್ದೀತೋ? ಅದು ಹಾಗಿರಲಿ, ಮನೆಯ ಯಜಮಾನಿಗೆ ಇಂಗ್ಲಿಷ್ ಮಾತಾಡಲು ಬರುವುದೋ?

ಸೆಕೆಗಾಲದಲ್ಲಿ ಮಾಲಿ ಹೆಚ್ಚಿನ ಹೊತ್ತೆಲ್ಲಾ ನೀರು ಹಾಕುತ್ತಿರುವನು. ಶಾಲೆಯಿಂದ ಹಿಂದಿರುಗಿದಮೇಲೆ ಆ ಕೆಲಸದಲ್ಲಿ ಕೂಡ ನೆರವಾಗಲು ಜೂಡಿಗೆ ಇಷ್ಟವಿಲ್ಲ. ಅವಳಿಗೆ ಬೇಕಾಗಿದ್ದುದೆಂದರೆ ನಲ್ಲಿಯ ಕೆಳಗೆ ಕುಳಿತು, ಸ್ನಾನಮಾಡಿ, ಪಂಕದ ಕೆಳಗೆ ಕುಳಿತು ಲೋಟವಾದಮೇಲೆ ಲೋಟದಂತೆ ನಿಂಬೆಯ ಪಾನಕ ಕುಡಿಯುವುದು. ಕಡುಗೆಂಪಿನ ಹೂ ಬಿಡುವ ದೊಡ್ಡಬಿಂದಿಗೆ ಗಿಡಗಳ ಗುಂಪು ಒಂದನ್ನು ಬೆಳಸಿದ್ದ ಮಾಲಿ; ಅದನ್ನು ಕಂಡರೆ ಅವನಿಗೆ ಪೂರಾ ಹೆಮ್ಮೆ ಅಲ್ಲಾ, ಈ ದೊಡ್ಡ ಬಿಂದಿಗೆಗಿಡಗಳು ಲಂಡನ್ನಿನಲ್ಲಿ ಎಷ್ಟು ಚೆನ್ನಾಗಿ ಬೆಳೆಯುತ್ತವೆಯೋ ಮದರಾಸಿನಲ್ಲಿಯೂ ಅಷ್ಟೇ ಚೆನ್ನಾಗಿ ಬೆಳೆಯುವುವಲ್ಲ, ಎಂಥ ಜಾಣ ಗಿಡಗಳು ಈ ದೊಡ್ಡ ಬಿಂದಿಗೆಗಳು, ಅಂತೂ ಒಳ್ಳೇ ತಮಾಷೆಯಾಗಿದೆ ಎಂದು ಅಚ್ಚರಿಗೊಳ್ಳುವಳು ಜೂಡಿ. ಇದ್ದಕ್ಕಿದ್ದ ಹಾಗೆ ಎಲ್ಲಿಂದಲೋ ಒಂದು ಆಡು ಬಂತು, ಈ ದೊಡ್ಡ ಬಿಂದಿಗೆಗಿಡಗಳನ್ನು ತಿನ್ನಲು ಬಾಯಿಹಾಕಿತು, ಮಾಲಿಯೂ ಪರಿಚಾರಕನೂ ಆಡಿನಹತ್ತಿರ ನುಗ್ಗಿಹೋದರು, ಅರಚಿಕೊಂಡರು. ಕೊನೆಗೆ 'ಷೂ ಷೂ' ಗದ್ದಲಮಾಡಿ ಬೆದರಿಸಿ ಅದನ್ನು ಆಚೆಗೆ ಓಡಿಸಿದರು ಬೆದರಿದ ಆಡು ದಿಕ್ಕು ಕಾಣದಂತಾಗಿ 'ಬೆಳಗಿನ ಬೆಡಗಿ' ಹಬ್ಬಿದ್ದ ಬೇಲಿಯೊಳಕ್ಕೆ ಡಿಕ್ಕಿಹೊಡೆದು ನುಗ್ಗಿ, ಅದರ ತುಸುಭಾಗವನ್ನು ಅರೆವಾಸಿ ಹಾರಿಸಿಬಿಟ್ಟಿತು. "ಇನ್ನು ಅದನ್ನು ಸರಿಪಡಿಸುವುದಕ್ಕೆ ಅವರಿಗೆ ಎಷ್ಟುಕಾಲ ಹಿಡಿಯುವುದೋ, ಪಾಪ" ಎಂದು ಜೂಡಿಯ ತಾಯಿ ಸ್ವಲ್ಪ ಬೇಸರಗೊಂಡೇ ನುಡಿದರು. ಬೇಸಗೆಯಲ್ಲಿ ಹೆಚ್ಚಿನ ಕೆಲಸ ಮಾಡಲು ಯಾರಿಗೂ ಬೇಕಿಲ್ಲ ನಿಜವಾದ ಬೇಸಗೆಕಾಲದಲ್ಲಿ ಇಂಗ್ಲಿಷ್ ಜನಕ್ಕೆ ಎಷ್ಟು ತೊಂದರೆಯಾಗುವುದೋ ಭಾರತದ ಜನಕ್ಕೂ ಅಷ್ಟೇ ತೊಂದರೆ; ಜೊತೆಗೆ, ಪಂಕಗಳು, ಸಾಮಾನುಗಳನ್ನು ತಣ್ಣಗಿಡುವ 'ರೆಫ್ರಿಜೆರೇಟರು'

ಕಾಯಿಗಳು ಬಿಟ್ಟಿದ್ದುವು ; ಅವು ಬಿಡಲು ಒಂದು ಗೊತ್ತಾದ ಕಾಲ ಏನೂ ಇಲ್ಲ, ವರ್ಷಗಾಲವೆಲ್ಲ ಬಿಡುವುವು. ಹಾಗೆ ಕಾಣ್ಮರೆಯಾಗಿದ್ದವುಗಳಲ್ಲಿ, ಮೊಟ್ಟೆ ಹೊದಿಸಿದ್ದ ಚಿಕ್ಕ ಮನೆ ಒಂದು ; ಅದರ ಮೇಲೆ ಕಲ್ಲಂಗಡಿ ಹಣ್ಣಿನ ಬಳ್ಳಿ ಹಬ್ಬಿತ್ತು. ಮನೆಯಮುಂದೆ ಹಸುವೊಂದಿತ್ತು ; ಶುಭ್ರವಾದ ಧೋತಿ ಉಟ್ಟಿದ್ದ ಒಬ್ಬನು ಅದರಮುಂದೆ ಕುಕ್ಕರಗಾಲು ಕುಳಿತು, ಮಂಡಿಗಳ ನಡುವೆ ಥಳಥಳ ಹೊಳೆಯುವ ಪಾತ್ರೆಯೊಂದನ್ನು ಇರುಕಿಸಿಕೊಂಡು, ಎಚ್ಚರಿಕೆಯಿಂದ ಹಾಲು ಕರೆಯುತ್ತಿದ್ದ. ಹಸುವಿನ ಪಕ್ಕದಲ್ಲಿ ಅದರ ಕರು ಕಾದಿತ್ತು ; ಅದನ್ನು ಹಾಲುಕುಡಿಯಲು ಬಿಡುತ್ತಿದ್ದುದು ಕಡೆಯಲ್ಲಿ. ಹಸು ಕರು ಎರಡೂ ಸೊಗಸಾದ ಬೆಳ್ಳಿಬೂದು ಬಣ್ಣದವು ; ಮದರಾಸಿನ ಬೀದಿಗಳಲ್ಲಿ ಅಲೆದಾಡುವ ಹಸುಗಳಿಗಿಂತ ಇವು ಬಹಳ ತೆಳ್ಳಗೆ ಕಾಣುತ್ತಿದ್ದುವು. ಈಗ ನಡುಬೇಸಗೆಯಾದ್ದರಿಂದ, ಅವಕ್ಕೆ ಹಸುರ. ಮೇವು ಏನೂ ಸಿಕ್ಕುತ್ತಿರಲಿಲ್ಲ ; ಹೆಚ್ಚಾಗಿ ನೆಲ್ಲುಹುಲ್ಲನ್ನೆ ತಿಂದು ಅವು ಬದುಕಬೇಕಾಗಿತ್ತು ; ಆದರೆ ಈ ಮನೆಯಾಕೆ ಸಾಕಿದ್ದ ಹಸುಗಳಿಗೆ ನಿಜವಾದ ಒಣಹುಲ್ಲು ಮಾತ್ರವಲ್ಲದೆ ತೋಟದ ತರಕಾರಿಗಳ ಸೊಪ್ಪೂ ಸಿಕ್ಕುತ್ತಿತ್ತು. ಹಾಲುಕರೆಯುವವನು ಕರುವಿಗೂ ಧಾರಾಳವಾಗಿ ಕುಡಿಯಲು ಹಾಲುಬಿಟ್ಟು ಕರೆಯುವುದನ್ನು ನಿಲ್ಲಿಸಿದ. ಮನೆಯಾಕೆ ಹಸುವಿನ ಹತ್ತಿರಕ್ಕೆ ಹೋಗಿ ಅದನ್ನು ನೇವರಿಸಿದರು ; ಹಸು ಕರುನೆಕ್ಕುವುದನ್ನು ನಿಲ್ಲಿಸಿ, ತನ್ನ ದೊಡ್ಡ ಕಣ್ಣುಗಳನ್ನು ಅರಳುಸಿ, ಅವರ ಕಡೆಗೆ ಪ್ರೀತಿಯಿಂದ ದೃಷ್ಟಿತಿರುಗಿಸಿತು. ಬೆನ್ ಮಾವಿನ ಹಣ್ಣನ್ನು ತಿಂದು ಮುಗಿಸಿದ್ದ ; ಆದರೆ ಅವನ ಮುಖವೆಲ್ಲಾ ಅಂಟಂಟಾಗಿತ್ತು ; ಮುಖವೇನು, ಮೈಯೆಲ್ಲಾ ಅಂಟಂಟಾಗಿತ್ತು. ಅಲ್ಲೇ ಮೂಲೆಯಲ್ಲಿ ಒಂದು ನಲ್ಲಿಯಿತ್ತು. "ತೊಳೆಯಬಹುದಾ?" ಎಂದು ಕೇಳಿದಳು ಜೂಡಿ, ಸ್ವಲ್ಪ ಸಂದೇಹಪಡುತ್ತ.

ಮನೆಯಾಕೆ ನಕ್ಕುಬಿಟ್ಟರು. "ಓಹೋ, ಅಗತ್ಯವಾಗಿ! ನಿನ್ನ ತಮ್ಮ ಒಂದು ಶುಭದಿನದಲ್ಲೇ ನನ್ನನ್ನು ನೋಡಲು ಬಂದಿದ್ದಾನೆ. ಶುಕ್ರವಾರ ಶುಭದಿನ, ಗೊತ್ತು ತಾನೆ ?" ಜೂಡಿ ತಲೆಯಲ್ಲಾಡಿಸಿದಳು. ಅವಳ ಶಾಲೆಯ ಗೆಳತಿಯರೆಲ್ಲಾ ಹಾಗೆಯೆ ಭಾವಿಸಿದ್ದರು. ಅವಳು ಬೆನ್ನನ ಮುಖ ಮೈಗಳ ಅಂಟನ್ನೆಲ್ಲಾ ತುಸು ತೊಳೆದು, ತನ್ನ ಲಂಗದ ಒಂದು ಕೊನೆಯಿಂದ ಒರಸಿದಳು.

"ಈಗ ಸ್ವಲ್ಪ ಕಾಫಿ ತೆಗೆದುಕೊಳ್ಳೋಣ," ಎಂದರು ಮನೆಯಾಕೆ.

ಜೂಡಿ ಹಿಂದೆಗೆದಳು, ತನ್ನ ಉಡುಪನ್ನು ಬಗ್ಗಿ ನೋಡಿಕೊಂಡಳು ; ಅದು ಇನ್ನು ಸ್ವಲ್ಪ ಚೊಕ್ಕಟವಾಗಿದ್ದರೆ ಚೆನ್ನಿರುತ್ತಿತ್ತು ಎಂದುಕೊಂಡಳು. ಆದರೆ

ಅದನ್ನು ತಿನ್ನುವಾಗ ಬೆನ್ನನ ಮುಖ ಅದರಲ್ಲಿ ಹೂತು ಹೋಯಿತು ; ತಿಳಿ ಹೊಂಬಣ್ಣದ ರಸ ಅವನ ಹೊಟ್ಟೆಯಮೇಲೆಲ್ಲ ಧಾರಾಕಾರವಾಗಿ ಸುರಿಯತೊಡಗಿತು. ಇದನ್ನೆಲ್ಲ ಕಂಡು ದಾದಿಗೆ ಚಿಂತೆಗಿಟ್ಟುಕೊಂಡಿತು. ಆಗ ಜೂಡಿಗೆ ತಾನು ಅವನ ಹತ್ತಿರಕ್ಕೆ ಹೋಗಬೇಕೆನಿಸಿತು. ತಾನು ನುಸಿದು ಹೋಗುವಷ್ಟುಮಾತ್ರ ಸಂದುಬಿಟಿತ್ತು ಬೇಲಿಯಲ್ಲಿ. ಅವಳು ಆಗ ಹತ್ತಿಯ ಮೇಲುತೊಡಪನ್ನು ಮಾತ್ರ ಹಾಕಿಕೊಂಡಿದ್ದಳು ; ಅದರಿಂದಾಗಿ ಅವಳ ತೋಳುಗಳೂ ಬೆನ್ನಿನ ಬಹುಭಾಗವೂ ಬತ್ತಲೆಯಾಗಿದ್ದವು ; ಅವಳ ಕಂದುಬಣ್ಣದ ಚರ್ಮದಮೇಲೆ ಅವಳ ಕೂದಲು ಬಿಳಿಚಿಕೊಂಡಂತೆ ಕಾಣುತ್ತಿತ್ತು.

ಬೇಲಿಯ ದೂರದ ಒಂದುಪಕ್ಕದಲ್ಲಿ ಬೆಳೆದಿದ್ದ ಬಾಳೆಯ ಗಿಡದ ಕೆಳಗಿನಿಂದ ಅವಳು ಸ್ವಲ್ಪ ಎಚ್ಚರಿಕೆಯಿಂದಲೆ ಮುಂದಕ್ಕೆ ಬಂದಳು ; ಅಲ್ಲೇ ಮೂಲೆಯಲ್ಲಿ ಒಂದು ಕಡೆ ಕೆಂಪು ಮತ್ತು ನೇರಿಳೆ ಬಣ್ಣದ ಚುಕ್ಕಿಗಳಿದ್ದ ಉದ್ದನೆಯ ಎಲೆಗಳ ಅಂದವಾದ ಗಿಡವೊಂದು ಇತ್ತು, ಅದು ಇವರ ಮನೆಯಕಡೆಯಿಂದ ಕಣ್ಣಿಗೆ ಬೀಳುತ್ತಿರಲಿಲ್ಲ. ಅವಳನ್ನು ಮನೆಯಾಕೆ ಕಂಡಾಗ, ಅವರು ಎರಡು ಕೈಗಳನ್ನೂ ಜೋಡಿಸಿ ನಮಸ್ಕಾರ ಮಾಡಿದರು ; ಆಕೆ ಉಂಗುರಗಳನ್ನು ಧರಿಸಿದ್ದರು, ಅವುಗಳಲ್ಲಿ ಒಂದಕ್ಕೆಸೊಗಸಾದ ಚಪ್ಪಟೆ ಮುಖದ ವಜ್ರ ಕೆತ್ತಿತ್ತು. ಬಳಿಕ, ಆಕೆ, "ನೀನು ಬಂದು ನನ್ನನ್ನ ನೋಡುತ್ತಿ ಅಂತ ತುಂಬ ಆಸೆಪಡುತ್ತಿದ್ದೆ ನಾನು" ಎಂದು ಸ್ವಲ್ಪ ತಗ್ಗಿನ ದನಿಯಲ್ಲಿ, ಸ್ಪಷ್ಟವಾಗಿ, ನುಡಿದರು.

"ಓ, ನನಗೆ ಗೊತ್ತಿರಲಿಲ್ಲ. ನಾನೂ ಏನು ಯೋಚಿಸುತ್ತ ಇದ್ದೆ ಅಂದರೆ......" ಎಂದು ಜೂಡಿ ತಡವರಿಸಿದಳು. ತಾನು ಏನು ಯೋಚಿಸುತ್ತಿದ್ದೆ ಎನ್ನುವುದು ಅವಳಿಗೆ ಪೂರ್ತಿಯಾಗಿ ಅರಿವಿಗೆ ಬರಲಿಲ್ಲ.

"ನಿಮ್ಮ ಮನೆಯ ಮಾಳಿಗೆಯಮೇಲೆ ನಾನು ನಿನ್ನನ್ನ ನೋಡಿದ್ದೇನೆ. ಅಲ್ಲಿಗಿಂತ ಇಲ್ಲಿ ತಣ್ಣಗಿದೆ, ಅಲ್ಲವಾ?" ಎಂದರು ಯಜಮಾನಿ.

ಆಗತಾನೆ ನೀರುಹಾಕಿದ್ದರಿಂದ ತೇವವಾಗಿದ್ದ ಹುಲ್ಲಿನಮೇಲೆ ತನ್ನ ಬರಿದಾಗಿದ್ದ ಕಾಲ ಬೆರಳುಗಳನ್ನು ಹರಡುತ್ತ ಜೂಡಿ ಹೇಳಿದಳು. "ಒಳ್ಳೇ ಸೊಗಸಾಗಿದೆ."

ಮನೆಯೊಳಗಿದ್ದರೆ ಎಷ್ಟೋ ವಿಷಯ ಕಣ್ಣಿಗೆ ಬೀಳುತ್ತಿರಲಿಲ್ಲ : ಅದಕ್ಕೆ ಅರ್ಧ ಕಾರಣ, ಕುಳ್ಳಾದ ಕೆಲವು ತೆಂಗಿನಮರಗಳು ಒಂದು ತೆರೆಯಂತೆ ಅಡ್ಡವಾಗಿದ್ದುವು ; ಅವುಗಳ ತಾಳು ಕೆಲವು ಅಡಿ ಮಾತ್ರ ಎತ್ತರವಾಗಿದ್ದುವು, ಅಷ್ಟೇ ; ಅವುಗಳಲ್ಲಿ ಅದೇತಾನೆ ಮಾಗುತ್ತಿದ್ದ ಕಂದುಬೆರೆತ ಹೊಂಬಣ್ಣದ

ಜೂಡಿ ಹೇಳಿದಳು–"ಹೌದು, ನೀವು ಹೂವು ಕುಯ್ಯುವುದನ್ನು ನಾನು ನೋಡಿದೇನೆ. ನನಗೆ ಏನು ಆಶ್ಚರ್ಯ ಆಯಿತು ಅಂದರೆ–ನೀವು ಹೂವನ್ನ ಆಯ್ದು ಆಯ್ದು ಕುಯ್ಯುವಹಾಗೆ ಕಂಡಿತು."

ಅದಕ್ಕೆ ಯಜಮಾನಿ ಹೇಳಿದರು: "ಹೌದು, ಅವನ್ನ ನಾನು ಆಯ್ದು ಕುಯ್ಯವುದು ದಿಟ. ಒಂದೊಂದು ಹೂವಿಗೂ ಒಂದು ಅರ್ಥವಿದೆ. ನಿಮಗೆ ಇನ್ನೊಂದು ಬಟ್ಟಲು ಕಾಫಿ ಬೇಕೋ? ನಿಮ್ಮ ಹೆಸರು–?"

"ನಾನು ಜೂಡಿ, ಅವನು ಬೆನ್. ಬೆಂಜಮಿನ್ ಎನ್ನುವುದಕ್ಕೆ ಚಿಕ್ಕಹೆಸರು."

"ಬೆಂಜಮಿನ್" ಎಂದು ಉಚ್ಚರಿಸಿ, ಅದು ಒಂದು ತಮಾಷೆಯ ಹೆಸರೋ ಎಂಬಂತೆ ಮುಗುಳುನಗೆ ನಕ್ಕರು ಯಜಮಾನಿ. "ಹೌದು. ಆ ಹೆಸರು ನಾನು ಕೇಳಿಬಲ್ಲೆ. ಬೆಂಜಮಿನ್ ಎಂಬ ಹೆಸರಿನ ಒಬ್ಬ ಭಾರಿ ಭಾರತೀಯ ವೈದ್ಯರಿದ್ದಾರೆ," ಎಂದು ಆಕೆ ಧಾರಾಳವಾಗಿ ಸಕ್ಕರೆ ಹಾಕಿ, ಕಾಫಿ ಬಗ್ಗಿಸತೊಡಗಿದರು. ಪರಿಚಾರಕ ಗರಿಗರಿಯಾದ ಕೆಲವು ಸಿಹಿರೊಟ್ಟಿಗಳನ್ನು ತಂದಿಟ್ಟ ಅವುಗಳ ರುಚಿ ಯಾವುದೋ ಜೂಡಿಗೆ ಗೊತ್ತಾಗಲಿಲ್ಲ. ಬೆನ್ ಹಾಯಾಗಿ ಕುಳಿತು ಅವುಗಳನ್ನು ತಿಂದು ಸವಿಯುತ್ತಿದ್ದ.

ಯಜಮಾನಿ ಹೇಳುತ್ತಲೇ ಹೋದರು : "ಶುಕ್ರವಾರ ಎಲ್ಲವೂ, ಪ್ರತಿಯೊಂದೂ, ಶುಭ್ರವಾಗಿರಬೇಕು ! ಹೂವುಗಳ ಹಾಗೆಯೆ ಬೆಳಗಿ ಹೊಳೆಯುತ್ತಿರಬೇಕು."

ಆಗ, ಇದ್ದಕ್ಕಿದ್ದ ಹಾಗೆಯೇ ಜೂಡಿಗಿಂತ ವಯಸ್ಸಿನಲ್ಲಿ ಸ್ವಲ್ಪ ದೊಡ್ಡವಳಾದ ಹುಡುಗಿಯೊಬ್ಬಳು ಮನೆಯೊಳಗಿಂದ ಓಡಿಬಂದು, ಜೂಡಿಯ ಎದುರುಗಡೆ ತಟಕ್ಕನೆ ನಿಂತಳು. ಕಡುಗೆಂಪು ಚುಕ್ಕಿಯ ಸೀರೆಯೊಂದನ್ನು ಉಟ್ಟಿದ್ದಳು ಅವಳು; ಅವಳು ಮುಡಿದಿದ್ದ ಹೂಗಳು ಹೊಸದಾಗಿದ್ದುವು "ಹಲೋ!" ಎಂದು ಸಂಬೋಧಿಸಿದಳು ಅವಳು.

"ಓಹೋ, ನೀನೇ !" ಎಂದಳು ಜೂಡಿ.

ಇಬ್ಬರ ಕಡೆಗೂ ತಿರುಗಿನೋಡಿದರು ಯಜಮಾನಿ. "ನೀನು, ಲಕ್ಷ್ಮಿ, ಒಬ್ಬರನ್ನೊಬ್ಬರು ಬಲ್ಲಿರಿ ಹಾಗಿದ್ದರೆ?" ಎಂದು ಪ್ರಶ್ನಿಸಿದರು ಅವರು.

"ಓಹೋ, ಹೌದು ಮತ್ತೆ. ಮುಳುಗಿ ಈಜುವುದರಲ್ಲಿ ಅವಳೂ ಗಟ್ಟಿಗಿತ್ತಿ–ಎತ್ತರದ ಹಲಗೆಯ ಮೇಲಕ್ಕೆ ಹೀಗೆ ಹೋಗಿ ಹಾಗೆ ದುಮುಕಿಬಿಡುತ್ತಾಳೆ ! ಆದರೆ ಅವಳು ಇಲ್ಲಿ ವಾಸಮಾಡುತ್ತಾಳೆ ಅಂತ ನನಗೆ ಗೊತ್ತಿರಲಿಲ್ಲ" ಎಂದಳು ಜೂಡಿ.

ಮನೆಯ ಯಜಮಾನಿ ಅದನ್ನು ಗಮನಿಸಲಿಲ್ಲ. ಆಕೆ ಮನೆಯ ಮುಂದಿದ್ದ ರಂಗೋಲಿಯ ಚಿತ್ರಗಳನ್ನು ದಾಟಿಕೊಂಡು ಅವರಿಬ್ಬರನ್ನೂ ವರಾಂಡಕ್ಕೆ ಕರೆದೊಯ್ದರು ; ದಕ್ಷಿಣ ಭಾರತದ ಹಿಂದೂ ಮಹಿಳೆಯರೆಲ್ಲಾ ಅಂಥ ರಂಗೋಲಿಯನ್ನು ತಮ್ಮ ಮನೆಯ ಮುಂದಿನ ಬಾಗಿಲಹೊರಗೆ ಬರೆದಿರುವರು. ಹೋದಕೂಡಲೆ ಆಕೆ ತಮ್ಮ ಎಕ್ಕಡಗಳನ್ನು ಒದೆದಹಾಗೆ ಕಳಚಿದ್ದು ಜೂಡಿಯ ಗಮನಕ್ಕೆ ಬಂತು ; ಹಿಮ್ಮಡಿಗೆ ಬಿಗಿಪಟ್ಟ ಇರುವ ಬದಲು ಹೆಬ್ಬೆರಳಿಗೆ ಪಟ್ಟಿ ಹಾಕಿರುವ ಇಂಡಿಯದ ಚಪ್ಪಲಿ ಹಾಕಿಕೊಂಡಾಗ ಹಾಗೆ ಕಳಚುವುದು ಬಹುಸುಲಭ. ಕಸೂತಿ ಕೆಲಸ ಮಾಡಿದ್ದ ಅಂದವಾದ ಪಟ್ಟಿಗಳಿದ್ದವು ಆಕೆಯ ಚಪ್ಪಲಿಗಳಿಗೆ.

ವರಾಂಡದತುಂಬ ಸುಖಕರವಾದ ಬೆತ್ತದ ಕುರ್ಚಿಗಳೂ ಚಿಕ್ಕಚಿಕ್ಕ ಮೇಜುಗಳೂ ಇದ್ದವು. ತಂಪಾಗಿ ಕತ್ತಲೆಯಾಗಿದ್ದ ಒಳಕೋಣೆಯಕಡೆಗೆ ಯಜಮಾನಿ ಕೂಗುಹಾಕಿದರು ; ಒಂದು ನಿಮಿಷದಲ್ಲಿ ಒಬ್ಬ ಪರಿಚಾರಕ ತಟ್ಟೆಯಲ್ಲಿ ಕಾಫಿಬಟ್ಟಲುಗಳನ್ನು ಇಟ್ಟುಕೊಂಡು ಹೊರಕ್ಕೆ ಬಂದ. ಪರವಾಯಿಲ್ಲ ಅವರ ಮನೆಯ ಬಟ್ಟಲುಗಳಲ್ಲೇ ನಾವು ಕುಡಿಯಬಹುದು ಎಂತ ಕಾಣುತ್ತೆ ಎಂದು ಜೂಡಿಯ ಮನಸ್ಸಿಗೆ ನೆಮ್ಮದಿಯಾಯಿತು ; ಮನೆಯ ಯಜಮಾನಿ ಮುಡಿದಿದ್ದ ಬಿಳಿಯ ಮತ್ತು ಹಳದಿಯ ಹೂಗಳ ಸುವಾಸನೆಯೊಂದಿಗೆ ಬೆರೆತು ಬರುತ್ತಿದ್ದ ಕಾಫಿಯ ಪರಿಮಳವನ್ನು ಅವಳು ಆಘ್ರಾಣಿಸಿದಳು. ವರಾಂಡದ ನೆಲ ಗುಡಿಸಿ, ಮಿರಮಿರ ಮಿರುಗುತ್ತಿತ್ತು ; ಕುಂಡದ ಗಿಡಗಳ ಎಲೆ ಕೂಡ ತಮ್ಮತಮ್ಮ ಜಾಗದಲ್ಲಿ ಇದ್ದಂತೆ ಎಲ್ಲ ಓರಣವಾಗಿದ್ದುವು. ಜೂಡಿ ಸುತ್ತಲೂ ತಿರುಗಿ ನೋಡಿದ್ದನ್ನು ಮನೆಯಾಕೆ ಕಂಡರು. "ಶುಕ್ರವಾರ ಎಂದರೆ ಅಷ್ಟು ಸೊಗಸಾದ ದಿನ! ಎಲ್ಲ ಬಹು ಶಿಸ್ತು, ಬಹು ಶುಭ್ರ ! ಶುಕ್ರವಾರ ನಾನು ಮುಂಚೆಯೇ ಏಳುತ್ತೇನೆ ; ಹೀಗೆಲ್ಲ ಶುಭ್ರವಾಗಿರುವುದೆಂದರೆ ನನ್ನ ಮನಸ್ಸಿಗೆ ತುಂಬ ನೆಮ್ಮದಿ."

"ಆಗ ಏನು ಮಾಡುತ್ತೀರಿ?" ಎಂದು ಜೂಡಿ ಮೆಲ್ಲನೆ ಕೇಳಿದಳು.

"ಎಣ್ಣೆ ಒತ್ತಿಕೊಂಡು ಸ್ನಾನಮಾಡುತ್ತೇನೆ; ಅದು ಬಹಳ ಒಳ್ಳೆಯದು ಮೈಗೆ. ಕೈಬೆರಳು, ಕೂದಲು, ಎಲ್ಲ ಹೊಚ್ಚಹೊಸದಾದಹಾಗೆ ತೋರುತ್ತೆ ಹಾಗೆ ಸ್ನಾನಮಾಡಿದಮೇಲೆ, ಆಮೇಲೆ, ನನ್ನ ಪೂಜೆಯ ಕೋಣೆಯಲ್ಲಿ ಎಲ್ಲವೂ, ಕನ್ನಡಿಯ ಹಾಗೆ ಹೊಳೆಯುವಹಾಗೆ ಮಾಡುತ್ತೇನೆ. ಒಂದು ದಿನ ನಿನ್ನನ್ನ ಅಲ್ಲಿಗೆ ಕರೆದುಕೊಂಡುಹೋಗಿ, ಥಳಥಳ ಹೊಳೆಯುವ ನನ್ನ ದೇವರುಗಳನ್ನೆಲ್ಲ ತೋರಿಸುತ್ತೇನೆ. ಆಮೇಲೆ ದೇವರಮೇಲೆ ಹೂವು ಹಾಕುತ್ತೇನೆ" ಎಂದು ಮನೆಯ ಯಜಮಾನಿ ವಿವರಿಸಿದರು.

# ೩. ಆಲದ ಮರದಡಿಯಲ್ಲಿ

ಲಕ್ಷ್ಮಿ ತನ್ನ ಅಜ್ಜಿಯೊಂದಿಗೆ ಎಲ್ಲೋ ಕೆಲವು ದಿನ ಮಾತ್ರ ಇರುವಂತಾಗಿತ್ತು; ಆದರೆ ಅದೇ ಪೀಠಿಕೆಯಾಯಿತು. ಇದ್ದಕ್ಕಿದ್ದಂತೆ ಜೂಡಿಗೆ ಶಾಲೆ ಮುಂತಾದ ಎಲ್ಲದರ ಬಗೆಗೆ ಮೊದಲಿನಷ್ಟು ಚಿಂತೆ ಇಲ್ಲವೆನಿಸಿತು; ಕೆಲಸಮಾಡಲು ಅವಳು ಮೊದಲಿಗಿಂತ ಈಗ ಹೆಚ್ಚು ಸಿದ್ಧ ; ಜಾನನ ಅಗಲಿಕೆ ಹಿಂದೆ ಬಹಳ ಕಾಲದ ತನಕ ಇದ್ದುದಕ್ಕಿಂತ ಹೆಚ್ಚಿನ ಸಂತೋಷವಾಗಿತ್ತು ! ಸಿನಿಮಾ ತಾರೆಯರೆಂದರೆ ಮೂಗಮುರಿಯುತ್ತಿದ್ದಳು ಲಕ್ಷ್ಮಿ ; ಅವಳಿಗೆ ಏನಾದರೂ ಕೆಲಸ ಮಾಡುವುದರಲ್ಲಿ ಇಷ್ಟ, ನೋಡುವುದರಲ್ಲಿ ಅಲ್ಲ. ಪ್ರಾಣಸಂರಕ್ಷಣೆ ಮಾಡಬಲ್ಲಳು ಅವಳು, ನೀರಿನಡಿಯಲ್ಲಿ ಬಲು ಸೊಗಸಾಗಿ ಈಜಬಲ್ಲಳು ; ಎಲಿಯಟ್ ಬೀಚಿನ (ಕಡಲಕರೆಯ) ಬಳಿ ಅವಳು ತೆರೆನೊರೆಯ ನಡುವೆ ನುಗ್ಗಿಹೋಗುವಳು ; ಅಲ್ಲದೆ, ಶಾಲೆಯ ಪುಸ್ತಕಗಳಲ್ಲಿ ಕಂಡುಬಾರದ, ಭಾರತದ ಇತಿಹಾಸದ ಎಲ್ಲ ತೆರನಾದ ಉದ್ರೇಕಕಾರಿ ಸಂಗತಿಗಳನ್ನೂ ಅವಳು ಬಲ್ಲಳು. ಇಷ್ಟರ ಜೊತೆಗೆ, ಅಬ್ಬಾ, ಎಷ್ಟು ಅಂದವಾಗಿದ್ದಳು ಅವಳು ! ಸಾಧಾರಣವಾಗಿ ಜನ ಎಂದರೆ ಮನಸ್ಸಿಗೆ ಹಚ್ಚಿಕೊಳ್ಳತಕ್ಕವಳಲ್ಲ ಜೂಡಿ ; ಆದರೆ, ಲಕ್ಷ್ಮಿಯ ವಿಚಾರ ಬೇರೆ ; ಅವಳು ತನ್ನ ಬಳೆ ತೊಟ್ಟುಕೊಳ್ಳುವುದನ್ನಾಗಲಿ, ನಾಟ್ಯದ ಹೆಜ್ಜೆ ನೋಡಿದಂತೆ. ಕೆಲವೊಮ್ಮೆ ಅವಳು ಜೂಡಿಯ ಕೂದಲಿಗೆ ಸೊಂಪಾದ, ನಸುಗೆಂಪಿನ, ಬಲು ಸುವಾಸನೆಯಾದ ಗುಲಾಬಿ ಹೂಗಳನ್ನೆ ಹೆಚ್ಚಾಗಿ ಮುಡಿಸುವಳು. ಅವು ತಾವಾಗಿ ಬಿದ್ದುಹೋಗುವವರೆಗೂ ಜೂಡಿ ಅವನ್ನು ಮುಡಿದಿರುವಳು.

ಬೇಲಿಯ ಆಚೆಯ ಮನೆಯವರು ಅಷ್ಟೊಂದು ಸ್ನೇಹಪರರಾಗಿದ್ದುದನ್ನು ಕಂಡು ಜೂಡಿಯ ತಾಯಿಗೆ ತುಸ ಅಚ್ಚರಿಯೆನಿಸಿತು ; ಬೆನ್ ಮತ್ತು ಜೂಡಿ ತಾವು ಅನಿಷ್ಟವಾಗಿ ಪರಿಣಮಿಸದಿದ್ದರೆ ಸರಿ, ಬೇಲಿಯ ಸಂದು ಇದ್ದುಕೊಳ್ಳಲಿ ಎಂದು ಅವರು ಒಪ್ಪಿದರು. ಅವರು ಹೇಳಿದರು, "ಜೂಡಿ, ಎಷ್ಟೇ ಆಗಲಿ, ಇಲ್ಲಿಗೆ ಹೊಂದದ ಬಣ್ಣದವರು ಎಂದರೆ ನಾವು ! ಭಾರತದ ಜನ ಬಹುಮಂದಿ ನಮ್ಮ ವಿಚಾರದಲ್ಲಿ ತುಂಬ ಒಳ್ಳೆಯವರಾಗಿದಾರೆ, ತುಂಬ ಸ್ನೇಹವಾಗಿದಾರೆ– ನಡೆದ ಸಂಗತಿಗಳು ಕೆಲವನ್ನು ನೆನೆದರೆ, ನಾವು ಬಹುಶಃ ಅಷ್ಟಕ್ಕೆ ಪಾತ್ರರಲ್ಲ..."

"ನಾವು ಕೂಡ ಎಷ್ಟೋ ಒಳ್ಳೆಯದನ್ನು ಹೇರಳವಾಗಿ ತಂದಿದೇವೆ. ವಿಜ್ಞಾನ,

ಯಜಮಾನಿ ನಕ್ಕರು ; ಲಕ್ಷ್ಮಿ ಜೂಡಿಗೆ ವಿವರಿಸತೊಡಗಿದಳು : "ಕೆಲವು ಸಲ ನಾನು ಅಮ್ಮಣ್ಣಿ ಪಾಟಿ–ಅಂದರೆ ನಮ್ಮ ಅಜ್ಜಿ ಅಮ್ಮಣ್ಣಿ, ಇವರ ಜೊತೆ ಇರಲು ಬರುತ್ತೀನಿ....." ಎಂದು ಕ್ಷಣಹೊತ್ತು ಯಜಮಾನಿಯ ಕೈಹಿಡಿದುಕೊಂಡು, ಮತ್ತೆ ಹೇಳಿದಳು : "ಅವರು ಹೇಳಿದರು, ಗೋಡೆಯ ಆಚೆಯಕಡೆ ಯಾರೋ ಇದ್ದಾರೆ ಅಂತ ; ನೀನು ಅಂಥ ನನಗೆ ಗೊತ್ತೇ ಇರಲಿಲ್ಲ!"

"ಬೇಲಿಯ ಮೂಲಕ ನುಸಿದುಹೋದವನು ಬೆನ್" ಎಂದು ಮೊದಲು ಮಾಡಿದಳು ಜೂಡಿ ; ಆಗಲೀಗ ಬೆನ್ನನಿಗೆ ಇದ್ದಕ್ಕಿದ್ದ ಹಾಗೆ ತೋರತೊಡಗಿತು, ತಾನು ಹೊಸ ಜಾಗದಲ್ಲಿ ಇದ್ದೇನೆ ಎಂದು ; ತನ್ನ ದಾದಿ ಎಲ್ಲಿ ಎಂದು ಅವನು ಕೇಳತೊಡಗಿದ ; ತಾನು ಆವನನ್ನು ಹಿಂದಕ್ಕೆ ಕರೆದುಕೊಂಡು ಹೋಗದಿದ್ದರೆ. ಇನ್ನು ಒಂದು ನಿಮಿಷದಲ್ಲೀ ಅವನು ಕಿರಿಚತೊಡಗುತ್ತಾನೆ ಎಂದು ಜೂಡಿಗೆ ಗೊತ್ತು. ನಮಸ್ಕಾರ ಹೇಳಿ ಹೊರಡುವುದಕ್ಕೆಂದೂ ಅವಳು ಮೇಲಕ್ಕೆದ್ದಳು. ಅವಳು ಹಾಗೆ ಎದ್ದಾಗ, ಒಬ್ಬ ಗಂಡಸರು ವರಾಂಡಕ್ಕೆ ಬಂದರು. ಅವರು ಮನೆಯ ಯಜಮಾನಿಯ ಗಂಡ, ಲಕ್ಷ್ಮಿಯ ಅಜ್ಜ ಇರಬೇಕೆಂದು ಜೂಡಿ ಭಾವಿಸಿದಳು. ರಟ್ಟುಗಳು ಕಳಚಿಹೋಗಿದ್ದ, ಹಳೆಯವಾಗಿ ಕಾಣುತ್ತಿದ್ದ ಎರಡು ಪುಸ್ತಕಗಳನ್ನು ಹಿಡಿದು ಬರುತ್ತಿದ್ದರು ಅವರು ; ಅವರ ತಲೆಗೂದಲು ಮುಂದಗಡೆ ಕತ್ತರಿಸಿದ್ದು, ಹಿಂದುಗಡೆ ನೀಳವಾಗಿತ್ತು. ಲಕ್ಷ್ಮಿಯನ್ನು ನೋಡಿ ಅವರು ನಸು ನಕ್ಕರು. ಜೂಡಿಯಕಡೆ ತಿರುಗಿ, ತಮ್ಮ ಪುಸ್ತಕವೊಂದರಿಂದ ಅವಳು ಮೈವೆತ್ತು ಹೊರಕ್ಕೆ ಬಂದಿದ್ದಾಳೆಯೋ ಎಂಬಂತೆ, ಅವಳನ್ನು ಸ್ನೇಹಭಾವದಿಂದ ನೋಡಿದರು; ಜೂಡಿ ನಮಸ್ಕಾರಮಾಡಿದಳು; ಬೆನ್ ಮಾತ್ರ ಅವಳ ಲಂಗವನ್ನು ಹಿಡಿದು ಜಗ್ಗಿಸುತ್ತಿದ್ದ ; ಕೂಡಲೆ ಹೊರಟುಬಿಡುವುದು ಒಳ್ಳೆಯದೆಂದು ಅವಳಿಗೆನ್ನಿಸಿತು.

ಲಕ್ಷ್ಮಿ ಬೇಲಿಯವರೆಗೆ ಅವರ ಸಂಗಡ ಬಂದಳು. ವಾಸ್ತವವಾಗಿ, ಲಕ್ಷ್ಮಿ ಎಂದರೆ ಜೂಡಿಗೆ ಏನೋ ಒಂದು ವಿಧವಾದ ಹೆದರಿಕೆ ; ಅವಳು ಅಂತಹ ಒಳ್ಳೆಯ ಈಜುಗಾತಿ ಎನಿಸಿಕೊಂಡಿದ್ದು, ತನಗಿಂತ ಸ್ವಲ್ಪ ದೊಡ್ಡವರಾದ ಇತರ ಹುಡುಗಿಯರ ನಡುವೆಯೇ ಯಾವಾಗಲೂ ಇರುವಂತೆ ಕಾಣುತ್ತಿತ್ತು ; ಅವರೆಲ್ಲಾ ಒಬ್ಬರನ್ನೊಬ್ಬರು ಬಲ್ಲರು, ಆಟಗಳಲ್ಲಿ ಎಲ್ಲರೂ ವಿಪರೀತ ಗಟ್ಟಿಗರು ಅವರಲ್ಲಿ ಯಾರೂ ಜೂಡಿ ಹೋಗುತ್ತಿದ್ದ ಶಾಲೆಗೆ ಹೋಗುತ್ತಿರಲಿಲ್ಲ. ಆದರೆ ಈಗ ಲಕ್ಷ್ಮಿ ಹೇಳಿದಳು–"ಬೇಲಿಯನ್ನು ಸರಿಪಡಿಸಬೇಡ, ಜೂಡಿ !"

ಒಂದಕ್ಕೆ ಅವರು ಸಹಾಯಕರಾಗಿದ್ದರು, ಅದನ್ನು ನಾ ಬಲ್ಲೆ. ಅವರ ಬಗ್ಗೆ ಜನ ಒಳ್ಳೆಯ ಮಾತು ಹೇಳುವುದನ್ನ ಕೇಳಿದೇನೆ. ಒಳ್ಳೆ ಚುರುಕಾದ ಮನುಷ್ಯ, ನೇರವಾದ ಮನುಷ್ಯ."

ತೆವಳುತ್ತ ಸುಳಿದಾಡುವ ನೇರವಾಗಿಲ್ಲದ ಮನುಷ್ಯನೊಬ್ಬನನ್ನು ತಟ್ಟನೆ ಕಲ್ಪಿಸಿಕೊಂಡು, ಎಂಥ ವಿಚಿತ್ರವಾದ ಮಾತು ಎಂದುಕೊಂಡಳು ಜೂಡಿ. ಆದರೆ, ತನ್ನ ತಂದೆ ಹೇಳಿದ್ದರ ಅಭಿಪ್ರಾಯ ಏನೆಂದು ಅವಳಿಗೆ ಗೊತ್ತು : ಲಕ್ಷ್ಮಿಯ ತಂದೆ ಲಂಚ ತೆಗೆದುಕೊಳ್ಳುವುದಿಲ್ಲ, ಕಷ್ಟಪಟ್ಟು ಕೆಲಸಮಾಡುತ್ತಾರೆ, ತಾವು ರಜಾಗಳಿಸದೆ ಇದ್ದಾಗಲೂ ಸದಾ ರಜಾ ತೆಗೆದುಕೊಂಡು ಹೋಗುತ್ತ ಇರಲಿಲ್ಲ, ಎಲ್ಲಕ್ಕಿಂತ ಮಿಗಿಲಾಗಿ ಅವರು 'ಕರಾರುವಾಕು' 'ಕರಾರುವಾಕು.' ಅದು ಅವಳ ತಂದೆಯ ಅಚ್ಚುಮೆಚ್ಚಿನ ಮಾತುಗಳಲ್ಲಿ ಒಂದು. ಅವಳ ಅಣ್ಣ ಜಾನ್ ಕೂಡ ಅದನ್ನು ಕಲಿತುಬಿಟ್ಟಿದ್ದ. ಅವನ ಹಿಂದಿನ ಕಾಗದ ಎಲ್ಲ ಕ್ರಿಕೆಟ್ ವಿಚಾರವೆ, ಕ್ರಿಕೆಟ್ ಚೆಂಡನ್ನು ಹೇಗೆ ಕರಾರುವಾಕಾಗಿ ಹೊಡೆಯಬೇಕು ಎಂಬುದೆ ; ದಾಂಡನ್ನು ಹೀಗೆ ಹಿಡಿದುಕೊಂಡರೆ ಅಥವಾ ಹಾಗೆ ಹಿಡಿದುಕೊಂಡರೆ ಕ್ರಿಕೆಟ್ಟ ಚೆಂಡು ಹೇಗೆ ಹೋಗುತ್ತದೆ ಎಂಬುದನ್ನು ತೋರಿಸಲು ಅವನು ಕೆಲವು ಚಿತ್ರಗಳನ್ನು ಬೇರೆ ಬರೆದಿದ್ದ. ಅದೆಲ್ಲ ಏಕೋ ತಲೆ ಚಿಟುಹಿಡಿಸುವ ರೇಖಾ ಗಣಿತದಹಾಗಿತ್ತು; ಅಲ್ಲದೆ, ಅಸಾಧ್ಯ ಭಯಂಕರವಾಗಿ ಕಂಡಿತು.

ಮದರಾಸಿನಲ್ಲಿ ಕೆಲವುವೇಳೆ ಸಂಜೆಯ ಹೊತ್ತು ಕ್ರಿಕೆಟ್‌ಪಂದ್ಯ ನಡೆಯುತ್ತಿತ್ತು; ಬಡಪಾಯಿಗಳು ಸೆಕೆಯಲ್ಲಿ ಕರಗಿಹೋಗುತ್ತಿರುವರೋ ಎನ್ನುವಹಾಗೆ ಬೆವರುತ್ತ, ಹುಚ್ಚುಹಿಡಿದಂತೆ ಓಡಾಡುತ್ತಿದ್ದರು. ಬೇಸಗೆಯಲ್ಲಿ, ಸಾಧ್ಯವಾದರೆ ಒಂದು ಮಾವಿನಹಣ್ಣು ತೆಗೆದುಕೊಂಡು, ಒಂದುಚೂರು ನೆರಳುಹಿಡಿದು ಅಲ್ಲಿಯೇ ಇದ್ದುಬಿಡಬೇಕು, ಅಷ್ಟೆ, ಎಂದು ಯಾರಿಗಾದರೂ ಎನಿಸೀತು. ಜೂಡಿಯ ಮೆಚ್ಚಿನ ಸ್ಥಳಗಳಲ್ಲಿ ಒಂದು ಎಂದರೆ ಅಡ್ಯಾರಿನ ಒಂದು ದೊಡ್ಡ ಆಲದ ಮರ; ಅದೊಂದು ಹಳೆಯ ಮರ ; ಅದರ ಹರಡುವ ಕೊಂಬೆಗಳು ನೆಲಕ್ಕೆ ಬೀಳಲು ಬಿಡುವಂತೆ ಅದನ್ನ ಸ್ವೇಚ್ಛೆಯಾಗಿ ಬೆಳೆಯಗೊಟ್ಟಿದ್ದರು ; ಆ ಬಿಳಲುಗಳು ಬೇರೂರಿ, ಕೆಲವು ವರ್ಷಗಳಲ್ಲಿ ಸಣ್ಣ ಮರದ ತಾಳುಗಳಾಗಿ ಬೆಳೆದುಬಿಟ್ಟಿದ್ದುವು. ರಸ್ತೆಯ ಆಲದಮರಗಳೂ ಹೀಗಾಗಲು ಹೆಣಗುತ್ತಿದ್ದುವು; ಆದರೆ ಹಸುಗಳೊ ಆಡುಗಳೊ ತಿನ್ನಲಾಗುವಷ್ಟು ಕೆಳಮಟ್ಟಕ್ಕೆ ಆ ಎಳೆಯ ಬಿಳಲಿನ ತುದಿಗಳು ಇಳಿದ ಕೂಡಲೆ– ಸರಿ, ಅವು ತಿಂದುಹೋಗಿಬಿಡುತ್ತಿದ್ದುವು. ಆದರೆ, ಅಡ್ಯಾರಿನ ಆ ಹೇರಾಲದ ಮರ ವರ್ಷವರ್ಷವೂ ಹಬ್ಬಿ ಹರಡಿ, ಕಂಬಗಳಿಂದಲೂ ಚಪ್ಪಟೆ ಕಮಾನು

ಔಷಧಚಿಕಿತ್ಸೆ, ಕರಾರುವಾಕ್ಕಾಗಿರುವುದು, ಹೊತ್ತು ಗೊತ್ತು ; ವಿಚಾರಗಳನ್ನ ಆಧುನಿಕ ರೀತಿಯಲ್ಲಿ ನೋಡುವುದು......" ಎಂದು ಅವಳ ತಂದೆ ಹೇಳಿದರು.

ಜೂಡಿಗೆ ಈ ಒಂದು ವಿಚಾರ ಬಾಯಿಪಾಠವಾಗಿಹೋಗಿತ್ತು ; ಭಾರತದಲ್ಲಿ ಬ್ರಿಟಿಷರ ಕಾಲದ ಪರವಾಗಿ ಮತ್ತು ವಿರುದ್ಧವಾಗಿ ತನ್ನ ತಾಯಿತಂದೆ ಆಡಿದ ಮಾತುಗಳನ್ನೆ ಹೇಗೆ ಮತ್ತೆ ಮತ್ತೆ ಆಡುವರು ಎಂಬುದನ್ನು ಅವಳು ಬಲ್ಲಳು ಕೆಲವುವೇಳೆ ಶಾಲೆಯಲ್ಲೂ ಅದರ ಪ್ರಸ್ತಾಪ ಬಂದದ್ದು ಉಂಟು ; ಒಂದೆರಡು ಸಲ ಅವಳು ಬಹಳ ಸಿಟ್ಟುಗೊಂಡಿದ್ದಳು ; ಪಶ್ಚಿಮದೇಶಗಳಿಂದ, ಅದರಲ್ಲೂ ವಿಶೇಷವಾಗಿ ಇಂಗ್ಲೆಂಡಿನಿಂದ ಇಲ್ಲವೆ ಸ್ಕಾಟ್‌ಲೆಂಡಿನಿಂದ ಬಂದಿದ್ದ ಒಳ್ಳೆಯ ವಿಷಯಗಳನ್ನುಇ ಭಾರತದ ಹುಡುಗಿಯರು ಮರೆತುಬಿಟ್ಟಿದ್ದರು, ಇಲ್ಲವೋ, ಅವೆಲ್ಲವನ್ನೂ ಭಾರತದಲ್ಲೆ ಹೊಸದಾಗಿ ನಿರ್ಮಾಣಮಾಡಿದೆ ಎಂದು ತೋರ್ಪಡಿಸಿಕೊಳ್ಳುತ್ತಿದ್ದರು ; ಜೊತೆಗೆ ಕ್ರಿಯೆ ಏನೇನೂ ನಡೆಯದಿದ್ದರೂ ಅತಿರೇಕದ ಹಾಡು ಕುಣಿತಗಳಿಂದ ತುಂಬಿ ಗಂಟೆಗಟ್ಟಲೆ ನಡೆಯುವ ತಮ್ಮ ಸಪ್ಪೆಯಾದ ಚಲನಚಿತ್ರಗಳೇ ಅಮೆರಿಕದ ಚಿತ್ರಗಳಿಗಿಂತ ಮೇಲು ಎಂದು ಹೇಳುತ್ತಿದ್ದರು!–ಇದನ್ನೆಲ್ಲಾ ಕಂಡರೆ ತನಗೆ ಸಹಿಸುವುದಕ್ಕಾಗದು ಎನಿಸುತ್ತಿತ್ತು ಅವಳಿಗೆ. ಸದ್ಯ, ಜನ ಅದರ ವಿಚಾರವಾಗಿ ಯೋಚಿಸುವುದನ್ನ ನಿಲ್ಲಿಸಿಬಿಟ್ಟರೆ ಸಾಕು–ಇಷ್ಟಕ್ಕೂ ಅದು ಇತಿಹಾಸ, ಎಲ್ಲ ನಡೆದುಹೋದದ್ದು, ಅದರ ವಿಚಾರ ಮಾತಾಡುವುದರಿಂದ ಅದೇನೂ ಮಾರ್ಪಡುವುದಿಲ್ಲ, ಎಂದು ಅವಳು ತನಗೆ ತಾನೆ ಹೇಳಿಕೊಂಡಳು. ಯೂರೋಪಿಯನ್ನರು ಭಾರತೀಯರ ಹಾಗಲ್ಲ, ಇದು ಸಹಜ; ಅಂತೆಯೆ, ಭಾರತೀಯರು ನಮ್ಮ ಹಾಗಲ್ಲ ಇದೂ ಸಹಜ ; ನಮ್ಮಿಬ್ಬರಲ್ಲಿ ಯಾರೊಬ್ಬರೂ ಬೇರೆ ಯಾವ ರೀತಿ ಇರುವಂತೆ ನಟಿಸುವುದರಿಂದಲೂ ಉಪಯೋಗವಿಲ್ಲ ; ಒಂದು ತಂಡ ಇತರರಿಗಿಂತ ಮೇಲು ಎಂದು ಎಣಿಸುವುದು ಎಲ್ಲ ಅವಿವೇಕ ; ಹೀಗಿರುವಾಗ, ಈ ವಿಚಾರವಾಗಿ ಏಕೆ ಸುಮ್ಮನೆ ತಲೆಕಡೆಸಿಕೊಳ್ಳುತ್ತ ಹೋಗಬೇಕು? ಆಗ, 'ಲಕ್ಷ್ಮಿಯ ತಂದೆ ಕುಮಾರ್ ಒಬ್ಬ ಇಂಜಿನಿಯರ್' ಎಂದು ತನ್ನ ತಂದೆ ಹೇಳಿದ್ದು ಅವಳಿಗೆ ಕೇಳಿಸಿತು "ಅವರು ಆತನನ್ನು ಯೂರೋಪಿಗೆ ಹೋಗಗೊಟ್ಟಿರಬೇಕು; ಬ್ರಾಹ್ಮಣರಾದವನಿಗೆ ಅದು ಸುಲಭವೇನಲ್ಲ. ಆತ ಅಕಸ್ಮಾತ್ ತಿನ್ನಬಾರದ್ದನ್ನು ತಿಂದುಬಿಡಬಹುದು; ಅದು ಆತನಿಗೆ ಹೊಲಸಾಗಿ ಕಾಣುವುದು ಖಂಡಿತ" ಎಂದರು ಅವಳ ತಂದೆ.

"ಅವರು ಯಾವ ತರಹದ ಇಂಜಿನಿಯರು ?" –ಜೂಡಿ ಕೇಳಿದಳು.

ಅವಳ ತಂದೆ ಹೇಳಿದರು, "ಭಾರಿ ಅಣೆಕಟ್ಟು ನಿರ್ಮಾಣ ಯೋಜನೆಯಲ್ಲಿ

ಅಲ್ಲಿ ಕುರ್ಚಿ ಗಿರ್ಚಿ ಒಂದೂ ಇರಲಿಲ್ಲ. ಅವಳ ತಾಯಿ ಮತ್ತು ಇಬ್ಬರು ಮಕ್ಕಳು ಅಲ್ಲಿದ್ದರು ; ಆದರೆ ಆ ಮಕ್ಕಳು ಜೂಡಿಯೊಂದಿಗೆ ಮಾತಾಡಲು ತುಂಬ ನಾಚಿಕೆಪಡುತ್ತಿದ್ದುವು. ತಾವು ಹಾಕಿಕೊಳ್ಳುವ ಉಡುಪಿನಲ್ಲಿ ಅತ್ಯುತ್ತಮವಾದುದನ್ನು ಹಾಕಿಕೊಂಡಿದ್ದರು ಅವರು ; ಜೂಡಿಗೆ ಚಿಕ್ಕದಾಗಿಹೋಗಿದ್ದ ಒಂದು ಉಡುಪಿನಿಂದ ಚಿಕ್ಕಹುಡುಗಿಯ ಲಂಗವನ್ನು ಮಾಡಿತ್ತು. ಆ ಹಳ್ಳಿಯಲ್ಲಿ ಜನ ಅಡಿಗೆಮಾಡುತ್ತಲೋ, ಮನೆ ಚೊಕ್ಕಟ ಮಾಡುತ್ತಲೋ, ಸ್ನಾನ ಮಾಡುತ್ತಲೋ, ತಮ್ಮ ಬಟ್ಟೆ ಒಗೆದುಕೊಳ್ಳುತ್ತಲೋ ಇದ್ದರು ; ಆದರೆ ಅಲ್ಲಿ ಕೂಡ ತಿರುಕರಿದ್ದರು, ಅಲ್ಲಿ ಇಲ್ಲಿ ಪಡೆದ ಹಿಡಿ ಅಕ್ಕಿಯನ್ನೊ ಬೇಳೆಯನ್ನೊ ಹಾಗೆಹಾಗೆಯೆ ಮುಕ್ಕುತ್ತಿದ್ದರು. ಹಾಗಾದರೆ, ನಿಜವಾಗಿಯೂ ಅವರಿಗೆ ತಮ್ಮ ಸ್ವಂತ ಮನೆಗಳು ಇರಲಿಲ್ಲ !

ಆದರೂ ಕೂಡ, ಜೂಡಿಗೆ ತಿರುಕರನ್ನು ಕಂಡರೆ ಆಗುತ್ತಿರತಲಿಲ್ಲ : ಆ ಆಲದ ಮರಕ್ಕೆ ಸಂಬಂಧಪಟ್ಟ ಒಳ್ಳೆಯ ಸಂಗತಿಗಳಲ್ಲಿ ಒಂದು ಏನೆಂದರೆ, ಅಲ್ಲಿ ತಿರುಕರು ಯಾರೂ ಇರಲಿಲ್ಲ. ಒಂದು ದಿನ ಅವಳೂ ಅಲ್ಲಿ ಪುಸ್ತಕವೊಂದನ್ನು ಹಿಡಿದುಕೊಂಡು ಕುಳಿತಿದ್ದಳು ; ಆದರೆ ನಿಜವಾಗಿ, ತುತ್ತತುದಿಯ ಎಲೆಗಳ ನಡುವೆ ಮೇಲುಗಡೆ ಏನೋ ಹೋರಾಟ ನಡೆಸುತ್ತಿದ್ದ, ತುಂಬ ಹೊಳಪುಬಣ್ಣದ ಯಾವುದೋ ಹಕ್ಕಿಯನ್ನು ನೋಡಲು ಪ್ರಯತ್ನಿಸುತ್ತಿದ್ದಳು. ಅದನ್ನು ಸರಿಯಾಗಿ ನೋಡಲು ತನಗೆ ಸಾಧ್ಯವಾಗಿದ್ದರೆ ! ಆಗ ಲಕ್ಷ್ಮಿ ತನ್ನ ನೃತ್ಯದ ವಸ್ತ್ರಗಳನ್ನು ಧರಿಸಿ ಓಡುತ್ತ ಬಂದಳು : ಕಾಲಿನ ಹರಡಿನ ಬಳಿ ಬಿಗಿಯಾಗಿದ್ದ, ಹಸುರು ಹತ್ತಿಬಟ್ಟೆಯ ಪೈಜಾಮ, ಮತ್ತು ಮೇಲುಭಾಗದಲ್ಲಿ ನಸುಗೆಂಪಿನ ಮೋಟು ಸೀರೆ. ಬಂದವಳೆ ಅವಳು ಜೂಡಿಯನ್ನೂ ಹಿಡಿದುಕೊಂಡಳು. "ನೃತ್ಯವನ್ನು ನೋಡುವೆಯಂತೆ ಬಾ !" ಎಂದು ಕರೆದು, ಅವಳನ್ನು 'ಕಲಾಕ್ಷೇತ್ರದ ಉದ್ಯಾನ'ಕ್ಕೆ ಕರೆದೊಯ್ದಳು ಅಲ್ಲಿ ತಾನು ನೃತ್ಯದ ತರಗತಿಗೆ ಹೋಗುತ್ತಿರುವುದಾಗಿ ಲಕ್ಷ್ಮಿ ವಿವರಿಸಿದಳು ಇದೆಲ್ಲಾ ತುಂಬ ಕಕ್ಕಾಬಿಕ್ಕಿಹಿಡಿಸುತ್ತಿತ್ತು ; ಶಾಲೆಯಲ್ಲೀ ಕ್ರಮವಾದ ಪಾಠ ಕಲಿಯುವಷ್ಟೇ ಚೆನ್ನಾಗಿ ಲಕ್ಷ್ಮಿ ಬೇರೆ ಏನನ್ನಾದರೂ ಮಾಡುವಳು ಎಂದು ಜೂಡಿಗೆ ಸದಾ ತೋರುವುದು ನಿಜವಾಗಿ, ಲಕ್ಷ್ಮಿಗೆ ಅಷ್ಟೊಂದು ವಿಷಯ ಗೊತ್ತಿದ್ದರೂ, ಶಾಲೆ ಎಂದರೆ ಅವಳಿಗೆ, ಲೆಕ್ಕಕ್ಕಿಲ್ಲವೆಂಬಂತೆ ಕಾಣುತ್ತಿತ್ತು.

ತೆಂಗಿನಗರಿಯ ತಡಿಕೆಯ ಅಂದವಾದ ಅಭ್ಯಾಸಶಾಲೆಯ ಒಂದು ಮೂಲೆಯಲ್ಲಿ ಅವಳು ಜೂಡಿಯನ್ನು ನೃತ್ಯ ನೋಡಲೆಂದು ಕೂರಿಸಿದಳು; ಹೂಗಳಿಂದಲೂ ಹೊತ್ತಿಸಿದ ದೀಪದಿಂದಲೂ ಬಹು ಶುಭ್ರವಾಗಿ ಬೆಳಗುತ್ತಿತ್ತು ಆ ಶಾಲೆ. ಅಲ್ಲಿ ಹತ್ತು ಹನ್ನೆರಡು ಜನ ಹುಡುಗಿಯರಿದ್ದರು ; ಅವರಲ್ಲಿ ಇಬ್ಬರು

ಗಳಿಂದಲೂ ಎಲ್ಲ ಒಂದುಗೂಡಿದ ಆಲದ ಮರಗಳ ಒಂದು ತೋಪಾಗಿ ಪರಿಣಮಿಸಿತ್ತು. ಕೆಲವು ಆಲದ ಕಾಂಡಗಳ ಮೇಲಕ್ಕೆ ಬಳ್ಳಿಗಳು ಹಬ್ಬಿಹೋಗಿದ್ದುವು; ಅಲ್ಲಿ ಯಾವಾಗಲೂ ನೂರಾರು ಹಕ್ಕಿಗಳು ಇರುತ್ತಿದ್ದುವು ; ಜೊತೆಗೆ ಎಲೆಗಳನಡುವೆ ಕೆಳಗಿಂದ ಮೇಲಕ್ಕೆ ಎಷ್ಟು ಸರಾಗವಾಗಿ ಓಡಾಡುವುವೋ ಮೇಲಿನಿಂದ ಕೆಳಕ್ಕೂ ಅಷ್ಟೆ ಸರಾಗವಾಗಿ ಓಡಾಡುವ, ಮುದ್ದಾದ ಚಿಕ್ಕ ಅಳಿಲುಗಳೂ ಇರುತ್ತಿದ್ದುವು. ಮನೆಯ ಪಾಠದ ಅಭ್ಯಾಸಮಾಡಿಕೊಳ್ಳಲೆಂದು ಜೂಡಿಯನ್ನು ಅವಳ ತಾಯಿ ಏನಾದರೂ ಅಲ್ಲಿ ಬಿಟ್ಟುಹೋದರೆ, ಅಭ್ಯಾಸಮಾಡಿಕೊಳ್ಳಲು ಆಗುತ್ತಲೇ ಇರಲಿಲ್ಲ ಅವಳಿಗೆ.

ಇದ್ದ ತೊಂದರೆ ಎಂದರೆ, ಇತರ ಎಷ್ಟೋ ಜನ ಆ ಆಲದ ಮರದ ಕೆಳಗೇ ಕುಳಿತುಕೊಳ್ಳಬಯಸುತ್ತಿದ್ದರು ! ಭಾರತ ದೇಶದ ಎಲ್ಲ ಕಡೆಯೂ, ಅಷ್ಟೊಂದು ಮಂದಿ ಜನ ಇರದಿದ್ದರೆ ಚೆನ್ನಾಗಿರುತ್ತಿತ್ತು, ಎಂದು ಅವಳ ಆಲೋಚನ, ಆ ಮುಖಗಳು, ಕೈಗಳು, ಸೆಣಕಲು ಕಾಲುಗಳು, ಇವುಗಳಿಂದ ಯಾರಾದರೂ ಬೇಸರಗೊಳ್ಳುವರು–ಜೊತೆಗೆ, ಓ, ತಿರುಕರು ಬೇರೆ ! ಮೌಂಟ್‌ರೋಡಿನಲ್ಲಿ ನೀವು ಯಾವುದೇ ಅಂಗಡಿಯೊಳಕ್ಕೆ ಹೋಗಿ, ಅಲ್ಲಿರುವವರು ಡಜನ್‌ಗಟ್ಟಳೆ ತಿರುಕರು, ಕಾದಿರುತ್ತ, "ತಂದೆ ಇಲ್ಲ, ತಾಯಿ ಇಲ್ಲ" ಎಂದು ಕುಂಯ್‌ಗುಟ್ಟುತ್ತ. ನಿಮಗೆಂದಿಗೂ ತಿಳಿಯದು–ಅದು ನಿಜವಾಗಿಯೇ ಇದ್ದಿರಬಹುದು ; ಹಾಗಿದ್ದರೆ ಅದೆಷ್ಟು ಘೋರ ! ಅವರಿಗೆ ಏನನ್ನೂ ಕೊಡಕೂಡದೆಂದು ಅವಳ ತಾಯಿ ಹೇಳಿದ್ದರು : "ಅದರಿಂದ ಅವರಿಗೆ ಪ್ರೋತ್ಸಾಹಮಾತ್ರ ಆಗುತ್ತದೆ."

ಹಾಗಿದ್ದರೂ ಕೂಡ, ಹಸುಳೆಯೊಂದಿಗಿರುವ ಹೆಂಗಸನ್ನು ಕಂಡರೆ, ಇಲ್ಲವೆ ಬೆನ್ನನೊಂದಿಗೆ ಹೊರಹೊರಟಿದ್ದರೆ, ಅವರು ಏನನ್ನಾದರೂ ಕೊಟ್ಟೇಬಿಡುತ್ತಿದ್ದರು. "ಇತ್ತ ನಾನು ಬೆನ್ನನಿಗೆ ಬೇಕುಬೇಕಾದ್ದನ್ನು ಕೊಳ್ಳುತ್ತಿರುವುದು, ಅತ್ತ ಅವರಿಗೆ ತಿನ್ನಲುಕೂಡ ಏನೂ ಇಲ್ಲ, ಇದು ತುಂಬ ಘೋರ" ಎಂದು ಅವರು ಜೂಡಿಗೆ ಹೇಳುವರು. ಅದನ್ನು ಪೂರ್ತಿ ನಂಬುವುದಕ್ಕಾಗುತ್ತಿರಲಿಲ್ಲ ಜೂಡಿಗೆ; ಅವರೆಲ್ಲರಿಗೂ ಮನೆಯಲ್ಲಾದರೂ ಏನಾದರೂ ಸ್ವಲ್ಪ ತಿನ್ನಲು ಇದ್ದೇ ಇರಬೇಕಲ್ಲವೇ? ಆದರೆ, ಒಂದು ದಿನ, ಬಟ್ಟೆ ಒಗೆಯುವ ದಾದಿ ವಾಸಿಕಿಯ ಮನೆಗೆ ಹೋಗಿಬರಲು ಅವಳಿಗೆ ಅವಕಾಶಕೊಟ್ಟಿತ್ತು ; ಮದರಾಸಿನಲ್ಲಿ ಎಲ್ಲೆಲ್ಲಿ ಖಾಲಿ ಜಾಗವಿರುತ್ತವೆಯೋ ಅಲ್ಲೆಲ್ಲ ಮಣ್ಣು ಮತ್ತು ತೆಂಗಿನಗರಿಯ ತಡಿಕೆಗಳಿಂದ ಕಟ್ಟಿದ ಮನೆಗಳಿರುವ ಹಳ್ಳಿಗಳಲ್ಲಿ ಒಂದರಲ್ಲಿ ಇತ್ತು ಆ ಮನೆ. ವಾಸಿಕಿಯದು ಚೆಲುವಾ ಚೊಕ್ಕಟವಾದ ಮನೆ ; ನೆಲ ಮತ್ತು ಗೋಡೆಗಳ ಮೇಲೆ ಒಂದು ಕಲೆಯೂ ಇರಲಿಲ್ಲ ; ಆದರೆ

ಭಾವಾಭಿನಯಗಳ ಅಭ್ಯಾಸರೂಪದ ಎರಡನೆಯ ನೃತ್ಯದಲ್ಲಿ ಇದು ಇನ್ನೂ ಹೆಚ್ಚು ಹೆಚ್ಚಾಗಿ ನಡೆಯುವಂತೆ ತೋರಿತು. ಲಕ್ಷ್ಮಿಯ ಕಣ್ಣಾಲಿಗಳೂ ಕೊರಳೂ ಪಕ್ಕದಿಂದ ಪಕ್ಕಕ್ಕೆ ಹೊರಳುತ್ತಿದ್ದುವು ; ಅವಳ ತೋಳುಗಳು ಹಾವುಗಳಂತೆ ಅಲೆಅಲೆಯಾಗಿ ಬಳುಕುತ್ತಿದ್ದವು ; ಅವಳ ಬೆರಳು ಬಟ್ಟಲುಗಳಾಗುತ್ತಿದ್ದುವು, ಹೂಗಳಾಗುತ್ತಿದ್ದುವು. ಸಜೀವವಾಗುತ್ತಿದ್ದುವು. ತೊಡಕಾದ ಲಯವಿನ್ಯಾಸಗಳಲ್ಲಿ ಪ್ರತಿಯೊಂದರಲ್ಲಿಯೂ ಒಂದು ಕೋಮಲ ಭಾವ, ಇಲ್ಲವೆ ನೃತ್ಯದಲ್ಲಿ ಆ ಒಂದು ಕ್ಷಣಮಾತ್ರ ಒಂದು ಹುಲಿಯೆ ಅಡಗಿಕೊಂಡಿದೆಯೋ ಎಂಬಂತೆ ಹಠತ್ತಾನೆ ತೋರುವ ದಿಗ್ಭ್ರಮೆಹಿಡಿಸುವ ಒಂದು ಭಯಂಕರ ಭಾವ, ಅಂತೂ ಯಾವುದೋ ಒಂದು ಭಾವ, ಇರುತ್ತಿತ್ತು.

ಲಕ್ಷ್ಮಿ ಹೀಗೆ ಪರಿವರ್ತನೆಗೊಳ್ಳಬಲ್ಲವಳಾಗಿರುವಾಗ ತಾನು ಅವಳನ್ನು ನಿಜವಾಗಿ ಬಲ್ಲೆನೆ ಎಂದು ನೆಲದಮೇಲೆ ಕುಳಿತಿದ್ದ ಜೂಡಿ ಅಚ್ಚರಿಗೊಳ್ಳ ತೊಡಗಿದಳು. ಆದರೆ ತಾಳ ನಿಂತಿತು; ಲಕ್ಷ್ಮಿ ತನ್ನ ಕೂದಲನ್ನು ಹಿಂದಕ್ಕೆ ಎಳೆದುಕೊಂಡಳು ; ಅವಳು ಬೆವರುತ್ತಿದ್ದಳು–ಮತ್ತು ತಾನೇ ಆಗಿದ್ದಳು. "ಒಂದೆಲ್ಲ ಒಂದು ದಿನ ನಾನು ನಿಜವಾಗಿ–ನೃತ್ಯಮಾಡುತ್ತೇನೆ, ಅದು ನನ್ನ ಆಸೆ" ಎಂದಳು ಅವಳು.

"ಅದು ಅದ್ಭುತವಾಗಿದ್ದೀತು," ತುಸ ಬೆಚ್ಚಿಯೇ ನುಡಿದಳು ಜೂಡಿ.

"ನಾವು ನಿನಗೆ ಕಲಿಸಿಕೊಡುತ್ತೇವೆ !" ಎಂದಳು ಲಕ್ಷ್ಮಿ. ಅದರಂತೆ, ಅಭ್ಯಾಸಗಳೆಲ್ಲ ಮುಗಿದಮೇಲೆ, ಅವಳೂ ಅವಳ ಗೆಳತಿಯರೂ ಜೂಡಿಗೆ ನೃತ್ಯವನ್ನು ಕಲಿಸಲು ಪ್ರಯತ್ನಿಸತೊಡಗಿದರು. ಆದರೆ ಅವಳಿಗೆ ನಿರ್ವಹಿಸಿಲಾಗಲಿಲ್ಲ. ಏನುಮಾಡಬೇಕೆಂದು ತಾಳಗಳು ತನಗೆ ಸೂಚಿಸುತ್ತಿದ್ದುವೊ ಅದನ್ನು ಅವಳು ಸರಿಯಾಗಿ ಕೇಳಿ ತಿಳಿದುಕೊಳ್ಳಲಾರದವಳಾಗಿದ್ದಳು. ಅವರಡಿಗಳೊಂದಿಗೆ ಹೋಲಿಸಿದರೆ ಅವಳ ಅಡಿಗಳೂ ಕೈಗಳೂ ಮೊದ್ದುಮೊದ್ದಾಗಿ ಭಾರವಾಗಿದ್ದುವು. ಆದರೂ ಕೂಡ, ಅವಳು ಅಲ್ಲಿಗೆ ಬಂದು, ನೃತ್ಯಮಾಡುವುದನ್ನು ಅನೇಕಸಲ ಗಮನವಿಟ್ಟು ನೋಡಿದಳು. ವಿಪರೀತ ಕಸುವುಳ್ಳ, ಕಾಲಿಗೆ ಗೆಜ್ಜೆ ಕಟ್ಟಿ ಕುಣಿಯುವ, ಉತ್ತರದ ಕಥಕ್ ನೃತ್ಯವು ವಿನೋದ ಪೂರ್ಣವಾಗಿತ್ತು ; ತಬಲಾವಾದ್ಯಗಳಲ್ಲಿ ಸದಾ ಬದಲಾಗುತ್ತಿರುವ ತಾಳಗತಿಗೆ ಅನುಸಾರವಾಗಿ ಇಡುವ ಸೂಕ್ಷ್ಮವಾದ ಪಾದವಿಕ್ಷೇಪಗಳಿಂದ ಕೂಡಿತ್ತು ಆ ನೃತ್ಯ ; ಆ ತಬಲಾ ವಾದ್ಯಗಳೋ, ಒಂದೊಂದು ಕಡೆ ಒಂದೊಂದು ವಿಧವಾಗಿ ತಟ್ಟಿದರೆ ಇಲ್ಲವೆ ಹೊಡೆದರೆ ಹಲವಾರು ಬಗೆಯಲ್ಲಿ ನುಡಿಯುವುವು. ಈ ನೃತ್ಯದಿಂದಲೇ ನೃತ್ಯಾಭ್ಯಾಸವನ್ನು ಪ್ರಾರಂಭ ಮಾಡುತ್ತಿದ್ದರು

ಜೂಡಿಗೆಗೊತ್ತಿದ್ದವರು ; ಹತ್ತಿಯಬಟ್ಟೆಯ ನೃತ್ಯದ ಪೈಜಾಮ ಹಾಕಿಕೊಂಡು, ಸೀರೆಯನ್ನು ಎಲ್ಲೊ ತುಸ ಹೊದೆದು, ಅವರೆಲ್ಲರೂ ಲಕ್ಷ್ಮಿಯಂತೆಯೆ ಉಡುಪುಹಾಕಿಕೊಂಡಿದ್ದರು ; ಅವರ ಕೂದಲಲ್ಲಿ, ಕೊರಳ ಹಿಂಬದಿಯಲ್ಲಿ ಉದ್ದನೆಯ ಕಪ್ಪು ಜಡೆ ಮೊದಲಾಗುವ ಕಡೆ, ಹೂವಂತೂ ಇದ್ದೇಇದ್ದುವು– ಸುವಾಸನೆ ಬೀರುವ ಹೂ ಗೊಂಚಲು. ಈ ನೃತ್ಯದಲ್ಲಿ ಪ್ರತಿಯೊಬ್ಬರೂ ಚಾವಣಿಯಿಂದ ತೂಗಬಿದ್ದಿದ್ದ ಒಂದೊಂದು ಬಟ್ಟೆಪಟ್ಟಿಯನ್ನು (ರಿಬ್ಬನ್) ಹಿಡಿದುಕೊಂಡಿರುವರು ; ಮದ್ದಳೆ, ಮೂರುತಂತಿಯ ವೀಣೆ ಮತ್ತು ಗಾಳಿಯಾಡುವುದಕ್ಕಾಗಿ ಪುಸ್ತಕದಂತೆ ತೆರೆದು ಮುಚ್ಚುತ್ತಿದ್ದ ವಿಚಿತ್ರವಾದ ಚಿಕ್ಕ ಹಾರ್ಮೋನಿಯಮ್ಮು*–ಇವುಗಳ ಸಂಗೀತಕ್ಕೆ ತಕ್ಕಹಾಗೆ ಕುಣಿಯುತ್ತ, ಎಲ್ಲರೂ ಆ ಪಟ್ಟಿಗಳನ್ನು ಒಟ್ಟಿಗೆ ಸೇರಿಸಿ ಹೆಣೆಯುವರು. “ಇದು ಒಂದು ಹಳ್ಳಿಯ ಕುಣಿತ !” ಎಂದಳು ಲಕ್ಷ್ಮಿ. ಇಂಗ್ಲೆಂಡಿನಲ್ಲಿ ಹಳ್ಳಿಯ ಹುಲ್ಲುಗಾವಲುಗಳಮೇಲೆ ಇರುತ್ತಿದ್ದ ‘ಮೇ ಹಬ್ಬದ–ಕಂಬ’ಗಳನ್ನು ಕುರಿತ ಹಳೆಯ ಚಿತ್ರಪಟಗಳ ಮತ್ತು ಕಥೆಪುಸ್ತಕಗಳ ನೆನಪಾಯಿತು ಜೂಡಿಗೆ, ಅದನ್ನು ಕಂಡು. ಆದರೆ ಇಂಗ್ಲೆಂಡಿನಲ್ಲೂ ‘ಮೇ’ ಹಬ್ಬದ ಕಂಬಗಳು ಯಾವವೂ ಇರಲಿಲ್ಲ ಈಗ.

ಲಕ್ಷ್ಮಿ ತನ್ನ ಸೀರೆಯನ್ನು ಇನ್ನಷ್ಟು ಬಿಗಿಯಾಗಿ ಗಂಟಿಕ್ಕುತ್ತ ಹೇಳಿದಳು– “ಈಗ ನನ್ನ ಭರತನಾಟ್ಯದ ಪಾಠ ಅಭ್ಯಾಸಮಾಡುತ್ತೇನೆ. ಹಾಗೆಂದರೆ, ಭಾರತದ ನೃತ್ಯ ಅಂತ, ಜೂಡಿ ; ದೇವರಿಗೆ ಅರ್ಪಿಸಿಬಿಟ್ಟಿಡ ಹುಡುಗಿಯರು ದೇವಸ್ಥಾನಗಳಲ್ಲಿ ಮಾತ್ರ ಆ ನಾಟ್ಯ  ನರ್ತಿಸುತ್ತಿದ್ದರು. ಈಗ ಅದು ನಮ್ಮ ಸ್ವಂತದ್ದು. ಆದರೆ, ಜೂಡಿ, ಈಗಲೂ ಅದು ಒಂದು ಬರಿಯ ಪ್ರಾರ್ಥನೆಯೆ. ಅದು ಬಹುಶಃ– ನಾನು ಖಂಡಿತವಾಗಿ ಹೇಳಲಾರೆ–ಒಂದು ನಲಿವು, ಒಂದುಸ್ತುತಿ. ಇನ್ನೇನು ನೀನೇ ನೋಡುವೆ.”

ಅವರು ಒಂದು ಸಣ್ಣ ಕೊಠಡಿಯೊಳಕ್ಕೆ ಹೋದರು ; ಕೊಳಕು ಕೋಡು ಯಾವುದೂ ಎಂದೂ ಸೋಕದೆ ಇದ್ದದ್ದರಿಂದ ಅದರ ನೆಲ ಫಳಫಳನೆ ಹೊಳೆಯುತ್ತ ನಯವಾಗಿತ್ತು. ಸಂಗೀತವೇನೂ ಇರಲಿಲ್ಲ ; ಆದರೆ ಅವಳ ಶಿಕ್ಷಕರು ಹಾಡುತ್ತಲೋ ರಾಗವನ್ನು ಗುಣಗುಟ್ಟುತ್ತಲೋ ನುರಿತ ಕೈಯಿಂದಲೂ ಒಂದು ಮರದ ತುಂಡಿನಿಂದಲೂ ತಾಳ ಹಾಕುತ್ತಿದ್ದರು. ಮೊದಲನೃತ್ಯದಿಂದ ಸ್ವಲ್ಪ ಕಾವೇರುವುದು, ಕೀಲುಗಳೂ ಮಾಂಸಖಂಡಗಳೂ ಬಾಗುವುವು ; ಲಕ್ಷ್ಮಿ ತಾನು ತಾನಾಗಿರದೆ, ನೃತ್ಯವೇ ಯಾವುದೋ ಆಕಾರ ತಳೆದಂತಾಗಿ, ತನ್ನ ಕಣ್ಣೆದುರಿಗೆಯೆ ಮಾರ್ಪಡುತ್ತಿರುವಂತೆ ಜೂಡಿಗೆ ತೋರಿತು. ಭಾವಭಂಗಿಗಳ ಮತ್ತು

ದೊಡ್ಡ, ತಂಪಾಗಿಕಾಣುವ ಕಟ್ಟಡ ಇದ್ದದ್ದು ಇಲ್ಲೆ ; ಆದರೆ ಭಾನುವಾರಗಳಂದು ಅಲ್ಲಿ ಯಾರೂ ಇರುತ್ತಿರಲಿಲ್ಲ, ಒಂದು, ಕಾರು ಕೂಡ ಇರುತ್ತಿರಲಿಲ್ಲ ಅಲ್ಲಿ ಕಾಣ ಬರುತ್ತಿದ್ದುದು, ಎತ್ತರವಾದ ಕಟ್ಟಡಗಳಿಂದ ಬೀಳುತ್ತಿದ್ದ ಚಚ್ಚೌಕ ನೆರಳುಗಳು, ಕಂಬಗಳು, ವರಾಂಡಗಳು, ಬಿಳಿಯಬಣ್ಣ ಬಳಿದು ಗಂಭೀರವಾಗಿ ಕಾಣುವ ಕಿಟಕಿ ಸಾಲುಗಳು ಇವೆಲ್ಲ ಇರುವ, ಶಾಂತವಾದ, ಪ್ರಿಯವೆನಿಸುವ, ಹಿಂಭಾಗದ ಹಳೆಯ ಚೌಕ. ಅವೆಲ್ಲ ಬಹುಮಟ್ಟಿಗೆ ಈಗ ದಂಡಿನ ಬಿಡಾರದ ಮನೆಗಳಾಗಿದ್ದುವು; ಹಿತ್ತಾಳೆಯ ಸಾಮಾನನ್ನೆಲ್ಲ ಮೆರುಗಿಟ್ಟು, ಹಳೆಯ ಕಾಲದ ಕಲ್ಲಿನ ಫಿರಂಗಿ ಗುಂಡುಗಳಿಗೆಲ್ಲ ಕಪ್ಪು ಬಣ್ಣ ಹಾಕಿ ಅವುಗಳನ್ನು ಸುಣ್ಣಬಳಿದ ಗುಂಡು ಜಾಗಗಳಲ್ಲಿ ಪೇರಿಸಿಟ್ಟು, ತಾಳೆಯ ಮರಗಳ ಗರಿಗಳು ಅಸ್ತವ್ಯಸ್ತವಾಗಿ ಕಂಡುಬಂದಲ್ಲಿ ಅವನ್ನು ಕೂಡ ಕತ್ತರಿಸಿ ಓರಣಮಾಡಿ, ಆ ಬಿಡಾರದ ಮನೆಗಳನ್ನು ಮದರಾಸು ಸೈನ್ಯದವರು ಬಹು ಚೊಕ್ಕಟವಾಗಿಯೂ ಠಾಕುಠೀಕಾಗಿಯೂ ಇಟ್ಟುಕೊಂಡಿದ್ದರು. ಫೋರ್ಟ್ ಸೆಯಿಂಟ್ ಜಾರ್ಜ್ (Fort St. George) ಬಳಿ ಒಂದು ಸೊಗಸಾದ ತಂಪಾದ ವಸ್ತುಸಂಗ್ರಹಾಲಯ (ಮ್ಯೂಸಿಯಂ) ಇತ್ತು ; ಆದರೆ ಹೊರಗಡೆ, ಕಡಲಕಡೆಗೆ ಮುಖ ಮಾಡಿಕೊಂಡು, ಗೆಲವಾಗಿ ಕಾಣುವ ನಕಾಸೆ ಚಿತ್ರಗೆಲಸದಿಂದ ಅಲಂಕೃತವಾದ ಹಳೆಯಕಾಲದ ಕಬ್ಬಿಣದ ಫಿರಂಗಿ ಒಂದಿತ್ತು. ಚಳಿಗಾಲದಲ್ಲಿ ಆ ಹಳೆಯ ಕೋಟೆಯ ಗೋಡೆಗಳ ಮೇಲಕ್ಕೆ ನಡೆದುಹೋಗುವುದೆಂದರೆ ಜೂಡಿಗೆ ಇಷ್ಟ ; ಆದರೆ ಈಗಲ್ಲ, ಈಗ ಕಲ್ಲು ಕೈಗಳನ್ನು ಸುಡುವುವು.

ಊರಿನ ಇನ್ನೊಂದು ವಸ್ತು ಸಂಗ್ರಹಾಲಯದಲ್ಲಿ ಜನದ ಗುಂಪು ಹೆಚ್ಚು; ಆದರೆ ಬೆನ್ನನಿಗೆ ಮಾದರಿ ಗ್ರಾಮಗಳನ್ನು ಕಂಡರೆ ಇಷ್ಟ, ಅವನ ದಾದಿಗೆ ನೆರಳಾದ ಉದ್ಯಾನವೂ ಇತರ ದಾದಿಗಳ ಜೊತೆಯೂ ಬೇಕು. ಅವಳು ಬೆನ್ನನಿಗೆ, ('ಒಬ್ಬ ಹುಡುಗ ಬಂದ. ಒಬ್ಬ ಹುಡುಗ ಒಂದು, ಎರಡು ಒಮ್ಮೆ ನೋಡಿದ'.....) ಎಂದು ಇಂಗ್ಲೀಷಿನಲ್ಲಿ ಕತೆಗಳನ್ನು ಹೇಳತೊಡುಗುವಳು. ಅವು ಸಾಧಾರಣವಾಗಿ ಯಾವಾಗಲೂ ತಮಿಳಿಗೆ ತಿರುಗಿಬಿಟುತ್ತಿದ್ದುವು. ಆದರೆ ಬೆನ್ ಅವನ್ನು ಒಂದು ರೀತಿಯಲ್ಲಿ ಅರ್ಥಮಾಡಿಕೊಳ್ಳುತ್ತಿದ್ದ ; ಮತ್ತು ಜೂಡಿ ತನಗೆ ಸರಿಯಾದ ಇಂಗ್ಲಿಷಿನಲ್ಲೆ ಹೇಳುತ್ತಿದ್ದ. 'ಹಂಪ್ಟಿಡಂಪ್ಟಿ' ಇಲ್ಲವೆ 'ಜ್ಯಾಕ್ ಮತ್ತು ಜಿಲ್' ಪದ್ಯಗಳಷ್ಟೇ ಈ ಕತೆಗಳನ್ನೂ ಮೆಚ್ಚಿಕೊಂಡಿದ್ದ.

ಜೂಡಿ ಕಲಾ ಕ್ಷೇತ್ರದಲ್ಲಿ ನಾಟ್ಯವನ್ನು ನೋಡಿದ ತರುವಾಯ, ನೃತ್ಯಾಭಿಮಾನಿ ದೇವತೆ ನಟರಾಜನೆನಿಸಿದ ಶಿವನ ದೊಡ್ಡ ಕಂಚಿನ ವಿಗ್ರಹಗಳು ಏನೆಂಬುದು ತನಗೆ ಅರ್ಥವಾಗುತ್ತಿರುವುದಾಗಿ ಅವಳಿಗೆ ತಟ್ಟನೆ ತೋರಿತು. ವಿಚಿತ್ರವಾಗಿ

ಹೆಚ್ಚು ಚಿಕ್ಕ ವಯಸ್ಸಿನ ಮಕ್ಕಳು ; ಮೊದಲು ಪೋಲೀಸು ಶಿಕ್ಷಣದ ಕವಾಯತುಗಳನ್ನು ಬಹುಮಟ್ಟಿಗೆ ಹೋಲುವ ತೋಳಿನ ಹಾಗೂ ಕೈಯಿನ ಚಲನೆಗಳನ್ನು ಕಲಿಯುತ್ತ, ಕಾಲಿನ ಗೆಜ್ಜೆ ಘಲ್‌ಘಲ್ ಎನ್ನುತಿರಲು ಪುಟ್ಟ ಕುದುರೆಗಳಂತೆ ನೆಲ ಘಟ್ಟಿಸುತ್ತಿದ್ದರು. ಕಲಿಯುವುದು ಸುಲಭವಾಗಿದ್ದಿರಬೇಕು ಎಂದು ಜೂಡಿ ಬಗೆಯುವಳು ; ಆದರೆ ಏಕೋ ಅದು ಹಾಗಿರಲಿಲ್ಲ !

ಒಮ್ಮೆ ಅವಳು ಬಂದು, ಕೆಲವು ಹುಡುಗರನ್ನು ಗಮನಿಸಿದಳು. ದಕ್ಷಿಣ ಭಾರತದ ಕಥಕ್ಕಳಿ ನೃತ್ಯವನ್ನು ಅವರು ನರ್ತಿಸುತ್ತಿದ್ದರು ; ಅದು ಅರ್ಧಪಾಲು ನಾಟಕಾಭಿನಯದಂತೆ ಇರುತ್ತದೆ ; ಅದರಲ್ಲಿ ನೃತ್ಯನಾಡುವವರು ಕೆಂಪು, ಹಸುರು ಮತ್ತು ಕಪ್ಪು ಬಣ್ಣಗಳನ್ನು ದಟ್ಟವಾಗಿ ಬಳಿದುಕೊಂಡು, ಸಾಂಗೋಪಾಂಗವಾಗಿ ಉಡುಪು ಧರಿಸಿ ವೇಷ ಹಾಕಿಕೊಂಡಿರುತ್ತಾರೆ. ಈ ಹುಡುಗರು ಅವರ ಅಭ್ಯಾಸದ ಬಟ್ಟೆಗಳನ್ನು ಮಾತ್ರ. ಎಂದರೆ ಸಡಿಲವಾದ ಮಡಿಚಿದ ಬಿಳಿಯ ಷರಾಯಿಗಳನ್ನು ಧರಿಸಿದ್ದರು ; ಹುಡುಗಿಯರಂತೆ ಅವರು ಬರಿಗಾಲಿನಲ್ಲಿಯೆ ಇದ್ದರು ; ಉದ್ದಕ್ಕೂ ಒಬ್ಬ ಹಾಡುಗಾರ ಅವರು ಅಭಿನಯಿಸುತ್ತಿದ್ದ ನೃತ್ಯದ ಕಥೆಯನ್ನು ರಾಗವಾಗಿ ಹೇಳುತ್ತಿದ್ದ. ನಮಗೆ ಆ ಹಾಡು ಅರ್ಥವಾಗದಿದ್ದರೂ ನಾವು ನೃತ್ಯವನ್ನು ಅರ್ಥಮಾಡಿಕೊಳ್ಳಲು ಅಡ್ಡಿಯಿಲ್ಲ. ಅದರಲ್ಲಿ, ತಾನೂ ಒಬ್ಬ ದೇವತೆಯಾದ ಕಪಿರಾಜ ಹನುಮಂತನು ತಾನು ಗುರುತುಹಿಡಿದ ಕಾಡಿನ ತರುಣವೀರರನ್ನು ಎದುರಿಸಿ, ಅವರೊಂದಿಗೆ ಹೋರಾಡಿ, ತಾನಾಗಿ ಅವರಿಗೆ ಸೆರೆಬೀಳುತ್ತಾನೆ. ಅಚ್ಚರಿಗೊಳಿಸುವ ರೀತಿಯಲ್ಲಿ ನಿಧಾನವಾಗಿ ನೆಗೆಯುತ್ತ ನಿಲ್ಲುತ್ತ, ಬೆರಳು ಮಿಡಿಯುತ್ತ, ಕಣ್ಣಿಂದ ಸನ್ನೆಮಾಡುತ್ತ, ಬಿಲ್ಲು ಬಗ್ಗಿಸುತ್ತ, ಈಟಿಗಳನ್ನೆಸೆಯುತ್ತ, ಒಬ್ಬರನ್ನೊಬ್ಬರು ಮೂದಲಿಸುತ್ತ, ಹುಡುಗರು ಅದನ್ನು ಅಭಿನಯಿಸಿಬಿಟ್ಟರು. ಅವರು ಎಷ್ಟು ಸ್ಪಷ್ಟವಾಗಿ ಅಭಿನಯಿಸಿದರೆಂದರೆ ನಿಜವಾದ ಬಿಲ್ಲುಗಳೂ ಈಟಿಗಳೂ ನಮಗೆ ಕಂಡಂತೆಯೇ ತೋರುವುದು, ಕಾಲಡಿಯಲ್ಲಿ ನೆಲಬಿರುಕು ಬಿಟ್ಟಂತೆಯೇ ಕಾಣುವುದು, ಎದೆಯಮೇಲೆ ಧಾರಾಕಾರವಾಗಿ ಬೆವರು ಪ್ರವಹಿಸುತ್ತಿರಲು ಹರೆಯದ ಹನುಮಂತನು ಚಿಮ್ಮುತ್ತ ತೂಗಾಡುತ್ತ ಕಂಪಿಸುತ್ತಿದ್ದಾಗ ಅವನು ವೇಷ ಮರಸಿಕೊಂಡ ದೇವತೆಯೆಂದೇ ತಿಳಿಯುವೆವು. ತಾನು ಪೂರ್ತಿ ಇನ್ನೊಬ್ಬ ವ್ಯಕ್ತಿಯಾಗಿ ಮಾರ್ಪಾಟುಹೊಂದಬಲ್ಲ ಸಾಮರ್ಥ್ಯ ಹೊಂದಿರುವುದು ಆಶ್ಚರ್ಯಕರ, ಅದ್ಭುತ ಎಂದು ಬಗೆದಳು ಜೂಡಿ !

ವಾರಾಂತ್ಯದಲ್ಲಿ ಕೆಲವು ವೇಳೆ ಅವರು ಕಾಡಿನಲ್ಲಿ ಕುಳಿತು ಕೋಟೆಗೆ ಹೋಗುವರು. ಮದರಾಸಿನ ಪಾರ್ಲಿಮೆಂಟು (ವಿಧಾನ ಸಭೆ) ಸೇರುತ್ತಿದ್ದ,

ಅವಳು ಇದ್ದುದೇ ಅವರ ಗಮನಕ್ಕೆ ಬಂದಿರಲಾರದು. ಒಂದೆರಡು ಸಲ ಲಕ್ಷ್ಮಿಯ ತಂಗಿ ಸರಸ್ವತಿ ಬಂದಿದ್ದಳು; ಅವಳು ಸಾಧಾರಣ ರೀತಿಯ ಚಿಕ್ಕ ಹುಡುಗಿ ; ಅವಳ ತಮ್ಮ ಕಂದನ್ ಅನೇಕ ಸಲ ಬಂದಿದ್ದ. ಗಲಭೆಯಿಂದಲೇ ಗೊತ್ತಾಗಿಹೋಗುತ್ತಿತ್ತು ಅವನು ಎಂದು; ಅವನು ಯಾವಾಗಲೂ ಕೂಗಾಡುತ್ತ ಸುತ್ತಮುತ್ತ ಹಾರಾಡುತ್ತಿದ್ದ. ಆದರೆ ಅನೇಕವೇಳೆ ಅವಳ ಪುಟ್ಟ ತಂಗಿ ಪಾರ್ವತಿಯದೇ ಗಲಾಟೆ ಹೆಚ್ಚು ; ಅವಳು ಬೆನ್‌ಗಿಂತ ಸ್ವಲ್ಪ ಚಿಕ್ಕವಳು. ಅವಳ ಕಾಲಿಗೆ ಬೆಳ್ಳಿಯ ಗೆಜ್ಜೆ ಕಟ್ಟಿತ್ತು ; ಅವಳು ಅವರೊಂದಿಗೆ ಗಂಟೆಗಟ್ಟಲೆ ಆಟವಾಡುತ್ತ ಕಾಲಕಳೆಯುವಳು. ಹೀಗೆ ಸ್ವಲ್ಪ ಕಾಲವಾದಮೇಲೆ, ಮೊದಲು ಬೆನ್, ಆ ಬಳಿಕ ಜೂಡಿ, ಆ ಹಿಂಭಾಗದ ಮನೆಯ ಯಜಮಾನಿಯನ್ನು ಆಕೆಯ ಮೊಮ್ಮಕ್ಕಳು ಕೂಗುತ್ತಿದ್ದಂತೆಯೆ 'ಅಮ್ಮಣ್ಣಿ ಪಾಟಿ' ಎಂದು ಕರೆಯತೊಡಗಿದರು; ಆ ಮನೆಯಾಕೆಗೂ ಅದು ಇಷ್ಟವೇ ಆಯಿತು.

ಬೇಗನೆ ಆಕೆ ಜೂಡಿಯೊಂದಿಗೆ ತುಂಬ ಮಾತುಕತೆ ಆಡತೊಡಗಿದರು. ಒಂದುದಿನ ವರಾಂಡದಲ್ಲಿ ಕುಳಿತಿದ್ದಾಗ ಆಕೆ ತಮ್ಮ ಸ್ವಂತಜೀವನದ ವಿಚಾರ ಅವಳಿಗೆ ಹೇಳಿಕೊಂಡರು. "ನನ್ನ ತಂದೆ ತಾಯಿ ತುಂಬ ಸಂಪ್ರದಾಯವಂತರು; ನಾನೂಕೂಡ ಬಹಳ ಸಂಪ್ರದಾಯವಂತ ಬ್ರಾಹ್ಮಣರಹಾಗೆ ಇರಬೇಕೆಂದು ಅವರ ಆಸೆ. ಆದರೆ ನನಗೆ ವಿದ್ಯಾಭ್ಯಾಸದಮೇಲೆ ಆಸೆ. ನಾನು ಅತ್ತೆ, ಕೂಗಾಡಿದೆ; ತುಂಬ ಕೆಟ್ಟಹುಡುಗಿಯಾಗಿಬಿಟ್ಟೆ ನಾನು !" ಎಂದು, ಅಕೆ ತಮ್ಮಷ್ಟಕ್ಕೆ ತಾವೆ ನಸುನಕ್ಕರು. "ಆದರೆ ನಾನು ಬಯಸಿದ ವಿದ್ಯಾಭ್ಯಾಸ ನನಗೆ ದೊರಕಿತು. ಅದು ನಿಜ. ನಾನು ಕಾಲೇಜಿಗೆ ಹೋದೆ. ಅಲ್ಲಿ ಒಬ್ಬ ಇಂಗ್ಲಿಷ್ ಉಪಾಧ್ಯಾಯಿನಿ ಇದ್ದರು–ಆಕೆ ನನಗೆ ಎಷ್ಟು ಸಹಾಯಮಾಡಿದರು ಅಂತ ! ನನ್ನ ದೇಶಕ್ಕಾಗಿ ಮಹಾಮಹಾಕಾರ್ಯಗಳನ್ನು ಮಾಡಬೇಕೆಂದು ನನ್ನ ಹಂಬಲವಿತ್ತು. ಇಷ್ಟೆಲ್ಲ, ನೀವು ಇಂಗ್ಲಿಷರು ಇಲ್ಲಿದ್ದಾಗ, ನಾವು ಸ್ವಾತಂತ್ರ್ಯ ಬಯಸುತ್ತಿದ್ದಾಗ–ಆದರೂ ಕೂಡ, ಇಂಗ್ಲಿಷಿನಲ್ಲಿದ್ದ ಎಷ್ಟೋ ಘನವಾದ ಗಂಭೀರವಾದ ಪುಸ್ತಕಗಳನ್ನು ಸಹ ನಾನು ಓದುತ್ತಿದ್ದೆ ! ಒಂದು ವರ್ಷಕಾಲ ನಾನು ಪಾಠಹೇಳುತ್ತಿದೆ; ಆಮೇಲೆ, ಬಹಳ ಸಂಪ್ರದಾಯವಂತರಾದ ನಮ್ಮ ಮನೆಯವರು ನಾನು ಮದುವೆಯಾಗಬೇಕು ಅಂತ ಇಷ್ಟಪಟ್ಟರು. ವಿದ್ಯಾವಂತನನ್ನು ಮಾತ್ರ ನಾನು ಮದುವೆಯಾಗುವುದಾಗಿ ತಿಳಿಸಿಬಿಟ್ಟೆ. ಒಳ್ಳೆಯದು, ಹಾಗೇ ಆಗಲಿ, ವಿದ್ಯಾವಂತನನ್ನೆ ಹುಡುಕುತ್ತೇವೆ, ಎಂದರು ಅವರು." ಆಕೆ ಮತ್ತೆ ತುಸ ನಕ್ಕರು. "ನಡೆದದ್ದು ಹಾಗೆ ಕಣಮ್ಮ, ಜೂಡಿ."

ಕಾಣುತ್ತಿದ್ದ ಆ ತೋಳುಗಳ, ಕಾಲಗಳ ಮತ್ತು ಬೆರಳುಗಳ ಭಂಗಿಗಳು ಹೇಗೆ ಶುದ್ಧಾಂಗವಾಗಿ ಸರಿಯಾದವು, ನಿಜವಾದ ಪರಿಪೂರ್ಣ ಸಮತೋಲನ ಸ್ಥಿತಿಯನ್ನು ವ್ಯಕ್ತಪಡಿಸಲು ಅವನ್ನು ಬಿಟ್ಟರೆ ಇಲ್ಲ ಎಂಬುದನ್ನು ಅವಳು ಈಗ ಕಂಡುಕೊಂಡಳು. ಒಮ್ಮೆ ಅವಳೂ ಲಕ್ಷ್ಮಿಯೂ ಮ್ಯೂಸಿಯಮ್ಮಿನ ಆ ವಿಗ್ರಹಗಳು ನಿಂತಿರುವ ವೇದಿಕೆಯ ಮೇಲೆ ಸಂಧಿಸಿ, ಒಬ್ಬರನ್ನೊಬ್ಬರು ನೋಡಿ, ತಲೆಯಲ್ಲಾಡಿಸಿದರು ; ಅವರಿಬ್ಬರೂ ಒಟ್ಟಾಗಿ ಒಂದು ರಹಸ್ಯವನ್ನು ಅನುಭವಕ್ಕೆ ತಂದುಕೊಂಡಿದ್ದರು; ಲಕ್ಷ್ಮಿಯಬಳಿ ತನ್ನದೇ ಒಂದು ಚಿಕ್ಕ ನಟರಾಜ ವಿಗ್ರಹವಿತ್ತು. ಅವಳು ಆ ನಟರಾಜನ ಮೇಲೂ ಸುತ್ತಲೂ ಬಹು ಎಚ್ಚರಿಕೆಯಿಂದ, ಮತ್ತು ಎಲ್ಲಿರಿಸಬೇಕೊ ಅಲ್ಲಿ, ಬಿಡಿ ಹೂಗಳನ್ನು ಇಡುತ್ತಿದ್ದಳು.

ಇದು ಅವಳ ತಂದೆಯ ಮಹಡಿ ಮನೆಯಲ್ಲಿ ; ಅದು ಮದರಾಸಿನ ಮಧ್ಯ ಭಾಗಕ್ಕೆ ಹೆಚ್ಚು ಹತ್ತಿರವಾಗಿದ್ದು, ಆಧುನಿಕ ರೀತಿಯದಾಗಿ ಕಾಣುತ್ತಿತ್ತು. ಅಲ್ಲಿ ತೋಟ ಇಲ್ಲ ಎನಿಸಿರಲಿಲ್ಲ ; ಏಕೆಂದರೆ, ಕುಂಡಗಳಲ್ಲಿ ಬೆಳೆದ ಹೂಗಿಡಗಳಿಂದ ತುಂಬಿದ್ದ ಸೊಗಸಾದ ವಿಶಾಲವಾದ ವರಾಂಡ ಇತ್ತು. ಕೊಟಡಿಗಳೆಲ್ಲ ದೊಡ್ಡವಾಗಿದ್ದುವು ; ಅಲ್ಲಿಂದ ಕೆಳಗೆ ನೋಡಿದರೆ ಹೊಂಬಣ್ಣದ, ಕಿತ್ತಿಳೆ ಬಣ್ಣದ ಪಾಟಲವರ್ಣದ ಹೂಗಿಡಗಳ ಮೇಲ್ಭಾಗಗಳು ಕಾಣುತ್ತಿದ್ದವು; ಬೀಸಣಿಗೆಯಂತ್ರ, (ಶೀತಕ ಕಪಾಟು, ರೆಫ್ರಿಜರೇಟರು) ಮುಂತಾಗಿ ಪ್ರತಿಯೊಂದೂ ಸರಿಯಾಗಿ ಕೆಲಸ ಮಾಡುವಂತೆ ಕಂಡಬರುತ್ತಿತ್ತು. ಅಲ್ಲಿ ಬೇಕಾದಷ್ಟು ಪುಸ್ತಕಗಳಿದ್ದವು, ಆದರೆ ಅವೆಲ್ಲ ಬಹುಮಟ್ಟಿಗೆ ಎಂಜಿನಿಯರಿಂಗ್ ವಿಷಯಕ್ಕೆ ಸಂಬಂಧಪಟ್ಟಿದ್ದುವು ; ಅವರಿಬ್ಬರೂ ಮೆಚ್ಚಿಕೊಂಡಿದ್ದ ಒಂದು ಹಕ್ಕಿಯ, ಚೀಣೀಯ ಚಿತ್ರಪಟವೂ ಅಲ್ಲಿತ್ತು; ಅದು ಅಷ್ಟೇನೂ ನಿಕರವಾದ, ಎಚ್ಚರಿಕೆಯಿಂದ ಬರೆದ ಚಿತ್ರವಾಗಿರದೆ, ಕೇವಲ ಕೆಲವು ಗೆರೆ ಮತ್ತು ಬಟ್ಟುಗಳಿಂದ ಬರೆದದ್ದಾಗಿತ್ತು. ಲಕ್ಷ್ಮಿಯ ತಾಯಿ ಒಳ್ಳೆಯವರು, ಅಂದವಾಗಿದ್ದರು ; ಆದರೆ ಹೆಚ್ಚು ಇಂಗ್ಲಿಷ್ ಮಾತಾಡಲು ಬರುತ್ತಿರಲಿಲ್ಲ ಅವರಿಗೆ, ಅವಳ ತಂದೆ ಹೆಚ್ಚುಕಡಮೆ ಯಾವಾಗಲೂ ತರಾತುರಿಯಲ್ಲಿರುತ್ತಿದ್ದರು; ಹಾಗಿಲ್ಲದಿದ್ದಾಗ, ತುಂಬ ಹಾಸ್ಯಮಾಡುತ್ತಿದ್ದರು ; ಲಕ್ಷ್ಮಿಯೆಂದರೆ ಅವರಿಗೆ ಬಲು ಬಲು ಅಕ್ಕರೆ.

ಜೂಡಿ ಆ ಮಹಡಿಗೆ ತುಂಬ ಸಲ ಹೋಗುತ್ತಿರಲಿಲ್ಲ. ಲಕ್ಷ್ಮಿ ಅಲ್ಲಿದ್ದಾಗ ಬೇಲಿಯನ್ನು ನುಸುಳಿಕೊಂಡು ಅವಳು ಪಕ್ಕದ ಮನೆಗೆ ಹೋಗುತ್ತಿದ್ದಳು. ತಾನು ಕಣ್ಣಿಗೆ ಬಿದ್ದರೆ ತನ್ನನ್ನು ಬರಮಾಡಿಕೊಳ್ಳುವರು ಎಂದು ಅವಳ ನಿರೀಕ್ಷೆ ಅವಳಿಗೆ ಲಕ್ಷ್ಮಿಯ ಅಜ್ಜನ ವಿಚಾರವಾಗಿ ಎಂದೂ ಪೂರ ಧೈರ್ಯ ಇರಲಿಲ್ಲ; ಬಹುಶಃ

ಚಿತ್ರಪಟಗಳು, ಇವೆಲ್ಲ ಅಲ್ಲಿದ್ದುವು. ಅಲ್ಲಿದ್ದ ಚಿತ್ರಗಳ ಪೈಕಿ ಚೌಕಟ್ಟು ಹಾಕಿದ್ದ ಕೆಲವು ಗಂಭೀರವ್ಯಕ್ತಿಗಳ ಛಾಯಾಚಿತ್ರಗಳು; ಕೆಲವು ಸಲ ಅವಕ್ಕೆ ಹೂವಿನಹಾರ ಹಾಕಿರುತ್ತಿತ್ತು ; ಆದರೆ, ಅವುಗಳ ಪೈಕಿ ಜೂಡಿ ಮೆಚ್ಚಿಕೊಂಡಿದ್ದ ಎರಡು ಚಿತ್ರಗಳಿದ್ದವು. ಒಂದು, ಭಾರತೀಯ ರಾಜರ ಚಿತ್ರ; ಅದರಲ್ಲಿ ಅವರು ಮಸ್ಲಿನ್ ಬಟ್ಟೆಯ ಉದ್ದನಯ ನಿಲುವಂಗಿ ತೊಟ್ಟು, ಜರಿ ಅಂಚಿನ ವಸ್ತ್ರ ಧರಿಸಿ, ಚಿಕ್ಕಚಿಕ್ಕ ಬಿಲ್ಲುಗಳಿಂದ ಒಂದು ಗುರಿಯ ಕಡೆಗೆ ಬಾಣ ಬಿಡುತ್ತಿದ್ದರು ಅವರ ಹಿಂಬದಿಯಲ್ಲಿ ಒಂದು ತೋಟ; ಅದರಲ್ಲಿ ನಡೆದಾಡುವ ದಾರಿಗಳು. ಹೂವಿನ ಪಾತಿಗಳು, ಹೂಬಿಡುವ ಗಿಡಮರ, ನವಿಲುಗಳು, ಎಲ್ಲ ಇದ್ದುವು, ಒಂದು ಅಂಗುಲ ಮಾತ್ರ ಎತ್ತರದ ಮಾವಿನ ಮರಗಳಿದ್ದುವು; ಆದರೂ ಅದರಲ್ಲಿ ಬಿಟ್ಟಿದ್ದ ಮಾವಿನ ಹಣ್ಣುಗಳನ್ನು ಎಣಿಸಬಹುದಾಗಿತ್ತು. ಇನ್ನೊಂದು ಚಿತ್ರ, ಸರೋವರದ ಪಕ್ಕದಲ್ಲಿ ನಿಂತಿದ್ದ ಒಬ್ಬ ಹೆಂಗಸಿನದು; ಅವಳ ಸೀರೆಯ ಸೆರಗು ಅವಳ ಹಿಂದೆ ಗಾಳಿಗೆ ಹಾರಾಡುತ್ತಿತ್ತು, ಅವಳ ಕೈಲಿ ಒಂದು ಕನ್ನಡಿಯಿತ್ತು. ಕನ್ನಡಿಯಲ್ಲಿ ಅವಳ ಮುಖದ ಪುಟಾಣಿ ಪ್ರತಿಬಿಂಬವನ್ನು ಕೂಡ ಕಾಣಬಹುದಾಗಿತ್ತು; ಜೊತೆಗೆ, ತೆಳ್ಳನೆಯ ಕಾಲಿನ ಚುಕ್ಕಿಗಳಿದ್ದ ಜಿಂಕೆಗಳು ಅವಳ ಬಳಿಗೆ ಧೈರ್ಯದಿಂದ ಹೋಗುತ್ತಿದ್ದವು ; ಉದ್ದನೆಯ ಕಾಲಿನ ಕೊಂಕಿಕೊಕ್ಕಿನ ಹಕ್ಕಿಗಳೂ ಕೆಲವಿದ್ದವು. ದಿನದ ಒಂದು ಗೊತ್ತಾದ ಹೊತ್ತಿನಲ್ಲಿ ಮಾತ್ರ ಹಾಡಬಹುದಾದ ಒಂದು ರಾಗದ ಚಿತ್ರ (ರಾಗಿಣಿ) ಅದು, ಎಂದು ಹೇಳಿದರು ಅಮ್ಮಣ್ಣಿ ಪಾಟಿ.

ಈ ಚಿತ್ರಗಳನ್ನು ಜೂಡಿ ಅಷ್ಟೊಂದು ಮೆಚ್ಚಿಕೊಂಡದ್ದನ್ನು ಕಂಡು, ಅಮ್ಮಣ್ಣಿ ಪಾಟಿ ಕೆತ್ತನೆಕೆಲಸಮಾಡಿದ್ದ ಪೆಟ್ಟಿಗೆಯೊಂದರಲ್ಲಿ ತಾವು ಇಟ್ಟಿದ್ದ ಬೇರೆ ಮೂರು ಚಿತ್ರಗಳನ್ನು ಅವಳಿಗೆ ತೋರಿಸಿದರು. ಒಂದು, ಹೋರಾಡುವ ಆನೆಗಳದ್ದು ; ಅವು ಒಂದನ್ನೊಂದು ತಮ್ಮ ಸೊಂಡಿಲಗಳಿಂದ ಬಡಿದಾಡುತ್ತಿದ್ದುವು, ಈಟಿಗಳನ್ನು ಹಿಡಿದಿದ್ದ ಚಿಕ್ಕ ಮನುಷ್ಯರು ನೋಡುತ್ತಿದ್ದರು. ಎರಡನೆಯದು, ಬಹಳ ಗಂಭಿರಾಕೃತಿಯ, ನೀಳ ಪುರುಷನದು; ಆತನ ಮುಂಗೈಮೇಲೆ ಕೆನೆಬಣ್ಣದ ಭಯಂಕರವಾದ, ಗೆಜ್ಜೆ ಕಟ್ಟಿದ್ದ, ಚೆಂದವಾದ ಗಿಡುಗ ಪಕ್ಷಿ ಕುಳಿತ್ತು ; ಬಿರುಗಾಳಿ ಮಳೆಯನ್ನು ಸೂಚಿಸುವ ಆಕಾಶದ ಕೆಳಗೆ, ಕಪ್ಪು ಮೂತಿ ಕಪ್ಪು ಬಾಲಗಳೂ ಕೆಂಬಣ್ಣ ಹಚ್ಚಿದ್ದ ಕಾಲುಗಳೂ ಉಳ್ಳ ಬೂದು ಬಣ್ಣದ ಕುದುರೆಯನ್ನು ಸವಾರಿಮಾಡುತ್ತಿದ್ದ ಆತ ಮೂರನೆಯದು, ಒಂದು ಗವುಜಗ ಹಕ್ಕಿಯದು; ಅದರ ಪ್ರತಿಯೊಂದು ಗರಿಗೂ ಅಂದವಾಗಿ ಬಣ್ಣಹಾಕಿತ್ತು. ಖಂಡಿತವಾಗಿಯೂ ಇದು ತಮ್ಮ ತಂದೆಯನ್ನು ಕೂಡ ಮೆಚ್ಚಿಸುವಷ್ಟು ಕರಾರವಾಕಾಗಿದೆ, ಎಂದಿಕೊಂಡಳು

"ಆಮೇಲೆ, ನಿಮಗೆ ಮದುವೆ ಆಯಿತು, ಅಲ್ಲವೆ ?"

"ಓಹೋ, ಆಯಿತು. ನಾನು ಇಷ್ಟೆಲ್ಲಾ ಹೋರಾಡಬೇಕಾಯಿತು; ಆದರೆ ನನ್ನ ಹೆಣ್ಣು ಮಕ್ಕಳು ವಿದ್ಯಾಭ್ಯಾಸದ ಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ, ಕಡೆಗೆ ಬಿ ಎ ಪ್ಯಾಸು ಮಾಡುವುದೂ ಬೇಕಾಗಲಿಲ್ಲ ಅವರಿಗೆ. ಆದ್ದರಿಂದ ಅವರಿಗೆ ಮದುವೆ ಮಾಡಿಬಿಟ್ಟೆವು; ನನಗೆ ಇನ್ನೂ ಹೆಚ್ಚು ಮೊಮ್ಮಕ್ಕಳಾದರು. ಆದರೆ ನನ್ನ ಮಗ ಕುಮಾರ್ ಇದ್ದಾನಲ್ಲ, ಅವನಿಗೆ ಆ ಕಡೆ ಲಕ್ಷ್ಯ ಹೋಯಿತು; ಸಂಸ್ಕೃತ ವಿದ್ವಾಂಸನಾಗುವುದು ಅವನಿಗೆ ಬೇಕಿರಲಿಲ್ಲ; ನನಗೆ ಹೇಗೆ ಅಪೇಕ್ಷೆಯಾಗಿತ್ತೊ ಹಾಗೆ ಅವನಿಗೂ ತನ್ನ ದೇಶಕ್ಕಾಗಿ ಮಹಾಕಾರ್ಯಗಳನ್ನು ಮಾಡಬೇಕೆಂದೆ ಹೆಚ್ಚು ಅಪೇಕ್ಷೆಯಾಯಿತು. ಆದ್ದರಿಂದ ಅವನು ಇಂಜಿನಿಯರ್ ಆದ ; ಯೂರೋಪಿನಲ್ಲಿ ಶಿಕ್ಷಣ ಪಡೆದ; ಈ ವಿಚಾರದಲ್ಲಿ ಮೊದಲೇನೋ ನಮಗೆ ಸ್ವಲ್ಪ ಭಯವೇ ಇತ್ತು. ಆದರೆ ನಮ್ಮ ಮಗ ಒಳ್ಳೆಯವನು. ಈಗ ನಮ್ಮ ಲಕ್ಷ್ಮಿ ಇದಾಳೆಯಲ್ಲ, ಅವಳಿಗೂ ವಿದ್ಯೆಯ ಕಡೆ ಲಕ್ಷ ಇದೆ."

"ಅಮ್ಮಣ್ಣಿ ಪಾಟಿ. ಅವಳು ಬೆಳೆದು ದೊಡ್ಡವಳಾದ ಮೇಲೆ ಏನಾಗುತ್ತಾಳೆ ಅಂತ ನಿಮಗೆ ತೋರುತ್ತೆ? ನರ್ತಕಿ ಆಗುತ್ತಾಳೆಯೆ ?"

"ನನಗೆ ತೋರುತ್ತೆ, ಅವಳು ನರ್ತಿಸುತ್ತಾಳೆ, ಆದರೆ ನರ್ತಕಿ ಆಗುವುದಿಲ್ಲ ಅವಳು ಕಾಲೇಜಿಗೆ ಹೋಗಿ ಕಲಿತು, ಬಹುಶಃ ಪಾಠ ಹೇಳಿಯಾಳು ಅಂತಲೂ ನನಗೆ ತೋರುತ್ತೆ."

"ಇಲ್ಲ ಕವಿ ಆಗಬಹುದು", ಎಂದಳು ಜೂಡಿ. ಏಕೆಂದರೆ, ಲಕ್ಷ್ಮಿ ತಾನು ರಚಿಸಿದ್ದ ಕೆಲವು ಕವಿತೆಯ ಸಾಲುಗಳನ್ನು ಅವಳಿಗೆ ಹೇಳಿದ್ದಳು; ಅವು ಸೊಗಸಾಗಿ ಕಂಡವು ಎಂದು ಜೂಡಿ ಭಾವಿಸಿದ್ದಳು.

"ಹೌದು, ಜೂಡಿ, ಅವಳು ಕವಿಯಾದರೂ ಆಗಬಹುದು. ನೀನೋ?"

ಜೂಡಿ ಎಂದಳು, "ಓ, ನನಗೆ ಗೊತ್ತಿಲ್ಲ; ಕವಿತೆ ಬರೆಯುವುದಾಗಲಿ ನರ್ತಿಸುವುದಾಗಲಿ ನನ್ನ ಕೈಲಿ ಆಗುವುದಿಲ್ಲ ಅಂತ ಕಾಣುತ್ತೆ. ಅಮ್ಮಣ್ಣಿ ಪಾಟಿ, ಮನೆಯಲ್ಲಿ ಏನೇನಿನೆ ಕೆಲವನ್ನ ನನಗೆ ತೋರಿಸಿ ಮತ್ತೆ !"

ಒಳಗಡೆ ಒಂದು ರೇಡಿಯೋ ಆಗಲಿ, ಕಡೆಗೆ ಒಂದು ಗ್ರಾಮಫೋನ್ ಆಗಲಿ ಇರದಿದ್ದರೂ ಕೂಡ, ಮನೆಯ ಒಳಭಾಗ ಅಷ್ಟು ಚೆನ್ನಾಗಿತ್ತು ; ಜೂಡಿಗೆ ಅದರಿಂದ ಬೇಸರವೇ ಆಗದು. ಹೆಚ್ಚುಕಡಮೆ ಹಾಸಿಗೆಯ ಹಾಗೇ ಇದ್ದ, ಕಸೂತಿ ಕೆಲಸ ಮಾಡಿದ್ದ ಮೆತ್ತೆ ಹಾಕಿದ್ದ, ಅಗಲವಾದ ಪೀಠಗಳು; ಚದರಬಿಲ್ಲೆ ಹಾಕಿದದ ನೆಲದಮೇಲೆ ರಗ್ಗುಗಳು; ಕೆತ್ತನೆಕೆಲಸದ ಚಿಕ್ಕ ಮೇಜುಗಳು; ಮತ್ತು

# ೪. ಸ್ವಾತಂತ್ರ್ಯ ದಿನ

ದೊಡ್ಡ ಕಾರ್ಮೋಡಗಳು ದಟ್ಟೈಸತೊಡಗಿದ್ದವು; 'ಮಳೆ ಬಾರದಿರದಲ್ಲವೆ' ಎಂದು ಜನ ಮಾತಾಡಿಕೊಳ್ಳಲು ಮೊದಲಿಟ್ಟಿದರು. ಬೇರೆ ಎಲ್ಲೋ ಒಂದೆಡೆ ಗುಡುಗುಮಳೆ ಆಯಿತೆಂಬ ಮಾತು ಕೇಳಿಬರುವುದು, ಇತ್ತ ಆಗಸದಲ್ಲಿ ಗುಡುಗುಡು ಎಂದು ಕೇಳಿಬರುವುದು. "ಮಳೆ ಬಂದರೆ, ಕಿಟಕಿಯ ಬಾಗಿಲುಗಳನ್ನೆಲ್ಲಾ ಮುಚ್ಚಿಬಿಡು, ಅದು ಮಾಡು, ಇದು ಮಾಡು" ಎಂದು ಅವಳ ತಂದೆ ಅಡಿಗೆಯ ಕೆಲಸದ ಜಾರ್ಜ್‌ಗೆ ಹೇಳುವರು. ಹೇಳಿದ್ದಕ್ಕೆಲ್ಲ ಜಾರ್ಜ್ 'ಹ್ಞೂ ಹ್ಞೂ' ಎಂದು, ಅವನು ಹಿಂದೆಲ್ಲ ಕೊಡುತ್ತಿದ್ದಷ್ಟೆ ಲಕ್ಷ್ಯವನ್ನು ಕೊಟ್ಟರೆ ಕೊಟ್ಟ ಇಲ್ಲದಿದ್ದರೆ ಇಲ್ಲ. ಆದರೆ, ಭಾರತದಲ್ಲಿ ಜುಲೈ ಮತ್ತು ಆಗಸ್ಟ್ ತಿಂಗಳುಗಳಲ್ಲಿ, ಸರ್ವಸಾಧಾರಣವಾಗಿ ಛಿದ್ರಛಿದ್ರವಾಗಿ ಕರಗಿಹೋಗುವಂತೆಯೆ ಕಾಣುವುವು. "ಆಸ್ಪತ್ರೆಯಲ್ಲಿ ಸ್ವಾತಂತ್ರ್ಯ ದಿನಾಚರಣೆಯ ಗೋಷ್ಠಿಗೆ ನಾವೆಲ್ಲ ಹೋಗಬೇಕು" ಎಂದು ಜೂಡಿಯ ತಂದೆ ಹೇಳಿದರು.

ಅವಳ ತಾಯಿ, "ಹೌದು. ದರ್ಜಿ ಬರುತ್ತಾನೆ"–ಎಂದು ಜೂಡಿಯ ಕಡೆ ನೋಡಿದರು. "ಅಗೊ, ಆನೆ ಚಿತ್ರದ ಖಾದಿ ಬಟ್ಟೆಯ ತುಂಡಿದೆಯಲ್ಲ ಅಲ್ಲಿ–"

"ಏನಮ್ಮಾ, ನನ್ನ ಮೈಮೇಲೆಲ್ಲ ಆನೆಗಳನ್ನ ಹೇರಿಕೊಳ್ಳಬೇಕೆ?" ಎಂದು ಕೇಳಿದಳು ಜೂಡಿ.

ಕೈಯಿಂದ ನೂತು, ಹಳ್ಳಿಗಳಲ್ಲಿ ನೆಯ್ದದ್ದು ಖಾದಿ; ತನಗೆ ಖಾದಿ ಧರಿಸಲು ಇಷ್ಟವಿಲ್ಲ ಎಂಬುದು ಅವಳ ಅಭಿಪ್ರಾಯವೆಂದು ಅವಳ ತಂದೆಗೆ ಗೊತ್ತು. ಭಾರತದ ಸಾಮಾನ್ಯ ಪ್ರಜೆಗಳಾದ ಬಡ ಗಂಡಸರ ಮತ್ತು ಹೆಂಗಸರ ಹಿತವನ್ನು ಲಕ್ಷಿಸುವವರು ಅದನ್ನು ಧರಿಸುತ್ತಾರೆ ; ಏಕೆಂದರೆ, ಅತ್ಯಂತ ಬಡಸ್ಥಿತಿಯ ಹಳ್ಳಿಗಳಿಗೆ ಕೂಡ ಸ್ವಲ್ಪ ಹಣವನ್ನೂ ಆಹಾರವನ್ನೂ ಪಡೆಯಲು ಅದರಿಂದ ಸಹಾಯವಾಗುತ್ತದೆಂದು ಅವರಿಗೆ ಗೊತ್ತು. ಭಾರತ ಸರಕಾರದ ಅತ್ಯಂತ ಮೇಲಿನ ಪದವಿಯಲ್ಲಿರುವವರು, ಅವರು ಗಂಡಸರಾಗಿರಲಿ ಹೆಂಗಸರಾಗಿರಲಿ, ಅದನ್ನು ಧರಿಸುವರು. ಅದು ಒರಟಾದ ಬಟ್ಟೆ ; ಖಾದಿ ಎಂದರೆ ಧೋಬಿಗಳು ಕಲ್ಲನ್ನು ಒಡೆಯಲು ಉಪಯೋಗಿಸುವ ಪದಾರ್ಥ ಎಂಬ ಹಳೆಯ ಹಾಸ್ಯದ ಮಾತೂ ಒಂದುಂಟು. ಧೋಬಿಗಳು ಎಂದರೆ ಬಟ್ಟೆ ಒಗೆಯುವವರು ; ಅವರು ನೀರ

ಜೂಡಿ ! ಅವು ಬಹಳ ಹಳೆಯ ಚಿತ್ರಗಳು, ಬಹಳ ಕಾಲದಿಂದಲೂ ತಮ್ಮ ಕುಟುಂಬದಲ್ಲಿ ಇದ್ದವು, ಅವುಗಳನ್ನು ಬಹು ಎಚ್ಚರಿಕೆಯಿಂದ ಇಟ್ಟಿದ್ದು ಹೊರಕ್ಕೆತೆಗೆದ ಕೆತ್ತನೆ ಕೆಲಸದ ಪೆಟ್ಟಿಗೆಯೂ ಅಷ್ಟೆ, ಎಂದು ತಿಳಿಸಿದರು ಅಮ್ಮಣ್ಣಿ ಪಾಟಿ.

ಅಲ್ಲದೆ, ಮುಂಭಾಗಕ್ಕೆ ಗಾಜು ಹಾಕಿದ್ದ ಪೆಟ್ಟಿಗೆಯೊಂದರಲ್ಲಿ ಇರಿಸಿದ್ದ ಒಂದು ವೀಣೆಯೂ ಇತ್ತು ; ಅದರ ಬರುಡೆಗೂ ದಂಡಕ್ಕೂ ದಂತದ ಹೂಗೊಂಚಲುಗಳನ್ನು ಹದ್ದಿಸಿತ್ತು. ಕೆಲವು ವೇಳೆ ಅಮ್ಮಣ್ಣಿಪಾಟಿ ಅದನ್ನು ಹೊರಕ್ಕೆ ತೆಗೆದು, ಅದನ್ನು ಬಾರಿಸಿಕೊಂಡು ಹಾಡತೊಡಗುತ್ತಿದ್ದರು; ಹಾಡುಗಳೆಲ್ಲ ಬಹುಮಟ್ಟಿಗೆ ಸ್ವರಕಂಪನದಿಂದ ಕೂಡಿದ್ದು, ಶೋಕಪೂರ್ಣವಾಗಿದ್ದು, ತಟ್ಟನೆ ತಾಳಗತಿಯನ್ನು ಬದಲಾಯಿಸುತ್ತಿದ್ದುವು. ಶಾಲೆಯಲ್ಲಿ ಹುಡುಗಿಯರು ಸಾಧಾರಣವಾಗಿ ಹಾಡುತ್ತಿದ್ದ ಸಿನಿಮಾ ಹಾಡುಗಳಿಗಿಂತ ಅವು ಪೂರ್ತಿ ಬೇರೆಯಾಗಿದ್ದುವು.

ಆ ಮನೆಯಲ್ಲಿ ಸೊಗಸಾದ ಪೆಟ್ಟಗೆಗಳು ಬೇಕಾದಷ್ಟಿದ್ದುವು; ಅದರಲ್ಲಿ ವಿಶೇಷವಾಗಿ ಉಗ್ರಾಣದಲ್ಲಿ ಸಂಭಾರ ಪದಾರ್ಥಗಳ ಭರಣಿಗಳೂ, ಅಕ್ಕಿ ತೂಗರಿಬೇಳೆ ಮುಂತಾದ ಸರಕುಗಳಿಗಾಗಿ ಬೀಗ ಹಾಕಿದ್ದ ದೊಡ್ಡ ಪೆಠಾರಿಗಳೂ ತಂಡತಂಡವಾಗಿದ್ದವು; ಅಲ್ಲಿಯ ಆ ಎಲ್ಲ ಸಂಭಾರಗಳು ಮತ್ತು ಹಣ್ಣುಗಳಿಂದ ಯಾವಾಗಲೂ ಒಳ್ಳೆಯ ಸುವಾಸನೆ ಬರುತ್ತಿತ್ತು. ಆದರೆ, ಒಂದು ರೀತಿಯಲ್ಲಿ, ಆ ಮನೆಯಲ್ಲಿ ಭಾವವನ್ನು ಉಕ್ಕಿಸುತ್ತಿದ್ದ ಕೋಣೆ ಎಂದರೆ ಪೂಜೆಯ ಕೋಣೆ; ಅಲ್ಲಿನ ಹೊಳೆಯುವ ನೆಲ ಬರಿಗಾಲಿಗೆ ತಣ್ಣಗಿತ್ತು; ದೇವರ ಪಟಗಳು, ಸೊಡರು, ಹೂವು ಇವೆಲ್ಲ ಇದ್ದ ಆ ಪುಟ್ಟ ಕೊಣೆ ಶಾಂತವಾಗಿತ್ತು. ಅಮ್ಮಣಿಪಾಟಿ ಜೂಡಿಯನ್ನು ಅಲ್ಲಿಗೆ ಕರೆದೊಯ್ಯಲು ಹಿಂದೆಗೆಯುತ್ತಿರಲಿಲ್ಲ; ತಾವೂ ದೇವಿಯರೂ ಎಲ್ಲಾ ಒಂದೇ ವಸ್ತುವಿನ ಬೇರೆ ಬೇರೆ ಭಾಗಗಳೋ ಎಂಬಂತೆ ಅವರು ತಮ್ಮ ಇಷ್ಟ ದೈವಗಳ ವಿಚಾರವಾಗಿ ಒಂದು ವಿಧವಾದ ಕುಟುಂಬಭಾವನೆಯಿಂದ ಮಾತಾಡುತ್ತಿದ್ದರು.

ಒಂದು ಮಾತನ್ನೂ ಆಡದೆ ಬಾಗಿಲ ಬಳಿ ಪದ್ಮಾಸನಹಾಕಿ ಕುಳಿತಿರುವನು ಅವನು ಬಟ್ಟೆಯನ್ನೆಲ್ಲಾ ತನ್ನ ಚಿಕ್ಕ ಅಂಗಡಿಗೆ ತೆಗೆದುಕೊಂಡು ಹೊರಟುಹೋಗುತ್ತಿದ್ದ ; ಅಂಗಡಿ ಎಂದರೆ ಬರೀ ಒಂದು ಷೆಡ್ಡು ; ಅಲ್ಲಿ ಬಹು ಜಾಗ್ರತೆಯಾಗಿ ಕೆಲಸ ಮಾಡುತ್ತಿದ್ದ. ತುಂಬ ಕಾಲವಾಗುತ್ತದೆ ಎಂದು ಅವನು ಹೇಳಿದನೋ, ನಾಳಿದ್ದರವರೆಗೂ ಆದೀತು. ಆದರೆ ಅದಕ್ಕಿಂತ ಮುಂದೆ ಹೋಗದು! ಮಾದರಿಯನ್ನು ಅನುಕರಣ ಮಾಡುವುದರಲ್ಲಿ ಅವನೊಳ್ಳೆ ಗಟ್ಟಿಗ ; ಆದರೆ ಏನಾದರೂ ಬದಲಾವಣೆ ಆಗಬೇಕೆಂದು ಇಷ್ಟಪಟ್ಟರೋ, ಆಗ ಅವನು ಅಷ್ಟು ಪ್ರಯೋಜನವಿಲ್ಲ ; ಹಿಂದಿನ ಬೇಸಗೆಯಲ್ಲಿ ಇದ್ದುದಕ್ಕಿಂತ ಜೂಡಿ ಈಗ ಮೂರು ಅಂಗುಲ ಹೆಚ್ಚು ಎತ್ತರವಾಗಿಬಿಟ್ಟಿದ್ದಳು.

ಸ್ವಾತಂತ್ರ್ಯ ದಿನ ಒಂದು ರಜಾದಿನ ; ಅದು ಹೇಗೆ ತಿಳಿಯುತ್ತಿತ್ತೆಂದರೆ, ಅದರ ಹಿಂದಿನ ಸಂಜೆಯೇ ಬ್ಯಾಂಡುಗಳು ಬಾಜಿಸುವುದಕ್ಕೆ ತೊಡಗಿಬಿಟ್ಟರೆ, ರಾತ್ರಿಯೆಲ್ಲ ನಿಲ್ಲುತ್ತಲೇ ಇರಲಿಲ್ಲ. ಎಲ್ಲಿ ನೋಡಿದರೂ ಮೇಲ್ಗಡೆ ಭಾರತದ ಧ್ವಜ ; ಆ ಚಕ್ರವೇ ಕೈಯಿಂದ ನೂಲುವ ಚರಕ, ಗಾಂಧಿಯವರು ಉಪಯೋಗಿಸುತ್ತಿದ್ದಂತಹ ಬಗೆಯದೇ. ಜೊತೆಗೆ ಮೆರೆವಣಿಗೆಗಳು, ಭಾಷಣಗಳು, ಪ್ರತಿಯೊಬ್ಬರೂ ಬೇರೆ ಇನ್ನೊಬ್ಬರಿಗೆ ಹಾರ ಒಪ್ಪಿಸುವುದು ಇವು ಇದ್ದೇ ಇರುತ್ತಿದ್ದುವು. ೧೯೪೭ರಲ್ಲಿ ಬ್ರಿಟಿಷರಿಂದ ಸ್ವಾತಂತ್ರ್ಯವನ್ನು ಪಡೆದ ದಿನದ ವಾರ್ಷಿಕೋತ್ಸವವನ್ನು ತಾವು ನೆರವೇರಿಸುತ್ತಿರುವ ಕಾರಣದಿಂದ, ಜೂಡಿಯ ತಂದೆ ತಾಯಿಯಂತಹ ಜನಕ್ಕೆ ಅದರಲ್ಲಿ ಅವಕಾಶವಿಲ್ಲ ಎಂದು ಯಾರೂ ಯೋಚಿಸುತ್ತಿದ್ದಂತೆಯೇ ಕಾಣಲಿಲ್ಲ. ಸ್ವಾತಂತ್ರ್ಯ ಒಳ್ಳೆಯದಾಗಿತ್ತು ಎಂಬುದು ಸ್ಪಷ್ಟ ; ಜೂಡಿಯ ತಂದೆ ತಾಯಿ ಒಳ್ಳೆಯ ಜನ ; ಹೀಗಿರುತ್ತ, ಅವರೂ ಸಂತೋಷ ಪಡುವರು, ಅಲ್ಲವೆ?

ಅಸ್ಪತ್ರೆಯ ಬಳಿ ಬಾವುಟಗಳು, ಬೆಲೂನುಗಳು, ಬರೆದ ಮಾತುಗಳು ಎಲ್ಲ ಇದ್ದುವು ; ಬಾಗಿಲು ಕಾಯುವ 'ಪೋರ್ಟರು'ಗಳು, ಕಸಗುಡಿಸುವವರು ಮತ್ತು ಅವರ ಮನೆಮಂದಿ ಇವರೆಲ್ಲಾ ಕೂಡಿ ಪ್ರತಿಯೊಬ್ಬರನ್ನೂ ಕರೆದು ಏರ್ಪಡಿಸಿದ್ದ ಭಾರಿ 'ಟೀಪಾರ್ಟಿ' ಬೇರೆ ಇದ್ದಿತು ; ಅವರೆಲ್ಲ ಅದು ಹೇಗೋ ಏನೋ ಅಂತೂ ಅಗ್ಗವಾದ ಅಂದವಾದ ಉಡಿಗೆತೊಡಿಗೆ ದೊರಕಿಸಿಕೊಂಡು ಧರಿಸಿದ್ದರು. ಸೆಣಕಲಾದ, ದೀನರಾಗಿ ಕಾಣುವ ಹೆಂಗಸರು ಕೈಗೆ ಗಾಜಿನ ಬಳೆ ತೊಟ್ಟಿದ್ದರು ; ಕೆಲವು ವೇಳೆ ಬೆಳ್ಳಿಯ ಕಡಗವನ್ನೋ ಇಲ್ಲವೆ 'ಯಂತ್ರ'ನ್ನೋ ಧರಿಸಿರುತ್ತಿದ್ದರು ; ಇವನ್ನೆಲ್ಲ ಅವರು ಧರಿಸಿದ್ದೇ ಆದರೆ, ತಮ್ಮ ಸಂಸಾರದ ವೆಚ್ಚದ ಉಳಿತಾಯವನ್ನೆಲ್ಲ ಆ ರೂಪದಲ್ಲಿ ತಮ್ಮ ಬಳಿ ಇಟುಕೊಂಡಿದ್ದಾರೆ

ಅಂಚಿನಲ್ಲಿ ನಿಂತು, ಕೈಗೆ ಸಿಕ್ಕಿದ ಬಟ್ಟೆ ತೆಗೆದುಕೊಂಡು, ಕಲ್ಲಿನಮೇಲೆ ಬಡಿದು ಹಾಕಿಬಿಡುವರು ; ಎಂದಮೇಲೆ, ಮಗ್ಗಲು ಹಾಸಿಗೆಗಳೂ ದಿಂಬಿನ ಚೀಲಗಳೂ ಚೆನ್ನಾಗಿ ಬಾಳಿಕೆ ಬರುವುದೇ ಇಲ್ಲ ; ಆದ್ದರಿಂದ, ಯಾರೇ ಆಗಲಿ ತಮ್ಮ ಉಡುಪುಗಳನ್ನು ಮನೆಯಲ್ಲಿ ಒಗೆಯಿಸಿಕೊಳ್ಳಬೇಕು. ಜೂಡಿಗೆ ಖಾದಿಯ ಮೇಲೆ ಇಷ್ಟ ಇಲ್ಲ ಎಂದು ಅವಳ ತಾಯಿಗೂ ಗೊತ್ತು ; ಆದರೆ ತಮಗೆ ಇಷ್ಟವಿರಲಿ ಇಲ್ಲದಿರಲಿ, ಅದನ್ನು ಇಷ್ಟಪಡಬೇಕು ಎಂದು ಅವರ ಭಾವನೆ. ಅದು ಹೇಗಾದರೂ ಇರಲಿ, ಅವಳ ತಂದೆಯೇನೋ, "ನೀನು ಕೈಮಗ್ಗದ ವಸ್ತ್ರಾಲಯಕೆ ಹೋಗಿ ಅಲ್ಲಿ ಏನೇನು ಇದೆ ಎಂದು ಯಾಕೆ ನೋಡಬಾರದು ? ನಾನು ಜೂಡಿಗೆ ಒಂದು ಹೊಸ ಉಡುಪು ತೆಗೆದುಕೊಡಬೇಕೆಂದಿದ್ದೇನೆ !" ಎಂದರು.

"ಓಹೋ, ಆಗಲಿ !" ಎಂದಳು ಜೂಡಿ.

ಹೀಗೆ, ಅವರೆಲ್ಲ ಹೊರಟರು. ಕೈಮಗ್ಗದ ವಸ್ತ್ರಾಲಯ ಜೂಡಿಯ ಮೆಚ್ಚಿನ ಅಂಗಡಿಯಲ್ಲಿ ಒಂದು ; ಹತ್ತಿಯ ಬಟ್ಟೆಯ ಥಾನುಥಾನುಗಳನ್ನೆ ಹೊರಕ್ಕೆ ತೆಗೆಸುವಂತೆ ಅವಳು ತನ್ನ ತಾಯಿಯನ್ನು ಅದು ಹೇಗೋ ಮಾಡಿ ಮುಂದೆಬಿಟ್ಟಳು; ಆ ಬಟ್ಟೆ ಕೈಯಿಂದ ನೆಯ್ದದ್ದೇ ಆದರೂ ಖಾದಿಗಿಂತ ಎಷ್ಟೋ ನಯವಾದದ್ದು; ಏಕೆಂದರೆ, ಹತ್ತಿಯಿಂದ ನೂಲು ತೆಗೆಯುವುದು ಯಂತ್ರ ಅದು ಜನರ ಬೆರಳುಗಳಿಗಿಂತ ಚೆನ್ನಾಗಿಯೇ ನೂಲು ತೆಗೆಯುತ್ತದೆ. ಅವರ ಬಳಿ ಗಡುಸಾದ, ಭಾರವಾದ, ಬಣ್ಣವಾಗಿ ಮಿನುಗುವ ಕಚ್ಚಾ ರೇಶ್ಮೆಯಬಟ್ಟೆ ಕೂಡ ಇತ್ತು ; ಆದರೆ ಬೇಸಗೆಯಲ್ಲಿ ಅದು ತುಂಬ ಸೆಕೆ. ಕಪ್ಪು ಮತ್ತು ತೆಳು ಹಳದಿಯ ಅಂಚಿನ, ನಸು ಕೆನ್ನೇರಿಳೆ ಬಣ್ಣದ ರೇಶ್ಮೆಯಬಟ್ಟೆಯಲ್ಲಿ ಸೀರೆಗೆ ಆಗುವಷ್ಟು ಉದ್ದದ ತುಂಡನ್ನು ತೆಗೆದುಕೊಡುವಂತೆ ಜೂಡಿ ತನ್ನ ತಾಯಿಯನ್ನು ಒತ್ತಾಯ ಮಾಡಲು ಯತ್ನಿಸಿದಳು; ಆದರೆ ದರ್ಜಿ ಅದರಿಂದ ಏನು ಮಾಡಬಲ್ಲ ಎಂಬುದೇ ಪ್ರಶ್ನೆಯಾಗಿತ್ತು ; ಏನೇ ಆದರೂ, ಸೀರೆಯ ಉದ್ದದ ಆರು ಗಜ ಬಹಳ ಹೆಚ್ಚೆನಿಸಿತ್ತು. ಕಡೆಗೆ, ಕೆಂಪು ಮತ್ತು ತೆಳುಹಳದಿಯ ಪಟ್ಟಿಗಳುಳ್ಳ ಹತ್ತಿಯ ಬಟ್ಟೆಯನ್ನೂ, ಎರಡು ಬಗೆಯ ನೀಲಿಯ ಬಟ್ಟೆಗಳನ್ನೂ ತೆಗೆದುಕೊಂಡರು ; ಬಟ್ಟೆಯ ಪಟ್ಟಿಗಳು ಲಂಗದಲ್ಲಿ ಉದ್ದುದ್ದನಾಗಿ ಮೇಲಕ್ಕೂ ಕೆಳಕ್ಕೂ, ತೋಳುಗಳಿಲ್ಲದ ಕುಪ್ಪಸದಲ್ಲಿ ಅಡ್ಡಡ್ಡವಾಗಿ ಸುತ್ತಲೂ ಕಾಣುವಂತಿರುವುವು.

ತಮಗೆ ಬೇಕಾದ್ದನ್ನು ದರ್ಜಿಗೆ ಅರ್ಥವಾಗುವಂತೆ ತಿಳಿಯ ಹೇಳುವುದು ಯಾವಾಗಲೂ ಅಷ್ಟೇನೂ ಸುಲಭವಾಗಿರಲಿಲ್ಲ. ಆತ ಒಬ್ಬ ಒಳ್ಳೆಯ ಪುಟ್ಟ ಆಳು ; ಆತ ಹಾಗೆಯೆ ಮನೆಗೆ ಬಂದು, ಯಾರಾದರೂ ತನ್ನನ್ನು ಕಾಣುವವರೆಗೂ

ಗೆದ್ದಳು ; ಅವಳ ಲಂಗವೂ ಒಪ್ಪಿಗೆಯಾಯಿತು–ಕಡೆಗೂ, ಆ ದರ್ಜಿ ಅದನ್ನು ತಕ್ಕಮಟ್ಟಿಗೆ ದೊಡ್ಡದಾಗಿ ಹೊಲಿದು ನಿರ್ವಹಿಸಿದ್ದ. ಆದರೆ, ಲಕ್ಷ್ಮಿ ಅಲ್ಲಿ ಇದ್ದಿದ್ದರೆ ಚೆನ್ನಾಗಿತ್ತು ಎಂದುಕೊಂಡಳು ಅವಳು ; ಆಗ ವಿನೋದ ಇಮ್ಮಡಿಯಾಗಿರುತ್ತಿತ್ತು. ಬಹುಶಃ ಲಕ್ಷ್ಮಿ ಮೆರವಣಿಗೆಯನ್ನು ನೋಡುತ್ತ ದೊಡ್ಡ ನಿಲ್ದಾಣದಲ್ಲಿ (ಗ್ರ್ಯಾಂಡ್ ಸ್ಟ್ಯಾಂಡ್) ಇದ್ದಿರಬೇಕು, ಇಲ್ಲವೋ ಎಲ್ಲೆಲ್ಲೂ ನಡೆಯುತ್ತಿದ್ದ ಉತ್ಸವಕೂಟ ಒಂದರಲ್ಲಿ ಇದ್ದಿರಬೇಕು.

ಅವರೆಲ್ಲರೂ ದಟ್ಟವಾದ ನೆರಳುಕೊಡುತ್ತಿದ್ದ ಒಂದು ದೊಡ್ಡ ಹುಣಿಸೆ ಮರದಡಿಯಲ್ಲಿ ಕುಳಿತುಕೊಂಡು, ನಿಂಬೆ ಮತ್ತು ಕಿತ್ತಳೆಹಣ್ಣಿನ ಪಾನಕ ಕುಡಿದರು. ಪ್ರಕಾಶಮಾನವಾದ ಬಣ್ಣದ ಸೀರೆ ಉಟ್ಟಿರುವವರಿಂದಲೂ, ಬಳಿಯ ಸೂಟು ಧರಿಸಿರುವವರಿಂದಲೂ, ಎಲ್ಲವೂ ಹೂಗಳ ಚೆಲುವನ್ನು ಚಿಮ್ಮುತ್ತಿದ್ದ ಕಡಕತ್ತಿಕಾಯಿ (ಗೋಲ್ಡ್‌ಮೊಹರ್) ಮರಗಳ ಸಾಲಿನಿಂದಲೂ ಆಸ್ಪತ್ರೆಯ ಆವರಣ ಅಂದವಾಗಿ ಕಾಣುತ್ತಿತ್ತು. ಜೂಡಿಯ ತಾಯಿ ಇತರ ವೈದ್ಯರು ಕೆಲವರ ಹೆಂಡಿರೊಂದಿಗೆ ಮಾತಾಡುತ್ತಿದ್ದರು ; ಜೂಡಿ ತಾನು ಹೋಗುತ್ತಿದ್ದ ಶಾಲೆಗೇ ಹೋಗುತ್ತಿದ್ದ ಒಬ್ಬ ಹೆಣ್ಣುಮಗಳೊಬ್ಬಳನ್ನು ನೋಡಿ ಸೋಮಾರಿತನದಿಂದ ಅಣಕಿಸುತ್ತಿದ್ದಳು. ಎದ್ದುಹೋಗಿ ಅವಳೊಂದಿಗೆ ಮಾತಾಡಲು ಬಹಳ ಸೆಕೆಯಾಗಿತ್ತು.

ಬಳಿಕ ವೈದ್ಯರ ಪೈಕಿ ಇನ್ನೊಬ್ಬರು ಬಂದು, ತಮ್ಮ ಹೆಂಡತಿಯನ್ನು ಪರಿಚಯ ಮಾಡಿಕೊಟ್ಟರು ; ಇತರ ಹೆಂಡಿರಲ್ಲಿ ಬಹುಮಂದಿಗಿಂತ ಆಕೆ ಹೆಚ್ಚು ಎತ್ತರವಾಗಿದ್ದರು, ಅವರ ಎದೆಭುಜದ ಅಗಲವೂ ಹೆಚ್ಚಾಗಿತ್ತು; ಅಲ್ಲದೆ, ಆಕೆ ತಮ್ಮ ತಲೆಯನ್ನು ಹೆಚ್ಚು ಎತ್ತಿಕೊಂಡಿದ್ದಂತೆ ಕಾಣುತ್ತಿತ್ತು ; ಉಡುಪುಗಳೂ ಅಷ್ಟೆ, ಸ್ವಲ್ಪ ಮಾತ್ರ ಬೇರೆ ತೆರನಾಗಿ ಧರಿಸಿದ್ದಂತಿತ್ತು. ಅಕೆಯ ಹೆಗಲ ಮೇಲೆ ಬಂಗಾರದ ಮತ್ತು ಎನಾಮೆಲ್ಲಿನ ಬಹುಸೊಗಸಾದ ಒಂದು ಬ್ರೂಚುಪಿನ್ನು (Brooch) ಇತ್ತು. ಅವರೊಂದಿಗೆ ಒಂದು ನಿಮಿಷಕಾಲ ಮಾತಾಡುವುದಕ್ಕಿಲ್ಲ, ಅಷ್ಟರಲ್ಲಿ ಆಗಲೇ ಆಕೆ ತಾನು ಬಂದಿರುವುದು ಉತ್ತರದೇಶದಿಂದ, ತಾನು ಇಲ್ಲಿಯವಳಲ್ಲ ಎಂದೂ ತಿಳಿಸಿದಳು. ಆಕೆ ಬಹುಚೆನ್ನಾಗಿ ಇಂಗ್ಲಿಷ್ ಮಾತಾಡುತ್ತಿದ್ದಳು. "ಗೃಹಕೃತ್ಯ ನಡೆಸುವುದು ಈ ಕಡೆ ನಿಮಗೆ ಕಷ್ಟವಾಗಿ ಕಾಣುತ್ತಿದೆಯೆ? ತಮಿಳು ಕಲಿಯಬೇಕೆಂದು ನಿಮಗೆನಿಸುತ್ತಿದೆಯೆ?" ಎಂದು ಜೂಡಿಯ ತಾಯಿ ಪ್ರಶ್ನಿಸಿದರು.

"ತಮಿಳೆ? ಎಂದಿಗೂ ಇಲ್ಲ!" ಎಂದು ವೈದ್ಯರ ಹೆಂಡತಿ ತಲೆ ಒಲೆದು ಹೇಳಿದಳು. ಮತ್ತೆ, "ನೀವು ಉತ್ತರದ ಕಡೆ ಹೋಗಿಲ್ಲದೆ ಇದ್ದರೆ, ಇಂಡಿಯಾ

ಎಂದು ಅರ್ಥ. ಈ ಎಲ್ಲ ಕೆಳಜಾತಿಯ ಜನದ ವಿಚಾರವಾಗಿ ಒಬ್ಬ ವೈದ್ಯರು ಜೂಡಿಯ ತಾಯಿಯ ಎದುರಿನಲ್ಲಿ ಒಂದು ಉಪನ್ಯಾಸವನ್ನೆ ಮಾಡಿ, ಆಸ್ಪತ್ರೆಯಲ್ಲಿ ಜಾತಿ ಪಂಗಡಗಳ ಅಡ್ಡಿ ಆತಂಕಗಳು ಯಾವವೂ ಇಲ್ಲವೆಂದು ಹೇಳಿದರು. "ಓಹೊ, ನಿಜವಾಗಿ ! ಇರಕೂಡದೆಂದು ನನಗೂ ಅನ್ನಿಸುತ್ತೆ" ಎಂದು ಜೂಡಿಯ ತಾಯಿ ಬಹು ಸಿಡುಕಿನಿಂದಲೇ ನುಡಿದರು.

ದಾದಿಯಲ್ಲಿ ಕೆಲವರು ಬಹು ನಾಜೂಕಾಗಿ ಕಾಣುತ್ತಿದ್ದರು ; ಅದರಲ್ಲಿಯೂ ಜೂಡಿಗೆ ಇಂಜೆಕ್ಷನ್ನುಗಳನ್ನು ಕೊಡುವಾಗ ನೆರವಾಗಿದ್ದ ಒಳ್ಳೆಯ ದಾದಿ ಇನ್ನೂ ನಾಜೂಕಾಗಿ ಕಾಣುತ್ತಿದ್ದಳು. ಆದರೆ ಇನ್ನುಳಿದವರು ರೋಗಿಗಳಿಗೆ ಸೊಗಸಾದ ಚಹವನ್ನು ಇನ್ನೊಂದು ಬಟ್ಟಲು ಹೆಚ್ಚಾಗಿ ಕೊಡುತ್ತ ವಾರ್ಡಿನಲ್ಲಿದ್ದರು ; ಅವರಿಗೆ ಭಾಷಣಗಳೂ ಆಗುತ್ತಿದ್ದುವು, ಬಹುಶಃ ಅವುಗಳನ್ನು ಅವರು ಮೆಚ್ಚಿಕೊಳ್ಳುತ್ತಿದ್ದರು. ಎಷ್ಟೇ ಆಗಲಿ, ವಾರ್ಡುಗಳಲ್ಲಿ ರೇಡಿಯೋ ಸೆಟ್ಟುಗಳಿರಲಿಲ್ಲ, ಓದಬಲ್ಲವರೂ ವಿರಳವೆ ; ಹೀಗಾಗಿ, ಒಂದು ಭಾಷಣವೆಂದರೂ ಅವರಿಗೆ ಏನೋ ಒಂದು ವಿಶೇಷವೇ.

ಅವಳ ತಂದೆಯೂ ಒಂದು ಭಾಷಣ ಮಾಡಬೇಕಾಗಿ ಬಂದಿತು : ಅದರಿಂದ ಜೂಡಿಗೆ ಸ್ವಲ್ಪ ಮುಜುಗರವೆನಿಸಿದರೂ ಉಳಿದ ಪ್ರತಿಯೊಬ್ಬರೂ ಅದನ್ನು ಮೆಚ್ಚಿಕೊಂಡಂತೆ ಕಾಣುತ್ತಿತ್ತು ; ಬಿಳುಪು ಹಳದಿ ಮತ್ತು ಪಾಟಲ ವರ್ಣದ ಬಹು ಸುವಾಸನೆಯಾದ ಹೂಗಳಿಂದ ಕಟ್ಟಿ, ಗಿಲೀಟುದಾರ ಕುಚ್ಚುಗಳನ್ನು ತೂಗಕಟ್ಟಿದ್ದ, ಕೈಗವುಸಿನಂತೆ ಕಾಣುವ ಭಾರಿ ಹಾರವೊಂದನ್ನು ಅವರು ಜೂಡಿಯ ತಂದೆಗೆ ಅರ್ಪಿಸಿದರು. ಆದರೂ, ಯಾರೇ ಆಗಲಿ ತಮಗೆ ಹಾಕಿದ ಹೂವಿನ ಹಾರವನ್ನು ಬಹಳ ಹೊತ್ತು ಧರಿಸುವ ಹಾಗಿರಲಿಲ್ಲ ; ಎಲ್ಲಿ ನೋಡಿದರೂ ಹೂವುಗಳು ಹಾಗೂ ಹೂವಿನೆಸಳುಗಳೆ. ಕೆಲವು ಮಂದಿ ಭಾರತೀಯ ವೈದ್ಯರು 'ಮ್ಯೂಸಿಕಲ್ ಚೇರ್ಸ್' (ಸಂಗೀತ–ಸುತ್ತು ಕುರ್ಚಿ ಆಟ) ಆಟವನ್ನೂ, ಮೊಟ್ಟೆ–ಚಮಚದ (ಚಮಚದಲ್ಲಿ ಮೊಟ್ಟೆ ಇಟ್ಟುಕೊಂಡು ಓಡುವ) ಪಂದ್ಯವನ್ನೂ ಏರ್ಪಡಿಸಿದ್ದರು ; ಒಳ್ಳೆಯ ಮೊಟ್ಟೆಗಳನ್ನು ಹಾಳುಮಾಡಲು ಯಾರಿಗೂ ಇಷ್ಟವಿಲ್ಲದ್ದರಿಂದ, ಅವುಗಳ ಬದಲು ಚಿಕ್ಕ ಹಳದಿ ಬಣ್ಣದ ನಿಂಬೆಯ ಹಣ್ಣುಗಳನ್ನು ಉಪಯೋಗಿಸಿದ್ದರು ; ಅವುಗಳನ್ನು ಚಮಚಗಳಲ್ಲಿ ಬೀಳದಂತೆ ಇರಿಸಿಕೊಂಡಿರುವುದು ಅಷ್ಟೇ ಕಷ್ಟವಾಗಿತ್ತು. ಆಟಪಾಟಗಳಲ್ಲಿ ಬಹಳ ಮೇಲ್ಮಟ್ಟದವರೆನಿಸಿದ್ದ ಜೂಡಿಯ ತಂದೆಗೆ ಅವರೆಲ್ಲ ಉತ್ತೇಜನಕೊಟ್ಟು, ಅವರು ಗೆಲ್ಲುವಂತೆ ಮಾಡಲು ಪ್ರಯತ್ನಿಸಿದರು. ಬೆಲೂನ್ ಪಂದ್ಯವೊಂದರಲ್ಲಿ ಜೂಡಿ

ಒಂದೇ ಸಮನಾಗಿ ಬೆವರು ಸುರಿಸುತ್ತ ಅವರು ತಾವಿದ್ದ ಮರದಡಿಗೆ ಹೋಗಿ, ಕೋಕಾ–ಕೋಲದಂತಹ ಭಾರತೀಯ ಪಾನೀಯವೊಂದನ್ನು ಒಕ್ಕೊಳೊಕ್ಕೊಳ ಕುಡಿದರು. ತುಸುಹೊತ್ತು ಮೊದಲಿಗಿಂತ ತಂಪಾಗಿರುವಂತೆ ಕಂಡಿತು; ಸೂರ್ಯನನ್ನು ಒಂದು ಮೋಡ ಮುಸುಕಿದ್ದುದೆ ಇದಕ್ಕೆ ಕಾರಣ ಎಂದು ಆಮೇಲೆ ಜೂಡಿಗೆ ತಟ್ಟನೆ ಮನವರಿಕೆಯಾಯಿತು; ಬಳಿಕ ಪ್ರತಿಯೊಬ್ಬರೂ ತಮ್ಮ ತಮ್ಮ ಅಂಗಿಗಳನ್ನು ತೆಗೆದುಕೊಂಡು, ಆಸ್ಪತ್ರೆಯ ವರಾಂಡಕ್ಕೆ ಧಾವಿಸುತ್ತಿದ್ದರು. ದಿಗ್ಭ್ರಮೆಹಿಡಿಸುವಂತಹ ಭಾರಿ ಗುಡುಗಿನ ಮೊಳಗು ಕೇಳಿ ಬಂದು, ಮಳೆ ಸುರಿಯತೊಡಗಿತು.

ಬೆನ್ನನಿಗೆ ಅದು ಸರಿಬೀಳಲಿಲ್ಲ ; ಅವನ ತುಟಿ ಅದುರ ತೊಡಗಿತು; ಅವನನ್ನು ಎತ್ತಿಕೊಂಡು ಎದೆಗವಚಿಕೊಳ್ಳಬೇಕಾಯಿತು. ಜೂಡಿಗೇನೋ ಅದು ವಿನೋದವೆನಿಸಿತು; ಇಷ್ಟಕ್ಕೂ, ಎಲ್ಲ ಬೇಗನೆ ಮುಗಿದೇಹೋಯಿತು. ಹರಿದಾಸನಿಗೆ ಕೂಡ ಅದು ಇಷ್ಟವಾಗಿತ್ತು; ಅವನು ಅತ್ತಿಂದಿತ್ತ ನೆಗೆದಾಡಿ, ಅವನ ಚೊಕ್ಕಟವಾದ ಬಿಳಿಯ ನಿಕ್ಕರುಗಳ ಮೇಲೆ ಹೊಸದಾದ ಕೆಂಪು ಕೆಸರುಮಣ್ಣು ಎರಚಿಬಿದ್ದು ಕಲೆಕಲೆಯಾಯಿತು. ಒಂದೇನೆಂದರೆ, ಅದರಿಂದ ನಾವು ಅಂದುಕೊಳ್ಳುವಷ್ಟು ತಣ್ಣಗಾಗಲಿಲ್ಲ; ಇಷ್ಟಕ್ಕೂ, ಹಾಗೆ ಏಕೆ ತಾನೆ ಆಗಬೇಕು? ಮಳೆ ತಣ್ಣನೆಯ ಮಳೆಯಾಗಿರದೆ, ನಸುಬಿಸಿಯಾಗಿತ್ತು.

ಮೋಟಾರುಕಾರು ನೀರನ್ನು ಕೊಚ್ಚಿ ಎರಚುತ್ತ ಮನೆಗೆ ಹಿಂದಿರುಗಿತ್ತು; ಜಾರ್ಜ್ ಮನೆಯಲ್ಲಿನ ಕೆಲವು ಕಿಟಕಿಯ ಬಾಗಿಲುಗಳನ್ನು ಮಾತ್ರ ಮುಚ್ಚಿದ್ದ; ಜೂಡಿಯ ಹಾಸಿಗೆಯ ತುದಿ ತೊಯ್ದು ಹೋಗಿತ್ತು. ಅಲ್ಲಿ ಇಲ್ಲಿ ಗುಡುಗೇ ಹೆಚ್ಚಾಗಿತ್ತು ; ದಿಗಿಲು ಹುಟ್ಟಿಸುವ ಹರಿದಾಡುವ ಹುಳುಗಳ ತಂಡವೇ ಹೊರಕ್ಕೆ ಬಂದಿತ್ತು ; ಜೊತೆಗೆ ನೊಣಗಳು, ಜಿಗಿಹುಳುಗಳು, ಬೆನ್ 'ಪುಚ್ಚಿ' ಎಂದು ಕರೆಯುತ್ತಿದ್ದ ಕ್ರಿಮಿಕೀಟ ಬೇರೆ ಇದ್ದುವು ; ಪುಚ್ಚಿ ಎಂದರೆ ತಮಿಳಿನಲ್ಲಿ ಅದು ಏನೋ ಕೆಟ್ಟ ಅರ್ಥವಂತೆ. ನಿಜವಾಗಿಯೂ ತಣ್ಣಗಿರುವ ನೀರಿಗಾಗಿ ಜೂಡಿ ಶೀತ ಕಪಾಟುವಿನ (ರೆಫ್ರಿಜರೇಟರ್) ಬಳಿಗೆ ಹೋದಳು ; ಆಟಪಾಟಗಳಲ್ಲಿ ವಿಪರೀತ ಬೆವರಿದ್ದರಿಂದ ಏನೂ ವಿರೋಧವಾಗದಿರುವುದಕ್ಕಾಗಿ ಅವಳ ತಂದೆ ಆ ನೀರಿಗೆ ಒಂದು ಚಿಕ್ಕ ಚಿಟಿಕೆಯಷ್ಟು ಉಪ್ಪನ್ನು ಉದುರಿಸಿದರು.

ಅದಾದಮೇಲೆ ಜೂಡಿಗೆ ಹರಿದಾಸನ ದರ್ಶನ ಬೇಕಾದಷ್ಟು ಆಗುತ್ತಿರುವಂತೆ ಕಂಡುಬಂದಿತು. ಅವನು ಒಳ್ಳೆಯ ಹುಡುಗ ; ಸ್ವಲ್ಪಮಟ್ಟಿಗೆ ಜಾನನ ನೆನಪು ತರುತ್ತಿದ್ದ ಅವಳಿಗೆ ; ಅವನು ಕ್ರಿಕೆಟ್ಟು ಮುಂತಾದ್ದೆಲ್ಲದರಲ್ಲೂ ಆಸಕ್ತಿ ಹೊಂದಿದ್ದ.

ದೇಶ, ನಿಜವಾದ ಇಂಡಿಯಾ ದೇಶ, ಹೇಗಿದೆಯೆಂಬುದು ನಿಮಗೆ ತಿಳಿಯದು, ಆ ದೆಹಲಿ ! ಆಗ್ರ ! ಓ, ಆ ಬೆಟ್ಟಗುಡ್ಡಗಳೋ ! ಈ ಹೊಲಸು ದಕ್ಷಿಣ ದೇಶದ ಹಾಗಲ್ಲ."

ಈ ಮಾತುಗಳನ್ನು ಯಾರಾದರೂ ಕೇಳಿಸಿಕೊಂಡು ಮನಸ್ಸಿನಲ್ಲಿ ನೊಂದುಕೊಂಡರೋ ಎಂದು ಜೂಡಿ ಚಿಂತಿಸುತ್ತಿದ್ದಳು; ಆಮೇಲೆ ಇದ್ದಕ್ಕಿದ್ದ ಹಾಗೆ ಅವಳಿಗೆ ತಿಳಿಯಬಂದಿತು, ಅವು ಇತರರಿಗೆ ಕೇಳಿದರೆ ಡಾಕ್ಟರ ಹೆಂಡತಿ ಲಕ್ಷ್ಯ ಮಾಡುವಳಲ್ಲ, ನಿಜವಾಗಿ ಅವು ಇತರರಿಗೆ ಕೇಳಿಸಬೇಕೆಂದೇ ಆಕೆಯ ಇಷ್ಟ, ಎಂದು ! ದೊಡ್ಡವರು ಎನಿಸಿಕೊಂಡವರು ಎಷ್ಟೊಂದು ನಡತೆತಪ್ಪುವರು ಎನಿಸಿತು. ಆಮೇಲೆ ಒಬ್ಬ ಹುಡುಗ ಓಡುತ್ತ ಬಂದ; ಒಳ್ಳೆಯ ಲಕ್ಷಣವಾದ ಹುಡುಗ, ಇತರರಿಗಿಂತ ಸ್ವಲ್ಪ ತಿಳಿಯಾದ ಬಣ್ಣ ಎಂದೇ ಹೇಳಬೇಕು; ತುಂಬ ಗುಂಗುರುಗುಂಗರಾದ ಕಪ್ಪು ಕೂದಲುಳ್ಳವನು. "ನನ್ನ ಮಗ ಹರಿದಾಸ್" ಎಂದು ಹೇಳಿದಳು ಆಕೆ. ಆ ಹುಡುಗ ಕೈಕುಲುಕಿ, ಮುಗುಳುನಗೆ ನಕ್ಕ. ಅವರಿಬ್ಬರ ತಾಯಂದಿರೂ ಮಾತಿಗೆ ತೊಡಗಿದಾಗ, ಅವನೂ ಮಾತಾಡತೊಡಗಿದ; ಯಾರೊ ಒಬ್ಬರು ಒಂದು ಎಲೆಯ ಮೇಲೆ ಬಾಳೆಯಕಾಯಿ ಉಪ್ಪೇರಿಯನ್ನು ತಂದರು; ಅದು ಆಲೂಗಡ್ಡೆಯ ಉಪ್ಪೇರಿಯ ಹಾಗೇ ಇರುವುದಾದರೂ ಅದಕ್ಕಿಂತ ಚೆನ್ನ; ಇಬ್ಬರೂ ಅದಕ್ಕೆ ಕೈಹಾಕಿದರು.

ಆಮೇಲೆ ಹಗ್ಗ ಎಳೆಯುವ ಪಂದ್ಯ ಆಯಿತು; ಅದಕ್ಕೆ ಸೇರಿಕೊಳ್ಳಲು ಪ್ರತಿಯೊಬ್ಬರೂ ಆಕರ್ಷಿತರಾಗಿ ನುಗ್ಗಿದರು. ಪ್ರತಿಯೊಬ್ಬರೊ ಕೂಗಾಡುತ್ತಿದ್ದುದನ್ನು ಕಂಡು, ಅಂಥ ಹುಯಿಲನ್ನು ತನ್ನ ಜೀವಮಾನದಲ್ಲಿ ಹಿಂದೆಂದೂ ಕೇಳಿರಲಿಲ್ಲ ಎನಿಸಿತು ಜೂಡಿಗೆ; ಎಲ್ಲರೂ ಭಯಂಕರವಾಗಿ ಕೋಪಗೊಂಡಿದ್ದಂತೆ ಕೇಳಿಸಿತು; ಆದರೆ, ನಿಜವಾಗಿ, ಅದರಲ್ಲೂ ಅವಳ ತಂದೆಯ ತಂಡ ಗೆದ್ದಾಗ, ಎಲ್ಲರೂ ಸಂತೋಷದಲ್ಲಿದ್ದರು. ಅನಂತರ ಮಕ್ಕಳಲ್ಲಿಯೆ ಒಂದು ಹಗ್ಗ ಎಳೆಯುವ ಪಂದ್ಯ ನಡೆಯಿತು; ಹುಡುಗಿಯರೆಲ್ಲ ತಮ್ಮ ಸೀರೆಯ ನೆರಿಗೆಯನ್ನು ಸೆಕ್ಕಿಸಿಕೊಂಡರು, ಹುಡುಗರು ತಾವು ವಿಪರೀತ ಬಲಶಾಲಿಗಳು ಎಂಬಂತೆ ನಟಿಸುತಿದ್ದರು. ಜೂಡಿ ಮತ್ತು ಹರಿದಾಸ್ ಹಗ್ಗದ ಒಂದೇ ಕಡೆ ಇದ್ದರು; ಇಬ್ಬರೂ ತಮ್ಮ ಚಪ್ಪಲಿಗಳದ್ನು ನೆಲಕ್ಕೆ ಕಚ್ಚಿಸಿ, ತಮ್ಮ ಭಾರವನ್ನೆಲ್ಲಾ ಅದರ ಮೇಲೆ ಹಾಕಿದರು. ಮಧ್ಯದ ಗೆರೆಯಿಂದ ಆಚೆಗೆ ಅವರು ಎಳೆಯಪಟ್ಟಾಗ, ಎದುರು ಪಕ್ಷದ ಯಾರೇ ಇಬ್ಬರಿಗೆ ಎದುರಾಗಿ ತಾವಿಬ್ಬರು ಮಾತ್ರ ಇದ್ದಿದ್ದರೆ ತಾವು ಖಂಡಿತವಾಗಿ ಗೆಲ್ಲುತ್ತಿದ್ದೆವು ಎಂದು ಅವರಿಬ್ಬರಿಗೂ ದೃಢನಂಬಿಕೆ ಆಯಿತು.

ತಾರಿದ ನೆಲದೊಳಕ್ಕೆ ಬೇಗನೆ ಇಂಗಿಹೋಗುತ್ತಿದ್ದುವು ; ಪ್ರತಿಯೊಂದು ಪದಾರ್ಥವೂ ಹಬೆಯಾಡುತ್ತಿತ್ತು ; ಜನ ರೇಗುತ್ತಿದ್ದರು. ಯಾವುದೋ ಒಂದು ವಾರಕಾಲ ಬೆನ್ನನಿಗೆ ಮೈಗೆ ಸರಿಯಿರಲಿಲ್ಲ ; ಎಲ್ಲರಿಗೂ ಚಿಂತೆಗಿಟ್ಟುಕೊಂಡಿತ್ತು. ಅಮ್ಮಣ್ಣಿ ಪಾಟಿ ವಿಶೇಷವಾಗಿ ಚೆನ್ನಾಗಿದ್ದ ಕೆಲವು ಹಣ್ಣು ಕಳಿಸಿಕೊಟ್ಟಿದ್ದರು ; ಆದರೆ ಅವನಿಗೆ ಅದುಕೂಡ ಬೇಕಾಗಲಿಲ್ಲ. ಅವನಿಗೆ ಸ್ವಲ್ಪ ಮೇಲಾದರೂ ಪೂರ್ತಿ ಗುಣವಾಗಿರಲಿಲ್ಲ ; ಜೂಡಿಯ ವ್ಯಾಸಂಗದ ಅವಧಿ ಮುಗಿದೊಡನೆಯೆ ಪ್ರತಿಯೊಬ್ಬರೂ ಬೆಟ್ಟಕ್ಕೆ ಹೋಗುವ ವ್ಯವಸ್ಥೆಯಾಯಿತು.

ಈ ಪ್ರಕಾರ ಅವಳು ಹರಿದಾಸನನ್ನಾಗಲಿ ಲಕ್ಷ್ಮಿಯನ್ನಾಗಲಿ ಕೆಲವು ದಿನ ನೋಡಲಾಗಲಿಲ್ಲ ; ಅವಳು ಲಕ್ಷ್ಮಿಯನ್ನು ನೋಡಿದಾಗ ಏನೋ ಒಂದು ವಿಚಿತ್ರ ಭಾವನೆಯುಂಟಾಯಿತು. ಲಕ್ಷ್ಮಿಗೆ ಇನ್ನೂಮುಂದೆ ಸ್ನೇಹವಾಗಿರುವುದು ಇಷ್ಟವಿಲ್ಲವೇನೋ ಎಂಬಂತಿತ್ತು. ಆದರೆ ಜೂಡಿಗೆ ಬೆನ್ನನ ಚಿಂತೆ ಅವಳು ಈ ವಿಚಾರಕ್ಕೆ ಅತಿಯಾದ ಗಮನವನ್ನು ಕೊಡಲಿಲ್ಲ, ಅಥವಾ; ಏನಾದರೂ ಪ್ರಮಾದವಾಗಿದೆಯೆ ಎಂದು ಲಕ್ಷ್ಮಿಯನ್ನು ಕೇಳಲೂ ಇಲ್ಲ.

ಮತ್ತೆ ಬೆಟ್ಟಕ್ಕೆ ಹೋಗುವುದೆಂದರೆ ಅದೆಷ್ಟು ಸೊಗಸು ! ದೋಣಿಗಳಿದ್ದ ಒಂದು ದೊಡ್ಡ ಕೆರೆಯ ಬಳಿ ಅವರಿದ್ದರು ; ಇದ್ದಕ್ಕಿದ್ದ ಹಾಗೆ, ಹುಟ್ಟು ಹಾಕಿ ದೋಣಿ ನಡಸಬೇಕೆನ್ನಿಸಿತು ಜೂಡಿಗೆ. ಅಂತಹ ಏನನ್ನೇ ಮಾಡುವುದಾಗಲಿ, ಓಡಾಡ ಬಯಸುವುದಾಗಲಿ, ನೆಗೆದಾಡ ಬಯಸುವುದಾಗಲಿ, ವಿಚಿತ್ರವೆಂದು ತೋರಿತು. ರಾತ್ರಿಯ ವೇಳೆ ತಣ್ಣಗೆ ಭರ್ಜರಿಯಾಗಿತ್ತು ; ಕಂಬಳಿಯ ಕೆಳಗೆ ಹುದುಗಿಕೊಳ್ಳಬೇಕೆನಿಸುವುದು ಕೂಡ ಒಳ್ಳೆ ಭರ್ಜರಿಯಾಗಿತ್ತು. ಬಯಲು ಸೀಮೆಯಲ್ಲಿ ಜನರೆಲ್ಲಾ ದಿನದಿನಕ್ಕೆ ಹೆಚ್ಚು ಹೆಚ್ಚು ಸೆಕೆ ಅನುಭವಿಸುತ್ತಿರುವುದನ್ನು ಕುರಿತು ಯೋಚಿಸುವುದು ಮನಸ್ಸಿಗೆ ಅಷ್ಟು ಹಿತವೆನಿಸಲಿಲ್ಲ. "ಆದರೆ, ಭಾರತದ ಜನ ಸೆಕೆಯ ಹವವನ್ನು ಅಷ್ಟಾಗಿ ಗಮನಿಸುತ್ತಾರೆಯೆ?" ಎಂದು ಅವಳು ತನ್ನ ತಂದೆಯನ್ನು ಕೇಳಿದರು.

"ಹೆಚ್ಚು ಕಡಮೆ ಅಷ್ಟರಮಟ್ಟಿಗೇ ಗಮನಿಸುತ್ತಾರೆ. ಭಾರತದಲ್ಲಿ ಸೊಗಸಾದ ಹವ ಇದ್ದಿದ್ದರೆ, ಅದರ ಇಡೀ ಸ್ವರೂಪವೇ ಬೇರೆಯಾಗಿರುತ್ತಿತ್ತು. ಸೆಕೆಯ ಹವದಲ್ಲಿ ಯಾರಿಗೂ ಸರಿಯಾಗಿ ಕೆಲಸ ಮಾಡಲಾಗುವುದಿಲ್ಲ", ಎಂದು ಅವರು ಉತ್ತರವಿತ್ತರು.

ಅವಳ ಭಾರತೀಯ ಸ್ನೇಹಿತರಲ್ಲಿ ಕೆಲವು ಮಂದಿ ಬೆಟ್ಟದ ಮೇಲಕ್ಕೆ ಬಂದರು ; ಅವರಲ್ಲಿ ಹರಿದಾಸನೂ ಇದ್ದ ; ಅವನು ಬಹಳ ಚೆನ್ನಾಗಿಯೇ

ತಾವಿಬ್ಬರೂ ಅವವೇ ವಿಷಯವಾಗಿ ನಗುತ್ತಿದ್ದಂತೆ ತೋರಿತು. ಅವನ ತಂದೆಯನ್ನು ಕಂಡರೆ ತನ್ನ ತಂದೆಗೆ ಇಷ್ಟ ಎಂದು ಅವಳಿಗೆ ಗೊತ್ತು : "ಬಹಳ ಉನ್ನತವಾದ ವೃತ್ತಿಯ ಆದರ್ಶಗಳುಳ್ಳ ಮನುಷ್ಯ" ಎಂದು ಹೇಳಿದರು ಅವಳ ತಂದೆ ; ಎಂದಮೇಲೆ ಬಹಳ 'ಕರಾರು ವಾಕು' ಎಂದ ಹಾಗೆಯೆ ಆಯಿತಲ್ಲ ! ಆದರೆ ಅವನ ತಾಯಿಯ ವಿಚಾರವಾಗಿ ಅವಳ ತಾಯಿ ಬಹುಮಟ್ಟಿಗೆ ಮೌನವಾಗಿಯೇ ಇದ್ದರು. ಅವನ ತಾಯಿಗೆ ಮದರಾಸು ಇಷ್ಟವಾಗದೆ, ಉತ್ತರ ಭಾರತದ ಆಹಾರ ಎಷ್ಟು ಮೇಲಾದುದು ಎಂದು ಮೇಲಿಂದ ಮೇಲೆ ಆಕೆ ಹೇಳುತ್ತಲೇ ಇದ್ದರು, ನಿಜಕ್ಕೂ ಅದರಿಂದೇನೂ ಬಾಧಕವಿರಲಿಲ್ಲ. ಪಾಕ ತೊಟ್ಟಿಕ್ಕುತ್ತಿದ್ದರೂ ಒಳಗಡೆ ಗರಿಗರಿಯಾಗಿರುವ, ಅತ್ಯಂತ ರುಚಿಕರವಾದ ಸಿಹಿ ತಿನಿಸುಗಳನ್ನೋ, ಇಲ್ಲವೆ ಬಾಯಲ್ಲಿ ಕರಗಿಹೋಗುವಂತಹ, ತುಪ್ಪುಳಿನ ಹಾಗೆ ಕಾಣುವ ಸಕ್ಕರೆ ಮಿಠಾಯಿಯನ್ನೋ ಮಾಡುವುದರಲ್ಲಿ ಆಕೆ ಎತ್ತಿದ ಕೈ. ಆಕೆ ಮಾಡುತ್ತಿದ್ದ ಪಲ್ಯಗಳು ಮದರಾಸಿನ ಕಡೆಯ ಪಲ್ಯಗಳಷ್ಟು ಖಾರವಾಗಿರುವತ್ತಿರಲಿಲ್ಲ ; ಅವುಗಳ ರುಚಿಯೂ ಬೇರೆ ಬೇರೆಯಾಗಿರುತ್ತಿದ್ದುವು. ಆದರೆ, ದಕ್ಷಿಣ ಭಾರತ ಅಷ್ಟೊಂದು ಹೊಲಸೆಂಬ ವಿಷಯವನ್ನು ತೆಗೆದುಕೊಂಡರೆ–ಒಳ್ಳೆಯದು, ಉತ್ತರದ ವಿಚಾರವಾಗಿ ಮದರಾಸಿನ ಜನ ಏನು ಆಡಿಕೊಳ್ಳುತ್ತಾರೆ, ನೋಡಿ !

ಒಮ್ಮೆ ಹರಿದಾಸ ತಮ್ಮ ಮನೆಗೆ ಬಂದಿದ್ದಾಗ, ಬೇಲಿಯ ಸಂದಿನ ಮೂಲಕ ಅವನನ್ನು ಕರೆದುಕೊಂಡು ಹೋಗುವುದೆಂದು ಜೂಡಿ ಯೋಚಿಸಿದಳು ; ತರವಾಯ, 'ಬೇಡ, ಅದರಿಂದ ಉಪಯೋಗವಿಲ್ಲ' ಎಂದುಕೊಂಡಳು. ಹಾಗಿದ್ದರೂ ಕೂಡ, ಅವರೆಲ್ಲರೂ ಈಜಾಡುತ್ತಿದ್ದಾಗ, ಅವಳು ಲಕ್ಷ್ಮಿ ಮತ್ತು ಅವಳ ಗೆಳತಿಯರೊಂದಿಗೋ, ಇಲ್ಲವೆ ಹರಿದಾಸನೊಂದಿಗೋ ಮುಳುಗೀಜು ಹೊಡೆಯುತ್ತಿದ್ದಳು. ಕೊಳದಲ್ಲಿ ನಿಜವಾಗಿ ಈಜಹೋಗುತ್ತಿದ್ದ ಕೆಲಮಂದಿ ವಯಸ್ಕ ಮಹಿಳೆಯರ ಪೈಕಿ ಹರಿದಾಸನ ತಾಯಿಯೂ ಒಬ್ಬಳಾಗಿದ್ದಳು ಎಂಬುದನ್ನು ಅವಳು ಗಮನಿಸಿಯೇ ಗಮನಿಸಿದಳು. ಅವರಲ್ಲಿ ಬಹುಮಂದಿ ತಮ್ಮ ಮಕ್ಕಳೊಂದಿಗೆ ಬರುತ್ತಿದ್ದರು, ಆದರೆ ಐಸ್‌ಕ್ಯಾಂಡಿಯನ್ನು ತಿನ್ನುತ್ತಲೋ, ಇಲ್ಲವೆ ತಮ್ಮಪಾಡಿಗೆ ತಾವು ಚಹ ಕುಡಿಯುತ್ತಲೋ ಕುಳಿತಿರುತ್ತಿದ್ದರು. "ನನಗೆ ಒಂದು ಡಜನ್ ಮಕ್ಕಳಿದ್ದರೂ ಸರಿಯೆ, ನಾನು ಹಾಗಿರುವುದಿಲ್ಲ" ಎಂದಳು ಲಕ್ಷ್ಮಿ.

ಆದರೆ ಈಗ ಮಳೆಗಾಲ ನಿಜವಾಗಿ ಪ್ರಾರಂಭವಾಗಿತ್ತು, ಆಕಾಶದ ಸುತ್ತ ಗುಡುಗು ತಮಟೆ ಹೊಡೆಯತೊಡಗಿತ್ತು ; ಬೀದಿಯ ನೇರ ಅಡ್ಡಡ್ಡನಾಗಿ ಮಳೆಯ ಪ್ರವಾಹದ ನೀರು ದೊಡ್ಡ ಮಡುಗಳಾಗಿ ನಿಂತಿದ್ದುವು. ಆದರೆ ಅವೆಲ್ಲ

# ೫. ಕಾಂಚೀಪುರ

ಅವರು ಹಿಂದಿರುಗಿದಾಗ, ಅಷ್ಟೊಂದು ಶೈತ್ಯವಾಗಿರದಿದ್ದರೂ ಇನ್ನೂ ಸೆಕೆಯಾಗಿಯೇ ಇತ್ತು. ಮುಂಗಾರು ನಿಂತಿತ್ತು ; ಹಿಂಗಾರು ಇನ್ನೂ ಬಂದಿರಲಿಲ್ಲ. ಶಾಲೆಯಲ್ಲಿ ಆಗಲೆ ಹೆಣ್ಣು ಮಕ್ಕಳು ಬರುವ ದೀಪಾವಳಿಯ ರಜಾ ದಿನದಂದು ತಾವು ಏನು ಮಾಡಬೇಕೆಂಬುದನ್ನು ಕುರಿತು ಮಾತಾಡತೊಡಗಿದ್ದರು ; ಯೂರೋಪ್ ಅಥವಾ ಅಮೆರಿಕದಲ್ಲಿ ಕ್ರಿಸ್‌ಮಸ್ ಹಬ್ಬದಲ್ಲಿ ಮಾಡುವಂತೆಯೆ, ಅಂಗಡಿಗಳವರು ತಮ್ಮ ಕಿಟಕಿಗಳ ಮುಂಗಡೆ–"ನಿಮ್ಮ ದೀಪಾವಳಿಯ ಉಡುಗೊರೆ"–ಎಂದು ಸರಕುಗಳನ್ನು ಪ್ರದರ್ಶಿಸತೊಡಗಿದ್ದರು ; ಹಾಗಿದ್ದರೂ ಕೂಡ, ಅದೆಲ್ಲಾ ವ್ಯಾಪಾರ ಮಾಡುವುದಕ್ಕೊಂದು ನೆಪ, ಅಷ್ಟೆ. ದಟ್ಟ ದರಿದ್ರರು ಕೂಡ ಅಂದು ಧರಿಸಲು ಏನಾದರೂ ಹೊಸದನ್ನು ಪಡೆಯಲು ಪ್ರಯತ್ನಿಸಿ, ಹೇಗಾದರೂ ಪಡೆದುಕೊಳ್ಳುವರು ; ಕಡೆಗೆ, ಹೆಚ್ಚು ಸಿರಿವಂತರು ಯಾರಾದರೂ ಕೊಟ್ಟದ್ದಾದರೂ ಸರಿಯೆ. ಆದರೆ, ದಾದಿ, ವಾಸಿಕಿ ಮತ್ತು ಜಾರ್ಜನ ಹೆಂಡತಿ ಇವರಿಗೆ ಹೊಸ ಹತ್ತಿಯ ನೂಲಿನ ಸೀರೆಗಳನ್ನು ಆರಿಸಲು ಜೂಡಿ ತನ್ನ ತಾಯಿಯೊಂದಿಗೆ ಹೋಗಿದ್ದಳು ; ಜಾರ್ಜನ ಹೆಂಡತಿ ಕೆಲವು ವೇಳೆ ಅವರ ಮನೆಗೆ ಬರುತ್ತಿದ್ದಳು ; ಅವಳ ಚಿಕ್ಕ ಮಕ್ಕಳು ಎರಡು ಕಾಲೆಳೆದುಕೊಂಡು ಅವಳನ್ನು ಹಿಂಬಾಲಿಸಿ ಬರುತ್ತಿದ್ದವು, ಇನ್ನೊಂದು ಅವಳ ಸೊಂಟದ ಮೇಲಿರುತ್ತಿತ್ತು.

ಲಾಂಟಾನಾ ಬೇಲಿಯ ಆಚೆಯ ನೆರೆಮನೆಯವರು ಎಲ್ಲ ಬಗೆಯ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತಿದ್ದರು. ವಾರಂತಿ ಜೂಡಿಗೆ ಬಾಣವಿರುಸುಗಳ ಒಂದು ಇಡೀ ಪೆಟ್ಟಿಗೆಯನ್ನು ತೋರಿಸಿದಳು–ಬಹುಶಃ ಅವಳಿಗೆ ಈ ವರ್ಷ ಒಂದು ನಿಜವಾದ ಚಿನ್ನದ ಬಳೆ ದೊರಕಿದರೂ ದೊರಕೀತು ! ಗೋಡೆಯ ಆಚೆಯ ನೆರೆಮನೆಯವರು ಮೆರೆತಕ್ಕೋಸ್ಕರ ಇನ್ನೂ ದೊಡ್ಡ ಪೆಟ್ಟಿಗೆಯ ತುಂಬ ಬಾಣ ಬಿರಸನ್ನು ತರಿಸಿಟ್ಟುಕೊಳ್ಳುವುದು ಖಂಡಿತ ; ಸಿಹಿ ತಿಂಡಿಗಳನ್ನೂ ಇನ್ನೂ ಹೆಚ್ಚಾಗಿಯೇ ಮಾಡುವರು.

ಆ ಬಳಿಕ, 'ಬೆಳಗಿನ ಬೆಡಗಿ'ಯ ಬೇಲಿಯ ಆಚೆಯ ಕಡೆಯಿಂದ ಅಮ್ಮಣ್ಣಿ ಪಾಟಿ ತಾವು ಹೊಸಸೀರೆಗಳನ್ನು ತರುವುದಕ್ಕಾಗಿ ಕಾಂಚೀಪುರಕ್ಕೆ (ಕಂಚಿಗೆ) ಹೋಗಲಿರುವವರೆಂದು ಜೂಡಿಯನ್ನು ಕೂಗಿ ಕರೆದು ತಿಳಿಸಿದರು. "ಅವು ಅಲ್ಲಿ

ದೋಣಿ ನಡಸುವುದರಲ್ಲಿ ಸಮರ್ಥನೆನಿಸಿದ್ದ. ಚಿಕ್ಕ ದೋಣಿಗಳಲ್ಲಿ ಅವರು ಒಬ್ಬರಮೇಲೊಬ್ಬರು ಪೈಪೋಟಿ ನಡಸಿದಾಗ ಅವನೇ ಬಹುಪಾಲು ಗೆಲ್ಲುತ್ತಿದ್ದ. ಸ್ಟ್ಯಾಂಪು ಕಲೆಹಾಕುವ ಹುಡುಗ ಇನ್ನೊಂದು ಬೆಟ್ಟದ ವಿಹಾರಸ್ಥಳದಲ್ಲಿದ್ದ. ಬೆನ್ ಮತ್ತೆ ಮೊದಲಿನಂತೆ ಆರೋಗ್ಯವಾದರೂ, ಸ್ವಲ್ಪ ಬಡವಾಗಿ ಕಾಣುತ್ತಿದ್ದ. ಅಕ್ಟೋಬರ್ ತಿಂಗಳ ಮೊದಲ ಭಾಗದಲ್ಲಿ ಪೂಜಾ ದಿನ ಬಂದಿತು ; ಪ್ರತಿಯೊಂದನ್ನೂ ಪೂಜಿಸಿ ಶುಭಕೋರುವ ದಿನ ಅದು. ಕಾರಿಗೆ ಹೂಮಾಲೆಗಳನ್ನು ಹಾಕಿ, ಅದರ ಮುಂದೆ ಹೂಹಣ್ಣುಗಳನ್ನು ನೈವೇದ್ಯ ಮಾಡಿದರು. ಬೆನ್ನನ ತಳ್ಳುವ ಕುರ್ಚಿಗೂ ಶುಭಕೋರಲಾಯಿತು ; ಅವನ ದಾದಿಯಾದ ಮೇರಿ ಕ್ರೈಸ್ತಳಾದರೂ ಅದನ್ನು ಮಾಡದೆ ಬಿಡುವುದೆಂದರೆ ಅವಳಿಗೆ ಆಗದು. ಒಬ್ಬರು ಬಹು ಒಳ್ಳೆಯ ಮುದುಕ ಪೂಜಾರಿ ಇದ್ದರು ; ಅವರು ಇದನ್ನೆಲ್ಲಾ ಮಾಡಿ, ಕೆಲವು ರೂಪಾಯಿಗಳನ್ನು ಮಾತ್ರ ಕೇಳಿದರು.

ಅದೇರೀತಿ, ಆಸ್ಪತ್ರೆಯ ಎಲ್ಲ ವಾರ್ಡುಗಳಿಗೂ, ವಿಶೇಷವಾಗಿ ಶಸ್ತ್ರ ಚಿಕಿತ್ಸಾ ಭವನ ಮತ್ತು ಎಕ್ಸ್–ರೇ ಸಲಕರಣೆತಂಡಕ್ಕೂ ಪೂಜೆ ಸಲ್ಲಿಸಲಾಯಿತು. ಅವೊತ್ತಂತೂ ರಜಾದಿನ. ಹಿಂದೂಗಳ ಕ್ಯಾಲೆಂಡರಿನಲ್ಲಿ (ಪಂಚಾಂಗದಲ್ಲಿ) ಹಲವಾರು ರಜಾದಿನಗಳಿದ್ದುವು ; ಅದಕ್ಕೆ ಕಾರಣ, ಪ್ರತಿಯೊಬ್ಬರೂ ಕಷ್ಟಪಟ್ಟು ಕೆಲಸಮಾಡುತ್ತಿದ್ದರು, ಬಹಳ ಹಣವೇನೂ ಕೈಗೆ ಬರುತ್ತಿರಲಿಲ್ಲ, ಅವರಲ್ಲಿ ಅಪಾರಮಂದಿ ಭಾನುವಾರಕೂಡ ವಿಶ್ರಾಂತಿ ಪಡೆಯುತ್ತಿರಲಿಲ್ಲ; ಅವರ ಬದುಕೆಲ್ಲ ಬೇಸರದಿಂದ ತುಂಬಿ, ಅವರಿಗೆ ರಜಾದಿನಗಳೂ ಸ್ವಲ್ಪ ತಮಾಷೆಯೂ ನಿಜವಾಗಿ ಅಗತ್ಯವಾಗಿದ್ದುವು–ಹೀಗೆಂದು ಜೂಡಿ ಭಾವಿಸಿದಳು. ಆದರೆ, ಆಸಕ್ತಿಹುಟಿಸುವ ಕೆಲಸಮಾಡುವ ಜನಕ್ಕೆ ಅವುಗಳ ಅಗತ್ಯವಿರಲಿಲ್ಲ; ಹೀಗಿರುವುದರಿಂದ ಪ್ರತಿಯೊಬ್ಬರೂ ತಾವು ಆಸಕ್ತಿಹೊಂದಿರುವಂತಹದು ಏನಾದರೂ ಕೆಲಸ ಮಾಡಲು ಸಿಕ್ಕಿದರೆ, ಬಹುಶಃ ಅವರು ಈ ರಜಾದಿನಗಳನ್ನು ಪಡೆಯಲು ಅಪೇಕ್ಷೆ ಪಡಲಾರರು. ಅದೆಂತಹುದು ಎಂಬುದನ್ನು ತಿಳಿಯುವದೇ

ಮೇಲೆ ಕೋತಿಗಳೂ ಇರುತ್ತಿದ್ದುವು; ಒಂದು ಚೂರು ಹಣ್ಣಿಗಾಗಿಯೋ ಇನ್ನು ಯಾವುದಕ್ಕಾದರೋ ಅವು ಕಚ್ಚಾಡುತ್ತಿದ್ದರೆ, ಕಡೆಯ ಕ್ಷಣದವರೆಗೂ ಅವು ದಾರಿ ಬಿಟ್ಟು ಹೋಗುತ್ತಿರಲಿಲ್ಲ.

ಕಟ್ಟಕಡೆಗೆ, ಅವರ ಮುಂದೆ ಬಹುದೂರದಲ್ಲಿ ಮೇಲೆದ್ದು ನಿಂತಿರುವ ಕಂಚಿಯ ಗೋಪುರಗಳು ಅವರಿಗೆ ಕಾಣತೊಡಗಿದುವು. ಅವು ಒಂದು ಕಡೆ ಇನ್ನೊಂದು ಕಡೆಗಿಂತ ಅಗಲವಾಗಿದ್ದು, ಮೇಲುಮೇಲಕ್ಕೆ ಹೋದಂತೆ ಕ್ರಮೇಣ ಸಣ್ಣವಾಗುತ್ತ, ತಟ್ಟನೆ ಕತ್ತರಿಸಿದಂತೆ ಮುಗಿದುಬಿಡುತ್ತಿದ್ದುವು ; ಚರ್ಚಿನ ಶಿಖರಗಳಂತೆ ಅವು ಚೂಪುಮೊನೆಯಾಗಿರುತ್ತಿರಲಿಲ್ಲ. ಜನನಿಬಿಡವಾದ ಕಂಚಿಯ ಬೀದಿಗಳೊಳಕ್ಕೆ ಪ್ರವಾಸಿಗಳು ಹೊಕ್ಕಾಗ ಅವು ಕಂಡದ್ದು ಹಾಗೆ. ದೇವಾಲಯಗಳ ಮಹಾದ್ವಾರಗಳಮೇಲೆ ಅವು ಮೇಲೆದ್ದು ನಿಂತಿದ್ದುವು ; ಇಪ್ಪತ್ತು ಅಂತಸ್ತುಗಳ ಎತ್ತರವಾಗಿದ್ದು, ದೇವರುಗಳ ಶಿಲಾವಿಗ್ರಹಗಳಿಂದಲೂ ಇತರ ಲಾಂಛನಗಳಿಂದಲೂ ದಟ್ಟವಾಗಿ ಮುಚ್ಚಿಹೋಗಿದ್ದುವು ; ವಿಗ್ರಹಗಳ ಕೈಗಳು ಒಲೆದಾಡುವಂತೆ, ಹರಸುವಂತೆ ಇರುತ್ತಿದ್ದವು, ಇಲ್ಲವೆ ಪವಿತ್ರ ವಸ್ತುಗಳನ್ನು ಹಿಡಿದಿರುತ್ತಿದ್ದುವು ; ಅವುಗಳ ಒಂದು ಚದರಡಿಯೂ ಅಲಂಕಾರವಿಲ್ಲದೆ ಇರಲಿಲ್ಲ ; ಎಲ್ಲದರ ಮೇಲ್ಗಡೆ ಕಿರೀಟಪ್ರಾಯವಾಗಿ ಕೆತ್ತಿದ್ದ ದೊಡ್ಡ ನವಿಲ ತೋಕೆಗಳಿದ್ದುವು ಇನ್ನೊಂದು ಕ್ಷಣದಲ್ಲಿ ಅಲ್ಲಿನ ಪ್ರತಿಮೆಗಳೆಲ್ಲ ನರ್ತನಕ್ಕೆ ತೇಲಿಬಂದುಬಿಡುವವೋ ಎಂಬಂತೆ ಅವುಗಳಲ್ಲಿ ಒಂದು ಬಗೆಯ ನುಲಿದಾಟ ಕಂಡುಬರುತ್ತಿತ್ತು. ಸಮತೋಲ, ಎತ್ತಿದ ಕೋಮಲ ಪಾದ, ಮಂಡಿ ಮತ್ತು ಸೊಂಟಗಳ ಬಳಿಯ ಬಾಗು–ಇವು ತೋರುವ ನೃತ್ಯ ಭಂಗಿಗಳನ್ನು ಜೂಡಿ ಗುರುತಿಸಿದಳು.

ಅವರು ತಮ್ಮ ಜೋಡುಗಳನ್ನು ದ್ವಾರದ ಹೊರಗೆ ಬಿಟ್ಟು, ಒಳಕ್ಕೆ ಹೋದರು. ಕಾಲಿನ ಅಡಿಯ ತಳಭಾಗಕ್ಕೆ ಬಿಸಿಯಾಗಿ ಕಾಣುವ ಕಲ್ಲು ಹಾಸಿದ್ದ ಅಂಗಳಗಳಿದ್ದುವು ಇಲ್ಲಿ ; ಕಂಬಗಳಿಂದ ಸುತ್ತುವರಿಯಲ್ಪಟ್ಟು. ಪ್ರತಿಯೊಂದೂ ಒಂದು ಅಂತಸ್ತಿನಂತಿದ್ದ ಪ್ರತಿಯೊಂದೂ ಬೇರೆಯಾಗಿ ಕಾಣುವ, ವಿಶಾಲ ದೇವ ಮಂದಿರಗಳಿಗೆ ಹೋಗಲು ಮೆಟ್ಟಲುಗಳಿದ್ದುವು. ತನ್ನ ಬೆನ್ನ ಮೇಲೆ ಪ್ರತಿಯೊಂದನ್ನು ಹೊತ್ತಿರುವ ಕೂರ್ಮ, ವರಾಹ, ನಾರಸಿಂಹ–ಹೀಗೆ, ವಿಷ್ಣುವಿನ ಅನೇಕ ಅವತಾರಗಳ ಆಕೃತಿಗಳ ವಿಚಾರವಾಗಿ ಈ ಮೊದಲೇ ಅಮ್ಮಣ್ಣಿ ಪಾಟಿ ಅವಳಿಗೆ ತಿಳಿಯಹೇಳಿದ್ದರು ; ಅವೆಲ್ಲ ಇಲ್ಲಿಯೆ ಇದ್ದುವು. ಬಾಗಿದ ರೆಕ್ಕೆಗಳುಳ್ಳ ಭವ್ಯವಾದ ಗರುಡಪಕ್ಷಿ, ಹಲವೆಡೆ ಕೊಳಲ ಕೃಷ್ಣ, ಆನೆಯ ತಲೆಯ ಗಣೇಶ ಇವೆಲ್ಲ ಇದ್ದದ್ದು ಇಲ್ಲಿಯೇ. ಇಲ್ಲಿಯೇ ಇದ್ದರು ದೇವಿಯರು : ಪಾರ್ವತಿ, ಹಾಗೂ ತನ್ನ ಅನೇಕ ಗೆಳತಿಯರಿಗೆ ಹೆಸರು

ಇನ್ನೂ ಚೆಂದ. ನೀನು ಬರಬಹುದೆಂದು ನಿಮ್ಮ ತಾಯಿ ಹೇಳಿದರೆ, ನಿನ್ನನ್ನೂ ಕರೆದುಕೊಂಡು ಹೋಗುತ್ತೇನೆ" ಎಂದು ಹೇಳಿದರು ಅವರು.

"ಓಹೋ, ಭೇಷಾಗಿರುತ್ತೆ ಹಾಗಾದರೆ, ಲಕ್ಷ್ಮಿಯೂ ಬರುತಾಳೆಯೊ?" ಎಂದು ಕೇಳಿದಳು ಜೂಡಿ.

ಒಂದು ಕ್ಷಣಕಾಲ ಅಮ್ಮಣ್ಣಿ ಪಾಟಿ ಏನೂ ಹೇಳಲಿಲ್ಲ ; ಬಳಿಕ, "ಲಕ್ಷ್ಮಿಯ ಕೂಡ ನೀನು ಜಗಳ ಕಾದಿಲ್ಲ ತಾನೆ?" ಎಂದರು.

ಜೂಡಿ ಎಂದಳು, "ಇಲ್ಲ ! ಅವಳೂನೂ ನನ್ನ ಕೂಡ ಜಗಳ ಕಾದಿಲ್ಲ ಅಂದುಕೊಂಡಿದ್ದೇನೆ, ಅಷ್ಟೆ."

ಲಕ್ಷ್ಮಿಯನ್ನು ತಾನು ಈಚೆಗೆ ಅಷ್ಟಾಗಿ ಕಾಣುತ್ತಿಲ್ಲ ಎಂದುಕೊಳ್ಳತೊಡಗಿದಳು ಅವಳು. ಮೊದಲ ವಾರವೇನೋ ಸರಿಯೆ, ಶಾಲೆಯಲ್ಲಿ ಸ್ವಲ್ಪ ನೂಕು ನುಗ್ಗಲು, ಯಾವುದಕ್ಕೂ ಸಮಯವಿಲ್ಲ ; ಆದರೆ, ಈಜುವ ಕೊಳದ ಬಳಿ ಲಕ್ಷ್ಮಿ ಯಾವಾಗಲೂ ಸುಮ್ಮನೆ ಹೋಗಿಬಿಡುತ್ತಿದ್ದಳು, ಇಲ್ಲ ಮತ್ತೇನನ್ನೋ ಮಾಡುತ್ತಿದ್ದಳು. ಸರೋವರದಲ್ಲಿನ ದೋಣಿಗಳ ವಿಚಾರ. ತಾನು ಎಲ್ಲಿಗೆ ಹೋಗಿದ್ದೆ ಎಂಬ ವಿಚಾರ, ಇದನ್ನೆಲ್ಲ ಅವಳಿಗೆ ಹೇಳಬೇಕೆಂದು ಮಾಡಿಕೊಂಡಿದ್ದಳು ಜೂಡಿ ; ಏನೋ ಎಂತೋ ಅದಕ್ಕೆ ಅವಕಾಶಮಾತ್ರ ಆಗಿರಲಿಲ್ಲ. ಬಹುಶಃ ಎಲ್ಲ ಸರಿಯಾಗಿಯೇ ಇತ್ತೋ ಏನೋ.

ಜೂಡಿಯ ತಾಯಿ ಅವಳು ಅಮ್ಮಣ್ಣಿಪಾಟಿಯ ಸಂಗಡ ಹೋಗಬಹುದೆಂದು ಹೇಳಿದರು ; ಆದರೆ, ಯಾವುದಾದರೂ ದೇವಸ್ಥಾನಕ್ಕೆ ಹೋಗುವ ಮೊದಲು ತನ್ನ ಜೋಡುಗಳನ್ನು ಕಳಚಿಡುವುದನ್ನು ಯಾವಾಗಲೂ ಖಂಡಿತ ನೆನಪಿಡಬೇಕೆಂದು ಎಚ್ಚರಿಸಿದರು. "ಕಂಚಿಯಲ್ಲಿ ನೂರಎಂಟು ಗುಡಿಗಳಿವೆ. ಅವುಗಳಲ್ಲಿ ಕೆಲವಕ್ಕಾದರೂ ಹೋಗಬೇಕೆಂದು ಅಮ್ಮಣ್ಣಿ ಪಾಟಿ ಇಷ್ಟ ಪಡುವರು ಎಂದು ನನಗೆ ತೋರುತ್ತೆ," ಎಂದರು ಅವರು.

ಬೆಳಗ್ಗೆ ಕೆಂಪು ಮೂಡಿದ ತುಸು ಹೊತ್ತಿನ ಮೇಲೆ ಸೆಕೆ ಅತಿ ಉಗ್ರವಾಗುವ ಮೊದಲೆ, ಬಹಳ ಮುಂಚೆಯೇ ಅವರೆಲ್ಲ ಕಾರಿನಲ್ಲಿ ಹೊರಟು, ಸೆಯ್ಂಟ್ ಥಾಮಸ್ ಮೌಂಟನ್ನು ಹಾದು, ಒಂದು ಹಳ್ಳಿಯ ರಸ್ತೆಯನ್ನು ಹಿಡಿದರು. ಕಾರು ನಡಸುತ್ತಿದ್ದ ಯುವಕ ಯಾರೋ ದೊಡ್ಡಪ್ಪ ಚಿಕ್ಕಪ್ಪನ ಮಗನಂತೆ ಕಂಡು ಬಂತು. ಅವನು ಹಸುಗಳನ್ನೂ ಆಡುಗಳನ್ನೂ ಅದೆಷ್ಟು ಸರಸರನೆ ಬಳಸಿಕೊಂಡು ಹೋಗುತ್ತಿದ್ದನೆಂದರೆ, ಜೂಡಿ ಸ್ವಲ್ಪ ಗಾಬರಿ ಪಡತೊಡಗಿದಳು; ಅಲ್ಲದೆ ಅವನು ಕಾರಿನ ಹಾರನ್ನನ್ನು (ಕಹಳೆಯನ್ನು) ವಿಪರೀತ ಬಾರಿಸುತ್ತಿದ್ದ. ಕೆಲವೊಮ್ಮೆ ರಸ್ತೆಯ

ಅಂಗಡಿಗಳು, ಅಥವಾ ಮಳಿಗೆಗಳು ಇದ್ದುವು ; ಅಲ್ಲಿ ಎಲ್ಲ ತರದ ಪದಾರ್ಥಗಳೂ ಇದ್ದುವು ; ಸಾಧಾರಣ ಆಟದ ಸಾಮಾನುಗಳು, ಗಮನಿಸಿ ನೋಡಿದರೆ ನಿಜವಾಗಿ ದೇವ ದೇವಿಯರೆಂದು ಕಾಣಬರುವ ಕರ್ಪೂರದ ಬೊಂಬೆಗಳು, ಎಲ್ಲ ಒಟ್ಟಿಗೆ ಕಲಬೆರಕೆಯಾದ ದೇವರುಗಳ ಚಿತ್ರಪಟಗಳು ; ಹಾಗೂ ರಾಜಕಾರಣಿಗಳ ಚಿತ್ರಪಟಗಳು ; ಎಲ್ಲ ಪಟಗಳಿಗೂ ವಿಪರೀತ ಬಣ್ಣ ಹಾಕಿತ್ತು, ಕೆಲವು ವೇಳೆ ಚಮಕಿ ಕೆಲಸ ಕೂಡ ಮಾಡಿರುತ್ತಿತ್ತು ; ಕೆಲವು ಸಲ ಬಹುಮಟ್ಟಿಗೆ ಸಿನಿಮಾ ತಾರೆಯರಂತೆ ಕಾಣುತ್ತಿದ್ದವು. ಆದರೆ ಜನಕ್ಕೆ ಕಾಟ ಕೊಡುತ್ತಿದ್ದುದು ಇಂಥದು ಯಾವುದೂ ಅಲ್ಲ. ಯಾವಾಗಲೂ, ಸದಾ ಕಾಲವೂ ತಿರುಕರಿರುತ್ತಿದ್ದರು ; ಕೆಲವುವೇಳೆ ಮುಂದಕ್ಕೆ ಬಂದು ಒತ್ತಾಯ ಪಡಿಸಿ ತಿರುಪೆಕೇಳುವರು, ಕೆಲವುವೇಳೆ ಸುಮ್ಮನೆ ಕುಳಿತಿರುವರು.

ಒಂದು ದೇವಾಲಯದಲ್ಲಿ, ಕಾಲನ್ನು ಮೇಲೆತ್ತಿ ಒದೆಯುವಂತಿದ್ದ ಶಿವನ ವಿಗ್ರಹವಿತ್ತು ; ಒಮ್ಮೆ ಪಾರ್ವತಿ ತನ್ನ ಪತಿಯಾದ ಶಿವನನ್ನು ನೃತ್ಯದ ಪಂದ್ಯಕ್ಕೆ ಕರೆದ ಸಂಗತಿಯ ಕತೆಯನ್ನು ಅಮ್ಮಣ್ಣಿಪಾಟಿ ಜೂಡಿಗೆ ಹೇಳಿದರು. ಶಿವ ತನ್ನ ಕರ್ಣಕುಂಡಲವನ್ನು ಕೆಳಕ್ಕೆ ಬೀಳಿಸಿ, ಅದನ್ನು ತನ್ನ ಕಾಲ ಬೆರಳಿನಿಂದ ಎತ್ತಿಕೊಂಡು ಮರಳಿ ಕಿವಿಗೆ ಹಾಕಿಕೊಂಡು, ಪಂದ್ಯದಲ್ಲಿ ಗೆದ್ದನಂತೆ. "ಆದರೆ, ಪಾರ್ವತಿ ಹೆಂಗಸಾದ್ದರಿಂದ ಅದನ್ನು ಮಾಡಲಾಗಲಿಲ್ಲ. ಅಗೋ, ಅಲ್ಲಿ ನೋಡು, ಅವಳು ಅವನನ್ನು ಗಮನಿಸಿ ನೋಡುತ್ತಿದಾಳೆ. ಆದರೆ, ಅವಳು ನಿಜವಾಗಿಯೂ ಸಂತೋಷವಾಗಿದಾಳೆ ; ನೋಡು, ಅವಳ ಮುಗುಳು ನಗೆಯನ್ನು !" ಎಂದು ವಿವರಿಸಿದರು ಅವರು. ವಿನೋದಕ್ಕಾಗಿ ಬೇಕಾದ್ದನ್ನು ಮಾಡಬಲ್ಲ. ದೇವರುಗಳಿಗೂ ಕೂಡ ವಿನೋದ ಸಾಕಷ್ಟು ಮುಖ್ಯವಾದುದು ಎಂದು ಎಣಿಸುವ ದೇವರುಗಳನ್ನು ಪಡೆದಿರುವುದು ಒಳ್ಳೆ ಸೊಗಸಾಗಿರುತ್ತೆ, ಎಂದು ಬಗೆದಳು ಜೂಡಿ.

ಆದರೆ, ಅಬ್ಬಾ ಅದೆಷ್ಟು ಸೆಕೆ ! ಕಾರು ನೆರಳಿನಲ್ಲೆ ನಿಂತಿದ್ದರೂ ಕೂಡ, ಬಾಗಿಲು ಮುಟ್ಟಿದರೆ ಬೆರಳು ಸುಟ್ಟು ಹೋಗುತ್ತಿದ್ದವು. "ಬಾ" ಎಂದು ಅಮ್ಮಣಿಪಾಟಿ ಜೂಡಿಯನ್ನು ತಮ್ಮೊಂದಿಗೆ ಒಂದು ಸೀರೆಯ ಅಂಗಡಿಗೆ ಎಳೆದು ಕೊಂಡುಹೋದರು. ಒಡನೆಯ ಅಂಗಡಿಯವನು ಸೀರೆಗಳನ್ನು ಹೊರಕ್ಕೆ ತೆಗೆದು ಮೇಜಿನ ಮೇಲೆ ಹರಡಿದ, ಎತ್ತಿ ಎಸೆದ–ಅಲ್ಲದೆ, ಬಟ್ಟಲುಗಳಲ್ಲಿ ಮಧುರವಾದ ಕಾಫಿಯನ್ನೂ ತಂದ. ಇಲ್ಲಿ ಚಿನ್ನದ ಸರಿಗೆಯಿಂದ ಭಾರವಾದ ಮದುವೆಯ ಸೀರೆಗಳಿದ್ದುವು ; ಚೌಕಳಿ ನಮೂನೆಯ ಇಲ್ಲವೆ ಕಸೂತಿ ಕೆಲಸ ಮಾಡಿದ, ಮೀನುಗಳ ಇಲ್ಲವೆ ಆನೆಗಳ ಚಿತ್ರದ ಅಂಚಿನ ರೇಶ್ಮೆ ಬಟ್ಟೆ ಪ್ರತಿಯೊಂದು

ಕೊಟ್ಟಿದ್ದ ಲಕ್ಷ್ಮಿ. ರುಂಡಮಾಲೆಯನ್ನು ಧರಿಸಿ, ಮೂಕ ಗರ್ಜನೆಯ ಗುರುತಾಗಿ ನಾಲಗೆಯನ್ನು ಹೊರ ಚಾಚಿಕೊಂಡಿದ್ದ ಭಯಂಕರ ಕಾಳಿ ಬೇರೆ ಇದ್ದಳು ! ಎಲ್ಲ ಪ್ರತಿಮೆಗಳನ್ನೂ ಸುತ್ತಲೂ ಕೆತ್ತಿದ್ದರು ; ಅವುಗಳ ಸಂಬಂಧವಾದ ಕಥೆಗಳ ಗೊಂಡಾರಣ್ಯ ಹಿಂದೂಗಳಿಗೆಲ್ಲ ತಿಳಿದಿದ್ದು. ಚಿತ್ರರೂಪದಲ್ಲಿಯೂ ಗಾನ ರೂಪದ್ಲಲಿಯೂ ಕೊನೆ ಮೊದಲಿಲ್ಲದಂತೆ ಪುನರುಕ್ತವಾಗಿವೆ. ಸರಿಯಾಗಿ ಒಳಗಡೆ ದೇವರಿಗಾಗಿ ಒಂದು ಬಗೆಯ ಪೀಠ ಇರುತ್ತದೆ ; ಕೆಲವು ವೇಳೆ ಪುರುಷ ದೇವರ ಇಲ್ಲವೆ ಸ್ತ್ರೀ ದೇವರ ಇಲ್ಲವೆ ಇಬ್ಬರೂ ಇರುವ ಚಿಕ್ಕ ಪ್ರತಿಮೆ ಇರುತ್ತದೆ; ಅದು ಧೂಳು, ಎಣ್ಣೆ ಮತ್ತು ಧೂಪದ ಹೊಗೆಯಿಂದ ಕಪ್ಪಿಡಿದಿರುತ್ತದೆ ; ಚೆಂಡು ಹೂವಿನಿಂದಲೂ, ಕೆಲವು ವೇಳೆ ಒಡವೆ ವಸ್ತ್ರಗಳಿಂದಲೂ ಅಲಂಕೃತವಾಗಿರುವುದೂ ಉಂಟು. ಕೆಲವು ಗುಡಿಗಳ ಹತ್ತಿರ ಜೂಡಿಯನ್ನು ನೋಡಿಕೊಳ್ಳುವಂತೆ ಪೂಜಾರಿಗೆ ಹೇಳಿ, ಅಮ್ಮಣಿ ಪಾಟಿ ಒಳಕೆ ಹೋಗುವರು. ಹಣೆಯ ಮೇಲೆ ವಿಭೂತಿಯ ಬೊಟ್ಟು ಇಟ್ಟುಕೊಂಡು, ಬಹುಶಃ ಕೆಳವು ಹುಗಳು ಇಲ್ಲವೆ ತೆಂಗಿನಕಾಯಿ ಹೋಳಿನ ಪ್ರಸಾದದೊಂದಿಗೆ ಆಕೆ ಹೊರಕ್ಕೆ ಬರುವರು. ಆಕೆ ಏನು ಮಾಡುತ್ತಿದ್ದರೆಂದು ಕೇಳಲು ಜೂಡಿಗೆ ಇಷ್ಟವಿರಲಿಲ್ಲ ; ಆದರೂ ಕೂಡ, ತಾನು ಹಾಗೆ ಕೇಳಿದ್ದರೂ ಅಮ್ಮಣಿಪಾಟಿ ಏನೂ ತಿಳಿದುಕೊಳ್ಳುತ್ತಿರಲಿಲ್ಲವೆಂದು ಅವಳ ಭಾವನೆ ; ದೇವರು ಮತ್ತು ದೇವರ ಪೂಜೆ ಎಂದರೆ ಏನೋ ಒಂದು ವಿಧವಾದ ಸ್ನೇಹ ಸಲಿಗೆಗಳಿಂದ ಕೂಡಿದ ಸಂಗತಿ ಎಂದು ಎಲ್ಲರ ಗ್ರಹಿಕೆ. ಚರ್ಚಿನಲ್ಲಿ ಉಂಟಾಗುವಂಥ, ಭಯ ಹುಟ್ಟಿಸುವ ಭಾವನೆ ಅಲ್ಲವೇ ಅಲ್ಲ ; ಬಹಳ ಸೆಕೆ ಎನ್ನುವುದೊಂದೇ ; ದೇವಾಲಯದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಬ್ಬರು ಕಾಲಳೆದುಕೊಂಡು ಹೋಗುವುದೇ ಕಷ್ಟವಾಗುತ್ತಿತ್ತು.

ಅನೇಕ ದೇವಾಲಯಗಳಲ್ಲಿ ಪುಷ್ಕರಿಣಿಗಳು (ಕೆರೆಗಳು) ಇದ್ದುವು ; ಚೆಲುವಾದ, ತಂಪಾದ, ಮೆಟ್ಟಿಲುಗಳುಳ್ಳ, ಚೌಕವಾಗಿ ನಿಂತ ನೀರು. ಅವುಗಳ ಪೈಕಿ ಒಂದರ ಆಚೆಯ ಕಡೆ ಯಾವುದೋ ಒಂದು ಪ್ರತಿಮೆ ಇದೆಯೆಂದು ಕ್ಷಣ ಕಾಲ ಭಾವಿಸಿಕೊಂಡು ಅದನ್ನು ನೋಡಿದಳು ; ಆಮೇಲೆ ತಿಳಿಯಿತು, ಅದು ದೇವಾಲಯದ ದೊಡ್ಡ ಆನೆ ಎಂದು ; ಅದರ ಹಣೆಯಮೇಲೂ ಕೆನ್ನೆಗಳಮೇಲೂ ಬೂದು ಮತ್ತು ಕೆಂಪುಬಣ್ಣಗಳಿಂದ ಚಿತ್ರ ಬರೆದಿತ್ತು. ಅದು ಒಳ್ಳೆ ಭರ್ಜರಿಯಾದ, ಭಾರಿಯಾದ, ಪಳಗಿಸಿದ ಆನೆ ; ಆದರೂ ಕೂಡ, ಕಾಡಿನ ಜೊಂಡು ಹುಲ್ಲಿನ ನಡುವೆ ಇರುವ ಕಾಡಾನೆಗಳಷ್ಟು ಚೆಂದವಲ್ಲ.

ಭಾರಿ ಗೋಪುರಗಳ ಅಡಿಯ ಕಮಾನುಗಳ ತಂಪೆಡೆಯಲ್ಲಿ ಚಿಕ್ಕ

ಮಾಡಬೇಕೆಂದೇ ದೇವರ ಅಪೇಕ್ಷೆ" ಎಂದು ಅಮ್ಮಣ್ಣಿ ಪಾಟಿ ತಿಳಿಸಿದರು.

ಇಲ್ಲಿನ ಬೀದಿಗಳಲ್ಲಿ ಎಲ್ಲಾ ಬಗೆಯ ಬಣ್ಣ ಬಣ್ಣದ ಹಣ್ಣುಗಳನ್ನೂ ದಿನಸಿ ಪದಾರ್ಥಗಳನ್ನೂ ಮಾರುವ ಅಂಗಡಿಗಳಿದ್ದುವು ; ಮನೆಗಳೂ ಇದ್ದುವು ; ಅವುಗಳ ವರಾಂಡಗಳು ತಗ್ಗು, ಭಾರವಾದ ಮರದ ಬಾಗಿಲುಗಳಿಗೆ ಕೆತ್ತನೆ ಕೆಲಸ ಮಾಡಿರುತ್ತಿತ್ತು. ಅವರು ಒಂದು ಮನೆಯೊಳಕ್ಕೆ ಹೋದರು ; ಅಲ್ಲಿ ಒಂದು ಅಂಗಳ ; ಸುತ್ತಲೂ ನೆಯ್ಗೆಯವರು ಮಗ್ಗಗಳ ಮುಂದೆ ಕುಳಿತು, ಸೊಗಸಾದ ನೂಲನ್ನು ತಮ್ಮ ಲಾಳಿಗಳಿಂದ ಆಕಡೆಗೂ ಈಕಡೆಗೂ ಎಸೆದಾಡುತ್ತಿದ್ದರು. ಕೆಲವು ವೇಳೆ, ಒಂದೇ ಮಗ್ಗದಲ್ಲಿ ಇಬ್ಬರು ಕೆಲಸ ಮಾಡುತ್ತ ಇರುವರು, ಒಬ್ಬರು ಸೀರೆಯ ಅಂಚಿನ ಕೆಲಸ, ಇನ್ನೊಬ್ಬರು ಅದರ ಒಡಲಿನದು. ಮಗ್ಗಗಳು ಸರಳ ರೀತಿಯವಾಗಿ ಕಾಣುತ್ತಿದ್ದವು ; ತೂಕದ ಗುಂಡುಗಳು ಕೆಳಗೆ ಕುಳಿಗಳಲ್ಲಿ ಜೋಲಾಡುತ್ತಿದ್ದುವು ; ಉದ್ದನೆಯ ಹಾಸಿನ ನೂಲುಗಳು ಹೇಗೆ ಹೇಗೋ ಗಂಟುಗಂಟಾಗಿ ಗೋಜಿಗೊಂಡು ಸಿಕ್ಕಾಬಟ್ಟೆ ಹರಡಿಹೋಗಿದ್ದುವು. ಆದರೆ ನಿಪುಣತೆ ಇದ್ದದ್ದು ಚಿತ್ರನಮೂನೆಗಳನ್ನು ಕೂರಿಸುವುದರಲ್ಲಿ, ಹಾಗೂ ತುಯ್ತದ ಬಿಗಿಯಲ್ಲಿ. ನೆಯ್ಗೆಯವರು ಯಾವ ಅವಸರವೂ ಇಲ್ಲದೆ, ನೆಮ್ಮದಿಯಾಗಿ ಕಂಡರು; ಶಾಲೆಗೆ ಹೋಗಿ ಓದು ಕಲಿತು ಬ್ಯಾಂಕಿನಲ್ಲಿ ಕೆಲಸ ಮಾಡುವ ಗುಮಾಸ್ತರಿಗಿಂತ ಬಹುಶಃ ಹೆಚ್ಚಿನದಾದ ಒಳ್ಳೆಯ ಮಜೂರಿಯನ್ನು ಅವರು ಸಂಪಾದಿಸುತ್ತಾರೆ ಎಂದು ಅಮ್ಮಣಿಪಾಟಿ ಜೂಡಿಗೆ ಹೇಳಿದರು. ತಮ್ಮ ತಂದೆಗಳೊಂದಿಗೆ ಕೆಲಸ ಮಾಡುತ್ತಿದ್ದ ಚಿಕ್ಕ ಹುಡುಗರು ಕೂಡ ಒಳ್ಳೆಯ ಸಂಪಾದನೆ ಮಾಡುತ್ತಿದ್ದರು. ಅಲ್ಲದೆ ತಾವು ಮಾಡುತ್ತಿದ್ದ ಕೆಲಸದಲ್ಲಿ ಅವರಿಗೆ ಖಂಡಿತವಾಗಿಯೂ ಇಷ್ಟವಿರುವಂತೆ ತೋರುತ್ತಿತ್ತು.

ಅಲ್ಲಿಂದ ಅವರು ಒಳ್ಳೆ ನಯವಾದ ಗಚ್ಚುಗಾರೆ ನೆಲದ ಸಣ್ಣ ಕೋಣೆಯೊಂದಕ್ಕೆ ಹೋದರು ; ಅಲ್ಲಿ ಅವರಿಗೆ ತುಸು ನಿಂಬೆಯ ಹಣ್ಣಿನ ರಸ ಬೆರಸಿದ ಎಳನೀರನ್ನು ಕುಡಿಯಕೊಟ್ಟರು. ಇಲ್ಲಿ ಗಂಡಸರು ತಮ್ಮ ಕಾಲಬೆರಳುಗಳ ನಡುವೆ ಒಂದು ಹಂಜಿಗೋಲನ್ನು ಇಟ್ಟುಕೊಂಡೋ, ಇಲ್ಲವೆ ಸುತ್ತು ಚೌಕಟ್ಟಿಗೋ ಚಿನ್ನದ ಸರಿಗೆ ದಾರವನ್ನು ಸುತ್ತುತ್ತಿದ್ದರು. ಅದು ನಿಜವಾಗಿ ರೇಶ್ಮೆಯದಾರ ; ಅದಕ್ಕೆ ಬೆಳ್ಳಿಯ ಮುಲಾಮು ಮಾಡಿ, ಅದರ ಮೇಲೆ ಬಹಳ ಸೂಕ್ಷ್ಮವಾಗಿ ಚಿನ್ನದ ಲೇಪಹಾಕಿರುತ್ತಿತ್ತು. ಅಮ್ಮಣ್ಣಿಪಾಟಿ ಎರಡು ಲಡಿಗಳನ್ನು ಕೈಗೆತ್ತಿಕೊಂಡರು.

"ನೋಡಿದೆಯಾ ಜೂಡಿ, ಇದು ಹೇಗೆ ಫಳಫಳ ಹೊಳೆಯುತ್ತದೆ, ಕೈಗೆ ಎಷ್ಟು ಭಾರವಾಗಿದೆ? ಅದರಲ್ಲಿ ಚಿನ್ನ ಹೆಚ್ಚಾಗಿದೆ." ಆದರೆ ಜೂಡಿ ನಿಜವಾಗಿ

ಬಣ್ಣದಲ್ಲೂ ಇತ್ತು. ಬಗೆಬಗೆ ಬಣ್ಣ ಕಾಣುವ ರೇಶ್ಮೆ ಬಟ್ಟೆ (ಷಾಟ್ ಸಿಲ್ಕು) ಜೂಡಿಗೆ ವಿಶೇಷವಾಗಿ ಮೆಚ್ಚುಗೆಯಾಯಿತು ; ಆದರೆ ಎಲ್ಲವೂ ಸೊಗಸಾಗಿದ್ದುವು. ಅಮ್ಮಣಿ ಪಾಟಿ ತಮ್ಮ ಸೇವಕಿಯರಿಗೆಲ್ಲ ಹತ್ತಿಬಟ್ಟೆಯ ಸೀರೆಗಳನ್ನು ಆರಿಸಿಕೊಂಡರು; ಲಕ್ಷ್ಮಿಗೆ ಎಳೆಯ ಹಸುರು ಬಾಳೆಯೆಲೆಯ ಬಣ್ಣದ ರೇಶ್ಮೆಯ ಬಟ್ಟೆಯನ್ನೂ, ಸರಸ್ವತಿಗೆ ಬೆಣ್ಣೆ ಹಳದಿಯ ಬಣ್ಣದ್ದನ್ನೂ, ಎರಡು ವರ್ಷದ ಪಾರ್ವತಿಗೆ ಒಂದು ಚಿಕ್ಕ ಲಂಗ ಹೊಲಿಸಲು ಒಂದು ತುಂಡು ಚೀಟಿ ನಮೂನೆಯ ರೇಶ್ಮೆಬಟ್ಟೆಯನ್ನೂ ಆರಿಸಿಕೊಂಡರು. ಆಮೇಲೆ ತಮ್ಮ ಯಜಮಾನರಿಗೆಂದು, ಚಿನ್ನದ ಸರಿಗೆಯ ಸಣ್ಣ ಅಂಚಿನ ಹತ್ತಿಬಟ್ಟೆಯ ಧೋತ್ರಗಳನ್ನೂ ತೆಗೆದುಕೊಂಡರು. ಸೀರೆಗಳನ್ನು ಆರಿಸಿಕೊಳುತ್ತಿದ್ದ ಹಲವರು ಇತರರೂ ಇದ್ದರು ; ಹೀಗಾಗಿ, ಬಣ್ಣಬಣ್ಣವಾಗಿ ಮೆರೆಯುವ ಹೂವಿನ ಪಾತಿಯಂತೆ, ಉದ್ದನೆಯ ಮೇಜದಮೇಲೆ ಬಟ್ಟೆಯ ರಾಶಿಯಿತ್ತು. ಇದ್ದಕ್ಕಿದ್ದ ಹಾಗೆ ಅಮ್ಮಣ್ಣಿ ಪಾಟಿ ಎದ್ದುಬಿಟ್ಟರು. "ಬಾ !" ಎಂದು ಕರೆದು, "ಕೆಲವು ಒಳ್ಳೆಯ ಸೀರೆಗಳನ್ನು ಹುಡುಕೋಣ" ಎಂದು ಹೇಳಿದರು ಅವರು.

"ಆದರೆ ಅವು ಚೆನ್ನಾಗಿಲ್ಲವೋ?" ಎಂದು ಜೂಡಿ ಕೇಳಿದಳು.

ಅಮ್ಮಣ್ಣಿ ಪಾಟಿ ನಸುನಕ್ಕರು. "ನೀನೇ ನೋಡುವೆ."

ಅದೇತಾನೆ ಅವರಿಗೆ ತಮಟೆಗಳ ಮತ್ತು ಪಿಳ್ಳಂಗೋವಿಗಳ ನಾದ ಕೇಳಿ ಬಂತು ; ಅಲ್ಲಿಯೇ ಮೂಲೆಯನ್ನು ತಿರುಗಿಕೊಂಡು, ಬಹಳ ಎತ್ತರವಾದ ಮರದ ತೇರು ಬರುತ್ತಿತ್ತು ; ಬಣ್ಣಬಳಿದು ಗಿಲೀಟುಹಾಕಿದ ಅದು ಸಿಂಹಾಸನದ ಹಾಗಿತ್ತು ; ಅದರ ಮೇಲ್ಗಡೆ, ತುಂಬ ಚಿತ್ರಬಿಡಿಸಿ ತೊಡತೊಡಕಾಗಿ ಕೆತ್ತನೆಕೆಲಸ ಮಾಡಿದ ಮೇಲುಕಟ್ಟಿನ ಕೆಳಗೆ ಒಂದು ಸಣ್ಣ ಉಯ್ಯಾಲೆಯಿದ್ದು, ಅದರಲ್ಲಿ ಎರಡು ದೇವರ ವಿಗ್ರಹಗಳಿದ್ದುವು. ಭಾರಿ ಮರದ ಚಕ್ರಗಳು ಗಡಗಡ ಸದ್ದು ಮಾಡುತ್ತ ಉರುಳುತ್ತಿದ್ದವು ; ತೇರನ್ನು ಹಗ್ಗಗಳಿಂದ ಎಳೆಯುತ್ತಿದ್ದರು ; ಒಂದೊಂದು ಹಗ್ಗವನ್ನೂ ನೂರಕ್ಕೂ ಮೇಲ್ಪಟ್ಟು ಜನ ಹಿಡಿಯುತ್ತಿದ್ದರು. "ದೇವರನ್ನು ಎಳೆದು ಅವರು ಪುಣ್ಯ ಕಟ್ಟಿಕೊಳ್ಳುತ್ತಾರೆ" ಎಂದು ತಿಳಿಸಿದರು, ಅಮ್ಮಣ್ಣಿ ಪಾಟಿ.

"ಹಾಗೆ ಎಳೆಯುವುದು ಅವರಿಗೆ ತುಂಬ ಇಷ್ಟ ಅಂತ ಕಾಣುತ್ತದೆ" ಎಂದಳು ಜೂಡಿ. ಏಕೆಂದರೆ, ಪ್ರತಿಯೊಬ್ಬರೂ ಕೂಗುತ್ತ ನಗುತ್ತ ಸಿಕ್ಕಾಬಟ್ಟೆ ನಲಿದಾಡುತ್ತ ಇದ್ದಂತೆ ಕಂಡುಬಂದಿತು ; ರಥದಮೇಲೆ ಕುಳಿತಿದ್ದ ಇಬ್ಬರು ಮುದುಕರು ಅವರ ವಿನೋದದಲ್ಲಿ ಭಾಗಿಗಳಾಗಿದ್ದರು.

"ಇನ್ನೂ ಹೆಚ್ಚು. ನಾವು ಅವರ ಸೇವೆಯನ್ನು ಮನಃಪೂರ್ತಿಯಾಗಿ

ಹರಿಸುತ್ತಿದ್ದುವು. ಅಮ್ಮಣ್ಣಿಪಾಟಿ ಅವಕ್ಕೆ ಒಣ ಹುಲ್ಲನ್ನೂ ನೆಲ್ಲ ಹುಲ್ಲನ್ನೂ ಕೊಳ್ಳುತ್ತಿದ್ದರು ; ಈ ಬಡ ಹಸುಗಳಾದರೋ ಎಲೆಗಳನ್ನೋ ಮುಳ್ಳುಪೊದೆಗಳ ಚೂರುಪಾರನ್ನೋ ದೊರಕಿಸಿಕೊಳ್ಳಲು ಪ್ರಯತ್ನಿಸಬೇಕಾದರೆ ಅಲ್ಲಿ ಇಲ್ಲಿ ಅಲೆಯಬೇಕಾಗಿತ್ತು. ಬೇಸಗೆ ಕಾಲಕ್ಕೆ ಮುನ್ನ ಕಳೆದ ಫೆಬ್ರುವರಿಯಲ್ಲಿ, ಮದರಾಸಿನ ಸುತ್ತ ಮುತ್ತಣ ಹಳ್ಳಿಗಾಡಿನಲ್ಲಿ ಎಲ್ಲ ಕಡೆಯೂ ಆಳವಿಲ್ಲದ ಕೆರೆ ಕೊಳಗಳು ಕಂಡಬಂದುದನ್ನು ಜೂಡಿ ಜ್ಞಾಪಿಸಿಕೊಂಡಳು ; ಆದರೆ ಈಗ, ಕೆಲವು ಹಳೆಯ ಕೆರೆಗಳ ತಳಗಳಲ್ಲಿ, ಹಳದಿ ಹೂಗಳನ್ನೂ ಮಾಸಲು ಹೊಂಬಣ್ಣದ ದುಂಡು ಹಣ್ಣುಗಳನ್ನೂ ಬಿಟ್ಟಿದ್ದ ಕರ್ಬೂಜದ ಬಳ್ಳಿಗಳ ಬೂದು ಹಸುರಿನ ಬೆಳಸು ಇದ್ದರೂ, ಪ್ರತಿಯೊಂದು ಕೆರೆ. ಕೊಳವೂ ಒಣಗಿ ಬಿರುಕುಬಿಟ್ಟಿತ್ತು. ಮುಂಗಾರು ಕಾಣಿಸಿಕೊಂಡ ತರುಣದಲ್ಲಿ ಸ್ವಲ್ಪ ಹುಲ್ಲೂ ಕೆಲವು ತರಕಾರಿ ಗಿಡಗಳ ಬೆಳೆಯೂ ಬೆಳೆದಿದ್ದುವು ; ಆದರೆ ಅದರ ಬಹುಪಾಲನ್ನು ಬಿಸಿಲಬೇಗೆ ಒಣಗಿಸಿಬಿಟ್ಟಿತ್ತು.

"ಮಳೆ ಮತ್ತೆ ಎಂದು ಬಂದೀತೋ ಎಂದು ನನಗೆ ಕುತೂಹಲ !" ಎಂದಳು ಜೂಡಿ.

ಅಮ್ಮಣ್ಣಿಪಾಟಿ ಹೇಳಿದರು : "ದೀಪಾವಳಿ ಆದ ಮೇಲೆ–ಓ, ಆಗಲೇ ನಮ್ಮ ಮನೆಗೆ ಮತ್ತೆ ಬಂದೇ ಬಿಟ್ಟೆವು, ಜೂಡಿ, ಇಗೊ ಇಲ್ಲಿ, ನಿನಗೆ ನನ್ನ ದೀಪಾವಳಿಯ ಉಡುಗೊರೆ–ನೀನು ಮೆಚ್ಚಿದ್ದು ಇದನ್ನೇ ಎಂದು ತೋರುತ್ತೆ. ಆಕೆ ಜೂಡಿಯ ಕೈಗಳಿಗೆ ಒಂದು ಕಟ್ಟನ್ನು ಹಾಕಿದರು–ಅದರಲ್ಲಿ ಇದ್ದದ್ದು ಹಸುರು ಬೆರೆತ ನೀಲಿಯ ನವಿಲುಬಣ್ಣದ ರೇಶ್ಮೆ ಸೀರೆ.

"ಓಹೊ, ಹೊ" ಎಂದು ಉದ್ಗಾರ ತೆಗೆದಳು ಜೂಡಿ.

"ಆದರೆ, ನೆನಪಿರಲಿ : ಅದರಿಂದ ನೀನು ಉಡುಪು ಹೊಲಿಸಿಕೊಳ್ಳಬಹುದು, ಆದರೆ ನೀನು ಅದನ್ನು ದೀಪಾವಳಿಯ ಬೆಳಗ್ಗೆಗಿಂತ ಮುಂಚೆ ಧರಿಸಕೂಡದು!" ಎಂದರು ಅಮ್ಮಣ್ಣಿಪಾಟಿ.

ಏನನ್ನೂ ಕಾಣಲಿಲ್ಲ ; ಹೊಂಬಣ್ಣದ ಕೂದಲಿನ ರಾಜಕುಮಾರಿಯ ಕೂದಲಂತಹ ರೇಶ್ಮೆಯ ನೂಲಿನ ಎಳೆಗಳನ್ನು ಅವಳು ಮೆಚ್ಚಿಕೊಂಡಳು. ಚಿನ್ನದ ಸರಿಗೆದಾರವನ್ನು ತೂಕಮಾಡುವುದು ಹೇಗೆಂಬುದನ್ನೂ ನೆಯ್ಕಾರರ ಮುಖ್ಯಸ್ಥ ಜೂಡಿಗೆ ತೋರಿಸಿದ ; ಅದರಲ್ಲಿದ್ದ ಚಿನ್ನದ ಪ್ರಮಾಣಕ್ಕೆ ಅನುಗುಣವಾಗಿತ್ತು ಸೀರೆಯ ಬೆಲೆ. "ನನ್ನ ಹಳೆಯ ಸೀರೆಗಳು ಪೂರ್ತಿ ನಮೆದುಹೋದಮೇಲೆ," ಅಮ್ಮಣ್ಣಿ ಪಾಟಿ ಹೇಳಿದರು, "ಅವೆಲ್ಲವನ್ನೂ ಒಂದು ರಾಶಿಮಾಡಿ ಸುಟ್ಟುಬಿಡುತ್ತೇನೆ ; ಆಗ, ಅವುಗಳಿಗೆ ಸೇರಿಸಿ ನೆಯ್ದಿದ್ದ ಚಿನ್ನವೋ ಬೆಳ್ಳಿಯೋ ಉಳಿದು ಬಿಡುತ್ತದೆ."

ಇಲ್ಲಿ ಎರಡು ಸೀರೆಗಳಿದ್ದುವು ; ಒಂದೂ ಆಳವಿಲ್ಲದ ನೀರು ಬಿಸಿಲಿನಲ್ಲಿ ಹೊಳೆಯುವ ಹಾಗೆ, ಆಕಾಶ ನೀಲಿ ಬಣ್ಣದ ನೀಲಮಣಿಯ ಬಣ್ಣದ್ದು ; ನಕ್ಷತ್ರ ಮತ್ತು ಎಲೆಗಳ ಚಿತ್ರನಮೂನೆಯ ಚಿನ್ನದ ಸರಿಗೆಯ ಅಂಚಿತ್ತು. ಇನ್ನೊಂದು, ಬಹುಮಟ್ಟಿಗೆ ಕಪ್ಪಗೇ ಕಾಣುವ ದಟ್ಟ ನೀಲಿ ಬಣ್ಣದ್ದು ; ಇದಕ್ಕೆ, ಒಂಟೆಗಳಿಂದ ಪ್ರಾರಂಭವಾಗಿದ್ದಿರಬಹುದಾದ ಅಂದವಾದ ಚಿಕ್ಕ ಪ್ರಾಣಿಗಳ ಚಿತ್ರನಮೂನೆಯ ಬೆಳ್ಳಿ ಸರಿಗೆಯ ಅಂಚಿತ್ತು. ಕಡೆಗೆ, ಅಮ್ಮಣ್ಣಿಪಾಟಿ ಅವೆರಡನ್ನೂ ತೆಗೆದುಕೊಂಡರು; ಇಬ್ಬರು ಅವುಗಳನ್ನು ಸ್ವಲ್ಪವೂ ಸುಕ್ಕು ಉಳಿಯದಂತೆ ಕೋಲುಗಳ ಮೇಲೆ ಬಿಗಿಯಾಗಿ ಎಳೆದು ಮಡಿಸಿದರು. ಆಮೇಲೆ ಅವರು ಕಾರಿನಲ್ಲಿ ಕುಳಿತು ಹೊರಟುಬಿಟ್ಟರು ; ಕಾರಿನ ಎಲ್ಲ ಕಿಟಕಿಗಳನ್ನು ತೆರೆದಿದ್ದರೂ ಕೂಡ, ಒಳಕ್ಕೆ ಬಂದ ಗಾಳಿ ಅವರನ್ನು ತಂಪಾಗಿ ಮಾಡಲಿಲ್ಲ. ಬೀದಿಗಳು, ಅಂಗಡಿಮಳಿಗೆಗಳು, ದೇವರುಗಳಿಂದ ಮೆರೆಯುವ ದೇವಾಲಯದ್ವಾರಗಳು ಇವನ್ನೆಲ್ಲಾ ಹಾದು ಅವರು ಕಡೆಗೆ ಮದರಾಸು ರಸ್ತೆಯನ್ನು ತಲಪಿದರು. ಅವರು ಬುಟ್ಟಿಯಲ್ಲಿದ್ದ ಹಣ್ಣನ್ನು ತೆಗೆದುಕೊಂಡು ತಿಂದು, ಸಿಪ್ಪೆಯನ್ನು ಹೊರಕ್ಕೆಸೆದರು ಅದರಿಂದ ಇಲ್ಲಿ ಕಸವಾಗುತ್ತಿರಲಿಲ್ಲ, ಏಕೆಂದರೆ ಆಡುಗಳೂ ಕಪಿಗಳೂ ಬಂದು; ಅವನ್ನು ತಿಂದುಬಿಟುತ್ತಿದ್ದುವು.

ಮರಗಳೆಲ್ಲ ಕೆಂಪು ದೂಳಿನಿಂದ ಬಣ್ಣಗೆಟ್ಟಿದ್ದುವು ; ಅವರು ಸಂಧಿಸಿನ ಪ್ರತಿಯೊಂದು ಲಾರಿಯೂ ದೂಳಿನ ತೆರೆಮರೆಯಲ್ಲೀ ಅಡಗಿರುತ್ತಿತ್ತು ; ಎತ್ತಿನ ಗಾಡಿಗಳು ಗಡಗಡ ಸದ್ದು ಮಾಡುತ್ತ ನಿಧಾನವಾಗಿ ಸಾಗುತ್ತಿದ್ದುವು. ನೆಲವೆಲ್ಲ ತಾರಿಹೋಗಿ, ಕಂದು ತಿರುಗಿ, ಇನ್ನೂ ತಿಂಗಳುಗಟ್ಟಲೆ ಹಾಗೆಯೇ ಇರುವುದು. ಬಡ ಹಸುಗಳು ಅದೆಷ್ಟು ತೆಳ್ಳಗಿದ್ದುವು ! ಅಮ್ಮಣ್ಣಿ ಪಾಟಿಯವ ಎರಡು ಹಸುಗಳಿಗೂ ಇವಕ್ಕೂ ಅದೆಷ್ಟು ವ್ಯತ್ಯಾಸ ! ಅವುಗಳ ಹೆಸರು ದಕ್ಷಿಣದ ಎರಡು ಪುಣ್ಯ ನದಿಗಳಾದ ಕಾವೇರಿ ಮತ್ತು ಗೋದಾವರಿ ಎಂದು ; ಅವು ಹಾಲಿನ ಹೊನಲನ್ನೆ

ಬಾಣ ಬಿರುಸುಗಳ ಒಟ್ಟಿಲ ನಡುವೆ ಒಂದು ಬೆಂಕಿ ಕಡ್ಡಿಯನ್ನು ಕೆಡವಿಬಿಟ್ಟ ಅವು ಹೊತ್ತಿಕೊಂಡು ಎಲ್ಲ ಕಡೆಗೂ ಹಾರಿಬಿಟ್ಟವು ; ಅತಿಥಿಗಳಲ್ಲಿ ಕೆಲವರನ್ನು ಅವು ಸುಟ್ಟವು. ಜೂಡಿಯ ತಂದೆ ಅಲ್ಲಿಗೆ ಹೋಗಿ, ಅವರಿಗೆಲ್ಲ ಬ್ಯಾಂಡೇಜು (ಮುಲಾಮು ಪಟ್ಟಿ) ಕಟ್ಟಿ, ಅವರಲ್ಲಿ ಇಬ್ಬರನ್ನು ತಮ್ಮ ಕಾರಿನಲ್ಲಿ ಆಸ್ಪತ್ರೆಗೆ ಕರೆದೊಯ್ದರು ; ಆದರೆ ಯಾರೂ ಇದನ್ನೆಲ್ಲ ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಂಡಿದ್ದಂತೆ ಕಾಣಲಿಲ್ಲ. ಬೆನ್ನನಿಗೆ ಮಾತ್ರ ಇದರಿಂದ ಸ್ವಲ್ಪ ದಿಗಿಲಾಯಿತು. ಜೂಡಿಯ ತಾಯಿ ಬಹಳ ಸಿಡಿಮಿಡಿಗೊಂಡರು. "ತಮ್ಮ ಹಸುಳೆಗಳಿಗೆ ಹೊಟ್ಟೆ ತುಂಬ ಆಹಾರ ಕೊಡಲು ಸಾಕಷ್ಟು ಹಣ ಇಲ್ಲದ ಜನ ತಮ್ಮಲ್ಲಿರುವ ಒಂದೊಂದೂ ಆಣೆಯನ್ನೂ ಈ ಹಾಳು ಬಾಣಬಿರುಸಿಗೆ ವೆಚ್ಚ ಮಾಡುತ್ತಾರೆ" ಎಂದರು ಅವರು.

ಜೂಡಿಯೇನೊ ಆ ದಿನದ ಮೊದಲ ಭಾಗವನ್ನು ಸಂತೋಷವಾಗಿಯೆ ಕಳೆದಳು. ಇಂಗ್ಲೆಂಡಿನಲ್ಲಿ ವಿಶೇಷ ಸಂತೋಷ ಗೋಷ್ಠಿಗಳಿಗೆ ಹೋಗುವಾಗ ಧರಿಸುವಂತಹ ಉಡುಪನ್ನು ಮಾಡಿತ್ತು ಆ ಬೆರೆಕೆ ಬಣ್ಣದ ರೇಶ್ಮೆಯಿಂದ; ಆದರೆ ವಾಸಿಕಿ ಅದನ್ನು ಆ ಬೆಳಗ್ಗೆಯೆ ತಂದಿದ್ದು, ಜೂಡಿ ಅದನ್ನು ಉಪಾಹಾರಕ್ಕೆ ಕುಳಿತುಕೊಳ್ಳುವಾಗ ಹಾಕಿಕೊಳ್ಳಬೇಕಾಗಿಬಂದಿತು. ಅವರನ್ನು ನೋಡಿಕೊಂಡು ಹೋಗಲು ಹಲವರು ಬಂದಿದ್ದರು ; ಹರಿದಾಸ್ ಮತ್ತು ಅವನ ತಾಯಿಯೂ ಬಂದಿದ್ದರು ; ಆಕೆಯದು ಒಂದೇ ಪಲ್ಲವಿ–ನಿಜವಾಗಿ ಇದಕ್ಕಿಂತ ವಿನೋದದ ಹಬ್ಬ ಎಂದರೆ ಹೋಳಿ, ಆದರೆ ದಕ್ಷಿಣ ದೇಶದ ಈ ಹಾಳು ಜನ ಅದನ್ನು ಆಚರಿಸುವುದಿಲ್ಲ ; ಹಬ್ಬವನ್ನು ಸರಿಯಾಗಿ ಆಚರಿಸುವುದನ್ನು ನೋಡಬೇಕಾದರೆ, ಅಹಾ; ಅವರು ದೆಹಲಿಗೆ ಬರಬೇಕು. ಹರಿದಾಸರ ಬಳಿ ಒಂದು 'ಯೋಯೋ' (ಆಟದ ಸಾಮಾನು) ಇತ್ತು ; ಅದನ್ನು ಅವನು ಜೂಡಿಗೆ ಕೊಟ್ಟ ; ಅವರು ಅದನ್ನು ವರಾಂಡಾಕ್ಕೆ ತೆಗೆದುಕೊಂಡು ಹೋಗಿ, ಯಾರು ಬಹಳ ಚೆನ್ನಾಗಿ ಆಡಿಸಬಲ್ಲರು ಎಂಬುದನ್ನು ಪರೀಕ್ಷಿಸಿದರು.

ಆದರೂ, ದೀಪಾವಳಿ ಹಬ್ಬದ ಬಹು ಸೊಗಸಿನ ಸಂಗತಿ ಎಂದರೆ ರಾತ್ರಿಯ ದೀಪಗಳು. ಮೊದಲಸಂಜೆ, ಅಂದು ಅಮಾವಾಸ್ಯೆ, ಬಾಗಿಲ ಎರಡುಕಡೆಯೂ ಒಂದು ಜೊತೆ ದೀಪಗಳನ್ನು ಇರಿಸಿ ಜನ ಅದನ್ನು ಪ್ರಾರಂಭಗೊಳಿಸುವರು. ಆಮೇಲೆ, ಮುಂದಿನ ಕಾರ್ತಿಕ ಹುಣ್ಣಿಮೆಯತನಕ, ಎಂದರೆ ಇನ್ನು ಒಂದುಪಕ್ಷ' ಪ್ರತಿರಾತ್ರಿಯೂ ಹೆಚ್ಚುಹೆಚ್ಚು ದೀಪಗಳನ್ನು ಇರಿಸುವರು. ಅವುಗಳಲ್ಲಿ ಬಹು ಸಂಖ್ಯೆಯವು ಚಿಕ್ಕ ಮಣ್ಣಿನ ಹಣತೆ ದೀಪಗಳನ್ನು; ನೂರಾರು ವರ್ಷಗಳಿಂದ ಜನ ಅವುಗಳನ್ನು ಬಳಸಿದ್ದಾರೆ ; ಎಣ್ಣೆ ತುಂಬಿದ ಅದರಲ್ಲಿ ದೀಪ

# ೬. ದೀಪಾವಳಿ

ಜಾರ್ಜ್‌ಗೆ ಸಿಹಿ ತಿಂಡಿ ಮಾಡುವ ಕೆಲಸ ಬಹಳ ಇತ್ತು ; ಆದರೆ, ಹೇಗಾದರೂ, ಹಿಂದೂಗಳ ಮನೆಯಲ್ಲಿ ಇದ್ದಂತೆಯೆ ಅವರ ಮನೆಯಲ್ಲಿ ಇರಲಾರದು. ದೀಪಾವಳಿ ವಿನೋದ ಪೂರ್ಣ ಹೌದು, ಆದರೆ ಅದಕ್ಕೆ ಅಂತಹ ಮಹತ್ವವೇನೂ ಇಲ್ಲ. ಜೂಡಿ ಬೇಲಿಯ ಮೂಲಕ ನುಸುಳಿ ಹೋದಾಗ, ಅಮ್ಮಣ್ಣಿ ಪಾಟಿ ತಯಾರಿಸುತ್ತಿದ್ದ ರುಚಿ ರುಚಿಯಾದ ಭಕ್ಷ್ಯಗಳ ಸುವಾಸನೆ ತೋಟ ಮೂಲಕ ತೇಲಿ ಬಂತು. "ಒಳ್ಳೆ ಹೊಸ ಅಕ್ಕಿ ತರಿಸುತ್ತೇನೆ. ನಾವು ಮಾತ್ರವಲ್ಲ ; ನನ್ನ ಪ್ರೀತಿಯ ಹಸುಗಳಿಗೂ ದೀಪಾವಳಿ ಉಂಟು. ನಾನೇ ಸ್ವತಃ ನನ್ನ ಕೈಗಳಿಂದ ಅವಕ್ಕೆ ಆಹಾರ ತಿನ್ನಿಸುತ್ತೇನೆ. ಅವಕ್ಕೆ ಕೊಡುವುದೂ ನಮ್ಮ ಆಹಾರವೇ. ಅವು ಕಳೆದ ವರ್ಷವನ್ನು ನೆನಸಿಕೊಂಡು, ಈ ವರ್ಷದ್ದನ್ನು ನಿರೀಕ್ಷಿಸುತ್ತ ಇವೆ ಎಂದು ನನಗೆ ತೋರುತ್ತೆ" ಎಂದು ಹೇಳಿದರು ಅವರು.

ದೀಪಾವಳಿ ದಿನದಂದು ಶಾಲೆ ಇರಲಿಲ್ಲ. ಗೊತ್ತೇ ಇದೆ. ಅಂದು ಏನು ನಡೆಯುತ್ತದೆ ಎಂದರೆ, ಬೆಳಗ್ಗೆ ಪ್ರತಿಯೊಬ್ಬರೂ ಎಲ್ಲರನ್ನೂ ಒಂದು ಸುತ್ತು ; ನೋಡಿಕೊಂಡು ಬರುತ್ತಾರೆ, ಒಬ್ಬರೊಬ್ಬರಿಗೆ ಉಡುಗೊರೆಗಳನ್ನೂ ಕಜ್ಜಾಯಗಳನ್ನೂ ಸಿಹಿ ತಿಂಡಿಗಳನ್ನೂ ಕೊಡುತ್ತಾರೆ. ಇದರ ಆಯಾಸವನ್ನೆಲ್ಲ ಮಧ್ಯಾಹ್ನದ ಮೇಲೆ ನಿದ್ರಿಸಿ ಹೋಗಲಾಡಿಸಿಕೊಳ್ಳುತ್ತಾರೆ. ಏಕೆಂದರೆ, ಬಹುಮಂದಿ ಹೊತ್ತು ಹುಟ್ಟುವುದಕ್ಕೆ ಮುಂಚಿನಿಂದಲೂ ಎದ್ದಿರುವರು. ಡಂ ಡಂ ಡಮಾರ್ ಎಂದು ಬರುವುದು ಅಮೇಲೆ ಪಟಾಕಿ, ಬಾಣ ಬಿರುಸು. ಒಂದು ಕಷ್ಟ ಏನೆಂದರೆ, ಪಟಾಕಿ ಹೊಡೆತ ಒಂದು ಸಲ ಮೊದಲಾಯಿತೆಂದರೆ ಆಯಿತು ಅದು ನಿಲ್ಲುವ ಹಾಗೆಯೆ ಕಾಣದು ; ಯಾರಿಗೂ ನಿದ್ದೆ ಮಾಡುವ ಇಷ್ಟವಿಲ್ಲ ; ಯಾರು ಏನು ಮಾಡಿದರೂ ಅದಕ್ಕೆ ಯಾರ ಅಡ್ಡಿಯೂ ಇಲ್ಲ. ಎಲ್ಲ ಚಿಕ್ಕ ಹುಡುಗರ ಬಳಿಯೂ ಪಟಾಕಿ ಇರುತ್ತವೆ ; ಎಲ್ಲ ಕಡೆಯೂ ಹೊಡೆಯುತ್ತ ಇರುತ್ತವೆ ಅವು ; ಅಂದಿಗೇ ನಿಲ್ಲುವುದಿಲ್ಲ ಇದು–ಬಾಣ ಬಿಡುಸುಗಳಂತೂ ಬಹುಜನಕ್ಕೆ ಬೇಸರವಾಗುವವರೆಗೂ ಹಾರುತ್ತಲೇ ಇರುತ್ತವೆ.

ಅಂದು ಸ್ವಲ್ಪ ಗಾಬರಿಯೇ ಆಗಿತ್ತು ; ಏಕೆಂದರೆ, ಗೋಡೆಯ ಆಚೆಯ ಕಡೆಯ ಮನೆಯವರ ಮಗ ಮೋಟಾರು ಬೈಸಿಕಲ್ ಇಟ್ಟು ಕೊಂಡಿದ್ದವನು–

ಬಹುಮಂದಿ ಗೃಹಿಣಿಯರು ಎಣಿಸುವರು ; ಭಕ್ಷ್ಯಗಳನ್ನು ಮಾಡುವ ವಿಶೇಷವಿಧಾನಗಳು ಅವರಿಗೆ ಸಾಧಾರಣವಾಗಿ ಗೊತ್ತಿದ್ದು, ಆ ಬಗೆಗೆ ಅವರಿಗೆ ಬಲುಹೆಮ್ಮೆ.

ಜೂಡಿ ಲಕ್ಷ್ಮಿಯನ್ನು ಮರಳಿ ಕಾಣುವಹೊತ್ತಿಗೆ ಕೃತ್ತಿಕೆಯೇ ಬಂದಿತ್ತು ಎನ್ನಬೇಕು. ಈ ಹೊತ್ತಿಗೆ, ಮನೆ ಮನೆಗಳೆಲ್ಲ ಬಾಗಿಲ ಹೊರಗಡೆ, ಕಿಟಕಿಯ ಅಂಚುಗಳಲ್ಲಿ, ವರಾಂಡಗಳ ಉದ್ದಕ್ಕೆ ಹೊತ್ತಿಸಿಟ್ಟ ದೀಪಗಳಿಂದ ಪೂರ್ತಿ ಬೆಳಗುತ್ತಿದ್ದವು. ಕೆಲವೆಡೆಗಳಲ್ಲಿ, ಬಣ್ಣ ಬಣ್ಣದ ಎಲೆಕ್ಟ್ರಿಕ್ ದೀಪಗಳನ್ನು ಮಾಲೆಗಟ್ಟಿ ಭಾರಿಯಾಗಿ ಅಲಂಕಾರ ಮಾಡಿದ್ದರು ; ಆದರೆ, ಮೆಲುಗಾಳಿ ಬೀಸಿದಾಗ ಉದ್ದನೆಯ ಬೆಳಕಿನ ಬಳ್ಳಿಯಾಗಿ ಒಲೆದಾಡುವ ಸಣ್ಣ ಮಿನುಗುದೀಪಗಳಷ್ಟು ಸೊಗಸಾಗಿರುತ್ತಿರಲಿಲ್ಲ, ಈ ಅಲಂಕಾರ. ಈ ದೀಪ ಮಾಲೆಗಳಿಂದ ಅಲಂಕೃತವಾಗಿ, ಅಂತ್ಯತ ವಿಕಾರವಾದ ಮನೆಗಳು ಕೂಡ ತುಸ ಮಟ್ಟಿಗೆ ಅಂದವಾಗಿ ಕಾಣುತ್ತಿದ್ದವು. ಆದರೆ, ಕೃತಿಕೆಯ ವೇಳೆಗೆ, ಹಬ್ಬದ ಭಾವನೆಯೆಲ್ಲ ಕ್ರಮ ಕ್ರಮವಾಗಿ ಮಸುಕಾಗಿ ಹೋಗಿತ್ತು, ಕಡೆಗೊಮ್ಮೆ ಡಬ್ ಡುಬ್ ಎಂದು ಪಟಾಕಿಯ ಹೊಡೆತಗಳೆಲ್ಲ ಮುಗಿದುಹೋಗಿದ್ದುವು, ಶಾಲೆಗಳು ಮರಳಿ ಪ್ರಾರಂಭವಾಗಿದ್ದುವು, ದೊಡ್ಡವರು ಮತ್ತೆ ಕೆಲಸಕ್ಕೆ ಹೋಗತೊಡಗಿದ್ದರು. ಈ ವರ್ಷದ ಮಟ್ಟಿಗೆ ದೀಪಾವಳಿ ಆಗಿಹೋಯಿತು.

ಜೂಡಿ ಈಜುವುದಕ್ಕೊಂದು ತನ್ನ ತಂದೆಯೊಂದಿಗೆ ಕ್ಲಬ್ಬಿಗೆ ಹೋಗಿದ್ದಾಗ, ಈಜುವ ಉಡುಪನ್ನು ಹಾಕಿಕೊಳ್ಳುವುದಕ್ಕಾಗಿ ಕೊಳದ ಮುಂದೆ ಹಾದು ಹೋದಳು; ಅಲ್ಲಿದ್ದಳು ಲಕ್ಷ್ಮಿ, ಅರ್ಧ ಮುಗಿಸಿದ್ದ ಐಸ್‌ಕ್ರೀಮ್ ತಿನ್ನುತ್ತ ; ಅವಳು ಎದ್ದು ಹೊರಟು ಹೋಗುವುದಂತೂ ಆಗುತ್ತಿರಲಿಲ್ಲ. ಆದರೆ ಅವಳು ಸಿಡುಕು ಮೋರೆ ಮಾಡಿಕೊಂಡು, ಬೇರೆಯ ಕಡೆಗೆ ದೃಷ್ಟಿ ತಿರುಗಿಸಿದಳು. "ಯಾಕೆ ಹೀಗೆ, ಏನು ಸಮಾಚಾರ ?" ಎಂದಳು ಜೂಡಿ.

ಲಕ್ಷ್ಮಿ ಸುಮ್ಮನೆ ಕುಳಿತಿದ್ದಳು, ಮೇಜಿನ ಮೇಲೆ ತನ್ನ ಕೈ ಬೆರಳುಗಳಿಂದ ಟಪಟಪನೆ ಬಡಿಯುತ್ತಿದ್ದಳು ಅಷ್ಟೆ. ಅವಳು ಕೆನೆಬಣ್ಣದ ರವಿಕೆ ತೊಟ್ಟು, ಹೊಸ ಹಸುರು ಸೀರೆಯನ್ನು ಉಟ್ಟಿದ್ದಳು. ಇದ್ದಕ್ಕಿದ್ದ ಹಾಗೆ, "ನಾವು ಹೊಲಸು ಎಂದು ನೀವು ಭಾವಿಸಿದ್ದೀರಿ, ಅಲ್ಲಾ? ಹೊಲಸು ತಮಿಳರು !" ಅವಳ ಧ್ವನಿಗಾರಾಗಿ ಕೋಪದಿಂದ ಕೂಡಿದ್ದಂತೆ ಕಂಡುಬಂದಿತು.

ಜೂಡಿಗೆ ನಿಜವಾಗೂ ದಿಗ್ಭ್ರಮೆಯಾಯಿತು, "ನೀನು ಹೇಳುವುದೇನೋ ನನಗೆ ಸ್ವಲ್ಪವೂ ಅರ್ಥವಾಗುವುದಿಲ್ಲ" ಎಂದಳು.

ಸಣ್ಣಗೆ ಒಂದೇಸಮನಾಗಿ ಉರಿಯುತ್ತದೆ. ಅವು ಒಡೆದುಹೋದರೂ ಚಿಂತೆಯಿಲ್ಲ; ಅವು ಬಹಳ ಅಗ್ಗ, ಕುಂಬಾರರು ಮಾಡಿದವು. ಅವರು ಹಿಂಭಾಗದ ಕೇರಿಗಳಲ್ಲಿ ಷೆಡ್ಡುಗಳಲ್ಲಿ ಕೆಲಸಮಾಡುತ್ತ, ಹಣತೆಗಳ, ಚಟ್ಟಿಗಳು, ಹೂವಿನ ಕುಂಡಗಳು ಮುಂತಾದುವನ್ನು ಮಾಡುವರು ; ಅವಕ್ಕೆ ಅವರು ಮಾಡುವ ಅಲಂಕಾರ ಎಂದರೆ ಒಂದು ಹೆಬ್ಬೆಟ್ಟಿನ ಗುರುತು, ಮಣ್ಣಿನಲ್ಲಿ ಒಂದು ತಿರಿಚು ; ನರ್ತಕರು ನೃತ್ಯದಲ್ಲಿ ಸಮತೋಲನದ ಅಂಶಕ್ಕೆ ಯಾವರೀತಿ ಅಂಟಿಕೊಂಡಿದ್ದರೋ ಅದೇರೀತಿ ಇವರೂ ಕೂಡ ತಮ್ಮ ಅಜ್ಜ ಮುತ್ತಜ್ಜಂದಿರು ಯಾವ ಆಕೃತಿಗಳನ್ನು ಅಂದ ಎಂದು ರಚಿಸುತ್ತಿದ್ದರೋ ಅವೇ ಆಕೃತಿಗಳಿಗೆ ಅಂಟಿಕೊಂಡಿದ್ದರು.

ಆ ಮೊದಲ ಸಂಜೆ ಜೂಡಿಯ ತಂದೆ ಕಾರಿನಲ್ಲಿ ಆಸ್ಪತ್ರೆಗೆ ಹೋದರು ; ನೆರೆಮನೆಯ ಮಂದಿಗೆ ಆದಂತೆ ಕೆಲವು ಜರೂರು ಚಿಕಿತ್ಸೆಸಂದರ್ಭಗಳು ಇರುತ್ತವೆ ಎಂದು ಅವರಿಗೆ ಗೊತ್ತು, ಅಲ್ಲದೆ ಯಾವ ವೈದ್ಯರು ಅಲ್ಲಿಗೆ ಬಂದಿರುವರು ಎಂಬುದನ್ನು ಅವರು ಖಂಡಿತವಾಗಿ ಅರಿಯರು. ಅವರು ಜೂಡಿಯನ್ನೂ ತಮ್ಮೊಂದಿಗೆ ಕರೆದೊಯ್ದರು ; ದೀಪಗಳು ಚುಕ್ಕಿಹೊಯ್ದ ಎಲ್ಲ ಬೀದಿಗಳನ್ನು ಹಾದುಹೋಗುವುದೇ ಒಂದು ಸೊಗಸೆನಿಸಿತ್ತು. ಹುಲ್ಲುಹೊದೆಸಿದ ಗುಡಿಸಿಲುಗಳುಳ್ಳ ಹಳ್ಳಿಗಳಲ್ಲಿ ಕೂಡ ಸಣ್ಣದೀಪಗಳು ಇದ್ದವು ; ಪ್ರತಿಯೊಬ್ಬರೂ ತುಂಬ ನಲಿವಿನಲ್ಲಿ ಇದ್ದಂತೆ ಕಂಡಿತು.

ತಾನು ಲಕ್ಷ್ಮಿಯನ್ನು ನೋಡಿಯೇನು ಎಂಬ ಆಶೆಯಿತ್ತು ಜೂಡಿಗೆ ; ಲಕ್ಷ್ಮಿ ತನ್ನ ಅಜ್ಜಿಯಮನೆಗೆ ಬಂದೇ ಇರಬೇಕು, ಅವಳಿಗೆ ಅವಳ ಹೊಸ ಸೀರೆಯನ್ನು ಕೊಟ್ಟೇ ಇರಬೇಕು. ಅದು ಖಂಡಿತ. ಅವಳು ಆ ಸೀರೆ ಉಟ್ಟಿದ್ದನ್ನು ನೋಡಿದ್ದರೆ ಚೆನ್ನಾಗಿತ್ತು ಎಂದು ಬಯಸಿದಳು ಜೂಡಿ–ಲಕ್ಷ್ಮಿ ಆಗಲೆ ಅಲ್ಲಿಯೆ ಅದನ್ನು ಉಟ್ಟುನೋಡಿಕೊಳ್ಳುವುದು ಖಂಡಿತ. ಅದರೆ ಲಕ್ಷ್ಮಿಗೆ ಅನೇಕಮಂದಿ ಸೋದರಸಂಬಂಧಿಗಳು ಇದ್ದರು ಎಂದು ಅವಳಿಗೆ ಗೊತ್ತು ; ಬಹುಶಃ ಲಕ್ಷ್ಮಿ ಅವರನ್ನೆಲ್ಲಾ ನೋಡಹೋಗುವಳು, ಉಡುಗೊರೆಗಳನ್ನೂ ಸಿಹಿತಿಂಡಿಗಳನ್ನೂ ಇಸುಕೊಳ್ಳುವಳು, ತಾನೂ ಕೊಡುವಳು. ನೆರೆಮನೆಯ ವಾರಂತಿ ತನ್ನ ತಾಯಿ ಮಾಡಿದ್ದ ಬಿತ್ತಬೆತ್ತವಾಗಿ ಕಾಣುವ ವಿಶೇಷತೆರದ ಕರಿದ ಕಜ್ಜಾಯವನ್ನು ಒಂದು ತಟ್ಟೆಯಲ್ಲಿ ದೊಡ್ಡ ಎಲೆಯಮೇಲೆ ಇರಿಸಿಕೊಂಡು, ಒಂದು ತುಂಡು ಮಸ್ಲಿನ್ ಬಟ್ಟೆಯಿಂದ ಅದನ್ನು ಮುಚ್ಚಿಕೊಂಡು, ಅದು ಹೆಚ್ಚು ಅಂದವಾಗಿ ಕಾಣಲೆಂದು ಅದರಮೇಲೆ ಕೆಲವು ಹೂಗಳನ್ನು ಇರಿಸಿ ತಂದಿದ್ದಳು. ತಮಗೆ ಬೇಕಾದ ದೀಪಾವಳಿಯ ಸಿಹಿಭಕ್ಷ್ಯಗಳನ್ನು ಕೊಂಡು ತರುವುದು ತಪ್ಪು ಎಂದು ಭಾರತದ

ನೆನೆದಳು. ಅಲ್ಲ, ಲಕ್ಷ್ಮಿ ತನ್ನ ಪಾಲಿಗೆ ಹುಲಿಯಾಗಿ ಪರಿಣಮಿಸುವುದೆ ! ಜೂಡಿಯ ಕಣ್ಣುಗಳಿಂದ ಅವಳಿಗೆ ಅಹಿತವೆನಿಸಿ ಎರಡು ದಪ್ಪ ಕಣ್ಣೀರ ಹನಿಗಳು ಉರುಳಿ ಬಂದು, ನೆಲದ ಬಿಲ್ಲೆಗಳ ಮೇಲೆ ತೊಟ ತೊಟ ಉದುರಿದವು. ಈಜುವುದಕ್ಕೆ ಸಿದ್ಧವಾಗಿ, ತಮ್ಮ ಈಜುವ ಚಡ್ಡಿಯನ್ನು ಹಿಡಿದುಕೊಂಡು ಅವಳ ತಂದೆ ಬಂದಾಗ ಅವಳು ನಿಂತಿದ್ದುದು ಹಾಗೆ, ನಡೆದ ಸಂಗತಿಯನ್ನು ಅವಳು ಅವರಿಗೆ ತಿಳಿಸಿದಳು; ಅವರ ಮನಸ್ಸು ತುಂಬ ಕಲಕಿ ಹೋಯಿತು.

ಅವರು ಹೇಳಿದರು : "ಭಾರತವನ್ನು ಒಡೆಯಬಹುದಾದ್ದು ಇಂತಹ ವಿಷಯ; ಹಾಗಾದಲ್ಲಿ, ಅದು ಅತ್ಯಂತ ಘೋರ ಕರುಣಾಜನಕ ವಿಷಯ. ಅವರು ಈ ಎಲ್ಲ ಬಡತನವನ್ನೂ ನಿರ್ಮೂಲ ಮಾಡಲು ಸಾಧ್ಯವಾದೊಡನೆಯೇ ಈ ದೇಶ ಬಲವಾದ ಸುಭದ್ರವಾದ ಒಂದೇ ದೇಶವೆನಿಸಲು ಸಾಧ್ಯವಾಗುವುದು. ನಿಜವಾಗಿ ಇದು ಒಂದೇ ದೇಶ. ಭಾಷೆಗೆ ಸಂಬಂಧಪಟ್ಟ ಯಾವುದೋ ಅರ್ಥವಿಲ್ಲದ ಕಾರಣಕ್ಕಾಗಿ ರಾಜ್ಯಗಳು ಬೇರೆಯಾಗಬೇಕು ಎನ್ನುವ ಜನ, ತಾವು ಏನು ಹಾನಿಯುಂಟುಮಾಡುತ್ತಿದ್ದೇವೆ ಎಂಬುದನ್ನು ಅರಿಯರು ! ಹರಿದಾಸನ ತಾಯಿಯಂತಹ ತಿಳಿಗೇಡಿ ಹೆಂಗಸರು ಮಾಡುವ ಹಾನಿ ಎಷ್ಟು ಎಂದರೆ–ಎಷ್ಟು ಎಂದರೆ–"

"ಹಾವಿನ ಬಿಲದಷ್ಟು" ಎಂದಳು ಜೂಡಿ. ಶಾಲೆಯಲ್ಲಿ ಅವಳು ಕಂಡುಕೊಂಡಿದ್ದ ಪದಪುಂಜ ಅದು ; ಅದನ್ನು ಉಪಯೋಗಿಸಲು ಅವಳಿಗೆ ಒಂದು ಸಂದರ್ಭವೂ ದೊರಕಿರಲಿಲ್ಲ. "ಆದರೆ ಹಿಂದೀ ಬೇಸರಹಿಡಿಸುವ ಕಾಟ" ಎಂದು ಜೂಡಿ ಕೂಡಿಸಿ ಹೇಳಿದಳು.

ಅವಳ ತಂದೆ ಹೇಳಿದರು, "ಆಡಳಿತದ ಭಾರತೀಯ ಭಾಷೆ ಒಂದು ಇಲ್ಲದೆ ಇರುವುದ ಹೇಗೋ ನಾನು ಕಾಣೆ ಆದರೆ ಹಿಂದೀ ಮಾತಾಡುವ ಜನ ಇತರ ಜನರ ರಾಷ್ಟ್ರಭಾಷೆಗಳನ್ನು ಕೀಳಾಗಿ ಕಾಣುವುದು ಸಲ್ಲದ ಕೆಲಸ. ನೆಹರು ಹಾಗೆ ಮಾಡುವುದಿಲ್ಲ. ನಿನಗೆ ಗೊತ್ತಿಲ್ಲ, ಜೂಡಿ, ಭಾರತದಲ್ಲಿ ಹತ್ತಾರುರಾಷ್ಟ್ರ ಭಾಷೆಗಳಿವೆ ; ಅಲ್ಲದೆ, ಎಂದಿಗೂ ಮರೆಯಕೂಡದಂತಹ ಗ್ರಂಥಗಳು, ಕವಿತೆ ಹಾಗೂ ಹಾಡುಗಳು ಆ ಕೆಲವು ಭಾಷೆಗಳಲ್ಲಿ ಇವೆ. ಇದು ತಮಿಳಿಗೂ ಅನ್ವಯಿಸುತ್ತದೆ. ನಾವು ಶ್ರಮಪಡುವುದೊಂದಾದರೆ, ನಾವೆಲ್ಲ ಬೇರೆ ಬೇರೆ ಭಾಷೆಗಳ ತಂಡತಂಡವನ್ನೇ ಕಲಿಯಬಹುದು."

"ನನಗೆ ಆಗದು" ಎಂದು ಮತ್ತೆ ಹೇಳಿದಳು ಜೂಡಿ : "ಆದರೆ, ಲಕ್ಷ್ಮಿಯ ವಿಚಾರ ಏನು ಮಾಡೋಣ? ಅಪ್ಪಾ, ನನ್ನ ಮನಸ್ಸಿಗೆ ಹೇಗೆ ಹೇಗೋ ಆಗಿದೆ !"

"ನೀನು ಮತ್ತು ನಿನ್ನ ಸ್ನೇಹಿತರು, ಉತ್ತರ ದೇಶದಿಂದ ಬಂದಿರುವ ನಿನ್ನ ಸ್ವಲ್ಪವೂ ಅರ್ಥವಾಗುವುದಿಲ್ಲ" ಎಂದಳು.

"ನೀನು ಮತ್ತು ನಿನ್ನ ಸ್ನೇಹಿತರು, ಉತ್ತರ ದೇಶದಿಂದ ಬಂದಿರುವ ನಿನ್ನ ಹೊಸ ಸ್ನೇಹಿತರು !" ಎಂದಳು ಲಕ್ಷ್ಮಿ.

"ಎಂದರೆ ಹರಿದಾಸ್ ಅಂತ ನಿನ್ನ ಮಾತಿನ ಅರ್ಥವೋ ?" ಎಂದು ಜೂಡಿ ಮಂಕು ಹಿಡಿದು, ತುಂಬ ಚಿಂತೆಗೊಳಗಾಗಿ, ಕೇಳಿದಳು.

"ಅವನ ಹೆಸರು ಏನಾದರೆ ನನಗೇನು ?" ಎಂದಳು ಲಕ್ಷ್ಮಿ.

"ಆದರೆ ನಿನ್ನ ಮನಸ್ಸಿನಲ್ಲಿರುವುದ ಅವನೇ–ಲಕ್ಷ್ಮೀ, ಅವನಿನ್ನೂ ಕೇವಲ ಹುಡುಗ–"

"ಕೇವಲ ಹುಡುಗ ! ಅವನ ತಾಯಿ ಕೇವಲ ಹೆಂಗಸು ಎಂದೂ ನನ್ನ ಭಾವನೆ" ಎಂದು ನುಡಿದು, ಲಕ್ಷ್ಮಿ ತನ್ನ ಹೆಗಲನ್ನು ಜೂಡಿಯ ಕಡೆಗೆ ತಿರುಗಿಸಿದಳು.

ಜೂಡಿ ಹೇಳಿದಳು. "ಓಹೋ, ಆಕೆಯೊ ! ಇಲ್ಲಿ ನೋಡು ಲಕ್ಷ್ಮಿ, ಆಕೆಯೊಬ್ಬರು ದಡ್ಡ ಕತ್ತೆ ಅಂತ ನನ್ನ ಭಾವನೆ ; ಇಲ್ಲಿಗಿಂತ ಉತ್ತರ ದೇಶ ಹೆಚ್ಚು ಸೊಗಸು ಎಂದೂ ನಾನು ನಂಬಲಾರೆ. ಆದರೆ, ಅದು ಹರಿದಾಸನ ತಪ್ಪೂ ಅಲ್ಲ, ನನ್ನ ತಪ್ಪೂ ಅಲ್ಲ......."

ಆದರೆ ಲಕ್ಷ್ಮಿ ಇದಕ್ಕೆಲ್ಲ ಕಿವಿಗೊಡುವವಳಾಗಿರಲಿಲ್ಲ ; ಅವಳು ತನ್ನ ಮನಸಿನಲ್ಲಿ ನಿಶ್ಚಯ ಮಾಡಿಬಿಟ್ಟಿದ್ದಳು. "ನಮ್ಮನ್ನು–ತಿರಸ್ಕಾರವಾಗಿ ಕಂಡು, ಹೇಗೋ ಪ್ರಯತ್ನಿಸಿ ದೆಹಲಿಯಲ್ಲಿ ಕುಳಿತು ನಮ್ಮನ್ನು ಆಳುವ ಜನ ಇವರು ! ಆದರೆ ಹಾಗೆ ಆಳಲು ನಾವು ಅವಕಾಶ ಕೊಡುವುದಿಲ್ಲ, ನೀವು ಬ್ರಿಟಿಷರು ನಮ್ಮನ್ನು ಆಳುತ್ತಿದ್ದಾಗ ಕೆಟ್ಟದಾಗಿತ್ತು – ಕೆಟ್ಟದು ! ಆದರೆ ತಾವು ಆಳಬಲ್ಲೆವು ಎಂದೂ ಇವರು ಭಾವಿಸಿರುವುದಾದರೆ, ಇವರು ತಕ್ಕ ಪಾಠ ಕಲಿಯುತ್ತಾರೆ. ನಾವು ಹಿಂದಿ ಮಾತನಾಡಬೇಕಂತೆ, ನಮಗೆ ಹೇಳುತ್ತಾರೆ ಇವರು ! ನಿಮಗಿಂತ ಕೆಟ್ಟವರು ಇವರು !"

ಅಯ್ಯೋ, ಇದು ಕುಲಗೆಟ್ಟ ರಾಜಕೀಯ, ಇಲ್ಲದ್ದು ಸಲ್ಲದ್ದನ್ನು ಬಣ್ಣ ಕಟ್ಟಿ, ಹೇಳುತ್ತಿದ್ದಾಳೆ, ಇವಳನ್ನು ಹೇಗೆ ತಡೆಯುವುದೋ ನಾನು ಕಾಣೆ, ಎಂದು ಚಿಂತಿಸಿದಳು ಜೂಡಿ. ಲಕ್ಷ್ಮಿ ತಾನು ತಿನ್ನುತ್ತಿದ್ದ ಐಸ್‌ಕ್ರೀಮನ್ನೂ ಮುಗಿಸದೆ, ಮೇಜಿನ ಮುಂದಿನಿಂದ ಎದ್ದು, ತುಟಿ ಕಚ್ಚಿಕೊಂಡು ನಡೆದು ಬಿಟ್ಟಳು. ಲಕ್ಷ್ಮಿ ಭರತನಾಟ್ಯವನ್ನು ಅಭಿನಯಿಸುತ್ತಿದ್ದಾಗ ಹುಲಿಯನ್ನು ನೆನಪಿಗೆ ತರುವ ಒಂದು ಕ್ರೂರ ನೃತ್ಯ ಭಂಗಿಯಲ್ಲಿ ಹೇಗೆ ಕಾಣುತ್ತಿದ್ದಳು ಎಂಬುದನ್ನು ಜೂಡಿ ತಟ್ಟನೆ

ನಾನು ಕಾಣೆ. ಏನೇ ಆಗಲಿ, ಅದರಷ್ಟು ಚೆನ್ನಾಗಿರುವುದಿಲ್ಲ. ಸಹಜವಾಗಿಯೆ, ಕೆಲವರು ಕುಮಾರ್ ಬ್ರಾಹ್ಮಣನಾಗಿ ಹುಟ್ಟಿರುವುದು ಕಾರಣ ಎನ್ನುತ್ತಾರೆ ; ಈಗ ಅವರಿಗೆ ವಿರುದ್ಧವಾಗಿ ಈ ಭಾವನೆ ಇದೆ. ಅದು ಹೇಗಿದ್ದರೂ, ಆ ಮೇಲಧಿಕಾರಿ ಕೂಡ ಒಬ್ಬ ಬ್ರಾಹ್ಮಣನೇ ! ಆದರೆ ನನಗೆ ಯಾವುದೂ ಖಂಡಿತವಿಲ್ಲ. ತಾನು ಹಿಂಸೆಗೆ ಗುರಿಯಾಗಿದ್ದೇನೆ ಎಂಬ ಭಾವನೆಯನ್ನು ಇದು ಲಕ್ಷ್ಮಿಯಲ್ಲಿ ಉಂಟುಮಾಡಿರಬಹುದು, ಅಷ್ಟೆ."

"ಅಯ್ಯೋ, ಇದು ಅನ್ಯಾಯ !" ಎಂದಳು ಜೂಡಿ. "ಅಪ್ಪಾ, ನೀನು ಏನೂ ಮಾಡಲಾಗುವುದಿಲ್ಲವೆ?"

ಅವಳ ತಂದೆ ಹೇಳಿದರು, "ಇಲ್ಲ, ನಿಜವಾಗಿ ನಾನು ಏನೂ ಮಾಡಲಾರೆ! ನ್ಯಾಯ ಮೇಲೆದ್ದು ಗೆಲ್ಲುತ್ತದೆ ಎಂದು ನಾವೂ ಬಯಸಬೇಕು, ಅಷ್ಟೆ. ವಾಸ್ತವ ಜೀವನದಲ್ಲಿ ಕೂಡ ಅನೇಕವೇಳೆ ಹಾಗಾಗುತ್ತದೆ. ನೀನು ಬಲ್ಲೆಯಷ್ಟೆ. ಈಗ ಹೇಳು, ಜೂಡಿ, ಸ್ವದೇಶವಾದ ಇಂಗ್ಲೆಂಡಿಗೆ ಹೋಗಬೇಕೆಂದರೆ ನಿನಗೆ ಅಪಾರ ಸಂತೋಷವಾಗುವುದಲ್ಲವೆ?"

"ಜಾನನ ಜೊತೆ ತಪ್ಪಿಹೋಗಿದೆ ನನಗೆ" ಎಂದು ಜೂಡಿ ನುಡಿದ ಅದೇ ಉಸಿರಿನಲ್ಲಿ ಅವಳಿಗೆ ಹರಿದಾಸನ ಆಲೋಚನೆ ಬಂತು ; ಅವನು ಜಾನನ ನೆನಪು ತಂದಿದ್ದ ಅವಳಿಗೆ ; ಅವನು ಇಲ್ಲವೆ ಲಕ್ಷ್ಮೀ ಇಬ್ಬರಲ್ಲಿ ಒಬ್ಬರನ್ನು ಆರಿಸಿಕೊಳ್ಳಬೇಕಾದಲ್ಲಿ, ತಾನು ಅವನನ್ನು ನೋಡುವುದನ್ನು ನಿಲ್ಲಿಸಿಬಿಡಬೇಕೆ ಎಂದು ವಿಸ್ಮಯಪಟ್ಟಳು ಅವಳು. ಆದರೆ, ಹಾಗೆ ಆರಿಸಿಕೊಳ್ಳಲೇಬೇಕೆ ಎಂಬುದೆ ಪ್ರಶ್ನೆ. ಮುಂದುವರಿದು, "ಇಂಗ್ಲೆಂಡಿನಲ್ಲಿ ಇಷ್ಟೊಂದು ಹೆಚ್ಚಿನ ತೊಡಕುಗಳಿಲ್ಲ> ಎಂದರೆ, ಜಾತಿಗಳು–ಕೆಲವು ಜನರು ದರಿದ್ರರಾಗಿರುವುದು–ಮತ್ತು ಈ ಎಲ್ಲಾ ದೇವರುಗಳು...." ಎಂದು ಹೇಳಿದಳು. ಅವಳು ನೀರಿನಲ್ಲೀ ಮುಳುಗಿ, ಬೇರೆ ಏನನ್ನೊ ಯೋಚನೆಮಾಡುತ್ತ ತನ್ನ ತಂದೆಯ ಪಕ್ಕಕ್ಕೆ ಎದ್ದುಬಂದಳು. "ಒಂದೇನೆಂದರೆ, ಈಗ ಆ ಪುರಾತನಕಾಲದ ಕಟ್ಟಡದೊಳಗಿನ ಈಜುವ ತೊಟ್ಟಿಯಲ್ಲಿ ಈಜುವುದೆಂದರೆ ನನಗೆ ಆಗುವುದಿಲ್ಲ. ಅಲ್ಲದೆ, ಮಾವಿನಹಣ್ಣು ಇಲ್ಲದೆ ಇರಲಾರೆ."

ಅವಳ ತಂದೆ ಹೇಳಿದರು, "ನಿನ್ನ ಎಡಮಂಡಿಯನ್ನು ನೀನು ಇನ್ನೂ ಬಗ್ಗಿಸುತ್ತೀಯೆ : ಅದಿಲ್ಲದಿದ್ದರೆ, ಸೊಗಸಾದ ಮುಳುಗೀಜಾಗಿರುತ್ತಿತ್ತು. ನಾವು ಸ್ವದೇಶಕ್ಕೆ ಮರಳುವ ಮೊದಲು ನೀನು ಅದನ್ನು ಸರಿಪಡಿಸಿಕೊಳ್ಳಬೇಕು. ಆಗೋ, ಅಲ್ಲೀ ಬರುತ್ತಿದ್ದಾರೆ ನಿನ್ನ ತಾಯಿ, ಬೆನ್ನನೊಂದಿಗೆ."

ಅವಳ ತಂದೆ ನುಡಿದರು, "ನಾವು ಬಹಳ ಏನನ್ನೂ ಮಾಡಲಾರೆವೆಂದೆ ನನ್ನ ಅಳುಕು. ಆದರೆ, ಬಹುಶಃ ಎಲ್ಲವೂ ಸರಿಹೋದೀತು ಎಂದು ಕಾಣುತ್ತೆ ಜೂಡಿ. ಇದ್ದಕಿದ್ದಹಾಗೆ ಎಲ್ಲ ಸರಿಹೋಗುತ್ತವೆ, ನೀನೂ ಬಲ್ಲೆ. ಈ ಸೆಕೆಯ ಹವಾ ಕೆಲಮಟ್ಟಿಗೆ ಕಾರಣ ಇರಬಹುದು, ಪ್ರತಿಯೊಬ್ಬರೂ ರೇಗುತ್ತಾರೆ. ಹೋಗಲಿ ಬಾರಮ್ಮಾ, ನಮ್ಮಮ್ಮೈ ಆರುವ ಹೊತ್ತಿಗೆ 'ಚಾಕೊಲೇಟ್ ಐಸು'ಗಳನ್ನಾದರೂ ತಿನ್ನೋಣ. ಅಗಬಹುದು ತಾನೆ ?"

ನೀರು ತುಂಬ ಬೆಚ್ಚಗೆ ಕಾಣುವಾಗ ಕೂಡ ಈಜುವುದು, 'ಚಾಕೊಲೇಟ್ಟ ಐಸು'ಗಳನ್ನು ತಿನ್ನುವುದು, ಹಿತಕರ. ಆದರೆ ಜೂಡಿಗೆ ಮಾತ್ರ ಚಿಂತೆ ತಪ್ಪಲಿಲ್ಲ. "ಉತ್ತರ ದೇಶ ನಿಜವಾಗಿ ಹೇಗಿದೆ?"

"ಈ ಕಡೆಗಿಂತ ಆಕಡೆ ಸ್ವಲ್ಪ ಹೆಚ್ಚು ಏಳಿಗೆ ಹೊಂದಿರುವಹಾಗೆ ಕಾಣುತ್ತೆ, ಅಲ್ಲಿನ ಜನ ಹೆಚ್ಚು ಬಟ್ಟೆಹಾಕುತ್ತಾರೆ. ಆದರೆ–ಇರಲಿ, ನಾವು ನಮ್ಮ ಸ್ವದೇಶಕ್ಕೆ ಹಿಂದಿರುಗುವ ಮುನ್ನ, ಹೇಗಾದರೂ ಪ್ರಯತ್ನ ಪಟ್ಟು ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ, ಜೂಡಿ" ಎಂದು ತಿಳಿಸಿದರು ಅವಳ ತಂದೆ.

ಜೂಡಿ, "ಹೋ, ನಿಜವಾಗಿ ನಾವು ಹೋಗಬಲ್ಲೆವೆ ?" ಎಂದು ಹೇಳಿ, ಆ ವಿಚಾರವಾಗಿ ತುಸ ಆಲೋಚಿಸಿದಳು. ಆದರೆ ಆಮೇಲೆ ಹೇಳಿದಳು : ಲಕ್ಷ್ಮಿ" ತನ್ನ ಹೊಸ ಸೀರೆಯನ್ನ, ತನ್ನ ದೀಪಾವಳಿ ಸೀರೆಯನ್ನ, ಕೊಂಡುಕೊಳ್ಳಲು ನಾನು ನೆರವಾದೆನಲ್ಲ, ಅದನ್ನ, ಉಟ್ಟಿದ್ದಳು."

ಜೂಡಿಯ ತಂದೆ ಮರುಕತೋರಿ ಗಂಟಲಲ್ಲಿ ಗುರಗುರ ಶಬ್ದಮಾಡಿದರು. ಅವರು ಸುತ್ತ ಒಮ್ಮೆ ತಿರುಗಿನೋಡಿ, ಆಮೇಲೆ ಸ್ವಲ್ಪ ಗೋಪ್ಯವಾಗಿಯೇ ಹೇಳಿದರು, "ಇನ್ನೊಂದು ಸಂಗತಿ ಲಕ್ಷ್ಮಿಯನ್ನು ಕೊರೆಯುತ್ತಿದ್ದರೂ ಇರಬಹುದು. ಅವಳ ತಂದೆ, ಕುಮಾರ್, ತೊಂದರೆಗೆ ಸಿಕ್ಕಿಹಾಕಿಕೊಂಡಿದಾರೆ. ಈಗ ಪ್ರಾಜೆಕ್ಟುಗಳು, ಯೋಜನೆಯ ಕಾರ್ಯಗಳು, ನಡೆಯುತ್ತಿವೆಯಲ್ಲ, ಅವುಗಳಲ್ಲಿ ಒಂದರ ಕೆಲಸ ನೋಡಿಕೊಳ್ಳುತ್ತಿರುವ ಮೇಲಧಿಕಾರಿಗಳಲ್ಲಿ ಒಬ್ಬರ ವಿಚಾರ ಅಷ್ಟು ಸರಿಯಾಗಿಲ್ಲ ಎಂದೂ ಅವರಿಗೆ ಕಂಡುಬಂದಿತು. ನಾನು ಹೇಳುವುದೇನೆಂದರೆ, ಜೂಡಿ, ಈ ಇನ್ನೊಬ್ಬ ಮನುಷ್ಯ, ಅವರ ಮೇಲ್ಪಟ್ಟವನು, ಲಂಚಗಳನ್ನು ತೆಗೆದುಕೊಳ್ಳುತ್ತಿದ್ದ ; ಅದನ್ನು ಕಂಡು ಕುಮಾರ್ ಉಗ್ರವಾದರು ; ಆದರೆ, ಆ ಇನ್ನೊಬ್ಬಾತನಿಗೆ ಹೆಚ್ಚು ಪ್ರಭಾವ ಇತ್ತು....ಸರಿ, ಅವರು ಹೇಗೋ ಮಾಡಿ, ಕುಮಾರರನ್ನು ಕೆಲಸದಿಂದ ವಜಾಮಾಡಿಸಿದರು. ಅವರಿಗೆ ಬೇರೆ ಕೆಲಸ ಇನ್ನೂ ಸಿಕ್ಕಿದೆಯೋ ಇಲ್ಲವೋ

# ೭. ಮಳೆ

ಈಗ, ಅಕ್ಟೋಬರ್ ತಿಂಗಳ ಕೊನೆಕೊನೆಗೆ, ಎರಡನೆಯ ಹಾಗೂ ಹೆಚ್ಚು ಜೋರಾದ 'ಹಿಂಗಾರು' ಮಳೆಯ ಮೋಡಗಳು ದಟ್ಟೈಸತೊಡಗಿದವು ; ಗುಡುಗು ರಾತ್ರಿಯೆಲ್ಲ ಗುಡುಗುಡಿಸುತ್ತಿತ್ತು. ಜೂಡಿಯ ತಾಯಿ, "ಮತ್ತೆ ಪ್ರವಾಹ ಬಂದದ್ದೆ ಆದರೆ, ತಕ್ಕ ವ್ಯವಸ್ಥೆಗಳನ್ನು ಮಾಡಿದ್ದಾರೆ ಎಂದು ನಂಬುತ್ತೇನೆ" ಎಂದು ಗಾಬರಿಗೊಂಡು ಹೇಳಿದರು. ಅವರ ಕ್ಷೇಮಾಭಿವೃದ್ಧಿಯ ಕಾರ್ಯವೆಲ್ಲ ಬಡಜನರಿಗೆ ಸಂಬಂಧಿಸಿತ್ತು ; ಆ ಜನ ಒಂದಲ್ಲ ಒಂದು ಕಾರಣದಿಂದ ವಾಸಕ್ಕೆ ಮನೆಯಿಲ್ಲದವರು, ಹೊಟ್ಟೆಗಿಲ್ಲದವರು. ಗಂಡಸರು ಕೂಲಿಗಳಾಗಿ ದುಡಿಯಲು ಕೆಲಸ ಸಿಕ್ಕೀತು ಎಂಬ ಆಶೆಯಿಂದ ತಮ್ಮ ಹಳ್ಳಿಗಳಿಂದ ಮದರಾಸಿಗೆ ಬರುತ್ತಿದ್ದರು; ಭಾರವಾದ ಹೊರೆಗಳನ್ನು ತಳ್ಳುವುದು ಮತ್ತು ಹೊರುವುದು, ಯಾವಾಗಲೂ ಆಯಾಸಪಡುತ್ತ ತರಾತುರಿಯಲ್ಲಿರುವುದು, ಇದೇ ಅವರ ಕೆಲಸ ; ಆದರೆ ಪ್ರಾಯಿಕನಾಗಿ ಅವರಿಗೆ ಅದು ಕೂಡ, ಅಂದರೆ ಯಾವ ಕೆಳವೂ ದೊರೆಯುತ್ತಿರಲಿಲ್ಲ. ಅವರ ಹೆಂಡಿರು ಮಕ್ಕಳು ಅವರ ಹಿಂದೆಯೆ ಕಾಲೆಳೆದುಕೊಂಡು ಬರುತ್ತಿದ್ದರು; ಸಾಧಾರಣವಾಗಿ ಅವರಿಗೆ ವಾಸಕ್ಕೆ ಎಲ್ಲಿಯೂ ಎಡೆ ದೊರಕದು ; ಅದೃಷ್ಟವಿದ್ದರೆ ಮಾತ್ರ, ಯಾವುದಾದರೂ ಬೀದಿಯಲ್ಲಿ ಒಂದು ಗೋಡೆಯ ನೆರಳಿನಲ್ಲೋ ಒಂದೂ ಮರದ ಅಡಿಯಲ್ಲೋ ಸಿಕ್ಕಿದರೆ ಸಿಕ್ಕಬೇಕು. ಅವರ ಮೇಲೆ ಮಳೆ ಸುರಿದರಂತೂ ಹೇಳಬೇಕಾಗಿಯೆ ಇಲ್ಲ ; ಬಯಲಿನಲ್ಲಿನ ಪ್ರಾಣಿಗಳಂತೆ ಒದ್ದೆಮುದ್ದೆಯಾಗುವರು ; ಆಮೇಲೆ, ತಮ್ಮ ಬಟ್ಟೆ ಬರೆಯನ್ನೂ ತಮ್ಮ ಮೈಯನ್ನೂ ಒಣಗಿಸಿಕೊಳ್ಳುವುದಕ್ಕೆ, ತಮ್ಮ ಬಳಿಯ ಮಳೆನೀರು ಆವಿಯಾಗಿ ಮರಳಿ ಆಕಾಶಕ್ಕೇ ಹೊರಟು ಹೋಗುವುದಕ್ಕಾಗಿ, ಬಯಲಿನಲ್ಲಿನ ಹಸು ಅಥವಾ ಕುರಿಗಳಷ್ಟೇ ತಾಳ್ಮೆಯಿಂದ ಬಿಸಿಲಿಗಾಗಿ ಕಾಯುವರು.

ಕ್ಷೇಮಾಭಿವೃದ್ಧಿಯ ಕೆಲಸ ಮಾಡುತ್ತಿದ್ದ ಬಹುಮಂದಿ ಭಾರತೀಯ ಮಹಿಳೆಯರು; ಅವರೇನೋ ಆ ಬಡ ಬನರಿಗೆ ಸ್ವಲ್ಪ ಸಹಾಯ ಮಾಡುತ್ತಿದ್ದರ ಆದರೆ ಆ ಜನ ಹೆಚ್ಚು ಹೆಚ್ಚಾಗಿ ಬರುತ್ತಿದ್ದರು. ಈ ಕೆಲಸದಲ್ಲಿ, ಬೇಕಾದ ಪದಾರ್ಥಗಳಿಗಾಗಿ ಸರ್ಕಾರದ ಇಲಾಖೆಗಳಿಗೆ ಅಪಾರವಾಗಿ ಕಾಗದ ಪತ್ರಗಳನ್ನು ಬರೆಯಬೇಕಾಗುತ್ತಿತ್ತು ; ಆ ಪದಾರ್ಥಗಳು ಬಳಕೆಯಾಗದೆ ಅಲ್ಲಿ ಇದ್ದುವು

ನೆರಳುಬಿದ್ದಿದ್ದ ನೀರಿನೆಡೆಯೊಂದರಲ್ಲಿ ನಿಧಾನವಾಗಿ ಈಜುತ್ತ ಜೂಡಿ ಹೇಳಿದಳು : "ಲಕ್ಷ್ಮಿ ನನಗಿಂತ ಎಷ್ಟೋ ಮೇಲಾಗಿ ಮುಳುಗೀಜು ಹೊಡೆಯುತ್ತಾಳೆ, ನೃತ್ಯಮಾಡಿದ ಹಾಗೆ. ಅದು ಯಾಕೋ ನನ್ನ ಕಾಲುಗಳನ್ನು ಸರಿಯಾಗಿ ನೀಡಲೇ ಆರೆ. ಅಪ್ಪಾ, ನಾವು ಇಂಗ್ಲೆಂಡಿಗೆ ಹಿಂದಿರುಗಿ ಹೋದಮೇಲೆ, ನಾವು ದೀಪಾವಳಿ ಹಬ್ಬ ಮಾಡುತ್ತ ಇರುವುದಕ್ಕಾಗುವುದಿಲ್ಲವೆ?"

ನೊಣಗಳ ಗುಂಪು ಮತ್ತೆ ಅದಿನ್ನೆಷ್ಟು ! ಮೊದ ಮೊದಲು ಕೆಂಪು ಕೆಸರಿನ ನೀರಿನಲ್ಲಿ ಅದು ಎರಚಾಡುವಂತೆ ಕುಣಿದಾಡುವುದು ಬೆನ್ನನಿಗೆ ವಿನೋದವೆನಿಸಿತ್ತು; ಜೂಡಿಗೆ ಕೂಡ ಹಾಗೆಯೆ ಎನಿಸಿತ್ತು ; ಆದರೆ ಬೇಗನೆ ಅವರಿಗೆ ಸೆಕೆಯಾಯಿತು, ಮೈಯನ್ನು ಅಂಟಂಟಾಗಿ ಮಾಡುವ ಒಂದು ತೆರನ ಹೊಲಸು ಸೆಕೆ. ಮಧ್ಯಾಹ್ನವಾಗುವ ವೇಳೆಗೆ ನೀರೆಲ್ಲ ಇಂಗಿಹೋಗಿ, ಕೆಸರು ಮಣ್ಣು ಮಾತ್ರ ಉಳಿದಿತ್ತು. ಒಂದಲ್ಲ ಒಂದು ರೀತಿಯಲ್ಲಿ ವಿಪರೀತ ಮಣ್ಣು ಮನೆಯೊಳಕ್ಕೂ ಬಂದಿತ್ತು, ಅದೆಲ್ಲ ಬಹುಮಟ್ಟಿಗೆ ಬೆನ್ನನ ಅಳತೆಯ ಹೆಜ್ಜೆ ಗುರುತುಗಳಾಗಿದ್ದುವು.

ಮಾರನೆಯ ರಾತ್ರಿ ಇನ್ನೂ ಮಳೆ ಬಂದಿತು, ಹಿಂದಿನಷ್ಟಲ್ಲದಿದ್ದರೂ ನೀರು ನಿಲ್ಲುವ ಮಟ್ಟಿಗಿತ್ತು ; ಹೀಗೆಯೆ ರಾತ್ರಿಯಾದ ಮೇಲೆ ರಾತ್ರಿ ಸುರಿಯುತ್ತ ಹೋಯಿತು. ಕೆಲವು ವೇಳೆ, ಇಡಿಯ ತೋಟವೆಲ್ಲ ಚಿಕ್ಕಪುಟ್ಟ ಕಪ್ಪೆಗಳಿಂದ ತುಂಬಿರುತ್ತಿತ್ತು ; ಹೀಗಾಗಿ, ಅವುಗಳನ್ನು ತುಳಿಯದೆ ಇರುವುದೇ ಕಷ್ಟವಾಗುತ್ತಿತ್ತು. ನಿಧಾನವಾಗಿ ಪ್ರತಿಯೊಂದು ಪದಾರ್ಥವೂ ಮಳೆಯಲ್ಲಿ ತೊಯ್ದು ಹೋಗುತ್ತ ಬಂದಿತು. ರಸ್ತೆಗಳಲ್ಲೀ ಅಡ್ಡಅಡ್ಡನಾಗಿ ನೀರು ಹರಿಯುತ್ತಿತ್ತು ; ಅಸ್ಪತ್ರೆಯ ಆವರಣದಲ್ಲಿ ಅವರು ಹಗ್ಗ ಎಳೆಯುವ ಆಟ ಆಡಿದ್ದ ಕಡೆ ನೀರು ನಿಂತಿತ್ತು. ಮದರಾಸಿನ ಭಾರಿ ಭಾರಿ ಮನೆಗಳ ನಡುವೆ ಎಡೆ ಮಾಡಿಕೊಂಡಿರುವ ಹಲವಾರು ಬಡಹಳ್ಳಿಗಳ ಮನೆಗಳಲ್ಲಿಯೂ ಅಡಿಗೆ ಮಾಡುವ ಕಡೆಗಳಲ್ಲಿಯೂ ನೀರು ನುಗ್ಗಿದ್ದವು. ತೆಂಗಿನ ತಡಿಕೆಯ, ತೆಂಗಿನ ಗರಿ ಹೊದೆಸಿದ, ಮನೆಗಳು ಮಳೆಗಾಲದ ಮಳೆಯನ್ನು ಒಳಕ್ಕೆ ಬರದಂತೆ ತಡೆಯಲಾರವು ; ಜನದ ಬಟ್ಟೆ ಬರೆ ನೀರಿನಲ್ಲಿ ಎಳೆದಾಡಿ, ಅವರೆಲ್ಲ ಕೊಳಕಾಗಿ ಕಾಣುತ್ತಿದ್ದರು. ತಗ್ಗು ಭೂಮಿಯ ಮೇಲೆಲ್ಲ ಹರಿದು, ಹೊಳೆಗಳು ಮೇಲೆ ಏರುತ್ತಿದ್ದುವು ; ಅಲ್ಲಿ ಸಾಧಾರಣವಾಗಿ ಎಮ್ಮೆಗಳು ಸಿಕ್ಕಿದ ಗಿಡಗಂಟಿಯನ್ನೆಲ್ಲ ನುಣ್ಣಗೆ ಮಾಡಿ, ಮೇಲೆತ್ತಿಕೊಂಡ ತಲೆ ಹೊರತು ಬೇರೆ ಏನೂ ಕಾಣದ ಹಾಗೆ ಆಳವಿಲ್ಲದ ಮಡುಗಳಲ್ಲಿ ಹೊರಳಾಡುತ್ತ, ತಿರುಗಾಡುತ್ತಿದ್ದುವು.

ಮಳೆಗಾಲ ಚೆನ್ನಾಗಿ ಸಾಗಬೇಕೆಂದೇ ಪ್ರತಿಯೊಬ್ಬರ ಅಪೇಕ್ಷೆ ; ಏಕೆಂದರೆ, ಅದಿಲ್ಲದ ಬೆಳೆ, ಅದರಲ್ಲಿಯೂ ಎಲ್ಲರೂ ಅವಲಂಬಿಸಿದ್ದ ಬತ್ತದ ಬೆಳೆ, ಚೆನ್ನಾಗಿ ಆಗದು. ಆದರೆ, ಆವಿಯಾಡುವ ಈ ಹವೆಯಲ್ಲಿ ನಿಜವಾಗಿ ಯಾರಿಗೂ ಸಂತೋಷವೇನಿಲ್ಲ ; ಆಗ ಯಾರಿಗೂ ಸರಿಯಾಗಿ ಬೆವರು ಕೂಡ ಬರದು. ತಕ್ಕಮಟ್ಟಿಗೆ ಚೆನ್ನಾಗಿಯೆ ಕಟ್ಟಿದ ಮನೆಗಳು ಕೂಡ ಮಳೆಯನ್ನು ಎದುರಿಸಲಾರದಿದ್ದವು ; ಅವುಗಳಲ್ಲಿ ಹಲವು ಮನೆಗಳ ನೆಲಗಟ್ಟು ಮಳೆಯಿಲ್ಲದ

ಎಂದು ಅವರಿಗೆ ಗೊತ್ತು ; ಆದರೆ ಮಾತ್ರ, ಅವುಗಳನ್ನು ಉಪಯೋಗಿಸಲು ಯಾರಿಗೇ ಆಗಲಿ ಅವಕಾಶ ಕೊಡುವ ಕೆಲಸವನ್ನು ಯಾರು ವಹಿಸಿಕೊಂಡಿರಲಿಲ್ಲ. ಯಾರೇ ಆಗಲಿ ತಮ್ಮ ಕೆಲಸವನ್ನು ಒಂದು ಹೆಜ್ಜೆ ಮುಂದುವರಿಸಬೇಕಾದರೆ, ಅದೆಷ್ಟು ಚಹಾ ಕುಡಿಯಬೇಕು, ಅದೆಷ್ಟು ಸಲ ಟೆಲಿಫೋನು ಮಾಡಬೇಕು, ಯಾರಿಗೂ ಅವಮರ್ಯಾದೆ ಮಾಡುಲ್ಲ ಎಂದು ಹೇಗೆ ದೃಢಪಡಿಸಿಕೊಳ್ಳಬೇಕು ಎಂಬ ಬಗೆಗೆ ಜೂಡಿಯ ತಾಯಿ ದೂರುತ್ತಲೆ ಇದ್ದರು. ಇದ್ದಕ್ಕಿದ್ದ ಹಾಗೆ ಅವುಗಳಿಗೆ ಕೋರಿಕೆ ಬಂದೀತೋ ಏನೋ ಎಂದು, ಆಕೆ ಈಗ ಆಹಾರ, ಬಟ್ಟೆ ಬರೆ, ಹಾಲಿನ ಪುಡಿ ಮುಂತಾದ ಪದಾರ್ಥಗಳನ್ನು ಸಂಗ್ರಹಿಸಿ ಇಡಲು ಪ್ರಯತ್ನ ಪಡುತ್ತಿದ್ದರು.

ಕ್ಷೇಮಾಭಿವೃದ್ಧಿಯ ಕೆಲಸ ಮಾಡುತ್ತಿದ್ದ ಜನ ಇವರು ಮಾತ್ರ ಆಗಿರಲಿಲ್ಲ ಎಂಬುದೇನೋ ದಿಟ. ಉದಾಹರಣೆಗೆ, ರಾಮಕೃಷ್ಣ ಮಿಷನ್ (ಧರ್ಮ ಪ್ರಚಾರ ಸಂಸ್ಥೆ ಇತ್ತು ; ಸಾವಿರಾರು ಜನಕ್ಕೆ ಅನ್ನ ಹಾಕುವುದು, ಉಚಿತ ಔಷಧಾಲಯಗಳನ್ನು ನಡಸುವುದು, ಪಾಠ ಶಾಲೆಗಳನ್ನು ನಡಸುವುದು ಮುಂತಾಗಿ ಕ್ಷೇಮಾಭಿವೃದ್ಧಿಯ ಕಾರ್ಯವನ್ನು ಆ ಸಂಸ್ಥೆ ಭಾರತದಲ್ಲೆಲ್ಲ ಮಾಡುತ್ತಿದೆ, ಎಂದು ಜೂಡಿಯ ತಾಯಿ ಹೇಳಿದರು. “ಆದರೆ ಅವರು ಹಿಂದೂಗಳಲ್ಲದವರನ್ನು ತಮ್ಮೊಡನೆ ಕೆಲಸ ಮಾಡಲು ಸೇರಿಸಿಕೊಳ್ಳುವುದಕ್ಕೆ ಇಷ್ಟಪಡುವುದಿಲ್ಲ ಇತರ ಧರ್ಮ ಪ್ರಚಾರ ಸಂಸ್ಥೆಗಳಲ್ಲಿ ಬಹು ಸಂಖ್ಯೆಯವು ಜನರವು ಹಿಂದೂಗಳಾಗಿರುವುದನ್ನು ತಪ್ಪಿಸಿ ಬೇರೆಯ ಮತಕ್ಕೆ ಪರಿರ್ತಿಸಲು ಇಷ್ಟಪಡುತ್ತವೆ ; ಭಾರತದಲ್ಲಿ ಹಾಗೆ ಮಾಡುವುದು ಸರಿ ಎಂದು ನನಗೆ ತೋರುವುದಿಲ್ಲ ; ಆದ್ದರಿಂದ ಅವರೊಂದಿಗೆ ಕೆಲಸ ಮಾಡಲು ನನಗೆ ಇಷ್ಟವಿಲ್ಲ.”

“ಅರ್ಥವಿಲ್ಲದ ಗೊಡ್ಡು ಮಿಷನ್‌ಗಳು !” ಎಂದಳು ಜೂಡಿ.

ಒಂದು ದಿನ ಬೆಳಗ್ಗೆ ಜೂಡಿ ಎದ್ದೊಡನೆಯೆ ಬೆನ್ ಸಂತೋಷದಿಂದ ಚೀರುವುದನ್ನು ಕೇಳಿದಳು. ಸೆಕ್ಕಿಸಿದ್ದ ಸೊಳ್ಳೆ ಪರದೆಯ ಕೆಳಗಿನಿಂದ ಅವನು ಹೊರಹೊರಟು, ಮಹಡಿಯಿಂದ ಕೆಳಗಿಳಿದು, ಆ ಬಳಿಕ ತೋಟದಲ್ಲಿ ಬಹು ಸೊಗಸಾಗಿ ನೀರು ಕೆರೆಗಟ್ಟಿ ಮಡುಗಟ್ಟಿ ನಿಂತಿರುವುದನ್ನು ಕಂಡ; ಸ್ವಲ್ಪ ಹೊತ್ತಿನಲ್ಲೆ, ಮಾಲಿಯ ಕೈ ತಪ್ಪಿಸಿಕೊಂಡು, ಮೈಮೇಲೆ ಬೇರೆ ಏನೂ ಇಲ್ಲದೆ ಬರಿ ಮೈಯಲ್ಲಿ ಅವುಗಳಲ್ಲಿ ಕುಣಿದಾಡುತ್ತಿದ್ದ. ಅಂತೂ ಹಿಂದಿನ ಇರುಳಿನ ಗುಡುಗು ನಿಜವಾಗಿಯೂ ಮಳೆಯನ್ನು ತಂದಿತ್ತು. ಎಲೆಗಳು ಹೂವುಗಳೆಲ್ಲ ತೊಳೆದಂತಾಗಿ ಅದೆಷ್ಟು ಸೊಗಸಾಗಿತ್ತು–ಆದರೆ ಮರಳಿ ಸೂರ್ಯ ಹೊರಬಂದು, ಸೆಕೆ ಮೊದಲಾದೊಡನೆಯೆ

ಹಸುರು ಬೂಷ್ಟು ಕಟ್ಟಿರುತ್ತಿತ್ತು. ಸೂಜಿಗಳೂ ಗುಂಡುಸೂಜಿಗಳೂ ತುಕ್ಕು ಹಿಡಿದುಬಿಡುತ್ತಿದ್ದುವು. ಗೋಂದು ಹಚ್ಚಿದ್ದ ಲಕೋಟೆಗಳು ಒಟ್ಟಿಗೆ ಅಂಟಿಕೊಂಡುಬಿಡುತ್ತಿದ್ದವು, ಆಟದ ಸಾಮಾನುಗಳ ಬಣ್ಣ ಉದುರಿ ಬರುತ್ತಿತ್ತು. ಜೂಡಿಗೆ ಕೆಲವು ವೇಳೆ ತಂಪಾದ ತೇವವಿಲ್ಲದ ಗಾಳಿಯನ್ನು ಒಮ್ಮೆ ಸೇವಿಸಬೇಕು ಎನಿಸುತ್ತಿತ್ತು.

ಸಮುದಾಯ 'ಎಕ್ಸ್‌ರೇ' ಛಾಯಾಬಿಂಬ ತಗೆಯುವ ಸಲಕರಣೆಯಿದ್ದ ಮೋಟಾರು ವ್ಯಾನು ಒಂದು ಹಳ್ಳಿಯಿಂದ ಹಿಂದಿರುಗಿ ಬರುತ್ತಿದ್ದದ್ದು ಹೂತು ಹೋಗಿತ್ತು ; ಕಾರಣ, ಅದರ ಮುಂಗಡೆಯ ರಸ್ತೆ ಕೊಚ್ಚಿಹೋಗಿತ್ತು. 'ನಾನು ಅದರೊಂದಿಗೆ ಇದ್ದಿದ್ದರೆ' ಎಂದುಕೊಂಡಳು ಜೂಡಿ. ಆ ವ್ಯಾನಿನ ಮೇಲ್ವಿಚಾರಣೆಯಲ್ಲಿದ್ದ ತರುಣ ವೈದ್ಯರು ಬಂದು, ತಾವು ರಾತ್ರಿಯನ್ನೆಲ್ಲ ಹೇಗೆ ವ್ಯಾನಿನಲ್ಲೆ ಕಳೆಯಬೇಕಾಯಿತೆಂಬುದನ್ನು ವಿವರಿಸಿದರು ; ಎಲ್ಲ ಬಗೆಯ ಊಳಾಟಗಳನ್ನೂ ಬಗುಳಿಕೆಗಳನ್ನೂ ತಾವು ಕೇಳಿದ್ದ ಸಂಗತಿಯನ್ನು ಬಣ್ಣಿಸಿದರು ; ಅವು ಬಹುಶಃ ಹಳ್ಳಿಯ ನಾಯಿಗಳದ್ದಾಗಿರಬಹುದು ; ಆದರೆ ನರಿಗಳದ್ದೊ, ಇಲ್ಲವೆ ಕಿರುಬನದು ಕೂಡ ಆಗಿರಬಹುದು, ಇಲ್ಲವೆ ಬರಿಯ ತೋಳಗಳದ್ದು ಆಗಿರಲೂ ಸಾಧ್ಯ. ಅಥವಾ ಅಲ್ಲಿ ಆನೆಗಳು ಇದ್ದಿರಬಹುದೆಂದು ಜೂಡಿ ಆಲೋಚಿಸಿದಳು ; ಆ ಆನೆಗಳು ಕಾಡಿನಿಂದ ಹೊರಕ್ಕೆ ಮೆಲ್ಲನೆ ಬಂದು, ರಾತ್ರಿಯೆಲ್ಲ ವ್ಯಾನಿನ ಸುತ್ತಲೂ. ಓಡಾಡುತ್ತಿದ್ದಿರಬಹುದು. ಅವುಗಳನ್ನು ಯಾರೂ ಕಾಣಲಾಗುತ್ತಲೇ ಇರಲಿಲ್ಲ, ಅವುಗಳ ಸೊಂಡಿಲುಗಳಿಂದ ಮೆಲ್ಲನೆಯ ಸುಯಿಲುಗಳು ಮಾತ್ರ ಹೊರಡುವುವು – ಮತ್ತು, ಬಹುಶಃ ಯಾರಿಗಾದರೂ ವಾಸನೆಯಿಂದ ಆನೆಗಳ ಸುಳಿವು ಹತ್ತುವುದೊ

ಮಳೆಗಾಲ ಮೊದಲಿಟ್ಟದ್ದೆ ತಡ, ಶಾಲೆಯ ಆಟಪಾಗಳೆಲ್ಲ ಪೂರ್ತಿನಿಲುಗಡೆಗೆ ಬಂದುವು. ಬಲೆಚೆಂಡಾಟದ ಮೈದಾನ ನೀರಿನಲ್ಲಿ ಮುಳುಗಿ ಹೋಗಿತ್ತು. ಎಲೆಗಳ ದಟ್ಟದಟ್ಟನೆಯ ಸ್ತರಗಳೂ ದೊಡ್ಡ ಕಪ್ಪನೆಯ ತಾಳುಗಳೂ ಇದ್ದು, ಬಿಸಿಲಿಗೆ ಅಡ್ಡನಾಗಿ ಬಹು ಒಳ್ಳೆಯ ಮರೆಯಾಗಿದ್ದ ಆ ಹುಣಿಸೆಯ ಹೆಮ್ಮರಗಳು ಕೂಡ ಮಳೆ ತೂರಿಬರಲು ಅವಕಾಶ ಕೊಟ್ಟಿದ್ದುವು, ತರಗತಿಯ ಕೊಟಡಿಗಳಲ್ಲಿ ಒಂದರ ಮೇಲುಚಾವಣಿ ಇದ್ದಕ್ಕಿದ್ದ ಹಾಗೆ ಸೋರತೊಡಗಿತು ; ಜೂಡಿಯ ಅದೃಷ್ಟಕ್ಕೆ, ತರಗತಿಯಲ್ಲಿ ಅವಳು ಕೆಳಗಿದ್ದ ಹಿಂದೀ ಪಾಠದ ನಡುವೆ ಹಾಗಾಯಿತು. ಹಿಂದೀ ಉಪಾಧ್ಯಾಯಿನಿ ತಮ್ಮ ಕನ್ನಡಕದೊಂದಿಗೆ, ಮತ್ತೆ ಅದನ್ನು ತೆಗದು, ಸೋರುವ ಕಡೆ ನೋಡಿದರು ; ಕನ್ನಡಕವನ್ನು ಜಂಬಕ್ಕೆ ಮಾತ್ರ ಆಕೆ ಧರಿಸುತ್ತಿದ್ದರು

ಒಣಗವೆಯಲ್ಲಿ ಗಟ್ಟಿಸಿದ ಮಣ್ಣಿನ ಮೇಲೆ ಬಲವಾಗಿ ಕುಳಿತು ಕಲ್ಲಿನಷ್ಟೇ ಗಟ್ಟಿಯಾಗಿ ಕಾಣುವುದು. ಆದರೆ ಮಳೆ ಹಿಡಿದ ಕೆಲವು ದಿನಗಳೊಳಗಾಗಿ ಇದು ಕರಗತೊಡಗುವುದು. ಒಂದು ದಿನ ಗ್ಯಾರೇಜಿನ (Garage ಮೋಟಾರು ಖಾನೆ) ನೆಲ ಕಾರಿನ ಕೆಳಗೆ ಸುಮ್ಮನೆ ಕುಡಿಯಿತು ! ಅದನ್ನು ಹೊರಕ್ಕೆ ತೆಗೆಯುವ ಮೊದಲು ಅವರು ಚಕ್ರಗಳ ಕೆಳಗೆ ಇಟ್ಟಿಗೆಗಳನ್ನಿಟ್ಟು ಎತ್ತಬೇಕಾಯಿತು. ಬೆನ್ ಇದೆಲ್ಲ ಬಲು ವಿನೋದಕರ ಎಂದು ಭಾವಿಸಿದನು ; ಜಾರ್ಜ್ ಮತ್ತು ಮಾಲಿ ಕೂಡ ನಿಜವಾಗಿ ಹಾಗೆಯೆ ತಿಳಿದರು.

ಇತರರನ್ನು ಭೇಟಿ ಮಾಡಹೋಗವುದು ಬಹುಮಟ್ಟಿಗೆ ಅಸಾಧ್ಯವೇ ಆಗಿತ್ತು. "ದೇವರ ದಯದಿಂದ, ಇನ್ನು ಮೇಲೆ ಟೀ ಪಾರ್ಟಿಗಳಿಲ್ಲ !" ಎಂದರು ಜೂಡಿಯ ತಾಯಿ. ಆದರೆ ಒಂದು ದಿನ ಭೇಟಿಕೊಡುವ ವೈದ್ಯರೊಬ್ಬರು ಮಧ್ಯಾಹ್ನದ ಭೋಜನಕ್ಕೆ ಬಂದಿದ್ದರು ; ಅವರನ್ನು ಕಾಣಲು ಮತ್ತೆ ಒಬ್ಬಿಬ್ಬರು ಬಂದಿದ್ದರು. ಭೋಜನಕ್ಕೆ ಮುನ್ನ ಜೂಡಿ ತನ್ನ ದೀಪಾವಳಿಯ ಉಡುಪನ್ನು ತೊಟ್ಟು ಬಂದು, ತಿನ್ನುವ ಬಿತ್ತ (ಪಪ್ಪು)ಗಳನ್ನೂ ಹಪ್ಪಳಗಳನ್ನೂ ನಿಂಬೆ ಮತ್ತು ಕಿತ್ತಿಳೆ ರಸದ ಪಾನಕವನ್ನೂ ಎಲ್ಲರಿಗೂ ಒಂದು ಸುತ್ತು ನೀಡಿದಳು. ಆ ಭೇಟಿಯ ವೈದ್ಯರೆಂದರೆ ಅವಳಿಗೆ ಮೆಚ್ಚಿಗೆ ; ಆತ ಬಂದವರು ; ಅವರ ಮುಖದಲ್ಲಿ ದಯೆ ತೋರುವ, ಮೃದುವಾದ, ನಸುನಗೆ ಹರಡಿಕೊಂಡಿರುತ್ತಿತ್ತು : ಅವಳಿಗೆ ಅರ್ಥವಾಗದಿದ್ದರೂ ಕೂಡ ಕೇಳುವುದಕ್ಕೆ ಸೊಗಸಾಗಿದ್ದ ಕವಿತೆಯನ್ನು ಅವರು ಎತ್ತಿ ಹೇಳುತ್ತಿದ್ದರು ; ಅಲ್ಲದೆ, ಖಾದಿ ಧರಿಸುತ್ತಿದ್ದವರಲ್ಲಿ ಅವರೂ ಒಬ್ಬರು ಎಂದು ಅವಳ ಗಮನಕ್ಕೆ ಬಂದಿತು. ಆದರೆ, ಅವರು ಇನ್ನೇನು ಭೋಜನಕ್ಕೆ ಕುಳಿತುಕೊಳ್ಳಬೇಕು, ಆ ವೇಳೆಗೆ ಸರಿಯಾಗಿ ಧಡಾರನೆ ಬಂದಿತು ಮಳೆ ; ಜಾರ್ಜ್ ಚಿಕ್ಕ ಅಂಗಳವನ್ನು ದಾಟಿ ಕೆಲವು ಗಜ ಮಾತ್ರ ನಡೆದು ಬರುವಷ್ಟರೊಳಗೆ, ಮೈಯೆಲ್ಲ ಒದ್ದೆಮುದ್ದೆಯಾಗಿ ಬಂದ–ಸಾಲದ್ದಕ್ಕೆ, ಅವನು ಅಷ್ಟೊಂದು ಶ್ರಮಪಟ್ಟು ತಯಾರಿಸಿದ್ದ ಸೊಗಸಾದ 'ಕರಿ' (ಪಲ್ಯ), ಯಾರೋ ಅದರ ಮೇಲೆ ಒಂದು ಬಕೆಟ್ಟು ನೀರನ್ನು ಸುರಿದಿರುವಂತೆ ಕಾಣುತ್ತಿತ್ತು.

ಇನ್ನೊಂದು ಭಯಂಕರ ಸಂಗತಿ ಎಂದರೆ, ಬಟ್ಟೆಗಳನ್ನು ಬಗೆದಾದ ಮೇಲೆ ಅಷೊಂದು ಸೆಕೆ ಇದ್ದರೂ ಕೂಡ ಅವು ಸರಿಯಾಗಿ ಒಣಗುತ್ತಿರಲಿಲ್ಲ. ಮೇಜಿನ ವಸ್ತ್ರಗಳು, ಮಗ್ಗಲು ಹಾಸುಗಳು, ದಿಂಬುಗಳು, ಇವು ಯಾವವೂ ನಿಜವಾಗಿ ಒಣಗಿದಂತಿರುತ್ತಿರಲಿಲ್ಲ. ಜೂಡಿ ಏನಾದರೂ ತನ್ನ ಚಪ್ಪಲಿಗಳನ್ನು ಒಂದೆರಡು ದಿನ ಹಾಕಿಕೊಳ್ಳದೆ ಹಾಗೆಯೆ ಬಿಟ್ಟುಬಿಟ್ಟಿದ್ದರೆ, ಅವುಗಳ ಮೇಲೆ

ಅಮ್ಮಣ್ಣಿಪಾಟಿ, ನೀವು ಅವಳಿಗೆ ಹೇಳುವುದಕ್ಕೆ ಆಗುವುದಿಲ್ಲವೆ?"

ಅಮ್ಮಣ್ಣಿಪಾಟಿ ತಮ್ಮ ಕಣ್ಣುಗಳನ್ನು ಸೀರೆಯ ಕೊನೆಯಿಂದ ಒರಸಿಕೊಂಡರು. "ನನ್ನ ಜೂಡಿ, ಬಹುಶಃ ನೀನು ಲಕ್ಷ್ಮಿಗೆ ಬರೆದು ತಿಳಿಸುತ್ತೀಯೆ, ಅಲ್ಲವೆ ? ಆಗ, ಅವಳು ನಂಬಿದರೂ ನಂಬಬಹುದು", ಎಂದರು ಅವರು.

"ಬರೆಯುವುದೇ? ನಾನು ಅವಳನ್ನು ನೋಡಲಾಗದೆ ? ಅವಳು ಮದರಾಸಿನಲ್ಲಿ ಇಲ್ಲವೆ ?" ಎಂದು ಕೇಳಿದಳು ಜೂಡಿ.

"ಇಲ್ಲ" ಎಂದು, ಅಮ್ಮಣ್ಣಿ ಪಾಟಿ ಮುಂದುವರಿಸಿದರು :

"ನಿನಗೆ ಹೇಳುತ್ತೇನೆ, ಅದು ಹೀಗೆ : ಲಕ್ಷ್ಮೀಯತಂದೆ, ನನ್ನ ಮಗ ಕುಮಾರ್, ಅಂಥಿಂಥ ಮಗನಲ್ಲ, ಉತ್ತಮನಾದವನು, ಅವನೊಬ್ಬ ಇಂಜಿನಿಯರು." ಜೂಡಿ ತಲೆದೂಗಿದಳು ; ತನ್ನ ತಂದೆ ತನಗೆ ಹೇಳಿದ್ದನ್ನು ನೆನೆದಳು. "ಈ ಭಾರಿ ಇಂಜಿನಿಯರಿಂಗ್ ಸಂಸ್ಥೆಯಲ್ಲಿ ಅವನು ಕೆಲಸಮಾಡುತ್ತಿದ್ದ, ಒಳ್ಳೆಯ ಸಂಬಳ, ಮೋಟಾರುಕಾರು, ಎಲ್ಲಾ ಇತ್ತು. ಅವರು ಭಾರಿ ಇಂಜಿನಿಯರಿಂಗ್ ಕೆಲಸಗಳನ್ನು ಮಾಡುತ್ತಿದ್ದರು ; ಅವನು ಸುಖವಾಗಿದ್ದ. ಆದರೆ ಈ ಸಂಸ್ಥೆಯಲ್ಲಿ ಕೆಟ್ಟ ಜನ ಇದಾರೆ, ಎಲ್ಲ ಹಣವನ್ನೂ ತಮಗೇ ಬೇಕೆಂದು ಪಡೆಯಲು ಹವಣಿಸುವ ಮಂದಿ. ಗುತ್ತಿಗೆಗಳ (ಕಂಟ್ರ್ಯಾಕ್ಟು) ವಿಚಾರದಲ್ಲಿ ಮೋಸಮಾಡುವಂಥವರು. ನಮ್ಮ ಕುಮಾರನಿಗೆ ಈ ವಿಚಾರ ತಿಳಿಯಬರುತ್ತದೆ, ಅವರನ್ನು ತಡೆಗಟ್ಟಲು ಯತ್ನಿಸುತ್ತಾನೆ. ಸುಮ್ಮನಿರುವುದಕ್ಕಾಗಿ ಅವರು ಅವನಿಗೆ ಹಣ ಕೊಡಬರುತ್ತಾರೆ. ಅವನು ಬೇಡ, ಬೇಡ, ಕೂಡದು ಎನ್ನುತ್ತಾನೆ ! ಇಂಥ ದುಷ್ಟತನವನ್ನು ನಿಲ್ಲಿಸಿಬಿಡುತ್ತೇನೆ, ಸರ್ಕಾರಕ್ಕೆ ಹೇಳುತ್ತೇನೆ ಎನ್ನುತ್ತಾನೆ ಅವನು. ಆಗ ಅವರು ಕೋಪಗೊಳ್ಳುತ್ತಾರೆ. ನನ್ನ ಕುಮಾರ್, ನನ್ನ ಒಳ್ಳೆಯ ಕುಮಾರ್, ನನ್ನ ಒಳ್ಳೆಯ ಕುಮಾರ್, ಅವನಿಗೆ ಹೇಗೆ ಕೆಡಕುಮಾಡಬಹುದು ಎಂದು ಅವರು ಆಲೋಚಿಸುತ್ತಾರೆ. ಆದದ್ದು ಹಾಗೆಯೆ. ಅವನ ವಿಚಾರ ಏನೇನೋ ಹೇಳುತ್ತಾರೆ: ಸುಳ್ಳುಗಳು–ಕೆಟ್ಟೆ ಸುಳ್ಳುಗಳು. ಆದರೆ ಅದೆಲ್ಲ ರಾಜಕೀಯ, ಅಲ್ಲದೆ, ಅವನು ಬ್ರಾಹ್ಮಣನಾಗಿ ಹುಟ್ಟಿದಾನೆ, ಕಂಡೆಯಾ–ಹೀಗೆ, ಈಗ, ಈ ಕೆಟ್ಟ ಸಂಸ್ಥೆಯಲ್ಲಿ ತನ್ನ ಜಾಗ ಕಳೆದುಕೊಂಡಿದಾನೆ ನನ್ನ ಕುಮಾರ್; ಆದರೆ ಇಲ್ಲಿಂದ ತುಂಬ ದೂರ ಇರುವ ಒಂದು ಹಳ್ಳಿಯಲ್ಲಿ, ನದಿಯಿಂದ ನೀರು ಹಾಯಿಸುವ ನಾಲೆಯನ್ನು ಮಾಡಿಸುವ ಕೆಲಸದಲ್ಲಿ ಕೇಂದ್ರಸರ್ಕಾರದ ಕೈಕೆಳಗೆ ಒಂದು ಸಣ್ಣ, ಸಣ್ಣ ಉದ್ಯೋಗವನ್ನು ದೊರಕಿಸಿಕೊಂಡಿದಾನೆ–ಹೋ, ಇಲ್ಲಿಂದ ಬಲು ಬಲು ದೂರದ ಪ್ರಯಾಣ. ನನ್ನ ಮಗಳು ಅಂದರೆ ಅವನ ಹೆಂಡತಿ, ಅವಳ ಮಕ್ಕಳು ಲಕ್ಷ್ಮಿ,

ಎಂದು ಪ್ರತಿಯೊಬ್ಬರ ಹೇಳಿಕೆ ತರಗತಿಯ ಹುಡುಗಿಯರೆಲ್ಲ ಒಡನೆಯೆ ಮಾತಾಡುತ್ತಿದ್ದಾಗ, ಆಕೆ ಗಾಬರಿ ಗಾಬರಿಯಾಗಿ, ತಮ್ಮ ಸೀರೆಯ ನೆರಿಯನ್ನು ಮುದುರಿಕೊಂಡು ಹೊರಕ್ಕೆ ಧಾವಿಸಿಬಿಟ್ಟರು. ಅವರು ತಮ್ಮ ಪಾಠದ ಅಭ್ಯಾಸವನ್ನು ಮುಗಿಸಬೇಕಾಗಿಯೆ ಇರಲಿಲ್ಲ.

ಹುಡುಗಿಯರ ಪೈಕಿ ತಾರಾ ಎಂಬವಳ, ತಕ್ಕಮಟ್ಟಿಗೆ ಸೊಗಸಾಗಿದ್ದ, ಹುಟ್ಟಿದ ಹಬ್ಬದ ಸಂತೋಷ ಕೂಟವೊಂದಕ್ಕೆ ಜೂಡಿ ಹೋಗಿದ್ದಳು. ಅಲ್ಲಿ ಪಾಟಲ ಮತ್ತು ಹಸುರು ಬಣ್ಣಗಳ ಕಜ್ಜಾಯ (ಕೇಕ್)ಗಳಿದ್ದುವು ; ಅವುಗಳ ಮೇಲೆ ತಿನ್ನಬಹುದಾದ ಬೆಳ್ಳಿಯ ರೇಕುಗಳ ಚೂರುಗಳಿದ್ದುವು ; ಡಬ್ಬದ ಕೆನೆ ಹಾಕಿದ್ದ ಹಣ್ಣಿನ ರಸಾಯನವೂ ಇತ್ತು.

ಅಗಲವಾದ ವರಾಂಡಗಳಿದ್ದ ದಾರಿ ಮನೆಗಳ ಪೈಕಿ ಅದೂ ಒಂದು ; ಅದರ ಒಳಗಡೆ ಒಂದು ತೊಟ್ಟಿಯೂ (ಅಂಗಳ) ಇತ್ತು ; ಅದನ್ನು ಕೆಲವು ನಿಜವಾದ ಹಾಗೂ ಕೆಲವು ಕಾಗದದ ಹೂಗಳಿಂದ ಅಲಂಕರಿಸಿ, ಅರೆವಾಸಿ ಮುಚ್ಚಿತ್ತು. ಕೆಳಗೆ ತೊಟ್ಟಿಯಲ್ಲಿ ಒಬ್ಬ ಯಕ್ಷಿಣಿಗಾರ ಇದ್ದ ; ಉಳಿದವರೆಲ್ಲ ಉಪ್ಪರಿಗೆಯ ಮೊಗಸಾಲೆಯಲ್ಲಿ ಕುಳಿತಿದ್ದರು, ಇಲ್ಲವೆ ಕಂಬಗಳಿಗೆ ಒರಗಿಕೊಂಡಿದ್ದರು. ಬೋಗುಣಿಯಲ್ಲಿದ್ದ ಹಾಲಿನಲ್ಲಿ ಬೇಯಿಸಿದ ಅನ್ನವನ್ನು ಕಾವೇರಿಗೆ ತಿನ್ನಿಸತೊಡಗಿದರು.

ಜೂಡಿ ಅವರ ಸೀರೆಯ ಸೆರಗನ್ನು ಹಿಡಿದುಕೊಂಡಳು. "ದಯವಿಟ್ಟು, ದಯವಿಟ್ಟು–ಅಮ್ಮಣ್ಣಿ ಪಾಟಿ ! ನಾನು ಲಕ್ಷ್ಮಿಯನ್ನು ನೋಡದೆ ಯುಗವಾಯಿತು, ನಾನು ಇನ್ನು ಸಹಿಸಲಾರೆ, ನನ್ನ ಮೇಲೆ ಅವಳು ಮುನಿಸಿಕೊಂಡಿದ್ದಾಳೆ, ನನಗೆ ಗೊತ್ತು–ಆದರೆ, ಉತ್ತರ ದೇಶದ ಜನರೇ ಎಲ್ಲರಿಗಿಂತ ಉತ್ತಮ ಅಂತ ನಾನು ಎಂದೆಂದಿಗೂ ಹೇಳಲಿಲ್ಲ ; ಅಲ್ಲದೆ, ಹರಿದಾಸನ ತಾಯಿಯ ಸಂಗಡ ನಾನು ಸ್ನೇಹವಾಗಿಲ್ಲ–ಜೊತೆಗೆ, ನನಗೆ ದೆಹಲಿಗೆ ಹೋಗುವ ಇಷ್ಟವಿಲ್ಲ–"

ತಟ್ಟನೆ ಅಮ್ಮಣ್ಣಿಪಾಟಿಯ ಸಣ್ಣ, ಬಿಗಿಯಾದ ಕೈ ತನ್ನದನ್ನು ಅದುಮಿ ಹಿಡಿದದ್ದು ಅವಳಿಗೆ ಅರಿವಾಯಿತು. ಅಮ್ಮಣ್ಣಿಪಾಟಿ ನಿಧಾನವಾಗಿ ಹೇಳಿದರು, "ಹಾಗಾದರೆ, ನನ್ನ ಲಕ್ಷ್ಮಿ ಭಾವಿಸಿಕೊಂಡದ್ದು–ಹಾಗಿಲ್ಲ–ಅದೊಂದು ಭ್ರಾಂತಿ–ಎಂದು ನೀನು ಹೇಳುತ್ತೀ ಅಲ್ಲವೆ......." ಇದ್ದಕ್ಕಿದ್ದ ಹಾಗೆ ಅಮ್ಮಣ್ಣಿ ಪಾಟಿ ಇನ್ನೇನು ಅಳುವುದರಲ್ಲಿದ್ದರು ಎಂದು ಜೂಡಿಗೆ ಕಂಡುಬಂತು.

"ನಿಜವಾಗಿಯೂ ಅವಳು ಭಾವಿಸಿಕೊಂಡಿರುವ ಹಾಗೆ ನಾನು ಎಂದಿಗೂ ಹೇಳಲಿಲ್ಲ–ಆದರೆ ಬಿಡಿಸಿ ಹೇಳುವುದಕ್ಕೆ ಅವಳು ನನಗೆ ಅವಕಾಶವನ್ನೇ ಕೊಡಲಿಲ್ಲ–

# ೮. ಪ್ರವಾಹ

ಮೈಯೆಲ್ಲಾ ಅಂಟಂಟಾಗುತ್ತಿದ್ದ ಅಂದಿನ ಹಗಲು ಕಳೆದ ಮೇಲೆ ಆರಾತ್ರಿ ಬಲು ಜೋರಾದ ಬಿರುಗಾಳಿ ಮಳೆ ಬಂದಿತು. ಮಹಡಿ ಮೆಟ್ಟಿಲ ಕೆಳಗೆ ನೆಲ ಕುಸಿದುಹೋಗಿ, ಸಿಮೆಂಟು ಬಿರುಕು ಬಿಟ್ಟಿದ್ದ ನಡುವೆ ವಿಪರೀತ ತೇವವಾಗಿತ್ತು. ಬೆನ್ ದಿಗಿಲುಗೊಂಡು, ಚೀರಿದ ; ತಾನು ಚೆನ್ನಾಗಿರುವುದನ್ನು ನೋಡುಕೊಂಡು ಹೋಗುವುದಕ್ಕಾಗಿ ತನ್ನ ತಾಯಿ ಬಂದಾಗ ಜೂಡಿಗೆ ಕೂಡ ತುಂಬ ಸಂತೋಷ ಆಯಿತು. ಮಳೆ ಎಷ್ಟು ಪ್ರಬಲವಾಗಿ ಸದ್ದು ಮಾಡುತ್ತಿತ್ತು ಎಂದರೆ, ಅದು ನಮಗೆ ಬಾಧೆಯುಂಟುಮಾಡುವುದೇನೋ ಎಂದೆನಿಸುತ್ತಿತ್ತು. ಇರುಳೆಲ್ಲಾ ಹಾಗೆಯೇ ಸಾಗಿತ್ತು ; ಬೆಳಗ್ಗೆ ತೋಟದಲ್ಲಿ ಮಳೆಸುರಿತದ ನೀರು ಹಿಂದೆ ಎಂದೂ ಇಲ್ಲದಿದ್ದಷ್ಟು ಹೆಚ್ಚು ಆಳವಾಗಿತ್ತು. ಶುಭ್ರವಾಗುತ್ತಿದ್ದ ಆಕಾಶದ ಕೆಳಗೆ ಮಾಳಿಗೆಯ ಮೇಲಕ್ಕೆ ಜೂಡಿ ಹೋದಾಗ, ಅವಳು ಮೊದಲು ನೋಡಿದುದೇನೆಂದರೆ, ಅಮ್ಮಣ್ಣಿ ಪಾಟಿಯ ತೋಟದಲ್ಲಿ ನಿಂತಿದ್ದ ಒಂದು ದೊಡ್ಡ ಸರೋವರ, ಮತ್ತು ಅದರಲ್ಲಿ ನೀರು ಕುಡಿಯುತ್ತಿದ್ದ ಹಸುಗಳು. ಲಾಂಟಾನ ಬೇಲಿಯ ಆಚೆ ಮಕ್ಕಳು ಎಲೆಯ ದೋಣಿಗಳನ್ನೂ ತೇಲಬಿಡುತ್ತಿದ್ದರು. ಚಿಕ್ಕ ರಾಮ ಕೃಷ್ಣ ಸುತ್ತ ನೀರು ಸಿಡಿಸಿ ಕುಳಿತುಕೊಂಡುಬಿಟ್ಟಿದ್ದ. ಇನ್ನೂ ಆಚೆ, ಮರಗಳ ನಡುವೆ, ರಸ್ತೆಗೆ ಅಡ್ಡಲಾಗಿ, ಎಲ್ಲೆಲ್ಲಾ ಹೊಸ ಮಡುಗಳು ಮಿರುಗುತ್ತಿದ್ದುವು. ಮದರಾಸಿನೊಳಕ್ಕೆ ಹೋಗುತ್ತಿದ್ದ ಮುಖ್ಯ ರಸ್ತೆಯಲ್ಲಿ ತಡೆಗಟ್ಟಾಗಿ, ಅವಳು ಶಾಲೆಗೆ ಹೋಗುವುದು ಸಾಧ್ಯವಾಗುತ್ತಿರಲಿಲ್ಲ.

ಸ್ವಲ್ಪ ಹೊತ್ತಾದಮೇಲೆ ಟೆಲಿಫೋನು ಗಂಟೆ ಬಾರಿಸಿತು ; ಅವಳ ತಾಯಿ ಉತ್ತರಕೊಡುತ್ತಿದ್ದರು: "ಹ್ಲೋ...ಹೌದು....ನೀರು ಇನ್ನೂ ಏರುತ್ತಿದೆಯೆ !...... ಸದ್ಯದಮಟ್ಟಿಗೆ ಅವರನ್ನ ಶಾಲೆಯೊಳಕ್ಕೆ ಕರೆದುಕೊಂಡುಬಂದಿದ್ದೀರೊ? ಒಳ್ಳೆಯದು !.... ಆಗಲಿ, ಕಂಬಳಿಗಳನ್ನು ತೆಗೆದುಕೊಂಡು ಬನ್ನಿ ; ಸಾಕಷ್ಟು ಇವೆ ಎಂದು ನನ್ನ ನಿರೀಕ್ಷೆ. ಶ್ರೀಮತಿ ಜ್ಞಾನ ಅಮ್ಮಾಳ್ ಅವರ ಬಳಿ 'ಯೂನಿಸೆಫ್' (Unicef : ಸಂಯುಕ್ತರಾಷ್ಟ್ರಸಂಸ್ಥೆಯ ಒಂದು ಶಾಖೆ) ಕಳಿಸಿರುವ ಹಾಲು ಇದೆ. ಓಹೊ, ಅವರಾಗಲೇ ಅದನ್ನು ತುಂಬಿಸುತ್ತ ಇದಾರೆಯೋ, ಲೇಸಾಯ್ತು.....ಅದನ್ನು ಬೆರಸಲು ನೆರವಾಗಲು ಒಬ್ಬರು ಬೇಕು ಅಲ್ಲವೆ...."

ಕಂದನ್, ಸರಸ್ವತಿ, ನನ್ನ ಪುಟ್ಟ ಪಾರ್ವತಿ ಇವರೆಲ್ಲರೂ ಆವನ ಸಂಗಾತ ಹೋಗಿದಾರೆ. ಈ ಹಳ್ಳಿಯಲ್ಲಿ, ಅವರು ಬಲು ಸಣ್ಣಮನೆಯಲ್ಲಿ ವಾಸಮಾಡುತ್ತಾರೆ." ಅವರು ತಮ್ಮ ಕಣ್ಣುಗಳನ್ನು ಮತ್ತೆ ಒರಸಿಕೊಂಡರು.

ಜೂಡಿ ಹೇಳಿದಳು, "ಅಯ್ಯೋ ದೇವರೆ ! ಏನೋ ಕೆಟ್ಟದ್ದು ನಡೆದಿದೆ ಎಂದು ನನಗೆ ಗೊತ್ತಿತ್ತು ; ಆದರೆ, ಯಾವಾಗಲೂ ಹೀಗಿರುವುದಿಲ್ಲ, ಅಮ್ಮಣ್ಣಿ ಪಾಟಿ. ನಮ್ಮ ತಂದೆ ಹೇಳುತ್ತಾರೆ, ಕಡೆಗೆ ಒಳ್ಳೆಯದಕ್ಕೇ ಜಯ ಅಂತ...."

"ನಾನೂ ಹಾಗೆಯೆ ನಂಬಿದ್ದೇನೆ," ಎಂದರು ಅಮ್ಮಣ್ಣಿಪಾಟಿ. "ಆದರೆ ಆ 'ಕಡೆ'ಯನ್ನು ಮುಟ್ಟಬೇಕಾದರೆ ತುಂಬ ಕಾಲವೆ ಹಿಡಿಯಬಹುದು. ನನ್ನ ಮಗ, ಅವನ ಮಕ್ಕಳೂ ಸಹ ದೂರದಲ್ಲಿದ್ದಾರೆ. ನೋಡಿದೆಯಾ ಜೂಡಿ, ನೀನು ಲಕ್ಷ್ಮಿಗೆ ಒಂದು ಕಾಗದ ಬರೆಯಬೇಕು." ಅವರು ಮನೆಯೊಳಕ್ಕೆ ಹೋಗಿ, ಒಂದು ಚೂರು ಕಾಗದ ತೆಗೆದುಕೊಂಡರು ; ಇತರ ಎಲ್ಲದರ ಹಾಗೆ ಅವರ ಪೆನ್ಸಿಲ್ಲೂ ಅವರ ಸೀರೆಯ ಒಂದು ಗಂಟಿನಲ್ಲಿತ್ತು. ಅವರು ಒಂದು ವಿಳಾಸವನ್ನು ಬರೆದಿಟ್ಟರು. "ಅವಳು ಈಗ ವಾಸಿಸುತ್ತಿರುವುದು ಇಲ್ಲಿ. ಅದರ ಹೆಸರು ಪೊನ್ನೇರಿ, ನೋಡಿದೆಯಾ; ಆದರೆ ನೀನು ಈ ಅಕ್ಷರಗಳು, ಅಂಕಿಗಳು, ಈ ಇನ್ನೊಂದು ಮಾತು ಎಲ್ಲವನ್ನೂ ಬರೆಯಬೇಕು ; ಏಕೆಂದರೆ, ಅದು ಅಷ್ಟೊಂದು ಸಣ್ಣಹಳ್ಳಿ!"

"ತುಂಬ ಉಪಕಾರವಾಯ್ತು !" ಎಂದಳು ಜೂಡಿ. "ನಾನು ಬರೆಯುತ್ತೇನೆ– ಈ ರಾತ್ರಿಯೇ ಬರೆಯುತ್ತೇನೆ. ಆಮೇಲೆ, ದಯವಿಟ್ಟು, ದಯವಿಟ್ಟು–"

"ಆಗಲಿ, ಬೇಲಿಯ ಸಂದನ್ನು ಮತ್ತೆ ಬಿಡಿಸೋಣ" ಎಂದರು ಅಮ್ಮಣ್ಣಿಪಾಟಿ.

"ಹೌದು" ಎಂದರು ಅವಳ ತಾಯಿ. "ಜೊತೆಗೆ, ದೊಡ್ಡ 'ಥರ್ಮೋಸ್ ಫ್ಲಾಸ್ಕ್' (Thermos flask) ತುಂಬ ನೀರು ಬೇಕು ಎಂದು ಜಾರ್ಜನಿಗೆ ಹೇಳು. ಬೇರೆ ಯಾವ ನೀರನ್ನೂ ಖಂಡಿತ ಕುಡಿಯಬೇಡ. ಸುರಿಮಳೆಯ ದೆಸೆಯಿಂದ ನೀರು ಎಂದಿಗಿಂತ ಇನ್ನೂ ಹೊಲಸಾಗಿರುತ್ತದೆ."

ಅರ್ಧ ಗಂಟೆಯಲ್ಲಿ ವ್ಯಾನು ದಾರಿಯುದ್ದಕ್ಕೂ ನೀರು ಸಿಡಿಸುತ್ತಾ ಬಂದು ಬಿಟ್ಟಿತ್ತು. ಗೇಟಿನ ಬಳಿ ಅದು 'ಹಾರನ್' ಕೂಗಿಸಿತು–ಅದು ಒಳಕ್ಕೆ ತಿರುಗಿಬಿಟ್ಟಿದ್ದರೆ, ಅದು ಒಂದು ಕೆರೆಯಲ್ಲಿ ನಿಂತುಬಿಡುತ್ತಿತ್ತು ; ಜೂಡಿಯೂ ಅವಳ ತಾಯಿಯೂ ನೀರಿನ ಅಂಚಿನಲ್ಲೆ ಬಳಸಿಕೊಂಡು ಹೋಗಿ, ವ್ಯಾನನ್ನು ಹೊಕ್ಕರು ; ಅದರೊಳಗೆ ಶ್ರೀಮತಿ ಜ್ಞಾನ ಅಮ್ಮಾಳ್ 'ಯೂನಿಸೆಫ್'ನಿಂದ (ಯುನೈಟೆಡ್ ನೇಷನ್ಸ್ ಸಂಸ್ಥೆಯ ಶಾಖೆ) ಬಂದ ಹಾಲಿನ ಪುಡಿಯ ಪೆಟ್ಟಿಗೆಗಳ ನಡುವೆ ಕುಳಿತಿದ್ದರು ; ಆಕೆ ಉಲ್ಲಾಸ ದಿಂದಿದ್ದ ಭಾರಿ ಹೆಂಗಸು, ನೀಲಿಬಣ್ಣದ ಹತ್ತಿಯ ಸೀರೆ ಉಟ್ಟಿದ್ದರು, ಅವರ ಹಲ್ಲುಗಳ ತುಂಬ ಚಿನ್ನ ತುಂಬಿತ್ತು. ವ್ಯಾನಿನಲ್ಲಿ ಕೆಲವು ಮೆತ್ತೆಗಳಿದ್ದುವು ; ವ್ಯಾನು ಹೊರಕ್ಕೆ ಹೊರಡುವಾಗ ಅವರೆಲ್ಲ ಮುದುರಿಕೊಂಡು ಕುಳಿತಿದ್ದರು. ಮಳೆ ನಿಂತ ಮೂರುನಾಲ್ಕು ಗಂಟೆಯೊಳಗಾಗಿ ನೀರಿನ ಪ್ರವಾಹವೂ ಇಳಿದು ಹೋಗಿದ್ದುದು ಕಂಡುಬರುತ್ತಿತ್ತು ; ಆದರೆ ಭೂಮಿಯನ್ನು ಬಿಟ್ಟು ಹೊರಕ್ಕೆ ಹರಿದುಹೋದ ನೀರೆಲ್ಲಾ ನದಿಗಳಿಗೆ ಸೇರಿ, ಅವು ಇನ್ನೂ ಏರುತ್ತಲೇ ಇದ್ದುವು. ಒಮ್ಮೆ, ಬಿಷಪ್ಪುಗಳು ಧರಿಸುವಂತಹ ಉದ್ದನೆಯ ಟೋಪಿ ಧರಿಸಿದ್ದ ಮದರಾಸಿನ ಪೊಲೀಸರವನು ಅವರನ್ನು ತಡೆದು ನಿಲ್ಲಿಸಿ, ಸೇತುವೆಗೆ ಒಯ್ಯುವ ದಾರಿ ಮಳೆಯ ಪ್ರವಾಹದ ನೀರಿನಿಂದ ತುಂಬಿದ್ದರಿಂದ ಇನ್ನೊಂದು ದಾರಿಯಲ್ಲಿ ಹೋಗುವ ಪ್ರಯತ್ನ ಮಾಡಬೇಕೆಂದು ಹೇಳಿದನು.

ಕಡೆಗೆ ಅವರು ಪ್ರವಾಹದ ನೀರಿನಿಂದ ನಿಜವಾಗಿ ಪೀಡಿತವಾಗಿದ್ದ ಪ್ರದೇಶವನ್ನು ಸಮಿಪಿಸಿದರು. ರಸ್ತೆಯ ಪಕ್ಕದಲ್ಲಿ ನಿಂತುಕೊಂಡೊ ಚಕ್ಕಳಬಕ್ಕಳ ಕುಳಿತೊ, ಬಹಳ ಶೋಚನೀಯವಾಗಿ ಕಾಣುತ್ತಿದ್ದ ಜನರ ಗುಂಪುಗಳು ಅವರಿಗೆ ಕಾಣಿಸತೊಡಗಿದವು. ಆ ಮೇಲೆ ತಮ್ಮ ಮುಂದುಗಡೆ, ಗಿಡಮರಗಳ ಮತ್ತು ಪೊದೆಗಳ ನಡುವೆ, ಕಂದುಬಣ್ಣದ ಹರಿದಾಡುವ ನೀರಿನ ಹರವನ್ನು ಅವರು ಕಂಡರು. ಇಬ್ಬರು ಬಂದು, 'ಯೂನಿಸೆಫ್' ಹಾಲಿನ ಪೆಟ್ಟಿಗೆಗಳನ್ನು ಕೆಳಕ್ಕೆ ಇಳಿಸಿಕೊಳ್ಳತೊಡಗಿದರು. "ಬಾ, ಜೂಡಿ" ಎಂದು ಅವಳ ತಾಯಿ ಕರೆದರು ; ಎಲ್ಲರೂ ಮಾವಿನ ಮರಗಳ ಅಡಿಯ ದಾರಿಯೊಂದನ್ನು ಹಿಡಿದು ಹೊರಟರು; ಅದು ಪ್ರವಾಹದ ನೀರಿನ ನಿಲುಕಿನಿಂದ ಆಚೆ ಇತ್ತು. ಒಂದು ಕಡೆ ಒಂದು

ಅವರ ಕಣ್ಣು ಸುತ್ತ ಹೊರಳಿದವು. "ಜೂಡಿಯನ್ನು ಕರೆಯುತ್ತೇನೆ.....ಓಹೊ ಅವಳು ಬರುವುದಕ್ಕೆ ಅಡ್ಡಿಯಿಲ್ಲ ; ಅವಳಿಂದ ಉಪಯೋಗವಾಗುತ್ತದೆ. ಹಿತಕರವಲ್ಲದ ದೃಶ್ಯಗಳ–ಪರವಾಯಿಲ್ಲ, ಅವಳಿಗೆ ಹನ್ನೊಂದುವರ್ಷ ವಯಸ್ಸು."

ಜೂಡಿ ಲಕ್ಷ್ಮಿಗೆ ತಾನು ಬರೆಯಬೇಕೆಂದಿದ್ದ ಕಾಗದವನ್ನು ಬರೆದು ಮುಗಿಸಲು ಪ್ರಯತ್ನಿಸುತ್ತಿದ್ದಳು ; ಬರೆಯುವುದು ಅವಳು ಯೋಚಿಸಿದ್ದಕ್ಕಿಂತ ಹೆಚ್ಚು ಕಷ್ಟವಾಗಿತ್ತು. ಭಾವೋದ್ರೇಕದಿಂದಲೂ ದೊಡ್ಡವಳಾಗಿ ಬೆಳೆದು ಬಿಟ್ಟೆನೆಂಬ ಭಾವನೆಯಿಂದಲೂ ಮೈ ಕಾವೇರಿದಂತಾಗಿ, ಅವಳಿಗ ಚಿಗಿದೆದ್ದಳು. "ಓ, ಅಮ್ಮಾ, ಹೊಳೆಯ ಪಕ್ಕದಲ್ಲಿ ಇದಾರೆ ಎಂದು ನೀನು ನನಗೆ ಹೇಳುತ್ತಿದ್ದೆಯಲ್ಲಾ, ಆ ಜನವೆ ಇವರು ?"

"ಹೌದು, ಆ ಬಡಪ್ರಾಣಿಗಳೆ," ಎಂದರು ಅವಳ ತಾಯಿ. "ಅವರ ಚಿಕ್ಕ ಮನೆಗಳು ಕೊಚ್ಚಿಹೋಗಿವೆ ; ಅಲ್ಲದೆ, ಅವರಲ್ಲಿ ಕೆಲವರು ಮುಳುಗಿ ಹೋಗಿರಬಹುದು ಎಂದು ನನ್ನ ಹೆದರಿಕೆ. ಅದು ನಗರದ ಎಲ್ಲೆಕಟ್ಟಿನಿಂದ ಹೊರಗಿದೆ, ಅವರ ಯೋಗ ಕ್ಷೇಮ ನೋಡಿಕೊಳ್ಳುವುದು ಯಾರಿಗೂ ಸೇರಿದ ಕೆಲಸವಲ್ಲ ಎಂದು ಕಾಣಿಸುತ್ತಿದೆ, ರಾಮಕೃಷ್ಣ ಸಂಸ್ಥೆಯವರು ಕೆಲವರು ಇತರರಿಗೆ ನೆರವು ನೀಡುತ್ತಿದ್ದಾರೆ, ಆದರೆ ಇವರಿಗಲ್ಲ. ಮುಂದೆ ಏನು ಒದಗಲಿದೆ ಎಂಬುದನ್ನು ಅವರು ಅರಿತುಕೊಂಡು, ತಾವಾಗಿ ತಾವು ದಡದ ಮೇಲ್ಗಡೆಗೆ ಸರಿಯಬೇಕಾಗಿತ್ತು. ಅದೇನೋ ಸರಿಯೆ. ಆದರೆ ಜನ ವಿವೇಕದ ಕೆಲಸವನ್ನು ಮಾಡುವುದೇ ಇಲ್ಲ, ಅಂದರೆ ಅಲ್ಲಿಗೆ ಮುಗಿಯಿತು. ನಮಗೆ ಕೆಲವು 'ಸ್ಯಾಂಡ್ ವಿಚ್' (ನಡುವೆ ರುಚಿಕರ ಪದಾರ್ಥ ಇರುವ ಬ್ರೆಡ್ಡಿನ ಎರಡು ಹಲ್ಲೆಗಳು) ಮಾಡುವ ಹಾಗೆ ಜಾರ್ಜನಿಗೆ ಹೇಳು."

"ರಸ್ತೆಗೆ ಅಡಚಣೆ ಇರುವಾಗ ನಾವು ಅಲ್ಲಗೆ ಹೋಗುವುದಾದರೂ ಹೇಗೆ ?"

"ಇನ್ನೊಂದು ಮಾರ್ಗವಾಗಿ ನಮಗೆ 'ವ್ಯಾನ್' (Van) ಕಳಿಸಿ ಕೊಡುತ್ತಾರೆ. ಕೆಲವು ಅಂಗುಲದಷ್ಟು ನೀರು ನಿಂತಿದ್ದರೂ ಕೂಡ ಅದನ್ನು ವ್ಯಾನ್ ಹಾದುಕೊಂಡು ಹೋಗುತ್ತದೆ. ನಾವು ದಂಡಿಯಾಗಿ, ಹಾಲನ್ನು ಮಿಶ್ರಮಾಡಿಕೊಳ್ಳಬೇಕಾಗಿದೆ, ಬಹಳ ಬೇಸರವಾಗುವುದು, ಆದರೆ ನೆರವಾಗಲು ನಿನಗೂ ಇಷ್ಟ ಎಂದು ನನಗೆ ಗೊತ್ತು."

ಜೂಡಿ ಹೇಳಿದಳು : "ಬೇಸರವೇನಾಗುವುದಿಲ್ಲ, ನನಗಂತೂ ಆಗದು. ಸಂಯುಕ್ತ ರಾಷ್ಟ್ರ ಸಂಸ್ಥೆಯ ದೇಶಗಳಿಂದ ಬಂದ ಹಾಲೆ ಇದು ?"

ಮತ್ತೆ ಇನ್ನೊಂದನ್ನು ಸಿದ್ಧಪಡಿಸುತ್ತ ಹೋಗು."

ಹಾಲಿನ ಪುಡಿಗೆ ಬೀಸಿನೀರು ಹಾಕಿ ಕಲಕುವುದು, ಒಂದು ಡಬ್ಬ ಅಥವಾ ಬಟ್ಟಲು ಆದಮೇಲೆ ಇನ್ನೊಂದನ್ನು ತೆಗೆದುಕೊಳ್ಳುವುದು, ಹೀಗೆ ಜೂಡಿ ಈ ಕೆಲಸದಲ್ಲಿ ನಿರತಳಾದಳು. ಶ್ರೀಮತಿ ಜ್ಞಾನ ಅಮ್ಮಾಳ್ ಅವರು ತಮ್ಮ ಸೀರೆಯ ನೆರಿಯನ್ನು ಮೇಲಕ್ಕೆ ಸಿಕ್ಕಿಸಿಕೊಂಡು, ಸೆರಗನ್ನು ಸೊಂಟದ ಸುತ್ತ ಬಿಗಿಯಾಗಿ ಎಳೆದು ಕಟ್ಟಿಕೊಂಡಿದ್ದರು–ಲಕ್ಷ್ಮಿ ನೃತ್ಯ ಮಾಡುವುದಕ್ಕೆ ಮೊದಲು ಹಾಗೆ ಕಟ್ಟಿಕೊಳ್ಳುತ್ತಿದ್ದಳು ಎಂದು ಜೂಡಿ ತಟ್ಟನೆ ಯೋಚಿಸಿದಳು ; ಹಾಗೆ ಕಟ್ಟಿಕೊಂಡು, ಅವರು ಒಬ್ಬ ಹಳ್ಳಿಯ ಹೆಂಗಸಿನಂತೆಯೆ, ಆದರೆ ಹೆಚ್ಚು ಉಲ್ಲಾಸವಾಗಿಯೂ ಕಾರ್ಯಶೀಲರಾಗಿಯೂ ಕಾಣುತ್ತ, ಸುತ್ತಮುತ್ತ ಪರೆದಾಡುತ್ತಿದ್ದರು. ಆಕೆ ಚಿಕ್ಕಮಕ್ಕಳುಳ್ಳ ತಾಯಂದಿರನ್ನು ಒಂದು ಸಾಲಾಗಿ ಏರ್ಪಡಿಸಿ, ಹಾಲನ್ನು ಕೊಡುತ್ತಿದ್ದರು. ಕಾದುಕೊಂಡಿದ್ದ ಮಂದಿ ಆಕೆಯನ್ನೂ ಜೂಡಿಯನ್ನು ಗಮನಿಸಿ ನೋಡುತ್ತ ಮಣ್ಣಿನಮೇಲೆ ತೆಪ್ಪನೆ ಕುಳಿತಿದ್ದರು. ಸ್ವಲ್ಪ ಹೊತ್ತಾದ ಮೇಲೆ, ಅವರಲ್ಲಿ ಕೆಲವರು ಮುಂದೆ ಬಂದು ನೆರವಾಗಲಿ ಎಂದು ಜೂಡಿ ಬಯಸಿದಳು, ಆದರೆ ಯಾರೂ ಹಾಗೆ ಬರಲಿಲ್ಲ. ತಾವು ಯಾವಾಗಲೂ ಮಾಡಿರುವ ಕೆಲಸ ಹೊರತು ಬೇರೆ ಏನನ್ನೂ ಅವರಲ್ಲಿ ಯಾರೂ ಎಂದೂ ಮಾಡಿಲ್ಲ ಎಂದು ನನಗೆ ತೋರುತ್ತೆ, ಹಾಲಿನ ಪುಡಿ ಕಲಕುವುದು ಅದರಲ್ಲಿ ಸೇರಿಲ್ಲ, ಎಂದು ಅವಳು ಆಲೋಚಿಸಿದಳು. ಆದರೆ, ಬರುಬರುತ್ತ ಅವಳಿಗೆ ಹೆಚ್ಚು ಸೆಕೆಯಾಯಿತು, ಮೈ ಹೆಚ್ಚು ಅಂಟಂಟಾಯಿತು. ಹೆಚ್ಚು ಬಳಲಿದಳು ; ಅಲ್ಲದೆ, ಹಾಲಿನ ಪುಡಿ, ಹೆಚ್ಚು ಹೆಚ್ಚು ಕೆಟ್ಟವಾಸನೆಯುಳ್ಳದ್ದಾಗಿಯೂ, ಅವಳ ಮುಖ ಹಾಗೂ ಕೂದಲುಗಳ ಮೇಲೆ ಹೆಚ್ಚುಹೆಚ್ಚಾಗಿ ಮೆತ್ತಿಕೊಳ್ಳುವಂತೆಯೂ ಕಂಡುಬಂದಿತು. ನೀರಹರಹಿನ ಅಂಚು ಪೊದೆಗಳ ಮತ್ತು ಚರಂಡಿಗಳ ನಡುವೆ ನಿಧಾನವಾಗಿ ಹರಿಯುತ್ತಿದ್ದುದನ್ನು ತನ್ನ ಕಡೆಗಣ್ಣಿನಿಂದ ಅವಳು ಗಮನಿಸಿ ನೋಡುತ್ತಿದ್ದಳು ; ಆ ವೇಳೆಯುದ್ದಕ್ಕೂ ಅದು ಹೆಚ್ಚು ಹೆಚ್ಚು ಹತ್ತಿರಕ್ಕೆ ಸರಿಯುತ್ತಿತ್ತು.

ಕಡೆಗೆ ಅವರು ಕೆಲಸ ನಿಲ್ಲಿಸಿದರು ; ಅವಳು ಥರ್ಮೋಸ್‌ಫ್ಲ್ಯಾಸ್ಕಿನಿಂದ ತಂಪಾದ ಪಾನೀಯವನ್ನು ತುಂಬ ಹೊತ್ತು ಕುಡಿದು, ಒಂದು 'ಸ್ಯಾಂಡ್ವಿಚ್ಚ'ನ್ನು ತಿಂದಳು. ಆದರೆ ಆ 'ಸ್ಯಾಂಡ್ವಿಚ್ಚ'ನ್ನು ತಿನ್ನುವುದು ಅಷ್ಟು ಹಿತರಕರವಾಗಲಿಲ್ಲ, ಏಕೆಂದರೆ ಮಳೆಯ ಪ್ರವಾಹದಿಂದ ಹೊರಹಾಕಲ್ಪಟ್ಟವರೆಲ್ಲ ಅವಳನ್ನು ಗಮನಿಸಿ ನೊಡುತ್ತಿದ್ದರು ; ಅದನ್ನು ಅವರಿಗೆ ಕೊಡಬೇಕಾದ್ದು ಅಗತ್ಯ ಎನಿಸಿತು ಅವಳಿಗೆ. ಶ್ರೀಮತಿ ಜ್ಞಾನ ಅಮ್ಮಾಳ್ ಅವರು ಸ್ಯಾಂಡ್ವಿಚ್ಚಿನ ಬದಲು ಜೋಡಿ ಹಿತ್ತಾಳೆ

ಹಳ್ಳವಿತ್ತು ; ಅದರಲ್ಲಿನ ನೀರು ಹೆಚ್ಚು ಆಳವಾಗಿದ್ದುದಲ್ಲದೆ, ಎಲ್ಲ ಬಗೆಯ ಕಚಡದಿಂದಲೂ ತುಂಬಿ ಬಹಳ ಹೊಲಸಾಗಿತ್ತು. ಅದರಲ್ಲಿ ಒಂದು ಬಡ ಆಡು ಮುಳುಗಿಹೋಗಿದ್ದುದನ್ನೂ, ತುಸ ಹೊತ್ತಾದ ಮೇಲೆ ಸತ್ತು ಅಸ್ತವ್ಯಸ್ತವಾಗಿದ್ದ ಕೆಲವು ಕೋಳಿಗಳನ್ನೂ ಜೂಡಿ ಕಂಡಳು.

"ನೋಡು, ಜೂಡಿ, ನಾವು ಅವರನ್ನು ಕರೆದುಕೊಂಡುಹೋಗಿ ಬಿಟ್ಟಿರುವ ಶಾಲೆ ಅಲ್ಲಿದೆ" ಎಂದರು ಅವಳ ತಾಯಿ.

ಅದು ಮಣ್ಣು–ಇಟ್ಟಿಗೆಗಳಿಂದ ಕಟ್ಟಿದ ಗೋಡೆಗಳುಳ್ಳ ಉದ್ದನೆಯ, ತಗ್ಗಾದ ಕಟ್ಟಡ; ಏನಿಲ್ಲವೆಂದರೂ, ಅವರು ಎಲ್ಲರಿಗೂ ಅಲ್ಲದೆ ಹೋದರೂ ಕೆಲವರಿಗಾದರೂ ತಲೆಯ ಮೇಲಕ್ಕೆ ಒಂದು ಸೂರು ಸಿಕ್ಕಿದಂತಾಗುವುದು ; ಏಕೆಂದರೆ, ಡಜನ್‌ಗಟ್ಟಳೆ ಕುಟುಂಬಗಳಿದ್ದರು ಅಲ್ಲಿ; ಅವರು ತಮ್ಮ ಸಾಮಾನುಗಳ 'ಅಯ್ಯೋ' ಎನಿಸುವ ಚಿಕ್ಕಪುಟ್ಟ ಗಂಟುಮೂಟೆಗಳನ್ನು ಹೊರಗಿಟ್ಟುಕೊಂಡು, ಎಲೆ ಮತ್ತು ರೆಂಬೆಗಳಿಂದ ಆಸರೆಗಳನ್ನು ಕಟ್ಟಿಕೊಳ್ಳಲು ಪ್ರಯತ್ನಪಡುತ್ತಿದ್ದರು.

ಆ ಬಳಿಕ, ದಾರಿಯ ಪಕ್ಕದಲ್ಲಿ, ಉಟ್ಟಿದ್ದ ಕಪ್ಪು ಸೀರೆಯೆಲ್ಲ ಒದ್ದೆಯಾಗಿ, ತನ್ನ ಕಣ್ಣುಗಳನ್ನು ಮುಚ್ಚಿ, ಬಿದ್ದುಕೊಂಡಿದ್ದ ಒಬ್ಬ ಹೆಂಗಸನ್ನು ಜೂಡಿ ಕಂಡಳು. ಅವಳ ತಾಯಿ ಹೇಳಿದರು : "ಹೌದು, ಜೂಡಿ ಆ ಬಡ ಪ್ರಾಣಿ ಮುಳುಗಿ ಹೋಗಿರಬೇಕು, ಅವರು ಅವಳ ನಂಟರಿಷ್ಟರನ್ನು ಹುಡುಕಲು ಯತ್ನಿಸುತ್ತಿದ್ದಾರೆ." ಅದು ಹೇಗೋ ಏನೋ, ಜೂಡಿ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಒದ್ದೆಮುದ್ದೆಯಾದ, ಆ ಮಡಿದ ಹೆಂಗಸು ನೊಂದಂತೆ ಆಗಲಿ ಅಸುಖಿಯಾಗಿ ಆಗಲಿ ಕಂಡುಬರಲಿಲ್ಲ ; ಅವಳು, ಅಲ್ಲಿ ಇರಲಿಲ್ಲ–ಅಷ್ಟೆ.

ಎತ್ತರಿಸಿದ ಒಂದು ತುಂಡು ನೆಲದ ಮೇಲೆ ಉರಿ ಉರಿಯುತ್ತಿತ್ತು ; ಕೋಲುಗಳಿಗೆ ತೂಗಹಾಕಿದ್ದ ದೊಡ್ಡ ಮಡಕೆಯೊಂದು ಅದರ ಮೇಲ್ಗಡೆ ಇತ್ತು. ಶ್ರೀಮತಿ ಜ್ಞಾನ ಅಮ್ಮಾಳ್ ಅಟ್ಟಿದ ಒಬ್ಬಾತ ಡಬ್ಬಗಳನ್ನೂ ಮಣ್ಣಿನ ಬಟ್ಟಲುಗಳನ್ನೂ, ಕಡೆಗೆ, ಹಾಲನ್ನು ತುಂಬಲು ಏನು ಸಿಕ್ಕಿದರೆ ಅದನ್ನು ತರಲು ಅವಸರಪಡುತ್ತಿದ್ದ. ಆಕೆ ಹೇಳಿದರು : "ಜೂಡಿ, ಈಗ ನಾನೂ ನೀನೂ ಒಂದು ತಂಡ. ನಿನ್ನ ತಾಯಿ ಕಂಬಳಿ ಕೊಡುವ ಕೆಲಸ ನೋಡಿಕೊಳ್ಳುತ್ತಾರೆ. ನಾನು ಬಿಸಿನೀರನ್ನು ಒಳಕ್ಕೆ ಸುರಿಯುತ್ತೇನೆ, ನೀನು ಕಲಕಿ ಕಲಕಿ ಇಡಬೇಕು !" ಆಕೆ ತಮ್ಮ ಕೈಗೆ ಸಿಕ್ಕಿದ ಬೇರೆಬೇರೆ ಪಾತ್ರೆ ಮುಂತಾದವುಗಳೊಳಕ್ಕೆ ಹಾಲಿನ ಪುಡಿಯನ್ನು ಖಾಲಿಮಾಡ ತೊಡಗಿದರು. ಅವರು ಜೂಡಿಗೆ ಒಂದು ಮರದ ಚಮಚವನ್ನು ಕೊಟ್ಟರು. "ನೀನು ಒಂದು ಬಟ್ಟಲನ್ನು ಸಿದ್ಧಪಡಿಸಿ ಇಟ್ಟುಕೊಂಡ ಕೂಡಲೆ ನನಗೆ ಹೇಳು,

ಒಟ್ಟಿಗೆ ನೆರೆದಿದ್ದ ಜನ ಜಂಗುಳಿಯ ವಾಸನೆ ಒಂದುಕಡೆ, ಅಸುಖದ ವಾಸನೆ ಅದು ; ಪ್ರವಾಹದ ನೀರಿನ ವಾಸನೆ, ಮತ್ತು ಅದು ತನ್ನೊಂದಿಗೆ ತರುತ್ತಿದ್ದ ಎಲ್ಲದರ ವಾಸನೆ, ಇದು ಇನ್ನೊಂದು ಕಡೆ ; ಇದರ ಮೇಲೆ ಏಕೋ ಏನೋ, ಒಣ ಹಾಲಿನ ವಾಸನೆ ಜೂಡಿ ಸಹಿಸಲಾರದಷ್ಟು ಹೆಚ್ಚಾಗಿತ್ತು. ಆದರೆ ಆ ಕೆಲಸವನ್ನು ನಿರ್ವಹಿಸಲೇಬೇಕಾಗಿತ್ತು ; ಅತ್ತ, ಕೆಲಸ ಸಾಗಿಸಿಕೊಂಡು ಹೋಗಲು ಪ್ರಯತ್ನ ಪಡುತ್ತಿದ್ದ ಯಾವಳೋ ಹೆಂಗಸನ್ನು ನೋಡಿಯೋ, ಇಲ್ಲವೆ ತನ್ನ ಪುಟ್ಟ ತಮ್ಮನನ್ನು ನೋಡಿಕೊಳ್ಳುತ್ತಿದ್ದ ಯಾವುದೋ ಮಗುವನ್ನು ನೋಡಿಯೋ ಮುಗುಳ್ನಗೆ ನಗುವಾಗ ತಮ್ಮ ಚಿನ್ನದ ಹಲ್ಲುಗಳನ್ನು ತೋರುತ್ತ ಜ್ಞಾನ ಅಮ್ಮಾಳ್ ಬೇರೆ ಚಡಪಡಿಸುತ್ತಿದ್ದರು.

ರಸ್ತೆಯಮೇಲೆ ಇನ್ನೊಂದು ವ್ಯಾನ್ ಇದ್ದಿತು; ಎಲ್ಲಾ ಬಿಟ್ಟು ಅದರಿಂದ ಹರಿದಾಸ್ ಮತ್ತು ಅವನ ತಾಯಿ ಹೊರಬರಬೇಕೆ ! ಹರಿದಾಸ್ ಓಡೋಡುತ್ತ ಬಂದ, ಆ ಸೆಕೆಯಲ್ಲಿ ಕೂಡ ನಿಜವಾಗಿಯೂ ಓಡಬಲ್ಲವನೆಂಬಂತೆ ಕಾಣುತ್ತಿದ್ದ. “ನೀನು ಏನು ಮಾಡುತ್ತಿದ್ದೀಯೇ, ಜೂಡಿ ? ನಾನೂ ನಿನಗೆ ನೆರವಾಗುತ್ತೇನೆ!” ಎಂದನವನು.

ಜೂಡಿ ತನ್ನ ಶಕ್ತಿಯನ್ನೆಲ್ಲಾ ಕೂಡಿಸಿಕೊಂಡು, ಹಾಲನ್ನು ಬಹು ಅಚ್ಚುಕಟ್ಟಾಗಿ ಬೆರಸತೊಡಗಿದಳು. “ನಿನ್ನ ಕೈಲಿ ಇದು ಆದೀತು ಅಂತ ನನಗೆ ತೋರುವುದಿಲ್ಲ,” ಎಂದಳು ಅವಳು.

ಅವನೆಂದ, “ಆಗುತ್ತೆ, ನನ್ನ ಕೈಲಿ ಆಗುತ್ತೆ ! ಎಲ್ಲ, ಆ ಚಮಚವನ್ನು ಇಲ್ಲಿ ಕೊಡು !”

ಅವಳು ಹೇಳಿದಳು, “ಒಳ್ಳೆಯದು, ನೀನು ಒಂದು ಸಲ ಪ್ರಯತ್ನಿಸಿ ನೋಡಲು ಬಿಡುತ್ತೇನೆ. ಇಲ್ಲಿ ನೋಡು, ಹರಿದಾಸ್, ನೀನು ಈ ಪುಡಿಯನ್ನು ಸರಿಯಾದ ಹಾಲಾಗಿ ಮಾಡಬೇಕು–ಗೆಡ್ಡೆ ಕಟ್ಟಕೂಡದು. ಒಂದು ಡಬ್ಬವನ್ನು ನೀನು ಮಾಡಿ ಮುಗಿಸಿದಮೇಲೆ, ಅದನ್ನು ಜ್ಞಾನ ಅಮ್ಮಾಳ್ ಅವರ ಬಳಿಗೆ ತೆಗೆದುಕೊಂಡುಹೋಗು. ನಾನು ನೋಡುತ್ತ ಇರುತ್ತೇನೆ.”

ಹೀಗೆ, ಜೂಡಿ ಹಿಂದೆ ಕುಳಿತು, ಮೊದಲಲ್ಲಿ ಹಾಗೂ ಹೀಗೂ ಬಹಳ ಚಟಪಟನೆ ಕೆಲಸಮಾಡುವಂತೆ ನಟಿಸುತ್ತಿದ್ದ ಹರಿದಾಸನನ್ನು ಗಮನಿಸಿದಳು. ಆದರೆ ಅವನು ಸರಿಯಾಗಿ, ತಾನು ಮಾಡಿದ್ದಷ್ಟೇ ಬೇಗನೆ ಅದನ್ನು ಮಾಡುತ್ತಿದ್ದ; ಹಿಂದೆ ಸುಮ್ಮನೆ ಕುಳಿತು ಏನನ್ನೂ ಮಾಡದಿರುವುದೆಂದರೆ ಅದೆಷ್ಟೊ ಸೊಗಸು. ಹರಿದಾಸನ ತಾಯಿ ಜೂಡಿಯ ತಾಯಿಯ ನೆರವಿಗೆ ಹೊರಟು ಹೋಗಿದ್ದರು;

ಭರಣಿಯಲ್ಲಿ ಅನ್ನ ಮತ್ತು ಪಲ್ಯವನ್ನು ತಂದಿದ್ದರು ; ಅದು ಹೆಚ್ಚು ಸೊಗಸಾಗಿ ಕಂಡಿತು, ಅಂಚುಗಳು ಯಾವಾಗಲೂ ಸುರುಟಿಕೊಳ್ಳುವ 'ಸ್ಯಾಂಡ್ವಿಚ್ಚು'ಗಳ ಬದಲು ಅಂಥದು ಏನನ್ನಾದರೂ ತನ್ನ ತಾಯಿ ತಂದರೆ ಚೆನ್ನು ಎಂದು ಜೂಡಿ ಬಯಸಿದಳು. ಜ್ಞಾನ ಅಮ್ಮಾಳ್ ಅದನ್ನು ತಮ್ಮ ಕೈಬೆರಳುಗಳಿಂದಲೆ ಬಹಳ ಅಚ್ಚುಕಟ್ಟಾಗಿ ತಿಂದರು ; ಬಳಿಕ, ತಿಂದು ಮಿಕ್ಕಿದ್ದನ್ನು ಒಂದು ಎಲೆಯೊಳಕ್ಕೆ ಬಳಿದು ಹಾಕಿದರು; ಅದಕ್ಕಾಗಿ ಒಂದು ಕಂದುಬಣ್ಣದ ಸೆಣಕಲ ಕೈ ಗುಂಪಿನಿಂದ ಚಾಚಿ ಹೊರಬಂದಿತ್ತು.

ಕೊಚ್ಚಿಕೊಂಡು ಹೋಗಿದ್ದ ಹಳ್ಳಿ ಹೊಳೆಯ ದಡದ ಮೇಲೆ, ಬೇಸಗೆಯಲ್ಲೆಲ್ಲಾ ನೀರು ಯಾವ ಮಟ್ಟಕ್ಕೆ ಇರುತಿತ್ತೊ ಅದಕ್ಕಿಂತ ಬಹು ಮೇಲೆಯೆ ಇದ್ದಿತು; ಕ್ರಮಕ್ರಮವಾಗಿ ಹಳ್ಳಿಯ ಜನ ಅದರ ಹತ್ತಿರಹತ್ತಿರಕ್ಕೆ ಇಳಿದು ಬಂದಿದ್ದರು. ಬಳಿಕ ಕೆಲವು ಹಂಟೆಗಳೊಳಗಾಗಿ, ಇರುಳಿನ ಕಗ್ಗತ್ತಲೆಯಲ್ಲಿ, ಹೊಳೆ ಅವರ ಮೇಲೆ ಎರಗಿಬಂದು, ಅವರ ಮನೆಗಳು, ಅವರ ಕೋಳಿಯ ಗೂಡುಗಳು, ಹುರಿಯಿಂದ ಕಟ್ಟಿಹಾಕಿದ್ದ ಅವರ ಆಡುಗಳು, ಮೀನು ಹಿಡಿಯುವ ಬಲೆಗಳು ಮತ್ತು ಸಲಕರಣೆಗಳು ಇವೆಲ್ಲವನ್ನೂ ಸೆಳೆದುಕೊಂಡು ಒಯ್ದು ಬಿಟ್ಟಿತ್ತು. ಅವರಲ್ಲಿ ಕೆಲವರು, ಮುಳುಗಿ ಹೋಗಿದ್ದ ಆ ಹೆಂಗಸಿನ ಹಾಗೆ, ತಮ್ಮ ಮನೆಯೊಳಕ್ಕೆ ನೀರು ನುಗ್ಗಿ ಬಂದಾಗ ಮಲಗಿ ನಿದ್ದೆ ಹೋಗುತ್ತಿದ್ದರು. ಮಳೆಯ ಶಬ್ದಕ್ಕಿಂತ ಕಡಮೆಯಾಗಿತ್ತು ಅದರ ಶಬ್ದ. ಅವರಲ್ಲಿ ಕೆಲವರು ಒಂದು ಹಾಸಿಗೆಯನ್ನೂ ಕೆಲವು ಮಡಕೆಗಳನ್ನೂ ಅದು ಹೇಗೋ ಉಳಿಸಿಕೊಂಡಿದ್ದರು. ಇತರರು ಎಲ್ಲವನ್ನೂ ಕಳೆದುಕೊಂಡಿದ್ದರು. ಅವರಲ್ಲಿ ಬಹುಮಂದಿ ಚಿಕ್ಕಚಿಕ್ಕ ನೆಲದ ತುಂಡುಗಳನ್ನು ಬೇಸಾಯಮಾಡಿಕೊಂಡಿದ್ದವರು ; ಅವು ಫಲವತ್ತಾದ ನದಿಯ ಗೋಡು ಮಣ್ಣಿನಿಂದ ಕೂಡಿದ್ದರಿಂದ ಚೆನ್ನಾಗಿಯೆ ಬೆಳೆ ಕೊಡುತ್ತಿದ್ದುವು ; ಆದರೆ ಈಗ ಇವು ಎಲ್ಲ ಮುಳುಗಡೆಯಾಗಿ, ಅಲ್ಲಿ ಇದ್ದ ಬೆಳೆಯೆಲ್ಲ ನಷ್ಟವಾಗಿ ಹೋಗಿತ್ತು. ಮದರಾಸಿಗೆ ಬಂದು ಕೂಲಿಗಳಾಗಿ ಕೆಲಸ ಮಾಡುತ್ತಿದ್ದವರ ಪಾಡು ಬಹುಶಃ ಅಷ್ಟು ಕೆಟ್ಟದ್ದಾಗಿರಲಿಲ್ಲ ; ಆದರೆ ಅವರಲ್ಲಿ ಯಾವುದೇ ಆಹಾರವನ್ನು ಜೋಪಾನಮಾಡಿಕೊಂಡು ತರಲು ಸಾಧ್ಯವಾದವರ ಸಂಖ್ಯೆ ವಿರಳ ; ಭಾರತದ ನಿಡುಗಾಲದ ಇತಿಹಾಸದಲ್ಲಿ ಅನೇಕವೇಳೆ ಜನ ಅನುಭವಿಸಿರುವಂತೆ, ಹೆಂಡಿರು ತಮ್ಮ ಹಸುಳೆಗಳೊಂದಿಗೆ ಹಸಿದುಕೊಂಡು ನಿರಾಶರಾಗಿ ನೆಲದ ಮೇಲೆ ಕುಳಿತಿದ್ದರು.

ಜೂಡಿ ವಿಪರೀತ ಆಯಾಸಪಡುತ್ತಿದ್ದಳು ; ಬರುಬರುತ್ತ ಹೆಚ್ಚು ಹೆಚ್ಚು ಸೆಕೆಯಾಗಿ, ಉಸಿರಾಡುವುದೇ ಕಷ್ಟವಾಗಿತ್ತು ; ವಾಸನೆಗಳೋ ಅಸಹ್ಯವಾಗುತ್ತಿದ್ದುವು.

ಗಮನಿಸಿದಳು. ಅವನು ಸ್ವಲ್ಪ ಬಳಲಿಕೆ ಹೊಂದುತ್ತಿದ್ದ ; ಜೂಡಿ ಹಾಲು ಕಲಕುವ ಸರತಿಯನ್ನು ತಾನು ವಹಿಸಿಕೊಂಡಾಗ ಅವನಿಗೆ ತುಂಬ ಸಂತೋಷವೆ ಆಯಿತು. ಆದರೆ ಆ ಸಂಜೆ ಅವರು ಒಂದು ಡಬ್ಬಕ್ಕಿಂತ ಹೆಚ್ಚಿಗೆ ಉಪಯೋಗಿಸಲಿಲ್ಲ. ಅವರು ತಂದಿದ್ದ ಅಕ್ಕಿ ಮತ್ತು ಧಾನ್ಯಗಳೆಲ್ಲವನ್ನೂ ಹಂಚಿಕೆಯಾಗಿತ್ತು. ಇದರಿಂದಾಗಿ, ಏನಿಲ್ಲವೆಂದರೂ ಎಲ್ಲ ಜನರಿಗೂ ತಿನ್ನುವುದಕ್ಕೆ ಸ್ವಲ್ಪ ದೊರಕಿದಂತಾಗಿತ್ತು. ಅವರು ಮತ್ತೆ ವ್ಯಾನುಗಳಿಗೆ ಬಂದು, ಊರಿಗೆ ಹಿಂದಿರುಗಿದರು. ಹೆಚ್ಚಿನ ಮಳೆ ಸುರಿಸುವುದಕ್ಕಾಗಿ ಈಶಾನ್ಯ ದಿಕ್ಕಿನಲ್ಲಿ ಮೋಡಗಳು ರಾಶಿಗೂಡುತ್ತಿದ್ದುವು. ಸರಿಯಾದ ಸೂರಿನ ನೆರಳು ಇಲ್ಲದ ಎಲ್ಲ ಜನರ ವಿಚಾರವಾಗಿ ಯೋಚಿಸುವುದು ಘೋರವಾಗಿತ್ತು. ಆದರೆ, ಅದೇ ಕಾಲಕ್ಕೆ, ಸಹಾಯ ನೀಡುವ ಸಾಮರ್ಥ್ಯ ತಮಗಿತ್ತು ಎಂದು ಯೋಚಿಸುವುದು ಅಷ್ಟೇ ಹಿತವೆನಿಸುತ್ತಿತು. ಪ್ರವಾಹ ಹರಿದ ಕಡೆಯೆಲ್ಲ ರಸ್ತೆಗಳು ಕೆಮ್ಮಣ್ಣಿನಿಂದ ಬಳಿದಿದ್ದವು.

"ಇವೊತ್ತು ನನಗೆ ಶಾಲೆಗೆ ಹೋಗಲು ಸಾಧ್ಯವಾಗಲಿಲ್ಲ. ನಿನಗೆ ಆಯಿತೆ?' ಎಂದು ಕೇಳಿದ ಹರಿದಾಸ್.

ಜೂಡಿ ಹೇಳಿದಳು: "ಇಲ್ಲ. ರಸ್ತೆ ಅಷ್ಟು ಭಾಗದಲ್ಲಿ ಪ್ರವಾಹತೆಗೆದಿರುತ್ತೆ ಎಂದು ನನ್ನ ಆಶೆ !"

ಆಕೆ ಅಷ್ಟೊಂದು ಮಾತಾಡಿದರೂ ಕೂಡ ಕೆಲಸದಲ್ಲಿ ಬಹಳ ಗಟ್ಟಿಗರು ಎಂದು ಜೂಡಿಯ ತಾಯಿ ಆಮೇಲೆ ಹೇಳಿದರು. ಜೂಡಿ ಹರಿದಾಸನನ್ನು ಗಮನಿಸುವುದನ್ನು ಬಿಟ್ಟು, ನೆರೆಯ ನೀರಿನ ಅಂಚನ್ನು ಗಮನಿಸತೊಡಗಿದಳು. ಅದು ಇನ್ನೂ ಹೆಚ್ಚಾಗಿ ಏನೂ ಮೇಲೇರುತ್ತಿರಲಿಲ್ಲ. ಅದು ಕೆಳಕ್ಕೆ ಇಳಿಯುತ್ತಿತ್ತು; ಹಾಗೆ ಇಳಿದಂತೆ ಅದರ ಹಿಂದೆ ಕಸ, ಕಡ್ಡಿ, ಹಣ್ಣಿನ ಸಿಪ್ಪೆ ಮತ್ತು ಒಂದು ಸತ್ತ ಕಪಿ–ಹೌದೋ ಅಲ್ಲವೋ ?–ಚಿಂದಿ ಬಟ್ಟೆಯ ಚೂರುಗಳು ಇವುಗಳ ಒಂದು ಸಾಲು ಉಳಿದಿತ್ತು ; ಇಟ್ಟುಕೊಳ್ಳಬಹುದಾದದ್ದು ಅದರಲ್ಲಿ ಏನಾದರೂ ಸಿಕ್ಕೀತೋ ಏನೋ ಎಂದು ಇಬ್ಬರು ಹಳ್ಳಿಯ ಹೆಂಗಸರು ಅದನ್ನು ಪರೀಕ್ಷಿಸಿ ನೋಡುತ್ತಿದ್ದರು. ಇಷ್ಟು ಹೊತ್ತಿಗೆ ಜ್ಞಾನ ಅಮ್ಮಾಳ್ ಇತ್ತ ಬಂದಿದ್ದರು, ತಮ್ಮ ಸೀರೆಯ ಮಡಿಕೆಯಿಂದ ಒಂದು ದೊಡ್ಡ ಶುಭ್ರವಾದ ಕರವಸ್ತ್ರ ಹೊರತಗೆದಿದ್ದರು. "ಜೂಡಿ, ನಿನ್ನ ತಲೆಯನ್ನು ಅದರ ಮೇಲೆ ಇರಿಸಿಕೊಂಡು ಹಾಗೆಯೇ ಒಂದು ನಿಮಿಷ ಮಲಗಿಕೊ– ಅಂದರೆ, ನೀನು ನಿದ್ದೆ ಮಾಡಬೇಕಾಗಿಲ್ಲ, ಇಲ್ಲ....."

ಏನೇ ಆಗಲಿ, ವಾಸನೆ ಹೊಡೆಯುವ ಮಣ್ಣಿಗೂ ಇರುವೆಗಳಿಗೂ ಮತ್ತು ತನಗೂ ನಡುವೆ ಒಂದು ಶುಭ್ರವಾದ ಕೈವಸ್ತ್ರ ಹಾಕಿಕೊಂಡು ಹಾಗೆ ಒರಗಿ ಮಲುಗುವುದು ಬಹುಮಟ್ಟಿಗೆ ಚೆನ್ನಾಗಿಯೇ ಇತ್ತು. ಒಂದು ಕ್ಷಣಕಾಲ ಕಣ್ಣನ್ನೂ ಮುಚ್ಚಿಕೊಳ್ಳಬಹುದು. ಹ್ಞಾ, ಹೀಗೆ, ಇದ್ದಕ್ಕಿದ್ದ ಹಾಗೆ, ಹರಿದಾಸ ಹೇಳುತ್ತಿರುವುದು ಜೂಡಿಗೆ ಕೇಳಿಸಿತು. "ಇನ್ನೊಂದು ಪೆಟ್ಟಿಗೆ ಹಾಲು ಬೇಕಾಗುತ್ತದೆ–ಅದನ್ನು ನಾನು ಒಡೆಯುತ್ತೇನೆ !" ಅದೋ, ನೆರಳುಗಳೆಲ್ಲ ಸ್ಥಳ ಬಿಟ್ಟು ಬಳಿಸಿ ಹೋಗಿದ್ದವು– ಓಹೋ, ನೀರು ಕೂಡ ಬಲುದೂರ ಕೆಳಗಿಳಿದಿತ್ತು. ಅವಳು ಒಂದು ಯುಗ ನಿದ್ದೆಹೋಗಿರಬೇಕು !

ಈ ಹೊತ್ತಿಗೆ ಹಳ್ಳಿಯ ಜನ ಹೆಚ್ಚು ಕಡಮೆ ನೆಲೆಕಂಡಿದ್ದರು, ಎಲ್ಲ ಕೂಸುಗಳಿಗೂ ಆಹಾರ ಕೊಟ್ಟಾಗಿತ್ತು, ಹೊರಗಿದ್ದವರು ರೆಂಬೆಗಳಿಂದಲೂ ಕಂಬಳಿಗಳಿಂದಲೂ ಯಾವುದೋ ಒಂದು ಬಗೆಯ ಆಸರೆಯನ್ನು ಕಲ್ಪಿಸಿಕೊಂಡಿದ್ದರು. ಏಕೆಂದರೆ, ಅಂದು ರಾತ್ರಿ ಮತ್ತೆ ಮಳೇ ಬರುವಂತಿತ್ತು. ಅತ್ಯಂತ ಕೆಡುಕಿನದು ಎನ್ನುವ ಕಡೆಯಲ್ಲಿ ಇದ್ದುದಕ್ಕಿಂತ ಆಚೆಗೆ ಹೊಳೆ ಏರಿದ್ದರೂ ಕೂಡ, ಅವರು ಶಾಲೆಯಲ್ಲಿ ಸುರಕ್ಷಿತವಾಗಿರುತ್ತಿದ್ದರು ; ಏಕೆಂದರೆ, ಅದು ಸ್ವಲ್ಪ ಹೆಚ್ಚು ಎತ್ತರದ ಭೂಮಿಯ ಮೇಲಿತ್ತು.

ಹರಿದಾಸ್ ಕೂಡ ತನ್ನ ಹಾಗೆಯೇ ಹಾಲಿನ ಪುಟಿಯನ್ನು ತನ್ನ ಕೂದಲ ಮೇಲೂ ಷರಟಿನ ಮೇಲೆ ಎಲ್ಲ ಕಡೆಯೂ ಬೀಳಿಸಿಕೊಂಡಿದ್ದುದನ್ನು ಜೂಡಿ

ಅದನ್ನು ಕ್ಷಣಾರ್ಧದಲ್ಲಿ ಮತ್ತೆ ಹಾಕಿಸಿಕೊಂಡುಬಿಟ್ಟಿದ್ದರು ; ಅದನ್ನು ಮಾಡಿಕೊಟ್ಟವನಿಗೆ ಅದನ್ನು ಮಾಡುವುದರಲ್ಲಿಯೆ ಒಂದು ಸಂತೋಷವೆಂಬಂತೆ ಕಾಣುತ್ತಿತ್ತು. ಆದಾದಮೇಲೆ, ಅವರು ತಮ್ಮ ಹೊಸ ಟೈರನ್ನು ಹಾಕಿಕೊಡಲು ಎಷ್ಟು ಹೊತ್ತು ಹಿಡಿಯುವುದೆಂದು ಗ್ಯಾರೇಜಿನಲ್ಲಿ ಕೇಳದರು–ಏಕೆಂದರೆ, ಅಂತಹ ಕೆಲಸ ಮನೆಯಲ್ಲಿ ಇನ್ನೂ ಹೆಚ್ಚು ಕಾಲವನ್ನು ತೆಗೆದುಕೊಳ್ಳುತ್ತಿತ್ತು ; ಆ ಬಳಿಕ ಅವರು 'ಇಂಡಿಯಾ ಕಾಫಿ ಹೌಸ್'ಗೆ ಹೋಗಿ ಒಂದು ಪೌಂಡು ಕಾಫಿ ಪುಡಿಯನ್ನು ಕೊಂಡುಕೊಂಡು, ತಾವು ಪ್ರತಿಯೊಬ್ಬರೂ ಒಂದು ಬಟ್ಟಲು ಕಾಫಿಯನ್ನು ಕುಡಿದರು. ಆ ವೇಳೆಯಲ್ಲೆಲ್ಲ, ಪೊನ್ನೇರಿಯಲ್ಲಿದ್ದ ಲಕ್ಷ್ಮಿಗೆ ತಾನು ಬರೆದ ಕಾಗದ ಅವಳಿಗೆ ತಲಪಲು ಎಷ್ಟು ಕಾಲ ಹಿಡಿಯುತ್ತೆ, ಅವಳು ಅದಕ್ಕೆ ಯಾವಾಗ ಉತ್ತರಕೊಡಬಹುದು, ಎಂದು ಜೂಡಿ ಆಶ್ಚರ್ಯ ಪಡುತ್ತಿದ್ದಳು.

ಮಳೆಯ ಪ್ರವಾಹ ಎಷ್ಟೋಮಟ್ಟಿಗೆ ಇಳಿದು ಹೋಗಿತ್ತು. ಅವಳ ತಾಯಿ ಜ್ಞಾನ ಅಮ್ಮಾಳ್ ಅವರೊಂದಿಗೆ ಬಿಡಾರದೆಡೆಗೆ ಹೋಗಿದ್ದರು ; ಇನ ಮತ್ತೆ ಪೂರ್ವಸ್ಥಿತಿಗೆ ಹಿಂದಿರುಗುತ್ತಿದ್ದರು ; ಮುಳುಗಿ ಹೋಗಿದ್ದ ಬಡ ಹೆಂಗಸಿನ ದೇಹವು ಅವಳ ಮಕ್ಕಳಿಗೆ ಸಿಕ್ಕಿ, ಅವರು ಅದನ್ನು ಸರಿಯಾಗಿ ದಹನ ಮಾಡಿದ್ದರು. ಆದರೆ ಅಪಾರ ಮಂದಿ ಹಳ್ಳಿಯ ಜನರು ಶಾಲೆಯ ಕಟ್ಟಡದಲ್ಲಿಯೆ ಇರಬಯಸಿದರು. ಏಕೆಂದರೆ, ಅದಕ್ಕೆ ಇದ್ದಂತಹ ಮೇಲ್ಛಾವಣಿಯನ್ನು ಕೂಡ ಅವರ ಸ್ವಂತದ ಚಿಕ್ಕ ಗುಡಿಸಿಲುಗಳು ಎಂದೂ ಕಂಡಿರಲಿಲ್ಲ. ಆದರೆ ಹಾಗೆ ಇರಲು ಅವಕಾಶವೇ ಇರಲಿಲ್ಲ ; ಏಕೆಂದರೆ, ಆ ಶಾಲೆಗೆ ಹೋಗುತ್ತಿದ್ದ ಮಕ್ಕಳಿಗೆ ಬೇರೆ ಎಲ್ಲಿಯಾದರೂ ಕಲಿಸಬೇಕಾಗುತ್ತಿತ್ತು. ಆದ್ದರಿಂದ, ಹಳ್ಳಿಯ ಜನ ಸಾಧ್ಯವಾದಷ್ಟು ಬೇಗ ತಮಗಾಗಿ ತಾವೆ ಬೇರೆಯ ಹೊಸ ಮನೆಗಳನ್ನು ಕಟ್ಟಿಕೊಳ್ಳುವಂತೆ ಮಾಡುವುದು ಮುಖ್ಯ ಕೆಲಸವಾಗಿತ್ತು. ಜೂಡಿಯ ತಾಯಿ ಆ ಕಾರ್ಯಕ್ಕಾಗಿ ಸ್ವಲ್ಪ ಸರ್ಕಾರದ ಸಹಾಯವನ್ನು ಪಡೆಯಲು ಪ್ರಯತ್ನಿಸುತ್ತಿದ್ದರು.

ಮೂರು ದಿನಗಳಾದ ಮೇಲೆ, ತನಗೆ ಉತ್ತರ ಬರಬಹುದೆಂದು ಜೂಡಿ ಎಣಿಸತೊಡಗಿದಳು. ಆದರೆ, ಬಹುಶಃ ಕಾಗದ ಚಿಕ್ಕ ಹಳ್ಳಿಯೊಂದನ್ನು ಬಂದುಮಟ್ಟಲು ಅದಕ್ಕಿಂತ ಹೆಚ್ಚು ಕಾಲ ಬೇಕಾಗಿದ್ದಿರಬಹುದು ; ಅಂಥ ಕಡೆ ಒಂದು ತಿಂಗಳಿಂದ ಮುಂದಿನ ತಿಂಗಳವರೆಗೆ ಯಾವ ಕಾಗದವೂ ಯಾರಿಗೂ ಬರುತ್ತಿರಲಿಲ್ಲ. ಆದರೆ, ಒಂದು ವಾರ ಕಳೆಯಿತು, ಇನ್ನೊಂದೂ ಆಯಿತು ; ಆದರೂ ಇನ್ನೂ ಕಾಗದವಿಲ್ಲ. "ಅಂಚೆಕಚೇರಿ ಇಲ್ಲದ ಸಣ್ಣ ಹಳ್ಳಿಯಲ್ಲಿ ಸ್ಟ್ಯಾಂಪು ಸಿಕ್ಕುವುದು ಲಕ್ಷ್ಮಿಗೆ ಕಷ್ಟವಾಗಿರಬಹುದು," ಎಂದು ಅವಳ ತಾಯಿ ಹೇಳಿದರು.

# ೯. ರಾಷ್ಟ್ರೀಯ ವಿಸ್ತರಣ ಯೋಜನಾ ಕ್ಷೇತ್ರ

ಜೂಡಿ ಲಕ್ಷ್ಮಿಗೆ ತನ್ನ ಕಾಗದ ಬರೆದಳು ; ಅದರಲ್ಲಿ ಬೇಕಾದಷ್ಟನ್ನು ಹೊಡೆದುಹಾಕಿದಳು, ಚಿತ್ತುಮಾಡಿದಳು, ಅಂಟಂಟು ಮಾಡಿದಳು ; ಹೀಗಾಗಿ ಅದನ್ನು ಮರಳಿ ಬರೆಯಲೇಬೇಕೆಂದು ಅವಳ ತಾಯಿ. ಆದರೆ ಅಷ್ಟು ಮಾಡಲು ತುಂಬ ಸೆಕೆಯೆನಿಸಿತ್ತು ; ಅಲ್ಲದೆ, ಹಾಗಿದ್ದರೂ ಲಕ್ಷ್ಮಿ ಮನಸ್ಸಿಗೆ ಹಚ್ಚಿಕೊಳ್ಳಳು ; ಕಡೆಯಲ್ಲಿ ಅವಳು ಅದನ್ನು ಲಕ್ಕೋಟೆಯೊಳಕ್ಕೆ ಹಾಕಿದಳು; ಅವರು ಸ್ಪೆನ್ಸರರ ಅಂಗಡಿಗೆ ಹೋದಾಗ, ಅವಳು ಅದನ್ನು ಅಲ್ಲಿನ ಅಂಚೆಯ ಕಚೇರಿಗೆ ತೆಗೆದುಕೊಂಡು ಹೋಗಿ, ಸ್ಟ್ಯಾಂಪಿಗೆ ಮುದ್ರೆಯೊತ್ತಿಸಿದಳು. ಅನಂತರ ಅವಳ ತಾಯಿ ಸ್ವಲ್ಪ ಬೆಣ್ಣೆ ಬಿಸ್ಕತ್ತು, ಆಸ್ಪಿರಿನ್ ಮುಂತಾದ ಪದಾರ್ಥಗಳನ್ನು ಕೊಳ್ಳುತ್ತಿದ್ದಾಗ ಅವಳು ಸ್ಪೆನ್ಸರರ ಕಾಫಿ ತಿಂಡಿಯಂಗಡಿಯಲ್ಲಿ ಒಂದು ಲೋಟ ಕಿತ್ತಿಳೆ ಪಾನಕವನ್ನು ಕುಡಿದಳು ; ಆಮೇಲೆ, ಸ್ಟೇನ್ಲೆಸ್ ಸ್ಟೀಲು (ತುಕ್ಕು ಹಿಡಿಯದ ಉಕ್ಕು), ಹಿತ್ತಾಳೆ, ತಾಮ್ರ ಇವುಗಳ ಪದಾರ್ಥಗಳನ್ನು ಮಾರುವ ಅಂಗಡಿಗಳಲ್ಲಿ ಒಂದರಲ್ಲಿ ಹೊಸ 'ಕೆಟಲ್' ಒಂದನ್ನು ಕೊಂಡರು ; ಆ ಅಂಗಡಿ ಎಂದರೆ, ತೂಗಹಾಕಿದ್ದ ಹಾಗೂ ಬಡುಗಳ ಮೇಲೆ ಪೇರಿಸಿ ಇಟ್ಟಿದ್ದ ಹೊಳೆಯುವ ಪದಾರ್ಥಗಳ ಒಂದು ಕಿರಿದಗಲದ ಗವಿ. ಅಲ್ಲಿದ್ದ ಅತ್ಯಂತ ಅಂದವಾದ ಸಾಮಾನುಗಳೆಂದರೆ ಹಿತ್ತಾಳೆ ಮತ್ತು ತಾಮ್ರದವು; ಅದರಲ್ಲಿಯೂ, ಎಲ್ಲ ಅಳತೆಗಳಲ್ಲಿಯೂ ದೊರೆಯುತ್ತಿದ್ದ ಸಾಧಾರಣ ನೀರಿನ ಕೊಡಗಳು ವಿಶೇಷ ಅಂದವಾಗಿದ್ದುವು ; ಆದರೆ, ಈಗ ಭಾರತದಲ್ಲಿಯೆ ತಯಾರುಮಾಡುವ ಸ್ಟೆಯ್ನ್‌ಲೆಸ್ ಸ್ಟೀಲಿನಷ್ಟು ಅವು ಉಪಯುಕ್ತವಾಗಿರಲಿಲ್ಲ. ಅವಳ ತಾಯಿ ತನ್ನ ಹೆಸರಿನ ಮೊದಲಕ್ಷರಗಳನ್ನು ಕೆಟಲಿನ ಹಿಡಿಯಮೇಲೆ ಕೊರೆಯುವಂತೆ ಅಂಗಡಿಯವನನ್ನು ಕೇಳಿದಳು; ಅವನು ಒಂದು ಚಿಕ್ಕ ಎಲೆಕ್ಟ್ರಿಕ್ ಬೈರಿಗೆ ತೆಗೆದುಕೊಂಡು, ಅದನ್ನು 'ಬಸ್‌ಸ್' ಎನಿಸುತ್ತ ಓಡಿಸಿದ, ಅಲ್ಲಿ ಅಕ್ಷರಗಳು ಮೂಡಿದವು.

"ಇದನ್ನು ನಾನು ಲಂಡನ್ನಿನಲ್ಲಿ ಮಾಡಿಸಿಕೊಳ್ಳಬೇಕೆಂದು ಇಷ್ಟಪಟ್ಟಿದ್ದರೆ, ವಾರಗಟ್ಟಳೆ ಹಿಡಿಯುತ್ತಿತ್ತು" ಎಂದರು ಅವಳ ತಾಯಿ. ಚಿಕ್ಕ ಪುಟ್ಟ ತೆರದ ಕೆಲಸ ಯಾವುದೇ ಆಗಲಿ, ಸರಿಪಡಿಸುವ ಕೆಲಸವೇ ಆಗಲಿ, ಎಲ್ಲ ಹಾಗೆಯೆ ಉದಾಹರಣೆಗೆ, ಅವಳ ತಂದೆ ತಮ್ಮ ಕನ್ನಡಕದ ಪಕ್ಕದಕಡ್ಡಿ ಕಳಚಿಹೋಗಿದ್ದಾಗ

ಆದರೆ ಅವನ ತಂದೆಯೀ ಸಹ ಷಾರ್ಕ್ ಮೀನುಗಳ ವಿಚಾರ ಕೇಳಿ, ಅವನನ್ನು ತಡೆದರು.

ಇನ್ನೂ ಯಾವ ಕಾಗದವೂ ಬಂದಿರಲಿಲ್ಲ.

"ನಾವು ಒಂದು ಪ್ರಯಾಣ ಇಟ್ಟಕೊಳ್ಳಬೇಕು ಎಂದು ನನಗೆನಿಸುತ್ತದೆ" ಎಂದರು ಜೂಡಿಯ ತಾಯಿ. "ಈಗ ಸೆಕೆ ಅತಿಯಾಗಿರುವುದಿಲ್ಲ, ರಸ್ತೆಗಳೂ ಮತ್ತೆ ಸರಿಹೋಗಿರುತ್ತವೆ." ಅವಳ ತಂದೆ ಹೇಳಿದರು ; "ಹೌದು ಸರಿಯೆ, ರಾಷ್ಟ್ರೀಯ ವಿಸ್ತರಣ ಸೇವೆಯ ಕೆಲಸ ನಡೆಯುತ್ತಿರುವ ಹಳ್ಳಿಗಳಲ್ಲಿ ಒಂದಕ್ಕೆ ಯಾಕೆ ಹೋಗಬಾರದು, ಅಲ್ಲಿ ಕೆಲಸ ಹೇಗೆ ನಡೆಯುತ್ತಿದೆ ಎಂದು ನೋಡಿಕೊಂಡು ಬರಬಾರದು ?"

ಜೂಡಿ ಗೊಂದಲಕ್ಕೀಡಾದವಳಂತೆ ಕಂಡಳು. ಅವಳ ತಾಯಿ ಹೇಳಿದರು: "ರಾಷ್ಟ್ರೀಯ ವಿಸ್ತರಣ ಸೇವಾ ಕಾರ್ಯ ಅಂತ ಇದೆ, ಭಾರತ ದೇಶ ಏಳಿಗೆ ಹೊಂದಲು ತಾವು ಮಾಡಬೇಕಾದ್ದನ್ನೆಲ್ಲ ಮಾಡಲು ಹಳ್ಳಿಯ ಜನಕ್ಕೆ ಅದು ಸಹಾಯ ಮಾಡುತ್ತದೆ, ಎಂದು ಅದರ ವಿಚಾರ ನಾನು ನಿನಗೆ ಹೇಳಿದ್ದು ನೆನಪಿಲ್ಲವೆ ನಿನಗೆ ? ಆ ಪ್ರದೇಶಗಳಲ್ಲಿ ಒಂದಕ್ಕೆ ಹೋಗೋಣ ; ಅಲ್ಲಿನ ಗೃಹ ಕೈಗಾರಿಕೆಗಳು, ಪಾಠಶಾಲೆಗಳು, ಹೊಸ ಬೆಳೆಗಳು ಮುಂತಾದುವನ್ನು ಒಂದು ಸಲ ನೋಡೋಣ–ಅದು ಬೇಸರವೆನಿಸುವುದಿಲ್ಲ, ಜೂಡಿ ಸಾವಿರಾರು ವರ್ಷಗಳಿಂದ ಬಡವರಾಗಿದ್ದು ಸುಮ್ಮನೆ ಕುಳಿತಿದ್ದ ಜನ ಇದ್ದಕ್ಕಿದ್ದ ಹಾಗೆ ಮೇಲೆದ್ದು ತಮ್ಮ ಕಾಲಮೇಲೆ ನಿಂತು ಕೆಲಸ ಮಾಡಿಕೊಳ್ಳುತ್ತ ಹೋಗುವುರೆಂದರೆ ನಿಜವಾಗಿ ಹುರಿ ಹುಟ್ಟಿಸುವ ಸಂಗತಿ. ಒಂದು ವನ ಭೋಜನ ಇಟ್ಟುಕೊಳ್ಳೋಣ ನಾವು, ಆಮೇಲೆ ಒಂದು ವಿಶ್ರಾಂತಿ ಮಂದಿರದಲ್ಲಿ ತಂಗೋಣ...."

"ಅಲ್ಲಿ ಒಂದು ಆನೆ ಇರಬಹುದು ಅಲ್ಲವೆ?" ಎಂದಳು ಜೂಡಿ. ಅವರು ಹಿಂದೆ ಬೆಟ್ಟದಲ್ಲಿ ಒಂದು ವಿಶ್ರಾಂತಿ ಮಂದಿರದಲ್ಲಿ ಇದ್ದಾಗಲೆ ಆನೆಯ ಮೇಲೆ ಕುಳಿತು ಹೊರಟದ್ದು, ಅವಳು ಕಾಡುಮೃಗಗಳನ್ನೆಲ್ಲ ನೋಡಿದ್ದ ಕಾಲ.

ಅದಕ್ಕೆ ಅವಳ ತಾಯಿ ಹೇಳಿದರು, "ಇದ್ದೀತು ಎಂದು ನನಗೆ ತೋರುವುದಿಲ್ಲ. ಆದರೆ ಭಾರತದಲ್ಲಿ ತಾವು ಏನನ್ನು ಕಂಡೆವು ಎಂದೂ ಯಾರಿಗೂ ಎಂದಿಗೂ ತಿಳಿಯುವುದಿಲ್ಲ."

ಕಡೆಗೆ, ಬಹುದೂರ ಇದ್ದ ಸ್ಥಳಗಳಲ್ಲಿ ಒಂದಕ್ಕೆ ವಾರಾಂತ್ಯ ಪೂರ್ತಿ ಹೋಗಿ ಇದ್ದು ಬರುವುದೆಂದು ಅವರು ತೀರ್ಮಾನಿಸಿದರು. ದಾದಿ ಬೆನ್ನನ್ನು ಕರೆದುಕೊಂಡು ಹೋಗಿ ಕೆಲವು ಸ್ನೇಹಿತರೊಂದಿಗೆ ಇರುವುದೆಂದಾಯಿತು.

ಉತ್ತರ ಕೊಡಬೇಕೆಂದು ಲಕ್ಷ್ಮಿಗೆ ನಿಜವಾಗಿ ಇಷ್ಟವಿದ್ದಿದ್ದರೆ, ಅವಳು ಹೇಗಾದರೂ ಮಾಡಿ ಬರೆಯುತ್ತಿದ್ದಳು, ಅಲ್ಲವೆ, ಎಂದು ಜೂಡಿ ಯೋಚಿಸಿದಳು. ಆದ್ದರಿಂದ, ಉತ್ತರಿಸುವುದು ಬಹುಶಃ ಇಷ್ಟವಿರಲಿಲ್ಲ ಲಕ್ಷ್ಮಿಗೆ.

ಅಮ್ಮಣ್ಣಿ ಪಾಟಿಗೆ ಹೇಗೆ ತೋರುತ್ತೆ ಎಂದು ಕೇಳಲು, ಅವಳು ಅವರ ಬಳಿಗೆ ಹೋದಳು. ಆದರೆ, ಅಮ್ಮಣಿ ಪಾಟಿ ತಲೆಯಲ್ಲಾಡಿಸಿ, ಏನೂ ಹೇಳದೆ ಹೋದರು. ಕುಮಾರನಿಂದ ಬರುತ್ತಿದ್ದ ಕಾಗದಗಳು ಬಹಳ, ಬಹಳ ಕಾಲ ತೆಗೆದುಕೊಳ್ಳುತ್ತಿದ್ದುವು ಎಂದು ಮಾತ್ರ ಹೇಳಿದರು. ಜೂಡಿ ತಾಳ್ಮೆಯಿಂದ ಇರಬೇಕು. ತಾಳ್ಮೆಯಿಂದ ಇರುವುದನ್ನು ಕಲಿಯುವುದು ಒಳ್ಳೆಯದು.

ಬರುಬರುತ್ತ ಮಳೆ ನಿಂತಿತ್ತು; ಇದ್ದಕ್ಕಿದ್ದ ಹಾಗೆ ಆಗ ಸೆಕೆ ಕಡಮೆಯಾಗಿತ್ತು, ಅಷ್ಟೊಂದು ಅಂಟಂಟಾಗುತ್ತಿರಲಿಲ್ಲ, ಎನಿಸಿತು ಜೂಡಿಗೆ. ಕಿತ್ತಿಳೆ ಹಣ್ಣಿನ ಕಾಲ ಮೊದಲಾಗಿ, ಮಾವಿನ ಹಣ್ಣಿನ ಕೊರತೆಯನ್ನು ಬಹುಮಟ್ಟಿಗೆ ಹೋಗಲಾಡಿಸಿತ್ತು; ಕಿತ್ತಿಳೆ ಹಣ್ಣುಗಳಲ್ಲಿ ಎಷ್ಟೋ ಬಗೆಗಳಿದ್ದುವು : ಬಿಗಿಯಾದ ಸಿಪ್ಪೆ ಇದ್ದು, ನಿಜವಾಗಿ ಕಿತ್ತೀಳೆ ರುಚಿಯುಳ್ಳ ಹಣ್ಣುಗಳು ; ಅಳ್ಳಕವಾದ ಸಿಪ್ಪೆ ಇದ್ದು, ರಸ ರಸವಾಗಿ ಹೆಚ್ಚು ಸಿಹಿಯಾಗಿದ್ದ ಹಣ್ಣುಗಳು ; ಅಲ್ಲದೆ, ಎಲ್ಲ ಬಗೆಯ ನಿಂಬೆ ಜಾತಿಯ ಹಣ್ಣುಗಳು. ಮಳೆಯ ನೀರಿನಿಂದ ರಸ್ತೆಗಳಲ್ಲೀ ಉಂಟಾಗಿದ್ದ ಹಳ್ಳಕೊಳ್ಳಗಳನ್ನು ಆಗಲೇ ಸರಿಪಡಿಸತೊಡಗಿದ್ದರು ತೋಟದಲ್ಲಿನ ಕಂದು ಬಣ್ಣದ ದೂಳು ಹಾಗೂ ಕಡ್ಡಿಗಳು ಉದ್ದನೆಯ ಒರಟು ಹುಲ್ಲಾಗಿ ತಿರುಗಿದ್ದುವು ; ಮಾಲಿ ಒಂದು ದೊಡ್ಡ ಚಾಕುವಿನಿಂದ ಅದನ್ನು ಕತ್ತರಿಸುತ್ತ ಹೋಗುಬೇಕಾಯಿತು. ಪ್ರತಿಯೊಬ್ಬರೂ ಹೆಚ್ಚು ಚಟುವಟಿಕೆಯನ್ನು ತೋರತೊಡಗಿದರು. ನಿಜವಾಗಿಯೂ ಸೆಕೆಯಾಗಿದ್ದ ಹವ ಕೊನೆಗಂಡಿತ್ತು.

ಒಂದೇ ಸಂಗತಿ ಏನೆಂದರೆ, ಈಜುವ ಕೊಳ ಬಹುಮಟ್ಟಿಗೆ ಕೆಸರು ಕೆಸರಾಗಿ ಎಲೆಗಳಿಂದ ತುಂಬಿತ್ತು ; ಅದನ್ನು ಚೊಕ್ಕಟಪಡಿಸಲಾಗುತ್ತಿತ್ತು ; ಷಾರ್ಕ್ ಮೀನುಗಳ ಕಾರಣದಿಂದ ಸಮುದ್ರ ಸ್ನಾನದ ವಿಚಾರವಾದ ಜೂಡಿಯ ತಾಯಿ ಗೊಣಗುಟ್ಟತೊಡಗಿದರು. ಆದರೆ ಅವು ಯಾರನ್ನೂ ಈವರೆಗೆ ತಿಂದು ಹಾಕಿರಲಿಲ್ಲ, ಕಚ್ಚಿ ಕೂಡ ಇರಲಿಲ್ಲ ; ಮೀನುಗಾರರು ಎರಡು ಮೂರು ಹಲಗೆಗಳನ್ನು ಒಟ್ಟಿಗೆ ಬಿಗಿದುಕಟ್ಟಿ ಮಾಡಿಕೊಂಡಿದ್ದ ಕುಲುಕಾಡುವ ತಮ್ಮ ದೋಣಿಗಳಲ್ಲಿ ಹೊರಟು ಕೆಲಸ ಸಾಗಿಸುತ್ತಲೇ ಇದ್ದರು ; ಹೀಗಿದ್ದೂ ಗಲಾಟೆಯಾಕೆಂದು ಜೂಡಿ ಕಾಣದಾದಳು. ಹರಿದಾಸ್ ತೀರದ ದೊಡ್ಡ ಅಲೆಗಳ ಆಚೆಗೂ ಈಜಿಕೊಂಡು ಹೋಗುತ್ತಿದ್ದ, ಒಂದು ಚಾಕುವನ್ನೂ ಒಯ್ಯುತ್ತಿದ್ದ ;

ಹಾಯಿಸಿಕೊಂಡು ಅವುಗಳನ್ನು ಉಪಯೋಗಿಸಿಕೊಳ್ಳಬಹುದಾಗಿತ್ತು. ಅವುಗಳ ಅಂಚಿನ ಸುತ್ತ ಸಣ್ಣ ಹೂ ಗಿಡಗಳು ಬೆಳೆಯುತ್ತಿದ್ದುವು. ಇಲ್ಲಿ ಅಲ್ಲಿ ಕಬ್ಬಿನ ಗದ್ದೆಗಳೂ ಇದ್ದುವು ; ಕೆಲವು ಹಳ್ಳಿಗಳಲ್ಲಿ, ಜನ ತಾವೇ ನಡಸಬಹುದಾದಂತಹ, ಬಹು ಸರಳವಾದ, ಕಬ್ಬು ಜಜ್ಜುವ ಗಾಣಗಳನ್ನು ಜೂಡಿ ನೋಡಿದಳು. ಆದರೆ ದೂರದಲ್ಲಿ ಒಂದು ಕಾರ್ಖಾನೆಯೂ ಇತ್ತು, ಕೆಲವು ಭರ್ತಿಗಾಡಿಗಳು ಅಲ್ಲಿಗೆ ಹೋಗುತ್ತಲೂ ಇದ್ದುವು. ಹತ್ತಿ, ಸಾಸಿವೆ, ಮುಂತಾಗಿ ಇತರ ಬೆಳೆಗಳನ್ನು ಬೇಸಿಗೆಯಲ್ಲಿಯೆ ಕೊಯಿಲುಮಾಡಲಾಗಿತ್ತು ; ಈಗ ಮತ್ತೆ ಅವುಗಳ ಬೀಜ ಬಿತ್ತುತ್ತಲೋ ಸಸಿ ನೆಡುತ್ತಲೋ ಇದ್ದರು.

ಅಲ್ಲದೆ, ಆಡುಗಳ ಮಂದೆಗಳನ್ನು ಅಟ್ಟಿಕೊಂಡು ಹೋಗುತ್ತಿದ್ದ ಹುಡುಗರನ್ನೂ, ಹಳ್ಳಿಯ ಸಂತೆಗಳನ್ನೂ ಬಾವಿಗಳ ಪಕ್ಕದಲ್ಲಿ ಕಾಯುತ್ತಲೋ ಇಲ್ಲವೆ ಒಲೆ ಉರಿಸಲು ಉಪಯೋಗಿಸುವುದಕ್ಕಾಗಿ ಹಸುವಿನ ಸೆಗಣಿಯೆ ಬೆರಣಿಗಳನ್ನು ಗೋಡೆಗಳ ಮೇಲೆ ತಟ್ಟುತ್ತಲೋ ಇದ್ದ. ಹೆಂಗಸರನ್ನೂ ಹಾದು ಹೋದರು ಅವರು. ಅಸ್ವಸ್ಥರಾಗಿದ್ದ ಅಥವಾ ಗಾಯಗೊಂಡಿದ್ದ ಜನರನ್ನು ನೋಡುತ್ತ, ಅವರ ವಿಚಾರವಾಗಿ ಚಿಂತಿಸುತ್ತಲೇ ಇದ್ದರು ಜೂಡಿಯತಂದೆ. ಅಂಥವರು ಅನೇಕಾನೇಕ ಮಂದಿ ಇದ್ದರು, ಅವರು ಸಹಿಸಬೇಕಾಗಿದ್ದ ನೋವೂ ಅಪಾರ. ಒಂದು ಉಚಿತ ಔಷಧಾಲಯ ಅವರಿಗೆ ಸಿಕ್ಕಿದರೆ ಸರಿ, ಇಲ್ಲದಿದ್ದರೆ ಆ್ಯಸ್ಪಿರಿನ್ನಿನ ಒಂದೇ ಮಾತ್ರೆ ಕೊಳ್ಳಲು ಅವರಿಗೆ ಒಂದು ಇಡೀ ಆಣೆಯೆ, ಎಂದರೆ ಒಂದು ಪೆನ್ನಿಯಷ್ಟು ಬೇಕಾಗಬಹುದಾಗಿತ್ತು. ಒಬ್ಬ ಹಳ್ಳಿಯ ವರ್ತಕ ಒಂದು ಶೀಸೆಯನ್ನು ಕೊಂಡಿಟ್ಟುಕೊಂಡು, ಅವರಿಗೆ ಆ ಪ್ರಕಾರ ಮಾರಿ, ತುಂಬ ದೊಡ್ಡ ಲಾಭವನ್ನೆ ಗಳಿಸಬಹುದಾಗಿತ್ತು. ಆದರೆ ಯಾವ ಬಡವ್ಯಕ್ತಿಯೂ ಒಂದು ಇಡೀ ಸೀಸೆಯನ್ನು ಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಕೆಲವು ವೇಳೆ ರಸ್ತೆ ರಿಪೇರಿಯಾಗುತ್ತಿರುವುದು, ಆಗ, ಸೀರೆಯುಟ್ಟ ಹೆಂಗಸರು, ಏನೂ ಇಲ್ಲ ಎನ್ನುವ ಮಟ್ಟಿಗೆ ಬಲು ಕಡಮೆ ಬಟ್ಟೆ ಹಾಕಿಕೊಂಡಿದ್ದ ಗಂಡಸರು, ಇಂಥ ಡಜನ್‌ಗಟ್ಟಲೆ ಜನರು ಮಕ್ಕರಿಯಲ್ಲೀ ಮಣ್ಣನ್ನೊ ಕಲ್ಲನ್ನೊ ಹೊರುತ್ತ, ಜರಡಿ ಆಡಿಸುತ್ತ, ಕಾಲಿಂದ ನೆಲ ತುಳಿಯುತ್ತ ಹೆಚ್ಚು ಧನವಂತ ದೇಶಗಳಲ್ಲಿ ಯಂತ್ರಗಳಿಂದ ಮಾಡಿಸುವ ಎಲ್ಲ ಬಗೆಯ ಕೆಲಸಗಳನ್ನೂ ಮಾಡುತ್ತ, ರಸ್ತೆಯ ಮೇಲೆ ಮುಸುರಿಕೊಂಡಿರುವರು. ಒಮ್ಮೆ ಅವರು ಒಂದು ಚಿಕ್ಕ ಪಟ್ಟಣದ ಮೂಲಕ ಹೋದರು ; ಅಲ್ಲಿ ಟ್ಯಾಕ್ಸಿಗಳು ಇದ್ದಂತೆ ಕಾಣಿಸಲಿಲ್ಲ ಅದರ ಬದಲು ಎರಡು ಚಕ್ರದ ಕುದುರೆ ಗಾಡಿಗಳಿದ್ದುವು ಗಾಡಿಯ ಒಡಲು ದೊಡ್ಡ ದುಂಡನೆಯ

ಜಾರ್ಜ್ ಸ್ಯಾಂಡ್ವಿಚ್ಚುಗಳನ್ನು ಮಾಡುವನು, ಅವರು ಎಲ್ಲ ಥರ್ಮೋಸ್ ಫ್ಲ್ಯಾಸ್ಕ್‌ಗಳಲ್ಲೂ ನೀರು ತುಂಬಿಕೊಳ್ಳುವರು. ಅವರು ಕಿತ್ತಿಳೆ ಹಣ್ಣುಗಳನ್ನು ತೆಗೆದುಕೊಂಡು ಹೋಗುವರು, ಜೊತೆಗೆಪಪ್ಪು ಕಾಯಿಗಳನ್ನೂ ತೆಗೆದುಕೊಳ್ಳುವರು. ಎಳನೀರುಗಳು ದಾರಿಯಲ್ಲೆ ದೊರೆಯುವುವು, ಆ ವಿಚಾರದಲ್ಲಿ ಅವರು ನಂಬಿಕೆಯಿಂದಿರಬಹುದು. ಜೂಡಿ ಆ ರಾತ್ರಿ ತನ್ನ ಸಾಮಾನುಗಳನ್ನೆಲ್ಲ ಗಂಟುಕಟಿಕೊಂಡಳು ; ಅವರು ಹಾಸಿಗೆಬಟ್ಟೆಯ ಸುರುಳಿಗಳನ್ನು ತೆಗೆದುಕೊಂಡರು; ವಿಶ್ರಾಂತಿ ಮಂದಿರದಲ್ಲಿ, ಅಡ್ಡಡ್ಡಲಾಗಿ ಬಲೆಕಟ್ಟು ಇರುವ ಭಾರತದ ರೀತಿಯ ಮಂಚಗಳಿರುವುದು, ಅದರ ಮೇಲೆ ಹತ್ತಿ ತುಂಬಿದ ಕ್ವಿಲ್ಟು ಹಾಸಿಗೆಯನ್ನು ಹಾಕಿಕೊಂಡು ಬಿಟ್ಟರೆ ಬಹಳ ಹಾಯಾಗಿರುವುದು.

ಅವರು ದಾದಿಯನ್ನು ಬೆನ್ನನ್ನೂ ಹೋದ ರಾತ್ರಿಯೇ ಹಿಂದೆ ಉಳಿಸಿ, ತಾವು ಬೆಳಗ್ಗೆ ಹೊತ್ತಿಗೆ ಮುಂಚೆ ಬೆಳಕುಹರಿಯುತ್ತಿದ್ದಾಗಲೆ ಹೊರಟುಬಿಟ್ಟರು. ಹಕ್ಕಿಗಳೆಲ್ಲಾ ಹಾಡುತ್ತ, ಬಹುಮಟ್ಟಿಗೆ ತಂಪಾಗಿ, ಮನೋಹರವಾಗಿತ್ತು. ಅದೇ ತಾನೆ ಬಾಗಿಲನ್ನು ತೆಗೆದಿಡುತ್ತಿದ್ದ ಚಿಕ್ಕ ಅಂಗಡಿಗಳು, ಎತ್ತಿನ ಗಾಡಿಗಳು, ಕೆಲಸಕ್ಕಾಗಿ ನಡೆದುಹೋಗುತ್ತಿದ್ದ ಜನ–ಇದನ್ನೆಲ್ಲಾ ಹಾದು ಅವರು ಕಾರಿನಲ್ಲಿ ಮದರಾಸನ್ನು ಬಿಟ್ಟು ಹೋದರು. ಬಳಿಕ ಅವರು ಊರನ್ನು ದಾಟಿದ್ದರು; ಅವರ ಆ ಕಡೆ ಈ ಕಡೆ ಹೊಲಗದ್ದೆ ಚಾಚಿದ್ದುವು ; ಬೇಸಗೆಯ ತಿಂಗಳುಗಳ ಉದ್ದಕ್ಕೂ ಒಣಗಿ, ಕಂದುತಿರುಗಿ ಹೀನ ಸ್ಥಿತಿಯಾಗಿ, ಕಡೆಯಲ್ಲೆಲ್ಲ ಮಳೆ ಬಿದ್ದು ಆಳವಾಗಿ ಕೆಸರೂ ತೆಳ್ಳಗೆ ನೀರೂ ನಿಂತಿದ್ದ ಅಲ್ಲಿ ಇಂದು ಚೆಲುವಾದ ತಿಳಿಹಸುರಿನ ಬತ್ತದ ಎಳೆ ಪಯಿರು ಹಾಸಿತ್ತು. ನಡುನಡುವೆ ತಗ್ಗಾದ ಮಣ್ಣಿನ ತೆವರು ಕಟ್ಟಿ ಭಾಗಭಾಗವಾಗಿದ್ದ ಈ ಗದ್ದೆಗಳು ಕೆಲವಲ್ಲಿ ಗಂಡಸರೂ ಹೆಂಗಸರೂ ಚೀಲದ ಚಿಕ್ಕಚಿಕ್ಕ ಬತ್ತದ ಸಸಿಗಳನ್ನು ತುಂಬಿಕೊಂಡು, ನೀರಿನಲ್ಲಿ ನಡೆದುಹೋಗುತ್ತ, ಅವುಗಳ ಬೇರನ್ನು ಕೆಸರಿನಲ್ಲಿ ಹೂಳುತ್ತ ಇನ್ನೂ ನಾಟಿ ಹಾಕುತ್ತಿದ್ದರು. ಬೇರೆಯವುಗಳಲ್ಲಿ ಬತ್ತದ ಪಯಿರು ಆಗಲೆ ಬಲಿತಿತ್ತು. ಮೈಲಿ ಮೈಲಿಗಳವರೆಗೂ ಇಂಗ್ಲಿಂಡಿನ ಸುಗ್ಗಿಗಿಂತ ಇಲ್ಲಿ ಹೆಚ್ಚು ಹಸುರಾಗಿತ್ತು ; ಕೆಲವು ವೇಳೆ, ಮಳೆ ಹುಯ್ದು ಆದ ಅಗಲವಾದ ಆಳವಿಲ್ಲದ ಸರೋವರಗಳನ್ನು ಅವರು ಹಾದುಹೋದರು, ಅವುಗಳ ಕೆಮ್ಮಣ್ಣು ಕಂದು ನೀರಿನಲ್ಲಿ ಶಾಂತವಾದ ನೀಲಿಯ ಆಕಾಶವು ಮಾರ್ಪೊಳೆದದ್ದರ ಪರಿಣಾಮವಾಗಿ ಒಂದು ಸೊಗಸಾದ ವೈಡೂರ್ಯದ ಬಣ್ಣ ಕಂಡುಬರುತ್ತಿತ್ತು. ಸರೋವರಗಳು ಮುಳ್ಳು ಗಿಡಗಂಟೆಗಳ ಬುಡಗಳ ಸುತ್ತಲೂ ಆವರಿಸಿಕೊಂಡು ಹಿಂದಕ್ಕೆ ದಬಾಯಿಸಿಕೊಂಡು ಬರುತ್ತಿದ್ದುದರಿಂದ, ಬೆಳೆಗಳಿಗೆ ನೀರು

ಬಳಸುಹಾಕಿ, ಹಳ್ಳಿಯ ಹೆಂಗಸರು ಸರ್ಕಾರದ ಸಹಾಯದಿಂದ ಹೊಲಿಗೆ ಯಂತ್ರಗಳನ್ನು ಪಡೆಯುವುದಕ್ಕಾಗಿ ಹೇಗೆ ಒಟ್ಟುಗೂಡಿದ್ದರು ಎಂಬುದನ್ನು ತೋರಿಸಿದ ; ಅವರು ಕಷ್ಟಪಟ್ಟು ಕೆಲಸ ಮಾಡಿದರೆ ಕೆಲವು ವರ್ಷಗಳಲ್ಲಿಯೆ ತಾವು ಪಡೆದದ್ದನ್ನು ಹಿಂದಿರುಗಿಸಲು ಸಮರ್ಥರಾಗುವರು. "ಆ ಬಳಿಕ, ಅವರು ತಮ್ಮ ಸ್ವಂತ ಹೊಲಿಗೆ ಯಂತ್ರಗಳನ್ನು ಇಟ್ಟುಕೊಂಡಿರುವರು !" ಎಂದು ಹೇಳಿದ ಆತ. ಇಲ್ಲಿ ಮಗ್ಗಗಳಿದ್ದ ಒಂದೆರಡು ಕೊಠಡಿಗಳಿದ್ದುವು; ಅವುಗಳಲ್ಲಿ ಇತರ ಹೆಂಗಸರು ಬಟ್ಟೆ ಮಾಡುತ್ತಿದ್ದರು ಮತ್ತು ಅವರು ಬಣ್ಣಗಳಲ್ಲಿ ಅದ್ದಿದ ಮರದ ಅಚ್ಚುಗಳಿಂದ ಬಟ್ಟೆಯ ಮೇಲೆ ಚಿತ್ರದ ನಮೂನೆಗಳನ್ನು ಒತ್ತುತ್ತಿದ್ದರು. ಅಲ್ಲಿ ಇನ್ನೊಂದೆಡೆ ಅವರು ಬಂಬುಗಳಿಂದೆ ಪೆನ್ಸಿಲುಗಳನ್ನು ಮಾಡುತ್ತಿದ್ದರು. ತರುಣ ಹೇಳಿದ, "ಎಷ್ಟು ಜಾಗ್ರತೆ ! ಹೆಂಗಸರು–ಅಡಿಗೆ ಮಾಡುವ ಹಾಗೆ–ಜೇಡಿ ಮಣ್ಣು ಮತ್ತು ಗ್ರ್ಯಾಫೈಟು ಪುಡಿ (ಬರೆಯುವ ಸೀಸದ ಪುಡಿ)ಯಿಂದ ಸೀಸದ ಕಡ್ಡಿಯ ಒಳಭಾಗಗಳನ್ನು ಮಾಡುತ್ತಾರೆ, ಗಂಡಸರು ಹೊರ ಭಾಗಗಳನ್ನು ಮಾಡುತ್ತಾರೆ. ಅರಣ್ಯ ವಿಚಾರ ಸಂಶೋಧನ ಸಂಸ್ಥೆಯವರು (ಫಾರೆಸ್ಟ್ರಿ ರಿಸರ್ಚ್ ಇನ್ಸ್ಟಿಟ್ಯೂಟ್) ಇದನ್ನು ತೊರಿಸಿಕೊಟ್ಟರು–ಅಷ್ಟು ದೂರದಲ್ಲಿ, ಡೆಹರಾಡೂನಿನಲ್ಲಿ ಇರುವವರು ಇಲ್ಲಿನ ಬಡಜನರ ವಿಚಾರ ಕುರಿತು ಯೋಚಿಸುತ್ತಾರೆ !"

ಸ್ವಲ್ಪ ದೊಡ್ಡದಾದ ಈ ಗುಡಿಸಿಲೆ ಪಂಚಾಯಿತಿ ಕಟ್ಟಡ. "ಹಳ್ಳಿಯ ಸಭೆ ಸೇರುತ್ತದೆ ಇಲ್ಲಿ ; ಎಲ್ಲವೂ ಅವರ ಸ್ವಾಧೀನದಲ್ಲೆ ; ನಾವು ಬರೀ ಸಲಹೆ ಕೊಡುತ್ತೇವೆ, ನೆರವು ನೀಡುತ್ತೇವೆ, ಮುಂದಕ್ಕೆ ಬಿಡುತ್ತೇವೆ ! ನೆಲಹೊಲ ನೋಡಿಕೊಳ್ಳುವವರು ಅವರು. ಹೊಲಗದ್ದೆಗಳಿಗೆಂದು ನಾವು ತರಿಸುವ ಗೊಬ್ಬರಗಳನ್ನು ಹಂಚುತ್ತಾರೆ," ಇಲ್ಲಿಯೇ ಒಂದು ಕೋಳಿ ಸಾಕಣೆ ಕೇಂದ್ರ ಇತ್ತು ; ಹಳ್ಳಿಯ ಕೋಳಿಗಳ ತಳಿಯನ್ನು ಉತ್ತಮಗೊಳಿಸಿ, ಅವು ಇನ್ನೂ ದಪ್ಪನೆಯ ಮೊಟ್ಟೆಗಳನ್ನು ಇಕ್ಕುವಂತೆ ಮಾಡಲು ರೋಡ್ ದ್ವೀಪದ (Rhode Islands) ಹಾಗೂ ಲೆಗ್‌ಹಾರ್ನಿನ ಜಾತಿಯ ಕೋಳಿ (Leghorns) ಇಲ್ಲಿದ್ದುವು. ಯೂನಿಯನ್ ಹೆಲ್ತ್ ಸೆಂಟರಿನಲ್ಲಿ (ಒಕ್ಕೂಟ ಆರೋಗ್ಯ ಕೇಂದ್ರ) ಜೂಡಿಯ ತಂದೆ ಬಹುಹೆಚ್ಚಿನ ಆಸಕ್ತಿ ತೋರಿದರು ; ಅದರ ಮೇಲ್ವಿಚಾರಣೆಯಲ್ಲಿ ಹದಿನೈದು ಹಳ್ಳಿಗಳಿದ್ದುವು ; ಹಳ್ಳಿಯವರು ಖಾಯಿಲೆ ಬಿದ್ದಾಗ ಅವರಿಗೆ ಉಚಿತವಾಗಿ ಚಿಕಿತ್ಸೆ ನಡಸುತ್ತಿತ್ತು, ಆರೋಗ್ಯವಾಗಿರಲು ಏನು ಮಾಡಬೇಕು ಎಂಬುದನ್ನು ಅವರಿಗೆ ತೋರಿಸಿಕೊಡುತ್ತಿತ್ತು ; ಅಲ್ಲದೆ ಆತ ಬೇಕಾದಷ್ಟು ಪ್ರಶ್ನೆಗಳನ್ನೂ ಹಾಕಿದರು. ಇಲ್ಲೊಂದು ಕುಟುಂಬ ಇತ್ತು, ಗ್ರಾಮದ ಸಹಕಾರ ಸಂಸ್ಥೆಯ

ಮೇಲ್ಭಾಗವುಳ್ಳ ಪೆಟ್ಟಿಗೆಯಂತಿದ್ದು ಅದರೊಳಗೆ ಜನ ಕುಳಿತುಕೊಳ್ಳಬಹುದಾಗಿತ್ತು; ಕೆಲವು ವೇಳೆ ಹಿಂದುಗಡೆ ಪರದೆಗಳಿರುತ್ತಿದ್ದುವು, ಅಲ್ಲದೆ ಗಾಡಿಯ ಮೇಲೆ ದೇವರುಗಳ ಮಹಲುಗಳ ಸರೋವರಗಳ ಬಲು ಅಂದವಾದ ಚಿಕ್ಕ ಬಣ್ಣದ ಚಿತ್ರಗಳು ಬರೆದಿರುತ್ತಿದ್ದುವು ; ಗೆಜ್ಜೆಕಟ್ಟಿ ಗರಿಯ ತುರಾಯಿಗಳಿಂದ ಮೆರೆಯುವ ಕುದುರೆ ಉಲ್ಲಾಸದಿಂದ ಕುಲುಕೋತ ಓಡುತ್ತ ಸಾಗುವುದು.

ಅವರು ಹೆದ್ದಾರಿಯಿಂದ ಹೆಚ್ಚು ಚಿಕ್ಕದಾದ ಒಂದು ದಾರಿಗೆ ತಿರುಗಿಕೊಂಡರು ; ಅದು ಹಲವು ಕಡೆ ಮಳೆಯ ಪ್ರವಾಹದಿಂದ ತಿಂದುಹೋಗಿತ್ತು, ಆದ್ದರಿಂದ ಸರಿಪಡಿಸುತ್ತಿದ್ದ ತುಂಡು ಜಾಗಗಳ ಮೇಲೆ ಅವರು ಎಚ್ಚರಿಕೆಯಿಂದ ಹೋಗಬೇಕಾಗಿತ್ತು. ಅವರು ತಿಂಡಿಗೋಸ್ಕರ ತಂಗಿದಾಗ, ಕೆಲವು ಕಪಿಗಳು ಬಂದು ಅವರ ಸ್ಯಾಂಡ್ವಿಚ್ಚುಗಳನ್ನು ಮುಗಿಸಿ ಬಿಟ್ಟುವು. ಜಾನನಿಗೆ ಮರಳಿ ಕಳಿಸಿಕೊಡುವುದಕ್ಕೆಂದು ಜೂಡಿ ಅವುಗಳ ಫೋಟೋ ಒಂದನ್ನು ತೆಗೆದುಕೊಂಡಳು; ಹಾಗಿದ್ದರೂ, ಅವು ಪಲ್ಯವನ್ನೆ ತಿಂದಿದ್ದರೆ ಚೆನ್ನಾಗಿತ್ತು ಎಂದು ಕೊಂಡಳು. ಅವಳು ಏನೇ ಹೇಳಲಿ, ಜೂಡಿಗೆ ಸ್ಯಾಂಡ್ವಿಚ್ಚುಗಳನ್ನು ಕಂಡರೇ ಹೆಚ್ಚು ಇಷ್ಟು ಎಂದು ಅವಳ ತಾಯಿಯ ಎಣಿಕೆಯಿದ್ದಂತೆ ಕಂಡಿತು. ಆ ಬಳಿಕ, ಹೀಗಿದ್ದ ಒಂದು ಹೆಸರು ಹಲಗೆಯನ್ನು ಅವರು ಕಂಡರು : **ಎನ್.ಇ.ಎಸ್. ಡೆವೆಲೊಪ್‌ಮೆಂಟ್ ಏರಿಯಾ** (ರಾಷ್ಟ್ರೀಯ ವಿಸ್ತರಣ ಸೇವಾಕಾರ್ಯದ ಅಭಿವೃದ್ಧಿ ಕ್ಷೇತ್ರ).

ಇಷ್ಟೇ ಅಲ್ಲದೆ, ಅಲ್ಲಿ ಇನ್ನೂ ಬೇಕಾದಷ್ಟು ಹೆಸರುಹಲಗೆಗಳಿದ್ದುವು ; ನೋಡಿದರೆ ಯಾವುದೋ ಕಟ್ಟಡ ಕೆಲಸ ನಡೆಯುತ್ತಿದ್ದ ಹಾಗೆ ಕಂಡಿತು ; ಸಮಾಜ ಕೇಂದ್ರ' (ಸೋಷಿಯಲ್ ಸೆಂಟರ್) ಎಂದು ಕರೆಯುತ್ತಿದ್ದ ಒಂದು ದೊಡ್ಡ ಗರಿಹೊದೆಸಿದ್ದ ಗುಡಿಸಲು ಅಲ್ಲಿತ್ತು ; ಪಯಿರಿನ ಬೆಳೆಯೋ ಇಲ್ಲವೆ ದಪ್ಪನಾಗಿ ಕಾಣುತ್ತಿದ್ದ ಕಬ್ಬಿನ ಬೆಳೆಯೋ ಇದ್ದ ಜಮೀನು ತಾಕುಗಳ ಮೇಲೆ ಕೆಲವು ಹೆಸರಿನ ಫಲಕಗಳಿದ್ದುವು. ವಿಶ್ರಾಂತಿಮಂದಿರದ ಕಡೆಗೆ ತೋರುತ್ತಿದ್ದ ಕೈಮರ ಒಂದಿತ್ತು ; ಅವರು ಅಲ್ಲಿಗೆ ಹೋಗಿ, ತಮ್ಮ ಸಾಮಾನುಗಳನ್ನೆಲ್ಲ ಅಲ್ಲಿ ಬಿಟ್ಟರು. ಅಲ್ಲಿ ಅವರಿಗಾಗಿ ಕಾದುಕೊಂಡಿದ್ದ ಒಬ್ಬ ಯುವಕನಿದ್ದ, ಭಾವಪರವಶನಾದ ಯುವಕ; ತಾನು ಮಾಡುತ್ತಿದ್ದುದರಲ್ಲಿ, ಮತ್ತು ಅದನ್ನು ಅವರಿಗೆ ವಿವರಿಸಿ ತಿಳಿಸುವುದರಲ್ಲಿ ಅವನಿಗೆ ಎಷ್ಟು ಆಸಕ್ತಿಯಿತ್ತು ಎಂದರೆ, ಕೆಲವು ವೇಳೆ ಇಂಗ್ಲಿಷು ಪದಗಳನ್ನ ಜ್ಞಾಪಿಸಿಕೊಳ್ಳಲಾರದೆ, ತಾಳ್ಮೆಗೆಟ್ಟು ಕೈಕೈ ಹೊಡೆದುಕೊಳ್ಳುತ್ತಿದ್ದ. ಅವನ ಬಳಿ ಒಂದು 'ಜೀಪ್' ಕಾರು ಇತ್ತು ; ಅದರಲ್ಲಿ ಅವರೊಂದಿಗೆ ಭರ್ರನೆ ಒಂದು

ಕಾಲುಗುರಿನಿಂದ ಹಸಿಯ ಗಡ್ಡೆಬೇರುಗಳನ್ನು ಹಿಡಿದುಕೊಂಡು ಕೊಂಬೆಗಳ ಮೇಲೆ ನಡೆದಾಡುತ್ತಿದ್ದುವು. ಅವು ಅವಳನ್ನು ಗಮನಿಸಲೂ ಇಲ್ಲ ; ಬಹುಶಃ, ಅವಳುಸೊಳ್ಳೆಯ ಪರದೆಯ ಒಳಗಡೆ ಇದ್ದದ್ದರಿಂದ, ಅವಳು ಒಂದು ಪಂಜರದಲ್ಲಿ ಇದಾಳೆ ಎಂದು ಭಾವಿಸಿದುವೊ ಏನೊ.

ಅವರು ಬೆಳಗಿನ ಉಪಾಹಾರವನ್ನು ಮುಗಿಸುವುದಕ್ಕೆ ಮುನ್ನವೆ ಆ ತರುಣ ಜೀಪಿನೊಂದಿಗೆ ಹಾಜರಾದ. ಕುಲುಕಿಸಿ ಎತ್ತಿಹಾಕುವ ರಸ್ತೆಯಲ್ಲಿ ಅವರು ಸರ್‍ರನೆ ಹೋದರು. ಒಂದು ಕೈಮರದ ಬಳಿ ತಿರುಗಿ, "ಇಲ್ಲೆ !" ಎಂದ ಆತ. ಕೈಮರದ ಮೇಲೆ, "ಪೊನ್ನೇರಿ" ಎಂದಿತ್ತು.

"ಹೋ, ನೋಡಲ್ಲಿ" ಎಂದು ಜೂಡಿ ಹೆಚ್ಚುಕಡಮೆ ಚೀರಿಬಿಟ್ಟಳು. "ಲಕ್ಷ್ಮಿಯ ಹಳ್ಳಿಯ ಹೆಸರು ಅದು, ಅದೇ, ಅದೇ !"

"ಆದರೆ, ನನ್ನಮ್ಮಾ, ಪೊನ್ನೇರಿ ಅಂತ ಹೆಸರು ಇರುವ ಹಳ್ಳಿಗಳು ಬೇಕಾದಷ್ಟು ಇರಬಹುದು."

"ಆದರೆ ಅದೇ ಎಂದು ನನಗೆ ಗೊತ್ತು !" ಎಂದು ಜೂಡಿ ಹೆಚ್ಚು ಕಡಮೆ ಅಳುವುದಕ್ಕೇ ಮೊದಲಿಟ್ಟಳು, ಅಷ್ಟು ಉದ್ರೇಕಗೊಂಡಿದ್ದಳು ಅವಳು. "ಅದು ಆಗಿಯೇ ತೀರಬೇಕು !" ಇನ್ನೂ ಚೆನ್ನಾಗಿ ನೋಡಲೆಂದು ಅವಳು ಮೇಲಕ್ಕೆ ನೆಗೆದೆದ್ದು, ಢಮಾರೆಂದು ಜೀಪಿಗೆ ತಲೆ ಹೊಡೆದುಕೊಂಡಳು ; ಅದು ಒಂದು ಕಲ್ಲ ಮೇಲೆ ನೆಗೆದಿತ್ತು ; ಆಗಲೀಗ ಅವಳು ನಿಜವಾಗಿಯೂ ಅಳತೊಡಗಿದಳು.

ಅವಳ ತಾಯಿ ತುಸ ರೇಗಿದರು. "ಕುಳಿತುಕೊ, ಜೂಡಿ ತಿಳಿಗೇಡಿಯ ಹಾಗೆ ಆಡಬೇಡ," ಎಂದರು ಅವರು. ಆದರೆ, ಹಾಗಿದ್ದರೂ ಕೂಡ, ಅವರು ಮುಂದಕ್ಕೆ ಬಾಗಿ, ಆ ತರುಣನನ್ನು ಕೇಳಿದರು : "ನೀರಾವರಿ ಕಾರ್ಯದ ಮೇಲ್ವಿಚಾರಣೆ ನೋಡಿಕೊಳ್ಳುವ ಇಂಜಿನಿಯರುಗಳು ನಿಮ್ಮ ಬಳಿ ಇದಾರೆಯೆ ?"

ಆ ತರುಣ ಹೇಳಿದ : "ಹೌದು, ಇದಾರೆ, ಒಳ್ಳೆಯ ಇಂಜಿನಿಯರುಗಳು. ನೋಡಿ, ಇದೇ ಹೊಸನಾಲೆ, ಅದು ಪ್ರವಾಹ ಉಕ್ಕುವುದನ್ನು ತಡೆ ಗಟ್ಟುತ್ತದೆ...." ಎಂದು ಅದರ ವಿಚಾರವಾಗಿ ಬೇಕಾದಷ್ಟು ಅಂಕಿಗಳನ್ನು ಕಕ್ಕಿಬಿಟ್ಟ, ಆದರೆ ಒಬ್ಬ ಇಂಜಿನಿಯರ ಹೆಸರನ್ನೂ ಹೇಳಿಲಿಲ್ಲ.

ಹೊಸ ನಾಲೆ ಮಣ್ಣುಗೂಡಿ ಕಂದು ಬಣ್ಣವಾಗಿತ್ತು ; ಹಾಗಿದ್ದರೂ ಕೂಡ ಅದರ ಮಂಡಿಯಾಳದ ನೀರಿನಲ್ಲಿ ಹೆಂಗಸರೂ ಹುಡುಗಿಯರೂ ಬಟ್ಟೆ ಒಗೆಯುತ್ತಿದ್ದರು, ಹಿತ್ತಾಳೆಯ ಬಿಂದಿಗೆಗಳನ್ನು ಬೆಳಗಿಕೊಳ್ಳುತ್ತಿದ್ದರು. ಜೂಡಿ ತನ್ನ ತಾಯಿಗೆ ಜೋತು ಬಿದ್ದಳು. "ಓ, ನೋಡು, ಓ ನೋಡು, ಅಲ್ಲಿ ಸರಸ್ವತಿ ಇದಾಳೆ !"

ಕಾರ್ಯದ ಒಂದು ಭಾಗವಾಗಿ, ತಾಳೆಯಗರಿಯ ಪೆಟ್ಟಿಗೆಳಿಂದ ಸಂಸ್ಥೆಯ ಚಾಪೆ ಹೆಣೆಯುತ್ತ. ಅಲ್ಲಿ ಅವರು ಆಟದ ಸಾಮಾನುಗಳನ್ನು ಮಾಡುತ್ತಿದ್ದರು. ಬಹಳ ಒಳ್ಳೆಯವೇನಲ್ಲ, ಆದರೂ ಕೆಲವು ಆಣೆಗಳಿಗೆ ಬಿಕರಿಯಾಗಿ, ಲಾಭವನ್ನು ತರುತ್ತಿದ್ದುವು. ಆ ಯುವಕ ಹೇಳಿದ, "ಅಲ್ಲಿ ನೋಡಿ ! ಎಲೆಕ್ಟ್ರಿಕ್ ತಂತಿಗಳು ಇಷ್ಟು ಹತ್ತಿರ ಹಾದುಹೋಗಿವೆ, ಆದರೂ ಇಂದು ಒಂದು ಎಲೆಕ್ಟ್ರಿಕ್ ದೀಪದ ಬಲ್ಬು ಹಾಕಿಕೊಳ್ಳಲು ಅವರಿಗೆ ಚೈತನ್ಯವಿಲ್ಲ. ಆದರೆ, ಇನ್ನೇನು ಬೇಗನೆಯೇ ಅವರು ಉಳಿತಾಯ ಮಾಡಿರುತ್ತಾರೆ ! ಮೊದಲನೆಯ ದೀಪವನ್ನು ಸಮಾಜ ಕೇಂದ್ರದಲ್ಲಿ ಹಾಕಿಸಿಕೊಳ್ಳುತ್ತೇವೆ. ಹೌದು, ಹಳ್ಳಿಗಳಲ್ಲಿ ಇವು ಹಲವು ಇವೆ. ಅವರಿಗೆ ಓದು ಕಲಿಸಲು, ಒದುಬರಹದ ತರಗತಿಗಳನ್ನು ಏರ್ಪಡಿಸಿದ್ದೇವೆ. ಒಂದು ಸಂಜೆ ದೊಡ್ಡ ಮನುಷ್ಯರು ಕಲಿಸುತ್ತಾರೆ. ಹೆಂಗಸರು ಇನ್ನೊಂದು ಸಂಜೆ ; ಹಗಲು ಹೊತ್ತಿನಲ್ಲೂ ಉಂಟು. ಮಕ್ಕಳಿಗೂ ಶಾಲೆ ಇದೆ !"

ಯಾರೋ ಒಬ್ಬರು ಬಂದು, ಆತನನ್ನು ತಮಿಳಿನಲ್ಲಿ ಮಾತನಾಡಿಸಿದರು. ಆತ ಒಂದು ಉತ್ತರವನ್ನು ಒದರಿದ. ಆತ ಹೇಳಿದ, "ಯಾವಾಗಲೂ ಅವರು ಅದು ಇದು ನನ್ನನ್ನ ಕೇಳುತ್ತಲೇ ಇರುತ್ತಾರೆ. ಸಹಾಯಕರು ನಾವು ಸಾಕಷ್ಟು ಮಂದಿ ಇಲ್ಲ. ಆದರೆ ಹೆಚ್ಚು ಹೆಚ್ಚಾಗಿ ಬರುತ್ತಲೆ ಇರುತ್ತಾರೆ. ಇರಲಿ, ಗಿಡ ನಡುವ ಕಾರ್ಯಕ್ರಮ–ನೋಡಿ, ಎಳೆಯ ಗಿಡಗಳನ್ನ !"

ಇವು ಗರಿಬೆಳೆದಂತೆ ಕಾಣುವ ಕ್ಯಾಸರೀನ (ಸರ್ವೆ) ಮರಗಳು, ಸ್ವಲ್ಪವೂ ಶೈತ್ಯವಿಲ್ಲದ ಉಷ್ಣ ಪ್ರದೇಶಗಳಲ್ಲಿ ಬೆಳೆಯುವ ಆಸ್ಟ್ರೇಲಿಯದ ಮರಗಳು ; ಇವನ್ನು ಬೆಳೆದುಕೊಂಡರೆ, ಜನ ಬೆರಣಿಗಳಿಗೆ ಬದಲಾಗಿ ಈ ಮರದ ಸೌದೆ ಉಪಯೋಗಿಸಿಕೊಂಡು, ಹಸುವಿನ ಸಗಣಿಯನ್ನು ಹೊಲಗದ್ದೆಗಳನ್ನು ಫಲವತ್ತಾಗಿ ಮಾಡಲು ಗೊಬ್ಬರಕ್ಕಾಗಿ ಇಟ್ಟುಕೊಳ್ಳಬಹುದು.

ಕತ್ತಲೆಯಾಗುವವರೆಗೂ ಅವರನ್ನು ಸುತ್ತ ಕರೆದೊಯ್ಯುವುದನ್ನು ಆತ ನಿಲ್ಲಿಸಲೇ ಇಲ್ಲ ; ಪ್ರವಾಹ ತಡೆಗಟ್ಟುವ ವ್ಯವಸ್ಥೆಯನ್ನು ತೋರಿಸಲು ಮಾರನೆಯ ಬೆಳಗ್ಗೆ ಏಳು ಗಂಟೆಯ ಹೊತ್ತಿಗೆ ತಾನು ಅಲ್ಲಿ ಇರುವುದಾಗಿ ಆತ ತಿಳಿಸಿದ.

"ಎಂಟು ಗಂಟೆ" ಎಂದರು ಜೂಡಿಯ ತಾಯಿ ; ಆಮೇಲೆ, ಆತ ನಿರಾಶೆಗೊಂಡಂತೆ ಕಂಡಾಗ, "ಒಳ್ಳೆಯದು, ಏಳೂವರೆ !" ಎಂದರು.

ಇರುಳಿನ ಸದ್ದು ಗದ್ದಲಗಳನ್ನು ಕೇಳುತ್ತ ಆ ವಿಶ್ರಾಂತಿ ಮಂದಿರದಲ್ಲಿ ಇರುವುದು ವಿನೋದವೆನಿಸಿತ್ತು ; ಜೂಡಿ ಎಚ್ಚರಗೊಂಡಾಗ, ಕಿಟಕಿಯ ಹೊರಗಡೆ ತುಸ ಆಚೆ ಸಣ್ಣ ಗಿಳಿಗಳು ಕಾದಾಡುತ್ತ ಹಾರಾಡುತ್ತಿದ್ದುವು ; ಒಂದು

ಕಡೆ ತಿರುಗಿ ನೋಡಿ, ತುಟಿಯ ಮೇಲೆ ಬೆರಳಿಟ್ಟಳು. ಅವಳ ತಂದೆ ಆ ತರುಣನನ್ನು ಹಿಡಿದುಕೊಂಡರು. ಬಹಳ ನಿಧಾನವಾಗಿ ಜೂಡಿ ಹತ್ತಿರ ಹತ್ತಿರಕ್ಕೆ ಹೋದಳು.

"ನಿನಗೆ ಖಂಡಿತವಾಗಿದೆಯೋ ? ನಿಜವಾಗಿಯೂ ನಿನಗೆ ಖಂಡಿತವಾಗಿದೆಯೋ ? ಜಿಗುಟಬೇಡ ಕಣ್ಣಮ್ಮಾ !" ಎಂದರು ಅವಳ ತಾಯಿ. ಏಕೆಂದರೆ, ನಾಲೆಯ ಅರುಗಿನಲ್ಲಿ ತಮ್ಮ ಬಿಂದಿಗೆಗಳನ್ನು ಮರಳನಿಂದ ತಿಕ್ಕಿಕೊಳ್ಳುತ್ತ ಹಾಡಿಕೊಳ್ಳುತ್ತಿದ್ದ ಹುಡುಗಿಯರ ನಡುವೆ ಅವರೇ ಸರಸ್ವತಿಯ ಗುರುತನ್ನು ಹಿಡಿಯಲಾರದೆಹೋದರು ! ಅವರೆಲ್ಲ ತುಂಬ ಗೆಲವಾಗಿದ್ದರು, ಆದರೆ ಹರುಕು ಪರುಕಾಗಿದ್ದಹಳೆಯ ಲಂಗಗಳನ್ನೂ ಕುಪ್ಪಸಗಳನ್ನೂ ತೊಟ್ಟ ಅವರು ಹೆಚ್ಚು ಕಡಮೆ ಒಂದೇ ತೆರನಾಗಿದ್ದರು.

"ನಿಜವಾಗಿ ನನಗೆ ಖಂಡಿತವಾಗಿದೆ– ಓ, ನಿಲ್ಲಿಸಿ, ನಿಲ್ಲಿಸಿ !" ಜೂಡಿ ಹೆಚ್ಚು ಕಡಮೆ ಚೀರಿಬಿಟ್ಟಳು. ಆದರೆ ಅವಳ ತಂದೆ ಆ ಜೀಪಿನ ತರುಣನನ್ನು ನಿಧಾನವಾಗಿ ಹೋಗುವಂತೆ ಮಾಡುವ ಹೊತ್ತಿಗೆ, ಅವರೆಲ್ಲ ಕಾಲು ಮೈಲಿ ಮುಂದಕ್ಕೆ ಹೋಗಿಬಿಟ್ಟಿದ್ದರು. "ನಾನು ಹಿಂದಕ್ಕೆ ಹೋಗಬೇಕು" ಎಂದಳು ಜೂಡಿ ; ಅವಳಿಗ ಲಕ್ಷ್ಮಿಯ ವಿಚಾರ ತಿಳಿಯುವವಳಾಗಿದ್ದರಿಂದ, ಅವಳ ಧ್ವನಿ ಸ್ವಲ್ಪ ನಡುಗುತ್ತಿತ್ತು.

ಅವರು ನಿಂತ ಕಡೆ, ಕೆಲವು ಗುಡಿಸಿಲುಗಳೂ ಕೆಲವು ನೆರಳು ಕೊಡುವ ಮರಗಳೂ ಇದ್ದುವು ; ಅವುಗಳ ನಡುವೆ, ವಕ್ರ ವಕ್ರವಾದ ಭಾರಿ ತಾಳುಳ್ಳ ದೊಡ್ಡ ಅರಳಿಯ ಮರ ಇತ್ತು. ಅದರ ಮಧ್ಯದಲ್ಲಿ ಒಂದು ಸಣ್ಣ ಗುಡಿ ಇತ್ತು. ಅದರ ಭಾರಿ ಕೊಂಬೆಗಳಲ್ಲಿ ಒಂದರ ಅಡಿಯಲ್ಲಿ ಒಂದು ಹೊಸದಾಗಿ ಕಾಣುವ ಗರಿ ಹೊದೆಸಿದ ಗುಡಿಸಿಲಿತ್ತು. "ಪೊನ್ನೇರಿ ಕ್ಷೇತ್ರದ ಸಮಾಜ ಸೇವಾ ಕೇಂದ್ರ ಇರುವುದು ಇಲ್ಲೆ. ಅದೊ ನೋಡಿ, ಹೆಂಗಸರ ಅಕ್ಷರ ವಿದ್ಯಾಭ್ಯಾಸದ ತರಗತಿ" ಎಂದು ಆ ತರುಣ ತಿಳಿಸಿದ.

"ಹಾಗೆಯೇ ಸ್ವಲ್ಪ ಇಣಿಕಿ ನೋಡಿ, ಆಮೇಲೆ ಹಿಂದಕ್ಕೆ ಹೋಗೋಣ," ಎಂದರು ಜೂಡಿಯ ತಾಯಿ.

ಜೂಡಿ ವಿಪರೀತ ಭಾವಾವೇಶಗೊಂಡಿದ್ದಳು, ತಾನು ಏನು ಮಾಡುತ್ತಿದ್ದೇನೆ ಎಂಬುದನ್ನರಿಯದೆ, ಕೆಲವು ಹೆಜ್ಜೆ ಓಡಿ ಹೋಗುತ್ತಿದ್ದಳು, ಬಳಿಕ ನಿಂತು ಬಿಡುತ್ತಿದ್ದಳು ; ಈಗ ಸಮಾಜ ಸೇವಾ ಕೇಂದ್ರದ ತೆರೆದ ಬಾಗಿಲ ಕಡೆಗೆ ಅವಳು ಧಾವಿಸಿದಳು.

ತಗ್ಗಾದ ಧ್ವನಿಯ ಗುಜಗುಜು ನುಡಿಗಳು ಹೊರಕ್ಕೆ ಕೇಳಿಬರುತ್ತಿದ್ದುವು. ಇದ್ದಕ್ಕಿದ್ದ ಹಾಗೆ ಅವಳು ನಿಶ್ಚಲಳಾಗಿ ನಿಂತುಬಿಟ್ಟಳು; ತನ್ನ ತಂದೆ ತಾಯಿಯ

ಸಾಲುಗಳನ್ನು ಓದಬಲ್ಲವಳಾಗಿದ್ದಳು, ಸುಲಭವಾದ ಪುಸ್ತಕಗಳನ್ನು ಸರಸರನೆ ಓದುತ್ತಿದ್ದಳು. ಅವಳು ಶಾಲೆಗೆ, ಕಾಲೇಜಿಗೂ ಸಹ, ಸರಿಯಾಗಿ ಹೋಗುವುದಕ್ಕೆ ಮಾತ್ರ ಸಾಧ್ಯವಾಗಿದ್ದರೆ ಅದೆಷ್ಟು ಚೆನ್ನಾಗಿರುತ್ತಿತ್ತು.....ಆದರೆ, ತಾನು ತರಗತಿಯನ್ನು ಒಡೆದರೆ ವಯಸ್ಸಾದ ಹೆಂಗಸರು ಮನನೊಂದುಕೊಳ್ಳುವರು ; ಅವರಲ್ಲಿ ಕೆಲವರನ್ನು ಬರಮಾಡಿಕೊಳ್ಳುವುದೇ ಸಾಕಷ್ಟು ಕಷ್ಟಕರವಾಗಿತ್ತು. ತಾನು ಇದ್ದುದಕ್ಕಿಂತ ಹೆಚ್ಚು ವಯಸ್ಸಾದವಳಂತೆ ಲಕ್ಷ್ಮಿ ನಟಿಸಿದ್ದಳು. ಆದರೆ ಸರಸ್ವತಿ ಅವಳ ನಿಜವಾದ ವಯಸ್ಸನ್ನು ಹೊರಕ್ಕೆ ಹಾಕಿಬಿಟ್ಟಿದ್ದಳು ; ಈಗ, ಕೆಲಸ ಸರಿಯಾಗಿ ಸಾಗದೆ ಇದ್ದಾಗ, ಅವಳಂತಹ ಎಳೆಯ ಮಗುವಿನ ಕೈಲಿ ತಾವು ಕಲಿಯುವುದಿಲ್ಲವೆಂದು ಮದುವೆಯಾದ ಹೆಂಗಸರಲ್ಲಿ ಕೆಲವರು ಗೊಣಗಿಕೊಂಡರು.

ಕೆಲವು ವೇಳೆ, ಪೂರ್ತಿ ಎಲ್ಲವನ್ನೂ ಅತ್ತ ಒಗೆದುಬಿಡಲೇ ಎಂದುಕೊಂಡಿದ್ದಳು ಅವಳು ; ಅವಳು ಮನೆಗೆ ಹಿಂದಿರುಗಿದಳು, ಅಲ್ಲಿ ಬೀಸಣಿಗೆ ಇರಲಿಲ್ಲ, ನಿಜವಾಗಿ ತಣ್ಣಗಿರುವ ನೀರಿರಲಿಲ್ಲ, ಒಂಟಿಯಾಗಿದ್ದು ಅಳೋಣವೆಂದು ಬಯಸಿದರೆ ಅದಕ್ಕೆ ಎಡೆಯಿರಲಿಲ್ಲ. ಅವಳ ತಂದೆಯೇನೋ ಜಲ ವರ್ಷದ ಸಕರಣೆಯನ್ನೂ ಕೆಲವು ಪರದೆಗಳನ್ನೂ ಜೋಡಿಸಲು ಶ್ರಮಪಟ್ಟಿದ್ದರು ; ಅಷ್ಟಕ್ಕೇ ಮುಗಿದಿತ್ತು. ಅವಳ ತಂದೆ ಇಲ್ಲದಿದ್ದರೆ, ಅವಳು ಅಲ್ಲಿ ಮುಂದುವರಿಯುವುದಕ್ಕೆ ಆಗುತ್ತಿರಲಿಲ್ಲ ಆದರೆ, ಅವರು ತಗಡಿನ ಚಾವಣಿಯ ತಮ್ಮ ಅನಿಷ್ಟದ ಚಿಕ್ಕಕಚೇರಿಯಿಂದ ಹಿಂದಿರುಗಿದಾಗ, ಇಲ್ಲವೆ ನೀರಾವರಿಯ ಯೋಜನೆಯಕೆಲಸದ ಕಡೆಯಿಂದಲೇ ಮಣ್ಣು ಮೆತ್ತಿಕೊಂಡು–ಇದೇ ಹೆಚ್ಚು ಸಂಭವ–ಹಿಂದಿರುಗಿದಾಗ, ಅವರನ್ನು ಉಲ್ಲಾಸಗೊಳಿಸುತ್ತಿದ್ದುದು ಅದೊಂದೇ. ಆಗ ಅವರು ತರಗತಿ ಹೇಗೆ ನಡೆಯಿತು ಎಂದು ಅವಳನ್ನು ಕೇಳುವರು, ಹೇಳಿದನ್ನು ಆಲಿಸುವರು, ಅವಳು ಮಾಡಬಹುದಾದ ಕಾರ್ಯಗಳ ಬಗೆಗೆ ಸಲಹೆ ಸೂಚನೆ ಕೊಡುವರು. ಹೆಂಗಸರೇನೋ ಮೊದಲು ಅವಳ ತಾಯಿಯ ಬಳಿಗೇ ಬಂದರು. ತಮಗೆ ಅವರು ಪಾಠ ಹೇಳಿಕೊಡುವರೇ ಎಂದು ಕೇಳುವುದಕ್ಕೆ ; ಆದರೆ ಅವಳ ತಾಯಿ ತುಂಬ ಮನ ಕುಗ್ಗಿದ್ದರು ; ಹೇಗೇ ಆದರೂ, ತಾವು ಇಟ್ಟುಕೊಂಡಿದ್ದ ಮುದಿ ಆಳು ಇದ್ದು ಕೂಡ, ಗೃಹಕೃತ್ಯದ ಕೆಲಸವೇ ಅವರಿಗೆ ಅತಿ ಹೆಚ್ಚು ಎನಿಸಿತ್ತು. ಇಲ್ಲಿ ಅದೆಷ್ಟೊಂದು ವ್ಯತ್ಯಾಸ ಎಲ್ಲವೂ! ಅವಳ ತಾಯಿ ಎಂದೂ ಕೆಲಸ ಮಾಡಿದವರೇ ಅಲ್ಲ, ಯಾವಾಗಲೂ ಇತರರು ಆಕೆಯ ಸೇವೆಗೆ ಸಿದ್ಧ ; ಅವಳಿಗೆ ಈ ಪರಿಸ್ಥಿತಿಯನ್ನು ಸಹಿಸುವುದಾಗಲಿಲ್ಲ. ಹಳ್ಳಿಯ ಹುಡುಗಿಯರೊಂದಿಗೆ ಒಂದು ಸುತ್ತು ಹೋಗಿ ಬರುವುದೆಂದರೆ ಸರಸ್ವತಿಗೆ ಇಷ್ಟ ; ಆದರೆ ಅವಳ

# ೧೦. ಪೊನ್ನೇರಿಯಲ್ಲಿ ಲಕ್ಷ್ಮಿ

ಕಣ್ಣಿಗೆ ತಂಪಾಗಿಯೂ ಹಿತವಾಗಿಯೂ ಇದ್ದ, ಗುಡಿಸಿಲಿನ ನಯವಾದ ಮಣ್ಣಿನ ಗೋಡೆಗಳ ಮೇಲೆ ಕೆಲವು ಪ್ರಕಟನ ಪಟಗಳಿದ್ದುವು ; ಅವುಗಳಲ್ಲಿ ಚಿತ್ರಗಳೂ ಅಕ್ಷರಗಳೂ ಇದ್ದುವು. ಅಲ್ಲಿ ಬೆಂಚುಗಳಿರಲಿಲ್ಲ, ಬರಿಯ ನೆಲವಷ್ಟೆ ; ಒರಟಾಗಿ ಮಾಡಿದ ಕಪ್ಪು ಹಲಗೆಯೊಂದಿತ್ತು. ಪ್ರತಿಯೊಬ್ಬರೂ ನೋಡಲೆಂದು ಲಕ್ಷ್ಮಿ ಬಿಳಿಯ ಸೀಮೆ ಸುಣ್ಣದಿಂದ ಅಕ್ಷರಗಳನ್ನು ಇನ್ನೊಮ್ಮೆ ನಿಧಾನವಾಗಿ ಬರೆದಳು. ಅವಳು ಬಳಲಿದ್ದಳು, ಅವಳ ಮನಸ್ಸು ಕೆಲವು ಸಲ ಎಲ್ಲೋ ಅಲೆದಾಡುತ್ತಿತ್ತು ; ಅವಳ ಚಪ್ಪಲಿಯ ಪಟ್ಟಿ ಕಿತ್ತು ಹೋಗಿ, ಅದನ್ನು ಅಡ್ಡಾದಿಡ್ಡಿಯಾಗಿ ರಿಪೇರಿ ಮಾಡಿತ್ತು ; ಅದು ಅವಳ ಕಾಲ್ಬೆರಳುಗಳನ್ನು ಮುಜುಗರವಾಗುವಂತೆ ಉಜ್ಜುತ್ತಿತ್ತು. ಆದರೆ, ಶಿಕ್ಷಕಳೆನಿಸಿದ ತಾನು ಚಪ್ಪಲಿಗಳನ್ನು ಧರಿಸಬೇಕೆಂದು ಅವಳು ಭಾವಿಸಿದ್ದಳು; ಅವಳು ಹೆಚ್ಚು ವಯಸ್ಸಾದವಳ ಹಾಗೆ ಕಾಣುವಂತೆ ಮಾಡುತ್ತಿದ್ದುವು ಅವು. ಉಳಿದವರೆಲ್ಲರೂ ಬರಿಗಾಲಿನಲ್ಲಿದ್ದರು. ಅವಳ ಮುಂದುಗಡೆಯಲ್ಲಿ, ಹೆಚ್ಚು ವಯಸ್ಸಾಗಿದ್ದ ಕೆಲವು ಹೆಂಗಸರು ಅವಳು ಬರೆದಿದ್ದ ಅಕ್ಷರಗಳನ್ನು, ತಮ್ಮ ತುಟಿ ಅಲುಗಿಸುತ್ತ, ಮತ್ತೆ ಮತ್ತೆ ಪುನರುಚ್ಚಾರ ಮಡುತ್ತಿದ್ದರು. ಇಷ್ಟಾದರೂ ಅವರ ತಲೆಯಲ್ಲಿ ಏನೂ ಉಳಿಯುತ್ತಿರಲಿಲ್ಲ. ಇದೆಲ್ಲ ಬಹಳ ಅಪರಿಚಿತವಾದ ವಿಷಯವಾಗಿತ್ತು ಅವರಿಗೆ. ಮುಂದುವರಿಯ ಬಲ್ಲವರಾಗಿದ್ದ ಚಿಕ್ಕ ವಯಸ್ಸಿನವರಿಗೆ ಇದರಿಂದ ಕಷ್ಟವಾಗುತ್ತಿತ್ತು ; ಈ ಹೊಸ ಸಾಹಸವನ್ನು, ಎಂದರೆ ಓದಿ ಬರೆಯುವುದನ್ನು, ಮಾಡಬೇಕೆಂದು ಅವರಿಗೆ ಅದೆಷ್ಟೋ ಅಪೇಕ್ಷೆ. ವಯಸ್ಸಾದವರಿಗೂ ಅದನ್ನು ಮಾಡಬೇಕೆಂದೇ ಅಪೇಕ್ಷೆ. ಆದರೆ, ದೇವರುಗಳಿಂದ ಯಾವುದೋ ಒಂದು ವರ ಬಯಸಿದ ಹಾಗೆ ಬಹು ಅಸ್ಪಷ್ಟವಾಗಿತ್ತು ಅದು ; ವರ ಕೊಡದಿದ್ದರೆ, ಅದು ಯಾರ ತಪ್ಪೂ ಅಲ್ಲ, ಏನೂ ಮಾಡುವ ಹಾಗೂ ಇರಲಿಲ್ಲ. ಸರಿಯಾದ ರೀತಿಯಲ್ಲಿ ಪ್ರಯತ್ನ ಮಾಡುವುದು ಅವರಿಗೆ ಮೀರಿದ್ದಾಗಿತ್ತು.

ಲಕ್ಷ್ಮಿ ಯೋಚಿಸಿದಳು, ಹಾಗಾದರೆ ತಾನು ಎರಡು ತರಗತಿಗಳನ್ನು ಇಟ್ಟುಕೊಳ್ಳಬೇಕೆ ? ಮುಂದಿನ ಸಾಲಿನಲ್ಲಿ ವಲ್ಲಿ ಇದ್ದಳು, ಹಳ್ಳಿಯ ಕಲ್ಲು ಕೆಲಸದವನ ಮಗಳು, ತನಗಿಂತ ದೊಡ್ಡವಳೇನಲ್ಲ–ಆವಳಿಗೆ ಒಂದು ಅವಕಾಶ ದೊರೆತರೆ ಎಷ್ಟು ಚೆನ್ನಾಗಿರುತ್ತೆ ! ಈಗಾಗಲೇ ಅವಳು ಸುದ್ದಿ ಪತ್ರಿಕೆಗಳ ತಲೆ

ಕಾಣುವುದು ಎಂದರೇನು ! ನಾನು ಆ ಭಾವನೆಯನ್ನು ಜೂಡಿಯಿಂದ ತೊಲಗಿಸಬೇಕಾಯಿತು, ಎಂದು ಯೋಚಿಸಿದಳು ಲಕ್ಷ್ಮಿ. ನಾನು ಅವಳ ಮನ ನೋಯಿಸಬೇಕಾಯಿತು, ನೋವಿನಿಂದ ಅವಳು ಬೆಚ್ಚಿ ಬೀಳುವಂತೆ ಮಾಡಬೇಕಾಯಿತು. ಜೂಡಿ, ಮೆಲ್ಲೆದೆಯ ಜೂಡಿ. ನನ್ನ ಅಜ್ಜಿಯನ್ನು ಅವಳಿಗೆ ವಿರುದ್ಧವಾಗಿ ಎತ್ತಿಕಟ್ಟಬೇಕಾಯಿತು. ಹಾಗೆ ಮಾಡಿಸಿದ್ದು ನನ್ನ ನೋವು, ನನ್ನ ಮಾನ ! ನನ್ನ ನೊಂದ ಮಾನ.

ಈಗ ಅವಳು ಕಪ್ಪು ಹಲಗೆಯ ಮೇಲೆ ಭಾರತ ದೇಶದ ಭೂಪಟದ ಆಕೃತಿಯ ಹೊರ ರೇಖೆಯನ್ನು ಎಚ್ಚರಿಕೆಯಿಂದ ಬರೆಯತೊಡಗಿದಳು. ಅದನ್ನು ಅನೇಕ ಸಲ ಮಾಡಿದ್ದಳು ಅವಳು; ಆದರೆ, ಆ ರೇಖಿಸುವ ಕಾರ್ಯವನ್ನು, ಬಿಳಿಯ ಸೀವೆಯ ಸುಣ್ಣದಿಂದ ಅದು ಮೂಡಿ ಬರುವುದನ್ನು, ನೋಡುವುದೆಂದರೆ ತರಗತಿಗೆ ಇಷ್ಟ. ಅವಳು ನದಿಗಳನ್ನು ಗುರುತಿಸುತ್ತ ಹೋದಂತೆ, ಅವರು ಮೆಲ್ಲನೆ ಉಚ್ಚರಿಸುವುದು ಅವಳಿಗೆ ಕೇಳಿ ಬರುತ್ತಿತ್ತು : ಗಂಗಾ...ಕಾವೇರಿ.....ಗೋದಾವರಿ..... ತನ್ನ ಅಜ್ಜಿಯ ಬಳಿ ಹಸುಗಳು ಇನ್ನೂ ಇದ್ದುವೋ ?

ಆಮೇಲೆ ಕಾಗದ, ತನ್ನ ಅಜ್ಜಿ ಜೂಡಿಗೆ ವಿಳಾಸವನ್ನು ಕೊಟ್ಟಿರಬೇಕು. ಬೇರೆ ಯಾರು? ಎಷ್ಟು ಹೀನ ಸ್ಥಿತಿಯಲ್ಲಿ ತಾವು ಬಾಳು ನೂಕುತ್ತಿದ್ದೇವೆ ಎಂಬ ಸಂಗತಿ ಅವಳ ಅಜ್ಜಿಗೆ ತಿಳಿಯದು. ಅವಳ ತಂದೆ ತಮ್ಮ ತಾಯಿ ತಂದೆಗೆ ಏನೂ ಹೇಳರು, ಅಲ್ಲದೆ ಹೇಳ ಕೂಡದೆಂದು ತಮ್ಮ ಕುಟುಂಬದವರಿಗೂ ತಡೆ ಹಾಕಿದ್ದರು; ಒಳ್ಳೆಯ ವಿಚಾರಗಳನ್ನು ಮಾತ್ರ ಪ್ರಸ್ತಾಪಿಸುತ್ತ, ಅವರು ಉಲ್ಲಾಸ ಪೂರ್ಣ ಪತ್ರಗಳನ್ನೆ ಬರೆಯುತ್ತಿದ್ದರು. ನಾನು ಸತ್ತರೂ ಎಂದಿಗೂ ಹೇಳುವುದಿಲ್ಲ, ಎಂದು ಲಕ್ಷ್ಮಿ ಬಿಂಕದ ಕೊಂಕಿನಿಂದ ತನ್ನಲ್ಲಿಯೆ ಬಗೆದಳು ! ಆದರೆ, ನಾನು ಜೂಡಿಗೆ ಮರಳಿ ಬರೆದರೆ, ಸಂಗತಿಯನ್ನು ಮುಚ್ಚಿಡುವುದು ಕಷ್ಟ. ಹಾಗೆ ಮಾಡಿದರೆ, ಆಗ–ಆಗ ಅವಳು ಬಂದಾಳು, ಆ ಇಂಗ್ಲಿಷು ಪೋರಿಯಲ್ಲಿ, ಹಿಂದೆ ದಬ್ಬಾಳಿಕೆ ಮಾಡುತ್ತಿದ್ದ ಜನಕ್ಕೆ ಸೇರಿದವಳಲ್ಲಿ, ಬೇಡುವುದೇ ! ಇಲ್ಲ, ಇಲ್ಲ. ಕತ್ತಲೆಗವಿದ ಕರೆಯೊಳಕ್ಕೆ ಕಲ್ಲು ಬೀಳುವಂತೆ ಅವಳ ಬಾಳಿನಿಂದ ಹೊರಬೀಳುವುದೇ ಸರಿ.

ಅವಳು ಪಟ್ಟಣಗಳನ್ನು ಬರೆದಳು. ಮೊತ್ತ ಮೊದಲು ಪೊನ್ನೇರಿ–ಅದು ಮೊದಲು ಬಂದಿತೆಂದು ಅವರು ಬಲ್ಲರು, ಆದನ್ನು ಗಟ್ಟಿಯಾಗಿ ಹೇಳಿದರು. ಅನಂತರ ಮದರಾಸು. ಆಮೇಲೆ ಇತರ ನಗರಗಳು. ಅವರಲ್ಲಿ ಕೆಲವರು ಬಲ್ಲರು, ಬಹುಶಃ ಯಾರೋ ಅವರ ಚಿಕ್ಕಪ್ಪ ದೊಡ್ಡಪ್ಪನ್ನೊ ಇಲ್ಲವೆ ಅವರ

ತಾಯಿಗೆ ಸ್ನೇಹಿತರಿರಲಿಲ್ಲ. ಜೊತೆಗೆ, ತಾನೋ? ಹೌದು, ತನಗೇನೋ ಸ್ನೇಹಿತರು ಉಂಟು ಎಂದು ಅವಳು ಭಾವಿಸಿದಳು. ಓದುವುದರಲ್ಲೂ ನೃತ್ಯ ಮಾಡುವುದರಲ್ಲೂ ಗಟ್ಟಿಗಳಾಗಿದ್ದ ವಲ್ಲಿ ಒಬ್ಬಳು. ಇನ್ನೊಬ್ಬಳು ಇನ್ನೂ ಚಿಕ್ಕ ಹುಡುಗಿ, ಮೋಹಿನಿ ; ಪೊನ್ನೇರಿಗೆ ಪಶ್ಚಿಮಕ್ಕಿದ್ದ ಚಿಕ್ಕ ಹಳ್ಳಿಯ ಪಟೇಲ್ ಅವಳ ತಂದೆ. ಸಮಾಜ ಸೇವಾ ಕಾರ್ಯಕರ್ತರಲ್ಲಿ ಕೆಲವರಿಗೆ, ಅದರಲ್ಲೂ ಕಾಲೇಜಿಗೆ ಹೋಗಿ ಬಂದಿದ್ದ ಒಬ್ಬರಿಗಂತೂ, ಎಂದೂ ಹೆಚ್ಚು ಹೊತ್ತೇ ಇರುತ್ತಿರಲಿಲ್ಲ. ಆದರೆ ಜೂಡಿಯಂಥವರು ಯಾರೂ ಇಲ್ಲ–ಯಾರೂ ಇಲ್ಲ.

ಅವಳು ಬೆಚ್ಚಿಬಿದ್ದಳು ; ತನ್ನ ಕೆಲಸದ ಮೇಲೆ ಅವಳು ಸರಿಯಾಗಿ ಗಮನವನ್ನೇ ಕೊಡುತ್ತಿರಲಿಲ್ಲ. ನಿಧಾನವಾಗಿ ಅವಳು ಒಂದು ಪೂರ್ತಿ ಪದವನ್ನು ಬರೆದಳು ; ಅವರು ತಮ್ಮ ಕಣ್ಣುಗಳಿಂದ ಅವಳ ಸೀವೆಯ ಸುಣ್ಣವನ್ನೇ ಹಿಂಬಾಲಿಸುತ್ತಿದ್ದರು ; ಬಳಿಕ, ಒಬ್ಬರಾದ ಮೇಲೆ ಒಬ್ಬರು, ಅದನ್ನು ಹೇಳಿದರು. ಚುರುಕಾಗಿದ್ದವರನ್ನು ಅವಳು ಹೊಗಳಿದಳು. ಆ ಮೇಲೆ ಮತ್ತೆ ಅವಳು ಇನ್ನೊಂದೂ ಪದವನ್ನು ಬರೆದಳು. ಬರೆದು, ಜೂಡಿಯ ವಿಚಾರವಾಗಿ ಆಲೋಚಿಸ ತೊಡಗಿದಳು ಮತ್ತೆ. ಆದರೆ ಈಗ ಎಲ್ಲ ಕೈಮೀರಿ ಹೋಗಿತ್ತು. ಜೂಡಿಯೊಂದಿಗೆ ಕೆಲಸಗಳನ್ನು ಮಾಡುವುದೆಂದರೆ ಎಷ್ಟೋ ವಿನೋದವಾಗಿತ್ತು; ತನ್ನ ಇತರ ಎಷ್ಟೋ ಸ್ನೇಹಿತರೊಂದಿಗೆ ಮಾಡುವುದಕ್ಕಿಂತ ಹೆಚ್ಚು ವಿನೋದ ; ಏಕೆಂದರೆ, ಯಾರೇ ಆಗಲಿ ಅವಳಲ್ಲಿ ಹೆಚ್ಚು ವಿಶ್ವಾಸವಿಡುವರು. ಅವಳದು ಇತರರಿಗಿಂತ ಅಂತಹ ನಿಧಾನದ, ಗಂಭೀರದ, ಸ್ವಭಾವ, ನಾನು ಅವಳನ್ನ ಆಚೆಗೆ ಹಾಕಿಬಿಟ್ಟಿದ್ದೇನೆ, ಎಂದು ಎಣಿಸಿದಳು ಲಕ್ಷ್ಮಿ.

ಕ್ಲಬ್ಬಿನಲ್ಲಿ ಆ ದಿನ ನಾನು ಹೇಗೆ ಸಂಕಟ ಪಡುತ್ತಿದ್ದೆ ಎಂದು ಅವಳಿಗೆ ತಿಳಿದಿದಿದ್ದರೆ....ನಮ್ಮ ತಂದೆ ಅದೇ ತಾನೆ ಮೊದಲ ಏಟನ್ನು ತಿಂದಿದ್ದರು, ಅದನ್ನು ತಡೆದುಕೊಳ್ಳಲು ತಮ್ಮ ಹೆಂಡತಿ ಮಕ್ಕಳನ್ನು ಸಿದ್ಧಗೊಳಿಸಲು ಪ್ರಯತ್ನಿಸಿದ್ದರು, ಆದರೆ ಅಂದು ಆದ ಅಧಃಪತನ ಇಷ್ಟೊಂದು ಕೆಟ್ಟದ್ದಾಗಿರುತ್ತದೆ ಎಂದು ಅವರು ಅರಿತಿರಲಿಲ್ಲ. ಅದರ ಜೊತಗೆ, ಜೂಡಿಯ ಜೊತೆಯಲ್ಲಿದ್ದ ಆ ಹೆಂಗಸು, ತಾನು ಜೂಡಿಯ ತಂದೆ ತಾಯಿಗಳ ಸ್ನೇಹಿತೆ ಎಂದು ಜಂಬಕೊಚ್ಚಿಕೊಂಡು ಅವರ ವಿಚಾರಮಾರ್ಗವನ್ನು ತನ್ನದರ ಕಡೆಗೆ ತಿರುಗಿಸಿಕೊಳ್ಳಬೇಕು ಎಂದುಕೊಂಡಿದ್ದ, ಉತ್ತರ ದೇಶದಿಂದ ಬಂದಿದ್ದ ಆ ಹೆಂಗಸು, ಅವರು ಏನು ಮಾಡಬೇಕು ಎಂಬುದನ್ನು ಅವರಿಗೆ ಹೇಳುತ್ತ ತಾನೇ ಒಂದು ಸಮಸ್ತ ಸರ್ಕಾರ ವಿಭಾಗವಾಗಿದ್ದರೆ ಹೇಗೊ ಹಾಗೆ ಕೀಳಾಗಿ ಕಾಣುವುದು ಎಂದರೇನು, ಅವರನ್ನು ಹಾಗೆ ಕೀಳಾಗಿ

ಎಂಬ ಆಲೋಚನೆ ಅವಳ ತಲೆಯಲ್ಲಿ ಸುಳಿದಿತ್ತು ; ಅವಳ ತಂದೆ ಅವಳನ್ನು ಪ್ರೋತ್ಸಾಹಿಸಿ ; ಸಮಾಜ ಸೇವಾ ಕಾರ್ಯಕರ್ತರೊಬ್ಬರಲ್ಲಿ ಆ ಬಗೆಗೆ ಮಾತನಾಡಿದ್ದರು ; ಅವರು ಮದ್ದಳೆ ಇಟ್ಟುಕೊಂಡಿದ್ದ ಕುರುಡನನ್ನು ಪತ್ತೆ ಹಚ್ಚಿದ್ದಲ್ಲದೆ, ಮಕ್ಕಳಿಗೆ ಕಥಕ್ ನೃತ್ಯವನ್ನು ಹೇಳಿಕೊಡುವುದಕ್ಕಾಗಿ ಅವಳಿಗೆ ಕೆಲವು ಗೆಜ್ಜೆ ಜೊತೆಗಳನ್ನು ತಂದುಕೊಟ್ಟಿದ್ದರು.

ಈಗ ತಾವೇ ಕಪ್ಪು ಹಲಗೆಯ ಮೇಲೆ ಬರೆಯಲಿ ಎಂದು ಅವರನ್ನು ಅವಳು ಕರೆಯತೊಡಗಿದಳು. ಹೆಚ್ಚು ವಯಸ್ಕರಾದ ಹೆಂಗಸರಲ್ಲಿ ಕೆಲವರು ಇದನ್ನು ಮಾಡುವುದಿಲ್ಲ, ಬಹುಶಃ ಎಂದಿಗೂ ಮಾಡುವುದಿಲ್ಲ ಎಂಬುದನ್ನು ಅವಳು ಬಲ್ಲಳು. ಅವಳು ಚಿಕ್ಕವರನ್ನು ಕರೆದುಕೊಂಡಳು. ಅವರು ಚಿಕ್ಕ ಚಿಕ್ಕ ವಾಕ್ಯಗಳನ್ನು ಬರೆದರು ; ಬಳಿಕ ಇತರರು ಅವುಗಳನ್ನು ಗಟ್ಟಿಯಾಗಿ ಓದಿದರು, ಕೆಲವೊಮ್ಮೆ ನಗುತ್ತಿದ್ದರು ; ಏಕೆಂದರೆ, ತಮ್ಮ ಪೈಕಿಯೇ ಇದನ್ನು ಮಾಡಲು ಸಮರ್ಥರಾಗಿದ್ದರಲ್ಲಾ ಎಂಬುದನ್ನು ಕಂಡು ಅವರಿಗೆ ಬಲು ತಮಾಷೆಯೆನಿಸಿತ್ತು. ‘ಚೆನ್ನಾಗಿದೆ, ವಲ್ಲಿ ! ನೀನು ಹಿಂದೆ ಎಂದೂ ಬರೆಯದೆ ಇರುವ ಒಂದು ಹೊಸ ವಾಕ್ಯವನ್ನು ಈಗ ಬರಿ, ನೋಡೋಣ” ಎಂದಳು ಅವಳು.

ಆದರೆ ವಲ್ಲಿ ಬಾಯಿಬಿಟ್ಟುಕೊಂಡು ಬೆರಗಾಗಿ ತನ್ನ ಹೆಗಲ ನೇರಕ್ಕೆ ತೆರೆದ ಬಾಗಿಲ ಮೂಲಕ ನೋಡುತ್ತಿದ್ದಳು. ಆದು ಏನೂ ಅಲ್ಲ? ತುಸ ಮುಖ ಗಂಟಿಕ್ಕುತ್ತ, ಲಕ್ಷ್ಮಿ ತಿರುಗಿದಳು. ಅಗೊ ಅಲ್ಲಿದ್ದಳು ಜೂಡಿ, ಒಂದು ಕಾಲ ಮೇಲೆ ಭಾರಬಿಟ್ಟು ನಿಂತು, ತನ್ನ ಕೈಗಳನ್ನು ಚಾಚಿ. ಜೂಡಿ !

ಮಗನೋ ಬೆಂಗಳೂರಿಗೋ, ನಾಗಪುರಕ್ಕೊ, ಇಲ್ಲವೆ ಇನ್ನೂ ಆಚೆಯ ಬೊಂಬಾಯಿಗೋ ಅಥವಾ ಕಲ್ಕತ್ತಕ್ಕೋ ತಮ್ಮ ಭಾಗ್ಯವನ್ನು ಹುಡುಕಿಕೊಳ್ಳುವುದಕ್ಕೆ ಒಮ್ಮೆ ಹೋಗಿದ್ದರು ; ಅಂತೂ ಅವರಲ್ಲಿ ಕೆಲವರು ಆ ಸ್ಥಳಗಳನ್ನು ಬಲ್ಲರು. ಅನಂತರ ಅವಳು ಅವರನ್ನು ಸುಲಭವಾದ ಪ್ರಶ್ನೆಗಳನ್ನು ಕೇಳತೊಡಗಿದಳು. ಗಾಂಧೀಜಿಯ ವಿಚಾರ ಹೇಳಿ, ಎಂದು ಅವಳು ವಯಸ್ಸಾದ ಹೆಂಗಸರಲ್ಲಿ ಒಬ್ಬಳನ್ನು ಕೇಳುವಳು ; ಆ ಹೆಂಗಸು ಚೆನ್ನಾಗಿ ಓದುವುದಕ್ಕೆ ಬಾರದಳವಳು, ಪ್ರೋತ್ಸಾಹದ ಅಗತ್ಯ ಇದ್ದವಳು. ಅನಂತರ ಇತರರು ಜೊತೆಗೆ ಸೇರಿಕೊಳ್ಳುವರು; ತಾನು ಓದಿದ್ದ ಇಲ್ಲವೆ ತನ್ನ ತಂದೆಯಿಂದ ಕೇಳಿ ತಿಳಿದಿದ್ದ ಯಾವುದಾದರೂ ಸಂಗತಿಯನ್ನು ಅವಳೂ ಕೂಡಿಸಿ ಹೇಳಬಹುದು. ಅವರಿಗೆ ಹಿಂದಿಯನ್ನು ಏನೂ ಕಲಿಸಲು ಅವಳು ಪ್ರಯತ್ನಿಸಿರಲಿಲ್ಲ ! ಯಾವಾಗಲಾದರೂ ಅದನ್ನು ಮಾಡಬೇಕಾದೀತು, ಎಲ್ಲರಿಗೂ ಅಲ್ಲದಿದ್ದರೆ ಕಡೆಯ ಪಕ್ಷ ಅತ್ಯಂತ ಬುದ್ಧಿವಂತರಿಗೆ; ಅಥವಾ–ಹಿಂದಿಯ ವಿಚಾರದಲ್ಲಿ, ಹಿಂದಿ ಮತ್ತು ಉತ್ತರ ದೇಶದ ವಿಚಾರದಲ್ಲಿ, ಅವಳ ನಂಬಿಕೆ ಅಷ್ಟು ದೃಢವಾಗಿತ್ತೆ ? ಅವರೊಂದಿಗೆ ಅವಳ ಎಲ್ಲ ಶಿಕ್ಷಣ ಹಾಗೂ ಮಾತುಕತೆ ತಮಿಳಿನಲ್ಲೇ ನಡೆಯುತ್ತಿತ್ತು. ಈ ನಡುವೆ, ತನ್ನ ಗಮನವನ್ನೆಲ್ಲಾ ಅತ್ಯಂತ ಬಡವರಿಗೆ ವಿನಿಯೋಗಿಸಬೇಕಾಗಿತ್ತು. ಶಿಕ್ಷಣ ಅತ್ಯಗತ್ಯವಾಗಿದ್ದವರು ಅವರು.

ಅವಳು ತನ್ನ ನೃತ್ಯದ ತರಗತಿಗೆ ಇನ್ನಷ್ಟು ಸಂಗೀತದ ನೆರವು ಪಡೆಯುವುದು ಸಾಧ್ಯವಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ! ಆ ಕುರುಡನೇನೋ ತಕ್ಕಮಟ್ಟಿಗೆ ಒಳ್ಳೆಯ ಮದ್ದಳೆಗಾರನೆ ; ಆದರೆ ಆವನನ್ನು ಸ್ವಲ್ಪ 'ಖುಷಿ' ಪಡಿಸಬೇಕಾಗಿತ್ತು. ಕೆಲವು ವೇಳೆ ತಾನು ಅಪೇಕ್ಷಿಸಪಟ್ಟದ್ದನ್ನು ಅವನು ಬಾರಿಸುತ್ತಲೇ ಇರಲಿಲ್ಲ ; ತಾನೇ ಮುಖ್ಯ ಎಂದು ಅವನು ಭಾವಸಿದ್ದಂತೂ ಸ್ಪಷ್ಟ. ಅವರೆಲ್ಲರಿಗೂ ನೃತ್ಯದ ತರಗತಿ ಎಂದರೆ ಅಷ್ಟು ಪ್ರೇಮ, ಅದರಲ್ಲಿಯೂ ಚಿಕ್ಕ ಮಕ್ಕಳಿಗೆ ಹೆಚ್ಚು ; ಆ ಮಕ್ಕಳ ತಾಯಂದಿರು ಸಾಧಾರಣವಾಗಿ ಬಂದು, ಧೂಳುಮಣ್ಣಿನ ಮೇಲೆ ಕುಳಿತು, ಅವರನ್ನು ನಿಶ್ಶಬ್ದವಾಗಿ ಗಮನಿಸುತ್ತಿರುವರು. ಮಳೆಯೆಲ್ಲ ಮುಗಿದು ಹೆಚ್ಚು ತಂಪಾದಾಗ ಮಾತ್ರ ನೃತ್ಯದ ತರಗತಿ ಪ್ರಾರಂಭವಾಗಿತ್ತು. ಜೊತೆಗೆ ಸಂಗೀತವಿಲ್ಲದಿದ್ದರೂ ಕೂಡ ತನ್ನ ನೃತ್ಯಗಳನ್ನು ಅಭ್ಯಾಸಮಾಡುತ್ತ ಹೋಗಬೇಕು ಎಂದು ತನ್ನ ತಂದೆ ಹೇಳದೆ ಹೋಗಿದ್ದರೆ ಅದು ಪ್ರಾರಂಭವಾಗುತ್ತಲೇ ಇರಲಿಲ್ಲ; ಹಾಗೆ ಹೇಳಲು ಕಾರಣ, ಎಂದಾದರೂ ಒಂದು ದಿನ........ಹೀಗೆ ಭಾವಿಸಿದಳು ಲಕ್ಷ್ಮಿ. ಆಗ ತಾನೇ ನೃತ್ಯ ಮಾಡುವ ಬದಲು ಅದನ್ನು ಮಕ್ಕಳಿಗೆ ಕಲಿಸಿಯೇನು

ಪಿಸು ಮಾತಿಗಿಂತ ಎತ್ತರದ ದನಿಯಲ್ಲಿ ಮಾತಾಡಲಾರದವಳಾಗಿದ್ದಳು. ಹಿಂದುಗಡೆಯಿದ್ದ ಹೆಚ್ಚು ವಯಸ್ಸಿನ ಹೆಂಗಸರಲ್ಲಿ ಒಬ್ಬಳು ಏನೋ ಕೂಗಿ ಕರೆದಳು ; ಲಕ್ಷ್ಮಿ ಅವಳಿಗೆ ಚುರುಕಾಗಿಯೆ ಉತ್ತರ ಕೊಟ್ಟಳು. ಶಿಸ್ತನ್ನು ಕಾಪಾಡಲೇ ಬೇಕಷ್ಟೆ.

"ಈಗ ಸ್ಕೂಲನ್ನು ಬಿಟ್ಟು ಬಿಡುತ್ತೇನೆ !" ಎಂದಳು ಅವಳು. "ಏಕೆಂದರೆ, ನಾನು ಹೇಳಬೇಕಾದ್ದು ಬಹಳ ಇದೆ. ಓ, ಜೂಡಿ, ಹೇಗೆ ಬಂದೆ ನೀನು ?"

"ಅದೆಲ್ಲ ಒಂದು ಸೊಗಸಾದ ಆಕಸ್ಮಿಕ" ಎಂದಳು ಜೂಡಿ. "ಅದಿರಲಿ, ನನ್ನ ಕಾಗದ ನಿನಗೆ ಸಿಕ್ಕಿತೊ ?"

ಲಕ್ಷ್ಮಿ ಅವಳ ಕೈಯನ್ನು ಅದುಮಿದಳು, ಒಂದು ಕ್ಷಣ ಉತ್ತರ ಕೊಡಲಿಲ್ಲ; ಸುಲಭವಾಗಿ ಹೇಳಬಹುದಾದ ಒಂದು ಸುಳ್ಳನ್ನು ಯೋಚಿಸಿದಳು, ಆದರೆ ಅದು ತಪ್ಪೆಂದು ಅವಳು ಬಲ್ಲಳು. ಯಾರೇ ಆಗಲಿ ತಮ್ಮ ಸ್ನೇಹಿತರಿಗೆ ಸುಳ್ಳು ಹೇಳರು. "ನನಗೆ ಅದು ಬಂತು, ಜೂಡಿ", ಎಂದಳು ಅವಳು, ಕಡೆಗೆ ; "ಆದರೆ–ನನಗಿದ್ದ ಮಾನ......"

ಜೂಡಿ ಗಮನಿಸಲಿಲ್ಲ. "ಆದರೆ ನೀನು ನನ್ನ ಮೇಲೆ ಮುನಿಸಿಕೊಂಡಿಲ್ಲ ತಾನೆ?" ಎಂದವಳು ಕೇಳಿದಳು.

"ಇಲ್ಲ–ಇಲ್ಲಾ–ಖಂಡಿತ ಇಲ್ಲ !" ಎಂದಳು ಲಕ್ಷ್ಮಿ. "ಆದರೆ–ಈ ಹಳ್ಳಿ–ಜೊತೆಗೆ ಪ್ರತಿಯೊಂದೂ ನಿನಗೆ ಗೊತ್ತಾಗುವುದು ನನಗೆ ಇಷ್ಟವಿರಲಿಲ್ಲ–"

ಜೂಡಿ ಹೇಳಿದಳು. "ಆದರೆ, ಯಾಕೆ ? ಇಡೀ ದೊಡ್ಡವರ ತರಗತಿಗೆ ನೀನು ಪಾಠ ಹೇಳುವುದು ! ಅದು ವಿಪರೀತ ಬುದ್ಧಿವಂತಿಕೆಯ ಕೆಲಸ."

ಆಗ ಅವಳ ತಾಯಿ ಮಧ್ಯೆ ಬಾಯಿ ಹಾಕಿದರು : "ಈ ತರುಣ ನಮಗೆ ಇನ್ನೂ ಏನೇನೋ ತೋರಿಸಬೇಕು ಅಂತ ಆಸೆಪಡುತ್ತಾರೆ, ಲಕ್ಷ್ಮಿ. ನೀನೂ ಸಹ ಬರುತ್ತೀ ತಾನೆ ? ಎಷ್ಟೇ ಆಗಲಿ, ಇದು ನಿಮ್ಮ ಹಳ್ಳಿ ! ಅಲ್ಲದೆ, ನೀನು ಹಿಂದಿರುಗಿದ ಮೇಲೆ ನಮ್ಮ ಜೊತೆ ವಿಶ್ರಾಂತಿ ಮಂದಿರದಲ್ಲಿ ತಿಂಡಿ ತೀರ್ಥ ತೆಗೆದುಕೊಳ್ಳಬೇಕು, ತೆಗೆದುಕೊಳ್ಳುತ್ತೀ ತಾನೆ ? ನಿಮ್ಮ ಮನೆಯಲ್ಲಿ ನಾವು ಸುದ್ದಿಮುಟ್ಟಿಸಿ ಹೋಗಬಹುದಲ್ಲವೆ ?"

ಲಕ್ಷ್ಮಿ ವಲ್ಲಿಯನ್ನು ಕರೆದಳು–ಅವರಿಗೆ ತಮ್ಮ ಮನೆಯನ್ನು ತೋರಿಸಲು ಇಷ್ಟವಿರಲಿಲ್ಲ, ಈಗ ಅಲ್ಲ, ಇನ್ನೂ ಕೂಡದು ! ಆದರೆ ವಲ್ಲಿ ಆ ಸುದಿ ಮುಟ್ಟಿಸುವಳು. ಅಥವಾ ಅವಳು ಹಿಂದಕ್ಕೆ ಹೋಗಿ, ಒಂದು ಶುಭ್ರವಾದ ಸೀರೆಯನ್ನು, ತನ್ನ ಒಳ್ಳೆಯ ಹಳೆಯ ಸೀರೆಗಳಲ್ಲಿ ಒಂದನ್ನು, ತನ್ನ ಹಿಂದಿನ ದೀಪಾವಳಿಯದನ್ನು, ಉಟ್ಟುಕೊಳ್ಳಬೇಕೆ ? ಕಡೆಯ ಪಕ್ಷ ತಲೆಗೆ ಹೂವನ್ನಾದರೂ

# ೧೧. ಜೂಡಿ ಮತ್ತು ಲಕ್ಷ್ಮಿ

ಲಕ್ಷ್ಮೀ ಉಸುರಿದಳು, "ಜೂಡಿ, ಜೂಡಿ, ನೀನು ಬಂದುಬಿಟ್ಟೆ !" ಎಲ್ಲಾ ಸರಿಹೋಯಿತು. ಅವಳು, ಲಕ್ಷ್ಮಿ, ತನ್ನ ಬಿಗುಮಾನವನ್ನು ಉಳಿಸಿಕೊಂಡಿದ್ದಳು, ಕಾಗದ ಬರೆದಿರಲಿಲ್ಲ ; ಆದರೂ ಕೂಡ, ಜೂಡಿ, ಆ ಪುಟ್ಟ ಬಿಳಿಯ ಇಂಗ್ಲಿಷರ ಜೂಡಿ, ಮುದ್ದು ಜೂಡಿ, ಅವಳು ಬಂದೇ ಬಿಟ್ಟಿದ್ದಳು !

ಜೂಡಿ ನುಡಿದಳು, "ಹೌದು, ಹೌದು–ಓ, ಲಕ್ಷ್ಮಿ......." ಬಳಿಕ ಗೊತ್ತೇ ಇದೆ, ಗಲ್ಲ ಗಲ್ಲಕ್ಕೆ ಒತ್ತಿಕೊಂಡಿತ್ತು, ಕೈಗಳು ಒಂದನ್ನೊಂದು ಬಿಗಿಯಾಗಿ ಹಿಡಿದಿದ್ದುವು.

ತಟ್ಟನೆ ಲಕ್ಷ್ಮಿ ಹೇಳಿದಳು : "ಬಾ, ಜೂಡಿ, ಬಾ, ನೀನು ನನ್ನ ತರಗತಿಯನ್ನು ನೋಡಲೇಬೇಕು ! ನಿನ್ನ ತಂದೆ ತಾಯಿಯನ್ನೂ ಕರೆದು ತಾ ! ಅವರೆಲ್ಲರೂ ಸಮಾಜ ಸೇವಾ ಕೇಂದ್ರಕ್ಕೆ ಬಂದರು ; ಆ ತರುಣನೂ ಅವರನ್ನು ಹಿಂಬಾಲಿಸಿದ್ದ; ಆ ಕ್ಷಣದಲ್ಲಿ ಅವನಿಗೆ ಏನು ಹೇಳುವುದಕ್ಕೂ ತೋರಲಿಲ್ಲ, ಅವನಿಗೆ ಅಷ್ಟು ಅಚ್ಚರಿಯಾಗಿತ್ತು. ಓದುಬರಹ ಕಲಿಸುವ ತರಗತಿಯನ್ನು ಒಬ್ಬರು ಇಂಜಿನಿಯರ ಮಗಳು ತೆಗೆದುಕೊಳ್ಳುತ್ತಿದ್ದಳು ಎಂಬುದಷ್ಟನ್ನು ಅವನು ಬಲ್ಲನಷ್ಟೆ ; ಆ ವಿಚಾರವಾಗಿ ಅವನು ಹೆಚ್ಚಾಗಿ ಏನೂ ಯೋಚಿಸಿರಲಿಲ್ಲ.

ಈಗ ಓದು ಬರಹದ ತರಗತಿ ಎದ್ದು ನಿಂತುಕೊಂಡಿತು, ಗುಸ ಗುಸ ಪಿಸ ಪಿಸ ಎಂದಿತು, ಕಿಲ ಕಿಲ ನಕ್ಕಿತು. ಲಕ್ಷ್ಮಿ ಅವರಿಗೆ ಕುಳಿತುಕೊಳ್ಳುವಂತೆ ಹೇಳಿದಳು, ಆಮೇಲೆ ತನ್ನ ಇಂಗ್ಲೆಂಡಿನ ದರ್ಶನಾರ್ಥಿಗಳ ವಿಚಾರವಾಗಿಒಂದು ಭಾಷಣ ಮಾಡಿದಳು–ಓ, ತನ್ನ ಬಳಿ ಒಂದು ಪ್ರಪಂಚ ಭೂಪಟ ಇದ್ದಿದ್ದರೆ ! ಜೂಡಿಯ ಕೈಗಳನ್ನು ತನ್ನ ಕೈಗಳಲ್ಲಿ ಅವಳು ಇನ್ನೂ ಹಿಡಿದುಕೊಂಡಿದ್ದಳು. ಅನಂತರ, ಭಾರತದ ಸ್ಥಳಗಳನ್ನು ಬರೆದು, ಹೇಳಿ, ತರಗತಿಯವರು ತಾವು ಕಲಿತದ್ದನ್ನು ತೋರಿಸಿಕೊಡುವಂತೆ ಮಾಡಿದಳು ಅವಳು. ಆದರೆ ಅವರಿಗೆಲ್ಲ, ಅದರಲ್ಲಿ ವಿಶೇಷವಾಗಿ ಮೋಹಿನಿಗೆ, ನಾಚಿಕೆ ; ನೋಡಬಂದವರ ಎದುರಿಗೆ ವಿಪರೀತ ನಾಚಿಕೆ ; ಅವಳಂತೂ ಯೂರೋಪಿಯನ್ನಿನ ಮುಖವನ್ನು ಎಂದೂ ನೋಡಿರಲಿಲ್ಲ; ವಲ್ಲಿ ಮೇಲೆನಿಸಿದ್ದಳು ; ಆದರೆ ಅವಳು ಕೂಡ, ತುಸ ಮಟ್ಟಿಗೆ ನಡುಗುವ ಕೈಯಿಂದಲೇ ಕಪ್ಪು ಹಲಗೆಯ ಮೇಲೆ ತನ್ನ ಬರೆವಣಿಗೆ ಬರೆದರೂ,

ಒಂದರ ಒಳಕ್ಕೆ ಕರೆದೊಯ್ದಳು ; ಅಲ್ಲಿ ಒಂದು ವರಾಂಡ, ಅದರ ಹಿಂದುಗಡೆ ಒಂದು ಕೊಟಡಿ, ಇನ್ನೊಂದು ಕೊಟಡಿ, ಮೇಜಿನ ಹಾಗೂ ಕಾಣುತ್ತಿದ್ದ ಒಂದು ಅಗಲವಾದ ತಗ್ಗು ಮಂಚ, ಕೆಲವು ಜಾಡಿಗಳು ಹಾಗೂ ಸುಟ್ಟ ಮಣ್ಣಿನ ಬಟ್ಟಲುಗಳು, ಮತ್ತು ಅಚ್ಚುಕಟ್ಟಾಗಿ ಮಡಿಸಿದ್ದ ಆದರೆ ಹರುಕುಪರುಕಾಗಿ ಕಾಣುವ ಕೆಲವು ಬಟ್ಟೆಯ ರಾಶಿ ಇದ್ದುವು ; ಕುಟುಂಬ ಹೊಂದಿದ್ದುದೆಲ್ಲಿ ಎಂದರೆ ಅಷ್ಟೆ. "ಅವರು ತಿನ್ನುವುದು ಏನು ?" ಎಂದು ಜೂಡಿ ಕೇಳಿದಳು.

"ಸಂಜೆಯ ಹೊತ್ತು ಬಿಸಿಯನ್ನ ಮತ್ತು ಕಾಯಿಪಲ್ಯ. ಬೆಳಗ್ಗೆ, ಮಿಕ್ಕ ತಂಗಳನ್ನ, ಜೊತೆಗೆ ಉಪ್ಪಿನಕಾಯಿ", ಎಂದಳು ಲಕ್ಷ್ಮಿ. "ಕೆಲವು ಸಲ ತೊಗರಿಬೇಳೆಯೂ ಇರುತ್ತೆ ಏನೇನನ್ನು ಮಾರಬಹುದೊ ಅದನ್ನೆಲ್ಲ ಮಾರುತ್ತಾರೆ."

ಮನೆಗಳೂ, ಹಳ್ಳಿಯ ಚಿಕ್ಕ ದಾರಿಗಳೂ ಚೊಕ್ಕಟವಾಗಿದ್ದುವು ; ಹೊಲಸಾಗುವಂತೆ ಏನನ್ನೂ ಅಲ್ಲಿ ಇಲ್ಲಿ ಎಂದೂ ಎಸೆದಿರುತ್ತಿರಲಿಲ್ಲ. ರಸ್ತೆಯ ಅಂಚಿನಲ್ಲಿ ಒಂದು ಮರದಡಿಯಲ್ಲಿ, ಅಲ್ಲಿ ಒಂದು ಚಿಕ್ಕ ಚಹದಂಗಡಿ ಇತ್ತು. ಬಹುಶಃ ಎಲ್ಲ ನೆಟ್ಟಗೆ ಇದ್ದ ಸಂದರ್ಭದಲ್ಲಿ ಗಂಡಸರು ಸಂಜೆಯ ಹೊತ್ತು ಒಂದು ಸಣ್ಣ ಬಟ್ಟಲು ಚಹಕ್ಕಾಗಿಯೋ ಇಲ್ಲವೆ ಒಂದು ವೀಳ್ಯದೆಲೆಯ ಬೀಡಕ್ಕಾಗಿಯೋ ಅಲ್ಲಿಗೆ ಹೋಗುವರು. ಆದರೆ ಬಹುಮಂದಿ ಜನ, ಕಡಮೆ ಎಂದರೆ ಅರೆಪಾಲು, ಆಶೇಯನ್ನೆ ನೆಮ್ಮಿಕೊಂಡು ಬದುಕಿದ್ದರು.

ಅರಣ್ಯ ಸಂಶೋಧನ ಸಂಸ್ಥೆ ಆಲೋಚಿಸಿದ್ದ ಇನ್ನೊಂದು ಉದ್ಯಮವು ಮೂರು ಕೋಣೆಯ ಮಣ್ಣಿನ ಗುಡಿಸಿಲೊಂದರಲ್ಲಿ ನಡೆಯುತ್ತಿತ್ತು. ಹಳೆಯ ಬೆಂಕಿಯ ಪೆಟ್ಟಿಗೆಗಳಿಗೆ ಬಣ್ಣ ಹಾಕಿ, ಗಟ್ಟಿ ತುಂಡುಗಳಾಗಿ ಒತ್ತಿಟ್ಟು, ಮತ್ತೆ ಅವುಗಳಿಂದ ತೆಳ್ಳನೆಯ ಚೂರುಗಳನ್ನು ಕತ್ತರಿಸಿ, ಅವಕ್ಕೆ ಬಣ್ಣದಿಂದ ಹೊರಗಡೆ ನಯಮಾಡಿ, ಇವುಗಳಿಂದ ಸಣ್ಣ ತಟ್ಟೆಗಳನ್ನೂ ಇತರ ಪೆಟ್ಟಿಗೆಗಳನ್ನೂ ಮಾಡುತ್ತಿದ್ದರು. ಇದು ಬಹು ಚಮತ್ಕಾರದ ಕೆಲಸವಾಗಿದ್ದರೂ, ನಿಜವಾಗಿ ಅಷ್ಟೇನೂ ಅಂದದ ಕೆಲಸವಲ್ಲ ಎಂದು ಭಾವಿಸಿದಳು ಜೂಡಿ ; ಆದರೂ ಕೂಡ, ಅವಳ ತಾಯಿ ಒಂದನ್ನು ಕೊಂಡುಕೊಂಡರು.

"ಅದು ಹಣ ಸಾಲ ಕೊಡುವವನ ಮನೆ," ಎಂದು ಹೇಳಿದಳು ಲಕ್ಷ್ಮಿ. "ಬಾಗಿಲ ಮೇಲೆ ದೊಡ್ಡ ಹಿತ್ತಾಳೆಯ ಬೀಗಗಳನ್ನು ನೋಡಿ ! ಸರ್ಕಾರವೇ ಹಣ ಸಾಲ ಕೊಡುವ ಕೆಲಸವೆಲ್ಲವನ್ನೂ ಮಾಡಲು ಸಾಧ್ಯವಾದರೆ ಜನಕ್ಕೆ ಅಷ್ಟೊಂದು ಕಷ್ಟವಾಗದು."

"ಹಣ ಸಾಲ ಕೊಡುವವನು ಎಷ್ಟು ಬಡ್ಡಿ ಹಾಕುತ್ತಾನೆ ?" ಎಂದು

ಮುಡಿದುಕೊಳ್ಳಬಹುದಲ್ಲ–ಅದನ್ನೆಲ್ಲ ಅವಳು ಹಚ್ಚಿಕೊಂಡೇ ಇರಲಿಲ್ಲ, ಆದರೆ ಈಗ ಅವುಗಳ ಮೇಲೆ ಅವಳಿಗೆ ಅಷ್ಟೊಂದು ಆಶೆಯಾಯಿತು ! ಇಲ್ಲ, ಇನ್ನು ಅವಳು ಜೂಡಿಯನ್ನು ಬಿಡುವುದಿಲ್ಲ.

ಅವರು ಮೊತ್ತ ಮೊದಲು ನೋಡಿದ್ದೆಂದರೆ, ಇನ್ನೊಂದು ಮಹಿಳೆಯರ ಸಹಕಾರ ಸಂಸ್ಥೆ ; ಅದನ್ನು ಲಕ್ಷ್ಮಿಯ ಜೊತೆ ನೋಡುವುದು ಹೆಚ್ಚು ಸ್ವಾರಸ್ಯವಾಗಿತ್ತು; ಅಲ್ಲಿ ಕೆಲಸ ಮಾಡುತ್ತಿದ್ದ ಎಲ್ಲ ಹುಡುಗಿಯರನ್ನೂ ಹೆಂಗಸರನ್ನೂ ಅವಳು ಬಲ್ಲಳು, ಅವಳು ಅವರಿಗೆ ಎಲ್ಲ ಬಗೆಯ ಸಂಗತಿಗಳನ್ನೂ ತಿಳಿಸಿದಳು ; ಈ ಹೆಂಗಸಿನ ಮೂವರು ಮಕ್ಕಳೂ ಸಿಡುಬಿನಿಂದ ಸತ್ತಿದ್ದರು, ಆದರೆ ಈಗ ಜನ ದೇವಿ ಹಾಕಿಸಿಕೊಳ್ಳುತ್ತಿದ್ದರು. ಆ ಹುಡುಗಿಯನ್ನು ಕಂಡರೆ ಅವಳಿಗೆ ಇಷ್ಟವಿಲ್ಲ. ಆದರೆ ಚುಕ್ಕಿಯ ಸೀರೆ ಉಟ್ಟಿದ್ದ ಇವಳನ್ನು–ಹಾ, ಅವಳನ್ನು ಬಲಿಷ್ಠನಾದ ಒಬ್ಬ ಯುವಕನಿಗೆ ಕೊಟ್ಟು ಮದುವೆಯಾಗಿತ್ತು ; ಅವನ ಬಳಿ ಒಂದು ಜೊತೆ ಎತ್ತು ನೇಗಿಲು, ಮೂರು ಆಕಳು ಇದ್ದವು. ಅವನು ಪ್ರಗತಿಪರನಾಗಿದ್ದ, ಉಳಿದೆಲ್ಲ ಯುವಕರೂ ಅವನು ಗ್ರಾಮ ಪಂಚಾಯಿತಿ ಸಭೆಯಲ್ಲಿ ಇರಬೇಕೆಂದು ಬಯಸಿದ್ದರು. ಆಹಾ, ಹೌದು, ಯಂತ್ರದ ಹಿಡಿಯನ್ನು ತಿರುಗಿಸುವಾಗ ಅಷ್ಟೊಂದು ನಗುತ್ತಿದ್ದಾಳಲ್ಲಾ ಆ ಹೆಂಗಸು, ಅವಳು ಒಬ್ಬಳು ಅಜ್ಜಿ, ಅವಳು ಸಂಪಾದಿಸುವ ಹಣವೆಲ್ಲ ಅವಳ ಮೊಮ್ಮಕ್ಕಳಿಗೆ ಉಡುಗೊರೆಗಳ ರೂಪದಲ್ಲಿ ಹೋಗುವುದು.

ಸದ್ಯದ ಮಟ್ಟಿಗೆ ಕೆಲಸ ಮಾಡಿದಿರುವ ಸಲಕರಣೆಗಳನ್ನು ಸಹ ಅವಳು ಅವರಿಗೆ ತೋರಿಸಿದಳು. "ಇಲ್ಲಿಯೆ, ಮಳೆಗಾಲದಲ್ಲಿ ಹತ್ತಿಯನ್ನು ಅದು ಇನ್ನೂ ಅಷ್ಟು ಒಣಗದೆ ಇರುವಾಗ ಎಕ್ಕುವುದು. ಅದು ಹಾಗಿರುವಾಗ ಅದರಿಂದ ಕೆಲಸಮಾಡುವುದು ಹೆಚ್ಚು ಸುಲಭ. ಆ ಮೇಲೆ ಅದರಿಂದ ನೂಲುತ್ತೇವೆ. ಅದನ್ನು ಕಲಿತಿದ್ದೇನೆ, ಜೂಡಿ ! ಆದರೆ ಒಂದು ದಿನ, ಹಾಗಂತ ನಮ್ಮ ತಂದೆ ಹೇಳುತ್ತಾರೆ, ಭಾರತ ದೇಶ ಹೆಚ್ಚು ಹಣವಂತವಾದಾಗ, ನಾವು ಯಂತ್ರಗಳಿಂದಲೇ ಎಕ್ಕುತ್ತೇವೆ, ನೂಲುತ್ತೇವೆ ; ಗಂಟುಗಳು ಗೋಜುಗಳು ಇಲ್ಲದ ಹಾಗೆ ಅವು ಮನುಷ್ಯರಿಗಿಂತ ಚೆನ್ನಾಗಿ ಮಾಡುತ್ತವೆ ; ನೆಯ್ಯುವುದು ಮಾತ್ರ ಹಳ್ಳಿಗಳಲ್ಲಿ. ಆದರೆ ಇನ್ನೂ ಈಗಲೆ ಅಲ್ಲ ; ಈಗಲೆ ಆಲ್ಲ" ಎಂದು ತಿಳಿಸಿದಳು ಅವಳು.

"ಆದರೆ, ನೀನು ನಿಜವಾಗಿ ಹತ್ತಿಯ ದಾರವನ್ನು, ನೀನೇ ನೂಲ ಬಲ್ಲೆಯಾ?" ಎಂದು ಕೇಳಿದಳು ಜೂಡಿ.

"ಅದನ್ನು ಮನೆಗಳ ಒಳಗೆ ಹೇಗಿರುತ್ತವೆಯೋ ಎಂದು ಜೂಡಿಯ ತಾಯಿ ತಮ್ಮ ಆಶ್ಚರ್ಯವನ್ನು ಗಟ್ಟಿಯಾಗಿಯೆ ವ್ಯಕ್ತಪಡಿಸಿದಾಗ, ಲಕ್ಷ್ಮಿ ಅವರನ್ನು

ಮೇಲೆ ಹರಡಿಕೊಂಡಿದ್ದಳು, ಹೂವಿಗಾಗಿ ಕಾದಿದ್ದಳು ; ಆಗ, ಅವರು ಉಪಾಹಾರಕ್ಕೆ ಕುಳಿತುಕೊಳ್ಳುವ ಹೊತ್ತಿಗೆ, ಅವಳು ಮತ್ತು ಲಕ್ಷ್ಮಿ ಎಲ್ಲ ಬಗೆಯ ವಿಚಾರಗಳನ್ನೂ ಒಬ್ಬರಿಗೊಬ್ಬರು ಹೇಳಿಬಿಟ್ಟಿದ್ದರು. ಜೂಡಿಗೆಗೊತ್ತಿದ್ದ ತನ್ನ ಸ್ನೇಹಿತರ ಸಮಾಚಾರ, ಅಮ್ಮಣ್ಣಿಪಾಟಿಯ ವಿಚಾರವಾಗಿ ಅತ್ಯಂತ ಈಚಿನ ಸುದ್ದಿ, ಎಲ್ಲ ಲಕ್ಷ್ಮಿಗೆ ದೊರಕಿತ್ತು ; ಅಲ್ಲದೆ ಮುದ್ದು ಬೆನ್ ಈಗಲೇ ಚೆನ್ನಾಗಿ ತಮಿಳು ಮಾತಾಡಲು ಕಲಿತಿದ್ದ ಎಂಬುದೂ ತಿಳಿಯ ಬಂತು. ಅದೇ ತಾನೆ ಅವರು ಸುಟ್ಟ ಸಕ್ಕರೆ ಮೊಟ್ಟೆ ಮೀಠಾಯಿಯನ್ನು (ಕ್ಯಾರ ಮೆಲ್ ಕಸ್ಟರ್ಡ್, ತಿನ್ನುತ್ತಿದ್ದರು ; ಅದು ಪೂರ್ತಿ ಬಿಸಿಯಾಗಿಯೂ ಇರಲಿಲ್ಲ, ಪೂರ್ತಿ ಆರಿಯೂ ಇರಲಿಲ್ಲ, ತುಸಮಟ್ಟಿಗೆ ಸಪ್ಪೆ ಸಪ್ಪೆಯಾಗೇಇತ್ತು ; ಆದರೆ ಲಕ್ಷ್ಮಿ ಅದನ್ನು ಆಸೆಯಾಗಿ ತಿನ್ನುತ್ತಿದ್ದಳು ; ಆಗ ಅವಳ ತಂದೆ ಕುಮಾರ್ ಒಳಕ್ಕೆ ಬಂದರು. ಅವರು ಷರಟು ನಿಕ್ಕರು ಧರಿಸಿದ್ದರು ; ಏಕೋ ಏನೋ, ಹೆಚ್ಚು ವಯಸ್ಸಾದಂತೆ, ಹೆಚ್ಚು ಕೃಶವಾಗಿ, ಕಾಣುತ್ತಿದ್ದರು. ಅವರು ಬೇಗನೆ ಯಾವುದೋ ಒಂದನ್ನು ತಿಂದರು; ಬಳಿಕ ಅವರೂ ಜೂಡಿಯ ತಂದೆಯೂ ನಾಲೆಯ ದಿಕ್ಕನ್ನು ಹಿಡಿದು ಸಂಚಾರಕ್ಕೆಂದು ಹೊರಟರು. ಸ್ವಲ್ಪ ಹೊತ್ತಾದ ಮೇಲೆ, ಅವರು ಹಿಂದಿರುಗಿ ಬಂದಾಗ, ಒಬ್ಬರಿಗೊಬ್ಬರು ಬಹಳ ಒತ್ತಾಗಿ ನಡೆದು ಬರುತ್ತಿದ್ದರು ; ಕುಮಾರರ ಮುಖ ಸ್ವಲ್ಪ ಕರೆಕರೆಯಾಗಿದ್ದಂತೆ ಕಂಡುಬಂತು, ತಮ್ಮ ತಂದೆ ತಮ್ಮ ಕನ್ನಡಕದ ಗಾಜುಗಳನ್ನು ಒರಸಿಕೊಳ್ಳುತ್ತಿದ್ದುದನ್ನು ಜೂಡಿ ಕಂಡಳು.

"ಅವರು ಅಳುತ್ತ ಇದ್ದಾರೆ," ಎಂದು ಅವಳು ಉತ್ಸಾಹ ಕುಗ್ಗಿ ನುಡಿದಳು.

"ಅವರು ಅಳುತ್ತ ಇದ್ದರೆ, ಅದು ನಮಗೆ ತಿಳಿಯಬಾರದು ಎಂದು ಅವರ ಇಷ್ಟ," ಎಂದರು ಅವಳ ತಾಯಿ. "ಸ್ವಲ್ಪ ಕಾಫಿತೆಗೆದುಕೊಳ್ಳೋಣ. ಒಳ್ಳೆಯದು, ಕುಮಾರ್, ನಿಮ್ಮನ್ನು ನಾವು ಮತ್ತೆ ಕಂಡದ್ದು ತುಂಬ ಸಂತೋಷ, ಲಕ್ಷ್ಮಿಯನ್ನು ಬಿಟ್ಟು ಇರುವುದಕ್ಕೆ ಜೂಡಿಗೆ ತುಂಬ ಕಷ್ಟವಾಗಿದೆ."

ಜೂಡಿ ಮತ್ತು ಲಕ್ಷ್ಮಿ ಒಬ್ಬರ ಕಡೆಗೆ ಒಬ್ಬರು ನೋಡಿದರು. ಹಾಗೆ ಹೇಳಿದ್ದು, ಶುದ್ಧ ಅವಿವೇಕ ; ಆದರೆ ನಿಜ. ತುಸುಹೊತ್ತಾದ ಮೇಲೆ, ಲಕ್ಷ್ಮಿ ಹೇಳಿದಳು : "ಆದರೆ, ನೀನು ನನ್ನ ನೃತ್ಯದ ತರಗತಿಗೆ ಬರುತ್ತೀಯೆ ಅಲ್ಲವೆ, ಜೂಡಿ."

"ಆಮೇಲೆ ನಮ್ಮ ಮನೆಗೆ ಹೋಗೋಣ, ನನ್ನ ಹೆಂಡತಿ ನಮಗೆ ಒಂದು ಕಪ್ ಚಹ ಮಾಡಿಕೊಡುತ್ತಾಳೆ", ಎಂದರು ಕುಮಾರ್.

ಲಕ್ಷ್ಮಿ ಯೋಚಿಸಿದಳು : ಒಳ್ಳೆಯದಾಯಿತು. ಅವರಿಗೆ ಕಾಲ ಸಿಕ್ಕಿದ

ಜೂಡಿಯ ತಂದೆ ಕೇಳಿದರು.

"ಓ, ಕೆಲವು ಸಲ ವರ್ಷಕ್ಕೆ ಶೇಕಡ ನೂರಕ್ಕೆ ನೂರು ಬಡ್ಡಿ ! ಅಥವಾ ಇನ್ನೂ ಹೆಚ್ಚು. ಅದು ಸರಿಯಲ್ಲ, ಅವರು ಶೇಕಡ ಇಪ್ಪತ್ತೈದರಷ್ಟು ಹಾಕಿದರೂ ಕೂಡ ಅಷ್ಟು ಕೆಟ್ಟದಾಗಿರುವುದಿಲ್ಲ. ಸರ್ಕಾರಕ್ಕೆ ಯಾರಾದರೂ ತಿಳಿಯ ಹೇಳಲಾರರೆ?"

"ಸಾಲ ಕೊಡುವ ಯೋಜನೆಗಳು ಕೆಲವು ಇವೆ–"

"ಹೌದು, ಹೌದು," ಎಂದಳು ಲಕ್ಷ್ಮಿ; "ಆದರೆ ಸಾಲದು ; ಆದರೂ, ಮಾಡಿರುವಷ್ಟಕ್ಕೆ ನಾವು ಕೃತಜ್ಞರಾಗಿದ್ದೇವೆ."

ಈಗ ಅವರೆಲ್ಲ ಅದರ ಬಗೆಗೆ ಅಷ್ಟೊಂದು ಸಂತುಷ್ಟರಾಗಿದ್ದರೆ, ಇದಕ್ಕೆ ಮೊದಲು ಇನ್ನೂ ಹೀನಸ್ಥಿತಿಯಾಗಿದ್ದರಿಬೇಕು. ಆ ತರುಣನು ಅವಳ ತಂದೆಗೆ ಕೆಲವು ಅಂಕಿಗಳನ್ನು ತಿಳಿಸುತ್ತಿದ್ದ–ಅಷ್ಟು ಜನ ಇಷ್ಟು ಜನ ಎಂದು. ಅವರಿಗೆಲ್ಲ ಸಹಾಯ ಮಾಡುವುದು ಹೇಗೆ ?

ವಿಶ್ರಾಂತಿ ಮಂದಿರದಲ್ಲಿ, ಜೂಡಿ ಲಕ್ಷ್ಮಿಯನ್ನು ತನ್ನ ಸ್ವಂತ ಕೊಟಡಿಗೆ ಕರೆದುಕೊಂಡು ಹೋದಳು ; ಅದಕ್ಕೆ ಸೇರಿದ ಹಾಗಿದ್ದು ಬಾಗಿಲು ತೆರೆದಿದ್ದ ಸ್ನಾನದ ಮನೆಯನ್ನು ಅವಳು ಆಶೆಯಿಂದ ದೃಷ್ಟಿಸಿದ್ದನ್ನು ಕಂಡಳು. "ಹೋಗು ಲಕ್ಷ್ಮಿ, ತುಂತುರು ಧಾರೆಯ ಸ್ನಾನಮಾಡು, ಹೋಗು ! ನೋಡಲ್ಲಿ, ಅಲ್ಲೆ ನನ್ನ ಸಾಬೂನು, ಟವಲು......."

ಒಂದು ಕ್ಷಣಕಾಲ ಲಕ್ಷ್ಮಿ ಹಿಂದೆ ಮುಂದೆ ನೋಡಿದಳು, ಆಮೇಲೆ ಅದು ಅತಿಯಾಯಿತೆನಿಸಿತು–ನಿಲ್ಲದೆ ಸುರಿಯುವ ತುಂತುರು ಸ್ನಾನದ ಕೊಳಾಯಿ, ತಾವು ಇಟ್ಟುಕೊಂಡಿದ್ದಂತಹ ರಂಧ್ರಗಳುಳ್ಳ ಬರಿಯ ಬಕೆಟ್ಟು ಅಲ್ಲ. ಸ್ವಲ್ಪ ಜೂಡಿಯ ಗಂಧವನ್ನೆ ಕೊಡುತ್ತಿದ್ದ ಜೂಡಿಯ ಸಾಬೂನು–ಅವಳ ಟವೆಲು. "ಒಹ್, ಜೂಡಿ, ನನ್ನ ಕೂದಲನ್ನು ತೊಳೆದುಕೊಳ್ಳುವುದಕ್ಕಾದರೂ ಆದರೆ !"

"ಬೇಕಾದಷ್ಟು ಹೊತ್ತಿದೆ," ಎಂದು ಹೇಳಿ, ಉಪಾಹಾರದ ವೇಳೆಯನ್ನು ಸ್ವಲ್ಪ ಮುಂದಕ್ಕೆ ಹಾಕಬೇಕೆಂದು ಕೇಳುವುದಕ್ಕಾಗಿ ಜೂಡಿ ತಾಯಿಯ ಬಳಿಗೆ ಓಡಿದಳು. ಬಳಿಕ ತಟ್ಟನೆ ಅವಳು ಏನನ್ನೋ ಯೋಚಿಸಿಕೊಂಡಳು, ಬಿಡಾರದ ಮನೆಯ ತೋಟದೊಳಕ್ಕೆ ಹೋಗಿ, ಕೆಲವು ಹೂಗಳನ್ನು ಕದ್ದುಕೊಂಡಳು ; ಲಕ್ಷ್ಮಿ ತನ್ನ ಕೂದಲಿನಲ್ಲಿ ಮುಡಿಯಲು ಕೆಲವು, ಲಕ್ಷ್ಮಿ ಮದರಾಸಿನಲ್ಲಿ ಮಾಡುತ್ತಿದ್ದಂತೆ ಅವಳ ಕೂದಲಿನಲ್ಲಿ ಸಿಕ್ಕಿಸಲು ಕೆಲವು, ಇದು ಅವಳ ಆಶೆ.

ಲಕ್ಷ್ಮಿ ತನ್ನ ನೀಳವಾದ, ಅಲೆ ಅಲೆಯಾಗಿದ್ದ ಒದ್ದೆ ಕೂದಲನ್ನು ಬೆನ್ನ

ಅನಂತರ ದೊಡ್ಡ ಹುಡುಗಿಯರ ಸರತಿ ಬಂತು ; ಆದರೆ ಮೊದಲು, ಮೋಹಿನಿ ಅವಳ ಬಳಿಗೆ ಓಡಿಹೋಗಿ, ಯಾವುದೋ ಬಲು ನಾಜೂಕಾದ ವಸ್ತು ಎನ್ನುವಂತೆ ಅವಳ ರೇಷ್ಮೆ ಸೀರೆಯನ್ನು ಮುಟ್ಟಿ, ತಟ್ಟನೆ ಪಿಸುಮಾತಿನಲ್ಲಿ ಹೇಳಿದಳು : "ನೀವು ನಮ್ಮನ್ನು ಬಿಟ್ಟು ಹೋಗುವುದಿಲ್ಲ ತಾನೆ ?"

"ಇಲ್ಲ, ಇಲ್ಲ" ಎಂದಳು ಲಕ್ಷ್ಮಿ, ಬಹುಶಃ ಒಂದು ದಿನ ಇದೆಲ್ಲ ಮುಗಿದು ಹೋಗುವುದು,–ಅದೃಷ್ಟ ಬದಲಾಯಿಸುವುದು–ಕಡೆಗೂ ತಾನು ಅವರನ್ನು ಬಿಟ್ಟು ಹೋಗಬೇಕಾದೀತು, ಎಂದು ಮೊದಲ ಬಾರಿಗೆ ಅವಳಿಗೆ ತೋರಿತು.

ಆದರೆ ಈಗ ಅವಳು ಮನಸ್ಸನ್ನೆಲ್ಲ ಒಂದೇ ಕಡೆ ನಿಲ್ಲಿಸಬೇಕು, ಹಿಂದಿನ ದಿನಗಳಲ್ಲಿ ತಾನು ನೃತ್ಯ ಮಾಡುತ್ತಿದ್ದಾಗ ಮಾಡುತ್ತಿದ್ದಂತೆ ಸಾಧ್ಯವಿರುವ ಮಟ್ಟಿಗೆ ತನ್ನ ಶಿಕ್ಷಣ ಕಾರ್ಯದಲ್ಲಿ ತಾನು ತಲ್ಲೀನವಾಗಬೇಕು. ಕಣ್ಣುಗಳ ಮೂಲಕವೂ ಮರದ ತುಂಡಿನ ಮೇಲೆ ಹಾಕುವ ಹೊಳಲುಕೊಡುವ ಕಚ್ಚು ಏಟುಗಳ ತಾಳದ ಮೂಲಕವೂ ತನ್ನ ಮತ್ತು ನೃತ್ಯ ಮಾಡುವ ಪ್ರತಿಯೊಬ್ಬರ ನಡುವೆ ಒಂದು ಸಂಬಂಧವನ್ನು ಕಲ್ಪಿಸಿಕೊಂಡಳು. ಆ ತಾಳದ ಏಟು ಒಮ್ಮೆ ಗೆಲವಾಗಿರುವುದು, ಒಮ್ಮೆ ಖಿನ್ನತೆಯನ್ನು ಸೂಚಿಸುವುದು, ಇನ್ನೊಮ್ಮೆ ಚಿಗಿದಂತಿರುವುದು, ಮತ್ತೊಮ್ಮೆ ತೂಗಿ ತೊನೆದಂತಿರುವುದು. ಎಷ್ಟು ಮೆಚ್ಚಿಕೊಳ್ಳುತ್ತಿದ್ದರು. ಅದನ್ನು ಆ ಹುಡುಗಿಯರು, ಆ ನೃತ್ಯದಲ್ಲಿ ಅದು ಹೇಗೆ ಅವರು ಒಂದು ಬದುಕನ್ನೆ ಕಂಡುಕೊಂಡಿದ್ದರು.

ಕೊನೆಯಲ್ಲಿ, ಜೂಡಿಯ ತಾಯಿ ಅವಳನ್ನು ಕೇಳಿದರು : "ಆದರೆ ಅವರು ಹಳ್ಳಿಯಲ್ಲಿ ತಾವೇ ಕುಣಿಯುತ್ತಾರೆಯೋ ?"

"ಬಹಳವೇನಿಲ್ಲ. ಅವರು ಒಂದು ಸುತ್ತಾಗಿ ಕುಳಿತುಕೊಳ್ಳುವರು, ಹಾಡಿಗೆ, ತಕ್ಕ ಹಾಗೆ ಒಲೆಯುವರು. ಅವರು ನೀಳವಾದ ಕತೆ ಹಾಡುಗಳನ್ನು ಕಟ್ಟುವರು. ಹೆಚ್ಚಾಗಿ ಕುಣಿಯುವವರು ಗಂಡಸರು, ಆದರೆ ತಾವು ತಾವೆ ಕುಣಿಯುವರು. ಇತರ ಹೆಂಗಸರೊಂದಿಗೆ ಗುಡಿಸಿಲುಗಳಲ್ಲಿ ಇದ್ದುಕೊಂಡು, ಸ್ವಲ್ಪ ದೂರದಿಂದ ಮಾತ್ರ ನಾನು ಅದನ್ನು ನೋಡಿದೇನೆ. ಬಹುಶಃ ಪೊಂಗಲ್ ಹಬ್ಬದ ದಿನ ಅವರು ಹೆಚ್ಚಿಗೆ ಕುಣಿದಾರು ; ಅವರು ಸುಖ ಸಂತೋಷದಿಂದ ಇರುತ್ತಾರೆ ಆಗ–ಅಂದರೆ, ಸುಗ್ಗಿಯ ಫಸಲು ಚೆನ್ನಾಗಿದ್ದರೆ ಮಾತ್ರ." ಅವಳ ಎದ್ದು ನಿಂತುಕೊಂಡಳು ; ತರಗತಿಯವರು ಚಾಪೆಯನ್ನೂ ಮರದ ತುಂಡನ್ನೂ ಅತ್ತ ಇಟ್ಟುಬಿಟ್ಟರು. ಕುರುಡ ತನಗೆ ತಾನೆ ಮಾತಾಡಿಕೊಳ್ಳುತ್ತ, ಕಾಲೆಳೆದು ಹಾಕುತ್ತ, ಹೊರಕ್ಕೆ ಹೊರಟ, ತನ್ನ ತಾಯಿ ಸಿದ್ಧರಾಗಿರುವರೆ, ಮನೆಯಲ್ಲಿ ಎಲ್ಲ

ಹಾಗಾಯಿತು, ನನ್ನ ತಾಯಿಯೂ ಸರಸ್ವತಿಯೂ ಸಿದ್ಧವಾಗಿರುತ್ತಾರೆ, ಪರಿಸ್ಥಿತಿ ಅಷ್ಟೊಂದು ಕೆಟ್ಟದಾಗಿ ಕಾಣುವುದಿಲ್ಲ. ಜೂಡಿಯೊಬ್ಬಳೆ ನೋಡಿದ್ದರೆ ನಾನು ಚಿಂತಿಸುತ್ತಿರಲಿಲ್ಲ–ಆದರೆ ಅವಳ ತಂದೆ ತಾಯಿ ನೋಡಕೂಡದಾಗಿತ್ತು. ಅವರೇನೋ ಒಳ್ಳೆಯವರೇ..........ಆದರೆ, ಹಾಗಿದ್ದರೂ ಕೂಡ......ಅವಳು ತನ್ನ ತಂದೆಯ ಗಮನವನ್ನು ಸೆಳೆದಳು ; ಅವರು ಮುಗುಳ್ನಗೆ ನಕ್ಕು ನುಡಿದರು: "ನಾನು ನಿನಗೆ ಇನ್ನೊಂದು ಸೀರೆ ತೆಗೆದುಕೊಂಡುಬಂದೆ, ಲಕ್ಷ್ಮಿ ನಿನ್ನ ತರಗತಿಗೆ ಹೋಗುವಾಗ ಅದು ನಿನಗೆ ಬೇಕಾದೀತು ಎಂದುಕೊಂಡೆ" ಹಳೆಯ ಸುದ್ದಿಪತ್ರಿಕೆಯಲ್ಲಿ ಕಟ್ಟಿದ್ದ ಕಟ್ಟನ್ನು ಅವರು ಅವಳ ಕೈಗಿತ್ತರು ; ಅಲ್ಲದೆ– ಓಹೋ, ಅವಳ ದೀಪಾವಳಿಯ ಸೀರೆಯನ್ನೂ ಅದಕ್ಕೊಪ್ಪುವ ಕುಪ್ಪಸವನ್ನೂ ಅವರು ತಂದಿದ್ದರು. ಈ ಏರ್ಪಾಡು ತನ್ನ ತಾಯಿಯದೆ ಆಗಿದ್ದಿರಬೇಕು. ಈಗಲೀಗ ಅವಳು ತನ್ನ ಯಥಾಸ್ಥಿತಿಯಲ್ಲಿ ಇದ್ದಹಾಗಾಗುವುದು. "ನಿನ್ನ ಕೊಟಡಿಗೆ ಓಡಿ ಹೋಗುತ್ತೇನೆ, ಜೂಡಿ !" ಎಂದಳು ಅವಳು. ಓಹೋ, ಆ ಸೊಗಸಾದ ಸ್ನಾನದಮನೆ ; ಸುರಿಯುವ ನಲ್ಲಿಯ ಬಳಿ ಸಾಬೂನು ಹಾಕಿಕೊಂಡು ಇನ್ನೊಮ್ಮೆ ಮೈತೊಳೆದುಕೊಳ್ಳುವುದು !

ಅವಳ ತರಗತಿಯವರೆಲ್ಲ ಅಲ್ಲಿ ಕಾದುಕೊಂಡಿದ್ದರು ; ಅವರು ಸಮಾಜ ಸೇವಾ ಕೇಂದ್ರಕ್ಕೆ ಹಿಂಮರಳಿದಾಗ, ವಾಸ್ತವವಾಗಿ ಅಲ್ಲಿ ಬೇಕಾದಷ್ಟು ಜನ ಇತರ ಹುಡುಗಿಯರು ಸುತ್ತ ಇಣಿಕಿ ನೋಡುತ್ತಿದ್ದರು. ತರಗತಿಯವರು ಸ್ಥಳವನ್ನು ಗುಡಿಸಿ ಚೊಕ್ಕಟಪಡಿಸಿದ್ದರು ; ಇದಕ್ಕೆ ವಿಶೇಷ ಸಂದರ್ಭದ ಸ್ವರೂಪ ಕೊಡುವುದಕ್ಕಾಗಿ ಯಾರೋ ಒಬ್ಬರು ಒಂದು ಕೋಕಾ–ಕೋಲ ಪ್ರಕಟನೆಯನ್ನು ಹುಡುಕಿ ತಂದು ಹಚ್ಚಿದ್ದರು. ಜೂಡಿಯ ತಂದೆ ಕುಮಾರರೊಂದಿಗೂ ರಾಷ್ಟ್ರೀಯ ವಿಸ್ತರಣ ಯೋಜನೆಯ ತರುಣನೊಂದಿಗೊ ನಡೆದರು ; ಆತನ ಮುಂದೆ ನೃತ್ಯ ಮಾಡಲು ಹುಡುಗಿಯರು ಲಜ್ಜೆ ಪಟ್ಟುಕೊಳ್ಳುತ್ತಿದ್ದರು. ಕುರುಡ ಮನುಷ್ಯ ತನ್ನ ಮದ್ದಳೆಯೊಂದಿಗೆ ಅಲ್ಲಿದ್ದ ; ವಲ್ಲಿ ಲಕ್ಷ್ಮಿಗೆಂದು ಒಂದು ಚಾಪೆಯನ್ನು ಹಾಸಿ ಸಿದ್ಧಪಡಿಸಿ, ಅವಳು ತಾಳಹಾಕಲು ಮರದ ತುಂಡನ್ನೂ ಅದರ ಪಕ್ಕದಲ್ಲಿ ಕೋಲನ್ನೂ ಇರಿಸಿದ್ದಳು ಒಬ್ಬೊಬ್ಬರಿಗೆ ಒಂದು ಸಲದಂತೆ, ಕಥಕ್ ನೃತ್ಯದ ತಾಳಗಳನ್ನು ಬಾರಿಸುತ್ತ, ತಪ್ಪಿದ ಕಡೆ ಅವರನ್ನು ಸರಿಪಡಿಸುತ್ತ ಮೊದಲು ಚಿಕ್ಕ ಮಕ್ಕಳಿಗೆ ಹೇಳಿಕೊಟ್ಟಳು ಅವಳು. ಇಬ್ಬರು ಮೂವರು, ತಾಯಂದಿರು ಮೌನದಿಂದ ಗಮನಿಸಿ ನೋಡುತ್ತ ಮೂಲೆಗಳಲ್ಲಿ ಚಕ್ಕಳಬಕ್ಕಳ ಹಾಕಿ ಕುಳಿತಿದ್ದರು. ಬಳಿಕ, ಗಂಭೀರವಾಗಿ, ಉತ್ತೇಜನಗೊಂಡು, ಅವಳು ಎಲ್ಲರಿಗೂ ಹೇಳಿಕೊಡತೊಡಗಿದಳು.

"ಓಹೋ, ಹೌದು ! ನನಗೆ ಎಂದಾದರೂ ಕಲಿಸುವುದಕ್ಕೆ ಆಗುತ್ತದೆಯೋ ಇಲ್ಲವೋ ನಾನು ಕಾಣೆ," ಎಂದಳು ಜೂಡಿ "ಪ್ರಾರಂಭ ಮಾಡುವುದು ವಿಪರೀತ ಕಷ್ಟವಾಗಿತ್ತಲ್ಲವೆ ?"

"ಬಹಳ ಕಷ್ಟವಾಗಿತ್ತು," ಎಂದಳು ಲಕ್ಷ್ಮಿ ; "ನಾನು ಬಹಳ ಚಿಕ್ಕವಳು ಎಂದು ಅವರ ಭಾವನೆ." ನಿಜವಾದ ಉಪಾಧ್ಯಾಯರು ಬರುವವರೆಗೂ ತಾನು ಹಿಂದಿರುಗುವುದಿಲ್ಲವೆಂದು ಹೇಳುತ್ತ, ಮೈಯನ್ನು ಕುಲುಕಿಸಿ, ಓದು ಬರಹದ ತರಗತಿಯನ್ನು ಬಿಟ್ಟು ಹೊರಟು ಹೋದದ್ದನ್ನು ಅವಳು ಜ್ಞಾಪಿಸಿಕೊಂಡಳು. ಆದರೆ ಇತರರು ಬಂದಿದ್ದರು. ಹೌದು, ಇನ್ನೂ ಬರುತ್ತಲೂ ಇದ್ದರು.

"ನೀನು ಕಾಗದ ಬರೆಯುತ್ತೀಯೆ, ಅಲ್ಲವೆ ?" ಎಂದು ಕೇಳಿದಳು ಜೂಡಿ.

"ಆದರೆ ನಾನು ಬರೆಯಬೇಕಾದ್ದು ಏನಿರುತ್ತದೆ ? ನೀನು–ನೋಡ ಬೇಕಾದ್ದನ್ನೆಲ್ಲ ನೀನು ನೋಡಿದ್ದೀಯೆ." ಇದ್ದಕ್ಕಿದ್ದ ಹಾಗೆ ಲಕ್ಷ್ಮಿಗೆ ಬಹಳ ದುಃಖವೆನಿಸಿತು. ಜೂಡಿ ಹಿಂದಿರುಗಿ ಹೋಗುವಳು–ಪ್ರತಿಯೊಂದಕ್ಕೂ ಹಿಂದಿರುಗುವಳು. ಹಿಂದೆ ಉಳಿಯುವವಳು ತಾನು.

"ಓ, ಆದರೆ ತರಗತಿ ಹೇಗೆ ನಡೆಯುತ್ತ ಇದೆ ಎಂಬುದನ್ನು ನಾನು ತಿಳಿಯಬೇಕು. ಅದರ ವಿಚಾರವಾಗಿ ಅಮ್ಮಣ್ಣಿ ಪಾಟಿಗೆ ನಾನು ಎಲ್ಲವನ್ನೂ ತಿಳಿಸುತ್ತೇನೆ."

"ಆದರೆ, ಅವರಿಗೆ ಹೇಳಬೇಡ..." ಎಂದು ಲಕ್ಷ್ಮಿ ಮೊದಲು ಮಾಡಿ, ಆ ಬಳಿಕ ಹೇಳಿದಳು : "ಜೂಡಿ, ದಯವಿಟ್ಟು ಅದನ್ನು ಮಾತ್ರ ಅವರಿಗೆ ಹೇಳಬೇಡ–ನಾನು ಒಂದು ಕೊಳಕು ಹಳೆಯ ಸೀರೆ ಉಟ್ಟಿದ್ದ ಸಂಗತಿಯನ್ನು ಮತ್ತೆ, ನಮ್ಮ ಹತ್ತಿರ ತುಂತುರು ಸ್ನಾನದ ಕೊಳಾಯಿ ಇಲ್ಲದಿರುವುದನ್ನು ಮತ್ತೆ ನಮ್ಮ ತಂದೆ ನೋಡುವುದಕ್ಕೆ ಹೀಗೆ, ಹೀಗೆ–"

"ನನಗೆ ಅರ್ಥವಾಗುತ್ತೆ," ಎಂದಳು ಜೂಡಿ; "ನಿಜವಾಗಿಯೂ ನನಗೆ ಅರ್ಥವಾಗುತ್ತೆ ! ಅಷ್ಟೇ ಅಲ್ಲ, ಹುಡುಗಿಯರಲ್ಲಿ ಕೂಡ ನಾನು ಯಾರಿಗೂ ತಿಳಿಸುವುದಿಲ್ಲ ! ಅದು ಹೇಗಿದ್ದರೂ ಇರಲಿ, ಪಾಠ ಹೇಳಿಕೊಡಲು ನಿನ್ನ ಕೈಲಿ ಆಗಬೇಕಾದರೆ, ನೀನು ವಿಪರೀತ ಬುದ್ಧಿವಂತೆ ಎಂದೇ ನನ್ನ ಭಾವನೆ."

ಅವಳ ತಾಯಿಯ ಸಾಮಾನುಗಳು ಕೆಲವು ವಿಶ್ರಾಂತಿ ಮಂದಿರದ ಮೇಜಿನ ಮೇಲೆ ಬಿದ್ದಿದ್ದುವು ; ಅವುಗಳಲ್ಲಿ ಅವರ ಕಪ್ಪು ಗಾಜಿನ ಕನ್ನಡಕವೂ ಒಂದು ಅದನ್ನು ಅವರು ಯಾವಾಗಲೂ ತಮ್ಮ ಜೊತೆ ತರುತ್ತಿದ್ದರೇ ಹೊರತು ಅದನ್ನು

ಸಿದ್ಧವಾಗಿರುವುದೆ ? ಹೌದು–ಅದೊ ಅಲ್ಲಿ, ಸರಸ್ವತಿ ಕೈಬೀಸುತ್ತ ಇದ್ದಾಳೆ–ತಕ್ಕ ಸೀರೆ ಸಹ ಉಟ್ಟಿದ್ದಾಳೆ, ಹೂ ಮುಡಿದಿದ್ದಾಳೆ.

ಸರಸ್ವತಿ ಹರುಕು ಹರುಕು ಹಳೆಯ ಲಂಗ ಉಟ್ಟುಕೊಂಡು ಬಿಂದಿಗೆ ತೊಳೆಯುತ್ತ ಇದ್ದುದನ್ನು ತಾನು ಕಂಡಿದ್ದೆ ಎಂದು ಅವಳಿಗೆ ತಿಳಿಸದೆ ಇರುವುದು ವಾಸಿ ಎಂದು ತಟ್ಟನೆ ಯೋಚಿಸಿದಳು ಜೂಡಿ. ಅವರು ಇಂಜಿನಿಯರ ಮನೆಯ ಕಡೆಗೆ ಹೊರಟರು ; ಏನಿಲ್ಲವೆಂದರೂ ಅದರ ಸುತ್ತ ಒಂದು ತುಂಡು ಬೇಲಿಹಾಕಿ. ಒಂದು ತೋಟ ಮಾಡುವ ಪ್ರಯತ್ನ ನಡೆದಿತ್ತು. ವರಾಂಡದಲ್ಲಿದ್ದ ಕುರ್ಚಿಗಳು ಮದರಾಸಿನ ವಾಸದ ಮಹಡಿಯಿಂದ ತಂದಿದ್ದ ಕೆಲವು ಹಳೆಯ ಕುರ್ಚಿಗಳು ; ಚಹಾಪಾತ್ರೆಗಳ ಅಣಿಯೂ ಅಷ್ಟೆ. ಆದರೆ ಲಕ್ಷ್ಮಿ ಅವರನ್ನು ಮನೆಯೊಳಕ್ಕೆ ಬನ್ನಿ ಎಂದು ಕರೆಯಲಿಲ್ಲ. ಅವಳ ತಾಯಿಯಾಗಲಿ ಕರೆಯಲಿಲ್ಲ. ಅಲ್ಲಿ ಮೂರು ಕೊಟಡಿಗಳಿವೆ ಎಂದು ಜೂಡಿ ಭಾವಿಸಿದಳು ; ಆದರೆ ಒಂದು ಅಡಿಗೆಯ ಮನೆಯಾಗಿದ್ದಿರಬಹುದು. ಯಾರೋ ಒಬ್ಬರು–ಜ್ಞಾನ ಅಮ್ಮಾಳ್ ಆಗಿದ್ದಿರಬಹುದೆ?–ಅವರ ಮನೆಯಲ್ಲಿ ಮಾರಾಟ ನಡೆದಿತ್ತೆಂದು ಅವಳ ತಾಯಿಗೆ ಹೇಳಿದ್ದರು. ಬಹುಶಃ ರೇಡಿಯೋ, ಉತ್ತಮವಾದ ಪೀಠ ಸಾಮಗ್ರಿಗಳು ಮುಂತಾದ ಬೆಲೆಬಾಳುವ ಸಾಮಾನುಗಳನ್ನು ಅವರು ಮಾರಬೇಕಾಗಿದ್ದಿರಬೇಕು. ಅಯ್ಯೊ ಪಾಪವೆ ; ಬೇಕಾದಷ್ಟು ಒಡವೆ ವಸ್ತುಗಳನ್ನು ಧರಿಸುತ್ತಿದ್ದ ಲಕ್ಷ್ಮಿಯ ತಾಯಿ ಈಗ ಬರಿಯ ಸಣ್ಣದೊಂದು ಸರವನ್ನು ಧರಿಸಿದ್ದುದು ತನ್ನ ಗೋಚರಕ್ಕೆ ಬಂದುದನ್ನು ತಟ್ಟನೆ ಅರಿತಳು ಅವಳು. ಆದರೆ ಅದನ್ನೆಲ್ಲ ಗಮನಿಸಕೂಡದು, ಏನನ್ನೇ ಆಗಲಿ ನೋಡಿದಂತೆ ತೋರಿಸಿಕೊಳ್ಳಕೂಡದು.

ಕಂದನ್‌ಗೆ ಯಾವುದೋ ಒಂದು ತರಹದ ದಡಾರ ಆಗಿದೆ ಎಂದು ತಿಳಿಯ ಬಂತು ; ಆದರಿಂದ ಜೂಡಿಯ ತಂದೆ ಅವನನ್ನು ಒಂದು ಸಲ ನೋಡಿದರು. ಏನೋ ಮುಲಾಮು ಕಳಿಸಿಕೊಡುವುದಾಗಿ ಹೇಳಿದರು ; ಅದರಿಂದ ಸ್ವಲ್ಪವೂ ತೊಂದರೆಯಾಗದು. ಏನೂ ಬದಲಾಯಿಸದೆ ಇದ್ದಂತೆ ಕಂಡು ಬಂದದ್ದೆಂದರೆ, ಇನ್ನೂ ಕಾಲ್ಗೆಜ್ಜೆ ಕಟ್ಟಿಕೊಂಡಿದ್ದ ಹೆಣ್ಣುಮಗು.

ಲಕ್ಷ್ಮಿ, ಸರಸ್ವತಿ, ಮತ್ತು ಕುಮಾರ್ ಎಲ್ಲರೂ ರಾತ್ರಿಯೂಟಕ್ಕಾಗಿ ವಿಶ್ರಾಂತಿಮಂದಿರಕ್ಕೆ ಹಿಂದಿರುಗಿದರು ; ಬಹಳ ಕಳಪೆಯಾದ ಚಹಾ ಕೊಟ್ಟದ್ದಕ್ಕಾಗಿ ಕ್ಷಮೆ ಕೇಳಿದರು,–ಸಕಾಲಕ್ಕೆ ತಮಗೆ ವಿಷಯ ಗೊತ್ತಿದ್ದಿದ್ದರೆ, ಎಂದುಕೊಂಡರು. –"ನೀನು ನನ್ನ ತರಗತಿಯನ್ನು ಮೆಚ್ಚಿಕೊಂಡೆ ತಾನೆ ?" ಎಂದು ಕೇಳಿದಳು ಲಕ್ಷ್ಮಿ.

# ೧೨. ಕ್ರಿಸ್‌ಮಸ್ ಮತ್ತು ಪೊಂಗಲ್

ಕುಮಾರ್ ಪೆನ್ಸಿಲಿನಿಂದ ಅಂಕಿಗಳನ್ನು ಬರೆದಿದ್ದ ಕಾಗದವನ್ನು ಅತ್ತ ತಳ್ಳಿಬಿಟ್ಟರು ; ಅದರ ಕೆಲಸ ಮುಗಿದಿತ್ತು. ಇದ್ದಕ್ಕಿದ್ದ ಹಾಗೆ ಅವರು ಮೇಜಿನ ಮೇಲೆ ತಲೆ ಬಗ್ಗಿಸಿ ಅದನ್ನು ಕೈಗಳಿಂದ ಹಿಡಿದುಕೊಂಡರು. ಎಲ್ಲವೂ ಕಪ್ಪಿಡಿದಿತ್ತು. ಆಗ ಲಕ್ಷ್ಮಿ, ಅವರ ಮಗಳು, ಒಂದು ತೋಳನ್ನು ಅವರ ಕೊರಳ ಸುತ್ತ ಸರಿಸಿ, ಅವರ ಹೆಗಲ ಮೇಲೆ ತಟ್ಟುತ್ತಿದ್ದಳು. "ಅಪ್ಪಾ, ಅಪ್ಪಾ, ಅದು ಏನು, ಅದು?"

ಅವರು ಮೇಲೆ ನೋಡಿ, ತಮ್ಮ ಕೂದಲೊಳಗೆ ಕೈ ಆಡಿಸಿದರು. ಬಳಿಕ, ಕಾಗದದ ಮೇಲೆ ತಮ್ಮ ಬೆರಳುಗಳಿಂದ ತಟ್ಟಿ, ನಿಧಾನವಾಗಿ ನುಡಿದರು : "ಇದೆಲ್ಲವೂ ಬಹಳ ಸುಲಭವಾಗಿಯೆ ಇದೆ. ಅದನ್ನು ಮಾಡುತ್ತ ಇದ್ದರೆ, ನನ್ನ ಮನಸ್ಸು ಇತರ ವಿಚಾರಗಳನ್ನು ಕುರಿತು ಆಲೋಚಿಸುತ್ತದೆ." ಅವರು ಇಂಗ್ಲಿಷಿಗೆ ಬದಲಾಯಿಸಿದರು ; ಏಕೆಂದರೆ, ತಮ್ಮ ಹೆಂಡತಿ ತಮ್ಮ ಮಾತನ್ನು ಕೇಳಿಸಿಕೊಂಡು, ತಾವು ಪಡುತ್ತಿದ್ದುದಕ್ಕಿಂತ ಹೆಚ್ಚು ಆತಂಕಪಡುವುದು ಅವರಿಗೆ ಇಷ್ಟವಿರಲಿಲ್ಲ. "ಲಕ್ಷ್ಮೀ, ನನ್ನ ಶಿಕ್ಷಣ ಮತ್ತು ನನ್ನ ಅನುಭವವನ್ನು ಇಟ್ಟುಕೊಂಡು ಅರ್ಧ ಗುಮಾಸ್ತನ, ಅರ್ಧ ಕೂಲಿಯಾಳಿನ ಕೆಲಸವನ್ನು ನಾನು ಮಾಡುತ್ತಿದ್ದೇನೆ, ಅದಕ್ಕೆ ಅನುಗುಣವಾಗಿ ನನಗೆ ಸಂಬಳ ಕೊಡುತ್ತಿದಾರೆ, ಇದು ಹೀಗೆಯೇ ಮುಂದುವರಿಯುತ್ತ ಹೋಗುತ್ತದೆ ಎಂಬುದನ್ನು ನಾನು ಅರಿತಿರುವಾಗ ಇದನ್ನೆಲ್ಲಾ ನೋಡಿದಾಗ, ಕಚೇರಿಯಲ್ಲಿದ್ದಾಗಿನ ಆ ಹಿಂದಿನ ದಿನಗಳಲ್ಲಿ ನಡೆಯುತ್ತ ಇದ್ದ ಅನ್ಯಾಯದ ಸಂಗತಿಗಳ ಗೊಡವೆಗೆ ನಾನು ಹೊಗಬಾರದಾಗಿತ್ತು– ಎಂದು ನನಗೆ ನಾನೇ ಹೇಳಿಕೊಳ್ಳುತ್ತೇನೆ. ಬಹುಶಃ ನಾನು ಕೂಡ ಆ ಹೊಲಸು ಹಣವನ್ನು ತೆಗೆದುಕೊಳ್ಳಬೇಕಾಗಿತ್ತು. ಕಡೆಯ ಪಕ್ಷ ಅದನ್ನು ನಾನು ಮಾಡಿದ್ದಿದ್ದರೆ, ನನ್ನ ಮೆದಳನ್ನು ನಾನು ಇನ್ನೂ ಉಪಯೋಗಿಸಬಹುದಾಗಿತ್ತು !"

"ಅಪ್ಪಾ, ನೀನು ನಿಜವಾಗಿ ಯೋಚಿಸುವುದು ಅದನ್ನಲ್ಲ" ಎಂದಳು ಲಕ್ಷ್ಮಿ "ಯಾವಾಗಲೂ ಹೀಗೆಯೆ ಇರುವುದಿಲ್ಲ."

"ತುಸ ಕಾಲ, ನಾನೂ ಹಾಗೆಯೇ ಯೋಚಿಸಿದೆ, ಕಳೆದ ತಿಂಗಳು ನಿನ್ನ ಜೂಡಿ ಮತ್ತು ಅವಳ ತಂದೆತಾಯಿ ಬಂದಮೇಲೆ ಮತ್ತೆ ಹಿಂದಿನಂತೆ ನಾನು ನಾನಾಗಿಯೇ ಇದ್ದುದು ವಿಚಿತ್ರವೆ. ಆದರೆ ಈಗ ಅವರು ನನ್ನನ್ನು

ಹಾಕಿಕೊಳ್ಳಲು ಜ್ಞಾಪಿಸಿಕೊಳ್ಳುತ್ತಿದ್ದುದೆ ವಿರಳ. ಜೂಡಿ ಅದನ್ನು ಅದರ ಗೂಡಿನಿಂದ ಹೊರತೆಗೆದು ಧರಿಸಿಕೊಂಡು, ಅದರ ಮೇಲ್ಗಡೆಯಿಂದ ಲಕ್ಷ್ಮಿಯನ್ನು ನೋಡಿದಳು. ಆಮೇಲೆ ಅದನ್ನು ಲಕ್ಷ್ಮಿ ಹಾಕಿಕೊಂಡಳು. ತಟ್ಟನೆ ಹೇಳಿದಳು ಅವಳು : "ಈ ಕನ್ನಡಕ ಹಾಕಿಕೊಂಡರೆ ನಾನು ಪೂರ್ತಿ ವಯಸ್ಸಾದವಳ ಹಾಗೆ ಕಾಣುತ್ತೇನೆಯೆ?"

"ಹೌದು," ಎಂದರು ಜೂಡಿಯ ತಾಯಿ ; "ನೀನು ಬಹುಮಟ್ಟಿಗೆ ಪೂರ್ತಿ ವಯಸ್ಸಾದವರ ಹಾಗೆಯೆ ಕಾಣುತ್ತಿ–ನಿನಗೆ ಆ ಹಾಳು ಪದಾರ್ಥ ಬೇಕಿದ್ದರೆ, ನೀನು ಅದನ್ನ ಸುಮ್ಮನೆ ಇಟ್ಟುಕೊ, ಲಕ್ಷ್ಮಿ ನಾನು ಅದನ್ನ ಉಪಯೋಗಿಸುವುದೇ ಇಲ್ಲ."

"ಬಾ, ನಿನ್ನನ್ನ ನೀನು ನೋಡಿಕೊ !" ಎಂದಳು ಜೂಡಿ. ಸರಸ್ವತಿ ಅವರನ್ನು ಹಿಂಬಾಲಿಸಿ ಜೂಡಿಯ ಕೊಟಡಿಯೊಳಕ್ಕೆ ಓಡಿಹೋದಳು ; ಎಲ್ಲರೂ ನಗತೊಡಗಿದರು.

"ಕುಮಾರ್, ನಿಮ್ಮ ಹುಡುಗಿ ಬಹಳ ಶಕ್ತಿವಂತೆ, ಅಂಥವರು ಇನ್ನೂ ಹೆಚ್ಚು ಮಂದಿ ಇದ್ದರೆ ಇಂಡಿಯಾ ದೇಶ ಇನ್ನೂ ಮೇಲಾದ ಸ್ಥಳವಾಗುವುದು," ಎಂದರು ಜೂಡಿಯ ತಂದೆ.

ಕುಮಾರರಿಗೆ ನಿಜವಾಗಿ ಸಂತೋಷವಾದಂತೆ ಕಂಡಿತು ; ಆದರೆ, ಮುಜುಗರಪಟ್ಟುಕೊಂಡು ಹೇಳಿದರು : "ಓ, ಅದು ಸರಿಯೆ, ಅದು ನಿಜ. ಹಳ್ಳಿಗಳಿಗೆ ನಾವು ಸಹಾಯಮಾಡಬೇಕು." ಬಳಿಕ ಎಂದರು : "ನಿಮ್ಮನ್ನು ನೋಡಿದ್ದು ಬಹಳ ಒಳ್ಳೆಯದಾಯಿತು. ಎಲ್ಲರೂ ನಮ್ಮನ್ನು–ಮರೆತುಬಿಟ್ಟು, ನಾವು ಇಲ್ಲದ ಹಾಗೆಯೆ, ಎಂದುಕೊಂಡಿದ್ದೆ."

ಅನಂತರ ಹುಡುಗಿಯರು ಓಡುತ್ತ ಒಳಕ್ಕೆ ಬಂದರು. "ನಾನು ಅವರನ್ನು ನೋಡಿಕೊಳ್ಳುತ್ತೇನೆ !" ಎಂದಳು ಲಕ್ಷ್ಮಿ. "ನಾನು ಒಳ್ಳೆ ಮೇಧಾವಿಯಂತೆ ಕಾಣುವೆನಂತೆ, ಜೂಡಿ ಹೇಳುತ್ತಾಳೆ. ನಾನು ಅವಳ ಹಿಂದಿ ಉಪಾಧ್ಯಾಯಿನಿಯ ಹಾಗೆ ಕಾಣುತ್ತೇನೆ–ಇನ್ನು ನನ್ನ ತರಗತಿಯವರು ಮೇಲಾಗಿ, ಎಷ್ಟೋ ಮೇಲಾಗಿ ನಡೆದುಕೊಳ್ಳುವರು ಎಂತ ನನಗೆ ತೋರುತ್ತೆ !"

ಅಲ್ಲದಿರಬಹುದು. ಅದು ಬರಿಯ–ಸೋಮಾರಿತನ. ಅದು ಅಷ್ಟು ಕೆಟ್ಟದ್ದಲ್ಲ. ಅಲ್ಲವೆ ?''

“ಆದರೆ, ಅಪ್ಪಾ, ಅದೂ ಕೆಟ್ಟದ್ದೆ. ನೀನು–ಓ, ನೀನು ಎಷ್ಟೊಂದು ಒಳ್ಳೆಯದು ಮಾಡಬಲ್ಲೆ !''

ಕುಮಾರ್ ಹೇಳಿದರು : “ಬಹುಶಃ ನಾನು ಯೋಚಿಸಿಕೊಂಡಿರುವಷ್ಟು ಆಗದು. ಆದರೂ ಕೂಡ, ಸ್ವಲ್ಪ ಮಟ್ಟಿಗೆ ಆದೀತು ಆದರೆ, ಲಕ್ಷ್ಮಿ, ಇದು ಯಾವುದನ್ನೂ ನೀನು ಎಂದಿಗೂ ಪುನರುಚ್ಚರಿಸಕೂಡದು''

ಲಕ್ಷ್ಮಿ ಅವರ ತಲೆಯನ್ನು ನೇವರಿಸುತ್ತ ನುಡಿದಳು : “ಅಪ್ಪಾ, ಪುರಾಣ ಕಥೆಗಳಲ್ಲಿ ಹೇಳುವುದಿಲ್ಲವೆ ಹಾಗೆ, ಇದು ಸತ್ವಪರೀಕ್ಷೆಯ ಕಾಲ. ನಾಯಕ ವೀರನು ಅಡವಿಯ ಪಾಲಾಗಿರುವಾಗ, ಅವನು ಹುಳಗಳೊಂದಿಗೆ ಹೋರಾಡ ಬೇಕು. ಆದರೆ ಇಲ್ಲಿ ಹುಲಿ ಒಂದಿಲ್ಲ ಅಷ್ಟೆ, ಮುಖ್ಯ ಇಂಜಿನಿಯರು ಮಾತ್ರ.''

“ಆದರೆ ಅವರೊಂದಿಗೆ ಹೋರಾಡಲು ನನಗೆ ಅವಕಾಶ ಕೊಟ್ಟಿಲ್ಲ, ಅಷ್ಟೆ!'' ಎಂದರು ಅವಳ ತಂದೆ. ಹೀಗಿದ್ದರೂ ಕೂಡ, ಅವರು ಸ್ವಲ್ಪ ಸಮಾಧಾನಗೊಂಡಿದ್ದಂತೆ ಕಂಡಿತು.

ಆಗ ಯಾರೋ ಒಬ್ಬರು, ಹಳ್ಳಿಯವರಲ್ಲಿ ಒಬ್ಬನಿರಬೇಕು, ಅವರನ್ನು ಕೂಗಿ ಕರೆಯುತ್ತಿದ್ದರು. ಕುಮಾರ್ ಕೆಳಗಡೆಗೆ ಹೋಗಿ, ಉದ್ದನೆಯಾಕಾರದ ಕಾಗದದ ಕಟ್ಟೊಂದನ್ನೂ ಕಾಗದವೊಂದನ್ನು ಹಿಡಿದುಕೊಂಡು ಹಿಂತಿರುಗಿದರು. “ಲಕ್ಷ್ಮೀ, ಇವು ನಿನಗೆ,'' ಎಂದರು ಅವರು.

ಲಕ್ಷ್ಮಿ ಮೊದಲು ಕಾಗದವನ್ನು ಒಡೆದಳು ; ಅದು ಜೂಡಿ ಕಳಿಸಿದ್ದ ಕ್ರಿಸ್‌ಮಸ್ ಕಾರ್ಡು, ಇಂಗ್ಲಿಷಿನಲ್ಲಿತ್ತು ; ಅದರಲ್ಲಿ, ಹಿಮದರಾಶಿ ಮತ್ತು ಕೆಂಪು ಕಂಬಳಿ ಹೊದೆದಿದ್ದ ಒಬ್ಬ ಗಡ್ಡದ ಮುದುಕನ ಚಿತ್ರವೂ ಇತ್ತು–ಆ ಮನುಷ್ಯನನ್ನು ‘ಕ್ರಿಸ್‌ಮಸ್ ತಾತ’ ಎಂದು ಅವರು ಕರೆಯುತ್ತಿದ್ದುದು ಅವಳ ನೆನಪಿಗೆ ಬಂತು. ಜೂಡಿ ತನ್ನ ಪ್ರೀತಿಯನ್ನು ತಿಳಿಸಿ, ತನ್ನ ತಂದೆ ತಾಯಿ ತರಗತಿಗಾಗಿ ಏನೋ ಒಂದು ಪದಾರ್ಥವನ್ನು ಕಳಿಸುತ್ತಿರುವುದಾಗಿ ಹೇಳಿದ್ದಳು. “ಅದೇ ಆ ಕಟ್ಟು !'' ಎಂದು ಲಕ್ಷ್ಮಿ ಉತ್ಸಾಹಗೊಂಡು ಹೇಳಿ, ಕಟ್ಟಿನ ದಾರವನ್ನು ಎಚ್ಚರಿಕೆಯಿಂದ ಬಿಚ್ಚಿ, ಸುತ್ತಿದ್ದ ರಟ್ಟನ್ನೂ ಕಾಗದವನ್ನೂ ಬಿಚ್ಚಿದಳು. “ಓ, ನೋಡಿಲ್ಲಿ, ಇದು ಭೂಪಟ–ಎರಡು ಭೂಪಟಗಳು–ಭಾರತದ ಭೂಪಟ ಒಂದು, ಪ್ರಪಂಚದ ಭೂಪಟ ಒಂದು !'' ಎಂದಳು ಅವಳು.

ಅವಳ ತಂದೆ ಮಂಕಾಗಿ ನುಡಿದರು : “ಆದರೆ ನಾವು ಅವರಿಗೆ ಪ್ರತಿಯಾಗಿ

ಮರೆತುಬಿಟ್ಟಿರುತ್ತಾರೆ."

"ಅವರು ಮರೆತಿರುವುದಿಲ್ಲ ; ನಿನ್ನ ತಂದೆ ತಾಯಿ ಕೂಡ ಮರೆತಿರುವುದಿಲ್ಲ." ಎಂದಳು ಲಕ್ಷ್ಮಿ.

ಕುಮಾರ್ ಹೇಳಿದರು : "ಇನ್ನೇನಿಲ್ಲದಿದ್ದರೂ, ಸ್ಥಿತಿ ಎಷ್ಟು ಕೆಟ್ಟದೆ ಎಂಬುದನ್ನು ಅವರು ತಿಳಿದಿಲ್ಲ, ಇದು ನನಗೆ ಸಂತೋಷದ ವಿಷಯ. ಇಂದು ಬೆಳಗ್ಗೆ, ನಾನು ಕೈಕೆಳಗೆ ಕೆಲಸ ಮಾಡುತ್ತ ಇರುವ ಮುಖ್ಯ ಇಂಜಿನಿಯರು ನನಗೆ ಹೇಳಿದರು......ಓ, ಅದು ಆ ನಾಲೆಯ ವಿಚಾರ; ಅದನ್ನು ಹಾಗೆ ಮಾಡುವುದು ತಪ್ಪು, ಅದು ಪೋಲು ಮಾಡುತ್ತದೆ, ಇದನ್ನೆಲ್ಲ ನಾನು ಚೆನ್ನಾಗಿ ಬಲ್ಲೆ ; ಆದರೆ ನಾನು ಏನು ತಾನೆ ಹೇಳಲು ಸಾಧ್ಯ? ನಾನು ಅವರ ಅಪ್ಪಣೆಯನ್ನು ಪಾಲಿಸಬೇಕು. ಆತನೋ ವಿಷಯಜ್ಞಾನವಿಲ್ಲದ ಮನುಷ್ಯ. ನಮ್ಮಲ್ಲಿ ಸಜ್ಜಾಗಿರುವ ಸಾಮಾಗ್ರಿಯಿಂದ ನಾವು ಏನು ಮಾಡಬಲ್ಲೆವು ಎಂಬುದನ್ನು ಯೋಚಿಸುತ್ತೇನೆ, ಲಕ್ಷ್ಮಿ ಪ್ರತಿ ಹಳ್ಳಿಗೂ ಕೊಳವೆ ಬಾವಿಗಳನ್ನು ಮಾಡಿಕೊಡುತ್ತ ಇರಬೇಕು. ನಮ್ಮ ಕಾರ್ಯಪಟ್ಟಿಯಲ್ಲಿ ಅವು ಸೇರಿವೆ ಎಂದೂ ನನ್ನ ನಂಬಿಕೆ, ಆದರೆ ಆ ವಿಚಾರ ಸ್ವಲ್ಪ ನೋಡೋಣ ಎಂದರೆ ಅದಕ್ಕೆ ನನಗೆ ಅವಕಾಶ ಕೊಟ್ಟಿಲ್ಲ." ಅವಳ ಆಚೆಗೆ ನಿಟ್ಟಿಸಿ ನೋಡಿದರು ಅವರು.

"ಓ, ಅಪ್ಪಾ, ಯಾಕಾಗಬಾರದು? ಮತ್ತೆ ಆ ಬಾವಿಗಳನ್ನು ಯಾಕೆ ಕಟ್ಟಿಸುತ್ತ ಇಲ್ಲ? ಅದು ಬಹಳ ಚೆನ್ನಾಗಿರುತ್ತೆ !"

"ಅವುಗಳನ್ನು ಮಾಡಿಸುವುದರಿಂದ ಸಾಕಷ್ಟು ಲಾಭ ಮಾಡಿಕೊಳ್ಳಲಾಗುವುದಿಲ್ಲ–ಕೆಲವರಿಗೆ. ಮಲೇರಿಯಾ ನಿವಾರಣೆಗಾಗಿ ಔಷಧ ಚಿಮುಕಿಸುವ ವಿಚಾರದಲ್ಲಿಯೂ ಅಷ್ಟೆ. ಆರೋಗ್ಯ ಇಲಾಖೆಯ ಜನರೊಂದಿಗೆ ನಾವು ಸಹಕರಿಸಬೇಕು ; ಅವರು ಒಳ್ಳೆಯವರು, ಆದರೆ ಅವರಿಂದ ದುಡಿಸಿಕೊಳ್ಳುತ್ತಿರುವುದು ಹೆಚ್ಚು. ಆದರೆ ಅವರೊಂದಿಗೆ ನಾವು ಸಹಕರಿಸುವುದಿಲ್ಲ. ಹೀಗಾಗಿ, ಕೆಲವು ಪ್ರದೇಶಗಳಿಗೆ ಮಾತ್ರ ಔಷಧ ಚಿಮುಕಿಸುತ್ತಿದೆ ; ಇದರಿಂದ ಸೊಳ್ಳೆಗಳು ಮತ್ತೆ ಹೆಚ್ಚುತ್ತದೆ. ಅರ್ಥವಾಯಿತು ತಾನೆ ನಿನಗೆ ?"

"ಆಯಿತು" ಎಂದು, ಅವಳು ಹೇಳಿದಳು : "ವಲ್ಲಿಯ ಸಹೋದರ, ಅವನಿಗೆ ಮಲೇರಿಯಾ ಇದೆ."

"ಅದು ಅವನಿಗೆ ಬರಬೇಕಾದ್ದೇ ಇರಲಿಲ್ಲ !" ಎಂದು ಬಹುಮಟ್ಟಿಗೆ ಕಿರಿಚಿಕೊಳ್ಳುವ ಹಾಗೆಯೇ ನುಡಿದರು, ಕುಮಾರ್. "ಆದರೆ ಇರುವ ಪರಿಸ್ಥಿತಿ ಹಾಗೆ, ಲಕ್ಷ್ಮಿ ; ಈ ಔಷಧ ಚಿಮುಕಿಸುವ ವಿಷಯ ಬಹುಶಃ ಲಂಚಗುಳಿತನ

ಮತ್ತೆ ನೋಡಲೇಬೇಕು ; ನೋಡದೆ ದಾರಿಯಿಲ್ಲ ! ಏಕೆಂದರೆ, ಎಷ್ಟೇ ಆಗಲಿ, ಸ್ನೇಹಿತರಾಗಿರುವುದನ್ನು ತಟ್ಟನೆ ಬಿಟ್ಟುಬಿಡುವುದಕ್ಕೆ ಆಗುವುದಿಲ್ಲ. ಇನ್ನು ಮುಂದೆ ಲಕ್ಷ್ಮಿಯನ್ನು ಎಂದಿಗೂ ನೋಡದೆ ಇರುವುದು ಯಾರಿಗೂ ಆಗುವುದಿಲ್ಲ.

ಅಲಂಕಾರದ ಕೆಲಸ ಮಾಡುವುದರಲ್ಲಿ ಅವರು ತಾವೇ ಅಪಾರ ವಿನೋದ ಪಟ್ಟರು. ಅವರು ತಮ್ಮ ಬಿಳಿಯ ಗೋಡೆಗಳ ಮೇಲೆ ಬಣ್ಣದ ಕಾಗದದ ನಕ್ಷತ್ರಗಳನ್ನೂ ಇತರ ಅಲಂಕಾರಗಳನ್ನೂ ಅಂಟಿಸಿದರು ; ಅನಂತರ, ಥೇಟ್ ಕ್ರಿಸ್‌ಮಸ್ ಗಿಡದ ಹಾಗೆಯೆ ಕಾಣುತ್ತಿದ್ದ ಸರ್ವೆ ಮರದ ದೊಡ್ಡ ರೆಂಬೆಯೊಂದನ್ನು ತೆಗೆದುಕೊಂಡು, ತೋಟದ ಒಂದು ಮೂಲೆಯ ಮಣ್ಣು ನೆಲದಲ್ಲಿ ಅದನ್ನು ನಟ್ಟರು ; ಏಕೆಂದರೆ, ಸಹಜವಾಗಿಯೆ ಮದರಾಸಿನಲ್ಲಿ ಕ್ರಿಸ್‌ಮಸ್ ಕೂಟಗಳು ನಡೆಯುವುದು ಮನೆಯೊಳಗೆ ಸೆಕೆಯಾದ ಕೊಟಡಿಗಳಲ್ಲಿ ಅಲ್ಲ, ಹೊರಗಡೆ ಸಂಜೆಯ ತಂಪಿನಲ್ಲಿ. ಆ ಮೇಲೆ ಕರೆಯಬೇಕಾದ ಮಕ್ಕಳ ಪಟ್ಟಿಯೊಂದನ್ನು ಮಾಡಿದರು. ಅವರಲ್ಲಿ ಕೆಲವರು ಬೆನ್ನನ ಹಾಗೆ ಮೂರು ನಾಲ್ಕು ವರ್ಷ ವಯಸ್ಸಿನವರು ; ಕೀಲು ಕೊಟ್ಟರೆ ನೆಲದ ಮೇಲೆ ಓಡಾಡುವ ಸಾಮಾನುಗಳೆಂದರೆ ಅವರಿಗೆಲ್ಲ ಇಷ್ಟ ಅಲ್ಲದೆ, ಜೀಪುಗಳು, ಟ್ಯಾಕ್ಸಿಗಳು ಮತ್ತು ಎಮ್ಮೆಗಳನ್ನು ತಿನ್ನುತ್ತಿರುವ ಹುಲಿಗಳು, ಇಲಿಗಳನ್ನು ನುಂಗುತ್ತಿರುವ ನಾಗರಹಾವುಗಳು ಮುಂತಾದ, ಸ್ವಲ್ಪ ಮಟ್ಟಿಗೆ ಭೀಕರವಾದ ಕೆಲವು ಆಟದ ಸಾಮಾನುಗಳೂ ಇದ್ದುವು. ಬೆಲೂನುಗಳಂತೂ ಇದ್ದೇ ಇದ್ದುವು. ಅವು ಭಾರತದಲ್ಲಿ ಮಾಡಿದ ಬೆಲೂನುಗಳು, ಇಂಗ್ಲಿಷ್ ಬೆಲೂನುಗಳಿಗಿಂತ ತಮಾಷೆಯಾಗಿದ್ದುವು ; ಏಕೆಂದರೆ, ಅವುಗಳನ್ನು ಎಲ್ಲಾ ಬಗೆಯ ವಿಚಿತ್ರ ಆಕಾರಗಳಲ್ಲಿ ಮಾಡಿತ್ತು ; ಟೀ ಪಾತ್ರೆಗಳು, ಹೂವುಗಳು, ಲ್ಯಾಂಪುಗಳು ಮತ್ತು ಪ್ರಾಣಿಗಳು ; ಅಲ್ಲದೆ ಅವುಗಳ ಉದ್ದಕ್ಕೂ ಬೆರಳುಗಳನ್ನೂ ಉಜ್ಜಿದರೆ ಅವು ಕಿಚುಗುಟ್ಟುತ್ತಿದ್ದುವು. ಬೆನ್ ಮಾಡಲು ಇಷ್ಟಪಡುತ್ತಿದ್ದ ಮತ್ತೊಂದು ಕೆಲಸವಾಗಿತ್ತು ಅದು.

ಜೂಡಿ ತನ್ನ ಶಾಲೆಯ ಗೆಳತಿಯ ಕೆಲವರನ್ನು ಕರೆದಿದ್ದಳು, ಒಳ್ಳೆಯ ವಿನೋದವಾಗಿದ್ದ ಹುಟ್ಟುಹಬ್ಬದ ಕೂಟ ಏರ್ಪಡಿಸಿದ್ದ ಹುಡುಗಿ ತಾರೆಯೂ ಅವರ ಪೈಕಿ ಇದ್ದಳು. ಆದರೆ– 'ಆಹಾ, ಲಕ್ಷ್ಮಿ ಇಲ್ಲಿ ಮದರಾಸಿನಲ್ಲಿ ಇದ್ದಿದ್ದರೆ' ಎಂದು ಅದೆಷ್ಟು ಹಂಬಲಿಸಿದಳು ಅವಳು ! ಈ ದೊಡ್ಡ ಹುಡುಗಿಯರಿಗೆ ಆಟದ ಸಾಮಾನಗಳನ್ನೋ ಮಕ್ಕಳ ಪುಸ್ತಜಗಳನ್ನೋ ಕೊಡಬೇಕೆಂದು ಅವಳ ತಾಯಿಯ ಆಲೋಚನೆ ; ಆದರೆ, ಅಂಥ ಸಾಮಾನುಗಳನ್ನು ಕೊಡಲು ಅವರು ಅತಿ ಬೆಳೆದವರೆಂದು ಜೂಡಿ ಬಲ್ಲಳು ; ಆದ್ದರಿಂದ ಅವಳು ಹಣದ 'ಪರ್ಸು'ಗಳು,

ಏನನ್ನು ಕಳಿಸೋಣ ? ಲಕ್ಷ್ಮಿ, ಅವರೇನೊ ಒಳ್ಳೆಯವರು ; ಆದರೆ ಅವರು ಕೊಟ್ಟ ಬಹುಮಾನಗಳನ್ನು ನಾವು ತೆಗೆದುಕೊಳ್ಳುವುದಕ್ಕಾಗುವುದಿಲ್ಲ !"

ಲಕ್ಷ್ಮಿ ಭೂಪಟಗಳನ್ನು ಭದ್ರವಾಗಿ ಹಿಡಿದುಕೊಂಡಳು. "ನನ್ನ ತರಗತಿಗೆ ನಾನು ಏನನ್ನು ಬೇಕಾದರೂ ತೆಗೆದುಕೊಳ್ಳುತ್ತೇನೆ !" ಎಂದಳು ಅವಳು.

ಸರಸ್ವತಿ ಮತ್ತು ಕಂದನ್‌ಗೆ ಕೂಡ ಕ್ರಿಸ್‌ಮಸ್ ಕಾರ್ಡುಗಳು ಬಂದುವು, ಪಾರ್ವತಿಗೂ ಸಹ ಬಂತು, ಎಲ್ಲ ಜೂಡಿಯಿಂದಲೇ. ಅವೆಲ್ಲವನ್ನೂ ಸ್ಪೆನ್ಸರ್ ಅವರಲ್ಲಿ ತೆಗೆದುಕೊಳ್ಳುವುದು ತಮಾಷೆಯಾಗಿತ್ತು ; ಜೂಡಿ "ನಿಜವಾದ" ಕ್ರಿಸ್‌ಮಸ್ ಕಾರ್ಡುಗಳು ಎಂದು ಕರೆಯುತ್ತಿದ್ದ ಕಾರ್ಡುಗಳ ಒಂದು ದೊಡ್ಡ ಪೆಟ್ಟಿಗೆ ಅಲ್ಲಿತ್ತು; ಅವುಗಳ ಮೇಲೆ ರಾಬಿನ್ ಹಕ್ಕಿ, ಮಿನುಗು ಬಟ್ಟುಗಳು, ಹಿಮ ಮತ್ತು ಇನ್ನೂ ಏನೇನೊ ಇದ್ದ ಚಿತ್ರಗಳಿದ್ದುವು. ಸಹಜವಾಗಿಯೆ, ಕ್ರಿಸ್‌ಮಸ್ ಹಬ್ಬಕ್ಕೆ ಯಾವ ಗಮನವನ್ನಾಗಲಿ ಕೊಟ್ಟಿದ್ದವರು ಕೆಲವು ಮಂದಿ ಮಾತ್ರ, ಯೂರೋಪಿಯನ್ನರು ಮತ್ತು ಮದರಾಸಿನ ಕ್ರೈಸ್ತರು ; ಆದರೆ ಕ್ಲಬ್ಬಿನಲ್ಲಿ ಒಬ್ಬ ಯಕ್ಷಿಣಿಗಾರನನ್ನಿಟ್ಟುಕೊಂಡು ಒಂದು ಸಂತೋಷಕೂಟ ನಡೆಯಿತು, ಹಲವು ಇತರ ಕೂಟಗಳೂ ಇದ್ದುವು, ಇಂಗ್ಲೆಂಡಿನಿಂದ ಭಾಂಗಿಗಳು ಬರುತ್ತಿದ್ದುವು ; ಅವುಗಳಲ್ಲಿ, ಜೂಡಿಯ ಒಬ್ಬ ಆಂಗ್ಲ ಅಜ್ಜಿಯಿಂದ ಬಂದಿದ್ದ ಚಾಕೊಲೇಟ್ ಪೆಟ್ಟಿಗೆಯೂ ಇತ್ತು ; ಅದು ಬಂದಮೇಲೆ, ಅಂಚೆಯ ಸಾಗಣೆಯಲ್ಲಿ ಬಹಳ ಕಾವುಗೊಂಡ, ಆ ಕಾರಣದಿಂದ ಚಾಕೊಲೇಟುಗಳೆಲ್ಲ ಸ್ವಲ್ಪ ಅಜ್ಜಿಬಜ್ಜಿಯಾಗಿ ಹೋಗಿದ್ದುವು ; ಹಾಗಿದ್ದರೂ ಕೂಡ, ಎಲ್ಲರೂ, ಅದರಲ್ಲಿಯೂ ಬೆನ್, ತಿನ್ನಲು ಯೋಗ್ಯವಾಗಿದ್ದುವು ಅವು.

ಅವಳಿಗೆ ಜಾನನಿಂದ ಒಂದು ಕಾಗದ ಬಂದಿತ್ತು ; ಅದರಲ್ಲಿ, ತಾನು ಹಣ ಉಳಿಸುತ್ತಿರುವುದಾಗಿಯೂ, ಅವಳು ಹಿಂತಿರುಗಿದಾಗ ಎಂದರೆ ಈಸ್ಟರ್ ಹಬ್ಬದ ರಜಾಕಾಲದಲ್ಲಿ ಅವಳಿಗೆ ಒಂದು ಭೇಷಾದ ಬಹುಮಾನವನ್ನು ಕೊಡುವುದಾಗಿಯೂ ಒಳ್ಳೆಯ ಚಲನ ಚಿತ್ರಗಳು ಏನಾದರೂ ಇದ್ದರೆ ತಾನೇ ದುಡ್ಡು ಕೊಟ್ಟು ತಾನು ಅವಳನ್ನು ಮೂರುಸಲ ಚಿತ್ರಮಂದಿರಕ್ಕೆ ಕರೆದುಕೊಂಡು ಹೋಗುವುದಾಗಿಯೂ ತಿಳಿಸಿದ್ದ. ಎಲ್ಲ ಎಲ್ಲಾ, ಸ್ವದೇಶದ ಚಿತ್ರ ಮಂದಿರವನ್ನು ಕುರಿತು ಯೋಚಿಸಿ ಬಹಳ ಕಾಲವಾಗಿ ಹೋಯಿತಿ ! ಸ್ವದೇಶವೆ ? ಹೌದು ; ಅನೇಕ ಪರೀಕ್ಷೆಗಳಿರುವುವು ; ಆದರೆ ಇನ್ನು ತುಸ ಹೆಚ್ಚು ಹಿಂದಿಯನ್ನು ಹೇಗಾದರೂಮಾಡಿ ಕಲಿತಿದ್ದರೆ ಚೆನ್ನಾಗಿತ್ತು ಎಂಬ ಅಪೇಕ್ಷೆಯುಂಟಾಯಿತು ಅವಳಿಗೆ ; ಏಕೆಂದರೆ, ಆಗ–ಏನು ? ಭಾರತವನ್ನು ಮತ್ತೆ ಎಂದಿಗೂ ನೋಡದಿರುವುದೆಂದರೆ ಎಂಥ ವಿಚಿತ್ರ ಸಂಗತಿ, ಎಷ್ಟು ಅಸಾಧ್ಯದ ಮಾತು.

ನನಗೆ ಬಂದಿದೆ ; ಪೊಂಗಲ್ ಹಬ್ಬ ಗೆಲವಾಗಿರುತ್ತೆ ಅವಳಿಗೆ, ಹೌದು ! ಹಳ್ಳಿಯಲ್ಲಿ ವಾಸಿಸುವುದೇ ಬಹುಶಃ ಎಷ್ಟೋ ಮೇಲೆಂದು ನನಗೆ ಕೆಲವು ವೇಳೆ ಎನಿಸುತ್ತದೆ."

"ಹೌದು, ಪೊಂಗಲ್ ವಿನೋದವಾಗಿರಬೇಕು ಅಂತ ನನ್ನ ಊಹೆ", ಎಂದಳು ಜೂಡಿ. ಆ ಹಳ್ಳಿಯ ಬಗೆಗೆ ಅಮ್ಮಣ್ಣಿಪಾಟಿ ಯಾವ ಬಗೆಯ ಭಾವನೆ ಹೊಂದಿದ್ದಾರೆ ಎಂದು ಅವಳು ಕುತೂಹಲಗೊಂಡಳು, ತರಗತಿಯ ವಿಚಾರವಾಗಿ ಮಾತ್ರ ಅತಿಯಾಗಿ ಏನೂ ಹೇಳಕೂಡದು ಎಂದು ತನ್ನಮಟ್ಟಿಗೆ ಅವಳು ಎಚ್ಚರಿಕೆಯಿಂದಿದ್ದಳು. ಸದ್ಯದಮಟ್ಟಿಗೆ ಅಮ್ಮಣ್ಣಿಪಾಟಿ ಇನ್ನೊಂದು ಮಗುವನ್ನು, ತಮ್ಮ ಎರಡನೆಯ ಮಗಳ ಚೊಚ್ಚಲ ಮಗುವನ್ನು ಎಂದರೆ ಮೊಮ್ಮಗನನ್ನು ತಮ್ಮ ಜೊತೆಗೆ ಇರಿಸಿಕೊಂಡಿದ್ದರು. ಅದು ಬೇಕು ಇದು ಬೇಕು ಎನ್ನುತ್ತಾ ಯಾವಾಗಲೂ ಅಳುತ್ತ ಇದ್ದ, ಅತಿ ಮುದ್ದಿನಿಂದ ಸ್ವಲ್ಪ ಮಟ್ಟಿಗೆ ಕೆಟ್ಟುಹೋಗಿದ್ದ ಚಿಕ್ಕ ಹುಡುಗ. ಕ್ರಿಸ್‌ಮಸ್ ಗಿಡ ನೋಡುವ ಕೂಟಕ್ಕೆ ಅವನನ್ನೂ ಕರೆದಿದ್ದರು ; ಯಾವಾಗಲೂ ಇನ್ನೊಬ್ಬರಿಗೆ ಕೊಟ್ಟ ಬಹುಮಾನಕ್ಕೆ ಆಸೆಪಡುವ ಮಕ್ಕಳಲ್ಲಿ ಅವನೂ ಒಬ್ಬನಾಗಿದ್ದ ; ಒಳ್ಳೆಯವಳಾಗಿದ್ದ ನೆರೆಮನೆಯ ಪುಟ್ಟ ವಾರಂತಿ ತನ್ನ ಬಹುಮಾನವನ್ನು ಅವನಿಗೆ ಕೊಟ್ಟಳು ; ಹಾಗೆ ಕೊಟ್ಟದ್ದು ಲೇಸು ಎನಿಸಲಿಲ್ಲ.

ಕೂಟಗಳಲ್ಲಿ ಬಹುಸಂಖ್ಯೆಯವು ವಿನೋದಕರವಾಗಿದ್ದುವು ; ಇದಕ್ಕೆ ಅರ್ಧ ಕಾರಣ ಎಂದರೆ, ಆ ವೇಳೆಗೆ, ನೆಮ್ಮದಿಹೊಂದುವ ಮಟ್ಟಿಗೆ ಹವಾ ತಕ್ಕಷ್ಟು ತಂಪಾಗಿತ್ತು, ವಾಸ್ತವವಾಗಿ ಇನ್ನೂ ಎಲೆಗಳನ್ನು ಉದುರಿಸದೆ ಇರುವ ಮರಗಳನ್ನು ನೋಡಿದಾಗ ಸ್ವಲ್ಪ ಬೇಸರವೇ ಆಗುತ್ತಿತ್ತು ; ಆದರೂ ಕೆಲವು ವೇಳೆ ಯಾವುದೋ ಒಂದು ಮರ ಇದ್ದಕ್ಕಿದ್ದ ಹಾಗೆಯೇ ಎಲೆ ಉದುರಿಸಿಬಿಟ್ಟು, ಕೆಲವು ದಿನಗಳ ಮಟ್ಟಿಗೆ ಮಾತ್ರ ಹಾಗಿರುತ್ತಿತ್ತು ; ಏಕೆಂದರೆ, ಬಲುಮಟ್ಟಿಗೆ ಒಡನೆಯ ಅದರ ತಲೆಯಮೇಲೆ ಹಸುರು ಗೊಂಚಲುಗಳು ಒಡೆದು ಕಾಣತೊಡಗುತ್ತಿದ್ದುವು. ಬೀಸಣಿಗೆಗಳನ್ನು ಉಪಯೋಗಿಸುವುದನ್ನು ಪೂರ್ತಿನಿಲ್ಲಿಸಿಯೇ ಬಿಡಬೇಕಾಗುತ್ತಿತ್ತು ; ಒಂದೆರಡು ಸಲ ರಾತ್ರಿಯ ವೇಳೆ ಎಷ್ಟು ತಂಪಾಯಿತೆಂದರೆ, ಒಂದು ಕಂಬಳಿಯನ್ನು ಕೇಳಬೇಕು ಎಂದೆನಿಸಿತ್ತು ಜೂಡಿಗೆ ಆದರೆ ಎಂದೂ ತಕ್ಕಮಟ್ಟಿಗೆ ಪೂರ್ತಿ ತಂಪಾಗಿರಲಿಲ್ಲ.

ಕ್ರಿಸ್‌ಮಸ್ ಹಬ್ಬದ ದಿನವೇ ಸೇವಕರು ಅವರಿಗೆ ಹೂವಿನ ಹಾರಗಳನ್ನು ತಂದಿತ್ತರು ; ಪ್ರತಿಯೊಬ್ಬರೂ ಬೇರೆ ಪ್ರತಿಯೊಬ್ಬರ ಫೋಟೋಗಳನ್ನು ತೆಗೆದುಕೊಂಡರು ; ಅದರಲ್ಲಿ ವಿಶೇಷವಾಗಿ, ಜಾರ್ಜನ ಮೂರು ಮಕ್ಕಳು,

ಕರವಸ್ತ್ರಗಳು, ನೋಟು ಬುಕ್ಕುಗಳು, ಸುಗಂಧದ ಚಿಕ್ಕ ಶೀಸೆಗಳು ಇವುಗಳನ್ನು ಆರಿಸಿದಳು. ಸ್ಟ್ಯಾಂಪು ಕೂಡಿಹಾಕುವ ಹುಡುಗನೂ ಅಲ್ಲಿದ್ದ ; ಆದರೆ ಅವನು ಈಗ ಬೆಂಕಿಪೆಟ್ಟಿಗೆಗಳನ್ನು ಕೂಡಿ ಹಾಕುತ್ತಿದ್ದ, ಎಲ್ಲಕ್ಕೂ ಬೇರೆ ಬೇರೆ ಚೀಟಿಗಳನ್ನೂ ಅಂಟಿಸಿರುವ ನೂರಾರು ಬಗೆಯ ಬೆಂಕಿಪೆಟ್ಟಿಗೆಗಳು ಭಾರತದಲ್ಲೇ ಉಂಟು ಜೂಡಿ ಅವನಿಗಾಗಿ ಸೀಸ ತಳ್ಳುವ ಪೆನ್ಸಿಲ್ಲನ್ನು ಆಯ್ಕೆಮಾಡಿದ್ದಳು ; ಪಟ್ಟಿಗಳನ್ನು ತಯಾರಿಸಲು ಅದು ಉಪಯೋಗವಾಗುವುದು. ಅದೇ ರೀತಿಯ ಇನ್ನೊಂದು ಪೆನ್ಸಿಲ್ಲನ್ನು ಹರಿದಾಸನಿಗೆ ಆಯ್ದಿಟ್ಟಳು. ಇಬ್ಬರು ಬ್ರಿಟಿಷ್ ಹುಡುಗಿಯರೂ, ಒಬ್ಬಳು ಸ್ವಿಸ್ ಹುಡುಗಿಯೂ ಇದ್ದರು ; ಬೆಟ್ಟಕ್ಕೆ ಹೋಗಿದ್ದಾಗ ಅವರು ಅಲ್ಲಿ ಶಾಲೆಗೆ ಬರುತ್ತಿದ್ದರು ; ಅವರಿಗೆಂದು ಭಾರತೀಯ ಕುಶಲ ಕೈಕಸಬಿನ ಅಂಗಡಿಯಿಂದ ಬಹುಮಾನ ವಸ್ತುಗಳನ್ನು ತಂದಳು.

ಅದಲ್ಲ ಬಹು ವಿನೋದಕರವಾಗಿತ್ತು ; ಆ ಬಳಿಕ, ಕ್ರಿಸ್‌ಮಸ್ ಗಿಡಕ್ಕೆ ಪೂರ್ತಿ ಅಲಂಕಾರ ಮಾಡಿದಮೇಲೆ, ಅದನ್ನು ಬಂದು ನೋಡಿಕೊಂಡು ಹೋಗುವಂತೆ ಅಮ್ಮಣಿ ಪಾಟಿಯನ್ನು ಅವಳು ಕರೆದಳು. ಮೇಲುಗಡೆ ನಕ್ಷತ್ರ ಇರುವುದು ಯಾಕೆ ? ಎಂದು ಮುಂತಾಗಿ ಅಮ್ಮಣ್ಣಿ ಪಾಟಿ ಪ್ರಶ್ನೆಗಳನ್ನು ಕೇಳತೊಡಗಿದರು. "ಅದು ಕುರುಬನ ನಕ್ಷತ್ರ" ಎಂದು ಹೇಳಿಮ ಕುರುಬರು ಮತ್ತು ಮೂವರು ದೊರೆಗಳು (ಅವರಲ್ಲಿ ಒಬ್ಬ ಪೂರ್ವ ದೇಶಗಳಿಂದ ಬಂದವನು) ಬೆತ್ಲೆಹೆಮ್‌ಗೆ ಬಂದು ಗೋದಣಿಗೆಯಲ್ಲಿ ಹಸುಳೆಯನ್ನು ಕಂಡ ಸಂಗತಿಯನ್ನು ಕುರಿತ ಸಮಸ್ತ ಕ್ರಿಸ್‌ಮಸ್ ಕತೆಯನ್ನು ಜೂಡಿ ಅಮ್ಮಣ್ಣಿಪಾಟಿಗೆ ಬಿತ್ತರಿಸತೊಡಗಿದಳು. ಅದೆಲ್ಲವನ್ನೂ–ಅದರಲ್ಲಿ ವಿಶೇಷವಾಗಿ, ಹಸುಗಳೂ ಕತ್ತೆಯೂ ಬಂದು ನೋಡುತ್ತ ನಿಂತಿರುವುದನ್ನಿ–ಅಮ್ಮಣ್ಣಿಪಾಟಿ ಮೆಚ್ಚಿಕೊಂಡರು. ಅವರು ಹೇಳಿದರು. "ಮಗು ಬೆಳೆದು ಮನುಷ್ಯನಾದಮೇಲೆ ಬಲಿಯಾಗುತ್ತಾನೆಯಲ್ಲ, ಅದಕ್ಕಿಂತ ಹೆಚ್ಚು ಸೊಗಸಾದ ಕ್ರೈಸ್ತ ಕಥೆ ಇದು." ಅದನ್ನು ವಿವರಿಸಬೇಕೆಂದು ಜೂಡಿ ಪ್ರಯತ್ನ ಪಡಬೇಕೆಂದಿರುವಷ್ಟರಲ್ಲಿ, ಬೆನ್ ಕ್ರಿಸ್‌ಮಸ್ ಹಬ್ಬದ ಕೀರ್ತನೆಯೊಂದನ್ನು ತನ್ನ ಧ್ವನಿಯನ್ನೆಲ್ಲ ಎತ್ತರಿಸಿ ಹಾಡುತ್ತ ಓಡುತ್ತ ತೋಟದೊಳಕ್ಕೆ ಬಂದ. ಅವನು ಅಷ್ಟೇನೂ ಚೆನ್ನಾಗಿ ಹಾಡಲಿಲ್ಲ ; ಅಲ್ಲದೆ, "ನೋಯೆಲ್, ನೋಯೆಲ್" (Noel Noel) ಎಂಬ ಗೀತದ ಒಂದು ಪದ್ಯ ಮಾತ್ರ ಅವನಿಗೆ ಬರುತ್ತಿತ್ತು. ಅದು ತಾವು ಮೆಚ್ಚಿಕೊಂಡುದಾಗಿ ಅಮ್ಮಣ್ಣಿಪಾಟಿ ತಿಳಿಸಿದರು. ಆಗ ಅವರು ಹೇಳಿದರು : "ಇನ್ನೇನು ಇಷ್ಟರಲ್ಲಿಯೆ ಬೇಗನೆ ಈ ಹಳ್ಳಿಯಲ್ಲಿ, ಮೊನ್ನೇರಿಯಲ್ಲಿ, ಪೊಂಗಲ್ ಹಬ್ಬವನ್ನು ಮಾಡುತ್ತಾರೆ. ಲಕ್ಷ್ಮಿಯಿಂದ ತುಂಬ ಸುಖಸಂತೋಷದ ಕಾಗದ

ರೋಷಗೊಂಡಳು ! ಅವಳ ತಂದೆ ತುಸ ನಸುನಕ್ಕರು, ಆದರೆ ಅರ್ಧ ಒಪ್ಪಿದರು; ನಗರಗಳಿಂದ ಬರುತ್ತಿದ್ದ ಜನವನ್ನು ಅವರು ಎಷ್ಟೋ ಬಾರಿ ಕಂಡಿದ್ದರು. ಅವರಲ್ಲಿ ಕೆಲವರು ನಿಪುಣರೆಂದು ಭಾವನೆ–ಎಲ್ಲದರಲ್ಲಿಯೂ ನಿಪುಣರೆ, ಅದು ಮಾತ್ರ ತೀರ ಅಸಾಧ್ಯ ; ಅವರು ನೀಡಿದ ಅವಿವೇಕದ ಸಲಹೆಯನ್ನು ಹಳ್ಳಿಯ ಜನ ಅನುಸರಿಸುತ್ತಲೇ ಇರಲಿಲ್ಲ. ಅವರು ತಾವೇ ಹೆಚ್ಚು ತಿಳಿದಿದ್ದರು.

"ನಾವೆಲ್ಲ ಹಳ್ಳಿಗಳಿಗೆ ಬಂದು ನೆಲಸಬೇಕೆಂದು ಗಾಂಧೀಜಿಯವರ ಅಪೇಕ್ಷೆಯಾಗಿತ್ತು. ಬಹುಶಃ ನಾವು ಹಾಗೆ ಮಾಡಬೇಕು. ಆದರೆ ಸರಿಯಾದ ವ್ಯರ್ಥವಾಗಿ ಇರುವುದಕ್ಕಲ್ಲ !" ಎಂದರು ಕುಮಾರ್.

ಒಂದು ವಿಧದಲ್ಲಿ ಆತನ ಸ್ಥಿತಿ ಲಕ್ಷ್ಮಿಯದಕ್ಕಿಂತ ಕೆಟ್ಟತ್ತು ; ಕಾರಣ, ಆತ ಹಳ್ಳಿಯ ಜನಕ್ಕೂ ಮುಖ್ಯ ಇಂಜಿನಿಯರಿಗೂ ಮಧ್ಯಸ್ಥವಾಗಿ ಇದ್ದರು. ಆ ಮುಖ್ಯ ಇಂಜಿನಿಯರು ಯಾವಾಗಲೂ ದೊಡ್ಡ ಮನುಷ್ಯರಂತೆ ತೋರ್ಪಡಿಸಿಕೊಳ್ಳುತ್ತ, ಯಾವಾಗಲೂ ತಮ್ಮ ಕಾರಿನಲ್ಲಿ ಅತ್ಯಂತ ಹತ್ತಿರದ ಪಟ್ಟಣಕ್ಕೋ ಇಲ್ಲ ಮದರಾಸಿಗೆ ಕೂಡ ಹೊರಟುಬಿಡುತ್ತಿದ್ದರು. ಆದ್ದರಿಂದ ಅವರಿಗೆ ನಿಜವಾಗಿ ಯಾವ ಸ್ನೇಹಿತರೂ ಇರಲಿಲ್ಲ. ಆದರೆ ಲಕ್ಷ್ಮಿಗೆ ತನ್ನ ತರಗತಿಯವರಲ್ಲಿ ಸ್ನೇಹಿತರಿದ್ದರು ; ಅವರೆಲ್ಲರೂ ಕೂಡಿಯೆ ಪೊಂಗಲ್ ಹಬ್ಬದ ಆಟ ಆಡಿದರು. ಪ್ರತಿಯೊಬ್ಬರೂ ತಮ್ಮ ತಮ್ಮ ಹಳೆಯ ಮಣ್ಣಿನ ಮಡಕೆಗಳನ್ನೂ ತಟ್ಟೆಗಳನ್ನೂ ಒಡೆದುಹಾಕಿ, ಹೊಸವನ್ನು ಕೊಂಡರು ; ಅವು ಬಹು ಅಗ್ಗವಾಗಿದ್ದುವು, ಅಲ್ಲದೆ ಕುಂಬಾರರಿಗೂ ಒಳ್ಳೆಯದೆ ಆಯಿತು. ಮನೆಗಳನ್ನೆಲ್ಲಾ ಚೊಕ್ಕಟವಾಗಿ ಗುಡಿಸಿ, ಸೂರ್ಯನಿಗೆ ಹುರಿಪುಹುಟ್ಟಿಸಲೆಂದು ಮನೆಯ ಮುಂದೆ ಹೊತ್ತಿಸಿದ್ದ ಬಯಲುಕಿಚ್ಚಿಗೆ ಚಿಂದಿಪಂದಿಯನ್ನು ಒಟಿದ್ದರು. ಪೊಂಗಲ್ ಹಾಡುಗಳು ಕೂಡ ಇದ್ದುವು.

ಎರಡನೆಯ ದಿನ, ಹಾಲು ಮತ್ತು ತುಂಬ ಸಿಹಿಯಾದ ಬೆಲ್ಲದಲ್ಲಿ ಬೇಯಿಸಿದ ಹೊಸ ಅಕ್ಕಿಯ ಸಕ್ಕರೆ ಪೊಂಗಲಿನ ಹಬ್ಬವೂ ಇತ್ತು ; ಈ ಪೊಂಗಲು ಅಕ್ಕಿಯ ಕಡುಬಿಗಿಂತ ಹೆಚ್ಚು ಸ್ವಾರಸ್ಯವಾದದ್ದು. ಬಳಿಕ ಮೂರನೆಯ ದಿನ ಅವರು ಹಸುಗಳಿಗೂ ಎತ್ತುಗಳಿಗೂ ಅದೇ ಪೊಂಗಲನ್ನು ತಿನ್ನಲು ಇಟ್ಟು, ಅವುಗಳ ಮೈ ತೊಳೆದು, ಕೋಡುಗಳಿಗೆ ಬಣ್ಣ ಹಚ್ಚಿ, ಅವುಗಳ ನೊಗಗಳು ಮುಂತಾದ ಸರಂಜಾಮುಗಳನ್ನು ಅಲಂಕರಿಸಿದರು. ಎಮ್ಮೆಗಳಿಗೆ ಕೂಡ ಅಲಂಕಾರ ನಡೆದಿತ್ತು. ಕುಮಾರರ ಬಳಿ ಇದ್ದದ್ದು ಸ್ವಲ್ಪಮಟ್ಟಿಗೆ ಸಣಕಲ್ಲು ಹಸು ; ಅವರೂ ಲಕ್ಷ್ಮಿಯೂ ಇತರ ಮಕ್ಕಳೂ ಸೇರಿಕೊಂಡು ಅದನ್ನು ತೊಳೆದು ಅದರ ಕೋಡುಗಳಿಗೆ ಬಣ್ಣ

ಅಂದಿನ ದಿನ ಬಂದಿದ್ದ ವಾಸಿಕಿಯ ಎರಡು ಮಕ್ಕಳು ಇವರ ಫೋಟೋ ತೆಗೆದುಕೊಂಡರು. ಜೂಡಿಯ ತಂದೆ ಅಸ್ಪತ್ರೆಗೆ ಹೋಗದೆ ನಿಂತುಬಿಟ್ಟರು ; ಕಡುಬಿಗಾಗಿ ಬಲು ಸೊಗಸಾದ ರೀತಿಯ 'ಐಸ್‌ಕ್ರೀಮ್' ಸಿಕ್ಕಿತ್ತು ಅವರಿಗೆ.

ಜಿಮ್‌ಖಾನ ಕ್ಲಬ್ಬಿನಲ್ಲಿ ಕೆಲವು ಮಂದಿ ಸ್ಕಾಟ್ಟ ಜನ ನೂತನ ವರ್ಷದ ಸಂತೋಷಕೂಟವನ್ನು ಇಟ್ಟುಕೊಂಡಿದ್ದರು. ಜೂಡಿಯ ತಾಯಿ ಅವರ ಮೇಲೆ ಸ್ವಲ್ಪಮಟ್ಟಿಗೆ ರೇಗಿದರು ; ಏಕೆಂದರೆ, ಅವರು ಯಾವಾಗಲೂ ಹೇರಳವಾಗಿ ವ್ಹಿಸ್ಕಿ ಮದ್ಯವನ್ನು ಕುಡಿಯುತ್ತಿದ್ದರು ; ಅದು ಕೆಟ್ಟ ಮೇಲ್ಪಂಕ್ತಿ ಎಂದು ಜೂಡಿಯ ತಾಯಿಯ ಭಾವನೆ ಮದರಾಸು ಪಾನನಿರೋಧ ಇರುವ ರಾಜ್ಯ ; ವ್ಹಿಸ್ಕಿ ಮುಂತಾದನ್ನು ಉಪಯೋಗಿಸಲು ಅಪ್ಪಣೆಚೀಟಿ ಹೊಂದಿರಬೇಕು. ಅದು ಕೂಡ, ವರ್ಷಕ್ಕೊಮ್ಮೆ ಮಾತ್ರ.

ಇದಾದಮೇಲೆ, ಪೊಂಗಲ್ ಹಬ್ಬ ಮೊದಲಾಗಲು ಕಾಲ ಸಮೀಪಿಸಿತ್ತು. ಮದರಾಸಿನಂತಹ ನಗರದಲ್ಲಿ, ಹುಡುಗರು ಅಲ್ಲಿ ಇಲ್ಲಿ ನುಗ್ಗಿ ಇತರ ಜನರ ಪದಾರ್ಥಗಳನ್ನು ಒಡೆದುಹಾಕುವುದಕ್ಕೆ ಅನೇಕ ವೇಳೆ ಅದು ಒಂದು ನೆಪ ಅಷ್ಟೆ. ಆದರೆ ಹಳ್ಳಿಗಾಡಿನಲ್ಲಿ ಅದು ಸಹಜವಾದ ಹಬ್ಬ ; ಏಕೆಂದರೆ, ಅದು ನಿಜವಾಗಿ ಸುಗ್ಗಿಯ ಹಬ್ಬ. ಮುಖ್ಯ ಬೆಳೆಯಾದ ಬತ್ತ ಆಗತಾನೆ ಗದ್ದೆಯಿಂದ ಮನೆಗೆ ಬಂದಿರುತ್ತದೆ ; ನಡುಮಾಗಿ ಕಳೆದಮೇಲೆ ಈಗ ಸೂರ್ಯ ಎಂದಿನಂತೆ ಮತ್ತೆ ಯಥಾರೀತಿಯಾಗಿ ಕಾಣಿಸಿಕೊಳ್ಳುತ್ತಾನೆ ಎಂದು ಜನ ಖಂಡಿತಮಾಡಿಕೊಳ್ಳಬಯಸುವರು ; ಅದಕ್ಕಾಗಿ ಅವರು ಪ್ರಪಂಚದಲ್ಲೆಲ್ಲಾ ಹಳ್ಳಿಗಾಡಿನ ಜನ ಎಲ್ಲಾ ಕಾಲದಲ್ಲೂ ಮಾಡಿರುವಂತೆ, ಬಯಲುಕಿಚ್ಚು ಹೊತ್ತಿಸುವರು ಹಬ್ಬದ ರಜಾ ದಿನಗಳಂದು ಲಕ್ಷ್ಮಿ ತನ್ನ ತರಗತಿಯನ್ನು ಮುಚ್ಚಿಬಿಟ್ಟಳು; ಯಾರೂ ಬರುತ್ತಲೂ ಇರಲಿಲ್ಲ. ಆದರೆ ಅದೇ ಸಮಯಕ್ಕೆ ಏನಾಯಿತೆಂದರೆ. ಸರ್ಕಾರದ ಜನರ ಪೈಕಿ ಒಬ್ಬರು ರಾಷ್ಟ್ರೀಯ ವಿಸ್ತರಣ ಸೇವಾ ಯೋಜನೆಯ ಪ್ರದೇಶಕ್ಕೆ ಬಂದರು ; ಆದರೆ ಅವರೇನೋ ತಾವು ವಯಸ್ಕರ ವಿದ್ಯಾಭ್ಯಾಸದ ತರಗತಿಯನ್ನು ನೋಡಲು ಅಪೇಕ್ಷೆಯಾಯಿತು ಎಂದರು. ಆತ ಉತ್ತರ ಪ್ರದೇಶದವರು, ಅಲ್ಲಿ ಪೊಂಗಲ್ ಹಬ್ಬದ ಆಚರಣೆ ಇಲ್ಲ, ಅದರ ಬದಲು ಇನ್ನೇನೋ ಒಂದು ನಡೆಯುವುದು. ಆದರೆ ರಾಷ್ಟ್ರೀಯ ವಿಸ್ತರಣ ಚಳವಳಿಯ ವಿಚಾರ ಅಷ್ಟೊಂದು ಮಾತಾಡುತ್ತ, ನಿಜವಾದ ಹಳ್ಳಿಗಳ ಚಳವಳಿಯ ವಿಚಾರ ಅಷ್ಟೊಂದು ಮಾತಾಡುತ್ತ, ನಿಜವಾದ ಹಳ್ಳಿಗಳ ವಿಚಾರವಾಗಿ ಎಂದೂ ಯೋಜನೆಯೇ ಮಾಡದಿರುವ ನಗರದ ಜನರ ದಡ್ಡತನವನ್ನು ಕಂಡು ಲಕ್ಷ್ಮಿ

ಹೂವನ್ನು ಪೋಣಿಸಿ ಮಾರುವ ಅಂಗಡಿಗಳಿಗೆ ಹೋಗುವರು, ಅದೂ ಇಲ್ಲವೋ ಹೂವಾಡಿಗನೇ ಸಂಜೆಯ ಹೊತ್ತು ಮನೆಮನೆಗೂ ಬರುವನು, ಮದರಾಸಿನಲ್ಲಿ ಹೂವು ಬಲು ಅಗ್ಗವಾಗಿತ್ತು ; ಜೂಡಿ ತನ್ನ ದೇಶಕ್ಕೆ ಹೋದಾಗ ಆ ಹೂವುಗಳು, ಆ ಬಣ್ಣ ಅವಳ ಪಾಲಿಗೆ ಇಲ್ಲವಾಗುವುವು.

ಬಳಿಯತೊಡಗಿದರು. ಅವರ ಹೆಂಡತಿ ಎಷ್ಟು ದೀರ್ಘಕಾಲ ಮಹಡಿಯಮೇಲೆ ವಾಸಮಾಡಿದ್ದರೆಂದರೆ, ಆಕೆ ಹಸುವಿನ ಕೊಂಬುಗಳಿಗೆ ಬಣ್ಣ ಬಳಿದು ವರ್ಷಗಳಾಗಿತ್ತು. ಅವರು ಬಣ್ಣಬಳಿಯುವ ಕೆಲಸವನ್ನು ಕೆಲಮಟ್ಟಿಗೆ ಅಡ್ಡಾದಿಡ್ಡಿಯಾಗಿ ಮಾಡಿ ಕೆಡಿಸಿಬಿಡುತ್ತಿದ್ದರು ; ಆದರೆ ಆಗ ವಲ್ಲಿಯ ತಂದೆ, ಕಲ್ಲು ಕೆಲಸದವನು, ಅಲ್ಲಿಗೆ ಬಂದು ಅವರಿಗೆ ನೆರವಾದ ; ಹೀಗೆ ಕಡೆಯಲ್ಲಿ, ಒಂದು ಕೋಡಿಗೆ ಕೆಂಪನ್ನೂ ಇನ್ನೊಂದಕ್ಕೆ ಹಸುರನ್ನೂ ಹಾಕಿ ಅದರ ಮೇಲೆ ಚಿಕ್ಕ ಹೂಚಿತ್ರಗಳನ್ನು ಬಣ್ಣದಿಂದ ಬರೆದಿದ್ದ ಅವರ ಹಸುವೇ ಪೊನ್ನೇರಿಯಲ್ಲಿನ ಬಲು ಬೆಡಗಿನ ಹಸುಗಳಲ್ಲಿ ಒಂದು ಎನಿಸಿತ್ತು.

ಇದರ ಜೊತೆಗೆ ಸ್ವಲ್ಪ ಕುಣಿತವೂ ಇತ್ತು, ಆದರೆ ಅದು ಲಕ್ಷ್ಮಿ ಅದುವರೆಗೆ ನೋಡಿದ್ದ ಯಾವುದೇ ಕುಣಿತಕ್ಕಿಂತ ಹೆಚ್ಚು ಒರಟುತರಹದ್ದು ; ಅಲ್ಲದೆ ಅದರೊಂದಿಗೆ ತುಂಬ ಕೂಗಾಟವೂ ಇತ್ತು. ಬಯಲುಕಿಚ್ಚು ಉರಿಸುವ ರಾತ್ರಿ, ಭಾರತದೇಶದ ಪಡುವಣ ದೊಡ್ಡ ಬಯಲುಸೀಮೆಯಲ್ಲಿ, ಬಹು ದೂರಕ್ಕೂ ಆಚೆ ಉರಿಯುವ ಜ್ವಾಲೆಗಳ ಮಿನುಗನ್ನು ಅವರು ಕಾಣಬಹುದಾಗಿತ್ತು.

"ಅಮ್ಮಣ್ಣಿ ಪಾಟಿಯ ಹಸುಗಳನ್ನು ನೋಡಬೇಕು ಅಂತ ನನಗೆ ಆಸೆಯಾಗುತ್ತೆ," ಎಂದಳು ಸರಸ್ವತಿ ಬೇರೆ ವರ್ಷಗಳಲ್ಲಿ ಅವರು ಅವುಗಳನ್ನು ನೋಡಿಕೊಂಡು ಬರಲು ಒಂದು ಸುತ್ತು ಹೋಗಿಬರುತ್ತಿದ್ದರು ; ಆಗ ದೋಸೆ ಕಾಫಿ ಸಿಕ್ಕುತ್ತಿತ್ತು. ಕೆಲವು ವೇಳೆ ಬಹುಮಾನಗಳೂ ದೊರೆಯುತ್ತಿದ್ದುವು.

"ಜೂಡಿ ಹೋಗಿ ಅವುಗಳನ್ನು ನೋಡುತ್ತಾಳೆ, ಬಹುಶಃ ನನಗೆ ಬರೆದು ತಿಳಿಸುತ್ತಾಳೆ," ಎಂದಳು ಲಕ್ಷ್ಮಿ. ಅದರ ಹಾಗೆಯೇ ಅವಳು ಮಾಡಿದಳಿ. ಕಾವೇರಿ, ಗೋದಾವರಿ ಮತ್ತು ಅದೇ ತಾನೆ ಮೊಳೆಯುತ್ತಿದ್ದ ಸಣ್ಣ ಕೊಂಬುಳ್ಳ, ಮಾಡಿ, ಚೆಂದವಾಗಿ ಕಾಣುವಂತೆ ಮಾಡುತ್ತಿದ್ದುದನ್ನು ಜೂಡಿ ಮತ್ತು ಬೆನ್ ಬೇಲಿಯ ಆಚೆಯ ಕಡೆಯಿಂದ ಗಮನಿಸಿ ನೋಡುತ್ತಿದ್ದರು. ಮದರಾಸಿನ ಬೀದಿಗಳಲ್ಲಿ ಎಲ್ಲೆಲ್ಲಿಯೂ ಅದೇ ಕಾರ್ಯಕಲಾಪ ; ಹಸುಗಳು, ಬಂಡಿಯ ಎತ್ತುಗಳು ಮತ್ತು ಎಮ್ಮೆಗಳು ಎಲ್ಲಕ್ಕೂ ಕೋಡುಗಳಿಗೆ ಬಣ್ಣ ಬಳಿದಿರುತ್ತಿತ್ತು ; ಕೆಲವು ವೇಳೆ ಬರಿಯ ಸಾದಾ ಬಣ್ಣ, ಒಂದು ಕೋಡಿಗೆ ಒಂದು ಬಣ್ಣ, ಇನ್ನೊಂದು ಕೊಡಿಗೆ ಬೇರೆ ಇನ್ನೊಂದು ಬಣ್ಣ ; ಆದರೆ ಅನೇಕವೇಳೆ ಕೋಡುಗಳ ತುದಿಗೆ ಗಿಲೀಟು ಹಾಕಿ, ಹೂವುಗಳನ್ನೂ ಕುಚ್ಚುಗಳನ್ನೂ ಕಟ್ಟಿರುತ್ತಿದ್ದರು. ಮದರಾಸಿನಲ್ಲಿ ಪ್ರತಿಯೊಂದು ಸಂದರ್ಭವೂ ಸುವಾಸನೆಯಾದ ಹೂವುಗಳನ್ನು ಉಪಯೋಗಿಸಲು ಒಂದು ನೆಪ, ಅಷ್ಟೆ. ತಾವು ತಾವೇ ಹೂ ಕಟ್ಟಕೊಳ್ಳುವರು. ಇಲ್ಲವೇ ದಾರಕ್ಕೆ

ಬಳಿಗೆ ಸಡಗರಪಡುತ್ತ ಬಂದು, ಹೇಳಿದರು : "ಹಾಗಾದರೆ ನೀವು ದೇಹಲಿಗೆ ಹೋಗುತ್ತೀರಿ. ಓಹೊ, ನನಗೆಷ್ಟು ಸಂತೋಷವಾಗಿದೆಯೊ ! ಶುಭ್ರವಾದ ಹಸುರು ತುಂಬಿದ, ಹುರಿಪುಹುಟ್ಟಿಸುವ, ನಿಜವಾದ ಭಾರತವನ್ನು ನೀವು ನೋಡುವಿರಿ ; ಆ ಸೊಗಸಾದ ಬಲಿಷ್ಠವಾದ ಗಂಡಸರು, ಚೆಲುವೆಯರಾದ ಹೆಂಗಸರು, ಅಂಗಡಿಗಳು...." ಜೂಡಿಯ ತಂದೆ ಸ್ವಲ್ಪ ಅನ್ಯ ಮನಸ್ಕರಾಗಿಯೆ ಆಕೆಯನ್ನು ಕೇಳಿದರು, ತಮ್ಮ ಅಂಗಡಿ ವ್ಯಾಪಾರವನ್ನು ಮದರಾಸಿನಲ್ಲಿ ಮಾಡಲು ಸಾಧ್ಯವಾಗಲಿಲ್ಲವೆ ಎಂದು. ಎಲ್ಲವೂ ಎಷ್ಟು ದರಿದ್ರವಾಗಿದೆ, ಎಷ್ಟು ಕೊಳಕಾಗಿದೆ, ಎಂದು ಆಕೆ ಮತ್ತೆ ಪ್ರಾರಂಭ ಮಾಡಿಯೇ ಬಿಟ್ಟರು, ಬಳಿಕ ಜೂಡಿಯ ಕಡೆಗೆ ತಿರುಗಿದರು. "ನಿನ್ನ ಸ್ನೇಹಿತೆ ಲಕ್ಷ್ಮಿ ಎಲ್ಲಿ ? ಅವಳಿಗೂ ಕೂಡ ತಣ್ಣಗಿದೆಯೆ ನೀರು ? ಹರಿದಾಸ್, ಓಡು, ಬಟ್ಟೆ ಬದಲಾಯಿಸು ! ಅಥವಾ ನೀವು ಸ್ನೇಹಿತರಾಗಿಲ್ಲವೋ ಈಗ ?"

"ಅವಳು ಮದರಾಸಿನಲ್ಲಿ ಇಲ್ಲ," ಎಂದು ಕೋಪದಿಂದ ಹೇಳಿದಳು ಜೂಡಿ.

"ಹೋ, ಅದು ಸರಿ–ಅವಳ ತಂದೆಯನ್ನು ಕೆಲಸದಿಂದ ವಜಾಮಾಡಿ ಬಿಟ್ಟರು–ಹೌದಾ ?" ಆಕೆ ಜೂಡಿಯ ತಂದೆಯ ಕಡೆಗೆ ತಿರುಗಿದರು ; ಆದರೆ ಅವರು ಸ್ನಾನ ಮಾಡುವುದಕ್ಕೆ ಹೊತ್ತಾಯಿತೆಂದು ಆತುರದಿಂದ ಹೇಳಿ, ಜೂಡಿ ಪ್ರತ್ಯುತ್ತರ ಕೊಡುವುದಕ್ಕೆ ಮೊದಲೆ ಅವಳನ್ನು ಅತ್ತ ದೂಡಿದರು.

ತುಸು ಹೊತ್ತಾದ ಮೇಲೆ ಅವಳ ತಾಯಿ ಮತ್ತು ಬೆನ್ ಕ್ಲಬ್ಬಿಗೆ ಬಂದರು. "ಇದೊ ಇಲ್ಲಿ, ನಾವು ಕಾಯುತ್ತ ಇದ್ದ ಕಾಗದ" ಎಂದರು ಅವಳ ತಾಯಿ. ಅವಳ ತಂದೆ ಅದರ ಕಡೆ ನೋಡಿ, ನುಡಿದರು : "ಜೂಡಿ, ರಾವ್ ದಂಪತಿಗಳು ನೀನೂ ಬಂದು ಇರಬೇಕೆಂದೂ ಕೇಳಿಕೊಂಡಿದ್ದಾರೆ ; ನೀನು ಇಷ್ಟೊಂದು ಬೇಗ ಹಿಂದಿರುಗಿ ಹೋಗುತ್ತಿರುವುದರಿಂದ ನೀನು ಇನ್ನೂ ಶಾಲೆಗೆ ಹೋಗುತ್ತ ಇರುವುದರಲ್ಲಿ ಅರ್ಥವಿಲ್ಲ. ಮುಂದಿನ ವಾರ ನಾವೆಲ್ಲ ದೆಹಲಿಗೆ ಒಟ್ಟಿಗೆ ಹೋಗೋಣ."

"ಓ, ಅಪ್ಪಾ !" ಎಂದಳು ಜೂಡಿ. ಆಗ ಇದ್ದಕ್ಕಿದ್ದ ಹಾಗೆ, ತಾನು ಹರಿದಾಸನ ತಾಯಿಗೆ ಹೇಳದೆ ಅಡಗಿಸಿ ಇಟ್ಟುಕೊಂಡದ್ದೆಲ್ಲವೂ ಕುದುಕುದಿಯುತ್ತ ಉಕ್ಕಿಬಂತು. "ಆದರೆ ನನಗೆ ದೆಹಲಿಗೆ ಹೋಗಲು ಇಷ್ಟವಿಲ್ಲ–ಅಸಹ್ಯಕರವಾದ ದೆಹಲಿ !" ಎಂದಳು ಅವಳು

ಅವಳ ತಂದೆಗೆ ಅರ್ಥವಾಯಿತು. "ಏನು, ಆ ತಿಳಿಗೇಡಿ ಹೆಂಗಸಿಗೋಸ್ಕರವೆ?

## ೧೩. ಉತ್ತರ ದೇಶ

ಒಂದು ಸಮ್ಮೇಳನಕ್ಕಾಗಿ ದೆಹಲಿಗೆ ಹೋಗಬೇಕು, ಅಲ್ಲಿ ಕೆಲವು ಸ್ನೇಹಿತರೊಂದಿಗೆ ಬಹುಶಃ ನಿಲ್ಲಬೇಕಾದೀತು, ಮದರಾಸಿಗೆ ಹಿಂದಿರುಗಿ ತಮ್ಮ ಸಾಮಾನುಸರಂಜಾಮುಗಳೆಲ್ಲವನ್ನೂ ಗಂಟುಮೂಟೆ ಕಟ್ಟಿಡಲು ಏರ್ಪಾಟು ಮಾಡುವ ಮುನ್ನ ಇತರ ಕೆಲವು ಸ್ನೇಹಿತರೊಂದಿಗೆ ಇನ್ನೂ ಆಚೆಯ ಉತ್ತರಕ್ಕೆ, ಬೆಟ್ಟಗಳ ಹತ್ತಿರ, ಹೋಗಿ ಇರಬೇಕಾದೀತು–ಎಂದು ಜೂಡಿಯ ತಂದೆ ಹೇಳುತ್ತ ಇದ್ದರು. ಆದರೆ ಜೂಡಿ ಅದಕ್ಕೆ ವಿಶೇಷ ಗಮನ ಕೊಟ್ಟಿರಲಿಲ್ಲ ; ಪೊನ್ನೇರಿಗೆ ಹಿಂದಿರುಗಬೇಕೆಂದು ಅವಳ ಅಪೇಕ್ಷೆ, ಆದರೆ ಅದು ಬಹುಮಟ್ಟಿಗೆ ದೀರ್ಘ ಪ್ರವಾಸ. ಅಲ್ಲಿಗೆ ಹೋಗಬೇಕೆಂದು ತಾವು ಇಷ್ಟಪಡುವುದಾಗಿ ಅಮ್ಮಣ್ಣಿ ಪಾಟಿ ಹೇಳುತ್ತಲೇ ಇದ್ದರು ; ಆದರೆ ಮೊದಲು ಆಕೆಯ ಹೆಣ್ಣುಮಗಳೊಬ್ಬಳು ಇರಲು ಬಂದಳು, ಆಮೇಲೆ ಮರಕ್ಕೆ ಕಾರನ್ನು ಢಿಕ್ಕಿ ಹೊಡೆಸಿದ್ದ ಸೋದರ ಸಂಬಂಧಿ ಬಂದ.

"ಲಕ್ಷ್ಮಿಯ ತಂದೆಯ ವಿಚಾರದಲ್ಲಿ ಯಾರಾದರೂ ಮಾಡಬಹುದಾದ್ದು ಏನೂ ಇಲ್ಲವೆ ?" ಎಂದು ಪ್ರಶ್ನಿಸಿದಳು ಜೂಡಿ. ಅವರು ಮತ್ತೆ ಜಿಂಖಾನಾ ಕ್ಲಬ್ಬಿನಲ್ಲಿ ಸೇರಿದ್ದರು ; ಲಕ್ಷ್ಮಿಯ ಸ್ನೇಹಿತೆಯರ ಪೈಕಿ ಕೆಲವರು ದೊಡ್ಡ ಹುಡುಗಿಯರು ಆಚೆಯ ಕಡೆ ಮೇಜಿನ ಮುಂದೆ ಸೋಡಾ–ಪಾನೀಯಗಳನ್ನೂ ಉಪ್ಪೇರಿಯ ತಟ್ಟೆಗಳನ್ನೂ ಇಟ್ಟುಕೊಂಡು ಕುಳಿತಿದ್ದರು. ಅವರಲ್ಲೀ ಬಹುಮಂದಿ ಮಾಗಿಯ ಕಾಲದಲ್ಲಿ ಈಜುವುದಕ್ಕೆ ತುಂಬ ಚಳಿ ಎಂದರು ; ಅಲ್ಲದೆ, ಅವರು ದೊಡ್ಡವರಾಗಿ ಬೆಳೆದು, ಯುವತಿಯರು ಕುರಿತು ಯೋಚಿಸತೊಡಗಿದ್ದರು.

"ನನಗೆ ತಿಳಿಯದು, ಜೂಡಿ" ಎಂದು ಮುಖಗಂಟಿಕ್ಕಿ ನುಡಿದರು ಅವಳ ತಂದೆ. "ನಾನು ಅನೇಕ ಜನರ ಹತ್ತಿರ ಮಾತಾಡಿದ್ದೇನೆ. ಆದರೆ ಇದು ಹಿಂದಿನಿಂದ ಸೂತ್ರ ಎಳೆದು ಆಡಿಸುವ ವಿಚಾರ ಎಂದು ತೋರುತ್ತೆ ; ಎಳೆದು ಆಡಿಸಲು ಸರಿಯಾದ ಸೂತ್ರ ನನಗಿನ್ನೂ ಸಿಕ್ಕಿಲ್ಲ. ಬಹುಶಃ ಆ ಕೆಲಸವನ್ನು ಮದರಾಸಿನಲ್ಲಿ ಮಾಡಲು ಆಗುವುದಿಲ್ಲ."

ಆಗ ತಾನೆ ಹರಿದಾಸ್ ತನ್ನ ಟವಲನ್ನು ಹಿಡಿದುಕೊಂಡು, ಓಡುತ್ತ ಬಂದ ; ಅವನ ಹಿಂದೆಯ ಬಂದರು ಅವನ ತಾಯಿ ; ಅವರು ಮೇಜಿನ

ಭಾರಿ ಜನಸಂದಣಿ, ರಂಕರಾಟಣಗಳು, ಜೋಕಾಲಿಗಳು, ದಾರಿ ಪಕ್ಕದ ನೆಲಗಟ್ಟಿನ ಮೇಲೆ ಹರಡಿಕೊಂಡಿದ್ದ ರಾಶಿ ರಾಶಿ ಆಟದ ಸಾಮಾನುಗಳು, ಚಿಕ್ಕಪುಟ್ಟ ಒಡವೆಗಳು, ಹಿತ್ತಾಳೆ ಸಾಮಾನು ಮತ್ತು ಒಳೆಗಳು; ನೂರಾರು ಮಂದಿ ತಿರುಕರು; ಹಣ್ಣನ್ನೋ ಮಿಠಾಯಿಗಳನ್ನೋ ತಿನ್ನುತ್ತ, ಅಲೆಯೆಬ್ಬಿಸುತ್ತ ತಮ್ಮ ಕಡೆಗೆ ನಿಧಾನವಾಗಿ ಬರುತ್ತಿದ್ದ ತೆಪ್ಪವನ್ನು ನೋಡುತ್ತ, ಕೆರೆಯ ಕಲ್ಲು ಮೆಟ್ಟಲುಗಳ ಮೇಲೆ ಕಿಕ್ಕಿರಿದು ಕುಳಿತಿದ್ದ ಜನ–ಇದೆಲ್ಲಾ ಕೂಡಿ, ಕೆರೆಯ ಸುತ್ತ ಒಂದು ಬಗೆಯ ಜಾತ್ರೆಯೇ ನೆರೆದಂತಿತ್ತು. 'ಇಂದಿನಿಂದ ಇನ್ನು ಆರು ವಾರಗಳಲ್ಲಿ ನಾನು ಇಂಗ್ಲೆಂಡಿನಲ್ಲಿ ಇರುತ್ತೇನೆ', ಎಂದು ಆಲೋಚಿಸಿದಳು ಜೂಡಿ.

ಭಾರತದ ರೈಲ್ವೆಗಾಡಿಗಳು ತುಂಬ ಹಾಯಾಗಿಯೆ ಇರುತ್ತವೆ ; ಆದರೆ ಸ್ವಲ್ಪಮಟ್ಟಿಗೆ ನಿಧಾನ; ಏನೇ ಆದರೂ, ದೀರ್ಘಪ್ರಯಾಣದ ಮಟ್ಟಿಗೆ ಅವು ಯಾವಾಗಲು ಶುಭ್ರವಾಗಿರುವುದಿಲ್ಲ. ಆದರೆ ಬೇಕಾದಷ್ಟು ಜನ ವಿಮಾನದಲ್ಲಿ ಪ್ರಯಾಣ ಮಾಡುತ್ತಾರೆ ; ಜೂಡಿ ಮತ್ತು ಅವಳ ತಂದೆಯೂ ಹಾಗೆಯೇ ಮಾಡಿದರು ; ಅವರು ರಾತ್ರಿಯ ಮೆಯಿಲ್ ವಿಮಾನದಲ್ಲಿ ದೆಹಲಿಗೆ ಹೊರಟರು, ಹಗಲು ವಿಮಾನದಷ್ಟು ದುಬಾರಿವೆಚ್ಚದ್ದಲ್ಲ ಅದು ; ಹಿಂದಕ್ಕೆ ಓರೆಮಾಡಿ ಮಲಗಿಕೊಳ್ಳಬಹುದಾದ ಹಿತಕರವಾದ ಪೀಠಗಳಿರುತ್ತವೆ ಅದರಲ್ಲಿ. ಜೂಡಿ ತುಸ ನಿದ್ದೆಹೋದಳು ; ಆ ಬಳಿಕ 'ಭಾರತ ವಿಮಾನ'ದ ಒಳ್ಳೆಯ ಉಪಚಾರಿಕೆ ಅವಳನ್ನು ಎಬ್ಬಿಸಿದಳು ; ಏಕೆಂದರೆ ಅವರು ನಾಗಪುರವನ್ನು ಸೇರುವವರಾಗಿದ್ದು, ಅಲ್ಲಿ ವಿಮಾನವನ್ನು ಬದಲಾಯಿಸಬೇಕಾಗಿತ್ತು. "ನಾಗಪುರ್–ಎಂದರೆ ಹಾವಿನ ಊರು, ಅಲ್ಲಿ ಒಂದು ಸಿನಿಮಾ ಮಂದಿರ ಇದೆ" ಎಂದರು ಅವರ ತಂದೆ. ಅದೇ ಪ್ರಕಾರ ಅಲ್ಲಿ ಇತ್ತು. ಅದರಲ್ಲಿ ಸ್ವಲ್ಪ ಚೆನ್ನಾದ 'ಡಾಕ್ಯುಮೆಂಟರಿ' (ಪ್ರತ್ಯಕ್ಷ ನಿದರ್ಶನ) ಚಿತ್ರಗಳು ನಡೆಯುತ್ತಿದ್ದುವು; ಬೆಳಗಿನ ಉಪಾಹಾರ ಇಲ್ಲವೆ ರಾತ್ರಿಯೂಟ ಎಂದು ನಿಮಗೆ ತೋರಿದಂತೆ ಕರೆಯಬಹುದಾದ ಒಂದು ಬಗೆಯ ಊಟವೂ ಇತ್ತು.

ಅವರು ಮುಂದಕ್ಕೆ ಪ್ರಯಾಣಮಾಡಿದಾಗ ಇನ್ನೂ ಕತ್ತಲೆಯಾಗಿತ್ತು ; ಅಲ್ಲದೆ, ತಕ್ಕಮಟ್ಟಿಗೆ ತಂಪಾಗಿಯೂ ಇದ್ದು, 'ಭಾರತ ವಿಮಾನ'ದವರು ತನಗೆ ಕಂಬಳಿ ಒದಗಿಸಿದ್ದಕ್ಕಾಗಿ ಜೂಡಿ ಸಂತೋಷಪಟ್ಟದ್ದಳು. ಆಮೇಲೆ, ಕೆಲವು ವೇಳೆ ತಿಟ್ಟುತಿಟ್ಟಾದ, ತೀರ ಕೆಳಗೆ ಹಸುರು ಮತ್ತು ಕಂದುಬಣ್ಣದ ಬೆಳೆಹರಡಿದ್ದ. ಹಳ್ಳಿಗಳು ಗುಂಪುಗುಂಪಾಗಿರುವ, ಚಪ್ಪಟೆಯ ನಾಡಮೇಲೆ ಸೂರ್ಯೋದಯವಾಯಿತು. ಆದರೆ ಭವ್ಯವಾಗಿ ಕಾಣುವ ಭವನಗಳ ಮೇಲೂ, ಅಗಲವಾದ ಬೀದಿಗಳ

ಆಕೆ ಹೇಳುವುದು ನಿನ್ನ ಮೇಲೆ ಪ್ರಭಾವ ಬೀರಲು ನೀನು ಖಂಡಿತ ಅವಕಾಶ ಕೊಡುತ್ತಿಲ್ಲ, ಅಲ್ಲವೆ ಜೂಡಿ ?" ಎಂದು ಕೇಳಿದರು ಅವರು.

ಆ ರೀತಿ ಹೇಳಿದ್ದರಿಂದ, ಸಹಜವಾಗಿಯೆ ಅವಳು ಒಪ್ಪಿಕೊಂಡಳು. ಅವಳ ತಂದೆ ಮುಂದುವರಿಸಿದರು : "ಅದು ಪಾರ್ಲಿಮೆಂಟು ಇರುವ ರಾಜಧಾನಿ. ಬೇರೆಯ ರೀತಿಯ ಭಾರತ, ಮೇಲಾದದ್ದೇನೂ ಅಲ್ಲ ; ನೀನು ಅದನ್ನು ನೋಡ ಬೇಕು, ಜೂಡಿ."

"ನಿನಗೆ ಕೆಲವು ಬೆಚ್ಚಗಿರುವ ಉಡುಪುಗಳು ಬೇಕಾಗುತ್ತದೆ ; ಏಪ್ರಿಲ್‌ನಲ್ಲಿ ಅವು ಇಂಗ್ಲೆಂಡಿನಲ್ಲೂ ಬೇಕಾಗುತ್ತವೆ," ಎಂದರು ಅವಳ ತಾಯಿ.

ಅವಳ ತಾಯಿ ಜೂಡಿಗೆಂದು ಆಗಲೇ ಒಂದು ಜರ್ಸಿಯನ್ನೂ ನಡುವಂಗಿಯನ್ನೂ ಹೆಣೆದುಬಿಟ್ಟಿದ್ದರು ; ಅವು ಅವಳಿಗೆ ಎಂದೇ ಆಗಲಿ ಬೇಕಾಗುವ ಸಂದರ್ಭ ತೀರ ಅಸಂಭವ ಎಂದು ಕಂಡುಬಂದರೂ ಬಿಡಲಿಲ್ಲ. ದರ್ಜಿ ಅವಳಿಗಾಗಿ ದಪ್ಪನೆಯ ಲಂಗವೊಂದನ್ನು ತಯಾರು ಮಾಡಿದ. "ಉಣ್ಣೆಯ ಕಾಲು ಚೀಲಗಳೂ ನಿನಗೆ ಬೇಕಾಗುತ್ತವೆ, ಜೊತೆಗೆ ಒಂದು ಮಳೆಯಂಗಿ...." ಎಂದು ಹೇಳಿದರು ಅವರ ತಾಯಿ.

"ಆದರೆ ಇದು ಭಾರತ !" ಎಂದು ಪ್ರತಿಭಟಿಸಿದಳು ಜೂಡಿ ; ಬೆಟ್ಟಗಳಲ್ಲಿ ಇದ್ದಾಗ ಕೂಡ ಕಾಲುಚೀಲಗಳನ್ನು ಹಾಕಿಕೊಳ್ಳುವ ಕನಸು ಕಂಡಿರಲಿಲ್ಲ ಅವಳು! ಹೇಗಾದರೂ ಆಗಲಿ, ಪ್ರತಿಯೊಂದೂ ಸಿದ್ಧವಾಯಿತು.

"ಉತ್ತರ ದೇಶದಲ್ಲಿ ಜನರೊಂದಿಗೆ ಮಾತಾಡುವುದಕ್ಕಾಗಿ ನೀನು ಕಲಿತಿರುವ ಹಿಂದಿಯನ್ನು ಉಪಯೋಗ ಮಾಡಿಕೊಳ್ಳಬಹುದು," ಎಂದರು ಅವಳ ತಾಯಿ. ಆದರೆ ಜೂಡಿ ಮಾತ್ರ ಮುಖ ಸೊಟ್ಟ ಮಾಡಿದಳು.

ಅವರು ಊರು ಬಿಡುವುದಕ್ಕೆ ಸ್ವಲ್ಪ ಮೊದಲು, ಮದರಾಸಿನ ಉಪನಗರವೊಂದರಲ್ಲಿ ಮೈಲಾಪುರದಲ್ಲಿ ತೆಪ್ಪೋತ್ಸವ ನೋಡಲು ಹೋದರು. ಈ ಉತ್ಸವಕ್ಕಾಗಿ ದೇವರಿಗೆಂದು ಒಂದು ಸೊಗಸಾದ, ಅಲಂಕರಿಸಿದ ತೆಪ್ಪವನ್ನು ಸಿದ್ಧಪಡಿಸುತ್ತಾರೆ ; ಸಂಜೆ ದೇವಾಲಯದ ಮುಂದಿನ ಕೆರೆಯಲ್ಲಿ ಸುತ್ತಲೂ ಅದನ್ನು ಎಳೆಯುತ್ತಾರೆ ; ಆಮೇಲೆ ತೆಪ್ಪ ವಿದ್ಯುಚ್ಛಕ್ತಿಯದೀಪಗಳ ತೋರಣಗಳಿಂದ ಬೆಳಗುತ್ತಿರುತ್ತದೆ ; ಅವೆಲ್ಲವನ್ನೂ ಚಮತ್ಕಾರವಾದ ಮತ್ತು ತೊಡಕಾದ ತಂತಿಗಳ ವ್ಯವಸ್ಥೆಯ ಮೂಲಕ ವಿದ್ಯುಚ್ಛಕ್ತಿಯ ಮುಖ್ಯ ಸರಬರಾಯಿಸಾಧನಕ್ಕೆ ಜೋಡಿಸುತ್ತಾರೆ ಅವರು ಅಲ್ಲಿಗೆ ಕಾರಿನಲ್ಲಿ ಹೋದರು ; ಸ್ವಲ್ಪ ಕಷ್ಟಪಟ್ಟು ಕಾರನ್ನು ನಿಲ್ಲಿಸಲು ಒಂದು ಸ್ಥಳವನ್ನು ದೊರಕಿಸಿಕೊಂಡರು. ಕೂಗಾಡುತ್ತಿದ್ದ

ನೀಳ ಚುಂಚಗಳಿಂದ ಹುಳಹುಪ್ಪಟೆಗಾಗಿ ನೆಲಬೆದಕುತ್ತ. ನಿಶ್ಚಿಂತೆಯಾಗಿ ಅತ್ತ. ಇತ್ತ ಅಲೆದಾಡುತ್ತಿದ್ದುವು. ಅಲ್ಲದೆ ಬೇಕಾದಷ್ಟು ಇತರ ಹಕ್ಕಿಗಳೂ ಇದ್ದುವು ಆದರೆ ಒಳಕ್ಕೆ ನುಗ್ಗಿ ಪದಾರ್ಥಗಳನ್ನು ಎಗರಿಸಿಕೊಂಡು ಹೋಗುತ್ತಿದ್ದ ಕಪಿಗಳದ್ದು ಮಾತ್ರ ಒಂದೂ ಕಾಟವಾಗಿತ್ತು. ತನ್ನ ಪ್ರಯಾಣ ಮುಗಿದ ಮೊದಲ ರಾತ್ರಿ ಜೂಡಿ ಒಳ್ಳೆ ಮರದ ಕೊಡಿನಂತೆ ಮಲಗಿ ನಿದ್ರಿಸಿದಳು; ಆದರೆ ಎರಡನೆಯ ರಾತ್ರಿ ಭಯಂಕರವಾದ ಕೀರಲು ದನಿಯ ಊಳಾಟವನ್ನು ಕೇಳಿ ಎಚ್ಚರಗೊಂಡು, ಸ್ವಲ್ಪಮಟ್ಟಿಗೆ ದಿಗಿಲುಗೊಂಡಳು. ಆದರೆ ಅವಳು ಮಲಗುತ್ತಿದ್ದ ಕೊಟಡಿಯಲ್ಲಿ ದೊಡ್ಡ ಹುಡುಗಿ ಇಂದಿರೆ ಜೊತೆಗಿದ್ದಳು; ಅವು ಬರಿಯ ನರಿಗಳೆಂದು ಅವಳು ನಿದ್ದೆಗಣ್ಣಿನಲ್ಲಿ ತಿಳಿಸಿದಳು. ಮಾರನೆಯ ದಿನ ದಿಲೀಪ್, ಕೆಲವು ಸಲ ತೋಳಗಳ ಹಿಂಡು ಬರುವುದುಂಟು ಎಂದು ಸೇರಿಸಿಹೇಳಿದ; ಆದರೆ ತಾನು ಅದನ್ನು ನಿಜವಾಗಿ ನಂಬಿದುದಾಗಿ ಜೂಡಿ ಎಣಿಸಲಿಲ್ಲ.

ನಡುಹಗಲಿನಲ್ಲಿ ಬಿಸಿಲು ಶಾಖವಾಗಿ ಪ್ರಕಾಶಮಾನವಾಗಿತ್ತು : ಎಲ್ಲವೂ ಬೆಳಗುವಂತೆ ಕಾಣುತ್ತಿತ್ತು. ಅವರು ಹಳೆಯ ದೆಹಲಿಗೆ ಹೋದರು; ಹಾಗೆ ಹೋಗುವಾಗ, ಕೋಟೆಯ ತೆನೆಗಳುಳ್ಳ ಎತ್ತರವಾದ ಗೋಡೆಗಳನ್ನೂ, ಹಿಂದೊಮ್ಮೆ ನಗರವನ್ನು ಮುಚ್ಚಿ ಒಳಕೊಳ್ಳುತ್ತಿದ್ದ ಮಹಾದ್ವಾರಗಳನ್ನೂ ಹಾದು ಕೆಂಪು ಕೋಟೆಯೊಳಕ್ಕೆ ಹೋದರು ; ಅಲ್ಲಿ ಚಕ್ರವರ್ತಿಗಳು ಹಾಗೂ ರಾಜಕುಮಾರಿಯರಿಗೆಂದು ಅಮೃತಶಿಲೆಯನ್ನು ಕೊರೆದು, ಬಿಡಿಸಿ, ಕಂಡರಿಸಿ, ಕಮಾನುಗಳಿಟ್ಟು ಮಾಡಿದ ಚೆಲುವಾದ ಮೋಹಕವಾದ ಕೊಟಡಿಗಳಿವೆ; ಬಣ್ಣ ಬಣ್ಣದ ಕಲ್ಲುಗಳನ್ನೂ ಮಣಿಶಿಲೆಗಳನ್ನೂ ಹದ್ದಿಸಿದ ಗೋಡೆಗಳುಳ್ಳ ಅವು ಅಲೆ ಅಲೆಯಾಗಿ ಕಾಣುವ ಉದ್ಯಾನದ ಹಾಗಿವೆ. ಇಲ್ಲಿನ ಪ್ರಾಚೀನ ವಸ್ತು ಸಂಗ್ರಹಾಲಯದಲ್ಲಿ ಅಮ್ಮಣ್ಣಿ ಪಾಟಿಯವರ ಬಳಿ ಇದ್ದಂತಹ ಚಿತ್ರಗಳಿದ್ದುವು; ಮತ್ತು ಅಲ್ಲಿ ಒಂದು ತಟ್ಟೆ ಇತ್ತು, ಅದರೊಳಕ್ಕೆ ವಿಷಹಾಕಿದರೆ ಅದರ ಬಣ್ಣ ಬದಲಾಯಿಸುತ್ತದೆ ಅಥವಾ ಹಾಗೆ ಏನೋ ಆಗುತ್ತದೆ, ಎಂದ ರಾವ್ ದಂಪತಿಗಳ ಹುಡುಗರು ಹೇಳಿದರು.

ಅವರು ಕುತಬ್ ಮಿನಾರ್ ನೋಡಲು ಹೋದರು; ಹೂವರಳಿರುವಂತೆ ಕಾಣುವ ಅರಬ್ಬೀ ಅಕ್ಷರಗಳನ್ನು ಕೆತ್ತಿರುವ, ಭಾರಿ ಗೋಪುರ ಸ್ತಂಭ ಅದು. 'ವಿಷ್ಣುವಿನ ಧ್ವಜಸ್ತಂಭ'ವಾದ ಕಬ್ಬಿಣದ ಕಂಬ ಇರುವುದೂ ಇಲ್ಲಿಯೇ, ಅದರ ಮೇಲೆ ಪುರಾತನ ಮಹಿಮೆಯನ್ನೂ ಸಾಮಥ್ಯವನ್ನೂ ಹೊಗಳುವ ಮಾತುಗಳನ್ನು ಕೆತ್ತಿವೆ : "ಯಾರ ಮಹಿಮಾ ಮಾರುತನಿಂದ ದಕ್ಷಿಣ ಸಾಗರವು ಇನ್ನೂ ಪರಿಮಳಿತವಾಗಿದೆಯೋ ಆತ......" ಎಂದು.

ಮೇಲೂ, ಹರುಳುರುಳಿ ಇಳಿದು ಹೋಗಿ ಹೊಸದೆಹಲಿಯ ವಿಮಾನ ನಿಲ್ದಾಣದಲ್ಲಿ ತಂಗಿದಾಗ ಇನ್ನೂ ಹೊತ್ತಿಗೆ ಮುಂಚೆಯೇ ಆಗಿತ್ತು. "ಅಬ್ಬಾ, ಚಳಿಯಾಗಿದೆ !" ಎಂದೂ ಹೇಳಿ, ಯುಗಕಳೆದ ಮೇಲೆ ಮೊತ್ತಮೊದಲನೆಯ ಸಲ, ಜೂಡಿ ತನ್ನ ಉಣ್ಣೆಯ ಕಾಲು ಚೀಲಗಳನ್ನು ಹಾಕಿಕೊಂಡಳು.

"ಅಗೋ ಅಲ್ಲಿ ರಾವ್ ದಂಪತಿಗಳು!" ಎಂದು ಹೇಳಿ, ಅವಳ ತಂದೆ ಕೈ ಎತ್ತಿ ಆಡಿಸಿದರು. ಆಮೇಲೆ, ಇನ್ನೂ ನಿದ್ದೆಗಣ್ಣಿನಲ್ಲಿ ಇದ್ದಾಗಲೇ, ಅವರನ್ನು ಬಹುಶೀಘ್ರವಾಗಿ ಕಾರಿಗೆ ಕರೆದೊಯ್ದು, ಸಾಲುಮರದ ಬೀದಿಗಳ ಮತ್ತು ಉದ್ಯಾನಗಳ ಮೂಲಕ ಕರೆದುಕೊಂಡು ಹೋದರು; ಆಗ ಹವಾ ಸ್ವಲ್ಪ ಹೆಚ್ಚು ಕಡಮೆ ನಿಜವಾದ ಮಾಗಿಯಂತೆ, ಅದಿಲ್ಲವೋ ಬಹುಶಃ ಬಹು ಮುಂಚೆ ಬಂದ ವಸಂತದಂತೆ ಇತ್ತು. ಜನ, ಒಂದೋ ಸೂಟು ಧರಿಸಿದ್ದರು, ಅದಿಲ್ಲವೋ ಕಂಬಳಿಯ ಮೇಲೆ ಕಂಬಳಿಗಳನ್ನು ಹೊದೆದಿದ್ದರು–ಇಂಥದರಲ್ಲೂ ಅಲ್ಲೊಬ್ಬ ಆಟ ಆಡುವ ಕರಡಿಯೊಂದಿಗೆ ಇದ್ದ ! ಪಾಪ, ಧೂಳು ಹೊರೆದಿದ ಕರಡಿ ಅದು; ಆದರೆ, ಕಡೆಯ ಪಕ್ಷ ಅದಕ್ಕೆ ಒಂದು ತುಪ್ಪಟದ ಮೇಲ್ಹೊಚ್ಚಿಗೆಯಾದರೂ ಇತ್ತು.

ಅವಳ ತಂದೆ ಸಮ್ಮೇಳನದಲ್ಲಿ ಭಾಗವಹಿಸುತ್ತಿದ್ದಾಗ, ಸುತ್ತ ನೋಟ ನೋಡುವುದಕ್ಕೆ ಜೂಡಿಯನ್ನು ಕರೆದುಕೊಂಡು ಹೋಗಿದ್ದರು. ರಾವ್ ದಂಪತಿಗಳಿಗೆ ಹಲವಾರು ಮಕ್ಕಳಿದ್ದರು ; ಅವರಲ್ಲಿ ದೊಡ್ಡವರು ಎಲ್ಲರೂ ಶಾಲೆಯಲ್ಲಿ ಇಂಗ್ಲಿಷು ಕಲಿತಿದ್ದರು ; ಸಂಕೋಚಪಡುವುದನ್ನು ಬಿಟ್ಟಕೂಡಲೆ, ಜೂಡಿಯನ್ನು ಬೇಕಾದಷ್ಟು ಮಾತಾಡಿಸಿದರು; ಆದರೆ ಯಾವಾಗಲೂ ಇಂಗ್ಲಿಷಿನಲ್ಲಿಯೇ ಹೊರತು ಹಿಂದಿಯಲ್ಲಿ ಎಂದಿಗೂ ಅಲ್ಲ. ದಿಲೀಪ್ ಎಂಬ ಹೆಸರಿನ ಹುಡುಗ ಒಬ್ಬನಿದ್ದ, ಅವನ ತಂದೆಯ ಹಾಗೆ; ಇಂದಿರಾ ಎಂಬ ಹೆಸರಿನ ಹುಡುಗಿಯೊಬ್ಬಳಿದ್ದಳು. ಅವರಿಬ್ಬರೂ ತಾವು ವೈದ್ಯರಾಗುತ್ತೇವೆ ಎಂದು ಭಾವಿಸಿದ್ದರು ; ಚಿಕ್ಕ ಹುಡುಗನಿದ್ದ, ಅವನಿಗೆ ಕಾಲ್ಚೆಂಡಾಟದಲ್ಲಿಯೆ ಬಹುಮಟ್ಟಿನ ಆಸಕ್ತಿ. ಅವರ ತೋಟದಲ್ಲಿ ಅಚ್ಚುಕಟ್ಟಾದ ಹುಲ್ಲುಹಸಲೆ ಹಾಗೂ ಹೂಗಿಡಗಳ ಪಾತಿಗಳೂ ಇದ್ದವು; ಸ್ನ್ಯಾಪ್‌ಡ್ರ್ಯಾಗನ್ (Snapdragon), ಡ್ವಾರ್ಫ್‌ಫ್ಲಾಕ್ಸ್ (Dwarf phlox), ಲಾರ್ಕ್‌ಸ್ಪರ್ (Larkspur), ಕ್ಯಾಂಡಿಟಫ್ಟ್ ಫ್ಲವರ್ (Corn flower), ಪಿಂಕ್ (Pink) ಮುಂತಾದ ಎಲ್ಲ ಇಂಗ್ಲಿಷ್ ಹೂಗಿಡಗಳು ಆಗಲೇ ಹೂಬಿಡತೊಡಗಿದ್ದವು; ಬಟಾಣಿ ಕೂಡ ಮೊದಲ ಫಲಕೊಡತೊಡಗಿತ್ತು. ಇಷ್ಟರಲ್ಲಿಯೇ ಡೇರಾ (Dahlia) ಹಾಗೂ ಪಿಟ್ಯೂ ಹೂಪೀ (Petunia) ಗಿಡಗಳಲ್ಲಿ ರಾಶಿರಾಶಿ ಹೂವರಳುವುದು. ಚೆಲುವಾದ ಹೂಪೀ (Hoopoe) ಹಕ್ಕಿಗಳು ತಮ್ಮ

ಬಡ ಮನುಷ್ಯ ಪ್ರಾಣಿಗಳು ಪೆಡಲುಗಳನ್ನು ತುಳಿದು ಓಡಿಸುತ್ತಿದ್ದ ರಿಕ್ಷಾಗಾಡಿಗಳು ಅಲ್ಲಿ ಕಂಡುಬರುತ್ತಿಲಿಲ್ಲ ; ಅದರ ಬದಲು, ನಾಲ್ಕು ಪೀಠಗಳುಳ್ಳ ಮೂರು ಚಕ್ರದ ತೆರೆದ ಟ್ಯಾಕ್ಸಿಗಳಿದ್ದುವು ; ಸರಿಯಾದ ರೀತಿಯ ಟ್ಯಾಕ್ಸಿಗಳು ಹಾಗೂ ಬೇಕಾದಷ್ಟು ಕಾರುಗಳಂತೂ ಇದ್ದೇ ಇದ್ದುವು. ಒಮ್ಮೆ ಶ್ರೀಮತಿ ರಾವ್ ಅವರೊಂದಿಗೆ ಅವಳು ಹೊರಹೊರಟ್ಟದ್ದಾಗ, ರಸ್ತೆಯ ಆಚೆಯ ಕಡೆ ಒಂದು ದೊಡ್ಡ ತಗ್ಗಾದ ಮನೆಯ ಬಳಿ ಒಂದು ಸರ್ಕಾರಿ ಕಾರು ನಿಂತುಕೊಂಡಿತು ; ತಮ್ಮ ಕಂದುಬಣ್ಣದ ಅಂಗಿಯುಲ್ಲಿ ಒಂದು ಕೆಂಪು ಗುಲಾಬಿಯನ್ನು ಸಿಕ್ಕಿಸಿಕೊಂಡಿದ್ದ ಯಾರೋ ಒಬ್ಬರು ಹೊರಕ್ಕೆ ಬಂದರು "ಅಗೋ ಅಲ್ಲಿ ಪ್ರಧಾನ ಮಂತ್ರಿಗಳು," ಎಂದು ಶ್ರೀಮತಿ ರಾವ್ ಹೇಳಿ, "ದೇವರು ಅವರನ್ನು ಕಾಪಾಡಲಿ !" ಎಂದು ತಮ್ಮಲ್ಲಿ ತಾವು ಒಂದು ಬಗೆಯ ಪಿಸುದನಿಯಲ್ಲಿ ಹೇಳಿಕೊಂಡರು. ಹಾಗಾದರೆ ಇವರೇ ನೆಹರು, ಎಂದುಕೊಂಡಳು ಜೂಡಿ; ಯಾರ ವಿಚಾರವಾಗಿ ತನ್ನ ತಂದೆ ಅಷ್ಟೊಂದು ತಿಳಿಯ ಹೇಳಿದ್ದರೋ ಅವರೇ ಈತ, ಖಿನ್ನರಾಗಿ ಕಾಣುತ್ತಿದ್ದವರು, ಚೆಲುವಾಗಿದ್ದವರು, ಅಲ್ಲದೆ–ಓ–ಅದು ಹೇಗೋ ಏನೋ ಅವಳಿಗೆ ಹಾಗೆ ಅನಿಸಿತು–ಅತ್ಯಂತ ದಯಳುಗಳಾಗಿದ್ದವರು, ದಾರಿತಪ್ಪಿದ್ದಾರೆ ದಾರಿ ಕೇಳಿ ತಿಳಿದುಕೊಳ್ಳಬಹುದಾದಂಥವರು. ಸಮವಸ್ತ್ರ ಧರಿಸಿದ್ದ ಯಾರೋ ಒಬ್ಬರು ಸಲಾಮುಹೊಡೆದರು ; ಕೆಂಪು ಗುಲಾಬಿ ಧರಿಸಿದ್ದ ಆತ ಮನೆಯೊಳಕ್ಕೆ ಹೋದರು.

ಇದು ನಡೆದ ಮಾರನೆಯ ಭಾನುವಾರ, ಡಾ॥ ರಾವ್ ಅವರು ಜೂಡಿಯನ್ನೂ ಅವಳ ತಂದೆಯನ್ನೂ ತಮ್ಮ ಕಾರಿನಲ್ಲಿ ಸುತ್ತ ಕರೆದುಕೊಂಡು ಹೋಗುತ್ತಿದ್ದಾಗ, ಅದು ಇದು ನೋಡುತ್ತ ಅವಳ ತಂದೆ ಹೇಳಿದರು : "ಲಕ್ಷ್ಮಿಯ ತಂದೆ ಕುಮಾರರ ವಿಷಯದಲ್ಲಿ ಏನಾದರೂ ಇತ್ಯರ್ಥವಾಗುವುದು ಸಾಧ್ಯ ಎಂದು ನನಗೆ ತೋರುತ್ತೆ, ಜೂಡಿ ಇಲ್ಲಿರುವವರಿಗೆ ಅವರ ವಿಚಾರ ಸ್ವಲ್ಪ ತಿಳಿದಿರುವಹಾಗೆ ಕಾಣುತ್ತೆ." ತಮಗೆ ಯಾವುದೂ ಖಾತರಿ ಇಲ್ಲವಾದರೂ ಸಂಬಂಧಪಟ್ಟ ಕೆಲವು ಜನಕ್ಕೆ ಅದೇ ಮಟ್ಟಿನ ಪ್ರಭಾವ ಕೇಂದ್ರದಲ್ಲಿ ಇದ್ದಂತೆ ಕಾಣುವುದಿಲ್ಲ, ಎಂದು ಮುಂದುವರಿದು ಹೇಳಿದರು.

ಜೂಡಿಗೆ ಪೂರ್ತಿ ಅರ್ಥವಾಗಲಿಲ್ಲ. ಆದರೆ ಎಲ್ಲವೂ ಸರಿಹೋಗುವುದು ಎಂದು ಅವಳಿಗೆ ಭಾಸವಾಯಿತು. "ಹಾಗಾದರೆ ನಾನು ಹಿಂದಿರುಗುವ ಮೊದಲು ಲಕ್ಷ್ಮಿಯನ್ನು ಮತ್ತೆ ನೋಡುತ್ತೇನೆ !" ಎಂದಳು ಅವಳು.

"ಓಹೋ, ನೋಡಿಯೇ ನೋಡುತ್ತೀಯೆ" ಎಂದು ಹೇಳಿ, ಅವಳ ತಂದೆ ಡಾ॥ ರಾವ್ ಅವರ ಕಡೆಗೆ ತಿರುಗಿದರು : "ನೀನು ಬಲ್ಲೆಯಾ, ದಿಲೀಪ್,

ಕಟ್ಟಡಗಳ ಶಿಲೆಗಳ ಭವ್ಯವಾದ, ಅಲಂಕಾರ ರಹಿತವಾದ ಆಕೃತಿಗಳಾಗಿ ಮೇಲೆದ್ದು ನಿಂತಿದ್ದುವು ; ದೇವತೆಗಳಿಲ್ಲ, ಕೈಗಳಿಲ್ಲ, ಕಾಲುಗಳಿಲ್ಲ. ಅದು ಹೇಗೋ, ಅಂತೂ ಅದು ವಿಶ್ರಾಂತಿದಾಯಕವಾಗಿತ್ತು. ಅವರೆಲ್ಲ ಕುತುಬ್ ಮಿನಾರನ್ನು ಹತ್ತಿದರು; ರಾವ್ ದಂಪತಿಗಳ ಮಕ್ಕಳು ಅದರ ಮೇಲಕ್ಕೆ ಓಡಿ ಹತ್ತಿ, ತಮ್ಮ ಸಾಮರ್ಥ್ಯವನ್ನು ಮೆರೆದರು. ಇಂದಿರಾ ಮತ್ತು ಜೂಡಿ ಮೊದಲ ಇಪ್ಪತ್ತು ಮೆಟ್ಟಲುಗಳನ್ನು ಓಡುತ್ತಲೇ ಹತ್ತಿದರು, ಆದರೆ ಆಮೇಲೆ ದಮ್ಮು ಹತ್ತಿ. ಪಟ್ಟುಹಿಡಿದು ಏರತೊಡಗಿದರು. ಇಂದಿರಾ ಸೀರೆಯನ್ನು ಉಟ್ಟಿರಲಿಲ್ಲ. ಶಾಲೆಯ ಹುಡುಗಿಯರು ಸಾಧಾರಣವಾಗಿ ಧರಿಸುವ ಉತ್ತರ ದೇಶದ ಉಡುಪನ್ನು ಎಂದರೆ, ಪ್ರತಿನಿತ್ಯ ಒಗೆಯುವ ಕೆಲಸಕ್ಕೆ ಅನುಕೂಲವಾದ ಬಿಳಿಯ ದಗಲೆ ಪಾಯಿಜಾಮ (ಸುರವಾಲ್) ಮತ್ತು ಮಂಡಿಯುದ್ದದ ನೀಳಜುಬ್ಬ (ಕಮೀಜ್) ಹೂವಿನ ಹತ್ತಿಯ ಬಟ್ಟೆಯದು; ಅದರ ಮೇಲೊಂದು ಚಳಿಗಾಳದ ಎಣ್ಣೆಯ ಸ್ವೆಟರನ್ನು ತೊಟ್ಟಿದ್ದಳು.

ಕುತಬ್‌ಮಿನಾರನ್ನು ಸುತ್ತು ಬಳಸಿರುವ ಮಾಳಿಗೆಗಳಲ್ಲಿ ಮೊದಲನೆಯದರ ಮೇಲಕ್ಕೆ ಅವರು ಹೊರಬಂದರು ; ಅದರ ಕೈಪಿಡಿಗೋಡೆ ಬಹಳ ತಗ್ಗಾಗಿ ಕಂಡುಬಂದು, ಕೆಳಗಿನ ನೆಲ ಬಹು ದೂರದಾಚೆ ಇದ್ದುದರಿಂದ, ಜೂಡಿ ಕೈಪಿಡಿಯ ಮೇಲೆ ಬಾಗಿದಾಗ ಅವಳಿಗೆ ವಿಪರೀತ ತಲೆರಿರುಗಿದಂತಾಯಿತು ; ಕೆಳಗಡೆ ವಿನ್ಯಾಸಗೊಳಿಸಿದ್ದ ಹೂವಿನ ತೋಟಗಳೂ, ನಡೆದಾಡುತ್ತಿದ್ದ ಇಲ್ಲವೆ ಚಿಕ್ಕವಾದ ಕಂದುಬಣ್ಣದ ಮುಖಾಕೃತಿಗಳನ್ನು ತೋರುತ್ತ ಮೇಲೆನೋಡುತ್ತಿದ್ದ ಚಿಕ್ಕಚಿಕ್ಕ ಜನರು ಕಾಣುತ್ತಿದ್ದರು. ಆದರೆ ದಿಲೀಪ್ ಮೇಲ್ಭಾಗದಿಂದ ಕೂಗಿಕೊಂಡ : ಆದ್ದರಿಂದ ಅವರು ಮುಂದುಮುಂದಕ್ಕೆ ಹೋಗಬೇಕಾಯಿತು. ಇನ್ನೂ ಎತ್ತರದ ಮಾಳಿಗೆಗಳ ಮೇಲೆ ಇನ್ನೂ ಕೇಡಾಗಿತ್ತು ; ಅವುಗಳ ಮೇಲಿಂದ ನೋಡಿದರೆ, ಕೆಲವು ಪಾಳುಬಿದ್ದಿದ್ದ, ಕೆಲವು ಇನ್ನೂ ಬಲವಾಗಿಯೆ ನಿಂತಿದ್ದ, ಮೊಗಲರ ಕಾಲದ ಹಳೆಯ ಗೋರಿಗಳ ಅಥವಾ ಮಸೀತಿಗಳ ಬುರುಜುಗಳೂ ಗೋಡೆಗಳೂ ಕಾಣಬರುತ್ತಿದ್ದುವು.

ಜೂಡಿಗೆ ಹಾಗೆಂದು ಒಪ್ಪಿಕೊಳ್ಳಲು ನಿಜವಾಗಿ ಇಷ್ಟವಿಲ್ಲದಿದ್ದರೂ ಕೂಡ ಹೊಸದೆಹಲಿ ಶುಭ್ರವಾಗಿತ್ತೆಂದು ಅವಳು ಒಪ್ಪಿಕೊಳ್ಳಬೇಕಾಯಿತು. ಎಲ್ಲೆಲ್ಲಿ ಬೇಕಾದರೂ ಸುತ್ತಾಡುತ್ತ ಹೋಗಬಹುದು, ಇಲ್ಲ ಅಂಗಡಿ ವ್ಯಾಪಾರಕ್ಕೆ ಹೋಗಬಹುದು, ಎಲ್ಲಿಯೂ ತಿರುಕರ ಸುಳಿವಿಲ್ಲ, ತೊಂಡಲೆಯುವ ಹಸುಗಳಿಲ್ಲ, ಎಮ್ಮೆಗಳಿಲ್ಲ–ಮತ್ತೆ ಎಂಥ ಮನೋಹರವಾದ ಮಿಠಾಯಿಗಳು ! ಕೃಶರಾದ

ಎಲೆಗಳುಳ್ಳ ಸುಂದರ ವೃಕ್ಷಗಳ ಅರಣ್ಯದ ಮೂಲಕ ಸಾಗಿಹೋದರು. "ಸಾಲವೃಕ್ಷಗಳು, ಎಲ್ಲವೂ ಸ್ವಾಭಾವಿಕವಾದ ಅರಣ್ಯ–ಆದರೆ, ನನ್ನ ತೇಗದ ಮರದ ಕಾಡನ್ನು ನೋಡುವ ತನಕ ಸ್ವಲ್ಪ ತಡೆಯಿರಿ !" ಎಂದು ತಿಳಿಸಿದರು ಅರಣ್ಯಾಧಿಕಾರಿ.

ಗಿಡಮರಗಳನ್ನೂ ಪೊದೆಗಳನ್ನೂ ಬೆಳಸಿದ್ದ ಒಂದು ದೊಡ್ಡ ಉದ್ಯಾನದ ನಡುವೆ ಇದ್ದಿತು ಅವರ ಬಂಗಲಿ. ಅವುಗಳಲ್ಲಿ ಹಲವು ಇನ್ನೂ ಹೂ ಬಿಟ್ಟರಲಿಲ್ಲ; ಆದರೆ ಒಂದು ರೇಶಿಮೆಹತ್ತಿ ಗಿಡ ಇತ್ತು, ಅದರ ತಿರುಳಾದ ದೊಡ್ಡ ಕೆಂಪು ಹೂಗಳು ತೊಪ್ಪನೆ ಬೀಳುತ್ತಿದ್ದುವು. ಅನಂತರ, ಹಕ್ಕಿಗಳು ಯಾವಾಗಲೂ ಅವುಗಳನ್ನು ಕುಟುಕುತ್ತಿದ್ದುದನ್ನು ಜೂಡಿ ಗಮನಿಸಿದಳು ; ಆದರೆ ಈಗ ಮುಖ್ಯ ಕೊಟಡಿಯಲ್ಲಿದ್ದ ಇಟ್ಟಿಗೆಯ ಒಲೆಯಲ್ಲಿ ಉತ್ಕೃಷ್ಟವಾದ ವಾಸನೆಯನ್ನು ಬೀರುತ್ತ ಉರಿಯುತ್ತಿದ್ದ ಸೊಗಸಾದ ಕಟ್ಟಿಗೆಯ ಉರಿ ಇದ್ದರೂ ಕೂಡ, ಎಲ್ಲಕ್ಕಿಂತ ಮೊದಲು ಸ್ಥಳಪರೀಕ್ಷೆ ಮಾಡಬೇಕೆಂಬ ಅಪೇಕ್ಷೆಯುಂಟಾಯಿತು ಅವಳಿಗೆ. ಅವಳು ಬಂಗಲಿಯ ಸುತ್ತ ಉದ್ದಕ್ಕೂ ಓಡಿದಳು ; ತಟ್ಟನೆ ಅವಳಿಗೆ ಅರಿವಾಯಿತು, ಹಿಂದುಗಡೆ ಎರಡು ಆನೆಗಳು ಇವೆ ಎಂದು ; ಅವು ತಮ್ಮ ಕಿವಿಗಳನ್ನು ಮೆಲ್ಲನೆ ಬಡಿದಾಡಿಸುತ್ತ, ತಮ್ಮ ಮುಂದಿದ್ದ ದೊಡ್ಡ ರಾಶಿಯಿಂದ ಹುಲ್ಲಿನ ಕಂತೆಗಳನ್ನು ಎಟುಕಿಸಿಕೊಳ್ಳಲ. ತಮ್ಮ ಸೊಂಡಿಲುಗಳನ್ನು ಚಾಚುತ್ತಿದ್ದುವು. ಅವಳು ಇನ್ನೂ ಹತ್ತಿರ ಹೋದಳು; ಅವುಗಳಲ್ಲಿ ಪ್ರತಿಯೊಂದರ ಎರಡು ಕಾಲುಗಳನ್ನೂ ಕಟ್ಟಿಹಾಕಿತ್ತು, ಆದರೆ ಬಲು ಹಗುರವಾಗಿ ಅಲ್ಲಿ ಇಲ್ಲಿ ನಡೆದಾಡಕೂಡದು ಎಂದು ಅವುಗಳಿಗೆ ನೆನಪುಕೊಡುವುದಕ್ಕಾಗಿ ಮಾತ್ರ. ಹರಡಿಕೊಂಡಿದ್ದ ದೊಡ್ಡ ಬೇವಿನ ಮರದಡಿಯಲ್ಲಿ ಅವು ಬಹು ನೆಮ್ಮದಿಯಿಂದ ನಿಂತಿದ್ದುವು ; ಅವುಗಳ ಮುಖಕ್ಕೆ ಬಣ್ಣ ಬಳಿದಿತ್ತು ; ದೇವಸ್ಥಾನದ ಆನೆಗಳಷ್ಟು ಬಿಡಿಸಿಡಿಸಿ ಚಿತ್ರಬರೆದಿರಲಿಲ್ಲ, ಕೆಲವು ಬಗೆಯ ಹಿಂದೂ ಮಹಿಳೆಯರು ಹಾಕಿಕೊಳ್ಳುವಹಾಗೆ ಅವುಗಳ ಕಣ್ಣುಗಳ ಸುತ್ತ ಬೇಕಾದಷ್ಟು ಕಾಡಿಗೆಕಪ್ಪು ಹಾಕಿತ್ತು. ಆನೆಯ ಜಾತಿಲಾಂಛನ ಎನ್ನುವ ಹಾಗೆ ಅವುಗಳ ಹಣೆಯ ಮೇಲೆ ಕೆಂಪು ನಕ್ಷತ್ರಗಳಿದ್ದುವು, ಅವುಗಳ ತಲೆಯ ಕುಂಭಗಳ ಮೇಲೆ ಸೊಗಸಾದ ಕಪ್ಪು ಟೋಪಿಯಂತೆ ಕಾಣುವಹಾಗೆ ಬಣ್ಣಬಳಿದಿತ್ತು. ಜೂಡಿ ನೀಳವಾಗಿ ಉಸಿರೆಳೆದುಕೊಂಡಳು, ಏನೋ ದೊಡ್ಡದಾಗಿ ಪ್ರಯಾಸಪಟ್ಟಳು, ಆ ಹಿಂದಿಯ ಪಾಠವೆಲ್ಲವನ್ನೂ ಕುರಿತು ಯೋಚಿಸಿದಳು.

ಆನೆಗಳನ್ನು ನೋಡಿಕೊಳ್ಳುವ ಮನುಷ್ಯ ತುಂಬ ಸಂತೋಷಗೊಂಡಂತೆ ಕಂಡ; ಆತ ಅನೇಕ ಸಲಾಮುಗಳನ್ನು ಮಾಡಿಸಿದ ; ತೊಡಕಾದ ಉದ್ದನೆಯ

ಆ ಎಲ್ಲ ಹಳೆಯ ಕಾಲೇಜುಗಳು, ಆ ಸ್ಮಾರಕಗಳು, ಆ ಚಾವಣಿ ಮುಚ್ಚಿದ ಹಾದಿಗಳು, ಮರಗಳ ಅಡಿಯಲ್ಲಿ ಕಲ್ಲು ಮೆಲ್ಲನೆ ಸವೆದು ನಯವಾಗಿರುವ ಬಗೆ, ಆ ಎಲ್ಲ ಶಾಂತಿ ಸಮಾಧಾನ, ಪಟಪಟನೆ ರೆಕ್ಕೆ ಬಡಿಯುತ್ತ ಹಾರಾಡುವ ಈ ಎಲ್ಲ ಪಾರಿವಾಳಗಳು–ಇವೆಲ್ಲಾ ಉದ್ದಕ್ಕೂ ನನಗೆ ಆಕ್ಸ್‌ಫರ್ಡಿನ ನೆನಪು ತರುತ್ತವೆ !"

ಡಾ॥ ರಾವ್ ಅವರೂ ಆಕ್ಸ್‌ಫರ್ಡಿಗೆ ಹೋಗಿದ್ದವರೆ ; ಅವರೂ ಕೂಡ,– ಹೌದು, ಅಲ್ಲವೆ, ಇಲ್ಲಿ ಕೆಲಸ ಮಾಡಲು ತಮ್ಮ ಪುಸ್ತಕಗಳೊಂದಿಗೆ ಬರುತ್ತಿದ್ದ ವಿದ್ಯಾರ್ಥಿಗಳು ಈ ಉದ್ಯಾನಗಳನ್ನು ಬಹುಮಟ್ಟಿಗೆ ಅಷ್ಟೇ ಉಪಯೋಗ ಮಾಡಿಕೊಳ್ಳುತ್ತಿದ್ದರು ಎಂದು ಸಮ್ಮತಿಸಿದರು.

ಅನಂತರ ಸಮ್ಮೇಳನ ಮುಗಿಯಿತು ; ಅವರೆಲ್ಲ ಅವಳ ತಂದೆಯ ಇನ್ನೊಬ್ಬರು ಸ್ನೇಹಿತರಾಗಿದ್ದ, ಅರಣ್ಯ ಇಲಾಖೆಯ ಅಧಿಕಾರಿಗಳೊಂದಿಗೆ ಎರಡು ರಾತ್ರಿ ತಂಗಲು ಹೋದರು. ಕುಲುಕಾಡುವ ಆದರೆ ಕೆಲಮಟ್ಟಿಗೆ ಉಲ್ಲಾಸಕರವಾದ ಬಸ್ಸಿನಲ್ಲಿ ಪ್ರಯಾಣ ಮಾಡಿದರು ; ಅದರ ತುಂಬ ಸ್ನೇಹಪರರಾದ ಜನರಿದ್ದರು ; ಜೂಡಿಯೂ ಕೂಡಿ ಸಾಮಾನ್ಯವಾಗಿ ಪ್ರತಿಯೊಬ್ಬರೂ ಹುರಿದ ನೆಲಗಡಲೆಕಾಯನ್ನೂ ಕಿತ್ತಿಳೆಹಣ್ಣನ್ನೂ ತಿಂದರು. ಇಲ್ಲಿನ ರಸ್ತೆಗಳಲ್ಲಿ ಒಂಟೆಗಳಿದ್ದುವು, ಹೆಚ್ಚುಕಡಮೆ ಎಷ್ಟು ಎಮ್ಮೆಗಳೋ ಅಷ್ಟೇ ಒಂಟೆಗಳು; ಬಹಳ ಸೊಗಸಾಗಿ ಕಾಣುವ ಕೆಲವು ಸವಾರಿ ಕುದುರೆಗಳೂ ಇದ್ದುವು. ಅನೇಕ ಒಂಟೆಗಳು ಕಬ್ಬುತುಂಬಿದ ಗಾಡಿಗಳನ್ನು ಕಾರ್ಖಾನೆಗಳಿಗೆ ಎಳೆದುಕೊಂಡು ಹೋಗುತ್ತಿದ್ದುವು. ಎಲ್ಲೆಲ್ಲೂ ಹಸುರು ಹೊಲುಗಳು, ಆಗತಾನೆ ತೆನೆಕಚ್ಚುತ್ತಿದ್ದ ಎಳೆಯ ಗೋಧಿಪಯಿರು, ಎಕರೆಎಕರೆ ತುಂಬ ಬೆಳೆದಿದ್ದ ತೊಗರಿ ಗಿಡ ಇಲ್ಲವೆ ಒತ್ತಾಗಿ ಬೆಳೆದಿದ್ದ ನೆಲಗಡಲೆ. ಹಳ್ಳಿಗಳಲ್ಲಿ ಮಣ್ಣು ಇಟ್ಟಿಗೆಯಿಂದ ಭದ್ರವಾಗಿ ಕಟ್ಟಿದ್ದ ಮನೆಗಳಿದ್ದುವು ; ತೆಂಗಿನತಡಿಕೆಯಿಂದ ಕಟ್ಟಲು ಇಲ್ಲಿ ವಿಪರೀತ ಚಳಿ. ಸುತ್ತಮುತ್ತ ಹೆಚ್ಚು ಮರಗಳಿದ್ದುವು ; ಕೆಲವು ವೇಳೆ ಅವುಗಳನ್ನೂ ಕತ್ತರಿಸಿ ಚೌಬೀನೆಮರವಾಗಿ ಹಳ್ಳಿಗಳಲ್ಲಿ ಬಿಟ್ಟಿರುತ್ತಿತ್ತು.

ಅನಂತರ, ಒಂದು ಬಸ್‌ನಿಲ್ದಾಣದ ಬಳಿ, ಅವಳ ತಂದೆಯ ಸ್ನೇಹಿತರಾಗಿದ್ದ ಅರಣ್ಯ ಇಲಾಖೆಯ ಮುಖ್ಯಾಧಿಕಾರಿ, ತೆಳ್ಳನೆಯ ಕಪ್ಪುಮನುಷ್ಯ, ಅಲ್ಲಿದ್ದರು ; ಅವರನ್ನು ನೋಡಿ ಬಲು ಸಂತೋಷಗೊಂಡಂತೆ ಕಂಡರು ಆತ. ಅವರೂ ದಕ್ಷಿಣ ದೇಶದವರೆ ; ಮದರಾಸಿನ ಕಡೆಯ ಮಾತುಕತೆ ಕೇಳಲು ಇಷ್ಟ ಅವರಿಗೆ. ಎಲ್ಲರೂ ಬಸ್ಸಿನಲ್ಲಿ ಬೆಟ್ಟಗಳ ಅಂಚಿನಮೇಲಕ್ಕೆ ಹೋದರು ; ಅಗಲವಾದ

ಎಲೆಯ ಮೇಲೆ ಹಾಕಿ ಜೂಡಿಗೆ ಕೊಟ್ಟರು; ಅದು ಈ ಆನೆಗೆ ಬಹಳ ಪ್ರಿಯವಾಗಿದ್ದ ಇನ್ನೊಂದು ಪದಾರ್ಥ.

ಆ ಆನೆಯ ನಿಜವಾದ ಕೆಲಸ ಎಂದರೆ, ಮರಗಳನ್ನು ಅರಣ್ಯದಿಂದ ಹೊರಕ್ಕೆ ಎಳೆದು ಸಾಗಿಸುವುದು; ಆದರೆ, ವಿಶೇಷವಾದ ತಿಂಡಿತಿನಿಸು ಪಡೆದು, ಜೂಡಿಯನ್ನು ತನ್ನ ಬೆನ್ನ ಮೇಲೆ ಹೊತ್ತು ಸುತ್ತ ತಿರುಗಾಡುವುದೆಂದರೆ ಅದಕ್ಕೆ ತುಂಬ ಆಸೆ ಈ ಆನೆ ಪಳಗಿಸಿಲ್ಲದ ಕಾಡಾನೆಗಳಷ್ಟೇ ಸುಖವಾಗಿದೆ ಎಂಬ ಭಾವನೆ ಉಂಟಾಯಿತು ಜೂಡಿಗೆ; ಅಲ್ಲದೆ, ಅವರಿದ್ದಷ್ಟು ಕಾಲದ ಕೊನೆಯ ಹೊತ್ತಿಗೆ, ಆನೆ ತನ್ನನ್ನು ಗುರುತಿಸುತ್ತಿತ್ತು ಎಂದು ಸಹ ಅವಳು ಖಂಡಿತವಾಗಿ ನಂಬಿದ್ದಳು. ಅದೆಲ್ಲದರ ಜೊತೆಗೆ, ಅವಳು ಬೇಕಾದಷ್ಟು ಹೊಸದಾದ, ಹೆಚ್ಚು ಹೆಚ್ಚು ಸ್ವಾರಸ್ಯವಾದ ಹಿಂದಿಯ ಮಾತುಗಳನ್ನು ಕಲಿತುಕೊಂಡಿದ್ದಳು; ಆ ಮಾತೆಲ್ಲವೂ ಆನೆಗಳಿಗೆ ಸಂಬಂಧಿಸಿದ್ದು.

ವಾಕ್ಯವೊಂದನ್ನು ಉಚ್ಚರಿಸಿದ, ಅದರ ಕೆಲವು ಮಾತುಗಳು ಮಾತ್ರ ಜೂಡಿಗೆ ಅರ್ಥವಾದುವು. ಅಂತೂ ಇಂತು. ಅವಳ ಹಿಂದಿ ಅವನ ಇಂಗ್ಲಿಷು ಇವನ್ನು ಇಟ್ಟುಕೊಂಡೂ ಅವರು ಬಹಳ ಚೆನ್ನಾಗಿಯೆ ನಿರ್ವಹಿಸಿದರು; ಅವನು ಆಗಲೇ ಜಾಗ್ರತೆಯಾಗಿ ಒಂದು ಬಗೆಯ ಮೆತ್ತೆಯಿಂದ ದೊಡ್ಡ ಆನೆಗೆ ಹಲ್ಲಣ ಅಳವಡಿಸುತ್ತಿದ್ದ ; ಅದಕ್ಕೆ ನಾಲ್ಕು ಮೂಲೆಗಳಲ್ಲೀ ನಾಲ್ಕು ಚಿಕ್ಕ ಕೋಲುಗಳೂ, ಪಾದಗಳನ್ನು ಇಟ್ಟುಕೊಳ್ಳಲು ಒಂದು ಮೆಟ್ಟಲೂ ಇದ್ದುವು. ಅವನು ಹಗ್ಗಗಳನ್ನು ಬಿಗಿದುಕಟ್ಟಿದ, ಆನೆ ಮಂಡಿಯೂರಿ ಕುಳಿತುಕೊಂಡಿತು ; ಬೇಟೆಯ ಮೃಗಗಳ ರಕ್ಷಿತಪ್ರದೇಶದಲ್ಲಿ ಅವಳು ಹಿಂದೆ ಆ ಇನ್ನೊಂದೂ ಆನೆಯನ್ನು ಹತ್ತಿದ್ದ ರೀತಿಯಲ್ಲಿ, ಅದರ ಒಂದು ಹಿಂಗಾಲಿನ ಹಾಗೂ ಸುರುಳಿಸುತ್ತಿದ್ದ ಬಾಲದ ಮೇಲಿಂದ ಜೂಡಿ ಆನೆಯ ಮೇಲಕ್ಕೆ ಹತ್ತಿಕೊಂಡಳು. ಹಾಗೆ ಮೇಲಕ್ಕೆ ಏರುವಾಗ ಅವಳು ಅದನ್ನು ಕೈಯಿಂದ ತಟ್ಟಿದಳು ; ಆದರೆ ಹಾಗೆ ತಟ್ಟುವುದು ಆನೆಯ ವಿಷಯದಲ್ಲಿ ಬಹುಶಃ ಹೆಚ್ಚು ಪರಿಣಾಮಕಾರಿಯಾಗದೆಂದು ಅವಳು ಭಾವಿಸಿದಳು. ಆಮೇಲೆ ಅದು ಮೇಲಕ್ಕೆದ್ದಿತು, ಅವಳಿಗೆ ನೆನಪಿದ್ದಮಟ್ಟಿಗೆ ಅದು ದೋಣಿಯಂತೆ ಹಾಗೂ ಹೀಗೂ ಒಲೆದಾಡುತ್ತಿತ್ತು ; ಅವಳು ಕೋಲನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು; ಮರಗಳಿಗೂ ಹಕ್ಕಿಗಳಿಗೂ ಹತ್ತಿರವಿದ್ದಂತೆ ಅವಳಿಗೆ ಒಂದು ಹಿಗ್ಗಿನ ಭಾವನೆ.

ಅವರು ಅವಳ ತಂದೆಯೂ ಅರಣ್ಯಾಧಿಕಾರಿಯೂ ಕುಳಿತಿದ್ದ ವರಾಂಢದ ಮುಂಗಡೆಗೆ ಬಳಸಿಕೊಂಡು ಬಂದರು ; ಅವರು ಕೆಲವು ಬಟ್ಟಲು ತೀಕ್ಷ್ಣವಾದ ಚಹ ಕುಡಿಯುತ್ತಿದ್ದರು ; ಉತ್ತರ ದೇಶದಲ್ಲಿ ಅಂತಹ ಚಹವನ್ನು ಪ್ರತಿಗಂಟೆ ಅಥವಾ ಎರಡು ಗಂಟೆಗೊಮ್ಮೆ ಜನ ಕುಡಿಯುವಂತೆ ಕಾಣುತ್ತದೆ. ಅವಳ ತಂದೆ ಬೇಕಾದಷ್ಟು ನಗುತ್ತಿದ್ದರು; ಆಗ ಅರಣ್ಯಾಧಿಕಾರಿ ಬಂದು, ಬಹಳ ಬಹಳ ವಯಸ್ಸಾದ, ಸುಮಾರು ಶತಮಾನ ವಯಸ್ಸಿನ, ಹೆಣ್ಣಾನೆಯನ್ನು ಅವಳು ಸವಾರಿ ಮಾಡುತ್ತಿರುವುದಾಗಿಯೂ, ತನ್ನ ಕಾಲದಲ್ಲಿ ಅದು ಭಾರಿ ಷಿಕಾರಿಯ ಆನೆಯಾಗಿತ್ತೆಂದೂ ಅವಳಿಗೆ ತಿಳಿಸಿ, ನೋಡು, ಅಗೋ ಅದರ ಕತ್ತಿನಮೇಲೆ ಹುಲಿಯ ಉಗುರಿನ ಗುರುತುಗಳು ! ಎಂದರು. ಆನೆ ತನ್ನ ಸೊಂಡಿಲನ್ನು ಅವರ ಕಡೆಗೆ ಬೀಸಿತು. "ತನಗೆ ಇಷ್ಟವಾದುದನ್ನೇ ನಾನು ಯಾವಾಗಲೂ ಮಾಡಬೇಕೆಂದು ಅದರ ಯೋಚನೆ" ಎಂದು ಪ್ರೀತಿಯಿಂದ ಹೇಳಿ, ಒಂದು ತೆಂಗಿನ ಕಾಯನ್ನು ತಂದುಕೊಡಲು ಯಾರನ್ನೊ ಕಳಿಸಿದರು; ಅದನ್ನು ಆನೆ ಇಡಿಯಾಗಿಯೆ ಬಾಯೊಳಕ್ಕೆ ಹಾಕಿಕೊಂಡ ಕರಂಕರಂ ಎಂದು ಅಗಿದುಬಿಟ್ಟಿತು. ಸವಾರಿ ಮುಗಿದ ಮೇಲೆ, ಅವರು ಬೆಲ್ಲದ ಭಾರಿ ಮುದ್ದೆಯೊಂದನ್ನು ಒಂದು

ಬಲಗೈಯ ಗುರುತು ಅಚ್ಚೊತ್ತಿರುತ್ತಿತ್ತು. ಮುಂದೆ ಆ ಬೆರಣಿಯನ್ನು ಅವರು ತಮ್ಮ ಅಡಿಗೆಯ ಮಡಕೆಗಳನ್ನು ಕಾಯಿಸಲು ಉಪಯೋಗಿಸುವರು. ಹೌದು, ಗೃಹ ಕೈಗಾರಿಕೆಗಳಿಂದ ಸ್ವಲ್ಪ ಹೆಚ್ಚು ಹಣ ಸಂಪಾದನೆಯಾಗುತ್ತಿತು. ಬರಗಾಲವೇನಾದರೂ ಬಂದರೆ, ಅದರಿಂದ ಜನ ಸಾಯಲು ಹೆಚ್ಚುಕಾಲ ಹಿಡಿಯುವುದು ; ಕೆಲವು ಮಂದಿ ಹೆಂಗಸರಿಗೆ ಹೆಚ್ಚು ಬೆಳ್ಳಿಯ ಕಡಗಗಳಿದ್ದುವು; ಕೆಲವು ಸಂಸಾರಗಳಲ್ಲೀ ಸ್ವಲ್ಪ ಹೆಚ್ಚು ಬಟ್ಟಬರೆ, ಒಂದು ಹೆಚ್ಚಿನ ಬಿಂದಿಗೆ ಇಲ್ಲವೆ ಲಾಂದ್ರ, ಇದ್ದುವು ಎರಡನೆಯ ಪಾಂಚವಾರ್ಷಿಕ ಯೋಜನೆಯ ಅತ್ಯಂತ ಹೊತ್ತಿಗೆ ಅವರು ಧನಿಕರಾಗದಿದ್ದರೂ ಕಡೆಯ ಪಕ್ಷ ಈಗಿರುವಷ್ಟು ದರಿದ್ರರಾಗಿರುವುದಿಲ್ಲ ಎಂದು ಎಣಿಸಲು ಸಾಧ್ಯವಾಗಿತ್ತೋ ?

ಆಗ ಸರಸ್ವತಿ ಖಾಯಿಲೆ ಬಿದ್ದಳು; ಅವಳ ತಾಯಿ ತಮ್ಮ ಜೊತೆ ತಂದಿದ್ದ ವಿಧ ವಿಧವಾದ ಔಷಧಿಗಳಲ್ಲಿ ಉಳಿದದ್ದನ್ನು ಕೊಟ್ಟು ಪ್ರಯತ್ನಿಸಿ ನೋಡಿದರು; ಆದರೆ ಅದು ಸಾಧಾರಣ ಜ್ವರವಾಗಿರಲಿಲ್ಲ. ಇತರ ಹುಡುಗಿಯರೊಂದಿಗೆ ಆ ಹಾಳು ನಾಲೆಯಲ್ಲಿ ನಡೆದುಹೋಗುವುದು, ಬಟ್ಟೆ ಒಗೆಯುವುದು, ಪಾತ್ರೆ ತೊಳೆಯುವುದು ಇದರಿಂದ ಬಂದಿರಬೇಕೆಂದು ಅವರು ಹೇಳಿದರು. ಹೀಗಿದ್ದರೂ ಇರಬಹುದು ಎಂದು ಲಕ್ಷ್ಮಿ ಚಿಂತೆಗೊಳಗಾಗಿ ಒಪ್ಪಿಕೊಂಡಳು. ಅವರು ಅವಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು ; ಅಲ್ಲಿ ಅವಳನ್ನು ನೋಡಿ ಅವಳ ತಾಯಿಯ ಕೈಗೆ ಕೆಲವು ಗುಳಿಗೆಗಳನ್ನು ಕೊಟ್ಟರು ; ಅವುಗಳಿಗೆ ದುಡ್ಡು ತೆಗೆದುಕೊಳ್ಳಬೇಕೆಂದು ಆಕೆ ಒತ್ತಾಯಮಾಡಿ ದುಡ್ಡು ಕೊಟ್ಟರು. ಬಿಟ್ಟಿಕೊಡುವ ಗುಳಿಗೆಗಳಿಗಿಂತ ಅವು ಖಂಡಿತ ಮೇಲು ಎಂದು ಆಕೆಯ ಭಾವನೆ. ಆದರೆ ಸರಸ್ವತಿಯ ಸ್ಥಿತಿ ಉತ್ತಮವಾಗುವುದುಕ್ಕೆ ಬದಲು ಕೆಟ್ಟಿತು. ಕಡೆಗೆ ಲಕ್ಷ್ಮಿ ತನ್ನ ತಂದೆಗೆ ಹೇಳಿದಳು : "ನಮ್ಮ ಮಾನವನ್ನೆ ಮುಂದುಮಾಡಿಕೊಂಡು ಹೋಗುವುದಕ್ಕಾಗುವುದಿಲ್ಲ. ನೀವು ಹಾಗೆ ಮಾಡಿದರೆ ನನ್ನ ತಂಗಿಯನ್ನು ಕೊಂದುಬಿಡುತ್ತೀರಿ. ಅಮ್ಮಣ್ಣಿ ಪಾಟಿಗೆ ನೀವು ಬರೆಯಬೇಕು. ಇಲ್ಲವೊ ನಾನು ಬರೆಯುತ್ತೇನೆ. ಸರಸ್ವತಿ ಮದಾರಾಸಿಗೆ ಹಿಂತಿರುಗಬೇಕು, ಜೂಡಿಯ ತಂದೆ ಕೆಲಸ ಮಾಡುವ ಆಸ್ಪತ್ರೆಗೆ ಅವಳನ್ನು ಕರೆದುಕೊಂಡು ಹೋಗಬೇಕು."

ಕುಮಾರ್ ತಮ್ಮ ಮಗಳ ಕಡೆ ನೋಡಿದರು ; ಅವಳು ತಮ್ಮ ಹೆಂಡತಿಯ ಪರವಾಗಿ ಮಾತಾಡುತ್ತಿದಾಳೆ ಎಂದು ಅವರು ಬಲ್ಲರು ; ಪರಿಸ್ಥಿತಿ ಹೇಗೆ ಪರಿಣಮಿಸಿತು ಎಂಬುದನ್ನು ಗಮನಿಸಿದರೆ, ಅವಳು ಸರಿ, ತಾವು ಸೋತಂತೆ, ಎಂದೂ ಅವರು ಬಲ್ಲರು.

# ೧೪. ಬೀಳ್ಕೊಡುವ ನಮಸ್ಕಾರ ಅಲ್ಲ

ಪೊನ್ನೇರಿಯಲ್ಲಿ ಪರಿಸ್ಥಿತಿ ಎಂದೆಂದಿಗೂ ಬದಲಾಯಿಸುವ ಹಾಗೆಯೆ ಕಾಣಲಿಲ್ಲ. ಅಮ್ಮಣ್ಣಿ ಪಾಟಿಗೆ ಏನೂ ಹೇಳುವುದಿಲ್ಲವೆಂದು ಮಾತುಕೊಟ್ಟಿದ್ದರೂ ಕೂಡ ಜೂಡಿ ಅವರಿಗೆ ನಿಜವಾದ ಪರಿಸ್ಥಿತಿ ಹೇಗಿತ್ತು ಎಂದು ತಿಳಿಸಿರಬಹುದೆಂದು ಲಕ್ಷ್ಮಿ ಕೆಲವು ವೇಳೆ ನಿರೀಕ್ಷಿಸುತ್ತಿದ್ದಳು. ಅವಳೇನೋ ತನ್ನ ತರಗತಿಗಳನ್ನು ನಡಸಿಕೊಂಡು ಹೋಗುತ್ತಿದ್ದಳು ; ಆದರೆ, ಕಲ್ಲುಕೆಲಸದವನ ಮಗಳು ವಲ್ಲಿಯ ಮದುವೆಯ ಮಾತು ಕೇಳಿ ಬರುತ್ತಿತ್ತು ; ಹಾಗಿದ್ದಲ್ಲಿ ಅವಳು ಇನ್ನು ಓದುವ ಪುಸ್ತಕಗಳು ತನ್ನ ಬಳಿ ಇದ್ದಿದ್ದರೆ ! ಸಮಾಜ ಸೇವಾ ಕಾರ್ಯಕರ್ತರಿಬ್ಬರನ್ನೂ ಅವಳು ಕೇಳಿಕೊಂಡಿದ್ದಳು ; ಆದರೆ ಅವರು ಅವಳಿಗೆ ಕೊಟ್ಟ ಪುಸ್ತಕಗಳು ಕಷ್ಟವಾಗಿದ್ದುವು. ಅವಳು ಪಾಠಹೇಳುತ್ತಿದ್ದ ತರಗತಿಗೆಂದು ನಿಜವಾಗಿ ಬರೆದವಲ್ಲ. ಅವರಿಗೆ ಯಾವ ಬಗೆಯದು ಸ್ವಾರಸ್ಯವಾಗಿರುತ್ತದೆ ಎಂಬುದನ್ನು ಅವಳು ಈ ಹೊತ್ತಿಗೆ ಚೆನ್ನಾಗಿ ತಿಳಿದಿದ್ದಳು ! ಒಮ್ಮೆ ಒಂದು ವಿದ್ಯಾಭ್ಯಾಸ ಸಂಬಂಧವಾದ ಚಲನಚಿತ್ರವನ್ನು ಅವರಿಗೆ ತೋರಿಸಲಾಯಿತು ; ಪ್ರತಿಯೊಬ್ಬರೂ ಬಂದು, ನೆಲದಮೇಲೆ ಅದರ ಮುಂದೆ ಕುಳಿತು ಸಂತೋಷ ಆಸಕ್ತಿಗಳಿಂದ ಗೋಣಗುಟ್ಟಿಕೊಳ್ಳುತ್ತಿದ್ದರು. ಬಹುಶಃ ಆ ಪ್ರಕಾರವಾಗಿಯೇ ವಯಸ್ಸಾದ ಹೆಂಗಸರನ್ನು ಆಕರ್ಷಿಸಬೇಕಾಗಿತ್ತು.

ಕ್ರಮಕ್ರಮವಾಗಿ ಪೊಂಗಲ್ ಹಬ್ಬದ ಹಸುಗಳು ಮತ್ತು ಎತ್ತುಗಳ ಕೊಂಬುಗಳ ಬಣ್ಣ ಮಾಸಿಹೋಯಿತು ; ಆಗ ಅವಕ್ಕೆ ಪೂರ್ತಿ ತಿಂಡಿ ಹಾಕಿತ್ತೆಂಬುದನ್ನು ಜನ ಮರೆತುಬಿಟ್ಟರು. ಆಮೇಲೆ ಬಂದ ಬತ್ತದ ಬೆಳೆಯನ್ನು ಕೊಯಿಲು ಮಾಡಿ, ತೂರಿದರು. ಏನೂ ಬೆಳೆಯದ ಬೇಸಗೆ ತಿಂಗಳುಗಳಲ್ಲಿ ದನದ ಮೇವಿಗೆಂದು ಒಣಹುಲ್ಲನ್ನು ಬಣಬೆಗಳಾಗಿ ಒಟ್ಟಿದರು. ಹಸ ನಾಲೆಯಿಂದ ನೀರಾವರಿಯ ನೀರು ಸ್ವಲ್ಪಮಟ್ಟಿಗೆ ಬರುತ್ತಿತ್ತು, ಆದರೆ ನಿರೀಕ್ಷಿಸಿದಷ್ಟು ಅಲ್ಲ. ಎಂದೂ ಎಂದಿನಂತೆ, ಮುಂಜಾನೆಯಿಂದ ಸಂಜೆಯವರೆಗೆ ಗಂಡಸರು ಹೊಲಗಳಲ್ಲಿ ದುಡಿಯುತ್ತಿದ್ದರು ; ಎಂದೂ ಎಂದಿನಂತೆ, ಹೆಂಗಸರು ಮಕ್ಕರಿಗಳಲ್ಲಿ ದನದ ಸೆಗಣಿ ಕೂಡಹಾಕಿ, ಅದನ್ನು ಗುಂಡನೆಯ ಬೆರಣಿಗಳಾಗಿ ಒಣಗಿಸಿಟ್ಟುಕೊಳ್ಳಲು ತಮ್ಮ ಮನೆಯ ಗೋಡೆಯ ಮೇಲೆ ತಟ್ಟುತ್ತಿದ್ದರು ; ಪ್ರತಿ ಬೆರಣಿಯ ಮೇಲೂ

ನಿನ್ನ ತರಗತಿಗಳಿಗೆ ಹೋಗಬಹುದು, ನಿನ್ನ ನೃತ್ಯವನ್ನು ಮುಂದುವರಿಸಿಕೊಂಡು ಹೋಗಬಹುದು, ನಿನ್ನ ಸ್ನೇಹಿತೆಯರನ್ನೆಲ್ಲಾ– ಜೂಡಿಯನ್ನ– ನೋಡಬಹುದು–," ಎಂದು ನುಡಿದರು ಕುಮಾರ್.

"ಅದನ್ನೆಲ್ಲ ನಾನು ಯೋಚಿಸಿದ್ದೇನೆ." ಎಂದು, ತನ್ನ ತಂದೆಯ ಕಣ್ಣುಗಳನ್ನು ದೃಷ್ಟಿಸಿ ನೋಡಿದಳು. ಆಮೇಲೆ ಅವಳು ಪೇನವನ್ನೂ ಕಾಗದವನ್ನೂ ತಂದು, ಅವರ ಮುಂದೆ ಇಟ್ಟಳು.

ಅವರು ನಿಧಾನವಾಗಿ, ಬರೆದದ್ದನ್ನು ಹೊಡೆದುಹಾಕಿ ಮತ್ತೆ ಮತ್ತೆ ಬರೆದು, ಬಹಳ ಹೊತ್ತಿನವರೆಗೆ ಬರೆದರು. ಕಡೆಯಲ್ಲಿ ಅವರು ಕಾಗದವನ್ನು ಲಕ್ಷ್ಮಿಗೆ ಕೊಟ್ಟರು. "ನನ್ನ ಜಂಭವನ್ನು ನಾನು ಸಾಕಷ್ಟು ನುಂಗಿಕೊಂಡಿದೇನೆಯೋ?" ಎಂದು ಕೇಳಿದರು.

ಅವಳು ಅದನ್ನು ಪೂರ್ತಿ ಓದಿಕೊಂಡಳು. "ಹೌದು," ಎಂದೂ ಹೇಳಿ, ಸರಸ್ವತಿ ಮಲಗಿದ್ದ ಕೋಣೆಯ ಕಡೆ ಹಿಂದಿರುಗಿ ನೋಡಿದಳು. "ಆದರೆ– ಅಪ್ಪಾ–ಹಿಂದಿರುಗಿ ಟೆಲಿಗ್ರಾಂ ಉತ್ತರ ಕೊಡುವಂತೆ ನೀವು ಕೇಳಬೇಕು ಎಂದು ನನಗೆ ತೋರುತ್ತೆ. ಆಮೇಲೆ ನಾವು ಒಂದು ಗಾಡಿಯನ್ನು ಬಾಡಿಗೆಗೆ ಗೊತ್ತು ಮಾಡಿಕೊಂಡು, ಅವರನ್ನೆಲ್ಲ ರೈಲು ಜಂಕ್ಷನ್ನಿಗೆ ಕರೆದುಕೊಂಡು ಹೋಗಬಹುದು. ಪ್ರಯಾಣ ಮಾಡುವುದರಲ್ಲಿ ಅಮ್ಮ ಬಹಳ ಜಾಣರೆನಲ್ಲ, ಆದರೆ–'ಹೆಂಗಸರಿಗೆ ಮಾತ್ರ' ಎಂದಿರುವ ಎರಡನೆಯ ತರಗತಿಯ ಗಾಡಿಯಲ್ಲಿ ಕೂರಿಸಿ ಅವರನ್ನು ಕಳಿಸಿಕೊಡೋಣ ; ನೀವು ರೈಲ್ವೆಗಾರ್ಡ್‌ಗೆ ಹೇಳಿಬಿಡಿ–ಎಲ್ಲ ಸರಿಹೋಗುತ್ತೆ, ನಾನೂ ಕೂಡ ನನ್ನ ಜಂಭವನ್ನು ನುಂಗಿಕೊಂಡು, ಜೂಡಿಗೆ ಬರೆಯುತ್ತೇನೆ, ಅವಳ ತಂದೆ ಸರಸ್ವತಿಯನ್ನು ಕೂಡಲೆ ನೋಡಬೇಕೆಂದು ಕೇಳಿಕೊಳ್ಳುತ್ತೇನೆ."

ಜೂಡಿ ದೆಹಲಿಯಿಂದ ಹಿಂದಿರುಗಿದ ಮೇಲೆ ಅವಳ ಕೈಗೆ ಸಿಕ್ಕಿದ್ದು ಅದೇ ಕಾಗದ. ರಾತ್ರಿ ವಿಮಾನದಲ್ಲಿ ಹಾರಿ ಹಿಂದಿರುಗಿದಮೇಲೆ, ಭಾರಿ ಬೆಳಗಿನೂಟವನ್ನು ಮಾಡುತ್ತಿದ್ದಾಗ, ಅವಳು ಅದನ್ನು ಓದಿಕೊಂಡಳು. ಊಟಕ್ಕೆ ಪರಂಗಿ ಹಣ್ಣು ಮತ್ತು ನಿಂಬೆಹಣ್ಣು, ಕಲಕಿ ಬೇಯಿಸಿದ ಮೊಟ್ಟೆಯ ತಿರುಳು ಮತ್ತು ಸೀಬೆಯ ಹಣ್ಣು ಇದ್ದುವು ; ಆದರೆ, ಇವು ದೆಹಲಿಯ ಸೀಬೆಯ ಹಣ್ಣುಗಳಷ್ಟು ದೊಡ್ಡವೂ ಅಲ್ಲ ಸೊಗಸಾದವೂ ಅಲ್ಲ, ಎಂದಳು ಅವಳು; ಅಲ್ಲಿ ನಿಜವಾಗಿಯೂ ಬಹಳ ಚಳಿಯಾಗಿತ್ತು, ಎಂದೂ, ಆನೆಯ ವಿಚಾರವಾಗಿಯೂ ಒಂಟೆಗಳ ಮುಖಗಳು ಹೇಗೆ ತಮಾಷೆಯಾಗಿವೆ ಎಂದೂ ತನ್ನ ತಾಯಿಗೆ ವಿವರಿಸುತ್ತಿದ್ದಳು. ತುಸ ಹೊತ್ತಿನವರೆಗೆ ಲಕ್ಷ್ಮಿಯಿಂದ ಬಂದಿದ್ದ ಕಾಗದ ಎಷ್ಟು ಗಾಬರಿಯಿಂದ ಕೂಡಿತ್ತು

"ನಾನು ಹಾಗೆ ಮಾಡಿದ್ದೇ ಅದರೆ, ಪರಿಸ್ಥಿತಿ ಹೇಗಿದೆ ಎಂದು ಅಮ್ಮಣ್ಣಿ ಪಾಟಿಗೆ ನಾನು ತಿಳಿಸಿದರೆ. ನೀವು ಅವರ ಜೊತೆ ಇರಲು ಹೋಗಬೇಕೆಂದು ಕೂಡಲೆ ಹೇಳಿಬಿಡುತ್ತಾರೆ ; ನಾನು ಅದನ್ನು ಬಲ್ಲೆ. ನಿಮ್ಮ ತಾಯಿ ಮತ್ತು ನೀವೆಲ್ಲರೂ ಹೋಗಬೇಕಾಗುತ್ತೆ," ಎಂದರು ಅವರು.

"ನೀವೋ, ಅಪ್ಪಾ?"

ಅವರು ಅತ್ತ ತಿರುಗಿ ನೋಡಿದರು, "ನಾನು ಇಲ್ಲಿಯೇ ಇರಬೇಕು. ನನಗೆ ಇರುವ ಕೆಲಸ ಅದೊಂದೆ. ನನಗೆ ಸಾಧ್ಯವಾದಷ್ಟು ಹಣವನ್ನು ಕಳಿಸಿಕೊಡುತ್ತೇನೆ. ನಿನ್ನ ತಾಯಿಗೆ ಈ ಸ್ಥಳವನ್ನು ಕಂಡರೆ ಯಾವಾಗಲೂ ದ್ವೇಷವೆ. ಅವಳು–ಅವಳಾಗಲೆ ಮುದುಕಿಯಂತೆ ಕಾಣುತ್ತಿದ್ದಾಳೆ. ಅವಳು ಈಗ ಹಾಡುವುದೇ ಇಲ್ಲ."

ಲಕ್ಷ್ಮೀ ಹೇಳಿದಳು, "ನೀವು ಒಬ್ಬೊಂಟಿಗರಾಗಿಬಿಡುತ್ತೀರಿ. ನಿಮಗೆ ಅಡಿಗೆ ಮಾಡಿಹಾಕುವರು ಯಾರು ?"

ಅದಕ್ಕೆ ಅವರು ಹೇಳಿದರು, ಹೇಗೊ ನಿರ್ವಹಿಸಿಕೊಳ್ಳುತ್ತೇನೆ. ಬಹುಶಃ ತಾವು ತುಂಬ ಪ್ರೀತಿಸುವವರ ಮನಸ್ಸನ್ನು ನೋಯಿಸಿರುವಾಗ ತಾವು ಒಂಟಿಯಾಗಿರುವುದೇ ಮೇಲು.

ಲಕ್ಷ್ಮಿ ಹೇಳಿದಳು, ಅಪ್ಪಾ, ನೀವು ಯಾವ ತಪ್ಪನ್ನೂ ಮಾಡಿಲ್ಲ. ನೀವು ಉಳಿದುಕೊಂಡರೆ. ನಾನೂ ನಿಮ್ಮ ಜೊತೆಗಿರುತ್ತೇನೆ."

"ನಿಮ್ಮ ತಾಯಿಯನ್ನು ಬಿಟ್ಟು ನೀನು ಇರುವುದಕ್ಕಾಗುವುದಿಲ್ಲ–ಇಲ್ಲದೆ ಹೋದರೆ, ಕಡೆಯ ಪಕ್ಷ, ಬೇರೆ ಯಾರಾದರೂ ಹೆಂಗಸರು......."

ಆದರೆ, ತಮ್ಮ ತಂದೆ ಹಿಂದೆಮುಂದೆ ನೋಡಿದ್ದರು, ಅವರ ಕಣ್ಣು ಕಾಂತಿಯಿಂದ ಗೆಲವುಗೂಡಿತ್ತು, ಎಂಬುದನ್ನು ಅವಳು ಚೆನ್ನಾಗಿ ಕಂಡುಕೊಂಡಳು. ಅವಳು ತನ್ನ ಸೀರೆಯನ್ನು ದೊಡ್ಡವರ ಹಾಗೆ ಅಚ್ಚುಕಟ್ಟಾಗಿ ನೆರಿಹಿಡಿದು ಸಿಕ್ಕಿಸಿಕೊಂಡಳು. "ನಾನು ಖಂಡಿತ ಇರಬಲ್ಲೆ, ಅಪ್ಪಾ ! ನಾನು ಈಗಿನ ಕಾಲದ ಹೆಂಗಸು, ವಿದ್ಯಾಬುದ್ಧಿ ಉಳ್ಳವಳು. ನಾನು ಹಾಗಾಗಬೇಕೆಂದು ತಾನೆ ನೀವು ಅಪೇಕ್ಷಿಸಿದ್ದು : ಒಬ್ಬ ಆಧುನಿಕ ಭಾರತೀಯ ಮಹಿಳೆ. ಅಲ್ಲದೆ. ನಾನು ಇತರರ ಹಾಗೆ ಸುಲಭವಾಗಿ ಬಿಟ್ಟುಹೋಗುವುದಕ್ಕಾಗುವುದಿಲ್ಲ. ನನಗೂ ಸಹ ನನ್ನ ಕೆಲಸ ಇದೆ ಇಲ್ಲಿ"

"ನೀನು ನನ್ನ ಧೈರ್ಯಶಾಲಿಯಾದ ಮಗಳು, ಧೈರ್ಯಸ್ಥೆ. ಆದರೆ, ಯೋಚಿಸಿನೋಡು–ನೀನು ಮದರಾಸಿಗೆ ಹಿಂದಿರುಗಿಹೋದರೆ, ನೀನು ಮತ್ತೆ

ಉಲ್ಲಾಸವಾಗಿರಲು ಪ್ರಯತ್ನಿಸಿದ್ದರು, ಆದರೆ ಆಮೇಲೆ ಗಾಡಿಯಲ್ಲಿ ಹಿಂತಿರುಗುವಾಗ, ಅದು ಅಷ್ಟು ಸುಲಭವಾಗಿರಲಿಲ್ಲ. ಅಲ್ಲದೆ, ಅವಳ ತಂದೆ ಅಂದುಕೊಂಡಿದ್ದುದು ನಿಜವಾಗಿತ್ತು ; ಮದರಾಸಿಗೆ, ತನ್ನ ಹಿಂದಿನ ಬದುಕಿಗೆ ಹಿಂದಿರುಗಿ ಹೋದ, ತನ್ನ ಸ್ನೇಹಿತರೊಂದಿಗೆ ಇರಬೇಕೆಂದು ಅವಳು ಒಂದು ರೀತಿಯಲ್ಲಿ ಬಹಳ ಇಷ್ಟಪಡುತ್ತಿದ್ದಳು. ತನ್ನ ನೃತ್ಯದ ಪಾಠಗಳಿಗೆ ಅಮ್ಮಣ್ಣಿ ಪಾಟಿ ಫೀಜನ್ನು ಒದಗಿಸುತ್ತಿದ್ದರು ಎಂದು ಅವಳಿಗೆ ಗೊತ್ತು. ಆದರೂ, ಅದನ್ನು ತಾನು ಹಾಗೆ ಪಡೆಯುವುದು ಸರಿಯಾಗಿದ್ದೀತೆ ? 'ಆರು ತಿಂಗಳ ಹಿಂದಾಗಿದ್ದರೆ, ಹಣದ ವಿಚಾರವಾಗಿ ನಾನು ಹಾಗೆ ಯೋಚಿಸಲು ನನಗೆ ಸಾಧ್ಯವಾಗುತ್ತಿರಲಿಲ್ಲ', ಎಂದು ಅವಳು ತನಗೆ ತಾನೇ ಹೇಳಿಕೊಂಡಳು. 'ಆದರೆ ಈಗಾಗಲೇ ನಾನು ತಕ್ಕಮಟ್ಟಿಗೆ ದೊಡ್ಡವಳಾಗಿದ್ದೇನೆ. ಎಷ್ಟೋ ವಿಷಯಗಳು ನನಗೆ ಸ್ಪಷ್ಟವಾಗಿವೆ.'

ಆದರೆ, ಅದಾದಮೇಲೆ, ಯೋಚನೆಮಾಡಲು ಇತರ ವಿಚಾರ ಬೇಕಾದಷ್ಟು ಇದೆ ಎಂದು ಅವಳಿಗೆ ಕಂಡುಬಂತು. ಅಡಿಗೆಯ ಕೆಲಸವನ್ನೆಲ್ಲ ಅವಳೇ ಮಾಡುತ್ತಿದ್ದಳು, ಹಿಂದೆ ತನ್ನ ತಾಯಿ ತನ್ನನ್ನು ಮಾಡಗೊಡದೆ ಇದ್ದ ಭಕ್ಷ್ಯಗಳನ್ನು ಈಗ ಮಾಡಲು ಪ್ರಯತ್ನಿಸುತ್ತಿದ್ದಳು. ಆದರೆ ಅವೆಲ್ಲ ಅವಳು ಉದ್ದೇಶಪಟ್ಟದ್ದಷ್ಟು ಚೆನ್ನಾಗಿರುತ್ತಿರಲಿಲ್ಲ. ಆದರೆ ಪ್ರತಿಯೊಂದೂ ಚೆನ್ನಾಗಿದೆ ಎನ್ನುತ್ತಿದ್ದರು ಅವಳ ತಂದೆ. ಸಂಜೆಯ ಹೊತ್ತುಗಳಲ್ಲಿ, ಈಗ, ತಮ್ಮ ಕೆಲಸ ಮತ್ತು ಅವಳ ತರಗತಿಗಳ ವಿಚಾರವಾಗಿ ಅಲ್ಲದೆ, ತಾವು ಯೂರೋಪಿನಲ್ಲಿದ್ದಾಗ ಕಲಿತ ವಿಷಯಗಳ ವಿಚಾರವಾಗಿ ಕೆಲವು ವೇಳೆ, ಚರಿತ್ರೆ ಅಥವಾ ರಾಜಕೀಯದ ವಿಚಾರವಾಗಿ ಇನ್ನು ಕೆಲವು ವೇಳೆ ಮಾತಾಡುತ್ತಿದ್ದರು. ಒಂದೆರಡು ವಾರಗಳಲ್ಲಿಯೇ, ಲಕ್ಷ್ಮಿಯ ಸ್ನೇಹಿತಯರಲ್ಲಿ ಯಾರೇ ಆಗಲಿ ಶಾಲೆಗೆ ಹೋಗಿ ಕಲಿತಿರಬಹುದಾದ್ದಕ್ಕಿಂತ ಹೆಚ್ಚಾಗಿ ಬೀಜಗಣಿತವನ್ನೂ ರೇಖಾಗಣಿತವನ್ನೂ ಅವಳಿಗೆ ಕಲಿಸಿದರು. ಒಂದೆರಡು ಸಲ ಸಮಾಜಾಭಿವೃದ್ಧಿಯ ಕಾರ್ಯಕರ್ತರಲ್ಲಿ ಒಬ್ಬರು ಒಂದು ಬಟ್ಟಲು ಚಹಾ ಸ್ವೀಕರಿಸಲು ಬಂದಿದ್ದರು ; ಗ್ರಾಮಸೇವಾ ಕಾರ್ಯಕ್ಕಾಗಿ ಪಡೆಯಬೇಕಾದ ಶಿಕ್ಷಣ, ಆ ಸಂಬಂಧವಾಗಿ ಮಾಡಬೇಕಾಗಿದ್ದ ಪರೀಕ್ಷೆಗಳುಯಾವವು ಎಂಬೀ ವಿಚಾರವಾಗಿ ಲಕ್ಷ್ಮಿ ಅವರನ್ನು ಕೇಳಿದಳು.

ಕೆಲವು ವೇಳೆ ಅವಳ ಓದುಬರಹದ ತರಗತಿಯಲ್ಲಿ ತೊಂದರೆಗಿಟ್ಟುಕೊಳ್ಳುತ್ತಿತ್ತು. ತೊಂದರೆ ಮಾಡಲೆಂದು ಮಾತ್ರ ಬರುತ್ತಿದ್ದ ಹೆಂಗಸೊಬ್ಬಳಿದ್ದಳು; ಆದರೂ ಕೂಡ, ಸಮಾಜ ಸೇವಾ ಕಾರ್ಯಕರ್ತರಿಗೆ ಆ ಸಂಗತಿ ತಿಳಿಸಲು ಲಕ್ಷ್ಮಿ ಇಷ್ಟಪಡಲಿಲ್ಲ. ಆಗ, ಪಕ್ಕದ ಹಳ್ಳಿಯಿಂದ ಬರುತ್ತಿದ್ದ

ಎಂಬುದನ್ನು ಅವಳು ಗ್ರಹಿಸಿರಲಿಲ್ಲ; ಏಕೆಂದರೆ ಲಕ್ಷ್ಮಿ ಕಾಗದವನ್ನು ಬಹಳ ಉಲ್ಲಾಸಕರವಾಗಿಯೇ ಮೊದಲು ಮಾಡಿ, ಸರಸ್ವತಿಗೆ ಸಂಬಂಧಪಟ್ಟ ಮುಖ್ಯ ಭಾಗವನ್ನು ಆಮೇಲೆ ಸೇರಿಸಿದ್ದಳು. ಅವಳು ಅದನ್ನು ತನ್ನ ತಂದೆಗೆ ಕೊಟ್ಟಳು ಅವರು ಕಾಫಿ ಕುಡಿಯುತ್ತಿದ್ದುದನ್ನು ನಿಲ್ಲಿಸಿಬಿಟ್ಟರು ಮತ್ತು ಹುಬ್ಬುಗಂಟುಹಾಕಿಕೊಂಡು, ಭಾರತದ ಪಾಕೀಜು ವ್ಯವಸ್ಥೆಯ ವಿಚಾರವಾಗಿ ಗೊಣಗುಟ್ಟತೊಡಗಿದರು.

ಆ ಬಳಿಕ, ಇದ್ದಕ್ಕಿದ್ದ ಹಾಗೆಯೇ ಅಮ್ಮಣ್ಣಿ ಪಾಟಿಯೇ ಅಲ್ಲಿಗೆ ಬಂದರು; ಬಂದವರು ಜೂಡಿಯ ತಂದೆಗೂ ತಾಯಿಗೂ ನಮಸ್ಕಾರ ಮಾಡಿದರು. ಜೂಡಿಯ ತಾಯಿ ಅವರಿಗೆ ಒಂದು ಬಟ್ಟಲು ಕಾಫಿ ಕೊಟ್ಟರು ; ಅವರು ಸ್ವಲ್ಪ ಮಟ್ಟಿಗೆ ಅಳುಕುತ್ತಲೇ ಹವದ ವಿಚಾರ ಮಾತಾಡತೊಡಗಿದರು ; ಆದರೆ ಜೂಡಿ ಹೇಳಿಬಿಟ್ಟಳು : "ನನಗೆ ಇದೇ ತಾನೆ ಒಂದು ಕಾಗದ ಬಂತು–ಅವರು ಬಂದಿದ್ದಾರೆಯೆ ?"

'ಬಂದಿದಾರೆ, ಪಾಪ, ಬಡಪ್ರಾಣಿಗಳು. ನನ್ನ ಮೊಮ್ಮಗಳು, ನನ್ನ ಪುಟ್ಟ ಸರಸ್ವತಿ, ಬಹುಶಃ ಅವಳು ಅಷೊಂದು ಚೆನ್ನಾಗಿಲ್ಲ–", ಎಂದರು ಅಮ್ಮಣ್ಣಿ ಪಾಟಿ.

"ನಾನು ಈ ಕೂಡಲೆ ಬಂದುಬಿಡುತ್ತೇನೆ", ಎಂದರು ಜೂಡಿಯ ತಂದೆ, ಆಮೇಲೆ ತಕ್ಕಮಟ್ಟಿಗೆ ಓಡಾಟವೇ ಆಯಿತು; ಸರಸ್ವತಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು; ಅಲ್ಲಿ, ಕೆಲವು ದಿನಗಳೊಳಗಾಗಿ, ಏನು ಕೆಟ್ಟಿದೆ ಎಂಬುದನ್ನು ಕಂಡುಹಿಡಿದರು. ಜೂಡಿ ಅವಳನ್ನು ನೋಡಿಕೊಂಡು ಬರಲು ಹೋದಳು. ಮತ್ತು ಅವಳಿಗೆ ಕೊಡಬಹುದೆಂದು ಹೇಳಿದ್ದ ಸಾಧಾರಣ ತೆರೆದ ಮಿಠಾಯಿಗಳನ್ನು ತೆಗೆದುಕೊಂಡುಹೋಗಿ ಕೊಟ್ಟಳು; ಕೆಲವು ಚಿತ್ರದ ಪುಸ್ತಕಗಳನ್ನೂ ಕೊಟ್ಟಳು. ಅವಳು ಬಹು ಬಡವಾಗಿ, ಬಾಗಿಹೋಗಿದ್ದಂತೆ ಕಂಡಳು ಆದರೆ ದಾದಿಯರೇನೋ ಅವಳ ಬಗೆಗೆ ಸಂತುಷ್ಟರಾಗಿದ್ದರು. ಎಲ್ಲಾ ಸರಿಹೋಗುವುದೆಂದು ಹೇಳಿದರು. "ಆದರೆ ಲಕ್ಷ್ಮಿ ತನ್ನ ತಂದೆಯೊಂದಿಗೆ ಒಬ್ಬಳೇ ಇದಾಳೆ! ಅದು ಸರಿಯಲ್ಲ....." ಎಂದರು ಅಮ್ಮಣ್ಣಿ ಪಾಟಿ.

ಇತರರೆಲ್ಲ ಹೊರಟು ಹೋದಂದಿನ ಸಂಜೆ ಲಕ್ಷ್ಮಿ ಸ್ವಲ್ಪ ಅತ್ತಿದ್ದಳು. ಅದಕ್ಕೆ ಅರ್ಧ ಕಾರಣ, ಅವಳ ತಾಯಿ ರೈಲು ನಿಲ್ದಾಣದಲ್ಲಿ ಬೇಕಾದಷ್ಟು ಅತ್ತು ಬಿಟ್ಟಿದ್ದರು; ಕಡೆಯಲ್ಲಿ ಕಂಡದ್ದೆಂದರೆ, ರೈಲುಗಾಡಿಯ ತೆರೆದ ಕಿಟಕಿಯಲ್ಲಿ ಕಂಡ, ಕಣ್ಣೀರು ಕವಿದುಕೊಂಡಿದ್ದ ಅವರ ಮುಖ. ಕುಮಾರ್ ಮತ್ತು ಲಕ್ಷ್ಮಿ, ಇಬ್ಬರೂ

ಲಕ್ಷ್ಮಿ ತನ್ನ ತುಟಿ ಕಚ್ಚಿಕೊಂಳು. ತಾನು ಮನೆಯಲ್ಲಿ ಒಬ್ಬಳೇ, ಅದರಲ್ಲಿಯೂ ರಾತ್ರಿಯ ವೇಳೆ, ಇರಲು ಅವಳು ಇಷ್ಟಪಡಲಿಲ್ಲ–ಎಲ್ಲಕ್ಕಿಂತ ಹೆಚ್ಚಾಗಿ, ಅವಳ ತಂದೆ ಶತ್ರುಗಳನ್ನು ಮಾಡಿಕೊಂಡಿದ್ದರಂತೂ ತೀರಿತು; ಒಂದು ಅವಕಾಶ ಅವರಿಗೆ ಕಂಡರೆ ಸಾಕು, ತಮ್ಮ ಸೇಡನ್ನು ತೀರಿಸಿಕೊಳ್ಳಬಹುದು ಅವರು. ಆದರೆ ಆಗ ಅವಳು ಯೋಚಿಸಿದಳು, ಇಲ್ಲ, ಇರುವವರೆಲ್ಲ. ನನ್ನ ಸ್ನೇಹಿತರು !–ಎಂದು. "ವಲ್ಲಿಯ ಮನೆಗೆ ಹೋಗುತ್ತೇನೆ, ಇಲ್ಲವೆ ಮೋಹಿನಿಯ ಮನೆಗೆ ಹೋಗುತ್ತೇನೆ–ಓ, ನಾನು ಹೋಗಬೇಕೆಂದರೆ ಅನೇಕ ಸ್ಥಳಗಳಿವೆ !"

"ವಿಶ್ರಾಂತಿಮಂದಿರ ಆಗಬಹುದು" ಎಂದು ಕಾಗದಪತ್ರದ ಚೀಲ ಹಿಡಿದಿದ್ದಾತ ಸೂಚಿಸಿದರು; ಆದರೆ ಲಕ್ಷ್ಮಿ ತಲೆ ಅಲ್ಲಾಡಿಸಿದಳು. ಇಲ್ಲ, ಅವಳು ಹಳ್ಳಿಯ ಒಂದು ಭಾಗವಾಗಿಬಿಟ್ಟಿದ್ದಳು. ಅವಳ ತಂದೆ ಸ್ನಾನಮಾಡಿ, ಉಡುಪು ಬದಲಾಯಿಸಿ, ತಮ್ಮ ಕಾಗದ ಪತ್ರಗಳನ್ನೆಲ್ಲ ಜೋಡಿಸಿಟ್ಟುಕೊಳ್ಳುತ್ತಿದ್ದಾಗ, ಅವಳು ಹೋಗಿ ತನ್ನ ತರಗತಿಯವರನ್ನು ಕಂಡಳು; ಅವರಲ್ಲಿ ಅರ್ಧ ಮಂದಿ ತಮ್ಮೊಂದಿಗೆ ಇರುವಂತೆ ಅವಳನ್ನು ಕೇಳಿಕೊಂಡರು. ಕಡೆಯಲ್ಲಿ, ಮೋಹಿನಿಯೊಂದಿಗೆ ನೆರೆಯ ಹಳ್ಳಿಗೆ ಹೋಗುವುದಾಗಿ ಅವಳು ನಿರ್ಧರಿಸಿದಳು. ಮೋಹಿನಿಯ ತಾಯಿ ಹಾಗೂ ಸೋದರತ್ತೆಯೊಂದಿಗೆ ತಾನು ಬಹುಸುರಕ್ಷಿತವಾಗಿರಬಹುದು. ಅವಳೂ ಕೂಡ, ಬೆಲೆಬಾಳುವ ಒಡವೆ ವಸ್ತುಗಳನ್ನು ಹತ್ತಿರ ತೆಗೆದಿಟ್ಟುಕೊಂಡೋ, ಇಲ್ಲವೆ ತನ್ನ ಕೊರಳಿಗೆ ಕೈಗೆ ಧರಿಸಿಕೊಂಡೋ, ಒಂದು ಸಣ್ಣ ಪೆಟ್ಟಿಗೆಯಲ್ಲಿ ಸಾಮಾನು ತುಂಬಿದಳು. ಬಾಗಿಲಿಗೆ ಅಡ್ಡನಾಗಿ ಸರಪಣಿಯಕೊಂಡಿ ಚಿಲಕ ಹಾಕಿ, ತಮ್ಮ ಸ್ವಂತ ಮನೆಯನ್ನು ಅವರು ಭದ್ರವಾಗಿ ಮುಚ್ಚಿದರು. ಕಾರು ಅವಳನ್ನು ಕರೆದೊಯ್ದು ಮೋಹಿನಿಯ ತಂದೆಯ ಎರಡು ಕೋಣೆ ಮನೆಯ ಬಳಿ ಬಿಟ್ಟಿತು; ಬಳಿಕ, ಅವಳ ತಂದೆ ಕೈಬೀಸುತ್ತ ಅವಳನ್ನು ಬೀಳ್ಕೊಳ್ಳುತ್ತಿದ್ದಾಗ, ಕಾರು ಮುಂದಕ್ಕೆ ಓಡಿತು.

ಒಂದು ದಿನ ಕಳೆಯಿತು, ಇನ್ನೊಂದು ದಿನ ಸಾಗಿತು; ಆಗ ಸಂಜೆಯಲ್ಲಿ ಒಂದು 'ಟೆಲಿಗ್ರ್ಯಾಂ' (ತಂತಿ ಸಮಾಚಾರ) ಹಿಡಿದುಕೊಂಡು ಒಬ್ಬಾತ ಬಂದ, ಅದರಲ್ಲಿ ಸುಮ್ಮನೆ 'ಹುಲಿಗಳು ಓಡುತ್ತಿವೆ' ಎಂದಿತ್ತು, ಅಷ್ಟೆ. ಅವಳ ಮನಸ್ಸು ವಿಪರೀತ ಉದ್ರೇಕಗೊಂಡಿತು. ಅವಳ ತಂದೆಗೆ ಏನೇನು ಒದಗಿತು ಎಂಬ ಬಗೆಗೆ ಮೋಹಿನಿಯ ತಂದೆತಾಯಿಗೆ ಎಷ್ಟು ಸಂಗತಿ ತಿಳಿದಿತ್ತು ಎಂಬುದು ವಿಚಿತ್ರವಾಗಿಯೆ ಇತ್ತು. ಮದರಾಸಿನಲ್ಲಿ ಅವಳ ತಂದೆಯ ಶತ್ರುಗಳಾಗಿದ್ದವರ

ಪುಟ್ಟ ಮೋಹಿನಿಯ ತಾಯಿ ಹಾಗೂ ಅವಳ ಸೋದರತ್ತೆ, ಇಬ್ಬರೂ ದೃಢಸಂಕಲ್ಪದ ಮತ್ತು ಸಂತೋಷಚಿತ್ತದ ಹೆಂಗಸರು, ಒಂದು ದಿವಸ ಬಂದು ಈ ಇನ್ನೊಬ್ಬಳು ಹೆಂಗಸಿನೊಂದಿಗೆ ಮಾತಾಡಿದರು ; ಇದಾದಮೇಲೆ ಅವಳು ಮತ್ತೆ ಬರಲಿಲ್ಲ; ತರಗತಿಯ ಇನ್ನುಳಿದವರು ಹಲವಾರು ದಿನಗಳ ಕಾಲ ಪಾಠದ ಕಡೆಗೆ ಗಮನವಿಟ್ಟು, ಬಹಳ ಒಳ್ಳೆಯವರಾಗಿಯೆ ಇದ್ದರು. ಅವಳು ತಲೆಗೆ ಮುಡಿಯಲೆಂದು ಮೋಹಿನಿ ಅನೇಕವೇಳೆ ಹೂಗಳನ್ನು ತಂದುಕೊಡುತ್ತಿದ್ದಳು; ಒಮ್ಮೆ ಸ್ವಲ್ಪ ಸಿಹಿತಿಂಡಿಯನ್ನೂ ತಂದುಕೊಟ್ಟಳು.

ಆಗ, ಸೆಕೆಯಾಗಿದ್ದ ಒಂದು ದಿನ ಮಧ್ಯಾಹ್ನದ ಮೇಲೆ, ಘನವಾದ ಬಿಳಿಯ ಸೂಟು ಧರಿಸಿದ್ದ ಇಬ್ಬರು ಗಂಡಸರು ಕಾರಿನಲ್ಲಿ ಪೊನ್ನೇರಿಗೆ ಬಂದರು; ಒಬ್ಬರು ಕಾಗದಪತ್ರಗಳ ಕೈಚೀಲವನ್ನು ಹಿಡಿದಿದ್ದರು. ಅವರು ಕುಮಾರರನ್ನು ನಾಲೆಯ ಬಳಿ ಹೋಗಿ ಕಂಡರು ; ಕುಮಾರ್ ಒಂದು ಅಳತೆಯ ಕೋಲನ್ನು ಹಿಡಿದಿದ್ದು, ಕೆಲಸಗಾರರ ಮೇಲ್ವಿಚಾರಕರಲ್ಲಿ ಒಬ್ಬರೊಂದಿಗೆ ರೇಗಿ ಮಾತಾಡುತ್ತಿದ್ದರು; ಅವರ ತೋಳು ಕಾಲುಗಳ ಮೇಲೆಲ್ಲಾ ನಾಲೆಯ ಕೆಸರುಮಣ್ಣು ಮೆತ್ತಿಕೊಂಡಿತ್ತು. ಅವರು ತಮ್ಮ ಪರಿಚಯವನ್ನು ತಾವೇ ಮಾಡಿಕೊಂಡರು, ಕೈಕುಲುಕಿದರು; ಕುಮಾರರೊಂದಿಗೆ ಕಚೇರಿಗೆ ಹಿಂದಿರುಗಿದರು. ಅವರಲ್ಲಿ ಒಬ್ಬರು ಮುಖ್ಯ ಇಂಜಿನಿಯರಿಗೆ ಏನೋ ಹೇಳಿದರು; ಅವರು ಬಹಳ ಪೇಚಾಟಕ್ಕೆ ಒಳಗಾಗಿ, ಚಹಾ ಬಿಸ್ಕತ್ತು ಮತ್ತು ಕಡತಗಳು ನಕ್ಷೆಗಳು ಇವಕ್ಕೆ ಹೇಳಿಕಳಿಸಿದರು ಮತ್ತು ಬಹಳ ವೇಗವಾಗಿ ಮಾತಾಡತೊಡಗಿದರು.

ಅನಂತರ ಅವರು ಕುಮಾರರ ಮನೆಗೆ ಹಿಂದಿರುಗಿದರು; ಅಲ್ಲಿ ಆ ಇಬ್ಬರೂ ವಿನಯದಿಂದ ಲಕ್ಷ್ಮಿಗೆ ನಮಸ್ಕಾರಮಾಡಿದರು. ಕುಮಾರ್ ಹೇಳಿದರು: "ಅವರೊಂದಿಗೆ ನಾನು ಮದರಾಸಿಗೆ ಈ ಕೂಡಲೆ ಹಿಂದಿರುಗಬೇಕೆಂದು ಅವು ಅಪೇಕ್ಷಿಸುತ್ತಾರೆ,–ಆದರೆ ನೀನು ಎಲ್ಲಿಗೆ ಹೋಗುತ್ತೀಯೆ ? ನಾನು ನಿನ್ನನ್ನ ಒಂಟಿಯಾಗಿ ಬಿಟ್ಟು ಹೋಗಲಾರೆ."

ಲಕ್ಷ್ಮಿ ತನ್ನ ಕೈಯನ್ನು ಗಂಟಲು ಹತ್ತಿರ ಇಟ್ಟುಕೊಂಡಿದ್ದಳು ; ಅವಳ ಹೃದಯವು ಉಬ್ಬಿ ಅವಳ ಉಸಿರು ಕಟ್ಟಿಸುವಂತೆ ಬಹುಮಟ್ಟಿಗೆ ತೋರಿಬರುತ್ತಿತ್ತು. ಅವಳು ಹೇಳಿದಳು : "ಅಪ್ಪಾ, ಏನು–ಏನು–ಹುಲಿಗಳೊಂದಿಗೆ ನೀನು ಕಾದಾಡಿದ್ದೀಯೇನು?"

"ನಾನು, ಇಲ್ಲವೆ ನನ್ನ ಸ್ನೇಹಿತರು", ಎಂದರು ಅವಳ ತಂದೆ, "ಅವರ ಹೃದಯಗಳಲ್ಲಿ ಬಾಣಗಳು ಇವೆ ಎಂದು ನನಗೆ ತೋರುತ್ತದೆ. ಆದರೆ ನೀನು– ನಾನು ಒಂದೆರಡು ದಿನ–"

ಹಾಗೆ ಏರ್ಪಾಡುಮಾಡುತ್ತೇನೆ."

"ನೆರವಾಗಲು ಬಂದಿದ್ದೇನೆ ನಾನು !" ಎಂದಳು ಜೂಡಿ.

ಲಕ್ಷ್ಮಿ ಹೇಳಿದಳು : "ಜೂಡಿ, ಒಂದು ಗಂಟೆಯಕಾಲ ನೀನು ನನ್ನ ಸ್ಥಾನದಲ್ಲಿ ನನ್ನ ತಂದೆಯ ಮಗಳಾಗಿದ್ದುಕೊಂಡು, ಗಂಟುಮೂಟೆ ಕಟ್ಟುವುದಕ್ಕೆ ನೆರವಾಗಬೇಕು; ಏಕೆಂದರೆ, ನಾನು ನನ್ನ ತರಗತಿಯವರನ್ನೆಲ್ಲ ಇನ್ನೊಮ್ಮೆ ಕಲೆಹಾಕಿ, ನಾನು ಹೋಗಿ ಬರುತ್ತೇನೆಂದು ಅವರಿಗೆ ಹೇಳಬೇಕು. ಆದರೆ, ಹಿಂದಿರುಗಿ ಬರುತ್ತೇನೆಂದು ಸಹ ಅವರಿಗೆ ಹೇಳುತ್ತೇನೆ."

ಅಮ್ಮಣ್ಣಿ ಪಾಟಿ ಹೇಳಿದರು, "ಆದರೆ, ಲಕ್ಷ್ಮೀ, ನೀನು ಈಗ ಮನೆಗೆ ಬರುತ್ತಿದ್ದೀಯೆ; ಮದರಾಸಿನಲ್ಲಿ ಮನೆಗೆ, ನಿನ್ನ ಸ್ವಂತ ಬದುಕನ್ನು ನಡಸಲು ಬರುತ್ತಿದ್ದಿಯೇ; ನನಗೇನಾದರೂ ಗೊತ್ತಿದ್ದಿದ್ದರೆ, ನೀನು ಇಲ್ಲಿರಲು ನಾನು ಎಂದಿಗೂ ಅವಕಾಶ ಕೊಡುತ್ತಿರಲಿಲ್ಲ ! ನನ್ನ ಮಗ ಎಂಥ ಕೆಟ್ಟವನು–ತನ್ನ ತಾಯಿಗೆ ಹೇಳಿಕೊಳ್ಳುವುದಕ್ಕೂ ಅವನಿಗೆ ಮಾನ ! ಅಂತೂ ಈಗ ಎಲ್ಲ ಮುಗಿದುಹೋಯಿತು. ನೀನು ಎಂದಿಗೂ ಹಿಂದಿರುಗಿ ಬರಬೇಕಾಗಿದ್ದಿಲ್ಲ."

ಲಕ್ಷ್ಮಿ ನಡುವೆ ಮಾತಾಡಲಿಲ್ಲ; ಕಡೆಯಲ್ಲಿ, ಅವಳು ಬಹು ಮೆಲ್ಲನೆ ನುಡಿದಳು: "ಆದರೆ, ಅಮ್ಮಣ್ಣಿಪಾಟಿ, ಅದು ಹಾಗೆ ಆಗುವಹಾಗೆ ಇಲ್ಲವೆ ಇಲ್ಲ. ಗಾಂಧಿಜಿ ಹೇಳಿದಹಾಗೆ, ಹಳ್ಳಿಗಳಲ್ಲಿ ನಮ್ಮ ಅವಶ್ಯಕತೆ ಇದೆ ಎಂದು ನನಗೆ ಈಗ ತಿಳಿದಿದೆ. ಈ ಕಾರ್ಯಕ್ಕೆಂದು ಆಯ್ಕೆಯಾದವರಲ್ಲಿ ನಾನೂ ಒಬ್ಬಳಾಗಿರುವುದು ಒಳಿತೇ ಆಯಿತು. ಬಹುಶಃ ನಾನು ಶಾಲೆಯ ಓದನ್ನು ಮುಗಿಸುತ್ತೇನೆ ; ಬಹುಶಃ ಕಾಲೇಜಿಗೂ ಹೋಗುತ್ತೇನೆ ; ಆದರೆ ನಾನು ಖಂಡಿತ ಹಿಂದಿರುಗಿ ಬರುತ್ತೇನೆ. ನಾನು ಮಾತುಕೊಟ್ಟುಬಿಟ್ಟಿದ್ದೇನೆ."

ಅಮ್ಮಣ್ಣಿಪಾಟಿ ಅವಳ ಕಡೆಯಿಂದ ಅವಳ ತಂದೆಯ ಕಡೆಗೆ ತಿರುಗಿ ನೋಡಿದರು. "ನೀನು ಏನು ಹೇಳುತ್ತೀ, ಕುಮಾರ್?"

ಅವರು ಹೇಳಿದರು : "ಭಾರತದೇಶದ ಅತ್ಯಂತ ಕೆಟ್ಟ ಹುಲಿಗಳಲ್ಲಿ ಅಜ್ಞಾನ ಒಂದು. ಲಕ್ಷ್ಮಿ ಕೂಡ ಹುಲಿಗಳನ್ನು ಕೊಲ್ಲಬಯಸುತ್ತಾಳೆ ಎಂದು ನನಗೆ ತೋರುತ್ತೆ, ಬೇಡ ಎಂದು ಹೇಳುವವರಲ್ಲಿ ಒಬ್ಬನಾಗಲಾರೆ ನಾನು."

ಜೂಡಿ ಹೇಳಿದಳು, "ಲಕ್ಷ್ಮಿ, ಹಿಂದಿರುಗಿ ಹೋಗಲು ನೀನು ನಿಜವಾಗಿ ಮಾತುಕೊಟ್ಟಿರುವುದಾದರೆ, ನೀನು ಹೋಗಲೇಬೇಕು, ಅದು ಸರಿಯೆ. ಆದರೆ ಎಂದಾದರೂ ಒಂದು ದಿನ, ನಾನೂ ಸಹ ದೊಡ್ಡವಳಾದ ಮೇಲೆ, ಭಾರತಕ್ಕೆ ಹಿಂದಿರುಗಿ ಬರುವುದಾಗಿ ನಾನು ಮಾತುಕೊಟ್ಟರೆ. ನಾನು ಬೇಕಾದೇನು ಎಂದು

ಹೆಸರುಗಳೂ ಅವರಿಗೆ ಗೊತ್ತಿದ್ದುವು–ಆ ಹೆಸರುಗಳನ್ನು ಅವಳು ತಾನೇ ಕೇಳಿಯೂ ಇರಲಿಲ್ಲ. ಮುಖ್ಯ ಇಂಜಿನಿಯರು ಬಂದು, ಒಂದು ತುಂಡು 'ಬ್ರಾಕೇಡು' (ಉಬ್ಬು ನಮೂನೆಗಳ ನೆಯ್ಗೆಯ) ರೇಷ್ಮೆ ಬಟ್ಟೆಯನ್ನು ಒಂದು ಪೆಟ್ಟಿಗೆ ಚಾಕೊಲೇಟನ್ನೂ ಅವಳಿಗೆ ಬಹುಮಾನವಾಗಿ ಕೊಡಲು ಪ್ರಯತ್ನಪಟ್ಟರು. ಆದರೆ, ಅವಳು ಲಜ್ಜೆಯಿಂದ ಕೆಳಗೆ ನೋಡಿ, ತನ್ನ ತಂದೆ ಹೊರಟು ಹೋಗಿರುವಾಗ ತಾನು ಏನನ್ನೂ ಸ್ವೀಕರಿಸುವುದಿಲ್ಲವೆಂದು ಮೆಲ್ಲನೆ ನುಡಿದಳು. ಆತ ಹಳ್ಳಿಯನ್ನು ಬಿಟ್ಟಮೇಲೆ ಜನರೆಲ್ಲ ಅವಳು ಹಾಗೆ ನಡೆದುಕೊಂಡದ್ದು ಸರಿ ಎಂದು ಹೇಳಿ, ತಾವೇ ಅವಳಿಗೆ ಕೊಡಲೆಂದು ಹೂಹಾರಗಳನ್ನು ತಂದರು.

ಆದರೆ ಮೋಹಿನಿ ಸ್ವಲ್ಪ ಖಿನ್ನಳಾಗಿದ್ದಳು. ರಾತ್ರಿ ಅವರು ಒಂದೇ ಹಾಸಿಗೆಯಲ್ಲಿ ಮಲಗಿದ್ದರು ; ಸೆಕೆಸೆಕೆಯಾಗಿ, ನಿಶ್ಶಬ್ದವಾಗಿದ್ದ ಹೊತ್ತಿನಲ್ಲಿ, ಮೋಹಿನಿ, "ನೀವು ಪಟ್ಟಣಕ್ಕೆ ಹೊರಟುಹೋಗುತ್ತೀರಿ, ನಾನು ಮತ್ತೆ ಎಂದೂ ನಿಮ್ಮನ್ನ ನೋಡುವ ಹಾಗೇ ಇಲ್ಲ" ಎಂದಳು.

"ಅದಕ್ಕೆ ಲಕ್ಷ್ಮಿ ಹೇಳಿದಳು, "ಹಾಗೆಂದಿಗೂ ಆಗುವುದಿಲ್ಲ. ಸದಾ ಕಾಲವೂ ನಿನ್ನನ್ನ ಬಿಟ್ಟು ಇರುವುದಿಲ್ಲ" ಜೊತೆಗೆ, ತನ್ನ ತಂದೆ ಮತ್ತು ತಾಯಿಯ ಮೇಲೆ ಆಣೆಯಿಟ್ಟು, ತಾನು ಖಂಡಿತ ಹಿಂದಿರುಗಿ ಬರುವುದಾಗಿ ಅವಳು ಮೋಹಿನಿಗೆ ಮಾತುಕೊಟ್ಟಳು.

ನಾಲ್ಕನೆಯ ದಿನ ಇನ್ನೊಂದು ಕಾರು ಬಂದಿತು, ದೊಡ್ಡಪ್ಪನ ಮಗನದು; ಆದರೆ ಅದನ್ನು ನಡೆಸುತ್ತಿದ್ದವರು ಕುಮಾರರೆ. ಹಿಂದುಗಡೆ, ಕಾರಿನ ಕಿಟಕಿಯ ಚೌಕಟ್ಟನ್ನು ಹಿಡಿದುಕೊಂಡು, ಅಮ್ಮಣಿ ಪಾಟಿ ಮತ್ತು ಜೂಡಿ ಕುಳಿತಿದ್ದರು; ಉದ್ವೇಗದಿಂದ ಜೂಡಿಯ ಬಾಯಿ ತೆರೆದಿತ್ತು. ಅವರನ್ನು ಎದುರುಗೊಳ್ಳಲು ಲಕ್ಷ್ಮಿ ಓಡಿದಳು. "ಹುಲಿಗಳು ಓಡಿಬಿಟ್ಟವೆ; ಆದರೆ ಒಂದೆರಡನ್ನು ದಿಕ್ಕು ಕಾಣದಂತೆ ಮಾಡಿದೆ ; ಕುಂಟುತ್ತ ಇದೆ ಮತ್ತೊಂದು !" ಎಂದರು ಕುಮಾರ್. ಅದು ವಿಚಿತ್ರವಾಗುತ್ತು ; ಏಕೆಂದರೆ, ಆತ ಇನ್ನೂ ಕೃಶವಾಗಿಯೆ ಇದ್ದರು, ಕೂದಲು ಕೆದರಿತ್ತು ; ಒಂದು ಹೊಸ ಷರಟು ಕೊಳ್ಳಲು ಕೂಡ ಅವರಿಗೆ ಹೊತ್ತು ಇರಲಿಲ್ಲ ; ಆದರೆ ಅದು ಎಂತೋ ಏನೋ, ಒಳಗೆ ಹಿಗ್ಗಿನ ಕಾಂತಿಯಿತ್ತು ; ಶಾಲೆಯಿಂದ ಹೊರಕ್ಕೆ ಬಂದ ಹುಡುಗನಂತೆ ಕಾಣುತ್ತಿದ್ದರು.

"ಈಗ ಏನು ?" ಎಂದು ಕೇಳಿದಳು ಲಕ್ಷ್ಮಿ.

"ಈಗ–ಗಂಟುಮೂಟೆ ಕಟ್ಟುವುದು, ಮತ್ತೆ ಹೊರಡುವುದು ! ಆಮೇಲೆ, ನಾಲೆಯನ್ನು ಸರಿಯಾಗಿ ತೋಡಿ, ಹಳ್ಳಿಗಳಿಗೆ ಕೊಳವೆ ಬಾವಿಗಳು ದೊರೆಯುವ

ನಿನಗೆ ತೋರುತ್ತದೆಯೇ? ಏಕೆಂದರೆ, ಹಾಗಲ್ಲದಿದ್ದರೆ–ಓ, ಲಕ್ಷ್ಮಿ, ನನ್ನ ದೇಶಕ್ಕೆ ಹಿಂದಿರುಗಿ, ನಿನ್ನನ್ನು ಇನ್ನು ಎಂದಿಗೂ ನೋಡದಿರುವುದೆಂದರೆ ನಾನು ಸಹಿಸಲಾರೆ!"

"ನಿನ್ನ ಆವಶ್ಯಕತೆ ಇದ್ದೇ ಇರುತ್ತದೆ. ಅದು ದಿಟ," ಎಂದರು ಕುಮಾರ್, "ಎಲ್ಲಿ, ಈಗ ಬಾ, ನನ್ನ ಮಗಳಾಗಿರುವೆಯಂತೆ ಪಾಟ್ಲಾಕು ತೆಗೆದು, ಕಟ್ಟಬೇಕಾದ್ದನ್ನು ಗಂಟುಮೂಟೆ ಕಟ್ಟಿ, ಉಳಿದವನ್ನು ನಮ್ಮ ಸ್ನೇಹಿತರಿಗೆ ಕೊಡೋಣ."

ಅಮ್ಮಣಿಪಾಟಿ ಜೂಡಿಯ ಕೈ ಹಿಡಿದುಕೊಂಡರು; ಬೀಗ ಹಾಕಿದ್ದ ಮನೆಯ ಕಡೆಗೆ ಅವರು ಒಟ್ಟಿಗೆ ಸಾಗಿಹೋದರು. ಲಕ್ಷ್ಮಿ ಅವರ ಕಡೆಗೆ ಕೈಯಾಡಿಸಿ, ಸಮಾಜಾಭಿವೃದ್ಧಿಯ ಕೇಂದ್ರದ ದಾರಿ ಹಿಡಿದು ಹೊರಟಳು. ಆಮೇಲೆ, ಹಳ್ಳಿಯ ಹೆಂಗಸರೂ ಹುಡುಗಿಯರೂ ಒಬ್ಬರಾದಮೇಲೆ ಒಬ್ಬರಂತೆ ಅವಳನ್ನು ಹಿಂಬಾಲಿಸಿ ಬಂದರು–ಅವಳಿಗೆ ನಮಸ್ಕಾರ ಹೇಳಿ ಬೀಳ್ಕೊಡಲೆಂದು, ಆದರೆ ಸ್ವಲ್ಪಕಾದವರೆಗೆ ಮಾತ್ರ.

# ಅನುಬಂಧಗಳು

೧. ಸಂಪುಟ ೮(ಭಾಗ ೧–೨)ರ ವಿಷಯ ಸೂಚಿ
೨. ಎಂವಿಸೀ ಜೀವನಪಥ ಸೂಚಿ
೩. ಎಂವಿಸೀ ಸಮಗ್ರ ಗ್ರಂಥ ಸೂಚಿ
೪. ಎಂವಿಸೀ ಸಮಗ್ರ ಲೇಖನ ಸೂಚಿ
೫. ಎಂವಿಸೀ ಅವರನ್ನು ಕುರಿತ ಗ್ರಂಥಲೇಖನ ಸೂಚಿ

# ಅನುಬಂಧ – ೧

# ಎಂ.ವಿ.ಸೀ ಜೀವನಚರಿತ್ರೆ ಮತ್ತು ಅನುವಾದ ಸಾಹಿತ್ಯ ವಿಷಯ ಸೂಚಿ

## ಸಂಪುಟ ೮ರ(ಭಾಗ ೧ ಮತ್ತು ೨) ಸೂಚಿ

[ಸೂಚನೆ : ಎಂ.ವಿ.ಸೀ. ಅವರ ಜೀವನಚರಿತ್ರೆ ಮತ್ತು ಅನುವಾದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಮಗ್ರ ಗ್ರಂಥ–ಲೇಖನಗಳ ಸೂಚಿ ಇಲ್ಲಿದೆ. ಭಾಗ ೧ ರಿಂದ ೩ ರವರೆಗೆ ಸಂಪುಟ ೮ ಭಾಗ ೧ರಲ್ಲಿ ಪ್ರಕಟವಾಗಿದೆ. ಭಾಗ ೪ ರಿಂದ ೯ ವರೆಗೆ ಸಾಹಿತ್ಯ ಸಂಪುಟ ೮ ಭಾಗ ೨ರಲ್ಲಿ ಪ್ರಕಟವಾಗಿದೆ.]

**ಗುಂಪು ೧ – ಆತ್ಮಕಥೆ**
**ನನ್ನ ಸಾಹಿತ್ಯ ಜೀವನ ಸ್ಮೃತಿಗಳು (ಆತ್ಮಕಥೆ)**
ಗ್ರಂಥ : ಎಂ.ವಿ.ಸೀ. ಅವರಿಗೆ ಅರ್ಪಿಸಿದ ಅಭಿವಂದನ ಗ್ರಂಥ 'ಆಸ್ವಾದ'
ಪ್ರಕಾಶಕರು : ಉದಯಭಾನು ಕಲಾ ಸಂಘ, ಬೆಂಗಳೂರು
ಇ. ೧೯೮೩ ಸಂ : ಶ್ರೀವತ್ಸ, ಅನಂತಪದ್ಮನಾಭ ರಾವ್, ಎಚ್‌ಎಂ ರಂಗನಾಥ್. ಪುಟಗಳು ೨೮

**ವಿದ್ಯಾರ್ಥಿಯಾಗಿ ನಾನು ಕಂಡಂತೆ (ಪ್ರಸಿದ್ಧ ಕರ್ನಾಟಕ)**
**ಗುಂಪು ೨ – ಜೀವನಚರಿತ್ರೆ**
**ಎ.ಆರ್. ರಾಜರಾಜವರ್ಮ (ಜೀವನಚರಿತ್ರೆ)**
(ಕೆ.ಎಂ. ಜಾರ್ಜ್ ಅವರ ಇಂಗ್ಲಿಷ್ ಕೃತಿಯ ಅನುವಾದ)
ಪ್ರ. : ಕೇಂದ್ರ ಸಾಹಿತ್ಯ ಅಕಾಡೆಮಿ ೧೯೮೬ ಪುಟಗಳು ೮೬

೯. ಕನ್ನಡಕ್ಕೆ ಒಲಿದು ಬಂದ ಶ್ರೀ
೧೦. ಬಿಎಂಶ್ರೀ ಅವರ ಬಹುಮುಖದ ವಿದ್ವತ್ತು, ಬಹುಮುಖ ಪ್ರತಿಭೆ
೧೧. ಪರಿಷತ್ತನ್ನು ಬೆಳೆಸಿದ ಬಿಎಂಶ್ರೀ
೧೨. ಶ್ರೀಯವರ ವ್ಯಕ್ತಿತ್ವದಲ್ಲಿಯ ವಿರೋಧಾಭಾಸಗಳು
೧೩. ಶ್ರೀ ಸ್ಮೃತಿ
(೯–೧೩ ಲೇಖನಗಳು 'ನಾಡೋಜ ಬಿಎಂಶ್ರೀ' ಗ್ರಂಥದಲ್ಲಿ ಪ್ರಕಟವಾಗಿದೆ)
೧೪. ಶ್ರೀ ಬಸವಣ್ಣನವರು
೧೫. ಮಾರ್ಗದರ್ಶಕ (ರಾಮಕೃಷ್ಣ ಪರಮಹಂಸರು)
೧೬. ಶ್ರೀ ಪುರಂದರದಾಸರು
(೧೪–೧೬ ಲೇಖನಗಳು 'ಬಾಳಿನಬುತ್ತಿ' ಗ್ರಂಥದಲ್ಲಿ ಪ್ರಕಟವಾಗಿವೆ)
೧೭. ಗೋವಿಂದ ಪೈ
(ಗುಡಿನುಡಿಯ ಗೊಮ್ಮಟ)
೧೮. ಬಿಎಂಶ್ರೀ
ವಿದ್ಯಾರ್ಥಿಯಾಗಿ ನಾನು ಕಂಡಂತೆ
೧೯. ಟಿ.ಎಸ್. ವೆಂಕಣ್ಣಯ್ಯ
ಟಿ.ಎಸ್.ವಿ. – ಗುರುವಿನ ಒಂದು ಭಾವಚಿತ್ರ
೨೦. ಎ.ಆರ್. ಕೃ
ಪೂಜ್ಯ ಎ.ಆರ್. ಕೃ ಅವರನ್ನು ಕುರಿತು ನಾಲ್ಕು ನೆನಪಿನ ಮಾತು
೨೧. ಡಿ.ವಿ.ಜಿ.
ಕಗ್ಗದ ಮಂಕುತಿಮ್ಮನಿಗೆ
'ನನ್ನನ್ನು ಕಂಡರಿಸಿದ ರೂವಾರಿ'
೨೨. ತೀ.ನಂ.ಶ್ರೀ
'ನಮೋಗುರುವೆ'
ನಾನು ಕಂಡ ತೀನಂಶ್ರೀ
೨೩. ಮಾಸ್ತಿ
ಶ್ರೀನಿವಾಸನಿಗೆ
'ಗುರುಸ್ಥಾನಿಯರು'
೨೪. ಕೆ. ವೆಂಕಟಪ್ಪ
'ಕಲಾತಪಸ್ವಿ'

**ಗುಂಪು ೩ – ಕಾದಂಬರಿ – ೧**

**ಏಳು ಇಪ್ಪಾರಿನ ಮನೆ (ಕಾದಂಬರಿ)**

(ನ್ಯಾಥಾನಿಯಲ್ ಹಾರ್ಥಾರ್ನ್ ಅವರ 'ದಿ. ಹೌಸ್ ಆಫ್ ದಿ ಸೆವನ್ ಗೇಬಲ್ಸ್' ಕಾದಂಬರಿಯ ಅನುವಾದ)

ಪ್ರ : ಕಾವ್ಯಾಲಯ, ಮೈಸೂರು, ೧೯೬೬ ಪುಟಗಳು ೪೪೦

**ಜೂಡಿಲಕ್ಷ್ಮಿ (ಕಾದಂಬರಿ) – ೨**

(ನಯೋಮಿ ಮಿಚಿಸನ್ ಅವರ 'ಜೂಡಿ ಅಂಡ್ ಲಕ್ಷ್ಮಿ' ಕಾದಂಬರಿಯ ಅನುವಾದ) ೧೯೬೫, ಪುಟಗಳು ೧೫೬

ಪ್ರ : ನ್ಯಾಷನಲ್ ಬುಕ್ ಟ್ರಸ್ಟ್‌ರ ಶಾರದಾ ಪ್ರಕಟನಾಲಯ, ಬೆಂಗಳೂರು.

**ಗುಂಪು ೪ (ವಿಜ್ಞಾನ)**

**ಆಕಾಶಯಾನ (ವಿಜ್ಞಾನ ಗ್ರಂಥ)**

(ಬಿ.ಕೆ. ಎನ್ ರಾವ್ ಅವರ 'ಏವಿಯೇಷನ್' ಗ್ರಂಥದ ಅನುವಾದ)

ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ೧೯೪೨, ಪುಟಗಳು ೧೩೪

**ಗುಂಪು ೫ – ಸ್ತೋತ್ರ**

**ಶ್ರೀ ಶಂಕರಾಚಾರ್ಯ ವಿರಚಿತ ಸೌಂದರ್ಯಲಹರೀ**

(ಶಂಕರರ ಸಂಸ್ಕೃತ ಸ್ತೋತ್ರದ ಅನುವಾದ) 'ಹಸ್ತಪ್ರತಿ ಅಪ್ರಕಟಿತ'

**ಗುಂಪು – ೬ ವ್ಯಕ್ತಿ ಚಿತ್ರಗಳು**

೧. ಸೋಸಲೆ ಅಯ್ಯಾಶಾಸ್ತ್ರಿ
೨. ಕಾನಕಾನಹಳ್ಳಿ ವರದಾಚಾರ್ಯ
೩. ನಾರಾಯಣಶಾಸ್ತ್ರಿ ಎನ್.ಎಸ್.
೪. ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ
೫. ಮೋಟಗಾನಹಳ್ಳಿ ಶಂಕರಶಾಸ್ತ್ರಿ
೬. ನಾರಾಯಣ ಶ್ರೀನಿವಾಸ ರಾಜಪುರೋಹಿತ
೭. ವಾಸುದೇವಾಚಾರ್ಯ
೮. ನಾನು ಕಂಡ ಶಿವರುದ್ರಪ್ಪನವರು

(೧–೮ ಲೇಖನಗಳು ಕನ್ನಡ ವಿಷಯ ವಿಶ್ವಕೋಶದಲ್ಲಿ ಪ್ರಕಟವಾಗಿದೆ)

**ಗುಂಪು ೭ ಮಕ್ಕಳ ಜೀವನಚರಿತ್ರೆಗಳು**

೧. ರನ್ನ
೨. ಯುಧಿಷ್ಠಿರ
೩. ವೈಣಿಕವಿದ್ವಾನ್ ಎಲ್. ರಾಜರಾವ್
೪. ವಿವೇಕಾನಂದ
೫. ಶ್ರೀರಾಮಕೃಷ್ಣಪರಮಹಂಸ

(೧,೨,೩. ಮಕ್ಕಳ ಸಾಹಿತ್ಯ ನಾಟಕ ಸಂಪುಟ ೫ ರಲ್ಲಿ ಪ್ರಕಟವಾಗಿದೆ. ೪ ಲಭ್ಯವಿಲ್ಲ. ಪ್ರಬಂಧಗಳು ಮತ್ತು ವ್ಯಕ್ತಿಚಿತ್ರಗಳು ಸಂಪುಟದಲ್ಲಿ ಪ್ರಕಟವಾಗಿದೆ.)

**ಗುಂಪು ೮ (ವ್ಯಕ್ತಿ ಕಥೆಗಳು)**

೧. ಗುಮಾಸ್ತೆ ಗುಂಡಪ್ಪ
೨. ನಾಟಕದ ಸುಬ್ಬಣ್ಣ
೩. ಅರಮನೆ ಶಾಮರಾಯರು
೪. ಭಿಕ್ಷಾನ್ನದ ಭಾಗೀರಥಮ್ಮ
೫. ಜಗಲಿ ಜೋಯಿಸರು
೬. ಹಾಲಿನ ಹನುಮಕ್ಕ
೭. ಕೊಟ್ಟಣದ ನೀಲಮ್ಮ
೮. ಆನೆಕಾಲು ರಾಮರಾಯರು
೯. ಒಂಟೆ ಸಂಜೀವ
೧೦. ಕಡಲೆಪುರಿಯ ಕೆಂಪಮ್ಮ
೧೧. ವೀಳ್ಯೆದೆಲೆಯ ಮಂಚಮ್ಮ
೧೨. ಔಷಧದ ಅಜ್ಜಮ್ಮ
೧೩. ಅಂಚೆ ಅನಂತಯ್ಯ

(ಎಂವಿಸೀ ಅವರ ಜೀವನ ನಾಟಕ ಗ್ರಂಥದಲ್ಲಿ ೧–೩ ವ್ಯಕ್ತಿಗಳು ಪ್ರಕಟವಾಗಿವೆ. ಇದು 'ಎಂ.ವಿ.ಸೀ. ಅವರ ಸಮಗ್ರ ಸಣ್ಣಕಥೆಗಳು' (ಸಂಪುಟ ೩–ಗ್ರಂಥದಲ್ಲಿ ಸೇರಿದೆ.)

೨೫. ಬೇಂದ್ರೆ
ಶ್ರೀ ದ.ರಾ. ಬೇಂದ್ರೆ
'ಚಾರಣಕವಿ ಬೇಂದ್ರೆ'
೨೬. ವಿ.ಸೀ
ವಿ. ಸೀತಾರಾಮಯ್ಯ
'ವಿ.ಸೀ. ನಾನು ತಿಳಿದಹಾಗೆ'
೨೭. ರಾಜರತ್ನಂ ಜಿ.ಪಿ
ಸ್ನೇಹ ಸಾಹಿತ್ಯ ಪರಿಚರ್ಯೆ
೧೭–೨೭ ಲೇಖನಗಳು
'ಪ್ರತಿಮಾ ಗೃಹ' ಪ್ರ. ರಾಘವ ಪ್ರಕಾಶನ, ಬೆಂಗಳೂರು
೧೯೯೦. ೧೪೦ ಪುಟಗಳು
೨೮. ವಿಮರ್ಶಕ ನರಸಿಂಹಸ್ವಾಮಿ
೨೯. ಜಿ. ನಾರಾಯಣ ೧, ೨
೩೦. ಸ್ನೇಹದ ನೆನಪು (ವಿಮರ್ಶಕ ಸಿ.ನರಸಿಂಹಮೂರ್ತಿ)
೩೧. ಚೌಂಡರಸ
೩೨. ತಿಮ್ಮ
೩೩. ಉದಯಾದಿತ್ಯ
೩೪. ಜ್ಯೋತಿರ್ಲಿಂಗಾನುಭವಿ ಶ್ರೀ ಜ.ಚ.ನಿ.
೩೫. ತುಂಬಲೂರಾಚಾರ್ಯ
೩೬. ಪಂಪ ೧–೨
೩೭. ಕರ್ಣನ ಒಂದು ಚಿತ್ರ
೩೮. ಪುರಂದರದಾಸರು
೩೯. ಪೂಜ್ಯ ಕೃಷ್ಣಶಾಸ್ತ್ರಿಗಳಿಂದ ಕಲಿತಪಾಠ
೪೦. ಕುಮಾರವ್ಯಾಸ
೪೧. ಮಾ.ನಾ. ಚೌಡಪ್ಪ
೪೨. ಮಾಸ್ತಿ
೪೩. ದೇಜಗೌ
೪೪. ಹರಿಹರ
(೨೮ ರಿಂದ ೪೪ ಲೇಖನಗಳು ಮುನ್ನುಡಿ ಭಾಷಣ ಲೇಖನಗಳು ಸಂಪುಟ ೭ರಲ್ಲಿ ಪ್ರಕಟವಾಗಿವೆ)

## ಅನುಬಂಧ – ೨

## ಎಂ.ವಿ.ಸೀ. ಅವರ ಜೀವನಪಥ

೧೯೧೦ : ಜನನ, ಮೈಸೂರು ಸೆಪ್ಟೆಂಬರ್ ೯ (ಸಾಧಾರಣ ಸಂವತ್ಸರ ಭಾದ್ರಪದ ಶುದ್ಧ ಷಷ್ಠಿ)

೧೯೧೬–೨೬ : ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಿಕ್ಷಣ: (ಸರ್ಕಾರಿ ಪ್ರಾಥಮಿಕ ಹಾಗೂ ಬನುಮಯ್ಯನವರ ವಿದ್ಯಾಶಾಲಾ, ಮೈಸೂರು.)

೧೯೨೦ : ಸಂಗೀತಾಭ್ಯಾಸ (ಮೃದಂಗ) ಪ್ರಾರಂಭ. ಮುಂದೆ ಎಲ್.ರಾಜಾರಾಯರೊಂದಿಗೆ ಅಭ್ಯಾಸ.

೧೯೨೧ : ಚಿತ್ರಕಲಾಭ್ಯಾಸ ಪ್ರಾರಂಭ.

೧೯೨೨ : ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ Pen & Ink draw in ರೇಖಾಚಿತ್ರಗಳಿಗೆ ಪ್ರಶಸ್ತಿ ಪತ್ರ (Certificate of merit)

೧೯೨೩ : ಮದರಾಸಿನ ಕಾಂಗ್ರೆಸ್ ವಸ್ತುಪ್ರದರ್ಶನದಲ್ಲಿ ಅದೇ ಚಿತ್ರಗಳಿಗೆ ಪ್ರಶಸ್ತಿ ಪತ್ರ.

೧೯೨೮ : ವಿವಾಹ, ಧರ್ಮಪತ್ನಿ ಸೌ॥ಸಾವಿತ್ರಮ್ಮ ಅವರೊಂದಿಗೆ.

೧೯೩೦ : ಮೊದಲ ಕವನ 'ಬೀದಿಯೊಳಗಲೆಯುತಿಹಳಾರಿವಳು ಚೆಲುವೆ' ಕವನವನ್ನು ತೀ.ನಂ.ಶ್ರೀ ಅವರಿಂದ ತಿದ್ದಿಸಿದ್ದು. ಸ್ವಯಂ ಚಿತ್ರ ಬರೆದುಕೊಂಡದ್ದು.

೧೯೩೧ : ಬಿ.ಎ. ಪದವಿ, (ಕನ್ನಡ, ಇಂಗ್ಲಿಷ್ ಚರಿತ್ರೆ)

೧೯೩೨ : ಕೆ.ವೆಂಕಟಪ್ಪನವರ ಶಿಷ್ಯತ್ವದಲ್ಲಿ ಚಿತ್ರಕಲಾಭ್ಯಾಸ.

೧೯೩೩ : ಎಂ.ಎ. ಪದವಿ. ಶ್ರೀಪದಕ (ಕನ್ನಡ): ಆ ಚಿತ್ರಗಳು ಕವನಕ್ಕೆ. ಚಿತ್ರಕಲೆ ಕಲಿಯಲು ಶಾಂತಿನಿಕೇತನ್‌ಗೆ ಪ್ರಯಾಣ, ಟಿ.ಎಸ್.ವೆಂಕಟಣ್ಣಯ್ಯನವರಿಂದ ಬೀಳ್ಕೊಡುಗೆ.

೧೫–೧೧–೧೯೩೪ : ಮಗಳು ಶಾರದಳ ಜನನ

೧೯೩೬ : ಮೊದಲ ಪ್ರಕಟನೆಗಳು: (೧) ಶಿಲಾಮುಖ

**ಗುಂಪು ೯ ಕಥೆ ಕವಿತೆ ಅನುವಾದಗಳು**

೧. ಶಿಲಾಮುಖ (ಹಾರ್ಥಾರ್ನಿನ ಮೂರು ಕಥೆಗಳ ರೂಪಾಂತರಗಳು)
೨. ಯೌವನ ಸುಧೆ (ಹಾರ್ಥಾರ್ನಿನ ನಾಲ್ಕು ಕಥೆಗಳ ರೂಪಾಂತರ)
೩. ಗುಂಡಿನೇಟು ಮತ್ತು ಇತರ ಕಥೆಗಳು (ಪುಷ್ಕಿನ್ನನ ೫ ಕಥೆಗಳ ಅನುವಾದ)
೪. ರತಿದೇವಿ ಮತ್ತು ಇತರಕಥೆಗಳು ೯ಅನುವಾದ ಮತ್ತು .....
೫. ಬಿಸಿಲುಬೆಳದಿಂಗಳು (ಅನುವಾದಿತ ಮತ್ತು ಸ್ವತಂತ್ರ ಕಥೆಗಳು)
೬. ನಿಲ್ದಾಣಗಳ ನಡುವೆ ೨೫ ಕಥೆಗಳು)
೭. ಪುರಾತನನಾವಿಕ (ಕೋಲರಿಜ್ ಕವಿಯ ಏನ್ಷಿಯಂಟ್ ಮಾರ್‍ಯಿನರ್ ಕವಿತೆಯ ಅನುವಾದ)

ಮಕ್ಕಳ ಸಾಹಿತ್ಯದ ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೬೫ : ಅಣ್ಣಾಮಲೈ ಹಾಗೂ ಮೈಸೂರು ವಿಶ್ವವಿದ್ಯಾನಿಲಯಗಳ ಆಶ್ರಯದಲ್ಲಿ ನಡೆದ ಭಾಷಾವಿಜ್ಞಾನ ಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೬೭ : ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಅಂಗವಾಗಿ ನಡೆದ ಲೇಖಕರ ಸಮ್ಮೇಳನದಲ್ಲಿ ಭಾಗವಹಿಸಿದ್ದು.

೧೯೬೭ : ನಿವೃತ್ತಿ, ಮಾರ್ಚ್ ೨೪.
ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ನಿವೃತ್ತರಾದ ಸಮಯದಲ್ಲಿ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ಪರವಾಗಿ "ರಾಘವ ಸನ್ಮಾನ ಸಮಿತಿ"ಯಿಂದ ಸನ್ಮಾನ (ಅಧ್ಯಕ್ಷತೆ ಡಾ॥ಮಾಸ್ತಿ ವೆಂಕಟೇಶ ಅಯ್ಯಂಗಾರ್)

೧೯೬೭ : ಶ್ರೀ ನಿಡುಮಾಮಿಡಿ ಶ್ರೀಗಳವರಾದ ಡಾ:ಜ.ಚ.ನಿ. ಅವರಿಂದ ಸ್ವರ್ಣ ಪದಕ ಸಮೇತ 'ವಿಚಾರ ರತ್ನಾಕರ' ಎಂಬ ಪ್ರಶಸ್ತಿ.

೧೯೬೮–೭೩ : ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಯು.ಜಿ.ಸಿ. ಪ್ರಾಧ್ಯಾಪಕ (೧೯೭೩–೭೪ ಗೌರವ ಪ್ರಾಧ್ಯಾಪಕ)

೧೯೬೮ : 'ಕವಿರಾಜ ಮಾರ್ಗ' ಪ್ರಕಟಣೆ

೧೯೬೯ : ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ವಿಚಾರ ಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೭೦ : ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಆಶ್ರಯದಲ್ಲಿ ಮೂರು ವಿಶೇಷ ಉಪನ್ಯಾಸಗಳು (ವಿಷಯ: "ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ")

೧೯೭೩ : ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.
ಮಿಥಿಕ್ ಸೊಸೈಟಿ ಆಶ್ರಯದಲ್ಲಿ ರಾಷ್ಟ್ರಕೂಟ ವಂಶದ ಮತ್ತು ಕಲ್ಯಾಣ ಚಾಲುಕ್ಯರ ವಿಷಯವಾಗಿ ನಡೆದ ವಿಚಾರ ಗೋಷ್ಠಿಗಳಲ್ಲಿ ಭಾಗವಹಿಸಿದ್ದು.
ಧಾರವಾಡದಲ್ಲಿ ನಡೆದ ದ್ರಾವಿಡ ಭಾಷಾ ವಿಜ್ಞಾನಿಗಳ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ.
ಬೆಂಗಳೂರಿನಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಡೆದ ಭಾಷಾ ವಿಜ್ಞಾನಿಗಳ ಸಮ್ಮೇಳನದಲ್ಲಿ ಭಾಗವಹಿಸಿದ್ದು.

| | | |
|---|---|---|
| | | (೨) ಯೌವನ ಸುಧೆ) ಮೊದಲನೇ ಮಗ ವೆಂಕಟೇಶನ ಜನನ (ಮರಣ ೧೯೪೫) |
| ೧೯೩೪–೩೯ | : | ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಾರ್ಯದರ್ಶಿ |
| ೨೬–೧೧–೧೯೩೯ | : | ೨ನೇ ಮಗ ಭಾಸ್ಕರನ ಜನನ. |
| ೧೯೩೯–೪೬ | : | ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ–ಇಂಗ್ಲಿಷ್ ಕೋಶದ ಸಹ–ಸಂಪಾದಕ |
| ೨೪–೬–೧೯೪೩ | : | ೩ನೇ ಮಗ ರಾಮಪ್ರಸಾದನ ಜನನ |
| ೨೫–೯–೧೯೪೫ | : | ೪ನೇ ಮಗ ರಾಧಾಕೃಷ್ಣನ ಜನನ |
| ೧೯೪೬ | : | ಬೆಂಗಳೂರು ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ ಆರಂಭ. "ಹಕ್ಕಿಹಾಡು" ಕವನ ಸಂಕಲನಕ್ಕೆ ದೇವರಾಜ ಬಹದ್ದೂರ್ ಹಾಗೂ "ಕನ್ನಡ ಸಾಹಿತ್ಯ ಪರಿಷತ್ತಿನ" ಬಹುಮಾನ. |
| ೧೯೫೧ | : | "ರಾಘವ ಪ್ರಕಾಶನ" ಪ್ರಾರಂಭ<br>"ಮಾದನ ಮಗಳು" ಕಾದಂಬರಿಗೆ "ದೇವರಾಜ ಬಹದ್ದೂರ್" ಬಹುಮಾನ. |
| ೧೯೫೩ | : | ಬೆಂಗಳೂರು ಸರ್ಕಾರಿ ಕಾಲೇಜಿನ ಕರ್ಣಾಟಕ ಸಂಘವನ್ನು ಶ್ರೀ ಜಿ.ಪಿ.ರಾಜರತ್ನಂ ಅವರಿಂದ ವಹಿಸಿಕೊಂಡದ್ದು. |
| ೨೯–೯–೧೯೫೪ | : | ೫ನೇ ಮಗ ಶೇಷಾದ್ರಿನಾಥನ ಜನನ. |
| ೧೯೫೭ | : | "ಮುಗಿಯದ ಮಾಯೆ" ಕವನ ಸಂಕಲನಕ್ಕೆ ದೇವರಾಜ ಬಹದ್ದೂರ್ ಬಹುಮಾನ.<br>"ತೊಟ್ಟಲು ತೂಗದಕ್ಕೆ" ನಾಟಕಕ್ಕೆ ರಾಜ್ಯ ಸರ್ಕಾರ ಪ್ರಶಸ್ತಿ |
| ೧೯೫೯ | : | "ಕರ್ನಾಟಕ ಸಂಘ"ದ ಪುನರಾರಂಭ. |
| ೧೯೬೦ | : | "ಜೀವನ ನಾಟಕ" ಕಾದಂಬರಿಗೆ ರಾಜ್ಯ ಸರ್ಕಾರದ ಪ್ರಶಸ್ತಿ. |
| ೧೯೬೧ | : | ಆಕಾಶವಾಣಿಯ ರಾಷ್ಟ್ರೀಯ ಕವಿ ಸಮ್ಮೇಳನದಲ್ಲಿ ಭಾಗವಹಿಸಿದ್ದು |
| ೧೯೬೩ | : | ಕನ್ನಡ ರೀಡರ್ ಆಗಿ ನೇಮಕ. |
| ೧೯೬೪ | : | ದಕ್ಷಿಣಭಾಷಾ ಪುಸ್ತಕ ಸಂಸ್ಥೆಯ ಆಶ್ರಯದಲ್ಲಿ ನಡೆದ |

**ಕುಟುಂಬ ವಿವರಗಳು:**

ಎಂ.ವಿ.ಸೀತಾರಾಮಯ್ಯ : ಕಾವ್ಯನಾಮ "ರಾಘವ"
(ಮೈಸೂರು ವೆಂಕಟದಾಸಪ್ಪನವರ ಸೀತಾರಾಮಯ್ಯ)

ತಂದೆ : ಎಂ.ವೆಂಕಟದಾಸಪ್ಪ (ಮೈಸೂರು)

ತಾಯಿ : ಸಾವಿತ್ರಮ್ಮ (ಅರಕಲಗೂಡು ಛತ್ರದ ರಾಮಣ್ಣನವರ ಮಗಳು)

**ಒಡಹುಟ್ಟಿದವರು:**

ಅಣ್ಣಂದಿರು : ಇಬ್ಬರು (ಈಗ ಇಲ್ಲ)

ತಮ್ಮಂದಿರು : ಇಬ್ಬರು (ಈಗ ಇಲ್ಲ)

ತಂಗಿಯರು : ಇಬ್ಬರು (ಒಬ್ಬಳು ಈಗ ಇಲ್ಲ)

ಪತ್ನಿ : ಸಾವಿತ್ರಮ್ಮ (ಕೊಣನೂರು ನಂಜುಂಡಯ್ಯನವರ ಮಗಳು)

ಗಂಡುಮಕ್ಕಳು : ಐವರು

ಹೆಣ್ಣುಮಕ್ಕಳು : ಒಬ್ಬಳು

೧೯೭೫ : ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವದ ಸಂದರ್ಭದಲ್ಲಿ "ಗ್ರಂಥ ಸಂಪಾದನ ಕ್ಷೇತ್ರದಲ್ಲಿ" ಸೇವೆಗಾಗಿ ಪ್ರಶಸ್ತಿ.

೧೯೭೮ : ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಆಶ್ರಯದಲ್ಲಿ ಮೂರು ವಿಶೇಷೋಪ–ನ್ಯಾಸಗಳು (ವಿಷಯ: "ಕನ್ನಡ ಸಾಹಿತ್ಯದಲ್ಲಿ ಶಾಂತರಸ") ರಾಜ್ಯ ಸರ್ಕಾರದಿಂದ ಆಜೀವ ಗೌರವ ಮಾಸಿಕ ವೇತನ.

೧೯೭೯ : "ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ"ದ ಸ್ಥಾಪನೆ.

೧೯೮೦ : ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ: 'ಕನ್ನಡ ವ್ಯಾಕರಣಗಳು' ಪುಸ್ತಕಕ್ಕೆ.

೧೯೮೨ : ಬೆಂ.ವಿ.ವಿ, ಕನ್ನಡ ಅಧ್ಯಯನ ಕೇಂದ್ರದಲ್ಲಿ, ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷತೆ
ಗೋಕಾಕ್ ವರದಿ ಹೋರಾಟದಲ್ಲಿ ಪಾಲ್ಗೊಂಡು, ನಗರದ ಸಾಹಿತಿ ಕಲಾವಿದರ ಬಳಗದ ಚಟುವಟಿಕೆಗಳ ಸಹಾಯಕ್ಕಾಗಿ 'ಕನ್ನಡಮ್ಮನ ಕೊರಗು' ಪುಸ್ತಕವನ್ನು ಪ್ರಕಟಿಸಿ ದಾನಮಾಡಿದ್ದು.

೧೯೮೩ : ಕನ್ನಡ ಸಾಹಿತ್ಯ ಪರಿಷತ್ತಿನ ತುಮಕೂರು ಜಿಲ್ಲಾ ಸಮಿತಿಯಿಂದ ಡಾ॥ಗೋವಿಂದ ಪೈ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಸನ್ಮಾನ.
ಕೋಲಾರದ ಕನ್ನಡ ಪಕ್ಷ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಸಮಿತಿಯಿಂದ ಸನ್ಮಾನ.
ಲಯನ್ಸ್ ಕ್ಲಬ್ ಬೆಂಗಳೂರು (ಪಶ್ಚಿಮ)ರವರಿಂದ ಸನ್ಮಾನ.
ಕನ್ನಡ ಸಾಹಿತ್ಯ ಪರಿಷತ್ತಿನ ಮೈಸೂರು ಜಿಲ್ಲಾ ಸಮಿತಿ ಕೊಳ್ಳೆಗಾಳದಲ್ಲಿ ನಡೆಸಿದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಸನ್ಮಾನ.
ಮೈಕೋ ಕಾರ್ಖಾನೆ, ಬೆಂಗಳೂರು ಅವರಿಂದ ರಾಜ್ಯೋತ್ಸವ ಸಂದರ್ಭದಲ್ಲಿ ಸನ್ಮಾನ.
ಬಬ್ಬೂರು ಕಮ್ಮೆ ಸಂಘದಿಂದ ಮೈಸೂರಿನಲ್ಲಿ ಸನ್ಮಾನ.

ಮಾರ್ಚಿ ೧೨, ೧೯೯೦ರಂದು ನಿಧನ

೧೦. **ಹಂಸಪಥ:**
ರಾಘವ ಪ್ರಕಾಶನ, ೧೯೭೧

೧೧. **ಬೀಸಿ ಬಂದ ಗಾಳಿ:**
ರಾಘವ ಪ್ರಕಾಶನ, ೧೯೮೦

೧೨. **ಮೊದಲ ಹೆಜ್ಜೆ (ಪ್ರಾರಂಭದ ಕವನಗಳು):**
ರಾಘವ ಪ್ರಕಾಶನ, ೧೯೮೧.

೧೩. **ಕಾವ್ಯಾಲಾಪ:**
(೪೬ ಬಿಡಿ ಪದ್ಯಗಳ ಸಂಕಲನ; ಕಾವ್ಯ ಜಿಜ್ಞಾಸೆ; ೧೯೪೪. ಸುಮಾರು ೩೫೦ ಪದ್ಯಗಳ ವಿಸ್ತೃತ ಸಂಕಲನ–ಅಪ್ರಕಟಿತ)

೧೪. **ಸೌಂದರ್ಯ ಲಹರಿ:**
(೧೯೮೦) ಶ್ರೀ ಶಂಕರಾಚಾರ್ಯ ರಚಿತ ಸಂಸ್ಕೃತ, ಸೌಂದರ್ಯ ಲಹರಿಯ ಅನುವಾದ: ಅಪ್ರಕಟಿತ_

೧೫. **ಪುರಾತನ ನಾವಿಕ:**
(ಕೋಲರಿಜ್ ಕವಿಯ Ancient Mariner ಕವನದ ಅನುವಾದ: ಅಪ್ರಕಟಿತ)

**೨. ಮಕ್ಕಳ ಪದ್ಯಗಳು**

೧. **ಹೂವಾಡಗಿತ್ತಿ**
ಕಾವ್ಯಾಲಯ, ಮೈಸೂರು (೧೯೪೬; ತೃತೀಯ ಆವೃತ್ತಿ ೧೯೬೮)

೨. **ಹಾವಾಡಿಗ**
ಕಾವ್ಯಾಲಯ, ಮೈಸೂರು; ೧೯೫೮ (ದ್ವಿ.ಆ. ೧೯೬೮)

೩. **ಕೋಡಂಗಿ**
ಕಾವ್ಯಾಲಯ, ಮೈಸೂರು; ೧೯೭೯

**೩. ಸಣ್ಣಕಥೆ**

೧. **ಶಿಲಾಮುಖ (ಹಾರ್ಥಾನಿನ ಮೂರು ಕಥೆಗಳ ರೂಪಾಂತರ):**
ಭಾರತೀ ಸಾಹಿತ್ಯ ಮಂದಿರ, ಬೆಂಗಳೂರು, ೧೯೩೬.

೨. **ಯೌವನ ಸುಧೆ (ಹಾರ್ಥಾನಿನ ನಾಲ್ಕು ಕಥೆಗಳ ರೂಪಾಂತರ):**
ಸ್ವಂತ ಪ್ರಕಟಣೆ, ೧೯೪೬.

## ಅನುಬಂಧ – ೩

# ಎಂ.ವಿ.ಸೀ. ಅವರ ಸಮಗ್ರ ಕೃತಿಸೂಚಿ

### ೧. ಕಾವ್ಯ

೧. **ಹಕ್ಕಿ ಹಾಡು:**
ಸತ್ಯಶೋಧನ ಪ್ರಕಟನ ಮಂದಿರ, ೧೯೪೪ (ದೇವರಾಜ ಬಹದ್ದೂರ್ ಸಾಹಿತ್ಯ ನಿಧಿಯ ಬಹುಮಾನ ೧೯೪೫, ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ, ೧೯೪೫)

೨. **ಆ ಚಿತ್ರಗಳು ಮತ್ತು ಇತರ ಕಥನ ಕವನಗಳು:**
ಸತ್ಯಶೋಧನ ಪ್ರಕಟನ ಮಂದಿರ, ೧೯೪೬ (ಆ ಚಿತ್ರಗಳು: ಬಿ.ಎಂ.ಶ್ರೀ ರಜತೋತ್ಸವ ಸ್ವರ್ಣಪದಕ ಪಡೆದ ಕವಿತೆ, ೧೯೩೩)

೩. **ರಾಗ (ಪ್ರಣಯ ಗೀತೆಗಳು)**
ಸತ್ಯಶೋಧನ ಪ್ರಕಟನ ಮಂದಿರ, ೧೯೪೮

೪. **ಅಶೋಕ ಚಕ್ರ (ದೇಶಭಕ್ತಿ ಕವನಗಳು):**
ಸತ್ಯಶೋಧನ ಪ್ರಕಟನ ಮಂದಿರ, ೧೯೪೭

೫. **ವಿಶ್ವಜ್ಯೋತಿ ಬಾಪು:**
ಸತ್ಯಶೋಧನ ಪ್ರಕಟನ ಮಂದಿರ, ೧೯೪೮

೬. **ರಾಷ್ಟ್ರರಥ:**
ಸತ್ಯಶೋಧನ ಪ್ರಕಟನ ಮಂದಿರ, ೧೯೫೧

೭. **ರಾಷ್ಟ್ರದಿನೋತ್ಸವ ಗೀತೆ:**
ರಾಘವ ಪ್ರಕಾಶನ, ೧೯೫೪

೮. **ಮುಗಿಯದ ಮಾಯೆ:**
ರಾಘವ ಪ್ರಕಾಶನ, ೧೯೫೮ (ದೇವರಾಜ ಬಹದ್ದೂರ್ ಸಾಹಿತ್ಯ ನಿಧಿಯ ಬಹುಮಾನ)

೯. **ಗೀತ ಭಾರತಿ: (ಆಯ್ದ ದೇಶಭಕ್ತಿ ಗೀತೆಗಳ ಸಂಕಲನ)**
ರಾಘವ ಪ್ರಕಾಶನ, ೧೯೬೯

೫. **ನಂಜಿನ ಸವಿ:**
ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೫೨

೬. **ಸ್ನೇಹದ ಕಾಣಿಕೆ:**
ರಾಘವ ಪ್ರಕಾಶನ; ೧೯೫೭

೭. **ತಾಯ ಬಯಕೆ:**
ಸುಧಾ ಪ್ರಕಾಶನ,; ೧೯೫೪
(ದ್ವಿ.ಮು. ಶಾರದಾ ಪ್ರಕಟನಾಲಯ, ಬೆಂಗಳೂರು, ೧೯೫೯)

೮. **ಕುಂಕುಮ ಭಾಗ್ಯ:**
ಉಷಾ ಸಾಹಿತ್ಯಮಾಲೆ, ೧೯೫೫

೯. **ಜೀವನದ ಜೊತೆಗಾತಿ:**
ಶಾರದಾ ಪ್ರಕಟನಾಲಯ, ೧೯೫೯

೧೦. **ಜೂಡಿ ಲಕ್ಷ್ಮಿ: (ಇಂಗ್ಲಿಷಿನಿಂದ ಅನುವಾದ)**
ನ್ಯಾಷನಲ್ ಬುಕ್ ಟ್ರಸ್ಟ್, ೧೯೬೫.

೧೧. ಏಳು ಇಪ್ಪಾರಿನ ಮನೆ: **(ಹಾಥಾರ್ನಿನ ಕಾದಂಬರಿ ಅನುವಾದ)**
ಕಾವ್ಯಾಲಯ, ೧೯೬೬.
(ಭಾಗ್ಯಲಕ್ಷ್ಮಿ ಮತ್ತು ಸೌಭಾಗ್ಯವತಿ ಕಾದಂಬರಿಗಳು ಒಟ್ಟಾಗಿ ಗಂಡನನ್ನು ಗೆದ್ದವಳು ಹೆಸರಿನಲ್ಲಿ ೧೯೭೪ರಲ್ಲಿ ಪ್ರಕಟವಾಗಿದೆ)

**<u>೫. ಸಾಹಿತ್ಯ ಸಮೀಕ್ಷೆ</u>**

೧. **ಹೊಸಗಕನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು:**
ರಾಘವ ಪ್ರಕಾಶನ, ೧೯೫೮ (೧೯ ಲೇಖನಗಳು)

೨. **ಕನ್ನಡ ಜೀವನ ಚರಿತ್ರೆ:**
ಕನ್ನಡ ಸಾಹಿತ್ಯ ಪರಿಷತ್ತು, ೧೯೭೩.

೩. **ಶಾಸ್ತ್ರ ಸಾಹಿತ್ಯ:**
ಬೆಂಗಳೂರು ವಿಶ್ವವಿದ್ಯಾಲಯ, ೧೯೭೫.

**<u>೬. ನಾಟಕ</u>**

೧. **ಹೂವಿನ ಆಸೆ:**
ಭಾರತೀ ಸಾಹಿತ್ಯ ಮಂದಿರ, ೧೯೩೬ (ದ್ವಿ.ಮು.೧೯೪೩)

೩. **ಮಾರ್ಗದರ್ಶಕ (೧೩ ಸಣ್ಣ ಕಥೆಗಳು)**
ಮನೋಹರ ಗ್ರಂಥಮಾಲೆ, ಧಾರವಾಡ, ೧೯೪೦ (ದ್ವಿ. ಮು.೧೯೪೮)

೪. **ರತಿದೇವಿ ಮತ್ತು ಇತರ ಕಥೆಗಳು (೭ ಸಣ್ಣ ಕಥೆಗಳು):**
ಸತ್ಯಶೋಧನ ಪ್ರಕಟನ ಮಂದಿರ, ೧೯೪೫.

೫. **ಕರುಣಾಲಹರಿ (೧೧ ಸಣ್ಣ ಕಥೆಗಳು):**
ಶಾರದಾ ಮಂದಿರ, ಮೈಸೂರು, ೧೯೫೫.

೬. **ಬಿಸಿಲು–ಬೆಳುದಿಂಗಳು (೧೧ ಸಣ್ಣ ಕಥೆಗಳು):**
ಪ್ರಭಾ ಪ್ರಕಟನಾಲಯ, ೧೯೫೩, (ದ್ವಿಮು. ರಾಘವ ಪ್ರಕಾಶನ ೧೯೫೪)

೭. **ಜೀವನ ನಾಟಕ (೧೧ ವ್ಯಕ್ತಿ ಕಥೆಗಳು):**
ರಾಘವ ಪ್ರಕಾಶನ, ೧೯೬೧ (ರಾಜ್ಯ ಸರಕಾರದ ಪ್ರಶಸ್ತಿ)

೮. **ಗುಂಡಿನೇಟು ಮತ್ತು ಇತರ ಕಥೆಗಳು:**
ಕರ್ಣಾಟಕ ಸಂಘ, ಗೌ॥ ಕಾಲೇಜು ಬೆಂಗಳೂರು, ೧೯೬೬
(ಪುಷ್ಕಿನ್ನನ ೫ ಕಥೆಗಳ ಅನುವಾದ)

೯. **ನಿಲ್ದಾಣಗಳ ನಡುವೆ (೨೫ ಸಣ್ಣ ಕಥೆಗಳು):**
ರಾಘವ ಪ್ರಕಾಶನ, ೧೯೭೪

೧೦. **ವಿರಹಿಗಳ ಶೃಂಗಾರ**
(ಕನ್ನಡ ಕಾವ್ಯಗಳಿಂದ ಆಯ್ದ ಪ್ರಣಯ ಪ್ರಸಂಗಗಳು–ಅಪ್ರಕಟಿತ)

**<u>೪. ಕಾದಂಬರಿ</u>**

೧. **ಭಾಗ್ಯಲಕ್ಷ್ಮಿ:**
ಎಸ್.ಎಸ್.ಎನ್. ಬುಕ್ ಡಿಪೋ, ಬೆಂಗಳೂರು; ೧೯೪೨
(ದ್ವಿ.ಮು. ೧೯೪೪)

೨. **ರಾಬಿನ್ ಸನ್ ಕ್ರೂಸೋ (೧):**
ಎಸ್.ಎಸ್.ಎನ್. ಬುಕ್ ಡಿಪೋ, ಬೆಂಗಳೂರು, ೧೯೪೮

೩. **ಮಾದನ ಮಗಳು:**
ಮನೋಹರ ಗ್ರಂಥಮಾಲೆ, ೧೯೫೦
(ದೇವರಾಜ ಬಹದ್ದೂರ್ ಸಾಹಿತ್ಯ ನಿಧಿ ಬಹುಮಾನ)

೪. **ಸೌಭಾಗ್ಯವತಿ:**
ಎಸ್.ಎಸ್.ಎನ್. ಬುಕ್ ಡಿಪೋ, ೧೯೫೧

<u>೮. ವ್ಯಕ್ತಿ ಚಿತ್ರ</u>

೧. **ಗುರುಹಿರಿಯರು ಮತ್ತು ಗೆಳೆಯರು (ಅಪ್ರಕಟಿತ)**

<u>೯. ಕಾವ್ಯಮೀಮಾಂಸೆ</u>

೧. **ಭಾರತೀಯ ಕಾವ್ಯಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ:**
ಮೈಸೂರು ವಿಶ್ವವಿದ್ಯಾನಿಲಯ, ೧೯೭೦.

೨. **ಕನ್ನಡ ಸಾಹಿತ್ಯದಲ್ಲಿ ಶಾಂತರಸ:**
ಕರ್ನಾಟಕ ವಿಶ್ವವಿದ್ಯಾಲಯ, ೧೯೭೦.

<u>೧೦. ಗ್ರಂಥ ಸಂಪಾದನೆ</u>

೧. **ಕವಿರಾಜಮಾರ್ಗ:**
ಕರ್ನಾಟಕ ಸಂಘ, ಗೌ: ಕಾಲೇಜು, ಬೆಂಗಳೂರು ೧೯೬೮, ಇದೇ ಗ್ರಂಥದ ವಿದ್ಯಾರ್ಥಿಗಳ ಆವೃತ್ತಿ ಡಿ.ವಿ.ಕೆ. ಮೂರ್ತಿ ಮೈಸೂರು, ೧೯೭೫.

೨. **ಉದಯಾದಿತ್ಯಾಲಂಕಾರ:**
ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೬೯

೩. **ಅರ್ಚನ:**
ಬೆಂಗಳೂರು ವಿಶ್ವವಿದ್ಯಾಲಯ, ೧೯೭೧.

೪. **ಕೀರ್ತನ ಕುಸುಮಾಂಜಲಿ:**
ಬಿ.ಎಂ.ಶ್ರಿ ಪ್ರತಿಷ್ಠಾನ, ೧೯೮೦

೫. **ಕವಿ ಕವಿವೆಂಕಣ್ಣನ ಕೃತಿಗಳು:**
ಕೆಳದಿ ಗುಂಡಾಜೋಯಿಸರೊಂದಿಗೆ; ಕೆಳದಿ ಮ್ಯೂಸಿಯಂ, ೧೯೮೦.

೬. **ಸೂತ ಭಾರತ:**
ಶ್ರೀ ಕೃಷ್ಣಭಟ್, ಎಂ.ಜಿ.ಹೆಗಡೆ ಅವರೊಂದಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನ, ೧೯೮೨

೭. **ಸರ್ವಜ್ಞ ವಚನಗಳು:**
ಕೆ.ಆರ್.ಗಣೇಶ್ ಮತ್ತು ವಿ.ವೆಂಕಟರಾವ್ ಅವರೊಂದಿಗೆ; ಬಿ.ಎಂ.ಶ್ರೀ. ಪ್ರತಿಷ್ಠಾನ, ೧೯೮೨.

೮. **ಕೃಷ್ಣದೇವರಾಯನ ದಿನಚರಿ:**
ಡಾ॥ವಿ.ಎಸ್.ಆಚಾರ್ ಅವರೊಂದಿಗೆ; ಬಿ.ಎಂ.ಶ್ರೀ. ಪ್ರತಿಷ್ಠಾನ, ೧೯೮೩

೨. **ತೆರೆಮರೆಯ ಚಿತ್ರಗಳು:**
ಕಾವ್ಯಾಲಯ, ೧೯೪೧.

೩. **ಸ್ವಯಂವರ:**
ರಾಘವ ಪ್ರಕಾಶನ, ೧೯೫೩.

೪. **ಕವಿಯ ಹೆಂಡತಿ:**
ರಾಘವ ಪ್ರಕಾಶನ, ೧೯೫೫

೫. **ತೊಟ್ಟಿಲು ತೂಗದ ಕೈ:**
ಶಾರದಾ ಪ್ರಕಟನಾಲಯ, ೧೯೫೯
(ಮೈಸೂರು ಸರ್ಕಾರದ ಬಹುಮಾನ)

೬. **ತಿರುಕಿಯ ಕನಸು:**
ಪ್ರ : ಎಂ.ವಿ.ಸೀ. ಶತಮಾನೋತ್ಸವ ಸಮಿತಿ ಬೆಂ.

೭. **ಕುಮಾರ ಗೌತಮ:**
ಹಂಸಧ್ವನಿ ಪ್ರಕಾಶನ, ೧೯೭೯ (ಮಕ್ಕಳ ನಾಟಕ)

೮. **ಕೈಕೋಲು:**
ಕಾವ್ಯಾಲಯ, ೧೯೭೯ (ಮಕ್ಕಳ ನಾಟಕ)

೯. **ಕರುಣೆಯ ಕುಡಿ:**
ರಾಘವ ಪ್ರಕಾಶನ, ೧೯೮೦ (ಮಕ್ಕಳ ನಾಟಕ)

## ೭. ಪ್ರಬಂಧಗಳು

೧. **ಹಿಡಿ ಹೂವು:**
ರಾಘವ ಪ್ರಕಾಶನ, ೧೯೪೬ ('ಕನ್ನಡಮ್ಮನ ಕೊರಗು' ಶೀರ್ಷಿಕೆಯಲ್ಲಿ ಪುನರ್ಮುದ್ರಿತ, ೧೯೮೩)

೨. **ಮುಗಿಲುಗಳು:**
ಎಸ್.ಎಸ್.ಎನ್. ಬುಕ್ ಡಿಪೋ, ೧೯೫೦.
(ದ್ವಿ.ಮು. ಧೂಮಲೀಲೆ ಮತ್ತು ಮುಗಿಲುಗಳು: ರಾಘವ ಪ್ರಕಾಶನ, ೧೯೫೯)

೩. **ಬಾಳಿನ ಬುತ್ತಿ:**
ಸಾಹಿತ್ಯ ಮಂದಿರ, ಬೆಂಗಳೂರು, ೧೯೫೭.

೪. **ವೈಣಿಕ ವಿದ್ವಾನ್** ಎಲ್.ರಾಜಾರಾವ್, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೩.

೫. **ವಿವೇಕಾನಂದ:**
(ವೆಲ್ಲೂರಿನ ಶ್ರೀಮತಿ ಕೃಷ್ಣಕುಮಾರಿ ಅವರ ತೆಲುಗು ಕೃತಿ ಅನುವಾದ) ವಿವೇಕ ಪಬ್ಲಿಷರ್ಸ್, ಬೆಂಗಳೂರು, ೧೯೫೧.)

೬. **ಎ.ಆರ್.ರಾಜರಾಜವರ್ಮ:**
(ಕೆ.ಎಂ.ಜಾರ್ಜ್ ಅವರ ಇಂಗ್ಲಿಷ್ ಕೃತಿಯ ಅನುವಾದ, ಸಾಹಿತ್ಯ ಅಕಾಡೆಮಿ)

<u>೧೩. ಸಂಕಲನಗಳು</u>

೧. **ರಾಘವ ಕವನಕೋಶ :**
(ಹಂಸ ಪಥ, ಮುಗಿಯದ ಮಾಯೆ ಮತ್ತು ಗೀತ ಭಾರತಿ ಸಂಕಲನಗಳ ಕೂಡು ಸಂಪುಟ)

೨. **ಗೀತ ಭಾರತಿ :**
(ಆಯ್ದ ದೇಶಭಕ್ತಿ ಗೀತಗಳ ಸಂಕಲನ) ರಾಘವ ಪ್ರಕಾಶನ ೧೯೬೯

೩. **ಗಂಡನನ್ನು ಗೆದ್ದವರು :**
(ಭಾಗ್ಯಲಕ್ಷ್ಮಿ ಮತ್ತು ಸೌಭಾಗ್ಯವತಿ ಕಾದಂಬರಿಗಳ ಕೂಡು ಸಂಪುಟ) ಗೀತ ಬುಕ್ ಹೌಸ್ ೧೯೭೪

೪. **ರಸಿಕತೆ :**
(ಲಲಿತ ಪ್ರಬಂಧ : ಮೂರು ಹೊಸ ಪ್ರಬಂಧಗಳ ಜೊತೆಗೆ ಹಳೆಯವು ಕೆಲವನ್ನು ಸೇರಿಸಿ ಪ್ರಕಟಿಸಿದ ಸಂಕಲನ) ಹಂಸಧ್ವನಿ ಪ್ರಕಾಶನ

೫. **ದಾದಿರನ್ನೆ (ಮಕ್ಕಳಿಗಾಗಿ ಕಥನ ಕವನ) :**
ಆ ಚಿತ್ರಗಳು ಮತ್ತು ಇತರ ಕವನ ಸಂಕಲನಗಳಿಂದ ಆಯ್ದವು ಹಂಸಧ್ವನಿ ಪ್ರಕಾಶನ ೧೯೭೯.

೬. **ಕಾವ್ಯ ಪ್ರದೀಪಿಕೆ :**
(ಲೇಖಕರು : ಎಂವಿಸೀ ; ಜಿ.ವಿ.; ಕ.ವೆಂ ಕಾವ್ಯ ಸಮೀಕ್ಷೆ) ಕರ್ನಾಟಕ ಸಂಘ ಗೌ॥ ಕಾಲೇಜು, ಬೆಂಗಳೂರು

೭. **ಬಿರಿಮೊಗ್ಗು :**
(ವಿದ್ಯಾರ್ಥಿಗಳ ಬರಹ) ಸಂಪಾದಿತ ; ಕ.ಸಂಘ ಗೌ ॥ ಕಾಲೇಜು.

೯. **ಧ್ರುವ ಚರಿತ್ರೆ:**
ಡಾ॥ ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರೊಂದಿಗೆ ಬಿ.ಎಂ.ಶ್ರೀ ಪ್ರತಿಷ್ಠಾನ, ೧೯೮೩.

೧೦. **ಶ್ರೀ ಕೃಷ್ಣ ಬಾಲಲೀಲೆ:**
ಬಿ.ಎಂ.ಶ್ರೀ ಪ್ರತಿಷ್ಠಾನ

೧೧. **ವೀರ ಅಭಿಮನ್ಯು:**
ಕ.ಸಂಘ, ಗೌ॥ಕಾಲೇಜು, ೧೯೬೦,
(ಶ್ರೀಮತಿ ಎಂ.ಎಲ್.ಲಲಿತಮ್ಮನವರ ಜೊತೆ)

೧೨. **ಮಣಿಹ:**
ಸಿದ್ಧಯ್ಯ ಪುರಾಣಿಕ, ಶೇಷಶಾಸ್ತ್ರಿಗಳ ಜೊತೆಯಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನ ೧೯೮೨.

೧೩. **ಬೇಂದ್ರೆ ಸ್ಮೃತಿ:**
ಗೋವಿಂದ ಅ.ಜಾಲಿಹಾಳರ ಜೊತೆಯಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನ ೧೯೮೨.

೧೪. **ಹಸ್ತಪ್ರತಿ ಶಾಸ್ತ್ರ:**
ಡಾ॥ ಚಿದಾನಂದಮೂರ್ತಿಯವರ ಜೊತೆಯಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನ, ೧೯೮೩.

## <u>೧೧. ವ್ಯಾಕರಣ</u>

೧. **ಪ್ರಾಚೀನ ಕನ್ನಡ ವ್ಯಾಕರಣಗಳು;**
ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿ, ಮೈಸೂರು, ೧೯೮೦.

## <u>೧೨. ಮಕ್ಕಳ ಸಾಹಿತ್ಯ (ಜೀವನ ಚರಿತ್ರೆ)</u>

೧. **ಯುಧಿಷ್ಠಿರ:**
ರಾಷ್ಟ್ರೋತ್ಥಾನ ಪರಿಷತ್ತು, ಬೆಂಗಳೂರು. ೧೯೭೩
(ಕನ್ನಡ ಮತ್ತು ಇಂಗ್ಲಿಷ್‌ಗಳಲ್ಲಿ)

೨. **ಕವಿರನ್ನ:**
ರಾಷ್ಟ್ರೋತ್ಥಾನ ಪರಿಷತ್ತು, ೧೯೭೬.

೩. **ಕನ್ನಡದ ಕತೆ:**
ಕನ್ನಡ ಸಾಹಿತ್ಯ ಪರಿಷತ್ತು, ೧೯೭೯.

## ಅನುಬಂಧ – ೪

## ಎಂ.ವಿ.ಸೀ. ಅವರ ಸಮಗ್ರ ಲೇಖನಸೂಚಿ

### ೧೫. ಗ್ರಂಥ ವಿಮರ್ಶೆ

೧. **ಕುಮಾರ ಸಂಭವ :**
ಕಾವ್ಯ ಪ್ರದೀಪಿಕೆ ೧೯೫೮

೨. **ಕುವೆಂಪು ಅವರ ಪ್ರೇಮದರ್ಶನ :**
ಉಪಾಯನ ಕೃತಿ ಕರಂಡ
ಶ್ರೀ ಕುವೆಂಪು ಸಂಭಾವನಾಗ್ರಂಥ, ಚಿಕ್ಕಮಗಳೂರು ೧೯೬೯

೩. **ಡಿ.ವಿ.ಜಿ. ಅವರ ನಿವೇದನ :**
ಕುಸುಮಾರ್ಪಣೆ, ಬೆಂಗಳೂರು

೪. **ತಿಮ್ಮಪ್ಪದಾಸರ ಕೃಷ್ಣದರ್ಶನ :**
ಜೀವನ ೨೯.೯.೧೯೬೯

೫. **ಗೊರೂರು ಅವರ 'ಹಳ್ಳಿಯ ಚಿತ್ರಗಳು :**
ಗೊರೂರು ಗೌರವಗ್ರಂಥ, ಮೈಸೂರು ೧೯೭೩

೬. **ವಿನಾಯಕರ 'ಚೆಲುವು ನಿಲುವು' (ಪ್ರಬಂಧಗಳು) :**
ವಿನಾಯಕ ವಾಙ್ಮಯ, ಮೈಸೂರು ೧೯೭೩

೭.. **ಶ್ರೀನಿವಾಸರ ಗೇಯ ಕಾವ್ಯ :**
'ಶ್ರೀನಿವಾಸ', ಬೆಂಗಳೂರು

### ೧೬. ವಿಚಾರ ಪ್ರಬಂಧ

೧. **ಇಂದಿನ ಜೀವನ ದರ್ಶನ :**
ನಂದಿನಿ (ದಸರಾ ವಿಶೇಷಾಂಕ)

೨. **ಜ್ಞಾನದೀಪ :**
ವಿಶ್ವಕರ್ನಾಟಕ (ದೀಪಾವಳಿ ಸಂಚಿಕೆ) ೧೯೪೯

೮. **ಸೊಡರು :**
(ವಿದ್ಯಾರ್ಥಿಗಳ ಕವನ ಸಂಕಲನ) ಸಂಪಾದಿತ ; ಕ. ಸಂಘ ಗೌ : ಕಾಲೇಜು

೯. **ಹೊಳಪು–ಝುಳಪು :**
(ಬೇರೆ ಬೇರೆ ಕವಿಗಳ ಯುದ್ಧಗೀತೆಗಳ ಸಂಕಲನ ಸಂಪಾದಿತ : ಗೌ : ಕಾಲೇಜು ಕನ್ನಡ ಸಂಘ)

## ೧೪. ವಿಶೇಷ ಸಂಚಿಕೆಗಳ ಸಂಪಾದನೆ

೧. **ವಿಕಾಸ :**
(ಮೂರು ಸಂಚಿಕೆಗಳು : ವಿದ್ಯಾರ್ಥಿಗಳ ಪ್ರಬಂಧಗಳು)
ಸಂಪಾದಿತ : ಕ. ಸಂಘ, ಗೌ : ಕಾಲೇಜು

೨. **ಚಿನ್ನದ ಬೆಳಸು :**
ಸಂಪಾದಿತ ಕನ್ನಡ ಸಾಹಿತ್ಯ ಪರಿಷತ್ತಿನ ಸ್ವರ್ಣ ಮಹೋತ್ಸವದ ಪ್ರಕಟನೆ, ಕ.ಸಾ.ಪ. ೧೯೭೦

೩. **ಕೌಸ್ತುಭ :**
ಸಂಪಾದಿತ : ಕನ್ನಡ ಮತ್ತು ಇಂಗ್ಲಿಷಿನಲ್ಲಿ : ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಪ್ರಕಟನೆ, ಕ.ಸಾ.ಪ. ೧೯೭೭

೯. **ಸಾಹಿತ್ಯ ಮತ್ತು ಚಿತ್ರಕಲೆ :**
ಪ್ರಬೋಧಕ ೧.೮+೯, ಫೆಬ್ರವರಿ–ಮಾರ್ಚ್ ೧೯೩೧

೧೦. **ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ :**
ಬಿಡುಗಡೆ ಬೆಳ್ಳಿ, ಮೈಸೂರು ೧೯೭೪

೧೧. **ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದ ಒಲವು – ನಿಲವುಗಳು – ವಸ್ತು, ಉದ್ದೇಶ ಮತ್ತು ಪಾತ್ರ :**
ಸುವರ್ಣ ಸಂಚಯ, ಮೈಸೂರು ೧೯೬೭

೧೨. **ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದಲ್ಲಿ ರಾಷ್ಟ್ರೀಯ ಪ್ರಜ್ಞೆ,**
೧೯೭೩

## ೧೮. ಸಂಶೋಧನೆ

೧. **ಉದಯಾದಿತ್ಯಾಲಂಕಾರದ ಕೆಲವು ಸಮಸ್ಯೆಗಳು :**
ಪರಿಷತ್ ಪತ್ರಿಕೆ, ೫೪–೧, ೧೯೬೯

೨. **ಉದಯಾದಿತ್ಯಾಲಂಕಾರ ಕರ್ತೃ ವಿಚಾರ (ವಿವೇಚನೆ) :**
ಕರ್ನಾಟಕ ಭಾರತಿ ೭–೪, ೧೯೭೫

೩. **ಎರಡನೇ ನಾಗವರ್ಮನ ಕಾಲ ವಿಚಾರ :**
ಪರಿಷತ್ಪತ್ರಿಕೆ, ೫೪–೧, ೧೯೬೯

೪. **ಓವನಿಗೆ :**
ಕರ್ನಾಟಕ ಭಾರತಿ, ೬–೪, ೧೯೭೪

೫. **ಕನ್ನಡ ಗ್ರಂಥ ಸಂಪಾದನೆಗೆ ತೀ.ನಂ. ಶ್ರೀ. ಯವರ ಕೊಡುಗೆ :**
ಶ್ರೀಕಂಠ ತೀರ್ಥ, ಬೆಂಗಳೂರು – ೧೯೭೬

೬. **ಕವಿರಾಜಮಾರ್ಗದ ಹೆಸರು–ಒಂದು ಟಿಪ್ಪಣಿ :**
ಪ್ರಬುದ್ಧ ಕರ್ನಾಟಕ, ೫೩–೧

೭. **ಕವಿರಾಜಮಾರ್ಗದಲ್ಲಿನ ರಾಮಾಯಣ ಪದ್ಯಗಳು :**
ಪರಿಷತ್ಪತ್ರಿಕೆ, ೫೧–೧, ೨, ೧೯೬೬

೮. **ಕವಿರಾಜಮಾರ್ಗದಲ್ಲಿ ಕಾರಕ ವಿಚಾರ :**
ಸಾಧನೆ, ೪–೩,೧೯೭೫

೯. **ಕವಿರಾಜಮಾರ್ಗದ ಮೇಲೆ ಉದ್ಭಟನ ಪ್ರಭಾವ :**
ಸಾಧನೆ, ೪–೨, ೧೯೭೫

೩. **ವಿದ್ಯಾಭ್ಯಾಸದ ಪರಿ–ಗುರಿ :**
ಶಿಕ್ಷಣ–ಸಂಸ್ಕೃತಿ, ಬೆಂಗಳೂರು ೧೯೮೩

೪. **ಸಂಯಮ ಪಾಲನದಿಂದಲೇ ಸಾಹಿತ್ಯದ ಉಳಿವು :**
ವಿಶ್ವಕರ್ನಾಟಕ, ೧೫–೮–೧೯೪೮

೫. **ಭಾಗವತಧರ್ಮ :**
ಸೇವಾಸದನ, ಜನವರಿ ೧೯೭೬

೬. **ಭಾವೈಕ್ಯ :**
ಸಾಧನೆ ೧೯೮೧

೭. **ಕನ್ನಡಕ್ಕೆ ಕ್ರೈಸ್ತರ ಕಾಣಿಕೆ :**
ಕನ್ನಡ ನುಡಿ, ೨೯–೭–೧೯೬೬

<u>೧೭. ಸಾಹಿತ್ಯ ಸಮೀಕ್ಷೆ</u>

೧. **ಕನ್ನಡ ಕಾವ್ಯ :**
೧೯೨೦–೧೯೪೭ (ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ),
ಬೆಂಗಳೂರು ವಿಶ್ವವಿದ್ಯಾಲಯ, ೧೯೭೩

೨. **ಕವಿಕಂಡ ಕಡಲು :**
ಪಂಡಿತ ಮಂಡಲ ಪತ್ರಿಕೆ, ೬–೨–೧೯೭೫

೩. **ಚಲನಚಿತ್ರದಿಂದ ನಾಟಕಕ್ಕೆ ಧಕ್ಕೆಯೇ ? :**
ವಾಕ್ಚಿತ್ರ. ಏಪ್ರಿಲ್ ೧೯೪೬

೪. **ಜನಕ್ಕಾಗಿ ಸಾಹಿತ್ಯ :**
ತಾಯಿನಾಡು, ೧೯೬೦

೫. **ಪರಿವರ್ತನಕಾರ್ಯ (ಸಣ್ಣಕತೆ) :**
ಕನ್ನಡ ನುಡಿ : (**ವರ್ಷ ?**)

೬. **ಪದ್ಯಕಾವ್ಯಕ್ಕೆ ಪ್ರೋತ್ಸಾಹ :**
ಕನ್ನಡ ನುಡಿ. ೧೪–೭–೧೯೫೧

೭. **ಸಣ್ಣಕತೆಗಳ ಬೆಳವಣಿಗೆ (ಸಾತಂತ್ರ್ಯ ಪೂರ್ವದಲ್ಲಿ) :**
ಕನ್ನಡ ನುಡಿ, ೨೬–೧೨–೧೯೬೩

೮. **ಸಾಹಿತ್ಯದಲ್ಲಿ ಮೌಲ್ಯಗಳು :**
ಸಮನ್ವಯ–೮, ಬೆಂಗಳೂರು ಆಗಸ್ಟ್ ೧೯೬೯

೪) **ಪ್ರಣಯಾವರ್ತ** : ಚಿತ್ರಗುಪ್ತ ೨೪-೩-೧೯೫೦, ೩೧-೩-೧೯೫೦
೫) **ಪಾಂಡುವಿನ ಮರಣ** : ಚಿತ್ರಗುಪ್ತ ೭-೪-೧೯೫೦
೬) **ಕಾಮಲತೆ** : ಚಿತ್ರಗುಪ್ತ, ೨೮-೪-೧೯೫೦

೩. **ಕನ್ನಡ ನಾಟಕ :**
ಕನ್ನಡ ನುಡಿ ೩-೭-೧೯೪೦

೪. **ಕನ್ನಡ ಸಾಹಿತ್ಯದ ಪಕ್ಷಿನೋಟ** (ಹೊಸಗನ್ನಡ ಯುಗ), ಕನ್ನಡ ನುಡಿ, ೫-೩೯, ೧೯೬೨

೫. **ಕನ್ನಡ ಸಾಹಿತ್ಯದಲ್ಲಿ ಮಾನವ ಭ್ರಾತೃತ್ವ ಕಲ್ಪನೆ, ನಂದನವನ** (ಶ್ರೀ ರಾಘವೇಂದ್ರಸ್ವಾಮಿ ಅಭಿನಂದನ ಗ್ರಂಥ), ಮಲ್ಲಾಡಿಹಳ್ಳಿ ೧೯೭೮

೬. **ಕನ್ನಡ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಹೆಜ್ಜೆಗಳು :**
ಮಲೆನಾಡು, ಆಗಸ್ಟ್ ೧೯೫೬

೭. **ಕವಿರಾಜಮಾರ್ಗ-ಕನ್ನಡಿಗರ ಕೈಗನ್ನಡಿ :**
ಜನಪದ, ೧೧-೧೩, ನವೆಂಬರ್ ೧, ೧೯೭೬

೮. **ಕಾವ್ಯಗಳಲ್ಲಿ ಕರ್ನಾಟಕ :**
ಕನ್ನಡ ನುಡಿ ೩೭-೧, ೧೯೭೪

೯. **ಕುಮಾರವ್ಯಾಸನ ವರ್ಣನೆ :**
ಕನ್ನಡ ನುಡಿ ೧೯೩೮

೧೦. **ಕುವೆಂಪು ಸಾಹಿತ್ಯದಲ್ಲಿ ಸಾರ್ವಕಾಲೀನ ಪ್ರಜ್ಞೆ:**
ಸಹ್ಯಾದ್ರಿ, ಮೈಸೂರು ೧೯೭೫

೧೧. **ಪಂಪನ ಕಾವ್ಯಧರ್ಮ, ಸತ್ಸಂಗ ೧೯೬೮**

೧೨. **ವಿಮರ್ಶಕ ನರಸಿಂಹಸ್ವಾಮಿ :**
ಚಂದನ, ಬೆಂಗಳೂರು ೧೯೭೨

<u>೨೦. ಗ್ರಂಥ ವಿಮರ್ಶೆ</u>

೧. **ಅಭಿಜ್ಞಾನ ಶಾಕುಂತಲ (ವಿಜಯ ಗ್ರಂಥ ಪ್ರಕಾಶನ) :**
ಸುಧಾ ೨೩-೬-೧೯೭೪

೨. **ಆಳಿದ ಮಹಾಸ್ವಾಮಿಯವರು (ಸಿ.ಕೆ.ವೆಂ) :**
ಪರಿಷತ್ಪತ್ರಿಕೆ, ೨೬-೨

೧೦. **ಕವಿರಾಜಮಾರ್ಗದ ಮೂರು ಶಬ್ದಗಳ ವಿಚಾರ–ಕೀ, ತೂ, ಪೊಳ್ (ಪುಳ್ ?)**

೧೧. **ಕವಿರಾಜಮಾರ್ಗ :**
ಶ್ರೀ ವಿಜಯ ಕರ್ತೃತ್ವದ ಬಗೆಗೆ ಹೊಸ ಬೆಳಕು, ಪ್ರಬುದ್ಧ ಕರ್ನಾಟಕ ೫೫–೩

೧೨. **ಪುರುಷವ್ರತ ಮತ್ತು ಕವಿರಾಜಮಾರ್ಗ :**
ಪರಿಷತ್ಪತ್ರಿಕೆ

೧೩. **ಕವಿರಾಜಮಾರ್ಗ :**
ಕಾಲ ಕರ್ತೃ, ಸ್ವರೂಪ : ಕವಿಕಾವ್ಯ ಪರಂಪರೆ ೧ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೫

೧೪. **ಶ್ರೀ ವಿಜಯರ ಕವಿರಾಜಮಾರ್ಗಂ – (ಒಂದು ವಿವರಣೆ) :**
ಸಾಧನೆ ೫–೧, ೧೯೭೬ ಪು. ೧೪೯.

೧೫. **ಸಭಾಮಧ್ಯಲಬ್ಧವರಂ ಶ್ರೀವಿಜಯಂ :**
ಸಾಹಿತ್ಯ ಜೀವಿ (ಜಿ. ವೆಂಕಟಸುಬ್ಬಯ್ಯ ಅಭಿನಂದನ ಗ್ರಂಥ), ಬೆಂಗಳೂರು ೧೯೭೬

೧೬. **ಸರ್ವಜ್ಞನ ತ್ರಿಪದಿಗಳು–ಪುನಃ ಪರಿಷ್ಕರಣದ ಅಗತ್ಯ :**
ಪರಿಷತ್ಪತ್ರಿಕೆ, ೬೦–೧, ೧೯೭೫ ಪು. ೪೩.

<u>**೧೯. ಸಾಹಿತ್ಯ ವಿಮರ್ಶೆ**</u>

೧. **ಕಥಾ ಸಾಹಿತ್ಯ :**
ಪ್ರಬುದ್ಧ ಕರ್ನಾಟಕ ಚಿನ್ನದ ಸಂಚಿಕೆ ೧೯೬೯

೨. **ಕನ್ನಡ ಕಾವ್ಯಗಳಲ್ಲಿ ಪ್ರಣಯ ಕಥೆಗಳು (೧–೬)**

೧) **ಅಮೃತಮತಿಯ ಅಪಾತ್ರ ಪ್ರಣಯ :** ಚಿತ್ರಗುಪ್ತ ವಾರಪತ್ರಿಕೆ, ಬೆಂಗಳೂರು, ೧೭–೨–೧೯೫೦

೨) **ಪ್ರಣಯಚ್ಚಲಿ ಚಂಡಶಾಸನ :** ಚಿತ್ರಗುಪ್ತ, ೨೪–೨, ೧೯೫೦, ೩–೩–೧೯೮೧

೩) **ಕೀಚಕ ವಿಲಾಸ :** ಚಿತ್ರಗುಪ್ತ, ೧೦–೩–೧೯೫೦, ೩೧–೩–೧೯೫೦

೧೪. **ಮಹಾದೇವಿಯಕ್ಕನ ಚರಿತ್ರೆ** (ಟಿ.ಎನ್. ಮಹದೇವಯ್ಯ) : ಪರಿಷತ್ಪತ್ರಿಕೆ ೨೨–೧೨

೧೫. **ಮಾಕಂದ** (ಸಂ : ಆನಂದಮಿತ್ರ) ; ತರುಣ–ಧಮನಿ (ಚಕ್ರಪಾಣಿ ;) ಪರಿಷತ್ಪತ್ರಿಕೆ, ೨೨–೩, ೧೯೩೭, ಪು ; ೧೯೩

೧೬. **ವಿಶ್ವವಾಣಿ** (ಸಂ : ಸಿದ್ದಲಿಂಗಪ್ಪ) ಪರಿಷತ್ಪತ್ರಿಕೆ, ೧೯–೩

೧೭. **ವಾಲ್ಮೀಕ ವೀರರತ್ನ ಪ್ರಕಾಶಿಕೆ** : ಪರಿಷತ್ಪತ್ರಿಕೆ, ೨೦–೨

೧೮. **ಶ್ರೀ ರಾಮಾಶ್ವಮೇಧಂ** (ಗೋವಿಂದ ಪೈ ಸ್ಮಾರಕ ಗ್ರಂಥ ಪ್ರಕಾಶನ) : ಸುಧಾ ೧೬–೬–೧೯೭೪

೧೯. **ಸಂಸ್ಕೃತಿಯ ಸ್ವರೂಪ** (ಡಿ.ವಿ.ಜಿ.) : ಜೀವನ ೨೦–೫, ಆಗಸ್ಟ್ ೧೯೫೪

೨೦. **ಸವ್ಯಸಾಚಿ** (ಉಡುಪಿ ಕಲಾವೃಂದದ ಪ್ರಕಟನೆ) ; ಗಿರಿಜಾ ಕಲ್ಯಾಣವು (ಪಂಪ ಸಾಹಿತ್ಯ ಪ್ರಕಟನಾಲಯ ದಾವಣಗೆರೆ) ಕನ್ನಡ ನುಡಿ ೨೦–೧೦–೧೯೫೭

೨೧. **ಸಾಹಿತ್ಯ ವಾರ್ಷಿಕ** ೧೯೭೧, (ಬೆಂ.ವಿ.ವಿ) : ಸುಧಾ, ೧೯–೮–೧೯೭೩

೨೨. **ಸುಭಾಷಿತಗಳು** (ಅನು : ಎನ್. ರಂಗಾಚಾರ್) ಪ್ರಜಾವಾಣಿ ೨೦–೫–೧೯೫೬

೨೩. **ಸೌಂದರ್ಯಲಹರಿ ಮತ್ತು ಶಿವಮಹಿಮೆ ಸ್ತೋತ್ರ,** (ಡಾ: ಬಿ.ಪುಟ್ಟಸ್ವಾಮಯ್ಯ ನವರ ಪುಸ್ತಕಕ್ಕೆ ಬರೆದುಕೊಟ್ಟ ಅಭಿಪ್ರಾಯ)

೨೪. **ಸ್ನೇಹಸೂಕ್ತಿ** : ಜೀವನ ನಂ ೧೩

೨೫. **ಹೊನಲು** (ಎಂ.ಜಿ. ಆನಂದಮೂರ್ತಿ) ಕನ್ನಡ ನುಡಿ ಸಂ. ೧, ೧೯೩೮

೨೬. **ಹುಲಿಯ ಮೇವು** ; ದ್ವಾಸುಪರ್ಣ ; ಬೆಟ್ಟದಿಂದ ಬಟ್ಟಲಿಗೆ, ಆಕಾಶವಾಣಿ

೨೭. **ಹೊಸ ಪುಸ್ತಕಗಳು** : ಅಗ್ನಿಕನ್ನೆ, ವಿಲಾಸಿನಿಯ ಅಕಾಲಮರಣ, ನಳಪಾಕ, ಗಾಳಿಯ ಹಾವಳಿ, ಸುಧಾಮ ಚರಿತ್ರೆ, ಪಂಡಿತ ಜವಹರಲಾಲ ನೆಹರು ಚಕ್ರವರ್ತಿಯ ಕೋಗಿಲೆ, ಚಂದ್ರನನ್ನು ತಂದವರು, ಅಲಿವರ್ ಟ್ವಿಸ್ಟ್, ಬಮ್ಮೆರ ಪೋತನ, ಅಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು.

೩. **ಕರ್ಣಾಟಕ ಕಾದಂಬರಿ** (ಸಂ : ಎನ್. ಅನಂತರಂಗಾಚಾರ್) ಸುಧಾ ೧೧–೫–೧೯೭೫

೪. **ಕನ್ನಡ ಕಾವ್ಯಗಳು :**
ಜೀವನ, ಸಂ : ೨೪

೫. **ಕನ್ನಡ ಒಗಟುಗಳು (ಶ್ಯಾಮಲಾ)**
ಕನ್ನಡ ಮರಾಠಿವಾದ ಅಥವಾ ಕರ್ನಾಟಕದಲ್ಲಿಯ ಮಹಾರಾಷ್ಟ್ರ ಪ್ರದೇಶ ವೆಂ. ಶ್ರೀ ಪಂಡಿತ) : ಪರಿಷತ್ಪತ್ರಿಕೆ, ೨೨–೧, ೨

೬. **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ (ಡಾ. ಎಂ.ಎಂ. ಕಲಬುರ್ಗಿ):**
ಕನ್ನಡನುಡಿ ೧೬–೮–೧೯೭೩

೭. **ಜೈನರ ಮೂರು ರತ್ನಗಳು** (ಕೆ. ಭುಜಬಲಿಶಾಸ್ತ್ರಿ), ಪರಿಷತ್ಪತ್ರಿಕೆ, ೨೦–೨

೮. **ದ್ರಾವಿಡ ಭಾಷಾ ವಿಜ್ಞಾನ** (ಹಂಪನಾ) ಕನ್ನಡನುಡಿ, ೧೧–೧೩, ೧೯೬೮

೯. **ನಾಡಹಬ್ಬ** (ಶ್ರೀ ರಾಮರಾಯರು) ; ವಿದೇಶೀಯ ಲೋಕೋಪಕಾರಿಗಳು (ಎಸ್. ಸ್ವಾಮಿರಾಮ), ಸರ್.ಸಿ.ವಿ. ರಾಮನ್ ಅವರ ಜೀವನ ಚರಿತ್ರೆ (ಎಸ್.ಎಸ್. ಲೋಕನಾಥ್), ಹಾಡಿನ ಚಿಲುಮೆ (ಹೊಯಿಸಳ) ; ಪರಿಷತ್ಪತ್ರಿಕೆ, ೨೩–೧–೧೯೩೮, ಪು. ೫೮.

೧೦. **ನಿಷ್ಕ್ರಮಣ** (ಹ.ಪಿ. ಜೋಶಿ) ; ಪರಿಷತ್ಪತ್ರಿಕೆ, ೨೦–೧

೧೧. **ಪಕ್ಷ್ಮಲಾಕ್ಷಿ** (ಎಂ.ಜಿ. ನಂಜುಂಡಾರಾಧ್ಯ) ; ಮಹಾಯುದ್ಧ (ವೈ. ಎಂ ಷಣ್ಮುಖಯ್ಯ); ಮಾಂಗಲ್ಯ (ಓ.ಎನ್. ಲಿಂಗಣ್ಣಯ್ಯ) ; ವೈಶಾಖ ಅಥವಾ ಬುದ್ಧನ ಕಡೆಯ ದಿನಗಳು (ಎಂ. ಗೋವಿಂದಪೈ) : ಪುಸ್ತಕ ಪ್ರಪಂಚ, ೨–೨, ಸುವರ್ಣ ಸಂಪುಟ (ಎಚ್.ಪಿ. ವೀರಪ್ಪ) ಸೆಪ್ಟಂಬರ್ ೧೯೪೩

೧೨. **ಭಾನುವಾರದ ಬಯಕೆ** (ರ.ವೆಂ. ಶ್ರೀನಿವಾಸ್) ; ಬೃಂದಾವನ : ಜೀವನ ಸಂ. ೧೪

೧೩. **ಮದುವಣಿಗ ಸೋಮಶೇಖರ :** (ಪರಮಿಪದ್ಮನಾಭಯ್ಯ) : ಪರಿಷತ್ಪತ್ರಿಕೆ ೨೦–೧

ಅನಕೃ. ಸತೀ ತುಳಸಿ, ಆಶೆ–ನಿರಾಶೆ

–ಪುಸ್ತಕ ಪ್ರಪಂಚ ೨–೪, ನವೆಂಬರ್ ೧೯೪೭

೨೮. **ನಗರದಲ್ಲಿ ನೆರಳು (ಕಣವಿ) :** ಚೆಂಬೆಳಕು, (ಚೆನ್ನವೀರ ಕಣವಿ ಸಂಭಾವನಾ ಗ್ರಂಥ) ಧಾರವಾಡ ೧೯೮೦

೨೯. **ಶರ್ವರೀ ಸುಷಮೆ (ಪು.ತಿ.ನ.) :** ಯದುಗಿರಿ (ಪು.ತಿ.ನ ಸಂಭಾವನಾ ಗ್ರಂಥ) ಮೈಸೂರು

೩೦. **ಶೂದ್ರರ್ಷಿ (ಗೋವಿಂದ ಪೈ) ; ತೆಂಗಾಳಿ (ಶ್ರೀನಿವಾಸ) ; ಗೊಮ್ಮಟೇಶ್ವರ, (ಕುವೆಂಪು) :** ಆಕಾಶವಾಣಿ

<u>೨೧. ಕಾವ್ಯ ಮೀಮಾಂಸೆ</u>

೧. **ಅನ್ವಯ ಜಿಜ್ಞಾಸೆ–ಪ್ರತಿಕ್ರಿಯೆ ;** ಪರಿಷತ್ಪತ್ರಿಕೆ ೫೮–೨

೨. **ಅನುಭೂತಾಭ್ಯಾಸ–ಒಂದು ಅಲಂಕಾರ :** ಸಾಧನೆ, ೧–೧

೩. **ಅಷ್ಟಾದಶವರ್ಣನೆ :** ಪ್ರಭಾತ ವಿಶೇಷ ಸಂಚಿಕೆ, ಮಂಗಳೂರು

೪. **ಕನ್ನಡ ಸಾಹಿತ್ಯದಲ್ಲಿ ಶಾಂತರಸ :** ಶಂಕರಮಠ ನವರಾತ್ರಿ ಧರ್ಮ ಸಮ್ಮೇಳನದ ಸಾಹಿತ್ಯ ಗೋಷ್ಠಿಯಲ್ಲಿ ಓದಿದ ಪ್ರಬಂಧ ೧೯೭೫ (ಅಪ್ರಕಟಿತ)

೫. **ಕವಿಗಳ ಅನುಭವ ಸಂಪತ್ತು :** ೧೯೫೯

೬. **ಕರ್ನಾಟಕ ಕಾವ್ಯಕಲೆ :** ಜೀವನ ೧೭–೧೯೬

೭. **ಕಾವ್ಯದ ವಸ್ತು :** ಶ್ರದ್ಧಾಂಜಲಿ (ಮುಳಿಯ ತಿಮ್ಮಪ್ಪಯ್ಯ ಸ್ಮರಣ ಸಂಪುಟ) ಮಂಗಳೂರು, ೧೯೫೬ ಪು. ೧೭೪–೧೮೪

೮. **ಕಾವ್ಯ ಮೀಮಾಂಸೆಯ ಬಗೆಗೆ ಷಡಕ್ಷರ ಕವಿಯ ಚಿಂತನ ಮಂಥನ** : ಮಹಾ ಕವಿ ಷಡಕ್ಷರಿ, ಎಳಂದೂರು, ೧೯೭೫, ಪು. ೫೩–೬೫

೯. **ನಾಟಕ ಕಲೆ :** ಸಮರ್ಪಣೆ, (ಮಂಜಯ್ಯ ಹೆಗ್ಗಡೆ ಅಭಿನಂದನ ಗ್ರಂಥ) ೧೯೫೦, ಪು ೨೨೭–೨೨೯

೧೦. **ಪಂಪನ ಅಲಂಕಾರ ಧ್ವನಿ :** ಸಾಧನೆ, ೩–೩, ೧೯೭೩

೧೧. **ಮಹೋಪಮೆ–ಕನ್ನಡಕ್ಕೆ ಕುವೆಂಪು ಅವರ ಕೊಡುಗೆ :** ಉಡುಗೊರೆ, ಮೈಸೂರು ೧೯೫೬

೧೨. **ರಸಪ್ರಸ್ಥಾನ :** ಸಿದ್ಧಯ್ಯ ಪುರಾಣಿಕ ಅಭಿನಂದನ ಗ್ರಂಥ ೧೯೮೧

೧೩. **ಕಾವ್ಯ–ಕವಿಯ ಅನುಭವ :** ವಿಭೂತಿ ಗಿರಿಯಾಪುರ ೧೯೬೧, ಪು. ೪೫೪–೪೬೧

– ಪುಸ್ತಕ ಪ್ರಪಂಚ, ೧–೮ ಮಾರ್ಚ್ ೧೯೩೪

ಚರಿತ್ರಹೀನರು, ಕಳ್ಳಸಂತೆ ಬೆಸ್ತರ ಕರಿಯ, ಪುರಂದರದಾಸರ ಪರಿಚಯ, ಬೆಳಗಾವಿಯಲ್ಲಿ ಕನ್ನಡ ಚಳವಳಿಯ ಸಮಸ್ಯೆ, ಕರ್ನಾಟಕದ ಕಣ್ಮರೆಯಾದ ಆಗಸ್ಟ್ ವೀರರು, ಕ್ರಾಂತಿಯ ನೂರು ವರುಷ, ಗಾಂಧೀಜಿಯರ ರಾಜಕೀಯ ಪತ್ರಗಳು, ನಡುಗಾಲ ಪ್ರಭುತ್ವ, ವಿಪರ್ಯಾಸ, ಮೀನಾಮದುವೆ, ನವೀನ ನಾಟಕಗಳು, ಲೋಹವರಾಹ, ಪುಟಾಣಿ ಪಂಚತಂತ್ರ, ಅಗಲಿದ ಮಗಳು, ಸುಳ್ಳಿನ ಸೋಲು – ಪುಸ್ತಕ ಪ್ರಪಂಚ, ೧–೮, ಏಪ್ರಿಲ್ ೧೯೪೮೭

ಪೂರ್ಣಚಂದ್ರ, ಬಾಡದಹೂವು ಮುಂಬೆಳಗು, ರಾಗ, ಉದ್ಘೋಷ, ರಘುನಾಥನ ಸಾಹಸ, ಸಂಧಿಕಾಲ, ರಕ್ತ ಸರೋವರ, ಕಸದ ಬುಟ್ಟಿ, ಒಡೆದ ಕನ್ನಡಿ ರಾಬಿನ್ ಹುಡ್, ಕಲಿರ್ತರ್, ಮರಿ ವಿಜ್ಞಾನಿ, ರಂಕುಲ್ ರಾಟೆ, ಮನೆಮದ್ದು.

–ಪುಸ್ತಕ ಪ್ರಪಂಚ, ೧–೧೦, ಮೇ ೧೯೪೭

ಪಲಾಯನ, ರಕ್ತಾಂಜಲಿ, ಪುಣ್ಯಭೂಮಿ, ರುದ್ರವೀಣೆ, ಆಹಾರ ವಿಜ್ಞಾನ–ಸಂತಾನ ವಿಜ್ಞಾನ, ದಾಂಪತ್ಯ ವಿಜ್ಞಾನ, ಕಟ್ಟೆಯ ಬಸವೇಶ್ವರನ ವಚನಗಳು, ಅಕ್ಕಮಹಾದೇವಿ, ಅಮ್ಮ ಮತ್ತು ಬಾಬರನ ಪಾಠ, ಭಾರತದಿಂದ ತೊಲಗಿರಿ, ಜವಾಬ್ದಾರಿ ಸರ್ಕಾರ, ಕೈಲಾಸಂ.

–ಪುಸ್ತಕ ಪ್ರಪಂಚ, ೧–೧೧, ಜೂನ್ ೧೯೭೪

ಕುಮುದಿನಿ, ವಿಧಿ ತಂದ ವಧು, ಸವತಿ, ಲೋಕ ಚರಿತ್ರೆ

–ಪುಸ್ತಕ ಪ್ರಪಂಚ, ೧–೧೨, ಜುಲೈ ೧೯೪೭

ಪುನರಾಗಮನ, ಮಾಧವ ಲೀಲೆ, ಕಾಂಚನ ಮೃಗ, ಹೊಸ ಹೆಜ್ಜೆ, ಪ್ರೇತ ಸಂಸಾರ, ಭಾಸನ ಭಾರತ, ಮಂಜಿನ ಮಣಿ, ಕನ್ನಡದಲ್ಲಿ ವಿಡಂಬನ ಸಾಹಿತ್ಯ, ಯುಗಾಂತರ

–ಪುಸ್ತಕ ಪ್ರಪಂಚ, ೨–೧, ಆಗಸ್ಟ್ ೧೯೪೭

ಕರ್ತವ್ಯ, ಮುರುಕು ಮಂಟಪ, ಕಥಾವಲ್ಲರಿ, ೧೮೫೭ ದೊಡ್ಡ ದಂಗೆ, ಮಹಾತ್ಮರ ಸ್ವಾತಂತ್ರ್ಯ ಭಾರತದ ರಾಜ್ಯ ಘಟನೆ, ನಾಡ ಪದಗಳು

–ಪುಸ್ತಕ ಪ್ರಪಂಚ, ೨–೩, ಅಕ್ಟೋಬರ್ ೧೯೪೭

೧೧. **ಶಬ್ದಾವತಾರ** : ಗೋವಿಂದಪೈ ಸ್ಮಾರಕ ಉಪನ್ಯಾಸ (ಗೋಖಲೆ ವಿಚಾರ ಸಂಸ್ಥೆ) ೧೯೮೦

೧೨. **ಶಿಲಾಹಾರ–ವಂಶನಾಮದ ನಿರ್ವಚನೆ** : ಅಪ್ರಕಟಿತ

೧೩. **ಕಾವ್ಯಾಲಾಪಾಂಶ್ಚ ವರ್ಜಯೇತ್** : ಜಿ.ಪಿ. ರಾಜರತ್ನಂ ಸ್ಮಾರಕೋಪನ್ಯಾಸ (ಗೊ.ಸಾ.ವಿ. ಸಂಸ್ಥೆ)

<u>೨೩. ಸಂಗೀತ ಮತ್ತು ಕಲೆ</u>

೧. **ಬೃಹದ್ದೇಶಿ–ಪರಿಚಯಾತ್ಮಕ ಲೇಖನ** : ಪರಿಷತ್ಪತ್ರಿಕೆ, ೬೨–೧, ೨

೨. **ಭಾರತೀಯ ಚಿತ್ರಕಲೆ–ಅದರ ಚೇತನ ಮತ್ತು ಬೆಳವಣಿಗೆ** : ಹೊಸಬೆಳಕು, ಮೈಸೂರು ೧೯೬೦, ಪು : ೧೪೭–೧೫೬

೩. **ರತ್ನಾಕರನ ಕಲಾಭಿಜ್ಞತೆ** : ಪರಿಷತ್ಪತ್ರಿಕೆ

೪. **ಸ್ವತಂತ್ರ ಭಾರತದಲ್ಲಿ ಕಲಾ ಶಿಕ್ಷಣ, ಕನ್ನಡ ನುಡಿ ೧೬–೧–೧೯೪೮**

೫. **ಗಮಕ ಕಲೆಯ ಸ್ವರೂಪ** : ಗಮಕ ಕಲೆ, ಕ.ಸಾ.ಪ. ೧೯೭೪

೬. **ಸಂಗೀತ ಸಾಹಿತ್ಯ** : ಲೋಚನ ೧–೧, ೧೯೮೩

<u>೨೪. ವ್ಯಕ್ತಿ ಚಿತ್ರ</u>

೧. **ಎತ್ತರ ವ್ಯಕ್ತಿ (ಬೆಳ್ಳಾವೆ ವೆಂಕಟನಾರಾಯಣಪ್ಪ)** : (ಅಪ್ರಕಟಿತ)

೨. **ಬಿ.ಎಂ.ಶ್ರೀ**–(ಅಪ್ರಕಟಿತ)

೩. **ಕನ್ನಡದ ಹೊಸ ಸಾಹಿತ್ಯದಲ್ಲಿ ಪ್ರೊ** : ಎ.ಆರ್. ಕೃಷ್ಣಶಾಸ್ತ್ರಿಗಳ ಸ್ಥಾನ. ಜೀವನ ೧೩–೪, ೧೯೫೨ ಪು. ೧೧೩

೪. **ಕಲಾ ತಪಸ್ವಿ ಕೆ. ವೆಂಕಟಪ್ಪ, ಕನ್ನಡನುಡಿ**

೫. **ಕಲೆಯಲ್ಲಿ ಪರಿಪಕ್ವ ಸ್ಥಿತಿಯನ್ನು ಮುಟ್ಟಿರುವವರು** : ಗಾನಕೋಗಿಲೆ ಜಿ. ಚನ್ನಮ್ಮ ಸನ್ಮಾನ ಸಂಚಿಕೆ, ಬೆಂಗಳೂರು, ಪು. ೧೯–೨೦

೬. **ಡಿ.ವಿ. ಗುಂಡಪ್ಪನವರ ಪೂರ್ಣ ವ್ಯಕ್ತಿತ್ವ** : ಸಾರ್ವಜನಿಕ, ಬೆಂಗಳೂರು ೧೦–೧೧–೧೯೭೫

೭. **ಗುರುವಿನ ಒಂದು ಭಾವಚಿತ್ರ** : ಸವಿ ನೆನಪು, ಮೈಸೂರು–೧೯೭೦

೮. **ಗುರುಸ್ಮರಣೆ** : ಅನಂತರಾಗ, ಮೈಸೂರು–೧೯೭೭

೧೪. **ವೀರಶೈವ ಸಾಹಿತ್ಯದಲ್ಲಿ ಲಕ್ಷಣ ಪ್ರಜ್ಞೆ:** ಜಂಗಮಜ್ಯೋತಿ, ಚಿತ್ರದುರ್ಗ ೧೯೭೫, ಪು ೨೮೦

೧೫. **ಶಾಕುಂತಲದಲ್ಲಿ ದೈವಪ್ರಾಬಲ್ಯ ದೃಷ್ಟಿ** (ಕಾಳಿದಾಸನ ದೃಷ್ಟಿ–ಸೃಷ್ಟಿ) ಕ.ಸಾ. ಪರಿಷತ್ತಿನ ಪ್ರಕಟನೆ ೧೯೬೬

೧೬. **೧೯೪೭ರ ಸಣ್ಣಕತೆಗಳು :** ವಾಹಿನಿ (ದ್ವಿತೀಯ ವಾರ್ಷಿಕ ಸಂಚಿಕೆ) ಪು. ೧೯೧–೧೯೮

೧೭. **ಶಾಂತರಸ :** ಜೈನಧರ್ಮದ ಕೊಡುಗೆ (ಅಪ್ರಕಟಿತ)

೧೮. **ವಿಮರ್ಶೆಯ ಭಾಷೆ ಮತ್ತು ಪರಿಭಾಷೆ :** (ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ವಿಚಾರಗೋಷ್ಠಿಯಲ್ಲೀ ಓದಿದ ಪ್ರಬಂಧ)

**೨೨. ಛಂದಸ್ಸು ವ್ಯಾಕರಣ, ಭಾಷೆ**

೧. **ಕನ್ನಡ ಹಾಡಿನ ವಿಕಾಸ ಮತ್ತು ಲಯ ಸ್ವರೂಪ :** ಚಿನ್ನದ ಬೆಳಸು ೧೯೭೦

೨. **ಗೀತಿಕೆ, ಮದನ ಮತಿ, ಅಕ್ಕರಿಕೆ, ಚೌಪದಿ (ಗೆ). ಉತ್ಸಾಹ, ಛಂದೋವಸಂತ ಲಕ್ಷಣ ಪ್ರಯೋಗ :** ಛಂದಸ್ಸಿನ ಚರಿತ್ರೆ (ಮೈ.ವಿ.ವಿ.)

೩. **ಏಳೆಯ ಸ್ವರೂಪ :** ಚಿಂತನ, ಬೆಂಗಳೂರು ೧೯೭೧–೭೨

೪. **ಉದ್ಧಂಡ ಷಟ್ಪದಿಯ ಸಮಸ್ಯೆ (ಸಂಶೋಧನೆ) :** ಪರಿಷತ್ಪತ್ರಿಕೆ ೫೪–೧

೫. **ರಾಘವಾಂಕನು ಷಟ್ಪದಿಯ ನಿರ್ಮಾಪಕನೆ :** ಬೆಳ್ಳಿ ಶಾರದೆ, ಮೈಸೂರು ೧೯೭೩

೬. **ಕನ್ನಡ ನುಡಿಯ ಅಳಿವು–ಉಳಿವು :** ಅಭಿವಂದನೆ, ಮೈಸೂರು ೧೯೫೬

೭. **ಕನ್ನಡದ ತದ್ಧಿತ ಪ್ರತ್ಯಯಗಳು :** ಅಧ್ಯಯನ, ಬೆಂಗಳೂರು ೧೯೮೦

೮. **ಕೆಲವು ಅಕ್ಷರಗಳ ಅನುನಾಸಿಕೋಚ್ಚಾರಗಳು :** ಕನ್ನಡನುಡಿ, ಜನವರಿ–ಫೆಬ್ರವರಿ ೧೯೫೭

೯. **ಪ್ರಾಚೀನ ಕನ್ನಡ ವ್ಯಾಕರಣಗಳು :** ಕನ್ನಡ ಭಾಷೆಯ ಚರಿತ್ರೆ (ಮೈ.ವಿ.ವಿ)

೧೦. **ವ್ಯಾಕರಣ ಮತ್ತು ಹಾಸ್ಯ :** ಸುನಂದಾಭಿನಂದನ, ಬೆಂಗಳೂರು–೧೯೭೪

೩. **ನ್ಯಾಥಾನಿಯಲ್ ಹಾಥಾರ್ನ್ ಮತ್ತು ಏಳು ಇಪ್ಪಾರಿನ ಮನೆ :** ಕಾವ್ಯಾಲಯ, ಮೈಸೂರು
೪. **ವಿನೋಬ ಜೀವನ ದರ್ಶನ :** ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ, ಬೆಂಗಳೂರು ೧೯೭೫
೫. **ವೆಂಕಣ್ಣನ ಕೃತಿಗಳು :** ಕೆಳದಿ ಮ್ಯೂಸಿಯಂ, ಕೆಳದಿ ೧೯೮೦
೬. **ಉದಯ ವಂದನೆ :** ವಿ. ಹರಿಕೃಷ್ಣಲಕ್ಷಣ ಅಳವರದಾ, ಕವನ ಸಂಕಲನ, ೧೯೬೩
೭. **ಕಾಣಿಕೆ :** (ಸಂ. ನಾ – ಗೀತಾಚಾರ್ಯ, ಇತರರನ್ನು ಕನ್ನಡ ಅಧ್ಯಯನ ಕೇಂದ್ರ, ಬೆಂ.ವಿ.ವಿ. ಬೆಂಗಳೂರು ೧೯೮೨

**೨೬. ಕನ್ನಡ ವಿಶ್ವಕೋಶದ ಬರಹಗಳು**

೧. ಅಯ್ಯ ಶಾಸ್ತ್ರಿ ಸೋಸಲೆ
೨. ಉದಯಾದಿತ್ಯಾಲಂಕಾರ
೩. ಕನ್ನಡದಲ್ಲಿ ಪ್ರಬಂಧ ಸಾಹಿತ್ಯ
೪. ಕವಿರಾಜಮಾರ್ಗ
೫. ಕುಮಾರವ್ಯಾಸ
೬. ಖಗೇಂದ್ರ ಮಣಿದರ್ಪಣ
೭. ಗೀತಿಕೆ
೮. ಚಂದ್ರಪ್ರಭ ಪುರಾಣ
೯. ಚೌಂಡರಸ
೧೦. ಜೀವನ ಚರಿತ್ರೆ
೧೧. ಕರ್ನಾಟಕ ಸಂಘಗಳು
೧೨. ಕನ್ನಡ ಸಾಹಿತ್ಯ ಪರಿಷತ್ತು
೧೩. ಕಾನಕಾನಹಳ್ಳಿ ವರದಾಚಾರ್ಯ
೧೪. ತಿಮ್ಮ
೧೫. ತಿಮ್ಮಪ್ಪದಾಸರು
೧೬. ತುಂಬಲೂರಾಚಾರ್ಯ
೧೭. ನೃಪತುಂಗ
೧೮. ನಾರಾಯಣದಾಸರು
೧೯. ನಾರಾಯಣಶಾಸ್ತ್ರಿ
೨೦. ಪಂಪ
೨೧. ಮೋಟಗಾನಹಳ್ಳಿ ಶಂಕರಶಾಸ್ತ್ರಿ
೨೨. ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ
೨೩. ರಾಜಪುರೋಹಿತ ನಾರಾಯಣ ಶ್ರೀನಿವಾಸ
೨೪. ವಾಸುದೇವಾಚಾರ್ಯ
೨೫. ಶ್ರೀವಿಜಯ
೨೬. ಸೂಕ್ತಿ ಸುಧಾರ್ಣವ

೯. **ಜ್ಯೋತಿರ್ಲಿಂಗಾನುಭವಿ ಶ್ರೀ ಜ.ಚ.ನಿ. ದಾಸೋಹ** ಬೆಂಗಳೂರು, ೧೯೬೩ ಪು. ೧–೧೮
೧೦. **ತಪಸ್ವಿನಿ ಯಶೋಧರ** : ಪೌರವಾಣಿ ೧೯೬೨
೧೧. **ನನ್ನನ್ನು ಕಡೆದ ರೂವಾರಿ ಡಿ.ವಿ.ಜಿ.** : ಕರ್ಮವೀರ ೮–೨–೧೯೭೦
೧೨. **ನಾನು ಕಂಡ ಕೆ. ಗೋಪಾಲಕೃಷರಾಯರು** : ಕನ್ನಡ ನುಡಿ ೧.೩೧, ೧೯೬೮ ಪು. ೪
೧೩. **ನಾನು ಕಂಡ ತೀ.ನಂ.ಶ್ರೀ** : ಕನ್ನಡ ನುಡಿ ೨೯–೧೦, ೧೯೬೬
೧೪. **ನಾನು ಕಂಡ ಶಿವರುದ್ರಪ್ಪನವರು** : ಸ್ನೇಹಕಾರ್ತೀಕ, ಬೆಂಗಳೂರು, ೧೯೭೭
೧೫. **ನುಡಿಸೇವೆ** : ಸ್ವರ್ಣರಶ್ಮಿ, ಬೆಂಗಳೂರು ೧೯೭೯, ಪು. ೧೧–೧೨
೧೬. **ಪೂಜ್ಯ ಎ.ಆರ್.ಕೃ ಅವರನ್ನು ಕುರಿತು ನಾಲ್ಕು ನೆನಪಿನ ಮಾತು** : ಕನ್ನಡ ನುಡಿ, ೩೧–೪–೫, ೧೯೬೮
೧೭. **ಪೂಜ್ಯ ಕೃಷ್ಣಶಾಸ್ತ್ರಿಗಳಿಂದ ನಾನು ಕಲಿತ ಪಾಠ** : ಎ.ಆರ್.ಕೃ. ಜೀವನ ಮತ್ತು ಸಾಧನೆ : ಮೈ.ವಿ.ವಿ. ೧೯೭೧
೧೮. **ಬಳ್ಳಾರಿಯ ಸಮ್ಮೇಳನ – ಅದರ ಅಧ್ಯಕ್ಷರು** : ಕನ್ನಡ ನುಡಿ ೨೧–೫, ೧೯೭೮, ಪು. ೧೧೬–೧೧೮
೧೯. **ವಾಗ್ಗೇಯಕಾರ ವಾಸುದೇವಾಚಾರ್ಯ** : ವಾಗ್ಗೇಯಕಾರ ವಾಸುದೇವಾಚಾರ್ಯ, ಮೈಸೂರು ೧೯೬೫, ಪು. ೨೪೧–೨೪೮
೨೦. **ವಿನಯಶಾಲಿ ವೀರ ಕನ್ನಡಿಗ** : ರಸಷಷ್ಟಿ, ಮೈಸೂರು ೧೯೮೦, ಪು. ೯೫–೧೦೧
೨೧. ವಿ.ಸೀ. – **ನಾನು ತಿಳಿದ ಹಾಗೆ** : ವಿ.ಸೀ. ೭೫, ಬೆಂಗಳೂರು ೧೯೭೩
೨೨. **ಶ್ರೀರಾಮಕೃಷ್ಣ ಪರಮಹಂಸರು** : ಪ್ರಜಾಮತ
೨೩. **ಸಾಹಿತ್ಯ–ರಾಜರತ್ನಂ ಅವರ ಪರಿಚರ್ಯ** : ರಾಜಮಾರ್ಗ, ಬೆಂಗಳೂರು ೧೯೮೦
೨೪. **ವೈಣಿಕ ವಿದ್ವಾನ್ ಎಲ್. ರಾಜಾರಾವ್** : ೧೯೭೯

**೨೫. ಮುನ್ನುಡಿ : ಪ್ರಸ್ತಾವನೆ**

೧. **ಚಂದ್ರಪ್ರಭ** – (ಜಚನಿ ಗ್ರಂಥಕ್ಕೆ) ೭–೬–೧೯೮೧)
೨. **ಚೆನ್ನಿಗ ಚೆಲವಯ್ಯ** (ಸಂ : ಕ. ರಾ. ಕೃ.) ಜನಪದ ಅಕಾಡೆಮಿ, ಬೆಂಗಳೂರು ೧೯೬೫

<u>೨೮. ಅನುವಾದ ಗ್ರಂಥಗಳು</u>

೧. **ಆಕಾಶಯಾನ :** [ಸರ್ ಕೆ.ಪಿ. ಪುಟ್ಟಣ್ಣ ಚೆಟ್ಟಿ ಪುದುವಟ್ಟಿನ ಗ್ರಂಥಮಾಲೆ] ಮೈ.ವಿ.ವಿ.

೨. **ಕನ್ನಡ ನಾಡಿನ ಚರಿತ್ರೆ :** [ಮೂಲ : ಸಾಲೆತೋರೆ ಅವರ ಲೇಖನ] ಕ.ಸಾ. ಪರಿಷತ್ತಿನ ಪ್ರಕಟನೆ

೩. **ಠಾಕೂರರು ಮತ್ತು ಪಾಶ್ಚಾತ್ಯ ಸಂಗೀತ :** ರವೀಂದ್ರ ಪೂಜನ : ಬೆಂ. ೧೯೬೩, ಪು. ೧೮೭-೨೦೩

೪. **ತೆಲುಗು ಏಕಾಂಕ ನಾಟಕಗಳು :** [ಎನ್.ಬಿ.ಬಿ.] ಅಪ್ರಕಟಿತ

೫ **ನಿಜವಾದ ಒಲವು, ಒಲ್ಲಭಿಯ ಕಂಗಳು :** [ಮೂ : ಷೇಕ್ಸ್‌ಪಿಯರ್ ಸಾನೆಟ್ ೧೧೬, ೧೩೦] ಷೇಕ್ಸ್‌ಪಿಯರಿಗೆ ನಮಸ್ಕಾರ, ದೆಹಲಿ ೧೯೬೬

೬. **ಮಹಾತ್ಮ :** [ಪುಸ್ತಕ] ಮೂಲ : ಹೆಂಡೋಲ್ಕರ್ ಭಾಗ ೭, ಪು. ೨೭೭-೪೧೫, ಮೈ.ವಿ.ವಿ.

<u>೨೯. "ಇಂಗ್ಲಿಷ್ ಪತ್ರಿಕೆಗಳಲ್ಲಿ ಕನ್ನಡ ಗ್ರಂಥಗಳ ವಿಮರ್ಶೆ"</u>

೧. **ಬಲೆಯ ಬೀಸಿದರು :** ಹಿಂದು, ೭-೮-೧೯೫೫

೨. **ಅಭಿವ್ಯಕ್ತಿ :** ಡೆಕ್ಕನ್ ಹೆರಾಲ್ಡ್

೩. **ಚಂದವಳ್ಳಿಯ ತೋಟ :** ಹಿಂದು, ೧೦-೭-೧೯೫೫

೪. **ದೇವದಾಸಿ ; ಎಚ್ಚಮನಾಯಕ ; ರಾಜಾಮಲಯ ಸಿಂಹ ಭಾಗ-೧ (ಎಂ.ವಿ. ಶ್ರೀನಿವಾಸಾಚಾರ್ಯ) :** ಹಿಂದು, ೧೫-೫-೧೯೫೫

೫. **ಫೋಕ್ಲೋರ್ ಆಸ್ ಕೋರ್ ಆಫ್ ಕಲ್‌ಚರಲ್ ಹೆರಿಟೇಜ್ :** ಡೆಕ್ಕನ್ ಹೆರಾಲ್ಡ್ ೬-೭-೧೯೬೦

೬. **ಕನ್ನಡ ಮಿಸ್ಸಲಿನಿ :** ಡೆಕ್ಕನ್ ಹೆರಾಲ್ಡ್ ೨೭-೯-೧೯೭೦

೭. **ಕನ್ನಡ ಡಿಂಡಿಮ (ಕುವೆಂಪು) :** ಡೆಕ್ಕನ್ ಹೆರಾಲ್ಡ್

೮. **ಕೇದಿಗೆ ವನ :** ಹಿಂದು ೮-೫-೧೯೫೫

೯. **ನಗೆಯ ನೆಲೆ (ಎಸ್.ಕೆ. ರಾಮಚಂದ್ರರಾವ್) :** ನಕ್ಷತ್ರಲೋಕ (ಜಿ.ಟಿ. ನಾರಾಯಣರಾವ್) : ಡೆಕ್ಕನ್ ಹೆರಾಲ್ಡ್

೧೦. **ಶ್ರೀ ಶ್ರೀ ಬಾಬಾರವರ ಶಾಸನಗಳು ಮತ್ತು ಅಮೃತವಾಣಿಗಳು :** ಹಿಂದು ೧೮-೫-೧೯೬೯

**೨೭. ಬಾನುಲಿ ಬರಹ**

೧. ಅಯೋಧ್ಯೆಯ ಅರಸು [ರೂಪಕ]
೨. ಇಂದಿನ ಸಾಹಿತ್ಯದ ಕೆಲವು ಸಮಸ್ಯೆಗಳು [ಭಾಷಣ]
೩. ಕನ್ನಡ ಸಣ್ಣ ಕಥೆ [ಭಾಷಣ]
೪. ಕರೀಮದ್ದು – ಬಿಳೀಹಾವು [ನಾಟಕ]
೫. ಕಾರ್ತಿಕೇಯ [ಸಂಭಾಷಣೆ] ೧೧–೧೨–೧೯೫೬
೬. ಕೈಕೋಲು [ಮಕ್ಕಳ ಕಾರ್ಯಕ್ರಮ]
೭. ಗಾಂಧಿಸ್ಮೃತಿ ೧೦–೮–೧೯೭೯
೮. ಜನ್ನನ ಯಶೋಧರ ಚರಿತೆ [ರೂಪಕ]
೯. ಜೀರ್ಣೋದ್ಧಾರ [ಸಣ್ಣಕತೆ] ಪ್ರ : ಸಮಾಜ ಕಲ್ಯಾಣ
೧೦. ಜೈಮಿನಿ ಭಾರತ [ರೂಪಕ] ಪ್ರ : ಜೀವನ
೧೧. ದಂಡಿಗೆ ಬೆತ್ತ ಹಿಡಿಸಿದಳಯ್ಯ [ರೂಪಕ] ೧೭–೧–೧೯೮೧
೧೨. ಬಾಲಬಸವೇಶ್ವರ [ರೂಪಕ–ಮಕ್ಕಳ ಕಾರ್ಯಕ್ರಮ]
೧೩. ಮಾದನ ಮಗಳು [ರೇಡಿಯೋ ರೂಪಾಂತರ] ಧಾರವಾಡ ನಿಲಯ ೧೬–೧೨–೧೯೭೩
೧೪. ಮಾಲಿನಿ [ನಾಟಕ] ಮೂಲ : ರವೀಂದ್ರನಾಥ ಠಾಕೂರ್, ಪ್ರ : ಜೀವನ
೧೫. ಮೋಹನ ಮುರಲಿ [ರೂಪಕ]
೧೬. ಯತ್ರನಾರ್ಯಸ್ತು ಪೂಜ್ಯತೆ [ರೂಪಕ] ಪ್ರ : ಸಮಾಜ ಕಲ್ಯಾಣ
೧೭. ಯುಗಧರ್ಮವಾಣಿ [ಗೇಯರೂಪಕ]
೧೮. ಸಾಹಿತ್ಯ ಸ್ಮೃತಿಗಳು [೧ ರಿಂದ ೫]
೧೯. ಪುರಂದರದಾಸರು ಮತ್ತು ದಾಸಕೂಟ [ಭಾಷಣ]
೨೦. ಡಾ॥ ಜಿ.ಪಿ. ರಾಜರತ್ನಂ [ಭಾಷಣ] ನವೆಂಬರ್ ೧೯೮೦
೨೧. ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣ [ಭಾಷಣ] ಪ್ರ : ಮಣಿಹ
೨೨. ಹೋರಾಟ [ರೂಪಕ] ಏಪ್ರಿಲ್ ೧೯೬೦
೨೩. ಹೊಸಗನ್ನಡ ಕವಿತೆಯಲ್ಲಿ ಹೇಮಂತ ಋತು ವರ್ಣನೆ [ಭಾಷಣ] ೧೩–೧೦–೬೧ ಪ್ರ : ಶಾರದಾ ಮಂದಿರ

14. Nagari as the First-script of India (A note) ; Old Kannada Souvenir of the First world Kannada meet-Nagapur times, 25-2-1974.
15. Relavance of Grammar in the Study of Poetics : Mythic Society Journel. LXV-2, 1974 : pp : 24-31.
16. Study of Language-Aids & Means, Hindu.
17. Social Function and Ideology of a writer : 1977
18. Sastra Literature during the Kalyana Chalukyan Period. Mysthic Society Journal, Feb : 1976.
19. Sree Purandara Dasa : Life and Thought : 9th National Geetha Gyana Yagna, Bangalore 1981.
20. Sri Ramapattabhishekam by Masti : (Short Note)
21. Taddhita (Derivative) Suffixes in Kannada : Un published.
22. "Bankimachandra" : Note on the Biography of Bankimchandra by Dr. A.R.K.
23. 'Antiquity of Kannada' : Nagapur Karnataka Sangha Souvernir (1974)
24. "Kannada : 1965-1760" Karnataka through the ages 1968.
25. The Place of Kanaka Dasa in Haridasa Literature : (Indluded in "Priceless gold", Publised by Kalidasa Samskitika Sanga, Bangalore)

<u>ಭಾರತೀಯ ಸಾಹಿತ್ಯ ವಿಶ್ವಕೋಶಕ್ಕೆ ಬರೆದ ಕಿರುಲೇಖನಗಳು</u>

1. Brahmashiva
2. Chamarasa
3. Chikkadeva Raja
4. Duragasimha
5. Mummadi Krishana Raja
6. Anthologies of Poetry and Prose in Kannada
7. Ashtaka in Kannada Poetry.
8. Harikatha in Kannada
9. Basavappa Shastri
10. Halakatti, P.G.

೧೧. **ಮದುವೆ ಬೇಕೆ (ಎನ್. ಸೀತಾರಾಮಶಾಸ್ತ್ರಿ)** : ಡೆಕ್ಕನ್ ಹೆರಾಲ್ಡ್
೧೨. **ಸಮಾಜ ಗರ್ಭದಲ್ಲಿ ಜನಿವಾರ ಮತ್ತು ಶಿವದಾರ** : ಹಿಂದು ೩೦–೭–೧೯೫೫
೧೩. **ಸುಗ್ಗಿಯ ಕಣ (ವಿರೂಪಾಕ್ಷ)** : ಹಿಂದು ೨೯–೫–೧೯೬೦
೧೪. **ಶಬ್ದಮಣಿ ದರ್ಪಣ ದಿಗ್ದರ್ಶನ (ದೊಡ್ಡಸ್ವಾಮಿ)** : ಡೆಕ್ಕನ್ ಹೆರಾಲ್ಡ್
೧೫. **ಡಾ: ಜಾಕೀರ್‌ಹುಸೇನ್ (ಮುತ್ತೂರು ಕೃಷ್ಣಮೂರ್ತಿ)** : ಡೆಕ್ಕನ್ ಹೆರಾಲ್ಡ್

**೩೦. ಇಂಗ್ಲಿಷ್ ಬರಹಗಳು**

1. Adoption of Devenagari as an Additional sript for use in Karnataka in particular and in India in General : (Unpublished)
2. A note on the Historical Information in Neminatha Purana by Karnaparya (C 1140)-Unpublished.
3. Art and Architecture : Kaustubha 1975
4. Biographical Writings in Kannada, 1979 (Comparative Indian literature Kerala Sahitya Akademy)
5. Creative writing : P.E.N. 1955.
6. The case system in Kannada : Kannada Studies Vol. : 2-2, 1966.
7. Contribution for symposiam : Traditional Values Modern thinking : Deccan Herald.
8. Chavundaraya and Attimabbe : March of Karnataka 1981 (March)
9. Etymology of silahara-Unpublished.
10. Kannada Literary Journals : P.E.N. August 1963.
11. Kannada Vs Sanskrit ? No. Deccan Herald, 1979.
12. Kavirajamargam : 1982
13. Goravas of Karnataka : Sri Kanthika Mysore 1973 : PP 316-322.

## ಅನುಬಂಧ – ೫

## ಎಂ.ವಿ.ಸೀ. ಅವರನ್ನು ಕುರಿತ ಗ್ರಂಥ–ಲೇಖನ ಸೂಚಿ

೧. **ಆಸ್ವಾದ (ಎಂ.ವಿ.ಸೀ. ಅವರಿಗೆ ಅರ್ಪಿಸಿದ ಅಭಿನಂದನಗ್ರಂಥ)**
ಸಂ : ಶ್ರೀವತ್ಸ, ಅನಂತಪದ್ಮನಾಭರಾವ್, ಎಚ್.ಎಂ. ರಂಗನಾಥ್
ಪ್ರ : ಉದಯಭಾನು ಕಲಾಸಂಘ (ರಿ) ಬೆಂಗಳೂರು ೧೯೮೩

೨. **ಎಂ.ವಿ. ಸೀತಾರಾಮಯ್ಯ (ಕಿರಿಪರಿಚಯ–ನುಡಿಮುತ್ತುಗಳು)**
ಲೇ : ಎಸ್.ವಿ. ಶ್ರೀನಿವಾಸರಾವ್ ೨೦೦೯
ಪ್ರ : ಎಂ.ವಿ.ಸೀ. ಶತಮಾನೋತ್ಸವ ಸಮಿತಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

೩. **ಎಂ.ವಿ.ಸೀ. ೮೦ (ಪರಿಚಯ ಗ್ರಂಥ) ೧೯೮೯**
ಸಂ : ವಿ. ವೆಂಕಟರಾವ್, ನಾ ಗೀತಾಚಾರ್ಯ
ಪ್ರ : ಎಂ.ವಿ.ಸೀ. ೮೦ : ಅಭಿನಂದನ ಸಮಿತಿ, ಬೆಂಗಳೂರು

೪. **ಮರೆಯಲಾಗದ ನೆನಪು (ಎಂ.ವಿ.ಸೀ. ಕುರಿತು)**
ಸಂ : ಎಂ.ಎಸ್. ಭಾಸ್ಕರ್ ೨೦೧೦
ಪ್ರ : ಲಿಪಿ ಪ್ರಕಾಶನ, ಬೆಂಗಳೂರು

೫. **ಮಕ್ಕಳ ಎಂ.ವಿ.ಸೀ. (ಜೀವನ ಚರಿತ್ರೆ) ೨೦೧೦**
ಲೇ : ಬೆ. ಗೋ ರಮೇಶ್
ಪ್ರ : ಎಂ.ವಿ.ಸೀ. ಶತಮಾನೋತ್ಸವ ಸಮಿತಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೬. **ಎಂ.ವಿ.ಸೀ. ಸ್ಮರಣೆ (ವಿವಿಧ ಲೇಖಕರು)**
೧೯೯೨ ಸಂ : ನಾ. ಗೀತಾಚಾರ್ಯ
ಪ್ರ : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

11. Awards, Literary
12. Elegy in Kannada Poetry.
13. Encyclopedia's in Kannada
14. Institutions (Literary)
15. Gadayuddha.
16. Grammars in Kannada
17. Kirtana Poems in Kannada
18. Poetics in Kannada.
19. Research (Kannada Literary)
20. Sarvajna
21. Ranna

<u>೩೧. ಇತರೆ</u>

೧. **ಏಕಲಿಪಿ ಸಮಸ್ಯೆ :** ವಿಚಾರವಾಣಿ, ಮಂಗಳೂರು ೧೯೫೬.
೨. **ಒಂದು ಸ್ಮರಣೀಯ ಸಂದರ್ಶನ :** ಡಿ.ವಿ.ಜಿ. ಅವರೊಂದಿಗೆ : ಜೀವನ.
೩. **ಕನ್ನಡ ನಾಟಕ (ಭಾಷಣ)** ಕನ್ನಡ ನುಡಿ (ಸಾರಾಂಶ ಪ್ರಕಟನೆ) ೬–೬–೧೯೪೮
೪. **ಕನ್ನಡ ಟೈಪರೈಟರಿಗೊಂದು ಕೀ ಬೋರ್ಡ್ :** ಜೀವನ ೧೯೫೩
೫. **ಗೊಮ್ಮಟ ದರ್ಶನ :** ಉದಯವಾಣಿ, ದೀಪಾವಳಿ ವಿಶೇಷಾಂಕ ೧೯೮೦.
೬. **ನಾನು ಮತ್ತು ನನ್ನ ಸಾಹಿತ್ಯ (ಭಾಷಣ)** ವ್ಯಾಕರಣ ಗ್ರಂಥಕ್ಕೆ ಪ್ರಶಸ್ತಿ ನೀಡಿದ ಸಂದರ್ಭದಲ್ಲಿ ೧೯೮೧
೭. **ಪಂಚಶೀಲ (ಭಾಷಣ–ಬುದ್ಧಜಯಂತಿಗೆ)** ಮಲೆನಾಡು, ೩–೩, ಮೇ, ೫೬ ಪು. ೯.

೭. **ಕಲಾರಾಘವ (ಸಂಸ್ಮರಣ ಸಂಚಿಕೆ) ೧೯೯೧**
ಸಂ : ಬಿ.ಎಸ್. ವೆಂಕಟರಾಜು, ನಾ ಗೀತಾಚಾರ್ಯ
ಪ್ರ : ಎಂ.ವಿ.ಸೀ. ಸಂಸ್ಮರಣ ಸಮಿತಿ, ಬೆಂಗಳೂರು

೮. **ಎಂ.ವಿ.ಸೀ ನೀತಿ ಮುತ್ತು**
–ಎಸ್.ವಿ. ಶ್ರೀನಿವಾಸರಾವ್
ಪ್ರ. ಎಂ.ವಿ.ಸೀ. ಶತಮಾನೋತ್ಸವ ಸಮಿತಿ ಪ್ರಕಟನೆ

೯. ಲೋಚನ (ಜನವರಿ–ಜೂನ್ ೨೦೧೧) ನಂ ೨೫, ಸಂ.೦೧
ಎಂವಿಸೀ ಜನ್ಮಶತಮಾನೋತ್ಸವ ವಿಶೇಷ ಸಂಚಿಕೆ.

೧೦. ಕನ್ನಡ ಪಠ್ಯ ಪುಸಕ್ತ ಪ್ರದೀಪಿಕೆ (ವಿಮರ್ಶಾತ್ಮಕ ಲೇಖಗಳ ಸಂಕಲನ)
ಸಂ : ಕೆ.ವೆಂಕಟರಾಮಪ್ಪ, ಎಂ.ವಿ.ಸೀ ಜಿ ವೆಂಕಟಸುಬ್ಬಯ್ಯ
ಪ್ರ : ಇಂಟರ್ ಮೀಡಿಯೇಟ್ ಕಾಲೇಜ್, ಬೆಂಗಳೂರು ೧೯೫೭

೧೧. ಕೆಳಕಂಡ ೧೨ ಎಂವಿಸೀ ಸಮಗ್ರ ಸಾಹಿತ್ಯ ಸಂಪುಟಗಳಿಗೆ ಸಂಪಾದಕರು ಬರೆದ ಪ್ರಸ್ತಾವನೆಗಳು.
ಅ) ಎಂವಿಸೀ ಕಾವ್ಯಸಂಪುಟ
ಆ) ಎಂವಿಸೀ ಸಣ್ಣಕಥೆಗಳ ಸಂಪುಟ
ಇ) ಎಂವಿಸೀ ಪ್ರಬಂಧಗಳು, ವ್ಯಕ್ತಿ ಚಿತ್ರಗಳ ಸಂಪುಟ
ಈ) ಎಂವಿಸೀ ಕಾವ್ಯ ಮೀಮಾಂಸೆ–ಸಾಹಿತ್ಯ ವಿಮರ್ಶೆ ಸಂಪುಟ
ಉ) ಎಂವಿಸೀ ಮಕ್ಕಳ ಸಾಹಿತ್ಯ ಮತ್ತು ನಾಟಕ ಸಂಪುಟ
ಊ) ಎಂವಿಸೀ ವ್ಯಾಕರಣ ಮತ್ತು ಛಂದಸ್ಸ ಸಂಪುಟ
ಋ) ಎಂವಿಸೀ ಮುನ್ನುಡಿ ಲೇಖನ ಭಾಷಣ ಸಂಪುಟ
ೠ) ಎಂವಿಸೀ ಜೀವನಚರಿತ್ರೆ–ಅನುವಾದ ಸಂಪುಟ
ಎ) ಎಂವಿಸೀ ಗ್ರಂಥಸಂಪಾದನೆ ಹಸ್ತಪ್ರತಿ ಸಂಪುಟ
ಏ) ಎಂವಿಸೀ ವಿಚಾರಸಾಹಿತ್ಯ ಸಂಪುಟ
ಐ) ಎಂವಿಸೀ ಇಂಗ್ಲಿಷ್ ಲೇಖನ ಸಂಪುಟ
ಓ) ಎಂವಿಸೀ ಕಾದಂಬರಿ ಸಂಪುಟ

* * * *



# ಗುಂಪು ೧ – ಆತ್ಮಕಥೆ

೧. ನನ್ನ ಸಾಹಿತ್ಯ ಜೀವನ ಸ್ಮೃತಿಗಳು
೨. ವಿದ್ಯಾರ್ಥಿಯಾಗಿ ನಾನು ಕಂಡಂತೆ



# ನನ್ನ ಸಾಹಿತ್ಯ ಜೀವನ ಸ್ಮೃತಿಗಳು

**ಪ್ರಾರಂಭ ವರ್ಷದ ಪ್ರೇರಣೆಗಳು**

ಬರಹಗಾರನ ಬದುಕಿಗೂ ಅವನ ಬರಹಕ್ಕೂ ಯಾವ ಸಂಬಂಧವೂ ಇಲ್ಲ, ಕೃತಿ ವಿಮರ್ಶೆ ಕೃತಿಕಾರನ ಬದುಕನ್ನು ಅಗತ್ಯವಾಗಿ ಗಮನಿಸಬೇಕಾಗಿಲ್ಲ, ಎನ್ನುವ ಒಂದು ಪಂಥವಿದೆ, ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲಿ. ನಾನು ಈ ಪಂಥಕ್ಕೆ ಸೇರಿದವನಲ್ಲ. ಪರಿಸರದ ಪ್ರಭಾವದಿಂದ ವ್ಯತ್ಯಾಸಹೊಂದುತ್ತ. ಬೆಳೆಯುತ್ತ ಹೋಗುವ ಅವನ ವ್ಯಕ್ತಿತ್ವ, ಅವನ ನಿತ್ಯದ ಬದುಕು, ಇವು ಅವನ ಸಾಹಿತ್ಯ ಜೀವನದ ಮೇಲೆ ಮುದ್ರೆಯೊತ್ತುತ್ತೆ. ನಿತ್ಯದ ಬದುಕು–ಬರಹದ ಬದುಕು, ಇವುಗಳ ಅಂಟು–ನಂಟು ನನ್ನ ಅನುಭವಕ್ಕೂ ಬಂದಿದೆ. ನನ್ನ ಕೈವಾಡವಿಲ್ಲದೆ ಸಂಭವಿಸಿದ ಬದುಕಿನ ಸಂಗತಿಗಳು ನನ್ನ ಸಾಹಿತ್ಯಜೀವನವನ್ನು ರೂಪಿಸಿವೆ. ಮೇಲುನೋಟಕ್ಕೆ ಕಾರಣವಿಲ್ಲದ ಕಾರ್ಯವಾಗಿ, ಅನಿರೀಕ್ಷಿತ ಸೋಜಿಗದ ಸಂಗತಿಯಾಗಿ ಕಂಡರೂ ನನ್ನ ಸಾಹಿತ್ಯಕಾರ್ಯದ ಬೀಜ ನನ್ನ ಬದುಕಿನಲ್ಲಿ, ಹುಟ್ಟಿನಲ್ಲಿ ಹುದುಗಿದೆ. ನನ್ನ ಸಾಹಿತ್ಯ ನಿರ್ಮಾಣ ಶಕ್ತಿ, ಭಾಷಾ ಸಾಮರ್ಥ್ಯ, ಆಸ್ತಿಕ್ಯ, ಆಧ್ಯಾತ್ಮಿಕ ದೃಷ್ಟಿ, ಪಾಂಡಿತ್ಯ ಮುಂತಾಗಿ – ನನ್ನ ಈವರೆಗಿನ ಬರವಣಿಗೆಯ ರಾಶಿಯಲ್ಲಿ ಯಾವ ಯಾವ ವಿಶೇಷ ಲಕ್ಷಣಗಳು ಕಾಣಿಸಿಕೊಂಡಿವೆಯೋ ಅವೆಲ್ಲ, ವಾಗ್ಗೇಯಕಾರ ಭಕ್ತಕವಿ– ನನ್ನ ಮುತ್ತಜ್ಜ– ತಿಮ್ಮಪ್ಪದಾಸರಿಂದ ನನಗೆ ಆನುವಂಶಿಕವಾಗಿ ದೊರೆತ ಪಿತ್ರಾರ್ಜಿತ ಎಂದು ಈಚೆಗೆ ನನ್ನ ತಿಳಿವಳಿಕೆಗೆ ಬಂದಿದೆ. ಇದರ ಜೊತೆಗೆ, ಬಹುಶಃ ಜನ್ಮಾಂತರಗಳ ಸಂಸ್ಕಾರ–ವಿಶೇಷ, ಹಾಗೂ ಈ ಜನ್ಮದ ನನ್ನ ಪ್ರಯತ್ನಗಳನ್ನು, ಇವು ಸ್ವಯಾರ್ಜಿತ. ಈ ಕಾರ್ಯ–ಕಾರಣ ಸರಣಿಯನ್ನು adinfinitum ಆಗಿ, ಸ್ವಯಾರ್ಜಿತ, ಈ ಕಾರ್ಯ–ಕಾರಣ ಸರಣಿಯನ್ನು ಕಾರಣಾನಾಂ" ಆದ ಆದಿಮೂಲವನ್ನು ತಲುಪುತ್ತದೆ. ಈ ಬರೆಯುವ ಶಕ್ತಿ, ಪ್ರತಿಭೆ, ದೈವದತ್ತ–ವಾಗ್ದೇವಿಯ ವರಪ್ರಸಾದ– ಎಂದರೂ ಇದೇ ಅರ್ಥ– ಎಂದು ನನಗೆ ತೋರುತ್ತದೆ.

---

ಪ್ರಕಟಣೆ: ಆಕಾಶವಾಣಿಯ ಕೃಪೆ

ನಾನು ಮಾಧ್ಯಮಿಕ ಶಾಲೆಯನ್ನು ಸೇರುವ ವೇಳೆಗೆ ಚಿತ್ರ ಬರೆಯುವ ಗೀಳು, ಪದ್ಯ ಬರೆಯುವುದಕ್ಕಿಂತ ಮೊದಲೇ ಹೇಗೆ ಹಿಡಿದಿತ್ತು ಎನ್ನುವುದನ್ನು ಈಗಾಗಲೇ ಸೂಚಿಸಿದ್ದೇನೆ. ಆ ವಿಚಾರವನ್ನು ಇಲ್ಲಿ ಬೆಳೆಸುವುದಿಲ್ಲ. ಚಿತ್ರಕಲೆಯಲ್ಲಿ ಸಿದ್ಧಿಪ್ರಸಿದ್ಧಿಗಳನ್ನು ಪಡೆಯದಿದ್ದರೂ, ದಿವಂಗತ ಕೆ. ವೆಂಕಟಪ್ಪ, ಗುರುಗಳಾದ ಟಿ.ಎಸ್. ವೆಂಕಣ್ಣಯ್ಯ ಮುಂತಾದವರ ಮೆಚ್ಚುಗೆ ಗಳಿಸುವ ಮಟ್ಟಿಗೆ, ಅದರಲ್ಲಿ ತಕ್ಕಮಟ್ಟಿನ ಪರಿಣತಿ ಪಡೆದಿದ್ದೆ. ನನ್ನ ಕೆಲವು ಸಾಹಿತ್ಯ ಕೃತಿಗಳಿಗೆ ಚಿತ್ರಕಲೆಯ ವಿಚಾರ ವಸ್ತುವಾಗಿದೆ; ಒಟ್ಟಿನಲ್ಲಿ ಅದರ ಪ್ರಭಾವ ನನ್ನ ಸಾಹಿತ್ಯ ರಚನೆಯ ಮೇಲೆ ಗಮನಾರ್ಹವಾಗಿದೆ. ಕ್ರಮ–ಕ್ರಮವಾಗಿ, ನನ್ನ ಸಾಹಿತ್ಯದ ಉಪಾಸನೆ ಚಿತ್ರಕಲೆಯ ಸಾಧನೆಯನ್ನು ಹಿಂದಿಕ್ಕಿತು.

ನಾನು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ, ನನ್ನ ದೊಡ್ಡಮ್ಮನ (ತಾಯಿಯ ಅಕ್ಕ) ಒಬ್ಬ ಮಗ ಟೀಚರ್ಸ್ ಟ್ರೇನಿಂಗ್ ಪರೀಕ್ಷೆಗಾಗಿ ನಮ್ಮ ಮನೆಯಲ್ಲಿ ಓದಿಕೊಂಡಿದ್ದ. ಆತ ವೆಂಕಟಾಚಾರ್ಯರ, ಗಳಗನಾಥರ ಕಾದಂಬರಿಗಳನ್ನು ತಂದು ಒಮ್ಮೊಮ್ಮೆ ಗಟ್ಟಿಯಾಗಿಯೇ ಓದುತ್ತಿದ್ದ. ಈ ಓದು, ನನ್ನಲ್ಲಿ ಆಸಕ್ತಿ ಹುಟ್ಟಿಸಿ, ನಾನೂ ಅವುಗಳನ್ನು ಕೈಗೆತ್ತಿಕೊಂಡು ಓದುವಂತೆ ಮಾಡಿತು. ವೆಂಕಟಾಚಾರ್ಯರ 'ಅಡವಿಯ ಹುಡುಗಿ', 'ಆನಂದ ಮಠ', 'ದೇವೀ ಚೌದುರಾಣಿ', 'ದುರ್ಗೇಶ ನಂದಿನಿ', ಇವು ನನಗೆ ತುಂಬ ಮೆಚ್ಚಿಗೆಯಾದವು. ನನ್ನ ಒಬ್ಬ ಸಹಪಾಠಿಯೊಂದಿಗೆ,– ಈತನ ಹೆಸರು ವೆಂಕಟರಾಯ ಎಂದು ನೆನಪು– joint authorshipನಲ್ಲಿ ವೆಂಕಟಾಚಾರ್ಯರ ಶೈಲಿಯನ್ನು ಅನುಕರಿಸಿ, ಒಂದು ಸಾಹಸಮಯ, ಪ್ರೇಮಮಯ, ಅದ್ಭುತ ರಮ್ಯ ಕಾದಂಬರಿಯನ್ನು ರಚಿಸತೊಡಗಿದ್ದೆ! ಈ ಸಾಹಿತ್ಯ ಸಾಹಸ ಮೊದಲ ಅಧ್ಯಾಯಕ್ಕೇ ಮುಕ್ತಾಯವಾಯಿತು. ಕಾದಂಬರಿಯ ಕಥಾವಸ್ತುವಿನ ಕಲ್ಪನೆಯೂ ಇರಲಿಲ್ಲ. ಕಥಾನಾಯಕ, ಕಥಾನಾಯಕಿ, ದರೋಡೆಕಾರರು, ಖಳನಾಯಕ ಮುಂತಾದ ಪಾತ್ರಗಳೇನೋ ಮನಸ್ಸಿನಲ್ಲಿ ಸುಳಿದಾಡಿ ನಿದ್ರಾಭಂಗ ಮಾಡುತ್ತಿದ್ದವು. ಗೊಂಡಾರಣ್ಯ, ಗಾಢಾಂಧಕಾರ, ಕಳ್ಳರಗುರು, ಭವಾನೀ ಠಾಕೂರ, ಸಿಡಿಲು ಮಿಂಚು ಗುಡುಗು ಮಳೆ, ಕಾಡು ಪ್ರಾಣಿಗಳ ಗರ್ಜನೆ, ಮಳೆಯಲ್ಲಿ ಸಿಕ್ಕಿಕೊಂಡ ಅನಾಥ ಬಾಲಿಕೆಯ ಅರಣ್ಯರೋದನ, ಇಂಥ ಮಾತುಗಳ ಪ್ರಯೋಗ ಮಾತ್ರ ನೆನಪಿನಲ್ಲಿದೆ.

ನಾನು ಮೈಸೂರಿನ ಬನುಮಯ್ಯನವರ ಕೊಲಿಜಿಯೇಟ್ ಹೈಸ್ಕೂಲಿನ ವಿದ್ಯಾರ್ಥಿ. ನನ್ನ ಶಾಲಾವ್ಯಾಸಂಗದ ದಿನಗಳಲ್ಲಿ ಕನ್ನಡ ಪಠ್ಯಪುಸ್ತಕಗಳ ಪದ್ಯಗಳನ್ನು ಬಾಯಿಪಾಠ ಮಾಡುವ ರೂಢಿಯಿತ್ತು. ಹೈಸ್ಕೂಲ್ ತರಗತಿಗಳಲ್ಲಿ ನಮ್ಮ ಕನ್ನಡ

ನಾನು, 'ಸಾಹಿತಿ ಆದೇನು' ಎಂದು ಕನಸು–ಮನಸಿನಲ್ಲಿಯೂ ಎಣಿಸಿರಲಿಲ್ಲ. ನನ್ನ ಒಬ್ಬ ದೊಡ್ಡಪ್ಪನ ಮಗ ನಮ್ಮ ಮನೆಯಲ್ಲೇ ಓದಿಕೊಂಡಿದ್ದ ಹೈಸ್ಕೂಲು ವಿದ್ಯಾರ್ಥಿ, ಬುದ್ಧಿವಂತ. 'ವಿಕಟ–ವಿನೋದಿನಿ', ಎಂ.ಎಸ್.ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ', ಮುಂತಾದ ಆಗಿನ ಕಾಲದ ಜನಪ್ರಿಯ ಕೃತಿಗಳನ್ನು ನನ್ನ ತಾಯಿಯ ಮುಂದೆ, ಒಮ್ಮೊಮ್ಮೆ ನಾಟಕೀಯವಾಗಿ ಓದಿ ತೋರಿಸುತ್ತಿದ್ದ. ಎಂಟು–ಹತ್ತು ವರ್ಷದ ಹುಡುಗ ನಾನು, ಆಸಕ್ತಿಯಿಂದ ಕೇಳಿಸಿಕೊಳ್ಳುತ್ತಿದ್ದೆ. ಅದೇ ಕಾಲದಲ್ಲಿ, ಶ್ರೀವೈಷ್ಣವ ವಿದ್ವಾಂಸರೊಬ್ಬರಿಂದ, ನನ್ನ ತಂದೆ, ವಾಲ್ಮೀಕಿ ರಾಮಾಯಣವನ್ನು ಪಾರಾಯಣ ಮಾಡಿಸಿದರು. ರಾಮ ಪಟ್ಟಾಭಿಷೇಕ ನೆರವೇರಿಸಿದರು. ಅವರು ತರಿಸಿಕೊಂಡಿದ್ದ ದೇವಶಿಖಾಮಣಿ ಅಳಸಿಂಗರಾಚಾರ್ಯರ ಕನ್ನಡ ರಾಮಾಯಣದ ಸಂಪುಟಗಳು ಈಗಲೂ ನನ್ನ ಬಳಿ ಇವೆ. ಆಗ ಅವುಗಳನ್ನು ನಾನು ಓದಿರದಿದ್ದರೂ, ಅವುಗಳಲ್ಲಿನ ಚಿತ್ರಗಳನ್ನು ನೋಡಿ, ರಾಮಾಯಣ ಪಾರಾಯಣದ ಭಾಗಗಳ ಕನ್ನಡ ಅನುವಾದವನ್ನು ಕೇಳಿ, ರಾಮಾಯಣದಿಂದ ಪ್ರಭಾವಿತನಾಗಿದ್ದೇನೆ. ಹನುಮಂತನ ಪಾತ್ರ, ನನ್ನ ಮನಸ್ಸನ್ನು ಸೆಳೆದಿತ್ತು. ನಮ್ಮ ಮನೆಯ ಪಕ್ಕದಲ್ಲೇ ಅರಮನೆಯ "ಆನೆಕರೋಟಿ"– ಎಂದರೆ "ಗಜಶಾಲೆ". ಹನುಮಂತನ ಚಿತ್ರ, ಆನೆಯ ಚಿತ್ರಗಳನ್ನು ಬರೆಯುವುದರಿಂದ ನನ್ನ ಚಿತ್ರ–ಲೇಖನ ಮೊದಲಾಯಿತು. ಪದ್ಯ ಬರೆಯುವ ಗೀಳು ಹಿಡಿದದ್ದು ಆಮೇಲೆ. ನನ್ನ ಸೋದರತ್ತೆ ತಾವು ಹೋಗುತ್ತಿದ್ದ ಹರಿಕಥೆಗಳಿಗೂ, ದೊಂಬಿದಾಸರ ಕುಣಿತ, ಬಯಲಾಟಗಳಿಗೂ ತಪ್ಪದೆ ನನ್ನನ್ನು ಕರೆದೊಯ್ಯುತ್ತಿದ್ದರು. ನನ್ನ ತಂದೆಯೇ ಒಮ್ಮೆ ಬೀದಿಯ ಉದ್ದಕ್ಕೂ ಚಪ್ಪರ ಹಾಕಿಸಿ, ಹರಿಕಥಾ ಸಪ್ತಾಹ ಏರ್ಪಡಿಸಿದ್ದರು. ಹರಿದಾಸರುಗಳ ಕೀರ್ತನೆಗಳು ಕಿವಿಗೆ ಬೀಳದ ದಿನವೇ ಇರಲಿಲ್ಲ. ನಮ್ಮ ಮನೆಯಲ್ಲೇ ನನ್ನ ತಂದೆ, ದೊಡ್ಡಪ್ಪ, ಪ್ರತಿ ಶನಿವಾರ ಭಜನೆ ಮಾಡುತ್ತಿದ್ದರು. 'ಪೂರ್ವಿಕರು ಮಾಡಿದ ಕೀರ್ತನೆಗಳು' ಎಂದು 'ಪೂಜಾವಿಧಾನದ ಕೀರ್ತನೆಗಳನ್ನು ಹಾಡುತ್ತಿದ್ದರು. ಈ ಕೀರ್ತನೆಗಳೇ ನಾನು ಈಚೆಗೆ ಸಂಪಾದನೆ ಮಾಡಿ, ಬೆಂಗಳೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ "ಅರ್ಚನ". ನಾಯಕ ವೆಂಕಟರಾಯರೆಂಬವರು ನಮ್ಮ ಶನಿವಾರದ ಭಜನೆಗಳಿಗೆ ಬಂದು, ದಾಸರ ಪದಗಳನ್ನು ಬಲು ಚೆನ್ನಾಗಿ ಹಾಡುತ್ತಿದ್ದರು. ಪುಸ್ತಕದ ರಾಘವೇಂದ್ರರಾಯರೆಂಬುವರು, ಮೃದಂಗ ನುಡಿಸುತ್ತಿದ್ದರು. ಇವರ ಬಳಿ ನಾನು ಮೃದಂಗ ವಾದನ ಕಲಿಯಲು ನಮ್ಮ ತಂದೆ ಏರ್ಪಾಡು ಮಾಡಿದರು. ಈ ಹಿನ್ನೆಲೆಯಲ್ಲಿ, ನನ್ನಲ್ಲಿ ಹುದುಗಿದ್ದ ಸಾಹಿತ್ಯ, ಸಂಗೀತ ಕಲೆಗಳ ಸಂಸ್ಕಾರಕ್ಕೆ ಉದ್ದೀಪನ ದೊರಕಿತು.

ತೀ.ನಂ.ಶ್ರೀಯವರ ಗಮನ ಸೆಳೆದು, ಮೆಚ್ಚುಗೆಗೆ ಪಾತ್ರವಾದವು. "ಕುರುಡ–ಭಿಕ್ಷುಕ", "ಬೋಧಿ ದರ್ಶನ", ಎಂಬ ನನ್ನ ಎರಡು ಚಿತ್ರಗಳ ಪ್ರತಿಕೃತಿಗಳನ್ನು ಪರಿಚಯ ಲೇಖನಗಳೊಂದಿಗೆ ಪ್ರಬುದ್ಧ ಕರ್ಣಾಟಕದಲ್ಲಿ ಕೆಲವು ವರ್ಷಗಳ ತರುವಾಯ ಪ್ರಕಟಿಸಿದವರು– ಅವರು. ನನ್ನ ಪದ್ಯ ರಚನೆಯ ಅಸಕ್ತಿಯೂ ಅವರ ಗಮನ ಸೆಳೆಯಿತು. ನಾನು ಎಸ್.ಎಸ್.ಎಲ್.ಸಿ. ತರಗತಿಯಲ್ಲಿದ್ದಾಗಲೇ– ೧೯೨೬ರಲ್ಲಿ ಅವರೊಮ್ಮೆ ನಮ್ಮ ಮನೆಗೆ ಎಂದಿನಂತೆ ಬಂದಿದ್ದಾಗ, ಮಾರನೆಯ ದಿನ ನನ್ನ ಹುಟ್ಟುಹಬ್ಬವೆಂಬ ಸಂಗತಿ ಅವರಿಗೆ ತಿಳಿಯಿತು. ನನ್ನನ್ನು ತಮ್ಮ ಮನೆಗೆ ಬರಮಾಡಿಕೊಂಡು, ಅದೇ ತಾನೇ ಪ್ರಕಟವಾಗಿದ್ದ 'ಶ್ರೀ'ಯವರ 'ಇಂಗ್ಲಿಷ್ ಗೀತೆ'ಗಳ ಒಂದು ಪ್ರತಿಯನ್ನು ಉಡುಗೊರೆಯಾಗಿ ಕೊಟ್ಟರು. ಅದರಲ್ಲಿನ ಪದ್ಯಗಳನ್ನು ಓದಿ, ಅರ್ಥಮಾಡಿಕೊಂಡು, ಮೆಚ್ಚಿಕೊಂಡ ಮೇಲೆ– ಈ ಪುಸ್ತಕವನ್ನೇ ಏಕೆ ಉಡುಗೊರೆಯಾಗಿ ಕೊಟ್ಟರು ಎನ್ನುವುದು ಮನವರಿಕೆಯಾಯಿತು. ಪದ್ಯರಚನೆಯಲ್ಲಿ, ಭಾವಾಭಿವ್ಯಕ್ತಿಯಲ್ಲಿ, ಹೊಸಮಾರ್ಗದ ದಿಕ್ಕೂ ಕಾಣಿಸಿತು ನನಗೆ. ಹೀಗೆ, "ಶ್ರೀ" ದ್ವಯರು ಕಾವ್ಯರಚನೆಯ ದೀಕ್ಷಾ ಗುರುಗಳಾದರು. ನನ್ನ ಬಳಿಯಿದ್ದ ಇಂಗ್ಲಿಷ್ ಕವನ ಸಂಕಲನಗಳಲ್ಲಿನ ಹಲ ಕೆಲವು ಪದ್ಯಗಳನ್ನು ಕನ್ನಡಕ್ಕೆ ಅನುವಾದ ಮಾಡಿದೆ; ಸ್ವತಂತ್ರವಾಗಿಯೂ ಕೆಲವು ಪದ್ಯಗಳನ್ನು ಬರೆದು ತೀ.ನಂ.ಶ್ರೀಯವರಿಗೆ ತೋರಿಸಿದೆ. ಮುಂದಿನ ಕೆಲವು ವರ್ಷಗಳಲ್ಲಿ, ೧೯೩೪ರಲ್ಲಿ, ನಾನು ಬೆಂಗಳೂರಿಗೆ ಬರುವವರೆಗೆ, ನಾನು ಬರೆದದ್ದನ್ನೆಲ್ಲ ಅವರಿಗೆ ತೋರಿಸುತ್ತಿದ್ದೆ. ಅವರ ರಚನಾತ್ಮಕ ವಿಮರ್ಶೆಯಿಂದ ಪ್ರಯೋಜನ ಪಡೆಯುತ್ತಿದ್ದೆ. ಬರಹಗಾರನಾಗಿ ನನ್ನ ಜನ್ಮ ವರ್ಷ ೧೯೨೬ (ನಿಜವಾದ ಜನ್ಮವರ್ಷ ೧೯೧೦).

ನನ್ನ ಬರೆವಣಿಗೆ, ತೀ.ನಂ.ಶ್ರೀಯವರ ತಿದ್ದಾಣಿಕೆ– ಇದಕ್ಕೊಂದು ಚಿಕ್ಕ ಉದಾಹರಣೆ ಕೊಡುತ್ತೇನೆ: ಪ್ರಸಿದ್ಧ ಜರ್ಮನ್ ಕವಿ ಗಯಟೆಯ ಕೆಲವು ಕಿರು ಕವನಗಳನ್ನು ಅನುವಾದ ಮಾಡಿದ್ದೆ. ಎರಡೇ ಸಾಲಿನ ಒಂದು ಮುಕ್ತಕದ ಅನುವಾದ ಹೀಗೆ ಇತ್ತು:

**ಮಾಲೆಯನು ಕಟ್ಟುವುದು ಬಲು ಸುಲಭವಹುದು:**
**ಬಲು ಕಷ್ಟ ಸರಿಯಾದ ಮುಡಿವವರನರಸುವುದು.**

ಎರಡನೆಯ ಸಾಲನ್ನು ತೀ.ನಂ.ಶ್ರೀ. "ಬಲುಕಷ್ಟ ಮಡಿವುದಕೆ ತಕ್ಕವರ ನರಸುವುದು" ಎಂದು ತಿದ್ದಿದ ಮೇಲೆ, ರಚನೆ ಹೇಗೆ ಉತ್ತಮಗೊಂಡಿತು ಎನ್ನುವದನ್ನು ಬಿಡಿಸಿಹೇಳಬೇಕಾಗಿಲ್ಲ. ಮಹಾರಾಜ ಕಾಲೇಜಿನ ಕರ್ಣಾಟಕ

ಪಂಡಿತರು ಶ್ರೀ ರಾಮಯ್ಯ ಎಂಬುವರು ಪದ್ಯಗಳನ್ನು ಚೆನ್ನಾಗಿ ಓದುತ್ತಿರಲಿಲ್ಲ. ಬೇರೆ ತರಗತಿಗಳಲ್ಲಿ ಪಾಠ ಮಾಡುತ್ತಿದ್ದ ಶ್ರೀ ಅಳಗಿರೀಶಾಚಾರ್ಯರೆಂಬವರು, ರಾಗಯುಕ್ತವಾಗಿ, ಬಲು ಚೆನ್ನಾಗಿ ಪದ್ಯವಾಚನ ಮಾಡುತ್ತಿದ್ದರು. ಅದೇ ತಾನೇ ಮಹಾರಾಜ ಕಾಲೇಜಿನ ಪಂಡಿತ ಪದವಿಯಿಂದ ವಿಶ್ರಾಂತರಾಗಿದ್ದ ಕಾನಕಾನ ಹಳ್ಳಿ ವರದಾಚಾರ್ಯರು ನಮ್ಮ ಶಾಲೆಗೆ ನೇಮಕಗೊಂಡು ಬಂದಿದ್ದರು– ನಾನು ಜೂನಿಯರ್ ಇಂಟರ್ ಮೀಡಿಯಟ್ ತರಗತಿಯಲ್ಲಿ ಓದುತ್ತಿದ್ದಾಗ; ಇವರ ಓದಾಣಿಕೆಯೂ ವಿಶಿಷ್ಟವಾಗಿ ಮನೋಜ್ಞವಾಗಿತ್ತು. ಕಳಲೆ ಕೃಷ್ಣರಾಯರು ನಮ್ಮ ಪಕ್ಕದ ಮನೆಗೆ ಬಂದು ಭಾರತವಾಚನ ಮಾಡುತ್ತಿದ್ದರು. ಪದ್ಯಗಳ ಬಾಯಿಪಾಠದ ಅಭ್ಯಾಸ, ಸುಶ್ರಾವ್ಯ ಪದ್ಯವಾಚನದ ಕೇಳ್ಮೆ– ಇವುಗಳ ಪರಿಣಾಮವಾಗಿ ಭಾಮಿನಿ, ವಾರ್ಧಕ ಮುಂತಾದ ಮಾತ್ರಾ ಛಂದಸ್ಸುಗಳ ಧಾಟಿಗಳೂ ಮನಸ್ಸಿನಲ್ಲಿ ಊರಿದ್ದವು. ಅರ್ಥಭಾವಗಳ ಕಡೆಗೆ ಗಮನವಿಲ್ಲದಿದ್ದರೂ, ಚೌಪದಿ, ಷಟ್ಪದಿ ಪದ್ಯಗಳ ರಚನೆಯಲ್ಲಿ ಕೈಯಾಡಿಸುತ್ತಿದ್ದೆ. ಕುಮಾರವ್ಯಾಸ ಭಾರತ, ಜೈಮಿನಿ ಭಾರತಗಳಲ್ಲಿ ವಿಶೇಷ ಆಸಕ್ತಿ ಬೆಳೆಸಿಕೊಂಡಿದ್ದೆ.

ಇದೇ ಕಾಲದಲ್ಲಿ, ಇಂಗ್ಲಿಷ್ ಭಾಷೆಯ ಹಲವು ಕಾದಂಬರಿಗಳನ್ನು ಓದಿ ಮುಗಿಸಿದ್ದೆ. ಕ್ಯಾಪ್ಟನ್ ಮ್ಯಾರಿಯಟ್, ಚಾರಲ್ಸ್ ಕಿಂಗ್‌ಸ್ಲಿ, ಡ್ಯಾನಿಯಲ್ ಡೀಫೋ, ಸರ್ ವಾಲ್ಟರ್ ಸ್ಕಾಟ್, ಥಾಮಸ್ ಹಾರ್ಡಿ, ಚಾರ್ಲ್ಸ್ ಡಿಕನ್ಸ್, ಮುಂತಾದ ಮಹಾ ಕಾದಂಬರಿಕಾರರ ಅನೇಕ ಕಾದಂಬರಿಗಳನ್ನು ಓದಿ ಮುಗಿಸಿದ್ದೆ. ಡಿಕೆನ್ಸ್ ಮತ್ತು ಹಾರ್ಡಿಯವರ ಜೀವನ ದರ್ಶನ ನನ್ನ ಮೇಲೆ ತಕ್ಕ ಮಟ್ಟಿನ ಪ್ರಭಾವ ಬೀರಿವೆ. ೧೬–೧೭ರ ಪ್ರಾಯದ ಓದು ಇದೆಲ್ಲ.

ನನ್ನ ದುರ್ಬಲವಾಗಿದ್ದ ಬರವಣಿಗೆಯ ಆಸಕ್ತಿಯನ್ನು ಬದುಕಿನ ಬಲವನ್ನಾಗಿ ಮಾರ್ಪಡಿಸಿದ ಒಂದೆರಡು ಸಂದರ್ಭಗಳು ಗಮನಾರ್ಹ. ನಾನು ಸೀನಿಯರ್ ಇಂಟರ್ ಮೀಡಿಯಟ್ ತರಗತಿಯಲ್ಲಿದ್ದಾಗ, ತೀ.ನಂ.ಶ್ರೀಕಂಠಯ್ಯನವರು ಕನ್ನಡ ಅಧ್ಯಾಪಕರಾಗಿ ನೇಮಕಗೊಂಡು ನನ್ನ ಗುರುಗಳಾದರು. ಅದಕ್ಕೂ ಮೊದಲೇ ನನ್ನ ಅವರ ಪರಸ್ಪರ ಪರಿಚಯ ಆಗಿ, ಸ್ನೇಹದ ಸಲಿಗೆಯಿಂದ ನಡೆದುಕೊಳ್ಳುತ್ತಿದ್ದೆವು. ಅವರ ಪರಿಚಯ ಲಾಭವಾದದ್ದು, ನಮ್ಮ ಮನೆಯಲ್ಲಿ ವಿದ್ಯಾವ್ಯಾಸಂಗಕ್ಕೆಂದು ಬಂದಿದ್ದ ನನ್ನ ಚಿಕ್ಕಮ್ಮನ (ತಾಯಿಯ ತಂಗಿ) ಮಗ ಬಿ.ನಂಜುಂಡಯ್ಯನ ಮೂಲಕ. ನಂಜುಂಡಯ್ಯನೂ ತೀ.ನಂ.ಶ್ರೀಯವರೂ ಸಹಪಾಠಿಗಳು. 'ಗಳಸ್ಯ–ಕಂಠಸ್ಯ' ಎನ್ನುವಂಥ ಸ್ನೇಹ ಅವರದ್ದು. ಸ್ನೇಹಿತನನ್ನು ನೋಡುವುದಕ್ಕೆಂದು ತೀ.ನಂ.ಶ್ರೀ. ನಮ್ಮ ಮನೆಗೆ ಬರುತ್ತಿದ್ದರು. ನನ್ನ ಚಿತ್ರಕಲೆಯ ಮಾದರಿಗಳು

ಪಠ್ಯಪುಸ್ತಕವಾಗಿ ನಾನು ಓದಿದ 'ಶ್ರೀನಿವಾಸ'ರ ಮೊದಲ ಕಥಾ ಸಂಕಲನ "ಕೆಲವು ಸಣ್ಣ ಕಥೆಗಳು". ವಾಸ್ತವವಾಗಿ ನಮ್ಮ ಕನ್ನಡ ಪಂಡಿತರು ರಾಮಯ್ಯನವರು, "ಪಾಠ ಮಾಡುವುದು ಇದರಲ್ಲಿ ಏನಿದೆ? ನೀವೇ ಓದಿಕೊಳ್ಳಿ" ಎಂದು ಈ ಪುಸ್ತಕವನ್ನು ಪಾಠ ಮಾಡಲೇ ಇಲ್ಲ! ಮುಂದೆ, ಆಂಗ್ಲ ಕಥೆಗಾರ ಕಥಾತಂತ್ರಗಳಿಂದ ಪ್ರಭಾವಿತನಾದೆ. ಅಮೆರಿಕದ ಕಥೆಗಾರ ನಥೆನಿಯಲ್ ಹಾತಾರ್ನನ Rappaccinic's Daughter, The Great Stone Face, Prophetic Pictures ಎಂಬೀ ಮೂರು ಕಥೆಗಳನ್ನು ಪ್ರಾರಂಭದಲ್ಲಿ ರೂಪಾಂತರ ಮಾಡಿದೆ. ಇವೂ, ಅನುವಾದಗೊಂಡ ಇನ್ನು ನಾಲ್ಕೂ ಕಥೆಗಳೂ ಕೂಡಿ ೧೯೩೬ರಲ್ಲಿ "ಶಿಲಾಮುಖ" ಎಂಬ ಹೆಸರಿನ ಸಂಕಲನದಲ್ಲಿ ಪ್ರಕಟವಾದವು. ಶಿಕ್ಷಕ–ಶಿಕ್ಷಣ ಶಾಲಾ ತರಗತಿಗಳಿಗೆ ಪಠ್ಯವೂ ಆಯಿತು. ಈ ಅನುವಾದಗಳಿಂದಾಗಿ, ಕತೆ ಬರೆಯುವ ಕಲೆಯಲ್ಲಿ ಕೈ ಕುದುರಿತು. ಜೊತೆ–ಜೊತೆಗೇ ಸ್ವತಂತ್ರ ಕತೆಗಳನ್ನೂ ಬರೆಯತೊಡಗಿದೆ. ಮೊತ್ತ ಮೊದಲಕತೆ 'ದೋಸೆಯ ಆಸೆಯೋ?' (೧೯೨೬) ಕಾಲೇಜಿನ ಯೂನಿಯನ್ ಪತ್ರಿಕೆಯಲ್ಲಿ ಪ್ರಕಟವಾದ ಹಾಗೆ ನೆನಪು. ಪತ್ರಿಕೆಯ ಸಂಚಿಕೆಯಾಗಲೀ, ಕತೆಯ ಹಸ್ತಪ್ರತಿಯಾಗಲೀ ಈಗ ಸಿಕ್ಕುವಂತಿಲ್ಲ. ಸ್ವತಂತ್ರ ಕತೆಗಳ ಸಂಕಲನ 'ಮಾರ್ಗದರ್ಶಕ' ೧೯೪೦ರಲ್ಲಿ ಪ್ರಕಟವಾಯಿತು. ನಾನು ಬಿ.ಎ. ತರಗತಿಯಲ್ಲಿದ್ದಾಗಲೇ ಬರೆದ "ಹೆಸರುಗಳು" ಮತ್ತು "ಮುಗಿಲುಗಳು" ಎಂಬೆರಡು ಲಲಿತ ಪ್ರಬಂಧಗಳು ಕಾಲೇಜು ಯೂನಿಯನ್ ಪತ್ರಿಕೆಯಲ್ಲಿ ಪ್ರಕಟವಾದವು. ಅಂದು ಬರೆದ 'ಮುಗಿಲುಗಳು' ಇಂದಿಗೂ ಸಹೃದಯರ ಮೆಚ್ಚುಗೆಗೆ ಪಾತ್ರವಾಗಿ, ಅನೇಕ ಸಂಕಲನಗಳಲ್ಲಿ ಸೇರ್ಪಡೆಯಾಗಿದೆ. ವಜ್ರಮಹೋತ್ಸವದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಪ್ರಬಂಧಗಳ ಇಂಗ್ಲಿಷ್ ಅನುವಾದದ ಸಂಕಲನದಲ್ಲಿ ಈಚೆಗೆ ಸೇರ್ಪಡೆಯಾಗಿದೆ. "ಕೃತಿಯ ಗುಣಮುಖ್ಯವೇ ಹೊರತು, ಅದನ್ನು ಕೃತಿಕಾರ ಯಾವ ವಯಸ್ಸಿನಲ್ಲಿ ಬರೆದ ಎನ್ನುವುದು ಅಷ್ಟು ಮುಖ್ಯವಲ್ಲ"– ಎನ್ನುವುದು ಈ ಪ್ರಬಂಧದಿಂದ ಗೊತ್ತಾಗುತ್ತದೆ. "ಗುಣೇಷು ಪೂಜಾಸ್ಥಾನಂ, ನಚ ವಯಃ, ನಚ ಲಿಂಗಂ" ಎಂಬ ಮಾತು ಸಾಹಿತ್ಯ ಸೃಷ್ಟಿಗೂ ಅನ್ವಯಿಸುತ್ತದೆ. ವಿದ್ಯಾರ್ಥಿಯಾಗಿದ್ದಾಗಲೇ ಬರೆದ ನಾಟಕ "ಹೂವಿನ ಆಸೆ"– ಬಾಲ ವಿಧವೆಯ ಪುನರ್ವಿವಾಹದ ವಿಷಯವನ್ನು ಕುರಿತ ನಾಟಕ– ೧೯೩೬ರಲ್ಲಿ ಪ್ರಕಟವಾಯಿತು. ಪ್ರಕಟವಾದ ಮೇಲೆ, ಹಳೆಯ ಮೈಸೂರು ರಾಜ್ಯದಲ್ಲಿ ನನಗೆ ತಿಳಿದ ಹಾಗೆ ಒಟ್ಟು ೨೦–೩೦ ಸಲ ಪ್ರದರ್ಶಿತವಾಗಿದೆ. ಶ್ರೀರಂಗರು ನನ್ನ ಒಪ್ಪಿಗೆ ಪಡೆದು, ಮೈಸೂರು ಕಡೆಯ ಭಾಷೆಯನ್ನು, ಧಾರವಾಡದ ಆಡುಮಾತಿಗೆ ತಿರುಗಿಸಿ,

ಸಂಘ ಪ್ರಕಟಿಸಿದ "ತಳಿರು" ಕವನ ಸಂಕಲನದಲ್ಲಿ (೧೯೩೦ರಲ್ಲಿ) ನನ್ನ ಎರಡು ಪ್ರಾರಂಭದ ಕವನಗಳು ಸೇರುವುದಕ್ಕೂ ತೀ.ನಂ.ಶ್ರೀ. ಮುಖ್ಯ ಕಾರಣರು. ವೆಂಕಣ್ಣಯ್ಯನವರ ಉತ್ತೇಜನವೂ ಕಡಮೆಯದಲ್ಲ. ಇಂಥ ಮಾರ್ಗದರ್ಶನದಿಂದ ಕವಿಗೆ, ಸ್ವವಿಮರ್ಶೆಯ ಶಕ್ತಿ ಲಭಿಸುತ್ತದೆ. ನಾನು, ಅನುಭವದಿಂದ ಹೇಳುವ ಮಾತು ಇದು. ಬಿ.ಎಂ.ಶ್ರೀ.ಯವರು ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ 'ರಜತ ಮಹೋತ್ಸವ ಸ್ವರ್ಣ ಪದಕ ಕವಿತಾ ಸ್ಪರ್ಧೆ'ಯನ್ನು ಏರ್ಪಡಿಸಿದ್ದರು. ಮೊದಲ ಸಲ ಕೆ.ವಿ.ಪುಟ್ಟಪ್ಪನವರು ಈ ಪದಕವನ್ನು ಪಡೆದರು. ರಾಜರತ್ನಂ, ಎಲ್.ಗುಂಡಪ್ಪ ಪಡೆದುಕೊಂಡಿದ್ದರು. ನಾನು ಜೂನಿಯರ್ ಎಂ.ಎ. ತರಗತಿಗೆ ಬಂದಾಗ, ನನಗೂ ಸ್ಪರ್ಧಿಸುವ ಆಸೆಯಾಯಿತು. ಭಗ್ನ ಪ್ರಣಯಿಯಾದ ಚಿತ್ರಗಾರನೊಬ್ಬನ ವಿರಹ ಉನ್ಮಾದಕ್ಕೆ ತಿರುಗಿದ ಸ್ವಕಪೋಲ ಕಲ್ಪಿತ ವಸ್ತುವನ್ನು ಆಧರಿಸಿ, ಸರಳ ರಗಳೆಯಲ್ಲಿ ನೀಳ್ಗವನವೊಂದನ್ನು ರಚಿಸಿದೆ. ಸುಮಾರು ೧೫೦ ಪಂಕ್ತಿಗಳು. ತೀ.ನಂ.ಶ್ರೀಯವರಿಗೆ ತೋರಿಸಿದೆ. ಓದಿ, ಏನೂ ಹೇಳದೆ ಹಿಂದಿರುಗಿಸಿದರು. ಅವರ ಮೌನವೇ ವಿಮರ್ಶೆಯಾಗಿತ್ತು. ನಾನೂ ನಿರಾಶೆಗೊಂಡರೂ, ಪ್ರಯತ್ನನ್ನು ಬಿಡಲಿಲ್ಲ. ನನ್ನ ರಚನೆಯನ್ನು ಮತ್ತೆ ಮತ್ತೆ ಓದಿದೆ. ಸಪ್ಪೆಯಾಗಿ, ಗದ್ಯರಚನೆಯಂತೆ ಕಂಡಿತು. ರಚನೆ ೩೦೦ ಪಂಕ್ತಿಗಳಿಗೆ ಕಡಿಮೆಯಿಲ್ಲದೆ ಇರತಕ್ಕದ್ದು ಎಂಬ ನಿಯಮವನ್ನೂ ತೀ.ನಂ.ಶ್ರೀ. ನನ್ನ ಗಮನಕ್ಕೆ ತಂದಿದ್ದರು. ಕೆಲವು ದಿನ ಬಿಟ್ಟು, ಪದ್ಯವನ್ನು ಮತ್ತೆ ಓದಿದೆ. ಏನೋ ಹೊಳೆಯಿತು. ಪದ್ಯದ ಪ್ರತಿಸಾಲನ್ನು ಎರಡಾಗಿ ಒಡೆದು, ಕೆಲವು ಮಾತುಗಳನ್ನು ತೆಗೆದು ಮತ್ತೆ ಕೆಲವನ್ನು ಹೊಸದಾಗಿ ಸೇರಿಸಿ, ಅಂತ್ಯಪ್ರಾಸ ಯೋಜನೆ ಮಾಡಿ, ಪ್ರತಿಮಾಡಿ, ಮತ್ತೆ ತೀ.ನಂ.ಶ್ರೀ.ಯವರಿಗೆ ತೋರಿಸಿದೆ. "ಚೆನ್ನಾಗಿದೆ ಈ ಹೊಸಪದ್ಯ, ಸ್ಪರ್ಧೆಗೆ ಕಳಿಸು" ಎಂದು ಉತ್ತೇಜನ ಕೊಟ್ಟರು. "ಹೊಸಪದ್ಯವಲ್ಲ, ಅದೇಯೆ" ಎಂದು ತಿಳಿಸಿದೆ. ಅವರು ಆಶ್ಚರ್ಯಪಟ್ಟರು. ಪದ್ಯವನ್ನು ಮಾರ್ಪಡಿಸಿದ ವಿಧಾನವನ್ನು ತಿಳಿಸಿದಾಗ ನಕ್ಕುಬಿಟ್ಟರು ಆ ಚಿತ್ರಗಳು' ಎಂಬ ಪದ್ಯವನ್ನು ಸ್ಪರ್ಧೆಗೆ ಕಳಿಸಿದೆ. ಸ್ವರ್ಣಪದಕವೂ ಲಭಿಸಿತು. ಈ ಪದ್ಯ "ಆ ಚಿತ್ರಗಳು ಮತ್ತು ಇತರ ಕಥನ ಕವನಗಳು" ಎಂಬ ಸಂಕಲನದಲ್ಲಿ ಸೇರಿದೆ.

ಹೀಗೆ, ತೀ.ನಂ.ಶ್ರೀ. ಅವರ ಉತ್ತೇಜನದಿಂದ ೧೯೨೬ರಿಂದ ಪ್ರಾರಂಭವಾದ ಕಾವ್ಯರಚನೆಯ ಪ್ರಯತ್ನಗಳ ಜೊತೆ–ಜೊತೆಯಲ್ಲೇ, ಲಲಿತಪ್ರಬಂಧ, ಸಣ್ಣಕಥೆ, ನಾಟಕ, ಈ ಸಾಹಿತ್ಯ ಪ್ರಾಕಾರಗಳಲ್ಲಿಯೂ ನನ್ನ ಪ್ರಾರಂಭದ ಕೃತಿರಚನೆ ಸಾಗಿತು. ಸಣ್ಣಕಥೆಗಳ ರಚನೆಗೆ ಪ್ರೇರಣೆ ನೀಡಿದ್ದು, ಎಸ್.ಎಸ್.ಎಲ್.ಸಿ. ತರಗತಿಯಲ್ಲಿ

ಬರಹದ ಶಕ್ತಿಯಲ್ಲಿ. ಪ್ರತಿಭೆ ಎನ್ನುವುದು ಸಹಜವಾದ ಸೃಷ್ಟಿಕಾರ್ಯ ಸಾಮರ್ಥ್ಯ. ಕೆಲವರಲ್ಲಿ ಇದು ತೀವ್ರ; ಕೆಲವರಲ್ಲಿ ಇದು ಮಂದ. ಅಂತೂ, ಈಗ ಹೇಳಿದ ಎಲ್ಲ ಕಾರಣಗಳೂ ತನ್ನ ಸಾಹಿತ್ಯ ಸೃಷ್ಟಿಗೆ ನೆರವಾಗಿವೆ. 'ನವೋದಯ' ಎನ್ನುವುದು, ಈಚೆಗೆ ಬಳಕೆಗೆ ಬಂದ ಮಾತು; ಆಗ 'ಆಧುನಿಕ ಸಾಹಿತ್ಯ' ಎನ್ನುವ ಮಾತು ಬಳಕೆಯಲ್ಲಿತ್ತು. ಸಾಹಿತ್ಯ ವಿಮರ್ಶೆಯಲ್ಲಿ ನಿರ್ದೇಶನ ಸೌಕರ್ಯಕ್ಕಾಗಿ ಬಳಸುವ ಮಾತುಗಳು ಇವು. ಈ ನವೋದಯ ಯುಗದಲ್ಲಿ ಬೆಳಕಿಗೆ ಬಂದ ತರುಣರ ಪೀಳಿಗೆಗೆ ಸೇರಿವನು ನಾನು. ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘ ಪ್ರಕಟಿಸಿದ 'ಕಿರಿಯ ಕಾಣಿಕೆ' ಮತ್ತು 'ತಳಿರು' ಕವನ ಸಂಕಲನಗಳಲ್ಲಿ ಕಾಣಿಸಿಕೊಂಡ ಕುವೆಂಪು, ಪು.ತಿ.ನರಸಿಂಹಾಚಾರ್, ತೀ.ನಂ.ಶ್ರೀ., ಎಲ್.ಗುಂಡಪ್ಪ, ರಾಜರತ್ನಂ, ದಿನಕರ ದೇಸಾಯಿ– ಈ ಕವಿಗಳ ಬಳಗದಲ್ಲಿ ನನಗೂ ಎಡೆ ಕೊಟ್ಟಿತು ಸಂಘ. ಈ ಸಂಘಕ್ಕೆ ನಾನು ಕೃತಜ್ಞ, ಆ ಬಳಗಕ್ಕೆ ಸೇರಿದವನು ಎಂಬ ಕ್ಷಮ್ಯವಾದ ಹೆಮ್ಮೆ ನನಗೆ. ಆ ಕಾಲದ ಕವಿಗಳಲ್ಲಿ ಕಂಡುಬಂದ ಯುಗ ಲಕ್ಷಣಗಳೆಲ್ಲ– ಹೆಚ್ಚಾಗಿಯೋ, ಕಡಮೆಯಾಗಿಯೋ– ನನ್ನ ಕೃತಿಗಳಲ್ಲೂ ಕಂಡುಬಂದಿವೆ. ಇವುಗಳಲ್ಲಿ ಪ್ರಕೃತಿ ಪ್ರೇಮ, ಪ್ರಕೃತಿಯ ಆರಾಧನೆ, ಒಂದು ಮುಖ್ಯ ಲಕ್ಷಣ. ಪ್ರಾಚೀನ ಸಂಸ್ಕೃತ–ಕನ್ನಡ ಕಾವ್ಯಗಳಲ್ಲಿ ನಮ್ಮ ಕವಿಗಳು ಪ್ರಕೃತಿಯನ್ನು ಕಂಡು ವರ್ಣಿಸುತ್ತಿದ್ದ ವಸ್ತುನಿಷ್ಠ ರೀತಿಗೂ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳು ವರ್ಣಿಸುತ್ತಿದ್ದ ವ್ಯಕ್ತಿನಿಷ್ಠ–ಸ್ವಾನುಭವ ಪ್ರಧಾನವಾದ ರೀತಿಗೂ ಇದ್ದ ವ್ಯತ್ಯಾಸ, ಭಾಷೆ ಮತ್ತು ನಿರೂಪಣೆಗಳಲ್ಲಿ ಇದ್ದ ವ್ಯತ್ಯಾಸ. "ಶ್ರೀ" ಇಂಗ್ಲಿಷ್ ಗೀತಗಳನ್ನು ಓದಿದ ಮೇಲೆ ಮನವರಿಕೆಯಾಯಿತು. ಪ್ರಕೃತಿ ಮಾತ್ರವಲ್ಲದೆ, ಗಂಡು–ಹೆಣ್ಣಿನ ಪ್ರಣಯ, ಸಾಮಾನ್ಯ ಜನಜೀವನದಿಂದ ಕಾವ್ಯವಸ್ತುವನ್ನು ಆಯ್ದುಕೊಳ್ಳುವುದು, ಈ ವಿಷಯದಲ್ಲಿಯೂ ಆಂಗ್ಲ ಕವಿಗಳೇ ನನ್ನ ಆದರ್ಶ. ನನಗೆ ಇಷ್ಟವಾದ, ಕೆಲವು ಇಂಗ್ಲಿಷ್ ಕವನಗಳನ್ನು ಅಂದು–ಇಂದೂ ಅನುವಾದ ಮಾಡಿದ್ದೇನೆ. ಇಂಗ್ಲಿಷ್ ಕವಿಗಳಲ್ಲಿ ವರ್ಡ್ಸ್‌ವರ್ತ್ ನನಗೆ ಹೆಚ್ಚು ಪ್ರಿಯ. ನಾನು, ಮಲೆನಾಡಿನ ಮಗುವಲ್ಲ; ಮೈಸೂರಿನಲ್ಲಿ ಹುಟ್ಟಿ ಬೆಳೆದವನು. ಅಲ್ಲಿನ ಸುಂದರ ಕೃತಕೋದ್ಯಾನಗಳಲ್ಲಿ ವಿಹರಿಸಿದವನಾದರೂ, ನನ್ನ ಕಣ್ಣಿಗೆ ನಿತ್ಯವೂ ಬೀಳುತ್ತಿದ್ದ, ನಿಸರ್ಗದ ನೋಟವೆಂದರೆ– ವಿಶಾಲವಾದ ನೀಲಾಕಾಶ; ನಮ್ಮ ಮನೆಯ ಬಿಸಿಲುಮುಚ್ಚಿನ ಮೇಲೆ ನಿಂತು ನೋಡಿದರೆ ಕಾಣುತ್ತಿದ್ದ, ಚಾಮುಂಡಿಬೆಟ್ಟದ ಮೇಲ್ಭಾಗ; ಅದರ ಮೇಲೆ ಹಾದುಹೋಗುತ್ತಿದ್ದ ಮೋಡದ ದಿಬ್ಬಣ; ಕಾಲೇಜು ಮೈದಾನದ ಪಡುಗಡೆಯ ಅಂಚಿನಲ್ಲಿ ರಂಜಿಸುತ್ತಿದ್ದ ಸಂಜೆಗೆಂಪಿನ ಸಿರಿವಂತಿಕೆ;

"ಹೂವಿನ ಆಸೆ"ಯನ್ನು ಪ್ರದರ್ಶಿಸಿದರು. ವಿಸ್ಮೃತಿ ಲೋಕದ ವಸ್ತುವಾದ ಈ ಕೃತಿ ಅಂದು ಒಂದು ಬಹು ಯಶಸ್ವೀ ನಾಟಕ. ಆಂಗ್ಲ ನಾಟಕಗಳ ಓದು, ಹಾಗೂ ಶಾಲೆಕಾಲೇಜಿನ ನಾಟಕ ಪ್ರದರ್ಶನಗಳಲ್ಲಿ ಅಭಿನಯಿಸಿದ ಅನುಭವ– ಇವೇ ನಾಟಕ ರಚನೆಗೆ ಪ್ರೇರಣೆ. ಎಂ.ಎ. ತರಗತಿಯಲ್ಲಿದ್ದಾಗ, ರಾಜರತ್ನಂ ಅವರ ಶಿಶುಗೀತೆಗಳಿಗೆ ಚಿತ್ರ ಬರೆದುಕೊಟ್ಟ ಮೇಲೆ, ಮಕ್ಕಳ ಪದ್ಯಗಳ ರಚನೆಗೆ ಪ್ರೇರಣೆ ಉಂಟಾಯಿತು. ಮದರಾಸು ವಿಶ್ವವಿದ್ಯಾನಿಲಯ ಹೊರತಂದಿದ್ದ 'ಕವಿರಾಜ ಮಾರ್ಗ'ವನ್ನು ಪತ್ರಿಕೆಯೊಂದಕ್ಕೆ ವಿಮರ್ಶೆ ಮಾಡಲು ಗುರು ವೆಂಕಣ್ಣಯ್ಯ ಪ್ರೋತ್ಸಾಹ ಕೊಟ್ಟರು. ಈಚೆಗೆ ಈ ಆದಿಗ್ರಂಥವನ್ನು ಸಂಪಾದನೆ ಮಾಡುವುದಕ್ಕೆ ಪ್ರೇರಣೆ, ಅಂದು ನಾನು ಅದರಲ್ಲಿ ಬೆಳೆಸಿಕೊಂಡಿದ್ದ ಆಸಕ್ತಿ; ಗುರುಗಳ ಬೋಧನೆಯ ಫಲ. ಒಟ್ಟಿನ ಮೇಲೆ, ವಿದ್ಯಾರ್ಥಿ ದೆಶೆಯಲ್ಲಿ ನಾನು ಬರೆದ ಕೃತಿಗಳಲ್ಲಿ ಬಾಲಿಶ ಎನ್ನಬಹುದಾದ ಕೆಲವು ಪದ್ಯಗಳನ್ನೂ, ಒಂದೆರಡು ಕಥೆಗಳನ್ನೂ, ಬಿಟ್ಟರೆ, ಉಳಿದವು ಆಧುನಿಕ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕೃತಿಕಾರನಿಗೆ ಅಗ್ರಗಣ್ಯಸ್ಥಾನವನ್ನಲ್ಲದಿದ್ದರೂ, ಒಂದು ಗಣ್ಯ ಸ್ಥಾನವನ್ನು ದೊರಕಿಸಿಕೊಟ್ಟವು. ರಾಜರತ್ನಂ ಅವರು ತಮ್ಮ ಶಿಶುಗೀತೆಗಳಿಗೆ, ನನ್ನಿಂದ ಚಿತ್ರಗಳನ್ನು ಬರೆಯಿಸಿ ಕೊಳ್ಳದಿದ್ದರೆ, ನಾನು ಬಹುಶಃ 'ಹೂವಾಡಗಿತ್ತಿ'ಯ 'ರಾಘವ'ನಾಗುತ್ತಿರಲಿಲ್ಲ! "ಕವಿರಾಜಮಾರ್ಗ"ವನ್ನು ಪಾಠ ಹೇಳಿದ ಪ್ರೊ. ವೆಂಕಣ್ಣಯ್ಯನವರು, 'ಪ್ರಜಾಮತ'ದ ಕಡೆಯಿಂದ ನನಗೆ ೧೯೩೧ರಲ್ಲಿ ವಿಮರ್ಶೆಗೆ ಬಂದಿದ್ದ 'ಕವಿರಾಜ ಮಾರ್ಗ'ವನ್ನು ವಿಮರ್ಶೆ ಮಾಡಲು ಮಾರ್ಗದರ್ಶನ ಮಾಡಿರದಿದ್ದರೆ ಬಹುಶಃ "ಕವಿರಾಜ ಮಾರ್ಗ"ವನ್ನು ಪರಿಷ್ಕರಿಸಿ ಸಂಪಾದನೆ ಮಾಡಲು ನನಗೆ ಪ್ರೇರಣೆಯುಂಟಾಗುತ್ತಿರಲಿಲ್ಲ. ಸಾಹಿತ್ಯ ನಿರ್ಮಾಣಕ್ಕೆ ಪ್ರೇರಣೆಕೊಟ್ಟ ಶಕ್ತಿಗಳಲ್ಲಿ ಗ್ರಂಥಗಳ ಪ್ರಭಾವದ ಜೊತೆಗೆ ಗುರುವರ್ಗದ ಉತ್ತೇಜನವೂ ಸೇರಿದೆ. ಈ ಗುರು–ಶಕ್ತಿಗಳಿಗೆ ನಮಸ್ಕಾರ.

**ಹರೆಯದ ದೃಷ್ಟಿ–ಧೋರಣೆ**

ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ನಾನು ಬರೆಯುವಂತೆ ಪ್ರೇರಣೆ ನೀಡಿದ ಶಕ್ತಿಗಳ ವಿಚಾರ ಹೇಳಿದೆನಷ್ಟೆ. ಒಳ್ಳೆಯ ಪುಸ್ತಕ ಓದಿ, ಎಲ್ಲರೂ ಪ್ರಭಾವಿತರಾಗ ಬಹುದು. ಆದರೆ ಎಲ್ಲರೂ ಬರಹಗಾರರಾಗುವುದಿಲ್ಲ. "ಪ್ರತಿಭಾನಂ, ಕಾವ್ಯ ವಿದ್ಯಾಪ್ರಚಯ ಪರಿಚಯಂ, ವೃದ್ಧಸೇವಾನುರಾಗಂ, ಸತತಾಭ್ಯಾಸ ಪ್ರಯತ್ನಂ" ಇವು, "ನಿಯತಂ ಕವಿತೆಗೆ ಕಾರಣಂ". ಪ್ರತಿಭೆ ವ್ಯಕ್ತಪಡುವುದು ಅಸಾಧಾರಣವಾದ

ನಿಂತು, ಸರ್ವ ಸಮಾನತೆಯ ಕನಸು ಕಾಣುತ್ತಿದ್ದ, ಆದರ್ಶವಾದಿ ತರುಣ ಕವಿಗೆ– ಫ್ರಾನ್ಸಿನ ಮಹಾಕ್ರಾಂತಿಯ ವಿಚಾರವೂ, ರಷ್ಯದ ೧೯೧೭ರ ಅಕ್ಟೋಬರ್ ಕ್ರಾಂತಿಯೂ– ಅಂದಿನ ಪೀಳಿಗೆಯ ಅನೇಕ ವಿದ್ಯಾವಂತ ತರುಣರಿಗೆ ಕಾಣಿಸಿಕೊಟ್ಟಂತೆ, ನನಗೂ ಒಂದು ನೂತನ ಸಮಾಜ ನಿರ್ಮಾಣದ ಕನಸನ್ನು ಕಾಣಿಸಿಕೊಟ್ಟಿತು. ಈ ಕಾಲದಲ್ಲಿ, ನನ್ನ ಮನೆತನಕ್ಕೆ ಬಂದ ರಾಜನಿಷ್ಠೆ ಮರೆಯಾಯಿತು; ಆಸ್ತಿಕ್ಯ ಸಡಿಲಗೊಂಡಿತು; ನನ್ನ ಕುಲಧರ್ಮಕ್ಕೆ ಹೇಳಿದ ಸಾಂಪ್ರದಾಯಿಕ ಆಚಾರ–ವಿಚಾರಗಳಲ್ಲಿ ನಂಬಿಕೆ ಉಡುಗಿ, ಹಿರಿಯರ ಮನಸ್ಸು ನೋಯಿಸಲಾರದೆ ಕಾಟಾಚಾರಕ್ಕೆ ಅವುಗಳನ್ನು ಅನುಸರಿಸುತ್ತಿದ್ದೆ. ನನ್ನಲ್ಲಿ ಸಹಜವಾಗಿಯೇ ಇದ್ದ ಮತಾತೀತವಾದ ವಿಶಾಲ ಮನೋಭಾವ, ಮಾನವೀಯ ದೃಷ್ಟಿ, ದೃಢಗೊಂಡುವು. ದೀನದಲಿತರಲ್ಲಿ, ಪತಿತರಲ್ಲಿ, ನನ್ನ ಅನುಕಂಪೆ ಬಲವಾಯಿತು. "ಬೀದಿಯೊಳಗಲೆಯುತಿಹಳಾರಿವಳು ಚೆಲುವೆ" ಎಂಬ ನನ್ನ ಪ್ರಾರಂಭ ಕಾಲದ ಪದ್ಯವೊಂದರಲ್ಲಿ ಈ ಅನುಕಂಪೆ ಪ್ರಕಟವಾಯಿತು. ಇದು "ತಳಿರು" ಸಂಕಲನದಲ್ಲಿ ಪ್ರಕಟವಾಗಿದೆ. ನಮ್ಮ ಬೀದಿಯ ಜನ ಮುಸ್ಲಿಮ್ ತಿರುಪೆಯ ಹುಡುಗಿ ಒಬ್ಬಳಿಗೆ– "ಬೇರೆ ಮತದವಳೆಂದು ಭಿಕ್ಷೆಯನು ಕೊಡರು, ದೂರನಡೆ, ತೊಲಗೆಂದು ಗದರಿಸುವರು"–, "ತಮ್ಮಂತೆ ಜೀವಿಯೆಂದೆಣಿಸದಿಹರು", ಎಂಬ ಸನ್ನಿವೇಶವನ್ನು ಕಂಡು ಕೊರಗಿದೆ. ಸನ್ನಿವೇಶ ಬೇರೆಯೇ ಆದರೂ ಈ ಹುಡುಗಿಯ ಚೆಲುವಿನ ವರ್ಣನೆಯ ಸಾಲುಗಳಲ್ಲಿ "King Copheuta and The Beggar Maid" ಎಂಬ ಕವಿತೆಯ ಪ್ರಭಾವವನ್ನು ಯಾರೂ ಗುರುತಿಸಬಹುದು.

ಬಿಳಿತೊನ್ನಿನ ಬಾಲಕನೊಬ್ಬನನ್ನು ಇತರ ಬಾಲಕರು ದೂರವಿಡುತ್ತಿದುದು ನನಗೆ ತುಂಬಾ ವ್ಯಥೆಯುಂಟುಮಾಡಿತು. ಆ ಸಂದರ್ಭದಲ್ಲಿ ರಚಿತವಾದದ್ದು ನನ್ನ "ಬಗೆದಂತೆ ಬಾಳು" ಎಂಬ ಸಣ್ಣ ಕಥೆ. ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ ಮುದ್ದಣ ಸ್ವರ್ಣಪದಕ ಕಥಾಸ್ಪರ್ಧೆಯಲ್ಲಿ ಎರಡನೆಯ ಬಹುಮಾನ ಪಡೆಯಿತು. ಇಂಥ ಸನ್ನಿವೇಶಗಳಲ್ಲಿ ಕೃತಿ ರಚನೆಯ ಮೂಲಕ ಅನುಕಂಪವನ್ನು ವ್ಯಕ್ತಪಡಿಸುವುದು ಸುಲಭ. ಎಷ್ಟೋ ಇನ್ನಿತರ ಸಂದರ್ಭಗಳಲ್ಲಿ, ನನ್ನ ನಂಬಿಕೆ–ನಿಷ್ಠೆಗಳನ್ನು ಕಾರ್ಯತಃ ಆಚರಣೆಗೆ ತರುವಲ್ಲಿ ಮಾತ್ರ, ನಾನು ಸೋತಿದ್ದೆ– ಎಂದು ಕಾಣುತ್ತದೆ. ಅಂದಿನ ವಾತಾರಣ ಅಂಥದು. ಸಮಾಜದ ಕಟ್ಟು ಕಟ್ಟಲೆಗಳನ್ನು ಎದುರಿಸಿ ತನ್ನ ಮನಸ್ಸಾಕ್ಷಿಯಂತೆ ನಡೆದುಕೊಳ್ಳಲು, ಇಂದಿನ ತರುಣ ಪೀಳಿಗೆಗೆ ಸುಲಭವಾಗಿರುವಷ್ಟು, ಅಂದಿನ ಪೀಳಿಗೆಗೆ ಸುಲಭವಾಗಿರಲಿಲ್ಲ.

ಹಿತ್ತಲ ಮೂಲೆಯ ದಾಳಿಂಬೆ ಮರದ ಸಿಂಧೂರ ವರ್ಣದ ದಾಳಿಂಬೆ ಹೂ; ಆ ಮರದ ಕೊಂಬೆ–ಕಡ್ಡಿಗಳ ಮೇಲೆ ಕುಳಿತು, ಬಗೆ–ಬಗೆಯ ದನಿ–ಹೂಗಳನ್ನ ರಳಿಸುತ್ತಿದ್ದ, ಹೆಸರರಿಯದ ಹಾಡು–ಹಕ್ಕಿಗಳು– ಇಷ್ಟೆ–, ನನ್ನ ಸಂಕುಚಿತ ನಿಸರ್ಗ ಪ್ರಪಂಚ. ಮೋಡಗಳು ನನ್ನ 'ಮುಗಿಲುಗಳು' ಎಂಬ ಪ್ರಬಂಧ ಅಲ್ಲದೆ, ಅನೇಕ ರಚನೆಗಳಿಗೆ ವಸ್ತು. ನನ್ನ ಒಂದು ಕಥೆಯ ಹೆಸರು 'ಮೋಡದ ದಿಬ್ಬಣ'. ನನ್ನ ಬಗೆ ಬಾನಿನಲ್ಲಿ ರೂಪಗೊಂಡಿತು. "ಮೇಘಲಿಂಗ;" ಬಿಡು ಬೀಸಿನ ಪಾಠ ಕಲಿಸಿತು. "ತೆವಳು ಮೋಡ". ನಾನು, ಈಗಲೂ ಮೇಘಲೋಕ ನಿರತ. "ಮೇಘಾಲೋಕೇ ಭವತಿ ಸುಖಿನೋಪ್ಯನ್ಯಥಾ ವೃತ್ತಿ ಚೇತಃ" ಎಂದಿರುವನಲ್ಲವೆ ಕಾಳಿದಾಸ? ನನ್ನ "ಅನ್ಯಥಾ ವೃತ್ತಿ" ಸಾಹಿತ್ಯದ ಮೂಲಕ ಸತ್ಯಾನ್ವೇಷಣೆ; ಸೌಂದರ್ಯ ದರ್ಶನ.

ನಾನು ವಿದ್ಯಾರ್ಥಿಯಾಗಿದ್ದಾಗ, ರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಗಾಳಿ ಅಷ್ಟೇನೂ ಬಲವಾಗಿ ಬೀಸುತ್ತಿರಲಿಲ್ಲ. ಗಾಂಧೀಜಿ ಮೈಸೂರಿಗೆ ಬಂದಿದ್ದಾಗ ಅವರ ದರ್ಶನ ಮಾಡಿದ ಮೇಲೆ, ಇತರ ಕೆಲವು ವಿದ್ಯಾಥಿಗಳಂತೆ ಖಾದಿ ಧರಿಸತೊಡಗಿದೆ. ಮಹಾತ್ಮಗಾಂಧೀಜಿಯರೇ ಮೈಸೂರು ರಾಜ್ಯವನ್ನು "ರಾಮರಾಜ್ಯ" ಎಂದು ಕರೆದು, ರಾಜ್ಯವನ್ನೂ–ರಾಜವನ್ನೂ ಮೆಚ್ಚಿಕೊಂಡಿದ್ದರು. ಬಿ.ಎಂ.ಶ್ರೀ. ಮುಂತಾದವರು ಅಪ್ಪಟ ರಾಜ ಭಕ್ತರಾಗಿದ್ದರು. ಕೃಷ್ಣರಾಜ ಒಡೆಯರ ಆಳ್ವಿಕೆಯ ರಜತ ಮಹೋತ್ಸವದ ಪ್ರಗಾಥವನ್ನೂ ರಚಿಸಿದ್ದರು. ಕೆ.ವಿ. ಪುಟ್ಟಪ್ಪನವರು ಕೂಡ "ಬೆಳ್ಳಿಯ ಹಬ್ಬದ ಕಬ್ಬದ ಬಳ್ಳಿ"ಯನ್ನು ಹಬ್ಬಿಸಿದ್ದರು. ನನ್ನ ತಾತ–ಮುತ್ತಾತಂದಿರ ಕಾಲದಿಂದ ನಮ್ಮ ಮನೆತನ ಅರಮನೆಯ ಆಶ್ರಯದಲ್ಲಿ ಬೆಳೆದದ್ದು. ನನ್ನ ತಂದೆಯ ಕಾಲದಲ್ಲಿ ಆ ಉದಾರ ಆಶ್ರಯ ನಿಂತುಹೋಯಿತು. ಅವರು, ಅರಮನೆಯ ಕಚೇರಿಯ ಸಿಬ್ಬಂದಿ ವರ್ಗದಲ್ಲಿ ಹತ್ತಿಪ್ಪತ್ತು ರೂಪಾಯಿ ಸಂಬಳದ ಗುಮಾಸ್ತರು. ದೊಡ್ಡ ಸಂಸಾರದ ಹೊಣೆ; ಸಾಲದ ಹೊರೆ, ಕುಟುಂಬ ದಟ್ಟದಾರಿದ್ರ್ಯಕ್ಕೆ ಸಿಲುಕಿರದಿದ್ದರೂ, ಬಡ ಕುಟುಂಬ ಎಂದೇ ಹೇಳಬೇಕು. ನಾನು ಹುಟ್ಟಿ ಬೆಳೆದ ಮೈಸೂರಿನ ಹಳೆಯ ಅಗ್ರಹಾರದ ಹಾರುವರ ಕೇರಿಯ ನಿವಾಸಿಗಳೆಲ್ಲ ಕಡು ಬಡವರೇ. ನಮ್ಮ ಬೀದಿಯಲ್ಲಿ ಓಡಾಡುತ್ತಿದ್ದರೆಲ್ಲ ಇನ್ನೂ ಬಡವರು. ಇವರ ಪ್ರತಿನಿಧಿಗಳೇ ನನ್ನ "ಜೀವನ ನಾಟಕ" ಕೃತಿಯ ಪಾತ್ರವರ್ಗ. ಪ್ರತಿನಿತ್ಯವೂ ಬಡತನದ ಕಣ್ಣುಕುಕ್ಕುವ ನೋಟಗಳನ್ನು ಕಾಣುತ್ತಿದ್ದ ಅಂದಿನ ಬಡವಿದ್ಯಾರ್ಥಿಗೆ– ರಾಮಕೃಷ್ಣ ಪರಮಹಂಸ, ಮಹಾತ್ಮಾಗಾಂಧಿ, ಇವರ ಉಪದೇಶಗಳ ಪ್ರಭಾವಕ್ಕೆ ಒಳಗಾಗಿ, ವಿಶಾಲ ಮನೋಧರ್ಮದ ಮಾನವೀಯತೆಯ ಭೂಮಿಕೆಯಲ್ಲಿ

ದುಡಿಯುವ ಜನಕ್ಕೆ. ಕೈಲಾಗದಿದ್ದರೂ ಹೊಟ್ಟೆಯ ಪಾಡಿಗಾಗಿ ಕಟ್ಟಿಗೆ ಸೀಳುತ್ತಿದ್ದ ಒಬ್ಬ ಮುದುಕನನ್ನು ಕಂಡಾಗ, ಬಡವರ ಬಗೆಗೆ ಮರುಕ, ಸಿರಿವಂತರ ಮೇಲೆ ಆಕ್ರೋಶ– ಒಂದು ಕವನದಲ್ಲಿ ಉಕ್ಕಿಬಂದುವು. ಈ ಕವನ ರಚನೆಯ ಸಂದರ್ಭದಲ್ಲಿ ನಾನು ಓದಿದ್ದ Burns ಕವಿಯ Song of the Shirt ಎಂಬ ಪದ್ಯ ಪ್ರೇರಕ ಶಕ್ತಿಯಾಗಿತ್ತು. ನನ್ನ ಕವನದ ಕೆಲವು ಪಂಕ್ತಿ ಹೀಗಿವೆ:

**ಕಡಿದೂ ಕಡಿದೂ ಸೌದೆಯ ಕಡಿದು**
**ದುಡಿದೂ ದುಡಿದೂ ದಿನವೂ ದುಡಿದು**
**ಇಂದಿನವರೆಗೂ ಹೊಟ್ಟೆಯ ಹೊರೆದು**
**ಹೆಂಡತಿ ಮಕ್ಕಳನೆಲ್ಲರ ಪೊರೆದು**
**ಬಾಳುತಿಹನೀ ನರಕದ ಬದುಕ–**
**ನೋಡದೊ ಸೌದೆಯ ಕಡಿಯುವ ಮುದುಕ.**

* * *

**ಮನೆಮನೆಗಲೆಯುತ ನಿತ್ಯವು ದುಡಿದರೆ**
**ತನ್ನಯ ಬಾಳನು ಬಲಿಗೊಟ್ಟು**
**ಸಿರಿವಂತರ ಸಿರಿಗಡಲಿಂದವನಿಗೆ**
**ಸಿಕ್ಕುವುದೊಂದೇ ಒಂದು ತೊಟ್ಟು!**
**ಜಿಗಣೆಯ ತೆರದಿ ಕುಬೇರನ ಕುವರರು**
**ಬಡಬಗ್ಗರ ಎದೆರಕ್ತವ ಹೀರಿ**
**ಆಳ ಆಳದಲಿ ಬೇರೂರಿ**
**ಯುಗ ಯುಗವಾಯ್ತು, ಬೆಳೆಯುತಲಿಹರು**
**ದೊಡ್ಡ ಕಾಡಾಗಿ**
**ಅಧರ್ಮದ ಬೀಡಾಗಿ.**
**ಸುಮ್ಮನೆ ಬಿಡುವುದೆ ಈ ಕಾಡನ್ನು**
**ಬಡವನ ಬಡ ಕೊಡಲಿಯ ಪೆಟ್ಟು?**
**ಮಲಗಿಹ ಅವನೆದೆ ಕೋಪದ ಕಿಚ್ಚು**
**ನೆಲಸಮ ಮಾಡದೆ ಕೊನೆಗದ ಸುಟ್ಟು?**

“ಕವಳ ತಾಯಿ” ಎಂಬ ನನ್ನ ಇನ್ನೊಂದು ಕವನದಲ್ಲೂ, ಬಡತನದ ಬವಣೆಯ ಚಿತ್ರವಿದೆ. ಸಿರಿವಂತನಿಗೆ ಎಚ್ಚರಿಕೆ ಇದೆ. ಈ ಎರಡು ಕವಿತೆಗಳೂ

ಧರ್ಮಸಂಕಟದ ಇಕ್ಕಳಕ್ಕೆ ಸಿಲುಕಿ ಒದ್ದಾಡುತ್ತಿದ್ದೆವು. ಇಂಥ ಸನ್ನಿವೇಶದಲ್ಲಿ ಮೂಡಿ ಬಂದದ್ದು ಈ ಕವನ:

**ಜಾತಿಮತಗಳ ಹೊದಿಕೆಯನು ತೆಗೆದು ಹರಿದು**
**ಕುಲಗೋತ್ರವೆಂಬ ಹುಸಿ ಹೆಸರ ಕಿತ್ತೊಗೆದು**
**ಪ್ರೀತಿಗೆಲ್ಲರು ಒಂದೆ ಎಂಬುದನು ಅರಿದು**
**ಬಳಗ ಬಂಧುಗಳೆಂಬ ಭಾವನೆಯ ತೆಗೆದು**
**ಮಾತೆಯೊಬ್ಬಳ ಮುಂದೆ ಭೇದವನು ಮರೆದು**
**ಬಾಳು 'ಧರ್ಮ' ದಲೆಂಬ ದನಿಯ ಕೇಳಿದೆನು:**
**ಹೃದಯದೊಳದನಿಯು ಅದು, ದಿವ್ಯದನಿಯು.**
**ಕೇಳಿದಂತೆಯೇ ನಡೆಯೆ, ಎಲ್ಲವನು ತೊರೆದು,**
**ಎದೆಯಿಲ್ಲ, ಎದೆಯಿಲ್ಲ, ಸುಮ್ಮನಿಹೆನು.**
**ಹಾಳಾದ ಈ ಹುಟ್ಟು,– ಕಬ್ಬಿಣದ ಕಟ್ಟು:**
**ಅದ ಮುರಿದು ಬಿಸುಡುವೆನು, ಎಲ್ಲವನು ಸುಟ್ಟು;**
**ನಡೆಯಿಸೆನ್ನನು ದೇವ ಶಕ್ತಿಯನು ಕೊಟ್ಟು.**

ಇದು ನನ್ನೊಬ್ಬನ ಎದೆಗುದಿಯಾಗಿರಲಿಲ್ಲ. ಬಹುಶಃ ಮೇಲುಜಾತಿಯವರು ಎನಿಸಿಕೊಂಡಿದ್ದ ಎಲ್ಲ ತರುಣರನ್ನೂ ಬಾಧಿಸುತ್ತಿದ್ದ ಧರ್ಮಸಂಕಟ. 'ಧರ್ಮ' ಬೇರೆ, 'ಜಾತಿ' ಬೇರೆ– ಎಂಬ ವಿವೇಕ ಜಾಗೃತವಾದದ್ದರಿಂದಲೇ ಆ ತೊಳಲಿಕೆ. ಈ ಜಾತಿ ಸಮಸ್ಯೆ ಈಗಲೂ ನನ್ನನ್ನು ಕಾಡುತ್ತಿದೆ. ಅದಕ್ಕೆ ಸಂಬಂಧಪಟ್ಟಂತೆ ಒಂದು ಕಾದಂಬರಿ ಕಲ್ಪನೆಯಲ್ಲಿ ರೂಪಗೊಂಡು ಸಿದ್ಧವಾಗಿದೆ. ಬರೆಯುವುದಕ್ಕೆ ವ್ಯವಧಾನವಾಗಿಲ್ಲ. ಈ ಪದ್ಯದ ಸಂದರ್ಭದಲ್ಲಿ ನಡೆದ ಒಂದು ಸ್ವಾರಸ್ಯದ ಸಂಗತಿ ಎಂದರೆ, ಇದು ನಮ್ಮ ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ ಪ್ರಸಾರವಾದಾಗಲೆಲ್ಲ, 'ಕುವೆಂಪು ರಚಿಸಿದ್ದು' ಎಂದು ಹೇಳಲಾಗುತ್ತಿದೆ. ಕುವೆಂಪು ಅವರನ್ನು ಈ ಧರ್ಮಸಂಕಟಕ್ಕೆ ಸಿಲುಕಿಸುವುದು ಸರಿಯಲ್ಲ.

ಸೌದೆ ಒಡೆಯುವುದು, ಬಾವಿಯಿಂದ ನೀರು ಸೇದುವುದು, ಗಂಟು–ಮೂಟೆ ಹೊರುವುದು, ಬಟ್ಟೆ ಒಗೆದುಕೊಳ್ಳುವುದು, ದೂರ ನಡೆಯುವುದು, ಮುಂತಾದ ಕಾಯಕಷ್ಟದ ಕೆಲಸಗಳನ್ನು ಚಿಕ್ಕಂದಿನಲ್ಲಿ ಸಮಯ ಬಿದ್ದಾಗ ಮಾಡಿದ್ದೇನೆ. ಆದ್ದರಿಂದ, ದೇಹಶ್ರಮದ ಕೆಲಸ ಮಾಡುವವರ ಬಗೆಗೆ ಎಂದಿನಿಂದಲೂ ನನಗೆ ಮೆಚ್ಚುಗೆ, ಗೌರವ, ಕನಿಕರ. ಅಂದಿನ ದಿನಗಳಲ್ಲಿ ಇಂದಿನಷ್ಟು ಕೂಲಿ ಸಿಕ್ಕುತ್ತಿರಲಿಲ್ಲ

ಕಾವ್ಯ ಎನ್ನುವ ಕಾಲದ ಕವಿಗಳ ಕಾವ್ಯದ ಸಮರ್ಥನೆ ಕಾವ್ಯಾಲಾಪದಲ್ಲಿದೆ. ಕಾವ್ಯತತ್ವದ ಜಿಜ್ಞಾಸೆಯ ಕೆಲವು ಮುಖ್ಯ ವಿಚಾರಗಳು ಕಾವ್ಯಾಲಾಪದಲ್ಲಿ ಹಾಸುಹೊಕ್ಕಾಗಿ ಬಂದಿವೆ. ಪ್ರಗತಿಶೀಲ ಸಾಹಿತ್ಯದ ಚಳವಳಿ "ಕಾವ್ಯಾಲಾಪ"ದಿಂದ ತಣ್ಣಗಾಯಿತು ಎಂದು ತಿಳಿಯಬಾರದು. ಅದರ ಸಿದ್ಧಾಂತದ ತಳಹದಿಯೇ ಕಾವ್ಯತತ್ವಕ್ಕೆ ವಿರುದ್ಧವಾದದ್ದರಿಂದ ಬೇಗನೆ ನಿಂತುಹೋಯಿತು. ರಾಜಕೀಯ ಉಪಾಧಿಗೆ ಬದ್ಧವಾದದ್ದರಿಂದ, ಕಾವ್ಯವಸ್ತುವಿನ ಆಯ್ಕೆಗೆ ಸ್ವಯಂಕಲ್ಪಿತವಾದ ನಿರ್ಬಂಧ ಏರ್ಪಟ್ಟು, ಬಡತನದ ಚಿತ್ರಣದ ಸಾಧ್ಯತೆಗಳೂ ಮುಗಿದು ಹೋಗಿ, ಅಶ್ಲೀಲ ವಸ್ತುವಿನ ವಿನ್ಯಾಸವೂ, ಪ್ರಗತಿಯ ಚಿಹ್ನೆ ಎನ್ನುವ ಕಡೆಗೂ ಚಳವಳಿ ವಾಲಿತು. ಹೊಸಗನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಇದೊಂದು ಪ್ರಮುಖ ಘಟ್ಟ. ಇದರಲ್ಲಿ ನನ್ನ ಪಾತ್ರವೂ ಪ್ರಮುಖವಾಗಿತ್ತು ಎಂಬ ಸಂಗತಿಯನ್ನು ಆಗಿನವರೇ– "ಕಾವ್ಯಕಲಾಪ" ಮತ್ತು "ಹಕ್ಕಿಹಾಡ"ನ್ನ ಸಹೃದಯತೆಯಿಂದ ವಿಮರ್ಶಿಸಿದ ಮಾಸ್ತಿ ಮುಂತಾಗಿ ಕೆಲವರ ಹೊರತು ಉಳಿದ ಅನೇಕ ಸಾಹಿತಿಗಳೇ ಗಮನಿಸಲಿಲ್ಲ– ಎಂದು ನಾನು ತಿಳಿದಿದ್ದೇನೆ. ನನ್ನ ತಿಳಿವಳಿಕೆ ತಪ್ಪಾಗಿರುವುದೂ ಸಾಧ್ಯ. ಅದು ಹೇಗಾದರೂ ಇರಲಿ, ಈವರೆಗಿನ ನನ್ನ ಸಾಹಿತ್ಯ ಸೃಷ್ಟಿಯಲ್ಲಿ ರಾಷ್ಟ್ರೀಯ ಪ್ರಜ್ಞೆ ಅಷ್ಟು ಪ್ರಮುಖವಾಗಿರಲಿಲ್ಲ; ಪದ್ಯಕ್ಕೆ ಹೋಲಿಸಿದರೆ, ಗದ್ಯ ಸಾಹಿತ್ಯದ ಸೃಷ್ಟಿಯೂ ಕಡಮೆಯೇ. ವಾಸ್ತವವಾಗಿ, ಇದು ಕನ್ನಡದ ಹೊಸ ಸಾಹಿತ್ಯ ಸೃಷ್ಟಿಯ ಪ್ರಾರಂಭದ ಲಕ್ಷಣವೇ ಆಗಿತ್ತು ಎನ್ನಬಹುದು. ಮುಂದಿನ ವರ್ಷಗಳಲ್ಲಿ ನಾನು ಪದ್ಯರಚನೆಯನ್ನು ಮುಂದುವರೆಸಿಕೊಂಡು ಹೋದರೂ, ಗದ್ಯ ಗ್ರಂಥಗಳ ರಚನೆಗೆ ವಿಶೇಷವಾಗಿ ಗಮನ ಹರಿಸಿದೆ. ಅದಕ್ಕೆ ಕಾರಣವೂ ಇತ್ತು. ಆವರೆಗೆ ಕಾವ್ಯರಚನೆಯಲ್ಲಿ ನಾನು ಹೊಂದಿದ್ದ ಗುರಿ ಏನು ಎನ್ನುವುದು 'ಬೇಡಿಕೆ' ಎಂಬ ಪದ್ಯದಲ್ಲಿ ಹೀಗೆ ವ್ಯಕ್ತವಾಗಿದೆ:

**ಒಂದು ವರವ ನಿನ್ನೊಳಿಂದು**
**ದೇವ, ಬೇಡುವೆ–**
**ಬೇಡಿ ಬೇಡಿ ಮೊರೆಯನಿಡುವೆ**
**ಕೊನೆಗೆ ಕಾಡುವೆ.**
**ಹೊನ್ನ ರಾಶಿ ಸುರಿಯಲೆಂಬ**
**ಕೀಳು ಬಯಕೆಯಲ್ಲವು;**
**ಆಯುರಾರೋಗ್ಯ ಹೆಚ್ಚಲೆಂಬ**
**ಆಸೆಯಲ್ಲವು;**
**ಜಸದ ಬಯಕೆ ಬೇಡವೆನಗೆ,**

ಸೇರಿದಂತೆ, ೧೯೨೬ರಿಂದ ೧೯೪೩ರವರೆಗೆ ರಚಿತವಾದ ಬಹು ಸಂಖ್ಯೆಯ ಕವನಗಳು– "ರಾಘವ" ಎಂಬ ಕಾವ್ಯನಾಮದೊಂದಿಗೆ– ೧೯೪೪ರಲ್ಲಿ "ಹಕ್ಕಿಹಾಡು" ಸಂಕಲನವಾಗಿ ಪ್ರಕಟವಾದವು. ನನ್ನ ಕಾವ್ಯ ಜೀವನದಲ್ಲಿ ಈ ವರ್ಷ ಮುಖ್ಯವಾದ ಒಂದು ಘಟ್ಟ. "ಕಾವ್ಯಾಲಾಪ", ೪೦–೫೦ ಪದ್ಯಗಳ ಒಂದು ತೀರ ಚಿಕ್ಕ ಪುಸ್ತಕ. ಪುಸ್ತಕ ಚಿಕ್ಕದಾದರೂ, ಅದರ ಪರಿಣಾಮ, ಅಂದಿನ ಸಾಹಿತ್ಯ ಪ್ರಪಂಚದಲ್ಲಿ ತಕ್ಕಮಟ್ಟಿಗೆ ಆಯಿತು. ಬಡತನದ ಬಗೆಗೆ ನನ್ನ ಅನುಕಂಪದ ವಿಚಾರವನ್ನು ಈಗ ತಾನೇ ಪ್ರಸ್ತಾಪಿಸಿದ್ದೇನೆ. ಅದರ ಹಿನ್ನೆಲೆಯನ್ನೂ ಕುರಿತು ಹೇಳಿದ್ದೇನೆ. ರಷ್ಯದ ಅಕ್ಟೋಬರ್ ಕ್ರಾಂತಿಯ ಪ್ರಭಾವ ನನ್ನ ಮೇಲಾಗಿದ್ದರೂ, ನಾನು ಕಮ್ಯುನಿಸಮ್ಮಿನ ಸಿದ್ಧಾಂತವನ್ನು ಪೂರ್ತಿ ಒಪ್ಪಿರಲಿಲ್ಲ. ಮಹಾತ್ಮರು ಬೋಧಿಸಿದ ಅಹಿಂಸಾಯುತ ಕ್ರಾಂತಿಯಲ್ಲಿ ನನ್ನ ನಿಷ್ಠೆ ದೃಢವಾಗಿ ನೆಲೆಸಿತ್ತು. ೧೯೪೨–೪೩ರ ಸುಮಾರಿನಲ್ಲಿ, ಭಾರತದ ಎಲ್ಲಾ ಪ್ರಾಂತಗಳ ಸಾಹಿತ್ಯದಲ್ಲೂ, ಪ್ರಗತಿಶೀಲ ಸಾಹಿತ್ಯದ ಚಳವಳಿ ಜೋರಾಗಿ ಪ್ರಾರಂಭವಾಗಿತ್ತು. ಸಾಹಿತ್ಯ ಬಡವರ ಬವಣೆಯನ್ನು ಚಿತ್ರಿಸಬೇಕು, ಆ ಮೂಲಕ ಸರ್ವ ಸಮಾನತಾ ತತ್ವವನ್ನು ಪ್ರತಿಪಾದಿಸಬೇಕು– ಎಂಬ ನಿಲುವಿನಲ್ಲಿ ತಪ್ಪೇನೂ ಇಲ್ಲ. ಪ್ರಗತಿಶೀಲ ಪಂಥದ ಬರಹಗಾರರು ಇಷ್ಟಕ್ಕೆ ನಿಲ್ಲದೆ, ಸಮಕಾಲೀನ ಕವಿಗಳು ನಿಸರ್ಗದ ವರ್ಣನೆ ಮಾಡುತ್ತಿದ್ದುದನ್ನೂ ಪ್ರಾಚೀನ ಸಾಂಸ್ಕೃತಿಕ ಪರಂಪರೆಯಲ್ಲಿ ನಿಷ್ಠೆಯುಳ್ಳವರಾಗಿದ್ದುದನ್ನೂ ಕಟುವಾಗಿ ಟೀಕಿಸಿದರು; ಈ ಕವಿಗಳು ದಂತದ ಗೋಪುರದಲ್ಲಿ ಕುಳಿತು ಬರೆಯುವವರು– ಎಂದು ಹಾಸ್ಯ ಮಾಡಿದರು; ಇವರು ಪ್ರಗತಿಶೀಲರ ದೃಷ್ಟಿಯಲ್ಲಿ ಪ್ರತಿಗಾಮಿಗಳಾದರು. ಹರೆಯದ ಬಿಸಿರಕ್ತದ 'ರಾಘವ'ನಿಗೆ ಇದು ಸಹಿಸಲಿಲ್ಲ. ಪ್ರಗತಿಶೀಲ ಸಾಹಿತ್ಯದ ನಿಲುವನ್ನು ಪದ್ಯರೂಪದಲ್ಲಿ ಪ್ರತಿಭಟಿಸುತ್ತಾ, ಆ ಗುಂಪಿನೊಂದಿಗೆ ಬಹುಮಟ್ಟಿಗೆ ಏಕಾಂಗಿಯಾಗಿಯೇ ಹೋರಾಡಿದನು. 'ಕಾವ್ಯಾಲಾಪ' ಪ್ರಕಟವಾದ ಕೂಡಲೆ ಅದಕ್ಕೆ ಪ್ರತಿಕ್ರಿಯೆಯಾಗಿ "ವ್ಯರ್ಥಾಲಾಪ"ವೂ, ಪ್ರಗತಿಶೀಲ ಸಾಹಿತ್ಯಕ್ಕೆ ನಿಷ್ಠನಾಗಿದ್ದ ಕವಿಯಿಂದ ಹೊರಬಂದಿತು. ಕಾವ್ಯಾಲಾಪದ ಪದ್ಯಗುಚ್ಛ, ಪ್ರಗತಿಶೀಲ ಚಳವಳಿಯ ಮುಖ್ಯ ಆಪಾದನೆಗಳನ್ನು ನಿಮಿತ್ತ ಮಾಡಿಕೊಂಡು ರಚಿತವಾಗಿದ್ದರೂ, ಕಾವ್ಯದ ಸ್ವರೂಪ, ಕಾವ್ಯದ ವಸ್ತು, ಕಾವ್ಯದ ಕಾರ್ಯ, ಕಾವ್ಯದಲ್ಲಿ ಹೊಸತು–ಹಳತರ ಪ್ರಶ್ನೆ, ಕಾವ್ಯದ ಮಹಿಮೆ, ಮುಂತಾಗಿ ಪ್ರಾಚೀನ ಕವಿಗಳು ಕಾವ್ಯದ ಪೀಠಿಕಾ ಪ್ರಕರಣದಲ್ಲಿ ಏನೆಲ್ಲ ನಿರ್ವಚಿಸುತ್ತಿದ್ದರೋ ಅದೇ ಮಾದರಿಯಲ್ಲಿ ಸ್ವತಂತ್ರವಾಗಿ, ಸಮಕಾಲೀನ ಸಂದರ್ಭಕ್ಕೆ ಅನುಗುಣವಾಗಿ, ರಚಿತವಾದದ್ದು. ಒಟ್ಟಿನಲ್ಲಿ, ಈಗ ನವೋದಯ

ಈ ನನ್ನ ಧ್ಯೇಯವನ್ನು ತಿಳಿಸುವ– The Poet is a nightingale which Sings to cheer its own solitude– ಎಂಬ ಷೆಲ್ಲಿ ಕವಿಯ ವಾಕ್ಯವನ್ನು ನನ್ನ ಪ್ರಥಮ ಕವನ ಸಂಕಲನ "ಹಕ್ಕಿ ಹಾಡು"ವಿನಲ್ಲಿ, ನನ್ನ ಧ್ಯೇಯ ವಾಕ್ಯವಾಗಿ ಮುದ್ರಿಸಿದ್ದೇನೆ. ಬದುಕಿನುದ್ದಕ್ಕೂ ಧ್ಯೇಯವನ್ನು ಪೂರ್ತಿಯಾಗಿ ಉಳಿಸಿಕೊಳ್ಳುವುದು ಸಾಧ್ಯವಾಗಲಿಲ್ಲವೆಂಬುದು ಇಂದಿಗೂ ನನ್ನ ವಿಷಾದ.

**ಹರೆಯದ ಕಾಲದ ಕೃತಿಗಳು**

೧೯೩೩ರಲ್ಲಿ ಕನ್ನಡ ಎಂ.ಎ. ಪದವಿಯನ್ನು ಪಡೆದು, ೧೯೮೪ರ ಫೆಬ್ರುವರಿ ತಿಂಗಳಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಂಬಳ ಪಡೆಯುವ ಕಾರ್ಯದರ್ಶಿಯಾಗಿ ನೇಮಕಗೊಂಡೆ. ಕನ್ನಡ ಸಾಹಿತ್ಯ ಪರಿಷತ್ತಿನ ಚರಿತ್ರೆಯಲ್ಲಿ ಹೊಸ ಅಧ್ಯಾಯ ಪ್ರಾರಂಭವಾದ ವರ್ಷ ಅದು. ಆ ವರ್ಷ ಡಿ.ವಿ.ಗುಂಡಪ್ಪನವರು ಪರಿಷತ್ತಿನ ಉಪಾಧ್ಯಕ್ಷರಾಗಿ ಕಾರ್ಯಾರಂಭ ಮಾಡಿದ್ದರು. ಪರಿಷತ್ತಿನ ಕಚೇರಿಯ ಕೆಲಸಗಳನ್ನು ಒಪ್ಪೊತ್ತಿನ ಗುಮಾಸ್ತೆ ಒಬ್ಬರು ನೋಡಿಕೊಳ್ಳುತ್ತಿದ್ದರು. ಪರಿಷತ್ತಿನ ಆಯ–ವ್ಯಯಗಳ ಲೆಕ್ಕವಿಡುವುದು, ಕನ್ನಡ ಮತ್ತು ಇಂಗ್ಲೀಷು ಪತ್ರವ್ಯವಹಾರಗಳನ್ನು ಸ್ವತಂತ್ರವಾಗಿ ಮಾಡುವುದು, ಪರಿಷತ್ಪತ್ರಿಕೆ ಮತ್ತು ಇತರ ಪ್ರಕಟನೆಗಳ ಸಂಪಾದಕೀಯ ಕಾರ್ಯದಲ್ಲಿ ಸಹಾಯ ಮಾಡುವುದು, ಪರಿಷತ್ತಿಗೆ ಆಗಮಿಸುವ ಅತಿಥಿಗಳು, ಸದಸ್ಯರು ಇವರನ್ನು ಸ್ವಾಗತಿಸುವುದು, ಪುಸ್ತಕ ಭಂಡಾರದ ಮೇಲ್ವಿಚಾರಣೆ– ಹೀಗೆ, ಬಹುಮುಖವಾದ, ಕಾರ್ಯಕಲಾಪಗಳನ್ನು ಉಪಾಧ್ಯಕ್ಷರು, ಗೌರವ ಕಾರ್ಯದರ್ಶಿಗಳು, ಗೌರವ ಕೋಶಾಧಿಕಾರಿಗಳು, ಉಪಸಮಿತಿಗಳ ವ್ಯವಸ್ಥಾಪಕರುಗಳು ಮುಂತಾಗಿ ಹಲವು ಅಧಿಕಾರಿಗಳ ಮರ್ಜಿಯನ್ನ ಅನುಸರಿಸಿ ನಡೆಸಿಕೊಂಡು ಹೋಗುವ ಹೊಣೆಗಾರಿಕೆ ನನ್ನದಾಗಿತ್ತು. ಪರಿಷತ್ತಿನ ಕೆಲಸಕ್ಕೆ ಸೇರುವುದಕ್ಕೆ ಮುಂಚೆ ಶಾಂತಿನಿಕೇತನದಲ್ಲೋ, ಕಲ್ಕತ್ತೆಯಲ್ಲೋ ಚಿತ್ರಕಲೆಯ ಅಭ್ಯಾಸವನ್ನು ಮುಂದುವರಿಸಬೇಕೆಂಬ ಉದ್ದೇಶದಿಂದ ಮೈಸೂರನ್ನು ಬಿಟ್ಟು, ಕಲ್ಕತ್ತೆಯ ಪ್ರಯಾಣವನ್ನು ಕೈಗೊಂಡಿದ್ದೆ. ಈ ನನ್ನ ಉದ್ದೇಶಕ್ಕೆ ಬಿ.ಎಂ.ಶ್ರೀ ವೆಂಕಣ್ಣಯ್ಯನವರು, ಮಾಸ್ತಿ, ತೀ.ನಂ.ಶ್ರೀ, ಇವರೆಲ್ಲ ತುಂಬ ಒತ್ತಾಸೆ ನೀಡಿದ್ದರು. ಶಾಂತಿನಿಕೇತನದಲ್ಲಿ ಪ್ರವೇಶ ದೊರೆಯುವುದು ಕಷ್ಟವೆಂದು ಅಲ್ಲಿದ್ದ ನಾರಾಯಣ ಸಂಗಮರಿಂದ ಉತ್ತರ ಬಂತು. ಕಲ್ಕತ್ತೆಯಲ್ಲಿ ಊಟವಸತಿಗಳಿಗೆ ಅನುಕೂಲ ದೊರೆಯಲಿಲ್ಲ. ಮದರಾಸಿನವರೆಗೆ ಪ್ರಯಾಣ ಮಾಡಿದ್ದವನು, ಮೈಸೂರಿಗೆ ಹಿಂದಿರುಗಿದೆ. ಜೀವನದ ಒಂದು ಧ್ಯೇಯ ನೆರವೇರದೆ, ನಿರಾಶನಾಗಿ,

**ಜಸವು ಗರ್ವದಾಗರ;**
**ಮೋಕ್ಷವಲ್ಲ, ಮೋಕ್ಷವಿಲ್ಲ,**
**ಮೋಕ್ಷ ಶೂನ್ಯಸಾಗರ.**
**ಒಂದೆ ವರವ ನಿನ್ನೊಳಿಂದು**
**ದೇವ ಬೇಡುವೆ–**
**ನನ್ನನೊಂದು ಹಕ್ಕಿಮಾಡು,**
**ಹಾಡಿ ಹಾಡಿ ಹಾಡುವೆ.**

* * *

**ನನ್ನ ಹಾಡಿನಲ್ಲಿ ಮತ್ತೆ**
**ವರವ ಬೇಡೆನು;**
**ಅವರು ಇವರು ಮೆಚ್ಚಲೆಂದು**
**ಹಾಡ ಹಾಡೆನು;**
**ನನ್ನ ಹಾಡಿನಲ್ಲಿ ಅಂದು**
**ಗೋಳ ಕರೆಯೆನು;**
**ಆದರಂದು, ಎಂದೆಂದು**
**ನಿನ್ನ ಮರೆಯೆನು.**
**ಎಲ್ಲಿ ಕುಳಿತರಲ್ಲಿ ನಾನು**
**ಹಾಡುತಿರುವೆನು;**
**ಹಾಡಿಗಾಗಿ ಹಾಡನೊಂದ**
**ಹಾಡುತಿರುವೆನು;**
**ಹಾಡುತಿರುವ ಜಗದ ಜೊತೆಗೆ**
**ಹಾಡುತಿರುವೆನು.**
**ಹಕ್ಕಿಯಾಗಿ ಹಾಡಿ ನಿನ್ನ**
**ವೀಣೆಯಾಗುವೆ;**
**ಹಾಡಿ ದುಡಿದು, ಕೊನೆಗೆ ನಿನ್ನ**
**ವಾಣಿಯಾಗುವೆ!**

ಕೀರ್ತಿ, ಹಣ ಸಂಪಾದನೆ, ಪ್ರಶಂಸೆ– ಇದು ಯಾವುದನ್ನೂ ಬಯಸದೆ, ಕೇವಲ ಆತ್ಮಸಂತೋಷಕ್ಕಾಗಿ ಕೃತಿರಚನೆ ಮಾಡಿದೆ. ಪ್ರಾರಂಭದ ವರ್ಷಗಳಲ್ಲಿ

ಸಾಹಿತ್ಯದ ಮಟ್ಟದಲ್ಲಿ ಬರೆಯುವುದು ಹೇಗೆ ಎನ್ನುವುದರಲ್ಲಿ ಗುಂಡಪ್ಪನವರಿಂದ ನಾನು ಕಲಿತದ್ದು ಬಹಳ. ಪರಿಷತ್ತಿಗೆ ಬರುತ್ತಿದ್ದ ಸಾಹಿತಿಗಳ ಸ್ನೇಹ, ಪರಿಚಯ ಬೇಗನೆಯೆ ದೊರೆತವು. ಬೇರೆ ಬೇರೆ ಸ್ಥಳಗಳಲ್ಲಿ ನಡೆಯುತ್ತಿದ್ದ ಸಾಹಿತ್ಯ ಸಮ್ಮೇಳನ, ಅದರ ಸಂದರ್ಭದಲ್ಲೇ ನಡೆಯುತ್ತಿದ್ದ ಸಕಲ ಸದಸ್ಯರ ವಾರ್ಷಿಕಾಧಿವೇಶನಗಳು, ಇವುಗಳಿಗೆ ನಾನು ಪರಿಷತ್ತಿನ ಕಚೇರಿಯ ಪರವಾಗಿ ಹೋಗಲೇಬೇಕಾಗಿತ್ತು. ಅಖಿಲ ಕರ್ನಾಟಕದ ಕವಿಗಳ, ಸಾಹಿತಿಗಳ, ವಿದ್ವಾಂಸರ ಪರಿಚಯ, ಸ್ನೇಹ ಈ ಅಧಿವೇಶನಗಳಲ್ಲಿ ಆಗಿ, ಕಾಲಕ್ರಮದಲ್ಲಿ ಬೆಳೆಸುತ್ತ ಬಂದವು. ಈ ಎಲ್ಲ ಸಾಹಿತಿಗಳ ಸಂಗಕ್ಕೆ ಬೆಲೆ ಕಟ್ಟುವುದಾದರೂ ಹೇಗೆ? ಇವರಲ್ಲಿ ಅನೇಕರು ವಯಸ್ಸಿನಲ್ಲಿ, ಸಾಧನೆಯಲ್ಲಿ, ಸಿದ್ಧಿಯಲ್ಲಿ, ನನಗಿಂತ ಹಿರಿಯರು. ನನ್ನ ಸಾಹಿತ್ಯ ಸೃಷ್ಟಿ ಕಾರ್ಯಕ್ಕೆ ಕೆಲವರಿಂದ, ದೊರೆತ ಉತ್ತೇಜನ ಸಂಜೀವಿನಿಯಾಗಿತ್ತು. ಇಂಥವರಲ್ಲಿ ಗೋವಿಂದ ಪೈ ಅವರನ್ನು ಮುಖ್ಯವಾಗಿ ನೆನೆಯಬೇಕು. 'ಹಕ್ಕಿಹಾಡು' ಪ್ರಕಟವಾದಂದಿನಿಂದ, ಪ್ರತಿಯೊಂದು ಪುಸ್ತಕವನ್ನು ಅವರಿಗೆ ಕಳಿಸಿಕೊಟ್ಟಿದ್ದೇನೆ. ಅದು ಕೈಸೇರಿದ ಕೂಡಲೇ ಅವರು ಅದನ್ನು ಪೂರ್ತಿಯಾಗಿ ಓದಿ, ಕಾರ್ಡು ತುಂಬ ಅವರ Trade Mark ಎನ್ನಬಹುದಾದ Violet (ಪಾಟಲ ವರ್ಣದ) ಶಾಯಿಯಲ್ಲಿ ಎದೆತುಂಬ ಮೆಚ್ಚುಗೆಯ ಮಾತುಗಳನ್ನು ಬರೆಯುತ್ತಿದ್ದರು. ನನಗೆ ಮಾತ್ರವಲ್ಲ, ಪುಸ್ತಕ ಕಳಿಸಿದ ಪ್ರತಿ ಗ್ರಂಥಕರ್ತನಿಗೂ ಈ ರೀತಿ ಅಭಿಪ್ರಾಯ ತಿಳಿಸುವ ರೂಢಿಯಿಟ್ಟು ಕೊಂಡಿದ್ದರು. ಮಾತ್ರವಲ್ಲ, ಅದನ್ನು ಒಂದು ವ್ರತವಾಗಿ ನಡೆಸಿಕೊಂಡು ಬಂದಿದ್ದರು. ಎಷ್ಟು ಜನ ಹೀಗೆ ಮಾಡಿದ್ದಾರೆ? ಮಾಡುತ್ತಿದ್ದಾರೆ? ಪುಸ್ತಕದ ಬಗೆಗೆ ಮಾತ್ರವಲ್ಲ, ಭಾಷೆ, ಸಾಹಿತ್ಯ, ಸಂಶೋಧನೆಗಳಿಗೆ ಸಂಬಂಧಪಟ್ಟಂತೆ ಯಾವ ಸಂದೇಹದ ಪ್ರಶ್ನೆಯನ್ನು ಮುಂದಿಟ್ಟರೂ ಕೂಡಲೇ ಉತ್ತರ ಬರೆಯುತ್ತಿದ್ದರು. ಇವರಿಂದ ಕಲಿತ ಪಾಠವನ್ನು ಕೈಲಾದ ಮಟ್ಟಿಗೂ, ಅನುಷ್ಠಾನದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಇಂಥ ಶ್ರೇಷ್ಠ ವ್ಯಕ್ತಿಗಳ ಪರಿಚಯ, ಪರಿಷತ್ತಿನಲ್ಲಿ ಇರದಿದ್ದರೆ, ನನಗೆ ಆಗುತ್ತಿರಲಿಲ್ಲ.

ನಾನು ಪರಿಷತ್ತಿನಲ್ಲಿ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದಾಗ, ಕನ್ನಡ–ಹಿಂದೀ ವಾದ; "ಕರ್ಣಾಟಕವೊ–ಕರ್ನಾಟಕವೋ" ಎಂಬ ವಾಗ್ಯುದ್ಧ ನಡೆದುವು. ಪರಿಷತ್ತಿನ ಅಧಿಕಾರಿಗಳಿಗೂ, ಸಂಸ್ಥೆಯ ಬಗೆಗೆ ಟೀಕೆ ಮಾಡುವವರಿಗೂ ವಾದ ವಿವಾದಗಳು ನಡೆಯುತ್ತಲೇ ಇದ್ದವು. ಪ್ರಾಯದ ಬಿಸಿ ನೆತ್ತರು ಹರಿಯುತ್ತಿದ್ದ ನನಗೆ ಈ ವಾದಗಳಲ್ಲಿ ಭಾಗವಹಿಸಬೇಕೆಂದು ಉತ್ಸುಕತೆ. ಪರಿಷತ್ತಿಗೆ ನೇಮಕಗೊಂಡ ಹೊಸದರಲ್ಲಿ ಕನ್ನಡದ ಬಗೆಗೆ ಇದ್ದ ನಿರಭಿಮಾನವನ್ನು ಕುರಿತು 'ತಾಯಿನಾಡು'

ನಿರುದ್ಯೋಗಿಯಾಗಿದ್ದ ನನ್ನನ್ನು ಕನ್ನಡ ತಾಯ ಗುಡಿಯ ಸೇವಕನಾಗಿ ನಿಲ್ಲಿಸಿದವರು ಗುರುವರ್ಯ ವೆಂಕಣ್ಣಯ್ಯನವರು. ಗುಂಡಪ್ಪನವರ ಕೈಕೆಳಗೆ ಕೆಲಸ ಮಾಡಿದರೆ ಮುಂದೆ ಯಾವ ಕೆಲಸವನ್ನು ಬೇಕಾದರೂ ನಿಭಾಯಿಸುವ ಸಾಮರ್ಥ್ಯ ಬರುತ್ತದೆ ಎಂದು ವೆಂಕಣ್ಣಯ್ಯನವರು ಭರವಸೆಕೊಟ್ಟಿದ್ದರು. ಅವರ ಮಾತು ಹುಸಿಯಾಗಲಿಲ್ಲ.

ಗುಂಡಪ್ಪನವರ ನೇತೃತ್ವದಲ್ಲಿ, ಕಚೇರಿಯ ಕೆಲಸದ ಅನುಭವ, ವ್ಯವಹಾರ ಚಾತುರ್ಯ ದೊರೆಯಿತು. ಸಾಹಿತ್ಯದೃಷ್ಟಿಯಿಂದ ಹೆಚ್ಚಿನ ಪ್ರಯೋಜನವಾದದ್ದು ಎ.ಆರ್.ಕೃಷ್ಣಶಾಸ್ತ್ರಿಗಳಿಗೆ ಪರಿಷತ್ಪತ್ರಿಕೆಯ ಸಂಪಾದನಾ ಕಾರ್ಯದಲ್ಲಿ ಸಹಾಯಕನಾಗಿದ್ದ ಕಾರಣದಿಂದ. ಪರಿಷತ್ ಪತ್ರಿಕೆಯಲ್ಲಿ, "ಪ್ರಾಚ್ಯ–ಲೇಖನಾವಳಿ" ಎಂಬ ಹೊಸ ವಿಭಾಗವೊಂದನ್ನು ಅವರು ಪ್ರಾರಂಭ ಮಾಡಿದರು. ಪರಿಷತ್ಪತ್ರಿಕೆಗೆ ವಿನಿಮಯವಾಗಿ ಬರುತ್ತಿದ್ದ, ಚಂದಾಕೊಟ್ಟು ತರಿಸುತ್ತಿದ್ದ ಅನೇಕ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಲೇಖನಗಳೆಲ್ಲವನ್ನೂ ಓದಿ, ಮಹತ್ವಪೂರ್ಣ ಲೇಖನಗಳ ಸಾರಾಂಶವನ್ನು ಬರೆದು ಸಿದ್ಧಪಡಿಸುವ ಕಾರ್ಯವನ್ನು, ಕರಡಚ್ಚು ತಿದ್ದುವುದು ಮುಂತಾದ ಇತರ ಕಾರ್ಯಗಳೊಂದಿಗೆ, ಕೃಷ್ಣಶಾಸ್ತ್ರಿಗಳು ನನಗೆ ವಹಿಸಿದ್ದರು. ನಾನು ಪರಿಷತ್ತಿನಲ್ಲಿದ್ದಷ್ಟು ಕಾಲ ಈ ಕೆಲಸಗಳಿಂದ ದೊರೆತ ಸಂಪಾದಕೀಯ ಅನುಭವ ಅತ್ಯಮೂಲ್ಯವಾದುದು. ಈ ಕಾಲದಲ್ಲಿ ಪರಿಷತ್ಪತ್ರಿಕೆಗಾಗಲಿ, ಬೇರೆ ಯಾವುದೇ ಪತ್ರಿಕೆಗಾಗಲೀ, ನಾನು ವಿಮರ್ಶಾತ್ಮಕ, ಸಂಶೋಧನಾತ್ಮಕ ಲೇಖನಗಳನ್ನು ಬರೆಯದೆ ಹೋದರೂ ಕನ್ನಡದಲ್ಲಿ ಸಾಹಿತ್ಯ ವಿಮರ್ಶೆ, ಸಂಶೋಧನೆ ಹೇಗೆ ನಡೆಯುತ್ತಿದೆ ಎನ್ನುವುದರ ನಿಕಟವಾದ, ನಿರಂತರವಾದ, ಪರಿಚಯ ನನಗಾಯಿತು; ವಿಮರ್ಶನ ದೃಷ್ಟಿ, ಸಂಶೋಧನ ದೃಷ್ಟಿ ಬೆಳೆದುವು. ವಿದ್ವತ್ಪೂರ್ಣವಾದ ಲೇಖನಗಳ ಕರಡಚ್ಚು ತಿದ್ದುವುದೇ ಒಂದು ಸ್ವಾರಸ್ಯವಾದ ಅನುಭವವಾಗಿತ್ತು. ಗೋವಿಂದ ಪೈ ಅವರು ರೂಢಿಯಲ್ಲಿದ್ದ ಶಬ್ದರೂಪಗಳನ್ನು, ತಮ್ಮದೇ ಆದ ರೀತಿಯಲ್ಲಿ ಬಳಸುತ್ತಿದ್ದರು. ಉದಾಹರಣೆಗೆ, ಎಲ್ಲರೂ ಸಾಧಾರಣವಾಗಿ ಬಳಸುವ "ಖಂಡಿತ" ಎಂಬ ಶಬ್ದವನ್ನು "ಕಂಡಿತ" ಎಂದು ಪ್ರಯೋಗಿಸಿದ್ದರು. ಅದನ್ನು ನಾನು "ಖಂಡಿತ" ಎಂದು ತಿದ್ದಿದಾಗ ಅವರ ಬರವಣಿಗೆಯ ಒಂದು ಅಕ್ಷರವನ್ನೂ ತಿದ್ದಕೂಡದೆಂದು ಕೃಷ್ಣಶಾಸ್ತ್ರಿಗಳು ತಿಳಿಸಿದರು. ಪರಿಷತ್ತಿನ ಸಭೆ ಸಮಾರಂಭಗಳ ವರದಿಗಳು ವಾರ್ಷಿಕ ವರದಿ, ಸಾಹಿತ್ಯ ಸಮ್ಮೇಳನ, ಸಕಲ ಸದಸ್ಯರ ಸಭೆ, ಕಾರ್ಯಸಮಿತಿ–ಉಪಸಮಿತಿಗಳ ಗೊತ್ತುವಳಿಗಳು– ಮುಂತಾದವುಗಳನ್ನು ಕೂಡ ನಿರ್ದುಷ್ಟವಾದ, ಆಕರ್ಷಕವಾದ,

'ಕಾವ್ಯಾಲಾಪ' ಎಂಬ ಹೆಸರಿನಡಿಯಲ್ಲಿ, ಪದ್ಯಗಳು ಪ್ರಕಟವಾದವು. ನನ್ನ ಹರೆಯದ ಹೋರಾಟದ ಮನೋಧರ್ಮದ ಸ್ಥಿತಿಯಲ್ಲಿ ಮೂಡಿಬಂದದ್ದು "ಕಾವ್ಯಾಲಾಪ". ಇದರ ಬಗ್ಗೆ ಈ ಹಿಂದೆಯೂ ಕೆಲವು ಮಾತುಗಳನ್ನು ಆಡಿರುವೆನಾದ್ದರಿಂದ, ಹೆಚ್ಚು ಹೇಳಬೇಕಾದ ಕಾರಣವಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ಮತ್ತು ನಿಘಂಟು ಕಚೇರಿಗಳಲ್ಲಿ ಕೆಲಸ ಮಾಡಿದ ೧೦–೧೨ ವರ್ಷಗಳ ಅವಧಿಯಲ್ಲಿ "ಶಿಲಾಮುಖ", "ಮಾರ್ಗದರ್ಶಕ", "ರತಿದೇವಿ" ಎಂಬ ಮೂರು ಕಥಾಸಂಕಲನಗಳು; "ಹಕ್ಕಿಹಾಡು", "ಆ ಚಿತ್ರಗಳು", "ಕಾವ್ಯಾಲಾಪ", "ಹೂವಾಡಗಿತ್ತಿ", "ರಾಗ", ಎಂಬ ಐದು ಪದ್ಯದ ಪುಸ್ತಕಗಳು; "ಹೂವಿನ ಆಸೆ", "ತೆರೆಮರೆಯ ಚಿತ್ರಗಳು" ಎಂಬ ಎರಡು ನಾಟಕಗಳು; "ಹಿಡಿ ಹೂವು" ಎಂಬ ವಿವಿಧ ಬರೆಹಗಳ ಸಂಕಲನ; "ಭಾಗ್ಯಲಕ್ಷ್ಮಿ" ಎಂಬ ಒಂದು ಕಾದಂಬರಿ ಪ್ರಕಟವಾಗಿ, ಸಾಹಿತ್ಯ ಸೃಷ್ಟಿಯ ದೃಷ್ಟಿಯಿಂದ ವ್ಯರ್ಥವೆನಿಸಲಿಲ್ಲ. ಇಂದಿನ ಪೀಳಿಗೆಗೆ ಇವು Out of date, Out of fashion ಆಗಿ ಕಾಣಬಹುದು. ಪ್ರತಿಯೊಂದು ಸಾಹಿತ್ಯಕೃತಿಯೂ ತನ್ನ ಕಾಲದಲ್ಲಿ ಜನಪ್ರಿಯವಾಗಿದ್ದಷ್ಟು ಮುಂದೆ ಇರದು. ಇದು ಸಹಜ. ಪ್ರತಿಯೊಂದು ಕಾಲದಲ್ಲಿಯೂ ಆ ಕಾಲದ ಬರಹಗಾರರ ಕೃತಿಗಳು ಮುಂದೆ ಬರದೆ ಹೋದರೆ, ಅವುಗಳನ್ನು ಕೇಳುವರಾರು? ಆದರೂ, ಒಳ್ಳೆಯ ಕೃತಿಗಳು ಎಲ್ಲ ಕಾಲದವರಿಗೂ ಬೇಕಾಗುತ್ತವೆ. ಆದ್ದರಿಂದ ಅವು ಆಗಿಂದಾಗ್ಗೆ ಪುನರ್ಮುದ್ರಣ ಆಗುವ ವ್ಯವಸ್ಥೆ ಆಗಬೇಕು. ಮಾರ್ಗದರ್ಶಕ, ಹೂವಾಡಗಿತ್ತಿ, ಭಾಗ್ಯಲಕ್ಷ್ಮಿ, ಹೂವಿನ ಆಸೆ ಇವು ಎರಡು ಮೂರು ಸಲ ಮುದ್ರಣವಾಗಿವೆ.

ಈಗ ಹೆಸರಿಸಿದ ಕೃತಿಗಳಲ್ಲಿ ಎರಡು ಮೂರರ ಸಂಬಂಧದಲ್ಲಿ ಗಮನಾರ್ಹವಾದ ಸಂಗತಿಗಳುಂಟು. ಆದ್ದರಿಂದ ತಿಳಿಸಬಯಸುತ್ತೇನೆ. ಪ್ರಕಾಶಕರು ತಾವಾಗಿ ಮುಂದೆ ಬಂದು ಒಬ್ಬ ಗ್ರಂಥಕರ್ತನನ್ನು ಬೇಡಿ, ಹಸ್ತಪ್ರತಿ ಪಡೆಯಬೇಕಾದರೆ ಆತ "ಕರೆಯುವ ಹಸು" ಆಗಿರಬೇಕು; "ಗೊಡ್ಡು"ಯಾದರೂ ಪ್ರಯೋಜನವಿಲ್ಲ, ಎಳಗರುವಾದರೂ ಪ್ರಯೋಜನವಿಲ್ಲ. ಆ ಕಾಲದಲ್ಲಿ ನಾನು ತಕ್ಕಮಟ್ಟಿಗೆ ಹೆಸರಾದ ತರುಣ ಬರಹಗಾರನಾಗಿದ್ದರೂ ಪ್ರಕಾಶಕರಿಗೆ ಲಾಭ ತರುವಷ್ಟು 'ಜನಪ್ರಿಯ' ಇಲ್ಲವೆ 'ಪ್ರಸಿದ್ಧ' ಬರಹಗಾರನಾಗಿರಲಿಲ್ಲ. ಹೀಗೆಂದು ನನ್ನ ತಿಳಿವಳಿಕೆ ೧೯೪೦–೪೧ರ ಸುಮಾರಿನಲ್ಲಿ, ನನ್ನ ಮಾತಾ–ಪಿತೃಗಳು ತೀರಿಹೋಗಿದ್ದರು. ತಕ್ಕಮಟ್ಟಿನ ಪಿತೃಋಣ ಇತ್ತು. ನನ್ನ ಪಾಲಿನದಷ್ಟನ್ನಾದರೂ ತೀರಿಸಬೇಕೆಂಬ ಸಹಜವಾದ ತವಕ. ಹತಾರ್ನಿನ ಕತೆಗಳನ್ನು ಪಠ್ಯ ಪುಸ್ತಕ ಮಾಡಿಸಬಹುದು ಎಂದು ಆಪ್ತಮಿತ್ರರು ಸಲಹೆ ಮಾಡಿದರು. ಅವನ ನಾಲ್ಕು

ಪತ್ರಿಕೆಗೆ ಒಂದು ಲೇಖನ ಬರೆದೆ. ಉಪಾಧ್ಯಕ್ಷ ಗುಂಡಪ್ಪನವರು ಪರಿಷತ್ತಿನ ಸೇವಕನಾದ ನಾನು ವಾದ ವಿವಾದದಲ್ಲಿ ತೊಡಗಕೂಡದೆಂದು ಆದೇಶ ನೀಡಿದರು. ಈ ಆದೇಶವನ್ನು ನಾನು ಪಾಲಿಸಿದೆ. 'ಕರ್ನಾಟಕ–ಕರ್ಣಾಟಕ' ವಿವಾದ ನಡೆದದ್ದು ಬಿ.ಎಂ.ಶ್ರೀ ಉಪಾಧ್ಯಕ್ಷರಾಗಿದ್ದ ಕಾಲದಲ್ಲಿ. ಇದರದ್ದೇ ಒಂದು ಚರಿತ್ರೆ. ಆದ್ದರಿಂದ, ಆ ಬಗ್ಗೆ ಇಲ್ಲಿ ಬೆಳಸುವುದಿಲ್ಲ. ಈ ವಿವಾದಕ್ಕೆ ಪರೋಕ್ಷವಾಗಿ ನಾನೇ ಮೂಲ ಕಾರಣ; ಬೀಜ ಬಿತ್ತಿದವನು. ಗುರುಗಳಾದ ಬಿ.ಎಂ.ಶ್ರೀ. ಶಿಷ್ಯನ ಅಪರಾಧವನ್ನು ಬಿಟ್ಟುಕೊಡದೆ, ಅಕ್ಷರ ವ್ಯತ್ಯಾಸವನ್ನು ವಿರೋಧಿಸಿ ಪ್ರಚಂಡ ಯುದ್ಧವನ್ನೇ ಹೂಡಿದ ತಮ್ಮ ಗುರುಗಳಾದ ಬೆಳ್ಳಾವೆ ವೆಂಕಟನಾರಣಪ್ಪನವರ ಎದುರು ನಿಂತು ಹೋರಾಡಿದರು. ನನ್ನ ಜೊತೆಯವರೆಲ್ಲ– ಎಲ್.ಗುಂಡಪ್ಪ, ಕ.ವೆಂ.ರಾಘವಾಚಾರ್, ರಾಜರತ್ನಂ, ತೀ.ನಂ.ಶ್ರೀ. ಮುಂತಾದವರು ಬಿ.ಎಂ.ಶ್ರೀ.ಯವರ ಪಕ್ಷ ವಾದಿಸಿದರು. ನಾನು ನಿಷ್ಪಾಕ್ಷಿಕ ಎಂಬಂತೆ ತೆಪ್ಪನಿದ್ದೆ. ಬಳ್ಳಾರಿ ಸಾಹಿತ್ಯ ಸಮ್ಮೇಳನದಲ್ಲಿ ಪರಿಷತ್ತಿನ ಹೆಸರಿನ ಸಂಬಂಧವಾಗಿ ಹುಟ್ಟಿದ ವಾದಕ್ಕೆ ಕಾರಣವಾದ "ನ–ಣ" ಕಾರಗಳ ಗೊಡವೆಯೇ ಬೇಡ ಎಂದು, "ಕರ್ಣಾ(ರ್ನಾ)ಟಕ" ಸಾಹಿತ್ಯ ಪರಿಷತ್ತು ಇದ್ದುದು "ಕನ್ನಡ ಸಾಹಿತ್ಯ ಪರಿಷತ್ತು" ಆಯಿತು.

ಈ ಎಲ್ಲ ವಾದಗಳೂ ನನ್ನ ಸ್ವಭಾವದಲ್ಲಿದ್ದ ಹೋರಾಟದ ಓಲವನ್ನು ಕೆಣಕುತ್ತಲೇ ಇದ್ದವು. ಆದರೆ ಪರಿಷತ್ತಿನ ಸಂಬಳಗಾರನಾಗಿದ್ದುಕೊಂಡು, ಉದ್ರೇಕವನ್ನು ಅಡಗಿಸಿಕೊಳ್ಳಬೇಕಾಗಿತ್ತು. ಪ್ರಗತಿಶೀಲ ಸಾಹಿತ್ಯದ ವಾದ ಎದ್ದಾಗ, ನಾನು ಪರಿಷತ್ತಿನ ಹುದ್ದೆಯನ್ನು ಬಿಟ್ಟು, ಮೈಸೂರು ವಿಶ್ವವಿದ್ಯಾಲಯ ಕೈಗೊಂಡಿದ್ದ ಇಂಗ್ಲೀಷು–ಕನ್ನಡ ನಿಘಂಟು ನಿರ್ಮಾಣಕ್ಕೆಂದು ಏರ್ಪಾಟಾಗಿದ್ದ ಕಚೇರಿಯಲ್ಲಿ ಸಂಪಾದಕ ಸಹಾಯಕರಲ್ಲಿ ಒಬ್ಬನಾಗಿ ಕೆಲಸ ಮಾಡುತ್ತಿದ್ದೆ. ನಿಘಂಟುವಿನ ಪ್ರಧಾನ ಸಂಪಾದಕರು ಬೆಳ್ಳಾವೆ ವೆಂಕಟನಾರಣಪ್ಪನವರು. ಮೈಸೂರು ವಿಶ್ವ ವಿದ್ಯಾನಿಲಯ ಆಗ ಇನ್ನೂ ಪೂರ್ತಿಯಾಗಿ ಸರ್ಕಾರದ ಅಧೀನದಲ್ಲಿಯೇ ಇತ್ತು. ನಾನು ಸರ್ಕಾರಿ ನೌಕರ. ಪ್ರಗತಿಶೀಲ ಸಾಹಿತ್ಯದ ಸಿದ್ಧಾಂತಗಳನ್ನು ಪ್ರತಿಭಟಿಸಿ ಬರೆಯಬೇಕೆಂಬ ಪ್ರಚೋದನೆ ತೀವ್ರವಾಗಿತ್ತು. ನನ್ನ ಅಭಿಪ್ರಾಯಗಳನ್ನು ಪದ್ಯ ರೂಪದಲ್ಲಿ ಬರೆಯುತ್ತ ಹೋದೆ. ಬರವಣಿಗೆ ಪ್ರಾರಂಭವಾದದ್ದು ೧೯೪೮ರ ಜನವರಿ. ಬರೆ–ಬರೆದಂತೆ ನನ್ನ ಆಪ್ತಮಿತ್ರರಾಗಿದ್ದ ಮೋಟಗಾನ ಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳಿಗೆ ಪದ್ಯಗಳನ್ನು ತೋರಿಸುತ್ತಿದ್ದೆ. ಆಗ ಅವರು ಪರಿಷತ್ತಿನ ಕನ್ನಡ ನುಡಿಯ ಸಂಪಾದಕರು. ನನ್ನ ಪದ್ಯಗಳನ್ನು ಅವರು ಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟಿಸುತ್ತಾ ಬಂದರು. "ಕವಿಮಿತ್ರ" ಎಂಬ ಅರ್ಥಪೂರ್ಣ ಕಾವ್ಯನಾಮ ಸಹಿತ,

ಪ್ರಕಟವಾಯಿತು. ಶ್ಲೀಲ–ಅಶ್ಲೀಲದ ಪ್ರಶ್ನೆ ಎಲ್ಲ ಕಾಲದಲ್ಲೂ ಇದ್ದದ್ದೆ. ಅದರ ಇತಿ–ಮಿತಿ ಮಾತ್ರ ಕಾಲಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಏರು–ಪೇರಾಗುತ್ತ ಇರುತ್ತದೆ.

"ಭಾಗ್ಯಲಕ್ಷ್ಮಿ" ಪ್ರಕಟವಾದಾಗ, ೧೯೪೨ರಲ್ಲಿ, ನನ್ನ ವಯಸ್ಸು ೩೨. ಇದನ್ನು ಓದಿ ಮೆಚ್ಚಿಕೊಂಡ ಎಂ.ಆರ್. ಶ್ರೀನಿವಾಸಮೂರ್ತಿಯವರು, ೪೦ ವರ್ಷವಾದ ಮೇಲೆ ಕಾದಂಬರಿ ಬರೆಯಬೇಕು. ಆ ವೇಳೆಗೆ ಲೋಕಾನುಭವ ಸಮೃದ್ಧ ವಾಗಿರುತ್ತದೆ, ಎಂದು ಸಲಹೆ ಮಾಡಿದರು. "ಮಾದನ ಮಗಳು" ಕಾದಂಬರಿಯನ್ನು ಬರೆಯತೊಡಗಿದ್ದವನು, ನಿಲ್ಲಿಸಿಬಿಟ್ಟೆ; ನಿಲ್ಲಿಸಲು ಬೇರೆಯ ಕಾರಣವೂ ಇತ್ತು. ಹಾಗೆ ಮಾಡಿದ್ದು ಒಳ್ಳೆಯದೂ ಆಯಿತು. ಮೂರ್ತಿಯವರ ಸಲಹೆಯಲ್ಲಿ ನಿಜಾಂಶ ಇದೆಯೆಂದು ನನಗೆ ತೋರಿದೆ.

ಪರಿಷತ್ತು ಮತ್ತು ನಿಘಂಟು ಕಚೇರಿಗಳಲ್ಲಿ ಕೆಲಸ ಮಾಡುತ್ತ, ಲೇಖನ ಕಾರ್ಯಕ್ಕೆ ಬಿಡುವು ಸಿಕ್ಕುತ್ತಿರಲಿಲ್ಲ. ಇದರಿಂದಾಗಿ, ನಿದ್ದೆಗೆಟ್ಟು ಬರವಣಿಗೆಯ ಕೆಲಸ ಮಾಡುತ್ತಿದ್ದೆ. ಕಷ್ಟ, ಕಾರ್ಪಣ್ಯ, ಸಾವು, ನೋವು, ಮೈಮೇಲೆ, ಮನಸ್ಸಿನ ಮೇಲೆ ಅಗುತುಕೊಂಡವು. ೧೯೪೬ರ ವೇಳೆಗೆ ನಿಘಂಟುವಿನ ಕಚೇರಿಯ ಕೆಲಸ ಮುಗಿದು, ಕಾಲೇಜಿನ ಅಧ್ಯಾಪಕನಾಗಿ ವರ್ಗ ಪಡೆದಿದ್ದೆ.೧೯೪೭ರಲ್ಲಿ ಸ್ವಾತಂತ್ರ್ಯ ಬಂತು. ೧೯೪೮ರಲ್ಲಿ ಮಹಾತ್ಮರ ಕೊಲೆಯಾಯಿತು; ಇದು ಕೂಡ ಮಾನಸಿಕವಾಗಿ ಯಾತನೆ ತಂದಿತು. ಇಲ್ಲಿಂದ ಮುಂದೆ, ನನ್ನ ಬರಹಗಳಲ್ಲಿ, ರಾಷ್ಟ್ರೀಯ ಭಾವನೆ ಪ್ರಭಾವ ಬೀರತೊಡಗಿತು. "ಅಶೋಕ ಚಕ್ರ" ಪ್ರಕಟವಾದದ್ದು ಆಗ. ನನ್ನ ಆರೋಗ್ಯ ಕುಸಿದದ್ದು ಆಗಲೇ. ಈಚೆಗೆ, ನನ್ನ ಮಿತ್ರರೊಬ್ಬರು ನನಗೆ "The Sick Man of Karnataka" ಎಂಬ ಪ್ರಶಸ್ತಿಯನ್ನು ನೀಡಿದ್ದಾರೆ; ಹಾಸ್ಯಕ್ಕಾಗಿ ಅಲ್ಲ; ತುಂಬ ಅಭಿಮಾನದಿಂದ. ನನ್ನ ಹರೆಯದ ಪರ್ವ ಮುಗಿಯಿತು. ಅಕಾಲಿಕ ಮುಪ್ಪು ದೇಹವನ್ನು ಅಡರಿತು. ಆದರೆ, ಮನಸ್ಸಿಗೆ, ಚೈತನ್ಯಕ್ಕೆ, ಮುಪ್ಪು ಬರಲಿಲ್ಲ. ಇದು ದೇವರ ಕೃಪೆ.

## ಪೂರ್ಣ ತೃಪ್ತಿಯನ್ನು ಕೊಟ್ಟ ನನ್ನ ಕೃತಿ

ಯಾರಾದರೂ "ನಿಮಗೆ ಪೂರ್ಣ ತೃಪ್ತಿ ಕೊಟ್ಟ ಕೃತಿ ಯಾವುದು?" ಎಂದು ಕೇಳಿದರೆ, ಉತ್ತರ ಹೇಳುವುದು ಕಷ್ಟವಾಗುತ್ತದೆ. ಮೊದಲನೆಯದಾಗಿ, "ಪೂರ್ಣ ತೃಪ್ತಿ" ಎನ್ನುವ ಸಮಸ್ತ ಪದ ವಿಚಾರಣೀಯವಾಗಿ ಕಾಣುತ್ತದೆ. "ತೃಪ್ತಿ" ಎನ್ನುವ ಮಾತಿನಲ್ಲಿಯೇ ಪೂರ್ಣತೆಯ ಭಾವ ಅಡಗಿದೆ ಎಂದಮೇಲೆ,

ಕತೆಗಳನ್ನು ಹೊಸದಾಗಿ ಅನುವಾದ ಮಾಡಿದ್ದೆ. ಪ್ರಕಾಶಕರನ್ನು ಕೇಳಿ, "ಇಲ್ಲ' ಎನ್ನಿಸಿಕೊಳ್ಳುವುದು ಎಂದೂ ನನಗೆ ಬೇಸರದ ವಿಷಯ. ಬಿ.ಎಂ.ಶ್ರೀ ಸ್ವರ್ಣ ಪದಕವನ್ನು ಮಾರಿ "ಯೌವ್ವನ ಸುಧೆ" ಎಂಬ ಕಥಾಪುಸ್ತಕವನ್ನು ಸ್ವಂತವಾಗಿ ಅಚ್ಚುಹಾಕಿಸಿದೆ. ಪುಸ್ತಕ ಪ್ರಕಟವಾದದ್ದಷ್ಟೆ ಲಾಭ.

"ಭಾಗ್ಯಲಕ್ಷ್ಮಿ" ಎಂಬ ಕಾದಂಬರಿ ೧೯೪೪ರಲ್ಲಿ ಪಠ್ಯಪುಸ್ತಕ ಆಗಿ, ಪಿತೃ ಋಣದಲ್ಲಿ ಅರ್ಧದಷ್ಟನ್ನು ತೀರಿಸಲು ನೆರವಾಯಿತು. ಇದಕ್ಕಿಂತ ಹೆಚ್ಚಾಗಿ, ನನಗೆ ಸಂತೋಷ ಕೊಟ್ಟ ವಿಚಾರ, ಇಂದಿನ ಬರಹಗಾರರಲ್ಲಿ ಹಲಕೆಲವರು ಅದನ್ನು ಪಠ್ಯ–ಪುಸ್ತಕವಾಗಿ ಓದಿ, ಮೆಚ್ಚಿಕೊಂಡಿದ್ದಾರೆ; ಸಾಹಿತ್ಯದಲ್ಲಿ ಆಸಕ್ತಿ ತಳೆದಿದ್ದಾರೆ ಎನ್ನಬಹುದು. ಬರಹಗಾರರಲ್ಲದ ಒಬ್ಬಿಬ್ಬರು, ಬೇರೆಯ ರೀತಿಯಲ್ಲಿ ಪ್ರಭಾವಿತರಾಗಿದ್ದಾರೆ. ಕಪ್ಪು ಹೆಂಡತಿಯನ್ನು ಮದುವೆಯಾಗಿ, ಅವಳನ್ನು ತಾತ್ಸಾರದಿಂದ ಕಾಣುತ್ತಿದ್ದು, ಅಕಸ್ಮಾತ್ತಾಗಿ ಈ ಕಾದಂಬರಿಯನ್ನು ಓದಿ, ತಮ್ಮ ನಡತೆಯನ್ನು ತಿದ್ದಿಕೊಂಡವರ ನಿದರ್ಶನಗಳನ್ನು ಸಂಗತಿ ಬಲ್ಲವರು ನನಗೆ ತಿಳಿಸಿದ್ದಾರೆ. ಸಾಹಿತ್ಯ, "ಕಾಂತಾ ಸಂಮಿತ ತಯೋಪದೇಶಯುಜೇ" ಎನ್ನುವುದಕ್ಕೆ ಈ ಕೃತಿ ಒಂದು ನಿದರ್ಶನವಾಗಿ ಪರಿಣಮಿಸಿದೆ. ಎಂದರೆ, ಇದರಲ್ಲಿ ಉಪದೇಶ ಇದೆ ಎಂದಲ್ಲ, ನನಗೆ ಪ್ರಿಯವಾದ ಹಾರ್ತಾರ್ನಿನ ಕಥೆಗಳ ವಿಷಯದಲ್ಲಿ The Story is the Moral ಎಂದು ವಿಮರ್ಶಕರ ಅಭಿಪ್ರಾಯ, ನನ್ನ ಕತೆಗೂ ಇದು ಅನ್ವಯಿಸುತ್ತದೆ. ಈ ಗ್ರಂಥದ ಬಗ್ಗೆ ಇನ್ನೊಂದು ಸ್ವಾರಸ್ಯದ ಸಂಗತಿ ಉಂಟು. ಪಠ್ಯಪುಸ್ತಕ ಸಮಿತಿಯಲ್ಲಿ ಇದಕ್ಕೆ ಬಹುಮತ ಬಂದಾಗ; "ಇದು ಪಠ್ಯಪುಸ್ತಕ ಆಗಲು ಯೋಗ್ಯವಾಗಿಲ್ಲ, ಪುಸ್ತಕದಲ್ಲಿ ಅನೇಕ ಕಡೆ 'ಪ್ರಸ್ತ' ಎಂಬ ಮಾತು ಬರುತ್ತದೆ" ಎಂದು ಒಬ್ಬರು ವಿದ್ವಾಂಸರು ಆಕ್ಷೇಪವೆತ್ತಿದರು. ಆ ಆಕ್ಷೇಪ ಎತ್ತುವುದರಲ್ಲಿ ಅವರ ಉದ್ದೇಶ ಬೇರೆಯಾಗಿತ್ತು. ಅದರ ಪ್ರಸಕ್ತಿ ಇಲ್ಲಿ ಅಪ್ರಕೃತ. 'ಪ್ರಸ್ತ' ಎನ್ನುವುದನ್ನು ಮಾರ್ಪಡಿಸುವಂತೆ ನನಗೆ ಸಮಿತಿಯ ಸೂಚನೆ ಬಂತು. ಮಾರ್ಪಾಟಿನೊಡನೆ ಪಠ್ಯಪುಸ್ತಕದ ಪರಿಷ್ಕೃತ ಮುದ್ರಣ ಸಿದ್ಧವಾಯಿತು. ಇಲ್ಲಿ ಪ್ರಸಕ್ತವಾದದ್ದು ಅಶ್ಲೀಲದ ಪ್ರಶ್ನೆ. ಮಾಸ್ತಿಯವರ 'ಸುಬ್ಬಣ್ಣ' ಕಾದಂಬರಿಯಲ್ಲಿ ಕೇವಲ ಒಂದು ಮಾತು ಅಶ್ಲೀಲ ಎಂಬ ಕಾರಣದಿಂದ ಎ.ಆರ್. ಕೃಷ್ಣಶಾಸ್ತ್ರಿಗಳು ಅದನ್ನು 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟಿಸಲು ಒಪ್ಪದೆ, ಆ ಮಾತು ಸ್ವಲ್ಪ ಮಾರ್ಪಟ್ಟ ಮೇಲೆ ಪ್ರಕಟಿಸಿದ್ದು ಪ್ರಸಿದ್ಧವಾದ ಸಂಗತಿ. ನನ್ನ "ತೆರೆಮರೆಯ ಚಿತ್ರಗಳು" ನಾಟಕವನ್ನೂ ಅನೀತಿಯುತ ಎಂದು, ನನ್ನ ವಿಷಯದಲ್ಲಿ ತುಂಬ ಪ್ರೀತಿಯಿಟ್ಟಿದ್ದ ಶಾಸ್ತ್ರಿಗಳು ಪ್ರಕಟಿಸಲು ನಿರಾಕರಿಸಿದರು. ಅದು ಆಮೇಲೆ ಬೇರೆಯಾಗಿ

ಕಸರತ್ತು ಮಾಡುವುದಕ್ಕಾಗಿ, ಬಿ.ಎಂ.ಶ್ರೀಯವರಂತೆ ಪುಟತುಂಬ ಒಂದೇ ವಾಕ್ಯ ಬರೆದಿದ್ದೇನೆ; ನಾನೂ, ಸ್ವಲ್ಪ ಸಂಸ್ಕೃತ ಬಲ್ಲೆ ಎಂದು ತೋರಿಸಿಕೊಳ್ಳಲು ಒಂದೆರಡು ಪದ್ಯಗಳನ್ನು ಸಂಸ್ಕೃತ ಭೂಯಿಷ್ಠವಾಗಿ ಬರೆದಿದ್ದೇನೆ. ಕಥೆ ಕಾದಂಬರಿಗಳಲ್ಲಂತೂ, "ತಲೆಗೆಲ್ಲಾ ಒಂದೇ ಮಂತ್ರ" ಎನ್ನುವಂತೆ, ಏಕಶ್ರುತಿಯ, ಒಂದೇ ಬಗೆಯ ಶೈಲಿಯಲ್ಲಿ ಬರೆಯುವ ರೀತಿ, ನನಗೆ ಒಪ್ಪಿತವಿಲ್ಲ. ಶೈಲಿಯ ವಿಚಾರದಲ್ಲಿ ನಾನು ಯಾವ ಪೂರ್ವಗ್ರಹಿಕೆಯಿಂದಲೂ ಬರೆಯಹೊರಡುವುದಿಲ್ಲ. ನನ್ನ ಕೃತಿಯ ವಸ್ತು ಅಥವಾ ವಿಷಯ ತನ್ನ ಶೈಲಿಯನ್ನು ತಾನೇ ಗೊತ್ತು ಮಾಡಿಕೊಳ್ಳುತ್ತದೆ. ಸೃಜನಶೀಲ ಕೃತಿಗಳ ಬಗೆಗೆ ಮಾತ್ರ ಈ ಮಾತು. ಹತ್ತು ಸಂಪುಟಗಳ "ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ"ಗೆಂದು ನಾನು ಬರೆದ "ಶಾಸ್ತ್ರಸಾಹಿತ್ಯ" ಸಂಪುಟವನ್ನು ಉದ್ದೇಶಪೂರ್ವಕವಾಗಿ ಕೂಡಿದ ಮಟ್ಟಿಗೂ, ಸರಳವಾದ ಭಾಷೆಯಲ್ಲಿ ಬರೆದಿದ್ದೇನೆ. ಈ ಜಾತಿಯ ಗ್ರಂಥರಚನೆಯಲ್ಲಿ ಈ ದೃಷ್ಟಿ ಇರಬೇಕು; ಈ ಗ್ರಂಥ ನನಗೆ "ಪೂರ್ಣ ತೃಪ್ತಿ"ಯನ್ನು ಕೊಟ್ಟಿದೆ ಎಂದು ಮೊದಲಿಗೇ ಹೇಳಿಬಿಡುತ್ತೇನೆ.

ತೃಪ್ತಿಯ ವಿಚಾರ ಹೇಳಿದೆ. ಈಗ ಪೂರ್ಣತೃಪ್ತಿಯ ವಿಚಾರಕ್ಕೆ ಬರುತ್ತೇನೆ. ನಾನು ಈ ಮೊದಲೇ ಹೇಳಿದಂತೆ ನಿಜವಾದ ಬರಹಗಾರನ ಕೃತಿ ಅವನಿಗೆ ತೃಪ್ತಿ ಕೊಟ್ಟೇ ಕೊಡುತ್ತದೆ. ಏಕೆಂದರೆ ಅವನು ಬರೆಯುವುದೇ ಆತ್ಮಸಂತೋಷಕ್ಕಾಗಿ, ಆತ್ಮತೃಪ್ತಿಗಾಗಿ. ಈ ತೃಪ್ತಿಯೇ ಲಾಕ್ಷಣಿಕರು ಹೇಳುವ "ಸದ್ಯಃ ಪರನಿರ್ವೃತ್ತಿ", ಅಥವಾ "ತತ್ಕಾಲದ ಪರಮಾನಂದ", divine bliss here and now. ಕೃತಿ ರಚನೆ ಮಾಡುವಾಗ, ಮಾಡಿದ ಕೂಡಲೆ, ದೊರಕುವ ಸಂತೃಪ್ತಿ ಇದೆಯಲ್ಲ, ಇದನ್ನು "ಪೂರ್ಣತೃಪ್ತಿ" ಎಂದು ಕರೆಯಬಹುದು. ನಾನು ರಚಿಸಿರುವ ಎಲ್ಲ ಕೃತಿಗಳೂ ಅಲ್ಲದಿದ್ದರೂ, ಹಲವು ಈ ತೃಪ್ತಿಯನ್ನು ಕೊಟ್ಟಿರುವುದರಿಂದ, ಯಾವ ಒಂದು ಕೃತಿಯನ್ನು ಮಾತ್ರ ಪೂರ್ಣತೃಪ್ತಿಯನ್ನು ಕೊಟ್ಟದ್ದು ಎಂದು ಹೇಳುವುದು ಕಷ್ಟವಾಗುತ್ತದೆ.

ಪೂರ್ಣತೃಪ್ತಿಗೆ ಮುಖ್ಯವಾದ ಇನ್ನೊಂದು ಮುಖವುಂಟು. ಅಡಿಗೆಯ ದುಷ್ಟಾಂತವನ್ನು ಮತ್ತೆ ಪ್ರಸ್ತಾಪಿಸಬಹುದಾದರೆ, ಮನೆಯಾಕೆ ಮಾಡಿದ ಅಡಿಗೆ ಸಾರ್ಥಕವಾಗುವುದು, ಮನೆಯವರೆಲ್ಲ ಉಂಡು "ಚೆನ್ನಾಗಿದೆ" ಎಂದು ಬಾಯಿ ಚಪ್ಪರಿಸಿದಾಗ. ಆಗ ಮನೆಯಾಕೆಯ ಮುಖ ಹಪ್ಪಳ ಅರಳಿದ ಹಾಗೆ ಅರಳುತ್ತದೆ. Proof of the Pudding is in the eating. ಕಡಬು ಚೆನ್ನಾಗಿದೆ ಎಂದು ಮಾಡಿದವರೇ ಹೇಳಿದರೆ ಏನು ಸಾರ್ಥಕ್ಯ? ತಿಂದವರು ಹಾಗೆ ಹೇಳಬೇಕು. ಕವಿ ತಾನು ಬರೆದ ತೃಪ್ತಿ ಪಡೆದಮೇಲೆ ಸಹೃದಯರು ಓದಿ ತೃಪ್ತಿ ಪಡಲಿ–

ಪೂರ್ಣತೃಪ್ತಿ– ಎಂದರೇನು? ತೃಪ್ತಿಯಾಗಿ ಊಟ ಮಾಡಿದೆ ಎಂದರೆ, ಮಾಡಿದ ಊಟ ರುಚಿಸಿದ್ದು ಮಾತ್ರವಲ್ಲ, ಹೊಟ್ಟೆ ತುಂಬಿತು ಎಂದೂ ಅರ್ಥ. ಇದು ಊಟ ಮಾಡುವವನ ದೃಷ್ಟಿಯಿಂದ ಹೇಳಿದ ಮಾತು. ಅಡಿಗೆ ಮಾಡಿದವನ ದೃಷ್ಟಿಯಿಂದ, ಮಾಡಿದ ಅಡಿಗೆ ಕೆಲವರಿಗೆ ರುಚಿಸಿ, ಇನ್ನು ಕೆಲವರಿಗೆ ರುಚಿಸದೆ ಹೋಗಬಹುದು. ಅಡಿಗೆ ಮಾಡುವವನು ಪಾಕಪಂಡಿತನಾದ್ದರಿಂದ, ರುಚಿ ಬಲ್ಲವನಾದ್ದರಿಂದ, ತನ್ನ ರುಚಿ ಭೋಜಕರ ರುಚಿ ಎರಡನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಅಡಿಗೆಯನ್ನು ಸಿದ್ಧ ಮಾಡುತ್ತಾನೆ. ತಾನು ಊಟ ಮಾಡಿದಾಗ ತನಗೇ ರುಚಿಸದ ಭೋಜನವನ್ನು ಇತರರು ಹೊಗಳಿದರೆ, ಅವರ ರುಚಿ ಕೆಟ್ಟಿರಬೇಕು, ಇಲ್ಲವೆ ತಮಗೆ ತೃಪ್ತಿಯಾಗದಿದ್ದರೂ ಉಪಚಾರಕ್ಕೆ ಮುಖಸ್ತುತಿ ಮಾಡಿರಬೇಕು. ಸಾಹಿತ್ಯದ ಕೃತಿಯ ವಿಷಯದಲ್ಲಿಯೂ ಈ ಎಲ್ಲ ಸಾಧ್ಯತೆಗಳೂ ಉಂಟು. "ಲೋಕೋ ಭಿನ್ನ ರುಚಿಃ" ಎಂಬ ಮಾತು ಇದೆಯಷ್ಟೆ. ಹಲವು ರುಚಿಗಳಿಗೆ ಪ್ರಿಯವಾಗುವಂತೆ ಅಡಿಗೆ ಮಾಡುವುದು ಎಷ್ಟು ಕಷ್ಟವೋ ಸಾಹಿತ್ಯ ಕೃತಿ ರಚಿಸುವುದೂ ಅಷ್ಟೇ ಕಷ್ಟ; ಹಾಗೆ ಮಾಡಬೇಕಾದದ್ದೂ ಇಲ್ಲ. "ನಮ್ಮಮ್ಮನ ಹಾಗೆ, ನಿನಗೆ ಅಡಿಗೆ ಮಾಡುವುದಕ್ಕೆ ಬರುವುದಿಲ್ಲ" ಎಂದು ಹೊಸದಾಗಿ ಮನೆಗೆ ಬಂದ ಹೆಂಡತಿಗೆ ಗಂಡ ಹೇಳುವುದು ಸಾಮಾನ್ಯ. ಅತ್ತೆಯ ಕೈಕೆಳಗೆ ನುರುಗಿದ ಮೇಲೆ ಸೊಸೆ, ಅಮ್ಮನ ಹಾಗೆ ಏಕೆ, ಅಮ್ಮನ ಅಮ್ಮನ ಹಾಗೂ ಮಾಡಬಲ್ಲಳು. ಆಗ ಗಂಡ, "ಅಮ್ಮನ ಕೈಲಾಗುವುದಿಲ್ಲ, ಇನ್ನು ಮೇಲೆ ನೀನೆ ಅಡಿಗೆ ಮಾಡು" ಎಂದು ಸೂಚ್ಯವಾಗಿ, ಹೆಂಡತಿಯ ಅಡಿಗೆಯ ಕಡೆಗೆ ಒಲಿಯುತ್ತಾನೆ. ಮೊದಲು, ಕೆಲವು ಕಾಲ ಬರಹಗಾರನ ಕೃತಿಗಳು ಬಾಲಿಶ, ಅಪಕ್ವ ಆಗಿರಬಹುದು. ಕೈಕುದುರಿದ ಮೇಲೆ, ನಿಜವಾದ ಬರಹಗಾರ ತನ್ನ ರುಚಿ ಸಿದ್ಧಿಯಲ್ಲಿ ನಂಬಿಕೆ ಉಳ್ಳವನಾಗುತ್ತಾನೆ. ಆತ್ಮವಿಶ್ವಾಸದಿಂದ ಬರೆಯುತ್ತಾನೆ. ತನಗೇ ತೃಪ್ತಿ ಕೊಡದ ಕೃತಿಯನ್ನು ಅವನು ಎಂದಿಗೂ ಪ್ರಕಟಿಸುವುದಿಲ್ಲ. ಇಂಥ ಬರಹಗಾರನ ಬರಹ ಬರೆವಾಗಲೂ, ಬರೆದ ಮೇಲೂ ಅವನಿಗೆ ತೃಪ್ತಿ ಕೊಡುತ್ತದೆ. ಈ ದೃಷ್ಟಿಯಿಂದ, ನಾನು ಬರೆದ ಪದ್ಯ, ಕಥೆ, ಕಾದಂಬರಿ, ನಾಟಕ, ಪ್ರಬಂಧ, ಇವುಗಳಲ್ಲಿ ಬಹುಪಾಲಿನವು ನನಗೆ ತೃಪ್ತಿ ಕೊಟ್ಟಿವೆ. ಒಂದು ನಿರ್ದಿಷ್ಟ ಶ್ರೋತೃ ವರ್ಗವನ್ನು ಗಮನದಲ್ಲಿರಿಸಿಕೊಂಡೋ, ಇಲ್ಲವೆ, ಒಂದು ಶ್ರೋತೃವರ್ಗವನ್ನು ಕಲ್ಪಿಸಿಕೊಂಡೋ ನಾನು ಎಂದೂ ಬರೆದಿಲ್ಲ. ಎಲ್ಲರಿಗೂ ಅರ್ಥವಾಗಬೇಕು ಎಂದು ಉದ್ದೇಶಪೂರ್ವಕವಾಗಿ ಸರಳವಾದ ಭಾಷೆಯನ್ನು ಬಳಸಹೋಗಿಲ್ಲ; ಹಾಗೆಯೇ ಪಾಂಡಿತ್ಯ ಪ್ರದರ್ಶನಕ್ಕಾಗಿ ಪ್ರೌಢವಾಗಿಯೂ ಬರೆಯಹೋಗಿಲ್ಲ. ಅಪವಾದಗಳು ಇಲ್ಲವೆಂದಲ್ಲ. ಒಂದುಕಡೆ,

ಬಂದಾಗ, ಅವು ನೂರು ಪತ್ರಕ್ಕೆ ಸಮನಾಗುತ್ತವೆ. ಸಹೃದಯರಾದ ವಿಮರ್ಶಕರ ಮೆಚ್ಚುಗೆಯ ಮಾತೂ ಒಡಗೂಡಿದಾಗ ಕೃತಿಕಾರನಿಗೆ ಪೂರ್ಣತೃಪ್ತಿ ಲಭಿಸುತ್ತದೆ. ಈ ಬಗೆಯ ಪೂರ್ಣತೃಪ್ತಿ ನನ್ನ "ಮುಗಿಯದ ಮಾಯೆ" ಎಂಬ ಕವನ ಸಂಕಲನ, "ಮುಗಿಲುಗಳು" ಎಂಬ ಪ್ರಬಂಧ ಸಂಕಲನ, "ಜೀವನ ನಾಟಕ" ಎಂಬ ವ್ಯಕ್ತಿ ಚಿತ್ರಗಳ ಸಂಕಲನಗಳ ಬಗೆಗೆ ಉಂಟಾಗಿದೆ. ನಾನು ಸಂಪಾದನೆ ಮಾಡಿರುವ "ಕವಿರಾಜ ಮಾರ್ಗ", "ಉದಯಾದಿತ್ಯಾಲಂಕಾರ" ಮತ್ತು "ಅರ್ಚನ" ಎಂಬ ಗ್ರಂಥಗಳ ಬಗೆಗೂ ಪೂರ್ಣತೃಪ್ತಿ ದೊರಕಿದೆ. ಈಗ ಹೆಸರಿಸಿದ ಗ್ರಂಥಗಳ ವಿಷಯವಾಗಿ ಸಹೃದಯರಾದ ಹಿರಿಯ ಮಿತ್ರರೂ, ಗುರು ವರ್ಗದವರೂ, ಗುರು ಸ್ಥಾನೀಯರೂ, ಇತರ ಸನ್ಮಿತ್ರರೂ ಬರೆದ ಪತ್ರಗಳಿಂದ ಕೆಲವು ಮೆಚ್ಚುಗೆಯ ಮಾತುಗಳನ್ನು ಇಲ್ಲಿ ಎತ್ತಿ ಹೇಳಬಹುದು. ಆದರೆ ಇತರರು ಹೇಳಿರುವ ಮಾತುಗಳೇ ಆದರೂ, ನನ್ನ ಬಾಯಿಂದ ಬಂದರೆ ಸ್ವಪ್ರಶಂಸೆಯಾಗಬಹುದು– ಎಂಬ ಭಯದಿಂದ ಸುಮ್ಮನಿರಬೇಕಾಗಿದೆ.

ಪ್ರಕಟವಾದ ನನ್ನ ಎಲ್ಲ ಗ್ರಂಥಗಳ ಬಗೆಗೂ ಪತ್ರಿಕೆಗಳಲ್ಲಿ ವಿಮರ್ಶೆಗಳು ಪ್ರಕಟವಾಗಿವೆ. ಅವುಗಳನ್ನು ವಿಮರ್ಶೆ ಎನ್ನುವುದಕ್ಕಿಂತಲೂ ಅಭಿಪ್ರಾಯಗಳು ಎಂದರೆ ಸರಿಯಾದೀತೇನೋ. ಪತ್ರಿಕೆಗಳಲ್ಲಿ ಒಂದೇ ಬಗೆಯ ಸದಭಿಪ್ರಾಯಗಳನ್ನು ಒಂದು ಕೃತಿಯ ಬಗೆಗೆ ಓದಿದಾಗ ಕೃತಿಕಾರನಿಗೆ ಸಂತೋಷವಾಗುತ್ತದೆ. ನನ್ನ 'ಭಾಗ್ಯಲಕ್ಷ್ಮಿ', "ಸೌಭಾಗ್ಯವತಿ", "ಮುಗಿಯದ ಮಾಯೆ", "ಮಾರ್ಗದರ್ಶಕ" ಮತ್ತು "ಬಿಸಿಲು–ಬೆಳುದಿಂಗಳು"– ಕಥಾಸಂಕಲನಗಳು, "ಜೀವನ ನಾಟಕ"– ಈ ಗ್ರಂಥಗಳ ಬಗೆಗೆ ವಿರುದ್ಧವಾದ ಅಭಿಪ್ರಾಯ ಪ್ರಕಟವಾದಂತೆ ತೋರುವುದಿಲ್ಲ. ಹೀಗಿರುವುದರಿಂದ ಈ ಅಭಿಪ್ರಾಯಗಳನ್ನು ಓದಿಕೊಂಡ ಗಳಿಗೆಯಲ್ಲಿ ಗ್ರಂಥ ಬರೆದದ್ದು ಸಾರ್ಥಕವಾಯಿತು ಎನ್ನಿಸಿದೆ.

ಎಲ್ಲ ಗ್ರಂಥಗಳ ವಿಚಾರವಾಗಿಯೂ ಈ ಮಾತು ಹೇಳಲು ಸಾಧ್ಯವಿಲ್ಲ. ಕೆಲವು ಕೃತಿಗಳ ವಿಷಯದಲ್ಲಿ ಹೊಗಳಿಕೆ–ತೆಗಳಿಕೆ ಎರಡೂ ಪ್ರಕಟವಾಗಿವೆ. ಸ್ವ ಪ್ರಚಾರ, ಸ್ವಪ್ರಶಂಸೆ, ಆಗಬಹುದೆಂಬ ಭೀತಿಯಿದ್ದರೂ, ನಾನು ಕುರಿತಿರುವ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಡುವುದು ಅನಿವಾರ್ಯವಾಗುತ್ತದೆ. ೧೯೫೦ರಲ್ಲಿ ಪ್ರಕಟವಾದ "ಮಾದನ ಮಗಳು" ಕಾದಂಬರಿಯನ್ನು ಕುರಿತು, ಒಬ್ಬ ಕಾದಂಬರಿಕಾರ–ವಿಮರ್ಶಕರು "ಪ್ರಚಾರದ ಕಾದಂಬರಿ" ಎಂದು ವಿಶ್ಲೇಷಿಸಿ ಹೇಳಿದರೆ, ಇನ್ನೊಬ್ಬರು– "ಇದು ಹರಿಜನ ಸಮಸ್ಯೆಯ ಕಾದಂಬರಿ ಎಂದು ಇದು ಪ್ರಚಾರಾತ್ಮಕ ಸಾಹಿತ್ಯ ಎಂದು ತಟ್ಟನೆ

ಎಂದು ಬಯಸುತ್ತಾನೆ. "ಕಟ್ಟಿಯುಮೇನೊ ಮಾಲೆಗಾರನ ಪೊಸ ಬಾಸಿಗಂ, ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ?" ಎಂಬ ಜನ್ನನ ಮಾತು ಈ ಅಭಿಪ್ರಾಯವನ್ನು ಬಹು ಮನೋಜ್ಞವಾಗಿ ತಿಳಿಸಿದೆ. ಕಾವ್ಯದ ಹುಟ್ಟು ಕವಿಯ ಪ್ರತಿಭೆಯಲ್ಲಿ; ಅದರ ನೆಲಸು ಸಹೃದಯನ ಹೃದಯದಲ್ಲಿ. "ಸರಸ್ವತ್ಯಾಸ್ತತ್ವಂ ಕವಿ ಸಹೃದಯಾಖ್ಯಂ ವಿಜಯತೇ", ಸರಸ್ವತೀತತ್ವವು ಕವಿ–ಸಹೃದಯರಿಬ್ಬರನ್ನು ಅವಲಂಬಿಸಿರತಕ್ಕದ್ದು; ಅವರ ಅನ್ಯೋನ್ಯಾಶ್ರಯದಲ್ಲೆ ಕಾವ್ಯದ ಗೆಲುವಿನ ಗುಟ್ಟು. ಈ ವಿಜಯಸಿದ್ಧಿಯೇ ನಿಜವಾದ ಯಶಸ್ಸು. ಕವಿ ಯಶಃ ಪ್ರಾರ್ಥೀ; ಯಶಸ್ಸನ್ನು ಬಯಸತಕ್ಕವನು. ತನ್ನ ಕೃತಿಯಿಂದ ಯಶಸ್ಸು ದೊರಕಿದಾಗಲೇ, ಎಂದರೆ, ತಾನು ಬದುಕಿರುವಾಗ, ತಡವಾಗಿಯಾದರೂ, ಸಹೃದಯರು– ಇವರ ಸಂಖ್ಯೆ ಅಪಾರವಾಗಿರಬೇಕಿಲ್ಲ– ಪರಿಮಿತ ಸಂಖ್ಯೆಯ ಸಹೃದಯರು ಅಯಾಚಿತವಾಗಿ ತಮ್ಮ ಮೆಚ್ಚುಗೆಯನ್ನು ತಿಳಿಸಿದಾಗಲೇ ಕವಿಗೆ ಪೂರ್ಣ ತೃಪ್ತಿ. ಹೆಚ್ಚು ಕಡಿಮೆ ಜನ್ನನ ಮಾತನ್ನು ಹೋಲುವ ಗಯಟೆ ಕವಿಯ ಮಾತನ್ನು ಇಲ್ಲಿ ಸ್ಮರಿಸುವುದು ಸೂಕ್ತ: ಮಾಲೆಯನು ಕಷ್ಟಪಟ್ಟ ಗ್ರಂಥರಚನೆ ಮಾಡಬಹುದು ; ಕಷ್ಟ ಏಕೆಂದರೆ ಗ್ರಂಥರಚನೆ ಮಾಲೆಕಟ್ಟುವಷ್ಟು ಸುಲಭವಲ್ಲ ಬಲು ಸುಲಭವಹುದು; ಬಲು ಕಷ್ಟ ಮುಡಿವುದಕೆ ತಕ್ಕವರನರಸುವುದು! ಇಂಗ್ಲಿಷಿನಲ್ಲಿ ವಾಡಿಕೆಯಾಗಿ ಹೇಳುವಂತೆ, ಗ್ರಂಥರಚನೆಯಲ್ಲಿ Inspiration ಸ್ಫೂರ್ತಿ ಒಂದು ಪಾಲಾದರೆ, perspiration ಬೆವರು ಸುರಿಸುವುದು, ಕೆಲವು ವೇಳೆ ರಕ್ತ ಬಸಿಯುವುದೂ ಆಗಬಹುದು– ಇದು ಹತ್ತು ಪಾಲು. ನಮ್ಮ ಲಾಕ್ಷಣಿಕರು ಗ್ರಂಥರಚನೆಯ ಸಂಕಷ್ಟವನ್ನು ಪ್ರಸವವೇದನೆಗೆ ಹೋಲಿಸಿದ್ದಾರೆ. ಗ್ರಂಥ ರಚನೆಯಾದ ಮೇಲೆ ಆತ್ಮತೃಪ್ತಿಯಾದರೂ, ಸಹೃದಯರ ಮೆಚ್ಚುಗೆಯ ಪೂರ್ಣತೃಪ್ತಿ ದೊರಕಲು ಬಹು ಕಾಲ ಕಾಯಬೇಕು. ಇದು ಅಚ್ಚಿನ ಯುಗ. ಬರೆದ ಗ್ರಂಥ ಅಚ್ಚಿನಮನೆ ಕಾಣಬೇಕಾದರೆ ಅಶ್ವಮೇಧಯಾಗ ಮಾಡಿದ ಹಾಗೆ. ಅಚ್ಚಾಗದೆ ಜನ ಓದುವಂತಿಲ್ಲ; ಓದುಗರು ದೊರೆಯದೆ, ಸಹೃದಯರು ದೊರೆಯುವಂತಿಲ್ಲ. ಒಂದು ಗ್ರಂಥ ರಚಿತವಾಗುವ ಕಾಲಕ್ಕೂ, ಅಚ್ಚಾಗುವ ಕಾಲಕ್ಕೂ, ಅಚ್ಚಾಗಿ ಅದರ ವಿಮರ್ಶೆಗಳು ಹೊರಬರುವ ಕಾಲಕ್ಕೂ ನಡುನಡುವೆ ವರ್ಷಗಳ ಅಂತರ ಕಾಣಿಸಿಕೊಂಡು, ಸಹೃದಯರ ಮೆಚ್ಚುಗೆಯನ್ನು ತಿಳಿಯಲು ಗ್ರಂಥಕರ್ತ ವರ್ಷಗಟ್ಟಲೆ ಕಾಯ ಬೇಕಾಗುತ್ತದೆ. ಗ್ರಂಥ ಅಚ್ಚಾಗಿ ಬಂದ ಕೂಡಲೇ, ನೂರು ಪ್ರತಿಗಳನ್ನು ಗೌರವಾರ್ಥ ಗುರುಹಿರಿಯ ಮಿತ್ರವರ್ಗಕ್ಕೆ ಕಳಿಸಿಕೊಟ್ಟರೆ, ಮೂರು ಮೆಚ್ಚುಗೆಯ ಪತ್ರ ಬಂದರೆ ಹೆಚ್ಚು. ಆದರೂ ಈ ಮೂರು ಮೆಚ್ಚುಗೆಯ ಪತ್ರ ಸ್ವತಃ ಬರಹಗಾರೂ, ಸಹೃದಯರೂ ಆದವರಿಂದ

ಕೈಲಾದದ್ದನ್ನು ಮಾಡಿದ್ದೇನೆ, ಮಾಡುತ್ತಿದ್ದೇನೆ. ಬರಹ ಹೇಗಾದರೂ ಇರಲಿ, ಎಲ್ಲ ಬಗೆಯ ಬರಹವನ್ನು ಬರೆಯುತ್ತಿರುವುದರಲ್ಲೇನೆ ನನಗೆ ಪೂರ್ಣತೃಪ್ತಿ. ಇಹ ಸಂಸಾರದ ತಾಪತ್ರಯವನ್ನು ನೀಗಿ ಆತ್ಮಸಂಸ್ಕಾರಕ್ಕೆ ಸಾಧಕವಾಗುವ ಸಂಜೀವಿನಿ ಸಾಹಿತ್ಯ ಓದುಗ, ಕೃತಿಕಾರ, ಇಬ್ಬರಿಗೂ ಅನ್ವಯಿಸುವ ಮಾತು ಇದು. ಅರ್ಧ ಶತಮಾನ ಕಾಲ ಈ ಸಂಜೀವಿನಿಯನ್ನು ಸೇವಿಸಿರುವ ನಾನು "ಧನ್ಯೋಽಸ್ಮಿ" ಎಂದು ನಮ್ರತೆಯಿಂದ ಹೇಳುತ್ತೇನೆ.

* * * *

ಕೆಲವರು ತೀರ್ಮಾನ ಮಾಡಿಬಿಡುವುದುಂಟು. ಆದರೆ, ಪ್ರಚಾರಕ್ಕಿಂತಲೂ ಕಲೆಗೇ ಇದರಲ್ಲಿ ಪ್ರಥಮ ಸ್ಥಾನವಿದೆ. ''Uncle Tom's Cabin'ದಲ್ಲಿ ಅಮೇರಿಕಾದಲ್ಲಿಯ ನೀಗ್ರೋ ಸಮಸ್ಯೆ ಇರುವಂತೆ, ಇಲ್ಲಿ ಹರಿಜನ ಸಮಸ್ಯೆ ಇದೆ. ಕಾದಂಬರಿಯ ಕಥಾವಸ್ತುವನ್ನು ನಿರೂಪಿಸಿರುವ ಕಾದಂಬರಿಕಾರರ ಕಲಾಪ್ರೌಢಿಮೆಯಿಂದಲೇ, ಕೆಲವು ಕಡೆ ನೀರಸವಾಗಿ ಬಿಡಬಹುದಾಗಿದ್ದ ಸನ್ನಿವೇಶಗಳು ಸಹ, ರಸ ಭರಿತವಾಗಿಯೇ ಉಳಿದಿವೆ. ವಸ್ತು ನಿರೂಪಣೆಗಿಂತಲೂ ನಮ್ಮ ಮನಸ್ಸನ್ನು ಸೆಳೆಯುವುದು, ಪಾತ್ರ ಪರಿಪುಷ್ಟಿ" ಎಂದು ಅಭಿಪ್ರಾಯಪಟ್ಟರು. ಮತ್ತೊಬ್ಬ ವಿಮರ್ಶಕರಿಗೆ, "ಸಮಸ್ಯೆಯನ್ನು ಅದರ ಅನೇಕ ಮುಖಗಳಲ್ಲಿ ಮಂಡಿಸುತ್ತಾರೇನೋ ಸರಿ. ಆದರೆ ಪುಸ್ತಕ ಮಾತ್ರ ಬೇಸರ ಬರಿಸುವಂತಿದೆ. ಇಡೀ ಕಾದಂಬರಿಯಲ್ಲಿ ಯಾವ ಪಾತ್ರವೂ ನಮ್ಮ ಮನಸ್ಸಿನಮೇಲೆ ವಿಶೇಷ ಪರಿಣಾಮ ಮಾಡುವುದಿಲ್ಲ'' ಎಂಬಂತೆ ಕಂಡಿತು. ವಾಸ್ತವವಾಗಿ, ಅನಾರೋಗ್ಯದಲ್ಲೂ ಸುಮಾರು ಒಂದು ತಿಂಗಳ ಅವಧಿಯಲ್ಲಿ ೪೦೦ ಪುಟಗಳ ಈ ಕಾದಂಬರಿಯನ್ನು ಮುಗಿಸಿದಾಗಲೇ ನನಗೆ ಪೂರ್ಣತೃಪ್ತಿಯಾಗಿತ್ತು. ಮಿಶ್ರಾಭಿಪ್ರಾಯಗಳನ್ನು ನೋಡಿದ ಮೇಲೆ ಪೂರ್ಣತೃಪ್ತಿಗೆ ಸ್ವಲ್ಪ ಕೊರತೆಯುಂಟಾಯಿತು. One man's meat is another man's poison. ಒಬ್ಬನಿಗೆ ಮಾವು; ಇನ್ನೊಬ್ಬನಿಗೆ ಬೇವು.

ಈ ತೃಪ್ತಿಯ ವಿಚಾರವನ್ನು ಇನ್ನೂ ಒಂದು ದೃಷ್ಟಿಯಿಂದ ಪರಿಶೀಲಿಸಬೇಕು. ಕಾಲ ಕಳೆದಂತೆ ಒಮ್ಮೆ ತೃಪ್ತಿಯನ್ನು ಕೊಟ್ಟ ಕೃತಿಯೇ, ಏನೋ ಕೊರತೆಯಿಂದ ಕೂಡಿರುವಂತೆ ಕಂಡುಬರುತ್ತದೆ. ಒಟ್ಟು ಸಾಧನೆಯಲ್ಲಿಯೇ ಏನೋ ಒಂದು ಅತೃಪ್ತಿ ಉಂಟಾಗುತ್ತದೆ. ಇನ್ನೂ ಉತ್ತಮವಾದದ್ದನ್ನು ಸೃಷ್ಟಿಸಬೇಕೆಂಬ ಮಹತ್ವಾಕಾಂಕ್ಷೆ ಬಾಧಿಸುತ್ತದೆ. ಇದ್ದುದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕು. ನನಗಿಂತ ಚೆನ್ನಾಗಿ ಬರೆಯುವವರು ಹುಟ್ಟಿಕೊಂಡಿದ್ದಾರೆ. ಒಂದು ಕೋಗಿಲೆಯಿಂದ ವಸಂತವಾಗದು, ''ಅಹಂ ಕರೋಮಿ ಇತಿ ವೃಥಾಭಿಮಾನಃ'' ಎಂಬ ವಿವೇಕೋದಯವಾಗಿ, ಮನಸ್ಸಿಗೆ ನೆಮ್ಮದಿಯಾಗುತ್ತದೆ.

ಇಷ್ಟು ಹೇಳಿ, ಪೂರ್ಣತೃಪ್ತಿಯನ್ನು ಕೊಟ್ಟ ಒಂದು ಕೃತಿಯನ್ನು ನಾನು ಹೆಸರಿಸಿಲ್ಲ. ನಾಲ್ಕು ಮಕ್ಕಳ ತಾಯಿಯನ್ನು, "ಯಾರಲ್ಲಿ ನಿನಗೆ ಹೆಚ್ಚು ಪ್ರೇಮ?, ಯಾರು ಪೂರ್ಣತೃಪ್ತಿಯನ್ನು ಕೊಟ್ಟಿದ್ದಾರೆ", ಎಂದು ಕೇಳಿದರೆ, ಏನು ತಾನೆ ಹೇಳಿಯಾಳು?

ಅನೇಕ ಎರಡು–ತೊಡರುಗಳನ್ನು ಎದುರಿಸಿ, ಸಾಹಿತ್ಯ ಕ್ಷೇತ್ರದಲ್ಲಿ, ನನ್ನ

ಶ್ರೇಯಸ್ಸು ಶ್ರೀ ಅವರಿಗೆ ಸಲ್ಲಬೇಕು. ಶ್ರೀಯವರು ಕೃತಿಯ ಕಾವ್ಯಗುಣವನ್ನೂ, ನಾಟಕೀಯತೆಯನ್ನೂ ಗುರುತಿಸಿ, ತಾವು ಸವಿದ ಕಾವ್ಯರಸವನ್ನು ಇತರರೊಂದಿಗೆ ಹಂಚಿಕೊಂಡಲ್ಲದೆ ಅವರಿಗೆ ಸಮಾಧಾನವಾಗುತ್ತಿರಲಿಲ್ಲ ಎಂದು ಕಾಣುತ್ತದೆ. ಹಳಗನ್ನಡ ಕಾವ್ಯಗಳ ರಸವತ್ತಾದ ಭಾಗಗಳನ್ನು ಸಹೃದಯರೊಂದಿಗೆ ಹಂಚಿಕೊಳ್ಳುವ ಉದ್ದೇಶದಿಂದ ಕಾವ್ಯವಾಚನ ಮಾಡುವುದನ್ನು ತಮ್ಮ ಬದುಕಿನ ಒಂದು ನೋಂಪಿಯಾಗಿ ಸ್ವೀಕರಿಸಿದ್ದರು. ನಾನು ಬಲ್ಲ ಮಟ್ಟಿಗೆ, ನಾನು ಮೇಲೆ ಪ್ರಸ್ತಾಪಿಸಿದ ಕಾರ್ಯಕ್ರಮವೇ ಅವರ ಸಾರ್ವಜನಿಕ ಕಾವ್ಯವಾಚನ ಕಾರ್ಯಗಳಲ್ಲಿ ಮೊತ್ತಮೊದಲನೆಯದು. ವೇದಿಕೆಯ ಮೇಲೆ ಮುಖಾ ಮುಖಿಯಾಗಿ ಶ್ರೀಯವರನ್ನು ನಾನು ಕಂಡದ್ದು ಅದೇ ಮೊದಲ ಸಲ. ಅದಕ್ಕೂ ಮೊದಲು ನಾನು ಮೈಸೂರಿನ ಡಿ. ಬನುಮಯ್ಯನವರ ಕೊಲಿಜಿಯೆಟ್ ಹೈಸ್ಕೂಲಿನಲ್ಲಿ ಜೂನಿಯರ್ ಇಂಟರ್‌ಮಿಡಿಯೆಟ್ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ (೧೯೨೮) ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದ ಬಿ.ಎಂ. ಶ್ರೀಕಂಠಯ್ಯನವರು ಕನ್ನಡ ಪಾಠ ಪ್ರವಚನದ ಪರೀಕ್ಷಕರಾಗಿ ಬಂದಿದ್ದರು. ಆಗ ನಮಗೆ ಪಾಠ ಮಾಡುತ್ತಿದ್ದವರು ಕಾನಕಾನಹಳ್ಳಿ ವರದಾಚಾರ್ಯರು. ಅವರು 'ಶ್ರೀ'ಯವರ ಗುರುವೂ ಆಗಿದ್ದರು ಎನ್ನುವುದು ಆ ಸಂದರ್ಭದಲ್ಲಿಯೇ ನನಗೆ ಮನವರಿಕೆಯಾದದ್ದು. ಆ ಸಂದರ್ಭದಲ್ಲಿ ಶ್ರೀಯವರು ನಡೆದುಕೊಂಡ ರೀತಿ ಅವರ ಗುರುಭಕ್ತಿಯನ್ನು ಕಣ್ಣಿಗೆ ಕಟ್ಟುವಂತೆ ಪ್ರದರ್ಶಿಸಿತು. ಆ ಸನ್ನಿವೇಶದ ನೆನಪು ಅರ್ಧಶತಮಾನವಾದ ಮೇಲೂ ನಿನ್ನೆ ನಡೆದ ಸಂಗತಿ ಎನ್ನುವ ಹಾಗೆ ಹಚ್ಚಹಸುರಾಗಿ ಉಳಿದು ಬಂದಿದೆ. ಅದನ್ನು ತಿಳಿಸದೆ ಮುಂದುವರಿದರೆ ಈ ಸ್ಮೃತಿಚಿತ್ರ ಪರಿಪೂರ್ಣ ಎನಿಸದು.

ಪ್ರಾತಃಸ್ಮರಣೀಯರಾದ ಗುರುವರ್ಯ ಕಾನಕಾನಹಳ್ಳಿ ವರದಾಚಾರ್ಯರು ಜೈಮಿನಿ ಭಾರತದ 'ಚಂದ್ರಹಾಸನ' ಬಾಲ್ಯವನ್ನು ವರ್ಣಿಸುವ ಕಾವ್ಯ ಭಾಗವನ್ನು ಪಾಠ ಮಾಡುವುದಕ್ಕೆ ತೊಡಗಿದ್ದಾರೆ. ವರದಾಚಾರ್ಯರು ಇತರ ಅಧ್ಯಾಪಕರುಗಳಂತೆ ನಿಂತುಕೊಂಡಾಗಲಿ ಕುರ್ಚಿಯ ಮೇಲೆ ಕುಳಿತಾಗಲಿ ಪಾಠಮಾಡುವುದು ಅವರ ರೂಢಿಯಲ್ಲ. ಆಗಿನ ಕಾಲದ ಪಂಡಿತರ ವೇಷ ಎಂದರೆ, ಪಂಚೆ ಉಟ್ಟು ಶಾಲು ಹೊದೆದು, ತಲೆಗೂ ಒಂದೂ ಶಾಲನ್ನೇ ಬಿಗಿದುಕೊಳ್ಳುವುದು. ತಲೆಯ ಶಾಲು ರುಮಾಲು ಬಿಚ್ಚಿಹೋಗುವ ಪ್ರಸಂಗಗಳೂ ಇಲ್ಲದಿರುತ್ತಿರಲಿಲ್ಲ. ನಮ್ಮ ವರದಾಚಾರ್ಯರ ವೇಷ ಭೂಷಣ ಪುರಾತನ ನೂತನಗಳ ಸಂಗಮ; ಶಾಲನ್ನು ಹೊದೆಯುವ ಬದಲು ಯಾರದ್ದೋ ಯಾವುದೋ ಹಳೆಯ 'ಓಪನ್ ಕಾಲರ್'

# ವಿದ್ಯಾರ್ಥಿಯಾಗಿ ನಾನು ಕಂಡಂತೆ

ಭೈರವನ ಜವನ ಮಾರಿಯ
ಮೂರಿಯವೊಲ್ನಿಂದ ಮಾರಿದತ್ತಂ ಲಲಿತಾ
ಕಾರರ ಧೀರರ ಬಂದ ಕು
ಮಾರರ ರೂಪಿಂಗೆ ತಕ್ಕುಗೊಂಡಂತಿರ್ದಂ

ಮೈಸೂರು ಮಹಾರಾಜರವರ ಕಾಲೇಜಿನ ಜೂನಿಯರ್ ಬಿ.ಎ. ತರಗತಿಯ ಗ್ಯಾಲರಿ ಸಭಾಂಗಣದಲ್ಲಿ ಕರ್ಣಾಟಕ ಸಂಘದ ಆಶ್ರಯದಲ್ಲಿ ಒಂದು ಅಪೂರ್ವವಾದ ಸಭೆ. ವಿದ್ಯಾರ್ಥಿಗಳು ಕಿಕ್ಕಿರಿದು ನೆರೆದಿದ್ದಾರೆ. ಕನ್ನಡದ ವಿದ್ಯಾರ್ಥಿಗಳಲ್ಲದೆ ಇತರ ಭಾಷೆ, ವಿಷಯಗಳ ವಿದ್ಯಾರ್ಥಿಗಳ ಸಹ ಕರ್ಣಾಟಕ ಸಂಘದ ವಿದ್ಯಾರ್ಥಿ ಸದಸ್ಯರಂತೂ ಇದ್ದೇ ಇದ್ದರು. ಮುಂಮುಂದಿನ ಕುರ್ಚಿ ಸಾಲಿನಲ್ಲಿ ಪ್ರೊ. ವೆಂಕಣ್ಣಯ್ಯ, ತೀ.ನಂ.ಶ್ರೀ, ಡಿ.ಎಲ್.ಎನ್. ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಇನ್ನೂ ಕೆಲವರು ಅಧ್ಯಾಪಕರು ಯಾರು ಯಾರು, ಸರಿಯಾಗಿ ನೆನಪಿಲ್ಲ. ಅಂದಿನ ಕಾರ್ಯಕ್ರಮದ ವಿಶೇಷ ಆಕರ್ಷಣೆಗೆ ಪ್ರೇರಕಶಕ್ತಿ ಬಿ.ಎಂ.ಶ್ರೀ ಎಂದು ಬೇರೆ ಹೇಳುವ ಕಾರಣವೇ ಇಲ್ಲ; ಹಾಗೂ ಅವರು ವಾಚನ ಮಾಡುವರು ಎಂದು ಪ್ರಕಟವಾಗಿದ್ದ ಕೃತಿಯ ಅಪೂರ್ವತೆ. ಆ ಕೃತಿ, ಜನ್ನನ 'ಯಶೋಧರ ಚರಿತೆ' ಈ ಅಪೂರ್ವ ಕೃತಿ ಎಂ.ಎ. ರಾಮಾನುಜ ಅಯ್ಯಂಗಾರರ ಕರ್ಣಾಟಕ ಕಾವ್ಯ ಕಲಾನಿಧಿ ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದರೂ ಸಾಹಿತ್ಯ ಚರಿತ್ರೆಯ ಮಾತು ಹಾಗಿರಲಿ, ಆರ್. ನರಸಿಂಹಾಚಾರ್ಯರ ಕವಿಚರಿತ್ರೆಯ ಹಾಳೆಗಳನ್ನೂ ತಿರುವಿಹಾಕಿರಲಿಲ್ಲ. ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶರಂತಹ ಪ್ರಸಿದ್ಧ ಕವಿಗಳ ಹೆಸರುಗಳನ್ನು ಕೇಳಿದ್ದೆವೇ ಹೊರತು ಯಶೋಧರ ಚರಿತೆಯ ಕರ್ತೃ ಜನ್ನನ ಹೆಸರನ್ನು ಕೇಳಿಕೂಡ ಅರಿಯೆವು. ಅಷ್ಟು ಪರಿಚಿತವಲ್ಲದ ಕೃತಿಯನ್ನು ವಾಚನಕ್ಕಾಗಿ ಬಿ.ಎಂ.ಶ್ರೀ ಆರಿಸಿಕೊಳ್ಳಬೇಕಿದ್ದರೆ ಅದರಲ್ಲಿ ವಿಶೇಷ ಮಹತ್ವ ಇರಲೇಬೇಕು ಎಂದು ನಮ್ಮ ಸಕಾರಣವಾದ ಕಲ್ಪನೆ.

ಈಚಿನ ದಿನಗಳಲ್ಲಿ ಜನ್ನನ ಯಶೋಧರ ಚರಿತೆಯ ಸಂಗ್ರಹ ಕಾವ್ಯಪ್ರೇಮಿಗಳಿಗೆ ಅತ್ಯಂತ ಪ್ರಿಯವಾದ ಕಾವ್ಯವಾಗಿ ಪರಿಣಮಿಸಿದೆ. ಇದರ

ಬಂದಿದ್ದೇನೆಯೇ ಹೊರತು ಪರೀಕ್ಷೆ ಮಾಡುವುದಕ್ಕಲ್ಲ'' ಎಂದರು. ಪಾಠ ಮುಂದುವರಿಯಿತು. ಬಿ.ಎಂ.ಶ್ರೀ. ಪಕ್ಕದಲ್ಲಿ ಕುಳಿತಿರುವುದರ ಅರಿವೇ ಇಲ್ಲವೋ ಏನೋ ಎಂಬಂತೆ ಗುರುಗಳು ಪಾಠ ಮಾಡಿದರು. ಬಿ.ಎಂ.ಶ್ರೀ. ಪೀರೀಯಡ್ ಮುಗಿಯುವವರೆಗೂ ಕುಳಿತಿದ್ದರು. ಎದ್ದು ಹೋಗುವಾಗ–''ನಿಮ್ಮ ಪಾಠ ಕೇಳಿದ ಯಾವ ಶಿಷ್ಯರಿಗೆ ತಾನೆ ಕನ್ನಡ ಕಾವ್ಯದಲ್ಲಿ ಪ್ರೀತಿ ಹುಟ್ಟುವುದಿಲ್ಲ?'' ಎಂದೂ ನಮಸ್ಕರಿಸಿ, ಗುರುಗಳನ್ನು ಬೀಳ್ಕೊಂಡರು. ಬಿ.ಎಂ.ಶ್ರೀ. ಅವರಿಗೆ ವರದಾಚಾರ್ಯರು ಕನ್ನಡ ಪಾಠ ಹೇಳಿ, ಅವರಿಗೆ ಹಳಗನ್ನಡ ಕಾವ್ಯದಲ್ಲಿ ಅಕ್ಕರೆ ಹುಟ್ಟಿಸಿದರು ಎಂದು ಈ ಪ್ರಸಂಗದಿಂದ ನನಗೆ ಮನವರಿಕೆಯಾಯಿತು. ಅಂದು, ಗುರುಗಳ ಪಾಠವನ್ನು ಎಂದಿನಂತೆಯೇ ನಾನು ಗಮನವಿಟ್ಟು ಕೇಳುತ್ತಿದ್ದೆನಾದರೂ ನಾನು ಆಗಾಗ್ಗೆ ಬಿ.ಎಂ.ಶ್ರೀಯವರ ಮುಖದ ಕಡೆಗೆ ದೃಷ್ಟಿ ಹಾಯಿಸುತ್ತಿದ್ದೆ. ೧೯೨೭ರಲ್ಲಿ ನಾನು ಎಸ್.ಎಸ್.ಎಲ್.ಸಿ. ತರಗತಿಯ ವಿದ್ಯಾರ್ಥಿಯಾಗಿದ್ದಾಗ ತೀ.ನಂ.ಶ್ರೀ ಅವರಿಂದ ನನ್ನ ಹುಟ್ಟು ಹಬ್ಬದ ಉಡುಗೊರೆಯಾಗಿ ಕೈಗೆ ಬಂದಿದ್ದ ''ಇಂಗ್ಲಿಂಷ್‌ಗೀತೆ''ಗಳನ್ನು ಓದಿ ಪ್ರಭಾವಿತನಾಗಿದ್ದ ನನಗೆ* ಅದರ ಕರ್ತೃವನ್ನು ನೋಡುವ ಹೆಬ್ಬಯಕೆ. ಅದು ತೀರಿತು ಅಂದು. ಕವಿ ಚೆಲುವನಾಗಿರಲೇ ಬೇಕು, ಅವನ ಮುಖದಲ್ಲಿ ದಿವ್ಯವಾದ ಕಳೆ ತುಂಬಿರಬೇಕು ಎನ್ನುವ ನನ್ನ ತಾರುಣ್ಯದ ಕಲ್ಪನೆ ಹುಸಿಯಾಗಲಿಲ್ಲ. ಅವರ ಮುಖದ ಸೊಬಗಿನ ವಿವರಗಳನ್ನು ವರ್ಣಿಸಬಹುದು. ಈ ಮಾತಿನ ಚಿತ್ತಾರ ಬಿಡಿಸುವ ಕುಸುರಿ ಕೆಲಸವನ್ನು 'ಶ್ರೀ'ಯವರ ಪರಮ ಶಿಷ್ಯರಲ್ಲಿ ಒಬ್ಬರಾದ, ನನ್ನ ಗುರು ಸ್ಥಾನೀಯರಾದ ಡಾ. ಎಸ್.ವಿ. ರಂಗಣ್ಣನವರು ಈಗಾಗಲೇ ಅನನುಕರಣೀಯವಾಗಿ ಮಾಡಿಬಿಟ್ಟಿರುವುದರಿಂದ ನಾನು ಅದಕ್ಕೆ ಕೈಹಾಕಿ ಸೋಲುವುದಕ್ಕೆ ಇಷ್ಟಪಡುವುದಿಲ್ಲ. ಆದ್ದರಿಂದ ಅವರ ಎದೆ ತುಂಬಿ ಬಂದ ಮಾತುಗಳನ್ನೆ ಉದ್ಧರಿಸಿ, ಅವರ ಮಾತಿನಲ್ಲಿ ಅತ್ಯುಕ್ತಿ ಇಲ್ಲ, ಅದು ಸ್ವಭಾವೋಕ್ತಿ, ಎಂದು ಹೇಳಿ ಅದನ್ನು ಸಮರ್ಥಿಸಿ ಸಂತೋಷಪಡುತ್ತೇನೆ.

''ದುಂಡುದುಂಡಾದ, ಮಧ್ಯ ಎತ್ತರದ, ಭವ್ಯ ದೇಹಾಕೃತಿ ; ಅಗಲವಾದ, ನಸುಗೆಂಪಿನ, ಗಂಭೀರ ಹಣೆ; ಉಬ್ಬಿದ ತಿಳಿಗೆಂಪಿನ ಲವಲವಿಕೆಯ ಕೆನ್ನೆಗಳು;

---

* ಇಂಗ್ಲಿಷ್ ಗೀತಗಳ ಪ್ರಭಾವಕ್ಕೆ ಒಳಗಾಗಿ ನಾನು ೧೯೨೮, ೧೯೨೯ರಲ್ಲಿ ಬರೆದ ಅನುವಾದಿತ ಹಾಗೂ ಸ್ವತಂತ್ರ ಕವನಗಳು ಹಲವನ್ನು 'ಮೊದಲ ಹೆಜ್ಜೆ' (೧೯೮೨) ಎಂಬ ಹೆಸರಿನಲ್ಲಿ ಪ್ರಕಟಿಸಿದ್ದೇನೆ.

ಅಂಗಿಯನ್ನೇ ಕಾಲರಿಗೆ ಸೇಫ್ಟಿಪಿನ್ನು ಚುಚ್ಚಿಕೊಂಡು ಮುಚ್ಚುಕಾಲರಿನ (Close-Collar) ಅಂಗಿ ಮಾಡಿಕೊಂಡು ಅದನ್ನು ನಮ್ಮ ಗುರುಗಳು ತಗುಲಿಹಾಕಿಕೊಂಡಿರುವರು. ಉಡಿಗೆ ಉತ್ತರೀಯಗಳಿಗೆ ಮೇಲು ಕೋಟೆ ಅಂಚಿನ 'ಪತ್ತಾರು'. ತಲೆಗೆ, ಯಥಾಪ್ರಕಾರ, ಜಿರಲೆತಿಂದ, ಜರಿ ಕಿತ್ತುಬಂದ, ಅಚ್ಚಗೆಂಪಿನ ಶಾಲೇ ಮುಂಡಾಸು. ತಿಂಗಳ ಮೇಲೆ ಬೆಳೆದು ಕಟಾವಾಗದೆ ನಿಂತ, ಉಪ್ಪು ಮೆಣಸು ಬೆರೆತ ಬಣ್ಣದ, ಕೆಳಮೊಗದ ಕೂದಲ ಬೆಳೆ–ಹಣೆತುಂಬ ನೋಡುವ ವರ ಕಣ್ಣಿಗೆ ತಾಡಿಸುವ ಊರ್ಧ್ವಪುಂಡ್ರ. ತುಂಟ ವಿದ್ಯಾರ್ಥಿಗಳ ಲೇವಡಿ ಕುಚೋದ್ಯಗಳಿಗೆ ಪಕ್ಕಾಗದ ಕನ್ನಡ ಮುನಿಷಿಗಳೇ ಆಗಿನ ದಿನಗಳಲ್ಲಿ ವಿರಳ. ಹೀಗಿರುವಲ್ಲಿ, 'ಅಣ್ಣಯ್ಯ' ಎಂಬ ಮಾತು ವರದಾಚಾರ್ಯರ ಬಾಯಿಂದ ಹೊರಬೀಳುವುದೇ ತಡ, ತುಂಟ ಪ್ರಶ್ನೆ ಕೇಳಲು ಎದ್ದು ನಿಂತ ತುಂಟ ಪೋರ ಯಾವನೇ ಆದರೂ ಬಾಲ ಮುದುಡಿ ಕುಳಿತುಬಿಡುತ್ತಿದ್ದ !

ಅನನ್ಯಸಾಧಾರಣ ವ್ಯಕ್ತಿತ್ವದ ಪೂಜ್ಯ ಗುರುಗಳ ಪಾಠ ಪ್ರವಚನವನ್ನು ಪರೀಕ್ಷೆಮಾಡಲು ಶಿಷ್ಯ ಬಿ.ಎಂ.ಶ್ರೀ, ಮೊದಲೇ ತಿಳಿವಳಿಕೆ ಕೊಟ್ಟಿದ್ದ ಪ್ರಕಾರ, ಶಾಲೆಯ ಮಹಡಿಯ ಮೇಲೆ ನಡೆಯುತ್ತಿದ್ದ ನಮ್ಮ ತರಗತಿಗೆ ಬಂದರು. ವರದಾಚಾರ್ಯರು ಎಂದಿನಂತೆ ವೇದಿಕೆಯ ಮೇಲಿದ್ದ ಮೇಜಿನ ಮೇಲೆ ಕುಳಿತು ಜೈಮಿನಿ ಭಾರತದ ಪದ್ಯವನ್ನು ತಮ್ಮದೇ ಆದ ಧಾಟಿಯಲ್ಲಿ ರಾಗವಾಗಿ ವಾಚನ ಮಾಡುತ್ತಿದ್ದಾರೆ. ಬಿ.ಎಂ.ಶ್ರೀ ಅಂದು ಬರುವುದು ಆಚಾರ್ಯರಿಗೆ ಗೊತ್ತಿದ್ದದ್ದೆ. ಯಾವ ವೇಳೆಗೆ ಎನ್ನುವುದು ಗೊತ್ತಿರಲಿಲ್ಲವೇನೋ. ಪಾಠ ಪ್ರಾರಂಭವಾಗಿ ನಿಮಿಷ ಆಗಿರಬಹುದು. ಬಿ.ಎಂ. ಶ್ರೀಯವರು ತರಗತಿಯೊಳಕ್ಕೆ ಗಂಭೀರವಾಗಿ ನಡೆದು ಬಂದರು. ಅವರು ಬಂದದ್ದನ್ನು ಗಮನಿಸಿ, ಆಚಾರ್ಯರು ತಟ್ಟನೆ ಮೇಜಿನಿಂದ ಕೆಳಕ್ಕಿಳಿದು, ಬಿ.ಎಂ.ಶ್ರೀಯವರನ್ನು ಸ್ವಾಗತಿಸಿ ಅವರಿಗಾಗಿಯೇ ಹಾಕಿಸಿದ್ದ ಇನ್ನೊಂದು ಕುರ್ಚಿಯಲ್ಲಿ ಕುಳಿತುಕೊಂಡರು. ಆಗ ಅವರ ಮುಖದ ಮೇಲೆ ಮುಗುಳುನಗೆ ಹಾದು ಹೋಗಿತ್ತು. ಕಾರಣ ಆಚಾರ್ಯರು ಮೇಜಿನ ಮೇಲಿಂದ ಇಳಿಯುವ ರಭಸದಲ್ಲಿ ತಲೆಗೆ ಸುತ್ತಿದ್ದ ಶಾಲು ರುಮಾಲು ನಸು ಬಿಚ್ಚಿ ಹೋಗಿತ್ತು. ನಾವು ವಿದ್ಯಾರ್ಥಿಗಳು ಒಳಗೊಳಗೇ ನಗುತ್ತಿದ್ದೆವು. ಬಹುಶಃ ಬಿ.ಎಂ.ಶ್ರೀಗೂ ಅದೇ ಕಾರಣಕ್ಕಾಗಿ ನಗೆ ಮೂಡಿರಬೇಕು. ವರದಾಚಾರ್ಯರು ರುಮಾಲನ್ನು ಸರಿಪಡಿಸಿಕೊಂಡ ಮೇಲೆ, ಬಿ.ಎಂ.ಶ್ರೀಯವರು "ನಮಗೂ ತಾವು ಹೀಗೆಯೇ ಅಲ್ಲವೇ ಪಾಠ ಹೇಳುತ್ತಿದ್ದದ್ದು, ತಾವು ದಯವಿಟ್ಟು ಮೊದಲಿನ ಹಾಗೆಯೇ ಪಾಠ ಮುಂದುವರಿಸಬೇಕು. ನಾನು ತಮ್ಮ ಪಾಠವನ್ನು ಕೇಳುವುದಕ್ಕೆ

ಕಾಣಬೇಕಾದರೆ ಅವರು ಸಾಧಾರಣ ಮನೆಯುಡುಪಿನಲ್ಲಿ ಕುಳಿತಿದ್ದಾಗಲೋ ಶತಪಥ ತಿರುಗುತ್ತಿದ್ದಾಗಲೋ ನೋಡಬೇಕಿತ್ತು. ಮನೆಯಲ್ಲಿ ಅವರ ಉಡುಪು ಎಂದರೆ, ಅಚ್ಚ ಟ್ವಿಲ್ ಬಟ್ಟೆಯ ಷರಟು ; ಮೇಲುಕೋಟೆ ಗುಂಡಂಚಿನ ತಡಪುಸುತ್ತಿದ್ದ ಪಂಚೆ. ಅವರು ಪರಿಷತ್ತಿನ ಉಪಾಧ್ಯಾಕ್ಷರಾಗಿದ್ದಾಗ ನಾನು ಅಲ್ಲಿ ಸಹಾಯಕ ಕಾರ್ಯದರ್ಶಿ. ಕಚೇರಿಯ ಕೆಲಸಕ್ಕಾಗಿ ಅವರ ಮನೆಗೆ ಹೋದಾಗಲೆಲ್ಲ ಅವರನ್ನು ನಾನು ಕಾಣುತ್ತಿದ್ದದ್ದು ಇದೇ ಉಡುಪಿನಲ್ಲಿ. ಇಂಥ ಸನ್ನಿವೇಶದಲ್ಲಿ ಅವರ ನಡೆ ನುಡಿ ಎಲ್ಲ ತೀರ ಸರಳ ; ಸಲಿಗೆಯ ಮಾತು, ಎಷ್ಟು ಬೇಕೋ ಅಷ್ಟು ; "ಇನ್ನೇನೂ ಇಲ್ಲವಲ್ಲ", ಎಂದಾಗ, ಅವರ ಇಂಗಿತ ವರಿತ ನಾನು, 'ಬರ್ತೀನಿ' ಎಂದು ಹೇಳಿ, ಹೊರಟುಬಿಡುತ್ತಿದ್ದೆ.

ವೇದಿಕೆಯ ಮೇಲೆ ನಿಂತು ತರಗತಿಯ ಪಾಠವೇ ಆಗಲಿ, ಸಾರ್ವಜನಿಕ ಭಾಷಣವೇ ಆಗಲಿ, ಜರಿಯ ಪೇಟ ಧರಿಸಿ ಸೂಟು–ಧಾರಿಯಾದ ಅವರ ಜರ್ಬೇ ಜರ್ಬು. ಜಂಬವಿಲ್ಲದ ಜರ್ಬು. ರಾಜಗಾಂಭೀರ್ಯ. ವಾಗ್ವಿಲಾಸವನ್ನು ಮೆರೆಯಲು ಧರೆಗಿಳಿದ ವಾಚಸ್ಪತಿ.

ಬಿ.ಎಂ.ಶ್ರೀ ಅವರು ಯಶೋಧರ ಚರಿತ್ರೆಯನ್ನು ವಾಚನ ಮಾಡಿದ ಸಂಗತಿಯನ್ನು ಈ ಮೊದಲೇ ಪ್ರಸ್ತಾಪ ಮಾಡಿದ್ದೇನೆ. ಆಗಲೇ ನಾನು ಅವರನ್ನು ವೇದಿಕೆಯ ಮೇಲೆ ಮೊದಲಸಲ ಕಂಡದ್ದು. "ಮಾರಿದತ್ತಂ ಲಲಿತಾಕಾರದ ಬಂದ ಕುಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ" ಎಂಬ ಮಾತನ್ನು ಅವರು ವಾಚಿಕಾಭಿನಯವಾಗಿ ಉಚ್ಚರಿಸಿದ ಬಗೆ ಇಂದಿಗೂ ನನ್ನ ಕಿವಿಯಲ್ಲಿ ಮೊರೆಯುತ್ತಿದೆ. 'ಠಕ್ಕು' ಎಂಬ ಪದದ ಉಚ್ಚಾರಣೆಯ ಕಾಕುವಿನಲ್ಲಿ ಕುಮಾರರ ರೂಪನ್ನು ಕಂಡು ಬೆರಗಾಗಿ ಮೂಗುವಟ್ಟು ಕರವಾಳದಿಂದ ಪೊಯ್ಯದೆ ನಿಂತ ಮಾರಿದತ್ತನ ಚಿತ್ರ ನನ್ನ ಬಗೆಗಣ್ಣ ಮುಂದೆ ನಿಚ್ಚಳವಾಗಿ ಸುಳಿಯಿತು. ಯಶೋಧರ ಚರಿತೆಯ ಈ ಪದ್ಯವನ್ನು ಓದಿದಾಗಲೆಲ್ಲ ಮಾರಿದತ್ತನ ಭಂಗಿಯೊಂದಿಗೆ 'ಶ್ರೀ'ಯವರ ಕಂಠಶ್ರೀಯ ಪಲುಕುಗಳೂ ಮನಸ್ಸಿನಲ್ಲಿ ಮರುಕೊಳಿಸುತ್ತವೆ. ಅಂತೆಯೇ, ಮೃತ್ಯಸಂಮುಖದಲ್ಲಿ ನಿಯತಿಯ ಅನಿವಾರ್ಯತೆಯ ಬಗೆಗೆ ಅಭಯರುಚಿ ಅಭಯಮತಿಗೆ–"ನಿಯತಿಯನಾರ್ ಮಿೀರಿದಪರ್, ಭಯವೇವುದೊ, ಮುಟ್ಟಿದೆಡೆಗೆ ಸೈರಿಸುವುದೆ"–ಎಂದು. ಹೇಳಿದ ಸಮಾಧಾನದ ಮಾತನ್ನಾಗಲಿ, 'ಅಣ್ಣನ ಮಾತಂ ಮನದೊಳ್ ತಿಣ್ಣನೆ ತಲೆದು', "ಭವಪ್ರಕೃತಿ ವಿಕೃತಿ'ಯನ್ನು ಅರಿತ ತಂಗಿ ಅಣ್ಣನಿಗೆ–

ಎನಿತೊಳವಪಾಯ ಕೋಟಿಗ
ಳನಿತರ್ಕಂ ಗೇಹಮಲ್ತೆ ದೇಹಮಿದಂ ನೆ

ತೀಕ್ಷ್ಣವೂ ಆಲೋಚನಾಪೂರಿತವೂ ಅತ್ಯುತ್ಸಾಹ ಸೂಚಕವೂ ನಗುವನ್ನು ಸೂಸುವುದೂ ಆದ ಉಜ್ವಲ ಕಾಂತಿಯ ಕಣ್ಣುಗಳು ; ಸ್ವಲ್ಪ ಸಣ್ಣದಾದರೂ ಮುಖಕ್ಕೆ ಮುದ್ದಾಗಿ ಹೊಂದಿಕೊಂಡ ನಾಸಿಕ ; ಮಂದಸ್ಮಿತದಿಂದ ಕೂಡಿದ್ದರೂ ದೃಢತೆ ಕಾಠಿಣ್ಯಗಳನ್ನು ವ್ಯಕ್ತಪಡಿಸುವ ಸ್ಪಷ್ಟ ತುಟಿಗಳು ; ಕೆಳಗಲ್ಲದ ಹಿಂಬದಿಯಿಂದ ಮೇಲಕ್ಕೆದ್ದು, ಕೆಳಗುಳಿಯೊಂದರಿಂದ ಕೊಂಚ ಇಬ್ಬಗೆಯಾದ ನುಣ್ಣನೆಯ ರಂಜಕ ಗಲ್ಲ; ಎಲ್ಲಕ್ಕಿಂತ ಮಿಗಿಲಾಗಿ, ಲೋಚನಾಗ್ರದಿಂದ ಅವುಡಿನವರೆಗೆ ಇಳಿದು ಬಂದು, ಕವುಳುಗಳನ್ನು ಮೂಗು ಬಾಯಿಗಳಿಂದ ಪ್ರತ್ಯೇಕಿಸುತ್ತ, ಗೆಲವಿನಿಂದ ಕೂಡಿದ ಎರಡು ಗೀರುಗಳು ; ಒಟ್ಟಿನಲ್ಲಿ ಒಂದು ಸಾರಿ ನೋಡಿದರೆ ಸಾಕು, ಪ್ರೇಕ್ಷಕನ ಚಿತ್ರಭಿತ್ತಿಯಲ್ಲಿ ಕೊರೆದು ನಿಲ್ಲುವ, ಅಂಬಾರಿ ಆನೆಯಂದದ ಠೀವಿಯ ಮುಖಮುದ್ರೆ; ಏರಲೂ ಬಲ್ಲ ಇಳಿಯಲೂ ಬಲ್ಲ, ಇಂಪಾದ ಕುಗ್ಗದ ದನಿ ; ಆಗಾಗ ಮೇಲಕ್ಕೆದ್ದು, ಪ್ರತಿಪಾದಿಸುವ ಅಂಶವನ್ನು ಒತ್ತಿ ಹೇಳುವ ಭಂಗಿಯನ್ನು ತಾಳುವ, ಉಚಿತಾಕಾರದ ದುಂಡಾದ ಕೈಗಳು ; ತಾವರೆಯಂತೆ ಕೆಂಪಾಗಿ ಕೋಮಲವಾದ ಅಂಗೈ ; ಹಾಗೆಯೇ ರಕ್ತ ಸೋರುತ್ತದೆಯೋ ಎನ್ನುವಂತೆ ಕಾಣುತ್ತಿದ್ದ ಶುಭ್ರಸುಂದರವಾದ ಹೆಜ್ಜೆಗಳು;....ಆ ಅಂಗೈ ಆ ಅಂಗಾಲನ್ನು ಹತ್ತಿರ ಕುಳಿತು ದರ್ಶಿಸಿದವನು ಧನ್ಯ; ಏತಕ್ಕೆಂದರೆ ಅವುಗಳ ಮೇಲೆ ನಿಷ್ಕಳಂಕಿಯ ಸಂಯಮ ಶಾಲಿಯ ತಪಸ್ವಿಯ, ಗುರುತು ಸ್ವಚ್ಛವಾಗಿ ಒತ್ತಿದಂತಿದ್ದಿತು.''*

ರಂಗಣ್ಣನವರ ವರ್ಣನೆ 'ಶ್ರೀ'ಯವರು ತೀರಿಕೊಂಡ ಮೇಲೆ ೧೯೪೮ರಲ್ಲಿ ಬರೆದದ್ದು. ನೆನಪಿನಿಂದ ಬರೆದದ್ದು. ಆದರೆ, ಮಾಸದ ನೆನಪು. ಯಾರೇ ಆಗಲಿ, ಒಂದು ಸಲ ನೋಡಿದರೆ ಸಾಕು, 'ಶ್ರೀ'ಯವರ ಮುಖಮುದ್ರೆ ನೋಡಿದವರ ಮನಃಪಟಲದ ಮೇಲೆ ಅಚ್ಚೊತ್ತಿ ನೆನಪಿನಲ್ಲಿ ನಿಲ್ಲುವಂಥದು. ಅವರ ನೆಚ್ಚಿನ ಶಿಷ್ಯರು ಅವರನ್ನು ನೂರಾರು ಸಲ ನೋಡಿರತಕ್ಕವರು. ಕನ್ನಡ ತಾಯ ಕೃಪೆಯಿಂದ ನನಗೂ ಈ ಭಾಗ್ಯ ಲಭಿಸಿದೆ. "ಆರಂಕುಸಮಿಟ್ಟೊಡಂ ನೆನೆವುದೆನ್ನ ಮನಂ, ಗುರುವರ್ಯ ನಾಸ್ಯಮಂ". ಈ ಆಸ್ಯವನ್ನು, ಕೆಂದಾವರೆಮೊಗಮಂ, ನೋಡಿದಾಗ, "ತಾವರೆಯ ಹೊಸ ಕೆಂಪು, ತಾವರೆಯ ಹೊಸ ಅರಳ ಹೊಳೆವ ಕೆಂಪು" ಎಂಬ ಶ್ರೀಯವರ ಗೀತವೊಂದರ ಸಾಲು ನೆನಪಿಗೆ ಬರುತ್ತದೆ. ಮುಖದ ಕೆಂಪು ಸರಿಯೆ. ಅವರ ಅಂಗೈ ಅಂಗಾಲುಗಳ ರಕ್ತ ಚಿಮ್ಮುವ ಕೆಂಪನ್ನು

---

* 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' (ಭಾಗ–೧), ಮೈಸೂರು; ೧೯೪೮; ಪೀಠಿಕೆ, ಪು. ೧೪.

ಮಾಡಿಕೊಡುತ್ತ, ರಸ ಭಾವಾನುಗುಣವಾಗಿ ದನಿಯನ್ನು ಏರಿಸುತ್ತಾ ತಗ್ಗಿಸುತ್ತಾ, ತಾವೇ ಸ್ವತಃ ರಸಾನಂದವನ್ನು ಅನುಭವಿಸಿದಾಗ ಕ್ಷಣಕಾಲ ಕಣ್ಣನ್ನು ಮುಚ್ಚುತ್ತ, ಇಡಿಯ ಕಾವ್ಯವನ್ನು ಓದಿದ ರೀತಿ, ಸಾಹಿತ್ಯ ವಿದ್ಯಾರ್ಥಿಯಾದ ನನ್ನ ಬದುಕಿನಲ್ಲಿ ನಾನು ಪಡೆದ, ಮರೆಯಲಾಗದ, ಸಂಗತಿ.

ಕೆಲವು ವರ್ಷಗಳಾದರೂ ಅವರು ಜನ್ನನ ಯಶೋಧರ ಚರಿತೆಯನ್ನು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ನಡುವೆ ಮಾತ್ರವಲ್ಲದೆ ಸಾಮಾನ್ಯ ಜನಕ್ಕೂ ಓದಿ ತಿಳಿಯ ಹೇಳುವ ಕರ್ತವ್ಯವನ್ನು ಹೊತ್ತಂತೆ ಕಾಣುತ್ತದೆ. ಅವರು ರಿಜಿಸ್ಟ್ರಾರ್ ಮತ್ತು ಗೌರವ ಕನ್ನಡ ಪ್ರಾಧ್ಯಾಪಕರಾಗಿದ್ದ ಕಾಲದಲ್ಲಿಯೇ UTA 'ಊಟ' (ಊಟ: ಯೂನಿವರ್ಸಿಟಿ ಟೀಚರ್ಸ್ ಅಸೋಸಿಯೇಷನ್) ಪ್ರಾರಂಭವಾದದ್ದು. 'ಊಟ' ಹೆಸರು ಎರಡು ಅರ್ಥಗಳಲ್ಲಿ ಸಾರ್ಥಕವಾಯಿತು. ಕನ್ನಡ ಕಾವ್ಯ ಪ್ರಸಾರ, ಜ್ಞಾನ ಪ್ರಸಾರ, ಇವೆರಡೂ ಅದರ ಕಾರ್ಯಗಳು. ಬಹಳ ಕಾಲ ದಿವಂಗತ ಜಿ. ಹನುಮಂತರಾಯರು 'ಊಟ'ದ ನೇತಾರರಾಗಿದ್ದುಕೊಂಡು ಭರ್ಜರಿಯಾದ ಊಟದ ವ್ಯವಸ್ಥೆ ಮಾಡುತ್ತಿದ್ದರು ; ಉಪನ್ಯಾಸಗಳು ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ನಡೆಯುತ್ತಿದ್ದುವು. ಊಟದ ವ್ಯವಸ್ಥೆ ಬಲವಾದ ಆಕರ್ಷಣೆ; ಪೂರ್ವ ವಯಸ್ಸಿನ ಅಧ್ಯಾಪಕರು ಪ್ರವಾಸಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಬಿ.ಎಂ.ಶ್ರೀಯವರು ಕಾರ್ಯ ಗೌರವದಿಂದ ಹೆಚ್ಚಾಗಿ ಈ ಕಾರ್ಯಗಳಲ್ಲಿ ಭಾಗವಹಿಸುತ್ತಿರಲಿಲ್ಲವೆಂದು ಕಾಣುತ್ತದೆ. ಈಚೆಗೆ ನಾನು ದೊಡ್ಡಬಳ್ಳಾಪುರಕ್ಕೆ ಒಂದು ಶಾಲೆಯ ವಾರ್ಷಿಕೋತ್ಸವದಲ್ಲಿ ಉಪನ್ಯಾಸ ಮಾಡಲು ಹೋಗಿದ್ದಾಗ ಅಲ್ಲಿನ ಪ್ರಮುಖರೊಬ್ಬರೂ, ಬಹಳ ವರ್ಷಗಳ ಹಿಂದೆ ಬಿ.ಎಂ.ಶ್ರೀ ಅವರು ದೊಡ್ಡಬಳ್ಳಾಪುರಕ್ಕೆ ಬಂದಿದ್ದು 'ಯಶೋಧರ ಚರಿತೆ'ಯನ್ನು ಕುರಿತು ಭಾಷಣ ಮಾಡಿದರೆಂದೂ ದೊಡ್ಡ ಸಭೆ ನೆರೆದಿತ್ತೆಂದೂ ತಿಳಿಸಿದರು. ಈ ಕೃತಿ ಕುರಿತು ಬಿ.ಎಂ.ಶ್ರೀ ಇನ್ನೂ ಎಷ್ಟೋಕಡೆ ಭಾಷಣ ಮಾಡಿರಬೇಕು ಎಂದು ಕೊಂಡೆ. ಅದು ಹೇಗಿದ್ದರೂ, ಯಶೋಧರ ಚರಿತೆ ಅವರ ಅಚ್ಚುಮೆಚ್ಚಿನ ಕಾವ್ಯಗಳಲ್ಲಿ ಒಂದು. ನಮಗೆ ಸಾಹಿತ್ಯ ಚರಿತ್ರೆಯನ್ನು ಕುರಿತು ಪಾಠ ಮಾಡುವಾಗಲೂ ಯಶೋಧರ ಚರಿತೆಯನ್ನು ಕಂಡರೆ ಅವರಿಗೆ ಒಂದು ಬಗೆಯ ಪಕ್ಷಪಾತ ಇತ್ತು ಎಂದು ವ್ಯಕ್ತ ಪಟ್ಟಿತ್ತು. ಕಾವ್ಯದ ಬೆಲೆ ಕಟ್ಟುವ ಮಾತು ಬಂದಾಗ ಅವರ ಅಗ್ರವೀಳ್ಯ ಪಂಪನಿಗೆ. ರನ್ನನ ಗದಾಯುದ್ಧದ ಪ್ರಸ್ತಾಪ ಬಂದಾಗ, ಅಜಿತಪುರಾಣ ಪಂಪನ ಆದಿಪುರಾಣಕ್ಕೆ ಸರಿದೊರೆ ಎನ್ನಿಸದು, ಆದರೆ ಗದಾಯುದ್ಧದ ವಿಷಯ ಬೇರೆ, ಎಂದು ಪಂಪನನ್ನೂ ಮರೆಯುವಂತೆ ಮಾಡಿ

ಟ್ಟನೆ ಪೊತ್ತು ಸುಖಮನಱಿಸು
ಮನಜಂ ಮೊರಡಿಯೊಳೆ ಮಾದುಪಟಿಮನಱಿಸದಿರಂ

ಬೇಡಿದ ಕಾಡೊಳ್ ಮಱೆಯಾ
ಯ್ತೀಡಾಡುವಮಿದಱ ಪೊಱೆಯನೆನಗಂ ನಿನಗಂ
ಮೂಡುವ ಮುಟುಗುವ ದಂದುಗ
ಮಾಡಿದ ಪೊಲನುಂಡ ಮರ್ದು ಕಂಡ ವಿಚಾರಂ

ಎಂದು ಅಣ್ಣನಿಗೆ ಹೇಳಿದ ವೈರಾಗ್ಯದ ಮಾತನ್ನಾಗಲಿ, "ಪುಳಿಂದನ "ಕಣೆಗಟ್ಟಿನಿಂದ ವನಹರಿಣಿ" ಅಮೃತಮತಿ–

ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
ಸುರಚಾಪಮನಿಳಿಕೈವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್

ಒಲವಾದೊಡೆ ರೂಪಿನ ಕೋ
ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ
ಫಲಮೇನ್ ಇಂದೆನಗಾತನೆ
ಕುಲದೈವಂ ಕಾಮದೇವನಿಂದ್ರಂ ಚಂದ್ರಂ

ಎಂದು, ಗೆಳತಿ, ಅಷ್ಟವಂಕನ ಕುರೂಪನ್ನು ವರ್ಣನೆ ಮಾಡಿದಾಗ ಒಲವಿಗೆ ತೆತ್ತ ಮನಸ್ಸನ್ನು ಗಟ್ಟಿಮಾಡಿ ತನ್ನ ನಿಲುವನ್ನು ಸಮರ್ಥಿಸಿ ಆಡಿದ ತರ್ಕಬದ್ಧವಾದ ಮಾತನ್ನು ತಾವೂ ಒಪ್ಪುವಂತೆ ಒತ್ತುಕೊಟ್ಟು ಓದಿದಾಗ ಆಗಲಿ; ಪ್ರಿಯಪತ್ನಿಯ ಅಪಾತ್ರಪ್ರಣಯದ ದುರ್ವ್ಯವಹಾರವನ್ನು ಕಣ್ಣಾರೆ ಕಂಡು, ಮನಸ್ಸು ರೋಸಿ, ಅವಳನ್ನೂ ಅವಳ ಮಿಂಡನನ್ನೂ ತನ್ನ ಖಡ್ಗದಿಂದ ಎರಡು ತುಂಡು ಮಾಡಬೇಕೆಂದು ಮನದಂದ "ಆಗಳ್ ಬಾಳ್ ನಿಮಿರ್ದುದು ತೋಳ್ ತೂಗಿದುದು," ಆದರೂ ಧೃತಿ ಬಂದು, ಆ ಹುಳುಕರನ್ನು ಇರಿಯಲೊಲ್ಲದೆ ಹೇಸಿ ಹಿಂದಿರುಗಿದ ಸನ್ನಿವೇಶವನ್ನು ಸಾಭಿನಯವಾಗಿ ಓದಿದಾಗ ಆಗಲಿ; ಇಂಥ ಯಾವ ಯಾವ ರಸವತ್ಸನ್ನಿವೇಶಗಳು ಕಾವ್ಯದಲ್ಲಿ ಉಂಟೋ ಅವನ್ನು ಮಾತ್ರ ಆಯ್ದುಕೊಂಡು, ನಡುನಡುವೆ ಕಥೆಯ ಸರಣಿಯ ಕುಣಿಕೆಗಳನ್ನು ಪರಿಚಯ

ಒಟ್ಟು ಗೂಡಿಸಿ ಹೇಳಿದ ಸಾಹಿತ್ಯ ಚರಿತ್ರೆ ಪಾಠಕ್ಕೆ ಸಂಬಂಧಪಟ್ಟ ವಿಷಯ ಅದು ಎಂದು. ಹೌದು, ನಮಗೆ ಮಾತ್ರವಲ್ಲ, ಬಹುಶಃ ಎಲ್ಲ ಎಂ.ಎ. ತರಗತಿಯ ವಿದ್ಯಾರ್ಥಿಗಳಿಗೆ ಮಾಡಿರಬಹುದಾದ ಸಾಹಿತ್ಯ ಚರಿತ್ರೆಯ ಪಾಠದ ಒಂದು ದಿಗ್ದರ್ಶನ ಅದು. ಕಿಟೆಲ್ ಅವರು ಸಂಪಾದಿಸಿರುವ ಛಂದೋಂಬುಧಿಯ ಮುದ್ರಣಕ್ಕೆ ಇಂಗ್ಲಿಷಿನಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಬರೆದ ಮುನ್ನುಡಿ, ಇ.ಪಿ. ರೈಸ್ ಅವರ Heritage of India ಪುಸ್ತಕ ಮಾಲೆಯ 'ಕನ್ನಡ ಸಾಹಿತ್ಯ', ಆರ್. ನರಸಿಂಹಾಚಾರ್ಯರ 'ಕವಿ ಚರಿತೆ' ಸಂಪುಟಗಳು–ಇವು ಹೊರತಾಗಿ, ಕವಿಕೃತಿಗಳ ಬಗೆಗೆ ವಿಮರ್ಶಾತ್ಮಕ ಮೌಲ್ಯಮಾಪನ ಮಾಡುವ ಒಂದು ಸಾಹಸದ ಪ್ರಥಮ ಪ್ರಯತ್ನ, ತಕ್ಕಮಟ್ಟಿಗೆ ವಿಸ್ತಾರವಾದದ್ದು, ಅವುಗಳಲ್ಲಿ ಇಲ್ಲ. 'ಶ್ರೀ' ಅವರ ಸೂಚನೆಯ ಮೇರೆಗೆ ಇವುಗಳನ್ನು ನಾನಂತೂ ನೋಡಿದ್ದೆ. ಕವಿಗಳ ಸ್ಥಳ, ಕಾಲ, ಮತ ವಿಷಯಗಳ ಕುರಿತಾದ ಚರ್ಚೆಗೆ ಆಗಿನ ದಿನಗಳಲ್ಲಿ ಪ್ರಾಮುಖ್ಯ. ಆದ್ದರಿಂದ, ನರಸಿಂಹಾಚಾರ್ಯರ ಕವಿಚರಿತೆಯನ್ನೂ, ಪ್ರಬುದ್ಧ ಕರ್ಣಾಟಕದಲ್ಲೂ ಪರಿಷತ್‌ಪತ್ರಿಕೆಗಳಲ್ಲೂ ಪ್ರಕಟವಾಗಿದ್ದ ಲೇಖನಗಳನ್ನೂ ಓದಿಕೊಂಡಿದ್ದೆ. ಆದರೆ, ಬಿ.ಎಂ.ಶ್ರೀ ತಮ್ಮ ಪಾಠಪ್ರವಚನದಲ್ಲಿ ಕವಿಕೃತಿಗಳಲ್ಲಿ ಹಿಂಡಿ ತೆಗೆದು ಎರೆಯುತ್ತಿದ್ದ ಕಾವ್ಯಸುಧಾಸಾರ ತೆರೆದು ತೋರಿಸುತ್ತಿದ್ದ ಕಾವ್ಯ ಮೌಲ್ಯಗಳು ; ಮಿಂಚಿಸುತ್ತಿದ್ದ, ಕಟುವಾದರೂ ಸತ್ಯವಾದ ಎದೆಗಾರಿಕೆಯ ನಿಷ್ಪಕ್ಷಪಾತ ವಿಮರ್ಶೆಯ ಮಾತುಗಳು; ಕವಿಹೃದಯವನ್ನು ಒಳಹೊಕ್ಕು ನೋಡಬಲ್ಲ ಚುರುಕಾದ ಒಳನೋಟ ; ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಒಮ್ಮೊಮ್ಮೆ ಮೇಲುಗೈಯಾಗಿ ವಿಜೃಂಭಿಸಿಸುತ್ತಿದ್ದ ವಿಭಿನ್ನಮತಧರ್ಮಗಳ ಬಗ್ಗೆ ಸಮಾನ ಗೌರವ ; ಕಾವ್ಯದಲ್ಲಿ ಗ್ರಹಿಸಬೇಕಾದ ಜೀವನದರ್ಶನ, ಸಾರ್ವತ್ರಿಕ ಮೌಲ್ಯಗಳು–ಇವನ್ನೆಲ್ಲಾ, ಇವಲ್ಲದೆ ಇನ್ನೂ ಅನೇಕ ಆನುಷಂಗಿಕ ವಿಚಾರಗಳನ್ನು,–ಪ್ರತಿ ಕವಿಯ ಭಾಷಾ ಶೈಲಿ, ಛಂದಸ್ಸಿನ ಪ್ರಯೋಗ ಕೌಶಲ, ಅಲಂಕಾರ ಪ್ರಿಯತೆ, ಕೆಲವು ಕವಿಗಳ ಸಂಸ್ಕೃತ ವ್ಯಾಮೋಹ, ಅಷ್ಟಾದಶ ವರ್ಣನೆ ಮತ್ತು ಕವಿಸಮಯಗಳ ಅನಗತ್ಯ ಭಾರ,–ಮುಂತಾದುವನ್ನೆಲ್ಲಾ ನಾಗಾಲೋಟದ ಅಶ್ವಧಾಟಿಯಲ್ಲಿ ಪಾಠಪ್ರವಚನಸಪ್ತಾಹದಲ್ಲಿ ಮುಗಿಸಿ, ಒಂದು ಹೊಸ ಸಾಹಿತ್ಯಪ್ರಪಂಚವನ್ನೇ ಸೃಷ್ಟಿಮಾಡಿ ಬಿಟ್ಟರು. ಆ ದಿನಗಳಲ್ಲಿ ಅವರು ಹೇಳಿದ ಪಾಠವೇ ಮುಂದೆ 'ಕನ್ನಡ ಕೈಪಿಡಿ'ಯ ಎರಡನೆಯ ಸಂಪುಟವಾಗಿ ೧೯೪೭ರಲ್ಲಿ, ಅವರು ತೀರಿಕೊಂಡ ಮೇಲೆ, ಪ್ರಕಟವಾಯಿತು. ಈ ಪುಸ್ತಕ ಅವರು ಬರೆಯಬೇಕೆಂದಿದ್ದ ಸಮಗ್ರ ಸಾಹಿತ್ಯ ಚರಿತ್ರೆಯ ಒಂದು ಭಾಗ, ಅಷ್ಟೆ; ನಾಗಚಂದ್ರನವರೆಗೆ ಮಾತ್ರ ಸಾಗಿದೆ. ಪೂರ್ಣ ಗ್ರಂಥ ನಮಗೆ ಲಭಿಸಲಿಲ್ಲ.

ದುರ್ಯೋಧನ ಪಾತ್ರ ಸೃಷ್ಟಿಗಾಗಿ ರನ್ನನಿಗೆ ಮುಕ್ತಕಂಠದ ಮಣಿಹಾರ. ಕುಮಾರವ್ಯಾಸನ ಬಗೆಗೆ ಹೇಳುವಾಗ ಅವರಿಗೆ ಒಂದು ಬಗೆಯ ಆವೇಶ, ಭಾವುಕ ಪ್ರಶಂಸೆ. ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದ ಆಶ್ರಯದಲ್ಲಿ ಕುಮಾರವ್ಯಾಸ ಜಯಂತಿಯ ವ್ಯವಸ್ಥೆ, ಪ್ರಸಿದ್ಧ ಗಮಕಿಗಳಿಂದ ಕುಮಾರವ್ಯಾಸ ಭಾರತ ಪ್ರಕರಣಗಳ ವಾಚನ ಸಪ್ತಾಹ, ಉಪನ್ಯಾಸಗಳು– ಇವೆಲ್ಲವುಗಳ ಯಶಸ್ವೀ ನಿರ್ವಹಣೆಗೆ ವೆಂಕಣ್ಣಯ್ಯನವರು ಸೂತ್ರಧಾರರು; ಪ್ರೇರಣೆ, ಸ್ಫೂರ್ತಿ, ಬಿ.ಎಂ.ಶ್ರೀ ಅದೇ ವರ್ಷ (೧೯೩೦) ಕುಮಾರವ್ಯಾಸ ಭಾರತದ ಸಂಗ್ರಹವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಿದ್ಧಪಡಿಸಿಕೊಡಬೇಕೆಂದು ವೆಂಕಣ್ಣಯ್ಯನವರು ಮತ್ತು ಪಂಜೆ ಮಂಗೇಶರಾಯರಿಗೆ ಶ್ರೀಯವರ ಕೋರಿಕೆ. ಈ ಸಂಗ್ರಹಕಾರ್ಯದ ಹಿಂದೆ ಒಂದು ಸಣ್ಣ ಚರಿತ್ರೆ ಅಡಗಿದೆ. ಅದು ಈಚೆಗೆ ತಿಳಿದುಬಂದ ಸಂಗತಿ ; ಇಲ್ಲಿಗೆ ಅಪ್ರಸ್ತುತ. ಸಿದ್ಧವಾದ ಸಂಗ್ರಹದ ಹಸ್ತಪ್ರತಿಯಲ್ಲಿ ಪಾಠಾಂತರ ಸಂಕಲವನ್ನು ಪರಿಶೀಲಿಸಿ, ಉಚಿತ ಪಾಠವನ್ನು ಆಯ್ಕೆ ಮಾಡಿದವರು ಬಿ.ಎಂ.ಶ್ರೀ. ಪಂಪಭಾರತದ ಸಂಪಾದನ ಕಾರ್ಯದಲ್ಲಿಯೂ ಬಿ.ಎಂ.ಶ್ರೀ ಅವರದ್ದು ಕೊನೆಯ ಮಾತು. ಒಂದು ಮಾತಿನಲ್ಲಿ, ಪಂಪ ಹೆಚ್ಚೋ ಕುಮಾರವ್ಯಾಸ ಹೆಚ್ಚೋ, ಕನ್ನಡ ಕವಿ ಕುಲದಲ್ಲಿ ? ಒಮ್ಮೆ ಅವನ ಕಡೆಗೆ, ಒಮ್ಮೆ ಇವನ ಕಡೆಗೆ, ಶ್ರೀಯವರ ಮೆಚ್ಚುಗೆ–ವಿಮರ್ಶನಪ್ರಜ್ಞೆಯ ಫಲಿತವಾದ ಮೆಚ್ಚುಗೆ–ಒಲಿದಾಡುತಿತ್ತು. ಈ ಇಬ್ಬರು, ಕನ್ನಡ ಶಾರದೆಯ ಎರಡನೆಯ ಕಣ್ಣು. ಅವರ ನಿಲುವು ಇದು. ದುರಂತ ರಾವಣನ ಚಿತ್ರಣಕ್ಕಾಗಿ ನಾಗಚಂದ್ರ ಅವರಿಗೆ ಪ್ರಿಯ. ಬಸವಣ್ಣ, ಪುರಂದರಿಗೆ, ಸಮಾನೋನ್ನತಿಯ ಪೀಠಗಳು, ಕವಿಗಳಲ್ಲದಿದ್ದರೂ ಸಾಹಿತ್ಯಕ್ಕೆ, ಕನ್ನಡಿಗರ ಬದುಕಿಗೆ, ಇವರ ಕೊಡುಗೆ ವಿಶಿಷ್ಟ–ಆದರೂ ಬಸವಣ್ಣನವರ ಕಡೆಗೆ ಒಂದು ಗುಲಗಂಜಿ ತೂಕದಷ್ಟು ಹೆಚ್ಚಿನ ಒಲವು. ಹರಿಹರ, ರಾಘವಾಂಕ, ಚಾಮರಸ, ಲಕ್ಷ್ಮೀಶ, ರತ್ನಾಕರ–ಇವರ ಕಾವ್ಯಗಳ ಬಗೆಗೆ ಹೇಳುವ ಹೊತ್ತಿಗೆ, ಶ್ರೀಯವರ ಆವೇಶದ ಕಾವು ಇಳಿಮುಖ. ಮಹಾದೇವಿಯಕ್ಕ, ಹೊನ್ನಮ್ಮ– ಇವರ ವಿಷಯದಲ್ಲಿ ರಿಯಾಯಿತಿ ತೋರಿಯೂ ಪ್ರಾಮಾಣಿಕವಾದ ಮೆಚ್ಚುಗೆ. ಇತರ ಕವಿಗಳ, ಕೃತಿಗಳ, ಕಾಲಗಳ, ಉಲ್ಲೇಖಯೋಗ್ಯ–ಬೋರ್ಡಿನ ಮೇಲೆ ಸೀಮೆಯ ಸುಣ್ಣದ ಬರಹ ಮಾತ್ರ ಇವರಿಗೆ ಅವರ ಕೈಯಿಂದ ಸಂದ ಮನ್ನಣೆ.

ಮೇಲಿನ ಕೊನೆಯ ವಾಕ್ಯದಿಂದಲೇ ಊಹಿಸಿಕೊಳ್ಳಬಹುದು ಓದುಗರು– 'ಶ್ರೀ'ಯವರು ಎಂ.ಎ. ತರಗತಿಯ ನಾವು ಮೂವರು ವಿದ್ಯಾರ್ಥಿಗಳು ಆಗತಾನೆ, ಪ್ರಾರಂಭವಾಗಿದ್ದ ಕನ್ನಡ ಆನರ್ಸ್ ಪರೀಕ್ಷೆಯ ಏಳೆಂಟು ವಿದ್ಯಾರ್ಥಿಗಳು–ಇವರನ್ನು

ಸಮಾರಂಭಗಳಲ್ಲಿ, ಗಂಟೆ ಗಟ್ಟಲೆ ಉಪನ್ಯಾಸ ಮಾಡಿದರು ; ಕನ್ನಡ ಬಳಗಗಳನ್ನು ಕಟ್ಟಿದರು, ಸಂಘಗಳನ್ನು ಹುಟ್ಟಹಾಕಿದರು. ಮುಗುಳರಳುತ್ತಿದ್ದ ಕವಿಗಳ ಬೆನ್ನು ತಟ್ಟಿದರು, ನಲಿವನ್ನು ಊಡಿದರು, ತಿಳಿವನ್ನು ನೀಡಿದರು, ಕನ್ನಡ ತಾಯ ಹಿರಿಮೆಯನ್ನು ಕೊಂಡಾಡಿದರು. ಧನ್ಯೋಸ್ಮಿ' ಎಂದು ನಲಿದಾಡಿದರು.

ಹಳಗನ್ನಡದ ನಾಡೋಜ, ಪಂಪ
ಹೊಸಗನ್ನಡದ ನಾಡೋಜ, ಬಿ.ಎಂ.ಶ್ರೀ

* * * *

ಎಂಥ ದುರ್ದೈವ ನಮ್ಮದು !

ಮೇಲೆ, ಪಾಠಪ್ರವಚನ ಸಪ್ತಾಹ ಎಂದು ಹೇಳಿದ್ದೇನೆ. ಈ ಕುರಿತು ವಿವರಣ ರೂಪದಲ್ಲಿ ನಾಲ್ಕು ಮಾತು ಹೇಳಬೇಕು. ನಮಗೆ ಬಿ.ಎಂ.ಶ್ರೀ ಸಾಹಿತ್ಯ ಚರಿತ್ರೆಯ ಪಾಠ ಮಾಡಿದ್ದೂ ೧೯೩೮ರ ಮಾರ್ಚಿ ತಿಂಗಳಿನಲ್ಲಿ ಎಂದು ನೆನಪು. ಆಗ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು. ಅಲ್ಲಿ ತಮ್ಮ ಪಾಠಪ್ರವಚನ ಕರ್ತವ್ಯವನ್ನು ನೆರವೇರಿಸಿ, ಮೊದಲೇ ಗೊತ್ತಾಗಿದ್ದಂತೆ, ನಮಗೆ ಸಾಹಿತ್ಯ ಚರಿತ್ರೆಯನ್ನು ಬೋಧಿಸಲು ಮೈಸೂರಿಗೆ ಬಂದರು. ಕಾಲೇಜಿನ ಮಹಡಿಯ ಮೇಲಿನ ಉತ್ತರ ದಿಕ್ಕಿನ ಕಡೆಯ ಮೂಲೆ ಕೋಣೆಯಲ್ಲಿ ಪಾಠ. ಪ್ರತಿದಿನವೂ ಬೆಳಗ್ಗೆ ೧೧ ಗಂಟೆಯಿಂದ ಸಂಜೆ ೫ರ ವರೆಗೂ ಅವಿಶ್ರಾಂತ ಉಪನ್ಯಾಸ. ಅವರಿಗೂ ವಿಶ್ರಾಂತಿಯಿಲ್ಲ, ವಿದ್ಯಾರ್ಥಿಗಳಿಗೂ ವಿಶ್ರಾಂತಿ ಇಲ್ಲ. ಮಧ್ಯೆ ವಿರಾಮವೂ ಇಲ್ಲ, ಕಾಫಿಯೂ ಇಲ್ಲ. ನಡು ನಡುವೆ ಬೋರ್ಡಿನ ಮೇಲೆ ಆಗೊಮ್ಮೆ ಈಗೊಮ್ಮೆ ಕವಿ–ಕೃತಿಗಳ ಕಾಲ ಮುಂತಾದ ನೆನಪಿಡಬೇಕಾದ ಸಂಗತಿಗಳನ್ನು ಗುರುತಿಸುತ್ತಿದ್ದರು–ಬಡ ವಿದ್ಯಾರ್ಥಿಗಳ ಬಳಿ ಕವಿಚರಿತೆಯ ಸಂಪುಟಗಳು ಇರಲಾರವು–ಕಾವೇರಿಯ ಪ್ರವಾಹ. ರಸಸಮಾರಾಧನ ಸಪ್ತಾಹ. ಅದೆಂತಹ ದೈತ್ಯ ಶಕ್ತಿ ! ಅದೆಂತಹ ವೇಗದ ಮಾತುಗಾರಿಕೆ ! ಟಿಪ್ಪಣಿ ತೆಗೆದುಕೊಳ್ಳುವುದಕ್ಕಂತೂ ಸಾಧ್ಯವೇ ಇರಲಿಲ್ಲ. ಪರೀಕ್ಷಾನಿಷ್ಠ ವಿದ್ಯಾರ್ಥಿಗಳು ಟಿಪ್ಪಣಿ ತೆಗೆದುಕೊಳ್ಳುವ ಸಾಹಸವನ್ನೇನೋ ಮಾಡಿದರು. ಜಗತ್ತಿನಲ್ಲಿ ಎಲ್ಲಿಯೇ ಆಗಲಿ ಈ ರೀತಿ ಏಳು ದಿನ ಅಖಂಡ ಪಾಠಪ್ರವಚನವನ್ನು ಮಾಡಿದ ದಾಖಲೆ ಇದೆಯೋ ಇಲ್ಲವೋ ನಾನು ಕಾಣೆ. ಗಿನ್ನೆಸ್ ಬುಕ್‌ನಲ್ಲಿ ದಾಖಲೆಯಾಗಲು ಯೋಗ್ಯವಾದ ಪರಮ ದಾಖಲೆ.

ಬಿ.ಎಂ.ಶ್ರೀ ನಮಗೆ ಮಾತ್ರ ಉಪಾಧ್ಯಾಯರಾಗಿರಲಿಲ್ಲ, ಕನ್ನಡ ನಾಡಿಗೇ ಉಪಾಧ್ಯಾಯರು ; ನಾಡೋಜರು. ಕನ್ನಡ ತಲೆ ಎತ್ತಿ 'ಅಕ್ಕತಂಗಿಯರೊಡನೆ ನಾನು ಸಮ ನಿಮಗೆಂದು' ನಿಲ್ಲುವುದಕ್ಕಾಗಿ, ಕನ್ನಡ ಜನ ಒಂದು ಕುಲವಾಗಿ ಒಂದುಗೂಡಿ ಬದುಕುವುದಕ್ಕಾಗಿ, ಕನ್ನಡದ ಎಲ್ಲ ಮಕ್ಕಳು ಹಳಗನ್ನಡ ಸಾಹಿತ್ಯವನ್ನು ಓದಿಕೊಂಡು ಮೆಚ್ಚಿಕೊಂಡು ಹೆಮ್ಮೆಪಡುವುದಕ್ಕಾಗಿ, ಹೊಸ ಸಾಹಿತ್ಯವನ್ನು ಸೃಷ್ಟಿಸಲು ಸ್ಫೂರ್ತಿ ಪಡೆಯುವುದಕ್ಕಾಗಿ, "ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ ನಿಬೋಧತ" ಎಂದು ಕನ್ನಡ ಕುಲಕೋಟಿಯನ್ನು ಎಚ್ಚರಿಸುವುದಕ್ಕಾಗಿ, ಕನ್ನಡ ನಾಡನ್ನೆಲ್ಲಾ ಸುತ್ತಿ ಹಾಸುಹೊಕ್ಕು ಹರಿದು, ಕನ್ನಡ ಕಾವ್ಯ ಸಂಪತ್ತನ್ನು ಕುರಿತು, ಕನ್ನಡ ಸಮಸ್ಯೆಗಳನ್ನು ಕುರಿತು, ನಾಡಹಬ್ಬಗಳಲ್ಲಿ ಸಂಘ ಸಂಸ್ಥೆಗಳ ವಾರ್ಷಿಕ ಸಭೆ

# ಅಧ್ಯಾಯ ಒಂದು

# ಹಿನ್ನೆಲೆ

ಶತಶತಮಾನಗಳ ಉದ್ದಕ್ಕೂ ಬೆಳೆದು ಬಂದಿರುವ ಯಾವುದೇ ಸಾಹಿತ್ಯದ ಚರಿತ್ರೆಯನ್ನು ನಾವು ಪರಿಶೀಲಿಸಿ ನೋಡಿದರೆ, ಅತ್ಯಂತ ಫಲಪ್ರದವಾದ ಮತ್ತು ಸತ್ತ್ವಯುತವಾದ ಕಾಲಗಳಿಗೂ ಬರಡು ಬಿದ್ದು ನಿಸ್ಸತ್ತ್ವವಾದ ಯುಗಗಳಿಗೂ ನಡುವೆ ಏರಿಳಿತಗಳು ಇದ್ದುದನ್ನು ನಾವು ಗಮನಿಸುತ್ತೇವೆ. ಅವನತಿಯ ಕಾಲಗಳೂ ವಿಕಾಸಗೊಂಡು ಉನ್ನತಿ ಪಡೆದ ಕಾಲಗಳೂ ಒಂದಾದಮೇಲೆ ಇನ್ನೊಂದರಂತೆ ಕಾಣಿಸಿಕೊಳ್ಳುತ್ತವೆ; ಆದ್ದರಿಂದ, ಪ್ರಗತಿ ಎಡೆಬಿಡದಂತೆ ಒಂದೇ ಸಮನಾಗಿರುವುದಿಲ್ಲ. ಮಲಯಾಳ ಸಾಹಿತ್ಯದ ಮಹತ್ವದ ಪರಿವರ್ತನೆಯ ಘಟ್ಟಗಳು ಚೆರುಶ್ಶೇರಿ (೧೫ನೆಯ ಶತಕ), ತುಞಚತ್ ಎಷುತ್ತಚ್ಛನ್ (೧೬ನೆಯ ಶತಕ), ಕುಞಚನ್ ನಂಬಿಯಾರ್ (೧೮ನೆಯ ಶತಕ) ಮತ್ತು ಉಣ್ಣಾಯಿ ವಾರಿಯರ್, ಇಂತಹ ಘಟಾನುಘಟಿಗಳನ್ನು ಅವಲಂಬಿಸಿಕೊಂಡಿವೆ. ಈ ಮಹಾಕವಿಗಳ ಕೃತಿಗಳು ತಮ್ಮ ರೂಪರಚನೆ, ವಸ್ತು ಮತ್ತು ಭಾವನೆ– ಈ ಎಲ್ಲ ಅಂಶಗಳಲ್ಲಿಯೂ ಪ್ರಮುಖವಾಗಿವೆ. ಅವರಾದ ಮೇಲೆ ಬಂದವರು ಅವರಿಗಿಂತ ಕಡಮೆ ಕವಿತಾಶಕ್ತಿಯುಳ್ಳ ಬರಹಗಾರರು; ಇವರಲ್ಲಿ ಬಹಳ ಮಂದಿ ಆ ಪ್ರಖ್ಯಾತಪುರುಷರ ಆಚಾರ್ಯಕೃತಿಗಳನ್ನು ಅನುಕರಿಸಲು ಪ್ರಯತ್ನಪಟ್ಟರು.

ಮಲಯಾಳ ಸಾಹಿತ್ಯದಲ್ಲಿ ಅತ್ಯಂತ ಮುಂಚಿನ ಕಾಲ ೧೫ನೆಯ ಶತಮಾನಕ್ಕೆ ಹಿಂದಿನದು ಎಂಬ ಬಗೆಗೆ ಸಾಮಾನ್ಯವಾಗಿ ಬಹುಮತವಿದೆ; ಆ ಕಾಲದಲ್ಲಿ ಚೆರುಶ್ಶೇರಿ ನಂಬೂದರಿಯವರ ಶ್ರೇಷ್ಠ ಕೃತಿರತ್ನ 'ಕೃಷ್ಣಗಾಥಾ' ರಚಿತವಾಯಿತು. ಅದೇ ಕಾಲದಲ್ಲಿ ಮಲಯಾಳ ಭಾಷೆ ಸಾಹಿತ್ಯದ ಭಾಷೆಯಾಗಿ ರೂಪಗೊಳ್ಳುತ್ತಿದ್ದುದನ್ನು ಕಾಣುತ್ತೇವೆ; ಆಗ ಸಂಸ್ಕೃತ ಮತ್ತು ತಮಿಳಿನಂತಹ ಬೆಳೆದುನಿಂತ ಸಾಹಿತ್ಯಗಳು ಅದರ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರಿದುವು. ಇದೇ ಸಮಯದಲ್ಲಿ ಸಾಹಿತ್ಯಯುಗವು ಜನಪದಗೀತಗಳ ಪುಷ್ಕಳವಾದ ಸಂಪತ್ತನ್ನು ನಮಗೆ ಬಿಟ್ಟುಹೋಗಿದೆ; ಅದು ಬಹುಮಟ್ಟಿಗೆ ಆಡುನುಡಿಯಲ್ಲಿದೆ. ವಾಸ್ತವವಾಗಿ ಕೇರಳದ ಪ್ರೌಢಕಾವ್ಯದ ವಾಙ್ಮಯ ವಾಹಿನಿ ರೂಪಗೊಳ್ಳುವುದರಲ್ಲಿ ಮೂರು

ಆತನ 'ನಳಚರಿತ್ರಂ ಆಟ್ಟಕ್ಕಥ' ತನ್ನ ನಾಟಕೀಯ ಗುಣಗಳಿಗಾಗಿಯೂ ಸ್ವೋಪಜ್ಞತೆಗಾಗಿಯೂ ಪ್ರಸಿದ್ಧವಾಗಿದೆ; ನಾಲ್ಕು ದಿನ ಪ್ರದರ್ಶಿತವಾಗಬೇಕೆಂದು ರಚಿತವಾದದ್ದು ಅದು. ಕಥಕ್ಕಳಿ ಒಂದು ಮಹೋನ್ನತ ಕಲಾಪ್ರಕಾರ; ಅದರಿಂದ ಪೂರ್ಣ ಆನಂದಾನುಭವನ್ನು ಪಡೆಯಲು ರಸಿಕಪ್ರೇಕ್ಷಕವೃಂದ ಇರಬೇಕು. ಉತ್ಸಾಹಿಯೂ ಬುದ್ಧಿಚಮತ್ಕಾರವುಳ್ಳವನೂ ಆಗಿದ್ದ ಕುಞಚನ್ ನಂಬಿಯಾರ್ ಜನಸಾಮಾನ್ಯದ ಅಗತ್ಯವನ್ನು ಅರಿತುಕೊಂಡು ತುಳ್ಳಲ್ ಎಂಬ ಕಲಾಪ್ರಕಾರವನ್ನು ರೂಪಿಸಿ, ಗಣ್ಯವಾದ ಸಾಹಿತ್ಯರಾಶಿಯನ್ನು ನಿರ್ಮಾಣ ಮಾಡಿದನು; ಪಂಡಿತ ಪಾಮರರಿಬ್ಬರಿಗೂ ರುಚಿಸುವಂಥದು ಅದು. ನಂಬಿಯಾರ್ ಪೌರಾಣಿಕ ಕಥಾ ವಸ್ತುಗಳನ್ನೇ ಉಪಯೋಗಿಸಿಕೊಂಡರೂ ಕೂಡ, ಆತನ ಪ್ರತಿಭೆ ಎಂಥದೆಂದರೆ, ಪ್ರತಿಯೊಂದು ಕಥೆಯೂ ಪ್ರತಿಯೊಂದು ಸನ್ನಿವೇಶಸರಣಿಯೂ ಸಮಕಾಲೀನವಾಗಿ ಕಾಣುತ್ತ, ಓದುಗರನ್ನು ಸಂತೋಷದಲ್ಲಿ ಮುಳುಗಿಸಿಬಿಡುವುವು. ಈತ ೧೮ನೆಯ ಶತಮಾನಕ್ಕೆ ಸೇರಿದವನು.

ಈ ಮಹಾವ್ಯಕ್ತಿಗಳ ಸ್ವೋಪಜ್ಞತೆ ಎಷ್ಟರಮಟ್ಟಿಗಿತ್ತೆಂದರೆ, ಸೂತ್ರಬದ್ಧ ಸಾಹಿತ್ಯ ರೂಪಗಳನ್ನು ಅತಿಕ್ರಮಿಸಿ ಅವರು ತಮ್ಮದೇ ಆದ ಏನಾದರೊಂದು ಕೊಡುಗೆಯನ್ನು ನೀಡಲು ಸಮರ್ಥರಾಗಿದ್ದರು. ಮಲಯಾಳ ಸಾಹಿತ್ಯದಲ್ಲಿ ಕುಞಚನ್ ನಂಬಿಯಾರ್‌ನ ಮತ್ತು ೧೯ನೆಯ ಶತಕದ ನಡುವಣ ಕಾಲ ಬಲುಮಟ್ಟಿಗೆ ಬರಡಾದ ಯುಗವಾಗಿದೆ. ಆ ಬಳಿಕ ಬಹುಮಂದಿ ಲೇಖಕರು ಏಳಿಗೆಗೆ ಬರುವುದನ್ನು ಕಾಣುತ್ತೇವೆ; ಅವರಲ್ಲಿ ಹಲವರು ಸಂಸ್ಕೃತ ಸಂಪ್ರದಾಯದ ತುಳಿದು ಸವೆದ ಜಾಡನ್ನೇ ಹಿಡಿದವರು. ಮಹಾಕಾವ್ಯ, ಚಂಪೂಕಾವ್ಯ ಮತ್ತು ಸಂದೇಶ ಕಾವ್ಯ– ಈ ಪುರಾತನ ಕಾವ್ಯ ಪ್ರಕಾರಗಳಲ್ಲಿ ಅವರು ಪ್ರಯೋಗ ನಡಸಿದರು. ಇದರೊಂದಿಗೆಯೇ ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವನ್ನೂ ನಾವು ಕಾಣುತ್ತೇವೆ. ಇವರಲ್ಲಿ ಕೆಲವರು ಸಂಸ್ಕೃತ ಶಬ್ದಗಳನ್ನೂ ರೂಪಗಳನ್ನೂ ಅಳವಡಿಸಿಕೊಂಡು ಒಂದು ಅಲಂಕಾರಮಯ ಶೈಲಿಯನ್ನು ಬಳಕೆಗೆ ತಂದರು. ಇತರರಾದರೋ ಬಳಕೆ ಮಾತಿನ ಚುರುಕಾದ ಸತ್ತ್ವಶಾಲಿಯಾದ ಪ್ರಯೋಗಗಳನ್ನುಳ್ಳ ಶುದ್ಧ ದೇಸಿ ಶೈಲಿಯನ್ನು ಪುರಸ್ಕರಿಸಿದರು.

## ಸಾಹಿತ್ಯದ ಸುವರ್ಣಯುಗ

೧೮೫೦ರ ತರುವಾಯದ ಆರು ದಶಕಗಳಲ್ಲಿ ಅನೇಕ ಪ್ರಮುಖ ಗದ್ಯಪದ್ಯ ಲೇಖಕರು ನಮಗೆ ಕಂಡುಬರುತ್ತಾರೆ. ಅವರಲ್ಲಿ ಹೆಚ್ಚು ಪ್ರಖ್ಯಾತರಾದವರೆಂದರೆ:–

ವಿಶಿಷ್ಟ ಸಾಹಿತ್ಯ ಸಂಪ್ರದಾಯಗಳು ಹರಿದು ಬಂದು ಅದಕ್ಕೆ ಕೂಡಿಕೊಂಡು ನೆರವಾಗಿವೆ: ೧) ದೇಸಿ ಪ್ರವಾಹ, ೨) ತಮಿಳು ಪ್ರವಾಹ, ಮತ್ತು ೩) ಸಂಸ್ಕೃತದ ಪ್ರವಾಹ. 'ಪಾಟ್ಟು' ಪ್ರಕಾರದ ರಚನೆಯಲ್ಲಿ ಪ್ರಾಚೀನ ತಮಿಳಿನ ಪ್ರಭಾವವನ್ನು ಕಾಣಬಹುದು; 'ರಾಮ ಚರಿತ್ರಂ' ಇದಕ್ಕೆ ನಿದರ್ಶನ. 'ಮಣಿಪ್ರವಾಳ' ಶೈಲಿಯ ರಚನೆಗಳು ಸಂಸ್ಕೃತ ಪ್ರಭಾವಕ್ಕೆ ಒಳಗಾದಂಥವು.

ಜೊತೆಗೂಡಿ ಹರಿದು ಬಂದ ಈ ಮೂರು ಶೈಲಿ ಅಥವಾ ಪ್ರಭಾವಗಳು ಗುಣದಲ್ಲಿಯೂ ಗಾಢತೆಯಲ್ಲಿಯೂ ವ್ಯತ್ಯಾಸ ಹೊಂದಿದ್ದುವು; ಒಂದು ಇನ್ನೊಂದರ ಮೇಲೆ ಪ್ರಭಾವ ಬೀರಿತು. ಮೊದಲನೆಯ ದೇಸಿ ಶೈಲಿಯ ಪ್ರವಾಹ ಹೆಚ್ಚು ಆಳ ಇಲ್ಲದ್ದು, ಹಾಗೂ ವರ್ಣರಹಿತ; ಆದರೆ ತಿಳಿಯಾದದ್ದು, ಓಟ ಉಳ್ಳದ್ದು. ಎರಡನೆಯದು ವರ್ಣಮಯವಾದ, ಆಟಾಟೋಪದ ಶೈಲಿ; ಮೂರನೆಯದು ಗಾಢವಾದದ್ದು, ಆದರೆ ಸುತ್ತುಬಳಸಿ ಹುಚ್ಚುಹುಚ್ಚಾಗಿ ಹರಿಯುವಂಥದು, ವಿದ್ವಾಂಸರಾದ ಕೆಲ ಮಂದಿಗೆ ಮಾತ್ರ ಹಿಡಿಸುವಂಥದು. ಈ ಮೂರುಬಗೆಯ ಪರಸ್ಪರ ಪ್ರಭಾವವು ೧೪ನೆಯ ಶತಕದ 'ಉಣ್ಣುನೀಲಿ ಸಂದೇಶಂ' ಮತ್ತು 'ಕಣ್ಣಾಶನ್ ಪಾಟ್ಟುಕಳ್' ಎಂಬುವುಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಹೀಗಿದ್ದರೂ, ವಿವಿಧ ಶೈಲಿಗಳ ಹಿತಕರವಾದ ಸಂಮಿಶ್ರಣವನ್ನೂ ಆಡುನುಡಿಯ ಪ್ರಕಾರದ ನಿರ್ಮಾಣವನ್ನೂ ಸೂಚಿಸುವ ಹೊಸ ಶೈಲಿಯ ವಿಕಾಸವು ಒಂದು ಶ್ರೇಷ್ಠ ಕೃತಿಯಾದ 'ಕೃಷ್ಣಗಾಥ'ದಲ್ಲಿ ಗೋಚರಿಸುತ್ತದೆ.

ಇತರ ಸಂಪ್ರದಾಯಗಳಲ್ಲಿ, ವಿಶೇಷವಾಗಿ ಸಂಸ್ಕೃತ 'ಮಾರ್ಗ' ಸಂಪ್ರದಾಯದಲ್ಲಿ, ಉತ್ತಮವಾದದ್ದು ಯಾವುದುಂಟೋ ಅದನ್ನು ಸ್ವೀಕರಿಸಿ ಅಳವಡಿಸಿಕೊಳ್ಳುವ ಪ್ರವೃತ್ತಿಯು ತುಞಚತ್ ಎಷುತಚ್ಚನ್ ಅವನ ಕೈಲಿ ಪರಾಕಾಷ್ಠೆಯನ್ನು ಮುಟ್ಟಿತು; ಆತ ಸಾಂಪ್ರದಾಯಿಕ ಮಲಯಾಳ ಭಾಷೆಯನ್ನು ಒಮ್ಮಿಂದೊಮ್ಮಿಗೆ ಜನಪ್ರಿಯವಾಗಿ ಮಾಡಿ ಪ್ರೌಢಗೊಳಿಸಿದನು. ಮಲಯಾಳ ಭಾಷೆಯ ಓದುಗರು ಆತನ 'ರಾಮಾಯಣ' ಮತ್ತು 'ಮಹಾಭಾರತ'ಗಳಿಗೆ ಚಿರಋಣಿಗಳು; ಚಿರಋಣಿಗಳಾಗಿರಲು ಕಾರಣ, ಅವುಗಳಲ್ಲಿಯ ಕಾವ್ಯಗುಣದ ಭವ್ಯತೆ ಹಾಗೂ ಆಧ್ಯಾತ್ಮಿಕ ದೃಷ್ಟಿ.

ಸಾಹಿತ್ಯ ಪರ್ವತ ಶ್ರೇಣಿಯ ಎರಡನೆಯ ಉಚ್ಚಶಿಖರದ ನೋಟವನ್ನು ನಾವು ಕಾಣುವಷ್ಟರಲ್ಲಿ ಒಂದು ಶತಮಾನಕ್ಕೂ ಹೆಚ್ಚಿನ ಕಾಲ ಕಳೆದುಹೋಗಿರುತ್ತದೆ. ವಾಸ್ತವವಾಗಿ, ಜೋಡಿ ಶಿಖರಗಳನ್ನು ನಾವು ಕಾಣುತ್ತೇವೆ. ಮೊದಲನೆಯ ಶಿಖರಪ್ರಾಯನೆಂದರೆ, ಕಥಕ್ಕಳಿ ಸಾಹಿತ್ಯದ ಅಗ್ರಗಣ್ಯನಾದ ಉಣ್ಣಾಯಿವಾರಿಯರ್;

ಮತ್ತು ಮಲಯಾಳ ಭಾಷೆಗಳಲ್ಲಿ ಆತನಿಗಿದ್ದ ಆಳವಾದ ಪಾಂಡಿತ್ಯ, ಸಾಹಿತ್ಯ ಮತ್ತು ವಿದ್ಯಾಕ್ಷೇತ್ರಗಳ ಅಭಿವೃದ್ಧಿಗೆ ಸೇವೆ ಸಲ್ಲಿಸುವುದರಲ್ಲಿ ಆತನಿಗಿದ್ದ ಕಳಕಳಿ, ಇಷ್ಟರ ಜೊತೆಗೆ ರಾಜವಂಶದ ಸಮೀಪ ಬಂಧುವೆನಿಸಿಕೊಂಡು ಆತ ಪಡೆದಿದ್ದ ದೊಡ್ಡ ಪ್ರತಿಷ್ಠೆ,– ಇವೆಲ್ಲವೂ ಆತನಿಗೊಂದು ಉನ್ನತ ಸ್ಥಾನವನ್ನು ದೊರಕಿಸಿಕೊಟ್ಟಿದ್ದುವು; ಅದನ್ನು ಆ ಮುನ್ನ ಅಥವಾ ಆಮೇಲೆ ಯಾರೂ ಅನುಭೋಗಿಸಿರಲಿಲ್ಲ. ಒಬ್ಬ ಕವಿಯಾಗಿ ಆತ ಸಂಸ್ಕೃತ ಸಂಪ್ರದಾಯದ ಸೊಬಗನ್ನೂ ಅಗಾಧತೆಯನ್ನೂ ಮನಗಂಡಿದ್ದನು. ಆದರೆ ಆತನು ಇಂಗ್ಲಿಷ್ ಮಾದರಿಯ ವಿದ್ಯಾಭ್ಯಾಸದ ಪ್ರಭಾವಕ್ಕೂ ಒಳಗಾಗಿದ್ದನು; ಪಠ್ಯಪುಸ್ತಕ ಸಮಿತಿಯ ಒಬ್ಬ ಸದಸ್ಯನಾಗಿರುತ್ತ, ವಿದ್ಯಾರ್ಥಿಗಳು ತಮ್ಮ ಗದ್ಯ ಪ್ರಬಂಧಗಳನ್ನು ಸರಳವಾದ, ನೇರವಾದ ಶೈಲಿಯಲ್ಲಿ ಬರೆಯುವುದಕ್ಕೆ ಉತ್ತೇಜನ ಕೊಟ್ಟನು. ಆದರೆ ಬುದ್ಧಿವಂತ ವರ್ಗಕ್ಕೆಂದು ತಾನೇ ಬರೆಯುವಾಗ, ಕೃತಕವಾದ ಅಲಂಕೃತಶೈಲಿಯಲ್ಲಿ ಬರೆಯುವುದು ಸರಿ ಎಂದು ಆತ ಭಾವಿಸಿದ್ದನು; ಆತನ 'ಅಕ್ಬರ್' ಎಂಬ ಕಾದಂಬರಿ ಈ ಬಗೆಯ ಶೈಲಿಗೆ ಉದಾಹರಣೆ. ಎ.ಆರ್. ರಾಜರಾಜವರ್ಮನು ವ್ಯಾಕರಣಕಾರ, ಕವಿ ಹಾಗೂ ವಿಮರ್ಶಕ; ತನ್ನ ಸೋದರಮಾವನಲ್ಲಿ ಆತನಿಗೆ ಅಪಾರ ಗೌರವ; ಆದರೆ ಸಾಹಿತ್ಯ ಕೃತಿ ರಚನೆ ಮತ್ತು ಕೃತಿಮೌಲ್ಯಮಾಪನಗಳಿಗೆ ಸಂಬಂಧಪಟ್ಟ ಅನೇಕ ವಿಚಾರಗಳಲ್ಲಿ ಅವರಿಬ್ಬರಲ್ಲಿ ಮೂಲಭೂತವಾಗಿ ಅಭಿಪ್ರಾಯ ಭೇದಗಳಿದ್ದುವು. ವಾಗಾಡಂಬರ, ಕಲ್ಪನಾಶಕ್ತಿ, ಮತ್ತು ಸಂಸ್ಕೃತ ಕಾವ್ಯದ ಮಾದರಿಯ ನಿಯಮ ಪಾಲನೆಯ ಔಚಿತ್ಯ– ಇವುಗಳಿಗೆ ಸಂಬಂಧಪಟ್ಟಂತೆ ಇವರಿಬ್ಬರೂ ತಳೆದಿದ್ದ ನಿಲುವನ್ನು ಪರಿಶೀಲಿಸುವ ಸಂದರ್ಭ ಈ ಮುಂದಿನ ಪುಟಗಳಲ್ಲಿ ನಮಗೆ ಒದಗಿಬರುತ್ತದೆ.

ತಮ್ಮ ಮಲಯಾಳ ಸಾಹಿತ್ಯದ ಸಮಗ್ರಚರಿತ್ರೆಯಲ್ಲಿ*, ಮಹಾಕವಿ ಉಳ್ಳೂರ್ ಎಸ್. ಪರಮೇಶ್ವರ ಅಯ್ಯರ್ ಅವರು ಎ.ಆರ್. ರಾಜರಾಜವರ್ಮನ ಜೀವನ ಮತ್ತು ಸಾಧನೆಗಳನ್ನು ಈ ಮುಂದಿನ ಮಾತುಗಳಲ್ಲಿ ಸಂಕ್ಷೇಪವಾಗಿ ತಿಳಿಯ ಹೇಳಿದ್ದಾರೆ: "ಮಲಯಾಳ ಸಾಹಿತ್ಯ ಸೌಧದ ಗೋಡೆಗಳನ್ನು ಇತರ ಬರಹಗಾರರು ವರ್ಣಚಿತ್ರಗಳಿಂದಲೂ ರೇಖಾಚಿತ್ರಗಳಿಂದಲೂ ಅಲಂಕರಿಸಿದ್ದರು; ರಾಜರಾಜ ವರ್ಮನಾದರೋ ಆ ಸೌಧದ ತಳಪಾಯ ಹಾಗೂ ಗೋಪುರಗಳ ಮೇಲೆ ಕೆಲಸ ಮಾಡಿ ಕೇರಳದ ಜನತೆಯ

* 'ಕೇರಳ ಸಾಹಿತ್ಯ ಚರಿತ್ರಂ'– ಸಂಪುಟ ೫.

ಕೇರಳವರ್ಮ (೧೮೪೫–೧೯೧೫)– ಕವಿ ಮತ್ತು ವಿದ್ವಾಂಸ

ಎ.ಆರ್. ರಾಜರಾಜವರ್ಮ (೧೮೬೩–೧೯೧೮)– ವಿದ್ವಾಂಸ ಮತ್ತು ವಿಮರ್ಶಕ

ಕೊಟ್ಟುಂಜಲ್ಲೂರ್ ಕುಂಞಿ ಕುಟ್ಟನ್

ತಂಪುರಾನ್ (೧೮೬೫–೧೯೧೩– ಕವಿ ಮತ್ತು ಭಾಷಾಂತರಕಾರ

ಚಂತು ಮೆನೋನ್ (೧೮೪೭–೧೯೦೦)– ಕಾದಂಬರಿಕಾರರು

ಸಿ.ವಿ. ರಾಮನ್ ಪಿಳ್ಳೈ (೧೮೫೮–೧೯೨೨)– ಕಾದಂಬರಿಕಾರರು

ಕರನ್ ಆಶಾನ್ (೧೮೭೩–೧೯೨೪)– ಆಧುನಿಕ ಕಾಲದ ಕವಿ

ಉಳ್ಳೂರ್ (೧೮೭೭–೧೯೪೯)– ಆಧುನಿಕ ಕಾಲದ ಕವಿ

ವಳ್ಳತ್ತೋಳ್ (೧೮೭೮–೧೯೫೮)– ಆಧುನಿಕ ಕಾಲದ ಕವಿ

–ಇವರೆಲ್ಲರೂ ೧೯ನೆಯ ಶತಮಾನದಲ್ಲಿ (ಬಹುತೇಕ ಅದರ ಉತ್ತರಾರ್ಧದಲ್ಲಿ) ಜನಿಸಿದವರೆಂಬುದನ್ನು ನಾವು ಗಮನಿಸಬಹುದು; ಅವರ ಅತ್ಯುತ್ತಮ ಕೃತಿಗಳು ೧೮೮೦ರಿಂದ ೧೯೩೦ರ ನಡುವೆ ನಿರ್ಮಾಣಗೊಂಡುವು. ಇದನ್ನು ಮಲಯಾಳಂ ಸಾಹಿತ್ಯದ ಪುನರುಜ್ಜೀವನದ ಕಾಲವೆಂದು ಭಾವಿಸ ಬಹುದು. ಸ್ಥೂಲವಾಗಿ ಹೇಳುವುದಾದರೆ, ಮಲಯಾಳ ಸಾಹಿತ್ಯದ ಸುವರ್ಣ ಯುಗವು ೧೮೫೦ರ ಬಳಿಕ ಒಂದು ಶತಮಾನ ಕಾಲ ಎನ್ನಬಹುದು.

ನಾವು ಎಂಟು ಹೆಸರುಗಳನ್ನು ಮಾತ್ರ ಉಲ್ಲೇಖಿಸಿದ್ದರೂ, ಸಾಹಿತ್ಯಕ್ಕೆ ಘನವಾದ ಕೊಡುಗೆಯನ್ನು ನೀಡಿರುವ ಇನ್ನೂ ಕೆಲರು ಉಂಟು. ಮಲಯಾಳಿ ಸಾಹಿತ್ಯೋದ್ಯಾನದಲ್ಲಿ ನೂರಾರು ಹೂಗಳು ಅರಳಿ ಆ ಕಾಲವನ್ನು ನಿಜವಾಗಿ ವಸಂತ ಋತು ಎನ್ನಿಸಿಬಿಟ್ಟವು. ಹೊಸ ಸಾಹಿತ್ಯರೂಪಗಳನ್ನೂ ಕಥಾವಸ್ತು ಗಳನ್ನೂ, ಹೊಸ ಮಾರ್ಗಗಳನ್ನೂ ಒಳನೋಟಗಳನ್ನೂ ಮೊದಲ ಬಾರಿಗೆ ಪರಿಚಯ ಮಾಡಿಕೊಡುವ ಮೂಲಕ ಹಲವರು ಸಾಹಿತ್ಯದ ಬಗೆಗೆ ಎಲ್ಲ ಕಡೆ ಎಚ್ಚರವನ್ನು ಉಂಟುಮಾಡಿದರಾದರೂ ನಿಜವಾದ ಮುಂದಾಳುಗಳಾಗಿದ್ದವರು ಕೆಲವರು ಮಾತ್ರ. ಅಂಥವರಲ್ಲಿ ಕೇರಳವರ್ಮ ವಲಿಯ ಕೋಯಿಲ್ ತಂಪುರಾನ್ ಮತ್ತು ಆತನ ಸೋದರ ಅಳಿಯ (ಸಹೋದರಿಯ ಮಗ) ಎ.ಆರ್. ರಾಜ ರಾಜವರ್ಮ ತಂಪುರಾನ್ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಸಾಹಿತ್ಯದ ಈ ಹೊಸ ಯುಗದ ಮಹೋನ್ನತ ವ್ಯಕ್ತಿಗಳು ಎಂದು ಅವರು ಸರ್ವ ಮಾನ್ಯರಾಗಿದ್ದರು.

ಕೇರಳವರ್ಮನು **ಸಾಹಿತ್ಯ ಸಮ್ರಾಟ್** ಎಂದು ಪರಿಗಣಿಸಲ್ಪಟ್ಟಿದ್ದನು. ಸಂಸ್ಕೃತ

# ಅಧ್ಯಾಯ ಎರಡು

## ಬೆಳವಣಿಗೆಯ ವರ್ಷಗಳು

ನಮ್ಮ ಕಥಾನಾಯಕನ ಪೂರ್ತಿ ಹೆಸರು ಎ.ಆರ್. ರಾಜರಾಜವರ್ಮ ಕೋಯಿ ತಂಪುರಾನ್. ರಾಜ, ವರ್ಮ, ತಂಪುರಾನ್, ಕೋಯಿತಂಪುರಾನ್ (ಕೋಯಿಲ್+ತಂಪುರಾನ್)[೧] ಎಂಬೀ ಮಾತುಗಳು ರಾಜವಂಶದೊಂದಿಗೆ ಸಂಬಂಧ ಹೊಂದಿದ ವ್ಯಕ್ತಿಗಳನ್ನು ಸೂಚಿಸುತ್ತವೆ, ಮತ್ತು ಆಳುವ ವರ್ಗ ಎಂದರೆ ಕ್ಷತ್ರಿಯರೊಂದಿಗೆ ಸಮೀಪ ಸಂಬಂಧವನ್ನು ನಿರ್ದೇಶಿಸುತ್ತವೆ. ಮಲಯಾಳ ಸಾಹಿತ್ಯದಲ್ಲಿ ಈ ಶಬ್ದಗಳು ಪ್ರಮುಖವಾಗಿ ಕಂಡುಬರುತ್ತವೆ; ಇದರಿಂದ ಈ ಸಣ್ಣ ಪಂಗಡದ ಜನ ಕೇರಳದ ಸಾಂಸ್ಕೃತಿಕ ಜೀವನಕ್ಕೆ ನೀಡಿರುವ ಕೊಡುಗೆ ಎಷ್ಟು ಸತ್ವಪೂರ್ಣವಾದದ್ದು ಎಂಬುದು ವ್ಯಕ್ತಪಡುತ್ತದೆ.

ರಾಜರಾಜವರ್ಮ ಹುಟ್ಟಿದ್ದು ೧೮೬೩ರಲ್ಲಿ, ಚಣ್ಣನಾಶ್ಶೇರಿ ಎಂಬಲ್ಲಿಯ ಲಕ್ಷ್ಮೀಪುರಂ ಅರಮನೆಯಲ್ಲಿ. ಚಣ್ಣನಾಶ್ಶೇರಿ ತಿರುವನಂತಪುರಕ್ಕೆ ಉತ್ತರದಲ್ಲಿ ೧೪೦ ಕಿಲೋಮೀಟರ್ ದೂರದಲ್ಲಿರುವ ಜನಬಾಹುಳ್ಯವುಳ್ಳ ಪಟ್ಟಣ. ಮಲಬಾರಿನಲ್ಲಿ ಪ್ರಚುರವಾಗಿರುವ ಶಕೆಗೆ ಅನುಗುಣವಾಗಿ ಆತನ ಸರಿಯಾದ ಜನ್ಮದಿನ ೧೦೩೮ರ ಕುಂಭಮಾಸದ ನವಮಿ. ರಾಜವಂಶಕ್ಕೆ ಸೇರಿದ ವ್ಯಕ್ತಿಗಳಿಗೆ ಅವರ ಜನ್ಮನಕ್ಷತ್ರದ ಪ್ರಕಾರ ಹೆಸರಿಡುವುದು ಪದ್ಧತಿ. ಅದರಂತೆ ಆತನ ಹೆಸರು ಪೂರುಟ್ಟಾತಿ (ಎಂದರೆ, ೨೫ನೆಯ ನಕ್ಷತ್ರ, ಪೂರ್ವಾಭಾದ್ರ) ಎಂದಾಯಿತು.

ಚಣ್ಣನಾಶ್ಶೇರಿಯ ತಂಪುರಾನರ ವಂಶಕ್ಕೂ ದಕ್ಷಿಣ ಮಲಬಾರಿನಲ್ಲಿಯ ಪರಪ್ಪೂರು ಸ್ವರೂಪಮ್‌ಗೂ ಸಂಬಂಧ ಬೆಳೆದು ಬಂದಿತ್ತು; ಈ ವಂಶ ಪರಂಪರಾಗತವಾಗಿ ಬಂದ ಸಂಸ್ಕೃತಿಗೂ ಘನತೆಗೂ ಪ್ರಖ್ಯಾತವಾಗಿತ್ತು. ಹೈದರ್ ಆಲಿಯ ದಾಳಿಯ ಹೊಡೆತದಿಂದ ಪಾರಾಗಲು ಮಲಬಾರ್ ಪ್ರಾಂತದಿಂದ

---

೧. ತಂಪುರಾನ್=ಒಡೆಯ, ಸ್ವಾಮಿ; ಗೌರವವನ್ನು ಸೂಚಿಸುವ ಶಬ್ದ. ಕೋಯಿಲ್=ರಾಜತ್ವ ಇಲ್ಲವೆ ದೇವಾಲಯಗಳ ಸಂಬಂಧದಲ್ಲಿ ಪ್ರಯೋಗವಾಗುವ ಶಬ್ದ. ಕೋಯಿತಂಪುರಾನ್=ರಾಜ ಕುಮಾರಿಯ ಪತಿಯನ್ನು ಕುರಿತು ಪ್ರಯೋಗವಾಗುವ ಪದ.

ಪ್ರಯೋಜನಾರ್ಥವಾಗಿ ಅದನ್ನು ಚಿರಸ್ಥಾಯಿಯಾದ, ಭವ್ಯವಾದ ಕಟ್ಟಡವಾಗಿ ಮಾಡಿದನು. ವಾಸ್ತುಶಿಲ್ಪ ಸದೃಶವಾದ ಈ ಸಾಧನೆಯನ್ನು ಅವಲಂಬಿಸಿದೆ ಆತನ ಕೀರ್ತಿ; ಅದು ಎಂದೆಂದಿಗೂ ಉಳಿದಿರತಕ್ಕದ್ದು. ಆತನಲ್ಲಿ ವಿಕಾಸಗೊಂಡಿದ್ದಂಥ ಸೂಕ್ಷ್ಮ ನಿರೀಕ್ಷಣ ಸಾಮರ್ಥ್ಯ, ಸ್ವೋಪಜ್ಞತೆ ಮತ್ತು ಔಚಿತ್ಯಪ್ರಜ್ಞೆಗಳನ್ನು ಉಳ್ಳ ಬೇರೆ ಯಾರೂ ಈ ಆಧುನಿಕ ಯುಗದಲ್ಲಿ ಕೇರಳದಲ್ಲಿಲ್ಲ. ಯಾವ ಕಾಲದಲ್ಲಿಯೇ ಆಗಲಿ ಯಾವ ಸ್ಥಳದಲ್ಲಿಯೇ ಆಗಲಿ, ಅಂಥ ಅತಿ ಮಾನವ ವ್ಯಕ್ತಿಗಳು ಕಂಡುಬರುವುದು ಅಪೂರ್ವ.

* * * *

ಕೊಚ್ಚಪ್ಪನ ಪಾಲಿಗೆ ಸುಖಮಯವಾಗಿದ್ದರೂ ಕೂಡ, ಬಲುಮಟ್ಟಿಗೆ ಅವನ ಪ್ರಾಣಕ್ಕೇ ಸಂಚಕಾರ ತಂದ ಎರಡು ಆಕಸ್ಮಿಕ ವಿಪತ್ತುಗಳು ಸಂಭವಿಸಿದುವು. ಮೊದಲ ಸಲ ಅವನು ನೀರಿನಲ್ಲಿ ಮುಳುಗಿಹೋಗುವುದರಲ್ಲಿದ್ದನು. ಆಗ ಮಳೆಗಾಲ. ಮನೆಯ ಬಳಿ ಒಂದು ಆಳವಾದ ದೊಡ್ಡ ಕೊಳ. ಎಳೆ ಹರೆಯದ ಸೋದರಬಂಧುಗಳೊಂದಿಗೆ ದೋಣಿಯಲ್ಲಿ ತೇಲಾಡಬೇಕು ಎಂದು ಆಸೆಯಾಯಿತು ಪೋರನಿಗೆ. ದೋಣಿಯಲ್ಲಿ ಹುಡುಗರಿಗೆ ನೆರವಾಗಲು ಒಬ್ಬಳು ಸೇವಕಿಯೇನೋ ಇದ್ದಳು. ಸಣ್ಣ ದೋಣಿ ಮಗುಚಿಕೊಂಡಿತು; ದೋಣಿಯಲ್ಲಿದ್ದ ಮೂವರೂ ದೋಣಿಯಾಚೆ ಬಿದ್ದು ನೀರು ಪಾಲಾದರು. ಈ ಎಳೆಯರನ್ನು ನೀರಿನಿಂದ ಪಾರು ಮಾಡುವ ವೇಳೆಗೆ ಅವರು ಸಾಯುವ ಸ್ಥಿತಿಯಲ್ಲಿದ್ದರು. ಆದರೆ ಸುದೈವದಿಂದ ಅವರಿಗೆ ಸರಿಯಾದ ಪ್ರಥಮ ಚಿಕಿತ್ಸೆ ಮಾಡಿದ್ದರಿಂದ ಅವರನ್ನು ಬದುಕಿಸಿಕೊಳ್ಳಲಾಯಿತು. ಆಗ್ಗೆ ಇನ್ನು ಏಳು ತುಂಬಿರದಿದ್ದ ಕೊಚ್ಚಪ್ಪನ್ ದೊಡ್ಡವನಾದ ಮೇಲೆ ಆ ದುರ್ಘಟನೆಯನ್ನೂ ಹುಡುಗರನ್ನು ಕೊಳಕ್ಕೆ ಕರೆದುಕೊಂಡು ಹೋದಾಗ ತಮ್ಮ ಅಲಕ್ಷ್ಯಕ್ಕಾಗಿ ಹೆಂಗಸರು ತಿಂದ ಬೈಗುಳನ್ನೂ ಜ್ಞಾಪಿಸಿಕೊಳ್ಳುತ್ತಿದ್ದನು.

ಎರಡನೆಯ ಘಟನೆ ನಡೆದದ್ದು, ಹಾವಿನ ಕಾಟ ಇದ್ದ ಒಂದು ತೋಪಿನಲ್ಲಿ ಈ ಬಾಲಕ ಕ್ರೀಡಾಸಕ್ತನಾಗಿದ್ದಾಗ. ತನ್ನ ಬಲ ಅಡಿಗಾಲು ಯಾವುದೋ ಚೂಪಾದ ಪದಾರ್ಥಕ್ಕೆ ತಾಕಿದಂತೆ ಅವನಿಗೆ ಭಾಸವಾಯಿತು. ಹಾಗೆ ಅನ್ನಿಸಿದ್ದೇ ತಡ, ಕಾಲು ಭಾರವಾದಂತೆ ಅನುಭವವಾಯಿತು; ಹಾಗಿದ್ದರೂ ಕೂಡ ಅವನು ಮನೆಯ ಕಡೆಗೆ ಓಡಿದನು. ಬಲವಾದ ಗಾಯ ಯಾವುದೂ ಕಂಡುಬರಲಿಲ್ಲ; ಆದರೆ ಅಡಿಯಲ್ಲಿ ಎಡೆಬಿಡದ ನೋವು, ಸೆಡೆತ ಇತ್ತು. ಅದು ಹಾವಿನ ಕಡಿತ ಎಂಬುದು ಖಂಡಿತ. ಅದು ಹೇಗೋ ಏನೋ, ಪವಾಡ ಎನ್ನುವಂತೆ ಹುಡುಗ ಅಪಾಯದಿಂದ ಪಾರಾದನು.

## ಪ್ರಾರಂಭದ ವಿದ್ಯಾಭ್ಯಾಸ

ಪ್ರಖ್ಯಾತರಾದ ಗುರುಗಳ ಸನ್ನಿಧಿಯಲ್ಲಿ ರಾಜರಾಜವರ್ಮನ ಪ್ರಾರಂಭದ ವಿದ್ಯಾಭ್ಯಾಸ ಸಾಂಪ್ರದಾಯಿಕವಾದ ರೀತಿಯಲ್ಲಿ ಸಾಗಿತು. ಚುನಕ್ಕರ್ ವಾರಿಯರ್ ಮತ್ತು ಶಂಕರ ವಾರಿಯರ್ ಅವನ ಮೊದಲ ಗುರುಗಳು. ಇವರುಗಳು ಅವನಿಗೆ ಓದು, ಬರಹ ಮತ್ತು ಗಣಿತಗಳನ್ನು ಕಲಿಸಿದರು. ಮುಂದಿನ ಹಂತದಲ್ಲಿ ಸಂಸ್ಕೃತ ಕಾವ್ಯಗಳ ವ್ಯಾಸಂಗ ಸಾಗಿತು. ಹುಡುಗ ತುಂಟನಾಗಿದ್ದು, ಚೇಷ್ಟೆ ಮಾಡುತ್ತಿದ್ದ.

ತಿರುವಾಂಕೂರಿಗೆ ೧೭೬೮ರಲ್ಲಿ ಈ ವಂಶದ ಅನೇಕ ಕುಟುಂಬಗಳು ವಲಸೆಬಂದವು; ಈ ಮಹತ್ವದ ಘಟನೆಯ ಬಗೆಗೆ ಚರಿತ್ರೆಯಲ್ಲಿ ಉಲ್ಲೇಖವಿದೆ. ಪರಪ್ಪೂರು ಸವರೂಪದ ಕೆಲವು ಶಾಖೆಗಳೂ ಅದೇ ಕಾಲದಲ್ಲಿ ಹಿಂದಿನ ತಿರುವಾಂಕೂರು ಸಂಸ್ಥಾನಕ್ಕೆ ಧಾವಿಸಿ ಅಲ್ಲಿ ಆಶ್ರಯ ಪಡೆದುವು. ಉದಾರಶೀಲನಾದ ತಿರುವಾಂಕೂರಿನ ಮಹಾರಾಜನು ಅವರುಗಳನ್ನು ಎಷ್ಟು ಚೆನ್ನಾಗಿ ನೋಡಿಕೊಂಡನೆಂದರೆ, ಮತ್ತೆ ಶಾಂತಿ ನೆಲಸಿದಾಗ ಅವರುಗಳು ಹಿಂದಿರುಗಲು ಇಷ್ಟಪಡಲಿಲ್ಲ. ಇಷ್ಟು ಮಾತ್ರವಲ್ಲ; ಅವನು ತೋರಿದ ಔದಾರ್ಯ ನೀಡಿದ ಆಶ್ರಯ ಎಷ್ಟರಮಟ್ಟಿಗೆ ಇದ್ದುವು ಎಂದರೆ, ರಾಜವಂಶದ ಕೆಲವು ನಿರ್ದಿಷ್ಟ ಶಾಖೆಗಳೊಂದಿಗೆ ವಿವಾಹಸಂಬಂಧ ಬೆಳಸಲು ಅವರಲ್ಲಿ ಕೆಲವರಿಗೆ ಆಹ್ವಾನ ನೀಡಲಾಯಿತು. ಅಂಥವರಲ್ಲಿ ರಾಜರಾಜವರ್ಮನ ಪೂರ್ವಿಕರ ಕುಟುಂಬವೂ ಒಂದಾಗಿತ್ತು.

ರಾಜರಾಜವರ್ಮನಿಗೆ ಜನ್ಮವಿತ್ತ ತಾಯ್ತಂದೆಗಳು ಮೇಲ್ಮಟ್ಟದ ಸುಸಂಸ್ಕೃತರು. ಆತನ ತಾಯಿ ಕುಂಞಿಕ್ಕಾವು ತಂಪುರಾಟ್ಟಿ ಸಾಹಿತ್ಯಸಾಮ್ರಾಟ್ ಕೇರಳವರ್ಮನ ದೊಡ್ಡಮ್ಮನ (ತಾಯಿಯ ಅಕ್ಕನ) ಮಗಳು; ಚೊಕ್ಕ ಬಂಗಾರದಂಥ ಒಳ್ಳೆಯ ನಡತೆಯ ಹೆಣ್ಣುಮಗಳು. ಪಾಟ್ಟಿಯಲ್ ಇಲ್ಲಮ್‌ನ ವಾಸುದೇವನ್ ನಂಬೂದರಿ ದೊಡ್ಡ ವೇದವಿದ್ವಾಂಸ; ತುಂಬ ಹಾಸ್ಯಸ್ವಭಾವದ ಮನುಷ್ಯ. ಆಗಿನ ಕಾಲದಲ್ಲಿ ಕ್ಷತ್ರಿಯ ಮತ್ತು ನಾಯರ್ ಜನಾಂಗದ ಪ್ರತಿಷ್ಠಿತ ಕುಟುಂಬಗಳೊಂದಿಗೆ ನಂಬೂದರಿ ಬ್ರಾಹ್ಮಣರು ವಿವಾಹ ಸಂಬಂಧವನ್ನು ಬೆಳೆಸಿದ್ದರು.

ಎಳೆಯ ಮಗ ರಾಜರಾಜವರ್ಮನನ್ನು ಕೊಚ್ಚಪ್ಪನ್ ಎಂದು ಕರೆಯುತ್ತಿದ್ದರು; ಅವನಿಗೆ ಸುಮಾರು ಎರಡು ವರ್ಷ ಮಾತ್ರ ವಯಸ್ಸಾಗಿದ್ದಾಗ, ಲಕ್ಷ್ಮೀಪುರಂ ಅರಮನೆಯಲ್ಲಿ ತೀವ್ರವಾದ ಅಭಿಪ್ರಾಯಭೇದ ಮತ್ತು ವಿವಾದಗಳು ತಲೆದೋರಿದುವು; ಆ ಕಾರಣ ಅಲ್ಲಿನ ಕೆಲವು ಮಂದಿ ಚಣ್ಣನಾಶ್ಶೇರಿಗೆ ಸುಮಾರು ೨೦ ಮೈಲಿ ದೂರದಲ್ಲಿದ್ದ ಕಾರ್ತಿಕಪ್ಪಳ್ಳಿಗೆ ಹೊರಟುಹೋದರು. ಇಲ್ಲಿ ಕೇರಳವರ್ಮ ಮತ್ತು ಅವನ ಅಣ್ಣ ರಾಜರಾಜವರ್ಮ ಬಗೆ ಬಗೆಯ ಕಷ್ಟಗಳನ್ನು ಎದುರಿಸಿದರು. ಕೆಲಕಾಲದ ತರುವಾಯ ಅವರು ಆಳುವ ಮಹಾರಾಜನ ಸಹಾಯ ಪಡೆದು ಹರಿಪಾಟ್ ಎಂಬಲ್ಲಿ ಒಂದು ಹೊಸ ಭವನಕ್ಕೆ ತೆರಳಿದರು. ಈ ಹೊಸ ಭವನವನ್ನು 'ಅನಂತಪುರಂ ಅರಮನೆ' ಎಂದು ಕರೆಯಲಾಯಿತು. ನಮ್ಮ ಪುಟ್ಟ ಕಥಾನಾಯಕ ತನ್ನ ಶೈಶವದ ಕಾಲವನ್ನು ಕಳೆದದ್ದು ಇಲ್ಲಿಯೆ.

ಸೋದರ ಬಾಂಧವ್ಯದ ವಿದ್ವಾಂಸರಾದ ಹಿರಿಯರು, ದಯಾಮಯಿಯಾದ ತಾಯಿ, ಇವರುಗಳ ಒಲವಿನ ಆರೈಕೆಯಲ್ಲಿ ಕಳೆದ ಕಾಲ ಒಟ್ಟಿನ ಮೇಲೆ

ರಚಿಸಿ ಮಾರನೆಯ ದಿನ ಮಧ್ಯಾಹ್ನದ ಮೇಲೆ ಮೂರು ಗಂಟೆಯ ಹೊತ್ತಿಗೆ ತಮಗೆ ತಂದುಕೊಡಬೇಕೆಂದು ಗುರು ತಮ್ಮ ಮೂವರು ಶಿಷ್ಯರಿಗೆ ಆದೇಶವಿತ್ತರು. ಉಳಿದಿಬ್ಬರು ಶಿಷ್ಯರು ನೆಟ್ಟನೆ ರಚನಾಕಾರ್ಯವನ್ನು ಪ್ರಾರಂಭಿಸಿಯೇಬಿಟ್ಟರು; ಪದ್ಯಗಳನ್ನು ಹೊಸೆಯಲು ತಲೆ ಕೆರೆದುಕೊಳ್ಳುತ್ತ, ಬಹಳ ಪ್ರಯಾಸಪಟ್ಟು ಪ್ರಯತ್ನಿಸುತ್ತಿದ್ದರು. ಹುಡುಗಾಟಿಕೆ ಸ್ವಭಾವದ ಕೊಚ್ಚಪ್ಪನು ಕೊನೆಯ ಗಳಿಗೆಯವರೆಗೂ ಆ ಬಗೆಗೆ ತಲೆಕೆಡಿಸಿಕೊಳ್ಳಲಿಲ್ಲ. ಸುಮಾರು ಎರಡು ಗಂಟೆಯಾದಾಗ ನೆನಪಾಯಿತು ಗುರು ವಹಿಸಿದ್ದ ಕಾರ್ಯ; ಏನೋ ಗೀಚತೊಡಗಿದ ಆಗ. ಗೊತ್ತಾಗಿದ್ದ ಸಮಯಕ್ಕೆ ಸರಿಯಾಗಿ ಗುರುಗಳು ಬಂದರು; ರಾಜರಾಜವರ್ಮನು ತನ್ನ ಸಹಪಾಠಿಗಳ ಹಿಂದೆ ಹೋದನು. ಪದ್ಯ ರಚನೆಯಲ್ಲಿ ಮುಗ್ಗರಿಸಿದ್ದ ಮೊದಲ ಶಿಷ್ಯನನ್ನು ಕ್ಷಮಿಸಲಾಯಿತು; ತೃಪ್ತಿಕರವಾಗಿ ರಚನೆ ಮಾಡಿದ್ದ ಎರಡನೆಯವನಿಗೆ ಶಹಭಾಸುಗಿರಿ ಸಿಕ್ಕಿತು. ಆ ಬಳಿಕ ತಾನು ಮಾಡಿದ್ದರಲ್ಲಿ ತನಗೇ ನಂಬಿಕೆ ಇಲ್ಲದೆ ಅಂಜುತ್ತ ಅಂಜುತ್ತ ರಾಜವರ್ಮನು ಮುಂದೆ ಬಂದನು. ಅಷ್ಟಕವನ್ನು ಗಟ್ಟಿಯಾಗಿ ಓದು ಎಂದು ಗುರು ಕೇಳಿದರು; ಅವನು ತುಸು ಮನಸ್ಸಿಲ್ಲದ ಮನಸ್ಸಿನಿಂದಲೇ ಓದಿದನು. ಮತ್ತೆ ಓದು ಎಂದರು ಗುರು. ಅನಂತರ ಗುರು ತಾನೇ ರಚಿಸಿಕೊಂಡಿದ್ದ ಅಷ್ಟಕವನ್ನು ಶಿಷ್ಯನಿಗೆ ತರಹೇಳಿದರು. ಅದನ್ನು ಗಟ್ಟಿಯಾಗಿ ಓದಿದರು. ಆಮೇಲೆ ಗುರು ಶಿಷ್ಯರಿಬ್ಬರೂ ಒಬ್ಬರ ಮುಖವನ್ನು ಒಬ್ಬರು ನೋಡುತ್ತ ಮುಗುಳುನಕ್ಕರು; ಕಾರಣ, ಗುರುಶಿಷ್ಯರ ಕೃತಿಗಳ ರೂಪ ಮತ್ತು ವಸ್ತುಗಳಲ್ಲಿ ಸಾಮ್ಯವಿದ್ದಿತು. ತಮ್ಮ ಸೋದರಳಿಯನ ಸಾಧನೆಯನ್ನು ಕಂಡು ಸೋದರಮಾವನಿಗೆ ಹಿಡಿಸಲಾಗದಷ್ಟು ಸಂತೋಷ, ಹಿಗ್ಗೋ ಹಿಗ್ಗು; ಶಿಷ್ಯನೂ ಹಿಗ್ಗಿಹೋದ. ಗುರು ಇನ್ನೊಂದು ತಂತ್ರ ಹೂಡಿದರು: ಎರಡು ರಚನೆಗಳನ್ನೂ ಪ್ರತಿಮಾಡಿ, ಕೃತಿಕಾರ ಯಾರು ಎಂಬುದನ್ನು ತಿಳಿಸದೆ ಅವುಗಳನ್ನು ತಮ್ಮ ಅಣ್ಣನಿಗೆ ಕಳಿಸಿಕೊಟ್ಟರು. ವಿದ್ವಾಂಸರಾಗಿದ್ದ ಅಣ್ಣ ಕಾವ್ಯ ರಚನೆಯಲ್ಲಿ ಕೈಪಳಗಿದ್ದ ತಮ್ಮನ ರಚನೆಯನ್ನು ಸುಲಭವಾಗಿ ಗುರುತಿಸಿದರು; ಜೊತೆಗೆ, ಹೆಸರುಗೊತ್ತಿರದ ಕವಿಯನ್ನು ಮೆಚ್ಚಿಕೊಂಡು, ಆತನ ಅಷ್ಟಕವೂ ಅಷ್ಟೇ ಚೆನ್ನಾಗಿದೆ ಎಂದು ಸಾರಿ ಹೇಳಿದರು. ಬಳಿಕ ಕವಿ ಯಾರೆಂಬುದು ಹೊರಪಟ್ಟ ಮೇಲೆ, ಪ್ರತಿಯೊಬ್ಬರೂ ಈ ವಿನೋದ ಪ್ರಸಂಗದಲ್ಲಿ ನಲಿದರು. ರಾಜರಾಜವರ್ಮನಿಗೆ ಸೊಗಸಾದ ಬಹುಮಾನಗಳೂ ದೊರೆತವು. ಇದೆಲ್ಲವೂ ನಡೆದದ್ದು ಅವನಿಗೆ ಕೇವಲ ೧೫ ವರ್ಷ ವಯಸ್ಸಾಗಿದ್ದಾಗ.

ವ್ಯಾಸಂಗಕ್ಕಿಂತ ಆಟಗಳಲ್ಲಿ ಅವನಿಗೆ ಹೆಚ್ಚು ಆಸಕ್ತಿ. ಆಗಿನ ಕಾಲದಲ್ಲಿ ಜನಪ್ರಿಯವಾಗಿದ್ದ ನಮ್ಮ ದೇಶದ ಆಟಗಳಲ್ಲಿ ಅವನು ಮೇಲಾದ ಪಟುತ್ವವನ್ನು ಹೊಂದಿದ್ದರಿಂದ ಬಾಲಕರೆಲ್ಲವೂ ಅವನನ್ನು ತಮ್ಮ ನಾಯಕನೆಂದು ಒಪ್ಪಿಕೊಂಡಿದ್ದರು; ಆರೋಗ್ಯಶಾಲಿಯಾದ ಅವನು ತನ್ನ ಜೊತೆಯವರನ್ನೆಲ್ಲ ಸುಲಭವಾಗಿ ಮೀರಿಸಿಬಿಟ್ಟಿದ್ದನು. ಅವನು ತನ್ನ ವ್ಯಾಸಂಗಕ್ಕೆ ಅಷ್ಟೇನೂ ಗಮನ ಕೊಡುತ್ತಿರಲಿಲ್ಲ; ಆದರೂ ಕೂಡ ಚುರುಕಾದ ಬುದ್ಧಿಶಕ್ತಿ ಗ್ರಹಣಶಕ್ತಿಗಳನ್ನು ಉಳ್ಳವನಾದ್ದರಿಂದ ಅವನು ಉಪಾಧ್ಯಾಯನು ಕಲಿಸಿದ್ದನ್ನು ಬಲುಬೇಗನೆ ಗ್ರಹಿಸಿಕೊಂಡುಬಿಡುತ್ತಿದ್ದನು. ಆದ್ದರಿಂದ ಅವನನ್ನು ಗುರುಗಳು ಕೂಡ ಮೆಚ್ಚಿಕೊಂಡಿದ್ದರು.

ಈ ವೇಳೆಗೆ, ರಾಜರಾಜವರ್ಮನಿಗಿಂತ ೧೮ ವರ್ಷ ದೊಡ್ಡವನಾಗಿದ್ದ ಅವನ ಸೋದರಮಾವ (ಎಂದರೆ, ಸೋದರಮಾವನ ವಾವೆಯವನು) ಪ್ರತಿಭೆಯುಳ್ಳ ಲೇಖಕ ಎಂದು ಹೆಸರುವಾಸಿಯಾಗಿದ್ದನು. ಹಾಗಿದ್ದರೂ, ಆತನ ಮತ್ತು ಆಳರಸನ ನಡುವೆ ಏನೋ ಮನಸ್ತಾಪ ಉಂಟಾಗಿ, ಆತ ಗೃಹಬಂಧನಕ್ಕೆ ಒಳಗಾಗಿದ್ದನು. ಹೀಗಾಗಿ ಅವನನ್ನು ಅಲಪ್ಪಿಯಿಂದ ಹರಿಪಾಟ್‌ಗೆ ಕಳಿಸಲಾಯಿತು. ಈ ದುರದೃಷ್ಟದ ಪ್ರಕರಣದಿಂದ ಮಲಯಾಳ ಸಾಹಿತ್ಯಕ್ಕೆ ಉಪಕಾರವೇ ಆಯಿತು. ರಾಜರಾಜ ವರ್ಮನು ತನ್ನ ಸೋದರಮಾವನಿಂದ ಖುದ್ದಾಗಿ ಸಂಸ್ಕೃತದಲ್ಲೂ ಪದ್ಯರಚನೆಯಲ್ಲೂ ಪಾಠ ಹೇಳಿಸಿಕೊಳ್ಳಲು ಅವಕಾಶವಾಯಿತು. ಇದರಿಂದಾಗಿ ಸೋದರಲ್ಲಿ ಅವನ ವ್ಯಕ್ತಿತ್ವ ಸರಿಯಾದ ರೀತಿಯಲ್ಲಿ ರೂಪಗೊಳ್ಳುವುದಕ್ಕೂ ಅವನ ಮನಸ್ಸು ಪಾಂಡಿತ್ಯ ಸಂಪಾದನೆಯ ಕಡೆಗೆ ಒಲೆಯುವುದಕ್ಕೂ ಸಹಾಯವಾಯಿತು. ಇದಕ್ಕಿಂತ ಮಿಗಿಲಾಗಿ, ಕೇರಳವರ್ಮನು ಪಡೆದ ಕಹಿ ಅನುಭವವು 'ಮಯೂರ ಸಂದೇಶಂ' ಎಂಬ ಕೃತಿಯ ಸೃಷ್ಟಿಗೆ ಪ್ರೇರಕವಾಯಿತು; ರಾಜನ ಅಸಮಾಧಾನ ದಿಂದಾಗಿ ತನ್ನ ಪತ್ನಿಯಿಂದ ಅಗಲಬೇಕಾಗಿ ಬಂದು, ಆಕೆಯನ್ನು ಸಂಬೋಧಿಸಿ ಬರೆದ ಪ್ರಖ್ಯಾತವಾದ ಸಂದೇಶ ಕಾವ್ಯ ಅದು.

ಪೂರ್ತಿ ಆರು ವರ್ಷಗಳ ಕಾಲ (೧೮೭೫–೧೮೮೧) ತನ್ನ ಸೋದರಮಾವನ ಸಹಾಯ ಮತ್ತು ಮಾರ್ಗದರ್ಶನಗಳಿಂದ ರಾಜರಾಜವರ್ಮನು ಕಾವ್ಯಗಳನ್ನು ಅಭ್ಯಾಸ ಮಾಡಿ, ಕವನಗಳನ್ನು ರಚಿಸುವುದನ್ನು ಕಲಿತನು. ಪಾಠ ಪ್ರವಚನಗಳು ನಡೆದ ರೀತಿ, ರಾಜರಾಜವರ್ಮನ ಪ್ರತಿಭೆ ವಿಕಾಸಗೊಂಡ ಬಗೆ, ಒಂದು ವಿಶೇಷ ಘಟನೆಯಿಂದ ಸ್ಪಷ್ಟಪಡುತ್ತವೆ; ಇಲ್ಲಿ ನಿರೂಪಿಸಲು ಅದು ಯೋಗ್ಯವಾಗಿದೆ. ಒಂದು ದಿನ, ಗಣಪತಿಯ ಮೇಲೆ ಒಂದು ಅಷ್ಟಕವನ್ನು

ನಾದರೂ, ಅವನಲ್ಲಿ ಕೆಲವು ಕುಂದುಕೊರತೆಗಳೂ ಇದ್ದವು. ಗಣಿತವೆಂದರೆ ಅವನ ಪಾಲಿಗೆ ಭಯಂಕರ ದುಃಸ್ವಪ್ನ. ಗಣಿತದಲ್ಲಿ ಒಂದಂಕಿಯ ಅಂಕಗಳನ್ನು ಪಡೆದಾಗಲೂ ಅವನು ಸಾಮಾನ್ಯವಾಗಿ ಪಡೆಯುತ್ತಿದ್ದ ಸರಾಸರಿ ಅಂಕಗಳು ಶೇಕಡಾ ೭೦ರಷ್ಟು ಇರುತ್ತಿತ್ತು. ಹೀಗಿರುತ್ತ ಯೂರೋಪಿಯನ್ ಪ್ರಿನ್ಸಿಪಾಲರ ಶಿಫಾರಸ್ಸಿನ ಮೇಲೆ ಮುಂದಿನ ಮೇಲ್ತರಗತಿಗೆ ಅವನು ತೇರ್ಗಡೆ ಪಡೆದನು. ಅವನು ಸಂಸ್ಕೃತವನ್ನು ದ್ವಿತೀಯ ಭಾಷೆಯಾಗಿ ಆಯ್ದುಕೊಂಡಿದ್ದನು; ಆದರೆ ಮಲಯಾಳ ಭಾಷೆಯನ್ನೂ ಕಲಿಯಬೇಕಾಗಿತ್ತು. ಸಂಸ್ಕೃತದಲ್ಲಿ ಅವನ ಬಲ್ಮೆ ಎಷ್ಟಿತ್ತು ಎಂದರೆ ಸಂಸ್ಕೃತ ಮುನ್ಷಿಗಳು ಅವನನ್ನು ತಮ್ಮ ಸರಿಸಮಾನ ಎಂದು ಭಾವಿಸಿದರು. ಸಮಸ್ಯೆಗಳು ತಲೆದೋರಿದಾಗ ಅವರು ಪರಸ್ಪರ ಒಬ್ಬರು ಇನ್ನೊಬ್ಬರ ಸಲಹೆ ಕೇಳುತ್ತಿದ್ದರು. ಆಗಿನ ದಿನಗಳಲ್ಲಿ ಮಲಯಾಳ ಭಾಷೆಗೆ ಕೆಳಗಿನ ಸ್ಥಾನ ಪ್ರಾಪ್ತವಾಗಿತ್ತು; ಸಂಸ್ಕೃತ ಪ್ರೇಮಿಯಾಗಿದ್ದ ರಾಜರಾಜವರ್ಮನು ಅದು ಸರಿ ಎಂದು ಭಾವಿಸಿದನು. ಆಗ ಮಲಯಾಳ ಭಾಷೆಯ ಪಠ್ಯಪುಸ್ತಕಗಳು ಬಹಳ ಸಪ್ಪೆಯಾಗಿರುತ್ತಿದ್ದುವು; ಆದ್ದರಿಂದ ತಾಯ್ನುಡಿಯ ಬಗೆಗೆ ಈ ಭಾವನೆ ಇದ್ದುದು ಸ್ವಲ್ಪಮಟ್ಟಿಗೆ ಸಮರ್ಥನೀಯವಾಗಿ ಕಾಣುತ್ತದೆ.

ತಿಳಿವಳಿಕೆಯುಳ್ಳ ಮಹಾರಾಜನು ಪ್ರಭಾವಶಾಲಿಗಳಾದ ಹೊಸಬರಿಗೆ ಉತ್ತೇಜನ ಕೊಡಬೇಕೆಂದು ಅಪೇಕ್ಷೆಪಟ್ಟನು. ನಿದರ್ಶನಾರ್ಥವಾಗಿ, ಮಹಾರಾಜನಾದ ತಾನೇ ಗೊತ್ತುಮಾಡಿದ ವಿಷಯದ ಮೇಲೆ ಬರೆದ ಉತ್ತಮ ಪ್ರಬಂಧಕ್ಕೆ ಒಂದು ಆಕರ್ಷಕವಾದ ಬಹುಮಾನವನ್ನು ಇಟ್ಟನು; ವಿದ್ಯಾರ್ಥಿಗಳು ಎಂಟುಪುಟಗಳ ಪ್ರಬಂಧವನ್ನು ಬರೆಯಬೇಕಾಗಿದ್ದಿತು. ಪ್ರಬಂಧಗಳನ್ನು ಮೊದಲಸಲ ಮಹಾರಾಜನೇ ಸ್ವತಃ ಪರಿಶೀಲಿಸಿ, ಅನಂತರ ಅವುಗಳನ್ನು ಕೇರಳವರ್ಮನಿಗೆ ಕಳಿಸಿಕೊಟ್ಟನು. ನಮ್ಮ ತರುಣ ಕವಿಯೂ ಒಬ್ಬ ಸ್ಪರ್ಧಿಯಾಗಿದ್ದನು. ಮಹಾರಾಜ ಮತ್ತು ಕೇರಳವರ್ಮರಿಬ್ಬರೂ ರಾಜರಾಜವರ್ಮನು ಬರೆದ ಪ್ರಬಂಧ ಸರ್ವೋತ್ತಮವಾದುದೆಂಬ ತೀರ್ಮಾನಕ್ಕೆ ಬಂದರು. ಈ ತರುಣ ಲೇಖಕನ ಬಗೆಗೆ ಗಣ್ಯರಾದ ಮಹನೀಯರು ಹೆಚ್ಚುಹೆಚ್ಚಾಗಿ ಆಸಕ್ತಿಯನ್ನು ವಹಿಸುತ್ತಿದ್ದರು ಎನ್ನುವುದಕ್ಕೆ ಈ ಪ್ರಕರಣ ಇನ್ನೊಂದು ನಿದರ್ಶನ. ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮುಂದುವರಿಯುತ್ತಿದ್ದ ವೇಳೆಯಲ್ಲೇ, ಕೇರಳವರ್ಮನು ಬಿಡುವು ಮಾಡಿಕೊಂಡು ತನ್ನ ಸೋದರಳಿಯನಿಗೆ ಪ್ರೌಢಮಟ್ಟದ ಸಂಸ್ಕೃತದಲ್ಲಿ ಪಾಠ ಹೇಳುತ್ತಿದ್ದನು.

ಇನ್ನೊಂದು ಅತಿಶಯವಾದ ಸಂಗತಿ ನಡೆಯಿತು. ಅದು ಎಲತ್ತೂರ್ ರಾಮಸ್ವಾಮಿ ಶಾಸ್ತ್ರಿಗಳೆಂಬುವರು ಅರಮನೆಗೆ ಭೇಟಿ ಕೊಟ್ಟ ಸಂದರ್ಭಕ್ಕೆ ಸಂಬಂಧಪಟ್ಟದ್ದು. ಶಾಸ್ತ್ರಿಗಳು ಕೇರಳವರ್ಮನ ಗುರು. ಅವರು ತಮ್ಮ ಶಿಷ್ಯನ ವಿದ್ಯಾರ್ಥಿಗಳ ಬುದ್ಧಿಶಕ್ತಿಯನ್ನೂ ಸಾಮರ್ಥ್ಯವನ್ನೂ ಪರೀಕ್ಷಿಸಿ ನೋಡ ಬಯಸಿದರು; "ಅದ್ಯಪಿತಿಷ್ಠತಿ..." ಎಂದು ಆರಂಭವಾಗುವ "ಕುವಲಯಾನಂದ'ದ ಶ್ಲೋಕವನ್ನು ಓದಿ ಹೇಳಿ, ಅದರ ಅರ್ಥವನ್ನು ವಿವರಿಸುವಂತೆ ವಿದ್ಯಾರ್ಥಿಗಳನ್ನು ಕೇಳಿದರು. ತರುಣ ರಾಜರಾಜವರ್ಮನು ಕೆಲವು ಪಂಕ್ತಿಗಳನ್ನು ವ್ಯಾಖ್ಯಾನಿಸಿ ಅವುಗಳ ಅಂತರಾರ್ಥದ ಸ್ವಾರಸ್ಯವನ್ನು ವಿವರಿಸಿದ್ದನ್ನು ಕಂಡು ವೃದ್ಧ ವಿದ್ವಾಂಸನಿಗೆ ಸಂತೋಷವೂ ಆಶ್ಚರ್ಯವೂ ಆದುವು. ಹುಡುಗನು ತೋರಿಸಿದ ಸಾಮರ್ಥ್ಯಕ್ಕಾಗಿ ಆತನನ್ನು ಪ್ರಶಂಸಿಸಿದರು. ಹೀಗೆ ದೊರೆತ ಉತ್ತೇಜನವು ಸಹಜವಾಗಿಯೆ ತರುಣ 'ಸಹೃದಯ'ನು ಬೆಳೆಯುವುದಕ್ಕೆ ಸಹಾಯವಾಯಿತು.

ಹೀಗೆ ರಾಜರಾಜವರ್ಮನು ತನ್ನ ತಾರುಣ್ಯದಲ್ಲಿಯೆ ಸಂಸ್ಕೃತ ಭಾಷೆಯಲ್ಲಿ ಒಬ್ಬ ಕವಿ ಎನ್ನಿಸಿಕೊಂಡು, ಪದ್ಯರಚನಾಕುಶಲತೆಯಲ್ಲಿ ಅಪಾರ ಸಾಮರ್ಥ್ಯವನ್ನು ಮೆರೆದನು. ೧೮೮೦ರಲ್ಲಿ ವಿಶಾಖಂ ತಿರುನಾಳ್ ತಿರುವಾಂಕೂರು ಸಂಸ್ಥಾನದ ದೊರೆಯಾದಾಗ ಭಾಗ್ಯಚಕ್ರವು ಕೇರಳವರ್ಮನಿಗೆ ಅನುಕೂಲವಾಗುವಂತೆ ಹೊರಳಿತು. ಈ ರೀತಿ ಅನಂತಪುರಂ ಅರಮನೆಯ ನಿವಾಸಿಗಳ ಅರ್ಹತೆಗೆ ತಕ್ಕ ಪ್ರೋತ್ಸಾಹವು ಅವರಿಗೆ ದೊರೆಯಿತು. ಬಲುಬೇಗನೆ ಕೇರಳವರ್ಮನು ತನ್ನ ವಾಸಸ್ಥಳವನ್ನು ತಿರುವನಂತಪುರಕ್ಕೆ ಸ್ಥಳಾಂತರಿಸಿಕೊಂಡು, ಸ್ವತಃ ವಿದ್ವಾಂಸನೂ ಲೇಖಕನೂ ಆಗಿದ್ದ ವಿಶಾಖಂ ತಿರುನಾಳನೊಂದಿಗೆ ತನ್ನ ಸಲಿಗೆಯನ್ನು ಬೆಳಸಿಕೊಂಡನು. ಸ್ವಲ್ಪ ಕಾಲ ಕಳೆಯುವಷ್ಟರಲ್ಲಿ ತರುಣ ಕವಿಯಾದ ಎ.ಆರ್. ಕೂಡ ತಿರುವನಂತಪುರಕ್ಕೆ ಹೋಗಿ, ಅಲ್ಲಿ ತನ್ನ ವ್ಯಾಸಂಗವನ್ನು ಮುಂದುವರಿಸ ತಕ್ಕದ್ದು ಎಂಬ ಸೂಚನೆ ಬಂದಿತು. ಅದರಂತೆ ರಾಜರಾಜವರ್ಮನು ಇನ್ನಿಬ್ಬರು ವಿದ್ಯಾರ್ಥಿಗಳೊಂದಿಗೆ ತಿರುವನಂತಪುರಕ್ಕೆ ತೆರಳಿ ಅಲ್ಲಿಯ ಚಣ್ಣನಾಶ್ಶೇರಿ ಮೂಟತ್ತು ಮಠದಲ್ಲಿ ಉಳಿದುಕೊಂಡು, ಒಂದು ಪ್ರೌಢಶಾಲೆಗೆ ಸೇರಿ ಕ್ರಮವಾದ ರೀತಿಯಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದನು. ಈ ವ್ಯವಸ್ಥೆಯನ್ನು ಮಾಡಿದಾತ ಕೇರಳವರ್ಮ ಎಂದು ಹೇಳಬೇಕಾದದ್ದು ಅನಗತ್ಯವಷ್ಟೆ; ಆತ ಕುಗ್ಗದ ಉತ್ಸಾಹದಿಂದ ಸೋದರಳಿಯನಿಗೆ ಮಾರ್ಗದರ್ಶನ ಮಾಡುವುದನ್ನು ಮುಂದುವರಿಸಿದನು.

ಪ್ರೌಢಶಾಲಾ ವಿದ್ಯಾಭ್ಯಾಸವು ೧೮೮೧ರಿಂದ ತೊಡಗಿ ಮುಂದುವರಿಯಿತು. ಒಟ್ಟಿನಮೇಲೆ ರಾಜರಾಜವರ್ಮನು ಬಹಳ ಚೆನ್ನಾಗಿ ವ್ಯಾಸಂಗ ಮಾಡುತ್ತಿದ್ದ

ಬೇಗನೆ ತೀರಿಕೊಂಡುಬಿಟ್ಟನು; ಆದ್ದರಿಂದ ಕೆಲಕಾಲದ ಮೇಲೆ ರಾಜರಾಜವರ್ಮನು ಮಹಾರಾಜರ ಕಾಲೇಜಿಗೆ ಸೇರಬೇಕಾಯಿತು. ಅಂತೂ ಅವನು ೧೮೮೬ರಲ್ಲಿ ಎಫ್.ಎ. ಪರೀಕ್ಷೆಯಲ್ಲಿ ತೇರ್ಗಡೆ ಆದನು.

ಆ ಬಳಿಕ ಅವನು ಬಿ.ಎ. ತರಗತಿಗೆ ಸೇರಿದನು. ಎಂದಿನಂತೆ, ಆಟಪಾಟಗಳಲ್ಲಿ ಅವನಿಗೆ ಆಸಕ್ತಿ. ತಿರುವನಂತಪುರದಲ್ಲಿ ಆಗತಾನೆ ಜನಪ್ರಿಯವಾಗುತ್ತಿದ್ದ ಟೆನಿಸ್ ಆಟದಲ್ಲಿ ಅವನಿಗೆ ವಿಶೇಷವಾದ ಆಸಕ್ತಿ. ಈಜುವುದರಲ್ಲಿಯೂ ಅವನಿಗೆ ಬಲು ಸಂತೋಷ. ಪಠ್ಯಪುಸ್ತಕಗಳನ್ನು ಓದುವುದರಲ್ಲಿ ಕಾಲ ಕಳೆಯುವುದಕ್ಕಿಂತಲೂ ಸ್ವಾರಸ್ಯವಾದ ಸಾಹಿತ್ಯಕೃತಿಗಳನ್ನು ಓದುವುದು, ಮತ್ತು 'ಅಕ್ಷರಶ್ಲೋಕ' ಸ್ಪರ್ಧೆಗಳಲ್ಲಿ ಭಾಗವಹಿಸುವುದು, ಅವನಿಗೆ ಹೆಚ್ಚು ಪ್ರಿಯವಾಗಿದ್ದುವು; ಪದ್ಯಗಳನ್ನು ರಚಿಸುವುದರಲ್ಲಿ ನಲಿವು. ಬಿ.ಎ. ಪದವಿ ಪರೀಕ್ಷೆಯಲ್ಲಿ ಇಂಗ್ಲಿಷ್ ಮತ್ತು ಸಂಸ್ಕೃತ ಭಾಷಾ ವಿಷಯಗಳಲ್ಲಿ ಗಣ್ಯರೀತಿಯಲ್ಲಿ ಉತ್ತೀರ್ಣನಾದನು; ಆದರೆ ಐಚ್ಛಿಕ ವಿಷಯವಾಗಿ ಆಯ್ಕೆಮಾಡಿಕೊಂಡಿದ್ದ ರಸಾಯನಶಾಸ್ತ್ರದಲ್ಲಿ ಉತ್ತೀರ್ಣನಾಗಲಿಲ್ಲ. ಅನುತ್ತೀರ್ಣನಾದದ್ದು ಪ್ರಯೋಗಭಾಗದ ಪರೀಕ್ಷೆಯಲ್ಲಿ. ಆದರೆ ಖಾಸಗಿ ಅಭ್ಯರ್ಥಿಯಾಗಿ ರಸಾಯನಶಾಸ್ತ್ರದ ಮಟ್ಟಿಗೆ ಮರುಪರೀಕ್ಷೆಗೆ ಕುಳಿತು, ಆ ಪರೀಕ್ಷೆಯಲ್ಲಿ ಉತ್ತೀರ್ಣನಾದನು. ಕಾಲೇಜಿನ ಅಧ್ಯಯನ ವಿಷಯಗಳಿಗೆ ಅವನು ಕೊಡುತ್ತಿದ್ದ ಗಮನದ ಬಗೆಗೆ ಅವನಿಗೇ ತೃಪ್ತಿಸಮಾಧಾನಗಳಿರಲಿಲ್ಲ ಎಂಬುದು ಆ ದಿನಗಳಲ್ಲಿ ರಾಜರಾಜವರ್ಮನು ಬರೆದಿಟ್ಟ ದಿನಚರಿಗಳಿಂದಲೇ ವ್ಯಕ್ತಪಡುತ್ತದೆ. ಆದರೆ, ಒಂದು ವಿಷಯದಲ್ಲಿ ಅವನು ಮನಸ್ಸನ್ನು ನೆಟ್ಟದ್ದೇ ಆದರೆ, ಅದನ್ನು ಅವನು ಸುಲಭವಾಗಿ ಸ್ವಾಧೀನಪಡಿಸಿಕೊಂಡುಬಿಡುತ್ತಿದ್ದನು. ಹಾಗಿದ್ದುದರಿಂದಲೇ ಜೂನಿಯರ್ ಬಿ.ಎ. ತರಗತಿಯ ವರ್ಷಾಂತ್ಯ ಪರೀಕ್ಷೆಯಲ್ಲಿ ಅವನು ಪ್ರಥಮ ಸ್ಥಾನವನ್ನು ಪಡೆದದ್ದಲ್ಲದೆ, ಬಹುಮಾನವನ್ನೂ ಗೆದ್ದುಕೊಂಡನು. ಅಲ್ಲದೆ, ಸಂಸ್ಕೃತ ಪ್ರಶ್ನೆಪತ್ರಿಕೆಗಳಿಗೆ ಪದ್ಯರೂಪದಲ್ಲಿ ಉತ್ತರ ಬರೆದು ಪರೀಕ್ಷಕರಿಗೆ ಬೆರಗು ಹಿಡಿಸುವುದರಲ್ಲಿ ಅವನು ಖುಷಿ ಪಡುತ್ತಿದ್ದನು. ಇದೆಲ್ಲದ್ದರಿಂದ ಅವನೊಬ್ಬ ಅಸಾಧಾರಣ ವಿದ್ಯಾರ್ಥಿಯಾಗಿದ್ದನೆಂಬುದು ತೋರಿಬರುತ್ತದೆ.

ಬಿ.ಎ. ಪದವೀ ಪರೀಕ್ಷೆಯಲ್ಲಿ ಉತ್ತೀರ್ಣನಾಗದೆ ಹೋದದ್ದು ರಾಜರಾಜ ವರ್ಮನ ಮನಸ್ಸಿಗೆ ಬಲವಾದ ಆಘಾತವುಂಟುಮಾಡಿತು. ತನ್ನ ಭಾವನೆಗಳನ್ನು ವ್ಯಕ್ತಪಡಿಸಿ ಸಂಸ್ಕೃತದಲ್ಲಿ ೨೮ ಶ್ಲೋಕಗಳನ್ನು ರಚಿಸಿ ಆ ಮೂಲಕ ಸ್ವಲ್ಪ ಮನಸ್ಸಮಾಧಾನವನ್ನು ಕಂಡುಕೊಂಡನು. ಈ ಚಿಕ್ಕ ದುಃಖಗೀತದ ಹೆಸರು 'ಭಂಗ ವಿಲಾಪಂ'. ಅವನ ಸ್ವಂತ ದಿನಚರಿಯಲ್ಲಿ ಬರೆದಿಟ್ಟ ಟಿಪ್ಪಣಿಗಳು[೨] ಅವನು

## ವಿಶ್ವವಿದ್ಯಾನಿಲಯದ ವಿದ್ಯಾಭ್ಯಾಸ

ವಿನೋದಪ್ರಿಯನಾದ ರಾಜರಾಜವರ್ಮನು ತಿರುವನಂತಪುರದಲ್ಲಿ ತನ್ನ ಗೆಳೆಯರೊಂದಿಗೆ ಜೀವನದ ಸುಖಸಂತೋಷಗಳನ್ನು ಅನುಭವಿಸುತ್ತಿದ್ದನು. ಹೀಗಿದ್ದರೂ ಕೂಡ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಯಾವ ಕಷ್ಟವೂ ಇಲ್ಲದೆ ತೇರ್ಗಡೆ ಹೊಂದಿದನು. ಆದರೆ ತನ್ನ ವಿಶ್ವವಿದ್ಯಾನಿಲಯದ ವಿದ್ಯಾಭ್ಯಾಸವನ್ನು ಅವನು ಮುಂದುವರಿಸುವಷ್ಟರಲ್ಲಿ, ಒಂದು ದೊಡ್ಡ ವಿಪತ್ತು ಅದಕ್ಕೆ ತಡೆಹಾಕಿತು. ಅವನ ತಾಯಿ ತೀರಿಕೊಂಡಳು (೧೮೮೪); ಇದರಿಂದ ಅನೇಕ ವಿಧಗಳಲ್ಲಿ ಅವನಿಗೆ ಆತಂಕವಾಯಿತು. ಪ್ರೀತಿಪಾತ್ರಳಾದ ತನ್ನ ತಾಯಿಯ ಅಕಾಲಿಕ ಮರಣದಿಂದ ದುಃಖವುಂಟಾದದ್ದು ಸ್ಪಷ್ಟವಾಗಿಯೇ ಇದೆ; ಅದು ಹಾಗಿರಲಿ. ಪದ್ಧತಿಯ ಪ್ರಕಾರ ಅವನು ಒಂದು ವರ್ಷಕಾಲ ಹೊರಗಡೆ ಕಾಣಿಸಿಕೊಳ್ಳಲು ಕೆಲವು ವಿಧಿನಿಷೇಧಗಳು ನಿರ್ಬಂಧಹಾಕಿದ್ದರಿಂದ ತನ್ನ ಕ್ರಮವಾದ ವಿದ್ಯಾಭ್ಯಾಸವನ್ನು ನಿಲ್ಲಿಸಬೇಕಾದದ್ದು ಅನಿವಾರ್ಯವಾಯಿತು. ಪೂರ್ತಿ ವರ್ಷಕಾಲ ಅವನು ಕ್ಷೌರ ಮಾಡಿಸಿಕೊಳ್ಳುವ ಹಾಗಿರಲಿಲ್ಲ; ಮನೆಯಲ್ಲಿ ಕೆಲವು ಕರ್ಮಗಳನ್ನು ಆಚರಿಸಬೇಕಾಗಿತ್ತು. ಒಂದು ವರ್ಷಪೂರ್ತಿ ವ್ಯಾಸಂಗ ಇಲ್ಲದೆ ಕಾಲವನ್ನು ವ್ಯರ್ಥ ಮಾಡುವುದು ಅವನಿಗೆ ಇಷ್ಟವಾಗಲಿಲ್ಲ; ತನ್ನ ಈ ಪರಿಸ್ಥಿತಿಯನ್ನು ಕೇರಳವರ್ಮನಿಗೂ ಇತರರಿಗೂ ನಿವೇದಿಸಿಕೊಂಡನು. ರೂಢಮೂಲವಾದ ಸಂಪ್ರದಾಯಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವಂತೆ ಅವನಿಗೆ ಸಲಹೆ ಮಾಡಲು ಯಾರಿಗೂ ಧೈರ್ಯಬರಲಿಲ್ಲ. ಕೊನೆಗೆ ಈ ತೊಡರು ಸ್ವಯಂ ಮಹಾರಾಜನ ಗಮನಕ್ಕೇ ಹೋಯಿತು; ಆತನು ಸೂಚಿಸಿದ ಪರಿಹಾರವನ್ನು ಎಲ್ಲರೂ ಕೃತಜ್ಞತಾಭಾವದಿಂದ ಸ್ವಾಗತಿಸಿದರು, ನೆಮ್ಮದಿಯನ್ನು ಪಡೆದರು. ಮಹಾರಾಜನ ಪುತ್ರ ಶ್ರೀ ನಾರಾಯಣನ್ ತಂಪಿಯೇ ಮದರಾಸು ವಿಶ್ವವಿದ್ಯಾನಿಲಯದ ಎಫ್.ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿತ್ತು; ಅವನಿಗಾಗಿ ಅರಮನೆಯಲ್ಲಿ ಖಾಸಗಿ ಶಿಕ್ಷಣ ಕೊಡಿಸುವ ಏರ್ಪಾಡಾಯಿತು. ತಂಪಿಗೆ ಕೊಡುವ ಶಿಕ್ಷಣವನ್ನೆ ಕೊಚ್ಚಪ್ಪನಿಗೂ ಕೊಡತಕ್ಕದ್ದೆಂದು ರಾಜಾಜ್ಞೆಯಾಯಿತು. ಇದು ನಿಜವಾಗಿ ಸ್ವಾಗತಾರ್ಹವಾದ ಪರಿಹಾರವಾಗಿತ್ತು; ದೇಶದಲ್ಲಿ ಲಭ್ಯವಾದ ಉತ್ತಮ ಮಟ್ಟದ ಶಿಕ್ಷಣವು ಉಚಿತವಾಗಿ ದೊರಕುವಂತಾದದ್ದು ಕೊಚ್ಚಪ್ಪನ ಪಾಲಿಗೆ ವರವಾಯಿತು. ಪರೀಕ್ಷೆಗೆ ಕುಳಿತುಕೊಳ್ಳಲು ಮದರಾಸು ವಿಶ್ವವಿದ್ಯಾನಿಲಯದಿಂದ ವಿಶೇಷ ಅನುಮತಿಯ ಅಗತ್ಯವಿದ್ದಿತು; ಈ ವಿಷಯದಲ್ಲಿ ಸಮಸ್ಥಾನದ ದೊರೆಯೇ ಆಸಕ್ತಿ ವಹಿಸಿದ್ದರಿಂದ ಅದೊಂದು ಸಮಸ್ಯೆಯಾಗಿರಲಿಲ್ಲ. ಆದರೆ ದುರ್ದೈವದಿಂದ ವಿಶಾಖಂ ತಿರುನಾಳ್ ಬಹಳ

ರಾಜರಾಜವರ್ಮನ ವಯಸ್ಸು ಆಗ ೨೬; ಶಾರೀರಿಕವಾಗಿ, ಮಾನಸಿಕವಾಗಿ ಒಳ್ಳೆಯ ಪ್ರೌಢಾವಸ್ಥೆಯಲ್ಲಿದ್ದ ಅವನು ವಿದ್ವಾಂಸನಾಗಿದ್ದನು, ಉದಯೋನ್ಮುಖ ಕವಿಯಾಗಿದ್ದನು. ಅವನು ಇನ್ನೂ ರಸಾಯನಶಾಸ್ತ್ರದ ವಿಷಯದಲ್ಲಿ ತೇರ್ಗಡೆ ಯಾಗಬೇಕಾಗಿತ್ತು; ಮರುಪ್ರಯತ್ನದಲ್ಲಿ ಹೆಚ್ಚು ಕಷ್ಟವಿಲ್ಲದೆ ತೇರ್ಗಡೆಯೂ ಆದನು. ಹೀಗೆ, ನಮ್ಮ ತರುಣ ಚರಿತ್ರನಾಯಕನು, ಮಲಯಾಳೀ ಕ್ಷತ್ರಿಯ ಜನಾಂಗದ ಪ್ರಥಮ ಪದವೀಧರನಾದನು: ಈ ಜನಾಂಗಕ್ಕೆ ತನ್ನ ವಿದ್ವಾಂಸರು ಪಾರಂಗತರು ಎಂದರೆ ಹೆಮ್ಮೆಯೆ, ಅದರಲ್ಲಿ ಸಂದೇಹವಿರಲಿಲ್ಲ; ಆದರೆ ಈ ಜನಕ್ಕೆ ವ್ಯವಸ್ಥಿತ ವಿದ್ಯಾಸಂಸ್ಥೆಗಳಲ್ಲಿ ಕಲಿಯುವುದೆಂದರೆ ಆಗದು; ಸಾಧಾರಣವಾಗಿ ಮನೆಯಲ್ಲೇ ಖಾಸಗಿ ಶಿಕ್ಷಣಕ್ಕೆ ಏರ್ಪಾಡು ಮಾಡುತ್ತಿದ್ದರು. ಹೀಗಿರುತ್ತ ಈ ವ್ಯವಸ್ಥೆಯಲ್ಲಿಯ ವಿದ್ಯಾಭ್ಯಾಸದ ಮಟ್ಟಗಳೇ ಬೇರೆಯಾಗಿರುತ್ತಿದ್ದುವು. ಆದ್ದರಿಂದ ರಾಜರಾಜವರ್ಮನು ಮದರಾಸು ವಿಶ್ವವಿದ್ಯಾನಿಲಯದ ಪದವೀಧರನಾದಾಗ[3] ಆ ಜನಾಂಗದವರು ಮನಃಪೂರ್ವಕವಾಗಿ ಹರ್ಷಗೊಂಡರು, ಆ ಸಂದರ್ಭದಲ್ಲಿ ಅವನಿಗೆ ಅನೇಕ ಪ್ರಶಸ್ತಿಗಳೂ ಬಹುಮಾನಗಳೂ ದೊರೆತವು; ಆದರೆ ಅವುಗಳಲ್ಲಿ ಅತ್ಯಮೂಲ್ಯ ವಾದದ್ದೆಂದರೆ ಶ್ರೀಮೂಲಂ ತಿರುನಾಳ್ ಮಹಾರಾಜರು ನೀಡಿದ ರತ್ನಖಚಿತವಾದ ಚಿನ್ನದ ಕಂಕಣ.

## ಪ್ರಾರಂಭವಾದ ರಚನೆಗಳು

ಸಂಸ್ಕೃತದಲ್ಲಿ ಪದ್ಯರಚನೆ ಮಾಡಲು ಗ್ರಂಥಕರ್ತನು ಪಟ್ಟ ಮೊದಮೊದಲಿನ ಕೆಲವು ಪ್ರಯತ್ನಗಳ ಬಗೆಗೆ ಈಗಾಗಲೇ ನಾವು ಉಲ್ಲೇಖಿಸಿದ್ದೇವೆ. ಮದರಾಸಿನಲ್ಲಿ ಎಂ.ಎ. ಪರೀಕ್ಷೆಗೆ ಕುಳಿತು ಅಲ್ಲಿಂದ ಹಿಂದಿರುಗಿದ ಕೂಡಲೆ ಅವನು 'ವಿಮಾನಾಷ್ಟಕ'ವನ್ನು ರಚಿಸಿದನು. ಮದರಾಸಿನಲ್ಲಿ ಒಬ್ಬ ಯೂರೋಪಿಯನ್ನನು ಅನಿಲ ತುಂಬಿದ ವಿಮಾನದಲ್ಲಿ ಆಕಾಶಕ್ಕೆ ಹಾರಲು ಮಾಡಿದ ಪ್ರಯೋಗವನ್ನು ಕುರಿತದ್ದು ಈ ಅಷ್ಟಕ. ಪ್ರೇಕ್ಷಕರ ಉತ್ಕಂಠತೆಯನ್ನು ಇದರಲ್ಲಿ ಚೆನ್ನಾಗಿ ವರ್ಣಿಸಲಾಗಿದೆ. 'ಪಿತೃಪ್ರಲಾಪಂ' ಎಂಬುದು, ಅದರ ಹೆಸರೇ ಸೂಚಿಸುವಂತೆ, ಒಬ್ಬ ತಂದೆಯ ವಿಲಾಪವನ್ನು ಕುರಿತದ್ದಾಗಿದೆ. ರಾಜರಾಜವರ್ಮನ ಎರಡನೆಯ ಮಗಳು ತೀರಿಕೊಂಡಾಗ ರಚಿತವಾದ ಇದು ಸಂಸ್ಕೃತದ ಒಂದು ಕರುಣಾಜನಕವಾದ ಚರಮಗೀತೆ. ಇದೇ ಕಾಲದಲ್ಲಿ ರಚಿತವಾದ ಇನ್ನೂ ಕೆಲವು ಸಣ್ಣ ಸಣ್ಣ ಕವಿತೆಗಳಿವೆ;

---

೩. ಆಗಿನ ಕಾಲದಲ್ಲಿ ದಕ್ಷಿಣ ಭಾರತಕ್ಕೆಲ್ಲ ಒಂದೇ ವಿಶ್ವವಿದ್ಯಾನಿಲಯ.

ತನ್ನ ವಿದ್ಯಾವ್ಯಾಸಂಗವನ್ನು ಏಕಾಗ್ರಚಿತ್ತದಿಂದ ನಡಸಲು ಹೇಗೆ ಅಸಮರ್ಥನಾಗಿದ್ದನು, ಅದರಿಂದಾಗಿ ಹೇಗೆ ನಿರಾಶೆಗೊಂಡಿದ್ದನು ಎಂಬುದನ್ನು ತೋರಿಸುತ್ತವೆ. ರಸಾಯನ ಶಾಸ್ತ್ರದ ಪ್ರಯೋಗಭಾಗದ ಪರೀಕ್ಷೆಗೆ ಕುಳಿತುಕೊಳ್ಳಲು ಅವನು ಮದರಾಸಿಗೆ ಮೊತ್ತಮೊದಲ ಸಲ ಪ್ರಯಾಣ ಮಾಡಿದನಷ್ಟೆ. ಆ ಸಂಬಂಧದ ಕ್ಲೇಶಕರ ಪ್ರಯಾಣವನ್ನು ವರ್ಣಿಸುವ ಸ್ವಾರಸ್ಯವಾದ ಉಲ್ಲೇಖಗಳು ಅವನ ದಿನಚರಿಯಲ್ಲಿವೆ. ತಿರುವಾಂಕೂರಿನ ಮಧ್ಯಭಾಗದಿಂದ ಮದರಾಸನ್ನು ತಲುಪಲು ವಿದ್ಯಾರ್ಥಿಗಳ ಸಣ್ಣ ತಂಡಕ್ಕೆ ಪೂರ್ತಿಯಾಗಿ ಒಂದು ವಾರವೇ ಹಿಡಿಯಿತು. ಅಂದಿನ ದಿನಗಳಲ್ಲಿ ಅವರಿಗೆ ಶೋರನೂರಿನಿಂದ ಮಾತ್ರ ರೈಲಿನ ಸೌಕರ್ಯ ಲಭ್ಯವಾಗಿತ್ತು. ಈ ಸ್ಥಲಕ್ಕೆ ಹೋಗಬೇಕಾದಲ್ಲಿ ಪ್ರಯಾಣದ ಅರ್ಧಭಾಗವನ್ನು ನಾಡದೋಣಿಯ ಮೂಲಕವೂ ಉಳಿರ್ಧವನ್ನು ಎತ್ತಿನಗಾಡಿಯಲ್ಲೂ ಮಾಡಬೇಕಾಗಿದ್ದಿತು. ಹೀಗಿರುತ್ತ, ಆಗಿನ ದಿನಗಳಲ್ಲಿ ಸರ್ಕಾರದ ಮನ್ನಣೆ ಪಡೆದ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವಿದ್ಯಾಭ್ಯಾಸವನ್ನು ಮಾಡಬೇಕಾಗಿದ್ದರೆ ಯಾವ ಯಾವುದೋ ದೂರಸ್ಥಳಗಳಲ್ಲಿದ್ದ ವಿದ್ಯಾರ್ಥಿಗಳು ಎಷ್ಟು ಶ್ರಮಪಡಬೇಕಾಗಿತ್ತು ಎಂಬುದನ್ನು ನಾವು ಸುಲಭವಾಗಿ ಕಲ್ಪಿಸಿಕೊಳ್ಳಬಹುದು.

**ಮದುವೆ**

ರಾಜರಾಜವರ್ಮ ಒಳ್ಳೆಯ ಯೋಗ್ಯನಾಗಿದ್ದ ಬ್ರಹ್ಮಚಾರಿ. ಎಂದಮೇಲೆ ಕೇಳಬೇಕೆ, ಆಳುವ ದೊರೆಯಾಗಿದ್ದ ವಿಶಾಖಂ ತಿರುನಾಳ್ ಕೂಡ ತನ್ನ ಮಗಳಿಗೋಸುಗ ಅವನ ಮೇಲೆ ಕಣ್ಣಿಟ್ಟಿದ್ದನು. ಆದರೆ ದೊರೆಯ ಅಕಾಲಮರಣ ಹಾಗೂ ಇತರ ಕೆಲವು ಸಂದರ್ಭಗಳ ಪರಿಣಾಮವಾಗಿ ಅವನ ಅದೃಷ್ಟದ ಸ್ವರೂಪ ಬೇರೆಯ ತೆರನಾಯಿತು. ಒಳ್ಳೆಯ ಸರಿಯಾದ ಗಳಿಗೆಯಲ್ಲಿ ಹಿರಿಯ ಕೋಯಿತಂಪುರಾನ್ ಈ ವಿಚಾರಕ್ಕೆ ತಾನೇ ಮೊದಲು ಗಮನಕೊಟ್ಟು, ಸರಿಯಾದ ವ್ಯವಸ್ಥೆ ಮಾಡಿದನು; ಅದರ ಫಲವಾಗಿ, ಅವನ ಮೂರನೆಯ ಮಗಳು 'ಸ್ವಾತಿ ತಿರುನಾಳ್ ಮಹಾಪ್ರಭಾ ತಂಪುರಾಟ್ಟಿ'ಯನ್ನು ರಾಜರಾಜವರ್ಮನಿಗೆ ಕೊಟ್ಟು ೧೮೮೦ರಲ್ಲಿ ಸಂಪ್ರದಾಯಾನುಸಾರವಾಗಿ ಮದುವೆ ನಡೆಯಿತು. ಮದುವೆ ಬಹಳ ಸುಖಕರವಾಗಿ ಪರಿಣಮಿಸಿತು; ತಂಪುರಾಟ್ಟಿ ತನ್ನ ಪತಿಯಲ್ಲಿ ಗಾಢವಾದ ಪ್ರೀತಿ, ಗೌರವಗಳನ್ನು ಇಟ್ಟಿದ್ದಳು.

---

೨. ಉಪಯೋಗವಾದದ್ದು ಏನನ್ನೂ ಈ ದಿನ ನಾನು ಮಾಡಲಾಗಲಿಲ್ಲ. ನನ್ನ ಸೋಮಾರಿತನದ ಬಗ್ಗೆ ನನಗೇ ನಾಚಿಕೆಯಾಯಿತು. ಸೋಮಾರಿಗಳು ಎಂದಿಗೂ ಜ್ಞಾನಾರ್ಜನೆ ಮಾಡುವುದಿಲ್ಲ.

# ಅಧ್ಯಾಯ ಮೂರು

## ಶಿಕ್ಷಕ ಹಾಗೂ ಸಂಶೋಧಕ

ರಾಜರಾಜವರ್ಮನು ಹೊಂದಿದ್ದ ಮೇಲುದರ್ಜೆಯ ಸಂಬಂಧಗಳು ಅವನನ್ನು ಶ್ರೀಮಂತನಾಗುವಂತಹ ಸ್ಥಿತಿಯಲ್ಲಿ ಇರಿಸಲಿಲ್ಲ. ತನ್ನ ವಿದ್ಯಾರ್ಥಿ ದಿನಗಳಲ್ಲಿ ತನ್ನ ಕುಟುಂಬದಿಂದ ಪಡೆಯುತ್ತಿದ್ದ ಸಹಾಯಧನವು ಅವನ ನ್ಯಾಯವಾದ ಖರ್ಚುವೆಚ್ಚಗಳಿಗೇ ಸಾಲುತ್ತಿರಲಿಲ್ಲ. ಸೋದರಮಾವ ಕೇರಳ ವರ್ಮನೇನೋ ವಿಶ್ವಾಸದಿಂದ ಅವನಿಗೆ ಆಗಾಗ್ಗೆ ಸಹಾಯ ಮಾಡುತ್ತಿದ್ದನು. ಮಹಾರಾಜನು ಕೂಡ ಅವನಿಗೆ ಉದಾರವಾದ ಸಹಾಯವನ್ನು ನೀಡಿದ್ದನು. ಆದರೆ ರಾಜರಾಜವರ್ಮನು ಸ್ವತಂತ್ರವಾಗಿ ಇರಬಯಸಿದನು. ಆದ್ದರಿಂದ ಪದವೀ ಪರೀಕ್ಷೆಯನ್ನು ಮುಗಿಸಿದ ಮೇಲೆ ಅವನು ಸರ್ಕಾರದ ಸೇವಾವೃತ್ತಿಗೆ ಸೇರಬಯಸಿದನು. ಆ ದಿನಗಳಲ್ಲಿ ಕ್ಷತ್ರಿಯ ಕುಲದವರು ಸರ್ಕಾರದ ನೌಕರಿಗೆ ಸೇರುವುದು ಸಂಪ್ರದಾಯಕ್ಕೆ ವಿರುದ್ಧವೆನಿಸಿತ್ತು. ಹೀಗಿರುತ್ತ ರಾಜರಾಜವರ್ಮನು ಸರ್ಕಾರಿ ನೌಕರಿಯನ್ನು ಹುಡುಕುತ್ತಿದ್ದ ವಿಚಾರ ತಿಳಿದುಬಂದಾಗ ಸಂಪ್ರದಾಯ ಶರಣರು ಹುಬ್ಬೇರಿಸಿದರು. ಆದರೆ ಈ ಅರ್ಥಹೀನ ಪೂರ್ವಗ್ರಹಿಕೆಯ ವಿರೋಧಕ್ಕೆ ರಾಜರಾಜವರ್ಮನು ತಲೆಕೆಡಿಸಿಕೊಳ್ಳಲಿಲ್ಲ.

ಅದೇ ಸಮಯದಲ್ಲಿ ಸಂಸ್ಥಾನದ ಸರ್ಕಾರವು ತಿರುವನಂತಪುರದಲ್ಲಿ ಒಂದು ಸಂಸ್ಕೃತಪಾಠಶಾಲೆಯನ್ನು ಪ್ರಾರಂಭಿಸಲು ನಿರ್ಧರಿಸಿತು. ಈ ಸಂಸ್ಥೆಯ ಉತ್ತಮ ಭವಿಷ್ಯಕ್ಕೆ ಯೋಗ್ಯವಾದ ಮಾರ್ಗದರ್ಶನ ನೀಡಲು ರಾಜರಾವರ್ಮನನ್ನು ಆಯ್ಕೆ ಮಾಡಬೇಕಾದದ್ದು ಸುಸ್ಪಷ್ಟವಾಗಿದ್ದರೂ ಅವನ ಕಿರಿಯ ವಯಸ್ಸು ಒಂದು ಕೊರತೆ ಎಂಬುದನ್ನು ಎತ್ತಿ ತೋರಿಸಲಾಯಿತು. ಆದರೆ ಕಡೆಗೆ ಆತನನ್ನೇ ಪಾಠಶಾಲೆಯ ಮುಖ್ಯಸ್ಥನನ್ನಾಗಿ ನೇಮಿಸಲಾಯಿತು (೧೮೯೬), ಒಂದು ಗೊತ್ತಾದ ವಿಷಯ ಸೂಚಿಕೆಯಾಗಲಿ ವೇಳಾಪಟ್ಟಿಯಾಗಲಿ ವಿದ್ಯಾವಿಭಾಗಗಳ ರೂಪರೇಖೆಯಾಗಲಿ ಯಾವುದೂ ಇರಲಿಲ್ಲ. ರಾಜರಾಜವರ್ಮನು ಇವೆಲ್ಲವನ್ನೂ ಯೋಚಿಸಿ, ಸಂಸ್ಕೃತ ಪಾಠಶಾಲೆಯ ಸ್ಥಾನಮಾನವನ್ನು ಮೇಲಕ್ಕೇರಿಸಿದನು. ಬ್ರಾಹ್ಮಣೇತರರಿಗೆ ಸಂಸ್ಕೃತವನ್ನು ಕಲಿಸುವ ವಿಷಯದಲ್ಲಿ ವಿಶೇಷವಾಗಿ

ಕೆಲವು ವೇಳೆ ಸ್ನೇಹಿತರ ಸೂಚನೆಗಳಿಗೆ ಅನುಗುಣವಾಗಿ ಇನ್ನು ಕೆಲವು ವೇಳೆ ಕೆಲವು ನಿಯತಕಾಲಿಕ ಪತ್ರಿಕೆಗಳಿಗಾಗಿ ಬರೆದವು ಅವು. 'ದೇವೀಮಂಗಳಂ', 'ಸರಸ್ವತೀಸ್ತವಂ', 'ರಾಗಮುದ್ರಾಸಪ್ತಕಂ', 'ಶ್ರೀ ಪದ್ಮನಾಭ ಪಂಚಕಂ' ಮತ್ತು 'ದೇವೀದಂಡಕಂ', ಇವು ಅಂಥವಲ್ಲಿ ಕೆಲವು. 'ಗೈರ್ವಾಣೀವಿಜಯಂ' ಎಂಬ ಏಕಾಂಕ ನಾಟಕ ಇನ್ನೊಂದು; ಇದರಲ್ಲಿ ಇಂಗ್ಲಿಷ್ ಭಾಷೆಗೂ ಸಂಸ್ಕೃತಕ್ಕೂ ಇರುವ ತಾರತಮ್ಯವನ್ನು ಹೇಳಿ, ಸಂಸ್ಕೃತದ ಮಹಿಮೆಯನ್ನು ಎತ್ತಿಹೇಳಿದೆ. ಷೇಕ್ಸ್‌ಪಿಯರ್ ಕವಿಯ 'ಒಥೆಲೊ' ನಾಟಕದ ಗದ್ಯ ರೂಪಾಂತರದ ಹೆಸರು 'ಉದ್ದಾಲಚರಿತಂ ಗದ್ಯಂ.'[೪] ವಿಶೇಷವಾಗಿ ಗಮನಿಸಬೇಕಾದ ಸಂಗತಿ ಎಂದರೆ ಈ ಎಲ್ಲ ಕೃತಿಗಳೂ ಸಂಸ್ಕೃತದಲ್ಲಿರುವುದು. ಈ ಮಹಾ ಸಾಹಿತಿ ತನ್ನ ಲಕ್ಷ್ಯವನ್ನು ತನ್ನ ಸ್ವಂತ ತಾಯ್ನುಡಿಯ ಕಡೆಗೆ ಹರಿಸಲು ಇನ್ನು ಕೆಲವು ಕಾಲ ಕಳೆಯ ಬೇಕಾಯಿತು. ಅವನ ಜೀವನದ ಗುರಿ ತನ್ನ ತಾಯ್ನುಡಿಯಾದ ಮಲಯಾಳಂ ಭಾಷೆಯ ಅಭಿವೃದ್ಧಿಯೆ ಆಗಿತ್ತು ಎಂಬುದು ೧೮೯೪ರ ಅವನ ದಿನಚರಿ ಪುಸ್ತಕದಿಂದ ಗೊತ್ತಾಗುತ್ತದೆ.

ಕೇರಳವರ್ಮನ ಸಲಹೆಯಂತೆ, 'ಮಲಯಾಳ ಮನೋರಮಾ', 'ಬ್ರಹ್ಮವಿದ್ಯಾ', 'ವಿಜ್ಞಾನ ಚಿಂತಾಮಣಿ', 'ವಿದ್ಯಾವಿನೋದಿನಿ' ಮುಂತಾದ ಕೆಲವು ನಿಯತಕಾಲಿಕಗಳಿಗೆ ಅವನು ಲೇಖನಗಳನ್ನು ಬರೆದು ಕಳಿಸತೊಡಗಿದನು. ಅವನು ಸಂಸ್ಕೃತದ ಮತ್ತು ಮಲಯಾಳಗಳಲ್ಲಿ ಅಲ್ಲದೆ ಆಗಾಗ್ಗೆ ಇಂಗ್ಲಿಷಿನಲ್ಲೂ ಬರೆಯುತ್ತಿದ್ದನು.

* * * *

---

೪. ಇದರ ಬಗ್ಗೆ ಹೆಚ್ಚಿನ ವಿವರಗಳಿಗಾಗಿ ನಾಲ್ಕನೆಯ ಅಧ್ಯಾಯವನ್ನು ನೋಡಿ.

ಇಟ್ಟುಕೊಳ್ಳುವಂತೆ ವಿಶ್ವವಿದ್ಯಾನಿಲಯಕ್ಕೆ ಸಲಹೆ ಮಾಡಿದರು. ಗ್ರೀಕ್ ಭಾಷೆಯಿಂದ ಸಂಸ್ಕೃತ ತೆಗೆದುಕೊಂಡಿರುವ ೧೨ ಶಬ್ದಗಳನ್ನು ತಿಳಿಸಬೇಕೆಂಬುದು, ಕೇಳಿದ ಒಂದು ಪ್ರಶ್ನೆ. ೧೨ಕ್ಕೆ ಬದಲಾಗಿ ೩೦ ಶಬ್ದಗಳನ್ನು ವಿದ್ಯಾರ್ಥಿ ತಿಳಿಸಿದ್ದನು; ಇದನ್ನು ನೋಡಿ ಪರೀಕ್ಷಕರು ಬೆರಗಾಗಿ ಹೋಗಿದ್ದರು. ಮಿಲ್ಟನ್ ಕವಿಯ ಕೆಲವು ಕವಿತಾಭಾಗಗಳ ಭಾಷಾಂತರದ ವಿಷಯದಲ್ಲಿ, ಅಭ್ಯರ್ಥಿ ಭಾಷಾಂತರವನ್ನು ಉತ್ಕೃಷ್ಟವಾದ ಪದ್ಯರೂಪದಲ್ಲಿ ಒದಗಿಸಿದ್ದನು. ಸಂಸ್ಕೃತ ಭಾಷೆಯಲ್ಲಿ ಪರಿಣತಿಗಾಗಿ 'ರಾಸ್' (Ross) ಚಿನ್ನದ ಪದಕವನ್ನೂ 'ಮುನಿಸ್ವಾಮಿ ಚೆಟ್ಟಿ ಪದಕ'ವನ್ನು ಗೆದ್ದುಕೊಂಡನು.

**ಸಂಸ್ಕೃತ ಮಹಾಪಾಠಶಾಲೆ (ಕಾಲೇಜು)**

೧೮೯೪ರಲ್ಲಿ ರಾಜವರ್ಮನನ್ನು ಸಂಸ್ಕೃತ ಮಹಾಪಾಠಶಾಲೆಯ (The Sanskrit College) ಮುಖ್ಯಸ್ಥನನ್ನಾಗಿ ನೇಮಿಸಲಾಯಿತು. ಅಲ್ಲಿದ್ದಾಗ ಕಾಲೇಜಿನ ಅಭಿವೃದ್ಧಿಗೂ ಪಠ್ಯವಿಷಯಗಳನ್ನು ಉತ್ತಮಪಡಿಸುವುದಕ್ಕೂ ಆತ ತನ್ನ ಗಮನವನ್ನು ಹರಿಸಿದನು. ಈ ಸಂಬಂಧದಲ್ಲಿ ಆತನು ಸರ್ಕಾರಕ್ಕೆ ಅನೇಕ ಸಲಹೆ ಸೂಚನೆಗಳನ್ನು ಶಿಫಾರಸು ಮಾಡಿದನು; ಅವುಗಳಲ್ಲಿ ಕೆಲವಕ್ಕೆ ಬಹಳ ಕಾಲವಾದ ಮೇಲೆ ಸರ್ಕಾರ ಅನುಮೋದನೆಯನ್ನು ನೀಡಿತು. ಪಾಠಕ್ರಮದಲ್ಲಿ ಸಾಹಿತ್ಯ, ಆಯುರ್ವೇದ, ಜ್ಯೋತಿಷ್ಯಶಾಸ್ತ್ರಗಳನ್ನು ಅಳವಡಿಸಲು ಆತ ಅಪೇಕ್ಷೆಪಟ್ಟನು; ಆತನ ಅಭಿಪ್ರಾಯದ ಪ್ರಕಾರ, ರಾಷ್ಟ್ರದ ಕಲೆ, ಸಾಹಿತ್ಯ ಮತ್ತು ವಿಜ್ಞಾನ ವಿಷಯಗಳೆಲ್ಲಕ್ಕೂ ಪ್ರಾಮುಖ್ಯ ಸಲ್ಲಬೇಕು. ವಿಷಯ ಸೂಚಿಯಲ್ಲಿ ಭೂಗೋಳ, ಇತಿಹಾಸ, ಬೀಜಗಣಿತ ಮತ್ತು ತ್ರಿಕೋನಮಿತಿಗಳನ್ನು ಆತ ಅಳವಡಿಸಿದನು. ಆತನು ಬೀಜಗಣಿತ ಮತ್ತು ತ್ರಿಕೋನ ಮಿತಿಗಳ ಪಾಠಗಳನ್ನು ತಾನೇ ಮಾಡುತ್ತಿದ್ದನಲ್ಲದೆ ಪಠ್ಯಪುಸ್ತಕಗಳನ್ನು ಸಂಸ್ಕೃತಕ್ಕೆ ಭಾಷಾಂತರ ಮಾಡಿದನು. ಅಂದಿನ ದಿನಗಳಲ್ಲಿ ಯೂರೋಪಿಯನ್ ಪ್ರಾಧ್ಯಾಪಕರ ಮತ್ತು ಅವರು ಹಾಕಿದ್ದ ಗೆರೆಯ ಮೇಲೆಯೇ ನಡೆಯುತ್ತಿದ್ದಂಥ ಇತರ ಜನರ ಅಭಿಪ್ರಾಯಗಳ ಮೇರೆಗೆ ಮಹತ್ವದ ನಿರ್ಣಯಗಳನ್ನು ಕೈಗೊಳ್ಳುವ ಸಂಸ್ಥೆಗಳಲ್ಲಿ ಅವರು ಪ್ರಾಬಲ್ಯ ಹೊಂದಿದ್ದರು. ಸುಮಾರು ೨೫ ವರ್ಷಗಳಷ್ಟು ಕಾಲವೇ ಹಿಡಿದರೂ ಕೂಡ ಈ ಮಹಾವಿದ್ವಾಂಸನ ಸಲಹೆ ಸೂಚನೆಗಳ ಶಿಫಾರಸ್ಸನ್ನು ಕ್ರಮಕ್ರಮವಾಗಿ ಸ್ವೀಕರಿಸಲಾಯಿತು ಎಂಬುದನ್ನು ಇತಿಹಾಸವು ತೆರೆದು ತೋರಿಸಿದೆ.

ಒಂದು ಕಡೆ 'ಗೈರ್ವಾಣೀವಿಜಯ', ಇನ್ನೊಂದು ಕಡೆ 'ಉದ್ದಾಲಚರಿತಂ'

ಈ ಪಾಠಶಾಲೆ ಕಾರಣಭೂತವಾಗಿದ್ದಿತು.

ಈ ಹೊಸ ಉದ್ಯೋಗದಿಂದಾಗಿ ತಿರುವನಂತಪುರದಲ್ಲಿಯೆ ಖಾಯಮ್ಮಾಗಿ ವಾಸಮಾಡಬೇಕಾದುದು ಎ.ಆರ್.ಗೆ ಅಗತ್ಯವಾಯಿತು. ನಾರಾಯಣ ಶಾಸ್ತ್ರಿಗಳು ಮತ್ತು ಗಣಪತಿ ಶಾಸ್ತ್ರಿಗಳು ಎಂಬ ಇಬ್ಬರು ಪ್ರಸಿದ್ಧ ವಿದ್ವಾಂಸರ ಸಹಾಯವನ್ನು ಆತ ಶಾಲೆಗೆ ಪಡೆದುಕೊಂಡನು. ಕೇರಳವರ್ಮನ ಸಲಹೆಯಂತೆ ಸಂಸ್ಕೃತ ಎಂ.ಎ. ಪದವಿ ಪರೀಕ್ಷೆಗೆ ಕುಳಿತುಕೊಳ್ಳಲು ರಾಜರಾಜವರ್ಮನು ಒಬ್ಬ ಖಾಸಗಿ ಅಭ್ಯರ್ಥಿಯಾಗಿ ತನ್ನ ಹೆಸರನ್ನು ಆಗಲೇ ದಾಖಲುಮಾಡಿಸಿಕೊಂಡಿದ್ದನು. ಆದರೆ ಈ ಮೊದಲೆ ಕೈಕೊಂಡ ಕಾರ್ಯಗಳಿಂದಾಗಿ ಖಾಸಗಿ ವ್ಯಾಸಂಗವು ತೃಪ್ತಿಕರವಾಗಿ ಮುಂದುವರಿಯಲಿಲ್ಲ. ಅಲ್ಲದೆ, 'ನಲಿವಿನತ್ತ ನೂಕಿ ದಿನದಿನವೂ ದುಡಿದು ಬದುಕಲು' (Shun delight and live laborious days) ಅವನಿಗೆ ಇಷ್ಟವಿರಲಿಲ್ಲ. ಚದುರಂಗ, ಇಸ್ಪೀಟು, ಕುದುರೆಸವಾರಿ, ಇನ್ನೂ ಇತರ ಹವ್ಯಾಸಗಳು, ಇವೆಲ್ಲಾ ಅವನಿಗೆ ಇದ್ದೇ ತೀರಬೇಕು. ಎಂ.ಎ. ವ್ಯಾಸಂಗ ವಿಷಯದ ಒಂದು ಭಾಗವಾಗಿ ಆತ ಒಂದು ವಿಶೇಷ ಪ್ರಬಂಧವನ್ನು ಸಿದ್ಧಪಡಿಸಬೇಕಾಗಿದ್ದಿತು; ಪ್ರಬಂಧ ವಿಷಯ, 'ನಾರಾಯಣಭಟ್ಟ ಮತ್ತು ಆತನ ಕೃತಿಗಳು'. ಆತನ ಇಬ್ಬರು ಗಣ್ಯ ಸಹೋದ್ಯೋಗಿಗಳು ಈ ಕೆಲಸದಲ್ಲಿ ಸ್ವಲ್ಪಮಟ್ಟಿಗೆ ನೆರವು ನೀಡಿದರು. ಸಾಂಪ್ರದಾಯಿಕ ಮಾದರಿಯ ವಿದ್ವತ್ತಿನಲ್ಲಿ ಅವರಿಬ್ಬರೂ ಒಳ್ಳೆಯ ವಿದ್ವಾಂಸರಾಗಿದ್ದರೂ ಸಂಶೋಧನೆ ನಡಸಲು ಅವರಿಗೆ ಅಗತ್ಯವಾದ ಶಿಕ್ಷಣವಾಗಲಿ, ಸಾಮರ್ಥ್ಯವಾಗಲಿ ಇರಲಿಲ್ಲ. ವಿಮರ್ಶನ ಸೂಕ್ಷ್ಮಮತಿಯ ಕೊರತೆಯೂ ಅವರಲ್ಲಿತ್ತು. ಆದ್ದರಿಂದ ರಾಜರಾಜವರ್ಮನು ಬಲುಮಟ್ಟಿಗೆ ಎಲ್ಲವನ್ನೂ ತಾನೇ ಮಾಡಬೇಕಾಗಿದ್ದಿತು. 'ಇಂಡಿಯನ್ ಆ್ಯಂಟಿಕ್ವೆರಿ'(Indian Antiquary)ಯಂತಹ ನಿಯತಕಾಲಿಕಗಳ ಸಂಪುಟಗಳಲ್ಲಿ ಲಭ್ಯವಾಗಿದ್ದ ಉಪಯುಕ್ತ ಸಾಮಗ್ರಿಯನ್ನು ಆತ ಕೂಲಂಕಷವಾಗಿ ಶೋಧಿಸಿ ನೋಡಿದನು. ಕಡೆಗೂ ಸಕಾಲದಲ್ಲಿ ಒಂದು ಪ್ರಥಮಶ್ರೇಣಿಯ ಪ್ರೌಢಪ್ರಬಂಧವನ್ನು ಸಿದ್ಧಪಡಿಸಲು ಸಮರ್ಥನಾದನು. ೧೮೯೧ರಲ್ಲಿ ಆತ ಪರೀಕ್ಷೆಗೆ ಕುಳಿತು ವಿಶ್ವವಿದ್ಯಾನಿಲಯಕ್ಕೇ ಮೊದಲನೆಯ ಸ್ಥಾನ ಪಡೆದು ತೇರ್ಗಡೆಯಾದನು; ಆದರೂ ತೇರ್ಗಡೆ ಆದದ್ದು ಎರಡನೆಯ ದರ್ಜೆಯಲ್ಲಿ. ಆಗಿನ ದಿನಗಳಲ್ಲಿ ಅಂತಹ ಬುದ್ಧಿಶಾಲಿ ವಿದ್ಯಾರ್ಥಿಗಳಿಗೆ ಕೂಡ ಪ್ರಥಮ ದರ್ಜೆಯನ್ನು ಪಡೆಯುವುದು ಅತ್ಯಂತ ಕಷ್ಟಕರವಾಗಿತ್ತು. ಹೀಗಿದ್ದರೂ ಕೂಡ, ಮುಖ್ಯ ಪರೀಕ್ಷಕರಾಗಿದ್ದ ಶೇಷಗಿರಿಶಾಸ್ತ್ರಿಗಳು ಆತನ ಉತ್ತರಗಳ ಗುಣಮಟ್ಟಕ್ಕೆ ಮಾರುಹೋಗಿ ಅವನ ಉತ್ತರಪತ್ರಿಕೆಗಳನ್ನು ಕಾಪಾಡಿ

ನಂತರ ಪ್ರಾಚ್ಯವಸ್ತು ವಿಜ್ಞಾನ ಇಲಾಖೆಯ ನಿರ್ದೇಶಕರ ಸ್ಥಾನ ತೆರವಾದಾಗ ಆ ಇಲಾಖೆಯೊಂದಿಗೆ ಸಂಸ್ಕೃತ ಕಾಲೇಜನ್ನೂ ಜೊತೆಗೂಡಿಸಬಹುದೆಂಬ ಸಲಹೆಗೂ ಅದೇ ಗತಿಯಾಯಿತು. ಆ ವೇಳೆಗೆ ರಾಜರಾಜವರ್ಮನ ವಿದ್ವತ್ತೂ ಸಾಮರ್ಥ್ಯವೂ ದಕ್ಷಿಣ ಭಾರತದಲ್ಲೆಲ್ಲ ಕಡೆಯೂ ತುಂಬ ಮಾನ್ಯತೆ ಪಡೆದಿದ್ದುವು. ಆದರೆ ಮುಖ್ಯ ಸಂಗತಿ ಏನೆಂದರೆ, ಯಾವ ವಿಷಯವೇ ಆಗಲಿ, ಅದು ಅಧಿಕಾರದಲ್ಲಿದ್ದ ದಿವಾನರ ಕೃಪೆಗೆ ಪಾತ್ರವಾಗಬೇಕಾಗಿದ್ದಿತು. ಕೃಷ್ಣಸ್ವಾಮಿರಾಯರು ತಿರುವಾಂಕೂರು ಸಂಸ್ಥಾನದ ದಿವಾನರಾದಾಗ ರಾಜರಾಜವರ್ಮನ ಹಕ್ಕಿಗೆ ಪುರಸ್ಕಾರ ದೊರೆಯಿತು. ರಾಜರಾಜವರ್ಮನನ್ನು ಮಹಾರಾಜರವರ ಕಾಲೇಜಿನಲ್ಲಿ ದೇಶಭಾಷಾವ್ಯಾಸಂಗದ ಮೇಲ್ವಿಚಾರಣಾಧಿಕಾರಿ ಎಂದು ನೇಮಕ ಮಾಡಲಾಯಿತು. ೧೮೯೯ರಲ್ಲಿ ರಾಜರಾಜವರ್ಮನು ಸಂಸ್ಕೃತ ಕಾಲೇಜಿನ ವಹಿವಾಟನ್ನು ಗಣಪತಿ ಶಾಸ್ತ್ರಿಗಳಿಗೆ ವಹಿಸಿಕೊಟ್ಟು, ಹೊಸಹುದ್ದೆಯನ್ನು ಒಪ್ಪಿಕೊಂಡನು.

ಈ ಹೊಸ ಹುದ್ದೆಯಲ್ಲಿ ನಮ್ಮ ಮಹಾವಿದ್ವಾಂಸನಿಗೆ ಹೊಸ ಕಾರ್ಯ ಸಾಧ್ಯತೆಗಳು ಗೋಚರವಾದುವು. ಉನ್ನತ ಮಟ್ಟದ ವಿದ್ಯಾಭ್ಯಾಸ ವ್ಯವಸ್ಥೆಯಲ್ಲಿ ಭಾರತೀಯ ಭಾಷೆಗಳ ಸ್ಥಾನಮಾನವು ಸಮರ್ಪಕವಾಗಿರಲಿಲ್ಲೆಂಬುದನ್ನು ಅವನು ಮನಗಂಡನು. ವಿಷಯ ಸೂಚಿಕೆ ಒಂದು ಸರಿಯಾದ ಯೋಜನೆಗೆ ಒಳಪಟ್ಟಿರಲಿಲ್ಲ; ಪಠ್ಯ ಪುಸ್ತಕಗಳು ಅಸಮರ್ಪಕವಾಗಿದ್ದುವು; ಭಾಷಾಬೋಧನೆಯ ತರಗತಿಗಳಿಗೆ ಬಂದಾಗ ವಿದ್ಯಾರ್ಥಿಗಳು ಪಾಠದಲ್ಲಿ ಶ್ರದ್ಧೆ ವಹಿಸುತ್ತಿರಲಿಲ್ಲ. ಈ ಭಾಗದಲ್ಲಿಯೇ ರಾಜರಾಜವರ್ಮನ ಸಾಧನೆ ನಿಜವಾಗಿ ಮಹತ್ವಪೂರ್ಣದ್ದಾಗಿ, ನೆನೆಯತಕ್ಕದ್ದಾಗಿ ಪರಿಣಮಿಸಿದ್ದು. ಲಭ್ಯವಿದ್ದ ಗ್ರಂಥರಾಶಿಯಿಂದ ಇದ್ದುದರಲ್ಲಿ ಮೇಲಾದ ಪುಸ್ತಕಗಳನ್ನು ಪಾಠ ಪ್ರವಚನಕ್ಕೆ ಗೊತ್ತು ಮಾಡಲಾಯಿತು; ಹೊಸ ಪುಸ್ತಕಗಳನ್ನು ಬರೆಯಿಸಲಾಯಿತು; ಪಠ್ಯ ವಿಷಯ ಸೂಚಿಕೆಯನ್ನು ಸುಧಾರಿಸಲಾಯಿತು. ಎಫ್.ಎ. (ಕಲಾ ವಿಷಯಗಳಲ್ಲಿ ಮೊದಲ ಪರೀಕ್ಷೆ) ಮತ್ತು ಬಿ.ಎ. ಪರೀಕ್ಷೆಗಳ ತರಗತಿಗಳಲ್ಲಿ ತಾನೇ ಪಾಠ ಹೇಳತೊಡಗಿದನು. ಅಗತ್ಯಕ್ಕೆ ತಕ್ಕಂತೆ ವ್ಯಾಕರಣ, ಛಂದಸ್ಸು ಮತ್ತು ಕಾವ್ಯಮೀಮಾಂಸೆಗಳಿಗೆ ಸಂಬಂಧಪಟ್ಟ ಗ್ರಂಥಗಳನ್ನು ತಾನೇ ರಚಿಸಿದನು. ವಿದ್ಯಾರ್ಥಿಗಳಿಗೆ ಹೇಗೆ ಪಾಠ ಹೇಳಬೇಕೆಂಬ ವಿಷಯದಲ್ಲಿ ತನ್ನ ಸಹೋದ್ಯೋಗಿಗಳಿಗೆ ಮಾರ್ಗದರ್ಶನ ನೀಡಿದನು; ಅವರ ಪೈಕಿ ಸಾಹಿತ್ಯ ಪಂಚಾನನ ಪಿ.ಕೆ. ನಾರಾಯಣಪಿಳ್ಳೆಯಂಥ ಕೆಲವರು ಆತನ ಪ್ರಿಯ ವಿದ್ಯಾರ್ಥಿಗಳೇ ಆಗಿದ್ದರು. ರಾಜರಾಜವರ್ಮನು ಬರೆದ ಪ್ರಮುಖ ಗ್ರಂಥಗಳ ವಿಚಾರವಾಗಿ ಮುಂದೆ ವಿವೇಚಿಸಲಾಗುವುದು.

ಇವು ಜಗತ್ತಿನ ಎರಡು ಮಹತ್ವದ ಭಾಷೆಗಳಾದ ಸಂಸ್ಕೃತ ಮತ್ತು ಇಂಗ್ಲಿಷುಗಳ ಬಗೆಗೆ ಅವನ ಮನಸ್ಸು ಹೇಗೆ ಕೆಲಸ ಮಾಡುತ್ತಿತ್ತು ಎಂಬುದನ್ನು ತೋರಿಸಿ ಕೊಟ್ಟಿವೆ. ಇನ್ನೂ ಅಷ್ಟಾಗಿ ಅಭಿವೃದ್ಧಿಗೊಳ್ಳದಿದ್ದ ಅವನ ತಾಯ್ನುಡಿಯಾದ ಮಲಯಾಳವು ವಿಕಾಸಗೊಳ್ಳುವುದಕ್ಕೆ ಪ್ರದಾನ ಮಾಡಲು ಅಗತ್ಯವಾದ ಅನೇಕ ವಿಷಯಗಳು ಈ ಎರಡೂ ಭಾಷೆಗಳಲ್ಲಿ ಇದ್ದುವು. ಅವನು ಇಬ್ಬರು ಶಾಸ್ತ್ರಿಗಳಿಗೂ ಇಂಗ್ಲಿಷ್ ಭಾಷೆಯನ್ನು ಬೋಧಿಸಿದನು. ಆ ಇಬ್ಬರಲ್ಲಿ ಒಬ್ಬರಾದ ಗಣಪತಿ ಶಾಸ್ತ್ರಿಗಳು ಶ್ರೇಷ್ಠ (ಸಂಸ್ಕೃತ೦ ಕೃತಿಗಳ ಸಂಪಾದಕರೆಂದು ಪ್ರಸಿದ್ಧರಾದರು.* ವಿದ್ವತ್ತಿನ ಕ್ಷೇತ್ರದಲ್ಲಿ ತನ್ನ ಸ್ಥಾನವನ್ನು ಉತ್ತಮಪಡಿಸಿಕೊಳ್ಳಲು ರಾಜರಾಜವರ್ಮನು ಕಾತರನಾಗಿದ್ದನು; ಆದರೆ ಅಧಿಕಾರಿಗಳು ಅವನಿಗೆ ಕುಕ್ಕುಮುಳ್ಳಾಗಿದ್ದರು. ಈ ವಿಷಯ ಆತನ ದಿನಚರಿಯ ಟಿಪ್ಪಣಿಗಳಿಂದಲೂ ಪತ್ರಗಳಿಂದಲೂ ಹೊರಪಡುತ್ತದೆ. ಮದರಾಸು ಪ್ರಾಂತದಲ್ಲಿ ಯೋಗ್ಯವಾದ ಅಧಿಕಾರ ಸ್ಥಾನಗಳನ್ನು ಪಡೆಯುವುದಕ್ಕು ಸಹ ಆತನು ಪ್ರಯತ್ನಿಸಿದನು. ಆಗಿನ ದಿನಗಳಲ್ಲಿ ಪ್ರಾದೇಶಿಕ ಭಾಷೆಗಳು ಬಲುಮಟ್ಟಿಗೆ ಕೆಳಗಿನ ಸ್ಥಾನಗಳಲ್ಲಿದ್ದುವು. 'ಮಲಯಾಳಿ ಭಾಷೆಯಲ್ಲಿ ಕಲಿಯುವುದೇನಿದೆ?' ಎನ್ನುವುದು ಇಂಗ್ಲಿಷಿನಲ್ಲಿ ವಿದ್ಯಾವಂತರಾದ ಗರ್ವಿಷ್ಠರು ಆಗಾಗ್ಗೆ ಪ್ರಶ್ನಿಸುತ್ತಿದ್ದುದು ಸಾಮಾನ್ಯವಾಗಿತ್ತು. ಸಂಸ್ಕೃತದಲ್ಲಿ ವಿಶೇಷ ಪರಿಣತನಾದ ಎ.ಆರ್.ಗೆ ಮಲಯಾಳ ಭಾಷೆಯ ಉತ್ತಮ ಭವಿಷ್ಯವನ್ನು ಕಂಡುಕೊಳ್ಳಬಲ್ಲ ದೂರದೃಷ್ಟಿಯಿದ್ದಿತು. ಈ ವಿಚಾರದಲ್ಲಿ ಸೋದರಮಾವ ಕೇರಳವರ್ಮನು ಸಹಾಯಕನಾಗಿದ್ದನು. ಬದುಕಿನಲ್ಲಿ ಮನರಂಜನೆಯನ್ನು ಒದಗಿಸುವುದಕ್ಕಿಂತ ಹೆಚ್ಚು ಮುಖ್ಯವಾದ ಹೆಚ್ಚಿನ ಪಾತ್ರಗಳನ್ನು ವಹಿಸಬೇಕಾಗಿದೆ ಎಂಬುದನ್ನು ಅರಿತುಕೊಳ್ಳಲು ರಾಜರಾಜವರ್ಮನ ವೃತ್ತಿಜೀವನದ ಮುಂದಿನ ಘಟ್ಟದಲ್ಲಿ ಒಂದು ದೊಡ್ಡ ಅವಕಾಶ ದೊರಕಿತು.

### ದೇಶಭಾಷಾವ್ಯಾಸಂಗದ ಮೇಲ್ವಿಚಾರಣಾಧಿಕಾರಿ

೧೮೯೬–೧೮೯೮ರ ಅವಧಿಯಲ್ಲಿ, ಪ್ರಿನ್ಸಿಪಾಲರ ಕರ್ತವ್ಯಗಳನ್ನು ಆಯುರ್ವೇದ ಸಂಸ್ಥೆಯ ಮುಖ್ಯಸ್ಥರ ಕರ್ತವ್ಯಗಳೊಂದಿಗೆ ಸಮನ್ವಯ ಮಾಡಬಹುದೆಂಬ ಸಲಹೆಯನ್ನು ಸರ್ಕಾರ ತಿರಸ್ಕರಿಸಿತು. ಮುಂದೆ, ಕೆಲಕಾಲಾ

* ತಿರುವನಂತಪುರದ ಸರಸ್ವತೀಮಹಲಿನ ಹಸ್ತಪ್ರತಿ ಭಂಡಾರದಲ್ಲಿ ಅಡಗಿದ್ದ ಭಾಸನ ನಾಟಕಗಳನ್ನು ಗುರುತಿಸಿ, ಆ ಬಗ್ಗೆ ಜಗತ್ತಿಗೆ ಪ್ರಚುರಪಡಿಸಿದವರು ಈ ವಿದ್ವಾಂಸರು –ಅನುವಾದಕ.

ಗೊತ್ತು ಗುರಿ ಇಲ್ಲದೆ ಕಾಲಹರಣ ಮಾಡುವುದಾಗಲಿ ಅಪರೂಪವೇನಾಗಿರಲಿಲ್ಲ. ತಂಪುರಾನ್‌ನ ತರಗತಿಯಲ್ಲಿಯ ತನ್ನ ಅನುಭವವನ್ನು ಒಬ್ಬ ಗಣ್ಯನಾದ ಹಳೆಯ ವಿದ್ಯಾರ್ಥಿ ಹೇಗೆ ಬರೆದಿಟ್ಟಿದ್ದಾನೆ:

"ಬಿ.ಎ. ತರಗತಿಗೆ ಸೇರುವುದಕ್ಕೆಂದು ನಾನು ತಿರುವನಂತಪುರಕ್ಕೆ ಹೋದೆನು. ಯಥಾಪ್ರಕಾರ ಮಲಯಾಳಂ ತರಗತಿಯಲ್ಲಿ ನಾನು ನಿದ್ರೆ ಮಾಡಬಹುದು ಇಲ್ಲವೆ ಸ್ವಂತದ ಕಾಗದಗಳನ್ನು ಬರೆಯಬಹುದು ಎಂದುಕೊಂಡಿದ್ದೆ. ಆದರೆ ಆಗ ನಾನು ಕಂಡದ್ದೇನು, ವೇದಿಕೆಯ ಮೇಲೆ ಒಬ್ಬ ಮಹಾವ್ಯಕ್ತಿ; ನಾನು ಸಂತೋಷದಿಂದ ದಂಗುಬಡಿದುಹೋದೆ. ಆತನ ಮಾತು ಎಷ್ಟು ಅರ್ಥಪೂರ್ಣವಾಗಿದ್ದು, ಮೋಹಕವಾಗಿದ್ದುವು ಎಂದರೆ, ನಾನು ಆತನ ಮೋಡಿಗೆ ಒಳಗಾಗಿಬಿಟ್ಟೆ. ಆಮೇಲೆ ನನಗೆ ಗೊತ್ತಾಯಿತು, ಉಪಾಧ್ಯಾಯರು 'ಕೇರಳದ ಪಾಣಿನಿ' ಎಂದು ಪ್ರಸಿದ್ಧರಾಗಿದ್ದ ಪ್ರೊಫೆಸರ್ ತಂಪುರಾನ್ ಎಂದು. ಆತನ ತರಗತಿಯಲ್ಲಿ ನನಗೆ ಅನುಭವಕ್ಕೆ ಬಂದದ್ದು ಒಂದು ಅಪೂರ್ವವಾದ ರೋಮಾಂಚ."

ತಂಪುರಾನನ ಕರ್ತವ್ಯನಿಷ್ಠೆ ಪ್ರಸಿದ್ಧವಾದದ್ದು. ಬೋಧನೆ ಮಾಡುವುದು, ಬೋಧನಕಾರ್ಯದ ಮೇಲ್ವಿಚಾರಣೆ ನೋಡಿಕೊಳ್ಳುವುದು, ಇದಕ್ಕೆ ಆದ್ಯತೆಕೊಟ್ಟು ಕಟ್ಟುಬಿದ್ದಿದ್ದನು. ಮಲಯಾಳ ಸಮಾಜಂನಲ್ಲಿ ಇದ್ದ ರೀತಿಯಲ್ಲಿ ಪಠ್ಯೇತರ ಚಟುವಟಿಕೆಗಳನ್ನು ವ್ಯವಸ್ಥೆ ಮಾಡಲು ಆತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಡುತ್ತಿದ್ದನು. ಕಾಲೇಜಿನ ವಿದ್ಯಾರ್ಥಿಗಳು ಹಾಗೂ ಗಣ್ಯರಾದ ವಿದ್ವಾಂಸರು ಉಪನ್ಯಾಸಗಳನ್ನು ನೀಡಿ, ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು. ಆಗಿನ ದಿನಗಳಲ್ಲಿ ವಿಚಾರಗೋಷ್ಠಿ (Seminar) ಮತ್ತು ಭಾಷಣಮಾಲಿಕೆ (Symposium) ಎಂಬ ಮಾತುಗಳು ಬಳಕೆಯಲ್ಲಿ ಇಲ್ಲದಿದ್ದರೂ, ಅವುಗಳ ಕಲ್ಪನೆ ಅಸ್ತಿತ್ವದಲ್ಲಿದ್ದಿತು. ತಂಪುರಾನ್ ಈ ಕೂಟಗಳಿಗೆ ತಪ್ಪದೆ ಹೋಗುತ್ತಿದ್ದನು; ಅವು ಮುಕ್ತಾಯ ವಾಗುವವರೆಗೂ ಕುಳಿತಿರುತ್ತಿದ್ದನು. ಆತನ ಈ ನಡೆವಳಿಕೆ ವಿದ್ಯಾರ್ಥಿಗಳಿಗೆ ಬಹಳ ಪ್ರೋತ್ಸಾಹಕರವಾಗಿತ್ತು; ಆ ವಿದ್ಯಾರ್ಥಿಗಳ ಪೈಕಿ ಉದಯೋನ್ಮುಖ ಗ್ರಂಥಕರ್ತರೂ ಇದ್ದರು.

ಒಳ್ಳೆಯ ಬೋಧನೆ ಒಳ್ಳೆಯ ಕಲಿಕೆಯೊಂದಿಗೆ ಜೊತೆ ಜೊತೆಯಾಗಿ ಸಾಗುವುದು ಕೇವಲ ಸಹಜ. ಎಂದೇ ಆಗಲಿ ಮಲಯಾಳವು ಪಡೆದು ಕೊಂಡಿದ್ದಂತಹ ಉತ್ತಮೋತ್ತಮ ಬೋಧಕರಲ್ಲಿ ರಾಜರಾಜವರ್ಮನು ಒಬ್ಬನಾಗಿದ್ದಂತೆಯೆ ಶತಮಾನಗಳ ಕಾಲದಲ್ಲಿ ಆ ಭಾಷೆ ಕೂಡಿದ್ದಂತಹ

**ಭಾರತೀಯ ಭಾಷೆಗಳ ಹೋರಾಟಗಾರ**

ಅಂದಿನ ಕಾಲದಲ್ಲಿ ದ್ವಿತೀಯಭಾಷೆ ಎನ್ನಿಸಿಕೊಂಡಿದ್ದ ಮಾತೃಭಾಷೆಯ ವ್ಯಾಸಂಗವನ್ನು ಸಾಮಾನ್ಯವಾಗಿ ಹಿಂಬದಿಗೆ ಹಾಕಲಾಗಿತ್ತು. ಇಂಗ್ಲಿಷಿಗೆ ಪ್ರಥಮ ಭಾಷೆಯ ಸ್ಥಾನ; ಅದೇ ಅತ್ಯಂತ ಮುಖ್ಯವಾಗಿದ್ದ ವ್ಯಾಸಂಗ ವಿಷಯ. ಈ ಭಾಷೆಯ ಅಧ್ಯಯನಕ್ಕೆ ವಿಶೇಷ ಗಮನ ಕೊಡುತ್ತಿದ್ದರು ವಿದ್ಯಾರ್ಥಿಗಳು. ತಮ್ಮ ಸ್ವಂತ ಭಾಷೆಯ ವಿಚಾರದಲ್ಲಿ ವಿದ್ಯಾರ್ಥಿಗಳ ಪ್ರತಿಕ್ರಿಯೆ ಸಾಮಾನ್ಯವಾಗಿ ಔದಾಸೀನ್ಯದಿಂದ ಕೂಡಿರುತ್ತಿತ್ತು. ಯಾರೇ ಆಗಲಿ ವಿದ್ಯಾರ್ಥಿಗಳ ಮೇಲೆಯೇ ಪೂರ್ತಿಯಾಗಿ ತಪ್ಪನ್ನು ಹೊರಿಸಲಾಗದು. ಈ ಪರಿಸ್ಥಿತಿ ವಿವಿಧ ವಿದ್ಯಮಾನಗಳ ಒಟ್ಟಿನ ಪರಿಣಾಮವಾಗಿತ್ತು; ಅವುಗಳಲ್ಲಿ ಕೆಲವನ್ನು ಈಗಾಗಲೇ ಸೂಚಿಸಿದ್ದಾಗಿದೆ. ವಿಶ್ವವಿದ್ಯಾನಿಲಯದ ವ್ಯಾಪ್ತಿಯಿಂದ ದ್ವಿತೀಯ ಭಾಷೆಯ ವ್ಯಾಸಂಗವನ್ನು ಹೊರಗಿಡುವ ಒಂದು ಚಳವಳಿ ಕೂಡ ನಡೆದು, ಅದು ಸ್ವಲ್ಪ ಕಾಲ ಯಶಸ್ವಿಯೂ ಆಗಿತ್ತು. ಆದರೆ ಪರಿಸ್ಥಿತಿ ಬೇಗನೆ ಬದಲಾಯಿಸಿತು. ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಮಲಯಾಳ ಭಾಷೆ ಅಧ್ಯಯನಕ್ಕೆ ಅರ್ಹವಾದದ್ದು ಎಂದು ಎಣಿಕೆಗೊಂಡದ್ದು ರಾಜರಾಜವರ್ಮನ ಕಾಲದಲ್ಲಿಯೆ. ಈ ಮಹಾವಿದ್ವಾಂಸನ ಅಪಾರ ವಿದ್ವತ್ತು, ಮೆಚ್ಚಬೇಕಾದಂತಹ ದೂರದೃಷ್ಟಿ, ಬಿಡುವಿಲ್ಲದ ದುಡಿಮೆ, ಇವು ಈ ವಿಚಾರದಲ್ಲಿ ಒಂದು ಹೊಸ ದಾರಿಗೆ ತಿರುಗಲು ಕಾರಣಭೂತವಾದುವು. ಭಾರತೀಯ ಭಾಷೆಗಳ ಮಾನ್ಯತೆಗಾಗಿ ಆತ ವೃತ್ತಪತ್ರಿಕೆಗಳಲ್ಲಿಯೂ ಭಾಷಣಗಳ ಮೂಲಕವೂ ಹಾಗೂ ಬೋಧನ ವಿಷಯ ನಿಯಾಮಕ ಸಮಿತಿಗಳಲ್ಲಿಯೂ ಹೋರಾಡಿದನು. ಸ್ವಾತಂತ್ರ್ಯ ಬಂದ ಮೇಲೆ ನಮ್ಮ ಭಾಷೆಗಳ ಬೇರೆಯದಾದ ಪರಿಸರದಲ್ಲಿರುವುದರಿಂದ ಆಗಿನ ದಿನಗಳಲ್ಲಿ ಇದ್ದ ಸ್ಥಿತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಸ್ವಲ್ಪ ಊಹಾಶಕ್ತಿ ಅಗತ್ಯ. ರಾಜರಾಜವರ್ಮನು ಒಬ್ಬ ದೊಡ್ಡ ಯೋಜನಾಕಾರ ಹಾಗೂ ಕನಸುಗಾರ ಎಂದು ಮಾತ್ರವಲ್ಲದೆ, ಒಬ್ಬ ಶಿಕ್ಷಕನಾಗಿ ಕೂಡ ಅಸಾಧಾರಣನಾಗಿದ್ದನು. ಪಿ. ಅನಂತನ್ ಪಿಳ್ಳೆ ಹಾಗೂ ಪಿ.ಕೆ. ನಾರಾಯಣ ಪಿಳ್ಳೆ ಇವರಂತಹ ಆತನ ಅನೇಕ ವಿದ್ಯಾರ್ಥಿಗಳು ಆತನಲ್ಲಿ ಸಹಜವಾಗಿದ್ದ ಬೋಧನಾಶಕ್ತಿಯ ವಿಚಾರವಾಗಿ ತಮ್ಮ ಅಪಾರ ಮೆಚ್ಚುಗೆಯನ್ನು ಬರೆದಿಟ್ಟಿದ್ದಾರೆ. ಬುದ್ಧಿವಂತರಾದ ವಿದ್ಯಾರ್ಥಿಗಳು ಆತನ ತರಗತಿಯಲ್ಲಿ ಮಂತ್ರಮುಗ್ಧರಾಗಿ ಕುಳಿತುಬಿಡುತ್ತಿದ್ದರು. ಅಷ್ಟು ಬುದ್ಧಿವಂತರಲ್ಲದ ವಿದ್ಯಾರ್ಥಿಗಳು ಕೂಡ ಆತನ ಪಾಠಪ್ರಚನಗಳು ಸಾಕಷ್ಟು ಸ್ವಾರಸ್ಯವಾಗಿರುತ್ತಿದ್ದುವು ಎಂಬುದನ್ನು ಬಲ್ಲವರಾಗಿದ್ದರು. ಆಗಿನ ಕಾಲದಲ್ಲಿ ಕೂಡ ಭಾಷಾ ವಿಷಯದ ತರಗತಿಗಳಲ್ಲಿ ವಿದ್ಯಾರ್ಥಿಗಳು ನಿದ್ರೆ ಮಾಡುವುದಾಗಲಿ

ಅಭಿನಯಿಸುವುದೆಂದರೆ ಆತನಿಗೆ ಸಂತೋಷ. ಆತ ಅನೇಕ ಸಂಸ್ಕೃತ ನಾಟಕಗಳನ್ನು ಮಲಯಾಳಕ್ಕೆ ಭಾಷಾಂತರ ಮಾಡಿದನು. ಭಾಷಾಂತರ ಮಾಡುವುದರಲ್ಲಿ ಆತನ ಉದ್ದೇಶ, ಮೊದಲನೆಯದಾಗಿ ಶ್ರಮಸಾಧ್ಯವಾದ ಸಂಶೋಧನ ಕಾರ್ಯದ ನಡುವೆ ವಿಶ್ರಾಂತಿ ಪಡೆಯುವುದು, ಎರಡನೆಯದಾಗಿ ತನ್ನ ಸಹೋದ್ಯೋಗಿಗಳಿಗೂ ಆಪ್ತಮಿತ್ರರಿಗೂ ಮನೋಲ್ಲಾಸವನ್ನು ನೀಡುವುದು.

* * * *

ಉತ್ತಮೋತ್ತಮ ವಿದ್ಯಾರ್ಥಿಗಳಲ್ಲಿಯೂ ಒಬ್ಬನಾಗಿದ್ದನು. ಜೀವನಪರ್ಯಂತವೂ ವಿದ್ಯಾರ್ಜನೆ ಮಾಡಬೇಕು ಎನ್ನುವುದರಲ್ಲಿ ಆತನ ವಿಶ್ವಾಸ. ಮೊದಲಿಗೆ ಆತನು ಸಂಸ್ಕೃತಕ್ಕೆ ಒಲಿದು ಕಟ್ಟುಬಿದ್ದು ಮಲಯಾಳವನ್ನು ಕಡೆಗಂಡಿದ್ದರೂ, ಸಂದರ್ಭ ವಶದಿಂದ ತನ್ನ ಬದುಕಿನ ಕಡೆಯ ೨೫ ವರ್ಷಗಳಲ್ಲಿ ಮಲಯಾಳದಲ್ಲಿಯೆ ಹೆಚ್ಚಾಗಿ ಬರೆದನು. ಆದರೆ ಸಂಸ್ಕೃತ ಮತ್ತು ಇಂಗ್ಲಿಷುಗಳು ಆತನ ಜ್ಞಾನ–ಸ್ಫೂರ್ತಿಗಳ ಆಕರಗಳಾಗಿ ಮುಂದುವರಿದುವು. ಆತನು ಪ್ರತಿನಿತ್ಯವೂ ಓದುತ್ತಿದ್ದ ಗ್ರಂಥಗಳಲ್ಲಿ ಮಹಾಭಾರತ ಮತ್ತು ಭಗವದ್ಗೀತೆಗಳು ಸೇರಿದ್ದುವು. ಜ್ಯೋತಿಷ್ಯ ಶಾಸ್ತ್ರದಲ್ಲಿ ತನ್ನ ಸಂಶೋಧನೆಯನ್ನು ಆತ ಮುಂದುವರಿಸಿದನು. ಕಾವ್ಯಮೀಮಾಂಸೆ ಮತ್ತು ಸಾಹಿತ್ಯಶಾಸ್ತ್ರದ ಇತರ ಅಂಗಗಳನ್ನು ಕುರಿತು ಹೇಳುವುದಾದರೆ, ಸಂಸ್ಕೃತ ಮತ್ತು ಇಂಗ್ಲಿಷ್ ಗ್ರಂಥಗಳನ್ನು ಆತ ಪದೇಪದೇ ಉಪಯೋಗಿಸಿಕೊಳ್ಳುತ್ತಿದ್ದನು. ಆಧುನಿಕ ಮಲಯಾಳ ಸಾಹಿತ್ಯದ ಸಂಪತ್ತನ್ನು ಹೆಚ್ಚಿಸಲು ಬಯಸುವ ಯಾರಿಗೇ ಆದರೂ ಅಪಾರವಾದ ಇಂಗ್ಲಿಷ್ ಸಾಹಿತ್ಯರಾಶಿಯ ಪರಿಚಯದಿಂದ ಬಹಳ ಪ್ರಯೋಜನವಾಗುವುದು. ಷೇಕ್ಸ್‌ಪಿಯರನ ನಾಟಕಗಳು, ಫ್ರೂಡನ (Froude) ಪ್ರಬಂಧಗಳು, ಮಕಾಲೆಯ (Macaulay) ಇಂಗ್ಲೆಂಡಿನ ಚರಿತ್ರೆ, ಸ್ಕಾಟ್ (Scott) ಮತ್ತು ಥ್ಯಾಕರೆ (Thackeray) ಇವರ ಕಾದಂಬರಿಗಳು, ಷೋಪನ್‌ಹೌರನ (Wisdom of Life) 'ಜೀವನ ವಿವೇಕ' (Schopenhaur), ಈ ಕೃತಿಗಳ ಬಗೆಗೆ ಆತನ ದಿನಚರಿಗಳಲ್ಲಿ ಮೆಚ್ಚುಗೆಯ ಮಾತುಗಳು ಕಂಡುಬರುತ್ತವೆ.

ಇಷ್ಟೇ ಅಲ್ಲದೆ, ಅವಕಾಶ ದೊರೆತಾಗಲೆಲ್ಲ ಅವನು ಇತರ ವಿದ್ವಾಂಸರೊಡನೆ ಭಾಷೆ ಮತ್ತು ಸಾಹಿತ್ಯ ವಿಚಾರಗಳಿಗೆ ಸಂಬಂಧಪಟ್ಟ ಸ್ವಾರಸ್ಯವಾದ ಸಮಸ್ಯೆಗಳನ್ನು ಚರ್ಚಿಸುತ್ತಿದನು. 'ಕೇರಳ ಪಾಣಿನೀಯಂ' ಎಂಬ ಅಮೋಘವಾದ ಮಲಯಾಳಿ ವ್ಯಾಕರಣದ ರಚನೆಯಲ್ಲಿ ತೊಡಗಿದ್ದಾಗ ಆತನು ಮಹಾಕವಿ ಕುಞಿಕುಟ್ಟನ್ ತಂಪುರಾನ್‌ಗೆ ಧಾತುಪಾಟದ ಪಟ್ಟಿಯನ್ನು ತೋರಿಸಿ, ಅದರ ಬಗ್ಗೆ ಮಹಾಕವಿಯ ಅಭಿಪ್ರಾಯವನ್ನು ಕೇಳಿ ತಿಳಿದುಕೊಂಡನು. ಆತನ ಪದ್ಯರಚನೆಗಳನ್ನು ಸಾಧಾರಣವಾಗಿ ತುರವೂರ್ ನಾರಾಯಣಶಾಸ್ತ್ರಿಗಳು ಪರಿಶೀಲಿಸುತ್ತಿದ್ದರು. ಇದರಿಂದ ತೋರಿಬರುವುದೇನೆಂದರೆ, ತನ್ನ ಭಾಷೆಗಾಗಿ ಅತ್ಯುತ್ತಮವಾದುದನ್ನು ನಿರ್ಮಾಣ ಮಾಡಬೇಕೆಂಬ ಆತನ ಅಪೇಕ್ಷೆ ಹಾಗೂ ನಮ್ರತೆ. ಆತನ ಎಲ್ಲ ಬರವಣಿಗೆಯನ್ನೂ ಪರಿಶೀಲಿಸಿ ನೋಡಿದಾಗ ಆತ ಶುಷ್ಕ ವಿದ್ವಾಂಸನಾಗಿರಲಿಲ್ಲ ಎಂಬುದು ಗೊತ್ತಾಗುತ್ತದೆ. ನಾಟಕಗಳನ್ನು ರಚಿಸಿ ಅವುಗಳಲ್ಲಿ

ಶ್ರದ್ಧಾನ್ವಿತ ಬೋಧಕರೂ ಆಗಿದ್ದ ಇಂಥವರು, ಮಲಯಾಳ ಭಾಷೆಯಲ್ಲಿ ಪರಿಣತಿಯನ್ನು ಪಡೆಯಬೇಕೆಂದಿದ್ದ ವಿದ್ಯಾರ್ಥಿಗಳನ್ನು ಆಕರ್ಷಿಸಿದರು. ಇದರಿಂದಾಗಿ ಮಲಯಾಳ ವಿಭಾಗದ ಸಾಮಾನ್ಯಮಟ್ಟವು ಉತ್ತಮಗೊಳಿಸಲು ದಾರಿಯಾಯಿತು.

ಯೂರೋಪಿಯನ್ ಪ್ರಾಧ್ಯಾಪಕರುಗಳಿಗೂ ಭಾರತೀಯ ಪ್ರಾಧ್ಯಾಪಕರುಗಳಿಗೂ ಕೊಡುತ್ತಿದ್ದ ವೇತನ ಶ್ರೇಣಿಯಲ್ಲಿ ಅವರಿಬ್ಬರ ನಡುವೆ ಭೇದ ಕಲ್ಪಿಸಲಾಗಿತ್ತು. ಯೂರೋಪಿಯನ್ ಪ್ರಾಧ್ಯಾಪಕರಿಗೆ ತಿಂಗಳಿಗೆ ೭೫೦ ರೂ. ಸಲ್ಲುತ್ತಿದ್ದ ಕಡೆ ಭಾರತೀಯ ಪ್ರಾಧ್ಯಾಪಕರಿಗೆ ೪೫೦ ರೂ. ಮಾತ್ರ ಸಲ್ಲುತ್ತಿತ್ತು. ಈ ವ್ಯತ್ಯಾಸವನ್ನು ತೊಡೆದುಹಾಕಲು ೩ ವರ್ಷಗಳ ಕಾಲ ಮನವಿಗಳನ್ನು ಮಾಡಿಕೊಳ್ಳಬೇಕಾಯಿತು, ವಾದ ಮಾಡಬೇಕಾಯಿತು. ಆ ಕಾಲದಲ್ಲಿ ಯೂರೋಪಿಯನ್ನರನ್ನು ಮಾತ್ರ ಪ್ರಿನ್ಸಿಪಾಲರುಗಳಾಗಿ ನೇಮಕ ಮಾಡಲಾಗುತ್ತಿತ್ತು. ೧೯೧೩ರಲ್ಲಿ ಎಂಟು ದಿನಗಳ ಅವಧಿಗಾಗಿ ರಾಜರಾಜವರ್ಮನನ್ನು ಪ್ರಿನ್ಸಿಪಾಲರ ಸ್ಥಾನದಲ್ಲಿ ಕೆಲಸ ಮಾಡಲು ಅವನನ್ನು ನೇಮಿಸಿದಾಗ ಅದೊಂದು ಮಹತ್ವ ಸೂಚನೆಯ ಘಟನೆ ಎಂದು ಎಣಿಸಲಾಯಿತು. ೧೯೧೬ರಲ್ಲಿ ೭ ತಿಂಗಳುಗಳ ಕಾಲ ಮತ್ತು ೧೯೧೮ರಲ್ಲಿ ೩ ತಿಂಗಳ ಕಾಲ, ಹೀಗೆ ಆ್ಯಕ್ಟಿಂಗ್ ಪ್ರಿನ್ಸಿಪಾಲ್ ಆಗಿ ಕಾರ್ಯ ನಿರ್ವಹಿಸಲು ರಾಜರಾಜವರ್ಮನಿಗೆ ಇನ್ನು ಎರಡು ಅವಕಾಶಗಳು ದೊರೆತವು.

**ಸುಧಾರಣೆಯಲ್ಲಿ ಉತ್ಸುಕತೆ**

ಮದರಾಸು ವಿಶ್ವವಿದ್ಯಾನಿಲಯವು ಭಾರತೀಯ ಭಾಷೆಗಳ ವಿಚಾರದಲ್ಲಿ ವರ್ತಿಸುತ್ತಿದ್ದ ರೀತಿಯ ಬಗೆಗೆ ರಾಜರಾಜವರ್ಮನಿಗೆ ಸ್ವಲ್ಪವೂ ಸಮಾಧಾನವಿರಲಿಲ್ಲ. ಈ ಪ್ರವೃತ್ತಿಯನ್ನು ಸ್ಪಷ್ಟವಾದ ಮಾತುಗಳಲ್ಲಿ ಖಂಡಿಸಲು ದೊರೆತ ಯಾವ ಅವಕಾಶವನ್ನು ಅವನು ಕಳೆದುಕೊಳ್ಳಲಿಲ್ಲ. ೧೯೧೪ರಲ್ಲಿ ಕಾಲೇಜು ದಿನಾಚರಣೆಯ ಸಮಾರಂಭದ ಅಧ್ಯಕ್ಷತೆಯನ್ನು ರಾಜರಾಜವರ್ಮನು ವಹಿಸಿದನು. ಆತನು ಬಹಳ ಎಚ್ಚರಿಕೆಯಿಂದ ಸಿದ್ಧಪಡಿಸಿದ್ದ ಅಧ್ಯಕ್ಷ ಭಾಷಣವನ್ನು ಅಚ್ಚು ಮಾಡಿಸಿ, ಅದರ ಪ್ರತಿಗಳನ್ನು ವಿಶ್ವವಿದ್ಯಾನಿಲಯದ ಸೆನೆಟ್ ಸಭೆ ಸಿಂಡಿಕೇಟ್ ಮತ್ತು ಇತರ ವಿದ್ಯಾವಿಷಯ ಮಂಡಲಿಗಳ ಎಲ್ಲ ಸದಸ್ಯರಿಗೂ ಹಂಚಲಾಯಿತು. ಮದರಾಸು ವಿಶ್ವವಿದ್ಯಾನಿಲಯದಲ್ಲಿ ದ್ವಿತೀಯ ಭಾಷೆಯೊಂದನ್ನು ಕಡ್ಡಾಯವಾಗಿ ವ್ಯಾಸಂಗ ಮಾಡುವ ಅವಕಾಶವನ್ನು ತೆಗೆದು ಹಾಕಬೇಕೆಂಬ ಪ್ರಯತ್ನದ ವಿಚಾರಕ್ಕೆ ಸಂಬಂಧಿಸಿದ ಭಾಷಣದ ಕೆಲವು ಪ್ರಸಕ್ತ ವಾಕ್ಯಗಳನ್ನು ಈ ಕೆಳಗೆ ಎತ್ತಿಕೊಟ್ಟಿದೆ:

# ಅಧ್ಯಾಯ ನಾಲ್ಕು

## ವೃತ್ತಿಜೀವನದ ಪರಾಕಾಷ್ಠೆ

೨೫ ವರ್ಷಗಳ ಕಾಲ ಸಾಗಿದ ರಾಜರಾಜವರ್ಮನ ಅಧ್ಯಾಪಕ ವೃತ್ತಿ ಉದ್ಯೋಗ ನಿಚ್ಚಣಿಗೆಯ ಅತ್ಯಂತ ಕೆಳಗಿನ ಮೆಟ್ಟಿಲಿನಿಂದ ತೊಡಗಿ ಸುಮಾರು ೨೦ ವರ್ಷಗಳಲ್ಲಿ ಅತ್ಯಂತ ಮೇಲಿನ ತುದಿಯನ್ನು ಮುಟ್ಟಿತು. ಬಲುಮಟ್ಟಿಗೆ ಯೂರೋಪಿಯನ್ನರಿಗೆ ಮಾತ್ರ ಮೀಸಲಾಗಿದ್ದ ಪ್ರಥಮದರ್ಜೆಯ ಕಾಲೇಜಿನಲ್ಲಿ ಆಗಿನ ದಿನಗಳಲ್ಲಿ ಪ್ರಾಧ್ಯಾಪಕನಾಗುವುದು, ಅದರಲ್ಲಿಯೂ ಉಪೇಕ್ಷೆಗೆ ಪಾತ್ರವಾಗಿದ್ದ ಭಾರತೀಯ ಭಾಷೆಗಳ ಅದ್ಯಯನ ಕ್ಷೇತ್ರದಲ್ಲಿ ಪ್ರಾಧ್ಯಾಪಕನಾಗುವುದು, ನಿಜವಾಗಿಯೂ ಒಂದು ಅಪೂರ್ವ ಸಾಧನೆಯಾಗಿತ್ತು. ಈ ಅಸಾಧಾರಣ ಗೌರವವು ಒಂದು ಸಹಜ ರೀತಿಯಲ್ಲಿ ರಾಜರಾಜವರ್ಮನಿಗೆ ಪ್ರಾಪ್ತವಾಯಿತು. ೧೯೧೦ರಲ್ಲಿ ಆತ ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳ ಪ್ರಥಮ ಪ್ರಾಧ್ಯಾಪಕನಾಗಿ ನೇಮಕಗೊಂಡನು. ಈ ಸಮಾಚಾರವನ್ನು ಕೇಳಿ ಕೇರಳವರ್ಮನಿಗೆ ಎಷ್ಟು ಸಂತೋಷವಾಯಿತೆಂದರೆ, ಅವನು ತನ್ನ ಸೋದರಳಿಯನಿಗೆ ಅಭಿನಂದನೆಯ ಸಂದೇಶವೊಂದನ್ನು ತಂತಿಯ ಮೂಲಕ ಕಳಿಸಿದನು; ಅದನ್ನು ಸ್ವೀಕರಿಸಿದ ರಾಜರಾಜವರ್ಮನು ಅದನ್ನು ಅಮೂಲ್ಯವೆಂದು ಭಾವಿಸಿದನು.

ಅವನು ಪ್ರಾಧ್ಯಾಪಕನಾಗಿದ್ದ ಐದು ವರ್ಷಗಳ ಕಾಲದಲ್ಲಿ (೧೯೧೦–೧೯೧೫) ಸಂದರ್ಭ ಸನ್ನಿವೇಶಗಳು ಅಷ್ಟೇನೂ ಸುಗಮವಾಗಿರಲಿಲ್ಲ. ಕಾಲೇಜು ಸಲಹಾ ಮಂಡಲಿ(College Council)ಯಲ್ಲಿ ಯೂರೋಪಿಯನ್ ಪ್ರಾಧ್ಯಾಪಕರುಗಳು ಅನೇಕ ವಿಷಯಗಳಲ್ಲಿ ತಂಪುರಾನದೊಂದಿಗೆ ಏಕದೃಷ್ಟಿಯುಳ್ಳವರಾಗಿರಲಿಲ್ಲ. ಪ್ರಾರಂಭದಲ್ಲಿ ಸಂಸ್ಕೃತಕ್ಕೆ ಒಂದು, ಮಲಯಾಳಕ್ಕೆ ಒಂದು, ಹೀಗೆ ಎರಡು 'ಅಯೂಟರ್' (ಸಹಾಧ್ಯಾಪಕ) ಹುದ್ದೆಗಳನ್ನು ನಿರ್ಮಿಸಬೇಕೆಂದು ಆತ ಅಪೇಕ್ಷೆ ಪಟ್ಟನು. ಈ ಏರ್ಪಾಡನ್ನು ವಿರೋಧಿಸಲಾಯಿತು; ಆದರೆ ಕಡೆಯಲ್ಲಿ ಆತನೆ ಗೆದ್ದನು. ಪ್ರಸಿದ್ಧ ವಿದ್ವಾಂಸರಾದ ನಂತ್ಯಾರ್ ವೀಟ್ಟಿಲ್ ಪರಮೇಶ್ವರನ್ ಪಿಳ್ಳೈ ಹಾಗೂ ಆಟ್ಟೂರ್ ಕೃಷ್ಣ ಪಿಷಾರೊಟಿ ಇವರುಗಳು ತಿರುವನಂತಪುರದ ಮಹಾರಾಜರ ಕಾಲೇಜಿನಲ್ಲಿ ನೇಮಕಗೊಂಡದ್ದು ಈ ರೀತಿಯಲ್ಲಿ. ವಿದ್ವಾಂಸರೂ

ಇದರ ಪರಿಣಾಮವಾಗಿ, ವಿದ್ಯಾರ್ಥಿಗಳ ದೃಷ್ಟಿಯಲ್ಲಿ ದ್ವಿತೀಯ ಭಾಷಾವಿಷಯವು ಅನೇಕ ವಿಧಗಳಲ್ಲಿ ತನ್ನ ಘನತೆಗೌರವಗಳನ್ನು ಕಳೆದುಕೊಂಡಿತು... ವಿಪತ್ತು ಸಂಭವಿಸಿದ್ದು ಹೀಗೆ. ಹೀಗಿರುವುದರಿಂದ ನಿಜವಾದ ಪರಿಹಾರೋಪಾಯ ಇರುವುದು ಕುಂದುಕೊರತೆಗಳನ್ನು ಹೋಗಲಾಡಿಸುವುದರಲ್ಲಿ ಇದೆಯೇ ಹೊರತು ವಿಷಯವನ್ನೇ ಪೂರ್ತಿಯಾಗಿ ತೆಗೆದುಹಾಕಿ ಬಿಡುವುದರಲ್ಲಿ ಅಲ್ಲ."

ಅನಂತರ, ತನ್ನ ಸ್ವಂತ ತಾಯ್ನುಡಿಯ ವಿಷಯದಲ್ಲಿ ಆಗಿರುವ ಪ್ರಗತಿಯ ಸಮೀಕ್ಷೆಯನ್ನು ಮುಂದಿಡುವುದಕ್ಕಾಗಿ ಹೀಗೆ ಮುಮದುವರಿಸುತ್ತಾನೆ:

"ಇತರ ದೇಶಭಾಷೆಗಳಲ್ಲಿ ಹೇಗೊ ಹಾಗೆ ಮಲಯಾಳದಲ್ಲಿಯೂ ಅತ್ಯಂತ ಈಚೆಗೆ, ತಕ್ಕಮಟ್ಟಿನ ಪ್ರಮಾಣದಲ್ಲಿ ಹುಟ್ಟಿರುವ ಗದ್ಯ ಸಾಹಿತ್ಯವನ್ನು ಗಮನವಿಟ್ಟು ನೋಡಿ; ಅದೆಲ್ಲವೂ ನಿಸ್ಸಂದೇಹವಾಗಿ ಪ್ರತ್ಯಕ್ಷವಾಗಿಯೊ ಇಲ್ಲವೆ ಪರೋಕ್ಷ ವಾಗಿಯೊ ವಿಶ್ವವಿದ್ಯಾನಿಲಯದ ಮೂಲಕ ಆಗಿರುವ ಕೆಲಸ. ಸಾಹಿತ್ಯ ವಿಮರ್ಶೆ, ಜನಪ್ರಿಯ ವಿಜ್ಞಾನ, ಮತ್ತು ಅಂಥ ಇತರ ಆಧುನಿಕ ದೃಷ್ಟಿಯ ಇತರ ವಿಷಯಗಳ ಬಗೆಗೆ ದೇಶ ಭಾಷೆಗಳಲ್ಲಿ ಹುಟ್ಟಿರುವ ಕೃತಿಗಳನ್ನೂ ಗಮನಿಸಿ; ಇಂಗ್ಲಿಷಿನಲ್ಲಿಯೂ ತಮ್ಮ ಸ್ವಂತ ದೇಶಭಾಷೆಗಳಲ್ಲಿಯೂ ಸ್ವಲ್ಪಮಟ್ಟಿಗೆ ಹೊಂದಿಕೆಯಾದ ತರಬೇತಿ ಮತ್ತು ಶಿಕ್ಷಣವನ್ನು ಪಡೆದಿರುವ ಪದವೀಧರರು ರಚಿಸದೆ ಹೋಗದಿದ್ದರೆ ಅವುಗಳ ಸೊಲ್ಲೂ ನಮಗೆ ಕೇಳಿಬರುತ್ತಿರಲಿಲ್ಲ... ಈ 'ಅಂಕಿತ'ಗಳ ('Titles') (Oriental Tital Examinations) ವ್ಯವಸ್ಥೆ ಏರ್ಪಟ್ಟಿರುವುದು ಪಂಡಿತವರ್ಗವನ್ನು ಈಗಿನ ಕಾಲಕ್ಕೆ ತಕ್ಕಂತೆ ತಿದ್ದಿ, ಅವರ ಅಂಥ ಸಂಪ್ರದಾಯನಿಷ್ಠೆಯನ್ನು ಮುರಿದು, ಅವರಿಂದ ಯಾವ ಕೇಡೂ ಉಂಟಾಗದಂತೆ ಅವರನ್ನು ಶಕ್ತಿಗುಂದಿಸುವುದೇ ಅದರ ಉದ್ದೇಶ ಎಂಬುದು ವ್ಯಕ್ತಪಡುತ್ತದೆ."

"ವಿಶ್ವವಿದ್ಯಾನಿಲಯದ ಹೊಸ ಪಾಠ ಪಟ್ಟಿಕೆಯಲ್ಲಿ ಇಂಗ್ಲಿಷಿನಿಂದ ದೇಶ ಭಾಷೆಗೂ ದೇಶಭಾಷೆಯಿಂದ ಇಂಗ್ಲಿಷಿಗೂ 'ಭಾಷಾಂತರ' ಎಂಬ ವಿಷಯವನ್ನು ಎಲ್ಲ ವಿಭಾಗಗಳಲ್ಲಿಯೂ ಏಕೆ ಕಡ್ಡಾಯದ ವಿಷಯವಾಗಿ ಮಾಡಿಲ್ಲವೆಂಬುದು ನನಗೆ ಆಶ್ಚರ್ಯವನ್ನುಂಟುಮಾಡಿದೆ."

ಅನಂತರ, ಇಂಗ್ಲಿಷ್ ಹಾಗೂ ಸರ್ವಸಾಮಾನ್ಯ ವಿಚಾರ ಜ್ಞಾನಗಳ ಪರಿಚಯ ಇಲ್ಲದ ಬಹುಸಂಖ್ಯಾತ ಜನವರ್ಗ ಒಂದು ಕಡೆ, ತಾನು ಬಲ್ಲ ಪಾಶ್ಚಾತ್ಯ ವಿದ್ಯೆಗಾಗಿ ಹೆಮ್ಮೆಪಡುತ್ತಾ ಯುಗ ಯುಗಾಂತರಗಲ ನೆಲೆಗಟ್ಟಿನಿಂದ ದೂರ ಸರಿಯುತ್ತ ತಮ್ಮ ರಾಷ್ಟ್ರೀಯ ಲಕ್ಷಣವನ್ನೇ ಕಳೆದುಕೊಳ್ಳುತ್ತಿರುವ ಅಲ್ಪ ಸಂಖ್ಯಾತ ವರ್ಗ,– ಹೀಗೆ ಪರಸ್ಪರ ಹೊಂದಿಕೊಳ್ಳದೆ ಬೇರೆ ಬೇರೆಯಾಗಿ ನಿಂತಿರುವ

"…..ದಕ್ಷಿಣ ಭಾರತದ ಕೆಲವು ದೇಶ ಭಾಷೆಗಳಲ್ಲಿ ಪರೀಕ್ಷೆಗಳ ಉನ್ನತಮಟ್ಟಕ್ಕೆ ಯೋಗ್ಯವೆನಿಸುವ ಪಾಠ ಪುಸ್ತಕಗಳು ಕಡೆಯಪಕ್ಷ ಗದ್ಯದಲ್ಲಿಯಾದರೂ ಆಗ ಇರಲಿಲ್ಲ; ಹಾಗೂ ಅಂತ ಪುಸ್ತಕಗಳು ಲಭ್ಯವಿದ್ದ ಸಂದರ್ಭಗಳಲ್ಲಿ ಕೂಡ ಇಂಗ್ಲಿಷ್ ಸಾಹಿತ್ಯದಲ್ಲಿರುವಂಥ ಉತ್ತಮೋತ್ತಮ ಕೃತಿಗಳಿಗೆ ಸರಿದೊರೆಯಾಗುವ ಮಟ್ಟಿನ ಗುಣವನ್ನು ಉಳ್ಳವಾಗಿರಲಿಲ್ಲ ಅವು. ಇಷ್ಟರ ಜೊತೆಗೆ, ಬೇರೆಬೇರೆ ಪರೀಕ್ಷೆಗಳಿಗೆ ಇದ್ದುದರಲ್ಲಿ ಉತ್ತಮವಾದ ಪುಸ್ತಕಗಳನ್ನು ಪಠ್ಯವಾಗಿ ನಿಯಾಮಕ ಮಾಡಿ ಏನೂ ಇಲ್ಲದುದಕ್ಕಿಂತ ಮೇಲು ಎನ್ನುವ ಮಟ್ಟಿಗೆ ಪಾಠ ನಿಯಾಮಕ ಮಂಡಲಿಗಳ ಎಚ್ಚರಿಕೆ ವಹಿಸಿ ಕೆಲಸ ಮಾಡುತ್ತಿರಲಿಲ್ಲ; ಇದರಿಂದಾಗಿ ಮೊದಲೇ ಹದಗೆಟ್ಟ ಪರಿಸ್ಥಿತಿ ಇನ್ನಷ್ಟು ಹದಗೆಡುತ್ತಿತ್ತು. ಅಲ್ಲದೆ, ಗೊತ್ತು ಮಾಡಿದ ಪುಸ್ತಕಗಳನ್ನು ಬೋಧಿಸುವ ಹೊಣೆ ಹೊತ್ತ ಪಂಡಿತರುಗಳು ಆಧುನಿಕ ವಿಮರ್ಶಪದ್ಧತಿಯಲ್ಲಿ ಅವುಗಳನ್ನು ಪಾಠ ಮಾಡಲು ಅಸಮರ್ಥರಾಗಿದ್ದರು; ಈ ಪರಿಸ್ಥಿತಿಯಿಂದಾಗಿ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಆ ವಿಷಯವನ್ನು ಕಂಡರೇ ಆಗದಷ್ಟು ಸ್ವಾಭಾವಿಕವಾಗಿಯೇ ಜುಗುಪ್ಸೆ ಹುಟ್ಟುವಂತಾಯಿತು. ಇನ್ನು ವಿಶ್ವವಿದ್ಯಾನಿಲಯದ ಪರೀಕ್ಷಕರ ಸರತಿ; ಅವರುಗಳು ಪದೇಪದೇ ಕಿರಿಕಿರಿ ಹುಟ್ಟಿಸುವ ಅವಿವೇಕದ ಪ್ರಶ್ನೆ ಪತ್ರಿಕೆಗಳನ್ನು ರಚಿಸಿ, ಭಾಷಾ ವಿಷಯದ ಬಗ್ಗೆ ಇದ್ದ ತಿರಸ್ಕಾರ ಭಾವನೆಯನ್ನು ಹೆಚ್ಚು ಮಾಡುತ್ತಿದ್ದರು."

ಆಗಿನ ಕಾಲದಲ್ಲಿ ಇದ್ದಂತಹ ಪರಿಸ್ಥಿತಿಯ ಸರಿಯಾದ ಹಾಗೂ ನ್ಯಾಯವಾದ ವಿಶ್ಲೇಷಣೆ ಇದು; ಇದರಿಂದ ವಿಫಲತೆಯನ್ನು ಒಪ್ಪಿಕೊಂಡಂತೆಯೆ ಆಗಿದೆ. ಇಡಿಯ ಪ್ರಶ್ನೆಯನ್ನು ಪುನರಾಲೋಚನೆ ಮಾಡುತ್ತಿದ್ದವರು ಗಲಭೆ ಮಾಡತೊಡಗಿದರು. ಈ ವಿಚಾರವಾಗಿ ರಾಜರಾಜವರ್ಮ ಹೀಗೆ ಮುಂದುವರಿಸಿದನು:

"ದ್ವಿತೀಯ ಭಾಷೆ ವ್ಯಾಸಂಗವನ್ನು ಸುಧಾರಿಸಬೇಕು, ನಿಲ್ಲಿಸಕೂಡದು ಎಂದು ಅವರು ಒತ್ತಾಯ ಮಾಡಿದರು. ವಿಫಲತೆ ಉಂಟಾಗಿದ್ದರೆ ಅದರಲ್ಲಿ ಭಾಷೆಗಳ ತಪ್ಪೇನೂ ಇಲ್ಲ; ಅದಕ್ಕೆ ಕಾರಣ ಇಷ್ಟೆ, ಸರಿಯಾದ ರೀತಿಯಲ್ಲಿ ಅವುಗಳ ಯೋಗ್ಯತೆಯನ್ನು ಪರೀಕ್ಷಿಸಿ ನೋಡುವ ಅವಕಾಶವನ್ನೇ ಅವಕ್ಕೆ ಕೊಡಲಿಲ್ಲ. ಅನೇಕ ಕಾಲೇಜುಗಳಲ್ಲಿ ದ್ವಿತೀಯ ಭಾಷೆಗಳನ್ನು ಸಮರ್ಥವಾಗಿ ಬೋಧಿಸುವುದಕ್ಕೆ ಅವಕಾಶವನ್ನೇ ಕಲ್ಪಿಸಿರಲಿಲ್ಲ. ಹೆಸರಿಗೆ ಅಷ್ಟೋ ಇಷ್ಟೋ ಸಂಬಳ ತೆಗೆದುಕೊಂಡು ಕೆಲಸ ಮಾಡಲೊಪ್ಪಿಕೊಂಡು ಬಂದಿದ್ದ, ಒಂದು ಹೊತ್ತಿನ ಊಟಕ್ಕಿಲ್ಲದ ಹಳೆಯ ಮಾದರಿಯ ಪಂಡಿತರಿಗೆ ಆ ವಿಷಯವನ್ನು ಸಾಧಾರಣವಾಗಿ ಒಪ್ಪಿಸಲಾಗುತ್ತಿತ್ತು.

ಕಂಡಿರಬಹುದು; ಆದರೆ ಆಮೇಲಿನ ಘಟನೆಗಳು ಆತ ಹೇಳಿದ್ದು ಎಷ್ಟು ಸರಿಯಾಗಿತ್ತು ಎನ್ನುವುದನ್ನು ತೋರಿಸಿಕೊಟ್ಟುವು. ತಿರುವನಂತಪುರದ ಮಹಾರಾಜರವರ ಕಾಲೇಜಿನಲ್ಲಿ ಮಲಯಾಳ ಬಿ.ಎ. (ಆನರ್ಸ್) ಪದವಿ ವ್ಯಾಸಂಗವನ್ನು ೧೯೩೫ನೆಯ ಇಸವಿಯಲ್ಲಿ ಪ್ರಾರಂಭಿಸಲಾಯಿತು. ೧೯೩೭ರಲ್ಲಿ ತಿರುವಾಂಕೂರು ವಿಶ್ವವಿದ್ಯಾನಿಲಯವು ಸ್ಥಾಪಿತವಾಯಿತು; ಆಮೇಲೆ ಇದೇ ಕೇರಳದ ವಿಶ್ವವಿದ್ಯಾನಿಲಯವಾಯಿತು.

**ಶೈಕ್ಷಣಿಕ ಕಾರ್ಯನಿರ್ವಾಹ**

ಸಂಸ್ಕೃತ ಪ್ರಾಧ್ಯಾಪಕತ್ವ ಮತ್ತು ಸಂಸ್ಕೃತ ಹಾಗೂ ದ್ರಾವಿಡ ಭಾಷೆಗಳ ವಿಭಾಗದ ತನ್ನ ದಿನನಿತ್ಯದ ಕರ್ತವ್ಯಗಳ ಜೊತೆಗೆ ರಾಜರಾಜವರ್ಮನು ಭಾಷಾ ಅಧ್ಯಯನ ವಿಚಾರ ಮತ್ತು ಸಾಮಾನ್ಯ ಶಿಕ್ಷಣ ಇವುಗಳಿಗೆ ಸಂಬಂಧಪಟ್ಟ ಬೇರೆ ಬೇರೆ ಇತರ ಹೊಣೆಗಳನ್ನೂ ಒಪ್ಪಿಕೊಳ್ಳಬೇಕಾಯಿತು. ವಿಶ್ವವಿದ್ಯಾನಿಲಯದ ಪಾಠ ವಿಷಯ ನಿಯಾಮಕ ಮಂಡಲಿ (Board of Studies) ಮತ್ತು ತಿರುವಾಂಕೂರು ಸಂಸ್ಥಾನದ ಪಠ್ಯ ಪುಸ್ತಕ ಸಮಿತಿಗಳಲ್ಲಿ ಚಟುವಟಿಕೆಯಿಂದ ಕೆಲಸ ಮಾಡುವ, ಉಪಯೋಗಕಾರಿಯಾದ ಸದಸ್ಯನಾಗಿದ್ದುದರಿಂದ ಆತ ಗಣ್ಯ ಪ್ರಮಾಣದಲ್ಲಿ ಕಾರ್ಯನಿರ್ವಹಣೆ ಮಾಡಬೇಕಾಗಿದ್ದಿತು. ಅಧಿಕಾರಿಗಳು ಮತ್ತು ಅಧಿಕಾರಿಗಳಲ್ಲದವರು ಇದ್ದ ಭಾಷಾ ಪರಿಷ್ಕರಣ ಸಮಿತಿಯ ಸದಸ್ಯನಾಗಿಯೂ ಇದ್ದನು. ಇಷ್ಟರ ಜೊತೆಗೆ, ಗಣ್ಯರಾದ ವಿದ್ವಾಂಸರಿಂದ ಉಪನ್ಯಾಗಳನ್ನು ಏರ್ಪಡಿಸುವುದಕ್ಕಾಗಿ ನಿಯೋಜಿತವಾಗಿದ್ದ ಸಾರ್ವಜನಿಕ ಉಪನ್ಯಾಸ ಸಮಿತಿಯ ಕಾರ್ಯದರ್ಶಿಯಾಗಿಯೂ ಆತ ಕೆಲಸ ಮಾಡ ಬೇಕಾಗಿದ್ದಿತು. ಬೇರೆ ಇನ್ನು ಕೆಲವು ಸಮಿತಿಗಳಲ್ಲಿಯೂ ಅವುಗಳ ಅಧ್ಯಕ್ಷನಾಗಿದ್ದು ಕೊಂಡು, ಅವುಗಳ ಕಾರ್ಯಕಲಾಪಗಳಲ್ಲಿ ಮಾರ್ಗದರ್ಶನ ಮಾಡಬೇಕಾಗಿದ್ದಿತು.

ಈ ಎಲ್ಲ ಕರ್ತವ್ಯಗಳ ನಿರ್ವಾಹವು ಹೆಗಲೇರಿದ್ದರೂ ಸಹ ಪುಸ್ತಕಗಳನ್ನು ಬರೆಯಲು ಅದು ಹೇಗೋ ಕಾಲವನ್ನು ದೊರಕಿಸಿಕೊಳ್ಳುತ್ತಿದ್ದನು. ಉದ್ಯೋಗ ಸಂಬಂಧದ ಕಾರ್ಯದಲ್ಲಿ ತೊಡಗಿದ್ದ ಕಡೆಯ ಎಂಟು ವರ್ಷಗಳಲ್ಲಿ ಕೆಲಸದ ಒತ್ತಡ ಆತನ ಮೇಲೆ ಅಗುತುಕೊಂಡಿದ್ದಾಗಲೂ 'ಸಾಹಿತ್ಯ ಸಾಹ್ಯಂ', 'ಮಲಯಾಳ ಶಾಕುಂತಳಂ' (ಸರಳವಾದ ಮಲಯಾಳದಲ್ಲಿ ಸಂಸ್ಕೃತ 'ಶಾಕುಂತಲ ನಾಟಕ'ದ ಅನುವಾದ), 'ಲಘುಪಾಣಿನೀಯಂ'–ಭಾಗ ೨, 'ಮಾಳವಿಕಾಗ್ನಿಮಿತ್ರಂ', 'ಚಾರುದತ್ತನ್' ಮತ್ತು 'ಸ್ವಪ್ನವಾಸವದತ್ತಂ' ನಾಟಕಗಳ

ಎರಡು ಭಿನ್ನವರ್ಗಗಳನ್ನು ಪೋಷಿಸಿಕೊಂಡು ಬರುತ್ತಿರುವ ವಿದ್ಯಮಾನದಲ್ಲಿ ಅಡಗಿರುವ ಅಪಾಯಗಳನ್ನೂ ಆತ ಎತ್ತಿತೋರಿದನು.

ಕಡೆಯದಾಗಿ ಆತನು ಹೀಗೆ ಹೇಳುತ್ತಾನೆ:

"ದೇಶಭಾಷೆ ಯಾವಾಗಲೂ ಜನಸಾಮಾನ್ಯರ ಭಾಷೆಯಾಗಿಯೇ ಉಳಿಯಬೇಕು; ಹೀಗಿರುವುದರಿಂದ ಇಂಗ್ಲಿಷ್ ವಿದ್ಯಾಭ್ಯಾಸವು ಭಾರತದಲ್ಲಿ ನಾಗರಿಕತೆಯನ್ನು ಬೆಳಸುತ್ತಿರುವ ಕಾರ್ಯಕ್ರಮದ ಜೊತೆಗೆ ದೇಶ ಭಾಷೆಗಳಲ್ಲಿಯೂ ಅಂತಹ ಕಾರ್ಯವನ್ನು ಮಾಡುವುದು ಅಪೇಕ್ಷಣೀಯ. ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದ ಫಲವಾಗಿ ಒಂದು ಸರಾಸರಿ ಮಟ್ಟದ ತಿಳಿವಳಿಕೆಯ ಪ್ರಯೋಜನಗಳನ್ನು ಪಡೆದ ಭಾರತೀಯನು ಪಾಶ್ಚಾತ್ಯ ಜ್ಞಾನ ಸಂಸ್ಕೃತಿಗಳನ್ನೂ ಪಡೆದಿರಬೇಕೆಂದು ನಾವು ನಿರೀಕ್ಷಿಸುವೆವು; ಕನಿಷ್ಠಪಕ್ಷ ಅವುಗಳ ಕೆಲವು ಪಾಲನ್ನಾದರೂ ಒಳಗೊಂಡು ಧರಿಸಬಲ್ಲ ಮಟ್ಟಿಗೆ ದೇಶಭಾಷೆಗಳನ್ನು ಉತ್ತಮಪಡಿಸಿ ಹದಗೊಳಿಸಬೇಕಾದದ್ದು ಅಗತ್ಯ. ಕೈಬಿಡಲಾಗದ ಈ ಅತ್ಯಗತ್ಯ ಕಾರ್ಯವನ್ನು ನಮ್ಮ ವಿಶ್ವವಿದ್ಯಾನಿಲಯಗಳ ಪದವೀಧರರಿಗಿಂತ ಮೇಲಾಗಿ ಮಾಡಬಲ್ಲವರು ಯಾರು? ವಿಷಯ ಜ್ಞಾನದಲ್ಲಿಯೂ ಭಾಷಾ ಸಾಮರ್ಥ್ಯದಲ್ಲಿಯೂ ಅವರಿಗೆ ಸರಿಯಾದ ಶಿಕ್ಷಣವನ್ನು ಕೊಡದಿದ್ದರೆ ಅದನ್ನು ಅವರು ಮಾಡಬಲ್ಲರಾದರೂ ಹೇಗೆ?"

ಸಂಪದ್ಯುಕ್ತವೂ ಪುರಾತನವೂ ಆದ ಭಾರತೀಯ ಸಂಸ್ಕೃತಿಯನ್ನು ರೂಪಿಸುವ ಕಾರ್ಯದಲ್ಲಿ ಸಂಸ್ಕೃತ ಭಾಷೆ ವಹಿಸಿರುವ ದೊಡ್ಡ ಪಾತ್ರ, ವಿದ್ಯಾಭ್ಯಾಸ ವಿಷಯದ ಇನ್ನಿತರ ಹಲವು ಮುಖಗಳು, ಇವುಗಳ ವಿಚಾರವನ್ನೂ ಅಧ್ಯಕ್ಷ ಭಾಷಣ ಪ್ರಸ್ತಾವಿಸಿದೆ. ಈ ಭಾಷಣದ ಸತ್ವ, ಸ್ಪಷ್ಟತೆ, ಅದರ ದೂರವ್ಯಾಪ್ತಿಯ ದೃಷ್ಟಿ, ಹಾಗೂ ಅದರ ಮೂಲಕ ಭಾರತೀಯ ಭಾಷೆಗಳ ಪಕ್ಷವನ್ನು ವಹಿಸಿ ಅವುಗಳನ್ನು ಎತ್ತಿಹಿಡಿದ ಉತ್ಕೃಷ್ಟ ವಿಧಾನ,– ಇವುಗಳನ್ನು ಮೆಚ್ಚಿಕೊಂಡು ಸಮಸ್ತ ದಕ್ಷಿಣ ಭಾರತದ ಅನೇಕ ಶಿಕ್ಷಣವೇತ್ತರು ರಾಜರಾಜವರ್ಮನನ್ನು ಪ್ರಶಂಸೆ ಮಾಡಿದರು. ಭಾರತೀಯ ಭಾಷೆಗಳಲ್ಲಿ ಬಿ.ಎ. ಆನರ್ಸ್ ಪದವಿ ಪರೀಕ್ಷೆಯ ತರಗತಿಗಳನ್ನು ಪ್ರಾರಂಭ ಮಾಡಬೇಕು ಎಂದು ಆತ ವಾದಿಸಿದನು. ಮದರಾಸು ವಿಶ್ವವಿದ್ಯಾನಿಲಯದಲ್ಲಿ ಇದ್ದಂತ ಅಗೋಚರ ಅಪಾಯಗಳಿಂದ ತಪ್ಪಿಸಿಕೊಳ್ಳು ವುದಕ್ಕಾಗಿಯೂ ಸಂಸ್ಥಾನದ ವಿಶಿಷ್ಟ ಅಗತ್ಯಗಳನ್ನು ತುಂಬಿಕೊಂಡು ಅದರ ಆದರ್ಶಗಳನ್ನು ಸಾಧಿಸುವ ಸಲುವಾಗಿಯೂ ತಿರುವಾಂಕೂರಿಗೆ ಪ್ರತ್ಯೇಕವಾದ ವಿಶ್ವವಿದ್ಯಾಲಯವನ್ನು ಸ್ಥಾಪಿಸಬೇಕೆಂದು ಆತ ಬೇರೊಂದು ಸಂದರ್ಭದಲ್ಲಿ ಸಲಹೆ ಮಾಡಿದನು. ಅರುವತ್ತು ವರ್ಷಗಳ ಹಿಂದೆ ಅದೊಂದು ಹುಚ್ಚು ಕನಸಾಗಿ

**ಮನೆಬಾಳ್ವೆಯ ನೋಟ**

ತಂಪುರಾನನದು ಒಂದು ಆದರ್ಶವಾದ ಕೌಟುಂಬಿಕ ಜೀವನ. ಹೆಂಡತಿ ಮಕ್ಕಳನ್ನು ಬಹಳ ಎಚ್ಚರಿಕೆಯಿಂದ, ದಯಾದಾಕ್ಷಿಣ್ಯದಿಂದ ನೋಡಿಕೊಳ್ಳುತ್ತಿದ್ದನು. ಅವರ ಬದುಕು ಕಷ್ಟಕಾರ್ಪಣ್ಯ ಇಲ್ಲದೆ ನೆಮ್ಮದಿಯಿಂದ ಇರಬೇಕೆಂಬುದು ಆತನ ಬಲವಾದ ಆಸೆ. ಆತನಿಗೆ ಏಳು ಮಂದಿ ಹೆಣ್ಣುಮಕ್ಕಳು, ಆರು ಮಂದಿ ಗಂಡು ಮಕ್ಕಳು; ಇವರ ಪೈಕಿ ನಾಲ್ವರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು ಈಗ ಜೀವಂತವಾಗಿದ್ದಾರೆ. ಜೀವಂತರಾಗಿರುವ ಹೆಣ್ಣುಮಕ್ಕಳಲ್ಲಿ ಒಬ್ಬಾಕೆ ಕೇಂದ್ರ ಸರ್ಕಾರದ ಸಚಿವರಾಗಿದ್ದ ಶ್ರೀ ರವೀಂದ್ರವರ್ಮರ ತಾಯಿ. ಆತನ ದಿನಚರಿಯ ಒಂದು ದಾಖಲೆ (೧೯೧೮) ಹೀಗಿದೆ; ಇದರಿಂದ ಈ ಮಹಾವಿದ್ವಾಂಸನ ಮಾನವೀಯ ದೃಷ್ಟಿ ತೋರಿಬರುತ್ತದೆ: "ಸಂಜೆ ಹೆಂಡತಿಯನ್ನೂ ಹೆಣ್ಣು ಮಕ್ಕಳನ್ನೂ ನಕ್ಷತ್ರವೀಕ್ಷಣ ಶಾಲೆಗೆ ಕರೆದುಕೊಂಡು ಹೋಗಿದ್ದೆ; ಮಾಳಿಗೆಯ ಮೇಲಿನಿಂದ ಪಶ್ಚಿಮ ಸಮುದ್ರದ ಹಾಗೂ ಪೂರ್ವದ ಬೆಟ್ಟಗುಡ್ಡಗಳ ನೋಟ ಅತ್ಯಂತ ಅಮೋಘವಾಗಿತ್ತು. ಬಾಲಚಂದ್ರ, ಮುಳುಗುವ ಸೂರ್ಯ, ತಮ್ಮ ಉಪಗ್ರಹಗಳೊಡನೆ ತೊಳಗುತ್ತಿದ್ದ ಬೃಹಸ್ಪತಿ ಗ್ರಹ ಮತ್ತು ಶನಿಗ್ರಹ ಹಾಗೂ ಕೆಲವು ಯಮಳ ನಕ್ಷತ್ರಗಳು, ಇವನ್ನೆಲ್ಲಾ ನೋಡಿದೆವು. ಇವನ್ನು ನೋಡಿ ಮಕ್ಕಳು ಬೆರಗಾಗಿ ಹೋದರು."

ತನ್ನ ಅಣ್ಣ ವ್ಯಾಸಂಗ ಮಾಡುತ್ತಿದ್ದ ಕಾಲೇಜನ್ನು ಕೊನೆಯ ಮಗಳು ಒಮ್ಮೆ ನೋಡಬಯಸಿದಳು. ಅದಕ್ಕಾಗಿ ಒಂದು ದಿನ ನಮ್ಮ ಪ್ರಾಧ್ಯಾಪಕ ಅವಳನ್ನು ತನ್ನ ಸಂಗಡ ಕಾಲೇಜಿಗೆ ಕರೆದೊಯ್ದು, ಪಾಠ ಹೇಳುತ್ತಿದ್ದ ಒಂದು ಗಂಟೆಯ ಕಾಲವೂ ತನ್ನ ತರಗತಿಯಲ್ಲಿ ಕೂರಿಸಿಕೊಂಡಿದ್ದನು. ಈ ಸಂದರ್ಭ ಪ್ರಾಧ್ಯಾಪಕ ಕವಿಯ ಶೀಲಸ್ವಭಾವದ ಒಂದು ಮಾರ್ದವ ಗುಣವನ್ನು ತೋರಿಸುವುದಾಗಿದೆ. ೧೯೧೫ರಲ್ಲಿ ಆತನ ಗುರುವಾಗಿದ್ದ, ಪೂಜ್ಯ ಸೋದರಮಾವ ತೀರಿಕೊಂಡನು. ಈ ಘಟನೆ ಅವನಿಗೆ ದೊಡ್ಡ ಆಘಾತವಾಯಿತು.

ಆದರೆ ಜೀವನ ನಿಷ್ಠುರವಾಗಿ ಮುಂದೆ ಸಾಗಿತು. ಬಹಳ ಕೆಲಸ ಇದ್ದಾಗಲೂ ಸಾಂಸಾರಿಕ ಕರ್ತವ್ಯಗಳಲ್ಲಿ ಅವನು ಯಾವುದನ್ನೂ ಉಪೇಕ್ಷೆ ಮಾಡುತ್ತಿರಲಿಲ್ಲ. ೧೯೧೮ರಲ್ಲಿ ತನ್ನ ಮಗ ರಾಘವವರ್ಮನ ಮದುವೆಯನ್ನು ನೆರವೇರಿಸಿದನು.

ಸ್ವಲ್ಪವೂ ಸುಳಿವು ಕೊಡದೆ ಈ ಮಹಾವಿದ್ವಾಂಸನನ್ನು ಮೃತ್ಯು ಆಹುತಿ ತೆಗೆದುಕೊಂಡಿತು. ಒಂದು ಕೆಟ್ಟ ಶೀತ ಆತನ ಅವಸಾನಕ್ಕೆ ಕಾರಣವಾಯಿತು. ಶೀತದೊಂದಿಗೆ ಅತಿಸಾರವೂ ಸೇರಿಕೊಂಡು ದೇಹಸ್ಥಿತಿಯನ್ನು ಇನ್ನಷ್ಟು

ಭಾಷಾಂತರ ರೂಪಗಳನ್ನು ರಚಿಸಿದನು. ಇವುಗಳಲ್ಲದೆ ಶಾಲಾ ವಾಚನ ಪುಸ್ತಕಗಳನ್ನೂ ಸಿದ್ಧಪಡಿಸಿದನು.

ಎಂಟು ವರ್ಷಗಳ ಪರಿಮಿತ ಅವಧಿಯಲ್ಲಿ ಇಷ್ಟೆಲ್ಲವನ್ನೂ ಮಾಡಲು ಆತ ಹೇಗೆ ಸಮರ್ಥನಾದನು? ಅದೊಂದು ಅಚ್ಚರಿಯಾಗಿಯೆ ಉಳಿದುಕೊಂಡಿದೆ. ಆತನ ದಿನನಿತ್ಯದ ಕಾರ್ಯಕ್ರಮ ಹೇಗೆ ಇದ್ದಿತು?

ಆತ ಬೆಳಗ್ಗೆ ಏಳುವುದು ೬, ೬–೩೦ ಗಂಟೆಯ ಹೊತ್ತಿಗೆ. ೮ ಗಂಟೆಗೆ ಒಂದು ಬಟ್ಟಲು ಕೋಕೋ ಕುಡಿಯುವುದು. ೧೦ ಗಂಟೆಯ ಹೊತ್ತಿಗೆ ಸ್ನಾನ. ಸ್ನಾನವಾದ ಮೇಲೆ ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸಲೇಬೇಕು. ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ ದೇವಸ್ಥಾನಗಳಿಗೆ ಹೋಗುವನು. ದಿನದ ಮುಖ್ಯ ಭೋಜನ ೧೧ ಗಂಟೆಗೆ. ಅನಂತರ ನೆಲದ ಮೇಲೆ ಚಾಪೆ ಹಾಸಿಕೊಂಡು ಮಲಗುವನು; ಸ್ವಲ್ಪ ಹೊತ್ತು ಮಕ್ಕಳೊಂದಿಗೆ ವಿನೋದವಾಗಿ ಕಾಲಕಳೆಯುವನು. ನಿದ್ರೆ ಬರುವ ಹಾಗಾದರೆ ಒಳಗಡೆಗೆ ಹೋಗಿ ಒಂದು ಗಂಟೆ ಅಥವಾ ಒಂದೂವರೆಯ ಗಂಟೆಯಷ್ಟು ಕಾಲ ವಿಶ್ರಾಂತಿ ಪಡೆಯುವನು. ಆಮೇಲೆ ಏನನ್ನಾದರೂ, ಸ್ವಲ್ಪ ಹಣ್ಣು ಹಂಪಲ ಇಲ್ಲವೆ ವಿಶೇಷವಾಗಿ ಮಾಡಿದ ತಿಂಡಿ, ಇವುಗಳನ್ನು ತಿನ್ನಬೇಕು. ಅನಂತರ ವಾಟ ಮೇಜದ ಮುಂದೆ ಕುಳಿತು ಓದುವುದು ಇಲ್ಲ ಬರೆಯುವುದು. ೩–೩೦ರ ವೇಳೆಗೆ ಕಾಫಿ. ಅದಾದ ಬಳಿಕ ಸ್ವಲ್ಪ ಹೊತ್ತು ಪತ್ರವ್ಯವಹಾರಕ್ಕೆ ವಿನಿಯೋಗಿಸುವನು. ೫ ಗಂಟೆಯ ಸುಮಾರಿಗೆ ಅಂಗಳದಲ್ಲಿ ನಡೆದಾಡತೊಡಗುವನು, ಇಲ್ಲವೋ ಒಂದು ಆಟ ಟೆನಿಸ್ ಆಡಲು ಕ್ಲಬ್ಬಿಗೆ ಹೋಗುವನು. ಸಂಜೆಯಾದ ಮೇಲೆ ಹಿಂದಿರುಗಿ, ಸ್ನಾನ ಮಾಡುವನು. ಬಳಿಕ ನಿಯತಕಾಲಿಕ ಪತ್ರಿಕೆಗಳ, ಪುಸ್ತಕಗಳ ಓದು ಮೊದಲಾಗುವುದು. ರಾತ್ರಿ ೮, ೮–೩೦ರ ಹೊತ್ತಿಗೆ ಭೋಜನ. ಆ ಬಳಿಕ ಅವನ ಕುಟುಂಬದ ಜನ ಸುತ್ತಲೂ ಸೇರಿದಾಗ, ಸ್ವಲ್ಪಹೊತ್ತು ಆರಾಮವಾಗಿ ಕಾಲ ಕಳೆಯುವನು. ರಾತ್ರಿ ೧೦ ಗಂಟೆಯ ಮೇಲೆಯೇ ಮಲಗಿ ನಿದ್ರೆ ಹೋಗುವುದು.

ರಜಾ ದಿನಗಳ ಕಾರ್ಯಕ್ರಮ ಇದು. ಕೆಲಸ ಇರುವ ದಿನಗಳಲ್ಲಿ ಸ್ನಾನ ಊಟಗಳು ಬೆಳಗ್ಗೆ ೯ ಗಂಟೆಯ ಹೊತ್ತಿಗೆ ಮುಗಿದುಹೋಗುವುದು. ಮಧ್ಯಾಹ್ನದ ಲಘು ಆಹಾರ ಕಾಲೇಜಿನಲ್ಲಿಯೆ ನಡೆದುಹೋಗುವುದು. ಸಂಜೆ ೪ ಗಂಟೆಯಾದ ಮೇಲೆ ನೇರವಾಗಿ ಯೂನಿಯನ್ ಕ್ಲಬ್ಬಿಗೆ ಹೋಗುವನು; ಸಂಜೆಯ ವೇಳೆಗೆ ಒಂದು ಆಟ ಟೆನಿಸ್, ಇಸ್ಪೀಟ್ ಆಟ ಆಡಿದ ಮೇಲೆಯೇ ಅವನು ಮನೆಗೆ ಹಿಂದಿರುಗುವನು.

# ಅಧ್ಯಾಯ ಐದು

## ಭಾಷೆ ಸಾಹಿತ್ಯಗಳನ್ನು ಕುರಿತ ಪ್ರಕರಣ ಗ್ರಂಥಗಳು

ರಾಜರಾಜವರ್ಮನ ಬಹುಮುಖವಾದ ಪ್ರತಿಭೆಯ ಹಾಗೂ ಆತ ಬರೆದಿರುವ ಕೆಲವು ಪುಸ್ತಕಗಳ ವಿಚಾರವಾಗಿ ನಾವು ಈಗಾಗಲೇ ಪ್ರಾಸಂಗಿಕವಾಗಿ ಪ್ರಸ್ತಾಪಿಸಿದ್ದೇವೆ. ಈಗ ಆತನು ರಚಿಸಿರುವ ನಲವತ್ತಕ್ಕೂ ಮಿಕ್ಕರುವ ಸಾಹಿತ್ಯ ಕೃತಿಗಳನ್ನು ಕುರಿತು ಹೆಚ್ಚು ಸಮಗ್ರವೂ ವಸ್ತುನಿಷ್ಠವೂ ಆದ ಮೌಲ್ಯ ಮಾಪನವನ್ನು ಮಾಡಬೇಕಾಗಿದೆ. ಕೃತಿಗಳನ್ನು ಸ್ಥೂಲವಾಗಿ ಮೂರು ಗುಂಪುಗಳಾಗಿ ವಿಂಗಡಿಸಿ ಕೊಂಡು ಈ ಕೆಲಸ ಮಾಡುವುದು ಮೇಲು. ಮೊದಲ ಗುಂಪು, ಎಂದರೆ 'ಭಾಷಾ ಸಾಹಿತ್ಯ ವಿಷಯಕ ಪ್ರಕರಣ ಗ್ರಂಥಗಳು' ಎಂಬುದಿದು ಈ ಅಧ್ಯಾಯದ ವಿಷಯ.

ಸಾಹಿತ್ಯದ ಭಾಷೆಯಾಗಿ ಮಲಯಾಳಂ ಭಾಷೆಗೆ ಎಂಟು ಶತಮಾನಕ್ಕೂ ಮೇಲ್ಪಟ್ಟ ಇತಿಹಾಸವಿದೆ; ಆಡುನುಡಿಯಾಗಿ ಅದು ಇನ್ನೂ ಅನೇಕ ಶತಮಾನಗಳ ಕಾಲದಿಂದ ಅಸ್ತಿತ್ವದಲ್ಲಿ ಇದ್ದಿರಬೇಕು. ಹಾಗಿದ್ದರೂ, ವ್ಯವಸ್ಥಾಬದ್ಧವಾದ ವ್ಯಾಸಂಗಕ್ಕೆ ಅನುಕೂಲ ಮಾಡಿಕೊಡುವ ವ್ಯಾಕರಣ ಗ್ರಂಥಗಳು ಮತ್ತು ಶಬ್ದಕೋಶಗಳಂತಹ ಸಾಧನ ಸಲಕರಣೆಗಳು ಹದಿನೆಂಟನೆಯ ಶತಮಾನದವರೆಗೂ ಅದರಲ್ಲಿ ಬಲುಮಟ್ಟಿಗೆ ಇರಲೇ ಇಲ್ಲ. ಹದಿನೆಂಟನೆಯ ಶತಮಾನದಲ್ಲಿ ಕೂಡ ಈ ಕ್ಷೇತ್ರದಲ್ಲಿ ನಡೆದ ಕಾರ್ಯಪ್ರಯತ್ನಗಳು ಬಹಳ ಅಲ್ಪ; ಇದ್ದುದರಲ್ಲಿ ಸ್ವಲ್ಪ ಗಣ್ಯವಾದ ಕಾರ್ಯವನ್ನು ಕಾಣಬೇಕೆಂದರೆ ನಾವು ಹತ್ತೊಂಬತ್ತನೆಯ ಶತಮಾನಕ್ಕೆ ಬರಬೇಕು. ೧೪ನೆಯ ಶತಮಾನದ 'ಲೀಲಾತಿಲಕ'ವನ್ನು ಅಲಕ್ಷ್ಯ ಮಾಡದೆ ಈ ಮಾತನ್ನು ಹೇಳಿದೆ. 'ಮಣಿಪ್ರವಾಳ'ದ ಮೇಲೆ ಸಂಸ್ಕೃತದಲ್ಲಿ ಬರೆದ ಒಂದು ಪ್ರಕರಣ ಗ್ರಂಥ 'ಲೀಲಾ ತಿಲಕ'. ಇದರಲ್ಲಿ ಮಲಯಾಳಂ ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರದ ಬಗೆಗೆ ಬೆಲೆಯುಳ್ಳ ಉಲ್ಲೇಖಗಳಿವೆ.

ಹೀಗೆ ನೈಘಂಟುಕ ಶಾಸ್ತ್ರ ಮತ್ತು ವ್ಯಾಕರಣ ಶಾಸ್ತ್ರ ಗ್ರಂಥಗಳಿಗೆ ಸುಮಾರು ೨೫೦ ವರ್ಷಗಳಿಗಿಂತ ಕಡಮೆಯ ಅವಧಿಯ ಇತಿಹಾಸವಿದೆ. ಮಲಯಾಳ ಭಾಷೆಯನ್ನು ಕುರಿತು ನಿಜವಾದ ವೈಜ್ಞಾನಿಕ ವ್ಯಾಸಂಗ ಯೂರೋಪಿಯನ್ ವಿದ್ವಾಂಸರು ಆಗಮಿಸಿದಂದಿನಿಂದ ಮೊದಲಾಯಿತು. ಯೂರೋಪಿಯನ್ನರು

ಹದಗೆಡಿಸಿತು. ಮೂರು ದಿನ ಕಳೆಯುವಷ್ಟರಲ್ಲಿ ತಂಪುರಾನ್ ಶಕ್ತಿಗುಂದಿದನು. ಜ್ವರ ೧೦೩ ಡಿಗ್ರಿಗೆ ಏರಿ, ಸನ್ನಿ ಹಿಡಿಯಿತು. ಒಮ್ಮೆ ವೈದ್ಯರು ನೋಡಲು ಬಂದಾಗ, ಆತ ಹೇಳಿದ– "ಡಾಕ್ಟರ್, ನನಗೆ ಬೇಜಾರಾಗಿ ಹೋಗಿದೆ. ಜ್ವರ ಇನ್ನೂ ಕಾಯುತ್ತಲೇ ಇದೆ. ನಿಮ್ಮ 'ಪೇಷೆಂಟು' (ರೋಗಿ_ 'ಇಂಪೇಷೆಂಟ್' ಆಗಿದಾನೆ (ತಾಳ್ಮೆಗೆಟ್ಟಿದ್ದಾನೆ)." ಹಾಸ್ಯಮನೋವೃತ್ತಿ ಆತನಿಗೆ ಹುಟ್ಟುಗುಣದಂತೆ ಸ್ವಾಭಾವಿಕವಾಗಿತ್ತು. ವೈದ್ಯರು ಹೊರಟು ಹೋದಮೇಲೆ, ರೋಗಿ ತನ್ನ ಮಗಳನ್ನು 'ಗೀತಗೋವಿಂದ'ವನ್ನು ಹಾಡು ಎಂದು ಅಪೇಕ್ಷೆಪಟ್ಟನು. ತರುವಾಯ ತಾನು ಬರೆಯಬೇಕೆಂದು ಮಾಡಿಕೊಂಡಿದ್ದ ಒಂದು ಹೊಸ ನಾಟಕದ ಸಂವಿಧಾನವನ್ನು ಬರೆದುಕೊಳ್ಳುವಂತೆ ಮಗಳಿಗೆ ತಿಳಿಸಿದನು; ಆದರೆ ಕೊನೆಗೆ ವಿಶ್ರಾಂತಿ ತೆಗೆದುಕೊಳ್ಳಿ ಎಂದು ಮಗಳು ಒಂದೇ ಸಮನೆ ಬಲಾತ್ಕಾರ ಮಾಡಿದಳು. ಜ್ವರ ಏರುವುದು, ಇಳಿಯುವುದು, ಹೀಗೆ ಸಾಗಿತು; ಆಮೇಲೆ ವಿಷಮ ಶೀತಜ್ವರದ ಲಕ್ಷಣಗಳು ಕಾಣಿಸಿಕೊಂಡುವು. ವೈದ್ಯರ ಪ್ರಯತ್ನಗಳೆಲ್ಲವೂ ವ್ಯರ್ಥವಾಗಿ ಪರಿಣಮಿಸಿದುವು. ಹಾಸಿಗೆ ಹಿಡಿದು ಎರಡು ವಾರ ಕಳೆದ ಮೇಲೆ, ತನ್ನ ಸ್ವಂತ ಕುಟುಂಬದವರನ್ನು ಮಾತ್ರವಲ್ಲದೆ, ಸಮಸ್ತ ಕೇರಳವನ್ನು ತಡೆಯಲಾಗದ ದುಃಖದಲ್ಲಿ ಮುಳುಗಿಸಿ ಆತ ಹೊರಟುಹೊದನು.

* * * *

ಗ್ರಹಿಸುವುದಕ್ಕೂ ಅಗತ್ಯವಾದ ಸಹಜಶಕ್ತಿ ಅಥವಾ ಹುಟ್ಟುಗುಣ ಇದ್ದಿತು.

ಈವರೆಗೆ ಮಲಯಾಳ ಭಾಷೆ ಪಡೆದುಕೊಂಡಿರುವ ವೈಯಾಕರಣದಲ್ಲಿ ರಾಜರಾಜವರ್ಮನು ಅತ್ಯಂತ ಪ್ರಮುಖ ಎಂದು ಗಣ್ಯನಾಗಿದ್ದಾನೆ; ಆತನ ಕೃತಿ 'ಕೇರಳ ಪಾಣಿನೀಯ'ವು ಘನವಾದ ಸ್ಮಾರಕ ಗ್ರಂಥ ಎಂದು ಸಾರ್ವತ್ರಿಕವಾಗಿ ಮನ್ನಣೆ ಪಡೆದಿದೆ. ಈ ನಿರ್ದಿಷ್ಟ ಕ್ಷೇತ್ರದಲ್ಲಿ ಆತನ ಕಾಣಿಕೆಗೆ ಸರಿಯಾದ ಬೆಲೆ ಕಟ್ಟಬೇಕಾದರೆ 'ಕೇರಳ ಪಾಣಿನೀಯ'ವು ಪ್ರಕಟವಾಗುವುದಕ್ಕೆ ಮುಂಚಿನ ವ್ಯಾಕರಣ ಕೃತಿಗಳ ಬಗೆಗೆ ಒಂದು ಸ್ಥೂಲವಾದ ಕಲ್ಪನೆಯನ್ನು ನಾವು ಹೊಂದಿರಬೆಕು.

**ಯೂರೋಪಿಯನ್ ವಿದ್ವಾಂಸರ ಕೃತಿಗಳು**

| | |
|---|---|
| ೧. ರಾಬರ್ಟ್‌ಡ್ರಮಂಡ್ (Robert Drummond) | ಮಲಬಾರ್ ಭಾಷೆಯ ವ್ಯಾಕರಣ (Grammar of Malbar Language) (1799) |
| ೨. ಎಫ್ ಸ್ಪ್ರಿಂಗ್ (F. Spring) | ಮಲಯಾಳಂ ಭಾಷಾ ವ್ಯಾಕರಣದ ರೂಪರೇಖೆ (Outlines of a Grammar of the Malayalam Language) (1839) |
| ೩. ಜೋಸೆಫ್ ಪೀಟ್ (Joseph peet) | ಮಲಯಾಳಂ ಭಾಷಾ ವ್ಯಾಕರಣ (A grammar of the Malayalam language) (1854) |
| ೪. ಗುಂಡರ್ಟ್ (ಮತ್ತು ಗರ್ತ್‌ವೆಯ್) (Gundert and Garthwaite) | ಮಲಯಾಳಂ ವ್ಯಾಕರಣ ಪ್ರಶ್ನೋತ್ತರ ಮಾಲೆ (latechism of Malayalam Grammar( (1860) |
| ೫. ಗುಂಡರ್ಟ್ (Gundert) | ಮಲಯಾಳ ಭಾಷಾಂತರ ವ್ಯಾಕರಣಂ (Malayala Bhasha Vyakaranam) 1868) |
| ೬. ಎಲ್.ಜೆ. ಫ್ರಾನ್ಸ್‌ಮೆಯರ್ (L. J. Frohnmeyer) | ಯೂರೋಪಿಯನ್ನರಿಗಾಗಿ ಮಲಯಾಳ ಭಾಷೆಯ ಪ್ರಾಗತಿಕ ವ್ಯಾಕರಣ (A Progressive Grammar of Malayalam for Europeans) (1859) |

ಆಗಮಿಸಿ ಅದನ್ನು ವ್ಯಾಂಗಮಾಡುವರೆಗೆ ಮಲಯಾಳದಂತಹ ಬೆಳೆದು ಬಂದ ಭಾಷೆಗೆ ಈ ಆಧಾರ ಸಾಮಗ್ರಿ ಸಲಕರಣೆಗಳು ಇರಲಿಲ್ಲ ಎಂದು ಅನೇಕರಿಗೆ ಆಶ್ಚರ್ಯವಾಗಬಹುದು.

ಆದರೆ ಈ ಪ್ರಶ್ನೆಯನ್ನು ಗಂಭೀರವಾಗಿ ಆಲೋಚನೆ ಮಾಡಿನೋಡಿದರೆ ಅದರಲ್ಲಿ ಆಶ್ಚರ್ಯಕರವಾದದ್ದು ಯಾವುದೂ ಕಾಣುವುದಿಲ್ಲ. ಒಂದು ಭಾಷೆಯನ್ನು ತಾಯ್ನುಡಿ ಎಂದು ಇಲ್ಲವೆ ಪ್ರಥಮ ಭಾಷೆಯಾಗಿ ಕಲಿಯುವುದಕ್ಕೂ ದ್ವಿತೀಯ ಭಾಷೆಯಾಗಿ ಅದನ್ನು ಕಲಿಯುವುದಕ್ಕೂ ವ್ಯತ್ಯಾಸವಿದೆ. ಯಾವ ಸ್ಪಷ್ಟ ಪ್ರಯತ್ನವೂ ಇಲ್ಲದೆ, ಸುಮ್ಮನೆ ಆಲಿಸುವುದರಿಂದ ಹಾಗೂ ಅನುಕರಣ ಮಾಡುವುದರಿಂದ ಮಗು ಪ್ರಥಮ ಭಾಷೆಯನ್ನು ಕಲಿಯುತ್ತದೆ. ವರ್ಣಗುಚ್ಛಗಳನ್ನೂ, ಸರ್ವಸಾಮಾನ್ಯ ಶಬ್ದಕೋಶವನ್ನೂ ವಾಕ್ಯದ ಮಾದರಿಗಳನ್ನೂ ಸ್ವಾಭಾವಿಕವಾಗಿ, ಯಾವ ಪ್ರಶ್ನೆಯನ್ನೂ ಹಾಕದೆ, ಮಗು ಸ್ವಾಧೀನಪಡಿಸಿಕೊಳ್ಳುತ್ತದೆ. ವಯಸ್ಸಾದವನು ಭಾಷೆಯನ್ನು ಪ್ರಯತ್ನಪೂರ್ವಕವಾಗಿ ಕಲಿಯುತ್ತಾನೆ; ಮತ್ತು ಭಾಷೆಯನ್ನು ಮೈಗೂಡಿಸಿಕೊಳ್ಳುವಲ್ಲಿ ಹೆಚ್ಚು ತರ್ಕಬದ್ಧವಾಗಿ, ವಿಮರ್ಶಾತ್ಮಕವಾಗಿ, ಬೇಕಾದದ್ದನ್ನು ಮಾತ್ರ ಆಯ್ಕೆಮಾಡಿಕೊಳ್ಳುತ್ತ ಕಲಿಯುವ ಪ್ರವೃತ್ತಿ ಉಳ್ಳವನಾಗಿರುತ್ತಾನೆ. ಈ ಕಾರಣದಿಂದಲೇ ವ್ಯಾಕರಣವನ್ನು ಆಧಾರವಾಗಿಟ್ಟುಕೊಂಡು ವ್ಯಾಸಂಗ ಮಾಡುವುದನ್ನು ಆತ ಸ್ವಾಗತಿಸುತ್ತಾನೆ; ಹೀಗೆ ಮಾಡುವುದರಿಂದ ಭಾಷೆಯ ಸ್ವರೂಪ ರಚನೆಯನ್ನು ಹೆಚ್ಚು ಶೀಘ್ರವಾಗಿ ಅರಿತುಕೊಳ್ಳಲು ಅವನಿಗೆ ಸಹಾಯ ವಾಗುತ್ತದೆ. ವ್ಯಾಪಾರಕ್ಕೆಂದೋ ಮತಪ್ರಚಾರದ ಕೆಲಸಕ್ಕಾಗಿಯೋ ಯೂರೋಪಿಯನ್ನರು ಕೇರಳಕ್ಕೆ ಬಂದಾಗ ಜನದೊಡನೆ ಸಂಪರ್ಕ ಇಟ್ಟು ಕೊಳ್ಳುವ ಸಮಸ್ಯೆಯನ್ನು ಅವರು ಎದುರಿಸಬೇಕಾಯಿತು; ಎಂದರೆ, ಅವರು ಹೊಸದೊಂದು ಭಾಷೆಯನ್ನೆ ಕಲಿಯಬೇಕಾಯಿತು. ಆದರಿಂದ, ತಮ್ಮ ಸ್ವಂತದ ಉಪಯೋಗಕ್ಕಾಗಿಯೂ ಮುಂದೆ ಬರುವವರ ಉಪಯೋಗಕ್ಕಾಗಿಯೂ, (ಇಂಗ್ಲಿಷ್, ಲ್ಯಾಟಿನ್ ಅಥವಾ ಪೋರ್ಚುಗೀಸ್ ಭಾಷೆಗಳ ಪರ್ಯಾಯ ಪದಗಳೊಂದಿಗೆ) ಮೂಲ ಮಲಯಾಳಂ ಶಬ್ದಗಳ ಪಟ್ಟಿಯನ್ನು ತಯಾರಿಸುವ ಹಾಗೂ ಮಲಯಾಳ ವ್ಯಾಕರಣದ ಮುಖ್ಯಾಂಶಗಳನ್ನು ಬರೆದಿಡುವ ಕಾರ್ಯವನ್ನು ಅವರು ಸಹಜವಾಗಿಯೆ ಕೈಗೊಳ್ಳಬೇಕಾಯಿತು. ಈ ಮೊದಲಿನ ಕಾರ್ಯ ಪ್ರಯತ್ನ ಗಳನ್ನು ಆಮೇಲೆ ಬಂದ ಭಾಷಾ ವಿದ್ಯಾರ್ಥಿಗಳು ಉತ್ತಮಪಡಿಸಿದರು; ಅವರಲ್ಲಿ ಕೆಲವರಿಗೆ ಹೊಸ ಭಾಷೆಗಳನ್ನು ಕಲಿಯುವುದಕ್ಕೂ ವ್ಯಾಕರಣ ಸ್ವರೂಪವನ್ನು

ಸೇರಿವೆ ಎಂಬ ಸಂಗತಿಯನ್ನು ಸಂದೇಹ ಪಡಲು ಸಾಧ್ಯವೇ ಇಲ್ಲದಂತೆ ಸ್ಥಾಪಿಸಿದವನು ಕಾಲ್ಡ್‌ವೆಲ್. ಆದ್ದರಿಂದ, ಯೂರೋಪಿನಲ್ಲಿ ಅಭಿವೃದ್ಧಿಗೆ ತಂದ ಶಾಸ್ತ್ರ ಪದ್ಧತಿಯನ್ನು ಆತ ಬಳಸಿಕೊಂಡರೂ ಕೂಡ ಇಂಡೋ–ಯೂರೋಪಿಯನ್ ರೂಪ ರಚನಾ ವಿಧಾನಕ್ಕೆ ಕಟ್ಟು ಬೀಳದೆ ರೂಪ ರಚನಾ ವಿಷಯಕ್ಕೆ ಪ್ರವೇಶಿಸಿದನು.

**ಕೇರಳ ಪಾಣಿನೀಯ**

ಕಾಲ್ಡ್‌ವೆಲ್ಲನ ಈ ಮಹಾಕೃತಿಯ ಆಂತರಿಕ ಮೌಲ್ಯವನ್ನು ಮೆಚ್ಚಿಕೊಳ್ಳಲು ದೇಶೀಯ ವಿದ್ವಾಂಸರಿಗೆ ಸ್ವಲ್ಪಕಾಲ ಹಿಡಿಯಿತಾದರೂ ಆ ಶ್ರೇಷ್ಠ ಕೃತಿ ಪ್ರಕಟವಾದ ಮೇಲೆ ತಮಿಳು–ತೆಲುಗು, ಕನ್ನಡ ಮತ್ತು ಮಲಯಾಳ ವ್ಯಾಕರಣವನ್ನು ಕುರಿತು ರಚಿತವಾದ ಗ್ರಂಥಗಳಿಗೆ ಒಂದು ಸ್ಪಷ್ಟವಾದ ಅನುಕೂಲವಿತ್ತು. ಮಲಯಾಳಂ ವ್ಯಾಕರಣದ ವಿಷಯಕ್ಕೆ ಬಂದರೆ, ಡಾ॥ ಗುಂಡರ್ಟ್ ಮತ್ತು ಡಾ॥ ಕಾಲ್ಡ್‌ವೆಲ್ಲರು ಕೆಲವು ಭಾಷಾ ಸಮಸ್ಯೆಗಳ ವಿಚಾರದಲ್ಲಿ ಏಕಾಭಿಪ್ರಾಯವನ್ನು ಹೊಂದಿರದಿದ್ದರೂ ಇಬ್ಬರೂ ಸಮೀಪವರ್ತಿಗಳಾಗಿ ಜೊತೆಗೂಡಿ ಕೆಲಸ ಮಾಡಿದರು. ರಾಜರಾಜ ವರ್ಮನು ಈ ಇಬ್ಬರು ವಿದ್ವಾಂಸರ ಹಾಗೂ ರೆ॥ ಜಾರ್ಜ್ ಮ್ಯಾಥನ್ಮಹಾಶಯನ ಅಭಿಪ್ರಾಯಗಳನ್ನು ಬಹಳ ಜಾಗರೂಕತೆಯಿಂದ ಅಧ್ಯಯನ ಮಾಡಿದನು. ಆದರೆ ಸಂಸ್ಕೃತ ಸಂಪ್ರದಾಯದಲ್ಲಿ ಶಿಕ್ಷಣ ಪಡೆದ ಆತನು ಸಂಸ್ಕೃತ ವ್ಯಾಕರಣ ಪದ್ಧತಿಯಲ್ಲಿ ಮಲಯಾಳಂ ವ್ಯಾಕರಣವನ್ನು ರಚಿಸಲು ಮೊದಲು ಪ್ರಯತ್ನಪಟ್ಟನು. ಈ ರಚನೆಯ ಕೆಲಸವನ್ನು ಆತ ತನ್ನ ಅಧ್ಯಾಪಕ ವೃತ್ತಿಯಲ್ಲಿ ಬಹಳ ಮುಂಚೆಯೆ ಮಾಡಿ, ತನ್ನ ಗ್ರಂಥಕ್ಕೆ 'ಕೇರಳ ಪಾಣಿನೀಯಂ' ಎಂದು ಹೆಸರಿಟ್ಟನು (೧೮೯೬). ಅದಕ್ಕೆ 'ಕೇರಳ ಪಾಣಿನೀಯಂ' ಎಂದು ಏಕೆ ಹೆಸರಿಟ್ಟನು? ಎಲ್ಲೆಲ್ಲೂ ಪ್ರಸಿದ್ಧ ವಾಗಿರುವಂತೆ, ಸಂಸ್ಕೃತದಲ್ಲಿ ಪಾಣಿನಿ ಅತ್ಯಂತ ಪ್ರಖ್ಯಾತನಾದ ವೈಯಾಕರಣ; ಅವನು ಎಷ್ಟು ಪ್ರಖ್ಯಾತನಾಗಿರುವನು ಎಂದರೆ, 'ಪಾಣಿನಿ' ಅಥವಾ 'ಪಾಣಿನೀಯಂ' ಎಂಬ ಶಬ್ದ ಭಾರತೀಯ ಪರಂಪರೆಯಲ್ಲಿ 'ವ್ಯಾಕರಣ' ಎಂಬ ಅರ್ಥವನ್ನು ಕೊಡುವಂತಾಗಿದೆ. ಅದರಿಂದ 'ಕೇರಳ ಪಾಣಿನೀಯಂ' ಎಂದರೆ ಪಾಣಿನೀಯ ಸಂಪ್ರದಾಯದಲ್ಲಿ ಬರೆದ ಕೇರಳದ ಭಾಷೆಯ ವ್ಯಾಕರಣ ಎಂದು ಅರ್ಥವಾಗಬೇಕು. ಪಾಣಿನೀಯ ಸಂಪ್ರದಾಯದ ಒಂದು ಮುಖ್ಯ ಲಕ್ಷಣ ಅದರ 'ಸೂತ್ರ–ವೃತ್ತಿ' ಶೈಲಿ. ಬಹಳ ಸಂಕ್ಷೇಪವಾಗಿದ್ದು, ನೆನಪಿನಲ್ಲಿ ಇಟ್ಟುಕೊಳ್ಳಲು ಅನುಕೂಲ ವಾಗುವಂತಹ ನಿಯಮ; ಆದರೆ ಪ್ರತಿಯೊಂದು ಸೂತ್ರಕ್ಕು ಒಂದು 'ವೃತ್ತಿ'

**ಕೇರಳ ವಿದ್ವಾಂಸರ ಕೃತಿಗಳು**

| | |
|---|---|
| ೧. ಅಜ್ಞಾತ | ಲೀಲಾತಿಲಕಂ (೧೪ನೆಯ ಶತಕ) |
| ೨. ರೆ॥ ಜಾರ್ಜ್ ಮೂತ್ತಾತು | ಮಲಯಾಳ್ ಮಯುಟೆ (೧೮೬೩) |
| ೩. ಪಾಚ್ಚು ಮೂತ್ತಾತು | ಕೇರಳ ಭಾಷಾ ವ್ಯಾಕರಣಂ (೧೮೭೬) |
| ೪. ಕೋವುಣ್ಣಿ ನೆಟುಣ್ಣಾಟಿ | ಕೇರಳ ಕೌಮುದಿ (೧೮೭೮) |

ಮೇಲೆ ನಮೂದಿಸಿದ ಹತ್ತು ಕೃತಿಗಳ ಪೈಕಿ ಅತ್ಯಂತ ವಿದ್ವತ್‌ಪೂರ್ಣವಾದವು ಎರಡು; ಅವು ಯಾವುವೆಂದರೆ ಡಾ॥ ಗುಂಡರ್ಟನ 'ಮಲಯಾಳ ಭಾಷಾ ವ್ಯಾಕರಣಂ' (೧೮೬೮) ಮತ್ತು ರೆ॥ ಜಾರ್ಜ್ ಮ್ಯಾಥನ್ನನ 'ಮಲಯಾಳ್ ಮಯುಟೆ (೧೮೬೩). ಡಾ॥ ಗುಂಡರ್ಟನ ಕೃತಿಯನ್ನು ಬಿಟ್ಟುಬಿಟ್ಟರೆ ಮೊದಲ ಗುಂಪಿನ ಎಲ್ಲ ಕೃತಿಗಳೂ ಯೂರೋಪಿಯನ್ನರಿಗಾಗಿ ಬರೆದವು. ಭಾಷೆಯ ಸೂಕ್ಷ್ಮ ವಿಚಾರಗಳನ್ನು ಪರದೇಶದವರಿಗೆ ತಿಳಿಸಿಕೊಡುವುದಕ್ಕಾಗಿ ಉದ್ದಿಷ್ಟವಾದ ಪ್ರಾಥಮಿಕ ಪ್ರಕರಣ ಗ್ರಂಥಗಳು ಅವು. ಭಾಷೆಗಳ ಸ್ವರೂಪ ರಚನೆಯನ್ನು ಅರಿತುಕೊಳ್ಳಲು ಅನುಸರಿಸಬೇಕಾದ ಯೂರೋಪಿಯನ್ ಶಾಸ್ತ್ರ ಪದ್ಧತಿಯ ಪರಿಚಯವನ್ನು ಆ ಯೂರೋಪಿಯನ್ ವಿದ್ವದ್ವರೇಣ್ಯರು ಹೊಂದಿದ್ದರು; ಈ ಸಂದರ್ಭದಿಂದಾಗಿ ಪೂರ್ತಿಯಾಗಿ ಬೇರೆಯಾದ ಭಾಷಾ ಕುಟುಂಬಕ್ಕೆ ಸೇರಿದ ಭಾಷೆ ಒಂದನ್ನು ಅಭ್ಯಾಸಕ್ಕೆ ಎತ್ತಿಕೊಂಡಾಗ ತಾವು ಬಲ್ಲ ಶಾಸ್ತ್ರ ವಿಧಾನದ ಪ್ರಭಾವಕ್ಕೆ ಅವರು ಒಳಗಾದರು. ಅದೇ ರೀತಿಯಲ್ಲಿ ದೇಶೀಯ ವಿದ್ವಾಂಸರು ಸಂಸ್ಕೃತ ಭಾಷೆಯ ಮುಖ್ಯ ವ್ಯಾಕರಣ ಗ್ರಂಥಗಳ ಪರಿಚಯವನ್ನು ಹೊಂದಿದ್ದರು. ಹೀಗಿರುತ್ತ, ಈ ವ್ಯಾಕರಣ ರಚನೆಯ ಕಾರ್ಯವನ್ನು ಅವರು ಕೈಗೊಂಡಾಗ ಸಂಸ್ಕೃತ ವೈಯಾಕರಣರ ಶಾಸ್ತ್ರಮರ್ಯಾದೆ ಹಾಗೂ ಪರಿಭಾಷೆ ಅವರ ಮೇಲೂ ಸಹ ತಕ್ಕಮಟ್ಟಿನ ಪ್ರಮಾಣದಲ್ಲಿ ಪ್ರಭಾವಬೀರಿದುವು. ಈ ಸಂದರ್ಭದಲ್ಲಿ, ಬಿಷಪ್ ರಾಬರ್ಟ್ ಕಾಲ್ಡ್‌ವೆಲ್ (Bishop Robert Caldwell) ಮಹಾಶಯನ 'ದ್ರಾವಿಡ ಅಥವಾ ದಕ್ಷಿಣ ಭಾರತದ ಭಾಷಾ ಕುಟುಂಬದ ಭಾಷೆಗಳ ತೌಲನಿಕ ವ್ಯಾಕರಣ' (A Comparative Grammar of Dravidian or South Indian Family of Languages) (೧೮೫೬) ಗ್ರಂಥವನ್ನು ಹೆಸರಿಸುವುದನ್ನು ಯಾರೂ ಮರೆಯಕೂಡದು. ಸಂಸ್ಕೃತ ಭಾಷೆಯೊಂದಿಗೆ ಇಲ್ಲವೇ ಇಂಡೋಆರ್ಯನ್ ಭಾಷಾ ವರ್ಗಕ್ಕೆ ಸೇರಿದ ಯಾವುದೇ ಭಾಷೆಯೊಂದಿಗೆ ವಂಶಗತ ಸಂಬಂಧವನ್ನು ಹೊಂದಿರದ ಒಂದು ಪ್ರತ್ಯೇಕವಾದ ಭಾಷಾವರ್ಗಕ್ಕೆ ದಕ್ಷಿಣ ಭಾರತದ ಭಾಷೆಗಳು

ಇದ್ದೇ ಇದ್ದಿತು. ವಿದ್ವಾಂಸರುಗಳ ಪೈಕಿ ಕಾಲ್ಡ್‌ವೆಲ್ ಎಂದರೆ ಆತನಿಗೆ ಅಪಾರ ಗೌರವ. ಕಾಲ್ಡ್‌ವೆಲ್ಲನ ಅಭಿಪ್ರಾಯಗಳನ್ನು ಆತನು ಒಪ್ಪದಿದ್ದ ಸಂದರ್ಭಗಳಲ್ಲಿ ಎಷ್ಟು ಮುಜುಗರಪಡುತ್ತಿದ್ದನೆಂಬುದು ಗ್ರಂಥದ ಅನೇಕ ಭಾಗಗಳಲ್ಲಿ ಸ್ಪಷ್ಟ ಪಡುತ್ತದೆ; ಆದರೆ ಕಾಲ್ಡ್‌ವೆಲ್ ಹೇಳಿರುವುದು ತಪ್ಪು ಎಂದು ಆತನಿಗೆ ನಿಜವಾಗಿ ಮನವರಿಕೆಯಾದಾಗ ಆ ಯೂರೋಪಿಯನ್ ವಿದ್ವಾಂಸನನ್ನು ಆತ ವಿರೋಧಿಸುತ್ತಾನೆ. ರಾಜರಾಜವರ್ಮನ ಮುಂಚಿನ ಗ್ರಂಥಕ್ಕೆ **'ಕೇರಳ ಪಾಣಿನೀಯಂ'** ಎಂದು ಹೆಸರು ಉಚಿತವಾಗಿರುವ ಪಕ್ಷದಲ್ಲಿ, ಹೊಸ ಪರಿಷ್ಕರಣವನ್ನು **ಕೇರಳ ಕಾಲ್ಡ್‌ವೆಲ್ಲಿಯಂ** ಎಂದು ಹೆಸರಿಸಬೇಕಾಗಿದ್ದಿತು; ಕಾರಣ, ಗ್ರಂಥದ ಅನೇಕ ಭಾಗಗಳಲ್ಲಿ ಆತ ಕಾಲ್ಡ್‌ವೆಲ್ಲನನ್ನು ಬಹಳವಾಗಿ ಅವಲಂಬಿಸಿಕೊಂಡಿದ್ದಾನೆ. ಆದರೆ ವಸ್ತುನಿಷ್ಠವಾಗಿ ಹೇಳುವುದಾದರೆ, ಈ ಎರಡು ಹೆಸರುಗಳೂ ಅನುಚಿತವಾದವು; ಏಕೆಂದರೆ, ಆತ ಪಾಣಿನಿಯನ್ನಾಗಲಿ, ಕಾಲ್ಡ್‌ವೆಲ್ಲನನ್ನಾಗಲಿ ಅಂಧಾನುಕರಣೆ ಮಾಡುತ್ತಿಲ್ಲ. ಆತ ಸಾಂಪ್ರದಾಯಿಕ ಪದ್ಧತಿಯನ್ನೂ ಆಧುನಿಕ ವಿಧಾನಗಳನ್ನೂ ಎಷ್ಟು ಉತ್ಕೃಷ್ಟ ರೀತಿಯಲ್ಲಿ ಅಳವಡಿಸಿಕೊಂಡಿರುವನೆಂದರೆ, ಕೇರಳದ ವ್ಯಾಕರಣ ವಾಙ್ಮಯ ಪ್ರಪಂಚದಲ್ಲಿ ಅದು ಯುಗಪ್ರವರ್ತಕ ಗ್ರಂಥವಾಗಿ ಪರಿಣಮಿಸಿದೆ.

ಹೊಸ ಮುದ್ರಣದಲ್ಲಿ ರಾಜರಾಜವರ್ಮನು ಮುಂಚಿನ ಮುದ್ರಣದ ಸೂತ್ರಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿಬಿಟ್ಟು ಅವುಗಳ ಸ್ಥಾನದಲ್ಲಿ ದೀರ್ಘ ಅರ್ಥ ವಿವರಣೆಗಳು ಬೇಕಿಲ್ಲದ ಅನುಕೂಲಕರವಾದ ಕಾರಿಕೆಗಳನ್ನು (ಪದ್ಯಗಳನ್ನು) ಹಾಕಿದ್ದಾನೆ; ವಿವರಣೆ ಅಗತ್ಯ ಎನ್ನಿಸಿದ ಸಂದರ್ಭದಲ್ಲಿ ಅದನ್ನು ತಾನೇ ಒದಗಿಸಿದ್ದಾನೆ. ತಕ್ಕವಾದುದೆಂದು ಕಂಡುಬಂದ ವಿಪುಲ ಸಂಖ್ಯೆಯ ಸಂಸ್ಕೃತ ಶಾಸ್ತ್ರೀಯ ಶಬ್ದಗಳನ್ನು ಆತ ಬಳಸಿಕೊಂಡಿದ್ದಾನೆ; ಆದರೆ ಸಂಸ್ಕೃತ ಶಬ್ದಗಳನ್ನು ಬರಮಾಡಿಕೊಂಡಿರುವನೇ ಹೊರತು ನೆಟುಙ್ಙಾಟಿ ಮಾಡಿರುವ ಹಾಗೆ ಸಂಸ್ಕೃತ ವ್ಯಾಕರಣವನ್ನೇ ಆಮದುಮಾಡಿಕೊಂಡಿಲ್ಲ. ಸ್ವೀಕಾರಾರ್ಹ ಎಂದು ಕಂಡುಬಂದಾಗ ತಮಿಳು ವ್ಯಾಕರಣದಿಂದಲೂ ಕೆಲವು ಪದಗಳನ್ನು ಸ್ವೀಕಾರ ಮಾಡಿದ್ದಾನೆ. ಹೀಗಿದ್ದರೂ ಕೂಡ, ಒಟ್ಟಿನ ವಿವೇಚನೆ, ದೇಶೀಯ ಸಾಧನ ಸಲಕರಣೆಗಳನ್ನು ಉಪಯೋಗಿಸಿಕೊಳ್ಳುವ ವಿಧಾನ, ಇವೆಲ್ಲ ಗಮನಾರ್ಹವಾಗಿ ಪಾಶ್ಚಾತ್ಯವಾಗಿ ಕಾಣಿಸುತ್ತವೆ. ಆದರೆ ಆತನು ಮಲಯಾಳಂ ವ್ಯಾಕರಣಕ್ಕೆ ಗುಂಡರ್ಟ್ ಮತ್ತು ಜಾರ್ಜ್ ಮ್ಯಾಥನ್‌ರವರು ಮಾಡಿರುವಂತೆ ಪಾಶ್ಚಾತ್ಯ ಛಾಯೆಯನ್ನು ಆರೋಪಿಸಿಲ್ಲ.

ಇಲ್ಲವೆ ವ್ಯಾಖ್ಯಾನ ಇಲ್ಲದಿದ್ದರೆ ಅದು ಪೂರ್ತಿ ಅರ್ಥವಾಗುವುದಿಲ್ಲ. ಈ ವ್ಯಾಕರಣವು ಸುಮಾರು ಎರಡು ದಶಕಗಳ ಕಾಲ ಬಳಕೆಯಲ್ಲಿತ್ತು; ಆದರೆ, ಮಲಯಾಳ ಭಾಷೆಯಲ್ಲಿ ವಿಶೇಷ ಜ್ಞಾನವನ್ನು ಪಡೆಯಬಯಸುವ ಈಗಿನ ಕಾಲದ ವಿದ್ಯಾರ್ಥಿಗಳಿಗೆ ಬೇರೆಯದೇ ಆದ ವ್ಯಾಕರಣ ಅಗತ್ಯವೆಂಬುದನ್ನು ಗ್ರಂಥಕರ್ತನು ಮನಗಂಡನು. ಬಿ.ಎ. ಪದವಿ ತರಗತಿಗಳಿಗೆ ಐಚ್ಛಿಕ ವಿಷಯವಾದ ಮಲಯಾಳ ಭಾಷೆಯನ್ನು ಬೋಧಿಸುತ್ತಿದ್ದಾಗ ಈ ದೃಢವಾದ ನಂಬಿಕೆ ಆತನಲ್ಲಿ ಉಂಟಾಯಿತು. ಮಲಯಾಳಂ ವ್ಯಾಕರಣದ ಮೇಲೆ ಆಗ ಸಿದ್ಧಪಡಿಸಿದ್ದ ಉಪನ್ಯಾಸದ ಟಿಪ್ಪಣಿಗಳು ಒಂದು ಪರಿಷ್ಕೃತ ವ್ಯಾಕರಣದ ರೂಪವನ್ನು ತಳೆಯಿತು; ಅದು ೧೯೧೭ರಲ್ಲಿ ಪ್ರಕಟವಾಯಿತು. 'ಕೇರಳ ಪಾಣಿನೀಯ'ವು ಬಲುಮಟ್ಟಿಗೆ ಒಂದು ಮರುಹುಟ್ಟನ್ನೇ ಪಡೆದಿದ್ದುದರಿಂದ ಅದರ ಆ ಹಳೆಯ ಗ್ರಂಥನಾಮವನ್ನು ಉಳಿಸಿಕೊಳ್ಳಲು ಇಷ್ಟಪಡಲಿಲ್ಲ; ಆದರೆ, ಆ ಹೆಸರು ಒಳ್ಳೆಯ ಜನಮನ್ನಣೆಯನ್ನು ಪಡೆದಿದ್ದುದರಿಂದ ಅದು ನಷ್ಟವಾಗಬಾರದೆಂದು ಆತನ ಮಿತ್ರರು ಭಾವಿಸಿದರು; ಹೀಗೆ ಹೊಸ ಮುದ್ರಣವು ಆ ಹೆಸರನ್ನೆ ಉಳಿಸಿಕೊಳ್ಳುವಂತೆ ಆಯಿತು. ಕಳೆದ ೬೦ ವರ್ಷಗಳಿಂದಲೂ ಈ ಕೃತಿ ಪ್ರಮಾಣಭೂತವಾದುದೆಂದು ಗಣ್ಯತೆ ಪಡೆದಿದೆ; ಮುಂದಾಗುವುದನ್ನು ಊಹಿಸಬಲ್ಲಮಟ್ಟಿಗೆ ಹೇಳುವುದಾದರೆ, ಅದರ ಸ್ಥಾನದಲ್ಲಿ ಬೇರೊಂದು ಕೃತಿ ಬರುವ ಸಂಭವ ಕಡಮೆ. ಈ ಕೃತಿಗೆ ದೊರೆತ ಜನಮನ್ನಣೆ ಎಷ್ಟು ದೊಡ್ಡದಾಗಿತ್ತೆಂದರೆ ಗ್ರಂಥಕರ್ತನನ್ನು ಕೇರಳ ಪಾಣಿನಿ ಎಂದು ಕರೆಯುವುದು ರೂಢಿಯಾಯಿತು. ಆತನ ಶಿಷ್ಯರಲ್ಲಿ ಒಬ್ಬನಾದ ಪಿ. ಅನಂತನ್ ಪಿಳ್ಳೆ ಬರೆದಿರುವ ಸಂಕ್ಷೇಪವಾದ ಜೀವನ ಚರಿತ್ರೆ ಕೂಡ ಇದೇ ಹೆಸರನ್ನು ಹೊಂದಿದೆ.[೧]

ರಾಜರಾಜವರ್ಮನಿಗೆ ಸಂಸ್ಕೃತದಲ್ಲಿ ಆಳವಾದ ಪಾಂಡಿತ್ಯ ಇದ್ದಿತು; ತಮಿಳಿನಲ್ಲಿ ಒಳ್ಳೆಯ ಜ್ಞಾನವಿತ್ತು; ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಕಾರ್ಯನಿರ್ವಾಹ ಮಾಡುವ ಮಟ್ಟಿನ ಜ್ಞಾನವಿತ್ತು. ಈ ಭಾಷೆಗಳಲ್ಲಿರುವ ಪ್ರಮಾಣಭೂತ ವ್ಯಾಕರಣಗಳ ನೆರವನ್ನು ಆತ ಪಡೆಯುತ್ತಿದ್ದನು; ಕಾಲ್ಡ್‌ವೆಲ್ ಮತ್ತು ಗುಂಡರ್ಟ್ ಅವರ ಗ್ರಂಥಗಳನ್ನಂತೂ ಪದೇ ಪದೇ ನೋಡುವುದು

---

೧. ರಾಜರಾಜವರ್ಮನ ಸಾಹಿತ್ಯ ಸೇವೆಯ ಸ್ಮಾರಕವಾಗಿ ತಿರುವನಂತಪುರದಲ್ಲಿರುವ ದ್ರಾವಿಡ ಭಾಷಾ ವಿಜ್ಞಾನ ಮಹಾ ಸಂಘವು (The Dravidian Linguistic Association) ತನ್ನ ಕಚೇರಿಯ ಕಟ್ಟಡಕ್ಕೆ ಕೇರಳಪಾಣಿನಿ ಭವನ ಎಂದು ಹೆಸರಿಟ್ಟಿದೆ.

ಆದರೆ, ಪೂರ್ವದಲ್ಲಿ ಅನೇಕ ಏಳುಬೀಳುಗಳಿಗೆ ಒಳಗಾಗಿ, ದಿನದಿನಕ್ಕೆ ವಿಸ್ತಾರಗೊಂಡು ಬೆಳೆಯುತ್ತಿರುವ ಮಲಯಾಳದಂತಹ ಭಾಷೆಗೆ ಅಂಥ ನೆಲೆಗಟ್ಟು ಅಷ್ಟೇ ಸರಿಸಮನಾಗಿ ಕೂಡಿಬರುವುದೆ? ಆದ್ದರಿಂದ, ಆ ಬಗೆಯ ನೆಲೆಗಟ್ಟನ್ನು ಪೂರ್ತಿಯಾಗಿ ಪುನರ್ವಿರಚಿಸಿರುವುದನ್ನು, ತರ್ಕಪದ್ಧತಿಯನ್ನೇ ಕೈಬಿಡದಿದ್ದರೂ ತರ್ಕಬದ್ಧತೆಗೆ ಕಟ್ಟುಬೀಳದೆ ಅದಕ್ಕೆ ಮೇಲುಗೈ ಆಗಿ ಚಾರಿತ್ರಿಕ ದೃಷ್ಟಿಯನ್ನು ಇಟ್ಟುಕೊಂಡಿರುವುದನ್ನು ನಾವು ಈ ಪರಿಷ್ಕೃತ ಮುದ್ರಣದಲ್ಲಿ ಕಾಣುತ್ತೇವೆ... ನಮ್ಮ ಭಾಷೆಯ ವ್ಯಾಸಂಗಕ್ಕೆ ಲಭ್ಯವಾಗಿರುವ ಈ ಅಮೂಲ್ಯ ಕೊಡುಗೆಯ ಬಗೆಗೆ ನಾವು ಹೆಮ್ಮೆ ಪಡಬಹುದು; ಮತ್ತು ಈ ಅತ್ಯುತ್ಕೃಷ್ಟವಾದ ಪ್ರಕಟನೆಯ ಮೂಲಕ ಮಲಯಾಳವನ್ನು ಆಡುವ ಜನದ ಮೇಲೆ ಗುರುತರವಾದ ಋಣ ಭಾರವನ್ನು ಹೊರಿಸಿರುವುದಕ್ಕಾಗಿ ನಾವು ಗ್ರಂಥಕರ್ತನನ್ನು ಅಭಿನಂದಿಸಬಹುದು."

ಮುಂಚಿನ ಮುದ್ರಣಕ್ಕೆ ಗ್ರಂಥಕರ್ತನ ಸೋದರಮಾವ ಕೇರಳವರ್ಮನು ಮುನ್ನುಡಿಯನ್ನು ಬರೆದಿದ್ದನು. ಈ ಎರಡು ವ್ಯಾಕರಣ ರೂಪಗಳನ್ನೂ ಆ ಮಹನೀಯನಿಗೆ ಅರ್ಪಣೆ ಮಾಡಿದೆ. ಕೆಲವು ದೋಷಗಳೂ ಕುಂದುಕೊರತೆಗಳೂ ಇದ್ದರೂ ಕೂಡ ಮಲಯಾಳಂ ವ್ಯಾಕರಣದ ಮೇಲೆ ರಚಿತವಾದ ಇತರ ಎಲ್ಲ ಕೃತಿಗಳನ್ನೂ 'ಕೇರಳ ಪಾಣಿನೀಯ'ವು ಹಿಂದಕ್ಕೆ ಹಾಕಿಬಿಟ್ಟಿದೆ; ಆರು ದಶಕಗಳು ಕಳೆದ ಮೇಲೂ ವ್ಯಾಕರಣ ಪ್ರಪಂಚದಲ್ಲಿ ಗ್ರಂಥರಾಜನಾಗಿ ಮೆರೆಯುತ್ತಿದೆ.

## ಇತರ ವ್ಯಾಕರಣ ಕೃತಿಗಳು

'ಕೇರಳ ಪಾಣಿನೀಯ'ದ ಎರಡು ಮುದ್ರಣಗಳ ನಡುವೆ ೨೧ ವರ್ಷಗಳ ನಂತರವಿದ್ದಿತು ಎಂಬುದನ್ನು ನಾವು ಈ ಕಾಲಾವಧಿಯ ಉದ್ದಕ್ಕೂ ರಾಜರಾಜವರ್ಮನ ಮನಸ್ಸನ್ನು ಮಲಯಾಳಂ ವ್ಯಾಕರಣದ ವಿಷಯ ಆಕ್ರಮಿಸಿ ಕೊಂಡಿತ್ತು. 'ಕೇರಳ ಪಾಣಿನೀಯ'ವು ವಿದ್ವತ್‌ಪೂರ್ಣವಾದ ಕೃತಿ ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಶಾಲಾ ವಿದ್ಯಾಥಿಗಳ ದೃಷ್ಟಿಯಿಂದ ಇನ್ನೂ ಸುಲಭವಾದ ವ್ಯಾಕರಣ ಗ್ರಂಥಗಳು ಅಗತ್ಯವಾಗಿದ್ದುವು. ಆದ್ದರಿಂದ ತಂಪುರಾನನು ಆ ತೆರಪನ್ನು ತುಂಬಲು ನಿಶ್ಚಯಿಸಿದನು.

## ಶಬ್ದ ಶೋಧಿನಿ

'ಶಬ್ದ ಶೋಧಿನಿ' ೧೯೦೨ರಲ್ಲಿ ಪ್ರಕಟವಾಯಿತು; ಮೂರು ತಿಂಗಳ ಕಾಲ ಪಟ್ಟುಹಿಡಿದು ದುಡಿದದ್ದರ ಫಲ ಈ ಕೃತಿ. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ 'ಕೇರಳ

ಈ ಕೃತಿಯಲ್ಲಿ ಅವಗುಣಗಳೂ ಇವೆ. ಕೆಲವು ಪೂರ್ವಾಪರವಿರುದ್ಧ ಸಂಗತಿಗಳೂ ತಪ್ಪುಗಳೂ ಇವೆ. ಈ ಪರಿಷ್ಕೃತ ಮುದ್ರಣ ಪ್ರಕಟವಾದ ಮೇಲೆ ಒಂದು ವರ್ಷಪೂರ್ತಿ ಕೂಡ ಆತ ಜೀವಿಸಿರಲಿಲ್ಲ. ಆತ ಇನ್ನು ಸ್ವಲ್ಪ ಕಾಲ ಬದುಕಿದ್ದರೆ ತನ್ನ ಕೃತಿಯನ್ನು ಇನ್ನೂ ಬಹುಪಾಲು ಉತ್ತಮಪಡಿಸುತ್ತಿದ್ದನು. 'ಕೇರಳ ಪಾಣಿನೀಯ'ವು ವಿಶ್ಲೇಷಣ ವಿಧಾನವನ್ನು ಅನುಸರಿಸುವುದಿಲ್ಲ; ಅದರಲ್ಲಿ ಉದ್ಧರಿಸಿರುವ ಪ್ರಾಚೀನ ಕಾವ್ಯ ಪ್ರಯೋಗಗಳು ಗುಂಡರ್ಟ್ ಅವರ ಗ್ರಂಥದಲ್ಲಿ ಇರುವಷ್ಟು ವಿಪುಲವಾಗಿಲ್ಲ. ರೆ॥ ಮ್ಯಾಥನ್ ರೂಢಿಯಲ್ಲಿರುವ ಶಬ್ದರೂಪಗಳಿಗೆ ಎಷ್ಟು ಗಮನವನ್ನು ಕೊಟ್ಟಿರುವರೋ ಅಷ್ಟನ್ನು ನಮ್ಮ ಗ್ರಂಥಕರ್ತನು ವಿನಿಯೋಗಿಸಿಲ್ಲ. ಮುಖ್ಯವಾಗಿ ತಮಿಳು ಮತ್ತು ಮಲಯಾಳಗಳ ಭಾಷಾ ವೈಲಕ್ಷಣ್ಯಗಳನ್ನು ತುಲನಾತ್ಮಕವಾಗಿ ವಿವೇಚನೆ ಮಾಡಿರುವ ಸುದೀರ್ಘವಾದ ಪೀಠಿಕಾ ಪ್ರಕರಣವು ಗ್ರಂಥಕ್ಕೆ ಸೇರ್ಪಡೆಯಾಗಿರುವ ಗಣ್ಯವಾದ ಹೆಚ್ಚಿನ ಭಾಗ. ಇದರಲ್ಲಿ ಮಲಯಾಳಂ ಭಾಷೆ ಒಂದು ಸ್ವತಂತ್ರ ಭಾಷೆಯಾಗಿ ವಿಕಾಸಗೊಂಡು ಬೆಳೆದು ಬಂದಿರುವುದನ್ನೂ ತಮಿಳಿನೊಂದಿಗೆ ಅದು ಹೊಂದಿರುವ ಸಂಬಂಧವನ್ನೂ ಚರ್ಚಿಸಿದೆ.

ಒಂದು ಕಾಲದಲ್ಲಿ ರಾಜರಾಜವರ್ಮನ ವಿದ್ಯಾರ್ಥಿಯೂ ಸಹೋದ್ಯೋಗಿಯಾಗಿಯೂ ಆಗಿದ್ದ ಪಿ.ಕೆ. ನಾರಾಯಣ ಪಿಳ್ಳೆ (ಈತ ಅನಂತರ ತಿರುವಾಂಕೂರು ಸಂಸ್ಥಾನದಲ್ಲಿ ಉಚ್ಚನ್ಯಾಯಾಲಯದ ನ್ಯಾಯಾಧೀಶನಾದನು) ಹೊಸ ಪರಿಷ್ಕೃತ ಮುದ್ರಣಕ್ಕೆ ಬರೆದಿರುವ ಘನವಾದ ಮುನ್ನುಡಿಯಲ್ಲಿ ಈ ಮಹಾಕೃತಿಯನ್ನು ಉತ್ಕೃಷ್ಟ ರೀತಿಯಲ್ಲಿ ಮೌಲ್ಯಮಾಪನ ಮಾಡಿರುವುದನ್ನು ಕಾಣುತ್ತೇವೆ: "ವರ್ಣಮಾಲೆಯಿಂದ ಹಿಡಿದು ರೂಪನಿಷ್ಪತ್ತಿಯವರೆಗೆ ಸರ್ವಸಾಮಾನ್ಯ ಲಕ್ಷಣವಾಗಿ ವಿವರಿಸುವ ಆತನ ಅಸಾಧಾರಣ ಸಾಮರ್ಥ್ಯ ಹಾಗೂ ಸೂಕ್ಷ್ಮಪರೀಕ್ಷಣ ಶಕ್ತಿ, ಇವುಗಳಿಗೆ ಒಳಗಾಗದ ಯಾವ ಒಂದು ವ್ಯಾಕರಣ ವಿಚಾರವೂ ಇಲ್ಲ. ಆತನು ಅನೇಕ ಹೊಸ ವಿಚಾರಗಳನ್ನು ತಿಳಿಸಿದ್ದಾನೆ; ಹಾಗೂ ಅನೇಕ ವಿಚಾರಗಳನ್ನು ಹೊಸ ರೀತಿಯಲ್ಲಿ ಹೇಳಿದ್ದಾನೆ. ಹಿಂದಿನ ವ್ಯಾಕರಣಕಾರರು ಸಂಸ್ಕೃತದ ಮಾರ್ಗವನ್ನು ಅನುಸರಿಸಿ ಶಬ್ದರಾಶಿಯನ್ನು ಮೂರು ವರ್ಗಗಳಾಗಿ ವಿಂಗಡಿಸಿದ್ದರು; ಈ ಕ್ರಮವನ್ನು ಬಿಟ್ಟು ಐದು ವರ್ಗಗಳಾಗಿ ವಿಂಗಡಿಸಿರುವುದು ಇನ್ನೊಂದು ಸ್ವೋಪಜ್ಞ ವಿಚಾರ... ಪಾಣಿನಿಯ ನಿರೂಪಣಾಕ್ರಮ ಚಾರಿತ್ರಿಕವಾಗಿರುವುದಕ್ಕಿಂತ ಹೆಚ್ಚಾಗಿ ತರ್ಕಬದ್ಧವಾಗಿದೆ. ಅವನು ಒಂದು ಮೃತ ಭಾಷೆಯ ವಿಚಾರವನ್ನು ನಿರ್ವಹಿಸುತ್ತಿದ್ದುದರಿಂದ ಬಹುಶಃ ಅದು ಹೇಗಿದ್ದರೂ ಬಾಧಕವಿಲ್ಲ.

ಡಾ॥ ಗುಂಡರ್ಟನ ವ್ಯಾಕರಣವು ವಿದ್ವತ್‌ಪೂರ್ಣವಾಗಿದ್ದರೂ ಕೆಲವು ಕುಂದು ಕೊರತೆಗಳಿದ್ದುವು ಅದರಲ್ಲಿ; ಅವು ಏನೆಂದರೆ, ವಸ್ತುವಿಷಯವನ್ನು ಒಂದು ಸರಿಯಾದ ಕ್ರಮದಲ್ಲಿ ಅಳವಡಿಸಿಲ್ಲದಿರುವುದು, ಮತ್ತು ಉಪಯೋಗಿಸಲಾಗಿದ್ದ ಶಾಸ್ತ್ರೀಯ ಪದಗಳು ಸುಲಭವಾಗಿಲ್ಲದಿರುವುದು. 'ಕೇರಳ ಪಾಣಿನೀಯ'ದ ಮುಂಚಿನ ರೂಪದಲ್ಲಿಯೂ ಹಳತಾದ ಪದ್ಧತಿಯ ಕುಂದು ಕೊರತೆಗಳಿದ್ದುವು. 'ಶಬ್ದಶೋಧಿನಿ' ತಕ್ಕಮಟ್ಟಿನ ಪ್ರಮಾಣದಲ್ಲಿ ಇಂಗ್ಲೀಷು ವ್ಯಾಕರಣ ವಿಧಾನವನ್ನು ಅಳವಡಿಸಿಕೊಂಡಿದೆ. 'ಮಧ್ಯಮ ವ್ಯಾಕರಣ'ವನ್ನು ವಿಶ್ಲೇಷಣ ವಿಧಾನದಲ್ಲಿ ಬರೆಯಲಾಗಿದ್ದು, 'ಪ್ರಥಮ ವ್ಯಾಕರಣ'ವನ್ನು ಸಂಶ್ಲೇಷಣ ವಿಧಾನದಲ್ಲಿ ಬರೆದಿದೆ. ಒಟ್ಟಿನಲ್ಲಿ, ಕೇರಳದ ಪಾಣಿನಿ ಮಲಯಾಳಿಗಳಿಗಾಗಿ ಮಲಯಾಳಂ ವ್ಯಾಕರಣವನ್ನು ಹೆಚ್ಚು ಸುಲಭಗ್ರಾಹ್ಯವಾಗಿ, ತಿಳಿಯಾದ ರೀತಿಯಲ್ಲಿ, ಬರೆದಿಡಲು ಸಮರ್ಥನಾದನು.

**ಮಣಿದೀಪಿಕ**

ಮಲಯಾಳಂ ಸಾಹಿತ್ಯದ ಕೆಲವು ನಿರ್ದಿಷ್ಟ ಪ್ರಕಾರಗಳಾದ ಚಂಪೂ, ಅಟ್ಟಕ್ಕಥಾ ಮುಂತಾದವುಗಳಲ್ಲಿಯ ಸಾಹಿತ್ಯ ಕೃತಿಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡು ಮೆಚ್ಚಿಕೊಳ್ಳಬೇಕಾದರೆ ಸಂಸ್ಕೃತ ಭಾಷೆಯಲ್ಲಿ ಒಳ್ಳೆಯ ಪರಿಜ್ಞಾನ ಇರಬೇಕಾದದ್ದು ಅತ್ಯಗತ್ಯ, ಆದ್ದರಿಂದ ಮಲಯಾಳ ಭಾಷೆಯ ವಿದ್ವಾಂಸನಿಗೆ ಸಂಸ್ಕೃತ ವ್ಯಾಕರಣದ ತಕ್ಕಮಟ್ಟಿನ ಜ್ಞಾನ ಇರಬೇಕಾಗುತ್ತದೆ; ಆದರೆ ಪಾಣಿನಿಯನ್ನು ಸ್ವಾಧೀನಪಡಿಸಿಕೊಳ್ಳುವುದು ಎಲ್ಲ ವಿದ್ವಾಂಸರಿಗೂ ಕಷ್ಟಸಾಧ್ಯವೆನಿಸಿತ್ತು. ಹೀಗಿರುತ್ತ, ಮಲಯಾಳ ಭಾಷೆಯಲ್ಲಿ ಬರೆದ ಸಂಸ್ಕೃತದ ಸರಳ ವ್ಯಾಕರಣವು ಬಹಳ ಕಾಲದ ಅಗತ್ಯವನ್ನು ಪೂರೈಸುವುದಾಗಿತ್ತು. ರಾಜರಾಜವರ್ಮನು ಈ ಅಗತ್ಯವನ್ನು ಬೇಗನೆ ಮನಗಂಡನು, ಮತ್ತು ಅಂಥ ಪುಸ್ತಕವೊಂದನ್ನು ರಚಿಸಲು ಸಂಕಲ್ಪ ಮಾಡಿದನು. ಏನೇ ಆದರೂ, ೧೯೦೮ರಲ್ಲಿ ಮಾತ್ರ ಇದನ್ನು ನೆರವೇರಿಸಲು ಸಾಧ್ಯವಾಯಿತು. ಮೂರು ತಿಂಗಳ ಕಾಲ ಎಡೆಬಿಡದೆ ದುಡಿದು, 'ಮಣಿದೀಪಕ'ವನ್ನು ಹೊರತಂದನು. 'ಮಣಿಪ್ರವಾಳ' ಎಂಬ ಮಾತಿನಲ್ಲಿ ಇರುವಂತೆ 'ಮಣಿ' ಎಂದರೆ ಸಂಸ್ಕೃತ. ವೈಯಾಕರಣ ತುರವೂರು ನಾರಾಯಣ ಶಾಸ್ತ್ರಿಗಳು ಹಸ್ತಪ್ರತಿಯನ್ನು ಪರಿಶೀಲಿಸಿದರು; ಕೇರಳವರ್ಮ ಅದನ್ನು ಅನುಮೋದಿಸಿದರು; ಪುಸ್ತಕವನ್ನು ಕೇರಳ ವರ್ಮನಿಗೇ ಅರ್ಪಣೆ ಮಾಡಲಾಯಿತು. ಅಂದಿನಿಂದೀಚೆಗೆ ಮಲಯಾಳಂ ಭಾಷಾ ವಿದ್ಯಾರ್ಥಿಗಳಿಗೆ ಈ ಗ್ರಂಥದ ಮೂಲಕ ಸಂಸ್ಕೃತ ವ್ಯಾಕರಣದ ಸೂಕ್ಷ್ಮ ವಿಚಾರಗಳಿಗೆ ಪ್ರವೇಶ ದೊರೆಯುವಂತಾಗಿದೆ.

ಪಾಣಿನೀಯ'ವು ಕಬ್ಬಿಣದ ಕಡಲೆ ಎನಿಸಿತ್ತು. ಆದ್ದರಿಂದ ಅವರಿಗಾಗಿ ಒಂದು ಹೆಚ್ಚು ಸರಳವಾದ ವ್ಯಾಕರಣವನ್ನು ರಚಿಸುವುದು ಗ್ರಂಥಕರ್ತನ ಉದ್ದೇಶವಾಗಿತ್ತು. ಬಹು ತಿಳಿಯಾದ ನಿರೂಪಣೆ ಮತ್ತು ಸಾಮಾನ್ಯತರ ಉದಾಹರಣೆಗಳು, ಇವುಗಳಿಂದಾಗಿ ಕೃತಿ ಜನಪ್ರಿಯವಾಯಿತು. ಧ್ವನಿಶಾಸ್ತ್ರ (phonology), ಶಬ್ದರೂಪ ರಚನಾಶಾಸ್ತ್ರ (morphology), ವಾಕ್ಯರಚನಾ ವಿಧಾನ (syntax), ಮತ್ತು ಶಬ್ದ ನಿಷ್ಪತ್ತಿ ಶಾಸ್ತ್ರ (etymology) ಎಂಬ ನಾಲ್ಕು ಭಾಗಗಳನ್ನುಳ್ಳ ೧೭೫ ಪ್ರಕರಣಗಳಿವೆ ಗ್ರಂಥದಲ್ಲಿ. ಕೆಲವು ಭಾಗಗಳನ್ನು ಪುನರಾವಲೋಕನ ಮಾಡಿ, ಉಪಯುಕ್ತವಾದ ಮಾರ್ಪಾಡುಗಳನ್ನು ಮಾಡಿ, 'ಕೇರಳ ಪಾಣಿನೀಯ'ವನ್ನೇ ಸಾರಾಂಶ ರೂಪದಲ್ಲಿ ಬರೆದದ್ದು ಇದು ಎಂದು ಗ್ರಂಥಕರ್ತನೇ ಹೇಳಿಕೊಂಡಿದ್ದಾನೆ.

**ಪ್ರಥಮ ವ್ಯಾಕರಣ**

'ಶಬ್ದ ಶೋಧಿನಿ'ಯನ್ನು ಪ್ರಕಟಿಸಿದ ಮೇಲೆ ಕೂಡ, ಇನ್ನೂ ಕೆಳಗಿನ ತರಗತಿಗಳಿಗಾಗಿ ವ್ಯಾಕರಣ ಗ್ರಂಥಗಳು ಆವಶ್ಯಕ ಎಂದು ರಾಜರಾಜವರ್ಮನಿಗೆ ತೋರಿತು. ಸಾರ್ವಜನಿಕ ಶಿಕ್ಷಣದ ನಿರ್ದೇಶಕರು ಕೂಡ ಅಂಥದೇ ಸಲಹೆಯನ್ನು ನೀಡಿದರು. ಹೀಗೆ ಆತ ಇನ್ನೆರಡು ವ್ಯಾಕರಣ ಗ್ರಂಥಗಳನ್ನು ಸಿದ್ಧಪಡಿಸಿದನು; ಇವುಗಳಲ್ಲಿ ಮೊದಲನೆಯದು ಪ್ರಥಮ ವ್ಯಾಕರಣ (೧೯೦೬). ಗ್ರಂಥನಾಮವೇ ಸೂಚಿಸುವಂತೆ, ವಿದ್ಯಾಭ್ಯಾಸದ ಪ್ರಾಥಮಿಕ ಹಂತಕ್ಕೆಂದು ಬರೆದದ್ದು ಈ ವ್ಯಾಕರಣ.

**ಮಧ್ಯಮ ವ್ಯಾಕರಣ**

ಅದೇ ಮಾದರಿಯಲ್ಲಿ, ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿ 'ಮಧ್ಯಮ ವ್ಯಾಕರಣ' ಎಂಬ ಹೆಸರಿನ ಇನ್ನೊಂದು ಗ್ರಂಥವನ್ನು ೧೯೦೭ರಲ್ಲಿ ಸಿದ್ಧಪಡಿಸಲಾಯಿತು. ಈ ಎರಡು ಕೃತಿಗಳಲ್ಲೂ ಮಲಯಾಳಂ ವ್ಯಾಕರಣದ ಮೂಲ ತತ್ವಗಳನ್ನು ಬಹಳ ಸ್ಪಷ್ಟವಾಗಿ ವಿವರಿಸಲಾಗಿದೆ. ಕಲಿಸುವ ಬೋಧಕರು ಹಾಗೂ ಕಲಿಯುವ ವಿದ್ಯಾರ್ಥಿಗಳು, ಇಬ್ಬರೂ ಈ ವ್ಯಾಕರಣಗಳು ಹೆಚ್ಚು ಉಪಯುಕ್ತ, ಓದಿ ಗ್ರಹಿಸಿಕೊಳ್ಳುವುದಕ್ಕೆ ಸುಲಭ ಎಂಬುದನ್ನು ಕಂಡುಕೊಂಡರು. ಒಂದು ತಿಂಗಳೊಳಗಾಗಿ ಇನ್ನೊಂದು ಮುದ್ರಣವನ್ನು ಪ್ರಕಟಿಸ ಬೇಕಾಯಿತೆಂಬುದನ್ನೂ, ಮಾರನೆಯ ವರ್ಷವೇ ಮೂರನೆಯ ಮುದ್ರಣವನ್ನು ಹೊರತರಬೇಕಾಯಿತು ಎಂಬುದನ್ನೂ ಗಮನಿಸಿದರೆ ಪುಸ್ತಕ ಎಷ್ಟು ಜನಪ್ರಿಯವಾಯಿತು ಎನ್ನುವುದು ವ್ಯಕ್ತವಾಗುತ್ತದೆ.

ಜರ್ಮನಿಯಲ್ಲಿಯ ಬಾನ್ ವಿಶ್ವವಿದ್ಯಾಲಯದ ಪ್ರೊಫೆಸರ್ ಯಾಕೋಬಿ (Jacobi) ಮಹಾಶಯನು ಗ್ರಂಥಕರ್ತನಿಗೆ ಹೀಗೆ ಬರೆದನು:

"ನನ್ನ ವಿದ್ಯಾರ್ಥಿಗಳೊಂದಿಗೆ ಪಾಣಿನಿಯ ವ್ಯಾಕರಣವನ್ನು ಅಧ್ಯಯನ ಮಾಡಬೇಕಾದಾಗ– ಮುಂದಿನ ಬೇಸಗೆಯಲ್ಲಿ ಹಾಗೆ ಮಾಡುವೆನು, 'ಸಿದ್ಧಾಂತ ಕೌಮುದಿ'ಯ ಬದಲು ನಿಮ್ಮ ಕೃತಿಯನ್ನೇ ಉಪಯೋಗಿಸುತ್ತೇನೆ; ಅದರ ಉತ್ಕೃಷ್ಟತೆಯ ಬಗೆಗೆ ನನ್ನ ನಂಬಿಕೆ ದೃಢವಾಗಿದೆ."

ಮುಂಬಯಿಯ ವಿಲ್ಸನ್ ಕಾಲೇಜಿನ ಪ್ರೊ॥ ಎಂ.ಎಂ. ಭದ್ಕಮರ್ ಹೀಗೆ ಬರೆದನು:

"ಗ್ರಂಥದ ಯೋಜನೆ ಉತ್ಕೃಷ್ಟವಾಗಿದೆ; ಸಂಸ್ಕೃತ ವ್ಯಾಕರಣ ಜ್ಞಾನವನ್ನು ಅದು ಬಹಳ ಸುಲಭವಾಗಿ ದೊರಕಿಸಿಕೊಡುವುದಲ್ಲದೆ, ವ್ಯಾಕರಣವಿದ್ಯಾರ್ಥಿಗೆ ಭಾಷೆಯ ಪರಿಚಯ ಮಾಡಿಕೊಟ್ಟು ಅವನನ್ನು ಪಾಣಿನಿಯ ಮನೋ ಮಂದಿರದೊಳಕ್ಕೆ ಕರೆದೊಯ್ಯುವ ಗುರಿ ಇಟ್ಟುಕೊಂಡಿದೆ."

ಪುಣೆಯ ಡೆಕ್ಕನ್ ಕಾಲೇಜಿನ ಪ್ರೊ॥ ಆರ್.ಸಿ. ರಾನಡೆ ಈ ಪ್ರಶಸ್ತಿಯನ್ನು ನೀಡಿದರು;

"ಪುಸ್ತಕವನ್ನು ಓದುತ್ತ ಹೋದಂತೆ, ಪಾಣಿನಿಯ ಸೂತ್ರಗಳನ್ನು ಮತ್ತೊಮ್ಮೆ ಒಂದು ಹೊಸ ಅಚ್ಚಿನಲ್ಲಿ ಅಳವಡಿಸಿ ಹೊಸದಾಗಿ ರೂಪಿಸಿರುವುದನ್ನು ಕಂಡು ನಾನು ಬೆರಗಾಗಿಹೋಗಿದ್ದೇನೆ... ಪುಸ್ತಕಕ್ಕೆ ನೀವು ಸೇರಿಸಿರುವ ಅನುಬಂಧ ಸೊಗಸಾಗಿದೆ; ನಿಮ್ಮಂತಹ ವಿದ್ವಾಂಸರ ಕೈಯಲ್ಲಿ ಸಂಸ್ಕೃತ 'ಮೃತ' ಭಾಷೆ ಎಂಬ ಕಲಂಕವನ್ನು ಇನ್ನು ಮುಂದೆ ಹೊರಬೇಕಾಗಿಲ್ಲ ಎನ್ನುವುದನ್ನು ಅದು ತೋರಿಸಿಕೊಡುತ್ತದೆ. ಅದಕ್ಕೆ ಜೀವಂತಿಕೆಯ ತುಂಬು ಹೊಸತನ ಮತ್ತೊಮ್ಮೆ ಪ್ರಾಪ್ತವಾಗಿದೆ ಎಂದು ಯಾರಿಗಾದರೂ ನಿಜವಾಗಿ ಅನ್ನಿಸುತ್ತದೆ."

'ಅಷ್ಟಾಧ್ಯಾಯಿ'ಯ ೨೯೭೮ ಸೂತ್ರಗಳನ್ನು ೧೯೫೫ಕ್ಕೆ ಇಳಿಸಲಾಯಿತು. ಗ್ರಂಥಕರ್ತೃ 'ಲಘು ಪಾಣಿನಿಯ'ದ ಎರಡನೆಯ ಭಾಗವನ್ನೂ ಪ್ರಕಟಿಸಿದನು (೧೯೧೨); ಇದರಲ್ಲಿ 'ವೈದಿಕ ಕಾಂಡ', 'ಸ್ವರಕಾಂಡ' ಹಾಗೂ ಭಾಷೆಯನ್ನು ಕುರಿತು ಪೌರ್ವಾತ್ಯ ಪಾಶ್ಚಾತ್ಯ ಪಾಂಡಿತ್ಯಾಧಿಕಾರಿಗಳ ಚರ್ಚೆ– ಇವು ಅಡಕವಾಗಿವೆ.

## ಸಾಹಿತ್ಯ ಶಾಸ್ತ್ರ

ಭಾಷಾ ವ್ಯಾಸಂಗಕ್ಕೆ ಅತ್ಯಂತ ಮುಖ್ಯವಾದ ಸಾಧನ ಸಲಕರಣೆಗಳೆಂದರೆ, ವ್ಯಾಕರಣಗಳು ಮತ್ತು ನಿಘಂಟುಗಳು. ಈವರೆಗೆ, ವ್ಯಾಕರಣ ಕ್ಷೇತ್ರಕ್ಕೆ ರಾಜರಾಜ

**ಲಘುಪಾಣಿನೀಯಂ**

'ಮಣಿದೀಪಕವನ್ನು' ಪೂರ್ಣಮಾಡಿದ ನಾಲ್ಕು, ಅಥವಾ ಐದು ತಿಂಗಳು ಕಳೆದ ಮೇಲೆ, ಪಾಣಿನಿ ಇಟ್ಟ ಹೆಜ್ಜೆಯಲ್ಲಿ ಸಾಗಿ ಒಂದು ಸರಳ ಸಂಸ್ಕೃತ ವ್ಯಾಕರಣವನ್ನು ಬರೆಯುವ ಯೋಜನೆಯೊಂದನ್ನು ಎ.ಆರ್. ಪ್ರಾರಂಭಿಸಿದನು. ಈ ಮುಖ್ಯವಾದ ಕಾರ್ಯವನ್ನು ಕೈಗೊಂಡದ್ದರ ವಿಷಯದಲ್ಲಿ ಕೇರಳವರ್ಮನಿಂದ ಗ್ರಂಥಕರ್ತನು ನಿರಂತರವಾಗಿ ಪಡೆದ ಪ್ರೋತ್ಸಾಹ ಹಾಗೂ ಸಲಹೆಗಳ ಬಗೆಗೆ ದಿನಚರಿಯ ಪುಟಗಳಲ್ಲಿ ಉಲ್ಲೇಖಗಳಿವೆ. ಐದು ತಿಂಗಳ ಕಾಲದಲ್ಲಿ ಕೆಲಸ ಮುಗಿಯಿತು (೧೯೧೦). ಸಂಸ್ಕೃತದಲ್ಲಿರುವ ಪ್ರಸ್ತಾವನೆ, ಇಂಗ್ಲಿಷಿನಲ್ಲಿರುವ ಮುನ್ನುಡಿ, ಇವು ಗ್ರಂಥಕರ್ತನ ಉದ್ದೇಶವನ್ನು ವ್ಯಕ್ತಪಡಿಸುತ್ತವೆ. ಮುನ್ನುಡಿಯಿಂದ ಒಂದು ಭಾಗವನ್ನು ಈ ಕೆಳಗೆ ಉದ್ಧರಿಸಿಕೊಟ್ಟಿದೆ:

"ಪಾಣಿನಿ ಪ್ರಾಚೀನ ಕಾಲದಲ್ಲಿ ಹೇಗೊ ಇಂದಿಗೂ ಹಾಗೆಯೆ ತನ್ನ ಸೂತ್ರಗಳ ಪರಿಪೂರ್ಣತೆ ಮತ್ತು ಸಮಗ್ರತೆಯ ಗುಣಗಳಿಂದಾಗಿಯೇ ಸರಿದೊರೆಯಿಲ್ಲದ ವೈಯಾಕರಣನಾಗಿ ಉಳಿದು ಬಂದಿದ್ದಾನೆ; ಆದರೆ, 'ಅಷ್ಟಾಧ್ಯಾಯಿ'ಯನ್ನು ಶ್ರಮಪಟ್ಟು ವ್ಯಾಸಂಗ ಮಾಡಬೇಕೆಂದು ಹೊರಟು ಅದನ್ನು ಮುಂದುವರಿಸಲು ಅಗತ್ಯವಾದ ಬಿಡುವು ಮತ್ತು ತಪಸ್ವಿಯ ನಿಶ್ಚಲ ಬುದ್ಧಿಗಳನ್ನು ಹೊಂದಿರುವ ಭಾಗ್ಯವಿಲ್ಲದ ಯಾರೇ ಆಗಲಿ ಆ ಸೂತ್ರಗಳನ್ನು ಅರ್ಥಮಾಡಿಕೊಳ್ಳ ಬೇಕೆಂದು ಬಯಸಿದರೆ ಅವನ ಮುಂದೆ ಅನೇಕ ಕ್ಲೇಶಗಳನ್ನು ಅವು ತಂದೊಡ್ಡುತ್ತವೆ; ಅಲ್ಲದೆ, ಮಹಾ ವ್ಯಾಖ್ಯಾನಕಾರರಾದ ಪತಂಜಲಿ, ವಾರ್ತಿಕಾಕಾರ ಮತ್ತು ಕಾರಿಕೆಗ ಕರ್ತೃ, ಇವರುಗಳೆಲ್ಲರೂ ಪಾಣಿನಿಯ ಆಶಯವನ್ನು ಶಬ್ದಜಾಲದಲ್ಲಿ ಮರೆಮಾಡಿಬಿಟ್ಟು 'ಅಷ್ಟಾಧ್ಯಾಯಿ'ಯ ವ್ಯಾಸಂಗಕ್ಕೆ ಇನ್ನಷ್ಟು ಕ್ಲೇಶಗಳನ್ನು ಸೇರಿಸಿದ್ದಾರೆ. ಹಾಗಿದ್ದರೂ ಕೂಡ, ಪಾಣಿನಿಯ ವ್ಯಾಕರಣ ತತ್ತ್ವಗಳನ್ನು ಸರಳಗೊಳಿಸಿ, ಅವನ ವ್ಯಾಕರಣಕ್ಕೂ ಸರ್ವಸಾಮಾನ್ಯವಾಗಿ ಸಾಧಾರಣಮಟ್ಟದ ಪ್ರಾಚೀನ ಸಾಹಿತ್ಯಕ್ಕೂ ಒಂದು ಪ್ರವೇಶಿಕೆಯಾಗುವ ರೀತಿಯಲ್ಲಿ ಅವನ ಅನುಪಮವಾದ ಸೂತ್ರಗಳ ಆಧಾರದ ಮೇಲೆ ಸಂಸ್ಕೃತದಲ್ಲಿಯೇ ಒಂದು ಪ್ರಾಥಮಿಕ ವ್ಯಾಕರಣವನ್ನು ಸಿದ್ಧಪಡಿಸುವುದು ಸಾಧ್ಯವಾದಲ್ಲಿ ಅಂಥ ಒಂದು ಪ್ರಯತ್ನವನ್ನು ಮಾಡುವುದು ಪ್ರಯೋಜನವಾಗುವುದು ಎಂದು ನನಗೆ ಯಾವಾಗಲೂ ತೋರಿದೆ."

ಇಂಥ ಪ್ರಯತ್ನ ಮಾಡುವುದು ಯೋಗ್ಯವಾದದ್ದು ಎನ್ನುವುದು ಅನುಭವ ಸಿದ್ಧವಾಗಿದೆ. ಭಾರತವೆಲ್ಲದರಲ್ಲಿ ಮಾತ್ರವಲ್ಲ, ಪರದೇಶಗಳಲ್ಲಿ ಕೂಡ ಇದು ವ್ಯಾಕರಣ ವಿದ್ಯಾರ್ಥಿಗಳ ಹಾಗೂ ವ್ಯಾಕರಣ ವಿದ್ವಾಂಸರ ಅಭಿಪ್ರಾಯವಾಗಿದೆ.

ಪರ್ಯಾಯಪದ 'ಅಲಂಕಾರಶಾಸ್ತ್ರ'. 'ಭಾಷಾ ಭೂಷಣ'ದ ಪೀಠಿಕೆಯಲ್ಲಿ ಕೃತಿ ಹುಟ್ಟಿದ ಸಂದರ್ಭವನ್ನು ಕುರಿತು ಗ್ರಂಥಕರ್ತನು ವಿವರಗಳನ್ನು ನೀಡಿದ್ದಾನೆ. ಪೀಠಿಕೆಯಿಂದ ಆಯ್ದ ಪ್ರಸಕ್ತ ಭಾಗಗಳನ್ನು ಇಲ್ಲಿ ಎತ್ತಿಕೊಟ್ಟಿದೆ:

"ತಿರುವನಂತಪುರದ ಕಾಲೇಜಿನಲ್ಲಿ ಭಾರತೀಯ ಭಾಷೆಗಳನ್ನು ಬೋಧಿಸುವ ಹೊಣೆಗಾರಿಕೆಯನ್ನು ನನಗೆ ವಹಿಸಿದಾಗ, 'ಅಲಂಕಾರ ಶಾಸ್ತ್ರ'ವನ್ನು ಕುರಿತ ಗ್ರಂಥ ದಾರಿದ್ರ್ಯವನ್ನು ನಾನು ಅರಿತುಕೊಂಡೆನು. ಮದರಾಸು ವಿಶ್ವವಿದ್ಯಾನಿಲಯದ ಪ್ರಶ್ನೆಪತ್ರಿಕೆಗಳು ಪರೀಕ್ಷಾರ್ಥಿಗಳಿಂದ ಉಚ್ಚಮಟ್ಟದ ಉತ್ತರಗಳನ್ನು ನಿರೀಕ್ಷಿಸುತ್ತಿದ್ದುವು... ಆದ್ದರಿಂದ ಬಿ.ಎ. ತರಗತಿಗಳ ವಿದ್ಯಾರ್ಥಿಗಳು ಕಾವ್ಯಮೀಮಾಂಸೆಯಲ್ಲಿ ಸ್ಥೂಲವಾದ ಜ್ಞಾನವನ್ನು ಪಡೆದಿರತಕ್ಕದ್ದು ಅಗತ್ಯವೆಂದು ಭಾವಿಸಲಾಯಿತು. ಮಲಯಾಳದಲ್ಲಿ ಬೋಧನೆಗೆ ಯೋಗ್ಯವಾದ ಸಹಾಯಕ ಸಾಹಿತ್ಯ ಇಲ್ಲದಿದ್ದುದರಿಂದ ನಾನು ಸಂಸ್ಕೃತ ಪುಸ್ತಕಗಳ ಸಹಾಯದಿಂದ ವಿಷಯವನ್ನು ಬೋಧಿಸಲು ತೊಡಗಿದೆ. ಆದರೆ ಇದಿಷ್ಟು ಸಾಲದೇನೋ ಎಂದು ನನಗೆ ಬೇಗನೆಯೇ ಕಂಡುಬಂದಿತು... ಆದ್ದರಿಂದ ಎರಡು ವರ್ಷಗಳ ಕಾಲ (೧೯೦೦, ೧೯೦೧) ಬಿ.ಎ. ತರಗತಿಗಳಿಗೆಂದು ನಾನು ಕ್ರಮವಾಗಿ ಸಂಸ್ಕೃತ ಪ್ರಮಾಣ ಗ್ರಂಥಗಳಿಂದ ಆಯ್ದ ಭಾಗಗಳನ್ನು ಭಾಷಾಂತರಗಳನ್ನೂ ವಿಪುಲವಾದ ಟಿಪ್ಪಣಿಗಳನ್ನೂ ಸಿದ್ಧಪಡಿಸಿದೆನು. ಆಮೇಲೆ ಸಾಹಿತ್ಯಪ್ರೇಮಿಗಳಾಗಿದ್ದ ನನ್ನ ಮಿತ್ರರೂ ವಿದ್ಯಾರ್ಥಿಗಳೂ ಒತ್ತಾಯ ಮಾಡಿ ಕೇಳಿಕೊಂಡ ಮೇರೆಗೆ ಈ ಟಿಪ್ಪಣಿಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದೆನು.

ಕಾವ್ಯಮೀಮಾಂಸೆಯ ಮೇಲೆ ಸಂಸ್ಕೃತದಲ್ಲಿ ಉಪಲಬ್ಧವಿದ್ದ ಎಲ್ಲ ಮುಖ್ಯ ಗ್ರಂಥಗಳನ್ನೂ ತಾನು ನೋಡಿ ಉಪಯೋಗಿಸಿಕೊಂಡಿರುವುದಾಗಿಯೂ ನಿರ್ದಿಷ್ಟವಾಗಿ ಯಾವುದೇ ಒಂದು ಗ್ರಂಥವನ್ನು ಅನುಸರಿಸಿಲ್ಲವೆಂದೂ ಸಹ ಗ್ರಂಥಕರ್ತನು ಹೇಳಿಕೊಂಡಿದ್ದಾನೆ. ಲಕ್ಷ್ಯಗಳನ್ನು ಕೊಡುವ ವಿಷಯದಲ್ಲಿ, ಪ್ರಸಿದ್ಧವಾದ ಪ್ರಾಚೀನ ಶ್ರೇಷ್ಠ ಗ್ರಂಥಗಳಲ್ಲಿರುವದನ್ನು ಮೇಲೆಂದು ಭಾವಿಸಿ ಸ್ವೀಕರಿಸಿದ್ದಾನೆ. ಈ ಪ್ರಯತ್ನ ಅಷ್ಟೇನೂ ಯಶಸ್ವಿಯಾಗದೆ ಹೋದದ್ದರಿಂದ, ಆಧುನಿಕ ರಚನೆಗಳನ್ನೂ ಆತ ತೆಗೆದುಕೊಳ್ಳಬೇಕಾಯಿತು. ಅನೇಕವೇಳೆ ತಾನೇ ಸ್ವಂತವಾಗಿ ಪದ್ಯಗಳನ್ನು ರಚಿಸಬೇಕಾಯಿತು; ಅಂಥವನ್ನು ಸ್ಪಷ್ಟವಾಗಿ ನಿರ್ದೇಶಿಸಲಾಗಿದೆ.

ಕೃತಿಯನ್ನು ಸರ್ವಸಮಗ್ರವಾಗಿ ಮಾಡಲಾಗಲಿಲ್ಲ ಎಂಬುದನ್ನು ಎ.ಆರ್. ಒಪ್ಪಿಕೊಳ್ಳುತ್ತಾನೆ. ಗ್ರಂಥದಲ್ಲಿ ಮುಂದೆ ಹೇಳಿರುವ ಆರು ಪ್ರಕರಣಗಳಿವೆ:

ವರ್ಮನು ನೀಡಿರುವ ಕೊಡುಗೆಗಳನ್ನು ಕುರಿತು ವಿವೇಚಿಸಿದ್ದೇವೆ. ಬೇಯ್ಲಿ ಮತ್ತು ಗುಂಡರ್ಟ್ ಅವರ ಕೃತಿಗಳಿಗಿಂತಲೂ ಮೇಲಾದ ಒಂದು ನಿಘಂಟನ್ನು ರಚಿಸಬೇಕೆಂಬ ತೀವ್ರಾಪೇಕ್ಷೆ ಆತನಿಗಿದ್ದಿತು. ಆದರೆ ಇತರ ಕಾರ್ಯಗಳಲ್ಲಿ ಎಷ್ಟರಮಟ್ಟಿಗೆ ನಿರತನಾಗಿದ್ದನೆಂದರೆ ಈ ಕೆಲಸಕ್ಕೆ ಅಗತ್ಯವಾಗಿದ್ದ ಕಾಲಾವಕಾಶವನ್ನು ದೊರಕಿಸಿಕೊಳ್ಳಲು ಆತನಿಗೆ ಆಗಲಿಲ್ಲ. ಸಾಹಿತ್ಯವನ್ನು ನಿಷ್ಠೆಯಿಂದ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೂ ಲೇಖನಕಲೆಯನ್ನು ಅಭ್ಯಾಸ ಮಾಡುವವರಿಗೂ ನೆರವಾಗುವಂತಹ ಕೆಲವು ಆಧಾರಗ್ರಂಥಗಳನ್ನು ಬರೆಯಬೇಕಾದದ್ದು ಹೆಚ್ಚು ಮುಖ್ಯ ಎಂದು ಆತನು ಆಲೋಚಿಸಿದನು. ಕಾವ್ಯಮೀಮಾಂಸೆ ಮತ್ತು ಛಂದಶಾಸ್ತ್ರಗಳು ಪದ್ಯರಚನೆಗೆ ಸಂಬಂಧಪಟ್ಟ ವಿಷಯಗಳನ್ನು ವಿವೇಚಿಸುವ ಕಾವ್ಯಾಂಗಗಳು– ಈ ಕ್ಷೇತ್ರಕ್ಕೆ ಪೂರ್ವ ಪಶ್ಚಿಮ ದೇಶಗಳೆರಡೂ ಸಮೃದ್ಧವಾದ ಕಾಣಿಕೆಯನ್ನು ನೀಡಿವೆ. ರಾಜರಾಜವರ್ಮನಿಗೆ ಎರಡರಲ್ಲಿಯೂ ಒಳ್ಳೆಯ ಅಭಿನಿವೇಶವಿದ್ದು, ಎರಡರ ಉತ್ತಮಾಂಶಗಳನ್ನು ಹೀರಿಕೊಳ್ಳಬೇಕೆಂಬುದು ಆತನ ನಿಲುವು. ಮಲಯಾಳಂ ಭಾಷೆಯ ಗದ್ಯ ಪದ್ಯ ರಚನೆಗಳು ಪರಿಕರ ಮತ್ತು ರೂಪಗಳ ವಿಷಯದಲ್ಲಿ ಏಕಪ್ರಕಾರದ ಮಾರ್ಗಾನುಸರಣೆಯನ್ನು ಹೊಂದಿರ ಬೇಕಾದ ಅವಶ್ಯಕತೆಯೇನೂ ಇಲ್ಲ, ಎನ್ನುವುದೂ ಆತನ ಭಾವನೆಯಾಗಿತ್ತು. ಮಲಯಾಳ ವಾಙ್ಮಯದಲ್ಲಿ ಗದ್ಯಕ್ಕಿಂತ ಪದ್ಯಕ್ಕೆ ದೀರ್ಘವಾದ ಪರಂಪರೆ ಇದ್ದಿತು; ಆದ್ದರಿಂದ ಪದ್ಯ ರಚನೆಗೆ ಸಂಬಂಧಪಟ್ಟಂತೆ ಸಂಸ್ಕೃತ ಕಾವ್ಯಮೀಮಾಂಸೆ ಮತ್ತು ಛಂದಸ್ಸುಗಳ ಕಡೆಗೆ ಅದರ ಒಲೆತ ಇದ್ದರೆ, ಅದು ಸಮರ್ಥನೀಯವೇ ಆಗಿದ್ದಿತು. ಇದರಿಂದಾಗಿ ಕೃತಿಯ ವಸ್ತುವಿಗೆ ಮಾತ್ರ ಬಾಧಕ ಬರಕೂಡದು, ಯಾವುದೇ ಬಗೆಯ ನಿರ್ಬಂಧವೂ ಇರಕೂಡದು, ಅಷ್ಟೆ. ಇದು ಹೇಗಿದ್ದರೂ, ರೂಪ ಮತ್ತು ವಸ್ತು ಇವೆರಡರ ದೃಷ್ಟಿಯಿಂದಲೂ ಮಲಯಾಳಿ ಗದ್ಯವು ಇಂಗ್ಲಿಷಿನತ್ತ ವಾಲುವುದರಿಂದ ಅದಕ್ಕೆ ತಕ್ಕಮಟ್ಟಿನ ಪ್ರಯೋಜನವೇ ಆಗುವುದು. ಈ ಮನಃಪ್ರವೃತ್ತಿ ಎ.ಆರ್. ಬರೆದ 'ಭಾಷಾ ಭೂಷಣಂ', 'ವೃತ್ತಮಂಜರಿ' ಮತ್ತು 'ಸಾಹಿತ್ಯ ಸಾಹ್ಯಮ್' ಎಂಬೀ ಮೂರು ಗ್ರಂಥಗಳಲ್ಲಿ ಸ್ಪಷ್ಟಗೋಚರವಾಗಿದೆ.

**ಭಾಷಾ ಭೂಷಣಂ**

೧೯೦೨ರಲ್ಲಿ ಪ್ರಕಟವಾದ 'ಭಾಷಾ ಭೂಷಣ'ವು ಕಾವ್ಯದ ಅಭ್ಯಾಸ ಮತ್ತು ಸ್ವರೂಪವನ್ನು ಕುರಿತ ಕೈಪಿಡಿ. 'ಭೂಷಣ' ಎಂದರೆ 'ಅಲಂಕಾರ' ಅಥವಾ ಒಡವೆ, ತೊಡಿಗೆ. ಕಾವ್ಯಮೀಮಾಂಸೆ (poetics) ಎನ್ನುವುದಕ್ಕೆ ಸಂಸ್ಕೃತದ

ರತ್ನಾವಳಿ' ಎಂಬೀ ಎರಡು ಛಂದೋಗ್ರಂಥಗಳನ್ನೂ ಧಾರಾಳವಾಗಿ ಬಳಸಿಕೊಳ್ಳಲಾಗಿದೆ. ಗ್ರಂಥಕರ್ತನು ಲಕ್ಷ್ಯಲಕ್ಷಣಗಳನ್ನು ನಿರೂಪಿಸಿರುವುದು ಉತ್ಕೃಷ್ಟವಾಗಿದೆ. ಅನೇಕ ಸಂದರ್ಭಗಳಲ್ಲಿ ಪ್ರಸಿದ್ಧ ಮಲಯಾಳಿ ರಚನೆಗಳಿಂದ ಆಯ್ದ ಲಕ್ಷ್ಯಗಳನ್ನು ಆತ ಕೊಟ್ಟಿದ್ದಾನೆ.

ದೇಸಿ ಛಂದಸ್ಸಿನ ವಿಚಾರ ಹೇಳುವುದಾದರೆ, ಮಲಯಾಳ ಭಾಷೆಯಲ್ಲಿ ಲಕ್ಷಣಗಳೇ ಇರಲಿಲ್ಲ. ಆದ್ದರಿಂದ, ಗೇಯಪ್ರವಣವಾಗಿದ್ದ ಜನಪ್ರಿಯ ಮಲಯಾಳಂ ಛಂದಸ್ಸಿಗಾಗಿ ಮಾಪನದಂಡಗಳನ್ನು ಕಂಡುಹಿಡಿಯಲು ರಾಜರಾಜವರ್ಮನು ಗಣ್ಯ ಪ್ರಮಾಣದಲ್ಲಿ ಸ್ವತಂತ್ರ ಸಂಶೋಧನೆಯನ್ನು ನಡೆಸಬೇಕಾಯಿತು. ಈ ಕಾರ್ಯಕ್ಷೇತ್ರ ಬಹಳ ಕಷ್ಟಸಾಧ್ಯವಾದದ್ದೂ ಸಮಸ್ಯೆಗಳಿಂದ ಕೂಡಿದ್ದೂ ಆಗಿತ್ತೆಂಬುದರಲ್ಲಿ ಸಂದೇಹವಿಲ್ಲ; ಮುಂದಾಳಾಗಿದ್ದ ಈತನು ಕ್ಷೇತ್ರವನ್ನು ಹಸನುಗೊಳಿಸಿ, ತಕ್ಕಮಟ್ಟಿನ ಪ್ರಗತಿಯನ್ನು ಸಾಧಿಸಿದನು. ಆದರೆ ಶ್ರಮಸಾಧ್ಯವೂ ಅವ್ಯವಸ್ಥಿತವೂ ಆದ ಈ ಅಧ್ಯಯನ ಪ್ರಾಂತದಲ್ಲಿ ಇನ್ನೂ ಹೇರಳವಾದ ಕೆಲಸ ನಡೆಯಬೇಕಾಗಿದೆ ಎನ್ನುವದನ್ನು ಯಾರಾದರೂ ಒಪ್ಪಲೇಬೇಕು. ಆಮೇಲೆ ಬಂದ ವಿದ್ವಾಂಸರಾದ ಅಪ್ಪನ್ ತಂಪುರಾನ್, ಕುಟ್ಟಿಕೃಷ್ಣಮಾರರ್ ಮತ್ತು ಕೆ.ಕೆ. ವಾಧ್ಯಾರ್ ಅವರಂಥವರು ಈ ದಿಸೆಯಲ್ಲಿ ಹಲಕೆಲವು ಪ್ರಯತ್ನಗಳನ್ನೇನೋ ಮಾಡಿದ್ದಾರೆ; ಆದರೆ ಅವರುಗಳಿಗೆ ಭಾಗಶಃ ಯಶಸ್ಸು ಮಾತ್ರ ಲಭಿಸಿದೆ. ಮಲಯಾಳಂ ಭಾಷೆಯ ಛಂದಸ್ಸಿನ ಕ್ಷೇತ್ರದಲ್ಲಿ 'ವೃತ್ತಮಂಜರಿ' ಈಗಲೂ ಒಂದು ಮೈಲಿಗಲ್ಲಾಗಿ ಉಳಿದು ಬಂದಿದೆ.

**ಸಾಹಿತ್ಯಸಹಾಯ**

'ಸಾಹಿತ್ಯ ಸಾಹ್ಯಂ' ಮೊತ್ತಮೊದಲಿಗೆ ೧೯೧೧ರಲ್ಲಿ ಪ್ರಕಟವಾಯಿತು; ಇದೊಂದು ಗದ್ಯ ಲೇಖನ ಕಲೆಯ ಕೈಪಿಡಿ. ಈಗಾಗಲೇ ಸೂಚಿಸಿರುವಂತೆ ಮಲಯಾಳಂ ಗದ್ಯವು ಕಾಲಮಾನದೃಷ್ಟಿಯಿಂದ ಪದ್ಯ ಕಾವ್ಯಕ್ಕಿಂತ ಆಮೇಲೆ ಸಾಹಿತ್ಯವಾಗಿ ವಿಕಾಸಗೊಂಡಿತು; ಹೀಗಾದದ್ದು ವಿಶೇಷವಾಗಿ ಪಾಶ್ಚಾತ್ಯ ಸಾಹಿತ್ಯದೊಡನೆ ಅದು ಸಂಪರ್ಕವನ್ನು ಬೆಳೆಸಿಕೊಂಡ ತರುವಾಯ. ಗದ್ಯ ವಿಚಾರದಲ್ಲಿ ಕೂಡ ಮಲಯಾಳವು ಅಲಂಕಾರಯುಕ್ತವಾಗಿ ವೈಭವದಿಂದ ಮೆರೆಯಲು ಸಂಸ್ಕೃತವನ್ನು ಅವಲಂಬಿಸಬೇಕು ಎಂದು ಭಾವಿಸುತ್ತಿದ್ದ ವಿದ್ವಾಂಸರು ಕೆಲವರು ಇದ್ದರು; ಆದರೆ ರಾಜರಾಜವರ್ಮನ ದೃಷ್ಟಿಯೇ ಬೇರೆಯಾಗಿತ್ತು. ಸಾಹಿತ್ಯ ರೂಪ ಮತ್ತು ವಸ್ತು, ಈ ಎರಡೂ ವಿಷಯಗಳಲ್ಲಿಯೂ ಸಂಸ್ಕೃತದ

ಅಲಂಕಾರ
ದೋಷ
ಗುಣ
ಶಬ್ದಾರ್ಥ
ಧ್ವನಿ
ಗುಣೀಭೂತವ್ಯಂಗ್ಯ

ಅಲಂಕಾರಗಳನ್ನು, ಅತಿಶಯ, ಸಾಮ್ಯ, ಶ್ಲೇಷ, ವಾಸ್ತವ ಎಂದು ನಾಲ್ಕು ವರ್ಗಗಳಾಗಿ ವಿಂಗಡಿಸುವಲ್ಲಿ ಆತ ರುದ್ರಟನ ವ್ಯವಸ್ಥೆಯನ್ನು ಅನುಸರಿಸಿದ್ದಾನೆ.

ಗ್ರಂಥವನ್ನು ಮರುಮುದ್ರಣದಲ್ಲಿ ಇನ್ನೂ ಹೆಚ್ಚು ಸಮಗ್ರವಾಗಿ ಮಾಡಬೇಕೆಂದು ಗ್ರಂಥಕರ್ತನು ಆಶೆಯಿಟ್ಟುಕೊಂಡಿದ್ದನು; ಎರಡನೆಯ ಮುದ್ರಣವು ೧೯೧೦ರಲ್ಲಿ ಪ್ರಕಟವೂ ಆಯಿತು; ಆದರೂ ಕೂಡ ಕಾರ್ಯಬಾಹುಳ್ಯದ ಒತ್ತಡದಿಂದಾಗಿ ಅವಕಾಶವೇ ಆಗದಿದ್ದುದರಿಂದ ಅವನು ಅದನ್ನು ಮಾಡಲಾಗಲಿಲ್ಲ. ಆಮೇಲೆ ಬಂದ ವಿದ್ವಾಂಸರು 'ಭಾಷಾಭೂಷಣ'ವನ್ನು ಟೀಕೆ ಮಾಡಿದ್ದಾರೆ. ವಿಮರ್ಶೆ ಮಾಡಿದ್ದಾರೆ; ಇದೇ ಕ್ಷೇತ್ರದ ವಿಷಯವನ್ನು ಕುರಿತ 'ಸಾಹಿತ್ಯ ಭೂಷಣ'ದ ಕರ್ತೃ ಕುಟ್ಟಿ ಕೃಷ್ಣ ಮಾರರ್ ಎಂಬುವರ ವಿಮರ್ಶೆ ಮುಖ್ಯವಾದದ್ದು. ಆದರೆ ೧೯೬೮ರಲ್ಲಿ NBS (ನ್ಯಾಷನಲ್ ಬುಕ್‌ಸ್ಟಾಲ್) ಅವರು ಹೊರತಂದ ಮುದ್ರಣಕ್ಕೆ ಮುನ್ನುಡಿ ಬರೆಯುವಾಗ ಸ್ವತಃ ಮಾರರ್ ಅವರೇ ತಂಪುರಾನನ ಗ್ರಂಥ ಒಂದು ಮಹಾಸಾಧನೆ ಎಂಬುದನ್ನು ಒಪ್ಪಿಕೊಂಡಿದ್ದಾರೆ.

**ವೃತ್ತಮಂಜರಿ**

'ವೃತ್ತಮಂಜರಿ'ಯ (೧೯೦೫) ಹೆಸರೇ ಸೂಚಿಸುವಂತೆ ಅದು ಛಂದಸ್ಸನ್ನು ಕುರಿತ ಒಂದು ಪ್ರಕರಣ ಗ್ರಂಥ. ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಅಗತ್ಯವನ್ನು ಪೂರೈಸುವುದಕ್ಕಾಗಿಯೂ ಕಾವ್ಯ ನಿರ್ಮಾಣದ ಕಲೆ ಮತ್ತು ತಂತ್ರ ವಿಧಾನಗಳಲ್ಲಿ ವಿಶೇಷ ಪರಿಣತಿಯನ್ನು ಪಡೆಯಬಯಸುವ ಇತರರಿಗಾಗಿಯೂ ಕೂಡ ಈ ಗ್ರಂಥವನ್ನು ರಚಿಸಲಾಯಿತು. ಮಲಯಾಳಿ ಕವಿಗಳು ಸಂಸ್ಕೃತ ಛಂದಃ ಪ್ರಕಾರಗಳನ್ನೂ ದೇಸಿ ಛಂದಸ್ಸುಗಳನ್ನೂ ಧಾರಾಳವಾಗಿ ಬಳಸಿಕೊಳ್ಳುತ್ತಿದ್ದಾರೆ ಎಂಬುದು ಪ್ರಸಿದ್ಧ ಸಂಗತಿ. ಸಂಸ್ಕೃತ ಛಂದಸ್ಸಿನ ಮಟ್ಟಿಗೆ, ಬೇರೆ ಬೇರೆ ಮಾದರಿಯ ಲಕ್ಷ್ಯಲಕ್ಷಣ ನಿರೂಪಣೆಗಳಿಗೆ ಕೊರತೆ ಇರಲಿಲ್ಲ. ಅಕ್ಷರ (ವರ್ಣ) ವೃತ್ತ ಮತ್ತು ಮಾತ್ರಾ ವೃತ್ತ– ಈ ಎರಡು ಪ್ರಕಾರಗಳಿಗಾಗಿ 'ವೃತ್ತರತ್ನಾಕರ' ಹಾಗೂ 'ವೃತ್ತ

'ಸಾಹಿತ್ಯ ಸಾಹ್ಯಂ' ಗ್ರಂಥದ ನ್ಯಾಷನಲ್ ಬುಕ್‌ಸ್ಟಾಲಿನ (೧೯೬೭ರ) ಮುದ್ರಣಕ್ಕೆ ಸುಪ್ರಸಿದ್ಧ ವಿಮರ್ಶಕರಾದ ಕುಟ್ಟಿಪುಷ ಕೃಷ್ಣಪಿಳ್ಳೆ ಅವರು ಆಧುನಿಕ ರೀತಿಯ ಮುನ್ನುಡಿ ಬರೆದಿದ್ದಾರೆ; ಪರಿಣಾಮಕಾರಿಯಾಗಿ, ಮೆಚ್ಚಾಗುವಂತೆ, ಬರೆಯಲಿಚ್ಛಿಸುವ ಮಲಯಾಳ ಭಾಷೆಯ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ, ಗದ್ಯ ಲೇಖಕರಿಗೂ, ನುರಿತ ಲೇಖಕರಿಗೂ ಕೂಡ, ಚಿರಕಾಲಿಕ ಮೌಲ್ಯ ಉಳ್ಳದ್ದಾಗಿದೆ ಈ ಗ್ರಂಥ ಎಂದು ಆತ ಹೇಳುತ್ತಾರೆ. ಒಳ್ಳೆಯ ಗದ್ಯ ನೇರವಾಗಿ, ಸಂಕ್ಷೇಪವಾಗಿ, ಅಂದವಾಗಿ, ಮನಸ್ಸಿಗೆ ನಾಟುವಂತೆ ಇರಬೇಕಾಗುತ್ತದೆ. ಛಂದಸ್ಸಿನ ನಿರ್ಬಂಧ ಇಲ್ಲೆಂದು ಮಾತುಗಳನ್ನು ಸುಮ್ಮನೆ ಒಟ್ಟುಗೂಡಿಸಿಬಿಟ್ಟರೆ ಸಾಹಿತ್ಯಮಟ್ಟದ ಗದ್ಯ ಆಗುವ ಮಾತು ಇರಲಿ, ಒಳ್ಳೆಯ ಗದ್ಯವೂ ಆಗದು.

ಕೃತಿಯ ಮೊದಲ ಭಾಗದಲ್ಲಿ ಎ.ಆರ್. ಗದ್ಯವನ್ನು ನಾಲ್ಕು ವರ್ಗಗಳಾಗಿ ವಿಭಾಗಿಸಿದ್ದಾನೆ: **ಆಖ್ಯಾನಂ** (ನಿರೂಪಣಾತ್ಮಕ), **ವರ್ಣನಂ** (ವರ್ಣನಾತ್ಮಕ), **ವಿವರಣಂ** (ವಿವರಣಾತ್ಮಕ), **ಉಪಪಾದನಂ** (ಪ್ರತಿಪಾದನಾತ್ಮಕ, ವಾದಾತ್ಮಕ). ಪ್ರತಿಯೊಂದು ವರ್ಗದ ವಿಶೇಷ ಲಕ್ಷಣವನ್ನೂ ತಕ್ಕ ಉದಾಹರಣೆಗಳನ್ನು ಕೊಟ್ಟು ವಿವರಿಸಲಾಗಿದೆ. ಭಾಷಾಭಿವ್ಯಕ್ತಿಯ ಪರಿಶುದ್ಧತೆ, ಭಾಷೆಯ ನುಡಿಗಟ್ಟುಗಳು, ರೂಢಿಯ ಪ್ರಯೋಗದ ಔಚಿತ್ಯ ಮತ್ತು ವಿರಾಮ ವ್ಯವಸ್ಥೆ, ಇವುಗಳನ್ನು ವಿವರಿಸುವ ಎರಡನೆಯ ಭಾಗ ಕೂಡ ಉಪಯುಕ್ತವಾಗಿದೆ, ಸ್ವಾರಸ್ಯವಾಗಿದೆ. ಕಡೆಯಲ್ಲಿ ಕೊಟ್ಟಿರುವ ಶಬ್ದಕೋಶ ಗ್ರಂಥದ ಬೆಲೆಯನ್ನು ಹೆಚ್ಚಿಸಿದೆ. ಇಂಗ್ಲಿಷ್ ಭಾಷೆಗೆ ಫೌಲರ್ (Fowler) ಮಹಾಶಯನಿಂದ ಯಾವ ಉಪಕಾರ ಆಗಿದೆಯೋ, ಅಂಥದೇ ಉಪಕಾರ ಈ ಉತ್ಕೃಷ್ಟವಾದ ಕೈಪಿಡಿಯಲ್ಲಿ ಮಲಯಾಳ ಭಾಷೆಗೆ ಎ.ಆರ್. ಮಹನೀಯನಿಂದ ಆಗಿದೆ.

* * * *

ಪ್ರಭುತ್ವದಿಂದ ಮುಕ್ತವಾಗುವುದು ಭಾಷೆಗೆ ಒಳಿತೆಂದು ಆತ ಭಾವಿಸಿದನು; ಹೀಗಾದಲ್ಲಿ ಮಲಯಾಳವು ಇಂಗ್ಲಿಷಿನಿಂದಲೂ ಇತರ ಭಾಷೆಗಳಿಂದಲೂ ಅನೇಕ ವಿಚಾರಗಳನ್ನು ಕಲಿತು ಲಾಭ ಪಡೆಯಬಹುದು ಎಂದು ಆತನ ಆಲೋಚನೆ. ಹಾಗಿದ್ದರೂ ಕೂಡ ಭಾಷೆಯ ನುಡಿಗಟ್ಟು ತನ್ನ ಪರಿಶುದ್ಧತೆಯನ್ನು ಪಾಲಿಸಿಕೊಂಡು ಬರಬೇಕು, ಮತ್ತು ಹೊರಗಿನ ಯಾವುದೇ ಭಾಷಾ ಸಂಪರ್ಕ ಸಾಧನಗಳಿಂದ ಪ್ರಭಾವಿತವಾಗಕೂಡದು ಎಂಬ ವಿಷಯದಲ್ಲಿ ತೀವ್ರವಾದ ಕಳಕಳಿ ಹೊಂದಿದ್ದನು ಆತ. ಈ ಉದ್ದೇಶದಿಂದ ಬಹಳ ಉತ್ಸಾಹದಿಂದಲೇ 'ಸಾಹಿತ್ಯ ಸಾಹ್ಯಂ' ಗ್ರಂಥವನ್ನು ಸಿದ್ಧಪಡಿಸಿದನು. ಕೇವಲ ಬರೆಯುವ ಕೆಲಸ ಮತ್ತು ಸಂಗ್ರಹ ಕಾರ್ಯಗಳಿಗೆ ಸುಮಾರು ಐದು ತಿಂಗಳ ಕಾಲ ಮಾತ್ರ ಹಿಡಿಯಿತು. ಆದರೆ ಕರಡು ಪ್ರತಿಗಳನ್ನು ತಯಾರಿಸುವಂದು ತನ್ನ ಸಹೋದ್ಯೋಗಿಗಳ ಹಾಗೂ ತನ್ನ ಹಿರಿಯ ಸಲಹೆಗಾರ ಕೇರಳವರ್ಮನ ಸಲಹೆ ಪಡೆದನು. ಹಸ್ತಪ್ರತಿಯನ್ನು ಕೊಚ್ಚಿಯ ಮಹಾವಿದ್ವಾಂಸನಾದ ಅಪ್ಪನ್ ತಂಪುರಾನನಿಗೆ ಒಪ್ಪಿಸಲಾಯಿತು; ಆತ ಬೆಲೆ ಬಾಳುವ ಮುನ್ನುಡಿಯನ್ನು ಬರೆದುಕೊಟ್ಟನು.

ಪ್ರತಿಯೊಬ್ಬನಿಗೂ ತಿಳಿದಿರುವಂತೆ, ಸಂಸ್ಕೃತದಲ್ಲಿ ಪದ್ಯಕಾವ್ಯದ್ದೇ ಪ್ರಭುತ್ವ; ಗದ್ಯಕ್ಕೆ ಎರಡನೆಯ ಸ್ಥಾನ. ೧೯ನೆಯ ಶತಮಾನದ ಮಧ್ಯ ಭಾಗದವರೆಗೂ ಭಾರತೀಯ ಭಾಷೆಗಳಲ್ಲಿಯೂ ಅದೇ ವಿದ್ಯಮಾನ ಇದ್ದಿತು; ಅದೇ ಕಾಲದಲ್ಲಿ, ಗಾಳಿ ಬೀಸುವ ದಿಕ್ಕಿನಲ್ಲಿ ಒಂದು ಬದಲಾವಣೆ ಆಯಿತು. ರಾಜರಾಜವರ್ಮನಂತಹ ದ್ರಷ್ಟಾರರು ಪ್ರಾದೇಶಿಕ ಭಾಷೆಗಳಲ್ಲಿ ಸ್ಪಷ್ಟ್ಯಾತ್ಮಕ ಹಾಗೂ ತಿಳಿವಳಿಕೆ ನೀಡುವ ಗದ್ಯಕ್ಕೆ ಒಳ್ಳೆಯ ಭವಿಷ್ಯ ಇದೆ ಎಂಬುದನ್ನು ಕಂಡುಕೊಂಡರು. ಆದರೆ ಆತನ ಕಾಲದಲ್ಲಿ ಗದ್ಯ ರಚನೆಗಳು ಸರಿಯಾದ ದಿಕ್ಕುದೆಸೆ ಕಾಣದೆ ದಿನ ದಿನಕ್ಕೆ ಹೆಚ್ಚುತ್ತಿದ್ದುವು. ಗದ್ಯ ರಚನೆಯೆಲ್ಲವೂ ಕೃತಕವಾಗಿ, ಆಡಂಬರವಾಗಿ, ಶಿಥಿಲವಾಗಿ, ಅಡ್ಡಾದಿಡ್ಡಿಯಾಗಿ ಅವ್ಯವಸ್ಥೆಯ ದಾರಿ ಹಿಡಿದಿದ್ದುವು. ಈ ಸಂಧಿಕಾಲದಲ್ಲಿ, ಭರವಸೆ ಹುಟ್ಟಿಸುತ್ತಿದ್ದ ಲೇಖಕರಿಗೆ ಯಾವುದಾದರೂ ರೀತಿಯಲ್ಲಿ ಮಾರ್ಗದರ್ಶನ ನೀಡಬೇಕೆಂದು ಆತ ಆಲೋಚಿಸಿದನು. ಒಳ್ಳೆಯ ಗದ್ಯದ ಗುಣಗಳು ಯಾವುವು? ಗದ್ಯ ರಚನೆಗಳಲ್ಲಿ ಯಾರಿಗೇ ಆಗಲಿ ಗೋಚರಿಸುವ ಅಪಾಯಗಳು ಯಾವುವು? ಸ್ಪಷ್ಟ್ಯಾತ್ಮಕ ಹಾಗೂ ವಿಮರ್ಶಾತ್ಮಕ ಗದ್ಯ ಪ್ರಕಾರಗಳು ಯಾವುವು? 'ಸಾಹಿತ್ಯ ಸಾಹ್ಯಂ' ಗ್ರಂಥದಲ್ಲಿ ಈ ಪ್ರಶ್ನೆಗಳಿಗೆ ಕ್ರಮಬದ್ಧ ರೀತಿಯಲ್ಲಿ ನೀಡಿದ ಉತ್ತರಗಳನ್ನು ಕಾಣಬಹುದು.

ಆತ ಸಂಸ್ಕೃತದಿಂದ ಆರು ಶ್ರೇಷ್ಠ ಕೃತಿಗಳನ್ನೂ ಇಂಗ್ಲಿಷಿನಿಂದ ಒಂದನ್ನೂ ಭಾಷಾಂತರ ಮಾಡಿದನು. ಸೃಜನಶೀಲ ಪ್ರತಿಭೆಯುಳ್ಳ ಈ ಸಂಶೋಧಕ–ವಿದ್ವಾಂಸನಿಗೆ ಭಾಷಾಂತರ ಕಾರ್ಯ ಒಂದು ಉಲ್ಲಾಸಕರವಾದ ಸಾಹಿತ್ಯವಿಹಾರವಾಗಿತ್ತು.

**ಮೇಘದೂತ**

ತನ್ನ ಉದ್ಯೋಗಜೀವನದ ಮುಂಚಿನ ದಿನಗಳಲ್ಲಿಯೆ ಆತ ಕಾಲಿದಾಸನ 'ಮೇಘದೂತ'ವನ್ನು ಮಲಯಾಳಿ ಪದ್ಯಕ್ಕೆ ಭಾಷಾಂತರ ಮಾಡುವ ಕಾರ್ಯವನ್ನು ಕೈಗೊಂಡನು. ಯಾವ ಸಂದರ್ಭದಲ್ಲಿ ಭಾಷಾಂತರ ಕಾರ್ಯವನ್ನು ಕೈಗೊಳ್ಳಲು ನಿಶ್ಚಯಿಸಿದನು ಎಂಬುದನ್ನು ಪೀಠಿಕಾಭಾಗದಲ್ಲಿ ಸೂಚಿಸಿದೆ. 'ಕೇರಳ ಪಾಣಿನೀಯ'ವನ್ನು ರಚಿಸುವ ಕಾರ್ಯದಲ್ಲಿ ಆತನು ಮುಳುಗಿಹೋಗಿದ್ದನು; ಒಂದು ಹಂತದಲ್ಲಿ, 'ಮೇಘದೂತ'ದಂತಹ ಮಹಾಕೃತಿಯನ್ನು ಮಲಯಾಳಕ್ಕೆ ಅನುವಾದ ಮಾಡಿದರೆ, ಮಲಯಾಳ ಭಾಷೆಯ ವಾಕ್ಯರಚನಾಕ್ರಮಕ್ಕೂ ಸಂಸ್ಕೃತ ಭಾಷೆಯ ವಾಕ್ಯರಚನಾಕ್ರಮಕ್ಕೂ ಇರುವ ವ್ಯತ್ಯಾಸವನ್ನು ತಿಳಿದುಕೊಂಡಂತೆ ಆಗಿ ಅದು ಒಂದು ಒಳ್ಳೆಯ ಮತ್ತು ಬೋಧಪ್ರದವಾದ ಅಭ್ಯಾಸವಾಗುವುದು ಎಂದು ಆತ ಯೋಚಿಸಿದನು.

ಅವನು ಪ್ರತಿದಿನವೂ ಕೆಲವು ಶ್ಲೋಕಗಳನ್ನು ಅನುವಾದ ಮಾಡುತ್ತಿದ್ದನು ಎಂದು ಅವನ ದಿನಚರಿಯ ಟಿಪ್ಪಣಿಗಳಿಂದ ಹೊರಪಡುತ್ತದೆ. ಗ್ರಂಥಕರ್ತನು ಒಮ್ಮೆ ಹರಿಪಾದಕ್ಕೆ ಪಾದಯಾತ್ರೆ ಹೊರಟಿದ್ದಾಗ ಕೂಡ ಕೆಲವು ಶ್ಲೋಕಗಳನ್ನು ಭಾಷಾಂತರ ಮಾಡುವುದು ಒಂದು ಸ್ವಾರಸ್ಯವಾದ ಹವ್ಯಾಸವೆಂದು ಕಂಡುಬಂದಿತು. ಸಂಸ್ಕೃತ ಭಾಷೆಯ ಪಾಂಡಿತ್ಯ ಇಲ್ಲದ ಓದುಗರು ಕೂಡ ಕಾವ್ಯವನ್ನು ಓದಿ ಸಂತೋಷಪಡಲು ಸಾಧ್ಯವಾಗುವಂತೆ ಪದ್ಯಗಳನ್ನು ಸರಳವಾದ ಮಲಯಾಳ ಭಾಷೆಗೆ ಭಾಷಾಂತರಿಸಬೇಕೆಂದು ರಾಜರಾಜವರ್ಮನು ತೀವ್ರವಾದ ಅಭಿಲಾಷೆ ಹೊಂದಿದ್ದನು. ಅನುವಾದವು ಮೂಲಕೃತಿಗೆ ಯಥಾವತ್ತಾಗಿರಬೇಕೆಂಬ ವಿಷಯದಲ್ಲಿಯೂ ಅಷ್ಟೇ ತೀವ್ರಾಭಿಲಾಷೆ ಆತನದು. ಹಾಗಿದ್ದರೂ ಪದ್ಯಗಳನ್ನು ಅವುಗಳ ಛಂದಸ್ಸಿನಲ್ಲಿಯೇ ಭಾಷಾಂತರಿಸಬೇಕಾದದ್ದು ಅಗತ್ಯ ಎಂದು ಆತ ಭಾವಿಸಲಿಲ್ಲ. ಮೂಲವು ಮಂದಾಕ್ರಾಂತವೃತ್ತದಲ್ಲಿದೆ; ಆದರೆ ಅನುವಾದವು ಶಾರ್ದೂಲ ವೃತ್ತದಲ್ಲಿದೆ. ಅಲ್ಲದೆ, ಆತ ಉದ್ದಕ್ಕೂ ಏಕಪ್ರಕಾರವಾಗಿ ಮಲಯಾಳ ಭಾಷೆಯಲ್ಲಿ ಜನಪ್ರಿಯವಾಗಿ ಬಳಕೆಯಲ್ಲಿದ್ದ ದ್ವಿತೀಯಾಕ್ಷರ ಪ್ರಾಸವನ್ನು

# ಅಧ್ಯಾಯ ಆರು

## ಭಾಷಾಂತರಗಳು

ರಾಜರಾಜವರ್ಮನು ೫೬ ವರ್ಷ ಮಾತ್ರ ಬದುಕಿದ್ದನು; ಈ ಕಾಲವನ್ನು ಸಮನಾಗಿ ಎರಡು ಭಾಗ ಮಾಡಬಹುದು: ಮೊದಲಿನ ಅರ್ಧ ಸಿದ್ಧತೆಯ ಕಾಲ; ಎರಡನೆಯ ಅರ್ಧವು ಶ್ರಮಪೂರ್ಣವಾದ ಅಧಿಕಾರನಿಮಿತ್ತದ ಕೆಲಸ, ಸಾಹಿತ್ಯ ಸಂಬಂಧವಾದ ಪ್ರವಾಸಗಳು, ಕುಟುಂಬ ವರ್ಗಕ್ಕೂ ಒಟ್ಟಿನ ಜನ ಸಮುದಾಯಕ್ಕೂ ಸಲ್ಲಬೇಕಾಗಿದ್ದ ಕರ್ತವ್ಯನಿರ್ವಾಹ, ಇವುಗಳಿಂದ ಇಡಿಕಿರಿದು ತುಂಬಿತ್ತು. ಆದ್ದರಿಂದ ಅಷ್ಟು ಅಲ್ಪ ಕಾಲಾವಧಿಯಲ್ಲಿ ಇಷ್ಟೊಂದು ಕಾರ್ಯವನ್ನು ನೆರವೇರಿಸಲು ಆತ ಹೇಗೆ ಸಮರ್ಥನಾದನು ಎನ್ನುವುದು ಒಂದು ಅಚ್ಚರಿಯಾಗಿಯೇ ಉಳಿಯುತ್ತದೆ. ಆತನಿಗೆ ಅಧಿಕಾರ ಸಂಬಂಧವಾದ ಹಾಗೂ ಕೌಟುಂಬಿಕವಾದ ಸ್ವಂತ ಸಮಸ್ಯೆಗಳು ಇದ್ದೇ ಇದ್ದುವು. ಸಮಸ್ಯೆಗಳು ಸವಾಲು ಒಡ್ಡುವಂತಿದ್ದು, ಮನಸ್ಸಿನ ನೆಮ್ಮದಿಗೆ ಭಂಗವುಂಟುಮಾಡುವಂತಿದ್ದ ಸಮಯದಲ್ಲಿ ಆತ ಸೃಷ್ಟ್ಯಾತ್ಮಕ ಲೇಖನ ಕಾರ್ಯದಿಂದ ಮನಸ್ಸನ್ನು ಬೇರೆಯ ಕಡೆಗೆ ತಿರುಗಿಸುತ್ತಿದ್ದನು. ಇಂಥ ಸಂದರ್ಭಗಳಲ್ಲಿ ಇತರರು ತಾವು ಯಾವ ಪ್ರಯೋಜನಕರವಾದ ಕಾರ್ಯವನ್ನೂ ಮಾಡಲಾರೆವು ಎಂದುಕೊಳ್ಳಬಹುದು. ವಿಚಾರಪೂರ್ಣ ವಿಷಯಗಳ ಮೇಲೆ ಪ್ರಕರಣ ಗ್ರಂಥಗಳನ್ನೂ ಪ್ರೌಢ ಪ್ರಬಂಧಗಳನ್ನೂ ಬರೆಯುವುದಕ್ಕೆ ತಕ್ಕಮಟ್ಟಿನ ಸಂಶೋಧನೆ ನಡಸಬೇಕು, ಆಲೋಚನೆ ಮಾಡಬೇಕು, ಗ್ರಂಥಗಳನ್ನು ಓದಬೇಕು; ಇವೆಲ್ಲ ಮನಸ್ಸಿಗೆ ಕಿರಿಕಿರಿ ಉಂಟುಮಾಡುವ ಉದ್ಯೋಗ. ರಾಜರಾಜವರ್ಮನು ನಿರ್ಮಾಣ ಮಾಡಿದ ಕೃತಿಗಳ ವೈವಿಧ್ಯ, ಸಂಖ್ಯೆ ಮತ್ತು ಗುಣ ಹೇಗಿದ್ದುವು ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ. ಅಂತಹ ಶ್ರಮ ಸಾಧ್ಯವಾದ ಕೆಲಸದ ನಡುವೆ ಆತನಿಗೆ ಒಂದು ಬಗೆಯ ವಿಶ್ರಾಂತಿ ಬೇಕಾಗಿದ್ದಿತು; ಆತ ಪಡೆಯಲಿಚ್ಛಿಸಿ ಆಯ್ದುಕೊಂಡ ವಿಶ್ರಾಂತಿಯ ಸ್ವರೂಪ ಸೋಮಾರಿಯಾಗಿ ಕಾಲ ಕಳೆಯುವುದಾಗಿರಲಿಲ್ಲ, ಕೂಡಿದ ಮಟ್ಟಿಗೂ ಹಗುರವಾದ ಸಾಹಿತ್ಯದ ಚಟುವಟಿಕೆಯಲ್ಲಿ, ಎಂದರೆ ಭಾಷಾಂತರ ಕಾರ್ಯದಲ್ಲಿ, ನಿರತನಾಗಿರುವುದಾಗಿತ್ತು.

ನಿಂತಿದೆ. ಕಳೆದ ಒಂದು ನೂರು ವರ್ಷಗಳ ಕಾಲದಲ್ಲಿ ಕೇರಳದ ಹನ್ನೆರಡು ಜನಕ್ಕಿಂತ ಹೆಚು ಜನ ಕವಿಗಳು ತಮ್ಮ ಭಾಷೆಯಲ್ಲಿ ಅದಕ್ಕೆ ಸಂವಾದಿಯಾದ ಉತ್ಕೃಷ್ಟತೆ ಅಂಥದು. ಭಾಷಾಂತರದ ಮೊತ್ತಮೊದಲು ಪ್ರಯತ್ನವನ್ನು ಯಾರಿಗೂ ಕಡಮೆಯಲ್ಲದ ಕೇರಳವರ್ಮನು ಕೈಗೊಂಡನು. ೧೮೮೨ರಲ್ಲಿ ಪ್ರಕಟವಾದ ಈ ಭಾಷಾಂತರ ಒಂದು ಭಾರಿ ಯಶಸ್ವಿಯಾದ ಕಾರ್ಯ ಎಂದು ಕೊಂಡಾಡಲಾಯಿತು. ಆದರೆ ಅದರ ಅಲಂಕೃತ ಕಾವ್ಯ ಶೈಲಿ, ಸಂಸ್ಕೃತ ಶಬ್ದಗಳ ಮತ್ತು ಸಮಾಸಗಳ ಪ್ರಾಚುರ್ಯ, ಇವುಗಳಿಂದಾಗಿ ಅದು ಕೇವಲ ಪಂಡಿತವರ್ಗದಲ್ಲಿ ಮಾತ್ರ ಪ್ರಿಯವಾಗಿತ್ತು. ಈ ಸಾಧನೆ ಗುಣದಿಂದ ಕೂಡಿದೆ ಎಂಬುದನ್ನು ಒಪ್ಪಿಕೊಂಡ ರಾಜರಾಜವರ್ಮನು ಮಲಯಾಳಂ ಭಾಷೆಯ ಜಾಯಮಾನಕ್ಕೆ ಅನೇಕ ಕಡೆಗಳಲ್ಲಿ ಧಕ್ಕೆಯುಂಟಾಗಿದೆ ಎಂದು ಭಾವಿಸಿದನು. ಆದ್ದರಿಂದ ಒಂದು ಪರಿಷ್ಕೃತ ರೂಪವನ್ನು ಸಿದ್ಧಪಡಿಸುವಂತೆ ತನ್ನ ಸೋದರಮಾವನನ್ನು ಆತ ಕೇಳಿದನು. ಎ.ಆರ್. ತನ್ನವೇ ಆದ ಕೆಲವು ಸಲಹೆ ಸೂಚನೆಗಳನ್ನು ಮಾಡಿದನು; ಅದರೆ ಅವುಗಳಲ್ಲಿ ಹಲವನ್ನು ಗ್ರಂಥಕರ್ತನು ಒಪ್ಪಿಕೊಳ್ಳಲು ಸಾಧ್ಯವಾಗಲಿಲ್ಲ. ಈ ರೀತಿ ೧೯೧೨ರಲ್ಲಿ **'ಮಣಿಪ್ರವಾಳ ಶಾಕುಂತಲಂ'** ಎಂಬ ಶೀರ್ಷಿಕೆಯಲ್ಲಿ ಕೇರಳವರ್ಮನು ಅನುಮೋದಿಸಿದ ಪರಿಷ್ಕೃತ ರೂಪವೊಂದು ಪ್ರಕಟವಾಯಿತು. ಆದರೆ ಪಾಂಡಿತ್ಯ ಸಾಲದ ಓದುಗರ ಪ್ರಯೋಜನಕ್ಕಾಗಿ ಆ ಶ್ರೇಷ್ಠ ಕೃತಿಯ ಇನ್ನೂ ಸರಳವಾದ ರೂಪವೊಂದನ್ನು ನಿರ್ಮಾಣ ಮಾಡಬೇಕೆಂದು ರಾಜರಾಜವರ್ಮನು ಆಲೋಚಿಸಿದನು. ಹಾಗೆ ಆಲೋಚಿಸಿದ ಕೂಡಲೆ ಆ ಕೃತಿಯ ಭಾಷಾಂತರಕ್ಕೆ ತೊಡಗಿದನು; **'ಮಲಯಾಳ ಶಾಕುಂತಲ'** ಎಂಬ ಹೆಸರಿನಲ್ಲಿ ಆ ಕೃತಿ ಪ್ರಕಟವಾಯಿತು (೧೯೧೨).

ಈ ಎರಡು ಭಾಷಾಂತರಗಳನ್ನು ಪರಸ್ಪರ ಹೋಲಿಸಿ ನೋಡಿ ಇವುಗಳ ಬೆಲೆ ಕಟ್ಟುವುದು ಕಷ್ಟ. ಪ್ರತಿಯೊಂದೂ ತನ್ನ ತನ್ನ ಗುಣಗಳನ್ನೂ ಅವಗುಣಗಳನ್ನೂ ಹೊಂದಿದ್ದು, ಎರಡೂ ಜೊತೆಗೂಡಿ ಆ ಮಹಾ ನಾಟಕವನ್ನು ಅರ್ಥ ಮಾಡಿಕೊಳ್ಳುವುದಕ್ಕೂ ಓದಿ ಸಂತೋಷಪಡುವುದಕ್ಕೂ ನೆರವಾಗಿವೆ. ಮೂಲಕೃತಿಗೆ ಯಥಾವತ್ತಾಗಿರಬೇಕು ಎಂಬ ರಾಜರಾಜವರ್ಮನ ಆದರ್ಶವು ಕೇರಳ ವರ್ಮನಂತಹ ಇತರರ ಆದರ್ಶಕ್ಕೆ ಬೇರೆಯದಾಗಿತ್ತು; ಇವರುಗಳು ಛಂದಸ್ಸು, ನುಡಿಗಟ್ಟು, ಇಂಥ ಕಾವ್ಯಶರೀರದ ಹೊರಗಣ ವಿಷಯಗಳಲ್ಲಿ ಯಥಾವತ್ತಾಗಿರ ಬೇಕೆಂದು ಉದ್ದೇಶ ಇಟ್ಟುಕೊಂಡಿದ್ದವರು. ಎ.ಆರ್. ಕೃತಿಯ ಭಾವಕ್ಕೂ, ಅದನ್ನು ಮಲಯಾಳದಂತಹ ಪುಷ್ಟಿ ಸಾಲದ ಭಾಷೆಯಲ್ಲಿ ಹೆಚ್ಚು

ಪಾಲಿಸಿಕೊಂಡು ಬರಲಿಲ್ಲ. ವಿಶೇಷವಾಗಿ ಭಾಷಾಂತರಗಳಲ್ಲಿ ಈ ನಿರ್ಬಂಧಗಳ ಪಾಲನೆ ಅನಗತ್ಯ ಎಂಬುದು ಆತನ ಭಾವನೆ. ಸಂಸ್ಕೃತ ಕಾವ್ಯವನ್ನು ಮಲಯಾಳಂ ಪದ್ಯಕ್ಕೆ ಭಾಷಾಂತರಿಸುವುದರಲ್ಲಿ ಇದು ಆತನ ಮೊದಲ ಪ್ರಯತ್ನವಾದರೂ ಕೂಡ ಅದರ ಯಶಸ್ಸು ಪ್ರಶಂಸನೀಯ.

**ಕುಮಾರಸಂಭವ**

ರಾಜರಾಜವರ್ಮನು ತನ್ನ 'ಮೇಘದೂತ'ದ ಅನುವಾದಕ್ಕೆ ಪಡೆದ ಪುರಸ್ಕಾರ ಎಷ್ಟು ಪ್ರೋತ್ಸಾಹಕರವಾಗಿತ್ತೆಂದರೆ, ಅತ್ಯಲ್ಪಕಾಲದಲ್ಲಿಯೇ ಅಂಥದೇ ಇನ್ನೊಂದು ಕೃತಿರಚನೆಗೆ ತೊಡಗಿದನು. ೧೮೯೪ರಲ್ಲಿ ಆತನು ಒಬ್ಬ ವಿದ್ಯಾರ್ಥಿಗೆ 'ಕುಮಾರಸಂಭವ'ವನ್ನು ಪಾಠ ಹೇಳಬೇಕಾಗಿದ್ದಿತು; ಅದಕ್ಕೆಂದು ಕೆಲವು ಟಿಪ್ಪಣಿಗಳನ್ನು ಸಿದ್ಧಪಡಿಸಿದ್ದನು. ಏಕಕಾಲದಲ್ಲಿ ಕಾವ್ಯದ ಭಾಷಾಂತರ ಕಾರ್ಯದಲ್ಲಿ ನಿರತನಾದನು. ಬೋಧನ ಕಾರ್ಯ ಮಧ್ಯೆ ನಿಂತುಹೋದರೂ, ಭಾಷಾಂತರ ಕಾರ್ಯ ಮುಂದುವರಿಯಿತು, ಕೆಲಸ ೧೮೯೫ರಲ್ಲಿ ಮುಗಿದು, ೧೮೯೭ರಲ್ಲಿ ಅದನ್ನು ಪ್ರಕಟಿಸಲಾಯಿತು.

ಮೊದಲ ಎಂಟು ಸರ್ಗಗಳಲ್ಲಿ ಆರನ್ನು ಮಾತ್ರ ಆತನು ಭಾಷಾಂತರಿಸಿದನು; ಈ ಆರು ಸರ್ಗಗಳು ಕಾಲಿದಾಸ ವಿರಚಿತ ಎಂದು ಎಲ್ಲ ವಿಮರ್ಶಕರೂ ಒಪ್ಪುತ್ತಾರೆ. 'ರತಿ ಪ್ರಲಾಪ'ವನ್ನು ಕುರಿತ ನಾಲ್ಕನೆಯ ಸರ್ಗವನ್ನು ಸಂಕ್ಷೇಪಿಸಲಾಗಿದೆ; ಎಂಟನೆಯದು ಅಶ್ಲೀಲ ಶೃಂಗಾರದಿಂದ ಕೂಡಿರುವುದರಿಂದ ಅದನ್ನು ಬಿಟ್ಟು ಬಿಡಲಾಯಿತು. 'ಮೇಘದೂತ'ಕ್ಕಿಂತ ಈ ಭಾಷಾಂತರವು ಹೆಚ್ಚು ಆಕರ್ಷಕವಾಗಿದೆ. ಅದನ್ನು ಬೇರೆ ಬೇರೆ ತರಗತಿಗಳಿಗೆ ಪಠ್ಯಪುಸ್ತಕವಾಗಿ ಅಂಗೀಕರಿಸಿರುವುದರಿಂದ, ಅದರ ಅನೇಕಾನೇಕ ಮುದ್ರಣಗಳು ಈಗಾಗಲೇ ಕಾಣಿಸಿಕೊಂಡಿವೆ. ಕೆಲವರು ಸಂಪ್ರದಾಯನಿಷ್ಠ ವಿಮರ್ಶಕರ ಅಭಿಪ್ರಾಯದಂತೆ, ಈ ಎರಡು ಭಾಷಾಂತರಗಳಲ್ಲಿಯೂ ಆಡು ಭಾಷೆಯ ಶಬ್ದರೂಪಗಳು ಅಧಿಕ ಪ್ರಮಾಣದಲ್ಲಿವೆ; ಆದರೆ ಗ್ರಂಥಕರ್ತನು ಅವುಗಳನ್ನು ಬೇಕೆಂದೇ ಉಪಯೋಗಿಸಿದ್ದನು.

**ಶಾಕುಂತಲಂ**

ಕಾಲಿದಾಸನ 'ಶಾಕುಂತಲ'ವನ್ನು ಕೆಲವು ವಿಶೇಷ ಸಂದರ್ಭಗಳ ಕಾರಣದಿಂದ ಕೈಕೊಳ್ಳಲಾಯಿತು. ಈ ಮಹಾ ಶ್ರೇಷ್ಠ ಕೃತಿ ಯುಗ ಯುಗಗಳಿಂದಲೂ ಮಲಯಾಳಿ ಕವಿಗಳನ್ನೂ, ವಿದ್ವಾಂಸರನ್ನೂ ಮೋಹಗೊಳಿಸಿದೆ, ಅವರೆದುರು ಸಡ್ಡು ಹೊಡೆದು

ಅಯಶಸ್ವಿಯಾಗಿಯೋ, ಅಂತೂ 'ಮಾಳವಿಕಾಗ್ನಿಮಿತ್ರ'ವನ್ನು ನಾನು ಭಾಷಾಂತರಿಸಿರುವುದಕ್ಕೆ ಈ ಹುಚ್ಚೇ ಕಾರಣ."*

ಮಾವೇಲಿಕ್ಕರದಲ್ಲಿ ಇದ್ದಾಗಲೇ ಪ್ರಾರಂಭವಾದ ಭಾಷಾಂತರ ಕಾರ್ಯ ತಿರುವನಂತಪುರದಲ್ಲಿಯೂ ಉತ್ಸಾಹದಿಂದ ಮುಂದುವರಿಯಿತು. ಮುಖ್ಯ ಶ್ಲೋಕಗಳ ಭಾಷಾಂತರವನ್ನು ಕೇಳಿದ ವಿದ್ವಾಂಸ ಮಿತ್ರರು ಅವುಗಳಲ್ಲಿ ಕೆಲವು ಮೂಲವನ್ನೂ ಮೀರಿಸಿವೆ ಎನ್ನುವವರೆಗೂ ಹೋದರು. ಅದು ಅತ್ಯುಕ್ತಿ ಎನ್ನುವುದರಲ್ಲಿ ಸಂದೇಹವಿಲ್ಲ. ೧೯೧೬ರಲ್ಲಿ ಬೇಸಗೆಯಲ್ಲಿ ಕಲಾವಿಲಾಸಂ ನಾಟಕ ಸಂಘದವರು 'ಮಾಳವಿಕಾಗ್ನಿಮಿತ್ರ'ನನ್ನು ಪ್ರದರ್ಶಿಸಿದರು; ಈ ಪ್ರದರ್ಶನವೂ ಸಹ ಅತ್ಯಂತ ಯಶಸ್ವಿಯಾಯಿತು.

**ಚಾರುದತ್ತಂ**

೧೯೧೭ರ ಬೇಸಗೆಯಲ್ಲಿ ತಿರುವನಂತಪುರದ ಅದೇ ಕಲಾವಿಲಾಸ ನಾಟಕ ಸಂಘದವರು ತಂಪುರಾನನಿಂದ ಒಂದು ಹೊಸ ನಾಟಕವನ್ನು ಬಯಸಿದರು. ಈ ಸಲ ಹೆಚ್ಚು ಕ್ರಿಯೆ ಉಳ್ಳ, ಸಾಕಷ್ಟು ವೈವಿಧ್ಯಮಯವಾದ ಪಾತ್ರ ವರ್ಗವುಳ್ಳ ಒಂದು ನಾಟಕವನ್ನು ನೀಡಬೇಕೆಂದು ಆತ ಬಯಸಿದನು. ಈ ಉದ್ದೇಶಕ್ಕಾಗಿ ಶೂದ್ರಕನ 'ಮೃಚ್ಛಕಟಿಕಂ' ಪ್ರಕರಣವನ್ನು ಮೊದಲಿಗೆ ಆಲೋಚಿಸಲಾಯಿತು. ಆದರೆ ಅದರ ಕೆಲವು ದೃಶ್ಯಗಳು ಅತಿ ದೀರ್ಘ ಎಂದು ಕಂಡು ಬಂದುವು. ನಮ್ಮ ಗ್ರಂಥಕರ್ತನ ಅಭಿಪ್ರಾಯದಂತೆ ಶೂದ್ರಕನ ನಾಟಕಕ್ಕೆ ಸ್ಫೂರ್ತಿಯನ್ನು ನೀಡಿದ್ದ ಭಾಸಕೃತ 'ಚಾರುದತ್ತ'ವನ್ನೂ ಕುರಿತು ಆತ ಆಲೋಚಿಸಿದನು. ಕೊನೆಗೆ 'ಚಾರುದತ್ತ'ದ ಮೊದಲ ನಾಲ್ಕು ಅಂಕಗಳನ್ನು ಭಾಷಾಂತರ ಮಾಡಿ 'ಮೃಚ್ಛಕಟಿಕ'ದ ಉತ್ತರ ಭಾಗದ ಸಂಕ್ಷೇಪ ರೂಪವನ್ನು ಉಪಸಂಹಾರ ರೂಪದಲ್ಲಿ ಅದಕ್ಕೆ ಸೇರಿಸತಕ್ಕದ್ದೆಂದು ಆತ ನಿಶ್ಚಯಿಸಿದನು. ಎಂದಿನಂತೆ ಆತ ಪದ್ಯ ಭಾಗಗಳನ್ನು ಮೊದಲು ಭಾಷಾಂತರಿಸಿ ಆ ಬಳಿಕ ಗದ್ಯ ಭಾಗಗಳನ್ನು ಭಾಷಾಂತರಿಸಿದನು. ಪ್ರಾರಂಭದಲ್ಲಿ ತಾತ್ಪೂರ್ತಿಕ ಪ್ರಿನ್ಸಿಪಾಲ್ ಆಗಿ ಆತ ನಿರ್ವಹಿಸಬೇಕಾಗಿದ್ದ ಉದ್ಯೋಗ ಸಂಬಂಧದ ಕಾರ್ಯ ಕಲಾಪಗಳು ಕೆಲಸ ಸ್ವಲ್ಪ ತಡವಾಗುವುದಕ್ಕೆ ಕಾರಣವಾದುವು, ಆದರೆ ಬೇಗನೆಯೇ ಅದು ಪೂರ್ಣವೇಗದಲ್ಲಿ ನಡೆಯತೊಡಗಿತು. ಅವನ

* ಈ ಪುಸ್ತಕದ ಲೇಖಕರು ಮಾಡಿರುವ ಮೂಲದ ಆಂಗ್ಲ ಅನುವಾದದ ಕನ್ನಡರೂಪ ಈ ವಾಕ್ಯಗಳು.

ಪ್ರಮಾಣದಲ್ಲಿ ಸೆರೆ ಹಿಡಿದಿಡುವುದಕ್ಕೂ ಹೆಚ್ಚು ಲಕ್ಷ್ಯ ಕೊಟ್ಟನು; ಆದ್ದರಿಂದ ಛಂದಸ್ಸು; ಪ್ರಾಸ, ಮುಂತಾದ ಕೃತಿರೂಪದ ವಿಚಾರದಲ್ಲಿ ಹೆಚ್ಚಿನ ಸ್ವಾತಂತ್ರ್ಯವನ್ನು ವಹಿಸುವುದು ಉಚಿತ ಎಂದು ಆತ ಎಣಿಸಿದನು. 'ಶಾಕುಂತಲ'ದಂತಹ ಕೃತಿ ಸಂಸ್ಕೃತದಂತಹ ಭಾಷೆಯ ವಿಶಾಲ ವ್ಯಾಪ್ತಿಯನ್ನೂ, ಸಿರಿವಂತಿಕೆಯನ್ನೂ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಪಡಿಸಿಕೊಳ್ಳುತ್ತದೆ; ಆದ್ದರಿಂದಲೇ ಆಧುನಿಕ ಭಾರತೀಯ ಭಾಷೆಗಳ ರಸಿಕರು ತಮ್ಮ ತಮ್ಮ ಭಾಷಾ ಮಾಧ್ಯಮಗಳಲ್ಲಿ ಅದರ ಭಾವವನ್ನು ಗ್ರಹಿಸಲು ಹೆಣಗುತ್ತಿರುವುದು ನಮಗೆ ಕಂಡುಬರುತ್ತದೆ.

**ಮಾಳವಿಕಾಗ್ನಿಮಿತ್ರಂ**

'ಶಾಕುಂತಲ'ವು ಶ್ರೇಷ್ಠ ಕಾವ್ಯವಾಗಿರುವುದಲ್ಲದೆ, ಶ್ರೇಷ್ಠ ನಾಟಕವೂ ಆಗಿದೆ. ಮೊತ್ತಮೊದಲಿಗೆ ೧೮೮೨ರಲ್ಲಿ ಪ್ರಕಟವಾದ ಕೇರಳವರ್ಮನ **'ಅಭಿಜ್ಞಾನ ಶಾಕುಂತಲಂ'** ಸಂಸ್ಕೃತ ಭೂಯಿಷ್ಠವಾದ ಮಣಿಪ್ರವಾಳ ಶೈಲಿಯಲ್ಲಿ ರಚಿತವಾಗಿದ್ದರೂ ರಂಗಸ್ಥಲದ ಮೇಲೆ ಸಹ ಅಪಾರ ರಂಜನೆಯನ್ನು ನೀಡಿತು; ಇತರ ಸಂಸ್ಕೃತ ನಾಟಕಗಳು ಮಲಯಾಳಂ ಭಾಷೆಗೆ ಅನುವಾದಗೊಳ್ಳಲು ನಾಂದಿಯಾಯಿತು; ನಾಟಕ ಬೇಗನೆ ಒಂದು ಸಾಹಿತ್ಯ ಮಾಧ್ಯಮವಾಗಿ ಮನ್ನಣೆಪಡೆಯಿತು. ರಾಜರಾಜವರ್ಮನ 'ಶಾಕುಂತಲ'ದ ಅನುವಾದ ಕೂಡ ರಂಗಸ್ಥಲದ ಮೇಲೂ ಹೊರಗೂ ಜನರಿಂದ ಸ್ವೀಕೃತವಾಯಿತು. ಅದರಿಂದಾಗಿ ಹೆಚ್ಚುಹೆಚ್ಚಾಗಿ ಸಂಸ್ಕೃತ ನಾಟಕಗಳನ್ನು ಭಾಷಾಂತರಿಸಲು ಆತನಿಗೆ ಉತ್ತೇಜನ ದೊರೆಯಿತು; ಆತನು ಭಾಷಾಂತರಕ್ಕೆ ಆಯ್ದುಕೊಂಡ ಮುಂದಿನ ಕೃತಿ ಕಾಲಿದಾಸನ **'ಮಾಲವಿಕಾಗ್ನಿಮಿತ್ರಂ'**. ವಾಸ್ತವವಾಗಿ ಆತನ 'ಶಾಕುಂತಲ'ವು ಮಾವೇಲಿಕ್ಕರದಲ್ಲಿ ೧೯೧೫ರಲ್ಲಿ ರಂಗಭೂಮಿಯ ಮೇಲೆ ಪ್ರದರ್ಶಿತವಾದಾಗ, ಅದು ಎಷ್ಟು ಯಶಸ್ವಿಯಾಯಿತೆಂದರೆ ಪ್ರತಿವರ್ಷವೂ ಒಂದು ಹೊಸ ನಾಟಕವನ್ನು ಬರೆದು ಕೊಡುವುದಾಗಿ ಎ.ಆರ್. ಮಾತು ಕೊಟ್ಟನು.

'ಮಾಳವಿಕಾಗ್ನಿಮಿತ್ರ' ನಾಟಕಕ್ಕೆ ಬರೆದ ಮುನ್ನುಡಿಯಲ್ಲಿ ಆತ ಹೀಗೆ ಹೇಳಿದ್ದಾನೆ: "ದುರ್ಗಮವೂ ಮಾರ್ಗರಹಿತವೂ ಆದ ವ್ಯಾಕರಣದ ಅರಣ್ಯದಲ್ಲಿ ಅಲೆದಾಡಬೇಕಾಗಿದ್ದ ನನ್ನ ಮನಸ್ಸಿಗೆ ಸುಂದರವಾದ ನಾಟಕೋದ್ಯಾನದಲ್ಲಿ ಕೆಲಕಾಲ ವಿಶ್ರಾಂತಿ ಪಡೆಯುವುದು ಎಂಥ ನೆಮ್ಮದಿ! ಆ ಸಂತೋಷವನ್ನು ಪಡೆಯಬೇಕೆಂಬ ಹುಚ್ಚನ್ನು ತಡೆದುಕೊಳ್ಳಲು ಸಾಧ್ಯವಿಲ್ಲ; ಯಶಸ್ವಿಯಾಗಿಯೋ

ಭಾಷಾಂತರವನ್ನು ಸುಲಭವಾಗಿ, ಸಂತೋಷದಿಂದ, ಮಾಡಲಾಯಿತು. ಭಾಸನ ಮನೋಧರ್ಮ ಮತ್ತು ಹದ ಹವಣುಗಳೊಂದಿಗೆ ಎಷ್ಟು ಚೆನ್ನಾಗಿ ತಾದಾತ್ಮ್ಯವನ್ನು ಹೊಂದಲು ಎ.ಆರ್.ಗೆ ಸಾಧ್ಯವಾಯಿತೆಂದರೆ, ಭಾಷಾಂತರವು ಪ್ರತಿಸೃಷ್ಟಿ ಎನ್ನುವ ಮಟ್ಟಕ್ಕೆ ಏರಿತು. ಈ ಕೃತಿ ಉತ್ಕೃಷ್ಟವಾಗಿರುವುದು ಏಕೆ ಎನ್ನುವುದು ಇದರಿಂದ ವಿಶದವಾಗುತ್ತದೆ; ಹೀಗೆ, ನಮ್ಮ ಈ ಮಹಾಗ್ರಂಥಕರ್ತನ ಕಡೆಯ ಭಾಷಾಂತರವಾಗಿ ಉಳಿಯಿತು ಇದು. ಆಮೇಲೆ ಮೂರು ತಿಂಗಳ ಕಾಲ ಮಾತ್ರ ಆತ ಬದುಕಿದ್ದನು.

ಸಂಸ್ಕೃತದಿಂದ ಆದ ಈ ಎಲ್ಲ ಭಾಷಾಂತರಗಳೂ ಹಲವು ಮರು ಮುದ್ರಣಗಳನ್ನು ಕಂಡವು. ಅನೇಕ ಸಲ ಅವುಗಳನ್ನು ಶಾಲಾ ಕಾಲೇಜುಗಳಲ್ಲಿ ಪಠ್ಯಪುಸ್ತಕಗಳೆಂದು ಗೊತ್ತುಮಾಡಲಾಯಿತು. ಒಬ್ಬ ಶ್ರೇಷ್ಠ ಕಲಾಕಾರನ ಕೃತಿಗಳೆಂದು ಇವು ಉನ್ನತ ಗೌರವಕ್ಕೆ ಪಾತ್ರವಾಗಿವೆ.

### ಉದ್ದಾಲ ಚರಿತಂ

ಸಂಪೂರ್ಣವಾಗಿ ಬೇರೆಯ ತೆರನಾದ ಭಾಷಾಂತರವನ್ನು ಕುರಿತು ಈಗ ನಾವು ವಿಚಾರ ಮಾಡಬಹುದು; ಇದು ಬೇರೆಯ ಮೂಲದಿಂದ ಸಂಸ್ಕೃತ ಗದ್ಯಕ್ಕೆ ತಿರುಗಿಸಿದ ಕೃತಿ. ಮೂಲಕೃತಿ ಷೇಕ್ಸ್‌ಪಿಯರನ 'ಒಥೆಲೊ'. ಇದು ರಾಜರಾಜವರ್ಮನ ಮುಮ್ಮಂಚಿನ ಕೃತಿಗಳಲ್ಲಿ ಒಂದು (೧೮೯೮). ನಿಷ್ಕೃಷ್ಟವಾಗಿ ಹೇಳುವುದಾದರೆ ಇದು ಭಾಷಾಂತರವೇ ಅಲ್ಲ; ರೂಪಾಂತರ. ಷೇಕ್ಸ್‌ಪಿಯರನ ಪರಿಚಯವಿಲ್ಲದ ಸಂಸ್ಕೃತ ವಾಚಕರಿಗೆ ಆ ಮಹಾ ಕವಿಯ ಸೃಜನಶೀಲ ಪ್ರತಿಭೆಯ ಸ್ವರೂಪವನ್ನು ತೋರಿಸಿಕೊಡುವುದೇ ಈ ಪ್ರಯತ್ನದ ಉದ್ದೇಶ. ಪಾತ್ರಗಳ ಹೆಸರುಗಳನ್ನು ಮಾರ್ಪಡಿಸಿದೆ. (ಒಥೆಲೊ–ಉದ್ದಾಲ, ಡೆಸ್ಡಿಮೋನ–ದೋಷದಮನಾ, ಇತ್ಯಾದಿ); ಇದರಿಂದಾಗಿ ಯೂರೋಪು ಸಂಸ್ಕೃತಿಯ ಪ್ರವೇಶವಿಲ್ಲದೆ ಓದುಗರು ಜುಗುಪ್ಸೆ ಪಡುವುದಿಲ್ಲ. ಇಡಿಯ ನಾಟಕವನ್ನು ಸಂಕ್ಷೇಪಗೊಳಿಸಿ, ಸರಳವಾದ ಸಂಸ್ಕೃತ ಗದ್ಯದಲ್ಲಿ ಅನುವಾದ ಮಾಡಿದೆ; ಇದು ಲ್ಯಾಮ್‌ನ (Charles Lamb) 'ಷೇಕ್ಸ್ ಪಿಯರ್‌ನ ನಾಟಕ ಕಥೆಗಳು' (Tales from Shakespeare) ಎಂಬ ಕೃತಿಯನ್ನು ಹೋಲುತ್ತದೆ.

* * * *

ತೀವ್ರವಾದ ಅಪೇಕ್ಷೆ ಮತ್ತು ಉತ್ಸಾಹ ಎಷ್ಟರ ಮಟ್ಟಿಗಿದ್ದುವು ಎನ್ನುವುದನ್ನು ಆತನ ದಿನಚರಿಯಿಂದ ಅರ್ಥ ಮಾಡಿಕೊಳ್ಳಬಹುದು:

"ಹೊತ್ತಿಗೆ ಮುಂಚೆ ಎದ್ದು, ಸ್ನಾನಕಾಲಕ್ಕೆ ಮುಂಚೆ ಹನ್ನೆರಡು ಪದ್ಯಗಳನ್ನು ಭಾಷಾಂತರ ಮಾಡಿದೆ. ಕಾವ್ಯದೇವಿಯನ್ನು ಒಲಿಸಿಕೊಂಡು ಸುಪ್ರಸನ್ನಳಾಗಿ ಇರಿಸಬೇಕೆಂಬುದನ್ನು ಚೆನ್ನಾಗಿ ಅರಿತುಕೊಂಡು, ಕಾಲೇಜಿನ ತರಗತಿಗಳಲ್ಲಿ ಪಾಠ ಹೇಳುವ ಕೆಲಸ ಒಂದನ್ನು ಬಿಟ್ಟು ಉಳಿದೆಲ್ಲ ವ್ಯವಹಾರಗಳನ್ನೂ ಉಪೇಕ್ಷೆ ಮಾಡಿದೆ. ಟೆನಿಸ್ ಕ್ರೀಡಾರಂಗದಲ್ಲಿ ಕೂಡ ನನ್ನ ಮನಸ್ಸು ಕಾವ್ಯಪ್ರಪಂಚದಲ್ಲಿಯೇ ಅಲೆದಾಡುತ್ತಿತ್ತು. ರಾತ್ರಿಯೆಲ್ಲ ಗಾಢನಿದ್ರೆ ಇರಲಿಲ್ಲ. ಆದರೂ ಕಷ್ಟಕರವಾದ ಅನೇಕ ಪದ್ಯಗಳನ್ನು ಸುಲಭವಾಗಿ ಭಾಷಾಂತರ ಮಾಡಲಾಯಿತು."

"ಬೆಳಗ್ಗೆಯಿಂದ ಕಾವ್ಯದ ಕಲ್ಪನಾಲೋಕದಲ್ಲಿ ವಾಸ. ಶೂದ್ರಕನ ಪದ್ಯಗಳು ಭಾಸನಲ್ಲಿ ಕಂಡುಬರುವ ಸಹಜ ಸೌಂದರ್ಯವನ್ನಾಗಲಿ ಆಮೇಲಿನ ಕವಿಗಳಲ್ಲಿಯ ಪರಿಪೂರ್ಣತೆಯ ಲಕ್ಷಣವನ್ನಾಗಲಿ ಹೊಂದಿರಲಿಲ್ಲ. ಹೀಗಿದ್ದುದರಿಂದ ಮಲಯಾಳಂ ಭಾಷೆಗೆ ಪರಿವರ್ತಿಸುವ ಮುನ್ನ ಆ ಪದ್ಯಗಳಲ್ಲಿ ಮೇಲ್ಪಾಟು ಮಾಡುವುದಕ್ಕೆ ಪೂರ್ತಿ ಅವಕಾಶವಿತ್ತು ನನಗೆ."

ವಾಸ್ತವವಾಗಿ ಭಾಷಾಂತರ ಕಾರ್ಯವು ಗಡಿಯಾರದ ಚಲನೆಯಂತೆ ಕರಾರುವಾಕ್ಕಾಗಿ ಮುಂದೆ ಸಾಗಿತು; ಭಾಷಾಂತರ, ಮಾಡಿದ್ದನ್ನು ಸರಿ ನೋಡುವುದು, ಮತ್ತು ಅಚ್ಚಿನ ಕರಡು ಪ್ರತಿಯನ್ನು ತಿದ್ದುವುದು– ಇವು ಜೊತೆಜೊತೆಯಲ್ಲಿ ನಡೆದುವು; ಪುಸ್ತಕ ಅತ್ಯಂತ ಶೀಘ್ರವಾಗಿ ಪ್ರಕಟವಾಯಿತು. ಈ ಭಾಷಾಂತರದಲ್ಲಿ ಇತರ ಭಾಷಾಂತರಗಳಲ್ಲಿ ಕಂಡು ಬಂದಿರುವುದಕ್ಕಿಂತ ಹೆಚ್ಚಿನ ಸ್ವಾತಂತ್ರ್ಯವನ್ನು ಭಾಷಾಂತರಕಾರ ವಹಿಸಿದ್ದಾನೆ.

**ಸ್ವಪ್ನವಾಸವದತ್ತಂ**

ಹೊಸದೊಂದು ನಾಟಕವನ್ನು ಭಾಷಾಂತರ ಮಾಡಿ ಪ್ರದರ್ಶಿಸುವುದು ಒಂದು ವಾರ್ಷಿಕ ಸಮಾರಂಭವಾಗಿ ಪರಿಣಮಿಸಿತು; ೧೯೧೮ನೆಯ ವರ್ಷಕ್ಕೆ ಆಯ್ದುಕೊಂಡ ನಾಟಕ ಭಾಸನ '**ಸ್ವಪ್ನವಾಸವದತ್ತ**'. ನಾಟಕವೇನೋ ಯಶಸ್ವಿಯಾಯಿತು; ಆದರೆ ಇತರ ನಾಟಕಗಳಲ್ಲಿ ಇದ್ದುದಕ್ಕಿಂತ ಹಾಸ್ಯ ವಿನೋದ ಇದರಲ್ಲಿ ಕಡಮೆ. ವಿದೂಷಕನು ನಾಲ್ಕನೆಯ ಅಂಕದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಾನೆ. ಒಟ್ಟಿನ ಮೇಲೆ ನಾಟಕದಲ್ಲಿಯ ವಾತಾವರಣದಲ್ಲಿ ಉಲ್ಲಾಸ ಕಡಮೆಯೆ.

ವಿಜಯಂ' ನಾಟಕದ ಬಗೆಗೂ, 'ಒಥೆಲೊ' ನಾಟಕದ ರೂಪಾಂತರದ ಬಗೆಗೂ ನಾವು ಈಗಾಗಲೇ ಉಲ್ಲೇಖಿಸಿದ್ದೇವೆ. **'ಆಂಗ್ಲ ಸಾಮ್ರಾಜ್ಯಂ'** ಎಂಬ ಪ್ರೌಢ ಕೃತಿಯನ್ನು ಕುರಿತು ಸ್ವಲ್ಪ ವಿವರಪೂರ್ಣವಾಗಿ ವಿವೇಚಿಸಬೇಕಾಗಿದೆ. 'ಪಿತೃಪ್ರಲಾಪಂ' ಮತ್ತು 'ಭಂಗವಿಲಾಪಂ' ಎಂಬ ಚರಮಗೀತ ಮಾದರಿಯ ಎರಡು ಸಣ್ಣ ಕೃತಿಗಳನ್ನು ಸಹ ನೋಡಿದ್ದಾಗಿದೆ. ಆ ಬಳಿಕ 'ಸ್ತೋತ್ರ' ಇಲ್ಲವೆ (ರಾಜ ಮಹಾರಾಜರನ್ನು ಶ್ರೀಮಂತರನ್ನು ಹೊಗಳುವ) 'ಪ್ರಶಸ್ತಿ' ಸ್ವರೂಪದ ಕೆಲವು ಕವನಗಳು ಉಂಟು. ಈ ರಚನೆಗಳಲ್ಲಿ ಬಹುಪಾಲಿನವನ್ನು ಉತ್ಸಾಹಶಾಲಿ ಕವಿಯ ಮೊದಲಿನ ಅಭ್ಯಾಸ ಪ್ರಯತ್ನಗಳೆಂದು ಪರಿಗಣಿಸಬೇಕಾಗುತ್ತದೆ. ಅವುಗಳು ವಿದ್ವತ್ತನ್ನೂ ಕವಿತಾಶಕ್ತಿಯನ್ನೂ ತೋರುವುವಾದರೂ ಅವುಗಳನ್ನು ಪಳಗುತ್ತಿರುವ ಕವಿಯ ಕೃತಿಗಳೆಂದು ಭಾವಿಸಬೇಕು. ಸಂಪೂರ್ಣವಾಗಿ ಸಾಂಪ್ರದಾಯಿಕ ಮಾರ್ಗಕಾವ್ಯದ ಕವಿಯೊಬ್ಬ ಕ್ರಾಂತಿಕಾರಿ ಸ್ವತಂತ್ರ ಮಾರ್ಗದ ಕವಿಯಾಗಿ ಮಾರ್ಪಟ್ಟನು ಎಂಬುದನ್ನು ಅರ್ಥಮಾಡಿಕೊಳ್ಳುವ ಸಲುವಾಗಿ ಕೆಲವು ಸಂಸ್ಕೃತ ರಚನೆಗಳನ್ನು ಮಾತ್ರ ಎತ್ತಿಕೊಳ್ಳೋಣ.

### ಸಾಹಿತ್ಯ ಕುತೂಹಲಂ

ಇದು ಎ.ಆರ್. ಪ್ರಕಟಿಸಿದ ಕೆಲವು ಮೊದಲಿನ ಕವನಗಳ ಸಂಕಲನ; ವಿದ್ವಾಂಸರಾದ ತುರುವೂರ್ ನಾರಾಯಣ ಶಾಸ್ತ್ರಿಗಳು ಉಚಿತ ಟಿಪ್ಪಣಿಯನ್ನು ಒದಗಿಸಿದ್ದಾರೆ. ಇದರಲ್ಲಿ 'ಸರಸ್ವತೀಸ್ತವಂ' (೧೮೯೦), 'ವೀಣಾಷ್ಟಕಂ' (೧೮೮೭), 'ರಾಗಮುದ್ರಾಸಪ್ತಕಂ' (೧೮೮೯), 'ವಿಮಾನಾಷ್ಟಕಂ' (೧೮೯೧), 'ಹಿಂದೂಪದ ವ್ಯುತ್ಪತ್ತಿ' (೧೮೯೦), 'ಪಿತೃಪ್ರಲಾಪಂ (೧೮೯೨) ಮತ್ತು 'ದೇವೀದಂಡಕಂ' (೧೮೮೮), ಎಂಬೀ ರಚನೆಗಳು ಇವೆ. ನಮ್ಮ ಗ್ರಂಥಕರ್ತನು ಎಂಥ ಸಮರ್ಥ ಕಲಾಕಾರನಾಗಿದ್ದನೆಂಬುದನ್ನು ಈ ಎಲ್ಲ ಕವನಗಳೂ ತೋರಿಸುತ್ತವೆ; ಆದರೆ 'ಪಿತೃಪ್ರಲಾಪಂ' ಎಂಬ ಕವನ ಕವಿ ಉಳ್ಳೂರರ ಅಭಿಪ್ರಾಯದಂತೆ ಎಲ್ಲ ದೃಷ್ಟಿಯಿಂದಲೂ ಒಂದು ಸೊಗಸಾದ ಕವಿತಾರಚನೆ.

### ಗೈರ್ವಾಣೀ ವಿಜಯಂ

ಈಗಾಗಲೇ ಸೂಚಿಸಿರುವಂತೆ, ಇದು ಏಕಾಂಕ ಪದ್ಯನಾಟಕ; ಗೈರ್ವಾಣಿ (ಸಂಸ್ಕೃತ) ಮತ್ತು ಹೌಣಿ* (ಇಂಗ್ಲಿಷ್) ನಾಟಕದ ಮುಖ್ಯ ಪಾತ್ರಗಳು. ಸಂಸ್ಕೃತ

* 'ಹೂಣ' ಭಾಷೆಗೆ ಸಂಬಂಧಪಟ್ಟದ್ದು 'ಹೌಣಿ'– ಅನುವಾದಕ.

# ಅಧ್ಯಾಯ ಏಳು

# ಸೃಷ್ಟ್ಯಾತ್ಮಕ ಮತ್ತು ವಿಮರ್ಶಾತ್ಮಕ ಲೇಖನ ಕಾರ್ಯ

ಹಿಂದಿನ ಅಧ್ಯಾಯದಲ್ಲಿ ರಾಜರಾಜವರ್ಮನು ಮಾಡಿದ ಭಾಷಾಂತರಗಳನ್ನು ಕುರಿತು ವಿವೇಚನೆ ಮಾಡಿದ್ದೇವೆ. ಸಾಧಾರಣ ಅರ್ಥದಲ್ಲಿ ಭಾಷಾಂತರ ಎಂದರೆ ಬೇರೊಂದು ಭಾಷೆಯ ಯಾವುದಾದರೊಂದು ಕೃತಿಯನ್ನು ಯಥಾವತ್ತಾಗಿ ತನ್ನ ಭಾಷೆಯಲ್ಲಿ ನಿರೂಪಿಸುವುದು. ಮೂಲ ಕೃತಿ ಸೃಷ್ಟ್ಯಾತ್ಮಕವಿರಬಹುದು. ಇಲ್ಲವೆ ಬರಿಯ ತಿಳಿವಳಿಕೆ ನೀಡುವುದಾಗಿರಬಹುದು. ಒಳ್ಳೆಯ ಭಾಷಾಂತರವು ಸೃಷ್ಟ್ಯಾತ್ಮಕವಾಗಿದ್ದಾಗ ಅದು ಒಂದು ಹೆಜ್ಜೆ ಮುಂದಕ್ಕೆ ಹೋಗಿ ಒಂದು ಬಗೆಯ 'ಸೃಷ್ಟ್ಯಂತರ' ಇಲ್ಲವೆ 'ಪ್ರತಿಸೃಷ್ಟಿ' ಆಗಿರುತ್ತದೆ. ಸಂಸ್ಕೃತದ ಉದ್ದಾಮ ಕೃತಿಗಳ ವಿಷಯದಲ್ಲಿ ಎ.ಆರ್. ಮಾಡಿರುವುದು ಅದನ್ನೇ; ಹೀಗಿರುವುದರಿಂದಲೇ ಸೃಜನಶೀಲ (ಕಾರಯಿತ್ರೀ) ಪ್ರತಿಭೆಯುಳ್ಳವರು ಮಾತ್ರ ಕವಿತೆಯ ಭಾಷಾಂತರವನ್ನು ಚೆನ್ನಾಗಿ ಮಾಡಬಲ್ಲರು. ಹಾಗಿದ್ದರೂ ಕೂಡ, 'ಪ್ರತಿಸೃಷ್ಟಿ'ಯನ್ನು ಸ್ವತಂತ್ರ ಕೃತಿಗಳ ಸೃಷ್ಟಿಗೆ ಸಮ ಎನ್ನಲಾಗದು; ಏಕೆಂದರೆ, ಪ್ರತಿಸೃಷ್ಟಿಯ ಕಾರ್ಯದಲ್ಲಿ ಅಗತ್ಯ ಸ್ಫೂರ್ತಿಯನ್ನು ಪ್ರಚೋದಿಸುವ ಆಕರವಾಗಿ ಮೂಲಕೃತಿ ಕೆಲಸ ಮಾಡುತ್ತದೆ. ಸ್ವತಂತ್ರವಾದ ಸೃಷ್ಟ್ಯಾತ್ಮಕ ಕೃತಿಗಳಲ್ಲಿ ಸೃಷ್ಟಿಶಕ್ತಿ ಸ್ವತಂತ್ರವಾಗಿರಬೇಕು, ಸ್ವಯಂಪ್ರಕಟಿತವಾಗಿರಬೇಕು, ಮತ್ತು ಸಾಮಾನ್ಯವಾಗಿ ಅತ್ಯುಚ್ಚ ಮಟ್ಟದಲ್ಲಿರಬೇಕು. ಇನ್ನು ಸ್ವತಂತ್ರ ಕವಿಯಾಗಿ ರಾಜರಾಜವರ್ಮನ ಕೊಡುಗೆಗಳು ಏನು ಎಂಬುದನ್ನು ಪರೀಕ್ಷಿಸೋಣ.

**ಸಂಸ್ಕೃತ ಕೃತಿಗಳು**

ರಾಜರಾಜವರ್ಮನು ಒಬ್ಬ ಸಂಸ್ಕೃತ ಕವಿಯಾಗಿ ತನ್ನ ಲೇಖನೋದ್ಯೋಗವನ್ನು ಪ್ರಾರಂಭಿಸಿದನೆನ್ನುವುದನ್ನೂ, ಆತ ಮೂವತ್ತೊಂದು ವರ್ಷದವನಾಗಿದ್ದಾಗ ಮಲಯಾಳ ಭಾಷೆಯಲ್ಲಿ ಬರೆಯುವುದಕ್ಕೆ ಕೈಹಾಕಿದನೆಂಬುದನ್ನೂ ನಾವು ಈಗಾಗಲೇ ನೋಡಿದ್ದೇವೆ. ಸಂಸ್ಕೃತದಲ್ಲಿ ಆತ ೨೨ ಕೃತಿಗಳನ್ನು ರಚಿಸಿದನು; ಅವುಗಳಲ್ಲಿ ಬಹುಸಂಖ್ಯೆಯವು ತಾರತಮ್ಯ ದೃಷ್ಟಿಯಿಂದ ಸಣ್ಣವು. 'ಗೈರ್ವಾಣೀ

ಕೂಡ ಒಂದು ಉನ್ನತವಾದ ಸ್ಥಾನವನ್ನು ಹೊಂದಿದೆ. ಆಂಗ್ಲ ಸಾಮ್ರಾಜ್ಯ ಎಂದರೆ ಬ್ರಿಟಿಷ್ ಸಾಮ್ರಾಜ್ಯ; ವಿಕ್ಟೋರಿಯಾ ಮಹಾರಾಣಿಯ ಆಳ್ವಿಕೆಯ ವಜ್ರ ಮಹೋತ್ಸವದವರೆಗೆ ಸಾಮ್ರಾಜ್ಯದ ಕಥೆಯನ್ನು ಈ ಕಾವ್ಯ ನಿರೂಪಿಸುತ್ತದೆ. ಭಾರತ ದೇಶದಲ್ಲಿ ಈ ಉತ್ಸವವನ್ನು ೧೮೯೫ರಲ್ಲಿ ಸಮಸ್ತ ವೈಭವಗಳಿಂದ ನೆರವೇರಿಸಲಾಯಿತು. ವೈಭವೋಪೇತ ಉತ್ಸವ ಸಮಾರಂಭದ ಸಂದರ್ಭದಲ್ಲಿ, ಪ್ರಸಿದ್ಧವಾದ ರಘುವಂಶ ಮಹಾಕಾವ್ಯದ ಮಾದರಿಯಲ್ಲಿ ಒಂದು ದೀರ್ಘವಾದ ಕಾವ್ಯವನ್ನು ಬರೆದರೆ ಸೊಗಸಾಗಿರುವುದೆಂದು ರಾಜರಾಜವರ್ಮನು ಯೋಚಿಸಿದನು. ಉತ್ಸವವೇ ಸದ್ಯದಃ ಪ್ರೇರಣೆಯಾದರೂ, ಸಂಸ್ಕೃತ ಪಾಠಶಾಲೆಗಳ ವಿದ್ಯಾರ್ಥಿಗಳು ಚರಿತ್ರೆ ಮತ್ತು ಭೂಗೋಳಗಳಂತಹ ವಿಷಯಗಳನ್ನು ಕಲಿಯಬೇಕು; ಕಾವ್ಯಭಾಷೆಯಲ್ಲಿ ಆಚ್ಛಾದಿತವಾಗಿದ್ದರೂ ಯಥಾರ್ಥವಾದ ಇತಿಹಾಸದ ಆಧಾರದ ಮೇಲೆ ರಚಿಸಿದ ಅಂಥ ಒಂದು ಗ್ರಂಥವನ್ನು ಯೋಗ್ಯವಾದ ಸಂಸ್ಕೃತ ಪಠ್ಯ ಪುಸ್ತಕಗಳ ಕೊರತೆಯನ್ನು ಕೆಲಮಟ್ಟಿಗೆ ನೀಗಬಹುದು, ಎಂದು ಆತ ಆಲೋಚಿಸಿದನು. ಆತ ತನ್ನ ಹಿರಿಯ ಸಲಹೆಗಾರ ಕೇರಳವರ್ಮನ ಸಲಹೆ ಕೇಳಲಾಗಿ, ಆತ ಒಪ್ಪಿಗೆ ಕೊಟ್ಟನು; ಹೀಗೆ ವಜ್ರಮಹೋತ್ಸವಕ್ಕೆ ಎರಡು ವಾರ ಮುಂಚೆ ಗ್ರಂಥರಚನೆಗೆ ತೊಡಗಿದನು. ೨೩ ಸರ್ಗಗಳ ಈ ಕೃತಿ ಹೆಚ್ಚುಕಡಮೆ ಎರಡು ವರ್ಷಗಳಲ್ಲಿ ಮುಗಿಯಿತು, ೧೯೦೦ರಲ್ಲಿ ಪ್ರಕಟವಾಯಿತು.

ಲಂಡನ್ ನಗರದ ವಿವರಪೂರ್ಣವಾದ ವರ್ಣನೆಯೊಡನೆ ಕೃತಿ ಮೊದಲಾಗುತ್ತದೆ. ಕೃತಿಕರ್ತನು ನಗರವನ್ನು ನೋಡದೆ ಇದ್ದರೂ, ಕೇಳಿ ಓದಿ ತಿಳಿದ ಸಂಗತಿಗಳ ಆಧಾರದ ಮೇಲೆ ಆತನ ಕಲ್ಪನಾಶಕ್ತಿ ಕಾರ್ಯ ಮಾಡಿತು; ಕೃತಿ ವಿಶ್ವಾಸಾರ್ಹವಾದ, ಸುಂದರವಾದ ವರ್ಣನೆಯಾಗಿ ಪರಿಣಮಿಸಿತು. ಅನಂತರ ಈಸ್ಟ್ ಇಂಡಿಯಾ ಕಂಪೆನಿಯ ಸಾಹಸ ಕಾರ್ಯಗಳನ್ನು ವರ್ಣಿಸಿ, ಎಲ್ಲ ಮುಖ್ಯ ಐತಿಹಾಸಿಕ ಘಟನೆಗಳನ್ನೂ ಹಂತಹಂತವಾಗಿ ನಿರೂಪಿಸಲಾಗಿದೆ; ನಿರೂಪಣೆಯಲ್ಲಿ ಬ್ರಿಟಿಷ್ ಹಾಗೂ ಭಾರತೀಯ ಪ್ರಮುಖ ವ್ಯಕ್ತಿಗಳು ಹಾದುಹೋಗುತ್ತಾರೆ; ಘರ್ಷಣೆಗಳು, ಸಾಹಸ ಕಾರ್ಯಗಳು, ಕಾದಾಟಗಳು, ಶರಣಾಗತಿ ಮತ್ತು ಕೊನೆಯಲ್ಲಿ, ಬಹುಮಟ್ಟಿಗೆ ಶಾಂತಿಯಿಂದ ಕೂಡಿದ ಆಳ್ವಿಕೆ, ಈ ಆಳ್ವಿಕೆಯಲ್ಲಿ ಒಂದು ಜನಾಂಗವಾಗಿ ಇಂಡಿಯಾ ದೇಶವು ಸಾಧಿಸಿದ ಅಭಿವೃದ್ಧಿ ಕಾರ್ಯಗಳು ಮತ್ತು ಅದು ಅಭಿವೃದ್ಧಿ ಹೊಂದಿದ ಬಗೆ– ಇವೆಲ್ಲವೂ ನಿರೂಪಣೆಯಲ್ಲಿ ಕಾಣಬರುತ್ತವೆ. ಹನ್ನೊಂದನೆಯ ಸರ್ಗದಲ್ಲಿ ಟಿಪ್ಪು ಸುಲ್ತಾನನು ಕೇರಳದ ಮೇಲೆ ದಾಳಿ ನಡೆಸಿದ್ದನ್ನು ಪ್ರಮುಖವಾಗಿ ವರ್ಣಿಸಿದೆ.

ಮಹಾವಿದ್ವಾಂಸ ಪುನ್ನಶ್ಶೇರಿ ನಂಪಿ ತಾನು ಸಂಪಾದಿಸಿ ನಡಸುತ್ತಿದ್ದ 'ವಿಜ್ಞಾನ ಚಿಂತಾಮಣಿ' ಎಂಬ ನಿಯತಕಾಲಿಕ ಪತ್ರಿಕೆಗೆ ಬೇಕೆಂದು ಕೋರಿದ ಮೇರೆಗೆ ಈ ನಾಟಕವನ್ನು ರಚಿಸಲಾಯಿತು. ಕೋರಿಕೆಯ ಒತ್ತಾಯ ಬಲವಾಗಿದ್ದುದರಿಂದ ಕೃತಿಯನ್ನು ಆರು ದಿನಗಳಲ್ಲಿ ಮುಗಿಸಬೇಕಾಯಿತು. ತಿರುವನಂತಪುರದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದಾಗ ೧೮೮೯ರಲ್ಲಿ ರಚಿತವಾದ ಈ ನಾಟಕ ಆಗ ಇದ್ದ ಸನ್ನಿವೇಶವನ್ನು ಸಹ ಪ್ರತಿಬಿಂಬಿಸುತ್ತದೆ.

ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳ ಆದರ್ಶ ತತ್ತ್ವಗಳ ನಡುವಣ ವ್ಯತ್ಯಾಸ, ಸಂಸ್ಕೃತವನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಬೇಕೆಂಬ ಇಂಗ್ಲಿಷಿನ ಬಯಕೆ,– ಇವೇ ನಾಟಕದ ವಸ್ತು. ಸಂಸ್ಕೃತದ ಮಾತೆ ಭಾರತೀದೇವಿ ತನ್ನ ದುಃಖಪೂರ್ಣ ದುಃಸ್ಥಿತಿಗಾಗಿ ರೋದಿಸುತ್ತಾಳೆ. ಈ ಸನ್ನಿವೇಶದ ಅವಕಾಶವನ್ನು ಉಪಯೋಗಿಸಿ ಕೊಂಡು ಗ್ರಂಥಕರ್ತನು ಇಂಗ್ಲಿಷಿನ ಗುಣಾವಗುಣಗಳನ್ನು ಸವಿವರವಾಗಿ ನಿರೂಪಿಸುತ್ತಾನೆ. ಒಂದು ಸೊಗಸಾದ ಶ್ಲೋಕದಲ್ಲಿ, ಇಂಗ್ಲಿಷ್ ಭಾಷೆಯ ವರ್ಣಮಾಲೆಯಲ್ಲಿ ಅಕ್ಷರಗಳು ಕೊರತೆ ಬಿದ್ದಿವೆ ಎಂದು ಗೈರ್ವಾಣಿ ಇಂಗ್ಲಿಷನ್ನು ಗೇಲಿ ಮಾಡುತ್ತಾಳೆ. ಈಗಿನ ಕಾಲದ ವಾಚಕನಿಗೆ ಇಂಥ ವಾದಗಳೂ ಸಂವಾದಗಳೂ ಅತಿ ಸಾಮಾನ್ಯವಾಗಿ ಕಂಡರೂ ಅಂದಿನ ದಿನಗಳಲ್ಲಿ ಶಿಕ್ಷಣ ಇಲಾಖೆಯಲ್ಲಿ ಇದ್ದ ಉದ್ವೇಗದ ವಾತಾವರಣವನ್ನು ತೆರೆದು ತೋರಿಸುತ್ತವೆ.

### ವಿಟ ವಿಭಾವರಿ

ರಾಜರಾಜವರ್ಮನ ಸಂಸ್ಕೃತ ಪದ್ಯಗಳಲ್ಲಿ ಅತ್ಯಂತ ಸ್ವಾರಸ್ಯವಾದದ್ದು ಇದು. ರಾಧಾಮಾಧವರ ಸಮಾಗಮವನ್ನು ಬಿಟ್ಟು ಬೇರಿನ್ನೇನೂ ಇಲ್ಲ ಇದರಲ್ಲಿ; ರಾತ್ರಿಯ ನಾಲ್ಕು ಯಾಮಗಳನ್ನು ಸೂಚಿಸುವ ನಾಲ್ಕು ಸರ್ಗಗಳಲ್ಲಿ ಆ ಸಮಾಗಮವನ್ನು ವರ್ಣಿಸಿದೆ. ಕಾವ್ಯಶೈಲಿ, ಪದಗಳ ಆಯ್ಕೆ ಮತ್ತು ಅಭಿವ್ಯಕ್ತಿಗಳಲ್ಲಿ ಎ.ಆರ್. ಪರಿಣತ ಕೌಶಲ್ಯವನ್ನೂ ಕಲಾತ್ಮಕತೆಯನ್ನೂ ಮೆರೆದಿದ್ದಾನೆ. ಇಂಗ್ಲಿಷ್ ಭಾಷಾಂತರದಲ್ಲಿ ಮೂಲಕೃತಿಯ ಸೌಂದರ್ಯವನ್ನು ಎಷ್ಟು ಮಾತ್ರಕ್ಕೂ ಹಿಡಿದಿರಲು ಆಗಲಾರದು; ಆದ್ದರಿಂದ ಅಂಥ ಪ್ರಯತ್ನವನ್ನೇನೂ ಇಲ್ಲಿ ಮಾಡಿಲ್ಲ.

### ಆಂಗ್ಲ ಸಾಮ್ರಾಜ್ಯಂ

ಮಹಾಕಾವ್ಯದ ಶೈಲಿಯಲ್ಲಿ ಬರೆದಿರುವ ಈ ನೀಳ್ಗವಿತೆ ರಾಜರಾಜವರ್ಮನ ಕಾವ್ಯಗಳಲ್ಲಿ ಮಾತ್ರವಲ್ಲದೆ ಆಧುನಿಕ ಕವಿಗಳು ಬರೆದಿರುವ ಸಂಸ್ಕೃತ ಕಾವ್ಯಗಳಲ್ಲಿ

**ಮಲಯಾಳಂ ಕವಿತೆಗಳು**

ಗ್ರಂಥಕರ್ತನು ಮಲಯಾಳಂ ಭಾಷೆಯಲ್ಲಿ ರಚಿಸಿರುವ ಕಾವ್ಯ ನಿರ್ಮಿತಿ ಅಂಥದೇನೂ ವಿಪುಲವಾಗಿಲ್ಲ. ಉಲ್ಲೇಖಿಸಲರ್ಹವಾದ ಕವಿತೆ ಎರಡು ಮಾತ್ರ; ಇವೆರಡೂ ದೊಡ್ಡ ಪ್ರಮಾಣದವಲ್ಲವಾದರೂ ಗಮನಾರ್ಹವಾದವು. ಪೂರ್ತಿಯಾಗಿ ಪರಸ್ಪರ ಭಿನ್ನವಾದ ಕವಿಯ ವ್ಯಕ್ತಿತ್ವದ ಎರಡು ಮುಖಗಳನ್ನು ಅವು ವ್ಯಕ್ತಪಡಿಸುತ್ತವೆ.

**ಮಲಯ ವಿಲಾಸಂ**

೧೮೯೫ರಲ್ಲಿ ರಚಿತವಾದ 'ಮಲಯ ವಿಲಾಸಂ' ಪಶ್ಚಿಮ ಘಟ್ಟಗಳ ಮೇಲೆ ರಚಿತವಾದ ಒಂದು ಭಾವಗೀತೆ. ೧೮೯೫ರಲ್ಲಿ ಕವಿ ಅರ್ಧ ರೈಲು ಮಾರ್ಗವಾಗಿ, ಉಳಿದರ್ಧ ರಸ್ತೆಯಲ್ಲಿ ಪ್ರಯಾಣ ಮಾಡಿ ಹಿಂದಿರುಗುತ್ತಿದ್ದಾಗ ಪಶ್ಚಿಮ ಘಟ್ಟಗಳ ಚೆಲುವನ್ನು ನೋಡಿ ಆತ ಬೆರಗಾಗಿ ಹೋದನು. ವಲ್ಲಿಯೂರಿನಿಂದ ಆರುವ ಮೊಟಿಗೆ ಅಂಚೆಯ ಮೇಲ್ ಬಂಡಿಯಲ್ಲಿ ಪ್ರಯಾಣ ಮಾಡುವ ಯಾವ ಪ್ರಯಾಣಿಕನನ್ನಾದರೂ ಉದ್ದಕ್ಕೂ ಕಾಣುವ ಪಶ್ಚಿಮ ಘಟ್ಟಗಳ ನಿರಂತರ ದೃಶ್ಯಮಾಲೆ ಆಕರ್ಷಿಸುವುದು; ಈ ದೃಶ್ಯಮಾಲೆ ಕವಿಯ ಮನಸ್ಸಿನ ಮೇಲೆ ಎಷ್ಟು ಪರಿಣಾಮ ಬೀರಿತೆಂದರೆ ಅದನ್ನು ಕಲ್ಪನಾತ್ಮಕ ಪದ್ಯರೂಪದಲ್ಲಿ ವರ್ಣಿಸಬೇಕೆಂಬ ಮನಸ್ಸಿನ ಸೆಳೆತವನ್ನು ಅವನು ತಡೆಯಲಾರದೆ ಹೋದನು. ೨೪ ಪದ್ಯಗಳುಳ್ಳ ಈ ಕವಿತೆಯನ್ನು ರಸಿಕರು ಮೆಚ್ಚಿಕೊಂಡರು. ಭಾವಪ್ರಧಾನವಾದ ಕವಿತೆ ಅಂದಿನ ಮಲಯಾಳ ಭಾಷೆಗೆ ಅಪರಿಚಿತವಾಗಿತ್ತು. ಆದ್ದರಿಂದ 'ಮಲಯವಿಲಾಸಂ' ನೀಡಿದ ಹೊಸ ಸವಿಯನ್ನು ಎಲ್ಲರೂ ಸ್ವಾಗತಿಸಿದರು. ಈ ಸಣ್ಣ ಕವಿತೆ ಮಲಯಾಳಂ ಭಾಷೆಯಲ್ಲಿ ಒಂದು ಹೊಸ ಕಾವ್ಯ ಪ್ರಕಾರದ ಸಾಧ್ಯತೆಗಳನ್ನು ತೆರೆದು ತೋರಿಸಿಕೊಟ್ಟಿತು; ಇದೇ ಅದರ ವಿಶೇಷ ಗುಣಲಕ್ಷಣ.

**ಪ್ರಸಾದಮಾಲಾ**

'ಮಲಯವಿಲಾಸಂ' ಕೃತಿ ರಚನೆಯಾದ ಮೇಲೆ ಪದ್ಯ ರಚನೆ ಮುಂದುವರಿದರೂ ಅದು ಭಾಷಾಂತರ ಕಾರ್ಯಕ್ಕೆ ಮುಖ್ಯವಾಗಿ ಸೀಮಿತವಾಗಿತ್ತು. ಗ್ರಂಥಕರ್ತನು ನಿಧನವಾಗುವುದಕ್ಕೆ ಕೇವಲ ಕೆಲವು ತಿಂಗಳು ಮುಂಚೆ, ೧೯೧೮ರಲ್ಲಿ, ಮಲಯಾಳಿಯಲ್ಲಿ ಮುಂದಿನ ಸ್ವತಂತ್ರ ಕೃತಿ ರಚಿತವಾಯಿತು. ಆಳುವ ದೊರೆ ಶ್ರೀ ಮೂಲಂ ತಿರುನಾಳ್‌ನ ಷಷ್ಟಿಪೂರ್ತಿ ೧೯೧೮ರಲ್ಲಿ ನೆರವೇರಿತು; ಎ.ಆರ್. ತನ್ನ ಮಹಾಪೋಷಕನಿಗೆ ಪದ್ಯದ ಮೂಲಕ ತನ್ನ ಕಾಣಿಕೆಯನ್ನು ಸಮರ್ಪಿಸಲು

ರಾಜರಾಜವರ್ಮನು ತಾನು ನಿರೂಪಿಸಿದ ಸಂಗತಿಗಳಿಗೆ ಈ ಮುಂದೆ ತಿಳಿಸುವ ಗ್ರಂಥಗಳನ್ನು ಆಧಾರವಾಗಿ ಇಟ್ಟುಕೊಂಡಿದ್ದನು ಎಂಬುದು ಆತನ ದಿನಚರಿ ಪುಸ್ತಕದಿಂದ ವ್ಯಕ್ತಪಡುತ್ತದೆ. ಹಂಟರ್ ಮಹಾಶಯನ 'ಇಂಡಿಯಾ ದೇಶದ ಚರಿತ್ರೆ' [History of India], 'ಭಾರತೀಯ ರಾಜ್ಯಾಡಳಿತ ವ್ಯವಸ್ಥೆಯ ಹಿನ್ನೋಟ ಮತ್ತು ಮುನ್ನೋಟ' [The Retrospects and Prospects of Indian polity], 'ಕ್ಲೈವ್ ಮತ್ತು ವಾರೆನ್ ಹೇಸ್ಟಿಮಗ್ಸ್ ಇವರ ಮೇಲೆ ಬರೆದ ಪ್ರಬಂಧಗಳು' (Essays on Clive and Warren Hastings), 'ಚಿತ್ರಮಯ ಭಾರತ' (Picturesque India), ಮ್ಯಾಕೆನ್ಸಿ ಅವರ 'ಹತ್ತೊಂಬತ್ತನೆಯ ಶತಮಾನದ ಇತಿಹಾಸ' (The History of the Nineteenth Century), ಇದಿಷ್ಟು ಇತಿಹಾಸಕ್ಕೆ ಸಂಬಂಧಪಟ್ಟಂತೆ. ವರ್ಣನೆ ಗೆಲುವಾಗಿರಬೇಕು, ಸ್ವಾರಸ್ಯವಾಗಿರಬೇಕು, ಇದು ಅವನ ತೀವ್ರವಾದ ಅಭಿಲಾಷೆ. ಅವನು ಉಪಯೋಗಿಸಿರುವ ಕೆಲವು ಉಪಮೆಗಳು ಕಾಲಿದಾಸನ ನೆನಪನ್ನು ತರುತ್ತವೆ; ಕೆಲವು ಸ್ವತಂತ್ರವಾದವು, ಇನ್ನು ಕೆಲವು ಸಂಸ್ಕೃತ ಮಹಾಕಾವ್ಯಗಳ ಪ್ರಭಾವವನ್ನು ಸೂಚಿಸುತ್ತವೆ.

ಸಾಮಾನ್ಯವಾಗಿ ಹೇಳುವುದಾದರೆ 'ಆಂಗ್ಲ ಸಾಮ್ರಾಜ್ಯಂ' ಸಂಸ್ಕೃತದಲ್ಲಿ ಒಂದು ಘನವಾದ ಕಾವ್ಯ. ಎ.ಆರ್.ನ ಸಮಕಾಲೀನನೂ ಮಿತ್ರನೂ ಆದ ಮಹಾ ಕವಿ ಕೆ.ಸಿ. ಕೇಶವಪಿಳ್ಳೆ ಅದನ್ನು ಮಲಯಾಳಕ್ಕೆ ಭಾಷಾಂತರಿಸಿದ್ದಾನೆ. ಸಂಸ್ಕೃತ ಭಾಷೆ ಭಾರತೀಯ ಭಾಷೆಗಳು ಮತ್ತು ಭಾರತೀಯ ಸಂಸ್ಕೃತಿ, ಇವುಗಳ ವೈಭವವನ್ನು ಹಾಡಿಹೊಗಳಿದ ಒಬ್ಬ ರಾಷ್ಟ್ರೀಯ ಕವಿ, ಭಾರತಕ್ಕೆ ಸ್ವಾತಂತ್ರ್ಯವನ್ನು ನಿರಾಕರಿಸಿದ್ದ ಒಂದು ಸಾಮ್ರಾಜ್ಯದ ಗುಣಗಳನ್ನು ಕೊಂಡುಕೊನೆಯುವ ಯೋಜನೆಯನ್ನು ಏಕೆ ಕೈಗೊಂಡನೋ ಎಂದು ಆಧುನಿಕ ವಾಚಕನು ಆಶ್ಚರ್ಯ ಪಡಬಹುದು. ಈ ಸನ್ನಿವೇಶವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕಾದರೆ ಆ ಆಲೋಚನೆಯನ್ನು ಮಂಡಿಸಿದ್ದು ಯಾವ ಕಾಲದಲ್ಲಿ ಎಂಬುದನ್ನೂ ನೂರು ವರ್ಷಗಳ ಹಿಂದೆ ವಿದ್ಯಾವಂತರಾದ ಭಾರತೀಯರು ಯಾವ ಬಗೆಗೆ ಭಾವನೆಗಳನ್ನು ಹೊಂದಿದ್ದರು ಎಂಬುದನ್ನೂ ಆತ ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಈಗ ನಾವು ಅರಿತುಕೊಂಡಿರುವಂತಹ ಭಾರತ ರಾಷ್ಟ್ರೀಯ ಮನೋಭಾವ ಆಗ ಇನ್ನೂ ಮೊಳೆತಿರಲಿಲ್ಲ. ಏನೇ ಆಗಲಿ, ಒಂದು ಸಾಮ್ರಾಜ್ಯದ ಇತಿಹಾಸದ ಮೇಲೆ ಒಬ್ಬ ಕವಿ ಕಾವ್ಯರಚನೆ ಮಾಡಿದ ಮಾತ್ರಕ್ಕೆ ಆ ಕವಿ ಒಂದು ಪ್ರಬಲವಾದ ಸಾಮ್ರಾಜ್ಯದ ಕೈಗೊಂಬೆ ಎಂದು ಅವನಿಗೆ ಕಳಂಕ ಹಚ್ಚಲು ಸಾರ್ಥಕವಾದ ಅವಕಾಶವನ್ನು ಒದಗಿಸುವುದಿಲ್ಲ.

ಈ ವಿಭಾಗದಲ್ಲಿ ಆತನ ಪ್ರಬಂಧಗಳು ಹಾಗೂ ಸಾಹಿತ್ಯ ವಿಮರ್ಶೆಯ ಕೃತಿಗಳ ಮೇಲೆ ನಮ್ಮ ಗಮನವೆಲ್ಲವನ್ನೂ ಹರಿಸಬಹುದು; ಅವುಗಳ ಪ್ರಮಾಣ ಅಷ್ಟೇನೂ ಹೆಚ್ಚಲ್ಲ, ಆದರೆ ಗುಣದ ದೃಷ್ಟಿಯಿಂದ ಮೇಲುಮಟ್ಟದವು. ಅಚ್ಚುಕಟ್ಟು, ನಿಷ್ಕೃಷ್ಟತೆ, ವಿಚಾರಗಳ ಕರ್ತಬದ್ಧ ಜೋಡಣೆ, ಸ್ಪಷ್ಟತೆ ಹಾಗೂ ನಿರೂಪಣೆಯ ಸೊಗಸು, ಈ ಎಲ್ಲ ಗುಣಗಳಿಗಾಗಿ ಆತನ ಗದ್ಯ ಲೇಖನಗಳು ಗಮನಾರ್ಹವಾಗಿವೆ.

**ಸಾಹಿತ್ಯ ವಿಮರ್ಶೆ**

ರಾಜರಾಜವರ್ಮನ ಕಾಲದ ಮಲಯಾಳ ಭಾಷೆಯಲ್ಲಿ ಸಾಹಿತ್ಯ ವಿಮರ್ಶೆ ಎನ್ನಬಹುದಾದದ್ದು ಇನ್ನೂ ಶೈಶವಾವಸ್ಥೆಯಲ್ಲಿತ್ತು. ವಿದ್ವಾಂಸರಿಗೆ ಪರಿಚಿತವಾಗಿದ್ದುವು ಇಷ್ಟು ಮಾತ್ರ: ಪದ್ಯ ಕೃತಿಗಳ ಬಾಹ್ಯ ಪರಿಕರಗಳನ್ನು ಸಾಂಪ್ರದಾಯಿಕ ವಿಧಾನದಲ್ಲಿ ವಿಶ್ಲೇಷಿಸುವುದು ಮತ್ತು ಅವುಗಳ ಗುಣದೋಷಗಳನ್ನು ತಿಳಿಸುವುದು; ಮತ್ತು ವ್ಯಾಖ್ಯಾನಗಳನ್ನು, ವಿವರಣಾತ್ಮಕ ಟಿಪ್ಪಣಿಗಳನ್ನು ಬರೆಯುವುದು. ಸಾಹಿತ್ಯ ಕೃತಿಗಳ ಹುರುಳು ತಿರುಳುಗಳ ಬೆಲೆ ಕಟ್ಟಿ ಅವುಗಳ ಮೇಲೆ ಬೆಳಕು ಚೆಲ್ಲುವ ವಿಚಾರವು ಪಾಶ್ಚಾತ್ಯ ಸಾಹಿತ್ಯದ ಸಂಘಾತದ ಪರಿಣಾಮವಾಗಿ ಹುಟ್ಟಿಕೊಂಡಿತು.

**ನಳಚರಿತ್ರಂ– ಹೊಸ ಮುದ್ರಣ**

ಉಣ್ಣಾಯಿವಾರಿಯರ್ ರಚಿಸಿದ 'ನಳಚರಿತ್ರಂ' ಎಂಬ ಪ್ರಖ್ಯಾತವಾದ ಶ್ರೇಷ್ಠ ಕಥಕ್ಕಳಿಯನ್ನು (೧೯೦೫) ಕುರಿತು ರಾಜರಾಜವರ್ಮನು ಮೆಚ್ಚುಗೆಯ ಲೇಖನವನ್ನು ಬರೆದಾಗ ಅದು ಸಾಹಿತ್ಯ ರಸಿಕರ ಕಣ್ಣು ತೆರೆಯಿಸಿತು. ಪ್ರಾಚೀನ ಶ್ರೇಷ್ಠ ಕೃತಿಯೊಂದನ್ನು ಹೇಗೆ ಆಧುನಿಕ ವಿಮರ್ಶೆಯ ತುಲನೆಗೆ ಒಳಪಡಿಸಬಹುದು ಎನ್ನುವುದನ್ನು ಆತ ತೋರಿಸಿದನು. 'ನಳಚರಿತ್ರಂ ಅಟ್ಟಕ್ಕಥಾ' ಒಂದು ಕ್ಲಿಷ್ಟ ಕೃತಿ; ಅಲಕ್ಷ್ಯದಿಂದ ಮಾಡಿದ್ದ ಮುದ್ರಣ ಅದನ್ನು ಇನ್ನಷ್ಟು ಕ್ಲಿಷ್ಟವಾಗಿ ಮಾಡಿತ್ತು. ಆದ್ದರಿಂದ, ಎದ್ದುಕಾಣುವ ಅಚ್ಚಿನ ತಪ್ಪುಗಳನ್ನು ತಿದ್ದಿ, ಕಷ್ಟಕರವಾದ ಭಾಗಗಳಿಗೆ ವ್ಯಾಖ್ಯಾನವನ್ನೂ, ಟಿಪ್ಪಣಿಗಳನ್ನೂ ಸಿದ್ಧಪಡಿಸಬೇಕೆಂದು ರಾಜರಾಜವರ್ಮನು ನಿಶ್ಚಯಿಸಿದನು. ಈ ರೀತಿ ಸಿದ್ಧವಾದ ಮುದ್ರಣ ವಿದ್ವತ್ಪೂರ್ಣವೂ ವಿಷಯದ ಮೇಲೆ ಬೆಳಕು ಚೆಲ್ಲುವಂಥದೂ ಆದ ಆತನ ಪೀಠಿಕೆಯನ್ನು ಒಳಗೊಂಡಿದೆ; ಆ ಪೀಠಿಕೆಯನ್ನು 'ಕಾಂತಾರತಾರಕಂ' (ದಟ್ಟವಾದ ಕಾಡಿನಲ್ಲಿ ಒಂದು ನಕ್ಷತ್ರ) ಎಂದು ಕರೆಯಲಾಗಿದೆ. ಭವ್ಯಕೃತಿಯೊಂದರ ಸಹಜ ಸೌಂದರ್ಯವನ್ನು ವಿಶ್ಲೇಷಿಸಿ ವಿವರಿಸುವ

ಈ ಸಂದರ್ಭವನ್ನು ಉಪಯೋಗಿಸಿಕೊಂಡನು. ಆದರೆ ತಕ್ಕಮಟ್ಟಿಗೆ ದೀರ್ಘವಾದ ಈ ಕವಿತೆ ಸಾಧಾರಣ ಅರ್ಥದಲ್ಲಿ ಕೇವಲ ಪ್ರಶಸ್ತಿರೂಪದ ಕಾವ್ಯವಾಗಿರಲಿಲ್ಲ. ಒಟ್ಟುಗೂಡಿಸಿ ಹೋದ ಹಲವಾರು ದೇವತಾಸ್ತೋತ್ರಗಳ ಮಾಲಿಕೆಯನ್ನು ಒಳಗೊಂಡ ಬಹಳ ಪಾಂಡಿತ್ಯಪೂರ್ಣ ಕಾವ್ಯವಾಗಿತ್ತು ಅದು. ಋಗ್ವೇದವನ್ನು ಆಳವಾಗಿ ಅಭ್ಯಾಸಮಾಡಿದ ಮೇಲೆ ಕವನಗಳು ರಚಿತವಾಗಿವೆ; ಇದು ಎಂಟು 'ಮಂತ್ರ'ಗಳಿಂದ ವೇದ್ಯವಾಗುತ್ತದೆ. ಹಿಂದೂ ದೇವತಾ ಸಮುದಾಯವನ್ನು ಸ್ತುತಿ ಮಾಡಿದ ಮೇಲೆ ಬುದ್ಧ, ಜಿನ, ಕ್ರಿಸ್ತ ಮತ್ತು ಮಹಮ್ಮದ್ ಇವರುಗಳನ್ನು ಕವಿ ಪ್ರಾರ್ಥಿಸುತ್ತಾನೆ. ಈ ಸಂಗತಿ ಕವಿಯ ವಿಶಾಲ ಮನೋಧರ್ಮವನ್ನೂ, ಆತನ ಆಧ್ಯಾತ್ಮಿಕ ಹಾಗೂ ತಾತ್ವಿಕ ಒಲವು ನಿಲವುಗಳನ್ನು ಸೂಚಿಸುತ್ತದೆ.

**ಗದ್ಯ ಕೃತಿಗಳು**

ರಾಜರಾಜವರ್ಮನು ನಿಸ್ಸಂದೇಹವಾಗಿ ಕವಿತಾಶಕ್ತಿಯನ್ನು ಹೊಂದಿದ್ದನು ಎಂಬುದನ್ನು ನೋಡಿದ್ದೇವೆ; ಆದರೆ ಆತನ ಪ್ರತಿಭೆ ಪೂರ್ತಿಯಾಗಿ ಅರಳಿರುವುದನ್ನು ಆತನ ಗದ್ಯ ರಚನೆಗಳಲ್ಲಿ ಕಾಣಬೇಕು. ಆತ ಒಬ್ಬ ಶ್ರೇಷ್ಠ ಗದ್ಯ ಲೇಖಕ; ಆತ ರೂಪಿಸಿದ ಮಾದರಿಯಾದ ಆಧುನಿಕ ಗದ್ಯ ಇತರರಿಂದ ಅನುಕರಣ ಯೋಗ್ಯವಾದದ್ದು. ಆತ ಬರೆದ ಗದ್ಯ ಬಗೆಬಗೆಯಾದದ್ದು– ವಿಚಾರಾತ್ಮಕ, ವಿವರಣಾತ್ಮಕ, ವಿಮರ್ಶಾತ್ಮಕ ಮತ್ತು ಸೃಷ್ಟ್ಯಾತ್ಮಕ. ಆತನ ಗದ್ಯದ ಬರವಣಿಗೆಯ ಬಹುಪಾಲು ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರಕ್ಕೆ ಸಂಬಂಧಿಸಿದ ಪ್ರಕರಣ ಗ್ರಂಥಗಳನ್ನು ಒಳಗೊಂಡಿವೆ; ಇಂಥಲ್ಲಿ ವಿಷಯವೆಷ್ಟೋ ಅಷ್ಟಕ್ಕೆ ಕಟ್ಟುಬಿದ್ದು ಶುಷ್ಕವಾಗಿರುವ ಪ್ರವೃತ್ತಿ ಸಹಜವಾದದ್ದು. ಅಲ್ಲಿ ಕೂಡ ರಾಜರಾಜವರ್ಮನ ಪರಿಯೆ ಬೇರೆ ಎನ್ನುವುದನ್ನು ಕಾಣುತ್ತೇವೆ. ಕಷ್ಟಕರವಾದ ಭಾಷಾವಿಷಯಕ ಮತ್ತು ತಾತ್ತ್ವಿಕ ಪ್ರಶ್ನೆಗಳನ್ನು ವಿವರಿಸಲು ಆತ ಮನಸ್ಸಿಗೆ ನಾಟುವಂಥ ಉಪಮಾನಗಳನ್ನೂ ದೃಷ್ಟಾಂತಗಳನ್ನೂ ನಡುನಡುವೆ ಬಳಸುತ್ತಾನೆ. ಆತ ಬರೆಯುವ ಗದ್ಯದಲ್ಲಿ ತನ್ನದೇ ಆದ ಒಂದು ಹೊಳಪಿದೆ; ಅಂಥ ಶಾಸ್ತ್ರ ವಿಷಯಗಳನ್ನು ಕುರಿತು ಬರೆಯುವಾಗ ಅವನನ್ನು ಮೀರಿಸುವುದು ಇತರರಿಗೆ ಕಷ್ಟವೆಂದು ಕಂಡುಬಂದಿದೆ. 'ಕೇರಳ ಪಾಣಿನೀಯಂ' ಗ್ರಂಥಕ್ಕೆ (ಅದರ ಪರಿಷ್ಕೃತ ಮುದ್ರಣಕ್ಕೆ) ಬರೆದಿರುವ ದೀರ್ಘವಾದ ಪೀಠಿಕೆ ಈ ಪ್ರತಿಭಾ ವಿಶೇಷಕ್ಕೆ ಒಂದು ಶ್ರೇಷ್ಠ ನಿದರ್ಶನ.

ಎಂಬುದನ್ನು ಸ್ಪಷ್ಟವಾದ ಮಾತುಗಳಲ್ಲಿ ಆತನು ಬಹಿರಂಗವಾಗಿ ಸಾರಲು ಇಷ್ಟವುಳ್ಳವನಾಗಿದ್ದನು ಎಂಬುದೀಗ ಆತನ ಹೆಚ್ಚುಗಾರಿಕೆ. 'ನಳಿನಿ' ಒಂದು ವಿಶಿಷ್ಟವಾದ ಪ್ರಣಯಕಾವ್ಯ. ಏಕಪ್ರಕಾರದ ನಿರೂಪಣಾ ವಿಧಾನವನ್ನು ಬಿಟ್ಟು ಬೇರೆಯ ತೆರನಾಗಿರುವ ಅದರ ವಿಶಿಷ್ಟತೆಯನ್ನು ಎ.ಆರ್. ಎತ್ತಿತೋರಿಸಿದ್ದಾನೆ. ಕುಮಾರನ್ ಆಶನ್ ದೊಡ್ಡ ಭರವಸೆ ಹುಟ್ಟಿಸುವ ಕವಿ ಎಂಬುದನ್ನು ಎ.ಆರ್. ಕಂಡುಕೊಂಡನು; 'ನಳಿನಿ' ಒಂದು ಪ್ರಮುಖವಾದ ಪ್ರಣಯಕಾವ್ಯ, ಇಂಥ ಒಂದು ಕೃತಿಗಾಗಿ ಮಲಯಾಳ ಭಾಷೆ ಬಹಳ ಕಾಲ ಕಾದಿತ್ತು ಎಂದು ಸಾರಿ ಹೇಳಿದನು. ಕುಮಾರನ್ ಆಶನ್‌ಗೆ ಇದರಿಂದ ಎಂಥ ಪ್ರೋತ್ಸಾಹ! ರಾಜರಾಜವರ್ಮನ ಮಾತು ಎಷ್ಟು ನಿಜವಾಗಿತ್ತು ಎಂಬುದನ್ನು ಮುಂದಿನ ಇತಿಹಾಸ ಸಂದೇಹಕ್ಕೆ ಎಡೆಯಿಲ್ಲದಂತೆ ನಿಶ್ಚಯ ಮಾಡಿ ತೋರಿಸಿತು. ಒಳಹೊಕ್ಕು ನೋಡಬಲ್ಲ ಆತನ ಅಗಾಧವಾದ ಸಾಮರ್ಥ್ಯ, ಆಧುನಿಕ ದೃಷ್ಟಿ, ಮತ್ತು ಭವಿಷ್ಯದ ಕಾಣ್ಕೆ, ಇವನ್ನು ಈಗ ಪ್ರತಿಯೊಬ್ಬರೂ ಮೆಚ್ಚಿಕೊಳ್ಳುತ್ತಾರೆ. ಆದರೆ ಅಂದಿನ ದಿನಗಳಲ್ಲಿ ಎ.ಆರ್. ಒಬ್ಬ ಅವಿವೇಕಿ ಎಂದು ನೆಲೆ ನಿಂತ ಕವಿಗಳೂ ವಿದ್ವಾಂಸರೂ ಬಗೆದಿದ್ದರು.

**ಇತರ ಮುನ್ನುಡಿಗಳು**

ಸುಪ್ರಸಿದ್ಧ ಕವಿಯೂ ನಾಟಕಕಾರನೂ ಆದ ವಿ.ಕೃಷ್ಣನ್ ತಂಪಿ ರಾಜರಾಜ ವರ್ಮನ ಗಣ್ಯ ಶಿಷ್ಯ. ಆತನ 'ಕಪಾಲಕುಂಡಲ' ಎಂಬ ಕಾದಂಬರಿ (೧೯೧೪) ಒಟ್ಟಿನ ಮೇಲೆ ಒಂದು ಸ್ವತಂತ್ರ ಕೃತಿಯಾದರೂ ಬಂಕಿಮಚಂದ್ರರ ಅದೇ ಹೆಸರಿನ ಕಾದಂಬರಿಯಿಂದ ಸ್ಫೂರ್ತಿ ಪಡೆದಿದೆ. ಈ ಕಾದಂಬರಿಗೆ ರಾಜರಾಜವರ್ಮನು ಒಂದು ಉದ್ಬೋಧಕವಾದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾನೆ.

ಆತನು ಬರೆದಿರುವ ಇನ್ನೊಂದು ಮುನ್ನುಡಿ ಎಂದರೆ, ಕೆ.ರಾಮಕುರುಪ್‌ನ 'ಸೌದಾಮಿನಿ' (೧೯೧೪) ಎಂಬ ಕಾದಂಬರಿಗೆ ಬರೆದುಕೊಟ್ಟಿರುವದು. ಇದು ಕೂಡ ಸ್ವಾರಸ್ಯವಾಗಿದೆ, ಬೋಧಪ್ರದವಾಗಿದೆ. ಓದುಗರಲ್ಲಿ ನೈತಿಕ ಪ್ರಜ್ಞೆ ಉಂಟುಮಾಡುವುದಕ್ಕಾಗಿ ಇಂಥ ಕಥೆಗಳ ಮೂಲಕ ಪರೋಕ್ಷವಾಗಿ ನೈತಿಕ ಮೌಲ್ಯಗಳನ್ನು ಎತ್ತಿ ತೋರಿಸುವುದರ ಪ್ರಾಮುಖ್ಯವನ್ನು ನಿರ್ದೇಶಿಸಿದೆ ಈ ಮುನ್ನುಡಿ.

ಒಬ್ಬ ಸ್ವತಂತ್ರ ದೃಷ್ಟಿಯ ವಿಮರ್ಶಕ ಹಾಗೂ ಸುಸಂಸ್ಕೃತ ಸಹೃದಯನನ್ನು ಅದರಲ್ಲಿ ನಾವು ಕಾಣುತ್ತೇವೆ.

**ಇತರ ಮಹಾಕೃತಿಗಳಿಗೆ ಬರೆದ ಮುನ್ನುಡಿಗಳು**

ನಾವು ಈಗಾಗಲೇ ನೋಡಿರುವಂತೆ, ಕೇರಳವರ್ಮನು ಭಾಷಾಂತರಿಸಿದ 'ಶಾಕುಂತಲ'ವು ೧೯೧೧ರಲ್ಲಿ ಪ್ರಕಟವಾಯಿತು. ಇದಕ್ಕೊಂದು ಮುನ್ನುಡಿ ಇದೆ; ರಾಜರಾಜವರ್ಮನು ಬರೆದ ಈ ಮುನ್ನುಡಿ ರಸಗಳನ್ನು ಕುರಿತ ಒಂದು ಪ್ರೌಢ ವಿವೇಚನೆಯನ್ನು ಒಳಗೊಂಡಿದೆ. ಕೇರಳ ವರ್ಮನ 'ಮಯೂರ ಸಂದೇಶ'ವು ಸಂದೇಶ ಕಾವ್ಯ ಜಾತಿಯಲ್ಲಿ ಒಂದು ಅಸಾಧಾರಣ ಕೃತಿ ಎಂದು ಅಂಗೀಕೃತವಾಗಿದೆ; ರಾಜರಾಜವರ್ಮನು ಈ ಕೃತಿಗೂ ಒಂದು ಉಜ್ಜ್ವಲವಾದ ಪೀಠಿಕೆಯನ್ನು ಅರ್ಪಿಸಿದ್ದಾನೆ. ಒಬ್ಬ ಆಪ್ತಬಂಧುವಿನ ವಿಷಯದಲ್ಲಿ ಸ್ವಲ್ಪ ಪಕ್ಷಪಾತ ಇದೆ ಎಂಬುದನ್ನು ಒಪ್ಪಿಕೊಂಡರೂ ಈ ಪೀಠಿಕೆ ತುಂಬ ಬೆಲೆಯುಳ್ಳ ವಿಮರ್ಶಾತ್ಮಕ ವಿವೇಚನೆ ಎಂಬುದರಲ್ಲಿ ಸಂದೇಹವಿಲ್ಲ.

**'ನಳಿನಿ'ಯನ್ನು ಬೆಳಕಿಗೆ ತಂದದ್ದು**

ಆದರೆ, ಕುಮಾರನ್ ಆಶನ್‌ನ 'ನಳಿನಿ'ಗೆ ಎ.ಆರ್. ಬರೆದಿರುವ ಮುನ್ನುಡಿಯ ವಿಚಾರಕ್ಕೆ ಬಂದಾಗ, ಮಲಯಾಳಂ ಕಾವ್ಯದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನು ಅದು ತೆರೆಯುವುದನ್ನು ಕಾಣುತ್ತೇವೆ. ಕುಮಾರನ್ ಆಶನ್ ಆಧುನಿಕ ಕಾಲದ ಒಬ್ಬ ಪ್ರಮುಖ ಕವಿ ಎಂದು ಈಗ ಮಾನ್ಯನಾಗಿದ್ದಾನೆ. ಆದರೆ ಆತನ 'ನಳಿನಿ' ಎಂಬ ಪ್ರಣಯ ಕಾವ್ಯವನ್ನು ರಾಜರಾಜವರ್ಮನು ಪರಿಚಯ ಮಾಡಿಕೊಟ್ಟಾಗ ಆತ (ಕುಮಾರನ್ ಆಶನ್) ಯಾರಿಗೂ ಅಷ್ಟಾಗಿ ತಿಳಿದಿರಲಿಲ್ಲ. 'ಒರುವೀನ ಪೂವು' (ಒಂದು ಬಿದ್ದ ಹೂವು, ೧೯೦೭) ಪ್ರಕಟವಾದಾಗ ಅದು ಆತನನ್ನು ಗಮನಾರ್ಹವಾಗಿ ಮೂಡಿತ್ತು ಎಂಬುದೇನೋ ದಿಟ. ಆದರೆ, ಆತ ಹಿಂದುಳಿದ ಇಷವರ ಪಂಗಡಕ್ಕೆ ಸೇರಿದವನು ಹಾಗೂ ಮೇಲು ಜಾತಿಗಳಿಗೆ ಸೇರಿದ ಕವಿಗಳೂ ವಿದ್ವಾಂಸರೂ ಅಂತಹ ಬರಹಗಾರರನ್ನು ಹೊಗಳಲು ಹಿಂಜರಿಯುತ್ತಿದ್ದರು ಎಂಬ ಪರಿಸ್ಥಿತಿಯಲ್ಲಿ, ಆತ ಗಮನಾರ್ಹನಾಗಿದ್ದ ಎಂಬುದಷ್ಟು ಸಾಲದಾಗಿತ್ತು.

ರಾಜರಾಜವರ್ಮನು 'ನಳಿನಿ'ಯಲ್ಲಿ ಒಂದು ಹೊಸ ಮಿಂಚಿನ ಗೆರೆಯನ್ನು ಕಂಡುಕೊಂಡನು; ಅಲ್ಲದೆ, ಈ ಕಾವ್ಯ ಒಂದು ಹೊಸ ಜಾಡನ್ನು ಬೆಳಗುತ್ತದೆ



# ಅಧ್ಯಾಯ ಎಂಟು

# ಸಾಹಿತ್ಯ ಪುನರುಜ್ಜೀವನದ ಹರಿಕಾರ

ಸಾಹಿತ್ಯ ಕ್ಷೇತ್ರದಲ್ಲಿ ರಾಜರಾಜವರ್ಮನ ಸಾಧನೆಯ ಬಗೆಗೆ ಸ್ವಲ್ಪಮಟ್ಟಿಗೆ ಹರುಕುಮುರುಕಾದ ಒಂದು ಚಿತ್ರ ನಮಗೆ ದೊರಕಿದಂತಾಗಿದೆ. ಈ ಅಧ್ಯಾಯದಲ್ಲಿ ಕೆಲವು ಎಳೆಗಳನ್ನು ಒಟ್ಟುಗೂಡಿಸಿಕೊಂಡು, ಒಂದು ಸಮಗ್ರವಾದ, ಸಂಪೂರ್ಣ ಚಿತ್ರವನ್ನು ಮುಂದಿಡಲು ಪ್ರಯತ್ನಿಸುತ್ತೇನೆ. ರಾಜರಾಜವರ್ಮನು ತನ್ನ ಜೀವನದ ಉತ್ತರಭಾಗದಲ್ಲಿ ಸಂಶೋಧಕನಾಗಿ, ಯೋಜನೆಗಳ ನಿರ್ವಾಹಕನಾಗಿ, ಕವಿಯಾಗಿ, ವೈಯಾಕರಣನಾಗಿ ಹಾಗೂ ವಿಮರ್ಶಕನಾಗಿ ತಾನೇ ಆಯ್ದುಕೊಂಡ ಉದ್ಯೋಗಗಳಲ್ಲಿ ತೊಡಗಿರುವುದರ ಜೊತೆಗೆ ಸಂಸ್ಕೃತ ಮತ್ತು ಭಾರತೀಯ ಭಾಷೆಗಳಲ್ಲಿ ಉನ್ನತ ಮಟ್ಟದ ಪಾಠಕ್ರಮಗಳನ್ನು ವ್ಯವಸ್ಥೆಗೊಳಿಸಿ, ಬೋಧನ ಕಾರ್ಯದಲ್ಲಿಯೂ ನಿರತನಾಗಿದ್ದಾಗ ಕಾರ್ಯನಿಬಿಡವಾದ ಬದುಕು ಆತನದಾಗಿತ್ತು ಎಂಬುದನ್ನು ನಾವು ಕಂಡಿದ್ದೇವೆ. ಜ್ಞಾನಾರ್ಜನೆ ಆತನ ಸಹಜ ಸ್ವಭಾವದ ಒಂದು ಭಾಗವಾಗಿ ಹೋಗಿತ್ತು. ಸಾಮಾನ್ಯವಾಗಿ ಜೊತೆಗೂಡಿರದ ಪ್ರವೃತ್ತಿಗಳು ಆತನಲ್ಲಿ ಅಸಾಧಾರಣ ರೀತಿಯಲ್ಲಿ ಜೊತೆಗೂಡಿದ್ದುವು. ಸಾಹಿತ್ಯವನ್ನು ಸೃಷ್ಟಿ ಮಾಡಬಲ್ಲ ಪ್ರತಿಭೆಯ ಲವಲೇಶವೂ ಇಲ್ಲದ ಮಹಾವಿದ್ವಾಂಸರನ್ನೂ ಸಂಶೋಧಕರನ್ನೂ ನಾವು ಬಲ್ಲೆವು. ಅದೇ ರೀತಿ, ವಿದ್ವತ್ತನ್ನು ಸಂಪಾದಿಸಲು ಪಡಬೇಕಾದ ಶ್ರಮ–ಪರಿಶ್ರಮಸಾಧ್ಯವಾದ ಸಾಧನೆ ಎಂದರೆ ದೂರ ಸರಿಯುವ ಸೃಜನಶೀಲ ಪ್ರತಿಭಾಶಾಲಿಗಳನ್ನೂ ನಾವು ಬಲ್ಲೆವು. ತಮಗೆ ಇಷ್ಟವಾದ ವಿಷಯಗಳನ್ನು ಕುರಿತು ಹೊತ್ತುಗೊತ್ತಿಲ್ಲದೆ ಕೆಲಸ ಮಾಡುತ್ತ, ವಿಶ್ರಾಂತಿ ಮತ್ತು ಲಘುವಾದ ವಿನೋದಗಳೆಂದರೆ ಅವುಗಳನ್ನು ಉದಾಸೀನ ಮಾಡುವ ಇಲ್ಲವೆ ಅವುಗಳನ್ನು ಅನುಭವಿಸಲು ಅಸಮರ್ಥರಾದ ಜನವನ್ನೂ ನಾವು ಕಂಡಿದ್ದೇವೆ. ಆದರೆ ಇಲ್ಲೊಬ್ಬನಿದ್ದಾನೆ ನೋಡಿ; ಆತ ನಿಜವಾದ ಸಂಶೋಧಕ, ಕವಿ ಮತ್ತು ರಸಿಕ, ಕಷ್ಟಪಟ್ಟು ಕೆಲಸ ಮಾಡಿದ ಮನುಷ್ಯ ಮತ್ತು ಸುಖಭೋಗಗಳ ಬದುಕನ್ನು ಬಾಳಿದವನು.

ಆತನ ಸಾಹಿತ್ಯರಾಶಿಯನ್ನು ಗಮನಿಸಿದಾಗ ವ್ಯಕ್ತಪಡುವುದೇನೆಂದರೆ, ಆತನ

**ಪ್ರಬಂಧಗಳು**

ಜ್ಯೋತಿಷ್ಯಶಾಸ್ತ್ರವೆಂದರೆ ರಾಜರಾಜವರ್ಮನಿಗೆ ಒಂದು ಬಗೆಯ ಹುಚ್ಚು; ಅದರಲ್ಲಿ ಆತ ವ್ಯಾಪಕವಾದ, ಆಳವಾದ ಸಂಶೋಧನೆ ನಡಸಿದ್ದನು. 'ಕೇರಳದ ಜ್ಯೋತಿಷ್ಯಶಾಸ್ತ್ರ' ಮತ್ತು 'ಪಂಚಾಂಗ ಶುದ್ಧಿ ಪದ್ಧತಿ' ಎಂಬ ವಿಷಯಗಳನ್ನು ಕುರಿತು ಆತ ಒಂದು ವಿದ್ವತ್ಪೂರ್ಣ ಪ್ರೌಢ ಪ್ರಬಂಧವನ್ನು ಬರೆದನು. ಕುಂಞ್ಞಿ ಕುಟ್ಟನ್ ತಂಪುರಾನ್ ಮಾಡಿದ 'ಮಹಾಭಾರತ'ದ ಭಾಷಾಂತರವನ್ನು ಮೆಚ್ಚಿಕೊಂಡು ಒಂದು ಪ್ರಬಂಧವನ್ನು ಬರೆದುಕೊಟ್ಟನು. ಅಲ್ಲದೆ, ಶಾಲಾ ವಾಚನ ಪುಸ್ತಕಗಳಲ್ಲಿಯೂ ಕಾಲೇಜಿನ ಪಠ್ಯಪುಸ್ತಕಗಳಲ್ಲಿಯೂ ಸೇರಿಸಿಕೊಳ್ಳುವುದಕ್ಕಾಗಿ ಹಲಕೆಲವು ಪ್ರಬಂಧಗಳನ್ನು ಎ.ಆರ್. ಬರೆದನು. ಮಲಯಾಳಂ ಭಾಷೆಯಲ್ಲಿ ಗದ್ಯ ಪ್ರಬಂಧಗಳ ಮಾದರಿಯನ್ನು ಮುಂದಿಡಲು ಈ ಪ್ರಬಂಧಗಳು ಸಹಾಯಕವಾಗಿವೆ.

* * * *

ತಳ್ಳಿಬಿಟ್ಟಿದ್ದುವು. ಒಂದೇ ಅಚ್ಚಿಗೆ ಬಿದ್ದ ಅಲಂಕಾರದ ಶೈಲಿಯ ಮೊದಮೊದಲಿನ ಸಂಸ್ಕೃತ ರಚನೆಗಳನ್ನು ಬಿಟ್ಟು 'ಕುಮಾರ ಸಂಭವ' ಮತ್ತು 'ಶಾಕುಂತಲ'ಗಳ ಭಾಷಾಂತರಗಳನ್ನು ಎತ್ತಿಕೊಂಡರೆ ಅಭಿರುಚಿಯಲ್ಲೇ ಒಂದು ದೊಡ್ಡ ಮಾರ್ಪಾಡು ಆಗಿರುವುದನ್ನು ಕಾಣುತ್ತೇವೆ. 'ನಳಚರಿತ್ರಂ' ಕೃತಿಯ ಪರಿಷ್ಕೃತ ಮುದ್ರಣ ಮತ್ತು 'ಸಾಹಿತ್ಯ ಸಾಹ್ಯಂ', ಇವುಗಳಂತಹ ಆತನ ಗದ್ಯ ಕೃತಿಗಳು ಆತನ ವ್ಯಕ್ತಿತ್ವದಲ್ಲಿಯೂ ಸಾಹಿತ್ಯ ವಿಷಯಕವಾದ ಆತನ ಧೋರಣೆಯಲ್ಲಿಯೂ ಆಗಿರುವ ಪರಿವರ್ತನೆಯನ್ನು ತೋರಗೊಡುತ್ತವೆ. ಇಬ್ಬರು ರಾಜರಾಜವರ್ಮರು ಇದ್ದರು ಎಂದು ಹೇಳಬಹುದು; ಮುಂಚಿನವನು ಸಂಪ್ರದಾಯನಿಷ್ಠ, ಆಮೇಲಿನವನು ಆಧುನಿಕ. ಹೇಗೆ ಮತ್ತು ಯಾವಾಗ ಈ ಪುನರ್ಜನ್ಮ ಸಂಭವಿಸಿತು? ಇದಕ್ಕೆ ಉತ್ತರ ಕೊಡುವುದು ಕಷ್ಟ. ಅದು ಒಮ್ಮಿಂದೊಮ್ಮಿಗೆ ವಿಕಸನ ಕ್ರಿಯೆಯೂ ಆಗಿದ್ದು, ಕ್ರಾಂತಿಯೂ ಆಗಿದೆ. ಸಾಮಾನ್ಯವಾಗಿ ಹೇಳುವುದದರೆ ಮೊದಲಿನ ರಾಜರಾಜವರ್ಮನಿಗೂ ಆಮೇಲಿನ ರಾಜರಾಜವರ್ಮನಿಗೂ ಇರುವ ವ್ಯತ್ಯಾಸ ಎಂದರೆ ೧೯ನೆಯ ಶತಮಾನಕ್ಕೂ ೨೦ನೆಯ ಶತಮಾನಕ್ಕೂ ಇರುವ ವ್ಯತ್ಯಾಸ. ಸಾಹಿತ್ಯ ಕೃತಿಗಳನ್ನು ಪರಿಗಣಿಸಿ ಹೇಳುವುದಾದರೆ, ೧೯೦೦ರ ಸರಿಸುಮಾರಿನಲ್ಲಿ ಆತನ ಸಾಹಿತ್ಯ ದೃಷ್ಟಿಯಲ್ಲಿ ಒಂದು ಖಚಿತವಾದ ಪರಿವರ್ತನೆಯನ್ನು ಗುರುತಿಸಬಹುದು ಎಂದು ಹೇಳಿದರೆ ತಪ್ಪಾಗಲಾರದು.

**ಸಾಹಿತ್ಯದ ಪುನರುಜ್ಜೀವನ**

ರಾಜಕೀಯ, ಸಾಮಾಜಿಕ ಪರಿವರ್ತನೆಗಳ ಸಂದರ್ಭದಲ್ಲಿ ರಾಜರಾಜವರ್ಮನಲ್ಲಿ ಆದ ಪರಿವರ್ತನೆಯನ್ನು ಇನ್ನೂ ಚೆನ್ನಾಗಿ ಅರಿತುಕೊಳ್ಳಬಹುದು. ಒಬ್ಬ ವ್ಯಕ್ತಿ ಎಷ್ಟೇ ದೊಡ್ಡವನಾದ, ಎತ್ತರಕ್ಕೆ ಏರಿದ ವ್ಯಕ್ತಿಯಾಗಿರಲಿ, ತನ್ನ ಸುತ್ತಮುತ್ತಲಿನ ಸಮಾಜದ ಪ್ರಭಾವಕ್ಕೆ ಗಣ್ಯವಾದ ಪ್ರಮಾಣದಲ್ಲಿ ಒಳಪಟ್ಟು ರೂಪಗೊಳ್ಳುತ್ತಾನೆ. ಇದು ದಿಟದ ಸಂಗತಿ; ಆದರೆ ಕೆಲವು ವ್ಯಕ್ತಿಗಳು ತಾವು ಯಾವ ಸಮಾಜಕ್ಕೆ ಸೇರಿದವರೋ ಆ ಸಮಾಜಕ್ಕೆ ಒಂದು ಹೊಸ ದಿಗ್ದರ್ಶನವನ್ನೂ ನೀಡುತ್ತಾರೆ. ಕೇರಳವರ್ಮ, ರಾಜರಾಜವರ್ಮ, ಚಂದುಮೆನನ್, ಸಿ.ವಿ. ರಾಮನ್‌ಪಿಳ್ಳೆ ಇವರಂಥ ವಿಚಾರಪ್ರಪಂಚದ ನಾಯಕರನ್ನು ಅರ್ಥಮಾಡಿಕೊಳ್ಳಬೇಕಾದರೆ, ಮಲಯಾಳಂ ಸಾಹಿತ್ಯವು ಭಾರತೀಯ ಸಾಹಿತ್ಯದ ಒಂದು ಭಾಗ ಎಂಬುದನ್ನೂ, ಭಾರತೀಯ ಸಾಹಿತ್ಯ ಕೂಡ ಭಾರತದ ರಾಜಕೀಯ, ಸಾಮಾಜಿಕ ಜೀವನವನ್ನು ಆಧರಿಸಿ ಬೆಳೆದಿದೆ ಎಂಬುದನ್ನೂ ನಾವು

ವ್ಯಕ್ತಿತ್ವ ಇಬ್ಭಾಗವಾಗಿರುವಂತೆ ಕಂಡುಬರುತ್ತದೆ. ಪ್ರತಿಭಾವಂತ ವಿದ್ವಾಂಸ ಹಾಗೂ ಕವಿ ಆಗಿದ್ದ ಕೇರಳವರ್ಮನ ನೇರವಾದ ಮೇಲ್ವಿಚಾರಣೆಯಲ್ಲಿ ಸಾಂಪ್ರದಾಯಿಕ ಮಾರ್ಗದಲ್ಲಿ ಶಿಕ್ಷಣ ಪಡೆದಂಥವನು ರಾಜರಾಜವರ್ಮ. ಆತನ ಮೊದಮೊದಲಿನ ರಚನೆಗಳೆಲ್ಲವೂ ಸಂಸ್ಕೃತದಲ್ಲಿದ್ದುವು; ಅಂದಿನ ದಿನಗಳಲ್ಲಿ ಅಷ್ಟಾಗಿ ಅಭಿವೃದ್ಧಿ ಹೊಂದಿರದಿದ್ದ, ತನ್ನ ತಾಯ್ನುಡಿಯಾದ ಮಲಯಾಳ ಭಾಷೆಯಲ್ಲಿ ಪದ್ಯರಚನೆ ಮಾಡುವುದು ಸ್ಥಾನಮಾನಕ್ಕೆ ಕಡಮೆ ಎಂದು ಆತ ಭಾವಿಸಿದ್ದಿರಬೇಕು. ಸಂಸ್ಕೃತ ಸಾಹಿತ್ಯದ ಉದ್ದಾಮ ಕವಿಗಳನ್ನು ಅನುಕರಿಸಲು ಪ್ರಯತ್ನ ಮಾಡುತ್ತ ಸಂಸ್ಕೃತ ಭಾಷೆಯಲ್ಲಿ ಕೃತಿರಚನೆ ಮಾಡುವುದರಲ್ಲಿಯೇ ನಲಿದನು. ಕೆಲವು ವರ್ಷಗಳಾದ ಮೇಲೆ, ಅದೇ ರಾಜರಾಜವರ್ಮನು ಸಂಸ್ಕೃತ ಸಮಾಸ ಪದಗಳನ್ನೂ ನಿರೂಪಣಾಕ್ರಮವನ್ನೂ ವರ್ಜಿಸಿದ ಸರಳವಾದ ಮಲಯಾಳ ಭಾಷೆಯ ಪರವಾಗಿ ವಾದ ಮಾಡುವುದನ್ನು ಕಾಣುತ್ತೇವೆ. ಅಲ್ಲದೆ, ಅತ್ಯಂತ ಅಲಂಕೃತವಾದ ಭಾಷೆಯಲ್ಲಿ ಕೇರಳವರ್ಮನು ಭಾಷಾಂತರ ಮಾಡಿದ್ದ 'ಶಾಕುಂತಲ'ವನ್ನು ಪರಿಷ್ಕಾರ ಮಾಡಬೇಕೆಂದು ಆತನನ್ನು ಒಪ್ಪಿಸುವುದರಲ್ಲಿ ರಾಜರಾಜವರ್ಮನು ಜಯಶಾಲಿಯಾದದ್ದನ್ನೂ ನೋಡುತ್ತೇವೆ. ರಾಜರಾಜವರ್ಮನು ಸರಳವಾದ ಮಲಯಾಳಿಯಲ್ಲಿ ಕವಿತಾರಚನೆ ಮಾಡುವುದಕ್ಕೂ ಕವಿತೆಯನ್ನು ಭಾಷಾಂತರ ಮಾಡುವುದಕ್ಕೂ ತೊಡಗಿದ್ದು ಮಾತ್ರವಲ್ಲದೆ, ಆಗಿನ ದಿನಗಳಲ್ಲಿ ಸಾಧಾರಣಮಟ್ಟದ ಸೃಜನ ಸಾಮರ್ಥ್ಯವುಳ್ಳ ಬರಹಗಾರರ ಕ್ಷೇತ್ರವಾಗಿದ್ದ ಮಲಯಾಳಂ ಭಾಷೆಯ ಗದ್ಯಕ್ಷೇತ್ರಕ್ಕೆ ಪ್ರವೇಶಿಸಿದನು. ಕೇರಳವರ್ಮನು ಆಗೊಮ್ಮೆ ಈಗೊಮ್ಮೆ ಗದ್ಯವನ್ನು ಬರೆಯುತ್ತಿದ್ದುದು ಉಂಟು; ಆದರೆ ಅದು ಆಡಂಬರದ ಅಲಂಕೃತ ಶೈಲಿ; 'ಅಕ್ಬರ್' ಎಂಬ ಆತನ ಕಾದಂಬರಿಯಲ್ಲಿ ಆ ಬಗೆಯ ಗದ್ಯವನ್ನು ನಾವು ಕಾಣುತ್ತೇವೆ. ಆತ ಶಾಲಾ ವಿದ್ಯಾರ್ಥಿಗಳಿಗೆಂದು ಬರೆದಾಗ ಹೆಚ್ಚು ಸರಳವಾದ ಗದ್ಯದಲ್ಲಿ ಬರೆಯುತ್ತಿದ್ದನು ಎನ್ನುವುದರಲ್ಲಿ ಸಂದೇಹವಿಲ್ಲ; ಆದರೆ ಹಾಗೆ ಮಾಡುವುದು ತನ್ನ ಉನ್ನತ ಮಟ್ಟದಿಂದ ಕೆಳಕ್ಕೆ ಇಳಿದಂತೆ ಎಂದು ಆತನ ಭಾವನೆ.

ರಾಜರಾಜವರ್ಮನ ವಿಷಯದಲ್ಲಿ ಹಾಗಲ್ಲ. ಸರಳವಾದ, ನೇರವಾದ ಗದ್ಯರಚನೆ ಆತನಿಗೆ ಇಷ್ಟವಾಗಿತ್ತು; ಅತ್ಯಗತ್ಯವಾದಾಗ ಮಾತ್ರ ಸಂಸ್ಕೃತ ಶಬ್ದಗಳ, ಬರಹದ ಬಗೆಯ ಉಪಯೋಗ ಪಡೆದುಕೊಳ್ಳುತ್ತಿದ್ದನು. ಗದ್ಯ ಕೃತಿಗಳ ರಚನೆಯಲ್ಲಿ ಆತ ಬಿಡದೆ ತೊಡಗಿರುತ್ತಿದ್ದುದರಿಂದ, ಕವಿತೆ ಬರೆಯುವುದನ್ನು ಒಂದು ಹವ್ಯಾಸವಾಗಿ, ವಿಹಾರ ವಿನೋದವಾಗಿ, ಆತ ಪರಿಗಣಿಸಿದ್ದನು. ಆತನ ವೈಜ್ಞಾನಿಕ ಹಾಗೂ ವಿಮರ್ಶನ ಸಾಮರ್ಥ್ಯಗಳು ಕವಿತಾಸಾಮರ್ಥ್ಯವನ್ನು ಮೂಲೆಗೆ

ಮತ್ತು ಮನ್ನಾತ್ ಪದ್ಮನಾಭನ್ ನಾಯರ್ ಜನಾಂಗಕ್ಕಾಗಿ ಸ್ಥಾಪಿಸಿದ ನಾಯರ್ ಸೇವಾ ಸಂಘ (೧೯೧೪), ಇಂಥ ಸಂಸ್ಥೆಗಳು ರೂಪಗೊಳ್ಳಲು ಈ ನವಜಾಗೃತಿ ಅನತಿಕಾಲದಲ್ಲಿ ದಾರಿ ಮಾಡಿಕೊಟ್ಟಿತು. ಉಚ್ಚವರ್ಗದವರಾದ ನಂಬೂದರಿಗಳು ಕೂಡ ತಮ್ಮನ್ನು ತಾವು ಸಂಘಟಿಸಿಕೊಂಡು ತಮ್ಮವೇ ಆದ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ 'ಯೋಗಕ್ಷೇಮ ಸಭಾ' (೧೯೦೮) ಎಂಬುದನ್ನು ಸ್ಥಾಪಿಸಿಕೊಂಡರು. ಇವುಗಳಿಂದ ಅಂದಿನ ಸಾಮಾಜಿಕ ವಾತಾವರಣವನ್ನು ಗೊತ್ತುಮಾಡಿಕೊಳ್ಳಬಹುದು. ಚಿಂತನಪರರೂ ಲೇಖಕರೂ ಸಾಮಾಜಿಕ ಪರಿಸ್ಥಿತಿಯನ್ನೂ, ಜೀವನದಲ್ಲಿ ಹಾಗೂ ಸಾಹಿತ್ಯದಲ್ಲಿ ಆಗಬೇಕಾಗಿದ್ದ ತೀವ್ರವಾದ ಬದಲಾವಣೆಯ ಅಗತ್ಯವನ್ನು ಚೆನ್ನಾಗಿ ಮನಗಂಡಿದ್ದರು. ಪರಿವರ್ತನೆಯ ವಾತಾವರಣಕ್ಕೆ ಕೆಲವರು ಉಳಿದವರಿಗಿಂತ ಹೆಚ್ಚು ಸಂವೇದನಗೊಳ್ಳುತ್ತಿದರು. ಇಲ್ಲಿ ನಾವು ಕಾಣುತ್ತೇವೆ, ಒಂದು ಸರ್ವಸಾಮಾನ್ಯ ಪುನರ್ಜನ್ಮದ ಆದಿಮೂಲವನ್ನು.

**ಕೇರಳವರ್ಮ ಮತ್ತು ರಾಜರಾಜವರ್ಮ**

ಕೇರಳವರ್ಮನು ತನ್ನದೇ ಆದ ರೀತಿಯಲ್ಲಿ ಸಾಹಿತ್ಯದ ಪುನರುಜ್ಜೀವನದ ಕೆಲವು ಪ್ರಕಾರಗಳನ್ನು ಪ್ರಾರಂಭಗೊಳಿಸಿದನು; ಆದರೂ ಕೆಲವು ಮಟ್ಟಿಗೆ ಆತನು ಸಂಪ್ರದಾಯದ ಒತ್ತಡಕ್ಕೆ ಸಿಲುಕಿದ್ದನು. ಆದರೆ ರಾಜರಾಜವರ್ಮನು ಸಂಪೂರ್ಣ ಕ್ರಾಂತಿಯ ಅಗತ್ಯವನ್ನು ಮನಗಂಡದ್ದಲ್ಲದೆ, ತನ್ನ ಪೀಳಿಗೆಯ ಬರಹಗಾರರಿಗೆ ನಿರ್ದಿಷ್ಟವಾದ ನಾಯಕತ್ವವನ್ನು ದಾರಿದಿಕ್ಕಿನ ಅರಿವನ್ನೂ ಒದಗಿಸಿದನು. ಈ ಸಂದರ್ಭವನ್ನು ಅರ್ಥಮಾಡಿಕೊಳ್ಳಬಹುದು; ಕೇರಳವರ್ಮನು ಒಂದು ಹಿಂದಿನ ತಲೆಮಾರಿಗೆ ಸೇರಿದವನಾಗಿದ್ದು, ರಾಜರಾಜವರ್ಮನಿಗಿಂತ ೧೮ ವರ್ಷ ಹಿರಿಯನಾಗಿದ್ದನು. ಬೇರೆಯ ರೀತಿಯಲ್ಲಿ ಕೂಡ, ಕೇರಳವರ್ಮನು ರಾಜವಂಶಕ್ಕೆ ಸಂಬಂಧಪಟ್ಟವನಾಗಿದ್ದುದೂ ಅವನು ಪಡೆದುಕೊಂಡಿದ್ದ ಸ್ಥಾನಗೌರವವೂ ಆತನಿಗೆ ಒಂದು ಉನ್ನತ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದವು. ಆತ ಉತ್ತಮ ಜನದೊಂದಿಗೆ ಓಡಾಡುತ್ತಿದ್ದನು; ಆದರೆ ರಾಜರಾಜವರ್ಮನಾದರೋ, ವಿದ್ಯಾಸಂಸ್ಥೆಗಳಲ್ಲಿ ಒಬ್ಬ ಉಪಾಧ್ಯಾಯನಾಗಿರುತ್ತ ಎಲ್ಲ ಬಗೆಯ ಜನದೊಂದಿಗೂ ಆತ ವ್ಯವಹರಿಸ ಬೇಕಾಗಿದ್ದಿತು; ಅವರ ಜಾತಿ, ಸ್ಥಾನಮಾನ ಯಾವುದೇ ಆಗಿದ್ದರೂ ಪ್ರತಿಯೊಬ್ಬರೊಂದಿಗೂ ಬೆರೆಯುವುದರಲ್ಲಿ ಆತನಿಗೆ ಸಂತೋಷ. ಇವರಿಬ್ಬರ ನಡುವೆ ಉಭಯ ಸಮಾನಾಂಶ ಬೇಕಾದಷ್ಟಿದ್ದರೂ ಅವರ ಅಭಿರುಚಿಗಳಲ್ಲಿ, ಸಿದ್ಧಿ ಸಾಧನೆಗಳಲ್ಲಿ ಏಕಮುಖತೆ ಇರಲಿಲ್ಲ.

ಅರಿತುಕೊಳ್ಳಬೇಕು. ಸಾಹಿತ್ಯ ಬದುಕಿನಷ್ಟೇ ವಿಶಾಲ; ಹೀಗಿರುತ್ತ, ಸಾಹಿತ್ಯ ಸಾಂಪ್ರದಾಯಿಕ ಜೀವನದ ಮುಖವನ್ನು ಚಿತ್ರಿಸುವುದರ ಜೊತೆಗೆ ಅದರ ಕ್ರಾಂತಿಕಾರಿ ಸ್ವರೂಪವನ್ನು ಕ್ರಿಯಾಶೀಲವಾಗಿ ಮಾಡಬೇಕು.

ಪಾಶ್ಚಾತ್ಯ ಸಂಸ್ಕೃತಿಯ ವ್ಯಾಮೋಹದೊಂದಿಗೆ ಬ್ರಿಟಿಷ್ ಪ್ರಭಾವದ ಒತ್ತಡ ಮೊದಲಿಟ್ಟಿತು; ಆದರೆ, ಬಲುಬೇಗ ಅನಿವಾರ್ಯವಾದ ಒಂದು ಪ್ರತಿಕ್ರಿಯೆಯೂ ಉಂಟಾಯಿತು. ನಮ್ಮದೇ ಆದ ಒಂದು ಪರಂಪರೆಯಲ್ಲಿ ಹೆಮ್ಮೆಯೂ ಜಾಗೃತವಾಯಿತು. ಇದರ ಪರಿಣಾಮವಾಗಿ ಒಂದು ಸರ್ವಸಾಮಾನ್ಯ ಪುನರ್ಜನ್ಮ ಅಥವಾ ನವೋದಯ ಪ್ರಾಪ್ತವಾಯಿತು. ಇಂಗ್ಲಿಷ್ ವಿದ್ಯಾಭ್ಯಾಸದ ಪರಿಣಾಮ ಫಲವಾಗಿ ಮೂಲತಃ ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿನ ಪುನರ್ಜನ್ಮವಾಗಿ ಅದು ಪ್ರಾರಂಭವಾಯಿತು; ಈ ಪುನರ್ಜನ್ಮದ ಅವಧಿಯನ್ನು ೧೮೫೭–೧೯೦೫ ಎಂದು ಇಟ್ಟುಕೊಳ್ಳಬಹುದು. ಎರಡನೆಯ ಹಂತವು ರಾಷ್ಟ್ರೀಯ ಭಾವನೆಯ ಉತ್ಕರ್ಷದ ಹಾಗೂ 'ಹೋಮ್‌ರೂಲ್' ಚಳವಳಿಯ ಕಾಲಕ್ಕೂ ಸರಿಹೊಂದುತ್ತದೆ: ಇದು ೧೯೦೫ರಿಂದ ೧೯೨೦. ಮೂರನೆಯ ಹಂತ ಗಾಂಧಿಯ ಕ್ರಾಂತಿಯುಗ ಎಂಬುದು ಸುಸ್ಪಷ್ಟ: ಇದು ೧೯೨೦–೧೯೪೭.

ಈ ಹಂತಗಳು ಸಾಹಿತ್ಯದ ಮೇಲೆ ತಮ್ಮ ಒತ್ತಡವನ್ನು ಹಾಕಿದ್ದುವು. ಕೆಲವು ಸಲ ಸ್ವಲ್ಪ ತಡವಾಗಿ, ಕೆಲವು ಸಲ ಮುಂದಾಗಿ. ಎಲ್ಲ ಭಾರತೀಯ ಸಾಹಿತ್ಯಗಳಲ್ಲಿಯೂ ನಾವು ಕಾಣುವುದು ಇದನ್ನೇ. ಪ್ರಸ್ತುತ ಶತಮಾನ ಮೊದಲಾಗುವುದಕ್ಕೆ ೧೫ ವರ್ಷ ಮುಂಚೆ, ಮೊದಲಾದ ಮೇಲೆ ೧೫ ವರ್ಷ (೧೮೮೫–೧೯೧೫), ಈ ನಡುವಣ ಅವಧಿ ಆಧುನಿಕ ಜಾಗೃತಿಯಲ್ಲಿ ಅತ್ಯಂತ ನಿರ್ಣಾಯಕವಾದ ಕಾಲ ಎಂಬುದನ್ನು ಕೇರಳದ ಚರಿತ್ರೆ ವ್ಯಕ್ತಪಡಿಸಿದೆ. ಹಿಂದೂ ಮತಧರ್ಮದಲ್ಲಿದ್ದ ಅರ್ಥಹೀನ ಪದ್ಧತಿಗಳನ್ನು, ಮೂಢನಂಬಿಕೆಗಳನ್ನು, ಹೊರಹಾಕುವುದಕ್ಕೂ ಸ್ತ್ರೀಯರ ಸ್ಥಾನವನ್ನು ಮೇಲಕ್ಕೆತ್ತುವುದಕ್ಕೂ, ಜಾತಿ ಪದ್ಧತಿ ಮತ್ತು ಬಹುಪತ್ನಿತ್ವವನ್ನು ಅವಹೇಳನ ಮಾಡುವುದಕ್ಕೂ ಪಾಶ್ಚಾತ್ಯೀಕರಣ ಉಪಯುಕ್ತವಾಯಿತು. ಉದ್ಯೋಗಗಳಲ್ಲಿ ಬ್ರಾಹ್ಮಣ ಜನಾಂಗ ಪಡೆದಿದ್ದ ಏಕಸ್ವಾಮ್ಯದ ವಿರುದ್ಧವಾಗಿ ತಿರುವಾಂಕೂರು ಮಹಾರಾಜನಿಗೆ ಒಪ್ಪಿಸಿದ ಮಲಯಾಳಿ ಮನವಿ ಪತ್ರದಲ್ಲಿಯೂ (೧೮೯೧), ಈಷವ (Ezhava) ಜನಾಂಗದ ಕುಂದುಕೊರತೆಗಳನ್ನು ಎತ್ತಿಹಿಡಿದ ಈಷವರ ಮನವಿ ಪತ್ರದಲ್ಲಿಯೂ ಕೇರಳದ ಸಾಮಾಜಿಕ–ಧಾರ್ಮಿಕ ಜಾಗೃತಿಯ ವ್ಯಕ್ತವಾಗಿದೆ. ಶ್ರೀ ನಾರಾಯಣ ಗುರು ಅವರ ಪ್ರೇರಣೆಯಿಂದ ಈಷವರಿಗಾಗಿ ಎಸ್.ಎನ್.ಡಿ.ಪಿ. ಯೋಗಂ (೧೯೦೩)

ಆತನೊಬ್ಬ ಪ್ರತಿಭೆಯುಳ್ಳ ಕವಿ, ವಿದ್ವತ್–ಕವಿ. ಕಾವ್ಯ ಪ್ರತಿಭೆಯ ವಿಷಯದಲ್ಲಿ ರಾಜರಾಜವರ್ಮನು ತನ್ನ ಸೋದರಮಾವನನ್ನು ಸರಿಗಟ್ಟಲಾರದವನಾಗಿದ್ದನು. ಕಲಾಭಿರುಚಿಯನ್ನು ಬೆಳಸಿಕೊಂಡಿದ್ದ ವಿದ್ವಾಂಸ–ವಿಮರ್ಶಕನಾಗಿದ್ದ ಈತ. ಈತನ ಭಾಷಣಶೈಲಿ ಸರಳ. ಕಲ್ಪನಾವಿಲಾಸ, ಕಾವ್ಯದ ಸತ್ತ್ವ, ಇವು ಈತನಿಗೆ ಆಲಂಕಾರಿಕತೆಗಿಂತ ಹೆಚ್ಚು ಮುಖ್ಯವಾಗಿದ್ದುವು. ಅವನ ಕಾಲದ ಕವಿಗಳಿಗೆ ಅಗ್ಗದ ಮಾತಿನ ದೊಂಬರಾಟ ಬಹು ಪ್ರಿಯವಾಗಿದ್ದುವು; ಅವನು ಇದನ್ನು ಗೇಲಿ ಮಾಡಿದನು. ವಸ್ತು ವಿಷಯಗಳ ವೈವಿಧ್ಯ, ಕಲ್ಪನೆಯ ನಾವೀನ್ಯ, ನಿರೂಪಣಾಕ್ರಮದಲ್ಲಿ ವೈವಿಧ್ಯ, ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಭಾವಸ್ವಾತಂತ್ರ್ಯ– ಇವು ಅವನ ಮಾರ್ಗದರ್ಶಕ ಕಾವ್ಯಾಂಶಗಳು. ಇದು ನವೋದಯ ಕಾವ್ಯಯುಗದ ಧರ್ಮವಾಗಿತ್ತು; ಅವನು ಇದನ್ನು ಪ್ರವರ್ತನಗೊಳಿಸಿ, ಬಲವಾಗಿ ಎತ್ತಿಹಿಡಿದನು. ಈ ಹೊಸ ನಿಷ್ಠೆ ಅವನ ವಿಮರ್ಶಾತ್ಮಕ ಬರವಣಿಗೆಗಳಲ್ಲಿಯೂ ಸ್ಪಷ್ಟವಾಗಿದೆ. ವಿಭಿನ್ನ ತಾತ್ತ್ವಿಕ ನಿಷ್ಠೆಗಳ ನಡುವಣ ವಿರೋಧದ ಪರಿಣಾಮವಾಗಿ ಸಾಹಿತ್ಯಕ ವಾದವಿವಾದವೊಂದು ಹೊತ್ತಿಕೊಂಡು, ಬಹಳಕಾಲ ಸಾಹಿತ್ಯ ರಸಿಕರ ಕುಟೀರಗಳಲ್ಲಿ ಹೊಗೆಯಾಡುತ್ತಲೇ ಇತ್ತು. ನಮ್ಮ ವಿಷಯಕ್ಕೆ ಅದು ಪ್ರಸಕ್ತವಾಗಿರುವುದರಿಂದ ಆ ಕುರಿತು ಸಂಕ್ಷೇಪವಾಗಿ ಪ್ರಸ್ತಾಪಿಸುವೆವು.

### ಪ್ರಾಸ ವಿಷಯಕ ವಾದವಿವಾದ

ಮಲಯಾಳಂ ಭಾಷೆಯಲ್ಲಿಯೂ ಇತರ ಭಾರತೀಯ ಭಾಷೆಗಳಲ್ಲಿರುವಂತೆ ಬಗೆ ಬಗೆಯ ಪ್ರಾಸಗಳನ್ನು ಕವಿಗಳು ಬಳಸುವುದಿದೆ. ಆದರೆ ಒಂದು ವಿಶೇಷ ಜಾತಿಯ ಪ್ರಾಸವಿದೆ,– ಅದು ದ್ವಿತೀಯಾಕ್ಷರ ಪ್ರಾಸ; ಮಲಯಾಳಂ ಭಾಷೆಯ ಬಹು ಮಂದಿ ಕವಿಗಳಿಗೆ ಇದು ಪ್ರಿಯವೆನಿಸಿತ್ತು. ಈ ಪ್ರಾಸಕ್ಕೆ ಮಾತ್ರ ವಿಶಿಷ್ಟ ಮನ್ನಣೆ ಸಂದುದೇಕೆ, ಇದು ಮಾತ್ರ ಪ್ರಿಯವಾದುದೇಕೆ, ಎಂಬ ವಿಚಾರ ಸಂಶೋಧನೆಯಾಗತಕ್ಕುದ್ದು. ಆದರೆ ಹಾಗೆ ನೆಲೆಗೊಂಡ ಪದ್ಧತಿ ನಿಲುಗಡೆಯಿಲ್ಲದೆ ಹಲವು ಪೀಳಿಗೆಗಳ ಕಾಲ ಸಾಗಿಬಂದಿತು. ಈ ಪ್ರಾಸ ಕಿವಿಗೆ ಹಿತ ಎಂಬಲ್ಲಿ ಸಂದೇಹವಿಲ್ಲ; ಆದರೆ ಇದು ಇದ್ದೇ ತೀರಬೇಕೆಂಬ ನಿರ್ಬಂಧ ಕಾವ್ಯರಚನೆಯಲ್ಲಿ ಹೆಚ್ಚು ಪ್ರಾಮುಖ್ಯ ಪಡೆದ ಇತರ ಕಾವ್ಯಾಂಶಗಳಿಗೆ ಹಾನಿ ತಟ್ಟಲು ಕಾರಣವಾಯಿತು. ೧೮೯೧ರಷ್ಟು ಹಿಂದೆಯೇ ಒಂದು ಸಾಹಿತ್ಯ ಪತ್ರಿಕೆಯಲ್ಲಿ ಪ್ರತಿ ಪಂಕ್ತಿಯಲ್ಲಿಯೂ ಈ ದ್ವಿತೀಯಾಕ್ಷರ ಪ್ರಾಸಕ್ಕೆ ಅಂಟಿಕೊಳ್ಳುವುದರ ಸಾಧಕ ಬಾಧಕಗಳನ್ನು ಕುರಿತು ಚರ್ಚೆ ನಡೆಯಿತು. ಈ ಪ್ರಶ್ನೆಯ ಬಗೆಗೆ ಪ್ರಮುಖ ಕವಿಗಳು ಮತಭೇದ

ಅವರ ಪರಸ್ಪರ ಸಂಬಂಧ ವಿಶೇಷ ಬಗೆಯದಾಗಿದ್ದಿತು; ಅದರ ತೆರನಾದದ್ದನ್ನು ಮಲಯಾಳಂ ಸಾಹಿತ್ಯ ಚರಿತ್ರೆಯಲ್ಲಿ ಬೇರೆಲ್ಲಿಯೂ ಕಾಣಲಾಗದು. ಸೋದರಮಾವ, ಸೋದರ ಅಳಿಯಂದಿರು ನಿಜವಾದ ಅರ್ಥದಲ್ಲಿ ಗುರು–ಶಿಷ್ಯರಾಗಿದ್ದರು. ಸೋದರಮಾವನಿಗೆ ಸೋದರಳಿಯ ಎಂದರೆ ತುಂಬು ಪ್ರೀತಿ; ಅಳಿಯನಿಗೆ ಮಾವನಲ್ಲಿ ಅತಿಶಯ ಗೌರವ. ಸಲಹೆ ಹೇಳುವವನು, ಪೋಷಕ, ಆಧಾರ– ಎಲ್ಲವೂ ಆಗಿದ್ದನು ಸೋದರಮಾವ. ಅವರಿಬ್ಬರೂ ಹೆಚ್ಚು ಕಡಮೆ ಒಂದೇ ವಾತಾವರಣದಲ್ಲಿ ಬೆಳೆದು ಬಂದರು. ಆದರೆ ಇಬ್ಬರೂ ಒಬ್ಬರಿಂದ ಒಬ್ಬರು ಬೇರೆ, ಎದ್ದುಕಾಣುವಷ್ಟು ಬೇರೆ ಬೇರೆ. ಸೋದರಳಿಯ ಬಿರ್ರನೆ ಬೆಳೆದುಬಿಟ್ಟ, ತನ್ನದೇ ಆದ ವ್ಯಕ್ತಿತ್ವವನ್ನು ಬೆಳಸಿಕೊಂಡ, ಶಕ್ತಿಯನ್ನು ರೂಢಿಸಿಕೊಂಡ. ಸೋದರಮಾವ ಬಲುಬೇಗನೆ ಆತನ ಸಿದ್ಧಿ ಸಾಧನೆಗಳನ್ನು ಎಷ್ಟು ಚೆನ್ನಾಗಿ ಗುರುತಿಸಿಕೊಂಡ ಎಂದರೆ, ಸಾಹಿತ್ಯಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿ ಆತನ ಸಲಹೆ ಕೇಳಿ ಪಡೆಯತೊಡಗಿದ. ಅವರು ಪರಸ್ಪರ ಬೆಳಸಿಕೊಂಡ ಸಂಬಂಧ ಎಷ್ಟು ಹೆಚ್ಚಿನದು, ಎಷ್ಟು ಆತ್ಮೀಯ, ಎಂದರೆ ಅದು ಮಲಯಾಳಂ ಸಾಹಿತ್ಯದ ದಾಖಲೆಗಳಲ್ಲಿ ಇತಿಹಾಸದ ಪರ್ವವನ್ನೇ ಸೃಷ್ಟಿಸಿಬಿಟ್ಟಿದೆ. ಅವರ ನಿಡುಗಾಲದ ಈ ಬಾಂಧವ್ಯದಲ್ಲಿ ಕುಕ್ಕುಮುಳ್ಳು, ಮುಸುಕಿನೊಳಗಿನ ಸೆಣಸು, ಪರಸ್ಪರ ಅರಿವಿನ ಅರೆಕೊರೆ, ಇವೆಲ್ಲವೂ ಇದ್ದುವು; ಆದರೆ ಇವು ಹೊಮ್ಮಿ ಹಬ್ಬಿದ್ದು ತಾತ್ತ್ವಿಕ ನೆಲೆಗಟ್ಟಿನಲ್ಲಿ; ವೈಯಕ್ತಿಕ ಅಸೂಯೆ ಇಲ್ಲವೆ ಮನಸ್ತಾಪದಿಂದ ಅಲ್ಲ.

ಕೇರಳವರ್ಮನು ಕೇರಳದ ಕಾಳಿದಾಸ ಎಂದು ಖ್ಯಾತನಾಮನಾಗಿದ್ದ; ಇದಕ್ಕೆ ಕಾರಣ, ಆತ ಬಲು ಹಿಂದೆಯೇ 'ಶಾಕುಂತಲ'ವನ್ನು ಅನುವಾದ ಮಾಡಿದ್ದು, ಕಾಳಿದಾಸನು ಬಳಸುತ್ತಿದ್ದಂಥ ಕಾವ್ಯಪ್ರತಿಮೆಗಳನ್ನು ಸೃಷ್ಟಿಸುವ ಅವನ ಸಾಮರ್ಥ್ಯ. ಆದರೆ ಕಾವ್ಯಶೈಲಿಯ ಬಗೆಗೆ ಮಾತ್ರ ಆತನ ಆದರ್ಶಪುರುಷ ಶ್ರೀಹರ್ಷ. ರಾಜರಾಜವರ್ಮನಿಗಾದರೊ, ಕಾವ್ಯ ವಿಷಯ ಮತ್ತು ಶೈಲಿ ಎರಡರಲ್ಲಿಯೂ ಕಾಳಿದಾಸ ಆದರ್ಶ. ಈಗಾಗಲೇ ತಿಳಿಸಿದಂತೆ, ತನ್ನ 'ಮಣಿಪ್ರವಾಳ ಶೈಲಿ'ಯ ಕವಿತೆಗಳಲ್ಲಿ ಕೇರಳವರ್ಮನು ಸಂಸ್ಕೃತ ಪದಗಳನ್ನೂ ನುಡಿರಚನೆಯನ್ನೂ ಧಾರಾಳವಾಗಿ ಅಳವಡಿಸಿಕೊಳ್ಳುತ್ತಿದ್ದನು. ಅಲಂಕಾರ ಪ್ರಯೋಗ, ಪ್ರಾಸಯೋಜನೆ, ಇವುಗಳ ವಿಷಯದಲ್ಲಿ ಆತ ನಿಯಮಪ್ರಜ್ಞೆಯುಳ್ಳವನು; ಕಾವ್ಯದ ಬಾಹ್ಯರೂಪ ಮತ್ತು ಆಡಂಬರದ ನುಡಿರಚನೆ ಇವುಗಳ ಬಗ್ಗೆ ಆತನದು ಮಿತಿಮೀರಿದ ಎಚ್ಚರ. ಆಗೊಮ್ಮೆ ಈಗೊಮ್ಮೆ ಆತ ಅಲಂಕಾರಿಕ ಭಾಷೆಯ ಆಕರ್ಷಣೆಗೆ ಮನಸೋಲುತ್ತಿದ್ದನು ಎಂದು ಕೂಡ ಹೇಳಿಬಿಡಬಹುದು. ಹೀಗಿದ್ದರೂ ಕೂಡ

ತದನಂತರ ಕೇಶವಪಿಳ್ಳೆಯ ಪ್ರಬಂಧವು 'ಭಾಷ ಪೋಷಿಣಿ'ಯಲ್ಲಿ ಪ್ರಕಟವಾಯಿತು. ಆದರೆ ಮುಂದಿನ ಸಂಚಿಕೆಯಲ್ಲೇ ಕೇರಳವರ್ಮನ ಅಧ್ಯಕ್ಷ ಭಾಷಣ ಮಾತ್ರವಲ್ಲದೆ, ಕೆ.ಸಿ. ಕೇಶವ ಪಿಳ್ಳೆಯ ವಾದವನ್ನು ಕಟುವಾಗಿ ಟೀಕಿಸಿ ಬರೆದಿದ್ದ ಕವಿ ಉಳ್ಳೂರು ಎಸ್.ಪರಮೇಶ್ವರ ಐಯರ್‌ನ ಲೇಖನವನ್ನೂ ಪ್ರಕಟಿಸಲಾಯಿತು. ಇದರಿಂದಾಗಿ ಪತ್ರಿಕೆಗಳಲ್ಲೂ ವೇದಿಕೆಗಳ ಮೇಲೂ ಒಂದು ಕಹಿಯಾದ ವಾಗ್ವಾದ ಪ್ರಾರಂಭವಾಯಿತು; ಮುಂದಿನ ಮೂರು ವರ್ಷಕಾಲ ಅನೇಕ ವಿದ್ವಾಂಸರೂ ಕವಿಗಳೂ ಅದರಲ್ಲಿ ಪಾಲ್ಗೊಂಡರು. ತಂತಮ್ಮ ವಾದವನ್ನು ಸಮರ್ಥಿಸಿಕೊಳ್ಳಲು ಹೆಸರಾಂತ ಕವಿಗಳು ದ್ವಿತೀಯಾಕ್ಷರ ಪ್ರಾಸ ಸಹಿತವಾದ, ಆ ಪ್ರಾಸವನ್ನು ತ್ಯಜಿಸಿದ 'ಸಮಸ್ಯೆ'ಗಳನ್ನೂ ಕವನಗಳನ್ನೂ ರಚಿಸಿದರು. ತನ್ನ ಸೋದರಳಿಯನ ಪ್ರಭಾವಕ್ಕೆ ಒಳಗಾಗಿ, ಉದಾರ ಹೃದಯದ ಕೇರಳವರ್ಮನು ಈ ವಿಶಿಷ್ಟ ಪ್ರಾಸಕ್ಕೆ ಅಂಟಿಕೊಳ್ಳದೆ 'ದೈವಯೋಗಂ' ಎಂಬ ಕವಿತೆಯನ್ನು ರಚಿಸಿದನು. ಆದರೆ, ವಾಗ್ಯುದ್ಧ ಇನ್ನೂ ಮುಂದುವರಿಯಿತು; ಎರಡನೆಯ ದರ್ಜೆಯ ಕವಿಗಳೂ ಕಲಹಕ್ಕೆ ಪ್ರವೇಶಿಸಿದರು. ಈ ವಿಷಯದಲ್ಲಿ ಉಭಯ ಪಕ್ಷಗಳಿಗೂ ರಾಜಿಯುಂಟುಮಾಡುವ ರೀತಿಯಲ್ಲಿ ರಾಜರಾಜವರ್ಮನು ಒಂದು ಲೇಖನ ಬರೆಯತಕ್ಕದ್ದೆಂದು ಎರಡು ಪಕ್ಷಗಳವರೂ ಕಡೆಗೊಮ್ಮೆ ಒಪ್ಪಿಕೊಂಡರು.

## ಸಂಪ್ರದಾಯ ಮತ್ತು ಆಧುನಿಕತೆ

ವಾಸ್ತವವಾಗಿ ಪ್ರಾಸವಿಚಾರವು ವಾಗ್ವಾದಕ್ಕೆ ಕಾರಣವಾದ ಹಲವು ಅಂಶಗಳಲ್ಲಿ ಒಂದಾಗಿತ್ತು; ವಾಗ್ವಾದ ಆಸ್ಫೋಟಿಸುವುದಕ್ಕೆ ಅದೇ ಮುಖ್ಯ ಕಾರಣವಾಗಿತ್ತು, ಅದರಲ್ಲಿ ಸಂದೇಹವಿಲ್ಲ. ಕವಿತಾರಚನೆಯ ವಿಷಯದಲ್ಲಿ ಸಾಂಪ್ರದಾಯಿಕ ದೃಷ್ಟಿಗೂ ಆಧುನಿಕ ದೃಷ್ಟಿಗೂ ನಡುವೆ ಬಲಪರೀಕ್ಷೆಗಾಗಿ ನಡೆದ ಹೋರಾಟವಾಗಿತ್ತು ಅದು. ಪುನರುಜ್ಜೀವನದ ನಿಜವಾದ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಸಂಪ್ರದಾಯವಾದಿಗಳು ಎತ್ತಿಹಿಡಿದು ಮಲಯಾಳಂ ಕವಿತೆಯ ಲಕ್ಷಣಗಳೇನು ಎಂಬುದನ್ನು ನಾವು ಗೊತ್ತುಪಡಿಸಿಕೊಳ್ಳಬೇಕು. ಅವು ಯಾವುವು ಎಂಬುದನ್ನು ಕೆಳಗೆ ಸಂಕ್ಷೇಪವಾಗಿ ಸೂಚಿಸಲಾಗಿದೆ:[೧]

---

೧. ಕೆ.ಎಂ. ಜಾರ್ಜ್ ಅವರ 'ಮಲಯಾಳಂ ಭಾಷೆ ಮತ್ತು ಸಾಹಿತ್ಯಗಳ ಮೇಲೆ 'ಪಾಶ್ಚಾತ್ಯ ಪ್ರಭಾವ' (Western Influence on Malayalam Language and Literature) ಎಂಬ ಹತ್ತನೆಯ ಅಧ್ಯಾಯವನ್ನು ನೋಡಿ.

ಹೊಂದಿದ್ದರು; ಆದರೆ ಇದು ಕೆಲವು ವರ್ಷಗಳವರೆಗೆ ಒಂದು ವಾದವಿವಾದದ ಮಟ್ಟಕ್ಕೆ ಹೋಗಲಿಲ್ಲ. ಕೇರಳವರ್ಮನೇನೋ ದ್ವಿತೀಯಾಕ್ಷರಪ್ರಾಸವನ್ನು ಇಟ್ಟುಕೊಳ್ಳುವುದರ ಪರವಾಗಿದ್ದನು, ಅದರಲ್ಲಿ ಸಂದೇಹವಿರಲಿಲ್ಲ; ಆದರೆ ರಾಜರಾಜವರ್ಮನು ಆ ಬಗೆಯ ನಿರ್ಬಂಧಕ್ಕೆ ವಿರೋಧವಾಗಿದ್ದನು. ಈತನ ಅಭಿಪ್ರಾಯದಲ್ಲಿ, ಅಂತ ನಿರ್ಬಂಧವು ಅಪಕ್ವ ಸಾಹಿತ್ಯದ ಲಾಂಛನ.

ಈ ವಿಚಾರದಲ್ಲಿ ಭಿನ್ನಾಭಿಪ್ರಾಯವು ವಾದವಿವಾದದ ಬಿರುಗಾಳಿಯಾಗಿ ಪರಿಣಮಿಸಿದ್ದು ೧೯೦೮ರಲ್ಲಿ. ಅದು ತೊಡಗಿದ್ದು ಹೇಗೆ, ಅದನ್ನು ಹೊತ್ತಿಸಿದ ಸಂದರ್ಭ ಸನ್ನಿವೇಶಗಳೇನು, ಎಂಬುದನ್ನಿಲ್ಲಿ ಸಂಕ್ಷೇಪವಾಗಿ ತಿಳಿಸಬಹುದು. ಕೇರಳವರ್ಮನ ಸಮುಖದಲ್ಲಿ ವಿಶೇಷಪ್ರಾಸವನ್ನು ಇಟ್ಟುಕೊಳ್ಳುವುದರ ವಿರುದ್ಧವಾಗಿ ವಾದಗಳನ್ನು ಮಂಡಿಸಿ, ಆತನ ತತ್‌ಕ್ಷಣದ ಪ್ರತಿಕ್ರಿಯೆಯನ್ನು ತಿಳಿದರೆ, ಅದು ಒಳ್ಳೆಯ ಆಲೋಚನೆ ಎಂದು ರಾಜರಾಜವರ್ಮನು ಭಾವಿಸಿದನು. ೧೯೦೮ರಲ್ಲಿ ಮಲಯಾಳಂ ಸಮಾಜದ ವಾರ್ಷಿಕ ದಿನವನ್ನು ಆಚರಿಸತಕ್ಕದ್ದೆಂದು ತಿರುವನಂತಪುರದ ಮಹಾರಾಜರವರ ಕಾಲೇಜು ವ್ಯವಸ್ಥೆ ಮಾಡಿದಾಗ ಒಂದು ಅವಕಾಶ ದೊರಕಿತು. ಅಂದಿನ ಕಾರ್ಯ ಕವಿ ಕೆ.ಸಿ. ಕೇಶವ ಪಿಳ್ಳೆಯನ್ನೂ ಆಹ್ವಾನಿಸಬೇಕೆಂದು ಸಮಾಜದ ಕಾರ್ಯದರ್ಶಿ ಪಿ. ಅನಂತ ಪಿಳ್ಳೆಗೆ ರಾಜರಾಜವರ್ಮನು ನಿರ್ದೇಶ ಮಾಡಿದನು. ಅನೇಕ ತಾತ್ವಿಕ ವಾದ ವಿವಾದಗಳಲ್ಲಿ ರಾಜರಾಜವರ್ಮನ ನಿಲುವನ್ನು ಉತ್ಸಾಹದಲ್ಲಿ ಸಮರ್ಥನೆ ಮಾಡುತ್ತಿದ್ದ ಕೆ.ಸಿ. ಕೇಶವ ಪಿಳ್ಳೆ ಆತನೊಂದಿಗೆ ಸಂಚುಹೂಡಿ 'ಭಾಷಾಕವಿತೆ' (ಮಲಯಾಳಂ ಕಾವ್ಯ) ಎಂಬ ಪ್ರಬಂಧವನ್ನು ಸಿದ್ಧಪಡಿಸಿ, ಅದನ್ನು ಅಂದಿನ ಸಭೆಯಲ್ಲಿ ಮಂಡಿಸಿದನು. ಒಟ್ಟಿನಮೇಲೆ ಮಲಯಾಳಂ ಕವಿತೆಯನ್ನು ಕುರಿತದ್ದಾದರೂ, ಪ್ರಬಂಧದ ತಿವಿತವೆಲ್ಲವೂ ಪ್ರಾಸನಿರ್ಬಂಧದ ವಿರುದ್ಧವಾಗಿತ್ತು. ಪ್ರಬಂಧದಲ್ಲಿ ವಾದವನ್ನು ಬಹಳ ಚೆನ್ನಾಗಿ ಮಂಡಿಸಲಾಗಿತ್ತು. ಈ ಪ್ರಬಂಧವಾಚನ ಕಾರ್ಯಕ್ರಮದ ಹಿಂದಿನ ಆಟಹೂಟಗಳನ್ನು ಸಭಾಧ್ಯಕ್ಷ ಅರ್ಥಮಾಡಿಕೊಂಡನು. ಸಭೆಯನ್ನು ಉದ್ದೇಶಿಸಿ ಮಾತನಾಡುವಾಗ ಸಿದ್ಧಪಡಿಸಿದ್ದ ಭಾಷಣಕ್ಕೇ ಬದ್ಧನಾಗಿದ್ದನು; ಅಲ್ಲದೆ, ಪ್ರಬಂಧದಲ್ಲಿ ಪ್ರತಿಪಾದಿಸಿದ್ದ ವಾದವನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಎದುರಿಸಿದನು. ತನ್ನ ಪ್ರತಿಪಕ್ಷದವರು ಒಳ್ಳೆಯ ಕವಿತೆಯನ್ನು ರಚಿಸಲು ಅಸಮರ್ಥರು ಎಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು. ಇಷ್ಟೇ ಅಲ್ಲ, ಅತ್ಯಂತ ಮನೋಜ್ಞವಾದ ಪದ್ಯದಲ್ಲಿ ದ್ವಿತೀಯಾಕ್ಷರ ಪ್ರಾಸದ ಸ್ವರವ್ಯಂಜನಗಳೆರಡೂ ಏಕರೂಪದವು ಆಗಿರುತ್ತವೆ ಎಂದೂ ವಾದಿಸಿದನು.

ಕಾವ್ಯದಲ್ಲಿ ನಿರೂಪಣ ಯೋಗ್ಯ; ಆದರೆ ಮಾತ್ರ ಅದು ಕವಿಯ ಕಲ್ಪನಾ ಶಕ್ತಿಯನ್ನು ಪ್ರಚೋದನಗೊಳಿಸಬೇಕಷ್ಟೆ. ಪಾಶ್ಚಾತ್ಯ ದೇಶಗಳಲ್ಲಿ ಜನಪ್ರಿಯವಾಗಿರುವ ವ್ಯಕ್ತಿನಿಷ್ಠ (Subjective) ಕಾವ್ಯವನ್ನು ಬರಮಾಡಿಕೊಳ್ಳಬೇಕು; ಇದೊಂದು ಸ್ವಾಗತಾರ್ಹವಾದ ಬದಲಾವಣೆ ಆದೀತು.

(೨) ವರ್ಣನೆಗಾಗಿ ವರ್ಣನೆ ಅಪೇಕ್ಷಣೀಯವಲ್ಲ. ಕಾವ್ಯದ ಒಟ್ಟಿನ ಭಾವ ಮತ್ತು ಉದ್ದೇಶಗಳಿಗೆ ಅವು ಪೋಷಕವಾಗಿದ್ದರೆ ಮಾತ್ರ ಉಚಿತವಾಗಿರುವುವು.

(೩) ಅಲಂಕಾರಬಾಹುಳ್ಯ ಕಾವ್ಯಕ್ಕೆ ಹೊರೆಯಾಗಿ ಅದನ್ನು ಕೃತಕವನ್ನಾಗಿಸುವುದು.

(೪) ಪದ್ಯಕಾವ್ಯದಲ್ಲಿ ಸಂದರ್ಭಕ್ಕೆ ತಕ್ಕ (ಸ್ವರ ವ್ಯಂಜನ) ಧ್ವನಿಗಳನ್ನುಳ್ಳ ಶಬ್ದಗಳನ್ನು ಆಯ್ಕೆ ಮಾಡಿ ಪ್ರಯೋಗಿಸುವುದು ಖಂಡಿತವಾಗಿಯೂ ಉಚಿತವಾದದ್ದೆ; ಆದರೆ, ಈ ಬಗೆಯ ಪ್ರಯೋಗ ಯಾಂತ್ರಿಕವಾಗಿ ಒಂದು ನಿರ್ದಿಷ್ಟ ಆವೃತ್ತಿ ಕ್ರಮಕ್ಕೆ ಬದ್ಧವಾಗಿರತಕ್ಕದ್ದು ಎಂದಾಗಲಿ ಪ್ರತಿ ಪಾದದಲ್ಲಿಯೂ ಅದು ದ್ವಿತೀಯ ಅಕ್ಷರ ಸ್ಥಾನದಲ್ಲಿ ಪುನರಾವೃತ್ತಿಯಾಗಬೇಕು ಎಂದಾಗಲಿ ಭಾವಿಸುವುದು ಅವಿವೇಕ. ಇಂಥ ಯಾವುದೇ ಕಟ್ಟುನಿಟ್ಟಾದ ವ್ಯಸ್ಥೆಗೆ ಒಳಪಡುವುದರಿಂದ ಸ್ವಾಭಾವಿಕವಾದ ವಾಕ್ಯ ಬಂಧವನ್ನೂ ಪದಯೋಜನೆಯನ್ನು ಅನಗತ್ಯವಾಗಿ ಹಿಗ್ಗಾಮುಗ್ಗಾ ಎಳೆದಾಡಿ, ತಿರಿಚುಮುರಿಚು ಮಾಡಬೇಕಾಗಬಹುದು. ಒಂದು ನಿರ್ದಿಷ್ಟ ಧ್ವನಿಗೆ ಅಗತ್ಯಕ್ಕಿಂತ ಹೆಚ್ಚಿನ ಪ್ರಾಮುಖ್ಯಕೊಟ್ಟದ್ದೇ ಆದರೆ ಧ್ವನಿಬಂಧುರತೆಗೆ ಮಾರುಹೋಗಿ ಅರ್ಥಸ್ವಾರಸ್ಯವನ್ನು ಕೈಬಿಡಬೇಕಾದ ಚಾಪಲ್ಯಕ್ಕೆ ಸೋಲಬೇಕಾಗುವುದು.

(೫) ತನಗೆ ಇಷ್ಟಬಂದ ಛಂದೋಬಂಧವನ್ನು ಆಯ್ದುಕೊಳ್ಳಲು ಕವಿ ಸ್ವತಂತ್ರನಾಗಿರಬೇಕು. ಕಟ್ಟುನಿಟ್ಟಾದ ಸಂಸ್ಕೃತ ಛಂದಸ್ಸಿಗೆ ಅಂಟಿಕೊಳ್ಳಬೇಕಾದ ಅಗತ್ಯವೇನಿಲ್ಲ. ಜನಪದ ಮಟ್ಟುಗಳಿಂದ ರೂಪಗೊಂಡ ದೇಸಿ ಮಲಯಾಳಿ ಛಂದಃಪ್ರಕಾರಗಳು ಹೇಗೆಂದರೆ ಹಾಗೆ ಬಳುಕುವಂತಿದ್ದು, ಹೆಚ್ಚು ಗೇಯಯೋಗ್ಯವಾಗಿರುವುದರಿಂದ ಭಾವಪ್ರಧಾನವಾದ ಗೀತರಚನೆಗಳಿಗೆ ಯೋಗ್ಯವಾಗಿವೆ.

(೬) ಪೂರ್ವ ಸಾಧನೆಗಳ ಆಧಾರದ ಮೇಲೆ ನಿರ್ಮಾಣ ಮಾಡುವುದು ಒಳ್ಳೆಯದಾದರೂ ಸೂತ್ರಬದ್ಧ ರೂಪ ರಚನೆಗಳನ್ನು ಲೇಖಕರು ಅನುಕರಣ ಮಾಡಕೂಡದು. ಕಾವ್ಯದಲ್ಲಿ 'ಭಾವ' (Imagination) ಮುಖ್ಯವೇ ಹೊರತು

(೧) ಅದು ಪೌರಾಣಿಕವಾಗಿರಲಿ ಐತಿಹಾಸಿಕವಾಗಿರಲಿ, ಒಂದು ಪ್ರಸಿದ್ಧ ಕಥೆಯನ್ನು ಅವಲಂಬಿಸಿ ಕಾವ್ಯವನ್ನು ರಚಿಸಬೇಕು.

(೨) ಅದರಲ್ಲಿ ವಿಸ್ತಾರವಾದ ವರ್ಣನೆಗಳು ಅಡಕವಾಗಿರಬೇಕು: ಅವುಗಳಲ್ಲಿ ವರ್ಣನಾ ವಿಷಯಗಳೆಂದು ಕಾವ್ಯ ಪ್ರಪಂಚದಲ್ಲಿ ರೂಢಿಯಾದ ವರ್ಣನೆಗಳು. ಪರ್ವತ, ಸಮುದ್ರ, ಋತುಗಳು ಮುಂತಾದವು, ಇದ್ದೇ ತೀರಬೇಕು.

(೩) ಅಲಂಕಾರಗಳು ವಿಪುಲ ಸಂಖ್ಯೆಯಲ್ಲಿ ಇರಬೇಕು; ಅವು ಎಷ್ಟು ಕಾಲ್ಪನಿಕವಾಗಿದ್ದರೆ ಅಷ್ಟು ಮೇಲು.

(೪) ಅನುಪ್ರಾಸ, ಪ್ರಾಸ, ಇವು ಒಳ್ಳೆಯ ಕಾವ್ಯದ ಮುಖ್ಯ ಲಕ್ಷಣಗಳು. ಪ್ರತಿಪಾದದಲ್ಲೂ ದ್ವಿತೀಯಾಕ್ಷರಪ್ರಾಸ (ಆದಿಪ್ರಾಸ) ಇರಬೇಕಾದ್ದು ಅತ್ಯಗತ್ಯ.

(೫) ಬಳಸಲಾಗುವ ಛಂದೋವೃತ್ತಗಳನ್ನು ಸಂಸ್ಕೃತ ಛಂದಸ್ಸಿನಿಂದ ಆಯ್ದುಕೊಳ್ಳಲಾಗಿದೆ.

(೬) ಕಾವ್ಯ ಓದುಗನಲ್ಲಿ ಬೆರಗಿನ ಭಾವನೆಯನ್ನು ಹುಟ್ಟಿಸಬೆಕು; ಪ್ರತಿಯೊಂದು ವೃತ್ತವೂ ಕವಿಯ ಕಾವ್ಯಕಲಾ ಪ್ರೌಢಿಮೆ ಹಾಗೂ ಪಾಂಡಿತ್ಯಗಳ ಬಗೆಗೆ ವಿಶ್ವಾಸ ದೃಢವಾಗುವಂತೆ ಮಾಡಬೇಕು.

ಬೇರೆಯ ಮಾತಿನಲ್ಲಿ ಹೇಳುವುದಾದರೆ, ಪ್ರತಿಭೆಗಿಂತ ಅಲಂಕಾರವೇ ಮೇಲುಗೈ ಎಂದಾಯಿತು. ಮೇಲೆ ವಿವರಿಸಿದ ಲಕ್ಷಣಗಳಲ್ಲಿ ಸಂಸ್ಕೃತ ಕಾವ್ಯ ಮೀಮಾಂಸೆಯ, ಸಂಸ್ಕೃತ ಮಹಾಕಾವ್ಯದ ಪರಮ ಪ್ರಭಾವವನ್ನು ಸ್ಪಷ್ಟವಾಗಿ ಕಾಣಬಹುದು.

ಅಸಾಧಾರಣವಾದ ಮತ್ತು ಚಮತ್ಕಾರಯುತವಾದ ಏನನ್ನಾದರೂ ನಿರ್ಮಾಣ ಮಾಡಲು ಕವಿಗಳು ಪರಸ್ಪರ ಪೈಪೋಟಿ ನಡಸುತ್ತಿದ್ದರು. ಕಾವ್ಯದ ಬೆಳವಣಿಗೆ ಸಹಜವಾಗಿಯೆ ಕುಂಠಿತವಾಯಿತು. ಪುನರುಜ್ಜೀವನದ ಯುಗಧರ್ಮವನ್ನು ಮೈಗೂಡಿಸಿಕೊಂಡಿದ್ದ ರಾಜರಾಜವರ್ಮನೂ ಆತನ ಅಭಿಪ್ರಾಯವನ್ನೆ ಹೊಂದಿದ್ದ ಇನ್ನು ಕೆಲವರೂ ಈ ಪ್ರವೃತ್ತಿಗೆ ತಡೆಹಾಕಬಯಸಿದರು. ಇವರುಗಳ ವಕ್ತಾರನಾಗಿ ರಾಜರಾಜವರ್ಮನು ಹೊಸ ಮಾರ್ಗದಲ್ಲಿನ ಮೂಲಭೂತ ವ್ಯತ್ಯಾಸಗಳನ್ನು ಘೋಷಿಸಿದನು. ಅವುಗಳನ್ನು ಕೆಳಗೆ ಕೊಟ್ಟಿದೆ:

(೧) ಒಟ್ಟಿನ ಮೇಲೆ ಮಲಯಾಳಂ ಭಾಷೆಯಲ್ಲಿ "ವಸ್ತುಕ" (Objective) ಕಾವ್ಯ ಎನ್ನಬಹುದಾದ ಕಥನ (ಮಹಾಕಾವ್ಯ ಮತ್ತು ಹಾಡು ಕವಿತೆ) ಮತ್ತು ನಾಟಕ (ಆಟ್ಟ ಕಥಾ) ಪ್ರಕಾರಗಳು ಮಾತ್ರ ಇದ್ದುವು. ವಿಷಯದ ಆಯ್ಕೆಯಲ್ಲಿ ಮಿತಿಯನ್ನು ಕಲ್ಪಿಸುವ ಯಾವ ಕಟ್ಟುಪಾಡೂ ಇರಕೂಡದು. ಯಾವ ವಿಷಯವೂ

ವಿಮೋಚನಗೊಳಿಸಿದವನು. ಕಳೆದ ಶತಮಾನಾರ್ಧದಲ್ಲಿ ಬೇರೆ ಇತರ ಯಾವ ಸಾಹಿತ್ಯ–ಸಾಧಕನಿಗಿಂತ ಹೆಚ್ಚಾಗಿ ಮಲಯಾಳಂ ಸಾಹಿತ್ಯದ ಅಪಾರ ಪುರೋಭಿವೃದ್ಧಿಗೆ ಮಾತ್ರ ಹಾಕಿದವನು ರಾಜರಾಜವರ್ಮ. ಬೇರೆಯ ರೀತಿಯಲ್ಲಿ ಹೇಳುವುದಾದರೆ, ಮಲಯಾಳಂ ಸಾಹಿತ್ಯದಲ್ಲಿ ನವೋದಯ ಚಳವಳಿಯ ಮುಂಚೂಣಿಯ ಅಗ್ರನಾಯಕ ನಾಗಿರುವುದು ಅವನ ಪಾಲಿಗೆ ಒದಗಿಬಂದಿತು.

ಆತ ದೊಡ್ಡವನಾಗಿದ್ದುದು ಮಾತ್ರವಲ್ಲ, ಇತರರಲ್ಲಿಯ ದೊಡ್ಡತನವನ್ನು ಕಂಡುಹಿಡಿದು ಅದನ್ನು ಮೆಚ್ಚಿಕೊಳ್ಳಬಲ್ಲವನಾಗಿದ್ದನು. ಯಾರಲ್ಲಿಯೇ ಆಗಲಿ ಸೃಜನಶೀಲ ಪ್ರತಿಭೆ ಪ್ರಕಾಶಕ್ಕೆ ಬಾರದೆ ಇದ್ದರೂ, ಇಲ್ಲವೆ ಅನನುಕೂಲ ಪರಿಸ್ಥಿತಿಯಲ್ಲಿ ಮುಚ್ಚಿಹೋಗಿದ್ದರೂ ಕೂಡ, ಅದನ್ನು ಕಂಡುಹಿಡಿಯಬಲ್ಲ ಒಂದು ವಿಚಿತ್ರ ಸಾಮರ್ಥ್ಯ ಆತನಿಗಿದ್ದಿತು. ಕುಮಾರನ್ ಆಶನ್ ಕವಿ ಮೊತ್ತಮೊದಲ ದೊಡ್ಡ ಕಾವ್ಯ 'ನಳಿನಿ'ಯಲ್ಲಿ ವ್ಯಕ್ತವಾಗಿದ್ದ ಹೊಸ ಸ್ವತಂತ್ರ ಪ್ರವೃತ್ತಿಯನ್ನು ರಾಜರಾಜವರ್ಮನು ಎಷ್ಟು ಬೇಗನೆ ಕಂಡುಕೊಂಡನು, ಅದರ ಹೊಸ ದೃಷ್ಟಿಯನ್ನು ಸ್ಪಷ್ಟವಾದ ಮಾತುಗಳಲ್ಲಿ ಲೋಕಕ್ಕೆ ಪ್ರಕಟಿಸಲು ಆತ ಹೇಗೆ ಇಚ್ಛೆಯುಳ್ಳವನಾಗಿದ್ದನು ಎಂಬುದನ್ನು ನಾವು ಈಗಾಗಲೇ ನೋಡಿದ್ದೇವೆ. ತನ್ನ ಸಹೋದ್ಯೋಗಿಗಳು, ವಿದ್ಯಾರ್ಥಿಗಳು, ಸ್ನೇಹಿತರು ಮತ್ತು ಸಹಾಯವನ್ನು ಕೋರಿ ಬಂದವರು, ಮುಂತಾದವರೊಂದಿಗೆ ಆತ ನಡೆದುಕೊಳ್ಳುತ್ತಿದ್ದ ರೀತಿ ಆದರ್ಶಪ್ರಾಯವಾಗಿತ್ತು. ಬದುಕಿನಲ್ಲಿ ಅವರ ಸ್ಥಾನಮಾನ, ಅವರ ಜಾತಿ ಮತ ಇವುಗಳಿಗೆ ಎಂದೂ ಲಕ್ಷ್ಯಕೊಟ್ಟವನಲ್ಲ ಆತ. ಆ ಕಾರಣದಿಂದಲೇ, ತಿಳಿದೋ ತಿಳಿಯದೆಯೋ, ಜೋಸೆಫ್ ಮಂಡೇಶ್ಶೇರಿ ಹೇಳಿದರು: **"ತಂಪುರಾನ್"** ಎನ್ನಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ ಆತ ಒಬ್ಬ ಮಾನವನಾಗಿ ಇದ್ದುಕೊಂಡಿರಲು ಸಮರ್ಥನಾದನು. ಆತನು ಇದ್ದ ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ತನ್ನ ಉತ್ತಮ ಜಾತಿ ಮತ್ತು ಮೇಲ್ಮಟ್ಟದ ವಿದ್ಯಾಸಂಪನ್ನತೆಯ ಬಗ್ಗೆ ತಾನೇ ಶ್ರೇಷ್ಠ ಎಂಬ ಸ್ವಕೀಯ ಪ್ರಜ್ಞೆಯನ್ನು ಹೊಂದಿಲ್ಲದಿದ್ದುದು ಅಂದಿನ ದಿನಗಳಲ್ಲಿ ಸಣ್ಣ ಸಂಗತಿಯಾಗಿರಲಿಲ್ಲ. ತನ್ನ ಬಳಿಗೆ ಬಂದ, ಅರ್ಹತೆ ಉಳ್ಳ ಹಾಗೂ ಮುಂದಕ್ಕೆ ಬರುವ ಭರವಸೆ ನೀಡುವಂತಿದ್ದ ಎಲ್ಲ ಬರಹಗಾರರಿಗೂ ಬೇಕೆಂದೇ ಬೆನ್ನು ತಟ್ಟಿದನು; ತನ್ನ ಸಹೋದ್ಯೋಗಿಗಳಿಗೂ ಸ್ನೇಹಿತರಿಗೂ ಸ್ಫೂರ್ತಿಯ ಸೆಲೆಯಾಗಿದ್ದನು.

ಕುಮಾರನ್ ಆಶನ್ ಬರೆದಿರುವ 'ಪ್ರರೋದನಂ' ಎಂಬ ಶೋಕಗೀತೆಯನ್ನು ಉಲ್ಲೇಖಿಸಿ ಈ ಸಂಸ್ಮರಣವನ್ನು ನಾವು ಸಮಾಪ್ತಿ ಮಾಡಬಹುದು; ಈ ಗೀತೆಯಲ್ಲಿ

'ಕಲ್ಪನೆ' (Fancy) ಅಲ್ಲ. ಕುಶಲ ಕರ್ಮಕ್ಕಿಂತ ಕಲೆಗೆ ಹೆಚ್ಚಿನ ಪ್ರಾಮುಖ್ಯ ಇರಬೇಕು.

ವಾದವಿವಾದಗಳಲ್ಲಿ ರಾಜರಾಜವರ್ಮನ ಪಾತ್ರ ಎಷ್ಟು ಮಹತ್ವಪೂರ್ಣವಾಗಿತ್ತು ಎಂದರೆ, ಆತ ಪ್ರತಿಪಾದಿಸಿದ ನೂತನ ತತ್ತ್ವಗಳು 'ರಾಜರಾಜವರ್ಮ ಪ್ರಸ್ಥಾನಂ' ಎಂದೇ ಹೆಸರುವಾಸಿಯಾಯಿತು.

**ಸಾಹಿತ್ಯಕ ಲೇಖನಕ್ಕೆ ಹೊಸ ತಿರುವು**

ಈ ತತ್ತ್ವಗಳು ವಿಶೇಷವಾಗಿ ಪದ್ಯಕಾವ್ಯ ರಚನೆಯನ್ನು ಕುರಿತುವಾದರೂ, ಒಟ್ಟಿನ ಆಶಯ ಗದ್ಯಕ್ಕೂ ಅನ್ವಯಿಸತಕ್ಕವಾಗಿದ್ದುವು. ನಾವೀನ್ಯ ಹಾಗೂ ಸ್ವಾತಂತ್ರ್ಯಗಳಿಗೆ ಕೊಟ್ಟಿದ್ದ ಹೊಸತಾದ ಪ್ರಾಧಾನ್ಯ ಯುವಪೀಳಿಗೆಗೆ, ಮುಖ್ಯವಾಗಿ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದಿದ್ದ ಲೇಖಕರಿಗೂ ಸಾಹಿತ್ಯ ರಸಿಕರಿಗೂ ಸ್ವಾಗತಾರ್ಹವೆನಿಸಿತು. ಪ್ರತಿಪಾದಿಸಿದ ತತ್ತ್ವಗಳನ್ನೂ ಅವಕ್ಕೆ ಅನುಗುಣವಾಗಿ ನಿರ್ಮಾಣ ಮಾಡಿದ, ಉತ್ತೇಜನ ಕೊಟ್ಟು ನಿರ್ಮಾಣ ಮಾಡಿಸಿದ ಸಾಹಿತ್ಯ ಕೃತಿಗಳನ್ನೂ ಎಚ್ಚರಿಕೆಯಿಂದ ಪರಿಶೀಲನೆ ಮಾಡಿದ್ದೇ ಆದರೆ, ಸಾಹಿತ್ಯ ರಚನೆಗೂ ಸಹೃದಯ ವಿಮರ್ಶೆಗೂ ರಾಜರಾಜವರ್ಮನು ಮಲಯಾಳಂ ಭಾಷೆಯಲ್ಲಿ ಕಲ್ಪಿಸಿದ ನೆಲೆಬೆಲೆಗಳನ್ನು ನಾವು ಅರಿತುಕೊಳ್ಳುವೆವು. ನಿಯಮಗಳು, ಸೂತ್ರಗಳು, ಪ್ರಾಚೀನ ಕಾವ್ಯಗಳನ್ನು ಮಾದರಿಗಳಾಗಿ ಇಟ್ಟುಕೊಳ್ಳಬೇಕೆಂಬ ರಸದೃಷ್ಟಿಯಿಲ್ಲದ ಒತ್ತಾಯ, ಇವುಗಳಿಂದ ಉಪಲಕ್ಷಿತವಾಗಿದ್ದ ಕಾವ್ಯವಿಷಯಕ ಸಂಕುಚಿತ ಭಾವನೆಗೆ ಆತ ಕ್ರಾಂತಿಕಾರಕವಾದ ಕೊಡಲಿಪೆಟ್ಟು ಕೊಟ್ಟನು. ಗದ್ಯವಾಗಲಿ ಪದ್ಯವಾಗಲಿ, ತಂತ್ರ ಸ್ಫೂರ್ತಿಗೆ ಅಧೀನವಾಗಿರಬೇಕು ಎಂದು ಆತ ಘೋಷಿಸಿದನು. ಇದು ಆಧುನಿಕ ಸಾಹಿತ್ಯಕ್ಕೆ ರಾಜರಾಜವರ್ಮನ ಮುಖ್ಯವಾದ ಕೊಡುಗೆ. ಇನ್ನು ಭಾಷೆಯ ವಿಚಾರಕ್ಕೆ ಬಂದರೆ, ಒಂದು ಉತ್ತಮೋತ್ತಮವಾದ, ಕಾಲದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ನಿಂತ, ವ್ಯಾಕರಣ ಗ್ರಂಥವನ್ನು ರಚಿಸುವುದರ ಮೂಲಕ ಭಾಷೆಯ ವೈಜ್ಞಾನಿಕ ಅಧ್ಯಯನಕ್ಕೆ ಆತ ಆಸ್ತಿಭಾರ ಹಾಕಿದನು ಎಂಬುದನ್ನು ಈಗಾಗಲೇ ನಾವು ನೋಡಿದ್ದೇವೆ. ಕವಿ ಉಳ್ಳೂರ್ ಹೇಳಿರುವಂತೆ, 'ಕೈರಳೀ' ಎಂದರೆ ಕೇರಳದ ಭಾಷೆ ಸಾಹಿತ್ಯಗಳ ಸೌಧದ ಅಡಿಪಾಯವನ್ನು ರಾಜರಾಜವರ್ಮನು ಬಲಪಡಿಸಿದ್ದಲ್ಲದೆ ಅದರ ಮೇಲುಕಟ್ಟಡವನ್ನು ಅಲಂಕರಿಸಿದನು. ಆತ ನಿಜವಾಗಿಯೂ ಅನೇಕ ಕ್ಷೇತ್ರಗಳಲ್ಲಿ ಮುಂದಾಳಾಗಿದ್ದವನು, ಪ್ರಮುಖ ಪ್ರತಿಭಾವಂತ ಹಾಗೂ ಮಾನಸಿಕ ಶಕ್ತಿ ಸಾಮರ್ಥ್ಯಗಳನ್ನು

**ಬಿಟ್ಟು ಹೂಗಳ ಕಂಪು ಹರಡುವುದೆಲ್ಲೆಡೆ**
**ಕಾಲಾಗ್ನಿ ಕೂಡ ಮುಟ್ಟದದನು.***

* * * *

---

* ಮೇಲ್ಕಂಡ ಕವಿತೆಯ ಚರಣಗಳ ಮಲಯಾಳಂ ಮೂಲವನ್ನು ಡಾ॥ ಕೆ.ಎಂ. ಜಾರ್ಜ್ ಅವರು ನನ್ನ ಕೋರಿಕೆಯಂತೆ ರೋಮನ್ ಲಿಪಿಯಲ್ಲಿ ಬರೆದು ಕಳಿಸಿ ಉಪಕರಿಸಿದರು. ಅವರ ಆಂಗ್ಲ ಅನುವಾದವನ್ನೂ ಗಮನಿಸಿ, ಮೂಲಕ್ಕೆ ಹತ್ತಿರವಾಗಿರುವಂತೆ ಕನ್ನಡಕ್ಕೆ ಅನುವಾದ ಮಾಡಿದೆ. ಮಲಯಾಳಂ ಮೂಲ:

–ಅನುವಾದಕ.

೧

**ಕ್ಷೀಣಿಕ್ಕಾತ್ತ ಮನೀಷಯುಂ ಮಷಿಯುಣ–**
**ಣ್ಣೀಟತ್ತ ಪೊನ್‌ಪೇನಯುಂ**
**ವಾಣಿಕ್ಕಾಯ್ ತನಿಯಾಯುಟೆಇಳ್‌ಇಉ ವರಮಾಯ್**
**ನೇಟೀಭವಾನ್ ಸಿದ್ಧಿ ಕಳ್;**
**ಕಾಣಿಚ್ಚು ವಿವಿಧಾದ್ಭುತನ್ನಳ್ ವಿಧಿದೃ–**
**ಷ್ಟಾಂತನ್ನಳಾಯ್, ವೈರಿಮಾರ್**
**ನಾಣಿಚ್ಚು, ಸ್ವಯಮಂಬ ಕೈರಳಿ ತೆಳಿ–**
**ಇಳ್‌ಇೇಕ್ಷಿಚ್ಚು ಮೋಕ್ಷತ್ತೆಯುಂ.**

೨

**ಎಲ್ಲಾ ಪೋಕ್ಕುಕ ಕೀಟಟನ್ನುಕ ವಿಧಿ–**
**ಕ್ಕಿನ್ನಿ ಚ್ಚಿತಯ್ಕಪ್ಪುರ–**
**ತ್ತಿಲ್ಲಾಟಾಕುಕ ಜೀವಿತಂ:– ಮತಿ ವಿಭೋ–**
**ತ್ವನ್ನಾಮ ಪುಣ್ಯಾಕ್ಷರಂ;**
**ಚೊಲ್ಲಾಮಾಯತು ನನ್ನಳ್ ನಟ್ಟುಮಿಟೆನೀರ್**
**ತೂವಿಪ್ಪುಲರತ್ತುಮ್ ಪಟರ್–**
**ನ್ನೆಲ್ಲಾವರ್‌ಕುಮಕಿಟುಂ ಮಲರ್‌ಮಣಂ**
**ಕಾಲಾಗ್ನಿ ಚೆಲ್ಲಿಲ್ಲಾಟಲ್.**

ಆತನ ಕೃತಜ್ಞತಾಭಾವ, ಗೌರವ–ಪ್ರೀತಿಗಳು ತುಂಬಿ ತುಳುಕುತ್ತಿವೆ. 'ಪ್ರರೋದನ' ಎಂದರೆ ಬಹಳವಾಗಿ ದುಃಖಿಸುವುದು. ಮಹಾಕವಿ, ಮಹಾವಿದ್ವಾಂಸ, ಮಹೋಪಕಾರಿ ಎನ್ನಿಸಿಕೊಂಡಿದ್ದ ಒಬ್ಬಾತನನ್ನು ಕುರಿತು ಒಬ್ಬ ಮಹಾಕವಿ ಬರೆದ ಈ ಕವಿತೆ ಮಲಯಾಳ ಭಾಷೆಯ ಅರ್ಥವತ್ತಾದ ಶೋಕಗೀತೆಗಳಲ್ಲಿ ಒಂದಾಗಿದೆ. ರಾಜರಾಜವರ್ಮನ ಸಾವು ಕುಮಾರನ್ ಆಶನ್ನಿಗೆ ಅಸಹನೀಯವಾಗಿತ್ತು; ಏಕೆಂದರೆ, ಆತನ ಆಶೋತ್ತರಗಳನ್ನೂ ತಾತ್ತ್ವಿಕ ನಿಲುವನ್ನೂ ರಾಜರಾಜವರ್ಮನಷ್ಟು ಚೆನ್ನಾಗಿ ಬೇರೆ ಯಾರೂ ಅರ್ಥಮಾಡಿಕೊಂಡಿರಲಿಲ್ಲ. ಕುಮಾರನ್ ಆಶನ್ ತನ್ನ ಎದೆಯಳಲನ್ನು ತೋಡಿಕೊಳ್ಳಲು ಶೋಕಗೀತೆಯನ್ನು ರಚಿಸಿದನು.

ಆ ಮಹಾವಿದ್ವಾಂಸನಿಗೆ ಕವಿ ಸಲ್ಲಿಸಿದ ಗೌರವವು ಶೋಕಗೀತೆಯ ಮಾದರಿಯಾಗಿರುವ ಈ ಪದ್ಯಪಂಕ್ತಿಗಳಲ್ಲಿ ವ್ಯಕ್ತಪಟ್ಟಿದೆ:

**ಕ್ಷೀಣಿಸದಿರುವ ಮನೀಷೆಯನು ಮಸಿಯೊಣಗದೆ**
**ಓಡುವ ಹೊನ್ನಿನ ಪೇನವನೂ**
**ವಾಣಿಗಾಗಿಯೆ ಮೀಸಲಿಟ್ಟು ವರವಾಗಿ**
**ಬೇಡದೆ ಗಳಿಸಿದೆಯಯ್ ಸಿದ್ಧಿಗಳನು;**
**ಕಾಣಿಸಿದಯ್ ವಿವಿಧಾದ್ಭುತಗಳ ತತ್ವ ಪ್ರ–**
**ಯೋಗಗಳಲ್ಲಿ, ವೈರಿಗಳೆಲ್ಲ**
**ನಾಣ್ಚಿದರು; ಸ್ವಯಮಂಬಾ ಕೈರಳಿ ಕಳೆಗೂಡಿ**
**ಬೇಗನೀಕ್ಷಿಸಿದಳು ಮೋಕ್ಷವನು.**

ಮುಂಬರುವ ಮಲಯಾಳಂ ಲೇಖಕರ ಪರವಾಗಿ ಕುಮಾರನ್ ಆಶನ್ ಈ ಬೆಳಗುವ ನೆನಪಿನ ಕಾಣಿಕೆಯನ್ನು ನೀಡಿದ್ದಾನೆ:

**ಎಲ್ಲವನು ಪೋಗೊಟ್ಟು ತಲೆಬಾಗಿ ವಿಧಿಗೆ**
**ಚಿತೆಗೆ ಜೀವಿತವನ್ನೊಪ್ಪಿಸುತ**
**ಇಲ್ಲವಾಗುವುದದು ದೈವೇಚ್ಛೆಯಹುದು;**
**ತ್ವನ್ನಾಮ ಪುಣ್ಯಾಕ್ಷರಗಳನು**
**ನಟ್ಟು ಬೆಳಸುವೆವು, ಸಸಿಗೆ**
**ಕಣ್ಣೀರನೆರೆಯುತ**

೧೯೧೦ **ಲಘುಪಾಣಿನೀಯಂ;** ಮಹಾರಾಜರವರ ಕಾಲೇಜಿನಲ್ಲಿ ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳ ಪ್ರಾಧ್ಯಾಪಕ

೧೯೧೧ **ಸಾಹಿತ್ಯ ಸಹಾಯಂ**

೧೯೧೨ **ಮಲಯಾಳ ಶಾಕುಂತಲಂ**

೧೯೧೪ ಮಹಾರಾಜರವರ ಕಾಲೇಜಿನ 'ಆ್ಯಕ್ಟಿಂಗ್ ಪ್ರಿನ್ಸಿಪಾಲ್'; ಭಾಷಾ ಪರಿಷ್ಕರಣ ಸಮಿತಿಯ ಸದಸ್ಯ

೧೯೧೫ ಕೇರಳವರ್ಮನ ನಿಧನ

೧೯೧೬ ಮಹಾರಾಜರವರ ಕಾಲೇಜಿನ 'ಆ್ಯಕ್ಟಿಂಗ್ ಪ್ರಿನ್ಸಿಪಾಲ್'

೧೯೧೭ **ಕೇರಳ ಪಾಣಿನೀಯಂ** (ಪರಿಷ್ಕೃತ ಆವೃತ್ತಿ); ಚಾರುದತ್ತಂ

೧೯೧೮ **ಸ್ವಪ್ನವಾಸವದತ್ತಂ** (ಭಾಷಾಂತರ); ನಿಧನ

# ಎ.ಆರ್. ರಾಜರಾಜವರ್ಮ ಘಟನೆಗಳ ಕಾಲಾನುಕ್ರಮಣಿಕೆ

೧೮೬೩ ಚಣ್ಣನಾಶ್ಶೇರಿಯಲ್ಲಿ ಜನನ

೧೮೬೫ ಕಾರ್ತಿಕಪ್ಪಳ್ಳಿಗೆ ಕುಟುಂಬದ ಸ್ಥಳಾಂತರ

೧೮೭೭ ಕೇರಳವರ್ಮನಿಂದ ಬೋಧನೆಯ ಪ್ರಾರಂಭ

೧೮೮೧ ಮಹಾರಾಜರವರ ಪ್ರೌಢ ವಿದ್ಯಾಶಾಲೆಗೆ ಸೇರಿದ್ದು

೧೮೮೫ **ತುಲಾಭಾರ ಪ್ರಬಂಧಂ**

೧೮೮೮ **ದೇವೀದಂಡಕಂ, ಭಂಗವಿಲಾಸಂ**

೧೮೮೯ ಬಿ.ಎ. ಪದವಿ, (೧೮೮೦–ಮದುವೆ) **ವಿಟವಿಭಾವರಿ, ಮೇಘೋಪಲಂಭಂ**

೧೮೯೦ ಸಂಸ್ಕೃತ ಪಾಠಶಾಲೆಯಲ್ಲಿ ಉದ್ಯೋಗ ಹಿಡಿದದ್ದು

೧೮೯೧ ಸಂಸ್ಕೃತ ಎಂ.ಎ. ಪದವಿ

೧೮೯೨ **ಪಿತೃಪ್ರಲಾಪಂ**

೧೮೯೪ **ಮೇಘದೂತ (ಭಾಷಾಂತರ),** ಸಂಸ್ಕೃತ ಕಾಲೇಜಿನ ಪ್ರಿನ್ಸಿಪಲ್, **ಕುಮಾರ ಸಂಭವ** (ಭಾಷಾಂತರ)

೧೮೯೫ **ಮಲಯವಿಲಾಸಂ**

೧೮೯೬ **ಕೇರಳ ಪಾಣಿನೀಯಂ** (ಮೊದಲ ಆವೃತ್ತಿ)

೧೮೯೯ ತಿರುವನಂತಪುರದ ಮಹಾರಾಜರವರ ಕಾಲೇಜಿನಲ್ಲಿ ಪ್ರಾಚ್ಯ ಅಧ್ಯಯನ ಶಾಖೆಯ ಮೇಲ್ವಿಚಾರಕ

೧೯೦೦ **ಆಂಗ್ಲ ಸಾಮ್ರಾಜ್ಯಂ**

೧೯೦೨ **ಭಾಷಾಭೂಷಣಂ, ಶಬ್ದಶೋಧಿನಿ**

೧೯೦೫ **ನಳಚರಿತ್ರಂ** (ವ್ಯಾಖ್ಯಾನ), ವೃತ್ತಮಂಜರಿ

೧೯೦೬ **ಪ್ರಥಮ ವ್ಯಾಕರಣಂ**

೧೯೦೭ **ಮಧ್ಯಮ ವ್ಯಾಕರಣಂ**

೧೯೦೮ ಪ್ರಾಸ ವಿಷಯಕ ವಾದವಿವಾದ

೧೯೦೯ **ಮಣಿದೀಪಿಕಾ**

# ಗ್ರಂಥಸೂಚಿ

## ಮಲಯಾಳಂ


ಅನಂತನ್‌ಪಿಳ್ಳೆ, ಪಿ. — **ಕೇರಳಪಾಣಿನಿ** (೧೯೩೪)

ಭಾಗೀರಥಿ ಅಮ್ಮ ತಂಪುರಾಂ, ಎಂ. ಮತ್ತು ರಾಘವವರ್ಮ ಎಂ. — ಎ.ಆರ್. ರಾಜರಾಜವರ್ಮ (ಮೂರು ಸಂಪುಟಗಳು; ೧೯೫೩, ೧೯೬೧, ೧೯೬೩)

ಹರಿಶರ್ಮ, ಎ.ಡಿ. — **ರಂಟು ಸಾಹಿತ್ಯ ನಾಯಕನ್ಮರ್** (೧೯೩೭)

ಮುಂಡಶ್ಶೇರಿ, ಜೋಸೆಫ್ — **ರಾಜರಾಜಂಟೆ ಮಾಟ್ಟೊಲಿ**

ಪರಮೇಶ್ವರ ಅಯ್ಯರ್, ಉಳ್ಳೂರು, ಎಸ್ — ಕೇರಳ ಭಾಷಾ–ಸಾಹಿತ್ಯ ಚರಿತ್ರಂ (ಸಂಪುಟ ೫) (೧೯೫೭)


## ಇಂಗ್ಲಿಷ್


K.M. George — A Survey of Malayalam Literature (1968)

K.M. George — Western Influence on Malayalam Language and Literature (1972)

# ಯೌವನ ಸುಧೆ
## ಬಿನ್ನಹ

ನಾಲ್ಕು ವರ್ಷಗಳ ಹಿಂದೆ, ಅಮೆರಿಕಾ ದೇಶದ ಸುಪ್ರಸಿದ್ಧ ಕಥೆಗಾರನಾದ ನ್ಯಥೆನಿಯಲ್ ಹಾಥಾರ್ನ್ (ಕ್ರಿ.ಶ. ೧೮೦೪–೧೮೬೪) ಎಂಬವನ ಮೂರು ಕಥೆಗಳನ್ನು ಅನುವಾದ ಮಾಡಿ 'ಶಿಲಾಮುಖ' ಎಂಬ ಗ್ರಂಥರೂಪದಲ್ಲಿ ಪ್ರಕಟಿಸಿದೆ. ಈ ಪುಸ್ತಕದಲ್ಲಿ ಕಥೆಗಳು (ಕ್ರಮವಾಗಿ) ಅದೇ ಲೇಖಕನ Dr. Heidegger's Experiment, David Swan, . Ambitious Guest, The Threefold Destiny ಎಂಬ ನಾಲ್ಕು ಕಥೆಗಳ ಅನುವಾದ (Adaptation).

ಹಾಥಾರ್ನಿನ ಸಂಕ್ಷಿಪ್ತ ಜೀವನ ಪರಿಚಯ, ಅವನ ಕಥೆಗಳ ವೈಶಿಷ್ಟ್ಯ ಮುಂತಾದ ಕೆಲವು ಅಂಶಗಳನ್ನು ಕುರಿತು 'ಶಿಲಾಮುಖ'ದ ಮುನ್ನುಡಿಯಲ್ಲಿ ಪ್ರಸ್ತಾವಿಸಿದ್ದೇನೆ. ಅದೆಲ್ಲವನ್ನೂ ಮತ್ತೆ ಇಲ್ಲಿ ಹೇಳಬೇಕಾದ ಅವಶ್ಯಕತೆ ನನಗೆ ಕಾಣಲಿಲ್ಲ. ಆದರೆ ಈ ಒಂದು ವಾಕ್ಯವನ್ನು ಮಾತ್ರ ಎತ್ತಿಕೊಡಬಯಸುತ್ತೇನೆ: ಕಥೆಗಳ ಗುಣವಿಶೇಷಗಳೆಲ್ಲ ಮೂಲ ಕಥೆಗಳಿಗೆ ಸೇರಿದವು; ದೋಷಗಳಿದ್ದರೆ ಅವು ಅನುವಾದಕನವು.

ಈ ಗ್ರಂಥವನ್ನು ಬಹು ಬೇಗನೆ ಅಂದವಾಗಿ ಅಚ್ಚುಮಾಡಿಕೊಟ್ಟರುವುದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟಕ್ಕೆ ನನ್ನ ವಂದನೆ ಸಲ್ಲಬೇಕಾಗಿದೆ. ಈ ಭಾಗದಲ್ಲಿ ನನಗೆ ವಿಶೇಷ ಉಪಕಾರ ಮಾಡಿರುವ, ಅದರ ಸೂಪರಿಂಟೆಂಡೆಂಟರಾದ ಶ್ರೀಮಾನ್ ಬಿ. ಪುಟ್ಟಯ್ಯ, ಎಂ.ಎ. ಅವರಿಗೆ ನಾನು ವಿಶೇಷ ಕೃತಜ್ಞತೆಯುಳ್ಳವನಾಗಿದ್ದೇನೆ.

ಬೆಂಗಳೂರುನಗರ
ಜೂನ್ ೧೯೪೧

ಎಂ.ವಿ. ಸೀತಾರಾಮಯ್ಯ

೧೪೫

# ಯೌವನ ಸುಧೆ

ಮೃತ್ಯುಂಜಯ ಪಂಡಿತನು ಒಬ್ಬ ವಿಚಿತ್ರ ವ್ಯಕ್ತಿ. ಅವನು ಒಮ್ಮೆ ತನ್ನ ನಾಲ್ಕು ಜನ ಮಿತ್ರರನ್ನು ಮನೆಗೆ ಬರಹೇಳಿದ್ದನು. ಅವರಲ್ಲಿ ವಸುಪಾಲ, ಸಮರಸಿಂಹ, ವಿಜಯವರ್ಮ–ಈ ಮೂವರು ವೃದ್ಧರಲ್ಲದೆ ಇದ್ದರೂ ವೃದ್ಧಾಪ್ಯದ ಹೊಸಿಲು ಹತ್ತಿದ್ದರು; ತಲೆಗೂದಲಾಗಲೇ ಬೆಳ್ಳಗಾಗಿತ್ತು. ನಾಲ್ಕನೆಯ ವ್ಯಕ್ತಿ ಇಂದಿರೆ; ತೀರ ಅಷ್ಟು ಮುದುಕಿಯಲ್ಲದಿದ್ದರೂ ಅವಳ ಮುಖ ಸುಕ್ಕುಗಟ್ಟಿತ್ತು, ಒಮ್ಮೆ ಸೊಂಪಾಗಿದ್ದ ಅವಯವಗಳು ನಶಿಸಿಹೋಗಿದ್ದುವು, ತಲೆಗೂದಲು ಉಪ್ಪು ಮೆಣಸು ಬೆರಸಿದಂತಿತ್ತು. ಅವರೆಲ್ಲರೂ ಹುಟ್ಟಿದಂದಿನಿಂದ ದುರದೃಷ್ಟಶಾಲಿಗಳು; ಕೊರಗಿನಲ್ಲಿಯೇ ಮುಪ್ಪಾಗಿಹೋಗಿದ್ದರು. ಮುಪ್ಪಾದೆವಲ್ಲಾ ಎಂಬುದೇ ಅವರ ದೊಡ್ಡ ಕೊರಗಾಗಿತ್ತು ಈಗ. ವಸುಪಾಲನು ಹಿಂದೊಮ್ಮೆ ನಗರದಲ್ಲೆಲ್ಲ ದೊಡ್ಡ ಶ್ರೇಷ್ಠಿ ಎನಿಸಿಕೊಂಡಿದ್ದು ಲಕ್ಷಾಧೀಶ್ವರನಾಗಿದ್ದನು; ಆ ಲಕ್ಷಾಧೀಶ್ವರನು ಈಗ ಭಿಕ್ಷೇಶ್ವರನಿಗಿಂತ ಸ್ವಲ್ಪ ಮೇಲಾಗಿದ್ದನು, ಅಷ್ಟೆ! ಸಮರಸಿಂಹನು ತಾರುಣ್ಯದಿಂದಲೂ ಪಾಪಕಾರ್ಯಗಳಲ್ಲಿಯೇ ಭೋಗಿಸುತ್ತ ತನ್ನ ಆಯಸ್ಸಿನ ಅಮೂಲ್ಯಭಾಗವನ್ನು ವ್ಯರ್ಥಮಾಡಿ, ಅರ್ಥವನ್ನೆಲ್ಲ ದುರ್ವ್ಯಯಮಾಡಿ, ಆರೋಗ್ಯಭಾಗ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡು ದೇಹದ ರೋಗಗಳಿಗೂ ಮನೋರೋಗಗಳಿಗೂ ತುತ್ತಾಗಿದ್ದನು. ವಿಜಯವರ್ಮನು ರಾಜನೀತಿಯಲ್ಲಿ ನಿಪುಣನಾಗಿದ್ದನು. ಅವನು ಅನೇಕ ರಾಜಾಸ್ಥಾನಗಳ ದರ್ಶನ ಮಾಡಿದ್ದನು; ಆದರೆ ಯಾವ ರಾಜಾಸ್ಥಾನದಲ್ಲಿಯೂ ಅವನಿಗೆ ಪುರಸ್ಕಾರವಿರಲಿಲ್ಲ. ಅವನ ಶೀಲ ಸ್ವಭಾವಗಳು ಯಾರಿಗೂ ಸರಿಬೀಳದೆಯೋ ಏನೋ, ಅಂತೂ ಅವನಲ್ಲಿ ಯಾರಿಗೂ ವಿಶ್ವಾಸವಿರಲಿಲ್ಲ; ಎಲ್ಲರೂ ಅವನನ್ನು ಶಪಿಸುವವರೇ ಆಗಿದ್ದರು. ಕೊನೆಕೊನೆಗೆ ಅವನು ರಾಜನೀತಿ ವಿಷಯಗಳ ಗೊಡವೆಗೇ ಹೋಗಲಿಲ್ಲ; ಇಷ್ಟಾದರೂ ಜನರು ಅವನನ್ನು ನಿಂದಿಸುವುದು ತಪ್ಪಲಿಲ್ಲ. ಬರುಬರುತ್ತ ಅವನನ್ನು ಕೇಳುವವರೇ ಇಲ್ಲದಂತಾಗಿ ಅವನು ಅಜ್ಞಾತನಾಗಿ ಹೋದನು ಮಾಡಿಕೊಳ್ಳುವುದರಲ್ಲಿದ್ದನು. ಮದುವೆಗೆ ಕೆಲವು ಕಾಲ ಮುಂಚೆ ಅವಳ ದೇಹಸ್ಥಿತಿ ಏನೋ ಕೊಂಚ ವ್ಯತ್ಯಾಸವಾಯಿತು; ತನ್ನ ಇನಿಯನಿತ್ತ ಔಷಧವನ್ನೇ ಸೇವಿಸುತ್ತ ಬಂದಳು. ಆದರೂ ಮದುವೆಯ ಹಿಂದಿನ ದಿನ ಅವಳು ಸತ್ತುಹೋದಳು.

## ಕಥೆಗಳು

ಶೇಖರಿಸಿ ಅವುಗಳನ್ನು ಯಾವುದೋ ತೈಲದಲ್ಲಿ ಕದಡಿ 'ಇದು ಸಂಜೀವನಿ' ಎಂದೆನ್ನುವನೋ, ಹೆಚ್ಚೆಂದರೆ ಒಂದು ಚಿಟ್ಟೆಯನ್ನು ಹಿಡಿದು ಅದರ ರೆಕ್ಕೆಗಳನ್ನು ಮುರಿದು ಅದನ್ನು ಹಾರಿಬಿಡುವನೋ ಎಂದು ಅವನ ಸ್ನೇಹಿತರು ನಿರೀಕ್ಷಿಸುತ್ತಿದ್ದರು. ಏತಕ್ಕೆಂದರೆ, ಮೇಲೆ ಹೇಳಿದಂಥ 'ಪ್ರಯೋಗ'ಗಳನ್ನು ತನ್ನ ಕೋಣೆಗೆ ಬಂದ ಗೆಳೆಯರಿಗೆಲ್ಲಾ ಮಾಡಿ ಮಾಡಿ ತೋರಿಸುವುದು ಮೃತ್ಯುಂಜಯನ ಪದ್ಧತಿಯಾಗಿತ್ತು. ಇಂದೂ ಹಾಗೆಯೇ ಮಾಡುವನೆಂದು ಆ ನಾಲ್ವರು ತಿಳಿದಿದ್ದರು. ಆದರೆ ಮೃತ್ಯುಂಜಯನು ಅವರ ಸಮ್ಮತಿ ಸೂಚನೆಗಾಗಿ ಕಾಯದೆ, ಕುಳಿತಿದ್ದವನೆದ್ದು ತತ್ತರಿಸುತ್ತಾ ಹೋಗಿ, ಮಂತ್ರವಿದ್ಯೆಯ ಗ್ರಂಥವೆಂದು ಜನರಾಡಿಕೊಳ್ಳುತ್ತಿದ್ದ ಆ ಮಹಾತಾಳಪತ್ರ ಗ್ರಂಥವನ್ನು ಎರಡು ಕೈಗಳಿಂದಲೂ ಎತ್ತಿ ತಬ್ಬಿಹಿಡಿದುಕೊಂಡು ಬಂದನು. ತೆಗೆದುಕೊಂಡು ಬಂದು, ಅದನ್ನು ಒಂದು ಮಣೆಯ ಮೇಲಿರಿಸಿ, ಬೆಳ್ಳಿಯ ದಾರದ ಕಟ್ಟುಗಳನ್ನು ಬಿಚ್ಚಿ, ಗ್ರಂಥವನ್ನು ತೆರೆದು, ಪತ್ರಗಳ ಮಧ್ಯದಿಂದ ಒಂದು ಗುಲಾಬಿಯ ಹೂವನ್ನು ಹೊರದೆಗೆದನು. ಅದು ಗುಲಾಬಿಯ ಹೂವಾದರೂ ಅದನ್ನು ಹಾಗೆಂದು ಕರೆಯುವಂತಿರಲಿಲ್ಲ; ಅದರ ಕೆಂಪು ದಳಗಳೂ ಅಡಿಯ ಹಸುರು ಎಲೆಗಳೂ ಎಲ್ಲವೂ ಬಾಡಿ, ಮಾಸಿಹೋಗಿ, ಅದು ಏನೋ ಒಂದು ಬಗೆಯ ಕಂದುಬಣ್ಣವನ್ನು ತಳೆದಿದ್ದಿತು. ಪಂಡಿತನ ಹಿಡಿಯಲ್ಲಿ ಇದ್ದಕ್ಕಿದ್ದಂತೆಯೇ ಹುಡಿಹುಡಿಯಾಗಿ ಹೋಗುವುದೋ ಎನ್ನುವಷ್ಟು ಸೂಕ್ಷ್ಮಾವಸ್ಥೆಯಲ್ಲಿದ್ದಿತು ಆ ಬಾಡಿದ ಗುಲಾಬಿ ಹೂ.

ಪಂಡಿತನು ಒಮ್ಮೆ ನಿಟ್ಟುಸಿರುಬಿಟ್ಟು ಹೇಳತೊಡಗಿದನು:

"ಬಾಡಿಹೋಗಿ ಹುಡಿಹುಡಿಯಾಗಿ ಹೋಗಲಿರುವ ಆ ಗುಲಾಬಿಯ ಹೂ ಐವತ್ತು ವರ್ಷಗಳ ಹಿಂದೆ ಅರಳಿದುದು. ಅದೋ ಅಲ್ಲಿ ನೋಡಿ, ಆ ತರುಣಿಯ ಚಿತ್ರ! ಅವಳು ಅಂದು ನನಗಿತ್ತ ಹೂವಿದು. ಮಡಿದು ಹೋದ ನನ್ನ ಇನಿಯಳು ಇನ್ನು ಎದ್ದುಬರುವಳೆ? ಅಂತೆಯೇ, ನೀವು ಹೇಳಿ, ಅರ್ಧ ಶತಮಾನದ ಹಿಂದೆ ಅರಳಿ ಬಾಡಿಹೋಗಿರುವ ಈ ಪುಷ್ಪ ಮತ್ತೆ ಅರಳಿ ಘಮಘಮಿಸುವ ಸಂಭವವುಂಟೆ?"

"ಬರಿಯ ಹುಚ್ಚು! ಸುಕ್ಕುಗಟ್ಟಿದ ಮುದುಕಿಯ ಮುಖದಲ್ಲಿ ಪ್ರಾಯ ಮತ್ತೆ ಉಕ್ಕಿ ಹರಿಯುವುದುಂಟೆ, ಅವಳ ಬಾಡಿದ ಮುಖ ಮತ್ತೆ ಅರಳುವುದುಂಟೆ?" ಎಂದು ಇಂದಿರೆ ತುಟಿಯುರುಗಿಸಿಕೊಂಡು ತಲೆ ಯಲ್ಲಾಡಿಸುತ್ತ ಕೇಳಿದಳು.

"ಹಾಗಾದರೆ ನೋಡಿ!" ಎಂದು ಪಂಡಿತನು ಉತ್ತರ ಕೊಟ್ಟನು.

ಹೀಗೆ ಉತ್ತರಕೊಟ್ಟು, ಪಂಡಿತನು ಸ್ಫಟಿಕಪಾತ್ರೆಯ ಮೇಲಿದ್ದ ಮುಚ್ಚಳವನ್ನು

ಪಂಡಿತನ ಪ್ರಯೋಗಶಾಲೆಯಲ್ಲಿ ಎಲ್ಲಕ್ಕಿಂತಲೂ ವಿಚಿತ್ರವಾದ ಒಂದು ವಸ್ತುವಿನ ವಿಷಯ ಹೇಳುವುದಿದೆ; ಅದು ಒಂದು ತಾಳಪತ್ರ ಗ್ರಂಥದ ವಿಷಯ. ಅಲ್ಲಿದ್ದ ಗ್ರಂಥಗಳಲ್ಲಿ ಅದೇ ಬಲುದೊಡ್ಡದು; ಅದರ ಪ್ರಮಾಣ ಉಳಿದ ನಾಲ್ಕೈದು ಗ್ರಂಥಗಳು ಒಟ್ಟಿಗೆ ಸೇರಿದಷ್ಟು ಆಗುತ್ತಿತ್ತು. ಚಿತ್ರಗಳಿಂದ ಕೊರೆದಿದ್ದ ಬೆಳ್ಳಿಯ ದಾರ! ಅದು ಸಮಗ್ರ ಆಯುರ್ವೇದ ಶಾಸ್ತ್ರ ಪ್ರಕ್ರಿಯೆಗಳನ್ನೊಳಗೊಂಡ ಗ್ರಂಥವಾಗಿರಬೇಕು; ಇಲ್ಲದೆ ಹೋದರೆ ರಾಮಾಯಣ ಮಹಾಭಾರತಗಳಂಥ ಮಹಾಕಾವ್ಯವೊಂದರ ಪ್ರತಿ ಆಗಿರಬೇಕು. ಆದರೆ, ಅದು ಇಂದ್ರಜಾಲ ವಿದ್ಯೆಯ ಗ್ರಂಥವೆಂದು ಜನ ಆಡಿಕೊಳ್ಳುತ್ತಿದ್ದರು. ಒಮ್ಮೆ ಅದರ ಮೇಲೆ ಬಹಳ ಧೂಳು ಕವಿದಿದ್ದುದರಿಂದ ಅದನ್ನು ಒರೆಸುವುದಕ್ಕೆಂದು ಒಬ್ಬ ಸೇವಕ ಅದನ್ನು ಒಂದು ಕೊನೆಯಿಂದ ಎತ್ತಿ ಹಿಡಿದುಕೊಂಡನು. ಅಷ್ಟರಲ್ಲಿ ಅದು ಕೆಳಕ್ಕೆ ಜಾರಿಬಿದ್ದು ಅವನ ಬೆರಳುಗಳು ಜಜ್ಜಿಹೋದವು; ಚಿತ್ರದ ತರುಣಿ ಸಜೀವಳಾಗಿ ಕೆಳಗಿಳಿದು ಬಂದು ಒಂದು ಹೆಜ್ಜೆಯನ್ನಿಟ್ಟಳು; ಅನೇಕ ಭೀಕರ ಮುಖಗಳು ಕನ್ನಡಿಯಿಂದ ಹೊರಹಾಯ್ದುವು; ನಿಶ್ಚಲವಾಗಿ ನೀರವವಾಗಿ ಕುಳಿತಿದ್ದ ಧನ್ವಂತರಿ ಮೂರ್ತಿ ಹುಬ್ಬುಗಂಟು ಹಾಕಿಕೊಂಡು, ಸಿಡುಕಿನಿಂದ 'ನಿಲ್ಲು! ತಡೆ!' ಎಂದು ಹೇಳಿತು!

ಇಂಥದು ಮೃತ್ಯುಂಜಯನ ಪ್ರಯೋಗಶಾಲೆ. ಈ ಕಥೆ ನಡೆದುದು ಬೇಸಗೆಯಲ್ಲಿ ಒಂದು ದಿವಸ ಮಧ್ಯಾಹ್ನ. ಆ ದಿವಸ ಮಾತ್ರ ಕೋಣೆಯ ಮಧ್ಯದಲ್ಲಿ ಒಂದು ವರ್ತುಳಾಕಾರದ ಕರಿಯ ಮರದ ಕಾಲುಮಣೆಯಿತ್ತು; ಅದರ ಮೇಲೆ ಒಂದು ಸುಂದರವಾದ ಸ್ಫಟಿಕಪಾತ್ರೆಯಿತ್ತು. ಆ ಸ್ಫಟಿಕ ಪಾತ್ರೆ ಅತ್ಯಂತ ಸೂಕ್ಷ್ಮವಾದ ಚಿತ್ರಗೆಲಸದಿಂದ ಕಂಗೊಳಿಸುತ್ತಿತ್ತು. ಬಿಸಿಲು ಗವಾಕ್ಷದ ಜಾಲಂದರದಿಂದ ನುಸುಳಿಕೊಂಡು ಬಂದು ಈ ಪಾತ್ರೆಯ ಮೇಲೆ ಸರಿಯಾಗಿ ಬೀಳುತ್ತಿತ್ತು; ಹೀಗೆ ಒಳಹೊಕ್ಕ ಬಿಸಿಲಿನಲ್ಲಿ ಬೆಳಗುತ್ತಿದ್ದ ಸ್ಫಟಿಕಪಾತ್ರೆಯ ಸುತ್ತಲೂ ಬಳಸಿ ಕುಳಿತಿದ್ದ ಐವರ ಮುದಿ ಮುಖಗಳ ಮೇಲೂ ಒಂದು ಅಪೂರ್ವವಾದ ಪ್ರಭೆಯನ್ನು ಚೆಲ್ಲಿತ್ತು. ಸ್ಫಟಿಕಪಾತ್ರೆಯಿದ್ದ ಕಾಲುಮಣೆಯ ಮೇಲೆ ನಾಲ್ಕು ರಜತಪಾತ್ರೆಗಳು ಇದ್ದುವು.

ಮೃತ್ಯುಂಜಯ ಪಂಡಿತನು ಮತ್ತೆ ಹೀಗೆ ಹೇಳಿದನು: "ಪ್ರಿಯ ಮಿತ್ರರೇ, ಈಗ ನಾನು ಮಾಡಬೇಕೆಂದಿರುವ ಒಂದು ವಿಚಿತ್ರ ಪ್ರಯೋಗದಲ್ಲಿ ನಿಮ್ಮೆಲ್ಲರ ಸಹಾಯವನ್ನೂ ನೆಚ್ಚಿಕೊಂಡಿರಬಹುದಷ್ಟೇ?"

ಪಂಡಿತನು ಒಂದು ಪ್ರಯೋಗವನ್ನು ನಡೆಸುವನೆಂದು ಕೇಳಿದ ಕೂಡಲೆ– ಅವನು ಒಂದು ಇಲಿಯನ್ನು ಸಾಯಿಸುವನೋ, ಇಲ್ಲದಿದ್ದರೆ ಜೇಡರ ಬಲೆಗಳನ್ನೆಲ್ಲ

ಪಂಡಿತನು ಹೇಳಿದ ಕಥೆಯ ಒಂದು ಮಾತನ್ನಾದರೂ ನಂಬದೆ ಹೋದ ಸಮರಸಿಂಹನು, "ಓಹೊ! ಹಾಗಾದರೆ, ಮಾನವ ಶರೀರದ ಮೇಲೆ ಈ ಜಲದ ಪರಿಣಾಮವೇನು?" ಎಂದು ಕೇಳಿದನು. ಅದಕ್ಕೆ ಪಂಡಿತನು, "ಸಮರಸಿಂಹರೆ, ನೀವೇ ಅದನ್ನು ಸ್ವತಃ ನಿರ್ಣಯಿಸಿಕೊಳ್ಳುವಿರಿ" ಎಂದು ಉತ್ತರಕೊಟ್ಟು, ನಾಲ್ವರನ್ನೂ ಕುರಿತು ಇಂತೆಂದನು:

"ಮಿತ್ರರೇ, ನಿಮ್ಮಲ್ಲಿ ಮತ್ತೆ ಯೌವನ ಅರಳುವುದಕ್ಕೆ ಎಷ್ಟು ಬೇಕೋ ಅಷ್ಟು ಈ ಸ್ತೋತ್ರಾರ್ಹವಾದ ಜಲವನ್ನು ನೀವೆಲ್ಲರೂ ಸ್ವೀಕರಿಸಬಹುದು. ನಾನೇನೋ, ಈ ಮುಪ್ಪನ್ನು ಪಡೆಯುವುದಕ್ಕೆ ಬಹಳ ತೊಂದರೆ ಬಿದ್ದಿದ್ದೇನೆ; ಪುನಃ ಚಿಕ್ಕವನಾಗಲು ನನಗಷ್ಟು ಆತುರವಿಲ್ಲ. ಆದ್ದರಿಂದ, ನೀವೆಲ್ಲರೂ ನನ್ನ ಆಹ್ವಾನವನ್ನು ಮನ್ನಿಸಿ, ಪ್ರಯೋಗವನ್ನು ನಡೆಸುವುದಕ್ಕೆ ನನಗೆ ಅನುಮತಿಯನ್ನೀಯಬೇಕು. ಪ್ರಯೋಗ ಸಫಲವಾದರೆ ಅಷ್ಟರಿಂದಲೇ ನಾನು ತೃಪ್ತನಾಗುವೆನು; ನಿಮ್ಮೆಲ್ಲರ ಸಹಾಯವೂ ಸಾರ್ಥಕವಾಗುವುದು."

ಮಾತನಾಡುತ್ತಿದ್ದಂತೆಯೇ ಮೃತ್ಯುಂಜಯ ಪಂಡಿತನು ಅಲ್ಲಿದ್ದ ನಾಲ್ಕು ಬೆಳ್ಳಿಯ ಪಾತ್ರೆಗಳಿಗೂ 'ಯೌವನ ಸುಧೆ'ಯನ್ನು ತುಂಬಿದನು. ಅದು ಪಾತ್ರೆಗಳಿಗೆ ಬಿದ್ದೊಡನೆಯೇ ಅದರಲ್ಲಿ ಬಸುಬುಸು ಎಂದು ನೊರೆಯುಕ್ಕಿತು; ಕೋಣೆಯಲ್ಲೆಲ್ಲಾ ಒಂದು ವಿಧವಾದ ಸುವಾಸನೆ ಹರಡಿತು. 'ಯೌವನ ಸುಧೆ' ಕುಡಿಯುವುದಕ್ಕೆ ಬಹಳ ರುಚಿರುಚಿಯಾಗಿರಬೇಕೆಂದು ಅಲ್ಲಿದ್ದ ಮುದುಕರಿಗೆ ತೋರಿತು; ಅದು ತಮ್ಮನ್ನು ಮತ್ತೆ ತರುಣರನ್ನಾಗಿ ಮಾಡಬಲ್ಲದೆಂಬುದನ್ನು ನಂಬದಿದ್ದರೂ ಅದನ್ನು ತತ್‌ಕ್ಷಣವೇ ಹೀರುವುದಕ್ಕೇನೊ ಅವರು ಆಸೆಪಟ್ಟರು. ಆದರೆ, ಮೃತ್ಯುಂಜಯ ಪಂಡಿತನು ಒಂದು ಕ್ಷಣ ತಡೆಯುವಂತೆ ಅವರಿಗೆ ಹೇಳಿ, ಮಾತನ್ನು ಮುಂದುವರಿಸಿದನು:

"ಆದರೆ ಒಂದು ಮಾತು ಹೇಳುತ್ತೇನೆ. ನೀವು ವೃದ್ಧರು, ಬಾಳಿ ಬದುಕಿದವರು; ನಿಮಗೆ ಒಂದು ಜೀವಮಾನದ ಅನುಭವವಿದೆ. ಕಷ್ಟ ಪರಂಪರೆಗೊಳಗಾದ ಯೌವನದ ಹಾದಿಯನ್ನು ನೀವು ಮತ್ತೊಮ್ಮೆ ಈಗ ನಡೆಯಬೇಕಾಗಿದೆ. ನೀವಿದನ್ನು ಕುಡಿಯುವ ಮೊದಲು, ನಿಮ್ಮ ಹಿಂದಿನ ಅನುಭವದ ಸಹಾಯದಿಂದ ನಿಮಗೆ ದಾರಿತೋರುವ ಕೆಲವು ಸಾಮಾನ್ಯ ನಿಯಮಗಳನ್ನು ರಚಿಸಿಕೊಳ್ಳುವುದು ಒಳ್ಳೆಯದು. ನಿಮಗೆ ಇಷ್ಟೆಲ್ಲ ಸಹಾಯ ಸೌಕರ್ಯಗಳಿದ್ದೂ ನೀವು ಈಗಿನ ಕಾಲದ ತರುಣ ತರುಣಿಯರಿಗೆ ಗುಣದಲ್ಲಿ, ಬುದ್ಧಿಯಲ್ಲಿ, ಸ್ನೇಹಸೌಹಾರ್ದಗಳಲ್ಲಿ ಆದರ್ಶವಂತರಾಗದಿದ್ದರೆ ನೀವು ಎಂಥ ಪಾಪಕಾರ್ಯವನ್ನು ಮಾಡಿದಂತಾಗುತ್ತದೆ,

ತೆರೆದು ಅದರಲ್ಲಿದ್ದ ನೀರಿನೊಳಕ್ಕೆ ಆ ಬಾಡಿದ ಗುಲಾಬಿಯ ಹೂವನ್ನೆಸೆದನು. ಮೊದಲು ಹೂ ನೀರಿನ ಮೇಲೆಯೆ ತೇಲದಂತೆ ತೇಲುತ್ತಿತ್ತು. ಸ್ವಲ್ಪವಾದರೂ ಅದರಲ್ಲಿ ನೆನೆದಂತೆ ಕಾಣಲಿಲ್ಲ. ಆದರೆ ಶೀಘ್ರದಲ್ಲಿಯೇ, ಒಂದು ಅಪೂರ್ವವಾದ ವ್ಯತ್ಯಾಸ ಗೋಚರವಾಯಿತು. ಮರಣಸಮನಾದ ದೀರ್ಘನಿದ್ರೆಯಿಂದ ಆಗತಾನೆ ಎದ್ದುವೋ ಎಂಬಂತೆ, ಬಾಡಿಹೋಗಿ ಮುದುಡಿಹೋದ ದಳಗಳು ಸ್ವಲ್ಪ ಸ್ವಲ್ಪ ಚಲಿಸಿದುವು; ಒಡನೆಯೆ ಹೆಚ್ಚುಹೆಚ್ಚು ಕೆಂಪು ಬಣ್ಣವನ್ನು ತಳೆಯುತ್ತ ಬಂದುವು; ಹೂವಿನ ತೊಟ್ಟು ಎಲೆಗಳು ಕೂಡ ಹಸುರಾದುವು; ಅರ್ಧ ಶತಮಾನದ ಹಿಂದೆ ಆ ತರುಣಿ ತನ್ನ ಇನಿಯನಿಗೆ ಇತ್ತಾಗ ಆ ಗುಲಾಬಿಯ ಹೂ ಎಷ್ಟು ಹೊಸದಾಗಿದ್ದಿತೋ ಈಗಲೂ ಅಷ್ಟೇ ಹೊಸದಾಗಿ ಕಾಣುತ್ತಿದ್ದಿತು. ಅದು ಪೂರ್ಣವಾಗಿ ಕೂಡ ಅರಳಿರಲಿಲ್ಲ; ಒಳಗೆ ಮೊಗ್ಗುಮೊಗ್ಗಾಗಿಯೇ ಇದ್ದಿತು; ಸುತ್ತ ಕೆಂಪು ದಳಗಳು ಸುರುಳಿಯಾಗಿ ಸುರುಟಿಕೊಂಡು ನಾಚಿಕೆಯಿಂದ ಅರಳದೆ ಹಿಂಜರಿದಿವೆಯೋ ಎಂಬಂತಿದ್ದುವು; ಹೂವಿನ ಎಸಳುಗಳ ನಡುವೆ ಒದ್ದೆಯಾಗಿದ್ದಿತು; ಅಲ್ಲಿ ಒಂದೆರಡು ಹಿಮಮಣಿಗಳು ಕೂಡ ಹೊಳೆಯುತ್ತಿದ್ದುವು.

ಎಷ್ಟೋ ಜನ ಮಾಂತ್ರಿಕರು ಇದಕ್ಕಿಂತ ಅದ್ಭುತವಾದ ಚಮತ್ಕಾರಗಳನ್ನು ಮಾಡುವುದನ್ನು ಮೃತ್ಯುಂಜಯನ ಗೆಳೆಯರು ನೋಡಿದ್ದರು; ಅವನ ಚಮತ್ಕಾರವನ್ನು ನೋಡಿ ಅವರು ಚಕಿತರಾಗುವುದಿರಲಿ, ಸ್ವಲ್ಪವೂ ಆಶ್ಚರ್ಯಪಡಲಿಲ್ಲ. ಅಸಡ್ಡೆಯನ್ನು ತೋರುತ್ತ–"ಚಮತ್ಕಾರ ನಿಶ್ಚಯವಾಗಿಯೂ ಬಹಳ ಚೆನ್ನಾಗಿದೆ, ನೋಡತಕ್ಕದ್ದೆ. ಅದಿರಲಿ, ಇದನ್ನು ಹೇಗೆ ಮಾಡಿದಿರಿ, ದಯವಿಟ್ಟು ತಿಳಿಸುವಿರಾ?" ಎಂದು ಗೆಳೆಯರು ಪಂಡಿತನನ್ನು ಕೇಳಿದರು.

ಇಂದಿರೆ ಕೇಳಿದಳು: "ಯವನವೀರನಿಗೆ ಅದ ಸಿಕ್ಕಿತೆ ಕೊನೆಗೆ?"

"ಇಲ್ಲ" ಎಂದು ಹೇಳಿ ಪಂಡಿತನು ಮಾತನಾಡತೊಡಗಿದನು: "ಅವನು ಅದನ್ನು ಎಲ್ಲಿ ಹುಡುಕಬೇಕೊ ಅಲ್ಲಿ ಹುಡುಕಲಿಲ್ಲ. ಪ್ರಸಿದ್ಧವಾದ 'ಯೌವನ ಸುಧೆ'ಯ ಬುಗ್ಗೆ, ನನಗೆ ತಿಳಿದಿರುವಮಟ್ಟಿಗೆ, ಹಿಮವತ್ಪರ್ವತ ಪ್ರಾಂತದಲ್ಲಿದೆ. ವೃಕ್ಷಲತಾರಾಜಿಗಳಿಂದ ಆಚ್ಛಾದಿತವಾಗಿ ಅದರ ನೆಲೆ ಕಣ್ಣಿಗೆ ಕಾಣದಂತಿದೆ; ಆ ಬುಗ್ಗೆಯ ಸುತ್ತ ಬೆಳೆದಿರುವ ವೃಕ್ಷಲತಾದಿಗಳ ಹೂಗಳು ಶತಮಾನಗಳಿಂದಲೂ ಬಾಡಿಯೇ ಇಲ್ಲ, ಎಲೆಗಳು ಹಣ್ಣಾಗಿ ಉದಿರಿಲ್ಲ. ಇದಿಷ್ಟೂ ಆ ಬುಗ್ಗೆಯ ವಿಚಿತ್ರ ಜಲದ ಮಹಿಮೆ. ಇಂಥ ವಿಷಯಗಳಲ್ಲಿ ನನಗಿರುವ ಕುತೂಹಲವನ್ನು ಅರಿತ ನನ್ನ ಪರಿಚಿತನೊಬ್ಬನು ಈ ಸ್ಫಟಿಕಪಾತ್ರೆಯಲ್ಲಿರುವ ಜಲವನ್ನು ನನಗಾಗಿ ಕಳುಹಿಕೊಟ್ಟಿದ್ದಾನೆ."

ಇಂದಿರೆ ಸೆರಗನ್ನು ಸರಿಮಾಡಿಕೊಂಡು ಮುಂದಲೆಗುರುಳನ್ನು ಕಿರುಬೆರಳಿನಿಂದ ತಿದ್ದಿಕೊಂಡಳು; ಅವಳಾಗಲೇ ತಾನೊಬ್ಬ ಗಟ್ಟಿಮುಟ್ಟಾದ ಹೆಂಗಸೆಂದು ಭಾವಿಸತೊಡಗಿದಳು.

"ಈ ಆಶ್ಚರ್ಯಕರವಾದ ನೀರನ್ನು ನಮಗೆ ಇನ್ನಷ್ಟು ಕೊಡಿ! ನಾವು ಎಷ್ಟೋ ಚಿಕ್ಕವರಾದೆವು–ಆದರೂ, ಇನ್ನೂ ಬಹಳ ವಯಸ್ಸಾದವರೆ! ಎಲ್ಲಿ, ಇನ್ನಷ್ಟು ಕೊಡಿ!" ಎಂದು ಅವರೆಲ್ಲರೂ ಹಾತೊರೆದು ಕೂಗಿದರು.

ತನ್ನ ಪ್ರಯೋಗದ ಫಲಿಸಿಕೆಯನ್ನು ಸಾವಧಾನಚಿತ್ತದಿಂದ ಪರಿಶೀಲಿಸುತ್ತ ಕುಳಿತಿದ್ದ ಮೃತ್ಯುಂಜಯ ಪಂಡಿತನು ಹೇಳಿದನು: "ತಾಳಿ! ತಾಳಿ! ಎಷ್ಟೊಂದು ಕಾಲ ಹಿಡಿಯಿತು ನೀವು ಇಷ್ಟೊಂದು ವಯಸ್ಸಾದವರಾಗಿ ಬೆಳೆಯಬೇಕಾದರೆ ! ಇನ್ನು ಅರ್ಧಘಂಟೆಯಲ್ಲಿ ನೀವು ಮತ್ತೆ ಚಿಕ್ಕವರಾಗಬಹುದು, ಅಂಥ ಶಕ್ತಿಯಿದೆ ಈ ಜಲಕ್ಕೆ. ಹೀಗಿರುವಾಗ, ಇಷ್ಟು ಆತುರವೇಕೆ? ಆದರಿದೊ, ನೀರು ಸಿದ್ಧವಾಗಿದೆ, ಧಾರಾಳವಾಗಿ ಉಪಯೋಗಿಸಬಹುದು."

ನಗರದ ಮುದುಕರನ್ನೆಲ್ಲ ಬೇಕಾದರೂ ಅವರವರ ಮೊಮ್ಮಕ್ಕಳಷ್ಟು ವಯಸ್ಸಿಗೆ ಇಳಿಸುವುದಕ್ಕೆ ಸಾಕಾಗುವಷ್ಟು 'ಯೌವನ ಸುಧೆ' ಸ್ಫಟಿಕಪಾತ್ರೆಯಲ್ಲಿ ಉಳಿದಿತ್ತು; ಪಂಡಿತನು ಬೆಳ್ಳಿಯ ಪಾತ್ರೆಗಳನ್ನು ಮತ್ತೆ ನೀರಿನಿಂದ ತುಂಬಿದನು. ಪಾತ್ರೆಗಳಲ್ಲಿ ನೊರೆ ಇನ್ನೂ ಬುಸುಬುಸು ಎನ್ನುತ್ತಿರುವಾಗಲೇ ಪಂಡಿತನ ಅತಿಥಿಗಳು ಅವುಗಳನ್ನು ಸರ್ರನೆ ತೆಗೆದುಕೊಂಡು ಒಂದೇ ಗುಟುಕಿಗೆ ನೀರನ್ನು ಹೀರಿಬಿಟ್ಟರು. ಅದೇನು ಮಾಯೆಯೊ! ನೀರಿನ್ನೂ ಗಂಟಲಿನಲ್ಲಿ ಪ್ರವಹಿಸುತ್ತಿರುವಾಗಲೇ ಅವರ ಶರೀರಾವಸ್ಥೆ ಬಹಳಮಟ್ಟಿಗೆ ಬದಲಾಯಿಸಿದಂತೆ ತೋರಿತು. ಅವರ ಕಣ್ಣುಗಳು ಪ್ರಕಾಶಗೊಂಡು ಥಳಥಳಿಸಿದುವು; ಬೆಳ್ಳಿಯಂತಿದ್ದ ಅವರ ಬಿಳಿಗೂದಲಲ್ಲಿ ಕಪ್ಪು ಛಾಯೆ ಬಲಿಯುತ್ತ ಬಂತು. ಈಗ ಅಲ್ಲಿ ಕಾಲುಮಣೆಯನ್ನು ಬಳಸಿ ಕುಳಿತಿದ್ದವರು ಮೂವರು ಮಧ್ಯವಯಸ್ಸಿನವರು–ಮುದುಕರಲ್ಲ, ತುಂಬು ಪ್ರಾಯ ಜಾರಿ ಬಹುದಿನಗಳಾಗಿಲ್ಲದೆ ತುಂಬುಮೈಯ ಹೆಂಗಸೊಬ್ಬಳು.

ಅರುಣೋದಯದ ಕೆಂಪಿನ ಮುಂದೆ ನಿಲ್ಲದೆ ಓಡುವ ಕತ್ತಲೆಯಂತೆ ಇಂದಿರೆಯ ಮುಖಮಂಡಲದಿಂದ ಮುಪ್ಪಿನ ನೆರಳು ಜಾರುತ್ತಿರುವುದನ್ನು ನೋಡಿ ಸಮರಸಿಂಹನ ಕಣ್ಣುಗಳು ಅವಳ ಮುಖದಲ್ಲಿ ಕೀಲಿಸಿಹೋದುವು. "ಇಂದಿರಾ, ನನ್ನ ಮುದ್ದು ಇಂದಿರಾ, ನೀನೆಷ್ಟು ಮನೋಹರವಾಗಿದ್ದೀ" ಎಂದು ಕೂಗಿದನವನು!

ಸಮರಸಿಂಹನು ತನ್ನನ್ನು ಯಾವಾಗ ಹೊಗಳಿದರೂ ಮನಃಪೂರ್ವಕವಾಗಿ ಹೊಗಳುತ್ತಿರಲಿಲ್ಲವೆಂದು ಇಂದಿರೆಗೆ ಮೊದಲಿನಿಂದಲೂ ಗೊತ್ತು; ಆದ್ದರಿಂದ,

ಎಷ್ಟು ನಾಚಿಗೆಗೀಡಾಗಬೇಕಾಗುತ್ತದೆ!"

ಪಂಡಿತನ ಗೆಳೆಯರು ಅವನ ಈ ಮಾತಿಗೆ ಪ್ರತಿಯಾಗಿ ಯಾವ ಮಾತನ್ನೂ ಆಡಲಿಲ್ಲ, ಕಿರುನಗೆ ನಕ್ಕರು. ತಪ್ಪು ಮಾಡಿದಮೇಲೆ, ಪಾಪವನ್ನೆಸಗಿದಮೇಲೆ, ಪಶ್ಚಾತ್ತಾಪವುಂಟಾಗುತ್ತದೆ ಎಂಬುದನ್ನು ಅರಿತವರು ಮತ್ತೆ ತಪ್ಪನ್ನೆಸಗುವರೆ? ಪಂಡಿತನಿಗೆ ಇಷ್ಟು ಮಾತ್ರ ತಿಳಿಯದೆ ಹೋಯಿತೆ? ಎಂದು ಅವರು ನಕ್ಕರು. ಪಂಡಿತನ ಮಾತುಗಳು ಅವರಿಗೆ ಹಾಸ್ಯಾಸ್ಪದವಾಗಿ ಕಂಡುವು.

ಪಂಡಿತನೂ ಮುಗುಳುನಗೆಯನ್ನು ಬೀರಿ, "ಹಾಗಾದರೆ ಕುಡಿಯಿರಿ. ನನ್ನ ಪ್ರಯೋಗಕ್ಕೆ ಎಂಥ ಅಪೂರ್ವವಾದ ಸಾಮಗ್ರಿ ದೊರಕಿದೆಯೆಂದು ನನಗೆ ಬಹಳ ಸಂತೋಷ. ಅದಕ್ಕಾಗಿ ನಾನು ನಿಮಗೆಲ್ಲರಿಗೂ ಋಣಿ. ಇನ್ನು ನೀವು ಕುಡಿಯಬಹುದು" ಎಂದು ಹೇಳಿ ಸುಮ್ಮನಾದನು.

ಕಟ್ಟಿಗೆಯಂತೆ ನಿಶ್ಚೇತನಗೊಂಡ ಕೈಗಳಿಂದ ಅವರು ಕುಡಿಯುವುದಕ್ಕೆಂದು ರಜತಪಾತ್ರೆಗಳನ್ನು ಮೇಲಕ್ಕೆತ್ತಿ ತುಟಿಗಳಿಗೆ ಸೋಕಿಸಿದರು. ಪಂಡಿತನು ಆರೋಪಿಸಿದಂಥ ವಿಶೇಷ ಗುಣಗಳು ಆ ಜಲಕ್ಕೆ ಇದ್ದ ಪಕ್ಷದಲ್ಲಿ, ಆ ಜಲದಾನಕ್ಕೆ ಇವರಿಗಿಂತ ಹೆಚ್ಚು ಅವಶ್ಯಕತೆಯುಳ್ಳ ಬೇರೆ ಸತ್ಪಾತ್ರರಿರಲಿಲ್ಲ. ಯೌವನವನ್ನಾಗಲಿ ಸುಖವನ್ನಾಗಲಿ ಎಂದಾದರೂ ಅವರು ಅನುಭವಿಸಿದ್ದರೆನ್ನುವುದಕ್ಕೆ ಅವರ ಮುಖದಲ್ಲಿ ಏನೊಂದು ಕುರುಹೂ ಇದ್ದಂತೆ ಕಾಣಲಿಲ್ಲ; ಮುಂದೆ ಯೌವನ ಬರುವುದೆಂಬ ದೂರದ ಆಸೆಯಿಂದಲಾದರೂ ಹುರಿದುಂಬಿ ಹೊರಹೊಮ್ಮುವಷ್ಟು ಚೈತನ್ಯ ಕೂಡ ಅವರ ಆತ್ಮದಲ್ಲಿಯಾಗಲಿ ಅವರ ದೇಹದಲ್ಲಿಯಾಗಲಿ ಇರಲಿಲ್ಲ; ಅಷ್ಟೊಂದು ಮುದಿಯಾಗಿ, ಜೀವರಸರಹಿತರಾಗಿ, ಕುಗ್ಗಿದವರಾಗಿ, ಪ್ರಕೃತಿಯ ವೃದ್ಧಾಪ್ಯದ ಕೂಸಿನಂತಿದ್ದರು ಈ ಬಡ ಪ್ರಾಣಿಗಳು! ಇವರಿಗಿಂತ ಸತ್ಪಾತ್ರರು ಬೇಕಾಗಿದ್ದಿತೆ!..... ಇವರು ನೀರನ್ನು ಒಂದೇ ಸಲಕ್ಕೆ ಹೀರಿಬಿಟ್ಟು, ಬರಿಯ ಪಾತ್ರೆಗಳನ್ನು ಕಾಲುಮಣೆಯ ಮೇಲೆ ಇರಿಸಿದರು.

ತತ್‌ಕ್ಷಣ ಆ ಮಿತ್ರವರ್ಗದ ಸ್ವರೂಪ ನಿಶ್ಚಯವಾಗಿಯೂ ಉತ್ತಮಗೊಂಡಿತು. ಹೊಂಬಿಸಿಲು ಅವರ ಮುಖವನ್ನು ಬೆಳಗುತ್ತಿದೆಯೋ ಎಂಬಂತೆ ಒಂದು ನವೋಲ್ಲಾಸಪ್ರಭೆ ಅವರ ಮುಖಮಂಡಲಗಳನ್ನು ಬೆಳಗತೊಡಗಿತು. ಇದುವರೆಗೂ ಸುಕ್ಕುಗಟ್ಟಿ ಬತ್ತಿದ್ದ ಅವರ ಕಪೋಲಗಳಲ್ಲಿ ಒಂದು ಹೊಸ ಜೀವಕಳೆ ತುಂಬಿ ಹರಿಯಿತು. ಅವರು ಒಬ್ಬರನ್ನೊಬ್ಬರು ನೋಡಿ, ಕಾಲಪುರುಷನು ತಮ್ಮ ಹಣೆಯ ಮೇಲೆ ಊರಿಕೆತ್ತುತ್ತಿದ್ದ ಭೀಕರ ಶಾಸನಗಳನ್ನು ಯಾವುದೋ ಒಂದು ಅದೃಶ್ಯ ಮಂತ್ರ ಶಕ್ತಿ ನಿಜವಾಗಿಯೂ ಅಳಿಸತೊಡಗಿದೆಯೆಂದು ಭಾವಿಸತೊಡಗಿದರು.

ಬಿಚ್ಚಿಕೊಂಡು ಇಳಿಯಬಿದ್ದ ಕೂದಲನ್ನು ಕನ್ನಡಿಯಲ್ಲಿ ನೋಡಿಕೊಂಡಳು. ಹೀಗೆ ಸ್ವಲ್ಪ ಹೊತ್ತು ಕನ್ನಡಿಯ ಮುಂದೆ ನಿಂತು ನಲಿದಾಡಿ ತತ್‌ಕ್ಷಣ ಹಿಂದಿರುಗಿ, ಸೊಂಟದ ಮೇಲೆ ಕೈಯಿಟ್ಟುಕೊಂಡು, ಕೋಣೆಯ ಮಧ್ಯದಲ್ಲಿ ಕುಳಿತಿದ್ದ ಪಂಡಿತನ ಬಳಿಗೆ ಬಿಂಕದಿಂದ ನಡೆದುಬಂದಳು.

"ಪಂಡಿತರೆ, ದಯವಿಟ್ಟು ಇನ್ನೊಂದು ಬಟ್ಟಲು ನೀರು ಕೊಡುವಿರಾ!" ಎಂದು ಮಧುರಕಂಠದಿಂದ ಕೇಳಿದಳು ಇಂದಿರೆ.

"ಅದಕ್ಕೇನು, ಅಗತ್ಯವಾಗಿ ಆಗಬಹುದು. ನೋಡು! ನಾನಾಗಲೇ ಪಾತ್ರೆಗಳಲ್ಲಿ ನೀರು ತುಂಬಿದ್ದೇನೆ" ಎಂದು ಉದಾರಿಯಾದ ಪಂಡಿತನು ಉತ್ತರ ಕೊಟ್ಟನು.

ಅವನು ಹೇಳಿದಂತೆ ಆಗಲೇ ನಾಲ್ಕು ಪಾತ್ರೆಗಳ ತುಂಬ ಆ ವಿಚಿತ್ರ ಸಲಿಲ ಸಿದ್ಧವಾಗಿದ್ದಿತು; ಅದು ಆಗತಾನೆ ನೊರೆಯಾಡುತ್ತಿದ್ದು, ನೊರೆಯ ಗುಳ್ಳೆಗಳು ವಜ್ರದಂತೆ ಹೊಳೆಹೊಳೆಯುತ್ತಿದ್ದುವು. ಆಗ ಸಂಜೆ ಸಮೀಪಿಸುತ್ತಿತ್ತು. ಕೋಣೆ ಮೊದಲಿಗಿಂತ ಮಬ್ಬಾಗುತ್ತ ಬಂದಿತ್ತು; ಆದರೆ, ತಿಳಿಬೆಳದಿಂಗಳಿಗೆ ಸಮನಾದ ನಸುಬೆಳಕೊಂದು ಸ್ಫಟಕಪಾತ್ರೆಯಿಂದ ಹೊಳೆದು, ನಾಲ್ವರು ಮಿತ್ರರ ಮೇಲೂ ನೆಲಸಿ, ನಡುವೆ ಇದ್ದ ಪಂಡಿತನನ್ನು ಬೆಳಗುತ್ತಿತ್ತು. ಅಲ್ಲಿ ಅಂತು ನೆರೆದಿದ್ದ ಮಿತ್ರವರ್ಗವು ಕಾಲಪುರುಷನ ಶಕ್ತಿಯನ್ನು ಸ್ವಲ್ಪಮಟ್ಟಿಗೆ ಪ್ರತಿಭಟಿಸಿದ್ದಿತು; ಅಂಥ ಕಾಲಮಹಾರಾಯನಿಗೆ ಒಪ್ಪುವಂಥ ಗಂಭೀರಮುದ್ರೆಯನ್ನು ಧರಿಸಿ ಮೃತ್ಯುಂಜಯ ಪಂಡಿತನು ಕುಳಿತಿದ್ದನು. ಅವರು ಮೂರನೆಯ ಸಲ 'ಯೌವನ ಸುಧೆ'ಯನ್ನು ಕುಡಿಯುವಾಗಲೂ ಪಂಡಿತನ ನಿಗೂಢವಾದ ಮುಖಭಾವವನ್ನು ಕಂಡು ಚಕಿತರಾದರು.

ಆದರೆ, ಮರುಕ್ಷಣದಲ್ಲಿಯೇ ನವಯೌವನ ಪ್ರಾಪ್ತವಾದ ಹೊಸ ಹುಮ್ಮಸ್ಸು ಅವರ ನಾಳ ನಾಳದಲ್ಲಿಯೂ ಹರಿಯತೊಡಗಿತು. ದುಃಖ, ಚಿಂತೆ, ರೋಗ ಮುಂತಾದವುಗಳಿಂದ ದೂಷಿತವಾದ ಅನಿಷ್ಟವಾದ ವಯಸ್ಸು–ಅದರಲ್ಲಿಯೂ ಮುಪ್ಪು – ಅವರಿಗೆ ಕನಸಿನಂತೆ ತೋರಿತು; ಈಗವರು ಆ ಕನಸೊಡೆದು ಯೌವನದ ಅರುಣೋದಯವನ್ನು ಕಂಡಿದ್ದರು. ವಯಸ್ಸಾಗುತ್ತ ಆಗುತ್ತ ಆತ್ಮದ ಹೊಸ ಹೊಳಪು ಕಡಮೆಯಾಗುತ್ತ ಬರುತ್ತದೆ; ಆ ಹೊಳಪು ಕಡಮೆಯಾದಂತೆ ಅದರ ಕಣ್ಣಿಗೆ ಪ್ರಪಂಚವೆಲ್ಲವೂ ಮಾಸಿದ ಚಿತ್ರಮಾಲೆಯಂತೆ ಕಾಣುತ್ತದೆ; ಬಹಳ ಮುಂಚೆಯೇ ಮಾಯವಾಗಿದ್ದ ಆ ಹೊಳಪು ಅವರ ಆತ್ಮದಲ್ಲಿ ಮತ್ತೆ ಬಂದು ನೆಲಸಿ ಇಳೆಯೆಲ್ಲವೂ ನೂತನವಾಗಿ, ಒಂದು ಹೊಸ ಬೆಳಕಿನಲ್ಲಿ ಹೊಸ ಚಿತ್ರದಂತೆ ಅವರಿಗೆ ಕಂಡಿತು. ತಾವು ನೂತನ ಸೃಷ್ಟಿಯೊಂದರಲ್ಲಿ ಸುಳಿದಾಡುವ ನೂತನ

ಅವನ ನುಡಿಗಳನ್ನು ಒರೆಹಚ್ಚಿ ನೋಡುವುದಕ್ಕಾಗಿಯೋ ಎಂಬಂತೆ ಎದ್ದು ಕನ್ನಡಿಯ ಕಡೆ ನೋಡಿದಳು; ಕನ್ನಡಿಯಲ್ಲಿ ನೋಡಿಕೊಂಡಾಗ ಒಬ್ಬ ಮುದುಕಿಯ ವಿಕಾರಸ್ವರೂಪ ತನ್ನ ಕಣ್ಣಿಗೆ ಬೀಳುವುದೆಂದು ಶಂಕಿಸುತ್ತಲೇ ಅದರ ಬಳಿಗೆ ಹೋದಳು. ಇತ್ತಕಡೆ, ಉಳಿದ ಮೂವರು ವರ್ತಿಸುತ್ತಿದ್ದ ರೀತಿಯನ್ನು ನೋಡಿದರೆ, ಅವರು ಆಗತಾನೆ ಕುಡಿದಿದ್ದ 'ಯೌವನ ಸುಧೆ' ಯಾವ ಮಧುವಿಗೂ ಕಡಮೆಯಿರಲಿಲ್ಲವೆನ್ನಿಸಿತ್ತು; ಇಲ್ಲದೆ ಹೋದರೆ ಅಪಾರ ವಯೋಭಾರವು ಅವರ ತಲೆಯ ಮೇಲಿಂದ ತತ್‌ಕ್ಷಣ ಕಳಚಿ ಬಿದ್ದು ಹೋದದ್ದರಿಂದ ಅವರ ದೇಹ ಅತ್ಯಂತ ಹಗುರವಾಗಿ ಅವರ ಚೇತನಸರ್ವಸ್ವವೂ ವಿಶೃಂಖಲವಾದಂತಾಗಿ ಹಾರಾಡಲು ಹವಣಿಸುತ್ತಿದ್ದಿತೆಂದುಕೊಳ್ಳಬೇಕು. ವಿಜಯವರ್ಮನ ಮನಸ್ಸು ಆಗಲೇ ರಾಜನೀತಿಗೆ ಸಂಬಂಧಿಸಿದ ವಿಷಯಗಳಲ್ಲಿ ಹರಿಯತೊಡಗಿತು. ದೇಶ ಸೇವೆ, ರಾಜಭಕ್ತಿ, ಸ್ವದೇಶಾಭಿಮಾನ ಮುಂತಾದವುಗಳ ವಿಷಯವಾಗಿ ತನಗೆ ತಾನೇ ಮೆಲ್ಲನೆ ಮಾತನಾಡಿಕೊಳ್ಳತೊಡಗಿದನು; ಒಡನೆಯೇ, ಯಾವನೋ ಮಹಾರಾಜನೆದುರು ನಿಂತು ಮಾತಾನಾಡುತ್ತಿರುವನೋ ಎಂಬಂತೆ ಕೈಕಟ್ಟಿಕೊಂಡು, ತಲೆಬಾಗಿ, ನಿಧಾನವಾಗಿ, ಗಂಭೀರವಾಗಿ ಉಸಿರತೊಡಗಿದನು. ಸಮರಸಿಂಹನು ಒಮ್ಮೆ ಇಂದಿರೆಯನ್ನು ನೋಡುತ್ತ, ಮತ್ತೊಮ್ಮೆ ತನ್ನ ಮೈಕೈಗಳನ್ನು ತಾನೇ ನೋಡಿಕೊಂಡು ಹಿಗ್ಗುತ್ತ, ಯಾವುದೋ ರಣಗೀತೆಯೊಂದನ್ನು ಹಾಡಿಕೊಂಡು ಕುಣಿದಾಡಲು ಮೊದಲುಮಾಡಿದನು. ಇತ್ತ ವಸುಪಾಲನು ಮಾತ್ರ ಮೌನವಾಗಿ ತಲೆ ಬಗ್ಗಿಸಿಕೊಂಡು ಕುಳಿತೆಡೆಯಲ್ಲಿ ಕುಳಿತಿದ್ದನು; ಯಾವ ಯಾವ ಸರಕುಗಳನ್ನು ಎಲ್ಲೆಲ್ಲಿಗೆ ಕಳುಹುವುದು, ವಿದೇಶಗಳೊಡನೆ ಮತ್ತೆ ವ್ಯಾಪಾರವನ್ನು ಕೈಗೊಳ್ಳುವುದೆ ಬಿಡುವುದೆ, ಅದಕ್ಕಾಗಿ ಎಷ್ಟು ಹಡಗುಗಳನ್ನು ಕಟ್ಟಿಸಬೇಕು–ಎಂದು 'ಗಾಳಿಗೋಪುರ'ಗಳನ್ನು ಕಟ್ಟಿತೊಡಗಿದನು; ಆದರೆ ಏನು ಮಾಡುವುದಕ್ಕೂ ಬರಿಗೈಯಾಗಿದ್ದುದರಿಂದ ತಲೆ ಕೆರೆಯುತ್ತ ನಿಟ್ಟುಸಿರು ಬಿಡುತ್ತಿದ್ದನು.

ಇಂದಿರೆ ಕನ್ನಡಿಯ ಮುಂದೆ ನಿಂತು, ಪ್ರಪಂಚದಲ್ಲಿ ಎಲ್ಲ ವಸ್ತುಗಳಿಗಿಂತಲೂ ತನಗೆ ಪ್ರಿಯತಮೆಯಾದ ತನ್ನ ಗೆಳತಿಯೊಬ್ಬಳನ್ನು ಮಾತನಾಡಿಸುತ್ತಿರುವಳೋ ಎಂಬಂತೆ ತನ್ನ ಪ್ರತಿಬಿಂಬದೊಡನೆ ತಾನೇ ಮಾತನಾಡಿದಳು, ಸರಸವಾಡಿದಳು; ಪ್ರತಿಬಿಂಬಕ್ಕೆ ಒಮ್ಮೆ ತಲೆಬಾಗಿ ವಂದಿಸಿದಳು, ಒಮ್ಮೆ ಅದನ್ನು ನಕ್ಕು ಅಣಕಿಸಿದಳು. ಹಳೆಯ ಮುಖದ ಸುಕ್ಕು ಯಾವುದಾದರೂ ಉಳಿದಿದೆಯೋ ಇಲ್ಲವೋ ಎಂದು ಪರೀಕ್ಷಿಸಿ ನೋಡಲು ಒಂದು ಸಲ ಕನ್ನಡಿಗೆ ಸೋಂಕುವಂತೆ ಮುಖ ಚಾಚಿದಳು. ತಲೆಗೂದಲ ಬಿಳುಪು ಮಾಯವಾಗಿದೆಯೋ ಇಲ್ಲವೋ ಎಂದು ತುರುಬು

ಹಿಂದಕ್ಕೇ ಆಗಿಹೋಯಿತು. ಹೊಸ ಪ್ರಾಯದ ಈ ಹೊಸ ಯುವಕರು ಮೂವರಿರುವಾಗ ನಿನಗೇನು ಚಿಂತೆ? ಯಾರಾದರೂ ಒಬ್ಬನನ್ನು ಕರೆದರೆ ಹಿಗ್ಗುತ್ತ ಬಂದಾರು ನಿನ್ನೊಡನೆ ಕ್ರೀಡಿಸುವುದಕ್ಕೆ" ಎಂದು ಪಂಡಿತನು ಶಾಂತಚಿತ್ತದಿಂದ ಉತ್ತರ ಕೊಟ್ಟನು.

"ಬಾ ಇಂದಿರೆ, ಬಾ ನನ್ನ ಮುದ್ದುಗಿಣಿ! ನಾನಿರುವಾಗ ನಿನಗೆ ಚಿಂತೆಯೆ? ನನ್ನೊಡನೆ ಕುಣಿದಾಡು, ಬಾ! ಇಬ್ಬರೂ ಕೂಡಿ ಸುಖವಾಗಿ ಬಾಳೋಣ ಬಾ!" ಎಂದು ಕೂಗಿದನು ಸಮರಸಿಂಹ.

"ಆಗದು, ಆಗದು; ಅವಳಿಗೆ ತಕ್ಕವನು ನಾನೇ!" ಎಂದು ವಿಜಯವರ್ಮನು ಆರ್ಭಟಿಸಿದನು.

"ಐವತ್ತು ವರ್ಷಗಳ ಹಿಂದೆ ನನ್ನ ಕೈಹಿಡಿಯುವುದಾಗಿ ಮಾತು ಕೊಟ್ಟಿದ್ದಳಲ್ಲ ಇವಳು!" ಎಂದು ವಸುಪಾಲನು ಕಂಠವೆತ್ತಿದನು.

ಅವರೆಲ್ಲರೂ ಅವಳನ್ನು ಬಳಸಿ ನಿಂತರು. ಒಬ್ಬನು ಅವಳ ಎರಡು ಕೈಗಳನ್ನೂ ಬಲವಾಗಿ ಅದುಮಿ ಹಿಡಿದುಕೊಂಡನು, ಇನ್ನೊಬ್ಬನು ಅವಳ ಸೊಂಟ ಹಿಡಿದು ತಬ್ಬಿಕೊಂಡನು, ಮತ್ತೊಬ್ಬನು ಮತ್ತೊಂದು ಪಕ್ಕದಲ್ಲಿ ಅವಳ ಹೆಗಲ ಮೇಲೆ ಕೈಹಾಕಿಕೊಂಡು ನಿಂತನು. ಒಮ್ಮೆ ನಾಚಿಕೆಯನ್ನು ನಟಿಸುತ್ತ, ಒಮ್ಮೆ ದಿಕ್ಕುತೋಚದವಳಂತೆ ಬಾಯಿಬಿಡುತ್ತ, ಒಮ್ಮೆ ಇವರ ಬಂಧನದಿಂದ ಬಿಡಿಸಿಕೊಳ್ಳುವುದಕ್ಕೆಂದು ಮೈತಿರುವುತ್ತ, ಒಮ್ಮೆ ಹರಿಣಿಯಂತೆ ಬೆದರಿ ಕಣ್ಣರಳಿಸುತ್ತ, ಒಮ್ಮೆ ನಾಗರಹಾವಿನಂತೆ ಬುಸುಗುಟ್ಟುತ್ತ, ಒಮ್ಮೆ ಅವರ ಮೇಲೆ ಸಿಡಿದುಬೀಳುತ್ತ, ಒಮ್ಮೆ ಮೃದುಮಧುರವಾಗಿ ನಗುತ್ತ, ಮತ್ತೊಮ್ಮೆ ಗೊಳ್ಳೆಂದು ಗಹಗಹಿಸುತ್ತ; ಅವರನ್ನು ಬೆರಗುಮಾಡಿ, ರೇಗಿಸಿ,–ಅವರಿಗೆ ಭ್ರಮೆಹಿಡಿಸಿ, ಹುಚ್ಚು ಹಿಡಿಸಿ, ಬೆಪ್ಪು ಹಿಡಿಸಿ,–ಅವರು ತನ್ನನ್ನು ಕೈಗಳಿಂದ ಬಂಧಿಸಿದ್ದರೆ ತಾನವರನ್ನು ನೋಟಮಾತ್ರದಿಂದ ಬಂಧಿಸಿ; ಬಿಸಿಯುಸಿರು ಬಿಡುತ್ತ ಒಬ್ಬೊಬ್ಬರ ಕಾಮವನ್ನೂ ಕೆರಳಿಸಿ; ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದೂ ಅವರ ಮುಪ್ಪುರಿಗೊಂಡ ತೋಳ್ಸೆರೆಯಲ್ಲಿದ್ದಳು ನವವಿಲಾಸಿನಿಯಾದ ಆ ನವತರುಣಿ, ಇಂದಿರೆ. ಕಣ್ಮನಗಳನ್ನು ಸೂರೆಗೊಳ್ಳುವ ಸೌಂದರ್ಯಮೂರ್ತಿಯನ್ನು ಪಡೆಯುವುದಕ್ಕಾಗಿ ಯುವಕರು ಹೋರಾಡುವ ದೃಶ್ಯ ಇದಕ್ಕಿಂತ ಮನೋಹರವಾದುದು ಬೇರೆ ಇರಲಿಲ್ಲ. ಆದರೂ ಅದೇನು ವಿಚಿತ್ರ ಮಾಯೆಯೋ, ಸಂಜೆಯ ಮಬ್ಬು ಹೆಚ್ಚು ಹೆಚ್ಚಾಗಿ ಕವಿಯುತ್ತಿದ್ದುದರಿಂದಲೊ, ಇವರು ಧರಿಸಿದ್ದ ವೃದ್ಧಯೋಗ್ಯವಾದ ಉಡುಪಿನಿಂದಲೊ, ಅಲ್ಲಿದ್ದ ನಿಲುಗನ್ನಡಿಯಲ್ಲಿ ಪ್ರತಿಬಿಂಬಿತವಾದ ದೃಶ್ಯವೆ

ಶಿಶುಗಳೆಂದು ಅವರು ಭಾವಿಸಿಕೊಂಡರು.

"ನಾವು ತರುಣರಾದೆವು! ನಾವು ತರುಣರು!" ಎಂದು ಉಲ್ಲಾಸದಿಂದ ಕೂಗಿದರವರು.

ಈಗ ಯೌವನ ಅವರನ್ನು ಆವರಿಸಿತ್ತು; ಒಡನೆಯೇ ರೂಪ, ನಡೆ, ನುಡಿ ಎಲ್ಲವುಗಳಲ್ಲಿಯೂ ವಯೋನುಗುಣವಾದ ಮಾರ್ಪಾಟು ಕಣ್ಣುಚ್ಚಿ ಬಿಡುವುದರಲ್ಲಿ ಕಾಣಿಸಿಕೊಂಡಿತು. ವೃದ್ಧಾಪ್ಯದಂತೆಯೇ ಯೌವನವೂ ಅವರ ಮಧ್ಯವಯಸ್ಸಿನ ಚಿರಚಿಹ್ನೆಗಳನ್ನು ಅಳಿಸಿಬಿಟ್ಟಿದ್ದಿತು. ಅವರೀಗ ಉಲ್ಲಾಸಪೂರ್ಣ ತರುಣರು, ಪ್ರಾಯೋನ್ಮತ್ತರು; ಹೊಸ ಪ್ರಾಯ ಉಕ್ಕಿ ಹರಿಯುತ್ತಿದೆ ಅವರಲ್ಲಿ, ಉತ್ಸಾಹ ಇಮ್ಮಡಿಯಾಗಿ ಏರುತ್ತಿದೆ. ತಾವು ಹಿಂದೆ ತಲೆಬಾಗಿ ಶರಣುಹೋಗಿದ್ದ ಆ ವೃದ್ಧ ವಯೋಧರ್ಮವನ್ನು ಅಣಕಿಸುವುದರಲ್ಲಿ ಅವರ ನವೋಲ್ಲಾಸ ಮೊತ್ತಮೊದಲು ವ್ಯಕ್ತವಾಯಿತು. ತಾವು ಧರಿಸಿದ್ದ ವೃದ್ಧೋಚಿತವಾದ ಉಡುಪನ್ನು ನೋಡಿಕೊಂಡು ಕಿಲಕಿಲನೆ ನಕ್ಕರು; ಇಂದಿರೆಯಂಥ ಎಳೆವರೆಯದ ಹುಡುಗಿ ಮುದುಕಿಯರು ಉಡುವಂಥ ಮಾಸಿದ ಸೀರೆಯನ್ನು ಉಟ್ಟಿರುವುದನ್ನು ಕಂಡು ಹಾಸ್ಯಮಾಡಿದರು. ಒಬ್ಬನು ಗೂರಲು ಹಿಡಿದಿರುವ ತಾತ ನಡೆಯುವಂತೆ 'ಉಹು ಉಹುಹು' ಎಂದು ಕೆಮ್ಮುತ್ತಾ ಸೊಂಟ ಬಾಗಿಸಿ ನಡೆದನು; ಇನ್ನೊಬ್ಬನು ಬಚ್ಚುಬಾಯಿ ಮಾಡಿಕೊಂಡು ಮುದುಕನಂತೆ ಮಾತನಾಡತೊಡಗಿದನು; ಮತ್ತೊಬ್ಬನು ಕಾಲು ಮುರಿದುಕೊಂಡು ಕೈಯೂರಿ ಕುಳಿತಿದ್ದ ಮೃತ್ಯುಂಜಯ ಪಂಡಿತನನ್ನು ಅನುಕರಿಸಿದನು. ಅನಂತರ ಎಲ್ಲರೂ ಒಟ್ಟಿಗೆ ಉಲ್ಲಾಸದಿಂದ ಕೂಗಿ, ಕೋಣೆಯಲ್ಲೆಲ್ಲ ಕುಣಿದಾಡತೊಡಗಿದರು. ಇಂದಿರೆ ಮತ್ತೆ ಪಂಡಿತನ ಬಳಿಗೆ ಬಳುಕುತ್ತ ಹೋದಳು; ಅವಳ ಮುದ್ದು ಮುಖದಲ್ಲಿ ಒಂದು ಬಗೆಯ ಹುಡುಗಾಟಿಕೆ ಇಣಿಕಿ ಕಾಣುತ್ತಿತ್ತು.

ಇಂದಿರೆ ಈಗ ಏನೂ ಅರಿಯದ ಹುಡುಗಿಯಂತಿದ್ದಳು; ಆದರೆ ವೇಶ್ಯಾವೃತ್ತಿಯ ವಾಸನೆ ಹಿಂಗಿರಲಿಲ್ಲ.

"ಪಂಡಿತರೆ, ಮುದ್ದುಮುದುಕರೆ! ಏಳಿ, ಎದ್ದೇಳಿ; ನನ್ನೊಡನೆ ನಲಿದಾಡಿ, ಬನ್ನಿ; ನನ್ನೊಡನೆ ಕುಣಿದಾಡಿ, ಬನ್ನಿ!" ಎಂದು ಪಂಡಿತನನ್ನು ಕರೆದಳು. ಇದನ್ನು ಕೇಳಿ, ಇಂದಿರೆಯ ಜೊತೆಯಲ್ಲಿ ಪಂಡಿತರು ಎಷ್ಟು ಹಾಸ್ಯಾಸ್ಪದರಾಗಿ ಕಾಣುವರೆಂದು ಮೂವರು ಮಿತ್ರರೂ ಹೊಟ್ಟೆ ಬಿರಿಯುವಂತೆ ನಕ್ಕರು.

"ನನ್ನಂತಹ ಮುದುಕನೊಡನೆ ನಲಿಯುವುದೆಂದರೇನು, ಕುಣಿಯುವುದೆಂದರೇನು! ನನಗೆ ಬಹಳ ವಯಸ್ಸಾಗಿದೆ; ಜೊತೆಗೆ ರೋಗಪೀಡಿತನಾಗಿದ್ದೇನೆ; ನನ್ನ ನಲಿದಾಟ ಕುಣಿದಾಟಗಳ ಕಾಲವೆಲ್ಲ ಬಹಳ

ಅದರ ಚೂರುಗಳ ನಡುವೆ ಸಿಕ್ಕಿಹೋಗಿದ್ದ ಐವತ್ತು ವರ್ಷಗಳ ಹಿಂದಿನ ಆ ಗುಲಾಬಿಯ ಹೂವನ್ನು ಅಲ್ಲಿಂದ ಉದ್ಧರಿಸಿದನು; ಕಾದಾಡುತ್ತಿದ್ದ ನಾಲ್ವರೂ ಉರುಟಿಹೋಗಿದ್ದ ಕಾಲುಮಣೆಗಳನ್ನು ಸರಿಪಡಿಸಿಕೊಂಡು ಕುಳಿತರು; ಅವರಿಗೂ ಕೂರೋಣವೆನಿಸಿತ್ತು; ಯೌವನಸ್ಥರಾಗಿದ್ದರೂ, ಪಾಪ, ಕಾದಾಡಿ ಬಳಲಿದ್ದರು!

ಪಂಡಿತನು ಕೈಲಿ ಹಿಡಿದಿದ್ದ ಗುಲಾಬಿಯ ಹೂವನ್ನು ಇನ್ನೂ ನಸುಬೆಳಕುಗೂಡಿದ್ದ ಆಕಾಶದ ಕಡೆಗೆ ಹಿಡಿದು ನಿಟ್ಟುಸಿರು ಬಿಟ್ಟನು; ಒಡನೆಯೆ, "ಅಯ್ಯೋ ಹೋಯಿತು! ನನ್ನ ಪ್ರಿಯೆ ನನಗಿತ್ತ ಗುಲಾಬಿ ಮತ್ತೆ ಬಾಡಿಹೋಗುತ್ತಿರುವಂತೆ ಕಾಣುತ್ತದೆ!" ಎಂದು ಮರುಗಿದನು.

ಅದು ಹಾಗೆಯೇ ಆಗಿತ್ತು. ಅವರೆಲ್ಲ ಅದನ್ನು ನೋಡುತ್ತಿದ್ದ ಹಾಗೆಯೇ ಹೂ ಮುದುರಿಕೊಳ್ಳಲು ಮೊದಲಾಯಿತು. ಕೊನೆಗೆ, ಪಂಡಿತನು ಅದನ್ನು ಸ್ಫಟಿಕಪಾತ್ರೆಯ ನೀರಿಗೆ ಎಸೆಯುವ ಮೊದಲು ಹೇಗಿದ್ದಿತೋ ಹಾಗೆಯೇ ಒಣಗಿ ಅದೇ ಸೂಕ್ಷ್ಮತೆಯನ್ನೂ ಆಕಾರವನ್ನೂ ಹೊಂದಿತು. ಅದರ ಎಸಳುಗಳಿಗೆ ಹತ್ತಿಕೊಂಡಿದ್ದ ಒಂದೆರಡು ನೀರು ಹನಿಗಳನ್ನು ಪಂಡಿತನು ಒದರಿಬಿಟ್ಟನು.

ಅನಂತರ ಆ ಬಾಡಿದ ಹೂವನ್ನೆ ಮುತ್ತಿಡುವಂತೆ ತುಟಿಗಳಿಗೆ ಸೋಕಿಸಿಕೊಂಡು, "ಆಗತಾನೆ ಅರಳಿ ಹಿಮಮಣಿಗಳಿಂದ ಅಲಂಕೃತವಾಗಿದ್ದ ಇದನ್ನು ಹೇಗೆ ಪ್ರೀತಿಸುತ್ತಿದ್ದೆನೋ ಇಂದಾದರೂ ಹಾಗೆಯೆ ಪ್ರೀತಿಸುತ್ತೇನೆ" ಎಂದು ಹೇಳಿದನು. ಅವನು ಹೀಗೆ ಹೇಳುತ್ತಿರುವಾಗಲೇ ಅವನ ತಲೆಯ ಮೇಲೆ ಹಾರಿಬಂದು ಕುಳಿತಿದ್ದ ಚಿಟ್ಟೆ ಮತ್ತೆ ಕೆಳಕ್ಕೆ ಹಾರಿ, ನೆಲದ ಮೇಲೆ ಬಿದ್ದುಬಿಟ್ಟಿತು.

ಅವನ ಅತಿಥಿಗಳು ಮತ್ತೆ ನಡುಗಿದರು: ನಡುಮಾಗಿಯಲ್ಲಿ ಬೆಳಕು ಹರೆಯುವ ಮುನ್ನ ಬಟ್ಟೆಯಿಲ್ಲದೆ ಹೊರಗೆ ಹೋದರೆ ಹೇಗೆ ನಡುಗುವೆವೊ ಹಾಗೆ ನಡುಗಿದರು. ದೇಹಬಲವೂ ಆತ್ಮಬಲವೂ ತತ್‌ಕ್ಷಣ ಉಡುಗಿ ಹೋದದ್ದರಿಂದ ಅವರಿಗೆ ಒಂದು ವಿಚಿತ್ರಾನುಭವವಾಯಿತು. ಅವರು ನಡುಗುವುದರಲ್ಲಿ ಆ ಅನುಭವ ವ್ಯಕ್ತವಾಗಿರಬೇಕು. ನಡುಗುತ್ತಿದ್ದ ಹಾಗೆಯೇ ಒಬ್ಬರನ್ನೊಬ್ಬರು ದೃಷ್ಟಿಸಿ ನೋಡಿದರು; ಹಾರಿಹೋಗುತ್ತಿದ್ದ ಒಂದೊಂದು ಕ್ಷಣವೂ ಅವರ ಒಂದೊಂದು ಸೌಂದರ್ಯಕಣವನ್ನೂ ಕಸಿದುಕೊಂಡು, ಮೊದಲು ಇಲ್ಲದಿದ್ದ ಗೆರೆಬರೆಯ ಸುಕ್ಕುಗಳನ್ನೂ ಕುಳಿಗಳನ್ನೂ ಬಳುವಳಿಯಾಗಿ ಬಿಟ್ಟುಹೋಗುತ್ತಿವೆಯೆಂದು ಭಾವಿಸಿಕೊಂಡರು. ಅದೇನು ಮಾಯೆಯೋ? ಒಂದು ಜೀವಮಾನ ಕಾಲದಲ್ಲಿ ನಡೆಯಬೇಕಾದ ಅಷ್ಟೊಂದು ಬದಲಾವಣೆಗಳು ಅಷ್ಟು ಅತ್ಯಲ್ಪ ಕಾಲದಲ್ಲಿ ನಡೆದು

ಬೇರೆಯಾಗಿತ್ತಂತೆ: ಸಾಯುವುದರಲ್ಲಿದ್ದ ಮೂವರು ಮುದುಕರು ತಮ್ಮ ಭಾಗಕ್ಕೆ ಸುಂದರಿಯೆಂದು ಕಂಡ ರಕ್ತಮಾಂಸರಹಿತವಾದ ಎಲುಬಿನ ಗೂಡಿಗಾಗಿ ಹೋರಾಡುತ್ತಿದ್ದರಂತೆ!

ಆದರವರು ಚಿಕ್ಕವರಾಗಿಯೇ ಇದ್ದರು; ಅವರ ರಾಗೋದ್ರೇಕ ಅದನ್ನು ವ್ಯಕ್ತಪಡಿಸುತ್ತಿತ್ತು. ವೇಶ್ಯಾಬಾಲೆಯ ಬಿಂಕ ಬಿನ್ನಾಣಗಳಿಂದ ಅವರಿಗೆ ಹುಚ್ಚುಹಿಡಿದಂತಾಗಿತ್ತು; ಅವಳಾದರೋ ಒಬ್ಬನನ್ನೂ ಸ್ವೀಕರಿಸಿರಲಿಲ್ಲ, ಯಾರನ್ನೂ ತ್ಯಜಿಸಿರಲಿಲ್ಲ. ಅವರ ಆಸೆ ಕೆರಳುತ್ತ ಬಂತು, ಅವರ ಹುಚ್ಚು ಏರುತ್ತ ಬಂತು; ಜರೆದು ಮೇಲೆ ಬೀಳುವಂತೆ ಮೂವರೂ ಒಬ್ಬರನ್ನೊಬ್ಬರು ದುರಗುಟ್ಟಿಕೊಂಡು ನೋಡಿದರು. ತಮ್ಮಲ್ಲಿ ಯಾರೊಬ್ಬರಿಗೂ ಸಂಪೂರ್ಣವಾಗಿ ಸ್ವಾಧೀನವಾಗದಿದ್ದ ಆ ರಮಣೀ ರತ್ನವನ್ನು ಬೇಗನೆ ಸ್ವಾಧೀನಪಡಿಸಿಕೊಳ್ಳಬೇಕೆಂಬ ಉತ್ಕಟೇಚ್ಛೆ ಮೂವರಲ್ಲಿಯೂ ಸ್ಫುರಿಸಿತು; ಒಬ್ಬನಾದರೂ ಅವಳನ್ನು ತನ್ನ ಹಿಡಿತದಿಂದ ಬಿಡಲೊಲ್ಲನು. ಎಷ್ಟು ಹೊತ್ತು ಹೀಗೆ ಸುಮ್ಮನಿರುವುದು? ಒಬ್ಬನು ಮಾತ್ರ ಅವಳನ್ನು ಪಡೆಯಬಲ್ಲನು. ಸರಿ, ಒಬ್ಬನ ಕತ್ತನ್ನೊಬ್ಬ ಹಿಡಿದು, ನೂಕಿ, ತಿರುಹಿ, ಮೂವರೂ ತಮ್ಮತಮ್ಮಲ್ಲಿ ಉಗ್ರವಾಗಿ ಕಾದಾಡತೊಡಗಿದರು. ಅವರು ಹೀಗೆ ಮೈಮೇಲೆ ಪ್ರಜ್ಞೆಯಿಲ್ಲದೆ ಕಾದಾಡುವ ಭರದಲ್ಲಿ ಅಲ್ಲಿದ್ದ ಕಾಲುಮಣೆಗಳು ಮಗುಚಿಕೊಂಡುವು, ಸ್ಫಟಿಕಪಾತ್ರೆ ಕೆಳಗೆ ಬಿದ್ದು ನುಚ್ಚುನೂರಾಯಿತು. ಅಮೂಲ್ಯವಾದ ಆ 'ಯೌವನ ಸುಧೆ' ನೆಲದ ಮೇಲೆ ಮಿಂಚುತ್ತ ಪ್ರವಹಿಸಿತು; ಆ ವೇಳೆಗೆ, ಸಾಯುವುದರಲ್ಲಿದ್ದ ಒಂದು ಮುದಿ ಚಿಟ್ಟೆ ಹಾರಲಾರದೆ ನೆಲದ ಮೇಲೆ ಕುಳಿತಿತ್ತು; 'ಯೌವನ ಸುಧೆ' ಹರಿದುಬಂದು ಅದನ್ನು ಸೋಕಿತೋ ಇಲ್ಲವೋ ಅದು ಕೋಣೆಯಲ್ಲೆಲ್ಲಾ ಹಾರಾಡಿ, ಮೃತ್ಯುಂಜಯ ಪಂಡಿತನ ಬಿಳಿದಲೆಯ ಮೇಲೆ ನೆಲಸಿತು.

"ಮಿತ್ರರೆ, ಸಾಕು ಸಾಕು! ಇಂದಿರೆ, ಬಾ ಇಲ್ಲಿ, ಏನಿದು ಕಲಹ? ಈ ದುರ್ವರ್ತನೆ ಖಂಡಿತವಾಗಿಯೂ ಕೂಡದು. ನನ್ನ ಬಾಯಿಂದ ಸುಮ್ಮನೆ ಕಠಿನ ವಾಕ್ಕುಗಳನ್ನು ಹೊರಡಿಸಬೇಡ" ಎಂದು ಪಂಡಿತನು ಗಟ್ಟಿಯಾಗಿ ಹೇಳಿದನು.

ಅವರೆಲ್ಲರೂ ಇದ್ದಲ್ಲಿಯೇ ನಿಂತು ನಡುಗಿದರು; ಯೌವನ ಪ್ರಭಾವಿಹಾರಿಗಳಾದ ತಮ್ಮನ್ನು ಅಂಧಕಾರಮಯವಾದ ವಾರ್ಧಿಕ್ಯ ಕೂಪಕ್ಕೆ ಕೆಡವಲು ಕಾಲಪುರುಷನು ಮತ್ತೆ ಹಿಂದಕ್ಕೆ ಕರೆಯುತ್ತಿರುವನೋ ಎಂಬಂತೆ ಅವರಿಗೆ ತೋರಿತು. ಎತ್ತರವಾದ ಕಾಲುಮಣೆಯ ಮೇಲೆ ಕುಳಿತಿದ್ದ ಮೃತ್ಯುಂಜಯ ಪಂಡಿತನನ್ನು ಅವರೆಲ್ಲರೂ ತಿರುಗಿನೋಡಿದರು. ಸ್ಫಟಿಕಪಾತ್ರೆಯೊಡನೆಯೆ ಬಿದ್ದು,

## ೨. ಮುದ್ದುಮಲ್ಲ

ಎಷ್ಟೋ ಘಟನೆಗಳು ನಮ್ಮ ಜೀವನ ಪಥದಲ್ಲಿ ಬಹಳ ಮಟ್ಟಿಗೆ ಪ್ರಭಾವವನ್ನು ಬೀರಿ, ನಮ್ಮ ಜೀವನದಲ್ಲಿ ಅತ್ಯಂತ ಪರಿಣಾಮಕಾರಿಯಾಗಿರುತ್ತವೆ. ಅವುಗಳ ಪರಿಚಯವನ್ನು ಸ್ವಲ್ಪ ಮಾತ್ರ ನಾವು ತಂದುಕೊಳ್ಳಬಹುದು. ಪರಿಣಾಮಕಾರಿಯಾಗದ ಇನ್ನೂ ಎಷ್ಟೋ ಘಟನೆಗಳು ನಡೆಯುತ್ತವೆ. ಅವು ನಮ್ಮನ್ನು ಮುಟ್ಟಿಹೋದಂತೆ ಹೋಗುತ್ತವೆ; ನಮ್ಮ ಬಳಿ ಸುಳಿದು ಸುಳಿಯದಂತೆ ಮಾಯವಾಗುತ್ತವೆ. ಕನಸಿನ ಅರಿವಾದರೂ ಇರುತ್ತದೆ, ಅವುಗಳ ಅರಿವು ನಮಗಿರುವುದಿಲ್ಲ. ಹೀಗಲ್ಲದೆ, ನಮ್ಮ ಭವಿಷ್ಯ ನಮ್ಮ ಕರತಲಾಮಲಕವಾಗುವ ಪಕ್ಷದಲ್ಲಿ–ನಮ್ಮ ಜೀವನದಲ್ಲಿ ಮುಂದೆ ಏನೇನು ನಡೆಯುವುವು ಎಂಬ ಅಂಶಗಳ ಸಂಪೂರ್ಣವಾದ ಅರಿವು ನಮಗಾಗುವ ಪಕ್ಷದಲ್ಲಿ–ಬಾಳಿನಲ್ಲಿ ನಮ್ಮ ಮನಸ್ಸು ಒಂದು ಗಳಿಗೆ ಕಾಲವಾದರೂ ನೆಮ್ಮದಿಯಾಗಿರಬಹುದೆ? ಅತ್ಯಾಶೆಯ ಶಿಖರವನ್ನೇರಿ ನಿರಾಶೆಯ ಪ್ರಪಾತಕ್ಕೆ ಬೀಳುವೆವು; ಸುಖದ ಹೊಂಗನಸಿನಲ್ಲಿ ಮಿಂದು ದುಃಖದ ಅಂಧಕಾರಕೂಪದಲ್ಲಿ ಉರುಳುವೆವು; ಉತ್ಸಾಹದಿಂದ ಉದ್ಘೋಷಿಸಿ ಭಯದಿಂದ ಚೀರುವೆವು!

ಒಬ್ಬ ಯುವಕನ ಚರಿತೆಯ ಒಂದು ಭಾಗವನ್ನು ಉದ್ಧರಿಸಿ ಈ ಭಾವವನ್ನು ಉದಾಹರಿಸಬಹುದು.

ಯುವಕನ ಹೆಸರು ಮುದ್ದುಮಲ್ಲ. (ಅವನ ಕುಲ ಗೋತ್ರದಿಂದ ಕಥೆಗೆ ಪ್ರಯೋಜನ ಕಡಮೆ. ಅವನ ತಾಯಿ ತಂದೆಗಳ ವಿಷಯವೂ ಕಥೆಗೆ ಅವಶ್ಯಕವಲ್ಲ.) ಅವನು ಸದ್ವಂಶೀಕನೆಂದು ಹೇಳಿದರೆ ಸಾಕು. ಅವನ ಚಿಕ್ಕಪ್ಪ ಭವ್ಯನಗರವೊಂದರಲ್ಲಿ ಜವಳಿಯ ವರ್ತಕ. ಹುಡುಗನನ್ನ ತನ್ನ ಅಂಗಡಿಯಲ್ಲಿಯೆ ಇಟ್ಟುಕೊಂಡು ಅಭಿವೃದ್ಧಿಗೆ ತರಬೇಕೆಂದು ಚಿಕ್ಕಪ್ಪ ಮುದ್ದುಮಲ್ಲನನ್ನು ತನ್ನ ಬಳಿಗೆ ಬರಹೇಳಿದ್ದನು. ಚಿಕ್ಕಪ್ಪನ ಇಷ್ಟಾನುಸಾರವಾಗಿ ನಮ್ಮ ಕಥಾನಾಯಕ ತನ್ನ ಹಳ್ಳಿಯನ್ನು ಬಿಟ್ಟು ನಗರಕ್ಕೆ ಪ್ರಯಾಣಬೆಳಸಿದ್ದನು. ಹಳ್ಳಿಯ ಶಾಲೆಯಲ್ಲಿಯೆ ಅವನಿಗೆ ತಕ್ಕಮಟ್ಟಿಗೆ ವಿದ್ಯಾವ್ಯಾಸಂಗವಾಗಿತ್ತು.

ಮುದ್ದುಮಲ್ಲನ ಹಳ್ಳಿಗೂ ಮೋಟಾರು ಬಸ್ಸು ಬರುತ್ತಿದ್ದ ಮಾರ್ಗಕ್ಕೂ ಎಂಟು–ಹತ್ತು ಮೈಲಿಗಳಾಗುತ್ತಿತ್ತು; ಹಳ್ಳಿಯಿಂದ ಅಷ್ಟು ದೂರವನ್ನೂ

ಹೋದುವೆ? ಇದೇನು, ಒಂದು ಗಳಿಗೆಯ ಹಿಂದೆ ಯೌವನೋನ್ಮತ್ತರಾಗಿ ಕುಣಿದಾಡುತ್ತಿದ್ದವರು, ಈಗ ಮುಪ್ಪಿನಿಂದ ಕುಗ್ಗಿ ಹೋದವರಾಗಿ, ವೃದ್ಧ ಮಿತ್ರನಾದ ಮೃತ್ಯುಂಜಯ ಪಂಡಿತನೊಡನೆ ತಾವೂ ವೃದ್ಧರಾಗಿ ಕುಳಿತುಕೊಂಡಿದ್ದಾರೆ!

"ನಾವು ಮತ್ತೆ ಮುದುಕರಾಗಿಹೋದೆವೆ, ಅದೂ ಇಷ್ಟು ಬೇಗ?" ಎಂದು ಜೋಲುಮುಖ ಹಾಕಿಕೊಂಡು ಕುಗ್ಗಿದ ಕಂಠದಲ್ಲಿ ಅವರು ಪಂಡಿತನನ್ನು ಕೇಳಿದರು.

ನಿಜವಾಗಿಯೂ ಅವರು ಮುದುಕರಾಗಿದ್ದರು. 'ಯೌವನ ಸುಧೆ'ಗೆ ಇದ್ದ ಶಕ್ತಿಪ್ರಭಾವ ಎಷ್ಟು ಪರಿಣಾಮಕಾರಿಯಾಗಿ ಆಶ್ಚರ್ಯಕರವಾಗಿದ್ದಿತೋ ಅಷ್ಟೂ ಅಷ್ಟು ಕ್ಷಣಿಕವಾಗಿದ್ದಿತು; ಅದು ನಿರ್ಮಿಸಿದ್ದ ಸಂಮೋಹನ ಮಾಯವಾಗಿಹೋಗಿತ್ತು. ಹೌದು, ಅವರು ನಿಸ್ಸಂದೇಹವಾಗಿಯೂ ಮತ್ತೆ ಮುದುಕರಾಗಿದ್ದರು.

ಎಷ್ಟಾದರೂ ತಾನು ಹೆಂಗಸೆಂದು ಇಂದಿರೆಗೆ ಮಿಂಚಿನಂತೆ ಹೊಳೆಯಿತು. ಕೂಡಲೆ ಅವಳು ತನ್ನ ಎರಡು ಒಣಕಲು ಕೈಗಳಿಂದಲೂ ಬತ್ತಿದ ಕಪೋಲಗಳನ್ನು ಮುಟ್ಟಿಮುಟ್ಟಿ ನೋಡಿಕೊಂಡಳು. ಹೌದು, ತಾನು ಹೆಂಗಸು. ಆದರೆ ಆ ಮುದ್ದುಮೊಗವಿನ್ನೆಲ್ಲಿ? ತನ್ನ ದೇಹವಿನ್ನು ಮಣ್ಣು ಗೂಡುವುದು ಮೇಲೆಂದು ತೋರಿತವಳಿಗೆ.

"ಹೌದು, ಗೆಳೆಯರೆ, ನೀವು ಮತ್ತೆ ವಯೋವೃದ್ಧರಾಗಿದ್ದೀರಿ" ಎಂದು ಮೃತ್ಯುಂಜಯ ಪಂಡಿತನು ಹೇಳತೊಡಗಿದನು: "ಅದೋ ನೋಡಿ! 'ಯೌವನ ಸುಧೆ'ಯಷ್ಟೂ ಚೆಲ್ಲಿಹೋಗಿ ನೆಲದ ಪಾಲಾಗಿದೆ. ಹೋಗಲಿ, ನಾನದಕ್ಕಾಗಿ ಕೊರಗುವುದಿಲ್ಲ; ನನ್ನ ಮನೆಯ ಮುಂದೆಯೇ ಅದರ ಬುಗ್ಗೆ ಉಕ್ಕಿಹರಿದರೂ ನನ್ನ ತುಟಿಗಳನ್ನು ಕೂಡ ಅದಕ್ಕೆ ಸೋಕಿಸುವುದಿಲ್ಲ; ಅದು ನಿರ್ಮಿಸಿಕೊಡುವ ಯೌವನಭ್ರಮೆ ವರ್ಷಗಟ್ಟಲೆ ನಿಂತಿರುವುದಾದರೂ ನಾನು ಅದನ್ನೊಲ್ಲೆ. ನೀವು ನನಗೆ ಇಂದು ಕಲಿಸಿಕೊಟ್ಟ ಪಾಠ ಹಾಗಿದೆ!"

ಆದರೆ, ಪಂಡಿತನ ನಾಲ್ವರು ಗೆಳೆಯರು ಮಾತ್ರ ಅದೇ ಪಾಠವನ್ನು ತಾವು ಕಲಿತುಕೊಂಡಿರಲಿಲ್ಲ. ತಾವೆಲ್ಲರೂ ಕೂಡಲೆ ಹಿಮವತ್ಪರ್ವತ ಪ್ರಾಂತಕ್ಕೆ ಯಾತ್ರೆ ಬೆಳಸಬೇಕೆಂದೂ ಅಲ್ಲಿ 'ಯೌವನ ಸುಧೆ'ಯ ಬುಗ್ಗೆಯ ನೀರನ್ನು ಬೆಳಗ್ಗೆ, ಮಧ್ಯಾಹ್ನ, ರಾತ್ರಿ ಎಡೆಬಿಡದೆ ಹೀರುತ್ತಿರಬೇಕೆಂದೂ ಅವರು ನಿರ್ಧರಿಸಿದರು.

ಪಕ್ಕದಲ್ಲಿಯೇ ಹೋಗುತ್ತಿದ್ದರು. ಕೆಲವರು ಅತ್ತಇತ್ತ ತಿರುಗಿ ನೋಡದೆ ನೇರವಾಗಿ ತಮ್ಮ ದಾರಿ ನಡೆಯುತ್ತಿದ್ದರು. ಯುವಕನು ದಾರಿಯ ಪಕ್ಕದಲ್ಲಿಯೇ ಮಲಗಿರುವುದನ್ನು ಅವರು ನೋಡಲಿಲ್ಲ. ಕೆಲವರು ಒಮ್ಮೆ ಮಾತ್ರ ತಮ್ಮ ದೃಷ್ಟಿಯನ್ನು ಆ ಕಡೆಗೆ ಹರಿಸಿದರೂ ತಮ್ಮ ಆಲೋಚನಾಪ್ರಪಂಚದ ಕಾರ್ಯಭರದಲ್ಲಿ ನಿದ್ರೆ ಹೋಗುವವನನ್ನು ಗಣಿಸಲಿಲ್ಲ; ಹಾಸಿಗೆಯಿಲ್ಲದೆ ಹೊದಿಕೆಯಿಲ್ಲದೆ ನೆಲದ ಮೇಲೆ ಬಿದ್ದುಕೊಂಡು ಎಷ್ಟು ಗಾಢವಾಗಿ ನಿದ್ರಿಸುತ್ತಿರುವನೆಂದು ಕೆಲವರು ನಕ್ಕುಹೋದರು. ಸರ್ವಾಂಗ ವಿಷಭರಿತರಾದ ಹೊಟ್ಟೆಯಕಿಚ್ಚಿನ ಮೊಟ್ಟೆಗಳನೇಕರು ಮುದ್ದುಮಲ್ಲನ ಸುಖನಿದ್ರೆಯನ್ನು ಸಹಿಸಲಾರದವರಾಗಿ ತಮ್ಮ ವಿಷಾಧಿಕ್ಯವನ್ನು ಅವನ ಮೇಲೆ ಕಾರಿಹೋದರು. ಮತ್ತೊಬ್ಬ ನಡುಹರೆಯದವಳು ಅದೇ ದಾರಿಯಲ್ಲಿ ಬರುತ್ತಾ ಮುದ್ದುಮಲ್ಲನನ್ನು ನೋಡಿ, ಯುವಕನು ನಿದ್ರೆಯಲ್ಲಿ ಎಷ್ಟು ಮಹೋಹರನಾಗಿ ಕಾಣುವನೆಂದು ಮನಸ್ಸಿನಲ್ಲಿ ಕೊಂಡಾಡಿಕೊಂಡುಹೋದಳು. ಮದ್ಯಪಾನ ನಿರೋಧಚಳವಳಿಗಾರರ ಪ್ರಮುಖನೊಬ್ಬನೂ ಅದೇ ಮಾರ್ಗವಾಗಿ ಬಂದನು. ನಿದ್ರೆಯಲ್ಲಿ ಮುಳುಗಿದ್ದ ಮುದ್ದುಮಲ್ಲನನ್ನು ನೋಡಿ, ಮೈಮೇಲೆ ಪ್ರಜ್ಞೆಯಿಲ್ಲದೆ ದಾರಿಯಪಕ್ಕದಲ್ಲಿ ಬಿದ್ದಿರುವ ಹೆಂಡಕುಡುಕನೆಂದು ಬಗೆದು, ತನ್ನ ಸಂಜೆಯ ಉಪನ್ಯಾಸಕ್ಕೆ ಇವನೊಬ್ಬ ಒಳ್ಳೆಯ ಉದಾಹರಣೆ ಎಂದುಕೊಂಡು ಮುಂದೆ ನಡೆದನು. ಈ ನಾನಾ ಜನರ ನಾನಾ ರೀತಿಯ ಹೊಗಳಿಕೆ, ತೆಗಳಿಕೆ, ಹಾಸ್ಯ, ಮೆಚ್ಚು, ಅಸಡ್ಡೆ ಎಲ್ಲವೂ ಮುದ್ದುಮಲ್ಲನ ಭಾಗಕ್ಕೆ ಒಂದೇ ಆಗಿದ್ದುವು; ನಿದ್ರಾಕವಚರಕ್ಷಿತನಾದ ಮುದ್ದುಮಲ್ಲನ ಮನಸ್ಸನ್ನು ಯಾವುದೂ ನಾಟುವಂತಿರಲಿಲ್ಲ.

ಮುದ್ದುಮಲ್ಲನು ಕೊಂಚಹೊತ್ತು ಮಾತ್ರ ನಿದ್ದೆ ಹೋಗಿದ್ದನು. ಆಗ ಮಾರ್ಗದಲ್ಲಿ ಒಂದು ಕುದುರೆಯ ಗಾಡಿ ನಿಧಾನವಾಗಿ ಬರುತ್ತಿತ್ತು. ಅವನು ಮಲಗಿದ್ದ ಪ್ರದೇಶದ ಬಳಿಗೆ ಬಂದಾಗ ಇದ್ದಕ್ಕಿದ್ದ ಹಾಗೆಯೇ ಗಾಡಿಯ ಒಂದು ಕಡೆಯ ಕಡಾಣಿ ಕಳಚಿಕೊಂಡು ಚಕ್ರ ಜಾರಿ ಉರುಳಿತು; ಒಡನೆಯೆ ಗಾಡಿ ಕುಕ್ಕರಿಸಿಕೊಂಡುಬಿಟ್ಟಿತು. ಗಾಡಿಯಲ್ಲಿ ಕುಳಿತಿದ್ದ ವರ್ತಕನೂ ಅವನ ಹೆಂಡತಿಯೂ ಗಾಬರಿಗೊಂಡು ಈಚೆಗೆ ಇಳಿದರು. ಗಾಡಿಗೇನೂ ತೊಂದರೆಯಾಗಲಿಲ್ಲ. ವರ್ತಕನ ಮನಸ್ಸಿಗೆ ಸಮಾಧಾನವಾಯಿತು. ಗಾಡಿ ಹೊಡೆಯುವವನೂ ಜವಾನನೂ ಚಕ್ರವನ್ನು ಗಾಡಿಗೆ ಜೋಡಿಸುವುದಕ್ಕೆ ತೊಡಗಿದರು. ಗಾಡಿ ಸಿದ್ಧವಾಗುವವರೆಗೂ ಹೊಂಗೆಯ ಮರದ ನೆರಳಿನಲ್ಲಿ ಕೆಲಕಾಲ ಕುಳಿತು ವಿಶ್ರಮಿಸಿಕೊಳ್ಳೋಣವೆಂದು ವರ್ತಕನು ತನ್ನ ಹೆಂಡತಿಯೊಡನೆ ಅಲ್ಲಿಗೆ ನಡೆದನು. ಅವರು ಹೊಂಗೆಯ ಮರದ ಬಳಿ ಸಾರಿದಾಗ, ಕಲಕಲರವ ಸಂಗೀತವನ್ನು ಹಾಡುತ್ತಿದ್ದ ತೊರೆಯನ್ನೂ ಮರದ

ಕಾಲುದಾರಿಯಲ್ಲಿ ನಡೆಯಬೇಕಾಗಿತ್ತು. ಮುದ್ದುಮಲ್ಲನು ಬೆಳಗಾಗ ಎದ್ದು ಕಾಲುನಡಿಗೆಯಿಂದಲೇ ಪ್ರಯಾಣ ಮಾಡಿ, ಮಧ್ಯಾಹ್ನದ ಹೊತ್ತಿಗೆ ಬಸ್ಸು ಬರುವ ಮಾರ್ಗವನ್ನು ತಲುಪಿದ್ದನು. ಆಗ ಬೇಸಗೆ ಮೊದಲಾಗಿತ್ತು. ಬಿಸಿಲಿನ ತಾಪವೊಂದು ಕಡೆ, ನಡೆದ ಆಯಾಸವೊಂದು ಕಡೆ. ಬಸ್ಸಿಗಾಗಿ ಇನ್ನೂ ಬಲುಹೊತ್ತು ಕಾಯಬೇಕಾಗಿದ್ದುದರಿಂದ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವುದಕ್ಕೆ ಅವಕಾಶವಿತ್ತು. ದಾರಿಯ ಪಕ್ಕದಲ್ಲಿ ಎಲ್ಲೋ ತುಸುದೂರದಲ್ಲಿ ಅವನಿಗೆ ಅನುಕೂಲವಾಗಿ ಕಂಡುಬಂದ ಮರದ ಕೆಳಗೆ ಹೋಗಿ ಅವನು ಕುಳಿತುಕೊಂಡನು. ಅವನು ವಿಶ್ರಾಂತಿಗಾಗಿ ಆರಿಸಿದ ಆ ಪ್ರದೇಶ ಅವನಿಗಾಗಿ ನಿರ್ಮಿಸಿದಂತಿತ್ತು. ತಣ್ಣೆಳಲನ್ನು ಚೆಲ್ಲುತ್ತಿದ್ದ ಹೊಂಗೆಯ ಮರದ ಸುಖಾಶ್ರಯ; ಇನ್ನು ಯಾವ ದಾರಿಹೋಕನ ಪಾಲಿಗೂ ಇಲ್ಲದೆ ಅವನಿಗಾಗಿ ಹರಿಯುತ್ತಿರುವುದೋ ಎಂಬಂತೆ ಕಲಕಲರವದೊಡನೆ ಸಾಗುತ್ತಿದ್ದ ತಿಳಿನೀರಿನ ಸಣ್ಣ ತೊರೆ. ಅದರಲ್ಲಿ ಯಾರು ಕುಡಿದಿದ್ದರೇನು ಬಿಟ್ಟರೇನು, ಮುದ್ದುಮಲ್ಲನೇನೋ ತೊರೆಯ ತಿಳಿನೀರನ್ನು ಮನದಣಿಯ ಕುಡಿದು, ತೃಪ್ತಿಹೊಂದಿ, ಹಾಗೆಯೇ ದಡದ ಮೇಲೆ ಹೊಂಗೆಯ ಮರದಡಿಯಲ್ಲಿ ಉರುಳಿಕೊಂಡನು. ಅವನ ಬಟ್ಟೆಯ ಗಂಟು ತಲೆದಿಂಬಾಯಿತು. ಇನ್ನೇನು ಬೇಕಾಗಿತ್ತು? ಸೂರ್ಯಕಿರಣಗಳು ಅವನನ್ನು ತಾಗುತ್ತಿರಲಿಲ್ಲ. ಮೊನ್ನೆ ತಾನೆ ಮಳೆ ಮುಗಿದು ಸುತ್ತಮುತ್ತಣ ಪ್ರದೇಶವೆಲ್ಲ ನಿರ್ಮಲವಾಗಿದ್ದುದರಿಂದ ಹಾದಿಯ ಧೂಳು ಏಳುವಂತಿರಲಿಲ್ಲ; ಹಸುರು ಗರಿಕೆಯ ಹಾಸು ಯುವಕನಿಗೆ ಮೆತ್ತನೆಯ ಸುಪ್ಪತ್ತಿಗೆಗಿಂತಲೂ ಹೆಚ್ಚು ಸುಖಕರವಾಗಿತ್ತು; ಅವನಿಗದು ಪ್ರಿಯವಾಗಿಯೂ ಇದ್ದಿರಬೇಕು. ಕೆಲದಲ್ಲಿ ತೊರೆ ಹಾಡುತ್ತಾ ಮಂದವಾಗಿ ಸಾಗುತ್ತಿತ್ತು; ಮೇಲೆ ಪ್ರಶಾಂತವಾದ ನೀಲಿಯ ಆಕಾಶ; ಸ್ವಲ್ಪ ಮೇಲೆ, ನಿದ್ದೆಯ ಜೊಂಪಿನಿಂದಲೋ ಎಂಬಂತೆ ಮೆಲುಮೆಲನೆ ಒಲೆದಾಡುತ್ತಿದ್ದ ಹೊಂಗೆಯ ಮರದ ಸೆಳೆಗೊಂಬೆಗಳು. ಈ ಸನ್ನಿವೇಶದಲ್ಲಿ ಯಾರಿಗೆ ನಿದ್ದೆ ಹತ್ತುವುದಿಲ್ಲ? ಗಾಢನಿದ್ರೆ, ಬಹುಶಃ ಸಾವಿರಾರು ಕನಸಿನ ಮೊಟ್ಟೆಗಳನ್ನು ತನ್ನ ಬಸಿರಿನಲ್ಲಿ ಅಡಗಿಸಿಕೊಂಡಿದ್ದ ಗಾಢನಿದ್ರೆ, ಮುದ್ದುಮಲ್ಲನನ್ನು ಆವರಿಸಿತು. ಆದರೆ ಅವನು ಕನಸಿನಲ್ಲಿಯೂ ಕಾಣದ ಸಂಗತಿಗಳನ್ನು ಇಲ್ಲಿ ನಾವು ನಿರೂಪಿಸಬೇಕಾಗಿದೆ.

ಅವನು ಹೀಗೆ ನೆರಳಿನಲ್ಲಿ ಸುಖವಾಗಿ ನಿದ್ರಿಸುತ್ತಿದ್ದಾಗ ಇತರ ಜನರು ಎಚ್ಚರವಾಗಿದ್ದರು. ಪಾದಚಾರಿಗಳಾಗಿ ಕೆಲವರು, ಕುದುರೆಗಳ ಮೇಲೆ ಕೆಲವರು, ಗಾಡಿಯಲ್ಲಿ ಕೆಲವರು ದಾರಿಯ ಆ ಕಡೆಯಿಂದೀಕಡೆಗೆ ಈ ಕಡೆಯಿಂದಾಕಡೆಗೆ ಬಿಸಿಲಿನಲ್ಲಿ ಸಂಚರಿಸುತ್ತಿದ್ದರು. ಪ್ರಯಾಣಿರೆಲ್ಲಲರೂ ಇವನು ಮಲಗಿದ್ದ ಎಡೆಯ

ನಂಟನ ಮಗನನ್ನು ದತ್ತು ತೆಗೆದುಕೊಳ್ಳುವ ಆಸೆ ತಪ್ಪಿ ಹೋದದ್ದರಿಂದ ದೇವರೇ ನಮ್ಮನ್ನು ಇಲ್ಲಿಗೆ ಕರೆದುಕೊಂಡುಬಂದು ಈ ಹುಡುಗನನ್ನು ತೋರಿಸಿರಬೇಕು. ಸತ್ತುಹೋದ ನಮ್ಮ ಮಗು ಶಿವನ ಹಾಗೆಯೇ ಇವನು ಕಾಣುತ್ತಾನೆ ನನ್ನ ಕಣ್ಣಿಗೆ. ಇವನನ್ನು ಎಬ್ಬಿಸೋಣವೆ?"

"ಅದರಿಂದೇನು ಪ್ರಯೋಜನ? ನಿನಗೆಲ್ಲೋ ಹುಚ್ಚು. ಅವನ ಕುಲಗೋತ್ರ ಹಾಗಿರಲಿ, ಅವನ ಗುಣಲೇಶವಾದರೂ ನಮಗೆ ತಿಳಿಯದು" ಎಂದು ವರ್ತಕನು ತನ್ನ ಸಂದೇಹವನ್ನು ಸೂಚಿಸಿದನು.

ವರ್ತಕನ ಹೆಂಡತಿಗೆ ಆ ಹುಡುಗನಲ್ಲಿ ಆಸಕ್ತಿ ಮಾತ್ರ ತಪ್ಪಲಿಲ್ಲ. ಉಕ್ಕಿಬರುತ್ತಿದ್ದ ವಾತ್ಸಲ್ಯಭಾವವನ್ನು ಅದುಮಿ, ಪಿಸುಮಾತಿನಲ್ಲಿ ಅವಳು ಮತ್ತೆ ನುಡಿದಳು: "ಎಷ್ಟು ಸುಂದರವಾದ ಮುಖ! ಏನು ಮುಗ್ಧನಿದ್ರೆ!"

ನಿದ್ದೆ ಮಾಡುತ್ತಿದ್ದ ಮುದ್ದುಮಲ್ಲನಿಗೆ ಮಾತ್ರ ಈ ಪಿಸುಮಾತುಗಳಲ್ಲಿ ಕೊಂಚವಾದರೂ ಆಸಕ್ತಿಯುಂಟಾಗಲಿಲ್ಲ. ಅವುಗಳ ಅರಿವುಂಟಾಗಿದ್ದರೆ ತಾನೆ? ಅವನ ಹೃದಯಸ್ಪಂದನ ಇದ್ದಂತೆಯೇ ಇತ್ತು. ಉಸಿರೆಳೆಯುವುದು ಮೊದಲಿನಂತೆಯೇ ನೀಳವಾಗಿತ್ತು. ಮುಖದ ನೋಟದಲ್ಲಿ ಯಾವ ವ್ಯತ್ಯಾಸವೂ ಇರಲಿಲ್ಲ; ಅವರ ಪಿಸುಮಾತುಗಳು ಕೇಳಿ ಅವುಗಳಲ್ಲಿ ಅವನಿಗೆ ಆಸಕ್ತಿಯುಂಟಾಯಿತೆಂಬುದಕ್ಕೆ ಯಾವ ಕುರುಹೂ ಕಾಣಲಿಲ್ಲ. ವಿಧಿಯಾದರೋ ಅವನ ಬಳಿ ಸಾರಿ, ಅವನ ಮೇಲೆ ಬಾಗಿ, ಸುವರ್ಣ ವೃಷ್ಟಿಯನ್ನು ಕರೆಯುವುದರಲ್ಲಿತ್ತು–ಮುದುಕನಾದ ವರ್ತಕನಿಗೆ ಒಬ್ಬನೇ ಮಗನಿದ್ದನು; ಅವನು ಬಾಲ್ಯದಲ್ಲಿಯೇ ತೀರಿಹೋದನು. ವರ್ತಕನ ಅತುಳೈಶ್ವರ್ಯಕ್ಕೆ ಒಬ್ಬನಾದರೂ ಉತ್ತರಾಧಿಕಾರಿಯಿರಲಿಲ್ಲ. ತನ್ನ ದೂರದ ಸಂಬಂಧಿಯೊಬ್ಬನ ಮಗನನ್ನು ದತ್ತು ತೆಗೆದುಕೊಳ್ಳಬೇಕೆಂದು ತನ್ನ ಮನೆಗೆ ಕರೆತಂದು ಸಾಕಿಕೊಂಡಿದ್ದನು. ಆದರೆ ಅವನ ನಡತೆ ಏಕೋ ವರ್ತಕನಿಗೆ ಸರಿಬೀಳದೆ ಇದ್ದುದರಿಂದ ತನ್ನ ಮನಸ್ಸು ಬದಲಾಯಿಸಿಬಿಟ್ಟಿದ್ದನು. ಆ ಹುಡುಗನೂ ಹೇಳದೆ ಕೇಳದೆ ಎಲ್ಲಿಗೋ ಓಡಿಬಿಟ್ಟಿದ್ದನು. ಇಂಥ ಸಂದರ್ಭದಲ್ಲಿ, ಮಲಗಿ ನಿದ್ದೆಹೋಗುತ್ತಿದ್ದ ಅಪರಿಚಿತನಾದ ಬಡ ಯುವಕನನ್ನೆಬ್ಬಿಸಿ ಅವನನ್ನು ಐಶ್ವರ್ಯವಂತನನ್ನಾಗಿ ಮಾಡುವುದೆಂದರೆ–ಯಾರೂ ನಂಬಲಾಗದ ಮಾತು; ಮಂತ್ರಗಾರನ ಮಾಟಕ್ಕಿಂತಲೂ ವಿಚಿತ್ರವಾದುದು.

"ಅವನನ್ನು ಎಬ್ಬಿಸಬೇಡವೆ?" ಎಂದು ಹೆಂಡತಿ ಮತ್ತೆ ಒತ್ತಿ ಕೇಳಿದಳು.

ಇಷ್ಟು ಹೊತ್ತಿಗೆ, "ಗಾಡಿ ಸಿದ್ಧವಾಗಿದೆ ಸ್ವಾಮಿ" ಎಂದು ಸೇವಕನು ಹಿಂದುಗಡೆಯಿಂದ ಅರಿಕೆಮಾಡಿಕೊಂಡನು. ಗಂಡ ಹೆಂಡಿರಿಬ್ಬರೂ

ಕೆಳಗೆ ಮಲಗಿದ್ದ ಮುದ್ದುಮಲ್ಲನನ್ನೂ ಕಂಡರು. ತಿರುಕನಾಗಲಿ, ಧನಿಕನಾಗಲಿ, ಮಗುವಾಗಲಿ, ಮುದುಕನಾಗಲಿ–ನಿದ್ರಾಪರವಶರಾಗಿರುವ ಯಾರನ್ನು ನೋಡಿದರೂ ನಮ್ಮ ಮನಸ್ಸಿನಲ್ಲಿ ಅನಿರ್ವಚನೀಯವಾದೊಂದು ಭಾವನೆ ಮೂಡುತ್ತದೆ; ಆಗ ನಿದ್ರಾಭಂಗಮಾಡುವುದಕ್ಕೆ ಯಾರಿಗೂ ಮನಸ್ಸು ಬರುವುದಿಲ್ಲ. ಯುವಕನಿಗೆ ಎಲ್ಲಿ ಎಚ್ಚರವಾಗುವುದೋ ಎಂದು ವರ್ತಕನು ಸಾಧ್ಯವಾದಷ್ಟು ಮೆಲ್ಲನೆ ಹೆಜ್ಜೆಹಾಕಿದನು; ಸೀರೆ ಗಾಳಿಗೆ ಪಟಪಟ ಎಂದು ಎಲ್ಲಿ ಶಬ್ದ ಮಾಡುವುದೋ ಎಂದು ವರ್ತಕನ ಹೆಂಡತಿ ಸೀರೆಯ ಸೆರಗನ್ನೂ ನೆರಿಯನ್ನೂ ಮುದುರಿಕೊಂಡು ನಡೆದಳು.

"ಎಷ್ಟು ಗಾಢವಾಗಿ ನಿದ್ದೆಹೋಗುತ್ತಿದಾನೆ! ಎಷ್ಟು ನೀಳವಾಗಿ ಉಸಿರೆಳೆಯುತ್ತಾನೆ. ಆಹಾ, ಇಂಥ ನಿದ್ರೆ ಬರುವುದಾದರೆ ನನ್ನ ಅರ್ಧ ಸಂಪತ್ತನ್ನು ಕೊಟ್ಟೇನು. ಸುಖನಿದ್ರೆ ಬರಬೇಕಾದರೆ ಮನಸ್ಸಿಗೆ ಶಾಂತಿ ಇರಬೇಕು, ದೇಹ ಆರೋಗ್ಯವಾಗಿರಬೇಕು. ಅಲ್ಲವೆ?" ಎಂದು ತನ್ನ ಹೆಂಡಿತಯೊಡನೆ ವರ್ತಕನು ಪಿಸುಗುಟ್ಟಿದನು.

"ಮನಸ್ಸಿಗೆ ಎಷ್ಟು ಶಾಂತಿಯಿದ್ದರೂ ದೇಹ ಎಷ್ಟು ಆರೋಗ್ಯವಾಗಿದ್ದರೂ ಇಂಥ ನಿದ್ರೆ ಬರುವುದೆ? ಜೊತೆಗೆ ಯೌವನವೂ ಇರಬೇಕು. ಅಲ್ಲವೆ?" ಎಂದು ಹೆಂಡತಿಯೂ ಮೆಲ್ಲನೆ ನುಡಿದಳು.

"ಹೌದು. ಯೌವನವೂ ಇದ್ದರೆ ಇಂಥ ನಿದ್ರೆಯನ್ನು ಪಡೆಯುವುದು ಸಾಧ್ಯ. ದೇವರ ದಯದಿಂದ ನಮಗೆ ಅಲ್ಪಸ್ವಲ್ಪ ನಿದ್ರೆ ಬಂದರೆ ಅದೇ ಗಾಢನಿದ್ರೆ ಬಂದಂತೆ, ಅಷ್ಟೆ" ಎಂದು ವರ್ತಕನು ಹೇಳಿದನು.

ಹೆಚ್ಚು ಹೊತ್ತು ನೋಡಿದಷ್ಟೂ ಆ ಗಂಡ ಹೆಂಡಿರಿಗೆ ಅಪರಿಚಿತನಾದ ಆ ಯುವಕನಲ್ಲಿ ಹೆಚ್ಚುಹೆಚ್ಚು ಆಸಕ್ತಿ ಹುಟ್ಟಿತು. ಮರದ ನೆರಳೂ ಹಸುರು ತೆರೆಯನ್ನು ಹಾಕಿದಂತಿದ್ದ ಹೊಂಗೆಯ ಮರದ ಜೋಲಾಡುವ ಕೊಂಬೆಗಳೂ ಅವನ ಶಯನಸ್ಥಳವನ್ನು ಏಕಾಂತಗೃಹವನ್ನಾಗಿ ಮಾಡಿದ್ದುವು. ಎಲ್ಲೊ ಒಂದು ಸೂರ್ಯಕಿರಣ ಮರದ ಸಂದಿಯಲ್ಲಿ ನುಸುಳಿಕೊಂಡು ಬಂದು ಅವನ ಮುಖವನ್ನು ಬೆಳಗುತ್ತಿದ್ದುದನ್ನು ವರ್ತಕನ ಹೆಂಡತಿ ನೋಡಿದಳು: ಆಗ, ಮನಸ್ಸಿಲ್ಲದ ಮನಸ್ಸಿನಿಂದ ಒಂದು ಕೊಂಬೆಯನ್ನು ಆ ಕಡೆಗೆ ಜರುಗಿಸಿ, ಕಿರಣ ಅವನ ಮುಖದಮೇಲೆ ಬೀಳದಂತೆ ಅದನ್ನು ತಡೆದಳು. ಅವನಿಗೆ ಇಷ್ಟು ಸಣ್ಣ ಉಪಕಾರ ಮಾಡಿ ತಾನು ಅವನ ತಾಯಿ ಎಂಬಂತೆ ಭಾವಿಸತೊಡಗಿದಳು.

ಕೂಡಲೆ ಅವಳು ತನ್ನ ಗಂಡನಿಗೆ ಪಿಸುಮಾತಿನಲ್ಲಿ ಹೇಳಿದಳು: "ನಿಮ್ಮ

ಬಳಿ ಸಾರಿ, ಸೆರಗಿನ ಕೊನೆಯಿಂದ ಬೀಸಿ ದುಂಬಿಯನ್ನು ಓಡಿಸಿದುದರಲ್ಲಿ ಆಶ್ಚರ್ಯವೇನು? ಎಂಥ ಸುಂದರವಾದ ಸನ್ನಿವೇಶ, ಎಷ್ಟು ಮನೋಹರವಾದ ದೃಶ್ಯ! ಈ ಸತ್ಕಾರ್ಯವನ್ನೆಸಗಿ ಅವಳು ಅಲ್ಲಿ ಕ್ಷಣ ಹೊತ್ತು ನಿಂತಳು; ಅವಳ ಎದೆ ಡವಡವನೆ ಬೇಗ ಬೇಗ ಬಡಿಯತೊಡಗಿತು; ಮುಖದಲ್ಲಿ ಮತ್ತೆ ನಸುಗೆಂಪು ಮೂಡಿತು. ಯಾರು ಉಪಕಾರಕ್ಕಾಗಿ ಒಂದು ದುಂಬಿಯೊಡನೆ ಹೋರಾಡಿದಳೊ ಅವನ ಕಡೆಗೆ ಒಮ್ಮೆ ದೃಷ್ಟಿಯನ್ನು ಹರಿಸಿದಳು.

"ಆಹಾ, ಮುಖ ಎಷ್ಟು ಚೆನ್ನಾಗಿದೆ!" ಎಂದುಕೊಂಡಳು. ಅವಳ ಮುಖದ ನಸುಗೆಂಪು ಕಡುಗೆಂಪಾಯಿತು!

ಈ ಸಮಯದಲ್ಲಿ ಅವನಿಗೆ ಸುಖಸ್ವಪ್ನವಾಗಿರಬಾರದೆ? ಸ್ವಪ್ನದಲ್ಲಿ ಅವನು ಈ ಹುಡುಗಿಯನ್ನು ಕಂಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? ಕನಸೊಡೆದು ಎಚ್ಚರವಾಗಿದ್ದರೆ ತನ್ನ ಸ್ವಪ್ನಮೂರ್ತಿಯನ್ನು ಜೀವಂತ ಮೂರ್ತಿಯನ್ನಾಗಿ ಕಾಣುತ್ತಿದ್ದನು. ಆದರೆ ಅವನಿಗೆ ಸ್ವಪ್ನಕೂಡ ಆದಂತೆ ತೋರಲಿಲ್ಲ. ಒಂದು ಮೆಲುನಗೆಯಾದರೂ ಅವನ ಮುಖವನ್ನು ಬೆಳಗಲಿಲ್ಲ. ಅವನಿಗೆ ಅವಳ ಸ್ವಪ್ನವಾಗದಿದ್ದರೂ ಅವಳೇನೊ ಬಂದಿರುವಳು. ಈ ಯುವಕನ ಆತ್ಮದ ಕೂಗನ್ನು ಕೇಳಿ ಹುಡುಗಿಯ ಆತ್ಮ ಅವಳನ್ನು ಇಲ್ಲಿಗೆ ಕರೆತಂದಿದೆಯೋ ಎಂಬಂತೆ ಅವಳೀಗ ಬಂದಿರುವಳು. ಅವಳಿಗೆ ತಕ್ಕವನು ಇವನು; ಇವನಿಗೆ ತಕ್ಕವಳು ಆ ಹುಡುಗಿ....ಆದರೆ, ಓಹೊ! ತೊರೆಯ ತಿಳಿನೀರ್ಗನ್ನಡಿಯಲ್ಲಿ ಹೊಳೆಯುತ್ತಿದ್ದ ಅವಳ ಪ್ರತಿರೂಪ ತುಸ ತುಸ ಮರೆಯಾಗುತ್ತಿದೆ; ಅದು ಕಣ್ಮರೆಯಾಗಿಬಿಟ್ಟರೆ ಅದರ ಸುಖಮಯ ಪ್ರಭೆ ಅವನ ಬಾಳಿನಮೇಲೆ ಮತ್ತೆ ಬೆಳಕನ್ನು ಚೆಲ್ಲೀತೆ! ಅವನ ಜೀವವಾಹಿನಿ ಅವಳ ಪ್ರತಿಬಿಂಬದ ಸಂಮಿಳನವಿಲ್ಲದೆಯೇ ಹರಿಯುತ್ತಿರಬೇಕು!

"ಎಷ್ಟು ಗಾಢವಾಗಿ ನಿದ್ರಿಸುತ್ತಿದಾನೆ!" ಎಂದು ತನ್ನಲ್ಲಿ ತಾನು ಹೇಳಿಕೊಂಡಳು ಹುಡುಗಿ.

ಹಾಗೆ ಹೇಳಿದ ಮರುಕ್ಷಣವೇ ಹೊರಟುಹೋದಳು. ಮೊದಲು, ಯುವಕನನ್ನು ಕಾಣುವ ಮುನ್ನ, ಯಾವ ಉಲ್ಲಾಸಪೂರಿತ ಹೃದಯವುಳ್ಳವಳಾಗಿ ಹಕ್ಕಿಯಂತೆ ಹಾರುತ್ತ ಬಂದಳೋ ಆ ಉಲ್ಲಾಸರಹಿತಳಾಗಿ, ಭಾರಹೃದಯದೊಡನೆ ನಿಧಾನವಾಗಿ, ಮೌನವಾಗಿ, ಮನಸ್ಸಿಲ್ಲದ ಮನಸ್ಸಿನಿಂದ ನಡೆದುಹೋದಳು.

ಈ ಹುಡುಗಿ ನೆರೆಯೂರಿನ ಒಬ್ಬ ಗೌಡನ ಮಗಳು. ಗೌಡನಿಗೆ ತೋಟ, ಹೊಲ, ಗದ್ದೆ ಬೇಕಾದಷ್ಟಿದ್ದುವು. ಜೊತೆಗೆ ಸ್ವಲ್ಪ ವ್ಯಾಪಾರವನ್ನೂ ಇಟ್ಟುಕೊಂಡಿದ್ದನು; ಅದರಲ್ಲಿಯೂ ಅಭಿವೃದ್ಧಿ ಹೊಂದುತ್ತಿದ್ದನು. ಅವನು ತನ್ನ ಮಗಳಿಗಾಗಿ ಒಬ್ಬ

ಅವಸರವಸರವಾಗಿ ಗಾಡಿಯನ್ನು ಹತ್ತಿದರು. ಗಾಡಿ ಮುಂದಕ್ಕೆ ಹೋಯಿತು. ಇತ್ತ, ಮುದ್ದುಮಲ್ಲನು ಯಾವುದರ ಅರಿವೂ ಇಲ್ಲದೆ ಇನ್ನೂ ನಿದ್ರಾಪರವಶನಾಗಿದ್ದನು.

ಗಾಡಿ ಒಂದೆರಡು ಮೈಲಿಗಳು ಹೋಗಿದ್ದಿರಬಹುದು, ಅಷ್ಟೆ. ಅಷ್ಟು ಹೊತ್ತಿಗೆ ಚೆಲುವೆಯಾದ ಹುಡುಗಿಯೊಬ್ಬಳು ಕುಣಿದಾಡುತ್ತ ಆ ಮಾರ್ಗವಾಗಿ ಬಂದಳು. ಅವಳ ಕುಣಿತದ ಲಯ ಅವಳ ಎಳೆ ಹೃದಯದ ಕುಣಿತದ ಗತಿಯನ್ನು ತೋರಿಸುತ್ತಿದ್ದಿತೋ ಎಂಬಂತಿತ್ತು. ಅಷ್ಟರಲ್ಲಿ ಒಂದು ಬಣ್ಣದ ಚಿಟ್ಟೆ ಹಾರಾಡುತ್ತಾ ಬಂದು ಹುಡುಗಿಯ ಕಣ್ಣಮುಂದೆ ಸುಳಿದಾಡಿತು. ಅವಳದನ್ನು ಅಟ್ಟಿಸಿಕೊಂಡು ಓಡಾಡತೊಡಗಿದಳು. ಅದು ಎಲ್ಲಿ ಸುಳಿದರಲ್ಲಿ ಅದರ ಹಿಂದೆ ಅವಳೂ ಬಿಡದೆ ಹೋಗುತ್ತಿದ್ದಳು. ಚಿಟ್ಟೆ ಹಾರಾಡುತ್ತ ಹಾರಾಡುತ್ತ ಹೊಂಗೆಯ ಮರದಡಿಯನ್ನು ಸೇರಿತು. ಹುಡುಗಿ ಅಲ್ಲಿಗೂ ಅದನ್ನು ಹಿಂಬಾಲಿಸಿದಳು. ಕೊನೆಗೆ, ಚಿಟ್ಟೆ ಮೇಲು ಮೇಲಕ್ಕೆ ಹೋಗಿ ಎಲ್ಲಿಯೋ ಕಣ್ಮರೆಯಾಯಿತು. ಆಗ, ಹೊಂಗೆಯ ಹೂದೊಂಗಲನ್ನು ಮುಸುಕಿದ್ದ ಭೃಂಗಗಳ ಸಂಗೀತ ಕೇಳಿಬಂದು ಅದರಲ್ಲಿ ಅವಳ ಗಮನ ಕೆಲವುಕಾಲ ನಟ್ಟುಹೋಯಿತು. ಅವಳು ಹಾಗೆ ಗಾನವನ್ನಾಲಿಸುತ್ತಿದ್ದಾಗ, ಒಮ್ಮೆ ಗಾಳಿಗೆ ಮರದ ರೆಂಬೆಗಳಲುಗಿ, ದುಂಬಿಗಳೆಲ್ಲವೂ ಹೂದೊಂಗಲನ್ನುಳಿದು ಚೆದರಿ ಹಾರಾಡತೊಡಗಿದುವು. ಹುಡುಗಿ ಬೆದರಿ ಹಿಂದು ಹಿಂದಕ್ಕೆ ಸರಿದುಹೋದಳು. ಹಿಂಜರಿಯುತ್ತ ಹಿಂಜರಿಯುತ್ತ, ಇನ್ನೇನು ಕಾಣದೆ ಮುದ್ದುಮಲ್ಲನ ಮೇಲೆ ಬೀಳಬೇಕು, ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಹಿಂದಿರುಗಿದಳು; ತೊರೆಯ ಪಕ್ಕದಲ್ಲಿ ಮಲಗಿ ನಿದ್ದೆ ಹೋಗುತ್ತಿದ್ದ ಯುವಕನನ್ನು ಕಂಡು, ಕ್ಷಣಕಾಲ ಅಚಲಳಾಗಿ ನಿಂತಳು. ಕೂಡಲೆ ಲಜ್ಜೆ ಅವಳನ್ನಾವರಿಸಿತು; ಮುಖ ನಸುಗೆಂಪೇರಿತು; ಅವಳ ಎರಡು ಮೃದುಕಪೋಲಗಳಲ್ಲಿಯೂ ಎರಡು ಗುಲಾಬಿಗಳರಳಿದಂತಾದುವು. ಸದ್ದು ಮಾಡದೆ ಬಂದ ದಾರಿಯಲ್ಲಿ ಹಿಂದಿರುಗಬೇಕೆಂದು ಮಾಡಿಕೊಂಡಳು. ಆದರೆ ನಿದ್ರೆ ಹೋಗುತ್ತಿದ್ದ ಯುವಕನಿಗೆ ಒಂದು ಆಕಸ್ಮಿಕ ಅಪಾಯ ಒದಗುವ ಸಂಭವವಿದ್ದುದನ್ನು ನೋಡಿ ನಿಂತಳು. ದುಂಬಿಗಳಲ್ಲೊಂದು ದೊಡ್ಡ ದುಂಬಿ ಮರದೆಲೆಗಳ ನಡುವೆ ಅಲ್ಲಿ ಇಲ್ಲಿ ನುಸುಳಿ, ಹೊಂಬಿಸಿಲ ಹೊನಲಿಗೆ ಚಿಮ್ಮಿ, ಮತ್ತೆ ಬಂದು ನೆರಳಿನಲ್ಲಿ ಮಿಂದು, ಹೀಗೆಯೇ ನಲಿದಾಡುತ್ತಾ ಆಡುತ್ತ ಮುದ್ದುಮಲ್ಲನ ಮುಚ್ಚಿದೆವೆಯಮೇಲೆ ಕುಳಿತುಕೊಳ್ಳಲು ಹವಣಿಸುತ್ತಿತ್ತು. ದುಂಬಿ ಕಚ್ಚಿದರೆ ಕೆಲವು ವೇಳೆ ಬಹಳ ಅಪಾಯಕರವೆಂದು ಆ ಹುಡುಗಿಗೆ ಗೊತ್ತಿತ್ತು. ಅಲ್ಲದೆ, ಎಷ್ಟು ಮುಗ್ಧಳೋ ಅಷ್ಟೊ ಅಷ್ಟು ಸರಳ ಹೃದಯದವಳು ಆ ಹುಡುಗಿ. ಹೀಗಿರುವಾಗ, ಅವಳು ಬೇಗನೆ ಯುವಕನ

ಒಂದು ಕೈ ನೋಡಿಬಿಡೋಣ, ಏನು ಹೇಳುತ್ತಿ?" ಎಂದು ಜೊತೆಯವನ ಕಡೆಗೆ ತಿರುಗಿದನು ಮೊದಲನೆಯವನು.

"ಅವನು ಎದ್ದರೋ?" ಎಂದು ಜೊತೆಯವನು ಕೊಂಚ ಹಿಂಜರಿದನು. ಮೊದಲನೆಯವನು ಕೆಳದುಟಿಯನ್ನು ಕಚ್ಚಿ, ಸೊಂಟದಿಂದ ಒಂದು ಚೂರಿಯನ್ನು ಹಿಡಿದು ತೋರಿಸಿ, ತಲೆಯಲ್ಲಾಡಿಸಿದನು.

ಆಮೇಲೆ ಅವರಿಬ್ಬರೂ ನಿದ್ದೆ ಮಾಡುತ್ತಿದ್ದ ಮುದ್ದುಮಲ್ಲನ ಬಳಿ ಸಾರಿದರು. ಒಬ್ಬನು ಚೂರಿಯನ್ನು ಅವನೆದೆಗೆ ಗುರಿಯಿಟ್ಟು ಹಿಡಿದಿದ್ದನು; ಆಗ ಮತ್ತೊಬ್ಬನು ಅವನ ತಲೆಕೆಳಗಿನ ಗಂಟನ್ನು ಹುಡುಕ ತೊಡಗಿದನು. ಇಬ್ಬರೂ ಮಲಗಿದ್ದವನನ್ನು ದಿಟ್ಟಿಸಿ ನೋಡುತ್ತಿದ್ದರು. ಹಾಗೆ ನೋಡುತ್ತಿದ್ದಾಗ ಅವರ ಮುಖಗಳು ಶಂಕೆ ಭಯಗಳಿಂದ ವಿಕಾರವಾಗಿ ಸುಕ್ಕುಗಟ್ಟಿಹೋಗಿದ್ದವು. ಆಗ ಮುದ್ದುಮಲ್ಲನೇನಾದರೂ ಎಚ್ಚರವಾಗಿ ಅವರ ಮುಖಗಳನ್ನು ನೋಡಿದ್ದರೆ ಬೆಚ್ಚಿಬೀಳದೆ ಇರುತ್ತಿರಲಿಲ್ಲ. ಆ ಖೂಳರೇನಾದರೂ ಒಮ್ಮೆ ತೊರೆಯ ನೀರ್ಗನ್ನಡಿಯ ಕಡೆಗೆ ತಿರುಗಿ ನೋಡಿದ್ದರೆ, ಅಲ್ಲಿ ಪ್ರತಿಬಿಂಬಿಸಿದ ತಮ್ಮ ಮುಖಗಳನ್ನು ತಾವೇ ಗುರುತು ಹಿಡಿಯಲಾಗುತ್ತಿರಲಿಲ್ಲ; ಅಷ್ಟು ಭೀಕರವಾಗಿದ್ದುವು ಅವರ ಮುಖಗಳು. ಆದರೆ ಮುದ್ದುಮಲ್ಲನು ಮಾತ್ರ ಕದಲದೆ ಮಲಗಿದ್ದನು; ಹಿಂದೆ ಮಗುವಾಗಿದ್ದಾಗ, ಪ್ರಪಂಚದ ಅರಿವಿಲ್ಲದೆ ತನ್ನ ತಾಯಿಯ ತೊಡೆಯಮೇಲೆ ಮಲಗಿ ನಿದ್ರಿಸುತ್ತಿದ್ದಾಗಲೂ ಅವನ ಮುಖ ಇಂದಿನಷ್ಟು ಶಾಂತಭಾವವನ್ನು ತಳೆದಿರಲಿಲ್ಲ.

"ಈ ಗಂಟನ್ನು ಹಾರಿಸಬೇಕಲ್ಲ, ಏನು ಮಾಡವುದು?" ಎಂದು ಮುದ್ದುಮಲ್ಲನ ತಲೆಯ ಬಳಿ ಇದ್ದವನು ಕೇಳಿದನು.

"ಅವನು ಅಲುಗಾಡಿದರೆ, ಇದೋ ಇಲ್ಲಿ...." ಎಂದು ಜೊತೆಯವನು ಚೂರಿಯನ್ನು ತೋರಿಸಿ ಮಲಗಿದ್ದ ಯುವಕನಮೇಲೆ ಬಾಗಿ ನಿಂತನು.

ಆದರೆ, ಈ ಸಮಯಕ್ಕೆ ಸರಿಯಾಗಿ, ತೊರೆಯ ತೀರದ ಪೊದೆಗಳ ಹೊದರಿನಿಂದ, ನೆಲವನ್ನು ಮೂಸಿನೋಡುತ್ತ ಒಂದು ನಾಯಿ ಇವರಿದ್ದ ಸ್ಥಳಕ್ಕೆ ಬಂದು ನಿಂತಿತು. ಮೊದಲು ಇವರಿಬ್ಬರನ್ನೂ ದಿಟ್ಟಿಸಿ ನೋಡಿ, ಮಲಗಿದ್ದವನನ್ನೂ ಒಮ್ಮೆ ನೋಡಿತು; ಬಳಿಕ ತೊರೆಯ ಬಳಿಗೆ ಹೋಗಿ ನೀರು ಕುಡಿಯುತ್ತಾ ನಿಂತುಕೊಂಡಿತು.

ಒಬ್ಬನು ಹೇಳಿದನು: "ಏ, ಹುಷ್! ಈಗ ನಾವೇನೂ ಮಾಡುವುದಕ್ಕಾಗುವುದಿಲ್ಲ. ನಾಯಿಯ ಯಜಮಾನನು ಅದರ ಹಿಂದುಗಡೆಯೆ ಎಲ್ಲೊ ಹತ್ತಿರದಲ್ಲೇ ಬರುತ್ತಿರಬೇಕು."

ವರನನ್ನು ಹುಡುಕುತಿದ್ದನು. ಮುದ್ದು ಮಲ್ಲನಂಥ ಯುವಕನು ದೊರಕಿದ್ದರೆ ಗೌಡನು ಎಷ್ಟೋ ಹಿಗ್ಗುತ್ತಿದ್ದನು. ಹೀಗಿರುವಾಗ, ಮುದ್ದುಮಲ್ಲನಿಗೆ ಹುಡುಗಿಯ ಪರಿಚಯವಾಗಿದ್ದರೆ ಆ ಪರಿಚಯ ಅನುರಾಗಕ್ಕೆ ತಿರುಗುತ್ತಿತ್ತು; ಆಗ ಅವನು ಗೌಡನ ಬಳಿಗೆ ಕನ್ಯಾರ್ಥಿಯಾಗಿ ಹೋಗಿದ್ದರೆ ಗೌಡನು ಇವನನ್ನು ತಿರಸ್ಕರಿಸುತ್ತಿದ್ದನೆ? ಗೌಡನಿಗೆ ಗಂಡುಮಕ್ಕಳು ಬೇರೆ ಇರಲಿಲ್ಲ. ಮುದ್ದುಮಲ್ಲನ ಪುಣ್ಯಕ್ಕೆ ಎಣೆಯಾವುದಿದ್ದಿತು? ಆದರೆ,–ವಿಧಿ! ಹುಡುಗಿಯನ್ನು ಇನ್ನು ಸ್ವಲ್ಪ ಹೆಚ್ಚಾಗಿ ಯುವಕನ ಬಳಿಗೆ ವಿಧಿ ಒಯ್ದಿದ್ದರೆ? ಆಗ ಅವಳ ನೆರಿ ಅವನ ಕರಸ್ಪರ್ಶನ ಮಾಡಿದ್ದರೆ? ಇಲ್ಲವೆ, ಸೀರೆಯ ಸೆರಗಿನಿಂದ ಅವಳು ದುಂಬಿಯನ್ನೋಡಿಸುವಾಗ ಅದು ಅವನ ಮುಖಕ್ಕೆ ಬಡಿದಿದ್ದರೆ? ಆದರೆ ಅವನಿಗೆ ಏತರ ಅರಿವೂ ಇರಲಿಲ್ಲ.

ಹುಡುಗಿಯಿನ್ನೂ ಕಣ್ಮರೆಯಾಗುವುದಕ್ಕಿಲ್ಲ, ಹೊಂಗೆಯ ಮರದ ಬಳಿಯಿದ್ದ ಪೊದೆಗಳ ಸಂದಿಯಿಂದ ಯಾರೋ ಇಬ್ಬರು ಹಾದು ಬಂದು ಯುವಕನನ್ನು ಕಂಡರು. ಇಬ್ಬರೂ ಕಟ್ಟಾಳುಗಳು; ಅವರ ಮುಖದ ಬಣ್ಣ ಮಸಿಯ ಬಣ್ಣ; ಕಣ್ಣುಗಳು ಕೆಂಪಗೆ ಥಳಥಳಿಸುತ್ತಿದ್ದುವು. ಅವರ ಉಡುಪು ಕೊಳಕೊಳಕಾಗಿದ್ದರೂ ಬೆಲೆ ಬಾಳುವುದೆಂದೇ ಹೇಳಬೇಕು. ಅವರ ಉಡುಪನ್ನು ನೋಡಿ ಬೇರೆ ಅವರು ದರೋಡೆಕಾರರೆಂದು ಹೇಳುವಂತಿರಲಿಲ್ಲ. ಆದರೆ ದರೋಡೆ ಮಾಡುವುದೇ ಅವರ ನಿತ್ಯಜೀವನವಾಗಿದ್ದಿತು. ಅವರಿಬ್ಬರೂ ತಾವು ತಾವು ಸಂಪಾದಿಸಿದ ಒಡವೆ ಪದಾರ್ಥಗಳನ್ನು ಹೀಗೆ ಹಂಚಿಕೊಳ್ಳುತ್ತಿದ್ದರು–ದರೋಡೆಗೆ ಮುಂಚೆ ಇಬ್ಬರೂ ಜೂಜಾಡುವುದು; ಅನಂತರ ಇಬ್ಬರೂ ಸೇರಿ ದರೋಡೆಮಾಡುವುದು; ಸಿಕ್ಕಿದ ಒಡವೆಯುನ್ನೆಲ್ಲ ಗೆದ್ದವನು ತೆಗೆದುಕೊಳ್ಳುವುದು. ಈಗಲಾದರೂ ಜೂಜಾಡುವುದಕ್ಕೆಂದೇ ಅವರು ಹೊಂಗೆಯ ಮರದ ಬಳಿಗೆ ಬಂದಿದ್ದರು. ಅಲ್ಲಿ ಒಬ್ಬ ಯುವಕನು ಮಲಗಿರುವನೆಂದು ಅವರಿಗೆ ತಿಳಿದಿರಲಿಲ್ಲ. ಸ್ವಲ್ಪ ಹೊತ್ತಿನಮೇಲೆ ಮುದ್ದುಮಲ್ಲನನ್ನು ಕಂಡರು. ಆದರೆ ಅವನು ನಿದ್ದೆ ಹೋಗುತ್ತಿರುವುದನ್ನು ಕಂಡು ಅವರಿಗೆ ಸಮಾಧಾನವಾಯಿತು. ಅವರಲ್ಲೊಬ್ಬನು ತನ್ನ ಜೊತೆಯವನಿಗೆ ಹೀಗೆ ಪಿಸುಗುಟ್ಟಿದನು:

"ಏ, ನೋಡಿದೆಯಾ, ಅವನ ತಲೆದಸಿಯಲ್ಲಿ ಗಂಟು?"

ಜೊತೆಯವನು ಹಲ್ಲುಕಿರಿದು, ಕಣ್ಣು ಮಿಟುಕಿಸಿ, ತಲೆಯನ್ನು ಅಲ್ಲಾಡಿಸಿದನು.

"ಗಂಟಿನಲ್ಲಿ ಏನಾದರೂ ಇರಲೇಬೇಕು,–ಸ್ವಲ್ಪ ಚಿಲ್ಲರೆ ನಾಣ್ಯ, ಒಂದಿಷ್ಟು ತಿಂಡಿ. ಸಾಲದೆ? ಹೇಗಿದ್ದರೂ ನಮಗೆ ಹೊಟ್ಟೆ ಹಸಿದಿದೆ. ಏನಾದರೂ ಇರಲಿ,

ತಾನಲ್ಲಿ ಮಲಗಿದ್ದ ಒಂದು ಗಂಟೆಯ ಅತ್ಯಲ್ಪ ಕಾಲದೊಳಗಾಗಿ–ಸಿರಿ ತನ್ನ ಸ್ವರ್ಣಪ್ರಭೆಯನ್ನು ತೊರೆಯ ನೀರಿನ ಮೇಲೆ ಚೆಲ್ಲಿತೆಂಬುದನ್ನಾಗಲಿ, ಅದರ ಕಲಕಲರವದೊಡನೆ ಪ್ರೇಮ ನಿಟ್ಟುಸಿರು ಬಿಟ್ಟು ಮರುಗಿತೆಂಬುದನ್ನಾಗಲಿ, ಸಾವು ರಕ್ತವನ್ನು ಚೆಲ್ಲಿ ಅದರ ನೀರನ್ನು ಕದಡುವುದರಲ್ಲಿತ್ತು ಎಂಬುದನ್ನಾಗಲಿ–ಯಾವುದನ್ನೂ ಮುದ್ದುಮಲ್ಲನು ತಿಳಿಯಲಿಲ್ಲ.

* * *

ವಿಚಿತ್ರ ಘಟನಾ ಪರಂಪರೆಗಳೆಷ್ಟೋ ಸಂಭವಿಸಿರುವುದು ಸತ್ಯ; ಆದರೆ ಅವುಗಳ ಅಸ್ಪಷ್ಟ ಪದಗತಿಯ ಸಪ್ಪುಳವೂ ಸಹ ನಮಗೆ ಕೇಳಬರುವುದಿಲ್ಲ.

ಘಟನೆಗಳು ಒಂದು ನಿರ್ದಿಷ್ಟವಾದ ರೀತಿಯಲ್ಲಿ, ಸ್ಪಷ್ಟಗತಿಯಲ್ಲಿ ಸಂಭವಿಸುತ್ತಿದ್ದರೆ ಅವುಗಳ ಅನುಭವದ ಆಧಾರದ ಮೇಲೆ ಮುಂದೆಯೂ ಘಟನೆಗಳು ಹೀಗೆ ಹೀಗೆಯೇ ಒದಗುವುವು ಎಂದು ನಾವು ಹೇಳಲು ಶಕ್ಯವಾಗುತ್ತಿತ್ತು. ಆದರೆ ಎಷ್ಟೋ ಘಟನೆಗಳು ಅನಿರೀಕ್ಷಿತವಾಗಿ ಬಂದು, ನಮ್ಮ ಜೀವನಪಥದಲ್ಲಿ ಅಗೋಚರವಾಗಿ ಹಾದುಹೋಗುವುವು. ಆದರೂ ಇವೆಲ್ಲವೂ ಒಂದು ನಿಯಮಕ್ಕೆ ಒಳಪಟ್ಟಿರುವುದರಿಂದಲೇ ಅಲ್ಲವೇ ಪ್ರಪಂಚದಲ್ಲಿ ಸುವ್ಯವಸ್ಥೆ ನೆಲಸಿರುವುದು? ಹಾಗೆ ನಿಯಮರಹಿತವಾಗಿದ್ದ ಪಕ್ಷದಲ್ಲಿ–ಪ್ರಪಂಚದಲ್ಲಿ ಅವ್ಯವಸ್ಥೆ ನೆಲಸಿ, ಪ್ರಪಂಚದ ಸ್ಥಿತಿ ಎಷ್ಟು ಘೋರವಾಗುತ್ತಿತ್ತು! ಬಾಳು ಎಷ್ಟು ಅಸಹನೀಯವಾಗುತ್ತಿತ್ತು!

"ಹೌದು; ಸ್ವಲ್ಪ ನೀರು ಕುಡಿದು ಹೊರಟುಹೋಗೋಣ" ಎಂದು ಜೊತೆಯವನು ಒಪ್ಪಿ ನುಡಿದನು.

ಚೂರಿಯನ್ನು ಹಿಡಿದಿದ್ದವನು ಅದನ್ನು ಮತ್ತೆ ಸೊಂಟಕ್ಕೆ ಸೇರಿಸಿದನು. ಇಬ್ಬರೂ ಮಲಗಿದ್ದ ಯುವಕನ ಕಡೆ ಮುಷ್ಟಿಯನ್ನು ತಿರುವಿ, ಕಿಲಕಿಲನೆ ನಕ್ಕು, ದಾರಿಯುದ್ದಕ್ಕೂ ನಗುತ್ತಲೇ ಹೊರಟುಹೋದರು. ತಮ್ಮ ನೀಚಪ್ರಯತ್ನ ಕೈಗೂಡದಿದ್ದರೂ ಸರಿಯೆ, ತಾವು ಯಾರ ಕೈಗೂ ಸಿಕ್ಕಿಬೀಳಲಿಲ್ಲವೆಂಬ ಸಮಾಧಾನದಿಂದಲೊ ಏನೊ, ಅವರು ತೃಪ್ತರಾಗಿ ಹಿಂದಿರುಗಿರಬೇಕು. ಸ್ವಲ್ಪ ಹೊತ್ತಿನೊಳಗಾಗಿ ತಾವು ಕೈಗೊಂಡಿದ್ದ ಕ್ರೂರಕಾರ್ಯದ ವಿಷಯವನ್ನೇ ಅವರು ಮರೆತರು; ತಮ್ಮ ಕೊಲೆಯ ಪ್ರಯತ್ನವನ್ನು ಚಿತ್ರಗುಪ್ತರು ತಮ್ಮ ಪಟ್ಟಿಯಲ್ಲಿ ಬರೆದುಕೊಂಡಿರಬಹುದೆಂಬುದನ್ನು ಅವರು ಯೋಚಿಸಲೂ ಇಲ್ಲ. ಮುದ್ದುಮಲ್ಲನಾದರೊ ಇನ್ನೂ ಸುಖವಾಗಿ ನಿದ್ರಿಸುತ್ತಿದ್ದನು–ಸಾವಿನ ಕರಿನೆರಳು ತನ್ನ ಮೇಲೆ ಕವಿದಾಗ ಅವನಿಗೆ ಅದರ ಅರಿವಿರಲಿಲ್ಲ; ಅದು ಚೆದರಿಹೋಗಿ, ಬಾಳಿನ ಬೆಳಕು ಮತ್ತೆ ಹರಡಿದಾಗ ಅದರ ಅರಿವೂ ಇರಲಿಲ್ಲ.

ಅವನು ಮಲಗಿಯೇ ಇದ್ದನು, ಆದರೆ ಮೊದಲಿನಷ್ಟು ಶಾಂತನಾಗಿ ನಿದ್ರಿಸುತ್ತಿರಲಿಲ್ಲ. ಬಹಳ ಹೊತ್ತು ಬಲುದೂರ ನಡೆದು ಉಂಟಾಗಿದ್ದ ಶರೀರಾಯಾಸ ಒಂದು ಗಂಟೆಯ ಕಾಲದಲ್ಲಿ ಮಾಯವಾಯಿತು. ಈಗ ಅವನು ಸ್ವಲ್ಪ ಚಲಿಸಿದನು, ಎರಡು ಸಲ ಅತ್ತ ಇತ್ತ ಹೊರಳಿದನು–ಒಡನೆಯೇ ತುಟಿಗಳನ್ನು ಅಲುಗಿಸಿದನು, ಆದರೆ ಸದ್ದಿಲ್ಲ; ಬಳಿಕ ತನ್ನಲ್ಲಿ ತಾನು ಏನೋ ಗೊಣಗುಟ್ಟಿದನು, ಸ್ಪಷ್ಟವಾಗಿ ಒಂದೆರಡು ಮಾತನಾಡಿದನು. ಇಷ್ಟು ಹೊತ್ತಿನಮೇಲೆ ಹಗಲುಗನಸು ಕಂಡು ಅದು ಬಲಿಯುವಷ್ಟರಲ್ಲಿ ಒಡೆದಿರಬೇಕು!

ಅಷ್ಟು ಹೊತ್ತಿಗೆ ಬಸ್ಸು ಚೀರುತ್ತ ಬರ್ರನೆ ಬರುತ್ತಿದ್ದಿತು; ಬರುಬರುತ್ತ ಅದರ ಕೂಗಾಟ ಚೀರಾಟ ಹೆಚ್ಚಾಗಿ ಮುದ್ದುಮಲ್ಲನಿಗೆ ಎಚ್ಚರವಾಯಿತು. ಅವನು ಎದ್ದು ಕುಳಿತು ಗಂಟನ್ನು ತೆಗೆದಿಟ್ಟುಕೊಂಡು ಕಣ್ಣುಜ್ಜಿಕೊಳ್ಳುವುದಕ್ಕಿಲ್ಲ, ಆಗಲೇ ಬಸ್ಸು ಹತ್ತು ಮಾರು ದೂರದಲ್ಲಿ ಕಾಣಿಸಿಕೊಂಡಿತು. ಮುದ್ದುಮಲ್ಲನು ಸರ್ರನೆ ದಾರಿಯ ಪಕ್ಕಕ್ಕೆ ಹೋಗಿ ನಿಂತು, 'ಹೇ!' ಎಂದು ಕೂಗಿ ಕೈಯೆತ್ತಿದನು. ಬಸ್ಸು ನಿಂತಿತು. ಅವನ ಬಸ್ಸು ಹತ್ತಿದ ಕೂಡಲೆ ಅದು ಹೊರಟಿತು.

ಎಲ್ಲಿ ಅವನ ಜೀವನವು ಅನಿವಾರ್ಯವೆನ್ನಬಹುದಾದ ಅನೇಕ ಘಟನೆಗಳಿಗೆ ಸಿಲುಕಿಯೂ ಸಿಲುಕದಾಯಿತೋ ಆ ತೊರೆಯ ತೀರದ ಹೊಂಗೆಯ ಮರದಡಿಯನ್ನು ಯುವಕನು ಒಮ್ಮೆಯಾದರೂ ಹಿಂದಿರುಗಿ ನೋಡಲಿಲ್ಲ.

ದನಿಯಲ್ಲಿಯೂ ಹೊಸಪರಿಯಿಲ್ಲದಿದ್ದರೂ ಅವರು ತುಸುಮಟ್ಟಿಗೆ ಮನಕುಗ್ಗಿದರು. ಆದರೆ ಬಾಗಿಲ ಹೊರಚಿಲಕ ಎಡೆಬಿಡದೆ ಅಲುಗಿದಾಗ ಮನೆಯ ಯಜಮಾನ ಎದ್ದುಹೋಗಿ ಬಾಗಿಲು ತೆಗೆದನು; ಪ್ರಯಾಣಿಕನೊಬ್ಬನು ಒಳಹೊಕ್ಕನು. ಗಾಳಿಯ ನಿಡುಮೊರೆತದಲ್ಲಿ ಪ್ರಯಾಣಿಕನ ಹೆಜ್ಜೆ ಸಪ್ಪುಳವಾಗಲಿ ಅವನು ಮೊದಮೊದಲು ಬಾಗಿಲನ್ನು ಮೆಲ್ಲನೆ ತಟ್ಟಿದ್ದಾಗಲಿ ಒಳಗಿದ್ದವರಿಗೆ ಕೇಳಿಸಲಿಲ್ಲ. ಪ್ರಯಾಣಿಕನ ಹಿಂದೆ ಬಂದ ಗಾಳಿ ಅವನು ಗುಡಿಸಿಲನ್ನು ಹೊಕ್ಕೊಡನೆಯೆ ಹಾಗೆಯೇ ಚೀರುತ್ತ ಮುಂದಕ್ಕೆ ಹೊರಟುಹೋಯಿತು.

ಗುಡಿಸಿಲಿನಲ್ಲಿದ್ದವರು ನಿರ್ಜನಪ್ರದೇಶದಲ್ಲಿಯೆ ವಾಸಿಸುತ್ತಿದ್ದರೂ, ಹೊರಗಿನ ಪ್ರಪಂಚದೊಡನೆ ನಿತ್ಯಸಂಬಂಧವನ್ನು ಇಟ್ಟುಕೊಂಡಿದ್ದರು. ಇವರಿದ್ದ ಕಣಿವೆಯ ಮೂಲಕವಾಗಿಯೇ ಅಕ್ಕಪಕ್ಕದ ಸೀಮೆಗಳ ವ್ಯಾಪಾರ ನಡೆಯುತ್ತಿತ್ತು. ತನ್ನ ಕೈದೊಣ್ಣೆಯಲ್ಲದೆ ಬೇರೆಯ ಜೊತೆಗಾರರಿಲ್ಲದ ಒಬ್ಬೊಂಟಿಗನಾದ ಪ್ರಯಾಣಿಕನು ದಾರಿನಡೆದು ಬೇಸತ್ತು ಬಳಲಿ, ಇನ್ನು ಮುಂದೆ ಹೋದರೆ ಒಂಟಿತನದ ಬೇಸರಿಕೆಯಿಂದ ಬಳಲಿಕೆ ಹೆಚ್ಚಿ ಕಣಿವೆಯ ಕಿಬ್ಬಾಯನ್ನು ದಾಟುವುದಕ್ಕೆ ಮೊದಲೇ ಎಲ್ಲಿ ಕಾಲು ಕುಸಿಯುವುದೋ ಎಂದು ಹೆದರಿ, ಒಂದು ಕ್ಷಣ ಕಾಲೂರಿ ಕುಳಿತು ಒಂದು ಸವಿಮಾತಾಡಿ ಮುಂದೆ ಹೋಗೋಣವೆಂದು ಗುಡಿಸಿಲ ಬಳಿ ನಿಲ್ಲುವನು. ಎತ್ತಿನ ಮೇಲೆ ಹೇರುಹಾಕಿಕೊಂಡು ಸಂತೆಗೆ ಹೋಗುವ ಬಣಜಿಗನು ರಾತ್ರಿ ಈ ಗುಡಿಸಿಲಿನಲ್ಲಿ ತಂಗಿ ಬೆಳಕುಹರೆಯಲು ಮುಂದುವರಿಯುವನು. ಒಂದೊಂದು ವೇಳೆ ಯುವಕರಾದವರೂ ಗುಡಿಸಿಲಿಗೆ ಬರುತ್ತಿದ್ದರು; ಅವರು ಗುಡಿಸಿಲು ಬಿಟ್ಟು ಹೊರಡುವ ಮುನ್ನ, ಮನೆಯ ಯಜಮಾನನ ಹಿರಿಮೆಗಳ ಚೆಲುವಿಗೆ ಮುಗ್ಧರಾಗಿ ನಿಟ್ಟುಸಿರುಬಿಟ್ಟು, ಮನಸ್ಸನ್ನು ಹಿಂದೆ ಬಿಟ್ಟು, ಮುಂದಕ್ಕೆ ಹೊರಡುತ್ತಿದ್ದರು. ಅಂತು ಕಣಿವೆಯ ಕಿಬ್ಬಾಯಲ್ಲಿ ನೆಲಸಿದ್ದ ಗುಡಿಸಿಲು ಒಂದು ಬಗೆಯ ಛತ್ರವಾಗಿ ಪರಿಣಮಿಸಿತ್ತು. ಗುಡಿಸಿಲಿನ ಯಜಮಾನನು ತನ್ನ ನಿವಾಸಕ್ಕೆ ಬಂದವರಿಗೆ, ಅವಶ್ಯಬಿದ್ದರೆ, ಆತಿಥ್ಯವನ್ನೂ ಮಾಡುತ್ತಿದ್ದನು. ಅವನು ಆತಿಥ್ಯ ಮಾಡಲಿ ಬಿಡಲಿ, ಬಂದವರು ತಾವು ತಂದಿದ್ದ ಏನಾದರೂ ಸರಕನ್ನು ಅವನಿಗೆ ಕೊಟ್ಟು ಹೋಗುತ್ತಿದ್ದರು. ಹೀಗೆ ಅವರು ಕೊಡುತ್ತಿದ್ದುದು ತಾವು ತಿಂದ ಒಂದು ತುತ್ತಿನ ಬೆಲೆಯನ್ನಲ್ಲ; ತಮಗೆ ಸಂದ ಆದರ ಸತ್ಕಾರಗಳಿಗೆ ಪ್ರತಿಯಾಗಿ ತಾವು ಅವರಿಗೆ ಸಲ್ಲಿಸಿದ ಕೃತಜ್ಞತೆಯ ಕಾಣಿಕೆ.

ಯಜಮಾನನು ಆಗಂತುಕನೊಬ್ಬನೊಡನೆ ಹಿಂದಿರುಗಿದಾಗ, ತಮ್ಮ ಅದೃಷ್ಟದಲ್ಲಿ ಭಾಗಿಯಾದ ತಮ್ಮ ಬಂಧುವೊಬ್ಬನನ್ನು ಆದರದಿಂದ

## ೩. ಹೆಬ್ಬಯಕೆಯ ದಾರಿಹೋಕ

ಮಾರ್ಗಶಿರ ಮಾಸದ ಒಂದು ರಾತ್ರಿ. ಮನೆಮಂದಿಯೆಲ್ಲ ದೊಡ್ಡ ಅಗ್ಗಿಷ್ಟಿಕೆಯ ಸುತ್ತ ಬೆಂಕಿ ಕಾಯಿಸುತ್ತ ಕುಳಿತಿದ್ದರು; ಶೈಲಶಿಖರದ ಮೇಲೆ ಬೆಳೆದಿದ್ದ ದೊಡ್ಡ ದೊಡ್ಡ ಮರಗಳಿಂದ ಹಿರಿಗಾಳಿಗೆ ಉದಿರಿದ ತರಗೆಲೆಗಳನ್ನೂ ಪುರಲೆಗಳನ್ನೂ ಅವರು ಅಗ್ಗಿಷ್ಟಿಕೆಗೆ ಒಟ್ಟಿದಹಾಗೆಲ್ಲ ಅಗ್ನಿ ಜ್ವಾಲೆ ಮೇಲಮೇಲಕ್ಕೆದ್ದು ಗುಡಿಸಿಲಿನ ಒಳಭಾಗವನ್ನೆಲ್ಲ ತೀವ್ರವಾಗಿ ಬೆಳಗುತ್ತಿತ್ತು. ಗುಡಿಸಿಲಿನ ಒಡೆಯ ಒಡತಿಯರ ಮುಖದಲ್ಲಿ ಪ್ರಶಾಂತವಾದ ಹರ್ಷ ನೆಲಸಿತ್ತು; ಅವರ ಮಕ್ಕಳು ನಗುತ್ತಿದ್ದರು; ಹದಿನೇಳು ವರ್ಷದ ಹಿರಿಮಗಳು ಹರ್ಷದ ಹೂವಿನಂತಿದ್ದಳು; ಮುತ್ತ ಅಜ್ಜಿ ಒಬ್ಬಳು ದೂರದಲ್ಲಿಯೆ ಹಚ್ಚಡವೊಂದಕ್ಕೆ ಕರೆಕಟ್ಟುತ್ತ ಕುಳಿತು, ಹರ್ಷ ಹಣ್ಣಾದಂತೆ ಕಾಣುತ್ತಿದ್ದಳು. ಜನಸಮುದಾಯದಿಂದ ದೂರವಾಗಿದ್ದುಕೊಂಡು ಈ ಕಣಿವೆಯಲ್ಲಿ ಇವರು ಹೃದಯಸಂತುಷ್ಟಿಯನ್ನು ಪಡೆದಿದ್ದರು.

ಮೇಲೆ ಹೇಳಿದ ಸಂಸಾರ ವಾಸಮಾಡುತ್ತಿದ್ದ ಕಣಿವೆಯನ್ನೊಳಗೊಂಡ ಬೆಟ್ಟಗಳ ಗುಂಪನ್ನು ಬೆಳ್ಳಿಬೆಟ್ಟ ಎಂದು ಸುತ್ತಮುತ್ತಿನ ಜನ ಕರೆಯುತ್ತಿದ್ದರು. ಅಲ್ಲಿ ವರ್ಷಗಾಲವೆಲ್ಲ ಗಾಳಿ ಬಿರುಸಾಗಿ ಬೀಸುತ್ತಿದ್ದು, ಚಳಿಗಾಲದಲ್ಲಿ ಮೈ ಕೊರೆಯುವಂತೆ ಬೀಸುತ್ತಿತ್ತು. ಬೆಟ್ಟವನ್ನು ಹಾಯ್ದು ಬಂದ ಗಾಳಿ ತನ್ನ ಕೊರೆಯುವ ಚಳಿಯನ್ನು ಕಣಿವೆಯ ಬಾಯಲ್ಲಿ, ಬೆಟ್ಟದ ತಪ್ಪಲಿನಲ್ಲಿಯೇ ಇದ್ದ ಗುಡಿಸಿಲ ಬಳಿ ಬಿಟ್ಟು ಬಳಿಕ ಕಣಿವೆಯೊಳಕ್ಕೆ ನುಗ್ಗುತ್ತಿತ್ತು. ಆ ಗುಡಿಸಿಲಿನಲ್ಲಿ ವಾಸಿಸುತ್ತಿದ್ದವರು ಚಳಿಗಾಳಿಗೆ ಒಳಗಾಗಿದ್ದುದಲ್ಲದೆ ಅಪಾಯಕರವಾದ ಪ್ರದೇಶದಲ್ಲಿ ನೆಲಸಿದ್ದರು; ಏಕೆಂದರೆ, ಆ ಗುಡಿಸಿಲಿನ ಸಮೀಪದಲ್ಲಿಯೇ ಪರ್ವತಭಾಗ ಕಡಿದಾಗಿ ಎದ್ದುನಿಂತಿತ್ತು; ಅದು ಎಷ್ಟು ಕಡಿದಾಗಿತ್ತೆಂದರೆ, ಅನೇಕವೇಳೆ ನಟ್ಟಿರುಳಿನಲ್ಲಿ ದೊಡ್ಡ ದೊಡ್ಡ ಬಂಡೆಗಳು ಪರ್ವತಾಗ್ರದಿಂದ ಉರುಳಿಬಂದು ಗುಡಿಸಿಲಿನವರನ್ನು ಬೆದರಿಸುತ್ತಿದ್ದುವು.

ಮನೆಯ ಹಿರಿಮಗಳು ಆಗತಾನೆ ಒಂದು ತಿಳಿಹಾಸ್ಯದ ಮಾತನ್ನಾಡಿ ಎಲ್ಲರನ್ನೂ ವಿನೋದದಲ್ಲಿ ಮುಳುಗಿಸಿದ್ದಳು; ಆಗ ಕಣಿವೆಯ ಮುಖದಿಂದ ನುಗ್ಗಿಬಂದ ಗಾಳಿ ಬಾಗಿಲನ್ನು ಕಟಕಟಿಸುತ್ತ ಗೋಳುಕರೆಯ ದನಿಯೊಡನೆ ಗುಡಿಸಿಲ ಬಳಿ ತಂಗಿದಂತೆ ತೋರಿತು. ಗಾಳಿಯ ಚೇಷ್ಟೆಯಲ್ಲಿಯೂ ಅದರ

ನಿಮ್ಮೊಡನೆ ನಾನೂ ಒಬ್ಬ" ಎಂದು ಉತ್ತರ ಕೊಟ್ಟನು.

ಸರಳ ಹೃದಯನಾದ ಆಗಂತುಕ ತರುಣನು ಹೀಗೆ ಹೇಳಿ ಅಗ್ಗಿಷ್ಟಿಕೆಯ ಬಳಿಸಾರಿ ಎಲ್ಲರೊಡನೆ ಕುಳಿತನೊ ಇಲ್ಲವೊ ಆ ಕೂಡಲೆ ಹೊರಗಡೆ ಸದ್ದು ಕೇಳಬಂದಿತು. ಗುಡಿಸಿಲಿನ ಹಿಂದುಗಡೆಯ ಕಡಿದಾದ ಪರ್ವತಾಗ್ರದಿಂದ ದಡದಡನೆ ಇಳಿದುಬರುತ್ತಿದ್ದ ವಿಲಕ್ಷಣ ಹೆಜ್ಜೆ ಸಪ್ಪುಳದಂತೆ ಕೇಳಬಂದು, ಅದು ಗುಡಿಸಿಲನ್ನು ಸಮೀಪಿಸಿದಾಗ ನೆಗೆದಂತೆ ತೋರಿ, ಮುಂದುಗಡೆಯ ಶಿಲಾಪ್ರದೇಶಕ್ಕೆ ಹೊಡೆದು ದ್ವಿಗುಣಿತವಾಗಿ, ನಿಂತಂತೆ ತೋರಿತು. ಮನೆಯವರು ಉಸಿರುಹಿಡಿದು ಮೌನವಾಗಿ ಕುಳಿತರು. ಅವರಿಗೆ ಆ ಸದ್ದು ಹೊಸದೇನೂ ಆಗಿರಲಿಲ್ಲ; ತರುಣನು ಕೂಡ ಸ್ತಬ್ಧನಾದನು.

ಸ್ವಲ್ಪ ಹೊತ್ತಾದ ಮೇಲೆ ಮನೆಯ ಯಜಮಾನ ಉಸಿರಿದನು:

"ಆ ಪುರಾತನ ಪರ್ವತ, ಅದನ್ನು ನಾವು ಮರೆಯದಿರಲಿ ಎಂದು ಎಚ್ಚರಿಕೆ ಕೊಡಲೋಸುಗ, ನಮ್ಮೆಡೆಗೆ ಒಂದು ಕಲ್ಲನ್ನು ಕಳಿಸಿದೆ. ಪರ್ವತ ಒಂದೊಂದು ವೇಳೆ ತಲೆದೂಗುತ್ತದೆ, ಕೆಲವು ವೇಳೆ ಮೈಯದಿರಿಸಿ ಎದ್ದುಬರುವಂತೆ ಬೆದರಿಸುತ್ತದೆ. ಆದರೆ ನಾವು ಹಿಂದಿನಿಂದಲೂ ನೆರೆಯವರಾಗಿದ್ದುಕೊಂಡು ಪರಿಚಯಸ್ಥರಾದ್ದರಿಂದ ಪರಸ್ಪರ ಸಹಾನುಭೂತಿಯಿಂದ ಒಳ್ಳೆಯ ಸಹವಾಸದಲ್ಲಿಯೇ ಇದ್ದೇವೆ. ಒಂದು ವೇಳೆ ಮಿತಿ ಮೀರಿ ನಮ್ಮ ನೆರೆ ಸರಿಬೀಳದೆ ಪರ್ವತಾಗ್ರ ಮುನಿದರೆ ನಮಗೆ ಇಲ್ಲಿಯೇ ಸಮೀಪದಲ್ಲಿ ಒಂದು ಸುರಕ್ಷಿತ ಸ್ಥಳವಿದೆ."

ಹೀಗೆ ಹೇಳಿ, ಮನೆಯ ಯಜಮಾನ ತರುಣನಿಗೆ ಸ್ವಲ್ಪ ಉಪಾಹಾರನ್ನಿತ್ತನು. ದನಿಯಿಂದ ಮಾರ್ದನಿ ಹೊರಟಾಗ ಮಾರ್ದನಿ ದನಿಯಿಂದ ಬೇರೆಯಾಗಿರುವುದೆ? ಸೌಜನ್ಯ ಸೌಜನ್ಯವನ್ನು ತಾನೆ ಪ್ರಚೋದಿಸೀತು? ಮನೆಯವರೆಲ್ಲರ ಸರಳ ಸ್ವಭಾವವೂ ವಿಶ್ವಾಸದ ನಡೆ ನುಡಿಗಳೂ ತರುಣನ ಸಹಾನುಭೂತಿಯನ್ನು ಸೂರೆಗೊಂಡುವು; ಅವನ ಸ್ವಾಭಾವಿಕ ಸೌಜನ್ಯ ಉಕ್ಕಿ, ಅವನು ಅವರೊಡನೆ ಮನೆಯವನು ಹೇಗೋ ಹಾಗೆ ಸಲಿಗೆಯಿಂದ ವರ್ತಿಸತೊಡಗಿದನು.

ತರುಣ ಅಭಿಮಾನವುಳ್ಳವನು, ಆದರೂ ನಮ್ರ; ಸಿರಿವಂತರೊಡನೆಯೂ 'ದೊಡ್ಡವರು' ಎನ್ನಿಸಿಕೊಂಡವರೊಡನೆಯೂ ಬಹು ಬಿಗುಮಾನವುಳ್ಳವನು, ಮಿತವರ್ತನೆಯುಳ್ಳವನು; ಆದರೆ ಬಡವನ ಗುಡಿಸಿಲಿಗೆ ಹೋಗಿ ಅಲ್ಲಿ ಅವನ ಒಡಹುಟ್ಟಿದವನಂತೆ, ಮಗನಂತೆ ಇರುವುದೆಂದರೆ ಅವನಿಗೆ ಸಂತೋಷ.

ಕಣಿವೆಯ ಬಾಯಲ್ಲಿದ್ದ ಈ ಗುಡಿಸಿಲಿನ ಸಂಸಾರದಲ್ಲಿ ಇವನು ಒಂದು ಬಗೆಯ ಹಿತಕರವಾದ ಸರಳವಾದ ಭಾವವನ್ನು ಕಂಡನು; ಅಪಾಯಕರವಾದರೂ

ಬರಮಾಡಿಕೊಳ್ಳುವಂತೆ ಮನೆಮಂದಿ ಮಕ್ಕಳೆಲ್ಲರೂ ಎದ್ದುನಿಂತು ಒಟ್ಟುಗೂಡಿದರು.

ಆಗಂತುಕನು ತರುಣ. ನಿರ್ಜನ ಪ್ರದೇಶದಲ್ಲಿ, ಚಳಿಯಲ್ಲಿ, ರಾತ್ರಿಯಲ್ಲಿ, ದೂರದ ದಾರಿಯನ್ನು ನಡೆದುಬಂದ ಬಹಳ ಬಳಲಿದವನಂತೆ ಅವನ ಮುಖ ಮೊದಲು ಒಂದು ವಿಧವಾದ ನಿರಾಶಯುತವಾದ ಖಿನ್ನತೆಯನ್ನು ತಳೆದಿದ್ದಿತು; ಆದರೆ ಮನೆಯವರು ತನ್ನನ್ನು ಆದರ ವಿಶ್ವಾಸಗಳಿಂದ ಬರಮಾಡಿಕೊಂಡುದನ್ನು ಕಂಡ ಕೂಡಲೆ ಅವನ ಮುಖ ಕಳೆಗೂಡಿತು. ಮನೆಯ ಮುದುಕಿ ಏಳಲಾರದೆ ಎದ್ದು ಸಣ್ಣ ಚಾಪೆಯೊಂದನ್ನು ತಂದು ಹಾಸಿದಳು. ಮನೆಯ ಯಜಮಾನ ಆಗಂತುಕ ತರುಣನನ್ನು ಕುಳಿತುಕೊಳ್ಳಿ ಎಂದು ಹೇಳುವಷ್ಟರಲ್ಲಿ ಮನೆಯಾಕೆ ಕಾಲು ತೊಳೆದುಕೊಳ್ಳುವುದಕ್ಕಾಗಿ ಒಂದು ಚೆಂಬು ನೀರನ್ನು ತಂದು ನೀಡಿದಳು; ಸಣ್ಣ ಮಗು ಕುಳಿತೆಡೆಯಲ್ಲಿಯೆ ಎತ್ತಿಕೋ ಎನ್ನುವಂತೆ ತನ್ನ ಪುಟ್ಟ ಕೈಗಳನ್ನು ಚಾಚಿತು; ಇದನ್ನೆಲ್ಲ ನೋಡಿ ತರುಣನ ಹೃದಯ ಚಿಮ್ಮಿತು, ಮನಸ್ಸು ಹಿಗ್ಗಿತು. ಮನೆಯ ಹಿರಿಮಗಳು ಒಮ್ಮೆ ನಾಚಿಕೆಯಿಂದ ತರುಣನ ಕಡೆನೋಡಿ ನಸುನಗೆಯನ್ನು ಬೀರಿದಳು; ತರುಣನಿಗೆ ಅವಳಲ್ಲಿ ಆಗಲೇ ಒಂದು ವಿಧವಾದ ಸರಳವಾದ ಸಲಿಗೆ ಮೊಳೆಯಿತು.

"ಆಹಾ! ಎಷ್ಟು ಬೆಚ್ಚಗಿದೆ ಇಲ್ಲಿ! ಕೆಂಡ ಹೇಗೆ ಕಳಕಳಿಸುತ್ತಿದೆ! ಸಂತೋಷವಾಗಿ ಮಾತನಾಡುವುದಕ್ಕೆ ನಾಲ್ಕು ಜನ ಇದ್ದರೆ ಇಂಥ ರಾತ್ರಿಯಲ್ಲಿ ಬೆಂಕಿ ಕಾಯುವುದು ಸೊಗಸು. ಹೂಹಳ್ಳಿಯಿಂದ ಬರುವಾಗಲೆಲ್ಲ ದಾರಿಯಲ್ಲಿ ಕಣಿವೆಯ ಈ ಕಿಬ್ಬಾಯಿಂದ ಗಾಳಿ ತೂರಿಕೊಂಡು ಬಂದು ಮುಖಕ್ಕೆ ಬಿರುಸಾಗಿ ಹೊಡೆಯುತ್ತಲೆ ಇತ್ತು" ಎಂದು ತರುಣನು ಮಾತಿಗೆ ಮೊದಲುಮಾಡಿದನು.

"ಹಾಗಾದರೆ ಶೈಲಗ್ರಾಮಕ್ಕೆ ಹೊರಟಿರುವಂತೆ ಕಾಣುತ್ತದೆ" ಎಂದು ಹೇಳುತ್ತ ಮನೆಯ ಯಜಮಾನನು, ತರುಣ ಇದುವರೆಗು ಹೆಗಲಮೇಲೆ ಹೊತ್ತಿದ್ದ ಗಂಟುಮೂಟೆಗಳನ್ನು ಕೆಳಗಿಳಿಸಿದನು.

"ಹೌದು; ಶೈಲಗ್ರಾಮಕ್ಕೆ ಹೋಗಬೇಕಾಗಿದೆ. ನಾಳೆ ಮುಂಜಾನೆಯ ಹೊತ್ತಿಗೇ ಅಲ್ಲಿಗೆ ಹೋಗಿ, ಬೆಳಗ್ಗೆ ನಮ್ಮ ಸೋದರಮಾವನನ್ನು ಕಂಡು, ಅಲ್ಲಿಂದ ಮುಂದಕ್ಕೆ ಪ್ರಯಾಣ ಮಾಡಬೇಕಾಗಿತ್ತು. ಆದರೆ ಪ್ರಯಾಣಿಕರ ನಡಿಗೆ ಇಂಥ ದಾರಿಯಲ್ಲಿ ಸ್ವಲ್ಪ ತಳುವುತ್ತದೆ. ಅಲ್ಲದೆ, ನಿಮ್ಮ ಮನೆಯೊಳಗಿನ ಅಗ್ಗಿಷ್ಟಿಕೆಯ ಬೆಳಕು ಕಂಡಿಗಳಲ್ಲಿ ಹೊರಕ್ಕೆ ಕಾಣುತ್ತಿತ್ತು; ಮನೆಯ ಬಾಗಿಲಿಗೆ ಬಂದು ನಿಂತಾಗ ನಿಮ್ಮ ಉಲ್ಲಾಸದ ನಗೆಮಾತುಗಳು ಕೇಳಬಂದುವು. ನನಗಾಗಿಯೇ ನೀವು ಅಗ್ಗಿಷ್ಟಿಕೆ ಹಚ್ಚಿ ಕಾದು ಕುಳಿತಿರುವಂತೆ ಭಾವಿಸಿ ಸಲಿಗೆಯಿಂದ ಬಾಗಿಲು ತಟ್ಟಿದೆ. ಇನ್ನು ಪರವಾಯಿಲ್ಲ.

ನೆಚ್ಚುಗೆಯೆಂಬ ಕೈಗನ್ನಡಿ ಹಿಡಿದು, ಆ ಬಿಂಬ ಕೈಸೇರಿದಂತೆಯೇ ಅವನು ಭಾವಿಸಿದ್ದನು; ಆ ನೆಚ್ಚುಗೆಯ ನೆಲೆಯಲ್ಲಿ ಸ್ಥಿರವಾಗಿದ್ದ ಆ ಆಶಾಬಿಂಬ ಅವನ ಜೀವನಪಥವನ್ನು ಬೆಳಗುವುದಾಗಿತ್ತು. ಕೀರ್ತಿ ಕಿರಣಗಳು ಈಗ ಅವನನ್ನು ಬೆಳಗದಿರಬಹುದು. ಬದುಕಿದ್ದಾಗ ಅವನನ್ನು ಯಾರೂ ಗಣಿಸಿದ್ದಿರಲಾರರು; ಅವನು ಅಜ್ಞಾತನೆ; ಆದರೆ, ಕಾಲ ಕಳೆದಂತೆ, ಕೀಳುಬಯಕೆಯವರ ನೆನಪುಗಳನ್ನು ಅಳಿಸಿ, ಹೆಬ್ಬಯಕೆಯವನಾದ ಇವನನ್ನು ಬೆಳಗಿ–''ಇದೋ ನೋಡಿ: ಮಹತ್ವಾಕಾಂಕ್ಷೆಯಿಂದ ಪ್ರಚೋದಿತನಾಗಿ ಅಲ್ಪಾಕಾಂಕ್ಷೆಗಳಿಗೆ ಒಳಗಾಗದಿದ್ದ ಮಹತ್ವಾಕಾಂಕ್ಷಿ ಇವನು; ಇವನ ಬಾಳಬಟ್ಟೆಯನ್ನು ನೋಡಿ,–ಅವನ ಜೀವಿತದಲ್ಲಿ ಕಿರಿದಾಗಿದ್ದು ಮಬ್ಬಿನಲ್ಲಿ ಮುಸುಕಿ ಅನಂತತೆಯಲ್ಲಿ ಅನಂತ ವಿಸ್ತಾರವನ್ನು ಹೊಂದಿ ಮಹತ್ವದ ಪದವಿಗೆ ಅವನನ್ನು ಒಯ್ದಿದೆ''–ಎಂದು ಕಾಲಪುರುಷನು ಸಾರನೆ?

ಮಹಾಕಾರ್ಯಗಳನ್ನು ಸಾಧಿಸಿದವರು ಮಹಾಪುರುಷರಾಗುವರು; ಯಶಸ್ಕಾಯರಾಗುವರು; ಅವರು ಸತ್ತರೂ ಅವರು ಮಾಡಿರುವ ಕಾರ್ಯಗಳು ಅವರ ಶಾಸನಗಳಾಗಿ ನಿಲ್ಲುವುವು, ಜನದ ಬಾಯಲ್ಲಿ ಅವರ ಹೆಸರು ನಿಲ್ಲುವುದು. ಆದರೆ, ಮಹಾಕಾರ್ಯವನ್ನೆಸಗಿ ತನ್ನ ಹೆಸರನ್ನು ಚಿರಸ್ಥಾಯಿಯನ್ನಾಗಿ ಮಾಡಬೇಕೆಂಬ ಮಹತ್ವಾಕಾಂಕ್ಷೆಯಿದ್ದು, ಅವನು ಪ್ರತಿಕೂಲವಿಧಿಯ ಬಲಿಯಾದರೆ ಆ ಮಹತ್ವಾಕಾಂಕ್ಷೆಯಿದ್ದು, ಅವನು ಪ್ರತಿಕೂಲವಿಧಿಯ ಬಲಿಯಾದರೆ ಆ ಮಹತ್ವಾಕಾಂಕ್ಷಿಯ ಹೆಸರು ಉಳಿಯುವುದೆ? ದಾನ ಮಾಡಬೇಕೆಂಬ ಆಂತರಿಕ ಪ್ರೇರಣೆಯಿಲ್ಲದೆ ಕೀರ್ತಿ ಕಾಮದಿಂದ ದ್ರವ್ಯದಾನಮಾಡಿದರೂ ದಾನಿಯೆನಿಸುವನು; ದಾನಮಾಡಬೇಕೆಂಬ ಸಹಜವಾದ ಉತ್ಕಟೇಚ್ಛೆಯಿದ್ದರೂ ದ್ರವ್ಯವಿಲ್ಲದ ಕಾರಣ ದಾನಮಾಡದವನು ದಾನಿಯೆನಿಸನು. ಕಾಲಪುರುಷನೂ ಪಕ್ಷಪಾತಿಯೆ?

ಉತ್ಸಾಹದ ಭರದಿಂದ ಆಗಂತುಕ ತರುಣನ ಕೆನ್ನೆ ಕೆಂಪೇರಿ ಉರಿಗೆಂಡದ ಕೆಂಬೆಳಕಿನಲ್ಲಿ ಇಮ್ಮಡಿಯಾಗಿ ಬೆಳಗುತ್ತಿತ್ತು, ಕಣ್ಣುಗಳು ಹೊಳೆಯುತ್ತಿದ್ದುವು. ಅವನು ಮಾತನಾಡಲುಪಕ್ರಮಿಸಿದನು: ''ನಾನು ಇನ್ನೂ ಏನನ್ನೂ ಮಾಡಿಲ್ಲ. ನಾನು ನಾಳೆಯೇ ಮಡಿದರೆ ನನ್ನ ವಿಷಯದಲ್ಲಿ ನೀವು ತಿಳಿದಿರುವಷ್ಟು ಕೂಡ ಇತರರು ತಿಳಿಯರು. ಹೆಸರಿಲ್ಲದ ತರುಣನೊಬ್ಬನು ಇರುಳಿನಲ್ಲಿ ಕಣಿವೆಯ ಮಾರ್ಗವಾಗಿ ಇಲ್ಲಿಗೆ ಬಂದನು ಎಂದಾಗಲಿ, ಇಲ್ಲಿ ತಂಗಿ ನಿಮ್ಮ ಮುಂದೆ ಹೃದಯವನ್ನು ಬಿಚ್ಚಿ ತೋರಿದನೆಂದಾಗಲಿ, ಬೆಳಗಾಗ ಎದ್ದು ಹೊರಟುಹೋದನೆಂದಾಗಲಿ–ಇಷ್ಟು ಮಾತ್ರವಾದರೂ ನೀವು ಹೊರತು ಇನ್ನು ಯಾರೂ ಅರಿಯರು. ಆ ದಾರಿಹೋಕ ಯಾರು? ಅವನು ಎಲ್ಲಿಂದ ಬಂದನು?

ಮನೋಹರವಾಗಿದ್ದ ಅವರ ನಿವಾಸಸ್ಥಾನದ ವಾತಾವರಣ ಅವರ ಜೀವನದ ಮೇಲೆ ಒಂದು ಪ್ರಭಾವವನ್ನು ಬೀರಿದ್ದಿತು. ತರುಣ ಒಬ್ಬೊಂಟಿಗನಾಗಿ ದೂರದೇಶಗಳಲ್ಲಿ ಸಂಚಾರಮಾಡಿದ್ದನು; ವಾಸ್ತವವಾಗಿ, ಅವನ ಒಟ್ಟು ಜೀವನವೇ ಒಂದು ಒಂಟಿದಾರಿಯಾಗಿದ್ದಿತು. ತನ್ನ ಬಾಳದಾರಿಯಲ್ಲಿ ಅವನು ಏಕಾಂಗಿ. ತನ್ನ ಬುದ್ಧಿಯೇ ತನಗಿತ್ತ ಎಚ್ಚರಿಕೆಯ ಮೇರೆಗೆ ಅವನು ತನ್ನ ಸಂಗಡಿಗರಾಗಬಹುದಾಗಿದ್ದ ಕೆಲವರಿಂದ ದೂರವಾಗಿದ್ದನು. ಈ ಸಂಸಾರದವರು ಸಹ, ಅಷ್ಟೊಂದು ದಯಾಳುಗಳೂ ಉದಾರಿಗಳೂ ಆಗಿದ್ದರೂ, ತಾವು ಒಕ್ಕಟ್ಟಾಗಿ ಭಾವಿಸಿ ಒಟ್ಟು ಪ್ರಪಂಚದಿಂದ ತಾವು ಬೇರೆ ಎಂದು ತಿಳಿದಿದ್ದರು. ಪ್ರತಿಯೊಂದು ಸಂಸಾರದಲ್ಲಿಯೂ ಅದರದರ ವಿಶಿಷ್ಟತೆಗೆ ಒಂದು ಬೆಲೆಯಿದೆ; ಆ ವಿಶಿಷ್ಟ ಸ್ಥಳದಲ್ಲಿ ಹೊರಗಿನವನು ಹೊಕ್ಕು ನೆಲಸಲಾರನು. ಆದರೆ, ಈ ಸಂಜೆ, ವಿದ್ಯಾವಂತನೂ ವಿನಯಶೀಲನೂ ಆದ ತರುಣನ ಹೃದಯದಲ್ಲಿ ಭವಿಷ್ಯಸೂಚಕವಾದ ಸಹಾನುಭೂತಿಯೊಂದು ಜನಿಸಿ, ಅವನ ಹೃದಯದ ಭಾವವೆಲ್ಲವನ್ನೂ ಆ ಸರಳಜೀವಿಗಳ ಎದುರು ಹೊರಹರಿಯುವಂತೆ ಮಾಡಿತು; ಅವರುಗಳು ಅದೇ ಬಿಚ್ಚು ಮನದಿಂದ ಅವನಿಗೆ ಉತ್ತರ ಕೊಡಲು ತಡೆಗಟ್ಟಿತು. ಹೀಗೆ ಅವನಿಗೂ ಅವರಿಗೂ ಒಂದು ಸಂಬಂಧ ಕಲ್ಪಿತವಾಯಿತು. ಒಡಹುಟ್ಟಿಗಿಂತಲೂ ಸಮಾನವಾದ ಒಂದೇ ಅದೃಷ್ಟಕ್ಕೆ ಸಿಲುಕಿರುವುದು ಹೆಚ್ಚು ಆತ್ಮೀಯವಾದ ಬಂಧನವಲ್ಲವೆ?

ಈ ತರುಣನ ಜೀವಿತದ ರಹಸ್ಯಲಕ್ಷಣವೆಂದರೆ ಅವಲ್ಲಿ ನೆಲಸಿದ್ದ ಒಂದು ಬಗೆಯ ಉನ್ನತವಾದ ಮಹತ್ವಾಕಾಂಕ್ಷೆ: ಅದು ಭೋಗ್ಯವಸ್ತುಗಳ ಇಚ್ಛೆಯಲ್ಲ, ಐಶ್ವರ್ಯಸಂಪಾದನೆಯ ಅಭಿಲಾಷೆಯಲ್ಲ, ಸುಖ ಜೀವನದ ಬಯಕೆಯಲ್ಲ; ಅವನ ಹೃದಯದ ಆ ಹೆಬ್ಬಯಕೆಗೆ ಒಂದು ಸ್ಪಷ್ಟವಾದ ಗುರಿಯಿರಲಿಲ್ಲ; ಮಂತ್ರಿಪದವಿ ಹೊಂದಬೇಕೆಂದಾಗಲಿ, ಯೋಧವೀರನಾಗಬೇಕೆಂದಾಗಲಿ, ವರ್ತಕ ಶ್ರೇಷ್ಠನಾಗಬೇಕೆಂದಾಗಲಿ, ಕವಿವರ್ಯನಾಗಬೇಕೆಂದಾಗಲಿ, ಗಾನವಿಶಾರದನಾಗಬೇಕೆಂದಾಗಲಿ–ಯಾವ ಒಂದು ಉದ್ದೇಶವನ್ನು ಸಾಧಿಸಲೂ ಅವನು ಇನ್ನೂ ಮನೋ ನಿಶ್ಚಯಮಾಡಿಕೊಂಡಿರಲಿಲ್ಲ. ಅಷ್ಟೇಕೆ, ಎಲ್ಲರಂತೆ ಸಾಮಾನ್ಯ ಜೀವನವನ್ನು ಬದುಕಲು ಅವನು ಸಿದ್ಧನಾಗಿದ್ದನು. ತಾನೊಬ್ಬ ಆದರ್ಶಪುರುಷನಾಗಬೇಕೆಂಬ ಆಕಾಂಕ್ಷೆ ಅವನಿಗಿರಲಿಲ್ಲ; ಆದರೆ, ಸತ್ತಮೇಲೆ ಎಲ್ಲರಂತೆ ಅಪ್ರಸಿದ್ಧನಾಗಿ ಮಣ್ಣುಗೂಡಲು ಅವನು ಸಿದ್ದನಾಗಿರಲಿಲ್ಲ. ಅವನ ಬಗೆಬಾನಿನಲ್ಲಿ ಮೂಡಿದ ಆಶಾಬಿಂಬ ದಿನ ದಿನಕ್ಕೆ ಚಂದ್ರನಂತೆ ಬೆಳೆಯುತ್ತಿತ್ತು;

ವಿನೋದವೆಂದರಿತರೂ ಈ ನುಡಿಗಳು ಅವನ ಹೃದಯವನ್ನು ಕರಗಿಸಿದುವು. "ಇಲ್ಲ, ಇಲ್ಲ. ನೀನು ಇಂಥ ಅಶುಭವನ್ನಾಡಬಹುದೆ? ನಿನ್ನನ್ನು ಬಿಟ್ಟು ನಾನು ಇರಬಲ್ಲೆನೆ? ನಿನ್ನ ಸಾವನ್ನು ನಾನು ಬಗೆಯುವುದಾದರೆ ಜೊತೆಯಲ್ಲಿ ನನ್ನದನ್ನೂ ಕೋರುತ್ತೇನೆ. ಸಾವು ನಿನ್ನನ್ನು ಅಪ್ಪುವುದಾದರೆ ನನ್ನನ್ನೂ ಅಪ್ಪಲೇಬೇಕು. ನಾನು ಹಾಗೆ ಯೋಚಿಸುತ್ತಿರಲಿಲ್ಲ. ಈ ಬೆಟ್ಟಗಳ ತಪ್ಪಲಿನಲ್ಲಿಯೇ ಯಾವುದಾದರೂ ಹಳ್ಳಿಪಳ್ಳಿಗಳ ನಡುವೆ ನಮಗೆ ಒಂದು ಸೊಗಸಾದ ಹೊಲವಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಯೋಚಿಸುತ್ತಿದ್ದೆ. ಅಷ್ಟುಮಟ್ಟಿನ ಹೊಲವಿದ್ದು, ಎಲ್ಲರೂ ನನ್ನನ್ನು ಗೌಡರೇ ಗೌಡರೇ ಎಂದು ಕರೆಯುತ್ತಿದ್ದರೆ ನಾನೂ ಒಬ್ಬ ಗಣ್ಯಮನುಷ್ಯನಾಗಿರುತ್ತಿದ್ದೆ. ಹಳ್ಳಿಪಳ್ಳಿಯ ಜನರಿಗೆಲ್ಲ ನಾನೇ ಮುಂದಾಳು, ನಾನೇ ನ್ಯಾಯವಾದಿ, ನನ್ನ ಮಾತೇ ವೇದವಾಕ್ಯ. ಹೀಗೆ ಬಾಳಿ ಬದುಕಿ ಮುದುಕನಾಗಿ, ನೀನೂ ಮುತ್ತಜ್ಜಿಯಾಗಿ ಮಕ್ಕಳು ಮೊಮ್ಮಕ್ಕಳು ಬಿಟ್ಟು ಸಾಯುವುದನ್ನು ನೋಡಿ, ಸಂತೋಷದಿಂದ ಸಾಯುತ್ತಿದ್ದೆ. ನನ್ನ ಹೆಸರಾಗಿ ಒಂದೆರಡು ಗುಡಿಗೋಪುರಗಳನ್ನು ಕಟ್ಟಿಸಿ, ದೇವರಿಗೆ ನನ್ನ ಕಾಣಿಕೆ ಸಲ್ಲಿಸಿ ಸಾಯುತ್ತಿದ್ದೆ. ಅಂದು, ನಾಡಜನರೆಲ್ಲ ನನ್ನನ್ನು ಕುರಿತು –'ಎಂಥ ಮನುಷ್ಯ! ಎಂಥ ಸತ್ಯವಂತ, ಎಂಥ ದಯಾಳು, ನಮ್ಮ ತಂದೆಯ ಹಾಗೆ ಇದ್ದ! ಇದು ಅವನು ಕಟ್ಟಿಸಿದ ಗುಡಿ; ಗುಡಿಯ ಶಾಸನದಲ್ಲಿ ಇದೋ ಅವನ ಹೆಸರು'–ಎಂದು ನನ್ನನ್ನು ನೆನೆಯುವರು. ಜನರ ಬಾಯಲ್ಲಿ ನನ್ನ ಹೆಸರು ನಿಲ್ಲುವುದು. ನನಗೆ ಹೊಲ, ಗದ್ದೆ, ಹೆಸರು ಏನೂ ಇಲ್ಲದಿರುವುದರಿಂದ ನಾನು ಹೇಳಿದ್ದು ಜಂಬದ ಮಾತಾಗಲಾರದು; ಬರಿಬಯಕೆ, ಅಲ್ಲವೆ?" ಎಂದು ತರುಣನ ಕಡೆಗೆ ತಿರುಗಿ ನೋಡಿದನು.

ಆಗಂತುಕನು–"ನೋಡಿದಿರೊ! ಸ್ಮಾರಕವೊಂದನ್ನು ಬಯಸುವುದು ಮನುಷ್ಯನಿಗೆ ಸಹಜವಾದ ಇಚ್ಛೆ. ಆ ಸ್ಮಾರಕ ಒಂದು ಬೋಳುಗಲ್ಲಾದರೂ ಸರಿಯೆ, ಅಮೃತಶಿಲಾನಿರ್ಮಿತವಾದ ಬೃಂದಾವನವಾದರೂ ಸರಿಯೆ; ಅಥವಾ ಇವೆಲ್ಲಕ್ಕಿಂತ ಮೇಲಾಗಿ, ಜನಜನಾಂಗದ ನೆನಪಿನಲ್ಲಾದರೂ ಸರಿಯೆ–ಮನುಷ್ಯನು ತನ್ನ ಹೆಸರು ಶಾಶ್ವತವಾಗಿರಲಿ ಎಂದು ಕೋರುವುದು ಸಹಜ" ಎಂದು ಉತ್ಸಾಹದಿಂದ ಹೇಳಿದನು.

"ಈ ರಾತ್ರಿ ಏನೋ ವಿಚಿತ್ರವಾಗಿದ್ದೇವೆ. ನಾವು ಕನಸು ಕಾಣುತ್ತಿಲ್ಲ. ಆದರೂ ಕನಸುಕಾಣುತ್ತಿರುವಂತೆ ಮಾತಾಡುತ್ತಿದ್ದೇವೆ. ಮನೆಮಂದಿಯ ಮನಸ್ಸೆಲ್ಲ ಹೀಗೆ ಚೆದರುವುದು ಕಟ್ಟಿದೆಂದು ಹೇಳುತ್ತಾರೆ. ನೋಡಿ, ಆ ಮಕ್ಕಳ ಮಾತನ್ನ ಆಲಿಸಿ" ಎಂದಳು ಮನೆಯ ಯಜಮಾನಿತಿ. ಅವಳ ಕಣ್ಣುಗಳಲ್ಲಿ ಒಂದೆರಡು ಹನಿಗಳು ಊರಿದ್ದುವು.

ಬಂದ ದಾರಿ ಯಾವುದು? ಹೋದ ದಾರಿ ಯಾವುದು? ಎಲ್ಲಿಗೆ ಹೋದನು? ಎಂದು ಯಾರೂ ಕೇಳರು. ನನ್ನ ಉದ್ದೇಶವನ್ನು ಸಾಧಿಸಿದಲ್ಲದೆ ನಾನು ಸಾಯಲಾರೆ. ಆಮೇಲೆ ಬರಲಿ ಸಾವು! ನನ್ನ ಸ್ಮಾರಕವನ್ನು ನಾನು ನಿರ್ಮಿಸಿರುವೆನು!'

ತರುಣನ ಈ ಭಾವನೆಗಳು ಅವರಿಗೆ ತೀರ ಹೊಸವಾಗಿದ್ದುವು. ಆದರೆ ಅವನ ಮಾತುಗಳಲ್ಲಿ ಹೊರಹೊಮ್ಮಿದ ಸಹಜವಾದ ಉದ್ವೇಗವನ್ನೂ ತೀವ್ರಾಸಕ್ತಿಯನ್ನೂ ಕಂಡು ಆ ಭಾವನೆಗಳನ್ನು ಅವರು ಅರಿತುಕೊಳ್ಳಲು ಬಲ್ಲವರಾಗಿದ್ದರು. ತಾನು ಮೈ ಮರೆತು ಹಾಗೆ ಉತ್ಸಾಹದಿಂದ ಮಾತನಾಡಿದ್ದು ಹಾಸ್ಯಾಸ್ಪದವಾಗಿರಬಹುದೆಂದು ಊಹಿಸಿ, ತರುಣನು ಲಜ್ಜೆಗೊಂಡನು.

ಒಡನೆ ಹಿರಿಹುಡುಗಿಯೊಡನೆ ಹೀಗೆ ನುಡಿದನು:

"ನನ್ನನ್ನು ನೋಡಿ ನಗುತ್ತೀಯೆ ನೀನು. ಸುತ್ತಮುತ್ತಣ ಜನರು ದೂರ ನಿಂತು ನೋಡಿದರೆ ಮಾತ್ರ ಕಾಣುವಂತೆ, ಹಿಮವತ್ಪರ್ವತಾಗ್ರದ ಮಂಜುಗಲ್ಲಿನ ಮೇಲೆ ಶೀತಲ ಶ್ವೇತಶಿಲಾಮೂರ್ತಿಯಾಗುವಂತೆ ಬರಿ ಬತ್ತಲೆಯಾಗಿ ನಿಲ್ಲಹೋಗಬೇಕೆನ್ನುವುದು ನನ್ನ ಮಹತ್ವಾಕಾಂಕ್ಷೆ ಎಂದು ಯೋಚಿಸುವೆಯಲ್ಲವೆ ನೀನು? ಹಾಸ್ಯಾಸ್ಪದವಾದರೂ ಚಿಂತೆಯಿಲ್ಲ, ಆ ಕೆಲಸ ಮಾಡತಕ್ಕುದ್ದೇ ಸರಿ. ಹಿಮವತ್ಪರ್ವತಾಗ್ರ! ಶೀತಲ ಶ್ವೇತ ಶಿಲಾಮೂರ್ತಿಯಾಗಿ ಶಾಶ್ವತವಾಗಿ ನಿಲ್ಲಲು ಎಂತಹ ಪಾವನಪೀಠಾಗ್ರ!"

ಹುಡುಗಿಯೂ ಲಜ್ಜೆಗೊಂಡು ಮೆಲುಮಾತಿನಲ್ಲಿ ಇಂತುಸಿರಿದಳು: "ನಮ್ಮ ವಿಷಯವಾಗಿ ಯಾರೂ ಯೋಚಿಸಲೂ ಬೇಕಾಗಿಲ್ಲ; ತೃಪ್ತಿಯಿಂದ ಹಾಯಾಗಿ ಈ ಬೆಂಕಿಯ ಮುಂದೆ ಕುಳಿತಿರುವುದು ಲೇಸು.'

ಕ್ಷಣಹೊತ್ತು ಆಲೋಚನೆಯಲ್ಲಿ ಮುಳುಗಿ ಎದ್ದು, ಯಜಮಾನ–"ಈ ತರುಣ ಹೇಳುವುದು ಒಂದು ರೀತಿಯಲ್ಲಿ ಸಹಜವಾಗಿದೆ ಎಂದು ನನಗೆ ತೋರುತ್ತದೆ. ನಾನು ಆ ಕಡೆಗೆ ಮನಸ್ಸು ಕೊಟ್ಟಿದ್ದರೆ ನಾನೂ ಹಾಗೆಯೇ ಭಾವಿಸುತ್ತಿದ್ದೆ" ಎಂದು ನಿಲ್ಲಿಸಿ, ತನ್ನ ಹೆಂಡತಿಯನ್ನು ಕುರಿತು, ಮತ್ತೆ ನುಡಿದನು: "ಅಹಾ! ಎಷ್ಟು ವಿಚಿತ್ರವಾಗಿದೆ. ಇವನ ಮಾತುಗಳನ್ನು ಕೇಳಿ ನನ್ನ ತಲೆಯಲ್ಲಿ ಏನೇನೋ ಭಾವನೆಗಳು ಹುಟ್ಟುತ್ತಿವೆ. ಅವು ಎಂದಿಗೂ ಕಾರ್ಯರೂಪದಲ್ಲಿ ಪರಿಣಾಮಗೊಳ್ಳದಿರಬಹುದು. ಆದರೂ...."

ಅಷ್ಟರಲ್ಲಿ ಅವನ ಹೆಂಡತಿ–"ಅವು ನಡೆದರೂ ನಡೆಯಬಹುದು. ನಾನು ಸಾಯುವೆನೆಂದೂ ನಾನು ಸತ್ತಮೇಲೆ ಏನು ಮಾಡುವುದೆಂದೂ ಯೋಚಿಸುತ್ತಿರುವಿರೇನು?" ಎಂದು ವಿನೋದದಿಂದ ಕೇಳಿದಳು.

ಎಂದುಕೊಂಡು ಯಜಮಾನ ಸುಮ್ಮನಾದನು. ಆದರೆ ಮತ್ತೆ ಯಾರೂ ಕೂಗಿದಂತಾಗಲಿಲ್ಲ. ಗಾಡಿ ಮುಂದಕ್ಕೆ ಉರುಳುತ್ತ ಹೊರಟ ಸದ್ದು ಕೇಳಿತು. ಗಾಡಿಯಲ್ಲಿದ್ದವರು ಇನ್ನೂ ಹಾಡುತ್ತ ಕೇಕೆ ಹಾಕುತ್ತಿದ್ದರು. ಬರುಬರುತ್ತ ಅವರ ಶಬ್ದ ಕಡಮೆಯಾಗುತ್ತ ಬಂದಿತು.

ಹುಡುಗ ಮತ್ತೆ ಹೇಳಿದನು: "ಅಮ್ಮಾ, ಆ ಗಾಡಿಯವರನ್ನು ಕೂಗಿ ನಿಲ್ಲಿಸಿದ್ದರೆ ಚೆನ್ನಾಗಿತ್ತು. ನಾನು ಹೇಳಿದೆನಲ್ಲ, ಅಲ್ಲಿಗೆ ಸ್ನಾನಕ್ಕೆ ಹೋಗುವುದಕ್ಕೆ ಅವರು ಗಾಡಿಯ ಮೇಲೆ ಕೂರಿಸಿಕೊಂಡು ಹೋಗುತ್ತಿದ್ದರು, ಗಾಡಿ ಆ ಕಡೆಯೇ ಹೋಗುತ್ತಿದೆ ಅಲ್ಲವೆ ಅಮ್ಮ?"

''ಸುಮ್ಮನೆ ಮಲಗಿಕೊಳ್ಳಪ್ಪ'' ಎಂದಳು ತಾಯಿ. ರಾತ್ರಿ ಹೊರಹೊರಡಬೇಕೆಂದು ಹೇಳುತ್ತಿದ್ದ ಆ ಹುಡುಗನ ಹುಚ್ಚುಬಯಕೆಗೆ ಮತ್ತೊಮ್ಮೆ ಎಲ್ಲರೂ ನಕ್ಕರು.

ಆದರೆ ಮನೆಯ ಹಿರಿಹುಡುಗಿ ನಗಲಿಲ್ಲ, ಸುಮ್ಮನಿದ್ದಳು. ಅವಳ ಮುಖದ ಮೇಲೆ ಚಿಂತೆಯ ಮಬ್ಬು ಮುಸುಕಿದಂತಿತ್ತು. ಉರಿಯುತ್ತಿದ್ದ ಬೆಂಕಿಯನ್ನು ಏನೊ ಒಂದು ವಿಧವಾದ ಅರ್ಥವಿಲ್ಲದ ದೃಷ್ಟಿಯಿಂದ ನೋಡುತ್ತಿದ್ದಳು. ಇದ್ದಕ್ಕಿದ್ದಂತೆ ನಡುಗಿದಳು; ಒಮ್ಮೆ ನೀಳವಾಗಿ ಉಸಿರೆಳೆದುಕೊಂಡು ನೀಳವಾಗಿ ಉಸಿರುಬಿಟ್ಟಳು. ಒಡನೆಯೆ ಎಚ್ಚರಗೊಂಡಂತೆ ಸುತ್ತಲೂ ತಿರುಗಿ ನೋಡಿದಳು; ತನ್ನ ಹೃದಯದ ಭಾವನೆಯನ್ನು ಯಾರಾದರೂ ಗ್ರಹಿಸಿದರೋ ಏನೋ ಒಂದು ತಿಳಿಯಬೇಕೆಂಬಂತೆ ಎಲ್ಲರ ಕಡೆಗೂ ಒಮ್ಮೊಮ್ಮೆ ತಿರುಗಿ ನೋಡಿದಳು, ಲಜ್ಜೆಗೊಂಡಳು. ಆಗಂತುಕನ ಕಡೆ ತಿರುಗಿದಾಗ, "ಏನು ಯೋಚಿಸುತ್ತಿದ್ದೆ ನೀನು?" ಎಂದು ಅವನು ಕೇಳಿದನು.

''ಏನೂ ಇಲ್ಲ, ಏನೋ ಯೋಚಿಸುತ್ತ ಇದ್ದಕ್ಕಿದ್ದಂತೆ ನಾನು ಒಂಟಿಯಾಗಿದ್ದಂತೆ ತೋರಿತು. ಸುತ್ತಲೂ ತಿರುಗಿ ನೋಡಿದೆ. ಎಲ್ಲರ ನಡುವೆ ಕುಳಿತು ಒಂಟಿಯಾಗಿರುವಂತೆ ತೋರಿದ್ದಕ್ಕಾಗಿ ನನಗೆ ನಾಚಿಕೆಯಾಯಿತು" ಎಂದು ತಲೆ ತಗ್ಗಿಸಿಕೊಂಡು, ಲಜ್ಜೆಯಿಂದ ನಗುತ್ತ ಹೇಳಿದಳು.

"ಓಹೋ! ನೀನು ಒಂಟಿಯಾಗಿರುವಂತೆ ನಿನಗೆ ತೋರಿತೇನು? ಇನ್ನೊಬ್ಬರ ಮನಸ್ಸಿನಲ್ಲಿ ಏನಿದೆ ಎನ್ನುವುದನ್ನು ತಿಳಿಯುವ ಶಕ್ತಿ ನನಗೆ ಎಂದಿನಿಂದಲೂ ಇದೆ. ನಿನ್ನ ಮನಸ್ಸಿನ ಗುಟ್ಟನ್ನು ಒಡೆದು ಹೇಳಲೆ? ಬೆಂಕಿಯ ಮುಂದೆ ಕುಳಿತಿರಲು ಎಲ್ಲಿಯ ಚಳಿ, ಎಲ್ಲಿಯ ನಡುಕ? ತಾಯಿತಂದೆಗಳ ಬಳಿ ಕುಳಿತು, ಒಂಟಿತನದ ಭಾವನೆಯೇಕೆ? ಈ ಭಾವನೆಯ ಅರ್ಥವನ್ನು ಬಿಡಿಸಿ ಹೇಳಲೆ?"

ಎಲ್ಲರೂ ಕಿವಿಗೊಟ್ಟು ಆಲಿಸಿದರು. ಚಿಕ್ಕಮಕ್ಕಳನ್ನೆಲ್ಲಾ ಪಕ್ಕದ ಒಂದು ಕೋಣೆಯಲ್ಲಿ ಮಲಗಿಸಿತ್ತು; ಆ ಕೋಣೆಗೂ ಇವರೆಲ್ಲ ಕುಳಿತಿದ್ದ ಎಡೆಗೂ ನಡುವೆಯಿದ್ದ ಬಾಗಿಲ ಕಡೆ ತೆರೆದಿದ್ದುದರಿಂದ ಆ ಮಕ್ಕಳು ತಮ್ಮ ತಮ್ಮಲ್ಲಿ ಬಿಡದೆ ಮಾತನಾಡುವುದು ಇವರಿಗೆ ಕೇಳುವಂತಿತ್ತು. ಬೆಂಕಿ ಕಾಯುತ್ತ ಮಾತನಾಡುತ್ತಿದ್ದ ದೊಡ್ಡವರ ಸೋಂಕು ಈ ಎಳೆಯರಿಗೂ ಅಂಟಿದ್ದಂತೆ ತೋರಿತು. ತಾವು ಬೆಳೆದು ದೊಡ್ಡವರಾದಾಗ ತಾನು ಇದು ಮಾಡುತ್ತೇನೆ ತಾನು ಅದು ಮಾಡುತ್ತೇನೆ ಎಂದು ಹುಚ್ಚುಬಯಕೆಗಳನ್ನು ಬಯಸುವುದರಲ್ಲಿ ಪೈಪೋಟಿ ಮಾಡುತ್ತಿದ್ದರು. ಕೊನೆಗೆ, ಒಬ್ಬ ಚಿಕ್ಕ ಹುಡುಗ ತನ್ನ ಅಣ್ಣತಮ್ಮಂದಿರು ಅಕ್ಕತಂಗಿಯರೊಡನೆ ಹೇಳುವುದು ಬಿಟ್ಟು ಅಮ್ಮನನ್ನು ಕೂಗಿ ಹೇಳಿದನು:

"ಅಮ್ಮಾ, ನನಗೆ ಹೀಗೆ ಬಯಕೆಯಾಗುತ್ತಮ್ಮಾ: ನೀನು, ಅಪ್ಪ, ಅಜ್ಜಿ, ಅಕ್ಕ, ನಮ್ಮ ಮನೆಗೆ ಬಂದಿದ್ದಾರಲ್ಲ, ಇವರೂ ಕೂಡ–ಎಲ್ಲರೂ ಈಗಲೆ ಹೋಗಿ, ಅಲ್ಲಿ ಮೇಲಿನಿಂದ ನೀರು ಬೀಳುವುದಿಲ್ಲವೆ, ಅದರ ಕೆಳಗೆ ಕುಳಿತು ಸ್ನಾನಮಾಡಿ ನೀರು ಕುಡಿದುಕೊಂಡು ಬರೋಣ ಕಣಮ್ಮ. ಎಷ್ಟು ದಿವಸದಿಂದ ಹೇಳುತ ಇದ್ದೀಯಮ್ಮ, ನನ್ನ ಅಲ್ಲಿಗೆ ಕರೆದುಕೊಂಡು ಹೋಗುತೀನಿ ಅಂತ."

ಮಗುವಿನ ಈ ಹುಚ್ಚುಬಯಕೆಗೆ ಎಲ್ಲರೂ ನಕ್ಕರು. ಬೆಚ್ಚಗೆ ಮನೆಯೊಳಗೆ ಇರುವವರನ್ನು ಹೊರಗೆ ಚಳಿಗೆ ಎಳೆದುಕೊಂಡು ಹೋಗಿ, ಕಣಿವೆಯಲ್ಲಿದ್ದ ಒಂದು ಸಣ್ಣ ಜಲಪಾತದ ಕೆಳಗೆ ಕುಳಿತು ಆ ನಡುರಾತ್ರಿಯಲ್ಲಿ ಸ್ನಾನಮಾಡಿ ನೀರು ಕುಡಿಯುವುದೆಂದರೆ ಯಾರಿಗೆ ನಗು ಬರದು! ಹುಡುಗ ಹಾಗೆ ಹೇಳಿದ ಕ್ಷಣದಲ್ಲಿ, ಹೊರಗೆ ದಾರಿಯಲ್ಲಿ ಒಂದು ಗಾಡಿ ಹರಿದುಬಂದು ಬಾಗಿಲ ಮುಂದೆ ನಿಂತಂತಾಯಿತು. ಗಾಡಿಯಲ್ಲಿ ಎರಡು ಮೂರು ಮಂದಿ ಇದ್ದಂತೆ ತೋರಿತು; ಅವರು ದನಿಗೂಡಿಸಿ ಮನಬಂದಂತೆ ಹಾಡುತ್ತ ಉಲ್ಲಾಸಪಡುತ್ತಿದ್ದರು; ಅವರ ಹಾಡಿನ ನೀಳ್ದನಿ ಗುಹೆಗಹ್ವರಗಳಲ್ಲಿ ಹೋಗಿ ತಾಗಿ ಮರುದನಿಗೈದು ಗುಡಿಸಿಲಿನೊಳಗಿದ್ದವರಿಗೆ ನೂರ್ಮಡಿಯಾಗಿ ಕೇಳಿಸುತ್ತಿತ್ತು. ಅವರು ಒಮ್ಮೆ ನಡುವೆ ಹಾಡನ್ನು ನಿಲ್ಲಿಸಿದರು: ಪಯಣವನ್ನು ಮುಂದುವರಿಸುವುದೆ, ಇಲ್ಲದೆ ಹೋದರೆ ರಾತ್ರಿ ಗುಡಿಸಿಲಿನಲ್ಲಿ ತಂಗುವುದೆ ಎಂದು ಅವರು ಆಲೋಚಿಸುತ್ತಿದ್ದಂತೆ ತೋರಿತು.

"ಅಪ್ಪ, ಅವರು ನಿನ್ನ ಹೆಸರು ಹಿಡಿದು ಕೂಗುತ್ತಿದ್ದಾರೆ" ಎಂದಳು ಹುಡುಗಿ.

ಆದರೆ ಅವರು ತನ್ನ ಹೆಸರು ಹಿಡಿದು ಕೂಗಿದರೇ ಎಂದು ಯಜಮಾನನಿಗೆ ಸಂದೇಹವಾಯಿತು. ಯಾರೂ ಕೂಗಿದಂತೆ ಅವನಿಗೆ ಕೇಳಿಸಿರಲಿಲ್ಲ. ನಿಜವಾಗಿ ಅವರು ಕೂಗಿರುವುದಾದರೆ ಮತ್ತೊಮ್ಮೆ ಕೂಗುವರು, ಬಾಗಿಲು ತಟ್ಟುವರು–

ಅಜ್ಜಿ ಮುಖವನ್ನೆತ್ತಿದಳು; ಆದರೂ ಅವಳ ಕೈಬೆರಳುಗಳು ತಮ್ಮ ಕೆಲಸವನ್ನು ತಾವು ಮಾಡುತ್ತಿದ್ದುವು. ಇವಳು ಏನು ಹೇಳಲಿರುವಳೋ ಎಂದು ಎಲ್ಲರೂ ಕುತೂಹಲಗೊಂಡರು. ಅಜ್ಜಿ ಮಾತನಾಡ ತೊಡಗಿದಳು:

"ಚಿಕ್ಕವರಂತೆ ಮುದುಕರಿಗೂ ಅವರವರ ಬಯಕೆಗಳಿರುತ್ತವೆ. ನೀವೆಲ್ಲ ಮನಸ್ಸಿಗೆ ಬಂದಂತೆ ಬಯಸುತ್ತ ಗಾಳಿಗೋಪುರ ಕಟ್ಟುತ್ತ ಇರುವುದನ್ನು ನೋಡಿ ನನ್ನ ಮನಸ್ಸೂ ಎತ್ತೆತ್ತಲೋ ಹರಿದುಹೋಗುತ್ತಿದೆ. ಇವತ್ತೋ ನಾಳೆಯೋ ಕಣ್ಣುಮುಚ್ಚಿಕೊಳ್ಳುವ ಮುದುಕಿಗೆ ಏನು ಬಯಕೆ ಎಂದು ಅನ್ನಿಸಬಹುದು. ಆದರೆ, ಮಕ್ಕಳಿರಾ, ನಿಮಗೆ ಹೇಳುವತನಕ ನನ್ನ ಮನಸ್ಸಿಗೆ ನೆಮ್ಮದಿಯಿರದು."

"ಅದೇನು ಅದು?" ಎಂದು ಅವಳ ಮಗನೂ ಸೊಸೆಯೂ ಒಟ್ಟಿಗೆ ಕೇಳಿದರು.

ಆ ಮುದುಕಿ ಅವರಿಗೆ ಒಂದು ಸಂಗತಿಯನ್ನು ಹೇಳತೊಡಗಿದಳು; ತಾನು ಹೇಳುವುದರಲ್ಲಿ ಏನೋ ಒಂದು ರಹಸ್ಯವಿದೆಯೆನ್ನುವಂತೆ ಅವಳು ಪಿಸುಮಾತುಗಳನ್ನಾಡತೊಡಗಲು, ಅವರು ಅವಳ ಹತ್ತಿರ ಹತ್ತಿರ ಸರಿದು ಕುಳಿತರು. ತಾನು ಸತ್ತರೆ ತನ್ನ ಮದುವೆಯಲ್ಲಿ ಉಟ್ಟಿದ್ದ ಪಟ್ಟೆಯ ಸೀರೆಯನ್ನೇ ತನಗೆ ಉಡಿಸಿ, ತನ್ನ ಮುಂದಲೆಕೂದಲನ್ನು ಸರಿಮಾಡಿ, ತನ್ನ ಗಂಡನನ್ನು ಹೂಳಿರುವಲ್ಲಿಯೇ ಹಳ್ಳತೆಗೆದು ತನ್ನನ್ನು ಹೂಳಬೇಕೆಂದೂ, ತನ್ನ ಗಂಡ ತನಗಾಗಿ ಅಲ್ಲಿ ಕಾದಿರುವನೆಂದೂ ಹೇಳಿದಳು. ಎಲ್ಲರಿಗೂ ಆಶ್ಚರ್ಯವಾಯಿತು ಈ ನುಡಿಗಳನ್ನು ಕೇಳಿ. ಮುದುಕಿ ಮುಂದುವರಿಸಿದಳು: "ಅಚ್ಚರಿಯೇಕೆ ಕಂದಗಳಿರಾ! ನನ್ನ ಯಜಮಾನರು ಕನಸಿನಲ್ಲಿ ಬಂದು ಹಾಗೆ ಹೇಳಿಹೋದರು ನಿನ್ನೆಯ ರಾತ್ರಿ. ನನಗೆ ನೀವು ಆ ಸೀರೆಯನ್ನು ಉಡಿಸದಿದ್ದರೆ ಅವರು ನನ್ನನ್ನು ಬಳಿಗೇ ಸೇರಿಸರು. ಆದ್ದರಿಂದ ನಾನು ಹೇಳಿದಹಾಗೆ ಕೇಳಿ. ನಾನು ಸತ್ತಾಗ ನನ್ನ ಪಟ್ಟೆಯ ಸೀರೆ ಉಡಿಸಿ, ಜರತಾರಿಯ ಕುಪ್ಪಸವನ್ನು ತೊಡಿಸಿ, ಅವನ್ನು ನನ್ನ ಆ ಪೆಟ್ಟಿಗೆಯಲ್ಲಿ ಇಟ್ಟಿದ್ದೇನೆ. ನನ್ನ ಮುಂದಲೆಕೂದಲನ್ನು ಬಾಚುವುದನ್ನು ಮಾತ್ರ ಖಂಡಿತ ಮರೆಯಬೇಡಿ."

"ಹಾಗೆಲ್ಲ ಅನ್ನಬೇಡ ಅಜ್ಜಿ!" ಎಂದು ಕುಗ್ಗಿದ ದನಿಯಲ್ಲಿ ಮೊಮ್ಮಗಳು ಹೇಳಿದಳು.

"ಯಾಕೆ ಕೊರಗುತ್ತೀಯಮ್ಮ?" ಎಂದು ಮುದುಕಿ ಸಂತೋಷಚಿತ್ತಳಾಗಿಯೇ ಮುಂದುವರಿಸಿದಳು: "ಯಾಕೆ ಕೊರಗುತೀಯಮ್ಮ? ನಾನು ಒಂದಲ್ಲ ಒಂದು ದಿನ ಸಾಯಬೇಕು. ನೀವು ಚಿರಕಾಲ ಬಾಳಿ. ನಾನು ಸತ್ತಾಗ ಮಾತ್ರ ನನ್ನನ್ನು

"ಹುಡುಗಿಯಾದವಳು ತನ್ನ ಮನಸ್ಸನ್ನು ಮಾತಿನಿಂದ ತಿಳಿಸುವಳೆ? ಮಾತುಗಳಲ್ಲಿ ತಿಳಿಸಿದ ಆ ಭಾವನೆ ಎಂದಿಗೂ ಹುಡುಗಿಯ ಭಾವನೆಯಾಗಿರಲಾರದು" ಎಂದು ಆ ಮಲೆನಾಡ ಕನ್ನೆ ನಗುತ್ತ ಹೇಳಿದಳು, ಅವನ ಕಡೆ ತಿರುಗದೆ.

ಇದಿಷ್ಟನ್ನೂ ಆಗಂತುಕನೂ ಆ ಹುಡುಗಿಯೂ ತಮ್ಮತಮ್ಮಲ್ಲಿ ಹೇಳಿಕೊಂಡರು. ಅವರಲ್ಲಿ ಪರಸ್ಪರ ಅನುರಾಗ ಮೊಳೆಯುತ್ತಿದ್ದಂತೆ ತೋರುತ್ತದೆ; ಜಡವಾದ ಈ ಭೂಮಿಯ ಮೇಲೆ ಅದು ಪುಷ್ಪಿತವಾಗಲಾರದು, ಸ್ವರ್ಗದಲ್ಲಿ ಮಾತ್ರ ಪುಷ್ಪಿತವಾಗಿ ಫಲ ಬಿಡತಕ್ಕದ್ದು ಎನ್ನುವಷ್ಟು ಶುದ್ಧವಾಗಿತ್ತು ಅವರ ಅನುರಾಗದ ಭಾವನೆ. ಆಗಂತುಕನಲ್ಲಿ ನೆಲಸಿದಂಥ ಸೌಮ್ಯ ಗಾಂಭೀರ್ಯ ಯಾವ ಹೆಣ್ಣಿಗಾದರೂ ಸೊಗಸೆ; ಸ್ವಾಭಿಮಾನವುಳ್ಳ ಭಾವುಕನೊಬ್ಬನ ಹೃದಯವನ್ನು ಇಂಥ ಸರಳ ಬಾಲೆಯೊಬ್ಬಳು ಮುಗ್ಧಗೊಳಿಸುವುದೂ ಸಹಜವೆ.

ಆದರೆ, ಅವರು ಹೀಗೆ ಮೆಲ್ಲನೆ ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿರುವಾಗ, ಕನ್ನೆಯೊಬ್ಬಳ ಸಹಜ ಲಜ್ಜಾಮನೋವೃತ್ತಿಯನ್ನೂ ಅವಳ ಶಾಂತವದನದ ಮೇಲೆ ಆಡುತ್ತಿದ್ದ ಸುಖಸ್ಪರ್ಶಿತವಾದ ಚಿಂತಾತರಂಗಗಳನ್ನೂ ಅವನು ಈಕ್ಷಿಸುತ್ತಿದ್ದಾಗ,– ಇದ್ದಕ್ಕಿದ್ದಂತೆ ಗಾಳಿ ಕಣಿವೆಯ ಬಾಯಲ್ಲಿ ನುಗ್ಗಿ ಚೀರಿತು! ಅದರ ಚೀರಾಟ ಕರ್ಕಶವಾಗಿತ್ತು; ಗೋಳು ಕರೆಯ ದನಿ ಅಸಹ್ಯವಾಗಿತ್ತು. ಇಷ್ಟುಹೊತ್ತಿಗೆ ಅಗ್ಗಿಷ್ಟಿಕೆಯ ಕೆಂಡದ ರಾಶಿಯ ಮೇಲೆ ಬೂದಿ ಮುಚ್ಚುತ್ತ ಬಂದಿದ್ದು, ಗುಡಿಸಿಲಿನೊಳಗೆ ಬೆಳಕು ಕಡಮೆಯಾಗಿತ್ತು. ಗಾಳಿಯ ಈ ದನಿ ಕೇಳಬರಲು ಬೆಂಕಿಯಾರಿ ಕತ್ತಲೆ ತುಂಬಿದಂತೆ ಆಯಿತು. ಮನೆಯ ಯಜಮಾನ ಕೆಂಡವನ್ನು ಕೆದರಿ, ಬೂದಿಯನ್ನು ಉರುಬಿ, ಇನ್ನಷ್ಟು ಕಟ್ಟಿಗೆ ಹಾಕಿ ಉರಿ ಮಾಡಿದನು. ಬೆಂಕಿ ಮತ್ತೊಮ್ಮೆ ಕೆಂಬೆಳಕನ್ನು ಬೀರುತ್ತ ಕಳಕಳಿಸತೊಡಗಿತು. ಮನೆಮಂದಿಯ ಮನಸ್ಸೆಲ್ಲ ತಿಳಿದಂತೆ ಅವರ ಮುಖಗಳು ಸಮಾಧಾನದಿಂದ ಕೂಡಿ ಮತ್ತೆ ಗೆಲವಾದುವು. ಬೆಂಕಿಯ ಬೆಳಕು ಅವರ ಮುಖವನ್ನು ಬೆಳಗಿ, ಹಿತವಾದ ಶಾಖದಿಂದ ಎಲ್ಲರನ್ನೂ ಹುರಿದುಂಬಿಸುತ್ತಿತ್ತು. ಅಲ್ಲಿ ಹಾಸಿಗೆಯಲ್ಲಿ ಮಲಗಿದ್ದ ಮಕ್ಕಳ ಮುಖಗಳು ಕೆಂಬೆಳಕಿನಲ್ಲಿ ಮಾವಿನ ಚಿಗುರಿನಂತೆ ಹೊಳೆಯುತ್ತಿದ್ದುವು; ಇತ್ತ ಯಜಮಾನ ಮತ್ತು ಅವನ ಹೆಂಡತಿ–ಒಬ್ಬರಿಗೊಬ್ಬರು ಆಸರೆ ಎಂಬಂತೆ ಪಕ್ಕಪಕ್ಕದಲ್ಲಿ ಕುಳಿತಿದ್ದರು; ಇವರಿಬ್ಬರ ಪಕ್ಕದಲ್ಲಿ ಅವರ ಹಿರಿಮಗಳು; ಅವಳ ಕೆಲದಲ್ಲಿ ಹೆಬ್ಬಯಕೆಯ ದಾರಿಹೋಕ, ಮನೆಯ ಅಭ್ಯಾಗತ; ಒಕ್ಕಡೆ, ಹೆಚ್ಚು ಬೆಚ್ಚಗಿರುವ ಕಡೆ, ಹಚ್ಚಡಕ್ಕೆ ಇನ್ನೂ ಕರೆಕಟ್ಟುತ್ತ ಮೌನವಾಗಿ ಕುಳಿತಿದ್ದ ಅಜ್ಜಿ.

ಹಾಗೆ ಚೀರಿ ಕೂಡಲೆ ಹೊರನುಗ್ಗಿ, ತಾವು ಸುರಕ್ಷಿತವಾದ ಸ್ಥಳವೆಂದು ಬಗೆದಿದ್ದ ಒಂದು ಸ್ಥಳಕ್ಕೆ ಹೋಗಿ ನಿಂತರು. ಇಂಥ ದುರ್ಘಟನೆಯೊದಗಬಹುದೆಂದು ಮುಂಬಗೆದಿದ್ದ ಅವರು ಅಲ್ಲಿ ಕಲ್ಲು ಗುಂಡುಗಳ ಒಂದು ತಡೆಗೋಡೆಯನ್ನು ನಿಲ್ಲಿಸಿದ್ದರು! ಆದರೆ–ಅಯ್ಯೋ, ಅವರು ಸರಕ್ಷಿತವಾದ ಸ್ಥಳವನ್ನು ಬಿಟ್ಟು ಮೃತ್ಯುವಿನ ದಾಳಿಗೆ ತಲೆಕೊಟ್ಟು ನಿಂತಂತಾಯಿತು. ಕ್ಷಣದಲ್ಲಿ, ಪರ್ವತಾಗ್ರದ ಒಂದು ಪಕ್ಕವೇ ಕಳಚಿಕೊಂಡು, ಶಿಲಾವರ್ಷ ಕೊಚ್ಚಿ ಬಂದಿತು. ಗುಡಿಸಿಲನ್ನು ಮುಟ್ಟುವ ಮುನ್ನ ಅದು ಎರಡು ಕವಲಾಗಿ, ಮನೆಯ ಅಂಚನ್ನು ಸಹ ಮುಟ್ಟದೆ ಸುತ್ತಮುತ್ತ ಎಲ್ಲ ಎಡೆಯನ್ನೂ ಮುಸುಕಿ, ದಾರಿಯನ್ನು ಮುಚ್ಚಿ, ತನ್ನ ರಭಸಕ್ಕೆ ಸಿಲುಕಿ ಗಿಡಮರ ಮುಂತಾದುವೆಲ್ಲವನ್ನೂ ನಾಶಮಾಡಿ ಬಿಟ್ಟಿತು. ಈ ಶಿಲಾವರ್ಷದ ಘೋಷ ಬೆಟ್ಟಗಳ ಕಣಿವೆ ಕಣಿವೆಗಳಲ್ಲಿ ಮರುದನಿಕೊಟ್ಟು, ಅದರ ಮೊಳುಗು ಅಡಗುವ ಮುನ್ನ ಅದಕ್ಕೆ ಆಹುತಿಯಾಗುತ್ತಿದ್ದವರ ಸಾವಿನ ಮುನ್ನೋವು ಅಡಗಿದ್ದಿತು. ಅವರು ಮೃತ್ಯು ಸಮಾಧಿಯಲ್ಲಿ ಮಲಗಿದ್ದರು. ಪ್ರಕೃತಿ ತನ್ನ ಭೀಕರವ್ಯಾಪಾರದಿಂದ ಗೋರಿಯೊಂದನ್ನು ಕಟ್ಟಿ ಅವರ ಶರೀರಗಳನ್ನು ಮರೆಮಾಡಿತ್ತು.

ಮರುದಿನ ಬೆಳಗ್ಗೆ ಗುಡಿಸಿಲು ಎಂದಿನಂತೆಯೇ ಇತ್ತು. ಅಗ್ಗಿಷ್ಟಿಕೆಯಲ್ಲಿ ಒಟ್ಟಿದ್ದ ಸೌದೆಯ ತುಂಡುಗಳು ಕೆಂಡವಾಗಿ, ಕೆಂಡ ಇನ್ನೂ ಕಳಕಳಿಸುತ್ತಿತ್ತು. ಮಕ್ಕಳ ಹಾಸಿಗೆಗಳು ಹಾಸಿದಂತೆಯೇ ಇದ್ದುವು. ಅಜ್ಜಿ ಕುಳಿತಿದ್ದ ಚಾಪೆಯೂ, ಮನೆಯ ಯಜಮಾನನೂ ಆಗಂತುಕನೂ ಕುಳಿತಿದ್ದ ಕಾಲುಮಣೆಗಳೂ ಬರಿದಾಗಿ, ಅದೇ ಸ್ಥಳಗಳಲ್ಲಿ ಇದ್ದುವು. ಈ ಸ್ಥಿತಿಯನ್ನು ನೋಡಿದರೆ, ಕಲ್ಲುಮಳೆಗರೆಯುತ್ತಿದ್ದುದನ್ನು ಕೇಳಿ ಮನೆಯವರೆಲ್ಲ ಅದರ ಬೆರಗುನೋಟವನ್ನು ನೋಡಲು ಹೋಗಿದ್ದು ಇನ್ನೇನು ಹಿಂದಿರುಗಿ ಬರುವರೋ ಎಂಬಂತೆ ಕಾಣುತ್ತಿತ್ತು. ಪ್ರತಿಯೊಬ್ಬರೂ ತಮ್ಮ ತಮ್ಮ ಗುರುತಾಗಿ ತಮ್ಮದಾದ ಕೆಲವು ವಸ್ತುಗಳನ್ನು ಹಿಂದೆ ಬಿಟ್ಟಿದ್ದರು; ಮನೆಯವರ ಪರಿಚಯವಿದ್ದವರೆಲ್ಲರೂ ಆ ವಸ್ತುಗಳನ್ನು ನೋಡಿದಾಗ ಅವರನ್ನು ನೆನೆದು ಕಣ್ಣೀರುಗರೆದಿರಬೇಕು.

ಈ ದುರ್ಘಟನೆ ನಡೆದ ರಾತ್ರಿ ಒಬ್ಬ ಆಗಂತುಕನು ಈ ಮನೆಗೆ ಬಂದಿದ್ದನೆಂದೂ, ಅವನೂ ಮನೆಯವರೊಡನೆ ಅವರ ದುರ್ಗತಿಯನ್ನೇ ಹೊಂದಿದ್ದನೆಂದೂ ಕೆಲವರು ಊಹಿಸಲು ಅವಕಾಶವಿತ್ತು. ಊಹಿಸಿಯೂ ಊಹಿಸಿದರು. ಆದರೆ, ಹಾಗೆ ಊಹಿಸಲು ಆಧಾರ ಸಾಲದೆಂದು ಕೆಲವರು ಶಂಕಿಸಿದರು. ಅಯ್ಯೋ! ಹೆಬ್ಬಯಕೆಯ ದಾರಿಹೋಕನೇ! ಭೂಮಿಯಲ್ಲಿಯೇ ಅಮರ್ತ್ಯನಾಗಬೇಕೆಂಬ ಅವನ ಕನಸೆಲ್ಲಿ! ಅವನು ಬಂದ ದಾರಿ ಯಾವುದು,

ಅವರು ನೋಡುವಂತಿರಬೇಕು. ನಾನು ನಗುನಗುತ್ತಲೇ ಸಾಯುತ್ತೇನೆ. ನನ್ನನ್ನು ಹೂಳಿದಮೇಲೆ ಒಮ್ಮೆ ಕನ್ನಡಿ ಹಿಡಿದು ನನ್ನ ಮುಖ ತೋರಿಸಿ ನನಗೆ, ಗೆಲುವಾಗಿದ್ದೇನೆಯೋ ನೋಡಿಕೊಳ್ಳುತ್ತೇನೆ. ನೀನೆ ತೋರಿಸುತ್ತೀಯ ಅಮ್ಮ ಕನ್ನಡಿಯನ್ನ? ನಿನಗೆ ಹೆದರಿಕೆಯಾದರೆ ಬೇಡ?" ಎಂದು ಮೊಮ್ಮಗಳ ಕಡೆಗೆ ತಿರುಗಿ ಕೇಳಿದಳು.

"ಹೆದರಿಕೆಯೇಕೆ ಅಜ್ಜಿ? ಒಂದಲ್ಲ ಒಂದು ದಿನ ನೀನು ಸಾಯುವಂತೆ ನಾವೆಲ್ಲ ಸಾಯಲೇಬೇಕು" ಎಂದಳು ಮುಗುದೆ ಕನ್ನೆ.

ಆಗಂತುಕನು–ಎಲ್ಲರಿಗೂ ಕೇಳುವಂತೆ, ಆದರೂ ತನಗೆ ತಾನೇ ಹೇಳಿಕೊಳ್ಳುವಂತೆ ಉಸಿರಿದನು:

"ಆಹಾ! ಮುದುಕರು ದೊಡ್ಡವರು ಹುಡುಗರೆನ್ನದೆ ಎಲ್ಲರೂ ಸಾವಿನ ಕನಸು ಕಾಣುತ್ತಿದ್ದೇವೆ; ಸಾವಿನ ಮುಂದಿನ ಬದುಕನ್ನು ಬಗೆಯುತ್ತಿದ್ದೇವೆ; ಗೋರಿಕಲ್ಲುಗಳನ್ನು ನೆನೆಯುತ್ತಿದ್ದೇವೆ. ಹಡಗು ಮುಳುಗುತ್ತಿರುವಾಗ, ಸಾವಿನ ಸುಳಿಯಲ್ಲಿ ಸಿಕ್ಕಿರುವ ನಾವಿಕರಿಗೆ ಹೇಗೆ ಅನ್ನಿಸುವುದೊ ನಾನು ಕಾಣೆ. ಯಾರಿಗೂ ಗೊತ್ತಿಲ್ಲದಂತೆ, ಹೆಸರು ಕುಲ ಇಲ್ಲದವರಂತೆ ನೀರಿನಾಳದಲ್ಲಿ ನಿರ್ನಾಮವಾಗುವ ಅವರಿಗೆ ವಿಶಾಲ ಜಲರಾಶಿಯೇ ಒಂದು ಗೋರಿ!"

ಮುದುಕಿಯ ವಿಚಿತ್ರ ಕಲ್ಪನೆಯನ್ನು ಕೇಳಿ ಒಂದು ಕ್ಷಣ ಎಲ್ಲರೂ ಅದರ ಪರಿಭಾವನೆಯಲ್ಲಿಯೇ ಮಗ್ನರಾಗಿ ಹೋಗಿದ್ದರು; ಆ ನಟ್ಟಿರುಳಿನಲ್ಲಿ, ಮುಂಗಾರಿನ ದಿಗಂತದ ಮುಗಿಲುಗಳಿಂದ ಉರುಳುರುಳಿ ಬಂದಂತೆ ಕೇಳ ಬರುವ ಗುಡುಗಿನಂತೆ ಒಂದು ಶಬ್ದ ಮೊಳಗಿತು; ಮನೆಯೊಳಗಿದ್ದವರಿಗೆ ಅದರ ಅರಿವುಂಟಾಗುವ ಮೊದಲೇ ಅದು ನೀಳವಾಗಿ ಆಳವಾಗಿ ಭೀಕರವಾಗಿ ಪರಿಣಮಿಸಿತು. ಕೊನೆಗೆ, ಸದ್ದಿನ ಗದ್ದಲಕ್ಕೆ ಮನೆ ನಡುಗಿತು, ಮನೆಯವರೂ ನಡುಗಿದರು. ಈ ಮಹಾಶಬ್ದವು ಪ್ರಳಯಾಂತ ಶಬ್ದವೋ ಎನ್ನುವಂತೆ, ನೆಲದ ತಳವೇ ನಡುಗುತ್ತಿರುವಂತೆ ತೋರಿತು. ಮಲಗಿದ್ದ ಹುಡುಗರು ಹಾಸಿಗೆಬಿಟ್ಟು ಎದ್ದು ಬಂದು ದೊಡ್ಡವರ ಬಳಿ ಮುದುರಿ ಕುಳಿತರು. ಚಿಕ್ಕವರೂ ದೊಡ್ಡವರೂ ಒಬ್ಬರ ಮುಖವನ್ನೊಬ್ಬರು ಬಿರುನೋಟದಿಂದ ಹುಚ್ಚುಹುಚ್ಚಾಗಿ ನೋಡತೊಡಗಿದರು. ಎಲ್ಲರ ಮುಖಗಳೂ ಭಯದಿಂದ ಬಿಳಚಿತು; ಮಾತನಾಡುವುದಕ್ಕಾಗಲಿ ಕದಲುವುದಕ್ಕಾಗಲಿ ಆಗದೆ ಎಲ್ಲರೂ ಒಟ್ಟಿಗೆ ಒಂದೇ ದನಿಯಲ್ಲಿ, ಒಂದೇ ಹೆದ್ದನಿಯಲ್ಲಿ, ಚೀರಿದರು: "ಕಲ್‌ಮಳೆ! ಕಲ್‌ಮಳೆ!"

ಆ ಘೋರ ಘಟನೆಯನ್ನು ಮಾತುಗಳಿಂದ ವರ್ಣಿಸಲು ಸಾಧ್ಯವಿಲ್ಲ; ಕೆಲವೇ ನುಡಿಗಳಿಂದ ಸೂಚಿಸಲು ಮಾತ್ರ ಸಾಧ್ಯ. ಗುಡಿಸಿಲಿನೊಳಗಿದ್ದವರು

# ೪. ಭಾಗ್ಯತ್ರಯ

ಒಂದು ಬೇಸಗೆಯ ಬೈಗಿನಲ್ಲಿ, ಒಂದು ಎತ್ತರವಾದ ಶ್ಯಾಮಲಾಕೃತಿ ಹಳ್ಳಿಯೊಂದನ್ನು ಪ್ರವೇಶಿಸುತ್ತಿತ್ತು. ಹೆಸರಿಸದ ಮಾತ್ರಕ್ಕೆ ಯಾವುದೋ ಕಾಲ್ಪನಿಕ ಪ್ರಪಂಚದ ಹಳ್ಳಿಯೆಂದು ಭಾವಿಸಲಾಗದು; ನಮಗೆ ಪರಿಚಯವಾದಂಥ, ಸ್ವಲ್ಪ ಹಿಂದಿನ ಕಾಲದ, ನಮ್ಮ ನಾಡಿನ ಒಂದು ಹಳ್ಳಿ ಎಂದು ತಿಳಿದುಕೊಂಡರೆ ಸಾಕು. ಬಹಳ ಕಾಲ ಬಹು ದೂರದೇಶಗಳಲ್ಲಿ ಮಾಡಿದ್ದ ಪ್ರಯಾಣದ ಪರಿಣಾಮವಾಗಿ ಆ ವ್ಯಕ್ತಿಯಲ್ಲಿ ಹೊರನಾಡ ತೋರಿಕೆ ಎದ್ದು ಕಾಣುತ್ತಿತ್ತು. ಈ ಪ್ರಯಾಣಿಕನು ಊರಿ ನಿಂತಿದ್ದ ದಂಡ ಅವನ ಹುಟ್ಟುಡೆಯಾದ ಮಲೆನಾಡ ಕಾಡ ನಡುವೆಯ ಹಳ್ಳಿಯಿಂದಲೂ ಅವನ ಒಡನಾಡಿಯಾಗಿತ್ತು; ಇವನು ಹೊದೆದಿದ್ದ ಸೊಗಸಾದ ಶಾಲು ಇವನಿಗೆ ಕಾಶ್ಮೀರ ದೇಶದಲ್ಲಿಯೇ ದೊರಕಿದ್ದೆಂಬುದರಲ್ಲಿ ಸಂದೇಹ ಇರಲಿಲ್ಲ; ಇವನ ಮೈ ದಕ್ಷಿಣದೇಶದ ಬಿಸಿಲಿನ ತಾಪದಿಂದ ಕಪ್ಪಾಗಿತ್ತು, ಅಂತೆಯೇ ಹಿಮವತ್ಪ್ರಾಂತದ ಉಗ್ರವಾದ ಚಳಿಗೆ ಒಡ್ಡಿ ಗಟ್ಟಿಯಾಗಿತ್ತು. ಕಾಡುಜನರ ನಡುವೆ ಬಹಳ ಕಾಲ ಓಡಾಡಿದ್ದ ಅವನು ತನ್ನ ಸೊಂಟದಲ್ಲಿ ಒಂದು ಬಾಕುವನ್ನು ಇನ್ನೂ ಧರಿಸಿದ್ದನು; ಅದರಿಂದ ಅವನು ಎಷ್ಟೋ ಬಾರಿ ತನ್ನ ಆತ್ಮಸಂರಕ್ಷಣೆ ಮಾಡಿಕೊಂಡಿದ್ದನು; ಒಮ್ಮೆ, ತನ್ನ ಜೀವವನ್ನು ತೆಗೆಯಲು ಬಂದಿದ್ದ ಒಬ್ಬ ದರೋಡೆಕೋರನ ಕೊರಳನ್ನು ಅದರಿಂದ ಇರಿದಿದ್ದನು. ಈ ಲೋಕಸಂಚಾರಿ ಭರತಖಂಡದ ನಾನಾ ಭಾಗಗಳಲ್ಲದೆ ಸಿಂಹಳದ್ವೀಪ, ಬ್ರಹ್ಮದೇಶ, ಅರಬ್ಬೀದೇಶ, ಪರ್ಶಿಯಾ ದೇಶ, ಕಾಬೂಲು, ಚೀನ, ಟಿಬೆಟ್ಟು ಮುಂತಾದ ಹಲವು ನೆರೆನಾಡು ಹೊರನಾಡುಗಳನ್ನು ಸುತ್ತಾಡಿ ಬಂದಿದ್ದನು. ಪ್ರತಿಯೊಂದು ಹೊರನಾಡಿನಲ್ಲೂ ಅವನು ತನ್ನ ಕನ್ನಡತನವನ್ನು ಸ್ವಲ್ಪ ಕಳೆದುಕೊಂಡು ಬಿಟ್ಟಿದ್ದನು; ಅಲ್ಲದೆ, ಪ್ರತಿಯೊಂದು ನಾಡಿನ ಜನದಿಂದಲೂ ಒಂದು ವೈಚಿತ್ರ್ಯವನ್ನು ಎರವಲು ತೆಗೆದುಕೊಂಡಿದ್ದನು. ಹೀಗಾಗಿ, ಈ ಲೋಕಸಂಚಾರಿ ತನ್ನ ಹುಟ್ಟುಹಳ್ಳಿಯ ಬೀದಿಯಲ್ಲಿ ಮರಳಿ ನಡೆದು ಹೋಗುತ್ತಿದ್ದಾಗ ಎಲ್ಲರ ಗಮನ ಕುತೂಹಲಗಳನ್ನು ಸೆಳೆಯುತ್ತಿದ್ದರೂ, ಯಾರೂ ಇವನ ಗುರುತ ಹಿಡಿಯದೆ ಹೋದದ್ದರಲ್ಲಿ ಆಶ್ಚರ್ಯವೇನಿಲ್ಲ. ಆದರೂ, ಹಳ್ಳಿಯ ಕೆಲದ ಹಳ್ಳದಿಂದ ನೀರು ಹೊತ್ತು ತರುತ್ತಿದ್ದ ತರುಣಿಯೊಬ್ಬಳನ್ನು ಇವನ ತೋಳು ಆಕಸ್ಮಿಕವಾಗಿ ಸೋಕಲು,

ಅವನು ಹೋದ ದಾರಿ ಯಾವುದು! ಅವನ ಹೆಸರು ಗುರುತುಗಳು ಗೊತ್ತಿಲ್ಲ; ಅವನ ಚರಿತ್ರೆ, ಅವನ ಜೀವನ, ಅವನ ನೆಲೆ–ಎಲ್ಲವೂ ಒಂದು ಊಹಾತ್ಮಕವಾದ ಸಮಸ್ಯೆ; ಎಲ್ಲಕ್ಕಿಂತ ಮೊದಲು, ಅವನು ಬದುಕಿದ್ದ ವ್ಯಕ್ತಿಯೇ, ಸತ್ತನೇ ಎಂಬುದು ಕೂಡ ಒಂದು ಸಂದೇಹದ ಪ್ರಶ್ನೆ! ಅವನ ಹೆಬ್ಬಯಕೆಯ ಮೊಗ್ಗು ಅರಳುವ ಮುನ್ನ ಅದನ್ನು ವಿಧಿಯೆಂಬ ಮತ್ತಗಜ ತುಳಿದು ಹೊಸಕಿಹಾಕಿರಲು, ಇನ್ನು ಅವನ ಹೆಬ್ಬಯಕೆ ಯಾರಿಗೆ ಗೊತ್ತಾಗಬೇಕು? ಮೃತ್ಯುಮುಖದಲ್ಲಿ ಅವನು ಪಟ್ಟ ವೇದನೆ ಯಾರಿಗೆ ಗೊತ್ತಾಗಬೇಕು? ಮೃತ್ಯುಮುಖದಲ್ಲಿ ಅವನು ಪಟ್ಟ ವೇದನೆ ಯಾರಿಗೆ ತಿಳಿಯುವುದು? ಹೆಬ್ಬಯಕೆಯ ದಾರಿಹೋಕರ ದಾರಿ ಕಡಿದು, ಗುರಿ ದೂರ; ಹಿಂದೆ ವಿಧಿಯ ಸಂಚು, ಮುಂದೆ ಸಾವಿನ ಹೊಂಚು.

ಹೊರಿಸಬಹುದೆ?" ಅವಳೆ ಅವನ ಹಣೆಯಲ್ಲಿ ಬರೆದಿದ್ದ ವಧುವಾಗಿದ್ದರೆ– ಯಾವುವನ್ನು ಅನಂತಕಾಲವು ಹೆಚ್ಚು ಹೆಚ್ಚು ಹತ್ತಿರಕ್ಕೆ ತಂದು ಬಂಧಿಸದೆ ಇರುತ್ತಿರಲಿಲ್ಲವೊ ಅಂತಹ ಪರಸ್ಪರಾನುಬಂಧವುಳ್ಳ ಅವರ ಆತ್ಮಗಳು ಇಲ್ಲಿ, ಈ ಇಹಲೋಕದಲ್ಲಿ, ಒಂದಾಗಿ ಸೇರಬೇಕೆಂಬುದು ದೈವೇಚ್ಛೆಯಾಗಿದ್ದರೆ–ಅವಳು ತನ್ನ ವಕ್ಷಸ್ಥಲದ ಮೇಲಿನ ಪದಕದಮೇಲೆ ಬೆರಳಿಟ್ಟು, ಹೀಗೆ ಉತ್ತರ ಕೊಡುವಳು: "ನೀನು ಹಾಗೆ ಮಾಡಬಹುದು ಎಂಬುದಕ್ಕೆ ನಾನು ಬಹಳ ಕಾಲದಿಂದ ಧರಿಸಿರುವ ನೆನಪಿನ ಕುರುಹಾದ ಈ ಪದಕವೇ ಭರವಸೆ!"

ಎರಡನೆಯದಾಗಿ, ಪ್ರಪಂಚದಲ್ಲಿ ಎಲ್ಲೋ ಒಂದು ಕಡೆ ಭಾರಿಯಾದ ನಿಧಿಯೊಂದು ನಿಕ್ಷಿಪ್ತವಾಗಿದೆಯೆಂದೂ, ಅದರ ನಿಕ್ಷೇಪಸ್ಥಳ ತನಗಲ್ಲದೆ ಮತ್ತೆ ಯಾರಿಗೂ ಗೋಚರವಾಗದೆಂದೂ ವಿಶ್ವನಾಥನು ದೃಢವಾಗಿ ನಂಬಿದ್ದನು. ಆ ರಹಸ್ಯ ಸ್ಥಳವನ್ನು ಅವನ ಅಡಿಗಳು ಸೋಕಿದಂದು, ಕೆಳಮುಖವಾಗಿ ತೋರುತ್ತಿರುವ ಕೈಯೊಂದು ಅವನ ಮುಂದುಗಡೆ ಕಾಣಬರುವುವು–ಶರೀರದ ಇತರ ಭಾಗಗಳಿಂದ ಬೇರೆಯಾದ ಆ ಕೈ ಯಕ್ಷಿಣಿಯಿಂದ ಮೂಡಿದುದೊ, ಹಾಲುಗಲ್ಲಿನಲ್ಲಿ ಕಡೆದದ್ದೊ, ಪರ್ವತ ಪ್ರಪಾತ ಪಾರ್ಶ್ವದ ಹೆಬ್ಬಂಡೆಯೊಂದನ್ನು ಕೆತ್ತಿ ಮಾಡಿದುದೊ, ಇಲ್ಲವೆ ಬರಿಯ ಗಾಳಿಯಲ್ಲಿ ಇದ್ದಕ್ಕಿದ್ದ ಹಾಗೆ ಕಾಣಿಸುವ ಜ್ವಾಲಾಹಸ್ತವೊ, ಅವನು ಹೇಳಲಾರನಾಗಿದ್ದನು; ಆದರೆ, ಒಂದು ಕೈಯನ್ನಂತೂ ಅವನು ಕಾಣುವನು; ಅದರ ತೋರುಬೆರಳು ಕೆಳಕ್ಕೆ ತೋರುತ್ತಿರುವುದು; ಅದರ ಕೆಳಗೆ, 'ಖನ್' (ಎಂದರೆ ಅಗೆ) ಎಂಬ ಸಂಸ್ಕೃತ ಮಾತಿರುವುದು! ಅದು ಸಂಸ್ಕೃತದಲ್ಲೇ ಇರುವುದೆಂದು ಅವನು ಏಕೆ ತಿಳಿದಿದ್ದನೋ ಅವನಿಗೆ ಸರಿಯಾಗಿ ತಿಳಿಯದು. ಅವನಿಗೆ ತಕ್ಕಮಟ್ಟಿನ ಸಂಸ್ಕೃತ ಭಾಷಾಜ್ಞಾನ ಇತ್ತು. ಸಾಮಾನ್ಯವಾಗಿ ಮಂತ್ರಗಳೆಲ್ಲವೂ ಸಂಸ್ಕೃತದಲ್ಲೇ ಇರುವುದರಿಂದ, ನಿಧಿದರ್ಶಕವಾದ ಮಾತು ಯಾವ ಮಂತ್ರಕ್ಕೂ ಮಹತ್ವದಲ್ಲಿ ಕಡಮೆಯಲ್ಲವಾದ್ದರಿಂದ, ಅದು ಸಂಸ್ಕೃತದಲ್ಲೇ ಇರಬೇಕೆಂದು ಅವನಿಗೆ ತೋರಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಆ ಸ್ಥಳವನ್ನು ಅಗೆದರೆ, ಚಿನ್ನದ ನಾಣ್ಯಗಳು, ಚಿನ್ನದ ಗಟ್ಟಿಗಳು, ಪ್ರಶಸ್ತ ಶಿಲೆಗಳು, ಮತ್ತು ನಿಧಿಯಲ್ಲಿ ಸೇರಿರಬಹುದಾದ ವಸ್ತುಗಳು ಎಲ್ಲವೂ ದೊರೆತು, ಅವನ ಶ್ರಮ ಸಫಲಗೊಳ್ಳುವುದರಲ್ಲಿ ಸಂದೇಹವಿರಲಿಲ್ಲ. ಹೀಗೆ ಅವನು ನಂಬಿದ್ದನು.

ಈ ಮಹಾಭಾಗ್ಯಶಾಲಿಯ ಜೀವನದಲ್ಲಿನ ಮೂರು ಅದ್ಭುತ ಘಟನೆಗಳಲ್ಲಿ ಕಡೆಯದು ಇದು: ಅವನು ಇತರ ಮಾನವರ ಮೇಲೆ ವ್ಯಾಪಕವಾದ ಪ್ರಭಾವವನ್ನೂ ಅಧಿಕಾರವನ್ನೂ ಇಟ್ಟುಕೊಳ್ಳುವಂತಾಗುವುದು. ಅವನು ದೊರೆಯಾಗಿ

ಅವಳು ಬೆಕ್ಕಸ ಬೆರಗಾಗಿ ನಿಂತು, ಇವನನ್ನು ನಿಟ್ಟಿಸಿನೋಡಿದಳು.

ಕೂಡಲೆ ಅವಳ ಬಾಯಿಂದ ಈ ಹೆಸರು ಅರ್ಧ ಉಚ್ಚಾರವಾಗಿ ಹೊರಹೊರಟಿತು: "ವಿಶ್ವನಾಥ!"

ಪ್ರಯಾಣಿಕನು ಹಿಂದಿರುಗಿ ಅವಳ ಆಕೃತಿಯನ್ನು ನೋಡಿ, "ಇವಳು ನನ್ನ ಒಡನಾಡಿ ಗೌರಿ ಇರಬಹುದೆ" ಎಂದು ಯೋಚಿಸುತ್ತ ಅಲ್ಲಿ ನಿಲ್ಲದೆ ಮುಂದೆ ನಡೆದನು.

ವಿಶ್ವನಾಥನು ಪ್ರಾಯಕ್ಕೆ ಬಂದಮೇಲೆ ತಾನು ಬಹಳ ಭಾಗ್ಯಶಾಲಿಯಾಗುವುದಾಗಿ ಭಾವಿಸಿದ್ದನು. ತನ್ನ ಜೀವನದಲ್ಲಿ ಸಂಭವಿಸಲಿರುವ ಮೂರು ಅದ್ಭುತ ಘಟನೆಗಳು ಮೂರು ಚಿಹ್ನೆಗಳಿಂದ ಸ್ಥಿರಪಡುವುವು ಎಂಬ ಭಾವನೆಯನ್ನು ತಂದುಕೊಂಡು, ಅದನ್ನು ತನ್ನ ನಂಬಿಕೆಯ ವಿಷಯಗಳಲ್ಲಿ ಅತ್ಯಂತ ದೃಢವಾದುದಾಗಿ ಎಣಿಸಿದ್ದನು. ಈ ಭಾವನೆ ಯಾವ ಮಂತ್ರವಿದ್ಯೆಯಿಂದ ಇವನಿಗೆ ವ್ಯಕ್ತಗೊಂಡಿತ್ತೊ, ಇಲ್ಲವೆ ಯಾವ ಭವಿಷ್ಯದ ಕನಸಿನಲ್ಲಿ ಅದು ಮೂಡಿತ್ತೋ, ಇಲ್ಲವೆ ಯಾವ ಆಕಾಶವಾಣಿ ಯಾವ ಕಾಲದಲ್ಲಿ ಅವನಿಗೆ ಹಾಗೆ ನುಡಿದಿತ್ತೊ, ಇಲ್ಲವೆ ಯಾರು ಹಾಗೆಂದು ಕಣಿ ಹೇಳಿದ್ದರೊ, ಇಲ್ಲವೆ ಅವನ ಕಲ್ಪನಾಲಹರಿಯ ತರಂಗಗಳಲ್ಲಿ ಇವು ಮೂರು ಮಹಾತರಂಗಗಳು ಎದ್ದು ಎಡೆಬಿಡದೆ ಹೊಯ್ದಾಡುತ್ತಿದ್ದುವೊ–ಯಾವುದೊ ನಾವು ಹೇಳಲಾರೆವು.

ವಿಧಿವಶವಾದ ಈ ಮೂರು ಘಟನೆಗಳಲ್ಲಿ ಮೊದಲನೆಯದೂ, ಬಹುಶಃ ಅವನ ತಾರುಣ್ಯದ ಕಲ್ಪನೆ ಅತ್ಯಂತ ನಲ್ಮೆಯಿಂದ ನೆಚ್ಚಿಕೊಂಡಿದ್ದುದೂ ಯಾವುದೆಂದರೆ, ಪ್ರಪಂಚದ ತರುಣಿಯರಲ್ಲೆಲ್ಲ ಯಾವ ಒಬ್ಬ ತರುಣಿ ಮಾತ್ರ ತನ್ನ ಒಲುಮೆಯಿಂದ ಅವನನ್ನು ಸುಖಿಯನ್ನಾಗಿ ಮಾಡಬಲ್ಲವಳಾಗಿರುವಳೊ ಅವಳನ್ನು ಕಾಣುವುದು. ತನ್ನ ವಕ್ಷಸ್ಥಲದ ಮೇಲೆ ಹೃದಾಯಾಕಾರದ ಪದಕವನ್ನು ಧರಿಸಿರುವ ಅತ್ಯಂತ ಚೆಲುವೆ ಒಬ್ಬಳನ್ನು ಅವನು ಸಂಧಿಸುವವರೆಗೆ ಅವನು ಪ್ರಪಂಚವನ್ನೆಲ್ಲ ಸುತ್ತತಕ್ಕದ್ದು; ಆ ಪದಕ ಮುತ್ತಿನದೊ, ಪಚ್ಚೆಯದೊ, ಪುಷ್ಯರಾಗದ್ದೊ, ಮಾಣಿಕ್ಯದ್ದೊ, ಬಹುಶಃ ಅತ್ಯಮೂಲ್ಯವಾದ ವಜ್ರದ್ದೊ, ಯಾವುದರದ್ದಾದರೂ ಸರಿಯೆ, ಇದು ಅಷ್ಟು ಮುಖ್ಯವಾಗಿರಲಿಲ್ಲ ವಿಶ್ವನಾಥನಿಗೆ; ಅದು ಹೃದಯದ ವಿಚಿತ್ರ ಆಕಾರವನ್ನು ತಳೆದಿದ್ದರೆ ಸಾಕು. ಈ ಚೆಲುವೆಯಾದ ಆಗಂತುಕ ತರುಣಿಯನ್ನು ಅವನು ಕಂಡಕೂಡಲೆ ಅವನು ಅವಳನ್ನು ಕುರಿತು ಹೀಗೆಯೇ ಮಾತನಾಡಿಸುವನು: "ಕನ್ನೆ, ನಾನು ಬಹು ಭಾರವಾದ ಹೃದಯವನ್ನು ನಿನ್ನ ಬಳಿಗೆ ತಂದಿರುವೆ. ಅದರ ಭಾರವನ್ನು ನಿನ್ನ ಹೃದಯದ ಮೇಲೆ

ವರ್ಷವರ್ಷಕ್ಕೂ ಹೆಚ್ಚು ಹೆಚ್ಚಾಗಿ ಬಿಳಲುಬಿಡುತ್ತಿದ್ದ ಆಲದ ಮರಗಳ ಹರಹಿನ ನೋಟ ನಿಜವಾಗಿಯೂ ಗಂಭೀರವಾಗಿತ್ತು. ಒಂದೆರಡು ಆಲದ ಮರಗಳಂತೂ ಕೆಲವು ತಲೆಮೊರೆಗಳನ್ನೇ ಕಂಡಿದ್ದುವು! ಮನೆಯ ಮಾಳಿಗೆಗಳ ಮೇಲೆ ಹುಲ್ಲು, ಬಳ್ಳಿ ಮೊದಲಾದ ಬಗೆ ಬಗೆಯ ಸಣ್ಣ ಸಸ್ಯಜಾತಿಗಳು ಬೆಳೆದು, ಗೋಡೆಯ ಮೇಲೂ ನೆಲದ ಮೇಲೂ ಸಂದಿಗೊಂದಿಗಳಲ್ಲೂ ಪಾಚಿ ಬೆಳೆದು, ಮನೆಗಳೂ ಸಹ ಪುರಾಣವೇಷವನ್ನೇ ಧರಿಸಿದ್ದುವು. ಒಟ್ಟಿನ ಮೇಲೆ ಹಳ್ಳಿಯ ಹಳಮೆಯ ಸ್ವರೂಪ ದಿನ ದಿನಕ್ಕೆ ಖಚಿತಗೊಳ್ಳುತ್ತಿತ್ತು. ಒಂದು ಮಹತ್ವದ ಸಂಗತಿಯೇನೆಂದರೆ, ಶ್ಮಶಾನದ ಗೋರಿಕಲ್ಲುಗಳ ಸಂಖ್ಯೆಯೇನೊ ತಕ್ಕಮಟ್ಟಿಗೆ ಏರಿತ್ತು ಎಂಬುದರಲ್ಲಿ ಸಂದೇಹವಿರಲಿಲ್ಲ. ಇಷ್ಟಾದರೂ, ಹತ್ತು ವರ್ಷ ಕಾಲದ ಅವಧಿಯಲ್ಲಿ ಕಾಲಪುರುಷ ಹಳ್ಳಿಯಲ್ಲಿ ಮಾಡಿದ್ದ ಹಾವಳಿಯನ್ನೆಲ್ಲ ಲೆಕ್ಕಕ್ಕೆ ತೆಗೆದುಕೊಂಡರೂ, ವಿಶ್ವನಾಥನು ಅಂದಿನ ಬೆಳಗ್ಗೆಯೆ ಹೊರಹೊರಟು, ಬೈಗಾಗುವವರೆಗೆ ಒಂದು ಹಗಲುಗನಸು ಕಂಡು, ಬಳಿಕ ಹಿಂದಿರುಗಿದ್ದರೆ ಹೇಗಿರುತ್ತಿತ್ತೊ ಹಾಗೆಯೆ ಇತ್ತು ಹಳ್ಳಿ. ತಾನು ಬಿಟ್ಟಾಗ ಹೇಗಿತ್ತೊ ಹಾಗೆಯೇ ಇದ್ದ ಊರನ್ನು ಕಂಡು ಅವನಿಗೆ ಅಚ್ಚರಿಯಾಗದಿದ್ದರೂ ಹಿಗ್ಗಾದರೂ ಆಗಬೇಕು. ಆದರೆ ಅವನ ಹೃದಯವಿಷಾದಕ್ಕೆ ಎಡೆಗೊಟ್ಟಿತು; ಏಕೆಂದರೆ, ಅವನು ಹಳ್ಳಿಯನ್ನು ಹೇಗೆ ತನ್ನ ನೆನಪಿನಲ್ಲಿ ಇಟ್ಟುಕೊಂಡಿದ್ದನೊ ಹಳ್ಳಿ ಅವನನ್ನು ಹಾಗೆಯೇ ತನ್ನ ನೆನಪಿನಲ್ಲಿ ಇಟ್ಟುಕೊಂಡಿರಲಿಲ್ಲ.

"ಮಾರ್ಪಾಟು ಇಲ್ಲಿದೆ!" ಎಂದು ವಿಶ್ವನಾಥನು ತನ್ನ ಎದೆಯ ಮೇಲೆ ಕೈತಟ್ಟಿ ನಿಟ್ಟುಸಿರುಬಿಟ್ಟನು. "ಯೋಚನೆಯಿಂದಲೂ ಚಿಂತೆಯಿಂದಲೂ ಕುಗ್ಗಿದ, ಪ್ರಪಂಚದ ಸುತ್ತಾಟದಿಂದ ದಣಿದ, ಬಯಲಾದ ಬಯಕೆಗಳುಳ್ಳ ಈತ ಯಾರು? ಅಷ್ಟು ನಲಿವಿನಿಂದ ಹೊರಹೊರಟ ಯುವಕನು ಹಿಂದಿರುಗಿಬಾರನು!"

ವಿಶ್ವನಾಥನು ತನ್ನ ತಾಯ ಸಣ್ಣ ಮನೆಯನ್ನು ಬಳಸಿದ್ದ ಬೇಲಿಯಲ್ಲಿನ ಸಣ್ಣ ಹಾದಿಯ ಮೂಲಕ ಮನೆಯಂಗಳವನ್ನು ಸೇರಿದನು. ತನ್ನ ಮಗ ಮನೆಬಿಟ್ಟು ಹೊರಟುಹೋದಮೇಲೆ ಆ ಮುದುಕಿ ತನ್ನ ಗಂಡ ಬಿಟ್ಟುಹೋಗಿದ್ದ ಸಣ್ಣ ತೋಟ ಮತ್ತು ಹೊಲಗಳಿಂದ ದೊರಕುತ್ತಿದ್ದ ತಕ್ಕಮಟ್ಟಿನ ದವಸಧಾನ್ಯದಿಂದ ಕಾರ್ಪಣ್ಯವಿಲ್ಲದೆ ಜೀವನವನ್ನೇನೊ ನಡೆಸುತ್ತಿದ್ದಳು. ಆದರೆ, ಒಬ್ಬನೇ ಮಗ ಎಲ್ಲಿ ಹೋದನೋ, ಹಿಂದಿರುಗಿ ಬರುವನೋ ಬಾರನೋ–ಎಂಬುದೆ ಅವಳ ದೊಡ್ಡ ಕೊರಗಾಗಿತ್ತು. ಪ್ರಾಯಕ್ಕೆ ಬರುತ್ತಿದ್ದ ಮಗನನ್ನು ಕಂಡು ಹಿಗ್ಗುತ್ತ ಆಕೆ ತನ್ನ ಪತಿವಿಯೋಗವನ್ನು ಕೂಡ ಮರೆತಿದ್ದಳು. ಆದರೆ, ಮಗನ ವಿಯೋಗವನ್ನು

ರಾಜಮನೆತನವೊಂದರ ಮೊದಲಿಗನಾಗುವನೊ, ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಒಂದು ಜನಾಂಗದ ಜಯಶಾಲಿಯಾದ ನಾಯಕನಾಗುವನೊ, ಪಾವನಗೊಂಡು ಪುನರುಜ್ಜೀವಿತವಾದ ಧರ್ಮವೊಂದರ ಪ್ರವರ್ತಕನಾಗುವನೊ, ಯಾವುದೂ ಅವನ ಅರಿವಿಗೆ ಬಂದಿರಲಿಲ್ಲ; ಭವಿಷ್ಯತ್ತೇ ಅದನ್ನು ತೋರಬೇಕಾಗಿತ್ತು. ಆ ಘಟನೆ ನೆರವೇರುವುದರ ಮುನ್‌ಸೂಚನೆಯ ದೂತರಾಗಿ ಮೂವರು ಗಣ್ಯ ಮಹನೀಯರು ಅವನನ್ನು ಸಂದರ್ಶಿಸಲೋಸುಗ ಬರುವರು; ಆಗ ಅವನಿಗೆ ದೈವಾಜ್ಞೆಯ ಅರಿವಾಗುವುದು. ಅವರಲ್ಲಿ ಮುಖ್ಯಸ್ಥನಾದವನು ಗಂಭೀರ ವ್ಯಕ್ತಿ; ಪುರಾತನ ಋಷಿಯೋಗ್ಯವಾದ ಉಡುಪನ್ನು ಧರಿಸಿರುವನು ಎಂದು ಬೇಕಾದರೆ ಭಾವಿಸಬಹುದು; ಅವನು ಕೈಯಲ್ಲಿ ಒಂದು ದಂಡವನ್ನು ಹಿಡಿದಿರುವನು. ಆ ಮುನಿ ತನ್ನ ದಂಡದಿಂದ ವಾಯುಪಥದಲ್ಲಿ ಯಾವುದೋ ಒಂದು ಆಕೃತಿಯನ್ನು ಬರೆದಂತೆ ಸಂಜ್ಞೆ ಮಾಡಿ, ದೈವನಿರೂಪಿತ ಸಂದೇಶವನ್ನು ಸಾರತೊಡಗುವನು; ಆ ಸಂದೇಶದಂತೆ ನಡೆದರೆ, ಅಮೋಘವಾದ ಫಲಪ್ರಾಪ್ತಿಯಾಗುವುದು.

ಇಂತಹ ಘನವಾದ ಭವಿಷ್ಯತ್ತನ್ನು ತನ್ನ ಮುಂದೆ ಇಟ್ಟುಕೊಂಡು, ಆ ಕನ್ಯೆ, ನಿಧಿ, ಸಾಮ್ರಾಜ್ಯದಾನಿಯಾದ ಮುನಿ–ಇವರ ಅನ್ವೇಷಣಕ್ಕಾಗಿ ವಿಶ್ವನಾಥನು ಯಾತ್ರೆ ಬೆಳಸಿದ್ದನು. ಅವು ಅವನಿಗೆ ದೊರೆತಿದ್ದುವೆ? ಅಯ್ಯೊ! ಅವನು ತನ್ನ ತಾಯಿಯ ಗುಡಿಸಿಲನ್ನು ಕುರಿತು ಹಳ್ಳಿಯಲ್ಲಿ ಹಿಂದಿರುಗುತ್ತಿದ್ದಾಗ, ತನ್ನ ಜೊತೆಯವರು ಸಾಧಿಸುವುದಕ್ಕಿಂತ ಘನತರವಾದ ಉದ್ದೇಶವನ್ನು ಸಾಧಿಸಿದ್ದ ಜಯಶಾಲಿಯ ಗೆಲವುನೋಟ ಅವನ ಮುಖದಲ್ಲಿ ಇರಲಿಲ್ಲ; ಅದರ ಬದಲು, ವಿಚಿತ್ರವಾದ ಮತ್ತು ಸಂತತವಾದ ಕಷ್ಟ ಪರಂಪರೆಗೆ ಸಿಲುಕಿ ಹೋರಾಡುವವನ ಮುಖದ ಮೇಲೆ ಯಾವ ಮಂಕು ಕವಿದಿರುವುದೊ ಆ ಮಂಕು ವಿಶ್ವನಾಥನ ಮುಖವನ್ನು ಆವರಿಸಿತ್ತು. ಯಾತ್ರಿಕನ ಕೈಗೋಲನ್ನು ಕೆಳಗಿಟ್ಟು, ಎಲ್ಲಿ ಭಾಗ್ಯತ್ರಯದ ಕನಸು ತನಗಾಗಿತ್ತೋ ಆ ಸ್ಥಳದಲ್ಲಿ ತನ್ನ ದಣಿದ ಮಾನುಷತ್ವ ಸ್ವಲ್ಪಮಟ್ಟಿಗಾದರೂ ಹಿಂದಿನ ಯೌವನದ ಪುನಶ್ಚೈತನ್ಯವನ್ನು ಮರಳಿ ಪಡೆಯಬಹುದೆಂಬ ನೆಚ್ಚಿಕೆಯಿಂದ, ಸ್ವಲ್ಪ ಕಾಲ ಮಾತ್ರ ಇರಲು ಅವನು ಹಿಂದಿರುಗಿ ಬಂದಿದ್ದನು. ಹಳ್ಳಿಯಲ್ಲಿ ಅಂಥ ಬದಲಾವಣೆಗಳೇನೂ ಆಗಿರಲಿಲ್ಲ; ಎಲ್ಲಿ ಶತಮಾನದ ನಾಶ ಹಾವಳಿ ಮಾಡುವುದಕ್ಕಿಂತ ಹೆಚ್ಚಿನ ಪ್ರಮಾಣದ ಮಾರ್ಪಾಟನ್ನು ಒಂದು ವರ್ಷದ ಏಳಿಗೆ ಉಂಟುಮಾಡುತ್ತದೆಯೊ ಅಂತಹ ಬೆಳೆಯುವ ಸ್ಥಳವಾಗಿರಲಿಲ್ಲ ಆ ಹಳ್ಳಿ; ಅದು, ಯುವಕನ ತಲೆ ಮೇಲಿನ ನರೆಗೂದಲಿನಂತೆ, ಹಳೆಯ ಕಾಲದ ಸಣ್ಣ ಊರು; ಪುರಾತನವಾದ ಅಶ್ವತ್ಥವೃಕ್ಷಗಳಿಂದಲೂ ವಟವೃಕ್ಷಗಳಿಂದಲೂ ತುಂಬಿತ್ತು.

ಸಂಸ್ಕೃತ ಮಾತು; ಅವನು ಮೊತ್ತಮೊದಲು ತನ್ನ ಅಮೋಘವಾದ ಭವಿಷ್ಯವನ್ನು ಕುರಿತು ಚಿಂತಿಸತೊಡಗಿದಾಗ ಒಂದು ದಿನವೆಲ್ಲ ಶ್ರಮಿಸಿ ಮರದ ತೊಗಟೆಯಲ್ಲಿ ಆ ಮಾತನ್ನು ಕೆತ್ತಿದ್ದುದು ನೆನಪಿಗೆ ಬಂದಿತು. ಕಾಕತಾಳ ನ್ಯಾಯವೆಂದರೂ ಸರಿಯೆ, ಹೆಚ್ಚಿನ ಆಶ್ಚರ್ಯಕರ ಸಂಗತಿಯೇನೆಂದರೆ–ಮರದ ಬುಡದ ಕೆಲದಲ್ಲಿಯೆ ಕೆಳಭಾಗದಲ್ಲಿ ಕೈಯ ಆಕಾರವುಳ್ಳ ದಪ್ಪ ಬಿಳಲು ಇತ್ತು; ಅವನು ಊರು ಬಿಡುವ ಮುನ್ನ ಈ ಬಿಳಲು ಇರಲಿಲ್ಲ; ಕೈಯಂತಿದ್ದ ಆ ಬಿಳಲಿಗೆ ತೋರುಬೆರಳಿನಂತಹ ಚಾಚುಭಾಗವೊಂದಿದ್ದು, ಅದು ಆ ಮಾತಿನ ಕಡೆಗೆ ತೋರುತ್ತಿದ್ದಿತು. ಜಾರುತ್ತಿದ್ದ ಸಂಜೆಯ ಮಬ್ಬಿನಲ್ಲೇನೊ ಅದು ಹಾಗೆಯೆ ಕಾಣುತ್ತಿತ್ತು.

"ನಂಬುವಂಥ ಮನುಷ್ಯನು, ನಾನು ಪ್ರಪಂಚದಲ್ಲೆಲ್ಲ ಹುಡುಕುತ್ತಿದ್ದ ನಿಧಿ ಕಡೆಗೆ ನನ್ನ ತಾಯ ಮನೆಬಾಗಿಲ ಮುಂದೆಯೇ ಹೂತಿದೆ ಎಂದು ಊಹಿಸಬಹುದು. ಹಾಗಿರುವ ಪಕ್ಷದಲ್ಲಿ, ನಿಜವಾಗಿಯೂ ಅದು ಎಂತಹ ವಿನೋದದ ವಿಷಯ!" ಎಂದು ವಿಶ್ವನಾಥನ ತನಗೆ ತಾನೆ ಹೇಳಿಕೊಂಡನು.

ಈ ವಿಷಯವಾಗಿ ಅವನು ಇನ್ನು ಹೆಚ್ಚು ಆಲೋಚಿಸಲಿಲ್ಲ; ಏಕೆಂದರೆ, ಆ ಸಮಯದಲ್ಲಿ ಮನೆಯ ಬಾಗಿಲು ತೆರೆಯಿತು; ವಯಸ್ಸಾದ ಒಬ್ಬಾಕೆ ಹೊಸಿಲಮೇಲೆ ನಿಂತು, ತನ್ನ ಮನೆಯಂಗಳಕ್ಕೆ ಹೇಳದೆ ಕೇಳದೆ ನುಗ್ಗಿ ತನ್ನ ಮರದ ನೆಳಲಿನಲ್ಲಿ ನಿಂತಿರುವಾತನು ಯಾರಿರಬಹುದೆಂದು ಮಬ್ಬಿನಾಚೆಗೆ ನೋಟವನ್ನು ಹರಿಸಲು ಪ್ರಯತ್ನಿಸುತ್ತಿದ್ದಳು. ಹಾಗೆ ನಿಂತಿದ್ದವಳು ವಿಶ್ವನಾಥನ ತಾಯಿಯೆಂದು ಬೇರೆ ಹೇಳಬೇಕಾಗಿಲ್ಲ. ತಾಯಿಯನ್ನು ಅವಳ ಸಂತಸಕ್ಕೆ ಬಿಟ್ಟು, ಮಗನನ್ನು ಅವನ ವಿಶ್ರಾಂತಿಗೆ, –ಆ ಶಾಂತವಾದ ವಿಶ್ರಾಂತಿ ಅವನಿಗೆ ದೊರೆಕಿದ್ದ ಭಾಗದಲ್ಲಿ ಆ ವಿಶ್ರಾಂತಿಗೆ ಬಿಟ್ಟು, ತಾಯಿ ಮಕ್ಕಳ ಸಮಾಗಮವಾಯಿತು ಎಂದು ಸೂಚಿಸಿ ಮುಂದುವರಿಯೋಣ.

ಬೆಳಗಾದಾಗ, ಚಿಂತಾಕುಲನಾಗಿಯೇ ಅವನು ಮೆಲಕ್ಕೆದ್ದನು; ಅವನ ಭಾಗಕ್ಕೆ ನಿದ್ರೆಯೂ ಎಚ್ಚರವೂ ಎರಡೂ ಸಮಾನವಾಗಿದ್ದುವು: ಏಕೆಂದರೆ, ಎರಡೂ ಸ್ವಪ್ನಪೂರ್ಣವಾಗಿದ್ದುವು. ತನ್ನ ಅದೃಷ್ಟದ ರಹಸ್ಯತ್ರಯವನ್ನು ಭೇದಿಸುವುದಕ್ಕೆ ಹಿಂದೆ ಅವನು ಎಷ್ಟು ಹುಮ್ಮಸ್ಸಿನಿಂದ ಪರಿತಪಿಸುತ್ತಿದ್ದನೊ ಅದೆಲ್ಲವೂ ಮತ್ತೆ ಅವನಲ್ಲಿ ಪ್ರಜ್ವಲಿತವಾಯಿತು. ಅವನ ಹಿಂದಿನ ದರ್ಶನಗಳ ತಿಂತಿಣಿಯೆಲ್ಲವೂ ತನ್ನ ತಾಯ ಮನೆಯಲ್ಲಿಯೇ ಅವನಿಗಾಗಿ ಕಾದಿದ್ದು ಅವನು ಹಿಂದಿರುಗಿದ್ದಕ್ಕಾಗಿ ಅವನಿಗೆ ಸ್ವಾಗತ ನೀಡಲು ಸುತ್ತಮುತ್ತ ಸುಳಿದಾಡುತ್ತಿದ್ದುವೊ ಎಂಬಂತೆ ತೋರಿತು ಅವನಿಗೆ. ಚೆನ್ನಾಗಿ ನೆನಪಿನಲ್ಲಿದ್ದ ತನ್ನ ಮಲಗುವ ಕೋಣೆಯಲ್ಲಿ–ತಾನು

ಮರೆಯಲು ಅವಳಿಗೆ ಎಷ್ಟು ಮಾತ್ರವೂ ಸಾಧ್ಯವಾಗಿರಲಿಲ್ಲ. ತಾಯಿಯಾದವಳಿಗೆ ಮಗನೆಂದರೆ ಅಷ್ಟು ಮಮತೆ.

ವಿಶ್ವನಾಥನು ಮನೆಯಂಗಳವನ್ನು ಹೊಕ್ಕನಷ್ಟೆ. ಹೊಕ್ಕು, ಅಲ್ಲಿಯೆ ಇದ್ದ ದೊಡ್ಡ ಹಳೆಯ ಆಲದ ಮರವೊಂದನ್ನು ನೆಮ್ಮಿನಿಂತು, ವರ್ಷ ವರ್ಷಗಳ ನೆನಪುಗಳನ್ನು ಒಂದು ಕ್ಷಣದ ಅವಧಿಯಲ್ಲಿ ನೆನೆದು, ಒಡನೆಯೆ ಚಿಮ್ಮಿದ ಅಸಹನೆಯನ್ನು ಹತೋಟಿಗೆ ತಂದುಕೊಂಡು, ಸುತ್ತಮುತ್ತ ಕಣ್ಣುಹರಿಸಿ ಒಂದೊಂದಾಗಿ ಹಳೆಯ ಪಳಕೆಯ ವಸ್ತುಗಳನ್ನು ನೋಡುತ್ತ ಬಂದನು. ತಗ್ಗಾದ ಮನೆ, ಅದರ ದಪ್ಪ ಹಲಗೆಯ ತಿರುಗಣಿ ಬಾಗಿಲು, ಸುಣ್ಣ ಹಚ್ಚಿದ ಗೋಡೆಯಮೇಲೆ ತನ್ನ ತಾಯಿ ಎಂದಿನಂತೆಯೆ ತೆಗೆದಿದ್ದ ಕಾರಣೆ, ಮನೆಯ ಮುಂದೆ ಸಾರಿಸಿ ಚೊಕ್ಕಟವಾಗಿದ್ದ ನೆಲದ ಮೇಲೆ ಅಳಿಸದಿದ್ದ ರಂಗವಲ್ಲಿ, ಮನೆಯ ಮುಂದಿನ ತುಳಸಿಯ ಬೃಂದಾವನ–ಇವೆಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದನು. ತಾನು ಊರುಬಿಟ್ಟು ಹೋಗುವ ಮುನ್ನ ತಾನೂ ಗೌರಿಯೂ ಸೇರಿ ಅಂಗಳದಲ್ಲಿ ಹಾಕಿದ್ದ ಮಲ್ಲಿಗೆ ಜಾಜಿ ಅಂಟುಗಳು ಎಂದೋ ಚಿಗುರಿ ಹರವಾಗಿ ಹಬ್ಬಿ ಹೂ ಬಿಟ್ಟಿದ್ದುವು; ಅಂದು ನೆಟ್ಟಿದ್ದ ಪಾರಿಜಾತ ಸಂಪಗೆ ಸಸಿಗಳು ಈಗ ಮರವಾಗಿ ಹೂಕೊಡುತ್ತಿದ್ದುವು. ಅವುಗಳನ್ನು ನೋಡಿದಾಗ ಗೌರಿಯ ನೆನಪಾಯಿತು. ಹೀಗೆ, ಸುತ್ತ ಒಮ್ಮೆ ಪರಿಶೀಲಿಸಿದ ಮೇಲೆ, ತಾನು ನೆಮ್ಮಿ ನಿಂತಿದ್ದ ಆ ದೊಡ್ಡ ಆಲದ ಮರವನ್ನು ಸಾಕಿದ ಹಸುವನ್ನೋ ನಾಯಿಯನ್ನೋ ಮುಟ್ಟಿ ಮುಟ್ಟಿ ನೋಡುವಂತೆ ಮುಟ್ಟಿ ನೋಡಿದನು. ಹೌದು, ಅದೇ ಆಲದ ಮರ; ಚಿಕ್ಕಂದಿನಲ್ಲಿ ತನಗೂ ಗೌರಿಗೂ ಆಟಕ್ಕೆ ನೆಳಲುಕೊಡುತ್ತಿದ್ದ ಅದೇ ಆಲದ ಮರ; ಒಡನೆಯೆ, ತಾನೂ ಗೌರಿಯೂ ಅದರ ಬಿಳಲುಗಳಿಗೆ ಜೋತುಬಿದ್ದ ಆಡುತ್ತಿದ್ದುದು ನೆನಪಿಗೆ ಬಂದಿತು; ಅಂದು ಎಣಿಸುತ್ತಿದ್ದಂತೆ ಇಂದೂ ಒಮ್ಮೆ ಬಿಳಲುಗಳನ್ನು ಎಣಿಸಿನೋಡಬೇಕೆನ್ನಿಸಿತು; ಯಾಂತ್ರಿಕವಾಗಿಯೋ ಎಂಬಂತೆ ಎಣಿಸತೊಡಗಿದನು; ಅಂದು ನೆಲವನ್ನು ಮುತ್ತಿಡುವಂತಿದ್ದ ಹತ್ತುಹನ್ನೆರಡು ಬಿಳಲುಗಳು ಈಗ ನೆಲದಲ್ಲಿ ಬೇರುಬಿಟ್ಟು, ತಮ್ಮನ್ನು ಬೆಳಸಿಕೊಂಡುಬಂದ ಕೊಂಬೆಗಳಿಗೆ ಈಗ ಊರೆಯಾಗಿ ನಿಂತಿದ್ದುವು. ಅವುಗಳ ಜೊತೆಗೆ ಸುತ್ತಮುತ್ತ ಇಳಿಯಬಿದ್ದಿದ್ದ, ಇಳಿಯಬೀಳುತ್ತಿದ್ದ ಹಲವಾರು ಬಿಳಲುಗಳು ಇವನಿಗೆ ಹೊಸವಾಗಿ ಕಂಡುವು. ಹಾಗೆಯೇ ನೋಡುತ್ತ ನೋಡುತ್ತ ಅವನ ಕಣ್ಣು ಇದ್ದಕ್ಕಿದ್ದ ಹಾಗೆ ಮರದ ಬುಡದ ಕಡೆಗೆ ಹೋಯಿತು; ಅಲ್ಲಿ ಏನನ್ನೋ ಕಂಡು ಖಿನ್ನಭಾವದ ಹುಸಿನಗೆಯೊಂದು ಅವನ ಮುಖದಲ್ಲಿ ಮುದ್ರಿತವಾಯಿತು. ಅವನಿಗೆ ಕಂಡದ್ದು ಅರ್ಧ ಅಳಿಸಿಹೋಗಿದ್ದ 'ಖನ್' ಎಂಬ

"ನೋಡು, ವಿಶ್ವನಾಥ!" ಎಂದು ತಾಯಿಗೆ ಸಹಜವಾದ ಹೆಮ್ಮೆಯೊಡನೆ ಅವಳು ಮಗನನ್ನು ಕರೆದು ಹೇಳತೊಡಗಿದಳು: "ನೋಡಲ್ಲಿ, ಹೊನ್ನಯ್ಯಗೌಡರೂ ಇನ್ನಿಬ್ಬರು ಪಂಚಾಯತದಾರರೂ ನಿನ್ನನು ನೋಡುವುದಕ್ಕಾಗಿಯೇ ಇತ್ತ ಕಡೆ ಬರುತ್ತಿದ್ದಾರೆ. ನೀನು ಪರದೇಶದಲ್ಲಿ ನೋಡಿರುವುದೆಲ್ಲವನ್ನೂ ಅವರಿಗೆ ಮೊದಲಿಂದ ಕಡೆವರೆಗೆ ವಿವರಿಸಿ ಹೇಳು."

ವಿಶ್ವನಾಥನನ್ನು ಸಂದರ್ಶಿಸಲು ಬಂದ ಆ ಮೂವರಲ್ಲಿ ಪ್ರಮುಖನಾದ ಹೊನ್ನಯ್ಯಗೌಡನು ಬಹಳ ಆಡಂಬರದವನಾದರೂ ಒಳ್ಳೆಯ ಮುದುಕ; ಗ್ರಾಮದ ವ್ಯವಹಾರಗಳಿಗೆಲ್ಲ ಅವನೇ ಮುಖಂಡ, ಮತ್ತು ಮುಖ್ಯ ಸಂಚಾಲಕ; ಮತ್ತು ಅವನು ಅತ್ಯಂತ ಪ್ರಾಜ್ಞರಲ್ಲಿ ಒಬ್ಬನೆಂದು ಗಣ್ಯನಾಗಿದ್ದವನು. ಅವನು ತಲೆಗೆ ರೇಶ್ಮೆಯ ಪಾಗು ಧರಿಸಿದ್ದನು; ಸೊಗಸಾದ ಕಸೆಯ ಅಂಗಿಯನ್ನು ತೊಟ್ಟಿದ್ದನು; ಅದರ ಮೇಲೆ ಹಚ್ಚಡ ಒಂದನ್ನು ಹೊದೆದಿದ್ದನು; ಬೆಳ್ಳಿಯ ಕಟ್ಟಿನಿಂದ ಅಲಂಕೃತವಾಗಿದ್ದ ದಂಡವನ್ನು ಕೈಯಲ್ಲಿ ಹಿಡಿದಿದ್ದನು; ಅವನು ಅದನ್ನು ಊರಿಕೊಂಡು ನಡೆಯುವುದಕ್ಕಿಂತ ಹೆಚ್ಚಾಗಿ ಕೈಗೆ ಒಂದು ಭೂಷಣವಾಗಿ ಹಿಡಿದಿದ್ದಂತೆ ತೋರುತ್ತಿತ್ತು. ಅವನ ಜೊತೆಯವರಿಬ್ಬರೂ ಅವನಂತೆಯೆ ಗಣ್ಯಪುರುಷರಾಗಿ ಕಾಣುತ್ತಿದ್ದರು; ಆದರೆ, ಅವರು ಅವನಿಗಿಂತ ಕೆಳಗಿನ ವರ್ಗದವರೆಂಬುದು ಅವರ ಉಡುಪಿನಿಂದಲೆ ಚೆನ್ನಾಗಿ ವ್ಯಕ್ತವಾಗುತ್ತಿತ್ತು. ಅವರು ಅವನ ಹಿಂದುಗಡೆ ಬಹಳ ಭಯಭಕ್ತಿಯಿಂದ ನಡೆದು ಬರುತ್ತಿದ್ದುದರಿಂದ ಅವರು ಅವನ ಅನುಯಾಯಿಗಳಾಗಿದ್ದರೆಂದು ಎಣಿಸಲು ಅವಕಾಶವಿತ್ತು.

ಈ ಮೂವರೂ ದಾರಿಯಲ್ಲಿ ಬರುತ್ತಿದ್ದ ವೇಳೆಯಲ್ಲಿ, ವಿಶ್ವನಾಥನು ಬಾಗಿಲ ಎದುರಿನಲ್ಲಿ ಚಾಪೆಯ ಮೇಲೆ ಗೋಡೆಯೊರಗಿ ಕುಳಿತುಕೊಂಡು ಅವರನ್ನೆ ದಿಟ್ಟಿಸಿ ನೋಡುತ್ತಿದ್ದನು; ಅವನ ಕಣ್ಣುಗಳು ಹಾಗೆ ದಿಟ್ಟಿಸಿ ನೋಡುತ್ತಿದ್ದರೂ ಅವನ ಗಮನ ಮಾನಸಿಕ ಪ್ರಪಂಚದ ಮೋಹಕ ವಾತಾವರಣದಲ್ಲಿ ವಿಹರಿಸುತ್ತ, ಅವರ ಆಕೃತಿಗಳನ್ನೂ ಅಲ್ಲಿಯೇ ಪರಿಭಾವಿಸುತ್ತಿತ್ತು.

ಅವನ ಮನಸ್ಸಿನ ಪರಿಭಾವನೆ ಈ ರೀತಿಯಿತ್ತು: "ಇಂದು ಇಲ್ಲಿ ಮೂವರು ವಯೋವೃದ್ಧರಾದ ಮಹನೀಯರು ಬರುತ್ತಿದ್ದಾರೆ. ಇವರಲ್ಲಿ ಮುಖ್ಯಸ್ಥನಾದ ಮೊದನೆಯವನು ದಂಡಧಾರಿಯಾದ ಪೂಜ್ಯಜ್ಞಾನಿಯಾಗಿ ಕಾಣುತ್ತಾನೆ. ಇವರೇ ನನ್ನ ಭಾಗ್ಯದ ಸಂದೇಶವನ್ನು ತಂದಿರುವ ದೂತರಾಗಿದ್ದಾರೆ!"

ಹೊನ್ನಯ್ಯಗೌಡನೂ ಅವನ ಜೊತೆಯವರೂ ಮನೆಯನ್ನು ಹೊಕ್ಕ ಕೂಡಲೆ ವಿಶ್ವನಾಥನು ಉತ್ಸುಕತೆಯಿಂದ ಮೇಲೆದ್ದು ಅವರಿಗೆ ಸ್ವಾಗತ ನೀಡಲು ಕೆಲವು

ಎಳೆಯನಾಗಿದ್ದಾಗ ಮಲಗಿದ್ದ ದಿಂಬಿನ ಮೇಲೆಯೆ–ರಜಪುಟಾಣದ ಮರಳುಗಾಡಿನಲ್ಲಿ ಗೂಡಾರದ ಮರೆಯಲ್ಲಿ ಕಳೆದುದಕ್ಕಿಂತಾಗಲಿ ಅಥವಾ ನಿರ್ಜನವಾದ ವಿಂಧ್ಯಾರಣ್ಯದ ಭೀಕರ ತಮೋಮಧ್ಯದಲ್ಲಿ ಕಳೆದುದಕ್ಕಿಂತಾಗಲಿ ಹೆಚ್ಚು ಘೋರವಾದ ರಾತ್ರಿಯನ್ನು ಇಂದು ಅವನು ಕಳೆದಿದ್ದನು. ಛಾಯಾಕನ್ಯೆಯೊಬ್ಬಳು ಅವನ ಹಾಸಿಗೆಯ ಬಳಿ ಕದ್ದು ಸುಳಿದು, ಅವನ ಪ್ರತಿಸ್ಪಂದಿಸುತ್ತಿದ್ದ ಹೃದಯದ ಮೇಲೆ ತನ್ನ ಬೆರಳನ್ನು ಇಟ್ಟಿದ್ದಳು; ತಮೋಮಧ್ಯದಿಂದ ಜ್ವಾಲಾಹಸ್ತವೊಂದು ಕಾಣಿಸಿಕೊಂಡು, ಭೂಗರ್ಭನಿಕ್ಷಿಪ್ತರಹಸ್ಯವೊಂದರ ಕಡೆಗೆ ತೋರುತ್ತ ಕಂಗೊಳಿಸಿತ್ತು; ನರೆಗೂದಲಿನ ಮುನಿಯೊಬ್ಬನು ತನ್ನ ಭವಿಷ್ಯದ್ವಾದಿಯಾದ ಕರದಂಡವನ್ನು ಗಂಭೀರವಾಗಿ ತೂಗಾಡಿಸುತ್ತ, ಅದೇ ಛಾಯಾರೂಪಗಳು, ಹಗಲಾದ್ದರಿಂದ ಅಸ್ಫುಟವಾಗಿದ್ದರೂ ಕೂಡ ಇನ್ನೂ ಗುಡಿಸಿಲಿನ ಸುತ್ತ ಮುತ್ತ ಸುಳಿದಾಡುತ್ತ, ವಿಶ್ವನಾಥನು ಹಿಂದಿರುಗಿದ್ದ ಸಮಾಚಾರವನ್ನು ಕೇಳಿ ಅವನ ತಾಯಿಯ ಸಲುವಾಗಿಯಾದರೂ ಅವನಿಗೆ ಸ್ವಾಗತ ಬಯಸುವುದಕ್ಕಾಗಿ ಇತ್ತ ನೆರೆದಿದ್ದ ನೆರೆಹೊರೆಯ ಪರಿಚಯಸ್ಥ ಜನವೃಂದದೊಡನೆ ಸೇರಿಕೊಂಡಿದ್ದುವೊ ಎಂಬಂತಿತ್ತು. ಹಾಗೆ ನೆರೆದಿದ್ದ ಅವರ ಕಣ್ಣಿಗೆ ವಿಶ್ವನಾಥನು, ಒಬ್ಬ ಎತ್ತರವಾದ, ಶ್ಯಾಮಲವರ್ಣದ, ವಿನಯಭೂಷಿತ ವರ್ತನೆಯಿಂದಲೂ ಮೃದುಮಧುರ ಭಾಷಣದಿಂದಲೂ ಘನತೆಗೊಂಡಿದ್ದ, ಪರಕೀಯ ಸ್ವರೂಪವುಳ್ಳ, ಆಗಿಂದಾಗ್ಗೆ ಅದೃಶ್ಯವಾದುದರ ದರ್ಶನಪಡೆಯುತ್ತಿದ್ದಂತೆ ಕಾಣುತ್ತಿದ್ದ, ಅಂತರ್‌ದೃಷ್ಟಿಯುಳ್ಳ ಕಣ್ಣುಗಳಿಂದ ಆಕರ್ಷಣೀಯನಾಗಿದ್ದ ಒಬ್ಬ ಗಂಭೀರ ವ್ಯಕ್ತಿಯಾಗಿ ಕಂಡನು.

ವಿಶ್ವನಾಥನ ತಾಯಿಯ ಸಂತೋಷಕ್ಕೆ ಪಾರವೇ ಇರಲಿಲ್ಲ. ತಾನು ಎಂದಿನಂತೆ ಮತ್ತೆ ತನ್ನ ಪ್ರೇಮವನ್ನೆಲ್ಲ ಒಬ್ಬರ ಮೇಲೆ ಎರೆಯಬಹುದೆಂದೂ, ಮತ್ತೆ ಒಬ್ಬರ ಆರೈಕೆ ಮಾಡುವ ಹಿತವಾದ ಕರ್ತವ್ಯ ತನ್ನ ಪಾಲಿಗೆ ಹಿಂದಿರುಗಿತೆಂದೂ, ಮತ್ತೆ ಗೃಹಕೃತ್ಯ ನಡಸುವ ಸುಖಕರವಾದ ಹೊಣೆ ತನ್ನ ಭಾಗಕ್ಕೆ ಬಂದಿತೆಂದೂ ಆಕೆ ಹಿಗ್ಗುತ್ತ ಮನೆಯಲ್ಲೆಲ್ಲ ಒಂದೇ ಸಮನೆ ಓಡಾಡತೊಡಗಿದಳು.

ಆಗ ಮಧ್ಯಾಹ್ನವಾಗಿತ್ತು; ಅವಳು ಒಮ್ಮೆ ಅಕಸ್ಮಾತ್ತಾಗಿ ಬಾಗಿಲ ಹೊರಗಡೆಗೆ ನೋಡಿದಾಗ ದಾರಿಯಲ್ಲಿ, ಕಾಯುತ್ತಿದ್ದ ಬಿಸಿಲಿನಲ್ಲಿ, ಹೊಂಗೆಮರಗಳ ತಣ್ಣೆಳಲ ಅಡಿಯಲ್ಲಿ, ಮೂವರು ವ್ಯಕ್ತಿಗಳು ಬರುತ್ತಿದ್ದುದನ್ನು ಕಂಡಳು. ಕಡೆಗೆ, ಅವರು ತನ್ನ ಮನೆಯನ್ನೇ ಸಾರುತ್ತಿದ್ದುದು ಅವಳಿಗೆ ವ್ಯಕ್ತವಾಯಿತು.

ಗಂಭೀರಾಕೃತಿಯಲ್ಲಿ ಏನೋ ರಹಸ್ಯವಾದುದನ್ನು, ಏನೋ ಅಲೌಕಿಕವಾದುದನ್ನು ಕಂಡಂತೆಯೂ, ಅವನ ಕಸೆಯ ಅಂಗಿಯನ್ನು ಮುಚ್ಚಿದ್ದ ಕಾವಿಗೆಂಪಿನ ಹೊದೆಹಚ್ಚಡ ಮುನಿಯೋಗ್ಯವಾದ ಕಾಷಾಯ ವಸ್ತ್ರದಂತೆಯೂ, ಅವನ ತಕ್ಕಮಟ್ಟಿಗೆ ಬೆಳೆದಿದ್ದ ನರೆತ ಗಡ್ಡ ತಪಸ್ವಿಯ ಗಡ್ಡದಂತೆಯೂ ವಿಶ್ವನಾಥನಿಗೆ ತೋರಿದುವೋ ಎಂಬಂತೆ ಅವನ ನೋಟ ಗೌಡನ ಸ್ವರೂಪಾವಲೋಕನದಲ್ಲಿ ನೆಟ್ಟು ಹೋಗಿತ್ತು. ವಿಶ್ವನಾಥನ ಆಶ್ಚರ್ಯಕ್ಕೂ ಸಾಕಷ್ಟು ಕಾರಣವಿಲ್ಲದೆ ಇರಲಿಲ್ಲ: ಏಕೆಂದರೆ, ವಿಶ್ವನಾಥನು ಯಾರನ್ನು ಪ್ರಪಂಚದಲ್ಲೆಲ್ಲ ಅನ್ವೇಷಣ ಮಾಡುತ್ತಿದ್ದನೊ ಆ ಮುನಿವರ್ಯನ ಮಹಾಸಂದೇಶವನ್ನು ಸಾರುವ ಕರಧೃತದಂಡಚಾಲನ ಸಂಕೇತವನ್ನೇ ಯಥಾವತ್ತಾಗಿ ಪಡಿಮೂಡಿಸಿತ್ತು ಗೌಡನ ಕರದಂಡದ ಚಂಚಚ್ಚಾಲನ!

ಉತ್ಸುಕತೆಯಿಂದ ಕಂಪಿಸುತ್ತಿದ್ದ ಧ್ವನಿಯಲ್ಲಿ ವಿಶ್ವನಾಥನು ಇಂತು ಕೇಳಿದನು: "ಗೌಡಮಹಾಶಯರೆ, ನನ್ನನ್ನು ರಾಜಾಧಿರಾಜರಿಗೆ ಸರಿಗಟ್ಟುವ ಆ ಮಹಾಪದವಿಯಾದರೂ ಯಾವುದಿರಬಹುದು?"

ಗೌಡನು ಗಂಭೀರಧ್ವನಿಯಲ್ಲಿ ಉತ್ತರ ಕೊಟ್ಟನು: "ನಮ್ಮ ಗ್ರಾಮದ ಮಠದ ಉಪಾಧ್ಯಾಯ ಪಟ್ಟವೇ ಅದು. ಪೂಜ್ಯರಾದ ಕಾಶೀನಾಥ ಪಂಡಿತರು ಆ ಮಠವನ್ನು ಸ್ಥಾಪಿಸಿ, ಅದನ್ನು ಐವತ್ತು ವರ್ಷಗಳಿಂದಲೂ ನಡಸಿಕೊಂಡು ಬಂದು, ನಮ್ಮ ಗ್ರಾಮದ ಎಲ್ಲ ಮಕ್ಕಳಿಗೂ ಜಾತಿಮತಭೇದವಿಲ್ಲದೆ ವಿದ್ಯಾದಾನಮಾಡಿ, ಎಲ್ಲರಿಗೂ ಬಹಳ ಬೇಕಾದವರಾಗಿದ್ದು, ಈಗ ಮೊನ್ನೆ ತಾನೆ ತೀರಿಹೋದರು. ಅವರು ತೀರಿಹೋದದ್ದರಿಂದ, ನಮ್ಮ ಗ್ರಾಮದ ಹುಡುಗರೆಲ್ಲ ಕುರುಬನಿಲ್ಲದ ಕುರಿಗಳಂತಾಗಿದ್ದಾರೆ. ನೀನು ಆ ಪಂಡಿತರ ಕೈಕೆಳಗೆ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿರುತ್ತೀಯೆ. ಅವರು ಬರಿಯ ಕಾಶೀನಾಥರು; ಅವರ ಅನುಭವಕ್ಕೆ ಎಷ್ಟಾದರೂ ಒಂದು ಮಿತಿಯಿತ್ತು. ನೀನು ಪ್ರಪಂಚವನ್ನೆಲ್ಲ ಸುತ್ತಾಡಿ 'ವಿಶ್ವನಾಥ'ನೆನ್ನಿಸಿಕೊಳ್ಳಲು ಅರ್ಹತೆಯನ್ನು ಪಡೆದಿರುತ್ತೀಯೆ. ಅವರ ನಿಧನದಿಂದ ತೆರಪಾಗಿರುವ ಸ್ಥಾನಕ್ಕೆ ಅವರ ಶಿಷ್ಯನಾದ, ಜ್ಞಾನಾನುಭವಗಳಲ್ಲಿ ಅವರನ್ನು ಮೀರಿಸಿರುವ ನೀನೇ ತಕ್ಕವನು."

"ನಿಮ್ಮ ಸೂಚನೆಯನ್ನು ಪರ್ಯಾಲೋಚಿಸಿ, ಇನ್ನು ಮೂರು ದಿನಗಳೊಳಗಾಗಿ ನನ್ನ ನಿಶ್ಚಯವನ್ನು ನಿಮಗೆ ತಿಳಿಸುತ್ತೇನೆ" ಎಂದು ವಿಶ್ವನಾಥನು ಅವಸರದಿಂದ ಉತ್ತರ ಕೊಟ್ಟನು.

ಇನ್ನು ಕೆಲವು ಮಾತುಗಳನ್ನಾಡಿದ ಮೇಲೆ ಗೌಡನೂ ಅವನ ಜೊತೆಯವರೂ ವಿಶ್ವನಾಥನನ್ನು ಬೀಳ್ಕೊಂಡು ಹೊರಟು ಹೋದರು. ಆದರೆ, ಅವನ ಕಲ್ಪನೆಯಲ್ಲಿ

ಹೆಜ್ಜೆ ಮುಂದಕ್ಕೆ ಹೋದನು; ಅವನು ಎಲ್ಲರಿಗೂ ತಲೆಬಾಗಿ ವಂದಿಸಿ ಅವರನ್ನು ಬರಮಾಡಿಕೊಂಡಾಗ, ಅವನ ಶ್ಯಾಮಲವಾದ ಉನ್ನತಾಕೃತಿಯಲ್ಲಿ ಅದೊಂದು ಬಗೆಯ ಗಾಂಭೀರ್ಯ ಮೂಡಿ ಕಾಣುತ್ತಿತ್ತು. ಹೊನ್ನಯ್ಯಗೌಡನು ಗ್ರಾಮದಲ್ಲೆಲ್ಲ ಹಿರಿಯನಾದ್ದರಿಂದ ತಲೆಬಾಗಿದವರಿಗೆಲ್ಲ ಪ್ರಾಯಶಃ 'ದೇವರು ಒಳ್ಳೆಯದು ಮಾಡಲಿ' ಎಂದು ಹರಸುವುದೇ ಅವನ ಅಭ್ಯಾಸಕ್ಕೆ ಬಂದ ಕರ್ತವ್ಯವಾದ ಕಾರಣ, ಇಂದೂ ಅವನು ವಿಶ್ವನಾಥನನ್ನು ಹರಸುವುದಕ್ಕೋ ಎಂಬಂತೆ ದಂಡ ಸಮೇತವಾಗಿ ಕೈಗಳೆರಡನ್ನೂ ಮೇಲಕ್ಕೆತ್ತಿ, ಆಶೀರ್ವಚನ ಬಾಯಿಂದ ಹೊರಬರುವಷ್ಟರಲ್ಲಿಯೆ ತಟಕ್ಕನೆ ಕೈಗಳನ್ನು ಕೆಳಕ್ಕೆ ತಂದು ಜೋಡಿಸಿಕೊಂಡು ತಲೆಬಾಗಿ ಅವನಿಗೆ ನಮಸ್ಕರಿಸಿದನು. ಜೊತೆಯವರಿಬ್ಬರೂ ಸೊಂಟದವರೆಗೂ ಬಾಗಿ ವಿಶ್ವನಾಥನಿಗೆ ಪ್ರಣಾಮ ಮಾಡಿದರು. ವಿಶ್ವನಾಥನು ಮೂವರವನ್ನೂ ಕುಳಿತುಕೊಳ್ಳುವಂತೆ ಪ್ರಾರ್ಥಿಸಿಕೊಂಡನು. ಹೊನ್ನಯ್ಯಗೌಡನು ನಿಂತುಕೊಂಡೇ ತಾನು ಬಂದ ಉದ್ದೇಶವನ್ನು ವಿಶ್ವನಾಥನಿಗೆ ತಿಳಿಸಲು ಉಪಕ್ರಮಿಸಿದನು:

"ನಾನೂ ನನ್ನ ಜೊತೆಯವರಾದ ಇವರಿಬ್ಬರೂ ಈ ಗ್ರಾಮದ ಪಂಚಾಯತದಾರರಾಗಿರುವುದರಿಂದ ನಮ್ಮ ಮೇಲೆ ಅನೇಕ ಕರ್ತವ್ಯಭಾರಗಳು ಬಿದ್ದಿವೆ. ಮೂರು ದಿನಗಳಿಂದಲೂ ನಮ್ಮ ಮನಸ್ಸು ಒಂದು ಅತ್ಯಂತ ಮುಖ್ಯವಾದ ಅಧಿಕಾರಸ್ಥಾನಕ್ಕೆ ಒಬ್ಬ ಯೋಗ್ಯ ಪುರುಷನನ್ನು ಆರಿಸುವ ಮಹತ್ತರವಾದ ಕಾರ್ಯದಲ್ಲಿ ಉದ್ಯುಕ್ತವಾಗಿದೆ. ನಾವು ಆರಿಸುವ ಅಧಿಕಾರಿ ಒಂದು ದೊಡ್ಡ ಹೊಣೆ ವಹಿಸಿಕೊಂಡು ಒಂದು ಬಗೆಯ ಆಡಳಿತವನ್ನೇ ಮಾಡಬೇಕಾಗಿದೆ. ಅದು, ಸರಿಯಾಗಿ ಆಲೋಚಿಸಿ ನೋಡಿದರೆ, ರಾಜಾಧಿರಾಜರ ಕಾರ್ಯಭಾರಕ್ಕಿಂತ ಕಡಮೆಯಾದುದೇನೂ ಅಲ್ಲ. ನೀನಾದರೋ ನಮ್ಮ ಊರಿನವನೇ ಆಗಿದ್ದೀಯೆ. ನೀನು ಹುಟ್ಟಿದಂದಿನಿಂದಲೂ ಬಹಳ ಬುದ್ಧಿವಂತನೆಂಬುದು ನಮಗೆಲ್ಲ ತಿಳಿದ ವಿಷಯ. ನಿನಗೆ ಸಹಜವಾದ ಜ್ಞಾನಸಂಪತ್ತಿದೆ. ಪರದೇಶಗಳ ಸುತ್ತಾಟದಿಂದ ನೀನು ಸಂಸ್ಕೃತನಾಗಿರುತ್ತೀಯೆ. ನಿನ್ನ ಯೌವನದ ಕೊಂಕುಗಳೆಲ್ಲವೂ ತಿದ್ದಿಹೋಗಿ ಎಷ್ಟೋ ಕಾಲವಾಗಿದೆ; ನಿನ್ನ ಅಂದಿನ ಭ್ರಾಂತಿಯ ಕಲ್ಪನೆಗಳೆಲ್ಲವೂ ಮಾಯವಾಗಿದೆ. ಇದನ್ನೆಲ್ಲ ಪರ್ಯಾಲೋಚಿಸಿದ ಮೇಲೆ, ನಮ್ಮ ಉದ್ದೇಶವನ್ನು ನೆರವೇರಿಸಿ ಕೊಡುವುದಕ್ಕಾಗಿಯೇ ದಯಾಮಯನಾದ ಭಗವಂತನು ನಿನ್ನನ್ನು ಈ ಸಂಧಿಯಲ್ಲಿ ಇಲ್ಲಿಗೆ ಕಳಿಸಿರುತ್ತಾನೆ ಎಂಬುದಾಗಿ ನಾವು ಭಾವಿಸಿದ್ದೇವೆ."

ಈ ಸಾಡಂಬರ ಭಾಷಣವನ್ನು ಕೇಳುತ್ತಿರುವಾಗ, ವಿಶ್ವನಾಥನ ಕಣ್ಣುಗಳು ಮಾತನಾಡುತ್ತಿದ್ದ ವ್ಯಕ್ತಿಯ ಮೇಲೆ ಕೀಲಿಸಿ ಹೋಗಿದ್ದುವು. ಗೌಡನ

ನೆರಳು ಬಳಿಸಾರಿದ್ದ ಪ್ರತಿಯೊಂದು ವಸ್ತುವಿನ ಸಮೀಪಕ್ಕೆ ಹೋದಾಗಲೂ, ಪ್ರತಿಯೊಂದೂ ತನ್ನ ಬಾಲ್ಯ ಯೌವನಗಳಲ್ಲಿ ಪರಿಚಿತವಾಗಿದ್ದು ನೆನಪಿನಲ್ಲಿ ಉಳಿದವುಗಳಲ್ಲಿ ಒಂದಾಗಿ ಇರುತ್ತಿತ್ತು. ಹಾದಿಯ ಒಂದೊಂದು ತಿರುವೂ ನೆನಪಿಗೆ ಬಂದಿತು. ದೃಶ್ಯದ ಹೆಚ್ಚು ಕ್ಷಣಿಕ ಲಕ್ಷಣಗಳು ಕೂಡ ಸಂದ ದಿನಗಳಲ್ಲಿ ಹೇಗಿದ್ದುವೊ ಇಂದೂ ಹಾಗೆಯೆ ಇದ್ದುವು. ಹಾದಿಯ ಹುಲ್ಲಂಚಿನ ಮೇಲೆ ಮಂದೆಗೂಡಿ ಮೇಯುತ್ತಿದ್ದ ಹಸುಗಳು ತಮ್ಮ ಉಸಿರಿನ ನರುಗಂಪಿನಿಂದ ಅವನನ್ನು ಆಮೋದಗೊಳಿಸಿದುವು. "ನಾನು ಪ್ರವಾಸದಲ್ಲಿ ಒಮ್ಮೆ ಬಳಲಿದಾಗ ನನ್ನನ್ನು ಹುರಿದುಂಬಿಸಿದ ಮಲಯ ಮಾರುತಕ್ಕಿಂತ ಇದು ಹೆಚ್ಚು ಮಧುರವಾಗಿದೆ" ಎಂದು ಅವನು ಬಗೆದನು. ಹಾಗೆಯೆ ಮುಂದುವರಿಯುತ್ತಿರಲು, ಒಂದು ಮುದ್ದಾದ ಸಣ್ಣ ಹಸುಳೆ ಮನೆಯ ಬಾಗಿಲಿನಿಂದ ಹಾದಿಗೆ ಉರುಳಿಬಂದು, ಎಳನಗೆಯನ್ನು ಬೀರುತ್ತ, ಸಂಜೆಗಂಪಿನಲ್ಲಿ ಚೆಂದರಳಿರಂತೆ ನಳನಳಿಸುತ್ತ, ಹೆಚ್ಚು ಕಡಮೆ ಅವನ ಅಡಿಗಳೆಡೆಯಲ್ಲಿ ಮಲಗಿತು. ದೀರ್ಘಕಾಯನಾದ ವಿಶ್ವನಾಥನು ಬಾಗಿ, ಮಗುವನ್ನು ಎತ್ತಿಕೊಂಡು, ಅದನ್ನು ಅಲ್ಲಿಯೆ ಬಳಿಯಲ್ಲಿದ್ದ ಅದರ ತಾಯ ವಶಕ್ಕೆ ಒಪ್ಪಿಸಿದನು. "ಇನ್ನು ಮುಂದೆ ಮಕ್ಕಳು ನನ್ನ ವಶದಲ್ಲಿ ಇರುವುವಲ್ಲವೆ!" ಎಂದು ಅವನು ಒಮ್ಮೆ ನಿಟ್ಟುಸಿರುಬಿಟ್ಟು, ನಸುನಕ್ಕು, ತನಗೆ ತಾನೆ ಹೇಳಿಕೊಂಡನು. ಸಹಜಭಾವದ ಪ್ರವಾಹ ಅವನ ಹೃದಯದಲ್ಲಿ ಬುಗ್ಗೆಯಂತೆ ಚಿಮ್ಮುತ್ತಿರಲು, ಎಷ್ಟು ಪ್ರಯತ್ನಪಟ್ಟಿದ್ದರೂ ಪ್ರವೇಶಿಸದೆ ಮುಂದಕ್ಕೆ ಹೋಗಲು ಸಾಧ್ಯವಾಗದಂತೆ ಅವನನ್ನು ತಡೆದು ನಿಲ್ಲಿಸುತ್ತಿದ್ದ ಮನೆಯೊಂದರ ಬಳಿಗೆ ಬಂದನು. ಆಳವೂ ಕೋಮಲವೂ ಆದ ಆತ್ಮದಿಂದ ಹೊರಹೊರಡುತ್ತಿದ್ದಂತೆ ತೋರುತ್ತಿದ್ದ ಇಂಚರವೊಂದು ಮನೆಯೊಳಗೆ ವಿಷಾದಪೂರ್ಣವಾದ ಲಘು ಗೀತೆಯೊಂದನ್ನು ಹಾಡುತ್ತಿದ್ದಿತು.

ಅವನು ತನ್ನ ತಲೆ ಬಗ್ಗಿಸಿ, ತಗ್ಗಾದ ಬಾಗಿಲನ್ನು ಹಾದು ಮನೆಯೊಳಕ್ಕೆ ಹೋದನು. ಹೊಸಿಲ ಮೇಲೆ ಅವನ ಹೆಜ್ಜೆಯ ಸದ್ದಾದಕೂಡಲೆ, ಮಬ್ಬಾದ ಮನೆಯೊಳಗಿನಿಂದ ತರುಣಿಯೊಬ್ಬಳು ಮೊದಲು ತವಕದಿಂದ, ಬಳಿಕ ಎಚ್ಚರಿಕೆಯಿಂದ ಹೆಜ್ಜೆ ಹಾಕುತ್ತ ಬಂದಳು; ಬಂದು, ಅವನ ಮುಂದೆ ನಿಂತು, ತುಸು ಲಜ್ಜೆಯಿಂದ ತಲೆಬಾಗಿದಳು. ಅವಳ ದೃಷ್ಟಿ ಅವನ ಪಾದಗಳ ಮೇಲೆ ನೆಲಸಿತ್ತು. ಅವರಿಬ್ಬರ ಆಕೃತಿಗಳಲ್ಲಿ ಒಂದು ಬಗೆಯ ವಿಚಿತ್ರ ವ್ಯತ್ಯಾಸ ಕಾಣುತಿತ್ತು: ಪ್ರಪಂಚದೊಡನೆ ಹೋರಾಡಿದ್ದ, ಎಲ್ಲ ಬಿಸಿಲುಗಳಿಗೂ ಎಲ್ಲ ಗಾಳಿಗಳಿಗೂ ಮೈಯೊಡ್ಡಿದ್ದ, ಅವನ ಬಣ್ಣ ಶ್ಯಾಮಲ, ರೂಪ ರುದ್ರರಮಣೀಯ; ಅವಳೋ ಹೆಸರಿಗೆ ತಕ್ಕಂತೆ ಗೌರಾಂಗಿ, ನೋಟಕ್ಕೆ ಮಧುರ ಮನೋಹರಳು, ಶಾಂತಿಮೂರ್ತಿ–

ಅವರ ಪ್ರತಿಬಿಂಬಗಳು ಇನ್ನೂ ನೆಲಸಿದ್ದುವು; ಮತ್ತು, ಮೊದಲು ಅವನ ಕನಸಿನಲ್ಲಿ ಕಾಣಿಸಿಕೊಂಡು, ಆಮೇಲೆ ಪರಿಚಿತವಾದ ವಸ್ತುಗಳು ಹೇಗೋ ಹಾಗೆ ಅವನ ಎಚ್ಚರದ ವೇಳೆಯಲ್ಲೂ ಪರಿಚಿತ ಸ್ವರೂಪವನ್ನು ಧರಿಸಿ ಗೋಚರವಾಗುತ್ತಿದ್ದ ಆಕೃತಿಗಳ ಅಸ್ಪಷ್ಟ ಗಾಂಭೀರ್ಯವನ್ನು ಹೆಚ್ಚು ಹೆಚ್ಚಾಗಿ ತಳೆಯುತ್ತ ಬಂದುವು. ಅವನ ಮನಸ್ಸು ಗೌಡನ ಸ್ವರೂಪವನ್ನು ಕುರಿತು ಧ್ಯಾನಿಸುತ್ತ ಬಂದಂತೆಲ್ಲ ಅದು ತನ್ನ ಭಾವನಾವ್ಯಕ್ತಿಯಾದ ಮುನಿವರ್ಯನ ಸ್ವರೂಪವೇ ಎಂಬ ಭ್ರಮೆ ಬಲಿಯುತ್ತ ಬಂದು. ಒಂದು ವ್ಯಕ್ತಿ ಇನ್ನೊಂದು ವ್ಯಕ್ತಿಯ ನೆರಳು ಮಾತ್ರ ಎಂಬುದಾಗಿ ತೋರತೊಡಗಿತು. ಅದೇ ಮುಖಬಿಂಬ ಗಂಗಾ ತೀರದ ಸ್ನಾನಘಟ್ಟದಲ್ಲಿ ತನ್ನನ್ನು ದೃಷ್ಟಿಸಿ ನೋಡಿತ್ತಲ್ಲವೆ? ಅದೇ ಆಕೃತಿ ಮಧುರಾ ಪಟ್ಟಣದ ದೇವಸ್ಥಾನದ ಕೈಸಾಲೆಯಲ್ಲಿ ನಿಂತು ತನ್ನನ್ನು ಬಳಿಗೆ ಕರೆದಿತ್ತಲ್ಲವೆ? ಅದೇ ಮೂರ್ತಿ ಧಡಧಡನೆ ಧುಮುಕುತ್ತಿದ್ದ ಜಲಪಾತವೊಂದರಲ್ಲಿ ಮಬ್ಬಾಗಿ ವ್ಯಕ್ತಗೊಂಡಿತ್ತಲ್ಲವೆ? – ಎಂಬುದಾಗಿ ಅವನು ಈಗ ಆಲೋಚಿಸಿದನು. ಅವನು ಜ್ಞಾಪಕಕ್ಕೆ ತಂದುಕೊಳ್ಳಲು ಪ್ರಯತ್ನಪಟ್ಟ ಪ್ರತಿಸಲವೂ, ತಾನು ಸ್ವಪ್ನದಲ್ಲಿ ಕಂಡಿದ್ದ ಭಾಗ್ಯದೂತನ ಏನಾದರೂ ಒಂದು ಲಕ್ಷಣವನ್ನು ಈ ಠೀವಿಯ ಗಲಭೆಯ ಅಹಂಮನ್ಯನಾದ ಹಳ್ಳಿಯ ಚಿಕ್ಕ 'ದೊಡ್ಡಮನುಷ್ಯ'ನಲ್ಲಿ ಗುರುತು ಹಿಡಿಯುತ್ತಿದ್ದನು. ಇಂತಹ ಆಲೋಚನಾಪರಂಪರೆಯಲ್ಲಿ ಮುಳುಗಿ, ತನ್ನ ಪ್ರಯಾಣ ಸಾಹಸಗಳ ವಿಷಯವಾಗಿ ತಾಯಿ ಕೇಳಿದ ಸಾವಿರಾರು ಪ್ರಶ್ನೆಗಳಿಗೆ ಕಿವಿಗೊಡದೆಯೆ, ಒಂದುವೇಳೆ ಕಿವಿಗೊಟ್ಟರೂ ಅಸ್ಪಷ್ಟವಾಗಿ ಉತ್ತರ ಕೊಡುತ್ತ, ವಿಶ್ವನಾಥನು ಸುಮ್ಮನೆ ಕುಳಿತಿದ್ದನು. ಸಂಜೆಯಾದಾಗ ಅವನು ಎಚ್ಚರಗೊಂಡು ಸುತ್ತಾಡಿಕೊಂಡು ಬರುವುದಕ್ಕಾಗಿ ಹೊರಕ್ಕೆ ಹೊರಟನು; ಅಂಗಳದ ಆಲದ ಮರವನ್ನು ಹಾದು ಹೋಗುತ್ತಿದ್ದಾಗ, ಅರ್ಧ ಅಳಿಸಿ ಹೋಗಿದ್ದ ಅಕ್ಷರಗಳ ಕಡೆಗೆ ಕೆಳಮುಖವಾಗಿ ತೋರುತ್ತಿದ್ದ ಕೈಯ ಆಕೃತಿ ಮತ್ತೆ ಅವನ ಕಣ್ಣಿಗೆ ಬಿದ್ದಿತು.

ವಿಶ್ವನಾಥನು ಹಳ್ಳಿಯ ಹಾದಿಯಲ್ಲಿ ಮುಂದುಮುಂದಕ್ಕೆ ನಡೆದುಕೊಂಡು ಹೋದಂತೆ, ಸಂಜೆಯ ಸೂರ್ಯನ ಮಟ್ಟವಾದ ಕಿರಣಗಳು ಅವನ ನೆರಳನ್ನು ಅವನ ಮುಂದುಗಡೆ ಬಹು ದೂರಕ್ಕೆ ಬಿಂಬಿಸಿದ್ದುವು; ಇಂದು ದಾರಿಯಲ್ಲಿ ತನ್ನ ನೆರಳು ತನಗಿಂತ ಮುಂದಾಗಿ ಹೇಗೆ ದೂರ ವಸ್ತುಗಳೊಡನೆ ಚರಿಸುತ್ತಿದೆಯೊ ಹಾಗೆಯೆ ತನ್ನ ಮನದಿಂದೊಗೆದ ಮುಂಭಾವನೆಯೊಂದು ಜೀವನಮಾರ್ಗದುದ್ದಕ್ಕೂ ತನಗಿಂತ ಮುಂದಾಗಿ ಭವಿಷ್ಯದೊಡನೆ ಚರಿಸುತ್ತಿದೆ– ಎಂಬುದಾಗಿ ಅವನು ಯೋಚಿಸಿದನು. ತನಗಿಂತ ಮೊದಲೇ ತನ್ನ ಎತ್ತರವಾದ

"ಪ್ರಪಂಚವನ್ನೆಲ್ಲ ಸುತ್ತಾಡಿಕೊಂಡು ಬಂದಿರುವೆಯಲ್ಲ, ನನಗಾಗಿ ಮತ್ತೇನನ್ನು ತಂದಿರುವೆ?"

ಅದಮ್ಯವಾದ ಪ್ರೇರಣೆಗೆ ಒಳಗಾಗಿ, ವಿಧಿನಿಯಮದ ಪ್ರಕಾರ ತಾನು ಹೇಳಬೇಕಾದ ನುಡಿಗಳು ಎಂದು ಭಾವಿಸಿದ್ದ ಮಾತುಗಳನ್ನು ಅವನು ಉಚ್ಚರಿಸಿಬಿಟ್ಟನು: "ಗೌರಿ! ನನ್ನ ಭಾರವಾದ ಹೃದಯ ಹೊರತು ಮತ್ತೇನನ್ನೂ ನಾನು ನಿನಗಾಗಿ ತಂದಿಲ್ಲ. ಅದರ ಭಾರವನ್ನು ನಿನ್ನ ಹೃದಯದ ಮೇಲೆ ಹೊರಿಸಬಹುದೆ?"

ಕಂಪಿಸುತ್ತಿದ್ದ ತನ್ನ ಕೋಮಲಾಂಗುಲಿಯಿಂದ ಹೃದಯ ಪದಕವನ್ನು ತೋರುತ್ತ ಗೌರಿ ಇಂತು ನುಡಿದಳು: "ನೀನು ಹಾಗೆ ಮಾಡಬಹುದೆಂಬುದಕ್ಕೇ ನಾನು ಬಹಳ ಕಾಲದಿಂದ ಧರಿಸಿರುವ ನೆನಪಿನ ಕುರುಹಾದ ಈ ಪದಕವೇ ಭರವಸೆ."

"ಗೌರಿ, ಗೌರಿ! ನನ್ನ ನಿರರ್ಥಕವಾದ ಸ್ವಪ್ನವನ್ನು ನೀನು ಸಾರ್ಥಕಗೊಳಿಸಿರುವೆ!" ಎಂದು ವಿಶ್ವನಾಥನು ಅವಳನ್ನು ಆಲಿಂಗಿಸಿಕೊಂಡನು.

ಹುಚ್ಚು ಕನಸುಗಾರನು ಕೊನೆಗೆ ಎಚ್ಚತ್ತಿದ್ದನು: ಅವನು ಆ ರಹಸ್ಯ ನಿಧಿಯನ್ನು ದೊರಕಿಸಿಕೊಳ್ಳಲು, ತನ್ನ ಮನೆಯ ಸುತ್ತಮುತ್ತ ಇದ್ದ, ಸರಿಯಾಗಿ ಬೇಸಾಯಮಾಡಿಸುವವರಿಲ್ಲದೆ ಬಹುಭಾಗ ಪಾಳು ಬಿದ್ದಿದ್ದ ಹರವಾದ ಹೊಲವನ್ನು ಕೃಷಿಮಾಡಿ ಅದರ ಬೆಳಸಿನ ಫಲವನ್ನು ಅನುಭೋಗಿಸಬೇಕಾಗಿತ್ತು! ಯುದ್ಧ ವೀರನಾಗಿ ಆಜ್ಞೆ ಮಾಡುವ ಬದಲು, ಅಥವಾ ದೊರೆಯಾಗಿಯೊ ಧಾರ್ಮಿಕ ಮಹಾಪುರುಷನಾಗಿಯೊ ಪ್ರಭಾವಶಾಲಿಯಾಗುವ ಬದಲು, ಹಳ್ಳಿಯ ಮಕ್ಕಳನ್ನು ಆಳಬೇಕಾಗಿತ್ತು! ಅವನ ಕಲ್ಪನಾಕನ್ಯೆ ಮಾಯವಾಗಿ, ಅವಳ ಸ್ಥಾನದಲ್ಲಿ ತನ್ನ ಎಳೆತನದ ಒಡನಾಡಿಯನ್ನು ಇಂದು ಅವನು ಕಂಡನು.

* * *

ವಿಶ್ವನಾಥನು ಬಯಸಿದಂಥ ಹುಚ್ಚು ಬಯಕೆಯನ್ನು ಬಯಸುವವರು ಒಮ್ಮೆ ತಮ್ಮ ಸುತ್ತ ನೋಡಿದ್ದೇ ಆದರೆ, ಆ ಸುತ್ತಮುತ್ತಿನೆಡೆಯಲ್ಲೆ, ಎಲ್ಲಿ ದೈವವೇ ತಮ್ಮ ಭಾಗ್ಯವನ್ನು ಇಟ್ಟಿರುವುದೋ ಆ ಪದವಿಯಲ್ಲೆ, ಅವರು ತಮ್ಮ ಕರ್ತವ್ಯದ, ತಮ್ಮ ಪುರೋಭಿವೃದ್ಧಿಯ, ತಮ್ಮ ಸುಖಸಂತೋಷದ ನೆಲೆವೀಡನ್ನು ಅನೇಕ ವೇಳೆ ಕಂಡುಕೊಳ್ಳುವರು. ಪ್ರಯಾಸಕರವಾದ ಪ್ರಪಂಚಶೋಧನೆಯಿಲ್ಲದೆ, ಅಥವಾ ಜೀವಮಾನವನ್ನು ವ್ಯರ್ಥವಾಗಿ ವ್ಯಯ ಮಾಡದೆ, ತಮ್ಮ ಜೀವನದ ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವವರೇ ಧನ್ಯರು!

ಅವಳ ಸರಳ ಜೀವನದ ಶಾಂತ ಗಮನಕ್ಕೆ ತನ್ನ ಮನೋಭಾವಗಳೆಲ್ಲವನ್ನೂ ಅಧೀನಗೊಳಿಸಿದ್ದಳೊ ಎಂಬಂತೆ, ಮನಸ್ಸು ಕ್ಷುಬ್ಧವಾಗಿದ್ದರೂ ಕೂಡ ಶಾಂತಿಮೂರ್ತಿ. ಅವರ ಮುಖಗಳು ಇಂತು ಹೊರನೋಟಕ್ಕೆ ಬೇರೆ ಬೇರೆಯಾಗಿ ಕಂಡರೂ ಅವುಗಳಲ್ಲಿ ಪರಸ್ಪರ ಸಂಬಂಧವುಳ್ಳ ಒಂದು ಭಾವ–ಅರ್ಧ ಆರಿದ್ದ ಬೂದಿಮುಚ್ಚಿದ ಕೆಂಡದಿಂದ ಹೇಗೋ ಹಾಗೆ ಮತ್ತೆ ಹೊಸದಾಗಿ ಚಿಮ್ಮಿದ ಪರಸ್ಪರ ಸಂಬಂಧ ಸೂಕವಾದ ಭಾವನೆಯ ಒಂದು ಹೊಳಹು–ಕಂಡುಬರುತ್ತಿತ್ತು.

"ಯಾವಾಗ ಬಂದೆ, ಕ್ಷೇಮವೆ?" ಎಂದು ಕೇಳಿದಳು ಗೌರಿ. ಅವಳು ಇನ್ನೂ ತಲೆಬಾಗಿಸಿಯೆ ಇದ್ದಳು; ನಸುಲಜ್ಜೆ ನೆಲಸಿಯೆ ಇತ್ತು.

ಆದರೆ ವಿಶ್ವನಾಥನು ಕೂಡಲೆ ಉತ್ತರಕೊಡಲಿಲ್ಲ; ಏಕೆಂದರೆ, ಗೌರಿ ಧರಿಸಿದ್ದ ಹೃದಯಾಕಾರದ ಪದಕವೊಂದು ಅವನ ದೃಷ್ಟಿಗೆ ಬಿದ್ದು, ಅದರಲ್ಲಿ ಅವನ ಗಮನವೆಲ್ಲ ಸಿಲುಕಿಹೋಗಿತ್ತು. ಅದು ಸಾಧಾರಣವಾದ ಬೆಣಚುಕಲ್ಲಿನದು; ತನ್ನ ಮನೆಯಂಗಳದಲ್ಲಿ ದೊರೆತ, ಹಾಲುಗಲ್ಲಿಗಿಂತ ಹೆಚ್ಚು ಬಿಳುಪಾಗಿದ್ದ, ಕೆಂಪು ರೇಖೆಗಳಿಂದ ರಂಜಿತವಾದ ಬೆಣಚು ಕಲ್ಲನ್ನು ಮಸೆಗಲ್ಲಿನ ಮೇಲೆ ತೇದು ತೇದು, ಅದು ಹೃದಯದಾಕಾರವನ್ನು ತಳೆದಾಗ ತನ್ನ ಮನವೊಪ್ಪಿ, ತನ್ನ ಎಳೆತನದ ಗೆಳತಿ ಗೌರಿಯ ಜೊತೆಯಲ್ಲಿ ಅದರೊಡನೆ ಆಟವಾಡುತ್ತಿದ್ದುದು ಅವನ ನೆನಪಿಗೆ ಬಂದಿತು. ಅವನ ಸ್ವಪ್ನಸುಂದರೆ ಧರಿಸಿದ್ದ ಹೃದಯಾಕಾರದ ಪದಕಕ್ಕೂ ಈಗ ಗೌರಿ ಧರಿಸಿದ್ದ ಪದಕಕ್ಕೂ ಯಾವ ಭೇದವೂ ಇದ್ದಂತೆ ಅವನಿಗೆ ಕಂಡುಬರಲಿಲ್ಲ. ವಿಶ್ವನಾಥನು ಅನ್ವೇಷಣ ಯಾತ್ರೆಗೆ ಹೊರಡುವ ಮುನ್ನ ಗೌರಿಯನ್ನು ಬೀಳ್ಕೊಳ್ಳುವ ಸಂದರ್ಭದಲ್ಲಿ, ತನ್ನ ಎಳೆತನದ ಆಟದ ವಸ್ತುವಿಗೆ ಚಿನ್ನದ ಕುಂದಣ ಕಟ್ಟಿಸಿ ಅದನ್ನು ತನ್ನ ಜ್ಞಾಪಕಾರ್ಥವಾಗಿ ಗೌರಿಗೆ ಕೊಟ್ಟು ತೆರಳಿದ್ದನು.

ಕಡೆಗೆ, ವಿಶ್ವನಾಥನು–"ಗೌರಿ, ನನ್ನ ಹೃದಯ ಪದಕವನ್ನು ನೀನು ಇನ್ನೂ ಧರಿಸಿದ್ದೀಯೆ!" ಎಂದನು.

ಅವನ ಪಾದಗಳ ಮೇಲೆ ನೆಲಸಿದ್ದ ಅವಳ ದೃಷ್ಟಿ ಕೊಂಚಕೊಂಚವಾಗಿ ಮೇಲಕ್ಕೆ ಸರಿದು ಅವನ ದೃಷ್ಟಿಯೊಡನೆ ಬೆರೆಯಿತು; ನಸು ಲಜ್ಜೆಗೊಂಡಿದ್ದ ಅವಳು ಪೂರ್ಣಲಜ್ಜೆಯಿಂದ ಬೆವರಿಹೋದಳು; ಮುಖ ಕೆಂಪಡರಿತು. ಬೇಗನೆ ಮನಸ್ಸನ್ನು ಹತೋಟಿಗೆ ತಂದುಕೊಂಡು, ಸ್ವಲ್ಪ ಧೈರ್ಯವನ್ನೂ ಕೂಡಿಸಿಕೊಂಡಳು. ಹೃದಯದಲ್ಲಿ ಎಲ್ಲಿಯೋ ಅಡಗಿದ್ದ ಎಳೆತನದ ಸಲಿಗೆಯ ಭಾವ ಉಕ್ಕಿಬಂದು ಅವಳನ್ನು ಕೆಣಕಲು, ಅವಳು ಅವನನ್ನು ಹೀಗೆ ಕೇಳಿದಳು:




# ಗುಂಡಿನೇಟು ಮತ್ತು ಇತರ ಕಥೆಗಳು



## ೧. ಗುಂಡಿನೇಟು
(The Shot)

ನಾವು ದ್ವಂದ್ವಯುದ್ಧವನ್ನು ಕಾದಿದೆವು

–ಬ್ಯಾರಟನ್ಸ್ಕಿ*

ದ್ವಂದ್ವಯುದ್ಧವನ್ನು ಕಾದುವ ಹಕ್ಕಿನ ಬಲದಿಂದ ಅವನನ್ನು ಗುಂಡಿಟ್ಟುಕೊಲ್ಲುವೆನೆಂದು ಶಪಥಮಾಡಿದೆನು.

–ಬ್ಯೂವ್ಯಾಕ್‌ನಲ್ಲಿ ಒಂದು ಸಂಜೆ+

---

* ಪುಷ್ಕಿನ್ನನ ಸ್ನೇಹಿತ ಎವ್‌ಜೆನಿ ಬ್ಯಾರಟನ್ಸ್ಕಿ ಎಂಬಾತನ "Ball" ಎಂಬ ಕೃತಿಯಿಂದ.

\+ ೧೮೨೫ರ ಡಿಸೆಂಬರಿನ ದಂಗೆಯಲ್ಲಿ ಭಾಗವಹಿಸಿದ್ದ ಬೆಸ್ಟ್ಯುಷೆವ್ ಮಾರ್ಲಿನ್ಸ್ಕಿ ಎಂಬಾತನ ಒಂದು ಕಥೆಯಿಂದ.

# ಪ್ರಸ್ತಾವನೆ

ಅಲೆಕ್ಸಾಂಡರ್ ಪುಸ್ಕಿನ್ (೧೭೯೯–೧೮೩೭) ರಷ್ಯಾ ದೇಸದ ಪ್ರಖ್ಯಾತ ಕವಿ, ಈತ ೧೭೯೯ರ ಜೂನ್ ೬ ರಂದು ಮಾಸ್ಕೋ ನಗರದಲ್ಲಿ ಜನಿಸಿದನು; ಬೋಯರ್ (Boyars) ಎಂಬ ಪುರಾತನ ವಂಶಕ್ಕೆ ಸೇರಿದವನು. ಪುಷ್ಕಿನ್ನಿನ ಮಾತಾಮಹನ ತಂದೆ ರಷ್ಯದ ಚಕ್ರವರ್ತಿ ಪೀಟರ್ ಮಹಾಯನ (Peter the Great) ಆಳ್ವಿಕೆಯಲ್ಲಿ ದಂಡನಾಯಕನಾಗಿದ್ದು, ಚಕ್ರವರ್ತಿಯ ಸನ್ಮಾನಕ್ಕೆ ಪಾತ್ರನಾಗಿದ್ದನು. ಸೆಯ್‌ಂಟ್ ಪೀಟರ್ಸ್ ಬರ್ಗ್ ಬಳಿ ಹೊಸದಾಗಿ ಸ್ಥಾಪಿತವಾಗಿದ್ದ ಸಾಹಿತ್ಯ ಸದಸ್ಸಿಗೆ (Lyceum) ಪುಷ್ಕಿನ್ ೧೮೧೧ ವ್ಯವಹಾರ ಚಿವ ಶಾಖೆಯಲ್ಲಿ ಕೆಲಸಕ್ಕೆ ಸೇರಿಕೊಂಡನು. ಆರು ಸರ್ಗಗಳ ದೀರ್ಘರಂಜಕ ಕಾವ್ಯವೊಂದನ್ನು (Rulan and Ly'ndmila) ಅನು ಬರೆಯತೊಡಗಿದ್ದು ಇದೇ ವರ್ಷದಲ್ಲಿಯೆ ; ಅದು ೧೯೨೦ರಲ್ಲಿ ಸಮಾಪ್ತಿಯಾಯಿತು. ಈ ನಡುವೆ, ಪುಷ್ಕಿನ್ ಮಾಸ್ಕೋ ನಗರದ ವಿಲಾಸಪ್ರಿಯ ಸಮಾಜವರ್ಗದಲ್ಲಿ ಬಹುವಾಗಿ ಕಲೆಯುತ್ತಿದ್ದನು; ಅವನು ಕವಿಯಾಗಿ ಪ್ರಖ್ಯಾತನಾಗುವ ಬದಲು ಸೊಗಸುಗಾರನಾಗಿ ಪರಿಣಮಿಸಬಹುದೆಂಬ ಭಾವನೆ ಅವನನ್ನು ಬಲ್ಲವರಲ್ಲಿ ಬಲಿಯುತ್ತಿತ್ತು. ಆದರೆ, ಅವನು ರಚಿಸಿದ 'ಸ್ವಾತಂತ್ರಯ ಪ್ರಗಾಥ' (Ode to Liberty) ಹಸ್ತಪ್ರತಿಯ ರೂಪದಲ್ಲಿಯೇ, ಸೆಯ್‌ಂಟ್ ಪೀಟರ್ಸ್ ಬರ್ಗಿನಲ್ಲಿ ಪ್ರಚಲಿತವಾದಾಗ, ಅದು ವರಿಷ್ಠ ಅಧಿಕಾರಿಗಳ ಗಮನಕ್ಕೆ ಬಂದು, ರಷ್ಯಾ ನಾಡಿನ ತೆಂಕಣ ಸೀಮೆಗೆ ಅವನನ್ನು ದೇಶಾಂತರಗೊಳಿಸಲಾಯಿತು. ಆ ಸಮಯದಲ್ಲಿ, ಹದಗೆಟ್ಟಿದ್ದ ತನ್ನ ಆರೋಗ್ಯವನ್ನು ಉತ್ತಮಪಡಿಸಿಕೊಳ್ಳಲು ಪುಷ್ಕಿನ್ ದಂಡನಾಯಕ ರಯೆವ್ ಸ್ಕಿ ಎಂಬಾತನೊಂದಿಗೆ ಕಾಕಸಸ್ ಪರ್ವತ ಪ್ರಾಂತಕ್ಕೆ ಪ್ರವಾಸ ಹೋದನು. ಅಲ್ಲಿ ರಯೆವ್‌ಸ್ಕಿ ದಂಪತಿಗಳು ಪ್ರಖ್ಯಾತ ಆಂಗ್ಲಕವಿ ಲಾರ್ಡ್ ಬೈರನ್ನಿನ ಕವಿತೆಗಳನ್ನು ಅವನಿಗೆ ಪರಿಚಯ ಮಾಡಿಕೊಟ್ಟರು. ಈ ಹೊಸ ಪ್ರಭಾದ ಜತೆಗೆ ಆ ಪ್ರಾಂತದ ಭವ್ಯ ನಿಸರ್ಗ ಸೌಂದರ್ಯದ ಪ್ರಭಾವವೂ ಕೂಡಿಕೊಂಡು ಪುಷ್ಕಿನ್ನಿನ ಪ್ರತಿಭೆ ಉದ್ದೀಪನಗೊಂಡಿತು. ಇದರ ಪರಿಣಾಮ ಫಲಗಳೇ ಅವನು ಅಲ್ಲಿ ರಚಿಸಿದ ಹಲವಾರು ನೀಳ್ಗವಿತೆಗಳೂ: 'ಕಾಕಸಸ್ಸಿನ ಬಂದಿ' (The Captive of Caucasu–೧೮೨೨)' 'ಬಖ್ಚಿರಾಯಿನ ಚಿಲುಮೆ' (The Fountain of Bakhchisarai–೧೮೨೭); ಓವಿಡ್ ಮತ್ತು

ಪುಷ್ಕಿನ್ ಉದ್ಯೋಗಕ್ಕೆ ಸೇರಿ (೧೮೩೨) ಸ್ವಲ್ಪ ನೆಮ್ಮದಿಯನ್ನು ಪಡೆದಮೇಲೆ 'ಎವ್‌ಜೆನಿಒನೆಜಿನ್' (೧೮೨೫–೩೩) ಎಂಬ ದೀರ್ಘ ಕಾವ್ಯವನ್ನು ಮುಗಿಇಸ, "೧೭೭೩ರ ಪ್ರಗಚೆಫ್ ದಂಗೆಯ ಇತಿಹಾಸ" (೧೮೩೪) ಎಂಬ ಐತಿಹಾಸಿಕ ಗ್ರಂಥವನ್ನೂ, "ನೌಕಾಧಿಪತಿಯ ಮಗಳು" (The Captain's Daughter) (೧೮೩೬) ಎಂಬ ಕಾದಂಬರಿಯನ್ನೂ ರಿಚಿಸಿದನು ; 'ಎವ್‌ಜೆನಿ ಒನೆಜಿನ್' ಕಾವ್ಯದಮೇಲೆ ಬೈರನ್ ಕವಿಯ ಪ್ರಭಾವವನ್ನು ಮತ್ತೆ ಕಾಣಬಹುದು. ೧೮೩೦ರಲ್ಲಿ ರಚಿಸಿದ ಗೊರ್‍ಯುಖೀಣೋ ಗ್ರಾಮದ ಚರಿತ್ರೆ' ಎಂಬ ವಿಡಂಬನಾತ್ಮಕ ಗ್ರಂಥ ಗಮನಾರ್ಹವಾದುದು; ಏಕೆಂದರೆ, ತನ್ನ ಸ್ವಂತ ಕಥೆಗಳ ಕಾಲ್ಪನಿಕ ಕರ್ತೃವಾದ ಐವಾನ್ ಪೆಟೊವಿಚ್ ಬೆಲ್ಕಿನ್ನಿನ ವಿನೋದಪೂರ್ಣ ಚಿತ್ರವನ್ನು ಪುಷ್ಕಿನ್ ಅದರಲ್ಲಿ ಚಿತ್ರಿಸಿದ್ದಾನೆ. ಅವನ ಸಣ್ಣ ಕಥೆಗಳಲ್ಲಿ 'ಇಸ್ಪೀಟು ರಾಣಿ' (೧೮೩೪) ಎಂಬುದು ಅತ್ಯಂತ ಪ್ರಸಿದ್ಧವಾಗಿದೆ.

ಡಚ್ ಜನಾಂಗದ ಹೆಕೆರೆನ್ (Heckeren) ಎಂಬಾತನು ಪುಸ್ಕಿನ್ನಿನ ಹೆಂಡತಿಯ ಸಹೋದರಿಯನ್ನು ಮದುವೆಯಾಗಿದ್ದನು ; ಹೆಕೆರೆನ್ ರಷ್ಯದಲ್ಲಿ ಡಚ್ ದೇಶದ ರಾಯಭಾರಿ. ಈತನ ದತ್ತು ಪುತ್ರ ಜಾರ್ಜ್‌ಡ ಆ್ಯಂತಿಸ್ (George d'Anthes) ಪುಷ್ಕಿನ್ನಿನ ಹೆಂಡತಿಯಲ್ಲಿ ಮೋಹಗೊಂಡನು. ಈ ಕಾರಣದಿಂದ, ಪುಷ್ಕಿನ್ನಿಗೂ ಡ'ಆ್ಯಂತಿಸ್ಸಿಗೂ ದ್ವಂದ್ವಯುದ್ಧವಾಗಿ, ಆದರಲ್ಲಿ ಪುಷ್ಕಿನ್ ಮಡಿದನು. ಈ ಪ್ರಣಯ ಪ್ರಕರಣ ದ್ವಂದ್ವ ಯುದ್ಧಕ್ಕೆ ನಿಜವಾದ ಕಾರಣವಲ್ಲವೆಂದೂ, ಪುಷ್ಕಿನ್ನಿನ ಪ್ರಜಾಪ್ರಭುತ್ವವಾದೀ ಅಭಿಪ್ರಾಯಗಳನ್ನು ಸಹಿಸದ ಉಚ್ಚಶ್ರೀಮಂತ ವರ್ಗದ ಕೈವಾಡವು ಈ ದ್ವಂದ್ವ ಯುದ್ಧ ಸಮನಿಸುವಂತೆ ಸಂಚುಮಾಡಿತೆಂದೂ, ಪುಷ್ಕಿನ್ನಿನ ಮರಣವು ಒಂದು ವಿಧವಾದ ರಾಜಕೀಯ ಕೊಲೆಯೆಂದೂ ರಷ್ಯಾದೇಶದ ಇತ್ತೀಚಿನ ವಿಮರ್ಶಕರು ಸಂಶೋಧನೆ ನಡೆಸಿ ತೀರ್ಮಾನಿಸಿದ್ದಾರೆ. ಕಾರಣವೇನಾದರೂ ಇರಲಿ, ಪುಷ್ಕಿನ್ನಿ ಮರಣದ ಬಗೆಗೆ ದೇಶಕ್ಕೆ ದೇಶವೇ ಮರುಗಿತು. ಮರಣಾನಂತರ ಅನ ಕೀರ್ತಿ ದೇಶ ವಿದೇಶಗಳಲ್ಲಿ ಬೆಳೆಯತೊಡಗಿತು.

ರಷ್ಯದ ಸಾಹಿತ್ಯದಲ್ಲಿ 'ಬೆಲ್ಕಿನ್ನಿನ ಕತೆಗಳು' ಎಂಬ ಕೃತಿಗೆ ಒಂದು ವಿಶಿಷ್ಟ ಸ್ಥಾನವಿದೆ. ಮೊತ್ತ ಮೊದಲಿಗೆ ಈ ಕತೆಗಳಲಿ ಪುಷ್ಕನ್ ವಾಸ್ತವಿಕ ಗದ್ಯ ಶೈಲಿಯನ್ನು ಬಳಸಿ, ಪ್ರಜಾಸತ್ತೆಯ ಒಲವು ನಿಲವುಗಳ ಕಡೆಗೆ ಗಮನ ಕೊಟ್ಟನು; ಮೊತ್ತಮೊದಲಿಗೆ ಸಾಮಾನ್ಯ ಜನದ ನಿತ್ಯ ಜೀವನ, ಅವರ ನೋವು ನಲಿವು, ಅವರ ಅಭಿರುಚಿ ಅಪೇಕ್ಷೆಗಳು, ಸಾಮಾಜಿಕ ಅನ್ಯಾಯಗಳು ಪ್ರಚಲಿತವಾಗಿದ್ದ ಪ್ರಪಂಚದಲ್ಲಿ ಅವರು ಎದುರಿಸಲೇ ಬೇಕಾಗಿದ್ದ ದಾರುಣ ದುರಂತತೆ–ಇವುಗಳ ಚಿತ್ರಣಕ್ಕೆ

ನೆಪೋಲಿಯನ್–ಇವರನ್ನು ಕುರಿತ ಕವಿತೆಗಳು. ಈ ತರುವಾಯದ ದೀರ್ಘ ಕವನ–'ಜಿಪ್ಸಿಗಳು' (The Gipies–೧೮೨೭). ದಕ್ಷಿಣ ರಷ್ಯಾದಲ್ಲಿದ್ದಾಗ, ಆಗ ನಾಡಿನ ತುಂಬ ಹುಟ್ಟಿಕೊಂಡಿದ್ದ ಗುಪ್ತ ಸಂಗಗಳ ಚಟುವಟಿಕೆಗಳಲ್ಲಿ ಅವನು ಭಾಗವಹಿಸುತ್ತಿದ್ದನು. ಈ ಕಾರಣದಿಂದ ಇರಬಹುದು, ಪುಷ್ಕಿನ್ನನನ್ನು ಅಧಿಕಾರಿಗಳು ಆಗಾಗ್ಗೆ ಸ್ಥಳಾಂತರಗೊಳಿಸುತ್ತಿದ್ದರು. ಕಡೆಗೊಮ್ಮೆ, ನಾಸ್ತಿಕತೆಯ ಕಡೆಗೆ ಒಲವುಳ್ಳ ಅನ ಪತ್ರವೊಂದು ಅಧಿಕಾರಿಗಳ ಕೈಗೆ ಸಿಕ್ಕಿದಾಗ, ಅವನನ್ನು ಉದ್ಯೋಗದಿಂದ ತೆಗೆದುಹಾಕಿದರು. ಉದ್ಯೋಗದಿಂದ ವಿಶ್ರಾಂತನಾದಮೇಲೆ, ಪುಷ್ಕಿನ್ ಪ್ರಾಚೀನ ರಷ್ಯದ ಜನಪದ ಕಾವ್ಯ ವ್ಯಾಸಂಗದಲ್ಲಿ ನಿರತನಾಗಿದ್ದನು. ಈ ಕಾಲದ ಅವನ ಕೆಲವು ರಚನೆಗಳಲ್ಲಿ ಬೈರನ್, ಹಾಗೂ ಫ್ರೆಂಚ್ ಬರಹಗಾರ ಅಂದ್ರೆ ಚೆನ್ಯರ್ (Andre Chenier) ಇವರ ಪ್ರಭಾವ ಪ್ರಿಣಾಮಕಾರಿಯಾಗಿತ್ತು, ಅವನು ೧೮೨೫ರಲ್ಲಿ ರಚಿಸಿದ 'ಬೋರಿಸ್ ಗೊದುನಾಫ್' (Boris Godunov) ಎಂಬ ದುರಂತ ದೃಶ್ಯ ಕಾವ್ಯದಲ್ಲಿ ಷೇಕ್ಸ್‌ಪಿಯರ್ ಕವಿಯ ಸತ್ವಪ್ರಭಾವವನ್ನು ಕಾಣಬಹುದು.

೧೮೨೫ರಲ್ಲಿ ರಷ್ಯದ ಚಕ್ರವರ್ತಿಯ ವಿರುದ್ಧವಾದ ಒಂದು ಒಳಸಂಚು ತಲೆದೋರಿತು. ಸಂಚುಗಾರರು ಕೆಲವರು ಪುಷ್ಕಿನ್ನನ ಮಿತ್ರರಾಗಿದ್ದರು. ಇದರಿಂದಾಗಿ, ರಾಜದ್ರೋಹದ ಆರೋಪಣೆಗೆ ಅವನು ಗುರಿಯಾಗುವ ಸಂಭವವಿತ್ತು. ಈ ಬಗೆಗೆ ಸಾಕ್ಷ್ಯವಾಗಿ ಪರಿಣಮಿಸಬಹುದಾಗಿದ್ದ ಕೆಲವು ಕಾಗದ ಪತ್ರಗಳನ್ನು ಪುಷ್ಕಿನ್ ಸುಟ್ಟುಹಾಕಿಬಿಟ್ಟನು. "ರಷ್ಯದಲ್ಲೆಲ್ಲಾ ಅತ್ಯಂತ ಮೇಧಾವಿ" ಎಂದು ಉನ್ನತವಲಯಗಳಲ್ಲಿ ಖ್ಯಾತಿಗಳಿಸಿದ್ದ ಪುಷ್ಕಿನ್ನಿಗೆ ಕ್ಷಮಾದಾನದ ಭರಸೆಯನ್ನೂ ಚಕ್ರವರ್ತಿ ನೀಡಿದ್ದನು. ಅಂತೂ ಈ ಪ್ರಕರಣದಲ್ಲಿ ಅವನು ಯಾವ ಹಾನಿಗೂ ಒಳಗಾಗದೆ ಪಾರಾದುದು ಮಾತ್ರವಲ್ಲ, ೧೮೩೭ರಲ್ಲಿ ಅವನು ಮತ್ತೆ ವಿದೇಶ ವ್ಯವಹಾರ ಸಚಿವಶಾಖೆಯಲ್ಲಿ ಉದ್ಯೋಗವನ್ನು ಪಡೆದು. ಇದರ ಹಿಂದಿನ ವರ್ಷ ನಟಾಲಿಯಾ ಗೋಂಚರಾಫ್ ಎಂಬವಳನ್ನು ಅವನು ಮದುವೆಯಾಗಿದ್ದನು. ಇದಕ್ಕೆ ಮುಂಚೆ ೧೮೨೯ರಲ್ಲಿ 'ಪೊಲ್ಟಾವ' (Poltava) ಎಂಬ ಶಕ್ತಿಪೂರ್ಣ ಕಥನ ಕಾವ್ಯ ಪ್ರಕಟವಾಗಿತ್ತು. ಅದೇ ವರ್ಷ, ಪುಷ್ಕಿನ್ ಎರಡನೆಯ ಫಲ ಕಾಕಸಸ್ ಯಾತ್ರೆಯನ್ನು ಕೈಕೊಂಡು, ತನ್ನ ಪ್ರವಾಸಾನುಭವಗಳನ್ನು ಕಾವ್ಯರೂಪದಲ್ಲಿ ವರ್ಣಿಸಿದನು. ೧೮೩೦ರಲ್ಲಿ, 'ಐವಾನ್ ಬೆಲ್ಕಿನ್' ಎಂಬ ಕಾವ್ಯರೂಫದಲ್ಲಿ ವರ್ಣೀಸಿದನು. ೧೮೩೦ರಲ್ಲಿ, 'ಐವಾನ್ ಬೆಲ್ಕಿನ್' ಎಂಬ ಕಾವ್ಯನಾಮದಲ್ಲಿ ಒಂದು ಸಣ್ಣ ಕಥಾಸಂಕಲನವನ್ನು ಪ್ರಕಟಿಸಿದನು.

# ವಂದನಾರ್ಪಣೆ

ಕರ್ನಾಟಕ ಸಂಘದ ಅಧ್ಯಕ್ಷರಾದ ಶ್ರೀ ಎಂ. ವಿ. ಸೀತಾರಾಮಯ್ಯನವರು ತಾವು ಕಟ್ಟಿ ಬೆಳಸಿದ ಸಂಘದ ಮೇಲೆ ಅಭಿಮಾನವಿಟ್ಟು, ಈ ಅಮೂಲ್ಯ ಕೃತಿಯ ಮೊದಲ ಮುದ್ರಣವನ್ನು ಹೊರತರುವ ಹೆಮ್ಮೆಯ ಅವಕಾಶವನ್ನು ಸಂಘಕ್ಕೆ ಒದಗಿಸಿಕೊಟಟಿರುತ್ತಾರೆ. ಇದಕ್ಕಾಗಿ ಸಂಘವು ಅವರಿಗೆ ಋಣಿಯಾಗಿದೆ.

ತಾವು ಪಡೆದುಕೊಂಡಿದ್ದ ಮುದ್ರಣಸ್ವಾಮ್ಯವನ್ನು ನಮಗೆ ವಹಿಸಿ ಕೊಟ್ಟದ್ದಕ್ಕಾಗಿ ಮೈಸೂರಿನ 'ಪೀಪಲ್ಸ್ ಬುಕ್ ಹೌಸ್'ನ ಒಡೆಯರಾದ ಶ್ರೀ ಡಿ. ಆರ್. ಕೃಷ್ಣಮೂರ್ತಿಯವರಿಗೂ ನಾವು ಕೃತಜ್ಞರು.

ಈ ಗ್ರಂಥವನ್ನು ಬೆಂಗಳೂರು ವಿಶ್ವವಿದ್ಯಾನಿಲಯದ ಬಿ.ಕಾಂ. ತರಗತಿಗೆ (೧೯೬೬–೬೭) ಪಠ್ಯಪುಸ್ತಕವನ್ನಾಗಿ ಆರಿಸಿರುವುದಕ್ಕಾಗಿ ಪಠ್ಯ ಪುಸ್ತಕ ಸಮಿತಿಯವರಿಗೆ ಸಂಘವು ಕೃತಜ್ಞವಾಗಿದೆ.

ಪುಸ್ತಕವನ್ನು ಅತ್ಯಲ್ಪಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವ ಬಿ.ಎಂ. ಶ್ರೀಕಂಠಯ್ಯ ಅಚ್ಚುಕೂಟದ ಅಧಿಕಾರಿಗಳಿಗೂ ಅಧಿಕಾರಿಗಳಿಗೂ ಕೆಲಸಗಾರರಿಗೂ ಸಹ ನಮ್ಮ ವಂದನೆಗಳು ಸಲ್ಲುತ್ತವೆ.

–ಪ್ರಕಾಶಕರು

ಸಾಹಿತ್ಯದಲ್ಲಿ ಪರಮುಖ ಸ್ಥಾನ ದೊರಕಿತು. ಮೊತ್ತ ಮೊದಲಿಗೆ ಕೃತಕಾಡಂಬರದ ವರ್ಣನೆ, ಅರ್ಥ ಅನ್ವಯಗಳೀಲ್ಲದ ಉಪಮಾನಗಳು, ರಷ್ಯನರ ನಿತ್ಯಬಳಕೆಯ ಮಾತಿನಲ್ಲಿ ರೂಢವಾಗಿಲ್ಲದ ಘನವಾದ ರೂಪಕಗಳು ಇವುಗಳ ಸ್ಥಾನದಲ್ಲಿ ಸರಳವಾದ ತಿಳಿಯಾದ ಕಥನ ಶೈಲಿಯೊಂದು ಪ್ರಚುರವಾಯಿತು.

ಪುಷ್ಕಿನ್ನಿನಲ್ಲಿ ಜೀವನ ದರ್ಶನ ತುಂಬಿ ತುಳುಕುತ್ತಿದೆ ; ಅವನು ತಾನು ಕಂಡ ಬದುಕಿನ ನೋಟಗಳನ್ನು ಅತ್ಯಂತ ಸತ್ಯನಿಷ್ಠೆಯಿಂದಲೂ ತನ್ನ ಗದ್ಯ ದ್ಯ ಕೃತಿಗಳಲ್ಲಿ ನಿರೂಪಿಸಲು ಶ್ರಮಿಸಿದನು; ಶ್ರಮಿಸಿ, ಪ್ರತಿಭೆ ಪ್ರಜ್ವಲಿಸುವಂತೆ ತನ್ನ ಧ್ಯೇಯವನ್ನು ಸಾಧಿಸಿದನು.

"ಒಂದು ನಿರ್ದಿಷ್ಟ ಯುಗದ ನಡವಳಿಕೆಗಳ, ರೀತಿ ನೀರಿಗಳು, ಭಾವ ಭಾವನೆಗಳು–ಇವುಗಳ ಬಗೆಗೆ ಮೇಧಾವಿಯೂ ಅನುಭವಶಾಲಿಯೂ ಪ್ರಾಮಾಣಿಕನೂ ಆದವನೊಬ್ಬನ ಅಮೂಲ್ಯ ಸಾಕ್ಷ್ಯಗಳಾಗಿವೆ ಅವನ ಕೃತಿಗಳು; ವಾಸ್ತವವಾಗಿ, ರಷ್ಯದ ಇತಿಹಾಸದ ಪ್ರೋಜ್ವಲ ಪ್ರಕರಣಗಳು ಅವು"

–ಅನುವಾದಕ

ನಾವು ಎಕ್ಸ್ (x)– ಎಂಬ ಸಣ್ಣ ಪಟ್ಟಣದಲ್ಲಿ* ಪಾಳೆಯ ಹಾಕಿದ್ದೆವು. ಸೈನ್ಯಾಧಿಕಾರಿಯ ಜೀವನ ಎಂಥದೆಂದು ಪ್ರತಿಯೊಬ್ಬರಿಗೂ ಗೊತ್ತೇ ಇದೆ. ಬೆಳಗ್ಗೆ ಕವಾಯಿತ್ ಆಯಿತು, ಸವಾರಿ ಕಲಿಸುವ ಶಾಲೆ; ಸೈನ್ಯದಳದ ನಾಯಕನ ಜೊತೆಯಲ್ಲಿ, ಇಲ್ಲವೆ ಯಾವುದಾದರೂ ಯೆಹೂದ್ಯ ಭೋಜನಗೃಹದಲ್ಲಿ, ಮಧ್ಯಾಹ್ನದ ಭೋಜನ; ಸಂಜೆ 'ಪಂಚ್' ಮದ್ಯಸೇವನೆ ಮತ್ತು ಇಸ್ಪೀಟಾಟ. ಎಕ್ಸ್–ಪಟ್ಟಣದಲ್ಲಿ ಹೋಗಲು ಒಂದು ಮನೆಯೂ ಇಲ್ಲ, ಮದುವೆಗೆ ನೆರೆದ ಕನ್ಯೆ ಒಬ್ಬಳೂ ಇಲ್ಲ. ಒಬ್ಬರು ಇನ್ನೊಬ್ಬರ ಬಿಡಾರದಲ್ಲಿ ನೆರೆಯುತ್ತಿದ್ದೆವು; ಒಬ್ಬರು ಇನ್ನೊಬ್ಬರ ಸಮವಸ್ತ್ರ (ಯೂನಿಫಾರ್‌ಮ್) ನೋಡುವುದಲ್ಲದೆ, ನೋಡಲು ಬೇರೆ ಇನ್ನೇನೂ ಇರಲಿಲ್ಲ.

ನಮ್ಮ ಗುಂಪಿನಲ್ಲಿ ಸೈನ್ಯಕ್ಕೆ ಸೇರದೆ ಇದ್ದವನೆಂದರೆ ಒಬ್ಬನೇ ಒಬ್ಬ. ಆತ ಸುಮಾರು ಮೂವತ್ತೈದರ ಪ್ರಾಯದವನು; ನಾವೇನೋ ಅವನನ್ನು ವಯಸ್ಸಾದವನೆಂದೇ ಎಣಿಸಿದ್ದೆವು. ತನ್ನ ಅನುಭವಸಂಪತ್ತಿನ ಕಾರಣದಿಂದ ಯಾವಾಗಲೂ ಅವನು ನಮಗಿಂತ ಮೇಲುಗೈ; ಇದರ ಜೊತೆಗೆ, ಅವನಿಗೆ ಅಭ್ಯಾಸವಾಗಿ ಬಂದಿದ್ದ ವಿಷಣ್ಣಭಾವ, ಕಠಿನಪ್ರಕೃತಿ, ಕೆಟ್ಟ ನಾಲಗೆ–ಇವು ಯುವಕರಾದ ನಮ್ಮ ಮನಸ್ಸಿನಮೇಲೆ ಶಕ್ತಿಯುತವಾದ ಪ್ರಭಾವವನ್ನು ಬೀರುತ್ತಿದ್ದುವು. ಆತನ ಸ್ಥಿತಿಗತಿ ರಹಸ್ಯದಲ್ಲಿ ಹುದುಗಿತ್ತು; ರಷ್ಯನನಂತೆಯೇ ಕಾಣುತ್ತಿದ್ದನು, ಆದರೂ ಅವನ ಹೆಸರು ಪರದೇಶೀಯವಾಗಿತ್ತು. ಹಿಂದೊಮ್ಮೆ ಅವನು ರಾವುತ ದಳದಲ್ಲಿ ಸೇವೆ ಸಲ್ಲಿಸಿದ್ದನು; ತನ್ನ ವೃತ್ತಿಯಲ್ಲಿ ಯಶಸ್ಸು ಗಳಿಸುವ ಸಂಭವವೂ ಇತ್ತು. ಅವನು ತನ್ನ ಸೈನ್ಯದ ಹುದ್ದೆಗೆ ರಾಜೀನಾಮೆ ಕೊಟ್ಟು, ಹಾಳುಬಿದ್ದ ಸಣ್ಣಪಟ್ಟಣವೊಂದರಲ್ಲಿ ಯಾಕೆ ನೆಲಸಿದ್ದನೆಂಬುದನ್ನು ಮಾತ್ರ ಯಾರೂ ಅರಿಯರು. ಅಲ್ಲಿ ಅವನ ಬದುಕೋ, ದುಂದಿನದು ಹಾಗೂ ಕೀಳು. ನವೆದ ಕಪ್ಪು ನಿಲುವಂಗಿ ತೊಟ್ಟು ಕಾಲ್ನಡಿಗೆಯಲ್ಲೇ ಸಂಚರಿಸುತ್ತಿದ್ದನು. ನಮ್ಮ ದಳದ ಎಲ್ಲ ಸೈನ್ಯಾಧಿಕಾರಿಗಳಿಗೂ ಅವನ ಮನೆಯ ಬಾಗಿಲು ಸದಾ ತೆರೆದಿತ್ತು. ಹಿಂದೆ ಸೈನಿಕನಾಗಿದ್ದವನೊಬ್ಬ ಅವನಿಗೆ ಅಡಿಗೆ ಮಾಡಿ ಹಾಕುತ್ತಿದ್ದ; ಅವನ ಭೋಜನದಲ್ಲಿ ಎರಡು ಅಥವಾ ಮೂರು ಬಗೆಯ ಭಕ್ಷ್ಯಗಳು ಮಾತ್ರ ಇರುತ್ತಿದ್ದುವು, ನಿಜ;

---

* ಹೆಸರಿಸಲು ಇಷ್ಟಪಡದಾಗ, ಅಥವಾ ಹೆಸರು ಗೊತ್ತಿಲ್ಲದ ಸಂದರ್ಭದಲ್ಲಿ, x ಮೊದಲಾದ ಅಕ್ಷರಗಳಿಂದ ನಿರ್ದೇಶಿಸುವುದು ಒಂದು ರೂಢಿ.

ಒಂದು ದಿನ ನಮ್ಮ ಸೈನ್ಯಾಧಿಕಾರಿಗಳಲ್ಲಿ ಸುಮಾರು ಹತ್ತುಮಂದಿ ಸಿಲ್ವಿಯೋವಿನ ಬಿಡಾರದಲ್ಲಿ ಭೋಜನ ಮಾಡುತ್ತಿದ್ದೆವು. ಎಂದಿನಂತೆಯೇ–ಎಂದರೆ ಬಹು ಹೆಚ್ಚಾಗಿಯೇ –ಕುಡಿದೆವು. ಭೋಜಕವಾದ ಬಳಿಕ, ನಮ್ಮೆಲ್ಲರ ಜೂಜಿನಪಣದ ಹಣ ಇಟ್ಟುಕೊಂಡಿರುವಂತೆ ನಮ್ಮ ಆತಿಥೇಯ*ನನ್ನು ಕೇಳಿಕೊಂಡೆವು. ಅವನು ಬಡಪಟ್ಟಿಗೆ ಒಪ್ಪಲಿಲ್ಲ; ಏಕೆಂದರೆ ಅವನು ಇಸ್ಪೀಟಾಡುತ್ತಿದ್ದುದೇ ಅಪರೂಪ. ಆದರೆ, ಕಡೆಯಲ್ಲಿ, ಇಸ್ಪೀಟನ್ನು ತರಹೇಳಿದ; ಸುಮಾರು ಐವತ್ತು ಹತ್ತು–ರೂಬಲ್ ನಾಣ್ಯಗಳನ್ನು ಮೇಜಿನ ಮೇಲೆ ಹರಡಿದ; ಎಲೆಗಳನ್ನು ಹಂಚಲು ಪ್ರಾರಂಭಿಸಿದ. ನಾವೆಲ್ಲ ಅವನನ್ನು ಸುತ್ತುಗಟ್ಟಿದೆವು; ಆಟ ಮೊದಲಾಯಿತು. ಆಟವಾಡುವಾಗ ಸಿಲ್ವಿಯೋ ಮೌನ ಎಂದರೆ ಮೌನ; ವಾದವಿಲ್ಲ, ವಿವರಣೆಯಿಲ್ಲ: ಇದು ಅವನ ಅಭ್ಯಾಸ. 'ಪಂಟರ್' (ಜೂಜಿನ ನಿಧಿಗೆ ಎದುರಾಗಿ ಪಣವೊಡ್ಡುವವನು) ಒಂದು ವೇಳೆ ತಪ್ಪು ಮಾಡಿದರೆ, ಸಿಲ್ವಿಯೋ ಕೂಡಲೆ ಹಣ ಕೊಟ್ಟು ಬಿಡುತ್ತಿದ್ದ, ಇಲ್ಲವೆ ಹೆಚ್ಚಿನದನ್ನು ಗುರುತುಹಾಕುತ್ತಿದ್ದ. ನಮಗೆಲ್ಲ ಇದು ಗೊತ್ತಿತ್ತು; ಆದ್ದರಿಂದ, ಅವನು ತನ್ನ ನಿಯಮಗಳನ್ನು ವಿಧಿಸಲು ಅವಕಾಶಕೊಡುತ್ತಿದ್ದೆವು. ಆದರೆ ನಮ್ಮ ದಳಕ್ಕೆ ಹೊಸದಾಗಿ ವರ್ಗವಾಗಿ ಬಂದ ಒಬ್ಬ ಸೈನ್ಯಾಧಿಕಾರಿಯಿದ್ದ. ಈತ ಆಟವಾಡುವಾಗ ಅಡ್ಡಜ್ಞಾನದಲ್ಲಿ ಪಣವನ್ನು ಒಂದು 'ಅಂಕ' ಏರಿಸಿಬಿಟ್ಟ. ಸಿಲ್ವಿಯೊ ಯಥಾಪ್ರಕಾರ ಸೀಮೆಯ ಸುಣ್ಣ ತೆಗೆದುಕೊಂಡು, ಅಂಕಲೆಕ್ಕವನ್ನು ಸರಿಪಡಿಸಿದ. ಸಿಲ್ವಿಯೊ ತಪ್ಪು ಮಾಡಿದ್ದಾನೆಂದು ಎಣಿಸಿ ಸೈನ್ಯಾಧಿಕಾರಿ ವಿವರಣೆಗಳನ್ನು ಕೊಡತೊಡಗಿದ. ಸಿಲ್ವಿಯೊ ಮೌನವಾಗಿ ಆಟ ಸಾಗಿಸಿದ. ಸೈನ್ಯಾಧಿಕಾರಿ ತಾಳ್ಮೆಗೆಟ್ಟು, ಒರಸುವ ಬ್ರಷ್ ತೆಗೆದುಕೊಂಡು, ತಪ್ಪಾಗಿ ಬರೆದಿದೆ ಎಂದು ತನಗೆ ತೋರಿದ್ದನ್ನು ಉಜ್ಜಿ ಅಳಿಸಿಬಿಟ್ಟ. ಸಿಲ್ವಿಯೊ ಸೀಮೆಯಸುಣ್ಣ ಎತ್ತಿಕೊಂಡು, ಅಂಕಿಗಳನ್ನು ಮತ್ತೆ ಬರೆದ. ಮದ್ಯ, ಜೂಜಾಟ, ಸಂಗಡಿಗರ ನಗೆಯಾಟ–ಇವುಗಳಿಂದ ಕಾವೇರಿದ್ದ ಸೈನ್ಯಾಧಿಕಾರಿ ತಾನು ಬಹಳ ಅಪಮಾನಗೊಂಡವನಂತೆ ಭಾವಿಸಿದ; ಮೇಜಿನ ಮೇಲಿದ್ದ ಹಿತ್ತಾಳೆಯ ಮೋಂಬತ್ತಿಕೊಳವಿಯನ್ನು ತುಡುಕಿ, ಅದನ್ನು ಸಿಲ್ವಿಯೋವಿನ ಕಡೆಗೆ ಬೀರಿ ಎಸೆದ; ಅವನು ಅದರ ಹೊಡೆತವನ್ನು ಅದು ಹೇಗೋ ತಪ್ಪಿಸಿಕೊಂಡ. ನಾವೆಲ್ಲ ಬಹಳ ಕಳವಳಪಟ್ಟೆವು. ಸಿಲ್ವಿಯೊ ಮೇಲಕ್ಕೆದ್ದ; ಕೆರಳಿ ವಿವರ್ಣನಾಗಿದ್ದ; ಕಣ್ಣು ಫಳಫಳಿಸುತ್ತಿದ್ದುವು. ಆತ ಹೇಳಿದ: "ಸ್ವಾಮಿ, ತಾವು ಇನ್ನು ದಯವಿಟ್ಟು

ಆತಿಥ್ಯ ನೀಡುವವನು.

ಆದರೆ, 'ಷಾಂಪೇನ್' ಮದ್ಯ ಧಾರಾಳವಾಗಿ ಹರಿಯುತ್ತಿತ್ತು. ಅವನ ಆಸ್ತಿಪಾಸ್ತಿ ಏನು, ಅವನ ಆದಾಯ ಹೇಗೆ–ಇದು ಏನೊಂದನ್ನೂ ಯಾರೂ ಅರಿಯರು; ಈ ಬಗ್ಗೆ ಅವನನ್ನು ಪ್ರಶ್ನಿಸಲು ಯಾರಿಗೂ ಧೈರ್ಯವಿಲ್ಲ. ಅವನ ಬಳಿ ಒಂದು ಒಳ್ಳೆಯ ಪುಸ್ತಕಭಂಡಾರವಿತ್ತು; ಅದರ ತುಂಬ ಸೈನ್ಯವಿಚಾರದ ಗ್ರಂಥಗಳು ಮತ್ತು ಕಾದಂಬರಿಗಳು; ಅವುಗಳನ್ನು ಎರವಲು ಕೊಡಲು ಅವನು ಯಾವಾಗಲೂ ಸಿದ್ಧ; ಕೊಟ್ಟ ಪುಸ್ತಕವನ್ನು ಎಂದೂ ಹಿಂದಿರುಗಿ ಕೇಳುತ್ತಿರಲಿಲ್ಲ. ಅವನೂ ಕೂಡ ತಾನು ಎರವಲು ಕೊಡಲು ಅವನು ಯಾವಾಗಲೂ ಸಿದ್ಧ; ಕೊಟ್ಟ ಪುಸ್ತಕವನ್ನು ಎಂದೂ ಹಿಂದಿರುಗಿ ಕೇಳುತ್ತಿರಲಿಲ್ಲ. ಅವನೂ ಕೂಡ ತಾನು ಎರವಲು ತಂದು ಪುಸ್ತಕವನ್ನು ಪುಸ್ತಕ ಕೊಟ್ಟವರಿಗೆ ಎಂದೂ ಹಿಂದಿರುಗಿಸುತ್ತಿರಲಿಲ್ಲ. ಅವನ ಪ್ರಧಾನವಾದ ಉದ್ಯೋಗವೆಂದರೆ, ಒಂದು ಪಿಸ್ತೂಲಿನಿಂದ ಗುಂಡುಹಾರಿಸುವುದು. ಅವನ ಕೊಟಡಿಯ ಗೋಡೆಗಳೆಲ್ಲ ಗುಂಡಿನೇಟಿನ ತೂತುಗಳಿಂದ ತುಂಬಿಹೋಗಿ, ಜೇನುಹುಟ್ಟಿಯ ಸೀಳಿದ ಭಾಗದಂತೆ ಕಾಣುತ್ತಿತ್ತು. ಅವನು ವಾಸಿಸುತ್ತಿದ್ದ ಅಧ್ವಾನವಾದ ಮಣ್ಣಿನ ಮನೆಯಲ್ಲಿದ್ದ ಅವನ ಏಕಮಾತ್ರ ಸಂಪತ್ತೆಂದರೆ, ಅವನು ಕಲೆಹಾಕಿದ್ದ ಪಿಸ್ತೂಲುಗಳ ಅಮೂಲ್ಯ ಸಂಗ್ರಹ. ಗುಂಡು ಹೊಡೆಯುವುದರಲ್ಲಿ ಅವನು ಪಡೆದಿದ್ದ ಸಿದ್ಧಿ ಅತ್ಯಂತ ಮೇಲ್ಮಟ್ಟದ್ದು;' ಯಾರದ್ದಾದರೂ ತಲೆಯ ಟೋಪಿಯ ಮೇಲಿಟ್ಟ ಪೇರುಹಣ್ಣನ್ನು ಗುಂಡಿನಿಂದ ಹೊಡೆಯುವುದಾಗಿ ಅವನು ಸೂಚಿಸಿದ್ದಿದ್ದರೆ, ಅವನ ಗುಂಡಿನೇಟಿಗೆ ತಲೆಯೊಡ್ಡಲು ಹಿಂದೆಗೆಯುತ್ತಿದ್ದ ಒಬ್ಬನಾದರೂ ನಮ್ಮ ಸೈನ್ಯ ದಳದಲ್ಲಿರಲಿಲ್ಲ. ನಮ್ಮ ಸಂಭಾಷಣೆ ಆಗಾಗ್ಗೆ ದ್ವಂದ್ವಯುದ್ಧದ ವಿಚಾರದ ಕಡೆಗೆ ಹೊರಳುತ್ತಿತ್ತು; ಆದರೆ, ಸಿಲ್ವಿಯೊ (ಹಾಗೆಂದು ಅವನನ್ನು ಕರೆಯುತ್ತೇನೆ) ಅದರಲ್ಲಿ ಭಾಗವಹಿಸುತ್ತಲೇ ಇರಲಿಲ್ಲ. ಎಂದಾದರೂ ದ್ವಂದ್ವಯುದ್ಧದಲ್ಲಿ ಭಾಗವಹಿಸಿರುವನೇ ಎಂದು ಪ್ರಶ್ನಿಸಿದರೆ, ವಿವರವಾಗಿ ಏನನ್ನೂ ಹೇಳದೆ ಒಂದು ಮಾತಿನಲ್ಲಿ 'ಉಂಟು' ಎಂದು ಹೇಳುತ್ತಿದ್ದನು; ಅಂಥ ಪ್ರಶ್ನೆಗಳಿಂದ ಅವನಿಗೆ ಅಸಮಾಧಾನವಾಗುತ್ತಿತ್ತು ಎನ್ನುವುದು ಸ್ಪಷ್ಟ. ಯಾವನೋ ಅದೃಷ್ಟಹೀನನೊಬ್ಬ ಅವನ ಭೀಕರ ಕರಕೌಶಲಕ್ಕೆ ಬಲಿಯಾಗಿದ್ದು, ಆ ಸಂಗತಿ ಅವನ ಅಂತರಂಗವನ್ನು ಕೊರೆಯುತ್ತಿತ್ತೆಂದು ನಾವು ನಿಶ್ಚಯಿಸಿದೆವು. ಅವನಲ್ಲಿ ಹೇಡಿತನದ ಸುಳಿವಾದರೂ ಇದ್ದೀತೆಂದು ಸಂಶಯಪಡಲು ನಮಗೆ ಖಂಡಿತವಾಗಿಯೂ ಹೊಳೆಯಲೇ ಇಲ್ಲ. ಕೆಲವರ ವಿಚಾರದಲ್ಲಿ, ಕೇವಲ ಅವರ ಹೊರನೋಟವೇ ಸಾಕು: ಅಂಥ ಸಂಶಯಗಳಿಗೆ ಎಡೆಗೊಡುವುದಿಲ್ಲ. ಹೀಗಿರಲು, ಒಂದು ಸಂಗತಿ ನಡೆಯಿತು ನಮ್ಮನ್ನೆಲ್ಲ ಅಚ್ಚರಿಗೊಳಿಸಿತು.

ನನಗೊಬ್ಬನಿಗೆ ಮಾತ್ರ ಅವನ ವಿಚಾರದಲ್ಲಿ ಆ ಭಾವನೆ ಹೊಂದಲು ಸಾಧ್ಯವಾಗಲಿಲ್ಲ. ಸ್ವಭಾವತಃ ಆದರ್ಶರಮ್ಯ ಭಾವನೆಗಳುಳ್ಳ ನಾನು ರಹಸ್ಯಪೂರ್ಣ ಜೀವನವುಳ್ಳ ಆತನಲ್ಲಿ ಉಳಿದವರಿಗಿಂತ ಹೆಚ್ಚಾಗಿ ವಿಶ್ವಾಸ ಗೌರವಗಳನ್ನಿಟ್ಟಿದ್ದೆ; ನನ್ನ ದೃಷ್ಟಿಯಲ್ಲಿ ಆತನು ಯಾವುದೋ ರಹಸ್ಯಾತ್ಮಕ ಕಥೆಯ ಸಾಹಸವೀರನಂತಿದ್ದನು. ನನ್ನನ್ನು ಕಂಡರೂ ಆತನಿಗೆ ಅಷ್ಟೇ ಪ್ರೀತಿ. ಅಂತೂ ನನ್ನೊಬ್ಬನೊಂದಿಗೆ ಮಾತ್ರ ಆತ ನನ್ನ ಸ್ವಾಭಾವಿಕವಾದ ಕ್ರೂರ ವಿನೋದ ಕುಚೋದ್ಯಗಳಲ್ಲಿ ತೊಡಗುತ್ತಿರಲಿಲ್ಲ; ಬೇರೆ ಬೇರೆ ವಿಚಾರಗಳನ್ನು ಕುರಿತು ಸರಳರೀತಿಯಲ್ಲಿ, ತುಂಬ ಸೊಗಸಾಗಿ ಚರ್ಚಿಸುತ್ತಿದ್ದನು. ಆದರೆ, ತನ್ನ ಗೌರವಕ್ಕೆ ಅಂಟಿಕೊಂಡ ಕಳಂಕವನ್ನು ತನ್ನ ಸ್ವಂತ ಇಚ್ಛೆಯಿಂದ ತೊಳೆದುಕೊಳ್ಳದೆ ಹೋದ ಆ ದುರದೃಷ್ಟದ ಸಂಜೆಯ ನೆನಪು ನನ್ನನ್ನು ಬಿಟ್ಟುಹೋಗಿರಲಿಲ್ಲ; ಈ ಕಾರಣದಿಂದ ಅವನೊಂದಿಗೆ ಎಂದಿನಂತೆ ನಡೆದುಕೊಳ್ಳಲು ನನಗೆ ಸಾಧ್ಯವಾಗಲಿಲ್ಲ. ಅವನ ದೃಷ್ಟಿಗೆ ಬೀಳಲು ನನಗೆ ಸಂಕೋಚವಾಗುತ್ತಿತ್ತು. ಸಿಲ್ವಿಯೊ ತುಂಬ ಚತುರನೂ ಅನುಭವಸ್ಥನೂ ಆದ್ದರಿಂದ ಈ ಸಂಗತಿಯನ್ನು ಗಮನಿಸಿ, ಅದರ ಕಾರಣವೇನೆಂಬುದನ್ನು ಊಹಿಸದೆ ಹೋಗಲಿಲ್ಲ. ಅವನಿಗೆ ವ್ಯಥೆಯಾಗಿದ್ದಂತೆ ತೋರಿತು; ನನ್ನೆದುರಿನಲ್ಲಿ ತನ್ನ ಹೃದಯವನ್ನು ತೋಡಿಕೊಳ್ಳಬೇಕೆಂಬ ಅವನ ಹಂಬಲವಂತೂ ಒಂದೆರಡು ಸಲ ನನ್ನ ಗಮನಕ್ಕೆ ಬಂತು. ಆದರೆ ಅಂಥ ಸಂದರ್ಭಗಳಿಂದ ನಾನು ತಪ್ಪಿಸಿಕೊಳ್ಳುತ್ತಿದ್ದೆ; ಸಿಲ್ವಿಯೊ ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡುತ್ತಿದ್ದ. ಇಲ್ಲಿಂದಾಚೆಗೆ ನನ್ನ ಜೊತೆಗಾರರೊಂದಿಗೆ ಮಾತ್ರ ಅವನನ್ನು ಕಾಣುತ್ತಿದ್ದೆ; ನಮ್ಮ ಹಿಂದಿನ ಬಿಚ್ಚು ಹೃದಯದ ಮಾತುಕತೆ ಕೊನೆಗಂಡಿತು.

ಹಳ್ಳಿಗಳ ಹಾಗೂ ಹಳ್ಳಿಗಾಡಿನ ಸಣ್ಣ ಸಣ್ಣ ಪಟ್ಟಣಗಳ ನಿವಾಸಿಗಳಿಗೆ ಪರಿಚಯವಾಗುವ ಅನೇಕ ವಿಶೇಷಾನುಭವಗಳ ಕಲ್ಪನೆಕೂಡ ಮಹಾನಗರಗಳ ಸುಖಜೀವಿ ನಿವಾಸಿಗಳಿಗೆ ಇರಲಾರದು: ಉದಾಹರಣೆಗೆ, ಮತ್ತೊಮ್ಮೆ ಅಂಚೆ ಬರುವ ದಿನಕ್ಕಾಗಿ ಕಾಯುವ ಅನುಭವ. ಮಂಗಳವಾರ ಶುಕ್ರವಾರಗಳಲ್ಲಿ ಸೈನ್ಯದಳದ ಮುಖ್ಯಕಾರ್ಯಲಯವು ಯಾವಾಗಲೂ ಸೈನ್ಯಾಧಿಕಾರಿಗಳಿಂದ ಕಿಕ್ಕಿರಿದಿರುತ್ತಿತ್ತು: ಕೆಲವರು ಹಣಕ್ಕಾಗಿ, ಕೆಲವರು ಕಾಗದಪತ್ರಗಳಿಗಾಗಿ, ಇನ್ನು ಕೆಲವರು ವೃತ್ತಪತ್ರಿಕೆಗಳಿಗಾಗಿ ನಿರೀಕ್ಷಿಸುತ್ತಿದ್ದರು. ಸಾಧಾರಣವಾಗಿ, ಕಾಗದಗಳು ಕೈಸೇರಿದೊಡನೆ ಆಗಲೇ ಅಲ್ಲಿಯೇ ಅವುಗಳ ಮುದ್ರೆಯೊಡೆದು, ಸುದ್ದಿ ಸಮಾಚಾರಗಳ ವಿವರಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು; ಹೀಗಾಗಿ, ಕಚೇರಿಯಲ್ಲಿ ಮಹಾ ಸಂಭ್ರಮದ ದೃಶ್ಯ ಕಂಡುಬರುತ್ತಿತ್ತು. ಸೈನ್ಯದಳದ

ಹೊರಡೋಣವಾಗಲಿ. ಇದು ನನ್ನ ಮನೆಯಲ್ಲಿ ನಡೆದದ್ದಕ್ಕಾಗಿ ದೇವರಿಗೆ ವಂದನೆ ಸಲ್ಲಿಸಿ."

ಈ ಹಗರಣದ ಫಲಿತಾಂಶವೇನೆಂಬ ಬಗೆಗೆ ನಮಗೆ ಸಂದೇಹವೇ ಇರಲಿಲ್ಲ; ನಮ್ಮ ಹೊಸ ಗೆಳೆಯ ಇನ್ನು ಸತ್ತಂತೆಯೇ ಎಂದು ತಿಳಿದೆವು. ಜೂಜಿನ ನಿಧಿಯನ್ನು ಇಟ್ಟುಕೊಂಡಿದ್ದಾತನಿಗೆ ಯಾವಾಗ ಅನುಕೂಲವಾಗುವುದೊ ಆಗ ತಾನು ಪಟ್ಟ ಅಪಮಾನಕ್ಕೆ ಪ್ರತೀಕಾರ ಮಾಡಲು ತಾನು ಸಿದ್ಧ ಎಂದು ಹೇಳುತ್ತ ಆ ಸೈನ್ಯಾಧಿಕಾರಿ ಹೊರಟುಹೋದ. ಆಟ ಇನ್ನು ಕೆಲವು ನಿಮಿಷ ನಡೆಯಿತು; ಆದರೆ ನಮ್ಮ ಅತಿಥೇಯ ಇನ್ನು ಆಟಕ್ಕೆ ತನ್ನ ಮನಸ್ಸು ಕೊಡಲಾರನೆಂದು ನಮಗೆಲ್ಲ ತೋರಿತು; ಒಬ್ಬೊಬ್ಬರಾಗಿ ನಾವು ಬೀಳ್ಕೊಂಡು, ಸದ್ಯದಲ್ಲಿಯೇ ಈ ಪ್ರಪಂಚದಲ್ಲಿ ಉಂಟಾಗಲಿದ್ದ ಒಂದು ತೆರಪಿನ ಸ್ಥಾನದ ಬಗೆಗೆ ಚರ್ಚಿಸುತ್ತ, ನಮ್ಮ ನಮ್ಮ ಬಿಡಾರದ ಕಡೆಗೆ ನಡೆದೆವು.

ಮಾರನೆಯ ದಿನ ಸವಾರಿಶಿಕ್ಷಣ, ಶಾಲೆಯಲ್ಲಿ ಆ ಬಡ ಲೆಫ್ಟೆನಂಟ್ (ಒಬ್ಬ ಸೈನ್ಯದ ಅಧಿಕಾರಿ) ಇನ್ನೂ ಜೀವಂತನಾಗಿರುವವನೇ ಎಂದು ಒಬ್ಬರನ್ನೊಬ್ಬರು ಕೇಳುತ್ತಿದ್ದಾಗ, ಆತನೇ ನಮ್ಮೆದುರು ಬಂದು ಕಾಣಿಸಿಕೊಂಡನು; ನಾವೆಲ್ಲ ಅವನಿಗೆ ಒಂದೇ ಪ್ರಶ್ನೆ ಹಾಕಿದೆವು. ಸಿಲ್ವಿಯೊ ಇನ್ನೂ ಏನನ್ನೂ ಹೇಳಿಕಳಿಸಿಲ್ಲವೆಂದು ಆತ ಉತ್ತರಕೊಟ್ಟನು. ಇದು ನಮ್ಮನ್ನು ಅಚ್ಚರಿಗೊಳಿಸಿತು. ನಾವು ಸಿಲ್ವಿಯೋವಿನ ಮನೆಗೆ ಹೋದೆವು; ಆಗ ಅವನು ಗೇಟಿಗೆ ಸೆಕ್ಕಿಸಿದ್ದ ಒಂದು ಏಸ್–ಕಾರ್ಡಿನ (ಹಾಸು ಇಸ್ಪೀಟೆಲೆ) ಮಧ್ಯಕ್ಕೆ ಸರಿಯಾಗಿ ಒಂದಾದಮೇಲೆ ಒಂದರಂತೆ ಗುಂಡು ಹೊಡೆಯುತ್ತಿದ್ದನು. ಅವನು ಇಂದೂ ಎಂದಿನಂತೆ ನಮ್ಮನ್ನು ಬರಮಾಡಿಕೊಂಡನು; ಹಿಂದಿನ ದಿನದ ಘಟನೆಯ ಬಗೆಗೆ ಒಂದು ಮಾತನ್ನೂ ಎತ್ತಲಿಲ್ಲ. ಮೂರು ದಿನ ಕಳೆಯಿತು; ಲೆಫ್ಟೆನೆಂಟ್ ಇನ್ನೂ ಬದುಕಿದ್ದನು. ಕಾದಾಡಲು ಸಿಲ್ವಿಯೋವಿಗೆ ಇಷ್ಟವಿಲ್ಲದಿರಬಹುದೇ ಎಂದು ಬೆರಗುಗೊಂಡು ಒಬ್ಬರನ್ನೊಬ್ಬರು ಪ್ರಶ್ನಿಸಿದೆವು. ಸಿಲ್ವಿಯೊ ಕಾದಾಡಲಿಲ್ಲ. ಏನೋ ಒಂದು ಸಣ್ಣ ನೆಪಹೇಳಿ ಅವನು ಸಮಾಧಾನಗೊಂಡನು; ಲೆಫ್ಟೆನೆಂಟಿನೊಂದಿಗೆ ರಾಜಿಮಾಡಿಕೊಂಡನು.

ಇದರಿಂದ ಕಿರಿಯರ ದೃಷ್ಟಿಯಲ್ಲಿ ಸಿಲ್ವಿಯೋವಿನ ವ್ಯಕ್ತಿತ್ವ ತಕ್ಕಮಟ್ಟಿಗೆ ಕುಗ್ಗಿರಬಹುದು. ತರುಣರು ಎಂದಿಗೂ ಧೈರ್ಯಹೀನತೆಯನ್ನು ಸಹಿಸುವುದಿಲ್ಲ; ಅವರ ದೃಷ್ಟಿಯಲ್ಲಿ ಧೈರ್ಯವೊಂದೇ ಪರಮೋತ್ಕೃಷ್ಟಗುಣ, ಅನೇಕಾನೇಕ ದೋಷಗಳನ್ನೂ ಮುಚ್ಚೀತು ಅದು. ಆದರೆ, ಕ್ರಮಕ್ರಮೇಣ ಎಲ್ಲವೂ ಮರೆತುಹೋಯಿತು; ಸಿಲ್ವಿಯೊ ತನ್ನ ಮೊದಲಿನ ಪ್ರಭಾವವನ್ನು ಮತ್ತೆ ಗಳಿಸಿಕೊಂಡನು.

ಅನ್ಯಮನಸ್ಕನಾಗಿದ್ದನು; ಅವನ ಗೆಲವಿನ ಉದ್ರೇಕದ ಲವಲೇಶವೂ ಉಳಿದಿರಲಿಲ್ಲ. ಆತನ ವಿಷಣ್ಣವಾದ ವಿವರ್ಣತೆ, ಫಳಫಳಿಸುವ ಕಣ್ಣುಗಳು, ಅವನ ಬಾಯಿಂದ ಹೊರಬರುತ್ತಿದ್ದ ದಟ್ಟವಾದ ಹೊಗೆ ಇವೆಲ್ಲ ಸೇರಿ ಅವನು ನಿಜವಾದ ದೈತ್ಯನಂತೆ ಕಾಣುವಹಾಗೆ ಮಾಡಿದ್ದುವು. ಕೆಲವು ನಿಮಿಷಗಳಾದಮೇಲೆ, ಸಿಲ್ವಿಯೊ ಮೌನವನ್ನು ಮುರಿದನು.

ಆತ ಹೇಳತೊಡಗಿದ : "ಬಹುಶಃ ನಾವು ಮತ್ತೆ ಸಂಧಿಸುವುದಿಲ್ಲ. ನಾವಿಬ್ಬರೂ ಅಗಲುವ ಮುನ್ನ, ನಿಮ್ಮೊಂದಿಗೆ ಮಾತಾಡಬಯಸುತ್ತೇನೆ. ನನ್ನ ವಿಚಾರವಾಗಿ ಇತರರು ನಿಮ್ಮ ಗಮನಕ್ಕೆ ಬಂದಿರಬಹುದು. ಆದರೆ, ನೀವೆಂದರೆ ನನಗೆ ಮೆಚ್ಚಿಗೆ; ನೀವು ತಪ್ಪುಭಾವನೆ ಇಟ್ಟುಕೊಳ್ಳುವಂತೆ ಮಾಡಿ ಹೋಗುವುದೆಂದರೆ ನನ್ನ ಮನಸ್ಸಿಗೆ ನೋವಾಗುತ್ತದೆ."

ಆತ ನಡುವೆ ನಿಲ್ಲಿಸಿ, ತನ್ನ ಚುಂಗಾಣಿಯ ಬಟ್ಟಲುಬಾಯಿಗೆ ಮತ್ತೆ ಹೊಗೆಸೊಪ್ಪು ತುಂಬತೊಡಗಿದ. ನಾನು ಒಂದು ಮಾತನ್ನೂ ಆಡದೆ ಕೆಳಮುಖನಾಗಿ ನೋಡುತ್ತಿದ್ದೆ.

ಆತ ಮುಂದುವರಿಸಿದ :

"ಆ ಕುಡುಕಷೋಕೀಲಾಲ ಆರ್(R)–ನನ್ನು ದ್ವಂದ್ವಯುದ್ಧಕ್ಕೆ ಕರೆಯಲಿಲ್ಲವೆಂದು ನಿಮಗೆ ಆಶ್ಚರ್ಯವಾಗಿರಬಹುದು. ಯಾವ ಆಯುಧವನ್ನು ಬೇಕಾದರೂ ಆರಿಸಿಕೊಳ್ಳುವ ಹಕ್ಕುಳ್ಳ ನನ್ನ ಕೈಯಲ್ಲಿ ಆತನ ಪ್ರಾಣವಿತ್ತು, ನನ್ನ ಪ್ರಾಣಕ್ಕೆ ಯಾವ ಭಯವೂ ಇರಲಿಲ್ಲ; ಇದನ್ನು ನೀವೂ ಒಪ್ಪುತ್ತೀರಿ. ನನ್ನ ಸಂಯಮಕ್ಕೆ ಕೇವಲ ಉದಾರಮನಸ್ಸೇ ಕಾರಣವೆಂದು ನೀವು ಭಾವಿಸಲು ನನ್ನ ಅಡ್ಡಿಯಿಲ್ಲ; ಆದರೆ ನಿಮ್ಮನ್ನು ಮೋಸಪಡಿಸಲು ನನಗೆ ಇಷ್ಟವಿಲ್ಲ. ನನ್ನ ಪ್ರಾಣಕ್ಕೆ ಸ್ವಲ್ಪವೂ ಅಪಾಯವಾಗದಂತೆ ಆ ಆರ್–ಗೆ ಬುದ್ಧಿ ಕಲಿಸಲು ಸಾಧ್ಯವಾಗದ್ದಿದ್ದರೆ, ನಾನು ಆತನನ್ನು ಕ್ಷಮಿಸುತ್ತಲೇ ಇರಲಿಲ್ಲ."

ನಾನು ಬೆರಗಿನಿಂದ ಆತನನ್ನು ದಿಟ್ಟಿಸಿ ನೋಡಿದೆ. ಆತ ಹೀಗೆ ಒಪ್ಪಿಕೊಂಡದ್ದು ನನ್ನನ್ನು ಚಕಿತಗೊಳಿಸಿತು. ಸಿಲ್ವಿಯೊ ಮುಂದುವರಿಸಿದ:

"ಹೌದು–ನನ್ನ ಪ್ರಾಣವನ್ನು ಅಪಾಯಕ್ಕೆ ಸಿಲುಕಿಸಲು ನನಗೆ ಹಕ್ಕಿಲ್ಲ. ಆರು ವರ್ಷಗಳ ಹಿಂದೆ ನನ್ನ ಮುಖಕ್ಕೆ ಏಟು ಬಿತ್ತು; ಆದರೆ ನನ್ನ ಹಗೆ ಇನ್ನೂ ಜೀವಂತನಾಗಿದ್ದಾನೆ."

ನನ್ನ ಕುತೂಹಲ ಬಲವಾಗಿ ಕೆರಳಿತು. "ಹಾಗಾದರೆ ನೀವು ಆತನೊಂದಿಗೆ ಕಾದಾಡಲಿಲ್ಲ? ಸಂದರ್ಭವಶಾತ್ ನೀವು ಬೇರೆಯಾಗಿ ದೂರಹೋದಿರಿ ಎಂದು ಕಾಣುತ್ತದೆ" ಎಂದೆ ನಾನು.

ಮೂಲಕವಾಗಿಯೇ ತನ್ನ ಕಾಗದಗಳನ್ನು ಪಡೆಯುತ್ತಿದ್ದ ಸಿಲ್ವಿಯೊ ಕೂಡ ಸಾಧಾರಣವಾಗಿ ಅಲ್ಲಿ ಬಂದಿರುತ್ತಿದ್ದನು. ಒಂದು ದಿನ ಅವನ ಕೈಗೆ ಒಂದು ಕಾಗದ ತಂದುಕೊಟ್ಟಾಗ, ಅವನು ಅತ್ಯಂತ ತವಕದಿಂದ ಅದರ ಮುದ್ರೆಯನ್ನು ಒಡೆದನು. ಕಾಗದದ ಒಕ್ಕಣೆಯ ಮೇಲೆ ಅವನು ದೃಷ್ಟಿ ಓಡಿಸಿದಾಗ ಅವನ ಕಣ್ಣು ಫಳಫಳಿಸುತ್ತಿದ್ದುವು. ತಮ್ಮ ತಮ್ಮ ಕಾಗದಗಳನ್ನು ಓದಿಕೊಳ್ಳುವುದರಲ್ಲಿ ನಿರತರಾಗಿದ್ದ ಸೈನ್ಯಾಧಿಕಾರಿಗಳು ಏನನ್ನೂ ಗಮನಿಸಲಿಲ್ಲ. "ಮಹನೀಯರೆ, ನಾನು ಈ ಕ್ಷಣ ಹೊರಡಬೇಕಾದಂಥ ಸಂದರ್ಭವಿಶೇಷ ಒದಗಿದೆ. ಈ ರಾತ್ರಿಯೆ ನಾನು ಈ ಸ್ಥಳ ಬಿಡಬೇಕು. ಕಡೆಯ ಸಲ ನನ್ನೊಂದಿಗೆ ಭೋಜನಮಾಡಲು ನೀವು ನಿರಾಕರಿಸುವುದಿಲ್ಲವೆಂದು ನಂಬಿದ್ದೇನೆ" ಎಂದು ಸಿಲ್ವಿಯೊ ಗಟ್ಟಿಯಾಗಿ ಹೇಳಿ, ನನ್ನ ಕಡೆಗೆ ತಿರುಗಿ ಮುಂದುವರಿಸಿದನು: "ನಿಮ್ಮನ್ನು ನಿರೀಕ್ಷಿಸುತ್ತಿರುತ್ತೇನೆ. ನೀವು ಬರಲೇಬೇಕು." ಈ ಮಾತುಗಳನ್ನು ಹೇಳಿ, ಅವನು ಕಾರ್ಯಾಲಯದಿಂದ ಆತುರವಾಗಿ ಹೊರಟುಹೋದನು; ಸಿಲ್ವಿಯೋವಿನ ಮನೆಯಲ್ಲಿ ಸೇರುವುದೆಂದು ಗೊತ್ತುಮಾಡಿಕೊಂಡು, ನಾವೆಲ್ಲ ನಮ್ಮ ನಮ್ಮ ದಾರಿ ಹಿಡಿದೆವು.

ಗೊತ್ತಾದ ಹೊತ್ತಿಗೆ ಸರಿಯಾಗಿ ನಾನು ಸಿಲ್ವಿಯೋವಿನ ಮನೆಗೆ ಹೋದೆ; ಬಹುಮಟ್ಟಿಗೆ ಸೈನ್ಯದಳದವರೆಲ್ಲ ಅಲ್ಲಿ ನೆರೆದಿದ್ದರು. ಅವನ ಸಾಮಾನುಗಳನ್ನೆಲ್ಲಾ ಆಗಲೆ ಕಟ್ಟಿಡಲಾಗಿತ್ತು; ಗುಂಡಿನೇಟಿನ ತೂತುಗಳಿಂದ ತುಂಬಿದ್ದ ಬೋಳುಗೋಡೆಗಳ ಹೊರತಾಗಿ ಇನ್ನೇನೂ ಉಳಿದಿರಲಿಲ್ಲ. ನಾವು ಮೇಜಿನ ಮುಂದೆ ಊಟಕ್ಕೆ ಕುಳಿತೆವು; ನಮ್ಮ ಅತಿಥೇಯು ಅತ್ಯಂತ ಉತ್ಸಾಹಪೂರ್ಣನಾಗಿದ್ದನು; ಆತನ ಉಲ್ಲಾಸ ಬೇಗನೆ ಅತಿಥಿಗಳಿಗೂ ಹರಡಿತು. ಸೀಸೆಗಳ ಬಿರಡೆಗಳು 'ಪಾಪ್' ಎಂದು ಎಗರಿದವು; ದ್ರಾಕ್ಷಾ ಮದ್ಯ ಗಾಜಿನ ಲೋಟಗಳಲ್ಲಿ ಬುರಬುರನೆ ನೊರೆಯಾಡಿ ಬುಸ್ಸೆಂದಿತು; ನಾವೆಲ್ಲರೂ ಆತನಿಗೆ ಸುಖಪ್ರಯಾಣವನ್ನೂ ಅದೃಷ್ಟಲಾಭವನ್ನೂ ಅವಿಶ್ರಾಂತವಾಗಿ ಕೋರಿದೆವು. ನಾವು ಮೇಜನ್ನು ಬಿಟ್ಟಿದ್ದಾಗ ಸಂಜೆ ತುಂಬ ಹೊತ್ತಾಗಿತ್ತು. ನಾವು ನಮ್ಮ ಟೋಪಿಗಳನ್ನು ತೆಗೆದುಕೊಳ್ಳುತ್ತಿದ್ದಾಗ, ಸಿಲ್ವಿಯೊ ನಮ್ಮಲ್ಲಿ ಪ್ರತಿಯೊಬ್ಬರನ್ನೂ ಪ್ರತ್ಯೇಕವಾಗಿ ಬೀಳ್ಕೊಂಡನು. ನಾನು ಇನ್ನೇನು ಹೊರಡಲಿದ್ದಾಗ ಆತ ನನ್ನ ಕೈಹಿಡಿದುಕೊಂಡು ನನ್ನನ್ನು ತಡೆದು ನಿಲ್ಲಿಸಿಕೊಂಡನು. "ನಿಮ್ಮೊಡನೆ ಸ್ವಲ್ಪ ಮಾತಾಡಬಯಸುತ್ತೇನೆ" ಎಂದು ಆತ ತಗ್ಗಿದ ದನಿಯಲ್ಲಿ ಹೇಳಿದನು. ನಾನು ಅಲ್ಲಿಯೇ ಉಳಿದುಕೊಂಡೆ.

ಅತಿಥಿಗಳೆಲ್ಲ ಹೊರಟುಹೋಗಿದ್ದರು; ಎದುರುಬದುರಾಗಿ ನಾವಿಬ್ಬರೇ ಕುಳಿತು, ಮೌನದಿಂದ ಚುಂಗಾಣಿಯನ್ನು ಹೊತ್ತಿಸಿಕೊಳ್ಳುತ್ತಿದ್ದೆವು. ಸಿಲ್ವಿಯೊ

ಎಂಬುದನ್ನು ಊಹಿಸಿಕೊಳ್ಳಲು ಪ್ರಯತ್ನಿಸಿ. ನಾಯಕನೆಂಬ ನನ್ನ ಬಿರುದು ಅಲುಗಾಡಿತು. ನನ್ನ ಹೆಸರುವಾಸಿಯಿಂದ ಆಕರ್ಷಿತನಾಗಿ ಆತ ನನ್ನ ಗೆಳೆತನ ಬೆಳಸಲು ಪ್ರಯತ್ನಿಸಿದ; ಆದರೆ ಆತನ ಸ್ನೇಹ ಸಂಪಾದನೆಯ ಪ್ರಯತ್ನಗಳಿಗೆ ನಾನು ಪುರಸ್ಕಾರ ಕೊಡಲಿಲ್ಲ. ಅವನಾದರೋ ಸ್ವಲ್ಪವೂ ವ್ಯಥೆ ಪಡದೆ ತನ್ನ ಪ್ರಯತ್ನವನ್ನು ಕೈಬಿಟ್ಟ. ಅವನ ಬಗ್ಗೆ ನನಗೆ ಬಲವಾದ ದ್ವೇಷಭಾವನೆಯುಂಟಾಯಿತು. ಸೈನ್ಯದಳದಲ್ಲಿಯೂ ಹೆಂಗಸರೊಡನೆಯೂ ಅವನು ಹೊಂದಿದ್ದ ಜನಪ್ರಿಯತೆ ನನ್ನನ್ನು ತೀವ್ರನಿರಾಶೆಗೆ ದೂಡಿತು. ನಾನು ಅವನೊಂದಿಗೆ ಜಗಳ ತೆಗೆಯಲು ಪ್ರಯತ್ನಿಸಿದೆ. ಅವನು ನನ್ನ ಚಾಟು ನುಡಿಗಳ ತಲೆಯ ಮೇಲೆ ತನ್ನವನ್ನು ಕುಳ್ಳಿರಿಸುತ್ತಿದ್ದ; ಅವನ ಚಾಟು ನುಡಿಗಳ ಯಾವಾಗಲೂ ನನ್ನದಕ್ಕಿಂತ ಹೆಚ್ಚು ಚತುರವಾಗಿಯೂ ಹೊಸವಾಗಿಯೂ ಇರುತ್ತಿದ್ದುವು. ಖಂಡಿತವಾಗಿಯೂ ನನ್ನವಕ್ಕಿಂತ ಬಹಳ ವಿನೋದಕರವಾಗಿರುತ್ತಿದ್ದುವು. ಅವನದು ಬರಿಯ ಲೇವಡಿ; ನನ್ನ ಹಾಸ್ಯದ ಬಾಣಗಳು ವಿಷಪೂರಿತ. ಕಡೆಗೆ, ಒಂದು ಸಂಜೆ ಒಬ್ಬ ಪೋಲೀಸ್ ಜಮೀನುದಾರ ಒಂದು ನೃತ್ಯಕೂಟವನ್ನು ಏರ್ಪಡಿಸಿದ್ದನು. ಅಲ್ಲಿ ಆತ ಎಲ್ಲ ಹೆಂಗಸರ, ಮುಖ್ಯವಾಗಿ ಮನೆಯೊಡತಿಯ, ಮೋಹನ ಮೂರ್ತಿಯಾಗಿದ್ದುದನ್ನು ಕಂಡು ಅವನ ಕಿವಿಯಲ್ಲಿ ಗ್ರಾಮ್ಯವಾದ ಕೆಲವು ಕುಚೋದ್ಯದ ನುಡಿಗಳನ್ನು ಉಸುರಿದೆನು; ಆಕೆಯೊಂದಿಗೆ ನನ್ನ ವ್ಯವಹಾರವೂ ಇತ್ತು. ಆತನ ಮುಖ ಕೆಂಪೇರಿ, ನನ್ನ ಮುಖಕ್ಕೆ ಹೊಡೆದನು. ಕತ್ತಿಯ ಹಿಡಿಗಳತ್ತ ನಮ್ಮ ಕೈಗಳು ಸರಿದವು. ಹೆಂಗಸರೆಲ್ಲ ಪ್ರಜ್ಞೆ ತಪ್ಪಿದರು; ನಮ್ಮನ್ನು ಬಲಾತ್ಕಾರವಾಗಿ ಬೇರ್ಪಡಿಸಿದರು; ಅಂದಿನಿರುಳೇ ದ್ವಂದ್ವಯುದ್ಧ ಮಾಡುವುದಕ್ಕಾಗಿ ನಾವು ಹೊರಟುಬಿಟ್ಟೆವು.

"ಆಗ ಸೂರ್ಯ ಹುಟ್ಟುವ ಹೊತ್ತು, ಗೊತ್ತಾದ ಸ್ಥಳದಲ್ಲಿ ನಾನು ನನ್ನ ಮೂವರು ಸಹಾಯಕ* ಸಾಕ್ಷಿಗಳೊಂದಿಗೆ ನಿಂತಿದ್ದೆ. ವರ್ಣಿಸಲಾಗದ ತವಕದಿಂದ ನಾನು ನನ್ನ ಎದುರಾಳಿಯನ್ನು ಕಾಯುತ್ತಿದ್ದೆ. ಆಗ ವಸಂತ ಮಾಸವಾದ್ದರಿಂದ ಸೂರ್ಯ ಮುಂದಾಗಿ ಹುಟ್ಟಿದ; ಆಗಲೇ ಸೆಕೆಯಾಗಿತ್ತು. ದೂರದಲ್ಲಿ ಅವನು ಬರುತ್ತಿದ್ದುದನ್ನು ಕಂಡೆ. ಕತ್ತಿಯ ಮೇಲೆ ತನ್ನ ಅಂಗಿಯನ್ನು ಹಾಕಿಕೊಂಡು ನಡೆದು ಬರುತ್ತಿದ್ದ; ಅವನ ಜೊತೆಗಿದ್ದವನು ಒಬ್ಬನೇ ಒಬ್ಬ ಸಹಾಯಕ. ನಾವು ಅವನನ್ನು ಎದುರುಗೊಳ್ಳಲು ಹೋದೆವು. ಅವನು ತನ್ನ ಟೋಪಿಯ ತುಂಬ

---

* Second - ದ್ವಂದ್ವ ಯುದ್ಧ (Duel) ದಲ್ಲಿ ಕಾದಾಡುವವನ ಜೊತೆಗೆ ಹೋಗುವ ಸಹಾಯಕ. ಸಹಾಕರು ಸಾಕ್ಷಿಗಳಾಗಿದ್ದುಕೊಂಡು ಕಾದಾಟದ ನಿಯಮಗಳಿಗೆ ಲೋಪಬರದಂತೆ ನೋಡಿಕೊಳ್ಳುತ್ತಾರೆ.

"ನಾನು ಆತನೊಂದಿಗೆ ಕಾದಾಡಿದ್ದುಂಟು. ನಮ್ಮ ದ್ವಂದ್ವ ಯುದ್ಧದ ನೆನಪಿನ ವಸ್ತು ನನ್ನ ಬಳಿ ಇಲ್ಲಿದೆ" ಎಂದು ಸಿಲ್ವಿಯೊ ಉತ್ತರ ಕೊಟ್ಟ.

ಆತ ಮೇಲಕ್ಕೆದ್ದು, ಒಂದು ರಟ್ಟಿನ ಪೆಟ್ಟಿಗೆಯಿಂದ ಒಂದು ಚಿನ್ನದ ಜರಿಯ ಕುಚ್ಚಿನ ಹೆಣಿಗೆಕೆಲಸದ ಕೆಂಪುಟೋಪಿಯನ್ನು ಹೊರತೆಗೆದ. (ಅಂಥದನ್ನು ಫ್ರೆಂಚರು 'ಪೊಲೀಸು ಕುಲಾವಿ' ಎನ್ನುತ್ತಾರೆ). ಆತ ಅದನ್ನು ಧರಿಸಿದ; ಹಣೆಯ ಮೇಲೆ ಒಂದು ಅಂಗುಲದಷ್ಟು ಮೇಲ್ಭಾಗದಲ್ಲಿ ಅದರಲ್ಲಿ ಒಂದು ಗುಂಡಿನೇಟಿನ ರಂಧ್ರವಿದ್ದುದು ಕಂಡುಬಂತು.

"ನಾನು ಒಮ್ಮೆ–ನೆಯ ರಾವುತ ದಳದಲ್ಲಿ ಇದ್ದದ್ದು ನಿಮಗೆ ಗೊತ್ತು. ಎಲ್ಲದರಲ್ಲಿಯೂ ಮೊದಲಾಗಿರುವುದು ನನ್ನ ಸ್ವಭಾವ; ನನ್ನ ಯೌವನದಲ್ಲಂತೂ ಅದೊಂದು ಹುಚ್ಚೇ ಆಗಿತ್ತು. ನಮ್ಮ ಕಾಲದಲ್ಲಿ ಪುಂಡಾಟವೇ ಮೆಚ್ಚಿನ ಪದ್ಧತಿ; ಸೈನ್ಯದಲ್ಲಿ ನಾನೊಬ್ಬ ಭಾರಿ 'ಬೆಂಕಿ ನವಾಬ.'* ಕುಡಿದು ಉನ್ಮತ್ತರಾಗುವುದು ನಮಗೊಂದು ಹೆಮ್ಮೆ; ಕವಿ ಡೆನಿಸ್ ಡ್ಯಾವಿಡಾಫ್ ಅಮರಗೊಳಿಸಿರುವ ಪ್ರಸಿದ್ಧ ಬರ್ಟ್‌ಸಾಫ್ ಮದ್ಯವನ್ನು ನಾನೊಮ್ಮೆ ಕುಡಿದು ಮೇಜಿನ ಕೆಳಗೆ ಬಿದ್ದಿದ್ದೆ. ನಮ್ಮ ದಳದಲ್ಲಿ ಪ್ರತಿ ನಿಮಿಷವೂ ಒಂದೊಂದು ದ್ವಂದ್ವ ಯುದ್ಧವಾಗುತ್ತಿತ್ತು; ನಾನು ಭಾಗವಹಿಸದೆ ಇದ್ದ ಕಾದಾಟ ಒಂದೂ ಇರಲಿಲ್ಲ; ಪ್ರತಿಯೊಂದರಲ್ಲಿಯೂ ನಾನು ಕಾದಾಡುವವನ ಸಹಾಯಕ, ಇಲ್ಲವೆ ನಾನೇ ಕಾದಾಡುವವ. ನನ್ನ ಸಂಗಡಿಗರಿಗೆ ನಾನು ಆರಾಧ್ಯಮೂರ್ತಿ; ಪದೇ ಪದೇ ಬದಲಾವಣೆಯಾಗುತ್ತಿದ್ದ ದಳದ ಅಧಿಕಾರಿಗಳ ದೃಷ್ಟಿಯಲ್ಲಿ ಒಂದು ಅನಿವಾರ್ಯ ಪೀಡೆ.

"ನಾನು ಶಾಂತನಾಗಿ (ಅಥವಾ, ಬಹುಶಃ ಅಷ್ಟೊಂದು ಶಾಂತನಾಗಿರದೆ) ನನ್ನ ಕೀರ್ತಿಗಾಗಿ ನಲಿಯುತ್ತಿದೆ; ಆಗ ಸತ್ಕುಲಪ್ರಸೂತನಾದ ಶ್ರೀಮಂತ ತರುಣನೊಬ್ಬ–ನಾನು ಅವನ ಹೆಸರು ಹೇಳುವುದಿಲ್ಲ–ನಮ್ಮ ದಳಕ್ಕೆ ಸೇರಿದ. ಅಂಥ ಅದೃಷ್ಟಶಾಲಿಯನ್ನು, ಅಂಥ ತೇಜಸ್ವಿಯನ್ನು ಹಿಂದೆ ನಾನೆಂದೂ ನೋಡಿರಲಿಲ್ಲ! ಯೌವನ, ಬುದ್ಧಿಶಕ್ತಿ, ಅಂದಚೆಂದ, ಕೋಲಾಹಲಕರವಾದ ಹುಮ್ಮಸ್ಸು, ಹಿಂದೆಮುಂದೆ ನೋಡದ ಕೆಚ್ಚು, ಭರ್ಜರಿಯಾದ ಹೆಸರು, ಮತ್ತು ತನ್ನ ಸ್ವಭಾವಕ್ಕೆ ಅನುಗುಣವಾಗಿ ಎಷ್ಟು ಧಾರಾಳವಾಗಿ ಖರ್ಚು ಮಾಡಿದರೂ ಮುಗಿಯುವಂತೆಯೇ ಕಂಡುಬರದಷ್ಟು ಹಣ–ಇವನ್ನೆಲ್ಲ ಉಳ್ಳಂಥ ವ್ಯಕ್ತಿಯನ್ನು ಕಲ್ಪಿಸಿಕೊಳ್ಳಿ; ಆತ ನಮ್ಮ ಮೇಲೆ ಖಂಡಿತವಾಗಿ ಎಂಥ ಪ್ರಭಾವ ಬೀರುತ್ತಿದ್ದ

---

* Fire-eater - ಜಗಳಕ್ಕೆ ಕಾಲುಕೆರೆದು ಹೋಗುವ ಶೀಘ್ರ ಕೋಪಿ.

ಸಿಲ್ವಿಯೊ ತನಗೆ ಬೆಳಗ್ಗೆ ಬಂದಿದ್ದ ಕಾಗದವನ್ನು ತನ್ನ ಜೇಬಿನಿಂದ ಹೊರಕ್ಕೆ ಸೆಳೆದು, ಓದಿಕೊಳ್ಳಲೆಂದು ನನ್ನ ಕೈಗೆ ಕೊಟ್ಟ. ಯಾರೋ ಒಬ್ಬರು (ಬಹುಶಃ ಆತನ ವಕೀಲನೇ ಇರಬೇಕು) ಒಬ್ಬ ಗೊತ್ತಾದ ವ್ಯಕ್ತಿ ಒಬ್ಬಳು ಸುಂದರ ತರುಣಿಯನ್ನು ಶೀಘ್ರದಲ್ಲಿಯೇ ಶಾಸ್ತ್ರೋಕ್ತವಾಗಿ ಮದುವೆಯಾಗಲಿರುವನೆಂದು ಮಾಸ್ಕೋದಿಂದ ಬರೆದಿದ್ದನು.

"ಈ ಗೊತ್ತಾದ ವ್ಯಕ್ತಿ ಯಾರೆಂಬುದನ್ನು ನೀವು ಊಹಿಸಿದ್ದೀರಿ. ನಾನು ಮಾಸ್ಕೋವಿಗೆ ಹೋಗಲಿದ್ದೇನೆ. ಒಮ್ಮೆ ಟೋಪಿಯ ತುಂಬ 'ಚೆರಿ' ಹಣ್ಣು ತುಂಬಿಕೊಂಡು ಮರಣಕ್ಕೆ ಸಿದ್ಧನಾಗಿದ್ದಂತೆ ಈಗ ಮದುವೆಯ ಮುನ್ನವೂ ಅಷ್ಟೇ ಉದಾಸೀನನಾಗಿ ಅದನ್ನು ಎದುರಿಸುವನೇ ನೋಡೋಣ!" ಎಂದ ಸಿಲ್ವಿಯೊ.

ಇಷ್ಟು ಹೇಳಿ, ಸಿಲ್ವಿಯೊ ಮೇಲೆದ್ದು, ತನ್ನ ಟೋಪಿಯನ್ನು ನೆಲದ ಮೇಲೆ ಬಿಸಾಡಿ, ಬೋನಿನಲ್ಲಿಟ್ಟ ಹುಲಿಯಂತೆ ಕೋಣೆಯ ಅತ್ತಿಂದಿತ್ತ ಶತಪಥ ತಿರುಗಾಡತೊಡಗಿದನು. ವಿಚಿತ್ರವಾದ ಹಾಗೂ ಪರಸ್ಪರವಿರುದ್ಧವಾದ ಭಾವಗಳಿಂದ ಮನಸ್ಸು ಕಲಕಿ ಆತ ಕೋಣೆಯಿಂದ ಹೊರಹೊರಟಿದ್ದು ನೀರವನಿಶ್ಚಲಮೌನದಿಂದಿದ್ದ ನನಗೆ ಕೇಳಿಸಿತು.

ಕುದುರೆಗಳು ಸಿದ್ಧವಾಗಿವೆಯೆಂದು ಹೇಳಲು ಸೇವಕನು ಒಳಕ್ಕೆ ಬಂದನು. ಸಿಲ್ವಿಯೊ ತನ್ನ ಕೈಯನ್ನು ಪ್ರೀತಿಯಿಂದ ಅದುಮಿದನು; ಇಬ್ಬರೂ ಆಲಿಂಗನಮಾಡಿಕೊಂಡೆವು. ಅವನು ಗಾಡಿಯನ್ನೇರಿದನು; ಅದರಲ್ಲಿ ಎರಡು 'ಟ್ರಂಕು'ಗಳಿದ್ದುವು; ಒಂದರಲ್ಲಿ ಅವನ ಪಿಸ್ತೂಲುಗಳೂ ಇನ್ನೊಂದರಲ್ಲಿ ಅವನ ಹಣ ಕಾಸು ಮುಂತಾದ್ದೂ ಇದ್ದುವು. ನಾವು ಮತ್ತೊಮ್ಮೆ ಪರಸ್ಪರ ಬೀಳ್ಕೊಂಡೆವು; ಕುದುರೆಗಳು ಸಿದ್ಧವಾಗಿವೆಯೆಂದು ಹೇಳಲು ಸೇವಕನು ಒಳಕ್ಕೆ ಬಂದನು. ಸಿಲ್ವಿಯೊ ನನ್ನ ಕೈಯನ್ನು ಪ್ರೀತಿಯಿಂದ ಅದುಮಿದನು; ಇಬ್ಬರೂ ಆಲಿಂಗನಮಾಡಿಕೊಂಡೆವು. ಅವನು ಗಾಡಿಯನ್ನೇರಿದನು; ಕುದುರೆಗಳು ನಾಗಾಲೋಟದಲ್ಲಿ ಧಾವಿಸಿದುವು.

ಅನೇಕ ವರ್ಷಗಳು ಸಂದುವು; ಗೃಹಕೃತ್ಯದ ಸಂದರ್ಭಗಳ ದೆಸೆಯಿಂದ ನಾನು ಎಕ್ಸ್–ಜಿಲ್ಲೆಯ ಒಂದು ದಾರಿದ್ರ್ಯಪೀಡಿತವಾದ ಹಳ್ಳಿಯಲ್ಲಿ ನನ್ನ ನಿವಾಸವನ್ನು ಗೊತ್ತುಮಾಡಿಕೊಳ್ಳಬೇಕಾಯಿತು. ನನ್ನ ಹೊಲ ಮನೆಯ ಆಡಳಿತ ನೋಡಿಕೊಳ್ಳುವುದರಲ್ಲಿ ನಿರತನಾಗಿದ್ದಾಗ, ನನ್ನ ಹಿಂದಿನ ಕೋಲಾಹಲಕರವಾದ ಹಾಗೂ ನಿರ್ಲಕ್ಷ್ಯವಾದ ಜೀವನಕ್ಕಾಗಿ ನಿಟ್ಟುಸಿರುಗರೆಯುವುದನ್ನು ನಾನು ಎಂದೂ

'ಚೆರಿ' ಹಣ್ಣು ತುಂಬಿಕೊಂಡು ಬಳಿಗೆ ಬಂದ. ಸಹಾಯಕರು ನಮ್ಮಿಬ್ಬರ ನಡುವೆ ಹನ್ನೆರಡು ಹೆಜ್ಜೆಗಳನ್ನು ಅಳೆದರು. ಮೊದಲು ಗುಂಡು ಹಾರಿಸಬೇಕಾಗಿದ್ದವನು ನಾನು; ಆದರೆ ಕೋಪದಿಂದ ನಾನು ಎಷ್ಟು ಕಂಪಿಸುತ್ತಿದ್ದೆನೆಂದರೆ, ನನ್ನ ಕೈ ದೃಢವಾಗಿರುವುದೆಂದು ನಾನು ನೆಚ್ಚುವಂತಿರಲಿಲ್ಲ; ಹೀಗಾಗಿ, ಮೊದಲು ಗುಂಡು ಹೊಡೆಯುವ ಅವಕಾಶವನ್ನು ಅವನಿಗೇ ಬಿಟ್ಟುಕೊಟ್ಟೆ. ಆದರೆ ಇದಕ್ಕೆ ಅವನು ಒಪ್ಪಲಿಲ್ಲ. ಆದ್ದರಿಂದ ಚೀಟಿ ಎತ್ತಿ ನಿರ್ಧರಿಸಲು ನಿಶ್ಚಯಿಸಿದೆವು. ಚೀಟಿ ಎತ್ತಿದಾಗ, ಯಾವಾಗಲೂ ಭಾಗ್ಯದೇವತೆಯ ನಚ್ಚಿನವನಾದ ಅವನಿಗೇ ಅವಕಾಶ ಲಭಿಸಿತು. ಅವನು ಗುರಿ ತೆಗೆದುಕೊಂಡು ಹಾರಿಸಿದ ಗುಂಡು ನನ್ನ ಟೋಪಿಯನ್ನು ಕೊರೆದುಕೊಂಡು ಹೋಯಿತು. ಆಗ ನನ್ನ ಸರದಿ ಬಂತು. ಕಡೆಗೊಮ್ಮೆ ಅವನ ಪ್ರಾಣ ನನ್ನ ಕೈವಶವಾಯಿತು. ಕಳವಳದ ಸುಳಿವಿನ ಕುರುಹು ಏನಾದರೂ ಇದ್ದೀತು ಎಂದು ಪರೀಕ್ಷಿಸುವ ಸಲುವಾಗಿ ಅವನನ್ನು ಬಹು ಸೂಕ್ಷ್ಮವಾಗಿ ದೃಷ್ಟಿಸಿ ನೋಡಿದೆ. ಅವನು ತನ್ನ ಟೋಪಿಯಿಂದ ಪಕ್ವವಾದ 'ಚೆರಿ' ಹಣ್ಣುಗಳನ್ನು ಆಯ್ದುಕೊಳ್ಳುತ್ತ, ನನ್ನ ಪಿಸ್ತೂಲನ್ನು ಎದುರಿಸಿ ನಿಂತ; ಅವನು ಉಗುಳುತ್ತಿದ್ದ ಬೀಜಗಳು ನಾನು ನಿಂತೆಡೆಯ ಹತ್ತಿರ ಬಂದು ಬೀಳುತ್ತಿದ್ದುವು. ಅವನ ಈ ನಿರಾತಂಕಭಾವ ನನ್ನನ್ನು ಕೆರಳಿಸಿತು. ತನ್ನ ಪ್ರಾಣಕ್ಕೆ ಅವನು ಏನೂ ಬೆಲೆ ಕೊಡದಿರುವಾಗ ಅವನ ಪ್ರಾಣ ತೆಗೆಯುವುದರಿಂದ ಏನು ಪ್ರಯೋಜನ ಎಂದು ನಾನು ಎಣಿಸಿದೆ. ಒಂದು ಪೈಶಾಚಿಕ ಯೋಚನೆ ನನ್ನ ಮನಸ್ಸಿನಲ್ಲಿ ಹಾದುಹೋಯಿತು. ಪಿಸ್ತೂಲನ್ನು ಹಿಡಿದಿದ್ದ ಕೈಯನ್ನು ನಾನು ತಗ್ಗಿಸಿದೆ.

"ಓಹೋ, ಸಾವಿನ ಬಗ್ಗೆ ಯೋಚಿಸಲಾಗದಷ್ಟು ಕೆಲಸ ಅಂತ ಕಾಣುತ್ತೆ ನಿಮಗೆ. ಫಲಾಹಾರದಲ್ಲೆ ನಿಮಗೆ ಸಂತೋಷ. ನಿಮಗೆ ವಿಘ್ನ ಉಂಟುಮಾಡಲು ನನಗೆ ಇಷ್ಟವಿಲ್ಲ" ಎಂದೆ ನಾನು. 'ನನಗೇನೂ ವಿಘ್ನವಾಗಿಲ್ಲ ನಿಮ್ಮಿಂದ, ದಯವಿಟ್ಟು ಗುಂಡುಹಾರಿಸಿ. ಆದರೂ ನಿಮ್ಮ ಇಷ್ಟ ಬಂದ ಹಾಗೆ ಮಾಡಬಹುದು. ನನ್ನನ್ನು ಗುಂಡಿನಿಂದ ಹೊಡೆಯುವುದು ನಿಮ್ಮ ಹಕ್ಕು; ನಾನು ಯಾವಾಗಲೂ ನಿಮ್ಮ ಸೇವೆಗೆ ಸಿದ್ಧ' ಎಂದು ಆತ ಪ್ರತಿಯಾಗಿ ಉತ್ತರಿಸಿದ. ನಾನು ಸಹಾಯಕರ ಕಡೆ ತಿರುಗಿ, ಸದ್ಯಕ್ಕೆ ಗುಂಡು ಹೊಡೆಯುವ ಉದ್ದೇಶ ನನಗಿಲ್ಲ ಎಂದು ಅವರಿಗೆ ಹೇಳಿದೆ. ಅಷ್ಟಕ್ಕೆ ಅಂದಿನ ದ್ವಂದ್ವಯುದ್ಧ ಮುಗಿಯಿತು.

"ನಾನು ಸೈನ್ಯಕ್ಕೆ ರಾಜಿನಾಮೆ ಕೊಟ್ಟು, ಈ ಚಿಕ್ಕ ಸ್ಥಳಕ್ಕೆ ಬಂದು ನೆಲಸಿದೆ. ಅಲ್ಲಿಂದೀಚೆಗೆ, ಸೇಡು ತೀರಿಸಿಕೊಳ್ಳುವುದು ಹೇಗೆಂದು ಚಿಂತಿಸದೆ ಒಂದು ದಿನವೂ ಕಳೆದಿಲ್ಲ. ನಾನು ಹಾತೊರೆಯುತ್ತಿದ್ದ ಕಾಲ ಈಗ ಒದಗಿಬಂದಿದೆ."

ಹೊಲಮನೆಯನ್ನು ಭೇಟಿ ಮಾಡಲು ಉದ್ದೇಶಿಸಿರುವರೆಂದು ವದಂತಿ ಹುಟ್ಟಿತು. ಜೂನ್ ತಿಂಗಳ ಪ್ರಾರಂಭದಲ್ಲಿ ಅವರು ನಿಜವಾಗಿ ಬಂದೇ ಬಿಟ್ಟರು.

ಐಶ್ವರ್ಯವಂತರಾದ ನೆರೆಯವರು ಬರುವುದೆಂದರೆ ಗ್ರಾಮವಾಸಿಗಳ ಜೀವನದಲ್ಲಿ ಒಂದು ನೂತನ ಶಕೆಯೇ ಪ್ರಾರಂಭವಾದಂತೆ. ಜಮೀನುದಾರರೂ ಅವರ ಮನೆಗೆಲಸದವರೂ ಅವರ ಆಗಮನಕ್ಕೆ ಎರಡು ತಿಂಗಳು ಮುಂಚೆ ಮತ್ತು ಆಮೇಲೆ ಮೂರು ವರ್ಷಗಳವರೆಗೆ ಅದರ ವಿಚಾರವಾಗಿ ಮಾತುಕತೆಯಾಡುತ್ತಿರುತ್ತಾರೆ. ನನ್ನ ಮಟ್ಟಿಗೆ ಹೇಳುವುದಾದರೆ, ತರುಣಿಯೂ ಸುಂದರಿಯೂ ಆದವಳೊಬ್ಬಳು ನನ್ನ ನೆರೆಯವಳಾಗಿ ಬರಲಿರುವಳೆಂಬ ಸುದ್ದಿ ನನ್ನಮೇಲೆ ಅತ್ಯಂತ ಪ್ರಬಲವಾದ ಪ್ರಭಾವ ಬೀರಿತೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಅವಳನ್ನು ನೋಡಲು ನಾನು ತವಕಗೊಂಡು ತಹತಹಪಡುತ್ತಿದ್ದೆ; ಅವಳು ಬಂದ ಮೊದಲನೆಯ ಭಾನುವಾರವೇ ಭೋಜನವಾದಮೇಲೆ 'ಸಿ' (C)–ಹಳ್ಳಿಯನ್ನು ಕುರಿತು ಹೊರಟೆ; ಆ ಘನ ಶ್ರೀಮಂತರ ಅತ್ಯಂತ ಸಮೀಪದ ನೆರೆಯವನೆಂದೂ ಅವರ ಅತ್ಯಂತ ನಮ್ರ ಸೇವಕನೆಂದೂ ಅವರಿಗೆ ನನ್ನ ಪರಿಚಯಮಾಡಿಕೊಡಬೇಕೆಂದು ಉದ್ದೇಶಿಸಿದ್ದೆ.

ಡವಾಲಿಯ ಜವಾನ ನನ್ನನ್ನು ಶ್ರೀಮಂತರ ವ್ಯಾಸಂಗದ ಕೊಟಡಿಗೆ ಕರೆದೊಯ್ದು, ನನ್ನ ಆಗಮನವನ್ನು ಅವರಿಗೆ ತಿಳಿಸುವುದಕ್ಕಾಗಿ ಹೊರಟುಹೋದನು. ವಿಶಾಲವಾದ ಆ ವ್ಯಾಸಂಗದ ಕೋಣೆಯ ತುಂಬ ಮಹಾ ಶ್ರೀಮಂತಿಕೆಯ ಪೀಠೋಪಸ್ಕರಗಳು ಸಜ್ಜಾಗಿದ್ದುವು; ಗೋಡೆಯ ಉದ್ದಕ್ಕೂ ಪುಸ್ತಕಗಳು ತುಂಬಿದ್ದ ಪುಸ್ತಕ–ನಿಚ್ಚಣಿಕೆಗಳು ಇದ್ದುವು; ಪ್ರತಿಯೊಂದರ ಮೇಲ್ಭಾಗದಲ್ಲಿಯೂ ಕಂಚಿನ ಅರ್ಧಪ್ರತಿಮೆಯೊಂದಿದ್ದಿತು. ಅಮೃತಶಿಲೆಯ ಬೆಂಕಿಗೂಡಿನ ಮೇಲ್ಗಡೆ ಒಂದು ದೊಡ್ಡ ಕನ್ನಡಿ; ನೆಲ ತುಂಬ ಹಸುರಬಟ್ಟೆಯ ಹಾಸು; ಅದರಮೇಲೆ ಅಲ್ಲಲ್ಲಿ ರತ್ನಗಂಬಳಿ. ನನ್ನ ಅಭುಕ್ತ, ಮೂಲೆಯಲ್ಲಿ ಶ್ರೀಮಂತಿಕೆಯ ಅನುಭೋಗದ ಅಭ್ಯಾಸವೇ ತಪ್ಪಿಹೋಗಿತ್ತು; ಇತರರ ಸಂಪತ್ತನ್ನು ನೋಡುವ ಭಾಗ್ಯ ಕೂಡ ನಿಂತುಹೋಗಿತ್ತು. ಈ ಕಾರಣದಿಂದ, ಒಂದು ತೆರನ ಅಂಜುಬುರುಕುತನಕ್ಕೆ ಒಳಗಾಗಿ, ದೂರಪ್ರಾಂತದಿಂದ ಮನವಿ ಸಲ್ಲಿಸಬಂದವನು ಸಚಿವರ ಆಗಮನವನ್ನು ನಿರೀಕ್ಷಿಸುವಂತೆ ನಾನು ಏನೋ ಒಂದು ಬಗೆಯ ಗಾಬರಿಯಿಂದ ಶ್ರೀಮಂತರಿಗಾಗಿ ಕಾದಿದ್ದೆ. ಬಾಗಿಲು ತೆರೆಯಿತು; ಸುಮಾರು ಮೂವತ್ತೆರಡು ವರ್ಷ ಪ್ರಾಯದ ಅತ್ಯಂತ ಚೆಲುವನೊಬ್ಬನು ಪ್ರವೇಶಿಸಿದನು. ಆ ಶ್ರೀಮಂತನು ಸ್ನೇಹ ಸೌಹಾರ್ದಭಾವದಿಂದಲೇ ನನ್ನ ಬಳಿ ಸಾರಿದನು.

ನಿಲ್ಲಿಸಲೇ ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಶರತ್ಕಾಲ ಮತ್ತು ಹಿಮಕಾಲದ ಸಂಜೆಗಳಲ್ಲಿ ಪೂರ್ಣ ಏಕಾಂತ ವಾಸಕ್ಕೆ ಒಗ್ಗಿಕೊಳ್ಳುವುದು ನನಗೆ ಅತ್ಯಂತ ಕಷ್ಟವಾಗಿ ಕಂಡಿತು. ಹಳ್ಳಿಯ ಹೆಗ್ಗಡೆಯೊಂದಿಗೆ ಮಾತನಾಡುವುದು, ಕೆಲಸ ಹೇಗೆ ಸಾಗುತ್ತಿದೆಯೆಂದು ಪರಿಶೀಲಿಸಲು ಹೊಲಗಳ ಸುತ್ತ ಗಾಡಿಯಲ್ಲಿ ಓಡಾಡುವುದು, ಅಥವಾ ಹೊಸದಾಗಿ ಪ್ರಾರಂಭಿಸಿದ ಉದ್ಯಮಗಳಿಗೆ ಭೇಟಿಕೊಡುವುದು ಇವೇ ಮೊದಲಾದ ಕೆಲಸಗಳನ್ನಿಟ್ಟುಕೊಂಡು ಹಾಗೂ ಹೀಗೂ ಭೋಜನದ ಹೊತ್ತಿನವರೆಗೆ ಕಾಲ ಕಳೆಯಲು ಹವಣಿಸುತ್ತಿದ್ದೆ. ಆದರೆ ಸಂಜೆಯ ಮಬ್ಬು ಕವಿಯ ತೊಡಗಿದ ಕೂಡಲೆ ನಾನು ಏನು ಮಾಡಬೇಕೆಂಬುದೇ ನನಗೆ ತಿಳಿಯುತ್ತಿರಲಿಲ್ಲ. ಬೇರೆ ಬೇರೆ ಕಪಾಟುಗಳಲ್ಲಿಯೂ ಉಗ್ರಾಣದಲ್ಲಿಯೂ ನನಗೆ ದೊರೆತಿದ್ದ ಕೆಲವು ಪುಸ್ತಕಗಳ ವಿಷಯವೆಲ್ಲ ಆಗಲೆ ನನಗೆ ಬಾಯಿಪಾಠವಾಗಿತ್ತು. ಮನೆಯ ಕೆಲಸಗಿತ್ತಿ ಕಿರಿಲೋವ್ನ ತನ್ನ ಕತೆಗಳ ಸರಕನ್ನು ಮರಳಿ ಹೇಳಿ ಮುಗಿಸಿದ್ದಳು; ಹೆಂಗಸರ ಹಾಡುಗಳು ನನ್ನನ್ನು ಒಂದು ಬಗೆಯ ಖಿನ್ನಭಾವಕ್ಕೆ ಗುರಿಮಾಡಿದ್ದುವು. 'ಬಿಟರ್' ಮದ್ಯವು ನನ್ನ ತಲೆಗೆ ನೋವು ತರದೆ ಇದ್ದಿದ್ದರೆ ನಾನು ಅದರ ಕುಡಿತಕ್ಕೆ ಇಳಿದುಬಿಡಬಹುದಾಗಿತ್ತು. ಅಲ್ಲದೆ ಕೆಲಸವಿಲ್ಲದ ಬೇಸರದ ಪರಿಣಾಮವಾಗಿ ಎಲ್ಲಿ ಕುಡುಕನಾಗಿಬಿಡುತ್ತೇನೆಯೋ ಎಂದು ಹೆದರಿದ್ದೆನೆಂಬುದನ್ನು ನಾನು ಒಪ್ಪಿಕೊಳ್ಳಬೇಕು. ಕುಡುಕರಲ್ಲಿ ಅತ್ಯಂತ ಕೀಳೆಂದರೆ, ಮಾಡುವುದಕ್ಕೆ ಕೆಲಸವಿಲ್ಲದೆ ಕುಡಿತದ ಅಭ್ಯಾಸಕ್ಕೆ ಬಲಿ ಬೀಳುವವರು. ನಮ್ಮ ಪ್ರಾಂತ್ಯದಲ್ಲಿ ಅಂತಹ ಕುಡುಕರ ಅಸಂಖ್ಯಾತ ನಿದರ್ಶನಗಳನ್ನು ನಾನು ಕಂಡಿದ್ದೇನೆ. ಇಂಥ ಇಬ್ಬರು ಮೂವರು ನಿರ್ಭಾಗ್ಯರು ಮಾತ್ರ ನನ್ನ ನೆರೆಯವರಾಗಿದ್ದರು. ಅವರೊಡನೆ ಸಂಭಾಷಣೆಯೆಂದರೆ, ಮುಖ್ಯವಾಗಿ ಅವರ ಬಿಕ್ಕಳಿಕೆಗಳನ್ನೂ ನಿಟ್ಟುಸಿರುಗಳನ್ನೂ ಕೇಳುವುದೇ ಆಗಿದ್ದಿತು. ಇಂಥವರ ಸಹವಾಸಕ್ಕಿಂತ ಏಕಾಂತವಾಸ ಹೆಚ್ಚು ಸಹ್ಯವಾಗಿತ್ತು.

ನಾಲ್ಕು 'ವರ್ಸ್ಟ್'ಗಳ* ಆಚೆ 'ಕೌಂಟಿಸ್' (ಶ್ರೀಮಂತೆ) 'B' (ಬಿ)–ಎಂಬಾಕೆಯ ಬೆಲೆಬಾಳುವ ಹೊಲಮನೆಯಿತ್ತು. ಅಲ್ಲಿ ಅದರ ಮೇಲ್ವಿಚಾರಕ ಹೊರತು ಬೇರೆ ಯಾರೂ ವಾಸಿಸುತ್ತಿರಲಿಲ್ಲ; 'ಕೌಂಟೆಸ್' ತನ್ನ ಮದುವೆಯಾದ ಮೊದಲ ವರ್ಷದಲ್ಲಿ ಒಮ್ಮೆ ಮಾತ್ರ ತನ್ನ ಹೊಲಮನೆಗೆ ಭೇಟಿಕೊಟ್ಟಿದ್ದಳು. ಆಗಲೂ ಕೂಡ ಆಕೆ ಒಂದು ತಿಂಗಳಿಗಿಂತ ಹೆಚ್ಚಾಗಿ ಅಲ್ಲಿ ನಿಲ್ಲಲಿಲ್ಲ. ಆದರೆ ನನ್ನ ಏಕಾಂತವಾಸದ ಎರಡನೆಯ ವಸಂತಮಾಸದಲ್ಲಿ ಆ ಕೌಂಟಿಸ್ಸೂ ಅವಳ ಪತಿಯೂ ತಮ್ಮ

* ಒಂದು ರಸ್ತದ ದೂರದ ಅಳತೆ–೩,೫೦೦ ಅಡಿಗಳು.

"ಒಂದು ದಿನ ಪ್ರಯತ್ನಿಸಿ ನೋಡೋಣ. ಒಂದು ಕಾಲದಲ್ಲಿ ನಾನು ಅಂಥ ಕೆಟ್ಟ ಗುರಿಗಾರನೇನಾಗಿರಲಿಲ್ಲ. ಆದರೆ ಈ ನಾಲ್ಕು ವರ್ಷ ಕಾಲ ನಾನು ಕೈಲಿ ಪಿಸ್ತೂಲು ಹಿಡಿದಿಲ್ಲ" ಎಂದ ಶ್ರೀಮಂತ.

"ಓಹೋ! ಹಾಗಿದ್ದ ಪಕ್ಷದಲ್ಲಿ ಇಪ್ಪತ್ತು ಹೆಜ್ಜೆಗಳಾಚೆ ಇರುವ ಇಸ್ಪೀಟೆಲೆಯನ್ನೂ ನೀವು ಹೊಡೆಯಲಾರಿರಿ ಮಹಾಸ್ವಾಮಿ, ಬೇಕಾದರೆ ನಾನು ಪಣ ತೊಡುತ್ತೇನೆ. ಪಿಸ್ತೂಲು ಹೊಡೆಯುವುದಕ್ಕೆ ಪ್ರತಿನಿತ್ಯದ ಅಭ್ಯಾಸವಿರಬೇಕು. ಅನುಭವದಿಂದ ಈ ವಿಚಾರವನ್ನು ನಾನು ಬಲ್ಲೆ. ನಮ್ಮ ಸೈನ್ಯದಳದಲ್ಲಿ ನನ್ನನ್ನು ಒಬ್ಬ ಶ್ರೇಷ್ಠ ಗುರಿಗಾರನೆಂದು ಪರಿಗಣಿಸುತ್ತಿದ್ದರು. ಆದರೆ ಒಮ್ಮೆ ಇಡಿಯ ಒಂದು ತಿಂಗಳ ಕಾಲ ಪಿಸ್ತೂಲನ್ನು ಮುಟ್ಟಲೂ ಅವಕಾಶವಾಗಲಿಲ್ಲ. ನನ್ನದು ರಿಪೇರಿಗೆ ಹೋಗಿತ್ತು. ಏನಾಯಿತು ಗೊತ್ತೆ ಮಹಾಸ್ವಾಮಿ? ಆಮೇಲೆ ಗುಂಡು ಹಾರಿಸಲು ನಾನು ಮೊದಲ ಸಲ ಪ್ರಯತ್ನಿಸಿದಾಗ, ನಾಲ್ಕು ಬಾರಿ ಗುರಿಯಿಟ್ಟು ಹೊಡೆದಾಗಲೂ ಇಪ್ಪತ್ತೈದು ಹೆಜ್ಜೆಗಳಾಚೆ ಇರುವ ಸೀಸೆಯನ್ನು ಹೊಡೆಯಲಾರದೆ ಹೋದೆ. ನಮ್ಮ 'ಕ್ಯಾಪ್ಟನ್' ಒಬ್ಬ ಇದ್ದಾನೆ, ಅವನು ಒಳ್ಳೆಯ ತಮಾಷೆಗಾರ. ಅವನು, 'ಮಿತ್ರಾ, ಶೀಸೆ ಒಡೆಯುವುದಕ್ಕೆ ನಿನಗೆ ಮನಸ್ಸು ಬರುವುದಿಲ್ಲ ಎನ್ನುವುದು ಯಾರಿಗಾದರೂ ವೇದ್ಯ' ಎಂದು ನನಗೆ ಹೇಳಿದ. ನೀವು ಆ ಅಭ್ಯಾಸವನ್ನು ಕಡೆಗಣಿಸಬಾರದು, ಮಹಾಸ್ವಾಮಿ. ಹಾಗೆ ಮಾಡಿದರೆ, ಬಹುಬೇಗ ನಿಮಗೆ ಅಭ್ಯಾಸ ತಪ್ಪಿಹೋಗುತ್ತದೆ. ನಾನು ಬಲ್ಲ ಅತ್ಯುತ್ತಮ ಗುರಿಗಾರನೊಬ್ಬ ಪ್ರತಿದಿನವೂ ಭೋಜನಕ್ಕೆ ಮೊದಲು ಮೂರು ಸಲವಾದರೂ ಗುಂಡುಹಾರಿಸಿ ಅಭ್ಯಾಸ ಮಾಡುತ್ತಿದ್ದ. ಊಟಕ್ಕೆ ಮೊದಲು ಒಂದು ಲೋಟ 'ವೋಡ್ಕ'* ಕುಡಿಯುವ ಹಾಗೆ ಅದೂ ಒಂದು ಅಭ್ಯಾಸವಾಗಿಬಿಟ್ಟಿತು ಅವನಿಗೆ."

—ಎಂದು ನಾನು ಹೇಳಿದೆ. ನಾನು ಕಡೆಗೆ ಬಾಯಿ ಬಿಟ್ಟೆನಲ್ಲಾ ಎಂದು ಶ್ರೀಮಂತನಿಗೂ ಶ್ರೀಮಂತಪತ್ನಿಗೂ ಸಂತೋಷವಾಯಿತು. "ಅವನು ಗುಂಡು ಹಾರಿಸುವ ವಿಚಾರ ಇನ್ನಷ್ಟು ಹೇಳಿ" ಎಂದು ಶ್ರೀಮಂತನು ಕೇಳಿದನು.

"ಆಗಲಿ, ಮಹಾಸ್ವಾಮಿ, ಅದೇನೆಂಬುದನ್ನು ನಿಮಗೆ ಹೇಳುತ್ತೇನೆ. ಕೆಲವು ವೇಳೆಗೆ ಗೋಡೆಯ ಮೇಲೆ ನೊಣ ಬಂದು ಕುಳಿತುಕೊಳ್ಳುತ್ತಿದ್ದುದು ಅವನ ದೃಷ್ಟಿಗೆ ಬೀಳುತ್ತಿತ್ತು–ಅಮ್ಮಾವರೆ, ನಿಮಗೆ ನಗು ಬರುತ್ತಿದೆ. ಆದರೆ, ನನ್ನಾಣೆಗೂ ನಾನು ಹೇಳುತ್ತಿರುವುದು ನಿಜ. ಇರಲಿ–ಅವನು ಹಾಗೆ ನೊಣವನ್ನು ಕಂಡಾಗ,

* ರಷ್ಯಾ ದೇಶದಲ್ಲಿ ಸಾಮಾನ್ಯ ಬಳಕೆಯಲ್ಲಿರುವ ಒಂದು ತೀಕ್ಷ್ಣವಾದ ಮದ್ಯ.

ಮನಸ್ಸನ್ನು ಸಮಾಧಾನಕ್ಕೆ ತಂದುಕೊಳ್ಳಲು ಪ್ರಯತ್ನಿಸಿ, ನನ್ನ ಪರಿಚಯವನ್ನು ಹೇಳಿಕೊಳ್ಳಬೇಕೆಂದಿರುವಷ್ಟರಲ್ಲಿಯೇ, ಪರಿಚಯದ ಪೀಠಿಕೆಯನ್ನು ಆತನೇ ಮೊದಲುಮಾಡಿಬಿಟ್ಟ. ನಾವಿಬ್ಬರೂ ಕುಳಿತುಕೊಂಡೆವು. ಸೌಜನ್ಯ ಸರಳತೆಗಳಿಂದ ಕೂಡಿದ ಆತನ ಸಂಭಾಷಣೆ ಏಕಾಂತವಾಸದ ಫಲವಾದ ನನ್ನ ಸಂಕೋಚ ಸ್ವಭಾವವನ್ನು ಬೇಗನೆಯೆ ತೊಲಗಿಸಿತು. ನನ್ನ ಮನಸ್ಸು ಒಂದು ಹತೋಟಿಗೆ ಬರುವಷ್ಟರಲ್ಲಿ ಶ್ರೀಮಂತೆ ಪ್ರವೇಶಿಸಿದಳು; ಮೊದಲಿಗಿಂತ ಬಹುಪಾಲು ಹೆಚ್ಚಾಗಿ ಮನಸ್ಸಿನ ಗೊಂದಲದಲ್ಲಿ ಮುಳುಗಿದೆನು. ಅವಳು ನಿಜವಾಗಿ ಚೆಲುವಿನ ಬೊಂಬೆ. ಶ್ರೀಮಂತನು ನನ್ನ ಪರಿಚಯ ಮಾಡಿಕೊಟ್ಟನು. ನಾನು ನಿರಾತಂಕ ಭಾವದಿಂದ ಕಾಣಬೇಕೆಂದು ಬಯಸಿದೆನು; ಆದರೆ ನಾನು ಎಷ್ಟು ಉದಾಸೀನ ಭಾವವನ್ನು ತಳೆಯಲು ಪ್ರಯತ್ನಿಸಿದೆನೋ ಅಷ್ಟೂ ಅಷ್ಟು ಪೇಚಾಟಕ್ಕೂ ಸಿಲುಕಿದೆ. ನಾನು ಮನಸ್ಸಮಾಧಾನವನ್ನು ಹೊಂದಿ ಅಪರಿಚಯಸ್ಥರೊಂದಿಗೆ ಹೊಂದಿಕೊಳ್ಳಲು ಅವಕಾಶ ಕಲ್ಪಿಸುವ ಸಲುವಾಗಿ, ಹೆಚ್ಚಿನ ಉಪಚಾರವಿಲ್ಲದೆ ನನ್ನನ್ನು ಒಳ್ಳೆಯ ನೆರೆಯವನೆಂದು ಪರಿಗಣಿಸುತ್ತ ತಮ್ಮ ತಮ್ಮಲ್ಲಿಯೇ ಮಾತಾಡಿಕೊಳ್ಳತೊಡಗಿದರು. ಈ ನಡುವೆ ನಾನು ಪುಸ್ತಕಗಳನ್ನೂ ಚಿತ್ರಪಟಗಳನ್ನೂ ನೋಡುತ್ತ ಅತ್ತಿಂದಿತ್ತ ನಡೆದಾಡತೊಡಗಿದೆ. ನನಗೆ ಚಿತ್ರಗಳ ವಿಚಾರ ಹೆಚ್ಚಾಗಿ ಏನೂ ತಿಳಿಯದು; ಆದರೆ ಅಲ್ಲಿದ್ದ ಒಂದು ಚಿತ್ರ ಮಾತ್ರ ನನ್ನ ಗಮನವನ್ನು ಸೆಳೆಯಿತು. ಅದು ಒಂದು ಸ್ವಿಸ್ ಭೂ ದೃಶ್ಯ; ನನ್ನ ಗಮನವನ್ನು ಸೆಳೆಯಿತು. ನನ್ನ ಗಮನವನ್ನು ಸೆಳೆದದ್ದು ಆ ಚಿತ್ರಕ್ಕಿಂತ ಹೆಚ್ಚಾಗಿ ಅದರಲ್ಲಿ ಸರಿಯಾಗಿ ಒಂದರ ಮೇಲೊಂದು ಇದ್ದ ಎರಡು ಗುಂಡಿನೇಟಿನ ರಂಧ್ರಗಳು. ನಾನು ಶ್ರೀಮಂತರ ಕಡೆಗೆ ತಿರುಗಿ–

"ಅದು ಭರ್ಜರಿಯಾದ ಗುಂಡಿನೇಟು" ಎಂದೆ.

"ಹೌದು, ಒಳ್ಳೆ ಅಪೂರ್ವವಾದ ಗುಂಡಿನೇಟು. ನೀವು ಚೆನ್ನಾಗಿ ಗುಂಡು ಹಾರಿಸಬಲ್ಲಿರೋ?" ಎಂದು ಕೇಳಿದ ಆತ.

ಮಾತು ನನ್ನ ಹೃದಯಕ್ಕೆ ಹತ್ತಿರವಾದ ವಿಷಯದ ಕಡೆಗೆ ಹೊರಳಿತೆಂದು ನನಗೆ ಸಂತೋಷವಾಯಿತು; ನಾನು ಹೀಗೆ ಉತ್ತರ ಕೊಟ್ಟೆ;

"ಭೇಷಾಗಿ! ಮೂವತ್ತು ಹೆಜ್ಜೆ ದೂರದಲ್ಲಿ ಇರುವ ಇಸ್ಪೀಟೆಲೆಯ ಗುರಿ ತಪ್ಪುವುದಿಲ್ಲ–ಅಂದರೆ ಮಾತ್ರ, ನನಗೆ ಪಳಕೆಯಾದ ಪಿಸ್ತೂಲುಗಳಾಗಬೇಕಷ್ಟೆ."

"ನಿಜವಾಗಿ?" ಎಂದು ತುಂಬ ಗಮನಕೊಟ್ಟು ಕೇಳಿದಳು ಶ್ರೀಮಂತೆ: "ಅಣ್ಣಾ, ಮೂವತ್ತು ಹೆಜ್ಜೆಗಳಾಚೆ ಇರುವ ಇಸ್ಪೀಟೆಲೆಯನ್ನು ನೀನು ಹೊಡೆಯಬಲ್ಲೆಯಾ?"

ಹೇಗೆ ನನ್ನ ಮೇಲೆ ಸೇಡು ತೀರಿಸಿಕೊಂಡನೆಂಬುದನ್ನು ಇವರು ಕೇಳಿ ತಿಳಿಯಲಿ" ಎಂದು ಹೇಳಿ, ಶ್ರೀಮಂತನು ನನಗಾಗಿ ಒಂದು ಕುರ್ಚಿಯನ್ನು ಎಳೆದಿಟ್ಟನು. ನಾನು ಅವನ ಬಾಯಿಂದ ಈ ಮುಂದಿನ ಕಥನವನ್ನು ಅತ್ಯಂತ ಉತ್ಸಾಹಪೂರ್ಣ ಕುತೂಹಲದಿಂದ ಆಲಿಸಿದೆ:

"ಐದು ವರ್ಷಗಳ ಕೆಳಗೆ ನನಗೆ ಮದುವೆಯಾಯಿತು. ದಾಂಪತ್ಯದ ಮೊದಲ ಮಧುಮಾಸವನ್ನು ಈ ಹಳ್ಳಿಯಲ್ಲಿ ಕಳೆದೆ. ಈ ಮನೆ ನನ್ನ ಜೀವನದ ಅತ್ಯಂತ ಸುಖದ ಕ್ಷಣಗಳನ್ನು ಒದಗಿಸಿದೆ; ಅಂತೆಯೇ, ಅತ್ಯಂತ ದುಃಖದ ನೆನಪುಗಳಲ್ಲಿ ಒಂದಕ್ಕೂ ಈ ಮನೆಯೇ ಕಾರಣ.

"ಒಂದು ಸಂಜೆ ಕುದುರೆ ಸವಾರಿಗಾಗಿ ನಾವು ಹೊರ ಹೊರಟಿದ್ದೆವು. ನನ್ನ ಹೆಂಡತಿಯ ಕುದುರೆ ಮೊಂಡುಬಿದ್ದಿತು. ಅವಳು ದಿಗಿಲುಗೊಂಡು, ಲಗಾಮುಗಳನ್ನು ನನ್ನ ಕೈಗಿತ್ತು ನಡೆದುಕೊಂಡು ಮನೆಗೆ ಹಿಂದಿರುಗಿದಳು. ನಾನು ಸವಾರಿ ಮಾಡುತ್ತಲೇ ಸಾಗಿದೆ. ಅಂಗಳದಲ್ಲಿ ಒಂದು ಪ್ರಯಾಣದ ಬಂಡಿ ನಿಂತಿದ್ದುದನ್ನು ಕಂಡೆ. ಒಬ್ಬ ಮನುಷ್ಯ ನನ್ನ ಓದುವ ಕೋಣೆಯಲ್ಲಿ ನನಗಾಗಿ ಕಾಯುತ್ತಿರುವನೆಂದೂ, ನನ್ನೊಡನೆ ಏನೋ ಕೆಲಸವಿದೆಯೆಂದು ಮಾತ್ರ ತಿಳಿಸಿ ತನ್ನ ಹೆಸರನ್ನು ಹೇಳಲು ನಿರಾಕರಿಸಿದನೆಂದೂ ನನಗೆ ತಿಳಿಸಿದರು. ನಾನು ಈ ಕೋಣೆಯನ್ನು ಪ್ರವೇಶಿಸಿದೆ; ಮಬ್ಬುಗತ್ತಲೆಯಲ್ಲಿ ಇದೇ ಸ್ಥಳದಲ್ಲಿ, ಇದೇ ಬೆಂಕಿಗೂಡಿನ ಮುಂದೆ, ಒಬ್ಬನು ನಿಂತಿದ್ದನು; ಆತನ ಮೇಲೆಲ್ಲ ಧೂಳು ಕವಿದಿತ್ತು; ಆತ ಕ್ಷೌರ ಕೂಡ ಮಾಡಿಕೊಂಡಿರಲಿಲ್ಲ. ಆತ ಯಾರಿರಬಹುದೆಂದು ಜ್ಞಾಪಿಸಿಕೊಳ್ಳುತ್ತ ಆತನ ಬಳಿಗೆ ಹೋದೆ. 'ಶ್ರೀಮಂತ ಮಹಾಶಯರೇ, ನಾನು ಯಾರೆಂದು ತಮಗೆ ಗೊತ್ತಿಲ್ಲವೆ?' ಎಂದು ಆತ ಕಂಪಿತ ಸ್ವರದಲ್ಲಿ ಹೇಳಿದ– 'ಸಿಲ್ವಿಯೊ!' ಎಂದು ನಾನು ಗಟ್ಟಿಯಾಗಿ ಹೇಳಿದೆ; ಆಗ ನನ್ನ ಮೈಮೇಲಿನ ನವಿರು ನೆಟ್ಟಗೆ ನಿಂತುವೆಂದು ನಾನು ಒಪ್ಪಿಕೊಳ್ಳಬೇಕು. 'ಹೌದು. ಗುಂಡು ಹಾರಿಸಲು ಈಗ ನನ್ನ ಸರದಿ! ನನ್ನ ಪಿಸ್ತೂಲನ್ನು ಹಾರಿಸಲು ಬಂದಿದ್ದೇನೆ. ನೀವು ಸಿದ್ಧವಾಗಿದ್ದಿರೋ?' ಎಂದನವನು. ಆತನ ಎದೆಯ ಜೇಬಿನಿಂದ ಒಂದು ಪಿಸ್ತೂಲು ಹೊರಚಾಚಿ ಕಾಣುತ್ತಿತ್ತು. ನಾನು ಹನ್ನೆರಡು ಹೆಜ್ಜೆಗಳನ್ನು ಎಣಿಸಿ ಅಳತೆಮಾಡಿ, ಆ ಮೂಲೆಯಲ್ಲಿ ನಿಂತುಕೊಂಡೆ; ನನ್ನ ಹೆಂಡತಿ ಹಿಂದಿರುಗಿ ಇಲ್ಲಿಗೆ ಬರುವಷ್ಟರಲ್ಲಿ ತ್ವರೆಮಾಡಬೇಕೆಂದು ಆತನನ್ನು ಬೇಡಿಕೊಂಡೆ. ದೀಪಗಳು ಬೇಕೆಂದು ಹೇಳಿ ಆತ ತಡಮಾಡಿದ. ಮೋಂಬತ್ತಿಗಳನ್ನು ತರಿಸಿದೆ. ನಾನು ಬಾಗಿಲಿಗೆ ಬೀಗಹಾಕಿ, ಯಾರನ್ನೂ ಒಳಕ್ಕೆ ಬಿಡಕೂಡದೆಂದು ಅಪ್ಪಣೆಯಿತ್ತೆ;

'ಕುಷ್ಕಾ, ಎಲ್ಲಿ ನನ್ನ ಪಿಸ್ತೂಲು!' ಎಂದು ಕೂಗಿಕೊಳ್ಳುತ್ತಿದ್ದನು; ಕುಷ್ಕ ಮದ್ದುಗುಂಡು ತುಂಬಿದ ಅವನ ಪಿಸ್ತೂಲನ್ನು ತಂದುಕೊಡುತ್ತಿದ್ದನು. ಢಮಾರ್ ಎಂದು, ಆ ನೊಣ ಅಪ್ಪಚ್ಚಿಯಾಗಿಬಿಡುತ್ತಿತ್ತು."

"ಅದ್ಭುತವಾಗಿದ್ದೆ! ಅವನ ಹೆಸರು?" ಎಂದು ಶ್ರೀಮಂತ ಬೆರಗಿನಿಂದ ಕೇಳಿದನು.

"ಸಿಲ್ವಿಯೋ, ಶ್ರೀಮಂತ ಮಹಾಶಯರೆ."

"ಸಿಲ್ವಿಯೋ! ಸಿಲ್ವಿಯೋ ನಿನಗೆ ಗೊತ್ತೆ?" ಎಂದು ಶ್ರೀಮಂತ ಜಿಗಿದು ಕೇಳಿದನು.

"ನನಗೆ ಚೆನ್ನಾಗಿ ಗೊತ್ತು, ಮಹಾಶಯಾ. ಆತನೂ ನಾನೂ ಆಪ್ತ ಸ್ನೇಹಿತರು. ನಮ್ಮ ಸೈನ್ಯದಲ್ಲಿ ದಳಕ್ಕೆ ಸೇರಿದವನಂತೆಯೇ ಅವನನ್ನು ಬರಮಾಡಿಕೊಳ್ಳುತ್ತಿದ್ದೆವು. ಆದರೆ ಐದು ವರ್ಷಗಳಿಂದೀಚೆಗೆ ಅವನ ಸುದ್ದಿಯನ್ನೇ ಕಾಣೆ. ಹಾಗಿದ್ದರೆ, ಶ್ರೀಮಂತ ಮಹಾಶಯರಿಗೂ ಆತ ಗೊತ್ತು?"

"ಗೊತ್ತು, ಚೆನ್ನಾಗಿ ಗೊತ್ತು. ಆತ ನಿಮಗೆ ಹೇಳಲೇ ಇಲ್ಲವೆ.... ಆ ಸಂದರ್ಭ ಬಿದ್ದಿರಲಾರದು... ಆದರು, ತನ್ನ ಜೀವನದ ಒಂದು ವಿಶೇಷ ಘಟನೆಯ ಬಗ್ಗೆ ಆತ ನಿಮಗೆ ಏನೂ ಹೇಳಲಿಲ್ಲವೆ?"

"ಅಂದರೆ, ಶ್ರೀಮಂತ ಮಹಾಶಯರ ಮನಸ್ಸಿನಲ್ಲಿರುವುದು, ಒಬ್ಬ ಸೊಗಸುಗಾರ ಯುವಕ ಅವನ ಮುಖದ ಮೇಲೆ ಹೊಡೆದ ಸಂದರ್ಭ ತಾನೆ?"

"ಆ ಸೊಗಸುಗಾರ ಯುವಕನ ಹೆಸರನ್ನು ಆತ ನಿಮಗೆ ಹೇಳಲಿಲ್ಲವೆ?"

"ಇಲ್ಲ ಶ್ರೀಮಂತ ಮಹಾಶಯ, ಆತ ಹೇಳಲಿಲ್ಲ"–ಎಂದು ನಾನು ಹೇಳುತ್ತಿರುವಾಗ ಇದ್ದಕ್ಕಿದ್ದಂತೆಯೇ ಸತ್ಯಸಂಗತಿ ನನ್ನಲ್ಲಿ ಸ್ಫುರಿಸಿತು. "ಹಾ! ಶ್ರೀಮಂತ ಮಹಾಶಯರೆ, ನನ್ನನ್ನು ದಯವಿಟ್ಟು ಕ್ಷಮಿಸಬೇಕು! ಹಾಗೆಂದು ನಾನು ಭಾವಿಸಿರಲಿಲ್ಲ.... ತಾವೇ ಏನು ಆ.....?"

"ಹೌದು, ನಾನೇ, ಗುಂಡಿನೇಟಿನ ರಂಧ್ರಗಳಿರುವ ಆ ಚಿತ್ರಪಟ ನಮ್ಮ ಕೊನೆಯ ಭೇಟಿಯ ಸವಿ ನೆನಪು..." ಎಂದು ಶ್ರೀಮಂತನು ಖಿನ್ನನಾಗಿ ನುಡಿದನು.

"ಹಾ! ಪ್ರಿಯಾ, ಆ ವಿಷಯ ಮಾತಾಡಬೇಡ, ಬೇಡಿಕೊಳ್ಳುತ್ತೇನೆ. ನಿನಗೂ ಗೊತ್ತು, ಅದನ್ನು ಕಂಡರೆ ನನಗೆ ಮಹಾಭೀತಿ...."

"ಹೌದು. ಆದರೆ ಹೇಳಿಬಿಡುತ್ತೇನೆ, ಅದೆಲ್ಲವನ್ನೂ ಹೇಳಿಬಿಡುತ್ತೇನೆ. ಇವರ ಸ್ನೇಹಿತನಿಗೆ ಹೇಗೆ ಅಪಚಾರ ಮಾಡಿದೆನೆಂಬುದು ಇವರಿಗೆ ಗೊತ್ತು. ಸಿಲ್ವಿಯೊ

ಕಾಣುವುದಿಲ್ಲವೆ? ನೀನು ಹೇಗಾಗಿ ಬಿಟ್ಟಿದೀಯೆ! ಒಳಕ್ಕೆ ಹೋಗಿ ಒಂದು ಲೋಟ ನಿರು ಕುಡಿದು ಮತ್ತೆ ನಮ್ಮ ಬಳಿಗೆ ಬಾ. ನನ್ನ ಹಳೆಯ ಮಿತ್ರರು, ಜೊತೆಗಾರರು, ಇವರ ಪರಿಚಯ ಮಾಡಿಕೊಡಬೇಕು ನಿನಗೆ.'–ಮಾಶಾ ನನ್ನನ್ನು ಇನ್ನೂ ನಂಬಲಿಲ್ಲ. ಅವಳು ಭಯಂಕರನಾಗಿ ಕಾಣುತ್ತಿದ್ದ ಸಿಲ್ವಿಯೋವಿನ ಕಡೆ ತಿರುಗಿ, 'ನನ್ನ ಪತಿ ಹೇಳುತ್ತಿರುವುದು ನಿಜವೆ, ಹೇಳಿ? ನೀವಿಬ್ಬರೂ ನಿಜವಾಗಿ ವಿನೋದವಾಡುತ್ತಿರುವಿರಾ?' ಎಂದು ಕೇಳಿದಳು. ಅದಕ್ಕೆ ಸಿಲ್ವಿಯೋ, 'ತಾಯೀ, ಅವರು ಯಾವಾಗಲು ವಿನೋದವಾಡುತ್ತಾರೆ. ಒಮ್ಮೆ ವಿನೋದಕ್ಕೆಂದು ನನ್ನ ಮುಖದಮೇಲೆ ಬಾರಿಸಿದರು. ವಿನೋದಕ್ಕೆಂದು ನನ್ನ ಟೋಪಿಯನ್ನು ಕೊರೆದುಕೊಂಡು ಹೋಗುವಂತೆ ಗುಂಡು ಹೊಡೆದರು. ಇದೇ ತಾನೆ ವಿನೋದಕ್ಕೆಂದೇ ಗುರಿತಪ್ಪಿದರು. ಈಗ ನಾನೂ ಒಂದು ವಿನೋದ ಮಾಡಬಯಸುತ್ತೇನೆ....' ಎಂದನು. ಈ ಮಾತುಗಳನ್ನಾಡಿ, ನನ್ನ ಕಡೆಗೆ ಗುರಿಯಿಟ್ಟಂತೆ ಮಾಡಿದನು–ಅವಳ ಎದುರಿಗೆ! ಆಗ ಮಾಶಾ ಅವನ ಕಾಲಮೇಲೆ ಕೆಡೆದಳು. 'ನಾಚಿಕೆಯಾಗುವುದಿಲ್ಲವೆ ಮಾಶಾ, ಮೇಲೇಳು' ಎಂದು ನಾನು ಕೆರಳಿ ಕೂಗಿಟ್ಟೆ. 'ಇನ್ನು ನೀವು ನಿರ್ಭಾಗ್ಯ ಸ್ತ್ರೀಯೊಬ್ಬಳ ಮುಂದೆ ಅಣಕವಾಡುವುದನ್ನು ನಿಲ್ಲಿಸುವಿರಾ? ಗುಂಡು ಹಾರಿಸಲು ನಿಮಗೆ ಇಷ್ಟವಿದೆಯೇ, ಅಥವಾ ಇಲ್ಲವೆ?' ಎಂದೆ. ಅದಕ್ಕೆ ಸಿಲ್ವಿಯೊ, 'ನನಗೆ ಗುಂಡು ಹಾರಿಸಲು ಇಷ್ಟವಿಲ್ಲ. ದ್ವಂದ್ವ ಯುದ್ಧ ಕಾದು ಗೆದ್ದಷ್ಟೆ ನನಗೆ ಸಮಾಧಾನವಾಗಿದೆ. ನೀವು ಗಾಬರಿಗೊಂಡು ತಳಮಳಪಟ್ಟಿದ್ದನ್ನು ಕಂಡಾಯಿತು. ನನಗೆ ನೀವು ಗುಂಡು ಹೊಡೆಯುವಂತೆ ಮಾಡಿಯಾಯಿತು. ನನಗಿಷ್ಟು ಸಾಕು. ನನ್ನ ನೆನಪು ನಿಮಗೆ ಇರುತ್ತದೆ. ಇನ್ನು ನೀವಾಯಿತು, ನಿಮ್ಮ ಆತ್ಮಸಾಕ್ಷಿಯಾಯಿತು' ಎಂದು ಹೇಳಿ, ಹೊರಡುವುದರಲ್ಲಿದ್ದವನು ಬಾಗಿಲಿಗೆ ಅಡ್ಡನಾಗಿ ನಿಂತು, ನಾನು ಹೊಡೆದಿದ್ದ ಚಿತ್ರಪಟದ ಕಡೆಗೆ ಕಣ್ಣು ಹಾಯಿಸಿದನು; ಬಳಿಕ, ಬಹುಮಟ್ಟಿಗೆ ಗುರಿತೆಗೆದುಕೊಳ್ಳದೆಯೇ ಆ ಚಿತ್ರಪಟಕ್ಕೆ ಗುಂಡುಹಾರಿಸಿ ಕಣ್ಮರೆಯಾದನು. ನನ್ನ ಹೆಂಡತಿ ಪ್ರಜ್ಞೆ ತಪ್ಪಿ ಬಿದ್ದಿದ್ದಳು. ನನ್ನ ಸೇವಕರು ಅವನನ್ನು ಒಂದೇ ಸಮನೆ ದಂಗುಬಡಿದು ನೋಡುತ್ತಿದ್ದರು; ಅವನನ್ನು ತಡೆಯಲು ಅವರಿಗೆ ಧೈರ್ಯವಿರಲಿಲ್ಲ. ಅವನು ಮನೆಯ ಮುಂದಿನ ಮುಖ ಮಂಟಪಕ್ಕೆ ಹೋಗಿ, ತನ್ನ ಗಾಡಿಯವನನ್ನು ಕರೆದು, ಏನು ನಡಿಯಿತೆಂಬುದನ್ನು ನಾನು ಅರಿವಿಗೆ ತಂದುಕೊಳ್ಳುವ ಮೊದಲೇ ಹೊರಟುಹೋಗಿದ್ದನು."

ಶ್ರೀಮಂತನು ಇನ್ನು ಹೆಚ್ಚಿಗೆ ಏನನ್ನೂ ಹೇಳಲಿಲ್ಲ. ನನ್ನ ಮೇಲೆ ಅಪೂರ್ವ ಪ್ರಭಾವ ಮುದ್ರೆಯನ್ನು ಒತ್ತಿದ್ದ ಪ್ರಾರಂಭವುಳ್ಳ ಕಥೆಯ ಅಂತ್ಯವನ್ನು ನಾನು ಕಂಡುಕೊಂಡದ್ದು ಹೀಗೆ. ಅದರ ನಾಯಕನನ್ನು ನಾನು ಮತ್ತೆ ಸಂಧಿಸಲಿಲ್ಲ.

ಗುಂಡು ಹಾರಿಸಬೇಕೆಂದು ಮತ್ತೊಂದು ಸಲ ಆತನನ್ನು ಕೇಳಿಕೊಂಡೆ. ಆತ ಪಿಸ್ತೂಲನ್ನು ಹೊರಸೆಳೆದು, ಗುರಿಯಿಟ್ಟನು. ನಾನು ಕ್ಷಣಗಳನ್ನು ಎಣಿಸಿದೆ. . . ಅವಳ ಯೋಚನೆಯಾಯಿತು. . . ಒಂದು ನಿಮಿಷಕಾಲದ ಭಯಂಕರ ಕುತೂಹಲದ ನಿರೀಕ್ಷೆ ಕಳೆಯಿತು. ಸಿಲ್ವಿಯೋ ತನ್ನ ಕೈಯನ್ನು ಕೆಳಕ್ಕೆ ಜೋಲುಬಿಟ್ಟ.

"ನನಗೆ ಒಂದೇ ವ್ಯಥೆ: ನನ್ನ ಪಿಸ್ತೂಲಿಗೆ ಚರೆ ತುಂಬಿಲ್ಲ! ಈ ಗುಂಡುಗಳು ಬಹುಭಾರ. ಏನು ಮಾಡಿದರೂ ಇದೊಂದು ಕೊಲೆಗೆಲಸವಾಗಿ ತೋರುತ್ತಿದೆಯೇ ಹೊರತು ದ್ವಂದ್ವಯುದ್ಧದಂತೆ ನನಗೆ ತೋರುತ್ತಿಲ್ಲ. ನಿಶ್ಶಸ್ತ್ರನಾದವನ ಮೇಲೆ ಗುರಿಯಿಡುವುದು ನನಗೆ ಅಭ್ಯಾಸವಿಲ್ಲ. ಮತ್ತೆ ಮೊದಲಿಂದ ಪ್ರಾರಂಭಮಾಡೋಣ– ಯಾರು ಮೊದಲು ಗುಂಡುಹಾರಿಸಬೇಕೋ ಚೀಟಿ ಎತ್ತಿ ನಿರ್ಧರಿಸೋಣ' ಎಂದು ಆತ ಹೇಳಿದ.

ನನ್ನ ತಲೆ ಗಿರ್ರೆಂದಿತು. . . ನನಗೆ ನೆನಪಿರುವ ಮಟ್ಟಿಗೆ, ಅದಕ್ಕೆ ನಾನು ಒಪ್ಪಿಕೊಳ್ಳಲಿಲ್ಲ. . . ಕಡೆಗೆ, ಇನ್ನೊಂದು ಪಿಸ್ತೂಲಿಗೆ ಮದ್ದುಗುಂಡು ತುಂಬಿದೆವು; ಎರಡು ಚೀಟಿಗಳನ್ನು ತಿರುಚಿದೆವು; ನಾನು ಹಿಂದೆ ಹೊಡೆದು ತೂತು ಮಾಡಿದ್ದ ತನ್ನ ಟೋಪಿಯೊಳಕ್ಕೆ ಅವನು ಆ ಚೀಟಿಗಳನ್ನು ಹಾಕಿದನು. ನಾನು ಮತ್ತೆ ಅದೃಷ್ಟ ಸಂಖ್ಯೆಯನ್ನು ಎತ್ತಿದೆ. 'ಶ್ರೀಮಂತ ಮಹಾಶಯರೇ, ನಿಮ್ಮದು ಸೈತಾನನ ಅದೃಷ್ಟ' ಎಂದು ಮುಗುಳುನಗೆಯೊಡನೆ ಹೇಳಿದ; ಆ ನಗೆಯನ್ನು ನಾನು ಎಂದಿಗೂ ಮರೆಯಲಾರೆ. ನನಗೆ ಏನು ಬಂತೋ, ನನ್ನನ್ನು ಹಾಗೆ ಮಾಡಗೊಡುವಂತೆ ಅದು ಹೇಗೆ ಅವನಿಗೆ ಅವಕಾಶ ಕೊಟ್ಟೆನೋ ಒಂದೂ ನನಗೆ ಅರ್ಥವಾಗುವುದಿಲ್ಲ. ಅಂತೂ ನಾನು ಗುಂಡುಹಾರಿಸಿದೆ; ಆ ಚಿತ್ರಪಟಕ್ಕೆ ಹೊಡೆದ." (ಗುಂಡಿನೇಟಿನ ರಂಧ್ರಗಳಿದ್ದ ಆ ಚಿತ್ರಪಟದ ಕಡೆ ಶ್ರೀಮಂತನು ಬೆರಳು ತೋರಿಸಿದನು. ಆತನ ಕೆನ್ನೆಗಳು ಕೆಂಪಡರಿದ್ದುವು; ಶ್ರೀಮಂತೆ ತನ್ನ ಶಾಲಿಗಿಂತ ಬೆಳ್ಳಗಾಗಿದ್ದಳು; ಒಂದು ಉದ್ಗಾರ ತೆಗೆಯದೆ ಇರಲು ನನ್ನಿಂದ ಆಗಲಿಲ್ಲ.)

ಶ್ರೀಮಂತನು ಮುಂದುವರಿಸಿದನು: "ನಾನು ಗುಂಡು ಹಾರಿಸಿದೆ. ದೇವರ ಕೃಪೆಯಿಂದ ಗುರಿತಪ್ಪಿತು. ಆಗ ಸಿಲ್ವಿಯೋ.... ಆ ಕ್ಷಣದಲ್ಲಿ ಅವನು ಹೇಗೆ ಭಯಂಕರವಾಗಿ ಕಾಣುತ್ತಿದ್ದ!... ನನ್ನ ಕಡೆ ಗುರಿಯಿಡತೊಡಗಿದ. ತಟ್ಟನೆ ಬಾಗಿಲು ತೆರೆಯಿತು; ಮಾಶಾ ಧಾವಿಸಿ ಬಂದು, ಕಿರಿಚುತ್ತ ನನ್ನ ಹೆಗಲ ಮೇಲೆ ಜೋತುಬಿದ್ದಳು. ಅವಳನ್ನು ಕಂಡು, ನನ್ನ ಚಿತ್ತ ಸ್ವಾಸ್ಥ್ಯ ಮರಳಿತು. ನಾನು ಅವಳಿಗೆ ಹೇಳಿದೆ: 'ಪ್ರಿಯೆ, ನಾವು ಸರಸವಾಡುತ್ತಿದೇವೆ ಎನ್ನುವುದು ನಿನಗೆ

## ೨. ಹಿಮಮಾರುತ
(Blizzard)

ತಮ್ಮ ಗೊರಸಿನ ಕೆಳಗೆ ಹಿಮವ ತುಳಿಯುತ್ತ
ಕುದುರೆಗಳು ಧಾವಿಸಿವೆ ಒರಟು ಭೂಮಿಯಮೇಲೆ....
ಆಗ ನೋಡಲ್ಲಿ! ನಿರ್ಜನದೆಡೆಯ ನಡುವೆ
ದೇವಮಂದಿರವೊಂದೆ ಗೋಚರಿಸಿತು
..............................................................
ತಟ್ಟನೆಯೆ ಮುಸುಕಿತೆಲ್ಲವು ಹಿಮದ ಗಾಳಿ,
ಹಿಮಬೀಳುತಿಹುದು ಸುಳಿಸುಳಿಯಾಗಿ ಹಳುಕಾಗಿ;
ಕಟ್ಟುಕಥೆಯಾ ಕಾಗೆ ಸಿಳ್ಳೆನುವ ರೆಕ್ಕೆಯಿಂ–
ದೆರುಗುತಿದೆ ನೆಗೆದೋಡುತಿಹ ಜಾರುಬಂಡಿ ಮೇಲೆ:
ಅದರ ಕಣಿನುಡಿವ ಕೂಗೊಳ್ಳಿತೇನಲ್ಲ!
ಧಾವಿಸುತ್ತಿಹ ಕುದುರೆ ದೂರಮಬ್ಬನು ತೂರಿ
ನೋಡುತಿವೆ ಕಂಗಳಿಗೆ ಬೇನೆ ಬರುವವೊಲು,
ಕೊರಳ ಕೂದಲು ಭಯದೆ ನಿಮಿರಿ ನಿಂತಿರಲು.

–ರುಕೊವ್ಸ್ಕಿ*

* ವ್ಯಾಸಿಲಿ ಜುಕೊವ್ಸ್ಕಿ (೧೭೮೩–೧೮೫೨) ಎಂಬ ರಷ್ಯನ್ ಕವಿಯ ನಾಡು ಪದದಿಂದ.

ಅಲೆಕ್ಸ್ಯಾಂಡರ್ ಇಪ್ಸಿಲಾಂಟಿಯ* ಪ್ರತಿಭಟನೆಯ ಕಾಲದಲ್ಲಿ ಅವನು ಒಂದು ಸೈನ್ಯದ ತುಕಡಿಯ ನಾಯಕನಾಗಿದ್ದ, ಸ್ಕುಲ್ಯಾನಿ ಕದನದಲ್ಲಿ ಮಡಿದ ಎಂದು ಹೇಳುತ್ತಾರೆ.

೧೮೧೧ನೆಯ ಇಸವಿಯ ಕಡೆಯ ಭಾಗ ನಮ್ಮ ಇತಿಹಾಸದಲ್ಲಿ ಮರೆಯಲಾಗದ ಕಾಲ; ಆಗ ಮಾನ್ಯನಾದ ಗಾವ್ರಿಲ ಗಾವ್ರಿಲೋವಿಚ್ ಆರ್. ಎಂಬಾತನು ತನ್ನ ಆಸ್ತಿಯಿದ್ದ ಗ್ರಾಮ ನೆನರಾಡೋವೊ ಎಂಬಲ್ಲಿ ವಾಸಿಸುತ್ತಿದ್ದನು; ಆ ಪ್ರಾಂತದ ಸುತ್ತಮುತ್ತ ಆತ ತನ್ನ ಆತಿಥ್ಯ ಔದಾರ್ಯಗಳಿಗೂ ದಯಾಪರತೆಗೂ ಹೆಸರಾಗಿದ್ದನು. ತಿಂದು, ಕುಡಿದು, ಆತನ ಹೆಂಡತಿಯೊಂದಿಗೆ ಐದು–ಕೊಪೆಕ್* ನಾಣ್ಯದ ಪಣಕಟ್ಟುವ 'ಬೋಸ್ಟನ್'+ ಆಡುವುದಕ್ಕೆ ನೆರೆಹೊರೆಯವರು ಆತನ ಮನೆಗೆ ನಿರಂತರವಾಗಿ ಭೇಟಿಕೊಡುತ್ತಿದರು; ಹದಿನೇಳರ ಹರೆಯದ, ತೆಳ್ಳಗೆ ಬಿಳಚಿಕೊಂಡಿದ್ದ ಅವರ ಮಗಳು, ಕನ್ಯೆ ಮಾರ್ಯ ಗಾವ್ರಿಲೋವ್ನಳನ್ನು ನೋಡಿ ತಣಿಯಲು ಕೆಲವರು ಬರುತ್ತಿದ್ದರು. ಎಲ್ಲರೂ ಅವಳನ್ನು ಒಳ್ಳೆಯ ಜೋಡಿಯೆಂದು ಭಾವಿಸಿದ್ದರು; ತಮಗೋ ಇಲ್ಲವೆ ತಮ್ಮ ಮಕ್ಕಳಿಗೋ ಅವಳನ್ನು ಪಡೆಯುವ ಆಸೆಯನ್ನೂ ಅನೇಕರು ಇಟ್ಟುಕೊಂಡಿದ್ದರು.

ಮಾರ್ಯ ಗ್ರಾವಿಲೋವ್ನ ಫ್ರೆಂಚ್ ಕಾದಂಬರಿಗಳನ್ನು ಓದಿ ಬೆಳೆದವಳು; ಅದರ ಫಲವಾಗಿ ಅವಳು ಪ್ರೇಮದಲ್ಲಿ ಮುಳುಗಿದನು. ರಜ ಪಡೆದುಕೊಂಡು, ತನ್ನ ಪೂರ್ವಿಕರ ಹಳ್ಳಿಯಲ್ಲಿ ನೆಲಸಿದ್ದ ವಿವರ್ಣ ಮುಖದ ಬಾವುಟ–ಸಿಪಾಯಿಯೊಬ್ಬ ಅವಳ ಬಯಕೆಯ ಗುರಿಯಾಗಿದ್ದ. ಆ ತರುಣನೂ ಸಹ ಅವಳುದ್ದಕ್ಕೆ ಸರಿಸಮನಾದ ಪ್ರೇಮ ಜ್ವಾಲೆಯಿಂದ ಧಗ ಧಗಿಸುತ್ತಿದ್ದ ಎಂದು ಬೇರೆ ಹೇಳಲೇಬೇಕಾಗಿಲ್ಲ. ಇವರಿಬ್ಬರು ಈ ಪರಸ್ಪರ ಒಳವನ್ನು ಗಮನಿಸಿದ ಹುಡುಗಿಯ ತಾಯಿತಂದೆಗಳು ಅವನನ್ನು ನೆನೆಯಲೂ ಕೂಡದೆಂದು ಅವಳಿಗೆ ತಡೆಹಾಕಿದರು; ಮತ್ತು, ಅವನೊಬ್ಬ ಅಧಿಕಾರನಿವೃತ್ತ ನ್ಯಾಯವಿಚಾರಕನಾಗಿದ್ದರೆ ಹೇಗೋ ಹಾಗೆ ಅವನನ್ನು ಅನಾದರದಿಂದ ಕಾಣುತ್ತಿದ್ದರು.

ನಮ್ಮ ಈ ಪ್ರಣಯಿಗಳು ಪತ್ರವ್ಯವಹಾರ ನಡೆಸುತ್ತಿದ್ದರು; ಒಂದು ನಿರ್ಜನವಾದ ಪೈನ್‌ಮರಗಳ ತೋಪಿನಲ್ಲೋ ಪ್ರಾಚೀನವಾದ ಆರಾಧನ ಮಂದಿರದಲ್ಲೋ ಪ್ರತಿದಿನವೂ ಸಂಧಿಸುತ್ತಿದ್ದರು. ಅಲ್ಲಿ ಅವರು ತಮ್ಮ ಅಮರಪ್ರೇಮದ ಪ್ರತಿಜ್ಞೆ ಕೈಗೊಳ್ಳುತ್ತಿದ್ದರು, ತಮ್ಮ ಶೋಚನೀಯ ಸ್ಥಿತಿಗೆ ಹಲುಬುತ್ತಿದ್ದರು, ಬಗೆಬಗೆಯ ಹಂಚಿಕೆ ಹಾಕುತ್ತಿದ್ದರು. ಆ ಬಗೆಯ ಪತ್ರವ್ಯವಹಾರದ

* ಕೊಪೆಕ್=ಒಂದು ರಷ್ಯದ ನಾಣ್ಯ, +ಬೋಸ್ಟನ್=ಒಂದು ಬಗೆಯ ಇಸ್ಪೀಟಾಟ.

ಒಬ್ಬಳು ಭಾವಾತಿರೇಕ ಸ್ವಭಾವದ ತರುಣಿ ಗೆಳತಿಗೆ ಒಂದು ದೀರ್ಘಪತ್ರವನ್ನು ರಚಿಸಿದಳು, ಮತ್ತೊಂದು ತನ್ನ ತಾಯಿತಂದೆಗೆ ಬರೆದಿಟ್ಟಳು. ಆ ಪತ್ರದಲ್ಲಿ ಅವಳು ತನ್ನ ಈ ಕಾರ್ಯಕ್ಕೆ ಪ್ರಣಯಾವೇಶದ ದುರ್ದಮ್ಯ ಶಕ್ತಿಯೇ ಕಾರಣವೆಂದು ತಿಳಿಸಿ, ತನ್ನ ನೆಚ್ಚಿನ ತಾಯಿತಂದೆಗಳ ಅಡಿಗಳ ಮೇಲೆ ಬೀಳುವ ಅವಕಾಶದೊರೆತದಂದು ಅದು ತನ್ನ ಜೀವಮಾನದ ಅತ್ಯಂತ ಸುಖದ ಕ್ಷಣವೆಂದು ಭಾವಿಸುವುದಾಗಿ ಸಾರಿಹೇಳಿ ಪತ್ರವನ್ನು ಮುಗಿಸಿ, ಅವರನ್ನು ಮನಕರಗಿಸುವ ಮಾತುಗಳಲ್ಲಿ ಬೀಳ್ಕೊಂಡಿದ್ದಳು. ಒಂದು ಸಂದರ್ಭೋಚಿತ ವಾಕ್ಯದ ಮೇಲೆ ಎರಡು ದಗ್ಧ ಹೃದಯಗಳ ಚಿತ್ರವುಳ್ಳ ಮುದ್ರೆಯಿಂದ ಆ ಎರಡು ಪತ್ರಗಳಿಗೂ ಮುದ್ರೆಹಾಕಿ, ಬೆಳಗಾಗುವುದಕ್ಕೆ ಸ್ವಲ್ಪ ಮುಂಚೆ ತನ್ನ ಹಾಸಿಗೆಯ ಮೇಲೆ ಉರುಳಿಕೊಂಡು, ಹಾಗೆಯೇ ಒಂದು ಹೂನಿದ್ದೆಯಲ್ಲಿ ಮುಳುಗಿದಳು; ಆದರೆ ಅದರಲ್ಲಿ ಕೂಡ ಪ್ರತಿ ಕೆಲನಿಮಿಷಕ್ಕೊಮ್ಮೆ ಭೀಕರ ಸ್ವಪ್ನಗಳಿಂದ ಎಚ್ಚರಗೊಳ್ಳುತ್ತಿದ್ದಳು. ಒಂದು ಸಲ, ತಾನು ಚರ್ಚಿಗೆ ಹೋಗಬೇಕೆಂದು ಇನ್ನೇನು ಜಾರುಬಂಡಿಯನ್ನು ಹತ್ತುತ್ತಿರುವ ಕ್ಷಣದಲ್ಲಿಯೇ ತನ್ನ ತಂದೆ ಬಂದು ತಡೆದು ನಿಲ್ಲಿಸಿ, ತನ್ನನ್ನು ಹಿಮದ ಮೇಲೆ ಮರಣಸಂಕಟವಾಗುವಷ್ಟು ವೇಗದಿಂದ ಎಳೆದೊಯ್ದು ಒಂದು ತಮೋಮಯವಾದ ಪಾತಾಳಕಲ್ಪ ಕುಹರಕ್ಕೆ ಬಿಸಾಡಿದುದಾಗಿಯೂ ತನ್ನ ಹೃದಯ ನಿಂತಂತಾಗಿ ತಾನು ತಳತಳಕ್ಕೆ ಮುಳುಗುತ್ತಿದ್ದುದಾಗಿಯೂ ಕನಸುಕಂಡಳು; ಮತ್ತೊಮ್ಮೆ ವ್ಲ್ಯಾಡಿಮಿರ್ ಹುಲ್ಲು ಹಾಸಿನಮೇಲೆ ರಕ್ತಬಸಿಯುತ್ತ ವಿವರ್ಣನಾಗಿ ಬಿದ್ದಿರುವುದನ್ನು ತಾನು ನೋಡಿದಂತೆ ಕನಸುಕಂಡಳು: ಸಾಯುತ್ತಿದ್ದ ಅವನು ತಮ್ಮ ಮದುವೆಯನ್ನು ತ್ವರೆಗೊಳಿಸುವಂತೆ ಅವಳನ್ನು ಇರಿಯುವ ದನಿಯಲ್ಲಿ ಬೇಡಿಕೊಂಡಿದ್ದನು... ಅವಳ ಬಗೆಗಣ್ಣ ಮುಂದೆ ಒಂದಾದಮೇಲೆ ಒಂದರಂತೆ ಭಯಂಕರವಾದ, ಅವ್ಯವಸ್ಥಿತ ದೃಶ್ಯಗಳು ಹಾದುಹೋದುವು. ಕಡೆಗೆ ಅವಳು ಎಂದಿಗಿಂತ ಹೆಚ್ಚಾಗಿ ಬಿಳಿಚಿಕೊಂಡು, ನಿಜವಾದ ತಲೆನೋವಿನಿಂದ, ಎಚ್ಚತ್ತಳು. ಅವಳ ತಂದೆತಾಯಿ ಅವಳ ಕಳವಳವನ್ನು ಗಮನಿಸಿದರು. "ಏನಾಗಿದೆ, ಮಾಶಾ? ಮೈಗೆ ಸ್ವಸ್ಥವಾಗಿಲ್ಲವೆ, ಮಾಶಾ?"–ಇವೇ ಮೊದಲಾದ ಅವರ ನಿಲುಗಡೆಯಿಲ್ಲದ ಪ್ರಶ್ನೆಗಳು, ಮತ್ತು ಅವರ ಕರುಣಾ ಪೂರ್ಣ ಆತಂಕ ಅವಳ ಹೃದಯಕ್ಕೆ ಪೆಟ್ಟುಕೊಟ್ಟುವು. ಅವರ ಭೀತಿಯನ್ನು ನಿವಾರಿಸಿ, ಉಲ್ಲಾಸದಿಂದಿರುವಂತೆ ಕಾಣಲು ಅವಳು ಪ್ರಯತ್ನಪಟ್ಟಳು; ಆದರೆ ಈ ಪ್ರಯತ್ನದಲ್ಲಿ ಯಶಸ್ವಿಯಾಗಲಿಲ್ಲ. ಸಂಜೆಯಾಯಿತು. ತನ್ನ ಕುಟುಂಬದ ಮಡಿಲಿನಲ್ಲಿ ತಾನು ಕಳೆಯುವ ಕಡೆಯ ದಿನವಿದು ಎಂಬ ಯೋಚನೆ ಬಂದು ಅವಳ ಹೃದಯ ಯಾತನೆಪಟ್ಟಿತು.

ಮತ್ತು ಪ್ರೇಮ ಸಲ್ಲಾಪದ ಪರಿಣಾಮವಾಗಿ ಅವರು (ಸ್ವಾಭಾವಿಕವಾಗಿಯೆ) ಈ ತೀರ್ಮಾನಕ್ಕೆ ಬಂದರು: ನಾವು ಒಬ್ಬರನ್ನೊಬ್ಬರು ಬಿಟ್ಟು ಇರಲಾಗದ್ದರಿಂದ, ಕ್ರೂರಿಗಳಾದ ತಾಯಿತಂದೆ ನಮ್ಮ ಸೌಖ್ಯಕ್ಕೆ ಅಡ್ಡನಿಂತಿರುವುದರಿಂದ, ಅವರ ಒಪ್ಪಿಗೆಯ ಗೊಡವೆಯನ್ನೆ ತ್ಯಜಿಸಬಾರದೇಕೆ?–ಈ ಹಿತಕರವಾದ ಆಲೋಚನೆ ಮೊದಲು ತೋರಿದ್ದು ಆ ಯುವಕನಿಗೆ, ಅದು ರಮ್ಯಭಾವಜೀವಿ ಮಾರ್ಯ ಗಾವ್ರಿಲೋವ್ನಲಿಗೆ ತುಂಬ ಮೆಚ್ಚಿಗೆಯಾಯಿತು ಎಂಬುದನ್ನು ಯಾರಾದರೂ ಸುಲಭವಾಗಿ ಊಹಿಸಬಹುದು.

ಚಳಿಗಾಲ ಬಂದು, ಅವರ ಭೇಟಿಗಳನ್ನು ಕೊನೆಗಾಣಿಸಿತು; ಇದರಿಂದ ಅವರ ಪತ್ರವ್ಯವಹಾರಕ್ಕೆ ಇನ್ನಷ್ಟು ಹುರುಪೇರಿತು. ವ್ಲ್ಯಾಡಿಮಿರ್ ನಿಕೊಲಾಯೆವಿಚ್ ತನ್ನ ನಲ್ಲೆಗೆ ಬರೆದ ಪ್ರತಿಯೊಂದು ಪತ್ರದಲ್ಲಿಯೂ ಅವಳು ತನ್ನವಳಾಗಬೇಕೆಂದೂ, ತನ್ನನ್ನು ರಹಸ್ಯವಾಗಿ ಮದುವೆಯಾಗಿ ಸ್ವಲ್ಪ ಕಾಲ ತನ್ನೊಂದಿಗೆ ಅಜ್ಞಾತವಾಸಮಾಡಬೇಕೆಂದೂ, ಅನಂತರ ತಾವಿಬ್ಬರೂ ಅವಳ ಮಾತಾಪಿತೃಗಳ ಪಾದಗಳ ಮೇಲೆ ಕೆಡೆದರೆ ಪ್ರೇಮಿಗಳಾದ ತಮ್ಮ ಸಾಹಸಮಯವಾದ ಪ್ರೇಮನಿಷ್ಠೆಯನ್ನೂ ಕ್ಲೇಶವನ್ನೂ ಕಂಡು ಅವರ ಹೃದಯ ಕರಗದೆ ಇರಲಾರದೆಂದೂ, ಆಗ ಅವರು ಖಂಡಿತವಾಗಿ–'ಬನ್ನಿ ಮಕ್ಕಳೆ, ತಬ್ಬಿಕೊಳ್ಳುತ್ತೇನೆ ಬನ್ನಿ'–ಎಂದು ಉದ್ಗರಿಸುವರೆಂದೂ ಅವಳನ್ನು ಅಂಗಲಾಚಿ ಬೇಡಿಕೊಳ್ಳುತ್ತಿದ್ದನು.

ಮಾರ್ಯ ಗಾವ್ರಿಲೋವ್ನ ಒಂದು ನಿರ್ಧಾರಕ್ಕೆ ಬರಲು ಬಹಲ ಕಾಲ ತೆಗೆದುಕೊಂಡಳು: ಓಡಿಹೋಗಲು ಹಾಕಿದ ಅಸಂಖ್ಯಾಕ ಯೋಜನೆಗಳು ತಿರಸ್ಕೃತವಾದುವು. ಕಡೆಗೆ ಇದಕ್ಕೆ ಸಮ್ಮತಿಯಿತ್ತಳು: ಮೊದಲೆ ಗೊತ್ತಾದ ದಿನದಂದು ಅವಳು ತಲೆನೋವಿನ ನೆಪಹೇಳಿ, ರಾತ್ರಿ ಊಟದ ಮೇಜಿನ ಬಳಿ ಕಾಣಿಸಿಕೊಳ್ಳದೆ, ತನ್ನ ಮಲಗುವ ಕೋಣೆಯಲ್ಲಿಯೆ ಇರತಕ್ಕದ್ದು; ಅವಳ ಸೇವಕಿಯನ್ನು ಮಾತ್ರ ಈ ರಹಸ್ಯಕ್ಕೆ ಒಳಹಾಕಿಕೊಂಡು, ಇಬ್ಬರು ಬಾಲಿಕೆಯರೂ ಹಿಂಬಾಗಿಲ ಮುಖಾಂತರ ಉದ್ಯಾನಕ್ಕೆ ಹೋಗತಕ್ಕದ್ದು; ಅಲ್ಲಿ ಅವರಿಗಾಗಿ ಕಾದಿರುವ ಜಾರುಬಂಡಿಯಲ್ಲಿ ಕುಳಿತು, ನೆನರಾಡೋವೊವಿನಿಂದ ಷಾಡ್ರಿನೊ ಗ್ರಾಮಕ್ಕೆ ಐದು ವರ್ಸ್ಟ್‌ಗಳ ದೂರ ಪಯಣಮಾಡಿ ಅಲ್ಲಿ ನೇರವಾಗಿ ಚರ್ಚಿಗೆ ಹೋಗತಕ್ಕದ್ದು; ಅಲ್ಲಿ ವ್ಯಾಡಿಮಿರ್ ಅವರಿಗಾಗಿ ಕಾದಿರತಕ್ಕದ್ದು.

ಆ ನಿರ್ಧಾರದ ದಿನಕ್ಕೆ ಮುನ್ನ ಮಾರ್ಯ ಗಾವ್ರಿಲೋವ್ನ ರಾತ್ರಿಯೆಲ್ಲ ನಿದ್ರೆಮಾಡಲಿಲ್ಲ; ಅವಳು ತನ್ನ ಉಡುಪಿನ ಬೀರುವನ್ನೆಲ್ಲಾ ಹುಡುಕಾಡಿಬೇಕಾದ ಬಟ್ಟೆಬರೆ ಮತ್ತು ಉಡುಪುಗಳ ಗಂಟನ್ನು ಸಿದ್ಧಪಡಿಸಿದಳು; ತನ್ನ ಯಾರೋ

ನಮ್ಮ ಕಥಾನಾಯಕಿಯನ್ನು ವಿಧಿಯ ಕರುಣೆಗೂ ಬಂಡಿ ಹೊಡೆಯುವ ಟಿರಷ್ಕನ ಕೈಚಳಕಕ್ಕೂ ಒಪ್ಪಿಸಿ, ಅತ್ತ ನಮ್ಮ ತರುಣ ಪ್ರಣಯಿಯ ಕಡೆ ಸ್ವಲ್ಪ ತಿರುಗೋಣ.

ವ್ಲ್ಯಾಡಿಮಿರ್ ಹಗಲೆಲ್ಲಾ ಆ ಸ್ಥಳದಿಂದ ಈ ಸ್ಥಳಕ್ಕೆ ಗಾಡಿಯಲ್ಲಿ ಓಡಾಡುತ್ತಿದ್ದನು. ಬೆಳಗ್ಗೆ ಅವನು ಷಾಡ್ರಿನೋವಿನ ಪಾದ್ರಿಯನ್ನು ಭೇಟಿ ಮಾಡಿ, ತನ್ನ ಕೋರಿಕೆಯನ್ನು ಸಲ್ಲಿಸುವಂತೆ ಬಹಳ ಕಷ್ಟದಿಂದ ಅವನನ್ನು ಒಪ್ಪಿಸಿದನು; ಬಳಿಕ ನೆರೆಹೊರೆಯ ಜಮೀನುದಾರರಲ್ಲಿ ಸಾಕ್ಷಿಗಳನ್ನು ಹುಡುಕಿಕೊಂಡು ಹೊರಟನು. ಅವನು ಭೇಟಿ ಮಾಡಿದ ಮೊದಲ ವ್ಯಕ್ತಿ ಡ್ರ್ಯಾವಿನ್, ನಲವತ್ತು ವಯಸ್ಸಿನ ನಿವೃತ್ತ ಅಶ್ವಸೈನ್ಯಾಧಿಕಾರಿ; ಆತ ಕೂಡಲೆ ಒಪ್ಪಿದನು; ಈ ಸಾಹಸೋದ್ಯಮ ತನಗೆ ಹಿಂದಿನ ಕಾಲದ ಹಾಗೂ ರಾವುತರ ಕುಚೇಷ್ಟೆಗಳ ನೆನಪು ತರುತ್ತಿದೆಯೆಂದು ಹೇಳಿದನು. ವ್ಲ್ಯಾಡಿಮಿರ್‌ನನ್ನು ತನ್ನೊಂದಿಗೆ ಭೋಜನಕ್ಕೆ ನಿಲ್ಲಬೇಕೆಂದು ಬಲಾತ್ಕಾರ ಮಾಡಿ, ಇನ್ನಿಬ್ಬರು ಸಾಕ್ಷಿಗಳನ್ನು ಹೊಂದಿಸುವುದು ಕಷ್ಟವಾಗದೆಂದು ಆಶ್ವಾಸನೆಯಿತ್ತನು. ವಾಸ್ತವವಾಗಿ, ಭೋಜನಾನಂತರ, ಕುದುರೆ ಚೋದಿಸುವ ಚುಚ್ಚಾಗಲಿ ಧರಿಸಿದ್ದ, ಮೀಸೆ ಬಿಟ್ಟಿದ್ದ ಮೋಜಣಿದಾರ ಷ್ಮಿಟ್ ಕಾಣಿಸಿಕೊಂಡನು. ಅವನ ಜೊತೆ ಜಿಲ್ಲಾ ಪೊಲೀಸ್ ಅಧಿಕಾರಿಯ ಮಗ; ಹದಿನಾರರ ಪ್ರಾಯದ ಹುಡುಗ ಇದ್ದನು; ಅವನು ಅದೇ ತಾನೆ ಸೈನ್ಯದಳವೊಂದಕ್ಕೆ ಸೇರಿಕೊಂಡಿದ್ದನು. ಅವರು ವ್ಲ್ಯಾಡಿಮಿರ್‌ನ ಕೋರಿಕೆಗೆ ಒಪ್ಪಿದ್ದು ಮಾತ್ರವಲ್ಲ, ಅವನಿಗಾಗಿ ತಮ್ಮ ಪ್ರಾಣಗಳನ್ನು ಬೇಕಾದರೂ ಬಲಿಕೊಡಲು ಸಿದ್ಧರಾಗಿರುವುದಾಗಿ ಘೋಷಿಸಿದರು. ವ್ಲ್ಯಾಡಿಮಿರ್ ಅವರನ್ನು ಪ್ರೀತಿಯಿಂದ ಆಲಿಂಗಿಸಿಕೊಂಡು, ಸಿದ್ಧತೆಗಳನ್ನು ಮಾಡಿಕೊಳ್ಳುವುದಕ್ಕಾಗಿ ಮನೆಗೆ ತೆರಳಿದನು.

ಮುಚ್ಚಂಜೆಯ ಮಬ್ಬು ಎಂದೋ ಕವಿದಿತ್ತು. ಅವನು ತನ್ನ ನೆಚ್ಚಿನ ಟೆರೆಷ್ಕನಿಗೆ ಕೊಡಬೇಕಾದ ತಿಳಿವಳಿಕೆಯಿಲ್ಲವನ್ನೂ ಕೊಟ್ಟು ತನ್ನ ಮೂರು ಕುದುರೆ ಸಾರೋಟನ್ನು ಅವನೊಂದಿಗೆ ನೆನರಾಡೋವೋವಿಗೆ ಕಳಿಸಿಕೊಟ್ಟನು. ತನ್ನ ಚಿಕ್ಕ ಒಂಟಿ ಕುದುರೆಯ ಜಾರುಬಂಡಿಯನ್ನು ಕಟ್ಟಿಸಿದ್ಧಗೊಳಿಸುವಂತೆ ಆಜ್ಞೆಯಿತ್ತು, ಅದನ್ನು ತಾನೇ ಷಾಡ್ರಿನೋವಿಗೆ ಹೊಡೆದುಕೊಂಡು ಹೋದನು; ಇನ್ನು ಎರಡು ಗಂಟೆಗಳ ಅವಧಿಯಲ್ಲಿ ಮಾರ್ಯ ಗಾವ್ರಿಲೊವ್ನ ಅಲ್ಲಿಗೆ ಬಂದು ತಲುಪಬೇಕಾಗಿದ್ದಿತು. ರಸ್ತೆ ಅವನಿಗೆ ಪಳಕೆಯಾದದ್ದೆ; ಗಾಡಿಯ ಪ್ರಮಾಣಕ್ಕೆ ಇಪ್ಪತ್ತು ನಿಮಿಷಕ್ಕಿಂತ ಹೆಚ್ಚಿನ ಕಾಲ ಬೇಕಾಗಿರಲಿಲ್ಲ.

ವ್ಲ್ಯಾಡಿಮಿರ್ ಹಳ್ಳಿಯನ್ನು ಹಿಂದುಳಿದು ಬಯಲು ಪ್ರದೇಶವನ್ನು ಹೊಕ್ಕನೋ

ಉಸಿರಾಡುವುದಕ್ಕೂ ಅವಳಿಗೆ ಕಷ್ಟವೆನಿಸಿತು; ತನಗೆ ಪಳಕೆಯಾದ ವ್ಯಕ್ತಿಗಳಿಗೂ ವಸ್ತುಗಳಿಗೂ ಗೋಪ್ಯವಾಗಿ ಕಡೆಯ ಪ್ರಣಾಮ ಸಲ್ಲಿಸಿದಳು. ರಾತ್ರಿಯ ಭೋಜನ ಬಡಿಸಿದರು; ಅವಳ ಹೃದಯ ಜೋರಾಗಿ ಬಡಿದುಕೊಳ್ಳತೊಡಗಿತು. ನಡುಗುವ ದನಿಯಲ್ಲಿ ತನಗೆ ಊಟ ಬೇಕಿಲ್ಲವೆಂದು ಹೇಳಿ, ತನ್ನ ತಾಯಿ ತಂದೆಗೆ ರಾತ್ರಿಯ ಶುಭಾಶಯವನ್ನು ಕೋರಿದಳು. ಅವರು ಎಂದಿನಂತೆ ಅವಳನ್ನು ಮುದ್ದಿಟ್ಟು, ಆಶೀರ್ವದಿಸಿದರು; ಅವಳು ಅತ್ತಳೆಂದೇ ಹೇಳಬೇಕು. ತನ್ನ ಮಲಗುವ ಕೋಣೆಗೆ ಹೋದಳೋ ಇಲ್ಲವೋ, ಒಂದು ಕುರ್ಚಿಯ ಮೇಲೆ ಕುಸಿದು ಕಣ್ಣೀರುಗರೆಯುತೊಡಗಿದಳು. ಸಮಾಧಾನಗೊಂಡು, ಎಂದಿನಂತೆ ಉಲ್ಲಾಸದಿಂದಿರಬೇಕೆಂದು ಅವಳ ಸೇವಕಿ ಅವಳನ್ನು ಬೇಡಿಕೊಂಡಳು. ಎಲ್ಲವೂ ಸಿದ್ಧವಾಗಿತ್ತು. ಇನ್ನು ಅರ್ಧಗಂಟೆಯಾದ ಮೇಲೆ, ತನ್ನ ತಾಯ್ತಂದೆಗಳ ಗೃಹ, ತನ್ನ ಸ್ವಂತ ಕೊಟಡಿ, ತನ್ನ ಶಾಂತವಾದ ಬಾಲಿಕಾವಸ್ಥೆ–ಇವೆಲ್ಲವನ್ನೂ ಬೀಳ್ಕೊಂಡು ಮಾಶಾ ಹೊರಟುಬಿಡಬೇಕಾಗಿತ್ತು. . . ಹೊರಗಡೆ ಹಿಮವರ್ಷ ಭೋರ್ಗರೆಯುತ್ತಿತ್ತು; ಗಾಳಿ ಊಳಿಡುತ್ತಿತ್ತು; ಕಿಟಕಿಯ ಬಾಗಿಲುಗಳು ಅಲ್ಲಾಡುತ್ತ ಕಟಕಟ ಸುತ್ತಿದ್ದುವು; ಅವಳಿಗೆ ಇದೆಲ್ಲ ಒಂದು ಬೆದರಿಕೆಯಂತೆ, ಒಂದು ಶೋಕ ಪೂರ್ಣ ದುಶ್ಶಕುನದಂತೆ ಗೋಚರಿಸಿದುವು. ಬೇಗನೆಯೇ ಮನೆಯೆಲ್ಲ ನಿದ್ದೆಯ ಮುಸುಕುಹೊದೆಯಿತು. ಮಾಶಾ ಹೆಗಲಮೇಲೆ ಶಾಲನ್ನು ಹೊದೆದು, ಬೆಚ್ಚನೆಯ ಮೇಲಂಗಿ ಧರಿಸಿ, ತನ್ನ ಒಡವೆಪೆಟ್ಟಿಗೆಯನ್ನು ತೆಗೆದುಕೊಂಡು, ಹಿಂಬಾಗಿಲಿನಿಂದ ಮನೆಬಿಟ್ಟಳು; ಸೇವಕಿ ಎರಡು ಗಂಟುಮೂಟೆ ಹಿಡಿದು ಅವಳನ್ನು ಹಿಂಬಾಲಿಸಿದಳು. ಅವರು ಉದ್ಯಾನವನ್ನು ಹೊಕ್ಕರು. ಹಿಮವರ್ಷ ತಗ್ಗಿರಲಿಲ್ಲ; ಅಪರಾಧಿಯಾದ ಈ ತರುಣಿಯನ್ನು ತಡೆದುನಿಲ್ಲಿಸಲೋ ಎಂಬಂತೆ ಗಾಳಿ ಅವಳ ಮುಖಕ್ಕೆ ರಪರಪನೆ ಹೊಡೆಯುತ್ತಿತ್ತು. ಉದ್ಯಾನದ ಕೊನೆಮುಟ್ಟಲು ಅವರಿಗೆ ಎಷ್ಟೋ ಪ್ರಯಾಸವಾಯಿತು. ಬೀದಿಯಲ್ಲಿ ಒಂದು ಜಾರುಬಂಡಿ ಅವರಿಗಾಗಿ ಕಾದಿತ್ತು. ಕುದುರೆಗಳು ಚಳಿಯಿಂದ ಕೋರೈಸಿಹೋಗಿ ನಿಂತೆಡೆ ನಿಲ್ಲಲಾರದಾಗಿದ್ದುವು. ವ್ಲ್ಯಾಡಿಮಿರ್‌ನ ಬಂಡಿಹೊಡೆಯುವವನು ಆ ಚುರುಕಿನ ಕುದುರೆಗಳನ್ನು ಅಂಕೆಯಲ್ಲಿಟ್ಟುಕೊಳ್ಳುವ ಪ್ರಯತ್ನದಲ್ಲಿ ಗಾಡಿಯ ಮೂಕಿಗಳ ಮುಂದೆ ಅತ್ತಿಂದಿತ್ತ ಪರೆದಾಡುತ್ತಿದ್ದನು. ಅವನು ತರುಣಿಯನ್ನೂ ಸೇವಕಿಯನ್ನೂ ಕುಳ್ಳಿರಿಸಿ, ಅವರ ಗಂಟುಮೂಟೆಗಳನ್ನೂ ಒಡವೆಯ ಪೆಟ್ಟಿಗೆಯನ್ನೂ ಗಾಡಿಯಲ್ಲಿರಿಸಲು ಸಹಾಯಮಾಡಿದನು; ಅವನು ಕೈಗೆ ಲಗಾಮು ತೆಗೆದುಕೊಂಡ ಕೂಡಲೆ, ಕುದುರೆಗಳು ಒಂದೇ ಮನಸ್ಸಿನಿಂದ ಮುಂದಕ್ಕೆ ಹಾರಿದುವು.

ಕಡೆಗೆ ಒಂದು ಪಕ್ಕದಲ್ಲಿ ಏನೋ ಕಪ್ಪಗೆ ಮಸಕುಮಸಗಿ ಕಾಣಿಸತೊಡಗಿತು. ವ್ಲ್ಯಾಡಿಮಿರ್ ಕುದುರೆಯನ್ನು ಅದರ ಕಡೆಗೆ ತಿರುಗಿಸಿದನು. ಅದನ್ನು ಸಮೀಪಿಸಿದಾಗ, ಅವನ ಮುಂದೆ ಒಂದು ತೋಪು ಕಾಣಿಸಿತು. ದೇವರ ದಯದಿಂದ ಈಗ ತಾನು ಬಹುಮಟ್ಟಿಗೆ ಅಲ್ಲಿಗೇ ಬಂದ ಹಾಗಾಯಿತು ಎಂದುಕೊಂಡನವನು. ಷಾಡ್ರಿನೋ ಇದ್ದದ್ದು ಅದರ ಆಚೆಯ ಕಡೆಗೇ–ಆದ್ದರಿಂದ ಅವನು ತೋಪನ್ನು ಹಾದುಹೋದನು: ತನಗೆ ಪರಿಚಿತವಾದ ರಸ್ತೆಗೆ ಹೋಗುತ್ತೇನೆ. ಇಲ್ಲವೆ ತೋಪನ್ನು ಬಳಸುತ್ತೇನೆ ಎಂದು ಅವನ ನಿರೀಕ್ಷೆ. ಬೇಗನೆಯ ಅವನಿಗೆ ರಸ್ತೆಯೇನೋ ಸಿಕ್ಕಿತು ಅವನು ಈಗ ಮರಗಳ ಮಬ್ಬುಗತ್ತಲೆಯಡಿಯಲ್ಲಿ ಗಾಡಿ ಹೊಡೆದುಕೊಂಡು ಹೋದನು; ಅವುಗಳ ಕೊಂಬೆಗಳೆಲ್ಲ ಚಳಿಗಾಲದ ದೆಸೆಯಿಂದ ಎಲೆಯುದುರಿ ತರಕಲಾಗಿದ್ದುವು; ಇಲ್ಲಿ ಗಾಳಿ ಭೋರ್ಗ್ಗರೆಯುವಂತಿಲ್ಲ; ದಾರಿ ಸಮನಾಗಿತ್ತು; ಕುದುರೆ ಮತ್ತೆ ಚೈತನ್ಯ ಪಡೆಯಿತು; ವ್ಲ್ಯಾಡಿಮಿರ್ ಮತ್ತೆ ಮನಸ್ಸಮಾಧಾನ ಹೊಂದಿದನು.

ಆದರೆ ಅವನು ಮುಂದಮುಂದಕ್ಕೆ ಹೊಡೆದುಕೊಂಡು ಹೋದನು; ಷಾಡ್ರಿನೋ ದೃಗ್ಗೋಚರವಾಗಲೇ ಇಲ್ಲ; ತೋಪಿಗೆ ಕೊನೆಯೇ ಇರಲಿಲ್ಲ. ಈಗ ವ್ಲ್ಯಾಡಿಮಿರ್ ತಾನು ಪರಿಚಯವಿಲ್ಲದ ಕಾಡೊಂದರಲ್ಲಿ ಸಿಕ್ಕಿಬಿದ್ದಿರುವೆನೆಂದು ಅರಿತು ಭಯಭ್ರಾಂತನಾದನು. ನಿರಾಶೆಗೆ ಒಳಗಾಗಿ, ಕುದುರೆಯನ್ನು ಹೊಡೆದನು; ಆ ಬಡಪ್ರಾಣಿ ಕುಕ್ಕೋಟಕ್ಕೆ ಪ್ರಾರಂಭಿಸಿ, ಬೇಗನೆ ಬಳಲಿ, ಹದಿನೈದು ನಿಮಿಷಗಳಾಗುವಷ್ಟರಲ್ಲಿ ಹಜ್ಜೆಯ ಮೇಲೆ ಹಜ್ಜೆಯಿಡತೊಡಗಿತು; ಖಿನ್ನವಾದ ವ್ಲ್ಯಾಡಿಮಿರ್‌ನ ಪ್ರಯತ್ನಗಳೆಲ್ಲ ನಿಷ್ಫಲವಾಗಿದ್ದುವು.

ಕಾಡು ಬರುಬರುತ್ತ ಮೊದಲಿನಷ್ಟು ದಟ್ಟವಾಗಿರಲಿಲ್ಲಿ; ಕಡೆಗೆ ವ್ಲ್ಯಾಡಿಮಿರ್ ಅದರಿಂದ ಹೊರಬಿದ್ದನು; ಆದರೂ ಷಾಡ್ರಿನೋ ಮಾತ್ರ ಇನ್ನೂ ಕಣ್ಣಿಗೆ ಬಿದ್ದಿರಲಿಲ್ಲ. ಬಹುಶಃ ಮಧ್ಯರಾತ್ರಿಯಾಗಿರಬಹುದೆಂದು ಅವನಿಗನ್ನಿಸಿತು. ಬಿರುಗಾಳಿ ನಿಂತಿತು, ಮುಗಿಲು ಚೆದರಿತು. ರಾತ್ರ ಬಹುಮಟ್ಟಿಗೆ ನಿಚ್ಚಳವಾಗಿತ್ತು. ಅನತಿ ದೂರದಲ್ಲಿ ಒಂದು ಸಣ್ಣ ಹಳ್ಳಿಯನ್ನು–ಎಂದರೆ ಕೇವಲ ಕೆಲವು ಹೊಲಮನೆಗಳ ಗುಂಪಲನ್ನು–ಅವನು ಕಾಣಬಹುದಾಗಿತ್ತು. ವ್ಲ್ಯಾಡಿಮಿರ್ ಆದರೆ ಹತ್ತಿರಕ್ಕೆ ಸಾಗಿಹೋದನು. ಸಿಕ್ಕಿದ ಮೊದಲ ಗುಡಿಸಿಲ ಮುಂದೆ ಅವನು ತನ್ನ ಜಾರುಬಂಡಿಯಿಂದ ಹೊರಕ್ಕೆ ಹಾರಿದನು; ಕಿಟಕಿಯ ಹತ್ತಿರಕ್ಕೆ ಓಡಿಹೋಗಿ, ತಟ್ಟಿದನು. ಕೆಲವು ನಿಮಿಷಗಳಲ್ಲಿ ಮರದ ಬಾಗಿಲು ತೆರೆಯಿತು; ಒಬ್ಬ ಮುದುಕನು ತನ್ನ ನರೆತ ಗಡ್ಡವನ್ನು ಹೊರಕ್ಕೆ ಚಾಚಿದನು.

ಇಲ್ಲವೋ, ಅಷ್ಟರಲ್ಲಿ ಗಾಳಿಯೆದ್ದು, ಅವನು ಏನನ್ನೂ ನೋಡಲಾಗದ ಮಟ್ಟಿಗೆ ದಟ್ಟವಾಗಿ ಹಿಮವರ್ಷ ಬೀಳತೊಡಗಿತು. ಒಂದು ನಿಮಿಷದಲ್ಲಿ ರಸ್ತೆಯೆಲ್ಲ ಹಿಮದಿಂದ ಮುಚ್ಚಿಹೋಯಿತು: ಸುತ್ತಮುತ್ತಣ ಪ್ರದೇಶವನ್ನೆಲ್ಲಾ ಮಬ್ಬಾದ ಹಳದಿಯ ಛಾಯೆಯ ಹಿಮದ ಆವರಣವೊಂದು ಮುಸುಕಿತು; ಅದರ ನಡುನಡುವೆ ಬಳಿಯ ಹಿಮದ ಹಳುಕುಗಳು ಸುಟ್ಟರೆ ತಿರುಗುತ್ತಿದ್ದುವು; ಆಕಾಶವೂ ಭೂಮಿಯೂ ಒಂದಾದುವು; ತಾನು ಒಂದು ಹೊಲದ ನಡುವೆ ಇರುವುದಾಗಿ ವ್ಲ್ಯಾಡಿಮಿರ್‌ಗೆ ತಿಳಿದು, ರಸ್ತೆಗೆ ಹಿಂದಿರುಗಲು ಅವನು ವ್ಯರ್ಥ ಪ್ರಯತ್ನ ಮಾಡಿದನು. ಕುದುರೆ ಒಮ್ಮೆ ತಪ್ಪುದಾರಿ ಹಿಡಿದು ಹಿಮರಾಶಿಯ ಮೇಲೆ ನುಗ್ಗುತ್ತ, ಇನ್ನೊಮ್ಮೆ ಒಂದು ಹಳ್ಳಕ್ಕೆ ಉರುಟಿಕೊಳ್ಳುತ್ತ ಯಾವುದೋ ಗೊತ್ತಿಲ್ಲದ ಸ್ಥಳಕ್ಕೆ ಹೋಯಿತು; ಜಾರುಬಂಡಿಯಂತೂ ಪದೇ ಪದೇ ತಲೆಕೆಳಗಾಗುತ್ತಿತ್ತು. ವ್ಲ್ಯಾಡಿಮಿರನ ಪ್ರಯತ್ನಗಳೆಲ್ಲ ದಾರಿ ತಪ್ಪದಂತೆ ನೋಡಿಕೊಳ್ಳುವಷ್ಟಕ್ಕೆ ಮೀಸಲಾಗಿತ್ತು. ಅವನ ಭಾವನೆಯಂತೆ ಅರ್ಧಗಂಟೆ ಕಳೆದಮೇಲೆ, ಷಾಡ್ರಿನೋ ಬಳಿಯ ತೋಪನ್ನು ಅವನು ತಲಪಿರಲಿಲ್ಲ. ಸುಮಾರು ಇನ್ನೂ ಹತ್ತು ನಿಮಿಷಗಳಷ್ಟು ಕಾಲ ಕಳೆಯಿತು; ಆದರೂ ಆ ತೋಪು ಗೋಚರವಾಗಿರಲಿಲ್ಲ. ಉದ್ದನಾಗಿ ಅಡ್ಡನಾಗಿ ಆಳವಾದ ಕಮರಿಗಳಾಗಿದ್ದ ಬಯಲು ಪ್ರದೇಶದಲ್ಲಿ ವ್ಲ್ಯಾಡಿಮಿರ್ ಗಾಡಿ ಹೊಡೆದುಕೊಂಡು ಹೋದನು. ಹಿಮವರ್ಷ ಕಡಮೆಯಾಗಿರಲಿಲ್ಲ; ಆಕಾಶ ಇನ್ನೂ ಮೋಡ ಕವಿದಿತ್ತು.

ಕುದುರೆಗಳು ಆಯಾಸದ ಚಿಹ್ನೆ ತೋರತೊಡಗಿದುವು. ವ್ಲ್ಯಾಡಿಮಿರ್ ನಿರಂತರವಾಗಿ ಸೊಂಟದುದ್ದ ಹಿಮದಲ್ಲಿ ಮುಳುಗಿರುತ್ತಿದ್ದರೂ ಧಾರಾಳವಾಗಿ ಬೆವರಿದ್ದನು.

ಕಡೆಗೊಮ್ಮೆ ಅವನಿಗೆ ಗೊತ್ತಾಯಿತು, ತಾನು ತಪ್ಪಾದ ದಿಕ್ಕಿನಲ್ಲಿ ಪ್ರಯಾಣ ಮಾಡುತ್ತಿರುವೆನೆಂದು. ಅವನು ಕುದುರೆಯ ಲಗಾಮನ್ನು ಹಿಡಿದೆಳೆದು ಆಲೋಚನಾ ಮಗ್ನನಾದನು: ಏನೋ ನೆನೆದನು, ಏನೋ ಲೆಕ್ಕಾಚಾರ ಹಾಕಿದನು; ತಾನು ಬಲಕ್ಕೆ ತಿರುಗಬೇಕಾಗಿತ್ತೆಂಬ ನಿರ್ಣಯಕ್ಕೆ ಬಂದನು. ಈಗ ಹಾಗೆಯೇ ಮಾಡಿದನು. ಕುದುರೆ ಚಲಿಸುವುದೇ ದುಸ್ಸಾಧ್ಯವಾಗಿತ್ತು. ಈ ಮಾರ್ಗವಾಗಿ ಬಂದು ಆಗಲೇ ಒಂದು ಗಂಟೆಯ ಮೇಲಾಗಿತ್ತು. ಈಗ ಷಾಡ್ರಿನೋ ಬಹು ದೂರ ಇದ್ದಿರಲಾರದು. ಮುಂದು ಮುಂದಕ್ಕೆ ಗಾಡಿ ಹೊಡೆದುಕೊಂಡು ಸಾಗಿದನು–ಹಿಮರಾಶಿ ಮತ್ತು ಕಮರಿಗಳ ಹೊರತು, ಆ ಹೊಲಕ್ಕೆ ಕೊನೆಯೇ ಇದ್ದಂತೆ ಕಂಡುಬರಲಿಲ್ಲ. ಜಾರುಬಂಡಿ ಪದೇಪದೇ ಮಗುಚಿಕೊಳ್ಳುತ್ತಿತ್ತು; ವ್ಲ್ಯಾಡಿವಿರ್ ಅದನ್ನು ಪದೇಪದೇ ಸರಿಪಡಿಸಬೇಕಾಗಿಬರುತ್ತಿತ್ತು. ಕಾಲ ಕಳೆಯಿತು. ವ್ಲ್ಯಾಡಿಮರ್ ಅತ್ಯಂತ ಕಳವಳಪಡತೊಡಗಿದನು.

ಮಾತನ್ನೂ ಆಡಲ್ಲಿಲ್ಲ.

ಕೋಳಿಗಳು ಕೂಗುತ್ತಿದ್ದುವು; ಅವರು ಷಾಡ್ರಿನೋ ತಲುಪುವ ಹೊತ್ತಿಗೆ ಆಗಲೆ ಬೆಳಗಾಗಿತ್ತು. ಚರ್ಚಿಗೆ ಬೀಗ ಹಾಕಿತ್ತು. ದಾರಿ ತೋರಿದ ಯುವಕನಿಗೆ ಹಣಕೊಟ್ಟು, ವ್ಲ್ಯಾಡಿಮಿರ್ ಪಾದ್ರಿಯ ಮನೆಗೆ ಹೋದನು. ಅಲ್ಲಿ ಅಂಗಳದಲ್ಲಿ 'ಟ್ರಾಯ್ಕ' (ಮೂರುಕುದುರೆ ಸಾರೋಟು) ಯಾವುದೂ ಇರಲಿಲ್ಲ. ಅಲ್ಲಿ ಅವನಿಗೆ ಕಾದಿದ್ದಾದರೂ ಎಂತಹ ಸಮಾಚಾರ!

ಇರಲಿ. ನಾವೀಗ ನೆನರಾಡೋವೋವಿನ ದಣಿಗಳ ವಿಚಾರ ಅರಿಯೋಣ, ಅಲ್ಲಿ ಏನು ನಡೆಯುತ್ತಿದೆ ನೋಡೋಣ.

ಏನೂ ಇಲ್ಲ!

ಮುದುಕರೆಲ್ಲ ಎದ್ದಿದ್ದರು; ಗಾವ್ರಿಲ ಗಾವ್ರಿಲೋವಿಚ್ ಇರುಳು–ಕುಲಾವಿ ಮತ್ತು ಉಣ್ಣೆಯ ನಡುವಂಗಿ ಧರಿಸಿಕೊಂಡು, ಪ್ರಾಸ್ಕೊವ್ಯ ಪೆಟ್ರೋವ್ನ ಕವುದಿ ಬಟ್ಟೆಯ ಮೇಲಂಗಿ ಧರಿಸಿಕೊಂಡು ಹಜಾರಕ್ಕೆ ನಡೆದುಹೋದರು; ಗಾವ್ರಿಲ ಗಾವ್ರಿಲೋವಿಚ್ ಟೀ ಕುದಿಸುವ ಪಾತ್ರೆ (ಸ್ಯಾವೊವರ್)ತರಿಸಿಟ್ಟು, ಮಾರ್ಯಗಾವ್ರಿಲೋವ್ನ ಹೇಗಿದ್ದಾಳೆ, ರಾತ್ರಿ ಹೇಗೆ ನಿದ್ದೆ ಮಾಡಿದಳು ಎಂದು ಕೇಳಲು ಒಬ್ಬಳು ಹುಡುಗಿಯನ್ನು ಅವಳ ಬಳಿಗೆ ಕಳಿಸಿದನು. ಹೋಗಿದ್ದ ಹುಡುಗಿ ಹಿಂದಿರುಗಿ, ಚಿಕ್ಕ ಅಮ್ಮನವರು ಅಷ್ಟೇನೂ ಚೆನ್ನಾಗಿ ನಿದ್ದೆಮಾಡಲಿಲ್ಲವೆಂದೂ ಆದರೆ ಈಗ ಎಷ್ಟೋ ಮೇಲಾಗಿರುವರೆಂದೂ ಬೇಗನೆ ಹಜಾರಕ್ಕೆ ಬರಲಿರುವರೆಂದೂ ತಿಳಿಸಿದಳು. ಆಗ ಬಾಗಿಲು ತೆರೆಯಿತು, ಮಾರ್ಯಗಾವ್ರಿಲೊವ್ನ ಒಳಕ್ಕೆ ಬಂದು ತನ್ನ 'ಅಪ್ಪ'ನಿಗೂ 'ಅಮ್ಮ'ನಿಗೂ ವಂದನೆಮಾಡಿದಳು.

"ಈಗ ತಲೆ ಹೇಗಿದೆ, ಮಾಶಾ?" ಎಂದು ಕೇಳಿದನು ಗಾವ್ರಿಲ ಗಾವ್ರಿಲೋವಿಚ್.

"ಈಗ ಎಷ್ಟೋ ಮೇಲು, ಅಪ್ಪ" ಎಂದು ಮಾಶಾ ಉತ್ತರಕೊಟ್ಟಳು.

"ಎಲ್ಲೋ ಆ ಅಗ್ಗಿಷ್ಟಿಕೆಯಿಂದ ತಲೆನೋವಾಗಿರಬೇಕು, ಮಾಶಾ" ಎಂದಳು ಪ್ರಾಸ್ಕೊವ್ಯ ಪೆಟ್ರೋವ್ನ.

"ಇರಬಹುದು, ಅಮ್ಮಾ" ಎಂದು ಉತ್ತರಿಸಿದಳು ಮಾಶಾ.

ಯಾವ ವಿಶೇಷ ಘಟನೆಯೂ ಇಲ್ಲದೆ ದಿನ ಕಳೆಯಿತು; ಆದರೆ ಅಂದಿನಿರುಳು ಮಾಶಾ ಅಸ್ವಸ್ಥಳಾದಳು. ಒಬ್ಬ ವೈದ್ಯನಿಗಾಗಿ ನೆರೆಯೂರಿಗೆ ಹೇಳಿಕಳಿಸಲಾಯಿತು. ಆತ ಮಾರನೆಯ ಸಂಜೆ ಬಂದು, ರೋಗಿಗೆ ಸನ್ನಿ ಹಿಡಿದಿದೆ ಎಂದು ಅರಿತನು.

"ನಿಮಗೇನು ಬೇಕು?"

"ಇಲ್ಲಿಂದ ಷಾಡ್ರಿನೋ ತುಂಬಾ ದೂರವೆ?"

"ಷಾಡ್ರಿನೋ ತುಂಬಾ ದೂರವೇ ಎಂದಿರಾ?"

"ಹೌದು, ಹೌದು, ಅದು ತುಂಬ ದೂರವೇ?"

"ದೂರವೇನಿಲ್ಲ; ಇಲ್ಲಿಂದ ಸುಮಾರು ಹತ್ತು ವರ್ಸ್ಟ್ ಇರಬಹುದು."

ಈ ಉತ್ತರ ಕೇಳಿ ವ್ಲ್ಯಾಡಿಮಿರ್ ತನ್ನ ಕೂದಲು ಕಿತ್ತುಕೊಂಡು, ತನ್ನ ಮರಣದಂಡನೆಯ ತೀರ್ಪನ್ನು ಆಗತಾನೆ ಕೇಳಿದವನಂತೆ, ಗೂಟಬಡಿದ ಹಾಗೆ ನಿಂತನು.

"ನೀವು ಎಲ್ಲಿಂದ ಬಂದಿರುವುದು?"–ಎಂದು ವೃದ್ಧನು ಪ್ರಶ್ನಿಸಿದನು. ಅವನ ಪ್ರಶ್ನೆಗಳಿಗೆ ಉತ್ತರ ಕೊಡುವಷ್ಟು ಶಕ್ತಿ ವ್ಲ್ಯಾಡಿಮಿರ್‌ಗೆ ಇರಲಿಲ್ಲ. "ಷಾಡ್ರಿನೋವಿಗೆ ಹೋಗಲು ನನಗೆ ಒಂದು ಕುದುರೆ ಬೇಕಾಗಿತ್ತು, ಒದಗಿಸಿಕೊಡಬಲ್ಲೆಯಾ, ಅಜ್ಜಾ?" ಎಂದು ಅವನು ಕೇಳಿದನು. "ನಮ್ಮಲ್ಲಿ ಕುದುರೆಗಳೂ ಉಂಟೆಂದು ಭಾವಿಸಿದಿರೋ!" ಎಂದು ಆ ರೈತ ಉತ್ತರ ಕೊಟ್ಟನು. "ಒಳ್ಳೆಯದು ಹಾಗಿದ್ದರೆ, ದಾರಿ ತೋರಿಸಲು ಯಾರನ್ನಾದರೂ ಗೊತ್ತುಮಾಡಿಕೊಡಲಾರೆಯಾ? ಆತ ಕೇಳಿದಷ್ಟನ್ನು ಕೊಡುತ್ತೇನೆ" ಮುದುಕನು ಮರದ ಬಾಗಿಲನ್ನು ಸ್ವಲ್ಪ ಕೆಳಕ್ಕಿಳಿಸಿ, "ಒಂದು ನಿಮಿಷ ತಡೆಯಿರಿ. ನನ್ನ ಮಗನನ್ನು ಕಳಿಸಿಕೊಡುತ್ತೇನೆ. ಅವನು ನಿಮಗೆ ದಾರಿ ತೋರಿಸುತ್ತಾನೆ" ಎಂದನು. ವ್ಲ್ಯಾಡಿಮಿರ್ ಕಾದಿದ್ದ. ಇನ್ನೂ ಒಂದು ನಿಮಿಷವೂ ಆಗಿರಲಿಲ್ಲ. ಮತ್ತೆ ಕಿಟಕಿಟಯ ಬಳಿ ತಟ್ಟಿದ. ಬಾಗಿಲು ಮತ್ತೆ ತೆರೆಯಿತು, ಗಡ್ಡ ಪುನಃ ಕಾಣಿಸಿಕೊಂಡಿತು.

"ನಿಮಗೇನು ಬೇಕು?'

"ನಿನ್ನ ಮಗ ಎಲ್ಲಿ?'

"ಇನ್ನೇನು ಬರುತ್ತಾನೆ, ಬೂಡ್ಸು ಹಾಕಿಕೊಳ್ಳುತ್ತಿದ್ದಾನೆ. ಚಳಿಯಾದರೆ ಒಳಕ್ಕೆ ಬಂದು ಬೆಚ್ಚಗೆ ಮಾಡಿಕೊಳ್ಳಿ."

"ಬೇಡ, ವಂದನೆಗಳು–ನಿನ್ನ ಮಗನನ್ನು ತ್ವರೆಗೊಳಿಸಪ್ಪ."

ಬಾಗಿಲು ಕಿರ್ರೆಂದಿತು; ದೊಣ್ಣೆ ಹಿಡಿದ ಯುವಕನೊಬ್ಬ ಹೊರಕ್ಕೆ ಬಂದು, ಮುಂದುಗಡೆ ನಡೆದ. ಕೆಲವು ವೇಳೆ ರಸ್ತೆ ತೋರಿಸುತ್ತಿದ್ದ; ಅದು ಹಿಮರಾಶಿಯಿಂದ ಮುಚ್ಚಿಹೋಗಿದ್ದುದರಿಂದ, ಅದನ್ನು ಹುಡುಕಲು ಕೆಲವು ವೇಳೆ ನಿಲ್ಲುತ್ತಿದ್ದ. "ಹೊತ್ತು ಎಷ್ಟು?" ಎಂದು ವ್ಲ್ಯಾಡಿಮಿರ್ ಅವನನ್ನು ಕೇಳಿದನು. "ಇನ್ನೇನು ಬೆಳಕಾಗುತ್ತೆ" ಎಂದು ಆ ಕಿರಿಯ ಉತ್ತರ ಕೊಟ್ಟನು. ವ್ಲ್ಯಾಡಿಮಿರ್ ಇನ್ನೊಂದು

ಆ ತರುಣನಿಂದ ಅರೆಮರುಳಾದ ಪತ್ರ ಬಂದಾಗ ಅವರಿಗೆ ಆದ ಬೆರಗು ಅಷ್ಟಿಷ್ಟಲ್ಲ. ತಾನು ಅವರ ಮನೆಯ ಹೊಸಿಲನ್ನು ಮತ್ತೆ ಮೆಟ್ಟುವುದಿಲ್ಲವೆಂದು ನಂಬುಗೆಗೊಟ್ಟು, ತನ್ನಂಥ ನಿರ್ಭಾಗ್ಯ ವ್ಯಕ್ತಿಯನ್ನು ಮರೆತುಬಿಡಬೇಕೆಂದು ಪ್ರಾರ್ಥಿಸಿ, ಮರಣವೊಂದೇ ತನಗೆ ಉಳಿದಿರುವ ಕಡೆಯಾಸೆಯೆಂದು ತಿಳಿಸಿ ಅವನು ಬರೆದಿದ್ದನು. ಕೆಲವು ದಿನಗಳ ಬಳಿಕ, ಅವನು ಸೈನ್ಯಕ್ಕೆ ಹಿಂದಿರುಗಿದನೆಂದು ವರ್ತಮಾನ ಕೇಳಿದರು. ಇದು ನಡೆದದ್ದು ೧೮೧೨ರಲ್ಲಿ.

ಖಾಯಿಲೆಯಿಂದ ಚೇತರಿಸಿಕೊಳ್ಳುತ್ತಿದ್ದ ಮಾಶಾಗೆ ಈ ವಿಚಾರ ತಿಳಿಸಲು ಬಹಳ ಕಾಲದವರೆಗೆ ಯಾರೂ ಧೈರ್ಯಮಾಡಲಿಲ್ಲ. ಅವಳೂ ಸಹ ವ್ಲಾಡಿಮಿರ್‌ನ ವಿಷಯ ಪ್ರಸ್ತಾಪಮಾಡಲಿಲ್ಲ. ಕೆಲವು ತಿಂಗಳ ತರುವಾಯ, ಬೋರೋಡಿನೋ ಕದನವಾದಮೇಲೆ, ಧೈರ್ಯಕ್ಕಾಗಿ ಬಹುಮಾನಿತರಾದವರಲ್ಲಿ ಅವನ ಹೆಸರು ಇತ್ತೆಂದೂ ಆತ ಅಪಾಯಕರವಾಗುವಷ್ಟು ಗಾಯಗೊಂಡಿದ್ದನೆಂದೂ ಕೇಳಿ ತಿಳಿದು ಅವಳು ಪ್ರಜ್ಞೆ ತಪ್ಪಿದಳು; ಮತ್ತೆಲ್ಲಿ ಜ್ವರ ಪ್ರಾರಂಭವಾಗುವುದೋ ಎಂಬ ಶಂಕೆಯುಂಟಾಯಿತು. ದೇವರ ದಯದಿಂದ ಮೂರ್ಛೆ ಕೆಟ್ಟದ್ದಾಗಿ ಪರಿಣಮಿಸಲಿಲ್ಲ.

ಬೇಗನೆ ಮತ್ತೊಂದು ದುಃಖ ಅವಳಿಗೆ ಸಮನಿಸಿತು–ಅವಳ ತಂದೆ ಇಹಲೋಕವನ್ನು ತ್ಯಜಿಸಿದನು. ಇದರಿಂದ ಅವನ ಆಸ್ತಿಯೆಲ್ಲಕ್ಕೂ ಅವಳೇ ಉತ್ತರಾಧಿಕಾರಿಣಿಯಾದಳು. ಆದರೆ ಆ ಆಸ್ತಿಯ ಪ್ರಾಪ್ತಿಯಿಂದ ಅವಳಿಗೇನೂ ಸಮಾಧಾನವಾಗಲಿಲ್ಲ; ನಿರ್ಭಾಗ್ಯಳಾದ ಪ್ರಾಸ್ಕೊವ್ಯ ಪೆಟ್ರೋವ್ನಳ ದುಃಖದಲ್ಲಿ ಅವಳೂ ಪಾಲುಗಾರಳಾದಳು. ದುಃಖದ ನೆನಪು ಕೊಡುವ ನೆನರಾಡೋವೋವನ್ನು ಇಬ್ಬರೂ ತ್ಯಜಿಸಿ, (ಎಕ್ಸ್)–ಹಳ್ಳಿಯ ತಮ್ಮ ಜಮೀನಿನಲ್ಲಿ ವಾಸಿಸಲು ತೆರಳಿದರು.

ಇಲ್ಲಿಯೂ ಕೂಡ ಈ ಮೋಹಕ ಹಾಗೂ ಧನಿಕ ಉತ್ತರಾಧಿಕಾರಿಣಿಯ ಸುತ್ತಲೂ ಅನೇಕಮಂದಿ ವಿವಾಹಾಕಾಂಕ್ಷಿಗಳು ಮುತ್ತಿಮುಸುರುತ್ತಿದ್ದರು. ಒಬ್ಬ ಬಾಳ ಸಂಗಾತಿಯನ್ನು ಆಯ್ದುಕೊಳ್ಳುವಂತೆ ಅವಳ ತಾಯಿಯೂ ಕೆಲವುವೇಳೆ ಅವಳನ್ನು ಒತ್ತಾಯಪಡಿಸಲು ಪ್ರಯತ್ನಿಸುತ್ತಿದ್ದಳು; ಆದರೆ ಮಾರ್ಯ ಗಾವ್ರಿಲೊವ್ನ ಮಾತ್ರ ತಲೆಯಲ್ಲಾಡಿಸಿ, ಚಿಂತಾಕ್ರಾಂತಳಾಗುತ್ತಿದ್ದಳು. ವ್ಲ್ಯಾಡಿಮಿರ್ ಇನ್ನು ಜೀವಂತರ ಲೆಕ್ಕಕ್ಕೆ ಸೇರಿದವನಾಗಿರಲಿಲ್ಲ; ನಗರಕ್ಕೆ ಫ್ರೆಂಚರ ಪ್ರವೇಶವಾಗುವ ಮುನ್ನ ಅವನು ಮಾಸ್ಕೋದಲ್ಲಿ ಮಡಿದಿದ್ದನು. ಮಾಶಾ ಅವನ ನೆನಪನ್ನು ಬಹಳ ಪವಿತ್ರವಾಗಿಟ್ಟುಕೊಂಡಿದ್ದಳು; ಏನಾದರೂ ಆಗಲಿ, ಅವನ ನೆನಪು ಕೊಡುವ ಸರ್ವಸ್ವವನ್ನೂ–ಅವನು ಒಮ್ಮೆ ಓದಿದ್ದ ಪುಸ್ತಕಗಳು, ಅವನು ಬರೆದ ರೇಖಾ ಚಿತ್ರಗಳು, ತನಗಾಗಿ ಅವನು ಪ್ರತಿಮಾಡಿದ್ದ ಸಂಗೀತ ಕೃತಿಗಳು ಮತ್ತು

ಉಗ್ರಜ್ವರಕ್ಕೆ ಮೊದಲಿಟ್ಟು, ಆ ನಿರ್ಭಾಗ್ಯೆಯಾದ ಹುಡುಗಿ ಜೀವ ಸಾವುಗಳ ನಡುವೆ ಹೊರಾಡುತ್ತ ಎರಡುವಾರ ಕಾಲ ಹಾಸಿಗೆ ಹತ್ತಿ ಮಲಗಿದ್ದಳು.

ಮನೆಬಿಟ್ಟ ಓಡಿಹೋಗಬೇಕೆಂದಿದ್ದ ಉದ್ದೇಶ ಮನೆಯಲ್ಲಿ ಯಾರಿಗೂ ತಿಳಿಯದು. ಹಿಂದಿನ ಸಂಜೆ ಬರೆದಿದ್ದ ಕಾಗದಗಳನ್ನು ಸುಟ್ಟುಬಿಟ್ಟಿತ್ತು. ತನ್ನ ಒಡೆಯನ ಉಗ್ರ ಕೋಪಕ್ಕೆ ಅಂಜಿ, ಸೇವಕಿ ಯಾರಿಗೂ ಒಂದು ಮಾತನ್ನೂ ಉಸುರಿರಲಿಲ್ಲ. ಪಾದ್ರಿ, ನಿವೃತ್ತ ಅಶ್ವ ಸೈನ್ಯಾಧಿಕಾರಿ, 'ಗಿರಿಜಾ' ಮೀಸೆಯ ಮೋಜಿಣಿದಾರ, ತರುಣ–ಇವರೆಲ್ಲ ಸ್ವಂತ ಕಾರಣಗಳಿಗಾಗಿ ಬಾಯಿ ಮುಚ್ಚಿಕೊಂಡಿದ್ದರು. ಕುಡಿದು ಅಮಲೇರಿದ್ದಾಗ ಕೂಡ ಬಂಡಿಹೊಡೆಯುವ ಟೆರೆಷ್ಕ ಅನಾವಶ್ಯಕವಾದ ಒಂದು ಮಾತನ್ನೂ ತುಟಿಯಿಂದ ಹೊರ ಹಾಕಲಿಲ್ಲ. ಹೀಗೆ ಆರು ಮಂದಿಗಿಂತ ಹೆಚ್ಚು ಮಂದಿ ಸಂಚುಗಾರರು ಹಂಚಿಕೊಂಡಿದ್ದ ರಹಸ್ಯ ಭದ್ರವಾಗಿತ್ತು. ಆದರೆ, ತನ್ನ ಎಡೆಬಿಡದ ಸನ್ನಿಯಲ್ಲಿ ಮಾರ್ಯ ಗಾವ್ರಿಲೊವ್ನಳೇ ತನ್ನ ಗುಟ್ಟನ್ನು ಹೊರಕ್ಕೆ ಬಿಟ್ಟಿಬಿಟ್ಟಳು. ಆದರೆ ಅವಳ ಅಸ್ಪಷ್ಟವಾದ ನುಡಿಗಳಿಂದ ಅವಳ ಹಾಸಿಗೆಯ ಬಳಿಯೇ ಕಾವಲಿದ್ದ ಅವಳ ತಾಯಿಗೆ ಹೆಚ್ಚೇನೂ ತಿಳಿದು ಬರಲಿಲ್ಲ; ತನ್ನ ಮಗಳಿಗೆ ವ್ಲ್ಯಾಡಿಮಿರ್ ನಿಕೊಲಾಯಿವಿಚ್‌ನಲ್ಲಿ ಹುಚ್ಚು ಮೋಹ ಉಂಟಾಗಿದೆಯೆಂದೂ, ಈ ಪ್ರಣಯವೇ ಬಹುಶಃ ಅವಳ ಅಸ್ವಸ್ಥತೆಗೆ ಕಾರಣವೆಂದೂ ಗ್ರಹಿಸಿದಳು. ಅವಳು ತನ್ನ ಪತಿಯೊಂದಿಗೂ ನೆರೆಹೊರೆಯ ಕೆಲಮಂದಿಯೊಂದಿಗೂ ಆಲೋಚನೆ ಮಾಡಿದಳು; ಮಾರ್ಯ ಗಾವ್ರಿಲೋವ್ನಳ ಗತಿ ಹೀಗಾಗಬೇಕೆಂದು ಅವಳ ಹಣೆಯಲ್ಲಿ ಬರೆದಿತ್ತು, ವಿಧಿಯಿಂದ ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಬಡತನ ಘೋರವಾದ ಅಪರಾಧವೇನಲ್ಲ, ಬಾಳಬೇಕಾದದ್ದು ಮನುಷ್ಯಪ್ರಾಣಿಯೊಂದಿಗೆಯೆ ಹೊರತು ಹಣದ ಥೈಲಿಗಳೊಂದಿಗೆ ಅಲ್ಲ–ಎಂದು ಮುಂತಾಗಿ ಸಕಲರೂ ಸರ್ವಾನುಮತದಿಂದ ಒಮ್ಮತಕ್ಕೆ ಬಂದರು. ನಮ್ಮ ಕಾರ್ಯಗಳಿಗೆ ಹೆಚ್ಚಿನ ಸಮರ್ಥನೆ ದೊರೆಯದೆ ಹೋದಾಗ ನೀತಿವಾಕ್ಯಗಳು ಅತ್ಯಂತ ಸಹಾಯಕ.

ಈ ಮಧ್ಯೆ, ಹುಡುಗಿ ಕ್ರಮಕ್ರಮವಾಗಿ ಗುಣಹೊಂದಿದಳು. ವ್ಲಾಡಿಮಿರ್ ಬಹಳ ಕಾಲದವರೆಗೆ ಗಾವ್ರಿಲ ಗಾವ್ರಿಲೋವಿಚ್‌ನ ಮನೆಯಕಡೆ ಮುಖ ಹಾಕಿರಲಿಲ್ಲ. ಅವನಿಗೆ ಅಲ್ಲಿ ಸರ್ವಸಾಮಾನ್ಯವಾಗಿ ದೊರಕುತ್ತಿದ್ದ ಪುರಸ್ಕಾರ ಅವನನ್ನು ಅಂಜಿಸಿ ಓಡಿಸಿ ಬಿಟ್ಟಿತ್ತು. ಈಗ ಅವನಿಗೆ ಹೇಳಿ ಕಳಿಸಿ, ಅವನಿಗೆ ಕಾದಿದ್ದ ಅನಿರೀಕ್ಷಿತ ಭಾಗ್ಯದ ವಿಚಾರವನ್ನು–ಎಂದರೆ ಅವನ ಮದುವೆಗೆ ಒಪ್ಪಿಗೆಯನ್ನು–ತಿಳಿಸಲಾಯಿತು. ಆದರೆ, ನೆನರಾಡೋವೋವಿನ ಒಡೆಯರ ಆಹ್ವಾನಕ್ಕೆ ಉತ್ತರವಾಗಿ

ಈ ಉಜ್ಜ್ವಲಕಾಲದಲ್ಲಿ ಮ್ಯಾರ್‍ಯ ಗಾವ್ರಿಲೊವ್ನ ತನ್ನ ತಾಯಿಯೊಂದಿಗೆ ಎಕ್ಸ್(ನ)–ಹಳ್ಳಿಯ ಜಮೀನಿನಲ್ಲಿ ವಾಸಿಸುತ್ತಿದ್ದಳು; ರಾಜ್ಯದ ಎರಡು ಮುಖ್ಯ ನಗರಿಗಳಲ್ಲಿ ಸೈನಿಕರ ಪುನರಾಗಮನದ ಉತ್ಸವ ಸಮಾರಂಭಗಳು ಹೇಗೆ ನಡೆದುವೆಂದು ಅವಳು ಕಾಣಳು. ಆದರೆ ಸರ್ವಸಾಮಾನ್ಯ ಉತ್ಸಾಹ ಒಳನಾಡಿನ ಹಳ್ಳಿ ಹಳ್ಳಿಗಳಲ್ಲಿ ಇನ್ನೂ ಹೆಚ್ಚಾಗಿದ್ದಿತು. ಅಂಥ ಸ್ಥಳಗಳಲ್ಲಿ ಒಬ್ಬ ಸೈನಿಕ ಕಾಣಿಸಿಕೊಂಡನೆಂದರೆ ಗೆಲವೋ ಗೆಲವು; ನಿಲುವಂಗಿ ತೊಟ್ಟು ನಲಿಯುವ ಪ್ರಣಯ ವಿಲಾಸಿಯನ್ನು ಲಕ್ಷಿಸುವವರೇ ಇರಲಿಲ್ಲ.

ಮಾರ್‍ಯ ಗಾವ್ರಿಲೊವ್ನ ಉದಾಸೀನತೆಯನ್ನು ತೋರುತ್ತಿದ್ದರು ಕೂಡ ವಿವಾಹಾಕಾಂಕ್ಷಿಗಳು ಅವಳನ್ನು ಸುತ್ತುಗಟ್ಟಿದ್ದರೆಂದು ಆಗಲೇ ಹೇಳಿದೆ. ಆದರೆ ರಾವುತದಳಕ್ಕೆ ಸೇರಿದ ಗಾಯಗೊಂಡ 'ಕರ್ನಲ್' (ದಳಪತಿ) ಒಬ್ಬ ಅವಳ 'ದುರ್ಗ'ವನ್ನು ಪ್ರವೇಶಿಸಿದಾಗ ಅವರೆಲ್ಲ ಪಲಾಯನಮಾಡಬೇಕಾಯಿತು; ಅವನ ಹೆಸರು ಬರ್ಮಿನ್; ಸೆಯ್‌ಂಟ್ ಜಾರ್ಜನ ಪ್ರಶಸ್ತಿಯ 'ಕ್ರಾಸ್' ಪದಕ ಅವನ ಗುಂಡಿಕಾಜದ ಬಳಿ ಶೋಭಿಸುತ್ತಿತ್ತು; ಆ ಸ್ಥಳದ ಕುಲೀನ ತರುಣಿಯರು ಹೇಳುತ್ತಿದ್ದರಂತೆ, ಅವನ ಮುಖದಲ್ಲಿ 'ಸ್ವಾರಸ್ಯವಾದ ವಿವರ್ಣಕಾಂತಿ' ಇದ್ದಿತು. ಅವನು ರಜಾ ಪಡೆದು ತನ್ನ ಜಮೀನಿನಲ್ಲಿ ಬಂದು ನೆಲಸಿದ್ದನು; ಅದು ಮಾರ್‍ಯ ಗಾವ್ರಿಲೊವ್ನಳ ಸ್ವತ್ತಿಗೆ ಹತ್ತಿರದಲ್ಲೇ ಇದ್ದಿತು. ಅವನ ಬಗೆಗೆ ಮಾರ್‍ಯ ಗಾವ್ರಿಲೊವ್ನ ಹೆಚ್ಚಿನ ಪಕ್ಷಪಾತ ತೋರಿದ್ದಳು. ಅವನ ಸಮ್ಮುಖದಲ್ಲಿ ಅವಳ ಎಂದಿನ ವಿಷಣ್ಣತೆ ಒಂದು ವಿಧವಾದ ಗೆಲವಿಗೆ ಎಡೆಗೊಡುತ್ತಿತ್ತು. ಅವನೊಂದಿಗೆ ಅವಳ ನಡೆವಳಿಯಲ್ಲಿ ಬೆಡಗುಬಿನ್ನಾಣಗಳ ಸುಳಿವೇನಿರಲಿಲ್ಲ.

ಬರ್ಮಿನ್ ನಿಶ್ಚಯವಾಗಿ ಯಾರನ್ನಾದರೂ ಮನವೊಲಿಸಿಕೊಳ್ಳುವಂತಹ ತರುಣ ವ್ಯಕ್ತಿ. ಹೆಂಗಸರು ಮೆಚ್ಚಿಕೊಳ್ಳುವ ಬಗೆಯ ಮನಸ್ಸೆಂದರೆ ಅವನದ್ದು–ಮರ್ಯಾದೆಯರಿತದ್ದು. ಪರರ ವಿಚಾರಕ್ಕೆ ಗಮನ ಕೊಡತಕ್ಕದ್ದು, ಲವಲೇಶವಾದರೂ ಬೂಟಾಟಿಕೆಯಿಲ್ಲದ್ದು, ಸರಳ ಪರಿಹಾಸದ ಮೆರುಗುಳ್ಳದ್ದು. ಮಾರ್‍ಯ ಗಾವ್ರಿಲೊವ್ನಳ ಸಮ್ಮುಖದಲ್ಲಿ ಆತ ಸರಳತೆಯಿಂದ, ಸ್ವಾತಂತ್ರ್ಯದಿಂದ, ನಡೆದುಕೊಳ್ಳುತ್ತಿದ್ದ. ಅವಳು ಏನೇ ಹೇಳಲಿ ಮಾಡಲಿ, ಅವನ ಮನಸ್ಸು ಹಾಗೂ ಕಣ್ಣು ಅವಳನ್ನು ತಪ್ಪದೆ ಅನುಸರಿಸುತ್ತಿದ್ದವು. ಅವನು ಬಹಳ ಸೌಮ್ಯವಾಗಿ, ವಿವೇಚನಾಪರನಾಗಿ, ಕಾಣುತ್ತಿದ್ದನು! ಆದರೆ ಆತ ಹಿಂದೊಮ್ಮೆ ದುರ್ವ್ಯಸನಿಯಾಗಿದ್ದನೆಂಬ ವದಂತಿಯಿತ್ತು; ಆದರೆ ಮಾರ್‍ಯ ಗಾವ್ರಿಲೊವ್ನಳ ದೃಷ್ಟಿಯಲ್ಲಿ ಈ ಕಾರಣದಿಂದ ಅವನಿಗೇನೂ ಕೆಡುಕಾಗಲಿಲ್ಲ; ಧೈರ್ಯೋತ್ಸಾಹಗಳನ್ನು ಸೂಚಿಸುವ ಕುಚೇಷ್ಟೆಗಳನ್ನು (ಬಹುಮಂದಿ

ಪದ್ಯಗಳು–ಪ್ರತಿಯೊಂದನ್ನೂ ಅವಳು ಕಾದಿಟ್ಟಳು. ಅವಳ ಈ ನಿಶ್ಚಲಪ್ರೇಮವನ್ನು ಕಂಡು ನೆರೆಹೊರೆಯವರು ಬೆರಗಾದರು; ಈ ಸತೀಮಣಿಯ ಶೋಚನೀಯ ಪ್ರೇಮನಿಷ್ಠೆಯನ್ನು ಕಡೆಗೊಮ್ಮೆ ಗೆಲ್ಲುವ ಭಾಗ್ಯಶಾಲಿಯಾದ ಸಾಹಸಪುರುಷ ಯಾವನೋ ಎಂದು ಅವರೆಲ್ಲ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು.

ಈ ನಡುವೆ ಯುದ್ಧವು ಜಯಪ್ರದವಾಗಿ ಕೊನೆಗೊಂಡಿತು; ಪರದೇಶೀಯ ಭಾಗಗಳಿಂದ ನಮ್ಮ ಸೈನ್ಯದಳಗಳು ಹಿಂದಿರುಗಿದವು. ಅವುಗಳನ್ನು ಎದುರುಗೊಳ್ಳಲು ಜನ ಮನೆಯುಳಿದು ಧಾವಿಸಿತು. ಶತ್ರುಗಳನ್ನು ಗೆದ್ದ ಸಂಕೇತವಾಗಿ ಅವರ ಕಡೆಯ ಹಾಡುಗಳನ್ನು 'ಬ್ಯಾಂಡು' (ಸೈನ್ಯದ ವಾದ್ಯವೃಂದಗಳು) ಬಾಜಿಸಿದುವು. ಯುದ್ಧಕಾರ್ಯಾಚರಣೆಗೆ ಕೇವಲ ಬಾಲಕರಾಗಿ ಸೇರಿದ ಅಧಿಕಾರಿಗಳು ಶಿಲುಬೆಯಾಕಾರದ ಪ್ರಶಸ್ತಿಪದಕಗಳನ್ನು ಧರಿಸಿ, ಯುದ್ಧರಂಗದ ವಾತಾವರಣದಿಂದ ಪಕ್ವವಾಗಿ ಹಿಂದಿರುಗಿದರು. ತಮ್ಮ ಮಾತುಕತೆಯಲ್ಲಿ ಫ್ರೆಂಚ್ ಮತ್ತು ಜರ್ಮನ್ ಪದಗಳನ್ನು ಬೆರಸುತ್ತ ಒಬ್ಬರೊಡನೊಬ್ಬರು ವಿನೋದವಾಗಿ ಹರಟುತ್ತಿದ್ದರು. ಮರೆಯಲಾಗದ ದಿನಗಳು! ಜನ್ಮಭೂಮಿ ಎಂದೊಡನೆ ರಷ್ಯನ್ ಹೃದಯ ಎಷ್ಟು ತೀವ್ರವಾಗಿ ಸ್ಪಂದಿಸುತ್ತಿತ್ತು! ಪುನಸ್ಸಮಾಗಮದ ಆನಂದಬಾಷ್ಪ ಅದೆಷ್ಟು ಮಧುರ! ನಾವೆಲ್ಲ ಅದು ಹೇಗೆ ಒಮ್ಮತದಿಂದ ರಾಷ್ಟ್ರಾಭಿಮಾನವನ್ನೂ ಜಾರ್ ಚಕ್ರವರ್ತಿಯ ಮೇಲಿನ ಪ್ರೇಮವನ್ನೂ ಒಂದುಗೂಡಿಸಿಕೊಂಡಿದ್ದೆವು! ಆತನಿಗಾದರೂ ಅದೆಂಥ ಕಾಲ!

ಸ್ತ್ರೀಯರು,–ರಷ್ಯಾ ದೇಶದ ಸ್ತ್ರೀಯರು,–ಅಂದಿನ ದಿನಗಳಲ್ಲಿ ಅನನುಕರಣೀಯರು. ಅವರಿಗೆ ಅಭ್ಯಾಸವಾದ ನಿರುತ್ಸಾಹ ಅವರನ್ನು ಬಿಟ್ಟು ತೊಲಗಿತು. ಅವರ ಉತ್ಸಾಹ ನಿಜವಾಗಿ ಉನ್ಮಾದಕರವಾಗಿತ್ತು. ಯುದ್ಧ ವಿಜಯಿಗಳನ್ನು ಎದುರುಗೊಂಡಾಗ,

ತಮ್ಮ ಟೋಪಿಗಳ ಆಗಸಕೆಸೆದು
'ಜೈಜೈ' ಎಂದರು ಹೆಂಗಸರು.'

ತನ್ನ ಅತ್ಯುತ್ತಮವಾದ, ಅತ್ಯಮೂಲ್ಯವಾದ ಬಹುಮಾನಕ್ಕೆ ಯಾವಳಾದರೂ ಹೆಂಗಸೊಬ್ಬಳಿಗೆ ತಾನು ಋಣಿ ಎಂದು ಆಗಿನ ಕಾಲದಲ್ಲಿ ಹೇಳಿಕೊಳ್ಳದಿದ್ದ ಸೈನ್ಯಾಧಿಕಾರಿ ಯಾರು?

---

* ಪುಷ್ಕಿನ್ನನ ಸಮಕಾಲೀನ ನಾಟಕಕಾರ ಅಲೆಗ್ಸ್ಯಾಂಡರ್ ಗ್ರಿಬೊಯೆಡಾಫ್ ಎಂಬಾತನ ಪ್ರಸಿದ್ಧ ನಾಯಕದಲ್ಲಿ ಬರುವ ಸಾಲುಗಳು.

ಇಸ್ಪೀಟೆಲೆಗಳನ್ನು ಹರಡಿಕೊಂಡು ಕುಳಿತಿದ್ದಾಗ, ಬರ್ಮಿನ್ ಪ್ರವೇಶಿಸಿ ಮಾರ್ಯ ಗಾವ್ರಿಲೋವ್ನ ಎಲ್ಲಿ? ಎಂದು ಕೇಳಿದನು. "ಅವಳು ಉದ್ಯಾನದಲ್ಲಿದ್ದಾಳೆ. ಅವಳಿರುವಲ್ಲಿಗೆ ಹೋಗಪ್ಪಾ, ನಾನು ಇಲ್ಲೇ ಇರುತ್ತೇನೆ. ನಿಮ್ಮಿಬ್ಬರಿಗಾಗಿ ಕಾಯುತ್ತಿರುತ್ತೇನೆ" ಎಂದಳು ವೃದ್ಧೆ. ಬರ್ಮಿನ್ ಹೊರಕ್ಕೆ ಹೊರಟ, ವೃದ್ಧ ಶಿಲುಬೆಯ ಕರನ್ಯಾಸಮಾಡುತ್ತ, "ಬಹುಶಃ ಇವೊತ್ತು ಎಲ್ಲ ನಿಶ್ಚಯವಾಗುತ್ತೆ" ಎಂದು ಆಲೋಚಿಸಿದಳು.

ಬರ್ಮಿನ್ ಮಾರ್ಯ ಗಾವ್ರಿಲೊವ್ನಳನ್ನು ಕೊಳದ ಬಳಿ ಕಂಡನು; ಒಂದು ವಿಲೋ ವೃಕ್ಷದಡಿಯಲ್ಲಿದ್ದ ಅವಳು ಬಿಳಿಯುಡುಪು ಧರಿಸಿ, ಕೈಯಲ್ಲಿ ಒಂದು ಪುಸ್ತಕ ಹಿಡಿದು, ಕಾದಂಬರಿಯೊಂದರ ನಾಯಕಿಯಂತೆ ಕಂಡು ಬರುತ್ತಿದ್ದಳು. ಕುಶಲ ಪ್ರಶ್ನೆಗಳಾದ ಮೇಲೆ, ಮಾರ್ಯ ಗಾವ್ರಿಲೊವ್ನಬೇಕೆಂದೇ ಸಂಭಾಷಣೆಯನ್ನು ಮುಂದುವರಿಸದೆ ನಿಲ್ಲಿಸಿಬಿಟ್ಟಳು; ಇದರಿಂದ ಇಬ್ಬರ ಮನಸ್ಸೂ ಹೆಚ್ಚಿನ ಪೇಚಿಗೆ ಸಿಲುಕಿತು; ತಟ್ಟನೆ  ನಿಶ್ಚಿತ ರೀತಿಯಲ್ಲಿ ಪ್ರೇಮವನ್ನು ಪ್ರಕಟಿಸುವುದೊಂದೇ ಈ ಪೇಚಿನ ಸ್ಥಿತಿಯನ್ನು ನಿವಾರಿಸುವ ಏಕಮಾತ್ರ ಉಪಾಯವಾಗಿತ್ತು. ಮುಂದೆ ನಡೆದದ್ದು ಇಷ್ಟು: ತನ್ನ ಪೇಚಾಟದ ಪರಿಸ್ಥಿತಿಯನ್ನರಿತ ಬರ್ಮಿನ್ ತನ್ನ ಹೃದಯವನ್ನು ಅವಳ ಮುಂದೆ ತೆರೆದಿಡಬೇಕೆಂದು ತಾನು ಬಹಳ ಕಾಲದಿಂದಲೂ ತಕ್ಕ ಅವಕಾಶಕ್ಕಾಗಿ ಕಾಯುತ್ತಿದ್ದನೆಂದು ತಿಳಿಸಿ, ಒಂದು ಕ್ಷಣಕಾಲ ತನ್ನ ಕಡೆ ಗಮನಕೊಡಬೇಕೆಂದು ಬೇಡಿಕೊಂಡನು. ಮಾರ್ಯ ಗಾವ್ರಿಲೊವ್ನ ತನ್ನ ಪುಸ್ತಕವನ್ನು ಮುಚ್ಚಿ, ಕಣ್ಣಿವೆಗಳನ್ನು ಕೆಳಕ್ಕಿಳಿಸುವುದರ ಮೂಲಕ ಸಮ್ಮತಿಯನ್ನು ಸೂಚಿಸಿದಳು.

ಬರ್ಮಿನ್ ಹೇಳಿದ : "ನಾನು ನಿನ್ನನ್ನು ಪ್ರೀತಿಸುತ್ತೇನೆ, ತೀವ್ರವಾಗಿ ಪ್ರೀತಿಸುತ್ತೇನೆ." (ಮಾರ್ಯ ಗಾವ್ರಿಲೊವ್ನ ಕೆಂಪೇರಿದಳು, ತನ್ನ ತಲೆಯನ್ನು ಇನ್ನೂ ಕೆಳಕ್ಕೆ ತಗ್ಗಿಸಿದಳು) ಪ್ರತಿನಿತ್ಯವೂ ನಿನ್ನನ್ನು ನೋಡಿ ನಿನ್ನ ಮಾತು ಕೇಳುವ ಉಲ್ಲಾಸಕರವಾದ ಅಭ್ಯಾಸಕ್ಕೆ ಮನಸೋತು, ಒಂದು ಅಕಾರ್ಯವನ್ನು ಮಾಡಿದ್ದೇನೆ... (ಮಾರ್ಯ ಗಾವ್ರಿಲೊವ್ನಳಿಗೆ ಸೆಯ್ನ್ಟ್ ಪ್ರೊ (St. Preux)ವಿನ ಮೊದಲ ಕಾಗದದ ನೆನಪಾಯಿತು) "ಈಗ ನನ್ನ ವಿಧಿಯ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದಕ್ಕೆ ಕಾಲ ಮೀರಿಹೋಗಿದೆ; ನಿನ್ನ ನೆನಪು, ನಿನ್ನ ಮಧುರವಾದ ಅನುಪಮವಾದ ಆಕೃತಿಯ ನೆನಪು, ಇನ್ನು ಮುಂದೆ ನನ್ನ ಇಡಿಯ ಜೀವಮಾನದಲ್ಲಿ ಎಷ್ಟು ಮಟ್ಟಿಗೆ ಸುಖ ಕೊಡುವುದೋ ಅಷ್ಟೇ ಹಿಂಸೆಯನ್ನೂ ಉಂಟುಮಾಡುವುದು. ನಾನು ನಿರ್ವಹಿಸಬೇಕಾದ ಕ್ಲೇಶಕರ ಕರ್ತವ್ಯವೊಂದು ಇನ್ನೂ ಉಳಿದಿದೆ: ನನ್ನ ನಿನ್ನ ನಡುವೆ ದಾಟಲಾಗದ ಅಡ್ಡಗೋಡೆಯನ್ನು ನಿರ್ಮಿಸುವ ಒಂದು ಭಯಂಕರ

ತರುಣಿಯರಂತೆ) ಅವಳೂ ಸಂತೋಷದಿಂದ ಕ್ಷಮಿಸತಕ್ಕವಳಾಗಿದ್ದಳು.

ಆದರೆ, ಆ ತರುಣ ರಾವುತ ಸಿಪಾಯಿಯ ಎಲ್ಲ ಗುಣಗಳಿಗಿಂತ ಹೆಚ್ಚಾಗಿ– ಅವನ ಮೃದು ವರ್ತನೆ, ಅವನ ಸರಸ ಸಂಭಾಷಣೆ, ಅವನ 'ಸ್ವಾರಸ್ಯವಾದ ವಿವರ್ಣಕಾಂತಿ', ಗಾಯದ ಬಟ್ಟೆಕಟ್ಟಿದ ಅವನ ತೋಳು–ಇವಲ್ಲೆಕ್ಕಿಂತ ಹೆಚ್ಚಾಗಿ ಅವನ ಬಿಗುಮಾನ ಅವಳ ಕುತೂಹಲವನ್ನು ಕೆರಳಿಸಿತು, ಕಲ್ಪನೆಯನ್ನು ಕುದುರಿಸಿತು. ತಾನು ಅವನ ಮೇಲೆ ದೊಡ್ಡ ಪ್ರಭಾವ ಮುದ್ರೆ ಒತ್ತಿರುವೆನೆಂದು ಅವಳು ಅರಿಯದೆ ಸಾಧ್ಯವೇ ಇರಲಿಲ್ಲ. ಬುದ್ಧಿಶಕ್ತಿ ಮತ್ತು ಅನುಭವಗಳುಳ್ಳ ಅವನೂ ಕೂಡ ಅವಳು ತನ್ನನ್ನು ಉಪೇಕ್ಷೆಮಾಡುತ್ತಿಲ್ಲವೆಂದು ನಿಸ್ಸಂದೇಹವಾಗಿ ಗ್ರಹಿಸಿದ್ದನು. ಆದರೂ, ಅದೇಕೆ ಇನ್ನೂ ಅವನು ತನ್ನ ಅಡಿಗಳ ಬಲಿ ಮಂಡಿಯೂರಿ ಕುಳಿತಿರಲಿಲ್ಲ, ತನ್ನ ಪ್ರೇಮವನ್ನು ಸಾರಿ ಹೇಳಿರಲಿಲ್ಲ? ಅವನನ್ನು ತಡೆಯುತ್ತಿರುವುದಾದರೂ ಏನು? ನಿಜವಾದ ಪ್ರೇಮಭಾವದಿಂದ ಬೇರ್ಪಡಿಸಲಾಗದ ಆತ್ಮವಿಶ್ವಾಸಲೋಪವೆ? ಗರ್ವವೆ? ಅನುಭವವುಳ್ಳ ಪ್ರಣಯವಿಲಾಸಿಯ ಚತುರತೆಯೆ? ಅವಳ ಭಾಗಕ್ಕೆ ಅವನು ಬಿಡಿಸಲಾರದ ಒಗಟೆಯಾಗಿದ್ದನು. ಬಹಳ ವಿಚಾರ ಮಾಡಿದಮೇಲೆ, ಆತ್ಮವಿಶ್ವಾಸವಿಲ್ಲದಿರುವುದೇ ಅವನ ಬಿಗುವಿನ ನಡೆತೆಗೆ ಮುಖ್ಯ ಕಾರಣವೆಂದು ನಿಶ್ಚಯಿಸಿದಳು; ಇನ್ನೂ ಹೆಚ್ಚು ಪ್ರಕಟವಾದ ಆದರೋಪಚಾರಗಳಿಂದ ಅವನಿಗೆ ಒತ್ತಾಸೆಕೊಡುವ ಕಾರ್ಯ ಭಾರವನ್ನು ತಾನೇ ವಹಿಸಿಕೊಂಡಳು; ಮತ್ತು ಸಮಯ ಸಂದರ್ಭ ಒದಗಿದಾಗ ಅವನ ಮೇಲೆ ಕರುಣೆಯನ್ನೂ ತೋರತೊಡಗಿದಳು. ಬಹುಮಟ್ಟಿಗೆ ಅನಿರೀಕ್ಷಿತವೆನಿಸುವ ಒಂದು ಸನ್ನಿವೇಶವನ್ನು ಕಲ್ಪಿಸಿ, ಅವನು ತನ್ನ ಪ್ರೇಮವನ್ನು ಪ್ರಕಾಶಗೊಳಿಸುವ ಗಳಿಗೆಯನ್ನು ಕಾತರಳಾಗಿ ಕಾಯತೊಡಗಿದಳು. ಯಾವ ಬಗೆಯ ರಹಸ್ಯವೇ ಆದರೂ ಅದು ಹೆಣ್ಣಿನ ಹೃದಯವನ್ನು ರೊಚ್ಚಿಗೆಬ್ಬಿಸುತ್ತದೆ. ಅವಳ ಈ ಯುದ್ಧತಂತ್ರಗಳು ಫಲಕಾರಿಯಾಗಿ ಪರಿಣಮಿಸಿದುವು. ಇನ್ನೇನಿಲ್ಲದಿದ್ದರೂ ಕಡೆಯಪಕ್ಷ ಅವನು ಧ್ಯಾನಮಗ್ನನಾಗಿ, ಅವನ ಕಪ್ಪು ಕಣ್ಣುಗಳು ಮಾರ್ಯ ಗಾವ್ರಿಲೊವ್ನಳ ಮುಖದ ಮೇಲೆ ಉತ್ಸಾಹದಿಂದ ನೆಲಸುವಮಟ್ಟಿಗಾಯಿತು; ಆ ನಿರ್ಣಾಯಕ ಕ್ಷಣ ಸನ್ನಿಹಿತವೆಂಬಂತೆ ತೋರಿತು. ಮದುವೆ ಗೊತ್ತಾದ ಹಾಗೆಯೆ ಎಂದು ನೆರೆಹೊರೆಯವರು ಆಗಲೇ ಮಾತಾಡಿಕೊಳ್ಳತೊಡಗಿದರು. ಸಾಧ್ವಿಯಾದ ಪ್ರಾಸ್ಕೊವ್ಯ ಪೆಟ್ರೊವ್ನ ತನ್ನ ಮಗಳು ಕಡೆಗೊಮ್ಮೆ ತನಗೆ ತಕ್ಕ ವರನನ್ನು ಹುಡುಕಿಕೊಂಡಳೆಂದು ಹಿಗ್ಗಿದಳು.

ಒಂದು ದಿನ ಆ ವೃದ್ಧೆ ತನ್ನ ಭೇಟಿಯ ಕೊನೆಯಲ್ಲಿ 'ಪೇಷೆನ್ಸ್' ಆಟಕ್ಕಾಗಿ

ಹೋಗಿದ್ದರೆ ನಾವು ಯಾವ ಸ್ಥಳವನ್ನು ಮುಟ್ಟಬೇಕಾಗಿತ್ತೋ ಅದನ್ನು ಬಳಸಿಕೊಂಡು ಗಾಡಿ ಹೊಡೆಯುವವನು ಮುಂದೆ ಸಾಗಿದ: ಹೀಗಾಗಿ, ನಾವು ಅಪರಿಚಿತವಾದ ಸ್ಥಳಕ್ಕೆ ಬಂದುಬಿಟ್ಟೆವು. ಬಿರುಗಾಳಿ ತಗ್ಗುವ ಸೂಚನೆಗಳೇ ಇರಲಿಲ್ಲ; ನಾನು ಒಂದು ಬೆಳಕು ಕಂಡು, ಆ ಕಡೆಗೆ ಹೋಗುವಂತೆ ಗಾಡಿ ಹೊಡೆಯುವವನಿಗೆ ಹೇಳಿದೆ. ನಾವು ಒಂದು ಹಳ್ಳಿಗೆ ಬಂದೆವು; ಮರದಿಂದ ಕಟ್ಟಿದ ಚರ್ಚಿನಲ್ಲಿ ಒಂದು ದೀಪವಿತ್ತು. ಬಾಗಿಲು ತೆರೆದಿತ್ತು; ಹಲವು ಜಾರುಬಂಡಿಗಳು ಬೇಲಿಯೊಳಗಡೆ ಸಾಲಾಗಿ ನಿಂತಿದ್ದುವು; ಮುಖ ಮಂಟಪದ ಒಳಗಡೆ ಜನ ಅತ್ತಿಂದಿತ್ತ ಓಡಾಡುತ್ತಿದ್ದರು. 'ಈ ಕಡೆ! ಈ ಕಡೆ ಬನ್ನಿ!' ಎಂದು ಹಲವು ದನಿಗಳು ಕೂಗಿದುವು. ಚರ್ಚಿನ ಹತ್ತಿರಕ್ಕೆ ಹೋಗಬೇಕೆಂದು ನಾನು ಗಾಡಿ ಹೊಡೆಯುವವನಿಗೆ ಹೇಳಿದೆ. "ಇಷ್ಟು ತಡಯಾಕೆ? ವಧು ಪ್ರಜ್ಞೆ ತಪ್ಪಿದ್ದಾಳೆ; ಏನು ಮಾಡಬೇಕೋ ಪಾದ್ರಿಗೆ ತಿಳಿಯದು; ನಾವು ಇನ್ನೇನು ಮನೆಗೆ ತೆರಳಿದ್ದೆವು. ಬೇಗ ಒಳಕ್ಕೆ ಬಾರಪ್ಪ!" ಎಂದು ಯಾರೋ ನನಗೆ ಹೇಳಿದರು. ಒಂದು ಮಾತೂ ಆಡದೆ ನಾನು ಜಾರುಬಂಡಿಯಿಂದ ದುಮುಕಿ, ಚರ್ಚನ್ನು ಪ್ರವೇಶಿಸಿದೆನು; ಅದು ಕೆಲವು ಮೋಂಬತ್ತಿಗಳ ಮಂದ ಪ್ರಕಾಶದಿಂದ ಬೆಳಗುತ್ತಿತ್ತು. ಒಂದು ಕತ್ತಲೆ ಮೂಲೆಯಲ್ಲಿ ಒಬ್ಬಳು ಚಿಕ್ಕ ಹುಡುಗಿ ಒಂದು ಬೆಂಚಿನ ಮೇಲೆ ಕುಳಿತಿದ್ದಳು; ಇನ್ನೊಬ್ಬಳು ಅವಳ ಹಣೆಯ ಪಕ್ಕಗಳನ್ನು ಉಜ್ಜುತ್ತಿದ್ದಳು. ಅವಳು, "ದೇವರ ದಯದಿಂದ ನೀವು ಸಕಾಲಕ್ಕೆ ಬಂದಿರಿ. ನಮ್ಮ ಒಡತಿಯನ್ನು ನೀವು ಕೊಂದೇಬಿಟ್ಟಿದ್ದಿರಿ" ಎಂದಳು. ಒಬ್ಬ ವೃದ್ಧ ಪಾದ್ರಿ ನನ್ನ ಬಳಿಗೆ ಬಂದು, 'ಪ್ರಾರಂಭಿಸೋಣವೆ?' ಎಂದು ಕೇಳಿದನು. 'ಆಗಲಿ, ಆಚಾರ್ಯ, ಪ್ರಾರಂಭಿಸಿ' ಎಂದೆ ನಾನು ಅನ್ಯಮನಸ್ಕನಾಗಿ. ಹುಡುಗಿಯನ್ನು ಕೈಹಿಡಿದು ನಿಲ್ಲಿಸಿದರು. ನನಗೆ ಅವಳು ಬಹಳ ಅಂದವಾಗಿಯೇ ಕಂಡಳು...ವಿವರಿಸಲಾಗದ, ಅಕ್ಷಮ್ಯವಾದ ಹುಡುಗಾಟಿಕೆ.....ನಾನು ಪವಿತ್ರವೇದಿಕೆಯ ಬಳಿ ಅವಳ ಪಕ್ಕದಲ್ಲಿ ನಿಂತೆ; ಪಾದ್ರಿ ತುಂಬ ಅವಸರದಲ್ಲಿದ್ದ; ಮೂವರು ಗಂಡಸರು, ಮತ್ತು ಒಬ್ಬಳು ಸೇವಕಿ ಇನ್ನು ಯಾರಕಡೆಗೂ ಲಕ್ಷ್ಯಕೊಡದೆ ವಧುವನ್ನು ಬೀಳದಂತೆ ಹಿಡಿದು ನಿಲ್ಲಿಸಿಕೊಂಡಿದ್ದರು. ನಮ್ಮನ್ನು ಗಂಡಹೆಂಡಿರನ್ನಾಗಿ ಮಾಡಿಬಿಟ್ಟರು. 'ಮುದ್ದಿಡಿ' ಎಂದು ನಮಗೆ ಹೇಳಿದರು. ನನ್ನ ಹೆಂಡತಿ ತನ್ನ ಬಿಳಿಚಿದ ಮೋರೆಯನ್ನು ನನ್ನ ಕಡೆಗೆ ತಿರುಗಿಸಿದಳು. ನಾನು ಇನ್ನೇನು ಅವಳನ್ನು ಮುತ್ತಿಡುವುದರಲ್ಲಿದ್ದೆ. ಆಗವಳು, 'ಓ, ಇವರಲ್ಲ! ಇವರಲ್ಲ!' ಎಂದು ಚೀರಿ, ಪ್ರಜ್ಞೆ ತಪ್ಪಿ ಕೆಳಕ್ಕೆ ಬಿದ್ದಳೂ. ಮದುವೆಗೆ ಸಾಕ್ಷಿಯಾಗಿದ್ದವರು ಪರೀಕ್ಷಿಸುವ ನಟ್ಟನೋಟದಿಂದ ನನ್ನನ್ನು ನೋಡತೊಡಗಿದರು. ನಾನು ತಿರುಗಿ, ಯಾರ

ರಹಸ್ಯವನ್ನು ನಿನಗೆ ಬಹಿರಂಗಪಡಿಸಬೇಕಾಗಿದೆ...." ಮಾರ್ಯ ಗಾವ್ರಿಲೊವ್ನ ಉತ್ಸಾಹದಿಂದ ನಡುವೆ ಬಾಯಿ ಹಾಕಿದಳು; "ಆ ಅಡ್ಡಿ ಯಾವಾಗಲೂ ಇತ್ತು...ನಾನು ಎಂದಿಗೂ ನಿಮ್ಮ ಹೆಂಡತಿಯಾಗಲು ಸಾಧ್ಯವಿರಲಿಲ್ಲ....." "ನನಗೆ ಗೊತ್ತು: ನೀನು ಇನ್ನೊಬ್ಬನನ್ನು ಪ್ರೀತಿಸುತ್ತಿದ್ದೆ, ನನಗೆ ಗೊತ್ತು. ಆದರೆ, ಸಾವು, ಮೂರು ವರ್ಷದ ದುಃಖ... ಪ್ರಿಯೇ, ಕರುಣೀ, ಮಾರ್ಯ ಗಾವ್ರಿಲೋವ್ನ, ನನಗುಳಿದಿರುವ ಒಂದೇ ಸಮಾಧಾನವನ್ನು ಕಸಿದುಕೊಳ್ಳಬೇಡ! ನನ್ನ ಸೌಖ್ಯಕ್ಕೆ ನೆಲೆಯಾಗಲು ನೀನು ಒಪ್ಪುತಿದ್ದೆ ಎಂಬ ಆಲೋಚನೆಗೆ ಅವಕಾಶವಿತ್ತು; ಆದರೆ ಮಾತ್ರ ... ಸುಮ್ಮನಿರು, ಬೇಡಿಕೊಳ್ಳುತ್ತೇನೆ, ನೀನು ಸುಮ್ಮನಿರು! ನೀನು ನನ್ನನ್ನು ಚಿತ್ರಹಿಂಸೆಗೆ ಗುರಿಪಡಿಸಿದ್ದೀಯೆ! ನೀನು ನನ್ನವಳಾಗಬಹುದಾಗಿತ್ತು, ನಾನು ಬಲ್ಲೆ, ನನಗೆ ಹಾಗೆನ್ನಿಸುತ್ತದೆ. ಆದರೆ–ನಾನೊಬ್ಬ ದುರದೃಷ್ಟಶಾಲಿ–ನನಗೆ....ನನಗೆ ಮದುವೆಯಾಗಿದೆ!" ಎಂದು ಅವನು ಮೃದುವಾಗಿ ಉತ್ತರಕೊಟ್ಟನು.

ಮಾರ್ಯ ಗಾವ್ರಿಲೊವ್ನ ಚಕಿತಳಾಗಿ ಅವನ ಕಡೆ ದೃಷ್ಟಿಸಿದಳು.

ಬರ್ಮಿನ್ ಮುಂದುವರಿಸಿದ: "ನನಗೆ ಮದುವೆಯಾಗಿದೆ; ಮದುವೆಯಾಗಿ ನಾಲ್ಕು ವರ್ಷ. ನನ್ನ ಹೆಂಡತಿ ಯಾರು, ಅವಳೆಲ್ಲಿದ್ದಾಳೆ, ಅವಳನ್ನು ಎಂದಾದರೂ ಕಾಣುವ ಯೋಗವಿದೆಯೆ–ಇದೇನನ್ನೂ ನಾನರಿಯೆ."

ಬರ್ಮಿನ್ ಹೇಳತೊಡಗಿದ : "೧೮೧೨ನೆಯ ಇಸವಿಯ ಪ್ರಾರಂಭದಲ್ಲಿ ನಾನು ವಿಲ್ನಕ್ಕೆ ಆತುರಾತುರವಾಗಿ ಹೋಗುತ್ತಿದ್ದೆ; ಅಲ್ಲಿ ನಮ್ಮ ಸೈನ್ಯದಳ ನೆಲಸಿತ್ತು. ಒಂದು ಸಂಜೆ ಹೊತ್ತಾದ ಮೇಲೆ ಒಂದು ಅಂಚೆಯ ನಿಲ್ದಾಣಕ್ಕೆ ಬಂದು ಕೂಡಲೆ ಗಾಡಿಗೆ ಹೊಸ ಕುದುರೆಗಳನ್ನು ಹೂಡಬೇಕೆಂದು ಆಜ್ಞೆ ಮಾಡಿದೆ; ಆಗ ಇದ್ದಕ್ಕಿದ್ದ ಹಾಗೆ ಒಂದು ಭಯಂಕರ ಹಿಮವರ್ಷ ಪ್ರಾರಂಭವಾಯಿತು; ನಿಲ್ದಾಣದ ಒಡೆಯನೂ ಗಾಡಿ ಹೊಡೆಯುವವರೂ ಅದು ನಿಲ್ಲುವವರೆಗೂ ಕಾದಿರಬೇಕೆಂದು ನನಗೆ ಸಲಹೆ ಮಾಡಿದರು. ನಾನು ಅವರ ಸಲಹೆಗೇನೋ ಗಮನಕೊಟ್ಟೆ: ಆದರೆ ಒಂದು ವಿಚಿತ್ರ ಕಳವಳದ ಭಾವನೆಗೆ ಒಳಗಾದೆ; ನನ್ನನ್ನು ಯಾವುದೋ ಶಕ್ತಿ ಚೋದಿಸುತ್ತಿರುವಂತೆ ಭಾಸವಾಯಿತು. ಹಿಮಮಾರುತದ ಬಿರುಸು ಸ್ವಲ್ಪವೂ ಕಡಮೆಯಾಗಲಿಲ್ಲ; ನಾನು ತಾಳ್ಮೆಗೆಟ್ಟು, ಕುದುರೆಗಳನ್ನು ಹೂಡಬೇಕೆಂದು ಮತ್ತೆ ಆಜ್ಞೆಕೊಟ್ಟೆ; ಬಿರುಗಾಳಿಯನ್ನು ಎದುರಿಸಿಕೊಂಡೇ ಹೊರಟುಬಿಟ್ಟೆ. ಗಾಡಿ ಹೊಡೆಯುವವನು ನದಿಯ ಪಕ್ಕದಲ್ಲಿಯೇ ಹೋಗಬೇಕೆಂದು ಆಲೋಚಿಸಿದ; ಇದರಿಂದ ಪ್ರಯಾಣದಲ್ಲಿ ಮೂರು ವರ್ಸ್ಟ್‌ಗಳಷ್ಟು ದೂರ ಉಳಿಯಬೇಕಾಗಿತ್ತು. ದಡಗಳ ಮೇಲೆ ಹಿಮ ಕವಿದಿತ್ತು; ರಸ್ತೆಯ ಮೇಲೆಯ

## ೩. ಶವಸಂಸ್ಕಾರ ನಿರ್ವಾಹಕ
(The Undertaker)

ಮುದಿಯಾಗುತ್ತಿಹ ನಮ್ಮೀ ವಿಶ್ವದ
ನರೆಗೂದಲ ತೆರವಿಹ ಶವಪೆಟ್ಟಿಗೆ–
ಗಳನೆಲ್ಲೆಲ್ಲಿಯು ನಾವು ನೋಡದೇ ?

–ಡಲ್‌ಷಾವಿನ್*

* ೧೮ನೆಯ ಶತಮಾನದ ರಷ್ಯನ್‌ಕವಿ ಗ್ಯಾವ್ರಿರಲ್ ಡರ್‌ಷಾವಿನ್ ಎಂಬಾತನು ಬರೆದ 'Waterfall' (ಜಲಪಾತ) ಎಂಬ ಪ್ರಗಾಥದಿಂದ.

ತಡೆಯೂ ಇಲ್ಲದೆ ಚರ್ಚನ್ನು ಬಿಟ್ಟು ಹೊರಟೆ! ನನ್ನ ಜಾರುಬಂಡಿಯೊಳಕ್ಕೆ ನುಗ್ಗಿ, 'ಹೊಡೆ' ಎಂದು ಗಟ್ಟಿಯಾಗಿ ಹೇಳಿದೆ.

"ಅಯ್ಯೋ ದೇವರೆ! ನಿಮ್ಮ ನಿರ್ಭಾಗ್ಯ ಪತ್ನಿಯ ಗತಿ ಏನಾಯಿತೆಂದು ನಿಮಗೆ ತಿಳಿಯದೆ?"

"ಇಲ್ಲ. ನನಗೆ ಎಲ್ಲಿ ಮದುವೆಯಾಯಿತೋ ಆ ಹಳ್ಳಿಯ ಹೆಸರು ನನಗೆ ಗೊತ್ತಿಲ್ಲ. ಆ ಹೊತ್ತಿನಲ್ಲಿ ನಾನು ಮಾಡಿದ ಆ ನಿಂದ್ಯವಾದ ಕುಚೇಷ್ಟೆಗೆ ನಾನು ಯಾವ ಪ್ರಾಮುಖ್ಯವನ್ನೂ ಕೊಡದೆ ಹೋದದ್ದರಿಂದ, ಚರ್ಚನ್ನು ಹಿಂದುಳಿದ ಕೂಡಲೆ ನಾನು ನಿದ್ದೆ ಹೋದವನು ಮರುದಿನ ಬೆಳಗ್ಗೆ ಮುಂದಿನ ಅಂಚೆಯ ನಿಲ್ದಾಣ ಸಿಕ್ಕುವವರೆಗೂ ಎಚ್ಚರಗೊಳ್ಳಲಿಲ್ಲ. ಆಗ ನನ್ನ ಜೊತೆಗಿದ್ದ ಸೇವಕ ಸೈನ್ಯಕಾರ್ಯಾಚರಣೆಯ ವೇಳೆಯಲ್ಲಿ ಸತ್ತುಹೋದ. ಹೀಗಾಗಿ, ನಾನು ಕ್ರೂರತನದಿಂದ ಪರಿಹಾಸಮಾಡಿದ ಆ ವ್ಯಕ್ತಿ ಈಗ ನನ್ನ ಮೇಲೆ ಅಷ್ಟೇ ಕ್ರೂರತನದಿಂದ ಸೇಡು ತೀರಿಸಿಕೊಂಡಂತಾಗಿದೆ; ಅವಳನ್ನು ಹುಡುಕುವ ಆಸೆಯೇ ಇಲ್ಲ."

"ಅಯ್ಯೋ ದೇವರೆ! ಹಾಗಿದ್ದರೆ ನೀವೇ ಅವರು! ನನ್ನ ಗುರುತು ಸಿಕ್ಕಲಿಲ್ಲವೆ ನಿಮಗೆ!"

ಬರ್ಮಿನ್ ವಿವರ್ಣನಾದನು......ಅವಳ ಪಾದಗಳೆಡೆ ಮಂಡಿಯೂರಿ ಕುಳಿತನು.

ಶವಸಂಸ್ಕಾರ ನಿರ್ವಾಹಕ* ಏಡ್ರಿಯನ್ ಪ್ರೊಖೊರಾಫ್‌ನ ಮನೆಯ ಚರಸ್ವತ್ತಿನ ಉಳಿಕೆಪಳಿಕೆಯನ್ನೆಲ್ಲ ಶವಸಾಗಿಸುವ ಬಂಡಿಯ ಮೇಲೆ ಹೇರಿದ್ದಾಗಿತ್ತು; ಗಾಡಿಯು ಸಣಕಲಾದ ಜೋಡಿಕುದುರೆಗಳು ನಾಲ್ಕನೆಯ ಸಲ ಬಾಸ್‌ಮಾನ್ಯರಸ್ತೆಯಿಂದ ನಿಕಿಟ್ಸಕಯ ರಸ್ತೆಗೆ ಪ್ರಯಾಸದಿಂದ ನಡೆದುಹೋದುವು; ಆತ ಆ ಬೀದಿಯಿಂದ ಈ ಬೀದಿಗೆ ತನ್ನ ಸಂಸಾರವನ್ನೆಲ್ಲಾ ಬದಲಾಯಿಸಿದ್ದ. ಅವನು ಅಂಗಡಿಗೆ ಬೀಗ ಹಾಕಿ, ಮನೆ ಬಾಡಿಗೆಗೆ, ಅಥವಾ ಮಾರಾಟಕ್ಕೆ, ಇದೆ ಎಂದು ಪ್ರಕಟನೆಯೊಂದನ್ನು ಮನೆಯ ದ್ವಾರದ ಮೇಲೆ ಮೊಳೆ ಹೊಡೆದು ಹಾಕಿ, ತನ್ನ ನೂತನ ನಿವಾಸಕ್ಕೆ ಕಾಲ್ನಡಗೆಯಲ್ಲಿ ಹೊರಟನು. ಬಹುಕಾಲದಿಂದ ತನ್ನ ಬಯಕೆಯ ಗುರಿಯಾಗಿದ್ದು ಕಡೆಗೊಮ್ಮೆ ತಕ್ಕಮಟ್ಟಿಗೆ ಹೆಚ್ಚಿನ ಮೊತ್ತದ ಹಣ ಸುರಿದು ಕೊಂಡುಕೊಂಡ ಆ ಮನೆಯ ಹಳದಿಯ ಬಣ್ಣದ ಗೋಡೆಗಳನ್ನು ಸಮೀಪಿಸಿದಾಗ ತನಗೆ ಸಂತೋಷ ಉಕ್ಕದಿದ್ದುದನ್ನು ಕಂಡು ಆತನಿಗೆ ಅಚ್ಚರಿಯೆನಿಸಿತು. ಹೊಸ ಮನೆಯ ಪಳಕೆಯಿಲ್ಲದ ಹೊಸಿಲನ್ನು ಮೆಟ್ಟಿನಿಂತು ತನ್ನ ಬಿಟ್ಟು ಬಂದ ಮುರುಕಲು ಜೋಪಡಿಯನ್ನು ನೆನೆದು ನಿಟ್ಟುಸಿರುಗರೆದನು: ಅಲ್ಲಿ ಹದಿನೆಂಟು ವರ್ಷ ಕಾಲ ವಾಸಮಾಡುತ್ತಿದ್ದಾಗ ಕಟ್ಟುನಿಟ್ಟಾದ ವ್ಯವಸ್ಥೆ ನೆಲಸಿತ್ತು; ಇಲ್ಲಿಯೊ, ಇನ್ನೂ ಎಲ್ಲವೂ ಅಸ್ತವ್ಯಸ್ತ, ಅವ್ಯವಸ್ಥೆ; ಅವರ ನಿಧಾನಕ್ಕಾಗಿ ತನ್ನ ಇಬ್ಬರು ಹೆಣ್ಣು ಮಕ್ಕಳನ್ನೂ ಕೆಲಸಗಿತ್ತಿಯನ್ನೂ ಗದರಿಸಿಕೊಂಡು, ಅವರಿಗೆ ಕೈನೆರವು ನೀಡತೊಡಗಿದ. ಬೇಗನೆ ಎಲ್ಲವನ್ನೂ ಒಂದು ವ್ಯವಸ್ಥೆಗೆ ತರಲಾಯಿತು; ಪ್ರತಿಮೆಗಳಿಂದ ಅಲಂಕೃತವಾದ ಮರದ ತಡಿಕೆ, ಪಿಂಗಾಣಿ ಸಾಮಾನಿಡುವ ಬೀರು, ಮೇಜು, ಆರಾಮಸೋಫ, ಹಾಸಿಗೆ ಮೊದಲಾದುವನ್ನೆಲ್ಲ ಹಿಂದುಗಡೆಯ ಕೋಣೆಯಲ್ಲಿ ಅವುಗಳ ಮೂಲೆಗಳಲ್ಲಿ ಇರಿಸಲಾಯಿತ; ಮನೆಯ ಯಜಮಾನನ ಸ್ವಂತ ಸಾಮಾನುಗಳನ್ನು–ಎಂದರೆ, ಎಲ್ಲ ಬಣ್ಣಗಳ ಮತ್ತು ಅಳತೆಗಳ ಹೆಣದ ಪೆಟ್ಟಿಗೆಗಳು, ದುಃಖಪ್ರದರ್ಶಕ ತಲೆಮುಸುಕು, ನಿಲುವಂಗಿ ಮತ್ತು ದೀವಟಿಗೆಗಳು ತುಂಬಿದ ಉಡುಪಿನ ಬೀರು ಮುಂತಾದುವನ್ನು–ಅಡಿಗೆ ಮನೆಯಲ್ಲೂ ಬೈಠಕುಖಾನೆಯಲ್ಲಿಯೂ ಪೇರಿಸಲಾಯಿತು. ಮನೆ ಮುಂದಿನ 'ಗೇಟಿ'ನ ಮೇಲೆ

---

* ಮುಖ್ಯವಾಗಿ ಪಾಶ್ಚಾತ್ಯ ದೇಶಗಳಲ್ಲಿ, ಶವಸಂಸ್ಕಾರ ಕಾರ್ಯಕ್ಕೆ ಬೇಕಾದ ಶವದಪಟ್ಟಿಗೆ ಶವವಸ್ತ್ರ, ಮೊದಲಾದ ಸಾಮಗ್ರಿಗಳನ್ನು ಒದಗಿಸಿಕೊಡುವವನು (Undertaker). –ಅನು.

ಅದರ ಪರಿಣಾಮವಾಗಿ ಅನೇಕ ನಿಲುವಂಗಿಗಳು ಕುಗ್ಗಿಹೋಗಿದ್ದುವು, ಟೋಪಿಯಂಚುಗಳು ಬಾಗು ಬಂದಿದ್ದುವು. ತಕ್ಕಮಟ್ಟಿಗೆ ಖರ್ಚು ಬೀಳುವುದೆಂದು ಆತ ನಿರೀಕ್ಷಿಸುತ್ತಿದ್ದ; ಏಕೆಂದರೆ, ಅವನ ಬಳಿಯಿದ್ದ ಶವಸಂಸ್ಕಾರ ವಸ್ತ್ರಗಳ ಪುರಾತನವಾದ ಸರಕೆಲ್ಲ ಶೋಚನೀಯ ಸ್ಥಿತಿಯಲ್ಲಿತ್ತು.

ಇಡಿಯ ವರ್ಷದಿಂದ ಗೋರಿಗೆ ಪ್ರಯಾಣ ಮಾಡಲೋ ಬೇಡವೊ ಎಂದು ಹಾಗೂ ಹೀಗೂ ತೂಗಾಡುತ್ತಿದ್ದ ವರ್ತಕನ ವಿಧವೆ ಹೆಂಡತಿ ಟ್ರ್ಯುಖಿನಾಳ ಶವಸಂಸ್ಕಾರದಿಂದ ತನ್ನ ನಷ್ಟವನ್ನೆಲ್ಲ ಕಟ್ಟಿಕೊಳ್ಳಬಹುದೆಂದು ಆತ ಆಶಿಸಿದ್ದ. ಆದರೆ ಟ್ರ್ಯುಖಿನಾ ರಾಜ್‌ಗುಲ್ಯಾಯಿಯಲ್ಲಿ ಸಾಯುವಳಿದ್ದಳು; ಅವಳ ಉತ್ತರಾಧಿಕಾರಿಗಳೇನೋ ತನಗೇ ಮಾತುಕೊಟ್ಟಿದ್ದರು; ಆದರೂ ಅವರು ತನಗೆ ಹೇಳಿಕಳಿಸುವಷ್ಟು ತೊಂದರೆ ತೆಗೆದುಕೊಳ್ಳಲಾರರೆಂದೂ ಅತ್ಯಂತ ಸಮೀಪದ 'ಕಂಟ್ರ್ಯಾಕ್ಟರ' (ಗುತ್ತಿಗೆದಾರ)ನನ್ನು ಗೊತ್ತು ಮಾಡಿಕೊಳ್ಳಬಹುದೆಂದೂ ಪ್ರೊಖೊರಾಫ್ ಶಂಕಿಸಿದನು.

ಮುಂಬಾಗಿಲು (ರಹಸ್ಯ ಸಂಕೇತ ರೀತಿಯಲ್ಲಿ) ಮೂರು ಸಲ ತಟ್ಟಿದಂತಾಗಿ ಅವನ ಧ್ಯಾನಕ್ಕೆ ಭಂಗವುಂಟಾಯಿತು. ಶವಸಂಸ್ಕಾರ ನಿರ್ವಾಹಕನು 'ಯಾರಲ್ಲಿ?' ಎಂದು ಗಟ್ಟಿಯಾಗಿ ಕೇಳಿದನು. ಬಾಗಿಲು ತೆರೆಯಿತು; ಒಬ್ಬ ಮತ್ತೆ ಉಲ್ಲಾಸಭಾವದಿಂದ ಕೋಣೆಯೊಳಕ್ಕೆ ಪ್ರವೇಶಿಸಿ, ಶವಸಂಸ್ಕಾರ ನಿರ್ವಾಹಕನ ಸಮೀಪಕ್ಕೆ ಬಂದನು. ಅವನನ್ನು ನೋಡಿದ ಕೂಡಲೆ ಅವನು ಒಬ್ಬ ............ ಗುರುತು ಹಿಡಿಯಬಹುದಾಗಿತ್ತು; ಈಗಲೂ ಕೇಳಿದರೆ ನಮ್ಮಲ್ಲಿ ಯಾರಿಗಾದರೂ ನಗುಬರುವಂತಹ 'ಅರ್ಧಂಬರ್ಧ' ರಷ್ಯನ್ ಭಾಷೆಯಲ್ಲಿ ಆತ ಹೇಳಿದ: 'ಸ್ವಾಮೀ, ದಯವಿಟ್ಟು ಕ್ಷಮಿಸಿ, ನಿಮಗೆ ವಿಘ್ನವುಂಟುಮಾಡುತ್ತಿದ್ದೇನೆಯೋ ಏನೋ. ಆದಷ್ಟು ಬೇಗ ನಿಮ್ಮ ಪರಿಚಯ ಮಾಡಿಕೊಳ್ಳಬೇಕೆಂದು ನನಗೆ ಆಸೆ. ನಾನೊಬ್ಬ ಜೋಡು ಹೊಲಿಯುವವನು; ಗಾಟ್ಲಿಯೆಬ್ ಷುಲ್‌ಟೆಸ್ ಎಂದು ನನ್ನ ಹೆಸರು; ನಿಮ್ಮ ಕಿಟಕಿಯಿಂದ ಕಾಣುತ್ತದೆ ನೋಡಿ, ಇದೇ ಬೀದಿಯ ಆಚೆಯ ಕಡೆ ಇರುವ ಆ ಚಿಕ್ಕಮನೆಯಲ್ಲಿ ನನ್ನ ವಾಸ. ನಾಳೆಯ ದಿನ ನನ್ನ ಮದುವೆಯ ರಜತೋತ್ಸವ; ಸ್ನೇಹಸೂಚಕವಾಗಿ ನೀವೂ ನಿಮ್ಮ ಪುತ್ರಿಯರೂ ದಯಮಾಡಿ ಬಂದು ನನ್ನೊಡನೆ ಭೋಜನ ಮಾಡಬೇಕೆಂದು ನಿಮ್ಮನ್ನು ಆಹ್ವಾನಿಸಬಯಸಿದ್ದೇನೆ." ಈ ಆಹ್ವಾನವನ್ನು ಆದರಪೂರ್ವಕ ಒಪ್ಪಿಕೊಳ್ಳಲಾಯಿತು. ಕುಳಿತುಕೊಂಡು ತನ್ನ ಸಂಗಡ ಒಂದು ಬಟ್ಟಲು ಚಹಾ ಕುಡಿಯಬೇಕೆಂದು ಶವಸಂಸ್ಕಾರ ನಿರ್ವಾಹಕನು ಮೋಚಿಯನ್ನು ಕೇಳಿಕೊಂಡನು; ಗಾಟ್ಲಿಯೆಬ್ ಷುಲ್‌ಟೆಸ್‌ನದು ಬಿಚ್ಚು ಹೃದಯದ

ಒಂದು 'ಬೋರ್ಡು' ಹಾಕಲಾಯಿತು: ಅದರಲ್ಲಿ–'ಸಾಧಾರಣವಾದ ಹಾಗೂ ಬಣ್ಣದ ಹೆಣದ ಪೆಟ್ಟಿಗೆಗಳನ್ನು ಇಲ್ಲಿ ಮಾರುತ್ತೇವೆ. ಸಿದ್ಧಪಡಿಸಿಕೊಡುತ್ತೇವೆ, ಬಾಡಿಗೆಗೆ ಕೊಡುತ್ತೇವೆ; ಹಳೆಯ ಹಣದ ಪೆಟ್ಟಿಗೆಗಳನ್ನು ಸರಿಮಾಡುತ್ತೇವೆ'– ಎಂಬ ಬರಹದ ಮೇಲೆ, ಕೈಯಲ್ಲಿ ತಲೆಕೆಳಗಾಗಿ ಹಿಡಿದುಕೊಂಡ ಪಂಜನ್ನುಳ್ಳ ಮೈತುಂಬಿದ ಕಾಮದೇವತೆಯ* ಚಿತ್ರವನ್ನು ಬರೆದಿತ್ತು. ಅವನ ಪುತ್ರಿಯರು ತಮ್ಮ ಕೋಣೆಗೆ ಹೋದರು; ತನ್ನ ಹೊಸ ಮನೆಯನ್ನು ಪರಿಶೀಲಿಸಿದ ಮೇ, ಏಡ್ರಿಯನ್ ಕಿಟಕಿಯ ಬಳಿ ಕುಳಿತುಕೊಂಡು, ಚಹಾ ಕಾಯಿಸುವ ಪಾತ್ರೆಯನ್ನು ಬಿಸಿಗಿಡುವಂತೆ ಆಜ್ಞೆ ಮಾಡಿದನು.

ಷೇಕ್ಸ್‌ಪಿಯರ್ ಮಹಾಕವಿಯೂ ಸರ್ ವಾಲ್ಟರ್ ಸ್ಕಾಟನೂ ಪರಸ್ಪರ ವಿರುದ್ಧ ಚಿತ್ರಣಗಳ ಮೂಲಕ ನಮ್ಮ ಮನಸ್ಸಿನ ಮೇಲೆ ಹೆಚ್ಚಿನ ಪರಿಣಾಮವುಂಟುಮಾಡುವುದಕ್ಕಾಗಿ, ತಾವು ನಿರೂಪಿಸುವ ಹೆಣದ ಕುಳಿತೋಡುವವರ ಪಾತ್ರಗಳನ್ನು ಲಾಘವವುಳ್ಳವರನ್ನಾಗಿಯೂ ಕುಚೋದ್ಯಗಾರರನ್ನಾಗಿಯೂ ಚಿತ್ರಿಸಿರುವುದನ್ನು ಪ್ರಾಜ್ಞನಾದ ಓದುಗನು ಬಲ್ಲನಷ್ಟೆ. ಆದರೆ ಅವರ ಮೇಲ್ಪಂಕ್ತಿಯನ್ನು ಅನುಸರಿಸಲು ನಮ್ಮ ಸತ್ಯನಿಷ್ಠೆ ನಮಗೆ ಅಡ್ಡ ನಿಲ್ಲುತ್ತದೆ; ನಮ್ಮ ಶವಸಂಸ್ಕಾರ ನಿರ್ವಾಹಕನ ಪ್ರಕೃತಿಯಾದರೋ ಅವನ ನಿರುತ್ಸಾಹದ ಕಸಬಿಗೆ ಪೂರ್ಣವಾಗಿ ಅನುಗುಣವಾಗಿತ್ತೆಂಬುದನ್ನು ನಾವು ಒಪ್ಪಿಕೊಳ್ಳದೆ ವಿಧಿಯಿಲ್ಲ. ಏಡ್ರಿಯನ್ ಪ್ರೊಖೊರಾಫ್ ಗಂಭೀರ ಮ್ಲಾನ ಮೂರ್ತಿ. ಯಾವಾಗಲಾದರೂ ಅಪೂರ್ವ ಸಂದರ್ಭಗಳಲ್ಲಿ ಅವನು ಮೌನವನ್ನು ಮುರಿದನೆಂದರೆ, ಅದು ತನ್ನ ಹೆಣ್ಣುಮಕ್ಕಳು ಏನೂ ಕೆಲಸವಿಲ್ಲದೆ ಕಿಟಕಿಯಿಂದ ಹೊರಗೆ ದಾರಿಹೋಕರನ್ನು ನೋಡುತ್ತಿದ್ದುದನ್ನು ಕಂಡಾಗ ಅವರನ್ನು ಝುಂಕಿಸುವುದಕ್ಕೆ; ಇಲ್ಲವೆ ತನ್ನ ಕೈಯಿಂದ ನಿರ್ಮಿಸಿದ ಪದಾರ್ಥಗಳ ಅವಶ್ಯಕತೆ ಹೊಂದಿರುವಮಟ್ಟಿಗೆ ದುರದೃಷ್ಟಶಾಲಿಗಳಾದ (ಅಥವಾ, ಸಂದರ್ಭಾನುಸಾರವಾಗಿ, ಅದೃಷ್ಟಶಾಲಿಗಳೇ ಆದ) ಗಿರಾಕಿಗಳಿಂದ ತಲೆಬೆಲೆಯನ್ನು ಕೇಳುವುದಕ್ಕೆ ಇಂತು, ಎಂದಿನಂತೆ ಖಿನ್ನನಾಗಿ ಚಿಂತೆಯಲ್ಲಿ ಮುಳುಗಿ, ಏಟ್ರಿಯನ್ ಏಳನೆಯ ಬಟ್ಟಲ ಚಹಾ ಕುಡಿಯುತ್ತ ಕಿಟಕಿಯ ಬಳಿ ಕುಳಿತಿದ್ದನು. ಕಳೆದವಾರ ನಿವೃತ್ತ 'ಬ್ರಿಗಡಿಯರ್'ನ (ದಳಪತಿ) ಶವದ ಮೆರವಣಿಗೆ ಸುಂಕದ ಕಟ್ಟೆಯನ್ನು ಹಾದುಹೋಗುತ್ತಿದ್ದಾಗ ಧಾರಕಾರವಾದ ಮಳೆ ಅದಕ್ಕೆ ಸ್ವಾಗತ ನೀಡಿದ್ದು ಅವನ ನೆನಪಿಗೆ ಬಂದಿತು.

---

* ಕಾಮದೇವನ ಚಿತ್ರ ಸಾಧಾರಣವಾಗಿ ರೆಕ್ಕೆಯುಳ್ಳ ಶಿಶುವಿನ ಆಕೃತಿಯಲ್ಲಿರುತ್ತದೆ–ಅನು.

ಮನ್ನಣೆಗೆ ಪಾತ್ರನಾಗಿದ್ದನು. ಪೊಗೊರೆಲ್‌ಸ್ಕಿಯ ಪ್ರಸಿದ್ಧನಾದ ಅಂಚೆಯವನಂತೆ* ಅವನೂ ಶ್ರದ್ಧೆಯಿಂದ ಪ್ರಾಮಾಣಿಕತೆಯಿಂದ ಇಪ್ಪತ್ತೈದು ವರ್ಷ ಕಾಲ ತನ್ನ ವೃತ್ತಿಯಲ್ಲಿ ಸೇವೆ ಸಲ್ಲಿಸಿದ್ದನು. ೧೮೧೨ರ ಅಗ್ನಿಯ ಹಾವಳಿ ಪುರಾತನ ರಾಜಧಾನಿಯನ್ನು ನಾಶಮಾಡಿದ್ದರ ಜೊತೆಗೆ ಅವನ ಹಳದಿಯ ಕಾವಲು ಪೆಟ್ಟಿಗೆಯನ್ನೂ ನಿರ್ನಾಮ ಮಾಡಿತ್ತು. ಆದರೆ ಶತ್ರುಗಳನ್ನು ಆಚೆಗೆ ಓಡಿಸಿದ ಕೂಡಲೆ, ಅದರ ಸ್ಥಳದಲ್ಲಿ, ಬೂದು ಬಣ್ಣ ಬಳಿದು ಅದರ ಮೇಲೆ ಬಿಳಿಯ 'ಡೋರಿಕ್' ಸ್ತಂಭಗಳ ಚಿತ್ರ ಬರೆದಿದ್ದ ಹೊಸ ಕಾವಲು ಪೆಟ್ಟಿಗೆ ಕಾಣಿಸಿಕೊಂಡಿತು; ಅದರ ಮುಂದುಗಡೆ ಆಪಾದಮಸ್ತಕ ಶಸ್ತ್ರಸಜ್ಜಿತನಾಗಿ ಯುರ್ಕೋ ಮತ್ತೆ ಶತಪಥ ತಿರುಗಾಡಲು ಮೊದಲು ಮಾಡಿದ್ದನು. ನಿಕಿಟ್‌ಸ್ಕಿಪುರ ದ್ವಾರದ ಸುತ್ತ ಮುತ್ತಣ ಬೀದಿಗಳಲ್ಲಿ ವಾಸವಾಗಿದ್ದ ಜರ್ಮನರಲ್ಲಿ ಬಹುಮಂದಿಯನ್ನು ಅವನು ಬಲ್ಲವನಾಗಿದ್ದನು; ಅವರಲ್ಲಿ ಕೆಲವರು ಭಾನುವಾರ ರಾತ್ರಿಗಳಲ್ಲಿ ಅವನ ಕಾವಲು ಪೆಟ್ಟಿಗೆಯಲ್ಲಿ ಕಾಲ ಕಳೆಯಬೇಕಾಗಿ ಬರುತ್ತಿತ್ತು. ಸದ್ಯದಲ್ಲಿಯೋ ಆಮೇಲೋ ಎಂದಾದರೊಮ್ಮೆ ಆತನ ಸಹಾಯ ಬೇಕಾಗುವುದೆಂದು ಭಾವಿಸಿ, ಏಡ್ರಿಯನ್ ಆತನ ಪರಿಚಯ ಮಾಡಿಕೊಳ್ಳಲು ತವಕಪಟ್ಟನು; ಅತಿಥಿಗಳೆಲ್ಲಾ ಮೇಜಿನ ಮುಂದೆ ಕುಳಿತಾಗ, ಇವರಿಬ್ಬರೂ ಪಕ್ಕ ಪಕ್ಕದಲ್ಲಿ ಕುಳಿತರು. ಶ್ರೀಮಾನ್ ಮತ್ತು ಶ್ರೀಮತಿ ಷುಲ್‌ಟ್ಸ್ ಹಾಗೂ ಅವರ ಹದಿನೇಳು ವರ್ಷದ ಮಗಳು ಲಾಟ್‌ಷೆನ್ ಅತಿಥಿಗಳೊಂದಿಗೆ ಭೋಜನ ಮಾಡುವ ವೇಳೆಯಲ್ಲಿ ಮೇಜಿನ ಬಳಿ ಓಡಾಡುತ್ತ, ಭಕ್ಷ್ಯ ಭೋಜ್ಯದ ತಟ್ಟೆಗಳನ್ನು ಸಿದ್ಧಪಡಿಸಲು ಅಡಿಗೆಯವನಿಗೆ ಸಹಾಯ ಮಾಡುತ್ತಿದ್ದರು. ಬಿಯರ್ ಮದ್ಯ ಧಾರಾಳವಾಗಿ ಹರಿಯಿತು. ನಾಲ್ಕು ಜನದ ಊಟವನ್ನು ಯುರ್ಕೋ ಒಬ್ಬನೇ ಸಾಗಿಸಿದ. ಏಡ್ರಿಯನ್ನನೇನೂ ಅವನಿಗೆ ಹಿಂದುಳಿಯಲಿಲ್ಲ. ಅವನ ಹೆಣ್ಣು ಮಕ್ಕಳು ತಮ್ಮ ನಡೆನುಡಿಯ ಒಪ್ಪದ ಕಡೆ ಗಮನವಿತ್ತರು. ಜರ್ಮನ್ ಭಾಷೆಯಲ್ಲಿ ನಡೆಯುತ್ತಿದ್ದ ಸಂಭಾಷಣೆ ಬರುಬರುತ್ತ ಗಟ್ಟಿಯಾಗಿ ಕೇಳಿಬಂತು. ಇದ್ದಕ್ಕಿದ್ದ ಹಾಗೆ ಅತಿಥೇಯನು ಎಲ್ಲರ ಗಮನವನ್ನೂ ಸೆಳೆದು, ಅಲ್ಲಲ್ಲಿ ಟಾರು ಮೆತ್ತಿಕೊಂಡ ಶೀಸೆಯ ಬಿರಡೆ ತೆಗೆದು, "ನನ್ನ ಲ್ಯೂಸೆಯ ಕ್ಷೇಮಾಭ್ಯುದಯಕ್ಕೆ!" ಎಂದು ರಷ್ಯನ್ ಭಾಷೆಯಲ್ಲಿ ಗಟ್ಟಿಯಾಗಿ ಹೇಳಿದನು. ಸೌಮ್ಯವಾದ 'ಷಾಂಪೇನ್' ಮದ್ಯ ನೊರೆಯಾಡಿತು. ತನ್ನ ಮಧ್ಯವಯಸ್ಸಿನ ಮಡದಿಯ ಹೊಸ ಕಳೆಯ ಮುಖವನ್ನು ಅತಿಥೇಯನ ಮುದ್ದಿಟ್ಟನು;

* ಅಲೆಕ್ಸಿ ಪೆರಾಫಾಸ್ಕಿ )ಕಾವ್ಯನಾಮ : ಆಂಟೊನಿ ಪೊಗೊರೆಲ್‌ಸ್ಕಿ( ಎಂಬ ಒಬ್ಬ ಕಾದಂಬರಿಕಾರನ ಕಾದಂಬರಿಯೊಂದರ ಮುಖ್ಯಪಾತ್ರ

ಸ್ವಭಾವವಾದ್ದರಿಂದ, ಇಬ್ಬರೂ ಬೇಗನೆ ಅತ್ಯಂತ ಸ್ನೇಹ ಸೌಹಾರ್ದದಿಂದ ಹರಟೆ ಹೊಡೆಯ ತೊಡಗಿದರು.

"ನಿಮ್ಮ ಕಸಬು ಹೇಗೆ ಸಾಗುತ್ತಿದೆ?" ಎಂದು ಏಡ್ರಿಯನ್ ವಿಚಾರಿಸಿದನು.

ಷುಲ್‌ಟೆಸ್ ಉತ್ತರಕೊಟ್ಟ: "ಪರವಾಗಿಲ್ಲ, ನಮ್ಮ ಕಸಬಿನಲ್ಲೂ ಏರುಪೇರುಗಳಿವೆ. ನಾನು ಗೊಣಗುವ ಹಾಗೇನೂ ಇಲ್ಲ. ನಮ್ಮ ಸರಕು ನಿಮ್ಮದರ ಹಾಗಲ್ಲ–ಬದುಕಿರುವವರು ಜೋಡಿಲ್ಲದೆ ನಿರ್ವಹಿಸಬಹುದು; ಆದರೆ ಸತ್ತವನು ತನ್ನ ಹೆಣದ ಪೆಟ್ಟಿಗೆಯಿಲ್ಲದೆ ವಾಸಮಾಡಲಾರ."

"ಪೂರ್ತಿ ನಿಜ. ಅಷ್ಟೇ ಅಲ್ಲದೆ, ಬದುಕಿರುವವನಿಗೆ ಜೋಡುಕೊಳ್ಳಲು ದುಡ್ಡಿಲ್ಲದೆ ಹೋದರೆ, ನಿಮ್ಮ ಕಣ್ಣಿಗೆ ಬೀಳದಂತೆ ಬರಿಗಾಲಿನಲ್ಲಿ ನಡೆದುಹೋಗಬಹುದು. ಆದರೆ ಸತ್ತ ತಿರುಪೆಯವನೂ ಕೂಡ ಏನೂ ಖರ್ಚುಮಾಡದೆ ತನ್ನ ಹೆಣದ ಪೆಟ್ಟಿಗೆ ಗಿಟ್ಟಿಸಿಬಿಡುತ್ತಾನೆ" ಎಂದು ಏಡ್ರಿಯನ್ ಸಮ್ಮತಿಸಿ ನುಡಿದ. ಈ ರೀತಿ ಅದರ ಸಂಭಾಷಣೆ ಇನ್ನು ಕೊಂಚ ಕಾಲ ಮುಂದುವರಿಯಿತು. ಕಡೆಗೆ .... ಮೇಲಕ್ಕೆದ್ದು ಮತ್ತೆ ನನ್ನ ಆಹ್ವಾನವನ್ನು ನೀಡಿ, ಶವಸಂಸ್ಕಾರ ನಿರ್ವಾಹಕನನ್ನು ಬೀಳ್ಕೊಂಡು ಹೊರಟನು.

ಮಾರನೆಯ ದಿನ ಮಧ್ಯಾಹ್ನಕ್ಕೆ ಸರಿಯಾಗಿ ಶವಸಂಸ್ಕಾರ ನಿರ್ವಾಹಕನೂ ಅವನ ಹೆಣ್ಣುಮಕ್ಕಳೂ ಹೊಸದಾಗಿ ಕೊಂಡ ಮನೆಯ ಹೊರಬಾಗಿಲನ್ನು ದಾಟಿ ತಮ್ಮ ನೆರೆಯಾತನಿಗೆ ಭೇಟಿಕೊಡಲು ಹೊರಟರು. ಆಧುನಿಕ ಕಾದಂಬರಿಕಾರರ ಅಂಗೀಕೃತ ಪದ್ಧತಿಯನ್ನು ಈ ವಿಚಾರದಲ್ಲಿ ಪಾಲಿಸದೆ ಹೋದರೂ ಚಿಂತೆಯಿಲ್ಲ, ಏಡ್ರಿಯನ್ ಪ್ರೊಖೊರಾಫ್‌ನ, ರಷ್ಯನ್ ಮಾದರಿಯ 'ಕಫ್ತಾನ್' ಉಡುಪನ್ನಾಗಲಿ ಅಕ್ಯುಲೀನ ಮತ್ತು ದಾರ್ಯ ಇವರ ಯೂರೋಪಿನ ಮಾದರಿಯ ಉಡಿಗೆತೊಡಿಗೆಯನ್ನಾಗಲಿ ವರ್ಣಿಸುವ ಗೋಜಿಗೆ ಹೋಗುವುದಿಲ್ಲ. ಆದರೂ ಒಂದು ಸಂಗತಿಯನ್ನು ಸೂಚಿಸುವುದು ಹೆಚ್ಚೇನೂ ಆಗಲಾರದು: ಇಬ್ಬರು ಕುಮಾರಿಯರೂ ತಾವು ವಿಶೇಷ ಸಂದರ್ಭಗಳಲ್ಲಿ ಮಾತ್ರ ಧರಿಸುತ್ತಿದ್ದ ಹಳದಿಯ ಟೋಪಿಗಳನ್ನೂ ಕೆಂಪು ಮೊಚ್ಚೆಗಳನ್ನೂ ಧರಿಸಿದ್ದರು.

ಮೋಚಿಯ ಸಣ್ಣಕೋಣೆ ಅತಿಥಿಗಳಿಂದ ಕಿಕ್ಕಿರಿದು ತುಂಬಿಹೋಗಿತ್ತು; ಅವರಲ್ಲಿ ಬಹುಮಂದಿ ತಮ್ಮ ಹೆಂಡಿರು ಮತ್ತು ಕೈಕೆಳಗೆ ಕೆಲಸ ಕಲಿಯುವವರೊಡನೆ ಬಂದಿದ್ದ ಜರ್ಮನ್ ಕೆಲಸಗಾರರು. ಅಲ್ಲಿಗೆ ಬಂದಿದ್ದ ಏಕಮಾತ್ರ ರಷ್ಯನ್ ಅಧಿಕಾರಿಯೆಂದರೆ ಪೊಲೀಸು ಕಾನ್‌ಸ್ಟೆಬಲ್ ಯುರ್ಕೋ; ಈತನ ಪದವಿ ಸಾಧಾರಣದ್ದಾದರೂ ಅತಿಥೇಯನ (ಅತಿಥಿ ಸತ್ಕಾರ ಮಾಡುವವನು) ವಿಶೇಷ

'ಕೆಂಪು ಮೊರಾಕೊ ಚಕ್ಕಳದಿಂದ ಬೈಂಡು' ಮಾಡಿದ ಹಾಗೆ ಕಾಣುವ ಮುಖವುಳ್ಳ ಪುಸ್ತಕ ಬೈಂಡು ಮಾಡುವವನು–ಇವರಿಬ್ಬರೂ ಪೋಲೀಸಿನವನ ತೋಳುಗಳ ಕೆಳಕ್ಕೆ ಕೈಕೊಟ್ಟು ಅವನನ್ನು ಅವನ ನಿವಾಸಕ್ಕೆ ಕರೆದೊಯ್ದು; ಈ ಸಂದರ್ಭದಲ್ಲಿ ಅವರು–ಸಾಲವನ್ನು ತೀರಿಸಿದಾಗ ಅದಕ್ಕೆ ಗೌರವ ಕೊಟ್ಟಹಾಗೆ–ಎಂಬ ರಷ್ಯನ್ ಗಾದೆಯನ್ನು ಪಾಲಿಸಿದರು. ಶವಸಂಸ್ಕಾರ ನಿರ್ವಾಹಕ ಗಲ್ಲಿಗೆ ಹಾಕುವವನ ಅಣ್ಣನೋ ಇಲ್ಲ ತಮ್ಮನೋ? ಈ ಪರಕೀಯರು ಹಾಗೆ ನಗುವುದಕ್ಕೆ ಏನು ಕಂಡರು? ಅವರ ದೃಷ್ಟಿಯಲ್ಲಿ ಶವಸಂಸ್ಕಾರಕರ್ತ ಕೋಡಂಗಿಯಾಗಿಬಿಟ್ಟನೆ? ನಾನು ಅವರನ್ನೆಲ್ಲ ನಮ್ಮ ಗೃಹಪ್ರವೇಶೋತ್ಸವಕ್ಕೆ ಕರೆಯೋಣವೆಂದುಕೊಂಡಿದ್ದೆ. ಇಷ್ಟೆಲ್ಲ ಆದಮೇಲೆ ಇನ್ನು ಕರೆಯುವುದಿಲ್ಲ! ನಾನು ಯಾರಿಗಾಗಿ ದುಡಿಯುತ್ತೇನೆಯೋ ಆ ನನ್ನ ಕ್ರೈಸ್ತ ಶವಗಳನ್ನು ಆಹ್ವಾನಿಸುತ್ತೇನೆ" ಎಂದು ತನ್ನಲ್ಲಿ ತಾನು ಗಟ್ಟಿಯಾಗಿ ಹೇಳಿಕೊಳ್ಳುತ್ತಿದ್ದನು. ಅವನ ಬೂಡ್ಸುಗಳನ್ನು ಕಳಚುತ್ತಿದ್ದ ಕೆಲಸದವಳು, "ಅಯ್ಯೊ, ಇದೇನು ಸ್ವಾಮಿ ಹೇಳುತ್ತಿರುವುದು! ಮೊದಲು ಶಿಲುಬೆಯ ಸಂಜ್ಞೆಮಾಡಿಕೊಳ್ಳಿ! ಗೃಹಪ್ರವೇಶೋತ್ಸವಕ್ಕೆ ಸತ್ತವರನ್ನು ಕರೆಯುವುದೇ! ಎಂಥ ಭಯಂಕರವಾದ ಕೆಲಸ!" ಎಂದು ಉದ್ಗಾರ ತೆಗೆದಳು. "ದೇವರಾಣೆಗೂ ನಾನು ಹಾಗೆಯೇ ಮಾಡುತ್ತೇನೆ! ನಾಳೆಯೇ ಹಾಗೆ ಮಾಡುತ್ತೇನೆ! ಓ ನನ್ನ ಉಪಕಾರಿಗಳೇ, ನಾಳೆ ರಾತ್ರಿ ನಮ್ಮ ಮನೆಗೆ ಔತಣಕ್ಕೆ ದಯಮಾಡಿಸುವ ಕೃಪೆಮಾಡಿ ನನಗೆ ಗೌರವ ತಂದುಕೊಡಬೇಕು. ನನ್ನಲ್ಲಿರುವ ಅಲ್ಪವನ್ನು ಸ್ವೀಕರಿಸಬೇಕು ಎಂದನು ಏಡ್ರಿಯನ್. ಈ ಮಾತುಗಳನ್ನು ನುಡಿದು ಶವಸಂಸ್ಕಾರ ಕರ್ತಹಾಸಿಗೆಯಲ್ಲಿ ಮಲಗಿ, ಬೇಗನೆ ಗೊರಕೆ ಹೊಡೆಯುತ್ತಿದ್ದನು.

ಏಡ್ರಿಯನ್ನನನ್ನು ಎಚ್ಚರಗೊಳಿಸಿದಾಗ ಹೊರಗಡೆ ಇನ್ನೂ ಕತ್ತಲೆ. ವರ್ತಕನ ಹೆಂಡತಿ ಟ್ರ್ಯುಖಿನಾ ರಾತ್ರಿ ಸತ್ತುಹೋಗಿದ್ದಳು. ಅವಳ ಸ್ವಂತ ಸೇವಕನ ಕಡೆಯಿಂದ ಒಬ್ಬ ಸುದ್ದಿಗಾರ ಆ ಸುದ್ದಿಯನ್ನು ಏಡ್ರಿಯನ್ನಿಗೆ ಮುಟ್ಟಿಸಲು ಕುದುರೆಯ ಮೇಲೆ ನಾಗಾಲೋಟದಲ್ಲಿ ಬಂದಿದ್ದನು. ಶವಸಂಸ್ಕಾರ ಕರ್ತನು ಅವನಿಗೆ 'ವೋಡ್ಕ' ಕುಡಿಯಲು ಹತ್ತು 'ಕೊಪೆಕ್'ಗಳ ಬಹುಮಾನವಿತ್ತು, ಆತುರಾತುರವಾಗಿ ಉಡುಪು ಧರಿಸಿಕೊಂಡು, ಒಂದು 'ಡ್ರಾಷ್ಕಿ' ಬಂಡಿಯನ್ನು ಕೂಗಿ ಕರೆದು, ರಾಸ್‌ಗುಲಾಯಿಗೆ ಅದರಲ್ಲಿ ಭಾವಿಸಿದನು. ಮೃತಳ ಮನೆಯ ದ್ವಾರದ ಮುಂದೆ ಆಗಲೆ ಪೋಲೀಸು ಪಹರೆ ಹಾಕಿಬಿಟ್ಟಿತು; ಹೆಣದ ವಾಸನೆ ಹಿಡಿದ ಕಾಗೆಗಳಂತೆ ವರ್ತಕರು ಅತ್ತಿಂದಿತ್ತ ಬಿಂಕದಿಂದ ಸುಳಿದಾಡುತ್ತಿದ್ದರು. ಶವವನ್ನು ಮೇಜಿನ ಮೇಲೆ ಮಲಗಿಸಿದ್ದರು; ಅವಳ ಮೋರೆ ಮೇಣದ ಮುದ್ದೆಯಾಗಿದ್ದರೂ ಮುಖ ಲಕ್ಷಣಗಳು ಕೊಳೆತದಿಂದ

ಅತಿಥಿಗಳೆಲ್ಲರೂ ಆ ಸಾಧ್ವಿಯ ಕ್ಷೇಮಾಭ್ಯುದಯವನ್ನು ಹಾರೈಸಿ ಸಶಬ್ಧವಾಗಿ ಮದ್ಯಪಾನಮಾಡಿದರು. ಅತಿಥೇಯನು ಇನ್ನೊಂದು ಶೀಸೆಯ ಬಿರಡೆ ತೆಗೆದು, "ನನ್ನ ಪ್ರೀತಿಪಾತ್ರರಾದ ಅತಿಥಿಗಳ ಕ್ಷೇಮಾಭ್ಯುದಯಕ್ಕೆ!" ಎಂದು ಘೋಷಿಸಿದನು; ಅತಿಥಿಗಳು ಮತ್ತೆ ತಮ್ಮ ಲೋಟಗಳನ್ನು ಬರಿದು ಮಾಡಿ, ತಮ್ಮ ಪ್ರತಿವಂದನೆ ಸಲ್ಲಿಸಿದರು. ಪರಸ್ಪರ ಕ್ಷೇಮವನ್ನು ಕೋರುವ 'ಸ್ವಸ್ತಿಪಾನ' ಅವಿಚ್ಛಿನ್ನವಾಗಿ ಸಾಗಿತು–ಎಲ್ಲರೂ ಪ್ರತಿಯೊಬ್ಬ ವ್ಯಕ್ತಿಗೂ ಬೇರೆಬೇರೆಯಾಗಿ ಸ್ವಸ್ತಿಪಾನ ಮಾಡಿದರು; ಅನಂತರ ಮಾಸ್ಕೋ ನಗರಕ್ಕೆ ಶುಭಕೋರಿ ಪಾನಮಾಡಿದರು; ಅನಂತರ ಸುಮಾರು ಹತ್ತು ಹನ್ನೆರಡು ಸಣ್ಣ ಸಣ್ಣ ಜರ್ಮನ್ ಪಟ್ಟಣಗಳಿಗೆ; ಬಳಿಕ ಒಟ್ಟಿನ ಮೇಲೆ ಎಲ್ಲ ಕಸಬುಗಳಿಗೂ, ಆಮೇಲೆ ಪ್ರತ್ಯೇಕವಾಗಿ ಒಂದೊಂದಕ್ಕೂ ಸ್ವಸ್ತಿಪಾನ ನಡೆಯಿತು; ಎಲ್ಲ ಕೆಲಸಗಾರರ ಮತ್ತು ಅವರ ಕೈಕೆಳಗೆ ಕೆಲಸ ಕಲಿಯುವವರ ಆರೋಗ್ಯವನ್ನು ಕೋರಿ ಸ್ವಸ್ತಿಪಾನ ಮಾಡಿದರು. ಏಡ್ರಿಯನ್ ಅಂತಃಕರಣಪೂರ್ವಕವಾಗಿ ಪಾನಮಾಡಿ, ಕಡೆಗೆ ಎಷ್ಟು ಹಿಗ್ಗಿಹೋದನೆಂದರೆ, ನಿಜವಾಗಿಯೂ ವಿಚಿತ್ರವಾದ ಒಂದು ಸ್ವಸ್ತಿಪಾನವನ್ನು ಸೂಚಿಸಿದರು. ಅನಂತರ ಅತಿಥಿಗಳಲ್ಲಿ ಒಬ್ಬನಾದ ಬೊಜ್ಜು ಬೆಳೆದ ರೊಟ್ಟಿಯ ವ್ಯಾಪಾರಿಯೊಬ್ಬನು ತನ್ನ ಲೋಟವನ್ನು ಮೇಲಕ್ಕೆತ್ತಿ, "ಯಾರಿಗಾಗಿ ನಾವು ಕೆಲಸ ಮಾಡುತ್ತೇವೆಯೋ ಅವನ ಆರೋಗ್ಯವನ್ನು ಬಯಸಿ ಕುಡಿಯೋಣ!" ಎಂದು ಗಟ್ಟಿಯಾಗಿ ಹೇಳಿದನು. ಹಿಂದಿನಂತೆಯೇ ಎಲ್ಲರೂ ಒಂದಾಗಿ ಹಿಗ್ಗಿನಿಂದಲೇ ಈ ಸ್ವಸ್ತಿಪಾನ ಮಾಡಿದರು. ಅತಿಥಿಗಳು ಒಬ್ಬರಿಗೊಬ್ಬರು ತಲೆಬಾಗಲು ಪ್ರಾರಂಭಿಸಿದರು–ದರ್ಜಿ ಮೋಚಿಗೆ ತಲೆಬಾಗಿದನು, ಮೋಚಿ ದರ್ಜಿಗೆ ಮಣಿದನು, ರೊಟ್ಟಿಯಂಗಡಿಯವನು ಇಬ್ಬರಿಗೂ ನಮಸ್ಕಾರ ಮಾಡಿದನು, ನೆರೆದಿದ್ದವರ ಗುಂಪೆಲ್ಲ ರೊಟ್ಟಿಯಂಗಡಿಯವನಿಗೆ ತಲೆಬಾಗಿತು; ಹೀಗೆಯೇ ಸಾಗಿತು. ಈ ಪರಸ್ಪರ ನಮಸ್ಕಾರಗಳ ನಡುವೆ ಯುರ್ಕೋ ಶವಸಂಸ್ಕಾರಕರ್ತನ ಕಡೆ ತಿರುಗಿ, "ಮಿತ್ರವರ್ಯ, ಬಾರಯ್ಯಾ, ನಿನ್ನ ಸತ್ತ ಸ್ನೇಹಿತರ ಆರೋಗ್ಯವನ್ನು ಕೋರಿ ಪಾನಮಾಡಯ್ಯಾ!" ಎಂದು ಗಟ್ಟಿಯಾಗಿ ಹೇಳಿದನು. ಪ್ರತಿಯೊಬ್ಬರೂ ನಕ್ಕರು; ಆದರೆ ಶವ ಸಂಸ್ಕಾರಕರ್ತನು ಅಪಮಾನಗೊಂಡವನಾಗಿ, ಹುಬ್ಬುಗಂಟಿಕ್ಕಿದನು. ಯಾರೂ ಇದನ್ನು ಗಮನಿಸಲಿಲ್ಲ; ಅತಿಥಿಗಳು ಕುಡಿಯುತ್ತಲೇ ಇದ್ದರು; ಅವರು ಮೇಜನ್ನು ಬಿಟ್ಟು ಏಳುವ ವೇಳೆಗೆ ಸಾಯಂಸಂಧ್ಯಾ ಪ್ರಾರ್ಥನೆಯ ಘಂಟನಾದವಾಗುತ್ತಿತ್ತು.

ಬಹಳ ಹೊತ್ತಾದ ಮೇಲೆ ಅತಿಥಿಗಳೆಲ್ಲ ಚೆದರಿದರು; ಅವರಲ್ಲಿ ಬಹುಮಂದಿಗೆ ಕುಡಿತದ ಅಮಲೇರಿತ್ತು. ಬೊಜ್ಜುಮೈಯ ರೊಟ್ಟಿಯಂಗಡಿಯವನು,

ಕಳ್ಳನಿರಬಹುದೆ? ಅಥವಾ ನನ್ನ ಚಿಕ್ಕ ಮೂರ್ಖರನ್ನು ಭೇಟಿ ಮಾಡಲು ಯಾರಾದರೂ ಯುವಕರು ಬಂದಿದ್ದಿರಬಹುದೆ?'' ತನ್ನ ನೆರವಿಗಾಗಿ ಯುರ್ಕೋವನ್ನು ಕರೆಯಬೇಕೆಂಬ ಆಲೋಚನೆಯೂ ಅವನಿಗೆ ಬಂದಿತು. ಅದೇ ತಾನೇ ಇನ್ನೊಬ್ಬ ವ್ಯಕ್ತಿ ಗೇಟಿನ ಬಳಿ ಸಾರಿ ಪ್ರವೇಶಿಸಲಿದ್ದವನು ಮನೆಯ ಕಡೆ ಅವಸರವಾಗಿ ಬರುತ್ತಿದ್ದ ಶವಸಂಸ್ಕಾರ ನಿರ್ವಾಹಕನನ್ನು ಕಂಡು, ಸ್ತಬ್ಧನಾಗಿ ನಿಂತು, ತನ್ನ ಅಂಚಿಲ್ಲದ ಚೂಪು ಟೋಪಿಯನ್ನು ಮೇಲಕ್ಕೆತ್ತಿದ. ಆತುರದಲ್ಲಿದ್ದ ಏಡ್ರಿಯನ್ನಿಗೆ ಆ ವ್ಯಕ್ತಿಯ ಮುಖವನ್ನು ಹತ್ತಿರದಲ್ಲಿ ಪರೀಕ್ಷಿಸಿ ತಿಳಿಯಲು ಸಾದ್ಯವಾಗಲಿಲ್ಲ; ಆದರೂ ಆ ಮುಖವನ್ನು ತಾನು ಬಲ್ಲಂತೆ ಭಾವಿಸಿದನು.

ಅವನು ಮೇಲುಸಿರೆಳೆಯುತ್ತ, 'ನೀವು ನನ್ನನ್ನು ನೋಡಲು ಬರುತ್ತಿದ್ದಿರೇನೋ, ಒಳಕ್ಕೆ ದಯಮಾಡಿಸಿ" ಎಂದನು. ಆ ಅಜ್ಞಾತ ವ್ಯಕ್ತಿ, "ಉಪಚಾರ ಗೀಚಾರ ಬೇಕಿಲ್ಲ, ಮಿತ್ರರೆ. ನೀವು ಮೊದಲು ಒಳಕ್ಕೆ ನಡೆಯಿರಿ, ನಿಮ್ಮ ಅತಿಥಿಗಳಿಗೆ ದಾರಿ ತೋರಿಸಿ–'' ಎಂದು ಕಪಟಧ್ವನಿಯಲ್ಲಿ ನುಡಿದನು. ಏಡ್ರಿಯನ್ ಅತ್ಯವಸರದಲ್ಲಿದ್ದುದರಿಂದ ಉಪಚಾರ ನಿಯಮಗಳಿಗೆ ಗಮನ ಕೊಡುವಂತೆಯೂ ಇರಲಿಲ್ಲ. ಅವನು ಗೇಟಿನ ಅಗುಳಿಯನ್ನು ತೆಗೆದು, ಮೆಟ್ಟಿಲುಗಳನ್ನು ಹತ್ತಿ ಮನೆಗೆ ಹೋದನು; ಇತರರು ಅವನನ್ನು ಹಿಂಬಾಲಿಸಿದರು. ತನ್ನ ಕೋಣೆಗಳಲ್ಲಿ ಜನ ಓಡಾಡುತ್ತಿದ್ದಾರೆಂದು ಏಡ್ರಿಯನ್ನಿಗೆ ಭಾಸವಾಯಿತು. ಒಳಕ್ಕೆ ಹೋಗುವ ಆತುರದಲ್ಲಿ ಅವನು, "ಇದೇನು ಅಧ್ವಾನ! ಒಂದೂ ಅರ್ಥವಾಗುವುದೇ ಇಲ್ಲವಲ್ಲಾ!" ಎಂದು ಆಲೋಚಿಸುತ್ತಿರುವಂದು...... ಅವನ ಕಾಲು ಕುಸಿಯಿತು. ಕೋಣೆಯ ತುಂಬ ಹೆಣಗಳು! ಕಿಟಕಿಯ ಮೂಲಕ ಚಂದ್ರ ತೂರಿ ಬಂದು ಅವುಗಳ ಹಳದಿಯಾದ ಹಾಗೂ ನೀಲಿಗಟ್ಟಿದ ಮೋರೆಗಳನ್ನೂ, ಜೋತುಬಿದ್ದ ಬಾಯಿಗಳನ್ನೂ, ಮಂಕಾದ ಅರೆಮುಚ್ಚಿ ಕಣ್ಣುಗಳನ್ನೂ ಮೇಲಕ್ಕೆದ್ದ ಮೂಗುಗಳನ್ನೂ ಬೆಳಗುತ್ತಿದ್ದನು........ ಯಾರನ್ನೂ ಸಮಾಧಿ ಮಾಡಲು ತಾನು ನೆರವಾಗಿದ್ದನೋ ಅವರನ್ನೆಲ್ಲ ಗುರುತಿಸಿ ಏಡ್ರಿಯನ್ ಭಯಗೊಂಡನು; ತನ್ನೊಡನೆ ಒಳಕ್ಕೆ ಬಂದವನು, ಸುರಿಯುವ ಮಳೆಯಲ್ಲಿ ಸಮಾಧಿಗೊಂಡ ದಳಪತಿಯಾಗಿದ್ದನು. ಅಲ್ಲಿದ್ದ ಸ್ತ್ರೀಪುರುಷರಾದಿಯಾಗಿ ಎಲ್ಲರೂ ಶವಸಂಸ್ಕಾರ ನಿರ್ವಾಹಕನಿಗೆ ಬಾಗಿ ನಮಸ್ಕಾರ ಹೇಳುತ್ತ ಅವನ ಸುತ್ತ ಗುಂಪುಗೂಡಿದರು; ಒಬ್ಬ ಬಡಪ್ರಾಣಿ ಮಾತ್ರ ಹತ್ತಿರಕ್ಕೆ ಬಾರದೆ ತನ್ನ ಹರುಕಲು ಉಡುಪಿಗಾಗಿ ಲಜ್ಜೆಗೊಂಡವನಂತೆ ಕೋಣೆಯ ಒಂದು ಮೂಲೆಯಲ್ಲಿ ನಮ್ರನಾಗಿ ನಿಂತಿದ್ದನು; ಸ್ವಲ್ಪ ಕಾಲದ ಹಿಂದೆ ರುಸುಮು ತೆಗೆದುಕೊಳ್ಳದೆ ಅವನನ್ನು ಸಮಾಧಿ ಮಾಡಲಾಗಿತ್ತು. ಅವನನ್ನುಳಿದು ಮತ್ತೆಲ್ಲರೂ

ವಿಕಾರವಾಗಿರಲಿಲ್ಲ. ಬಂಧುಗಳು, ನೆರೆಹೊರೆಯವರು, ಮತ್ತು ಮನೆಗೆಲಸದವರು– ಇವರೆಲ್ಲ ಅವಳ ಸುತ್ತ ಗುಂಪುಗೂಡಿದ್ದರು, ಕಿಟಕಿಗಳೆಲ್ಲವೂ ತೆರೆದಿದ್ದುವು; ಮೋಂಬತ್ತಿಗಳು ಉರಿಯುತ್ತಿದ್ದುವು; ಮೃತಳ ಸದ್ಗತಿಗಾಗಿ ಪಾದ್ರಿಗಳು ಪ್ರಾರ್ಥನೆಗಳನ್ನು ಓದುತ್ತಿದ್ದರು.

ಏಡ್ರಿಯನ್ ಮೃತ ಮಹಿಳೆಯ ಸೋದರಳಿಯನ ಬಳಿಗೆ ಹೋದ; ಆ ತರುಣವರ್ತಕ ಸೊಗಸಾದ ನಿಲುವಂಗಿ ಧರಿಸಿ ನಿಂತಿದ್ದ; ಶವಸಂಪುಟ, ಅದರ ಮೇಲೆ ಹೊದಿಸುವ ವಸ್ತ್ರ, ಮೋಂಬತ್ತಿಗಳು ಮತ್ತು ಶವಸಂಸ್ಕಾರಕ್ಕೆ ಸಂಬಂಧಪಟ್ಟ ಇತರ ಸಾಮಾನು ಸರಂಜಾಮೆಲ್ಲವನ್ನೂ ಸುಸ್ಥಿತಿಯಲ್ಲಿ ಸರಬರಾಯಿ ಮಾಡಲಾಗುವುದೆಂದು ಏಡ್ರಿಯನ್ ಅವನಿಗೆ ತಿಳಿಸಿದನು. ಆ ಉತ್ತರಾಧಿಕಾರಿ ತಾನು ಕರೆಯದ ವಿಚಾರವಾಗಿ ಚೌಕಾಶಿ ಮಾಡುವುದಿಲ್ಲವೆಂದೂ ಶವಸಂಸ್ಕಾರ ನಿರ್ವಾಹಕನ ಮಾತಿನಲ್ಲಿ ಪೂರ್ಣ ವಿಶ್ವಾಸವಿಡುವುದಾಗಿಯೂ ಹೇಳಿ, ಅನ್ಯಮನಸ್ಕನಾಗಿ ಅವನಿಗೆ ವಂದನೆ ಸಲ್ಲಿಸಿದನು. ಶವಸಂಸ್ಕಾರಕರ್ತನು, ತನ್ನ ಪದ್ಧತಿಯ ಪ್ರಕಾರ, ತಾನು ಒಂದು ಕೊಪೆಕ್ಕನ್ನೂ ಹೆಚ್ಚಾಗಿ ಬೆಲೆಹಾಕುವುದಿಲ್ಲವೆಂದು ಹೇಳಿ, ಮೃತಳ ವೈಯಕ್ತಿಕ ಸೇವಕನ ಕೂಡ ಅರ್ಥಪೂರ್ಣ ದೃಷ್ಟಿಯನ್ನು ವಿನಿಮಯಮಾಡಿ, ಸಿದ್ಧತೆಗಳನ್ನು ಮಾಡಲು ಗಾಡಿಯಲ್ಲಿ ಹಿಂದಿರುಗಿದನು. ಆ ದಿನವೆಲ್ಲಾ ಅವನು ರಾಸ್‌ಗುಲಾಯಿ ಮತ್ತು ನಿಕಿಟ್‌ಸ್ಕಿ ದ್ವಾರಗಳ ನಡುವೆ ಗಾಡಿಯಲ್ಲಿ ಅಲ್ಲಿಂದಿಲ್ಲಿಗೆ ಓಡಾಡುತ್ತಲೇ ಇದ್ದನು. ಸಂಜೆಯ ಹೊತ್ತಿಗೆ ಎಲ್ಲ ಒಂದು ವ್ಯವಸ್ಥೆಗೆ ಬಂದಿತು; ಅವನು ಗಾಡಿಯವನನ್ನು ಹೊರಟುಹೋಗುವ ಹಾಗೆ ಹೇಳಿ ನಡೆದುಕೊಂಡೆ ಮನೆಗೆ ಹಿಂದಿರುಗಿದನು. ಅಂದು ಬೆಳುದಿಂಗಳ ರಾತ್ರಿ. ಶವಸಂಸ್ಕಾರ ನಿರ್ವಾಹಕನು ಸುರಕ್ಷಿತವಾಗಿ ನಿಕಿಟ್‌ಸ್ಕಿದ್ವಾರದ ಬಳಿಗೆ ಬಂದನು. ಅವನು 'ಅಸೆನ್‌ಷನ್' ಚರ್ಚನ್ನು* ಹಾದು ಹೋಗುತ್ತಿದ್ದಾಗ ನಮ್ಮ ಗೆಳೆಯ ಯುರ್ಕೋ ಅವನನ್ನು ತಡೆದು ನಿಲ್ಲಿಸಿದನು; ಶವಸಂಸ್ಕಾರಕರ್ತನೆಂದು ಗುರುತಿಸಿದ ಮೇಲೆ ಅವನಿಗೆ ಶುಭ ಕೋರಿಬೀಳ್ಕೊಟ್ಟನು. ರಾತ್ರಿ ತುಂಬ ಹೊತ್ತಾಗಿತ್ತು. ಶವಸಂಸ್ಕಾರ ಕರ್ತನು ತನ್ನ ಮನೆಯನ್ನು ಸಮೀಪಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಯಾರೋ ಗೇಟಿನ ಬಳಿಗೆ ಬಂದು, ಅದನ್ನು ತೆರೆದುಕೊಂಡು, ಅದರ ಮೂಲಕ ಕಣ್ಮರೆಯಾಗಿ ಹೊರಟುಹೋದಂತೆ ಅವನಿಗೆ ತೋರಿತು. "ಏನಿದರ ಅರ್ಥ?" ಎಂದು ಏಡ್ರಿಯನ್ ಅಚ್ಚರಿಗೊಂಡನು. "ನನ್ನ ಆವಶ್ಯಕ ಮತ್ತೆ ಯಾರಿಗಿದ್ದೀತು? ಮನೆಗೆ ನುಗ್ಗಿದ

* ಕ್ರಿಸ್ತನಸ್ವರ್ಗಾರೋಹಣದ ಜ್ಞಾಪಕಾರ್ಥವಾಗಿ ಕಟ್ಟಿದ ಚರ್ಚು –ಅನ್ನು

ನಜ್ಜುಗುಜ್ಜಾಗಿ, ತನ್ನ ಮನಶ್ಶಾಂತಿಯನ್ನೂ ಚಿತ್ತಸ್ಥೈರ್ಯವನ್ನೂ ಕಳೆದುಕೊಂಡು, ಮೃತನಾಗಿದ್ದ ಪಹರೆದಳದ ಸೈನಿಕನ ಮೂಳೆಗಳ ಮೇಲೆ ಪ್ರಜ್ಞಾ ಶೂನ್ಯವಾಗಿ ಬಿದ್ದು ಬಿಟ್ಟನು.

ಶವಸಂಸ್ಕಾರ ನಿರ್ವಾಹಕನು ಮಲಗಿದ್ದ ಹಾಸಿಗೆಯನ್ನು ಸೂರ್ಯಕಿರಣಗಳು ಬೆಳಗುತ್ತಿದ್ದುವು. ಕಡೆಗೆ ಅವನು ಕಣ್ಣು ತೆರೆದನು; ಚಹಾ ಕುದಿಸುವ ಪಾತ್ರೆಯ ಕೆಳಗಣ ಕೆಂಡಗಳ ಮೇಲೆ ಬೆಂಬೂದಿಯನ್ನು ಕೆಲಸಗಿತ್ತಿ ಊದುತ್ತಿದ್ದಳು. ಏಡ್ರಿಯನ್ ರಾತ್ರಿಯ ಘಟನೆಗಳನ್ನು ಭಯಭ್ರಾಂತನಾಗಿ ನೆನೆದನು. ಟ್ರ್ಯುಖಿನಾ, ದಳಪತಿ, ಸಾರ್ಜೆಂಟ್ ಕ್ಯುರಿಲ್ಕಿನ್–ಇವರು ಇವನ ಭಾವನಾಲೋಕದಲ್ಲಿ ಕಾಡತೊಡಗಿದರು. ಕೆಲಸದವಳು ಸಂಭಾಷಣೆಯನ್ನು ಮೊದಲು ಮಾಡಿ, ರಾತ್ರಿಯ ಅದ್ಭುತ ಘಟನೆಗಳ ಪರಿಣಾಮವೇನಾಯಿತೆಂಬುದನ್ನು ಹೇಳಲೆಂದು ಮೌನವಾಗಿ ಕಾದಿದ್ದನು.

ಅವನು ಬೆಳಗ್ಗೆ ಧರಿಸುವ ನಿಲುವಂಗಿಯನ್ನು ಅವನಿಗೆ ಕೊಡುತ್ತ ಅಕ್ಸಿನ್ಯ ನುಡಿದಳು:

"ರಾತ್ರಿ ಎಷ್ಟು ತಡವಾಗಿ ಮಲಗಿದಿರಿ, ನೀವು? ಆಚೆ ಮನೆಯ ದರ್ಜಿ ನಿಮ್ಮನ್ನು ನೋಡಲು ಬಂದಿದ್ದರು; ಇವೊತ್ತು ಪೋಲೀಸು ಇನ್‌ಸ್ಪೆಕ್ಟರ ನಾಮಕರಣ ದಿನ* ಎಂದು ತಿಳಿಸಲು ಪೋಲೀಸು ಕಾನ್‌ಸ್ಟೆಬಲು ಓಡಿಬಂದ; ಆದರೆ ನೀವು ನಿದ್ದೆಹೋಗುತ್ತಿದ್ದಿರಿ. ನಿಮ್ಮನ್ನು ಎಚ್ಚರಗೊಳಿಸಲು ಇಷ್ಟಪಡಲಿಲ್ಲ.."

"ಸತ್ತುಹೋದಳಲ್ಲ, ಆ ವಿಧವೆ ಟ್ರ್ಯುಖಿನಾ, ಅವಳ ಕಡೆಯಿಂದ ಯಾರಾದರೂ ಬಂದಿದ್ದರೆ?"

"ಟ್ರ್ಯುಖಿನಾ? ಏನು, ಅವಳು ಸತ್ತುಹೋದಳೆ?"

"ಎಂಥ ಮೂರ್ಖಳು ನೀನು ಅವಳ ಶವಸಂಸ್ಕಾರಕ್ಕೆ ವ್ಯವಸ್ಥೆ ಮಾಡಲು ನಿನ್ನೆ ನೀನು ನನಗೆ ಸಹಾಯಮಾಡಲಿಲ್ಲವೆ?"

"ನಿಮಗೆ ಹುಚ್ಚು ಹಿಡಿಯಿತೋ ಹೇಗೆ? ಇಲ್ಲ ನಿನ್ನೆಯ ಕುಡಿತದ ಕಾವು ಇನ್ನೂ ನಿಮಗೆ ಹತ್ತಿಕೊಂಡಿದೆಯೋ? ನಿನ್ನೆ ಯಾವ ಶವಸಂಸ್ಕಾರವೂ ಇರಲಿಲ್ಲ. ನಿನ್ನೆ ದಿನಪೂರ್ತಿ ಆ ಜರ್ಮನರವನ ಮನೆಯಲ್ಲಿ ಹಬ್ಬದೂಟ ಹೊಡೆದಿರಿ; ಕಂಠಪೂರ್ತಿ ಕುಡಿದು ಹಿಂದಿರುಗಿ ಹಾಸಿಗೆಯ ಮೇಲೆ ಬಿದ್ದುಕೊಂಡಿರಿ; ಇಲ್ಲಿಯವರೆಗೂ ನಿದ್ದೆ ಮಾಡಿದಿರಿ; ಚರ್ಚಿನ ಆರಾಧನೆಯ ಗಂಟೆ ಹೊಡೆದು ಹೊಡೆದು ನಿಂತಿತು."

---

* ಯಾವ ಸಂತನ ಹೆಸರಿಟ್ಟುಕೊಂಡಿರುತ್ತಾರೆಯೋ ಆ ಸಂತನ ದಿನ್ನ

ಅಚ್ಚುಕಟ್ಟಾಗಿ ಉಡುಪು ಧರಿಸಿದ್ದರು: ಹೆಂಗಸರು ಪಟ್ಟಿಪಟ್ಟಿಗಳಿಂದ ಅಲಂಕೃತವಾದ ಟೋಪಿಗಳನ್ನು ಧರಿಸಿದ್ದರು; ಸತ್ತ ಅಧಿಕಾರಿಗಳು ಸಮವಸ್ತ್ರ ತೊಟ್ಟಿದ್ದರು, ಆದರೆ ಕ್ಷೌರಮಾಡಿಸಿಕೊಂಡಿರಲಿಲ್ಲ; ವರ್ತಕರು ಅತ್ಯುತ್ತಮ ನಿಲುವಂಗಿಯನ್ನು ಹಾಕಿದ್ದರು. "ಇಲ್ಲಿ ನೋಡಯ್ಯಾ, ಪ್ರೊಖೊರಾಫ್ ನಿನ್ನ ಆಹ್ವಾನವನ್ನು ಅಂಗೀಕರಿಸಲು ನಾವೆಲ್ಲ ಎದ್ದು ಬಂದಿದ್ದೇವೆ. ಪೂರ್ತಿ ನಿಸ್ಸಹಾಯರಾದವರು, ಪೂರ್ತಿ ಕೊಳೆತುಹೋಗಿರುವವರು–ಇವರು ಮಾತ್ರ ಹಿಂದುಳಿದಿದ್ದಾರೆ; ಹಾಗೆಯೇ ಮಾಂಸವಿಲ್ಲದ ಮೂಳೆಯಲ್ಲದೆ ಇನ್ನೇನೂ ಇಲ್ಲದವರು ಕೂಡ ಬರಲಾಗಿಲ್ಲ; ಇಂಥವರಲ್ಲಿ ಒಬ್ಬ ಮಾತ್ರ ಬರದೆ ಇರಲಾಗಲ್ಲ, ನಿನ್ನನ್ನು ನೋಡಲು ಆತ ಅಷ್ಟು ಆಸಕ್ತಿ ಹೊಂದಿದ್ದ..........." ಎಂದು ಅಲ್ಲಿ ನೆರೆದಿದ್ದವರೆಲ್ಲರ ಪರವಾಗಿ ದಳಪತಿ ಮಾತಾಡಿದನು.

ಆ ಸಮಯಕ್ಕೆ ಸರಿಯಾಗಿ ಒಂದು ಚಿಕ್ಕ ಅಸ್ಥಿಪಂಜರ ಗುಂಪಿನ ನಡುವೆ ಮೊಳಕೈಯಿಂದ ದಾರಿಬಿಡಿಸಿಕೊಂಡು ಬಂದು ಏಡ್ರಿಯನನ್ನು ಸಮೀಪಿಸಿತು. ಅದರ ಮಾಂಸರಹಿತಮುಖ ಏಡ್ರಿಯನ್ನಿನ ಕಡೆ ಆದರ ಪೂರ್ವಕವಾಗಿ, ಓರೆ ನೋಟದಿಮದ ನೋಡಿತು. ಅಚ್ಚಹಸುರು ಮತ್ತು ಕೆಂಪಿನ ಬಟ್ಟೆಯ ಹಾಗೂ ದಾರ ಕಾಣುವಂತೆ ನಮೆದ ವಸ್ತ್ರದ ಪಟ್ಟಿಗಳು ಗಣಿಗೆ ಕಟ್ಟಿದ್ದರೆ ಹೇಗೋ ಹಾಗೆ ಅದರಿಂದ ಅಲ್ಲಲ್ಲಿ ತೂಗಾಡುತ್ತಿದ್ದುವು; ಎತ್ತರವಾದ ಸವಾರಿಬೂಡ್ಸುಗಳೊಳಗೆ ಅದರ ಮೊಳಕಾಲ ಮೂಳೆಗಳು ಒರಳೊಳಗಿನ ಒನಕೆಯಂತೆ ಲಟಪಟ ಸದ್ದು ಮಾಡುತ್ತಿದ್ದುವು. "ನನ್ನ ಗುರುತು ಸಿಕ್ಕಲಿಲ್ಲವೆ. ಪ್ರೊಖೊರಾಫ್? ೧೭೯೯ರಲ್ಲಿ ನಿನ್ನ ಮೊದಲನೆಯ ಶವಸಂಪುಟವನ್ನು ಮಾರಿದೆಯಲ್ಲ (ಅದು ಜಾಯಿಕಾಯಿ ಮರದ್ದು; ನೀನು ಓಕ್ ಮರದ್ದೆಂದು ಹೇಳಿದ್ದೆ), ಆ ಕಾವಲು ದಳದ ನಿವೃತ್ತ 'ಸಾರ್ಜೆಂಟ್' ಪ್ಯೋಟರ್ ಪೆಟ್ರೋವಿಚ್ ಕ್ಯುರಿಲ್‌ಕಿನ್, ಆ ಮನುಷ್ಯನೇ ನಾನು' ಎಂದು ಆ ಅಸ್ಥಿಪಂಜರ ಹೇಳಿ, ಮೂಳೆಯಾಲಿಂಗನಕ್ಕಾಗಿ ತನ್ನ ತೋಳುಗಳನ್ನು ಚಾಚಿತು; ಏಡ್ರಿಯನ್ ತನ್ನ ಬಲವನ್ನೆಲ್ಲ ಕೂಡಿಸಿಕೊಂಡು ಗಟ್ಟಿಯಾಗಿ ಕೂಗುತ್ತ ಅಸ್ಥಿಪಂಜರವನ್ನು ದೂರಕ್ಕೆ ದೂಡಿದನು, ಪ್ಯೋಟರ್ ಪೆಟ್ರೊವಿಜ್ ಅತ್ತಿತ್ತ ತೂಗಾಡಿ, ಕಾಲುತಪ್ಪಿದ್ದ ಮೂಳೆಗಳ ರಾಶಿಯಾಗಿ ನೆಲದಮೇಲೆ ಬಿದ್ದನು. ಶವಗಳ ಕಡೆಯಿಂದ ಒಂದು ಕ್ರೋಧದ ಹುಂಕಾರ ಮೇಲೆದ್ದಿತು. ಎಲ್ಲರೂ ತಮ್ಮ ಸಂಗಡಿಗನ ಗೌರವವನ್ನು ರಕ್ಷಿಸಲು ಆಸಕ್ತರಾಗಿ, ಏಡ್ರಿಯನ್ನನ್ನು ಶಪಿಸುತ್ತ ಬೆದರಿಸುತ್ತ ಅವನ ಮೇಲೆ ಬೀಳಲು ಹೋದರು. ನಿರ್ಭಾಗ್ಯನಾದ ಆತಿಥೇಯನು ಅವರ ಕೂಗಾಟಗಳಿಂದ ಕಿವುಡಾಗಿಹೋಗಿ, ಅವರ ಮುತ್ತಿಗೆಯಿಂದ ಬಹುಮಟ್ಟಿಗೆ

ಮನಸ್ಸಿನ ಹೊರೆ ಇಳುಹಿದಂತಾಗಿ, "ನಾನು ಇದುವರೆಗೂ ನಿದ್ದೆಮಾಡಿದೆನೆ? " ಎಂದನು, ಶವಸಂಸ್ಕಾರ ನಿರ್ವಾಹಕ.

"ಹೌದು ಮತ್ತೆ" ಎಂದಳು ಕೆಲಸದವಳು.

"ಹಾಗಿದ್ದ ಪಕ್ಷದಲ್ಲಿ, ಎಲ್ಲಿ ಬೇಗ ಬೇಗ ಚಹಾ ತೆಗೆದುಕೊಂಡು ಬಾ; ಕುಮಾರಿಯನ್ನು ಕೂಗು."



# ೮. ಅಂಚೆ ಯಜಮಾನ

(The Post Master)

ಆತ ಗ್ರಾಮ ಸಲಹೆಗಾರ,
ಅಂಚೆಮನೆಯ ಅಂಕೆಯುಲ್ಲದಧಿಕಾರಿ

–ಪ್ರಿನ್ಸ್ ವ್ಯಾಸೆಮ್ಸ್ಕಿ*

*೧೯ನೆಯ ಶತಮಾನದ ಒಬ್ಬಕವಿ

೨೬೪

ಅಂಚೆನಿಲ್ದಾಣದ ಯಜಮಾನನನ್ನು* ಎಂದೂ ಶಪಿಸದ, ಅಥವಾ ಆತನೊಂದಿಗೆ ಎಂದೂ ಕಚ್ಚಾಡದ ಮನುಷ್ಯನನ್ನು ನನಗೆ ತೋರಿಸಿ ಕೊಡಿ; ಮನಸ್ವೀವರ್ತನೆ, ಅಸಭ್ಯತೆ ಕಾಲನಿಯಮವನ್ನು ಮೀರುವುದು–ಈ ನಿರರ್ಥಕವಾದ ದೂರುಗಳನ್ನು ಬರೆದಿಡಲು ಆ ಹಾನಿಕಾರಿಯಾದ ಪುಸ್ತಕವನ್ನು ಕ್ರೋಧಾವೇಶದ ಭರದಲ್ಲಿ ಕೇಳದಿರುವ ಮನುಷ್ಯನನ್ನು ತೋರಿಸಿಕೊಡಿ ; ಅಂಚೆಯ ಯಜಮಾನರನ್ನು ಮನುಷ್ಯಾಕೃತಿಯ ರಾಕ್ಷಸರೆಂದು, ಬದುಕಿದ ಕೂಟಕ್ಕೆ ಸೇರದ ಕೆಲವು ಅಧಿಕಾರಗಳಿಗೆ ಸಮನೆಂದು, ಏನಿಲ್ಲವೆಂದರೂ 'ಮ್ಯುರೊಮ್' ದರೋಡೆಕೋರರಿಗಿಂತ ಮೇಲಲ್ಲವೆಂದು ಪರಿಗಣಿಸದೆ ಇರುವ ಒಬ್ಬ ಮನುಷ್ಯನನ್ನು ತೋರಿಸಿಕೊಡಿ. ಹೀಗಿದ್ದರೂ, ನಾವು ನ್ಯಾಯ ಪರರಾಗಿರಲು ಪ್ರಯತ್ನಿಸುತ್ತೇವೆ; ಅವರ ಸ್ಥಾನದಲ್ಲಿ ನಾವು ಇರುವಂತೆ ಭಾವಿಸುತ್ತೇವೆ; ಆಗ, ಬಹುಶಃ ಹೆಚ್ಚಿನ ದಯೆ ದಾಕ್ಷಿಣ್ಯಗಳಿಂದ ಅವರನ್ನು ತೂಗಿನೋಡಲು ಸಾಧ್ಯವಾದೀತು.

ಅಂಚೆ ಯಜಮಾನನೆಂದರೆ ಯಾರು ? ಸಣ್ಣ ಪುಟ್ಟ ಅಧಿಕಾರಿಗಳಲ್ಲಿ ಆತನೊಬ್ಬ ಆಹುತಾತ್ಮನೇ ಸರಿ ; ಕೈ ಏಟುಗಳಿಂದಲೂ ಮುಷ್ಟಿ ಪ್ರಹಾರಗಳಿಂದಲೂ ಆತನನ್ನು ರಕ್ಷಿಸಿರುವುದೆಂದರೆ, ಆತನ ಈ ಅಧಿಕಾರದ ದರ್ಜೆ ; ಇದು ಕೂಡ ಆತನನ್ನು ಯಾವಾಗಲೂ ಕಾಪಾಡುವುದಿಲ್ಲ. (ಈ ವಿಷಯದಲ್ಲಿ ನಾನು ವಾಚಕರ ಆತ್ಮಸಾಕ್ಷಿಯ ಮರೆಹೋಗುತ್ತೇನೆ) ಪ್ರಿನ್ಸ್ ವ್ಯಾಸೆಂಸ್ಕಿ ಆತನನ್ನು ವಿನೋದವಾಗಿ ಕರೆದಿರುವಂತೆ, ಈ ನಿರಂಕುಶಾಧಿಕಾರಿಯ ಪಾಡು ಎಷ್ಟು ಕಠಿನ ? ಆತನ ಕೆಲಸ ವಾಸ್ತವವಾಗಿ ಕಠಿನ ಸಜವಲ್ಲವೆ? ಹಗಲಾಗಲಿ ಇರುಳಾಗಲಿ ವಿಶ್ರಾಂತಿಯೆಂಬುದೇ ಇಲ್ಲ ! ಪ್ರಯಾಣಿಕನು ತನ್ನ ಬೇಸರದ ಪ್ರಯಾಣದಲ್ಲಿ ತುಂಬಿಕೊಂಡ ಮನಃಕ್ಲೇಶಗಳನ್ನೆಲ್ಲ ಅಂಚೆಯಜಮಾನನ ಮೇಲೆ ಹರಿಯಬಿಡುತ್ತಾನೆ. ಹವ :

---

* ಈತ ಕೇವಲ ಈಗಿನ ಕಾಲದ 'ಪೋಸ್ಟ್ ಮಾಸ್ಟರ್' ಅಲ್ಲ. ಪಾಶ್ಚಾತ್ಯದೇಶಗಳಲ್ಲಿ ಹಿಂದೆ ಪ್ರಯಾಣಮಾರ್ಗಗಳಲ್ಲಿ ಅಲ್ಲಲ್ಲಿಗೆ 'ಮಜಲು'ಗಳು ಅಥವಾ 'ಟಪ್ಪಾ'ಗಳು ಇರುತ್ತಿದ್ದುವು. ಪ್ರತಿ ಮಜಲಿನಲ್ಲೂ ಒಬ್ಬ ಅಧಿಕಾರಿಯ ವಶದಲ್ಲಿ ಕುದುರೆಗಳೂ, ಕುದುರೆ ಬಂಡಿಯೂ ಇರುತ್ತಿದ್ದುವು. ಆಗ ಅಂಚೆಯ ಕಾಗದಗಳನ್ನು ಕುದುರೆ ಸವಾರರು ಒಯ್ಯುತ್ತಿದ್ದರು. ಈ ಅಂಚೆಯ ನಿಲ್ದಾಣದ ಯಜಮಾನ ಅಂಚೆ ಕಾಗದಗಳನ್ನು ರವಾನಿಸುದರ ಜೊತೆಗೆ, ಪ್ರಯಾಣಿಕರಿಗೂ ಅಂಚೆ ಒಯ್ಯುವ ಮತ್ತು ಇತರ ಕುದುರೆ ಸವಾರರಿಗೂ ಅವರು ಅಪೇಕ್ಷಿಸಿದಾಗ ಕುದುರೆ ಬದಲಾಯಿಸಿಕೊಳ್ಳಲು ವ್ಯವಸ್ಥೆ ಮಾಡಬೇಕಾಗಿದ್ದಿತು. ಈ ಸಂಬಂಧದ ದಾಖಲೆಗಳನ್ನೆಲ್ಲ ಬರೆದಿಡಬೇಕಾಗಿತ್ತು–ಅನು.

ಶಾಂತಿಪ್ರಿಯರಾದ ಜನ, ದಯಾ ದಾಕ್ಷಿಣ್ಯವುಳ್ಳ ಪ್ರಕೃತಿಯುಳ್ಳವರು, ಸ್ನೇಹ ಸೌಹಾರ್ದಪರರು ; ತಮಗೆ ಸಲ್ಲಬೇಕಾದದ್ದರ ವಿಷಯದಲ್ಲಿ ಅತಿಶಯ ಭಾವನೆಯುಳ್ಳವರಲ್ಲ ; ಮತ್ತು ಎಂದಿಗೂ ಲೋಭಬುದ್ಧಿಯುಳ್ಳವರಲ್ಲ. ಅವರ ಸಂಭಾಷಣೆಯಿಂದ ವಿಚಿತ್ರವಾದ ಹಾಗೂ ಬೋಧಪ್ರದವಾದ ಎಷ್ಟೋ ವಿಷಯಗಳನ್ನು ಸಂಗ್ರಹಿಸಬಹುದು; ಅನೇಕ ಮಾನ್ಯ ಪ್ರಯಾಣಿಕರು ಹಾಗೆ ಮಾಡದೆ ಉಪೇಕ್ಷೆಮಾಡಿ ಒಂದು ದೊಡ್ಡ ತಪ್ಪು ಮಾಡಿದ್ದಾರೆ. ನನ್ನ ಮಟ್ಟಿಗೆ ಹೇಳುವುದಾದರೆ, ಸರ್ಕಾರಿ ಕೆಲಸದ ಮೇಲೆ ಪ್ರಯಾಣಮಾಡುವ ನಿಮ್ಮ ಎರಡನೆಯ ದರ್ಜೆಯ ಅಧಿಕಾರಿಗಳ ಭಾಷಣಗಳಿಗಿಂತ ಅವರ ಸಂಭಾಷಣೆಯನ್ನೆ ಹೆಚ್ಚು ಇಷ್ಟಪಡುತ್ತೇನೆ ಎಂದು ಒಪ್ಪಿಕೊಳ್ಳುತ್ತೇನೆ.

ಗೌರವ ಯೋಗ್ಯರಾದ ಈ ಅಂಚೆ ಯಜಮಾನರ ಬಳಗದಲ್ಲಿ ನನ್ನ ಮಿತ್ರರಿದ್ದಾರೆ ಎಂದು ಸುಲಭವಾಗಿ ಊಹಿಸಬಹುದಾಗಿದೆ. ವಾಸ್ತವಾಗಿ ಅವರ ಪೈಕಿ ಒಬ್ಬಾತನ ನೆನಪು ನನಗೆ ಅತ್ಯಮೂಲ್ಯವೆನಿಸಿದೆ. ನನ್ನ ಜೀವನದ ಒಂದೂ ನಿರ್ದಿಷ್ಟಕಾಲದಲ್ಲಿ ಸಂದರ್ಭವಶದಿಂದ ನಾವಿಬ್ಬರೂ ಒಟ್ಟು ಸೇರಿದ್ದೆವು ; ಆತನ ಕಥೆಯೇ ನನ್ನ ಸಹೃದಯರಾದ ವಾಚಕರಿಗೆ ಈಗ ನಾನು ಹೇಳಬೇಕೆಂದು ಉದ್ದೇಶಿಸಿರುವುದು.

೧೯೧೬ರ ಮೇ ತಿಂಗಳಲ್ಲಿ ನಾನು 'ಏಕ್ಸ್' (ಎಕ್ಸ್)–ಪ್ರಾಂತದಲ್ಲಿ ಒಂದು ಮಾರ್ಗದ ಮೂಲಕ ಸಂಚಾರ ಮಾಡಬೇಕಾದ ಸಂದರ್ಭವೊದಗಿತ್ತು ; ಈಗ ಆ ಮಾರ್ಗವೇ ಇಲ್ಲ. ನಾನು ಒಬ್ಬ ಚಿಕ್ಕ ಅಧಿಕಾರಿಯ ಹುದ್ದೆಯಲ್ಲಿದ್ದೆ ; ನಾನು ಸಂಚರಿಸುತ್ತಿದ್ದುದು ಅಂಚೆಯ ಮಾರ್ಗದಲ್ಲಿ ; ನನ್ನ ಅನುಕೂಲಕ್ಕೆ ಎರಡು ಕುದುರೆಗಳನ್ನು ಪಡೆಯಲು ಮಾತ್ರ ಸಾಕಾಗುತ್ತಿತ್ತು. ಮೊದಲೇ ತಾರುಣ್ಯ, ಜೊತೆಗೆ ಉದ್ರೇಕದ ಸ್ವಭಾವ ; ಈ ಕಾರಣದಿಂದ, ಯಾವನೋ ಒಬ್ಬ ಅಂಚೆಯ ಯಜಮಾನ ನನ್ನ ಉಪಯೋಗಕ್ಕೆಂದು ಸಜ್ಜಾಗಿದ್ದ ಕುದುರೆಗಳನ್ನು ಯಾರೋ ಉನ್ನತಾಧಿಕಾರಿಗೆ ಕೊಟ್ಟಾಗ ಆ ಅಂಚೆಯಜಮಾನನ ಕ್ಷುದ್ರತನ ಹೇಡಿತನಗಳನ್ನು ಕಂಡು ನಾನು ಕೆರಳಿದ್ದೆ. ಗೌರ್ನರರ ಭೋಜನ ಪಂಕ್ತಿಯಲ್ಲಿ ಭಕ್ಷ್ಯಭೋಜ್ಯಗಳನ್ನು ಬಡಿಸುವಾಗ ಪ್ರಚಂಡ ಬುದ್ಧಿಯ ಒರಟು ಪರಿಚಾರಕನೊಬ್ಬನು ನನ್ನನ್ನು ಉಪೇಕ್ಷೆಮಾಡಿ ಬಡಿಸದೆ ಮುಂದಕ್ಕೆ ಹೋದಾಗ, ಆ ತಾತ್ಸಾರಕ್ಕೆ ಹೊಂದಿಕೊಳ್ಳಲು ಬಹಳಕಾಲ ಹಿಡಿಯಿತು. ಈಗ ಈ ಎರಡು ಸನ್ನಿವೇಶಗಳೂ ಯಥಾಕ್ರಮದಲ್ಲಿರುವಂತೆ ನನಗೆ ತೋರುತ್ತಿವೆ. 'ಪದವಿ ಪದವಿಗೆ ಮಣಿಯಲಿ' ಎಂದೂ ಈಗ ಸಾರ್ವತ್ರಿಕವಾಗಿ ಅಂಗೀಕೃತವಾಗಿರುವ ನಿಯಮಕ್ಕೆ ಬದಲಾಗಿ

ರೌದ್ರವಾಗಿದೆ, ರಸ್ತೆಗಳು ಕುಲಗೆಟ್ಟು ಹೋಗಿವೆ, ಬಂಡಿ ಹೊಡೆಯುವವನು ಮೊಂಡ, ಕುದುರೆಗಳು ಮೈಗಳ್ಳ–ಈ ಎಲ್ಲಕ್ಕೂ ಅಂಚೆಯಜಮಾನ ಹೊಣೆ ಹೊರಬೇಕು. ಅವನ ಬಡ ಕುಟೀರವನ್ನು ಪ್ರವೇಶಿಸುವ ಪ್ರಯಾಣಿಕನು ಅವನನ್ನು ಹಗೆಯೆಂದು ಎಣಿಸುತ್ತಾನೆ ; ಈ ಆಹ್ವಾನಿಸದ ಅತಿಥಿಯನ್ನು ಆದಷ್ಟು ಬೇಗ ತೊಲಗಿಸಿಕೊಳ್ಳುವುದರಲ್ಲಿ ಯಶಸ್ವಿಯಾದರೆ ಅಂಚೆ ಯಜಮಾನನು ಭಾಗ್ಯಶಾಲಿಯೇ ಸರಿ. ಒಂದು ವೇಳೆ, ಕುದರೆಗಳೇನಾದರೂ ದೊರಕದೆ ಹೋಗುವ ಸಂಭವವಿದ್ದರಂತೂ ಆಯಿತು ಅವನ ತಲೆಯ ಮೇಲೆ ಅದೆಷ್ಟು ಆಣೆ ಪ್ರತಿಜ್ಞೆ ಬೆದರಿಕೆಗಳ ಸುರಿಮಳೆ ಸುರಿಯುತ್ತದೆಯೋ, ದೇವರಿಗೇ ಪ್ರೀತಿ ! ಮಳೆಯಲ್ಲೂ ಕೆಸರಿನಲ್ಲೂ ಆತ ಮನೆಯಿಂದ ಮನೆಗೆ ಓಡಾಡಬೇಕು ; ಬಿರುಗಾಳಿ ಮಳೆ ಭೋರ್ಗರೆಯುತ್ತಿರುವಾಗಲೂ ಜನವರಿ ತಿಂಗಳ ಹಿಮವರ್ಷದಲ್ಲೂ ಆತ ಕೈಸಾಲೆಗೆ ಹೋಗಿನಿಲ್ಲುತ್ತಾನೆ–ಕ್ರುದ್ಧ ಪ್ರಯಾಣಿಕನ ಕೂಗಾಟ ನೂಕಾಟಗಳಿಂದ ತಪ್ಪಿಸಿಕೊಂಡು ಕೇವಲ ಒಂದು ಕ್ಷಣಕಾಲವಾದರೂ ವಿಶ್ರಾಂತಿ ಪಡೆಯುವುದಕ್ಕಾಗಿ ಮಾತ್ರ. ಒಬ್ಬ ಸೇನಾಪತಿ ಬರುತ್ತಾನೆ : ಕಂಪಿಸುತ್ತಿರುವ ಅಂಚೆಯ ಯಜಮಾನ ತನ್ನಲ್ಲಿರುವ ಉಳಿದ ಕಡೆಯೆರಡು 'ಟ್ರಾಯ್ಕ' (ಮೂರು ಕುದುರೆಯ) ಬಂಡಿಗಳನ್ನು ಅವನಿಗೆ ಕೊಡುತ್ತಾನೆ ; ಅವುಗಳಲ್ಲಿ ಒಂದು ಅಂಚೆಯ ಕಾಗದಗಳನ್ನೊಯ್ಯುವ ಬಂಡಿಗಾಗಿ ಕಾದಿಡಬೇಕಾದದ್ದು. ಒಂದು ವಂದನೆಯ ಮಾತನ್ನೂ ಸಲ್ಲಿಸದೆ ಸೇನಾಪತಿ ತೆರಳುತ್ತಾನೆ. ಐದು ನಿಮಿಷಗಳ ತರುವಾಯ ಗಂಟೆಗಳ ಸದ್ದು ಕೇಳಿಬರುತ್ತದೆ; ಸರಕಾರದ ಹರಿಕಾರನೊಬ್ಬ ಹೊಸ ಕುದುರೆಗಳನ್ನು ಕೋರುವ ಆಜ್ಞಾ ಪತ್ರವೊಂದನ್ನು ಮೇಜಿನ ಮೇಲೆ ಎಸೆಯುತ್ತಾನೆ. ಈ ಸಂದರ್ಭಗಳನೆಲ್ಲಾ ನೋಡಿ.......ಬದಲು, ನಿಮ್ಮ ಹೃದಯ ನಿಜವಾದ ಮರುಕದಿಂದ ತುಂಬುತ್ತದೆ. ಈ ವಿಷಯವಾಗಿ ಇನ್ನು ಕೆಲವು ಮಾತು : ಇಪ್ಪತ್ತು ವರ್ಷಕಾಲದಲ್ಲಿ ನಾನು ರಷ್ಯದಲ್ಲೆಲ್ಲಾ ಪ್ರಯಾಣ ಮಾಡಿದ್ದೇನೆ. ಬಹುಮಟ್ಟಿಗೆ ಅಂಚೆಯ ಮಾರ್ಗಗಳೆಲ್ಲ ನನಗೆ ಗೊತ್ತು ; ಬಂಡಿ ಹೊಡೆಯುವವರ ಅನೇಕ ತಲೆಮಾರುಗಳ ಪರಿಚಯ ನನಗಿದೆ ; ನನಗೆ ಗೊತ್ತಿಲ್ಲದ, ನಾನು ವ್ಯವಹಾರ ಇಟ್ಟುಕೊಳ್ಳದೆ ಹೋದ, ಒಬ್ಬ ಅಂಚೆ ಯಜಮಾನನೂ ಇಲ್ಲ; ಪ್ರಯಾಣಕಾಲದಲ್ಲಿ ನಾನು ಶೇಖರಿಸಿರುವ ಸ್ವಾರಸ್ಯವಾದ ಅನುಭವ ಸಂಗತಿಗಳ ಸರಕನ್ನು ಬೇಗನೆಯೇ ಪ್ರಕಟಿಸುವ ನಿರೀಕ್ಷೆ ಹೊಂದಿದ್ದೇನೆ; ಸದ್ಯಕ್ಕೆ, ಈ ಅಂಚೆ ಯಜಮಾನರ ಬಳಗದಬಗ್ಗೆ ಸಾರ್ವಜನಿಕರಿಗೆ ವಿಪರೀತ ತಪ್ಪು ತಿಳಿವಳಿಕೆಯುಂಟಾಗಿದೆಯೆಂದು ಮಾತ್ರ ತಿಳಿಸುತ್ತೇನೆ. ಹೀಗೆ ಬಹಳ ನಿಂದೆಗೆ ಗುರಿಯಾದ ಅಂಚೆ ಯಜಮಾನರು ಸರ್ವ ಸಾಮಾನ್ಯವಾಗಿ

ವಿಶೃಂಖಲ ವರ್ತನೆಯನ್ನು ವಿವರಪೂರ್ಣವಾಗಿ ಚಿತ್ರಿಸುತ್ತಿತ್ತು. ಅನಂತರ ಕಂಡುಬಂದ ಚಿತ್ರದಲ್ಲಿ, ಹಾಳಾದ ಯುವಕನು ಚಿಂದಿ ಪಂದಿಯಾದ ನಿಲುವಂಗಿಯನ್ನೂ ಚೂಪುಟೋಪಿಯನ್ನೂ, ಧರಿಸಿ, ಹಂದಿ ಕಾಯುತ್ತ ಅವುಗಳ ತಿನಿಸನ್ನೆ ತಿನ್ನುತ್ತಿದ್ದನು ; ಅವನ ಮುಖವು ಅಗಾಧ ಸಂತಾಪವನ್ನೂ ಪಶ್ಚಾತ್ತಾಪವನ್ನೂ ವ್ಯಕ್ತಪಡಿಸುತ್ತಿತ್ತು. ಈ ಚಿತ್ರಮಾಲೆಯಲ್ಲಿ ಕಡೆಯದು ಅವನು ತನ್ನ ತಂದೆಯಲ್ಲಿಗೆ ಹಿಂದಿರುಗುತ್ತಿದ್ದುದನ್ನು ನಿರೂಪಿಸುತ್ತಿತ್ತು ; ಆ ಸಾಧು ವೃದ್ಧನು ಅದೇ ಇರುಳುಕುಲಾವಿಯನ್ನೂ ಮೇಲಂಗಿಯನ್ನೂ ಧರಿಸಿ ಅವನನ್ನು ಎದುರುಕೊಳ್ಳಲು ಧಾವಿಸುತ್ತಿದ್ದನು ; ದುಂದುಗಾರ ಮಗನು ಅವರ ಪಾದಗಳೆಡೆ ಮಂಡಿಯೂರಿ ಕುಳಿತಿದ್ದನು ; ಅಡಿಗೆಯವನು ಕೊಬ್ಬಿದ ಕರುವನ್ನು ಕಡಿಯುತ್ತಿರುವುದನ್ನೂ ಈ ನಲಿವಿಗೆಲ್ಲಾ ಕಾರಣವೇನೆಂದು ಹಿರಿಯ ಸೋದರನು ಸೇವಕರನ್ನು ಪ್ರಶ್ನಿಸುತ್ತಿರುವುದನ್ನೂ, ಹಿನ್ನೆಲೆಯಲ್ಲಿ ಕಾಣಬಹುದಾಗಿತ್ತು. ಪ್ರತಿಯೊಂದು ಚಿತ್ರದ ಕೆಳಗಡೆ ಬರೆದಿದ್ದ ಜರ್ಮನ್ ಭಾಷೆಯ ಸಂದರ್ಭೋಚಿತ ದ್ವಿಪದಿಗಳನ್ನು ನಾನು ಓದಿಕೊಂಡೆ. ಇವು, ಮತ್ತು ಇವುಗಳ ಜೊತೆಗೆ–ಆಗ ನನ್ನ ಸುತ್ತಲೂ ಇದ್ದ ಕರ್ಣಕುಂಡಲದ ಹೂಗಿಡಗಳಿದ್ದ ಕುಂಡಗಳು, ಪ್ರಕಾಶಮಾನವಾದ ಚಿತ್ರಾಲಂಕಾರಗಳ ಪರದೆಯಿದ್ದ ಹಾಸಿಗೆ, ಮತ್ತು ಇತರ ಪದಾರ್ಥಗಳು–ಇವೆಲ್ಲಾ ನನ್ನ ನೆನಪಿನಲ್ಲಿ ಇನ್ನೂ ಹೊಸದಾಗಿಯೆ ಇವೆ. ಸುಮಾರು ಐವತ್ತು ವರ್ಷ ವಯಸ್ಸಿನ, ಗಟ್ಟಿ ಮುಟ್ಟಾದ, ನಗುಮುಖದ, ಮಾಸಲು ಬಟ್ಟೆಪಟ್ಟಿಗಳಿಂದ ತೂಗಾಡುತ್ತಿದ್ದ ಮೂರು ಪದಕಗಳಿಂದ ಅಲಂಕೃತವಾದ ಹಸುರು ನಿಲುವಂಗಿಯನ್ನು ತೊಟ್ಟ ಆ ಅಂಚೆಮನೆಯ ಯಜಮಾನ ಈಗಲೂ ನನ್ನ ಕಣ್ಣಮುಂದೆ ಸುಳಿಯುವಂತೆ ತೋರುತ್ತದೆ.

ಮುದುಕನಾದ ಗುಡಿ ಹೊಡೆಯುವವನಿಗೆ ದುಡ್ಡುಕೊಡುವಷ್ಟರಲ್ಲಿ, ದುನ್ಯ ಕಾಯಿಸುವ ಪಾತ್ರೆಯೊಂದಿಗೆ ಹಿಂದಿರುಗಿದ್ದಳು; ನನ್ನ ಮೇಲೆ ತಾನು ಬೀರಿದ್ದ ಪ್ರಭಾವವನ್ನು ಗ್ರಹಿಸಿಕೊಳ್ಳುವುದರಲ್ಲಿ ಆ ಪುಟ್ಟ ಬಿನ್ನಾಣಗಿತ್ತಿ ಹಿಂದಾಗಿರಲಿಲ್ಲ ; ಕಪಟಲಜ್ಜೆಯಿಂದ ತನ್ನ ದೊಡ್ಡ ನೀಲಿಯ ಕಣ್ಣುಗಳನ್ನು ಕೆಳಕ್ಕಿಳಿಸಿದಳು. ನಾನು ಅವಳೊಂದಿಗೆ ಸಂಭಾಷಣೆಗೆ ತೊಡಗಿದೆ; ತಕ್ಕಮಟ್ಟಿಗೆ ಪ್ರಪಂಚಾನುಭವವುಳ್ಳ ಹುಡುಗಿಯಂತೆ ಅವಳು ನಿಸ್ಸಂಕೋಚವಾಗಿ ನನಗೆ ಉತ್ತರ ಕೊಟ್ಟಳು. ಅವಳ ತಂದೆಗೆ ಒಂದು ಲೋಟಪಂಚ್ ಪಾನೀಯವನ್ನು ಕೊಟ್ಟೆ ; ಅವಳಿಗೆ ಒಂದು ಬಟ್ಟಲು ಚಹಾ ಕೊಟ್ಟೆ. ಒಬ್ಬರನ್ನೊಬ್ಬರು ಯುಗ ಯುಗಾಂತರದಿಂದ ಬಲ್ಲವರಂತೆ ನಾವು ಮೂವರೂ ಹರಟೆ ಹೊಡೆಯುತ್ತಿದ್ದೆವು.

'ಮನಸ್ಸು ಮನಸ್ಸಿಗೆ ಮಣಿಯಲಿ' ಎಂಬ ನಿಯಮ ಬಳಕೆಗೆ ಬಂದುಬಿಟ್ಟರೆ, ನಮ್ಮ ಗತಿ ಏನಾದೀತು? ಎಂಥ ವಾದವಿವಾದಗಳು ಎದ್ದಾವು ! ಮನೆಗೆಲಸದವರು ಯಾರ ಸೇವೆಯನ್ನು ಮೊದಲು ಮಾಡಬೇಕು ? ಇರಲಿ, ಇನ್ನು ನನ್ನ ಕಥೆಗೆ ಹಿಂದಿರುಗುತ್ತೇನೆ.

ಅಂದು ತುಂಬ ಸೆಕೆಯಾದ ದಿನ, 'ಎಕ್ಸ್' ಅಂಚೆಯ ನಿಲ್ದಾಣದಿಂದ ಮೂರು 'ವರ್ಸ್ಟ್'ಗಳ ಆಚೆ ತುಂತುರು ಮಳೆಗೆ ಪ್ರಾರಂಭವಾಯಿತು ; ಒಂದು ನಿಮಿಷವಾದ ಮೇಲೆ ನಾನು ಧಡಧಡನೆ ಸುರಿದ ಮಳೆಯಲ್ಲಿ ನೆನೆದು ಒದ್ದೆ ಮುದ್ದೆಯಾದೆ. ನಿಲ್ದಾಣವನ್ನು ತಲಪಿದಕೂಡಲೆ, ಆದಷ್ಟು ಬೇಗ ನನ್ನ ಉಡುಪು ಬದಲಾಯಿಸುವುದು ನನ್ನ ಮೊದಲ ಎಚ್ಚರಿಕೆಯ ಕ್ರಮವಾಗಿತ್ತು ; ಎರಡನೆಯದು, ಚಹಾ ಕೇಳುವುದು. "ಏ ದುನ್ಯಾ ! ಚಹಾ ಕುದಿಸುವ ಪಾತ್ರೆ ಸಿದ್ಧಮಾಡಿ, ಹೋಗಿ ಸ್ವಲ್ಪ ಕೆನೆ ತೆಗೆದುಕೊಂಡು ಬಾ" ಎಂದು ಅಂಚೆ ಯಜಮಾನ ಕೂಗಿಹೇಳಿದನು. ಈ ನುಡಿಗಳಿಗೆ ಪ್ರತಿಯಾಗಿ ಸುಮಾರು ಹದಿನಾಲ್ಕು ವರ್ಷಗಳ ಹುಡುಗಿಯೊಬ್ಬಳು ಒಂದು ಅಡ್ಡಗೋಡೆಯ ಹಿಂದಿನಿಂದ ಕಾಣಿಸಿಕೊಂಡು, ಸರಸರನೆ ಕೈಸಾಲೆಗೆ ಓಡಿದಳು. ಅವಳ ಚೆಲುವನ್ನು ಕಂಡು ಚಕಿತನಾದೆ, "ನಿಮ್ಮ ಮಗಳೋ ಅವಳು ?" ಎಂದು ಅಂಚೆಯ ಯಜಮಾನನನ್ನು ಕೇಳಿದೆ. "ಹೌದು ಅವಳು ತುಂಬ ಬುದ್ಧಿವಂತೆ, ತುಂಬ ಚುರುಕು, ಎಲ್ಲ ಅವಳ ತಾಯಿಯ ತದ್ರೂಪು" ಎಂದು ಆತ ನಿರಾತಂಕ ಭಾವದಿಂದ ಉತ್ತರ ಕೊಟ್ಟನು. ಅಲ್ಲಿಂದಲ್ಲೆ ಕೂಡಲೆ ನನ್ನ ಕೋರಿಕೆ ಪತ್ರವನ್ನು ಪ್ರತಿಮಾಡತೊಡಗಿದನು ; ನಾನು ಆತನ ಸಾಮಾನ್ಯವಾದರೂ ಅಚ್ಚುಕಟ್ಟಾದ ಶುಭ್ರವಾದ ನಿವಾಸವನ್ನು ಅಲಂಕರಿಸಿದ್ದ ಚಿತ್ರಪಟಗಳ ಪರಿಶೀಲನೆಯಲ್ಲಿ ನಿರತನಾದೆ. ಅವು 'ದುಂದುಗಾರ ಮಗ'ನ ಕಥೆ*ಯನ್ನು ನಿರೂಪಿಸುವ ಚಿತ್ರಗಳಾಗಿದ್ದುವು. ಮೊದಲನೆಯ ಚಿತ್ರಪಟದಲ್ಲಿ ಇರುಳು ಕುಲಾವಿಯನ್ನೂ ಮೇಲಂಗಿಯನ್ನೂ ಧರಿಸಿದ್ದ ವೃದ್ಧನೊಬ್ಬನು ಚಡಪಡಿಸುವ ಯುವಕನೊಬ್ಬನನ್ನು ಬೀಳ್ಕೊಳ್ಳುತ್ತಿದ್ದನು ; ಯುವಕನು ಆತುರಾತುರವಾಗಿ ಆತನ ಆಶೀರ್ವಾದದೊಡನೆ ಒಂದು ಹಣದ ಚೀಲವನ್ನು ಈಸಿಕೊಳ್ಳುತ್ತಿದ್ದನು. ಇನ್ನೊಂದು ಚಿತ್ರವು, ಒಂದು ಮೇಜಿನ ಬಳಿ ಕಪಟ ಸ್ನೇಹಿತರಿಂದಲೂ ಲಜ್ಜೆಗೆಟ್ಟ ಸ್ತ್ರೀಯರಿಂದಲೂ ಪರಿವೃತನಾಗಿ ಕುಳಿತಿದ್ದ ಅವನ

---

* ಇದು The Prodigal Son ಎಂಬ ಪ್ರಸಿದ್ಧವಾದ, ಬೈಬಲ್ಲಿನ ದೃಷ್ಟಾಂತ ಕಥೆ – ಅನು.

ಎಂಥ ದುರ್ಬಲ ವೃದ್ಧನಾಗಿ ಮಾರ್ಪಟ್ಟಿದ್ದನೆಂಬುದನ್ನು ಕಂಡು ಅಚ್ಚರಿಗೊಂಡೆ. "ನಾನು ಯಾರೆಂದು ಗೊತ್ತಾಗಲಿಲ್ಲವೆ?" ಎಂದು ಹೇಳಿದೆ : "ನೀವೂ ನಾನೂ ಹಳೆಯ ಸ್ನೇಹಿತರು." ಆತ ಮಂಕಾಗಿ ಉತ್ತರ ಕೊಟ್ಟ : "ಇರಬಹುದು, ತುಂಬ ಜನಸಂಚಾರದ ಮಾರ್ಗ. ಬಹುಮಂದಿ ಪ್ರಯಾಣಿಕರು ಇಲ್ಲಿಗೆ ಬರುತ್ತಾರೆ." "ನಿಮ್ಮ ದುನ್ಯ ಹೇಗಿದ್ದಾಳೆ?" ಎಂದು ನಾನು ಮುಂದುವರಿಸಿದೆ. ಆ ಮುದುಕ ಹುಬ್ಬುಗಂಟಿಕ್ಕಿದ, "ದೇವರೇ ಬಲ್ಲ" ಎಂದ. ಅವನು ನನ್ನ ಪ್ರಶ್ನೆ ಕಿವಿಗೆ ಬೀಳಲೇ ಇಲ್ಲವೆಂಬಂತೆ ನಟಿಸಿದ, ಪಿಸುಮಾತಿನ ಧ್ವನಿಯಲ್ಲಿ ನಾನು ಕೊಟ್ಟಿದ್ದ ಕೋರಿಕೆ ಪತ್ರವನ್ನು ಓದಿಕೊಳ್ಳುತ್ತ ಹೋದ. ನಾನು ನನ್ನ ಪ್ರಶ್ನೆಗಳನ್ನು ನಿಲ್ಲಿಸಿಬಿಟ್ಟು, 'ಕೆಟಲ್' ಪಾತ್ರೆಯನ್ನು ಕೆಂಡದಮೇಳೆ ಇಡುವಹಾಗೆ ಹೇಳಿದೆ. ನನ್ನಲ್ಲಿ ಕುತೂಹಲ ಕೆರಳತೊಡಗಿತ್ತು ; 'ಪಂಚ್' ಪಾನೀಯ ನನ್ನ ವೃದ್ಧ ಸ್ನೇಹಿತನ ನಾಲಗೆಯನ್ನು ಸಡಿಲಗೊಳಿಸಬಹುದೆಂದು ಬಗೆದೆ.

ನನ್ನ ಎಣಿಕೆ ತಪ್ಪಾಗಲಿಲ್ಲ– ಆ ಮುದುಕ ನಾನು ನೀಡಿದ ಲೋಟವನ್ನು ನಿರಾಕರಿಸಿಲಿಲ್ಲ. "ರಂ" ಮದ್ಯ ಅವನ ಮಂಕುತನವನ್ನು ಬೆದರಿಸಿತೆಂದು ಕಂಡುಬಂದಿತು. ಎರಡನೆಯ ಲೋಟ ಕುಡಿಯುವ ವೇಳೆಗೆ ನಾನು ಯಾರೆಂದು ಜ್ಞಾಪಿಸಿಕೊಂಡೊ ಅಥವಾ ಜ್ಞಾಪಿಸಿಕೊಳ್ಳುವಂತೆ ನಟಿಸಿಯೊ, ಮಾತಾಳಿಯಾದ; ಆಗ ಅವನ ಬಾಯಿಂದ ಒಂದು ಕಥೆ ಕೇಳಿದೆ ; ಆಗ ಅದು ನನಗೆ ಸ್ವಾರಸ್ಯವಾಗಿತ್ತು, ಅಪೂರ್ವವಾದ ರೀತಿಯಲ್ಲಿ ಹೃದಯಸ್ಪರ್ಶಿಯಾಗಿತ್ತು.

ಆತ ಪ್ರಾರಂಭಿಸಿದ :

"ಹಾಗಾಗಿದ್ದರೆ ನನ್ನ ದುನ್ಯಾ ನಿಮಗೆ ಗೊತ್ತು ? ಆಹಾ, ಯಾರು ತಾನೆ ಅವಳನ್ನು ಕಾಣರು? ಹಾ, ದುನ್ಯಾ ? ಎಂಥ ಹುಡುಗಿ ಅವಳು ! ಇಲ್ಲಿ ಬಂದ ಪ್ರತಿಯೊಬ್ಬರೂ ಅವಳನ್ನು ಹೊಗಳುತ್ತಿದ್ದರು ; ಅವಳ ವಿರುದ್ಧ ಯಾರೂ ಒಂದೂ ಮಾತನ್ನೂ ಆಡಿರಲಿಲ್ಲ. ಮಹಿಳೆಯರು ಅವಳಿಗೆ ಒಂದು ರಕವಸ್ತ್ರವನ್ನೋ ಇಲ್ಲವೆ ಒಂದು ಜೊತೆ ಕಿವಿಯುಂಗುರಗಳನ್ನೋ, ಹೀಗೆ ಏನಾದರೂ ಬಹುಮಾನ ಕೊಡುತ್ತಿದ್ದರು. ಅಂಚೆನಿಲ್ದಾಣಕ್ಕೆ ದೊಡ್ಡ ಮನುಷ್ಯರು ಬಂದಾಗ ಮಧ್ಯಾಹ್ನದ ಊಟಕ್ಕೆಂದೋ ರಾತ್ರಿಯ ಊಟಕ್ಕೆಂದೋ ಇಲ್ಲಿ ಬೇಕೆಂದು ಉಳಿದುಕೊಳ್ಳುತ್ತಿದ್ದರು; ಅವಳನ್ನು ಇನ್ನು ಕೊಂಚಕಾಲ ನೋಡುತ್ತಿರಬೇಕೆಂದು ಅವರ ನಿಜವಾದ ಉದ್ದೇಶ. ಇಲ್ಲಿಗೆ ಬಂದ ದೊಡ್ಡ ಮನುಷ್ಯ ಎಷ್ಟೇ ಕೋಪಗೊಂಡಿರಲಿ, ಅವಳನ್ನು ಕಂಡಕೂಡಲೆ ಶಾಂತನಾಗಿ, ನನ್ನೊಂದಿಗೆ ಸೊಗಸಾಗಿ ಮಾತಾಡುತ್ತಿದ್ದನು. ಹೇಳಿದರೆ ನೀವು ನಂಬುತ್ತೀರೋ ಇಲ್ಲವೋ, ಸರ್ಕಾರದ ಓಲೆಕಾರರೂ ಇತರ ಹರಿಕಾರರೂ

ಕುದುರೆಗಳು ಸಿದ್ಧವಾಗಿದ್ದುವು ; ಆದರೆ ಅಂಚೆಯ ಜವಾನ ಮತ್ತು ಅವನ ಮಗಳನ್ನು ಬಿಟ್ಟು ಹೊರಡಲು ನನಗೆ ಮನಸ್ಸೆ ಬರಲಿಲ್ಲ. ಕಡೆಗೆ ನಾನು ಅವರನ್ನು ಬೀಳ್ಕೊಂಡೆ ; ತಂದೆ ನನಗೆ ಸುಖಪ್ರಯಾಣವನ್ನು ಕೋರಿದನು ; ಮಗಳು ಗಾಡಿಯವರೆಗೆ ನನ್ನ ಜೊತೆ ಬಂದಳು. ನಾನು ಕೈಸಾಲೆಯಲ್ಲಿ ತಡೆದು ನಿಂತು ಅವಳನ್ನು ಮುತ್ತಿಡಲು ಅವಕಾಶ ಬೇಡಿದೆ ; ದುನ್ಯಾ ಒಪ್ಪಿದಳು......

'ಈ ವಿನೋದದಲ್ಲಿ ನಾನು
ನಲಿಯ ತೊಡಗಿದಂದಿನಿಂದ.........'

ಅಸಂಖ್ಯಾತ ಚುಂಬನಗಳನ್ನು ನಾನು ಸ್ಮರಿಸಿಕೊಳ್ಳಬಲ್ಲೆ ; ಆದರೆ, ಅವುಗಳಲ್ಲಿ ಯಾವುದೂ ಇದರಷ್ಟು ಸೊಗಸಾದ ಚಿರಸ್ಥಾಯಿಯಾದ ನೆನಪನ್ನು ಬಿಟ್ಟುಹೋಗಿಲ್ಲ.

ಹಲವು ವರ್ಷಗಳು ಸಂದುವು ; ಮತ್ತೆ ಅದೇ ಮಾರ್ಗವಾಗಿ ಹೋಗಬೇಕಾದ ಸಂದರ್ಭಸನ್ನಿವೇಶಗಳ ವೇಶಗಳ ಯೋಗ ಒದಗಿತ್ತು. ಅಂಚೆಯಜಮಾನನ ಮಗಳನ್ನು ಸ್ಮರಿಸಿಕೊಂಡೆ ; ಮತ್ತೊಮ್ಮೆ ಅವಳನ್ನು ನೋಡುವಂತಾಯಿತೆಂದು ಹಿಗ್ಗಿದೆ. ಆ ಹಳಬ ಅಂಚೆಯಜಮಾನನನ್ನು ಕೆಲಸದಿಂದ ತೆಗೆದು ಹಾಕಿರಬಹುದು, ಬಹುಶಃ ಈ ಹೊತ್ತಿಗೆ ದುನ್ಯಾ ಮದುವೆಯಾಗಿರಬಹುದು ಎಂಬ ಆಲೋಚನೆ ಆಮೇಲೆ ಮೂಡಿತು. ಇಬ್ಬರ ಪೈಕಿ ಒಬ್ಬರು ಸತ್ತು ಹೇಗಿದ್ದರೂ ಇರಬಹುದೆಂಬ ಆಲೋಚನೆಯೂ ಮನಸ್ಸಿನಲ್ಲಿ ಹೊಳೆದು ಹೋಯಿತು ; ದುಃಖದ ಅಳುಕು ಭಾವನೆಯಿಂದ 'ಎಕ್ಸ್'–ಅಂಚೆಯ ನಿಲ್ದಾಣದ ಬಳಿ ಸಾರಿದೆ.

ಅಂಚೆಯಜಮಾನನ ಪುಟ್ಟಮನೆಯ ಮುಂದೆ ನನ್ನ ಕುದುರೆಗಳು ನಿಂತವು. ಕೋಣೆಯೊಳಕ್ಕೆ ಹೋದಕೂಡಲೆ 'ದುಂದುಗಾರ ಮಗನ' ಕಥೆಗ ದೃಷ್ಟಾಂತರೂಪದ ಚಿತ್ರಗಳನ್ನು ಗುರುತಿಸಿದೆ. ಮೇಜು ಮತ್ತು ಹಾಸಿಗೆ ತಮ್ಮ ತಮ್ಮ ಪೂರ್ವಸ್ಥಾನಗಳಲ್ಲಿಯೆ ಇದ್ದುವು ; ಆದರೆ ಕಿಟಕಿಯ ತಳಕಟ್ಟಿನ ಮೇಲೆ ಹೂವುಗಳು ಮಾತ್ರ ಇರಲಿಲ್ಲ. ಕೋಣೆಯಲ್ಲಿನ ಪ್ರತಿಯೊಂದು ಪದಾರ್ಥವೂ ಕ್ಷೀಣತೆ ಉಪೇಕ್ಷೆಗಳ ಕುರುಹಾಗಿದ್ದಿತು. ಕುರಿಯ ಚರ್ಮದ ಅಂಗಿ ಹೊದೆದುಕೊಂಡು, ಅಂಚೆಯಜಮಾನನು ನಿದ್ದೆಹೋಗುತ್ತಿದ್ದರು. ನನ್ನ ಆಗಮನ ಅವನನ್ನು ಎಚ್ಚರಗೊಳಿಸಿ, ಅವನು ಎದ್ದು. ಕುಳಿತನು. ಅವನು ಸ್ಯಾಮ್ಸನ್ ವೈರಿನ್ನನೇ ; ಆದರೆ ಅವನು ಎಷ್ಟೊಂದು ಮುದಿಯಾಗಿಹೋಗಿದ್ದ ! ಅವನು ನನ್ನ ಕೋರಿಕೆಪತ್ರವನ್ನು ಪ್ರತಿಮಾಡುತ್ತಿದ್ದಾಗ ಅವನ ನರೆಗೂದಲು, ಕ್ಷೌರವಿಲ್ಲದ ಕೆನ್ನೆಗಳಮೇಲೆ ಬಿದ್ದಿದ್ದ ಆಳವಾದ ಗೆರೆಗಳು, ಬಾಗಿದ ಹೆಗಲುಗಳು–ಇವನ್ನು ಗಮನಿಸಿದೆನು ; ಮೂರು ನಾಲ್ಕು ವರ್ಷಗಳ ಅವಧಿಯಲ್ಲಿ ದೃಢಕಾಯನಾದವನು

ಜಾರುಬಂಡಿಗೆ ಅವುಗಳನ್ನು ಹೂಡಬೇಕೆಂದು ಅಂಚೆಯಜಮಾನನು ಆಜ್ಞೆಮಾಡಿದನು. ಆದರೆ ಅವನು ತನ್ನ ಕೋಣೆಗೆ ಹಿಂದಿರುಗಿದಾಗ ಆ ಯುವಕನು ಬಹುಮಟ್ಟಿಗೆ ಪ್ರಜ್ಞೆತಪ್ಪಿ ಬೆಂಚಿನಮೇಲೆ ಮಲಗಿದ್ದುದು ಕಂಡುಬಂದಿತು. ಅವನಿಗೆ ಏನೋ ಸುಸ್ತು ಸಂಕಟ, ತಲೆನೋವು ; ಪ್ರಯಾಣಮಾಡಲು ಅವನು ಸಮರ್ಥನಾಗಿರಲಿಲ್ಲ.... ಅದಕ್ಕೆ ಏನೂ ಮಾಡುವಂತಿರಲಿಲ್ಲ ! ಅಂಚೆಯಜಮಾನನು ತನ್ನ ಹಾಸಿಗೆಯನ್ನು ಅವನಿಗೆ ಬಿಟ್ಟುಕೊಟ್ಟನು ; ರೋಗಿ ಮಾರನೆಯ ಬೆಳಗ್ಗೆಯ ಹೊತ್ತಿಗೆ ಉತ್ತಮಗೊಳ್ಳದಿದ್ದರೆ 'ಸಿ' (C) –ಗೆ ಒಬ್ಬ ವೈದ್ಯನಿಗಾಗಿ ಹೇಳಿ ಕಳಿಸತಕ್ಕದ್ದೆಂದು ನಿಶ್ಚಯವಾಯಿತು.

ಮಾರನೆಯ ದಿನ ರಾವುತ ಸಿಪಾಯಿಯ ಸ್ಥಿತಿ ಇನ್ನೂ ಕೆಟ್ಟಿತು. ಅವನ ಆಳು ವೈದ್ಯನಿಗಾಗಿ ನೆರೆಯೂರಿಗೆ ಕುದುರೆಯಮೇಲೆ ಹೋದನು. ದುನ್ಯ ವಿನೆಗರ್‌ನಲ್ಲಿ (ಧಾನ್ಯದ ಹುಳಿರಸ) ತೊಯಿಸಿದ ಕರವಸ್ತ್ರವನ್ನು ಅವನ ಹಣೆಯ ಮೇಲೆ ಹಾಕಿ, ತನ್ನ ಹೊಲಿಗೆ ಕೆಲಸಮಾಡುತ್ತ ಅವನ ಹಾಸಿಗೆಯ ಪಕ್ಕದಲ್ಲಿಯೆ ಕುಳಿತರು. ಅಂಚೆಯ ಯಜಮಾನನ ಎದರಿಗೆ ರೋಗಿ ಒಂದು ಮಾತನ್ನೂ ಆಡಲಾರದೆ ಮುಲುಕುತ್ತಿದ್ದನು. ಆದರೂ, ಎರಡು ಬಟ್ಟಲು ಕಾಫಿ ಕುಡಿದನು, ಮಧ್ಯಾಹ್ನದ ಊಟ ಬೇಕೆಂದು ಮುಲುಕುತ್ತಲೇ ಹೇಳಿದನು. ದುನ್ಯ ಅವನ ಪಕ್ಕವನ್ನು ಬಿಟ್ಟುಹೋಗುತ್ತಲೇ ಇರಲಿಲ್ಲ. ಏನಾದರೂ ಕುಡಿಯುವುದಕ್ಕೆ ಬೇಕೆಂದು ಅವನು ಕೇಳುತ್ತಲೆ ಇದ್ದನು ; ದುನ್ಯ ಸಣ್ಣ ಕೊಳಗ ದಪ್ಪಳೆ ತುಂಬ ಸ್ವಹಸ್ತದಿಂದ ತಯಾರಿಸಿದ 'ಲೆಮೊನೆಡ್' ಪಾನೀಯವನ್ನು ತಂದುಕೊಡುತ್ತಲೇ ಇದ್ದಳು. ರೋಗಿ ತನ್ನ ತುಟಿಗಳನ್ನು ನಾಲಗೆಯಿಂದ ಒದ್ದೆಮಾಡಿಕೊಳ್ಳುತ್ತಿದ್ದು, ಕೊಳಗದಪ್ಪಲೆಯನ್ನು ಹಿಂದಿರುಗಿಸಿದ ಪ್ರತಿಸಲವೂ ಕೃತಜ್ಞತಾಸೂಚಕವಾಗಿ ದುನ್ಯಳ ಕೈಗಳನ್ನು ಹಿಡಿಯಲಾರದೆ ಹಿಡಿದುಕೊಂಡು ಅದುಮುತ್ತಿದ್ದನು. ಊಟದ ಹೊತ್ತಿಗೆ ವೈದ್ಯನು ಬಂದನು. ಅವನು ರೋಗಿಯ ನಾಡಿ ಹಿಡಿದು ನೋಡಿದನು; ಅವನೊಂದಿಗೆ ಜರ್ಮನ್ ಭಾಷೆಯಲ್ಲಿ ಮಾತಾಡಿ, ಅವನಿಗೆ ಬೇಕಾಗಿರುವುದೆಲ್ಲಾ ವಿಶ್ರಾಂತಿಯೆಂದೂ ಇನ್ನು ಎರಡು ಮೂರು ದಿನಗಳಲ್ಲಿ ಅವನು ತನ್ನ ಪ್ರಯಾಣವನ್ನು ಮುಂದುವರಿಸಲು ಸಮರ್ಥನಾಗುವನೆಂದೂ ರಷ್ಯನ್ ಭಾಷೆಯಲ್ಲಿ ಹೇಳಿದನು. ವೈದ್ಯನ ಭೇಟಿಗಾಗಿ ರಾವುತ ಸಿಪಾಯಿ ಅವನಿಗೆ ಇಪ್ಪತ್ತೈದು 'ರೂಬಲ್' ಸಂಭಾವನೆ ಕೊಟ್ಟು, ತನ್ನ ಜೊತೆ ಊಟಮಾಡಬೇಕೆಂದು ಆಹ್ವಾನಿಸಿದನು. ವೈದ್ಯನು ಆಹ್ವಾನವನ್ನು ಅಂಗಿಕರಿಸಿದನು ; ಇಬ್ಬರೂ ತೃಪ್ತಿಯಾಗುವವರೆಗೆ ತಿಂದರು, ಒಂದು ಶೀಸೆ ದ್ರಾಕ್ಷಾಮದ್ಯವನ್ನು ಕುಡಿದರು, ಪರಸ್ಪರವಾಗಿ ತುಂಬ ಮೆಚ್ಚಿಕೊಂಡರು.

ಅವಳೊಂದಿಗೆ ಅರ್ಧ ಅರ್ಧಗಂಟೆ ಮಾತಾಡುತ್ತಿದ್ದರು. ನನ್ನ ಮನೆ ಅವಳಿಂದ ಮನೆಯೆನಿಸಿತ್ತು–ಹೇಗೋ ಹೊತ್ತುಮಾಡಿಕೊಂಡು ಮನೆಯನ್ನು ಚೊಕ್ಕಟ ಮಾಡುತ್ತಿದ್ದಳು, ಅಡಿಗೆ ಮಾಡುತ್ತಿದ್ದಳು ; ಎಲ್ಲವನ್ನೂ ಮಾಡುತ್ತಿದ್ದಳು. ದಡ್ಡ ಮುದುಕನಾದ ನನ್ನ ದುನ್ಯಳನ್ನು ನಾನು ಪ್ರೀತಿಸುತ್ತಿರಲಿಲ್ಲವೆ ? ನನ್ನ ಮಗುವನ್ನು ನಾನು ಲಾಲಿಸಿ ಪಾಲಿಸುತ್ತಿರಲಿಲ್ಲವೆ? ಅವಳ ಬಾಳು ಸುಖವಾಗಿರಲಿಲ್ಲವೆ? ಆದರೆ, ಯಾರೇ ಆಗಲಿ ಪ್ರಾರ್ಥನೆಗಳಿಂದ ವಿಪತ್ತನ್ನು ತಡೆಗಟ್ಟಲು ಸಾಧ್ಯವಿಲ್ಲ ; ವಿಧಿಯ ಕಟ್ಟಳೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.” ಆಗ ಅವನು ತನ್ನ ದೌರ್ಭಾಗ್ಯದ ವಿವರವಾದ ಒಕ್ಕಣೆಯನ್ನು ನನಗೆ ಹೇಳ ತೊಡಗಿದನು.

ಮೂರು ವರ್ಷಗಳ ಹಿಂದೆ, ಒಂದೂ ಮಾಗಿಯ ಸಂಜೆ ಅಂಚೆ ಯಜಮಾನನು ತನ್ನ ಲೆಕ್ಕಪುಸ್ತಕಕ್ಕೆ ..... ಹಾಕಿಕೊಳ್ಳುತ್ತಿದ್ದನು. ಅವನ ಮಗಳು ಅಡ್ಡಗೋಡೆಯ ಹಿಂದೆ ಕುಳಿತು ಒಂದು ಉಡುಪನ್ನು ತಯಾರಿಸಿ ಕೊಳ್ಳುತ್ತಿದ್ದಳು; ಆಗ ಒಂದು ‘ಟ್ರಾಯ್ಕ’ (ಮೂರು ಕುದುರೆಯ ಸಾರೋಟು) ಹೊರಗಡೆ ನಿಂತಿತು ; ‘ಕರ್‌ಕೇಷಿಯನ್’ ಟೋಪಿ, ದೊಡ್ಡ ಸೈನಿಕ ಅಂಗಿ, ಒಂದು ದಪ್ಪನೆಯ ‘ಮಫ್ಲರ್ !–ಇವನ್ನು ಧರಿಸಿದ್ದ ಒಬ್ಬ ಪ್ರಯಾಣಿಕನು ಕೋಣೆಯನ್ನು ಪ್ರವೇಶಿಸಿ, ಕುದುರೆಗಳು ಬೇಕೆಂದು ಕೇಳಿದನು. ಕುದುರೆಗಳೆಲ್ಲವೂ ಹೊರಗೆ ಹೋಗಿದ್ದವು. ಇದನ್ನು ಕೇಳಿ ಪ್ರಯಾಣಿಕನು ತನ್ನ ಧ್ವನಿಯನ್ನು ಎತ್ತರಿಸಿ, ಕೈಯ ಚಾವಟಿಯನ್ನು ಮೇಲಕ್ಕೆತ್ತಿದನು. ಇಂಥ ದೃಶ್ಯಗಳ ಪರಿಚಯವಿದ್ದ ದುನ್ಯ ನಡುಗೋಡೆಯ ಹಿಂದುಗಡೆಯಿಂದ ಓಡಿಬಂದು, ಪ್ರಯಾಣಿಕನನ್ನು ಕುರಿತು ನಯವಾಗಿ ಮಾತಾಡಿಸುತ್ತ, ಏನಾದರೂ ತಿನ್ನಲು ಅಪೇಕ್ಷಯಿದೆಯೆ ಎಂದು ಕೇಳಿದಳು. ದುನ್ಯಳ ಸಂದರ್ಶನ ತನ್ನ ಎಂದಿನ ಪರಿಣಾಮವನ್ನು ಬೀರಿತು. ಪ್ರಯಾಣಿಕನ ರೋಷ ಅವನನ್ನು ಬಿಟ್ಟು ತೊಲಗಿತು ; ಕುದುರೆಗಳಿಗಾಗಿ ಕಾದಿರಲೊಪ್ಪಿ, ರಾತ್ರಿಯೂಟಕ್ಕೆ ವ್ಯವಸ್ಥೆಮಾಡುವಂತೆ ಹೇಳಿದನು. ಅವನು ತನ್ನ ಒದ್ದೆಯಾದ ಗುಂಜುಗುಂಜಾದ ತುಪ್ಪಟದ ಟೋಪಿಯನ್ನು ತೆಗೆದಿಟ್ಟು, ಮಫ್ಲರನ್ನು ಬಿಚ್ಚಿ, ದೊಡ್ಡ ಅಂಗಿಯನ್ನು ಒಂದು ಕಡೆ ಬಿಸುಟಾಗ ಅವನೊಬ್ಬ ಸಣ್ಣ ಕಪ್ಪುಮಿಸೆಯ ತೆಳ್ಳನೆಯ ತರುಣ ರಾವುತಸಿಪಾಯಿಯೆಂಬುದು ಕಂಡುಬಂದಿತು. ಅವನು ಅಂಚೆಯಜಮಾನನ ಮನೆಯಲ್ಲಿ ಮನೆಯವನ ಹಾಗೆಯೇ ಹೊಂದಿಕೊಂಡುಬಿಟ್ಟು, ಆತನೊಡನೆಯೂ ಆತನ ಮಗಳೊಡನೆಯೂ ಉಲ್ಲಾಸವಾಗಿ ಹರಟೆ ಹೊಡೆಯತೊಡಗಿದನು. ರಾತ್ರಿಯೂಟವನ್ನು ಬಡಿಸಲಾಯಿತು. ಈ ನಡುವೆ ಕುದುರೆಗಳು ಹಿಂದಿರುಗಿದ್ದುವು ; ಅವಕ್ಕೆ ಮೇವನ್ನೂ ಕೊಡದೆ ಪ್ರಯಾಣಿಕನ

ಚರ್ಚಿನ ಅಂಗಳದಲ್ಲಾಗಲಿ ಮುಖಮಂಟಪದಲ್ಲಾಗಲಿ ದುನ್ಯ ಕಂಡುಬರಲಿಲ್ಲ. ಅವನು ಅತುರದಿಂದ ಚರ್ಚನ್ನು ಪ್ರವೇಶಿಸಿದನು ; ಪಾದ್ರಿಯೂ ವೇದಿಕೆಯನ್ನು ಬಿಟ್ಟು ಹೊರಟುಹೋಗಿದ್ದನ್ನು, ಚರ್ಚಿನ ಪಾರುಪತ್ಯಗಾರ (ಸೆಕ್ಸ್ಟನ್) ಮೋಂಬತ್ತಿಗಳನ್ನು ಆರಿಸುತ್ತಿದ್ದನು, ಮುದುಕಿಯರಿಬ್ಬರು ಒಂದು ಮೂಲೆಯಲ್ಲಿ ಇನ್ನೂ ಪ್ರಾರ್ಥನೆಗಳನ್ನು ಹೇಳಿಕೊಳ್ಳುತ್ತಿದ್ದರು ; ಆದರೆ ದುನ್ಯ ಮಾತ್ರ ಎಲ್ಲಿಯೂ ಕಂಡುಬರಲಿಲ್ಲ. ನೆಮ್ಮದಿಯಿಲ್ಲದ ತಂದೆ, ಅವಳು ಆರಾಧನೆಗೆ ಬಂದಿದ್ದಳೆ ಎಂದು ಪಾರುಪತ್ಯಗಾರನನ್ನು ತಡೆದು ತಡೆದು ಕೇಳಿದನು. ಅವಳು ಬಂದಿರಲಿಲ್ಲವೆಂದು ಪಾರುಪತ್ಯಗಾರ ಉತ್ತರ ಕೊಟ್ಟನು. ಅಂಚೆ ಯಜಮಾನನು ಹೆಸರಿಗೆ ಉಸಿರಾಡುತ್ತ ಹೆಣವಾಗಿ ಮನೆಗೆ ಹಿಂದಿರುಗಿದನು. ಅವನಿಗೆ ಉಳಿದದ್ದು ಒಂದೇ ಆಸೆ–ದುನ್ಯ ತಾರುಣ್ಯಕ್ಕೆ ಸಹಜವಾದ ಹುಡುಗಾಟಿಕೆಯಿಂದ ಮುಂದಿನ ಅಂಚೆನಿಲ್ದಾಣಕ್ಕೆ ಹೋಗಿರಬಹುದು ; ಅಲ್ಲಿ ಅವಳ 'ಧಾರ್ಮಿಕ' ಮಾತೆ* ವಾಸಿಸುತ್ತಿದ್ದಳು. ತಾಳ್ಮೆದಪ್ಪಿದ ದುಃಖೋದ್ವೇಗದಲ್ಲಿ ಮುಳುಗಿ ಅವನು ಗಾಡಿಯೊಂದಿಗೆ ಕಳಿಸಿದ್ದ ಕುದುರೆಗಳು ಹಿಂದಿರುಗುವುದನ್ನೇ ಕಾಯುತ್ತಿದ್ದನು. ಆದರೆ, ಹಗಲು ಕಳೆಯಿತು; ಗಾಡಿ ಹೊಡೆಯುವವನು ಹಿಂದಿರುಗಲೇ ಇಲ್ಲ. ಕಡೆಗೆ, ರಾತ್ರಿಯಾದಮೇಲೆ, ಅವನು ಕುಡಿದು ಅಮಲೇರಿ ಒಬ್ಬನೇ ಗಾಡಿಯಲ್ಲಿ ಹಿಂದಿರುಗಿದನು ; "ದುನ್ಯ ಆಮುಂದಿನ ಅಂಚೆನಿಲ್ದಾಣದಿಂದ ಆ ರಾವುತ ಸಿಪಾಯಿಯೊಂದಿಗೆ ಹೊರಟು ಹೋಗಿದ್ದಳು" ಎಂಬ ಎದೆಬಿರಿಯಿಸುವ ಸುದ್ದಿಯನ್ನು ಹೊತ್ತು ತಂದಿದ್ದನು.

ಆ ಮುದುಕನಿಗೆ ತನ್ನ ದೌರ್ಭಾಗ್ಯದ ಆಘಾತದಿಂದ ಪಾರಾಗಲು ಸಾಧ್ಯವಾಗಲಿಲ್ಲ ; ಆ ಸಂಜೆಯೇ ಅವನು ಹಾಸಿಗೆ ಹಿಡಿದನು–ಯಾವ ಹಾಸಿಗೆಯ ಮೇಲೆ ಹಿಂದಿನ ದಿನ ಆ ಠಕ್ಕ ಯುವಕ ಮಲಗಿಕೊಂಡಿದ್ದನೋ ಅದೇ ಹಾಸಿಗೆ ; ಅಂಚೆಯಜಮಾನ ಹಿಂದೆ ನಡೆದದ್ದನ್ನೆಲ್ಲಾ ನೆನೆದು, ಆ ಯುವಕನ ಖಾಯಿಲೆ ಬರಿಯ ನಟನೆಯದೆಂದು ಈಗ ಊಹಿಸಿದನು. ಆ ಬಡ ಮುದುಕನಿಗೆ ಉಗ್ರವಾದ ಜ್ವರ ಹಿಡಿಯಿತು ; ಅವನ ಸ್ಥಾನದಲ್ಲಿ ಇನ್ನೊಬ್ಬ ಅಂಚೆಯಜಮಾನನನ್ನು ಹಂಗಾಮಿಯಾಗಿ ನೇಮಿಸಿ, ಅವನನ್ನು 'ಸಿ' (C)–ಗೆ ಒಯ್ಯಲಾಯಿತು. ರಾವುತ ಸಿಪಾಯಿಯನ್ನು ಭೇಟಿಮಾಡಿದ್ದ ಅದೇ ವೈದ್ಯನೆ ಇವನ ಚಿಕಿತ್ಸೆಯನ್ನು ಮಾಡತೊಡಗಿದನು ; ಆ ತರುಣನು ಆಗ ಸಂಪೂರ್ಣವಾಗಿ ಸ್ವಸ್ಥವಾಗಿದ್ದನೆಂದೂ, ಆತನ ದುರುದ್ದೇಶವನ್ನು ತಾನು ಊಹಿಸಿದ್ದರೂ ಅವನ ಚಾವಟಿಯೇಟಿಗೆ

* ಧರ್ಮ ಶಿಕ್ಷಣದ ಹೊಣೆ ಹೊತ್ತವಳು = Godmother, – ಅನು.

ಇನ್ನೊಂದು ದಿನ ಕಳೆಯಲಾಗಿ, ರಾವುತ ಸಿಪಾಯಿ ಸಂಪೂರ್ಣವಾಗಿ ಗುಣಮುಖನಾದನು. ಅವನು ಅತ್ಯಂತ ಉಲ್ಲಾಸಭರಿತತನಾಗಿದ್ದನು: ಎಡೆ ಬಿಡದೆ ಪರಿಹಾಸಮಾಡುವನು ; ಸೀಟಿ ಹಾಕುತ್ತ ರಾಗಾಲಾಪನೆ ಮಾಡುವನು. ಇತರ ಪ್ರಯಾಣಿಕರೊಂದಿಗೆ ಹರಟೆ ಹೊಡೆಯುವನು ; ಅವರು ಬದಲಾಯಿಸಿ ಕೊಂಡ ಟಪ್ಪಾ ಕುದುರೆಗಳ ದಾಖಲೆಯನ್ನು ಲೆಕ್ಕಪುಸ್ತಕದಲ್ಲಿ ತಾನೆ ಬರೆಯುವನು. ಹೀಗಾಗಿ ಆ ದಯಾಳುವಾದ ಅಂಚೆಯಜಮಾನನಿಗೆ ಇವನನ್ನು ಕಂಡರೆ ಎಷ್ಟು ಅಕ್ಕರೆಯುಂಟಾಯಿತೆಂದರೆ, ಮೂರನೆಯ ದಿನದ ಬೆಳಗ್ಗಿನ ಹೊತ್ತಿಗೆ ತನ್ನ ಅಚ್ಚುಮೆಚ್ಚಿನ ಅಭ್ಯಾಗತನನ್ನು ಅಗಲುವುದೆಂದರೆ ಅವನಿಗೆ ಅಸಹನೀಯವಾಗಿ ಕಂಡೀತು. ಅಂದು ಭಾನುವಾರ ; ದುನ್ಯ ಚರ್ಚಿಗೆ ಹೋಗಲು ಸಿದ್ಧಳಾದಳು. ರಾವುತಸಿಪಾಯಿಯ ಜಾರುಬಂಡಿಯನ್ನು ತಂದೂ ನಿಲ್ಲಿಸಲಾಯಿತು. ಅಂಚೆಯಜಮಾನನು ತನಗೆ ಒದಗಿಸಿದ ಊಟವಸತಿ ಸೌಕರ್ಯಗಳಿಗಾಗಿ ಧಾರಾಳವಾಧ ಸಂಭಾವನೆಯನ್ನು ಅವನಿಗೆ ಕೊಟ್ಟು, ರಾವುತ ಸಿಪಾಯಿ ಅವನನ್ನು ಬೀಳ್ಕೊಂಡನು. ಅವನು ದುನ್ಯಳಿಗೂ ಅಂತ್ಯಪ್ರಣಾಮವನ್ನು ಸಲ್ಲಿಸಿ, ಅವಳನ್ನು ಚರ್ಚಿನವರೆಗೆ ಕರೆದುಕೊಂಡು ಹೋಗಿಬಿಡುವುದಾಗಿ ಮುಂದೆ ಬಂದನು ; ಚರ್ಚು ಹಳ್ಳಿಯ ಇನ್ನೊಂದು ಕೊನೆಯಲ್ಲಿತ್ತು. ದುನ್ಯ ದಿಕ್ಕು ತೋಚದವಳಂತಿದ್ದಳು. ಅವಳ ತಂದೆ, "ಏನು ಕಂಡು ಹೆದರಿಕೆ ನಿನಗೆ? ಈ ದೊಡ್ಡ ಮನುಷ್ಯರು ತೋಳನಲ್ಲ, ನಿನ್ನನ್ನು ಕಚ್ಚುವುದಕ್ಕೆ ; ಚರ್ಚಿಗೆ ತಮ್ಮ ಗಾಡಿಯಲ್ಲಿ ನಿನ್ನನ್ನು ಕರೆದುಕೊಂಡು ಹೋಗಲಿ, ಬಿಡು" ಎಂದನು. ದುನ್ಯ ಜಾರುಬಂಡಿಯೊಳಕ್ಕೆ ಹೋಗಿ ರಾವುತ ಸಿಪಾಯಿಯ ಪಕ್ಕದಲ್ಲಿ ಕುಳಿತಳು; ಆಳು ಬಂಡಿ ಹೊಡೆಯುವವನ ಪಕ್ಕದ ಸ್ಥಳಕ್ಕೆ ಹಾರಿ ಕುಳಿತನು ; ಬಂಡಿಹೊಡೆಯುವವನು ಶೀಟಿ ಹಾಕಿದನು; ಕುದುರೆಗಳು ನಾಗಲೋಟ ಕಿತ್ತವು.

ತಾನು ತನ್ನ ಮಗಳು ದುನ್ಯಳನ್ನು ಆ ರಾವುತ ಸಿಪಾಯಿಯೊಂದಿಗೆ ಹೋಗಗೊಟ್ಟದ್ದು ಹೇಗೆ, ತಾನು ಅಷ್ಟು ಕುರುಡಾದದ್ದು ಹೇಗೆ ಆ ವೇಳೆಯಲ್ಲಿ ತನ್ನನ್ನು ಯಾವ ದುಷ್ಟಶಕ್ತಿ ಹಾಗೆ ವಶಪಡಿಸಿಕೊಂಡಿತ್ತು–ಇದೊಂದೂ ನಿರ್ಭಾಗ್ಯನಾದ ಆ ಅಂಚೆಯಜಮಾನನಿಗೆ ಅರ್ಥವಾಗಲಿಲ್ಲ! ಅರ್ಧಗಂಟೆಯಾ ಗುವುದರೊಳಗಾಗಿ ಅವನ ಹೃದಯವನ್ನು ಜಗ್ಗಿಸಿ ಎಳೆದಂತಾಗತೊಡಗಿತು ; ಅವನ ಆತಂಕ ಮಿತಿಮೀರಿ, ಅವನಿಗೆ ಸುಮ್ಮನಿರಲು ಸಾಧ್ಯವಾಗದೆ, ಅವಳನ್ನು ನೋಡಿಕೊಂಡು ಬರಲು ಚರ್ಚಿಗೆ ಹೋದನು. ಅವನು ಅದನ್ನು ಸಮೀಪಿಸುತ್ತಿದ್ದಂತೆ, ಜನ ಆಗಲೆ ಹೊರಕ್ಕೆ ಬರುತ್ತಿದ್ದುದು ಅವನಿಗೆ, ಕಂಡುಬಂದಿತು;

ಅಣ್ಣಾ?" ಎಂದು ಕೇಳಿದನು. ಆ ಮುದುಕನ ಹೃದಯ ಭಾವಾವೇಶದಿಂದ ಕುದಿಯುತ್ತಿತ್ತು ; ಅವನ ಕಣ್ಣುಗಳಲ್ಲಿ ಕಂಬನಿ ಚಿಲುಮೆ ಚಿಮ್ಮಿತು ; "ಸ್ವಾಮಿ ! ದೇವರ ಪ್ರೀತ್ಯರ್ಥವಾಗಿಯಾದರೂ, ಸ್ವಾಮಿ...." ಎಂದು ನಡುಗುದನಿಯಲ್ಲಿ ಗೊಣಗಲು ಮಾತ್ರ ಅವನಿಗೆ ಸಾಧ್ಯವಾಯಿತು. ಮಿನ್ಸ್ಕಿ ಅವನ ಕಡೆಗೆ ಶೀಘ್ರವಾದ ಓರೆನೋಟವನ್ನು ಬೀರಿ, ಮುಖವೆಲ್ಲಾ ಕೆಂಪೇರಿ, ಅವನನ್ನು ಕೈಹಿಡಿದು ತನ್ನ ಓದುವ ಕೋಣೆಗೆ ಕರೆದುಕೊಂಡುಹೋಗಿ, ಅಲ್ಲಿ ಒಳಗಡೆಯಿಂದ ಬಾಗಿಲಿಗೆ ಬೀಗ ಹಾಕಿಕೊಂಡನು. "ಸ್ವಾಮಿ, ಕಳೆದು ಹೋದದ್ದು ಹೋಯಿತು ; ಆದರೆ ನನ್ನ ಬಡ ದುನ್ಯಳನ್ನು ನನಗೆ ಹಿಂದಿರುಗಿ ಕೊಡಿ ! ನೀವು ಅವಳಿಂದ ಪಡೆಯಬೇಕಾದ ಸುಖವನ್ನು ಪಡೆದಾಯಿತು–ಇನ್ನು ಅವಳನ್ನು ಅನ್ಯಾಯವಾಗಿ ಹಾಳುಮಾಡಬೇಡಿ" ಎಂದು ಮುದುಕ ಪ್ರಲಾಪಿಸಿದನು ನಿಜವಾಗಿ ಮನಕರಗಿದ ಆ ತರಣನು, "ಆದದ್ದು ಆಯಿತು, ಅದನ್ನು ತಪ್ಪಿಸಲಾಗುವುದಿಲ್ಲ. ನಾನು ನಿಮಗೆ ಅನ್ಯಾಯ ಮಾಡಿದ್ದೇನೆ, ನಿಮ್ಮ ಕ್ಷಮೆ ಬೇಡಲು ಸಿದ್ಧನಾಗಿದ್ದೇನೆ. ಆದರೆ ದುನ್ಯಳನ್ನು ನಾನು ಕೈ ಬಿಡತಕ್ಕವನೆಂದು ಮಾತ್ರ ಭಾವಿಸಬೇಡಿ. ನನ್ನ ಗೌರವದ ಆಣೆಯಿಟ್ಟು ಹೇಳುತ್ತೇನೆ, ಅವಳು ಸುಖವಾಗಿರುತ್ತಾಳೆ. ಅವಳಿಂದ ನಿಮಗೆ ಆಗ ಬೇಕಾದದ್ದಾದರೂ ಏನ? ಅವಳು ನನ್ನನ್ನು ಪ್ರೀತಿಸುತ್ತಾಳೆ; ಅವಳಿದ್ದ ಹಿಂದಿನ ಸ್ಥಿತಿಗತಿ ಅವಳಿಗೆ ಈಗ ಒಗ್ಗುವುದಿಲ್ಲ. ನೀವಾಗಲಿ ಅವಳಾಗಲಿ ನಡೆದದ್ದನ್ನು ಎಂದಿಗೂ ಮರೆಯಲಾರಿರಿ, ನಾನು ಬಲ್ಲೆ" ಎಂದನು. ಅನಂತರ, ಅಂಚೆ ಯಜಮಾನನ ಮುಂದೋಳಿನೊಳಕ್ಕೆ ಏನನ್ನೋ ತುರುಕಿ, ಬಾಗಿಲ ಬೀಗವನ್ನು ತೆಗೆದನು ; ಆ ಮುದುಕ ಬೀದಿಯಲ್ಲಿದ್ದನು, ಅದು ಹೇಗೆಂಬುದನ್ನು ಮಾತ್ರ ಅವನರಿಯನು.

ಅವನು ಬಹಳಹೊತ್ತು ನಿಶ್ಚಲನಾಗಿ ನಿಂತಿದ್ದನು ; ತನ್ನ ಮುಂದೋಳಿನ ಕೆಳಗೆ ಒಂದು ಕಾಗದದ ಕಟ್ಟಿದೆಯೆಂದು ಅವನಿಗೆ ಕಡೆಯಲ್ಲಿ ಗಮನಕ್ಕೆ ಬಂತು. ಅದನ್ನು ಹೊರಕ್ಕೆಳೆದನು ; ಬಿಡಿಸಿ ನೋಡಲು ಅನೇಕ ಮುದುಡಿದ ಐದು ಮತ್ತು ಹತ್ತು 'ರೂಬಲ್' 'ನೋಟು'ಗಳಿದ್ದುವು. ಮತ್ತೆ ಅವನ ಕಣ್ಣುಗಳಲ್ಲಿ ನೀರು ತುಂಬಿ ಬಂತು ; ಕ್ರೋಧದ ಕಂಬನಿ. ಅವನು ಆ 'ನೋಟು'ಗಳನ್ನೆಲ್ಲ ಒಂದು ಉಂಡೆಯಾಗಿ ಮುದುರಿ, ನೆಲದಮೇಲೆಸೆದು, ಅವುಗಳನ್ನು ಜೋಡಿನ ಹಿಮ್ಮಡಿಯಿಂದ ತುಳಿದು, ಹೊರಟುಹೋದನು.... ಕೆಲವು ಗಜ ಮುಂದೆ ನಡೆದುಹೋದಮೇಲೆ, ತನ್ನಲ್ಲಿ ತಾನು ಆಲೋಚಿಸಿದನು.....ಹಿಂದಿರುಗಿ ಹೆಜ್ಜೆ ಹಾಕದೊಡಗಿದನು. ಆದರೆ ನೋಟುಗಳು ಆಗ ಅಲ್ಲಿರಲಿಲ್ಲ. ಸೊಗಸಾಗಿ ಉಡುಪು

ಹೆದರಿ ಏನೂ ಹೇಳಿರಲಿಲ್ಲವೆಂದೂ ಅಂಚೆ ಯಜಮಾನನಿಗೆ ನಂಬಿಕೆಯಿತ್ತನು. ಆ ಜರ್ಮನ್ನನು ನಿಜವನ್ನೆ ನುಡಿದನೋ, ಇಲ್ಲವೆ ತಾನು ಸೂಕ್ಷ್ಮಬುದ್ಧಿಯುಳ್ಳವನೆಂದು ತೋರಿಸಿಕೊಳ್ಳಬಯಸಿದನೋ, ಅವನು ಅಸುಖಿಯಾಗಿದ್ದ ತನ್ನ ರೋಗಿಗೆ ಕೊಂಚಡವಾದರೂ ಮನಸ್ಸಮಾಧಾನವನ್ನುಂಟುಮಾಡಲಾಗಲಿಲ್ಲ. ಅಂಚೆಯಜಮಾನನು ಖಾಯಿಲೆಯಿಂದ ಗುಣಹೊಂದುವುಕ್ಕೆ ಮೊದಲೆ 'ಸಿ'–ಯಲ್ಲಿನ ಅಧಿಕಾರಿಗಳನ್ನು ಎರಡು ತಿಂಗಳ ರಜಕ್ಕಾಗಿ ಬೇಡಿ, ತನ್ನ ಉದ್ದೇಶದ ಬಗ್ಗೆ ಯಾರಿಗೂ ಒಂದು ಮಾತನ್ನೂ ಉಸುರದೆ, ತನ್ನ ಮಗಳನ್ನು ಹುಡುಕಲು ಕಾಲ್ನಡಗೆಯಲ್ಲೆ ಹೊರಟುಬಿಟ್ಟನು. ಕ್ಯಾಪ್ಟನ್ ಮಿನ್ಸ್ಕಿ ಸ್ಮೋಲೆನ್‌ಸ್ಕ್‌ನಿಂದ ಪೀಟರ್ಸ್‌ಬರ್ಗಿಗೆ ಪ್ರಯಾಣ ಮಾಡಿದ್ದನೆಂದು ಲೆಕ್ಕಪುಸ್ತಕದಿಂದ ಕಂಡುಹಿಡಿದನು. ಅವನನ್ನು ಕರೆದೊಯ್ದ ಕೋಚ್ ಗಾಡಿಯನ್ನು, ದುನ್ಯ ತನ್ನ ಸ್ವಂತ ಇಷ್ಟದ ಪ್ರಕಾರವೇ ಹೋಗುತ್ತಿದ್ದರೂ ದಾರಿಯುದ್ದಕ್ಕೂ ಅತ್ತಿದ್ದಳೆಂದು ನುಡಿದನು. "ದೇವರ ದಯೆಯೊಂದಿದ್ದರೆ, ದಾರಿತಪ್ಪಿದ ನನ್ನ ಕುರಿಮರಿಯನ್ನು ಮನೆಗೆ ಕರೆತರುತ್ತೇನೆ" ಎಂದು ಅಂಚೆ ಯಜಮಾನನು ಆಲೋಚಿಸಿದನು. ಈ ಭಾವನೆಯಿಂದ ಸ್ಫೂರ್ತಿಗೊಂಡು ಅವನು ಪೀಟರ್ಸ್‌ಬರ್ಗಿಗೆ ಹೋದನು ; ಅಲ್ಲಿನ ಇಸ್ಮೈಲಾಫ್ ದಳದ ಬರಾಕಿನಲ್ಲಿ, ತಾನು ಸೈನ್ಯ ಸೇವೆ ಸಲ್ಲಿಸುತ್ತಿದ್ದ ಕಾಲದಲ್ಲಿ ತನ್ನ ಜೊತೆಗಾರ ಸೈನಿಕನಾಗಿದ್ದು ಈಗ ಒಬ್ಬ ಮೇಲ್ದರ್ಜೆಯ ಸೈನ್ಯಾಧಿಕಾರಿಯಾಗಿ ನಿವೃತ್ತನಾಗಿದ್ದವನೊಬ್ಬನ ಮನೆಯಲ್ಲಿ ಇಳಿದುಕೊಂಡನು. ಅಲ್ಲಿದ್ದುಕೊಂಡು ಅವನು ತನ್ನ ಅನ್ವೇಷಣಕ್ಕೆ ತೊಡಗಿದನು. ಕ್ಯಾಪ್ಟನ್ ಮಿನ್ಸ್ಕಿ ಪೀಟರ್ಸ್‌ಬರ್ಗಿನಲ್ಲೇ ಡೆಮ್ಯುಟಾಫ್ ಉಪಾಹಾರ ಗೃಹದಲ್ಲಿ ವಾಸಿಸುತ್ತಿರುವನೆಂಬುದನ್ನು ಪತ್ತೆಮಾಡಿದನು. ಅವನನ್ನು ನೋಡುವುದಾಗಿ ಅಂಚೆ ಯಜಮಾನನು ನಿಶ್ಚಯಿಸಿದನು.

ಅವನು ಬೆಳಗ್ಗೆ ಹೊತ್ತಿಗೆ ಮುಂಚೆ ರಾವುತ ಸಿಪಾಯಿಯಿದ್ದ ಗೃಹದ ಮುಂಬಾಗಿಲ ಬಳಿ ಬಂದು, ಒಬ್ಬ ಹಳೆಯ ಸೈನಿಕನು ಅವರನ್ನು ನೋಡ ಬಯಸಿ ಬಂದಿರುವುದಾಗಿ ತಿಳಿಸಬೇಕೆಂದು ಸೇವಕನನ್ನು ಪ್ರಾರ್ಥಿಸಿಕೊಂಡನು. ಬೂಡ್ಸುನಿಲವಿನಮೇಲಿದ್ದ ಸವಾರಿ ಬೂಡ್ಸೊಂದಕ್ಕೆ ಮೆರುಗುಬಣ್ಣ ಹಾಕುತ್ತಿದ್ದ ಸೇವಕನು ತನ್ನ ದಣಿ ಮಲಗಿ ನಿದ್ದೆ ಮಾಡುತ್ತಿರುವುದಾಗಿಯೂ ಹನ್ನೊಂದು ಗಂಟೆಗೆ ಮುಂಚೆ ಯಾರನ್ನೂ ಕಾಣಗೊಡುವುದಿಲ್ಲವೆಂದೂ ಅವನಿಗೆ ತಿಳಿಸಿದನು. ಅಂಚೆ ಯಜಮಾನನು ಹೊರಟುಹೋಗಿ, ಗೊತ್ತಾದ ಗಂಟೆಯ ಹೊತ್ತಿಗೆ ಹಿಂದಿರುಗಿದನು. ಮಿನ್ಸ್ಕಿಮೇಲಂಗಿ ಮತ್ತು ಕೆಂಪು 'ಫೆಸ್' ಟೋಪಿ ಧರಿಸಿ ತಾನೇ ಹೊರಕ್ಕೆ ಅವನ ಬಳಿಗೆ ಬಂದನು. "ನನ್ನಿಂದ ನಿನಗೇನಾಗಬೇಕು,

ಇಷ್ಟು ಹೇಳಿ, ಅವನು ಮೆಟ್ಟಲುಗಳನ್ನೇರಿದನು.

ಬಾಗಿಲ ಬೀಗ ಹಾಕಿತ್ತು. ಗಂಟೆ ಬಾರಿಸಿ, ಆತಂಕದ ವೇದನೆಯನುಭವಿಸುತ್ತ ಕೆಲವು ಕ್ಷಣಗಳನ್ನು ಕಳೆದನು. ಬೀಗದಕೈ ಬೀಗದಲ್ಲಿ ಕಿರಕಿರ ಸದ್ದುಮಾಡಿತು, ಬಾಗಿಲು ತೆರೆಯಿತು. "ಅವ್ಡೊಟ್ಯ ಸ್ಯಾಮ್ಸೊನೊವ್ನ ಇಲ್ಲಿ ವಾಸಿಸುತ್ತಾರೆಯೇ?" ಎಂದು ಕೇಳಿದನು. "ಹ್ಞೂ, ವಾಸಿಸುತ್ತಾರೆ. ಅವರಿಂದ ನಿಮಗೇನಾಗಬೇಕು?" ಎಂದು ಯೌವನವತಿಯಾದ ಕೆಲಸಗಿತ್ತಿ ಉತ್ತಕೊಟ್ಟಳು. ಅಂಚೆಯಜಮಾನನು ಉತ್ತರ ಕೊಡದೆಯೆ ಹಜಾರದೊಳಕ್ಕೆ ಪ್ರವೇಶಿಸಿದನು. "ನೀವು ಹಾಗೆ ಒಳಕ್ಕೆ ಹೋಗಬೇಡಿ ! ಅವ್‌ಡೊಟ್ಟಯ ಸ್ಯಾಮ್ಸೋನೋವ್ನ ಯಾರ ಜೊತೆಯಲ್ಲಿಯೊ ಇದಾರೆ" ಎಂದೂ ಕೆಲಸದವಳು ಅವನಿಗೆ ಹಿಂದಿನಿಂದ ಕೂಗಿ ಹೇಳಿದಳು. ಆದರೆ ಆ ಮಾತಿಗೆ ಗಮನ ಕೊಡದೆಯೇ ಅಂಚೆ ಯಜಮಾನನು ಮುಂದೆ ನಡೆದು ಹೋದನು. ಅವನು ಹಾದುಹೋದ ಎರಡು ಕೋಣೆಗಳು ಕತ್ತಲೆಯಾಗಿದ್ದುವು ; ಮೂರನೆಯದರಲ್ಲಿ ಒಂದು ದೀಪವಿತ್ತು. ತೆರೆದಿದ್ದ ಬಾಗಿಲ ಬಳಿಗೆ ಹೋಗಿ, ಅಲ್ಲಿ ಹಾಗೆಯೆ ನಿಂತನು. ಉತ್ಕೃಷ್ಟವಾಗಿ ಸಜ್ಜಿತವಾಗಿದ್ದ ಕೋಣೆಯೊಳಗೆ ಮಿನ್ಸ್ಕಿ ಚಿಂತಾಮಗ್ನನಾಗಿ ಕುಳಿತಿದ್ದನು. ದುನ್ಯ ಆಗಿನ ಕಾಲದ ಅತಿ ಮೆಚ್ಚಿನ ಮಾದರಿಯ ಉಡುಪು ಧರಿಸಿ ಅವನು ಕುಳಿತಿದ್ದ ಕುರ್ಚಿಯ ತೋಳಿನ ಮೇಲೆ, ಇಂಗ್ಲಿಷ್ ಮಾದರಿಯಲ್ಲಿ ಪಕ್ಕಜೀನಿನಮೇಲೆ ಕುಳಿತು ಕುದುರೆ ಸವಾರಿ ಮಾಡುವ ರೀತಿಯಲ್ಲಿ ಕುಳಿತಿದ್ದಳು. ಅವಳು ಮಿನ್ಸ್ಕಿಯ ಕಪ್ಪು ಕುರುಳನ್ನು ಒಡವೆಗಳಿಂದ ಥಳಥಳಿಸುತ್ತಿದ್ದ ತನ್ನ ಬೆರಳುಗಳಿಂದ ಆಡಿಸುತ್ತ ಅವನ ಕಡೆ ಮೃದುಭಾವದಿಂದ ದೃಷ್ಟಿಸುತ್ತಿದ್ದಳು : ಅಯ್ಯೋ ಪಾಪ ! ಆ ಅಂಚೆ ಯಜಮಾನನಿಗೆ ತನ್ನ ಮಗಳು ಹಿಂದೆಂದೂ ಇಷ್ಟು ಮನೋಹರಳಾಗಿ ಕಂಡಿರಲಿಲ್ಲ ; ಅನೈಚ್ಛಿಕವಾದ ಮೆಚ್ಚುಗೆಯಿಂದ ಅವಳನ್ನು ಗಮನಿಸಿ ನೋಡುತ್ತಿದ್ದನು. ಅವಳು ತನ್ನ ತಲೆಯನ್ನು ಎತ್ತದೆಯೆ, "ಯಾರಲ್ಲಿ?" ಎಂದಳು. ಅವನು ಮೌನವಾಗಿ ನಿಂತಿದ್ದನು. ಉತ್ತರ ಬಾರದಿರಲು, ದುನ್ಯ ಕತ್ತೆತ್ತಿ ನೋಡಿದಳು... ಕಿರಿಚಿಕೊಂಡು ಜಮಖಾನದ ಮೇಲೆ ಬಿದ್ದುಬಿಟ್ಟಳು. ಗಾಬರಿಗೊಂಡ ಮಿನ್ಸ್ಕಿ ಅವಳನ್ನು ಮೇಲಕ್ಕೆತ್ತಲು ನುಗ್ಗಿಬಂದನು; ಆದರೆ ಬಾಗಿಲಬಳಿ ಮುದುಕನಾಥ ಅಂಚೆ ಯಜಮಾನನನ್ನು ಕಂಡು, ದುನ್ಯಳನ್ನು ಬಿಟ್ಟು, ಕೋಪದಿಂದ ಕಂಪಿಸುತ್ತ ಅವನನ್ನು ಸಮೀಪಿಸಿದನು. "ನಿನಗೇನು ಬೇಕು? ಕಳ್ಳನಹಾಗೆ ಯಾಕೆ ನನ್ನನ್ನು ಹಿಂಬಾಲಿಸುತ್ತಿದ್ದೀಯೆ? ನನ್ನ ಪ್ರಾಣ ತೆಗೆಯಬೇಕೆಂದು ಮಾಡಿದ್ದೀಯೇನು ? ಹೊರಡಾಚೆ !" ಎಂದು ಅವನು ಹಲ್ಲುಕಚ್ಚಿ ನುಡಿದನು. ಅಲ್ಲದೆ, ತನ್ನ ಬಲವಾದ ಕೈಯಿಂದ ಮುದುಕನ ಅಂಗಿಯ ಕೊರಳ ಪಟ್ಟಿಯನ್ನು

ಧರಿಸಿದ್ದ ತರುಣನೊಬ್ಬನು ಅವನನ್ನು ಕಂಡಕೂಡಲೆ ಒಂದು 'ಡ್ರಾಷ್ಕಿ' ಬಂಡಿಯ ಬಳಿಗೆ ಓಡಿಹೋಗಿ, ಆಶುರಾತುರವಾಗಿ ಅದರಲ್ಲಿ ಕುಳಿತು, 'ಹೊಡೆಯಯ್ಯಾ ಮುಂದಕ್ಕೆ' ಎಂದು ಕೂಗಿಕೊಂಡನು. ಅಂಚೆ ಯಜಮಾನನು ಅವನ ಬೆನ್ನಟ್ಟಿ ಹೋಗುವ ಪ್ರಯತ್ನವನ್ನೂ ಮಾಡಲಿಲ್ಲ. ತನ್ನ ಅಂಚೆಯ ನಿಲ್ದಾಣಕ್ಕೆ ಹಿಂದಿರುಗಲು ನಿಶ್ಚಯಿಸಿದನು ; ಆದರೆ, ಕಡೆಗೆ ಒಮ್ಮೆಯಾದರೂ ಸರಿಯೆ, ತನ್ನ ಬಡ ದುನ್ಯಳನ್ನು ಮೊದಲು ನೋಡಬೇಕೆಂದು ಆಸೆಯಾಯಿತು ಅವನಿಗೆ. ಆದ್ದರಿಂದ, ಎರಡು ದಿನ ಬಿಟ್ಟು, ಅವನು ಮತ್ತೆ ಮಿನ್ಸ್ಕಿಯ ಬಿಡಾರಕ್ಕೆ ಹೋದನು. ಆದರೆ, ಸೈನ್ಯದ ಸೇವಕನು ತನ್ನ ದಣಿ ಯಾರನ್ನೂ ನೋಡುವದಿಲ್ಲವೆಂದು ಕಠಿನವಾಗಿ ತಿಳಿಸಿಬಿಟ್ಟನು. ಅವನನ್ನು ಹೆಗಲಿಂದ ದಬ್ಬಿ ಹಜಾರದಾಚೆಗೆ ನೂಕಿ, ಅವನೆದುರಿಗೆ ಧಡಾರನೆ ಬಾಗಿಲು ಹಾಕಿಬಿಟ್ಟನು. ಅಂಚೆ ಯಜಮಾನನು ಹೊರಗಡೆ ಸ್ವಲ್ಪ ಹೊತ್ತು ನಿಂತಿದ್ದನು ; ಅನಂತರ ಹೊರಟುಹೋದನು.

ಅದೇ ಸಂಜೆ ಅವನು 'ಸರ್ವಾಹುತಾತ್ಮರ' ಚರ್ಚಿನಲ್ಲಿ ಆರಾಧಾನೆಯ ಕಾಲದಲ್ಲಿದ್ದು, ಲಿಟೀನಯ ರಸ್ತೆಯಲ್ಲಿ ನಡೆದುಹೋಗುತ್ತಿದ್ದನು. ಒಂದು ಸೊಗಸಾದ ಬಂಡಿ ಅವನ ಪಕ್ಕದಲ್ಲಿ ನುಗ್ಗಿ ಹೋಯಿತು ; ಅಂಚೆ ಯಜಮಾನನು ಮಿನ್ಸ್ಕಿಯ ಗುರುತು ಹಿಡಿದನು. ಬಂಡಿ ಬಂದು ಮೂರು ಅಂತಸ್ತಿನ ಮನೆಯ ಬಾಗಿಲ ಮುಂದೆ ನಿಂತುಕೊಂಡಿತು ; ರಾವುತ ಸಿಪಾಯಿ ಗಾಡಿಯಿಂದ ಮುಖಮಂಟಪಕ್ಕೆ ಹಾರಿದನು. ಸುಖಕರವಾದ ಆಲೋಚನೆಯೊಂದು ಅಂಚೆ ಯಜಮಾನನ ಮನಸ್ಸಿನಲ್ಲಿ ಹಾದುಹೋಯಿತು. ಅವನು ಬಂಡಿಯ ಸಮೀಪಕ್ಕೆ ಹಿಂದಿರುಗಿ ನಡೆದುಹೋಗಿ, ಬಂಡಿ ಹೊಡೆಯುವವನನ್ನು ಕುರಿತು : "ಅಯ್ಯಾ, ಇದು ಯಾರ ಕುದುರೆ? ಮಿನ್ಸ್ಕಿಯವರದಲ್ಲವೊ?" ಎಂದು ಕೇಳಿದನು. ಅದಕ್ಕೆ ಕೋಚಿನವನು, "ಹೌದು, ಅವರದ್ದೆ. ಯಾಕೆ ಕೇಳಿದ್ದು ?" ಎಂದು ಪ್ರಶ್ನಿಸಿದನು.

"ಏಕೆಂಬುದನ್ನು ಹೇಳುತ್ತೇನೆ. ನಿಮ್ಮ ಯಜಮಾನರು ತಮ್ಮ ದುನ್ಯ ಅವರ ಬಳಿಗೆ ಒಂದು ಚೀಟಿ ತೆಗೆದುಕೊಂಡು ಹೋಗಿ ಕೊಡುವಂತೆ ನನಗೆ ಹೇಳಿದ್ದರು. ಈ ದುನ್ಯ ಎಲ್ಲಿ ವಾಸ ಮಾಡುತ್ತಾರೆ ಎನ್ನುವುದು ನನಗೆ ಮರೆತುಹೋಗಿದೆ.

"ಹಾಗೋ. ಆಕೆ ಎರಡನೇ ಅಂತಸ್ತಿನಲ್ಲಿ ವಾಸ ಮಾಡುತ್ತಾರೆ. ಆದರೆ, ನೀವು ಚೀಟಿ ತಂದದ್ದು ತಡವಾಯಿತು. ಈಗ ಅವರೇ ಆಕೆಯ ಬಳಿ ಇದ್ದಾರಲ್ಲ."

"ಚಿಂತೆಯಿಲ್ಲ. ನನಗೆ ತಿಳಿಯಹೇಳಿದ್ದಕ್ಕಾಗಿ ವಂದನೆ ಕಣಯ್ಯ. ಮಾತುಕೊಟ್ಟಂತೆ ನಡೆದುಕೊಳ್ಳಬೇಕೋ ಇಲ್ಲವೋ" ಎಂದು ಅಂಚೆ ಯಜಮಾನನು ಹೇಳಿದನು ; ಅವನ ಹೃದಯ ವಿಚಿತ್ರ ರೀತಿಯಲ್ಲಿ ಪಕಪಕನೆ ಹೊಡೆದುಕೊಳ್ಳುತ್ತಿತ್ತು.

ನನ್ನ ತಲೆಯೊಳಗಿಂದ ಕೊಡಹಿಬಿಡುವುದಕ್ಕೇ ಆಗಲಿ, ನಿರ್ಭಾಗ್ಯಳಾದ ದುನ್ಯಳ ಬಗ್ಗೆ ಆಲೋಚಿಸಿದೆ ಇರುವುದಕ್ಕಾಗಲಿ ಬಹಳ ಕಾಲವೇ ಹಿಡಿಯಿತು.

ಈಚೆಗೆ ಸ್ವಲ್ಪ ಕಾಲದ ಹಿಂದೆ, 'ಎಕ್ಸ್' (X)-ಹಳ್ಳಿಯ ಮೂಲಕ ಹೋಗುತ್ತಿದ್ದಾಗ ನನ್ನ ಹಳೆಯ ಗೆಳೆಯನ ನೆನಪಾಯಿತು. ಅವನು ಆಡಳಿತ ನಡಸುತ್ತಿದ್ದ ಅಂಚೆಯ ನಿಲ್ದಾಣ ಈಗ ಇರಲಿಲ್ಲವೆಂದು ತಿಳಿಯ ಬಂತು. "ವೃದ್ಧ ಅಂಚೆ ಯಜಮಾನ ಇನ್ನೂ ಬದುಕಿರುವನೆ?" ಎಂಬ ನನ್ನ ಪ್ರಶ್ನೆಗೆ ಯಾರೂ ತೃಪ್ತಿಕರವಾದ ಉತ್ತರವನ್ನು ಕೊಡಲಾರದೆ ಹೋದರು. ಪರಿಚಿತ ಸ್ಥಳಗಳನ್ನು ಭೇಟಿಮಾಡಬೇಕೆಂಬ ಬಯಕೆಯಾಗಿ, ಕುದುರೆಗಳನ್ನು ಬಾಡಿಗೆಗೆ ತೆಗೆದುಕೊಂಡು 'ಎನ್' (N)-ಹಳ್ಳಿಗೆ ಪ್ರಯಾಣ ಹೊರಟೆ.

ಅದು ಶರತ್ಕಾಲ. ಆಕಾಶದ ತುಂಬ ಬೂದು ಮೋಡಗಳು. ಗಾಳಿ ತನ್ನ ಮಾರ್ಗದ ಮರಗಳ ಕೆಂಪು ಮತ್ತು ಹಳದಿ ಎಲೆಗಳನ್ನು ಹೊತ್ತು ತಂದು, ಬೋಳಾಗಿದ್ದ ಧಾನ್ಯದ ಹೊಲಗಳಿಂದ ಬೀಸಿ ಬರುತ್ತಿತ್ತು. ಸೂರ್ಯ ಮುಳುಗುವುದಕ್ಕೆ ಮುಂಚೆ ನಾನು ಹಳ್ಳಿಯನ್ನು ಸೇರಿದೆ. ದಪ್ಪನೆಯ ಹೆಂಗಸೊಬ್ಬಳು ಕೈಸಾಲೆಯೊಳಕ್ಕೆ ಬಂದಳು. (ಬಡ ದುನ್ಯ ಅಲ್ಲಿಯೇ ನನ್ನನ್ನು ಮುದ್ದಿಟ್ಟದ್ದು.) ನನ್ನ ಪ್ರಶ್ನೆಗಳಿಗೆ ಉತ್ತರವಾಗಿ, ಅಂಚೆ ಯಜಮಾನ ಸತ್ತು ಒಂದು ವರ್ಷವಾಯಿತೆಂದೂ, ಅವನ ಈ ಮನೆ ಈಗ ಸಾರಾಯಿ ಮಾಡುವವನಿಗೆ ಸೇರಿದೆಯೆಂದೂ, ತಾನೇ ಆ ಸಾರಾಯಿಗಾರನ ಹೆಂಡತಿಯೆಂದೂ ಉತ್ತರಕೊಟ್ಟಳು. ನನ್ನ ನಿರರ್ಥಕವಾದ ಪ್ರಯಾಣಕ್ಕಾಗಿ, ಅದಕ್ಕಾಗಿ ಅನ್ಯಾಯನಾಗಿ ವೆಚ್ಚಮಾಡಿದ ಏಳು ರೂಬಲ್‌ಗಳಿಗಾಗಿ, ನನಗೆ ವ್ಯಸನವಾಯಿತು. "ಅವನು ಏತರಿಂದ ಸತ್ತ?" ಎಂದು ಸಾರಾಯಿಗಾರನ ಹೆಂಡತಿಯನ್ನು ಹೇಳಿದೆ. "ಕುಡಿದು ಕುಡಿದು ಸತ್ತ ಸ್ವಾಮಿ" ಎಂದವಳು.

"ಅವನು ಎಲ್ಲಿ ಸಮಾಧಿಯಾಗಿದ್ದಾನೆ?"

"ಹಳ್ಳಿಯ ಆಚೆ ಸ್ವಲ್ಪ ದೂರ, ತನ್ನ ಹೆಂಡತಿಯ ಪಕ್ಕದಲ್ಲಿ."

"ಅವನ ಗೋರಿಯ ಹತ್ತಿರಕ್ಕೆ ನನ್ನನ್ನು ಕರೆದುಕೊಂಡು ಹೋಗಲು ಯಾರಾದರೂ ಸಿಕ್ಕುತ್ತಾರೆಯೆ?"

"ಓಹೋ, ಅದಕ್ಕೇನು.–ಹೇ, ವಾನ್ಕಾ ! ಆ ಬೆಕ್ಕನ್ನು ಅಲ್ಲಿ ಬಿಡು ! ಈ ದೊಡ್ಡಮನುಷ್ಯರನ್ನು ಮಸಣಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಅಂಚೆ ಯಜಮಾನರ ಗೋರಿಯನ್ನು ತೋರಿಸು."

ಚಿಂದಿ ಧರಿಸಿದ್ದ, ಕೆಂಚುಕೂದಲಿನ, ಒಕ್ಕಣ್ಣಿನ ಪೋರನೊಬ್ಬ ಓಡಿ ಬಂದ; ನನ್ನನ್ನು ಹಳ್ಳಿಯ ಕೊನೆಗೆ ಕರೆದೊಯ್ದ.

ಹಿಡಿದುಕೊಂಡು, ಮಹಡಿಯ ಮೆಟ್ಟಲ ಮೇಲಕ್ಕೆ ಅವನನ್ನು ದಬ್ಬಿದನು.

ಮುದುಕನು ತನ್ನ ನಿವಾಸಕ್ಕೆ ಹಿಂದಿರುಗಿದನು. ಅವನ ಸ್ನೇಹಿತನು ದೂರು ಕೊಡುವಂತೆ ಸಲಹೆ ಮಾಡಿದನು. ಆದರೆ, ಅಂಚೆ ಯಜಮಾನನು ಆ ವಿಚಾರವನ್ನು ಪರ್ಯಾಲೋಚಿಸಿ, ಆ ಆಲೋಚನೆಯನ್ನು ಕೈಬಿಟ್ಟಂತೆ ಕೈಯಲ್ಲಾಡಿಸಿಬಿಟ್ಟನು ; ವಿಷಯವನ್ನು ಹೇಗಿತ್ತೊ ಹಾಗೆ ಬಿಟ್ಟುಬಿಡಲು ನಿಶ್ಚಯಿಸಿದನು. ಎರಡು ದಿನಗಳ ತರುವಾಯ ಅವನು ಪೀಟರ್ಸ್‌ಬರ್ಗನ್ನು ಬಿಟ್ಟು, ತನ್ನ ಅಂಚೆಯನಿಲ್ದಾಣಕ್ಕೆ ಹಿಂದಿರುಗಿ, ತನ್ನ ಹಿಂದಿನ ಕೆಲಸವನ್ನು ಮತ್ತೆ ಕೈಗೊಂಡನು.

ಅವನು ತನ್ನ ಕಥನವನ್ನು ಮುಗಿಸುತ್ತ–

"ದುನ್ಯಳಿಲ್ಲದೆ, ಅವಳ ವಿಚಾರವಾಗಿ ಒಂದು ಮಾತೂ ಇಲ್ಲದೆ, ವಾಸ ಮಾಡತೊಡಗಿ ಇಂದಿಗೆ ಹೆಚ್ಚು ಕಡಮೆ ಮೂರು ವರ್ಷ. ಅವಳು ಬದುಕಿದ್ದಾಳೆಯೋ ಸತ್ತಿದ್ದಾಳೆಯೋ ದೇವರಿಗೊಬ್ಬನಿಗೆ ಗೊತ್ತು. ಏನಾಗಿದ್ದರೂ ಆಗಿರಬಹುದು. ಇಷ್ಟಕ್ಕೂ, ಯಾವನೋ ದಾರಿಹೋಕ ಸೊಗಸುಗಾರನೊಬ್ಬ ದುಷ್ಪ್ರೇರಣೆಮಾಡಿ ಕೆಡಿಸಿ, ಮೊದಲು ಅವಳನ್ನು ತಾನು ಇಟ್ಟುಕೊಂಡು ಬಳಿಕ ಬಿಟ್ಟುಬಿಟ್ಟ ಹೆಣ್ಣುಗಳಲ್ಲಿ ಇವಳು ಮೊದಲನೆಯವಳೂ ಅಲ್ಲ, ಕಡೆಯವಳೂ ಆಗಲಾರಳು. ಅವಳಂಥ ಅವಿವೇಕಿಗಳಾದ ತರುಣಿಯರು ಪೀಟರ್ಸ್‌ಬರ್ಗಿನಲ್ಲಿ ಅನೇಕಮಂದಿ ಇದ್ದಾರೆ; ಇಂದು 'ಸ್ಯಾಟಿನ್' ಮತ್ತು ಮಕಮಲ್ಲ ಬಟ್ಟೆಯ ಉಡುಪು ಧರಿಸಿ ಮೆರೆಯುತ್ತಾರೆ; ನಾಳೆ, ನೀವೇ ನೋಡಿ, ಕೀಳುಮಂದಿಯೊಂದಿಗೆ ಬೀದಿಯ ಚೌಕಗಳಲ್ಲಿ ಕಸಗುಡಿಸುತ್ತಿರುತ್ತಾರೆ. ಕೆಲವು ವೇಳೆ, ದುನ್ಯ ಅಲ್ಲಿ ಹಾಗೆ ಸೊರಗುತ್ತಿರಬಹುದೆಂಬ ಆಲೋಚನೆ ಬಂದಾಗ, ಎಷ್ಟು ತಡೆದುಕೊಂಡರೂ, ಅವಳು ಸತ್ತು ಸಮಾಧಿಯಾಗಬಾರದೆ ಎಂಬ ಕೆಟ್ಟ ಬಯಕೆ ಉಂಟಾಗದೆ ಇರುವುದಿಲ್ಲ....." ಎಂದನು.

ನನ್ನ ಮಿತ್ರ ಆ ವೃದ್ಧ ಅಂಚೆ ಯಜಮಾನನ ಕಥೆ ಹೀಗಿತ್ತು ; ಕಥೆ ಆಗಾಗ್ಗೆ ಕಂಬನಿಗರೆತದಿಂದ ತಡವರಿಸುತ್ತಿತ್ತು ; ಕವಿ ಡಿಮಿಟ್ರೀಫ್‌ನ ಸೊಗಸಾದ ಹಾಡುಗಬ್ಬದಲ್ಲಿ ಬರುವ ಮನೆಗೆಲಸದ ಗುಲಾಮನಂತೆ, ಅವನು ಆ ಕಂಬನಿಯನ್ನು ತನ್ನ ಅಂಗಿಯ ಅಂಚಿನಿಂದ ಒರೆಸಿಕೊಳ್ಳುತ್ತಿದ್ದ ರೀತಿ ವಿಚಿತ್ರವಾಗಿತ್ತು. ಈ ಕಂಬನಿಯ ಧಾರೆಗೆ ಅರ್ಧಮಟ್ಟಿನ ಕಾರಣ ಅವನು ಕುಡಿದ 'ಪಂಚ್' ಪಾನೀಯ: ಕಥೆ ಹೇಳುತ್ತ ಹೇಳುತ್ತ ಐದನೆಯ ಲೋಟಗಳಷ್ಟನ್ನು ಇಳಿಸಿದ್ದನು ; ಆದರೂ, ಅವನ ಕಥನ ಬಲವಾಗಿ ನನ್ನ ಮನಸ್ಸನ್ನು ಕರಗಿಸಿತು. ಅವನನ್ನು ಬೀಳ್ಕೊಂಡು ಹೊರಟ ಮೇಲೆ, ಆ ಮುದುಕ ಅಂಚೆ ಯಜಮಾನನ ವಿಚಾರವನ್ನು

ಯಜಮಾನನ ಗೋರಿ ಇದೇಯೆ" ಎಂದ.

"ಆ ಹೆಂಗಸು ಇಲ್ಲಿಗೆ ಬಂದಿದ್ದಳೇ?" ಎಂದು ನಾನು ಕೇಳಿದೆ.

ವಾನ್ಯ ಉತ್ತರ ಕೊಟ್ಟ : "ಬಂದಿದ್ದಳು. ನಾನು ದೂರದಿಂದ ಅವಳನ್ನು ನೋಡುತ್ತಿದ್ದೆ. ಅವಳು ಇಲ್ಲಿ ಮಲಗಿದ್ದಳು, ಬಹಳ ಹೊತ್ತು ಮಲಗಿದ್ದಳು. ಅನಂತರ ಅವಳು ಹಳ್ಳಿಗೆ ಹೋಗಿ, ಪಾದ್ರಿಯನ್ನು ಕರೆದು ಅವನಿಗೆ ಸ್ವಲ್ಪ ಹಣ ಕೊಟ್ಟಳು. ನನಗೆ ಬೆಳ್ಳಿಯ ಐದು ಕೋಪೆಕ್ ನಾಣ್ಯ ಕೊಟ್ಟಳು–ಎಂಥ ಒಳ್ಳೆಯ ಹೆಂಗಸು ಅಂತ!"

ನಾನೂ ಸಹ ಆ ಚಿಕ್ಕ ಹುಡುಗನಿಗೆ ಒಂದು ಐದು ಕೋಪೆಕ್ ಬಿಲ್ಲೆ ಕೊಟ್ಟೆ. ಪ್ರಯಾಣಮಾಡಿ ಬಂದದ್ದಕ್ಕಾಗಲಿ ಅದಕ್ಕಾಗಿ ಏಳು ರೂಬಲ್ ವೆಚ್ಚವಾದದ್ದಕ್ಕಾಗಲಿ ಈಗ ನನಗೆ ವ್ಯಸನವಾಗಲಿಲ್ಲ.

"ಅಂಚೆ ಯಜಮಾನ ನಿನಗೆ ಗೊತ್ತಿತ್ತು !" ಎಂದು ದಾರಿಯಲ್ಲಿ ಅವನನ್ನು ನಾನು ಕೇಳಿದೆ.

"ಓಹೋ, ಅವರು ನನಗೆ ಗೊತ್ತಿತ್ತು ! 'ಶಿಲ್ಪಿ' ಮಾಡುವುದನ್ನು ನನಗೆ ಹೇಳಿಕೊಟ್ಟವರೆ ಅವರು. ಅವರು ತಿಂಡಿಯಂಗಡಿಯಿಂದ ಹೊರಕ್ಕೆ ಬಂದಾಗ (ಪಾಪ, ದೇವರು ಅವರ ಆತ್ಮಕ್ಕೆ ಶಾಂತಿ ಕೊಡಲಿ!), ನಾವು ಅವರ ಹಿಂದೆ ಓಡಿಹೋಗಿ, 'ಮಾನ, ಮಾನ ! ನಮಗೆ ಸ್ವಲ್ಪ ಪಪ್ಪುಕಾಯಿ ಕೊಡಿ !' ಎಂದು ಕೇಳುತ್ತಿದ್ದೆವು. ಅವರು ತಮ್ಮಲ್ಲಿದ್ದ ಪಪ್ಪುಕಾಯಿಗಳೆಲ್ಲವನ್ನೂ ನಮಗೆ ಕೊಟ್ಟುಬಿಡುತ್ತಿದ್ದರು ಅವರು ಯಾವಾಗಲೂ ನಮ್ಮೊಂದಿಗೆ ಆಟವಾಡುತ್ತಿದ್ದರು."

"ಪ್ರಯಾಣಿಕರು ಎಂದಾದರೂ ಆತನ ವಿಚಾರ ಕೇಳುವುದುಂಟೋ?"

"ಈಗ ಮೊದಲಿನ ಹಾಗೆ ಪ್ರಯಾಣಿಕರೇ ಇಲ್ಲ. ಯಾರಾದರೂ ಇದ್ದರೆ, ಊರಿಂದೂರಿಗೆ ಸುತ್ತುವ ನ್ಯಾಯವಿಚಾರಕರು ಮಾತ್ರ. ಸತ್ತವರ ವಿಚಾರ ಅವರು ಯೋಚನೆ ಮಾಡುವುದೇ ಇಲ್ಲ. ಆದರೆ, ಈ ಬೇಸಗೆಯಲ್ಲಿ ಮಾತ್ರ ಒಬ್ಬಳು ಹೆಂಗಸು ಬಂದಿದ್ದಳು ; ಆ ಮುದುಕ ಅಂಚೆ ಯಜಮಾನನ ವಿಚಾರ ಕೇಳಿದಳು; ಅವನ ಗೋರಿ ನೋಡುವುದಕ್ಕೆ ಹೋಗಿದ್ದಳು."

"ಎಂಥವಳು ಆಕೆ ?"–ನಾನು ಕುತೂಹಲಗೊಂಡು ಕೇಳಿದೆ.

"ಒಳ್ಳೆ ಸುಂದರಿ ಆ ಹೆಂಗಸು. ಅವಳು ಆರು ಕುದುರೆ ಕಟ್ಟಿದ್ದ ಕೋಚು ಗಾಡಿಯಲ್ಲಿ ಬಂದಿದ್ದಳು. ಜೊತೆಗೆ ಅವಳ ಮೂರು ಮಕ್ಕಳು, ಒಬ್ಬಳು ದಾದಿ, ಒಬ್ಬ ಕಪ್ಪನೆಯ ಸೇವಕ ಇದ್ದರು. ಮುದುಕ ಅಂಚೆ ಯಜಮಾನ ಸತ್ತುಹೋದನೆಂದು ಅವಳಿಗೆ ತಿಳಿಸಿದಾಗ, ಅವಳು ಅತ್ತಳು ; ತನ್ನ ಮಕ್ಕಳನ್ನು ಕುರಿತು, 'ನೀವು ಇಲ್ಲೇ ಸುಮ್ಮನೆ ಇರಿ. ನಾನು ಸಮಾಧಿಯ ಸ್ಥಳಕ್ಕೆ ಹೋಗಿ ಬರುತ್ತೇನೆ' ಎಂದಳು. ನಾನು ಅವಳನ್ನು ಅಲ್ಲಿಗೆ ಕರೆದುಕೊಂಡು ಹೋಗಲು ಹೋದೆ. ಆದರೆ, ಅವಳು, "ನನಗೇ ದಾರಿ ಗೊತ್ತಿದೆ' ಎಂದಳು. ನನಗೆ ಬೆಳ್ಳಿಯ ಐದು ಕೊಪೆಕ್ ನಾಣ್ಯ ಕೊಟ್ಟಳು–ಅಂಥ ಒಳ್ಳೆಯ ಹೆಂಗಸು !" ಎಂದು ಆ ಹುಡುಗ ಹೇಳಿದನು.

ನಾವು ಶ್ಮಶಾನದ ಬಳಿಗೆ ಬಂದೆವು. ಬೇಲಿ ಕೂಡ ಇಲ್ಲದ ಬೋಳು ಜಾಗ. ಅಲ್ಲಲ್ಲೆ ಮರದ ಶಿಲುಬೆಗಳಿದ್ದುವು. ಬಿಸಿಲಿಗೆ ಮರೆ ಏನೂ ಇರಲಿಲ್ಲ. ಅಂಥ ಗೋಳುಕರೆಯುವ ಶ್ಮಶಾನವನ್ನು ನನ್ನ ಜೀವಮಾನದಲ್ಲಿ ಎಂದೂ ಕಂಡಿರಲಿಲ್ಲ.

ಆ ಚಿಕ್ಕ ಹುಡುಗ ಒಂದು ಮರಳ ದಿಬ್ಬದ ಮೇಲಕ್ಕೆ ಹಾರಿದ ; ಅದರ ಮೇಲೆ, ಹಿತ್ತಾಳೆ ವಿಗ್ರಹವಿದ್ದ ಕಪ್ಪು ಶಿಲುಬೆಯೊಂದಿತ್ತು ; "ಮುದುಕ ಅಂಚೆ

## ೫. ಪರಿವರ್ತನೆ
(Lady into Lassie)

ಯಾವ ಉಡುಪಿನೊಳಿದ್ದರೂ,
ಇನಿಯೆ, ನೀನು ಮನೋಹರೆ.

–ಬೊಗ್ಡ್ಯಾನೊವಿಚ್*

---

*೮ನೆಯ ಶತಮಾನದ ರಷ್ಯನ್ ಕವಿ ಇಪ್ಪೊಲಿಟ್ ಬೊಗ್ಡ್ಯಾನೊವಿಚ್ ಎಂಬ ಕವಿಯ 'ಇನಿಯೆ' (Sweetheart) ಎಂಬ ಕವನದಿಂದ.



ಇವಾನ್ ಪೆಟ್ರೋವಿಚ್ ಬೆರಿಸ್ಟಾಫ್‌ನ ಜಮೀನು ಆಸ್ತಿ ನಮ್ಮ ನಾಡಿನ ಅತ್ಯಂತ ದೂರದ ಪ್ರಾಂತಗಳಲ್ಲಿ ನೆಲಸಿತ್ತು. ಅವನು ತರುಣನಾಗಿದ್ದಾಗ ಕಾವಲುದಳದಲ್ಲಿ ಸೇವೆ ಸಲ್ಲಿಸಿ, ೧೭೯೭ರಲ್ಲಿ ಅದರಿಂದ ನಿವೃತ್ತಿ ಪಡೆದು, ತನ್ನ ಆಸ್ತಿಯನ್ನು ನೋಡಿಕೊಂಡು ಜಮೀನಿನಲ್ಲಿಯೇ ವಾಸಮಾಡಲು ಹೋದನು ; ಮತ್ತೆ ಅವನು ಅದನ್ನು ಬಿಟ್ಟು ಬರಲೇ ಇಲ್ಲ. ಅವನು ಒಬ್ಬಳು ಬಡವೆಯಾದ ಸಾಮಾನ್ಯ ಸ್ತ್ರೀಯನ್ನು ಮದುವೆಯಾದನು ; ಅವನು ಸ್ವಲ್ಪ ದೂರದಾಚೆ ಬೇಟೆಯಾಡಲು ಹೋಗಿದ್ದಾಗ, ಅವಳು ಮಗು ಹೆತ್ತು ಸತ್ತುಹೋದಳು. ಅವನು ತನ್ನ ಆಸ್ತಿಯ ಮೇಲ್ವಿಚಾರಣೆ ನೋಡಿಕೊಳ್ಳುವ ಕಾರ್ಯದಲ್ಲಿ ಮಗ್ನನಾಗಿ, ಬೇಗನೆ ಅದರಲ್ಲಿಯೇ ಸಮಾಧಾನವನ್ನು ಕಂಡುಕೊಂಡು ತನಗಾದ ನಷ್ಟವನ್ನು ಮರೆತನು. ತಾನೇ ರಚಿಸಿದ ನಕ್ಷೆಗಳಿಗೆ ಅನುಸಾರವಾಗಿ ತನ್ನ ಮನೆಯನ್ನು ಕಟ್ಟಿಸಿದನು. ಜಮೀನಿನಲ್ಲಿ ಒಂದು ಬಟ್ಟೆ ಕಾರ್ಖಾನೆಯನ್ನು ಸ್ಥಾಪಿಸಿದನು. ತನ್ನ ಆದಾಯವನ್ನು ಹೆಚ್ಚಿಸಿಕೊಂಡನು : ಆ ಪ್ರಾಂತದಲ್ಲೆಲ್ಲ ತಾನೇ ಅತ್ಯಂತ ಬುದ್ಧಿಶಾಲಿಯೆಂದು ಭಾವಿಸಿದನು. ಅವನ ಮನೆಗೆ ಸಂಸಾರ ಸಮೇತರಾಗಿ ತಮ್ಮ ಬೇಟೆಯ ನಾಯಿಗಳೊಂದಿಗೆ ದೀರ್ಘ ಕಾಲ ಭೇಟಿಕೊಡುವ ಅಭ್ಯಾಸವಿಟ್ಟುಕೊಂಡಿದ್ದ ನೆರೆಹೊರೆಯವರು ಅವನ ಈ ಭಾವನೆಯನ್ನು ಕದಲಿಸಲು ಸಮರ್ಥರಾಗಿರಲಿಲ್ಲ. ಕೆಲಸದ ದಿನಗಳಲ್ಲಿ ಆತ ಒಂದು ಮಕಮಲ್ಲಿನಂಥ ಬಟ್ಟೆಯ ನಡುವಂಗಿ ತೊಟ್ಟು ತಿರುಗಾಡುತ್ತಿದ್ದನು : ವಿಶ್ರಾಂತಿ ದಿನಗಳಲ್ಲಿ ಮನೆನೆಯ್ಗೆಯ ಬಟ್ಟೆಯ ನಿಲುವಂಗಿಯನ್ನು ಧರಿಸುತ್ತಿದ್ದನು. ಲೆಕ್ಕಪತ್ರಗಳನ್ನೆಲ್ಲ ತಾನೇ ಬರೆದಿಡುತ್ತಿದ್ದನು ; ಶಾಸನ ಸಭೆಯ ಕಾರ್ಯಕಲಾಪಗಳ ವರದಿಯನ್ನಲ್ಲದೆ ಮತ್ತೇನನ್ನೂ ಓದುತ್ತಿರಲಿಲ್ಲ. ಒಟ್ಟಿನ ಮೇಲೆ ಅವನನ್ನು ಗರ್ವಿಷ್ಠನೆಂದು ಭಾವಿಸಿದ್ದರೂ ಎಲ್ಲರೂ ಅವನನ್ನು ಇಷ್ಟಪಡುತ್ತಿದ್ದರು. ಆತನಿಗೆ ಅತ್ಯಂತ ಸಮೀಪದ ನೆರೆಯವನಾದ ಗ್ರಿಗೊರಿ ಇರಾನೊವಿಚ್ ಮ್ಯುರೋಮ್ಸ್ಕಿಯೊಬ್ಬನೇ ಆತನೊಂದಿಗೆ ಹೊಂದಿಕೊಂಡು ಹೋಗದೆ ಇದ್ದವನು. ಅವನೊಬ್ಬ ಹಳೆಯ ಸಂಪ್ರದಾಯದ ರಷ್ಯನ್ ದೊಡ್ಡಮನುಷ್ಯ. ಮಾಸ್ಕೋದಲ್ಲಿದ್ದ ತನ್ನ ಆಸ್ತಿಯ ಬಹುಭಾಗವನ್ನು ಪೋಲು ಮಾಡಿಬಿಟ್ಟು, ವಿಧುರನಾದಮೇಲೆ ತನ್ನದಾಗಿ ಉಳಿದಿದ್ದ ಒಂದೇ ಒಂದಾದ ಹಳ್ಳಿಯಲ್ಲಿ ವಾಸಮಾಡಲು ಹೋಗಿದ್ದನು. ಅಲ್ಲಿ ತನ್ನ ಉಳಿದಿದ್ದ ದ್ರವ್ಯವನ್ನು ಅಪವ್ಯಯ ಮಾಡುವುದನ್ನು ಮುಂದುವರಿಸಿದನು ; ಆದರೆ, ಈಗ

ಆಂಗ್ಲವ್ಯಾಮೋಹಿಯೂ ಟೀಕೆಯನ್ನು ಸಹಿಸದವನು. ಕೆರಳಿದ ಅವನು ಬೆರಿಸ್ಟಾಫ್‌ನನ್ನು ಶುದ್ಧ ಕರಡಿಯೆಂದೂ ಹಳ್ಳಿಯ ಗಮಾರನೆಂದೂ ಬೈದನು.

ಬೆರಿಸ್ಟಾಫ್‌ನ ಮಗ ತಂದೆಯ ಸಂದರ್ಶನ ಮಾಡಲು ಬಂದಾಗ ಈ ಇಬ್ಬರು ಜಮೀನುದಾರರ ಸಂಬಂಧ ಹೀಗಿತ್ತು. 'ಎಕ್ಸ್' (X)-ವಿಶ್ವವಿದ್ಯಾನಿಲಯದಲ್ಲಿ ವಿದ್ಯಾಭ್ಯಾಸ ಪಡೆದ ಅವನು ಸೈನ್ಯಕ್ಕೆ ಸೇರಲು ಉದ್ದೇಶಿಸಿದ್ದನು ; ಆದರೆ ಅವನ ತಂದೆ ಇದಕ್ಕೆ ಸಮ್ಮತಿಕೊಡದಾದನು. ಆ ತರುಣನಾದರೋ ತಾನು ಸರ್ಕಾರದ ಕೆಲಸಕ್ಕೆ ಪೂರ್ತಿ ಅನರ್ಹನೆಂದು ಭಾವಿಸಿದ್ದನು. ಇಬ್ಬರಲ್ಲಿ ಒಬ್ಬರೂ ಸೋಲರು. ಈ ನಡುವೆ ಯೌವನಸ್ಥನಾದ ಅಲೆಕ್ಸಿ ನಿರುದ್ಯೋಗಿಯಾದ ದೊಡ್ಡ ಮನುಷ್ಯನ ಜೀವನವನ್ನು ನಡಸುತ್ತಿದ್ದನು ; ಯಾವುದೇ ಜರೂರು ಸಂದರ್ಭಕ್ಕಾದರೂ ಆಗಲೆಂದು ಒಂದು ಮೀಸೆಯನ್ನೂ ಕೃಷಿಮಾಡಿ ಬೆಳಸಿದ್ದನು.

ಅಲೆಕ್ಸಿ ವಾಸ್ತವವಾಗಿ ಒಳ್ಳೆಯ ಸೊಗಸಾದ ಆಸಾಮಿ. ಅವನ ಲಲಿತಾ ಕೃತಿ ಸೈನಿಕ ಸಮವಸ್ತ್ರದಲ್ಲಿ ಮೆರೆಯುವ ಪುಣ್ಯವನ್ನು ಎಂದೂ ಪಡೆಯದೆ, ಧೈರ್ಯಶಾಲಿಯಾದ ಅಶ್ವಾರೋಹಿಯಾಗಿ ಕಂಗೊಳಿಸುವ ಬದಲು ಸರ್ಕಾರದ ಕಾಗದಪತ್ರಗಳ ಮೇಲೆ ಬಾಗಿ ಕುಳಿತು ತನ್ನ ಯೌವನವನ್ನೆಲ್ಲ ಕಳೆಯುವ ಸಂದರ್ಭವೊದಗಿದಲ್ಲಿ ಅದು ಖಂಡಿತವಾಗಿ ಮರುಕಪಡಬೇಕಾದ ವಿಷಯ. ಬೇಟೆಗೆ ಹೋದಾಗ ಅವನು ಮಾರ್ಗದಲ್ಲಿನ ಯಾವ ವಿಘ್ನಗಳನ್ನೂ ಲೆಕ್ಕಿಸದೆ ಎಲ್ಲರಿಗಿಂತ ಮುಂದೆ ನಾಗಾಲೋಟದಲ್ಲೀ ಸವಾರಿ ಮಾಡುತ್ತ ಹೋಗುತ್ತಿರುವುದನ್ನು ಕಂಡು. ನೆರೆಹೊರೆಯವರೆಲ್ಲ ಅವನೂ ಎಂದಿಗೂ ಒಳ್ಳೆಯ ಸರ್ಕಾರಿ ಅಧಿಕಾರಿಯಾಗಲಾರನೆಂದು ಒಮ್ಮತದಿಂದ ಒಪ್ಪಿದರು. ನೆರೆಹೊರೆಯ ತರುಣಿಯರು ಅವನೆಡೆಗೆ ಆಸಕ್ತಿಪೂರ್ಣವಾದ ಕಡೆಗಣ್ಣ ನೋಟವನ್ನು ಬೀರುತ್ತಿದ್ದರು ; ಆ ಆಸಕ್ತಿ ಮೆಚ್ಚಿಗೆಯಾಗಿ ಪರಿಣಮಿಸುತ್ತಿದ್ದುದೂ ಅಪೂರ್ವವೇನಾಗಿರಲಿಲ್ಲ. ಆದರೆ ಅಲೆಕ್ಸಿ ಇವುಗಳಿಗೆಲ್ಲ ಸ್ವಲ್ಪವೂ ಗಮನಕೊಡಲಿಲ್ಲ ; ಅದರಿಂದ ಅವನ ಈ ಔದಾಸೀನ್ಯಕ್ಕೆ ಪ್ರಣಯಪ್ರಸಂಗವೊಂದು ಕಾರಣವೆಂದು ಅವರು ಆರೋಪಿಸಿಲೇಬೇಕಾಯಿತು. ಈ ಅಭಿಪ್ರಾಯಕ್ಕೆ ಪೋಷಕವಾಗಿ, ಅವನ ಪತ್ರಗಳಲ್ಲಿ ಒಂದರಲ್ಲಿದ್ದ ಒಂದು ವಿಳಾಸದ ಪ್ರತಿಯನ್ನುಳ್ಳ ಚೀಟಿಯೊಂದು ಕೈಯಿಂದ ಕೈಗೆ ಸಾಗಿ ಹೋಯಿತು : ಮಾಸ್ಕೋ ನಗರದ, ಸೆಯ್ಂಟ್ ಅಲೆಕ್ಸಿಸ್ ಮಠದ ಎದುರಿಗೆ, ತಾಮ್ರ ಕೆಲಸಗಾರ ಸಾವೆಲ್ಯೆಫ್‌ನ ಮನೆಯಲ್ಲಿರುವ ಅಕ್ಯುಲೀನ ಪೆಟ್ರೋವ್ನ ಕುರೊಚ್ಕಿನಾಗೆ–'ಈ ಪತ್ರವನ್ನು ದಯವಿಟ್ಟು ಎ.ಎನ್.ಆರ್. (A.N.R.)-ಗೆ ತಲಪಿಸುವುದು.

ಬೇರೆಯ ವಿಧದಲ್ಲಿ, ಅಷ್ಟೆ. ತನ್ನದಾಗಿ ಉಳಿದಿದ್ದ ಒಂದೇ ಒಂದಾದ ಹಳ್ಳಿಯಲ್ಲಿ ವಾಸಮಾಡಲು ಹೋಗಿದ್ದನು. ಅಲ್ಲಿ ತನ್ನ ಉಳಿದಿದ್ದ ದ್ರವ್ಯವನ್ನು ಅಪವ್ಯಯ ಮಾಡುವುದನ್ನು ಮುಂದುವರಿಸಿದನು ; ಆದರೆ, ಈಗ ಬೇರೆಯ ವಿಧದಲ್ಲಿ, ಅಷ್ಟೆ. ತನ್ನಲ್ಲಿದ್ದಬದ್ದ ಹಣವನ್ನೆಲ್ಲಾ ವ್ಯಯಮಾಡಿ, ಇಂಗ್ಲಿಷ್ ಶೈಲಿಯಲ್ಲಿ ಒಂದು ಉದ್ಯಾನವನ್ನು ನಿರ್ಮಿಸಿದನು. ಆತನ ಲಾಯದ ಹುಡುಗರಿಗೆಲ್ಲ ಇಂಗ್ಲಿಷ್ ಕುದುರೆ ಸವಾರರ ಮಾದರಿಯ ಉಡುಪು. ಅವನ ಮಗಳಿಗೆ ಒಬ್ಬಳು ಇಂಗ್ಲಿಷ್ ಶಿಕ್ಷಕಿ. ಅವನು ತನ್ನ ಹೊಲವನ್ನು ಇಂಗ್ಲಿಷ್ ಮಾದರಿಯಲ್ಲಿ ಬೇಸಾಯ ಮಾಡಿಸಿದನು 'ಆದರೆ ಪರಕೀಯ ವಿಧಾನಗಳು ರಷ್ಯನ್ ಧಾನ್ಯಕ್ಕೆ ಹೊಂದುವುದಿಲ್ಲ.' ವ್ಯಯವನ್ನು ತಕ್ಕಮಟ್ಟಿಗೆ ತಗ್ಗಿಸಿದರೂ, ಗ್ರಿಗೊರಿ ಇವಾನೊವಿಚ್‌ನ ಆದಾಯಮಾತ್ರ ಹೆಚ್ಚಲಿಲ್ಲ; ಹಳ್ಳಿಗಾಡಿನಲ್ಲಿ ಕೂಡ ಅವನು ಹೊಸ ಸಾಲಗಳನ್ನು ಎತ್ತುವ ಮಾರ್ಗಗಳನ್ನು ಕಂಡುಕೊಂಡನು. ಇಷ್ಟೆಲ್ಲಾ ಆದರೂ ಅವನೊಬ್ಬ ಸಮರ್ಥನೆಂದೇ ಎಣಿಕೆಯಾಗಿತ್ತು. ತನ್ನ ಜಮೀನನ್ನು ಪ್ರಧಾನ ನ್ಯಾಯಸ್ಥಾನದ ಕಚೇರಿಗೆ ಭೋಗ್ಯಕ್ಕೆ ಹಾಕುವ ಯೋಚನೆ ಮಾಡಿದವನೆಂದರೆ, ಇವನೇ ಮೊದಲಿಗ ; ಈ ಕಾರ್ಯತಂತ್ರ ಆ ದಿನಗಳಲ್ಲಿ ಅತ್ಯಂತ ತೊಡಕಿನದು, ಸಾಹಸದ್ದು, ಎನಿಸಿಕೊಂಡಿತ್ತು. ಅವನನ್ನು ಖಂಡಿಸಿದವರಲ್ಲಿ ಅತ್ಯಂತ ಕಠಿನ ವಿಮರ್ಶಕನೆಂದರೆ ಬೆರಿಸ್ಟಾಫ್ ; ನವೀನ ಕ್ರಮಗಳನ್ನು ದ್ವೇಷಿಸುವುದೇ ಅವನ ಪ್ರಮುಖ ಗುಣವಿಶೇಷ. ತನ್ನ ನೆರೆಯವನ ಆ ಆಂಗ್ಲ ವ್ಯಾಮೋಹವನ್ನು ಕುರಿತು ಶಾಂತನಾಗಿ ಮಾತಾಡಲು ಆತನಿಗೆ ಸಾಧ್ಯವೇ ಇರಲಿಲ್ಲ ; ಅವನಲ್ಲಿ ಹುಳುಕು ಹುಡುಕುವುದರಲ್ಲಿ ದಣಿವೇ ಇಲ್ಲ. ಭೇಟಿ ಮಾಡಲು ಬಂದವರಿಗೆ ತನ್ನ ಹೊಲಮನೆಯನ್ನು ತೋರಿಸುವಾಗ ಅವರು ತನ್ನ ವ್ಯವಸ್ಥೆಯನ್ನು ಕುರಿತು ಮಾಡಿ ಪ್ರಶಂಸೆಗೆ ಉತ್ತರವಾಗಿ ಅವನು ಮುಚ್ಚುಮರೆಯ ವ್ಯಂಗ್ಯತೆಯಿಂದ ಹೀಗೆ ಹೇಳುತ್ತಿದ್ದನು : "ಒಳ್ಳೆಯದು, ಒಳ್ಳೆಯದು ! ನಮ್ಮ ನೆರೆಯವರಾದ ಗ್ರಿಗೊರಿ ಇವಾನೊವಿಚ್ ಮಹಾಶಯರ ರೀತಿಯಲ್ಲಿ ನಾವು ಇಲ್ಲಿ ಕೆಲಸ ಮಾಡುವುದಿಲ್ಲ. ಆಂಗ್ಲಶೈಲಿಯಲ್ಲಿ ನಮ್ಮನ್ನು ನಾವು ಹಾಳುಮಾಡಿಕೊಳ್ಳುವುದು ನಮ್ಮಂಥವರಿಗೆ ಹೇಳಿದ್ದಲ್ಲ. ತಿನ್ನುವುದಕ್ಕೆ ತಕ್ಕಷ್ಟು ನಮಗೆ ದೊರೆತರೆ ಸಾಕು, ನಾವು ತೃಪ್ತರು. ಇದು ರಷ್ಯನ್ ಮಾದರಿ !" ನೆರೆಹೊರೆಯವರ ಉತ್ಸಾಹದ ಪರಿಣಾಮವಾಗಿ, ಈ ಮತ್ತು ಇತರ ವ್ಯಂಗ್ಯಟೀಕೆಗಳು ಗ್ರಿಗೊರಿ ಇವಾನೊವಿಚ್‌ನ ಕಿವಿ ಮುಟ್ಟಿದುವು ; ಅವುಗಳ ನಿರೂಪಣೆಯಲ್ಲಿ ಅವುಗಳಿಗೆ ಏನೂ ಊನವಾಗಲಿಲ್ಲವೆಂದು ನೀವು ಖಾತರಿಯಾಗಿರಬಹುದು. ನಮ್ಮ ಪತ್ರಿಕೋದ್ಯೋಗಿಗಳಂತೆಯೇ ಆ

ಎಲ್ಲ ಹುಡುಗಿಯರೂ ಅವನ ವಿಚಾರದಲ್ಲಿ ಹುಚ್ಚೆದ್ದುಹೋದರು.

ಆದರೆ, ಅವರಲ್ಲಿ ಯಾರೂ ಅವನನ್ನು ಆ ಆಂಗ್ಲವ್ಯಾಮೋಹಿಯ ಮಗಳು ಲೀಸ (ಅಥವಾ, ಅವಳ ತಂದೆ ಸಾಮಾನ್ಯವಾಗಿ ಕರೆಯುತ್ತಿದ್ದಂತೆ ಬೆಟ್ಸಿ)* ಮನಸ್ಸಿಗೆ ಹಚ್ಚಿಸಿಕೊಂಡಷ್ಟು ಹಚ್ಚಿಸಿಕೊಳ್ಳಲಿಲ್ಲ. ಇಬ್ಬರ ತಂದೆಯವರೂ ಒಬ್ಬರ ಮನೆಗೊಬ್ಬರು ಹೋಗುತ್ತಿರಲಿಲ್ಲ ; ಈ ಕಾರಣ, ಅವಳು ಅಲೆಕ್ಸಿಯನ್ನು ಇನ್ನೂ ನೋಡಿರಲಿಲ್ಲ ; ಹೀಗಿರುವಲ್ಲಿ, ಸುತ್ತಮುತ್ತಿನ ತರುಣಿಯರಿಗಾದರೊ ಅವನನ್ನು ಬಿಟ್ಟು ಬೇರೆ ಪ್ರಸ್ತಾಪವೇ ಇಲ್ಲ. ಲೀಸ ಹದಿನೇಳರ ಹರೆಯದವಳು. ಅವಳ ಆಕರ್ಷಕವಾದ, ಆಲಿವ್ ಬಣ್ಣದ *ಚರ್ಮದ ಮುಖವನ್ನು ಎರಡು ಕಪ್ಪು ಕಣ್ಣುಗಳು ಬೆಳಗುತ್ತಿದ್ದುವು. ಒಬ್ಬಳೇ ಮಗುವಾಗಿದ್ದು ಮುದ್ದಿನಿಂದ ಕೆಟ್ಟು ಹೋಗಿದ್ದಳೆಂದೇ ಹೇಳಬೇಕು. ಅವಳ ಗೆಲವು ನಲಿವು, ಕೊನೆ ಮೊದಲಿಲ್ಲದ ಕುಚೋದ್ಯ ಇವನ್ನು ಕಂಡು ತಂದೆಗೆ ಹಿಗ್ಗು : ಆದರೆ ಶಿಕ್ಷಿಕೆ ಮಿಸ್ ಜ್ಯಾಕ್ಸನ್ನಿಗೆ ಮಾತ್ರ ನಿರಾಶೆಗೆ ಕಾರಣ. ಆಕೆ ನಲವತ್ತು ವರ್ಷದ ಬಿಂಕದ ವೃದ್ಧಕನ್ಯೆ ; ಅವಳು ಕೆನ್ನೆಗಳಿಗೆ ಬಣ್ಣ ಹಾಕಿಕೊಂಡು, ಕಪ್ಪಿನಿಂದ ಹುಬ್ಬು ತಿದ್ದಿಕೊಳ್ಳುತ್ತಿದ್ದಳು ; ಪ್ರತಿ ಆರು ತಿಂಗಳಿಗೊಮ್ಮೆ 'ಪಮೀಲ' ಕಾದಂಬರಿಯನ್ನು ಆದ್ಯಂತವಾಗಿ ಓದುತ್ತಿದ್ದಳು; ಇಷ್ಟೆಲ್ಲಕ್ಕೂ ಅವಳು ವರ್ಷಕ್ಕೆ ಎರಡು ಸಾವಿರ ರೂಬಲ್‌ಗಳನ್ನು ಪಡೆಯುತ್ತಿದ್ದಳು; 'ರಷ್ಯವೆಂಬ ಈ ರಾಕ್ಷಸ ದೇಶ'ದಲ್ಲಿ ಬೇಸರದಿಂದ ನವೆದು ಸಾಯುತ್ತಿದ್ದಳು.

ಲೀಸಳ ಪರಿಚರ್ಯೆಗೆ ಅವಳ ಸೇವಿಕೆ ನಾಸ್ತ್ಯ ಇದ್ದಳು ; ವಯಸ್ಸಿನಲ್ಲಿ ಅವಳಿಗಿಂತ ಸ್ವಲ್ಪ ದೊಡ್ಡವಳು ; ತನ್ನ ಚಿಕ್ಕ ಒಡತಿಯಂತೆಯೆ ಚಂಚಲ ಚಿತ್ತಳು. ಲೀಸಾಗೆ ಇವಳನ್ನು ಕಂಡರೆ ತುಂಬ ಅಕ್ಕರೆ; ಎಲ್ಲ ರಹಸ್ಯ ವಿಚಾರಗಳಲ್ಲಿಯೂ ಅವಳನ್ನು ತನ್ನ ಅಂತರಂಗಕ್ಕೆ ತೆಗೆದುಕೊಳ್ಳುತ್ತಿದ್ದಳು; ತನ್ನ ತಮಾಷೆ ಕುಚೋದ್ಯಗಳನ್ನು ಏರ್ಪಡಿಸುವುದರಲ್ಲಿ ಅವಳ ನೆರವು ಪಡೆಯುತ್ತಿದ್ದಳು. ಒಂದು ಮಾತಿನಲ್ಲಿ, ಫ್ರೆಂಚ್ ರುದ್ರನಾಟಕಗಳಲ್ಲಿ ಕಂಡುಬರುವ ಅನೇಕ ರಹಸ್ಯ ಸಂಗಾತಿಯರಿಗಿಂತ ನಾಸ್ತ್ಯ ಪ್ರಿಲುಚೀನೋ ಗ್ರಾಮದಲ್ಲಿ ಹೆಚ್ಚು ಪ್ರಮುಖ ಪಾತ್ರದ ವ್ಯಕ್ತಿಯಾಗಿದ್ದಳು.

ಒಂದು ದಿನ ಪ್ರಾತಃಕಾಲ ನಾಸ್ತ್ಯ ತನ್ನ ಒಡತಿಗೆ ವಸ್ತ್ರಧಾರಣೆ ಮಾಡಿಸುತ್ತಿದ್ದಾಗ, "ಇಂದು ಸ್ವಲ್ಪ ಹೊರಕ್ಕೆ ಹೋಗಿಬರಲೆ?" ಎಂದು ಕೇಳಿದಳು.

---

*Betsy – ಇದು ಇಂಗ್ಲಿಷ್ ಹೆಸರೆಂಬುದನ್ನೂ ಗಮನಿಸಬೇಕು–ಅನು.

* ಹಳದಿ ಕಂದು ಬಣ್ಣ.

ಗ್ರಾಮಾಂತರದಲ್ಲಿ ಎಂದೂ ವಾಸಮಾಡದೆ ಇರುವಂಥ ನನ್ನ ವಾಚಕರಿಕೆ ಹಳ್ಳಿಗಾಡಿನ ಈ ತರುಣಿಯರು ಎಷ್ಟು ಸಂತೋಷಭರಿತರೆಂಬ ಕಲ್ಪನೆಯಿರಲಾರದು. ನಿರ್ಮಲವಾದ ಗಾಳಿ ಕುಡಿಯುತ್ತ, ಸೇಬಿನ ತೋಟಗಳ ನೆರಳಲ್ಲಿ ಬೆಳೆಯುವ ಇವರು ಜೀವನ ಮತ್ತು ಸಮಾಜದ ವಿಚಾರವಾಗಿ ತಮ್ಮ ತಿಳಿವಳಿಕೆಯನ್ನೆಲ್ಲಾ ಪುಸ್ತಕಗಳಿಂದ ಪಡೆಯುತ್ತಾರೆ. ಏಕಾಂತ ವಾಸ, ಸ್ವಾತಂತ್ರ್ಯ, ಪುಸ್ತಕವಾಚನ ಇವು ನಮ್ಮ ಮುದ್ದಿನಲ್ಲಿ ಬೆಳೆದ ನಾಗರಿಕ ಸುಂದರಿಯರು ಕಾಣದ ಭಾವ ಭಾವೋದ್ರೇಕಗಳನ್ನು ಅವರಲ್ಲಿ ಮೊದಲಿನಲ್ಲೇ ಬೆಳಸುತ್ತವೆ. ಈ ಹಳ್ಳಿಯ ಕನ್ನೆಯರಿಗೆ ಗಂಟೆಗಳ ಝಣತ್ಕಾರವನ್ನು ಕೇಳುವುದೇ ಒಂದು ಸಾಹಸಾನುಭವ, ಹತ್ತಿರದ ಪಟ್ಟಣಕ್ಕೆ ಭೇಟಿಕೊಡುವುದೇ ಅವರ ಜೀವನದ ಮಹಾಘಟನೆ ; ಹಳ್ಳಿಗೆ ಭೇಟಿಕೊಟ್ಟವರು ಚಿರಸ್ಥಯಿಯಾದ, ಕೆಲವುವೇಳೆ ಜೀನವಪರ್ಯಂತವಾದ ಸ್ಮರಣೆಗಳನ್ನು ಇವರಿಗೆ ಬಿಟ್ಟು ಹೋಗುತ್ತಾರೆ. ಈ ತರುಣಿಯರ ವಿಶೇಷ ಲಕ್ಷಣಗಳಾಗಿ ತೋರುವ ಕೆಲವು ವೈಚಿತ್ರ್ಯಗಳನ್ನು ಕಂಡು ನಗುವ ಹಕ್ಕು ನಿಮಗಿದೆ; ಆದರೆ ಮೇಲೆ ಮೇಲೆ ಮಾತ್ರ ಪರಿಶೀಲಿಸುವವನ ಹಾಸ್ಯ ಕುಚೋದ್ಯಗಳು ಅವರ ಮುಖ್ಯ ಗುಣಗಳನ್ನು ನಾಶಮಾಡಲಾರವು ; ಅವುಗಳಲ್ಲಿ ಮುಖ್ಯವಾದದ್ದು ಶೀಲ ವೈಶಿಷ್ಟ್ಯ ಅಥವಾ ವ್ಯಕ್ತಿತ್ವ ; ಜೀನ್ –ಪಾಲ್ ರಿಷ್ಟರ್‌ನ ಮತಾನುಸಾರ, ಆ ಒಂದು ವ್ಯಕ್ತಿಯಿಲ್ಲದೆ ಯಾವ ಮನುಷ್ಯ ಪ್ರಾಣಿಯೂ ಮಹಿಮಾಶಾಲಿಯೆನಿಸಲಾರ. ದೊಡ್ಡ ದೊಡ್ಡ ಮುಖ್ಯನಗರಗಳಲ್ಲಿ ಸ್ತ್ರೀಯರು ಮೇಲ್ತೆರದ ವಿದ್ಯಾಭ್ಯಾಸವನ್ನು ಪಡೆಯ ಬಹುದು ; ಆದರೆ ಸಮಾಜದ ರೀತಿನೀತಿಗಳು ಶೀಲದಮೇಲೆ ತಮ್ಮ ಸಮತಾಸಾಧಕ ಪ್ರಭಾವವನ್ನು ಬೀರಿ, ಅವರ ತಲೆಯ ಟೋಪಿಯನ್ನು ಹೇಗೋ ಹಾಗೆ ಅವರ ಮನಸ್ಸನ್ನೂ ಒಂದೇ ತೆರದ್ದನ್ನಾಗಿ ಮಾಡುತ್ತವೆ. ನ್ಯಾಯ ವಿಮರ್ಶೆಯಾಗಿ ಇಲ್ಲವೆ ನಿಂದಾತ್ಮಕವಾಗಿ ಹೀಗೆ ಹೇಳಿಲ್ಲ ; ಆದರೂ ಕೂಡ, ಒಬ್ಬ ಹಳಬನಾದ ಲೇಖಕನು ಹೇಳುವಂತೆ, ಹೇಳಿಕೆಯಂತೂ ಉಳಿಯುತ್ತದೆ.

ನಮ್ಮ ತರುಣಿಯರ ಮೇಲೆ ಅಲೆಕ್ಸಿ ಎಂಥ ಪ್ರಭಾವಮುದ್ರೆಯನ್ನು ಬೀರುತ್ತಾನೆನ್ನುವುದನ್ನು ಕಲ್ಪನೆ ಮಾಡಿಕೊಳ್ಳುವುದು ಸುಲಭ. ಅವರು ಸಂಧಿಸಿದವರ ಪೈಕಿ, ಭ್ರಾಂತಿನಿರಸನ ಹೊಂದಿ ಮ್ಲಾನನಾಗಿ ಕಾಣುತ್ತಿದ್ದ ಮೊದಲನೆಯ ವ್ಯಕ್ತಿಯೊಂದರೆ ಅವನೆ ; ತೀರಿಹೋದ ಸುಖಭೋಗಗಳು, ಬಾಡಿದ ಯೌವನ ಇವನ್ನು ಕುರಿತು ತಮ್ಮೊಂದಿಗೆ ಮಾತಾಡಿದ ಮೊದಲನೆಯವನೂ ಅವನೆ ; ಇವೆಲ್ಲಕ್ಕೆ ಕಳಶವಿಟ್ಟಂತೆ, ಮರಣಸೂಚಕ ಸಂಕೇತ ಚಿತ್ರವನ್ನು ಕೆತ್ತಿದ ಕಪ್ಪು ಉಂಗುರವೊಂದನ್ನು ಧರಿಸಿದ್ದನು. ಹಳ್ಳಿಗಾಡಿನ ಸೀಮೆಗೆ ಇದೆಲ್ಲಾ ತೀರ ಹೊಸದು.

"ಬೆರಸ್ಟಾಫ್‌ರ ವಿಚಾರ ಹೇಳಬಾರದೆ?"

"ಒಂದು ನಿಮಿಷ ತಾಳಿ, ಸರಿ, ನಾವೆಲ್ಲ ಮೇಜಿನ ಮುಂದೆ ಊಟಕ್ಕೆ ಕುಳಿತೆವು. ಊಟಕ್ಕೆ ಕರೆದವಳ ಪಕ್ಕದಲ್ಲಿಯೆ ಉಗ್ರಾಣದವನ ಹೆಂಡತಿ, ಅವಳ ಪಕ್ಕದಲ್ಲಿ ನಾನು.....ಆ ಹೆಣ್ಮಕ್ಕಳಿದ್ದಾರೆಯಲ್ಲ, ಅವರು ತುಟಿ ಉರುಗಿಸಿದರು ; ಆದರೆ ಅವರನ್ನು ನಾನು ಲೆಕ್ಕಕ್ಕೆ ಮಡಗುತ್ತೇನೆಯೆ ?"

"ಓ, ನಾಸ್ಟ್ಯ, ನಿನ್ನ ಕೊನೆ ಮೊದಲಿಲ್ಲದ ಈ ಒಕ್ಕಣೆಯಿಂದ ಅದೆಷ್ಟು ಬೇಸರಗೊಳಿಸುತ್ತೀಯೇ !"

"ನಿಮಗಂತೂ ಅದೆಷ್ಟು ಆತುರವೋ ! ಸರಿ ; ಆಮೇಲೆ, ನಾವು ಊಟ ಮುಗಿಸಿ ಎದ್ದೆವು......ಊಟ ಮುಗಿಯಬೇಕಾದರೆ ಮೂರುಗಂಟೆ ಹಿಡಿಯಿತು, ಅಷ್ಟು ಸೊಗಸಾಗಿತ್ತು ಊಟ–'ಬ್ಲಮಾನ್‌ಷೇ,'* ಹಣ್ಣು ಹೂರಣದ ಕಡಬುಗಳು, ನೀಲಿಯ ಬಣ್ಣದ್ದು, ಕೆಂಪುಬಣ್ಣದ್ದು, ಪಟ್ಟೆಪಟ್ಟೆಯದು.....ಸರಿ, ನಾವೆಲ್ಲ ಎದ್ದು ಹಿಡಿಯುವಾಟ ಆಡಲು ತೋಟಕ್ಕೆ ಹೋದೆವು. ಅಲ್ಲಿಗೆ ಚಿಕ್ಕದಣಿ ಬಂದರು."

"ಹಾಗೇನು? ಅವರು ಅಷ್ಟು ಚೆನ್ನಾಗಿದಾರೆಯಂತೆ, ನಿಜವೆ?"

"ಹೌದು, ಅಷ್ಟೊಂದು ಚೆನ್ನಾಗಿದಾರೆ, ನಿಜವಾಗಿ ಸುಂದರಪುರುಷ. ತೆಳ್ಳಗೆ ಎತ್ತರವಾಗಿದಾರೆ, ಕೆಂಪು ಕೆನ್ನೆ....."

"ನಿಜವಾಗಿ ! ಅವರ ಬಣ್ಣ ಮಾಸಲು ಎಂದು ನಾನು ಖಂಡಿತವಾಗಿ ತಿಳಿದಿದ್ದೆ. ಸರಿ, ಅವರು ಹೇಗೆ ಕಂಡರು ನಿನಗೆ–ಕೊರಗುತ್ತಿರುವಂತೆ ಕಂಡರೆ, ಚಿಂತೆಯಲ್ಲಿರುವಂತೆ ಕಂಡರೆ?"

"ಕೊಂಚವೂ ಹಾಗಿರಲಿಲ್ಲ! ನನ್ನ ಬದುಕಿನಲ್ಲಿ ಅಂಥ ಹುಚ್ಚರನ್ನು ನಾನು ಎಂದೂ ಕಂಡಿದ್ದಿಲ್ಲ. 'ನಮ್ಮ ಜೊತೆ ಹಿಡಿಯುವಾಟ ಆಡಬೇಕೆಂದು ಅವರಿಗೆ ಅನ್ನಿಸಿತು."

"ಅವರು ನಿಮ್ಮೊಂದಿಗೆ ಹಿಡಿಯುವಾಟ ಆಡುವುದೆ ! ನೀನು ಹೇಳುವುದು ಹುಡುಗಾಟವಲ್ಲ ತಾನೆ !"

"ಖಂಡಿತ ಅವರು ಆಡಿದರು ! ಅಷ್ಟೇ ಅಲ್ಲ–ಅವರು ಯಾರನ್ನಾದರೂ ಹಿಡಿದಾಗ, ಅವಳಿಗೆ ಒಂದು ಮುತ್ತು ಕೊಡುತ್ತಿದ್ದರು."

"ಓ, ನಾಸ್ಟ್ಯ, ನೀನು ಕಥೆ ಹೇಳುತ್ತಿದ್ದೀಯೆ !"

"ಖಂಡಿತ ಇಲ್ಲ. ನಾನು ಅವರನ್ನು ಬಿಟ್ಟು ದೂರ ಕೂಡ ಹೋಗಲಾಗಲಿಲ್ಲ. ಅವರು ದಿನವೆಲ್ಲ ನಮ್ಮೊಂದಿಗೆಯೇ ಇದ್ದರು."

"ಆದರೆ ಎಲ್ಲರೂ ಹೇಳುತ್ತಾರೆ, ಅವರು ಯಾರನ್ನೋ ಪ್ರೀತಿಸುತ್ತಾರೆ

"ಅಗತ್ಯವಾಗಿ ಆಗಬಹುದು ! ಎಲ್ಲಿಗೆ ಹೊರಟಿದ್ದೀಯೆ?"

"ಟ್ಯುಗಿಲೋವ್ವೋಗೆ, ಬೆರಿಸ್ಟಾಫ್‌ರ ಮನೆಗೆ. ಅವರ ಅಡಿಗೆಯವನ ಹೆಂಡತಿಯ ಹೆಸರಿನ ಸಂತನ ದಿನ ಇವೊತ್ತು ; ನಮ್ಮನ್ನು ಊಟಕ್ಕೆ ಕರೆಯಲು ನಿನ್ನೆ ಅವಳು ಬಂದಿದ್ದಳು."

"ಹಾಗೇನು ! ಅತ್ತ ಮನೆಯ ಯಜಮಾನರುಗಳಿಗೆ ವಿರಸ ; ಇತ್ತ ಅವರ ಸೇವಕರು ಒಬ್ಬರನೊಬ್ಬರು ಔತಣ ಕೂಟಕ್ಕೆ ಕರೆಯುತ್ತಾರೆ !" ಎಂದು ಲೀಸ ಅಚ್ಚರಿಗೊಂಡಳು.

ನಾಸ್ತ್ಯ ಪ್ರತಿಭಟಿಸಿದಳು : "ನಮ್ಮ ನಮ್ಮ ದಣಿಗಳ ಜಗಳದ ವಿಚಾರ ಕಟ್ಟಿಕೊಂಡು ನಮಗೇನು ? ಇಷ್ಟಕ್ಕು, ನಾನು ನಿಮ್ಮ ಸೇವಕಳೇ ಹೊರತು ನಿಮ್ಮ ಅಪ್ಪನ ಸೇವಕಳಲ್ಲವಲ್ಲ. ನೀವು ಗೊತ್ತು. ಆದ್ದರಿಂದ ಆ ಮುದು ಮುದುಕರು ತಮ್ಮ ತಮ್ಮಲ್ಲಿಯೇ ಕಾದಾಡಿಕೊಳ್ಳಲಿ, ಬಿಡಿ !"

"ನಾಸ್ತ್ಯ, ಪ್ರಯತ್ನಪಟ್ಟು ಅಲೆಕ್ಸಿ ಬೆಂಸ್ಟಾಫರನ್ನು ಒಂದು ಸಲ ನೋಡಿ ಬಾ. ಅವರು ಹೇಗಿದ್ದಾರೆ, ಯಾವ ಪ್ರಕಾರದ ಮನುಷ್ಯರು ಎನ್ನುವುದನ್ನು ನನಗೆ ಸರಿಯಾಗಿ ತಿಳಿದುಹೇಳು."

ನಾಸ್ತ್ಯ ಆಗಲಿ ಎಂದು ಮಾತುಕೊಟ್ಟಳು ; ತನ್ನ ಸೇವಿಕೆ ಮರಳುವುದನ್ನೇ ದಿನಪೂರ್ತಿಯೆಲ್ಲ ಲೀಸ ತಾಳ್ಮೆಯಿಲ್ಲದೆ ಕಾಯುತ್ತಿದ್ದಳು. ಸಂಜೆ ನಾಸ್ತ್ಯ ಹಿಂದಿರುಗಿದಳು. ಅವಳು ಕೊಟಡಿಯೊಳಕ್ಕೆ ಒಂದೊಡನೆಯೆ, "ಒಳ್ಳೆಯದು, ಲಿಸವೀಟ ಗ್ರಿಗೊರ್ಯೆವ್ನ, ನಾನು ಕಿರಿಯ ಬೆರಿಸ್ಟಾಫ್‌ರನ್ನು ನೋಡಿದ್ದೇನೆ ; ಚೆನ್ನಾಗಿ ನೋಡಿದೆ. ದಿನವೆಲ್ಲಾ ನಾವು ಒಟ್ಟಿಗೆಯೆ ಇದ್ದೆವು" ಎಂದು ಹೇಳಿದಳು.

"ಏನು ? ಹಾಗಿದ್ದರೆ ಹೇಳು, ಮೊದಲಿಂದ ಕಡೆಯವರೆಗೆ ಎಲ್ಲವನ್ನೂ ನನಗೆ ಹೇಳು !"

"ಅಗತ್ಯವಾಗಿ ಆಗಲಿ, ನಾವೆಲ್ಲ ಅಲ್ಲಿಗೆ ಹೋದೆವು,–ನಾನು, ಅನಿಸ್ಯ ಯೊಗೊರೊವ್ನ, ನೆನಿಲಾ, ದುನ್ಯ......"

"ಅದೆಲ್ಲಾ ಇರಲಿ ಬಿಡು ! ಸರಿ, ಆಮೇಲೆ ?"

"ಎಲ್ಲವನ್ನೂ ತೀರ ಮೊದಲಿಂದ ನಿನಗೆ ಹೇಳೋಣ ಅಂತ, ಅಷ್ಟೆ. ಸರಿ, ಊಟದ ಹೊತ್ತಿಗೆ ನಾವೆಲ್ಲ ಅಲ್ಲಿಗೆ ಹೋದೆವು. ಕೋಣೆಯ ತುಂಬ ಜನ ಇದ್ದರು. ಕಾಲ್ಬಿನ್ ದಂಪತಿಗಳ, ಜಖರ್‍ಯೆಫ್ ದಂಪತಿಗಳ ಸೇವಕರು ಅಲ್ಲಿದ್ದರು. ಜೊತೆಗೆ, ಉಗ್ರಾಣದವನ ಹೆಂಡತಿ ಮತ್ತು ಹೆಣ್ಣುಮಕ್ಕಳು, ಖ್ಲುಪಿನ್‌ರ ಮನೆಯ ಸೇವಕರು..."

ದೃಢನಿಶ್ಚಯದಿಂದ ಲೀಸ ಹಾಸಿಗೆಯ ಮೇಲೆ ಮಲಗಿದಳು. ಮಾರನೆಯ ದಿನವೇ ಅದನ್ನು ನಿರ್ವಹಿಸತೊಡಗಿ, ದಪ್ಪನೆಯ ನೀಲಿಯ ಮನೆನೆಯ್ಗೆಯ ಬಟ್ಟೆ ಮತ್ತು ಹಿತ್ತಾಳೆಯ ಗುಂಡಿಗಳನ್ನು ಪೇಟಿಯಿಂದ ತರಹೇಳಿದಳು. ನಾಸ್ತ್ಯಳ ನೆರವಿನಿಂದ ಅವಳು ಒಂದು ಕುಪ್ಪಸವನ್ನೂ 'ಸರಫಾನ'ನ್ನೂ ಕತ್ತರಿಸಿ, ಎಲ್ಲ ಕೆಲಸದ ಹುಡುಗಿಯರಿಗೂ ಆದರ ತಯಾರಿಕೆಯನ್ನು ವಹಿಸಿದಳು ; ಸಂಜೆಯ ಹೊತ್ತಿಗೆ ಎಲ್ಲವೂ ಸಿದ್ಧವಾಗಿತ್ತು. ಲೀಸ ತನ್ನ ಹೊಸ ಉಡುಪನ್ನು ಧರಿಸಿ, ಕನ್ನಡಿಯ ಮುಂದೆ ನಿಂತು ತನ್ನನ್ನು ತಾನೆ ನೋಡಿ ಕೊಂಡಾಗ, ತಾನು ಎಂದೂ ಅಷ್ಟು ಅಂದವಾಗಿದ್ದುದು ಕಂಡಿರಲಿಲ್ಲವೆಂದು ಒಪ್ಪಿಕೊಳ್ಳಬೇಕಾಯಿತು. ತನ್ನ ಪಾತ್ರಾಭಿನಯವನ್ನು ಅಭ್ಯಾಸ ಮಾಡಿಕೊಳ್ಳುವುದಕ್ಕಾಗಿ, ಬಾಗಿ ನಮಿಸಿದಳು; ಕುಳಿಯಲ್ಲಿ ತಲೆ ಆಡಿಸುವ ಮಣ್ಣಿನ ಬೆಕ್ಕಿನಂತೆ ತಲೆಯನ್ನು ಆ ಕಡೆಗೂ ಒಲೆದಾಡಿಸುತ್ತ ಅತ್ತಿತ್ತ ನಡೆದಾಡಿದಳು. ಸ್ಥಳೀಯ ದೇಸಿ ನುಡಿಯಲ್ಲಿ ಮಾತಾಡಿ, ನಗುಬಂದಾಗ ತೋಳತುದಿಯಿಂದ ಬಾಯಿ ಮುಚ್ಚಿಕೊಳ್ಳುತ್ತಿದ್ದಳು ; ಇಷ್ಟೆಲ್ಲ ಮಾಡಿ, ನಾಸ್ತ್ಯಳ ಪೂರ್ಣ ಅನುಮೋದನೆಯನ್ನು ಪಡೆದಳು. ಅವಳಿಗಾದ ಕ್ಲೇಶವೆಲ್ಲ, ಅಂಗಳದಲ್ಲಿ ಬರಿಗಾಲಿನಲ್ಲಿ ನಡೆದಾಡಲು ಪ್ರಯತ್ನಿಸಿದಾಗ ; ಏಕೆಂದರೆ ಹುಲ್ಲುನೆಲ ಅವಳ ಕೋಮಲ ಪಾದಗಳನ್ನು ನೋಯಿಸುತ್ತಿದ್ದಿತು. ಮರುಳು ಮತ್ತು ಕಲ್ಲುಚೂರು ಸಹಿಸಲಾಗದಂತೆ ಚುಚ್ಚುತ್ತಿದ್ದುವು. ಈ ಸಂದರ್ಭದಲ್ಲೊ ನಾಸ್ತ್ಯಗೇಟಿನ ಜಮೀನುದಾರದ ಮನೆಯ ಮುಂದೆ ದಾರಿ ಹಿಡಿದು ಸಾಗಿದುವು. ಟ್ರೋಫಿಮ್ ದಾರಿಯಲ್ಲಿ ಹೋಗುವಾಗ ಒಂದು ಜೊತೆ ಸಣ್ಣ ಹೊಳಪು ಬಣ್ಣದ ಜೋಡುಗಳನ್ನು ನಾಸ್ತ್ಯಳ ಕೈಗಿತ್ತನು ; ಅವಕ್ಕೆ ಬೆಲೆಯಾಗಿ ಐವತ್ತು ಕೊಪೆಕ್‌ಗಳು ಅವಳಿಂದ ಅವನಿಗೆ ದೊರೆತುವು. ಲೀಸ ಸದ್ದಿಲ್ಲದ ತನ್ನ ರೈತರ ಉಡುಪು ತೊಟ್ಟು, ಮಿಸ್ ಜ್ಯಾಕ್ಸನ್ನಿನ ವಿಚಾರದಲ್ಲಿ ಹೇಳಬೇಕಾದ ಎಚ್ಚರಿಕೆಯ ಮಾತನ್ನು ಪಿಸುಗುಟ್ಟಿ, ಹಿಂದಿನ ಕೈಸಾಲೆಯಿಂದ ಮನೆಬಿಟ್ಟು, ಮನೆಯ ಹಿತ್ತಿಲ ತೋಟದ ಮೂಲಕ ಬಯಲಾದ ಹೊಲಗಳ ಕಡೆಗೆ ಓಡಿದಳು.

ಮೂಡಗಡೆಯ ಆಕಾಶವನ್ನು ಮುಂಜಾನೆ ಬೆಳಗುತ್ತಿತ್ತು. ಆಸ್ಥಾನಿಕರು ತಮ್ಮ ಜಾರ್ ಚಕ್ರವರ್ತಿಗಾಗಿ ಕಾದಿರುವಂತೆ ಮುಗಿಲುಗಳು ಹೊಂಬಣ್ಣತೊಟ್ಟು ಸೂರ್ಯನಿಗಾಗಿ ಸಾಲುಗಟ್ಟಿ ನಿಂತು ಕಾಯುತ್ತಿರುವಂತೆ ಕಂಡವು ಸ್ವಚ್ಛವಾದ ಆಕಾಶ, ಪ್ರಾತಃಕಾಲದ ಹೊಚ್ಚ ಹೊಸತನ, ಇಬ್ಬನಿ, ಮೆಲು ಗಾಳಿ, ಹಕ್ಕಿಗಳ ಸಂಗೀತ– ಇವು ಲೀಸಳ ಹೃದಯದಲ್ಲಿ ಶಿಶುಸಹಜವಾದ ಉಲ್ಲಾಸವನ್ನು ತುಂಬಿದುವು. ಯಾರಾದರೂ ತನ್ನನ್ನು ಕಂಡಾರೆಂಬ ಭೀತಿಯಿಂದ ಅವಳು ನಡೆದು ಹೋಗುತ್ತಿಲ್ಲ,

ಅಂತ, ಯಾರ ಕಡೆಗೂ ತಿರುಗಿನೋಡುವುದಿಲ್ಲ ಅಂತ?"

"ಅದು ಇರಬಹುದು. ಆದರೆ ಅವರು ಖಂಡಿತ ನನ್ನ ಕಡೆ ನೋಡಿದರು, ಉಗ್ರಾಣದವಳ ಮಗಳು ಟಾನ್ಯ ಕಡೆಯೂ ನೋಡಿದರು. ಕಾಲ್ಬಿನ್ಸ್ ಪಾಶಾಳನ್ನೂ ಕಡೆಗಣಿಸಲಿಲ್ಲ....ಹಾಗೆ ಯೋಚನೆ ಮಾಡಿದರೆ, ಆ ತುಂಟ ಮನುಷ್ಯ ಯಾರನ್ನೂ ಉದಾಸೀನ ಮಾಡಲಿಲ್ಲ !"

"ಆಶ್ಚರ್ಯ ! ಅದು ಸರಿ, ಮನೆಯಲ್ಲಿ ಅವನಬಗ್ಗೆ ಏನು ಹೇಳುತ್ತಾರೆ ?"

"ಬಹಳ ಒಳ್ಳೆಯ ಮನುಷ್ಯನೆಂದೇ ಹೇಳುತ್ತಾರೆ. ತುಂಬ ದಯಾವಂತ ; ಯಾವಾಗಲೂ ಗೆಲವಾಗಿರುತ್ತಾನಂತೆ. ಆತನಲ್ಲಿರುವ ಒಂದೇ ದೋಷ ಅಂದರೆ, ಕಂಡ ಹುಡುಗಿಯ ಬೆನ್ನಟ್ಟಿ ಹೋಗುವುದರಲ್ಲಿ ತುಂಬ ಇಷ್ಟ. ಆದರೆ, ನನಗೆ ಅದರಿಂದ ತುಂಬ ಕೆಡುಕೆನಿಸುವುದಿಲ್ಲ–ಅವರದನ್ನು ಬಿಟ್ಟುಬಿಡುತ್ತಾರೆ."

"ಅವರನ್ನ ನೋಡಬೇಕು ಅಂತ ನನಗೆ ಎಷ್ಟು ಆಸೆ ಅಂತ !"–ಎಂದು ನಿಟ್ಟುಸಿರುಗರೆದಳು ಲೀಸ.

"ಆಯ್ಯೊ, ಅದೇನು ಬಹು ಸುಲಭ. ಟ್ಯುಗಿಲೋವೊ ಇಲ್ಲಿಂದ ಬಹಳ ದೂರವೇನಲ್ಲ–ಬರೀ ಮೂರು ವರ್ಸ್ಟ್, ಅಷ್ಟೆ. ಅಲ್ಲಿಗೆ ಒಮ್ಮೆ ನಡೆದು ಹೋದರಾಯಿತು, ಇಲ್ಲ ಕುದುರೆಯ ಮೇಲೆ ಹೋದರೂ ಆಯಿತು–ಖಂಡಿತ ನಿಮಗೆ ಸಿಕ್ಕೇ ಸಿಕ್ಕುತ್ತಾರೆ. ಅವರು ಪ್ರತಿದಿನ ಬೆಳಗ್ಗೆ ಹೊತ್ತಿಗೆ ಮುಂಚೆ ಬಂದೂಕ ಹಿಡಿದು ಹೊರಕ್ಕೆ ಹೊರಡುತ್ತಾರೆ."

"ಹ್ಞಾ, ಅದು ಮಾತ್ರ ಸಾಧ್ಯವಿಲ್ಲ. ಅವರ ಬೆನ್ನಟ್ಟಿ ನಾನು ಹೋಗುತ್ತಿದೇನೆಂದು ಅವರು ಭಾವಿಸಬಹುದು. ಅಲ್ಲದೆ, ನಮ್ಮ ತಂದೆಗೂ ಅವರ ತಂದೆಗೂ ಆಗುವುದಿಲ್ಲ; ಆದ್ದರಿಂದ ಏನು ಮಾಡಿದರೂ ಅವರ ಪರಿಚಯ ಮಾಡಿಕೊಳ್ಳುವ ಹಾಗಿಲ್ಲ...ಓ, ನಾಸ್ತ್ಯ ! ಏನು ಅಂತ ನಿನಗೆ ಹೇಳ್ತೇನೆ ! ರೈತನ ಹುಡುಗಿಯಂತೆ ಉಡುಪು ಹಾಕಿಕೊಂಡು ಬಿಡುತ್ತೇನೆ !"

"ಹಾಗೆ ಮಾಡಿ ಮತ್ತೆ ! ಕೈಯಲ್ಲಿ ನೆಯ್ದ ಬಟ್ಟೆಯ ಒಂದು ಕುಪ್ಪಸ, ಒಂದು 'ಸರಫಾನ್' (ಲಂಗ) ಇವನ್ನು ತೊಟ್ಟು ಧೈರ್ಯವಾಗಿ ಟ್ಯುಗಿಲೋವೋಗೆ ನಡೆದುಕೊಂಡು ಹೋಗಿ. ಬೆರಿಸ್ಟಾಫ್ ನಿಮ್ಮನ್ನು ಕಡೆಗಣಿಸುವುದಿಲ್ಲ ಅಂತ ಖಾತರಿ ಕೊಡುತ್ತೇನೆ."

"ಹಳ್ಳಿಯ ಜನರಂತೆಯೇ ನಾನು ಮಾತಾಡಬಲ್ಲೆ ! ಓ ನಾಸ್ತ್ಯ, ನನ್ನ ಮೆಚ್ಚಿನ ನಾಸ್ತ್ಯ ! ಎಂಥ ಸೊಗಸಾದ ಆಲೋಚನೆ !"

ತನ್ನ ವಿನೋದಕರವಾದ ಯೋಚನೆಯನ್ನು ಕಾರ್ಯರೂಪಕ್ಕೆ ತರುವ

"ಪ್ರಿಲುಚಿನೋದಿಂದ. ಕಮ್ಮಾರ ವಾಸಿಲಿಯ ಮಗಳು, ನಾನು. ಅಣಬೆ ಕಿತ್ತುಕೊಂಡು ಹೋಗಲು ಬಂದೆ." (ಲೀಸ ತೊಗಟೆಯಿಂದ ಮಾಡಿದ ಬುಟ್ಟಿಯೊಂದನ್ನು ಅದಕ್ಕೆ ಕಟ್ಟಿದ್ದ ಹುರಿಯಿಂದ ತೂಗಾಡಿಸಿದಳು.) "ಅದು ಸರಿ, ನೀವು ಯಾರು ? ಟ್ಯುಗಿಲೋವೋದಿಂದ ಬಂದಿದ್ದೀರೋ?"

"ಹೌದು, ಹೌದು. ನಾನು ಚಿಕ್ಕ ದಣಿಗಳ ಕೈಯಾಳು" ಎಂದು ಅಲೆಕ್ಸಿ ಉತ್ತರಕೊಟ್ಟನು. ಅಲೆಕ್ಸಿ ಅವಳಿಗೆ ಸಮನಾದ ಸ್ಥಾನದಲ್ಲಿ ನಿಂತು ಅವಳೊಡನೆ ವ್ಯವಹರಿಸಲಿಚ್ಛಿಸಿದನು. ಆದರೆ ಲೀಸ ಅವನನ್ನು ನೋಡಿ ನಕ್ಕುಬಿಟ್ಟಳು.

"ಅಲ್ಲ, ನೀವು ಕೈಯಾಳಲ್ಲ. ನೀವು ನನ್ನನ್ನ ಮೋಸಮಾಡಲಾರಿರಿ. ನೀವೇ ದಣಿ ಎಂದೂ ನಾನು ಬಲ್ಲೆ" ಎಂದಳು ಅವಳು.

"ಹಾಗೆ ನೀನು ಯೋಚಿಸಲು ಕಾರಣ ?"

"ನಿಮ್ಮ ಸರ್ವಸ್ವವೂ ಅದನ್ನು ಸಾರುತ್ತಿದೆ."

"ಆದರೆ, ಸ್ಪಷ್ಟವಾಗಿ ಯಾವುದು, ಹೇಳು !"

"ಅಲ್ಲ, ಯಾರಿಗಾದರೂ ಗೊತ್ತಾಗುವುದಿಲ್ಲವೆ, ದಣಿ ಯಾರು, ಆಳು ಯಾರು ಅಂತ? ನೀವು ಉಡುಪು ತೊಟ್ಟಿರುವ ಬಗೆಯೆ ಬೇರೆ, ನಿಮ್ಮ ಮಾತಿನ ರೀತಿಯೇ ಬೇರೆ ; ನಿಮ್ಮ ನಾಯನ್ನು ಕರೆಯುವ ರೀತಿ ಕೂಡ ಬೇರೆ, ನಾವು ಕರೆಯುವ ಹಾಗಲ್ಲ."

ಲೀಸಳ ಸೊಬಗು ಅಲೆಕ್ಸಿಯ ಮೇಲೆ ಪ್ರಭಾವ ಬೀರತೊಡಗಿತು. ಹಳ್ಳಿಯ ಚೆಂದದ ಹುಡುಗಿಯರನ್ನು ತೀರ ಸಲುಗೆಯಿಂದ ಕಾಣುವ ಅಭ್ಯಾಸವುಳ್ಳ ಅವನು, ಅವಳ ಸುತ್ತ ತನ್ನ ತೋಳನ್ನು ಬಳಸಲು ಪ್ರಯತ್ನಿಸಿದನು. ಆದರೆ ಲೀಸ ಹಿಂದಕ್ಕೆ ಚಿಮ್ಮಿ, ತಟ್ಟನೆ ತಿರಸ್ಕಾರಸೂಚಕ ಹಾಗೂ ನಿರೋಧಿಸುವ ಮುಖಭಾವವನ್ನು ತಳೆದಳು ; ಅದನ್ನು ಕಂಡು ಅಲೆಕ್ಸಿಗೆ ವಿನೋದವೆನಿಸಿದರೂ, ತನ್ನ ಪ್ರಣಯ ಪ್ರದರ್ಶನದ ಪ್ರಯತ್ನದಲ್ಲಿ ಹೆಚ್ಚು ಮುಂದುವರಿಯಲು ಹಿಂದೆಗೆದನು.

"ತನ್ನ ಮುಂದೆ ನನ್ನೊಂದಿಗೆ ನೀವು ಸ್ನೇಹದಿಂದಿರಬೇಕಾದರೆ, ನೀವು ಮೈಮರೆತು ವರ್ತಿಸಕೂಡದು, ತಿಳಿಯಿತೆ?" ಎಂದು ಅವಳು ಬಿಂಕದಿಂದ ನುಡಿದಳು.

ಅಲೆಕ್ಸಿ ಹೊಟ್ಟೆತುಂಬ ನಕ್ಕು ಕೇಳಿದನು: "ಹೀಗೆ ಮಾತಾಡಲು ನಿನಗೆ ಹೇಳಿಕೊಟ್ಟವರು ಯಾರು? ನಿನ್ನ ಚಿಕ್ಕ ಒಡತಿಯ ಪರಿಚಾರಿಕೆ ಇದ್ದಾಳಲ್ಲ, ನನ್ನ ಗೆಳತಿ ನಾಸ್ಟೆಂಕ್, ಅವಳು ಕಲಿಸಿದಳೆ? ಈಗ ನಮಗೆ ಅರಿವಾಗುತ್ತಿದೆ, ವಿದ್ಯಾಭ್ಯಾಸ ಹೇಗೆ ಹರಡಿಬಿಟ್ಟಿದೆ ಅಂತ."

ಲೀಸ ತನ್ನ ಪಾತ್ರದ ಇತಿಮಿತಿಯನ್ನು ಮೀರಿ ತಾನು ಮಾತಾಡುತ್ತಿರುವುದಾಗಿ

ಹಾರಿ ಹೋಗುತ್ತಿದಾಳೆ ಎನ್ನುವಂತೆ ಕಾಣುತ್ತಿತ್ತು. ತನ್ನ ತಂದೆಯ ಜಮೀನಿನ ಎಲ್ಲೆಕಟ್ಟನ್ನು ಗುರುತಿಸಿದ್ದ ತೋಪನ್ನು ಸಮೀಪಿಸಿದಾಗ, ಅವಳು ನಿಧಾನಿಸಿದಳು. ಇಲ್ಲೆ ಅವಳು ಅಲೆಕ್ಸಿಗಾಗಿ ಕಾಯಬೇಕಾಗಿದ್ದದ್ದು. ಅವಳ ಹೃದಯ ಜೋರಾಗಿ ಬಡಿದುಕೊಳ್ಳ ತೊಡಗಿತು–ಏಕೆಂದು ಅವಳು ಹೇಳಲಾರದವಳಾಗಿದ್ದಳು. ನಮ್ಮ ಅನುಭವಕ್ಕೆ ಬರುವ ಕಳವಳವೇ ಅವುಗಳ ಮುಖ್ಯವಾದ ಸೊಬಗು. ಲೀಸ ತೋಪಿನ ನಸು ಬೆಳಕಿನ ಪ್ರದೇಶವನ್ನು ಹೊಕ್ಕಳು. ಆ ತೋಪಿನ ಅಂತರಾಳದಿಂದ ಮಂದವಾದ ಶಬ್ದಗಳು ಆ ಹುಡುಗಿಯ ಕಿವಿಗೆ ಬಿದ್ದು, ಅವಳ ಉಲ್ಲಾಸ ಆ ಕ್ಷಣದಲ್ಲಿಯೆ ಕುಗ್ಗಿಹೋಯಿತು. ತುಸುತುಸುವಾಗಿ ಅವಳು ಆನಂದದಾಯಕ ಧ್ಯಾನದಲ್ಲಿ ಮುಳುಗಿದಳು. ಅವಳು ಆಲೋಚಿಸಿದಳು, ಏನೆಂದರೆ......ಒಂದು ವಸಂತ ಪ್ರಾತಃಕಾಲದಂದು ಐದು ಆರು ಗಂಟೆಯ ಸಮಯದಲ್ಲಿ ಹದಿನೇಳರ ಹರೆಯದ ಕನ್ಯೆ ಒಂದು ತೋಪಿನಲ್ಲಿದ್ದಾಗ ಏನನ್ನು ಕುರಿತು ಆಲೋಚಿಸುವಳು ಎಂದು ಯಾರು ತಾನೆ ಹೇಗೆ ಖಚಿತವಾಗಿ ಹೇಳಲು ಸಾಧ್ಯ? ಅವಳು ತನ್ನ ಆಲೋಚನೆಗಳಲ್ಲಿ ಮುಳುಗಿ, ಇಕ್ಕಡೆಗಳಲ್ಲೂ ಇದ್ದ ಎತ್ತರವಾದ ಮರಗಳಿಂದ ನೆರಳು ಬೀಳುತ್ತಿದ್ದ ಒಂದು ದಾರಿಯುದ್ದಕ್ಕೂ ನಡೆದು ಹೋಗುತ್ತಿದ್ದಳು ; ಆಗ ತಟ್ಟನೆ ಒಂದು ಬೇಟೆಯ ನಾಯಿಬಗುಳುತ್ತ ಅವಳ ಕಡೆಗೆ ಓಡಿ ಬಂದಿತು. ಲೀಸ ಗಾಬರಿಗೊಂಡು ಕಿರಿಚಿದಳು. ಅದೇ ಕ್ಷಣದಲ್ಲಿಯೆ, ನಾಯಿಯನ್ನು ಗದರಿಸಿ ಕೂಗಿ ಕರೆಯುತ್ತಿದ್ದ ಒಂದು ಧ್ವನಿ ಅವಳಿಗೆ ಕೇಳಿಸಿತು; ಪೊದೆಗಳ ಹಿಂದಿನಿಂದ ಬಂದು ಒಬ್ಬ ಬೇಟೆಗಾರ ಕಾಣಿಸಿಕೊಂಡನು. “ಚೆಲುವೆ, ಹೆದರ ಬೇಡ ! ನನ್ನ ನಾಯಿ ಕಚ್ಚುವುದಿಲ್ಲ” ಎಂದು ಅವನು ಲೀಸಳಿಗೆ ಹೇಳಿ ಸನ್ನಿವೇಶವನ್ನು ಸದುಪಯೋಗಪಡಿಸಿಕೊಳ್ಳುವುದರಲ್ಲಿ ಹಿಂದಾಗಲಿಲ್ಲ. ಅವಳು ಭೀತಿ ಲಜ್ಜೆಗಳ ಮಿಶ್ರಭಾವವನ್ನು ನಟಿಸುತ್ತ, “ಆದರೆ, ನನಗೆ ಹೆದರಿಕೆ. ನಾಯಿ ಎಷ್ಟು ಭಯಂಕರವಾಗಿದೆ ನೋಡಿ ! ಅದು ಮತ್ತೆ ನನ್ನ ಮೇಲೆ ನೆಗೆದು ಬಿದ್ದೀತು” ಎಂದಳು. ಅಲೆಕ್ಸಿ (ಅವನು ಯಾರೆಂದು ವಾಚಕರಿಗೂ ಈಗಾಗಲೇ ಗೊತ್ತಾಗಿರಬೇಕಲ್ಲ) ಒಂದು ಕ್ಷಣ ಕಾಲ ರೈತರ ಹುಡುಗಿಯನ್ನು ದೃಷ್ಟಿಸಿ ನೋಡಿದನು. “ನಿನಗೆ ಹೆದರಿಕೆಯಾಗಿದ್ದರೆ ನಾನು ನಿನ್ನ ಜೊತೆ ಬರುತ್ತೇನೆ. ನಿನ್ನ ಜೊತೆ ನಡೆದುಬರಲು ಅಭ್ಯಂತರವಿಲ್ಲವಷ್ಟೆ?” ಎಂದನು. “ನಿಮ್ಮನ್ನು ತಡೆಯುವವರು ಯಾರು? ರಸ್ತೆಯಲ್ಲಿ ನಡೆದು ಹೋಗಲು ಎಲ್ಲರೂ ಸ್ವತಂತ್ರರು” ಎಂದು ಲೀಸ ಪ್ರತಿಯಾಡಿದಳು.

“ನೀನು ಎಲ್ಲಿಂದ ಬಂದಿದ್ದೀಯೆ?”

"ನನ್ನನ್ನ ನಿರಾಶೆಗೊಳಿಸುವುದಿಲ್ಲ ತಾನೆ ?"

"ಇಲ್ಲ, ಹಾಗೆ ಮಾಡುವುದಿಲ್ಲ."

"ಇಲ್ಲ ಅಂತ ಆಣೆಯಿಡು."

"ಪವಿತ್ರವಾದ ಶಿಲುಬೆಯಾಣೆಗೂ ನಾನು ಬರುತ್ತೇನೆ."

ಈ ತರುಣ ತರುಣಿಯರು ಒಬ್ಬರನ್ನೊಬ್ಬರು ಅಗಲಿದರು. ಲೀಸ ತೋಪಿನಿಂದ ಹೊರಬಂದು, ಹೊಲವನ್ನು ದಾಟಿ, ತೋಟದೊಳಕ್ಕೆ ನುಸುಳಿ, ಹೊಲಮನೆಗೆ ಧಾವಿಸಿದಳು ; ಅಲ್ಲಿ ನಾಸ್ತ್ಯ ಇವಳಿಗಾಗಿ ಕಾಯುತ್ತಿದ್ದಳು. ಇಲ್ಲಿ ಅವಳು ಉಡುಪು ಮಾರ್ಪಡಿಸಿ, ತನ್ನ ಎಂದಿನ ಉಡುಪನ್ನು ಧರಿಸಿದಳು ; ತನ್ನ ನಚ್ಚಿನ ಗೆಳತಿಯ ಕುತೂಹಲದ ಪ್ರಶ್ನೆಗಳಿಗೆ ಎಲ್ಲೋ ಜ್ಞಾನವಿಟ್ಟು ಉತ್ತರಕೊಡುತ್ತಿದ್ದಳು ; ಬಳಿಕ ಆತುರಾತುರವಾಗಿ ಭೇಟಿಯ ಕೋಣೆಗೆ ಹೋಗಿ ಕಾಣಿಸಿಕೊಂಡಳು. ಮೇಜಿನ ಮೇಲೆ ಬೆಳಗಿನ ಉಪಾಹಾರ ಬಡಿಸಿ ಸಿದ್ಧವಾಗಿತ್ತು. ಅಷ್ಟು ಹೊತ್ತಿಗೆಮುಂಚೆ ಕೂಡ ಮಿಸ್ ಜ್ಯಾಕ್ಸನ್ 'ಪೌಡರ್' ಹಾಕಿಕೊಂಡು, ತೆಳ್ಳಗೆ ಕಾಣುವಂತೆ ನಡುಬಿಗಿದುಕೊಂಡು, ಬ್ರೆಡ್ಡನ್ನು ತೆಳ್ಳನೆಯ ಹಲ್ಲೆಗಳಾಗಿ ಕೊಯ್ಯುತ್ತಿದ್ದಳು. ಲೀಸಳ ತಂದೆ ಅಷ್ಟು ಮುಂಚೆಯೆ ಹೊರಕ್ಕೆ ತಿರುಗಾಡಲು ಹೋಗಿದ್ದುದಕ್ಕಾಗಿ ಪ್ರಶಂಸಿಸಿದನು. "ಸೂರ್ಯೋದಯಕ್ಕೆ ಸರಿಯಾಗಿ ಎದ್ದೇಳುವುದಕ್ಕಿಂತ ಆರೋಗ್ಯಕರವಾದದ್ದು ಯಾವುದೂ ಇಲ್ಲ" ಎಂದು ಹೇಳಿದನು. ಆನಂತರ ಅವನು ಆಂಗ್ಲ ಕಾಲಿಕ ಪತ್ರಿಕೆಗಳಿಂದ ಆಯ್ದ ದೀರ್ಘಾಯುಸ್ಸಿನ ಹಲವು ನಿದರ್ಶನಗಳನ್ನು ಉಲ್ಲೇಖಿಸಿ, ನೂರು ವರ್ಷಕ್ಕೆ ಮೇಲ್ಪಟ್ಟು ಬದುಕಿದದವರೆಲ್ಲ 'ವೋಡ್ಕ'ವನ್ನು ಕುಡಿಯುತ್ತಿರಲಿಲ್ಲವೆಂದೂ ಬೇಸಗೆಯಾಗಲಿ ಮಾಗಿಯಾಗಲಿ ಹೊತ್ತುಮೂಡುವ ಹೊತ್ತಿಗೆ ಸರಿಯಾಗಿ ಏಳುತ್ತಿದ್ದರೆಂದೂ ತಿಳಿಸಿದನು. ಲೀಸ ಅವನು ಹೇಳಿದ್ದನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಅವಳು ಬೆಳಗ್ಗೆ ನಡೆದ ರಹಸ್ಯ ಸಂದರ್ಶನದ ಸಂದರ್ಭಗಳು, ಅಕ್ಯುಲಿನ ಮತ್ತು ತರುಣ ಬೇಟೆಗಾರ ಇವರ ನಡುವೆ ನಡೆದ ಸಮಗ್ರ ಸಂಭಾಷಣೆ–ಇವೆಲ್ಲವನ್ನೂ ಮನಸ್ಸಿನಲ್ಲಿಯೇ ತಿರುವಿ ಹಾಕುತ್ತಾ ಮನಸ್ಸಿನಲ್ಲಿ ಅಳುಕ ತೊಡಗಿದ್ದಳು. ತಮ್ಮ ಸಂಭಾಷಣೆ ಸಭ್ಯತೆಯ ಹದ್ದುಮೀರಿರಲ್ಲಿಲವೆಂದೂ, ತನ್ನ ಹುಡುಗಾಟಿಕೆಯ ಪರಿಣಾಮವಾಗಿ ಯಾವ ಅನಿರೀಕ್ಷಿತ ಅನಿಷ್ಟ ಪರಿಣಾಮಗಳೂ ಉಂಟಾಗವೆಂದೂ ತನಗೆ ತಾನೆ ಸಮಾಧಾನ ಹೇಳಿಕೊಂಡದ್ದು ವ್ಯರ್ಥವೆನಿಸಿತು–ಏಕೆಂದರೆ, ತರ್ಕಸರಣಿಗಿಂತ ಆತ್ಮಸಾಕ್ಷಿಯ ಸೊಲ್ಲು ಮೇಲುಗೈಯಾಗಿತ್ತು. ಅವಳ ಆತಂಕಕ್ಕೆ ಮುಖ್ಯ ಕಾರಣ, ಅವಳು ಮಾರನೆಯ ದಿನಕ್ಕಾಗಿ ಕೊಟ್ಟಿದ್ದ ವಚನ ; ಅವಳು

ಭಾವಿಸಿದಳು ; ಕೂಡಲೆ ತಾನು ವಹಿಸಿದ್ದ ಪಾತ್ರದಂತೆಯೆ ಮತ್ತೆ ನಡೆದುಕೊಳ್ಳಲು ತವಕಿಸಿದಳು.

"ಅದು ಸರಿಯೆ. ಆ ದೊಡ್ಡ ಮನೆಗೆ ನಾನು ಹೋಗುವುದಿಲ್ಲ ಅಂತ ಯಾಕೆ ನೀವು ಭಾವಿಸುತ್ತೀರಿ ; ಕೂಡಲೆ ತಾನು ವಹಿಸಿದ್ದ ಪಾತ್ರದಂತೆಯೆ ಮತ್ತೆ ನಡೆದುಕೊಳ್ಳಲು ತವಕಿಸಿದಳು.

"ಅದು ಸರಿಯೆ. ಆ ದೊಡ್ಡ ಮನೆಗೆ ನಾನು ಹೋಗುವುದಿಲ್ಲ ಅಂತ ಯಾಕೆ ನೀವು ಭಾವಿಸುತ್ತೀರಿ ? ಅಲ್ಲಿ ನಾನು ಏನೆಲ್ಲಾ ಕೇಳಿ, ನೋಡಿ, ತಿಳಿಯುತ್ತೇನೆ. ಹೌದೋ ಅಲ್ಲವೊ ? ನಿಮ್ಮೊಂದಿಗೆ ಇಲ್ಲಿ ಹರಟೆ ಹೊಡೆಯುತ್ತ ನಿಂತುಬಿಟ್ಟರೆ, ನನಗೆ ತುಂಬ ಅಣಬೆಯ ಸಿಕ್ಕುವುದಿಲ್ಲ. ಇನ್ನು ನಿಮ್ಮ ದಾರಿ ನಿಮಗೆ, ಸ್ವಾಮಿ; ನನ್ನ ದಾರಿ ನನಗೆ, ನಮಸ್ಕಾರ."

ಲೀಸ ಹೊರಟಂತೆ ನಟಿಸಿದಳು. ಅಲೆಕ್ಸಿ ಅವಳ ಕೈ ತುಡುಕಿ, ಹಿಂದೆ ಹಿಡಿದು ನಿಲ್ಲಿಸಿದನು.

"ಓ ಚೆಲುವೆ, ನಿನ್ನ ಹೆಸರೇನು?"

ಲೀಸ ತನ್ನ ಕೈ ಬೆರಳುಗಳನ್ನು ಅಲೆಕ್ಸಿಯ ಕೈಯಿಂದ ಬಿಡಿಸಿ ಕೊಳ್ಳಲು ಪ್ರಯತ್ನಿಸುತ್ತ, "ಅಕ್ಯುಲಿನ. ಇರಲಿ, ನನ್ನನ್ನು ಬಿಡಿ, ಮನೆಗೆ ಹೋಗಲು ಹೊತ್ತಾಯಿತು" ಎಂದು ಉತ್ತರ ಕೊಟ್ಟಳು.

"ಇರಲಿ, ಅಕ್ಯುಲಿನಾ. ನಾನು ಖಂಡಿತ ಹೋಗಿ, ನಿಮ್ಮ ತಂದೆ ಕಮ್ಮಾರ ವಾಸಿಲಿ ಎಂದೆಯಲ್ಲ, ಅವರನ್ನು ನೋಡಿ ಬರುತ್ತೇನೆ."

"ಏನೆಂದಿರಿ? ದೇವರಾಣೆ, ಹಾಗೆ ಮಾಡಬೇಡಿ ! ನಾನು ತೋಪಿನಲ್ಲಿ ಒಬ್ಬಳೇ ಒಂಟಿಯಾಗಿ ಒಬ್ಬ ಪುರುಷನೊಂದಿಗೆ ಮಾತಾಡುತ್ತಿದ್ದೆನೆಂದು ಮನೆಯಲ್ಲಿ ಗೊತ್ತಾಗಿಬಿಟ್ಟರೆ, ನಾನು ಚೆನ್ನಾಗಿ ತಿನ್ನಬೇಕಾಗುತ್ತೆ. ನಮ್ಮ ತಂದೆ, ಕಮ್ಮಾರ ವಾಸಿಲಿಯವರು, ನನ್ನನ್ನು ಮೈ ನೀಲಿಗಟ್ಟುವಂತೆ ಹೊಡೆದುಬಿಡುತ್ತಾರೆ."

"ಆರೆ, ನಾನು ಮತ್ತೆ ನಿನ್ನನ್ನು ನೋಡಲೇಬೇಕಲ್ಲ"

"ಅಣಬೆ ಕೀಳುವುದಕ್ಕೆ ನಾನು ಬರುತ್ತಾ ಇರುತ್ತೇನೆ."

"ಆದರೆ, ಯಾವಾಗ?"

"ನನಗೆ ತಿಳಿಯದು–ಬಹುಶಃ ನಾಳೆ !"

"ಧೈರ್ಯವಿದ್ದಿದ್ದರೆ, ನಿನಗೆ...ಮುತ್ತು... ಕೊಡಬೇಕೆಂಬ ಆಸೆ, ಪ್ರಿಯ ಅಕ್ಯುಲಿನಾ. ನಾಳೆಯೇ ಬಂದುಬಿಡು, ಇದೇ ಹೊತ್ತಿಗೆ, ಖಂಡಿತವಾಗಿ !"

"ಆಗಲಿ."

ತನ್ನ ವಾಕ್ಚಾತುರ್ಯವನ್ನೆಲ್ಲ ವ್ಯಯಮಾಡಿದನು ; ತನ್ನ ಉದ್ದೇಶಗಳು ನಿರ್ದುಷ್ಟವಾಗಿದ್ದುವೆಂದು ಅವಳಿಗೆ ಭರವಸೆಯಿತ್ತನು ; ಪಶ್ಚಾತ್ತಪಪಡಲು ಎಂದಿಗೂ ಅವಳಿಗೆ ಅವಕಾಶಕೊಡುವುದಿಲ್ಲವೆಂದೂ ಎಲ್ಲ ವಿಚಾರಗಳಲ್ಲಿಯೂ ಅವಳ ಇಷ್ಟವನ್ನು ನಡಸುವುದಾಗಿಯೂ ಪ್ರತಿಜ್ಞೆ ಮಾಡಿದನು ; ದಿನಬಿಟ್ಟು ದಿನ ಇಲ್ಲವೆ ವಾರಕ್ಕೆ ಎರಡು ದಿನವಾದರೂ ಅವಳನ್ನು ಒಂಟಿಯಾಗಿ ಕಾಣುವ ಸಂತೋಷವನ್ನು ತನ್ನಿಂದ ಕಸಿದುಕೊಳ್ಳ ಬೇಡವೆಂದು ಅವಳನ್ನು ಬೇಡಿಕೊಂಡನು. ಅವನು ಪ್ರಾಮಾಣಿಕವಾಗಿ ಭಾವಾವೇಶಸ್ಥಿತಿಯಲ್ಲಿರುವಾಗ ಉಪಯೋಗಿಸುವ ಭಾಷೆಯನ್ನುಪಯೋಗಿಸಿದನು ; ತತ್‌ಕ್ಷಣದಲ್ಲಿ, ತಾನು ಪ್ರೇಮದಲ್ಲಿ ಮುಳುಗಿರುವುದಾಗಿ ನಿಜವಾಗಿ ಭಾವಿಸಿದನು. ಅವನ ಮಾತೆಲ್ಲ ಮುಗಿದ ಮೇಲೆ, "ಹಳ್ಳಿಯಲ್ಲಿ ನನಗಾಗಿ ಹುಡುಕಿಕೊಂಡು ಬರುವುದಿಲ್ಲವೆಂದು, ನನ್ನನ್ನು ಕುರಿತು ವಿಚಾರಿಸುವುದಿಲ್ಲವೆಂದು ಮಾತು ಕೊಡು. ನಾನು ಗೊತ್ತುಮಾಡುವಷ್ಟಲ್ಲದೆ ಹೆಚ್ಚಿನ ಭೇಟಿಯನ್ನು ಅಪೇಕ್ಷಿಸುವುದಿಲ್ಲವೆಂದು ಮಾತುಕೊಡು' ಎಂದು ಅವಳೆಂದಳು. ಅಲೆಕ್ಸಿ ಇನ್ನೇನು 'ಪವಿತ್ರ ಶಿಲುಬೆಯ ಮೇಲೆ' ಆಣೆಯಿಟ್ಟು ಮಾತುಕೊಡುವುದರಲ್ಲಿದ್ದನು ; ಆದರೆ ಲೀಸ ಒಂದು ಮುಗಳ್ನಗೆಯಿಂದ ಬೇಡವೆಂದು ಸೂಚಿಸಿ ಅವನನ್ನು ತಡೆದಳು. "ಪ್ರತಿಜ್ಞೆ ಪ್ರಮಾಣಗಳು ನನಗೆ ಬೇಕಿಲ್ಲ. ನಿಮ್ಮ ಮಾತು ಸಾಕು" ಎಂದಳು. ಬಳಿಕ ಅವರು ಅತ್ಯಂತ ಸ್ನೇಹಪರರಾಗಿ ಮಾತಾಡುತ್ತ, ಪಕ್ಕಪಕ್ಕದಲ್ಲಿ ತೋಪನ್ನೆಲ್ಲಾ ಸುತ್ತಾಡಿದರು. ಕಡೆಗೆ ಲೀಸ, "ನಾನು ಇನ್ನು ಹೋಗಬೇಕು, ಹೊತ್ತಾಯಿತು" ಎಂದಳು. ಅವರಿಬ್ಬರೂ ಅಗಲಿದರು. ಒಬ್ಬನೇ ಉಳಿದ ಅಲೆಕ್ಸಿ, ಒಬ್ಬ ಮುಗ್ಧ ಗ್ರಾಮಕನ್ಯೆ ಕೇವಲ ಒಂದೆರಡು ಭೇಟಿಗಳಲ್ಲಿ ಅದು ಹೇಗೆ ತನ್ನ ಮೇಲೆ ಅಂಥ ಸ್ಪಷ್ಟವಾದ ಪರಿಣಾಮವನ್ನು ಬೀರಬಲ್ಲವಳಾದಳೆಂಬುದನ್ನು ಅರಿಯದಾದನು. ಅಕ್ಯುಲಿನಳೊಡನೆ ಅವನ ಸಂಬಂಧ ಸಂಪರ್ಕಗಳು ಅವನ ಪಾಲಿಗೆ ಒಂದು ನಾವೀನ್ಯದ ಸೊಗಸನ್ನು ಒದಗಿಸಿದ್ದುವು. ಆ ವಿಚಿತ್ರ ರೈತರ ಹುಡುಗಿಯ ಕಟ್ಟುಕಟ್ಟಳೆಗಳು ಅವನಿಗೆ ಪಾಲಿಸಲು ಕಷ್ಟ ಸಾಧ್ಯವಾಗಿ ಕಂಡುಬಂದರೂ, ಕೊಟ್ಟ ಮಾತನ್ನು ಮುರಿಯುವ ಭಾವನೆ ಅವನ ತಲೆಯಲ್ಲಿ ಸುಳಿಯಲೂ ಇಲ್ಲ. ನಿಜ ಹೇಳುವುದಾದರೆ, ಅವನಲ್ಲಿ ಒಂದು ಖಳಚ್ಛಾಯೆ, ನಿಗೂಢ ಸ್ವಭಾವ, ಭ್ರಾಂತಿಭಮೆಗಳಿಲ್ಲದ ನಿಷ್ಠುರತೆ ಇವೆಲ್ಲ ಕಂಡುಬಂದರೂ ಅವನೊಬ್ಬ ನಿಷ್ಕಳಂಕ ಹೃದಯದ, ಸದ್ಭಾವನೆಯ, ಭಾವೋದ್ರೇಕದ ತರುಣನಾಗಿದ್ದು, ಅತ್ಯಂತ ಸರಳಸಾಮಾನ್ಯ ಸುಖ ಸಂತೋಷಗಳನ್ನು ಅನುಭೋಗಿಸಬಲ್ಲವನಾಗಿದ್ದನು.

ತನ್ನ ಪವಿತ್ರವಚನವನ್ನು ಇನ್ನೇನು ಮುರಿದುಬಿಡುವವರಲ್ಲಿದ್ದಳು. ಆದರೆ ಅಲೆಕ್ಸಿ ತನಗಾಗಿ ವ್ಯರ್ಥವಾಗಿ ಕಾದು, ದುಂಡುಮ್ಮೈಯ ಸಿಡುಬಿನ ಕಲೆಯ ಹುಡುಗಿ, ಕಮ್ಮಾರನ ಮಗಳು, ನಿಜವಾದ ಅಕ್ಯುಲಿನ ಯಾರೆಂದು ಹಳ್ಳಿಗೆ ಬರಬಹುದು ; ಈ ರೀತಿಯಲ್ಲಿ, ಲೀಸ ತನಗೆ ಮಾಡಿದ ಮೋಸವನ್ನು ಅವನು ಊಹಿಸಿಬಿಡಬಹುದು. ಈ ಯೋಚನೆ ಬಂದು ಅವಳು ದಿಗಿಲುಗೊಂಡಳು ; ಮಾರನೆಯ ಬೆಳಗ್ಗೆ ಮತ್ತೆ ಅಕ್ಯುಲಿನಳಾಗಿ ವೇಷಧರಿಸಿ ತೋಪಿಗೆ ಹೋಗುವುದಾಗಿ ನಿಶ್ಚಯಿಸಿಕೊಂಡಳು.

ಅಲೆಕ್ಸಿಯ ಆನಂದವಾದರೋ ಅಕಲುಷಿತವಾಗಿತ್ತು ; ದಿನವೆಲ್ಲಾ ತನ್ನ ಹೊಸ ಪರಿಚಯದ ವ್ಯಕ್ತಿಯ ವಿಚಾರವಲ್ಲದೆ ಬೇರೆಯ ಆಲೋಚನೆಯೇ ಇರಲಿಲ್ಲ ; ರಾತ್ರಿ ಅವನ ಕನಸಿನಲ್ಲಿ ಮಸಕುಮಸಕಾಗಿ ಕಾಣುವ ಸುಂದರಿಯ ದರ್ಶನ ಕಾಡುತ್ತಿತ್ತು. ಅವನು ಎದ್ದು ಬೆಳಗಾಗುವ ಮುನ್ನವೇ ಉಡುಪು ಧರಿಸಿದನು. ಕೋವಿಯನ್ನು ಬಾರುಮಾಡಿಕೊಳ್ಳುವಷ್ಟು ಹೊತ್ತೂ ಕಾಯದೆ, ತನ್ನ ನಿಷ್ಠೆಯ ನಾಯಿ ಸ್ಬೊಗರ್ ಸಂಗಡ ಹೊರಬಿದ್ದು, ಹೇಳಿದ್ದ ಭೇಟಿಯ ಸ್ಥಳದೆಡೆಗೆ ಧಾವಿಸಿದನು. ಅಲ್ಲಿ ಸಹಿಸಲಾಗದ ಆತಂಕದ ನಿರೀಕ್ಷೆಯಲ್ಲಿ ಸುಮಾರು ಅರ್ಧಗಂಟೆಯ ಕಾಲ ಹೇಗೋ ಕಳೆಯಿತು ; ಕಡೆಗೊಮ್ಮೆ ಪೊದೆಗಳ ನಡುವೆ ನೀಲಿಯ 'ಸರಫಾನ್' ಸುಳಿದಾಡಿದ್ದು ಅವನಿಗೆ ಕಾಣಿಸಿತು ; ಅವನು ತನ್ನ ಪ್ರಿಯೆ ಅಕ್ಯುಲಿನಳನ್ನು ಎದುರುಗೊಳ್ಳಲು ನುಗ್ಗಿ ಹೋದನು. ಅವಳು ಅವನ ಆನಂದಮಯವಾದ ಕೃತಜ್ಞತಾಭಾವವನ್ನು ಮುಗುಳ್ನಗೆ ನಕ್ಕು ಸ್ವೀಕರಿಸಿದಳು. ಆದರೆ ಅವಳ ಮುಖ ಭಾವದಲ್ಲಿ ನಿರುತ್ಸಾಹದ ಆತಂಕದ ಛಾಯೆಯಿದ್ದುದು ಬೇಗನೆ ಅಲೆಕ್ಸಿಯ ಗಮನಕ್ಕೆ ಬಂದಿತು. ಅದಕ್ಕೆ ಕಾರಣವೇನೆಂದು ಅವನು ವಿಚಾರಿಸಿದನು. ಅದಕ್ಕೆ ಲೀಸ, ತನ್ನ ನಡತೆ ಅನುಚಿತವೆಂದು ತಾನು ಈಗ ಭಾವಿಸಿರುವುದಾಗಿಯೂ ಅದಕ್ಕಾಗಿ ಪಶ್ಚಾತ್ತಾಪಪಟ್ಟಿರುವುದಾಗಿಯೂ, ಈ ಸಲಕ್ಕೆ ಕೊಟ್ಟ ಮಾತನ್ನು ಮುರಿಯಲು ತಾನು ಇಷ್ಟಪಡಲಿಲ್ಲವೆಂದೂ, ಇದೇ ತಮ್ಮ ಕಡೆಯ ಭೇಟಿಯೆಂದೂ, ಇಬ್ಬರಿಗೂ ಒಳಿತನ್ನುಂಟುಮಾಡದ ಪರಿಚಯವನ್ನು ಮುರಿದು ಬಿಡಬೇಕೆಂದು ತಾನು ಬೇಡಿಕೊಳ್ಳುವುದಾಗಿಯೂ ಅವನಲ್ಲಿ ತನ್ನ ಅಂತರಂಗವನ್ನು ತೆರೆದು ನುಡಿದಳು. ಇದನ್ನೆಲ್ಲಾ ಅವಳು ಹಳ್ಳಿಯ ಭಾಷೆಯಲ್ಲೇನೋ ವ್ಯಕ್ತಪಡಿಸಿದಳು ; ಆದರೆ ಮುಗ್ಧಳಾದ ಹುಡುಗಿಯಲ್ಲಿ ಅಸಾಧಾರಣವೆಂದು ಕಾಣುವ ಆ ಭಾವ ಭಾವನೆಗಳನ್ನು ಕಂಡು ಅಲೆಕ್ಸಿಬೆರಗಾದನು. ಅಕ್ಯುಲಿನ ತನ್ನ ನಿರ್ಧಾರವನ್ನು ಹಿಂದೆಗೆದುಕೊಳ್ಳುವಂತೆ ಮಾಡಲು ಅವನು

ಕುಲುಕೋಟದಲ್ಲಿ ಹೊರಟನು. ಅವನು ಕುರುಚುಕಾಡನ್ನು ಸೇರಿದಾಗ, ಜೀನಿನ ಮೇಲೆ ನಿಮಿರಿ ಕುಳಿತು ಬರುತ್ತಿದ್ದ ತನ್ನ ನೆರೆಯವನನ್ನು ಕಂಡನು ; ಆತ ನರಿಯ ಚರ್ಮದ ಅಸ್ತರಿಕೊಟ್ಟಿದ್ದ ನಡುವಂಗಿ ಧರಿಸಿದ್ದನು ; ತನ್ನ ಜೀತದ ಹೈಕಳು ಕೂಗಾಟಗಳಿಂದಲೂ ರಟರಟಗಿಲಿಕೆ ಸದ್ದಿನಿಂದಲೂ ಮೊಲಗಳನ್ನು ಪೊದೆಗಳಿಂದ ಹೊರಹೊರಡಿಸುತ್ತಿದ್ದು, ಮೊಲ ಕಾಣಿಸಿಕೊಳ್ಳುವುದನ್ನೆ ಕಾಯುತ್ತಿದ್ದನು. ಈ ಅನಿರೀಕ್ಷಿತ ಸಮಾಗಮವನ್ನು ಗ್ರಿಗೋರಿ ಇವಾನೊವಿಚ್ ಮುಂಗಂಡಿದ್ದಿದ್ದರೆ ಅವನು ನಿಸ್ಸಂದೇಹವಾಗಿ ಬೇರೆಯ ದಿಕ್ಕಿಗೆ ತಿರುಗಿಬಿಡುತ್ತಿದ್ದನು; ಆದರೆ ಅವನು ತೀರ ಅನಿರೀಕ್ಷಿತವಾಗಿ ಬೆರಿಸ್ಟಾಫ್‌ನನ್ನು ಸಂಧಿಸಿ, ಅವನಿಂದ ಪಿಸ್ತೂಲು ಗುಂಡು ಹೊಡೆತದಷ್ಟು ದೂರದಲ್ಲಿದ್ದನು. ಆಗ ಏನು ಮಾಡುವುದಕ್ಕೂ ಅವಕಾಶವಿರಲಿಲ್ಲ. ನರನರದಲ್ಲಿಯೂ ಒಬ್ಬ ಸುಸಂಸ್ಕೃತನಾದ ಯೂರೋಪಿಯನ್ ಎನಿಸಿದ್ದ ಮ್ಯುರೊಮ್ಸ್ಕಿ ಕುದುರೆಯ ಮೇಲೆಯ ತನ್ನ ಶತ್ರುವಿನ ಬಳಿ ಸಾರಿ, ಬಹಳ ಮರ್ಯಾದೆಯಿಂದ ಅವನಿಗೆ ಅಭಿವಂದಿಸಿದನು. ಸರಪಣಿಯಿಂದ ಕಟ್ಟಿದ ಕರಡಿ ತನ್ನ ನಾಯಕನ ಅಪ್ಪಣೆಯಂತೆ ಸಭ್ಯರಿಗೆ ತಲೆಬಾಗುವಂತೆ, ಬೆರಿಸ್ಟಾಫ್ ಅಷ್ಟೇ ಸೌಹಾರ್ದದಿಂದ ಪ್ರತಿಯಾಗಿ ನಮಸ್ಕಾರ ಮಾಡಿದನು. ಆ ಹೊತ್ತಿಗೆ ಸರಿಯಾಗಿ ಮೊಲ ಪೊದೆಗುಂಪಲಿನಿಂದ ಹೊರಬಂದು ಬಯಲಾದ ಹೊಲದ ಕಡೆಗೆ ಓಡಿತು. ಬೆರಿಸ್ಟಾಫ್ ಮತ್ತು ಅವನ ಕಾಸ್ತಾರ ಅತ್ಯುಚ್ಚ ಕಂಠದಲ್ಲಿ ಕೂಗು ಹಾಕಿ, ನಾಯಿಗಳನ್ನು ಹಾಸಗಳಚಿ ಬಿಟ್ಟು, ನಾಗಾಲೋದಲ್ಲಿ ಪೂರ್ಣ ವೇಗದಿಂದ ಮೊಲವನ್ನು ಹಿಂಬಾಲಿಸಿದರು. ಮ್ಯುರೊಮ್ಸ್ಕಿಯ ಕುದುರೆಯನ್ನು ಎಂದೂ ಬೇಟೆಗೆ ಉಪಯೋಗಿಸಿರಲಿಲ್ಲ ; ಅದು ಬೆದರಿ, ಹತೋಟಿಗೆ ಮೀರಿ ಓಟ ಕಿತ್ತಿತು. ಸೊಗಸಾದ ಕುದುರೆ ಸವಾರನೆಂದು ತೋರ್ಪಡಿಸಿಕೊಳ್ಳುತ್ತಿದ್ದ ಮ್ಯುರೊಮ್ಸ್ಕಿ ಈ ಅಕಸ್ಮಾತ್ ಘಟನೆಯಿಂದ ತನಗೆ ಹಿತವಲ್ಲದ ಭೇಟಿ ತಾನಾಗಿ ತಪ್ಪದ್ದಕ್ಕಾಗಿ ಒಳಗೊಳಗೇ ಸಂತಸಗೊಂಡು, ಕುದುರೆ ಕಮರಿಯ ಅಂಚಿನ ಹತ್ತಿರಕ್ಕೆ ಧಾವಿಸಿಬಿಟ್ಟಿತ್ತು ; ಆವರೆಗೆ ಅದನ್ನು ಅದು ನೋಡಿರಲಿಲ್ಲ ; ಇದ್ದಕ್ಕಿದ್ದ ಹಾಗೆ ಅದು ಬೆದರಿದಾಗ, ಮ್ಯುರೊಮ್ಸ್ಕಿಗೆ ಜೀನಿನ ಪೀಠದ ಮೇಲೆ ಕುಳ್ಳಿರಲು ಸಾಧ್ಯವಾಗಲಿಲ್ಲ. ಹಿಮ ಬಿದ್ದು ಬಿದ್ದು ಗಟ್ಟಿಯಾದ ನೆಲದ ಮೇಲೆ ಅವನು ಬಲವಾಗಿಯೇ ದೊಪ್ಪನೆ ಕೆಡೆದು, ತನ್ನ ಮೊಂಡು ಬಾಲದ ಕುದುರೆಯನ್ನು ಶಪಿಸುತ್ತ ಅಲ್ಲಿಯೆ ಬಿದ್ದಿದ್ದನು. ಆಗ ಕುದುರೆ ತನ್ನ ಮೇಲೆ ಸವಾರನಿಲ್ಲದುದನ್ನು ಅರಿತುಕೊಂಡು ಕೂಡಲೆ ಜ್ಞಾನೋದಯವಾದ ರೀತಿಯಲ್ಲಿ ತಟ್ಟನೆ ನಿಂತಿತು. ಇವಾನ್ ಪೆಟ್ರೋ ವಿಚ್ ಕುದುರೆಯನ್ನು ನಾಗಾಲೋಟದಲ್ಲಿ ಬಿಟ್ಟುಕೊಂಡು

ಇತರರಿಗಾಗಿ ಅಲ್ಲದೆ ಕೇವಲ ಆತ್ಮ ಸಂತೋಷಾರ್ಥವಾಗಿ ಆಗಿದ್ದ ಪಕ್ಷದಲ್ಲಿ, ಈಗ ನಾನು ಆ ತರುಣ ತರುಣಿಯರ ಪ್ರಣಯಕ್ರೀಡೆ, ದಿನ ದಿನಕ್ಕೆ ಹೆಚ್ಚುತ್ತಿದ್ದ ಅವರ ಕೆಲಸ ಕಾರ್ಯಗಳು, ಅವರ ಮಾತುಕತೆ ಇವುಗಳ ವಿವಶಪೂರ್ಣವಾದ ವರ್ಣನೆಗೆ ತೊಡಗುತ್ತಿದ್ದ ; ಆದರೆ ನನ್ನ ಓದುಗರಲ್ಲಿ ಬಹುಮಂದಿ ನನ್ನ ಆ ಸಂತೋಷದಲ್ಲಿ ಪಾಲುಗೊಳ್ಳಲಿಚ್ಚಪಡುವುದಿಲ್ಲವೆಂಬುದನ್ನು ಬಲ್ಲೆ. ಅಂಥ ವಿವರಗಳು ಸಪ್ಪೆಯಾಗಿ ಕಂಡಾವು ; ಆದ್ದರಿಂದ ಅವನ್ನೆಲ್ಲ ಬಿಟ್ಟುಬಿಟ್ಟು, ಎರಡು ತಿಂಗಳು ಕಳೆಯುವಷ್ಟರಲ್ಲಿ ನಮ್ಮ ಅಲೆಕ್ಸಿ ಸಂಪೂರ್ಣವಾಗಿ ಪ್ರೇಮದಲ್ಲಿ ಮುಳುಗಿ ಬಿಟ್ಟಿದ್ದನು. ಬಾಹ್ಯ ಪ್ರದರ್ಶನ ಕಡಮೆಯಾದರೂ ಲೀಸ ಅಷ್ಟೇ ಪ್ರೇಮ ನಿಮಗ್ನಳಾಗಿದ್ದಳು ಎಂದಿಷ್ಟು ಮಾತ್ರ ಹೇಳಿಬಿಡುತ್ತೇನೆ. ಅವರಿಬ್ಬರೂ ಸದ್ಯದ ಸುಖದಲ್ಲಿ ನಲಿದರು; ಭವಿಷ್ಯದ ಕಡೆಗೆ ಸ್ವಲ್ಪವೂ ಗಮನ ಕೊಡಲಿಲ್ಲ.

ಹರಿಯಲಾಗದ ಬಂಧನದ ಆಲೋಚನೆಯೂ ಆಗಾಗ್ಗೆ ಅವರ ಮನಸ್ಸಿನಲ್ಲಿ ಹಾದುಹೋಯಿತು ; ಆದರೆ ಈ ವಿಚಾರವಾಗಿ ಅವರು ಒಬ್ಬರೊಡನೊಬ್ಬರು ಮಾತಾಡಲಿಲ್ಲ. ಇದಕ್ಕೆ ಕಾರಣವನ್ನು ದೂರ ಅರಸಬೇಕಾಗಿಲ್ಲ ; ಅಲೆಕ್ಸಿ ತನ್ನ ಪ್ರಿಯೆ ಅಕ್ಯುಲಿನಳಲ್ಲಿ ಅನುರಕ್ತನಾಗಿದ್ದರೂ, ತನಗೂ ಬಡ ರೈತರ ಹುಡುಗಿಗೂ ನಡುವೆ ಇದ್ದ ಅಂತರವನ್ನು ಪೂರ್ಣವಾಗಿ ಅರಿತಿದ್ದನು. ಇತ್ತ, ತಮ್ಮ ತಂದೆಗಳ ನಡುವೆ ಇದ್ದ ಹಗೆತನವನ್ನು ಬಲ್ಲ ಲೀಸ ಅವರಿಬ್ಬರ ನಡುವೆ ಮೈತ್ರಿ ಏರ್ಪಡುವುದೆಂದು ಆಶೆಯಿಟ್ಟುಕೊಳ್ಳುವ ಧೈರ್ಯ ಮಾಡಲಿಲ್ಲ. ಇದಕ್ಕಿಂತ ಹೆಚ್ಚಾಗಿ, ಟ್ಯುಗಿಲೋವೋದ ಉತ್ತರಾಧಿಕಾರಿ ಪ್ರಿಲುಚೀನೋ ಕಮ್ಮಾರನ ಮಗಳ ಅಡಿಗೆರಗುವ ದೃಶ್ಯವನ್ನು ಕಡೆಗೊಮ್ಮೆ ಕಾಣಬಹುದೆಂಬ ಅಸ್ಪಷ್ಟವಾದ ರಮ್ಯಭಾವನೆಯೊಂದು ಅವಳ ಅಂತರಂಗದ ಅಭಿಮಾನವನ್ನು ರಹಸ್ಯವಾಗಿ ಕೆಣಕಿ ಕುಣಿಸುತ್ತಿತ್ತು, ತಣಿಸುತ್ತಿತ್ತು. ಹೀಗಿರಲಿಲ್ಲ, ಒಂದು ಮುಖ್ಯ ಘಟನೆ ನಡೆದು, ಒಬ್ಬರ ದೃಷ್ಟಿಯಲ್ಲಿ ಇನ್ನೊಬ್ಬರ ಸ್ಥಾನಮಾನವನ್ನು ಮಾರ್ಪಡಿಸಲನುವಾಯಿತು.

ಒಂದು ಸೊಗಸಾದ ಚಳಿಯಾದ ಪ್ರಾತಃಕಾಲ (ನಮ್ಮ ರಷ್ಯದಲ್ಲಿ ಶರತ್ಕಾಲದಲ್ಲಿ ಸಾಮಾನ್ಯವಾದಂಥ ಪ್ರಾತಃಕಾಲ), ಇವಾನ್ ಪೆಟ್ರೋವಿಚ್ ಬೆರಿಸ್ಟಾಫ್ ಕುದುರೆ ಸವಾರಿಗೆ ಹೊರಟನು. ಅಕಸ್ಮಾತ್ ಏನಾದರೂ ಪ್ರಾಣಿ ಕಾಣಿಸಿಕೊಂಡರೆ ಸಮಯಕ್ಕಿರಲೆಂದು ತನ್ನೊಂದಿಗೆ ಐದಾರು ಬೇಟೆಯ ನಾಯಿಗಳನ್ನೂ ಕಾಸ್ತಾರನನ್ನೂ ರಟರಟಗಿಲಿಕೆ ತಿರುಗಿಸಲು ಕೆಲವು ಜೀತಗೆಲಸದ ಹುಡುಗರನ್ನೂ ಕಾಸ್ತಾರನನ್ನೂ ಮ್ಯುರೊಮ್ಸ್ಕಿ ಸೊಗಸಾದ ಹವಾಗುಣದಿಂದ ಆಕರ್ಷಿತನಾಗಿ ತನ್ನ ಹೆಂಗುದುರೆಗೆ ಜೀನುಹಾಕಿಸಿ, ತನ್ನ ಆಂಗ್ಲೀಕೃತ ಜಮೀನಿನಲ್ಲಿ

ಇವಾನೋವಿಚ್ ಅವಳಿಗೆ ಹೇಳಿದನು. ಅವಳು ವಿವರ್ಣಳಾಗಿ ಉದ್ಗಾರ ತೆಗೆದಳು: "ಏನು ! ಬೆರಿಸ್ಟಾಫ್‌ರು–ತಂದೆ ಮತ್ತು ಮಗ? ನಾಳೆ ನಮ್ಮೊಂದಿಗೆ ಊಟಮಾಡುತ್ತಾರೆಯೇ ! ಅಪ್ಪಾ, ನಿನ್ನ ಇಷ್ಟ ಬಂದ ಹಾಗೆ ನೀನು ಮಾಡು, ಆದರೆ ನಾನು ಮಾತ್ರ ಆಗ ಕಾಣಿಸಿಕೊಳ್ಳಲಾರೆ." ಅವಳ ತಂದೆಯೂ ಅಚ್ಚರಿಗೊಂಡು ಕೇಳಿದನು : "ನಿನಗೇನು ಹುಚ್ಚೋ ? ಇದ್ದಕ್ಕಿದ್ದ ಹಾಗೆ ಇಷ್ಟೊಂದು ನಾಚಿಕೆ ಪಡಲು ಕಾರಣ ಏನು? ಕಾದಂಬರಿಯ ಕಥಾನಾಯಕಿಯಂತೆ, ಅವನನ್ನು ಕಂಡರೆ ನಿನಗೆ ವಂಶಾನುಗತವಾದ ದ್ವೇಷವೇ? ಈ ಅವಿವೇಕ ಇನ್ನು ಸಾಕು...." "ಇಲ್ಲ ಅಪ್ಪಾ, ಖಂಡಿತ ಸಾಧ್ಯವಿಲ್ಲ. ಪ್ರಪಂಚದಲ್ಲಿರುವ ಯಾವುದೇ ವಸ್ತುವನ್ನು ತಂದುಕೊಟ್ಟರೂ ಬೆರಿಸ್ಟಾಫರ ಮುಂದೆ ನಾನು ಕಾಣಿಸಿಕೊಳ್ಳಲಾರೆ!" ಎಂದುಬಿಟ್ಟಳು ಅವಳು. ಅವಳನ್ನು ವಿರೋಧಿಸುವುದರಿಂದ ಏನೂ ಪ್ರಯೋಜನವಿಲ್ಲವೆಂಬುದನ್ನು ಬಲ್ಲ ಗ್ರಿಗೊರಿ ಇವಾನೊವಿಚ್ ತನ್ನ ಹೆಗಲನ್ನು ಹಾರಿಸಿ, ವಾದಿಸುವುದನ್ನು ಬಿಟುಬಿಟ್ಟು, ತನ್ನ ಸ್ಮರಣೀಯವಾದ ಸವಾರಿಯನಂತರ ವಿಶ್ರಾಂತಿ ತೆಗೆದುಕೊಳ್ಳಲು ಹೊರಟನು.

ಲಿಸವೀಟ ಗ್ರಿಗೊರ್ಯೆವ್ನ ತನ್ನ ಕೋಣೆಗೆ ಹೋಗಿ, ನಾಸ್ತ್ಯಳನ್ನು ತನ್ನ ಬಳಿಗೆ ಕರೆದಳು. ಮಾರನೆಯ ದಿನದ ಭೇಟಿಯ ವಿಚಾರವಾಗಿ ಇಬ್ಬರೂ ದೀರ್ಘವಾದ ಸಮಾಲೋಚನೆ ನಡಸಿದರು. ಅಲ್ಲ, ಈ ಸುಶಿಕ್ಷಿತ ತರುಣಿಯೆ ತನ್ನ ಅಕ್ಯುಲಿನ ಎಂದು ಅಲೆಕ್ಸಿ ಗುರುತಿಸಿದಾಗ ಅವನು ಏನು ಬಗೆಯಬಹುದು? ತನ್ನ ನಡವಳಿ, ತನ್ನ ನೀತಿನಿಯಮ, ತನ್ನ ವಿವೇಕ–ಇವುಗಳ ಬಗ್ಗೆ ಅವನು ಏನು ಅಭಿಪ್ರಾಯ ಪಡಬಹುದು? ಇಷ್ಟರ ಜೊತೆಗೆ ಅಷ್ಟು ಅನಿರೀಕ್ಷಿತ ಬೇಟಿಯಾದಾಗ ಅವನ ಮೇಲೆ ತಾನು ಏನು ಪರಿಣಾಮ ಬೀರಬಹುದೆಂಬುದನ್ನು ತಿಳಿಯಲೂ ಅವಳು ಅತ್ಯಂತ ಕುತೂಹಲಗೊಂಡಿದ್ದಳು. ತಟ್ಟನೆ ಅವಳಿಗೆ ಒಂದು ಸೊಗಸಾದ ಆಲೋಚನೆ ಹೊಳೆಯಿತು. ತತ್‌ಕ್ಷಣವೇ ಅದನ್ನವಳು ನಾಸ್ತ್ಯಳಿಗೆ ತಿಳಿಸಿದಳು. ಆ ಆಲೋಚನೆಯಿಂದ ಇಬ್ಬರೂ ಹಿಗ್ಗಿದರು ; ಏನೇ ಆಗಲಿ ಅದನ್ನು ಕಾರ್ಯ ರೂಪಕ್ಕೆ ತರಲು ನಿಶ್ಚಯಿಸಿದರು.

ಮಾರನೆಯ ಪ್ರಾತಃಕಾಲ ಉಪಾಹಾರ ತೆಗೆದುಕೊಳ್ಳುವಾಗ, ಬೆರಿಸ್ಟಾಫ್‌ರು ಬಂದಾಗ ಕಣ್ಮರೆಯಾಗಿರಬೇಕೆಂದು ಇನ್ನೂ ಉದ್ದೇಶ ಪಟ್ಟಿರುವಳೇ ಎಂದು ಗ್ರಿಗೊರಿ ಇವಾನೊವಿಚ್ ತನ್ನಮಗಳನ್ನು ಕೇಳಿದನು. "ಅಪ್ಪಾ, ನೀನು ಅಪೇಕ್ಷೆಪಟ್ಟರೆ ಅವರನ್ನು ನಾನು ಬರಮಾಡಿಕೊಳ್ಳುತ್ತೇನೆ. ಆದರೆ ಒಂದು ಕರಾರರು : ನಾನು ಅವರ ಮುಂದೆ ಯಾವ ಬಗೆಯ ಉಡುಪು ಧರಿಸಿ ಬರಲಿ, ನಾನು ಏನೇ

ಹೋಗಿ, ಗಾಸಿಯಾಯಿತೆ ಎಂದು ಗ್ರಿಗೋರಿ ಇವಾನೊವಿಚ್‌ನನ್ನು ಕೇಳಿದನು. ಈ ನಡುವೆಯಲ್ಲಿ, ಕಾಸ್ತಾರನು ತಪ್ಪಿಸಿಗಿದ್ದ ಕುದುರೆಯನ್ನು ಹಿಂದಕ್ಕೆ ಕರೆದುಕೊಂಡು ಬಂದು, ಅದರ ಕಡಿವಾಣವನ್ನು ಹಿಡಿದು ನಿಂತಿದ್ದನು. ಮ್ಯುರೊಮ್ಸ್ಕಿ ಕುದುರೆಯೇರಲು ಅವನು ನೆರವಾದನು ; ಬೆರಿಸ್ಟಾಫ಼್ ಮ್ಯುರೊಮ್ಸ್ಕಿಯನ್ನು ತನ್ನ ಮನೆಗೆ ಬರುವಂತೆ ಆಹ್ವಾನಿಸಿದನು. ಮ್ಯುರೊಮ್ಸ್ಕಿ ಆಹ್ವಾನವನ್ನು ಒಪ್ಪಿಕೊಳ್ಳದೆ ಇರಲಾಗಲಿಲ್ಲ. ಈ ಪ್ರಕಾರದಲ್ಲಿ, ಬೆರಿಸ್ಟಾಫ್ ಒಂದು ಮೊಲವನ್ನು ಹಿಡಿದು, ಗಾಸಿಗೊಂಡು ಬಹುಮಟ್ಟಿಗೆ ಯುದ್ಧದ ಕೈದಿಯಂತಾಗಿದ್ದ ತನ್ನ ಶತ್ರುವನ್ನೂ ಜೊತೆಯಲ್ಲಿ ಕರೆದುಕೊಂಡು ವಿಜಯಶಾಲಿಯಾಗಿ ಮನೆಗೆ ಹಿಂದಿರುಗಿದನು.

ಪ್ರಾತಃಕಾಲದ ಉಪಾಹಾರವನ್ನು ತೆಗದುಕೊಳ್ಳುತ್ತ ಇಬ್ಬರು ನೆರೆಯವರೂ ಪೂರ್ಣ ಮೈತ್ರೀಭಾವದಿಂದ ಸಂಭಾಷಿಸುತ್ತಿದ್ದರು. ಮ್ಯುರೊಮ್ಸ್ಕಿ ತಾನು ಪಟ್ಟ ಗಾಸಿಯ ಪರಿಣಾಮವಾಗಿ ತನ್ನ ಹೆಂಗುದುರೆಯ ಮೇಲೆ ಕುಳಿತು ಹಿಂದಿರುಗುವುದಕ್ಕೆ ಅಸಮರ್ಥನಾಗಿರುವುದಾಗಿ ಒಪ್ಪಿಕೊಂಡು, ಒಂದು ಗಾಡಿಯನ್ನು ಕೊಡಬೇಕೆಂದು ಬೆರಿಸ್ಟಾಫ್‌ನನ್ನು ಕೇಳಿಕೊಂಡನು. ಬೆರಿಸ್ಟಾಫ್ ಬಾಗಿಲವರೆಗೂ ಅವನನ್ನು ಬಿಟ್ಟುಬರಲು ಜೊತೆಯಲ್ಲಿ ಹೋದನು ; ಮಾರನೆಯ ದಿನವೇ ಬೆರಿಸ್ಟಾಫ್ ಅಲೆಕ್ಸಿ ಇವಾನೊವಿಚ್‌ನೊಂದಿಗೆ ಬಂದು ತಮ್ಮ ಮನೆಯ ಅಲ್ಪಾತಿಥ್ಯವನ್ನು ಸ್ವೀಕರಿಸುವುದಾಗಿ ತನ್ನ ಗೌರವದ ಮೇಲೆ ಆಣೆಯಿಟ್ಟು ಮಾತುಕೊಡುವವರೆಗೂ ಮ್ಯುರೊಮ್ಸ್ಕಿ ಅಲ್ಲಿಂದ ಬಿಟ್ಟು ಹೊರಡಲೇ ಇಲ್ಲ. ಈ ರೀತಿ ಮೊಂಡುಬಾಲದ ಹೆಂಗುದುರೆಯ ಬೆದರಿಕೆಯ ದೆಸೆಯಿಂದ ಹಳೆಯದಾದ, ಆಳವಾಗಿ ಬೇರೂರಿದ ಹಗೆತನ ಕೊನೆಗೊಳ್ಳುವ ಸೂಚನೆ ಕಂಡುಬರುವಂತಾಯಿತು.

ಲೀಸ ಗ್ರೀಗೊರಿ ಇವಾನೊವಿಚ್‌ನನ್ನು ಎದುರುಗೊಳ್ಳಲು ಹೊರಕ್ಕೆ ಓಡಿಬಂದಳು. "ಅಪ್ಪಾ, ಏನು ಸಮಾಚಾರ? ಯಾಕೆ ಕುಂಟುತ್ತಾ ಇದೀಯಲ್ಲ? ನಿನ್ನ ಕುದುರೆ ಎಲ್ಲಿ? ಆ ಬಂಡಿಯಾರದ್ದು ?" ಎಂದು ಅವಳು ಬೆರಗಾಗಿ ಕೇಳಿದಳು. "ನೀನು ಊಹಿಸಲೂ ಆರೆ, ನನ್ನ ಮುದ್ದುಗುವರಿ (My dear)" ಎಂದು ಗ್ರಿಗೊರಿ ಇವಾನೊವಿಚ್ ಉತ್ತರ ಕೊಟ್ಟನು. ಆಂಗ್ಲ ಸಂಬೋಧನಾ ಕ್ರಮವನ್ನು ಅನುಸರಿಸುವುದೆಂದರೆ ಅವನಿಗೆ ಇಷ್ಟ. ನಡೆದ ಘಟನೆಯೆಲ್ಲವನ್ನೂ ಅವನು ಅವಳಿಗೆ ವಿವರಿಸಿ ಹೇಳಿದನು. ಲೀಸ ತನ್ನ ಕಿವಿಗಳನ್ನೇ ನಂಬಲಾರದೆ ಹೋದಳು. ಅವಳು ತನ್ನ ಬೆರಗಿನ ಭಾವದಿಂದ ಚೇತರಿಸಿಕೊಳ್ಳುವುದಕ್ಕೂ ಅವಕಾಶ ಕೊಡದ ಹಾಗೆ, ಮಾರನೆಯ ದಿನ ಇಬ್ಬರು ಬೆರಿಸ್ಟಾಫ್‌ರೂ (ತಂದೆ ಮತ್ತು ಮಗ) ತಮ್ಮ ಮನೆಗೆ ಊಟಕ್ಕೆ ಬರಲಿರುವರೆಂದು ಗ್ರಿಗೊರಿ

ಹೇಗೆ ನಿರ್ವಹಿಸಿಬೇಕೆಂಬ ಪರಿಭಾವನೆಯಲ್ಲಿ ಅಲೆಕ್ಸಿ ಉದ್ಯುಕ್ತನಾಗಿದ್ದನು. ಬಿಂಕ ಬೆರೆತ ಔದಾಸೀನ್ಯ ಭಾವವೇ ತಕ್ಕದ್ದೆಂದು ನಿಶ್ಚಯಿಸಿ, ಅದಕ್ಕನುಗುಣವಾಗಿ ಅವನು ಸಿದ್ಧನಾಗುತ್ತಿದ್ದನು. ಬಾಗಿಲು ತೆರೆಯಿತು ; ಅವನು ಔದಾಸೀನ್ಯದಿಂದಲೂ ಅಪಾರ ತಿರಸ್ಕಾರ ಭಾರದಿಂದಲೂ ತನ್ನ ತಲೆಯನ್ನೂ ತಿರುಗಿಸಿದನು ; ಆ ಭಂಗಿಯಿಂದ ಎಂಥ ಕಡು ಬಿನ್ನಾಣಗಾತಿಯ ಹೃದಯವೂ ತುಡಿಯಬೇಕು. ಅವನ ದುರ ದೃಷ್ಟಕ್ಕೆ, ಬಂದವಳು ಲೀಸ ಅಲ್ಲ, ಮಿಸ್ ಜ್ಯಾಕ್ಸನ್ ; ಎಂದಿನಂತೆ ಅವಳು ಪೌಡರ್ ಹಾಕಿಕೊಂಡಿದ್ದಳು, ಗುತ್ತನೆಯ ಕುಪ್ಪಸ ತೊಟ್ಟಿದ್ದಳು ; ಕೋಣೆಗೆ ಪ್ರವೇಶಿಸಿದವಳೇ ಗೌರವ ಸೂಚಿಸಲು ನಡು ಬಗ್ಗಿಸಿದಳು. ಹೀಗಾಗಿ, ಅಲೆಕ್ಸಿಯ ಮಹಾ ಸೈನಿಕ ಆಕ್ರಮಣ ತಂತ್ರವೆಲ್ಲ ವ್ಯರ್ಥವಾಗಿ ಹೋಯಿತು. ಅವನು ಎಚ್ಚರಗೊಳ್ಳುತ್ತಿರುವಷ್ಟರಲ್ಲಿಯೇ ಮರಳಿ ಬಾಗಿಲು ತೆರೆಯಿತು ; ಈ ಸಲ ಲೀಸ ಕೋಣೆಯೊಳಕ್ಕೆ ಬಂದಳು. ಎಲ್ಲರೂ ಎದ್ದು ನಿಂತರು ; ಅತಿಥಿಗಳನ್ನು ಇನ್ನೇನು ಪರಿಚಯಮಾಡಿ ಕೊಡುವುದರಲ್ಲಿದ್ದ ತಂದೆ ತಟ್ಟನೆ ತಡೆದು ನಿಂತು, ಅವಸರದಿಂದ ಅವುಡುಗಚ್ಚಿದನು....ಲೀಸ, ಅವನ ಅವ್ಯಕ್ತ ಸುಂದರಾಕೃತಿಯ ಲೀಸ, ಮಿಸ್ ಜಾಕ್ಸನ್ನಳನ್ನು ಮೀರಿಸುವ ರೀತಿಯಲ್ಲಿ ಕಿವಿಯವರೆಗೂ ಪೌಡರ್ ಮೆತ್ತಿಕೊಂಡಿದ್ದಳು; ಅವಳ ಸ್ವಂಯ ಕೂದಳಿಗಿಂತ ಸೊಗಸಾದ ಕೃತಕ ಕೇಶ ಕಲಾಪವು ಅವಳ ತಲೆಯ ಮೇಲೆ ಗುಂಗುರು ಮೆರೆಯುತ್ತಿತ್ತು. ತೋಳುಗಳು ಮುಂದಕ್ಕೆ ಹಾಯ್ದು ನೆಟ್ಟಗೆ ನಿಂತಿದ್ದುವು ; ಅವಳ ದೇಹಾಕೃತಿ X (ಎಕ್ಸ್) ಅಕ್ಷರದಂತೆ ಕಾಣುವ ರೀತಿಯಲ್ಲಿ ಅಲಂಕಾರದ ಪಟ್ಟಿಗಳು ಅವಳ ಉಡುಪನ್ನಲಂಕರಿಸಿದ್ದುವು ; ಇನ್ನೂ ಒತ್ತೆಯಿಟ್ಟಿಲ್ಲದಿದ್ದ ಅವಳ ತಾಯಿಯ ವಜ್ರದ ಒಡವೆಗಳೆಲ್ಲ ಅವಳ ಬೆರಳು, ಕೊರಳು, ಕಿವಿಗಳನ್ನಂಲಕರಿಸಿದ್ದುವು. ಈ ಜಾಜ್ವಲ್ಯಮಾನಳಾದ ಹಾಸ್ಯಾಸ್ಪದ ಸ್ತ್ರೀ ವ್ಯಕ್ತಿಯಲ್ಲಿ ಅಲೆಕ್ಸಿ ತನ್ನ ಅಕ್ಯುಲಿನಳನ್ನು ಗುರುತಿಸಲು ಸಾಧ್ಯವೇ ಇರಲಿಲ್ಲ. ಅವನ ತಂದೆ ಅವಳ ಕೈಯನ್ನು ಮುತ್ತಿಡಲು ಮೇಲೆದ್ದನು ; ಅಲೆಕ್ಸಿ ಇಷ್ಟವಿಲ್ಲದೆ ಆತನ ಮೇಲ್ಪಂಕ್ತಿಯನ್ನು ಅನುಸರಿಸಿದನು. ಅವನ ತುಟಿಗಳು ಅವಳ ಕೋಮಲಾಂಗುಲಿಗಳನ್ನು ಸವರಿಕೊಂಡು ಹೋದಾಗ ಅವು ಕೊಂಚ ಮಾತ್ರ ಕಂಪಿಸಿದಂತೆ ಅವನಿಗೆ ತೋರಿತು. ಅದೇ ವೇಳೆಯಲ್ಲಿ ಸಣ್ಣ ಪಾದವೊಂದನ್ನು ಅವನು ಗಮನಿಸಿದನು ; ಥಳಕು ಪಳಕು ಬೆಡಗಿನ ಪಾದರಕ್ಷೆಯನ್ನು ಮೆರೆಸಲೆಂದೇ ಆ ಪಾದವನ್ನು ಮುಂಚಾಚಿದ್ದುದು ಸುಸ್ಪಷ್ಟವಾಗಿತ್ತು. ಇದನ್ನು ನೋಡಿದ ಮೇಲೆ ಅವಳ ಉಳಿದ ವೇಷಭೂಷಣಗಳ ವಿಚಾರದಲ್ಲಿಯೂ ಅವನು ಹೇಗೋ ಮನ ಸ್ಸಮಾಧಾನವನ್ನು ತಂದುಕೊಂಡನು. ಇನ್ನು ಪೌಡರ್ ಮತ್ತು ಬಣ್ಣ : ಸರಳ

ಮಾಡಲಿ, ನೀನು ನನ್ನನ್ನು ನಿಂದಿಸಕೂಡದು ; ಸ್ವಲ್ಪವಾದರೂ ಬೆರಗಿನ ಇಲ್ಲವೆ ಅಸಮಧಾನದ ಸೂಚನೆ ತೋರಿಸಕೂಡದು, ತಿಳಿಯಿತೆ?" ಎಂದು ಲೀಸ ಉತ್ತರಕೊಟ್ಟಳು. ಅದಕ್ಕೆ ಗ್ರಿಗೊರಿ ಇವಾ ನೋವಿಚ್ ನಗುತ್ತ, "ಮತ್ತೆ ನಿನ್ನ ಹುಡುಗಾಟಕ್ಕೆ ತೊಡಗಿದೆ ! ಆಗಲಿ, ನೀನು ಹೇಳಿದಕ್ಕೆ ಒಪ್ಪಿದೆ. ನನ್ನ ಕಪ್ಪುಕಣ್ಣಿನ ಹುಚ್ಚುಹುಡುಗಿ, ನಿನ್ನ ಇಷ್ಟವಿದ್ದಂತಾಗಲಿ!" ಎಂದನು. ಈ ಮಾತುಗಳನ್ನಾಡಿ, ಅವನು ಅವಳ ಹುಬ್ಬಿನ ಮೇಲೆ ಮುತ್ತಿಟ್ಟನು ; ಲೀಸ ತನ್ನ ಸಿದ್ಧತೆಗಳನ್ನು ಮಾಡಿಕೊಳ್ಳುವುದಕ್ಕಾಗಿ ಓಡಿಹೋದಳು.

ಎರಡು ಗಂಟೆಗೆ ಸರಿಯಾಗಿ ಆರು ಕುದುರೆ ಕಟ್ಟಿದ, ಮನೆಯಲ್ಲಿ ನಿರ್ಮಾಣಮಾಡಿದ ಗಾಡಿಯೊಂದೂ ಮನೆಯ ಮುಂದಿನ ದುಂಡನೆಯ ಹಸುರು ಹಸಲೆಯನ್ನು ಬಳಸಿಕೊಂಡು ವಾಹನ ಸಂಚಾರದ ಮಾರ್ಗದಲ್ಲಿ ಬಂದು ನಿಂತಿತು. ಹಿರಿಯ ಬೆರಿಸ್ಟಾಫ್ ಮ್ಯುರೋಮ್ಸ್ಕಿಯ ಇಬ್ಬರು ಡವಾಲಿಯ ಜವಾನರ ಕೈನೆರವು ಪಡೆದು ಮುಖಮಂಟಪದ ಮೆಟ್ಟಲುಗಳನ್ನು ಹತ್ತಿದನು. ಅವನ ಮಗ ಅವನ ಹಿಂದೆಯೇ ಕುದುರೆಯೇರಿ ಬಂದು, ಊಟದ ಕೋಣೆಗೆ ಜೊತೆಯಲ್ಲಿಯೇ ಹೋದನು ; ಅಲ್ಲಿ ಮೇಜಿನ ಮೇಲೆ ಊಟಬಡಿಸಿ ಸಿದ್ಧವಾಗಿತ್ತು. ಮ್ಯುರೋಮ್ಸ್ಕಿ ತನ್ನ ಅತಿಥಿಗಳನ್ನು ಅತ್ಯಂತ ಆದರದಿಂದ ಸ್ವಾಗತಿಸಿ, ಊಟಕ್ಕೆ ಮೊದಲೇ ತನ್ನ ಉದ್ಯಾನವನ್ನೂ ಪ್ರಾಣಿಸಂಗ್ರಹಗಳನ್ನೂ ಪರಿಶೀಲಿಸುವಂತೆ ಆಹ್ವಾನಿಸಿ, ಚೆನ್ನಾಗಿ ಗುಡಿಸಿದ ಜಲ್ಲಿಹಾಕಿ ಗಟ್ಟಿಣೆಮಾಡಿದ ಮಾರ್ಗಗಳಲ್ಲಿ ಅವರನ್ನು ಕರೆದೊಯ್ದನು. ಅಂಥ ನಿಷ್ಪ್ರಯೋಜಕ 'ಖಯಾಲಿ'ಗಳಿಗಾಗಿ ಕಾಲ ಮತ್ತು ಶ್ರಮ ಅಪವ್ಯಯವಾಗಿರುವುದೆಂದು ವೃದ್ಧ ಬೆರಿಸ್ಟಾಫ್ ಒಳಗೊಳಗೇ ವ್ಯಸನಪಟ್ಟರೂ, ಮರ್ಯಾದೆಗೋಸ್ಕರ ಮೌನವಾಗಿದ್ದನು. ಅವನ ಮಗನಾದರೋ ಮಿತವ್ಯಯದ ಜಮೀನುದಾರನ ಅಸಮ್ಮತಿಯಲ್ಲಾಗಲಿ ಸ್ವಸಂತುಷ್ಟ ಆಂಗ್ಲವ್ಯಾಮೋಹಿಯ ಉತ್ಸಾಹದಲ್ಲಾಗಲಿ ಪಾಲುಗೊಳ್ಳಲಿಲ್ಲ. ಅವನು ಆತಿಥೇಯನ ಪುತ್ರಿಯ ಸಂದರ್ಶನಕ್ಕಾಗಿ ಹಾತೊರೆಯುತ್ತಿದ್ದನು; ಏಕೆಂದರೆ ಅವಳ ವಿಚಾರವಾಗಿ ಅವನು ಬಹಳವಾಗಿ ಕೇಳಿ ತಿಳಿದಿದ್ದನು. ನಾನು ಬಲ್ಲಂತೆ ಆತನ ಹೃದಯದೊಲವು ಬೇರೊಂದು ಕಡೆಗೆ ಮೀಸಲಾಗಿದ್ದರೂ, ಚೆಲುವೆಯಾದ ತರುಣಿ ಯಾವಾಗಲೂ ಅವನ ಭಾವನಾ ಶಕ್ತಿಯನ್ನು ಪ್ರಚೋದಿಸುತ್ತಿದ್ದಳು.

ಮೂರು ಮಂದಿಯೂ ಭೇಟಿಯ ಕೋಣೆಗೆ ಹಿಂದಿರುಗಿ ಕುಳಿತುಕೊಂಡರು. ಹಿರಿಯರಿಬ್ಬರೂ ಹಿಂದಿನ ದಿನಗಳನ್ನು ನೆನೆಯುತ್ತ, ಸೈನಿಕ ಜೀವನದ ಕಥೆಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡರು. ಲೀಸಳ ಸಮ್ಮುಖದಲ್ಲಿ ತನ್ನ ಪಾತ್ರವನ್ನು

ಪೌಡರ್ ಉಪಯೋಗಿಸಲು ಮೊದಲು ಮಾಡಿಬಿಡುತ್ತಿದ್ದೆ. ಅಂದಮಾತ್ರಕ್ಕೆ, ಅತಿಯಾಗಿ ಅಲ್ಲ ; ಕೊಂಚ ಕೊಂಚ, ಅಷ್ಟೆ" ಎಂದು ಅವನು ಲೀಸಳನ್ನು ಕುರಿತು ಹೇಳಿದನು. ತನ್ನ ಆಲೋಚನೆ ಫಲಿಸಿದ್ದನ್ನು ಕಂಡು ಲೀಸಳಿಗೆ ಸೊಗಸೆನಿಸಿತು. ಅವಳು ತನ್ನ ತಂದೆಯ ಕೊರಳ ಸುತ್ತ ತನ್ನ ತೋಳುಗಳನ್ನು ಬೀಸಿ ಎಸೆದಳು, ಅವನ 'ಸಲಹೆ ಕುರಿತು ವಿಚಾರ ಮಾಡುವುದಾಗ ಮಾತುಕೊಟ್ಟಳು; ಬಳಿಕ, ಕೆರಳಿ ಕ್ರುದ್ಧಳಾಗಿದ್ದ ಮಿಸ್ ಜ್ಯಾಕ್‌ಸನ್ನಳನ್ನು ಸಮಾಧಾನ ಗೊಳಿಸಲು ಓಡಿದಳು. ಅವಳು ಕೋಣೆಯ ಬಾಗಿಲು ತೆರೆದು, ತನ್ನ ಸಮಾಧಾನ ವಾಕ್ಯಗಳಿಗೆ ಕಿವಿಗೊಡುವಂತೆ ಮಾಡುವುದು ಲೀಸಳಿಗೆ ಪ್ರಯಾಸವೇ ಆಯಿತು. ಪರಿಚಯವಿಲ್ಲದವರ ಎದುರಿನಲ್ಲಿ ತನ್ನ ಶ್ಯಾಮವರ್ಣದ ಚರ್ಮವನ್ನು ತೋರಗೊಡುವುದಕ್ಕೆ ತನಗೆ ನಾಚಿಕೆಯಾಯಿತೆಂದು ಲೀಸ ಅವಳಿಗೆ ವಿವರಿಸಿದಳೂ; ಒಂದು ಮಾತು ಕೇಳುವುದಕ್ಕೆ ತನಗೆ ಧೈರ್ಯವಾಗಿರಲಿಲ್ಲ.... ಆದರೆ, ತನ್ನ ಪ್ರೀತಿಪಾತ್ರಳಾದ ಒಳ್ಳೆಯವಳಾದ ಮಿಸ್ ಜ್ಯಾಕ್‌ಸನ್ ತನ್ನನ್ನು ಕ್ಷಮಿಸುವಳೆಂದು ತನಗೆ ಪೂರ್ಣ ಭರವಸೆಯಿದೆ..ಇತ್ಯಾದಿ, ಇತ್ಯಾದಿ. ತನ್ನನ್ನು ಗೇಲಿಮಾಡುವುದು ಲೀಸಳ ಉದ್ದೇಶವಲ್ಲವೆಂದು ಮಿಸ್ ಜ್ಯಾಕ್ಸನ್ನಿಗೆ ನಂಬಿಕೆಯಾದಾಗ, ಅವಳು ಸಮಾಧಾನಗೊಂಡಳು ; ಲೀಸಳನ್ನು ಮುದ್ದಿಟ್ಟಳು ; ರಾಜಿಯಾದುದರ ಗುರುತಾಗಿ ಅವಳಿಗೆ ಒಂದು ಜಾಡಿ ತುಂಬ ಇಂಗ್ಲಿಷ್ ತಯಾರಿಕೆಯ ಬಿಳಿಯ ಪೌಡರ್ ಕೊಟ್ಟಳು. ಲೀಸ ಮುನಃಪೂರ್ವಕವಾದ ಕೃತಜ್ಞತೆಯಿಂದ ಅದನ್ನು ಸ್ವೀಕರಿಸಿದಳು.

ಮಾರನೆಯ ದಿನ ಲೀಸ ಗೊತ್ತಾಗಿದ್ದ ಭೇಟಿಯ ಸ್ಥಳಕ್ಕೆ ಹೋಗಲು ತಪ್ಪಲಿಲ್ಲವೆಂದು ವಾಚಕರು ಸುಲಭವಾಗಿ ಊಹಿಸಿರಬಹುದು. ಅವಳು ಅಲೆಕ್ಸಿಯನ್ನು ಕಂಡಕೂಡಲೆ, "ನೀವು ನಿನ್ನೆ ನಮ್ಮ ದಣಿಗಳ ಮನೆಯವರನ್ನು ನೋಡಲು ಹೋಗಿದ್ದಿರಷ್ಟೆ. ನಿಮ್ಮ ಚಿಕ್ಕ ಒಡತಿಯವರ ವಿಚಾರ ನಿಮ್ಮ ಅಭಿಪ್ರಾಯ ಏನು?" ಎಂದು ಕೇಳಿದಳು. ತಾನು ಆಕೆಯನ್ನು ಗಮನಿಸಲಿಲ್ಲವೆಂದು ಅಲೆಕಸಿ ಉತ್ತರ ಕೊಟ್ಟನು. "ಎಂಥ ಅನ್ಯಾಯ !" ಎಂದು ಲೀಸ ಉದ್ಗಾರ ತೆಗೆದಳು. "ಏಕೆ?" ಎಂದು ಅಲೆಕ್ಸಿ ಕೇಳಿದನು.

"ಅವರು ಹೇಳುವುದು ನಿಜವೇ ಎಂದು ನಿಮ್ಮನ್ನು ಕೇಳಬೇಕೆಂದು ನನಗೆ ಆಸೆಯಾಯಿತು....."

"ಏನು ಹೇಳುತ್ತಾರೆ ಅವರು?"

"ಅವರು ಹೇಳುವುದು ನಿಜವಾದಲ್ಲಿ,..... ನಾನು ಅವಳ ಹಾಗೆಯೆ ಇದೇನೆಯಂತೆ."

ಹೃದಯವುಳ್ಳ ಅವನು ಅವುಗಳನ್ನು ಮೊದಲು ಗಮನಿಸಲೇ ಇಲ್ಲ. ಆ ಬಳಿಕವೂ ಅವುಗಳ ಬಗ್ಗೆ ಅವನು ಸಂಶಯಪಡಲಿಲ್ಲ. ಗ್ರಿಗೊರಿ ಇವಾನೊವಿಚ್ ತಾನು ಕೊಟ್ಟಿದ್ದ ವಚನವನ್ನು ನೆನಪಿನಲ್ಲಿಟ್ಟಿದ್ದನು ; ಲವಲೇಶವಾದರೂ ವಿಸ್ಮಯ ಭಾವವನ್ನು ತೋರಲು ಪ್ರಯತ್ನಿಸಲಿಲ್ಲ. ಆದರೆ ತನ್ನ ಮಗಳ ಈ 'ಖಯಾಲಿ' ಯನ್ನು ಕಂಡು ಅವನಿಗೆ ಅತ್ಯಂತ ವಿನೋದ ವೆನಿಸಿತು ; ನೇರೆದುರಾಗಿ ಮುಖ ತೋರಿಸುವುದು ಅವನಿಗೆ ಕಷ್ಟವಾಯಿತು. ಆದರೆ ಆ ಸಭ್ಯತೆಯ ಸೋಗಿನ ಆಂಗ್ಲ ಮಹಿಳೆಗೆ ಅದು ನಗೆಯ ವಿಷಯವಾಗಿರಲಿಲ್ಲ. ಪೌಡರನ್ನೂ ಬಣ್ಣವನ್ನೂ ತನ್ನ ಅಲಂಕಾರ ಮಾಡಿಕೊಳ್ಳುವ ಮೋಜಿನಿಂದ ಎಗರಿಸಿಬಿಟ್ಟಿದೆಯೆಂದು ಅವಳು ಥಟ್ಟನೆ ಊಹಿಸಿದಳು ; ಅವಳ ಕಪೋಲಗಳ ಕೃತಕ ಧಾವಳ್ಯದ ಅಡಿಯಲ್ಲಿ ಕೋಪದ ಕೆಂಗಾಂತಿ ವ್ಯಕ್ತಪಟ್ಟಿತು. ಅವಳು ಆ ತುಂಟ ಯುವತಿಯ ಕಡೆಗೆ ರೋಷದ ಕಡೆ ಕಣ್ನೋಟಗಳನ್ನು ಎಸೆದಳು ; ಆದರೆ ಆ ಯುವತಿ ಮುಂದೆ ಎಂದಾದರೂ ಸಂದರ್ಭವನ್ನು ವಿವರಿಸುವುದೆಂದುಕೊಂಡು, ಅವುಗಳನ್ನು ಗಮನಿಸಿದಂತೆಯೇ ಇದ್ದುಬಿಟ್ಟಳು.

ಅವರು ಮೇಜಿನ ಮುಂದೆ ಕುಳಿತರು. ಅಲೆಕ್ಸಿ ತಾನು ತಳೆದ ಅನ್ಯ ಮನಸ್ಕ ಖಿನ್ನವ್ಯಕ್ತಿಯ ಪಾತ್ರದ ನಟನೆಯನ್ನು ಮುಂದುವರಿಸಿದನು. ಲೀಸ ಹಲ್ಲು ಕಚ್ಚಿ, ಬೇಸರ ಹಿಡಿಸುವ ಏಕನಾದದಲ್ಲಿ, ಫ್ರೆಂಚಿನಲ್ಲಿ ಮಾತ್ರ ಮಾತನಾಡುತ್ತ ಹುಸಿನಗೆ ನಗುತ್ತಿದ್ದಳು. ಅವಳ ಉದ್ದೇಶವೇನೆಂಬುದು ತಿಳಿಯದೆ, ಅವಳ ತಂದೆ ಸುಮ್ಮನೆ ಅವಳನ್ನು ನೋಡುತ್ತಿದ್ದನು ; ಆದರೆ ಅವನಿಗೆ ಎಲ್ಲವೂ ಬಹು ವಿನೋದಕರವಾಗಿ ಕಾಣುತ್ತಿತ್ತು. ಆಂಗ್ಲರಮಣಿಯಂತೂ ಮಾತಿಲ್ಲದ ಕೋಪದ ಮುದ್ದೆಯಾಗಿದ್ದಳು. ನಿಜವಾಗಿಯೂ ನಿರಾತಂಕವಾಗದ್ದವನೆಂದರೆ ಇವಾನ್ ಪೆಟ್ರೋವಿಚ್ ; ಇಬ್ಬರು ತಿನ್ನುವಷ್ಟನ್ನು ಒಬ್ಬನೇ ತಿಂದನು ; ಎಂದಿನಂತೆ ಕಂಠಪೂರ್ತಿ ಕುಡಿದನು ; ತನ್ನ ಹಾಸ್ಯೋಕ್ತಿಗಳಿಗೆ ತಾನೇ ನಕ್ಕನು ; ಹೆಚ್ಚು ಹೆಚ್ಚು ಸ್ನೇಹಪರನಾಗಿ ಸಂಭಾಷಿಸತೊಡಗಿದನು.

ಕಡೆಗೆ ಮೇಜಿನ ಮುಂದಿನಿಂದ ಎದ್ದೇಳುವ ವೇಳೆಯಾಯಿತು. ಅತಿಥಿಗಳೂ ಬೀಳ್ಕೊಂಡು ಹೊರಟರು. ಆಗ ಮನಃಪೂರ್ತಿ ನಕ್ಕು, ಪ್ರಶ್ನೆ ಕೇಳುವ ಸ್ವಾತಂತ್ರ್ಯ ಗ್ರಿಗೊರಿ ಇವಾನೊವಿಚ್‌ಗೆ ದೊರಕಿತು. "ಅವರನ್ನು ಈ ರೀತಿ ಬೆಪ್ಪು ಹಿಡಿಸಬೇಕೆಂದು ನಿನಗೆ ತೋರಿದ್ದಾದರೂ ಯಾಕೆ? ಅದು ಹಾಗಿರಲಿ, ಪೌಡರ್ ಹಾಕಿಕೊಂಡರೆ ನಿನಗೆ ಒಪ್ಪುತ್ತೆ ! ಹೆಂಗಸರ ಅಲಂಕಾರ ಮಾಡಿಕೊಳ್ಳುವ ಮರ್ಮಗಳು ನನಗೆ ಗೊತ್ತಿಲ್ಲ ; ಆದರೆ, ನಾನು ನೀನಾಗಿದ್ದರೆ ಇಷ್ಟು ಹೊತ್ತಿಗೆ

ಸಾಗುತ್ತಿತ್ತು. ಒಂದು ಪುರಾತನ ಓಕ್ ವೃಕ್ಷದ ಪೊಟ್ಟರೆಯೆ ಅವರ ಅಂಚೆ ಕಚೇರಿ. ನಾಸ್ತ್ಯಗೋಪ್ಯವಾಗಿ ಅಂಚೆಯವನ ಕರ್ತವ್ಯವನ್ನು ನಿರ್ವಹಿಸುತ್ತಿದ್ದಳು. ಅಲೆಕ್ಸಿ ಒಳ್ಳೆಯ ಸ್ಫುಟವಾದ ಅಕ್ಷರಗಳಿಂದ ಬರೆದ ಕಾಗದಗಳನ್ನು ಓಕ್ ವೃಕ್ಷದ ಬಳಿಗೆ ತರುತ್ತಿದ್ದನು ; ಅಲ್ಲಿ ತನ್ನ ಪ್ರಿಯೆ ಅಗ್ಗದ ನೀಲಿಯ ಕಾಗದದ ಮೇಲೆ ಗೀಚಿದ್ದ ಪತ್ರಗಳು ಅವನಿಗೆ ಸಿಕ್ಕುತ್ತಿದ್ದುವು. ಪ್ರತಿಯೊಂದು ಕಾಗದ ಬರೆದಂತೆ ಅಕ್ಯುಲಿನಳ ಉತ್ತಮಗೊಳ್ಳುತ್ತಿತ್ತು.

ಈ ನಡುವೆ ಇವಾನ್ ಪೆಟ್ರೊವೀಚ್ ಬೆರಿಸ್ಟಾಫ್ ಮತ್ತು ಗ್ರಿಗೊರಿ ಇವಾನೊವಿಚ್ ಮ್ಯುರೊಮ್ಸ್ಕಿ ಇವರ ನಡುವೆ ಈಚೆಗೆ ಮೊಳೆತ ಹೊಸ ಸಂಬಂಧ ಒಂದೇ ಸಮನಾಗಿ ಉತ್ತಮಗೊಳ್ಳುತ್ತಿತ್ತು ; ಬೇಗನೆ ಸ್ನೇಹವಾಗಿಯೂ ಪರಿಣಮಿಸಿತು. ಅದಕ್ಕೆ ಕಾರಣ ಈ ಮುಂದಿನ ಸಂದರ್ಭಗಳು : ಇವಾನ್ ಪೆಟ್ರೋವಿಚ್ ಮೃತನಾದಾಗ ಅವನ ಆಸ್ತಿಯೆಲ್ಲ ಅಲೆಕ್ಸಿ ಇವಾನೊವಿಚ್‌ಗೆ ಬರುವುದು ; ಆಗ ಅವನು ಜಿಲ್ಲೆಯಲ್ಲೆಲ್ಲ ಅತ್ಯಂತ ಐಶ್ವರ್ಯವಂತನಾದ ಜಮೀನುದಾರನಾಗುವನು ; ಅವನು ಲೀಸಳನ್ನು ಮದುವೆಯಾಗದಿರಲು ಕಾರಣವೇನೂ ಇರದು – ಇದು ಮ್ಯುರೊಮ್ಸ್ಕಿಯ ಲೆಕ್ಕಾಚಾರ. ಇತ್ತ ವೃದ್ಧ ಬೆರಿಸ್ಟಾಫ್ ತನ್ನ ನೆರೆಯವನಲ್ಲಿ ಕೆಲವು ವೈಚಿತ್ರ್ಯಗಳನ್ನು (ಅಥವಾ ಅವನ ಮಾತಿನಲ್ಲಿಯೇ ಹೇಳುವುದಾದರೆ, ಆಂಗ್ಲವೆನಿಸಿಕೊಂಡ ಎಲ್ಲದರ ಮೇಲಣ ಹುಚ್ಚುಗೀಳು) ಗಮನಿಸಿದ್ದನು, ದಿಟ ; ಆದರೆ ಅವನಲ್ಲಿ ಅನೇಕ ಉತ್ಕೃಷ್ಟ ಗುಣಗಳು ಇದ್ದುವೆಂಬುದನ್ನೂ ಆತ ನಿರಾಕರಿಸಲಿಲ್ಲ. ಆ ಗುಣಗಳಲ್ಲಿ, ಅಪೂರ್ವ ಬುದ್ಧಿಚಾತುರ್ಯ ಒಂದು ಗ್ರಿಗೊರಿ ಇವಾನೊವಿಚ್ ಪ್ರಸಿದ್ಧನೂ ಪ್ರಭಾವಶಾಲಿಯೂ ಆಗಿದ್ದ ಕೌಂಟ್‌ಪ್ರೋನ್ಸ್ಕಿಗೆ ಹತ್ತಿರದ ಸಂಬಂಧಿ. ಆ ಕೌಂಟ್ ಅಲೆಕ್ಸಿಗೆ ತುಂಬ ಪ್ರಯೋಜನಕಾರಿಯಾಗಬಹುದು; ಪ್ರಯೋಜನವಾಗುವ ಸಂದರ್ಭದಲ್ಲಿ ಮ್ಯುರೋಮ್ಸ್ಕಿ ತನ್ನ ಮಗಳನ್ನು ಮದುವೆಮಾಡಿಕೊಡಲು ನಿಸ್ಸಂದೇಹವಾಗಿ ಸಂತೋಷ ಪಡುವನು – ಹೀಗೆಂದು ಇವಾನ್ ಪೆಟ್ರೊವಿಚ್ ಆಲೋಚಿಸಿದನು. ಕೆಲವು ಕಾಲದವರೆಗೆ ಇಬ್ಬರು ವೃದ್ಧರೂ ತಮ್ಮ ತಮ್ಮ ಆಲೋಚನೆಗಳನ್ನು ಬಹಿರಂಗ ಪಡಿಸಲಿಲ್ಲ ; ಕಡೆಗೊಂದು ದಿನ ಇಬ್ಬರೂ ತಮ್ಮ ಮನಸ್ಸು ಬಿಚ್ಚಿ ಮಾತಾಡಿದರು, ಆಲಿಂಗಿಸಿಕೊಂಡರು ; ವಿಷಯವನ್ನು ಸಮಗ್ರವಾಗಿ ಪರಾಮರ್ಶಿಸುವುದಾಗಿ ಒಬ್ಬರಿಗೊಬ್ಬರು ಮಾತುಕೊಟ್ಟರು. ಇಬ್ಬರೂ ತಮ್ಮ ತಮ್ಮ ರೀತಿಯಲ್ಲಿ ಕಾರ್ಯ ಪ್ರಯತ್ನಕ್ಕೆ ತೊಡಗಿದರು. ಮ್ಯುರೊಮ್ಸ್ಕಿಯ ದೃಷ್ಟಿಯಲ್ಲಿ ಒಂದು ತೊಂದರೆ ಕಂಡುಬಂತು – ಅದೇನೆಂದರೆ, ತನ್ನ 'ಬೆಟ್ಸ'ಯನ್ನೂ ಅಲೆಕ್ಸಿಯನ್ನೂ ಒಂದುಗೂಡುವಂತೆ

"ಎಂಥ ತಿಳಿಗೇಡಿತನ ! ನಿನಗೆ ಹೋಲಿಸಿದರೆ ಅವಳು ಕರಾಳ ಮೂರ್ತಿ!"

"ಓಹ್, ನೀವು ಹಾಗೆ ಹೇಳಬಾರದು. ನಮ್ಮ ಚಿಕ್ಕ ಒಡತಿಯವರು ಅಷ್ಟು ಚೆನ್ನಾಗಿದ್ದಾರೆ. ಅಷ್ಟು ಸೊಗಸಾಗಿದ್ದಾರೆ ! ಅವರೆಲ್ಲಿ ನಾನೆಲ್ಲಿ !"

ಪ್ರಪಂಚದಲ್ಲಿರುವ ಎಲ್ಲ ಸುಂದರ ತರುಣಿಯರಿಗಿಂತ ಆಕೆ ಮೇಲೆಂದು ಅಲೆಕ್ಸಿ ಪ್ರಮಾಣಮಾಡಿ ಹೇಳಿದನು ; ಇವಳ ಮನಸ್ಸಿನಲ್ಲಿ ಏನಾದರೂ ಸಂಶಯ ಉಳಿದಿದ್ದರೆ ಅದನ್ನು ಹೋಗಲಾಡಿಸುವುದಕ್ಕಾಗಿ, ಇವಳ ಒಡತಿಯನ್ನು ತುಂಬ ಹಾಸ್ಯಾಂಶಗಳೊಂದಿಗೆ ವರ್ಣಿಸತೊಡಗಿದನು. ಇದನ್ನು ಕೇಳಿ ಲೀಸ ಹಿಡಿಸಲಾರದಷ್ಟು ನಕ್ಕಳು.

"ನಮ್ಮ ಚಿಕ್ಕ ಒಡತಿ ನಗುವಹಾಗೆಯೇ ಇರಬಹುದು. ಆದರೂ, ಅವರಿಗೆ ಹೋಲಿಸಿದರೆ ನಾನು ಓದುಬರಹ ಬಾರದ ದಡ್ಡಿ" ಎಂದು ಅವಳು ನಿಟ್ಟುಸಿರುಬಿಟ್ಟಳು. "ಓಹೋ, ಅದು ನಿನ್ನ ಮನಸ್ಸು ಕೊರೆಯುತ್ತಿದೆಯೋ? ನೀನು ಇಷ್ಟಪಟ್ಟರೆ ಈ ಕ್ಷಣದಿಂದಲೇ ನಿನಗೆ ಪಾಠಹೇಳಿಕೊಡಲು ಮೊದಲು ಮಾಡುತ್ತೇನೆ" ಎಂದನು ಅಲೆಕ್ಸಿ. "ಯಾಕೆ ಆಗಬಾರದು? ನಾನು ಯಾಕೆ ಪ್ರಯತ್ನಿಸಿ ನೋಡಬಾರದು ?" ಎಂದು ಲೀಸ ಉಬ್ಬಿ ನುಡಿದಳು. "ಆಗಲಿ, ನನ್ನ ಚಿನ್ನ. ಇಲ್ಲೇ ಈಗಲೇ ಪ್ರಾರಂಭಿಸಿಬಿಡೋಣ." ಅವರು ಕುಳಿತುಕೊಂಡರು. ಅಲೆಕ್ಸಿ ತನ್ನ ಜೇಬಿನಿಂದ ಒಂದು ಸೀಸದಕಡ್ಡಿಯನ್ನೂ ಬರೆಯುವ ಪುಸ್ತಕವನ್ನೂ ಹೊರತೆಗೆದನು ; ಅಕ್ಯುಲಿನ ಅತ್ಯಲ್ಪ ಕಾಲದಲ್ಲಿಯೆ ವರ್ಣಮಾಲೆಯನ್ನು ಕಲಿತುಬಿಟ್ಟಳು. ಅವಳ ಚುರುಕುತನವನ್ನು ಕಂಡು ಅಲೆಕ್ಸಿ ತನ್ನ ಬೆರಗನ್ನು ತಡೆಯಲಾಗಲಿಲ್ಲ. ಮಾರನೆಯ ಬೆಳಗ್ಗೆ ಅವಳು ಬರೆವಣಿಗೆಯನ್ನು ಪ್ರಯತ್ನಿಸಬೇಕೆಂದು ಆಶಿಸಿದಳು ; ಮೊದಲೇನೋ ಸೀಸದಕಡ್ಡಿ ಅವಳು ಹೇಳಿದ ಹಾಗೆ ಕೇಳಲಿಲ್ಲ ; ಆದರೆ ಕೆಲವು ನಿಮಿಷಗಳಲ್ಲಿ ಅವಳು ಚೆನ್ನಾಗಿಯೇ ಅಕ್ಷರಗಳನ್ನು ಬರೆಯುತ್ತಿದ್ದಳು. "ಭೇಷ್. ಇದೊಂದು ಅದ್ಭುತವೇ ಸರಿ. ಲಂಕ್ಯಾಸ್ಟರ್ ಪದ್ಧತಿಯಲ್ಲಿ ಆಗುವುದಕ್ಕಿಂತ ಶೀಘ್ರವಾಗಿ ನಾವು ಮುಂದುವರಿಯುತ್ತಿದ್ದೇವೆ" ಎಂದು ಅಲೆಕ್ಸಿ ನುಡಿದನು. ವಾಸ್ತವವಾಗಿ ಮೂರನೆಯ ಪಾಠ ಮುಗಿಯುವ ಹೊತ್ತಿಗೆ, ಅವಳು "ನಟಾಲ್ಯ, ಬೋಯರ್‌ನ ಮಗಳು" ಎಂಬ ಹೆಸರಿನ ಕಾಗುಣಿತ ಬಿಡಿಸಿ ಹೇಳಲು ಸಮರ್ಥಳಾಗಿದ್ದಳು. ಓದಿನ ನಡುನಡುವೆ ಅವಳು ಆಡುತ್ತಿದ್ದ ಮಾತುಗಳು ಅಲೆಕ್ಸಿಯನ್ನು ದಂಗುಬಡಿಸಿದುವು. ಅದೇ ಕಾದಂಬರಿಯಿಂದ ಅಯ್ದ ಸೂಕ್ತಿಗಳನ್ನು ಒಂದು ಹಾಳೆಯ ತುಂಬ ಬರೆದುಬಿಟ್ಟಿದ್ದಳು.

ಒಂದು ವಾರ ಕಳೆಯಿತು ; ಈಗ ಅವರ ನಡುವೆ ಪತ್ರಗಳ ವಿನಿಮಯ

ಆಲೋಚನೆಮಾಡಿ, ನಿಶ್ಚಯಮಾಡಿಬಿಟ್ಟಿದ್ದೇನೆ."

"ಆದರೆ, ಅಯ್ಯಾ, ಲೀಸ ಮ್ಯುರೊಮ್ಸ್ಕಯಳನ್ನು ಕಂಡರೆ ನನಗೆ ಇಷ್ಟವಿಲ್ಲ."

"ಅವಳನ್ನು ಕಂಡರೆ ನಿನಗೆ ಆಮೇಲೆ ಇಷ್ಟವಾಗುತ್ತದೆ. ರೂಢಿಯಾದರೆ ಪ್ರೀತಿ ಅನುಸರಿಸಿ ಬರುತ್ತದೆ."

"ಅವಳನ್ನು ಸುಖಿಯಾಗಿ ಮಾಡುವ ಸಾಮರ್ಥ್ಯ ನನಗಿದೆ ಎನಿಸುವುದಿಲ್ಲ."

"ಅವಳ ಸುಖ ಕುರಿತು ನೀನು ಯೋಚಿಸಬೇಕಾಗಿಲ್ಲ. ಏನು, ಇದೇಯೋ ತಂದೆಯ ಇಚ್ಛೆಗೆ ನೀನು ಸಲ್ಲಿಸುವ ಗೌರವ? ನಾಚಿಕೆಗೇಡು !"

"ನಿಮಗೆ ಮೆಚ್ಚಿಗೆಯಾಗಲಿ ಬಿಡಲಿ, ನನಗೆ ಮದುವೆಯಾಗುವ ಇಷ್ಟವಿಲ್ಲ, ನಾನು ಮದುವೆಯಾಗುವುದೂ ಇಲ್ಲ."

"ನೀನು ಮದುವೆಯಾದೆಯೋ ಸರಿ. ಇಲ್ಲವೋ, ನೀನು ಎತ್ತಲಾಗಾದರೂ ಹಾಳಾಗಿಹೋಗು ; ದೇವರ ಪ್ರಮಾಣವಾಗಿಯೂ, ನಾನು ಆಸ್ತಿಯನ್ನೆಲ್ಲಾ ಮಾರಿ, ಬಂದ ಹಣವನ್ನು ಚೆಲ್ಲಾಪಿಲ್ಲಿಮಾಡಿಬಿಡುತ್ತೇನೆ. ಒಂದು ಕೊಪೆಕ್ಕನ್ನೂ ನಿನಗೆ ಉಳಿಸುವುದಿಲ್ಲ. ಆಲೋಚನೆ ಮಾಡುವುದಕ್ಕೆ, ನಿನಗೆ ಮೂರು ದಿನಗಳ ಅವಕಾಶಕೊಟ್ಟಿದ್ದೇನೆ. ಅಲ್ಲಿಯವರೆಗೆ ನನಗೆ ನಿನ್ನ ಮುಖ ತೋರಿಸಬೇಡ !"

ತನ್ನ ತಂದೆಯ ತಲೆಯೊಳಕ್ಕೆ ಏನಾದರೂ ಒಂದು ಭಾವನೆ ಹೊಕ್ಕಿಬಿಟ್ಟರೆ ಆದರಿಂದ ಪಾರಾಗುವ ಮಾರ್ಗವೇ ಇರಲಿಲ್ಲ ; ಟರಾಸ್ ಸ್ಕೊಟಿನಿನ್* ಹೇಳಿದಂತೆ, ಆ ಭಾವನೆಯನ್ನು "ಮೊಳೆಯಿಂದಲೂ ಎಬ್ಬಿ ತೆಗೆ"ಯುವುದಕ್ಕಾಗುತ್ತಿರಲಿಲ್ಲ ಎಂಬುದು ಅಲೆಕ್ಸಿಗೆ ತಿಳಿದಿತ್ತು. ಆದರೆ ಅಲೆಕ್ಸಿಯೂ ಅವರ ಅಪ್ಪನ ಮಗ ತಾನೆ ; ಅವನು ತನ್ನ ಮನಸ್ಸನ್ನು ಮಾರ್ಪಡಿಸುವಂತೆ ಮಾಡುವುದೂ ಅಷ್ಟೇ ಕಷ್ಟವಾಗಿತ್ತು. ಅವನು ತನ್ನ ಕೋಣೆಯೊಳಕ್ಕೆ ಹೋಗಿ, ತನ್ನ ತಂದೆಯ ಅಧಿಕಾರ ವ್ಯಾಪ್ತಿಯ ಇತಿ ಮಿತಿ, ಲಿಸವೀಟ ಗ್ರಿತೊರ್ಯೆವ್ನಳ ವ್ಯಕ್ತಿತ್ವ, ತನ್ನನ್ನು ನಿರ್ಗತಿಕನನ್ನಾಗಿ ಮಾಡುವುದಾಗಿ ತನ್ನ ತಂದೆ ಹಾಕಿದ ಬೆದರಿಕೆ – ಇವೆಲ್ಲವನ್ನೂ ಕುರಿತು ಪರ್ಯಾಲೋಚಿಸಿದನು ; ಕಡೆಯಲ್ಲಿ ಅವನ ಅಲೋಚನೆ ಅಕ್ಯುಲಿನಳಲ್ಲಿ ನೆಲೆಸಿತು. ತಾನು ಅವಳಲ್ಲಿ ಗಾಢ ಪ್ರೇಮ ಹೊಂದಿರುವುದಾಗಿ ಮೊತ್ತ ಮೊದಲ ಸಾರಿಗೆ ಅವನು ಸ್ಪಷ್ಟವಾಗಿ ಅರಿತನು. ಒಬ್ಬ ರೈತ ಹುಡುಗಿಯನ್ನು ಮದುವೆಯಾಗಿ ತನ್ನ ದುಡಿಮೆಯಿಂದ ತಾನು ಜೀವಿಸುವ ರಮ್ಯ ಭಾವನೆಯೂ

---

* ಫಾನ್‌ವಿಸಿನ್ ಎಂಬಾತನ ಎಂಬ ಹಾಸ್ಯ ನಾಟಕದಲ್ಲಿನ ಒಂದು ಪಾತ್ರ : ಅವನೊಬ್ಬ ಮಾದರಿ ಜಮೀನುದಾರ, ಹೆಡ್ಡ, ಅಜ್ಞ.

ಮಾಡುವುದು ; ಅಂದಿನ ಭೋಜನಕೂಟವಾದಮೇಲೆ ಅವಳು ಅವನನ್ನು ನೋಡಿಯೆ ಇರಲಿಲ್ಲ. ಅವರು ಅಷ್ಟಾಗಿ ಪರಸ್ಪರ ಆಕರ್ಷಿತವಾಗಿರಲಿಲ್ಲ ಎಂಬ ಭಾವನೆಯಿತ್ತು. ಅದು ಹೇಗಿದ್ದರೂ, ಅಲೆಕ್ಸಿ ಮರಳಿ ಪ್ರಿಲುಚೀನೋಗೆ ಬರಲಿಲ್ಲ. ಇವಾನ್ ಪೆಟ್ರೊವಿಚ್ ಅವರ ಮನೆಗೆ ಮರ್ಯಾದೆಯ ಭೇಟಿ ಕೊಟ್ಟಾಗಲೆಲ್ಲ ಲೀಸ ತನ್ನ ಕೋಣೆಗೆ ಹೋಗಿಬಿಡುತ್ತಿದ್ದಳು. ಆದರೆ ಗ್ರಿಗೊರಿ ಇವಾನೊವಿಚ್ ಮಾತ್ರ. "ಅಲೆಕ್ಸಿ ಪ್ರತಿನಿತ್ಯವೂ ಬಂದರೆ ಬೆಟ್ಸಿ ಅವನನ್ನು ಪ್ರೀತಿಸುವುದು ಖಂಡಿತ. ಅದು ಕೇವಲ ಸ್ವಾಭಾವಿಕ. ಕಾಲ ಎಲ್ಲವನ್ನೂ ಸರಿಪಡಿಸುತ್ತದೆ."

ಆದರೆ ಇವಾನ್ ಪೆಟ್ರೊವಿಚ್ ತನ್ನ ಯೋಜನೆಗಳ ಯಶಸ್ಸಿನ ಬಗೆಗೆ ಅಷ್ಟು ಖಂಡಿತವಾಗಿರಲಿಲ್ಲ. ಅದೇ ಸಂಜೆ ಅವನು ತನ್ನ ಮಗನನ್ನು ತಾನಿದ್ದ ವ್ಯಾಸಂಗದ ಕೋಣೆಗೆ ಕರೆದು, ತನ್ನ ಚಿಲಿಮೆಯನ್ನು ಹೊತ್ತಿಸಿಕೊಂಡು, ತುಸ ತಡೆದು ಹೀಗೆ ಹೇಳಿದನು :

"ಇದೇಕೆ ಅಲ್ಯೋಷ, ಸೈನಿಕ ಉದ್ಯೋಗದ ವಿಚಾರ ನೀನು ಮಾತಾಡುವುದನ್ನೆ ನಿಲ್ಲಿಸಿಬಿಟ್ಟಿದ್ದೀಯೆ? ರಾವುತ ಸಿಪಾಯಿಯ ಸಮವಸ್ತ್ರ ಧರಿಸಿಬೇಕೆಂದು ಇನ್ನು ಮುಂದೆ ನೀನು ಹಂಬಲಿಸುವುದೇ ಇಲ್ಲವೆ?"

"ಇಲ್ಲ, ಅಯ್ಯಾ. ನಾನು ರಾವುತಸಿಪಾಯಿದಳಕ್ಕೆ ಸೇರುವುದು ನಿಮಗೆ ಇಷ್ಟವಿಲ್ಲವೆಂದು ನನಗೆ ಗೊತ್ತಾದಮೇಲೆ, ನಿಮ್ಮ ಇಷ್ಟಾನುಸಾರ ನಡೆದುಕೊಳ್ಳುವುದ ನನ್ನ ಕರ್ತವ್ಯ" ಎಂದು ಅಲೆಕ್ಸಿ ಗೌರವ ಪೂರ್ವಕವಾಗಿ ಉತ್ತರಕೊಟ್ಟನು.

ಅದಕ್ಕೆ ಇವಾನ್ ಪೆಟ್ರೋವಿಚ್– "ಒಳ್ಳೆಯದು. ನೀನು ಕರ್ತವ್ಯವನ್ನು ಬಲ್ಲ ಮಗ. ಇದರಿಂದ ನನ್ನ ಮನಸ್ಸಿಗೆ ಎಷ್ಟೋ ಸಮಾಧಾನ. ನಿನ್ನನ್ನು ಬಲಾತ್ಕರಿಸಲು ನನಗೂ ಕೂಡ ಇಷ್ಟವಿಲ್ಲ. ಸದ್ಯಕ್ಕೆ, ಸರ್ಕಾರಿ ಚಾಕರಿಗೆ ಸೇರಬೇಕೆಂದು ನಾನು ನಿನ್ನನ್ನು ಒತ್ತಾಯಮಾಡುವುದಿಲ್ಲ. ಈ ಮಧ್ಯೆ, ನೀನು ಮದುವೆ ಮಾಡಿಕೊಳ್ಳಬೇಕೆಂದೂ ನಾನು ಉದ್ದೇಶಿಸಿದ್ದೇನೆ" ಎಂದನು.

ಅಚ್ಚರಿಗೊಂಡ ಅಲೆಕ್ಸಿ– "ನಾನು ಯಾರನ್ನು ಮದುವೆಯಾಗ ಬೇಕೆಂದು ನಿಮ್ಮ ಇಷ್ಟ?" ಎಂದು ಕೇಳಿದನು.

"ಲಿಸವೀಟ ಗ್ರಿಗೊರ್ಯೆವ್ನ ಮ್ಯುರೊಮ್ಸ್ಕಯ. ಕೆಟ್ಟ ಆಯ್ಕೆ ಅಲ್ಲವೆಂದು ಭಾವಿಸಿದ್ದೇವೆ" ಎಂದು ಇವಾನ್ ಪೆಟ್ರೋವಿಚ್ ಉತ್ತರಕೊಟ್ಟನು.

"ಆದರೆ, ಮದುವೆಯ ವಿಚಾರ ಕುರಿತು ನಾನು ಇನ್ನೂ ಯೋಚನೆ ಮಾಡತೊಡಗಿಲ್ಲ."

"ನೀನು ಯೋಚಿಸುತ್ತಿಲ್ಲ, ಸರಿಯೆ. ಆದ್ದರಿಂದಲೇ ನಿನ್ನ ಪರವಾಗಿ ನಾನು

ತತ್ಪರಳಾಗಿದ್ದಾಳೆ. ಚಿಮ್ಮಿದ ಹರ್ಷೋದ್ಗಾರವನ್ನು ಅಲೆಕ್ಸಿ ತೆರದುಕೊಳ್ಳಲಾಗಲಿಲ್ಲ. ಲೀಸ ಬೆಚ್ಚಿಬಿದ್ದು, ತನ್ನ ತಲೆ ಎತ್ತಿ, ಕಿರಿಚಿಕೊಂಡು, ಇನ್ನೇನು ಓಡಿ ಹೋಗುವುದರಲ್ಲಿದ್ದಳು. ಅವನು ಅವಳನ್ನು ಬಲಾತ್ಕಾರದಿಂದ ತಡೆದು ನಿಲ್ಲಿಸಲು ಪ್ರಯತ್ನಿಸಿದನು.

"ಅಕ್ಯುಲಿನ, ಅಕ್ಯುಲಿನಾ !"

ಅವಳು ಅವನಿಂದ ಬಿಡಿಸಿಕೊಂಡು ದೂರ ಹೋಗಲು ಪ್ರಯತ್ನಿಸಿದಳು. ಹಾಗೆ ಬಿಡಿಸಿಕೊಳ್ಳಲು ಒದ್ದಾಡುತ್ತ, "ಬಿಡಿ ಬಿಡಿ. ನನ್ನನ್ನು ಬಿಡಿ" ಎಂದು ಒಂದೇ ಸಮನಾಗಿ (ಫ್ರೆಂಚಿನಲ್ಲಿ) ಹೇಳುತ್ತಿದ್ದಳು.

ಅವನು ಪುನಃ ಪುನಃ "ಅಕ್ಯುಲಿನಾ ! ನನ್ನ ಪ್ರಿಯೆ, ಅಕ್ಯುಲಿನಾ !" ಎಂದು ಜಪಿಸುತ್ತಾ ಅವಳ ಕೈಗಳ ಮೇಲೆ ಮುತ್ತಿನ ಮಳೆಗಡೆದನು. ಮಿಸ್ ಜ್ಯಾಕ್ಸನ್ ಈ ದೃಶ್ಯಕ್ಕೆ ಸಾಕ್ಷಿಯಾಗಿದ್ದಳು ; ಅವಳಿಗೆ ಏನೆಂದು ಆಲೋಚನೆ ಮಾಡುವುದಕ್ಕೂ ತೋರಲಿಲ್ಲ. ಆ ಹೊತ್ತಿಗೆ ಸರಿಯಾಗಿ ಬಾಗಿಲು ತೆರೆಯಿತು, ಗ್ರಿಗೊರಿ ಇವಾನೊವಿಚ್ ಪ್ರವೇಶಿಸಿದನು.

"ಓಹೋ ! ಈಗ ಎಲ್ಲವನ್ನೂ ನೀವೇ ಕೈಗೆ ತೆಗೆದುಕೊಂಡಿದ್ದೀರಿ, ಸಂತೋಷ . . . " ಎಂದನು ಅವನು.

ಕಥೆಯ ಅಂತ್ಯವನ್ನು ವರ್ಣಿಸುವ ಅನಾವಶ್ಯಕ ಕಾರ್ಯವನ್ನು ಓದುಗರು ನನಗೆ ಬಿಡಲಾರರು.

ಇಲ್ಲಿಗೆ

**ಐ. ಪಿ. ಬೆಲ್ಕಿನ್ ಅವರ ಕಥೆಗಳು**

ಸಮಾಪ್ತಿಗೊಂಡುವು.

ಅವನ ಮನಸ್ಸಿನಲ್ಲಿ ಹಾದು ಹೋಯಿತು ; ಈ ಸುನಿಶ್ಚಿತ ಕಾರ್ಯವನ್ನು ಕುರಿತು ಆಲೋಚಿಸಿದಷ್ಟೂ ಅದು ಹೆಚ್ಚು ಹೆಚ್ಚು ಸಕಾರಣವಾಗಿ ಕಂಡಿತವನಿಗೆ. ಮಳೆಯ ಹವಾಗುಣದ ದೆಸೆಯಿಂದ, ತೋಪಿನಲ್ಲಿ ನಡೆಯುತ್ತಿದ್ದ ಅವರ ಸಮಾಗಮಗಳು ನಿಂತುಹೋಗಿದ್ದುವು. ಅವನು ಅಕ್ಯುಲಿನಳಿಗೆ ಒಂದು ಪತ್ರ ಬರೆದನು : ಸ್ಪಷ್ಟತೆಯಲ್ಲಿ ಬರವಣಿಗೆ ಆದರ್ಶ ಪ್ರಾಯವಾಗಿದ್ದರೂ ಶೈಲಿಮಾತ್ರ ಆವೇಶಪೂರ್ಣವಾಗಿತ್ತು ; ಪತ್ರದಲ್ಲಿ ಅವನು ತಮ್ಮ ಸುಖಕ್ಕೆ ಒದಗಬಹುದಾದ ವಿಪತ್ತನ್ನು ತಿಳಿಸಿ, ತಾನು ಅವಳ ಕೈಹಿಡಿಯಲು ಸಿದ್ಧನಾಗಿರುವುದಾಗಿ ಬರೆದಿದ್ದನು. ಒಡನೆಯೆ ಅವನು ಆ ಪತ್ರವನ್ನು ಓಕ್‌ಮರದ ಪೊಟ್ಟರೆಯ ಅಂಚೆಕಚೇರಿಗೆ ಕೊಂಡೊಯ್ದನು ; ತಾನು ಮಾಡಿದ್ದರಲ್ಲಿ ತೃಪ್ತಿಗೊಂಡು ಹಾಸಿಗೆಯ ಮೇಲೆ ಮಲಗಿದನು.

ಮಾರನೆಯ ದಿನ ಬೆಳಗ್ಗೆ ಹೊತ್ತಿಗೆ ಮುಂಚೆಯೇ ದೃಢನಿರ್ಧಾರ ಮಾಡಿದ್ದ ಅಲೆಕ್ಸಿ ಮ್ಯುರೊಮ್ಸ್ಕಿಯನ್ನು ಕಂಡು ಅವನೊಡನೆ ಬಿಚ್ಚು ಮನಸ್ಸಿನಿಂದ ಮಾತಾಡಲು ಹೋದನು. ಅವನು ಆತನ ಉದಾರ ಭಾವನೆಯನ್ನು ಜಾಗೃತಗೊಳಿಸಿ, ಅವನನ್ನು ತನ್ನ ಕಡೆಗೆ ಮಾಡಿಕೊಳ್ಳುವ ಆಶೆ ಹೊಂದಿದ್ದನು. ಅವನು ಪ್ರಿಲುಚಿನೋ ಭವನದ ಮುಖಮಂಟಪದ ಮುಂದೆ ತನ್ನ ಕುದುರೆಯನ್ನು ಲಗಾಮು ಹಿಡಿದು ನಿಲ್ಲಿಸಿ, "ಗ್ರಿಗೊರಿ ಇವಾನೊವಿಚ್ ಮನೆಯಲ್ಲಿದಾರೆಯೆ?" ಎಂದು ಕೇಳಿದನು. "ಇಲ್ಲ ಒಡೆಯಾ, ಗ್ರಿಗೊರಿ ಇವನೊವಿಚ್ ಅವರು ಈ ಬೆಳಗ್ಗೆ ಹೊತ್ತಿಗೆ ಮುಂಚೆಯೇ ಮನೆಬಿಟ್ಟು ಹೊರಟರು" ಎಂದು ಸೇವಕನು ಉತ್ತರ ಕೊಟ್ಟನು. "ಒಳ್ಳೆ ಕಿರುಕುಳವಾಯಿತೆ!" ಎಂದು ಅಲೆಕ್ಸಿ ಮನಸ್ಸಿನಲ್ಲೆ ಬೇಸರಗೊಂಡು, "ಹೋಗಲಿ, ಲಿಸವೀಟ ಗ್ರಿಗೊರ್ಯೆವ್ನ ಮನೆಯಲ್ಲಿದಾರೆಯೆ?" ಎಂದು ಕೇಳಿದನು. "ಇದ್ದಾರೆ, ಒಡೆಯಾ" ಎಂದ ಸೇವಕ. ಅಲೆಕ್ಸಿ ಕುದುರೆಯಿಂದ ಹಾರಿ ಇಳಿದು, ಲಗಾಮನ್ನು ಸೇವಕನ ಕೈಗಿತ್ತು, ತನ್ನ ಬರವನ್ನು ಹೇಳಿಸಿಕೊಳ್ಳದೆಯೇ ಒಳಕ್ಕೆ ಪ್ರವೇಶಿಸಿದನು.

ಅವನು ಭೇಟಿಯ ಕೋಣೆಯ ಕಡೆಗೆ ನಡೆದು ಹೋಗುತ್ತ, "ಇನ್ನೇನು, ಎಲ್ಲ ತೀರ್ಮಾನವಾಗಿ ಹೋಗುತ್ತೆ. ಆಕೆಯೊಂದಿಗೆಯೇ ಮಾತಾಡಿಬಿಡುತ್ತೇನೆ" ಎಂದುಕೊಂಡೇ ಹೋದನು. ಅವನು ಕೋಣೆಯನ್ನು ಪ್ರವೇಶಿಸಿದಾಗ, ಅವನಿಗೆ ಸಿಡಿಲೆರಗಿದಂತಾಯಿತು. ಲೀಸ.... ಅಲ್ಲ, ಅಲ್ಲ, ನಚ್ಚಿನ ಆಲಿವ್ ಕಂದುಬಣ್ಣದ ಅಕ್ಯುಲಿನ– 'ಸರ್ ಫಾನ್' ತೊಟ್ಟಿಲ್ಲ; ಪ್ರಾತಃಕಾಲಕ್ಕೆ ಒಪ್ಪುವಂತೆ ಶುಭ್ರವಸ್ತ್ರಧಾರಿಣಿಯಾಗಿದ್ದಾಳೆ. ಅವನ ಕಾಗದವನ್ನೋದಿಕೊಳ್ಳುತ್ತಾ ಕಿಟಕಿಯ ಬಳಿ ಕುಳಿತಿದ್ದಾಳೆ ; ಅವನು ಬಂದದ್ದನ್ನೂ ಕೇಳಿಸಿಕೊಳ್ಳದಷ್ಟು ಓದಿನಲ್ಲಿ

# ಬಿನ್ನಹ

ಇದರಲ್ಲಿನ 'ಬೊಲೆಸೊ' ಎಂಭ ಕಥೆ ರಷ್ಯದ ಪ್ರಸಿದ್ಧ ಸಾಹಿತಿ ಮ್ಯಾಕ್ಸಿಂಗಾರ್ಕಿಯ ಅದೇ ಹೆಸರಿನ ಕಥೆಯ (ಇಂಗ್ಲಿಷ್ ಭಾಷಾಂತರದ) ಭಾಷಾಂತರ ಇನ್ನುಳಿದವು ಸ್ವತಂತ್ರ ಕಥೆಗಳು. ಇವು ಈ ಮೊದಲೆ 'ವಾಣಿ', 'ಕತೆಗಾರ', 'ವಾಕ್‌ಚಿತ್ರ', 'ಮಯೂರ' ಗ್ರಂಥಮಾಲೆ, 'ಗಾರ್ಕಿ' ಸ್ಮಾರಕ ಗ್ರಂಥ– ಈ ಪತ್ರಿಕೆ ಪ್ರಕಟನೆಗಳಲ್ಲಿ ಪ್ರಕಟವಾಗಿವೆ–ಇವುಗಳ ಸಂಪಾದಕರಿಗೆ ನಾನು ಕೃತಜ್ಞನಾಗಿದ್ದೇನೆ.

ಕಥೆಗಳ ಬಗ್ಗೆ ಏನೂ ಹೇಳಬಯಸುವುದಿಲ್ಲ : ವಾಚಕರ ಮುಂದಿಟ್ಟಿದ್ದೇನೆ ; ಅವರು ಓದಿ ನಲಿದರೆ, ಕಥೆ ಬರೆದದ್ದು ಸಾರ್ಥಕ ಎಂದು ನಾನೂ ನಲಿಯುತ್ತೇನೆ.

ಇದರ ಪ್ರಕಾಶನ ಕಾರ್ಯದಲ್ಲಿ ನೆರವಾದ ಸತ್ಯಶೋಧನ ಪ್ರಕಟನ ಮಂದಿರದ ಒಡೆಯರಿಗೂ ಅಚ್ಚುಮಾಡಿಕೊಟ್ಟ ಸುಬೋಧ ಮುದ್ರಣಾಲಯದವರಿಗೂ ವಂದನೆಗಳು.

ಬೆಂಗಳೂರು
೮–೮–೧೯೪೫

**ಎಂ.ವಿ. ಸೀತಾರಾಮಯ್ಯ**

# ಬೊಲೆಸ್ಲೊ
## (ರತಿದೇವಿ ಮತ್ತು ಇತರ ಕಥೆಗಳು)

ಒಂದು ದಿನ ನನ್ನ ಗೆಳೆಯನೊಬ್ಬ ನನಗೆ ಹೇಳಿದ್ದು ಇದು: ನಾನು ಮಾಸ್ಕೋದಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಒಂದು ಸಣ್ಣ ಮನೆಯಲ್ಲಿ ವಾಸಮಾಡಿಕೊಂಡಿದ್ದೆ ; ಅಲ್ಲಿ ನನ್ನ ನೆರೆಯವಳು ಒಬ್ಬಳು ವಿಚಿತ್ರ ಹೆಣ್ಣು ಮಗಳು. ಅವಳು ಪೋಲಿಷರವಳು; ಹೆಸರು ಟೆರಿಸ. ಎತ್ತರವಾಗಿ, ಬಲವಾಗಿದ್ದಳು; ಬಣ್ಣ ಕಂದು; ಕೊಡಲಿಯಿಂದ ಕೆತ್ತಿ ಮಾಡಿದವೋ ಎಂಬಂತೆದ್ದವು. ಅವಳ ದಪ್ಪನೆಯ ತುರುಗು ಹುಬ್ಬುಗಳು, ಒರಟು ಮುಖ ಲಕ್ಷಣಗಳು. ಅವಳ ಕಣ್ಣುಗಳು ಮಂಕಾಗಿದ್ದುವು, ದನಿ ಜೋರಾಗಿತ್ತು, ನಡೆ ನುಡಿ ಮುಷ್ಟಿಕಾಳಿಗದಲ್ಲಿ ಹಣಕ್ಕಾಗಿಹೋರಾಡುವ ಹೋರಾಳುವಿನ ನಡೆನುಡಿಯನ್ನು ನೆನಪಿಗೆ ತರುತ್ತಿದ್ದುವು. ಅವಳ ಕಾಯ ಸ್ಥೂಲವಾಗಿಯೂ ಬಲಿಷ್ಠವಾಗಿಯೂ ಇದ್ದು, ಅವಳ ಒಟ್ಟು ಸ್ವರೂಪ ಭಯ ಹುಟ್ಟಿಸುವಷ್ಟು ವಿಕಾರವಾಗಿತ್ತು. ಕಡೆಯಪ್ಪರಿಗೆಯಲ್ಲಿ ನಮ್ಮ ಕೋಣೆಗಳು ಎದುರುಬದುರಾಗಿದ್ದುವು. ಅವಳು ಮನೆಯಲ್ಲಿರುವುದಾಗಿ ನನಗೆ ತಿಳಿದಿದ್ದರೆ ನಾನು ನನ್ನ ಕೋಣೆಯ ಬಾಗಿಲನ್ನೇ ತೆರೆಯುತ್ತಿರಲಿಲ್ಲ. ಕೆಲವು ವೇಳೆ ಮಹಡಿ ಮೆಟ್ಟಲುಗಳ ಮೇಲೋ ಇಲ್ಲವೆ ಅಂಗಳದಲ್ಲೋ ಅವಳನ್ನು ಸಂಧಿಸುತ್ತಿದ್ದೆ; ಅಂದು ಅವಳು ನನ್ನನ್ನು ನೋಡಿ ವ್ಯಂಗ್ಯವಾಗಿ ನಗುತ್ತಿದ್ದಳು. ಅನೇಕ ವೇಳೆ ಅವಳು ಮನೆಗೆ ಹಿಂದಿರುಗಿ ಬರುತ್ತಿದ್ದಾಗ ಅವಳನ್ನು ಸಂಧಿಸುತ್ತಿದ್ದೆ; ಆಗ ಅವಳ ಕಣ್ಣುಗಳು ಕೆಂಪಗಿರುತ್ತಿದ್ದವು, ತಲೆಗೂದಲು ಕೆದರಿರುತ್ತಿತ್ತು. ಅಂಥ ಸಮಯಗಳಲ್ಲಿ ಅವಳು ನನ್ನನ್ನು ಲಜ್ಜೆಯಿಲ್ಲದೆ, ಮರ್ಯಾದೆಯಿಲ್ಲದೆ, ದಿಟ್ಟಿಸಿ ನೋಡುತ್ತಿದ್ದಳು. ತರುವಾಯ ಹೀಗೆ ಸಂಬೋಧಿಸುತ್ತಿದ್ದಳು; "ಓಹೋ, ವಿದ್ಯಾರ್ಥಿಗಳೇ!".

ಅವಳ ಪೆದ್ದುನಗೆ ಅಸಹ್ಯಕರವಾಗಿತ್ತು. ನನ್ನ ಕೋಣೆ ಬೇಕಾದರೂ ಬದಲಾಯಿಸಲು ಸಿದ್ಧನಾಗಿದ್ದೆ–ಅವಳಿಗೆ ಕಾಣಿಸಿಕೊಳ್ಳದೆ ಇರುವುದಕ್ಕಾಗಿ. ಆದರೆ, ಸ್ಥಳ ಬಹು ಸೊಗಸಾಗಿತ್ತು. ನಗರದ ನೋಟಕ್ಕೆ ಯಾವ ಅಡಚಣೆಯೂ ಇರಲಿಲ್ಲ; ಬೀದಿ ಶಾಂತವಾಗಿತ್ತು ; ಆದ್ದರಿಂದ ಅಲ್ಲಿಯೇ ಉಳಿದಿದ್ದೆ.

ಒಂದು ದಿನ ಬೆಳಗ್ಗೆ, ಉಡುಪು ಹಾಕಿಕೊಂಡು ಹಾಸಿಗೆಯ ಮೇಲೆ

ಅವಳನ್ನು ನೋಡಿ ನಗದೆ ಇರಲಾಗಲಿಲ್ಲ. "ವ್ಯಸನಪಡುತ್ತಿರುವ ಚಿಕ್ಕ ಪಾರಿವಾಳ!"–ಸುಮಾರು ಆರು ಅಡಿ ಎತ್ತರದ, ಗಟ್ಟಿಮುಟ್ಟಾದ ಮೈ ಕಟ್ಟನ್ನೂ ವ್ಯಾಯಾಮಪಟುವಿನ ಮುಷ್ಟಿಗಳನ್ನೂ ಹೊಂದಿದ್ದ 'ಪಾರಿವಾಳ'–ತನ್ನ ಬದುಕಿನಲ್ಲಿ ಸದಾಕಾಲವೂ ಹೊಗೆಕೊಳವೆ (Chimney) ಗಳೊಳಕ್ಕೆ ನುಗ್ಗಿ ಅವನ್ನು ಝೂಡಿಸುವುದಲ್ಲದೆ ಬೇರೆ ಇನ್ನೇನೂ ಕೆಲಸ ಕಾಣದೋ ಎಂಬಂತೆ ಕಪ್ಪಗಿದ್ದ ಮುಖವುಳ್ಳ ಈ ಚಿಕ್ಕ ಪಾರಿವಾಳವನ್ನು ನೆನೆದರೆ ನಗು ಬರದೆ ಇನ್ನೇನು !

ಆದರೆ, ಗಂಭೀರ ಮುಖ ಭಾವದಿಂದಲೇ ಕೇಳಿದೆ: "ಈ ಬೊಲೆಸ್ಲೊ ಯಾರು ?"

"ಬೊಲೆಸ್ಸ್, ಅಣ್ಣಾ ?" ಎಂದು ಆಶ್ಚರ್ಯಭಾವದಿಂದ ಕೇಳಿದಳು : ಬೊಲೆಸ್ಲೊ ಯಾರಿಗೂ ಗೊತ್ತಿಲ್ಲ ಎಂದರೆ ನಂಬಲಾಗದ ಮಾತು ಎನ್ನುವಂತೆ. "ಬೊಲೆಸ್, ನನ್ನನ್ನು ಮದುವೆಯಾಗಲು ಮಾತುಕೊಟ್ಟಿರುವ ನನ್ನ ಪ್ರಿಯ–––"

"ಮದುವೆಯಾಗಲು ಮಾತುಕೊಟ್ಟಿರುವವನೆ ?"

'ಯಾತಕ್ಕಪ್ಪ, ಇಷ್ಟೊಂದು ಆಶ್ಚರ್ಯಪಡುತ್ತೀರಿ ? ನನ್ನಂಥ ಎಳೆಯ ಹುಡುಗಿಗೆ ನಲ್ಲನಿರಕೂಡದೆ ?"

"ಎಳೆಯ ಹುಡುಗಿ !"–ಎಂಥ ವಿನೋದ! ನಾನು ಹೇಳಿದೆ : "ಎಲ್ಲವು ಸಾಧ್ಯವಿರಬಹುದು. ಮದುವೆಯ ನಿಶ್ಚಿತಾರ್ಥವಾಗಿ ಎಷ್ಟು ಕಾಲವಾಯಿತು ?"

"ಹತ್ತು ವರ್ಷ".

ಅಂತೂ ಕೊನೆಗೊಂದು ಕಾಗದ ಬರೆದುಕೊಟ್ಟೆ ಅವಳಿಗೆ : ಅದು ಎಷ್ಟು ಪ್ರೇಮಪೂರ್ಣವಾಗಿ, ಮರುಕಹುಟ್ಟಿಸುವುದಾಗಿತ್ತೆಂದರೆ, ಟೆರಿಸ ಅಲ್ಲದೆ ಬೇರೆ ಇನ್ನಾವಳಿಂದ ಆ ಪ್ರೇಮ ಸಂದೇಶ ಬರುವುದಾಗಿದ್ದರೂ ಬೊಲೆಸ್ಲೋವಿನ ಸ್ಥಾನದಲ್ಲಿರಬಯಸುತ್ತಿದ್ದೆ ನಾನು : ಅಷ್ಟು ಪ್ರೇಮಸೂಸುವ, ಎದೆ ಕರಗಿಸುವ ಪತ್ರವಾಗಿತ್ತು ನಾನು ಬರೆದುಕೊಟ್ಟದ್ದು.

ಟೆರಿಸ ಹೇಳಿದಳು : "ನಿಮಗೆ ಮನಸಾರ ವಂದನೆಗಳು. ನಿಮಗೆ ಏನಾದರೂ ಪ್ರತ್ಯುಪಕಾರ ಮಾಡುವುದಿದೆಯೆ ?" ಬಹಳ ಉದ್ವೇಗಗೊಂಡವಳಂತೆ ಕಾಣುತ್ತಿದ್ದಳು ಅವಳು.

"ಏನೂ ಇಲ್ಲ, ಪರವಾಯಿಲ್ಲ"

"ನಿಮ್ಮ ಷರಟುಗಳನ್ನೂ ಬಟ್ಟೆಬರೆಗಳನ್ನೂ ಹರಿದಿದ್ದರೆ ಹೊಲಿದು ಸರಿಮಾಡಿಕೊಡಬಲ್ಲೆ." ಈ ಮಾತು ನನ್ನನ್ನು ತುಸ ಬೇಸರಪಡಿಸಿತು. ನನಗೆ ಖಂಡಿತವಾಗಿಯೂ ಅವಳಿಂದ ಯಾವ ಬಗೆಯ ಪ್ರತಿಫಲವೂ ಬೇಕಿಲ್ಲವೆಂದು

ಬಿದ್ದುಕೊಂಡಿದ್ದಾಗ, ಇದ್ದಕ್ಕಿದ್ದ ಹಾಗೆ ಬಾಗಿಲು ತೆರೆಯಿತು; ಹೊಸಿಲ ಮೇಲೆ ಟೆರಿಸ ಕಾಣಿಸಿಕೊಂಡಳು.

"ಏನು, ವಿದ್ಯಾರ್ಥಿಗಳೇ!" ಎಂದು ಸಂಬೋಧಿಸಿದಳು ಅವಳು ತನ್ನ ಹೆದ್ದನಿಯಲ್ಲಿ.

"ನಿನಗೇನು ಬೇಕಮ್ಮ ?" – ನಾನು ಕೇಳಿದೆ.

ಅವಳನ್ನು ನೋಡಿದೆ: ಕಲಕಗೊಂಡ ಲಜ್ಜಾ ಭಾವದ ಮುದ್ರೆಯನ್ನು ತಳೆದಿತ್ತು ಅವಳ ಮುಖ ; ಆ ಭಾವವನ್ನು ನಾನು ಹಿಂದೆಂದೂ ಕಂಡಿರಲಿಲ್ಲ ಅವಳ ಮುಖದಲ್ಲಿ.

"ನಿಮ್ಮಿಂದ ಒಂದು ಉಪಕಾರ ಆಗಬೇಕೆಂದು ಕೇಳಬೇಕೆಂದಿದೇನೆ, ದಯವಿಟ್ಟು ಇಲ್ಲವೆನ್ನ ಬೇಡಿ !"

"ಇದೊಂದು ನೆಪ" ಎಂದು ನನ್ನಷ್ಟಕ್ಕೆ ನಾನೇ ಅಂದುಕೊಂಡೆ, ಹಾಗೆಯ ಮೇಲೆ ಮಲಗಿ. ಆದರೆ ಬಾಯಿ ಬಿಡಲಿಲ್ಲ.

"ಮನೆಗೊಂದು ಕಾಗದ ಬರೆಯಬೇಕಾಗಿದೆ" ಎಂದು ಮುಂದು ವರಿಸಿದಳವಳು.

"ಅವಳ ಮನಸ್ಸಿನಲ್ಲಿ ಏನಿರಬಹುದೋ ?" ಎಂದು ಯೋಚಿಸಿದೆ ನಾನು. ಹಾಸಿಗೆಯಿಂದ ನೆಗೆದೆದ್ದೆ, ಮೇಜಿನ ಮುಂದೆ ಕುಳಿತುಕೊಂಡೆ, ಕಾಗದ ಮಸಿ ಹವಣಿಸಿಕೊಂಡೆ, "ಒಳಕ್ಕೆ ಬಾರಮ್ಮಾ ; ಕುಳಿತುಕೊ ; ಬೇಕಾದ್ದನ್ನು ಹೇಳು, ಬರೆದುಕೊಡುತ್ತೇನೆ" ಎಂದೆ.

ಅವಳು ಒಳಕ್ಕೆ ಬಂದು, ಎಚ್ಚರಿಕೆಯಿಂದ ಕುಳಿತುಕೊಂಡಳು; ನನ್ನ ಕಣ್ಣುಗಳ ಕಡೆ ಸೂಕ್ಷ್ಮ ದೃಷ್ಟಿಯಿಂದ ನೋಡಿದಳು.

"ಒಳ್ಳೆಯದು, ಕಾಗದ ಯಾರಿಗೆ ಬರೆಯಲಿ ?" ಎಂದು ಕೇಳಿದೆ,

"ವಾರ್ಸಾ (Warsaw) ರೈಲು ರಸ್ತೆಯ ಮೇಲೆ ಸ್ವೆನ್ಸಿಯಾನಿ (Swenziani) ಇದೆಯಲ್ಲ, ಅಲ್ಲಿ ವಾಸಮಾಡುತ್ತಾರಲ್ಲ ಬೊಲೆಸ್ಲೊ ಕಾಷ್‌ಪು (Boleslov Kaschput), ಅವರಿಗೆ"

"ಅವರಿಗೆ ಏನು ಬರೆಯಲಿ? ಹೇಳು."

"ನನ್ನ ಪ್ರಿಯ ಬೊಲೆಸ್–ನನ್ನ ಪ್ರಿಯತಮಾ–ನನ್ನ ಪ್ರೇಮವೇ–ನನ್ನ ಪ್ರಾಣಪದಕವೇ–ಮೇರಿ ಮಹಾತಾಯಿ ನಿನ್ನನ್ನು ಕಾಪಾಡಲಿ ! ನನ್ನ ಪ್ರಿಯನೇ, ಇಷ್ಟು ದೀರ್ಘಕಾಲವಾದರೂ ನಿನ್ನ ಮುದ್ದು ಪಾರಿವಾಳಕ್ಕೆ, ಇಷ್ಟೊಂದು ವ್ಯಸನ ಪಡುತ್ತಿರುವ ನಿನ್ನ ಟೆರಿಸಾಗೆ, ಏಕೆ ಇನ್ನೂ ಬರೆದಿಲ್ಲ?"

ಏನನ್ನೋ ಹೇಳಬೇಕೆಂದು ಬಹುಕಷ್ಟದಿಂದ ಪ್ರಯತ್ನಪಡುತ್ತಿದ್ದಳೂ. ಅವಳ ವಿಷಯವಾಗಿ ತಪ್ಪು ತಿಳಿದಿದ್ದೇನೆಂದು ತೋರತೊಡಗಿತು ನನಗೆ. ಅಂತೂ, ಒಳ್ಳೆಯ ನಡತೆಯ ದಾರಿಯಿಂದ ಕೆಟ್ಟ ದಾರಿಗೆ ನನ್ನನ್ನು ಎಳೆಯುವ ದುರ್ಭಾವನೆಯಿಂದ ಅವಳು ಬಂದಿರಲಿಲ್ಲ. ಆದರೆ, ಅವಳು ಹೀಗೆ ಬರುತ್ತಿದ್ದುದರಲ್ಲಿ ಏನೋ ಉದ್ದೇಶವಿತ್ತು. ಅದು ಏನೊ ?

"ವಿದ್ಯಾರ್ಥಿಗಳೇ–" ಎಂದು ಮೊದಲುಮಾಡಿದಳು ; ಆದರೆ, ಇದ್ದಕ್ಕಿದ್ದ ಹಾಗೆಯೇ ಮುಖ ತಿರುಗಿಸಿ, ಕೋಣೆಯಿಂದ ಹಿಂದಿರುಗಿ ಹೊರಟು ಹೋದಳು.

ನನ್ನ ಹೃದಯದಲ್ಲಿ ಏನೋ ತಳಮಳವಾದಂತಾಯಿತು. ಅವಳು ತನ್ನ ಕೋಣೆಯ ಬಾಗಿಲನ್ನು ಧಡಾರನೆ ಹಾಕಿಕೊಂಡದ್ದು ನನಗೆ ಕೇಳಬಂತು. ಅವಳು ಕೋಪಗೊಂಡಿದ್ದಳು. ಒಂದು ಕ್ಷಣ ಹಾಗೆಯೇ ಯೋಚಿಸಿ, ಅವಳನ್ನು ಹಿಂದಕ್ಕೆ ಕರೆಯುವುದೆಂದು ತೀರ್ಮಾನಿಸಿದೆ. ಅವಳಿಗೆ ಕಾಗದ ಬರೆದು ಕೊಡೋಣವೆನ್ನಿಸಿತು. ಅವಳಿಗಾಗಿ ವ್ಯಥೆಯುಂಟಾಯಿತು.

ಅವಳ ಕೋಣೆಗೆ ಹೋದೆ. ಅವಳು ಕೈಗಳಿಂದ ಮುಖ ಮುಚ್ಚಿಕೊಂಡು ಕುಳಿತಿದ್ದಳು.

"ಅಯ್ಯೋ, ಹುಡುಗೀ! ನೀನು–" ಎಂದು ಅವಳನ್ನು ಸಂತೈಸಹೋದೆ.

ಕಥೆಯಲ್ಲಿ ಈ ಭಾಗಕ್ಕೆ ಬಂದಾಗ ನನ್ನ ಮನಸ್ಸು ಕರಗಿಹೋಗುತ್ತದೆ. ಅವಳು ತಟ್ಟನೆ ಎದ್ದು, ನೆಟ್ಟಗೆ ನನ್ನ ಬಳಿಗೆ ಬಂದಳು; ಕಣ್ಣುಗಳು ಹೊಳೆಯುತ್ತಿದ್ದುವು; ನನ್ನ ಹೆಗಲ ಮೇಲೆ ತನ್ನ ತೋಳುಹಾಕಿ, ಎದೆ ಬಿರಿಯುವಂತೆ ಅಳತೊಡಗಿದಳು.

"ಈ–ಕೆಲವು–ಕೆಲವು ಪಂಕ್ತಿಗಳನ್ನು–ಬರೆದುಕೊಡಲು–ನಿಮಗೆಕೊಡಲು–ನಿಮಗೆ ನಿಮಗೆ–ಏನು ತೊಂದರೆ ? ಯಾರಿಗೆ–ಆದರೆ–ನಿಮಗೇನು–ಬಾಧಕ ? ಮೊದಲು–ಮೊದಲು ಅಷ್ಟು–ಅಷ್ಟು ಒಳ್ಳೆಯವರಾಗಿ ಕಂಡಿರಿ ! ಹೌದ–ಬೊಲೆಸ್ಲೊ ಯಾರೂ ಇಲ್ಲ–ಟೆರಿಸ–ಟೆರಿಸಾನೂ ಇಲ್ಲ. ಇರುವವಳು ನಾನು ಮಾತ್ರ–ನಾನೇ–ನಾನೊಬ್ಬಳೇ !"

ಅವಳ ಮಾತುಗಳನ್ನು ಕೇಳಿ ಕ್ಷಣಕಾಲ ದಂಗುಬಡಿದುಹೋದೆ ಅಚ್ಚರಿಯಿಂದ. "ಏನು ! ಬೊಲೆಸ್–ಬೊಲೆಸ್ಲೊ ಎಂಬಾತ ಇಲ್ಲವೇ ಇಲ್ಲವೆ ?" ಎಂದೆ.

"ಇಲ್ಲ".

"ಟೆರಿಸಾನೂ ಇಲ್ಲವೆ ?"

ಅವಳಿಗೆ ಸಂಕ್ಷೇಪವಾಗಿ ಒತ್ತಿ ಹೇಳಿದೆ. ಅವಳು ಹೊರಟು ಹೋದಳು.

ಎರಡು ವಾರಗಳು ಕಳೆದುವು. ಒಂದು ದಿನ ಸಂಜೆ, ಬೇಸರ ಕಳೆಯುವುದಕ್ಕಾಗಿ ಏನು ಮಾಡುವುದೆಂದು ಯೋಚಿಸುತ್ತ, ಶೀಟಿ ಹಾಕುತ್ತ ಕಿಟಕಿಯ ಬಳಿ ಕುಳಿತಿದ್ದೆ. ಹೊರಗಡೆ ಹವಾ ಅಧ್ವಾನವಾಗಿತ್ತು ; ಹೊರಕ್ಕೆ ಹೊರಡಲು ಇಷ್ಟವಿರಲಿಲ್ಲ. ತಟ್ಟನೆ ಬಾಗಿಲು ತೆರೆಯಿತು.

"ಅಯ್ಯೋ ದೇವರೆ ! ಯಾರೋ ಬರುತ್ತಿರುವ ಹಾಗಿದೆಯೆ !, ಎಂದುಕೊಂಡೆ.

"ನಿಮಗೆ ಈಗ ತುಂಬ ಕೆಲಸವೆಂದು ಕಾಣುತ್ತೆ?" ಬಂದವಳು ಟೆರಿಸ. ಇವಳಲ್ಲದೆ ಬೇರೆ ಯಾಗು ಬಂದಿದ್ದರೂ ಪರವಾಯಿರಲಿಲ್ಲ.

"ಏನೂ ಇಲ್ಲ. ಯಾಕೆ ?"

"ನನಗೆ ಇನ್ನೊಂದು ಕಾಗದ ಬರೆದುಕೊಡುತ್ತೀರ ?"

"ಆಗಬಹುದು. ಬೊಲೆಸ್ಸಿಗೊ ?"

"ಅಲ್ಲ. ನನಗೆ"

"ನಿನಗೆ !"

"ಹೌದು. ನನಗೆ, ಅವನ ಉತ್ತರ ....."

"ಏನು !"

"ದಯವಿಟ್ಟು ಕ್ಷಮಿಸಿ ; ನಾನು ತಿಳಿಗೇಡಿ, ನಾನು ನಿಮಗೆ ತಿಳಿಯುವ ಹಾಗೆ ಮಾತಾಡಲಿಲ್ಲ. ಕಾಗದ ನನಗಲ್ಲ; ನನ್ನ ಸ್ನೇಹಿತರ ಪೈಕಿ ಒಬ್ಬರಿಗೆ–ಅಂದರೆ, ಅಂಥ ಸ್ನೇಹಿತರೇನಲ್ಲ, ಒಬ್ಬರು ಪರಿಚಯಸ್ಥರು. ಆತನಿಗೆ ಬರೆಯುವುದಕ್ಕೆ ಬರುವುದಿಲ್ಲ–ನನ್ನ ಹಾಗೆ ಒಬ್ಬಾಕೆಗೆ ಮದುವೆಯ ವಾಗ್ದಾನ ಮಾಡಿದ್ದಾನೆ—"

ನಾನು ಒಮ್ಮೆ ಅವಳ ಕಡೆ ನೋಡಿದೆ. ಅವಳು ನಾಚಿಕೆಗೊಂಡವಳಂತೆ ಕಾಣುತ್ತಿದ್ದಳು ; ಅವಳ ಕೈಗಳು ನಡುಗುತ್ತಿದ್ದುವು ; ಅವಳು ಕಕ್ಕಾ ಬಿಕ್ಕಿಯಾಗಿದ್ದಳು. ಅವಳ ವಿಚಾರ ನನಗೆ ಗೊತ್ತಾದಂತೆ ಬಗೆದೆ.

ಅವಳಿಗೆ ಎಚ್ಚರಿಕೆ ಕೊಟ್ಟೆ : "ಇಲ್ಲಿ ಕೇಳು. ನಿನ್ನ ವಿಚಾರ, ನಿನ್ನ ಬೊಲೆಸ್ಲೊ ವಿಚಾರ–ಮುಂತಾಗಿ ನೀನು ನನ್ನೊಡನೆ ಹೇಳುತ್ತಿರುವುದೆಲ್ಲ ಶುದ್ಧಾಂಗವಾಗಿ ನಿನ್ನ ಸೃಷ್ಟನೆ ; ನೀನು ನನಗೆ ಸುಳ್ಳು ಹೇಳುತ್ತಿದ್ದೀಯೆ. ನೀನು ಇಲ್ಲಿಗೆ ಬರುವುದಕ್ಕೆ ಅದೆಲ್ಲಾ ಒಂದು ನೆಪ. ಇನ್ನು ಮೇಲೆ ನಿನ್ನ ಮುಖ ಕೂಡ ನೋಡಲು ಇಷ್ಟವಿಲ್ಲ ನನಗೆ, ತಿಳಿಯಿತೋ ?"

ಅವಳು ಬೆದರಿದಂತೆ ಕಂಡುಬಂತು. ಅವಳ ಮುಖ ಕೆಂಪೇರಿತು ;

ಎಂದು !" ಎಂದು ನಾನೆಂದೆ, ಮೊದಲಿನಂತೆಯೇ ಕಕ್ಕಾಬಿಕ್ಕಿಯಾಗಿ.

"ಅಯ್ಯೋ, ದೇವರೇ ! ಇಲ್ಲದೆಹೋದರೆ ಅದರಿಂದ ನನಗೇನು ! ಯಾರೂ ಇಲ್ಲ, ನಿಜ ; ಆದರೆ, ಬೊಲೆಸ್ಲೋ ಇದ್ದಾನೆಂದು ನನ್ನ ಕಲ್ಪನೆ. ಅವನು ವಾಸ್ತವವಾಗಿ ಬದುಕಿದ್ದಿದ್ದರೆ ಹೇಗೋಹಾಗೆ ಆತನಿಗೆ ಬರೆಯುತ್ತೇನೆ ; ಆತ ನನಗೆ ಉತ್ತರ ಕೊಡುತ್ತಾನೆ ; ನಾನು ಮತ್ತೆ ಬರೆಯುತ್ತೇನೆ, ಮತ್ತೆ ಆತ ಮಾರುತ್ತರ ಕೊಡುತ್ತಾನೆ–".

ಕಟ್ಟ ಕಡೆಗೆ ನನಗೆ ಅರ್ಥವಾಯಿತು.

ದೇಹದ ನೋವಿನಿಂದ ಹೇಗೊ ಹಾಗೆ ಧಕ್ಕೆ ತಗುಲಿದಂತಾಗಿ, ಏನೋ ಅಪರಾಧವೆಸಗಿದಂತೆ ಭಾವನೆಯಾಯಿತು, ನಾಚಿಕೆಯಾಯಿತು. ನನ್ನ ಬಳಿಯಲ್ಲಿ, ತೋಳು ಚಾಚಿನಷ್ಟು ಹತ್ತರದಲ್ಲಿ, ಇದ್ದ ಈ ಮಾನವ ಪ್ರಾಣಿಗೆ ಪ್ರೀತಿಯ ಲವಲೇಶವನ್ನು ತೋರುವವರೊಬ್ಬರಿರಲಿಲ್ಲ ಪ್ರಪಂಚದಲ್ಲಿ ; ತಂದೆ ತಾಯಿಯಿಲ್ಲ; ಕೆಳೆಯರಿಲ್ಲ, ಯಾರೂ ಇಲ್ಲ ! ಈ ಬಡಪ್ರಾಣಿ ತನಗಾಗಿ ಒಬ್ಬ ಇನಿಯನನ್ನು, ಮದುಮಗನನ್ನು, ಸೃಷ್ಟಿಸಿಕೊಂಡಿತ್ತು !

ಅವಳು ತನ್ನ ಬೇಸರ ಹಿಡಿಸುವ ಗೊರಗು ದನಿಯಲ್ಲಿ ಮುಂದುವರಿಸಿದಳು: "ಈ ಕಾಗದವನ್ನು ನೀವು ನನಗಾಗಿ ಬೊಲೆಸ್ಲೋಗೆ ಬರೆದಿರಿ–ಅದನ್ನು ನನಗೆ ಗಟ್ಟಿಯಾಗಿ ಓದಿ ಹೇಳುವಂತೆ ಬೇರೊಬ್ಬರನ್ನು ಕೇಳಿಕೊಂಡೆ. ಕಾಗದ ಕೇಳಿ, ಬೊಲೆಸ್ಲೊ ಬದುಕಿದ್ದಾನೆಂದು ಬಗೆದೆ, ಆಮೇಲೆ, ಬೊಲೆಸ್ಲೋವಿನಿಂದ ಟೆರಿಸ್ಸಾಗೆ– ಅಂದರೆ ನನಗೆ–ಉತ್ತರ ಬೇಕೆಂದು ಕೋರಿದೆ. ಬೊಲೆಸ್ಲೊ ಎಲ್ಲಿಯೋ ಬದುಕಿರಬೇಕೆಂದು ನನಗೆ ಖಂಡಿತವಾಗಿ ಅನಿಸಹತ್ತಿದೆ ; ಎಲ್ಲೋ ನಾನರಿಯೆ– ಹೀಗೆ, ನನಗೆ ಜೀವದಿಂದಿರಲು ಸಾಧ್ಯವಾಗಿದೆ. ಅಷ್ಟೊಂದು ಕಷ್ಟವಾಗಿಲ್ಲ, ಅಷ್ಟೊಂದು ಭಯಂಕರವಾಗಿಲ್ಲ, ಅಷ್ಟೊಂದು ಒಂಟಿಯಾಗಿಲ್ಲ!"

ಅಂತೂ, ಅಂದಿನಿಂದ ಮೊದಲ್ಗೊಂಡು, ವಾರಕ್ಕೆ ಎರಡು ದಿನ ಕ್ರಮವಾಗಿ, ಟೆರಿಸಾ ಇಂದ ಬೊಲೆಸ್ಲೋವಿಗೂ ಬೊಲೆಸ್ಲೋವಿನಿಂದ ಟೆರಿಸಾವಿಗೂ ಕಾಗದಗಳನ್ನು ಬರೆದೆ. ನಾನು ಅವುಗಳನ್ನು ಮನಃಪೂರ್ವಕವಾಗಿ ಬರೆದೆ ; ಅವುಗಳು, ಅದರಲ್ಲೂ ಉತ್ತರಗಳು, ಭಾವಾವೇಶದಿಂದ ತುಂಬಿ ತುಳುಕುತ್ತಿದ್ದುವು. ಅವಳು ಕಾಗದಗಳನ್ನು ಓದಿಸಿ ಕೇಳುತ್ತಿದ್ದಳು, ಕೇಳಿ ಅಳುತ್ತಿದ್ದಳು, ನಗುತ್ತಿದ್ದಳು, ಸುಖಪಡುತ್ತಿದ್ದಳು. ಇದಕ್ಕೆಲ್ಲ ಪ್ರತಿಯಾಗಿ, ನನ್ನ ಬಟ್ಟೆ ಬರೆಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದಳು ; ನನ್ನ ಷರಟುಗಳನ್ನೂ ಕಾಲು ಚೀಲಗಳನ್ನೂ ಹರಿದಿದ್ದರೆ ಸರಿಪಡಿಸಿಕೊಡುತ್ತಿದ್ದಳು ; ಜೋಡುಗಳನ್ನು ಒರಸಿ, ಟೋಪಿಯು ಧೂಳು

"ಇಲ್ಲ–ಅಂದರೆ–ಆದರೆ–ನಾನೇ ಟೆರಿಸ".

ನನ್ನ ತಲೆ ಗಿರ್ರನೆ ತಿರುಗತೊಡಗಿತು. ಬೆರಗು ನೋಟದಿಂದ ಅವಳ ಕಡೆ ನೋಡಿದೆ. ನಮ್ಮಿಬ್ಬರಲ್ಲಿ ಯಾರದೋ ಒಬ್ಬರ ತಲೆ ಕೆಟ್ಟಿರಬೇಖು ; ಅದು ಖಂಡಿತ. ಅವಳು ಮೇಜನ ಬಳಿ ಹೋಗಿ, ಸೆಳೆಖಾನೆಯಲ್ಲಿ ತಡಕಾಡಿ, ಒಂದು ಚೂರು ಕಾಗದ ತಂದಳು.

"ಇದೋ ನೋಡಿ, ನೀವು ಬರೆದುಕೊಟ್ಟ ಕಾಗದ ; ಅದನ್ನು ಹಿಂದಕ್ಕೆ ತೆಗೆದುಕೊಳ್ಳಿ. ಇನ್ನೊಂದು ಕಾಗದ ಬರೆದುಕೊಡಲು ನಿಮಗೆ ಇಷ್ಟವಿಲ್ಲ. ನಿಮಗಿಂತ ಹೆಚ್ಚು ಕರುಣೆಯುಳ್ಳವರು ಯಾರನ್ನಾದರೂ ಕೇಳಿ ಕೊಂಡರೆ ಬರೆದುಕೊಟ್ಟಾರು".

ಅವಳ ಬೊಲೆಸ್ಲೋವಿಗೆ ಅವಳಿಗಾಗಿ ನಾನು ಬರೆದುಕೊಟ್ಟಿದ್ದ ಕಾಗದವನ್ನು ಅವಳು ಕೈಲಿ ಹಿಡಿದಿದ್ದಳು. ಇದರ ಅರ್ಥವೇನೋ ದೇವರೇ ಬಲ್ಲ ಎಂದುಕೊಂಡೆ.

"ಟೆರಿಸಾ, ಇಲ್ಲಿ ಕೇಳು. ಇದು ಏನು? ಇದನ್ನು ನೀನು ಅಂಚೆಗೆ ಹಾಕದೆ ಇರುವಾಗ, ಬೇರೆಯವರೇಕೆ ನಿನಗಾಗಿ ಕಾಗದಗಳನ್ನು ಬರೆದು ಕೊಡಬೇಕು?"

"ಇದನ್ನು ಯಾರಿಗೆ ಅಂಚೆಗೆ ಹಾಕಲಿ ?"

"ಯಾರಿಗೆ ಅಂದರೆ ! ಬೊಲೆಸೋವಿಗೆ–ನಿನ್ನನ್ನು ಮದುವೆಯಾಗುತ್ತೇನೆಂದು ಹೇಳಿರುವವನಿಗೆ!"

"ಆದರೆ–ಅಂಥವನೊಬ್ಬನು ಯಾರೂ ಇಲ್ಲ".

ನನಗೆ ಏನು ಹೇಳುವುದಕ್ಕೂ ತೋರಲಿಲ್ಲ, ಸುಮ್ಮನಾದೆ. ಹೊರಟು ಹೋಗುವುದಲ್ಲದೆ ಬೇರೆ ಮಾರ್ಗವೇ ಇರಲಿಲ್ಲ. ಆದರೆ ಅವಳು ಮತ್ತೆ ಮಾತನಾಡಲು ಮೊದಲು ಮಾಡಿದಳೂ :

"ಇಲ್ಲ ; ಅವನು – ಇಲ್ಲ ; ಬೊಲೆಸ್ಲೊ ಇಲ್ಲ" ಎಂದು ಒಂದು ಬಗೆಯ ಕೈಗಳ ಚೇಷ್ಟೆಯೊಡನೆ ಹೇಳಿದಳು ; ಹೇಳಬೇಕೆಂದಿದ್ದುದನ್ನು ವಿವರಿಸುವುದು ಅಸಾಧ್ಯವೆಂಬುದು ಅದರಿಂದ ವ್ಯಕ್ತವಾಗುತ್ತಿತ್ತು.

ಅವಳು ಮುಂದುವರಿಸಿದಳು : "ಆದರೆ, ಅವನು ಬದುಕಿದ್ದಿರ ಬೇಕೆಂದು ನನ್ನ ಆಸೆ, ನಾನು ಇತರರಂತಲ್ಲ, ನನಗೆ ಗೊತ್ತು–ನಾನು ಎಂಥವಳೆಂಬುದು ನನಗೆ ಗೊತ್ತು. – ಆದರೆ, ನಾನು ಅವನಿಗೆ ಬರೆಯುವುದರಿಂದ ಯಾರಿಗೂ ತೊಂದರೆಯಾಗುವುದಿಲ್ಲ".

"ಹಾಗೆಂದರೆ ? ಯಾರಿಗೆ ?"

"ಯಾರಿಗೆ! ಮತ್ತೆ ಯಾರಿಗೆ, ಬೊಲೆಸ್ಲೋಗೆ !"

"ಆದರೆ ಈಗ ತಾನೆ ನೀನು ಹೇಳಿದೆ, ಅಂಥ ವ್ಯಕ್ತಿ ಯಾರೂ ಇಲ್ಲ

# ಬಿಸಿಲು ಬೆಳದಿಂಗಳು ಕಥಾಸಂಕಲನ

## ಬಿನ್ನಹ

ಈ ಸಂಕಲನದಲ್ಲಿನ ಕಥೆಗಳನ್ನು ಕುರಿತು ನಾನು ಬಿನ್ನವಿಸಿಕೊಳ್ಳಬೇಕಾದ ವಿಶೇಷ ಸಂಗತಿಯೇನೂ ಇಲ್ಲ. ಅದು ಏನಿದ್ದರೂ ಎರಡು ಕೃತಜ್ಞತೆಯ ಮಾತು.

ಈ ಹಿಂದೆ ಪ್ರಕಟವಾಗಿರುವ ನನ್ನ ಎಲ್ಲ ಕಥೆಗಳನ್ನಲ್ಲದಿದ್ದರೂ ಕೆಲವನ್ನಾದರೂ ಕನ್ನಡ ಲೋಕ ಮೆಚ್ಚಿಕೊಂಡಿದೆಯೆಂದು ನನ್ನ ನಂಬಿಕೆ. ಆ ನಂಬಿಕೆಯ ಸತ್ತ್ವದಲ್ಲಿ ನನ್ನ ಲೇಖನಿಯನ್ನದ್ದಿ ಇಲ್ಲಿನ ಕಥೆಗಳನ್ನು ಬರೆದದ್ದಾಗಿದೆ. ಇವನ್ನು ಬರಿದ ಕನ್ನಡ ವಾಚಕವೃಂದಕ್ಕೆ ನಾನು ಸದಾ ಕೃತಜ್ಞ.

ಈ ಸಂಕಲನದಲ್ಲಿನ ಎಲ್ಲ ಕಥೆಗಳೂ ಈ ಮುಂದೆ ಕಂಡಂತೆ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ : "ದೃಷ್ಟಿಲಾಭ"–ಕಥೆಗಾರ, ೧೮ನೆಯ ವಾರ್ಷಿಕ ಸಂಚಿಕೆ, ೧೯೪೯ ; "ನೂರನಲವತ್ತೆರಡು"–ಪ್ರಜಾಮತ, ದೀಪಾವಳಿಯ ಸಂಚಿಕೆ, ೧೯೫೮ ; "ನೂರನಲವತ್ತೆರಡು"–ಪ್ರಜಾಮತ, ದೀಪಾವಳಿಯ ಸಂಚಿಕೆ, ೧೯೫೭; "ನಿಷ್ಪ್ರಯೋಜಕ"–ಪ್ರಕಾಶ, ೧೯೫೮ ; "ತಂತಿ ಕಿತ್ತ ಪಿಟೀಲು"–ಕನ್ನಡನುಡಿ, ನವೆಂಬರ್ ೧೯೬೦ ; "ಆ ಚೋಟುದ್ದದ ಹುಡುಗ"–ಜೀವನ, ಆಗಸ್ಟ್ ೧೯೫೬ "ಗಂಡಿನ ಹೃದಯ"–ಪ್ರಭಾತ, ವಾರ್ಷಿಕ ಸಂಚಿಕೆ, ೧೯೬೧ ; "ಗೌರಿಯ ಸಾವು" – ವಾಹಿನಿ, ವಾರ್ಷಿಕ ಸಂಚಿಕೆ, ಸೆಪ್ಟೆಂಬರ್ ೧೯೫೬ ; "ತಾಯಿ–ಮಗ"–ಕಥಾವಳಿ, ವಾರ್ಷಿಕ ಸಂಚಿಕೆ, ೧೯೫೭ ; "ಮೋಡದ ದಿಬ್ಬಣ" ಜನಪ್ರಿಯ, ಡಿಸೆಂಬರ್ ೧೯೬೦. ೧೯೫೬ ರಿಂದ ೧೯೬೧ರ ವರೆಗೆ ಎಂದರೆ ಆರೇಳು ವರ್ಷಗಳ ಅವಧಿಯಲ್ಲಿ ಬರೆದ ಕಥೆಗಳಲ್ಲಿ ಕೆಲವು ಇಲ್ಲಿ ಬೆಳಕು ಕಂಡಿವೆ ; ಉಳಿದವು ಇನ್ನೊಂದು ಸಂಕಲನಕ್ಕೆ ಮೀಸಲಾಗಿವೆ.

ಮೇಲ್ಕಂಡ ಕಥೆಗಳನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಉಪಕಾರ ಮಾಡಿದ ಆಯಾ ಪತ್ರಿಕೆಗಳ ಸಂಪಾದಕರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಇನ್ನು ಈ ಸಂಕಲನದ ಪ್ರಕಾಶನ ; ಪ್ರಭಾ ಪ್ರಕಟನಾಲಯದವರು ಕೇವಲ ಸಾಹಿತ್ಯ ಸೇವೆಯ ಸದುದ್ದೇಶದಿಂದ ಪ್ರೇರಿತರಾಗಿ, ನನ್ನ ಕಥೆಗಳ ಸಂಕಲನವನ್ನು ತಮ್ಮ ಮೊದಲ ಪ್ರಕಟನೆಯಾಗಿ ಪ್ರಕಟಿಸಬೇಕೆಂದು ಅಪೇಕ್ಷಿಸಿದರು. ಇದು ಅವರ

ಝಾಡಿಸಿಡುತ್ತಿದ್ದಳು.

ಮೂರು ತಿಂಗಳುಗಳ ತರುವಾಯ ಏನೋ ಗುಮಾನಿಯ ಮೇಲೆ ಅವಳನ್ನು ದಸ್ತಗಿರಿಮಾಡಿ ಜೈಲಿಗೆ ಹಾಕಿದರು. ಅವಳನ್ನು ಮತ್ತೆ ಕಾಣಲಾಗಲಿಲ್ಲ. ಅವಳು ಸತ್ತುಹೋಗಿರಬೇಕು.



# ಬಿಸಿಲು – ಬೆಳದಿಂಗಳು ಕಥಾಸಂಕಲನ

## ೧. ಗಂಡಿನ ಹೃದಯ

ನನ್ನ
ಕಾಲೇಜು ದಿನಗಳ
ಮೂವರು ಗೆಳೆಯರ
ಸ್ನೇಹದ
ಸವಿ ನೆನಪಿಗೆ

ವಿಶ್ವಾಸ ಮಾತ್ರವಲ್ಲದ, ಅವರು ನನಗೆ ತೋರಿದ ಗೌರವ ಇದಕ್ಕಾಗಿ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಅವರಿಗೆ ಸಮರ್ಪಿಸಿ, ಅವರ ಸಾಹಿತ್ಯಸೇವೆ ವ್ಯಾಪಕವಾಗಿಯೂ ಬಹುಮುಖವಾಗಿಯೂ ಚಿರಕಾಲ ನಡೆಯಲೆಂದು ಹಾರೈಸುತ್ತೇನೆ.

ಈ ಗ್ರಂಥದ ಪ್ರಕಟನ ಕಾರ್ಯದಲ್ಲಿ ನನ್ನ ಗೆಳೆಯರು ಶ್ರೀ ಎಂ.ಎಸ್. ನಾರಾಯಣರಾಯರು ಬಗೆಬಗೆಯಲ್ಲಿ ಶ್ರಮವಹಿಸಿ ಸಹಕರಿಸಿದ್ದಾರೆ. ಅವರಿಗೂ ನನ್ನ ವಂದನೆ.

೩೦–೪೦–೧೯೫೩
ಬೆಂಗಳೂರು **ಮೈಸೂರು ಸೀತಾರಾಮಯ್ಯ**

# ಗಂಡಿನ ಹೃದಯ

## (ಬಿಸಿಲು – ಬೆಳದಿಂಗಳು ಕಥಾಸಂಕಲನದಿಂದ)

ಗೂಗ್ಲೀಲ್ಮೊ ಬಾಗಿಲ ಕರೆಗಂಟೆ ಬಾರಿಸಿದ್ದನ್ನು ಕೇಳಿದನು. ಬಳಿಕ ಯಾರೋ ಒಳಕ್ಕೆ ಹೋಗಿ ಹಜಾರದಲ್ಲಿ ಮಾತಾಡುತ್ತಿದ್ದುದೂ ಅವನಿಗೆ ಕೇಳಿಸಿತು. ಆದರೆ ಅವನು ಕದಲಲಿಲ್ಲ. ಅವರು ಯಾರಿರಬಹುದು  ಔಷಧಿಯಂಗಡಿಯ ಕೆಲಸದ ಹುಡುಗನೆ, ರೊಟ್ಟಿಯಂಗಡಿಯವನೆ, ಇಲ್ಲವೆ ಒಕ್ಕಲಗಿತ್ತಿಯೆ ? ತನ್ನ ಸರಳವಾದ ಏಕಪ್ರಕಾರವಾದ ಜೀವನದ ವಿವರಗಳೆಲ್ಲವೂ ಅವನಿಗೆ ಹೃದ್ಗತವಾಗಿದ್ದವು. ತನ್ನ ಓದುವ ಕೋಣೆಯಲ್ಲಿ ಕುಳಿತು ಅವನು ಪ್ರತಿದಿನದ ಕಾರ್ಯಕಲಾಪಗಳ ಗತಿಯ ಏಕನಾದವನ್ನು ಆಲಿಸುತ್ತಿದ್ದನು. ಅಂದು ಜರುಗುತ್ತಿದ್ದ ಎಂದಿನವಲ್ಲದ ಘಟನೆಗಳು ಕೂಡ ಅವನಿಗೆ ಹಿಂದೆ ಪರಿಚಯವಾದ ಘಟನೆಗಳಂತೆ ಕಿವಿಯಲ್ಲಿ ಮೊರೆಯ ತೊಡಗಿದವು : ಅವುಗಳಲ್ಲಿ ಅವನು ವಿಶೇಷ ಆಸಕ್ತಿ ವಹಿಸಲಿಲ್ಲ ; ಉದಾಹರಣೆಗೆ, ಔಷಧ ವ್ಯಾಪಾರಿ ಹೊಸಬ ; ಆದಮಾತ್ರಕ್ಕೆ ತಾನೇಕೆ ಕುಳಿತ ಕಡೆ ಬಿಟ್ಟು ಕದಲಬೇಕು ? ಘಟನೆಗಳ ಕಾರ್ಯಗತಿಯನ್ನು ವ್ಯತ್ಯಾಸಗೊಳಿಸಲು ಅವನು ಏನನ್ನೂ ಅರಿಯ ; ಅವನು ಏನನ್ನೂ ಮಾಡಲಾರ. ಅವನು ತನಗೆ ತಾನು ಹೇಳಿಕೊಳ್ಳುತ್ತಿದ್ದನು : “ಇನ್ನೇನು ತುಸು ಹೊತ್ತಿನಲ್ಲಿ ಸೂಲಗಿತ್ತಿ ಅಕಾರ್ಡಿ ಬರುತ್ತಾಳೆ. ಆಮೇಲೆ ಡಾಕ್ಟರು ಬರುತ್ತಾರೆ. ಅನಂತರ ಬಾಗಿಲ ಗಂಟೆ ಮತ್ತೆ ಮತ್ತೆ ಬಾರಿಸುತ್ತದೆ. ಒಂದೆರಡು ಗಂಟೆಯಲ್ಲಿ ಎಲ್ಲವೂ ಮುಗಿದುಹೋಗುತ್ತದೆ.”

ತನ್ನ ಮನಸ್ಸಿನ ಆತಂಕವನ್ನು ಅಡಗಿಸುವುದಕ್ಕಾಗಿ ಅವನು ಮತ್ತೆ ಓದತೊಡಗಿದನು : ವಸಂತದ ಹಸುರುಹೊದೆದ ಊರಹೊರಗಿನ ಚಿಕ್ಕ ತೋಟದ ಕಡೆ ಕೆತ್ತೆತ್ತಿಯೂ ನೋಡಲಿಲ್ಲ. ಅವನ ವ್ಯಾಸಂಗವೂ ಅವನ ಬಾಳಿನಷ್ಟೆ ನಿರಾಡಂಬರವಾದದ್ದು. ಈಗ, ಓದ ಓದುತ್ತಲೇ ತನ್ನ ಬಾಳಿನ ವಿಚಾರವಾಗಿ ಆಲೋಚಿಸತೊಡಗಿದನು.........ಅವನಿಗೆ ಮದುವೆಯಾದಾಗ ಇಪ್ಪತ್ತೈದು ವರ್ಷ: ಈಗ ಅವನಿಗೆ ಮೂವತ್ತು. ಐದು ವರ್ಷಗಳ ವೈಶಿಷ್ಟ್ಯವಿಲ್ಲದ ಜೀವನ ; ಗಮನಿಸುವ ಮಟ್ಟಿಗೆ ಸುಖವಾದದ್ದೂ ಅಲ್ಲ, ಸುಖವಿಲ್ಲದ್ದೂ ಅಲ್ಲ. ಅವನಿಗೋಸುಗ ಅವನ ತಾಯಿ ಮಾಡಿದ್ದ ಅಸಾಧಾರಣವಾದ ವ್ಯವಸ್ಥೆ ಸಂಪೂರ್ಣವಾಗಿ ಸಿದ್ಧಿಸಿತ್ತು; ಅದು ಸಿದ್ಧಿಸಲು ಅವನೂ ಅವಕಾಶಕೊಟ್ಟಿದ್ದನು ; ತನ್ನ ವ್ಯಕ್ತಿಪ್ರಭಾವವನ್ನು

ಬಿಟ್ಟುಬಿಟ್ಟಿದ್ದನು. ಆನಾ ಎತ್ತರವಾದ, ಚೆಂದದ ಹುಡುಗಿ : ಯಾವಾಗಲೂ ಒಳ್ಳೆಯ ಉಡುಪನ್ನೇ ಉಟ್ಟು, ಪರಿಮಳ ಪೂಸಿಕೊಂಡು, ಸೊಗಸಾಗಿ ಕಾಣುವಳು. ಅವನ ತಾಯಿಗೆ ಇವಳೂ "ಭ್ರಾಂತಿ" ; ಇವಳ ವಿರುದ್ಧವಾಗಿಯೇ ಆಕೆಯ ಹೋರಾಟ. "ಇಂಥವನಿಂದ ಅವಳಿಗೆ ಆಗಬೇಕಾದದ್ದೇನು ? ಎಲ್ಲಿಂದೆಲ್ಲಿಗೆ ! ಅವಳ ಗುರಿ ಇನ್ನೂ ಬಹು ಮೇಲಿನದು............ಇವನಲ್ಲಿ ಪ್ರೀತಿಯೆ ? ಛೆ, ಎಲ್ಲಿ ಬಂತು. ತನ್ನ ವಿನೋದಕ್ಕಾಗಿ ಸುಮ್ಮನೆ ಇವನೊಂದಿಗೆ ಚೆಲ್ಲಾಟವಾಡುತ್ತಿದ್ದಾಳೆ ; ತನ್ನ ಮನಸ್ಸಿನಲ್ಲಿ ಇವನಿಗೆ ಸ್ವಲ್ಪವೂ ಎಡೆಕೊಟ್ಟಿಲ್ಲ. ಇದು ಅವನ ಅರಿವಿಗೆ ಬಂದಿಲ್ಲವೆ ?"

ಈ ಮಾತುಗಳು ಅವನ ಕನಸನ್ನು ಕರಗಿಸಿಬಿಟ್ಟಿದ್ದುವು ; ಕ್ರೂರವಾಗಿ, ಅಡೆತಡೆಯಿಲ್ಲದೆ ; ತೊಟತೊಟನೆ ತೊಟ್ಟಿಕ್ಕುವ ನೀರು ಕಲ್ಲನ್ನೇ ಸವೆಸುವ ಹಾಗೆ. ಆದ್ದರಿಂದ ಅವನು ಐರೀನಳನ್ನು ಮದುವೆಯಾದನು–ಶಾಂತಿ, ಸುಖ.......

ಸಪ್ಪೆಯ ಸುಖದ ಹಲವು ವರ್ಷ ಕಳೆದ ಮೇಲೆ ಐರೀನಳಿಗೆ ಪುತ್ರಜನನವಾಗುವುದರಲ್ಲಿತ್ತು. ಮೊದಲು ಈ ಬಗ್ಗೆ ಗೂಗ್ಲೀಲೊಗೆ ಅಷ್ಟೇನೂ ಉತ್ಸಾಹವಿರಲಿಲ್ಲ. "ಭ್ರಾಂತಿ"ಗಳನ್ನು ಇಟ್ಟುಕೊಳ್ಳಬೇಡ ಎಂದು ಎಚ್ಚರಿಕೆ ಕೊಡುವುದಕ್ಕಾಗಿಯೇ ಇನ್ನೊಂದು ಜೀವವನ್ನು ಬೆಳಸುವ ಕಾಲ ಬಂದಿತೆಂದು ಅವನು ಈಗ ಭಾವಿಸಿದನು. ಕೆಲವು ತಿಂಗಳುಗಳು ಕಳೆದ ಮೇಲೆ, ನದಿ ನೆರೆ ತುಂಬಿ ನಾಡನ್ನು ಕೊಚ್ಚುವಂತೆ, ಅವನ ಹೃದಯದ ತುಂಬ ನಲವೇರಿತು. ಕಡೆಗೊಬ್ಬ ಪುತ್ರ ; ತನ್ನ ಹಿಂದಿನ ಎಲ್ಲ ದುಃಖಗಳಿಗೂ ಪ್ರೇಮ ಸೌಖ್ಯಗಳ ತ್ಯಾಗಕ್ಕೂ ಪ್ರತಿಫಲ !

ಈ ಸಲ ಅವನು ಯೋಚನೆಯ ಮಂಪರದಿಂದ ಎಚ್ಚತ್ತು, ತನ್ನ ಓದುವ ಕೋಣೆಯನ್ನು ಬಿಟ್ಟು, ಹೊರಗೆ ನಡವೆಯನ್ನು ಸೇರಿದನು. ಪೂತಿನಾಶಕದ ಕಟುವಾಸನೆ ಅವನ ಹೆಂಡತಿಯ ಕೋಣೆಯಿಂದ ಹೊರ ಬರುತ್ತಿತ್ತು. ಅವನು ಬಹಳ ಕಷ್ಟದಿಂದ ಕಿವಿಕೊಟ್ಟು ಆಲಿಸಿದ್ದರೆ ಬಹಳ ನರಳುವ ದನಿಯೂ ಅವನಿಗೆ ಕೇಳಿಬರುತ್ತಿತ್ತು.............ಆದರೆ ತಟ್ಟನೆ ಹೊರಗಿನಿಂದ ಒಂದು ನೆರಳು ಅವನ ಮುಂದೆ ಸುಳಿಯಿತು ; ಬಲವಾದ, ಶಾಂತವಾದ, ದನಿಯೊಂದು ಅವನ ಆಲೋಚನೆಯ ಎಳೆಯನ್ನು ಕತ್ತರಿಸಿತು. :

"ಇದೇ ತಾನೆ ನಾನಿಲ್ಲಿ ಬಂದೆ. ನಾನು ಬಂದದ್ದು ಗೊತ್ತಾಯಿತೆಂದು ಕಾಣುತ್ತೆ".

ಮಾತಾಡಿದಾತ ಡಾಕ್ಟರು : ಇವನ ಹಳೆಯ ಶಾಲಾ ಸ್ನೇಹಿತ ; ಇವನ

ತೋರಿಸುವುದಕ್ಕೇ ಆಗದಷ್ಟು ಅತಿ ಸೋಮಾರಿತನ ಅವನದು; ಅಲ್ಲದೆ ತನ್ನ ಗುಣಗಳಲ್ಲಿಯೇ ಆಗಲಿ ತನ್ನ ಕಾರ್ಯಸಾಮರ್ಥ್ಯದಲ್ಲಿಯೇ ಆಗಲಿ ಅವನಿಗೇ ನಂಬಿಕೆಯಿಲ್ಲ. ಅವನ ತಾಯಿಯಾದರೂ ಎಲ್ಲ ಮಧ್ಯವಯಸ್ಸಿನ ಸ್ತ್ರೀಯರಂತೆಯೇ ತನ್ನ ಮಗನ ವಿಚಾರದಲ್ಲಿ ಸಾಧಾರಣ ರೀತಿಯ ಬಯಕೆಗಳನ್ನೇ ಇಟ್ಟುಕೊಂಡಿದ್ದಳು; ತಮ್ಮ ಮಕ್ಕಳು ಕಟ್ಟಕಡೆಗೆ ಜೀವನವನ್ನು ಎದುರಿಸಬೇಕಾದ ಸನ್ನಿವೇಶದಲ್ಲಿ ಅವರ ಬಗ್ಗೆ ತಂದೆ ತಾಯಿಗಳು ಯಾವ ಹೆಚ್ಚಿನ ಭ್ರಾಂತಿಯನ್ನೂ ಇಟ್ಟುಕೊಳ್ಳದೆ ಎಚ್ಚರಿಕೆಯಿಂದ ಕೂಡಿದ ವಾತ್ಸಲ್ಯವನ್ನು ತೋರುತ್ತಾರೆಯೋ ಅದೇ ಬಗೆಯ ವಾತ್ಸಲ್ಯದಿಂದ ಆಕೆ ತನ್ನ ಮಗನಿಗೆ ಹೀಗೆ ಉಪದೇಶಮಾಡಿದ್ದಳು : "ನೀನು ಐರೀನಳನ್ನು ಮದುವೆಮಾಡಿಕೊ. ಅವಳು ನಿನಗೆ ತಕ್ಕ ಹೆಣ್ಣು. ನಿನಗೆ ಯೋಗ್ಯಳಾದವಳೆಂದರೆ ಅವಳೊಬ್ಬಳೆ. ಅವಳು ಅಷ್ಟು ಅಂದವಾಗಿಲ್ಲ, ಒಪ್ಪಿಕೊಳ್ಳುತ್ತೇನೆ. ಆದರೆ ಒಳ್ಳೆ ಗಂಭೀರ ಸ್ವಭಾವದವಳು : ಗಟ್ಟಿಗಳು. ಹಣವಂತಳಲ್ಲದಿದ್ದರೂ ತಕ್ಕಮಟ್ಟಿಗೆ ಅನುಕೂಲಸ್ಥಿತಿಯಲ್ಲಿದ್ದಾಳೆ........... ಇಷ್ಟಕ್ಕೂ ಹಣವನ್ನಲ್ಲವಲ್ಲ ನೀನು ಮದುವೆಮಾಡಿಕೊಳ್ಳುವುದು ! ಮಕ್ಕಳುಮರಿ ಹಡೆದು, ಒಳ್ಳೆ ಗೃಹಿಣಿಯಾಗಿರುತ್ತಾಳೆ............ ಇದಕ್ಕಿಂತ ಹೆಚ್ಚಿಗೆ ನಿನಗೆ ಆಗಬೇಕಾದ್ದೇನು? ನೋಡು, ಇದು ನಿನಗೆ ತಿಳಿಯದ್ದಲ್ಲ ; ಇಲ್ಲದ ಸಲ್ಲದ ಭ್ರಾಂತಿ ಇಟ್ಟುಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ."

ಖಂಡಿತವಾಗಿಯೂ ಅವನು ಯಾವ ಭ್ರಾಂತಿಯನ್ನೂ ಇಟ್ಟುಕೊಂಡಿರಲಿಲ್ಲ. ತನ್ನ ತಾಯಿಯನ್ನು ಮೆಚ್ಚಿಸುವುದಕ್ಕಾಗಿ ಅವನು ಐರೀನಳನ್ನು ಮದುವೆಯಾಗಿದ್ದನು. ತನ್ನ ತಾಯಿಯ ಸುಖದ ಕಲ್ಪನೆಗೆ ಅನುಗುಣವಾಗಿ ಸುಖವಾಗಿರುವುದನ್ನು ಅಭ್ಯಾಸಮಾಡಿಕೊಂಡಿದ್ದನು.

ಅದು ಸಪ್ಪೆಯಾದ, ಬತ್ತಿಹೋಗಿದ್ದ ಸುಖ ; ಪಥ್ಯವೆಂದು ಸಪ್ಪೆಯ ಸಾರು ಊಟಮಾಡಿದಂತೆ. ಅವನ ತಾಯಿ "ಭ್ರಾಂತಿ" ಎಂದು ಅವನೊಂದಿಗೆ ಹೇಳಿದಾಗ ಅದು ಏನೆಂಬುದನ್ನು ಅವಳು ಸಂಪೂರ್ಣವಾಗಿ ಅರಿತಿದ್ದಳು. ಗೂಗ್ಲೀಲ್ಮೋವಿನ ಭಾಗಕ್ಕೆ ಭ್ರಾಂತಿ ಎಂದರೆ ಅವನ ಸೋದರತ್ತೆಯ ಮಗಳು ಆನಾ. ಅವಳ ತಾಯಿ ಧನಿಕನಾದ ಒಬ್ಬ ವರ್ತಕನ ಹೆಂಡತಿ. ಗೂಗ್ಲೀಲ್ಮೊ ಹುಡುಗನಾಗಿದ್ದಂದು ಅವರ ಮನೆಗೆ ಬಹಳವಾಗಿ ಹೋಗಿಬರುತ್ತಿದ್ದನು ; ಆದರೆ ಅವನು ದೊಡ್ಡವನಾದಂತೆ ಅವನ ಸೋದರತ್ತೆಯ ಸಂಶಯಗಳೂ ಎರಡು ಕುಟುಂಬಗಳ ಭಾಗ್ಯಭೇದಗಳೂ ನಡುವೆ ಒಂದು ಕಮರಿಯನ್ನು ಕಲ್ಪಿಸಿದ್ದುವು. ಇದರಿಂದಾಗಿ ಅವನು ಅವರ ಮನೆಗೆ ಹೋಗುವುದನ್ನೇ

ಮಾತುಕತೆಯಿಲ್ಲ–ಹೆಚ್ಚೆಂದರೆ ಒಂದೆರಡು ಮುಗುಳುನಗೆ ; ಸ್ನೇಹಿತರಂತೆ ಅವನ ಕೈ ಕುಲುಕುವಳು. ತನ್ನ ತಾಯಿ ಅರ್ಧಮಟ್ಟಿಗೆ ಮಾತ್ರ ತಪ್ಪು ತಿಳಿದಳೆಂದು ಅವನು ಭಾವಿಸುವನು. ಆನಾ ಅಷ್ಟೊಂದು ಅತ್ಯಾಶೆಯುಳ್ಳವಳಲ್ಲದಿರಬಹುದು ; ಆದರೂ ವಿಶ್ವಾಸಪರಳಲ್ಲವೆಂಬುದು ಖಂಡಿತ.

ಹಜಾರದಲ್ಲಿ ಹೆಚ್ಚು ಜನರಿರುವರೆ? ಯಾರೋ ಕೆಲಸಗಿತ್ತಿಯೊಂದಿಗೆ ತಗ್ಗು ದನಿಯಲ್ಲಿ ಮಾತಾಡುತ್ತಿದ್ದರು. ಆ ದನಿ ಅವನನ್ನು ಬೆಚ್ಚು ಬೀಳುವಂತೆ ಮಾಡಿತು. ಬಳಿಕ, ಅವನ ಓದುವ ಕೋಣೆಯ ಬಾಗಿಲು ತೆರೆಯಿತು ; ಸುಂದರವಾದ ಮುಖವೊಂದು ಕಾಣಿಸಿತು.

"ನಾನು, ಗೂಗ್ಲೀಲ್ಮೊ. ಒಳಕ್ಕೆ ಬರಲೋ ?"

ತನ್ನ ಆಲೋಚನೆಗಳನ್ನೆಲ್ಲ ಮೇಜಿನ ಸಂದೂಕದೊಳಗೆ ಸೇರಿಸಿ ಮುಚ್ಚಿಡಲು ಬಯಸುವ ರೀತಿಯಲ್ಲಿ, ತಪ್ಪೆಸಗುವಾಗಲೇ ಸಿಕ್ಕಿಬಿದ್ದ ತಪ್ಪಿತಸ್ಥನಂತೆ, ನಿಸ್ಸಹಾಯಕನಾಗಿ ಮೇಜಿನ ಮೇಲೆ ಕೈಯಾಡಿಸಿದನು. ಆದರೆ ಆನಾ ಶಾಂತಳಾಗಿ, ಹಿಂದೆ ಮುಂದೆ ನೋಡದೆ, ಬಳಿ ಸಾರಿದಳು.

"ಹಾಗೆಯೇ ವಿಚಾರಿಸಿಕೊಂಡು ಹೋಗೋಣವೆಂದು ಬಂದೆ. ಹೇಗಿದ್ದಾಳೆ ಐರೀನ್ ?"

ಗೂಗ್ಲೀಲ್ಮೊ ಬಹಳ ಅನ್ಯಮನಸ್ಕನಾಗಿದ್ದುದನ್ನು ಕಂಡು, ಪ್ರೀತಿಯಿಂದ ಅವನ ಕಡೆ ನೋಡಿ, ಅವಳು ಮುಂದುವರಿಸಿದಳು :

"ಅಯ್ಯೋ ಪಾಪ. ನಿನಗೆ ತುಂಬ ಚಿಂತೆಗಿಟ್ಟುಕೊಂಡಿದೆ."

ಅವನು ಗೊಣಗಿದನು : "ಏನಿಲ್ಲ. ಡಾಕ್ಟರು ಬಂದಿದ್ದಾರೆ".

ಪ್ರೇಮದ ಹಾಗೂ ಜೀವನದ ಒಂದು ಘಟನೆಯಲ್ಲಿ ಅಷ್ಟೊಂದು ಆಸಕ್ತಿ ವಹಿಸಿದ್ದ ಈ ತರುಣಿಯನ್ನು ಕುರಿತು ತಟ್ಟನೆ ಅವನ ಮನಸ್ಸಿನಲ್ಲಿ ಒಂದು ಭಾವನೆ ಉದಿಸಿತು ; ಅದು ಅವನ ಮನಸ್ಸನ್ನು ಕಲಕಿತು ; ಏಕೆಂದರೆ, ಅವನು ಜಾಗರೂಕನಾಗಿದ್ದನು ; ಪರಿಶುದ್ಧ ಮನಸ್ಕನಾಗಿದ್ದನು. ಅವನು ಅಪ್ರಯತ್ನವಾಗಿ ಅವಳ ಸುಂದರ ದೇಹವನ್ನು–ಮಕ್ಕಳ ತಾಯಾಗಲು ಪೂರ್ಣವಾಗಿ ಹೊಂದಿಕೊಂಡಿದ್ದ ಅವಳ ದೇಹವನ್ನು–ದೃಷ್ಟಿಸಿದನು.

"ಒಂದು ಕ್ಷಣ ಕುಳಿತುಕೊ ಆನಾ......... ನೀನು ದೊಡ್ಡ ಮನಸ್ಸು ಮಾಡಿ ಬಂದದ್ದು ಬಹಳ ಸಂತೋಷ."

ಸ್ಥಾಯಿ ಬದಲಾಯಿಸಿದ ಸಂಗೀತ ಸ್ವರದಂತೆ, ಅವನ ಧ್ವನಿ ಅಪೂರ್ವವಾಗಿ ಕೇಳಿಸಿತವಳಿಗೆ. ಆನಾ ಅಚ್ಚರಿಗೊಂಡು ಅವನ ಕಡೆ ನೋಡಿದಳು ; ಕ್ಷಣಕಾಲ

ಮನೆಗೆ ಹಿಂದೆ ಒಂದು ಕಾಲದಲ್ಲಿ ಆಗಾಗ್ಗೆ ಬರುತ್ತಿದ್ದನಾತ. ಸ್ಥೂಲ ಕಾಯ ; ಕೆಂಪು ಮುಖ ; ರಸ ಸ್ವಭಾವದವನು. ಹೊಸ ಜೀವಿಗಳನ್ನು ಪ್ರಪಂಚಕ್ಕೆ ತರುವ ಕಾರ್ಯಭಾರ ಅದು ಹೇಗೋ ಅವನಿಗೆ ಹೆಚ್ಚಿನ ಕಸುವನ್ನು ಕೊಟ್ಟಿತ್ತು.

"ನನ್ನ ಕೈಲಾದ ಮಟ್ಟಿಗೂ ಬೇಗ ಬಂದೆ.........ಆಕೆ ಹೇಗಿದ್ದಾಳೆ ? ....... ಕ್ಷೇಮವಾಗಿದ್ದಾಳೆಯೋ ? ಒಳ್ಳೆಯದು..... ಗಾಬರಿಪಟ್ಟುಕೊಳ್ಳಬೇಡವಯ್ಯ........ ನಾನಾಗಿದ್ದರೆ ಹೊರಕ್ಕೆ ಹೊರಟುಹೋಗುತ್ತಿದ್ದೆ, ಇಲ್ಲವೆ ಓದುವ ಕೋಣೆಯಲ್ಲಿ ತೆಪ್ಪನೆ ಕುಳಿತಿರುತ್ತಿದ್ದೆ...... ಇನ್ನೊಂದೆರಡು ಗಂಟೆಯಲ್ಲಿ ಬಂದು ಎಲ್ಲವನ್ನೂ ತಿಳಿಸುತ್ತೇನೆ."

ಅವನು ನಕ್ಕು ಮಲಗುವ ಕೋಣೆಯೊಳಕ್ಕೆ ಹೋದನು. ಗೂಗ್ಲೀಲ್ಮೊ ತನ್ನ ಓದುವ ಕೋಣೆಗೆ ಹಿಂದಿರುಗಿದನು. ಹೊರಹೊರಡಬೇಕೆಂದು ಅವನು ಕ್ಷಣಕಾಲ ಯೋಚಿಸಿದನು ; ಆದರೆ, ಸಂತೋಷಭಯಮಿಶ್ರವಾದ ಒಂದು ಬಗೆಯ ಅಸ್ಪಷ್ಟವಾದ ಸಂವೇದನೆ ಅವನನ್ನು ತಡೆದು ನಿಲ್ಲಿಸಿತು. ಇದು ತನ್ನ ನರಗಳ ಉದ್ರೇಕದ ಫಲವೋ ಅಥವಾ ಇನ್ನೇನಾದರೂವೋ ಎಂದು ಅವನು ಅಚ್ಚರಿಗೊಂಡನು.

ಅವನು ಮತ್ತೆ ತನ್ನ ಬರೆಯುವ ಮೇಜಿನ ಮುಂದೆ ಕುಳಿತನು. ಅವನಿಗೆ ಒಂದು ಮಗು ಹುಟ್ಟಿ ಅವನ ಜೀವನವೇ ಭವಿಷ್ಯದ ತೆರೆಯ ಮೇಲೆ ರೂಪಗೊಳ್ಳುತ್ತಿದ್ದ ಆ ಕ್ಷಣದಲ್ಲಿ ಅವನ ಸದ್ಯದ ಆಲೋಚನೆಗಳು ವಕ್ರಪಥವನ್ನು ಹಿಡಿದು ಗತಕಾಲಕ್ಕೆ ದೂರ ದೂರ ಸಾಗಿಹೋಗುತ್ತಿವೆಯೋ ಎಂಬಂತೆ ಅವನ ಹಿಂದಣ ಆಲೋಚನೆಗಳು ಅವನಲ್ಲಿ ಮರುಕೊಳಿಸಿದವು.

ಅವನ ಭಾಗಕ್ಕೆ ಗತಕಾಲವೆಂದರೆ ಆನಾ–ಯಾವಾಗಲೂ ಆನಾ– ಅವಳೇ; ಅವಳು ಮತ್ತು ಅವಳ ಹೆಸರು : ಆನಾ !

ಅವನು ತನ್ನ ಮದುವೆಯಾದ ಮೇಲೆ ಆನಾಳನ್ನು ಹಲವು ಸಲ ಕಂಡಿದ್ದನು. ಅವಳಾದರೋ ಮದುವೆಯಾಗಲೇ ಇಲ್ಲ ; ಮದುವೆಯಾಗುವುದಕ್ಕಿಂತ ಸ್ವತಂತ್ರವಾಗಿರುವುದು ಲೇಸು–ಹೀಗೆಂದು ಅವಳೇ ನಸು ನಗುತ್ತ ಹೇಳುತ್ತಿದ್ದಳು. ಈಗ ಅವಳಿಗೆ ಇಪ್ಪತ್ತೇಳು ವಯಸ್ಸು ; ಒಂಟಿ ಬಾಳು ; ಮೇಲಿಂದ ಮೇಲೆ ಪ್ರಯಾಣಮಾಡುವಳು ; ಯಾವಾಗಲೂ ಏನಾದರೂ ಕೆಲಸಮಾಡುತ್ತಲೇ ಇರುವಳು ; ಆದರೂ ಎಂದಿನಂತೆಯೇ ಉಲ್ಲಾಸವಾಗಿದ್ದಾಳೆ, ಎಂದಿನಂತೆಯೇ ಅಂದವಾಗಿ ಕಾಣುತ್ತಾಳೆ. ಅವಳು ಕೆಲವು ವೇಳೆ ಇವರನ್ನು ನೋಡಲು ಬರುವಳು; ಐರೀನಳೊಂದಿಗೆ ಸ್ನೇಹದಿಂದ ವರ್ತಿಸುವಳು. ಅವನೊಂದಿಗೆ ಹೆಚ್ಚು

"ಆಮೇಲೆ ಪ್ರತಿಜ್ಞೆ ಮಾಡಬಹುದಲ್ಲ–"

"ನೀನು ಮಾಡಿದ್ದು ಯಾವಾಗ ?"

"ಖಂಡಿತವಾಗಿ ಹೇಳಲಾರೆ.......ಸುಮಾರು ಐದಾರು ವರ್ಷಗಳ ಹಿಂದೆ"

"ನಾನು ಮದುವೆಯಾದಾಗ, ಅಲ್ಲವೆ ?"

ಅವಳು ಹೆಚ್ಚು ಹೆಚ್ಚು ಪೇಚಾಟಕ್ಕೆ ಸಿಲುಕಿದಂತವಳಾಗಿ, ಮಾತು ನಿಲ್ಲಿಸಿದಳು; ತುಟಿ ಕಚ್ಚಿಕೊಂಡಳೂ ; ಅವಳು ಅವಿವೇಕದ ಮಾತಾಡಿದ್ದಳು–

ಗೂಗ್ಲೀಲ್ಮೊ ಹೇಳಿದ : "ಹೌದು, ಹೌದು. ನನಗೆ ನೆನಪಿದೆ, ನೀನು ಆ ವರ್ಷ ಅಸ್ವಸ್ಥವಾಗಿದ್ದೆ.......ಯಾರಿಗೂ ಏನೆಂದು ಗೊತ್ತಾಗಲಿಲ್ಲ.... ನನಗೆ ನೆನಪಿದೆ–ನಾನು, ಐರೀನ್ ಸ್ವಿಟ್ಸರ್ಲಂಡಿನಲ್ಲಿದ್ದೆವು..... ಆಮೇಲೆ ಆ ವಿಚಾರ ಕೇಳಿ ತಿಳಿದೆ.... ಅವನು ಮುಗುಳುನಗೆ ನಗುತ್ತ ಮುಂದುವರಿಸಿದ : "ಆಗಲೇ ಅಲ್ಲವೆ ನೀನು ಹಾಗೆಂದು ನಿಶ್ಚಯಮಾಡಿದ್ದು ?"

"ಹೋಗಿ ಬರುತ್ತೇನೆ, ಗೂಗ್ಲೀಲ್ಮೊ. ಮತ್ತೆ ಬರುತ್ತೇನೆ. ಫೋನ್ ಮಾಡಿ ಎಲ್ಲ ವಿಚಾರವನ್ನೂ ನನಗೆ ತಿಳಿಸು."

"ಓಹೋ, ಅಗತ್ಯವಾಗಿ. ಅದೇಕೆ, ಕೈ ಕುಲುಕುವುದಿಲ್ಲವೇನು ?"

"ಅದಕ್ಕೇನು, ಆಗಲಿ. ಇಕೋ."

ಅವಳು ತನ್ನ ಹಸ್ತವನ್ನು ನೀಡಿದಳು. ಅವನು ಅದನ್ನು ಕುಲುಕಿ, ಅಪ್ರಯತ್ನವಾಗಿ ಅದನ್ನು ಹಿಡಿದುಕೊಂಡೇ ಇದ್ದನು. ಏನು ಸಮಾಚಾರವೋ ? ಅದೇಕೆ ಅವಳ ಕೈ ಹಾಗೆ ನಡುಗುತ್ತಿತ್ತು ? ಅವನು ಕೈಯನ್ನು ಇನ್ನೂ ಬಲವಾಗಿ ಅದುಮಿದನು ; ಅವಳು ಪರವಶಳಾಗಿ ಅವನಿಗೆ ತನ್ನನ್ನು ತಾನೇ ಅರ್ಪಿಸಿಕೊಂಡಂತೆ ಅವನಿಗೆ ಭಾಸವಾಯಿತು......... (ಓಹ್, ಹಠಾತ್ತಾದ, ಭ್ರಾಮಕವಾದ, ಆದರೂ ನಿಶ್ಚಯವಾದ ಭಾವನೆ!)

ಈಗ ಅವನು ಒಬ್ಬನೇ ಇದ್ದನು ; ತಾನು ಧೈರ್ಯಮಾಡಿ ಹೇಳಿದ ಮಾತಿಗಾಗಿ, ಬಗೆದ ಆಲೋಚನೆಗಾಗಿ, ಅಚ್ಚರಿಗೊಂಡನು. ಸತ್ಯವೇ ಮೂರ್ತಿಮತ್ತಾಗಿ ಅವನ ಮುಂದೆ ನಿಂತು ಅವನನ್ನು– "ನಿನಗೆ ಅರ್ಥವಾಗಲಿಲ್ಲವೇ?" ಎಂದು ಪ್ರಶ್ನಿಸುತ್ತಿರುವಂತೆ ಅವನಿಗೆ ತೋರಿತು.

ಇಲ್ಲ–ಅವನಿಗೆ ಅರ್ಥವಾಗಿರಲಿಲ್ಲ. ಅವನು ತನ್ನ ತಾಯ ಕುರುಡು ತನವನ್ನು ನಂಬಿ ಆಕೆ ಹೇಳಿದಂತೆ ನಡೆದಿದ್ದನು ; ಪ್ರಪಾತದ ಅಂಚಿಗೆ ನಡೆದು ಹೋಗಿ ಅನಿವಾರ್ಯವಾಗಿ ಅದರೊಳಕ್ಕೆ ಮಗುಚಿಕೊಂಡಿದ್ದನು.

ಈಗ ಹಿಂದಿನದೆಲ್ಲವೂ ಅದರ ಸಹಜವಾದ ಬೆಳಕಿನಲ್ಲಿ ಅವನಿಗೆ

ಅವಳು ಏನೂ ನುಡಿಯಲಿಲ್ಲ. ಆಮೇಲೆ ಕೇಳಿದಳು :

"ನಿನಗೆ ಏನಾದರೂ ಬೇಕಾಗಿದೆಯೇನು ? ನನ್ನಿಂದ ಏನಾದರೂ ಉಪಯೋಗವಾದೀತೋ ?"

ಉತ್ತರ ಕೊಡದಿರುವುದಕ್ಕೆ ಈಗ ಅವನ ಸರತಿ. ಅವರಿಬ್ಬರೂ ಸಿಲುಕಿದ್ದ ಮೌನದ ಸುಳಿ ಬರುಬರುತ್ತ ದೊಡ್ಡದಾಯಿತು. ಯಾವುದೋ ಬೇರೊಂದು ಧ್ವನಿಯನ್ನು, ಹಿಂದೊಮ್ಮೆ ನುಡಿದು ಈಗ ಮರೆತ ಇಲ್ಲವೆ ಹೇಳಬೇಕೆಂದು ಆಲೋಚಿಸಿ ಹೇಳದೆ ಬಿಟ್ಟ ಮಾತುಗಳನ್ನು, ನೆನಪಿನಲ್ಲಿ ಆಲಿಸುತ್ತಿದ್ದಂತೆ ಅವರಿಗೆ ಭಾಸವಾಯಿತು. ಇದ್ದಕ್ಕಿದ್ದಂತೆ ಗೂಗ್ಲೀಲ್ಮೊ ಒಂದು ವಿಚಿತ್ರವಾದ ಪ್ರಶ್ನೆ ಹಾಕಿ ಮೌನವನ್ನು ಮುರಿದನು ; ನಾಚಿಕೆಯ ಸ್ವಭಾವದ ಅಂಥವನಿಂದ ಅದು ಹೊರಬಂದದ್ದರಿಂದ ಆ ಪ್ರಶ್ನೆ ವಿಚಿತ್ರ ತರವಾಗಿ ಕಂಡಿತು ; ಅದರಿಂದ, ಹೇಗೆ ಹೇಗೋ ಮುದ್ದಾಡಿದಂತೆ ಎನಿಸಿತು ಅವಳಿಗೆ.

"ನೀನೆಷ್ಟು ಒಳ್ಳೆಯವಳು ಆನಾ.....ಏಕೆ ನೀನು ಮದುವೆಯೇ ಆಗಿಲ್ಲವಲ್ಲ?"

ಅವಳು ಹುಚ್ಚಾಬಟ್ಟೆ ಕೆಂಪೇರಿದಳು ; ಅವಳ ಮುಖವೆಲ್ಲವೂ ಬರಿದಾಗಿದ್ದ ಕೊರಳೂ ಅಚ್ಚಗೆಂಪಾದುವು. ಅವಳ ಕಣ್ಣನ್ನು ಕವಿದ ನೆನಪಿನ ನೆರಳನ್ನು ಮುಚ್ಚಿಡುವುದಕ್ಕಾಗಿ ಅವಳು ನಸುನಗಲು ಪ್ರಯತ್ನಿಸಿದಳು.

"ನೀನು ಈಗ ಯೋಚಿಸುತ್ತಿರುವುದೇನು, ಗೂಗ್ಲೀಲ್ಮೋ ?..... ನಾನು ಮದುವೆಯಾಗದೆ ಒಂಟಿಯಾಗಿರುವುದು ಏಕೆಂದರೆ–ಏಕೆಂದರೆ, ನಾನು ಯಾರಿಗೂ.......ಬೇಕಾಗಿಲ್ಲ....."

"ಓಹೋ !"

ಜೊತೆಗೆ ಗೂಗ್ಲೀಲ್ಮೊ ಹೊಟ್ಟೆ ಹಿಡಿಸಲಾರದಷ್ಟೂ ಗೊಳ್ಳನೆ ನಕ್ಕನು. ಅವಳು ಯಾರಿಗೂ ಬೇಕಾಗಲಿಲ್ಲವೆ ? ಊರಿನ ಇತರ ಎಲ್ಲ ಹುಡುಗಿಯರನ್ನೂ ಒಟ್ಟುಗೂಡಿಸಿ ಎಣಿಸಿದ್ದಕ್ಕಿಂತ ಹೆಚ್ಚು ಸಂಖ್ಯೆಯ ತರುಣರು ಅವಳ ಲೆಕ್ಕಕ್ಕೆ ಇದ್ದರಲ್ಲಾ !

"ನಿನಗೆ ಹೇಳಿದವರು ಯಾರು ?"

"ಯಾರೆ, ನನ್ನ ತಾಯಿ."

"ನಿಮ್ಮ ತಾಯಿಗೆ ಏನೂ ತಿಳಿದಿರಲಿಲ್ಲ, ಪಾಪ. ಹೋಗಲಿ, ಆಗ ನಾನು ಒಂದು ಪ್ರತಿಜ್ಞೆ ಮಾಡಿದೆ ಎಂದು ಇಟ್ಟುಕೊಳ್ಳೋಣ" ಎಂದು ಆನಾ ಇನ್ನೂ ನಗುತ್ತಲೇ ಹೇಳಿದಳು ; ಆದರೆ ಅವಳು ನಿಜವಾಗಿ ಪೇಚಾಟಕ್ಕೆ ಸಿಲುಕಿದ್ದಳು.

"ಪ್ರತಿಜ್ಞೆಯೆ ? ಆದರೆ ನಾವಿಬ್ಬರೂ ಚಿಕ್ಕವರಾಗಿದ್ದಾಗ ನೀನು ಆ ಇನ್ನೊಬ್ಬ"

ಗೂಗ್ಲೀಲ್ಮೊವಿನ ತಲೆ ತಿರುಗಿದಂತಾಯಿತು. ಜೀವವನ್ನು ನೋವಿಗೆ ಬಲಿಕೊಟ್ಟು ನರಳುತ್ತಿದ್ದ ತನ್ನ ಹೆಂಡತಿಯನ್ನು ನೆನೆದನು.

ಡಾಕ್ಟರು ಮುಂದುವರಿಸಿದರು : "ನಿನ್ನನ್ನು ಕೇಳೋಣವೆಂದು ಬಂದೆ. ಈಗ ಯಾವುದು ಉತ್ತಮ ಪಕ್ಷವೆಂಬುದನ್ನು ನಿನ್ನ ಅಂತರಾತ್ಮ ನಿರ್ಧರಿಸಬೇಕು. ಇಬ್ಬರಲ್ಲಿ ಒಬ್ಬರನ್ನು ಮಾತ್ರ ಉಳಿಸಬೇಕಾಗಿ ಬಂದರೆ, ಯಾರನ್ನು ಉಳಿಸಲಿ– ತಾಯಿಯನ್ನೆ, ಮಗುವನ್ನೆ ?"

"ಏನು ?" – ಗೂಗ್ಲಿಲ್ಮೊ ಸತ್ತವನನ ಹಾಗೆ ಬಿಳಿಚಿಕೊಂಡು ಚೀರಿದನು.

"ಹೌದು. ಇರುವ ಸಂಗತಿ ಹೀಗೆ. ಇಬ್ಬರಲ್ಲಿ ಒಬ್ಬರನ್ನು ಉಳಿಸುವುದು ವಿಜ್ಞಾನಕ್ಕೆ ಸಾಧ್ಯ. ನಿನಗೆ ನಾನು ಅಷ್ಟು ಮಟ್ಟಿಗೆ ಭರವಸೆ ಕೊಡಬಲ್ಲೆ. ಆದರೆ, ಬಹುಶಃ ಇಬ್ಬರನ್ನೂ ಸಾಧ್ಯವಾಗಲಾರದು...........ಯೋಚನೆಮಾಡಿ ನನಗೆ ತಿಳಿಸು....."

ಗೂಗ್ಲೀಲ್ಮೊವಿನ ಕಣ್ಣಮುಂದೆ ಅವನ ಹೊಸ ಜೀವ ಮಿಂಚಿನಂತೆ ಹೊಳೆದು ಗೋಚರವಾಯಿತು ; ವಿಧಿಯೇ ಕೈಯೆತ್ತಿಕೊಡಬಂದಿದ್ದ ಹೊಸ ಜೀವ, ಅವನ ಬಾಳಿನ ಮುಂದೆ ಒಡ್ಡಿದ ಒಂದು ಹೊಸ ಸೆಳೆತ. ಜೊತೆಗೆ ಗಂಡು ಜೀವ, ಪುತ್ರ; ಅವನ ಬಾಳಿನ ಗುರಿ. ಆನಾ ; ಮತ್ತು ಅವಳೊಂದಿಗೆ ಸುಖ ಜೀವನ. ಎಲ್ಲವೂ ಮಾರ್ಪಡುವುದು ; ಎಲ್ಲವೂ ಹೊಸತಾಗುವುದು. ಅವನ ಸೌಖ್ಯವು ಕಳೆಗುಂದಿ ನಿಸ್ತೇಜವಾಗಿರುವುದರ ಬದಲು, ಅವನು ಅನೇಕ ಸಲ ಕನಸು ಕಂಡಂತೆ ಪ್ರಕಾಶಮಾನವಾಗಿ ಉಜ್ವಲವಾಗಿರುವುದು. ಇನ್ನು ಮುಂದೆ ಕರ್ತವ್ಯ ಪಾಲನೆಗೆ ಬದಲು ಪ್ರೇಮ ; ಪರಿಪಾಠಕ್ಕೆ ಬದಲು ವ್ಯಾಮೋಹ..........ಐರೀನ್ ಸತ್ತುಹೋದರೆ ಆನಾಳನ್ನು ತಾನು ಮದುವೆಯಾಗಬಹುದು............ತನಗೆ ಯಾವುದು ಬೇಕೋ ಅದನ್ನು ಕೈನೀಡಿ ಆರಿಸಿಕೊಳ್ಳಬೇಕಾಗಿದೆ, ಅಷ್ಟೆ. ಯಾರು ತಾನೆ ತನ್ನನ್ನು ನಿಂದಿಸುವರು ? ಜೀವನದ ನಿಯಮಕ್ಕೆ, ಮನುಷ್ಯಜಾತಿಯ ಅವಶ್ಯಕತೆಗೆ, ಕಟ್ಟುಬಿದ್ದು ತಾನೆ ತಾನು ನಡೆದುಕೊಳ್ಳುತ್ತಿರುವುದು ?

"ಅಯ್ಯೋ ದೇವರೇ !" ಎಂದು ಗೂಗ್ಲೀಲ್ಮೊ ನರಳುದನಿಯಲ್ಲಿ ನುಡಿದನು.

ಅವನ ಹೃದಯ ನುಡಿಯುತ್ತಲೇ ಇತ್ತು :

"ನೀನು ನಿನ್ನ ಹೆಂಡತಿಯನ್ನು ಹೇಗೂ ಪ್ರೀತಿಸುವುದಿಲ್ಲ. ನಿನ್ನ ಭಾಗಕ್ಕೆ ಅವಳು ಇದ್ದರೂ ಒಂದೆ ಇಲ್ಲದಿದ್ದರೂ ಒಂದೆ. ನೀನು ಅವಳೊಂದಿಗೆ ಮಕ್ಕಳಿಲ್ಲದೆ ಒಂಟಿಯಾಗಿ ಜೀವಿಸುತ್ತ ಹೋಗಬೇಕಾದೀತು. ಎರಡನೆಯ ಸಲವೂ ಆ ಇನ್ನೊಬ್ಬಳು ಕೈತಪ್ಪಿ ಹೋದಾಳು, ಜೋಕೆ, ಸ್ವಲ್ಪ ಯೋಚಿಸಿ ನೋಡು.....

ಗೋಚರವಾಯಿತು. ಅವನು ಅನೇಕ ವೇಳೆ ಆನಾಳನ್ನು ನೋಡಲು ಹೋಗಿದ್ದಾಗ, ಅವಳ ಮುಖಮಂಡಲವು ಬೆಳಗಿ ತೊಳಗುತ್ತಿತ್ತು ; ಅವನು ಅವಳನ್ನು ನೋಡುವುದು ಅಪರೂಪವಾದಾಗ, ಅವಳು ಅಸುಖಿಯಾಗುತ್ತಿದ್ದದನ್ನೂ ಅವನು ಬಲ್ಲನು. ಬಳಿಕ ಅವಳು ಅಸ್ವಸ್ಥಳಾದಳು ; ಆಮೇಲೆ ಆ ಹಲವು ವರ್ಷಗಳಲ್ಲಿ ಉಪೇಕ್ಷಿತಳಾಗಿದ್ದ ಅವಳು ಬೇರೆ ಯಾರನ್ನೂ ಮದುವೆಯಾಗಲೊಪ್ಪಲೇ ಇಲ್ಲ..... ಹಾಗಾದರೆ, ಅವಳೇಕೆ ಏನನ್ನೂ ಹೇಳಲಿಲ್ಲ ? ಅದೇನು ನೊಂದ ಅಭಿಮಾನವೋ? ಇಲ್ಲವೆ, ಮುಖ ಭಂಗವಾಗಬಹುದೆಂಬ ಹೆದರಿಕೆಯೋ ? ಇಲ್ಲ ; ನಿಜವಾಗಿ ಅವಳಾದರೂ ಅರ್ಥಮಾಡಿಕೊಂಡಿರಲಿಲ್ಲ.

ಈಗಲೋ ? ತಟ್ಟನೆ ಎಲ್ಲವೂ ಬೆಳ್ಳಂಬೆಳಕು !... ಅವಳ ಮುಖ ಕೆಂಪೇರಿದ್ದು, ಅವಳ ಕೈನಡುಕ.......ಆನಾ ತನ್ನನ್ನು ಇನ್ನೂ ಪ್ರೀತಿಸುತ್ತಾಳೆ......... "ಇಲ್ಲ ; ಅದು ಸಾಧ್ಯವಿಲ್ಲ" ಎಂದು ಅವನು ತನಗೆ ತಾನೇ ಹೇಳಿಕೊಂಡನು. ಆದರೆ ಅವನ ಹೃದಯ ಸಹಜಪ್ರೇರಣೆಯನ್ನು ಪಡಿನುಡಿಯುವಂತೆ ಮಂದವಾಗಿ ಸ್ಪಂದಿಸುತ್ತಿತ್ತು. ಅದು ಹಾಗೆಯೇ ಸರಿ, ಅದು ಹಾಗೆಯೇ ಸರಿ..........

ದಾರುಣ ವೇದನೆಯ ಭೀಕರ ಚೀತ್ಕಾರವೊಂದು ಅವನ ಆಲೋಚನೆಯ ಎಳೆಯನ್ನು ಕತ್ತರಿಸಿತು. ತನ್ನ ಮಗು, ತನ್ನ ದೇಹದ ಒಂದು ಭಾಗ, ಹುಟ್ಟುವುದರಲ್ಲಿತ್ತು; ತಾನಿಲ್ಲವಾದ ಮೇಲೆ ತನ್ನ ಬಾಳನ್ನು ಮುಂದುವರಿಸುವುದಾಗಿತ್ತು; ತಾನಿಲ್ಲವಾದ ಮೇಲೆ ತನ್ನ ಬಾಳನ್ನು ಮುಂದುವರಿಸುವುದಾಗಿತ್ತು. ಒಂದು ಹೊಸ ನಲಿವು, ತನ್ನ ಮಗು, ತನ್ನೆಡೆಗೆ ಬಂದಿರುವಾಗ ತಾನು ಇಲ್ಲಿ ಕುಳಿತು ಕಣ್ಮರೆಯಾದ ಸುಖವನ್ನು ಕುರಿತು ಚಿಂತಿಸುತ್ತಿದ್ದಾನೆ ! ಆದರೂ ಆನಾಳ ನೆನಪು ಇನ್ನೂ ಕಾಡುತ್ತಿದೆ. ಅಂತೂ ಈ ಎರಡು ಹೆಚ್ಚಿನ ನಲಿವುಗಳೂ–ಒಂದು ಅಸಾಧ್ಯವಾದದ್ದು, ಬತ್ತಿಹೋದದ್ದು– ಇವೆರಡು ಹೇಗೋ ಒಂದರೊಡನೆ ಒಂದು ಬೆರೆತು, ಪರಸ್ಪರ ಪೂರಕವಾಗಬೇಕು.

"ಗೂಗ್ಲೀಲ್ಮೊ"

ಡಾಕ್ಟರು ಅವನ ಮುಂದೆ ಕಳವಳಗೊಂಡು ನಿಂತಿದ್ದರು ; ಅವರ ಮುಖ ವಿವರ್ಣವಾಗಿತ್ತು. ಗೂಗ್ಲೀಲ್ಮೊ ಚಿಗಿದು ನಿಂತು, ಗಾಬರಿಗೊಂಡು ಕೇಳಿದನು :

"ಏನು ? ಏನು ಸಮಾಚಾರ ?"

ಡಾಕ್ಟರು ಗಂಭೀರ ವಾಣಿಯಲ್ಲಿ ಹೇಳಿದರು : "ಆಕೆ ಅಪಾಯದಲ್ಲಿದ್ದಾಳೆ. ಅನಿರೀಕ್ಷಿತವಾಗಿ ತೊಡಕುಂಟಾಗಿದೆ. ಆದರೂ ಇನ್ನೂ ಆಶೆಯಿದೆ ; ಶಸ್ತ್ರಚಿಕಿತ್ಸೆ ಮಾಡಬೇಕಾದೀತು. ನಿನಗೆ ತಿಳಿಸುವುದು ಮೇಲೆಂದು ತೋರಿತು........"

ಇಷ್ಟೆಲ್ಲಾ ನಿನ್ನ ತಪ್ಪಿನಿಂದ. ಹೂ, ಹೇಳು.... ಎರಡು ಮಾತು... ಅದು ಅಷ್ಟು ಕಷ್ಟವೆ ? ಅಯ್ಯೋ ಮಂಕೇ, ಹೇಳು ; 'ಮಗು' ಎಂದು ಹೇಳು."

ಅವನು ತಲೆಯೆತ್ತಿ ನಿರ್ವಿಣ್ಣನಾಗಿ ನುಡಿದನು :

"ತಾಯಿಯನ್ನು ಉಳಿಸಿಕೊಡಿ !"

(Cosimo Giorgeri Contri ಇಟ್ಯಾಲಿಯನ್ ಕಥೆಗಾರನ ಕಥೆಯ ಅನುವಾದ)

# ಬಿನ್ನಹ

## (ನಿಲ್ದಾಣಗಳ ನಡುವೆ ಕಥಾ ಸಂಕಲನಕ್ಕೆ)

'ಕರುಣಾಲಹರಿ' ಎಂಬ ನನ್ನ ಕಥಾ ಸಂಕಲನ ೧೯೫೫ರಲ್ಲಿ ಪ್ರಕಟವಾಯಿತು. ಅದಕ್ಕೆ ಸೇರಿಸದೆ ಉಳಿಸಿಕೊಂಡಿದ್ದ ಎರಡು ಮೂರು ಕಥೆಗಳನ್ನೂ ಅಲ್ಲಿಂದೀಚೆಗೆ ಬರೆದವನ್ನೂ ಕೂಡಿಸಿ, 'ನಿಲ್ದಾಣಗಳ ನಡುವೆ' ಎಂಬ ಮೂರು ಕಥೆಗಳನ್ನೂ ಅಲ್ಲಿಂದೀಚೆಗೆ ಬರೆದವನ್ನೂ ಕೂಡಿಸಿ, 'ನಿಲ್ದಾಣಗಳ ನಡುವೆ' ಎಂಬ ಈ ಸಂಕಲನವನ್ನು ಹೊರ ತರುವ ಸಾಹಸ ಮಾಡಿದ್ದೇನೆ. ಸಾಹಸ ಎನ್ನುವ ಮಾತು ಅರ್ಥಮಾಡಿಕೊಳ್ಳಬಲ್ಲವರಿಗೆ ಅರ್ಥವಾದೀತು. ರೂಪಾಂತರಗಳಾದ ಎರಡು ಕಥೆಗಳನ್ನು ಬಿಟ್ಟರೆ, ಉಳಿದ ಕಥೆಗಳಲ್ಲಿ ನಿರೂಪಿತವಾಗಿರುವ ನಮ್ಮ ಜನದ ಬದುಕಿನ ಹರವು ಸುಮಾರು ನಾಲ್ಕು ದಶಕಗಳ ಹಿಂದಿನ ('ಕಲಾಪುತ್ರ'ದ)ಸಂದರ್ಭದಿಂದ ಇಂದಿನದರ ('ಹಾಲಿಗೆ ಹೆಪ್ಪು ಹಾಕಿಲ್ಲ')ವರೆಗೆ ಬಿತ್ತರಗೊಂಡಿದೆ. ನಾನು ಆಗಲೂ ಇದ್ದೆ, ಈಗಲೂ ಇದ್ದೇನೆ ; ನನಗೆ ಇದೆಲ್ಲವೂ ಸಮಕಾಲೀನ. ಈಗಿನ ತಲೆಮಾರಿನ ಓದುಗರಿಗೆ ಕೆಲವು ಹಳಗಾಲದವು ಎಂದು ತೋರಬಹುದು. ಕಥೆಗಳ ಸಂಗತಿ ಸನ್ನಿವೇಶಗಳಲ್ಲಿ ಕೆಲವು ಕಂಡವು, ನಡೆದವು; ಕೇಳಿ ತಿಳಿದವು ; ಇನ್ನೂ ಕೆಲವು ಕಟ್ಟಿದವು. ಒಂದೆರಡು ಕೇವಲ ವಿನೋದ ಚಿತ್ರಗಳು. ಕಥೆಗಳ ಮೂಲ ಸಾಮಗ್ರಿ ಹೇಗಾದರೂ ಒದಗಿ ಬಂದಿರಲಿ, ಅವುಗಳಲ್ಲಿ ಬರುವ ಪಾತ್ರಗಳು ಜೀವನದಿಂದ ಮೂಡಿಬಂದವು; ಜೀವನದಿಂದ ಮೂಡಿಬಂದಿದ್ದರೂ ಜೀವಂತ ವ್ಯಕ್ತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು ರೂಪಿಸಿದವು ಅಲ್ಲ.

ಕೊನೆಯ ಕಥೆ ಹೊರತಾಗಿ, ಉಳಿದ ಕಥೆಗಳೆಲ್ಲವೂ ಪ್ರಜಾಮತ, ಚಿತ್ರಗುಪ್ತ, ಸಂಯುಕ್ತ ಕರ್ನಾಟಕ, ಕತೆಗಾರ, ಸುಧಾ, ಮಯೂರ, ಆದರ್ಶ, ಕೊರವಂಜಿ, ಪ್ರಬುದ್ಧ ಕರ್ಣಾಟಕ–ಈ ಪತ್ರಿಕೆಗಳಲ್ಲಿ ಈ ಮೊದಲೇ ಪ್ರಕಟವಾಗಿವೆ. ಕಥೆಗಳನ್ನು ನನ್ನಿಂದ ಬರಮಾಡಿಕೊಂಡು ಪ್ರಕಟಿಸಿದ ಈ ಪತ್ರಿಕೆಗಳ ಸಂಪಾದಕರುಗಳಿಗೆ ನಾನು ಕೃತಜ್ಞನಾಗಿದ್ದೇನೆ. 'ಮೆದರ ಚೆನ್ನಿ' ಮೊದಲು 'ನಡೆದು ಬಂದ ದಾರಿ'ಯಲ್ಲಿ ಪ್ರಕಟವಾಯಿತು ; ಅದೂ, 'ಸುಧಾ'ದಲ್ಲಿ ಪ್ರಕಟವಾದ 'ತಾಯೊಬ್ಬಳೇ ನನಗೆ

# ೧. ಸರ್ಪಾಕರ್ಷ

ಒಳವು ಕೆಲವು ಸರ್ಪಂಗಳ್,
ಫಳಫಳಿಸುವ ನೇತ್ರ ಸೂತ್ರದಿಂದೆಳೆಯುತೆ ತಾಂ ॥
ಬಳಿಗೈದಿದ ಜೀವಿಗಳಂ
ಕೊಲುವುವು ; ಕಳೆಯಲ್ಕೆ ಕಷ್ಟ ಸರ್ಪಾಕರ್ಷಂ ॥

ತೆಳ್ಳನೆಯ ಜುಬ್ಬ ತೊಟ್ಟು, ಕಾಲಿಗೆ ಸ್ಲಿಪರ್ ಧರಿಸಿ, ಸೋಫಾದ ಮೇಲೆ ಸುಖವಾಗಿ ಕಾಲುಚಾಚಿ ಕುಳಿತಿದ್ದ ಶ್ರೀಧರಶರ್ಮನು ಪ್ರಮೋದಘೋಷರ "ಪ್ರಾಚೀನ ಭಾರತದ ವೈಜ್ಞಾನಿಕ ವೈಚಿತ್ರ್ಯಗಳು" ಎಂಬ ಅಪೂರ್ವ ಗ್ರಂಥದ ಕನ್ನಡ ಭಾಷಾಂತರವನ್ನು ತಿರುವಿಹಾಕುತ್ತ ಮೇಲ್ಕಂಡ ಪದ್ಯವನ್ನು ಓದಿ ನಸುನಕ್ಕನು. "ಈ ವಿಚಾರದಲ್ಲಿ ನಿಜವಾದ ವಿಚಿತ್ರ ಎಂದರೆ, ನಮ್ಮ ಕಾಲದಲ್ಲಿ ದಡ್ಡರು ಕೂಡ ನಂಬದೆ ನಿರಾಕರಿಸುವುದನ್ನು ಪ್ರಾಚೀನ ಭಾರತದಲ್ಲಿ ವಿವೇಕಿಗಳು, ವಿದ್ವಾಂಸರು ಎನಿಸಿಕೊಂಡವರು ನಂಬುತ್ತಿದ್ದರಲ್ಲಾ, ಎಂಥ ಮೌಢ್ಯ !" ಎಂದು ತನಗೆ ತಾನೇ ಹೇಳಿಕೊಂಡನು.

ಶ್ರೀಧರಶರ್ಮ ವಿಚಾರಶೀಲ ; ಆದ್ದರಿಂದ ಸಹಜವಾಗಿಯೇ ಆಲೋಚನಾ ಪರಂಪರೆಯೊಂದು ಅವನ ತಲೆಯಲ್ಲಿ ಹಾಯ್ದು ಹೋಯಿತು ; ತನ್ನ ಕಣ್ಣುಗಳ ದೃಷ್ಟಿ ಪಥವನ್ನು ಕದಲಿಸದೆ, ತನಗರಿವಿಲ್ಲದೆಯೇ ತನ್ನ ಪುಸ್ತಕವನ್ನು ಕೆಳಕ್ಕೆ ತಗ್ಗಿಸಿ ಹಿಡಿದನು. ಗ್ರಂಥವು ದೃಷ್ಟಿ ರೇಖೆಯ ಕೆಳಗಡೆಗೆ ಹೋಯಿತೋ ಇಲ್ಲವೊ, ಕಣ್ಣಿಗೆ ಬೀಳದ ಕೋಣೆಯ ಮೂಲೆಯೊಂದರಲ್ಲಿ ಇದ್ದ ಯಾವುದೋ ವಸ್ತುವು ಸುತ್ತ ಮುತ್ತಣ ಪರಿಸರಕ್ಕೆ ಅವನ ಗಮನವನ್ನು ಮರಳಿ ಸೆಳೆಯಿತು. ಅವನ ಮಂಚದ ಕೆಳಗಣ ನೆರಳುಗತ್ತಲೆಯಲ್ಲಿ ಅವನು ಕಂಡದ್ದು, ಬೆಳಕಿನ ಜೋಡಿ ಕಿರುಚುಕ್ಕಿ ; ಆ ಚುಕ್ಕಿಗಳ ನಡುವಣ ಅಂತರ ಸುಮಾರು ಒಂದು ಅಂಗುಲದಷ್ಟು. ಅವನ ಮೇಲ್ಗಡೆ ಇದ್ದ ವಿದ್ಯುದ್ದೀಪದ ಸ್ವಿಚ್ಚುಗಳ ಥಳಥಳಿಸುವ ಲೋಹದ ಗುಂಡಿನ ಪ್ರತಿಫಲನವಾಗಿದ್ದಿರಬಹುದು, ಆ ಬೆಳಕಿನ ಚುಕ್ಕಿಗಳು ; ಅವನಂತೂ ಅವುಗಳನ್ನು ಕುರಿತು ಸ್ವಲ್ಪವೂ ಯೋಚಿಸದೆ, ಮತ್ತೆ ಓದತೊಡಗಿದನು.

ಒಂದು ಕ್ಷಣವಾದ ಮೇಲೆ, ಕೈಲಿ ಹಿಡಿದಿದ್ದ ಪುಸ್ತಕವನ್ನು ಕೆಳಕ್ಕೆ ತಗ್ಗಿಸಿ,

ಗೊತ್ತಿರುವುದು' ಎಂಬ ಕಥೆಯೂ ದಕ್ಷಿಣಭಾಷಾ ಪುಸ್ತಕನಿಧಿಯ ಸಂಕಲನಗಳಲ್ಲೂ ಸೇರಿವೆ.

ಪ್ರಭಾ ಮುದ್ರಣಾಲಯದ ಒಡೆಯರಾದ ಶ್ರೀ ಡಿ.ಎಸ್. ಕೃಷ್ಣಾಚಾರ್ಯರು ಈ ಪುಸ್ತಕದ ಪ್ರಕಟನೆಯಲ್ಲಿ ಮುದ್ರಣಕಾರರಾಗಿ ಮಾತ್ರವಲ್ಲದೆ ಅನೇಕ ವಿಧಗಳಲ್ಲಿ ಉಪಕಾರ ಮಾಡಿದ್ದಾರೆ. ಅವರಿಗೆ ನಾನು ಚಿರಋಣಿ. ಮಾರಾಟದ ವ್ಯವಸ್ಥೆಯ ಸಮಸ್ಯೆಯನ್ನು ಪರಿಹರಿಸಿ ಶ್ರೀ ಡಿ.ವಿ.ಕೆ. ಮೂರ್ತಿಯವರು ನೆರವಿಗೆ ನಿಂತಿದ್ದಾರೆ. ಅವರಿಗೂ ನಾನು ಕೃತಜ್ಞ.

ಎಂ.ವಿ. ಸೀತಾರಾಮಯ್ಯ<br>
ಆನಂದನಾಮ ಸಂವತ್ಸರದ<br>
ಶ್ರಾವಣಶುದ್ಧ ಪ್ರತಿಪದೆ.<br>
(೨೦–೭–೧೯೭೪)<br>
ಬೆಂಗಳೂರು.

ಆಧುನಿಕ ನಗರವೊಂದರ ಭವ್ಯಮಂದಿರದ ಶಯ್ಯಾಗೃಹದಲ್ಲಿ ಸರ್ಪವೊಂದು ಸೇರಿಕೊಂಡಿತ್ತೆಂದರೆ ಯಾವ ವಿವರಣೆಯೂ ಅಗತ್ಯವಿಲ್ಲವೆನ್ನುವ ಮಟ್ಟಿಗೆ ಅದು ಅಷ್ಟೇನೂ ಸರ್ವಸಾಧಾರಣವಾದ ಘಟನೆಯಲ್ಲ. ಶ್ರೀಧರಶರ್ಮನು ಮೂವತ್ತೈದು ವರ್ಷದವನಾದರೂ ಇನ್ನೂ ಬ್ರಹ್ಮಚಾರಿ ; ಆತ ವಿದ್ವಾಂಸ, ವ್ಯಾಯಾಮಪಟುವೆಂದೂ ಹೇಳಬಹುದು. ಆದರೆ ಸೋಮಾರಿ. ಶ್ರೀಮಂತ, ಹತ್ತು ಜನಕ್ಕೆ ಬೇಕಾದವನು ; ಅರೋಗ ದೃಢಕಾಯದವನು ; ಅನೇಕ ಅಪರಿಚಿತ ದೂರ ದೇಶಗಳಲ್ಲಿ ಸಂಚರಿಸಿ, ದೇಶಾಂತರವಾಸಪ್ರಿಯರಾದ ಕನ್ನಡಿಗರನ್ನು ಆಕರ್ಷಿಸುತ್ತಿದ್ದ ಬೊಂಬಾಯಿಯಲ್ಲಿ ಬಂದು ಬೆಲಸಿದ್ದನು. ಶ್ರೀಮಂತಿಕೆಗೆ ಸಹಜವಾದ, ಅವನ ಶ್ರೀಮಂತ ಅಭಿರುಚಿಗಳು ಬಹುಕಾಲದಿಂದ ತೃಪ್ತಿಹೊಂದಲು ಸಾಧ್ಯವಾಗದೆ, ಒಂದು ಬಗೆಯ ಪ್ರಕೋಪಸ್ಥಿತಿಯಲ್ಲಿದ್ದುವು ; 'ತಾಜ್‌ಮಹಲ್' ಹೋಟಲಿನ ಸುಖಸಾಧನ ಸಂಪತ್ತು ಕೂಡ ಅವುಗಳನ್ನು ತಣಿಸಲಾರದೆ ಹೋಗಿದ್ದುವು. ಆದ್ದರಿಂದ, ಅವನು ತನ್ನ ಪರಮ ಮಿತ್ರನೂ ಪ್ರಸಿದ್ಧ ವಿಜ್ಞಾನಿಯೂ ಆದ ಡಾ॥ ಮೆಹ್ತಾ ಅವರ ಅತಿಥ್ಯವನ್ನು ಸ್ವೀಕರಿಸಿದ್ದನು.

ಡಾ॥ ಮೆಹ್ತಾ ಅವರ ಮನೆ ಭವ್ಯವಾದುದಾದರೂ ಹಳೆಯ ಮಾದರಿಯದು; ಅದು ಇದ್ದ ಸ್ಥಳ, ಈಗಿನ ನಗರದ ಅಭುಕ್ತಮೂಲೆಯಾಗಿ ಪರಿಣಮಿಸಿತ್ತು ; ಅದರ ಹೊರನೋಟದಲ್ಲಿ ಆಕರ್ಷಕವಲ್ಲದಿದ್ದರೂ ಪುರಾತನವಾದ ಘನತೆಯಿತ್ತು. ಮಾರ್ಪಾಟಾದ ಸುತ್ತು ಮುತ್ತಣ ಪರಿಸರದೊಂದಿಗೆ ಅದು ಸ್ಪಷ್ಟವಾಗಿ ಹೊಂದಿಕೊಳ್ಳುತ್ತಿರಲಿಲ್ಲ; ಪ್ರತ್ಯೇಕತೆಯ ಪರಿಣಾಮವಾಗಿ ಉಂಟಾಗುವ ಕೆಲವು ವೈಲಕ್ಷಣಗಳು ಅದಕ್ಕೆ ಅಂಟಿ ಕೊಂಡು ಬೆಳೆದು ಬಂದಿದ್ದುವು. ಕಟ್ಟಡದ ವಾಸ್ತುಶಿಲ್ಪಕ್ಕೆ ಏನೇನೂ ಹೊಂದಿಕೊಳ್ಳದೆ ಎದ್ದು ಕಾಣುತ್ತಿದ್ದ ಕಟ್ಟಡದ ಪಕ್ಕದ ಚಾಚುಭಾಗ ಅಂಥ ವೈಲಕ್ಷಣ್ಯಗಳಲ್ಲಿ ಒಂದಾಗಿತ್ತು; ಆ ಭಾಗದ ಉದ್ದೇಶವೂ ಅಷ್ಟೇ ವಿಚಿತ್ರವಾಗಿತ್ತು ; ಏಕೆಂದರೆ, ಅದು ಪ್ರಯೋಗಶಾಲೆ, ಮೃಗಶಾಲೆ, ಮತ್ತು ಅಪೂರ್ವ ವಸ್ತುಸಂಗ್ರಹ ಶಾಲೆಗಳ ಒಂದು ಸಂಯೋಜನೆಯಾಗಿತ್ತು. ನಮ್ಮ ಡಾಕ್ಟರ್ ಸಾಹೇಬರು ತಮ್ಮ ಆಸಕ್ತಿಯನ್ನು ಕೆರಳಿಸಿದ ಪ್ರಾಣಿಜಾತಿಗಳ ಪರಿಶೀಲನೆಯನ್ನು ನಡೆಸಿ ತಮ್ಮ ಹುಟ್ಟುಗುಣವಾದ ವೈಜ್ಞಾನಿಕ ಕುತೂಹಲವನ್ನು ತಣಿಸಿ, ತಮ್ಮ ಅಭಿರುಚಿಯನ್ನು ಸಂತೃಪ್ತಿಪಡಿಸುತ್ತಿದ್ದುದು ಈ ಸ್ಥಳದಲ್ಲಿಯೆ ; ಅವರು ಹಾಗೆ ಪರಿಶೀಲಿಸುತ್ತಿದ್ದುದು ಕೇವಲ ಕೆಳವರ್ಗದ ಪ್ರಾಣಿ ಜಾತಿಗಳೆಂಬುದನ್ನು ಒಪ್ಪಿಕೊಳ್ಳಬೇಕು. ಮೇಲುವರ್ಗದ ಪ್ರಾಣಿಜಾತಿಗಳಲ್ಲಿ ಯಾವುದಾದರೂ ಒಂದು ಇವರ ಕೋಮಲೇಂದ್ರಿಯಗಳಿಗೆ ಮೆಚ್ಚಿಗೆಯಾಗಬೇಕಾದರೆ, ಸರ್ಪಗಳ ಮತ್ತು ಮಂಡೂಕಗಳ ಬಾಂಧವ್ಯವನ್ನು

ತಾನು ಮೊದಲು ಕಂಡಿದ್ದ ಆ ಬೆಳಕಿನ ಚುಕ್ಕಿಗಳನ್ನು ಮರಳಿ ನೋಡುವಂತೆ ಅವನಿಗೆ ಏನೋ ಪ್ರೇರಣೆಯಾಯಿತು: ಏಕೆ ಹಾಗೆ ಪ್ರೇರಣೆಯಾಯಿತೆಂಬುದನ್ನು ಬೆದಕಿ ನೋಡಬೇಕೆಂದು ಅವನಿಗೆ ಹೊಳೆಯಲಿಲ್ಲ. ಆ ಬೆಳಕಿನ ಚುಕ್ಕಿಗಳು ಇನ್ನೂ ಅಲ್ಲಿಯೇ ನೆಲಸಿದ್ದುವು. ಅವು ಮೊದಲಿಗಿಂತ ಹೆಚ್ಚು ಪ್ರಕಾಶಮಾನವಾಗಿದ್ದುವು ; ಒಂದು ಬಗೆಯ ಹಸುರು ಹೊಳಪಿನಿಂದ ಮಿನುಗುತ್ತಿದ್ದುವು. ಈ ಅಂಶವನ್ನು ಅವನು ಮೊದಲು ಗಮನಿಸಿರಲಿಲ್ಲ. ಅಲ್ಲದೆ, ಅವು ಕೊಂಚ ಮಾತ್ರ ಚಲಿಸಿರಬಹುದು. ಸ್ವಲ್ಪ ಮಟ್ಟಿಗೆ ಮೊದಲಿಗಿಂತ ಹೆಚ್ಚು ಹತ್ತಿರದಲ್ಲಿವೆ ಎಂದು ಅವನು ಬಗೆದನು. ಆದರೂ, ಅಲಕ್ಷ್ಯದಿಂದಿರುವವರ ಗಮನಕ್ಕೆ ತಮ್ಮ ಸ್ವಭಾವವನ್ನೂ ಮೂಲವನ್ನೂ ಹೊರಪಡಿಸಲಾಗದಷ್ಟು ಅವು ಇನ್ನೂ ಆ ನೆರಳುಗತ್ತಲೆಯಲ್ಲಿಯೇ ಹುದುಗಿಕೊಂಡಿದ್ದುವು ; ಶ್ರೀಧರಶರ್ಮನು ಮರಳಿ ಓದತೊಡಗಿದನು. ತಟ್ಟನೆ ಗ್ರಂಥದ ಯಾವುದೋ ಒಂದು ಸಂಗತಿ ಒಂದು ವಿಚಾರಕ್ಕೆ ಎಡೆಗೊಟ್ಟಿತು. ಅವನು ಬೆಚ್ಚಿ ಪುಸ್ತಕವನ್ನು ಸೋಫದ ಪಕ್ಕದಲ್ಲಿ ಮೂರನೆಯ ಸಲ ಕೆಳಕ್ಕೆ ಹಾಕುವಂತೆ ಮಾಡಿತು; ಪುಸ್ತಕ ಅವನ ಕೈಯಿಂದ ಜಾರಿ ಬೆನ್ನು ಮೇಲಾಗಿ ತೆರೆದುಕೊಂಡು ನೆಲಕ್ಕೆ ಬಿದ್ದಿತು. ಅರ್ಧ ಮೇಲಕ್ಕೆದ್ದ ಶ್ರೀಧರಶರ್ಮನು ಮಂಚದ ಕೆಳಗಣ ಕತ್ತಲೆಯಿಡಿದ ಪ್ರದೇಶವನ್ನು ಬಿಡದೆ ದಿಟ್ಟಿಸಿ ನೋಡುತ್ತಿದ್ದನು. ಅಲ್ಲಿ ಆ ಬೆಳಕಿನ ಚುಕ್ಕಿಗಳು ಹೆಚ್ಚಿನ ಕಾಂತಿಯಿಂದ ಬೆಳಗುತ್ತಿದ್ದಂತೆ ಅವನಿಗೆ ತೋರಿತು. ಈಗ ಆತನ ಗಮನವು ಸಂಪೂರ್ಣವಾಗಿ ಆಕರ್ಷಿತವಾಗಿತ್ತು: ನಟ್ಟ ನೋಟದಲ್ಲಿ ಉತ್ಸುಕತೆಯಿತ್ತು ; ನೋಡದೆ ವಿಧಿಯಿಲ್ಲ ಎಂಬಂತಿತ್ತು. ಮಂಚದ ಅಡಿಯ ಅಡ್ಡ ಕಂಬಿಗಳಿಗೆ ನೇರವಾಗಿ ತಳಗಡೆ ಒಂದು ದೊಡ್ಡ ಸರ್ಪದ ಸುರುಳಿಗಳು ಅವನ ನೋಟಕ್ಕೆ ಗೋಚರವಾದುವು ; ಆ ಬೆಳಕಿನ ಚುಕ್ಕಿಗಳು ಅದರ ಕಣ್ಣುಗಳು ! ಅದರ ಭಯಂಕರವಾದ ತಲೆ ತೀರ ಒಳಗಿದ್ದ ಸುರುಳಿಯಿಂದ ಹೊರಹಾಯ್ದು ಹೊರಸುರುಳಿಯಮೇಲೆ ಚಪ್ಪಟೆಯಾಗಿ ನೆಲಸಿ ನೇರವಾಗಿ ಅವನ ಕಡೆಗೇ ತಿರುಗಿತ್ತು ; ಅದರ ಅಗಲವಾದ ರೂಕ್ಷವಾದ ದವಡೆಯ ಹಾಗೂ ಮೊದ್ದು ಮೊದ್ದಾದ ಮುಂದಲೆಯ ಆಕೃತಿರೇಖೆ ಅದರ ನಿರ್ದಯವಾದ ದುರು ದುರು ನೋಟದ ದಿಕ್ಕನ್ನು ಸೂಚಿಸುವುದಕ್ಕೆ ನೆರವಾಗಿತ್ತು. ಆ ಕಣ್ಣುಗಳು ಈಗ ಕೇವಲ ಪ್ರಕಾಶಮಾನ ಬಿಂದುಗಳಾಗಿರಲಿಲ್ಲ ; ಅವು ಅವನ ಕಣ್ಣುಗಳನ್ನೇ ಅರ್ಥಪೂರ್ಣವಾದ ಅಪಾಯಸೂಚಕ ತೀಕ್ಷ್ಣತೆಯಿಂದ ನೋಡುತ್ತಿದ್ದುವು.

ಇಷ್ಟು ಹೊರತಾಗಿ, ಶ್ರೀಧರಶರ್ಮ ಯಾವ ತೀಕ್ಷ್ಣ ಪರಿಣಾಮಕ್ಕೂ ಒಳಗಾಗಲಿಲ್ಲ. ಕರೆಗಂಟೆ ಬಾರಿಸಿ, ಸೇವಕನೊಬ್ಬನನ್ನು ಬರಮಾಡಿಕೊಳ್ಳಬೇಕೆಂಬ ಆಲೋಚನೆ ಆತನಿಗೆ ಮೊದಲು ಉಂಟಾಯಿತು. ಆದರೆ ಕರೆಗಂಟೆಯ ಹುರಿ ಸುಲಭವಾಗಿ ನಿಲುಕುವಷ್ಟು ದೂರದಲ್ಲಿದ್ದರೂ, ಆತ ಆ ಕಡೆಗೆ ಸ್ವಲ್ಪವೂ ಸರಿಯಲಿಲ್ಲ ; ಹಾಗೆ ಮಾಡಿದರೆ, ತಾನು ಭೀತಿಶಂಕೆಗೆ ಒಳಗಾಗುವೆನೆಂದು ಅವನಿಗೆನ್ನಿಸಿತ್ತು; ನಿಜವಾಗಿ ಅವನು ಭಯಗ್ರಸ್ತನಾಗಿರಲಿಲ್ಲ. ಆಗಿನ ಸನ್ನಿವೇಶದ ಅಪಾಯಸಂಭವಕ್ಕಿಂತ ಹೆಚ್ಚಾಗಿ ಅದರ ಅಸಂಬದ್ಧ ಸ್ವಭಾವದ ಅರಿವು ಅವನಲ್ಲಿ ತೀವ್ರವಾಗಿತ್ತು. ಸನ್ನಿವೇಶ ಮನಸ್ಸಿಗೆ ಕಿರಿಕಿರಿಯುಂಟುಮಾಡುತ್ತಿತ್ತು. ಹಾಸ್ಯಾಸ್ಪದವೂ ಆಗಿತ್ತು.

ಆ ಜಾತಿಯ ಸರ್ಪದ ಪರಿಚಯ ಶ್ರೀಧರಶರ್ಮನಿಗೆ ಇರಲಿಲ್ಲ. ಅದರ ಉದ್ದ ಎಷ್ಟೆಂಬುದನ್ನು ಅವನು ಊಹಿಸಿಕೊಳ್ಳಲುಮಾತ್ರ ಸಾಧ್ಯವಾಗಿತ್ತು ; ಕಣ್ಣಿಗೆ ಕಾಣುವಂತಿದ್ದ ಅದರ ಅತ್ಯಂತ ದಪ್ಪನೆಯ ದೇಹಭಾಗ ಸುಮಾರು ಅವನ ಮೊಳಕೈ ಗಾತ್ರದಷ್ಟಿತ್ತು. ಯಾವುದಾದರೂ ರೀತಿಯಲ್ಲಿ ಅದು ಅಪಾಯಕರವಾಗಿದ್ದರೆ, ಯಾವ ರೀತಿಯಲ್ಲಿ? ಅದು ವಿಷದ್ದೇ ಮೈಗೆ ಸುತ್ತುಹಾಕಿಕೊಳ್ಳುವ ಹೆಬ್ಬಾವೇ? ಅದು ಏನೆಂದು ಹೇಳುವಮಟ್ಟಿಗೆ, ಪ್ರಕೃತಿಯ ಅಪಾಯ ಸೂಚನೆಗಳ ಪರಿಜ್ಞಾನ ಅವನಿಗಿರಲಿಲ್ಲ: ಆ ಸಂಕೇತಭಾಷೆಯನ್ನು ಅವನು ಎಂದೂ ಅರ್ಥಮಾಡಿಕೊಂಡಿರಲಿಲ್ಲ.

ಆ ಪ್ರಾಣಿ ಅಪಾಯಕರವಾಗಿಲ್ಲದಿರಬಹುದು. ಆದರೆ ಇನ್ನೇನಲ್ಲವೆಂದರೂ, 'ಅಸಹ್ಯವಾಗಿತ್ತು.' ಅದು ಅಲ್ಲಿರತಕ್ಕದ್ದಲ್ಲ : ಸ್ಥಳಕ್ಕೆ ಹೊಂದದ ವಸ್ತು ; ಸ್ಥಳದ ಘನತೆಗೆ ಅಪಮಾನಕರ. ಕುಂದಣಕೊಪ್ಪದ ರತ್ನದಂತೆ. ನಮ್ಮ ದೇಶದ ಈಗಿನ ಚಿತ್ರಪಟಗಳು ಕಿಕ್ಕಿರಿದಿದ್ದುವು. ನೆಲದ ಪೀಠ ಪರಿಕರಗಳು ಇಡಿಕಿರಿದಿದ್ದುವು. ಆ ಪೀಠಪರಿಕರಗಳ ಮೇಲೆಲ್ಲಾ ಚಿತ್ರವಿಚಿತ್ರ ವಸ್ತುಗಳು ಇಟ್ಟಾಡುತ್ತಿದ್ದುವು. ಹೀಗಿದ್ದರೂ ಕೂಡ, ಈ ಕ್ರೂರ ವನ್ಯ ಜಂತುವಿಶೇಷಕ್ಕೆ ಈ ಸ್ಥಳ ಯೋಗ್ಯವಾಗಿ ಕಾಣುತ್ತಿರಲಿಲ್ಲ. ಇಷ್ಟರ ಜೊತೆಗೆ, ಅದು ಬಿಟ್ಟ ಉಸಿರು ಅಲ್ಲಿನ ಗಾಳಿಯೊಂದಿಗೆ ಬೆರೆಯುತ್ತಿತ್ತು. ಆ ಗಾಳಿಯನ್ನು ಅವನು ಉಚ್ಛ್ವಾಸಿಸುತ್ತಿದ್ದನು !

ಅಂತೂ, ಶ್ರೀಧರನ ಮನಸ್ಸಿನಲ್ಲಿ ಈ ಭಾವನೆಗಳು ಸ್ಪಷ್ಟವಾಗಿಯೋ ಅಸ್ಪಷ್ಟವಾಗಿಯೋ ರೂಪುಗೊಂಡಿದ್ದು, ಕಾರ್ಯಪ್ರೇರಕವಾದುವು. ಈ ಮಾನಸಿಕ ಕ್ರಿಯಾವಿಧಾನವನ್ನು 'ಪರ್ಯಾಲೋಚನೆ ತದನಂತರ ನಿರ್ಧಾರ' ಎಂದು ಕರೆಯುತ್ತೇವೆ. ನಾವು ವಿವೇಕಿಗಳು ಇಲ್ಲವೆ ಅವಿವೇಕಿಗಳು ಎನ್ನಿಸುವುದು ಈ ರೀತಿಯೆ. ಮಾಗಿಯ ಗಾಳಿಯಲ್ಲಿ ಒಣಗಿದ ಎಲೆಯೊಂದು ನೆಲದಮೇಲೋ

ಸೂಚಿಸುವ ಕೆಲವು ನಿರ್ದಿಷ್ಟವಾದ ಮೂಲಭೂತ ಲಕ್ಷಣಗಳನ್ನು ಹೊಂದಿರಬೇಕಾಗಿತ್ತು. ಅವರ ವಿಜ್ಞಾನದ ಒಲವು ಸ್ಪಷ್ಟವಾಗಿ ಸರ್ಪಜಾತಿಯ ಕಡೆಗಿತ್ತು ; ಅವರ ಪ್ರೇಮವೆಲ್ಲ ಪ್ರಕೃತಿಯ "ದೀನದಲಿತ ವರ್ಗದ" ಕಡೆಗೆ; ಅವರ ಪತ್ನಿ ಪುತ್ರಿಯರ ಪರಿಯೇ ಬೇರೆ: ನಮ್ಮ ಒಡಹುಟ್ಟುಗಳೇ ಎನಿಸಿದ ಈ ಹೀನಜಾತಕದ ಪ್ರಾಣಿಬಂಧುಗಳ ರೀತಿ ರಚನೆಗಳ ವಿಚಾರವಾಗಿ ಮೆಹ್ತಾ ಹೊಂದಿದ್ದ ಪ್ರಬುದ್ಧ ಕುತೂಹಲದಲ್ಲಿ ಭಾಗಿಗಳಾಗುವ ಸೌಭಾಗ್ಯವನ್ನು ಅವರು ಹೊಂದಿರಲಿಲ್ಲ ; ಆದ್ದರಿಂದ 'ಸರ್ಪಾಲಯ' ಎಂದು ಆತ ಕರೆಯುತ್ತಿದ್ದ ಗೃಹಭಾಗದಿಂದ ಅವರು ಬಹಿಷ್ಕೃತರಾಗಿದ್ದು, ಸಜಾತಿಪ್ರಾಣಿಗಳೊಂದಿಗೆಯೇ ಅವರು ಸದಾ ವಾಸಮಾಡಬೇಕಾಗಿದ್ದಿತು. ಅವರ ಈ ದುರವಸ್ಥೆಯ ಕಷ್ಟ ನಿಷ್ಠುರಗಳನ್ನು ಕಡಮೆಮಾಡಲೋಸುಗ ತನ್ನ ಅಪಾರ ಸಂಪತ್ತನ್ನು ವ್ಯಯಮಾಡಿ, ಸರ್ಪಗಳಿಗಿಂತ ಹೆಚ್ಚಿನ ಕಾಂತಿಯಿಂದ ಬೆಳಗುವಂತೆಯೂ ಅವುಗಳ ವಾಸಸ್ಥಳಕ್ಕಿಂತ ಹೆಚ್ಚು ವೈಭವೋಪೇತವಾದ ನಿವಾಸದಲ್ಲಿರಲು ಸಾಧ್ಯವಾಗುವಂತೆಯೂ ಅವನು ಅವರಿಗೆ ಅವಕಾಶ ಕಲ್ಪಿಸಿಕೊಟ್ಟಿದ್ದನು.

ವಾಸ್ತುಶಿಲ್ಪದ ದೃಷ್ಟಿಯಿಂದಲೂ ಸಜ್ಜುಸರಂಜಾಮಿನ ವಿಚಾರದಲ್ಲಿಯೂ, 'ಸರ್ಪಾಲಯ'ವು ತನ್ನ ನಿವಾಸಿಗಳ ದೀನ ಸ್ಥಾನಮಾನಕ್ಕೆ ಅನುಗುಣವಾಗಿ ಅತ್ಯಂತ ಸರಳವಾಗಿತ್ತು ; ಸುಖಭೋಗಗಳ ಪೂರ್ಣಾನುಭವಕ್ಕೆ ಅವಶ್ಯವಾದ ಸ್ವಾತಂತ್ರ್ಯವನ್ನು ಅವುಗಳಲ್ಲಿ ಹಲವಕ್ಕೆ ನೀಡಿ, ಸುರಕ್ಷಿತವಾಗಿರುವುದು ಸಾಧ್ಯವಾಗಿರುತ್ತಿರಲಿಲ್ಲ ; ಏಕೆಂದರೆ, ಅವು ಜೀವಂತವಾಗಿದ್ದುದೇ ಅವುಗಳ ಸಂಬಂಧವಾಗಿದ್ದ ವಿಶೇಷ ಬಾಧಕ ! ಹೀಗಿದ್ದರೂ, ಅವುಗಳ ವಾಸಸ್ಥಾನಗಳಲ್ಲಿ ಅವು ಒಂದನ್ನೊಂದು ನುಂಗಿಹಾಕುವ ಕೆಟ್ಟಚಾಳಿಯನ್ನು ತಡೆಗಟ್ಟಲು ಎಷ್ಟು ಆವಶ್ಯಯಕವೋ ಅಷ್ಟು ಹೊರತಾಗಿ ಅವುಗಳ ಚಲನವಲನಕ್ಕೆ ಹೆಚ್ಚಿನ ನಿರ್ಬಂಧಗಳೇನೂ ಇರಲಿಲ್ಲ. ತತ್ಪರಿಣಾಮವಾಗಿ, ಅವುಗಳಲ್ಲಿ ಕೆಲವು ಬೇರೆ ಬೇರೆ ಕಾಲಗಳಲ್ಲಿ ಸುತ್ತಮುತ್ತಣೆಡೆಗಳಲ್ಲಿ ಗೋಚರವಾಗುವ ಪರಿಪಾಟಿಯಿತ್ತು ; ಆ ಸ್ಥಳಗಳಲ್ಲಿ ಅವು ಇರಲು ಕಾರಣವೇನೆಂಬುದನ್ನು ವಿವರಿಸುವುದೂ ಕಷ್ಟವಾಗುತ್ತಿತ್ತು ; ಈ ಬಗೆಗೆ ಶ್ರೀಧರಶರ್ಮನಿಗೆ ಮೊದಲೇ ಎಚ್ಚರಿಗೆ ಕೊಡಲಾಗಿತ್ತು. ಇಂತು ಈ ಸರ್ಪಾಲಯ' ಇದರ ಸಂಬಂಧವಾದ ಭಯೋತ್ಪಾದಕ ಭಾವನೆ – ಇವು ಇದ್ದರೂ ಕೂಡ ಮೆಹ್ತಮಹಲಿನಲ್ಲಿನ ಜೀವನವು ಶ್ರೀಧರನ ಮನಸ್ಸಿಗೆ ಹಿತಕರವಾಗಿಯೇ ಇದ್ದಿತು.

ಬೆರಗಿನಿಂದ ತಲೆ 'ದಿಂ' ಎಂದಿತು. ಹೇವರಿಕೆಯಿಂದ ಮೈ ನಡುಗಿತು –

ಇಟ್ಟನು ! ಅದು ಹೇಗೆ ಆ ಕ್ರಿಯೆ ನಡೆಯಿತೋ ಅವನು ಯೋಚಿಸಲಾರದವನಾಗಿದ್ದನು. ಎಡಗಾಲನ್ನು ಎತ್ತಿಟ್ಟಾಗಲೂ ಹಾಗೆಯೇ ಆಯಿತು; ಅದು ಬಲಗಾಲಿನ ಮುಂಭಾಗದಲ್ಲಿತ್ತು. ಹಿಂದೆ ಕುರ್ಚಿಯ ಮೇಲಿದ್ದ ಕೈ ಅದನ್ನು ಬಲವಾಗಿ ಹಿಡಿದಿತ್ತು ; ತೋಳು ಸ್ವಲ್ಪ ನೆಟ್ಟನೆ ಹಿಂದಕ್ಕೆ ಚಾಚಿತ್ತು. ಹಿಡಿದಿದ್ದ ಹಿಡಿತವನ್ನು ಬಿಟ್ಟು ಬಿಡಲು ಅವನಿಗೆ ಇಷ್ಟವಿಲ್ಲವೆಂದು ಯಾರಿಗಾದರೂ ಕಾಣುವಂತಿತ್ತು. ಸರ್ಪದ ಭಯಂಕರವಾದ ಮೂತಿ ಮೊದಲಿನಂತೆಯೇ ಕುತ್ತಿಗೆಯ ಮಟ್ಟದಲ್ಲಿ ಒಳ ಸುರಳಿಯಿಂದ ಹೊರಹಾಯ್ದಿತ್ತು. ಅದು ಚಲಿಸಿಯೇ ಇರಲಿಲ್ಲ: ಆದರೆ, ಈಗ ಅದರ ಕಣ್ಣುಗಳು ಅಸಂಖ್ಯಾತ ಪ್ರಕಾಶಮಾನ ಸೂಚಿಕಿರಣಗಳನ್ನು ಬೀರುವ ವಿದ್ಯುತ್ ಕಿಡಿಗಳಾಗಿದ್ದುವು.

ಅವನು ವಿವರ್ಣನಾಗಿ ಬೂದಿ ಬಳಿದುಕೊಂಡಂತೆ ಬಿಳಿಚಿಕೊಂಡಿದ್ದನು. ಕುರ್ಚಿಯನ್ನೂ ತನ್ನೊಡನೆ ಎಳೆದುಕೊಂಡು, ಮರಳಿ ಇನ್ನೊಂದು ಹೆಜ್ಜೆ ಮುಂದಿಟ್ಟನು ; ಮತ್ತೂ ಒಂದು ಹೆಜ್ಜೆಯಿಟ್ಟನು. ಕೈಬಿಟ್ಟಾಗ ಕುರ್ಚಿ ನೆಲದ ಮೇಲೆ ದಢಾರನೆ ಬಿದ್ದಿತು. ಅವನು ನರಳುವಂತೆ ಚೀರಿದನು ; ಸರ್ಪವು ಚಲಿಸಲೂ ಇಲ್ಲ, ಸದ್ದನ್ನೂ ಮಾಡಲಿಲ್ಲ ; ಆದರೆ ಅದರ ಕಣ್ಣುಗಳು ಮಾತ್ರ ಪ್ರಜ್ವಲಿಸುವ ಎರಡು ರವಿಗಳಂತಿದ್ದುವು. ಅವು ಸರ್ಪವನ್ನೇ ಸಂಪೂರ್ಣವಾಗಿ ಮರೆಮಾಡಿದ್ದವೆನ್ನಬೇಕು. ದಟ್ಟವಾದ ಹಾಗೂ ನಿಚ್ಚಳವಾದ ಬಣ್ಣಬಣ್ಣಗಳ, ಬರುಬರುತ್ತ ದೊಡ್ಡವಾಗುವ ಉಂಗುರಗಳನ್ನು ಅವು ಹೊರಹೊಮ್ಮಿಸುತ್ತಿದ್ದುವು. ಆ ಉಂಗುರಗಳು ಅತ್ಯಂತ ದೊಡ್ಡದಾದಾಗ, ಒಂದಾದಮೇಲೆ ಒಂದರಂತೆ ಸಾಬೂನು ಗುಳ್ಳೆಗಳ ಹಾಗೆ ಮಾಯವಾಗುತ್ತಿದ್ದುವು. ಅವು ಅವನ ಮುಖವನ್ನೇ ತಾಗಿ ಸಾಗಿಹೋಗುತ್ತಿದ್ದುವು. ಒಂದು ದೊಡ್ಡ ಭೇರಿಯ ನಿರಂತರವಾದ ಬಡಿತ ಎಲ್ಲಿಂದಲೋ ಅವನಿಗೆ ಕೇಳಿಬರುತ್ತಿತ್ತು; ಅದರೊಂದಿಗೆ. ಗಾಂಧರ್ವವೀಣಾಸ್ವರಗಳಂತೆ ಊಹಿಸಲಾಗದಷ್ಟು ಇಂಪಾಗಿ, ಒಮ್ಮೆ ಅಲ್ಲಿ ಒಮ್ಮೆ ಇಲ್ಲಿ ಎನ್ನುವಂತೆ, ಉಕ್ಕಿ ಕೇಳಿಬರುತ್ತಿತ್ತು ದೂರದ ಸಂಗೀತ. ಪ್ರಾಚೀನ ಭಾರತದ ಸಾರ್ವಭೌಮನೊಬ್ಬನ ರಾಜಮಂದಿರದಲ್ಲಿ ಆತನು ಉಪ್ಪವಡಿಸಲೆಂದು ಆಸ್ಥಾನದ ಗಾಯಕನು ಉದಯರಾಗವನ್ನು ಹಾಡುತ್ತಿರುವಂತೆಯೂ, ತಾನು ಅಲ್ಲಿಯೇ ನಿಂತುಕೊಂಡು ಶತಮಾನಗಳ ಮೌನವನ್ನು ಭೇದಿಸಿಕೊಂಡು ಬರುತ್ತಿದ್ದ ಆ ದಿವ್ಯ ಸಂಗೀತವನ್ನು ಆಲಿಸುತ್ತಿರುವಂತೆಯೂ ಶ್ರೀಧರಶರ್ಮನು ಭಾವಿಸಿಕೊಂಡನು.

ಸಂಗೀತವು ನಿಂತಿತು ; ಹಾಗೆನ್ನುವುದಕ್ಕಿಂತ ದೂರ ದೂರಕ್ಕೆ ಹಿಮ್ಮೆಟ್ಟುತ್ತಿರುವ ಗುಡಿಗಿನ ಮೊಳಗಿನಂತೆ ಕ್ರಮ ಕ್ರಮವಾಗಿ ಮಂದವಾಗುತ್ತ ಬಂತು ಎನ್ನಬಹುದು.

ಜಲದಮೇಲೋ ಬೀಳುವುದರಲ್ಲಿ ತನ್ನ ಜೊತೆಯೆಲೆಗಳಿಗಿಂತ ಹೆಚ್ಚಿನ ಅಥವಾ ಕಡಮೆಯ ಪ್ರಜ್ಞೆಯನ್ನು ತೋರುವುದೂ ಹೀಗೆಯೇ. ಮಾನವ ಕರ್ಮದ ಮರ್ಮ ಬಹಿರಂಗವಾದುದು. ಯಾವುದೋ ಒಂದು ಶಕ್ತಿ ನಮ್ಮ ಸ್ನಾಯುಗಳನ್ನು ಸಂಕೋಚನಗೊಳಿಸುತ್ತವೆ. ಪೂರ್ವಸಿದ್ಧತೆಯ ರೂಪದ ಈ ಸೂಕ್ಷ್ಮ ವ್ಯತ್ಯಾಸಗಳಿಗೆ ಇಚ್ಛಾ ಶಕ್ತಿ ಎಂದು ನಾಮಕರಣ ಮಾಡಿದರೆ ಬಾಧಕವಿಲ್ಲವಷ್ಟೆ ?

ಶ್ರೀಧರಶರ್ಮನು ಎದ್ದುನಿಂತು, ಸಾಧ್ಯವಾದರೆ ಸರ್ಪವನ್ನು ಎಚ್ಚರಗೊಳಿಸದ ರೀತಿಯಲ್ಲಿ ಬಾಗಿಲಮೂಲಕ ಮೆಲ್ಲಮೆಲ್ಲನೆ ಹಿಂದಕ್ಕೆ ಸರಿಯಲು ಅನುವಾದನು. ಸಾಮಾನ್ಯವಾಗಿ ಜನರು ಮಹಾಪುರುಷರ ಸಮ್ಮುಖದಲ್ಲಿ ಹೀಗೆ ನಿರ್ಗಮಿಸುತ್ತಾರೆ. ಏಕೆಂದರೆ, ಮಹತ್ವ ಒಂದು ಶಕ್ತಿ ; ಯಾವಾಗಲೂ ಭಯಕಾರಿ. ತಡೆಬಡೆಯಿಲ್ಲದೆ ಹಿಂದುಹಿಂದಕ್ಕೆ ನಡೆದುಹೋಗಿ, ತಪ್ಪದೆ ಬಾಗಿಲನ್ನು ಕಂಡುಕೊಳ್ಳಬಹುದೆಂದು ಅವನು ಬಲ್ಲನು. ಒಂದು ವೇಳೆ ಆ ಕ್ರೂರಜಂತು ಹಿಂಬಾಲಿಸಿದರೆ ? ಯಾವ ಅಭಿರುಚಿ ಗೋಡೆಗಳನ್ನು ಚಿತ್ರಮಯವಾಗಿ ಮಾಡಿತ್ತೋ ಅದೇ ಅಭಿರುಚಿ ಶಸ್ತ್ರ ಸಂಗ್ರಹಣವನ್ನೂ ಅಲ್ಲಿ ಒದಗಿಸಿಕೊಟ್ಟಿತ್ತು ; ಅದರಿಂದ ಸಂದರ್ಭಕ್ಕೆ ತಕ್ಕ ಒಂದನ್ನು ಅವನು ಸೆಳೆದುಕೊಳ್ಳಬಹುದಾಗಿತ್ತು. ಈ ನಡುವೆ, ಆ ಸರ್ಪದ ಕಣ್ಣುಗಳು ಮೊದಲಿಗಿಂತ ಹೆಚ್ಚಿನ ನಿರ್ದಯ ದೌಷ್ಟ್ಯದಿಂದ ಪ್ರೋಜ್ವಲವಾಗಿದ್ದುವು.

ಹಿಂದಕ್ಕೆ ಹೆಜ್ಜೆಯಿಡಬೇಕೆಂಬ ಉದ್ದೇಶದಿಂದ, ಶ್ರೀಧರಶರ್ಮನು ತನ್ನ ಬಲ ಅಡಿಯನ್ನು ನೆಲದಿಂದ ಬಿಡಿಸಿಕೊಂಡು ಮೇಲೆತ್ತಿದ್ದನು. ಆ ಕ್ಷಣವೇ ಹಾಗೆ ಮಾಡಲು ಹೇವರಿಕೆಯುಂಟಾಯಿತು.

"ನಾನು ಧೈರ್ಯಶಾಲಿಯೆಂದು ಎಲ್ಲ ತಿಳಿದಿದ್ದಾರೆ. ಧೈರ್ಯ ಪ್ರತಿಷ್ಠೆಗಿಂತ ಮೇಲಾದುದಲ್ಲವೇನು ? ಲಜ್ಜಾಸ್ಪದವಾದ ವರ್ತನೆಯನ್ನು ನೋಡಲು ಯಾರೂ ಇಲ್ಲವೆಂದ ಮಾತ್ರಕ್ಕೆ ನಾನು ಈ ರೀತಿ ಪಲಾಯನ ಮಾಡಿಬಿಡಲೆ ?" ಎಂದು ಅವನು ತನ್ನಲ್ಲಿ ತಾನು ಗೊಣಗಿಕೊಂಡನು.

ಎತ್ತಿದ ಕಾಲನ್ನು ಎತ್ತಿದ ಹಾಗೆಯೇ ಇಟ್ಟುಕೊಂಡು, ಕುರ್ಚಿಯೊಂದರ ಬೆನ್ನಿನಮೇಲೆ ಬಲಗೈಯ್ಯನ್ನೂರಿ, ಸ್ಥೈರ್ಯದಿಂದಿರಲು ಅವನು ಪ್ರಯತ್ನಿಸುತ್ತಿದ್ದನು.

"ಛೆ! ಎಂಥ ಅವಿವೇಕ ! ಹೆದರಿಕೊಂಡಿರುವಂತೆ ನನಗೆ ನಾನೇ ಕಾಣುವುದಕ್ಕೂ ಹೆದರುವಷ್ಟು ಮಹಾ ಅಂಜುಬುರುಕನೇನಲ್ಲ ನಾನು." ಎಂದು ಗಟ್ಟಿಯಾಗಿಯೇ ಹೇಳಿದನವನು.

ಮಂಡಿಯನ್ನು ಸ್ವಲ್ಪ ಬಗ್ಗಿಸಿ, ಪಾದವನ್ನು ಇನ್ನು ಸ್ವಲ್ಪ ಮೇಲಕ್ಕೆ ಎತ್ತಿದನು; ಇನ್ನೊಂದು ಪಾದಕ್ಕೆ ಅರ್ಧ ಅಂಗುಲದಷ್ಟು ಮುಂದುಗಡೆಯಲ್ಲಿ ಅದನ್ನು ಠಪಾರನೆ

ಒಂದು ಗಜದಷ್ಟು ಅಂತರದಲ್ಲಿ ನೆಲದಮೇಲೆ ಮುಖವಡಿಯಾಗಿ ಮಲಗಿದ್ದ ಅವನು ಮೊಳಕೈಯೂರಿ ತನ್ನ ದೇಹದ ಶಿರೋಭಾಗವನ್ನು ಮೇಲೆತ್ತಿದನು. ಅವನ ತಲೆ ಹಿಂದಕ್ಕೆ ಒಲೆದಿತ್ತು ; ಅವನ ಕಾಲುಗಳು ಪೂರ್ತಿ ನೀಡಿದಾಗಿ ಚಾಚಿದ್ದುವು. ರಕ್ತ ಸುರಿದು ಸುರಿದು ಅವನ ಮುಖ ಬೆಳ್ಳಗಾಗಿತ್ತು ; ಎಷ್ಟು ಸಾಧ್ಯವೋ ಅಷ್ಟು ಅಗಲವಾಗಿ ನೋಯುವ ಮಟ್ಟಿಗೆ ಕಣ್ಣು ತೆರೆದಿದ್ದುವು. ತುಟಿಗಳ ಮೇಲೆ ನೊರೆ ಕವಿದು, ಹುಳುಕು ಹಳುಕಾಗಿ ಕೆಳಕ್ಕೆ ಬೀಳುತ್ತಿದ್ದುವು. ಅವನ ದೇಹದಾದ್ಯಂತ ಬಲವಾದ ಎಳೆತ ಮೊದಲಾಗಿ, ಬಹುಮಟ್ಟಿಗೆ ಸರ್ಪಾಕೃತಿಯಲ್ಲಿ ಅದು ಏಳೂಬೀಳಾಗುತ್ತಿತ್ತು. ಅವನು ತನ್ನ ಕಾಲುಗಳನ್ನು ಆ ಪಕ್ಕದಿಂದ ಈ ಪಕ್ಕಕ್ಕೆ ಆಡಿಸುತ್ತ, ಸೊಂಟದ ಬಳಿಬಾಗಿ ಏಳುವುದರಲ್ಲಿದ್ದನು. ಆದರೆ, ಪ್ರತಿಕ್ಷಣವೂ ಅವನು ಸರ್ಪಕ್ಕೆ ತುಸುತುಸು ಹತ್ತಿರವಾಗುತ್ತಿದ್ದನು. ಊರಿಕೊಂಡು ಹಿಂದಕ್ಕೆ ಚಲಿಸುವ ಉದ್ದೇಶದಿಂದ ಅವನು ಕೈಗಳನ್ನು ಮುಂದಕ್ಕೆ ಚಾಚುತ್ತಿದ್ದನು ; ಆದರೂ, ತನ್ನ ಮೊಳಕೈಯೂರಿ ಮುಂದು ಮುಂದಕ್ಕೇ ಸರಿದುಹೋಗುತ್ತಿದ್ದನು.

ಡಾ॥ ಮೆಹ್ತಾ, ಅವನ ಹೆಂಡತಿ, ಪುಸ್ತಕಭಂಡಾರದಲ್ಲಿ ಕುಳಿತಿದ್ದರು. ಬಹಳ ಆಪೂರ್ವವಾಗಿ ಆ ವಿಜ್ಞಾನಿ ವಿನೋದದ ಮನೋಭಾವ ಹೊಂದಿದ್ದರು.

"ಇನ್ನೊಬ್ಬರು ಪ್ರಾಣಿ ಸಂಗ್ರಾಹಕರೊಂದಿಗೆ ಅದಲುಬದಲು ಮಾಡಿಕೊಂಡು, ನಾನು ಇದೇ ತಾನೇ ವ್ಯಾಳಭಕ್ಷಕಜಾತಿಯ ಉತ್ಕೃಷ್ಟ ಮಾದರಿಯೊಂದನ್ನು ಸಂಪಾದಿಸಿದ್ದೇನೆ" ಎಂದು ಆತ ಹೇಳಿದನು.

"ಅದು ಎಂಥಾದ್ದೋ ?" ಎಂದು ಆಕೆ ಅಷ್ಟೇನೂ ಆಸಕ್ತಿ ವಹಿಸದೆ ಪ್ರಶ್ನಿಸಿದಳು.

"ಅಯ್ಯೋ ದೇವರೆ! ಎಂಥ ಮೌಢ್ಯ! ವಿವಾಹವಾದ ಮೇಲೆ ತನ್ನ ಪತ್ನಿಗೆ ಸಂಸ್ಕೃತಭಾಷೆ ಗೊತ್ತಿಲ್ಲವೆಂದು ಪತಿಯಾದವನಿಗೆ ತಿಳಿದರೆ, ಆತನು ಆ ಕಾರಣದಿಂದ ವಿವಾಹವಿಚ್ಛೇದನವನ್ನು ಪಡೆಯಬಹುದು, ಹೊಸ ಕಾನೂನಿನ ಪ್ರಕಾರ ! 'ವ್ಯಾಳಭಕ್ಷಕ' ಎಂದರೆ, ಇತರ ಹಾವುಗಳನ್ನು ತಿನ್ನುವ ಒಂದು ಜಾತಿಯ ಹಾವು."

ಆಕೆ ಯಾವುದೋ ಜ್ಞಾನದಲ್ಲಿ ದೀಪವನ್ನು ಪಕ್ಕಕ್ಕೆ ಸರಿಸುತ್ತ ನುಡಿದಳು: "ಅದು ನೀವು ಸಾಕಿರುವ ಹಾವುಗಳನ್ನೆಲ್ಲ ತಿಂದುಬಿಡುತ್ತದೆ ಹಾಗಾದರೆ ! ಅದುಸರಿ, ಅದು ಇತರ ಹಾವುಗಳನ್ನು ಹೇಗೆ ತಿನ್ನುತ್ತದೆ ? ಅವುಗಳನ್ನು ಆಕರ್ಷಿಸಿ ತನ್ನ ಬಳಿಗೆ ಸೆಳೆದುಕೊಳ್ಳುತ್ತದೆಯೆ ?" ಸ್ವಲ್ಪ ತುಂಟತನವನ್ನು ತೋರುತ್ತ, ಡಾಕ್ಟರ್ ತಿಳಿಸಿದರು : "ಅದು ನಿನ್ನ ಹಾಗೆಯೇ, ಪ್ರಿಯೆ ! ... ಆದರೂ, ಸರ್ಪದ

ಆಗ ಅವನ ಮುಂದೆ ಚಾಚಿ ಗೋಚರವಾಯಿತು ಒಂದು ಸುಂದರ ದೃಶ್ಯ : ಫಳಫಳಿಸುವ ಬಿಸಿಲು–ಮಳೆ ; ವರ್ಣರಂಜಿತವಾದ ಬಾಗಿದ ಕಾಮನಬಿಲ್ಲು ; ಅದರ ದೈತ್ಯ ಚಾಪಾಕೃತಿಯ ಅಳವಿನಲ್ಲಿ ನೂರಾರು ನಗರಗಳ ಹರವುನೋಟ. ದೂರದಲ್ಲಿ ಮಧ್ಯದಲ್ಲೊಂದು ಮಹಾಸರ್ಪ ; ಅದರ ತಲೆಯಮೇಲೊಂದು ಕಿರೀಟ; ಅದು ತನ್ನ ಭಾರಿ ಸುರುಳಿಗಳೊಳಗಿಂದ ತಲೆಯನ್ನು ಹೊರಹಾಕಿ ಅವನ ಸತ್ತ ತಾಯಿಯ ಕಣ್ಣುಗಳನ್ನು ನೆನಪಿಗೆ ತರುವ ಕಣ್ಣುಗಳಿಂದ ಅವನನ್ನು ನೋಡತೊಡಗಿತು. ತಟ್ಟನೆ ಈ ಮೋಹಕ ದೃಶ್ಯವು ರಂಗಭೂಮಿಯ ದೃಶ್ಯದ ತೆರೆ ಮೇಲೇಳುವಂತೆ ಬೇಗನೆ ಮೇಲೆದ್ದು ಕಣ್ಮರೆಯಾಗಿ ಶೂನ್ಯದಲ್ಲಡಗಿತು. ಆಗ ಅವನ ಮುಖ ಮತ್ತು ಎದೆಗಳ ಮೇಲೆ ಏನೋ ಬಲವಾಗಿ ಹೊಡೆದಂತಾಯಿತು. ಅವನು ನೆಲದ ಮೇಲೆ ಬಿದ್ದಿದ್ದನು ; ಅವನ ಒಡೆದ ಮೂಗಿನಿಂದಲೂ ಬಿರಿದ ತುಟಿಗಳಿಂದಲೂ ರಕ್ತ ಹರಿಯುತ್ತಿತ್ತು. ಕ್ಷಣ ಕಾಲ ಅವನು ದಿಗ್ಭ್ರಮೆ ಹಿಡಿದು, ನಿಶ್ಚೇಷ್ಟಿತನಾಗಿ, ಕಣ್ಣುಮುಚ್ಚಿ, ಬಾಗಿಲಿಗೆ ಅಭಿಮುಖನಾಗಿ ಮಲಗಿದ್ದನು. ಕೆಲವು ಕ್ಷಣಗಳಲ್ಲಿಯೆ ಎಚ್ಚರಗೊಂಡನು ; ಆಗ, ತಾನು ಕೆಳಗೆ ಬಿದ್ದ ಕಾರಣ ಕಣ್ಣುಗಳನ್ನು ಬೇರೆಯಕಡೆಗೆ ತಿರುಗಿಸಿದಂತಾಗಿ, ತನ್ನನ್ನು ಬಂಧಿಸಿದ್ದ ಮೋಹಶಕ್ತಿಯಿಂದ ತಾನು ವಿಮುಕ್ತನಾಗಿರುವೆನೆಂದು ಅರಿತನು. ಈಗ ತನ್ನ ದೃಷ್ಟಿಯನ್ನು ಬೇರೆಯ ಕಡೆಗೆ ಹೊಳಿಸಿ ಇಟ್ಟುಕೊಂಡರೆ, ತಾನು ಹಿಮ್ಮೆಟ್ಟಲು ಸಾಧ್ಯವಾಗಬಹುದು ಎಂದು ಭಾವಿಸಿದನು. ಆದರೆ, ಆ ಸರ್ಪವು ಈಗ ಕಣ್ಣಿಗೆ ಬೀಳದಿದ್ದರೂ, ತನ್ನ ಮೇಲೆ ಎಗರಿಬಿದ್ದು ತನ್ನ ಕೊರಳಿಗೆ ಸುತ್ತಿಹಾಕಿಕೊಳ್ಳಲು ಹವಣಿಸುತ್ತಿದೆ–ಎಂಬ ಆಲೋಚನೆ ಬಹು ಭಯಂಕರವೆನಿಸಿತು. ಆಗ ಅವನು ತನ್ನ ತಲೆಯೆತ್ತಿದನು ; ಮರಳಿ ಆ ವಿಪತ್ಕಾರಕ ನೇತ್ರಗಳನ್ನೊಮ್ಮೆ ದೃಷ್ಟಿಸಿ ನೋಡಿದನು ; ಮರಳಿ ಬಂಧನಕ್ಕೊಳಗಾದನು.

ಸರ್ಪವು ಚಲಿಸಲಿಲ್ಲ ; ಭಾವನಾಶಕ್ತಿಯ ಮೇಲೆ ತನ್ನ ಪ್ರಭಾವವನ್ನು ಸ್ವಲ್ಪ ಮಟ್ಟಿಗೆ ಕಳೆದುಕೊಂಡಂತೆ ಕಾಣುತ್ತಿತ್ತು ; ಕೆಲವು ಕ್ಷಣಗಳ ಹಿಂದಿನ ವೈಭವ ಪೂರ್ಣವಾದ ಮಾಯಾದೃಶ್ಯಗಳು ಪುನಃ ಕಾಣಿಸಿಕೊಳ್ಳಲಿಲ್ಲ. ಚಪ್ಪಟೆಯಾದ ಮೆದುಳಿಲ್ಲದ ಅದರ ಹಣೆಯ ಕೆಳಗೆ ಕಪ್ಪನೆಯ ಮಣಿನೇತ್ರಗಳು ಮೊದಲಿನಂತೆಯೇ ಫಳಫಳಿಸುತ್ತಿದ್ದುವು ; ಅವುಗಳ ನೋಟ ಹೇಳಲಾಗದಷ್ಟು ಕ್ರೂರವಾಗಿದ್ದುವು. ತನಗೆ ಜಯ ಖಂಡಿತ ಎಂದು ತಿಳಿದು, ತನ್ನ ಮಾಯಾ ಜಾಲವನ್ನು ಇನ್ನು ಬೀಸುವುದಿಲ್ಲವೆಂದು ನಿರ್ಧರಿಸಿದೆಯೋ ಎಂಬಂತಿತ್ತು ಆ ಪ್ರಾಣಿ.

ಈಗಲೀಗ ಭಯಪೂರ್ಣ ದೃಶ್ಯವೊಂದು ಮೊದಲಾಯಿತು. ತನ್ನ ಶತ್ರುವಿಗೆ

ಸತ್ತ ಸರ್ಪ ಅದು–ಒಳಗೆಲ್ಲಾ ಹೊಟ್ಟನ್ನು ಗಿಡಿದು ತುಂಬಿದ್ದು ; ಅದರ ಕೋರೈಸುವ ಕಣ್ಣುಗಳು, ಕೇವಲ ಕರಿಯಮಣಿಗಳೆರಡು !*

---

Ambroce Bierce ಎಂಬ ಆಂಗ್ಲ ಕಥೆಗಾರನ The Snake ಎಂಬ ಕಥೆಯ ರೂಪಾಂತರ. "ನಿಲ್ದಾಣಗಳ ನಡುವೆ" ಕಥಾಸಂಕಲನದಿಂದ.

ಆಕರ್ಷಣಶಕ್ತಿಯ ಬಗ್ಗೆ ಇರುವ ಆ ಮೂಢನಂಬಿಕೆಯನ್ನು ಪ್ರಸ್ತಾಪಿಸಿದರೆ, ನನಗೆ ಮೈಯೆಲ್ಲಾ ಉರಿಯುತ್ತೆ."

ಇದ್ದಕ್ಕಿದ್ದಂತೆಯೆ ಭಾರಿ ಚೀತ್ಕಾರವೊಂದು, ಪಾತಾಳಗವಿಯೊಳಗೆ ರಾಕ್ಷಸ ವ್ಯಕ್ತಿಯಿದ್ದು ಆರ್ಭಟಿಸುತ್ತಿದ್ರೆ ಹೇಗೋ ಹಾಗೆ, ಆ ನಿಶ್ಯಬ್ದವಾದ ಮನೆಯ ತುಂಬ ಮೊಳಗಿಡುತ್ತ, ಅವರ ಸಂಭಾಷಣೆಗೆ ವಿಘ್ನವುಂಟುಮಾಡಿತು. ಭೀಕರವಾಗಿ ಸುಸ್ಪಷ್ಟವಾಗಿ ಆ ಕೂಗು ಮತ್ತೆ ಮತ್ತೆ ಧ್ವನಿಸಿತು. ಮೆಹ್ತಾ ಗಾಬರಿಗೊಂಡರು. ಆಕೆ ಬೆದರಿ ಬಣ್ಣಗೆಟ್ಟು ಮೂಕಳಾದಳು; ಇಬ್ಬರೂ ಕುಳಿತಿದ್ದವರು ನೆಗೆದೆದ್ದು ನಿಂತರು.

ಕೊನೆಯ ಸಲದ ಚೀರಾಟದ ಮಾರ್ಮೊಳಗು ಕ್ಷೀಣವಾಗುವುದಕ್ಕೆ ಮೊದಲೇ ಡಾಕ್ಟರ್ ಕೋಣೆಯಿಂದ ಹೊರಬಿದ್ದು. ಒಂದೊಂದು ಸಲಕ್ಕೆ ಎರಡೆರಡು ಮೆಟ್ಟಲಂತೆ ಮಹಡಿಯ ಮೆಟ್ಟಲುಗಳ ಮೇಲೆ ಹಾರಿಹೋಗುತ್ತಿದ್ದರು ಶ್ರೀಧರಶರ್ಮನಿದ್ದ ಕೋಣೆಯ ಮುಂಭಾಗದ ನಡವೆಯಲ್ಲಿ ಆತನು ಕೆಲಮಂದಿ ಸೇವಕರನ್ನು ಸಂಧಿಸಿದರು; ಅವರು ಮೇಲ್ಮಹಡಿಯಿಂದ ಅಲ್ಲಿಗೆ ಬಂದಿದ್ದರು. ಅವರೆಲ್ಲರೂ ಒಟ್ಟಿಗೆ ಬಾಗಿಲ ಕಡೆಗೆ ಧಾವಿಸಿದರು ; ಅದನ್ನು ತಟ್ಟದೆಯೆ ನುಗ್ಗಿದಾಗ, ಅಗುಳೀ ಹಾಕದಿದ್ದ ಬಾಗಿಲು ತಾನಾಗಿ ತೆರೆಯಿತು. ಶ್ರೀಧರಶರ್ಮನು ನೆಲದಮೇಲೆ ಬೆನ್ನು ಮೇಲಾಗಿ ಸತ್ತು ಒರಗಿದ್ದನು. ಆತನ ತಲೆ ತೋಳುಗಳು ಮಂಚದ ಅಡಿಯ ಅಡ್ಡ ಕಂಬಿಗಳ ಕೆಳಗೆ ಅರ್ಧ ಮರೆಯಾಗಿದ್ದುವು. ಅವರು ಕಳೇಬರವನ್ನು ಈಚೆಗೆಳೆದು, ಮುಖ ಮೇಲಾಗಿ ಮಾಡಿದರು. ಮುಖದ ತುಂಬ ರಕ್ತ, ನೊರೆ, ಮೆತ್ತಿಕೊಂಡಿದ್ದುವು ; ಕಣ್ಣುಗಳು ತೆಟ್ಟತೆರೆದು ನಿಟ್ಟನೆ ನೋಡುತ್ತಿದ್ದುವು– ಒಟ್ಟುನೋಟ ಭಯಂಕರವಾಗಿತ್ತು.

ವಿಜ್ಞಾನಿ ಮಂಡಿಯೂರಿ ಕುಳಿತು, ಮೃತನ ಹೃದಯದ ಮೇಲೆ ಕೈಯಿಟ್ಟು "ಮೂರ್ಛೆ ಬಂದು ಸತ್ತಿದ್ದಾನೆ"–ಎಂದರು. ಹಾಗೆ ಕುಳಿತಿದ್ದಾಗ, ಆತನ ದೃಷ್ಟಿ ಮಂಚದ ಕೆಳಗೆ ಹರಿಯಿತು. "ಎಲ ಎಲಾ ! ಹಾಳಾದ್ದು ಇದು ಹೇಗೆ ಇಲ್ಲಿ ಬಂತು" ಎಂದರು.

ಆತ ಮಂಚದಡಿಯಲ್ಲಿ ತೂರಿ, ಇನ್ನೂ ಸುರುಳಿಸುತ್ತಿಕೊಂಡಿದ್ದ ಆ ಸರ್ಪವನ್ನು ಹೊರಕ್ಕೆಳೆದು, ಅದನ್ನು ಕೋಣೆಯ ಮಧ್ಯಕ್ಕೆ ಬಿಸಾಡಿದರು; ಅಲ್ಲಿಂದ ಅದು ಕರ್ಕಶವಾದ ಕೀಚುಸದ್ದಿನೊಂದಿಗೆ ನುಣ್ಣನೆ ಮಿರುಗುವ ನೆಲದ ಮೇಲೆ ಸರಿದುಹೋಗಿ, ಎದುರು ಗೋಡೆಯಂಚಿನಲ್ಲಿ ನಿಶ್ಚಲವಾಗಿ ಬಿದ್ದಿತು.

ನನಗೆ ಒಂದಿರುಳು ನೂಕುವುದು ಕಷ್ಟವಾಗದು. ಆದರೆ, ನಿನ್ನನ್ನು ಕಂಡ ಕೂಡಲೆ ನಿನ್ನಲ್ಲಿ ನನಗೆ ನಂಬಿಕೆ ಹುಟ್ಟಿತು ; ಕೇಳಿದೆ."

"ನಾನು ಸಣ್ಣ ಮನುಷ್ಯ ; ಸಾಧಾರಣ ವ್ಯಕ್ತಿ."

"ಚಿಂತೆಯಿಲ್ಲ, ನನಗೆ ಬೇಕಾದದ್ದು ನಿಲ್ಲಲು ನೆಲೆ. ಪ್ರಚಾರವಲ್ಲ, ಕೀರ್ತಿಯಲ್ಲ."

"ನೀನು ಹೇಳಿದ್ದನ್ನು ಕೇಳಿದಮೇಲೆ, ನಿನಗೆ ಆಶ್ರಯ ಕೊಡಬೇಕಾದರೆ ನಿಜವಾಗಿ ಯೋಚನೆಮಾಡಬೇಕು. ನಾಳೆ ಬಂದರೆ, ಯೋಚನೆ ಮಾಡಿ,...."

"ನಾಳೆ.......ನಾಳೆ...... ಹಾಗೆಯೇ ಆಗಲಿ" ಎಂದು ನಿರಾಶೆಯಿಂದ ತಲೆ ತಗ್ಗಿಸಿ ಹೊರಟುಹೋದಳು ಸತ್ಯವತಿ.

ನಾನು ನಿರೀಕ್ಷಿಸಿದ್ದಂತೆ, ಮಾರನೆಯ ಬೆಳಗ್ಗೆ ಅವಳು ಬಂದಳು. ಅತ್ಯಾದರದಿಂದ ಅವಳನ್ನು ಸ್ವಾಗತಿಸಿದೆ.

ಆದರೆ, ನನಗೆ ಆಶ್ಚರ್ಯವಾಯಿತು. ಇವಳೇ ಅವಳು ಎಂದು ನಂಬುವಂತಿರಲಿಲ್ಲ. ಅದೇ ಆಕಾರ. ಅದೇ ರೂಪ, ಅದೇ ಸೌಂದರ್ಯ. ಆದರೆ, ಎಂಥ ಮಾರ್ಪಾಟು !

ಇಂದವಳು ಸರ್ವಾಲಂಕಾರ ಭೂಷಿತೆ; ಸುಪ್ರಸನ್ನೆ; ಹಾವಭಾವ ವಿಲಾಸರಮ್ಯ. ನೀನಿಂದು ? 'ನೀನು ಯಾರು ?' ಎಂದು ಕೇಳುವಂತೆಯೇ ಇರುವೆ. ನನ್ನ ಕಣ್ಣನ್ನು ನಾನೇ ನಂಬಲಾರೆ. ಇರಲಿ. ನಿನ್ನೆ ಇಲ್ಲಿಂದ ಹೋಗುವಾಗ ವ್ಯಾಕುಲೆ ಯಾಗಿದ್ದಂತೆ ಕಂಡೆ. ಈಗ ಮನಸ್ಸಿಗೆ ನೆಮ್ಮದಿ ತಾನೆ ? ಯೋಚನೆ ಮಾಡಿ, ನಿರ್ಧರಿಸಿದ್ದೇನೆ............ಒಳಕ್ಕೆ ಬಾ, ಸತ್ಯವತೀದೇವಿ......."

ಅಪಚಾರಗೊಂಡವಳಂತೆ ನುಡಿದಳು, ಹೊಸಿಲಬಳಿ ನಿಂತಿದ್ದ ಹೊಸಬಳು:

"ನಾನು ಸತ್ಯವತೀ ದೇವಿಯಲ್ಲ. ಮಿಥ್ಯಾಮೋಹಿನಿ, ತಿಳಿಯಿತೆ?"

"ಹ್ಹಾ! ಮಿಥ್ಯಾಮೋಹಿನಿಯೇ ? ಸತ್ಯವತಿಯ ಹಾಗೆಯೇ ಇದ್ದೀಯೆ !"

"ಥೂ ! ಅವಳ ಹೆಸರೆತ್ತಬೇಡ. ಅವಳು ನನ್ನ ಆಜನ್ಮವೈರಿ! ಅವಳ ನೆರಳಿದ್ದ ಕಡೆಯೂ ನಾನು ಸುಳಿಯುವುದಿಲ್ಲ."

"ನನ್ನಿಂದ ನಿನಗೆ ಏನಾಗಬೇಕು ? ಆಶ್ರಯ ಬೇಕೆ, ಇಲ್ಲವೆ........."

"ಅಸಂಖ್ಯಾತರ ಆಶ್ರಯ ನನಗುಂಟು. ನಾನು ಅನಾಥೆಯಲ್ಲ. ನಿನ್ನನ್ನು ಒಲಿದು ಬಂದಿದ್ದೇನೆ. ನನ್ನನ್ನು ವರಿಸು."

"ಯೋಚನೆ ಮಾಡಿ ನಾಳೆ ಹೇಳುತ್ತೇನೆ."

"ನಾಳೆ ಎಂದರೆ ನಷ್ಟ. ಇಂದೇ ವರಿಸಿದರೆ ಇಂದ್ರಲೋಕದ ಸಕಲ

# ೨. ನಿರಾಶ್ರಿತೆ ಮತ್ತು ಅಭಿಸಾರಿಕೆ

ಅವಳು ನನ್ನ ಕಡೆಗೆ ಸಾರಿ ಬಂದಳು ; ಹಿಂದೆ ಮುಂದೆ ನೋಡುತ್ತ, ಸುತ್ತ ಮುತ್ತ ದೃಷ್ಟಿ ಹರಿಸುತ್ತ, ತನ್ನನ್ನು ಯಾರಾದರೂ ಗುರುತಿಸಿಯಾರೋ ಏನೋ ಎಂಬ ಕಳವಳವನ್ನು ಅಡಗಿಸಲು ಪ್ರಯತ್ನಿಸುತ್ತ, ಯಾರನ್ನೋ ಹುಡುಕುತ್ತಿರುವಂತೆ ನನ್ನ ಬಳಿಗೆ ಬಂದಳು. ಸಂಶಯ ಭಾವದಿಂದ ತಲೆ ತಗ್ಗಿಸಿ ನನ್ನೆದುರು ನಿಂತಳು.

ಶುಭ್ರವಸ್ತ್ರ ಧಾರಿಣಿಯವಳು ; ನಿರಾಭರಣ ಸುಂದರಿಯವಳು ; ದಿವ್ಯತೇಜಃ ಪುಂಜ ಪ್ರಭಾಮಂಡಿತೆಯವಳು.

ನನಗವಳು ಅಪರಿಚಿತೆ.

"ನೀನು ಯಾರು ?" ಎಂದು ಕೇಳಿದೆ, ಕುತೂಹಲದಿಂದ.

"ಸತ್ಯ" ಎಂದು ಉತ್ತರಿಸಿದಳು.

"ನಿನ್ನ ವಿಚಾರ ಕೇಳಿ ಬಲ್ಲೆ. ಅಪರಿಚಿತೆಯಂತೆ ಕಂಡದ್ದಕ್ಕಾಗಿ ಕ್ಷಮಿಸು."

"ಚಿಂತೆಯಿಲ್ಲ. ಬಹುಮಟ್ಟಿಗೆ ನನ್ನನ್ನು ಯಾರೂ ಕಂಡರಿಯರು. ಯಾರ ಬಳಿಗೆ ಹೋದರೂ 'ನೀನು ಯಾರು ?' ಎಂದೇ ಕೇಳುತ್ತಾರ. ನನ್ನ ಪರಿಚಯವನ್ನು ಎಷ್ಟು ಹೇಳಿಕೊಂಡರೂ ಯಾರೂ ನನ್ನನ್ನು ಗುರುತಿಸರು ; ಅರ್ಥಮಾಡಿಕೊಳ್ಳರು" ಎಂದು ವ್ಯಸನಪಟ್ಟು ನುಡಿದಳು.

"ನನ್ನಿಂದ ನಿನಗೆ ಏನಾಗಬೇಕು ?"

"ನಿನ್ನ ಆಶ್ರಯ ಬಯಸಿ ಬಂದಿದ್ದೇನೆ."

"ನನ್ನ ಆಶ್ರಯವೇ ? ಯಾಕೆ ?"

"ನಾನು ನಿರಾಶ್ರಿತೆ. ನಾನು ಆಶ್ರಯಿಸಿದ ಪುರುಷಸಿಂಹರೆಲ್ಲರೂ ನನಗಾಗಿ ಪ್ರಾಣಾರ್ಪಣೆ ಮಾಡಬೇಕಾಗಿ ಬಂದಿದೆ ; ಇಲ್ಲವೆ ಕೊನೆ ಮೊದಲಿಲ್ಲದ ಕಷ್ಟಪಂಪರೆಗೆ ಗುರಿಯಾಗಿದ್ದಾರೆ. ನೀನು ನನಗೆ ಆಶ್ರಯ ಕೊಡಲು ಸಾಧ್ಯವೆ? ಧೈರ್ಯವಿದೆಯ"

"ಯೋಚನೆ ಮಾಡಿ ನಾಳೆ ಹೇಳುತ್ತೇನೆ."

"ನಾಳೆ.......ನಾಳೆಯೆ ?.......ವರ್ಷಗಟ್ಟಳೆ ನಿರಾಶ್ರಿತೆಯಾಗಿ ಅಲೆಯುತ್ತಿರುವ

ಸೌಭಾಗ್ಯಗಳೇ ನಾನು ನಿನಗೆ ತರುವ ಬಳುವಳಿ."

"ನಿನ್ನ ಸಹವಾಸ ನನಗೆ ಬೇಡ ಮಹಾರಾಯಿತಿ, ದಯವಿಟ್ಟು ಹೊರಟು ಹೋಗು" ಎಂದೆನ್ನುವಷ್ಟರಲ್ಲಿಯೇ ಅವಳು ನನ್ನ ಕೊರಳಿಗೆ ಹೂಮಾಲೆ ಹಾಕಿ ಹಾರಿಹೋಗಿದ್ದಳು.

"ಅಯ್ಯೋ" ಎಂದು ಕೈಕೈ ಹಿಸುಕಿಕೊಳ್ಳುತ್ತಿರುವಷ್ಟರಲ್ಲಿ–ಎಚ್ಚರವಾಯಿತು.

"ದೇವರ ದಯದಿಂದ, ಕನಸು" ಎಂದು ಸಮಾಧಾನಗೊಂಡೆ.

"ಅದೂ ನಾನೇ" ಎಂದು ಮಿಥ್ಯೆ ನನ್ನೆದುರು ಪ್ರತ್ಯಕ್ಷಳಾಗಿ ನಸುನಗುತ್ತ ನಿಂತಿದ್ದಳು.*

---

* E.V. Lucas ಅವರ Truth and Another ಎಂಬ ಬರಹದಿಂದ ಪ್ರೇರಿತ. (ನಿಲ್ದಾಣಗಳ ನಡುವೆ – ಕಥಾಸಂಕಲನದಿಂದ)

# ೧. ಠಾಕೂರರು ಮತ್ತು ಪಾಶ್ಚಾತ್ಯ ಸಂಗೀತ

## ಲೇಖಕ: ಆರ್ನಲ್ಡ್ ಬೇಕ್

## (ಅನುವಾದಕ: ಎಂ.ವಿ. ಸೀತಾರಾಮಯ್ಯ)

ಕಳೆದ ಆರೇಳು ಶತಮಾನಗಳ ಅವಧಿಯಲ್ಲಿ ತನ್ನದೇ ಆದ ಸಮಯಾಚಾರಗಳನ್ನು (conventions) ರೂಢಿಸಿಕೊಂಡು ಬೆಳೆದುಬಂದಿರುವ ಪಾಶ್ಚಾತ್ಯ ಸಂಗೀತವು, ಅದಕ್ಕಿಂತ ಸಂಪೂರ್ಣವಾಗಿ ಭಿನ್ನವಾದ ಹಾಗೂ ಅದಕ್ಕಿಂತ ಹೆಚ್ಚು ಪುರಾತನವಾದ ಸಮಯಾಚಾರಗಳ ಆಧಾರದ ಮೇಲೆ ನೆಲೆ ನಿಂತಿರುವ ಭಾರತೀಯ ಸಂಗೀತ ಪದ್ಧತಿಯ ವಾತಾವರಣದಲ್ಲಿ ಬೆಳೆದ, ಸೂಕ್ಷ್ಮ ಮನೋವೃತ್ತಿಯ, ಸಂಗೀತಜ್ಞನೊಬ್ಬನ ಮೇಲೆ ಯಾವ ಪರಿಣಾಮವನ್ನು ಹೊಂದಿರುವುದು?

ರವೀಂದ್ರರ ಸೃಷ್ಟ್ಯಾತ್ಮಕ ಕಾರ್ಯ ಕಲಾಪಗಳಲ್ಲಿ ಸಂಗೀತವು ಬಹು ಪ್ರಮುಖವಾದ ಪಾತ್ರವನ್ನು ವಹಿಸಿದ್ದಿತು; ಅತ್ಯುತ್ತಮ ಭಾರತೀಯ ಸಂಗೀತವು ದಿನದಿನದ ಬದುಕಿನಲ್ಲಿ ಒಂದು ಜೀವಂತ ಶಕ್ತಿಯಾಗಿದ್ದ ಮನೆಯಲ್ಲಿ ಅವರು ಹುಟ್ಟಿದರು; ಇದರಿಂದಾಗಿ, ಅವರು ಅವರ ಸಂಪ್ರದಾಯ ಸಮಯಾಚಾರಗಳನ್ನು ಒಳಗೊಂಡು, ಕಡೆಗೆ ಅವು ಅವರ ಸಂಗೀತ ಸ್ವಭಾವದ ಮುಖ್ಯಭಾಗವಾಗಿಯೂ, ಅವರ ಸಂಗೀತ ಕಲಾಭಿಜ್ಞತೆಯ ಆಧಾರವಾಗಿಯೂ ಪರಿಣಮಿಸಿದುವು. ಅವರ ರಚನೆಗಳ ಅತ್ಯಂತ ಪ್ರಮುಖ ಲಕ್ಷಣವೆಂದರೆ, ಸಂಗೀತಕ್ಕೂ ಸಾಹಿತ್ಯಕ್ಕೂ ಇರುವ ನಿಕಟ ಐಕ್ಯಭಾವ; ವಾಸ್ತವವಾಗಿ, ಆ ಐಕ್ಯಗುಣ ಅವರ ಸ್ವಂತ ಭಾರತೀಯ ಸಂಗೀತದಲ್ಲಿಯೇ ಆಳವಾಗಿ ಬೇರುಬಿಟ್ಟಿದೆ. ನಿಜದ ಸಂಗತಿ ಎಂದರೆ, ಮಧ್ಯಯುಗದ ಉತ್ತರಭಾಗದ ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ಪಟ್ಟಿ ಮಾಡಿರುವ ಪ್ರಕಾರ, ಸಾಹಿತ್ಯ–ಸಂಗೀತಗಳೆರಡನ್ನೂ ನಿರ್ಮಾಣ ಮಾಡುವ 'ವಾಗ್ಗೇಯಕಾರ'ನೇ ಸಂಗೀತ ರಚನಕಾರರಲ್ಲಿ ಅತ್ಯಂತ ಉಚ್ಚ ದರ್ಜೆಯವರು. ಈ ವಿವರಣೆ ರವೀಂದ್ರನಾಥ ಠಾಕೂರರಿಗೆ ಸಂಪೂರ್ಣವಾಗಿ ಸರಿಹೊಂದುತ್ತದೆ.

ಆದರೂ, ಠಾಕೂರರ ರಚನೆಗಳಲ್ಲಿ ಅತ್ಯಂತ ಪ್ರಬಲ ಶಕ್ತಿಯೆನಿಸಿದ, ಈ ಸಾಹಿತ್ಯ–ಸಂಗೀತ ರೂಪಗಳ ('ಮಾತು' ಮತ್ತು 'ಧಾತು'ಗಳ) ಐಕ್ಯವು ಅವರ

---

೧. ಧಾತು=Melody; ಸಂಗೀತಕ್ಕೆ ಆಧಾರಭೂತವಾದ ನಾದ ನಾದದ್ರವ್ಯ.

powering vertical structure) ಸಂಗೀತಜ್ಞರಾದ ಅವರಿಗೆ ಪರಕೀಯವಾಗಿಯೆ ಉಳಿದುದಲ್ಲದೆ, ಕೆಲಮಟ್ಟಿಗೆ ವಿಕರ್ಷಕವಾಗಿಯೂ ಇದ್ದಿತು. ಜೊತೆಗೆ ಪರಿಕರ ಯಾವುದೂ ಇಲ್ಲದ ಒಂದೇ ಒಂದು ರಾಗ ಧಾಟಿಯ (unaccompanied melodical line) ನಾಜೂಕಾದ ಅಚ್ಚನ್ನು (Delicate moulding) ರಚಿಸುವುದು ಅವರ ಮಾರ್ಗ; ಅದರಲ್ಲಿ ಅವರ ಕವನದ ರಸಭಾವಾತ್ಮಕ ಧ್ವನಿಗಳೆಲ್ಲವೂ (Emotional overtones) ಪ್ರಕಟಗೊಳ್ಳುತ್ತಿದ್ದುವು. ಸ್ವರಮೇಳಗಳ ಕಟ್ಟುನಿಟ್ಟಾದ ನಿಯಮದ ಮೂಲಕ ಆ ಸ್ವತಂತ್ರವಾದ ಬೆಳವಣಿಗೆಗೆ ಒದಗುವ ಯಾವುದೇ ನಿರ್ಬಂಧವಾಗಲಿ, ಅಥವಾ ಅಂಗೀಕೃತ ಧ್ವನಿಸಾಂಗತ್ಯ ಮಾರ್ಗದಲ್ಲಿ (Harmonie lines) ಒಂದು ಆಧಾರ ಸ್ವರ ಪದ್ಧತಿಯಿಂದ (Key) ಇನ್ನೊಂದು ಆಧಾರ ಸ್ವರ ಪದ್ಧತಿಗೆ ಬದಲಾಯಿಸುವ ಯಾವುದೇ ಸೂಚನೆಯಾಗಲಿ, ಅವರ ವಿಚಾರಕ್ರಮಕ್ಕೆ ಪರಕೀಯವೆನಿಸಿತ್ತು. ಅವರ ಸಂಗೀತ ಸಂಬಂಧವಾದ ಕಲ್ಪಕಶಕ್ತಿಯು ಪರಿಶುದ್ಧವಾದ ರಾಗಪದ್ಧತಿಯ ತತ್ತ್ವಕ್ಕೆ (Modal Principle) ಎಂದೆಂದಿಗೂ ಸಂಲಗ್ನವಾಗಿಹೋಗಿತ್ತು. ಆ ತತ್ತ್ವದ ಮೇರೆಗೆ, ಬೇರೆಬೇರೆ ಸ್ವರಾಷ್ಟಕ ಶ್ರೇಣಿಗಳ ಸ್ವರಗಳು ಒಂದು ಖಚಿತ ಸ್ವರಾಸ್ಥಾನಕ್ಕೆ (One fixed point) ಎಂದರೆ ಆಧಾರ ಶ್ರುತಿಗೆ ಅವು ಹೊಂದಿರುವ ಬೇರೆ ಬೇರೆ ಸಂಬಂಧಗಳಲ್ಲಿ ಮಾತ್ರ ಪರಿಗಣನೆಗೆ ಬರುತ್ತವೆ. ಎಂದರೆ, ಆ ಖಚಿತ ಸ್ವರ ಕೇಂದ್ರಕ್ಕೆ (Tonal Centre) ಹೊಂದಿಕೊಂಡಂತೆ ಪ್ರತಿ ಸ್ವಕಾಂಶದ ಆಂತರಿಕ ಸಂಬಂಧದ ವಿಷಯದಲ್ಲಿ ಒಂದು ರಾಗಪದ್ಧತಿಯು (Mode) ಇನ್ನೊಂದರಿಂದ ಭಿನ್ನವಾಗಿರುತ್ತದೆ; ಅದು ಯಾವುದೇ ಸ್ಥಾಯಿಯಲ್ಲಿ (Pitch) ಇರಬಹುದು. ಇದಕ್ಕೆ ವ್ಯತಿರಿಕ್ತವಾಗಿ, ಪಾಶ್ಚಾತ್ಯ ಸಂಗೀತದ ಎಲ್ಲ ಆಧಾರ ಸ್ವರ ಪದ್ಧತಿಗಳೂ (Western Keys)– ಅವು ವರಿಷ್ಠವಾಗಲಿ, ಅವರಿಷ್ಠವಾಗಲಿ (Major or Minior) ತಮ್ಮ ಸ್ವರಭಾವಕ್ಕೆ (Tonal base) ಸಂಬಂಧಪಟ್ಟಂತೆ ಒಂದು ವ್ಯತ್ಯಾಸವಾಗದ ಸ್ಥಿರ ಅಂತರಿಕ ಸಂಬಂಧವನ್ನು ಹೊಂದಿರುತ್ತವೆ; ವ್ಯತ್ಯಾಸಗೊಳ್ಳುವ ಏಕಮಾತ್ರ ಅಂಶವೆಂದರೆ, ಆಧಾರಸ್ವರವು (ಅಥವಾ ಮೂಲಸ್ವರವು: Tonic) ಯಾವ ಸ್ಥಾಯಿಗೆ (pitch) ಅಳವಡಿಸಲ್ಪಟ್ಟಿದೆಯೋ ಆ ಸ್ಥಾಯಿಗೆ ಎದುರಾಗಿ ಅವುಗಳ ಮೊತ್ತದ ಸ್ಥಾನ ('C') ('ಸ') (ವರಿಷ್ಠ)ದ (C Major) ಸ್ವರಪದ್ಧತಿಯ ಆಂತರಿಕ ಸಂಬಂಧವು ತದ್ವತ್ತಾಗಿ ಇತರ ಯಾವುದೇ ವರಿಷ್ಠ ಸ್ವರ ಪದ್ಧತಿಯ (Major key) ಆಂತರಿಕ ಸಂಬಂಧದ ಹಾಗೆಯೇ ಇರುತ್ತದೆ. ಅವುಗಳಲ್ಲಿ ಒಂದಕ್ಕೂ ಇನ್ನೊಂದಕ್ಕೂ ಇರುವ ಏಕಮಾತ್ರ ಸಂಬಂಧ ಎಂದರೆ, ತಮ್ಮ ತಮ್ಮ ಆಧಾರ ಸ್ವರಗಳ ('Tonics')

ಜನ್ಮ ಕಾಲದಲ್ಲಿ ಭಾರತ ದೇಶದಲ್ಲಿ ಹಿಂದಿನಷ್ಟು ಪ್ರಾಮುಖ್ಯವನ್ನು ಹೊಂದಿರಲಿಲ್ಲ. ಹದಿನೈದನೆಯ ಶತಮಾನದ ಅಂತ್ಯ ಭಾಗದಿಂದ ಮುಂದಕ್ಕೆ, ಮುಸ್ಲಿಮರ ಆಳ್ವಿಕೆ ಸ್ಥಾಪಿತವಾದ ಮೇಲೆ ವಿಶೇಷವಾಗಿ ಉತ್ತರಭಾರತದಲ್ಲಿ ಸಂಗೀತದಲ್ಲಾದ ಬೆಳವಣಿಗೆಗಳು ಅರಬ್ಬೀ ಮತ್ತು ಪಾರಸಿಕ ಪ್ರಪಂಚದ ಸಂಗೀತದ ಪ್ರಭಾವಕ್ಕೆ ಒಳಪಟ್ಟು, ಸಾಹಿತ್ಯ ಭಾಗದ (Text) ಅರ್ಥವ್ಯಾಪ್ತಿಯಿಂದ ಆಚೆಗೆ ಸರಿದು, ಶುದ್ಧಾಂಗವಾಗಿ ಆಲಂಕಾರಿಕವಾದ ಒಂದು ವಾದ್ಯನಿಷ್ಠ ಸಂಗೀತ ಶೈಲಿಯ (Instrumental, floried style) ಕಡೆಗೆ ಹೊರಳಿತ್ತು. ಆಗ, 'ಕಲಾ–ಸಂಗೀತ'ವು (Art-music) (ಎಂದರೆ, ಕೇವಲ ಕಲಾದೃಷ್ಟಿಯ ಸಂಗೀತ–ಅನು.) ಶುದ್ಧಾಂಗವಾಗಿ ನಾದದ ಹಾಗೂ ಲಯದವೈಖರಿಗಳ ಸಾಧ್ಯತೆಗಳನ್ನು ಅನ್ವೇಷಿಸುವುದರಲ್ಲಿಯೇ ನಲಿಯತೊಡಗಿತು; ಅದರೊಳಗಿನ ಸಾಹಿತ್ಯಭಾಗ– ಒಂದು ವೇಳೆ ಅದು ಏನಾದರೂ ಇದ್ದರೆ, ರಾಗ ಧಾಟಿಯ ಮೇಲೆ ಪ್ರಭಾವ ಬೀರುವುದು ತಪ್ಪಿಹೋಗಿತ್ತು? ಈ ಬೆಳವಣಿಗೆ ಸಂಪೂರ್ಣವಾಗಿಯು ಪಾಶ್ಚಾತ್ಯ ದೇಶಗಳಲ್ಲಿ ೧೭–೧೮ನೆಯ ಶತಮಾನಗಳಲ್ಲಿ ತಲೆದೋರಿದಂತಹ ಬೆಳವಣಿಗೆಯ ಹಾಗೆಯೇ ಇದ್ದಿತು; ಆಗ, ಹಾಡುಗಾರನೊಬ್ಬನು ಸಂಬಂಧಪಟ್ಟ ಪದದ ಅರ್ಥಕ್ಕಾಗಲಿ, ವಾಕ್ಯದಲ್ಲಿ ಅಥವಾ ಒಟ್ಟು ಕವಿತೆಯಲ್ಲಿ ಅದರ ಮುಖ್ಯತೆಗಾಗಲಿ ಲವಲೇಶವೂ ಆದರೆ, ಸಾಮಾನ್ಯ ಹಾಡುಗಳ (Melodies) ಹೆಚ್ಚು ಸರಳವಾದ ಧಾಟಿಗೂ (fine) ನೇರವಾದ ರಂಜಕ ಗುಣಕ್ಕೂ ಅವರ ಹೃದಯ ಮಾರುಹೋಯಿತು. ಭಾರತೀಯ ಸಂಗೀತ ಶಾಸ್ತ್ರವು ಪ್ರತಿಯೊಂದು ರಾಗಕ್ಕೂ ಉಂಟೆಂದು ತಿಳಿಯಹೇಳುವ ರಸಭಾವಾತ್ಮಕ ಗುಣಗಳನ್ನು ಅಂಗೀಕರಿಸಿ, ಪ್ರಾಚೀನ ಪದ್ಧತಿಯ ಶಾಸ್ತ್ರೀಯ ಸಂಗೀತದ ರಾಗಗಳನ್ನು ಅವರು ಉಪಯೋಗಿಸಿಕೊಂಡಾಗ ಕೂಡ ಆ ಹಾಡುಗಳ ಸರಳತೆಯನ್ನು ಅನುಸರಿಸಿದರು. ಅವರು ಭಾರತದ ಶಾಸ್ತ್ರೀಯ ಸಂಗೀತವನ್ನು ಬಲ್ಲವರಾಗಿದ್ದು, ಅರ್ಥ ಮಾಡಿಕೊಂಡಿದ್ದರು. ಅವರು ಸದಾ ಕಾಲದಲ್ಲಿಯೂ ಅದರಿಂದ ಸ್ಫೂರ್ತಿಯನ್ನು ಪಡೆಯದಿದ್ದರೂ, ಅದು ಅವರ ಆಧ್ಯಾತ್ಮಿಕ ಸಂಪತ್ತಿನ ಒಂದು ಭಾಗವಾಗಿತ್ತು.

ಪಾಶ್ಚಾತ್ಯ ಸಂಗೀತದೊಂದಿಗೆ ಅವರು ಸಂಪರ್ಕ ಹೊಂದಿದಾಗ, ಅವರು ಹೇಗೆ ಪ್ರತಿಕ್ರಿಯೆ ತೋರಿದರು? ಬಹುಮಟ್ಟಿಗೆ ಅದರಲ್ಲಿ ಅವರಿಗೆ ಯಾವ ಆಕರ್ಷಣೆಯೂ ಕಂಡುಬರಲಿಲ್ಲ ಎಂಬುದಂತೂ ಸ್ಪಷ್ಟ. 'ಪಾಶ್ಚಾತ್ಯ 'ಧ್ವನಿ ಸಾಂಗತ್ಯ' ರಚನೆಗಳ (Harmonic Compositions) ಉತ್ಕಟ ಊರ್ಧ್ವ ಸಂಚಾರ (Over

ಬಂದು, ಅದರಿಂದ ಭಿನ್ನವಾಗಿ ನಿಲ್ಲುತ್ತವೆ; ಮಧ್ಯಯುಗದ ಪಾಶ್ಚಾತ್ಯ ಗೀತಗಳಲ್ಲಿರುವಂತೆ, ಈ 'ಸ್ಥಾಯಿ'ಯನ್ನು ಪೂರ್ತಿಯಾಗಿಯೋ ಇಲ್ಲವೆ ಭಾಗವಾಗಿಯೋ ಒಂದು ಬಗೆಯ ಮೇಳಗೀತ ಖಂಡ("Pes")ದಂತೆ ಉಪಯೋಗಿಸುವುದು ಅವರ 'ವಿಚಾರಗಳಲ್ಲಿ ಒಂದಾಗಿದ್ದಿತು. ಈ 'ಗೀತಖಂಡ'ದ ಒಂದು ಉಚಿತ ಭಾಗವನ್ನು ಗಾಯಕರ ಒಂದು ತಂಡವು ಪುನರಾವೃತ್ತಿಯಾಗಿ ಹಾಡುತ್ತಿರುವಾಗ, ಇತರರು (ಇನ್ನೊಂದು ತಂಡ) ಮುಂದಿನ ಬೆಳವಣಿಗೆಯ ಭಾಗವನ್ನು ಹಾಡುತ್ತಿರುವರು. ಎರಡು ತಂಡಗಳೂ ಒಂದೇ ರಾಗರಚನೆಯಲ್ಲಿ (modal structure) ಉಪಯೋಗಿಸುತ್ತಿದ್ದುದರಿಂದಲೂ, ಆ ಪ್ರಯುಕ್ತ, ಆರಿಸಿಕೊಂಡ ಸ್ವರಗ್ರಾಮದ ಅವೇ ಪ್ರಧಾನ ಸ್ವರಗಳ್ನು ಒತ್ತಿ ಉಚ್ಚರಿಸುತ್ತ ಹಾಗೂ ಅವೇ ಪ್ರಧಾನವಲ್ಲದ ಸ್ವರಗಳನ್ನು ವರ್ಜಿಸುತ್ತ, ಅದೇ ನಿರ್ದಿಷ್ಟ ಸಮಾಪ್ತಿ ಸ್ವರದ ಮೇಲೆ ವಿಶ್ರಮಿಸುತ್ತ ಇದ್ದುದರಿಂದಲೂ, ಆ ಎರಡು ನಿಕಟವರ್ತಿ ಗೀತಧಾಟಿಗಳ (Melodical strains) ಹೆಣೆಗೆಯಲ್ಲಿ ಕೆಲವು ಧ್ವನಿಸಂಯೋಗ ಇದ್ದೇ ಇರುತ್ತಿದ್ದಿತು.

ಈ ಪ್ರಯೋಗವು ಎಷ್ಟರಮಟ್ಟಿಗೆ ("Sumar is icumen in ಎಂಬಂತಹ ಹಾಡುಗಳಲ್ಲಿನ) ಮೇಳ ಗೀತಖಂಡ(pes)ವನ್ನು ಕೇಳುವುದರಿಂದ ಬಹುಶಃ ಪ್ರೇರಿತವಾಯಿತು ಎಂದು ಹೇಳುವುದು ಅಸಾಧ್ಯ. ಆದರೆ, ಏನೇ ಆಗಲಿ, ಪಾಶ್ಚಾತ್ಯ ಸಂಗೀತದ ಈ ಪ್ರಭಾವವು ಪ್ರಬಲವಾದುದೇನೂ ಆಗಿರಲಿಲ್ಲ, ಹಾಗೂ ಮೊತ್ತದಲ್ಲಿ ಅವರ ಗೀತ ರಚನಾವಿಧಾನದ ಮೇಲೆ ಶಾಶ್ವತವಾದ ಪರಿಣಾಮವನ್ನು ಹೊಂದಿರಲಿಲ್ಲ. ವೇದದ ಋಕ್ಕುಗಳನ್ನು ಸಾಂಪ್ರದಾಯಿಕ ಪಾಶ್ಚಾತ್ಯ ಧ್ವನಿಸಾಂಗತ್ಯ ಪದ್ಧತಿಗೆ (Harmony) ಅಳವಡಿಸುವ ಪ್ರಯತ್ನಗಳಲ್ಲಿ ಅವರ ತಂದೆಗೆ ಒಲವಿದ್ದಂತೆ ಕಾಣುತ್ತದೆ; ಅವು ಕೂಡ ಯಾವ ಸ್ಥಿರವಾದ ಪರಿಣಾಮವನ್ನೂ ಬೀರಿದಂತೆ ಕಾಣುವುದಿಲ್ಲ. ಹೀಗೆ, ಸಹಜಪ್ರವೃತ್ತಿಯಿಂದ ಪ್ರೇರಿತರಾಗಿ ಅವರು ಪರಸ್ಪರ ಹೊಂದದ ಎರಡು ವಸ್ತುಗಳನ್ನು ಒಂದುಗೂಡಿಸುವ ನಿಷ್ಫಲ ಪ್ರಯತ್ನದಿಂದ ಅವರು ದೂರ ಸರಿದಿರಬೇಕು.

ಸೃಷ್ಟಿಶೀಲಕಲಾಕಾರರೆನಿಸಿದ ಅವರ ಜೀವಮಾನದಲ್ಲಿ ಪಾಶ್ಚಾತ್ಯ ಸಂಗೀತದ ಯಾವುದೋ ಒಂದು ಪ್ರಕಾರವು ಅವರ ಕಾರ್ಯದ ಮೇಲೆ ಸ್ಪಷ್ಟವಾದ ಮುದ್ರೆಯೊತ್ತಿರಬಹುದಾದ ಒಂದೇ ಒಂದು ಕಾಲವಿದೆ. ಇದು ಅವರು ಬಹಳ ಚಿಕ್ಕವರಾಗಿದ್ದಾಗ; ಅವರು ನ್ಯಾಯಶಾಸ್ತ್ರವನ್ನು ವ್ಯಾಸಂಗಮಾಡಲು ಇಂಗ್ಲೆಂಡಿಗೆ ತೆರಳಿದ್ದರು (ಆ ಪ್ರಯತ್ನ ಅಷ್ಟೇನೂ ಯಶಸ್ವಿಯಾಗಲಿಲ್ಲ); ಆಗ, ಅವರು ಅತಿಥಿಯಾಗಿ ಹೋಗುತ್ತಿದ್ದ ಬೇರೆ ಬೇರೆ ಮನೆಗಳ ದಿವಾನಖಾನೆಗಳಲ್ಲಿ ಸ್ಕಾಟ್,

ಖಚಿತ ಸ್ಥಾಯಿ. ನಿಜವಾಗಿ ಈ ಸಂಬಂಧವಾದ, ಪರಿಚಯ ಜ್ಞಾನ ಹೊಂದುವುದು ಯಾವ ಭಾರತೀಯ ಸಂಗೀತಗಾರನಿಗಾದರೂ ಬಹಳ ಕಷ್ಟವೆ. ಪ್ರತಿಯೊಂದು (ಸ್ವರ ಪದ್ಧತಿಯ) ಬದಲಾವಣೆಯಲ್ಲಿಯೂ ಅಂತರ್ಗತವಾದ ಸ್ವರ ಪ್ರಾರಂಭ ಸ್ಥಾನದ (Tonal starting point) ಅಥವಾ ಆಧಾರ ಷಡ್ಜ ಸ್ವರದ (Tonic) ಸ್ಥಾನಾಂತರವು ಭಾರತೀಯ ಶ್ರೋತೃಗಳನ್ನು ದಿಗ್ಭ್ರಮೆಗೊಳಿಸುವುದು ಖಂಡಿತ. ವ್ಯತ್ಯಾಸ ಹೊಂದದ ಆಧಾರ ಷಡ್ಜದ ಮೇಲೆ ರಚಿತವಾದ ರಾಗ(Melodic basis)ವನ್ನು ಹಿಡಿದು, ಸ್ವರ ಸ್ಥಾಯಿಯ ಅಂತರಗಳನ್ನು (Intervals: 'ಶ್ರುತಿ;ಗಳನ್ನು) (ತನಗರಿವಿಲ್ಲದಂತೆಯೆ) ಹೋಲಿಸುತ್ತ ಹೋಗುವುದೇ ಆತನು ಸಂಗೀತವನ್ನು ಅಲಿಸುವ ವಿಧಾನ.

ಹೀಗಿರುವುದರಿಂದ, ಸಂಗೀತ ರಚನಕಾರರು (Composers) ಬಂದು ರವೀಂದ್ರರ ಸಾಹಿತ್ಯಕ್ಕೆ (Texts) ತಮ್ಮ ಸಂಗೀತ ರಚನೆಗಳನ್ನು ಹೊಂದಿಸಿ ನುಡಿಸಿ ತೋರಿಸಿ, ಆಧುನಿಕ ಬೆಳವಣಿಗೆಗಳೆಲ್ಲವನ್ನೂ ಒಳಗೊಂಡ 'ಧ್ವನಿ ಸಾಂಗತ್ಯ' ಪದ್ಧತಿಯನ್ನು (Harmonic system) ಅವರು ಮೆಚ್ಚಿ ಪ್ರೀತಿಸಬೇಕೆಂದು ನಿರೀಕ್ಷಿಸಿದಾಗ, ಅದು ಅವರಿಗೆ ಹಿಡಿಸಲೇ ಇಲ್ಲ; ಏಕೆಂದರೆ, ತಮ್ಮ ಕವಿತೆಗಳ ಭಾವವನ್ನು ಒಂದೇ ಮಟ್ಟಿನ ಧಾಟಿಯಲ್ಲಿ (Single metadic line) ಹೊರತಾಗಿ ಅನ್ಯಥಾ ಅಭಿವ್ಯಕ್ತಿಗೊಳಿಸುವುದನ್ನು ಅವರು ಕಲ್ಪಿಸಿಕೊಳ್ಳಲಾರದವರಾಗಿದ್ದರು. ಆದರೂ, ಭಾರತೀಂಯು ಸಂಗೀತದಲ್ಲಿ ಧ್ವನಿಸಾಂಗತ್ಯ ಪದ್ಧತಿಂಯು ಬೆಳವಣಿಗೆಯಲ್ಲದಿದ್ದರೆ ಕಡೆಯ ಪಕ್ಷ ಬಹುರಾಗಾತ್ಮಕವಾದ (polyphone) ಬೆಳವಣಿಗೆ ಮುಂದೆ ಎಂದಾದರೊಮ್ಮೆ ಸಂಭವಿಸಲು ತಾತ್ತ್ವಿಕವಾಗಿ ಯಾವ ಅಡ್ಡಿಯೂ ಇರದೆಂಬುದನ್ನು ಅವರು ಸ್ಪಷ್ಟವಾಗಿ ಕಂಡುಕೊಂಡರು. ಮೂಲ ಭಾರತೀಯ ಗೀತ(Melody)ವೊಂದಕ್ಕೆ ಶುದ್ಧ ಪಾಶ್ಚಾತ್ಯ ಧ್ವನಿಸಾಂಗತ್ಯ ಪದ್ಧತಿಯನ್ನು ಅನ್ವಯಿಸುವುದರಿಂದ ಅದಕ್ಕೆ ಯಾವ ರೀತಿ ಪೂರ್ಣ ಹಾನಿಯುಂಟಾಗುವುದೋ ಆ ರೀತಿಯ ಹಾನಿಯುಂಟುಮಾಡದಂತಹ ಹೊಸ ಭಾವನೆಗಳನ್ನು ಪಾಶ್ಚಾತ್ಯ ಸಂಗೀತದಿಂದ ಸ್ವೀಕರಿಸಿ ಪ್ರಯೋಗ ನಡೆಸಲು ಅವರು ಆಗಾಗ್ಗೆ ಪ್ರಯತ್ನಿಸಿದರು; ಆದರೆ ಇದು ಹೃದಯದಿಂದ ಹೊಮ್ಮಿದ ಸ್ಫೂರ್ತಿಯಾಗಿರದೆ ಕೇವಲ ಬೌದ್ಧಿಕ ವಿನೋದವಾಗಿಯೇ ಉಳಿಯಿತು, ನಿಜವಾಗಿ ಎಂದಿಗೂ ಫಲಪ್ರದವಾಗಲಿಲ್ಲ. ಭಾರತೀಯ ಸಂಗೀತದಲ್ಲಿ 'ಸ್ಥಾಯಿ' (first stanza of song = ಕರ್ನಾಟಕ ಪದ್ಧತಿಯ 'ಪಲ್ಲವಿ'– ಅನು.) ಎಂದರೆ ಹಾಡಿನ ಮೊದಲ 'ಅಂಗಭಾಗ' ನಿಜವಾಗಿ ಆಧಾರಭೂತವಾಗಿದ್ದು, ಮುಂದಿನ 'ಅಂಗಭಾಗ'ಗಳು ಅದರಿಂದಲೇ ಬೆಳೆದು

ಹುಚ್ಚು ಲಹರಿಗೆ ಸೇರಿದವು ಎಂಬುದನ್ನು ನಿರ್ಧರಿಸುವುದು ಕಷ್ಟ. ಆದಾಗ್ಯೂ, ಕೆಲವು ವಿರಳ ನಿದರ್ಶನಗಳಲ್ಲಿ ಠಾಕೂರರ ಚಿತ್ತವೃತ್ತಿ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಅರಿಯುವುದು ಈಗಲೂ ಸಾಧ್ಯ; ಅವರು ಆಮೇಲಿನ ವರ್ಷಗಳಲ್ಲಿ ಭಾರತೀಯ ಹಾಡಿನ ಮಟ್ಟುಗಳನ್ನೇ ಅವಲಂಬಿಸಿ, ಅವುಗಳನ್ನು ತಮ್ಮ ವ್ಯಕ್ತಿತ್ವದ ಮೂಲಕ ಶೋಧಿಸಿ, ಸಂಪೂರ್ಣವಾಗಿ ತಮ್ಮದೇ ಆದ ಸ್ಪಷ್ಟವಾದ ಸವಿಕಟ್ಟನ್ನು ಅವುಗಳಲ್ಲಿ ಅಡಗಿಸಿ, ಅವುಗಳನ್ನು ತಮ್ಮವನ್ನಾಗಿಯೇ ಮಾಡಿಕೊಳ್ಳುತ್ತಿದ್ದಾಗ ಯಾವ ವಿಧಾನಗಳನ್ನು ಅನುಸರಿಸುತ್ತಿದ್ದರೋ ಆ ವಿಧಾನಗಳನ್ನೇ ಮೊದಲಿನ ಕಾಲದಲ್ಲಿ ಕೂಡ ಅನುಸರಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅಸಲು ಪ್ರತಿ (ಮಾತೃಕೆ) ಅಲ್ಲಿ ಇದ್ದೇ ಇರುತ್ತದೆ; ಆದರೆ, ಅದು ಮಾರ್ಪಟು ಹೊಂದಿರುತ್ತದೆ.

ರವೀಂದ್ರನಾಥ ಠಾಕೂರರು ಇಂಗ್ಲೆಂಡಿನಲ್ಲಿದ್ದಾಗಿನ ಮೊದಲ ಕೆಲವು ವಾರಗಳನ್ನು ತಮ್ಮ ಅಣ್ಣ ಸತ್ಯೇಂದ್ರನಾಥರ ಮಗಳು ಇಂದಿರಾದೇವಿಯೊಂದಿಗೆ ಸುಖವಾಗಿ ಕಳೆದಿದ್ದರಷ್ಟೆ; ಈಗ ಎಂಬತ್ತು ವರ್ಷಗಳ ಮೇಲೆ ವಯಸ್ಸಾಗಿರುವ ಆಕೆ, ಕೆಲವು ವರ್ಷಗಳ ಹಿಂದೆ 'Drink to me only with thine, thine eyes' ('ನಿನ್ನ ಕಣ್ಣಿಂದಲೇ ಪಾನಮಾಡೆನಗೆ ಶುಭಕೋರಿ') ಎಂಬ ಗೀತವನ್ನು ಯಾರೋ ಹಾಡುತ್ತಿದ್ದುದನ್ನು ಅಕಸ್ಮಾತ್ ಕೇಳಿದರು; ಕೇಳಿ, ತಮ್ಮ ಚಿಕ್ಕಪ್ಪ ಆ ಹಾಡಿನ ಮಟ್ಟನ್ನು ತಮ್ಮ ಕವನಗಳಲ್ಲಿ ಒಂದಕ್ಕೆ ಉಪಯೋಗಿಸಿಕೊಂಡಿದ್ದರೆಂದು ಹೇಳಿದರು. ರವೀಂದ್ರನಾಥರ ಕೃತಿಯನ್ನು ಆಕೆ ಹಾಡಿತೋರಿಸಿದ ರೀತಿಯೇ ಈ ಲೇಖನದಲ್ಲಿ ಮಂಡಿಸಿರುವ ಪರಸ್ಪರ ಹೋಲಿಕೆಗೆ ಆಧಾರ; ಇದು ವಿಶ್ವಾಸಾರ್ಹವಾದ ಆಧಾರ. ಏಕೆಂದರೆ, ಸುಮಾರು ಎಪ್ಪತ್ತು ವರ್ಷಗಳ ಹಿಂದೆ, ಬಹುಶಃ ಆ ಗೀತ ರಚಿತವಾದ ಒಡನೆಯೇ ಆಕೆ ಅದನ್ನು ಕಲಿತಿರಬೇಕು. ಆಗ ಚಿಕ್ಕಪ್ಪನಿಗೂ ಸೋದರಮಗಳಿಗೂ ವಯಸ್ಸಿನಲ್ಲಿ ಹದಿನೈದು ವರ್ಷಕ್ಕಿಂತ ಕಡಮೆಯ ಅಂತರವಿದ್ದಿತು; ಚಿಕ್ಕ ಹುಡುಗಿ ಇಂದಿರಾದೇವಿ ಕವಿಯ ಕುಟುಂಬ ವರ್ಗದಲ್ಲಿ ಬಹುಮಟ್ಟಿಗೆ ಖಾಯಮ್ಮಾಗಿಯೆ ನೆಲಸಿದ್ದಳು. ತೀರ ಬಾಲ್ಯದಿಂದಲೂ ಆಕೆ ಅಪಾರ ಸಂಗೀತ ಪ್ರತಿಭೆಯನ್ನು ತೋರುತ್ತಿದ್ದಳು; ಸುಮಾರು ಎಪ್ಪತ್ತು ವರ್ಷಕಾಲ ಪರ್ಯಂತ ತಮ್ಮ ಸ್ಮರಣಶಕ್ತಿ ಉಳಿಸಿಕೊಂಡು ಬಂದಿರುವ ಅನೇಕ ಗೀತಗಳನ್ನು ಆಕೆ ನಿಧಿಯಂತೆ ಕಾಪಾಡಿಕೊಂಡು ಬಂದಿದ್ದಾರೆ.

ಪರಸ್ಪರ ಹೋಲಿಸಿ ನೋಡಲು ಅನುಕೂಲವಾಗಲೆಂದು ಎರಡು ಗೀತಗಳನ್ನೂ ಇಲ್ಲಿ ಎತ್ತಿಕೊಡಲಾಗಿದೆ. ಮೂಲ ಇಂಗ್ಲಿಷ್ ಗೀತ ರಚನಾಕ್ರಮ ನಿಜವಾಗಿ ಬಹು ಸರಳ. ಪ್ರತಿ ಚರಣಕ್ಕೂ ('ನುಡಿ'ಗೂ) ಎಂಟು ಸಾಲುಗಳಂತೆ

ಐರಿಷ್ ಮತ್ತು ಹಳೆಯ ಇಂಗ್ಲಿಷ್ ಭಾಷೆಗಳ ಹಲವಾರು ಗೀತಗಳನ್ನು ಕೇಳಿ, ಅವನ್ನು ಮೆಚ್ಚಿಕೊಂಡರು. ಗಮನಾರ್ಹ ವಿಶಿಷ್ಟಾಂಶವೇನೆಂದರೆ, ಸಾಹಿತ್ಯಕ್ಕೂ ಸಂಗೀತಕ್ಕೂ (Melody and words) ಬಹಳ ನೇರವಾದ ಸಂಬಂಧ ಹೊಂದಿದ್ದ ಗೀತಗಳಾಗಿದ್ದವು ಅವು.

ಇಂಗ್ಲೆಂಡಿಗೆ ಅವರಿತ್ತ ಈ ಭೇಟಿಯ ಪ್ರಾರಂಭ ಭಾಗ ಬಹಳ ಸುಖಕರವಾಗಿತ್ತು; ಆಗ ಅವರು ತಮ್ಮ ಅಣ್ಣ ಸತ್ಯೇಂದ್ರನಾಥ ಮತ್ತು ಅವರ ಪತ್ನಿಯೊಂದಿಗೆ ಬ್ರೈಟನ್ನಿನಲ್ಲಿ (Brighton) ಉಳಿದುಕೊಂಡಿದ್ದರು; 'ಇಂಡಿಯನ್ ಸಿವಿಲ್ ಸರ್ವಿಸ್' ಹುದ್ದೆಯಲ್ಲಿದ್ದ ಸತ್ಯೇಂದ್ರನಾಥರು ತಮ್ಮ ಹಕ್ಕಿನ ರಜವನ್ನು ಉಪಯೋಗಿಸಿಕೊಂಡು ಅಲ್ಲಿ ನೆಲಸಿದ್ದರು. ರವೀಂಧ್ರನಾಥ ತಮ್ಮ ಅಣ್ಣನಿಗಿಂತ ಹದಿನೆಂಟು ವರ್ಷ ಚಿಕ್ಕವರಾಗಿದ್ದರು; ತಾವು ಬ್ರೈಟನ್ನಿನಲ್ಲಿ ಕಳೆದ ಕೆಲವು ವಾರಗಳ ಕಾಲವನ್ನು ತಾವು ಮೆಚ್ಚಿಕೊಂಡಿದ್ದ ಸಂಗತಿಯನ್ನು ಅವರು ತಮ್ಮ 'ನೆನಪುಗಳು' ಎಂಬ ಗ್ರಂಥದಲ್ಲಿ ಬಹಳ ವಿವರಪೂರ್ಣವಾಗಿ ಸ್ಮರಿಸಿದ್ದಾರೆ. ಆ ಬಳಿಕ, ತಾವು ಒಬ್ಬೊಂಟಿಗ ಎಂಬ ಭಾವನೆಗೆ ಒಳಗಾಗಿದ್ದರೂ, (ಒಮ್ಮೆ ತಾವೊಬ್ಬರೇ ಲಂಡನ್ನಿಗೆ ಹೋಗಿದ್ದರು), ಅನೇಕ ಕುಟುಂಬಗಳ ಸಂತೋಷಗೋಷ್ಠಿಗಳಲ್ಲಿ ಭಾಗವಹಿಸುವ ಮಟ್ಟಿಗೆ ಅವರು ಅಲ್ಲಿನ ಜನರೊಂದಿಗೆ ಬೆರೆತಿರಬೇಕು; ಐರೋಪ್ಯ ಗೀತಗಳನ್ನು ತಾವೇ ಹಾಡಿ ಕಲಿತಿದ್ದುದರಿಂದ, ಆ ಗೋಷ್ಠಿಗಳಲ್ಲಿ ಅವರಿಗೆ ಹೆಚ್ಚಿನ ಸ್ವಾಗತವೂ ಇದ್ದಿತು. ಇಂಗ್ಲೆಂಡಿನಲ್ಲಿ ಅವರಿದ್ದ ಕಾಲದಲ್ಲಿನ ಈ ಸಂಗೀತದ ಅನುಭವದ ಪರಿಣಾಮ ಏನಾಯಿತೆಂದರೆ, ಇಂಗ್ಲೆಂಡಿಗೆ ಭೇಟಿಕೊಟ್ಟು ಕಲ್ಕತ್ತೆಗೆ ಹಿಂದಿರುಗಿದ ತರುಣದಲ್ಲಿ ಬರೆದ ನಾಟಕಗಳಲ್ಲಿ ತಾವು ಮೆಚ್ಚಿಕೊಂಡಿದ್ದ ಅನೇಕ ಹಾಡುಗಳನ್ನು (Tunes) ಅಳವಡಿಸತೊಡಗಿದರು. ರವೀಂದ್ರನಾಥರ 'ವಾಲ್ಮೀಕಿ ಪ್ರತಿಭಾ' ಎಂಬ ನಾಟಕವನ್ನು ನೋಡುವಾಗ, ವಾಲ್ಮೀಕಿಯ ಭಂಡಾರವನ್ನು ಲೂಟಿ ಮಾಡುವ ದರೋಡೆಕೋರರು ಇದ್ದಕ್ಕಿದ್ದ ಹಾಗೆ ಸ್ಕಾಟರ್ ಮತ್ತು ಆಂಗ್ಲರ ಮಟ್ಟುಗಳಲ್ಲಿ ಹಾಡು ಹಾಡಿದರೆ, ಎಷ್ಟೇ ಭಾರತೀಕರಣವಾಗಿದ್ದರೂ ಗುರುತಿಸಬಹುದಾದ ಆ ಮೂಲ ಮಟ್ಟುಗಳನ್ನು ಐರೋಪ್ಯ ಪ್ರೇಕ್ಷಕನೊಬ್ಬನು ಕೇಳಿದನಾದರೆ, ಅದು ಅವನಿಗೆ ವಿಚಿತ್ರವಾಗಿ ತೋರಿತು.

ಅದು ಹೇಗಾದರೂ, ಆ ಗೀತಗಳನ್ನು ಪ್ರಚಾರಕ್ಕೆ ತಂದ ನಲವತ್ತು ಐವತ್ತು ವರ್ಷಗಳಾದ ಮೇಲೆ ಮೂಲ ಕೃತಿಗಳ ಪರಿಚಯವಿಲ್ಲದ ತರುಣ ವಿದ್ಯಾರ್ಥಿಗಳು ಅವುಗಳನ್ನು ಹಾಡಿದ್ದನ್ನು ಯಾರಾದರೂ ಕೇಳಿದಾಗ, ಮಾರ್ಪಡುಗಳಲ್ಲಿ ಯಾವವು ನಾಟಕಕರ್ತನಿಂದ ಹಿಂದೆ ಆದವು ಮತ್ತು ಯಾವವು ರಂಗಸ್ಥಲದ ನಟರ ಮನಸ್ಸಿನ

ಇದಕ್ಕೆ ಸಂವಾದಿಯಾದ ಬಂಗಾಳಿ ಕವನದ ರಚನೆಯನ್ನು ಇದರೊಂದಿಗೆ ಹೋಲಿಸಿದೆವಾದರೆ, ಅದು ಮೂಲತಃ ಭಿನ್ನವಾಗಿರುವುದು ನಮಗೆ ಕಾಣಬರುತ್ತದೆ:

**ಕೊತೊಬಾರ್ ಭೇಬೇ ಛಿನು ಅಪೊನಾ ಭುಲಿಯಾ**
**ತೊಮಾರ್ ಚರಣೆದಿಬೊ ಹೃದಯ ಖುಲಿಯಾ**
**ಚರಣ್ ಧರಿಯಾ ತಬ ಕಹಿಬೊ ಪ್ರಕಾಶಿ**
**ಗೋಪನೆ ತೊದೊರೆ ಸಖ ಕೊತೊ ಭಾಲಬಾಶಿ**
**ಭೆಬೇ ಛಿನು ಕೊಥಾ ತುಮಿ ಸ್ವರ್ಗೇರ್ ದೇಬತಾ**
**ಕೆಮೋನ್ ತೊಮಾಶಿ ಕೊಬೊ ಪ್ರಣಯೇರ್ ಕಥಾ**
**ಭೆಬೇ ಛಿನು ಮನೇಮನೇ ದೊರೆದೊರೆ ಥಾಕಿ**
**ಚಿರಜನ್ಮ ಸಂಗೋಪನೆ ಪೂಜಿಬೊ ಏಕಾಕಿ**
**ಕೇಹೊ ಜಾನಿಬೆನಾ ಮೋರ್ ಗಭೀರ ಪ್ರಣಯ ಕೇಹೊ**
**ದೇಖಿಬೆನಾ ಮೋರ್ ಅಶ್ರುಬಾರಿಚಯ**
**ಅಪೊನಿ ಆಜಿಕೆ ಜಬೆ ಶುಧಾಯಿಛೊ ಆಶಿ**
**ಕೆಮೊನೆ ಪ್ರಕಾಶಿ ಕಬೊ ಕೊತೊ ಭಾಲ ಬಾಶಿ**[೩]

ಇಲಿ, "ಭುಲಿಯಾ–ಖುಲಿಯಾ, ಪ್ರಕಾಶಿ–ಭಾಲಬಾಶಿ, ದೇಬತಾ–ಕಥಾ, ಥಾಕಿ–ಏಕಾಕಿ, ಆಶಿ–ಭಾಲಬಾರೆ"– ಈ ಪ್ರಕಾರವಾಗಿ ಜೊತೆಜೊತೆಯಾಗಿ ಪ್ರಾಸ ಕೊಡುವ ನಾಲ್ಕು ಪಾದಗಳ ಮೂರು ಚರಣಗಳನ್ನು[೪] (ಪದ್ಯಗಳನ್ನು) ಕಾಣುತ್ತೇವೆ.

---

೩. ಈ ಕವನದ ಪದಶಃ ಭಾಷಾಂತರ ಹೀಗಿದೆ:

ನಿನ್ನ ಚರಣದ ಬಳಿ ನನ್ನ ಹೃದಯವನ್ನು ತೆರೆದಿಡಬೇಕೆಂದು ಎಷ್ಟು ಬಾರಿ ನಾನು ನೆನೆದಿಲ್ಲ? ನನ್ನ ಸಖನೆ, ನಿನ್ನನ್ನು ಎಷ್ಟು ಪ್ರೀತಿಸುವೆ ಎಂಬುದನ್ನು ನಿನ್ನ ಚರಣವನ್ನು ಹಿಡಿದು ನಿನಗೆ ಮಾತ್ರ ತಿಳಿಸಬೇಕೆಂದು (ಎಷ್ಟು ಬಾರಿ ನಾನು ನೆನೆದಿಲ್ಲ)?

ಸ್ವರ್ಗ ದೇವತೆಯೆ, ನೀನೆಲ್ಲಿರುವೆಯೆಂದು, ನನ್ನ ಪ್ರಣಯ ಕಥೆಯನ್ನು ನಿನಗೆ ಹೇಗೆ ತಿಳಿಸಬೇಕೆಂದು, ನಾನು ಚಿಂತಿಸಿರುವೆ. ನಾನು ದೂರ ದೂರವಿದ್ದು, ಚಿರಜನ್ಮವೂ ಏಕಾಕಿಯಾಗಿ ನಿನ್ನನ್ನು ಪೂಜಿಸಬೇಕೆಂದು ಮನಸ್ಸಿನಲ್ಲಿ ಮರಳಿ ಮರಳಿ ಬಗೆದಿರುವೆ.

ನನ್ನ ಗಂಭೀರ ಪ್ರಣಯವನ್ನು ಯಾರೂ ಅರಿಯರು, ನನ್ನ ಅಶ್ರುವನ್ನು ಯಾರೂ ನೋಡರು. ಇಂದು ನಿನ್ನೆದುರು ನಾನು ಬಂದರೆ, ನಿನ್ನನ್ನು ಎಷ್ಟು ಪ್ರೀತಿಸುವೆನೆಂಬುದನ್ನು ಹೇಗೆ ಪ್ರಕಾಶಗೊಳಿಸಲಿ?

೪. ಪಾದ, ಚರಣ ಎರಡೂ ಸಮನಾರ್ಥಕಗಳಾದರೂ, ಇಲ್ಲಿ 'ಚರಣ' ('ನುಡಿ') ಎಂಬ ಮತನ್ನು ಸಂಗೀತ ಪರಿಭಾಷೆಯಲ್ಲಿ ಬಳಸುವ ಅರ್ಥದಲ್ಲಿ ಬಳಸಿದೆ.

ಅದರಲ್ಲಿ ಎರಡು ಚರಣಗಳಿವೆ; ಎರಡೂ ಚರಣಗಳು ಒಂದೇ ವರ್ಣ ಮಟ್ಟಿನಲ್ಲಿ (Melody) ಹಾಡತಕ್ಕವು. ಈ ವರ್ಣ ಮಟ್ಟಿನ ಕಟ್ಟಡವಾದರೋ (Structure) ಏನೂ ತೊಡಕಿಲ್ಲದ್ದು; ಅದರ ಸಂವಿಧಾನವನ್ನು a-b, a-b, c-d, a-b ಎಂಬಂತೆ ನಿರೂಪಿಸಬಹುದು; ಇದರಲ್ಲಿ ಪ್ರತಿ ಅಕ್ಷರವೂ ಚರಣದ ಎಂಟು ಪಂಕ್ತಿಗಳಲ್ಲಿ ಪ್ರತಿಯೊಂದರ ಹಾಡಿನ ಮಟ್ಟಿಗೆ ಸಂಕೇತವಾಗಿದೆ.

**Drink to me only with thine eyes**
**And I will pledge with mine**
**or leave a kiss within the cup**
**And I'll not ask for wine**
**The Thirst that from the soul doth rise**
**Doth ask a drink divine,**
**But might I of Jove's nectar seep**
**I would not change for thine**[೨]

ಮೊದಲ ಎರಡು ಸಾಲುಗಳ ಮಟ್ಟನ್ನೇ ಮೂರು–ನಾಲ್ಕನೆಯ ಸಾಲುಗಳಿಗೂ ಬಳಸಲಾಗಿದ್ದು, ಅದರ ರಚನೆ ಐದು ಮತ್ತು ಆರನೆಯ ಸಾಲುಗಳಿಗೆ ಬಳಸಲಾದ ಮಟ್ಟಿಗಿಂತ ಬೇರೆಯ ತೆರನಾಗಿದೆ; ಅದು ಪುನಃ ಕಾಣಿಸಿಕೊಂಡು ಆವರ್ತ ಪೂರ್ತಿಯಾಗುತ್ತದೆ. ಪ್ರಾಸವು ಸಮಪಾದಗಳ ಅಂತ್ಯಪದಗಳ ಮೇಲೆ ಕುಳಿತು (mine-wine-divine-thine) ಇಡಿಯ ಪದ್ಯವನ್ನು ಒಂದಿಗೆ ಬಂಧಿಸುತ್ತದೆ.

---

೨. ಇಂಗ್ಲಿಷ್ ಕವನದ ಕನ್ನಡ ಅನುವಾದ:

**ನಿನ್ನ ಕಣ್ಣಿಂದಲೇ ಪಾನ ಮಾಡೆನಗೆ ಶುಭಕೋರಿ,**
**ನನ್ನ ಕಣ್ಣುಗಳಿಂದ ಪ್ರತಿಪಾನಗೈವೆ;**
**ಇಲ್ಲದೊಡೆ, ಬಿಡು ಬಟ್ಟಲೊಳಗೆ ಮುತ್ತೊಂದ,**
**ಆಗ ನಾ ಬೇರೆ ಮಧುವನ್ನು ಕೇಳೆ**

**ಅಂತರಾತ್ಮದಿನೊಗೆದು ದಾಹ ಮೇಲೇರಿ**
**ದಿವ್ಯಪಾನವನೊಂದ ಕೋರುವುದು ತನಗೆ;**
**ದೊರೆಯಬಹುದೆನಗಮೃತ ದೇವೇಂದ್ರನಿಂದ,**
**ನೀನೀವ ಪಾನದೆಡೆಗದು ಬೇಡವೆನಗೆ**

ಪ್ರಾಸ ಕೊಡುವುದಿಲ್ಲ. ಆದರೆ, ಪುನರಾವೃತ್ತಿಗೊಳ್ಳುವ 'ಸ್ಥಾಯಿ'ಯೊಂದಿಗೆ ಪ್ರಾಸಗೊಂಡು ಅದು ಮುಗಿಯುತ್ತದೆ. ಬಲು ಹಿಂದಿನ ಈ ಗೀತದಲ್ಲಿಯೆ ಈ ತಂತ್ರದ ಮೊದಲ ಸೂಚನೆಗಳು ಕಂಡುಬರುತ್ತವೆ.

ವಾಸ್ತವವಾಗಿ, ಮೂರನೆಯ 'ಚರಣ'ದ ಕಡೆಯ ಪಾದದ "ಕೊತೊ ಭಾಲ ಬಾಶಿ' ಎಂಬೀ ಪದಗಳು 'ಸ್ಥಾಯಿ'ಯ ಕಡೆಯ ಪಂಕ್ತಿಯ ಕಡೆಯ ಪದಗಳ ಪುನರಾವೃತ್ತಿಯಾಗಿರುವ ಪ್ರಯುಕ್ತ, ಛಂದಸ್ಸಿನ ದೃಷ್ಟಿಯಿಂದ 'ಸ್ಥಾಯಿ'ಯು ಸಮಾಪ್ತಿ ಭಾಗ (ಅಥವಾ 'ಮುಡಿವು') ಎಂದು ಪರಿಗಣಿಸಬಹುದಾಗಿದೆ; ಆದರೆ, ಸಂಗೀತದೃಷ್ಟಿಯಿಂದ ಅವು ತೃಪ್ತಿಕರವಾದ ಸಮಾಪ್ತಿಭಾಗವಾಗುವುದಿಲ್ಲ. ಪೂರ್ತಿಯಾಗಿ ಮೊದಲ ನಾಲ್ಕು ಪಂಕ್ತಿಗಳನ್ನು ಪುನರಾವೃತ್ತಿ ಮಾಡುವುದರಿಂದಲೇ ಹಾಡು ತನ್ನ ಸರಿಯಾದ ಸಮಾಪ್ತಿಯನ್ನು ಪಡೆಯುತ್ತದೆ.

ಮೂಲ ಇಂಗ್ಲಿಷ್ ಗೀತವನ್ನು ಠಾಕೂರರ ರೂಪಾಂತರದೊಂದಿಗೆ ಹೋಲಿಸಿದಾಗ, ಅಚ್ಚ ಇಂಗ್ಲಿಷ್ ನಮೂನೆಯ ಈ ಹಾಡು ಅಷ್ಟೇ ಅಚ್ಚ ಬಂಗಾಳಿ ನಮೂನೆಯ ಹಾಡಾಗಿ ರೂಪಾಂತರ ಹೊಂದಿರುವುದು ಯಾರಿಗಾದರೂ ಬಲವಾಗಿ ಮನದಟ್ಟಾಗುತ್ತದೆ. ರೂಪಾಂತರದಲ್ಲಿ ಮೂಲಕೃತಿಯ ಘಟಕಾಂಶಗಳ ಗುರುತು ಸಿಕ್ಕುತ್ತದೆ; ಆದರೆ ಅವು ನಿರ್ವಹಿಸುವ ಕಾರ್ಯ ಸಂಪೂರ್ಣವಾಗಿ ಭಿನ್ನವಾದುದು. ಮೊದಲ ಪಂಕ್ತಿ ಇಂಗ್ಲಿಷ್ ಹಾಡಿನ ಮೊದಲ ಎರಡು ಪಂಕ್ತಿಗಳಿಗೆ ಸರಿಯಾಗಿ ಅನುರೂಪವಾಗಿದೆ. ಮುಂದಿನ ಪಂಕ್ತಿ ಮಾತ್ರ 'Drink to me' ಎಂಬಲ್ಲಿಯ ಹಾಡಿನ ಮಟ್ಟನ್ನು (Melody) ಪುನರಾವೃತ್ತಿ ಮಾಡದೆ, ಅದಕ್ಕೆ ಪ್ರತಿರೀತಿಯ ಮಟ್ಟಿನ ಧಾಟಿಯನ್ನು (Contrasting melodical line) ಅನುಸರಿಸಿ, ತಾರಸ್ಥಾಯಿಯ ಸ್ವರಾಷ್ಟಕದಿಂದ (upper octave) ಪಾಶ್ಚಾತ್ಯ ಪದ್ಧತಿಯ ಮೂಲಸ್ವರಕ್ಕೆ (Jonic) ಸಮನಾದ ಸ್ವರಕ್ಕೆ ಇಳಿದು ಬರುತ್ತದೆ. ಅನಂತರ, ಬಂಗಾಳಿ ಕವಿಯ ಮೂರನೆಯ ಪದವು ಇಂಗ್ಲಿಷ್ ಗೀತದ ಐದು ಹಾಗೂ ಆರನೆಯ ಪಂಕ್ತಿಗಳಿಗೆ ಪೂರ್ತಿ ಸರಿಸಮನಾಗಿ ಮುಂದುವರಿಯುತ್ತದೆ; ಕಡೆಯ ಪಂಕ್ತಿಯ ಪ್ರಾರಂಭ ಗೀತ ಭಾಗದ ಪುನರಾವೃತ್ತಿಯಾದರೂ ಅದರ ಯಾಂತ್ರಿಕ (ಮಕ್ಕಿಕಾಮಕ್ಕಿ) ಅನುಕರಣೆಯಲ್ಲ; ಏಕೆಂದರೆ, ಮೊದಲ ಆವರ್ತಖಂದ(Bar)ದಲ್ಲಿ ಅದು ಸೂಕ್ಷ್ಮವಾದ ವ್ಯತ್ಯಾಸವನ್ನು ಹೊಂದಿದೆ. ಇದರ ಪರಿಣಾಮವಾಗಿ, ಇಂಗ್ಲಿಷ್ ಗೀತದ ಪೂರ್ಣವ್ಯಾಪ್ತಿ ಬಂಗಾಳಿ ಗೀತದ ಮೊದಲ ಚರಣಕ್ಕೇ ಬರಿದಾಗಿ

ಕಡೆಯ ಪ್ರಾಸದ ಜೋಡಿ ಮತ್ತೆ ಮೊದಲ ಪ್ರಾಸದ ಜೋಡಿಯ ಹಾಗೆಯೇ ಇರುವ ವೈಲಕ್ಷಣ್ಯ ಮುಖ್ಯವಾದದ್ದು; ಏಕೆಂದರೆ, ಠಾಕೂರರು ತಮ್ಮ ಪಕ್ವದಶೆಯಲ್ಲಿ ರಚಿಸಿದ ಗೀತ–ಕವನಗಳಲ್ಲಿ ಬಹು ಸಂಖ್ಯೆಯವಕ್ಕೆ ಅದು ಮುನ್ಸೂಚನೆಯಾಗಿದೆ; ಅಲ್ಲದೆ, ನಿಜವಾಗಿ ಹಾಡಿನ ರೂಪದಲ್ಲಿರುವ ಕವನದ ಸಂಗೀತ ರಚನೆಯ ಆಧಾರದ ಮೇಲೆ ಮಾತ್ರ ಆ ವೈಲಕ್ಷಣ್ಯವನ್ನು ವಿವರಿಸುವುದು ಸಾಧ್ಯ. ಭಾರತೀಯ ಸಂಗೀತದ ಇತಿಹಾಸದ ಮುಂಚಿನ ಕಾಲದಲ್ಲಿಯೆ, ಗೇಯ ಕಾವ್ಯದ (sung poetry) ಅತ್ಯಂತ ಸಂಪ್ರದಾಯನಿಷ್ಠ ಶಾಸ್ತ್ರೀಯ ಪ್ರಕಾರವೆನಿಸಿದ 'ಧ್ರುಪದ್'[೫] ಪ್ರಕಾರದ ಲಕ್ಷಣ ನಿರೂಪಣೆಯಲ್ಲಿ ಮೊದಲ ಪದ್ಯಕ್ಕೆ ಅಪಾರ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಆಧುನಿಕ ಕಾಲದಲ್ಲಿ ಕೂಡ ಇದನ್ನು 'ಸ್ಥಾಯಿ',[೬] ಎಂದರೆ 'ಸ್ಥಿರವಾದ ಖಚಿತವಾದ ಅಂಗ', ಎಂದು ಕರೆಯಲಾಗಿದೆ; ಈಚಿನ ಈ ಪದವು ತಟ್ಟನೆ ಅದರ ಪ್ರಾಚೀನ ರೂಪದೊಡನೆ ಸಂಬಂಧವನ್ನು ಸೂಚಿಸುತ್ತದೆ; ಏಕೆಂದರೆ, 'ಧ್ರುಪದ್' ಎಂಬ ಪದದ ಅರ್ಥವೂ 'ಸ್ಥಿರ ಮತ್ತು ಚಿರ' ಎಂಬುದೇ ಆಗಿದೆ. ಈ 'ಸ್ಥಾಯಿ' ಗೀತದ ಆಧಾರಭೂತವಾದ ಮೂಲಭಾವದ ಭಾಗವಾಗಿದ್ದು, 'ಅಂತರ'[೭] ಮತ್ತು 'ಆಭೋಗ್'[೮] ಎಂಬ ಅದರ ಮುಂದಿನ ಭಾಗಗಳು (ಕೆಲವು ವೇಳೆ 'ಸಂಚಾರಿ'[೯] ಎಂಬ ಇನ್ನೊಂದು ಮೂರನೆಯ ವಿಭಾಗವೂ ಸಹ) ಭಾವದಲ್ಲಿ ಹಾಗೂ ಸಂಗೀತ ರೂಪದಲ್ಲಿ ಅದಕ್ಕೆ ವಿಷಮವಾಗಿ ನಿಲ್ಲುತ್ತವೆ. ಪ್ರತಿಯೊಂದು ವಿಭಾಗ ಹಾಡಿಕೆಯ ಅನಂತರ 'ಸ್ಥಾಯಿ'ಯನ್ನು ಪೂರ್ತಿಯಾಗಿಯೋ ಇಲ್ಲವೆ ಭಾಗಭಾಗವಾಗಿಯೋ ಪಲ್ಲವಿಯಾಗಿ (Refrain) ಪುನರಾವೃತ್ತಿ ಮಾಡಲಾಗುವುದು. ವಿಶೇಷವಾಗಿ ದೇಶ ಭಾಷಾ ಕವಿತೆಯಲ್ಲಿ ಬೆಳೆದು ಬಂದ ಪ್ರಕಾರ, ಹಾಗೂ ಠಾಕೂರರು ಅದನ್ನು ಪರಿಪೂರ್ಣಗೊಳಿಸಿದ ಪ್ರಕಾರ, ಪ್ರಾಸಕ್ರಮವು (Rhyme scheme) ಈ ವೈಲಕ್ಷಣ್ಯವನ್ನು ಗಣನೆಗೆ ತೆಗೆದು ಕೊಂಡಿದೆ; ಹೀಗಾಗಿ, 'ಅಂತರ'ದ ಮತ್ತು ಅದರ ಮುಂದಿನ 'ಚರಣ'ಗಳ ಕಡೆಯ ಪಾದವು ಹಿಂದಿನ ಪಾದಗಳೊಂದಿಗೆ

---

೫. **ಧ್ರುಪದ್:** = 'ಧ್ರುವಪದ'; ಬಗೆಯ ಸಂಗೀತ ಕೃತಿ, ಹಾಗೂ ಅದನ್ನು ಹಾಡುವ ಶೈಲಿ (–ಅನು.)

೬. **ಸ್ಥಾಯಿ:** ಇದನ್ನು 'ಅಸ್ತಾಯಿ' ಎಂದೂ ನಿರ್ದೇಶಿಸಲಾಗಿದೆ. ಕರ್ಣಾಟಕ ಪದ್ಧತಿಯಲ್ಲಿ ಇದು 'ಪಲ್ಲವಿಗೆ' ಸಮಾನ. (–ಅನು.)

೭. **ಅಂತರ:** ಕರ್ಣಾಟಕ ಪದ್ಧತಿಯಲ್ಲಿ 'ಅನುಪಲ್ಲವಿ' (–ಅನು.)

೮. **ಆಭೋಗ್:** ಹಿಂದೂಸ್ತಾನಿ ಪದ್ಧತಿಯಲ್ಲಿ ಹಾಡಿನ ಸಮಾಪ್ತಿ ಭಾಗ. (–ಅನು.)

೯. **ಸಂಚಾರಿ:** ಕರ್ಣಾಟಕ ಪದ್ಧತಿಯಲ್ಲಿ 'ಚರಣ' (ಪದ್ಯ, ನುಡಿ). (ಅ.ಸು.)

ಈ ಗೀತವನ್ನು ಪರಿಶೀಲಿಸಿದರೆ, ಸ್ವತಂತ್ರ ಬಂಗಾಳಿ ಗೀತದ ಬದಲಾಗದಂತಹ ಒಂದು ಆವರ್ತಖಂಡವು (Bar) ಅದರಲ್ಲಿ ಇಲ್ಲ (Aಅಡಿ ಟಿಪ್ಪಣಿ ನೋಡಿ) ಆದರೂ, ಅದರಲ್ಲಿ ಇಂಗ್ಲಿಷ್ ಮೂಲದ ನೆನಪು ಸ್ಪಷ್ಟವಾಗಿ ಅಚ್ಚೊತ್ತಿರುವುದು ವ್ಯಕ್ತಪಡುತ್ತದೆ; ಈ ಅಂಶವನ್ನು ಗಮನಿಸದಿರಲಾಗುವುದಿಲ್ಲ. ತರುಣನೊಬ್ಬನ ಕಾರ್ಯವಿಧಾನಕ್ಕೆ ಅದು ಅತ್ಯುತ್ಕೃಷ್ಟ ನಿದರ್ಶನ; ಆತ ವಯಸ್ಸಾದ ಮೇಲೆ, "ದುರ್ಬಲರು ಮಾತ್ರ ಎರವಲು ಪಡೆಯಲು ಹೆದರುತ್ತಾರೆ; ಏಕೆಂದರೆ, ತಮ್ಮ ಸ್ವಂತ ನಾಣ್ಯಗಳ ಮೂಲಕ ಸಾಲವನ್ನು ಹಿಂತಿರುಗಿಸಲಾರೆವು" ಎಂದು ಅವರು ಬಲ್ಲರು. ಅಲ್ಲಲ್ಲಿ ಅಪಕ್ವತೆಯ ಕುರುಹುಗಳು ಕಂಡು ಬಂದರೂ ಕೂಡ, ಅತ್ಯಂತ ಯಶಸ್ವಿಯಾಗಿಯೂ, ಅದ್ಭುತವಾಗಿಯೂ ರೂಪಾಂತರ ಕಾರ್ಯ ಸಿದ್ಧಿಸಿದೆ. ಅವರು ತಾವು ಪಡೆದ ಸಾಲವನ್ನು ತಮ್ಮ ಸ್ವಂತ ನಾಣ್ಯದಲ್ಲಿ ಆಗಲೇ ತೀರಿಸಿ ಬಿಟ್ಟಿದ್ದಾರೆ.

ಆಮೇಲಿನ ವರ್ಷಗಳಲ್ಲಿ ತರುಣರಾಗಿದ್ದಾಗ ಪಾಶ್ಚಾತ್ಯ ಸಂಗೀತದಿಂದ ಅವರು ಪಡೆಯುತ್ತಿದ್ದ ಈ ಎರವಲುಗಳು ಪೂರ್ತಿ ನಿಂತುಹೋಗಿವೆ. ಅವರ ಬಹು ಪೂರ್ವ ವಯಸ್ಸಿನಲ್ಲಿ ಕಂಡುಬಂದ ಐರೋಪ್ಯ ಗೀತಗಳ ಪ್ರಭಾವವು ಅವರ ಪಕ್ವದಶೆಯ ಕೃತಿಗಳಲ್ಲಿ ಕಂಡುಬರುವುದಿಲ್ಲ. ಶಾಂತಿನಿಕೇತನದ ಶಾಲಾಗೀತ, ಅಥವಾ 'ಅಚಲಾಯತನ'ದಲ್ಲಿ ಬರುವ 'ಆಲೋ ಆಮಾರ್ ಆಲೋ' ('ಬೆಳಕೇ ನನ್ನ ಬೆಳಕೇ') ಎಂಬ 'ಅಮರ ಜ್ಯೋತಿ'ಯನ್ನು ಕುರಿತ ಗೀತ– ಇಂತಹ ಪ್ರಬೋಧಕ ಗೀತೆಗಳಲ್ಲಿ ಆ ಪ್ರಭಾವವು ಕೆಲವು ವೇಳೆ ಗಮನಕ್ಕೆ ಬರುತ್ತದೆ; ಅಂಥಲ್ಲಿ, ಒಂದಾನೊಂದು ಕಾಲದಲ್ಲಿ ಅವರಿಗೆ ಐರೋಪ್ಯಗೀತಗಳು ಗೊತ್ತಿಲ್ಲದಿದ್ದರೆ, ಅಸ್ತಿತ್ವಕ್ಕೆ ಬಾರದಿರುತ್ತಿದ್ದಂತಹ ಸಂಗೀತ ರಚನಾ ವೈಖರಿ (Turn of musical phrasing) ತಟ್ಟನೆ ಗೋಚರಿಸುತ್ತದೆ. (ಅಡಿ ಟಿಪ್ಪಣಿ ನೋಡಿ B). ಆದರೆ ಮಾತ್ರ, ಅದು ಯಾವಾಗಲೂ ರಾಗ ಧಾಟಿಗೆ (Melodical line) ಸಂಬಂಧಪಟ್ಟಿರುತ್ತದೆ. ರವೀಂದ್ರನಾಥರು ಎಂದಿಗೂ 'ಧ್ವನಿಸಾಂಗತ್ಯ'ದ (star

---

A ಅಡಿಟಿಪ್ಪಣಿ: 'ದೂರೆ' ಎಂಬ ಪದ ಸಂಬಂಧವಾದ ಕಿಂಚಿತ್ ಅಪೂರ್ವಸ್ವರ ಸಂಚಾರವನ್ನು (Chromatic passage) ಬಿಟ್ಟು.

೧೦. ರವೀಂದ್ರರ ಒಂದು ನಾಟಕ.

B. ೩ ಮತ್ತು ೪ನಯ ಆವರ್ತ ಖಂಡಗಳಲ್ಲಿ ೧ನೆಯ ಮತ್ತು ೨ನೆಯ ಆವರ್ತಖಂಡಗಳ ರಾಘಧಾಟಿಯ ಅನುಕರಣೆಯಿದ್ದು, ಶುದ್ಧ ಭಾರತೀಯ ಸಂಪ್ರದಾಯಗಳ ಪ್ರಕಾರ 'ಶುದ್ಧ' ಸ್ವರವಾಗಿ ಉಳಿಯಬೇಕಾಗಿದ್ದುದು 'ತೀವ್ರ'ವಾಗಿ ಪರಿಣಮಿಸಿದೆ.(Chromatic passage) ಬಿಟ್ಟು

ಹೋಗಿದೆ. ಅಲ್ಲಿಂದ ಮುಂದಕ್ಕೆ ಕವಿ ತನ್ನ ಮಾದರಿಯನ್ನು ನೈಜ ಬಂಗಾಳಿ ಹಾಡಾಗಿಯೆ ಭಾವಿಸಿದ್ದಾರೆ; ಹಾಗೂ, ಸ್ವರಶ್ರೇಣಿಯ ಅತ್ಯಂತ ಕೆಳಭಾಗಕ್ಕೆ ಪ್ರಾಧಾನ್ಯವನ್ನು ಕೊಡುವುದರ ಮೂಲಕವೂ, ಸಾಹಿತ್ಯದ (ಗೀತದ ಮಾತುಗಳ) ಧ್ಯಾನಭಾವಕ್ಕೆ ಸೂಕ್ಷ್ಮವಾದ ಮಾರುಲಿಯಾಗಿ 'ಆಧಾರಸ್ವರ;ಕ್ಕೆ (Jonic) ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುವುದರ ಮೂಲಕವೂ 'ಸ್ಥಾಯಿ'ಯ (ಪಲ್ಲವಿಯ) 'ವರ್ಣಮಟ್ಟ'ನ ವಿನ್ಯಾಸಕ್ಕೆ (Melodic pattern) ವಿದೃಶವಾಗಿರುವಂತೆ ಉಚಿತ 'ಅಂತರ'ವನ್ನು (ಅನುಪಲ್ಲವಿಯನ್ನು) ತಂದಿದ್ದಾರೆ. ಈ ಚರಣದ ದ್ವಿತೀಯಾರ್ಧವು 'ಸ್ಥಾಯಿ'ಯ ದ್ವಿತೀಯಾರ್ಧಕ್ಕೆ ಸಂವಾದಿಯಾಗಿದೆ. ಮೂರನೆಯ ಚರಣದಲ್ಲಿ ಎರಡನೆಯದರ ಪುನರಾವೃತ್ತಿಯ ಸೂಚನೆ ಕಂಡುಬರುತ್ತದೆ; ಆದರೆ, ಅದರ ದ್ವಿತೀಯಾರ್ಧದಲ್ಲಿ ಒಂದು ಅನಿರೀಕ್ಷಿತ ಬೆಳವಣಿಗೆ ತಟ್ಟನೆ ಗೋಚರಿಸುತ್ತದೆ; ಇಲ್ಲಿ, ತನ್ನ ಆರಾಧ್ಯಮೂರ್ತಿಯನ್ನು ಸಂಧಿಸುವ ಸಾಧ್ಯತೆಯ ಆಲೋಚನೆ ತಾರ ಸ್ವರಾಷ್ಟಕಕ್ಕೆ (upper octave) ಪ್ರಾಧಾನ್ಯ ಕೊಡುವಂತೆ ಗಾಯಕನನ್ನು ಚೋದಿಸುತ್ತದೆ; ತದನಂತರ, ಒಂದು ಪ್ರಾತಿನಿಧಿಕವಾದ ಭಾರತೀಯ ವೈಲಕ್ಷಣ್ಯವನ್ನು ಬಳಸುತ್ತಾನೆ: ಅದು ಏನೆಂದರೆ, ಅವರೋಹಣ ಸ್ವರಶ್ರೇಣಿಯ ಪ್ರಭಾವ ಕೋಮಲ ಸ್ವರ (The flattened leading note in a descending passage, ಇದು, ಹಿಂದಿನ ಆವರ್ತ ಖಂಡದಲ್ಲಿ (Bar) ಪ್ರಧಾನವಾಗಿರುವ ಅದೇ ಸ್ವರದ ಅರ್ಧಸ್ವರ ರೂಪಕ್ಕೆ (semitone) ಕೊಟ್ಟಿರುವ ಪ್ರಾಮುಖ್ಯತೆಯೊಂದಿಗೆ ಹೋಲಿಸಿದರೆ, ತೀವ್ರವೂ ಅನಿರೀಕ್ಷಿತವೂ ಆದ ವೈಷಮ್ಯವಾಗಿ ಕಂಡುಬರುತ್ತದೆ. ಈ ಅವರೋಹಣವು ಪಾಶ್ಚಾತ್ಯ ಸಂಗೀತದಲ್ಲಿ ಇರುವಂತೆ ಸ್ವರಶ್ರೇಣಿಯ ನಾಲ್ಕನೆಯ ಸ್ವರದ (Sub-dominant) ಸ್ವರ ಪರಿವರ್ತನೆಯಲ್ಲ. ಈ ಸ್ವರ ಸಂಯೋಜನೆ (Notation)ಯಲ್ಲಿ ಕಾಣಿಸಿರುವಂತೆ ಸ್ವರವೆ (ಸ) ರಾಗಗ್ರಾಮದ ಆಧಾರ ಷಡ್ಜಸ್ವರ (Modal basis)ವಾಗಿದೆ. ತಟ್ಟನೆ ಆ ಕೋಮಲ ಸ್ವರಕ್ಕೆ ( flat) ತಿರುಗುವ ಈ ಪರಿವರ್ತನೆ. ಹಿತಕರವಾದ ವಿದೃಶ ಪರಿವರ್ತನೆಯಾಗಿ ತೋರುತ್ತದೆಯೆ ಹೊರತು, ಆಧಾರ ಸ್ವರದ (Tonic) ಪ್ರಾಸಂಗಿಕ ಪರಿವರ್ತನೆಯಾಗಿ ಎಂದಿಗೂ ಅಲ್ಲ. ಸ್ವರಮುಖ್ಯವಾದ 'ಕೊತೊ ಭಾಲಬಾರೆ' ಎಂಬ ಪದಗಳನ್ನು ಒಳಗೊಂಡ ಮುಂದಿನ ಆವರ್ತಖಂಡದಲ್ಲಿ B (Bar) ಶುದ್ಧ ಸ್ವರವನ್ನು (G natural) ಮತ್ತೆ ಅವರೋಹಣದಲ್ಲಿ ತರಲಾಗಿದೆ. ಇವುಗಳ ಪರಿಣಾಮವಾಗಿ ಪ್ರಾರಂಭ ಚರಣದ ಪುನರಾವೃತ್ತಿ ಅಗತ್ಯವಾಗುತ್ತದೆ.

ಗೀತವೊಂದರ ಪರಿಪೂರ್ಣತೆಯ ಸೊಬಗನ್ನು ರವೀಂದ್ರರು ಒಂದು ಕಾಲದಲ್ಲಿ ಮನಗಾಣದೆ ಹೋಗಿದ್ದರೆ, ಬಹುಶಃ ಆ ಪರಿವರ್ತನೆ ಸಂಭವಿಸುತ್ತಲೇ ಇರಲಿಲ್ಲ.

* * * *

[ವಿಶೇಷ ಸೂಚನೆ: ಅಂಕಿಗಳಿಂದ ನಿರ್ದೇಶಿಸಿರುವ ಅಡಿಟಿಪ್ಪಣಿಗಳೆಲ್ಲವೂ ಅನುವಾದಕನವು. ಅಡಿಟಿಪ್ಪಣಿ ೨ರಲ್ಲಿ ಕೊಟ್ಟಿರುವ ರವೀಂದ್ರ ಗೀತದ ಭಾವಾನುವಾದವನ್ನು ಮೂಲ ಲೇಖಕರ ಇಂಗ್ಲಿಷ್ ಅನುವಾದವನ್ನು ಅವಲಂಬಿಸಿ ಮಾಡಲಾಗಿದೆ. –ಅನುವಾದಕ]

mony) ಕಡೆಗೆ ಆಕರ್ಷಿತರಾಗಲಿಲ್ಲ; ಮತ್ತು, ಅವರ ಒಪ್ಪಿಗೆಯಿಲ್ಲದೆ, ಅವರ ಮರಣಾನಂತರ ಭಾರತೀಯ ಹಾಗೂ ಪಾಶ್ಚಾತ್ಯ ಸಂಗೀತಕಾರರು ಅವರ ಗೀತಗಳಿಗೆ (Melodies) 'ಧ್ವನಿಸಾಂಗತ್ಯ ರಚನೆಗಳನ್ನು (Harmonies) ಸಂಯೋಜಿಸಲು ಪ್ರಯತ್ನ ಪಟ್ಟಾಗಲೆಲ್ಲ ಗುರುತು ಹಿಡಿಯಲಾಗದಂತೆ ಅವರ ಗೀತಗಳನ್ನು ಕುಲಗೆಡಿಸಿಬಿಟ್ಟಿದ್ದಾರೆ.

ಏನೇ ಆಗಲಿ, ರವೀಂದ್ರರ ಸಂಗೀತದಲ್ಲಿ ಒಂದು ಸಾಧನೆ ಫಲಿಸಿದೆ; ಪಾಶ್ಚಾತ್ಯ ಸಂಗೀತ ರಚನೆಗಳ ಪರಿಚಯ ಅವರಿಗಿಲ್ಲದಿದ್ದ ಭಾಗದಲ್ಲಿ ಅದು ಅಷ್ಟು ಯಶಸ್ವಿಯಾಗಿ ಸಿದ್ಧಿಸುತ್ತಿರಲಿಲ್ಲ. ತಮ್ಮ ಗೀತಗಳು ಅನುಲ್ಲಂಘನೀಯ ವಾದವುಗಳು, ಇತರ ಗಾಯಕರು ಯಾರವೋ ಹಾಡುಗಳನ್ನು ಹಾಡುಗಳು ರೂಢಿಯಾಗಿ ಮಾಡುವಂತೆ ಸ್ವಂತದ ಮಾರ್ಪಾಟುಗಳನ್ನು ತಮ್ಮ ಗೀತಗಳಲ್ಲಿ ತರಕೂಡದು, ಎಂದು ಪರಿಗಣಿಸಿದ ಪ್ರಥಮ ಸಂಗೀತರಚನಕಾರರು ಇವರು. ಅಲ್ಲದೆ, ತಮ್ಮ ಸಂಗೀತರಚನೆಗಳು ಪರಿಪೂರ್ಣಕೃತಿಗಳು. ಅವುಗಳಲ್ಲಿ ಎಲ್ಲಿ ಅಲಂಕರಣ ಅವಶ್ಯವೆಂದು ತಾವೇ ಉದ್ದೇಶ ಪಟ್ಟಿರುವರೋ ಅಲ್ಲಿ ಮಾತ್ರ ಅವನ್ನು ತರತಕ್ಕದ್ದು ಎಂದು ಭಾವಿಸಿದ ಪ್ರಥಮ ಭಾರತೀಯ ಕೃತಿಕಾರರು ಯಾರೆಂದರೆ, ನಿಸ್ಸಂದೇಹವಾಗಿ ಇವರೆ. ಹಾಡಿನ ಮಟ್ಟಿನಲ್ಲಿ ಒಂದು ವ್ಯತ್ಯಾಸ, ಲಯಗತಿಯಲ್ಲಿ (ತಾಳದಲ್ಲಿ) ಒಂದು ಮಾರ್ಪಾಟು, ಅಲ್ಲೋ ಇಲ್ಲೋ ಒಂದು ಹೆಚ್ಚಿನ 'ಕಂಪನ' (Trill) ಅಥವಾ ಸ್ವರಗಳ ತ್ವರಿತ ಓಟ (ಉರುಟು) (Run)– ಇಷ್ಟು ಸಾಕು ಮೂಲಭಾವವನ್ನು ಊನ ಮಾಡುವುದಕ್ಕೆ.

ತಾವು ರಚಿಸಿದ ಮಟ್ಟು ತಾವು ಇಟ್ಟು ಪದಗಳಲ್ಲಿ ಅಡಗಿರುವ ಭಾವವನ್ನು ಪ್ರಕಾಶಪಡಿಸುತ್ತದೆ ಎಂದು ಅವರು ದೃಢವಾಗಿ ನಂಬಿದ್ದರು; ಆದ್ದರಿಂದ ಅವರು ರಚಿಸಿದ್ದರಲ್ಲಿ ಏನಾದರೊಂದು ಮಾರ್ಪಡು ಮಾಡುವುದೆಂದರೆ, ಅವರ ಉದ್ದೇಶಗಳನ್ನು ತಪ್ಪದೆ ಭಂಗಗೊಳಿಸಿದಂತೆಯೇ ಸರಿ. ಷುಬರ್ಟರ (Schubert) ಗೀತವನ್ನು ಆ ರಚನಕಾರರ ಉದ್ದೇಶಕ್ಕೆ ಎಷ್ಟು ಸಮೀಪವಾಗಿ ಹಾಡಬಹುದೋ ಅಷ್ಟು ಸಮೀಪವಾಗಿ ಹಾಡಿದಾಗ ಅದು ಹೇಗೆ ಉತ್ತಮವಾಗಿರುವುದೋ ಅದೇ ರೀತಿಯಲ್ಲಿ, ಠಾಕೂರರು ತಮ್ಮ ಗೀತ ಹೇಗಿರಬೇಕೆಂದು ಅಪೇಕ್ಷಿಸಿದರೋ ಆ ರೀತಿಗೆ ಆದಷ್ಟು ಸಮೀಪವಾಗಿ ಹಾಡಿದಾಗಲೇ ಅದು ಉತ್ತಮವಾಗಿರುವುದು. ಹೀಗೆಂದಾಗ, ಸರ್ವಸಾಮಾನ್ಯವಾದ ಭಾರತೀಯ ಮನೋಭಾವದಲ್ಲಿಯೇ ಒಂದು ಪರಿವರ್ತನೆ ಎಂದಾಯಿತು; ಪೂರ್ತಿಯಾಗಿ ಪರಿಷ್ಕಾರ ಮಾಡಿದ ಐರೋಪ್ಯ

ಪ್ರೇಮ ಗೀತಗಳ ಕವಿಗಾಯಕರೆ ನೀವೆಲ್ಲ ನೆರೆದು
ತುಂಬುಜೌವನದ ಗೆಲವಿನ ಶಾಂತಿ ವಧುವ ಸಿಂಗರಿಸಿ.
ಕಾಶ್ಮೀರದಿಂದ ಕೇರಳದವರೆಗಿಹ ನಾಡ ಬಾಂಧವರೆ,
ಬಂದು ಒಂದಾಗಿ ನೆರೆಯಿರಿ, ಹೃದಯದಾಳವನು ಮಿಡಿವ ಪ್ರೀತಿಯ
ಗೀತಗಳ ಹಾಡಿ:
ನಮ್ಮೆಲ್ಲ ಗೀತಗಳ ಶ್ರುತಿಯೊಂದೆ ಲಯವೊಂದೆ,
ನುಡಿ ಬೇರೆ ದನಿ ಬೇರೆಯಾದರೇನು, ರಾಗದೊಳಚೇತನದ ಭಾವವೊಂದೆ.
ನನ್ನ ಎದೆ ಮಿಡಿತಗಳ ಅರ್ಥವನು ಅರುಹೆ ನಾಲಗೆ ತೊಳಲುತಿದೆ ಬಳಲುತಿದೆ
ಅಹುದು, ಮೌನವೆ ತಕ್ಕ ಭಾಷೆ ಪ್ರೇಮದ ಸಾರ್ಥಸೂಚನೆಗೆ
ಐಕ್ಯ, ಏಕೋಭಾವ– ಇದೆ ನಮ್ಮ ಜೀವನದ ಪೂರ್ವಿಕರ ಉಳಿಕೆ ಗಳಿಕೆ;
ಹಲವು ನುಡಿತನವೆಂದಿಗೂ ಹರಿಯಲಾರದೀ ಒಂದುತನದ ಬಂಧುತನವ
ನಾವೆಲ್ಲರೊಂದೇ; ನಮ್ಮೆಲ್ಲರೆದೆಯಾಶೆಯಾಕಾಂಕ್ಷೆಗಳ ಸಲಹುತಿರುವುದೊಂದುತನ;
ನಮ್ರತೆಯ ಪ್ರೇಮದಲಿ ನಾವಿಟ್ಟ ವಿಶ್ವಾಸ ನಮ್ಮ ಕಣ್ಣಿನ ಬೆಳಕ
ಧನ್ಯವಾಗಲಿ ಚಿರಂತನವಿಂಥ ಭಾವನೆಗಳ ತಳೆದು ಮಾನವಕುಲ;
ನಮ್ಮ ಪೂಜೆಗಳಲ್ಲಿ ಹರಿದು ಬೆಳಗಲಿ ನಿತ್ಯವೀ ಸ್ನೇಹ ದೀಪ;
ಈಗಲೂ ಆಗೊಮ್ಮೆ ಈಗೊಮ್ಮೆ ಮೇಘಗರ್ಜನೆಯ ಕೋಲಾಹಲವು ನಭದ
ಉದ್ಘೋಷಿಸಬಹುದು;
ಆದರದೊ ನೋಡಲ್ಲಿ ಐಕ್ಯತೆಯ ಮಳೆಬಿಲ್ಲು, ಅದರದೇ ಸೊಬಗು
ಸೊಂಪೆಲ್ಲೆಲ್ಲು.

* * * *

ಕಾಶ್ಮೀರಿ ಮೂಲ: ರಷೀದ್ ನಾಸ್‌ಕಿ;
ಕನ್ನಡ ಅನುವಾದ: ಎಂ.ವಿ. ಸೀತಾರಾಮಯ್ಯ

೨೨–೧–೧೯೬೮
ಬೆಂಗಳೂರು–೧೯

# ೨. ಮಳೆಬಿಲ್ಲು

ನನ್ನ ಕಣ್ಣಿಗೆ ಹಬ್ಬ ಬಾಲ ಚಿಲುಮೆಯ ಚೆಲುವು;
ಜೀವನ ಪಾನಭವನ; ಒಲವ ಮದಿರೆಯ ಕುಡಿವೆನಲ್ಲಿ ಮನಸಾರ;
ಜ್ಞಾನಮಾರ್ಗದಲಿ, ಧ್ಯಾನಪಥದಲ್ಲಿ, ಯಾತ್ರಿಕನು ನಾನು:
ಶಮೆ ಶಾಂತಿಗಳ ಸದಾ ಕಾಪಾಡುವವನು.
ನನ್ನ ಸಂಸ್ಕೃತಿಯ ನಯವಿನಯಗಳ ಕುರುಹು, ಎಲ್ಲೋರ;
ನನ್ನ ಪವನ ಜೀವನದ ಚೇತನದ ರಕ್ಷೆ, ಅಜಂತ.
ನನ್ನ ಜೀವನದರ್ಶನದ ಫಲಿತ ಸೂಕ್ಷ್ಮ ನಯ ನೀತಿಗಳೆ
ಹಾರಾಡುತಿಹ ಪಾರಿವಾಳಗಳು ನನ್ನ ಬಗೆ ಬಾನಿನಲಿ.

ಇಲ್ಲಿಯೇ ಗೌತಮನು ಸಾರಿದುದು ಮಾನವ ಪ್ರೇಮ ಸಂದೇಶವನು;
ಇಲ್ಲಿಯೇ ಕೃಷ್ಣನಾ ಮಧುರ ಮುರಲೀನಾದ ಹೊಮ್ಮಿದ್ದು;
ಇಲ್ಲಿಯೇ ಐಕ್ಯ ಪ್ರವಚನವನು ನೀಡಿದುದು ನಾನಕ್;
ಇಲ್ಲಿಯೇ ಅಜಮೀರಿ ಖಾಜನಿಂದಾಯ್ತು ನಾಡು ಪವಿತ್ರ;
ನಮ್ಮ ಸಂಸ್ಕೃತಿ ನಮ್ಮ ಐಕ್ಯ ಸಮತಾಭಾವಗಳಿಗೆ ಜೀವಂತ ಸಾಕ್ಷಿ;
ಲಾಲಜಿಯವರ ಸಾಧುತ್ವ ಸಜ್ಜನಿಕೆ ಮತ್ತೊಂದು ಸಾಕ್ಷಿಯದಕೆ;
ಅದರ ಹೊಂಬೆಳಗೆ ಷೇಕ್ ನೂರು ದೀನರ ಕಣ್ಣ ಹೊಳಪು;
ಇಂದಿಗೂ ನಮ್ಮ ಕವಿಗಳ ಗೀತಕಾಧಾರವೈಕ್ಯಭಾವ.

ನಾವವರ ಸಂತಾನ: ಎಡರು ತೊಡರುಗಳೇನೆ ಇರಲಿ,
ನಮ್ಮ ಭವ್ಯ ಪರಂಪರೆಯ ನಾವು ಕಾಯ್ದುಕೊಳ್ಳುವೆವು: ಇದು ನನ್ನ ವಿಶ್ವಾಸ.
ಬನ್ನಿ ಗೆಳೆಯರೆ, ಬಾಳ ಸುಖದ ಸಂಗೀತಕ್ಕೆ ದನಿಯ ಕೂಡಿಸುವ,
ಪ್ರೇಮಜಲಧಿಯನದರ ಗಾಢನಿದ್ರೆಯ ಬಿಡಿಸುತೆಚ್ಚರಿಸುವ
ವಂಗಕನ್ಯೆಯ ಕುಂತಳದ ಕುಟಿಲಜಾಲವನು ಬಿಡಿಸುತಿರೆ ನಿನ್ನ ಬೆರಳು,
ಕಾಶ್ಮೀರ ಕನ್ನೆಕೆನ್ನೆಯ ಮಚ್ಚೆಗಳ ಮೇಲಲಂಕರಿಸುವೆನು ಮುತ್ತಗಳ ನಾನು.
ಸಂಗಾತಿ ಯೌವನವ ನೀನಿಂದು ಎಚ್ಚರಿಸು,
ಪ್ರೇಮಮಧುಪಾತ್ರೆಯನು ಅದಕೆಂದೆ ತುಂಬಿಡುವೆ ನಾನು.

ಮೊದಲ ಬಾರಿಯ ಭೂಮಿಯ ಸುತ್ತಣ ಹಾರಿಕೆಗಳು; ಉತ್ತರ ಧ್ರುವಕ್ಕೆ ಹಾರಿಕೆಗಳು; ಅಟ್ಲಾಂಡಿಕ್ ಸಾಗರವನ್ನು ದಾಟಿದ್ದು; ಒಬ್ಬ ಹೆಂಗಸು ಮೊದಲ ಸಲ ತನಿಯಾಗಿ ದಾಟಿದ್ದು; ಪೆಸಿಫಿಕ್ ಸಾಗರ ದಾಟಿದ್ದು; ಇಂಗ್ಲೆಂಡಿನಿಂದ ಇಂಡಿಯಕ್ಕೆ ಹಾರಿಕೆಗಳು; ಇಂಗ್ಲೆಂಡ್–ಆಸ್ಟ್ರೇಲಿಯಾ ಹಾರಿಕೆಗಳು; ಇಂಗ್ಲೆಂಡ್–ಆಸ್ಟ್ರೇಲಿಯಾ ಹಾರಿಕೆಗಳು; ಇಂಗ್ಲೆಂಡಿನಿಂದ ಆಫ್ರಿಕಕ್ಕೆ ಹಾರಿಕೆಗಳು.

ಪ್ರಕರಣ ೬

ಸಾಗಣೆ; ಆಕಾಶ ಪರಿಶೀಲನೆ ಮತ್ತು ಆಕಾಸ ಛಾಯಾಚಿತ್ರ ಗ್ರಹಣ; ಪ್ರಾಚೀನ ವಸ್ತುಶಾಸ್ತ್ರ; ಪರಿಶೋಧನೆ; ಸಂಕೀರ್ಣ; ಯುದ್ಧ.

ಪ್ರಕರಣ ೭

ವಿಮಾನದ ಪರಿಮಿತಿಗಳು: ಅದರ ಮುಂದಿನ ಬೆಲವಣಿಗೆ; ಮೇಲಾಕಾಶ ಹಾರಿಕೆ, ರಾಕೆಟ್ ಹಾರಿಕೆ.

ಪ್ರಕರಣ ೮

ಆಕಾಶಯಾನದಲ್ಲಿ ಜೀವನಮಾರ್ಗಗಳು; ವಿಮಾನ ಹಾರಿಸುವುದು; ವಿಮಾನ ನಡಸುವವನ ಜೀವನ; ಅಸೈನಿಕ ಹಾರಿಕೆಗೆ ಸಂಬಂಧಪಟ್ಟ ಉದ್ಯೋಗಗಳು; ವಾಣಿಜ್ಯ ಹಾರಿಕೆ ಮತ್ತು ಬಾಡಿಗೆ ವಿಮಾನ ಹಾರಿಕೆ; ವಿಮಾನ ಪರೀಕ್ಷೆಯ ಹಾರಿಕೆ; ಪ್ರದರ್ಶನ ಹಾರಿಕೆ ಮತ್ತು ವ್ಯಾಪಾರ ಪ್ರಕಟನೆ ಹಾರಿಕೆ; ಖಾಸಗಿ ಉದ್ಯೋಗ; ವಾಯುಯಾನ ಶಿಲ್ಪ; ನಿಸ್ತಂತು ಕಾರ್ಯನಿರ್ವಾಹ; ವಿಮಾನ ಕಾರ್ಯಾಡಳಿತ; ವಿಮಾನ ರಚನೆ; ವಿಮಾನ ಮಾರಾಟ.

# ವಿಷಯಸೂಚಿ

# ಆಕಾಶಯಾನ
# ಪ್ರಕರಣ ೧
# ಆಕಾಶಯಾನದ ಚರಿತ್ರೆ ಮತ್ತು ಬೆಳವಣಿಗೆ

ಮನುಷ್ಯನು ಈ ಭೂಗ್ರಹದ ಮೇಲೆ ತನ್ನ ಅತ್ಯಂತ ವೈವಿಧ್ಯಪೂರ್ಣವಾದ ಜೀವನವನ್ನು ಮೊದಲು ಮಾಡಿದಂದಿನಿಂದಲೂ ಆಕಾಶದಲ್ಲಿ ಹಾರಬೇಕೆಂಬುದು ಅವನ ಕನಸಾಗಿದೆ. ದೈವಸೃಷ್ಟಿಯಲ್ಲಿ ಅತ್ಯಂತ ಪ್ರಿಯವಾದ, ಚೆಲುವಾದ ಹಕ್ಕಿಗಳು ತಮ್ಮ ಮನಬಂದಂತೆ ಹಾರಾಡುವ ರೀತಿಯಲ್ಲಿ ತಾನೂ ಸಹ ಮರದಿಂದ ಮರಕ್ಕೆ, ಬೆಟ್ಟದಿಂದ ಬಯಲಿಗೆ, ಬಯಲಿನಿಂದ ಕಡಲಿಗೆ ಹಾರಿಹೋಗಬೇಕೆಂಬುದು ಅವನು ಹೃದಯದಲ್ಲಿ ಕಾಪಿಟ್ಟುಕೊಂಡು ಬಂದಿರುವ ಹಂಬಲಾಗಿದೆ. ಮನುಷ್ಯರು ರೆಕ್ಕೆ ಕಟ್ಟಿಕೊಂಡು ಹಾರಲು ಪ್ರಯತ್ನಪಟ್ಟು ಪ್ರಾಣ ಕಳೆದುಕೊಂಡಿರುವ ನಿದರ್ಶನಗಳನ್ನು ಗ್ರೀಕ್ ಪುರಾಣದಿಂದ ಎತ್ತಿಕೊಡಬಹುದು. ಮತ್ತೆ, ಈ ಭೂಮಿಯಲ್ಲಿ ದೇವತೆಗಳೇ ಸಂಚರಿಸುತ್ತಿದ್ದಂತಹ ಆ ಪ್ರಾಚೀನ ಕಾಲದಲ್ಲಿ ಪ್ರಭುವಾದ ರಾಮದೇವರು ತನ್ನ ಪ್ರಿಯೆಯಾದ ಸೀತೆಯೊಡನೆ ಲಂಕೆಯಿಂದ ಅಯೋಧ್ಯಾ ನಗರಿಗೆ ಮಾಡಿದ ಪ್ರಸಿದ್ಧವಾದ ವಿಮಾನ ಪ್ರಯಾಣದ ಉಲ್ಲೇಖ ರಾಮಾಯಣದಲ್ಲಿ ಬರುತ್ತದೆ. ಬೇರೆ ಬೇರೆ ನಾಗರಿಕತೆಗಳ ಪುರಾಣಗಳು ಚಾರಿತ್ರಿಕ ಸತ್ಯಗಳಲ್ಲವೆಂದೂ ಹಿಂದಿನ ಕಾಲದ ಕೆಲವು ಕವಿಗಳ ಕಲ್ಪನಾಶಕ್ತಿಯುಳ್ಳ ಪ್ರತಿಭೆ ಸೃಷ್ಟಿಸಿದ ಬರಿಯ ಕಟ್ಟುಕತೆಗಳೆಂದೂ ಇಟ್ಟುಕೊಳ್ಳೋಣ; ಆ ಪುರಾಣಗಳ ಕರ್ತೃಗಳಿಗೆ ಮನುಷ್ಯರು ಆಕಾಶದಲ್ಲಿ ಹಾರುವರೆಂಬ ಕಲ್ಪನೆಯಿದ್ದ ಅಂಶವೇ, ಅನಾದಿಕಾಲದಿಂದಲೂ ಮನುಷ್ಯನ ಮನಸ್ಸಿನಲ್ಲಿ ಹಾರುವಿಕೆಯ ಭಾವನೆ ಇತ್ತೆಂಬುದನ್ನು ಸ್ಥಿರಪಡಿಸುತ್ತದೆ. ಹೀಗಿರುವುದರಿಂದ, ಆಕಾಶದಲ್ಲಿ ಪ್ರಯಾಣ ಮಾಡಬೇಕೆಂಬ ಮನುಷ್ಯನ ಅಪೇಕ್ಷೆಯೂ ಅವನ ಬಹುಮುಖವಾದ ಚರಿತ್ರೆಯೂ ಹೆಚ್ಚು ಕಡಮೆ ಒಟ್ಟಿಗೆ ಮೊದಲಾದುವೆಂದು ಹೇಳುವುದು ಅತ್ಯುಕ್ತಿಯಾದೀತೆ? ಅದು ಹೇಗಾದರೂ, ಅನೇಕ ಶತಮಾನಗಳವರೆಗೆ ಆ ಭಾವನೆ ಫಲಿಸಲಿಲ್ಲ. ಮನುಷ್ಯನು ಪರ್ವತಗಳನ್ನು ಹತ್ತಬಲ್ಲವನಾಗಿದ್ದನು, ಸಮುದ್ರಗಳ ಮೇಲೆ ಸಂಚರಿಸಬಲ್ಲವನಾಗಿದ್ದನು, ತನ್ನ ಗುರಿಗಳನ್ನು ಸಾಧಿಸಲು ಪ್ರಕೃತಿಯ ಹಲವು ಶಕ್ತಿಗಳನ್ನು ಉಪಯೋಗಿಸಿಕೊಳ್ಳಬಲ್ಲವನಾಗಿದ್ದನು. ಆದರೆ, ಭೂಮ್ಯಾಕರ್ಷಣ ಶಕ್ತಿಗೆ ವಿರುದ್ಧವಾಗಿ ತನ್ನನ್ನು ತಾನು ಮೇಲಕ್ಕೆ ಒಯ್ಯುವ ಸೋಜಿಗ ಎಂದಿಗೂ

ಅಲ್ಪಪ್ರಯತ್ನಗಳನ್ನು ಆಕಾಶಯಾನದ ಪ್ರಾರಂಭವೆಂದು ಸರಿಯಾಗಿ ಕರೆಯಬಹುದು.

**ಆಕಾಶಬುಟ್ಟಿ ಮತ್ತು ವಾಯುಹಡಗು (Airship): ವಾಯುವಿಗಿಂತ ಹಗುರವಾದ ವಾಯುಯಾನಗಳು (Lighter than air Aircraft) :–**

ಹೀಗೆ, ಆಕಾಶಯಾನದ ಅಲ್ಪಾರಂಭಗಳು ಯಾವುವೆಂದು ಹುಡುಕುತ್ತ ಹೊರಟರೆ, ಹಾರಲು ಮಾಡಿದ ಮೊದಲ ಪ್ರಯತ್ನಗಳು ಆಕಾಶಬುಟ್ಟಿಯಲ್ಲಿ ಮಾಡಿದವುಗಳೆಂದು ತಿಳಿಯಬರುತ್ತದೆ. ಆಕಾಶಬುಟ್ಟಿ ಅನಿಲದಿಂದ (Gas) ತುಂಬಿದ ವರ್ತುಳಾಕಾರದ ಹೊದಿಕೆ ಅಥವಾ ಆವರಣ; ಅದಕ್ಕೆ ನಡೆಸುವವರ ತಂಡವನ್ನುಳ್ಳ (Crew) ಬುಟ್ಟಿಯೊಂದನ್ನು ಜೋಡಿಸಿರುತ್ತದೆ. ಆವರಣದ ತಳದಲ್ಲಿ ಒಂದು ಬಾಯಿ ಉಂಟು; ಒಳಗಿರುವ ಅನಿಲ ವಾತಾವರಣದ ಒತ್ತಡವನ್ನು ಮೀರದಂತೆ ಇದು ತಡೆಯುತ್ತದೆ. ದೋಣಿ ನೀರಿನಲ್ಲಿ ಹೇಗೆ ತೇಲುತ್ತದೆಯೊ ಹಾಗೆ ಆಕಾಶಬುಟ್ಟಿ ವಾಯುವಿನಲ್ಲಿ ತೇಲುತ್ತದೆ. ಆಕಾಶಬುಟ್ಟಿಯ ಘನಪರಿಮಾಣವು (Volume) ಆಕ್ರಮಿಸಿಕೊಂಡ ಸ್ಥಳದಲ್ಲಿದ್ದ ವಾಯು, ವಾಯುವಿನಲ್ಲಿನ ಆಕಾಶಬುಟ್ಟಿಯ ತೂಕವನ್ನು ಹೊರಲು ಸಾಕಾಗುವಮಟ್ಟಿಗೆ ಸಾಂದ್ರವಾಗಿದೆ. ಮೊದಲು ಆಕಾಶಬುಟ್ಟಿಯನ್ನು ಸಾಂದ್ರತೆಯಲ್ಲಿ (Density) ವಾಯುವಿಗಿಂತ ಹಗುರವಾದ ಬಿಸಿಗಾಳಿಯಿಂದಾಗಲಿ ಜಲಜನಕದಿಂದಾಗಲಿ ತುಂಬುತ್ತಿತ್ತು. ಆಕಾಶ ಬುಟ್ಟಿಯನ್ನು ಕೆಳಗಿಳಿಸಬೇಕಾದಾಗ ಸ್ವಲ್ಪ ಅನಿಲವನ್ನು ಹೊರಬಿಡಲಾಗುತ್ತದೆ; ಸ್ವಲ್ಪ ಅಡಿತೂಕವನ್ನು (Ballast) ತೆಗೆದಾಗ ಆಕಾಶಬುಟ್ಟಿ ಮೇಲೇರುತ್ತದೆ; ಅಡಿತೂಕವನ್ನು ಪೂರ್ತಿ ತೆಗೆದಾಗ ಅದರ ಹಾರಿಕೆ ಸಾಮಾನ್ಯವಾಗಿ ಕೊನೆಗೊಳ್ಳುತ್ತದೆ. ಆಕಾಶಬುಟ್ಟಿಯ ಸಹಾಯದಿಂದ ಮನುಷ್ಯನು ಮೇಲಕ್ಕೇರುವುದು ಸಾಧ್ಯವಾದರೂ ಅದು ವಾಯುಪ್ರಯಾಣದಲ್ಲಿ ಒಂದು ಹೆಚ್ಚುಗಾರಿಕೆಯನ್ನು ಪಡೆಯಲಾಗಲಿಲ್ಲ. ಆಕಾಶಬುಟ್ಟಿ ಹಾರುವ ದಿಕ್ಕು ಯಾವಾಗಲೂ ಗಾಳಿ ಬೀಸುವ ದಿಕ್ಕಿಗೆ ಅಧೀನವಾಗಿತ್ತು; ಅಂದರೆ ವಾಯುಯಾನ ನಡಸುವವನು (Pilot) ಗಾಳಿಗೆ ಅಧೀನನಾದಹಾಗಾಯಿತು. ಬೇರೆ ಬೇರೆ ಎತ್ತರಗಳಲ್ಲಿ ಗಾಳಿಯ ಹಕ್ಕನ್ನು ಸರಿಯಾಗಿ ಅಂದಾಜು ಮಾಡುವುದರಿಂದ, ಮತ್ತು ಅದಕ್ಕನುಸಾರವಾಗಿ ಆಕಾಶ ಬುಟ್ಟಿಯನ್ನು ಮೇಲೇರಿಸುವುದರಿಂದ ಮತ್ತು ಕೆಳಗಿಳಿಸುವುದರಿಂದ ಮಾತ್ರ ಆಕಾಶಬುಟ್ಟಿ ನಡೆಸುವವನು ಅದು ಹೋಗುವ ದಿಕ್ಕನ್ನು ಸ್ವಲ್ಪವುಟ್ಟಿಗೆ ತನ್ನ ಹತೋಟಿಯಲ್ಲಿಟ್ಟುಕೊಳ್ಳಬಲ್ಲನು. ಅದರ ವೇಗ ಕೂಡ ಗಾಳಿಯ ವೇಗಕ್ಕೇ

ಕನಸಾಗಿಯೇ ಉಳಿಯಿತು. ಅಂತಹ ಪ್ರಯತ್ನವು ದೇವರ ಅತ್ಯಂತ ಪವಿತ್ರವಾದ ನಿಯಮಗಳನ್ನು ಮೀರುವುದಾದ್ದರಿಂದ ಅದು ಮಾನವಕೋಟಿಯನ್ನೇ ದೇವರ ಶಾಪಕ್ಕೆ ಗುರಿಮಾಡುವುದು ಎಂದು ಮುಂಚಿನ ತತ್ತ್ವಶಾಸ್ತ್ರಜ್ಞರು ಹೆದರಿ ಕೂಡ ಇದ್ದರು. ಭೂಮಿಯ ಮೇಲೆ ಮಾತ್ರ ಇರುವುದಕ್ಕಾಗಿ ಮನುಷ್ಯನನ್ನು ದೇವರು ಸೃಷ್ಟಿಸಿದನು ಎಂದು ಅವರು ಎಣಿಸಿದ್ದರು. ಹೀಗೆ, ಮನುಷ್ಯನು ವಾಯು ಮಂಡಲವನ್ನು ಸುತ್ತಿ ನೋಡದೆಯೇ ಶತಮಾನಗಳು ಉರುಳಿದುವು.

ಹದಿನೇಳನೆಯ ಶತಮಾನದ ಹತ್ತಿರ ಹತ್ತಿರದಲ್ಲಿ ಅನೇಕ ಮಂದಿ ಫ್ರೆಂಚ್, ಇಂಗ್ಲಿಷ್ ಮತ್ತು ಇತರ ಯಂತ್ರಶಿಲ್ಪಿಗಳು ಈ ಭಾವನೆಯ ಅಂಕುರವನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಯೋಗ ನಡೆಸುತ್ತಿದ್ದರು. ಇಷ್ಟಾದರೂ ಆಕಾಶ ಬುಟ್ಟಿಯೊಂದನ್ನು ಯಶಸ್ವಿಯಾಗಿ ಹಾರಿಸಿದ್ದು ೧೭೮೩ರಲ್ಲಿ: ಬಿಸಿಗಾಳಿಯನ್ನು ತುಂಬಿ ಊದಿಸಿದ ಆ ಆಕಾಶಬುಟ್ಟಿಯನ್ನು ಕಂಡುಹಿಡಿದವರು ಮಾಂಗೊಲ್ ಫ್ಯೇ (Montgolfier) ಸೋದರರು. ಅದೇ ವರ್ಷ ಅಕ್ಟೋಬರಿನಲ್ಲಿ, ಬಿಸಿಗಾಳಿ ತುಂಬಿ ಊದಿಸಿದ, ಆದರೆ ಹಗ್ಗದಿಂದ ನೆಲಕ್ಕೆ ಕಟ್ಟಿದ, ಅಂತಹದೇ ಆಕಾಶಬುಟ್ಟಿಯಲ್ಲಿ ಮನುಷ್ಯನು ಮೊದಲ ಸಲ ಆಕಾಶಕ್ಕೆ ಏರಿಹೋದನು. ಅದಕ್ಕೆ ಕೆಲವು ತಿಂಗಳು ಮುಂಚೆ ಪ್ಯಾರಿಸ್ ಪಟ್ಟಣದ ಕ್ಯಾಂಪ್–ಡ–ಮಾರ್ಸ್ (Camp-de-Mars) ಎಂಬ ಸ್ಥಳದಿಂದ ಫಿರಂಗಿಯೊಂದನ್ನು ಹಾರಿಸಿದ ಕೂಡಲೇ ಜಲಜನಕ ತುಂಬಿದ ಆಕಾಶಬುಟ್ಟಿಯೊಂದನ್ನು ಹಾರಿಬಿಡಲಾಯಿತು. ಈ ಘಟನೆಯನ್ನು ಸಾವಿರಾರು ಮಂದಿ ನೋಟಕರು ಕೌತುಕದಿಂದ ನೋಡಿದರು. ಆಮೇಲೆ ಈ ಆಕಾಶಬುಟ್ಟಿ ಪ್ಯಾರಿಸ್ಸಿಗೆ ಹದಿನೈದು ಮೈಲಿ ದೂರದ ಹಳ್ಳಿಯೊಂದರಲ್ಲಿ ಕೆಳಕ್ಕೆ ಇಳಿಯಿತು; ದಿಗಿಲುಗೊಂಡ ಹಳ್ಳಿಯವರು ಅದನ್ನು ಒಂದು ವಿಚಿತ್ರ ಪ್ರಾಣಿಯೆಂದು ಭಾವಿಸಿದರು. ಅದೇ ವರ್ಷ ಸ್ವಲ್ಪ ಕಾಲಾನಂತರ ಪೀಲಾಟ್ರ್–ಡ–ರೊಸ್ಯೇ (Pilatre-de-Rosier) ಎಂಬ ಫ್ರೆಂಚನು ಮಾರ್ಕ್ವಿಸ್ ಆಫ್ ಆರ್ಲೆಂಡ್ಸ್ (Marques of Arlands) ಎಂಬವನ ಜೊತೆಗೂಡಿ ಬಿಸಿಗಾಳಿ ತುಂಬಿ ಊದಿಸಿದ ಆಕಾಶಬುಟ್ಟಿಯಲ್ಲಿ ವಾಯುಪ್ರಯಾಣ ಮಾಡಿದನು. ಯಂತ್ರಶಿಲ್ಪದಲ್ಲಿ ಆಸಕ್ತಿಯಿದ್ದ ಬ್ಲಾನ್‌ಷರ್ (Blanchard) ಎಂಬ ಫ್ರೆಂಚನು ಮಾಂಗೊಲ್‌ಫ್ಯೇ ಸೋದರರ ಆಕಾಶಬುಟ್ಟಿಯ ನಿರ್ಮಾಣದಿಂದ ಆಶ್ಚರ್ಯಗೊಂಡಿದ್ದನು. ಈತನು ೧೭೮೪ರಲ್ಲಿ ಇಂಗ್ಲೆಂಡಿಗೆ ಬಂದು, ಜನವರಿ ೭ರಲ್ಲಿ ಜೆಫ್ರಿಸ್ (Jeffris) ಎಂಬಾತನ ಜೊತೆಗೂಡಿ ಮೊದಲ ಸಲ ಆಕಾಶಬುಟ್ಟಿಯಲ್ಲಿ ಇಂಗ್ಲಿಷ್ ಕಡಲ್ಗಾಲುವೆಯನ್ನು ದಾಟಿದನು. ಈ

**ವಾಯು ಹಡಗು**

ವಾಯು ಪ್ರಯಾಣದಲ್ಲಿ ಮೊದಲ ಹೆಜ್ಜೆ ಇಟ್ಟದ್ದು ವಾಯುಹಡಗು ಅಥವಾ ವಾಯುವಿಗಿಂತ ಹಗುರವಾದ ವಾಯುಯಾನ. ವಾಯುಹಡಗು ಸ್ವತಂತ್ರ ಆಕಾಶಬುಟ್ಟಿಯ ಸಹಜ ಬೆಳವಣಿಗೆ: ಮಾಂಗೋಲ್ ಫ್ಯೇ (Montgolfier) ಸೋದರರು ಮೊದಲ ಸಲ ಆಕಾಶಬುಟ್ಟಿ ಹಾರಿಸಿದ ಒಂದು ವರ್ಷದೊಳಗಾಗಿ, ಆಕಾಶಬುಟ್ಟಿ ವಾಯುಮಂಡಲದ ವಾಯುಚಲನೆಗಳಿಗೆ ಒಳಪಡದೆ ಸ್ವತಂತ್ರವಾಗಿ ಹಾರುವಂತೆ ಅದನ್ನು ಹತೋಟಿಯಲ್ಲಿಟ್ಟುಕೊಳ್ಳುವ ಮತ್ತು ನಡಸುವ ವಿಧಾನಗಳನ್ನು ನಿರ್ಮಾಪಕರು ಪರ್ಯಾಲೋಚಿಸುತ್ತಿದ್ದರು. ಅದರ ಫಲಿತಾಂಶವೇ ವಾಯುಹಡಗು: ಇದು ಸ್ವತಂತ್ರ ಆಕಾಶಬುಟ್ಟಿಯಾಗಿರುವುದರ ಜೊತೆಗೆ ಯಂತ್ರಶಕ್ತಿಯಿಂದ ಚಾಲನೆಗೊಳ್ಳುತ್ತದೆ. ವಾಯುಹಡಗಿನ ಮೂಗಿಗೆ ಒಂದು ಚಾಲಕವನ್ನು (Propeller) ಜೋಡಿಸಿರುತ್ತದೆ. ಇದು ತಿರುಗುವುದರಿಂದ, ಹುಟ್ಟುಗಳು ನೀರನ್ನು ಪಕ್ಕಕ್ಕೆ ತಳ್ಳಿದಾಗ ದೋಣಿ ನೀರಿನಲ್ಲಿ ಹೇಗೆ ನುಗ್ಗಿ ಹೋಗುತ್ತದೆಯೊ ಹಾಗೆ ವಾಯುಯಾನ ವಾಯುವಿನಲ್ಲಿ ನುಗ್ಗಿಹೋಗಲು ನೆರವಾಗುತ್ತದೆ.

ವಾಯುಹಡಗುಗಳ ಬೆಳವಣಿಗೆಯ ಬಹಳ ಮುಂಚಿನ ಮಟ್ಟದಲ್ಲೆ ಅದರ ಅನಿಲ ಕೋಶ (Gas container) ಗೋಳಾಕೃತಿಯಿಂದ ದೀರ್ಘಾಕೃತಿಗೆ ಮಾರ್ಪಾಟು ಹೊಂದಿತು. ಏಕೆಂದರೆ, ವಾಯುವಿನಲ್ಲಿ ವಾಯುಯಾನದ ಗತಿಗೆ ದೀರ್ಘಾಕೃತಿಯಿಂದ ಕಡಮೆಯ ನಿರೋಧ ಉಂಟಾಗುತ್ತದೆಂದು ಗೊತ್ತಾಯಿತು. ಆವಿ ಎಂಜಿನ್ನಿನಿಂದ ಚಾಲನೆಗೊಂಡ ಮೊದಲ ವಾಯುಹಡಗನ್ನು ಗಿಫರ್ಡ್ (Giffard) ಎಂಬ ಫ್ರೆಂಚನು ೧೮೫೨ರಲ್ಲಿ ಕಟ್ಟಿ ಹಾರಿಸಿದನು. ಈ ವಾಯುಹಡಗು, ೧೧ ಅಡಿ ವ್ಯಾಸವುಳ್ಳ ಮತ್ತು ಮೂರು ಅಶ್ವಸಾಮರ್ಥ್ಯದ ಎಂಜಿನ್ನಿನಿಂದ ನಡೆಯುತ್ತಿದ್ದ ಚಾಲಕದಿಂದ ಚಾಲನೆಗೊಳ್ಳುತ್ತಿತ್ತು. ಆ ಎಂಜಿನ್ನು, ಅದರ ಕುದಿಪಾತ್ರೆಗಳು, ಒಂದು ಗಂಟೆ ಕಾಲಕ್ಕೆ ಸಾಕಾಗುವಷ್ಟು ನೀರು– ಎಲ್ಲ ಸೇರಿ ೪೬೦ ಪೌಂಡು ತೂಗುತ್ತಿತ್ತು. ಆ ವಾಯುಹಡಗಿನ ಘನ ಅಳತೆ ೨೮,೦೦೦ ಘನ ಅಡಿಗಳು; ಉದ್ದ ೧೪೪ ಅಡಿಗಳು; ಅತ್ಯಂತ ಹೆಚ್ಚಿನ ವ್ಯಾಸ ೩೯ ಅಡಿಗಳು. ಅದು ಗಂಟೆಗೆ ೬ ಮೈಲಿಗಳವರೆಗೂ ಹೋಗುತ್ತಿತ್ತು ಮತ್ತು ಚುಕ್ಕಾಣಿಯ (Rudder) ಚಲನೆಗಳಿಗೆ ಅನುಸಾರವಾಗಿ ಚಲಿಸುತ್ತಿತ್ತು. ಯಂತ್ರಶಕ್ತಿಯ ಸಹಾಯದಿಂದ ಹಾರಿದ ಮೊದಲನೆಯ ವಾಯುಯಾನೀ ವಾಯು ಹಡಗು. ಇದಾದ ೩೦ ವರ್ಷಗಳ ತರುವಾಯ, ಎಂದರೆ ೧೮೮೪ರಲ್ಲಿ, ರೀನಾಂಡ್ (Renand) ಮತ್ತು ಕ್ರೆಬ್ಸ್ (Krebs) ಎಂಬ ಇಬ್ಬರು ಫ್ರೆಂಚ್ ಸೈನ್ಯಾಧಿಕಾರಿಗಳು

ಅಧೀನವಾಗಿತ್ತು. ಹೀಗೆ, ಆಕಾಶಬುಟ್ಟಿ ಹಾರಿಕೆ ಅತ್ಯಂತ ಉತ್ತೇಜಕವಾದ ಅನುಭವವಾಗಿದ್ದರೂ ಅದು ಆಕಾಶಯಾನದಲ್ಲಿ ನಿಜವಾಗಿ ಮುಂದುವರಿಯಿತೆಂಬುದಾಗಿ ಎಂದಿಗೂ ಹೇಳಲಾಗುವುದಿಲ್ಲ.

ಆಕಾಶ ಬುಟ್ಟಿಗಳು ಎರಡು ಮಾದರಿಯವು: ಕಟ್ಟಿಲ್ಲದ (ಸ್ವತಂತ್ರ) ಆಕಾಶ ಬುಟ್ಟಿ ಮತ್ತು ಹಗ್ಗದಿಂದ ನೆಲಕ್ಕೆ ಬಿಗಿದ ಕಟ್ಟುಳ್ಳ (ಬಂಧಿತ) ಆಕಾಶಬುಟ್ಟಿ. ಸುಮಾರು ೨೦ ವರ್ಷಗಳ ಹಿಂದಿನವರೆಗೂ ಸ್ವತಂತ್ರ ಆಕಾಶಬುಟ್ಟಿಗಳನ್ನು ವಿನೋದ ಕ್ರೀಡೆಗಳಿಗಾಗಿ ಉಪಯೋಗಿಸುತ್ತಿತ್ತು; ಏಕೆಂದರೆ ಅವುಗಳಲ್ಲಿ ಮಾಡಿದ ಪ್ರಯಾಣಗಳು ಉಲ್ಲಾಸಕರವಾಗಿದ್ದುವು. ಸ್ವಲ್ಪವೂ ಶಬ್ದವಿಲ್ಲದ್ದರಿಂದ ನೆಲದ ಮೇಲಿನ ಜನರ ಸದ್ದುಗಳನ್ನೂ, ಕೆಲವು ವೇಳೆ ಹಕ್ಕಿಗಳ ಚಿಲಿಪಿಲಿಗಳನ್ನೂ ಸಹ, ಕೇಳಬಹುದಾಗಿತ್ತು. ಇಂಗ್ಲೆಂಡಿನಲ್ಲಿ ಸಮುದ್ರದ ಕಡೆಗೆ ಸಾಗಿ ಹೋಗುವ ಅಪಾಯ ಸಂಭವವಿದ್ದುದರಿಂದ ಆಕಾಶಬುಟ್ಟಿ ಹಾರಿಕೆಗಳನ್ನು ಅಲ್ಲಿ ಕೈಗೊಳ್ಳುತ್ತಿರಲಿಲ್ಲ. ಹೆಚ್ಚು ದೂರ ಹಾರಬೇಕೆಂದು ಇಷ್ಟಪಟ್ಟರೆ ಯುರೋಪು ಖಂಡದಲ್ಲಿ ಎಲ್ಲಿಯಾದರೂ ಪ್ರಯಾಣವನ್ನು ಮೊದಲು ಮಾಡಬೇಕಾಗಿತ್ತು. ೧೭ನೆಯ ಶತಮಾನದಲ್ಲಿ ಸೈನಿಕ ಪರಿಶೀಲನೆಗಾಗಿ ಬಂಧಿತ ಆಕಾಶಬುಟ್ಟಿಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿತ್ತು. ಇಂದಿಗೂ ಪವನಶಾಸ್ತ್ರ (Meteorology) ಸಂಬಂಧವಾದ ಪ್ರಯೋಗಗಳಿಗಾಗಿ ಸಣ್ಣ ಸ್ವತಂತ್ರ ಆಕಾಶಬುಟ್ಟಿಗಳನ್ನು ಉಪಯೋಗಿಸುತ್ತಿದೆ. ಇಂಥ ಆಕಾಶಬುಟ್ಟಿಯಲ್ಲಿ ಕೆಲವು ಲೇಖನ ಸಲಕರಣೆಗಳು (Recording instruments) ಇರುತ್ತವೆ. ಆಕಾಶಬುಟ್ಟಿ ಸಾಕಷ್ಟುಮಟ್ಟಿಗೆ ಮೇಲಕ್ಕೆ ಹೋದಾಗ ಆವರಣವು ಒಡೆದು ಹೋಗಿ, ಹಗುರವಾದ ಲೇಖನ ಸಲಕರಣೆಗಳು ಸಣ್ಣ ಇಳಿ ಕೊಡೆಯ (Parachute) ಸಹಾಯದಿಂದ ತಮಗೆ ತಾವೇ ಕೆಳಗಿಳಿಯುತ್ತವೆ. ಕೆಲವು ಸಂದರ್ಭಗಳಲ್ಲಿ ಈ ರೀತಿ ೨೦ ಮೈಲಿಗಳಷ್ಟು ಎತ್ತರವನ್ನು ಗುರುತಿಸಲಾಗಿದೆ. ಮೇಲಣ ವಾಯುಮಂಡಲದ ವೈಜ್ಞಾನಿಕ ಪರಿಶೋಧನೆಗಳಿಗಾಗಿ ಒಂದು ವಿಶಿಷ್ಟ ಮಾದರಿಯ ಸ್ವತಂತ್ರ ಆಕಾಶಬುಟ್ಟಿಯನ್ನು ಉಪಯೋಗಿಸಲಾಗುತ್ತದೆ. ಆವಶ್ಯಕ ಸಲಕರಣೆಗಳನ್ನೂ ಸ್ವಾಭಾವಿಕ ವಾಯುವಿನ ಸರಬರಾಯಿಯನ್ನೂ ಉಳ್ಳ, ಗಾಳಿತೂರದ ಕೋಣೆಯಲ್ಲಿ ನಡಸುವವರ ತಂಡ ಇರುತ್ತದೆ. ಆಕಾಶಬುಟ್ಟಿ ಪರಿಮಿತಿಗಳಿಗೆ ಒಳಪಟ್ಟಿರುವುದರಿಂದ ಅದರಲ್ಲಿ ದೂರ ವ್ಯಾಪ್ತಿಯ ಹಾರುವ ಪ್ರಯಾಣಗಳನ್ನು ಮಾಡಲಾಗುವುದಿಲ್ಲ.

ಒಳಕ್ಕೂ ಹೊರಕ್ಕೂ ನಡಸಿಕೊಂಡು ಹೋಗುವುದಕ್ಕೆ ಜನರ ತಂಡಗಳೇ ಬೇಕು; ತುಂಬು ಗಾಳಿ ಇದ್ದರೆ, ಹಡಗನ್ನು ಹತೋಟಿಯಲ್ಲಿಟ್ಟುಕೊಳ್ಳುವುದೇ ಕಷ್ಟ. ಈಚೆಗೆ ವಾಯುಹಡಗನ್ನು ಕಟ್ಟಿಹಾಕುವ ಕೂವೆಗೆ (ಕಂಬಕ್ಕೆ) (Mooring mast) ಬಿಗಿಯುತ್ತಾರೆ. ಅದನ್ನು ಸರಿಪಡಿಸಬೇಕಾದಾಗಾಗಲಿ ಬಿಚ್ಚಿ ಪರೀಕ್ಷಿಸಬೇಕಾದಾಗಾಗಲಿ ಮಾತ್ರ ವಾಯುಹಡಗನ್ನು ಅದರ ಮನೆಗೆ ಸಾಗಿಸುತ್ತಾರೆ. ಎರಡನೆಯದಾಗಿ, ವಾಯುಹಡಗು ಹಾರುತ್ತಿರುವಾಗ ಅದರ ಉರುವಲು (Fuel) ಮುಗಿಯುತ್ತ ಬಂದಂತೆ ಹಡಗಿನ ಭಾರ ವ್ಯತ್ಯಾಸಗೊಳ್ಳುತ್ತದೆ. ಇದು ಯಂತ್ರವನ್ನು ವಾಯುವಿನಲ್ಲಿ ಮೇಲಕ್ಕೇರಿಸಲು ಕಾರಣವಾಗುತ್ತದೆ. ಗ್ರಾಫ್ ಜೆಪ್ಲಿನ್ ಪೆಟ್ರೋಲಿಗೆ ಬದಲು ಅನಿಲದ ಉರುವಲನ್ನು ಉಪಯೋಗಿಸುತ್ತದೆ. ಈ ಉರುವಲು ಸಾಂದ್ರತೆಯಲ್ಲಿ ವಾಯುವಿಗೆ ಸಮನಾಗಿರುವುದರಿಂದ, ಉರುವಲು ಉಪಯೋಗಗೊಳ್ಳುತ್ತ ಬಂದಂತೆ ಅದು ತುಂಬಿದ್ದ ಚೀಲಗಳನ್ನು ವಾಯುವಿನಿಂದ ತುಂಬಲಾಗುತ್ತದೆ.

* * * *

೬೦,೦೦೦ ಘನ ಅಡಿಗಳ ವಾಯುಹಡಗನ್ನು ಕಟ್ಟಿದರು; ಆ ವೇಳೆಗಾಗಲೇ ಕಂಡುಹಿಡಿದಿದ್ದ ವಿದ್ಯುತ್ ಮೋಟಾರಿನ ಸಹಾಯದಿಂದ ಇದು ನಡೆಯುತ್ತಿತ್ತು. 'ಲಾ ಫ್ರ್ಯಾನ್ಸ್' (La France) ಎಂಬ ಹೆಸರಿನ ಈ ವಾಯುಹಡಗು ೧೮೮೪ರಲ್ಲೂ ೧೮೮೫ರಲ್ಲೂ ಅನೇಕ ಸಲ ಯಶಸ್ವಿಯಾಗಿ ಹಾರಿತು. ಇದಾದ ಕೂಡಲೆ ಪೆಟ್ರೋಲ್ ಎಂಜಿನನ್ನು ಕಂಡುಹಿಡಿಯಲಾಯಿತು; ಇದರಿಂದ ವಾಯುಹಡಗಿನ ಬೆಳವಣಿಗೆ ಬಹುಮಟ್ಟಿಗೆ ಮುಂದುವರಿಯಿತು. ೧೯೮೭ರಿಂದ ೧೯೨೦ರವರೆಗಿನ ವರ್ಷಗಳ ಅವಧಿಯಲ್ಲಿ ಈಗಿನ ಕಾಲದ ಸಾಗಣೆಯ ಉದ್ದೇಶಗಳಿಗಾಗಿ ಅನೇಕ ವಾಯುಹಡಗುಗಳನ್ನು ಕಟ್ಟಲಾಯಿತು. ಜರ್ಮನಿ ದೇಶವೊಂದು ಮಾತ್ರ ವಾಯುಹಡಗನ್ನು ಕಟ್ಟುವುದರಲ್ಲಿ ಎತ್ತಿದ ಕೈ ಎಂಬುದನ್ನೂ, ಸಾಗರ ಮಾರ್ಗ ಜಹಜು (Ocean Liner) ಎಷ್ಟರಮಟ್ಟಿಗೆ ಕಾಲಕ್ರಮವನ್ನು ಅನುಸರಿಸುತ್ತದೆಯೊ ಅಷ್ಟರಮಟ್ಟಿಗೆ ಕಾಲಕ್ರಮಾನುಸಾರವಾಗಿ ಅಟ್ಲಾಂಟಿಕ್ ಸಾಗರದ ಮೂಲಕ ಅಮೆರಿಕಾ ದೇಶಕ್ಕೆ ವಾಯುಹಡಗಿನ ಪ್ರಯಾಣದ ಏರ್ಪಾಟನ್ನು ನಡಸಿಕೊಂಡು ಬರುತ್ತಿದೆ ಯೆಂಬುದನ್ನೂ ಗಮನಿಸಬೇಕು. ಡಾ॥ ಎಕನರ್ (Ecaner) ಎಂಬುವರು ಪ್ರಸಿದ್ಧವಾದ ಗ್ರಾಫ್ ಜೆಪ್ಲಿನ್ (Graf Zeppelin) ಎಂಬ ವಾಯುಹಡಗಿನ ಸಹಾಯದಿಂದ ಈ ಏರ್ಪಾಟನ್ನು ನಡಸುತ್ತಿದ್ದಾರೆ. ಜೆಪ್ಲಿನ್ ವಾಯುಹಡಗುಗಳಲ್ಲಿ ದುರಂತ ಅಪಘಾತಗಳು ಆಗಿಲ್ಲದಿರುವುದು ಗಮನಾರ್ಹವಾಗಿದೆ. R ೧೦೦ ಮತ್ತು R೧೦೧ ಎಂಬ ಎರಡು ದೊಡ್ಡ ಬ್ರಿಟಿಷ್ ವಾಯು ಹಡಗುಗಳನ್ನು ಪ್ರಯಾಣಿಕರಿಗಾಗಿ ಕಟ್ಟಲಾಯಿತು. ಆದರೆ R ೧೦೧ ವಾಯುಹಡಗು ೧೯೩೦ರಲ್ಲಿ ಬಹಳ ಶೋಚನೀಯಸ್ಥಿತಿಯಲ್ಲಿ ನಾಶಹೊಂದಿತು. ಅಲ್ಲಿಂದೀಚೆಗೆ ಆ ದೇಶದಲ್ಲಿ ವಾಯುಹಡಗನ್ನು ಕಟ್ಟುವುದು ಸಂಪೂರ್ಣವಾಗಿ ನಿಂತಿದೆ. ಅಮೆರಿಕದಲ್ಲೂ ಸಹ ಸೈನ್ಯ ಸಹಕಾರಕ್ಕಾಗಿ ಕಟ್ಟಿದ ಸಂಯುಕ್ತ ಸಂಸ್ಥಾನಗಳ ವಾಯು ಹಡಗುಗಳು ಅದೇ ಗತಿಯನ್ನು ಹೊಂದಿದುವು. ಅಲ್ಲಿಂದ ಈಚೆಗೆ ಅಮೆರಿಕದಲ್ಲಿ ವಾಯುಹಡಗನ್ನು ಕಟ್ಟುತ್ತಿಲ್ಲ. ವಾಯುಹಡಗುಗಳನ್ನು ಕಟ್ಟಿ ಅವುಗಳನ್ನು ನಿರ್ವಹಿಸಲು ಅವಶ್ಯವಾದ ಅನುಭವವೂ ಕೌಶಲವೂ ಜರ್ಮನರಿಗೆ ಮಾತ್ರ ಇರುವಂತೆ ಕಾಣುತ್ತದೆ.

ವಾಯುಹಡಗುಗಳನ್ನು ನಿರ್ವಹಿಸುವುದರಲ್ಲಿ ಅನೇಕ ಸಮಸ್ಯೆಗಳೂ ತೊಂದರೆಗಳೂ ಇವೆ. ಈ ಯಾನವು ವಾಯುವಿಗಿಂತ ಹಗುರವಾಗಿರುವುದರಿಂದ ಗಾಳಿ ಬೀಸುತ್ತಿರುವಾಗ ಅದನ್ನು ಅದರ ಮನೆಯೊಳಕ್ಕೆ ತೆಗೆದುಕೊಂಡು ಹೋಗುವುದೂ ಅಲ್ಲಿಂದ ಹೊರಕ್ಕೆ ತರುವುದೂ ಕಷ್ಟದ ಕೆಲಸ. ಹಡಗನ್ನು

ಗೋಚರವಾಗುವ ಮಟ್ಟಿಗೆ ಗಾಳಿಯೆನ್ನಬಹುದಾದದ್ದೊಂದು ಉಂಟಾಗಿರುವುದು ಗೊತ್ತಾಗುತ್ತದೆ. ಚಲಿಸುತ್ತಿರುವ ಮೋಟಾರು ಬಂಡಿಯ ಹೊರಕ್ಕೆ ಕೈನೀಡಿದರೆ ಈ ಗಾಳಿಯ ಒತ್ತಡ ಚೆನ್ನಾಗಿ ಅನುಭವಕ್ಕೆ ಬರುತ್ತದೆ. ವೇಗ ಗಂಟೆಗೆ ೩೦ ಮೈಲಿ ಇದ್ದರೆ, ಅದೇ ವೇಗದ ಗಾಳಿಗೆದುರಾಗಿ ನಿಂತರೆ ಯಾವ ಒತ್ತಡವನ್ನು ಅನುಭವಿಸುತ್ತೇವೆಯೋ ಅದಕ್ಕೆ ಈ ಒತ್ತಡ ಸಮನಾಗಿರುತ್ತದೆ. ಆದ್ದರಿಂದ ಗಾಳಿಯಿಲ್ಲದ ದಿನ ವಾಯುವಿಗೂ ವಿಮಾನಕ್ಕೂ ಪರಸ್ಪರ ಸಂಬಂಧವುಳ್ಳ ಚಲನೆಯೊಂದನ್ನು ಕಲ್ಪಿಸಿದ್ದೇ ಆದರೆ ಹಾರಿಕೆಗೆ ಬೇಕಾದ ಮೊದಲ ಅವಶ್ಯಕತೆಗಳನ್ನು ಪಡೆದಂತಾಗುತ್ತದೆ.

ಒಂದು ಚಪ್ಪಟೆಯಾದ ಫಲಕವನ್ನು ತೆಗೆದುಕೊಂಡು ಅದನ್ನು ವಿದ್ಯುತ್ ಬೀಸಣಿಗೆಯಿಂದ ಉಂಟಾಗುವಂತಹ ಚಲಿಸುವ ವಾಯುವಿಗೆ ಎದುರಾಗಿ ಸಮಕೋನದಲ್ಲಿ ಹಿಡಿದುಕೊಂಡರೆ ಒಂದು ಒತ್ತಡ ಫಲಕವನ್ನು ಹಿಂದಕ್ಕೆ ತಳ್ಳಲು ಪ್ರಯತ್ನಿಸುತ್ತಿರುವುದು ನಮ್ಮ ಅನುಭವಕ್ಕೆ ಬರುತ್ತದೆ. ಚಲಿಸುವ ಗಾಳಿಯ ಕಡೆಗೆ ೪೫°ಗಳ ಕೋನದಲ್ಲಿ ಇರುವಂತೆ ಫಲಕವನ್ನು ನಿಧಾನವಾಗಿ ಓರೆಮಾಡಿದರೆ, ಫಲಕವು ವಿದ್ಯುತ್ ಬೀಸಣಿಗೆಯಿಂದ ದೂರಕ್ಕೂ ಮತ್ತು ಮೇಲೆ ಮೇಲಕ್ಕೂ ಚಲಿಸುವಂತೆ ನಮಗೆ ಕಂಡುಬರುತ್ತದೆ. ಮೊದಲಿಗಿಂತ ಕಡಮೆಯ ಕೋನದಲ್ಲಿರುವಂತೆ ಫಲಕವನ್ನು ಇನ್ನೂ ಸ್ವಲ್ಪ ಓರೆ ಮಾಡಿದರೆ ಫಲಕದ ಮೇಲಕ್ಕೇರುವ ಪ್ರವೃತ್ತಿ ಹೆಚ್ಚಿ, ಕಡೆಗೆ ಫಲಕವು ಚಲಿಸುವ ವಾಯುಪ್ರವಾಹದಲ್ಲಿ ಚಪ್ಪಟೆಯಾಗಿ ನಿಲ್ಲುತ್ತದೆ. ಆಗ ಫಲಕ ಯಾವ ರೀತಿಯಲ್ಲೂ ಚಲಿಸುತ್ತಿರುವುದಿಲ್ಲ. ಫಲಕವನ್ನು ವೇಗವಾಗಿ ಚಲಿಸುವ ವಾಯುಪ್ರವಾಹಕ್ಕೆ ಎದುರಾಗಿ ಇಡುವ ಬದಲು ಫಲಕವನ್ನು ಜೋರಾದ ವೇಗದಿಂದ ವಾಯುವಿನಲ್ಲಿ ಚಲಿಸುವಂತೆ ಮಾಡಿದರೂ ಇದೇ ಪರಿಣಾಮ ಕಂಡುಬರುವುದು. ಯಾವ ಕೋನದಲ್ಲಿ ಫಲಕವು ಮೇಲಕ್ಕೇರಲು ಅತ್ಯಂತ ಹೆಚ್ಚಿನ ಪ್ರವೃತ್ತಿಯುಳ್ಳದ್ದಾಗಿರುತ್ತದೆಯೋ ಆ ನಿರ್ದಿಷ್ಟ ಕೋನದಲ್ಲಿರುವಂತೆ ಚಪ್ಪಟೆಯಾದ ರೆಕ್ಕೆಗಳನ್ನು ಭಾರವಾದ ಕಾಯವೊಂದಕ್ಕೆ ಜೋಡಿಸಿದರೆ, ಮತ್ತು ವಾಯುವಿಗೂ ವಿಮಾನದ ಒಡಲಿಗೂ ಪರಸ್ಪರ ಸಂಬಂಧವುಳ್ಳ ಚಲನೆಯನ್ನು ಉಂಟುಮಾಡಿದ್ದೇ ಆದರೆ, ರೆಕ್ಕೆಗಳೂ ವಾಯುವೂ ಆ ಚಲನೆಯ ಪ್ರಭಾವಕ್ಕೊಳಗಾಗಿ ರೆಕ್ಕೆಗಳು ವಿಮಾನದ ಒಡಲಿನೊಡನೆ ಮೇಲಕ್ಕೇರುವುವು. ಚಾಲಕದ ಮತ್ತು ಎಂಜಿನ್ನುಗಳ ಸಹಾಯದಿಂದ ರೆಕ್ಕೆಗಳು ಜೋರಾದ ವೇಗದಿಂದ ಚಲಿಸುವಂತೆ ಮಾಡಿದರೆ ಈ ಚಲನೆಯುಂಟಾಗುತ್ತದೆ. ಚಾಲಕ ವೇಗವಾಗಿ ಚಲಿಸಿದಾಗ ಅದು ಸುತ್ತಲೂ ಇರುವ ವಾಯುವನ್ನು ತನ್ನ

# ಪ್ರಕರಣ ೨
# ವಾಯುವಿಗಿಂತ ಭಾರವಾದ ವಾಯುಮಾನದ ಬೆಳವಣಿಗೆ: ಹಾರಿಕೆಯ ತತ್ತ್ವ

ವಾಯುವಿಗಿಂತ ಹಗುರವಾದ ವಾಯುಯಾನಗಳ ಬೆಳವಣಿಗೆಯಾಗುತ್ತಿರುವಾಗಲೇ ವಾಯುವಿಗಿಂತ ಭಾರವಾದ ಕಾರ್ಯಗಳನ್ನು ಭೂಮ್ಯಾಕರ್ಷಣ ಶಕ್ತಿಗೆ ವಿರುದ್ಧವಾಗಿ ಮೇಲೆತ್ತಲು ನಿರ್ಮಾಪಕರು ಪ್ರಯೋಗಗಳನ್ನು ನಡಸುತ್ತಿದ್ದರು. ವಿಮಾನದ ಚಾಲಕವೊಂದು ಹೊರತಾಗಿ ಇತರ ಯಾವ ಭಾಗಗಳೂ ವ್ಯಕ್ತವಾಗಿ ಚಲಿಸದೆ ವಿಮಾನವು ಆಕಾಶದಲ್ಲಿ ವೇಗವಾಗಿ ಹೋಗುವುದು ನಿಜವಾಗಿಯೂ ಅಚ್ಚರಿಯ ಘಟನೆಯೇ ಸರಿ.

ಈ ಘಟನೆಯಲ್ಲಿ ಅಡಗಿರುವ ತತ್ತ್ವ ಯಾವುದೆಂದರೆ, ಚಲನಾತ್ಮಕ ಶಕ್ತಿ (Kinetic energy) ಅಥವಾ ವಾಯುವನ್ನು ಬೇಗ ಬೇಗನೆ ಚಲಿಸುವಂತೆ ಮಾಡುವ ಸಾಮರ್ಥ್ಯ. ಈ ಶಕ್ತಿ ಎಷ್ಟು ಬಲವಾದದ್ದೆನ್ನುವುದು ನಮ್ಮಲ್ಲಿ ಪ್ರತಿಯೊಬ್ಬರಿಗೂ ತಿಳಿದಿದೆ. ವಿಮಾನ ಏನೆಂಬುದನ್ನು ಕನಸಿನಲ್ಲೂ ಕಾಣದಿದ್ದ ಕಾಲದಿಂದಲೂ ಗಾಳಿಯಂತ್ರವನ್ನು ಅಥವಾ ನೀರೆತ್ತುವ ಪಂಪನ್ನು ನಡಸುವುದರಲ್ಲಿ ಈ ಶಕ್ತಿಯ ಉಪಯೋಗವನ್ನು ನಾವು ಕಾಣುತ್ತಿದ್ದೇವೆ. ಅಲ್ಲದೆ, ಗಂಟೆಗೆ ೫೦–೬೦ ಮೈಲಿಗಳ ವೇಗದಲ್ಲಿ ಬೀಸುವ ಗಾಳಿಯಿಂದ ಸಮುದ್ರದಲ್ಲಿ ದೊಡ್ಡ ಆವಿಜಹಜುಗಳು ನಡಸಲ್ಪಡುವುದನ್ನು ಕಂಡಿದ್ದೇವೆ. ವಿಮಾನಗಳನ್ನು ವಾಯುವಿನಲ್ಲಿ ಮೇಲಕ್ಕೆತ್ತುವುದಕ್ಕಾದರೂ ಇದೇ ಶಕ್ತಿಯನ್ನು ಉಪಯೋಗಿಸಿಕೊಂಡಿದೆ.

ಒಂದು ಕಾಯವನ್ನು ಮೇಲಕ್ಕೆತ್ತಲು ಚಲಿಸುವ ವಾಯು ಅವಶ್ಯಕವಾದರೆ, ವಾಯುವಿನ ವ್ಯಕ್ತ ಚಲನೆಯಿಲ್ಲದೆ ಸಂಪೂರ್ಣವಾಗಿ ಶಾಂತವಾಗಿರುವ ದಿನದಲ್ಲಿ ವಿಮಾನ ಹೇಗೆ ಮೇಲೇರುತ್ತದೆ?– ಎಂಬುದಾಗಿ ಕೇಳಬಹುದು. ಸ್ವಲ್ಪವೂ ಗಾಳಿಯಿಲ್ಲದ ದಿನದಲ್ಲಿ ವೇಗವಾಗಿ ಚಲಿಸುವ ವಸ್ತುವಿನಿಂದ ವಾಯುಚಲನೆಯನ್ನು ಉಂಟುಮಾಡಬಹುದು. ಉದಾಹರಣೆಗಾಗಿ, ಒಬ್ಬನು ಗಾಳಿಯಿಲ್ಲದ ದಿನ ಬೈಸಿಕಲ್ಲಿನ ಮೇಲಾಗಲಿ, ಮೋಟಾರು ಬಂಡಿಯಲ್ಲಾಗಲಿ ಸವಾರಿ ಹೊರಟರೆ, ಅಂದು ನಿಜವಾಗಿಯೂ ಗಾಳಿ ಬೀಸುತ್ತಿಲ್ಲವೆಂದು ನಮಗೆ ಚೆನ್ನಾಗಿ ಗೊತ್ತಿದ್ದರೂ, ವಾಯುವಿನಲ್ಲಿ ಮೋಟಾರು ಬಂಡಿ ಅಥವಾ ಬೈಸಿಕಲ್ಲು ಚಲಿಸುವುದರಿಂದ

ವಿಮಾನ ವಾಯುಮಂಡಲಕ್ಕೆ ಏರಿದ ಕೂಡಲೆ ಅದರ ಚಲನೆಗಳನ್ನು ಚುಕ್ಕಾಣಿ, ಮೇಲೆತ್ತಿಗೆ (Elevator) ಮತ್ತು ರೆಕ್ಕೆಗಳಲ್ಲಿನ ಪಾರ್ಶ್ವನಿಯಂತ್ರಕ (Aileron)– ಇವುಗಳ ಸಹಾಯದಿಂದ ಹತೋಟಿಯಲ್ಲಿಟ್ಟುಕೊಳ್ಳಲಾಗುತ್ತದೆ. ವಿಮಾನದ ಬಾಲಕ್ಕೆ ಜೋಡಿಸಿರುವ ಚುಕ್ಕಾಣಿಯನ್ನು ತಿರುಗಿಸಿದಾಗ ಬಾಲದ ಮೊದಲ ಮೇಲ್ಮೈಯ ಮೇಲಣ ವಾಯುವಿನ ಒತ್ತಡವು ಬಾಲವನ್ನು ಎಡಕ್ಕೆ ತಳ್ಳುತ್ತದೆ; ಮತ್ತು ಇದರ ಪರಿಣಾಮವಾಗಿ ವಿಮಾನದ ಮೂಗು ಬಲಕ್ಕೆ ತಿರುಗುತ್ತದೆ. ಮೂಗನ್ನು ಎಡಕ್ಕೆ ತಿರುಗಿಸಬೇಕಾದಾಗ ಇದಕ್ಕೆ ವ್ಯತಿರಿಕ್ತವಾದ ವಿಧಾನವನ್ನು ಅನುಸರಿಸಲಾಗುತ್ತದೆ. ವಿಮಾನದ ಬಾಲಕ್ಕೆ ಜೋಡಿಸಿರುವ ಮತ್ತು ಸಮತಲ ಸ್ಥಿತಿಯಲ್ಲಿರುವ ಮೇಲೆತ್ತಿಗೆ ವಿಮಾನವನ್ನು ಮೇಲಕ್ಕೇರಿಸುವ ಅಥವಾ ಕೆಳಕ್ಕಿಳಿಸುವ ಕಾರ್ಯವನ್ನು ಮಾಡುತ್ತದೆ. ವಿಮಾನ ನಡಸುವನು ವಿಮಾನವನ್ನು ಏರಿಸಬೇಕೆಂದು ಇಷ್ಟಪಟ್ಟರೆ ಅವನು ಮೇಲೆತ್ತಿಗೆಯನ್ನು ಮೇಲ್ಮುಖಕ್ಕೆ ಓರೆಮಾಡುತ್ತಾನೆ. ಮೇಲೆತ್ತಿಗೆಯ ಚಪ್ಪಟೆಯಾದ ಮೇಲ್ಮೈ ವಾಯುವಿನ ಹರಿವಿನಿಂದ ಒತ್ತಲ್ಪಟ್ಟು, ಬಾಲ ಕೆಳಕ್ಕೆ ನೂಕಲ್ಪಡುತ್ತದೆ; ಇದರ ಪರಿಣಾಮವಾಗಿ ವಿಮಾನದ ಮೂಗು ಮೇಲೇಳುತ್ತದೆ. ಮೇಲೆತ್ತಿಗೆ ಎಷ್ಟು ಹೆಚ್ಚು ಕೋನದಲ್ಲಿ ಓರೆಯಾಗಿರುತ್ತದೆಯೊ ಅಷ್ಟು ಕಡಿದಾಗಿ ಯಂತ್ರ ಮೇಲೇರುತ್ತದೆ. ವಿಮಾನ ನಡಸುವವನು ಯಂತ್ರ ಇಳಿಯಬೇಕೆಂದು ಇಷ್ಟಪಟ್ಟರೆ, ಅವನು ಮೇಲೆತ್ತಿಗೆಯನ್ನು ಕೆಳಕ್ಕೆ ತಳ್ಳುತ್ತಾನೆ; ಆಗ ವಾಯುವಿನ ಒತ್ತಡ ಕೆಳಗಣ ಮೇಲ್ಮೈಯ ಮೇಲೆ ಬಿದ್ದು ಬಾಲವನ್ನು ಮೇಲಕ್ಕೆತ್ತುತ್ತದೆ; ಇದರ ಪರಿಣಾಮವಾಗಿ ವಿಮಾನದ ಮೂಗು ಕೆಳಮುಖವಾಗುತ್ತದೆ. ಇವೆರಡು ನಿಯಂತ್ರಕಗಳಲ್ಲದೆ, (ರೆಕ್ಕೆಯ ಚಲ ಭಾಗಗಳಿಂದ ಏರ್ಪಡಿಸಿರುವ) ಪಾರ್ಶ್ವ ನಿಯಂತ್ರಕವಿದೆ: ಇದು ಎಲ್ಲ ಪರಿಸ್ಥಿತಿಯಲ್ಲೂ ವಿಮಾನವನ್ನು ಸಮಮಟ್ಟದಲ್ಲಿ ಇಟ್ಟಿರಲು ನೆರವಾಗುತ್ತದೆ. ವಿಮಾನದ ಕಟ್ಟಡವನ್ನು ಪದರ ಹಲಗೆ, ರಟ್ಟು ಮತ್ತು ಅಲ್ಯೂಮಿನಿಯಂ– ಇವುಗಳಿಂದ ತಯಾರು ಮಾಡಲಾಗುತ್ತದೆ.

ಈ ರೀತಿ, ವಾಯುವಿಗಿಂತ ಭಾರವಾದ ವಿಮಾನದ ಹಾರಿಕೆಯ ಅದ್ಭುತವನ್ನು ಮನುಷ್ಯನು ಸಾಧಿಸಿದ್ದಾನೆ. ಪ್ರತಿಯೊಂದು ಬೀಳುವ ಎಲೆಯಲ್ಲೂ, ಪ್ರತಿಯೊಂದು ನೀರ ಪ್ರವಾಹದಲ್ಲೂ ವ್ಯಕ್ತಗೊಳ್ಳುವ ಭೂಮ್ಯಾಕರ್ಷಣಶಕ್ತಿಯನ್ನು ಗೆಲ್ಲಲಾಗಿದೆ. ಅದ್ಭುತವಾದ ಈ ನಿರ್ಮಾಣಕ್ಕೆ ಈ ಶಾಖೆಯಲ್ಲಿ ಮೊದಲಿಗರಾಗಿದ್ದ ರೈಟ್ (Wright) ಸೋದರರಿಗೆ ನಾವು ಋಣಿಗಳಾಗಿದ್ದೇವೆ; ಅವರು ೧೯೦೩ನೆಯ ಇಸವಿ ಡಿಸೆಂಬರ್ ೧೭ರಲ್ಲಿ ಅಂತಹ ವಿಮಾನದಲ್ಲಿ ಯಶಸ್ವಿಯಾಗಿ ಹಾರಿದರು. ಈ ಪ್ರತಿಭಾಶಾಲಿಗಳಿಗೆ ನಮ್ಮ ಅಭಿವಂದನೆಗಳು ಸಲ್ಲಬೇಕು. ಮೊದಲನೆಯ

ಹಿಂದಕ್ಕೆ ತಳ್ಳಿ, ಹುಟ್ಟುಗಳು ನೀರನ್ನು ಪಕ್ಕಕ್ಕೆ ತಳ್ಳಿದಾಗ ದೋಣಿ ಹೇಗೆ ಮುಂದುವರಿಯುತ್ತದೆಯೊ ಹಾಗೆ ವಿಮಾನದೊಡನೆ ಮುಂದಕ್ಕೆ ನುಗ್ಗಿ ಹೋಗುತ್ತದೆ. ಹೀಗೆ ರೆಕ್ಕೆಗಳಿಗೂ ಅವುಗಳ ಸುತ್ತಲೂ ಇರುವ ವಾಯುವಿಗೂ ಪರಸ್ಪರ ಸಂಬಂಧವುಳ್ಳ ಚಲನೆಯೊಂದು ಉಂಟಾಗುವ ರೀತಿಯಲ್ಲಿ ವಿಮಾನವು ವೇಗವಾಗಿ ಚಾಲನೆಗೊಂಡರೆ, ರೆಕ್ಕೆಗಳು ವಾಯುವನ್ನು ಒತ್ತತೊಡಗುವುವು. ವೇಗ ಹೆಚ್ಚಿದಂತೆಲ್ಲ ಈ ಒತ್ತಡವೂ ಹೆಚ್ಚುತ್ತ ಹೋಗಿ, ಕಡೆಗೆ ಒತ್ತಡ ಅತ್ಯಂತ ಹೆಚ್ಚಿದಾಗ ರೆಕ್ಕೆಗಳನ್ನು ಮೇಲಕ್ಕೆತ್ತಲು ಬೇಕಾದ ಒತ್ತಡವನ್ನು ಪಡೆಯುವವರೆಗೂ ಅದು ಸ್ವಲ್ಪ ದೂರ ನೆಲದ ಮೇಲೆ ಓಡಬೇಕಾಗಿರುವುದು. ಈ ಕಾರಣದಿಂದ. ವಿಮಾನದ ರೆಕ್ಕೆಗಳಿಗೂ ಸಮತಲಕ್ಕೂ ನಡುವಣ ಕೋನಕ್ಕೆ ಆಪಾತ ಕೋನ (Angle of incidence) ಎಂದು ಹೆಸರು. ವಿಮಾನದ ಬಹುಮಟ್ಟಿನ ಮೇಲೇರುವ ಸಾಮರ್ಥ್ಯ ಈ ಕೋನಕ್ಕೆ ಅಧೀನವಾಗಿದೆ.

ಹಾಗಾದರೆ, (ಫಲಕ) ವಿಮಾನ (Aeroplane) ಹಾರುವುದು ಹೇಗೆ, ಅದನ್ನು ಕಟ್ಟುವುದು ಹೇಗೆ? (ಫಲಕ) ವಿಮಾನವು ವಾಯುಪ್ರವಾಹಕ್ಕೆ ಅತ್ಯಂತ ಕಡಮೆಯ ನಿರೋಧವನ್ನು ಒಡ್ಡುವ ದೀರ್ಘವೃತ್ತಾಕಾರದ ಒಂದು ಒಡಲು; ಸಮತಲಕ್ಕೆ ನಿರ್ದಿಷ್ಟ ಕೋನದಲ್ಲಿರುವಂತೆ ಎರಡು ಚಪ್ಪಟೆಯಾದ ರೆಕ್ಕೆಗಳನ್ನು ಈ ಒಡಲಿಗೆ ಜೋಡಿಸಿರುತ್ತದೆ. ಒಡಲಿನ ಮುಂಭಾಗದಲ್ಲಿ ಒಂದು ಎಂಜಿನ್ನೂ ಒಂದು ಚಾಲಕವೂ ಇವೆ. ಮೊದಲು, ಎಂಜಿನ್ನು ಚಾಲಕವನ್ನು ತಿರುಗಿಸುತ್ತದೆ. ಚಾಲಕದ ತಿರುಗುವಿಕೆಯಿಂದ ವಾಯು ಪಕ್ಕಕ್ಕೆ ತಳ್ಳಲ್ಪಟ್ಟು ವಿಮಾನವು ವಾಯುವಿನಲ್ಲಿ ತೇಲುತ್ತ ಹೋಗತೊಡಗುತ್ತದೆ. ವಿಮಾನ ನೆಲದಮೇಲೆ ಸಾಕಷ್ಟು ವೇಗವನ್ನು ಹೊಂದಿದಾಗ ಸುತ್ತಣ ವಾಯುವಿಗೂ ರೆಕ್ಕೆಗಳಿಗೂ ಪರಸ್ಪರ ಸಂಬಂಧವುಳ್ಳ ಚಲನೆಯೊಂದು ಉಂಟಾಗುತ್ತದೆ. ಇದರ ಪರಿಣಾಮವಾಗಿ ವಾಯು ರೆಕ್ಕೆಗಳನ್ನು ಒತ್ತುತ್ತದೆ; ಕಡೆಯಲ್ಲಿ ಈ ಒತ್ತಡ ಅತ್ಯಂತ ಹೆಚ್ಚಿ ರೆಕ್ಕೆಗಳು ವಾಯುವಿನಲ್ಲಿ ಮೇಲಕ್ಕೆ ತಳ್ಳಲ್ಪಡುತ್ತವೆ. ರೆಕ್ಕೆಗಳು ವಿಮಾನವನ್ನು ತಮ್ಮೊಡನೆ ಒಯ್ಯುತ್ತವೆ. ಇದೇ ವಿಮಾನದ ಹಾರಿಕೆ ಮೊದಲಾಗುವ ರೀತಿ. ಮೇಲಕ್ಕೆ ಎತ್ತಲ್ಪಟ್ಟ ವಿಮಾನದ ಒಟ್ಟು ತೂಕ ರೆಕ್ಕೆಯ ಮೇಲ್ಮೈಯ ಒಟ್ಟು ಕ್ಷೇತ್ರಕ್ಕೆ ವಿಸ್ತಾರಕ್ಕೆ ಅಧೀನವಾಗಿದೆ ಯೆಂಬುದನ್ನು ನೆನಪಿನಲ್ಲಿಡಬೇಕು. ರೆಕ್ಕೆಯ ಕ್ಷೇತ್ರದ ಒಂದು ಚದರಡಿ ಸರಿಸುಮಾರಾಗಿ ಹನ್ನೆರಡು ಪೌಂಡುಗಳ ಭಾರವನ್ನು ಮೇಲಕ್ಕೆತ್ತುವ ಸಾಮರ್ಥ್ಯ ಹೊಂದಿದೆ.

ಟಪ್ಪಾಲುಗಳಿಗೂ ಹೆಚ್ಚಿನ ಸ್ಥಳಾವಕಾಶ ಸಾಧ್ಯವಾಗುತ್ತದೆ; ಏಕೆಂದರೆ, ಬೇಕಾಗಿರುವ ಉರುವಲು ಪಾತ್ರೆಗಳು ಸಣ್ಣವಾಗಿರಬಹುದು. ಎರಡನೆಯದಾಗಿ, ಮುಖ್ಯವಾಗಿ ವಿಮಾನಾಂಗಣಗಳು ಸಣ್ಣವಾಗಿದ್ದಾಗ, ವಿಮಾನವು ವಾಯುವಿಗೆ ಒಯ್ಯಬಲ್ಲ ಒಟ್ಟು ತೂಕದ ಮಿತಿ ವಿಮಾನ ನೆಲೆಬಿಟ್ಟು ಮೇಲಕ್ಕೇರುವ ಸ್ಥಿತಿಗತಿಗಳಿಗೆ ಅಧೀನವಾಗಿದೆ. ವಿಮಾನ ನೆಲದ ಮೇಲೆ ಓಡುತ್ತಿರುವಾಗ ಸಾಧಾರಣ ರೀತಿಯ ಚಾಲಕ ಚೆನ್ನಾಗಿ ಕೆಲಸ ಮಾಡುವುದಿಲ್ಲ ; ವಿಮಾನ ಮುಂಬರಿಯುವ ವೇಗ ಹಾರಿಕೆಯ ವೇಗಕ್ಕೆ ಸಮನಾಗಿದ್ದಾಗ ಮಾತ್ರ ಅದು ಚೆನ್ನಾಗಿ ಕೆಲಸ ಮಾಡುತ್ತದೆ. ಆದ್ದರಿಂದ, ವಿಮಾನ ನೆಲೆಬಿಟ್ಟು ಮೇಲೇರಲು ಓಡುವ ಓಟದ ಬಹುಭಾಗದಲ್ಲಿ, ಇರುವ ಎಲ್ಲ ಎಂಜಿನ್‌ಸಾಮರ್ಥ್ಯವನ್ನೂ ಉಪಯೋಗಿಸುವುದಕ್ಕೆ ಸಾಧ್ಯವಾಗದಿರಬಹುದು; ತುಂಬ ಹೊರೆಹೊತ್ತಿರುವ ವಿಮಾನಗಳು ನೆಲೆಬಿಟ್ಟು ಮೇಲಕ್ಕೆ ಹಾರಲಿ ಬಹು ದೂರ ಓಡಬೇಕಾಗಬಹುದು; ಇದು ಸಣ್ಣ ವಿಮಾನಾಂಗಣಗಳಲ್ಲಿ ಸಾಧ್ಯವಿಲ್ಲ.

ಬಹಳ ಗಮನಕೊಟ್ಟು ಬೇರೊಂದು ಏರ್ಪಾಡನ್ನು ಪರ್ಯಾಲೋಚನೆ ಮಾಡಲಾಗಿದೆ. ಅದೇನೆಂದರೆ, ಕಡಾಯಿಗಳಲ್ಲಿ ಪೆಟ್ರೋಲನ್ನು ಕಡಮೆ ಮಾಡಿ, ವಿಮಾನದ ಹೊರೆಯನ್ನೂ ಕಡಮೆಮಾಡಿ, ಆಕಾಶದಲ್ಲಿ ಹಾರುತ್ತಿರುವಾಗಲೇ ಮತ್ತೊಂದು ವಿಮಾನದ ಸಹಾಯದಿಂದ ಉರುವಲ ಸರಬರಾಯಿಯನ್ನು ಮತ್ತೆ ತುಂಬುವುದು. ಮತ್ತೆ ಉರುವಲು ತುಂಬುವ ಈ ವಿಧಾನ ಬಹಳ ಸುಲಭವಾದದ್ದು. ಎರಡನೆಯ ವಿಮಾನವೊಂದರಲ್ಲಿ ಉರುವಲಿನ ಸರಬರಾಯಿಯನ್ನು ಒಯ್ಯುವುದಕ್ಕಾಗಿ ವಿಶೇಷ ರೀತಿಯ ಕಡಾಯಿಗಳನ್ನು ಜೋಡಿಸಿರುತ್ತದೆ, ಮತ್ತು ಯಾವ ವಿಮಾನದ ಕಡಾಯಿಗಳಿಗೆ ಮತ್ತೆ ಉರುವಲು ತುಂಬಬೇಕೊ ಆ ಹಾರುತ್ತಿರುವ ವಿಮಾನದ ಮೇಲುಗಡೆ ಇದನ್ನು ಹಾರಿಸಲಾಗುತ್ತದೆ. ಒಂದು ಉದ್ದನೆಯ ಮೆತುಕೊಳವೆಯನ್ನು ಇಳಿಯಬಿಡಲಾಗುತ್ತದೆ; ಇದನ್ನು ಕೆಳಗಿನ ವಿಮಾನದಲ್ಲಿನ ವಿಮಾನ ನಡಸುವವರು ಉರುವಲಿನ ಕಡಾಯಿಗೆ ಒಯ್ಯುವ ಒಂದು ವಿಶೇಷ ಜೋಡಣೆಗೆ ಜೋಡಿಸುತ್ತಾರೆ. ಬಳಿಕ ತಿರುಪುಬಿರಡೆಯನ್ನು ತೆರೆಯಲಾಗಿ, ಗುರುತ್ವಾಕರ್ಷಣ ಶಕ್ತಿಯಿಂದ ಉರುವಲು ಮೇಲಣ ಯಂತ್ರದಿಂದ ಕೆಳಗಣ ಯಂತ್ರಕ್ಕ ಹರಿದು ಬರುತ್ತದೆ. ಇದುವರೆಗೆ ಸಾಮಾನ್ಯವಾಗಿ ಒಂದು ವಿಮಾನಾಂಗಣದ ಮೇಲೆ ಈ ವಿಧಾನವನ್ನು ನಡಸಿದೆ. ಈ ವಿಧಾನದಿಂದ ಒಂದು ವಿಮಾನಾಂಗಣದ ಮೇಲೆ ಅನೇಕ ದೂರಹಾರಿಕೆಗಳನ್ನು ಮಾಡಲಾಗಿದೆ. ಎಲ್ಲರ ಗಮನವನ್ನೂ ಸೆಳೆದ ಇಂತಹ

ರೈಟ್ ವಿಮಾನ ೧೨ರಿಂದ ೧೫ ಅಶ್ವಸಾಮರ್ಥ್ಯದ ಎಂಜಿನ್ನಿನ ಸಹಾಯದಿಂದ ಹಾರಿತು; ಅದು ಗಂಟೆಗೆ ಸುಮಾರು ೩೫ ಮೈಲಿಗಳ ವೇಗದಲ್ಲಿ ಹೋಗುತ್ತಿತ್ತು. ಅಲ್ಲಿಂದೀಚೆಗೆ ೪೦ ವರ್ಷಗಳ ಅವಧಿಯಲ್ಲಿ ವಿಮಾನಪ್ರಯಾಣದಲ್ಲಿ ಆಗಿರುವ ಅಭಿವೃದ್ಧಿ ವಿಜ್ಞಾನದ ಇತಿಹಾಸದಲ್ಲಿ ಅದ್ವಿತೀಯವಾಗಿದೆ. ಈಗ, ಗಂಟೆಗೆ ೩೦೦ ಮೈಲಿಗಳ ವೇಗದಲ್ಲಿ ಹಾರುತ್ತ ೧೬೯ ಪ್ರಯಾಣಿಕರನ್ನು ಒಯ್ಯುವ ಸಾಮರ್ಥ್ಯವುಳ್ಳ ವಿಮಾನಗಳಿವೆ.

೪೦ ವರ್ಷಗಳ ಅವಧಿಯಲ್ಲಿ ಆಗಿರುವ ಈ ಆಶ್ಚರ್ಯಕರವಾದ ಅಭಿವೃದ್ಧಿಗೆ ಕಳೆದ ಮಹಾಯುದ್ಧ ಬಹುಮಟ್ಟಿಗೆ ಕಾರಣ. ವಿಜ್ಞಾನದ ಅಭಿವೃದ್ಧಿಗೆ ಯುದ್ಧ ಅತ್ಯಂತ ದೊಡ್ಡ ಪ್ರೇರಕಶಕ್ತಿಯಾಯಿತು. ಯುದ್ಧದ ನಾಲ್ಕು ವರ್ಷಗಳೂ ಪ್ರತಿಯೊಂದು ರಣಕ್ಷೇತ್ರದಲ್ಲಿಯೂ ವಿಮಾನಬಲದಲ್ಲಿ ಮೇಲುಗೈಯಾಗಲು ಪ್ರತಿಯೊಂದು ಜನಾಂಗವು ಈ ಘೋರವಾದ ಹೋರಾಟಕ್ಕಾಗಿ ರಕ್ತ, ಸಾಮಗ್ರಿ ಮತ್ತು ಸಂಪತ್ತುಗಳನ್ನು ಲಕ್ಷ್ಯವಿಲ್ಲದೆ ಸುರಿಯಿತು. ಆ ವರ್ಷಗಳಲ್ಲಿ ಮಾಡಿದ ನೂತನ ನಿರ್ಮಾಣಗಳ ಮತ್ತು ಪಡೆದ ಅನುಭವದ ಫಲವಾಗಿ ಯುದ್ಧ ನಿಂತ ಕೂಡಲೆ ಹಿಂದಿನದನ್ನು ಮೀರಿಸಿದ ಅನೇಕ ವಿಮಾನ ಹಾರಿಕೆಗಳು ನಡೆದುವು. ಸಣ್ಣ ಪ್ರಮಾಣದ ಪ್ರಯೋಗಗಳ ಹವ್ಯಾಸವಾಗಿದ್ದ ವಿಮಾನ ಪ್ರಯಾಣವನ್ನು ಯುದ್ಧ ಭೂತಾಕಾರಕ್ಕೆ ಬೆಳೆಯಿಸಿತು. ಆರ್ಥಿಕ ಸಾಮರ್ಥ್ಯವನ್ನು ಲಕ್ಷಿಸದೆ, ದ್ರವ್ಯವನ್ನೂ ಸಾಮಗ್ರಿಯನ್ನೂ ಧಾರಾಳವಾಗಿ ವೆಚ್ಚ ಮಾಡಿದ ಹಾಗೆಲ್ಲ ವಿಮಾನ ತಯಾರಿಕೆಯ ವಿಧಾನಗಳು ಬೇಕಾದಷ್ಟು ಮುಂದುವರಿದುವು. ಆ ವರ್ಷಗಳಲ್ಲಿ ವಿಮಾನ ಪ್ರಯಾಣ ಬೇಕಾದಷ್ಟು ಮುಂದುವರಿಯಿತು; ಆದರೆ ಯುದ್ಧ ಮುಗಿದ ಕೂಡಲೆ ಅದು ಒಂದು ಕ್ರಮವಾದ ರೀತಿಯಲ್ಲಿ ಮುಂದುವರಿಯುತ್ತ ಬಂತು.

**ವಿಮಾನಗಳಿಗೆ ಮರಳಿ ಉರುವಲು ತುಂಬುವುದು**

ವಿಮಾನಗಳು ತಮ್ಮ ಉರುವಲಿನ ಸರಬರಾಯಿ ಮುಗಿಯುವುದಕ್ಕೆ ಮುಂಚೆ ವಿಮಾನಾಂಗಣಕ್ಕೆ (Aerodrome) ಬಂದಿಳಿಯುವುದು ಸಾಮಾನ್ಯ ಪದ್ಧತಿ, ಆದರೆ ಇನ್ನು ಮುಂದೆ, ಮುಖ್ಯವಾಗಿ ಬಹುದೂರ ಹಾರಬೇಕಾದ ಸಂದರ್ಭಗಳಲ್ಲಿ, ಈ ಪದ್ಧತಿಯೇ ನಡೆದುಕೊಂಡು ಬರುತ್ತದೆಂಬುದು ಸ್ಥಿರವಲ್ಲ. ಮಾರ್ಪಾಟು ಸಾಧ್ಯವೆಂಬುದಕ್ಕೆ ಕಾರಣಗಳು ಎರಡು ; ಮೊದಲನೆಯದಾಗಿ, ವಿಮಾನ ಹೊರಬೇಕಾದ ಉರುವಲು ಎಷ್ಟು ಕಡಮೆಯಾಗಿರುತ್ತದೆಯೊ ಅಷ್ಟೊ ಅಷ್ಟು ಹೆಚ್ಚಿನ ಉಪಯುಕ್ತವಾದ ಹೇರು ಹಿಡಿಸುವುದಲ್ಲದೆ ಸಾಮಾನುಗಳಿಗೂ

ವಿಮಾನದ ಹತೋಟಿಯೂ ಸ್ವಭಾವ ಪರಿಚಯವೂ ಉಂಟಾಗುತ್ತವೆ. ಈ ಉದ್ದೇಶಕ್ಕಾಗಿರಿಸಿದ ಜಾರುವಿಮಾನಗಳು ಆಕಾಶದಲ್ಲಿ ಅಲ್ಪಾವಧಿಕಾಲ ಇರುವುದಕ್ಕಾಗಿ ರಚಿಸಲ್ಪಟ್ಟಿವೆ. ಇಳಿಜಾರಿನ ನೆತ್ತಿಯಿಂದ ಅವನ್ನು ತೇಲಿಬಿಟ್ಟಾಗ ಅವು ನಿಧಾನಗತಿಯಿಂದ, ಸರಿಸುಮಾರಾದ ಜಾರುಕೋನದಲ್ಲಿ ಮುಂದಕ್ಕೆ ಇಳಿಯುತ್ತವೆ. ಕ್ರಮಕ್ರಮವಾಗಿ ಹೆಚ್ಚು ಕಾಲ ಹಾರುತ್ತ ಅನೇಕ ಸಲ ಈ ಮಾದರಿಯಲ್ಲಿ ಹಾರಿದ ಮೇಲೆ ವಿಮಾನ ನಡಸುವವನು ಮೇಲಕ್ಕೇರುವ ಯಂತ್ರದಲ್ಲಿ ಹಾರುತ್ತಾನೆ. ಇವುಗಳಿಗೆ ವಿಸ್ತಾರವಾದ ಕ್ಷೇತ್ರವುಳ್ಳ ರೆಕ್ಕೆಗಳೂ ವಾಯುಪ್ರವಾಹಕ್ಕೆ ಅತ್ಯಂತ ಕಡಮೆಯ ನಿರೋಧವನ್ನೊಡ್ಡುವ ಒಡಲೂ ಇವೆ; ಹೀಗಿರುವುದರಿಂದ, ಒಂದು ಗುಡ್ಡದ ಗಾಳಿ ಬೀಸುವ ಪಕ್ಕದಿಂದ ಇವನ್ನು ತೇಲಬಿಟ್ಟರೆ ತಕ್ಕಮಟ್ಟಿಗೆ ದೀರ್ಘಕಾಲ ಹಾರುತ್ತಿರಬಹುದು. ವಿಮಾನ ನಡಸುವವನು ಮೇಲ್ಗಾಳಿಯ ಪ್ರದೇಶಗಳಲ್ಲಿ ಇರಬಲ್ಲನಾದರೆ ಆಗ ಮೇಲಕ್ಕೇರುವುದೂ ಸಾಧ್ಯ. ಅತ್ಯಂತ ಅನುಕೂಲವಾದ ವಾಯುವಿನ ಮೇಲ್‌ಪ್ರವಾಹಗಳು ಎಲ್ಲೆಲ್ಲಿ ಇರುತ್ತವೆ ಎಂಬುದನ್ನೂ ಅವುಗಳೊಳಗೇ ಇರಲಾಗುವಂತೆ ಹಾರುವ ಸರಿಯಾದ ವಿಧಾನವನ್ನೂ ಹೆಚ್ಚಾಗಿ ಅನುಭವಕ್ಕೆ ತಂದುಕೊಂಡಂತೆಲ್ಲ ವಿಮಾನ ನಡಸುವವನು ಅನಿರ್ದಿಷ್ಟ ಕಾಲ ಮೇಲುಮೇಲಕ್ಕೆ ಏರಬಲ್ಲವನಾಗಿರುತ್ತಾನೆ.

ಜಾರುಹೀರಿಕೆಯಲ್ಲಿ ಉತ್ಸಾಹವುಳ್ಳವರೆಲ್ಲರ ಗುರಿ ಎಂದರೆ ನಿಜವಾದ ತೇಲುಹಾರಿಕೆ; ಬಹು ಮೇಲಾದ ಸಾಮರ್ಥ್ಯವಿರುವಂತೆ ಕಟ್ಟಿದ ಯಂತ್ರಗಳಲ್ಲಿ ಈ ಬಗೆಯ ಹಾರಿಕೆ ಹಾರಲಾಗುತ್ತದೆ. ಈ ಬಗೆಯ ಜಾರುವಿಮಾನಗಳಿಗೆ ಅನೇಕ ವೇಳೆ ನೂರು ಅಡಿಗಳಷ್ಟು ವಿಸ್ತಾರವಾದ ಅಡ್ಡಗಲದ ಮತ್ತು ಬಹು ಸೂಕ್ಷ್ಮವಾಗಿ ಚೂಪಾಗುತ್ತ ಹೋಗುವ ರೆಕ್ಕೆಗಳುಂಟು. ವಾಯುಪ್ರವಾಹಕ್ಕೆ ಸ್ವಲ್ಪವೂ ನಿರೋಧವನ್ನೊಡ್ಡದ ಒಡಲೊಂದು ಈ ರೆಕ್ಕೆಗಳಿಗೆ ಆಧಾರವಾಗಿರುತ್ತದೆ. ನಿಶ್ಚಲ ವಾಯುಮಂಡಲದಲ್ಲಿ ಈ ಯಂತ್ರಗಳು ಬಹುಮಟ್ಟಿಗೆ ಸಮತಲದಲ್ಲೇ ಜಾರಬಲ್ಲವು. ಮತ್ತು ಇವು ಮೇಲೇರಲು ಅತ್ಯಂತ ಸೂಕ್ಷ್ಮ ಮೇಲ್‌ಪ್ರವಾಹಗಳು ಸಾಕು. ಕಳೆದ ೨೦ ವರ್ಷಗಳಲ್ಲಿ ಮೋಟಾರಿಲ್ಲದ ವಿಮಾನ ಹಾರಿಕೆಯಿಂದ ಬಹಳ ಪ್ರಯೋಜನ ವುಂಟಾಗಿದೆ. ೧೯೨೨ರಿಂದ ಈಚೆಗೆ ಹಾರಿಕೆಯ ಅತ್ಯಂತ ಹೆಚ್ಚಿನ ಅವಧಿ ೨ ಗಂಟೆಗಳ ಕಾಲದಿಂದ ೩೬ ಗಂಟೆ ೩೫ ನಿಮಿಷಗಳ ಕಾಲಕ್ಕೆ ಹೆಚ್ಚಿದೆ; ಸರಳರೇಖೆಯಲ್ಲಿ ಅಳೆದ ಅತ್ಯಂತ ಹೆಚ್ಚಿನ ದೂರ ೮ರಿಂದ ೧೬೫ ಮೈಲಿಗಳಿಗೆ ಹೆಚ್ಚಿದೆ; ಅತ್ಯಂತ ಹೆಚ್ಚಿನ ಎತ್ತರ (ಸಮುದ್ರ ಮಟ್ಟದ ಮೇಲೆ) ೩೪೦ ಅಡಿಗಳಿಂದ ೧೨,೩೬೧ ಅಡಿಗಳವರೆಗೆ ಹೆಚ್ಚಿದೆ.

ಮೊದಲ ಹಾರಿಕೆಯನ್ನು ಅಮೆರಿಕದ ಸಂಯುಕ್ತ ಸಂಸ್ಥಾನಗಳ 'ಪ್ರಶ್ನೆ ಚಿಹ್ನೆ (Question Mark) ಎಂಬ ವಿಮಾನ ೧೯೨೭ರಲ್ಲಿ ಹಾರಿತು; ಅದು ೧೪ ದಿನಗಳಿಗಿಂತ ಹೆಚ್ಚುಕಾಲ ಕೆಳಗಿಳಿಯದೆ ಹಾರುತ್ತಲೇ ಇತ್ತು.

ವಾಯು ಹಡಗುಗಳಿಗೆ ಆಕಾಶದಲ್ಲಿ ಮತ್ತೆ ಉರುವಲು ತುಂಬುವ ಪ್ರಶ್ನೆಯನ್ನು ವಿಚಾರಮಾಡಿದೆ; ಆದರೆ ಕಾರ್ಯತಃ ಪರೀಕ್ಷಿಸಿಲ್ಲ. ಕೆಲಸ ಮಾಡುತ್ತಿರುವ ಒಂದೇ ಒಂದು ವಾಯು ಹಡಗಾದ ಗ್ರಾಫ್ ಜೆಪ್ಲಿನ್ ಎಂಬುದಕ್ಕೆ, ಅದು ಪ್ರಯಾಣ ಗಳನ್ನು ಮುಗಿಸಿದ ಕಡೆಯಲ್ಲಿ ಕೂವೆಗಳಿಗೆ ಬಿಗಿದಿರುವಾಗ ಮತ್ತೆ ಉರುವಲನ್ನು ತುಂಬುತ್ತಿದೆ.

**ಜಾರುವಿಮಾನ (Glider):** ವಾಯುವಿಗಿಂತ ಭಾರವಾದ ವಿಮಾನಗಳ ವಿಚಾರ ಮಾಡುತ್ತಿರುವಾಗ ಜಾರು ವಿಮಾನದ ಪರಿಶೀಲನೆ ಮಾಡುವುದು ಮುಖ್ಯವೋ ಸ್ವಾರಸ್ಯವುಳ್ಳದೂ ಆಗಿದೆ. ಜಾರುವಿಮಾನ ಎಂಜಿನ್ನಿಲ್ಲದ, ಸ್ಥಿರ ರೆಕ್ಕೆಗಳುಳ್ಳ ವಿಮಾನ. ಬರುಬರುತ್ತಾ ಎತ್ತರ ಕಡಮೆಯಾಗುವ ಸ್ವತಂತ್ರ ಹಾರಿಕೆಗಳಲ್ಲಿ ಅದನ್ನು ಉಪಯೋಗಿಸಲಾಗುತ್ತದೆ. ವಾಯುವಿಗಿಂತ ಭಾರವಾದ ಕಾಯವೊಂದನ್ನು ಆಕಾಶದಲ್ಲಿ ತೇಲಿಬಿಟ್ಟಾಗ, ಅದಕ್ಕೆ ವಿಸ್ತಾರವಾದ ಮೇಲ್ಮೈ ಕ್ಷೇತ್ರವಿದ್ದರೆ ಅದು ಆಕಾಶದಲ್ಲೇ ಇರಬಲ್ಲದೆಂಬುದು ಹಕ್ಕಿಗಳ ಮತ್ತು ಗಾಳಿಪಟದ ಉದಾಹರಣೆಯಿಂದ ಸ್ಪಷ್ಟವಾಗಿದೆ. ಅದೇ ರೀತಿಯಲ್ಲಿ, ಜಾರುವಿಮಾನದ ರೆಕ್ಕೆಯ ಮೇಲ್ಮೈ ವಿಸ್ತಾರವು, ಗಾಳಿಯ ವೇಗ ಸಾಧಾರಣವಾಗಿರುವಾಗ, ವಿಮಾನದ ಭಾರವನ್ನು ಆಕಾಶದಲ್ಲಿ ಹೊರಲು ತಕ್ಕಷ್ಟು ದೊಡ್ಡದಾಗಿರುವಂತೆ ಜಾರುವಿಮಾನದ ಸಂವಿಧಾನವನ್ನು ಗೊತ್ತುಮಾಡಲಾಗಿದೆ. ಈ ಜಾರುವಿಮಾನಗಳನ್ನು ಗುಡ್ಡಗಳ ಮೇಲಿಂದ ಇಲ್ಲವೆ ಬೇರೆಯ ಎತ್ತರವಾದ ಸ್ಥಳಗಳಿಂದ ತೇಲಬಿಡಲಾಗುತ್ತದೆ. ಈ ವಿಮಾನಗಳನ್ನು ಮುಂದಕ್ಕೆ ನಡೆಸಿಕೊಂಡು ಹೋಗುವುದಕ್ಕೆ ಎಂಜಿನ್ನುಗಳಿಲ್ಲದಿರುವುದರಿಂದ ಅವು ನಿಧಾನವಾಗಿ ಭೂಮಿಯ ಕಡೆಗೆ ಕೆಳಕ್ಕೆ ಬರುತ್ತವೆ. ಆದರೆ ಗಾಳಿ ಬೀಸುತ್ತಿದ್ದ ಪಕ್ಷದಲ್ಲಿ ಅವು ಗಾಳಿ ಬೀಸುವ ದಿಕ್ಕಿನಲ್ಲೇ ಮುಂದಕ್ಕೆ ಹಾರಿ ಹೋಗುತ್ತವೆ, ಮತ್ತು ಬಹಳ ದೀರ್ಘವಾದ ಆಕಾಶದಲ್ಲೇ ಇರುತ್ತವೆ. ಸಮತಲಕ್ಕೂ ಪ್ರಮಾಣಭೂತವಾದ ವಾತಾವರಣದಲ್ಲಿ ಜಾರುವಿಮಾನ ಸಂಚರಿಸುವ ಪಥಕ್ಕೂ ನಡುವಣ ಕೋನಕ್ಕೆ ಜಾರುಕೋನ (Gliding angle) ಎಂದು ಹೆಸರು.

ಜಾರು ಹಾರಿಕೆಯನ್ನು ಮೂರು ಬಗೆಯಾಗಿ ವಿಂಗಡಿಸಬಹುದು: ಜಾರುವುದು, (ಹಾರುತ್ತ) ಮೇಲೇರುವುದು, ಮತ್ತು ತೇಲುವುದು, ಮೊದಲನೆಯದಾದ ಜಾರು ಹಾರಿಕೆಯಲ್ಲಿ ವಿಮಾನ ನಡಸುವವನಿಗೆ ಎಂಜಿನ್ನಿಲ್ಲದ

ಅವಲಂಬಿಸಬೇಕು. ಕಡೆಯದಾಗಿ, ಹಿತಕರವಾದ ವಿನೋದ ಕ್ರೀಡೆಯನ್ನು ವಿಜ್ಞಾನದ ಬೆಳವಣಿಗೆಗಾಗಿ ಉಪಯೋಗಿಸಿಕೊಳ್ಳುವುದರಿಂದ ಜಾರು ವಿಮಾನ ಹಾರಿಕೆಯಲ್ಲಿ ವಿನೋದ ಕ್ರೀಡೆ, ಕೌಶಲ, ಮತ್ತು ವಿಜ್ಞಾನ– ಇವುಗಳ ಒಂದು ಅಪೂರ್ವವಾದ ಸಮ್ಮಿಳನವುಂಟಾಗಿದೆ.

* * * *

ಮೋಟಾರಿಲ್ಲದ ವಿಮಾನ ಹಾರಿಕೆಗಳ ಉಪಯೋಗ ಏನು, ಮುಖ್ಯತೆ ಏನು?– ಎಂದು ಕೇಳಬಹುದು. ಪಂದ್ಯದ ಮೋಟಾರು ಬಂಡಿಗಳ ಮತ್ತು ವೇಗದ ಸ್ಪರ್ಧೆಗಳಿಗಾಗಿ ಕಟ್ಟಿದ ವಿಮಾನಗಳ ಸಂಬಂಧವಾಗಿ ಇದೇ ತೆರದ ಪ್ರಶ್ನೆಗಳನ್ನು ಅನೇಕ ವೇಳೆ ಕೇಳಲಾಗಿದೆ. ಅಂಥ ಯಂತ್ರಗಳು ವಿಮಾನ ರಚನೆಯ ವಿಧಾನಗಳನ್ನು ಉತ್ತಮಪಡಿಸುತ್ತವೆ ಎಂಬುದೇ ಉತ್ತರ. ಮತ್ತು ಮೋಟಾರು ಬಂಡಿಗಳ ಮತ್ತು ಸಾಮಾನ್ಯ ಬಳಕೆಯ ವಿಮಾನಗಳ ರಚನೆಯಲ್ಲಿ ಹೆಚ್ಚಿನ ಆವಶ್ಯಕತೆಗಳನ್ನು ಪೂರಯಿಸಲು ಹೊಸ ತಯಾರಿಕೆಯ ವಿಧಾನಗಳು ಏರ್ಪಡುತ್ತವೆ. ತೇಲುವಿಮಾನಗಳು ಅಥವಾ ಜಾರುವಿಮಾನಗಳು ಅದೇ ಬಗೆಯ ಉದ್ದೇಶಕ್ಕೆ ಒದಗಿಬರುತ್ತವೆ. ವಾಣಿಜ್ಯ ವಿಮಾನಗಳಲ್ಲಿ ಮಿತವ್ಯಯ ಬಹು ಮುಖ್ಯ ಅಂಶ; ಆದ್ದರಿಂದ ಬೇರೆ ಬೇರೆ ಬಗೆಯ ವಿಮಾನಗಳ ತಯಾರಿಕೆಯ ಅನುಭವದಿಂದ ದೊರೆತ ಪ್ರಯೋಜನಗಳನ್ನು ಮುಖ್ಯವಾಗಿ ವಾಣಿಜ್ಯ ವಿಮಾನಗಳ ತಯಾರಿಕೆಗಾಗಿ ವಿನಿಯೋಗಿಸಲಾಗಿದೆ. ವಾಣಿಜ್ಯ ವಿಮಾನಗಳು ಏರುವಾಗ ಮತ್ತು ಇಳಿಯುವಾಗ ಬಹಳ ಸಣ್ಣ ಕೋನಗಳಲ್ಲಿ ಏರಿ ಇಳಿಯುವಂತೆ ರಚಿಸಿದರೆ ಒಂದು ಗೊತ್ತಾದ ಅಶ್ವ ಸಾಮರ್ಥ್ಯಕ್ಕೆ ಹೆಚ್ಚಿನ ಹಣ ದೊರೆಯುವ ಹೇರನ್ನು ಒಯ್ಯಲು ಸಾಧ್ಯವಾಗುತ್ತದೆ. ಇಲ್ಲವೆ, ಹೇರು ಇದ್ದಷ್ಟೆ ಇದ್ದು, ಹಿಂದೆ ಉಪಯೋಗಿಸುತ್ತಿದ್ದುದಕ್ಕಿಂತ ಸಣ್ಣ ಎಂಜಿನ್ನುಗಳನ್ನು ಉಪಯೋಗಿಸಬಹುದಾಗಿದೆ. ಎರಡನೆಯದಾಗಿ, ಜಾರುವಿಮಾನದಲ್ಲಿ ಹಾರುವ ಚಳವಳಿಯ ಫಲವಾಗಿ ಪ್ರಪಂಚದ ವಾಯುಯಾನ ಮತ್ತು ಪವನಶಾಸ್ತ್ರ ಸಂಬಂಧವಾದ ಜ್ಞಾನಭಂಡಾರ ತಕ್ಕಮಟ್ಟಿಗೆ ಹೆಚ್ಚಿದೆ. ಇವಲ್ಲದೆ, ವಿಮಾನದಲ್ಲಿ ಹಾರುವುದನ್ನು ಕಲಿಸುವುದಕ್ಕೂ ಆಕಾಶ ಯಾನದ ಅಭಿರುಚಿಯನ್ನು ಮುಂದುವರಿಸುವುದಕ್ಕೂ ಜಾರುವಿಮಾನದಲ್ಲಿ ಹಾರುವುದು ಅಮೂಲ್ಯವಾದ ಸಾಧನವಾಗಿದೆ. ವಿಮಾನ ನಡಸುವವರು ಹೆಚ್ಚು ಸ್ವಾಭಾವಿಕವಾಗಿ ವಿಮಾನದಲ್ಲಿ ಹಾರುವುದಕ್ಕೂ ತಾವು ಹಾರುವ ಆಕಾಶದ ವಿಷಯವಾಗಿ ಮೊದಲಿಗಿಂತ ಉತ್ತಮವಾದ ತಿಳಿವಳಿಕೆ ಪಡೆಯುವುದಕ್ಕೂ ಇದರಿಂದ ಸಾಧ್ಯ. ಇದುವರೆಗೆ ತಿಳಿಸಿದ ಪ್ರಯೋಜನಗಳನ್ನು ಬಿಟ್ಟರೂ, ಆಕಾಶದ ಮೇಲೇರುವುದೂ ಅದರಲ್ಲಿ ತೇಲುವುದೂ ಅತ್ಯಂತ ಮನೋರಂಜಕ ವಿನೋದ ಕ್ರೀಡೆಯಾಗಿದ್ದು, ಜನಾಂಗದ ತರುಣರಿಗೆ ಅತ್ಯಂತ ರುಚಿಸುವುದಾಗಿದೆ. ಆಕಾಶದಲ್ಲಿ ಮೇಲೇರುವ ವಿಮಾನಸಾರಥಿ (Pilot) ಏರುವ ವಾಯುಪ್ರವಾಹಗಳ ಪ್ರದೇಶ ಗಳೊಳಗೆ ಇರುವುದಕ್ಕೂ ಬಲಾತ್ಕಾರದಿಂದ ಕೆಳಕ್ಕಿಳಿದಾಗ ತಾನು ಮೊದಲಿದ್ದ ಎತ್ತರಕ್ಕೆ ಮತ್ತೆ ಏರುವುದಕ್ಕೂ ತನ್ನ ಸ್ವಂತ ವಿವೇಚನೆ, ಕೌಶಲಗಳನ್ನು

ಇನ್ನೊಂದು ಮುಖ್ಯ ವರ್ಗೀಕರಣ, ವಿಮಾನ ನೆಲದ ಮೇಲೆ ಇಳಿಯ ಬೇಕೆಂದು ಉದ್ದೇಶಿಸಿದೆಯೆ, ಕಡಲ ಮೇಲೆ ಇಳಿಯಬೇಕೆಂದು ಉದ್ದೇಶಿಸಿದೆಯೆ, ಕಡಲ ಮೇಲೆ ಇಳಿಯಬೇಕೆಂದು ಉದ್ದೇಶಿಸಿದೆಯೆ, ಇಲ್ಲವೆ ಎರಡರಮೇಲೂ ಇಳಿಯಬೇಕೆಂದು ಉದ್ದೇಶಿಸಿದೆಯೆ– ಎಂಬುದಕ್ಕೆ ಅನುಸಾರವಾಗಿದೆ. ಮೊದಲನೆಯದರ ಹೆಸರು ಭೂವಿಮಾನ, ಎರಡನೆಯ ತೆರದ ಹೆಸರು ಸಮುದ್ರ ವಿಮಾನ, ಮೂರನೆಯದು ಸ್ಥಲಜಲ ವಿಮಾನ. ಭೂವಿಮಾನದ ಒಡಲಿಗೆ (Hull) ಎರಡು ಗಾಲಿಗಳು ಜೋಡಿಸಿರುತ್ತವೆ; ಸಮುದ್ರದ ಮೇಲೆ ಇಳಿಯಲನು ಕೂಲವಾಗುವಂಥ ಸಮುದ್ರವಿಮಾನಕ್ಕೆ ಒಂದು (ಅಥವಾ ಎರಡು) ದೋಣಿಯಾಕಾರದ ಒಡಲಿರುತ್ತದೆ. ಸಾಗರಗಳ ಮೇಲೆ ಹಾರುವ ಪ್ರಯಾಣ ಗಳನ್ನು ಕೈಕೊಂಡಾಗ ಅಂಥ ಸಮುದ್ರ ವಿಮಾನಗಳನ್ನು ಅಥವಾ ಹಾರುಹಡಗುಗಳನ್ನು ಉಪಯೋಗಿಸಲಾಗುತ್ತದೆ. ಸ್ಥಲಜಲ ವಿಮಾನಗಳೂ ಸಮುದ್ರ ವಿಮಾನಗಳೆ; ಆದರೆ, ನೆಲದ ಮೇಲೂ ಇಳಿಯಲಾಗುವಂತೆ ಅವಕ್ಕೆ ಗಾಲಿಗಳೂ ಇರುತ್ತವೆ. ನೀರಿನ ಮೇಲೆ ಇಳಿಸಬೇಕಾದಾಗ ಈ ಗಾಲಿಗಳನ್ನು ಒಳಸೆಳೆಯ ಲಾಗುತ್ತದೆ.

ಕೆಲವು ವೇಳೆ ವಿಮಾನಗಳನ್ನು ಯಾವ ಉದ್ದೇಶಕ್ಕಾಗಿ ಉಪಯೋಗಿಸ ಲಾಗುತ್ತದೆ ಎಂಬುದನ್ನು ಅನುಸರಿಸಿಯೂ ಅವುಗಳ ವರ್ಗೀಕರಣ ಮಾಡುವುದುಂಟು. ಈ ಸಂದರ್ಭದಲ್ಲಿ, ಮುಖ್ಯ ವಿಭಾಗಗಳು; ಅಸೈನಿಕ ವಿಮಾನಗಳು ಮತ್ತು ಸೈನಿಕ ವಿಮಾನಗಳು. ಅಸೈನಿಕ ವಿಮಾನಗಳಲ್ಲಿ ಮೂರು ಒಳವಿಭಾಗಗಳುಂಟು: ಖಾಸಗಿ ವಿಮಾನಗಳು, ವಾಣಿಜ್ಯ ವಿಮಾನಗಳು, ಪಂದ್ಯದ ಅಥವಾ ವಿನೋದ ಕ್ರೀಡೆಯ ವಿಮಾನಗಳು. ಯುದ್ಧದಲ್ಲಿ ಉಪಯೋಗಿಸುವ ವಿಮಾನಗಳಿಗೆ ಯುದ್ಧ ಸನ್ನಾಹಗಳನ್ನು ಸಜ್ಜುಗೊಳಿಸಿರುತ್ತದೆ: 'ಟಾರ್ಪೆಡೊ ಗುಂಡು'ಗಳನ್ನು ಒಯ್ಯುವವಾದರೆ 'ಟಾರ್ಪೆಡೊ ವಾಹಕ'ಗಳೆಂದೂ, ನಗರಗಳ ಮೇಲೆ 'ಬಾಂಬು'ಗಳನ್ನು ಹಾಕುವದಾದರೆ 'ಬಾಂಬರು'(ಬಾಂಬು ಹಾಕುವ ವಿಮಾನ)ಗಳೆಂದೂ, ಶತ್ರು ವಿಮಾನಗಳನ್ನು ಅಡ್ಡಗಟ್ಟಿ ಅವುಗಳೊಡನೆ ಕಾದಾಡುವವಾದರೆ ಯುದ್ಧ ವಿಮಾನಗಳೆಂದೂ ಬೇರೆ ಬೇರೆ ಹೆಸರುಗಳು ಇವೆಲ್ಲವೂ ಭೂವಿಮಾನಗಳಾಗಿರಬಹುದು, ಸಮುದ್ರವಿಮಾನಗಳಾಗಿರಬಹುದು, ಇಲ್ಲವೆ ಸ್ಥಲಜಲ ವಿಮಾನಗಳಾಗಿರಬಹುದು.

# ಪ್ರಕರಣ ೩
# ವಾಯುಯಾನಗಳ ಮಾದರಿಗಳು

ವಾಯುಯಾನಗಳನ್ನು ಎರಡು ಮುಖ್ಯ ವರ್ಗಗಳಾಗಿ ವಿಂಗಡಿಸಬಹುದು. ವಾಯುವಿಗಿಂತ ಹಗುರವಾದವು, ಮತ್ತು ವಾಯುವಿಗಿಂತ ಭಾರವಾದವು. ಹಿಂದೆಯೇ ವಿವರಿಸಿರುವಂತೆ, ಇವು ಬೇರೆ ಬೇರೆ ತತ್ತ್ವಗಳಿಗನುಸಾರವಾಗಿ ಕಾರ್ಯ ಮಾಡುತ್ತವೆ. ಮುಂದೆ ಕೊಟ್ಟಿರುವ ಪಟ್ಟಿಯಲ್ಲಿ ಬೇರೆ ಬೇರೆ ಒಳವಿಭಾಗಗಳ ವಿವರಣೆಯಿದೆ:–




(ಫಲಕ) ವಿಮಾನಗಳನ್ನು ಕೆಲವು ವೇಳೆ ಅವುಗಳಿಗೆ ಜೋಡಿಸಿರುವ ಎಂಜಿನ್ನುಗಳಿಗೆ ಅನುಸಾರವಾಗಿ ವರ್ಗೀಕರಿಸಲಾಗುತ್ತದೆ. ಬಹುದೂರ ಪ್ರಯಾಣ ಮಾಡುವ ಕೆಲವು ಆಧುನಿಕ ವಿಮಾನಗಳಿಗೆ ಎರಡು, ಮೂರು ಅಥವಾ ನಾಲ್ಕು ಎಂಜಿನ್ನುಗಳಿರುತ್ತವೆ; ಇದರಿಂದ, ಒಂದು ಎಂಜಿನ್ನು ಕೆಟ್ಟುಹೋದರೆ ಉಳಿದವುಗಳ ಬಲದ ಮೇಲೆ ವಿಮಾನವನ್ನು ಹಾರಿಸುತ್ತಿರಬಹುದು. ಹೀಗೆ, ಎರಡು ಎಂಜಿನ್ನುಗಳಿದ್ದರೆ ಎರಡೆಂಜಿನ್ನಿನ ವಿಮಾನವೆಂದೂ ಮೂರು ಎಂಜಿನ್ನುಗಳಿದ್ದರೆ ಮೂರೆಂಜಿನ್ನಿನ ವಿಮಾನವೆಂದೂ ಹೆಸರು.

ರೂಪಗೊಳ್ಳುವ ಮೂರು ಬಿಳಿಯ ದೀಪಗಳಿಂದಾಗಲಿ ನಿರ್ದೇಶಿಸಬೇಕು; ಹೀಗೆ ಏರ್ಪಡಿಸಿದಾಗ ಕೆಳಕ್ಕಿಳಿಯುವ ವಿಮಾನ ಈ ತ್ರಿಕೋನದ ಆಧಾರರೇಖೆಗೆ ಸಮಕೋನಗಳಲ್ಲಿಯೂ ಮತ್ತು ಅದರ ಮಧ್ಯದಲ್ಲಿಯೂ ಇಳಿದು, ತ್ರಿಕೋನದ ಕೋಟಿ (ಅಗ್ರಭಾಗ)ಯನ್ನು ಮುಟ್ಟುವುದಕ್ಕೆ ಮುಂಚೆ ನೆಲೆನಿಲ್ಲುವಂತಿರಬೇಕು. (೩) ಗಾಳಿಯ ದಿಕ್ಕನ್ನು ಕೂವೆಯ ಮೇಲೆ ಏರಿಸಿದ ಗೋಚರವಾಗುವಂಥ ಗೋಳದ ಮೂಲಕ ನಿರ್ದೇಶಿಸಬೇಕು. (೪) ತಕ್ಕಷ್ಟು ಪ್ರಥಮ ಚಿಕಿತ್ಸೆಯ ಸಲಕರಣೆಗಳು ಕೈಗೆ ಸಿಕ್ಕುವಂತೆ ಸಿದ್ಧವಾಗಿರಬೇಕು. (೫) ವಿಮಾನ ರಾತ್ರಿಯ ಕಾಲದಲ್ಲಿ ಇಳಿಯುವುದೆಂಬ ನಿರೀಕ್ಷೆಯಿರುವಾಗ, ರಾತ್ರಿಯಲ್ಲಿ ಸಂಚರಿಸುವ ವಿಮಾನಗಳ ಉಪಯೋಗಕ್ಕಾಗಿ ತಕ್ಕ ಪ್ರವಾಹದೀಪಗಳೂ ಸಂಜ್ಞಾದೀಪಗಳೂ ಇರಬೇಕು.

ಬೇರೆ ಬೇರೆ ವಿಮಾನ ಪ್ರಯಾಣದ ಏರ್ಪಾಡುಗಳು ಮೊದಲಾಗುವ ಅಂತ್ಯ ವಿಮಾನಾಂಗಣದಲ್ಲಿ (Terminal Aerodrome) ಸಾಮಾನ್ಯವಾಗಿ ಆ ಏರ್ಪಾಡುಗಳನ್ನು ನಡಸುವ ಸಂಘಗಳ ಉಪಯೋಗಕ್ಕಾಗಿ ಆಡಳಿತ ಕಚೇರಿಗಳು ಇಲ್ಲವೆ ಟಿಕೆಟ್ಟುಮಾರುವ ಕಚೇರಿಗಳು ಇರುತ್ತವೆ. ಅಲ್ಲದೆ, ವಿಮಾನಗಳನ್ನು ಬಿಡುವುದಕ್ಕೆ ವಿಮಾನಖಾನೆಗಳೂ (Hangars) ಅವನ್ನು ಸರಿಯಾದ ಸ್ಥಿತಿಯಲ್ಲಿಟ್ಟುಕೊಳ್ಳುವುದಕ್ಕಾಗಿ ಸರಿಮಾಡುವ ಸ್ಥಳಗಳೂ ಮತ್ತು ವಿಮಾನ ಮಾರ್ಗ ಪ್ರಯಾಣಿಕರ ಉಪಯೋಗಕ್ಕಾಗಿ ವಿಶ್ರಾಂತಿ ಮತ್ತು ಉಪಾಹಾರ ಸೌಕರ್ಯಗಳೂ ಇರುತ್ತವೆ. ವಿಮಾನಗಳಿಗೆ ಉರುವಲು ಹಾಕಲು ಎಣ್ಣೆ ಮತ್ತು ಪೆಟ್ರೋಲ್ ಶೇಖರಣೆಗಳು ದೊರೆಯುತ್ತವೆ. ವಿಮಾನಾಂಗಣವನ್ನು ಅಂತರರಾಷ್ಟ್ರೀಯ ವಾಯುಪ್ರಯಾಣಗಳಿಗೆ ಉಪಯೋಗಿಸಿಕೊಳ್ಳುವ ಸಂದರ್ಭದಲ್ಲಿ, ಸುಂಕದ ಸೌಕರ್ಯಗಳೂ ಒದಗಿಸಲ್ಪಡುತ್ತವೆ. ಕ್ರಾಯ್‌ಡನ್ (Croydon) ವಿಮಾನಾಂಗಣ ಅತ್ಯಂತ ಸುಸಜ್ಜಿತವಾದ ಪ್ರಥಮ ದರ್ಜೆಯ ವಿಮಾನಾಂಗಣಕ್ಕೆ ಮಾದರಿಯಾದ ಉದಾಹರಣೆ. ಕರಾಚಿಯಲ್ಲಿರುವ ವಿಮಾನಾಂಗಣ ಸಹ, ಲಂಡನ್ನಿನಿಂದ ಆಸ್ಟ್ರೇಲಿಯಕ್ಕೆ ಹೋಗುವ ಬ್ರಿಟಿಷ್ ಸಮುದ್ರೋಪರಿ ವಾಯುಮಾರ್ಗಗಳ (The British Overseas Airways) ವಿಮಾನಗಳು ಅದನ್ನು ಉಪಯೋಗಿಸುವುದ ರಿಂದ, ತಕ್ಕಮಟ್ಟಿಗೆ ಸುಸಜ್ಜಿತವಾದ ಸ್ಥಳವಾಗಿದೆ.

ಖಾಸಗಿ ಉಪಯೋಗಕ್ಕಾಗಿ ಉದ್ದೇಶಿಸಿರುವ ವಿಮಾನಾಂಗಣಗಳಿಗೂ, ಪ್ರಯಾಣಿಕರನ್ನು ಒಯ್ಯುವ ವಾಣಿಜ್ಯ ವಿಮಾನಗಳು ಸಾಮಾನ್ಯವಾಗಿ ಉಪಯೋಗಿಸದ ವಿಮಾನಾಂಗಣಗಳಿಗೂ, ತುರ್ತಾಗಿ ವಿಮಾನಗಳನ್ನು

**ವಿಮಾನಾಂಗಣಗಳು**

ವಿಮಾನಗಳನ್ನು (ಅವು ಖಾಸಗಿಯಾಗಿರಲಿ, ವಾಣಿಜ್ಯ ಸಂಬಂಧದವಾಗಲಿ, ಸೈನಿಕ ಸಂಬಂಧದವಾಗಲಿ) ತಂಗಿಸುವುದಕ್ಕೂ ಹಾರಿಸುವುದಕ್ಕೂ ಉಪಯೋಗಿಸುವ ಹರವಾದ ಭೂಪ್ರದೇಶಗಳೆ ವಿಮಾನಾಂಗಣಗಳು. ಯಾವ ವಿಮಾನಾಂಗಣವೇ ಆಗಲಿ, ಅದನ್ನು ಸರಿಯಾದ ನಿವೇಶನದಲ್ಲಿ ಸ್ಥಾಪಿಸಬೇಕಾದುದು ಅತ್ಯಂತ ಆವಶ್ಯಕ. ಸಾಧಾರಣ ಅಳತೆಯ ವಾಯುಯಾನದ ಸಾಮಾನ್ಯ ಉಪಯೋಗಕ್ಕೆ ಬೇಕಾದ ಸ್ಥಳಾವಕಾಶ ನಾಲ್ಕೂ ಕಡೆಯೂ ಕಡೆಯ ಪಕ್ಷ ೬೦೦ ಗಜಗಳಿರಬೇಕು. ಪ್ರದೇಶ ಯಾವ ಅಡಚಣೆಯೂ ಇಲ್ಲದೆ ೬೦ರಿಂದ ೨೦೦ ಎಕರೆಗಳವರೆಗೂ ಇರಬೇಕು. ಹಾಗೂ, ವಿಮಾನ ಇಳಿಯುವುದಕ್ಕಾಗಿ ಕನಿಷ್ಠ ಪ್ರಮಾಣದ ಸ್ಥಳ ಮಾತ್ರ ಇದ್ದರೆ ಸಾಲದು. ಅದರ ಇಡಿಯ ಎಲ್ಲೆಕಟ್ಟಿನಲ್ಲಿ ಇರುವ ಅಡಚಣೆಗಳನ್ನೆಲ್ಲ ನಿರ್ಮೂಲ ಮಾಡಬೇಕು. ವಿಮಾನ ಯಾವ ಕೋನದಲ್ಲಿ ನೆಲಕ್ಕಿಳಿಯುತ್ತದೆಯೊ ಆ ಕೋನಕ್ಕಿಂತ ಹೆಚ್ಚಿನ ಎತ್ತರಕ್ಕೆ ಕಟ್ಟಡಗಳಾಗಲಿ ಮರಗಳಾಗಲಿ ತಂತಿಗಳಾಗಲಿ ಹೋಗಿರದಂತೆ ನೋಡಿಕೊಳ್ಳಬೇಕು; ಇದಕ್ಕೆ ಮೈದಾನದ ಸುತ್ತಲೂ ತಕ್ಕಮಟ್ಟಿಗೆ ಹೆಚ್ಚಿನ ಪ್ರದೇಶವನ್ನು ಕೊಂಡುಕೊಳ್ಳಬೇಕು, ಇಲ್ಲವೆ ಸ್ವಾಧೀನಪಡಿಸಿಕೊಳ್ಳಬೇಕು. ನೆಲ ಮಟ್ಟವಾಗಿಯೂ ನಯವಾಗಿಯೂ ಒಂದೇ ಸಮನಾಗಿಯೂ ಬಿದ್ದ ನೀರು ಚೆನ್ನಾಗಿ ಆಚೆಗೆ ಹರಿದುಹೋಗುವಂತೆಯೂ ಇರಬೇಕು. ಮಂಜಾಗಲಿ ಕೆಳಗೆ ತೇಲುವ ಮೋಡಗಳಾಗಲಿ ಅಷ್ಟಾಗಿ ಇಲ್ಲದಿರ ಬೇಕಾದದ್ದು ಮತ್ತೊಂದು ವಿಚಾರ.

ವಿಮಾನಗಳನ್ನು ಇಳಿಸುವುದಕ್ಕೆ ಉಪಯೋಗಿಸುವ ಎಲ್ಲ ವಿಮಾನಾಂಗಣ ಗಳೂ ಸನ್ನದು ಪಡೆದಿರುತ್ತವೆ. ಸನ್ನದು ಪಡೆದ ಎಲ್ಲ ವಿಮಾನಾಂಗಣಗಳೂ ವಿಮಾನ ಸಚಿವ ಶಾಖೆ (Air Ministry) ವಿಧಿಸುವ ಈ ಮುಂದಿನ ಷರತ್ತುಗಳಿಗೆ ಒಳಪಟ್ಟಿರಬೇಕು.

(೧) ವಿಮಾನಾಂಗಣದಿಂದ ೫೦೦ ಗಜಗಳ ದೂರದೊಳಗಿರುವ, ಹಾರುವುದಕ್ಕೆ ಅಪಾಯಕರವಾದ ಎಲ್ಲ ಅಡಚಣೆಗಳ ಮೇಲೂ ತಕ್ಕ ಸಂಜ್ಞೆಗಳನ್ನು ಹಾಕಬೇಕು. ರಾತ್ರಿಯ ಕಾಲದಲ್ಲಿ ವಿಮಾನ ಇಳಿಸುವ ನಿರೀಕ್ಷೆಯಿದ್ದರೆ, ವಿಮಾನಾಂಗಣದ ಎಲ್ಲ ಎಲ್ಲೆಕಟ್ಟನ್ನೂ ದೀಪಗಳ ಮೂಲಕ ಸ್ಪಷ್ಟವಾಗಿ ಕಾಣುವಂತೆ ಮಾಡಬೇಕು. ಅಲ್ಲದೆ, ಅಡಚಣೆಗಳನ್ನೂ ಸಹ ದೀಪಗಳ ಮೂಲಕ ಗುರುತು ಗೊತ್ತಾಗುವಂತೆ ಮಾಡಬೇಕು. (೨) ಇಳಿಯಬೇಕಾದ ದಿಕ್ಕುಗಳನ್ನು ಪ್ರಕಾಶಮಾನವಾದ T ಸಂಜ್ಞೆಗಳಿಂದಾಗಲಿ ಸಮದ್ವಿಬಾಹು ತ್ರಿಕೋನವಾಗಿ

ಸಾಗರದಲ್ಲಿ ಅಲ್ಲಲ್ಲಿ ಲಂಗರು ಬಿಟ್ಟ ತೇಲುವ ವಿಮಾನ ಬಂದರುಗಳನ್ನು ನೆಲೆಗೊಳಿಸಿರಲಾಗುತ್ತದೆ. ಇವಕ್ಕೆ ಸಮುದ್ರ ವಿಮಾನಾಂಗಣಗಳು ಅಥವಾ ತೇಲುದ್ವೀಪಗಳು ಎಂದು ಹೆಸರು. ಈ ದ್ವೀಪಗಳ ಉದ್ದ ಸಮಯ ೧೫೦೦ ಅಡಿಗಳು, ಅಗಲ ೩೦೦ ಅಡಿಗಳು. ಈ ದ್ವೀಪಕ್ಕೆ ಆಧಾರವಾಗಿ ಅಡಿಯಲ್ಲಿ ಕಂಬಗಳಿರುತ್ತವೆ. ವಿಮಾನವಿಳಿಯುವ ಅಟ್ಟದ ಕೆಳಗಡೆ ಹೋಟೆಲುಗಳೂ ನಿಸ್ತಂತು ವಾರ್ತಾಸ್ಥಳಗಳೂ (Wireless Stations) ವಿಮಾನ ಖಾನೆಗಳೂ ಪೆಟ್ರೋಲ್ ಸರಬರಾಯಿಯ ಏರ್ಪಾಡುಗಳೂ ಇರುತ್ತವೆ. ಕಡಲು ಎಷ್ಟೇ ಅಲೆಯೆದ್ದು ಹೊಯ್ದಾಡುತ್ತಿರಲಿ, ಸಮುದ್ರ ವಿಮಾನಾಂಗಣ ಸ್ವಲ್ಪವೂ ಉರುಳಾಡದಂತೆ ಇವುಗಳಿಗೆ ಲಂಗರು ಹಾಕಿರುತ್ತದೆ. ಕೆಲವು ವೇಳೆ ಸಾಗರ ಮಧ್ಯದಲ್ಲಿ ವಿಮಾನಗಳನ್ನು ಇಟ್ಟುಕೊಳ್ಳುವುದಕ್ಕೂ ಹಾರಿಸಿ ಇಳಿಸುವುದಕ್ಕೂ ದೊಡ್ಡ ಸಾಗರ ಪ್ರಯಾಣ ಜಹಜುಗಳನ್ನು ಉಪಯೋಗಿಸಲಾಗುತ್ತದೆ. ಇವುಗಳಿಗೆ ವಿಮಾನ ವಾಹಕ (ಹಡಗು) (Aircraft carrier)ಗಳೆಂದು ಹೆಸರು. ಇಂಥ ಹಡಗಿನ ಅಟ್ಟದ ಮೇಲೆ ವಿಮಾನಗಳು ಇಳಿಯುವುದಕ್ಕೂ ಹಾರುವುದಕ್ಕೂ ಏರ್ಪಾಡು ಮಾಡಿರುತ್ತದೆ. ಹಡಗಿನ ಅಟ್ಟದ ಸ್ಥಳಾವಕಾಶ ಎಷ್ಟೇ ಹೆಚ್ಚೆಂದರೂ ಕಡಮೆಯಾದ್ದರಿಂದ ವಿಮಾನವನ್ನು ಇಳಿಸಿ ಹಾರಿಸಬೇಕಾದರೆ ವಿಮಾನ ನಡಸುವವನಿಗೆ ತಕ್ಕಮಟ್ಟಿನ ಶಿಕ್ಷಣವೂ ಕೌಶಲವೂ ಅಗತ್ಯ. ಶತ್ರು ನಗರಗಳು ಸ್ವದೇಶದಲ್ಲಿನ ವಿಮಾನಾಂಗಣ ಗಳಿಂದ ಹೊರಡುವ 'ಬಾಂಬರು'ಗಳ ಸಂಚಾರವ್ಯಾಪ್ತಿಯ ಹೊರಗಿದ್ದಾಗ ಇಂಥ ವಿಮಾನಾಂಗಣಗಳನ್ನು ಬಹುಮಟ್ಟಿಗೆ ಸೈನಿಕ ಕಾರ್ಯಾಚರಣೆಗಳಿಗಾಗಿ ಉಪಯೋಗಿಸಲಾಗುತ್ತದೆ.

### ಉದ್ಯೋಗಿ ಮಂಡಲಿ (Personnel)

ವಿಮಾನವನ್ನು ನಿರ್ವಹಿಸುವುದು, ಹಾರಿಸುವುದು, ಮತ್ತು ನಡಸುವುದು– ಇವು ಕಷ್ಟದ ಕೆಲಸಗಳೆಂದೂ ಇವಕ್ಕೆ ವಿಶೇಷ ಶಿಕ್ಷಣ ಆವಶ್ಯಕವೆಂದೂ ವಾಚಕರಿಗೆ ಸ್ಪಷ್ಟವಾಗಿರಬೇಕು. ಈ ಉದ್ದೇಶಕ್ಕಾಗಿ, ಪ್ರತಿಯೊಂದು ದೇಶದಲ್ಲೂ ಅಸೈನಿಕ ಆಕಾಶಯಾನ ಇಲಾಖೆಗಳು ಅಥವಾ ಅಧಿಕೃತ ಸಂಸ್ಥೆಗಳು, ಆವಶ್ಯಕವಾದ ಶಿಕ್ಷಣವನ್ನು ಪಡೆದು ಸಂಸ್ಥೆ ವಿಧಿಸಿರುವ ವಿಶೇಷ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವ ವ್ಯಕ್ತಿಗಳಿಗೆ ಸನ್ನದುಗಳನ್ನು ಕೊಡುತ್ತವೆ. ಇಂಥ ಸನ್ನದುಳ್ಳ ವ್ಯಕ್ತಿಗಳಿಗೆ ಮಾತ್ರ ವಿಮಾನ ನಡಸುವ ಅವಕಾಶವುಂಟು. ಈ ಸಂಸ್ಥೆ ವಿವಿಧ ದರ್ಜೆಗಳ ಹತ್ತೊಂಬತ್ತು ಬೇರೆ ಬೇರೆ ಸನ್ನದುಗಳನ್ನು ಕೊಡುತ್ತದೆ. ವಿಮಾನಗಳು,

ಇಳಿಸಬೇಕಾದ ಪ್ರದೇಶಗಳಿಗೂ ಸನ್ನದು ಪಡೆಯಬೇಕಾಗಿಲ್ಲ. ಅಲ್ಲದೆ, ವಿಮಾನ ಸಚಿವ ಶಾಖೆ ವಿಧಿಸಿರುವ ಷರತ್ತುಗಳಿಗೆ ಅವು ಅವಶ್ಯಕವಾಗಿ ಒಳಪಟ್ಟಿರುವುದಿಲ್ಲ.

ವಿಮಾನಾಂಗಣಕ್ಕೆ ಕಲ್ಲು ಹಾಸಿದ್ದರೆ ಇಲ್ಲವೆ ಸಿಮೆಂಟು ಹಾಕಿದ್ದರೆ ವಿಮಾನಗಳನ್ನು ನಡಸುವುದಕ್ಕೆ ಅತ್ಯುತ್ತಮ. ಆದರೆ ಇಡಿಯ ವಿಮಾನಾಂಗಣವನ್ನು ಹೀಗೆ ರಚಿಸುವುದಕ್ಕೆ ಮಿತಿಮೀರಿದ ವೆಚ್ಚವಾಗುವುದರಿಂದ, ತಕ್ಕಂತೆ ಕಟ್ಟಿದ ಓಡುದಾರಿಗಳ (Runways) ಮೇಲೆ ವಿಮಾನ ಓಡುವಂತೆ ಮಾಡಲಾಗುತ್ತದೆ. ಈ ಓಡುದಾರಿಗಳು, ವಿಮಾನಗಳು ಇಳಿಯಲು ಮಾಡಿದ ಕಲ್ಲು ಹಾಸಿದ ದಾರಿಗಳು. ಮುಖ್ಯವಾಗಿ, ಮಳೆ ಬಿದ್ದು ವಿಮಾನಾಂಗಣ ಕೊಚ್ಚೆಯಾಗಿರುವಾಗ ಈ ಓಡುದಾರಿಗಳು ವಿಮಾನಗಳನ್ನಿಳಿಸಲು ತುಂಬ ಅನುಕೂಲ.

**ವಾಯುಹಡಗಿನ ವಿಮಾನಾಂಗಣಗಳು**

ಅಂತರರಾಷ್ಟ್ರೀಯ ಪ್ರಯಾಣದಲ್ಲಿ ತೊಡಗಿರುವ ವಾಯುಹಡಗುಗಳ ಉಪಯೋಗಕ್ಕಾಗಿ ಉದ್ದೇಶಿಸಿದ ವಿಮಾನಾಂಗಣಗಳಲ್ಲಿ ಮೇಲೆ ಹೇಳಿದ ಸೌಕರ್ಯಗಳ ಜೊತೆಗೆ ಒಂದು ಕಟ್ಟಿಹಾಕುವ ಕೂವೆ ಇರುತ್ತದೆ. ಈ ಕೂವೆ ೨೦೦ ಅಡಿಗಳ ಎತ್ತರದ ಉಕ್ಕಿನ ಜಂತೆಯ ಕಟ್ಟಡ. ಇದರ ತುದಿಗೆ ವಾಯುಹಡಗನ್ನು ತೂಗುಕಟ್ಟಿರುತ್ತದೆ. ಕೂವೆಯ ಮೇಲ್ಭಾಗಕ್ಕೆ ಎಣ್ಣೆ, ನೀರು ಮತ್ತು ಉರುವಲುಗಳ ಸರಬರಾಯಿಯನ್ನು ಕೊಳವೆಗಳ ಮೂಲಕ ಸಾಗಿಸುತ್ತದೆ. ಪ್ರಯಾಣಿಕರು ವಾಯುಹಡಗಿಗೆ ಹತ್ತುವುದಕ್ಕೂ ಅಲ್ಲಿಂದ ಇಳಿಯುವುದಕ್ಕೂ ಒಂದು ಎತ್ತಿಗೆ (Lift) ಇರುತ್ತದೆ. ಈ ವಿಮಾನಾಂಗಣಗಳಲ್ಲಿ ವಾಯುಹಡಗನ್ನು ತುಂಬಿ ಊದಿಸಲು ಆವಶ್ಯಕವಾದ ಅನಿಲವನ್ನು ಉತ್ಪತ್ತಿ ಮಾಡುವುದಕ್ಕಾಗಿ ಒಂದು ಅನಿಲ ತಯಾರಿಕೆಯ ಸ್ಥಳವೂ ಇರುತ್ತದೆ. ಈ ರೀತಿ ಸಜ್ಜಾದ ವಿಮಾನಾಂಗಣಗಳು ಕೆಲವು ಮಾತ್ರ. ಬ್ರಿಟನ್ನಿನಲ್ಲಿರುವ ಇಂತಹ ಒಂದೇ ಒಂದು ವಿಮಾನಾಂಗಣ, ಇಸ್ಮಾಲಿಯಾ, ಕರಾಚಿ, ಮೆಲ್ಬೋರ್ನ್– ಈ ಸ್ಥಳಗಳಲ್ಲಿನ ವಿಮಾನಾಂಗಣಗಳಲ್ಲಿ ಕಟ್ಟಿಹಾಕುವ ಕೂವೆಗಳು ಮಾತ್ರ ಇವೆ.

ಸಮುದ್ರ ವಿಮಾನಗಳಿಗೆ ಬೇಕಾದ ವಿಮಾನಾಂಗಣಗಳಲ್ಲಿ ಭೂಪ್ರದೇಶದ ಬದಲು ವಿಮಾನಗಳಿಳಿಯಬಹುದಾದ ತೆರಪಾದ ಜಲಪ್ರದೇಶವಿರುತ್ತದೆ. ಭೂವಿಮಾನಾಂಗಣಗಳಿಗೆ ಅನ್ವಯಿಸುವ ನಿಯಮಗಳೇ ಇವಕ್ಕೂ ಅನ್ವಯಿಸುತ್ತವೆ. ಸಾಗರ ಮೂಲಕ ವಿಮಾನ ಸಂಚಾರದ ಏರ್ಪಾಡನ್ನು ನಡಸಿಕೊಂಡು ಬರುವಾಗ,

ನಮೂದಿಸಿರುತ್ತದೆಯೊ ಅಂಥ ವಿಮಾನಗಳಲ್ಲಿ ಮಾತ್ರ ಹಾರಲು ಅವರಿಗೆ ಅಧಿಕಾರ ಕೊಟ್ಟಿರುತ್ತದೆ. ಪ್ರತಿ ಆರು ತಿಂಗಳಿಗೊಮ್ಮೆ ಈ ಸನ್ನದನ್ನು ಪಡೆಯಬೇಕು. ಈ ಸನ್ನದುಗಳನ್ನು ಪಡೆಯಲು ತಗುಲುವ ಒಟ್ಟು ವೆಚ್ಚ ಸುಮಾರು ೪,೦೦೦ ರೂ. ಗಳಿಂದ ೬,೦೦೦ ರೂ.ಗಳವರೆಗೂ ಆಗುತ್ತದೆ. ವಿಮಾನ ಸಾರಥಿಯ ಸನ್ನದುಗಳಲ್ಲಿ ಪ್ರವೀಣ ವಿಮಾನ ಸಾರಥಿಯ ಯೋಗ್ಯತಾಪತ್ರವೇ ಅತ್ಯಂತ ಮೇಲು ದರ್ಜೆಯದು.

**ಶಿಕ್ಷಕರ ಯೋಗ್ಯತಾಪತ್ರಗಳು**

ವಿಮಾನದಲ್ಲಿ ಹಾರುವುದನ್ನು ಕಲಿಯುವ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡುವವರಿಗೆ ಇವುಗಳನ್ನು ಕೊಡಲಾಗುತ್ತದೆ. ಈ ಯೋಗ್ಯತಾಪತ್ರವನ್ನು ಪಡೆದಿರುವವರು 'ಬಿ' ತರಗತಿಯ ಸನ್ನದನ್ನು ಪಡೆದಿರುವ ಜತೆಗೆ ವಿಮಾನ ಹಾರಿಕೆಯ ಶಿಕ್ಷಕರಾಗಿ ವಿಶೇಷ ತರಪೇತು ಹೊಂದಿರಬೇಕು.

**ವಾಯುಹಡಗಿನ ಸಾರಥಿಯ (Airship pilot) ಸನ್ನದುಗಳು**

ಇವುಗಳಲ್ಲಿ ಮೊದಲನೆಯ, ಎರಡನೆಯ ಮತ್ತು ಮೂರನೆಯ ತರಗತಿಗಳ ಸನ್ನದುಗಳಿವೆ. ಇವುಗಳಲ್ಲಿ ಯಾವುದಾದರೂ ಒಂದು ತರಗತಿಯ ಸನ್ನದುಳ್ಳವನು ಮಾತ್ರ ದಾಖಲೆಯಾದ (ರಿಜಿಸ್ಟರಾದ) (Registered) ವಾಯು ಹಡಗಿನಲ್ಲಿ ಹಾರಲು ಅರ್ಹತೆ ಹೊಂದಿರುತ್ತಾನೆ. ಮೂರನೆಯ ತರಗತಿಯ ಸನ್ನದುಳ್ಳವನು ೨,೦೦,೦೦೦ ಘನ ಅಡಿಗಳ ಘನ ಅಳತೆಯ ವಾಯುಹಡಗಿನಲ್ಲಿ ಹಾರಲು ಅರ್ಹನಾಗಿರುತ್ತಾನೆ. ಅವನು ಆಕಾಶಬುಟ್ಟಿ ನಡಸುವವನ ಸನ್ನದನ್ನೂ ವಾಯುನಾವಿಕನ ಯೋಗ್ಯತಾಪತ್ರವನ್ನೂ ಪಡೆದಿರಬೇಕು. ಎರಡನೆಯ ತರಗತಿಯ ಸನ್ನದುಳ್ಳವನು ೭೦,೦೦,೦೦೦ ಘನ ಅಡಿಗಳ ಘನ ಅಳತೆಯ ವಾಯುಹಡಗಿನ ನಾಯಕನಾಗಿರಲು ಅರ್ಹನಾಗಿರುತ್ತಾನೆ; ಈತನು ಮೂರನೆಯ ತರಗತಿಯ ವಿಮಾನ ನಡಸುವವನ ಸನ್ನದನ್ನೂ ಹೊಂದಿರಬೇಕು. ಇರುವ ಸನ್ನದುಗಳಲ್ಲೆಲ್ಲ ಅತ್ಯಂತ ಮೇಲು ದರ್ಜೆಯ ಮೊದಲ ತರಗತಿಯ ಸನ್ನದುಳ್ಳವನು ಯಾವ ಅಳತೆಯ ವಾಯುಹಡಗಿಗೆ ಬೇಕಾದರೂ ನಾಯಕನಾಗಿರಲು ಅರ್ಹನಾಗಿರುತ್ತಾರೆ. ಈ ದರ್ಜೆಯ ವಿಮಾನ ನಡಸುವವನು, ವಾಯು ಹಡಗುಗಳನ್ನು ಹಾರಿಸಲು ಕೊಡುವ ಎರಡನೆಯ ತರಗತಿಯ ಸನ್ನದನ್ನು ಹೊಂದಿರಲೇಬೇಕು, ಮತ್ತು ಈತನಿಗೆ ವಾಯುಹಡಗಿನಲ್ಲಿ ನಾಲ್ಕು ತಿಂಗಳ ಕಾಲ ಹಾರಿದ ಅನುಭವವಿರಬೇಕು.

ಆಕಾಶಬುಟ್ಟಿಗಳು ಮತ್ತು ವಾಯುಹಡಗುಗಳನ್ನು ವಾಯುಪ್ರಯಾಣದಲ್ಲಿ ನಡಸುವುದು, ವಿಮಾನ ಹಾರಿಸುವ ಶಿಕ್ಷಣ ಕೊಡುವುದು, ವಾಯುಯಾನ ಸಂಬಂಧವಾದ ಯಂತ್ರಶಿಲ್ಪ ಮತ್ತು ವಾಯುವಿಗಿಂತ ಭಾರವಾದ ವಿಮಾನವನ್ನು ನಡೆಸುವವನಿಗೆ 'ಬಿ' (B) ಮತ್ತು ಪ್ರವೀಣ ವಿಮಾನ ಸಾರಥಿಯ (Master pilot) ಯೋಗ್ಯತಾಪತ್ರ. 'ಎ' ತರಗತಿಯ ಸನ್ನದು, ವಿನೋದಕ್ಕಾಗಲಿ ತನ್ನ ಸ್ವಂತ ವ್ಯವಹಾರೋದ್ದೇಶಗಳಿಗಾಗಲಿ ವಿಮಾನದಲ್ಲಿ ಹಾರಲು ಇಷ್ಟಪಡುವ ಖಾಸಗಿ ವ್ಯಕ್ತಿಗೆ ಕೊಡುವಂಥದು. ಅವನು ಯಾವ ಮಾದರಿಯ ವಾಯುಯಾನದಲ್ಲಾದರೂ, ಯಾವ ದೇಶದಲ್ಲಿ ಬೇಕಾದರೂ ಹಾರಿ ಹೋಗಬಹುದು; ಮತ್ತು ಖಾಸಗಿ ವಿಮಾನಗಳಲ್ಲಿ ಪ್ರಯಾಣಿಕರನ್ನು ಬೇಕಾದರೂ ಒಯ್ಯಬಹುದು; ಆದರೆ, ಅವನು ಅವರಿಂದ ಯಾವ ರುಸುಮನ್ನೂ ತೆಗೆದುಕೊಳ್ಳಕೂಡದು. ಈ ಸನ್ನದನ್ನು ಅಪೇಕ್ಷಿಸುವವರು ಈ ಮುಂದಿನ ಷರತ್ತುಗಳಿಗೆ ಒಳಪಟ್ಟಿರಬೇಕು: (೧) ಅವರಿಗೆ ೧೭ ವರ್ಷ ವಯಸ್ಸಾಗಿರಬೇಕು. (೨) ಅವರು ಶರೀರದಾರ್ಢ್ಯದ ಬಗ್ಗೆ ಯೋಗ್ಯತಾಪತ್ರವನ್ನು ತೋರಿಸಬೇಕು. (೩) ವಾಯುಯಾನದಲ್ಲಿ ಒಬ್ಬನೇ ಕುಳಿತು ಮೂರು ಗಂಟೆಗಳ ಕಾಲ ಹಾರುವ ಅನುಭವ ಹೊಂದಿರಬೇಕು. ವಿಮಾನದಲ್ಲಿ ಹಾರುವ ಸಾಮರ್ಥ್ಯವನ್ನು ಪರೀಕ್ಷಿಸುವ ಏರ್ಪಡಿಸುವ ಎರಡು ಪರೀಕ್ಷೆಗಳಲ್ಲೂ ಯಂತ್ರವಿದ್ಯೆಯ ಸಂಬಂಧವಾಗಿ ಕೇಳುವ ಬಾಯಿ ಪ್ರಶ್ನೆಗಳ ಪರೀಕ್ಷೆಯಲ್ಲೂ ತೇರ್ಗಡೆಹೊಂದಬೇಕು. 'ಬಿ' ತರಗತಿಯ ಸನ್ನದು ಕಸಬುದಾರಿ ವಿಮಾನ ನಡಸುವವನ ಸನ್ನದು ; ಪ್ರಯಾಣಿಕರನ್ನೂ ಸರಕುಗಳನ್ನೂ ಟಪ್ಪಾಲನ್ನೂ ತೆಗದುಕೊಂಡು ಹೋಗುವ ವಿಮಾನ ನಡಸುವವರು ಈ ಸನ್ನದನ್ನು ಪಡೆದಿರಬೇಕು. ಇದನ್ನು ೧೯ ರಿಂದ ೪೫ ವರ್ಷಗಳೊಳಗಿನ ಗಂಡಸರಿಗಾಗಲಿ ಹೆಂಗಸರಿಗಾಗಲಿ ಕೊಡಲಾಗುತ್ತದೆ. ಇಂಥವರು ಕಡೆಯ ಪಕ್ಷ ೧೦೦ ಗಂಟೆಗಳ ಕಾಲ ತನಿಯಾಗಿ ವಿಮಾನದಲ್ಲಿ ಹಾರುವ ಅನುಭವ ಹೊಂದಿರಬೇಕು. ವಿಮಾನ ಹಾರಿಸುವ ಪರೀಕ್ಷೆಯಲ್ಲೂ ತೇರ್ಗಡೆಹೊಂದಿರಬೇಕು. ವಿಮಾನದಲ್ಲಿರುವ ಕೆಲವು ಸಲಕರಣೆಗಳ ಸಹಾಯದಿಂದ ರಾತ್ರಿಯಲ್ಲಿ ಸ್ವಲ್ಪಕಾಲ ಹಾರಬೇಕು. ಮತ್ತು ಕಣ್ಣು ಕಟ್ಟಿಕೊಂಡು ಸ್ವಲ್ಪಕಾಲ ಹಾರಬೇಕು. ಇವುಗಳ ಜೊತೆಗೆ ಅವರು ಪವನ ಶಾಸ್ತ್ರ, ವಾಯುಪ್ರಯಾಣ ಮತ್ತು ವಾಯು ಎಂಜಿನ್ನುಗಳು– ಇವುಗಳ ಸಂಬಂಧದಲ್ಲೂ ಪರೀಕ್ಷೆ ಕೊಡಬೇಕು. ಈ ವಿಮಾನ ಸಾರಥಿಗಳು ತಾವು ಯಾವ ಬಗೆಯ ವಿಮಾನಗಳಲ್ಲಿ ಹಾರುವ ವಿಶೇಷ ಪ್ರವೀಣತೆ ಹೊಂದಿರುತ್ತಾರೆಯೊ ಮತ್ತು ಯಾವ ವಿಮಾನಗಳಲ್ಲಿ ಹಾರುವುದಾಗಿ ಸನ್ನದಲ್ಲಿ

ವರ್ಷಗಳ ಅನುಭವ ಹೊಂದಿರುವುದಲ್ಲದೆ, ಕೆಲವು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು. ವಿಮಾನ ನಡಸುವವರಿಗೂ ಯಂತ್ರ ಶಿಲ್ಪಿಗಳಿಗೂ ಸಾಮಾನ್ಯವಾಗಿ ಬೇರೆಬೇರೆ ವಿಮಾನ ಹಾರಿಕೆ ಸಂಘಗಳು ಶಿಕ್ಷಣ ಕೊಡುತ್ತವೆ; ಸರಕಾರಗಳಿಂದ ಅಧಿಕಾರ ಹೊಂದಿದ ಸಂಸ್ಥೆಗಳು ಆವಶ್ಯಕ ಪರೀಕ್ಷೆಗಳನ್ನು ನಡಸಿದ ಮೇಲೆ ಸನ್ನದುಗಳನ್ನು ಕೊಡುತ್ತವೆ.

**ನಿಸ್ತಂತು ಕಾರ್ಯಕರ್ತನ (Wireless Operator) ಸನ್ನದುಗಳು**

ಪ್ರತಿಯೊಂದು ವಾಣಿಜ್ಯ ವಿಮಾನದಲ್ಲೂ ನಿಸ್ತಂತು ವಾರ್ತಾ ಯಂತ್ರ ಸಲಕರಣೆ ಜೋಡಿಸಿರುವುದರಿಂದ ಅಂಥ ಪ್ರತಿಯೊಂದು ವಿಮಾನದಲ್ಲೂ ನಿಸ್ತಂತು ಸಮಾಚಾರಗಳನ್ನು ಗ್ರಹಿಸುವುದಕ್ಕೂ ಕಳಿಸುವುದಕ್ಕೂ ತಕ್ಕ ಶಿಕ್ಷಣ ಪಡೆದ ಒಬ್ಬ ನಿಸ್ತಂತು ಕಾರ್ಯಕರ್ತನಿರಬೇಕು. ಈ ವಿಭಾಗದ ಶಿಕ್ಷಣವನ್ನು ಸಾಮಾನ್ಯವಾಗಿ ಅಂಚೆ ಕಚೇರಿಗಳು ಕೊಡುತ್ತವೆ. ಆಯಾ ದೇಶದ ಪೋಸ್ಟ್‌ಮಾಸ್ಟರ್ ಜನರಲ್ ಅವರು ಸನ್ನದು ಕೊಡುತ್ತಾರೆ.

ಇವುಗಳ ಜೊತೆಗೆ, ಜಾರು ವಿಮಾನದಲ್ಲಿ ಹಾರುವವರ ಯೋಗ್ಯತಾಪತ್ರಗಳು, ಇಳಿ ಕೊಡೆಯವನ ಸನ್ನದುಗಳು ಮತ್ತು ಆಕಾಶಬುಟ್ಟಿ ನಡಸುವವನ ಸನ್ನದುಗಳು– ಇವೂ ಇವೆ. ಆಯಾ ವಿಭಾಗದಲ್ಲಿ ಅವಶ್ಯ ಅನುಭವವನ್ನು ಹೊಂದಿರುವವರಿಗೆ ಇವನ್ನು ಕೊಡಲಾಗುತ್ತದೆ.

**ಜಾರುವಿಮಾನದಲ್ಲಿ ಹಾರಲು ಯೋಗ್ಯತಾಪತ್ರಗಳು (Gliding Certificates)**

ಜಾರುವಿಮಾನದಲ್ಲಿ ಹಾರಲು ಯಾವ ಸನ್ನದೂ ಬೇಕಿಲ್ಲ. ಆದರೆ, ಸಂಯುಕ್ತ ರಾಜ್ಯದ ರಾಜವಿಮಾನ ಶಾಖೆ (Royal Aeroplanes of the United Kingdom) ಅಂತರರಾಷ್ಟ್ರೀಯ ವಾಯುನಾವಿಕ ಸಂಘ ವಿಧಿಸಿರುವ ಷರತ್ತುಗಳ ಮೇರೆಗೆ ಸನ್ನದುಗಳನ್ನು ಕೊಡುತ್ತದೆ.

**ಪ್ರದರ್ಶನ ಇಳಿಕೊಡೆಯವರ (Exhibition Parachutists) ಸನ್ನದು**

ವಿಮಾನ ಸಚಿವಮಂಡಲಿ ಕೊಡುವ ವಿಶೇಷ ಸನ್ನದನ್ನು ಪಡೆದಿರುವವರನ್ನುಳಿದು ಬೇರೆ ಯಾರೂ, ತುರ್ತು ಸಂದರ್ಭಗಳಲ್ಲಿ ವಿನಾ, ಇಳಿಕೊಡೆಗಳಲ್ಲಿ ಇಳಿಯಲು ಅನುಮತಿಯಿಲ್ಲ. ಇಳಿಕೊಡೆಯಲ್ಲಿ ಇಳಿಯಲು ಅರ್ಹನಾಗಬೇಕೆಂದು ಬಯಸುವವನು ಹತ್ತು ಸಲವಾದರೂ ಇಳಿಕೊಡೆಯಲ್ಲಿ ಇಳಿದಿರಬೇಕು, ಮತ್ತು ಭೂ ಯಂತ್ರಶಿಲ್ಪಿಯ X ಸನ್ನದನ್ನು ಹೊಂದಿರಬೇಕು.

* * * *

**ವಾಯುನಾವಿಕನ (Navigator) ಸನ್ನದು**

ಇದರಲ್ಲಿ ಎರಡು ದರ್ಜೆಯ ಸನ್ನದುಗಳಿವೆ: ಮೊದಲ ತರಗತಿಯದು, ಎರಡನೆಯ ತರಗತಿಯದು. ಅಂತರರಾಷ್ಟ್ರೀಯ ಕಾನೂನಿನ ಮೇರೆಗೆ, ವಾಯುಯಾನವು ನಡುಕಡಲಿನ ಮೇಲೆ ೧೦೦ರಿಂದ ೬೨೫ ಮೈಲಿಗಳವರೆಗೆ ಇಲ್ಲವೆ ನಿರ್ಜನ ಭೂ ಪ್ರದೇಶದ ಮೇಲೆ ರಾತ್ರಿಯ ಕಾಲದಲ್ಲಿ ೬೨೫ ಮೈಲಿಗಳಿಗೆ ಮೇಲ್ಪಟ್ಟು, ನಡುವೆ ಎಲ್ಲಿಯೂ ಕೆಳಕ್ಕಿಳಿಯದೆ ಪ್ರಯಾಣ ಮಾಡಬೇಕಾದ ಸಂದರ್ಭದಲ್ಲಿ ಪ್ರತಿಯೊಂದು ವಾಯುಯಾನವೂ ಮೊದಲ ತರಗತಿಯ ವಾಯು ನಾವಿಕನನ್ನು ಕರೆದೊಯ್ಯಬೇಕು. ಸನ್ನದುದಾರರು ವೈದ್ಯ ಪರೀಕ್ಷೆಯಲ್ಲೂ ವಾಯುಯಾನದ ಶಾಸ್ತ್ರ ವಿಚಾರ ಭಾಗದ ಪರೀಕ್ಷೆಯಲ್ಲೂ ತೇರ್ಗಡೆ ಹೊಂದಿರಬೇಕು, ಮತ್ತು ವಿಮಾನ ನಡಸುವರ ತಂಡದ ಕೆಲಸಗಾರರಲ್ಲಿ ಒಬ್ಬನಾಗಿ ಆಕಾಶದಲ್ಲಿ ಹಾರುವ ಅನುಭವ ಪಡೆದಿರಬೇಕು. ಮೊದಲ ತರಗತಿಯವರಿಗೆ ಈ ಅನುಭವ ನಾಲ್ಕು ವರ್ಷಗಳದ್ದಾಗಿರಬೇಕು.

**ಭೂಯಂತ್ರಶಿಲ್ಪಿಯ (Ground Engineer) ಸನ್ನದುಗಳು**

ಇವುಗಳಲ್ಲಿ ಐದು ವರ್ಗ. ವಾಯುಯಾನಗಳನ್ನು ಸರಿಯಾದ ಸ್ಥಿತಿಯಲ್ಲಿಟ್ಟು ಕೊಳ್ಳುವುದರಲ್ಲೂ ಸರಿಪಡಿಸುವುದರಲ್ಲೂ ತಿಳಿವಳಿಕೆ ಹೊಂದಿರುವವರಿಗೆ ಇವುಗಳನ್ನು ಕೊಡಲಾಗುತ್ತದೆ. ಇವು A, B, C, D ಮತ್ತು X ಎಂಬ ವರ್ಗಗಳಿಗೆ ಸೇರಿವೆ. ಒಬ್ಬ ಭೂ ಯಂತ್ರಶಿಲ್ಪಿ ಐದು ಸನ್ನದುಗಳನ್ನು ಹೊಂದಿರಬಹುದು; ಆದರೆ, ಕಡೆಯ ಪಕ್ಷ A ಮತ್ತು C ಸನ್ನದುಗಳನ್ನು ಹೊಂದಿರಲೇಬೇಕು. ಮೊದಲನೆಯ (ಅಂದರೆ A) ಸನ್ನದು, ವಾಯುಯಾನ ಆಕಾಶ ಪ್ರಯಾಣ ಮಾಡಲು ತಕ್ಕದ್ದಾಗಿದೆಯೆಂಬ ಯೋಗ್ಯತಾ ಪತ್ರವನ್ನು ಕೊಡುವುದಕ್ಕಾಗಿ ಬೇಕು. A ಸನ್ನದು, ಹಾರುವುದಕ್ಕೆ ಮುಂಚೆ ವಾಯುಯಾನವನ್ನು ಪರೀಕ್ಷಿಸುವುದಕ್ಕಾಗಿ; B ಸನ್ನದು, ವಾಯುಯಾನವನ್ನು ಬಿಚ್ಚಿನೋಡಿದ ಮೇಲೆ ಪರೀಕ್ಷಿಸುವುದಕ್ಕಾಗಿ, ಅದೇ ರೀತಿಯಲ್ಲಿ, C ಸನ್ನದು, ಹಾರುವುದಕ್ಕೆ ಮುಂಚೆ ವಾಯು ಎಂಜಿನ್ನಿನ ಪರೀಕ್ಷೆಗಾಗಿ; D ಸನ್ನದು, ಅದನ್ನು ಬಿಚ್ಚಿ ನೋಡಿದ ಮೇಲೆ ಪರೀಕ್ಷಿಸುವುದಕ್ಕಾಗಿ. ಯಂತ್ರಸಾಧನ ಸರಿಪಡಿಕೆ ಮೊದಲಾದ ವಿಶೇಷ ಕೆಲಸಗಳನ್ನು ಮಾಡಲು X ವರ್ಗದ ಸನ್ನದು ಬೇಕು. ಪ್ರತಿಯೊಬ್ಬ ಭೂ ಯಂತ್ರಶಿಲ್ಪಿಯೂ ೨೧ ವರ್ಷ ವಯಸ್ಸಿಗೆ ಮೇಲ್ಪಟ್ಟವನಾಗಿದ್ದು, ವಿಮಾನಗಳನ್ನು ಸರಿಯಾದ ಸ್ಥಿತಿಯಲ್ಲಿಟ್ಟು ಕೊಳ್ಳುವುದರಲ್ಲಿ ಎರಡು ವರ್ಷಗಳ ಅನುಭವ ಹೊಂದಿರುವುದಲ್ಲದೆ, ಕೆಲವು

ನಿಯಮವನ್ನು ಗೆಲ್ಲುವುದರಿಂದ ಅಪಾಯ ಸಂಭವ ಬಹು ಹೆಚ್ಚು; ಈ ಪ್ರಯತ್ನವನ್ನು ಪ್ರಕೃತಿ ಸ್ನೇಹಭಾವದಿಂದ ನೋಡುವುದಿಲ್ಲ. ಅತ್ಯಲ್ಪ ದೋಷವಿದ್ದರೂ ಪ್ರಕೃತಿಯ ದಂಡನೆಗೆ ಚೆನ್ನಾಗಿ ಗುರಿಯಾಗಬೇಕಾಗುತ್ತದೆ. ಆದ್ದರಿಂದ, ಮನುಷ್ಯನು ಅತ್ಯಂತ ಎಚ್ಚರಿಕೆಯಿಂದಲೂ ಸೂಕ್ಷ್ಮ ಪರಿಶೀಲನೆಯಿಂದಲೂ ವಿಮಾನದ ಸಂವಿಧಾನವನ್ನೂ ರಚನೆಯನ್ನು ಮಾಡಿದ್ದಾನೆ. ಸಾಧ್ಯವಿರುವ ಎಲ್ಲ ಎಚ್ಚರಿಕೆಗಳನ್ನೂ ತೆಗೆದುಕೊಂಡು ಅತ್ಯಲ್ಪ ದೋಷ ಸಹ ನುಸುಳದಂತೆ ರಕ್ಷಣೆ ಕಲ್ಪಿಸಲಾಗಿದೆ. ಮನುಷ್ಯನು ಅತ್ಯಂತ ಎಚ್ಚರಿಕೆಯಿಂದ ವಿಮಾನವನ್ನು ಯೋಜಿಸದೆ ಹೋಗಿದ್ದರೆ ವಿಮಾನ ಪ್ರಯಾಣದಲ್ಲಿ ಸುರಕ್ಷಿತತೆಯ ಸುಳಿವೂ ಇರುತ್ತಿರಲಿಲ್ಲ, ನಷ್ಟಸಂಭವಗಳು ಬೆಟ್ಟದಷ್ಟಿರುತ್ತಿದ್ದುವು. ಯಂತ್ರಶಿಲ್ಪದಲ್ಲಿ ವಿಮಾನ ರಚನೆ ಅತ್ಯಂತ ಬುದ್ಧಿಚಾತುರ್ಯವನ್ನಪೇಕ್ಷಿಸುವ ಶಾಖೆ; ಅತ್ಯಂತ ಸೂಕ್ಷ ವಿವರವನ್ನು ಸಹ ಎಚ್ಚರಿಕೆಯಿಂದ ಕಲ್ಪಿಸಿದೆ. ಆದ್ದರಿಂದಲೇ ಅಪಘಾತಗಳಾಗುವ ಸಂಭವಗಳೆಲ್ಲವನ್ನೂ ಆದಷ್ಟುಮಟ್ಟಿಗೆ ನಿವಾರಿಸಿ, ಸುರಕ್ಷಿತತೆಯನ್ನು ಬಹಳವಾಗಿ ಹೆಚ್ಚಿಸಿದೆ.

ಆಕಾಶದಲ್ಲಿರುವವನು ಶೇಕಡ ೯೯ರಷ್ಟು ಸುರಕ್ಷಿತತೆಯಿಂದ ವಿಮಾನವನ್ನು ಮರಳಿ ಭೂಮಿಯ ಮೇಲಕ್ಕೆ ತರಲು ಅವನಿಗೆ ನೆರವಾಗುವ ಬೇರೆ ಬೇರೆ ವಿಮಾನ ಹಾರಿಕೆಯ ಸಹಾಯ ಸಾಧನಗಳನ್ನು ಪರಿಶೀಲಿಸುವುದು ಅವಶ್ಯಕ ಮತ್ತು ಸ್ವಾರಸ್ಯವುಳ್ಳದ್ದು. ಸಹಾಯ ಸಾಧನಗಳನ್ನು ಮೂರು ವರ್ಗಗಳಾಗಿ ವಿಂಗಡ ಮಾಡಬಹುದು: (೧) ವಿಮಾನದಲ್ಲಿರುವ ಬೇರೆ ಬೇರೆ ಲೇಖನ ಸಲಕರಣೆಗಳು (Recording instruments); (೨) ರೇಡಿಯೊ; (೩) ಪವನ ಶಾಸ್ತ್ರ.

ವಿಮಾನ ಕೆಲಸ ಮಾಡುವುದು ಬಹುಮಟ್ಟಿಗೆ ಎಂಜಿನ್ನನ್ನು ಅವಲಂಬಿಸಿರುವುದರಿಂದ, ಸಾಮಾನ್ಯ ರೀತಿಯಲ್ಲಿ ಕೆಲಸ ಮಾಡಲು ತಕ್ಕಂತಿರುವಂತೆ ಎಂಜಿನ್ನನ್ನು ರಚಿಸಲು ಎಲ್ಲ ಎಚ್ಚರಿಕೆಯನ್ನು ತೆಗೆದುಕೊಂಡಿರುತ್ತದೆ. ಆದರೆ ಎಂಜಿನ್ನಿನ ಸಂವಿಧಾನ, ರಚನೆಗಳ ಬಗ್ಗೆ ತೆಗೆದುಕೊಂಡ ಮುನ್ನೆಚ್ಚರಿಕೆಗಳ ಜೊತೆಗೆ, ಎಂಜಿನ್ನಿನ ಸ್ಥಿತಿಯನ್ನು ಸೂಚಿಸಿ ಅದು ಕೆಟ್ಟು ಹೋಗಿದ್ದರೆ ಮುಂಚಿತವಾಗಿಯೇ ಎಚ್ಚರಿಕೆ ಕೊಡುವ ಕೆಲವು ಸಲಕರಣೆಗಳು ವಿಮಾನಕ್ಕೇ ಜೋಡಿಸಲ್ಪಟ್ಟಿರುತ್ತವೆ.

ಈ ಎಂಜಿನ್ನಿನ ಸಲಕರಣೆಗಳಲ್ಲಿ ಮೊದಲನೆಯದು (೧) **ನಿಮಿಷ ಪರಿವರ್ತನ ಸೂಚಕ** (R.P.M.=Revolution Pet Minute Indicator): ಇದು ಎಂಜಿನ್ನು ಕೆಲಸ ಮಾಡುವ ವೇಗವನ್ನು ತೋರಿಸುತ್ತದೆ. ಇದು ಎಂಜಿನ್ನಿನ

# ಪ್ರಕರಣ ೪
# ವಿಮಾನ ಹಾರಿಕೆಯ ಸಹಾಯಸಾಧನಗಳು: ವಿಮಾನ ಯಂತ್ರ ಸಾಧನಗಳು, ನಿಸ್ತಂತು (Wireless) ಮತ್ತು ಪವನಶಾಸ್ತ್ರ (Meteorology)–

ಮನುಷ್ಯನು ತನಗಾಗಿ ನಿರ್ಮಿಸಿಕೊಂಡಿರುವ ಸಮಾಚಾರಗಳ ಮತ್ತು ಸಾಗಣೆಯ ಬೇರೆಬೇರೆ ಸಾಧನಗಳ ಪ್ರಗತಿಯನ್ನೂ, ಬೆಳವಣಿಗೆಯನ್ನೂ ಪರಿಶೀಲಿಸಿದರೆ, ಸಾಧನ ವಿಧಾನ ಮುಂದುವರಿದಷ್ಟೂ ಅದರಲ್ಲಿ ಅಪಾಯಗಳೂ ತೊಂದರೆಗಳೂ ಹೆಚ್ಚೆಂಬುದು ವ್ಯಕ್ತವಾಗುತ್ತದೆ. ತನ್ನ ಸ್ವಂತ ಕಾಲುಗಳನ್ನು ಆಶ್ರಯಿಸಿರುವವನು ಕುದುರೆಯ ಮೇಲೆ ಅಥವಾ ಎತ್ತಿನ ಗಾಡಿಯ ಮೇಲೆ ಇರುವವನಿಗಿಂತ ಹೆಚ್ಚು ಸುರಕ್ಷಿತನಾಗಿರುತ್ತಾನೆ. ಅಪಘಾತಗಳು ಎಷ್ಟೇ ವಿರಳವೆಂದರೂ, ಹತೋಟಿ ತಪ್ಪಿ ಕುದುರೆ ಸಿಕ್ಕಾಬಟ್ಟೆ ಓಡಬಹುದು, ಬಂಡಿ ನಡುದಾರಿಯಲ್ಲಿ ಮುರಿದುಹೋಗಬಹುದು. ಆದರೆ, ಎತ್ತಿನ ಬಂಡಿಗೆ ಹೋಲಿಸಿದರೆ ಅದಕ್ಕಿಂತ ಮೋಟಾರು ಬಂಡಿಯಾಗಲಿ ಸ್ವಯಂಚಾಲಿತ ಎಂಜಿನ್ನಾಗಲಿ (Locomotive) ಎಷ್ಟು ಕ್ರಾಂತಿಕಾರಕ ಮುನ್ನಡೆಯಾಗಿದೆಯೊ ಪ್ರಾಚೀನ ಸಂಚಾರ ಸಾಧನೆಗಳಿಗೆ ಹೋಲಿಸಿದರೆ ಕುದುರೆಯಾಗಲಿ ಎತ್ತಿನ ಬಂಡಿಯಾಗಲಿ ಅಷ್ಟು ಕ್ರಾಂತಿಕಾರಕ ಮುನ್ನಡೆಯಾಗಿಲ್ಲ. ಮೋಟಾರು ಬಂಡಿಯಲ್ಲಿ ಮನುಷ್ಯರಿಗೆ ಹೆಚ್ಚು ಅನುಕೂಲವೂ ಸುಖವೂ ದೊರೆಯುತ್ತವೆ; ಆದರೆ ಅಪಘಾತಗಳ ಸಂಭವವೂ ಹೆಚ್ಚು. ಎತ್ತಿನ ಬಂಡಿಯಲ್ಲಿ ಹೋಗುವವನು ತಾನು ತಲುಪಬೇಕಾದ ಸ್ಥಳಕ್ಕೆ ಖಂಡಿತ ಸುರಕ್ಷಿತವಾಗಿ ತಲುಪುವ ಸಂಭವವಿದೆ; ಆದರೆ, ಮೋಟಾರು ಬಂಡಿಯಲ್ಲಿ ಹೋಗುವವನು ದಾರಿಯಲ್ಲೆ ಅಜ್ಜಿಬಜ್ಜಿಯಾಗುವ ಸಂಭವವಿದ್ದೇ ಇದೆ. ಈ ರೀತಿ, ಮನುಷ್ಯನು ಪ್ರಕೃತಿಯನ್ನು ಎಷ್ಟು ಬಲವಾಗಿ ಪ್ರತಿಭಟಿಸುತ್ತಾನೆಯೋ ಅಷ್ಟೇ ಹೆಚ್ಚಾಗಿ ಅಡಚಣೆಗಳನ್ನೂ ಅಪಾಯಸಂಭವಗಳನ್ನೂ ಅದು ಅವನ ಹಾದಿಯಲ್ಲೊಡ್ಡುತ್ತದೆ. ಪ್ರಕೃತಿಯ ಆಧಾರಭೂತ ನಿಯಮಗಳಲ್ಲಿ ಒಂದಾದ ಭೂಮ್ಯಾಕರ್ಷಣ ಶಕ್ತಿಗೆ ಆಕಾಶಯಾನ ನೇರವಾದ ಪ್ರತಿಭಟನೆ. ಆ ಶಕ್ತಿಗೆ ವಿರುದ್ಧವಾಗಿ ತನ್ನನ್ನು ತಾನು ಮೇಲೆತ್ತುವುದರ ಮೂಲಕ ಮನುಷ್ಯನು ಪ್ರಕೃತಿಯನ್ನು ಪ್ರತಿಭಟಿಸಿದ್ದಾನೆ. ಭೂಮ್ಯಾಕರ್ಷಣ ಶಕ್ತಿಗಿಂತ ಅತಿ ಬಲವಾದ

ಸರಬರಾಯಿ ಮುಗಿಯುತ್ತಾ ಬಂದಿದೆಯೆ ಇಲ್ಲವೆ, ಪೆಟ್ರೋಲಿನ ಒತ್ತಡವೂ ಹರಿವೂ ಸರಿಯಾಗಿವೆಯೆ ಇಲ್ಲವೆ ಎಂಬ ಬಗ್ಗೆ ವಿಮಾನ ನಡಸುವವನಿಗೆ ಮುನ್ನೆಚ್ಚರಿಕೆಯಾಗಿ, ಅವನು ಆವಶ್ಯಕವಾದ ಜೋಡಣೆಗಳನ್ನು ಮಾಡಲು ಸಾಧ್ಯವಾಗುತ್ತದೆ.

ಎಂಜಿನ್ನಿನ ಯಂತ್ರ ಸಲಕರಣೆಗಳ ಜೊತೆಗೆ, ವಿಮಾನ ನಡಸುವವನು ಸುರಕ್ಷಿತವಾಗಿ ಹಾರಲು ನೆರವಾಗುವ ಕೆಲವು ಹಾರಿಕೆಯ ಸಂಬಂಧದ ಯಂತ್ರ ಸಲಕರಣೆಗಳಿವೆ. ಇವುಗಳಲ್ಲಿ ಮೊದಲನೆಯದು, (೧) **ವಾಯುವೇಗ ಸೂಚಕ** (Air Speed Indicator): ವಾಯುವಿಗಿಂತ ಭಾರವಾದ ವಿಮಾನ ಆವಶ್ಯಕವಾದ ವೇಗವನ್ನು ಹೊಂದಿ, ಇದರ ಪರಿಣಾಮವಾಗಿ ವಿಮಾನವನ್ನು ಮೇಲೆತ್ತಲು ನೆರವಾಗುವ ವಾಯುವಿನ ಒತ್ತಡ ಹೆಚ್ಚಾಗುವುದರಿಂದ ಮಾತ್ರ ವಿಮಾನ ತನ್ನನ್ನು ತಾನು ಮೇಲಕ್ಕೆತ್ತಿಕೊಳ್ಳಲು ಸಾಧ್ಯ. ಈ ಯಂತ್ರ ಸಲಕರಣೆ ವಿಮಾನ ನಡಸುವವನಿಗೆ, ಅವನು ಬೇಕಾದ ವೇಗವನ್ನು ಯಾವಾಗ ಮುಟ್ಟಿದ್ದಾನೆ ಎಂಬುದನ್ನು ತಿಳಿಸುತ್ತದೆ; ಇದಕ್ಕನುಗುಣವಾಗಿ ಅವನು ನಿಯಂತ್ರಕಗಳನ್ನು ತಿರುಗಿಸುತ್ತಾನೆ. ಇದೇ ರೀತಿಯಲ್ಲಿ, ವಿಮಾನ ನೆಲಕ್ಕಿಳಿಯಬೇಕಾದಾಗ ವೇಗವನ್ನು ಒಂದು ಬೇಕಾದ ಮಟ್ಟಕ್ಕೆ ಕಡಮೆ ಮಾಡಬೇಕು; ಇದನ್ನು ಸಹ ವೇಗ ಸೂಚಕ ತೋರಿಸುತ್ತದೆ. ವಿಮಾನ ಕೆಳಕ್ಕಿಳಿಯುವಾಗ ಅಥವಾ ನೆಲೆ ಬಿಟ್ಟು ಮೇಲಕ್ಕೆ ಹಾರುವಾಗ ಸರಿಯಾದ ವೇಳೆಯಲ್ಲೂ ವೇಗದಲ್ಲೂ ನಿಯಂತ್ರಕಗಳನ್ನು ಪ್ರಯೋಗಿಸದೆ ಹೋದರೆ ಅಪಘಾತವಾಗುವ ಅಪಾಯ ಬೇಕಾದಷ್ಟಿದೆ. ಆದ್ದರಿಂದ, ಈ ಯಂತ್ರ ಸಲಕರಣೆ ವಿಮಾನ ನಡಸುವವನಿಗೆ ಅತಿಮುಖ್ಯ. (೨) **ಉನ್ನತಿ ಮಾಪಕ** (Altimeter): ಸಮುದ್ರ ಮಟ್ಟದ ಮೇಲೆ ವಿಮಾನ ಸುಮಾರು ಎಷ್ಟು ಎತ್ತರದಲ್ಲಿದೆಯೆಂಬುದನ್ನು ಲೇಖಿಸುತ್ತದೆ. ಸಾಮಾನ್ಯ ವಾಯುಸ್ಥಿತಿಯಲ್ಲಿ ವಿಮಾನ ನಡಸುವವನು ಭೂಮಿಯನ್ನು ನೋಡಬಹುದು, ಮತ್ತು ತಾನು ಇರುವ ಎತ್ತರವನ್ನು ನಿಶ್ಚಯಿಸಿ ಕೊಳ್ಳಬಹುದು. ಆದರೆ ಮಳೆಗಾಲದ ಪರಿಸ್ಥಿತಿಯಲ್ಲಿ ಏನೂ ಸ್ಪಷ್ಟವಾಗಿ ಗೋಚರವಾಗದೆ ಅವನು ಇತರ ವಸ್ತುಗಳನ್ನು ನೋಡಲಾಗದಿರುವಾಗ ಈ ಯಂತ್ರ ಸಲಕರಣೆ ಎಷ್ಟು ಮುಖ್ಯ ಎಂಬುದು ಸ್ಪಷ್ಟವಾಗಿಯೇ ಇದೆ. ತಾನು ಯಾವ ಎತ್ತರದಲ್ಲಿ ಹಾರುತ್ತಿದ್ದೇನೆಂಬುದು ವಿಮಾನ ನಡಸುವವನಿಗೆ ಗೊತ್ತಿಲ್ಲದಿದ್ದರೆ, ಅವನು ಒಂದು ಪರ್ವತಶಿಖರಕ್ಕೊ ಎದುರಿನಲ್ಲಿ ಬರುತ್ತಿರುವ ಮತ್ತೊಂದು ವಿಮಾನಕ್ಕೊ ಹೋಗಿ ಡಿಕ್ಕಿ ಹೊಡೆಯುತ್ತಾನೆ. ಅಲ್ಲದೆ, ಬಿರುಗಾಳಿ ಮಳೆ ಕೂಡಿದ ವಾಯುಸ್ಥಿತಿಯಿಂದ ಇಲ್ಲವೆ ಎದುರುಗಾಳಿಯಿಂದ

ತಿರುಗಚ್ಚು (ತಿರುಗುವ ಅಚ್ಚು, (Crank shaft) ನಿಮಿಷಕ್ಕೆ ಎಷ್ಟು ಸಲ ಸುತ್ತುತ್ತಿದೆಯೆಂಬುದನ್ನು ಗುರುತು ಮಾಡುತ್ತದೆ. ಎಂಜಿನ್ನಿನ ತಿರುಗಚ್ಚು ಎಂಜಿನ್ನು ಹೇಗೆ ಕೆಲಸ ಮಾಡುತ್ತಿದೆಯೆಂಬುದನ್ನೂ ಜೋಡಣೆಗಳು ಸರಿಯಾಗಿವೆಯೆ ಇಲ್ಲವೆ ಎಂಬುದನ್ನೂ ತಿಳಿಸುವುದರಿಂದ, ವಿಮಾನ ನಡಸುವವನಿಗೆ ಈ ಸಲಕರಣೆಯ ತಿಳಿವಳಿಕೆ ಅತ್ಯಗತ್ಯ. ಎಂಜಿನ್ನು ಉತ್ಪತ್ತಿಮಾಡುವ ಸಾಮರ್ಥ್ಯ ಅದರ ವೇಗವನ್ನು ಅವಲಂಬಿಸಿದೆ; ಸೂಚಕ ಬೇಗನೆಯೂ ಖಚಿತವಾಗಿಯೂ ವೇಗ ಕುಗ್ಗುವುದನ್ನು ತೋರಿಸುತ್ತದೆ. ವಿಮಾನವನ್ನು ಹಾರಿಸುವುಕ್ಕೆ ಮುಂಚೆ ಎಂಜಿನ್ನನ್ನು ಯಾವಾಗಲೂ ನೆಲದ ಮೇಲೆ ಓಡಿಸುತ್ತದೆ; ನಿಮಿಷ ಪರಿವರ್ತನ ಸೂಚಕವು ಎಂಜಿನ್ನು ಸಮರ್ಪಕವಾಗಿಯೂ ಸಮರ್ಥವಾಗಿಯೂ ಕೆಲಸ ಮಾಡುತ್ತಿದೆಯೆಂಬುದನ್ನು ತೋರಿಸುವವರೆಗೆ ವಿಮಾನವನ್ನು ಹಾರಿಸುವುದಿಲ್ಲ. ವಿಮಾನ ಹಾರುತ್ತಿರುವಾಗ, ಈ ಸೂಚಕದ ಸಹಾಯದಿಂದ ವಿಮಾನ ನಡಸುವವನು ಎಂಜಿನ್ನನ್ನು ಸಮವೇಗದಿಂದ ನಡಸುವುದಕ್ಕೂ ಅದರ ಮೇಲೆ ಮಿತಿಮೀರಿದ ಕಾರ್ಯದ ಒತ್ತಡ ಬೀಳುವ ಅಪಾಯಸಂಭವವನ್ನು ನಿವಾರಿಸುವುದಕ್ಕೂ ಸಾಧ್ಯವಾಗುತ್ತದೆ. ಎಂಜಿನ್ನಿನ ಭದ್ರತೆಯನ್ನು ಕಾಪಾಡುವ ಮತ್ತೊಂದು ಯಂತ್ರ ಸಲಕರಣೆ (೨) **ಎಣ್ಣೆಯ ಒತ್ತಡ ಮಾಪಕ** (Oil Pressure Guage): ಎಂಜಿನ್ನಿಗೆ ಎಣ್ಣೆ ಹಚ್ಚಿ ಚಲನಸೌಲಭ್ಯವುಂಟುಮಾಡುವ ಏರ್ಪಾಟಿನಲ್ಲಿನ ಒತ್ತಡವನ್ನು ಇದು ಸೂಚಿಸುತ್ತದೆ. ಈ ಮಾಪಕ ಕೊಡುವ ತಿಳಿವಳಿಕೆ ಬಹು ಮುಖ್ಯ: ಏಕೆಂದರೆ, ಎಣ್ಣೆಯ ಪರಿಚಲನೆ ನಿಂತುಹೋದರೆ ಎಂಜಿನ್ನು ಹಿಡಿದುಕೊಂಡು ನಿಂತು ಹೋಗುವ ಅಪಾಯ ಸಂಭವವಿದೆ. (೩) **ಎಂಜಿನ್ನಿನ ಮತ್ತು ಎಣ್ಣೆಯ ಶಾಖ ಮಾಪಕ:** ಇವು ಬೇರೆ ಬೇರೆ ಎರಡು ಸಲಕರಣೆಗಳು. ಇವುಗಳ ಸಹಾಯದಿಂದ ವಿಮಾನ ಮೇಲೆ ಕಣ್ಣಿಡಲು ಸಾಧ್ಯ. ಎಣ್ಣೆ ಅತಿಯಾಗಿ ಕಾದುಹೋದರೆ ಅದರ ಚಲನಸೌಲಭ್ಯಕಾರಕ ಗುಣಗಳು ನಾಶವಾಗುವುವು; ಎಣ್ಣೆ ಅತಿಯಾಗಿ ತಣ್ಣಗಾದರೆ ಅದು ತಡೆಯಿಲ್ಲದೆ ಪರಿಚಲಿಸಲಾಗದಷ್ಟು ತುಂಬ ಜಿಗುಟಾಗುವುದು. ಮೇಲಿನ ಸಲಕರಣೆಗಳ ಸಹಾಯದಿಂದ ಈ ಅಪಾಯಗಳನ್ನು ನಿವಾರಿಸಬಹುದು. ಎಂಜಿನ್ನಿನ ಶಾಖ ಮಾಪಕದ ಸಹಾಯದಿಂದ ವಿಮಾನ ನಡಸುವವನು ಎಂಜಿನ್ನು ಚೆನ್ನಾಗಿ ತಣ್ಣಗಾಗುವಂತೆ ಮಾಡಬಹುದು. (೪) **ಪೆಟ್ರೋಲು ಮಾಪಕಗಳು:** ಪೆಟ್ರೋಲಿನ ಒತ್ತಡ, ಮೊತ್ತ, ಮತ್ತು ಹರಿವು– ಇವುಗಳನ್ನು ತೋರಿಸಲು ಬೇರೆ ಬೇರೆ ಸಲಕರಣೆಗಳಿವೆ. **ಪೂರ್ಣ ಮಟ್ಟ ಸೂಚಕ** (Full Level Indicator) ಕಡಾಯಿಗಳಲ್ಲಿ ಉಳಿದಿರುವ ಉರುವಲಿನ ಮೊತ್ತವನ್ನು ಗುರುತಿಸುತ್ತದೆ. ಇದರಿಂದ ಪೆಟ್ರೋಲಿನ

ಕಂಡುಹಿಡಿಯದಿದ್ದಲ್ಲಿ, ಸುರಕ್ಷಿತ ವಾಯುಪ್ರಯಾಣವೆಂದಿಗೂ ಸಾಧ್ಯವಾಗುತ್ತಿರಲಿಲ್ಲ ಎಂದು ಧಾರಾಳವಾಗಿ ಹೇಳಬಹುದು. ನಿಸ್ತಂತು ವಾರ್ತೆ ಇಲ್ಲದಿದ್ದಲ್ಲಿ ಆಕಾಶದಲ್ಲಿರುವವನು ಮತ್ತೆ ಭೂಮಿಗೆ ಇಳಿಯುವವರೆಗೂ ಭೂಮಿಯೊಡನೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳಲಾಗುತ್ತಿರಲಿಲ್ಲ. ವಾಯುವಿನ ಸ್ಥಿತಿ ಒಂದು ಕ್ಷಣ ಇದ್ದ ಹಾಗೆ ಇನ್ನೊಂದು ಕ್ಷಣ ಇರುವುದಿಲ್ಲ; ಹೀಗಿರುವಾಗ, ವಿಮಾನ ನಡಸುವವನು ಸಂಪೂರ್ಣವಾಗಿ ವಾಯುವಿಗೆ ಅಧೀನನಾಗಿ, ಅವನು ಅತ್ಯಂತ ಅಪಾಯ ಸ್ಥಿತಿಯಲ್ಲಿರಬೇಕಾಗುತ್ತಿತ್ತು. ನಿಸ್ತಂತು ವಾರ್ತೆಯ ಸಹಾಯದಿಂದ, ಹಾರುತ್ತಿರುವಾಗ ವಾಯುಸ್ಥಿತಿಯಲ್ಲಿ ಆಗುವ ವ್ಯತ್ಯಾಸಗಳ ಬಗ್ಗೆ ಸಂಪೂರ್ಣ ತಿಳಿವಳಿಕೆಯುನ್ನೂ ತಲುಪಬೇಕಾದ ಸ್ಥಳದ ಬಗ್ಗೆ ಸಂಪೂರ್ಣ ಮಾರ್ಗದರ್ಶನವನ್ನೂ ವಿಮಾನ ನಡಸುವವನು ಪಡೆಯಲು ಸಾಧ್ಯ. ಹೀಗೆ, ನೆಲದ ಮೇಲೆ ಗಾಡಿಯ ಸಂಚಾರ ಎಷ್ಟು ಸುರಕ್ಷಿತವಾಗಿದೆಯೊ ವಿಮಾನ ಹಾರಿಕೆಯನ್ನೂ ಅಷ್ಟೇ ಸುರಕ್ಷಿತವಾಗಿ ಮಾಡಿದೆ ನಿಸ್ತಂತು ವಾರ್ತೆ. ನಿಸ್ತಂತು ವಾರ್ತೆಯ ಚರಿತ್ರೆ ಬೆಳವಣಿಗೆಗಳೂ ಆಕಾಶ ಪ್ರಯಾಣದ ಚರಿತ್ರೆ ಬೆಳವಣಿಗೆಗಳೂ ಹೆಚ್ಚು ಕಡಮೆ ಒಂದೇ ಕಾಲಕ್ಕೆ ಸೇರಿದವು. ಆಕಾಶ ಪ್ರಯಾಣ ಮತ್ತು ರೇಡಿಯೋ– ಇವು ಹೆಚ್ಚು ಕಡಮೆ ಒಟ್ಟಿಗೆ ಮೊದಲಾಗಿ ಜೊತೆಯಲ್ಲೇ ಬೆಳೆದುಕೊಂಡು ಬಂದುವು. ೨೦ನೆಯ ಶತಮಾನದ ವೈಜ್ಞಾನಿಕ ಪ್ರಗತಿಯ ಎರಡು ಅತ್ಯಂತ ಪ್ರಮುಖ ನಿದರ್ಶನಗಳಾದ ಇವುಗಳ ಸಹಸಂಬಂಧ ನಿಜವಾಗಿಯೂ ಉಚಿತವಾಗಿಯೇ ಇದೆ.

ವಿದ್ಯುತ್ ಕಾಂತ ತರಂಗ (Electro Magnetic Wave)ಗಳನ್ನು ಮೊದಲು ಕಂಡುಹಿಡಿದವರು ಶ್ರೀಯುತ ಜಗದೀಶ ಚಂದ್ರ ಬೋಸರವರು. ಅವರ ದುರದೃಷ್ಟದಿಂದ, ಸಾಮಾನ್ಯವಾಗಿ ಎಲ್ಲ ಭಾರತೀಯರ ವಿಷಯದಲ್ಲೂ ಇರುವ ತಿರಸ್ಕಾರಭಾವ ಅವರನ್ನೂ ಬಿಡಲಿಲ್ಲ; ಜೊತೆಗೆ ಸಹಾಯ ಸಂಪತ್ತೂ ಸಾಲದು; ಆದ್ದರಿಂದ ಅವರು ತಮ್ಮ ಸಂಶೋಧನೆಗಳನ್ನು ಮುಂದುವರಿಸಲಾಗದೆ, ನಿಸ್ತಂತು ವಾರ್ತೆಯ ನಿರ್ಮಾಪಕನಾಗಿರುವ ಗೌರವ ಇಟಲಿಯ ವಿಜ್ಞಾನಿಯಾದ ಮಾರ್ಕೊನಿಗೆ (Marconi) ಹೋಯಿತು. ಸರಕಾರದ ಸಹಾಯವೂ ಪ್ರೋತ್ಸಾಹವೂ ಇದ್ದಿದ್ದರೆ ಈ ಗೌರವ ಭಾರತೀಯನೊಬ್ಬನಿಗೆ ಬರುತ್ತಿತ್ತು. ಯುದ್ಧದ ವೇಳೆಯಲ್ಲಿ ನಿಸ್ತಂತು ವಾರ್ತೆ ಬಹು ಶೀಘ್ರವಾಗಿ ಅದ್ಭುತ ಪ್ರಗತಿಯನ್ನು ಹೊಂದಿತು; ಅದು ಇಂದು ಆಧುನಿಕ ನಾಗರಿಕತೆಯ ಅಗತ್ಯ ವೈಲಕ್ಷಣ್ಯವಾಗಿ ಪರಿಣಮಿಸಿದೆ. ಮೊದಮೊದಲು ಎರಡು ಮೈಲಿಗಳಿಂದ ಮೂರು ಮೈಲಿಗಳವರೆಗೆ ಸಂಚರಿಸುತ್ತಿದ

ದೂರವಾಗಿರುವುದಕ್ಕೂ ಸಹ ಅವನು ಗೊತ್ತಾದ ಎತ್ತರದಲ್ಲಿ ಹಾರುತ್ತಿರಬೇಕು, ಹಾಗೂ ಒಂದು ಎತ್ತರದಿಂದ ಮತ್ತೊಂದು ಎತ್ತರಕ್ಕೆ ಬದಲಾಯಿಸುತ್ತಿರಬೇಕು. (೩) **ಕೃತಕಕ್ಷಿತಿಜ**: ಒಂದು ಸೂಕ್ಷ್ಮಾಕಾರದ ವಿಮಾನ ಮತ್ತು ಕ್ಷಿತಿಜರೇಖೆ– ಇವೆರಡರ ರೂಪದಲ್ಲಿದೆ ಈ ಸೂಚಕಯಂತ್ರ. ವಿಮಾನವು ಕ್ಷಿತಿಜದಿಂದ ಎಡಕ್ಕೆ ಅಥವಾ ಬಲಕ್ಕೆ ತಿರುಗಿದಾಗ ಈ ಸೂಕ್ಷ್ಮಾಕಾರದ ವಿಮಾನವೂ ಕ್ಷಿತಿಜರೇಖೆಯಿಂದ ಎಡಕ್ಕೆ ಅಥವಾ ಬಲಕ್ಕೆ ಜರುಗುತ್ತದೆ. ಈ ರೀತಿಯಲ್ಲಿ, ವಿಮಾನಕ್ಕೂ ಕ್ಷಿತಿಜಕ್ಕೂ ಇರುವ ಪರಸ್ಪರ ಸ್ಥಾನಸಂಬಂಧವನ್ನು ಈ ಯಂತ್ರ ತೋರಿಸುತ್ತದೆ. ಸಾಮಾನ್ಯ ಪರಿಸ್ಥಿತಿಯಲ್ಲಿ ವಿಮಾನ ನಡಸುವವನು ತನ್ನ ಯಾನದ ಸ್ಥಾನವನ್ನು ಕಂಡುಕೊಂಡು ಅದಕ್ಕನುಸಾರವಾಗಿ ಚಲನೆಗಳನ್ನು ಸರಿಹೊಂದಿಸಬಹುದು. ಆದರೆ, ಮಳೆಗಾಲದಂಥ ಪರಿಸ್ಥಿತಿಯಲ್ಲಿ ವಿಮಾನದ ಸಮತಲ ಮಟ್ಟವನ್ನು ಸರಿಯಾಗಿಟ್ಟು ಕೊಳ್ಳಲು ಈ ಸೂಚಕ ಸಲಕರಣೆಯೆ ಏಕಮಾತ್ರ ಸಾಧನ. (೪) **ಏರು (ಆರೋಹ) ಸೂಚಕ** (Climb Indicator): ವಿಮಾನ ಮೇಲೇರುತ್ತಿರುವ ವೇಗವನ್ನು ಇದು ತೋರಿಸುತ್ತದೆ. (೫) **ವಾಯುಶಾಖ ಮಾಪಕ** (Air Temperature Guage): ವಿಮಾನ ಎಲ್ಲ ಕಡೆಯೂ ಮುಚ್ಚಿದ ಒಂದು ಕೋಣೆಯಾದ್ದರಿಂದ ಹೊರಗಣ ವಾಯುವಿನ ಶಾಖವನ್ನು ತಿಳಿಯಲಾಗುವುದಿಲ್ಲ. ಹೊರಗಣ ವಾಯುವಿನ ಶಾಖ ವಿಮಾನದ ಏರಿಕೆಯ ಮೇಲೆ ಪರಿಣಾಮವುಳ್ಳದ್ದಾದ್ದರಿಂದ, ಈ ಯಂತ್ರ ಸಲಕರಣೆಯ ಸಹಾಯದಿಂದ ವಿಮಾನ ನಡಸುವವನು ಬೇಕಾದ ವ್ಯವಸ್ಥೆಗಳನ್ನು ಮಾಡಲು ಸಾಧ್ಯವಾಗುತ್ತದೆ. (೬) ಕಡೆಯದೂ ಅತ್ಯಂತ ಮುಖ್ಯವೂ ಆದ, ವಿಮಾನ ಹಾರಿಕೆಗೆ ನೆರವಾಗುವ, ಯಂತ್ರ ಸಲಕರಣೆ **ದಿಕ್ಸೂಚಿ** (Compass): ವಿಮಾನ ನಡಸುವವನು ಯಾವ ದಿಕ್ಕಿನಲ್ಲಿ ಹಾರುತ್ತಿದ್ದಾನೆಂಬುದನ್ನು ಇದು ತೋರಿಸುತ್ತದೆ. ಸಾಗರದ ಮೇಲಾಗಲಿ, ಪರಿಚಯವಿಲ್ಲದಿರುವ ಭೂಪ್ರದೇಶಗಳ ಮೇಲಾಗಲಿ ಹಾರುವಾಗ, ಸಮುದ್ರದ ಮೇಲೆ ಪ್ರಯಾಣ ಮಾಡುವ ನಾವಿಕನಿಗೆ ಈ ದಿಕ್ಸೂಚಿ ಯಾವ ರೀತಿ ದಾರಿ ತೋರಿಸುತ್ತದೆಯೋ ಹಾಗೆಯೆ ವಿಮಾನ ನಡಸುವವನಿಗೂ ದಾರಿ ತೋರಿಸುತ್ತದೆ.

**ನಿಸ್ತಂತು (Wireless)**

ವಿಮಾನದ ಮೇಲಿನಿಂದಲೇ ನಿಸ್ತಂತು ವಾರ್ತೆಯನ್ನು ಕಳಿಸುವ ಏರ್ಪಾಡಿನಿಂದ ವಿಮಾನ ಹಾರಿಕೆಯ ಸುರಕ್ಷಿತತೆ ಬಹುಮಟ್ಟಿಗೆ ಹೆಚ್ಚಿದೆ. ನಿಜವಾಗಿ ಯೋಚಿಸಿ ನೋಡಿದರೆ, ನಿಸ್ತಂತು ವಾರ್ತೆಯ ಏರ್ಪಾಟನ್ನು

ಹೆದರಿಕೆಯಿದ್ದರೆ, ನೆಲೆ ನಿಲ್ದಾಣ (Ground station) ಹಾರುತ್ತಿರುವ ವಿಮಾನಕ್ಕೆ ಇನ್ನು ಮುಂದಕ್ಕೆ ಹೋಗಕೂಡದೆಂದು ತಿಳಿಸಿ, ಅದನ್ನು ಹಿಂದಕ್ಕೆ ಕರೆಯಬಹುದು. ಅಥವಾ, ಬಿರುಗಾಳಿ ಮಳೆ ಯಾವ ಎತ್ತರದಲ್ಲಿ ಭೋರ್ಗರೆಯುತ್ತಿದೆಯೆಂಬುದನ್ನು ವಿಮಾನ ನಡಸುವವನಿಗೆ ಸರಿಯಾಗಿ ತಿಳಿಸುವುದರ ಮೂಲಕ, ಅವನು ತನ್ನ ಎತ್ತರವನ್ನು ಬದಲಾಯಿಸಿಕೊಂಡು ಬಿರುಗಾಳಿ ಮಳೆಗೆ ಸಿಕ್ಕಿಕೊಳ್ಳದೆ ಅದರಿಂದ ಪಾರಾಗುವಂತೆ ಮಾಡಬಹುದು. ಅಥವಾ, ಒಂದು ಗೊತ್ತಾದ ಎತ್ತರದಲ್ಲಿ ಬಲವಾದ ಎದುರುಗಾಳಿಗಳು ಬೀಸುತ್ತಿದ್ದರೆ ಈ ವಿಚಾರವನ್ನು ವಿಮಾನ ನಡಸುವವನಿಗೆ ತಿಳಿಸಿ, ಸಾಮಾನ್ಯ ಸ್ಥಿತಿಯುಳ್ಳ ಹೆಚ್ಚು ಎತ್ತರದ ಪ್ರದೇಶದಲ್ಲಿ ಹಾರುವಂತೆ ಮಾಡಬಹುದು. ಅಲ್ಲದೆ, ಅವನು ಇಳಿಯಬೇಕೆಂದಿರುವ ವಿಮಾನಾಂಗಣ ಅಕಸ್ಮಾತ್ ಮಳೆಯಿಂದಾಗಲಿ ಇಲ್ಲವೆ ಬೇರೆ ಯಾವುದಾದರೂ ಅನಿರೀಕ್ಷಿತ ಘಟನೆಯಿಂದಾಗಲಿ ಉಪಯೋಗಿಸಲಾಗದಂತಾಗಿದ್ದರೆ ವಿಮಾನಾಂಗಣದ ಸ್ಥಿತಿಯನ್ನು ಅವನಿಗೆ ತಿಳಿಸಬಹುದು. ಈ ಮುನ್‌ತಿಳಿವಳಿಕೆ ಪಡೆದ ವಿಮಾನ ನಡಸುವವನು ತನ್ನ ಮಾರ್ಗವನ್ನು ಬದಲಾಯಿಸಿಕೊಂಡು ಇನ್ನೆಲ್ಲಿಯಾದರೂ ಇಳಿಯಲು ಏರ್ಪಾಡು ಮಾಡಿಕೊಳ್ಳುತ್ತಾನೆ. ಹಾರುತ್ತಿರುವ ವಿಮಾನಕ್ಕೂ ನೆಲಕ್ಕೂ ಈ ರೀತಿ ಸಂಪರ್ಕವಿಲ್ಲದೆ ಹೋಗಿದ್ದರೆ, ವಿಮಾನ ನಡಸುವವನು ಇಂಥ ಎಡರು ತೊಡರುಗಳಿಂದ ಪಾರಾಗುವುದು ದುಸ್ಸಾಧ್ಯವಾಗುತ್ತಿತ್ತು: ಮತ್ತು, ವಿಮಾನ ಪ್ರಯಾಣ ಮಾಡುವುದು ಅತ್ಯಂತ ಅಪಾಯಕರವಾಗುತ್ತಿತ್ತು.

(೩) ದಿಕ್‌ನಿರ್ದೇಶಕ ನಿಸ್ತಂತುವಿನ ಸಹಾಯದಿಂದ ವಿಮಾನ ನಡಸುವವನು ಬೇರೆ ಹೊರಗಿನ ಸಹಾಯವಾವುದೂ ಇಲ್ಲದೆ, ತನ್ನ ದಾರಿಯನ್ನು ಕಂಡುಹಿಡಿದು ಕೊಳ್ಳಬಹುದು. ಏನೂ ಚೆನ್ನಾಗಿ ಗೋಚರವಾಗದಿರುವ ಸ್ಥಿತಿಯಲ್ಲಿ ವಿಮಾನನಡಸುವವನಿಗೆ ನೆಲ ಕಾಣದಿರುವಾಗ, ಅವನು ತಾನು ತಲುಪಬೇಕಾದ ಸ್ಥಳದ ನಿಸ್ತಂತು ಕೇಂದ್ರದಿಂದ ಕಳಿಸಲ್ಪಟ್ಟ ಕಿರಣದ ವ್ಯಾಪ್ತಿಯೊಳಗೇ ಹೋಗುತ್ತ ಆ ಸ್ಥಳವನ್ನು ತಲುಪಬಹುದು. ತನ್ನ ನೆಲೆಯೇ ತನಗೆ ತಿಳಿಯದಿದ್ದರೂ ಕೇಂದ್ರದೊಡನೆ ಸಂತತ ಸಂಪರ್ಕವಿಟ್ಟುಕೊಳ್ಳುವುದರಿಂದ ತಾನು ಸರಿಯಾದ ದಿಕ್ಕಿನಲ್ಲಿ ಹೋಗುತ್ತಿದ್ದೇನೆಂದು ಅವನು ದೃಢವಾಗಿರಬಹುದು. ಕೇಂದ್ರದೊಡನೆ ನಿಸ್ತಂತು ಸಂಪರ್ಕ ತಪ್ಪಿದ ಕೂಡಲೆ ತಾನು ದಾರಿ ತಪ್ಪುತ್ತಿರುವುದಾಗಿ ಅವನಿಗೆ ಗೊತ್ತು. ಇದೇ ರೀತಿಯಲ್ಲಿ, ವಿಮಾನ ಹಾರುತ್ತಿರುವಾಗ ಅದರ ಮಾರ್ಗವನ್ನು ನೆಲ ನಿಲ್ದಾಣಗಳು ಗೊತ್ತುಹಿಡಿಯಬಹುದು. ವಿಮಾನ ನೆಲೆ ತಪ್ಪಿದರೆ, ಒಂದು

ನಿಸ್ತಂತು ತರಂಗಗಳು ಈಗ ಪ್ರಪಂಚದ ಮೇಲೆಲ್ಲ ಸಂಚರಿಸಬಲ್ಲವು, ಮತ್ತು ಯಾವ ಸಮಾಚಾರ ಸಂದೇಶವನ್ನು ಬೇಕಾದರೂ ವಿದ್ಯುದ್ವೇಗದಿಂದ ಪ್ರಪಂಚದ ಮೇಲೆಲ್ಲ ಹರಡಬಲ್ಲವು. ಅತ್ಯಂತ ಅಲ್ಪಾವಧಿಯಲ್ಲಿ, ಸಾಗಣೆಯಲ್ಲೂ ಆಕಾಶ ಅಥವಾ ಸಮುದ್ರ ಪ್ರಯಾಣದಲ್ಲೂ ನಿಸ್ತಂತುವಾರ್ತೆ ಎಷ್ಟು ಮುಖ್ಯ ಅಂಗವಾಗಿದೆಯೆಂದರೆ, ಆಕಾಶ ಸಾಗಣೆಯ (Air transport) ಮುಂದಿನ ಬೆಳವಣಿಗೆ ರೇಡಿಯೊ ಯಂತ್ರಶಿಲ್ಪದ ಬೆಳವಣಿಗೆಯೊಂದಿಗೆ ಬೇರ್ಪಡಿಸಲಾಗದಂತೆ ಹೊಂದಿಕೊಂಡಿದೆ.

ಇಂದು ರೇಡಿಯೋ ಸಜ್ಜಿತ ವಿಮಾನವನ್ನು ನಡಸುವವನು ರೇಡಿಯೋವಿನ ಸಹಾಯದಿಂದ, ಸಾಧಾರಣ ರಸ್ತೆ ಬಂಡಿ ಹೊಡೆಯುವವನು ನೆಲದ ಮೇಲಿನ ಜನರೊಡನೆ ಎಷ್ಟು ಸಂಪರ್ಕವುಳ್ಳವನಾಗಿರುತ್ತಾನೆಯೊ ಅದಕ್ಕಿಂತ ಹೆಚ್ಚು ಹತ್ತಿರದ ಸಂಪರ್ಕವುಳ್ಳವನಾಗಿದ್ದಾನೆ. ವಿಮಾನದ ರೇಡಿಯೋ ಸಜ್ಜು– ಎಂದರೆ ನಿಸ್ತಂತು ವಾರ್ತಾ ಪ್ರೇರಕ ಮತ್ತು ಗ್ರಾಹಕ– ಈ ಮುಂದಿನ ಕೆಲಸಗಳಿಗೆ ಉಪಯೋಗ: (೧) ದಿಕ್‌ನಿಯಂತ್ರಣ, (೨) ವಾಯುಸ್ಥಿತಿಯ ವರದಿಗಳನ್ನು ಪಡೆಯುವುದು, (೩) ತುರ್ತು ಸಂಜ್ಞೆಗಳನ್ನು ಕಳಿಸುವುದು.

(೧) ಒಂದು ವಿಮಾನವನ್ನು ನಡಸುವವನು ಹಾರುತ್ತಿರುವ ಎಲ್ಲ ವಿಮಾನಗಳಿಗೂ ತಂಗುವ ನಿಲ್ದಾಣಗಳು, ನಿಸ್ತಂತು ಕೇಂದ್ರಗಳು, ವಿಮಾನ ಒಂದು ಸ್ಥಳಕ್ಕೆ ಬಂದ ಮತ್ತು ಅದನ್ನು ಬಿಡುವ ಹೊತ್ತು– ಈ ಸಂಗತಿಗಳ ಬಗ್ಗೆ ತಿಳಿವಳಿಕೆ ಕೊಡಬಲ್ಲನು; ಇದರಿಂದ ಮಾರ್ಗದಲ್ಲಿ ಹಾರುತ್ತಿರುವ ಇತರ ವಿಮಾನಗಳು ತಮ್ಮ ದಾರಿಯನ್ನು ಸರಿಹೊಂದಿಸಿಕೊಳ್ಳಬಲ್ಲವು. ಉದಾಹರಣೆಗಾಗಿ, ಒಂದು ವಿಮಾನ ತಾನು ೪,೦೦೦ ಅಡಿಗಳ ಎತ್ತರದಲ್ಲಿ ಹಾರುತ್ತಿರುವುದಾಗಿ ತಿಳಿಸುತ್ತದೆ; ಅದೇ ಮಾರ್ಗದಲ್ಲಿ ಹಾರಿಹೋಗುತ್ತಿರುವ ಇತರ ವಿಮಾನಗಳು ಆ ಎತ್ತರದಲ್ಲಿ ಹಾರುವುದನ್ನು ಬಿಟ್ಟು, ಆ ವಿಮಾನಕ್ಕೆ ಡಿಕ್ಕಿಹೊಡೆದು ಅಪಘಾತ ಕ್ಕೀಡಾಗುವ ಸಂಭವದಿಂದ ಪಾರಾಗುತ್ತವೆ. ಹಿಂದೆ, ಒಂದು ವಿಮಾನ ಎಷ್ಟು ಎತ್ತರದಲ್ಲಿ ಹಾರುತ್ತಿದೆ ಎಂದು ಪರಸ್ಪರ ತಿಳಿದುಕೊಳ್ಳಲು ವಿಮಾನಗಳಿಗೆ ಅಸಾಧ್ಯವಾಗಿತ್ತು.

(೨) ವಿಮಾನ ನೆಲವನ್ನು ಬಿಟ್ಟಮೇಲೆ ವಾಯುಸ್ಥಿತಿಯಲ್ಲಿ ಆಗಿರುವ ವ್ಯತ್ಯಾಸಗಳನ್ನೂ ಅದು ಮುಂದೆ ಸಂಧಿಸಬೇಕಾಗಿರುವ ವಾಯುಗುಣವನ್ನೂ ಹಾರುತ್ತಿರುವ ವಿಮಾನಕ್ಕೆ ತಿಳಿಸಿ, ವಿಮಾನ ನಡಸುವವನಿಗೆ ಪೂರ್ವಭಾವಿಯಾಗಿ ಎಚ್ಚರಿಕೆ ಕೊಡಬಹುದು. ಉದಾಹರಣೆಗೆ, ಬಿರುಗಾಳಿ ಮಳೆ ಬರುವುದೆಂಬ

ಸಂಬಂಧಪಟ್ಟಿದೆಯೊ ಅದನ್ನೊಳಕೊಂಡ ಒಂದು ವಿಶಾಲ ಪ್ರದೇಶದಲ್ಲಿ ಒಂದು ಗೊತ್ತಾದ ಕಾಲದಲ್ಲಿ ಪವನಶಾಸ್ತ್ರ ಪ್ರಕಾರ ಸ್ಥಿತಿಗತಿಗಳು ಹೇಗಿವೆಯೆಂಬುದನ್ನು ತೋರಿಸುತ್ತದೆ. ಈ ಆಧಾರಭೂತವಾದ ಆವಶ್ಯಕತೆಯ ಪರಿಣಾಮವಾಗಿ ಕಳೆದ ೮೫ ವರ್ಷಗಳ ಅವಧಿಯಲ್ಲಿ ಒಂದು ವ್ಯವಸ್ಥೆ ಬೆಳೆಯಲವಕಾಶವಾಗಿದೆ; ಈ ವ್ಯವಸ್ಥೆಯ ಮೂಲಕ ಬೇರೆ ಬೇರೆ ದೇಶಗಳಲ್ಲಿ ಕ್ರಮವಾದ ಪರಿಶೀಲನೆಗಳನ್ನು ನಡಸಿ ಅವುಗಳನ್ನು ಶೀಘ್ರವಾಗಿ ವಿನಿಮಯ ಮಾಡಿಕೊಳ್ಳಲಾಗುತ್ತಿದೆ; ಹೀಗೆ, ಪವನ ಶಾಸ್ತ್ರ ಸಂಬಂಧವಾದ ಪರಿಶೀಲನೆ ನಡಸುವ ಯಾವ ಸಂಸ್ಥೆಗಾದರೂ ಈ ತಿಳಿವಳಿಕೆ ತಕ್ಕಮಟ್ಟಿಗೆ ಅಲ್ಪಕಾಲದಲ್ಲಿ ದೊರೆಯುವಂತಾಗಿದೆ. ಅಂತರರಾಷ್ಟ್ರೀಯ ಸಮ್ಮತಿಯಿಂದ ರಚಿತವಾದ ಈ ವ್ಯವಸ್ಥೆಗೆ, ರೇಡಿಯೋ ಬಂದಂದಿನಿಂದ ಈಚೆಗೆ ಹೆಚ್ಚಿನ ಸೌಕರ್ಯವುಂಟಾಗಿದೆ. ಈಗ ಬಹುಮಟ್ಟಿಗೆ ಪ್ರತಿಯೊಂದು ನಾಗರಿಕ ದೇಶವೂ ಪರಿಶೀಲನ ಕಾರ್ಯಸ್ಥಳಗಳ ಶಾಖೋಪಶಾಖೆಗಳನ್ನು ನಡಸಿಕೊಂಡು ಬರುತ್ತಿದೆ. ಉದಾಹರಣೆಗಾಗಿ, ಯೂರೋಪಿನಲ್ಲೂ ಪಶ್ಚಿಮ ರಷ್ಯದಲ್ಲೂ ಸುಮಾರು ೬೦೦ ಕಾರ್ಯಸ್ಥಳಗಳಿವೆ. ಪ್ರತಿಯೊಂದು ಪರಿಶೀಲನ ಕಾರ್ಯಸ್ಥಳವೂ ರಾಷ್ಟ್ರೀಯ ಪವನ ಶಾಸ್ತ್ರ ಕಾರ್ಯಾಲಯಕ್ಕೆ ಒಂದು ಅಥವಾ ಹೆಚ್ಚಿನ ವರದಿಗಳನ್ನು ಕಳಿಸುತ್ತವೆ. ಪರಿಶೀಲನೆಗಳನ್ನು ನಡಸುವ ಕಾಲಗಳನ್ನು ಅಂತರರಾಷ್ಟ್ರೀಯ ಸಮ್ಮತಿಯಿಂದ ಗೊತ್ತುಮಾಡಿದೆ. ರಾಷ್ಟ್ರೀಯ ಪವನಶಾಸ್ತ್ರ ಕಾರ್ಯಾಲಯಕ್ಕೆ ಬೇರೆ ಬೇರೆ ಪರಿಶೀಲನ ಕಾರ್ಯಸ್ಥಳಗಳಿಂದ ಬರುವ ಸಮಾಚಾರಗಳಲ್ಲಿರುವ ಅಂಶಗಳು ಇವು: ಸರಾಸರಿ ಸಮುದ್ರಮಟ್ಟಕ್ಕೆ ಇಳಿಸಿ ಅದಕ್ಕನುಗುಣವಾಗಿ ಸರಿಪಡಿಸಿದ, ವಾಯುಭಾರ ಮಾಪಕ ಯಂತ್ರದ ಒತ್ತಡ (Barometric Pressure) ಮತ್ತು ಕಳದ ಮೂರು ಗಂಟೆಗಳ ಕಾಲದಲ್ಲಿ ಅದರಲ್ಲಾದ ವ್ಯತ್ಯಾಸಗಳು; ಪರಿಶೀಲನ ಸಮಯದಲ್ಲಿನ ಶಾಖ; ವಾಯುವಿನ ಆರ್ದ್ರತೆ; ಗಾಳಿಯ ದಿಕ್ಕು ಮತ್ತು ಜೋರು; ಮೋಡಗಳ ಮಾದರಿ, ಮೊತ್ತ, ಮತ್ತು ಎತ್ತರ; (ಗೋಚರತೆ (Visibility); ಮತ್ತು ವಾಯುಗುಣದ ಸಾಮಾನ್ಯ ಲಕ್ಷಣ. ಬೆಳಗ್ಗೆಯ ಮತ್ತು ಸಂಜೆಯ ಪರಿಶೀಲನೆಗಳ ಸಮಾಚಾರದಲ್ಲಿ ಮಳೆ, ಹಿಂದಿನ ೧೩ ಅಥವಾ ೧೧ ಗಂಟೆಗಳ ಕಾಲದಲ್ಲಿನ ಪರಮಾವಧಿಯ ಮತ್ತು ಕನಿಷ್ಠಾವಧಿಯ ಶಾಖ– ಇವೂ ಸೇರಿರುತ್ತವೆ. ಈ ಎಲ್ಲ ಪರಿಶೀಲನೆಗಳೂ ಮೇಲ್ಮೈಯ ಸ್ಥಿತಿಗತಿಗಳನ್ನು ಕುರಿತವು; ಇವುಗಳನ್ನು ಪ್ರತ್ಯಕ್ಷವಾಗಿ ಅಳೆಯದೆ ಮೇಲ್ಮೈಯಿಂದಲೇ ಪರಿಶೀಲಿಸಬಹುದು. ಇಷ್ಟೇ ಅಲ್ಲದೆ, ಬೇರೆ ಬೇರೆ ಎತ್ತರಗಳಲ್ಲಿ ಗಾಳಿಯ ವೇಗ ಮತ್ತು ದಿಕ್ಕುಗಳ ಸಂಬಂಧವಾಗಿಯೂ ಶಾಖಗಳು ಊರ್ಧ್ವಮುಖದಲ್ಲಿ ಹೇಗೆ ಹಂಚಿಕೆಗೊಂಡಿವೆಯೆಂಬ ಬಗ್ಗೆಯೂ

ನಿರ್ದಿಷ್ಟ ಕ್ಷಣದಲ್ಲಿ ಅದರ ನೆಲೆಯೇನು, ಸ್ಥಿತಿಯೇನು ಎಂಬುದನ್ನು ಅದಕ್ಕೆ ತಿಳಿಸಲು ಸಾಧ್ಯ. ತುರ್ತಾದ ಸಂದರ್ಭದಲ್ಲಿ ವಿಮಾನ ನಡಸುವವನು ತಾನು ಕೆಳಗಿಳಿಯಬೇಕಾಗಿ ಬಂದಿದೆಯೆಂದಾಗಲಿ ತನಗೆ ಸಹಾಯ ಬೇಕಾಗಿದೆಯೆಂದಾಗಲಿ ಮಾರ್ಗದಲ್ಲಿನ ಎಲ್ಲ ನಿಲ್ದಾಣಗಳಿಗೂ ಸಂಜ್ಞೆ ಮಾಡಬಹುದು; ಸಾಧ್ಯವಾದ ಸಹಾಯವನ್ನು ಅವನಿಗೆ ಕೂಡಲೆ ಒದಗಿಸಬಹುದು.

ಹೀಗೆ, ರೇಡಿಯೋವಿನ ಸಹಾಯದಿಂದ ಆಕಾಶಸಾಗಣೆ ಸುರಕ್ಷಿತವಾಗಿ ಮಾಡಲ್ಪಟ್ಟಿದೆ; ಮಂಜು ಮತ್ತು ಕೆಟ್ಟ ವಾಯುಸ್ಥಿತಿಯಲ್ಲಿ ಕೂಡ ಹಾರುವುದು ಸಾಧ್ಯವಾಗಿರುವುದು ಮಾತ್ರವಲ್ಲದೆ ಸುರಕ್ಷಿತವಾಗಿಯೂ ಇದೆ.

**ಪವನ ಶಾಸ್ತ್ರ**

ಮನುಷ್ಯನು ಸಾಧ್ಯವಿರುವ ಮಟ್ಟಿಗೂ ವಾಯುಗುಣದ ಪರಿಸ್ಥಿತಿಗೆ ಅಧೀನನಾಗದೆ ಇರುವಂತೆ ಮಾಡುವುದಕ್ಕಾಗಿ, ಅವನ ಬಹುಮಟ್ಟಿಗಿನ ಸಾಮರ್ಥ್ಯವೆಲ್ಲ– ಬುದ್ಧಿಪೂರ್ವಕವಾಗಿಯೊ ಬುದ್ಧಿಪೂರ್ವಕವಾಗಿಲ್ಲದೆಯೊ– ವಿನಿಯೋಗವಾಗಿದೆ. ವಾಯು ನಾವಿಕನು ಇತರ ಮಾನವರು ಎದುರಿಸ ಬೇಕಾದ ಸಮಸ್ಯೆಯನ್ನೇ ಎದುರಿಸಬೇಕಾಗಿದೆ– ಆದರೆ, ಸ್ವಲ್ಪಮಟ್ಟಿಗೆ ಬೇರೆ ದೃಷ್ಟಿಕೋನದಿಂದ. ಯಶಸ್ವಿಯಾಗಿ ಆಕಾಶ ಪ್ರಯಾಣ ಮಾಡುವುದನ್ನೂ ಸುರಕ್ಷಿತವಾಗಿ ಹಾರುವುದನ್ನೂ ದೃಢಪಡಿಸಿಕೊಳ್ಳಬೇಕಾದರೆ ಸಾಮಾನ್ಯ ಕಾರ್ಯವೆಲ್ಲ– ಅತ್ಯಂತ ವಿಪರೀತ ಸ್ಥಿತಿಯುಂಟಾದರೆ ವಿನಾ– ಸ್ವಲ್ಪವೂ ವ್ಯತ್ಯಾಸ ಹೊಂದಕೂಡದು. ವಿಮಾನ ನಡಸುವವನು ಹಾರುವುದಕ್ಕೆ ಮುನ್ನ ತಾನು ತನ್ನ ಮಾರ್ಗದಲ್ಲಿ ಸಂಧಿಸಲಿರುವ ವಾಯುಸ್ಥಿತಿಗಳ ತಕ್ಕಮಟ್ಟಿನ ಪರಿಚಯವನ್ನು ಪಡೆದಿರಬೇಕು. ಇದು ಮಾತ್ರವಲ್ಲದೆ, ಹಾರುತ್ತಿರುವಾಗ ವಾಯುಸ್ಥಿತಿಯಲ್ಲಿ ನಿರಂತರವಾಗಿ ಉಂಟಾಗುತ್ತಿರುವ ಬದಲಾವಣೆಗಳ ವರದಿಗಳನ್ನು ಅವನಿಗೆ ಒದಗಿಸುತ್ತಿರಬೇಕು. ಈ ಮುನ್ನೆಚ್ಚರಿಕೆಗಳನ್ನೆಲ್ಲ ತೆಗೆದುಕೊಂಡ ಮೇಲೆಯೇ ಹಾರುವುದು ಯುಕ್ತ.

ಒಂದು ನಿಯಮಿತ ಕಾಲಾವಧಿಯಲ್ಲಿ, ಒಂದು ನಿರ್ದಿಷ್ಟ ಪ್ರದೇಶದಲ್ಲಿ, – ವಾಯುಗುಣ, ಗಾಳಿ, ಇಲ್ಲವೆ ಬೇರೆ ಯಾವುದಾದರೂ ಹೆಚ್ಚು ಮುಖ್ಯವಾದ ಪವನ ಶಾಸ್ತ್ರ ವಿಷಯಕವಾದ ಭೂಶಕ್ತಿಯಲ್ಲಿ ಹೀಗೆ ಹೀಗೆಯೇ ಬದಲಾವಣೆಗಳು ಸಂಭವಿಸಬಹುದೆಂದು ಮುಂದಾಗಿ ಹೇಳಬೇಕಾದರೆ, ಒಂದು ನಕ್ಷೆಗಳ ಮಾಲೆ ಆವಶ್ಯಕ. ಈ ನಕ್ಷೆಗಳಲ್ಲಿ ಪ್ರತಿಯೊಂದೂ, ಮುನ್‌ಸೂಚನೆ ಯಾವ ಪ್ರದೇಶಕ್ಕೆ

ಹೀಗೆ, ವಿಮಾನದಲ್ಲಿರುವ ಬೇರೆ ಬೇರೆ ಭದ್ರತೆಯ ಯಂತ್ರ ಸಲಕರಣೆಗಳು, ರೇಡಿಯೋ ಮತ್ತು ಪವನ ಶಾಸ್ತ್ರ– ಇವುಗಳು ವಿಮಾನ ಹಾರಿಕೆಯನ್ನು ಭೂಮಿಯ ಮೇಲಿನ ಇತರ ಯಾವುದೇ ಪ್ರಯಾಣವಿಧಾನದಷ್ಟೇ ಸುರಕ್ಷಿತವಾಗಿ ಮಾಡಿವೆ. ಈ ವೈಜ್ಞಾನಿಕ ಸಹಾಯಗಳಿಲ್ಲದೆ ಹೋಗಿದ್ದರೆ, ವಿಮಾನ ಪ್ರಯಾಣ ಇಂದಿನಷ್ಟು ಜನಪ್ರಿಯವಾಗುತ್ತಿರಲಿಲ್ಲ.

* * * *

ತಿಳಿವಳಿಕೆ ಆವಶ್ಯಕ. ಆಕಾಶಬುಟ್ಟಿ ಪರಿಶೀಲನೆ ನಡಸಲು ಸಜ್ಜಾದ ಕಾರ್ಯಸ್ಥಳಗಳ ಸಣ್ಣ ಜಾಲವೊಂದು ಮೊದಲನೆಯ ತೆರದ ಸಮಾಚಾರವನ್ನು ಒದಗಿಸುತ್ತದೆ; ಮೇಲ್ಭಾಗದ ವಾಯು ಶಾಖಗಳ ಪ್ರತ್ಯಕ್ಷ ಪರಿಶೀಲನೆಗಳು ಪರಿಮಿತ ಸಂಖ್ಯೆಯ ವಿಮಾನ ನಿಲ್ದಾಣಗಳಿಂದ ದೊರೆಯುತ್ತವೆ. ತಂತಿ ವರ್ತಮಾನದ ಮೊತ್ತವನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸುವುದಕ್ಕಾಗಿಯೂ ಎಲ್ಲ ಪರಿಶೀಲನೆಗಳನ್ನೂ ಒಂದು ಅಂತರ ರಾಷ್ಟ್ರೀಯ ಸಂಕೇತ ಭಾಷೆಯ ಮೂಲಕ ಕಳಿಸಿಕೊಡಲಾಗುತ್ತದೆ. ಭೂಮಿಯ ಮೇಲಣ ಕಾರ್ಯಸ್ಥಳಗಳಿಂದ ಕಳಿಸಿದ ಪರಿಶೀಲನೆಗಳ ಜೊತೆಗೆ, ಅಂತರಾಷ್ಟ್ರೀಯ ವರದಿ ಕಾಲದ ಗಂಟೆಗಳ ಸಮಯಕ್ಕೆ ಸರಿಯಾಗಿ ಸಮುದ್ರದ ಮೇಲೆ ಹಡಗುಗಳಿಂದ ಮಾಡಿದ ಪರಿಶೀಲನೆಗಳನ್ನು ಕಳಿಸಲಾಗುತ್ತದೆ. ಇಂಡಿಯಾದಲ್ಲೂ ಇದೇ ಬಗೆಯ ಪರಿಶೀಲನ ಕಾರ್ಯಸ್ಥಳಗಳು ನಾಡಿನಲ್ಲೆಲ್ಲಾ ಚೆದುರಿವೆ. ಈ ಎಲ್ಲ ಕಾರ್ಯಸ್ಥಳಗಳೂ ತಮ್ಮ ವರದಿಗಳನ್ನು ಪುಣೆಯ ಸಮೀಕ್ಷಾ ಮಂದಿರಕ್ಕೆ (Observatory) ಕಳಿಸುತ್ತವೆ; ಅಲ್ಲಿ ಬೇಕಾದ ಸಮಾಚಾರಗಳನ್ನೆಲ್ಲ ಪರಿಶೋಧಿಸಿ, ಲೆಕ್ಕಾಚಾರ ಮಾಡಿ, ಎಲ್ಲ ವಾಯುಗುಣ ವರದಿಗಳನ್ನೂ ಪ್ರಕಟಗೊಳಿಸಲಾಗುತ್ತದೆ.

ಯಾವುದೇ ವಾಯುಯಾನ ನಿಲ್ದಾಣವಾದರೂ ಅಲ್ಲಿ ವಿಮಾನ ನಡಸುವವನ ಉಪಯೋಗಕ್ಕೆ ಸಿದ್ಧವಾಗಿಟ್ಟಿದ್ದು, ವಿಮಾನ ಹಾರುತ್ತಿರುವಾಗ ರೇಡಿಯೋ ಮೂಲಕ ಎಡಬಿಡದೆ ಅವನಿಗೆ ಕಳಿಸುವ ಅಂಥ ವಾಯುಗುಣ ವರದಿಗಳು, ಆಯಕರ ಪ್ರದೇಶಗಳಿಂದಲೂ ವಾಯು ಮಂಡಲದ ಬಿರುಗಾಳಿ ಮಳೆಯ ಸ್ಥಳಗಳಿಂದಲೂ ದೂರವಾಗಿರುವುದಕ್ಕೆ ಮತ್ತು ಅನುಕೂಲವಾದ ಗಾಳಿಗಳ ಪ್ರಯೋಜನ ಹೊಂದುವುದಕ್ಕೆ ಅವನಿಗೆ ನೆರವಾಗುತ್ತವೆ. ಪವನ ಶಾಸ್ತ್ರದ ವಿಜ್ಞಾನ ಬಹು ಹಳೆಯದು; ಹಿಂದಿನ ಕಾಲದಲ್ಲಿ ಸಮುದ್ರ ಪ್ರಯಾಣ ಮಾಡುತ್ತಿದ್ದ ಪುರಾತನ ನಾವಿಕನು ಇದರ ಉಪಯೋಗ ಹೊಂದಿದ್ದಾನೆ. ಅದೇ ರೀತಿಯಲ್ಲಿ, ಈಗಿನ ಸಮುದ್ರ ಪ್ರಯಾಣವೂ ಅನುಕೂಲವಾಗಿರುವುದಕ್ಕೆ ಪವನಶಾಸ್ತ್ರವನ್ನು ಹೆಚ್ಚು ಹೆಚ್ಚಾಗಿ ಉಪಯೋಗಿಸಿಕೊಳ್ಳುತ್ತಿರುವುದೇ ಬಹುಮಟ್ಟಿಗೆ ಕಾರಣ. ವಾಯುವಿನಂಥ ಚಂಚಲ ಪ್ರವೃತ್ತಿಯ ಭೂತಶಕ್ತಿಯ ಮಾರ್ಗವಾಗಿ ವಾಯುನಾವಿಕನು ಪ್ರಯಾಣ ಮಾಡಬೇಕಾಗಿರುವುದರಿಂದ ಅವನು ಪವನ ಶಾಸ್ತ್ರದಿಂದ ಇನ್ನೂ ಹೆಚ್ಚಿನ ಪ್ರಯೋಜನ ಪಡೆಯಬೇಕಾದದ್ದು ಅಗತ್ಯ. ಈ ವಿಜ್ಞಾನ ಅಪರಿಪೂರ್ಣವಾಗಿದ್ದರೂ ಇದರ ಸಹಾಯದಿಂದ ವಿಮಾನಪ್ರಯಾಣ ತಕ್ಕಮಟ್ಟಿಗೆ ಸುರಕ್ಷಿತವಾಗಿ ಪರಿಣಮಿಸಿದೆ.

ವಾಯುಮಾರ್ಗ ಕಾರ್ಯಮಾಡತೊಡಗಿತೆಂದು ಹೇಳಬಹುದು. ಅಂದಿನಿಂದ ವಾಯುಮಾರ್ಗದ ಮೂಲಕ ಸಾಗಿಸುವುದು ಬಹಳ ಜನಪ್ರಿಯವಾಗಿದೆ; ಮತ್ತು ಸಾರ್ವಜನಿಕರಲ್ಲಿ ಬಹುಮಂದಿ ವಿಮಾನವನ್ನು ಕ್ರಮವಾದ ಸಂಚಾರ ಸಾಧನವಾಗಿ ಉಪಯೋಗಿಸುತ್ತಿದ್ದಾರೆ. ಈಚೆಗೆ ಹಲವು ದೂರದ ವಾಯುಮಾರ್ಗಗಳು ಏರ್ಪಟ್ಟು, ಅವುಗಳನ್ನು ಉಪಯೋಗಿಸುವ ಹಲವಾರು ಸಂಘಗಳು ಹುಟ್ಟಿಕೊಂಡಿವೆ. ಇಂದು ಪ್ರಪಂಚದ ಇತರ ಮುಖ್ಯ ನಗರಗಳೊಂದಿಗೆ ಆಕಾಶಮೂಲಕ ಸಂಸರ್ಗವಿಟ್ಟುಕೊಂಡಿಲ್ಲದ ಒಂದು ದೊಡ್ಡ ನಗರವೂ ಇಲ್ಲ. ಆದರೂ ಅನೇಕ ದೇಶಗಳಲ್ಲಿ ಕಾರ್ಯ ಮಾಡುವಂಥವು ಖಾಸಗಿ ಸಂಘಗಳು; ಅನೇಕ ಟಪ್ಪಾಲು ಕಚೇರಿಗಳು ಟಪ್ಪಾಲು ಒಯ್ಯಲು ಬರಿಯ ಗುತ್ತಿಗೆದಾರರ ಸ್ಥಾನವನ್ನು ವಹಿಸಿಕೊಂಡಿವೆ. ಟಪ್ಪಾಲು ಕಚೇರಿಗಳ ಈ ಮನೋವೃತ್ತಿ ಪರಿಣಾಮದಲ್ಲಿ ಆಕಾಶ ಟಪ್ಪಾಲಿನ ಬೆಳವಣಿಗೆಯನ್ನು ಹಿಮ್ಮೆಟ್ಟಿಸುವುದಾಗಿದೆ. ಇದರ ಫಲಿತಾಂಶ ಏನೆಂದರೆ, ಆಕಾಶ ಟಪ್ಪಾಲಿನ ದರ ಬಲು ಹೆಚ್ಚಾಗಿದೆ; ಮಿತಿಮೀರಿದ ರುಸುಮು ಹಾಕುವ ತೊಡಕಿನ ಪದ್ಧತಿಗೆ ಅವಕಾಶವಾಗಿದೆ. ಈ ಕಾರಣಗಳಿಂದ ಸಮಾಜದ ಮಧ್ಯಮ ವರ್ಗಕ್ಕೆ ಸೇರಿದವನು ತನ್ನ ಕಾಗದ ಕಳಿಸಲು ವಿಮಾನವನ್ನುಪಯೋಗಿಸಲಾರ. ಇವೆಲ್ಲದರ ಪರಿಣಾಮವಾಗಿ ವಿಮಾನ ಇನ್ನೂ ಧನಿಕರ ಏಕಸ್ವಾಮ್ಯವಾಗಿದೆ. ಟಪ್ಪಾಲು ಕಚೇರಿಗಳು ಟಪ್ಪಾಲು ಸಾಗಿಸುವ ಕಾರ್ಯದಲ್ಲಿ ಭಾಗವಹಿಸದಿರುವುದರಿಂದ, ಪ್ರಯಾಣಿಕರನ್ನೊಯ್ಯುವುದು ಕಾರ್ಯಕರ್ತ ಸಂಘಗಳಿಗೆ ಆದಾಯಕ್ಕೊಂದು ಮುಖ್ಯ ಸಾಧನವಾಗಿದೆ. ಆಕಾಶ ಮಾರ್ಗವಾಗಿ ಪ್ರಯಾಣಿಕರನ್ನು ಸಾಗಿಸುವುದರ ಚರಿತ್ರೆಯೊಂದಿಗೆ ಆಕಾಶ ಟಪ್ಪಾಲಿನ ಚರಿತ್ರೆ ಹೆಣೆದುಕೊಂಡಿದೆ. ಆದರೆ, ಇಂದು ರುಸುವನ್ನು ಕಡಮೆ ಮಾಡಿ ಮೇಲ್‌ರುಸುಮನ್ನು ತೆಗೆದುಹಾಕುವ ಪ್ರವೃತ್ತಿ ಹೆಚ್ಚುತ್ತಿದೆ. ಇಂಡಿಯದ ಅಂಚೆ ಕಚೇರಿ ಆಕಾಶಟಪ್ಪಾಲನ್ನು ಸಾಗಿಸಲು 'ತಾತಾ ಆಕಾಶ ಮಾರ್ಗಗಳು' (Tata Air Lines), 'ರಾಷ್ಟ್ರೀಯ ಆಕಾಶ ಮಾರ್ಗಗಳು' (National Air ways)– ಇವೇ ಮುಂತಾದ ಖಾಸಗಿ ಸಂಘಗಳಿಗೆ ಗುತ್ತಿಗೆ ಕೊಟ್ಟಿವೆ; ಆದ್ದರಿಂದಲೇ ಒಂದು ಮುಖ್ಯನಗರದಿಂದ ಇನ್ನೊಂದಕ್ಕೆ ಕಾಗದಗಳನ್ನೊಯ್ಯಲು ಅಷ್ಟು ಹೆಚ್ಚಿನ ದರ.

ಪ್ರಪಂಚದ ಅತ್ಯಂತ ಮುಖ್ಯವಾದ ಮತ್ತು ಅತ್ಯಂತ ಚಟುವಟಿಕೆಯಿಂದ ಕೂಡಿದ ಆಕಾಶಮಾರ್ಗಗಳು ಈ ಮುಂದಿನವು:–

# ಪ್ರಕರಣ ೫
# ವಿಮಾನ ಟಪ್ಪಾಲು ಮತ್ತು ಪರಮಾವಧಿ ಹಾರಿಕೆಗಳ (Record Flight) ಚರಿತ್ರೆ

ವಿಮಾನ ಟಪ್ಪಾಲು (ಆಕಾಶ ಟಪ್ಪಾಲು, ಬಾನಂಚೆ) ಕ್ರಮವಾದ ವಾಣಿಜ್ಯ ಏರ್ಪಾಡಾಗಿ ಬೆಳೆದದ್ದು ೧೯೧೮ರಲ್ಲಿ. ಇದಕ್ಕೆ ಮುಂಚೆ, ವಿಶೇಷ ಅಥವಾ ಪ್ರಾಯೋಗಿಕ ರೀತಿಯ ವಿಮಾನ ಹಾರಿಕೆಗಳಲ್ಲಿ ವಿಮಾನ ಟಪ್ಪಾಲನ್ನು ಒಯ್ಯಲಾಗುತ್ತಿತ್ತು. ಉದಾಹರಣೆಗೆ, ೧೮೪೧ರಲ್ಲಿ ವಾಯುನಾವಿಕನಾದ ಜಿಪ್ಸನ್ (Gypson) ಎಂಬವನು ಲೈಯನ್ಸ್ (Lyons) ಪಟ್ಟಣದಿಂದ ಲಂಡನ್ ಪಟ್ಟಣಕ್ಕೆ ಆಕಾಶಬುಟ್ಟಿಯಲ್ಲಿ ಒಂದು ಕಾಗದ ತೆಗೆದುಕೊಂಡು ಹೋದನು. ಮತ್ತು ೧೮೭೦ರಲ್ಲಿ ಪ್ಯಾರಿಸ್ ಪಟ್ಟಣದ ಮುತ್ತಿಗೆಯ ಕಾಲದಲ್ಲಿ ಒಂದು 'ಆಕಾಶಬುಟ್ಟಿ ಅಂಚೆ'ಯನ್ನು ಏರ್ಪಡಿಸಲಾಗಿತ್ತು; ಆಗ ೬೦ ಆರೋಹಣಗಳು ಆದುವು; ಅವು ಒಂದೇ ಸಮನಾಗಿ ಯಶಸ್ವಿಯಾಗಿರಲಿಲ್ಲ. ೧೯೦೯ರಲ್ಲಿ ಜರ್ಮನಿಯಲ್ಲಿ ಜೆಪ್ಲಿನ್ ವಾಯುಹಡಗುಗಳಲ್ಲಿ ಟಪ್ಪಾಲು ಒಯ್ಯುವ ಪ್ರಯೋಗಗಳು ನಡೆದುವು. ಅದರ ಮರುವರ್ಷ ಬ್ರಿಟಿಷ್ ವಾಯುನಾವಿಕನಾದ ಗ್ರಾಂ ವ್ಹೈಟ್ (Gram White) ಎಂಬಾತನು ಬ್ಲ್ಯಾಕ್ ಪೂಲಿನಿಂದ ಟಪ್ಪಾಲು ತೆಗೆದುಕೊಂಡು ವಿಮಾನದಲ್ಲಿ ಹಾರಿದನು. ಗ್ರೇಟ್ ಬ್ರಿಟನ್, ಅಮೆರಿಕದ ಸಂಯುಕ್ತ ಸಂಸ್ಥಾನಗಳು, ಇಂಡಿಯಾ, ದಕ್ಷಿಣ ಅಮೆರಿಕ, ಮತ್ತು ಫ್ರಾನ್ಸ್– ಈ ದೇಶಗಳ ಟಪ್ಪಾಲು ಕಚೇರಿಗಳು ೧೯೧೧ರಲ್ಲಿ ಪ್ರಾಯೋಗಿಕವಾಗಿ ಆಕಾಶ ಟಪ್ಪಾಲಿನ ಏರ್ಪಾಡುಗಳನ್ನು ನಡಸಿದುವು.

ಈ ಮೊದಮೊದಲಿನ ಪ್ರಯೋಗಗಳು ತಾತ್ಕಾಲಿಕ ಸ್ವಭಾವದಾದ್ದರಿಂದ ಅವುಗಳಲ್ಲಿ ಯಾವುದನ್ನೂ ವಾಣಿಜ್ಯ ಆಕಾಶ ಟಪ್ಪಾಲು ಏರ್ಪಾಡೆಂದು ಪರಿಗಣಿಸಲಾಗುವುದಿಲ್ಲ. ಈ ಹೆಸರು ಸರಿಯಾಗಿ ಅನ್ವಯಿಸುವ ಮೊದಲನೆಯ ಏರ್ಪಾಡೆಂದರೆ, ಅಮೆರಿಕದ ಸಂಯುಕ್ತ ಸಂಸ್ಥಾನಗಳ ಯುದ್ಧ ಶಾಖೆ ೧೯೧೮ನೆಯ ಇಸವಿ ಮೇ ೧೫ರಲ್ಲಿ ನ್ಯೂಯಾರ್ಕಿನಿಂದ ವಾಷಿಂಗ್‌ಟನ್ನಿಗೆ ತೆರೆದ ಆಕಾಶಮಾರ್ಗ. ಈ ಮಾರ್ಗದ ಉದ್ದ ೨೧೮ ಮೈಲಿಗಳು. ೧೯೧೯ರಲ್ಲಿ ಬ್ರಿಟಿಷ್ ಮತ್ತು ಫ್ರೆಂಚ್ ಸಂಘಗಳು ಲಂಡನ್ನಿನಿಂದ ಪ್ಯಾರಿಸ್ಸಿಗೆ ಮಾರ್ಗವೊಂದನ್ನು ಪ್ರಾರಂಭಿಸಿದಾಗ, ಯೂರೋಪಿನಲ್ಲಿ ಟಪ್ಪಾಲು ಒಯ್ಯುವ ಮೊದಲ ವಾಣಿಜ್ಯ

## ಇಂಡಿಯದಲ್ಲಿ ಆಕಾಶ ಸಂಚಾರ

ದೆಹಲಿಯನ್ನು ಕಲ್ಕತ್ತದೊಡನೆ ಕೂಡಿಸುವ 'ಬ್ರಿಟಿಷ್ ಓವರ್‌ಸೀಸ್ ಏರ್‌ವೇಸ್' ಎಂಬ ಮಾರ್ಗವಲ್ಲದೆ, 'ತಾತಾ ಏರ್‌ವೇಸ್' (ತಾತಾ ಆಕಾಶ ಮಾರ್ಗಗಳು), 'ದಿ ಇಂಡಿಯನ್ ಟ್ರ್ಯಾನ್ಸ್ ಕಾಂಟಿನೆಂಟಲ್ ಏರ್‌ವೇಸ್', (ಇಂಡಿಯದ ಖಂಡಾಂತರ ಆಕಾಶಮಾರ್ಗಗಳು), 'ದಿ ಇಂಡಿಯನ್ ನ್ಯಾಷನಲ್ ಏರ್‌ವೇಸ್' (ಇಂಡಿಯದ ರಾಷ್ಟ್ರೀಯ ಆಕಾಶ ಮಾರ್ಗಗಳು) ಎಂಬ ಮೂರು ಮುಖ್ಯ ಆಕಾಶಮಾರ್ಗಗಳಿವೆ. ಇವೆಲ್ಲವೂ ತಮ್ಮ ಮಾರ್ಗಗಳಲ್ಲಿ ಅಂಚೆಯನ್ನು ಒಯ್ಯುವುದರ ಜೊತೆಗೆ ಪ್ರಯಾಣಿಕರನ್ನೂ ಒಯ್ಯುತ್ತವೆ. 'ದಿ ತಾತಾ ಏರ್‌ವೇಸ್' ಕರಾಚಿಯನ್ನು,– ಭೂಜ್, ಅಹಮದಾಬಾದು, ಬೊಂಬಾಯಿ, ಹೈದರಾಬಾದು, ಮದರಾಸು, ತಿರುಚನಾಪಲ್ಲಿ– ಇವುಗಳ ಮಾರ್ಗವಾಗಿ ಕೊಲಂಬೋವಿಗೆ ಕೂಡಿಸುತ್ತದೆ. ಈ ಮಾರ್ಗವಿರುವುದರಿಂದ, ಈ ನಗರಗಳಿಗೂ ಬ್ರಿಟಿಷ್ ಓವರ್‌ಸೀಸ್ ಮಾರ್ಗಕ್ಕೂ ಪೂರ್ವ ಪಶ್ಚಿಮಗಳೆರಡು ಕಡೆಯೂ ನೇರವಾದ ಆಕಾಶ ಮೂಲಕ ಸಂಬಂಧ ಕಲ್ಪಿತವಾಗಿದೆ. ಇವುಗಳ ಜೊತೆಗೆ, ಇಂದೂರ್, ಭೂಪಾಲ್, ಗ್ವಾಲಿಯರ್– ಇವುಗಳ ಮಾರ್ಗವಾಗಿ ಬೊಂಬಾಯಿನಿಂದ ದೆಹಲಿಗೂ, ಮಲಬಾರು ತೀರದ ಉದ್ದಕ್ಕೆ ಗೋವ, ಕ್ಯಾನನೂರ್ ಮಾರ್ಗವಾಗಿ ಬೊಂಬಾಯಿನಿಂದ ತಿರುವನಂತಪುರಕ್ಕೂ ಕ್ಲುಪ್ತಕಾಲದ ಪ್ರಯಾಣದ ಏರ್ಪಾಡನ್ನು ಅವರು ನಡಸುತ್ತಾರೆ. ದಿ ಇಂಡಿಯನ್ ನ್ಯಾಷನಲ್ ಏರ್‌ವೇಸ್‌ನವರು ಲಾಹೋರಿನಿಂದ ದೆಹಲಿಗೂ, ದೆಹಲಿಯಿಂದ ಕರಾಚಿಗೂ ಎರಡು ಪ್ರಯಾಣಗಳ ಏರ್ಪಾಡನ್ನು ನಡಸುತ್ತಾರೆ. ದಿ ಇಂಡಿಯನ್ ಟ್ರ್ಯಾನ್ಸ್ ಕಾಂಟಿನೆಂಟಲ್ ಏರ್‌ವೇಸ್‌ನವರು ಕರಾಚಿಯಿಂದ ಕಲ್ಕತ್ತಕ್ಕೆ ಪ್ರಯಾಣದ ಏರ್ಪಾಡನ್ನು ಇಟ್ಟಿದ್ದಾರೆ. ಈ ಮಾರ್ಗಗಳು ಆಕಾಶ ಪ್ರಯಾಣ ಮಾಡುವುದಕ್ಕೆ ಬಹಳ ಜನಪ್ರಿಯವಾಗಿದ್ದರೂ ಸಂಚಾರದ ಖರ್ಚು ಮಿತಿಮೀರಿ ಹೆಚ್ಚಾಗಿರುವುದರಿಂದ ಜನಸಾಮಾನ್ಯನ ಬಹುಮಂದಿಗೆ ಅವು ಉಪಯೋಗಕರವಾಗಲಾರವು.

## ಕೆಲವು ಮುಖ್ಯ ಅಗ್ರಗಾಮಿ ಹಾರಿಕೆಗಳು

ವಾಯುಮಂಡಲದ ದಿಗ್ವಿಜಯಕ್ಕೆ ಸಾಧಕಗಳಾದ ಕೆಲವು ಅಗ್ರಗಾಮಿ ಹಾರಿಕೆಗಳ ಸಂಕ್ಷೇಪ ಉಲ್ಲೇಖವನ್ನು ಮುಂದೆ ಕೊಟ್ಟಿದೆ. ಪ್ರತಿಯೊಂದು ವಿಶೇಷ ರೀತಿಯ ಹಾರಿಕೆಯನ್ನೂ ಈಗ ಸಾಧಿಸಿಯಾಗಿದೆ. ಪ್ರಪಂಚದ ಅತ್ಯುನ್ನತ ಪರ್ವತದ ಮೇಲೆ ಹಾರಿದೆ. ಪ್ರತಿ ಸಾಗರವನ್ನೂ ದಾಟಿ, ಮರಳಿ ದಾಟಿದೆ. ಪ್ರಪಂಚದ

**ದಿ ಬ್ರಿಟಿಷ್ ಓವರ್‌ಸೀಸ್ ಏರ್‌ವೇಸ್ (ಬ್ರಿಟಿಷ್ ಸಮುದ್ರೋಪರಿ ಆಕಾಶಮಾರ್ಗಗಳು** (Old Imperial Airways): ಈ ಆಕಾಶಮಾರ್ಗ ಇಂದು ಯೂರೋಪ್, ಆಫ್ರಿಕ, ಏಷ್ಯ ಮತ್ತು ಆಸ್ಟ್ರೇಲಿಯ– ಈ ನಾಲ್ಕು ಭೂಖಂಡಗಳಿಗೂ ಸಂಬಂಧ ಕಲ್ಪಿಸಿದೆ. ೧೯೨೪ರಲ್ಲಿ ನಾಲ್ಕು ಬೇರೆ ಬೇರೆ ಸಂಘಗಳು ಒಗ್ಗೂಡಿ ಈ ಸಂಘ ಮೊತ್ತ ಮೊದಲು ಜನ್ಮ ತಾಳಿತು. ಕ್ರಮಕ್ರಮವಾಗಿ ೧೯೨೭ರಲ್ಲಿ ಕರಾಚಿಯನ್ನು ಲಂಡನ್ನಿನೊಡನೆ ಸೇರಿಸಿ, ಲಂಡನ್ನಿನಿಂದ ಇಂಡಿಯಾಕ್ಕೆ ಒಂದು ಆಕಾಶಮಾರ್ಗವನ್ನು ಏರ್ಪಡಿಸಿತು. ೧೯೩೦ರಲ್ಲಿ, ಈ ಸಂಘ ಕೇಪ್‌ಟೌನಿನಿಂದ ಕೈರೋವಿಗೆ ಸಹ ಒಂದು ವಿಮಾನದ ಏರ್ಪಾಡನ್ನು ಮೊದಲು ಮಾಡಿತು. ೧೯೩೨ರಲ್ಲಿ, ಇದೇ ಮಾರ್ಗವನ್ನು ಉತ್ತರಕ್ಕೂ ಬೆಳಸಿ, ಕೇಪ್‌ಟೌನನ್ನು ಲಂಡನ್ನಿಗೆ ಕೂಡಿಸಿತು. ೧೯೩೩ರ ಜುಲೈ ತಿಂಗಳಲ್ಲಿ, ಇಂಡಿಯಾ ಮಾರ್ಗವನ್ನು ಪೂರ್ವದಲ್ಲಿ ಕಲ್ಕತ್ತಕ್ಕೂ, ಅದೇ ವರ್ಷದಲ್ಲಿ ಸ್ವಲ್ಪ ಕಾಲಾನಂತರ ರಂಗೂನ್ ಮತ್ತು ಸಿಂಗಪುರಗಳಿಗೂ ವಿಸ್ತರಿಸಲಾಯಿತು. ೧೯೩೪ರಲ್ಲಿ, ಲಂಡನ್ನಿನಿಂದ ಆಸ್ಟ್ರೇಲಿಯದಲ್ಲಿ ಕ್ಯಾನ್‌ಬೆರ (Canberra) ಎಂಬ ಸ್ಥಳಕ್ಕೆ ಒಂದು ನೇರ ಮಾರ್ಗವನ್ನು ಸ್ಥಾಪಿಸಿತು; ಈ ಎಲ್ಲವೂ ಸೇರಿ ಮಾರ್ಗದ ಒಟ್ಟು ದೂರ ೧೧,೦೦೦ ಮೈಲಿಗಳಾದವು.

ಪ್ರಪಂಚದ ಇತರ ಮುಖ್ಯ ಆಕಾಶ ಮಾರ್ಗಗಳು ಯಾವುವೆಂದರೆ:– **ಏರ್ ಫ್ರಾನ್ಸ್ ರೂಟ್ (ಫ್ರಾನ್ಸ್ ಆಕಾಶ ಮಾರ್ಗ)** (The Air France Route): ಇದು ಪ್ಯಾರಿಸ್ಸನ್ನು ಪಶ್ಚಿಮ ಆಫ್ರಿಕದ ಮೂಲಕ ದಕ್ಷಿಣ ಅಮೆರಿಕದೊಡನೆ ಸಂಬಂಧಿಸುತ್ತದೆ. ಇದನ್ನು ೧೯೨೭ರಷ್ಟು ಮುಂಚೆಯೇ ಸ್ಥಾಪಿಸಲಾಯಿತು. ಇದಲ್ಲದೆ, ನ್ಯೂಯಾರ್ಕನ್ನು ಸ್ಯಾನ್‌ಫ್ರ್ಯಾನ್ಸಿಸ್ಕೋವಿಗೂ, ಅಲ್ಲಿಂದ ಮುಂದೆ ಸ್ಯಾನ್‌ಫ್ರ್ಯಾನ್ಸಿಸ್ಕೋವಿನಿಂದ ಪೆಸಿಫಿಕ್ ಸಾಗರದ ಮುಖಾಂತರ ಹವಾಯ್ ಮತ್ತು ಫಿಲಿಫೈನ್ಸ್ ದ್ವೀಪಗಳಿಗೂ, ಅಲ್ಲಿಂದ ಹಾಂಗ್–ಕಾಂಗ್ ಮತ್ತು ಚೀಣಾವಿಗೂ ಕೂಡಿಸುವ ಮಾರ್ಗವಿದೆ. ನ್ಯೂಯಾರ್ಕಿಗೂ ಇಂಗ್ಲೆಂಡಿಗೂ ನಡುವೆ ಉತ್ತರ ಅಟ್ಲಾಂಟಿಕ್ ಸಾಗರದ ಮೇಲೆ ಇನ್ನೊಂದು ಮುಖ್ಯ ಆಕಾಶ ಮಾರ್ಗವಿದೆ. ನೆಲದ ಮೇಲ್ಗಡೆಯ ಮಾರ್ಗಗಳಲ್ಲಿ ಅತ್ಯಂತ ಉದ್ದವಾದದ್ದು ಬರ್ಲಿನ್ ನಗರವನ್ನು ಮಾಸ್ಕೋ ನಗರಕ್ಕೆ ಕೂಡಿಸಿ, ಇನ್ನೂ ಮುಂದೆ ಸೈಬೀರಿಯಾದ ಪೂರ್ವದ ಕೊಟ್ಟ ಕೊನೆಯ ವ್ಲಾಡಿವೊಸ್ಟಾಕ್ ನಗರಕ್ಕೆ ಸಂಬಂದಿಸಿದೆ. ಹೀಗೆ, ಪ್ರಪಂಚದ ಮೇಲಿನ ಅತ್ಯಂತ ದೂರದ ಮೂಲೆ ಮೂಲೆಗಳಿಗೆಲ್ಲ ಪರಸ್ಪರ ಸಂಬಂಧ ಕಲ್ಪಿಸಿದೆ.

ಮಾಸ್ಕೊ, ಇರ್‌ಕೋಲ್‌ಸ್ಕ್ (Irkoulsk), ಕಾಬಾರೊಫ್‌ಸ್ಕ್ (Khabarovsk) ಮತ್ತು ಫೇರ್‌ಬಾಂಕ್ಸ್ ಮಾರ್ಗವಾಗಿ ಸಾಗಿ ಮತ್ತೆ ನ್ಯೂಯಾರ್ಕಿನಲ್ಲಿ ಕೊನೆಗೊಂಡಿತು.

### ಉತ್ತರಧ್ರುವಕ್ಕೆ ಹಾರಿಕೆಗಳು

ಉತ್ತರಧ್ರುವದ ಮೇಲೆ ಮೊದಲನೆಯ ಸಲ ೧೯೨೬ರಲ್ಲಿ ಫಾಕರ್ F VII (Fokker F VIII) ವಿಮಾನದಲ್ಲಿ ಹಾರಲಾಯಿತು; ನಾಯಕರಾಗಿದ್ದವರು ರಿಚರ್ಡ್ ಬರ್ಡ್ (Richard Byrd) ಮತ್ತು ಫ್ಲಾಯ್ಡ್ ಬೆನೆಟ್ (Floyd Bennet). ಮೇ ೯ರಲ್ಲಿ ಸ್ಪಿಟ್ಸ್‌ಬರ್ಗ್‌ನಿಂದ (Spitsbergh) ಹಾರಿಮೆ ಮೊದಲಾಗಿ, ಉತ್ತರಧ್ರುವದ ಮೇಲೆ ಪ್ರಯಾಣ ಮಾಡಿ, ಹಿಂದಿರುಗಲಾಯಿತು.

ದಕ್ಷಿಣಧ್ರುವದ ಮೇಲೆ ಮೊದಲ ಸಲ ೧೯೨೯ರಲ್ಲಿ ಫೋರ್ಡ್ ಏಕಫಲಕ ವಿಮಾನದಲ್ಲಿ ಹಾರಲಾಯಿತು. ನಡಸುವವರ ತಂಡದಲ್ಲಿ ನಾಯಕ ಬರ್ಡ್ ಎಂಬಾತನೂ ಆತನ ಜೊತೆಯವರೂ ಇದ್ದರು. ಅವರು ಲಿಟ್‌ಲ್ ಅಮೆರಿಕದಿಂದ (Little America) ಹಾರಿಕೆ ಮೊದಲುಮಾಡಿ, ದಕ್ಷಿಣ ಧ್ರುವ ಸಮುದ್ರ ಪ್ರದೇಶಗಳ ಮೇಲಿನಿಂದ ದಕ್ಷಿಣಧ್ರುವಕ್ಕೆ ಹಾರಿ, ಮರುದಿನವೇ ಹಿಂದಿರುಗಿದರು.

### ಅಟ್ಲಾಂಟಿಕ್ ಸಾಗರವನ್ನು ದಾಟಿದ್ದು

ವಿಮಾನದ ಬರವಿನಿಂದ ಸಾಗಣೆಯಲ್ಲುಂಟಾದ ಕ್ರಾಂತಿಯ ಪೂರ್ಣಪ್ರಮಾಣಕ್ಕೆ ಈ ಅಂಶವನ್ನು ನಿದರ್ಶನವಾಗಿ ಹೇಳಬಹುದು: ಸಾವಿರಾರು ಮೈಲಿಗಳ ವಿಸ್ತಾರದ ಅಟ್ಲಾಂಟಿಕ್ ಸಾಗರವನ್ನು ದಾಟುವ ಸಾಹಸ ಮಾಡಿದವರಿಗೂ ೭೦ ಮೈಲಿಗಳ ಅಗಲದ ಇಂಗ್ಲಿಷ್ ಕಡಲ್ಗಾಲುವೆಯನ್ನು ದಾಟಲಾಗುವುದೋ ಇಲ್ಲವೋ ಎಂದು ತತ್ತರಿಸುತ್ತ ಇದ್ದವರಿಗೂ ನಡುವಣ ಕಾಲದ ಅಂತರ ಹತ್ತು ವರ್ಷಗಳು ಮಾತ್ರ. ಈ ಅತ್ಯಲ್ಪ ಕಾಲಾವಧಿಯಲ್ಲಿ ಹಿಕ್ಸ್ (Hicks), ಗ್ರಾಂ ವ್ಹೈಟ್ (Gram White) ಮತ್ತು ಹ್ಯಾಮೆಲ್ (Hamel) ಮುಂತಾದವರು ಹಾರಿಸಿದ, ಹುರುಳಿಲ್ಲದ ಕೆಲಸಕ್ಕೆ ಬಾರದ ಸಣ್ಣ ಯಾನಗಳೇ ದಾಟಲು ಹೆದರುತ್ತಿದ್ದ ಉತ್ತರ ಅಟ್ಲಾಂಟಿಕ್ ಸಾಗರವನ್ನು ಸಹ ದಾಟಲು ತಕ್ಕ ನಿಜವಾದ ಹಾರುಯಂತ್ರಗಳಾಗಿ ಪರಿಣಮಿಸಿದುವು. ಹಿಂದಿನ ನಾಲ್ಕು ಪ್ರಯತ್ನಗಳು ನಿಷ್ಫಲವಾಗಿದ್ದರೂ, ಬ್ರಿಟಿಷ್ ಸೈನ್ಯಾಧಿಕಾರಿಗಳಾದ ಕ್ಯಾಪ್ಟನ್ ಆಲ್‌ಕಾಕ್ (Alcock) ಮತ್ತು ವಿಮಾನ ಸಾರಥಿ ಲೆಫ್ಟೆನೆಂಟ್ ಆರ್ತರ್ ವಿಟ್‌ನ್ ಬ್ರೌನ್ (Arthur

ರಾಜಧಾನಿ ನಗರಗಳಲ್ಲಿ ಆಕಾಶಮಾರ್ಗದ ಮೂಲಕ ಪರಸ್ಪರ ಸಂಬಂಧ ಹೊಂದಿಲ್ಲದ ಎರಡು ರಾಜಧಾನಿಗಳು ಯಾವುವೂ ಇಲ್ಲ. ಉತ್ತರಧ್ರುವ ಸಮುದ್ರವೂ ದಕ್ಷಿಣ ಧ್ರುವ ಸಮುದ್ರವೂ ವಿಮಾನದೆಂಜಿನ್ನಿನ ಭೋರ್ಗರೆತಕ್ಕೆ ಮಾರ್ದನಿಗೊಟ್ಟಿವೆ. ಆದ್ದರಿಂದ, ಈ ಸಂದರ್ಭದಲ್ಲಿ, ಈ ಅಸಾಧಾರಣ ಸಾಹಸಕಾರ್ಯಗಳನ್ನು ಮೊದಲು ಸಾಧಿಸಿದವರು ಯಾರು, ಹೇಗೆ ಸಾಧಿಸಿದರು ಎಂಬುದನ್ನು ತಿಳಿದುಕೊಳ್ಳುವುದು ಸ್ವಾರಸ್ಯಕರವಾಗಿದೆ.

**ಮೊದಲ ಬಾರಿಯ ಭೂಮಿಸುತ್ತಣ ಹಾರಿಕೆಗಳು**

ಹಿಂದಿನಿಂದಲೂ ಅನೇಕ ಮಂದಿ ವಾಯುನಾವಿಕರು ಭೂಮಿಯ ಸುತ್ತ ಹಾರಲು ಪ್ರಯತ್ನಿಸುತ್ತಿದ್ದರೂ, ಅನೇಕ ಅಡಚಣೆಗಳುಂಟಾದದ್ದರಿಂದ ಪ್ರಯತ್ನಗಳನ್ನು ಬಿಡಬೇಕಾಯಿತು. ಹಾಗಾದರೂ, ೧೯೨೪ರಲ್ಲಿ ನಾಲ್ಕು ಡಗ್ಲಾಸ್ (Douglas) ವಾಯುಯಾನಗಳು ಮೊದಲಸಲ ಭೂಮಿಯ ಸುತ್ತ ಯಶಸ್ವಿಯಾಗಿ ಹಾರಿದುವು. ಈ ಯಾತ್ರೆಯಲ್ಲಿ ಮೇಜರ್ ಪಿ.ಎಲ್. ಮಾರ್ಟಿನ್ (Martin), ಲೆಫ್ಟಿನೆಂಟರುಗಳಾದ ಲೋಎಲ್ (Lowell), ಸ್ಮಿತ್ (Smith), ಲೀವೇಡ್ (Leighwade), ಇ.ಎಚ್.ನೆಲ್ಸನ್ (Nelson), ಎಲ್.ಎಲ್.ಆರ್ನಲ್ಡ್ (Arnold) ಮತ್ತು ಇತರರು ಇದ್ದರು. ಹಾರಿಕೆ ಏಪ್ರಿಲ್ ೭ರಲ್ಲಿ ಸಿಯಟ್‌ಲ್(Seattle)ನಲ್ಲಿ ಪ್ರಾರಂಭವಾಗಿ ಜಪಾನ್, ಇಂಡಿಯಾ, ಯೂರೋಪ್, ಸ್ಕಾಟ್ಲೆಂಡ್, ಐಸ್ಲೆಂಡ್, ಗ್ರೀನ್‌ಲಂಡ್– ಇವುಗಳ ಮಾರ್ಗವಾಗಿ ಮತ್ತೆ ಸಿಯಟ್‌ಲ್‌ನಲ್ಲಿ ಕೊನೆಗೊಂಡಿತು. ಹಾರಿಕೆ ೧೭೪ ದಿನಗಳಾದ ಮೇಲೆ ಸೆಪ್ಟೆಂಬರ್ ೨೦ರಲ್ಲಿ ಮುಗಿಯಿತು.

ಮೊದಲಸಲ ಭೂಮಿಯಸುತ್ತ ಹಾರಿದ ವಾಯುಹಡಗು ಎಂದರೆ ಗ್ರಾಫ್ ಜೆಪ್ಲಿನ್; ಇದರ ನಾಯಕರು ಡಾ॥ ಅಕ್ನರ್ (Ackner), ಇವರು ೧೯೨೯ರ ಆಗಸ್ಟ್ ೮ರಲ್ಲಿ ಲೇಕ್‌ಹರ್‌ಸ್ಟ್ (Lakehurst) ಬಿಟ್ಟು, ಟೋಕಿಯೊ (Tokio) ಮತ್ತು ಲಾಸ್ ಆ್ಯಂಜೆಲೆಸ್ (Los Angeles) ಮಾರ್ಗವಾಗಿ ಹಾರಿ, ಅದೇ ತಿಂಗಳು೨೯ಕ್ಕೆ ಲೇಕ್‌ಹರ್‌ಸ್ಟಿಗೆ ಹಿಮ್ಮರಳಿ, ಒಟ್ಟು ಪ್ರಯಾಣವನ್ನು ೨೧ ದಿನಗಳಲ್ಲಿ ಮುಗಿಸಿದರು. ೧೯೩೩ರ ಜುಲೈ ತಿಂಗಳಲ್ಲಿ ವಿಲೀ ಪೋಸ್ಟ್ (Wiley Post) ಎಂಬಾತನು ಲಾಕ್‌ಹೀಡ್ (Lockheed) ಏಕಫಲಕ ವಿಮಾನದಲ್ಲಿ (Monoplane) ಮೊದಲ ಸಲ ಭೂಮಿಯ ಸುತ್ತ ತನಿಯಾಗಿ ಹಾರಿದನು. ಅವನು ೭ ದಿನ ೧೮ ಗಂಟೆಗಳಲ್ಲಿ ಪ್ರಯಾಣವನ್ನು ಮುಗಿಸಿದನು. ಈ ಪ್ರಯಾಣ ನ್ಯೂಯಾರ್ಕಿನಿಂದ ಮೊದಲಾಗಿ, ಅಟ್ಲಾಂಟಿಕ್ ಸಾಗರದ ಮೇಲೆ ಬರ್ಲಿನ್,

### ಒಬ್ಬ ಹೆಂಗಸು ಮೊದಲ ಸಲ ತನಿಯಾಗಿ ದಾಟಿದ್ದು

ಮಿಸ್ ಅಮಿಲಿಯ ಇಯರ್‌ಹಾರ್ಟ್ ಎಂಬ ಅಮೆರಿಕಾ ದೇಶದ ಹೆಂಗಸು ೧೯೩೨ರಲ್ಲಿ "ಲಾಕ್‌ಹೀಡ್ ವೇಗ" (Lockheed Vega) ಎಂಬ ವಿಮಾನದಲ್ಲಿ ಮೊದಲನೆಯ ಸಲ ಒಂಟಿಯಾಗಿ ಒಂದೇ ದಿನದಲ್ಲಿ ಹಾರಿದಳು. ಆಕೆ ನ್ಯೂಯಾರ್ಕಿನಲ್ಲಿ ಪ್ರಯಾಣವನ್ನು ಮೊದಲು ಮಾಡಿ, ಐರ್ಲೆಂಡಿನಲ್ಲಿ ಬಂದಿಳಿದಳು.

### ಫೆಸಿಫಿಕ್ ಸಾಗರ ದಾಟಿದ್ದು

ಮೇಜರ್ ಪಿ.ಎಲ್.ಮಾರ್ಟಿನ್ ಮತ್ತು ಜೊತೆಯ ವಿಮಾನ ನಡಸುವ ತಂಡದವರು ಭೂಮಿಯ ಸುತ್ತ ಹಾರಿದಾಗ ಅದರ ಒಂದು ಮಜಲಾಗಿ, ೧೯೨೪ರಲ್ಲಿ ಮೊದಲಸಲ ಪೆಸಿಫಿಕ್ ಸಾಗರದ ಮೇಲೆ ಹಾರಿದರು. ಈ ಹಾರಿಕೆಯ ವಿವರಗಳನ್ನು ಭೂಮಿಯ ಸುತ್ತಣ ಹಾರಿಕೆಗಳ ನಿರೂಪಣೆಯಲ್ಲಿ ಕೊಟ್ಟಿದೆ. ೧೯೩೫ರಲ್ಲಿ ಪೆಸಿಫಿಕ್ ಸಾಗರವನ್ನು ದಾಟಿದ ಮೊದಲ ಹೆಂಗಸು ಮಿಸ್ ಇಯರ್‌ಹಾರ್ಟಳೆ. ಈಕೆ ತನ್ನ "ಲಾಕ್‌ಹೀಡ್ ವೇಗ" ವಿಮಾನದಲ್ಲಿ ಹಾನೊಲುಲುವಿನಿಂದ (Honolulu) ಹಾರಿ ಕ್ಯಾಲಿಫೋರ್ನಿಯದ ಓಕ್‌ಲೆಂಡಿನಲ್ಲಿಳಿದಳು.

### ಇಂಗ್ಲೆಂಡಿನಿಂದ ಇಂಡಿಯಕ್ಕೆ ಹಾರಿಕೆಗಳು

ಇಂಡಿಯಕ್ಕೆ ಮೊದಲ ಸಲ ೧೯೧೮ರಲ್ಲಿ ದಳನಾಯಕ ಎ.ಸಿ.ಎಸ್. ಮೆಕಾಲೀನ್ (Mclean) ಮತ್ತು ಜೊತೆಯ ವಿಮಾನ ನಡಸುವ ತಂಡದವರು ಹಾರಿದರು. ಅವರು ಮಾರ್ಲ್ಷಮ್‌ಹೀತ್ ಎಂಬಲ್ಲಿಂದ 'ಹ್ಯಾಂಡ್ಲಿ ಪೇಜ್' ಎಂಬ ಬಾಂಬರ್ ವಿಮಾನದಲ್ಲಿ ಹೊರಟು ಜನವರಿಯಲ್ಲಿ ದೆಹಲಿಯನ್ನು ತಲುಪಿದರು.

ಇಂಗ್ಲೆಂಡಿಗೂ ಇಂಡಿಯಕ್ಕೂ ಹಾರುವ ಮೊದಲನೆಯ ಭಾರತೀಯ ವಿಮಾನ ನಡಸುವವನಿಗೆ ಕೊಡಲು ಇಂಡಿಯಾ ಸರಕಾರದವರು ಇಟ್ಟಿದ್ದ ೫೦೦ ಗಿನಿಗಳ ಬಹುಮಾನವನ್ನು ಶ್ರೀ ರಾಮನಾಥ್ ಚಾಲೆ ಮತ್ತು ಶ್ರೀ ಎಸ್.ಪಿ.ಎಂಜಿನಿಯರ್ ಎಂಬ ಇಬ್ಬರು ಭಾರತೀಯ ವೈಮಾನಿಕರು ೧೯೩೦ನೆಯ ಮಾರ್ಚಿಯಲ್ಲಿ ಪಡೆದರು. ಅವರು ಮಾರ್ಚಿ ૩ರಿಂದ ೨೧ರವರೆಗಿನ ಅವಧಿಯಲ್ಲಿ ಕರಾಚಿಯಿಂದ ಕ್ರಾಯ್‌ಡಾನಿಗೆ 'ಜಿಪ್ಸಿ ಮಾತ್' (Gipsy Moth) ಎಂಬ ದ್ವಿಫಲಕ ವಿಮಾನದಲ್ಲಿ ಹಾರಿದರು. ಅದೇ ವರ್ಷ ಏಪ್ರಿಲ್‌ನಲ್ಲಿ ಶ್ರೀ

Whitten Brown) ಎಂಬವರು ಸಾಗರವನ್ನು ದಾಟುವುದರಲ್ಲಿ ಜಯಶೀಲರಾದರು. ಅವರು ೧೯೧೯ರ ಜೂನ್ ೧೪ರಲ್ಲಿ ನ್ಯೂಫೌಂಡ್‌ಲೆಂಡಿನ ಸೆಂಟ್‌ಜಾನ್ಸ್ ಎಂಬಲ್ಲಿ Vickers "Vimy" (ವಿಕರ್ಸ್ ವಿಮಿ) ಎಂಬ ದ್ವಿಫಲಕ ವಿಮಾನವನ್ನು (Biplane) ಏರಿ, ೧೫ ಗಂಟೆ ೧೫ ನಿಮಿಷಗಳ ತರುವಾಯ ಕ್ಲಿಫ್‌ಡೆನ್ ಗಾಲ್‌ವೇ (Clifden Galway) ಬಳಿ ಜೌಗು ಭೂಮಿಯಲ್ಲಿ ಇಳಿದರು. ಆ ದೊಡ್ಡ ವಿಮಾನ ಮೆತುವಾದ ನೆಲದಲ್ಲಿ ತನ್ನ ಮೂಗಿನ ಮೇಲೆ ಮೆಲ್ಲನೆ ಇಳಿಯಿತು. ಈ ಸಣ್ಣ ದುರ್ಘಟನೆಯಿಂದ ಹಾರುವವರು ಲಂಡನ್ನಿಗೆ ಮುಂದುವರಿಯಲಾಗಲಿಲ್ಲ. ಆದರೆ ಈ ಅಂಶ, ಮೊದಲ ಸಲ ಹಾರು ಯಂತ್ರವೊಂದು ಅಟ್ಲಾಂಟಿಕ್ ಸಾಗರದ ಭೀಕರ ವಿಸ್ತಾರದ ಈ ಕೊನೆಯಿಂದ ಆ ಕೊನೆಗೆ ನಡುವೆ ನಿಲ್ಲದೆ ಹಾರಿತೆಂಬ ಕೀರ್ತಿಯನ್ನು ಮಸುಳಿಸುವುದಿಲ್ಲ. ೧೮೯೦ ಮೈಲಿಗಳ ಈ ದಾಟುವಿಕೆಯನ್ನು ಗಂಟೆಗೆ ೧೧೮ ಮೈಲಿಗಳ ಸರಾಸರಿ ವೇಗದಲ್ಲಿ ಮುಗಿಸಲಾಯಿತು; ಮತ್ತು, ಇದು ಸುಮಾರು ೧೩ ವರ್ಷ ಕಾಲ ಅತ್ಯಂತ ವೇಗದ ಸಾಗರ ದಾಟುವಿಕೆಯಾಗಿ ಉಳಿದು ಬಂತು. ಅಂದಿನಿಂದ ಎಂಟು ವರ್ಷಗಳವರೆಗೂ ಯಾವ ವಿಮಾನಗಾಮಿಯೂ ವಿಮಾನದ ಮೂಲಕ ಸಾಗರವನ್ನು ದಾಟುವುದರಲ್ಲಿ ಯಶಸ್ವಿಯಾಗಿರಲಿಲ್ಲ; ಇದು ಮೇಲ್ಕಂಡ ಸಾಹಸ ಕಾರ್ಯದ ಅಗ್ಗಳಿಕೆಯನ್ನು ಹೆಚ್ಚಿಸುತ್ತದೆ.

೧೯೧೯ರಲ್ಲಿ ದಳನಾಯಕ (Squadron leader) ಸ್ಕಾಟ್ ಎಂಬಾತನು ೩೦ ಮಂದಿಯನ್ನೊಳಕೊಂಡ ವಿಮಾನ ನಡಸುವವರ ತಂಡದೊಡನೆ ಅಟ್ಲಾಂಟಿಕ್ ಸಾಗರವನ್ನು R ೩೪ ವಾಯುಹಡಗಿನಲ್ಲಿ ಇಮ್ಮಡಿ ದಾಟಿದನು. ಅಟ್ಲಾಂಟಿಕ್ ಸಾಗರವನ್ನು ಎರಡು ಬಾರಿ, ಅದರಲ್ಲೂ ವಾಯು ಹಡಗಿನಲ್ಲಿ, ದಾಟಿದ್ದು ಇದೇ ಮೊದಲು. ಅವನು ಸ್ಕಾಟ್ಲೆಂಡಿನ ಈಸ್ಟ್ ಫಾರ್ ಟ್ಯೂನ್ (East Fortune) ಎಂಬಲ್ಲಿಂದ ಮೊದಲು ಮಾಡಿ ನ್ಯೂಯಾರ್ಕಿಗೆ ಹಾರಿದನು; ಹೀಗೆ ೩,೬೦೦ ಮೈಲಿಗಳನ್ನು ೧೦೮ ಗಂಟೆಗಳಲ್ಲಿ ಹಾರಿದನು. ನ್ಯೂಯಾರ್ಕನ್ನು ತಲುಪಿದ ಮೂರು ದಿನಗಳ ತರುವಾಯ, ಆ ನಗರದ ಮೇಲೆ ಗೆಲುವುಗೂಡಿ ಮೆರೆದು ಹಾರಾಡಿದ ಬಳಿ, R ೩೪ ವಾಯು ಹಡಗು ಹಿಮ್ಮರಳುವ ಪ್ರಯಾಣಕ್ಕಾಗಿ ಮತ್ತೆ ಮೇಲೇರಿತು. ಮೊದಲಿಗಿಂತ ಸ್ವಲ್ಪ ಹೆಚ್ಚು ನಿಡಿದಾದ ಹಾದಿ ಹಿಡಿದು, ಈ ವಾಯುಹಡಗು ೭೫ ಗಂಟೆಗಳಲ್ಲಿ ೩,೮೦೦ರವರೆಗೆ ಯಾರೂ ಮೀರಿಸಲಿಲ್ಲ; ೧೯೨೮ರಲ್ಲಿ ಡಾ॥ ಅಕ್ನರ್ ಅವರ ನಾಯಕತ್ವದಲ್ಲಿ ಗ್ರಾಫ್ ಜೆಪ್ಲಿನ್ ಈ ಪ್ರಯಾಣವನ್ನು ಮಾಡಿತು.

## ಇಂಗ್ಲೆಂಡಿನಿಂದ ಆಫ್ರಿಕಕ್ಕೆ ಹಾರಿಕೆಗಳು

೧೯೨೦ರಲ್ಲಿ ಕರ್ನಲ್ ಪಿಯೆರ್ (Col. pierre) ಮತ್ತು ಇತರರು 'ವಿಕರ್ಸ್ ವಿಮಿ' ವಿಮಾನದಲ್ಲಿ ಮೊದಲ ಸಲ ಲಂಡನ್ನಿನಿಂದ ಕೇಪ್‌ಟೌನಿಗೆ ಹಾರಿದರು. ೮,೫೦೦ ಮೈಲಿಗಳ ಈ ಪ್ರಯಾಣವನ್ನು ೪ ದಿನ ೧೩ವರೆ ಗಂಟೆಗಳೊಳಗಾಗಿ ಮಾಡಲಾಯಿತು. ಫೆಬ್ರುವರಿ ೧೨ರಲ್ಲಿ ಲೇಡಿ ಹೀತ್ ಎಂಬಾಕೆ ಕೇಪ್‌ಟೌನಿನಿಂದ ಆವ್ರೊ ಏವಿಯನ್ ('Avro Avian') ಎಂಬ ವಿಮಾನದಲ್ಲಿ ಒಬ್ಬಳೇ ಹಾರಿ ಇಂಗ್ಲೆಂಡು ಸೇರಿದಳು. ಈ ಹಾರಿಕೆಯನ್ನು ಹಾರಿದವರಲ್ಲಿ ಈಕೆಯೇ ಮೊದಲನೆಯ ಸ್ತ್ರೀ ವಿಮಾನ ಸಾರಥಿ.

* * * *

ಎಂಜಿನಿಯರ್, ಆಘಾಖಾನರು ಇಟ್ಟಿದ ಬಹುಮಾನವೊಂದನ್ನು ಗೆಲ್ಲುವುದಕ್ಕಾಗಿ ಇಂಡಿಯಕ್ಕೆ ಮರಳಿ ಹಾರಿದರು; ಆದರೆ ಎಂಜಿನಿಯರ್ ಹೊರಟ ೬ ದಿನಗಳ ಮೇಲೆ ಕ್ರಾಯ್‌ಡಾನ್ ಬಿಟ್ಟು ಆತನಿಗಿಂತ ಒಂದು ದಿನ ಮಾತ್ರ ತಡವಾಗಿ ಕರಾಚಿಯನ್ನು ಮುಟ್ಟಿದ ಶ್ರೀ ಜೆ.ಆರ್.ಡಿ. ತಾತಾ ಎಂಬವರು ಆ ಬಹುಮಾನವನ್ನು ಗೆದ್ದರು.

**ಇಂಗ್ಲೆಂಡ್–ಆಸ್ಟ್ರೇಲಿಯಾ ಹಾರಿಕೆಗಳು**

ಇಂಗ್ಲೆಂಡಿನಿಂದ ಆಸ್ಟ್ರೇಲಿಯಾಕ್ಕೆ ಮೊದಲನೆಯ ಸಲ ೧೯೧೯ರಲ್ಲಿ (ಲಂಡನ್ನಿನ) ಹೇಸ್ಟನ್ನಿನಿಂದ ಡಾರ್‌ವಿನ್ ಬಂದರಿಗೆ ಹಾರಲಾಯಿತು. ಈ ಹಾರಿಕೆಯನ್ನು ಕ್ಯಾಪಟನ್ ರಾಸ್‌ಸ್ಮಿತ್ ಮತ್ತು ಜೊತೆಯ ವಿಮಾನ ನಡಸುವ ತಂಡದವರು 'ವಿಕರ್ಸ್ ವಿಮಿ' ವಿಮಾನದಲ್ಲಿ ಮಜಲುಗಳಲ್ಲಿ ಹಾರಿದರು. ಈ ಹಾರಿಕೆಗೆ ೪ ವಾರ, ೩ ದಿನ ಹಿಡಿಯಿತು. ಮೇ ೧೯೩೦ರಲ್ಲಿ ಮಿಸ್ ಏಮಿ ಜಾನ್‌ಸನ್ (Miss Amy Johnson) ಎಂಬಾಕೆ ಒಂಟಿಯಾಗಿ ಆಸ್ಟ್ರೇಲಿಯಕ್ಕೆ ಹಾರಿದ್ದು ಪ್ರಪಂಚದಲ್ಲೆಲ್ಲ ಉತ್ಸಾಹ ಹುಟ್ಟಿಸಿತು. 'ಷಾರ್ಟ್‌ಹ್ಯಾಂಡ್ ಟೈಪಿಸ್ಟ್' ಆಗಿ ಕೆಲಸ ಮಾಡುತ್ತ, ಹಾರುವ ಶಿಕ್ಷಣ ಪಡೆಯುವುದಕ್ಕಾಗಿ ತಕ್ಕಷ್ಟು ಹಣ ಕೂಡಿಟ್ಟು ಕೊಂಡಿದ್ದ ಹುಡುಗಿಯೊಬ್ಬಳು ಕೆಲವು ದಿನಗಳಲ್ಲಿ ಅಂತರರಾಷ್ಟ್ರೀಯ ವೀರನಾರಿ ಎನ್ನಿಸಿಕೊಂಡಳು. ಅವಳು ಮೇ ೫ರ ಮುಂಜಾನೆ ಕ್ರಾಯ್‌ಡಾನನ್ನು ಬಿಟ್ಟಳು. ಮೊದಲನೆಯ ದಿನವೇ ಅವಳು ವಿಯೆನ್ನಾ ನಗರವನ್ನು ಸೇರಿದ್ದು ಕೆಲವರಲ್ಲಿ ಆಸಕ್ತಿ ಹುಟ್ಟಿಸಿತು. ಬಳಿಕ, ಮೇ ೧೦ರಲ್ಲಿ ಕರಾಚಿಯಲ್ಲಿಳಿದು, ಹಗುರ ವಿಮಾನ ವೊಂದರಲ್ಲಿ ೬ ದಿನಗಳಲ್ಲೆ ಇಂಡಿಯಕ್ಕೆ ಹಾರಿದ ಪರಮಾವಧಿಯನ್ನು (Record) ಸ್ಥಾಪಿಸಿದಳು. ಎರಡು ದಿನಗಳ ತರುವಾಯ ಅವಳು ಕಲ್ಕತ್ತದಲ್ಲಿದ್ದಳು; ಆಮೇಲೆ ಸಿಂಗಪುರವನ್ನು ಸೇರಿದಳು. ಕಡೆಯ ಮಜಲುಗಳಲ್ಲಿ ಅದೃಷ್ಟ ಅವಳಿಗೆ ಪ್ರತಿಕೂಲವಾಗಿತ್ತು; ಹಿಂದೆ ಸ್ಥಾಪಿಸಿದ್ದ ಪರಮಾವಧಿಯನ್ನು ಅವಳು ಮೀರಿಸಲಾರದೆ ಹೋದಳು; ಲಂಡನ್ನನ್ನು ಬಿಟ್ಟ ೧೯ ದಿನಗಳ ಮೇಲೆ ಮೇ ೨೪ರಲ್ಲಿ ಅವಳು ಡಾರ್‌ವಿನ್ ಬಂದರನ್ನು ತಲುಪಿದಳು. ಅವಳದ್ದು ಮಹಾಸಾಧನೆ; ಅವಳ ಮೇಲೆ ಮಳೆಗರೆದ ಹೊಗಳಿಕೆಗಳಿಗೂ ಬಹುಮಾನಗಳಿಗೂ ಅವಳು ನಿಜವಾಗಿಯೂ ಅರ್ಹಳು.

ಆಕಾಶಮಾರ್ಗವಾಗಿ ಪ್ರಯಾಣ ಮಾಡಬಹುದು; ಮತ್ತು ತನ್ನ ಅಂಚೆಯನ್ನು ಕಳಿಸಲು ವಿಮಾನಗಳನ್ನು ಉಪಯೋಗಿಸಬಹುದು. ಅಮೆರಿಕದ ಸಂಯುಕ್ತ ಸಂಸ್ಥಾನಗಳ ಆಕಾಶಮಾರ್ಗಗಳ ಪದ್ಧತಿಯಲ್ಲಿ ಎರಡು ವಿಧಗಳಿಗೂ ಅತ್ಯುತ್ತಮ ನಿದರ್ಶನಗಳಿವೆ. ಅಲ್ಲಿ, ತೀರದಿಂದ ತೀರಕ್ಕೆ ೩,೦೦೦ ಮೈಲಿಗಳ ಅಳತೆಯ ಖಂಡದ ಅಗಲಕ್ಕೂ ಪ್ರಯಾಣದ ಏರ್ಪಾಡಿದೆ; ಇದಕ್ಕೆ ಅಡ್ಡಲಾಗಿ ಗಂಟೆಗೆ ೪೦ ಮೈಲಿಗಳಂತೆ ರೈಲು ಬಂಡಿಗಳು ತಿರುಗುತ್ತವೆ. ಆಧುನಿಕ ವಾಯುಮಾರ್ಗ ವಿಮಾನದ (Air Liner) ವೇಗ, ನಿಲುಗಡೆಗಳೂ ಸೇರಿ, ಗಂಟೆಗೆ ಸರಾಸರಿ ೧೫೦ ಮೈಲಿಗಳು; ಈ ವೇಗ ಸದ್ಯದಲ್ಲೇ ಬಹುಶಃ ಇನ್ನೂ ಹೆಚ್ಚುವುದು. ಒಬ್ಬನು ನ್ಯೂಯಾರ್ಕಿನಿಂದ ಲಾಸ್ ಆ್ಯಂಜೆಲೆಸ್ಸಿಗೆ– ಅಂದರೆ ೩,೦೦೦ ಮೈಲಿಗಳನ್ನು– ೨೪ ಗಂಟೆಗಳಲ್ಲಿ ಪ್ರಯಾಣ ಮಾಡಲು ಸಾಧ್ಯ; ರೈಲು ಪ್ರಯಾಣಕ್ಕೆ ಹಿಡಿಯುವ ೫ ದಿನ ಗಳೊಡನೆ ಹೋಲಿಸಿದರೆ ಅವನು ವ್ಯರ್ಥ ಮಾಡಬೇಕಾದದ್ದು ಒಂದು ದಿನ ಮಾತ್ರ. ಅವನು ತನ್ನ ಕಾರ್ಯಗಳನ್ನು ಮುಗಿಸಿಕೊಂಡು ಮರುದಿನವೇ ಹಿಂದಿರುಗಬಹುದು; ಇದರಿಂದ ಅವನು ತನ್ನ ಕಚೇರಿಯಿಂದ ಒಟ್ಟು ಮೂರು ದಿನಗಳು ಮಾತ್ರ ಗೈರುಹಾಜರಾಗಿರಬೇಕಾಗುತ್ತದೆ, ಅಷ್ಟೆ. ವಾಯುಮಾರ್ಗ ವಿಮಾನದ ಉತ್ತಮ ಉಪಯೋಗಕ್ಕೆ ಇದು ಮಾದರಿಯಾದ ನಿದರ್ಶನ. ಅವನ ಅಂಚೆಯ ಸಾಗಣೆಯೂ ಇಷ್ಟೇ ಮುಖ್ಯ. ಅದೇ ಎರಡು ಸ್ಥಳಗಳಲ್ಲಿ ಒಂದಕ್ಕೊಂದಕ್ಕೆ ಮೂರು ದಿನಗಳೊಳಗಾಗಿ ಒಂದು ಕಾಗದ ಕಳಿಸಿ ಉತ್ತರ ತರಿಸಿಕೊಳ್ಳಬಹುದು, ಅಥವಾ ಚೆಕ್ಕುಗಳನ್ನು ಕಳಿಸಿ ಬ್ಯಾಂಕಿನ ಮೂಲಕ ಸರಿನೋಡಿಸಬಹುದು. ಹಿಂದೆ ಇದೇ ಕೆಲಸಕ್ಕೆ ಸರಿಸುಮಾರಾಗಿ ೧೫ ದಿನ ಬೇಕಾಗುತ್ತಿತ್ತು. ವ್ಯಾಪಾರ ವ್ಯವಹಾರಗಳು ಮೊದಲಿಗಿಂತ ಎಷ್ಟು ಹೆಚ್ಚು ಚುರುಕಿನಿಂದ ನಡೆಯಲು ಸಾಧ್ಯವಾಗಿದೆಯೆಂಬುದು, ಸ್ಥಳಗಳು ದೂರ ದೂರ ಇರುವ ಇಂಡಿಯಾ ದೇಶದಲ್ಲಿ ಬಹು ಸುಲಭವಾಗಿ ಮನದಟ್ಟಾಗುತ್ತದೆ. ಬೊಂಬಾಯಿಯ ವ್ಯಾಪಾರಸ್ಥನೊಬ್ಬನು ಕರಾಚಿಯಲ್ಲಿ ವ್ಯವಹಾರ ನಡಸಬೇಕಾದರೆ ಅವನು ಬೆಳಗ್ಗೆ ೧೦ ಗಂಟೆಗೆ ಹೊರಟು ಸಂಜೆ ೫ ಗಂಟೆಗೆ ಕರಾಚಿಯನ್ನು ಸೇರಬಹುದು; ಹೀಗೆ, ಅವನ ಪ್ರಯಾಣಕ್ಕೆ ೭ ಗಂಟೆ ಕಾಲ ಮಾತ್ರ ಸಾಕು. ಅವನು ಜಹಜಿನ ಮೇಲಾಗಲಿ ರೈಲು ಬಂಡಿಯಲ್ಲಾಗಲಿ ಹೋಗಿದ್ದರೆ ಹಿಂದೆ ಕನಿಷ್ಠ ಪಕ್ಷ ಅವನಿಗೆ ಎರಡು ದಿನ ಬೇಕಾಗುತ್ತಿತ್ತು. ಒಂದು ಮುಖ್ಯವಾದ ಕಾಗದವನ್ನಾಗಲಿ ಪದಾರ್ಥವನ್ನಾಗಲಿ ದೆಹಲಿಗೆ ಕಳಿಸಬೇಕಾದರೆ ೬ ಗಂಟೆಗಳ ಕಾಲ ಸಾಕು; ಬೇರೆಯ ರೀತಿಯಲ್ಲಾದರೆ ಇದರ ನಾಲ್ಕರಷ್ಟು ಕಾಲ ಬೇಕಾದೀತು.

# ಪ್ರಕರಣ ೬

## ಸಾಗಣೆ

ವಿಮಾನ ಮೊದಲು ನಿರ್ಮಾಣವಾದಂದಿನಿಂದ ಅದು ಅನೇಕ ವಿಧಗಳಲ್ಲಿ ಉಪಯೋಗವಾಗುವುದೆಂಬುದು ದೃಢಪಟ್ಟಿದೆ. ಸಾಗಣೆಯ ವಾಹಕವಾಗಿ (Medium) ವಾಯು ಎರಡು ವಿಧಗಳಲ್ಲಿ ಅಸಾಧಾರಣವಾಗಿದೆ. ಮೊದಲನೆಯದಾಗಿ, ಭೂಮಿಯ ಮೇಲೆ ಒಂದು ಸ್ಥಳದಿಂದ ನೇರವಾಗಿ ಮತ್ತೊಂದು ಸ್ಥಳಕ್ಕೆ ಭೌಗೋಲಿಕ ಅಡಚಣೆಗಳಾವುವೂ ಇಲ್ಲದ ಪ್ರಧಾನ ಮಾರ್ಗವೊಂದನ್ನು ಒದಗಿಸುತ್ತದೆ. ನೆಲವಾಗಲಿ, ನೀರಾಗಲಿ ಯಾವುದಾದರೂ ಎರಡು ಸ್ಥಳಗಳಿಗೆ ನಡುವೆ ನಿರಂತರವಾಗಿರುವುದಿಲ್ಲ; ಆದ್ದರಿಂದ ರಸ್ತೆಯ ವಾಹನದಿಂದ ಹಡಗಿಗೆ, ಹಡಗಿನಿಂದ ವಾಹನಕ್ಕೆ ಬದಲಾಯಿಸಬೇಕಾಗಬಹುದು. ಈ ಕಾರಣದಿಂದ ಬೆಲೆ ಬಾಳುವ ಸರಕನ್ನು ಸಾಗಿಸುವುದಕ್ಕೆ ವಿಮಾನಗಳನ್ನು ಉಪಯೋಗಿಸಲಾಗುತ್ತದೆ; ಏಕೆಂದರೆ, ಸರಕುಗಳನ್ನು ಹಿಡಿದಾಡುವುದು ಎಷ್ಟುಮಟ್ಟಿಗೆ ಕಡಮೆಯಾಗುತ್ತದೆಯೋ ಅವುಗಳು ನಷ್ಟವಾಗುವ ಇಲ್ಲವೆ ಕೆಟ್ಟು ಹೋಗುವ ಅಪಾಯಸಂಭವವೂ ಅಷ್ಟುಮಟ್ಟಿಗೆ ಕಡಮೆಯಾಗುತ್ತದೆ; ಇದಕ್ಕನುಗುಣವಾಗಿ ಅವುಗಳ ವಿಮಾದರಗಳೂ ಇಳಿಯುತ್ತವೆ. ಆಕಾಶಮಾರ್ಗವಾಗಿ ಒಯ್ಯುವ ಬೆಲೆ ಬಾಳುವ ಸರಕುಗಳಲ್ಲಿ ಚಿನ್ನ ಮತ್ತು ಒಡವೆಗಳು, ಸೊಗಸಾದ ರೇಷ್ಮೆ ಸರಕುಗಳು ಮತ್ತು ಬಟ್ಟೆಗಳು, ಪಂದ್ಯದ ಕುದುರೆಗಳು ಮುಂತಾದ ಬೆಲೆ ಬಾಳುವ ಜಾನುವಾರುಗಳು– ಇವೆಲ್ಲ ಇರುತ್ತವೆ.

ವಾಯುವಿಗಿರುವ ಎರಡನೆಯ ಪ್ರಯೋಜನವೇನೆಂದರೆ, ಉಚಿತ ಆಕಾರದ ವಾಹನಗಳು ಹೋಗುವುದಕ್ಕೆ ನೆಲಕ್ಕಿಂತಾಗಲಿ ನೀರಿಗಿಂತಾಗಲಿ ಕಡಮೆ ನಿರೋಧವನ್ನೊಡ್ಡುತ್ತದೆ. ಈ ರೀತಿ, ಮೋಟಾರು ಬಂಡಿಗಳು, ರೈಲು ಬಂಡಿಗಳು ಮತ್ತು ಹಡಗುಗಳು– ಇವುಗಳಿಗಿಂತ ವಿಮಾನಗಳು ಹೆಚ್ಚು ವೇಗವಾಗಿ ಹೋಗಬಲ್ಲವು; ಇದರ ಫಲವಾಗಿ ಆಗುವ ಕಾಲದ ಉಳಿತಾಯ ಮುಖ್ಯವಾಗಿ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿರುವವನಿಗೆ ಅನೇಕ ವೇಳೆ ಬಹಳ ಅಮೂಲ್ಯ. ಅವನು ಎರಡು ವಿಧಗಳಲ್ಲಿ ಇದರ ಪ್ರಯೋಜನ ಹೊಂದಬಹುದು: ಅವನ

## ಅಕಾಶ ಪರಿಶೀಲನೆ ಮತ್ತು ಆಕಾಶ ಛಾಯಾಚಿತ್ರಗ್ರಹಣ (Air Survey and Photography)

೧೯೧೪-೧೮ರ ಯೂರೋಪಿನ ಯುದ್ಧದಲ್ಲಿ ಬೇರೆ ಬೇರೆ ಯುದ್ಧ ಪಕ್ಷಗಳ ವಿಮಾನ ನಡಸುವವರು ಸೈನಿಕೋದ್ದೇಶಗಳಿಗಾಗಿ ಬೇರೆಬೇರೆ ಪ್ರದೇಶಗಳ ಛಾಯಾಚಿತ್ರಗಳನ್ನು ತೆಗೆದುಕೊಂಡರು; ಅದೇ ಆಕಾಶಪರಿಶೀಲನೆಯ ಪ್ರಾರಂಭ ಎಂದು ಹೇಳಬಹುದು. ಅಂದಿನಿಂದೀಚೆಗೆ, ಚೆನ್ನಾಗಿ ತಿಳಿದಿರುವ ಮತ್ತು ಸ್ವಲ್ಪವೂ ತಿಳಿಯದ ಭೂ ಪ್ರದೇಶಗಳ ನಕ್ಷೆಯನ್ನು ಶೀಘ್ರವಾಗಿ ಗುರುತಿಸಿಕೊಳ್ಳುವುದು ಮುಂತಾದ ಅನೇಕ ಬಗೆಯ ಉಪಯೋಗಗಳಿಗೆ ಈ ಆಕಾಶಪರಿಶೀಲನೆ ಒದಗಿಬರುವಂತೆ ಮಾಡಿಕೊಂಡಿದೆ. ೧೯೨೯ರಲ್ಲಿ ವಿಮಾನ ಕಾರ್ಯಕರ್ತ ಸಂಘವೊಂದು ರಿಯೋ-ಡ-ಜನೆರಿಯೋ (Rio-de-Janerio) ಎಂಬ ನಗರವನ್ನು ನೆಲದ ಮೇಲಿನಿಂದ ಮೋಜಣಿ ಮಾಡಿತು. ನಗರದ ಮಧ್ಯ ಭಾಗವನ್ನು ಒಂದು ಮೈಲಿಗೆ ೬೩ ಅಂಗುಲದ ಪ್ರಮಾಣದಲ್ಲಿ ನಕ್ಷೆ ಮಾಡಲಾಯಿತು. ಕಡೆಯಲ್ಲಿ ಸಿದ್ಧವಾದ ನಕ್ಷೆ ಎಷ್ಟು ನಿಷ್ಕೃಷ್ಟವಾಗಿತ್ತೆಂದರೆ, ಒಂದು ಗಜದೊಳಗಿನ ಯಾವ ಸ್ಥಳವನ್ನು ಬೇಕಾದರೂ ಅದರಲ್ಲಿ ಗುರುತು ಹಿಡಿಯಬಹುದಾಗಿತ್ತು. ಹೀಗೆ ಸಿದ್ಧಪಡಿಸಿದ ಕಡೆಯ ನಕ್ಷೆಗಳನ್ನು, ಭೂಮಿಯ ಮೇಲಿನ ಪರಿಶೀಲನೆಯಿಂದ ಅಳೆದ ಸ್ಥಳಗಳೊಡನೆ ಹೋಲಿಸಿ ಸರಿನೋಡಲಾಗುವುದು. ಇದರ ವೆಚ್ಚ ಒಂದು ಚದರ ಮೈಲಿಗೆ ಸುಮಾರು ೨,೫೦೦ ಪೌಂಡುಗಳಷ್ಟಾಗಿದೆ; ೪ ವರ್ಷಗಳಿಗಿಂತ ಕಡಮೆಯ ಕಾಲದಲ್ಲಿ ಮುಗಿಸಿದ ಈ ಕೆಲಸದ ವ್ಯಾಪ್ತಿ ೧೫,೦೦,೦೦೦ ಮನೆಗಳುಳ್ಳ ಪ್ರದೇಶವನ್ನು ಒಳಗೊಂಡಿತ್ತು. ಇದೇ ನಕ್ಷೆಯನ್ನು ಹಳೆಯ ವಿಧಾನಗಳಲ್ಲಿ ತಯಾರಿಸಿದ್ದರೆ ವೆಚ್ಚ ಇನ್ನೂ ಹೆಚ್ಚಾಗುತ್ತಿದ್ದಿತಲ್ಲದೆ ಕೆಲಸ ಮುಗಿಸಲು ಅದಕ್ಕಿಂತ ಮೂರರಷ್ಟು ಇಲ್ಲವೆ ನಾಲ್ಕರಷ್ಟು ಕಾಲ ಹಿಡಿಯುತ್ತಿತ್ತು.

ಪ್ರಪಂಚದ ಅನೇಕ ಭಾಗಗಳಲ್ಲಿ ಎಲ್ಲೆ ಕಟ್ಟುಗಳನ್ನು ಗೊತ್ತು ಮಾಡುವುದಕ್ಕಾಗಿ ಛಾಯಾಚಿತ್ರಗ್ರಹಣವನ್ನು ಸ್ವಲ್ಪ ಮಟ್ಟಿಗೆ ಉಪಯೋಗಿಸಲಾಗಿದೆ; ಮತ್ತು ಈ ರೀತಿಯಲ್ಲಿ ನ್ಯಾಯವಿವಾದಗಳನ್ನು ಬಗೆಹರಿಸಲಾಗಿದೆ. ಕಲ್ಕತ್ತದಲ್ಲಿ ಬಂದರಿನ ಅಧಿಕಾರಿಗಳು ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳನ್ನು ಗೊತ್ತು ಮಾಡುವುದಕ್ಕಾಗಿ ಪರ್ವ ಕಾಲದ ಭರತದಲ್ಲಿ (Spring tide) ಮತ್ತು ಕಡಮೆಯ ಭರತದಲ್ಲಿ (Neap tide) ಹೂಗ್ಲಿ ನದಿಯ ಎರಡು ದಡಗಳನ್ನೂ ಆಕಾಶ ಪರಿಶೀಲನೆಯ ಮೂಲಕಳೆಯಿಸಿದರು. ಆಕಾಶದಿಂದ ತೆಗೆದ ಛಾಯಾಚಿತ್ರಗಳು ನೀರು ಹೆಚ್ಚಾಗಿದ್ದಾಗ ಮತ್ತು ಕಡಮೆಯಾಗಿದ್ದಾಗ ನೀರಿನ ಮಟ್ಟದ ಪರಿಮಿತಿಗಳನ್ನು

ಅದೇ ರೀತಿಯಲ್ಲಿ, ವಾಯುಪ್ರಯಾಣಗಳಿಂದ ಸಮುದ್ರ ದಾಟುವುದು ತಪ್ಪಿದೆ; ಪರಿಣಾಮವಾಗಿ, ವಾಯುಪ್ರಯಾಣಗಳೇ ಹೆಚ್ಚು ರೂಢಿಗೆ ಬರುತ್ತಿವೆ. ಇಲ್ಲಿ ದೂರುಗಳು ಹೆಚ್ಚು ನಿಡಿದಾದ್ದರಿಂದ ಕಾಲದ ವಿಷಯ ಹೆಚ್ಚು ಮುಖ್ಯ. ಸಾಮಾನ್ಯವಾಗಿ ಮನುಷ್ಯನಿಗೆ ಉಪಯೋಗಕ್ಕೆ ಬರುವ ಪ್ರತಿಯೊಂದು ಪದಾರ್ಥವನ್ನೂ ಒಂದಲ್ಲ ಒಂದು ವೇಳೆಯಲ್ಲಿ ಆಕಾಶ ಮೂಲಕವೇ ಸಾಗಿಸಲಾಗಿದೆ. ಹಣ್ಣುಗಳು, ಮೀನು, ಉಷ್ಣದೇಶದ ಹಣ್ಣುಗಳು ಮುಂತಾದ ಬೇಗನೆ ಕೆಟ್ಟುಹೋಗುವ ಸರಕುಗಳನ್ನು ಆಗಿಂದಾಗ್ಗೆ ಒಯ್ಯಲಾಗುತ್ತದೆ. ಯಂತ್ರಗಳಂಥ ಭಾರವಾದ ವಸ್ತುಗಳನ್ನು ಸಹ, ಹಾಗೆ ಸಾಗಿಸುವುದು ಅತ್ಯಂತ ಅಗ್ಗವೆಂದು ಕಂಡುಬಂದಾಗ ಆಕಾಶ ಮುಖಾಂತರವೇ ಸಾಗಿಸಲಾಗಿದೆ. ೧೯೩೧ರಲ್ಲಿ ನ್ಯೂಗಿನಿಯಲ್ಲಿ ಚಿನ್ನದ ಗಣಿಯೊಂದನ್ನು ಪ್ರಾರಂಭಿಸಿದಾಗ ಒಂದು ಉತ್ಕೃಷ್ಟ ಉದಾಹರಣೆ ಗಮನಕ್ಕೆ ಬಂತು. ಕಾಡಿನ ಮೂಲಕ ದಾರಿ ಮಾಡಿಸಬೇಕಾಗಿದ್ದರೆ ತುಂಬ ವೆಚ್ಚವಾಗುತ್ತಿತ್ತು. ಆದ್ದರಿಂದ ಎಲ್ಲ ಯಂತ್ರಗಳನ್ನೂ ಭಾಗ ಭಾಗವಾಗಿ ತೆಗೆದೊಯ್ಯಲು 'ಜಂಕರ್ಸ್' (Junkers) ವಿಮಾನಗಳನ್ನು ಇದೇ ಉದ್ದೇಶಕ್ಕಾಗಿ ಜೋಡಿಸಲಾಯಿತು. ಒಂದು ಎಂಜಿನ್ನಿಗಾಗಿ ಒಂದು ಭಾರವಾದ ತಿರುಗಚ್ಚನ್ನು (Crank shaft) ಒಯ್ಯಬೇಕಾಗಿ ಬಂದಾಗ, ವಿಮಾನದ ರಚನಾಸಂವಿಧಾನವನ್ನೇ ಇದಕ್ಕನುಗುಣವಾಗಿ ಸರಿ ಹೊಂದಿಸಿಕೊಳ್ಳಲಾಯಿತು: ಹೇಗೆಂದರೆ, ಈ ತಿರುಗಚ್ಚನ್ನೆ ವಿಮಾನದ ಕಟ್ಟಡದ ಒಂದು ಭಾಗವಾಗಿ ಉಪಯೋಗಿಸಿಕೊಳ್ಳಲಾಯಿತು. ಇಲ್ಲದೆ ಹೋಗಿದ್ದರೆ, ವಿಮಾನ ವಾಯುವಿನಲ್ಲಿ ಎತ್ತುವ ಭಾರ ಬಹು ಹೆಚ್ಚಾಗಿಬಿಡುತ್ತಿತ್ತು.

ಪರ್ವತಗಳ ಮೇಲೆ ಅಥವಾ ಪರ್ವತಗಳುಳ್ಳ ದೇಶಗಳ ಮೇಲೆ, ಅದರಲ್ಲೂ ಕಾಲವಿಷಯ ಸರ್ವಮುಖ್ಯವಾಗಿದ್ದಾಗ, ವಿಮಾನವನ್ನು ಅದೇ ರೀತಿ ಉಪಯೋಗಿಸಿ ಕೊಳ್ಳಲಾಗಿದೆ. ಬ್ರಿಟಿಷ್ ಗಯೆನಾದಲ್ಲಿ ವಿಮಾನವನ್ನು ಚರಚಿಕಿತ್ಸಾಲಯವಾಗಿ (Ambulance) ಉಪಯೋಗಿಸಲಾಗುತ್ತಿದೆಯೆಂದು ಸೂಚಿಸಬಹುದಾಗಿದೆ. ಹಿಂದೆ ಅಲ್ಲಿ ಮುಖ್ಯವಾಗಿ ತೋಡುದೋಣಿಯ ಮೂಲಕ ೧೦ ದಿನ ಹಿಡಿಯುತ್ತಿದ್ದ ಒಂದು ಗೊತ್ತಾದ ಪ್ರಯಾಣಕ್ಕೆ ಈಗ ೮ ದಿನಗಳು ಸಾಕು. ನಿರ್ದಿಷ್ಟ ರೋಗಗಳ (ಉದಾಹರಣೆಗಾಗಿ, ನಾಯಿಕಡಿತದ ಹುಚ್ಚು) ಚಿಕಿತ್ಸೆಗೆ ಬೇಕಾದ ವಿಶಿಷ್ಟ 'ಸೀರಂ'ಗಳನ್ನು ಅವು ದೊರೆಯುವ ಕೆಲವು ಕೇಂದ್ರಗಳಿಂದ ಶೀಘ್ರವಾಗಿ ಕಳಿಸಿಕೊಟ್ಟಿದೆ. ಇದರಿಂದ ವಿಮಾನದ ಉಪಯೋಗ ಎಷ್ಟೆಂಬುದು ಮನದಟ್ಟಾಗುವುದು.

ಅತ್ಯಂತ ಅದ್ಭುತ ನಿದರ್ಶನವೆಂದರೆ, ೧೯೩೩ರ ವಸಂತ ಕಾಲದಲ್ಲಿ ಹೂಸ್ಟನ್ ವೆಸ್ಟ್ಲೆಂಡ್ ವಿಶೇಷ ಕಾರ್ಯಯಾತ್ರೆಯ ಹಾರಿಕೆಯವರು (Houstan Westland Expedition Flight) ತಯಾರಿಸಿದ ಹಿಮಾಲಯ ಪರ್ವತದ ಗೌರೀಶಂಕರ, ಮಾಕಾಲೂ ಮತ್ತು ಅಕ್ಕಪಕ್ಕದ ಶಿಖರಗಳ ನಕ್ಷೆಗಳು. ಎರಡು ಯಂತ್ರಗಳು ಹಾರಿಹೋಗಿ, ಈ ಪರ್ವತ ಶಿಖರಗಳ ಮೇಲೂ ಸುತ್ತಲೂ ಹಾರಾಡಿ, ಬೇರೆ ಯಾವ ರೀತಿಯಿಂದಲೂ ದುರ್ಗಮವಾಗಿದ್ದ ಹಿಮಾಲಯದ ಭಾಗಗಳನ್ನು ಯಶಸ್ವಿಯಾಗಿ ಛಾಯಾಚಿತ್ರಣ ಮಾಡಿದುವು.

**ಪ್ರಾಚೀನ ವಸ್ತುಶಾಸ್ತ್ರ**

ಪ್ರಾಚೀನ ವಸ್ತುಶಾಸ್ತ್ರ (Archaeology) ಸಂಬಂಧದ ಉದ್ದೇಶಗಳಿಗಾಗಿ ವಿಮಾನವನ್ನು ಮೊದಲಸಲ ಯೂರೋಪಿನಲ್ಲಿ ಯುದ್ಧ ಸಮಯದಲ್ಲಿ ಉಪಯೋಗಿಸಿತು; ಆಗ ಯೂರೋಪಿನಲ್ಲಿ ಟೈಗ್ರಿಸ್ ನದಿಯ ಉದ್ದಕ್ಕೂ ಇದ್ದ ಪ್ರಾಚೀನ ನಗರಗಳ ಹಾಳುಗಳ ಛಾಯಾಚಿತ್ರಗಳನ್ನು ತೆಗೆದುಕೊಂಡಿತು. ಈಚೀಚಿನ ವರ್ಷಗಳಲ್ಲಿ ವಿಮಾನದ ಸಹಾಯದಿಂದ ತುಂಬ ಪರಿಶೋಧನೆಗಳನ್ನು ನಡೆಸಿದೆ. ಈ ವಿಧಾನದ ಯಶಸ್ವಿತೆಗೆ, ಮುಖ್ಯವಾಗಿ, ಹಳೆಯ ಅವಶೇಷಗಳ ನಿವೇಶನದಲ್ಲಿ ಬೆಳೆಯುವ ಸಸ್ಯವರ್ಗದ ಬಣ್ಣದಲ್ಲಾಗಲಿ ಸ್ವಭಾವ ಮತ್ತು ಹೊರ ಆಕಾರಗಳಲ್ಲಾಗಲಿ ತೋರುವ ವ್ಯತ್ಯಾಸ ಹಾಗೂ ಛಾಯಾಚಿತ್ರಗಳಲ್ಲಿ ನೆರಳುಗಳಾಗಿ ಕಾಣುವ ಬೆಳಕಿನಲ್ಲಿನ ಅಲ್ಪಸ್ವಲ್ಪ ವ್ಯತ್ಯಾಸಗಳು ಕಾರಣ. ವಾಸ್ತವವಾಗಿ, ನೆಲದ ಮೇಲ್ಭಾಗದ ಬಳಿಯ ಇಟ್ಟಿಗೆಯ ಅಥವಾ ಮಣ್ಣಿನ ಕಟ್ಟಡದ ಉಳಿಕೆಗಳು ಇರಬಹುದೆಂಬ ನಿರೀಕ್ಷೆಯಿರುವ ಸಂದರ್ಭದಲ್ಲಿ ಆಕಾಶ ಛಾಯಾಚಿತ್ರ ಗ್ರಹಣವು ಭೂ ಶೋಧನೆಗೆ ಅಗತ್ಯವಾದ ಪ್ರಾರಂಭ ಕಾರ್ಯವಾಗಿ ಪರಿಣಮಿಸಿದೆ.

**ಪರಿಶೋಧನೆ**

ಪರಿಶೋಧನೆಗೆ ವಿಮಾನಗಳು ಸರ್ವೋತ್ಕೃಷ್ಟ. ಅವು ಪ್ರಪಂಚದ ಯಾವ ಭಾಗಕ್ಕೆ ಬೇಕಾದರೂ ಹಾರಬಲ್ಲವು, ಮತ್ತು ಮನುಷ್ಯರನ್ನೂ ಅವರ ಸಾಮಗ್ರಿ ಸಲಕರಣೆಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅತ್ಯಲ್ಪ ಕಾಲದಲ್ಲಿ ಒಯ್ಯಬಲ್ಲವು. ವಿಮಾನಗಳು ಯಾವ ಸ್ಥಳಕ್ಕೆ ಬೇಕಾದರೂ ಹಾರಬಲ್ಲವೆಂಬುದಕ್ಕೆ ಧ್ರುವಯಾತ್ರೆ ಅತ್ಯುತ್ತಮ ನಿದರ್ಶನ. ಈ ಯಾತ್ರೆಗಳ ಸಂಬಂಧವಾಗಿ ಪ್ರಮುಖವಾಗಿ ಎದ್ದು ಕಾಣುವವು ಮೂರು ಹೆಸರುಗಳು: ಆಮಂಡ್‌ಸೇನ್ (Amundsen),

ಸ್ಪಷ್ಟವಾಗಿ ತೋರಿಸುತ್ತವೆ. ಅವು ನೀರಿನ ಮೇಲ್ಮೈ ಕೆಳಗಿನ ಆಳವಿಲ್ಲದ ಸ್ಥಳಗಳು, ಅಡಚಣೆಗಳು ಮತ್ತು ಬಂಡೆಗಳು– ಇವುಗಳನ್ನು ಸಹ ಗೋಚರಪಡಿಸುತ್ತವೆ. ಇಷ್ಟೇ ಅಲ್ಲದೆ, ನಡುವೆ ತೇಲಾಡುವ ಸಣ್ಣ ಸಣ್ಣ ಕಣಗಳನ್ನು ಒಯ್ಯುವ ಮಟ್ಟಿಗೆ ಪ್ರವಾಹವು ವೇಗವಾಗಿರುವಾಗ ನೀರಿನ ಆಳವನ್ನೂ ಅಂದಾಜು ಮಾಡುವುದು ಸಾಧ್ಯ. ಬೇರೆಬೇರೆ ಕಾಲಗಳಲ್ಲಿರುವ ನೀರಿನ ಮಟ್ಟವನ್ನು ಹೋಲಿಸುವುದರಿಂದ ನದಿಯ ದಡಗಳ ಸ್ಥಳಬದಲಾವಣೆಯಿಂದಲೂ ಸವೆಯುವಿಕೆಯಿಂದಲೂ ಆಗುವ ವ್ಯತ್ಯಾಸಗಳು ವ್ಯಕ್ತವಾಗುತ್ತವೆ.

ಇಂಗ್ಲೆಂಡಿನ ಮಿಡ್ಲ್‌ಸೆಕ್ಸ್ ಪ್ರಾಂತದ ವೀಲ್ಡ್‌ಸ್ಟನ್ನಿನ (Wealdstone) ನಕ್ಷೆ ಆಕಾಶ ಛಾಯಾಚಿತ್ರ ಗ್ರಹಣಕ್ಕೆ ಮತ್ತೊಂದು ಉದಾಹರಣೆ; ಇದರ ಪ್ರಮಾಣ ಒಂದು ಮೈಲಿಗೆ ೧೦೦ ಅಂಗುಲಗಳು; ಇದು ಈಚೀಚೆಗೆ ಹಬ್ಬಿರುವ ಮಾದರಿಯಾದ ಆಧುನಿಕ ನಿವಾಸ ಪ್ರದೇಶವನ್ನು ತೋರಿಸುತ್ತದೆ. ಮನೆ ಕೊಳ್ಳಬೇಕೆಂದಿರುವವನು ನೆರೆಹೊರೆಯ ಪ್ರಾಂತದ ಚಿತ್ರ ನೋಡಬೇಕೆಂದು ಬಯಸಿದರೆ ಅವನಿಗೆ ಈ ನಕ್ಷೆಯಿಂದ ತುಂಬ ಸಹಾಯವಾಗುತ್ತದೆ. ಇಂಥ ಕಾರ್ಯ ಮಾಡುವುದು ಹೇಗೆನ್ನುವುದನ್ನು ಸಂಕ್ಷೇಪದಲ್ಲಿ ಹೀಗೆ ವಿವರಿಸಬಹುದು: ಬಲಕ್ಕೆ, ಎಡಕ್ಕೆ ಅಥವಾ ಮಧ್ಯಕ್ಕೆ ಛಾಯಾಚಿತ್ರಗಳನ್ನು ತೆಗೆಯಲಾಗುವಂತೆಯೂ ಹಾಗೆ ತೆಗೆದ ಚಿತ್ರಗಳು ಒಂದರ ಮೇಲೊಂದು ಕೂರುವಂತೆಯೂ ವಿಮಾನದ ಮೂಗಿನ ಭಾಗದಲ್ಲಿ ಆಕಾಶ ಛಾಯಾಚಿತ್ರಕವನ್ನು (Ariel camera) ಅಳವಡಿಸಿರುತ್ತದೆ. ೫,೦೦೦ ಅಡಿಗಳ ಎತ್ತರದ ಮೇಲೆ ನೇರ ಮಾರ್ಗದಲ್ಲಿ ವಿಮಾನವನ್ನು ಹಾರಿಸಲಾಗುತ್ತದೆ, ಮತ್ತು ಎರಡು ಮೈಲಿ ಬಿಟ್ಟು ಒಂದರಂತೆ ಮೂರು ಚಿತ್ರಪಟಲಗಳನ್ನು ಚಿತ್ರ ಗ್ರಹಣಕ್ಕೆ ಒಡ್ಡಲಾಗುತ್ತದೆ. ಒಂದೇ ದಿಕ್ಕಿನಲ್ಲಿ ನೇರ ದಾರಿಯಲ್ಲಿ ಹಾರಿದ ಮೇಲೆ ಆರು ಮೈಲಿಗಳಷ್ಟು ಪಕ್ಕಕ್ಕೆ ತಿರುಗಿ, ಅಲ್ಲಿಂದ ಮೊದಲಿನ ನೇರ ದಾರಿಗೆ ಸಮಾಂತರದಲ್ಲಿ ಹಿಂದಕ್ಕೆ ಹಾರಲಾಗುತ್ತದೆ. ಈ ರೀತಿಯಲ್ಲಿ, ಒಟ್ಟು ಪ್ರದೇಶವೆಲ್ಲವನ್ನೂ ಛಾಯಾಚಿತ್ರ ತೆಗೆಯಲಾಗುತ್ತದೆ. ಇದಕ್ಕೆ ಓರೆ ಛಾಯಾಚಿತ್ರ ಗ್ರಹಣ (Oblique photography) ಎಂದು ಹೆಸರು. ಊರ್ಧ್ವ ಛಾಯಾಚಿತ್ರಗಳಿಂದಲೂ (Vertical photograph) ನಕ್ಷೆಗಳನ್ನು ಮಾಡಲಾಗುತ್ತದೆ. ಆಕಾಶ ಛಾಯಾಚಿತ್ರ ಗ್ರಹಣವನ್ನು ವ್ಯಾಪಾರ ಪ್ರಕಟನೆ ಮತ್ತು ವಿದ್ಯಾಭ್ಯಾಸ ಸಂಬಂಧವಾದ ಉದ್ದೇಶಗಳಿಗಾಗಿ ಬಹಳ ಮಟ್ಟಿಗೆ ಉಪಯೋಗಿಸುತ್ತಿದೆ. ಆಕಾಶ ಛಾಯಾಚಿತ್ರ ಗ್ರಹಣ ಒಂದು ಪ್ರಾಂತದ ಅತಿ ವಿಶಾಲ ನೋಟವನ್ನು ಒದಗಿಸಿಕೊಡುತ್ತದೆ. ಆಕಾಶ ಛಾಯಾಚಿತ್ರ ಗ್ರಹಣದ

ಅಮೆರಿಕದ ಸಂಯುಕ್ತ ಸಂಸ್ಥಾನಗಳು, ರಷ್ಯ ಮತ್ತು ಇತರ ಕಡೆಗಳಲ್ಲಿ ಬೆಳೆಗಳ ಮೇಲೆ ಕ್ರಿಮಿನಾಶಕಗಳನ್ನು ತುಂತುರು ಎರಚುವ ಹಳೆಯ ವಿಧಾನಗಳಿಗೆ ಬದಲಾಗಿ ಧೂಳೆರಚುವ ಪದ್ಧತಿ ರೂಢಿಗೆ ಬಂದಿದೆ. ವಿಮಾನಗಳ ಸಹಾಯದಿಂದ ದೊಡ್ಡ ಪ್ರದೇಶಗಳಿಗೆ ಈ ರೀತಿ ಚಿಕಿತ್ಸೆ ಮಾಡಬಹುದು. ಉದಾಹರಣೆಗೆ, ಹತ್ತಿಹುಳು (Bollweevil) ತುಂಬಿದ ಹತ್ತಿಯ ಹೊಲದ ಮೇಲೆ ಸುಣ್ಣದ ಆರ್ಸೆನೇಟ್ (Calcium arsenate) ಲವಣವನ್ನು ಈ ರೀತಿ ಪ್ರಯೋಗಿಸಲಾಗಿದೆ. ಮಿಡತೆಗಳ ಹಿಂಡನ್ನು ನಾಶಮಾಡುವುದಕ್ಕೂ ಇದೇ ಬಗೆಯ ವಿಧಾನಗಳನ್ನು ಕೈಗೊಳ್ಳಲಾಗಿದೆ; ಆದರೆ, ಈ ಕೀಟಗಳ ಸಂಖ್ಯೆ ಅಪಾರವಾದ್ದರಿಂದ ಅವುಗಳನ್ನು ನಾಶಗೊಳಿಸುವ ಪ್ರಯತ್ನಪೂರ್ಣವಾಗಿ ಯಶಸ್ವಿಯಾಗಿಲ್ಲ. ಅವು ಹುಟ್ಟುವ ನೆಲೆಗಳ ಮೇಲೆಯೇ ಕ್ರಿಮಿನಾಶಕವನ್ನು ಪ್ರಯೋಗ ಮಾಡುವುದು ಹೆಚ್ಚು ಪರಿಣಾಮಕಾರಿಯಾಗಬಹುದು. ಕೆಸರು ಸ್ಥಳಗಳಲ್ಲೂ ಜೌಗು ಪ್ರದೇಶಗಳಲ್ಲೂ ಸೊಳ್ಳೆ ಹುಟ್ಟುವ ಎಡೆಗಳ ಮೇಲೆ ವಿಮಾನದಿಂದ ಎಣ್ಣೆ ಹರಡುವುದು ಮಲೇರಿಯಾ ರೋಗವನ್ನು ಅಡಗಿಸುವುದರಲ್ಲಿ ಈಗಾಗಲೇ ಎಷ್ಟೋ ಸಹಕಾರಿಯಾಗಿದೆ. ಆಕಾಶದಿಂದಲೇ ಬೀಜ ಬಿತ್ತುವ ವಿಶೇಷ ಯಂತ್ರದಿಂದ ಸಜ್ಜಿತವಾದ ವಿಮಾನಗಳನ್ನು ರಷ್ಯದಲ್ಲಿ ಉಪಯೋಗಿಸಿ ನೋಡಿ ಯಶಸ್ವಿಯಾಗಿದ್ದಾರೆ.

## ಯುದ್ಧ

ವಿಮಾನದ ಆಗಮನದಿಂದ ಆಧುನಿಕ ಯುದ್ಧವಿಧಾನದಲ್ಲಿ ಒಂದು ದೊಡ್ಡ ಕ್ರಾಂತಿಯುಂಟಾಗಿದೆ. ಶತ್ರುದೇಶಕ್ಕೆ ನೆಲ ಜಲಗಳ ಮೂಲಕ ಸೈನ್ಯಗಳು ಪ್ರವೇಶಿಸುವುದು ಅಸಾಧ್ಯವಾಗಿರುವ ಸಂದರ್ಭದಲ್ಲಿ ವಿಮಾನಗಳಿಂದ ಇಳಿ ಕೊಡೆಗಳ ಮೂಲಕ ಸೈನಿಕರನ್ನು ಇಳಿಸಬಹುದು. ಈ ವಿಧಾನದಿಂದ ದೇಶಗಳನ್ನು ಗೆಲ್ಲಲಾಗಿದೆ: ಉದಾಹರಣೆಗೆ, ಕ್ರೀಟ್ ಮತ್ತು ಫಿಲಿಪೈನ್ಸ್ ದ್ವೀಪಗಳು; ಅಲ್ಲದೆ ನೆಲಯುದ್ಧದಲ್ಲಿ ಶತ್ರು ಸೈನಿಕರ ನಡುವೆ ಒಂಟೊಂಟಿಯಾಗಿ ಇಳಿಕೊಡೆಯಾಳು (Parachutist)ಗಳನ್ನು ಇಳಿಸಬಹುದು. ಹಾಗೆ ಇಳಿಸಿದ ಇಳಿಕೊಡೆಯಾಳುಗಳು ಶತ್ರು ಸಮೂಹದಲ್ಲಿ ಹಾವಳಿ ಮಾಡಿ, ಎಲ್ಲೆಡೆಯೂ ಬೇಕಾದಷ್ಟು ಅವಸ್ಥೆಯುಂಟು ಮಾಡಬಲ್ಲರು. ಒಂಟಿಗನಾದ ಇಳಿಕೊಡೆಯಾಳು ಎಷ್ಟು ಕಿರುಕುಳ ಕೊಡಬಲ್ಲ ನೆಂಬುದು ಫ್ರಾನ್ಸಿನಲ್ಲೂ ಪೋಲೆಂಡಿನಲ್ಲೂ ಯುದ್ಧವಾಗುತ್ತಿದ್ದ ಸಂದರ್ಭದಲ್ಲಿ ಚೆನ್ನಾಗಿ ನಿದರ್ಶನಕ್ಕೆ ಬಂದಿದೆ; ಆ ದೇಶಗಳಲ್ಲಿ ಜರ್ಮನಿಯ ಮಿತಿ

ಬರ್ಡ್ (Byrd) ಮತ್ತು ವಿಲ್ಕಿನ್ಸ್ (Wilkins). ಇವರೆಲ್ಲರೂ ಧ್ರುವಗಳ ಮೇಲೆ ಹಾರಿದ್ದಾರೆ, ಮತ್ತು ಅನೇಕ ಛಾಯಾಚಿತ್ರಗಳು ತೆಗೆಯಲ್ಪಟ್ಟಿವೆ. ಸರ್ ಎಚ್.ಜಿ.ವಿಲ್ಕಿನ್ಸ್‌ರವರು ದಕ್ಷಿಣ ಧ್ರುವದಲ್ಲಿ ಆಕಾಶದಿಂದ ದೊಡ್ಡ ಪ್ರದೇಶಗಳ ಪರಿಶೀಲನೆ ಮಾಡುವುದಕ್ಕಾಗಿ ಧ್ರುವದ ಮೇಲೆ ಹಾರಿದ್ದಾರೆ. ಈ ಕಾರ್ಯ ಮಾಡುತ್ತಿದ್ದಾಗ, ದಕ್ಷಿಣ ಧ್ರುವ ಖಂಡದ ಭಾಗವೆಂಬುದಾಗಿ ವರ್ಣಿತವಾಗಿದ್ದದ್ದು ಒಂದು ದೊಡ್ಡ ದ್ವೀಪ ಮಾತ್ರವೆಂಬುದಾಗಿ ಅವರು ಸ್ಥಿರಪಡಿಸಿರು. ಈಗ ಆ ದ್ವೀಪದ ಹೆಸರು ದಕ್ಷಿಣ ಗ್ರ್ಯಾಹಮ್ ದ್ವೀಪ (South Graham Island).

**ಸಂಕೀರ್ಣ**

ಭೂಮಿಯ ಮೇಲ್ಮೈಯ ವಿಸ್ತಾರವಾದ ನೋಟ ಪಡೆಯಲು ವಾಯು ಮಂಡಲವೇ ಉತ್ತಮ ಸ್ಥಳವಾದ್ದರಿಂದ ಜನ ವಾಹನ ಸಂಚಾರ ನಿಯಂತ್ರಣಕ್ಕೆ (Traffic Control) ವಿಮಾನಗಳನ್ನು ಉಪಯೋಗಿಸಲಾಗಿದೆ. ನಿಯಂತ್ರಕ ವಿಮಾನಗಳು ನಿಧಾನವಾಗಿ ಹೋಗಬಲ್ಲವಾಗಿರಬೇಕಾದದ್ದು ಆವಶ್ಯಕವಾದ್ದರಿಂದ ಈ ಉದ್ದೇಶಕ್ಕಾಗಿ ಮೊತ್ತಮೊದಲು ವಾಯುಹಡಗುಗಳನ್ನು ಉಪಯೋಗಿಸಲಾಯಿತು. ದೊಡ್ಡ ಕುದುರೆ ಪಂದ್ಯ ಕೂಟಗಳಿಗೆ ಹೋಗಿ ಬರುವ ಜನರ ಗುಂಪಿನ ಮೇಲೆ ಕಾವಲಿರುವುದಕ್ಕಾಗಿ ಪೋಲೀಸು ಇಲಾಖೆಯವರು R ૩૯ ಮತ್ತು R ೧೦೧ ವಿಮಾನಗಳನ್ನು ಉಪಯೋಗಿಸಿದ್ದರು; ಮತ್ತು ಜನ ವಾಹನ ಸಂಚಾರದಲ್ಲಿ ನಡುನಡುವೆ ಹಾದಿಗಟ್ಟುಗಳನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸುವುದಕ್ಕಾಗಿ ಸಂಚಾರವನ್ನು ಅದರ ಪ್ರಮಾಣಕ್ಕನುಸಾರವಾಗಿ ಬೇರೆಯ ಕಡೆಗೆ ತಿರುಗಿಸಲಾಗುತ್ತಿತ್ತು. ಬಹಳ ವರ್ಷಗಳಿಂದ ಸಾಮಾನ್ಯ ಸಾರ್ವಜನಿಕ ಕಾರ್ಯಗಳಿಗಾಗಿ ವಿಮಾನಗಳನ್ನು ಉಪಯೋಗಿಸಲಾಗುತ್ತಿದೆ. ಇಂಡಿಯಾ ದೇಶದ ವಾಯುವ್ಯ ಗಡಿನಾಡಿನಂತಹ ಗಲಭೆಯ ಪ್ರಾಂತವನ್ನು, ಬಾಂಬು ಹಾಕುವ ಸೈನಿಕ ಕಾರ್ಯದಿಂದಾಗಲಿ ಭಯಗ್ರಸ್ತ ಸ್ಥಳಗಳಿಗೆ ಅಲ್ಪ ಸಂಖ್ಯೆಯಲ್ಲಿ ಸೈನಿಕ ದಳಗಳನ್ನು ಸಾಗಿಸುವುದರಿಂದಾಗಲಿ– ಅಂತೂ ಕನಿಷ್ಠ ಬಲಪ್ರಯೋಗದಿಂದ ಹತೋಟಿಗೆ ತರುವುದಕ್ಕೆ ವಿಮಾನಗಳು ಸಹಾಯವಾಗುತ್ತವೆ. ಇವುಗಳನ್ನೆಲ್ಲ ಎಲ್ಲಿಂದ ಒಯ್ಯಬೇಕೊ ಆ ವಿಮಾನ ನೆಲೆ ನೂರಾರು ಮೈಲಿ ಆಚೆ ಇರಬಹುದು. ಈ ಗಡಿನಾಡಿನಲ್ಲಿ ತಟ್ಟನೆ ಎದ್ದ ಅನೇಕ ದಂಗೆಗಳನ್ನು ಈ ವಿಧಾನದಿಂದ ಬೇಗನೆ ಅಡಗಿಸಲಾಗಿದೆ; ಇದರಲ್ಲಿ ಪ್ರಾಣ, ಧನ ಮತ್ತು ಕಾಲಗಳ ವ್ಯಯದಲ್ಲಿ ಎಷ್ಟೋ ಉಳಿತಾಯವಿದೆ.

ಹೋರಾಟದಲ್ಲಿ ಈ ಅಂಶ ಚೆನ್ನಾಗಿ ನಿದರ್ಶನಕ್ಕೆ ಬರುತ್ತಿದೆ. ಡಂಕರ್ಕ್ ಮತ್ತು ಕ್ರೀಟ್‌ಗಳಲ್ಲಿ ಸಹ ಇದೇ ಸ್ಥಿರಪಟ್ಟಿತು. ಈ ದೇಶಗಳಲ್ಲಿ ಮಿತ್ರಸೈನ್ಯಗಳು ಉತ್ಕೃಷ್ಟವಾಗಿ ಸಜ್ಜಾಗಿದ್ದರೂ ಪರಿಣಾಮಕಾರಿಯಾಗುವ ಮಟ್ಟಿನ ವಿಮಾನ ಬೆಂಬಲವಿಲ್ಲದ್ದರಿಂದ ಬಹು ಹೆಚ್ಚಾಗಿ ಕಷ್ಟನಷ್ಟಗಳಿಗೀಡಾದುವು. ವಿಮಾನ ಬೆಂಬಲ ಸಾಲದಿದ್ದರೆ, ಉಳಿದ ಎಲ್ಲ ಕಾದಾಡುವ ಸೈನ್ಯಶಾಖೆಗಳೂ ಮೇಲೆಬಿದ್ದು ಬರುವ ಶತ್ರು ವಿಮಾನಬಲದ ಮುಂದೆ ಏನೂ ಮಾಡಲಾರದೆ ತೆಪ್ಪನಿರಬೇಕು.

ಹಿಂದಿನ ಕಾಲದ ಯುದ್ಧಗಳಲ್ಲಿ ಕಾದಾಡುವ ಸೈನ್ಯಗಳು ಮಾತ್ರ ಯುದ್ಧದಲ್ಲಿ ತೊಡಗಿದ್ದು ಪ್ರಜಾ ಜೀವನವು ಯಥಾಪ್ರಕಾರವಾಗಿ ಇರುತ್ತಿತ್ತು: ಆಧುನಿಕ ಯುದ್ಧ ಜನಾಂಗವೆಲ್ಲವನ್ನೂ ರಣರಂಗಕ್ಕೆ ಎಳೆದುಕೊಳ್ಳುತ್ತದೆ. ಫ್ರಾನ್ಸಿನಲ್ಲಿ "ಮ್ಯಾಜಿನೋ" ರಕ್ಷಣಾಪಂಕ್ತಿಯಿಂದ (Maginot Line) ವಿಚಿಯ (Vichy)ವರೆಗೆ ಎಲ್ಲವನ್ನೂ ವಿಮಾನ ಅಪಾಯಕ್ಕೊಳಪಡಿಸಿತು. ನಿರಪರಾಧಿಗಳಾದ ಹೆಂಗಸರೆನ್ನದೆ ಮಕ್ಕಳೆನ್ನದೆ, ದೊಡ್ಡವರೆನ್ನದೆ ಚಿಕ್ಕವರೆನ್ನದೆ, ಸೈನಿಕರೆನ್ನದೆ ಅಸೈನಿಕರೆನ್ನದೆ ಎಲ್ಲರನ್ನೂ ವಿಮಾನ ಕೊಲೆ ಮಾಡುತ್ತದೆ. ಕಟ್ಟಡಗಳು, ಪವಿತ್ರ ಸ್ಥಳಗಳು, ಆಸ್ಪತ್ರೆಗಳೂ, ಚರ್ಚುಗಳು, ಮಸೀದಿಗಳು, ದೇವಾಲಯಗಳು– ಒಂದು ಮಾತಿನಲ್ಲಿ, ವಿಮಾನದ ವ್ಯಾಪ್ತಿಗೆ ಒಳಗಾದ ಸಮಸ್ತವೂ ಅದರ ದಾಳಿಗೆ ಆಹುತಿಯಾಗುತ್ತದೆ.

ಇಂದು ಯೂರೋಪಿನ ಬಹುಸಂಖ್ಯೆಯ ರಾಜಧಾನಿ ನಗರಗಳ ಮೇಲೆ ವೈಜ್ಞಾನಿಕ ನಿಷ್ಕೃಷ್ಟತೆಯಿಂದ ಬಾಂಬು ಹಾಕಲಾಗುತ್ತಿದೆ, ದುಮುಕು ಬಾಂಬು (Dive bomb) ಹಾಕಲಾಗುತ್ತಿದೆ. ಇಂದು ಅತ್ಯಂತ ಸುಂದರವಾಗಿದ್ದ ನಗರಗಳು ನಾಳೆ ಹಾಳುಬೀಳುಗಳ ಗುಡ್ಡೆಯಾಗುವ ರೀತಿಯಲ್ಲಿ ಅವು ವಿಧ್ವಂಸಗೊಳ್ಳುತ್ತಿವೆ. ಶತ್ರು ಬಾಂಬರಿನಿಂದ ಹಾಕಿದ ಕೆಲವು ಉರಿಬಾಂಬುಗಳು (Incendiary bombs), ನಗರವೆಲ್ಲವನ್ನೂ ಅತ್ಯಲ್ಪ ಕಾಲದಲ್ಲಿ ಒಂದೇ ಬಾರಿಗೆ ಆಹುತಿ ತೆಗೆದುಕೊಳ್ಳಬಲ್ಲ ಉರಿಯನ್ನು ಹೊತ್ತಿಸಬಲ್ಲವು. ಕಟ್ಟಡಗಳ ತಂಡಗಳ ಮೇಲೆ ಕೆಲವು ಬಾಂಬುಗಳು ಬಿದ್ದರೆ ಕಟ್ಟಡಗಳೆಲ್ಲ ನೆಲಸಮವಾಗಿ ಒಳಗಿರುವ ಸಾವಿರಾರು ನಿರ್ದೋಷಿ ಹೆಂಗಸರು ಮಕ್ಕಳು ಅಲ್ಲಿಯೇ ಹೂತುಹೋಗಬಹುದು. ಈ ಉರಿಬಾಂಬುಗಳಿಂದ ಹಾರುವ ಕಿಡಿಗಳು ಮನುಷ್ಯರನ್ನು ಬದುಕಿರುವವರೆಗೂ ಕುಂಟರನ್ನಾಗಿಯೋ ಬೇರೆ ರೀತಿಯಲ್ಲಿ ಅಂಗಹೀನರನ್ನಾಗಿಯೋ ಮಾಡಬಲ್ಲವು, ಅಥವಾ ಅವರನ್ನು ಒಂದೇ ಸಲಕ್ಕೆ ಇಲ್ಲವೆನಿಸಬಲ್ಲವು; ವಿಮಾನಗಳಲ್ಲಿನ ಯಂತ್ರಬಂದೂಕುಗಳು, ತಮ್ಮತಮ್ಮ ನಿತ್ಯಗೆಲಸಗಳಿಗೆ ಹೋಗುತ್ತಿರುವ ಸಾವಿರಾರು ನಿರಪರಾಧಿ

ಮೀರಿದ ಜಯಕ್ಕೆ ಈ ಇಳಿಕೊಡೆಯಾಳುಗಳು ಎಷ್ಟೋ ಮಟ್ಟಿಗೆ ಸಹಾಯ ಮಾಡಿದ್ದಾರೆ.

ಎರಡನೆಯದಾಗಿ ಬಂದರುಗಳು, ರೈಲುಮಾರ್ಗಗಳು ಮತ್ತು ವಿಮಾನಾಂಗಣಗಳು– ಇವುಗಳ ಮೇಲೆ ಬಾಂಬು ಹಾಕಿ ಶತ್ರುಗಳ ಸಂಚಾರ ಮಾರ್ಗಗಳನ್ನು ಅಣಿಗೆಡಿಸುವುದರಲ್ಲಿ ಬಾಂಬರುಗಳು (ಬಾಂಬೆಸೆಯುವ ವಿಮಾನಗಳು) ಭೇಷಾದ ಕೆಲಸ ಮಾಡುತ್ತವೆ. ಇದರಿಂದ ಕಾದಾಡುವ ಸೈನಿಕರಿಗೆ ಮದ್ದುಗುಂಡು, ಆಹಾರ, ಬಟ್ಟೆಗಳನ್ನು ಸರಿಯಾಗಿ ಒದಗಿಸುವುದು ಅಸಾಧ್ಯವಾಗುತ್ತದೆ. ಆಧುನಿಕ ಬಾಂಬರು ಯುದ್ಧ ಮಾಡದ ಪ್ರಜೆಗಳ ಮೇಲೆ ಬಾಂಬು ಹಾಕಿ ಯುದ್ಧೋದ್ಯೋಗಿಗಳಲ್ಲದವರ ಧೈರ್ಯಸ್ಥೈರ್ಯಗಳನ್ನು ಉಡುಗಿಸಲು ಸಾಧನವಾಗಿದೆ. ಅಲ್ಲದೆ, ಅತ್ಯಂತ ಘೋರ ನಾಶ ವಿಧಾನವಾದ ವಿಷವಾಯು ಯುದ್ಧಕ್ಕೆ ತೊಡಗಿ ಅವು ಶತ್ರುಶ್ರೇಣಿಗಳಲ್ಲಿ ಹಾವಳಿ ಮಾಡಬಲ್ಲವು.

ವಿಮಾನದ ಮುಂದೆ ದೂರವೆಂಬ ಸಂಗತಿ ಮಾಯವಾಗಿದೆ. ಒಂದು ಸ್ಥಳ ಶತ್ರುದೇಶದಿಂದ ದೂರದಲ್ಲಿದೆ ಎಂಬ ಮಾತ್ರಕ್ಕೆ ಅದು ಸುರಕ್ಷಿತವೆಂಬ ಖಾತರಿಯಿಲ್ಲ. ಆಧುನಿಕ ವಿಮಾನವಾಹಕ (ಹಡಗು)ಗಳ ದೆಸೆಯಿಂದ ಲಂಡನ್ನು ಬರ್ಲಿನ್ನಿಗೆ ಎಷ್ಟು ಸುಗಮ್ಯವೊ ಬೊಂಬಾಯಿ ಅಥವಾ ಮದರಾಸು ಬರ್ಲಿನ್ನಿಗೆ ಅಷ್ಟೇ ಸುಗಮ್ಯವಾಗಿವೆ. ವಿಮಾನದ ಉಪಟಳ ಸಮುದ್ರಕ್ಕೂ ತಪ್ಪಿದಲ್ಲ. ಶತ್ರು ನೌಕಾಬಲಕ್ಕೆ ಜಲಾಂತರನಾವೆ ಎಷ್ಟು ಅಪಾಯಕರವೊ ಟಾರ್ಪೆಡೋವಾಹಕ ವಿಮಾನಗಳೂ ಅಷ್ಟೇ ಅಪಾಯಕರ. ನಿಜವಾಗಿ ಟಾರ್ಪೆಡೋವಾಹಕಗಳೇ ಜಲಾಂತರನಾವೆಗಳಿಗಿಂತ ಹೆಚ್ಚು ಬೆಲೆಯುಳ್ಳವು; ಏಕೆಂದರೆ, ನೂರಾರು ಮೈಲಿ ದೂರವಿದ್ದರೂ ವಿಮಾನದಿಂದ ಗುರುತು ಹಚ್ಚಬಹುದು; ಜಲಾಂತರನಾವೆ ಇದನ್ನು ಮಾಡಲಾರದು. ಆಧುನಿಕ ಸೈನಿಕ ವಿಮಾನ ಸ್ಥಳಪರೀಕ್ಷೆಗೆ ಅತ್ಯುತ್ತಮವಾಗಿದೆ. ವಿಮಾನವು ತಾನಿರುವ ಎತ್ತರದಲ್ಲಿ ವಿಶಾಲವ್ಯಾಪಕವಾದ ನೋಟವುಳ್ಳದ್ದಾದ್ದರಿಂದ ವಿಸ್ತಾರವಾದ ಭೂ ಜಲ ಪ್ರದೇಶಗಳನ್ನು ಪರೀಕ್ಷಿಸಿನೋಡಿ, ಶತ್ರುಸ್ಥಾನಗಳನ್ನು ಕಂಡುಹಿಡಿಯಬಲ್ಲದು. ಆಧುನಿಕ ವಿಮಾನ ಸೈನ್ಯದ ಬೆಲೆ ಇಂಥದು: ಬೇರೆಯ ರೀತಿಯಲ್ಲಿ ಉತ್ಕೃಷ್ಟವಾಗಿ ಸಜ್ಜಾದ ಸೈನ್ಯಗಳು ಸಮರ್ಥವಾದ ವಿಮಾನ ಬಲವಿಲ್ಲದ್ದರಿಂದ ನಿಷ್ಪ್ರಯೋಜಕವಾಗಿವೆ. ಯಾವ ದೇಶದ ನೌಕಾಬಲವಾಗಲಿ, ಭೂ ಸೈನ್ಯವಾಗಲಿ ವಿಮಾನಗಳ ಬೆಂಬಲವಿಲ್ಲದೆ ದಕ್ಷತೆಯಿಂದ ಕಾರ್ಯಮಾಡಲಾರದು. ಜಪಾನಿಗೂ ವಿಮಾನ ಬಲದಲ್ಲಿ ಅದಕ್ಕಿಂತ ಕಡಮೆಯ ಸಾಮರ್ಥ್ಯವುಳ್ಳ ಮಿತ್ರ ರಾಷ್ಟ್ರಗಳಿಗೂ ದೂರಪ್ರಾಚ್ಯದಲ್ಲಿ ನಡೆಯುತ್ತಿರುವ

ಕರೆದೊಯ್ಯಬಲ್ಲ ವಿಮಾನವೇ ಜನ ಸಮುದಾಯಗಳ ಮತ್ತು ಆಸ್ತಿಪಾಸ್ತಿಗಳ ಮೇಲೆ ಸಾವನ್ನೂ ವಿನಾಶವನ್ನೂ ಮಳೆಗರೆಯಬಲ್ಲ ಭಯಂಕರ ಶಕ್ತಿಯನ್ನು ಹೊಂದಿದೆ. ವಿನಾಶಕ ಶಕ್ತಿಯಲ್ಲಿ ಮನುಷ್ಯನ ವಶದಲ್ಲಿರುವ ಉಳಿದೆಲ್ಲ ಆಯುಧಗಳನ್ನೂ ಮೀರಿಸುವ ಭಯಂಕರ ಆಯುಧವಿದು. ಇಂದು ಪ್ರಕೃತಿ ತನ್ನ ಅಂಕೆಯಲ್ಲಿರುವ ವಿನಾಶಕ ಶಕ್ತಿಯೆಲ್ಲವನ್ನೂ ಈ ಬಾಂಬರಿನ ರೂಪದಲ್ಲಿ ಹೊರಬಿಟ್ಟಿರುವಂತೆ ಕಾಣುತ್ತದೆ. ಇದೆಲ್ಲವನ್ನೂ ನೋಡಿದರೆ, ಹಾರಿಕೆಯ ಗೆಲವು ಹೆಮ್ಮೆಪಡಬೇಕಾದ ಮಹಾಸಾಧನೆಯೇ, ಇಲ್ಲವೆ ಬೇಗನೆ ನಿವಾರಿಸಿಕೊಳ್ಳಬೇಕಾದಂಥ ವ್ರಣಗಟ್ಟಿದ ಒಂದು ಅನಿಷ್ಟ ದುರ್ಮಾಂಸವೇ ಎಂದು ಸಂದೇಹಪಡಬೇಕಾಗುತ್ತದೆ. ವಿಮಾನವನ್ನು ನಿರ್ಮಿಸಿರುವುದರಿಂದ ಒಟ್ಟೊಟ್ಟಿಗೆ ಕೊಲೆ ಮಾಡುವ ಯಂತ್ರ ಸಲಕರಣೆ ಯೊಂದನ್ನು ಮಾನವನು ನಿರ್ಮಿಸಿದಂತಾಗಿಲ್ಲವೆ?– ಎಂದು ಪ್ರಶ್ನಿಸ ಬೇಕಾಗುತ್ತದೆ. ಕಡೆಗೆ ಅಹಿತವಾದ ಅರಿವು ನಮ್ಮಲ್ಲಿ ಮೂಡುತ್ತದೆ: ಆಧುನಿಕ ಪ್ರಗತಿಯೆಲ್ಲವೂ ಮನುಷ್ಯನ ಐಹಿಕ ಆವರಣದಲ್ಲಿ ಆಗಿರುವ ಪ್ರಗತಿ; ಮಾನವನಿನ್ನೂ ಹಿಂದೆ ಹೇಗಿದ್ದನೋ ಹಾಗೆಯೇ ಇದ್ದಾನೆ. ಮನುಷ್ಯನ ಬಯಕೆಗಳನ್ನೂ ಗೆಯ್ಮೆಗಳನ್ನೂ ನೋಡಿದರೆ ಅವನು ಪ್ರಾಕೃತನಾಗಿ, ಪ್ರಾಚೀನ ಕಾಲದ ಗವಿಯ ಮನುಷ್ಯ ಪ್ರಾಣಿಯಾಗಿ, ಪಶು ಸಹಜವಾದ ಬುದ್ಧಿಯುಳ್ಳವನಾಗಿ ಕಾಣುತ್ತಾನೆ. ಅವನ ರಕ್ತದಾಹ ಇನ್ನೂ ಹಿಂಗಿಲ್ಲ, ಅವನು ಸ್ವಲ್ಪವಾದರೂ ಮುಂದುವರಿದಿಲ್ಲ. ಅವನ ಮೇಲಾದ ಬುದ್ಧಿಶಕ್ತಿಯಿಂದೊಗೆದ ನಿರ್ಮಾಣವೆಲ್ಲ ಅವನ ಪ್ರಾಕೃತ ಮನಸ್ಸನ್ನು ತೃಪ್ತಿಪಡಿಸುವ ಯಂತ್ರವಾಗಿದೆಯೇ ಹೊರತು ಬಳಲಿರುವ ಅವನನ್ನು ಪ್ರಗತಿಪಥದಲ್ಲಿ ಕರೆದೊಯ್ಯುವ ತಂತ್ರವಾಗಿಲ್ಲ.

* * * *

ಪಾದಚಾರಿಗಳನ್ನು ಗುಂಡುಹಾರಿಸಿ ಕೊಲ್ಲಬಲ್ಲವು. ಆಧುನಿಕ ಬಾಂಬರಿನ ಕರಾಳಶಕ್ತಿ ಇಷ್ಟರಮಟ್ಟಿಗಿದೆ.

ವಿಮಾನ, ಅದರ ಹುಟ್ಟು ಮತ್ತು ಬೆಳವಣಿಗೆ– ಇವು ಎಷ್ಟರಮಟ್ಟಿಗೆ ಯುದ್ಧದೊಡನೆ ಸಂಬಂಧಪಟ್ಟಿವೆಯೆಂದರೆ,– ವಿಮಾನ ನಮಗೆ ಲಭಿಸಿದ ವರವಲ್ಲ, ನಮ್ಮ ಮೇಲೆ ಬಿದ್ದ ಶಾಪ ಎಂಬಂತೆ ತೋರುತ್ತಿದೆ. ಅದರಿಂದ ಉದ್ದಕ್ಕೂ ಆಗುತ್ತಿರುವ ದುಃಖಾನುಭವಗಳು ಮಾನವಕೋಟಿಗೆ ಅದರಿಂದ ದೊರೆಯ ಬೇಕಾಗಿರುವ ಅನುಕೂಲತೆಗಳಿಗಿಂತ ಅತಿ ಹೆಚ್ಚಾಗಿವೆ. ಸಾಮಾನ್ಯ ಮನುಷ್ಯನಿಗೆ ಅದರ ಭೀಕರವಾದ ಕೊಲ್ಲುವ ಶಕ್ತಿಯ ಪರಿಚಯ ಹೆಚ್ಚಾಗಿದೆಯೇ ಹೊರತು ಅದು ತನ್ನನ್ನು ಸುರಕ್ಷಿತ ಸ್ಥಳಕ್ಕೆ ಕ್ಷಣದಲ್ಲಿ ಒಯ್ಯಬಲ್ಲದೆಂಬುದರ ಪರಿಚಯ ಕಡಮೆ. ಹೀಗೆ, ವಿಮಾನಪ್ರಯಾಣದಲ್ಲಿ ಮಾನವಕೋಟಿಗೆ ಅನುಕೂಲತೆ ಮತ್ತು ಸುಖಗಳನ್ನು ಒದಗಿಸುವ ಒಳ್ಳೆಯತನ ಒಂದು ಕಡೆ ಇದ್ದರೆ, ಅದಕ್ಕೆ ಸಮತೂಗುವ ಕರಾಳ ಸ್ವಭಾವ ಮತ್ತೊಂದು ಕಡೆ ಇದೆ. ಎಲ್ಲ ಆಧುನಿಕ ವೈಜ್ಞಾನಿಕ ನಿರ್ಮಾಣಗಳೂ ಯಾವಮಟ್ಟಿಗೆ ಮಾನವ ಕೋಟಿಯ ಸ್ಥಿತಿಯನ್ನು ಹೆಚ್ಚು ಸುಖಮಯವಾಗಿ ಮಾಡಬಲ್ಲ ಸಾಮರ್ಥ್ಯ ಹೊಂದಿವೆಯೋ ಅದೇ ಮಟ್ಟಿಗೆ ಅಪಾರ ವಿನಾಶಕ ಶಕ್ತಿಯನ್ನೂ ಹೊಂದಿವೆ: ಇದೇ ಅವೆಲ್ಲವುಗಳ ಮೇಲಿರುವ ಶಾಪ; ಆಕಾಶಯಾನ ಈ ಸೂತ್ರಕ್ಕೆ ಅಪವಾದವೇನೂ ಅಲ್ಲ. ಸಂಕಟಪಡುವ ಒಬ್ಬನ ಶರೀರದ ದುರ್ಮಾಂಸವನ್ನು ತೆಗೆದುಹಾಕಲು ಶಸ್ತ್ರವೈದ್ಯನಿಗೆ ನೆರವಾಗುವ ಚಾಕುವೇ ಕೊಲೆಗಡಿಕನ ಕೈಯಲ್ಲಿ ಒಬ್ಬ ನಿರಪರಾಧಿಯ ಜೀವತೆಗೆಯುವ ಆಯುಧವಾಗುತ್ತದೆ. ರೋಗದಿಂದ ನರಳುತ್ತಿರುವವನ ಹಾಸಿಗೆಯ ಬಳಿಗೆ ಒಬ್ಬನನ್ನು ಬೇಗನೆ ಕರೆದುಕೊಂಡು ಹೋಗುವ ಅಥವಾ ರೋಗಗಳಿಂದಲೂ ಕ್ಷಾಮಗಳಿಂದಲೂ ಪೀಡಿತವಾದ ಪ್ರದೇಶಗಳಿಗೆ ವೈದ್ಯ ಸಹಾಯುವನ್ನಾಗಲಿ, ಆಹಾರ ಸಾಮಗ್ರಿಯನ್ನಾಗಲಿ ಶೀಘ್ರವಾಗಿ ಒಯ್ಯಬಲ್ಲ ಅದೇ ರೈಲುಗಾಡಿ, ಸಾವಿರಾರು ಮಂದಿ ನಿರಪರಾಧಿಗಳಿಗೆ ಕ್ರೂರವಾದ ಸಾವನ್ನುಂಟುಮಾಡುವ ಸೈನ್ಯದಳಗಳನ್ನೂ, ಮದ್ದುಗುಂಡುಗಳನ್ನೂ ಅಷ್ಟೇ ಶೀಘ್ರವಾಗಿ ಒಯ್ಯಬಲ್ಲದು. ಮಾನವಕೋಟಿಯ ಸಂಕಷ್ಟಗಳನ್ನು ಕಡಮೆ ಮಾಡುವುದಕ್ಕಾಗಿ ವಿಶೇಷರೀತಿಯ ವಿಷಗಳನ್ನೂ ವಿಷಹಾರಿಗಳನ್ನೂ (Toxins and anti-toxins) ಕಂಡುಹಿಡಿದಿರುವ ವೈಜ್ಞಾನಿಕನೇ ಯಾವ ಸಾಂಕ್ರಾಮಿಕ ರೋಗವೂ ಕೊಲ್ಲಲಾರದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ಕೊಲ್ಲಬಲ್ಲ ಘೋರ ವಿಷವಾಯುಗಳನ್ನು ಕಂಡುಹಿಡಿದಿದ್ದಾನೆ. ಇದೇ ರೀತಿಯಲ್ಲಿ, ಆಶ್ಚರ್ಯ ವಾಗುವಷ್ಟು ಅತ್ಯಲ್ಪ ಕಾಲದಲ್ಲಿ ಒಬ್ಬನನ್ನು ಪ್ರಪಂಚದ ಸುತ್ತ

ಸಮಸ್ಯೆಯನ್ನು ಬಿಡಿಸಲು ಹೆಣಗುತ್ತಿದ್ದಾರೆ. ಭೂಮಿಯ ವಾತಾವರಣದ ಮೇಲಣ ಮಿತಿಯ ಪ್ರದೇಶಗಳಲ್ಲಿ ಮಾತ್ರವಲ್ಲದೆ ಅದರಾಚೆಯ ಮೇಲಾಕಾಶದ ಶೂನ್ಯದಲ್ಲೂ ಹಾರಲು ಇರಬೇಕಾದ ಸ್ಥಿತಿಗತಿಗಳ ಸಂಬಂಧವಾಗಿ ಅವರುಗಳು ಪಟ್ಟ ಶ್ರಮ, ಮಾಡಿದ ಪ್ರಯೋಗಗಳು, ಲೆಕ್ಕಾಚಾರಗಳು, ವಿಭಜನೆಗಳು– ಇವುಗಳ ಫಲವೇ ಮೇಲಾಕಾಶಯಾನವೆಂಬ ನೂತನ ವಿಜ್ಞಾನ ಭಾಗದ ಮೂಲಾಧಾರ.

ಸಾಂದ್ರತೆಯಲಿ ಅತ್ಯಂತ ಕಡಮೆಯಾಗಿರುವ ಮೇಲಣ ಮತ್ತು ಹೊರ ಆಕಾಶಗಳಲ್ಲಿ ಸಂಚರಿಸಲು ಸಾಮಾನ್ಯ ವಿಮಾನ ವಿಕಾಸ ಮಾಡುವ ಸಾಮರ್ಥ್ಯದ ಅಂಶ ಮಾತ್ರ ಸಾಕು; ಅಲ್ಲದೆ, ಅಷ್ಟು ಎತ್ತರದಲ್ಲಿ ಎಂದೆಂದಿಗೂ ಏನೂ ವ್ಯತ್ಯಾಸವಾಗದ 'ಅನಂತ ಯಥಾಸ್ಥಿತಿ' (Eternal sameness) ನೆಲಸಿರುತ್ತದೆ. ಭೂಮಿಯ ಮೇಲ್ಮೈಯ ಹತ್ತಿರ ಹತ್ತಿರದಲ್ಲಿ ಸಂಧಿಸಲಾಗುವ ಮಂಜು, ಹಿಮ, ಮಿಂಚು– ಇವುಗಳಂಥ ಪ್ರತಿಕೂಲ ವಾಯುಗುಣಸ್ಥಿತಿಗಳು ಅಲ್ಲಿಲ್ಲ. ಆದ್ದರಿಂದ, ಕೆಳಮಟ್ಟದ ಸ್ಥಿತಿಗಳು ಹೇಗೇ ಇರಲಿ, ಆ ಎತ್ತರದ ಮಟ್ಟಗಳಲ್ಲಿ ಅತಿ ಹೆಚ್ಚಿನ ವೇಗಗಳಲ್ಲಿ ಸುರಕ್ಷಿತವಾಗಿಯೂ ಭರವಸೆಯಿಂದಲೂ ಸಂಚರಿಸುವುದು ಯಾವಾಗಲೂ ಸಾಧ್ಯ.

ಇದಲ್ಲದೆ, ಒಳರಿತದ ಎಂಜಿನ್ನುಳ್ಳ ಯಾವ ರೂಪದ ವಿಮಾನವೂ ಈ ಸಾಂದ್ರತೆ ಕಡಮೆಯಾದ (Rerefied) ಪ್ರದೇಶಗಳಲ್ಲಿ– ನಾವು ಊಹಿಸುವ ಮಟ್ಟಿಗೆ– ನಡೆಯಲಾರದಾದ್ದರಿಂದಲೂ, ಘರ್ಷಣೆಯಿಂದ ಉತ್ಪತ್ತಿಯಾಗುವ ಕಾವಿನ ದೆಸೆಯಿಂದ ಕೆಳಗಣ ಪ್ರದೇಶಗಳಲ್ಲಿ ಅತಿ ಹೆಚ್ಚಿನ ವೇಗಗಳಲ್ಲಿ ವಿಮಾನಹಾರಿಕೆ ತೀರ ಅಸಾಧ್ಯವಾದದ್ದರಿಂದಲೂ, ಪೂರ್ತ ಹೊಸ ಮಾದರಿಯ ಮೇಲಾಕಾಶನಾವೆ (Space ship) ವಿಕಾಸಗೊಳ್ಳಬೇಕಾಯಿತು. ಈ ಮೇಲಾಕಾಶದ ಹಾರಿಕೆ ತೀರ ಹೊಸದಾದ ವಿಜ್ಞಾನ; ಇದನ್ನು ಮೇಲಾಕಾಶಯಾನ ಎಂದು ಕರೆದಿದೆ.

ಇಂದಿನ ಕಾಲದ ವಿಮಾನದ ಸಂಬಂಧವಾಗಿ ಅಪರಿಮಿತವಾದ ಪ್ರಗತಿ ಬೆಳವಣಿಗೆಗಳಾಗಿರುವುವಾದರೂ, ಅದರ ಭವಿತವ್ಯದ ಬಗ್ಗೆ ಪ್ರತಿಭಾಪೂರ್ಣ ಭವಿಷ್ಯವಾಣಿಗಳು ನುಡಿದಿರುವುವಾದರೂ, ಮೇಲಾಕಾಶಯಾನ ವಾದಿಗಳು ಈ ರೀತಿ ಪ್ರತಿಪಾದಿಸುತ್ತಾರೆ: ಮೇಲಾಕಾಶಯಾನದ ಶಕ್ಯತೆ ಬಹಳ ವಿಶಾಲವಾದದ್ದು, ಬಹಳ ಮಹತ್ತರವಾದದ್ದು; ಹಿಂದಿನ ಕಾಲದ ಕುದುರೆಯ ಮಜಲುಬಂಡಿಯೊಡನೆ ಸ್ವಯಂಚಲಿ ಎಂಜಿನ್ನನ್ನಾಗಲಿ ಮೋಟಾರು ಬಂಡಿಯನ್ನಾಗಲಿ ಹೋಲಿಸಿದರೆ, ಪ್ರಯಾಣಿಕರನ್ನು ಒಯ್ಯುವ ವಿಧಾನದಲ್ಲಿ ಇವುಗಳಿಂದ ಎಷ್ಟು ದೊಡ್ಡ

# ಪ್ರಕರಣ ೭

## ವಿಮಾನದ ಪರಿಮಿತಿಗಳು: ಅದರ ಮುಂದಿನ ಬೆಳವಣಿಗೆ

ಹಿಂದಿನ ಪ್ರಕರಣವೊಂದರಲ್ಲಿ ಸೂಚಿಸಿರುವಂತೆ, ೩೦ ವರ್ಷಗಳ ಕಾಲಾವಧಿಯಲ್ಲಿ ಆಗಿರುವ ವಾಯುಯಾನ ವಿಜ್ಞಾನದ ಬೆಳವಣಿಗೆ ಮತ್ತು ಪ್ರಗತಿ ಚಕಿತಗೊಳಿಸುವಂತಿವೆ, ಮತ್ತು ಆಧುನಿಕ ವಿಜ್ಞಾನದ ಚರಿತ್ರೆಯಲ್ಲಿ ಹೋಲಿಕೆಯಿಲ್ಲದವಾಗಿವೆ. ವಿಮಾನದ ಮೊದಲಿನ ವೇಗವೂ ಕಾರ್ಯದಕ್ಷತೆಗೂ ಹನ್ನೆರಡು ಮಡಿ ಹೆಚ್ಚಿವೆ; ಮುಂದೆ ಅದರ ವೇಗ ೧,೦೦೦ ಮೈಲಿಗಳವರೆಗೆ ಕೂಡ ಹೆಚ್ಚಬಹುದೆಂದು ತಜ್ಞರು ಭವಿಷ್ಯ ಹೇಳುತ್ತಿದ್ದಾರೆ. ಆದರೂ ಕೂಡ, ಭವಿಷ್ಯದ ಪ್ರಯಾಣದ ಎಲ್ಲ ಆವಶ್ಯಕತೆಗಳನ್ನೂ ವಿಮಾನ ಪೂರೈಸಲಾರದು. ಅನೇಕರು ಈ ಹೇಳಿಕೆಯನ್ನು ತಿಳಿದುಕೊಳ್ಳದೆ ಹೋಗುವರು ಮತ್ತು ಇದರ ನಿಜತ್ವವನ್ನು ಪ್ರಶ್ನಿಸುವರು. ಇದು ನ್ಯಾಯವೆ. ಗಂಟೆಗೆ ೧,೦೦೦ ಮೈಲಿಗಳವರೆಗೆ ಹೋದರೆ ಸಾಕು, ಭವಿಷ್ಯದ ಪ್ರಯಾಣದ ಆವಶ್ಯಕತೆಗಳೆಲ್ಲವನ್ನೂ ಪೂರೈಸಿದಂತೆ– ಎಂದು ಅವರು ಬಗೆಯುವರು. ಕಡೆಯಲ್ಲಿ ಇದಕ್ಕಿಂತ ಇನ್ನೂ ಹೆಚ್ಚಿನ ವೇಗಗಳು ಅವಶ್ಯ. ಆದರೂ ಸಹ, ನಿರ್ಮಾಣ ಕಾರ್ಯದಲ್ಲೂ ಹೊಸಹೊಸದನ್ನು ಕಂಡುಹಿಡಿಯುವ ಕಾರ್ಯದಲ್ಲೂ ಉಂಟಾಗುವ ಅಭಿವೃದ್ಧಿಯ ಸಾಧಾರಣ ಮಟ್ಟ ಅಂಥ ವೇಗಪ್ರಯಾಣಗಳಿಗೆ ಅನುಗುಣವಾಗಿರುವುದೆಂದು ಊಹಿಸುವುದು ಸಕಾರಣವಾಗಿರಲಾರದೆ? ಆಕಾಶಯಾನದಲ್ಲಿ ಆಶ್ಚರ್ಯಕರವಾದ ಬೆಳವಣಿಗೆಯೂ ಪ್ರಗತಿಯೂ ಸಾಧಿಸಲ್ಪಟ್ಟಿರುವುದು ನಿಜವಾದರೂ, ಮಹಾಯುದ್ಧವು ವಿಮಾನ ಹಾರಿಕೆಯಲ್ಲಿ ಕ್ರಾಂತಿಯನ್ನುಂಟುಮಾಡಿತೆಂಬುದನ್ನೂ ಅದೇ ರೀತಿಯ ಪ್ರಗತಿಯನ್ನು ನಿರೀಕ್ಷಿಸುವುದು ಸಕಾರಣವಾಗಿಲ್ಲವೆಂಬುದನ್ನೂ ಅಲಕ್ಷಿಸಕೂಡದು.

ಈ ಸಂದುಕಟ್ಟಿನಲ್ಲೆ ಮೇಲಾಕಾಶಯಾನದ (Astranautics or Space Flight) ವಿಜ್ಞಾನ ಕ್ರಮಕ್ರಮವಾಗಿ ಜನಗಮನಕ್ಕೆ ತಾನಾಗಿ ಎದ್ದು ಕಾಣಿಸಿ ಕೊಳ್ಳುವುದು. ಕಳೆದ ಅನೇಕ ವರ್ಷಗಳಿಂದ ಉತ್ಸಾಹಶಾಲಿಗಳಾದ ಕಾರ್ಯಕರ್ತರು, ವೈಜ್ಞಾನಿಕರು, 'ಕನಸುಗಾರ'ರು ಮತ್ತು ವ್ಯವಹಾರತಜ್ಞರು ಹೊರ ಆಕಾಶದ ನಿರ್ವಾಯು ಪ್ರದೇಶದಲ್ಲಿ ಅಥವಾ ಶೂನ್ಯಾಕಾಶದಲ್ಲಿ ಸಂಚಾರ ಮಾಡುವ

ಪರಿಣಾಮವುಂಟಾಗುವ ರೀತಿಯಲ್ಲಿ ಚಾಲಕವನ್ನು ಪ್ರಚೋದಿಸಲಾರದು. ಎರಡನೆಯದಾಗಿ, ಆವಶ್ಯಕವಾದ ಹೊತ್ತಿಕೊಳ್ಳುವ ಮಿಶ್ರಣವನ್ನೊದಗಿಸಲು ತಕ್ಕಮಟ್ಟಿಗೆ ವಿಪುಲವಾಗಿ ಆಮ್ಲಜನಕವುಳ್ಳ ವಾಯುವಿನ ಸರಬರಾಯಿ ಪೆಟ್ರೋಲು ಎಂಜಿನ್ನಿಗೆ ಅತ್ಯಾವಶ್ಯಕ. ಆ ಎತ್ತರದಲ್ಲಿ ವಾಯು ಬಹು ಕಡಮೆಯ ಸಾಂದ್ರತೆಯುಳ್ಳದ್ದಾದ್ದರಿಂದ ಈ ಉದ್ದೇಶಕ್ಕೆ ಅನುಪಯುಕ್ತ ಮಾತ್ರವಲ್ಲ, ಬಹುಶಃ ಅದರಲ್ಲಿ ಆಮ್ಲಜನಕವೇ ಇದ್ದಿರಲಾರದು. ಸಮುದ್ರಮಟ್ಟಕ್ಕೆ ಐದೂವರೆ ಮೈಲಿ ಮಾತ್ರ ಎತ್ತರದಲ್ಲಿರುವ ಗೌರೀಶಂಕರ ಶಿಖರದ ಮೇಲೆ ಹಾರಹೊರಟ ಈಚಿನ ಪ್ರಯತ್ನದಲ್ಲಿ ಕೂಡ, ವಾಯುವಿನ ಸಾಂದ್ರತೆಯ ಕೊರತೆಯನ್ನು ಎದುರಿಸುವುದಕ್ಕಾಗಿ ಎಂಜಿನ್ನುಗಳಿಗೆ ಅವಶ್ಯ ಶಕ್ತಿಯ ಅಧಿಕಪೂರಣ (Supercharge) ಮಾಡಬೇಕಾದದ್ದು ಅವಶ್ಯವಾಯಿತು. ಆದ್ದರಿಂದ, ಇದಕ್ಕಿಂತ ೨೦ರಷ್ಟು ಹೆಚ್ಚಿನ ಎತ್ತರದಲ್ಲಿ ಒಳ ಉರಿತದ ಎಂಜಿನ್ನಿನ (Internal Combustion Engine) ಸಹಾಯದಿಂದ ಹಾರಲಾಗುವುದೆಂದು ನಿರೀಕ್ಷಿಸುವುದು ಹೇಗೆ ಅಸಾಧ್ಯವೆಂಬುದು ಸ್ಪಷ್ಟವಾಗಿಯೇ ಇದೆ.

**ಮೇಲಾಕಾಶ ಹಾರಿಕೆ, ರಾಕೆಟ್ ಹಾರಿಕೆ (Stratosphere and Rocket Flight)**

ಮೇಲಾಕಾಶಯಾನದ (Astranautics) ಮುಂದಿನ ಗುರಿ ಏನೂ ಇಲ್ಲದ ಶೂನ್ಯಪ್ರದೇಶದಲ್ಲಿ ಹಾರುವುದಾಗಿದೆ. ಆದ್ದರಿಂದ, ಮೊದಲು ವೈಜ್ಞಾನಿಕರು ಮೇಲಾಕಾಶ (Space or Stratosphere) ಎಂದು ಕರೆಯುವಂಥದು ಏನೆಂಬುದನ್ನು ತಿಳಿದುಕೊಳ್ಳಬೇಕು. ಭೂಮಿಯ ಮೇಲ್ಮೈಯಿಂದ ೧೦ ಮೈಲಿಗಳ ಮಟ್ಟದ ಮೇಲಣ ವಾಯುಮಂಡಲದ ಪ್ರದೇಶಕ್ಕೆ ಮೇಲಾಕಾಶ (ಅಥವಾ ಮೇಲ್ವಾಯುಮಂಡಲ) ಎಂದು ಹೆಸರು. ಈ ಪ್ರದೇಶದಲ್ಲಿ ಮೋಡಗಳು, ಬಿರುಗಾಳಿ ಮಳೆಗಳು, ಹಿಮ, ನೀರ್ಗಲ್ಲು, ಋತುಗಳು, ವಾಯುಗುಣ ವ್ಯತ್ಯಾಸಗಳು– ಇವು ಯಾವವೂ ಇಲ್ಲ; ಮತ್ತು ಒಂದು ದತ್ತ ಸ್ಥಳದಲ್ಲಿನ ವಾಯುವಿನಲ್ಲೆಲ್ಲ ಯಾವಾಗಲೂ ಒಂದೇ ಸಮವಾಗಿರುವ ಶಾಖವಿರುತ್ತದೆ. ಪ್ರಪಂಚದ ಈ ಮೇಲ್‌ಚಾವಣಿಯ ಬಗ್ಗೆ ನಮಗಿರುವ ತಿಳಿವಳಿಕೆ ಇನ್ನು ಅತ್ಯಲ್ಪ; ಅದನ್ನು ಇನ್ನೂ ಪರಿಶೋಧಿಸಿ ನೋಡಿ ಅಂತ್ಯದಲ್ಲಿ ಅದನ್ನು ಗೆದ್ದದ್ದೇ ಆದರೆ, ವಿಶ್ವದ ವಿಷಯವಾಗಿ ನಮ್ಮ ಭಾವನೆ ತೀರ ಮಾರ್ಪಡಬೇಕಾಗುತ್ತದೆ. ಮೇಲಣ ಆಕಾಶವನ್ನು ಪರೀಕ್ಷಿಸಿ ತಿಳಿಯಬೇಕೆಂಬ ಪ್ರಯತ್ನಗಳು ೧೮ನೆಯ ಶತಮಾನದಲ್ಲೇ ಮೊದಲಾದುವು. ಮೊದಮೊದಲಿನ ಅಗ್ರಗಾಮಿಗಳ ಪ್ರಯೋಗಗಳಿಂದ ಮೇಲಣ

ಕ್ರಾಂತಿಯುಂಟಾಯಿತೆಂದು ಸ್ಪಷ್ಟವಾಗುತ್ತದೆ; ಅದೇ ರೀತಿಯಲ್ಲಿ, ಈಗಿನ ಕಾಲದ ಆಕಾಶಯಾನದೊಡನೆ ಭವಿಷ್ಯದ ಮೇಲಾಕಾಶಯಾನವನ್ನು ಹೋಲಿಸಿದರೆ, ಮುಂದೆ ಅದರಿಂದ ಅಷ್ಟೇ ದೊಡ್ಡ ಕ್ರಾಂತಿಯುಂಟಾಗುವ ಅವಕಾಶವಿದೆಯೆಂದು ಹೇಳಬಹುದಾಗಿದೆ. ಇನ್ನು ಮುಂದೆ ದೂರಪ್ರಯಾಣಗಳನ್ನು ದಿನಗಟ್ಟಲೆಯಲ್ಲಿ ಮಾಡುವ ಭರವಸೆ ಆಕಾಶ ಹಾರಿಕೆಯಲ್ಲಿ ಇದ್ದರೆ, ಆ ಪ್ರಯಾಣಗಳನ್ನೆ ಗಂಟೆಗಟ್ಟಲೆಯಲ್ಲಿ ಮಾಡುವ ಭರವಸೆ ಮೇಲಾಕಾಶ ಹಾರಿಕೆಯಲ್ಲಿ ಉಂಟು. ನಿಜವಾಗಿ, ಪ್ರಪಂಚದ ಎಷ್ಟೇ ದೂರದ ಭಾಗಕ್ಕಾದರೂ ಸಹ ಮೇಲಾಕಾಶ ಹಾರಿಕೆಯ ಮೂಲಕ ಪ್ರಯಾಣ ಮಾಡಿದರೆ ೨–೩ ಗಂಟೆಗಳಿಗಿಂತ ಹೆಚ್ಚಾಗಿ ಹಿಡಿಯಲಾರದೆಂದು ಖಂಡಿತವಾಗಿ ಹೇಳಲಾಗಿದೆ. ಇಷ್ಟೇ ಅಲ್ಲದೆ, ಈ ಮಜಲನ್ನು ಮುಟ್ಟಿದ ಮೇಲೆ, ಚಂದ್ರಮಂಡಲಕ್ಕಾಗಲಿ ಅಂಗಾರಕ ಗ್ರಹಕ್ಕಾಗಲಿ ಶುಕ್ರ ಗ್ರಹಕ್ಕಾಗಲಿ ಪ್ರಯಾಣಗಳು ಅಸಾಧ್ಯವಾಗಿರುವ ಬದಲು ಸಾಧ್ಯವಾಗಬಹುದು.

ಗಂಟೆಗಳಲ್ಲಿ ಪ್ರಯಾಣ ಮಾಡುವ ಆದರ್ಶವನ್ನಾಗಲಿ, ಗ್ರಹಾಂತರ ಪ್ರಯಾಣಗಳನ್ನಾಗಲಿ ವಿಮಾನ ಎಂದಿಗೂ ಸಾಧಿಸಲಾರದು. ಮೊದಲನೆಯದಾಗಿ, ಭೂಮಿಯ ವಾಯುಮಂಡಲದ ಮೂಲಕ ಹೋಗುವ ಯಾವುದಾದರೂ ಕ್ಷಿಪಣಿಯ ವೇಗ ಒಂದು ಗೊತ್ತಾದ ಮಟ್ಟದ ವೇಗಕ್ಕಿಂತ ಹೆಚ್ಚಿದರೆ, ವಾಯುವಿನ ನಿರೋಧದ ಪರಿಣಾಮವಾಗಿ ಉತ್ಪತ್ತಿಯಾದ ಕಾವು ಕ್ಷಿಪಣಿಯ ಶಾಕವನ್ನು ಹೆಚ್ಚಿಸುತ್ತದೆಂಬುದು ಖಚಿತವಾಗಿ ತಿಳಿದ ವಿಷಯ. ಉಲ್ಕೆ ಬೀಳುವಾಗ ಅದರಲ್ಲಿ ಉತ್ಪತ್ತಿಯಾಗುವ ಕಾವು ಅದರಲ್ಲಿನ ಖನಿಜ ಪದಾರ್ಥವೆಲ್ಲವನ್ನೂ ಸಂಪೂರ್ಣವಾಗಿ ಸುಟ್ಟುಹಾಕಿ ಬಿಡುವಷ್ಟು ಭೀಕರವೆಂಬ ಸಂಗತಿಯನ್ನು ಎಲ್ಲರೂ ಬಲ್ಲರು. ಕ್ಷಿಪಣಿಗೆ ಅನ್ವಯಿಸುವಂಥದು ಯಾವ ಪ್ರಯಾಣಿಕ ವಾಹನಕ್ಕಾದರೂ ಅನ್ವಯಿಸುತ್ತದೆ. ಹೀಗೆ, ವಿಮಾನ ಗಂಟೆಗೆ ೪೫,೦೦೦ ಮೈಲಿಗಳ ವೇಗದಲ್ಲಿ ಹೋಗಬಲ್ಲದೆಂದು ಇಟ್ಟುಕೊಂಡರೂ, ವಾಯುವಿನೊಡನೆ ಯಂತ್ರದ ಘರ್ಷಣೆಯಿಂದ ಸೃಷ್ಟಿಯಾಗುವ ಕಾವು ಎಷ್ಟು ಹೆಚ್ಚಾಗಿರುತ್ತದೆಯೆಂದರೆ, ವಿಮಾನದಲ್ಲಿರುವವರು ಜೀವ ಸಹಿತ ಬೆಂದು ಹೋಗುವರು. ಇದಲ್ಲದೆ, ಎರಡು ಮುಖ್ಯಕಾರಣಗಳಿಗಾಗಿ, ೧೦೦ ಮೈಲಿಗಳ ಮಟ್ಟಕ್ಕಿಂತ ಆಚೆಗೆ ಏರಲು ವಿಮಾನಕ್ಕೆ ಸಂಪೂರ್ಣವಾಗಿ ಅಸಾಧ್ಯ. ಮೊದಲನೆಯದಾಗಿ, ಆ ಎತ್ತರದಲ್ಲಿ ವಾಯುವಿನ ಸಾಂದ್ರತೆ, ವಿಮಾನ ಈಗ ಹಾರುವ ಸಾಧಾರಣ ಎತ್ತರಗಳಲ್ಲಿರುವ ವಾಯುವಿನ ಸಾಂದ್ರತೆ ಎಷ್ಟಿರುತ್ತದೆಯೊ ಅದರ ಕೋಟ್ಯಂಶಕ್ಕಿಂತ ಕಡಮೆಯಾಗಿರುತ್ತದೆ; ಆದ್ದರಿಂದ, ಎಷ್ಟೇ ಬಲವಾದ ಸಾಮರ್ಥ್ಯವನ್ನೊದಗಿಸಿದ್ದರೂ ಅದು ಉಪಯೋಗಕರವಾದ ಎಳೆಯುವ

ಪ್ರತಿಯೊಬ್ಬರಿಗೂ ಗೊತ್ತು; ದೊಡ್ಡ ಫಿರಂಗಿಗಳಾದರೆ ಈ ಹಿಂಜರಿತ ಬಹು ಸ್ಪಷ್ಟವಾಗಿ ಕಾಣುತ್ತದೆ. ಒಂದು ದೊಡ್ಡ ಫಿರಂಗಿಯನ್ನು ಚಕ್ರಗಳ ಮೇಲೆ ಕೂರಿಸಿ, ನೀರ್ಗಲ್ಲು ಮುಚ್ಚಿದ ಸರೋವರದಂಥ ಬಹು ನಯವಾದ ಮೇಲ್ಮೈಯ ಮೇಲೆ ಇಟ್ಟು ಅದನ್ನು ಶೀಘ್ರವಾಗಿ ಹಾರಿಸಿದರೆ ಫಿರಂಗಿ ತಕ್ಕಮಟ್ಟಿನ ವೇಗದಲ್ಲಿ ಹಿಂದಕ್ಕೆ ಚಲಿಸುತ್ತದೆ. ಅದೇ ರೀತಿಯಲ್ಲಿ, ಆಕಾಶದ ಕಡೆಗೆ ಮೂಗು ಮಾಡಿಕೊಂಡು, ಕೆಳಕ್ಕೆಳೆದು ಹಿಡಿಯಲು ತಳದಲ್ಲಿ ಏನೂ ಇಲ್ಲದ ರಾಕೆಟ್ಟು ಸಿಡಿತಗಳ ಪರಂಪರೆಯಿಂದ ಚಾಲನೆಗೊಂಡು ಆಕಾಶಕ್ಕೆ ಚಿಮ್ಮಿ ಹೋಗುತ್ತದೆ. ಫಿರಂಗಿಗೂ ರಾಕೆಟ್ಟಿಗೂ ತತ್ವದಲ್ಲಿರುವ ಒಂದೇ ಒಂದು ವ್ಯತ್ಯಾಸವೇನೆಂದರೆ: ಫಿರಂಗಿ ಒಂದು ಕ್ಷಿಪಣಿಯನ್ನು ಹೊರಬಿಡುತ್ತದೆ, ರಾಕೆಟ್ಟು ಸಿಡಿತದಿಂದ ಉಂಟಾದ ಅನಿಲವನ್ನು ಹೊರಬಿಡುತ್ತದೆ. ಈಗ, ನಿರ್ವಾಯು ಪ್ರದೇಶದಲ್ಲಿ (ಅಥವಾ ಶೂನ್ಯಾಕಾಶದಲ್ಲಿ) ಕಾರ್ಯಮಾಡುವುದು ಹೇಗೆಂಬ ಪ್ರಶ್ನೆ ಏಳುತ್ತದೆ. ರಾಕೆಟ್ಟು ಮೇಲಕ್ಕೆ ಚಿಮ್ಮುವುದು, ಸಿಡಿತಗಳು ವಾಯುವನ್ನು ನೂಕುವುದರಿಂದ ಅಲ್ಲ; ಅವು ರಾಕೆಟ್ಟನ್ನೇ ನೂಕುತ್ತವೆ. ಸಿಡಿದ ಅನಿಲ ತಪ್ಪಿಸಿಕೊಂಡು ಹೋಗದಂತೆ ಅದನ್ನು ವಾಯು ತಡೆಯುವುದರಿಂದ, ವಾಯುವಿರುವುದು ಒಂದು ಅಡಚಣೆಯೆ. ಡೈನಮೈಟು ಬಂಡೆಗಳನ್ನು ಹೇಗೆ ಒಡೆಯುತ್ತದೆ ಎಂಬುದನ್ನು ನೆನಪಿಗೆ ತಂದುಕೊಂಡರೆ ಈ ತತ್ವವನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಬಂಡೆಯ ಮೇಲೆ ಡೈನಮೈಟಿನ ಮದ್ದನ್ನು ಇಟ್ಟು ಅದರ ಮೇಲೆ ಏನನ್ನಾದರೂ ತೆಳ್ಳನೆಯ ಮುಚ್ಚಿಗೆಯನ್ನು ಮುಚ್ಚಿ ಮದ್ದು ಹೊತ್ತಿಸಿದರೆ, ಡೈನಮೈಟು ಮೇಲಣ ಮುಚ್ಚಿಗೆಯನ್ನು ಎಗುರಿಸಿಬಿಟ್ಟು ಬಂಡೆಯನ್ನು ಒಡೆಯುತ್ತದೆ. ಇದರಿಂದ ಸಿದ್ಧವಾಗುವುದೇನೆಂದರೆ, ಸಿಡಿತಗಳು ತಮಗೆ ಅತ್ಯಂತ ನಿರೋಧವೊಡ್ಡುವ ಪದಾರ್ಥಗಳನ್ನು ನೂಕುತ್ತವೆ. ಹಾಗಿಲ್ಲದಿದ್ದ ಪಕ್ಷದಲ್ಲಿ, ಡೈನಮೈಟು ಬಂಡೆಯನ್ನು ಒಡೆಯುವುದರ ಬದಲು ತನ್ನ ಪಾಡಿಗೆ ತಾನು ವಾಯುವಿನಲ್ಲಿ ಸಿಡಿದು ಹೋಗುತ್ತಿತ್ತು.

ಭಾವಿ ಮೇಲಾಕಾಶ ಪ್ರಯಾಣಿಕನನ್ನು ಎದುರಿಸುವ ಮೊದಲ ದೊಡ್ಡ ಸಮಸ್ಯೆ ಯಾವುದೆಂದರೆ, ತನ್ನ ರಾಕೆಟ್ಟನ್ನು ಭೂಮಿಯ ಆಕರ್ಷಣಶಕ್ತಿಯ ವ್ಯಾಪ್ತಿಯಿಂದಾಚೆಗೆ ತೆಗೆದುಕೊಂಡು ಹೋಗುವುದು. ಫಿರಂಗಿಯಿಂದ ಒಂದು ಸಿಡಿ ಗುಂಡನ್ನು ಗಂಟೆಗೆ ೨೫,೦೦೦ ಮೈಲಿಗಳ ವೇಗದಲ್ಲಿ ಹಾರಿಸಿ ಕಳಿಸುವುದು ಸಾಧ್ಯವಾದ ಪಕ್ಷದಲ್ಲಿ, ಆ ಗುಂಡು ಭೂಮ್ಯಾಕರ್ಷಣವನ್ನು ತಪ್ಪಿಸಿಕೊಂಡು ಮರಳಿ ಭೂಮಿಗೆ ಎಂದೆಂದಿಗೂ ಹಿಂದಿರುಗಲಾಗದಂತೆ ಮೇಲಾಕಾಶಕ್ಕೆ ಚಿಮ್ಮಿ ಹೋಗಲು ತಕ್ಕಷ್ಟು ಶೀಘ್ರತೆಯನ್ನು ಹೊಂದಿರಬಲ್ಲದು– ಎಂಬುದನ್ನು ತತ್ವದ

ಆಕಾಶದ ವಿಷಯವಾಗಿ ಹೆಚ್ಚಾದ ತಿಳಿವಳಿಕೆ ಸಂಗ್ರಹಿಸಿಕೊಳ್ಳಲು ನಮಗೆ ಸಹಾಯವಾಗಿದೆ. ಆಕಾಶಬುಟ್ಟಿಗಳಲ್ಲಿ ಮೇಲಕ್ಕೇರಿದ ಮನುಷ್ಯರು ತಾವು ಮೇಲಕ್ಕೇರಿದಂತೆಲ್ಲ ವಾತಾವರಣ ಬರುಬರುತ್ತ ಹೆಚ್ಚು ಹೆಚ್ಚು ತಣ್ಣಗೂ ವಿರಳವಾಗಿಯೂ ಹಗುರವಾಗಿಯೂ ಪರಿಣಮಿಸುತ್ತ ಬಂದಿತೆಂಬುದನ್ನು ಕಂಡುಹಿಡಿದರು. ಹೆಚ್ಚಿನ ಶೈತ್ಯ ಅವರಿಗೆ ಸಾಯುವಮಟ್ಟಿನ ಚಳಿ ಹಿಡಿಸುವ ಭಯ ತೋರಿಸಿತು, ವಾಯುವಿನ ವಿರಳತೆ ಅವರಿಗೆ ಉಸಿರಾಡಲು ಕಷ್ಟವಾಗುವಂತೆ ಮಾಡಿತು. ಈ ರೀತಿ, ಮೇಲಾಕಾಶದಲ್ಲೂ ಅದರಾಚೆಯ ಪ್ರದೇಶಗಳಲ್ಲೂ ನಾವು ಮೇಲೆಮೇಲೆ ಹೋದಂತೆಲ್ಲ ವಾಯು ಹೆಚ್ಚು ಹೆಚ್ಚು ವಿರಳವಾಗುತ್ತ ಬರುತ್ತದೆ, ಮತ್ತು ಹೆಚ್ಚು ಹೆಚ್ಚು ಚಳಿಯಾಗುತ್ತದೆ. ಒಂದು ಗೊತ್ತಾದ ಎತ್ತರವಾದ ಮೇಲೆ, ಅಲ್ಲಿ ವಾಯುವಿರುವುದಿಲ್ಲ, ಮತ್ತು ಒಂದು ಬಗೆಯ ಶೂನ್ಯ ಮೊದಲಾಗುತ್ತದೆ.

ಮೇಲಾಕಾಶದಲ್ಲಿ ಹಾರುವ ವಿಜ್ಞಾನವೇ ಮೇಲಾಕಾಶಯಾನ. ಮೇಲಾಕಾಶದಲ್ಲಿ ಹಾರುವುದೆಂದರೆ ಭೂಮಿಯ ವಾತಾವರಣದ ಪ್ರದೇಶದಲ್ಲೂ ಅದರಾಚೆಯ ಶುದ್ಧಾಕಾಶದಲ್ಲೂ (Ether) ಮಾಡುವ ಪ್ರಯಾಣ ಎಂದರ್ಥ. ಈ ಶುದ್ಧಾಕಾಶವನ್ನು ಬಹುಮಟ್ಟಿಗೆ– ಆದರೆ ಪೂರ್ತಿಯಾಗಲ್ಲ– ಪರಿಪೂರ್ಣ ಶೂನ್ಯಪ್ರದೇಶ (ಅಥವಾ ನಿರ್ವಾಯು ಪ್ರದೇಶ) ಎಂದು ಪರಿಗಣಿಸಲಾಗಿದೆ.

ಸ್ವಲ್ಪ ವಿಚಾರಮಾಡಿ ನೋಡಿದರೆ, ತನ್ನ ಚಲನೆಗೆ ಚಾಲಕವನ್ನಾಶ್ರಯಿಸಿ ಕೊಂಡಿರುವ ಯಾವ ರೂಪದ ಯಂತ್ರವೂ ನಾವು ಊಹಿಸುವ ಮಟ್ಟಿಗೆ ಶೂನ್ಯದಲ್ಲಿ ನಡೆಯಲಾರದು. ಏಕೆಂದರೆ, ಅಲ್ಲಿ ಎಳೆಯುವ ಕಾರ್ಯಸಿದ್ಧಿ (Tractive effect) ಉಂಟಾಗಿರುವುದಿಲ್ಲ. ಆದರೆ ರಾಕೆಟ್‌ನಿಂದ (Rocket: ಆಕಾಶ ಬಾಣದಂಥ ಮೇಲಕ್ಕೆ ಚಿಮ್ಮಿಹಾರುವ ಸಾಧನವಿಶೇಷ) ಚಾಲನೆಗೊಂಡ ಹಡಗು (ನಾವೆ) ಶೂನ್ಯದಲ್ಲಿ ಕಾರ್ಯ ಮಾಡಬಲ್ಲದು. ಭೂಮಿಯನ್ನು ಸುಮಾರು ೧೦ ಮೈಲಿಗಳವರೆಗೆ ಆವರಿಸಿಕೊಂಡಿರುವ, ತಕ್ಕಮಟ್ಟಿಗೆ ಸಾಂದ್ರವಾಗಿರುವ ವಾತಾವರಣದಲ್ಲಿ ಚಾಲಕದಿಂದ ನಡೆಯುವ ವಿಮಾನ ಹೇಗೆ ಸಮರ್ಥವಾಗಿ ಕಾರ್ಯ ಮಾಡಬಲ್ಲದೊ ವಾಯು ತೀರ ವಿರಳವಾಗಿರುವ ಕಡೆ ರಾಕೆಟ್ಟಿನಿಂದ ನಡೆಯುವ ನಾವೆ ಹಾಗೆ ಪರಮಾವಧಿಯ ಸಮರ್ಥತೆಯಿಂದ ಕಾರ್ಯ ಮಾಡಬಲ್ಲದು.

ರಾಕೆಟ್ ಮೋಟಾರನ್ನು ತೀವ್ರವಾಗಿ ಗುಂಡು ಹಾರಿಸುವ ಫಿರಂಗಿಗೆ ಹೋಲಿಸಬಹುದು. ಫಿರಂಗಿ ಹಾರಿಸಿದಾಗ ಅದು ಹಿಂದಕ್ಕೆ ಸರಿಯುತ್ತದೆಂದು

ಸುಲಭವಾಗಿ ಸಹಿಸಬಲ್ಲದೆಂದು ವೈಜ್ಞಾನಿಕರು ಭರವಸೆ ಕೊಡುತ್ತಾರೆ. ಸ್ಥಾಯಿಯಾದ ಸ್ಥಿತಿಯಿಂದ ತಟ್ಟನೆ ಗಂಟೆಗೆ ೨೫,೦೦೦ ಮೈಲಿಗಳ ವೇಗದಲ್ಲಿ ನೆಗೆದರೆ ತತ್‌ಕ್ಷಣ ಪ್ರಾಣ ಹಾನಿಯಾಗುವುದು ಖಂಡಿತ. ಆದರೆ, ರಾಕೆಟ್ಟು ಸ್ಥಾಯಿಯಾಗಿದ್ದದ್ದು ಗಂಟೆಗೆ ೨೫,೦೦೦ ಮೈಲಿಗಳ ವೇಗಕ್ಕೆ ತನ್ನ ವೇಗವನ್ನು ಹೆಚ್ಚಿಸಿಕೊಳ್ಳಲು ೮ ನಿಮಿಷಗಳನ್ನು ತೆಗೆದುಕೊಂಡರೆ ಪ್ರಯಾಣಿಕರು ಜೀವದಿಂದುಳಿಯಬಲ್ಲರೆಂದು ಜರ್ಮನ್ ರಾಕೆಟ್ಟಿಗರು ಸಿದ್ಧಪಡಿಸಿದ್ದಾರೆ. ಅದು ಹಾಗಿಲ್ಲದಿದ್ದ ಪಕ್ಷದಲ್ಲಿ ಗ್ರಹಾಂತರ ಪ್ರಯಾಣದ ಆಸೆಯನ್ನೆಲ್ಲ ಕೈಬಿಡಬೇಕಾಗುತ್ತದೆ. ಗ್ರಹಗಳ ನಡುವಣ ದೂರ ಅಪಾರವಾಗಿದ್ದು ಅಲ್ಲಿ ಪ್ರಯಾಣ ಮಾಡಬೇಕಾಗಿದ್ದಲ್ಲಿ, ಮೇಲಾಕಾಶ ಹಡಗಿನ ವೇಗಮಾಪಕ ದಶಸಹಸ್ರ ಮೈಲಿಗಳ ಪ್ರಮಾಣದಲ್ಲಿ ವೇಗ ತೋರಿಸುವಂತಿರಬೇಕು, ಅಂದರೆ ಹಡಗು ಅಷ್ಟು ವೇಗದಲ್ಲಿ ಚಲಿಸುವಂತಿರಬೇಕು.

ಮೇಲಾಕಾಶ ಹಡಗು ಮೇಲಾಕಾಶದಲ್ಲಿ ಪ್ರಯಾಣ ಮಾಡಿದ ಮೇಲೆ ಹಾಗೆಯೇ ಉಳಿಯುವುದು ಅಸಾಧ್ಯವೆಂದು ಊಹೆ ಮಾಡಲ್ಪಟ್ಟಿದೆ. ಮೇಲಾಕಾಶ ಹಡಗು ಒಳಗಾಗುವ ಶಾಖವೂ ಸೂರ್ಯನ ಅತಿಯಾದ ಕಾವೂ ಹಡಗನ್ನು ಸುಟ್ಟು, ಅದರಲ್ಲಿರುವರು ಜೀವಸಹಿತ ಹುರಿದುಹೋಗುವರು ಎಂಬುದೇ ಈ ಊಹೆಗೆ ಕಾರಣ. ಸೂರ್ಯನ ಕಡೆಗೆ ಅಭಿಮುಖವಾಗಿರುವ ಮೇಲಾಕಾಶ ಹಡಗಿನ ಒಮ್ಮಗ್ಗುಲು ಅತಿಯಾದ ಕಾವಿಗೆ ಒಳಗಾಗುವುದೆಂಬುದು ನಿಜ; ಅಲ್ಲದೆ, ಇನ್ನೊಂದು ಮಗ್ಗುಲು ಅತಿಯಾದ ಚಳಿಗೆ ಗುರಿಯಾಗುವುದೂ ನಿಜ. ಆದರೆ ಹಡಗಿನ ಒಳಗಣ ಶಾಖವನ್ನು ಬೇರೆ ಬೇರೆ ಸಾಧನೋಪಾಯಗಳಿಂದ ಸಮಸ್ಥಿತಿಯಲ್ಲಿಟ್ಟಿರುವುದು ಸಾಧ್ಯ. ಉದಾಹರಣೆಗೆ, ಎರಡು ಗೋಡೆಗಳನ್ನು ರಚಿಸಿ ಅವುಗಳ ನಡುವೆ (ಥರ್ಮಾಸ್ ಫ್ಲ್ಯಾಸ್ಕಿನಲ್ಲಿ ಹೇಗೂ ಹಾಗೆ) ನಿರ್ವಾಯು ಪ್ರದೇಶವಿರುವಂತೆ ಹಡಗನ್ನು ಕಟ್ಟಬಹುದು. ಹೀಗೆ ಮಾಡಿದರೆ ಅತಿ ಚಳಿಯಾಗಲಿ ಅತಿ ಕಾವಾಗಲಿ ಹಡಗಿನ ಒಳ ಗೋಡೆಯನ್ನು ಭೇದಿಸಿಕೊಂಡು ಹೋಗಲಾರದು.

ನಮ್ಮ ಭೂಗೋಳವನ್ನು ಉಲ್ಕೆಗಳು ಯಾವಾಗಲೂ ಮುತ್ತುತ್ತಲೇ ಇರುತ್ತವೆ; ಆದರೆ ಭೂಮಿಯನ್ನು ಮುಟ್ಟುವವು ಕೆಲವು ಮಾತ್ರ. ಬಹುಸಂಖ್ಯೆಯವು ಮುಟ್ಟಲಾರವು; ಏಕೆಂದರೆ, ಮೇಲಾಕಾಶದ ಮೂಲಕ ಹಾಯ್ದುಬರುವಾಗ ಖಂಡಖಂಡವಾಗಿ ಹೋಗುತ್ತವೆ. ಮೇಲಾಕಾಶ ಹಡಗಿಗೆ ಉಲ್ಕೆಯೊಂದು ಬಂದು ಹೊಡೆದರೆ, ಅದು ಹಡಗನ್ನು ಕೊರೆದುಕೊಂಡು ಹೋಗಿ ಹಡಗಿನಲ್ಲಿ ಒಂದು ಸಣ್ಣ ರಂಧ್ರವಾಗುವುದು; ಹಡಗೇ ದೊಡ್ಡ ಉಲ್ಕೆಯೊಂದಕ್ಕೆ ಡಿಕ್ಕಿ ಹೊಡೆದರೆ

ಮಟ್ಟಿಗೆ ಸಿದ್ಧಾಂತಪಡಿಸಲಾಗಿದೆ. ಆದರೆ, ಪ್ರಯಾಣಿಕನೊಬ್ಬನನ್ನು ಇನ್ನೊಂದು ಗ್ರಹಕ್ಕೆ ಸಾಗಿಸಲು ಸಿಡಿಗುಂಡು ತಕ್ಕ ಸಾಧನವಾಗಲಾರದು. ಏಕೆಂದರೆ, ಮೊದಲನೆಯದಾಗಿ, ವೇಗವರ್ಧನವು ಅವನು ತಡೆದುಕೊಳ್ಳಲಾರದಷ್ಟು ಹೆಚ್ಚಾಗಿರುವುದು; ಎರಡನೆಯದಾಗಿ, ಅಷ್ಟು ವೇಗವಿರುವಾಗ ಭೂಮಿಯ ವಾತಾವರಣದಲ್ಲಿ ಉಂಟಾಗುವ ವಾಯು ನಿರೋಧದ ಪರಿಣಾಮವಾಗಿ ಸಿಡಿಗುಂಡು ಬೆಳ್ಗಾವಿಗೆ ತಿರುಗುವಷ್ಟು ಕಾದುಹೋಗುವುದು. ಮೇಲಾಕಾಶದಲ್ಲಿ ಹಾರುವ ಯಂತ್ರ ತನ್ನ ಸಾಮರ್ಥ್ಯದಿಂದಲೇ ಭೂಮಿಯನ್ನು ಬಿಡಬೇಕು, ಮತ್ತು ಯಂತ್ರದ ವೇಗವನ್ನು ಹತೋಟಿಯಲ್ಲಿಡಲು ಸಾಧ್ಯವಾಗುವಂತಿರಬೇಕು. ಆ ಯಂತ್ರ ತನ್ನ ಭಾರವನ್ನು ಭೂಮಿಯ ಎಳೆತದಿಂದ ಆಚೆಗೆ ಮೇಲಕ್ಕೆತ್ತಲು ತಕ್ಕಷ್ಟು ಸಾಮರ್ಥ್ಯವನ್ನು ಅದಕ್ಕೆ ಕೊಡಬಲ್ಲ ಉರುವಲು ನಮಗೆ ತಿಳಿದಮಟ್ಟಿಗೆ ಯಾವುದೂ ಇಲ್ಲ. ಆದರೂ ಕೂಡ, ೨೦ ಟನ್ನುಗಳು ತೂಗುವ ನಾಲ್ಕುಮಂದಿ ನಡಸುವವರ ತಂಡವುಳ್ಳ, ಭೂಮಿಯ ಆಕರ್ಷಣದ ಪ್ರಭಾವವನ್ನು ಮೀರಿ ಮೇಲಾಕಾಶಕ್ಕೆ ಏರಿ ಹೋಗಿ ಮತ್ತೆ ಭೂಮಿಗೆ ಹಿಂದಿರುಗಬಲ್ಲ, ರಾಕೆಟ್ ಹಡಗನ್ನು ರಚಿಸುವುದು ತತ್ವತಃ (Theoretically) ಸಾಧ್ಯ. ಅಪಾರ ವೆಚ್ಚವಾಗುವುದರಿಂದ ಅಂಥ ರಾಕೆಟ್ ಹಡಗನ್ನು ಕಟ್ಟುವುದು ಸಧ್ಯದಲ್ಲಿ ಕಾರ್ಯಸಾಧ್ಯವಲ್ಲ. ಆದರೆ, ಮುಂದೆ ಹೆಚ್ಚು ಸಾಮರ್ಥ್ಯವುಳ್ಳ ಉರುವಲುಗಳನ್ನು ತನ್ನ ವಶದಲ್ಲುಳ್ಳ ರಾಕೆಟ್ಟಿಗನು (Rocketnian) ರಾಕೆಟ್ ಹಡಗೊಂದನ್ನು ರಚಿಸಲು ಸಮರ್ಥನಾಗುವ ದಿನ ಪ್ರಾಯಶಃ ಬರಬಹುದು. ರಾಕೆಟ್‌ಹಡಗು ಒಮ್ಮೆ ಸ್ವಸಾಮರ್ಥ್ಯದಿಂದ ಗಂಟೆಗೆ ೨೫,೦೦೦ ಮೈಲಿಗಳ ವೇಗವನ್ನು ಪಡೆದು ಭೂಮಿಯ ಎಳೆತದಿಂದ ತಪ್ಪಿಸಿಕೊಂಡಿತೆಂದರೆ ಅದು ತನ್ನ ಪೂರ್ವನಿಶ್ಚಿತ ಗುರಿಯನ್ನು ಮುಟ್ಟುವವರೆಗೂ ಯಾವ ಚಾಲಕಶಕ್ತಿಯ ಸಹಾಯವೂ ಇಲ್ಲದೆ ಪ್ರಯಾಣ ಮಾಡುತ್ತ ಮೇಲಾಕಾಶಕ್ಕೆ ಹೋಗಬಲ್ಲದು: ಇದೇ ರಾಕೆಟ್ಟಿಗನ ಮುಖ್ಯ ಭರವಸೆ. ಮೇಲಾಕಾಶದಲ್ಲಿ ಘರ್ಷಣೆ ಇಲ್ಲದಿರುವುದರಿಂದ, ರಾಕೆಟ್ ಹಡಗಿನ ಗತಿಯನ್ನು ನಿಧಾನಗೊಳಿಸಿ ಕೆಳಕ್ಕೆ ತರುವಂಥದು ಯಾವುದೂ ಅಲ್ಲಿ ಇಲ್ಲವೆಂಬುದನ್ನು ನೆನೆಯುವವರೆಗೂ ಇದು ನಂಬಲಾಗದಂತೆ ತೋರಬಹುದು.

"ಮನುಷ್ಯನು ಗಂಟೆಗೆ ೨೫,೦೦೦ ಮೈಲಿಗಳಂತೆ ಪ್ರಯಾಣ ಮಾಡಿಯೂ ಜೀವದಿಂದುಳಿಯಬಲ್ಲನೆ?" ಎಂದು ಯಾರಾದರೂ ಸಹಜವಾಗಿ ಪ್ರಶ್ನಿಸಬಹುದು. ವೇಗವು ಕ್ರಮೇಣ ಹೆಚ್ಚುತ್ತ ಬಂದ ಪಕ್ಷದಲ್ಲಿ ಮಾನವ ಶರೀರ ಈ ವೇಗವನ್ನು

ರಾಕೆಟ್ ನಾವಿಕರು ಭೂಮಿಗೂ ಇತರ ಗ್ರಹಗಳಿಗೂ ಸಂಸರ್ಗ ವನ್ನೇರ್ಪಡಿಸುವ ಮುನ್ನ ಅವರು ತಮ್ಮ ಯಂತ್ರಗಳನ್ನು ಭೂಮಿಯ ವಾಯು ಮಂಡಲದ ಎಲ್ಲೆಕಟ್ಟಿನಲ್ಲಿ ಸಾಮಾನ್ಯ ರೀತಿಯಲ್ಲಿ ಉಪಯೋಗಿಸಿ ಅವುಗಳ ಹುರುಳನ್ನು ದೃಢಮಾಡಿಕೊಳ್ಳಬೇಕು. ೧೯೩೧ರಲ್ಲಿ, ಫ್ರೀಡಿಕ್ ಸ್ಮಿಟ್ (Friedrich Schmidt) ಎಂಬಾತನು ಆಸ್ಟ್ರಿಯದಲ್ಲಿ ಎರಡು ಪಟ್ಟಣಗಳಿಗೆ ಗ್ರಾಟ್‌ಜ್ (Graz) ಪರ್ವತ ಪ್ರದೇಶದ ಮೇಲಿನಿಂದ ರಾಕೆಟ್ ಅಚೆಯ ಏರ್ಪಾಟನ್ನು ಕಲ್ಪಿಸಿದನು. ಎರಡು ಪಟ್ಟಣಗಳಿಗೂ ನಡುವಣ ಅಂತರ ಕೆಲವು ಮೈಲಿಗಳು ಮಾತ್ರ. ಆದರೆ, ಪರ್ವತಪ್ರದೇಶವಾದ್ದರಿಂದ ಆ ಎರಡು ಪಟ್ಟಣಗಳಿಗೆ ಸಂಚಾರಸಂಸರ್ಗ ಕಷ್ಟ. ಹೀಗಾಗಿ, ಈ ಹೊಸ ಅಂಚೆಯ ಏರ್ಪಾಟು ಬಹಳ ಪ್ರಯೋಜನಕರವಾಗಿ ಪರಿಣಮಿಸಿತು. ಇದಾದ ಸ್ವಲ್ಪ ಕಾಲದಲ್ಲೆ, ಜೆರಾರ್ಡ್ ಜೂಕರ್ (Gerhard Zucker) ಎಂಬಾತನು ಜರ್ಮನಿಯಲ್ಲಿ ಹಾರ್‌ಟ್‌ಜ್ (Harz) ಪರ್ವತಗಳ ಮೇಲೆ ಇದೇ ಬಗೆಯ ಅಂಚೆಯ ಏರ್ಪಾಟನ್ನು ಸ್ಥಾಪಿಸಿದನು. ಇವುಗಳಲ್ಲಿ ಮುಖ್ಯತೆಯನ್ನು ಹೊಂದಿಲ್ಲದಿದ್ದರೂ, ರಾಕೆಟ್ಟು ಯಾವ ರೀತಿಯಲ್ಲಿ ಉಪಯೋಗ ಕರವಾಗಬಲ್ಲದೆಂಬುದರ ಕಡೆಗೆ ಇವು ಸುಳಿವು ತೋರುತ್ತವೆ. ವಿಮಾನ ತೆಗೆದುಕೊಳ್ಳುವ ಕಾಲಪ್ರಮಾಣದ (ಈ ಪ್ರಮಾಣ ಒಂದು ಗಂಟೆ ಎಂದು ಇಟ್ಟು ಕೊಳ್ಳೋಣ) ಒಂದು ಅಂಶ ಕಾಲದಲ್ಲಿ ಜನರಿಂದ ನಡಸಲ್ಪಡದ ರಾಕೆಟ್ ಹಡಗು ಯೂರೋಪಿನಿಂದ ಅಮೆರಿಕಕ್ಕೂ, ಅಮೆರಿಕದಿಂದ ಏಷ್ಯಕ್ಕೂ ಅಚೆ ಒಯ್ಯುವ ಕಾಲ ಬಹು ದೂರವಿರಲಾದು.

ಅಂಥ ಹಡಗುಗಳನ್ನು ಬಹುಶಃ ೬೦ ಡಿಗ್ರಿಗಳ ಕೋನದಲ್ಲಿ ಹಾರಿಸ ಲಾಗುವುದು; ಅವು ಭೂಮಿಯಿಂದ ಅನೇಕಾನೇಕ ಮೈಲಿಗಳ ಮೇಲಕ್ಕೆ ಮತ್ತು ಎರಡು ಭೂ ಖಂಡಗಳ ಮಧ್ಯ ಪ್ರದೇಶದಷ್ಟು ದೂರಕ್ಕೆ ನೆಗೆದು ಹಾರಿ, ಆಮೇಲೆ ಕ್ರಮಕ್ರಮವಾಗಿ ಕಡಮೆಯಾಗುವ ವೇಗದಿಂದ ಆದರೂ ಶೀಘ್ರವಾಗಿ ತಮ್ಮ ಗುರಿಯನ್ನು ತಲುಪುವುವು. ಅವು ಹಾರುವ ದೋಣಿಗಳಂತೆ ಬಹುಶಃ ನೀರಿನ ಮೇಲೆ ಇಳಿಯುವುವು.

* * * *

ಹಡಗು ನಾಶವಾಗಿಹೋಗುವುದು. ಮೊದಲ ನೋಟಕ್ಕೆ ಈ ಅಪಾಯ ಬಹು ದೊಡ್ಡದಾಗಿ ಕಾಣುತ್ತದೆ; ಮೇಲಾಕಾಶ ಪ್ರಯಾಣದ ವಿಷಯವಾಗಿ ಹೆಚ್ಚಿನ ಚರ್ಚೆ ವ್ಯರ್ಥವಾಗಿ ತೋರುತ್ತದೆ. ಆದರೆ, ಗ್ರಹಾಂತರ ಆಕಾಶ ಅನಂತ, ಅಪಾರ; ಹತ್ತಿರದ ಗ್ರಹವನ್ನು ಕುರಿತು ಸಾಗುತ್ತಿರುವ ಉಲ್ಕೆ ಈ ಮೇಲಾಕಾಶ ಹಡಗಿಗೆ ಡಿಕ್ಕಿ ಹೊಡೆಯುವ ಸಂಭವ ಕೋಟಿಗೆ ಒಂದು– ಎಂಬುದಾಗಿ ವೈಜ್ಞಾನಿಕರು ಭರವಸೆ ಕೊಡುತ್ತಾರೆ.

ರಾಕೆಟ್ ಹಡಗನ್ನು ಮೇಲಾಕಾಶಪ್ರಯಾಣಕ್ಕೆ ಕಳಿಸುವುದು ಮಾತ್ರವಲ್ಲದೆ, ಪ್ರಯಾಣಿಕರಿಗೆ ಪ್ರಾನಹಾನಿಯಾಗದಂತೆಯೂ ಭೂಮಿಯ ವಾತಾವರಣದಲ್ಲಿ ಮತ್ತು ಅದರಾಚೆಯ ಮೇಲಾಕಾಶ ಪ್ರದೇಶದಲ್ಲಿ ಪ್ರಯಾಣ ಮಾಡುತ್ತಿರುವಾಗ ಅವರ ಶರೀರಕ್ಕೆ ಅಸೌಖ್ಯವಾಗದಂತೆಯೂ ಭದ್ರಪಡಿಸುವುದು ಕೂಡ ತತ್ವತಃ ಸಾಧ್ಯವೆಂಬುದನ್ನು ನಾವು ಈಗ ಅರಿಯಬಹುದಾಗಿದೆ.

ಮೇಲಾಕಾಶ ಹಡಗಿನ ನಾವಿಕನು ತಾನು ಹೋಗಲು ನಿಶ್ಚಯಿಸಿರುವ ಗ್ರಹಕ್ಕಾಗಲಿ ಬೇರೆಯ ಸ್ಥಳಕ್ಕಾಗಲಿ ಶೂನ್ಯದ ಮೂಲಕ ತನ್ನ ದಾರಿ ಕಂಡು ಕೊಳ್ಳುವುದು ಹೇಗೆ?– ಎಂಬುದೇ ಮುಂದಿನ ಪ್ರಶ್ನೆ. ಈ ಪ್ರಶ್ನೆಯ ಮುಖ್ಯತೆಯನ್ನು ಒತ್ತಿ ಹೇಳುವ ಆವಶ್ಯಕತೆಯಿಲ್ಲ; ಏಕೆಂದರೆ, ಮೇಲಾಕಾಶ ಹಡಗು ತನ್ನ ಗುರಿ ತಪ್ಪಿದರೆ, ಏನೋ ಒಂದು ಅದ್ಭುತ ಮಾತ್ರ ಅದರಲ್ಲಿರುವವರನ್ನು ಮೃತ್ಯು ಮುಖದಿಂದ ತಪ್ಪಿಸಬಲ್ಲದು. ಹಡಗು ಅನಂತಕಾಲವೆಲ್ಲ ಮೇಲಾಕಾಶದಲ್ಲಿ ತೇಲುತ್ತ ಹೋಗುತ್ತಿರಬೇಕು. ಅದರಲ್ಲಿರುವವರೆಲ್ಲ ಸತ್ತ ಮೇಲೆ, ಅದರ ಉರುವಲರೆಲ್ಲ ಮುಗಿದ ಮೇಲೆ, ಆಕಾಶಸ್ಥ ಕಾಯಗಳಲ್ಲಿ ಒಂದರ ಪಥಕ್ಕೆ ಅದು ಸೆಳೆಯಲ್ಪಟ್ಟು ಆ ಕಾಯದ ಉಪಗ್ರಹವಾಗಿ, ಅದರ ಸುತ್ತಲೂ ಚಂದ್ರ ನಮ್ಮ ಭೂಮಿಯ ಸುತ್ತಲೂ ಸುತ್ತುತ್ತಿರುವಂತೆ ಸುತ್ತುತ್ತಿರಬಹುದು. ಇಲ್ಲವೆ, ಅದು ಸೂರ್ಯನ ಕಡೆಗೆ ಸೆಳೆಯಲ್ಪಟ್ಟು ಸುಟ್ಟು ಬೂದಿಯಾಗಬಹುದು, ಗ್ರಹವೊಂದಕ್ಕೆ ಡಿಕ್ಕಿ ಹೊಡೆದು ನುಚ್ಚುನೂರಾಗಬಹುದು. ಈ ಸಂಭವಗಳನ್ನೆಲ್ಲ ವಿಚಾರ ಮಾಡಿದರೆ, ಬಹಳ ಎಚ್ಚರಿಕೆಯಿಂದ ಅಚ್ಚುಕಟ್ಟಾದ ಪಥವನ್ನು ಮುನ್ನೇರ್ಪಾಡುಮಾಡಿಟ್ಟುಕೊಳ್ಳದಿದ್ದ ಭಾಗದಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲಿಷ್ಟವುಳ್ಳವರು ಮಾತ್ರ ಮೇಲಾಕಾಶ ಪ್ರಯಾಣವನ್ನು ಮಾಡುವ ಸಾಹಸಕ್ಕೆ ತೊಡಗುವರೆಂಬುದು ಸ್ಪಷ್ಟ. ಮೇಲಾಕಾಶ ನಾವಿಕನು ಸಂಪೂರ್ಣವಾಗಿ ಸರಿಯಾದ ಪಥವನ್ನು ನಕ್ಷೆ ಮಾಡಿಟ್ಟುಕೊಳ್ಳುವ ಮಟ್ಟಿಗೆ ಮೇಲಾಕಾಶ ವಿಷಯಕವಾದ ತಿಳಿವಳಿಕೆ ಸಾಕಷ್ಟು ಮುಂದುವರಿದಿದೆಯೆಂದು ವೈಜ್ಞಾನಿಕರು ವಾದಿಸುತ್ತಾರೆ.

ಹುಡುಕುವವರಿಗೆ ಇದು ಮೆಚ್ಚಿಗೆಯಾಗಿರುತ್ತದೆ. ಉದಾಹರಣೆಗೆ, ಇಂಗ್ಲೆಂಡಿನಲ್ಲಿ ವಿಮಾನ ನಡಸುವವನು ಅಸೈನಿಕ ವಿಮಾನ ಹಾರಿಸುವ ಶಾಖೆಯಲ್ಲಿ ಪಡೆಯ ಬಹುದಾದ ಅತ್ಯಂತ ಹೆಚ್ಚಿನ ಸಂಬಳದ ಉದ್ಯೋಗವೆಂದರೆ, ಭಾರಿ ವಿಮಾನ ತಯಾರಿಕೆಯ ಸಂಸ್ಥೆಯಲ್ಲಿ ವಿಮಾನಗಳನ್ನು ಪರೀಕ್ಷೆ ಮಾಡುವ ವಿಮಾನ ನಡಸುವವನ (ಪರೀಕ್ಷಾ ವಿಮಾನ ಸಾರಥಿ) ಉದ್ಯೋಗ: ಇದರಲ್ಲಿ ಕೂಡ ಅತ್ಯಂತ ಅನುಕೂಲ ಪರಿಸ್ಥಿತಿಯಲ್ಲಿ ವರ್ಷಕ್ಕೆ ೧,೫೦೦ ಪೌಂಡುಗಳಿಗಿಂತ ಹೆಚ್ಚಿನ ವರಮಾನ ದೊರೆಯಲಾರದು. ಸೈನ್ಯದಲ್ಲಿ ವಿಮಾನ ಹಾರಿಸುವುದನ್ನು ತೆಗೆದುಕೊಂಡರೆ, ರಾಜ ವಿಮಾನ ಬಲದಲ್ಲಿ (Royal Air Force) ಅತ್ಯುಚ್ಚ ಪದವಿಗೆ ಕೆಳಗಿನ ಪದವಿಯ ಉದ್ಯೋಗಸ್ಥನಾದ ಪ್ರಧಾನ ವಿಮಾನ ದಳಾಧಿಪತಿಗೆ (Air Chief Marshal) ಬರುವ ಒಟ್ಟು ಮೊಬಲಗು ವರ್ಷಕ್ಕೆ ೨,೫೦೦ ಪೌಂಡುಗಳು; ವೈಮಾನಿಕ ಸೈನ್ಯದ ಅಧಿಕಾರಿಗೆ, ಕೆಲಸಕ್ಕೆ ಸೇರಿದ ಮೊದಲ ಎರಡು ವರ್ಷಗಳಲ್ಲಿ ವರ್ಷಕ್ಕೆ ೩೬೫ ಪೌಂಡುಗಳು ಮಾತ್ರ.

**ವಿಮಾನ ನಡಸುವವನ ಜೀವನ**

ಬಹು ಹೆಚ್ಚಿನ ದರದ ಸಂಬಳವನ್ನು ನಿರೀಕ್ಷಿಸಲಾಗದಿದ್ದರೂ ವಿಮಾನ ಸಾರಥಿಯ ಜೀವನದಲ್ಲಿ ಹಲವು ಪ್ರತಿಫಲಗಳುಂಟು. ಅವನ ಬದುಕೆಲ್ಲ ಬಯಲಿನಲ್ಲಿ; ಅತ್ಯಂತ ಕೆಳದರ್ಜೆಯ ವಿಮಾನ ಸಾರಥಿಯಾದರೂ, ಇತರ ಕಸಬುಗಳಲ್ಲಿ ಇಲ್ಲದ ಕೆಲಮಟ್ಟಿನ ಸ್ವಾತಂತ್ರ್ಯವೂ ಅಧಿಕಾರವೂ ಅವನಿಗುಂಟು. ಹಡಗಿನ ನಾಯಕನಂತೆ ಅವನು ತನ್ನ ಯಂತ್ರಕ್ಕೆ ತಾನೇ ಒಡೆಯ; ನಿಸ್ತಂತುವನ್ನು (Wireless) ಹೆಚ್ಚು ಹೆಚ್ಚಾಗಿ ಬಳಸುತ್ತಿರುವುದರಿಂದ ಆಕಾಶದಲ್ಲಿರುವವನ (ಅಂದರೆ ವಿಮಾನ ಸಾರಥಿಯ) ಜವಾಬ್ದಾರಿಯ ಕೆಲಭಾಗ ನೆಲದ ಮೇಲಿರುವವನ (ಅಂದರೆ ನಿಸ್ತಂತು ಕಾರ್ಯಕರ್ತನ) ಪಾಲಿಗೆ ಬಿದ್ದಿರುವುದಾದರೂ ಆಕಾಶದಲ್ಲಿ ರುವನೇ ಇನ್ನೂ ಆ ಹೊಣೆಯ ಹೆಚ್ಚಿನ ಭಾಗವನ್ನು ಹೊತ್ತು ಯಂತ್ರದ ಅಧಿಕಾರಿಯಾಗಿದ್ದಾನೆ. ವಿಮಾನ ನಡಸುವವನು ಅನುಭೋಗಿಸುತ್ತಿರುವ ಇನ್ನೊಂದು ಪ್ರಯೋಜನವಿದೆ; ಅನೇಕವೇಳೆ ಅದನ್ನು ನಾವು ಲಕ್ಷಿಸುವುದಿಲ್ಲ; ಅದೇನೆಂದರೆ, ಈವರೆಗೆ ಕಲ್ಪಿಸಿರುವ ಕೌಶಲದ ಕಾರ್ಯಗಳಲ್ಲೆಲ್ಲ ಅತ್ಯಂಥ ಮನೋರಂಜಕವಾದದ್ದು ವಿಮಾನನಿಯಂತ್ರಣ ಕಾರ್ಯ. ವಿಮಾನವನ್ನು ನೆಲದಿಂದ ಮೇಲಕ್ಕೆ ಹಾರಿಸುವುದು; ಅದನ್ನು ಆಕಾಶದಲ್ಲಿ ಹಾರಿಸುವುದು, ತಿರುಗಿಸುವುದು, ನಡಸುವುದು; ಕಡೆಗೆ ಕೆಳಕ್ಕಿಳಿಸುವುದು– ಈ ಎಲ್ಲವುಗಳಿಂದಲೂ ತುಂಬ

# ಪ್ರಕರಣ ೮

## ಆಕಾಶಯಾನದಲ್ಲಿ ಜೀವನಮಾರ್ಗಗಳು

ಆಕಾಶಯಾನದಲ್ಲಿ ವಿಮಾನ ನಡಸುವವನ ವಿಶೇಷ ಶಿಲ್ಪವಿಷಯಕ ಸ್ಥಾನ ನಿಮಿತ್ತದಿಂದ ಅವನಿಗೆ ದೊರಕುವ ಬೇರೆ ಬೇರೆ ಉದ್ಯೋಗಗಳ ಮೇಲೆಯೇ ಎಲ್ಲರ ಗಮನವೂ ಕೇಂದ್ರೀಕೃತವಾಗುವ ಒಲವಿದೆ; ಆದರೂ, ವಾಸ್ತವವಾಗಿ ಯಾವುದೇ ಬಗೆಯ ವಾಯುಯಾನ ಸಂಬಂಧದ ಚಟುವಟಿಕೆಯಲ್ಲಿ ನೇಮಕ ಹೊಂದಿರುವವರ ಒಟ್ಟು ಸಂಖ್ಯೆ ಬರಿಯ ವಿಮಾನ ನಡಸುವವರ ಸಂಖ್ಯೆಗೆ ತಪ್ಪದೆ ಹಲವುಮಡಿಯಾಗಿರುತ್ತದೆ. ನಿಜವಾಗಿ ವಿಚಾರ ಮಾಡಿದರೆ, ಹಲವು ಸಂದರ್ಭಗಳಲ್ಲಿ, ವಿಮಾನ ಹಾರಿಸುವುದಕ್ಕೆ ಸಂಬಂಧಪಡದ ಉದ್ಯೋಗಗಳಲ್ಲಿ ಕೆಲಸ ಮಾಡಲು ವಿಮಾನ ನಡಸುವುದಕ್ಕೆ ಸಂಬಂಧಪಟ್ಟ ಉದ್ಯೋಗಿಗಳಿಗೆ ಬೇಕಾಗಿರುವಷ್ಟೇ ವಿಶೇಷಾನುಭವ ಬೇಕಾಗುತ್ತದೆ. ಆಕಾಶ ಯಾನದ ಬೇರೆಬೇರೆ ಕ್ಷೇತ್ರಗಳನ್ನು ಈ ರೀತಿ ವಿಂಗಡಿಸಬಹುದು: (೧) ವಿಮಾನ ಹಾರಿಸುವುದು (Flying), (೨) ವಾಯುಯಾನ ಶಿಲ್ಪ (Aeronautical Engineering), (೩) ವಿಮಾನಗಳ ಸಂಬಂಧದ ಆಡಳಿತ ಕಾರ್ಯ (Aircraft Operation), (೪) ವಿಮಾನ ರಚನೆ (Aircraft Construction), (೫) ವಿಮಾನ ಮಾರಾಟ, (೬) ರಾಜ ವಿಮಾನ ಬಲ (Royal Air Force: R.A.F.) ಮತ್ತು (೭) ಇತರ.

### ವಿಮಾನ ಹಾರಿಸುವುದು (ಅಥವಾ ನಡಸುವುದು)

ವಿಮಾನ ನಡಸುವವನ ಕಸಬಿಗೆ ಸಂಬಂಧಪಟ್ಟ ಅವಕಾಶಗಳನ್ನು ಎರಡು ಮುಖ್ಯ ಗುಂಪುಗಳಾಗಿ ವಿಂಗಡಿಸಬಹುದು: ಅಸೈನಿಕ (Civil) ಮತ್ತು ಸೈನಿಕ (Military). ಇವೆರಡು ಬಗೆಯ ಉದ್ಯೋಗಗಳೂ ಸ್ವಾರಸ್ಯವುಳ್ಳವು ಮತ್ತು ತಕ್ಕಮಟ್ಟಿಗೆ ಹೆಚ್ಚಿನ ಸಂಬಳಗಳನ್ನು ದೊರಕಿಸಿಕೊಡುವಂಥವು. ಆದರೆ, ಸದ್ಯ ಸ್ಥಿತಿಯಲ್ಲಿ ಆಕಾಶಯಾನದ ಕಾರ್ಯಕ್ಷೇತ್ರದಲ್ಲಿ ಅಪಾರ ದ್ರವ್ಯ ಗಳಿಸಲಾಗುವುದಿಲ್ಲ. ಹೆಚ್ಚಾದ ಸಂಬಳ ದೊರಕಿಸಿಕೊಡದಿದ್ದರೂ ಹಿತಕರವಾದ ಕಸಬನ್ನು

ಸಂಘದಲ್ಲಿ ಅಥವಾ ಹಾರಿಕೆಯ ಶಿಕ್ಷಣ ಶಾಲೆಯಲ್ಲಿ ಶಿಕ್ಷಕ; (೪) ಆಕಾಶ ಪರಿಶೀಲನೆ; (೫) ಆಕಾಶ ಲೇಖನ ಅಥವಾ ಬಾವುಟ ಹಾರಿಕೆ; (೬) ವಿಮಾನ ಪರೀಕ್ಷೆಯ ಹಾರಿಕೆ; (೭) ಪ್ರದರ್ಶನ ಹಾರಿಕೆ; (೮) ಸಲಹೆಗಾರ ವಿಮಾನ ಸಾರಥಿ; (೯) ವಿಹಾರ ಸವಾರಿ ಮತ್ತು ಖಾಸಗಿ ಉದ್ಯೋಗ.

**ವಾಣಿಜ್ಯ ಹಾರಿಕೆ ಮತ್ತು ಬಾಡಿಗೆವಿಮಾನ ಹಾರಿಕೆ**

ಬಾಡಿಗೆ ವಿಮಾನ ಹಾರಿಕೆಗೆ (Taxi Flying) ಅತ್ಯಂತ ಹೆಚ್ಚಿನ ಮಟ್ಟದ ವಿಮಾನ ಸಾರಥ್ಯ ಕೌಶಲ ಇರಬೇಕು. ವೃತ್ತಪತ್ರಿಕೆಗಳ ವರದಿಗಾರರೊಡನೆಯೂ ಛಾಯಾಚಿತ್ರಕಾರರೊಡನೆಯೂ ಈ ಬಗೆಯ ಕೆಲಸವನ್ನು ಹೆಚ್ಚಾಗಿ ಮಾಡ ಬೇಕಾಗುತ್ತದೆ; ಆದ್ದರಿಂದ, ಕಾಲಾವಕಾಶ ಅತ್ಯಲ್ಪ, ಕೆಲಸದ ಒತ್ತಡ ಬಹು ಹೆಚ್ಚು. ಅನೇಕವೇಳೆ ಕೆಟ್ಟ ವಾಯುಸ್ಥಿತಿಯಲ್ಲಿ ಹಾರಬೇಕಾಗುತ್ತದೆ. ಹೀಗಾಗಿ, ವಿಮಾನ ನಡಸುವವನ ಕೌಶಲ ಮತ್ತು ಸಹನಶಕ್ತಿಗಳ ಮೇಲೆ ತಕ್ಕಮಟ್ಟಿಗೆ ಹೆಚ್ಚಾಗಿಯೇ ಹೊರೆ ಬೀಳುತ್ತದೆ. ದೊರೆಯುವ ಸಂಬಳದಲ್ಲಿ ಸಂದರ್ಭಾನುಸಾರ ತುಂಬ ಹೆಚ್ಚು ಕಡಮೆಗಳುಂಟು. ಕೆಲವು ಬಾಡಿಗೆ ವಿಮಾನ ಸಾರಥಿಗಳು ಕೆಟ್ಟ ವಾಯುಸ್ಥಿತಿಯನ್ನು ಲೆಕ್ಕಿಸದೆ ವಿಮಾನ ನಡಸುವುದರಲ್ಲಿ ಹೆಸರುವಾಸಿ ಯಾಗಿರುತ್ತಾರೆ; ಅಂಥವರು ಇತರರಿಗಿಂತ ಹೆಚ್ಚಿನ ಸಂಬಳ ಕೇಳಲು ಅವಕಾಶವಿದೆ. ಪ್ರಮುಖರಾದ ಬಾಡಿಗೆ ವಿಮಾನ ಸಾರಥಿಗಳಲ್ಲಿ ಹಲವರು ತಾವು ಕೆಲಸ ಮಾಡುತ್ತಿರುವ ಸಂಸ್ಥೆಗಳ ನಿರ್ದೇಶಕರಾಗಿದ್ದಾರೆ.

ಕ್ರಮವಾದ ಆಕಾಶಮಾರ್ಗಗಳಲ್ಲಿನ ವಾಣಿಜ್ಯ ಸಂಬಂಧದ ವಿಮಾನಹಾರಿಕೆ ಕಸಬುದಾರಿ ಅಸೈನಿಕ ವಿಮಾನಹಾರಿಕೆಯ ಒಂದು ಶಾಖೆ. ಪೂರ್ವ ಶಿಕ್ಷಣ ಪಡೆದ, ನಂಬಿಕಸ್ಥರಾದ ವಿಮಾನ ನಡಸುವವರಿಗೆ ಇದರಲ್ಲಿ ಒಂದೇ ಸಮನಾಗಿ ಬೆಳೆಯುತ್ತ ಹೋಗುವ ಅವಕಾಶಗಳಿವೆ. ಸಂಬಳ ವರ್ಷಕ್ಕೆ ೩೦೦ ಪೌಂಡುಗಳಿಂದ ಹಿಡಿದು ೧,೦೦೦ ಪೌಂಡುಗಳವರೆಗೆ ಹೆಚ್ಚು ಕಡಮೆಯಾಗಿರುತ್ತದೆ. ಮುಂಚೆಗೆ ವಾಣಿಜ್ಯಕ್ಕಾಗಿ ವಿಮಾನ ನಡಸುವುದು ನರಬಲವನ್ನು ಕುಗ್ಗಿಸುತ್ತದೆಂಬ ನಿರೀಕ್ಷೆಯಿತ್ತು; ಆದರೆ ಅದಕ್ಕೆ ವಿರುದ್ಧವಾಗಿ, ವಾಣಿಜ್ಯ ವಿಮಾನ ಸಾರಥಿಗಳು ತಾವು ಬಹು ದೀರ್ಘ ಕಾಲ ನಿಷ್ಕೃಷ್ಟತೆಯಿಂದಲೂ ಕ್ರಮಬದ್ಧವಾಗಿಯೂ ವಿಮಾನ ಹಾರಿಸ ಬಲ್ಲೆವೆಂಬುದನ್ನು ದೃಢಪಡಿಸುತ್ತಿದ್ದಾರೆ. ವಾಣಿಜ್ಯ ವಿಮಾನಸಾರಥಿಯ ಚಟುವಟಿಕೆಯಿಂದ ಕೂಡಿದ ಜೀವನಾವಧಿ ಅಲ್ಪವೆಂಬುದಕ್ಕೆ ಇನ್ನೂ ಯಾವ ಸೂಚನೆಯೂ ಕಂಡುಬಂದಿಲ್ಲ. ಹಾಗೆ ನೋಡಿದರೆ, ೪೦ ವರ್ಷಕ್ಕೆ ಮೇಲ್ಪಟ್ಟ

ಮನಸ್ತೃಪ್ತಿಯುಂಟಾಗುವುದೆಂದು ಎಲ್ಲ ಅನುಭವಸ್ಥ ವಿಮಾನ ಸಾರಥಿಗಳೂ ಒಪ್ಪುತ್ತಾರೆ. ಕೆಟ್ಟ ವಾಯುಸ್ಥಿತಿಯಲ್ಲಿ, ಏನೊಂದೂ ಚೆನ್ನಾಗಿ ಗೋಚರವಾಗ ದಿರುವಾಗ, ಬಹು ಪ್ರಯಾಸದಿಂದ ವಿಮಾನ ಹಾರಿಸುವುದರಲ್ಲಿ ಕೂಡ ಹಲವು ಪ್ರತಿಫಲಗಳಿವೆ; ತುಂಬ ಕೆಟ್ಟ ವಾಯುಸ್ಥಿತಿಯಲ್ಲಿ ಸರಿಯಾದ ದಾರಿ ಬಿಟ್ಟು ಅಡ್ಡದಾರಿಗಳನ್ನು ಹಿಡಿದು ವಿಮಾನ ಹಾರಿಸುತ್ತ ಕಡೆಗೆ ಹಾರಿಕೆ ಯಶಸ್ವಿಯಾಗಿ ಮುಗಿದರೆ ವಿಮಾನ ನಡಸುವವನಿಗೆ ದೊರೆಯುವ ತೃಪ್ತಿ ಅಷ್ಟಿಷ್ಟಲ್ಲ.

ಅಸೈನಿಕ ವಿಮಾನ ಹಾರಿಕೆ ಬಹುಮಟ್ಟಿಗೆ ಕೌತುಕವಿಲ್ಲದ್ದು. ಯಾವನು ಜಾಗರೂಕನೆಂದೂ ನಂಬಿಕೆಯವನೆಂದೂ ಹೆಸರು ಪಡೆದಿರುತ್ತಾನೊ ಅಂಥ ವಿಮಾನ ಸಾರಥಿಗೆ ಎಲ್ಲೆಲ್ಲೂ ಸ್ವಾಗತ. ವಿಮಾನಪ್ರಯಾಣ ಸಂಸ್ಥೆಗಳು ಯಾವಾಗಲೂ ಜಾಗರೂಕರಾದ ವಿಮಾನ ಸಾರಥಿಗಳನ್ನೇ ಹುಡುಕುತ್ತಿರುತ್ತವೆ. ಅವನಿಗೆ ತೀಕ್ಷ್ಣಬುದ್ಧಿಯುಳ್ಳವರು ಬೇಕಾಗಿಲ್ಲ. ಆದರೆ, ವಿಮಾನ ಸಾಮು (Aerobatics) ಮತ್ತು ಇತರ ಕೌತುಕಾತ್ಮಕ ವಿಮಾನ ಹಾರಿಕೆಗಳಲ್ಲಿ ವಿಶೇಷ ಆಸಕ್ತಿ ವಹಿಸಿರುವವರಿಗೆ ಬೇಕಾದಷ್ಟು ಅವಕಾಶವಿದೆ. ಇಂಡಿಯಾದಲ್ಲಿ ವಿಮಾನಹಾರಿಕೆ ಸಂಘಗಳು ಆಗಿಂದಾಗ್ಗೆ ಹಾರಿಕೆಯ ಪ್ರದರ್ಶನಗಳನ್ನು ಏರ್ಪಡಿಸು ತ್ತಿರುತ್ತವೆ. ಇವುಗಳಲ್ಲೂ ಬೇರೆ ಬೇರೆ ವಿಮಾನಹಾರಿಕೆ ಪಂದ್ಯಗಳಲ್ಲೂ ವಿಮಾನ ಸಾಮಿನಲ್ಲಿ ನುರಿತ ವಿಮಾನ ಸಾರಥಿಗಳಿಗೆ ತಕ್ಕಮಟ್ಟಿನ ಅವಕಾಶವಿದೆ.

### ಅಸೈನಿಕ ಹಾರಿಕೆಗೆ ಸಂಬಂಧಪಟ್ಟ ಉದ್ಯೋಗಗಳು

ಪ್ರದರ್ಶನಗಳಿಗಾಗಿ ಹಾರುವ ವಿಮಾನ ಸಾಮಿನ ಹಾರಿಕೆಗೂ ಸ್ಥಿರವಾದ ಆಕಾಶಮಾರ್ಗದಲ್ಲಿ ಕ್ರಮವಾಗಿ ನಡೆಯುವ ವಾಣಿಜ್ಯ ಸಂಬಂಧದ ಹಾರಿಕೆಗೂ ನಡುವೆ ಬೇರೆ ಬೇರೆ ಬಗೆಯ ಉದ್ಯೋಗಗಳು ಚತುರನೂ ಪೂರ್ಣ ಸನ್ನದುದಾರನೂ ಆದ ವಿಮಾನ ಸಾರಥಿಗೆ ದೊರೆಯುತ್ತವೆ. ಮುಖ್ಯವಾಗಿ ಬೇಕಾದದ್ದು 'ಬಿ' ಸನ್ನದು; ವಾಯುನಾವಿಕನ ಸನ್ನದಿನಂಥ ಇತರ ಸನ್ನದುಗಳೂ ಇದ್ದರೆ ಹೆಚ್ಚು ಬೆಲೆಯುಂಟು. ರಾಜ ವಿಮಾನ ಬಲದಲ್ಲಿ ಕೆಲವು ಕಾಲ ಕೆಲಸ ಮಾಡಿದ್ದರೆ ಯಾವ ಬಗೆಯ ಅನುಭವ ದೊರೆಯುತ್ತದೆಯೊ ಆ ಬಗೆಯ ಅನುಭವವಿದ್ದರೂ ಸಹ ಹೆಚ್ಚಿನ ಬೆಲೆಯುಂಟು. ಆವಶ್ಯಕವಾದ ಸನ್ನದುಗಳ ಬಲದ ಮೇಲೆ ಅಸೈನಿಕ ವಿಮಾನ ಸಾರಥಿ ಈ ಮುಂದಿನ ಯಾವ ಉದ್ಯೋಗಕ್ಕಾದರೂ ಪ್ರಯತ್ನ ಪಡಬಹುದು: (೧) ವಾಣಿಜ್ಯ ವಿಮಾನ ಪ್ರಯಾಣ ಮಾರ್ಗದ ವಿಮಾನ ಸಾರಥಿ; (೨) ಬಾಡಿಗೆ ವಿಮಾನ ಸಾರಥಿ; (೩) ಹಾರಿಕೆಯ

ಪರೀಕ್ಷಾ ವಿಮಾನಸಾರಥಿಯ ಕೆಲಸ ಯಂತ್ರವನ್ನು ಹಾರಿಸಿ ಅದು ಸುರಕ್ಷಿತವಾಗಿರುವಂತೆ ನೋಡಿಕೊಳ್ಳುವುದು ಮಾತ್ರವಲ್ಲ; ಇದಕ್ಕಿಂತ ಹೆಚ್ಚಿನದು. ವನು ಅನೇಕ ವೇಳೆ ಸಂಸ್ಥೆಯ ವಿಮಾನ ರಚನಾ ಸಂವಿಧಾನ (ನಕ್ಷೆ) ಶಾಖೆಯವರಿಗೆ ಸಲಹೆ ಕೊಡುತ್ತಾನೆ, ಮತ್ತು ಯಂತ್ರಗಳ ಹೊಸ ಮಾದರಿಗಳನ್ನು ತಯಾರಿಸುವುದರಲ್ಲಿ ಅವನು ಕೊಡಬೇಕಾದ ಅಭಿಪ್ರಾಯ ಎಷ್ಟೋ ಇರುತ್ತದೆ. ಅವನಿಗೆ ಸುಮಾರಾಗಿ ಹೆಚ್ಚಾದ ಸ್ಥಿರ ಸಂಬಳ ದೊರೆಯುತ್ತದೆ; ಅದು ವರ್ಷಕ್ಕೆ ೫೦೦ ಪೌಂಡುಗಳಿಂದ ಹಿಡಿದು ೮೦೦ ಪೌಂಡುಗಳವರೆಗಿರಬಹುದು. ಹೊಸ ಯಂತ್ರವನ್ನು ಪರೀಕ್ಷೆ ಮಾಡಿದ ಪ್ರತಿಸಲವೂ ಅವನಿಗೆ ಹೆಚ್ಚಿನ ರುಸುಮು ಕೊಡಲಾಗುತ್ತದೆ; ಹೊಸ ಮಾದರಿಯ ಯಂತ್ರಗಳನ್ನು ಮೊದಲ ಸಲ ಹಾರಿಸಿದಾಗ ಈ ರುಸುಮಿನ ದರ ವಿಶೇಷ ಹೆಚ್ಚಾಗಿರುತ್ತದೆ. ಒಟ್ಟಿನಲ್ಲಿ, ಅವನು ವರ್ಷಕ್ಕೆ ೧,೫೦೦ ಪೌಂಡು ಸಂಪಾದಿಸಬಹುದು. ಕೆಲವು ಸಂಸ್ಥೆಗಳು ವಿಶೇಷ ರುಸುಮಿನ ಬದಲು ಸ್ಥಿರ ಸಂಬಳವನ್ನು ಕೊಡುತ್ತವೆ. ಆದರೆ, ಸಾಮಾನ್ಯವಾಗಿ ವಿಶೇಷ ರುಸುಮು ಕೊಡುವುದೇ ರೂಢಿ. ಪರೀಕ್ಷಾ ವಿಮಾನಸಾರಥಿ ವಿಶೇಷ ಮಾದರಿಯ ವ್ಯಕ್ತಿ. ಅವನು ವಿಮಾನಹಾರಿಕೆಯಲ್ಲೂ ವಿಮಾನತಯಾರಿಕೆಯಲ್ಲೂ ಎಲ್ಲ ಕಾರ್ಯಭಾಗದ ತಿಳಿವಳಿಕೆಯನ್ನು ಪಡೆದವನಾಗಿದ್ದು, ವಾಯುಯಾನ ವಿಮರ್ಶಕನಾಗಿರಬೇಕು. ಅನೇಕ ವೇಳೆ ಅವನಿಂದಲೇ ಸಂಸ್ಥೆಗೆ ಯಶಸ್ಸು ದೊರೆಯಬೇಕಾಗಿರುತ್ತದೆ. ಯಂತ್ರವನ್ನು ಹಾರಿಸಿ ಅದನ್ನು ಪರೀಕ್ಷಿಸುವುದು, ವಿಮಾನಗಳನ್ನು ಮೇಲಕ್ಕೇರಿಸುವಾಗ ಮತ್ತು ವೇಗ ಪರೀಕ್ಷೆಗಾಗಿ ಅವನ್ನು ಓಡಿಸುವಾಗ ನಾನಾ ದೊಡ್ಡ ಯಂತ್ರ ಸಲಕರಣೆಗಳು ಗುರುತಿಸುವ ದಾಖಲೆಗಳನ್ನು ಓದುವುದು– ಇಷ್ಟು ಮಾತ್ರವಲ್ಲದೆ, ಹೊಸ ಮಾದರಿಯ ಯಂತ್ರಗಳ ಗುಣಾವಗುಣಗಳನ್ನು ಚರ್ಚಿಸುವ ರಚನಾ ಸಂವಿಧಾನ ಸಭೆಗಳಲ್ಲೂ ಅವನು ಹಾಜರಿರಬೇಕು. ಆಕಾಶಯಾನದಲ್ಲಿ ತೀವ್ರಾಸಕ್ತಿ ಉಳ್ಳವರಿಗೆ ಎಲ್ಲ ಬಗೆಯ ಹಾರಿಕೆಗಳಿಗಿಂತ ವಿಮಾನ ಪರೀಕ್ಷೆಯ ಹಾರಿಕೆಯೇ ಬಹುಶಃ ಅತ್ಯಂತ ಸ್ವಾರಸ್ಯವುಳ್ಳದ್ದು. ಆದರೆ, ಅದರ ಸಂಗಡಲೇ ಅದಕ್ಕೆ ವಿಶಿಷ್ಟವಾದ ಅಪಾಯಗಳೂ ಅನುಗೂಡಿ ಬರುತ್ತವೆ. ಆಕಾಶ ಮಧ್ಯದಲ್ಲಿ ಅನಿರೀಕ್ಷಿತವಾಗಿ ಏನೋ ತಪ್ಪುಂಟಾಗಿ, ಸನ್ನಿಹಿತವಾದ ಅಪಾಯದಿಂದ ಬಹು ಪ್ರಯಾಸಪಟ್ಟು ಪಾರಾಗದಿರುವ ಪರೀಕ್ಷಾ ವಿಮಾನಸಾರಥಿಗಳು ಕೇವಲ ವಿರಳ.

ವಯಸ್ಸಿನ ವಿಮಾನಸಾರಥಿಗಳು ಕಿರಿಯರಿಗಿಂತ ಮೇಲಲ್ಲದಿದ್ದರೂ ಅವರಷ್ಟೇ ಸಮರ್ಥರೆಂದು ಹೇಳಲು ಹಲವು ಸೂಚನೆಗಳಿವೆ. ಹೀಗಿರುವುದರಿಂದ, ಸ್ಥಿರವಾದ ಮತ್ತು ಕ್ರಮವಾದ ಸಂಬಳ ದೊರೆಯುವ ಉದ್ಯೋಗ ಬಯಸುವವನಿಗೆ ಅಸೈನಿಕ ವಿಮಾನಹಾರಿಕೆಯ ಕ್ಷೇತ್ರದಲ್ಲೆಲ್ಲ ಇದಕ್ಕಿಂತ ಮೇಲಾದ ಉದ್ಯೋಗ ಬೇರೊಂದಿಲ್ಲ. ವಿಮಾನಸಾಮಿನಲ್ಲಿ ಅತಿಶಯವಾದ ಒಲವುಳ್ಳ, ಚಡಪಡಿಸುವ ಸ್ವಭಾವದವನಿಗೆ ವಾಣಿಜ್ಯ ವಿಮಾನಹಾರಿಕೆ ಅತ್ಯಂತ ಬೇಸರದ ಕೆಲಸವಾಗಿ ತೋರಬಹುದು. ಆಕಾಶಯಾನದಲ್ಲಿ ಒಂದು ಸರಿಯಾದ ನೆಚ್ಚಿಕೆಯ ಸ್ಥಾನದಲ್ಲಿ ನೆಲಸಬೇಕೆಂದು ಇಷ್ಟಪಡುವವನಿಗೆ ಇದಕ್ಕಿಂತ ಮೇಲಾದ ಬೇರೆಯ ಕ್ಷೇತ್ರವಿಲ್ಲ.

ಇಷ್ಟೇ ಅಲ್ಲದೆ, ಅಕಾಶಮಾರ್ಗಗಳ ಸಂಖ್ಯೆ ವರ್ಷವರ್ಷಕ್ಕೆ ಹೆಚ್ಚುತ್ತಿದೆ. ಆದ್ದರಿಂದ, ಸಿಬ್ಬಂದಿ ಕಡಮೆ ಮಾಡುವ ಯೋಜನೆಗೆ ಸಿಕ್ಕಿ ಕೆಲಸ ಕಳೆದುಕೊಳ್ಳುವ ಹೆದರಿಕೆಯಿಲ್ಲ. ಒಂದು ಸಂಘದಲ್ಲಿ ಸಿಬ್ಬಂದಿ ಕಡಮೆ ಮಾಡುತ್ತಿದ್ದರೆ ಸಿಬ್ಬಂದಿ ಹೆಚ್ಚು ಮಾಡುತ್ತಿರುವ ಬೇರೊಂದು ಸಂಘ ಖಂಡಿತ ಇರುತ್ತದೆ. ಗೊತ್ತಾದ ವಯಸ್ಸಾದ ಮೇಲೆ ವಿಮಾನ ಹಾರಿಸುವ ಕೆಲಸ ನಿಲ್ಲಿಸಬೇಕೆಂದು ಇಷ್ಟಪಡುವ ವಿಮಾನಸಾರಥಿಗಳು ಕ್ರಮವಾದ ಆಕಾಶಮಾರ್ಗಗಳಲ್ಲಿ ಉದ್ಯೋಗದಲ್ಲಿದ್ದ ಪಕ್ಷದಲ್ಲಿ, ಆಡಳಿತ ವಿಭಾಗದಲ್ಲಿ ವಿಮಾನಾಂಗಣ ನಿಯಂತ್ರಣಾಧಿಕಾರಿಗಳಂಥ (Aerodrome Control officers) ಉದ್ಯೋಗಗಳನ್ನು ತಪ್ಪದೆ ಪಡೆಯಬಹುದು.

### ವಿಮಾನ ಪರೀಕ್ಷೆಯ ಹಾರಿಕೆ (Test Flying)

ಪರೀಕ್ಷಾ ಹಾರಿಕೆಯ ಉದ್ಯೋಗದೊಡನೆಯೇ ಸಲಹೆಗಾರ ವಿಮಾನ ಸಾರಥಿಯ (Pilot consultant) ಉದ್ಯೋಗವೂ ಸೇರಿಕೊಂಡಿದೆ; ಏಕೆಂದರೆ, ಇವೆರಡರಲ್ಲೂ ಕೆಲಸ ಒಂದೇ ತೆರ. ಅಸೈನಿಕ ಹಾರಿಕೆಗಳಲ್ಲೆಲ್ಲ ಪರೀಕ್ಷಾ ಹಾರಿಕೆ ಅತ್ಯಂತ ಪಕ್ವವಾದದ್ದು ಹಾಗೂ ಅತ್ಯಂತ ಹೆಚ್ಚಿನ ಸಂಬಳವುಳ್ಳದ್ದು. ವಿಮಾನ ಸಾರಥಿಗೆ ಬೇರೆ ಬೇರೆ ಮಾದರಿಗಳ ವಿಮಾನಗಳನ್ನು ನಡಸುವುದರಲ್ಲಿ ವಿಶಾಲವಾದ ಪರಿಶ್ರಮವಿಲ್ಲದೆಹೋದ ಪಕ್ಷದಲ್ಲಿ ಉದ್ಯೋಗ ಪಡೆಯಲು ಪ್ರಯತ್ನಿಸುವುದು ವ್ಯರ್ಥ. ಬಹುಸಂಖ್ಯೆಯ ವಿಮಾನ ತಯಾರಕರ ಬಳಿ ಕೆಲಸಕ್ಕಿರುವ ಪರೀಕ್ಷಾ ವಿಮಾನ ಸಾರಥಿಗಳು ತಾವು ಆ ಕೆಲಸಕ್ಕೆ ಅರ್ಹರಾಗಲು ಬೇಕಾದ ಅನುಭವವನ್ನು ರಾಜ ವಿಮಾನ ಬಲದ ವಿಮಾನಪರೀಕ್ಷಾ ಕೇಂದ್ರಗಳಲ್ಲಾಗಲಿ (Royal Air Force Aeroplane Test Stations), ಮಾರ್ತ್‌ಷಮ್ ಹೀತ್‌ನಲ್ಲಾಗಲಿ (Marthesham Heath) ಸಂಪಾದಿಸಿರುತ್ತಾರೆ.

## ಖಾಸಗಿ ಉದ್ಯೋಗ

ಖಾಸಗಿ ಉದ್ಯೋಗದ ಹಾರಿಕೆ ಎಂದರೆ, ಸ್ವಂತ ವಿಮಾನ ಇಟ್ಟುಕೊಂಡಿರುವವನ ಖಾಸಾ ವಿಮಾನಸಾರಥಿಯಾಗಿದ್ದುಕೊಂಡು, ಆತನ ಯಂತ್ರ ಅಥವಾ ಯಂತ್ರಗಳನ್ನು ವಶದಲ್ಲಿಟ್ಟುಕೊಂಡು, ಅವುಗಳನ್ನು ನಡಸಲು ಸದಾ ಸಿದ್ಧನಾಗಿರುವುದು. ಸದ್ಯದಲ್ಲಿ ಖಾಸಗಿ ಉದ್ಯೋಗದ ಹಾರಿಕೆಯಲ್ಲಿ ಅವಕಾಶಗಳು ಕಡಮೆ. ಆದರೆ, ವಿಮಾನಗಳನ್ನು ಇಟ್ಟುಕೊಂಡು ತಾವೇ ಅವನ್ನು ನಡಸದಿರುವವರ ಸಂಖ್ಯೆ ಬೆಳೆಯುತ್ತಿದೆ; ಆದ್ದರಿಂದ ಈ ಬಗೆಯ ಉದ್ಯೋಗದಲ್ಲಿ ಇನ್ನು ಮುಂದೆ ಹೆಚ್ಚು ಅವಕಾಶಗಳು ದೊರೆಯಬಹುದು. ಹಿಂದೆ ಅತ್ಯಂತ ಪ್ರಸಿದ್ಧರಾದ ಅಸೈನಿಕ ವಿಮಾನಸಾರಥಿಗಳು ಈ ರೀತಿಯಲ್ಲಿ ತಮ್ಮ ಜೀವನ ಮಾರ್ಗವನ್ನು ಪ್ರಾರಂಭಿಸಿದರು.

ಇಂಡಿಯಾದಲ್ಲಿ ವಿಮಾನ ತಯಾರಿಕೆಯ ಸಂಸ್ಥೆಗಳು ಇಲ್ಲದಿರುವುದರಿಂದ ಇಲ್ಲಿ ಅಸೈನಿಕ ವಿಮಾನ ಸಾರಥಿಗಿರುವ ಅವಕಾಶಗಳು ಬೇರೆ ಯಾವ ಪರದೇಶದಲ್ಲಿರುವುದಕ್ಕಿಂತ ತುಂಬ ಕಡಮೆಯೆ. ಇಂಡಿಯಾದಲ್ಲಿರುವ ಸನ್ನದುಳ್ಳ ಅಸೈನಿಕ ವಿಮಾನಸಾರಥಿ ಯಾವುದಾದರೂ ಆಕಾಶಮಾರ್ಗಕ್ಕೇ ಸೇರಿಕೊಳ್ಳಬೇಕು: ಅದೊಂದೇ ಅವನಿಗೆ ತೆರೆದಿರುವ ದಾರಿ.

## ವಾಯುಯಾನ ಶಿಲ್ಪ

ವಾಯುಯಾನ ಶಿಲ್ಪಕ್ಕೆ ಹೆಚ್ಚಾದ ಯಂತ್ರವಿದ್ಯೆಯ ಯೋಗ್ಯತೆ ಬೇಕು. ವಾಣಿಜ್ಯ ಹಾಗೂ ಸೈನಿಕ ಆಕಾಶಯಾನದಲ್ಲಿ ಇದರ ಪ್ರಯೋಜನ ಬಹಳ. ವಾಸ್ತವವಾಗಿ, ಪೂರ್ಣ ಯೋಗ್ಯತೆಯುಳ್ಳ ವಾಯುಯಾನ ಶಿಲ್ಪಿ ಉಳಿದ ಎಲ್ಲ ಶಿಲ್ಪಿಗಳಿಗಿಂತ ಉಚ್ಚ ಶಿಕ್ಷಣ ಪಡೆದವನೆಂದು ಹೇಳಬಹುದು. ವಾಯುಯಾನ ಶಿಲ್ಪಿಯ ಆಧಾರಭೂತಶಿಕ್ಷಣವು ಪ್ರಾರಂಭ ದೆಸೆಯಲ್ಲಿ ಕೈಗಾರಿಕಾ ಕ್ಷೇತ್ರದ ಬೇರೆ ಯಾವುದಾದರೂ ಶಾಖೆಯ ಶಿಲ್ಪಶಿಕ್ಷಣದಿಂದಲೇ ಪ್ರಾರಂಭವಾಗಬೇಕು. ತೀರ ಮುಂಚೆ ಪ್ರವೀಣತೆ ಪಡೆಯಲು ಪ್ರಯತ್ನಿಸುವುದು ಒಳ್ಳೆಯದಲ್ಲ; ಏಕೆಂದರೆ, ಪರಿಹರಿಸಬೇಕಾದ ಸಮಸ್ಯೆಗಳನ್ನು ಎದುರಿಸಲು ಸಮಗ್ರವೂ ಸಂಪೂರ್ಣವೂ ಆದ ಶಿಕ್ಷಣ ಬೇಕು. ಒಳಉರಿತದ ಎಂಜಿನ್ನುಗಳು ಮತ್ತು ಆಕಾಶಗಮನದ ಚಾಲಕ ಶಕ್ತಿಗಳ ಇತರ ರೂಪಗಳು, ಉಪಯೋಗಿಸುವ ಪದಾರ್ಥಗಳ ರಚನೆ ಮತ್ತು ಸಾಮರ್ಥ್ಯದ ತತ್ತ್ವ, ಲೋಹ ಶಾಸ್ತ್ರ, ರಾಸಾಯನಿಕ ವಿಜ್ಞಾನ, ಭೌತವಿಜ್ಞಾನ, ಆಕಾಶಯಾನದ ಇತರ ಶಾಖೆಗಳಾದ ಪವನಶಾಸ್ತ್ರ, ನಿಸ್ತಂತು ಮತ್ತು ಇತರ ವಿಷಯಗಳು– ಇವುಗಳ ಸಂಬಂಧವಾದ ಪೂರ್ಣಜ್ಞಾನ ಆವಶ್ಯಕ. ಆದರೆ,

## ಪ್ರದರ್ಶನ ಹಾರಿಕೆ ಮತ್ತು ವ್ಯಾಪಾರ ಪ್ರಕಟನೆ ಹಾರಿಕೆ

ಪ್ರದರ್ಶನ ಹಾರಿಕೆ ಹಾರುವುದು ಮುಖ್ಯವಾಗಿ ನಾಡಿನಲ್ಲಿ ಸಂಚಾರಮಾಡುವ ಸರ್ಕಸ್ಸುಗಳಲ್ಲಿ ಮಾತ್ರ. ಅವು ಅನೇಕ ವೇಳೆ ಸಂತೋಷ ಸವಾರಿ ಸಂಸ್ಥೆಗಳ (Joy Fiding Firms) ಜೊತೆಗೂಡಿ ಕೆಲಸ ಮಾಡುತ್ತವೆ, ಇಲ್ಲವೆ ಸ್ವತಃ ಅಂಥ ಸಂಸ್ಥೆಗಳಾಗಿರುತ್ತವೆ. ಅವುಗಳಲ್ಲಿ ಪ್ರದರ್ಶಿಸುವ ವಿಮಾನ ಸಾಮುಹಾರಿಕೆಯಲ್ಲಿ ಬಹು ಮೇಲ್ಮಟ್ಟದ ಹಾರಿಕೆಯ ಕಲೆಯನ್ನು ಉಪಯೋಗಿಸಲಾಗುತ್ತದೆ; ರಾಜ ವಿಮಾನ ಬಲದವರು ತೋರಿಸುವ ಪ್ರದರ್ಶನಗಳಲ್ಲಿ ಕಾಣಬರುವ ಯಾವುದೇ ಸಾಹಸಕಾರ್ಯವನ್ನು ಮೀರಿಸುವಂಥ ವಿಮಾನ ಸಾಮಿನ ಪ್ರದರ್ಶನಗಳನ್ನು ಪ್ರದರ್ಶನ ವಿಮಾನಸಾರಥಿ ತೋರಿಸಲು ತಯಾರಾಗಿರಬೇಕು. ಈ ಬಗೆಯ ಕಸಬು ಕೆಲವರಿಗೆ ಮಾತ್ರ ರುಚಿಸುತ್ತದೆ. ಉದಾಹರಣೆಗೆ, ಹಿಂದೆ ಸ್ಥಾಪಿತವಾದ ಪರಮಾವಧಿ ಹಾರಿಕೆಗಳನ್ನು ಮೀರಿಸಲಾಶಿಸುವವರೂ ಹಾರಿಕೆಯಲ್ಲಿ ಕೀರ್ತಿಯನ್ನು ಸಂಪಾದಿಸಬೇಕೆಂದಿರುವವರೂ ಪ್ರಾರಂಭದಲ್ಲಿ ಪ್ರದರ್ಶನದ ಹಾರಿಕೆಗೆ ಸೇರುವುದು ಒಳ್ಳೆಯದು.

ವ್ಯಾಪಾರ ಪ್ರಕಟನೆಯ ಹಾರಿಕೆ ಅನೇಕ ಪರಿವರ್ತನೆಗಳನ್ನು ಹೊಂದಿದೆ. ಧೂಮ ಲೇಖನ (ಹೊಗೆ ಬರಹ) ಮೊದಮೊದಲು ಬಹಳ ಗಮನ ಸೆಳೆಯಿತು; ಹಲವು ದೊಡ್ಡ ವಾಣಿಜ್ಯ ಸಂಸ್ಥೆಗಳು ತಮ್ಮ ಸರಕನ್ನು ಪ್ರಕಟಗೊಳಿಸಲು ಇದನ್ನು ಉಪಯೋಗಿಸಿಕೊಂಡರು. ಆದರೆ ಈಚೀಚೆಗೆ ಇದಕ್ಕೆ ಮೊದಲಿನಷ್ಟು ಪುರಸ್ಕಾರವಿಲ್ಲ. ಆದ್ದರಿಂದ ಕಸಬುದಾರಿ ವಿಮಾನಸಾರಥಿಗೆ ಇದರಲ್ಲಿ ದೊರೆಯ ಬಹುದಾದ ಅವಕಾಶ ಕಡಮೆ. ಸಂಬಳವೇನೋ ಚೆನ್ನಾಗಿಯೇ ದೊರೆಯುತ್ತದೆ; ಆದರೆ ಕೆಲಸ ಕಷ್ಟ. ಆಕಾಶದಲ್ಲಿ ಹೊಗೆಯಿಂದ ಬರೆಯಲು ಕಲಿಯುವುದಕ್ಕೆ ತುಂಬ ಕಾಲವ್ಯವಧಾನವೂ ತಾಳ್ಮೆಯೂ ಬೇಕು. ಇದಕ್ಕೆ ಬೇಕಾದ ಪೂರ್ವಾಭ್ಯಾಸವನ್ನು ಪೆಡಲ್ ಬೈಸಿಕಲ್ಲಿನ ಸಹಾಯದಿಂದ ಮಾಡಲಾಗುತ್ತದೆ; ಈ ಬೈಸಿಕಲ್ಲಿಗೆ, ಅದರ ಹಿಂದಕ್ಕೆ ಮರಳಿನ ಸಾಲನ್ನು ಹೊರಕ್ಕೆ ಬಿಡುವಂತಹ ಸಾಧನವಿರುತ್ತದೆ. ಬರಹವನ್ನು ಕನ್ನಡಿಯಲ್ಲಿ ಕಾಣುವ ಆಕಾರದಲ್ಲಿ ಬರೆಯಲಾಗುತ್ತದೆ. ಬಾವುಟ ಹಾರಿಕೆಗೆ ಹೊಗೆ ಬರಹಕ್ಕಿಂತ ಕಡಮೆಯ ಕೌಶಲ ಸಾಕು; ಆದರೆ, ಇದೂ ಸಹ ಜನಾಭಿಪ್ರಾಯದ ಎರಿಳಿತಗಳಿಗೆ ಒಳಪಟ್ಟಿದೆ. ಕೆಲವು ಸಂದರ್ಭಗಳಲ್ಲಿ, ಜನಸಾಂದ್ರತೆಯುಳ್ಳ ಪ್ರಾಂತಗಳಲ್ಲಿ ಕೆಳಮಟ್ಟದಲ್ಲಿ ಹಾರುವ ಸೂಚನೆ ಕಂಡುಬಂದರೆ ಜನರು ತೀವ್ರವಾಗಿ ಪ್ರತಿಭಟಿಸುತ್ತಾರೆ; ಇದರ ಪರಿಣಾಮವಾಗಿ, ವಾಣಿಜ್ಯ ಸಂಸ್ಥೆಗಳ ಪ್ರಕಟನೆಯ ಉದ್ದೇಶಗಳಿಗಾಗಿ ಬಾವುಟವನ್ನು ಉಪಯೋಗಿಸಲು ಹಿಂಜರಿಯುತ್ತವೆ.

ನಡಸುವವರ ತಂಡಕ್ಕೆ ಸೇರಿದವನು; ವಾಯುಯಾನದ ನಿಸ್ತಂತು ಸನ್ನಾಹವನ್ನು ಸರಿಯಾಗಿ ಇಟ್ಟುಕೊಂಡು ಅದನ್ನು ಸರಿಪಡಿಸುತ್ತಿರಬೇಕಾದ ಜವಾಬ್ದಾರಿಯುಳ್ಳವನೂ ಆದ್ದರಿಂದ ಅವನು ಭೂ ಯಂತ್ರಶಿಲ್ಪಿಯೂ ಆಗಿರುತ್ತಾನೆ. ಹೀಗಿದ್ದರೂ ಕೂಡ, ನಿಸ್ತಂತು ಬರುಬರುತ್ತ ಪ್ರಾಮುಖ್ಯತೆಗೆ ಬರುತ್ತಿರುವುದನ್ನು ನೋಡಿದರೆ, ಮುಂದೆ ವಿಮಾನ ನಿಸ್ತಂತುಶಾಖೆ ತನ್ನದೇ ಆದ ಬಗೆಬಗೆಯ ಉದ್ಯೋಗಗಳನ್ನು ಒದಗಿಸುವ ಒಂದು ಮುಖ್ಯವಾದ ಕಸಬಾಗುವುದೆಂಬ ಸೂಚನೆ ಕಂಡುಬರುತ್ತದೆ.

**ವಿಮಾನ ಕಾರ್ಯಾಡಳಿಲಿತ**

ಆಕಾಶ ಸಾಗಣೆ ಸಂಘದ ಆಡಳಿತ ಬರುಬರುತ್ತ ತೊಡಕಾಗುತ್ತಿರುವುದರಿಂದ ಅದರದ್ದೇ ಒಂದು ಕಸಬಾಗಿದೆ. ಈ ಇಲಾಖೆಗೆ ಬೇಕಾದ ಬಗೆಬಗೆಯ ಕರ್ತವ್ಯಗಳ ಉದಾಹರಣೆಯಾಗಿ, ಇಂಪೀರಿಯಲ್ ಏರ್‌ವೇಸ್ ಸಂಸ್ಥೆಯವರು ತಾವು ಸೇರಿಸಿಕೊಳ್ಳುವ ವಾಣಿಜ್ಯ ಶಾಖೆಯ ಹೊಸಬರಿಗಾಗಿ ಏರ್ಪಡಿಸಿರುವ ಮೂರು ವರ್ಷಗಳ ಕಾಲದ ಶಿಕ್ಷಣ ವ್ಯವಸ್ಥೆಯನ್ನು ಉದಾಹರಿಸಬಹುದಾಗಿದೆ. ವಾಣಿಜ್ಯ ಸಂಬಂಧವಾದ ಕಾರ್ಯದ ಎಲ್ಲ ಇಲಾಖೆಗಳ ಅನುಭವವೂ ಈ ಶಿಕ್ಷಣದಲ್ಲಿ ಸೇರಿರುತ್ತದೆ; ಶಿಕ್ಷಣ ಕಾಲದಲ್ಲಿ ಕೆಲಸಗಾರನು ಕಚೇರಿಯ ನಿತ್ಯಗಟ್ಟಲೆಯ ಕೆಲಸ, ವಿಮಾನ ಸಂಬಂಧದ ಕಾಗದ ಪತ್ರಗಳು, ಒಂದು ಅಥವಾ ಹೆಚ್ಚು ಪರದೇಶ ಭಾಷೆಗಳು, ವಿಮಾನ ನಕಾಸೆಗಳು, ಪ್ರಕಟನೆ ಮತ್ತು ಪ್ರಚಾರ, ಸಂಚಾರದ ಆಡಳಿತ– ಇವೇ ಮುಂತಾದ ಕೆಲಸಗಳ ಪರಿಚಯ ಪಡೆಯಬೇಕು. ಶಿಕ್ಷಣ ಕಾಲದಲ್ಲಿ ಆತನು ತನ್ನ ಕಾರ್ಯಸಮರ್ಥತೆಯನ್ನು ತೋರಿಸಿಕೊಟ್ಟರೆ, ಸಾಧಾರಣವಾಗಿ ಒಡನೆಯೇ ಅವನು ವಿಮಾನಾಂಗಣದ ಮೇಲ್ವಿಚಾರಕನಾಗಿ ನೇಮಕ ಹೊಂದುತ್ತಾನೆ. ಈ ಅಧಿಕಾರದಲ್ಲಿ ಅವನು ವಿಮಾನವು ಇಳಿಯುವ ಭೂಪ್ರದೇಶದ ಮತ್ತು ಆಕಾಶಮಾರ್ಗದ ಒಂದು ವಿಭಾಗದ ಸಂಚಾರದ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾನೆ. ದೊಡ್ಡ ಆಕಾಶಮಾರ್ಗ ಪ್ರಯಾಣದ ವಿಮಾನದ ಪಾರುಪತ್ಯಗಾರನ ಕೆಲಸ ಇಲ್ಲವೆ ಕಚೇರಿಯ ಗುಮಾಸ್ತನ ಕೆಲಸ– ಇವೇ ಮುಂತಾದವು ಆಕಾಶಯಾನದಲ್ಲಿ ದೊರೆಯುವ ಇತರ ಕೆಲವು ಉದ್ಯೋಗಗಳು.

**ಇತರ:** ವಾಸ್ತವವಾಗಿ ಆಕಾಶಸಂಚಾರಕ್ಕೆ ಸಂಬಂಧ ಪಡದ ಇತರ ವಿಮಾನ ಕಾರ್ಯ ಶಾಖೆಗಳಲ್ಲಿ, ವಿಮಾನವನ್ನು ನಡಸುವ ಸಾಮರ್ಥ್ಯವಿಲ್ಲದಿದ್ದರೂ

ವಿದ್ಯಾರ್ಥಿ ಯಾವುವಾದರೂ ಒಂದು ಶಾಖೆಯಲ್ಲಿ ಶಿಕ್ಷಣ ಪಡೆಯುವುದು ಸಾಮಾನ್ಯ ರೂಢಿ.

ವಿಮಾನ ಸಾರಥ್ಯದ ವಿಷಯದಲ್ಲಿ ಹೇಗೊ ಹಾಗೆ ವಾಯುಯಾನ ಶಿಲ್ಪಕ್ಕೂ ಆವಶ್ಯಕವಾದ ಯೋಗ್ಯತಾಪತ್ರಗಳನ್ನು ವಿಮಾನ ಸಚಿವಶಾಖೆಯೇ ಕೊಡುತ್ತದೆ. ಯಂತ್ರ ಶಿಲ್ಪಿಗೆ ಸನ್ನದು ಕೊಡಬೇಕಾದದ್ದು ವಿಮಾನದ ಕಟ್ಟಡಗಳನ್ನು ಪರೀಕ್ಷಿಸುವುದಕ್ಕಾಗಿಯೆ, ಇಲ್ಲವೆ ಹಾರುವುದಕ್ಕೆ ಮುಂಚೆ ಎಂಜಿನ್ನುಗಳನ್ನು ಪರೀಕ್ಷಿಸುವುದಕ್ಕಾಗಿಯೆ, ಇಲ್ಲವೆ ವಿಮಾನ ಕಟ್ಟಡವನ್ನಾಗಲಿ ಎಂಜಿನ್ನನ್ನಾಗಲಿ ಪರೀಕ್ಷೆಗಾಗಿ ಬಿಚ್ಚಿ ಜೋಡಿಸಿದ ಮೇಲೆ ಮಾಡುವ ಇನ್ನೂ ಹೆಚ್ಚಿನ ಜವಾಬ್ದಾರಿಯ ಕೆಲಸವಾದ ಪರೀಕ್ಷೆಗಾಗಿಯೆ– ಎಂಬುದಕ್ಕೆ ಅನುಸಾರವಾಗಿ, ಭೂ ಯಂತ್ರ ಶಿಲ್ಪಿಯ ಸನ್ನದುಗಳಾದ A, B, C, D ಅಥವಾ X ಸನ್ನದುಗಳನ್ನು ಕೊಡಲಾಗುತ್ತದೆ. ಜೊತೆಗೆ, ದಿಕ್ಸೂಚಿ ಅಥವಾ ಇಳಿಕೊಡೆಗಳು– ಇವುಗಳಂಥ ಚಿಲ್ಲರೆ ಸನ್ನಾಹಗಳ ಪರೀಕ್ಷೆಗಾಗಿಯೂ ಯೋಗ್ಯತಾಪತ್ರಗಳನ್ನು ಕೊಡಲಾಗುತ್ತದೆ. ಜವಾಬ್ದಾರಿಯ ಪ್ರಮಾಣಕ್ಕೆ ಅನುಗುಣವಾಗಿ ಸಂಬಳವೂ ಹೆಚ್ಚುಕಡಮೆಯಾಗುತ್ತದೆ. ಉಮೇದುದಾರನಿಗೆ ಹೆಸರಿಗೆ ಕೊಡುವ ಸಂಬಳದ ದರವೇ ಅತ್ಯಂತ ಕಡಮೆಯದು; ಆಮೇಲೆ ಬೇರೆ ಬೇರೆ ಕೌಶಲದ ಉದ್ಯೋಗಗಳಿಗೆ ಉಚಿತವಾದ ಸಂಬಳ ದರಗಳು ಉಂಟು; ದೊಡ್ಡ ಆಕಾಶಮಾರ್ಗ ಸಂಘದ ಎಲ್ಲ ವಿಮಾನ ಸನ್ನಾಹಗಳನ್ನೂ ಸರಿಯಾಗಿ ನೋಡಿಕೊಳ್ಳುವುದಕ್ಕೂ, ಬಿಚ್ಚಿನೋಡಿ ಪರೀಕ್ಷಿಸುವುದಕ್ಕೂ ಪ್ರಧಾನ ಯಂತ್ರಶಿಲ್ಪಿಗೆ ಕೊಡುವ ಸಂಬಳವೇ ಒಬ್ಬನು ನಿರೀಕ್ಷಿಸಬಹುದಾದ ಅತ್ಯಂತ ಹೆಚ್ಚಿನ ಸಂಬಳ. ಈ ಸಂಬಳ ಇಂಡಿಯಾದಲ್ಲಿ ತಿಂಗಳಿಗೆ ೨,೦೦೦ ರೂಪಾಯಿಗಳಾದರೂ ಆಗಿರಬಹುದು.

## ನಿಸ್ತಂತು ಕಾರ್ಯನಿರ್ವಾಹ

ವಿಮಾನಗಳನ್ನು ಪರೀಕ್ಷಿಸುವುದು, ಬಿಚ್ಚಿನೋಡುವುದು, ಮತ್ತು ಸರಿಯಾದ ಸ್ಥಿತಿಯಲ್ಲಿಟ್ಟುಕೊಳ್ಳುವುದು– ಈ ಕೆಲಸಗಳಿಗಾಗಿ ನೇಮಿಸಿಕೊಂಡ ಸಿಬ್ಬಂದಿಯ ಮುಖ್ಯತೆ, ಇತರ ಕಡಮೆ ಮುಖ್ಯತೆಯುಳ್ಳ ಆದರೆ ನಿಜವಾಗಿಯೂ ಪ್ರತ್ಯೇಕವಾದ ಕಸಬುಗಳನ್ನು ದೃಷ್ಟಿಯಿಂದ ಮರೆಮಾಡುತ್ತದೆ. ಉದಾಹರಣೆಗೆ, ನಿಸ್ತಂತು ಕಾರ್ಯಕರ್ತನ ಮತ್ತು ಯಾಂತ್ರಿಕನ (Mechanic) ಕಸಬು ಪ್ರತ್ಯೇಕವಾದದ್ದು; ಆದರೆ ಇದನ್ನು ಸಾಮಾನ್ಯ ಭೂ ಯಂತ್ರಶಿಲ್ಪಿಯ ಕಸಬಿನ ದರ್ಜೆಗೇ ಸೇರಿಸಲಾಗುತ್ತದೆ. ಏಕೆಂದರೆ, ನಿಸ್ತಂತು ಕಾರ್ಯಕರ್ತನು ಒಕ್ಕಡೆ ವಿಮಾನ

ರೇಖನ ಸಿಬ್ಬಂದಿಯನ್ನು ತಯಾರಿಕೆ ಸಿಬ್ಬಂದಿಗೆ ಹೋಲಿಸಿದರೆ, ಇತರ ಯಾವ ಯಂತ್ರ ಶಿಲ್ಪ ಕೈಗಾರಿಕೆಯಲ್ಲೂ ಈ ಪ್ರಮಾಣ ಇಲ್ಲ. ಇದು ವಾಯುಯಾನ ಶಿಲ್ಪದ ಶಾಸ್ತ್ರೀಯ ಹಾಗೂ ಪ್ರಾಯೋಗಿಕ ಸ್ವರೂಪವನ್ನು ತೋರಿಸುತ್ತದೆ. ಇಲ್ಲಿ ಅನೇಕ ಮಂದಿ ನಕ್ಷೆಗಾರರನ್ನು ನೇಮಿಸಿಕೊಂಡಿರುತ್ತದೆ. ವಾಯುಯಾನ ಶಿಲ್ಪದಲ್ಲಿ, ಒತ್ತಡದ ಪರಿಣಾಮದಿಂದುಂಟಾಗುವ ಆಕೃತಿ ವಿಕಾರದ (Strain) ಸೂಕ್ಷ್ಮ ಲೆಕ್ಕಾಚಾರಗಳು ಒಂದು ವಿಶೇಷ ಲಕ್ಷಣ. ಆದ್ದರಿಂದ, ಯಂತ್ರಶಿಲ್ಪದ ಇತರ ಶಾಖೆಗಳಲ್ಲಿರುವಂತೆ, ಇಲ್ಲಿಯೂ ವಿಶ್ವವಿದ್ಯಾನಿಲಯದ ಪದವಿಗಳು ಉಪಯುಕ್ತವಾಗುತ್ತವೆ. ಈಗ ಹಲವು ವಿಶ್ವವಿದ್ಯಾನಿಲಯಗಳಲ್ಲಿ ವಾಯುಚಲನ ವಿಜ್ಞಾನದ (Dynamics) ವಿಷಯದಲ್ಲೂ ಪರೀಕ್ಷೆ ಇಟ್ಟಿದ್ದಾರೆ.

**ವಿಮಾನ ಮಾರಾಟ**

ವಿಮಾನ ಕೈಗಾರಿಕೆ ಹೆಚ್ಚು ವಾಣಿಜ್ಯ ಸಂಬಂದವುಳ್ಳದ್ದಾಗುತ್ತಿರುವುದರಿಂದ, ವಿಮಾನ ಮಾರಾಟದ ಇಲಾಖೆಯಲ್ಲಿನ ಅವಕಾಶಗಳು ಹೆಚ್ಚುತ್ತಿವೆ; ಹೀಗೆ, ಈ ಇಲಾಖೆ ಯಂತ್ರಶಿಲ್ಪ ಶಾಖೆಯಷ್ಟೆ ಪ್ರಮುಖವಾಗುತ್ತಿದೆ. ಹಿಂದೆ ಬಹುಮಟ್ಟಿಗೆ ಎಲ್ಲ ಸಂಘಗಳೂ ಹೊಸ ಮಾರಾಟಗಳನ್ನು ಮಾರಾಟದ ವ್ಯವಸ್ಥಾಪಕನ ಮತ್ತು ಮಾರಾಟದ ನಿರ್ದೇಶಕನ ವಶಕ್ಕೆ ಒಪ್ಪಿಸುತ್ತಿದ್ದುವು; ಇವರುಗಳ ಇಲಾಖೆ ನೇರವಾಗಿ ಆಕಾಶಮಾರ್ಗ ಸಂಸ್ಥೆಯ ಕಾರ್ಯಕರ್ತನಿಗಾಗಲಿ ಖಾಸಗಿ ವಿಮಾನ ಸಂಚಾರಿಗಾಗಲಿ ಮಾರಾಟ ಮಾಡುತ್ತಿತ್ತು. ಈಚೀಚೆಗೆ ವಿಮಾನ ಉಪಯೋಗಿಸುವವನೊಡನೆಯೆ ನೇರವಾಗಿ ವ್ಯವಹಾರ ನಡಸುವ ಹೊಣೆ ವಹಿಸಿಕೊಳ್ಳುವ ಕಡೆಗೆ ಪ್ರವೃತ್ತಿಯುಂಟಾಗುತ್ತಿರುವಂತೆ ತೋರಿಬರುತ್ತಿದೆ. ಕಾಲಾನುಕಾಲದಲ್ಲಿ ವಿಮಾನಗಳನ್ನು ಮಾರುವ ಕೆಲಸವೆಲ್ಲ ಸ್ಥಳೀಯ ಪ್ರತಿನಿಧಿಗಳ ವಶಕ್ಕೆ ಬರುವುದೆಂದು ನಿರೀಕ್ಷಿಸಬಹುದಾಗಿದೆ. ಆದ್ದರಿಂದ, ವಿಮಾನ ಮಾರಾಟದಲ್ಲಿ ಮುಂದೆ ದೊರೆಯಬಹುದಾದ ಜೀವನಮಾರ್ಗಗಳೆಲ್ಲ ಸ್ಥಳೀಯ ಪ್ರತಿನಿಧಿಗಳ ಉದ್ಯೋಗಗಳಾಗಿರುವುವು.

* * * *

ಆಕಾಶಯಾನ ಸಂಬಂಧವಾದ ತಿಳಿವಳಿಕೆಯುಳ್ಳವರಿಗೆ ಉದ್ಯೋಗಗಳು ದೊರೆಯುತ್ತವೆ. ವಿಮಾನ ಹಾರಿಕೆ ಸಂಘದ ಅಥವಾ ಶಾಲೆಯ ಕಾರ್ಯದರ್ಶಿಯಾಗಲಿ ವ್ಯವಸ್ಥಾಪಕನಿಗಾಗಲಿ, ಅದೇ ಪ್ರಮಾಣದ ಸಾಮಾಜಿಕ ಸಂಘದ ಕಾರ್ಯದರ್ಶಿಗೆ ಅಥವಾ ವ್ಯವಸ್ಥಾಪಕನಿಗೆ ದೊರೆಯುವಷ್ಟೇ ಸಂಬಳ ದೊರೆಯುತ್ತದೆ. ಕೆಲಸ ಶ್ರಮಸಾಧ್ಯವಾದರೂ ವೈವಿಧ್ಯಯವುಳ್ಳದ್ದು; ಬುದ್ಧಿವಂತರೂ ವ್ಯವಹಾರ ಸಮರ್ಥರೂ ಆದ ಪುರುಷರಾಗಲಿ ಸ್ತ್ರೀಯರಾಗಲಿ, ಈ ಉದ್ಯೋಗ ಮುಂದೆ ಹೆಚ್ಚು ಪ್ರತಿಫಲ ಕೊಡುವ ಮತ್ತು ಸ್ವಾರಸ್ಯವುಳ್ಳ ಉದ್ಯೋಗವೆಂಬುದನ್ನು ಅವರು ತಾವಾಗಿ ಅರಿತುಕೊಳ್ಳುತ್ತಾರೆ.

**ವಿಮಾನ ರಚನೆ**

ವಿಮಾನರಚನೆಯ ಕೆಲಸ ವಿದ್ಯುತ್‌ಶಿಲ್ಪ, ವಾಸ್ತು ಶಿಲ್ಪ ಮತ್ತು ಸ್ವಯಂ ಯಾನ ಶಿಲ್ಪ (Electrical, Civil and Automobile Engineering)– ಇವುಗಳಷ್ಟೆ ವಿಶಿಷ್ಟ ಯಂತ್ರವಿದ್ಯೆಯನ್ನೂ ವಿಸ್ತಾರವಾದ ಅಸ್ತಿಭಾರಗಳನ್ನೂ ಉಳ್ಳದ್ದು. ಯಂತ್ರಶಿಲ್ಪದ ಇತರ ಶಾಖೆಗಳಲ್ಲಿರುವಂತೆ ಇದರ ಕಾರ್ಯಕ್ಷೇತ್ರವನ್ನೂ ಒಟ್ಟಿನ ಮೇಲೆ ಕಾರ್ಖಾನೆಗಳು ಮತ್ತು ರೇಖನ ಕಚೇರಿ (ಅಥವಾ ತಯಾರಿಕೆಯ ಸ್ಥಳ ಮತ್ತು ನಕಾಸೆಯ ಸ್ಥಳ) ಎಂಬುದಾಗಿ ವಿಂಗಡಿಸಬಹುದು. ಕಾರ್ಖಾನೆಗಳಲ್ಲಿ ಕೈಯಿಂದ ಮಾಡುವ ಕೆಲಸಕ್ಕೆ ಅತ್ಯಂತ ಹೆಚ್ಚಿನ ನಿಷ್ಕೃಷ್ಟತೆ ಬೇಕು; ಮತ್ತು ವಿಮಾನ ತಯಾರಿಕೆಯ ಎಲ್ಲ ಮಟ್ಟಗಳಲ್ಲೂ, ಪ್ರತಿಯೊಂದು ಕಾರ್ಯ ವಿಧಾನವನ್ನೂ ವಿವರವಾಗಿ ಪರೀಕ್ಷಿಸಿ ಹತೋಟಿಯಲ್ಲಿಟ್ಟುಕೊಳ್ಳುವುದರಲ್ಲೂ ಕೈಯಿಂದ ಜೋಡಣೆಗಳನ್ನು ಮಾಡಬೇಕಾದ ಕಾರ್ಯವೇ ಹೆಚ್ಚಾಗಿರುತ್ತದೆ: ಇವೇ ಕಾರ್ಖಾನೆಯ ಕೆಲಸದ ಮುಖ್ಯ ಲಕ್ಷಣಗಳು. ಯಂತ್ರ ಸಲಕರಣೆಗಳನ್ನು ಜೋಡಿಸುವವರು ಮತ್ತು ಅವುಗಳ ಕಾರ್ಯಕರ್ತರು, ಬಡಗಿಗಳು, ಲೋಹ ಕೆಲಸದವರು, ಜೋಡಣೆದಾರರು, ವಸ್ತ್ರ ಮತ್ತು ಮೆರುಗೆಣ್ಣೆ ಕೆಲಸಗಾರರು– ಇವರುಗಳವೇ ವಿಮಾನ ರಚನೆಯಲ್ಲಿರುವ ಮುಖ್ಯ ಕಸಬುಗಳು. ಈ ಶಾಖೆಯಲ್ಲಿ ಮುಖ್ಯ ಕಾರೇಗಾರರಿಂದ ಹಿಡಿದು ಕಾರ್ಯಗಳ ವ್ಯವಸ್ಥಾಪಕರವರೆಗೆ ಎಲ್ಲ ಕುಶಲ ಕೆಲಸಗಾರರೂ ವಿಶೇಷ ಜಾಗರೂಕತೆಯಿಂದಲೂ, ನಿಷ್ಕೃಷ್ಟತೆಯಿಂದಲೂ ಕೆಲಸ ಮಾಡಬೇಕಾಗಿರುವುದರಿಂದ ಕೊಡುವ ಸಂಬಳ ತಕ್ಕಮಟ್ಟಿಗೆ ಹೆಚ್ಚಾಗಿಯೇ ಇರುತ್ತದೆ.

ಎಲ್ಲ ನಕಾಸೆಯ ಮತ್ತು ಪ್ರಯೋಗಪರೀಕ್ಷೆಯ ಸಿಬ್ಬಂದಿಯನ್ನೂ ಒಳಕೊಂಡ ರೇಖನ ಕಚೇರಿಯ ಸಿಬ್ಬಂದಿ ತಯಾರಿಕೆ ಇಲಾಖೆಯ ಸಿಬ್ಬಂದಿಗಿಂತ ದೊಡ್ಡದು.

### ಶ್ರೀ ಶಂಕರಾಚಾರ್ಯ ವಿರಚಿತ

## ಸೌಂದರ್ಯಲಹರೀ

೧

ಹೇ ದೇವಿ! ದೇವಾಧಿದೇವನೆನಿಸಿದ ಶಿವನು
ಶಕ್ತಿಯುಕ್ತನುಯೆನಿಸಿದಂದು ಶಕ್ತನು ತಾನು
ಸೃಷ್ಟಿಕಾರ್ಯವನೆಸಗಲಂತಲ್ಲದಿರಲವನು ಕದಲಲೂ ಆರನಲ್ತೆ;
ಇಂತಿರಲು ಹರಿಹರ ವಿರಿಂಚಾದ್ಯರಿಂದ ಸಂ–
ಪೂಜ್ಯೆಯಾಗಿರುವ ನಿನಗೆಂತು ಪ್ರಣಾಮವನು
ಸಂಸ್ತೋತ್ರಗಳನರ್ಪಿಸಲ್ಕಾರ್ಪನೆನಿಸುವನು ಕೃತಪುಣ್ಯನಲ್ಲದವನು

೨

ಹೇ ದೇವಿ! ಅಡಿದಾವರೆಯ ಸೂಕ್ಷ್ಮಾತಿ
ಸೂಕ್ಷ್ಮಧೂಳಿಯ ಕಣವ ಪಡೆದೊಟ್ಟುಗೂಡಿಸುತ
ಈರೇಳು ಲೋಕಗಳನಾ ವಿರಿಂಚಿಯು ವಿರಚಿಸುವನಲ್ತೆ ಸೊಗಸುವಂತೆ;
ಈ ಲೋಕಗಳನೆಲ್ಲ ಬಹಳ ಪ್ರಯಾಸದಿಂ–
ದಾ ವಿಷ್ಣು ಧರಿಸಿಹನು ಶಿರಸಹಸ್ರಗಳಿಂದ
ಲೋಕಗಳ ಪುಡಿಗುಟ್ಟಿ ಪುಡಿಯ ಹರ ಬಳಿದುಕೊಳುವನು ಭಸ್ಮಲೇಪನದೊಲು

೩

ಅಜ್ಞಾನವಂತರಂತಃಕರಣತಿಮಿರಕ್ಕೆ
ಭಾಸ್ಕರದ್ವೀಪನಗರವಿದು, ಜಡತೆಯ ಜನಕೆ
ಚೈತನ್ಯವೆಂಬ ಹೂಗೊಂಚಲಿಂದೊಸ*ರ್ವ ಮಕರಂದ ಝರಿಯಾಗಿರುವುದು;
ಬಡವರಿಗೆ ಚಿಂತಾಮಣಿಯ ಮಾಲೆಯಾಗಿಹುದು
ಜನ್ಮಜಲಧಿಯೊಳು ಮುಳುಗಿರುವರನ್ನುದ್ಧರಿಸಿ
ಪೊರೆವ ಮುರರಿಪುವರಾಹನ ದಾಡೆಯಾಗಿಹುದು ತವಪಾದಪದ್ಮಧೂಳಿ

ಬಿಲುಬಾಣಗಳನು ಪಾಶಾಂಕುಶಗಳನು ನಾಲ್ಕು
ಕೈಗಳಲಿ ಪಿಡಿದವಳು– ತ್ರಿಪುರಾಂತಕನ ಮಡದಿ
ಅವನಹಂಕಾರರೂಪಿಣಿ ನಮ್ಮ ಹೃತ್ಕಮಲಕೈತಂದು ನೆಲಸಲಲ್ಲಿ

೮

ಅಮೃತೋದಧಿಯ ನಡುವೆ ಕಲ್ಪವೃಕ್ಷೋಪವನ–
ದಿಂದ ಪರಿವೃತವಾದ ರತ್ನಮಯ ದೀವಿಯೊಳು
ನಿಪೋಪವನದಿಂದ ಶೋಭಿಸುವ ಚಿಂತಾಮಣಿವಿನಿರ್ಮಿತಾಲಯದಲಿ
ಶಿವನಾಕೃತಿಯ ಮಂಚದಲಿ ಪರಮಶಿವ ತಾನು
ಪರ್ಯಂಕವೆನಿಸಲದರಲ್ಲಿ ಪವಡಿಪ ಮಹಿಮೆ–
ಯುಳ್ಳ ನಿನ್ನನು ಚಿದಾನಂದಲಹರಿಯನು ಕೆಲಬರೆ ಧನ್ಯರಾದವರು ಭಜಿಸುತಿಹರು

೯

ಭೂಮಿ ಮೂಲಾಧಾರ ಚಕ್ರದಲಿ, ಮಣಿಪೂರ
ಚಕ್ರದಲಿ ಜಲವಗ್ನಿಯರಿಯೆ *ಸ್ವಾಧಿಷ್ಠಾನ
ಚಕ್ರದಲಿ, ಹೃದಯದಲಿ ಮಾರುತನು, ಮೇಲಿಹ ವಿಶುದ್ಧದಲ್ಲಾಕಾಶವು;
ಹುಬ್ಬುಗಳ ನಡುವೆಯಾಜ್ಞಾಚಕ್ರದಲಿ ಮನಸು–
ಇಂತಿವೆಲ್ಲದರ ಕುಲಪಥವ ನೆರೆ ಭೇದಿಸುತ
ನೀ ಸಹಸ್ರಾರ ಕಮಲದಲಿ ಪತಿಯೊಡನೆಯೇಕಾಂತದಲಿ ನಲಿಯುತಿರುವೆ

೧೦

ಅಡಿದಾವರೆಗಳಿಂದ ಸುರಿಮಳೆಯ ತೆರದಲ್ಲಿ
ಸುರಿವಮೃತವರ್ಷದಿಂ ನಾಡೀಪ್ರಪಂಚವನು
ತೋಯಿಪಳು ಸಾಹಸ್ರಕಮಲಸ್ಥ ಚಂದ್ರಮಂಡಲ ಸಮಾಯುಕ್ತಳೆನಿಸಿ;
ಮತ್ತೆಯ್ದಿ ತನ್ನ ಮೂಲಾಧಾರ ಭೂಮಿಯನು
ಪುಚ್ಛ ಕಚ್ಚಿದ ಸರ್ಪವನು ಪೋಲ್ವ ಕುಂಡಲಿನಿ–
ಶಕ್ತಿಯನು ತನ್ನ ತೆರನಾಗಿಸುತ ಕುಲಕುಂಡಕುಹರದಲಿ ನಿದ್ರಿಸುವಳು

೪

ಸರ್ವಲೋಕಶರಣ್ಯೆ! ನಿನ್ನಿಂದಿತರ ದೇವ
ಗಣಗಳೆರಡೂ ಕೈಗಳಿಂದ ಕೊಡುವರು ವರವ–
ನಭಯವನು; ನೀನೊಬ್ಬಳೇ, ತಾಯೆ, ವರದಾಭಯಾಭಿನಯವಿಲ್ಲದವಳು;
ಭಯಭೀತರಾಗಿ ತಲ್ಲಣಗೊಳದ ತೆರದಲ್ಲಿ
ಪೊರೆಯಲೂ ವಾಂಛಿತಕ್ಕಧಿಕವಹ ಫಲಗಳನು
ನೀಡಲೂ ನಿನ್ನೆರಡು ದಿವ್ಯ ಚರಣಗಳೆ ಸಾಲವೆ ಪೇಳು ಕೈಗಳೇಕೆ?

೫

ನತಜನಕೆ ಸೌಭಾಗ್ಯವನು ಸಂಜನಿಪ ನಿನ್ನ–
ನಾರಾಧಿಸುವ ವಿಷ್ಣು ಮುನ್ನ ಪಡೆಯುತ ಹೆಣ್ಣ
ರೂಪವನು ಪುರರಿಪುಮಹೇಶ್ವರನನೂ ಸಹ ಕ್ಷೋಭೆಗೊಳಗಾಗಿಸಿದನು;
ಮನ್ಮಥನು ಕೂಡ ನಮಿಸುತ ನಿನಗೆ, ರತಿಗೆ ಕಣ್
ಸವಿಯಾದ ಮೈಸೊಬಗೆವಡೆದು ಮುನಿಪುಂಗವರ
ಅಂತರಂಗದಲಿ ಸಹ ಮೋಹವನು ಮೂಡಿಸಲು ತಾನ್‌ಶಕ್ತನಾದನಲ್ತೆ

೬

ಹಿಮಗಿರಿಸುತೇ! ಬಿಲ್ಲು ಹೂವಿನದು, ಆ ಹೆದೆಯೊ
ತುಂಬಿಯಿಂದಾಗಿಹುದು, ಬಾಣವೈದೇ ಐದು,
ಸಾಮಂತನು ವಸಂತ, ಮಲಯಮಾರುತರಥ, ಯುದ್ಧ ಮಾಡುವನನಂಗ;
ಅಲ್ಲದೆಯುಮೇಕಾಕಿ; ಇಂತಿರಲ್ಕವನಿರವು,
ನಿನ್ನಯ ಕೃಪಾಮಯ ಕಟಾಕ್ಷವೀಕ್ಷಣಮಹಿಮೆ–
ಯಿಂದವನು ಬಲವಡೆದು ಯೀಜಗವನೆಲ್ಲವನು ಗೆಲ್ಲುತಿಹನಲ್ತೆ ತಾಯೇ

೭

ದನಿಗೈವ ಕಾಂಚಿಯನು ತಳೆದವಳು, ಕರಿಕಲಭ–
ಕುಂಭವನು ಪೋಲ್ವ ಕುಚಗಳ ಭಾರದಿಂದ ನಸು–
ಬಾಗಿಹಳು, ಬಡನಡುವಿನವಳು, ಶಾರದಸಮಯಪೂರ್ಣೇಂದುಸದೃಶವದನೆ,

ಆಕಾಶ ಚಕ್ರದಲ್ಲೆಪ್ಪತ್ತು ಮೇಲೆರಡು
ಮಾನಸದ ಚಕ್ರದಲ್ಲರುವತ್ತು ನಾಲ್ಕಂತು
ಮುನ್ನೂರರರುವತ್ತು ಕಿರಣಗಳ ಮೇಲ್ನಿನ್ನಡಿದಾವರೆಗಳ ಜೋಡಿ

೧೫

ಶಾರದದ ಬೆಳ್ದಿಂಗಳಂತೆ ಶುಭ್ರಳು, ಚಂದ್ರ-
ನನು ಮುಡಿದ ಜಡೆಮುಡಿಯ ಮುಡಿಯವಳು, ವರವೀವ
ಅಭಯದೋರುವ ಪಳಿಕುಗಳಸ ಹೊತ್ತಗೆಗಳನು ಪಿಡಿದ ನಾಲ್ಕೈಗಳವಳು;
ಇಂಥಳಹ ನಿನಗೊಮ್ಮೆಯಾದರೂ ನಮಿಸದಿರೆ
ಎಂತೊದಗುವುದು ತಾಯೆ, ಹಾಲುಜೇನುದ್ರಾಕ್ಷೆ-
ಗಳ ಮಧುರಗುಣವುಳ್ಳ ಕವಿತೆಯದು ಕಾವ್ಯ ಕರ್ಮಾಸಕ್ತಸಜ್ಜನರಿಗೆ

೧೬

ಕವಿವರರ ಮನವೆಂಬ ತಾವರೆಯ ತಂಡವ-
ನ್ನರಳಿಸುವ ಬಾಲಸೂರ್ಯನ ಕೆಂಪು ಕಿರಣಗಳ
ಅರುಣವರ್ಣದ ನಿನ್ನನಾರಾಧಿಸುವರು ಕೆಲಬರು ಸಾಧುಸತ್ಪುರುಷರು;
ಅಂಥ ಸಂತರು ವಿರಿಂಚಿಯ ಮಡದಿ ಶಾರದೆಯ
ಶೃಂಗಾರ ರಸಪೂರ್ಣ ಗಂಭೀರ ವಾಕ್ಪ್ರವಾ-
ಹದೊಳು ಮುಳುಗಿಸಿ ತೇಲಿಸುವರು ರಂಜಿಸಿ ರಸಿಕ ಸಜ್ಜನರನು

೧೭

ಎಲೆ ತಾಯೆ, ಮಾತುಗಳ ಮಾತೆಯಾಗಿಹ, ಚಂದ್ರ-
ಕಾಂತಶಿಲೆಯೊಡೆಯಲೊಗೆತರ್ಪ ಕಿರಣಗಳಂತೆ
ಶೋಭಿಪ ವಶಿನ್ಯಾದಿ ಶಕ್ತಿಗಳ ಕೂಡಿರುವ ನಿನ್ನ ಚಿಂತಿಸುವಾತನು
ವಾಗ್ದೇವಿಯಾ ವದನದಿಂದೊಗೆವ ಸೌಗಂಧ
ಮಾಧುರ್ಯ ಪರಿಪೂರ್ಣ ವಚನರಚನಾಸುಭಗ
ವರ ಮಹಾಕಾವ್ಯ ಕೃತಿಕಾರ ತಾನೆನಿಸುವನು ನಿನ್ನ ವಾಗ್ವರದಾನದೆ

೧೧

ನಾಲ್ಕು* ಶ್ರೀಕಂಠ ಚಕ್ರಗಳಿಂದೆ ಮೇಣ ಶಂಭು
ಚಕ್ರಪ್ರಭಿನ್ನವಹ ಐದು ಶಿವಯುವತಿ ಚ–
ಕ್ರಗಳಿಂದೆಯಿವು ಕೂಡಿದೊಂಬತ್ತು ಮೂಲಪ್ರಕೃತಿಗಳೆನಿಸಿದವುಗಳಿಂದೆ;
ವಸುದಳ ಕಲಾಶ್ರತ್ರಿವಲಯ ತ್ರಿರೇಖೆಗಳು
ಕೂಡಿಕೊಂಡಿರಲಾಗಿ ನಿನ್ನ ನಲನೆಲೆಯಾಗಿ
ಪರಿಣಮಿಸಿ ಶೋಭಿಸಿವೆ ನಾಲ್ವತ್ತು ನಾಲ್ಕು ತ್ರಿಕೋಣಗಳು ಬಿಂದುವೆನಿಸಿ

೧೨

ಹೇ ತುಹಿನಗಿರಿಕನ್ಯೆ! ಎಣೆಯಿಲ್ಲದಿಹ ನಿನ್ನ
ಚೆಲುವನುಪಮಿಸಲರಿವರೇನಾ ವಿರಿಂಚಿ ಮುಂ–
ತಪ್ಪ ಕವಿವರ್ಯರಿನ್ನುಳಿದ ಕವಿಗಳ ಕುಬ್ಜಕಲ್ಪನೆಗೆ ಸಾಧ್ಯವಹುದೇ?
ತಪದಿಂದಲೂ ಕೂಡ ಪಡೆಯಲಾಗದ ಶಿವನ
ಸಾಯುಜ್ಯ ಪದವಿಯನು ಆ ಸೊಬಗಿನಾಲೋಕ–
ದೌತ್ಸುಕ್ಯಮಾತ್ರದಿಂದೈದುವರು ಮನಸಿನಲಿ ದೇವಲಲನಾಮಣಿಗಳು

೧೩

ಅತಿವೃದ್ಧನರತಗಣ್ಣವನು ರತಿಸುಖ ವಿಮುಖ–
ನಿಂತಿಪ್ಪ ನರನಮೇಲೊಡನೆ ಬೀಳಲು ನಿನ್ನ
ಕಡೆಗಣ್ಣ ನೋಟವಾಕ್ಷಣದಲ್ಲಿ, ಓ ದೇವಿ, ನೂರಾರು ಎಳೆವೆಣ್ಗಳು
ಮುಡಿಗಟ್ಟು ಬಿಚ್ಚಿಕೊಳೆ ಎದೆಯ ಮೇಲುದ ಜಾರೆ
ತಟ್ಟನೆ ಮುರಿಯೆ ಕಾಂಚಿ ತೊಟ್ಟನುಟ್ಟುಡೆಕಳಚೆ
ಎಂಥ ಸೋಜಿಗವೆಂದು ಲೋಕನಿಬ್ಬೆರಗಾಗೆ ಅವನ ಹಿಂದೋಡಿಬಹರು

೧೪

ಐವತ್ತು ಮೇಲಾರು ಭೂನಿಷ್ಠ ಚಕ್ರದಲಿ
ಐವತ್ತು ಮೇಲೆರಡು ಜಲಯುಕ್ತ ಚಕ್ರದಲಿ
ಅಗ್ನಿ ಚಕ್ರದಲಾರು ಹತ್ತು ಮೇಲೆರಡನಿಲದಲ್ಲಿ ಐವತ್ತುನಾಲ್ಕು

ತನ್ನೊಳಗಿನ ಜ್ಞಾನ ಕಾಮ ಮದ ಮಾತ್ಸರ್ಯ
ಮೊದಲಪ್ಪ ಕೊಳೆಯೆಲ್ಲವನು ನೀಗಿಕೊಂಡ ಮನ–
ದಿಂದ ಕಾಣುವ ಮಹಾನ್ತನು ಪಡೆವನಲ್ತೆ ಪರಮಾಹ್ಲಾದ ಲಹರಿಯನ್ನು

೨೨

"ಹೇ ಭವಾನೀ ನೀನು ದಾಸನಾದೆನ್ನಲ್ಲಿ
ನಿನ್ನ ಕರುಣಾಪೂರ್ಣ ದೃಷ್ಟಿಯನ್ನಿರಿಸೆ"ಂದು
ಸಂಪ್ರಾರ್ಥಿಸಲ್ಕಿಚ್ಛಿಸುತ 'ಭವಾನೀ ನೀ...' ಎನುತ ನುಡಿಯುವನಿತರಲ್ಲಿ
ಅವನಿಗಾಗಲೆ ನೀನು ಬ್ರಹ್ಮೇಂದ್ರ ವಿಷ್ಣುಗಳ
ತೊಳಗುವ ಕಿರೀಟಗಳು ಬೆಳುವಾರತಿಯಿಂದ
ಹೊಳೆವ ನಿನ್ನಡಿಗಳೆಡೆಯಲ್ಲಿ ಸಾಯುಜ್ಯಪದವಿಯನು ದಯೆಗೈವೆ ಮುದದಿ

೨೩

ಹೇ ದೇವಿ, ಶಂಭುವಿನ ದೇಹದೆಡಭಾಗವನು
ಕಸಿದುಕೊಂಡೂ ನೀನು ತಣಿಯದಿಹ ಮನಸಿಂದ
ಉಳಿದ ದೇಹಾರ್ಧವನು ಕಸಿದುಕೊಂಡಿಹೆಯೆಂದು ಶಂಕೆಯಾಗುತಿದೆ ನನಗೆ;
ಏಕೆನಲು, ನಿನ್ನ ದೇಹವದೆಲ್ಲ ಕೆಂಪಾಗಿ,
ಮೂರು ಕಣ್ಗಳನೊಂದಿ, ಕುಚಭಾರದೊಳು ಬಾಗಿ
ಕೊಂಕುಚಂದಿರನ ಮುಡಿದಿಹ ಜಡೆಮುಡಿಯ ಕಿರೀಟವ ಧರಿಸಿಯೊಪ್ಪುತಿಹುದು

೨೪

ಜಗವಸೃಷ್ಟಿಸುವನು ವಿಧಾತೃ, ಹರಿ ಪೊರೆಯುವನು,
ನಾಶಗೊಳಿಪನು ರುದ್ರ; ಸರ್ಗಪಾಲನ ನಾಶ–
ತತ್ತ್ವಗಳನೀಶ ತನ್ನೊಳೆ ಲಯಿಸಿ ತನ್ನೊಡಲ ಲಯಿಪನು ಸದಾಶಿವನೊಳು;
ಬಳಿಕಾಸದಾಶಿವನು ನಿನ್ನ ಸುಭ್ರೂಲತಿಕೆ
ಚಣಮಾತ್ರ ಚಲನೆಯಿಂದೊರೆವಾಣತಿಯ ಕೊಂಡು
ಸೃಷ್ಟಿಪಾಲನ ನಾಶಗಳಿಗೆ ಕಾರಣವಪ್ಪ ತತ್ತ್ವಗಳ ಸೃಷ್ಟಿಸುವನು

೧೮

ಉದಯರವಿ ರಶ್ಮಿರಾಶಿಯ ತೆರನ ಅರುಣತೆಯ
ನಿನ್ನೊಡಲ ಕಾಂತಿಯೊಳು ಮುಳುಗಿ ಕೆಂಪಾಗಿರುವ
ಭೂವ್ಯೋಮವೆಲ್ಲದರ ಕೆಂಬೆಳಕನೇ ಸ್ಮರಿಸುತಿಹನಾವನಾ ಭಕುತಗೆ
ಕಾಡುಹುಲ್ಲೆಯ ಬೆದರುಕಂಗಳಂತಹ ಕಂಗ–
ಳಿಂದೊಪ್ಪುತಿಹ ಊರ್ವಶೀಸಹಿತ ದೇವಲೋ–
ಕದ ವೇಶ್ಯೆವೆಣ್ಗಳವರಾರಾದರೇನವರು ವಶವಾಗದಿಹರೆ, ತಾಯೆ?

೧೯

ಹೇ ಹರನರಾಣಿ! ಮುಖವನು ಬಿಂದು ಮಾಡುತ್ತ–
ಲದರಡಿಯೊಳ್ಕುಚಯುಗವನದರಡಿಯೊಳ್ಧ್ಯಾನಿಸುತ
ಹರನರ್ಧವನ್ನಲ್ಲಿ ನಿನ್ನ ಮನ್ಮಥಕಲೆಯ ಜಾನಿಸುವನಾವನವನು
ತಾನಾಗಳಿಚ್ಛಿಸಿದ ಹೆಣ್ಣಮನವನು ಕಲಕಿ
ಸೆಳೆವನೆಂಬುದು ದೊಡ್ಡಿತಲ್ಲ, ರವಿಶಶಿಗಳೇ
ಕುಚಯುಗ್ಮವಾದ ತ್ರಿಲೋಕಿಯನ್ನಾಕ್ಷಣದೆ ತಳ್ಳಂಕಗೊಳಿಸುವನು

೨೦

ಹೇ ಜನನಿ, ಅಂಗಾಂಗಜನ್ಯಕಿರಣಾಳಿಯಿಂ
ದುಗುವಮೃತರಸರೂಪಿ ಶಶಿಶಿಲಾಮೂರ್ತಿಯೆನೆ
ನಿನ್ನನಾವನು ತನ್ನ ಹೃತ್ಕಮಲದಲಿ ಧರಿಸಿಕೊಂಡಿಹನೊ ಆ ಭಕ್ತನು
ಕಣ್ನೋಟದಿಂದಲೇ ಸರ್ಪಗಳ ದರ್ಪವನು
ಮುರಿಯಲಾರ್ಪನು ತಾನು ಪಕ್ಷಿರಾಜನವೋಲು,
ಜ್ವರತಪ್ತರಿಗೆ ಸುಖವನೀಯಬಲ್ಲನು ಸುಧೆಗೆ ನೆಲೆಯಾದ ಸೆರೆಗಳಿಂದ

೨೧

ಸೆಳೆಮಿಂಚಿನೊಡಲವಳು, ಸೂರ್ಯ ಚಂದ್ರಾಗ್ನಿಸ್ವ–
ರೂಪತೇಜೋಮಯೀ, ಷಟ್‌ಕಮಲಗಳ ಮೇಲೆ
ಮೆರೆವ ಸಾಹಸ್ರಕಮಲದ ನಡುವೆ ನೆಲಸಿರುವ ತಾಯೆ, ನಿನ್ನಯ ಕಲೆಯನು,–

ಅತಿಘೋರವಾದಚ್ಚನಂಜನೇ ನುಂಗಿದಾ
ಶಂಭುವಿಗೆ ಕಾಲದಾಕಟ್ಟಿಲ್ಲದಿರಲದಕೆ
ಕಾರಣವು ನಿನ್ನ ಕಿವಿದೊಡವುವೋಲೆಯಮಹಿಮೆ, ಅದನೆಂತು ಬಣ್ಣಿಸುವುದೋ!

೨೯

ಹೇ ಒಡತಿ, 'ಮುಂದೆ ಚಾಚಿಹ ವಿರಿಂ–
ಚಿಯ ಕಿರೀಟವನಲ್ಲಿ ಬಿಟ್ಟುಬಿಡು', 'ಕೈಟಾಭಾ–
ರಿಯ ಕಠೋರ ಕಿರೀಟವೆಡಹೀಯೆ, 'ಜಂಭಾರಿಮಕುಟವಿದೊ ಬಿಟ್ಟುಸಾಗು'
ಎಂಬ– ಈ ದೇವರ್ಕಳಿವರು ಮೈಚಾಚಿರುವ
ಸಮಯದಲಿ, ನಿನ್ನ ಭವನಕೆ ಬಂದ ಭವನಬರ–
ಮಾಡಿಕೊಳೆ ಸಡಗರಿಸುತೆದ್ದು ನೀ ತೆರಳುತಿರೆ, ಪರಿಜನಪರಾಕುಗೆಲ್ಗೆ!

೩೦

ಒಂದೊಂದಕೂ ಬೇರೆ ಸಿದ್ಧಿಯನು ಕೊಡುವಂಥ
ಅರುವತ್ತುನಾಲ್ಕು ತಂತ್ರಗಳನ್ನು ಬಳಸುತ್ತ
ಪಶುಪತಿಯು ಸಕಲಭುವನವನು ವಂಚನೆಗೆ ಗುರಿ ಮಾಡಿ ಬಳಿಕ,
ಹೇ ದೇವಿ, ನಿನ್ನ ನಿರ್ಬಂಧಕ್ಕೆ ತಲೆವಾಗಿ
ಅಖಿಲ ಪುರುಷಾರ್ಥಗಳ ತಾನಾಗಿಯೇ ಕೊಡುವ
ನಿನ್ನೀಸ್ವತಂತ್ರತಂತ್ರವನು ಭೂತಲದಿ ಹರಹಿ ನೆಲೆಗೊಳಿಸಿರುವನು

೩೧

ಶಿವಶಕ್ತಿ ಕಾಮ ಧರೆ ಬಳಿಕ ರವಿ ಶೀತಕಿರಣ
ಸ್ಮರಹಂಸ ಶಕ್ರರು ಬಳಿಕ ಪರಾ ಮಾರ ಹರಿಯು
ಈ ಮೂರು ನಾಮಖಂಡಗಳ ವರ್ಣಗಳ ಕಡೆಯೆಡೆ ಕೂಡಲು
ಮೂರು ಹೃಲ್ಲೇಖಗಳು ನಿನ್ನ ನಾಮಾವಯವವಹವು ಜನನಿ

೩೨

ನೀ ನಿತ್ಯೆ, ಪಾರವಿಲ್ಲದ ನಿತ್ಯ ಸುಖವನು–
ಭೋಗಿಸುವ ಮನವುಳ್ಳ ನಿನ್ನ ಭಕ್ತರು ಕೆಲರು

೨೫

ಹೇ ಶಿವೇ! ನಿನ್ನ ಗುಣಮೂರರಿಂ ಹುಟ್ಟುವಡೆ
ದಿರುವ ಅಜ ವಿಷ್ಣುರುದ್ರರುಗಳಿಗದಾವುದದು
ಪೂಜೆಯೆನಲಾವ ಪೂಜೆಯು ನಡೆವುದೋ ನಿನ್ನ ಚರಣಗಳಿಗದೆಯವರಿಗೂ;
ನಿನ್ನಡಿಗಳನ್ನೆತ್ತಿ ಹಿಡಿದಿರುವ ಮಣಿಖಚಿತ
ಪೀಠದ ಸಮೀಪದಲಿ ಮುಗಿದ ಕೈಗಳಿನೆಸೆವ*
ಮಕುಟಗಳ ದೇವರ್ಕಳಿಹರಲ್ತೆ– ಏಕವರ್ಗೆ ಬೇರೆ ಪೂಜೆ?

೨೬

ಪಂಚತ್ವವನು ವಿರಿಂಚಿಯು ಪಡೆವನಾ ಹರಿ ವಿ–
ರಾಮವನ್ನೊಂದುವನು ಕೀನಾಶನಿಗೆ ಕೊನೆಗೆ
ಗತಿ ವಿನಾಶವು ಧನದನವನಾಗುವನು ನಿಧನ ನೋಡು ಇಂತಿವರ ಪಾಡು;
ಮಾಹೇಂದ್ರ ಮೊದಲಪ್ಪ ದೇವರ್ಕಳೆಲ್ಲರುಂ
ದೀರ್ಘನಿದ್ರೆಯ ಕಡೆಗೆ ತೆರಳುವರು ಕೊನೆಗೊಮ್ಮೆ;
ಹೇ ಸತಿಯೆ, ಈ ಮಹಾಪ್ರಲಯದಲಿ ನಿನ್ನ ಪತಿ
ವಿಹರಿಸುತ್ತಿರುವನಲ್ತೆ!

೨೭

ಹೇ ಜನನಿ, ಆತ್ಮಾರ್ಪಣದ ಬುದ್ಧಿಯಿಂದ ನಾ–
ನುಡಿವ ನುಡಿಯೇ ಜಪವು, ಗೈವ ಗೈಮೆಗಳೆಲ್ಲ
ಮುದ್ರಾವಿರಚನೆ, ತಿರುಗಾಟ ಪ್ರದಕ್ಷಿಣವು, ಅಶನವಾಹುತಿಯು ನಿನಗೆ;
ನಾಮಲಗಲದುವೆ ಪ್ರಣಾಮವಾಗಲಿ ನಿನಗೆ,
ನಾನು ಭೋಗಿಪ ವಿಷಯಸುಖವಾವುದಿದೆ
ಅದನೆ ನಾನರ್ಪಿಸುವ ಸರ್ವೋಪಚಾರ ಪೂಜಾವಿಧಿಯುನಿನಗಾಗಲಿ.

೨೮

ಓ ತಾಯೆ, ಬಹು ಭಯಂಕರಗಳಹ ಮುಪುಸಾ–
ವುಗಳ ಕಳೆದಮೃತವನು ಸವಿದಿರ್ದೊಡೇನಂತೆ
ಬ್ರಹ್ಮೇಂದ್ರರಾದಿ ದೇವತೆಗಳೆಲ್ಲರು ತಾವು ಮರಣವನ್ನೈದುವವರೇ;

೩೬

ಹೇ ದೇವಿ! ನಿನ್ನಯ ವಿಶುದ್ಧಿಚಕ್ರದಲಿರುವ
ಶುದ್ಧಸ್ಫಟಿಕ ವಿಶದನಾಕಾಶಜನಕನಹ
ಶಿವನನಂತೆಯೆ ಶಿವಸಮಾನಪ್ರಯತ್ನಳಹ ದೇವಿಯನು ಸೇವಿಸುವೆನು;
ಶಶಿಕಿರಣಕನುರೂಪಕಾಂತಿಯನು ಹೊಂದಿರುವ
ಶಿವಶಕ್ತಿಗಳ ಕಾಂತಿಯಲಿ ಮಿಂದು ಮೂಲೋಕ
ತನ್ನೊಳಗಿನಜ್ಞಾನತಮವ ನೀಗುತ ನಲಿಯುವುದು ಚಕೋರಿಯ ತೆರದಲಿ

೩೭

ಚೆನ್ನರಲ್ದ ಸುಜ್ಞಾನಕಮಲಮಕರಂದವನು
ಸೇವಿಸುತ ಯೋಗೀಶ್ವರರ ಮಾನಸದಲಿ ಸಂ–
ಚರಿಪ ಹಂಸದ್ವಂದ್ವವನು ನಾನು ಭಜಿಸುವೆನು, ಹೇ ದೇವಿ ಭಕ್ತಿಯಿಂದ;
ಯಾವ ಹಂಸದ್ವಯದ ಸಲ್ಲಾಪದಿಂದಹುದೊ
ಹದಿನೆಂಟು ವಿದ್ಯೆಗಳ ಪರಿಣತಿಯು, ನೀರುಳಿಸಿ
ಪಾಲುಣುವ ತೆರದಿ ದೋಷವನುಳಿದು ಗುಣವನೇ ಕೊಳುವ ಆ ಹಂಸಗಳನು

೩೮

ಹೇ ಜನನಿ! ನಿನ್ನ* ಸ್ವಾಧಿಷ್ಠಾನ ಚಕ್ರದಲಿ
ಹುತವಹನನಾಶ್ರಯಿಸಿವೊಡನೆ ಸಂವರ್ತನನು
ನುತಿಸುವೆನು ನಿರತ, ಜೊತೆಗಧಿಕಶಕ್ತಿ ಸ್ವರೂಪಳು ಸಮಯೆಯನು ನುತಿಪೆನು
ಯಾವಂದವನ ಮಹಾಕ್ರೋಧಯುಕ್ತಾಲೋಕ–
ವದು ಲೋಕಗಳನೆಲ್ಲ ಸುಡತೊಡಗಲಿಹುದಾಗ
ತಂಪನೆರೆಯುವ ದಯಾಮಯವಾದ ನೋಟ ಬೀರುವ ಸಮಯೆಯನ್ನು ನುತಿಪೆ

೩೯

ಹೇ ಜನನಿ! ನಿನ್ನ ಮಣಿಪೂರ ಚಕ್ರದಲಿ ನೆಲ–
ಸಿರುವ ಕತ್ತಲೆಗೆ ಹಗೆಯೆನಿಸಿ ಬೆಳಗುವ ಶಕ್ತಿ
ರೂಪವಹ ಮಿಂಚನೊಡಗೂಡಿರುವ, ಥಳಥಳಿಪ ಬಗೆಬಗೆಯ ರತ್ನದಿಂದ

ಸ್ಮರಯೋನಿ ಲಕ್ಷ್ಮೀತ್ರಿತಯವಿದನು ನಿನ್ನ ಮಂತ್ರದ ಮೊದಲಿನಲ್ಲಿರಿಸುವ
ಚಿಂತಾಮಣಿಗಳ ಕೋದಕ್ಷಮಾಲೆಯ ಪಿಡಿದು
ಸುರಭಿಘೃತದಿಂದ ಧಾರಾಕಾರವಾಗಿ ಶತ–
ಸಂಖ್ಯೆಯಲಿ ಶಿವೆಯಗ್ನಿಗಾಹುತಿಯನರ್ಪಿಸುತ ನಿನ್ನನಾರಾಧಿಸುವರು

೩೩

ಹೇ ಭಗವತೀ! ಶಂಭುವಿನ ದೇಹವಾಗಿರುವ
ನಿನಗೆ ಕುಚಯುಗ್ಮವಾಗಿಹರು ಶಶಿ ದಿನಕರರು,
ನಿರ್ದೋಷವಹ ನಿನ್ನ ದೇಹವು ನವಾತ್ಮನಹ ಶಂಭುವೆಂದರಿವೆ;
ಅದುವೆ ಕಾರಣದಿಂದ ಶೇಷಶೇಷೀ ಭಾವ–
ರೂಪದೀ ಸಂಬಂಧ ಸಮರಸಪರಾನಂದ–
ಪರರೆನಿಪ ನಿಮ್ಮಿರ್ವರೊಳಗುಭಯ ಸಾಧಾರಣತ್ವದಲಿ ನೆಲಸಿರುವುದು

೩೪

ಹೇ ಶಿವನ ಯುವಪತ್ನಿ! ನೀ ಮನಸು, ಆಕಾಶ
ನೀನು, ಮಾರುತನು ನೀನಗ್ನಿ ನೀಭೂಮಿ ನೀ–
ನಾಪ ನೀನಿಮತಿವೆಲ್ಲವು ನೀನೆಯಾಗಿರಲು ಪರಿಣಮಿಸಿ, ನಿನ್ನ ಹೊರತಾವುದಿಲ್ಲ;
ವಿಶ್ವರೂಪದಲಿ ಪರಿಣಮಿಸುವಿಚ್ಛೆಯ ತಳೆದು
ಚಿಚ್ಛಕ್ತಿರೂಪವಾನಂದರೂಪಗಳನ್ನು
ಕಾರ್ಯಕಾರಣವೆನಿಪ್ಪುಭಯ ಸ್ವರೂಪವನು ನಿನ್ನೊಳಗೆ ನೀ ಧರಿಸಿಹೆ

೩೫

ಹೇ ದೇವಿ! ನಿನ್ನಯಾಜ್ಞಾ ಚಕ್ರದಲ್ಲಿರುವ
ಕೋಟಿಸೂರ್ಯೇಂದು ಸಮಕಾಂತಿಯನು ಧರಿಸಿರುವ
ಪಾರ್ಶ್ವದಲ್ಲಿ ಚಿಚ್ಛಕ್ತಿಯನು ಕೂಡಿಕೊಂಡಿರುವ ಪರಶಿವನ ವಂದಿಸುವೆನು;
ಭಕ್ತಿಯಿಂದವನಾನಾರಾಧಿಸುವ ಭಕ್ತನವ
ನಲ್ಲಿ ರವಿಶಶಿಯಗ್ನಿ ಕಾಣಿಸದ ನಿರ್ಜನದ
ನಮ್ಮಿಳೆಯ ಬೆಳಕಿರದನಿ ಬೆಳ್ದಿಂಗಳಿಹ ಲೋಕದಲಿ ವಾಸಿಸುವನು

೪೩

ನಿನ್ನ ಮುಖಸೌಂದರ್ಯಲಹರೀ ಪ್ರವಾಹವದು
ಹರಿವ ಪಾತ್ರವೊ ಎನುವವೊಲು ಮೆರೆವ ಬಯ್ತಲೆಯು–
ನಿನ್ನ ಕೂದಲಹೊರೆಯ ಇರುಳೆಂಬ ಕಡುವೈರಿ ದಳಕೆ ಸೆರೆಸಿಲುಕಿಹೋಗಿರುವ
ನವಬಾಲಸೂರ್ಯಕಿರಣದ ವೋಲು ಮೆರೆಯುತಿಹ
ಚಾರು ಸಿಂಧೂರಚೂರ್ಣವ ತಳೆದ ಬಯ್ತಲೆಯು,
ಎಲೆ ತಾಯೆ, ನೀಡುತಿರಲೆಮಗೆ ಸುಕ್ಷೇಮವನ್ನು ಇಂದು ಮುಂದೆಂದೆಂದಿಗೂ

೪೪

ತನ್ನತನದಿಂದಲೇ ನೀಲಿಮೆಯನಾಂತ ಮರಿ–
ದುಂಬಿಗಳ ವರ್ಣಸಂಪದವ ಹೊಂದಿರುವ ಮುಂ–
ಗುರುಳು ಬಳಸಿರುವಂಥ ನಿನ್ನ ಮೊಗ ನಗುತಿರುವುದಲ್ತೆ ತಾವರೆಯ ಹೊಗರ;
ಅದರರಳುನಗೆಯಲಿ ಮೆರೆವ ದಂತಾವಳಿಯ
ಕೇಸರದ ಕಿರಣಕಾಂತಿಯಲಿ ಸೌಗಂಧದಲಿ
ಮದಿಸಿಹುದು ಮನುಮಥನ ಸುಟ್ಟಂಥ ಶಿವನ ಹಣೆಗಣ್ಣೆಂಬ ಮಧುಪಾಯಿಯು

೪೫

ಅಮಲವಹ ಲಾವಣ್ಯಕಾಂತಿಯಿಂದೊಪ್ಪುತಿಹ
ನಿನ್ನಯ ಲಲಾಟಕ್ಕೆ ಪಡಿಯೆನಿಸಿ ಮಕುಟದಲಿ
ನೆಲಸಿರುವ ಚಂದ್ರಾರ್ಧವೆರಡನೆಯ ಅರ್ಧವೆಂದರಿತು ನಾನಿಂತು ಬಗೆವೆ;
ಈಯೆರಡು ಅರ್ಧಗಳು ತಮ್ಮ ಅಡಿಮೇಲಾಗಿ
ಅಮೃತಲೇಪದ ಬೆಸುಗೆವಡೆದೊಂದೆನಿಸಲಾಹ
ಪೂರ್ಣಚಂದ್ರನೆಯಾಗಿ ಪರಿಣಮಿಸಿ ಪೂರ್ಣಸೌಂದರ್ಯದಿಂದೆಸೆವುದಲ್ತೆ!

೪೬

ಹೇ ಉಮೇ! ಇಳೆಯ ಭಯವನು ಕಳೆವ ಹರಿಬವನು
ಹೊತ್ತವಳೆ, ನಿನ್ನ ನಸುಬಾಗಿರುವ ಹುಬ್ಬೆರಡು
ಕಣ್ಣೆಂಬ ಕದ್ದುಂಬಿಯಿಂದೊಗೆದ ಕಾಂತಿಕಿರಣದ ಹೆದೆಯ ಧರಿಸಿಹುದನು

ಸಮೆದೊಡವೆಗಳ ಬಣ್ಣನೆಳಗು ನಿರ್ಮಿಸಿದಂಥ
ಇಂದ್ರಚಾಪವ ತಳದ ಹರಮಿಹಿರನಿಂದ ಬಲು
ಬೆಂದ ಮೂಲೋಕಕ್ಕೆ ಮಳೆಗರೆದ ನೀಲವೇಷ ಸ್ವರೂಪನ ಸೇವಿದೆ

೪೦

ಓ ತಾಯೆ! ನಿನ್ನ ಮೂಲಾಧಾರ ಚಕ್ರದಲಿ
ಲಾಸ್ಯತತ್ಪರೆ ಸಮಯೆಯೊಡನೆ ನವರಸಯುಕ್ತ
ಘನತಾಂಡವವನಾಡುವಾನಟನಾನಾನಂದ ಭೈರವನೆನುತ ತಿಳಿವೆನು;
ದಗ್ಧಲೋಕವಮರಳಿ ಸೃಷ್ಟಿಸುವ ಬಗೆ ಕುರಿತು
ದಯೆಯಿಂದ ಜೊತೆಗೂಡಲವರಿಬ್ಬರಾವೇಳೆ
ಜನನಿ ಜನಕರನು ಪಡೆದಂತಾಗಿ ಸಂಭವಿಸಿತೀ ಲೋಕದುತ್ಪತ್ತಿಯು

೪೧

ಹಿಮಗಿರಿಸುತೇ! ನಿನ್ನ ಹೊನ್ನ ಮುಡಿಯೆಂಥದಹ!
ಮಾಣಿಕ್ಯತನವನ್ನೈದಿದ ಗಗನಮಣಿಗಳೇ
ಸಂಘಟಿಸಿ ಸಾಂಧ್ರಗೊಳಿಸಿರುವ ಆ ಮುಡಿಯ ಬಣ್ಣಿಸಲಾರ್ತ ಕವಿಯಾತನು
ರತ್ನರಶ್ಮಿಗಳ ಬಗೆಬಗೆವರ್ಣಗಳ ಬಲೆಗೆ
ಸಿಲುಕಿ ಬಹುವರ್ಣಗಳ ಶಬಲತೆಯ ಪಡೆದಿರುವ
ಚಂದ್ರಶಕಲವನಿಂದ್ರಚಾಪವೆಂದೇ ಬಗೆದು ವರ್ಣನೆಯ ಮಾಡದಿಹನೇ

೪೨

ದಟ್ಟೈಸಿ ಚೆಲುವಾಂತ ಕನ್ನೈದಿಲೆಯ ವನವ
ಪೋಲ್ವ ಕುರುಳೋಳಿ ನಿನ್ನದು, ಶಿವೇ, ನಮ್ಮ ಅಂ–
ತಃಕರಣದಜ್ಞಾನ ತಮವ ಪರಿಹರಿಸಿ ಕಾಪಿಡುತಿರಲಿ ನಿರುತ ತಾಯೆ;
ನಿನ್ನ ಈ ಕುರುಳೊಡನೆ ಒಗೆತಂದ ನರುಗಂಪ
ಕೊಳಲೆಂದೆ ಇಂದ್ರನಂದನವನದ ತರುವೃಂದ–
ಸುಮಗಳವು ನಿನ್ನ ಈ ನಲ್ಗುರುಳನಾಶ್ರಿಯಿಸಿರುವುವೆಂದು ನಾನು ತಿಳಿದಿರುವೆ ತಾಯೆ.

೫೦

ತಾಯೆ, ಶಿವನೆಡೆ ನಿನ್ನ ನೋಟವದು ಶೃಂಗಾರ,
ಶಿವನನುಳಿದಿತರರೊಳು ಬೀಭತ್ಸ, ಗಂಗೆಯನು
ಕಂಡೊಡನೆಯೇ ರೌದ್ರ, ಗಿರಿಶನಯನಕೆ ವಿಸ್ಮಯವ ತಳೆದರಳುತಿಹುದು,
ಹರನಹಿಗೆ ಬಹುಭೀತಿ, ಸರಸಿರುಹಸೌಭಾಗ್ಯ-
ವನು ಜಯಿಸುವೆಡೆ ವೀರ, ಸಖಿಯರೊಳುದರಹಾಸ;
ಭಕ್ತನಾದೆನ್ನಮೇಲಿಹುದಲ್ತೆ ನಿನ್ನ ಕರುಣಾಪೂರ್ಣ ದೃಷ್ಟಿವೃಷ್ಟಿ

೫೧

ಹಿಮವಂತಕುಲಕಲಂಕಾರಳಾದವಳೆ, ಶಿವೇ,
ಕಿವಿಯ ಬಳಿಸಾರಿರುವ, ಕಣೆಗರಿಯ ತೆರನಕಂ-
ಗಳರೆಪ್ಪೆಗಳ ಮೆರೆವ, ಮುನ್ನ ಶಿವನ ಪ್ರಶಮರಸವ ಭಂಗಿಸಿದ ಕೊನೆಯ
ಪಡೆದಿರುವ ಈ ನಿನ್ನ ಕಮನೀಯ ಕಣ್ಣೆರಡು
ಕಿವಿವರೆಗೆ ತೆಗೆದೆಳೆದ ಮನ್ಮಥನ ಬಾಣಗಳ
ರಾಗಭಾವಗಳನುದ್ರೇಕಿಸುವ ಸಿರಿಸೊಬಗನಾವಗಂ ಮೆರೆಯುತಿಹುವು

೫೨

ಹೇ ಮಹಾದೇವಿ! ವಿಲಾಸಕೆಂದೇ ನೀನು
ಹಚ್ಚಿಕೊಂಡಿಹ ಕಣ್ಣಕಪ್ಪಿನಿಂದೊಡಗೂಡಿ
ನಿನ್ನ ಕಣ್ಮೂರು ಹೃತ್ಕಮಲದೊಳು ಬೇರ್ಪಟ್ಟ ಮೂಬಣ್ಣವೆನುವ ತೆರದಿ
ಪ್ರಳಯಕಾಲದಿ ನಿನ್ನೊಳೈಕ್ಯರಾದಾ ಬ್ರಹ್ಮ
ಹರಿರುದ್ರ ದೇವರನು ಮರಳಿ ಸೃಷ್ಟಿಸಲೆಂದೆ
ಸತ್ತ್ವ ಮೇಣ್‌ರಜ ತಮೋ ಗುಣ ಮೂರ ಧರಿಸಿರುವೆಯೋ ಎನಲು
ಹೊಳೆಯುತಿಹುದು

೫೩

ಪಶುಪತಿ ಪರಾಧೀನ ಹೃದಯೇ, ಶಿವೆ, ನಿನ್ನ
ದಯೆಗೂಡಿದಾ ಕಣ್ಣುಗಳ ಕೆಂಪು ಬಿಳಿಪಿಂದ
ಕಪ್ಪಿಂದ ಶೋಣ ಗಂಗಾಯಮುನೆಯರ ಪುಣ್ಯಕರ ಸಂಗಮವನು ನೆರಹಿ

ರತಿಪತಿಯು ತನ್ನೆಡದ ಕೈಚಾಚಿ ಬಿಗಿಮುಷ್ಟಿ–
ಯಿಂದ ಬಲ್ವಿಡಿದು ಬಲು ಬಿಂಕದಲಿ ನಿಂತಿರಲು
ಮಧ್ಯಭಾಗವದವನ ಹಿಡಿಯಲಡಗಿರುವ ಆತನ ಧನುಸ್ಸೆಂದು ಬಗೆವೆ.

೪೭

ಎಲೆ ದೇವಿ! ನಿನ್ನ ಬಲಗಣ್ಣು ನೇಸರನನೊಳ–
ಗೊಂಡು ಹಗಲಿಗೆ ಹುಟ್ಟು; ನಿನ್ನೆಡದ ಕಣ್ಣಿರುಳಿ–
ಗೊಡೆಯನನ್ನೊಳಗೊಂಡು ಮೂರು ಜಾವದ ಮಾನದಿರುಳ ಸೃಷ್ಟಿಸುತಿಹುದು;
ಮೂರನೆಯ ಹಣೆಗಣ್ಣು ಮುಚ್ಚಿಬಿಚ್ಚಿಯುಯಿದ್ದು
ಅರೆಯರಳಿ ಮೆರೆವ ಹೊಂದಾವರೆಯ ಹೊಳಪನ್ನು
ಹಸರಿಸುತ ಹಗಲಿರುಳನಡುವೆ ಸಂಚಿರಪ ಸಂಜೆಯನ್ನುಂಟು ಮಾಡುತಿಹುದು.

೪೮

ತಾಯೇ! ವಿಶಾಲ, ಕಲ್ಯಾಣಿ, ಪ್ರಕಾಶೀ ಕು–
ವಲಯಕ್ಕಯೋಧ್ಯಾ, ಕೃಪಾಧಾರೆಗಾಧಾರ,
ಅವ್ಯಕ್ತಮಧುರ, ಆ ಭೋಗವತಿ, ಮೇಲಾಗವಂತೀ, ವಿಜಯವೆನ್ನುವ
ಪೆಸರ್ಗಳಿಂದೆಸೆಯುತಿಹ ಬಹುಸಂಖ್ಯ ನಗರಗಳ
ನಾಮಗಳ ತಳೆಯಲರ್ಹತೆಯ ಹೊಂದಿರುವ ನಿ–
ನ್ನಯ ದೃಷ್ಟಿಯಾನಾಮ ನಿರ್ದಿಷ್ಟ ಗುಣಗಳಿಂದಾವಗಂ ಗೆಲ್ಗೆಗೆಲ್ಗೆ

೪೯

ಕವಿಕೃತಿಗಳೆಂಬ ಹೂಗೊಂಚಲಿನ ಮಧುವ ಸವಿ–
ಯುವ ರಸಿಕವೆವೆನಿಸಿರ್ಪ ನಿನ್ನ ಕಿವಿಜೋಡಿಯನು,
ನವರಸಾಸ್ವಾದದಲಿ ನಲಿವ ಕಡೆಗಣ್ಣ ನೋಟಗಳ ಮರಿದುಂಬಿಗಳನು,
ಎಡೆಬಿಡದೆ ನೋಡುತ್ತ ತನಗೆ ದಕ್ಕದ ಸುಖವ
ನೆನೆದಸೂಯಾಪರತೆಯಿಂದ ಕಿಡಿಕಿಡಿವೋಗಿ
ನಿನ್ನ ಹಣೆಗಣ್ಣುನಸುಗೆಂಪನಾಂತುದು, ತಾಯೆ, ತಾಳಲಾರದೆ ಕೋಪವ

೫೭

ಹೇ ನಗಾಧಿಪತನಯೆ! ನಿನ್ನ ಕಿವಿಹಾಲೆಗಳ
ವಕ್ರತಾವೈಖರಿಯು ಕುಸುಮಶರನಿಕ್ಷುಕೋ–
ದಂಡಸೌಭಾಗ್ಯವನ್ನಾರಿಗಾದರು ತಾನು ಮಾಡದಿರುವುದೆ ನೋಡಲು?
ಆ ಹಾಲೆಗಳ ನಡುವೆ ಹಾಯ್ದು ಬೆಳಗುತ್ತಿರುವ
ನಿನ್ನ ಕಡೆಗಣ್‌ನೋಟ ತಾನಲ್ಲಿ ಕೂಡುವೆಡೆ
ಅಂಬಹೂಡುವ ತೋರಿಕೆಯ ತೆರನ ನೋಡುವರ ಮನಕೆ ತೋರ್ಪಂತಿರುವುದು

೫೮

ಹೇ ದೇವಿ! ನಿನ್ನ ಚೆನ್ನನ್ನ ಕೆನ್ನೆಯ ಕನ್ನ–
ಡಿಯಲಿ ಮಾರ್ಪೊಳೆಯುತಿಹ ರನ್ನದೋಲೆಗಳೆರಡ–
ರಿಂದೆಸೆವ ಮೊಗವನ್ನ ಮನ್ಮಥನ ರಥವೆಂದೆನುತ ನಾನು ತಿಳಿದಿರುವೆನು;
ಆ ರಥವನೇರಿ ಮಾರನು ಮಹಾವೀರನೆನಿ–
ಸುತ, ಸೂರ್ಯ ಚಂದ್ರ ಚಕ್ರಯುತ ಭೂ–
ರಥವನಣಿಗೈದು ಸಜ್ಜಾಗಿಹ ಪ್ರಮಥಪತಿ ಶರ್ಮನನ್ನೆದುರಿಸುವನು

೫೯

ತಾಯೆ, ಶರ್ವಾಣಿ, ಅಮೃತವ ಹೊನಲ ಸುಭಗತೆಯ
ಹೊನಲ ಹರಿಸುವ ನಿನ್ನ ಸೂಕ್ತಿಗಳ ಸಾರವನು
ಕಿವಿಬೊಗಸೆಯೊಡ್ಡಿ ಕುಡಿಕುಡಿದು ನುಡಿಗಳ ಬೆಡಂಗನು ಮೆಚ್ಚುತ
ಬೆರಗಿಂದ ತಲೆದೂಗಲು ಸರಸ್ವತಿಯ ಕರ್ಣ–
ಕುಂಡಲಗಣದ ಝಣತ್ಕಾರ ತಾರಧ್ವನಿಯ
ಮಾರ್ನುಡಿಗಳೆನಲೆಸೆವುದಾ ಸೂಕ್ತಿಮುಕ್ತಾಫಲಗಳು ನಿನ್ನಯ ಕರುಣೆಯು

೬೦

ತಾಯೆ, ಹಿಮಗಿರಿ ಕುಲಪತಾಕಾಸ್ವರೂಪೆ, ನೇರ್–
ಬಂಚದೊಲು ನೀಳವಹ ನಿನ್ನನಾಸಿಕ ಕೊಡುಗೆ
ನನ್ನಂತರಂಗಕೆ ಸಮೀಪತಮವಾದ ಸಮುಚಿತವೆನಿಪ ಫಲವನಿರತ;

ಆ ಮೂರು ನದನದೀಗಳ ದಿವ್ಯತೀರ್ಥಗಳು
ನಮ್ಮನೆಲ್ಲಾ ಕಾಲದಲು ಪವಿತ್ರೀಕರಿಸಿ
ಉದ್ಧಾರ ಮಾಡುತಿರುವಂತೆ ಸಂಘಟಿಸಿತಿರುವೆ, ಏನಮ್ಮ ನಿನ್ನ ಕರುಣೇ!

೫೪

ಹೇ ಹಿಮಾಲಯತನಯೆ! ಕಣ್ಣುಮುಚ್ಚಲು ನೀನು
ವಿಲಯ ಹೊಂದುವುದು ಜಗ, ಕಣ್ಣು ತೆರೆಯಲ್ಕೊಡನೆ
ಉದಯಿಸುವುದದು ಮರಳಿ ಎಂದಿಂತು ನುಡಿವರು ಮಹಾಜ್ಞಾನಿಗಳು ಸಂತರು;
ನಿನ್ನ ಕಣ್‌ತೆರೆವಿನಿಂದುದಯಿಸುವ ಈ ಜಗವು
ಪ್ರಲಯಹೊಂದದ ತೆರದಿ ಅದನು ರಕ್ಷಿಸಲೆಂದೆ
ನಿನ್ನ ಕಣ್ಣೆವೆ ಸದಾ ಮುಚ್ಚದೆಯೆ ತೆರದಿಹವುಯೆಂದು ನಾ ಬಗೆವೆ ತಾಯೇ

೫೫

ತಾಯೇ, ಅಪರ್ಣಾ! ಸಮೀಪಕರ್ಣಾಂತವಹ
ನಿನ್ನ ನಯನದ ಚಾಡಿಕೋರತನಕಳುಕುತ್ತ
ಶಫರಮೀನ್ಗಳು ತೆರೆದೆ ಕಣ್ಣು ತೆರೆದಂತೆ ನೀರೊಳು ಮುಳುಗಿರುವುವು ಲೇಸು;
ಮೇಣಿತ್ತ ನೈದಿಲೆಯ ಅಂದಚೆಂದದ ಸಿರಿಯು,
ಮುಚ್ಚಿಕೊಳಲೆಸಳ ಬಾಗಿಲು, ಹೂವ ತೊರೆಯುತ್ತ
ಮತ್ತಿರುಳಿನಲಿ ಎಸಳ ಬೆಸುಗೆಯನು ಬಿಡಿಸುತ್ತ ಒಳಸೇರಿಕೊಂಡಿಹುದು

೫೬

ಹೇ ಶಿವೇ! ಅರೆಯರಳ್ದ* ನೀಳ ಕನ್ನೈದಿಲೆಯ
ಕಮನೀಯತೆಯ ನಿನ್ನ ಕಡೆಗಣ್ಣ ನೋಟದಾ
ಕಾಂತಿ ಬಲು ದೂರವಿಹ ದೀನನೆನ್ನನು ಕೃಪಾರಸದ ಮಜ್ಜನಗೈಸಲಿ;
ಅದರಿಂದ ನಾ ಧನ್ಯನಾಗುವೆನು, ನಿನಗಿನಿತು
ಹಾನಿಯಾಗದು, ತಾಯೆ; ಎಂತೆನಲು ತಂಗದಿರ
ತನ್ನ ತಂಬೆಳಕನುಪ್ಪರಿಗೆಯಡವಿಗಳಲ್ಲಿ ಸಮನಾಗಿ ಸುರಿವನಲ್ತೆ

೬೪

ಎಲೆ ತಾಯೆ, ಯುದ್ಧದಲಿ ಜಯಿಸಿ ರಾಕ್ಷಸರನ್ನು,
ತಮ್ಮ ತಲೆಗಾಪು ಮೈಜೋಡುಗಳ ತೆಗೆದಿಟ್ಟು
ಚಂಡಾಂಶ ತ್ರಿಪುರಹರ ನಿರ್ಮಾಲ್ಯವನು ಮನ್ನಿಸದೆ ಕಡೆಗಣಿಸುತ ತಾವು
ಷಣ್ಮುಖೇದ್ರೋಪೇಂದ್ರರೈತರಲು ಸನ್ನಿಧಿಗೆ
ಶಶಿಯಂತೆ ಶುಭ್ರವಹ ಕರ್ಪೂರ ಖಂಡಗಳು
ಬೆರೆತ ಬಾಯ್ದಂಬುಲದ ತುತ್ತುಗಳು ಕರಗಿಹೋದುವುವವರ ಬಾಯ್ಗಳಲಿ

೬೫

ಪಶುಪತಿಯ ವಿವಿಧ ಸಚ್ಚರಿತೆಯನು ವೀಣೆಯಲಿ
ನೀನು ನುಡಿಸುತ್ತಿರಲು, ಓ ತಾಯೆ, ಆಗಾನ
ನಿನ್ನದೆಂಬೊಲವಿಂದ ಲೇಸು ಲೇಸೆಂದೆನುತ ಶಿವನು ತಲೆ ತೂಗುತಿರಲು
ನಿನ್ನ ವೀಣಾಗಾನ ಮಾಧುರ್ಯದಪಹಾಸ–
ಕಾಗ ಗುರಿಯಾಗೆ ತನ್ನಯ ವೀಣೆತಂತಿಗಳ
ಕಲರವವು, ವಾಣಿಯೊಡನೆಯೆ ತನ್ನ ವೀಣೆಯನು ಮುಚ್ಚಿದಳು ಹೊದಿಕೆತೊಡಿಸಿ

೬೬

ಗಿರಿಸುತೇ, ಹಿಮವಂತ ವಾತ್ಸಲ್ಯದಿಂದ ಕೈ
ತುದಿಯಿಂದ ಹಿಡಿದ, ನಿನ್ನಧರಪಾನವ ಬಯಸು–
ತದ ಸವಿದು ತುಷ್ಟಿವಡೆಯದೆ ಮತ್ತೆ ಸವಿವಾಕುಲತೆಯಿಂದ ಕೈಲಿ ಹಿಡಿದ
ತನ್ನ ಮುಖದಂದವನು ನೋಡಿಕೊಳಲೆಳಸುತ್ತ
ನಿನ್ನ ಪತಿಪರಮೇಶ್ವರನು ಹಿಡಿಯುವಾರನ್ನ–
ಗನ್ನಡಿಯ ಹಿಡಿಯಾದ, ಉಪಮೆಗೆಟುಕದ, ನಿನ್ನ ಗಲ್ಲವನು ಹೊಗಳಲೆಂತು?

೬೭

ತ್ರಿಪುರಹರ ಪರಶಿವನ ತೋಳುತಬ್ಬಿನಲಿರುತ
ಅನುದಿನವು ಮುಳ್ಳುಗಳ ತಳೆದ ಮೊಗದಾವರೆಯ
ದಂಟಿನಾನಲ್‌ಸೊಬಗ ಸಿರಿಯನಾನುವುದಲ್ತೆ ನಿನ್ನ ಕೋಮಲವಾದ
ಕೊಳಲುಗೊರಳು;

ನಾಸಿಕದ ಆ ಬಂಚ ಮುತ್ತುಗಳನೊಳಕೊಂಡು
ಚಾಂದ್ರನಿಃಶ್ವಾಸದೊತ್ತರದಿಂದ ಆ ಮುತ್ತು
ಜಗುಳೆ ನಾಸಿಕವು ಮುತ್ತಿನ ಮಣಿಯ ಮೂಗುತಿಯ ಧರಿಸಿ ಶೋಭಿಸುತಿರುವುದು

೬೧

ಹೇ ಸುದತಿ, ಸಹಜವಾಗಿಯೆ ರಕ್ತವರ್ಣವನು
ತಳೆದಿರುವ ನಿನ್ನ ತುಟಿಗಳ ಕೆಂಪುಕಾಂತಿಗೆಣೆ–
ಯನು ಪೇಳ್ವೆ: ಹವಳಬಳ್ಳಿಯು ತಾನು ಹಣ್ಣುಬಿಟ್ಟಿದೆಯೆಂದು ಹೇಳಲುಂಟು;
ನಿನ್ನ ತುಟಿಗಳ ಕೆಂಪು ಪ್ರತಿಬಿಂಬಿಸಲು ಬಿಂಬ–
ವೆಂಬ ಹೆಸರನು ತೊಂಡೆಹಣ್ಣು ತಳೆದಿರಲೇನು?
ನಿನ್ನ ತುಟಿಗೆಣೆ ನಾನು ಎಂದೆನಲು ನಾಚಿಕೊಳದಿರುವುದೇ ತೊಂಡೆ ತಾನು?

೬೨

ಹೇ ಮಾತೆ, ನಿನ್ನ ಮೊಗ ಚಂದಿರನ ಸುಧೆಗರೆವ
ಬೆಳ್ದಿಂಗಳನು ಪಾನಮಾಡಿದ ಚಕೋರಗಳ
ನಾಲಗೆಯು ಮಧುರರಸದತಿಯಿಂದ ವೆಗಟುಗೊಂಡಿಹುದರೋಚಕತೆಯಿಂದ;
ಅದರಿಂದಲಾ ಚಕೋರಗಳು ಹುಳಿಗಂಜಿಯನು
ಕುಡಿವೆಣಿಕೆಯಿಂದಾಮ್ಲರುಚಿಯುಳ್ಳ ಹಿಮಕರನ
ಅಮೃತಲಹರಿಯನಧಿಕವಾಗಿಷ್ಟಬಂದಂತೆ ಇರುಳಿರುಳು ಹೀರುತಿಹವು

೬೩

ಹೇ ಜನನಿ! ನಿನ್ನ ಆ ನಾಲಗೆಯು ಎಡೆಬಿಡದೆ
ಪತಿಯಾಪ್ರಸಿದ್ಧ ಗುಣಗಣದ ಕಥನದ ಜಪಾ–
ಸಕ್ತಿಯಿಂದಾನುತ ಜಪಾಕುಸುಮವರ್ಣವನು ಮೆರೆದು ಗೆಲುವಾಂತಿರುವುದು;
ನಿನ್ನ ನಾಲಗೆಯ ತುದಿಪೀಠದಲಿ ಕುಳಿತಿರುವ
ಪಳಿಕುಗಲ್ಲಿನ ಶುದ್ಧ ಧವಳಕಾಂತಿಯಿನೆಸೆವ
ಶಾರದೆಯ ವಿಗ್ರಹವು ಮಾಣಿಕ್ಯಮಯಮೂರ್ತಿಯಾಗಿ ಪರಿಣಮಿಸಿರುವುದು

೭೧

ಓ ದೇವಿ! ಕುಚಯುಗದ ತೊಟ್ಟು ಪಾಲ್ತೊರೆಯುತಿರೆ
ಸಮವಾಗಿ ಗಜಮುಖ ಸ್ಕಂದರಿಬ್ಬರು ಕುಡಿಯ–
ಲದರ ತಣಿಸಿದ ನಿನ್ನ ಕುಚವೆರಡು ನಮ್ಮ ಖೇದವ ಸತತ ಪರಿಹರಿಸಲಿ;
ಕುಚಯುಗವ ನೋಡಿ ನೆನೆಯುತ ತನ್ನ ಕುಂಭಗಳ
ಕಸಿದುಕೊಂಡಳೊ ತಾಯಿ ಎಂದು ಶಂಕಾಕುಲಿತ–
ನಾಗಿ ಸೊಂಡಿಲಿನಿಂದ ತಡವರಿಸಿಕೊಳೆ ತಲೆಯ, ನಗೆಹುಟ್ಟಿಸಿದನು ತಾಯ್ಗೆ!

೭೨

ತಾಯೆ, ಹಿಮವಂತಪರ್ವತಪತಾಕೇ, ನಿನ್ನ
ಈ ಸ್ತನದ್ವಯವಮೃತರಸವು ನೆರೆ ತುಂಬಿರುವ
ಮಾಣಿಕ್ಯಕಲಶವೆರಡೆನ್ನುವೆಡೆ ನಮಗಿಲ್ಲ ಸಂದೇಹದಿನಿತು ಸುಳಿವು;
ಅದರಿನಲ್ಲವೆ ಯಿಂದಿಗೂ ಗಣಪ ಷಣ್ಮುಖರು
ನವವಧೂಸಂಗರಾಸಿಕ್ಯವನ್ನರಿಯದರು
ತಾಯ ಮೊಲೆವಾಲ್ಕುಡಿಯುತುಳಿದಿಹರು ಕೌಮಾರಭಾವದಲಿ ನಲಿನಲಿಯುತ

೭೩

ಹೇ ಅಂಬ! ಗಜದನುಜ ಕುಂಭದೆಡೆಯಲಿ ದೊರೆತ
ಮುಕ್ತಾಮಣಿಗಳಿಂದ ಕೋದ ನಿರ್ಮಲಹಾರ–
ಲತಿಕೆಯನು, ಬಿಂಬಾಧರದ ಕಾಂತಿಯಿಂದೊಳಗೆ ಕೆಂಪಾಗಿ ಶೋಭಿಪುದನು,
ತ್ರಿಪುರಹರ ಶಿವನಪ್ರತಾಪಮಿಶ್ರಿತವಾದ
ಕೀರ್ತಿಯನು ತಾನು ತಳದಿರುವುದೋ ಎನುವಂತೆ
ನಿನ್ನ ಕುಚಯುಗದ ಮೇಲ್ಗಡೆಯ ಚೆಂದದ ಎಡೆಯ ಹರಹು ಧರಿಸಿರುವುದದನು

೭೪

ಹೇ ಧರಣಿಧರಕನ್ಯೆ! ನಿನ್ನ ಹೃದಯದೊಳುಕ್ಕಿ
ಹರಿವ ಹಾಲ್ಗಡಲಾದ ನಿನ್ನಯೆದೆಹಾಲನ್ನು
ಸಾರಸ್ವತಸ್ವರೂಪಾವತಾರವದೆಂದೆ ನಾನು ತಿಳಿದಿರುವೆ ತಾಯೆ;

ಆ ಕೊರಳಕೆಳಗೆ ಕಾಳಾಗರುವಿನಧಿಕವಹ
ಕೇಸರಮಲಿನತೆಯಿಂದ ಹುಟ್ಟುಬಿಳಿ ಬಣ್ಣದಾ
ಹಾರಲತಿಕೆಯು ತಾನು ತಾವರೆಯ ದಂಟಸೊಬಗನು ಧರಿಸಿ ಮೆರೆಯುತಿಹುದು

೬೮

ಗತಿಗಮಕಯುಕ್ತ ಸಂಗೀತನಿಪುಣೇ, ಶಿವೇ,
ವೈವಾಹಸಮಯದಲಿ ನಿನ್ನ ಕೊರಳಿಗೆ ಶಿವನು
ತಾನೆ ಕಟ್ಟಿರುವ ಮೂರೆಳೆಯ ಮಂಗಲಸೂತ್ರವೋ, ವಿವಿಧ ರೀತಿಯೊಳಿಹ
ಮಧುರ ಸಂಗೀತರಾಗಾವಳಿಗೆ ಮೂಲವಹ
ತ್ರಿಸ್ರಸ್ವರಗ್ರಾಮಗಳ ನಿಯಮಿತ ಸ್ಥಳವ
ಸೂಚಿಸುವ ಸೀಮೆಗಳೂ ಎನೆ ನಿನ್ನ ಕೊರಳಲ್ಲಿ ಗೆರೆಮೂರು ಶೋಭಿಸುತಿವೆ

೬೯

ತನ್ನೈದನೆಯ ತಲೆಯ ಚಿವುಟಿ ತೆಗೆದಂಧಕಾ–
ಸುರವೈರಿಯಾ ಉಗುರುಗಳಿಗಂಜುತಿನ್ನುಳಿದ
ನಾಲ್ಕು ತಲೆಗಳ ಉಳಿವಿಗಭಯ ಹಸ್ತವ ನೀಡಬೇಕೆನುತ ಬೇಡಿಕೊಳಲು
ನಾಲ್ಮೊಗನು ತನ್ನ ನಾಲ್ಕೂ ಮುಖಗಳಿಂದೇಕ
ಕಾಲದಲಿ ತಾವರೆಯದಂಟಿನೊಲು ಮೃದುವಾದ
ನಿನ್ನ ನಾಲ್ದೋಳುಬಳ್ಳಿಯ ಬಂಧುರತೆಯ ನುತಿಸುತ್ತಿರುವನಲ್ತೆ ದೇವಿ

೭೦

ಹೇ ಉಮೇ, ಉಗುರ್ವೆಳಗಿನಿಂದ ಹೊಸ ತಾವರೆಯ
ಕೆಂಪನುಪಹಾಸಗೈಯುವ ನಿನ್ನ ಕೈಗಳಾ
ಕಾಂತಿಯನು ಹೇಗೆ ಬಣ್ಣಿಸೆ ಸೊಗಸು ಆ ಪರಿಯನೆಮಗೆ ನೀನರುಹುತಾಯೆ;
ತುಸುವಾದರೂ ಅವುಗಳೊಡನೆ ತಾವರೆ ತಾನು
ಸಮವೆನಿಸಿಕೊಳಬಲ್ಲುದೇ, ಸಾಧ್ಯವಾಗದದು;
ತನ್ನಲ್ಲಿಕ್ರೀಡಿಸುವ ಲಕುಮಿಯಡಿಯಲತಿಕೆಯ ಕೊಳಲಾಗಸಾಧ್ಯವೇನೋ

೭೮

ಹೇ ಗಿರಿಜೆ, ಪೆಣ್ಮಣಿಯೆ! ಸಹಜವಾಗಿಯೆ ನಿನ್ನ
ನಡು ಬಡವು, ಮೊಲೆಹೊರೆಯ ಹೊತ್ತು ಬಳಲಿದೆ ಮತ್ತೆ,
ಬಾಗಿ ಬಳುಕುವರೂಹಿನಿಂದಿನಿತರಲ್ಲಿಯೇ ಮುರಿದು ಬೀಳ್ವಂತಿರುವುದು;
ಒಡೆದ ಹೊಳೆದಡದಲಿಹ ಮರಕೆ ಸರಿದೊರೆಯೆನಿಸಿ
ಬೀಳ್ವ ಭಯಹುಟ್ಟಿಸುತ ಬೀಳದೆಯೆ ನಿಂತಿರುವ
ಆ ನಿನ್ನ ಬಡನುಡುವಿಗೆಂದೆಂದಿಗೂ ಕುಶಲವುಂಟಾಗುತಿರಲಿ ತಾಯೇ

೭೯

ಅದೆ ತಾನೆ ಬುಡದಲ್ಲಿ ಬೆವರಿಟ್ಟು ಬಿಗಿಕಟ್ಟು-
ವಡೆದ ಕುಪ್ಪಸಪೊಟ್ಟನೊಡೆದು ಹರಿವಂತಿರಲು
ತೋಳತಳಕುಜ್ಜತಿಹ ಚಿನ್ನ ಕಳಸದ ತೆರನ ಚೆನ್ನ ಮೊಲೆಜೋಡಿಯನ್ನ
ನಿನ್ನ ನಡು ಮುರಿದು ಬೀಳದೆ ಧರಿಸಲಾರ್ಪಂತೆ
ಮನ್ಮಥನು ಯೇಲಕಿಯ ಬಳ್ಳಿಯಿಂದದನು ಮೂ-
ವಳಸಾಗಿ ಬಳಸಿ ಬಲುಬಿಗಿಯಾಗಿ ಬಂಧಿಸಿಹ-
ನೆನುವಂತೆ, ಎಲೆದೇವಿ, ನಿನ್ನ ನಡುವಿನ ಬಳಿಯ ತಿವಳಿಯದು ಶೋಭಿಸಿಹುದು*

೮೦

ಪಾರ್ವತೀ, ಹಿಮವಂತನಂದು ಬಳಿವಳಿಕೊಡುವ
ಕಾಲದಲಿ ತನ್ನ ವಿಸ್ತಾರಗೌರವಗಳನು
ತನ್ನಯನಿತಂಬದಿಂದಲೆ ಪಡೆದು ನಿನಗೆ ಬಳಿವಳಿಯಾಗಿ ಕೊಟ್ಟನಲ್ತೆ;
ಅದರಿಂದಲೊದಗಿರುವ ನಿನ್ನಯ ನಿತಂಬಗಳ
ವಿಸ್ತಾರಗೌರವಗಳೀ ಭಾರಬಂಧುರತೆ
ವಸುಮತಿಯದೆಲ್ಲವನು ಮುಚ್ಚಿಮರೆ ಮಾಡುತ್ತ ಲಘುವಾಗಿ ಮಾಡಿರುವುದು

---

* ಮೂಲದ ಭಾವವೆಲ್ಲವೂ ಆರು ಸಾಲುಗಳಲ್ಲಿ ಮೂಡಲಶಕ್ಯವೆನಿಸಿ ಷಟ್ಪದಿಯಾಗಿರಬೇಕಾದದ್ದು ಸಪ್ತಪದಿಯಾಗಿ ಪರಿಣಾಮಿಸಿದೆ.

ನೀ ದಯಾಮಯಿಯಾಗಿ ನೀಡಿದಾಯೆದೆ ಹಾಲ–
ನೀದ್ರವಿಡಶಿಶುಸವಿದು ಕವಿವರರ ಮಧ್ಯದಲಿ
ತಾನೊರ್ವ ಕಮನೀಯಕವಿಯಾಗಿ ಪರಿಣಮಿಸಿ ಕೊಂಡಾಡುವನು ನಿನ್ನನು

೭೫

ಹೇ ಅಚಲತನಯೇ, ಹರನ ಕೋಪಜ್ವಾಲೆ
ಬಾಚಿ ತಬ್ಬುತಲಿರಲು ಬೇಯುವೊಡಲಿನ ಮದನ
ನಿನ್ನ ಗಂಭೀರವಹ ನಾಭೀಸರಸಿಯ ಸಂಗವ ಬೆಳಸಿಕೊಂಡನಲ್ತೆ;
ಅದುವೆ ಕಾರಣವಾಗಳಲ್ಲಿಂದ ತೆಳ್ಳನೆಯ
ಹೊಗೆಬಳ್ಳಿಕೊನರಿ ಕುಡಿವರಿದು ಹಬ್ಬಿತು ನೇರ;
ಜನವದನು, ಎಲೆ ತಾಯೆ, ನಿನ್ನ ರೋಮಾವಲೀ ಲೇಖೆಯೆಂದರಿಯುತಿಹುದು

೭೬

ಹೇ ಶಿವೇ! ನಿನ್ನ ಬಡನಡುವಿನಲಿ ಕಾಲಿಂದಿ
ತೊರೆಯ ಬಲು ತೆಳ್ಳನೆಯ ತೆರನಾಕೃತಿಯ ತಾನು
ತಳೆದಿರುವವೊಲು ತೋರುಹುದಾವುದದು ಸುಬುದ್ಧಿಗಳಿಗಾರೋಮರಾಜಿ
ಕುಚಕಲಶಗಳ ನಡುವೆ ಸಿಲುಕಿಯವುಗಳ ಪರ–
ಸ್ಪರವಿಮರ್ದನದ ದೆಸೆಯಿಂದ ತೆಳುತೆಳುವಾಗಿ
ಆಗಸವು ಹೊಕ್ಕುಳಕುಳಿಯ ಹೊಕ್ಕವೊಲು ತೋರುತೊಪ್ಪುತಿಹುದಲ್ತೆ ತಾಯೇ

೭೭

ಹೇ ಗಿರಿಸುತೇ! ನಿನ್ನ ನಾಭಿ ಗಂಗಾನದಿಯ
ನೀರೊಳಲುಗದಿಹ ಸುಳಿ, ಮೊಲೆಮೊಗ್ಗುಗಳ ಬಿಟ್ಟ
ರೋಮಾವಲೀಲತೆಯ ಪಾತಿ, ಮನ್ಮಥನ ತೇಜೋಽಗ್ನಿ ಬೆಳಗುವ ಕುಂಡವು;
ರತಿಯಲೀಲಾಗಾರ, ರಜತಗಿರಿಗೊಡೆಯನಹ
ಸರ್ವೇಶ್ವರನ ನಯನಗಳ ತಪಸ್ಸಿದ್ಧಿ ಸ–
ರ್ವಸ್ವವೂ ಹೋಗುವ ಗುಹೆಯದ್ವಾರ– ಇಂತೆಂದದರ ಗೆಲುವ ಹೊಗಳಲೆಂತು

ಆ ನಿನ್ನ ಮೃದುಪಾನ ತಾಡನದ ಸೌಖ್ಯವನು
ಅನುಭವಿಸಲೆಳಸುವ ವಿಹಾರವನದ ಅಶೋಕ
ವೃಕ್ಷವನು ಕಂಡು ಪಶುಪತಿ ಮತ್ಸರಗ್ರಸ್ತನಾಗುವನು ಬಹಳವಾಗಿ

೮೫

ನಿನ್ನೊಡನೆ ನಲಿವಂದು ಹೆಸರುತಪ್ಪುತ ಕರೆದು
ತನ್ನ ತಪ್ಪನ್ನರಿತು ದಿಕ್ಕುಗಾಣದೆ ತಲೆಯ
ತಗ್ಗಿಸಿದ ಪತಿಯ ಹಣೆಯನು ನಿನ್ನ ಚರಣಕಮಲವು, ದೇವಿ, ತಾಡಿಸುತಿರೆ
ದಹನಗೊಂಡಂದಿನಿಂದೊಳಗೆ ಕುದಿಯುತ್ತಿದ್ದ
ಹರವೈರಿಯಿಂದ ಹೊರಹೊಮ್ಮಿತೋ ಗೆಲುವುದನಿ
ಯೆನುವಂತೆ ನಿನ್ನನೂಪುರವಲುಗಿ ಘಲಿರುಘಲ್ ಘಲಿರೆನುತ ದನಿಗೈದುವು

೮೬

ಎಲೆ ತಾಯೆ, ಮಂಜುವೆಟ್ಟದ ಕೊರೆತಕಂಜದೆಯ
ಚರಿಪಚತುರತೆಯುಳ್ಳ, ಹಗಲಿರುಳಲೊಂದೆ ಬಗೆ–
ಯೊಪ್ಪಿರುವ, ಭಕ್ತರಿಗೆ ಹಿರಿಯಸಿರಿಯನು ಕೊಡುವ ನಿನ್ನಡಿಯ ತಾವರೆಗಳು–
ಮಂಜಿಗಂಜುತಸೊರಗಿ ಇರುಳಿನಲಿ ಮರೆದೊರಗಿ
ಬರಿಯ ನೆಲೆವೀಡನಿತೆ ಮಾಲಗುಮಿಗೆನಿಸಿರುವ
ಸರಸಿಯ ಸರೋಜವನು ತಾವು ಗೆಲ್ಲುತ್ತಿಹವು ಸೋಜಿಗವದೇನದರೊಳು

೮೭

ಹೇ ದೇವಿ, ಕೀರುತಿಗೆ ನೆಲೆವೀಡು ತಾಣವ–
ಲ್ಲಾಪದಕೆ, ಇಂತಪ್ಪ ಆ ನಿನ್ನ ಮುನ್ನಡಿಯ–
ನೆಂತು ಜಾಣರು ಕವಿಗಳಾಮೆಬೆನ್ನಿನ ಗಟ್ಟಿಚಿಪ್ಪಿಗೆಣೆಯೆಂದಿರುವರು;
ಎಂತು ಆ ಮೆಲ್ಲಡಿಯನೆತ್ತಿ ಸಾಣೆಯಕಲ್ಲ–
ಮೇಲಂದು ನಿನ್ನ ಮದುವೆಯವೇಳೆ ತನ್ನೆರಡು
ಕೈಗಳಿಂದ ಪುರಾರಿ ತುಂಬುದಯೆಮನದವನು ತಾನಿರಿಸೆ ಮನದಂದನು

೮೧

ಹೇ ಗಿರಿಸುತೇ! ವೇದವಿಧಿಗಳನು ಬಲ್ಲವಳೆ!
ಉತ್ತಮೋತ್ತಮವಾದ ಆನೆಗಳ ಸೊಂಡಿಲನು
ಬಂಗಾರದಿಂದಾದ ಬಾಳೆಕಂಬವನು ನಿನ್ನೆರಡು ತೊಡೆಯಿಂದ ಗೆಲುತ,
ಮಂಡಿಯೂರುತ ಮಂಡೆಯನು ಬಾಗಿಸುತ ಪತಿಗೆ
ನಿತ್ಯ ನಮಿಸುತ್ತ ಬಲು ಕಠಿನತೆಯನಾಂತಿರುವ
ಗುಂಡುಮಂಡಿಗಳಿಂದ ದಿಗ್ಗಜದ ಕುಂಭದ್ವಯವ ಗೆಲ್ಲುತಿದ್ದೆ

೮೨

ಗಿರಿಸುತೇ! ರುದ್ರನನುಗೆಲಲೆಂದು ಪಂಚಶರ–
ನಿಮ್ಮಡಿಯ ಬಾಣಗಳನೊಳಗೊಂಡ ಬತ್ತಳಿಕೆ
ಯೆರಡನತಿಶಯವೆನಿಸೆ ನಿನ್ನ ಜಂಘೆಗಳಿಂದ ನಿರ್ಮಾಣ ಮಾಡಿರುವನು;
ಆ ಜಂಘೆವತಳಿಕೆಯಗ್ರದಲಿ ಕಾಣುತಿವೆ
ಉಗುರುಕೊನೆರೂಹಾಗಿ, ನಮಿತದೇವೇಂದ್ರಾದಿ
ಸುರಮಕುಟಶಾಣೆಯಲಿ ಮಸೆದ ಹತ್ತಂಬುಗಳ ಹೊಳೆಹೊಳೆವ ಕೂರ್ಮೊನೆಗಳು

೮೩

ಎಲೆ ತಾಯೆ, ನಿನ್ನಾವ ಚರಣಯುಗ ವೇದ–
ಶಿರಕಾಗಿಹುದೊ ಭೂಷಣವು, ನಿನ್ನಾವ ಪಾದಗಳ
ತೊಳೆದ ಪಾವನ ಜಲವು ಶಿವನ ಜಡೆಮುಡಿಯಲಿಹ ಗಂಗೆ ತಾನಾಗಿರುವುದೋ
ನಿನ್ನ ಯಾವಲತಿಗೆಯ ಬಣ್ಣಸಿರಿ ಹರಿಯ ಚೂ–
ಡಾಮಣಿಯ ಕಾಂತಿಯನು ಕೆಂಪಾಗಿ ಮಾಡಿಹುದೊ
ಆ ಪಾದಪದ್ಮಯುಗಲವನೆನ್ನ ಶಿರದ ಮೇಲಿರಿಸಮ್ಮ ಕರುಣೆಯಿಂದ

೮೪

ಕಣ್ಸವಿಯ ಕಮನೀಯ ಕಾಂತಿಯಿಂದೊಪ್ಪುವಲ–
ತಿಗೆಯ ಲೇಪದ ನಿನ್ನ ಚಾರು ಚರಣಯುಗಕ್ಕೆ
'ನಮಿಸುವೆವು ನಮಿಸುವೆವು ಹೇ ದೇವಿ' ಎಂದು ನುಡಿಯುತ ನಾವು ನಲಿಯುತಿಹೆವು;

ಚೆಲುವಾದ ಮಣಿಖಚಿತ ನೂಪುರಧ್ವನಿಗಳಾ
ನೆವದಿಂದಲಾ ಅಂಚೆಗಳಿಗೆ ಚೆಲುನಡೆಯ ಕಲಿಕೆಯನು ಕಲಿಪಂತಿರುವುದು

೯೨

ಉಂಗುರುಂಗುರಗುರುಳು ನಿಜದೆ ಮೆಲುನಗೆಯರಳು
ಮೆಯ್ಶಿರೀಷದ ಮೆಲುಪು ಕುಚತಟವು ಕಲ್ನುಣುಪು
ನಡುವು ಬಲುಬಡವು ದೊಡ್ಡವು ಕುಚನಿತಂಬಗಳು
ಇಂತಪ್ಪ ಶಿವನಕರುಣಾರುಣಾರೂಪೆ ಶಿವೆ ಪೊರೆಗೆ ಜಗವ

೯೩

ಹೇ ದೇವಿ, ತ್ರಿಪುರಾಂತಕನ ಪಟ್ಟದರಸಿ ನೀ
ನಾಗಿಯವನಂತಃಪುರದ ವೊಡತಿಯಾಗಿರುವೆ,
ಅದರಿಂದಲಲ್ತೆ ಪೂಜೆಯ ವೋಜೆ ಚಂಚಲಮನಸ್ಕರಿಗೆ ಸುಲಭವಲ್ಲ;
ಅಂತಿರಲು ದೇವೇಂದ್ರ ಮುಂತಪ್ಪ ದೇವತೆಗ–
ಳೆಲ್ಲರೀ ನಿನ್ನ ಭವನದ ಬಾಗಿಲಾಚೆಯೇ
ನೆಲಸಿದಣಿಮಾದ್ಯಷ್ಟಸಿದ್ಧಿಗಳ ಕೂಡಿರುತ ಸಕಲಸಿದ್ಧಿಯ ಪಡೆವರು

೯೪

ಎಲೆ ದೇವಿ, ಹರಿಹರ ಬ್ರಹ್ಮರುದ್ರರುಗಳಾ
ನಿನ್ನ ಪವಡಿಪ ಮಂಚರೂಪವನೆ ಹೊಂದಿದರು,
ಶಿವನು ತಾನಚ್ಚಬಿಳಿಯವನಾಗಿ ಮೇಲುಹಾಸಿನ ತೋರ್ಕೆಯವನಾದನು;
ನಿನ್ನ ಮೈವೆಳಗಿನಾ ಮಾರ್ಪೊಳಪಿನಿಂದಾದ
ರಾಗ ರಂಜಿತರಕ್ತ ವರ್ಣತ್ವಕಾರಣದೆ
ಶೃಂಗಾರರಸದೆ ಮೈವೆತ್ತುದೆನೆ ಕಂಗಳಿಗೆ ಕೌತುಕವ ಕರೆಯುತಿಹನು

೯೫

ಕಪ್ಪುಕಲೆಯಲ್ಲವದು ಕಸ್ತೂರಿ, ಇಂದು ಬಿಂ–
ಬವದಲ್ಲ ಶುದ್ಧಜಲ, ಹದಿನಾರು ಕಲೆಯಲ್ಲ
ಪರಿಮಳದ ಕರ್ಪೂರವಿವು ತುಂಬಿರುವ ಪಚ್ಚೆಗಲ್ಲಿನ ಕರಂಡವದನು

೮೮

ಹೇ, ಚಂಡಿ! ದೇವಲೋಕದ ದಿವ್ಯವೃಕ್ಷಗಳು
ತಳಿರ್ಗೈಗಳಿಂದ ದೇವತೆಗಳಿಗೆ ಫಲಗಳನು
ಕೊಡುತಿಹವು, ಅದರೊಳೇನತಿಶಯವದೆಲೆ ದೇವಿ, ಆ ವೃಕ್ಷಗಳನು–
ನಾಕಿಗಳಿಗೆಂತಂತೆಯೇದರಿದ್ರರಿಗೆಯೂ
ಸತತ ಸಿರಿಯನು ಕೊಡುವ ನಾಕನಾರಿಯರ ಕರ–
ಕಮಲಗಳ ಮುಗುಳಿಸುವ ನಖಶಶಿಗಳಿಂ ನಿನ್ನ ಚರಣಗಳು ನಗುತಿರುವುವು

೮೯

ಎಲೆ ತಾಯೆ, ಪೇಳಮ್ಮ ಅಲತಿಗೆಯ ರಸಲೇಪ–
ದಿಂದ ಸೊಬಗಾಂತ ನಿನ್ನಯ ಪಾದವನು ತೊಳೆದ
ನೀರನೀ ವಿದ್ಯಾರ್ಥಿಯಾಗಿರುವ ನಾನೆಂದು ಧನ್ಯನಾಗುವೆ ಸೇವಿಸಿ;
ಹುಟ್ಟುಮೂಗರಿಗಾದೊಡೆಯು ಕವಿತ್ವದ ಶಕ್ತಿ–
ಯನು ಕೊಡುವ ಕಾರಣದಿನಾ ತೀರ್ಥಸೇವನೆಯು
ಸರಸತಿಯ ಮೊಗದಾವರೆಯ ತಾಂಬುಲದ ರಸದ ಮಹಿಮೆಗದು ಮಿಗಿಲೆನಿಪುದು

೯೦

ಹೇ ದೇವಿ! ಅವರವರ ಬಯಕೆಗನುಗುಣವಾಗಿ
ದೀನರಿಗೆ ಸಿರಿಯನನವರತವೂ ಕೊಡುತಿರುವ,
ಚೆಲುವನೊಟ್ಟೈಸಿದಂತಿರುವ ಮಕರಂದವನು ಬಹುವಾಗಿ ಹೊರಸೂಸುವ
ಮಂದಾರಪುಷ್ಪಗುಚ್ಛದ ಸೊಬಗಿನಿಂದೊಪ್ಪು–
ತಿಹ ನಿನ್ನವೀಯಡಿಗಳಲಿ ಮುಳುಗಿ ಸತತವೂ
ಆರಡಿತನವ ಪಡೆಯಲೆನ್ನಾರು ಕರಣಚರಣಗಳಿಂದ ಜೀವವೆನ್ನಾ

೯೧

ಚಾರುಚರಿತೇ! ನಿನ್ನ ಅಡಿಯಿಡುವ ಲೀಲಾವಿ–
ಲಾಸವನು ಕಲಿಯಬೇಕೆನುವ ಮನವುಳ್ಳ ಮನೆ–
ಯಂಚೆಗಳು ತಪ್ಪುಹೆಜ್ಜೆಯ ನಿಡುವ ತಮ್ಮ ನಡಿಗೆಯ ಬಗೆಯ ಬಿಡಲೊಲ್ಲವು;
ಅದುವೆ ಕಾರಣ ನಿನ್ನ ಚರಣ ಕಮಲವು ತನ್ನ

೯೯

ನಿನ್ನ ಭಜಿಪನು ಸರಸ್ವತಿ ಲಕ್ಷ್ಮಿಯವರೊಡನೆ
ವಿಹರಿಸುತ ವಿಧಿಹರಿಗಳಿಗೆ ಕರುಬುಹುಟ್ಟಿಪನು,
ರಮ್ಯದೇಹವ ಪಡೆದು ರತಿಯ ಪಾತಿವ್ರತ್ಯಭಂಗಗೈವನು, ನಿಶ್ಚಿತ;
ಇದಕಿಂತ ಮಿಗಿಲಾಗಿ, ಪಶುಪಾಶ ಬಂಧವನು
ಹರಿದು ಬಿಡುಗಡೆವಡೆದು ಚಿರಕಾಲ ಜೀವಿಸುವ
ಪರಲೋಕದಾನಂದ ರಸವ ಸವಿವನು, ತಾಯೆ, ನೀನು ಕೃಪೆದೋರಲಂದು

೧೦೦

ಹೇ ಜನನಿ! ಅವನ ಪ್ರದೀಪಕಿರಣಗಳಿಂದ
ದಿನಕರಗೆ ನೀರಾಜನವದೆಂತೊ ಅಮೃತಕರ–
ನಿಗೆ ಚಂದ್ರಕಾಂತಶಿಲೆಯಿಂದುಗುವ ನೀರ್ಪನಿನರ್ಘ್ಯವನು ಕೊಡುವುದೆಂತೊ
ಜಲನಿಧಿಯ ಜಲದಿಂದ ಬೊಗಸೆನೀರನುಕೊಂಡು
ಅದಕದನೆ ಸಲಿಸುತ್ತ ತೃಪ್ತಿಪಡಿಸುವುದೆಂತೊ
ಅಂತಲ್ತೆ ನಿನ್ನ ವಾಗ್ವರದಿಂದ ಮೂಡಿದೀ ವಚನರಚನಾಸ್ತೋತ್ರವು

–ಹರಿಃ ಓಂ ತತ್ಸತ್–

ಪ್ರತಿದಿವಸವೂ ನೀನು ಭೋಗಿಸಲು ಬಳಸುತಿರೆ
ಬಂದಾಗಲದನು ವಿಧಿ ನಿನ್ನ ಭೋಗಕ್ಕೆಂದೆ,
ಎಲೆದೇವಿ, ಆ ಪರಿಮಳ ದ್ರವ್ಯದಿಂದ ತುಂಬುವನಲ್ತೆ ಮರಳಿ ಮರಳಿ

೯೬

ಹೇ ನಿಷೇವ್ಯೇ, ನಿತ್ಯೆ, ನಿನ್ನೊಡಲಿನಿಂದುದಿಸಿ
ಕಿರಣರೂಪದಿ ಹೊಮ್ಮಿದಣಿಮಾದಿ ಸಿದ್ಧಿಗಳು
ಸೇವಿಸುತ್ತಿರುವ ನಿನ್ನನು ಸದಾ ನಾನೆಂದು ಯಾವಾತ ಭಾವಿಸುವನೋ
ಮುಕ್ಕಣ್ಣಮೈಮೆಯನು ಹುಲುಕಡ್ಡಿಗೆಣೆಮಾಡಿ–
ದಾ ಮಹಾಮಹಿಮಗೋಹೋ ಮಹಾಪ್ರಲಯ–
ಕಾಲಾಗ್ನಿಯೇ ನಿರಾಜನವಿಧಿಯಗೈವುದಚ್ಚರಿಯೆ, ಅದು ನಿನಗೆ ಕೊನೆಗೆ

೯೭

ಹೇ ಸತಿ! ವಿಧಾತ್ರನ ಕಳತ್ರವನ್ನೆನಿತೆನಿತು
ಕವಿಜನರು ತಾವ್ ಭಜಿಸದಿಹರು? ಯಾವುದೊ ಧನವ
ಪಡೆದು ಧನಪತಿಯೆನಿಸಿದಾತಾ ಲಕ್ಷ್ಮೀಪತಿಯು ತಾನಾಗದಿಹನು ಜಗದಿ?
ಸತಿಯೆನಿಸಿಕೊಳ್ವಳೊಳು ಸರ್ವೋತ್ತಮೇ ದೇವಿ,
ನಿನ್ನ ವಕ್ಷಸ್ಥಲಾಲಿಂಗನದ ಸೌಭಾಗ್ಯ–
ವದು ಮಹಾದೇವನನ್ನುಳಿದು ಕುರವಕತರುವಿಗೂ ಸುಲಭವಲ್ಲದಿಹುದು

೯೮

ಹೇ ಪರಬ್ರಹ್ಮಮಹಿಷೀ, ಚತುರ್ಮುಖನೆನಿಪ
ಬ್ರಹ್ಮನವಧೂ ವಾಣಿ, ಹರಿಯ ಹೆಂಡತಿ ಪದ್ಮೆ,
ಹರನ ಸಹಚರಿಯದ್ರಿತನಯೆ ನೀನೆನುತಾಗಮನರಿತವರು ಪೇಳ್ವರು;
ನೀ ತುರೀಯಳು ಸಕಲ ವಿಶ್ವವೂ ನೀನಹುದು
ಅರಿಯಲಸದಳವಾದಪಾರಮಹಿಮಾಸ್ಪದೆಯು
ನೀ ಮಹಾಮಾಯೆ, ತಾಯೇ, ನೀನು ಭ್ರಮೆ ಹುಟ್ಟಿಸುತ್ತಿರುವೆ ಬಹುರೂಪಿಣಿ

# ಅನುಬಂಧಗಳು

೧. ಸಂಪುಟ ೮(ಭಾಗ ೧–೨)ರ ವಿಷಯ ಸೂಚಿ
೨. ಎಂವಿಸೀ ಜೀವನಪಥ ಸೂಚಿ
೩. ಎಂವಿಸೀ ಸಮಗ್ರ ಗ್ರಂಥ ಸೂಚಿ
೪. ಎಂವಿಸೀ ಸಮಗ್ರ ಲೇಖನ ಸೂಚಿ
೫. ಎಂವಿಸೀ ಅವರನ್ನು ಕುರಿತ ಗ್ರಂಥಲೇಖನ ಸೂಚಿ

# ಅನುಬಂಧ – ೧

# ಎಂ.ವಿ.ಸೀ ಜೀವನಚರಿತ್ರೆ ಮತ್ತು ಅನುವಾದ ಸಾಹಿತ್ಯ ವಿಷಯ ಸೂಚಿ

## ಸಂಪುಟ ೮ರ(ಭಾಗ ೧ ಮತ್ತು ೨) ಸೂಚಿ

[ಸೂಚನೆ : ಎಂ.ವಿ.ಸೀ. ಅವರ ಜೀವನಚರಿತ್ರೆ ಮತ್ತು ಅನುವಾದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಮಗ್ರ ಗ್ರಂಥ–ಲೇಖನಗಳ ಸೂಚಿ ಇಲ್ಲಿದೆ. ಭಾಗ ೧ ರಿಂದ ೩ ರವರೆಗೆ ಸಂಪುಟ ೮ ಭಾಗ ೧ರಲ್ಲಿ ಪ್ರಕಟವಾಗಿದೆ. ಭಾಗ ೪ ರಿಂದ ೯ ವರೆಗೆ ಸಾಹಿತ್ಯ ಸಂಪುಟ ೮ ಭಾಗ ೨ರಲ್ಲಿ ಪ್ರಕಟವಾಗಿದೆ.]

**ಗುಂಪು ೧ – ಆತ್ಮಕಥೆ**
**ನನ್ನ ಸಾಹಿತ್ಯ ಜೀವನ ಸ್ಮೃತಿಗಳು (ಆತ್ಮಕಥೆ)**
ಗ್ರಂಥ : ಎಂ.ವಿ.ಸೀ. ಅವರಿಗೆ ಅರ್ಪಿಸಿದ ಅಭಿವಂದನ ಗ್ರಂಥ 'ಆಸ್ವಾದ'
ಪ್ರಕಾಶಕರು : ಉದಯಭಾನು ಕಲಾ ಸಂಘ, ಬೆಂಗಳೂರು
ಇ. ೧೯೮೩ ಸಂ : ಶ್ರೀವತ್ಸ, ಅನಂತಪದ್ಮನಾಭ ರಾವ್, ಎಚ್ಎಂ ರಂಗನಾಥ್. ಪುಟಗಳು ೨೮

**ವಿದ್ಯಾರ್ಥಿಯಾಗಿ ನಾನು ಕಂಡಂತೆ (ಪ್ರಸಿದ್ಧ ಕರ್ನಾಟಕ)**
**ಗುಂಪು ೨ – ಜೀವನಚರಿತ್ರೆ**
**ಎ.ಆರ್. ರಾಜರಾಜವರ್ಮ (ಜೀವನಚರಿತ್ರೆ)**
(ಕೆ.ಎಂ. ಜಾರ್ಜ್ ಅವರ ಇಂಗ್ಲಿಷ್ ಕೃತಿಯ ಅನುವಾದ)
ಪ್ರ. : ಕೇಂದ್ರ ಸಾಹಿತ್ಯ ಅಕಾಡೆಮಿ ೧೯೮೬ ಪುಟಗಳು ೮೬

೯. ಕನ್ನಡಕ್ಕೆ ಒಲಿದು ಬಂದ ಶ್ರೀ
೧೦. ಬಿಎಂಶ್ರೀ ಅವರ ಬಹುಮುಖದ ವಿದ್ವತ್ತು, ಬಹುಮುಖ ಪ್ರತಿಭೆ
೧೧. ಪರಿಷತ್ತನ್ನು ಬೆಳೆಸಿದ ಬಿಎಂಶ್ರೀ
೧೨. ಶ್ರೀಯವರ ವ್ಯಕ್ತಿತ್ವದಲ್ಲಿಯ ವಿರೋಧಾಭಾಸಗಳು
೧೩. ಶ್ರೀ ಸ್ಮೃತಿ
(೯–೧೩ ಲೇಖನಗಳು 'ನಾಡೋಜ ಬಿಎಂಶ್ರೀ' ಗ್ರಂಥದಲ್ಲಿ ಪ್ರಕಟವಾಗಿದೆ)
೧೪. ಶ್ರೀ ಬಸವಣ್ಣನವರು
೧೫. ಮಾರ್ಗದರ್ಶಕ (ರಾಮಕೃಷ್ಣ ಪರಮಹಂಸರು)
೧೬. ಶ್ರೀ ಪುರಂದರದಾಸರು
(೧೪–೧೬ ಲೇಖನಗಳು 'ಬಾಳಿನಬುತ್ತಿ' ಗ್ರಂಥದಲ್ಲಿ ಪ್ರಕಟವಾಗಿವೆ)
೧೭. ಗೋವಿಂದ ಪೈ
(ಗುಡಿನುಡಿಯ ಗೊಮ್ಮಟ)
೧೮. ಬಿಎಂಶ್ರೀ
ವಿದ್ಯಾರ್ಥಿಯಾಗಿ ನಾನು ಕಂಡಂತೆ
೧೯. ಟಿ.ಎಸ್. ವೆಂಕಣ್ಣಯ್ಯ
ಟಿ.ಎಸ್.ವಿ. – ಗುರುವಿನ ಒಂದು ಭಾವಚಿತ್ರ
೨೦. ಎ.ಆರ್. ಕೃ
ಪೂಜ್ಯ ಎ.ಆರ್. ಕೃ ಅವರನ್ನು ಕುರಿತು ನಾಲ್ಕು ನೆನಪಿನ ಮಾತು
೨೧. ಡಿ.ವಿ.ಜಿ.
ಕಗ್ಗದ ಮಂಕುತಿಮ್ಮನಿಗೆ
'ನನ್ನನ್ನು ಕಂಡರಿಸಿದ ರೂವಾರಿ'
೨೨. ತೀ.ನಂ.ಶ್ರೀ
'ನಮೋಗುರುವೆ'
ನಾನು ಕಂಡ ತೀನಂಶ್ರೀ
೨೩. ಮಾಸ್ತಿ
ಶ್ರೀನಿವಾಸನಿಗೆ
'ಗುರುಸ್ಥಾನಿಯರು'
೨೪. ಕೆ. ವೆಂಕಟಪ್ಪ
'ಕಲಾತಪಸ್ವಿ'

**ಗುಂಪು ೩ – ಕಾದಂಬರಿ – ೧**

**ಏಳು ಇಪ್ಪಾರಿನ ಮನೆ (ಕಾದಂಬರಿ)**

(ನ್ಯಾಥಾನಿಯಲ್ ಹಾರ್ಥಾರ್ನ್ ಅವರ 'ದಿ. ಹೌಸ್ ಆಫ್ ದಿ ಸೆವನ್ ಗೇಬಲ್ಸ್' ಕಾದಂಬರಿಯ ಅನುವಾದ)

ಪ್ರ : ಕಾವ್ಯಾಲಯ, ಮೈಸೂರು, ೧೯೬೬ ಪುಟಗಳು ೪೪೦

**ಜೂಡಿಲಕ್ಷ್ಮಿ (ಕಾದಂಬರಿ) – ೨**

(ನಯೋಮಿ ಮಿಚಿಸನ್ ಅವರ 'ಜೂಡಿ ಅಂಡ್ ಲಕ್ಷ್ಮಿ' ಕಾದಂಬರಿಯ ಅನುವಾದ) ೧೯೬೫, ಪುಟಗಳು ೧೫೬

ಪ್ರ : ನ್ಯಾಷನಲ್ ಬುಕ್ ಟ್ರಸ್ಟ್‌ರ ಶಾರದಾ ಪ್ರಕಟನಾಲಯ, ಬೆಂಗಳೂರು.

**ಗುಂಪು ೪ (ವಿಜ್ಞಾನ)**

**ಆಕಾಶಯಾನ (ವಿಜ್ಞಾನ ಗ್ರಂಥ)**

(ಬಿ.ಕೆ. ಎನ್ ರಾವ್ ಅವರ 'ಏವಿಯೇಷನ್' ಗ್ರಂಥದ ಅನುವಾದ)

ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ೧೯೪೨, ಪುಟಗಳು ೧೩೪

**ಗುಂಪು ೫ – ಸ್ತೋತ್ರ**

**ಶ್ರೀ ಶಂಕರಾಚಾರ್ಯ ವಿರಚಿತ ಸೌಂದರ್ಯಲಹರೀ**

(ಶಂಕರರ ಸಂಸ್ಕೃತ ಸ್ತೋತ್ರದ ಅನುವಾದ) 'ಹಸ್ತಪ್ರತಿ ಅಪ್ರಕಟಿತ'

**ಗುಂಪು – ೬ ವ್ಯಕ್ತಿ ಚಿತ್ರಗಳು**

೧. ಸೋಸಲೆ ಅಯ್ಯಾಶಾಸ್ತ್ರಿ
೨. ಕಾನಕಾನಹಳ್ಳಿ ವರದಾಚಾರ್ಯ
೩. ನಾರಾಯಣಶಾಸ್ತ್ರಿ ಎನ್.ಎಸ್.
೪. ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ
೫. ಮೋಟಗಾನಹಳ್ಳಿ ಶಂಕರಶಾಸ್ತ್ರಿ
೬. ನಾರಾಯಣ ಶ್ರೀನಿವಾಸ ರಾಜಪುರೋಹಿತ
೭. ವಾಸುದೇವಾಚಾರ್ಯ
೮. ನಾನು ಕಂಡ ಶಿವರುದ್ರಪ್ಪನವರು

(೧–೮ ಲೇಖನಗಳು ಕನ್ನಡ ವಿಷಯ ವಿಶ್ವಕೋಶದಲ್ಲಿ ಪ್ರಕಟವಾಗಿದೆ)

**ಗುಂಪು ೭ ಮಕ್ಕಳ ಜೀವನಚರಿತ್ರೆಗಳು**

೧. ರನ್ನ
೨. ಯುಧಿಷ್ಠಿರ
೩. ವೈಣಿಕವಿದ್ಯಾನ್ ಎಲ್. ರಾಜರಾವ್
೪. ವಿವೇಕಾನಂದ
೫. ಶ್ರೀರಾಮಕೃಷ್ಣಪರಮಹಂಸ

(೧,೨,೩. ಮಕ್ಕಳ ಸಾಹಿತ್ಯ ನಾಟಕ ಸಂಪುಟ ೫ ರಲ್ಲಿ ಪ್ರಕಟವಾಗಿದೆ. ೪ ಲಭ್ಯವಿಲ್ಲ. ಪ್ರಬಂಧಗಳು ಮತ್ತು ವ್ಯಕ್ತಿಚಿತ್ರಗಳು ಸಂಪುಟದಲ್ಲಿ ಪ್ರಕಟವಾಗಿದೆ.)

**ಗುಂಪು ೮ (ವ್ಯಕ್ತಿ ಕಥೆಗಳು)**

೧. ಗುಮಾಸ್ತೆ ಗುಂಡಪ್ಪ
೨. ನಾಟಕದ ಸುಬ್ಬಣ್ಣ
೩. ಅರಮನೆ ಶಾಮರಾಯರು
೪. ಭಿಕ್ಷಾನ್ನದ ಭಾಗೀರಥಮ್ಮ
೫. ಜಗಲಿ ಜೋಯಿಸರು
೬. ಹಾಲಿನ ಹನುಮಕ್ಕ
೭. ಕೊಟ್ಟಣದ ನೀಲಮ್ಮ
೮. ಆನೆಕಾಲು ರಾಮರಾಯರು
೯. ಒಂಟೆ ಸಂಜೀವ
೧೦. ಕಡಲೆಪುರಿಯ ಕೆಂಪಮ್ಮ
೧೧. ವೀಳ್ಯೆದೆಲೆಯ ಮಂಚಮ್ಮ
೧೨. ಔಷಧದ ಅಜ್ಜಮ್ಮ
೧೩. ಅಂಚೆ ಅನಂತಯ್ಯ

(ಎಂವಿಸೀ ಅವರ ಜೀವನ ನಾಟಕ ಗ್ರಂಥದಲ್ಲಿ ೧–೩ ವ್ಯಕ್ತಿಗಳು ಪ್ರಕಟವಾಗಿವೆ. ಇದು 'ಎಂ.ವಿ.ಸೀ. ಅವರ ಸಮಗ್ರ ಸಣ್ಣಕಥೆಗಳು' (ಸಂಪುಟ ೩–ಗ್ರಂಥದಲ್ಲಿ ಸೇರಿದೆ.)

೨೫. ಬೇಂದ್ರೆ
ಶ್ರೀ ದ.ರಾ. ಬೇಂದ್ರೆ
'ಚಾರಣಕವಿ ಬೇಂದ್ರೆ'
೨೬. ವಿ.ಸೀ
ವಿ. ಸೀತಾರಾಮಯ್ಯ
'ವಿ.ಸೀ. ನಾನು ತಿಳಿದಹಾಗೆ'
೨೭. ರಾಜರತ್ನಂ ಜಿ.ಪಿ
ಸ್ನೇಹ ಸಾಹಿತ್ಯ ಪರಿಚರ್ಯೆ
೧೭–೨೭ ಲೇಖನಗಳು
'ಪ್ರತಿಮಾ ಗೃಹ' ಪ್ರ. ರಾಘವ ಪ್ರಕಾಶನ, ಬೆಂಗಳೂರು
೧೯೯೦. ೧೪೦ ಪುಟಗಳು
೨೮. ವಿಮರ್ಶಕ ನರಸಿಂಹಸ್ವಾಮಿ
೨೯. ಜಿ. ನಾರಾಯಣ ೧, ೨
೩೦. ಸ್ನೇಹದ ನೆನಪು (ವಿಮರ್ಶಕ ಸಿ.ನರಸಿಂಹಮೂರ್ತಿ)
೩೧. ಚೌಂಡರಸ
೩೨. ತಿಮ್ಮ
೩೩. ಉದಯಾದಿತ್ಯ
೩೪. ಜ್ಯೋತಿರ್ಲಿಂಗಾನುಭವಿ ಶ್ರೀ ಜ.ಚ.ನಿ.
೩೫. ತುಂಬಲೂರಾಚಾರ್ಯ
೩೬. ಪಂಪ ೧–೨
೩೭. ಕರ್ಣನ ಒಂದು ಚಿತ್ರ
೩೮. ಪುರಂದರದಾಸರು
೩೯. ಪೂಜ್ಯ ಕೃಷ್ಣಶಾಸ್ತ್ರಿಗಳಿಂದ ಕಲಿತಪಾಠ
೪೦. ಕುಮಾರವ್ಯಾಸ
೪೧. ಮಾ.ನಾ. ಚೌಡಪ್ಪ
೪೨. ಮಾಸ್ತಿ
೪೩. ದೇಜಗೌ
೪೪. ಹರಿಹರ
(೨೮ ರಿಂದ ೪೪ ಲೇಖನಗಳು ಮುನ್ನುಡಿ ಭಾಷಣ ಲೇಖನಗಳು ಸಂಪುಟ ೭ರಲ್ಲಿ ಪ್ರಕಟವಾಗಿವೆ)

## ಅನುಬಂಧ – ೨

## ಎಂ.ವಿ.ಸೀ. ಅವರ ಜೀವನಪಥ

೧೯೧೦ : ಜನನ, ಮೈಸೂರು ಸೆಪ್ಟೆಂಬರ್ ೯ (ಸಾಧಾರಣ ಸಂವತ್ಸರ ಭಾದ್ರಪದ ಶುದ್ಧ ಷಷ್ಠಿ)

೧೯೧೬–೨೬ : ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಿಕ್ಷಣ: (ಸರ್ಕಾರಿ ಪ್ರಾಥಮಿಕ ಹಾಗೂ ಬನುಮಯ್ಯನವರ ವಿದ್ಯಾಶಾಲಾ, ಮೈಸೂರು.)

೧೯೨೦ : ಸಂಗೀತಾಭ್ಯಾಸ (ಮೃದಂಗ) ಪ್ರಾರಂಭ. ಮುಂದೆ ಎಲ್.ರಾಜಾರಾಯರೊಂದಿಗೆ ಅಭ್ಯಾಸ.

೧೯೨೧ : ಚಿತ್ರಕಲಾಭ್ಯಾಸ ಪ್ರಾರಂಭ.

೧೯೨೨ : ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ Pen & Ink draw in ರೇಖಾಚಿತ್ರಗಳಿಗೆ ಪ್ರಶಸ್ತಿ ಪತ್ರ (Certificate of merit)

೧೯೨೩ : ಮದರಾಸಿನ ಕಾಂಗ್ರೆಸ್ ವಸ್ತುಪ್ರದರ್ಶನದಲ್ಲಿ ಅದೇ ಚಿತ್ರಗಳಿಗೆ ಪ್ರಶಸ್ತಿ ಪತ್ರ.

೧೯೨೮ : ವಿವಾಹ, ಧರ್ಮಪತ್ನಿ ಸೌ॥ಸಾವಿತ್ರಮ್ಮ ಅವರೊಂದಿಗೆ.

೧೯೩೦ : ಮೊದಲ ಕವನ 'ಬೀದಿಯೊಳಗಲೆಯುತಿಹಳಾರಿವಳು ಚೆಲುವೆ' ಕವನವನ್ನು ತೀ.ನಂ.ಶ್ರೀ ಅವರಿಂದ ತಿದ್ದಿಸಿದ್ದು. ಸ್ವಯಂ ಚಿತ್ರ ಬರೆದುಕೊಂಡದ್ದು.

೧೯೩೧ : ಬಿ.ಎ. ಪದವಿ, (ಕನ್ನಡ, ಇಂಗ್ಲಿಷ್ ಚರಿತ್ರೆ)

೧೯೩೨ : ಕೆ.ವೆಂಕಟಪ್ಪನವರ ಶಿಷ್ಯತ್ವದಲ್ಲಿ ಚಿತ್ರಕಲಾಭ್ಯಾಸ.

೧೯೩೩ : ಎಂ.ಎ. ಪದವಿ. ಶ್ರೀಪದಕ (ಕನ್ನಡ): ಆ ಚಿತ್ರಗಳು ಕವನಕ್ಕೆ. ಚಿತ್ರಕಲೆ ಕಲಿಯಲು ಶಾಂತಿನಿಕೇತನ್‌ಗೆ ಪ್ರಯಾಣ, ಟಿ.ಎಸ್.ವೆಂಕಟಣ್ಣಯ್ಯನವರಿಂದ ಬೀಳ್ಕೊಡುಗೆ.

೧೫–೧೧–೧೯೩೪ : ಮಗಳು ಶಾರದಳ ಜನನ

೧೯೩೬ : ಮೊದಲ ಪ್ರಕಟನೆಗಳು: (೧) ಶಿಲಾಮುಖ

**ಗುಂಪು ೯ ಕಥೆ ಕವಿತೆ ಅನುವಾದಗಳು**

೧. ಶಿಲಾಮುಖ (ಹಾರ್ಥಾನಿನ ಮೂರು ಕಥೆಗಳ ರೂಪಾಂತರಗಳು)

೨. ಯೌವನ ಸುಧೆ (ಹಾರ್ಥಾನಿನ ನಾಲ್ಕು ಕಥೆಗಳ ರೂಪಾಂತರ)

೩. ಗುಂಡಿನೇಟು ಮತ್ತು ಇತರ ಕಥೆಗಳು (ಪುಷ್ಕಿನ್ನನ ೫ ಕಥೆಗಳ ಅನುವಾದ)

೪. ರತಿದೇವಿ ಮತ್ತು ಇತರಕಥೆಗಳು ೯ಅನುವಾದ ಮತ್ತು .....

೫. ಬಿಸಿಲುಬೆಳದಿಂಗಳು (ಅನುವಾದಿತ ಮತ್ತು ಸ್ವತಂತ್ರ ಕಥೆಗಳು)

೬. ನಿಲ್ದಾಣಗಳ ನಡುವೆ ೨೫ ಕಥೆಗಳು)

೭. ಪುರಾತನನಾವಿಕ (ಕೋಲರಿಜ್ ಕವಿಯ ಏನ್ಷಿಯಂಟ್ ಮಾರ್‍ಯಿನರ್ ಕವಿತೆಯ ಅನುವಾದ)

ಮಕ್ಕಳ ಸಾಹಿತ್ಯದ ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೬೫ : ಅಣ್ಣಾಮಲೈ ಹಾಗೂ ಮೈಸೂರು ವಿಶ್ವವಿದ್ಯಾನಿಲಯಗಳ ಆಶ್ರಯದಲ್ಲಿ ನಡೆದ ಭಾಷಾವಿಜ್ಞಾನ ಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೬೭ : ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಅಂಗವಾಗಿ ನಡೆದ ಲೇಖಕರ ಸಮ್ಮೇಳನದಲ್ಲಿ ಭಾಗವಹಿಸಿದ್ದು.

೧೯೬೭ : ನಿವೃತ್ತಿ, ಮಾರ್ಚ್ ೨೪.
ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ನಿವೃತ್ತರಾದ ಸಮಯದಲ್ಲಿ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ಪರವಾಗಿ "ರಾಘವ ಸನ್ಮಾನ ಸಮಿತಿ"ಯಿಂದ ಸನ್ಮಾನ (ಅಧ್ಯಕ್ಷತೆ ಡಾ॥ಮಾಸ್ತಿ ವೆಂಕಟೇಶ ಅಯ್ಯಂಗಾರ್)

೧೯೬೭ : ಶ್ರೀ ನಿಡುಮಾಮಿಡಿ ಶ್ರೀಗಳವರಾದ ಡಾ:ಜ.ಚ.ನಿ. ಅವರಿಂದ ಸ್ವರ್ಣ ಪದಕ ಸಮೇತ 'ವಿಚಾರ ರತ್ನಾಕರ' ಎಂಬ ಪ್ರಶಸ್ತಿ.

೧೯೬೮–೭೩ : ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಯು.ಜಿ.ಸಿ. ಪ್ರಾಧ್ಯಾಪಕ (೧೯೭೩–೭೪ ಗೌರವ ಪ್ರಾಧ್ಯಾಪಕ)

೧೯೬೮ : 'ಕವಿರಾಜ ಮಾರ್ಗ' ಪ್ರಕಟಣೆ

೧೯೬೯ : ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ವಿಚಾರ ಗೋಷ್ಠಿಯಲ್ಲಿ ಭಾಗವಹಿಸಿದ್ದು.

೧೯೭೦ : ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಆಶ್ರಯದಲ್ಲಿ ಮೂರು ವಿಶೇಷ ಉಪನ್ಯಾಸಗಳು (ವಿಷಯ: "ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ")

೧೯೭೩ : ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.
ಮಿಥಿಕ್ ಸೊಸೈಟಿ ಆಶ್ರಯದಲ್ಲಿ ರಾಷ್ಟ್ರಕೂಟ ವಂಶದ ಮತ್ತು ಕಲ್ಯಾಣ ಚಾಲುಕ್ಯರ ವಿಷಯವಾಗಿ ನಡೆದ ವಿಚಾರ ಗೋಷ್ಠಿಗಳಲ್ಲಿ ಭಾಗವಹಿಸಿದ್ದು.
ಧಾರವಾಡದಲ್ಲಿ ನಡೆದ ದ್ರಾವಿಡ ಭಾಷಾ ವಿಜ್ಞಾನಿಗಳ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ.
ಬೆಂಗಳೂರಿನಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಡೆದ ಭಾಷಾ ವಿಜ್ಞಾನಿಗಳ ಸಮ್ಮೇಳನದಲ್ಲಿ ಭಾಗವಹಿಸಿದ್ದು.

(೨) ಯೌವನ ಸುಧೆ) ಮೊದಲನೇ ಮಗ ವೆಂಕಟೇಶನ ಜನನ (ಮರಣ ೧೯೪೫)

೧೯೩೪–೩೯ : ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಾರ್ಯದರ್ಶಿ

೨೬–೧೧–೧೯೩೯ : ೨ನೇ ಮಗ ಭಾಸ್ಕರನ ಜನನ.

೧೯೩೯–೪೬ : ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ–ಇಂಗ್ಲಿಷ್ ಕೋಶದ ಸಹ–ಸಂಪಾದಕ

೨೪–೬–೧೯೪೩ : ೩ನೇ ಮಗ ರಾಮಪ್ರಸಾದನ ಜನನ

೨೫–೯–೧೯೪೫ : ೪ನೇ ಮಗ ರಾಧಾಕೃಷ್ಣನ ಜನನ

೧೯೪೬ : ಬೆಂಗಳೂರು ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ ಆರಂಭ. "ಹಕ್ಕಿಹಾಡು" ಕವನ ಸಂಕಲನಕ್ಕೆ ದೇವರಾಜ ಬಹದ್ದೂರ್ ಹಾಗೂ "ಕನ್ನಡ ಸಾಹಿತ್ಯ ಪರಿಷತ್ತಿನ" ಬಹುಮಾನ.

೧೯೫೧ : "ರಾಘವ ಪ್ರಕಾಶನ" ಪ್ರಾರಂಭ
"ಮಾದನ ಮಗಳು" ಕಾದಂಬರಿಗೆ "ದೇವರಾಜ ಬಹದ್ದೂರ್" ಬಹುಮಾನ.

೧೯೫೩ : ಬೆಂಗಳೂರು ಸರ್ಕಾರಿ ಕಾಲೇಜಿನ ಕರ್ಣಾಟಕ ಸಂಘವನ್ನು ಶ್ರೀ ಜಿ.ಪಿ.ರಾಜರತ್ನಂ ಅವರಿಂದ ವಹಿಸಿಕೊಂಡದ್ದು.

೨೯–೯–೧೯೫೪ : ೫ನೇ ಮಗ ಶೇಷಾದ್ರಿನಾಥನ ಜನನ.

೧೯೫೭ : "ಮುಗಿಯದ ಮಾಯೆ" ಕವನ ಸಂಕಲನಕ್ಕೆ ದೇವರಾಜ ಬಹದ್ದೂರ್ ಬಹುಮಾನ.
"ತೊಟ್ಟಿಲು ತೂಗದಕ್ಕೆ" ನಾಟಕಕ್ಕೆ ರಾಜ್ಯ ಸರ್ಕಾರ ಪ್ರಶಸ್ತಿ

೧೯೫೯ : "ಕರ್ನಾಟಕ ಸಂಘ"ದ ಪುನರಾರಂಭ.

೧೯೬೦ : "ಜೀವನ ನಾಟಕ" ಕಾದಂಬರಿಗೆ ರಾಜ್ಯ ಸರ್ಕಾರದ ಪ್ರಶಸ್ತಿ.

೧೯೬೧ : ಆಕಾಶವಾಣಿಯ ರಾಷ್ಟ್ರೀಯ ಕವಿ ಸಮ್ಮೇಳನದಲ್ಲಿ ಭಾಗವಹಿಸಿದ್ದು

೧೯೬೩ : ಕನ್ನಡ ರೀಡರ್ ಆಗಿ ನೇಮಕ.

೧೯೬೪ : ದಕ್ಷಿಣಭಾಷಾ ಪುಸ್ತಕ ಸಂಸ್ಥೆಯ ಆಶ್ರಯದಲ್ಲಿ ನಡೆದ

**ಕುಟುಂಬ ವಿವರಗಳು:**

ಎಂ.ವಿ.ಸೀತಾರಾಮಯ್ಯ : ಕಾವ್ಯನಾಮ "ರಾಘವ"
(ಮೈಸೂರು ವೆಂಕಟದಾಸಪ್ಪನವರ ಸೀತಾರಾಮಯ್ಯ)

ತಂದೆ : ಎಂ.ವೆಂಕಟದಾಸಪ್ಪ (ಮೈಸೂರು)

ತಾಯಿ : ಸಾವಿತ್ರಮ್ಮ (ಅರಕಲಗೂಡು ಛತ್ರದ ರಾಮಣ್ಣನವರ ಮಗಳು)

**ಒಡಹುಟ್ಟಿದವರು:**

ಅಣ್ಣಂದಿರು : ಇಬ್ಬರು (ಈಗ ಇಲ್ಲ)

ತಮ್ಮಂದಿರು : ಇಬ್ಬರು (ಈಗ ಇಲ್ಲ)

ತಂಗಿಯರು : ಇಬ್ಬರು (ಒಬ್ಬಳು ಈಗ ಇಲ್ಲ)

ಪತ್ನಿ : ಸಾವಿತ್ರಮ್ಮ (ಕೊಣನೂರು ನಂಜುಂಡಯ್ಯನವರ ಮಗಳು)

ಗಂಡುಮಕ್ಕಳು : ಐವರು

ಹೆಣ್ಣುಮಕ್ಕಳು : ಒಬ್ಬಳು

೧೯೭೫ : ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವದ ಸಂದರ್ಭದಲ್ಲಿ "ಗ್ರಂಥ ಸಂಪಾದನ ಕ್ಷೇತ್ರದಲ್ಲಿ" ಸೇವೆಗಾಗಿ ಪ್ರಶಸ್ತಿ.

೧೯೭೮ : ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಆಶ್ರಯದಲ್ಲಿ ಮೂರು ವಿಶೇಷೋಪ–ನ್ಯಾಸಗಳು (ವಿಷಯ: "ಕನ್ನಡ ಸಾಹಿತ್ಯದಲ್ಲಿ ಶಾಂತರಸ") ರಾಜ್ಯ ಸರ್ಕಾರದಿಂದ ಆಜೀವ ಗೌರವ ಮಾಸಿಕ ವೇತನ.

೧೯೭೯ : "ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ"ದ ಸ್ಥಾಪನೆ.

೧೯೮೦ : ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ: 'ಕನ್ನಡ ವ್ಯಾಕರಣಗಳು' ಪುಸ್ತಕಕ್ಕೆ.

೧೯೮೨ : ಬೆಂ.ವಿ.ವಿ, ಕನ್ನಡ ಅಧ್ಯಯನ ಕೇಂದ್ರದಲ್ಲಿ, ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷತೆ

ಗೋಕಾಕ್ ವರದಿ ಹೋರಾಟದಲ್ಲಿ ಪಾಲ್ಗೊಂಡು, ನಗರದ ಸಾಹಿತಿ ಕಲಾವಿದರ ಬಳಗದ ಚಟುವಟಿಕೆಗಳ ಸಹಾಯಕ್ಕಾಗಿ 'ಕನ್ನಡಮ್ಮನ ಕೊರಗು' ಪುಸ್ತಕವನ್ನು ಪ್ರಕಟಿಸಿ ದಾನಮಾಡಿದ್ದು.

೧೯೮೩ : ಕನ್ನಡ ಸಾಹಿತ್ಯ ಪರಿಷತ್ತಿನ ತುಮಕೂರು ಜಿಲ್ಲಾ ಸಮಿತಿಯಿಂದ ಡಾ॥ಗೋವಿಂದ ಪೈ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಸನ್ಮಾನ.

ಕೋಲಾರದ ಕನ್ನಡ ಪಕ್ಷ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಸಮಿತಿಯಿಂದ ಸನ್ಮಾನ.

ಲಯನ್ಸ್ ಕ್ಲಬ್ ಬೆಂಗಳೂರು (ಪಶ್ಚಿಮ)ರವರಿಂದ ಸನ್ಮಾನ.

ಕನ್ನಡ ಸಾಹಿತ್ಯ ಪರಿಷತ್ತಿನ ಮೈಸೂರು ಜಿಲ್ಲಾ ಸಮಿತಿ ಕೊಳ್ಳೆಗಾಳದಲ್ಲಿ ನಡೆಸಿದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಸನ್ಮಾನ.

ಮೈಕೋ ಕಾರ್ಖಾನೆ, ಬೆಂಗಳೂರು ಅವರಿಂದ ರಾಜ್ಯೋತ್ಸವ ಸಂದರ್ಭದಲ್ಲಿ ಸನ್ಮಾನ.

ಬಬ್ಬೂರು ಕಮ್ಮೆ ಸಂಘದಿಂದ ಮೈಸೂರಿನಲ್ಲಿ ಸನ್ಮಾನ.

ಮಾರ್ಚಿ ೧೨, ೧೯೯೦ರಂದು ನಿಧನ

೧೦. **ಹಂಸಪಥ:**
ರಾಘವ ಪ್ರಕಾಶನ, ೧೯೭೧

೧೧. **ಬೀಸಿ ಬಂದ ಗಾಳಿ:**
ರಾಘವ ಪ್ರಕಾಶನ, ೧೯೮೦

೧೨. **ಮೊದಲ ಹೆಜ್ಜೆ (ಪ್ರಾರಂಭದ ಕವನಗಳು):**
ರಾಘವ ಪ್ರಕಾಶನ, ೧೯೮೧.

೧೩. **ಕಾವ್ಯಾಲಾಪ:**
(೪೬ ಬಿಡಿ ಪದ್ಯಗಳ ಸಂಕಲನ; ಕಾವ್ಯ ಜಿಜ್ಞಾಸೆ; ೧೯೪೪. ಸುಮಾರು ೩೫೦ ಪದ್ಯಗಳ ವಿಸ್ತೃತ ಸಂಕಲನ–ಅಪ್ರಕಟಿತ)

೧೪. **ಸೌಂದರ್ಯ ಲಹರಿ:**
(೧೯೮೦) ಶ್ರೀ ಶಂಕರಾಚಾರ್ಯ ರಚಿತ ಸಂಸ್ಕೃತ, ಸೌಂದರ್ಯ ಲಹರಿಯ ಅನುವಾದ: ಅಪ್ರಕಟಿತ_

೧೫. **ಪುರಾತನ ನಾವಿಕ:**
(ಕೋಲರಿಜ್ ಕವಿಯ Ancient Mariner ಕವನದ ಅನುವಾದ: ಅಪ್ರಕಟಿತ)

<u>**೨. ಮಕ್ಕಳ ಪದ್ಯಗಳು**</u>

೧. **ಹೂವಾಡಗಿತ್ತಿ**
ಕಾವ್ಯಾಲಯ, ಮೈಸೂರು (೧೯೪೬; ತೃತೀಯ ಆವೃತ್ತಿ ೧೯೬೮)

೨. **ಹಾವಾಡಿಗ**
ಕಾವ್ಯಾಲಯ, ಮೈಸೂರು; ೧೯೫೮ (ದ್ವಿ.ಆ. ೧೯೬೮)

೩. **ಕೋಡಂಗಿ**
ಕಾವ್ಯಾಲಯ, ಮೈಸೂರು; ೧೯೭೯

<u>**೩. ಸಣ್ಣಕಥೆ**</u>

೧. **ಶಿಲಾಮುಖ (ಹಾಥಾರ್ನಿನ ಮೂರು ಕಥೆಗಳ ರೂಪಾಂತರ):**
ಭಾರತೀ ಸಾಹಿತ್ಯ ಮಂದಿರ, ಬೆಂಗಳೂರು, ೧೯೩೬.

೨. **ಯೌವನ ಸುಧೆ (ಹಾಥಾರ್ನಿನ ನಾಲ್ಕು ಕಥೆಗಳ ರೂಪಾಂತರ):**
ಸ್ವಂತ ಪ್ರಕಟಣೆ, ೧೯೪೬.

